**ತಿರುಗ** 'ತಿರುಗಿ' ನೋ.

**ತಿರುಗಣೆ** 'ತಿರುಗಣೆ' ನೋ.

**ತಿರುಗಣೆತಂಬಿಗೆ** (ನಾ). ತಿರುಂಪಿನ ಚೆಂಬು; ಸುತ್ತುಗಳನ್ನುಳ್ಳ ಮುಚ್ಚಳದ ಚೆಂಬು; ರೈಲುಚೆಂಬು: ಏನಾರ ಫರಾಳ ತಂದು ಬಿಡ್ರಿ ಸಾಕು ... ಶೇಷಣ್ಣ ತಿರುಗಣೆತಂಬಿಗೆ ತೆಗೆದುಕೊಂಡು ಹೋದ (ಬ್ರನಿ. ೨).
[ತಿರುಗಣೆ (< ತಿರುಗಣೆ) + ತಂಬಿಗೆ (< ತಂಬುಗೆ)]

**ತಿರುಗಣೆಮಡು** 'ತಿರುಗಣೆಮಡು' ನೋ.

**ತಿರುಗಣೆ**, ತಿರುಗಣಿ, ತಿರುಗಾಣೆ, ತಿರುಗುಣಿ (ನಾ). ೧. ತಿರುಗುವಿಕೆ; ಸುತ್ತಾಟ: ಸುಳಿಯ ತಿರುಗಣೆಗೆ ಸಿಲುಕಿ ಮಡುವಿನ ಆಳಕ್ಕೆ ಇಳಿದಳು (ಹುಲಿಹಾ. ೩೪). ೨. ಬಾಗು; ತಿರುವು: ಒಂದು ದೃಷ್ಟಿಯಿಂದ ಈ ತಿರುಗಣೆಯು ಮನೋರಂಜಕವಾಗಿದೆ (ಸಾಕಮಾ. ೬೦); ರಸ್ತೆ ದಾಟಿ ತಿರುಗಣೆಯ ಬಳಿ ಬಂದೊಡನೆ ಆ ನರಹರಿಯು ಜ್ಞಾಪಕಕ್ಕೆ ಬಂದ (ಸಾಹೇಬ್. ೬೭). ೩. ತಿರುವು; ಮಲಸೂತ್ರ: ಸಡಲಿದ ತಿರುಗಣೆಯ ತೀಯದವಳ ಬಲದ ಕಿವಿಯ ಗಿಳಿಯ ವಾಲೆ ಜಗುಳುವೊಡನೆ ಹೊಳೆಯ ಗುಳುಗುಳುರಿದುದು (ಗಿರಿವಿಂ. ೬೬-೨೪); ಈ ಸೂಜಿಯನ್ನು ನಾದ ಸಂಪುಟವೆಂಬ ಭಾಗದಲ್ಲಿರುವ ಸನ್ನೆಯ ಕೆಳತುದಿಗೆ ಒಂದು ತಿರುಗಣೆಯಿಂದ ಜೋಡಿಸಿರುತ್ತಾರೆ (ವಿಜ್ಞಾವಿ. ೪); ನೀರನ್ನು ಹಾಕಿಡುವ ಪಾತ್ರೆಗೆ ತಿರುಗಣೆ ಯಿದ್ದರೆ ಚೆನ್ನಾಗಿರುತ್ತದೆ (ಅಡುಕಾ. ೦೪). ತಿರುಗಣೆ: ೩. ರೈಲು ತಂಬಿಗೆಯ ತಿರುಗಣಿ ತೆಗೆದು ತಂದೆಗೆ ನೀರು ಕೊಟ್ಟಳು (ಬದುಜ. ೦೮). ೪. ಸುಳಿ; ಆವರ್ತ: ತಿರುಗಣೆಯಲ್ಲಿ ಸಿಕ್ಕಿರುವಂತೆ ಎಲ್ಲಿ ಸಾಗಿರುವೆವೋ ಏನೋ? (ಚಲುವಿ. ೦೦೩); ತಾಯಿ—ತಂಗಿ ತಿರುಗಣೆಯಲ್ಲಿ ಸಿಕ್ಕುಬಿಟ್ಟದ್ದರು. ತಂದೆ ನಡುನೀರನ್ನು ಮುಟ್ಟಿದಾಗ ಕೈಸಾಗದೆ ದುರ್ಬಲರಾಗಿ ಅಲ್ಲಿಯೇ ದೈವದ ಮೇಲೆ ಭಾರಹಾಕಿ ಉಳಿದುಬಿಟ್ಟರು (ಹೊಸಕ್ಕ. ೨೦೭); ಈ ಸಂಸಾರದ ತಿರುಗಣೆಯಲ್ಲಿ ಸಾಕಷ್ಟು ತಿರುಗಿ ದಣಿದದ್ದಾಯಿತು (ಹಳ್ಳಿಬ. ೩೭). ೫. ವ್ಯಾಯಾಮದಲ್ಲಿ ಬಳಸುವ ಒಂದು ಬಗೆಯ ಸಾಧನ: ಮಟ್ಟಿಯ ಬಲಭಾಗದಲ್ಲಿ ಗದೆ, ಡಂಬಲ್, ಲಾಠಿ, ದೊಣ್ಣೆ, ತಿರುಗಣಿ, ಗರ್ದನ್‌ಪಟ್ಟು ಗುಂಡು ಇತ್ಯಾದಿ ವ್ಯಾಯಾಮ ಸಾಧನಗಳು (ಭೀಮುಕಾ. ೨೦). ತಿರುಗಾಣೆ: ೩. ಮಧ್ಯದಲ್ಲಿ ತಿರುಗಾಣೆಯ (pivot) ಮೇಲೆ ನಿಂತಿರುವ ಮರದ ತೊಲೆಯು ಒಂದು ಕೊನೆಗೆ ಅಡುಬೆಣೆಯನ್ನು ಜೋಡಿಸಿದ (ತಿಲ್ಲನಾ. ೨೦೪). ತಿರುಗುಣಿ: ೪. ಪಚ್ಚೆಯದ ಕಡಗಮಂ ತಿರುಗುಣಿಯ ಮಡುವಿನಿಟ್ಟು (ಪಡಸಂ. ೦೯೯-೩೮); ವಿಚಾರವಿಪ್ಲವದ ತಿರುಗುಣಿಯಲ್ಲಿ ಸಿಕ್ಕು ದಿಕ್ಕುತೋಚದಂತಾಗಿತ್ತು (ಬ್ರನಿ. ೩೩೪). ೬. ಒಂದು ಬಗೆಯ ಆಯುಧ: ಹಾರೆ ಬಿರಿ ಕೊಂಟಿಡು ಪೆಟಲ ತಿರುಗು [ಪಾಠಾಂ. ಗ]ಣೆ ಬೀಸು ವಲೆ ತಳಿಯಮರದ ಗೊಂದಣದ ಸಂವರಣೆಯಿಂದಾ ಕೋಂಟೆ ಕಣ್ಗೊಟ್ಟಿತು (ಸಮ್ಯಕ್ತ್ವ. ೮-೨೮); ಬಲಿವ ಪೆಟಲ ಬೆಣೆ ಡೆಂಕಣಿಗೈ ಪಂದಿದರೆ ತಿರುಗುಣಿ ಭೀಮಗದೆಯ ಬಲಿದು ಕೆತ್ತುವ ಬಡಗಿಗಳಿಂದಾ ದುರ್ಗ ಸಲೆ ಮೆಚಿದುದು (ಶಬರಸಾಂ. ೩೭-೩೮); ಗುಂಡು ಪೆಟಲ ತಿರುಗುಣಿ ... ಬಿಲ್ಲಂಬು ಗರಗಸ (ಚಂಪ್ರಸಾಂ. ೮-೦೦).

ತಿರುಗಣೆಯ ಮಡು = ತಿರುಗಣೆಮಡು: ತಿರುಗಣೆಯ ಮಡುವಿನಲ್ಲಿ ಸಿಕ್ಕು ಬೊಗರಿಯಂತೆ ಗಿರಿಗಿರಿ ತಿರುಗಿದಂತೆ ಅವಳಿಗೆ ಭಾಸವಾಯಿತು (ಹೊಸಕ್ಕ. ೦೮೩).

[ತಿರುಗು₁ + – ಅಣೆ./ತಮಿ. ತಿರುಕಣಿ, ತಿರುಕಾಣಿ; ಮಲ. ತಿರುಗಣಿ; ತುಳು. ತಿರುಗಣೆ, ತಿರ್ಗಣೆ, ತಿಂರ್ಗಣೆ]

**ತಿರುಗಣೆಕೀಲು** (ನಾ). ತಿರುಗುವ ಕೀಲು; ಸುತ್ತುವ ಕೀಲು: ಕಾಲಿನ ಇತರ ಭಾಗಗಳು ತಿರುಗಣೆಕೀಲುಗಳಿಂದ ಕೂಡಿವೆ (ಕೀಟಬಿ. ೦೬).
[ತಿರುಗಣೆ + ಕೀಲು (< ಕೀಲ್)]

**ತಿರುಗಣೆಚೂರಿ** (ನಾ). ಸೀಸದ ಕಡ್ಡಿಯನ್ನು ಒಳಗಿಟ್ಟು ತಿರುಗಿಸಿದಂತೆಲ್ಲ ಹೆರೆಯುವ ಸಾಧನ: ಇದು ಪೆನ್ಸಿಲು ಕೊಯ್ಯುವ ತಿರುಗಣೆ ಚೂರಿ (ಪ್ರಾಡಿಕ್ಸ. ೦೩). [ತಿರುಗಣೆ + ಚೂರಿ]

**ತಿರುಗಣೆಮಡು**, ತಿರುಗಣಿಮಡು, ತಿರುಗುಣಿಮಡು (ನಾ). ನೀರಿನ ಸುಳಿಗಳುಳ್ಳ ಆಳವಾದ ಪ್ರದೇಶ: ಇವನು ಬಿದ್ದದ್ದು ತಿರುಗಣೆಮಡುವಿಗೆ (ಹೇಮುಕೂ. ೬೯). ತಿರುಗಣೆಮಡು: ಅವನು ಸೆಳವಿಗೆ ಸಿಕ್ಕಿ ಹರಿದು ಹೋಗಿ ತಿರುಗಣೇ ಮಡುವಿಗೆ ಬಿದ್ದು (ಮುಂಬಯಿ. ೪-೩೪); ತಿರುಗಣಿ ಮಡುವಿನಲ್ಲಿ ಸಿಕ್ಕ ನಾವಿನಂತೆ ಚಕ್ಕರ ಹೊಡೆಯಹತ್ತಿತು (ನಾಕಥ. ೫೦). ತಿರುಗುಣಿಮಡು: "ಚಕ್ರ = ತಿರುಗುಣಿಮಡು" (ಗಂಗಾಮ. ೦೨೭).
[ತಿರುಗಣೆ + ಮಡು₁]

**ತಿರುಗಮುರುಗ** 'ತಿರುಗುಮುರುಗು₁' ನೋ.

**ತಿರುಗಾಟ** (ನಾ). ಅಲೆದಾಟ; ಸುತ್ತಾಡುವಿಕೆ; ತಿರುಗುವಿಕೆ: ಹೋದ ಕೆಲಸ ಎಲ್ಲ ಆಯಿತೇ? ... ಇನ್ನೂ ಉಳಿದಿದೆಯೆ ತಿರುಗಾಟ? (ಪಾಶ್ಚಿಮ್ಯ. ೩೩೦): ಮಗ ಮನೆಗೆ ಬಾರದೆ ಎಲ್ಲಿ ತಿರುಗಾಟಕ್ಕೆ ಹೋಗಿದ್ದನೋ (ಮುಂಗಾಮು. ೪೯); ಅವರು ಇಂಥ ತಿರುಗಾಟಗಳಿಗೆ ಅಳಲ್ಲ (ಒಂಟಿದ. ೪೭).
[ತಿರುಗು₁ + ಆಟ]

**ತಿರುಗಾಡು** (ಕ್ರಿ). ಅಲೆದಾಡು; ಸಂಚರಿಸು; ಸುತ್ತಾಡು: ಸುಮ್ಮನೆ ತಿರುಗಾಡಿ ಹೊತ್ತುಗಳೆಯಲಾರೆ (ಮುಂಬಯಿ. ೪-೫೭); ಉಂಡು ತಿರುಗಾಡಿ ಕಾಲ ಕಳೆದ (ಕ್ಯಾಗಮು. ೬೦); ನೇಮ ಹಚ್ಚಿ ಹೋಂವ ವಿಪಾರಿ ಶ್ವಾನನ ಹಾಗೆ ತಿರುಗಾಡುವದಾಯಿತು (ಗಾದ). [ತಿರುಗು₁ + ಆಡು₁]

**ತಿರುಗಾಣೆ** 'ತಿರುಗಣೆ' ನೋ.

**ತಿರುಗಾಸ್**, ತಿರಗಾಸು, ತಿರ್ಗಾಸು (ನಾ). (ಕರಾ) ರಸ್ತೆಯ ತಿರುವು: ಕೆಲವು ಸಾರಿ ತಿರುಗಾಸ್‌ಗಳಲ್ಲಿ ಬಸ್ಸು ಓರೆಯಾದಾಗ ನನ್ನ ಭಾರ ಪಕ್ಕದವರ ಮೇಲೆ ಬೀಳುತ್ತಿತ್ತು (ಹಂಚಿಥ. ೬೦). ತಿರಗಾಸು: ಮೋಟಾರುಕಾರು ವೇಗವಾಗಿ ಓಡುತ್ತ ಆ ತಿರಗಾಸನ್ನು ಒಂದು ನಿಮಿಷದೊಳಗೆ ದಾಟಕೊಂಡು ...ಬಹಳ ದೂರವಾಯಿತು (ಮೃಚಿಅ. ೦೩೦). ತಿರ್ಗಾಸು: ತಿರ್ಗಾಸುಗಳಂ ಹಲವಾರು ಸಿಕ್ಕುತ್ತಿದ್ದವು (ಹಲಪ. ೦೩೦). [←ತುಳು. ತಿರ್ಗಾಸ್]

**ತಿರುಗಿ**, ತಿರಂಗ (ಅ). ೧. ಮತ್ತೆ; ಇನ್ನೊಮ್ಮೆ; ಪುನಃ: ತಿರುಗಿ ಭೀಮನನೆಚ್ಚನು (ಕುಮಾರವ್ಯಾ. ೦೮-೫೭): ತಿರುಗಿ ನೀವಿನ್ನೆನ್ನ ದಸೆಗುಬ್ಬರದ ಚಿಂತೆಯ ಕಾಳದಿರಿ (ಕೂಚರಾ. ೨-೪-೪); ಇಂತು ಜೂಜೊಳು ಸೋತು ತಿರುಗಿನ್ನೆಂತು ರಾಜ್ಯದಿ ನಿಲುವಿರಿ (ನಳಚ. ೪-೪೦). ೨. ಪ್ರತಿಫಲವಾಗಿ: ತಿರುಗಿ ಬಯಸದನ ಶಿವಪೂಜೆ ಶಿವನಿಂದ ಹಿರಿದೆಂದು ಅಜ್ಞಗು (ಸರ್ವಜ್ಞ. ೨೬೩). ತಿರುಗ: ೧. ಬಾಣಮನೊಂದನಿವಗಂ ತೊಡಲು ತಿರುಗ ಗತಿ ಬೇರಿಲ್ಲ ನರನಿಗಂ ಮರಣವಾಗಲಿಕ್ಕೆ (ಕುರಂಗ. ೫೭-೫೦); ಕಟ್ಟು ನೆಂಟರ ಸೇರಬೇಡ, ಕೊಟ್ಟ ಧರ್ಮ ತಿರುಗ ಕೇಳಬೇಡ (ಗಾದ).

ತಿರುತಿರುಗಿ (ದ್ವಿರುಕ್ತಿ): ಸೋಲ್ದೆಜಗಿ ತಿರುತಿರುಗಿ ಬರುತಿರ್ಪ ತಂಬಿಗಳ ಸಾಲ್ (ಕ್ಷಮಿಥಾ. ೩-೭). [< ತಿರುಗು₁]

**ತಿರುಗಿಮುರುಗಿ** 'ತಿರಂಗುಮುರುಗು₁' ನೋ.

**ತಿರುಗಿಸು**, ತಿರುಂಗಿಸು (ಕ್ರಿ). ೧. ಸುತ್ತುವಂತೆ ಮಾಡು; ಸುತ್ತಿಸು; ಅಲೆಸು: ತನ್ನ ವಿನೋದಕ್ಕೆ ತಾನೇ ತಿರುಗಿಸಿದನನಂತಭವದುಃಖಂಗಳಲ್ಲಿ ಇಂತೆನ್ನ ಚೆನ್ನಮಲ್ಲಿಕಾರ್ಜುನದೇವನೆಂಬ ಪರಶಿವನು (ಮಹಾದೇ.ಬ. ೨-೪); ಇತ್ತ ಬಲದಲಿ ಬಲಿಕೆ ಮೊಗವಿಡುತ್ತಲೆಡದಲಿ ಮರಳಲಲ್ಲಿಂದತ್ತ ತಿರುಗಿಸಿ ಬಳಲಿಸಿದನಸುರಾರಿ ದಿಗ್ಗಜವ (ಕುಮಾರವ್ಯಾ. ೩-೫೩). ೨. ಚಕ್ರಾಕಾರವಾಗಿ ಸುತ್ತಿಸು: ನೋಟ ವಿಷಯದಿಂದೊಳಗಾದ ಪುರುಷರ ಕೋಟಲೆಗೊಳಿಸಿ ಸುತ್ತಿಸುತ ಆಟವಿದೆಂಬಂತೆ ತಿರುಗಿಸುತಿರ್ದರು ಚಾಟಳದುಯ್ಯಾಲೆಗಳನು (ಮೋಹತ. ೦೪-೮೯); ಕರ್ಣಜಂ ಬಳಿಕ ನಸುನಗೆಯೊಳೆಡಗೈಯ

ಕೋದಂಡವಮಂ ತಿರುಗಿಸುತ್ತಿಂತೆಂದನು (ಕೃಮಿಥಾ. ೧೨-೧೬). ೩. ಬದಲಿಸು; ಬೇರೆ ಕಡೆಗೆ ಹೊರಳಿಸು : ಜನರ ತಾಮಸ, ಮೂಢಪದ್ಧತಿಗಳನ್ನು ಸಾತ್ವಿಕಭಕ್ತಿಗೆ ತಿರುಗಿಸುವ ಕಾರ್ಯವನ್ನು ಇವರು ಹೆಚ್ಚಾಗಿ ಮಾಡಿರಬೇಕೆನ್ನಿಸುತ್ತದೆ (ಜಗದಾ. ೦೧೬) : ನಾವು ಮೊದಲು ಆಡಿದ ಮಾತು ತಿರುಗಿಸಲಿಕ್ಕೆ ಏನೇನು ಹಿಂದೆ ಮುಂದೆ ನೋಡುವದಿಲ್ಲ (ಮುಂಬಯಿ. ೩-೦೪); ಯಾವ ಆಕಾರಕ್ಕಾದರೂ ತಿರುಗಿಸಬಹುದು (ಹಂತ್ರ. ೦೬). ೪. ಮಗುಚು; ಬುಡ ಮೇಲು ಮಾಡು : ಉಂಡೆಯಂ ಕೊಯಿದು ಮುಖವ ಮೇಲಾಗಿ ತಿರುಗಿಸಿಕೊಂಡು (ಸೂಪಶಾ. ೧-೪೮); ಚಪ್ಪಟೆಯಾದ ಸೌಟನಿಂದ ಬಾಣಲೆಗೆ ಹಾಕಿದ ಪೂರಿಯನ್ನು ತಿರುಗಿಸುತ್ತಿರಬೇಕು (ಅಡುಶಾ. ೧೦೬). △ ತಿರುಂಗಿಸು : ೩. ಹರಿಣಾಕ್ಷಿ ... ತಿರುಂಗಿಸಿದಾಸ್ಯಪದ್ಮಮಂ ಪಿಡಿದತಿಕಷ್ಟದಿಂ ನೆಗಪಿಯುಂ ನೆರೆ ಚುಂಬಿಸದಾದೆ ನಾನದಂ (ಶಾಕುಂತ. ೪೩-೬೬). [ ತಿರುಗು$_1$ + – ಇಸು$_3$ ]

**ತಿರುಗು$_1$, ತಿರುಂಗು** (ಕ್ರಿ). ೧. ಸುತ್ತು ; ಅಲೆದಾಡು ; ಓಡಾಡು : ಸುಟ್ಟುರೆಯ ತಱಗೆಲೆಯಂತೆ ಚಿಱ್ಱನೆ ತಿರುಗಿ ಬೀೞ್ವಲ್ಲಿ (ಕಾದಂಪೂ. ೦೮೬) : ತಿಟ್ಟನೆ ತಿರುಗುವ ಗಾಣದೆತ್ತಿನಂತೆ (ಬಸವ. ೩೮೦); ಶೋಕಾತುರದೊಳೊಂದೆಡೆಯೊಳುಂ ಕಾಲ್ ನಿಲ್ಲದೆ ಭ್ರಮೆಗೊಂಡು ತಿರುಗುತ್ತ (ಬಸಪು. ೪೩-೩೪) ; ಕಾಡಿನಲಿ ತಿರುಗುವಗೆ ಕನಕಭೂಷಣವೇಕೆ (ಪುರಂದ. ೨-೬೨-೦) ; ಪಡೆ ತಿರುಗುವುದು ದುರ್ಗದಲಿ (ಕಂನವಿ. ೦೦-೧೯೧) ; ಮೂಡ ಪಡವಲ ತಿರುಗು, ಬಡಗ ತೆಂಕಲು ತಿರುಗು (ಹೊಂಗಳು. ೦೩-೦೩) ; ಗಂಡಸು ಕೂತು ಕೆಟ್ಟ, ಹೆಂಗಸು ತಿರುಗಿ ಕೆಟ್ಟಳು (ರೂಢಿ). ೨. ಹಿಂದಕ್ಕೆ ಹೋಗು : ಹಿಂಜರಿ ; ಹಿಮ್ಮೆಟ್ಟು : ದೊರೆಯಾಳಿದನೇ ಸ್ವಾಮಿದ್ರೋಹರು ತಿರುಗಿ (ಕುಮಾರವ್ಯಾಸ. ೦೬-೩೯) : ಅಸಿತಧ್ವಜಂ ಬವರದೊಳ್ಮುರಿದು ಭಂಗಿತವಾಗಿ ತಿರುಗಿದಂ ತನ್ನ ಪಟ್ಟಣಕೆ (ಕೃಮಿಥಾ. ೮-೪೯). ೩. ಹೊರಳು : ಅಟ್ಟಿದೊಡೆ ತಿರುಗಿ ಮುರಿಮುರಿದೊಟ್ಟೈಸುತೆ ಕೊಂಕಿ ... ಓಡಿತೆಸೆವ ಮಸಕದ ಶಶಕಂ (ಗಿರಿಕ.೦-೮೬); ಕೊಂಚ ದೂರ ಹೋಗಿ ಬಲಕ್ಕೆ ತಿರುಗಬೇಕು (ರೂಢಿ). ೪. ಹೊರಳಿಸು ; ತಿರುಗಿಸು : ಭೀಮಗಜ ಕಟ್ಟಿದುದು ಬೀದಿಗಳ ತಿರುಗಲಾಪರೆ ಸಮಯುವಿದು (ಕುಮಾರವ್ಯಾಸ. ೩-೦): ತನ್ನಿರವ ಸುಜ್ಞಾನದೃಷ್ಟಿಯೊಳು ತಿರುಗಿ ನಿಟ್ಟಿಸಬೇಕು ಮುಕ್ಕಣ್ಣನಲ್ಲದೆಲ್ಲರಿಗೆ ಬಹುದೆ ಸುಖಸಿದ್ಧಿ (ಭರತ.೩-೬೬). ೫. ಗಿರಕಿ ಹೊಡೆ; ಚಕ್ರಾಕಾರವಾಗಿ ಸುತ್ತು : ಇಟ್ಟಿಯ ಹಣ್ಣ ನರಿ ತಿಂದು ಸೃಷ್ಟಿ ತಿರುಗಿತ್ತೆಂಬಂತೆ (ಬಸವ. ೩೬೮). ೬. ಕೆಳೆ : ಮೇದಿನಿಯುಲೊಂದಬುದ ತಿರುಗಲು ಸಾರಂಗೊಂದು ದಿನ (ಸಂಭಪ. ೪-೯). △ ತಿರುಂಗು : ೩. ‘ ತಿರುಂಗಿಸು ’ ಪರಾ.

ತಿರುತಿರುಗು (ದ್ವಿರುಕ್ತಿ) : ನರನ ರಥ ಸುಳಿಗಾಳಿಯಂತಿರೆ ತಿರುತಿರುಗಿದುದು ವಿಶ್ವತೋಮುಖದಿ (ಕುಮಾರವ್ಯಾಸ. ೦೪-೨೬). ತಿರುಗದ ದಾರಿ = ಹಿಂದಕ್ಕೆ ಬರದ ದಾರಿ; ಯಮಲೋಕದ ಹಾದಿ: ವಾರಿಜಗಂಧಿ ನಿನ್ನಯ ಕಾಂತ ತಿರುಗದ ದಾರಿಯ ಹೋದಾತ ಬಹನೆ (ಮೋಹತ.೯-೦೮). ತಿರುಗದ ಹಾದಿಯ ಹತ್ತು = ಸತ್ತುಹೋಗು : ಕಾದಿ ... ತಿರುಗದ ಹಾದಿಯ ಹತ್ತಿದರ್ (ಮೋಹತ. ೧೨-೩೮). ತಿರುಗಿ ನೋಡು = ಗಮನಕೊಡು ; ಲಕ್ಷಿಸು : ಆ ಕಡೆ ನಾನು ತಿರುಗಿ ನೋಡಲೂ ಇಲ್ಲ (ಪುನರು. ೦೯೨). ತಿರುಗಿ ಬರು = ಬಳಸಿಬರು; ಸುತ್ತಿಬರು : ತಿರುಗಿ ಬಾಹನೊ ಧರೆಯನೆಲ್ಲವನುರಿವ ಬೇಗೆಯೊಳೆಯ್ದಿ ಬೇವೆನೊ (ಬಸಪು. ೬೦-೩೮). ತಿರುಗಿ ಬೀಳು=ಎದುರು ಬೀಳು; ಪ್ರತಿಭಟಿಸು : ಸುಂದರಾಂಗನ ದುರ್ವರ್ತನವೆಲ್ಲ ಪ್ರಜೆಗಳಿಗೆ ತಿಳಿಯಲು ಅವರು ತಿರುಗಿ ಬಿದ್ದು...ಸತ್ಯವಿಕ್ರಮನನ್ನು ಬಿಡಿಸಿಬಿಟ್ಟರು (ಕವಿಕ. ೪೩). ತಿರುಗಿ ಹೊಡು = ತಿರುಗಿಬೀಳು : ಆದರೆ ಕೆಲಸ ಬಿದ್ದಾಗ ಅವರೊಡನೆ ಸ್ನೇಹ ಬೆಳಸುತ್ತಿದ್ದನು. ತಕ್ಷಣ ತಿರುಗಿ ಹೊಡುತ್ತಿದ್ದನು (ಹಿಂಮುಸ. ೬೮). ತಿರುತಿರುಗಿ ಅನ್ನು = ಪ್ರತಿಯಾಗಿ ಹೇಳು ; ಎದುರುತ್ತರ ಕೊಡು : ದೊಡ್ಡವರ ಮಾತಿಗೆ ತಿರುತಿರುಗಿ ಅನ್ನಬಾರದು (ರೂಢಿ).

[ ದೇ. ■ ತುಳು. ತಿರ್ಗ್, ತಿಂಗ್ರ್ ; ತೆಲು. ತಿರುಗು ]

**ತಿರುಗು$_2$** (ನಾ). ೧. ಸುತ್ತುವಿಕೆ ; ಚಕ್ರಾಕಾರವಾಗಿ ಚಲಿಸುವಿಕೆ. ‘ ತಲೆ ತಿರುಗು$_2$ ’ ಪರಾ. ೨. ತಲೆಕೆಳಗಾಗುವಿಕೆ. ‘ ತಿರುಗು ಮುರುಗು$_1$ ’ ಪರಾ. [ < ತಿರುಗು$_1$ ]

**ತಿರುಗುಣೆ** ‘ ತಿರುಗಣೆ ’ ನೋ.

**ತಿರುಗುಣೆಮಡು** ‘ ತಿರುಗಣೆಮಡು ’ ನೋ.

**ತಿರುಗುತ್ತ** (ನಾ). (ದನಗಳಿಗೆ ಬರುವ) ತಿರುಗಿ ತಿರುಗಿ ಬೀಳುವ ಒಂದು ಬಗೆಯ ರೋಗ ; ತಲೆದೂಗ ರೋಗ : ಎಡದತ್ತ ತಿರಿಗಿ ತೊಟ್ಟನೆ ಕೆಡೆವೊಡೆ ಬಲದೊಳ್ ... ಮೂಗಿನ ಸೆರೆಯಂ ಬಿಡುವುದು ತಿರುಗುತ್ತದವ ಕವಂ ಪಿಂಗಿಸುಗುಂ (ಗೋವೈದ. ೯-೨೧೦). [ ತಿರುಗು$_1$ + ಕುತ್ತ ]

**ತಿರುಗುಪ್ಪು** (ನಾ). ೧. ತಿಳ್ಳಿ ಮೊದಲಾದ ಆಟಗಳಲ್ಲಿ ಮಾಡುವ ಪ್ರತಿಧಾಳಿ : ಈ ಸರತಿ ರಾಮನ ಕಡೆಯವರು ಬಹಳೇ ಜಾಗ್ರತೆಯಿಂದ ಆಟವನ್ನು ಆಡಿದ್ದರಿಂದ ತಿರುಗುಪ್ಪಾಗಿ ತಿರುಗಿ ಎರಡನೆಯ ಮನೆಯವರೆಗೆ ಉಪ್ಪು ಏರಿ ಬಂದಿತ್ತು (ನಿರಾಳ. ೯೬). ೨. (ಆಲಂ) ತಿರುಗಿ ಬೀಳುವಿಕೆ ; ತಿರುಮಂತ್ರ : ತನ್ನ ಶಿಷ್ಯನೇ ತನಗೆ ತಿರುಗುಪ್ಪು ಕೊಟ್ಟನು (ಶರಣ. ೩೪೯); ನೀನು ಭಾಗೀರಥಿಗೆ ಮಾಡಿದ ಮೋಸವೇ ಈಗ ತಿರುಗುಪ್ಪು ಹೊಡಿದೆ (ಭಾರತಿ. ೦೯೦) ; ರಾಯರ ಮೇಲೆಯೆ ಖಟ್ಲೆಯು ತಿರುಗುಪ್ಪಾಗಿ, ಐನೂರು ರೂಪಾಯಿ ದಂಡ, ಆರುತಿಂಗಳ ಸಶ್ರಮ ಶಿಕ್ಷೆಯಾಯಿತು (ಹೊದಿಸಿ. ೬೨).
[ ತಿರುಗು$_1$ + ಉಪ್ಪು$_2$ ]

**ತಿರುಗುಮುರುಗು$_1$** (ನಾ) . ಹಿಂದುಮುಂದಾಗುವಿಕೆ : ನಡು ಸಣ್ಣದಾದರೆ ಮನ ದೊಡ್ಡದಾದರೆ ಕಾಂತಿ ಮೆಚ್ಚುಗುವೆ ನೀನು ನಡು ಮನಗಳ ಗಾತ್ರ ತಿರುಗುಮುರುಗಾದರೆ ಮತ್ತೆ ನಾ ಹೇಳುವುದೇನು (ಇಂಡಾಪ. ೦೦೬-೦೭) ; ನುಲೋ ಎಂಬ ಪರ್ವತದ ಮೇಲೆ ತಿರುಗುಮುರುಗು ಪಾದಗಳುಳ್ಳ ಎಂಟು ಬೆರಳುಳ್ಳ ಜನರಿದ್ದಾರೆ (ಪ್ರವಾಇ. I. ೨೮). [ತಿರುಗು$_2$ + ಮುರುಗು ]

**ತಿರುಗುಮುರುಗು$_2$, ತಿರುಗಮುರುಗ, ತಿರುಗಿಮುರುಗಿ** (ಅ). ಮತ್ತೆ ಮತ್ತೆ ; ಪುನಃ ಪುನಃ : ಅವರು ಅದೇ ಮಾತನ್ನು ತಿರುಗೂಮುರುಗೂ ಆಡುತ್ತ ಹೊರಬಿದ್ದರು (ಮೂಪಾಸಾ. ೦೩). ತಿರುಗಮುರುಗ : ತಿರುಗ ಮುರುಗ ಮತ್ತೆ ಅದೇ ಇದ್ದಕಿದ್ದ ಹಾಗೆ ಇದೆ (ಹೃದಸ. ೩೬-೦). ತಿರುಗಿ ಮುರುಗಿ : ಆ ರಭಸಕಸುರಮಳೆಗಳ್ ... ಕಂಗೆಟ್ಟು ದೆಸೆಗೆಟ್ಟು ಸುಳಿಸುತ್ತಿದುವು ಮರಳಿ ತಿರ್ರನೆ ತಿರುಗಿಮುರುಗಿ (ಶ್ರೀರಾಮಾ. ೬೩೩-೦೦೦).
[ < ತಿರುಗುಮುರುಗು$_1$ ]

**ತಿರುಗುಹ** (ನಾ). (ಸಾಲ ಮುಂತಾದುವನ್ನು) ಹಿಂದಿರುಗಿಸುವಿಕೆ,– ಮರಳಿ ಕೊಡುವಿಕೆ ; “ ನಿಷ್ಕೃತಿ ” (ನಾಚಿರಾ. ೬).
[ ತಿರುಗು$_1$ + – ಹ$_2$ ]

**ತಿರುಗುಳಿ** (ನಾ). “ ತಿರುಪು ಮೊಳೆಯನ್ನು ತಿರುಗಿಸಿ ಬಿಗಿಸುವ ಸಲಕರಣೆ : ತಿರುಪುಳಿ, ತಿರುಗುಳಿ ” (Screw-driver. ಇಂಕಾನಿ).
[ ತಿರುಗು$_1$ + ಉಳಿ$_6$ ]

**ತಿರುಗೊಂಬು** (ನಾ). ತಿರುಚಿಕೊಂಡಿರುವ ಕೊಂಬು; ಹೊಸೆದುಕೊಂಡಿರುವ ಕೊಂಬು : ಕಾಳ್ಕೋಣ ಕಡವೆ ಸಾರಗ ಜಿಂಕೆಗಳ ಕವಲ್ಗೊಂಬುಗಳ್ ತಿರುಗೊಂಬುಗಳ್ ನೀಳ್ದ ಕೊಂಬುಗಳ್ (ಶ್ರೀರಾಮಾ. ೪೩೩-೨೬೨).
[ < ತಿರಿ$_1$ + ಕೊಂಬು$_1$ ]

**ತಿರುಗೋಲು, ತಿರುಕೋಲು** (ನಾ). ೧. ವೃತ್ತಾಕಾರವಾಗಿ ಸುತ್ತುವ ಕೋಲು : ಇದರ ನಡುವೆ ಒಂದು (Rotor) ತಿರುಗೋಲು ಚಲಿಸುವುದು (ಬಾಲಪ್ರ. II, ೬೩೨). ತಿರುಕೋಲು : ೨. ಸುತ್ತಿ ಆಡುವ ಕೋಲಾಟ ; ಜಡೆಕೋಲಾಟ : ಸುರದಂತಿಯುರುದಂತವಮಂ ಮುಟ್ಟಿದು ತಿರುಕೋಲನಾಡುವರು (ಗುರುಚಾ.೨-೬೦)..[ < ತಿರುಗು$_1$ + ಕೋಲು$_1$ ( < ಕೋಲ್$_1$ )]

**ತಿರುಚು₁** 'ತಿರಿಚು' ನೋ.

**ತಿರುಚು₂** (ನಾ). ೧. ನುಲಿದುಕೊಂಡಿರುವಿಕೆ ; ಹೊಸೆದುಕೊಂಡಿರುವಿಕೆ : ಪೆರ್ಗರದ ತಿರುಚಿನಿಂ (ಪರಹ. ೨೯-೨೮). ೨. ಸುರುಳಿ : ಮೇಸನ್ ಎಂಬುವವರಿಗೆ ಅಫ್ಘಾನಿಸ್ಥಾನದ ಸ್ತೂಪಗಳಲ್ಲಿ ದೊರೆತ ತಿರುಚುಗಳು. ದಾರ ಬಿಗಿದಿರುವ ಈ ತಿರುಚುಗಳಲ್ಲಿ ಬರೆಹವಿದೆ (ಭಾರಪ.೦೩).
[ <ತಿರುಚು₁ ]

**ತಿರುಚೂರ್ಣ** (ನಾ). ಶ್ರೀವೈಷ್ಣವರು ನಾಮದ ಮಧ್ಯರೇಖೆಗೆ ಉಪಯೋಗಿಸುವ ಕೇಸರಿಬಣ್ಣದ ಹುಡಿ : ಮುಟ್ಟಬೇಡ ... ತಿರುಮಣಿ ತಿರುಚೂರ್ಣ ಶೃಂಗಾರ ಧರಿಸುವರ (ಕನಕ. ೮೫-೨) ; ಹರಿದಾಸರುಗಳು ... ತಿರುನಾಮ ತಿರುಚೂರ್ಣಗಳ ಪಣೆಯೊಳಗಿಟ್ಟು ತಿರಿಗಿ ಹರಿಯ ಧ್ಯಾನಿಪರು (ಕಂಸವಿ. ೫-೩೭) ; ತಿರುಮಣ್ ಶ್ರೀಚೂರ್ಣ (ತಿರುಚೂರ್ಣ) ಇವುಗಳನ್ನು ಧರಿಸಿದಲ್ಲಿ ... ದೇಹಕ್ಕೆ ಕಾಂತಿಯನ್ನುಂಟುಮಾಡಿ ಸಕಲ ದೋಷಂಗಳನ್ನೂ ಹೋಗಲಾಡಿಸುವುದು (ಸಕವ್ಯ. ೪೦).
[ ←ತಮಿ. ತಿರುಚ್ಚೂರ್ಣ ; ತೆಲು. ತಿರುಚೂರ್ಣ ]

**ತಿರುಚೊಂ** (?). (?) : ಬೇಳಉೂರು ಎಣ್ಬತ್ತು ಗದ್ಯಾಣ ಪೊನ್ನುಂ ಎಣ್ಬನೂಱು ಬತ್ತಮುಮ್ ತಿರುಚೊಂ (ಇಆ. VI. ೧೦೩-೧೪ ; 887?).
[ ? ]

**ತಿರುಣಾಳು** 'ತಿರುನಾಳ್' ನೋ.

**ತಿರುಣಿ** (ನಾ). ೧. ಕುಂಬಾರನ ಚಕ್ರ : ಅನುವಿನಿಂ ಕುಂಬಱಂ ಪಿಡಿದ ದಂಡದಿನಚೇತನಮಾದ ಚಕ್ರಮಂ ತಿರುಪಲಾ ತಿರುಣಿ ತಿರ್ರನೆ ತಿರುಗುವಂತೆ (ಪಾಸೋಪು. ೯-೪೩). ೨. ಮಲ್ಲಯುದ್ಧದ ಒಂದು ವರಸೆ : ತಿರುಣಿ ಕುಳಾಡೆ ಬಾಹುಗೆಣೆ ಸಂದ ಸುಭಾಹುಡೆ ... ಕತ್ತರಗಳೆನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ಕೃಪುವಿ.೨೩-೧೮). [ < ತಿರುಗಣೆ ]

**ತಿರುತುಳಸಿ** (ನಾ). ತುಳಸಿಯಲ್ಲಿ ಒಂದು ಬಗೆ ; ಶ್ರೀತುಳಸಿ : ತಿರುಪತೀ ಹಾದೀಲಿ ತಿರುತುಳಸಿಮರ ಹುಟ್ಟಿ ಬೇಲೂರ್ಗೆ ಬೇರು ಹರಿದಾವೊ. ತಿಮ್ಮಪ್ಪ ಕಲ್ಯಾಣಕ್ಕೆ ಮುಗ್ಗು ಸುರಿದಾವೊ (ಹಳ್ಳಿಹು. ೩೩).
[ ತಿರು₂ + ತುಳಸಿ (= ತುಲಸಿ) ]

**ತಿರುದಳ** (ನಾ). ಮೂರು ಎಸಳುಗಳುಳ್ಳ ಪತ್ರೆ ; ಬಿಲ್ವ : ೪೪ ತಿರುದಳದ ಹುವು ೧೪೪ ಭಂಡಿ ಚಕ್ರಕ್ಕೆ ಅಷ್ಟದಳ ಹುವು (ಎಕ. XIV, ನಂಜನ. ೨೮೯-೫ನೇ ಕಲಂ ; 1847). [ <ಸಂ. ತ್ರಿದಲ ]

**ತಿರುನಕ್ಷತ್ರ** (ನಾ). ಮಹಾತ್ಮರು ಹುಟ್ಟಿದ ನಕ್ಷತ್ರವು ಬರುವ ದಿನ; ಜಯಂತಿ : ಈ ದಿನ ರಾಮಾನುಜ ತಿರುನಕ್ಷತ್ರ (ಹಿರಕ. ೪೦).
[ ತಿರು₂ + ನಕ್ಷತ್ರ ]

**ತಿರುನಱುಂಗೊಂಡೆ** (ನಾ). ಒಂದು ಊರಿನ ಹೆಸರು : ಪಞ್ಚಮಹಾಪಾತಕದ ಫಲ(ಂ) ವಿನೆಟಗ್ಗ(ರ್ಗ)ಮಪ್ಪುದು ತಿರುನಱುಂಗೊಣ್ಡೆಯ ಕಟಿ ಪ್ಪಳ್ಳಿ ಬಟಿ (ಸಾಇಇ. IX-i, ೦೯-೦೩ ; 9ನೆಯ ಶತ). [ ? ]

**ತಿರುನಾಮ** (ನಾ). ಶ್ರೀವೈಷ್ಣವರು ಧರಿಸುವ ನಾಮ : ಹರಿದಾಸರುಗಳು ತಿರುನಾಮ ತಿರುಚೂರ್ಣಗಳ ಪಣೆಯೊಳಗಿಟ್ಟು ತಿರಿಗಿ ಹರಿಯ ಧ್ಯಾನಿಪರು (ಕಂಸವಿ. ೫-೩೭).

**ತಿರುನಾಮ ಹಾಕು** = ಮೋಸಮಾಡು : ನಾಲ್ಕು ದಿವಸ ಕಾಲ ವಿಳಂಬವಾದರೂ ನಾವೇನು ತಿರುನಾಮ ಹಾಕಿ ನಿಮ್ಮ ಹಣ ನುಂಗುವುದಿಲ್ಲ (ಕಾವೇರಿ. ೫೦). [ ← ತಮಿ. ತೆಲು. ತಿರುನಾಮ ]

**ತಿರುನಾಮಧಾರಿ** (ನಾ). ತಿರುನಾಮವನ್ನು ಧರಿಸಿದವನು ; ಶ್ರೀವೈಷ್ಣವ : ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ ಜನ್ಮಸಾರ್ಥಕವಿಲ್ಲದವರೆಲ್ಲ ಭಾಗವತರೆ (ಕನಕ. ೦೨೩ ಪಲ್ಲವಿ).
[ತಿರುನಾಮ + – ಧಾರಿ]

**ತಿರುನಾಳ್**, **ತಿರಿನಾಳ್**, **ತಿರುಣಾಳಂ**, **ತಿರುನಾಳು** (ನಾ). ಹಬ್ಬದ ದಿನ ; ಪರ್ವದಿನ : ದಿನವು ಬೇಱಿಲ್ಲ ತಿರುನಾಳೆ ದಿನವಾ ಪುರಕೆ (ತಿರುಂರ. ದೇ. ೩-೦೯) ; ತಿರುನಾಳೆಂಬುದು ತನಗಂ ನಿರುತಂ ತಾಯ್ಯಿಂದೆ ಬಂಧು ಗತಿಮತಿಯೆನುತಂ ... ಜಾನಿಸುತಿರ್ಪಂ (ಕೃಪುವಿ. ೫೬-೭). **ತಿರಿನಾಳ್** : ಹರನ ಭಕ್ತರ್ಗೆ ಹರ್ಷಂ ಬಪ್ಪ ಮಾಳ್ಕೆಯಿಂ ತಿರಿನಾಳ್ಗಳಲು ಪುರವನರ್ತಿಯಿಂ ಕಯ್ಗೆಯ್ವು (ಮುಂಸೆರ. ದೇ. ೭೦-೦೩). **ತಿರುಣಾಳು** : ವೇದಗಿರಿಪೆರುಮಾಳಿಗೆ ತಿರುಣಾಳನು ಸಾಗಿಸಿ ಪೂಜೆಯನು ಮಾಡಿಸೊದು (ಸಾಇಇ. IX-ii, ೫೩೬-೧ ; 1529). **ತಿರುನಾಳು** : ತಿರುವಧ್ಯಾನ ತಿರುನಾಳು ತಿರುವಿಶಾಖ ನಿತ್ಯಸಮಾರಾಧನೆ ನೈಮಿತ್ತಿಕಸಮಾರಾಧನೆ ನಡೆವಂತಾಗಿ (ಎಕ.XIV, ಶ್ರೀರಂಗ. ೮೭-೦೩ ; 1370) ; ನಂಮ ಸ್ಥಾನದಿಂದ ಬಂದ ತಿರುನಾಳ ಕಾಣಿಕೆ (ಸಾಇಇ. ೧೯೩೪, ಶೃಂಗನೂರು. ೦೩೬-೦೪ : 1419) ; ಕರಿರಾಜ ತಿರುನಾಳು ಭಾಸುರವಿಪ್ಪಿದಿಹ ಹರಿಯ ಸಂಕ್ರಮ ತಿರುನಾಳು ವರರಥಸಪ್ತಮಿಯುತ್ಸವ ತಿರುನಾಳು ಮೆಱೆದವು ರಂಗೇಶಗಾಗ (ಕಂಸವಿ. ೬-೧೦೯).
[← ತಮಿ. ತಿರುನಾಳ್ ; ತೆಲು. ತಿರುನಾಳ್ಳು ]

**ತಿರುನಾಳು** 'ತಿರುನಾಳ್' ನೋ.

**ತಿರುನೀರು** 'ತಿರುನೀಱು' ನೋ.

**ತಿರುನೀಱು**, **ತಿರುನೀರು** (ನಾ). ಪವಿತ್ರವಾದ ಬೂದಿ; ಭಸ್ಮ ; ವಿಭೂತಿ : ನೀವು ಮಂತ್ರಿಸೆನುತ್ತ ತಿರುನೀಱೆಗೊಳ್ವಿ ಮಂತ್ರಿಸಿ ಹಾಯ್ಕಲು (ಬಸಪು. ೫೦-೨೮). **ತಿರುನೀರು** : "ತಿರುನೀರು-ವಿಭೂತಿ (ಈ ಮಾತು ತಮಿಳುನಾಡಿನಲ್ಲಿ ರೂಢಿಯಲ್ಲಿದೆ)" (ಶರಸಾ. ೨೪-೮).
[ ←ತಮಿ. ತಿರುನೀಱು; ತೆಲು. ತಿರುನೀಱು, ತಿರುನೀರು, ತಿರ್ನೀರು ]

**ತಿರುಪ**, **ತಿರಿಪೆ**, **ತಿರುಪೆ** (ನಾ). ೧. ಅಲೆತ ; ಭಿಕ್ಷಕ್ಕಾಗಿ ಸುತ್ತುವಿಕೆ. ೨. ಭಿಕ್ಷೆ ; ಯಾಚನೆ : ತಿರುಪಕ್ಕೆ ಬಂದಿರೋ ಹಾಗಿದೆ (ಉದುಗೊ. ೫೮) ; ತಿರುಪದ ಪುಟ್ಟಿಯಲ್ಲಿ ಶನೀಶ್ವರ ಕೂತ (ಗಾದೆ). **ತಿರಿಪೆ** : ೩. ಭಿಕ್ಷೆ ಎತ್ತಿದ ಆಹಾರ ಅಥವಾ ಧಾನ್ಯ : ಬಡವರಲ್ಲಿ ಅನೇಕರು ತಿರಿಪೆ ತಿಂದೇ ಬದುಕುತ್ತಾರೆ (ರೂಢಿ). **ತಿರುಪೆ** : ೨. ಅಕ್ಕರವು ಲೇಖಕ್ಕೆ ತರ್ಕ ಶಾವಾದಕ್ಕೆ ವಿಂಕ್ಕ ಓದುಗಳು ತಿರುಪೆಗೆ (ಸರ್ವಜ್ಞ. ೪೭೧) ; ನಾಲ್ಕು ಜನ ಸರೀಕರಲ್ಲಿ ತಿರುಪೆಗೆ ಕೈಯೊಡ್ಡಿದೆ (ಕಾಮಿಕಾಂ. ೨೦೭) ; ತಿರುಪೆಗೆ ಹೊರಟ ವರಂತಿತ್ತು (ದೀಪದ. ೩೨). ೩. ನಿನ್ನನ್ನು ನಂಬಿದರೆ ತಿರುಪೆಯೂ ಹುಟ್ಟಲೊಲ್ಲದು ಕೇಳೊ ಹರಿಯೆ (ಪುರಂದ. ೪-೮೭-೩).

**ತಿರುಪವೆತ್ತು**, **ತಿರುಪೆಎತ್ತು**=ಭಿಕ್ಷೆಬೇಡು: ನಿನ್ನಂತಹ ಮಗನನ್ನು ಹೆತ್ತು ಅವರು ಗೋಳಿಡುತ್ತ ತಿರುಪವೆತ್ತಿ ಹೊಟ್ಟೆ ಹೊರೆಯುತ್ತ ಭೂಮಿಯ ಮೇಲೆ ಇರಬೇಕಾಗುವುದಲ್ಲ (ಶೀಷ್ಮದ. ೦೫೫) ; ತಿರುಪೆ ಎತ್ತಬಹುದಿತ್ತು (ಮುಂಗಾಮು. ೧೮). [ದೇ.? ತುಳು. ತಿರುಪ, ತಿರುಪೆ ; ತೆಲು. ತಿರಿಪ]

**ತಿರುಪಕೂಡೆ** (ನಾ). ಮಡಿಬಟ್ಟೆಗಳನ್ನು ಇಡುವುದಕ್ಕಾಗಿ ಶ್ರೀವೈಷ್ಣವರು ಬಳಸುವ ಓಲೆಗರಿಯ ಬುಟ್ಟಿ, – ಗೂಡೆ : ಮೊದಲ ರಾತ್ರಿಯೇ ತಿರುಪಕೂಡೆಗೆ ಮಡಿಬಟ್ಟೆಯನ್ನು ಹಾಕಿಟ್ಟು ಬೆಳಗಾದ ಒಡನೆಯೇ ಅದನ್ನು ಹೆಗಲಿಗೆ ಹಾಕಿಕೊಂಡು ನದಿಗೆ ಸ್ನಾನಕ್ಕೆ ಹೋಗುತ್ತಿದ್ದರು (ನನಮ್ಮೂರ. ೦೨೪) ; ಜೋಡಿದಾರರು, ಓಲೆಗರಿ ಪುಸ್ತಕಗಳೂ ತಿರುಪಕೂಡೆಗಳೂ ನಾಮದ ಗೆಡ್ಡೆಗಳೂ ತುಂಬಿದ್ದ ಒಂದು ಕೊಠಡಿಯನ್ನು ಧೂಳು ಹೊಡೆಸಿ ಅವರಿಗಾಗಿ ಸಿದ್ಧಮಾಡಿದ್ದರು (ಕೃಸರ್ವ. ೨೦) ; ಪಾರುಪತ್ತೇಗಾರರು ಸ್ನಾನ ಮಾಡಿ ಹೆಗಲಿನ ಮೇಲೆ ತಿರುಪಕೂಡೆಯನ್ನೂ ತಲೆಯ ಮೇಲೆ ಒಗೆದ ಪಂಚೆಗಳನ್ನೂ ಬಲಗೈಯಲ್ಲಿ ಚೊಂಬಿನಲ್ಲಿ ತೀರ್ಥವನ್ನೂ ತೆಗೆದುಕೊಂಡು (ಗರುಡಾ. ೦೩೭).
[ ←ತಮಿ. ತಿರುಪ್ಪುಕ್ಕೂಟ್ಟೈ ; ತೆಲು. ತಿರಿಪಗೂಡ, ತಿರಿಪುಗೂಡ]

**ತಿರುಪಣೆ₁** 'ತಿರುಪುಳಿ' ನೋ.

**ತಿರುಪಣೆ₂**, ತಿರುಪ್ಪಣ್ಣಿ (ನಾ). ೧. ದೇವಾಲಯದ ಸೇವೆ ; ದೇವ ಸ್ಥಾನದ ಕೆಲಸ. ೨. ದೇವಾಲಯದ ಜೀರ್ಣೋದ್ಧಾರ : ಯಿಷ್ಟು ಸ್ವಾಸ್ಥ್ಯವನು ಗುರುಮೂರ್ತಿ ತ್ರಿಯಂಬಕಲಿಂಗಗೆ ಅಂಗಭೋಗ ರಂಗ ಭೋಗ ತಿರುಪಣಿ ಕೆಜ್ ಕಾಲುವೆಗೆ ಯಿಷ್ಟಕೆ ಶಲವಾಗಿ ಸಮರ್ಪಿಸ್ಸನು (ಎಕ. XIV, ಗುಂಡ್ಲುಪೇ. ೧೨೮-೦೦೬ ; 1510) : ತೇರು ತಿರು ನಾಳು ತಿರುವಣಿ ಮಾಸೋತ್ಸವ (ಎಕ. IX, ಚನ್ನಪ. ೩೩-೧೨ : 1584). ೩. ದೇವಾಲಯದಿಂದ ಬರುವ ವರಮಾನ : ತಿರುಪಣಿಗೆ ಸಮರ್ಪಿಸ್ತ ರಾಯದುರ್ಗದ ಸೀಮೆಗೆ ಸಲ್ಲುವ [ಬ್ರ]ಹ್ಮಸಮುದ್ರದ ಗ್ರಾಮ (ಸೌಇಇ. IV, ೨೩೩-೦೬ , 1518). **ತಿರುಪ್ಪಣ್ಣಿ** : ೨. ಯೇಳು ನಿಲೆಯ ಗೋಪುರದ ತಿರುಪ್ಪಣ್ಣಿಗೆ ಕಲ್ಲು ಹಚ್ಚಿಸಿದ ಗ ೭೫೦ (ಸೌಇಇ. IX-II. ೩೩೦-೯ : 1582). [ ←ತಮಿ. ತಿರುಪ್ಪಣಿ ]

**ತಿರುಪತಿ** (ನಾ). ೧. ದೇವಾಲಯ : ತಿರುಪತಿ ನೂಱೆಂಟರೊಳಂ ಪರಮಾತ್ಮನ ದಿವ್ಯಮೂರ್ತಿಗಳ್ ಸ್ಫುರಿಕಂ (ದಿವ್ಯಸೂ. ೬-೪೪). ೨. ದಕ್ಷಿಣ ಭಾರತದ ಆಂಧ್ರಪ್ರದೇಶದಲ್ಲಿರುವ ಒಂದು ಪ್ರಸಿದ್ಧ ಹಿಂದೂ ಯಾತ್ರಾಸ್ಥಳ ; ವೆಂಕಟೇಶ್ವರಸ್ವಾಮಿಯು ನೆಲಸಿರುವ ಬೆಟ್ಟ : ತಿರುಪತಿ ವೇಂಕಟರಮಣ ನಿನಗೇತಕೆ ಬಾರದು ಕರುಣ (ಪುರಂದ. ೦-೬೬ ಪಲ್ಲವಿ) ; ತಿರುಪತಿ ಕರೆವುದು ಶ್ರೀಶೈಲವನಗೊ ಉಡುಪಿಗೆ ಕಿವಿಗೊಡೆ ಗೋಕರ್ಣ (ಅರಳು. ೩೦೯-೦೩) : ತಿರುಪತಿ ಕ್ಷೌರಿಕರು ತಲೇ ಬೋಳಿಸಿದ ಹಾಗೆ (ಗಾದೆ).

ತಿರುಪತಿ ಆಗು=ನಷ್ಟಹೊಂದು ; ಕಳೆದುಕೊಳ್ಳು ; ಮೋಸ ಹೋಗು : ನನಗೆ ಒಂಬತ್ತಾಣೆ ತಿರುಪತಿ ಆದುದರ ವಿನಾ ಇನ್ನಾವ ಒಳ್ಳೆಯ ಪರಿಣಾಮವೂ ಉಂಟಾಗಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ (ಸಾಹಿಗೀ. ೨೮೩). ತಿರುಪತಿಕ್ಷೌರ = ಅರ್ಧಂಬರ್ಧ ಮಾಡಿ ನಿಲ್ಲಿಸಿದ ಕೆಲಸ ; ಅಪೂರ್ಣವಾದ ಕೆಲಸ : ಮಾಡೋ ಕೆಲಸ ಸರಿಯಾಗಿ ಮಾಡು , ತಿರುಪತಿ ಕ್ಷೌರ ಮಾಡಬೇಡ (ರೂಢಿ).

[ ← ತಮಿ. ತಿರುಪ್ಪತಿ ; ತುಳು. ತೆಲು. ತಿರುಪತಿ ]

**ತಿರುಪಳಿ** ' ತಿರುಪುಳಿ ' ನೋ.

**ತಿರುಪಾಟ₁** (ನಾ). ಸುತ್ತು ತಿರುಗಿಸುವಿಕೆ : ರಂಗುರಂಗಿನಾ ಸೀರೆ, ಕಣ್ಣ ತಿರುಪಾಟವಾಡೆ ಮಧುವು (ಕಮೇಘ. ೨೦-೦೦).

[ ತಿರುವು₁ (<ತಿರಿವು₁)+ ಆಟ ]

**ತಿರುಪಾಟ₂** ' ತಿರುಪಾಟು ' ನೋ.

**ತಿರುಪಾಟು**, ತಿರುಪಾಟ₂, ತಿರುಪಾಟ್ಟು, ತಿರುಪಾಡು (ನಾ). ಶಿವನನ್ನು ಕುರಿತು ಮಾಡುವ ಸ್ತೋತ್ರ ; ತೇವಾರ : ನಂಬ್ಯಣ್ಣನುಸುರ್ದುರುತರವೆನಿಪ್ಪ ತಿರುಪಾಟುಗಳ ಪಾಡುತ್ತಿರಲ್ (ಅರಾಕ. ೬-೩) : ಶ್ರೀಗಿರಿಜಾರಮಣಗೆ ನಲಿದಾನತನಾಗಿ ಪಾಡಿದ ನಂಬಿ ತಿರುಪಾಟ (ಪ್ರಭುಶಿ. ೯೭-೦೬) ; ಸೌಂದರಂ ಪ್ರೇಮದಿಂ ವಾಲ್ಮೀಕ ನಾಥನಲ್ಲಿಗೆ ಬಂದು ತಿರುಪಾಟ ಪಾಡುವಲ್ಲಿ (ಚೀರಮ. ೦೦-೪) ; ಇರ್ವ ರಂದು ತಿರುಪಾಟುಗಳ ಪಾಡಲ್ (ಹಾಸೋಕು. ೬-೦೦೦). **ತಿರುಪಾಟ₂** : ಭಕ್ತರ ಚರಿತೆಗಳನಾನಂದದಿಂ ತಿರುಪಾಟ ರೀತಿಯೊಳೊಂದಿ ಪಾಡುತ (ಬಸವು. ೨೭-೭೦) : ಬಾಗಿಲ ತೆಗಸಿ ಲಿಂಗವ ಪೂಜಿಸಿ, ತಿರುಪಾಟವಂ ಪಾಡಿ (ಭೈರಸೂ. ೨೨೦). **ತಿರುಪಾಟ್ಟು** : ಪುರಾಣ ನಿತ್ಯ ಹೋಮ ವೇದ ಪಾರಯಣ ಶ್ರೀತಿರುಪಾಟ್ಟುಯಿಷ್ಟು ಶ್ರೀಕಾರ್ಯ್ಯಕೆಲು ಕೂಡಿ ಮಾಡಿದ ಕಡಕಟ್ಟು (ಮೈಆರಿ. ೧೯೩೮, ೭೩-೦೦ ; 1381). **ತಿರುಪಾಡು** : ಶಂಕರನಂ ಕರೆಯೆ ಕರೆವ ತಿರುಪಾಡಿನ ನಾದಕ್ಕೆ ನಾಗಕುಲವೆಲ್ಲಂ ಮಱೆದು ತಲೆದೂಗಿ (ಬಾಗೀರ.ದೇ. ೨೬೬-೦೯) ; ತಾಳವನಿತ್ತು ತಿರುಪಾಡ ಪಾಡೆಂದು ಬೆಸಸಿ (ಸೌಂದಪು. ೬-೪೪) ; ಹಂಪೆಯು ತೇರಿನ ತಿರುಪಾಡು ಪಂಪಾದೇವಿಯು ವಿರೂಪಾಕ್ಷನನ್ನು ಒಲಿದು ಒಲಿಸಿಕೊಂಡ ಆ ಸುಮನೋಹರ ನಿತ್ಯಕಲ್ಯಾಣ (ತುಂಗಭ. ೬೯). [ ← ತಮಿ. ತಿರುಪ್ಪಾಟ್ಟು ]

**ತಿರುಪಾಟ್ಟು** ' ತಿರುಪಾಟು ' ನೋ.

**ತಿರುಪಾಡು** ' ತಿರುಪಾಟು ' ನೋ.

**ತಿರುಪು₁** ' ತಿರಿವು₁ ' ನೋ.

**ತಿರುಪು₂** ' ತಿರಿವು₂ ' ನೋ.

**ತಿರುಪುಗೊಳು** (ಕ್ರಿ). ತಿರುಗುವ ಒಂದು ಭಂಗಿಯನ್ನು ಹೊಂದು : ನಡೆದು ನಡೆದು ಲಾಗಿನಲೋಲಾಡುತೆ ತಡೆದು ತಡೆದು ತೂಗುತೆ ಲೋಲಾಡುತೆ ತಿರುಪುಗೊಳುತೆ ಕಾಳಾಸದಿ ನಿಲುತಂ [ಪಾಠಾಂ. ಹಿರಿದುಂ ನೆಗೆದಾಕಾಶದಿ ನಿಲುತಂ] (ಕೃಂಗೀರ. ಹ. ೪೬೮-೦೮) ; ಸುಟಿಯೊಳಾವರ್ತ ತಿರುಪುಗೊಂಡು ನಾಟ್ಯವ ಪಟಂಗೊಳಿಸಿದರೇವೆಳ್ಳೆ (ಕಂಸವಿ. ೨೦-೧೦೪).

[ತಿರುಪು₂ (< ತಿರಿವು₂) + ಕೊಳು (< ಕೊಳ್₁)]

**ತಿರುಪುಟ್ಟಿ** (ನಾ). ಶ್ರೀವೈಷ್ಣವರಂ ಮಡಿಬಟ್ಟೆ, ಜಪಸರ, ಸಾಲಿಗ್ರಾಮ ಮೊದಲಾದುವುಗಳನ್ನು ಇಡುವ ಪೆಟ್ಟಿಗೆ ಅಥವಾ ಬುಟ್ಟಿ : ಇವನ ತಿರುಮಣ್ಣಿಡಲು ಅವನ ತಿರುಪುಟ್ಟಿ; ಬೇಹಾರವಕ್ಕಿರಲಿ ಬಂದಿಲ್ಲ ಬಿಟ್ಟಿ (ಗಹಕ. ೬೯-೧). [ ←ತಮಿ. ತಿರುಪ್ಪುಟ್ಟಿಲ್ ]

**ತಿರುಪುನಿಚ್ಚಣಿಕೆ** (ನಾ). ಚಕ್ರಾಕಾರವಾಗಿ ಇರುವ ಸೋಪಾನ : ಕತ್ತಲೆ ಗೂಡಿನಂತಿದ್ದ ಭಯಾನಕವಾದೊಂದು ಆಕೃತಿ, ಪಾತಾಳದಿಂದ ಸ್ವರ್ಗದ ವರೆಗೆ ಬೆಳೆದು ನಿಂತ ತಿರುಪುನಿಚ್ಚಣಿಕೆ ... ಆ ಚಿತ್ರಶತಕ್ಕೆ ಏಕಸೂತ್ರ ವಾಗಿತ್ತು (ಧರ್ಮಸಿ. ೦೮). [ ತಿರುಪು₂ ( <ತಿರಿವು₂) + ನಿಚ್ಚಣಿಕೆ ]

**ತಿರುಪುಹೂ** (ನಾ). (ಹೆಂಗಸರು) ತುರುಬು ಅಥವಾ ಜಡೆಗೆ ತಿರುಗಿಸಿ ಕೊಳ್ಳುವ ಒಂದು ಬಗೆಯ ಚಿನ್ನದ ಹೂವು ; ಜಡೆಯ ಬಿಲ್ಲೆ ; ಜಡೆಹೂವು : (ಕ).

[ತಿರುಪು₂(<ತಿರಿವು₂)+ಹೂ₂(<ಪೂ₂)./ ತೆಲು. ತಿರುಗುಡುಪುವ್ವು]

**ತಿರುಪುಳಿ**, ತಿರುಪಣೆ₁, ತಿರುಪಳಿ (ನಾ). ೧. "ತಿರುಪುಮೊಳೆಯನ್ನು ತಿರುಗಿಸಿ ಬಿಗಿಸುವ ಸಲಕರಣೆ : ತಿರುಪುಳಿ, ತಿರುಗುಳಿ" (Screw-driver. ಇಂಕನಿ). **ತಿರುಪಣೆ₁** : ೨. ತಿರುವುಗಳಿಂದ ಕೂಡಿರುವುದು ; ಸುತ್ತುಗಳನ್ನುಳ್ಳುದು : ಯುಗದ ಜುಗದ ತಿರುಪಣಿಯ ದಾರಿಯನ್ನು ಸಾವಕಾಶ ಹತ್ತಿ (ಅರಳು. ೨೦೬-೪). **ತಿರುಪಳಿ** : ೩. ತಿರುಪು ; ಮಲಸೂತ್ರ : ಹಾಕಿರುವ ತಿರುಪಳಿ ಎಲ್ಲಿಯೊ ಸಡಿಲಾದ ಹಾಗಿದೆ (ಉಡುಗೊ. ೦೩೪). [ತಿರುಪು₂ (<ತಿರಿವು₂) + ಉಳಿ₂./ತಮಿ. ತಿರುಪ್ಪುಳಿ; ತುಳು. ತಿರ್ಪುಳಿ, ತಿಪ್ಪುಳಿ ]

**ತಿರುಪೆ** ' ತಿರುಪ ' ನೋ.

**ತಿರುಪೆಕೂಳು** (ನಾ). ತಿರಿದು ತಂದ ಆಹಾರ ; ಭಿಕ್ಷಾನ್ನ : ಹರಿವಾಣ ದೊಳಗದ್ದುತಾನ್ನವ ಇರುತಿರೆ ತಿರುಪೆಕೂಳನು ತಿನ್ನಲ್ಯಾಕಯ್ಯ (ಕನಕ. ೦೬೩-೨). [ ತಿರುಪೆ (<ತಿರುಪ) + ಕೂಳು₂ (<ಕೂಟ್₁) ]

**ತಿರುಪೆಗಾರ** (ನಾ). ತಿರುಕ ; ಭಿಕ್ಷುಕ : (ಕ).

[ ತಿರುಪೆ (<ತಿರುಪ) + – ಕಾರ₁ ( < – ಕಾಱ ) ]

**ತಿರುಪೆಗಾರ್ತಿ** (ನಾ). ತಿರುಕಿ ; ಭಿಕ್ಷುಕಿ : (ಕ).

[ ತಿರುಪೆಗಾರ + – ತಿ₁ ( < – ಇತ್ತಿ ) ]

**ತಿರುಪೆರಿಭಟ್ಟ** (ನಾ). ಒಬ್ಬಾತನ ಹೆಸರು : ತಿರುಪೆರಿಭಟ್ಟರ್ಗ್ಗೆ ಸೆಟ್ಟಿ ಕೊಟ್ಟ ಸರ್ಬಾಪದ ಪರಿಹಾರ (ಎಕ. X (೮), ಬಾಗೇಪ. ೦೦೨-೧ ; ಸು. 10 ನೆಯ ಶತ). [ ತಿರುಪೆರಿ ? + ಭಟ್ಟ ]

**ತಿರುಪ್ಪಣ್ಣಿ** ' ತಿರುಪಣೆ₂ ' ನೋ.

**ತಿರುಪ್ಪಾಯಿ** (ನಾ). ತಮಿಳುಭಾಷೆಯಲ್ಲಿರುವ ಒಂದು ಧಾರ್ಮಿಕ ಗ್ರಂಥದ ಭಾಗ ; ಆಂಡಾಳ್ ಬರೆದಿರುವ ನಾಲಾಯಿರ ಪ್ರಬಂಧದ

ಒಂದಂ ಭಾಗ : ವೇದಪಾರಾಯಣ ತಿರುಪ್ಪಾಯಿ ಶ್ರೀಕಾರಕ್ಕೆ ಊರ ಮೂಡಣ ಮಾಯಣ್ಣನ ಭೂಮಿಯೊಳಗೆ ಇರ್ಕ್ಕಣ್ಣುಗ ಗದ್ದೆ ಹೊಲ ತೋಟ ಸಹ . . . ಧಾರಾಪೂರ್ವಕವಾಗಿ ಕೊಟ್ಟರು (ಮೈಆರಿ. ೧೯೨೮, ೫೬-೨ ; 1890). [ ← ತಮಿ. ತಿರುಪ್ಪಾವೈ ]

**ತಿರುಪ್ಪು** 'ತಿರಿಪ್ಪು$_1$' ನೋ.

**ತಿರುಪ್ರಬಂಧ** (ನಾ). ವಿಷ್ಣುವಿನ ಪಾರಮ್ಯವನ್ನು ಕುರಿತ ಹಾಡು : ವಾಸುದೇವನ ತಿರುವಡಿಗಳನ್ನು ನುತಿಸಿ ಪೂಜಿಸಿ ತಿರುಪ್ರಬಂಧಾದಿಗಳ ಪಾರಾಯಣವ ಮಾಡುತಲಿ (ಗಗಿಕಾ. ೧೯-೪೯). [ ತಿರು$_2$ + ಪ್ರಬಂಧ ]

**ತಿರುಬೊಬ್ಬೆ** (ನಾ). ಇನ್ನೊಬ್ಬರ ಮೇಲೆ ತಿರುಗಿಸಿ ಮಾಡುವ ಗದ್ದಲ, -ಕೂಗಾಟ : ಅಂದರೆ ಇದು ಕಳ್ಳನ ತಿರುಬೊಬ್ಬೆ (ಸ್ವ$_1$ಶಿಜಿ. ೨೪೨).
[ < ತಿರುಗು$_1$ + ಬೊಬ್ಬೆ$_1$ ]

**ತಿರುಬೋಕಿ** (ನಾ). ೧. ತಿರುಕನ ಓಡು ; ಭಿಕ್ಷಾಪಾತ್ರೆ : (ಕ). ೨. ತಿರುಕ ; ಭಿಕ್ಷುಕ. ೩. ದರಿದ್ರ ; ಬಡವ : ತಿರುಬೋಕಿಗಳನ್ನು ಕಟ್ಟಿಕೊಂಡು ನಾಟಕ ಮಾಡು (ನಟಸಾ. ೭೪). [ < ತಿರಿ$_1$ + ಬೋಕಿ ]

**ತಿರುಮಂತ್ರ** (ನಾ). ೧. ಪವಿತ್ರವಾದ ಮಂತ್ರ : ಮುಟ್ಟಬೇಡ ಮುಟ್ಟಬೇಡ . . . ತಿರುಮಂತ್ರ ತೀರ್ಥಪ್ರಸಾದಕೊಳಗಾದವರ (ಕನಕ. ೯೩-೨). ೨. (ಆಲಂ) ಪ್ರತಿಯಾಗಿ ಹೇಳುವ ಮಂತ್ರ ; ತಿರುಗುಬಾಣ : ಸ್ವಾತಂತ್ರ್ಯದ ಚಳುವಳಿ ತೀವ್ರವಾಯಿತು. ತಿರುಮಂತ್ರಕ್ಕೆ ಗುರುವೇ ತಲೆಬಾಗಿದನು (ಭಾರದ. ೪೨೮).

**ತಿರುಮಂತ್ರ ಹಾಕು** = ಎದುರಿಸು ; ಪ್ರತಿಭಟಿಸು ; ಪ್ರತೀಕಾರ ಮಾಡು: ಎಷ್ಟೋ ಜನರಿಗೆ ನೀನು ತಿರುಮಂತ್ರ ಹಾಕಿದೆ (ಮುಂಗಾಮು. ೩): ಅಪ್ಪಣ್ಣ ಗುರುವಿಗೆ ತಿರುಮಂತ್ರ ಹಾಕಬೇಡ (ನ್ಯದ್ಯವಿ. ೦೦೩). **ತಿರುಮಂತ್ರ ಹೇಳು** = ತಿರುಮಂತ್ರ ಹಾಕು : ಗುರುವಿಗೆ ತಿರುಮಂತ್ರ ಹೇಳಿದ ಹಾಗೆ (ನೀತಿಚಿಂ. VI. ೨೨); ಈ ಅಸಭ್ಯರೇ ಕಬ್ಬಿಣವನ್ನು ಮಾಡುವುದನ್ನು ಕಲಿತು ಯಜಮಾನರಿಗೆ ತಿರುಮಂತ್ರ ಹೇಳಿದರು (ಶಿಲ್ಪನಾ. ೬೭).
[ತಿರು$_2$ + ಮಂತ್ರ. /ತಮಿ. ತಿರುಮನ್ತಿರ ; ತೆಲು. ತಿರುಮಂತ್ರ]

**ತಿರುಮಣ್**, ತಿರುಮಣ್ಣು (ನಾ). ಶ್ರೀವೈಷ್ಣವರು ಹಣೆಯ ಮೇಲೆ ಧರಿಸುವ ತಿರುಚೂರ್ಣದ ಅಕ್ಕಪಕ್ಕದಲ್ಲಿ ನಾಮ ಹಾಕಿಕೊಳ್ಳಲು ಉಪಯೋಗಿಸುವ ಪವಿತ್ರವಾದ ಬಿಳಿಯ ಪುಡಿ: ತಿರುಮಣ್ ಶ್ರೀಚೂರ್ಣ (ತಿರುಚೂರ್ಣ) ಇವುಗಳನ್ನು ಧರಿಸಿದಲ್ಲಿ . . . ಸಕಲದೋಷಂಗಳನ್ನೂ ಹೋಗಲಾಡಿಸುವುದು (ಶಿಕವ್ಯ. ೯೦). **ತಿರುಮಣ್ಣು**: ಶರಣರ ಮೊಗವೊತ್ತೆ ಹರಿಯ ಚರಣಮುದಚ್ಯುವಡೆದು ತಿರುಮಣ್ಣಾಯ್ತುಕ್ಕುಂ (ಮ್ಯಸೂಮು. ೨-೩೭).
[← ತಮಿ. ತಿರುಮಣ್ ; ತೆಲು. ತಿರುಮನ್ನು]

**ತಿರುಮಣಿ** (ನಾ). = ತಿರುಮಣ್ : ನೋಟಕಾಶ್ಚರ್ಯವಾದ ನಗೆಮುಖ ನೊಸಲೊಳಗೆ ತಿರುಮಣಿಯ ಕಂಡೆನು (ಪುರಂದ. ೧-೦೦೯-೧) ; ತಿರುಮಣಿ ತಿಲುಕವ ತಿದ್ದಿ (ಗೀತಗೋ. ೭-೦) : ತಿರುಮಣಿಯನಿಡದ ಮೋರೆಯು ಸ್ಮಶಾನಕೆ ಸರಿಯು (ತಿರುಕ. ೭-೦೩).
[ < ತಿರುಮಣ್. / ತೆಲು. ತಿರುಮಣಿ ]

**ತಿರುಮಣ್ಣು** 'ತಿರುಮಣ್' ನೋ.

**ತಿರುಮಲೆ** (ನಾ). ಪವಿತ್ರವಾದ ಬೆಟ್ಟ ; ತಿರುಪತಿ : ಶ್ರೀನಿವಾಸನು ಕೂಡ ತಿರುಮಲೆಗೆ ನೆಲೆ ನಿಂತ ಮಣ್ಣಲ್ಲ ಈ ಭೂಮಿದೇವನೊಲುಮೆ (ಅರಳು. ೧೪೦-೨೪) ; ಶೀಟೆಗೆ ಮಕ್ಕಳ ಹೆತ್ತು ತಿರುಮಲೆದೇವರ ಹೆಸರಿಟ್ಟ ಹಾಗೆ (ಗಾದೆ). [←ತಮಿ. ತಿರುಮಲೈ ; ತೆಲು. ತಿರುಮಲ]

**ತಿರುಮಾಲೆ** (ನಾ). ೧. ದೇವತಾಮೂರ್ತಿಗಳಿಗೆ ಹಾಕುವ ಹೂವಿನ ಹಾರ : ತಿರುಮಾಲೆ ಜೋಡು ೪ (ಸೌಇಇ. IX-II, ೪೮೯-೩೯ ; 1513) ; ತಿರುಮಲೇಶ್ವರ ಲಿಂಗಕೆ ತಿರುಮಾಲೆ ಜೋಡು ೧೦ (ಸೌಇಇ. IX-II, ೫೩೦-೫ ; 1582). ೨. ಭಕ್ತರಿಗೆ ಪ್ರಸಾದರೂಪವಾಗಿ ಕೊಡುವ ದೇವರ ವಿಗ್ರಹದ ಮೇಲಿನ ಹಾರ: ವರಕಾಲಸ್ವಾಮಿಗಳವರಿಗೆ ಮೊದಲು ತೀರ್ಥ ತಿರುಮಾಲೆ ವರಶೆ ವಿನಿಯೋಗ ಶ್ರೀಶಟಗೋಪ ಮುಂತಾದ ಸಕಲ ಮರಿಯಾದೆಗಳನ್ನು ಪ್ರಥಮತಾ ಕೊಡುವಂತೆ (ಮೈಆರಿ. ೧೯೩೮, ೧೯-೭ ; 1811).
[ ←ತಮಿ. ತಿರುಮಾಲೈ ; ತೆಲು. ತಿರುಮಾಲ ]

**ತಿರುಮಾಳಿಗೆ** (ನಾ). ೧. ದೇವಸ್ಥಾನದ ಪ್ರಾಕಾರದ ಸುತ್ತಲೂ ಇರುವ ಮನೆಗಳ ಸಾಲು. ೨. ದೇವರ ಮನೆ; ದೇವರ ವಿಗ್ರಹವಿರುವ ಕಿರುಮನೆ. ೩. ಗೌರವಸ್ಥರ ಮನೆ : ತಿರುಮಾಳಿಗೆ ಹರಿದಾಸರು ಅಟ್ಟವಣೆ ಗಂಡು ಹೆಣ್ಣು ಎಲ್ಲರಿಗೂ ಇದು ದೊಡ್ಡ ಉತ್ಸವವಾಗಿದ್ದಿರಬೇಕು (ಗರುದಾ. ೧೩೪).
[ ←ತಮಿ. ತಿರುಮಾಳಿಕೈ ; ತೆಲು. ತಿರುಮಾಳಿಗ ]

**ತಿರುಮೀಸೆ** (ನಾ). ತಿರಿಚಿದ ಮೀಸೆ; ಹುರಿಮಾಡಿದ ಮೀಸೆ : ಹೊಂಬಣ್ಣ ತಿರುಮೀಸೆಯುಬ್ಬುರಕೆ ಮಣ್ಣಕ್ಕಿ ಸವುತೆಯನು ಮೆಲುವ ನಾಲಗೆಗೆ ಸುಣ್ಣವನು ತೀಡಿ ! (ಕಎತ್ತು. ೪-೫). [ <ತಿರಿ$_1$ + ಮೀಸೆ ]

**ತಿರುಮು** (ನಾ). ಜ್ಞಾನ; ಪ್ರಜ್ಞೆ : ಅಳತೆ ಮೀರಿ ಒಂದು ಚಿಮಿಟ ನಸ್ಯವನ್ನು, ಅವರು ನನ್ನ ಮುಂದೆ ಬಿಡಿಸಿ ಹಿಡಿದ ಬಾಳೆಪೊಟ್ಟಣದಿಂದ ಎತ್ತಿ, ಮೂಗಿಗೆ ಏರಿಸಿದೆ. ಏರಿಸಿದ್ದೇ ತಡ ತಿರುಮೇ ಹೋಯಿತು (ಬಿಟ್ಟಜೀ. ೦೦). [ ? ]

**ತಿರುಮುಡಿ** (ನಾ). ಹಿಂದಲೆಯಲ್ಲಿ ಬಿಟ್ಟ ಮುಡಿ, — ಶಿಖೆ : ನಾಡೊಳಗೆ ಸಾಮ್ರಾಜ್ಯಮುಮನೀಡಾಡಿ ತಿರುಮುಡಿಯುಂ ಧರಿಸಿ ರತಿ ಮೂಡೆ ಶಿವನಂ ಮೆಚ್ಚಿಸಿದ ಕಲಿಪಾಲನಾಳಾನು (ಬಸಪು. ೨೭-೬೮).
[ ← ತೆಲು. ತಿರುಮುಡಿ ]

**ತಿರುಮುರಿ** 'ತಿರುವುಮುರುವು' ನೋ.

**ತಿರುಮುರುವು** 'ತಿರುವುಮುರುವು' ನೋ.

**ತಿರುಮುರುಹು** 'ತಿರುವುಮುರುವು' ನೋ.

**ತಿರುಮೂರ್ತಿ** (ನಾ). ಪವಿತ್ರವಾದ ಶರೀರವುಳ್ಳವನು : ತಿರುಮೂರ್ತಿ ಮಾಡು ನನ್ನನ್ನು ನಿನ್ನ ಚಿನ್ಮೋದ ಬೋಧ ಬಿತ್ತಿ (ಹ್ಯದಸ. ೩-೬).
[ ತಿರು$_2$ + ಮೂರ್ತಿ ]

**ತಿರುರಾಜ್ಯ** (ನಾ). ಶುಭಕರವಾದ ರಾಜ್ಯ : ಶ್ರೀಮದುರಾಳಕ್ಕಳವರ ತಿರುರಾಜ್ಯದಲ್ (ಎಕ. IX. ಹೊಸಕೋ. ೦೩-೨ ; 900 ?).
[ ತಿರು$_2$ + ರಾಜ್ಯ ]

**ತಿರುವ** (ನಾ). ಒಂದು ಬಗೆಯ ಔಷಧದ್ರವ್ಯ : ಜಂಬೆ, ತಿರುವ, ಹಿಲ್ಪೆ, ಇರುಳ್ (ಮ್ಯಶಿಗಿ. ೭೯-೦೬೧೮). [ ? ]

**ತಿರುವಂದಿಕಾಪು** (ನಾ). ದೇವತಾಪೂಜೆಯ ಕೊನೆಯಲ್ಲಿ ದೃಷ್ಟಿದೋಷ ನಿವಾರಣಾರ್ಥವಾಗಿ ಮಾಡುವ ಕ್ರಿಯೆ : ತಿರುವಂದಿಕಾಪು ತಿರುಣಾಳು ವೈಗಾಶಿ x x x ಲೂ ನಡೆವಂಥಾ ತಿರುನಾಳಿಗೆ (ಸೌಇಇ. IX-i, ೪೮೯-೪೦ ; 1513). [ ←ತಮಿ. ತಿರುವನ್ತಿಕ್ಕಾಪ್ಪು ]

**ತಿರುವಡಿ** (ನಾ). ಪವಿತ್ರವಾದ ಪಾದ ; ಪೂಜ್ಯವಾದ ಪಾದ : ಚೊಕ್ಕಪ್ಪೆರುಮಾಳು ದೇವರ ಮುಂನಿನ ತಿರುವಡಿಯಾದ್ಪಡಳರಿಗೆ ಮೂಡಲು . . . ಕಲ್ಲು ನೆಟ್ಟು ಕೊಟ್ಟ ಗದ್ದೆ (ಎಕ. XII, ತುಮುಕೂ. ೦೭-೨೦ ; 1287) ; ನಮಗೆ ನಿಂಮ ಚೆಂನ್ನಾದ ತಿರುವಡಿ ಪದವ ಕೊಡಿ (ಮ್ಯಆರಿ. ೧೯೩೩, ೫೩-೩ : 1593) ; ಬುದ್ಧನ ತಿರುವಡಿಗೆ ಶರಣೆಂದು ಬಂದ ಅಶೋಕನಾದರೂ ತನ್ನ ಶಾಸನದಲ್ಲಿ ಹೇಳಿದ ಮಾತು ಹೊಸದೇನಲ್ಲ (ರಾಮುರಾ. ೬೩).
[ ←ತಮಿ. ತಿರುವಟಿ ; ತೆಲು. ತಿರುವಡಿ ]

**ತಿರುವತ್ತಿಸಾಮು** (ನಾ). ಧನುರ್ಮಾಸದಲ್ಲಿ ದೇವರಿಗೆ ಅರ್ಪಿಸುವ ಒಂದು ಬಗೆಯ ನೈವೇದ್ಯ: ಏಕಾಂತ ಅವಸರ ನೈವೇದ್ಯ ಕಟ್ಟಳೆ ತಿರುವತ್ತಿಸಾಮು ಹರಿವಾಣ ೨ಕಂ ಸಂಣಕ್ಕಿ (ಸೌಇಇ. IX-ii, ೫೬೨-೪; 1529). [ < ತಿರುವದಿ + ಸಾಮು ? ]

**ತಿರುವದಿ** (ನಾ). ಧನುರ್ಮಾಸದಲ್ಲಿ ಆರ್ದ್ರಾನಕ್ಷತ್ರದ ದಿನ ಶಿವಾಲಯಂಗಳಲ್ಲಿ ಮಾಡುವ ಉತ್ಸವ: ಶ್ರೀಮತು ದುಗಂಣದೇವರು ತಿರುವದಿಯು ವೊದಲೀಸ್ವರಮೊ[ ಡ ]ಯನಾಯನಾರುಗೆ ಆಸ್ತಾನಿಕರಿಗೆ ಕೊಟ್ಟ ಸಂಸ್ತ (ಸೌಇಇ. IX-ii, ೪೦೩-೬; 1370). [ ←ತಮಿ. ತಿರುವಾತಿರೈ ]

**ತಿರುವಧ್ಯಾನ** (ನಾ). ಪವಿತ್ರಗ್ರಂಥಗಳ ಚಿಂತನೆ: ತಿಂಮರಾಜಯ್ಯನವರು ಮಾಡಿಸಿದ ಪುಲ್ಲಿವೇಟು ತಿರುವಧ್ಯಾನ ತಿರುನಾಳ ಚಿರವು ದಿನ ೧೦ (ಸೌಇಇ. IV, ೨೬೫-೪; 1560). [ ←ತಮಿ. ತಿರುವತ್ತಿಯಯಯನ ]

**ತಿರುವಮುದು** (ನಾ). ದೇವರಿಗೆ ಅರ್ಪಿಸುವ ಅನ್ನದ ನೈವೇದ್ಯ; ಅವ್ಮೃತಪಡಿ: ಕೆಱೆಗೆ ಬತ್ತವಟ್ಟವು ದೇವರ್ಗೆ ತಿರು[ವ] ಮುದಿಂಗೆ ಬಿಟ್ಟ ಭೂಮಿಯುಮಂ ಕಲ್ನಟ್ಟ ಕೊಡುವುದಕ್ಕೆ . . . ಒಡೆಯಾರ್ ಧಾರಾಪೂರ್ವಕಂ ಈವನು (ಮೈಆರಿ. ೧೯೪೬, ೨೮-೬; 1082). [ ← ತಮಿ. ತಿರುವಮುತು ]

**ತಿರುವಯ್ಯ** (ನಾ). ಒಬ್ಬಾತನ ಹೆಸರು: ತಿರುವಯ್ಯನ ಮಗಂ ಚನ್ದ್ರಸೇಕರಂ ಮ್ಮಣ್ಣಗಲ್ಲ ಕೆಱೆಗೆ ಬತ್ತಕಟ್ಟ ಬಿಟ್ಟಂ (ಎಕ. X, ಮುಳಬಾ. ೧೯೮-೨; ಸು. 950). [ ತಿರು₂ + ಅಯ್ಯ₁ ]

**ತಿರುವರಿಯಾಟ** (ನಾ). ದೇವರಿಗೆ ತೊಡಿಸುವ ಬಟ್ಟೆ: ಶ್ರೀ ಆದಿಗುಂಚಯ ನಾರಸಿಂಹ್ವದೇವರ ತಿರುವರಿಯಾಟ ಅಂಗರಂಗಬೋಗ xxx ಲಂಬಲರ ಗ್ರಾಮ (ಎಕ. XIV, ತಿರುಮ. ೧೪೮-೮; 1556). [ ← ತಮಿ. ತಿರುಪ್ಪರಿವಟ್ಟ; ತೆಲು. ತಿರುಪಾವಡ ]

**ತಿರುವಳಿ** (ನಾ). ಒಂದು ಬಗೆಯ ವನಸ್ಪತಿ: "ಗ್ರಂಥಿಲಃ—ಹಲು ಮಾಣಿಕ, ತಿರುವಳಿ, ಎಟಂಕ" (ಒಷಧಿ. ೪೬). [ ? ]

**ತಿರುವಳೆಯಾಟ** (ನಾ). ದೇವರ ಲೀಲೆಗಳನ್ನು ಪ್ರದರ್ಶಿಸುವ ಒಂದು ಬಗೆಯ ಉತ್ಸವ: ದೇವಸ್ತಾನಕ್ಕೆ ಉಭಯ ಕಟ್ಟಳೆ ಮೊದಲಾಗಿ ತಿರುವಳೆಯಾಟಕಂ ಕಟ್ಟಳೆಯು ಮಾಡೆ ಚಿತ್ತಯಿಸ್ತ ಶೀಮೆಗಳು ಪೊಂದರಲೂ ಕಡಿಮೆಯಿಲ್ಲದ ಹಾಗೆ ನಡಸೂದು (ಸೌಇಇ. IX-ii, ೫೨೬-೨; 1529). [ ←ತಮಿ. ತಿರುವಿಳೈಯಾಟಲ್ ]

**ತಿರುವಾಯ್** (ನಾ). ಬಿಲ್ಲಿನ ಹಗ್ಗದ ಮಧ್ಯಭಾಗ; ಹೆದೆಯ ಬಾಯಿ: ಬಿಲ್ಗಳನೇಱಿಸಿ ತಿರುವಾಯೊಳಂಬನಿಟ್ಟಸಲೆಂದು ತೆಗೆದಿಸುವನ್ನೆಗಂ (ಪಡ್ಮರಾ. ೯೬-೬): ಅಂಬಂ ತಿರುವಾಯ್ಗೆ ತಂದಱಿವರೇ ತಾಮಿರ್ವರುಂ ಕಯ್ದುವಂ ಬಿಸುಟರ್ (ಗದಾಯು. ೨-೧೦); ಖೇಚರಬಲಂ ಪೆಳಱಿತ್ತು ಕರುತ್ತು ದಿವ್ಯಚಾಪದ ತಿರುವಾಯ್ಗೆ ದಿವ್ಯಶರಮಂ ತರೆ ದೋರ್ಬಲಶಾಲಿ ಲಕ್ಷ್ಮಣಂ (ಪಂರಾಮಾ. ೫-೧೦೨); ತಿರುವಾಯನೊದೆದುಬ್ಬಿನಲಿ ಬೊಬ್ಬಿಱಿದಂಬು ಸುರಪನ ವನವ ಮುತ್ತಿತು (ಕುವ್ಯಾಆ. ೨೦-೨೬); ಬಿಲ್ಗೆ ಕೊಪ್ಪನೇಱಿಸಿ ತಿರುವಾಯ್ಗೆ ಕಣೆಯುಂ ಪೂಡಿ ತೇರನೇಱಿ . . . ಪಗೆಯೊಳೆತ್ತಿ ನಡೆದಂ (ಧಮಾಶ. ೯೦-೧೬). [ತಿರು₁ (< ತಿರುವ್ಪು₃)+ಬಾಯ್]

**ತಿರುವಾಯ್ಗೊಳಿಸು** (ಕ್ರಿ). ಹೆದೆಯೇರಿಸು: ಬಿಲುದುಡುಕಿ ಬಲುಸರಳ ತಿರುವಾಯ್ಗೊಳಿಸಿ ಮಲೆತನು ಪಾರ್ಥಲಕೆ (ಕುವ್ಯಾದ್ರೋ. ೧೮-೬೪). [ ತಿರುವಾಯ್ + ಕೊಳ್₁ + –ಇಸು₃ ]

**ತಿರುವಾಯ್ಪೊಣರ್ಚು** (ಕ್ರಿ). ಹೆದೆಗೆ ಬಾಣವನ್ನು ಹೂಡು: ದೋಣೆಗಳಿನುರ್ಚುವ ತಿರುವಾಯ್ಪೊಣರ್ಚಿ ತೆಗೆನೆಱೆವ ಬೇಗಮಂ ಕಾಣದೆ ಕೂರ್ಗಣೆಗಳ ಪಂದರನೆ ನಭೋಂಗಣದೊಳ್ ಕಂಡತ್ತು ದೇವಗಣಮಿನಸುತನಾ (ಪಂಪಭಾ. ೧೨-೧೮೪). [ ತಿರುವಾಯ್ + ಪೊಣರ್ಚು ]

**ತಿರುವಾಸಿಲು** (ನಾ). ದೇವತಾಮೂರ್ತಿಯನ್ನು ಇರುವ ಗರ್ಭಗುಡಿಯ ಮುಂಭಾಗದ ಬಾಗಿಲು; ಶ್ರೀದ್ವಾರ: ಬೆಳಯೂ ಸೋಮೆಯ ದೇವರ ಸೇವೆ ತಿರುವಾಸಿಲ ಮಂಟಪವನೂ ಲ್ಲಾಕವಾಗಿ ಮಾಡಿಸಿ (ಎಕ. X(೮), ಮೂಲೂರು. ೦೪೬-೦೨; 1496). [←ತಮಿ. ತಿರುವಾಚಲ್ ]

**ತಿರುವಿಡು** (ಕ್ರಿ). = ತಿರುವಾಯ್ಗೊಳಿಸು: ಬಳಿಕ ತಿರುವಿಟ್ಟಾಗಲಸ್ತ್ರವ ಸೆಳೆದು ಬಿಲುವಿದ್ಯಾಚಮತ್ಕೃತಿಯುಳವ ತೋಱಿದಪೆ (ಕುವ್ಯಾದ್ರೋ. ೯-೯). [ ತಿರು₁ (< ತಿರುವ್ಪು₃) + ಇಡು₁ ]

**ತಿರುವಿಸು, ತಿರುಹಿಸು** (ಕ್ರಿ). ಬೇರೆ ಕಡೆಗೆ ತಿರುಗಿಸು,–ಹೊರಳಿಸು: ಮನುಷ್ಯ ಕಾಲವನ್ನತಿಕ್ರಮಿಸಬಲ್ಲನೆಂದರೆ ಅದೊಂದು ಕಲ್ಪನೆಯೆಂದು ಈಗ ಜನರು ಮೊಗ ತಿರುವಿಸುವರು (ಕಾಲಯಾ. ೪). **ತಿರುಹಿಸು:** ಪಾರ್ಥನ ಸೂನು ರಣದಲಿ ಬೀದಿವರಿದನು ಗದೆಯ ತಿರುಹಿಸುತ (ಕುವ್ಯಾದ್ರೋ. ಒರಿಇ. ಪರಿ. ೨೮೧). [ ತಿರುವ್ಪು₁ (< ತಿರಿಪು₁) + –ಇಸು₃ ]

**ತಿರುವೀಥಿ** (ನಾ). ದೇವರ ಉತ್ಸವದ ಬೀದಿ; ರಥದ ಬೀದಿ: ಕೆಲಂಬರು ಬಂಡಿಯ ಮುಂಕಣಿಯುಂ ಒಡಿದು ಪುರದ ತಿರುವೀಥಿಯೊಳು ನಡೆತಪ್ಪಾಗಳು (ನಂಬಿರ. ೨-೧೯). [← ತಮಿ. ತಿರುವೀತಿ; ತೆಲು. ತಿರುವೀಥಿ ]

**ತಿರುವ್ಪು₁** 'ತಿರಿಪು₁' ನೋ.

**ತಿರುವ್ಪು₂** 'ತಿರಿಪು₂' ನೋ.

**ತಿರುವ್ಪು₃, ತಿಬ್ಬು₁, ತಿರು₁, ತಿರ್ಪು, ತಿರ್ಬು, ತೆಬ್ಬು₂, ತೆರ್ಬು** (ನಾ). ಬಿಲ್ಲಿನ ಹಗ್ಗ; ಹೆದೆ: ''ನಯದಿಂ ತಿರುವದುವೆ ತಿರ್ಬು ಹೆದೆ ನಾರಿಯು ಮೌರ್ವಿಯ ಪೆಸರಕ್ಕುಂ'' (ಕವಿಕಂ. ೮೦): ಮತ್ತೊರ್ವರ್ ಕರ್ವಿನ ಬಿಲ್ಲ ತಿರುವಿಂ ಬರ್ದುಂಕಿ ಬರ್ಪಲರಂಬು ಬರ್ಪಂತೆ ಬಂದು (ಪಂಪಭಾ. ೪-೩೬೫): ತಿರುವಂ ಮುಪ್ಪುರಿಗೊಂಡು ಮಿಳ್ಳಿಸುವ ಮಿಂಚಂ ಮಾಡಿ . . . ಬೆಂಕೊಂಡತ್ತು ಮೇಘಾಗಮಂ (ಕಾದಂಬ. ೫೩೦); ಮಲ್ಲಿಗೆಯ ತಿಸರಮಂ ತೊಟ್ಟು ತಾವರೆಯ ನೂಲ ತಿರುವಂ ತೀಡೆ (ಅರ್ಥನೇ. ೫-೫೫ ವ): ಬಿಗಿದ ತಿರುವಿನ ಬೆರಳ ಕೋಲುಗಳ . . . ಚೆನ್ನಲಿವ ಬತ್ತಳಿಕೆಗಳಲ್ಯದಿತ್ತು ಬಿಲ್ಲಾಳುಭಯಸೇನೆಯಲಿ (ಕುವ್ಯಾಭೀ. ೪-೧೦); ತಿರುವಿನೊಳ್ ನನೆಗಣೆದೊಟ್ಟು (ಸೌಂದಪು. ೦೬-೪೩); ತಿರುವಿಗಂಬನು ಹೂಡಿ (ಸಾಳ್ವಭಾ. ೧೮-೬೦); ತುಂಬಿಗಳ ಪೊಸ ತಿರುವನಳವಡಿಸಿ (ಚಬಪು. ೩೫-೬); ಬಿಲ್ಲ ತಿರುವಿಂದ ಜೀವಮನುಣಲ್ ಬರ್ಪ ಕೋಲ್ಗಳ್ (ಪಾರಸಿ. ೧೬-೪೦೧). **ತಿಬ್ಬು:** "ತಿರುವೆಂದುಂ ತಿಬ್ಬೆಂದುಂ ಬಿಲ್ಲ ನಾರಿ" (ಕಕಸಾ. ೫೨-೧೧೫); ಕರಿಗಳ ಹೊದಱ ಮದೆಗೆಡಹಿ ತಿಬ್ಬ [ಪಾಠಾಂ.ತೆಬ್ಬ] ನೊದೆದುಱೆ ಬಳಿಕ ಗಱೆ ಮೊಱೆದಬ್ಬರಿಸಿ . . . ಮಸಗಿದವು ಫಲುಗುಣನ ಶರಜಾಲ (ಕುವ್ಯಾವಿ. ೬-೩೬); ಕಬ್ಬಿನ ಬಿಲ್ಲಲರ್ವಕ್ಕಿಯ ತಿಬ್ಬಂ ಬಲಿದ ತನು ಪೂಸರಂಗಳನಿಸಲು (ಶಬ್ದಾನು. ೫೦ ಪ್ರಯೋ); ಕೋಪದಿಂ ಧನುವಂ ಕೊಂಡು ಸಿಡಿಲಂ ಸರಂಗೊಳಿಸಿದಂತೆ ತಿಬ್ಬಿನಬ್ಬರಂ ಸೈನ್ಯಕಲಕಲವಂ ನುಂಗಿ ದಿಗಂತವಂ ನೀಡಿರಿವುತ್ತಿರೆ (ಸಕವ್ಯ. ೨ ಪ್ರಸ್ತಾವನೆ); ತಿಬ್ಬನೊದರಿಸಿ ಮುನಿದು ನಾರಾಯಣಾಸ್ತ್ರವನ್ನುಬ್ಬಿದರೆ ಹರಿ ಕರುಣಿಸಲು (ತುರಂಗ. ೬೯-೫೧). **ತಿರು₁:** "ತಿರುವೆಂದುಂ ತಿಬ್ಬೆಂದುಂ ಬಿಲ್ಲ ನಾರಿ'' (ಕಕಸಾ. ೫೨-೧೧೫); ಅಲರಂಬು ಕರ್ಬುವಿಲ್ ಕೋಮಲ ಸರಸಿಜನಾಳತಂತು ತಿರು ತ್ರಿಲೋಕಮಂ ಕಂತು ಬಸಕೆ ಬರಿಸುವನೆಂತುಂ (ಕವಿರಾ. ೨೨-೦೨೦); ಉನ್ಮತ್ತಭೃಂಗವ್ರಜಂ ತಿರು ತಳ್ತೊಪ್ಪುವ ನುಣ್ದಳಿ ದೋರ್ಣೆ ಲತಾಂತಶ್ರೇಣಿ ಬಾಣೌಘಮಾಗಿ ರತೀಶಂ ಪರಿಪಂಥಿರೂಪದಿಸು ತಿರ್ಪಂ (ಶಾಂತೀಶ. ೦೩-೧೩೧). **ತಿರ್ಪು:** ''ತಿರು ತಿರ್ಪು ಹೆದೆಯೆನೆ ಬಿಲ್ಲ ನಾರಿ'' (ಕಬ್ಬಮಂ. ೪೪). **ತಿರ್ಬು:** ''ತಿರುವದುವೆ ತಿರ್ಬು ಹೆದೆ ನಾರಿಯು ಮೌರ್ವಿಯ ಪೆಸರಕ್ಕುಂ'' (ಕವಿಕಂ. ೮೦). **ತೆಬ್ಬು₂:** ಅರಿ ಮಿಡಿದನು ತೆಬ್ಬಿನಸ್ತ್ರವ ತೂಗಿ ತುಳುಕಿದನಂಬಿನಂಬುಧಿಯ (ಕುವ್ಯಾಕ. ೩-೫೨); ಬಿಲುಗಳ ತೆಬ್ಬುಗಳನಾರ್ಯೆದು ಲುಳಿವಡೆದೆಬ್ಬಿಸಿದರಂಬುಗಳ

ಲಂಬರ ತುಂಬಲಗಲದಲಿ (ತೊರರಾ. ೬-೪೩-೦೫) ; ಕಬ್ಬಿನ ಬಿಲ್ಲಿಗಂಗಜನೆಳೆ ದುಂಬಿಯ ತೆಬ್ಬನೇಱಿಸಿ ಜೇವಡೆದು . . . ಎಚ್ಚನವರನು (ಕುರಾಸಾಂ. ೧೬-೯೫) ; ತೆಬ್ಬನೊದರಿಸಿ ಪಾರ್ಥ . . . ಅರಿಗಳಂ ಗೆದ್ದ ಪರಿ ಇದೆ (ಕುರಂಗ. ೬೪-೨೫); ತೆಬ್ಬನ್ನೇರಿಸಿ ಗುರಿಯಿಟ್ಟು ಹೂಡಿದನು (ಘಾತೀಸು. ೯೦).

ತೆರ್ಬು : ಪುರ್ಬು, ತೆರ್ಬು, ಕೊರ್ಬು (ಶಬ್ದಾಸು. ೮೦ ವ್ಯಾಖ್ಯಾ).

ತೆಬ್ಬಿನ ಧ್ವನಿ = ಹೆದೆಯ ಟಂಕಾರ : ಬ್ರಹ್ಮಾಂಡವು ಗುಮ್ಮಿಡುವ ಹಾಗೆ ತನ್ನ ಬಿಲ್ಲಿನ ತೆಬ್ಬಿನ ಧ್ವನಿಯನ್ನು ಮಾಡಿದನು (ಮುಂಬಯಿ. ೬-೨೪೮).

[ ದೇ.॥ ತುಳು. ತಿರು, ತೆಬ್ಬು ]

**ತಿರುವುಗಿವಿ** (ನಾ). ತಿರುಗಿಸಿದ ಕಿವಿ ; ಹೊರಳಿಸಿದ ಕಿವಿ : ತಿರುವುಗಿವಿಯು ಮಾಡಿ ಅವು ನಿಂತವಕ್ಕ ನಿಂತಲ್ಲೇನ (ಹಾಡುಹಾ. ೨೮-೩).

[ ತಿರುವು$_1$ (< ತಿರಿವು$_1$) + ಕಿವಿ$_3$ ]

**ತಿರುವುಮುರುವು**, ತಿರುಮುರಿ, ತಿರುಮುರುವು, ತಿರುಮುರುಹು, ತಿರುಹುಮುರುಹು (ನಾ). ೧. ಹಿಂದುಮುಂದಾಗಿರುವುದು ; ತಿರಿಚಿಕೊಂಡುದು : ಅವಳ ಜಡೆ ತಿರುವುಮುರುವಾಗಿದೆ (ಕೂಫಿ). ೨. ತಲೆಕೆಳಗು ; ಅಡಿಮೇಲು : ಒಬ್ಬರ ದುಡಿತದಲ್ಲಿ ಸಾವಿರ ಜನ ಕುಳಿತು ತಿನ್ನುವುದು ಜೀವನ ಅಲ್ಲ. ಅದು ಜೀವನದ ತಿರುವುಮುರುವು (ಮನ್ನಿಮ. ೫೫) ; ಬಂಡವಾಳವೆಂದು ಧನವು ವ್ಯವಹರಿಸಲು ತೊಡಗಿದಾಗ, ಸರಕು ಮತ್ತು ಹಣ ಇವುಗಳ ಸಂಬಂಧ ತಿರುವುಮುರುವಾಗಿ ಬಿಡುತ್ತದೆ (ಮಾವಾದ. ೧೧೮). **ತಿರುಮುರಿ** : ೧. ತಿರುಮುರಿಯ ಕೊಂಬುಗಳುಳ್ಳ ಒಂದು ಜಾತಿಯ ಜಿಂಕೆ (Addax. ಇಂಶಿನಿ). **ತಿರುಮುರುವು**: ೩. ಹಿಂದಿರುಗಿಸುವಿಕೆ : ನಗು ಕಾಟ ಅಳುವು ಹಿರಿದಾಟ ಕುಡಿನೋಟ ಮೋಸ ನುಸುಳಾಟ ತಿರುಮುರುವು (ಗ೧. ೦೦೮-೨) ; ಕಣ್ಣುಕಣ್ಣು ತಿರುಮುರುವು ನೋಟ ನೋಡುವನ ಗೊಂದೆಯಹುದು (ಮುಕ್ತಿಕಂ. ೦೩-೫). **ತಿರುಮುರುಹು** : ೨. ಸಂಚನೆಯ ತಿರುಮುರುಹು ಮೋಹದದಂಟಿಗೆಯ ಪೆಡೆಯಲ್ಲಿ . . . ನಡೆತಂದ (ಕೃಷ್ಣಾಕ. ೬-೨೦). **ತಿರುಹುಮುರುಹು** : ೪. ವಲ್ಲಿಯಂದ್ದದ ಒಂದು ಪರಸೆ : ತಿರುಹುಮುರುಹಿನಲೌಕುವಳ್ಳಿಯ ಭರದ ಬವರದ ಬಿನ್ನಣಗರಚ್ಚರಿಯ ಸಮರೋಚಿತವ ಮೆಱೆದರು (ತೊರರಾ. ೪-೪-೨೨). ೫. [ನಾಟ್ಯ] ವೃತ್ತಾಕಾರವಾಗಿ ಚಲಿಸುವ ಒಂದು ನೃತ್ಯಭಂಗಿ. ೨, ೫ : ತಿರುಹುಮುರುಹುಂಟು ನೃತ್ಯದೊಳು.... ಗುಣವಿರಹಿತತ್ವಂ ಬಿಂದುಗಳಿಯದೆಳಮುತ್ತುಗಳ ಪರಿವಿಡಿಯೊಳುಂಟಲ್ಲದಾ ದೇಶದೊಳಗಿಲ್ಲ (ಸೌಂದಕು. ೨-೬). [ತಿರುವು$_4$(< ತಿರಿವು$_4$) + ಮುರುವು]

**ತಿರುವುವೊಯ್**, ತಿರುವೊಯ್ (ಕ್ರಿ). ಜ್ಯಾರವ ಮಾಡು ; ಜೇವೊಡೆ ; ಧನುಷ್ಟಂಕಾರವಮಾಡು : ನನೆವಿಲ್ಲಂ ಬಿಟ್ಟು ವಿದ್ಯುಲ್ಲತೆಯ ತಿರುವುವೊಯ್ವಿಂದ್ರಕೋದಂಡವಮಂ ಕೊಂಡು ನಿಜಾಗ್ರಸ್ಕಂಧದೊಳ್ ಕೇದಗೆಯೆಸೆವರಲೆಂದೆಂಬ ಕೂರಂಬು ತೀವಿ (ಜಗವಿ. ೪-೨೦). **ತಿರುವೊಯ್** : ಮದನಂ ತಿರುವೊಯ್ದು ಕರ್ಬುವಿಲ್ಲಂ ಪಿಡಿಯಲ್ (ದಕಳು. ೪-೧೨೬) ; ವಿರಹಿಯ ಹೃದಯಸ್ಥ ವಿರಹವಹ್ನಿಗೆ ಕಯ್ಯಂ ಸ್ಮರನೊಡ್ಡಿ ಕಾಸಿ ಬಿಲ್ಲಂ ತಿರುವೊಯ್ದು ಸುತಿರ್ಪನಸಿತ ಶರರುಹ ಶರದಿಂ (ರಾಜಶೇ. ೯-೨೦). [ತಿರುವು$_3$+ಪೊಯ್$_1$]

**ತಿರುವೂರ್** (ನಾ). ಒಂದು ಊರಿನ ಹೆಸರು : ಚೋಟ ಧನಞ್ಜಯನ ಆಳು ಆದಿತ್ಯಕುಮಾರನ್ ತಿರುವೂರ ಕಾಳೆಗದುಳೆಱಿದು ಸುರಲೋಕಂ ಪೋದನ್ (ಎಕ. XII, ಮಧ್ಗಿ. ೧೧೦-೨ ; 750 ?). [ ತಿರು$_3$+ಊರ್ ]

**ತಿರುವೆ** (ನಾ). ಕಂಠಪಾಠಮಾಡುವುದು ; ಒರಲುಸಂತೆ ಹೇಳುವುದು : ಮತ್ತಮಾ ಕಾಲದೋಳ್ಪಾರ್ವರು ನಡೆಯುವ ನಡತೆಯೆಂತೆಂದೊಡೆ ಕೆಲರು ಮಕ್ಕಳನೆಬ್ಬಿಸಧ್ಯಯನ ತಿರುವೆಯಂ ಕೆಲವರಂಬುಜನೇತ್ರನಾ ಸ್ತೋತ್ರಪಾಠಮಂ . . . ಮಾಡಿಸುತ್ತಿರಲವರಾಗ (ಅಜಾವಿ. ೩೦-೪೦).

[ ← ತಮಿ. ತಿರುವೈ ]

**ತಿರುವೆಂಗಡಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮಜ್ಗಲ ಸಿಜ್ಗಪರಾಕ್ರಮನ ಮಗಂ ತಿರುವೆಜ್ಗಡಯ್ಯ ಎರೆಡಿಯೂರ ಪೆಟ್ಟುಱಿಗೊಳೊಳಾನ್ತಿಱಿದು ಸತ್ತನ್ (ಎಕ. X, ಮುಳಬಾ. ೧೧೮-೩ ; ಸು. 950).

[ < ತಿರುವೆಂಗಳ + ಅಯ್ಯ$_1$ ]

**ತಿರುವೆಂಗಳ** (ನಾ). ತಿರುಪತಿಯ ವೆಂಕಟೇಶ್ವರ ದೇವರು : ಕೊಂಮನಹಳ್ಳಿ ತಿರುವೆಂಗಳದೇವನಾಥಗೆ ಕೊಟ್ಟ ಮಾನ್ಯಹೊಲ ಆಱು ಕೊಳಗ (ಮೈಆರಿ. ೧೯೩೦, ೧೧-೩ ; 1646) ; ಚೆಲುವ ತಿರುವೆಂಗಳ ವಿಜಯವಿಠಲ ವೆಂಕಟ ನೆಲೆಯಾಗಿ ಇಪ್ಪ ಶುದ್ಧಭಕ್ತರ ವಶನಾಗಿ (ತೀರ್ಥಸು. ೮೦).

[ ← ತಮಿ. ತಿರುವೇಜ್ಕಟ ]

**ತಿರುವೆಂಗಳೇಶ** (ನಾ). = ತಿರುವೆಂಗಳ : ಅಜರಾಮರಣಸಿದ್ಧಿ ತ್ರಿಜಗದೊಳ್ ಪ್ರಸಿದ್ಧಿ ವಿಜಯವಿಠ್ಠಲ ಶ್ರೀನಿವಾಸನ ತಿರುವೆಂಗಳೇಶನ (ವಿದಾಕೃ. ೩೦-೩).

[ ತಿರುವೆಂಗಳ + ಈಶ ]

**ತಿರುವೆಟ್ಟ** (ನಾ). ಪವಿತ್ರವಾದ ಬೆಟ್ಟ : ವಾಯುವ್ಯಕ್ಕೆ ಬಸುರಿಯ ಕೊಳ . . . ಈಶಾನ್ಯಕ್ಕೆ ತಿರುವೆಟ್ಟ ಇನ್ತೀ ಚತುರಾಶ್ರಯು ಸೀಮೆ (ಕಇ. I, ೦೬-೪೩ ; 1066). [ ತಿರು$_3$ + ಬೆಟ್ಟ (< ಬೆಟ್ಟು$_2$) ]

**ತಿರುವೆಡೆ** (ನಾ). ಧನುರ್ಮಾಸದಲ್ಲಿ ದೇವರಿಗೆ ಅರ್ಪಿಸುವ ನೈವೇದ್ಯ : ಧನುಪರ್ವ ತಿರುವೆಡೆ (ಎಕ. XV, ಬೇಲೂರು. ೨೪೮-೧ ; 1297). 'ತಿರುವತ್ತಿಸಾಮ' ಪರಾ. [ ತಿರು$_3$ + ಎಡೆ$_4$ ]

**ತಿರುವೆಳಕು** (ನಾ). ದೇವಾಲಯದಲ್ಲಿ ಹಚ್ಚುವ ಮಂಗಳದೀಪ ; ನಂದಾದೀಪ : ಪಲ್ಲಕ್ಕಿಸೇವೆಗೆ ಬಿಜಯ ಮಾಡುಸೂ × ಸಂಬಂಧ ತಿರುವೆಳಕು ಪಂಜಿಗೆ (ಸಾಇಇ. IX-ii, ೫೬೨-೩ ; 1269).

[ ← ತಮಿ. ತಿರುವಿಳಕ್ಕು ; ತೆಲು. ತಿರುವಿಳಕ, ತಿರ್ವಿಳಕ ]

**ತಿರುವೇರಿಸು** (ಕ್ರಿ). ಬಿಲ್ಲಿನ ಹೆದೆಯನ್ನು ಏರಿಸು : ಎನ್ನೀ ತಿರುವೇರಿಸಿದ ಶರಾಸನೆಮಿರದಾದತ್ತಿತರಕಾರ್ಯದೊಳಗಾಸಕ್ತಂ (ಶಾಕುಂತ. ೯೮-೦೬೩) ; ಅನುಗಾಲ ಬಿಲ್ಲಿಗೆ ತಿರುವೇರಿಸಿಟ್ಟರೆ ಮುರಿಯದೆ ಉಳಿವುದೆ ಧನುವು (ಇಂಜಾಪ. ೦೦೦-೩೬).

[ ತಿರುವು$_3$ + ಏರಿಸು (< ಏಱಿಸು) ]

**ತಿರುವೊಡೆ** (ನಾ). ಬಿಲ್ಲುಗಾರನು ಬಿಲ್ಲಿನ ಹೆದೆ ತಾಗದಂತೆ ಎಡದ ಮುಂಗೈಗೆ ಕಟ್ಟುವ ಚರ್ಮದ ಪಟ್ಟಿ ; ಕೈಪೊಡೆ ; ಗೋಧೆ : ವರ ರಥವ ಬಲಗೊಂಡು ಕವಚವ ಬಿಗಿದನು ಕೈಗೆ ವಜ್ರದ ತಿರುವೊಡೆಯನವಚಿದನು ರಥವೇಱಿದನು ಕಲಿಪಾರ್ಥ (ಕುಪ್ಪಾದ್ರೋ. ೯-೩೬) ; ಕರದ ತಿರುವೊಡೆ ಜೋಡುಸೀಸಕ . . . ಪೆಂಡೆಯಂಗಳ ಬೆನ್ನ ಹೊದೆಗಳಲಿ ನೆರೆದುದತಿದಲ (ಕಾತಿರಾ. ೨೦-೬). 'ಕೈಯ್ಯೊಡೆ' ಪರಾ.

[ ತಿರು$_1$ (< ತಿರುವು$_3$) + ಪೊಡೆ$_3$ ]

**ತಿರುವೊಯ್** 'ತಿರುವುವೊಯ್' ನೋ.

**ತಿರುವೊಯ್ಲು** (ನಾ). ಹೆದೆಯ ಹೊಡೆತ.-ಪೆಟ್ಟು : ಮರಕತ ಕಂಕಣಮೆಸೆದುವು ತಿರುವೊಯ್ಲಿಂ ಕರ್ಪುವೆತ್ತ ತತ್ಕರಯುಗದೊಳ್ (ಚಂದ್ರಪ್ರ. ೬-೭೦) ; ತಿರುವೊಯ್ಲಿಂದಾದ ದಡ್ಡುಬ್ಬರಿಸಿ ಮೆಱೆವ ಮುಂಗೆಯ್ಗಳಿಂ ವನ್ಯಮಾತಂಗರದಾಘಾತಕ್ಷತಂ...ಕಾನನಕುಬ್ಬರಮಾಗಲ್ (ಶಾಂತೀಶ್ವ. ೩-೭೫). [ ತಿರು$_1$ (< ತಿರುವು$_3$) + ಪೊಯ್ಲು ]

**ತಿರುಸು** (ಗು). ವಕ್ರವಾದ ; ಓರೆಯಾದ. 'ತಿರುಸುಗಣ್ಣು' ಪರಾ.

[ < ತಿರಿಚು ? ]

**ತಿರುಸುಗಣ್ಣು** (ನಾ). ಮೆಳ್ಳೆಗಣ್ಣು ; ಮಾಲುಗಣ್ಣು ; ಓರೆಗಣ್ಣು : ದೃಷ್ಟಿದೋಷವು ಹುಬ್ಬುಗಂಟಿಕ್ಕುವುದನ್ನು ತಿರುಸುಗಣ್ಣನ್ನು ಉಂಟುಮಾಡಬಹುದು (ನಿಮ್ಮಕ್ಕ. ೪೧).

[ ತಿರುಸು + ಕಣ್ಣು (< ಕಣ್) ]

**ತಿರುಹಾಡು** (ನಾ). ಎಲ್ಲವೂ ಶ್ರೇಷ್ಠವೆಂದು ಹೇಳುವ ಹಾಡು; ಸ್ತುತಿಪಾಠ : ಭೀಮವಿಕ್ರಮವಲ್ಲ! ಹಾಹಾದಿ ಹೂಹುಗಳ ಸ್ತೋಮ ವಿದು–ತಿರುಹಾಡು ಸಾಕು ! ದೊರೆವಾಡುಗಳ ಸೀಮೆಗಳ ಸಮ್ರಾಟನಾಗಿ ಆಳುವವರೆಗೆ ಏನಾದರೇನು ನನಗೆ ? (ಗಱಿ. ೧೨-೨). 'ತಿರುಪಾಟು' ಪರಾ. [ ತಿರು$_2$+ಹಾಡು$_2$ (<ಪಾಡು$_2$) ]

**ತಿರುಹಿಸು** 'ತಿರುವಿಸು' ನೋ.

**ತಿರುಹು$_1$** 'ತಿರಿಪು$_1$' ನೋ.

**ತಿರುಹು$_2$** 'ತಿರಿಪು$_2$' ನೋ.

**ತಿರುಹುಮುರುಹು** 'ತಿರುವುಮುರುವು' ನೋ.

**ತಿರುಳ್**, ತಿರುಳು, ತಿಳಲು, ತಿಳಿಲು (ನಾ). ೧. ಹಣ್ಣು, ಕಾಯಿ ಮುಂತಾದುವುಗಳ ಒಳಭಾಗ: ಬಾಟೆಯ ದಿಂಡಿನ ತಿರುಳೊಳ್ ಮಾತ್ಸ್ಯಾಕ್ಷಿ ಮೂಲವುಂ ಸುಣ್ಣಮುಮಂ ಬೆರಸಿ ಹದವಱಿದು ಕುದಿಯಿಸೆ (ಲೋಕೋಪ. ೮-೦೯); ಳಕಾರಕ್ಕೆ . . . ಕುರುಳ್, ತಿರುಳ್, ಮುಗುಳ್ (ಶಮದ. ೪೮ ಪ್ರಯೋ). ೨. ಹುರುಳು; ಸಾರ; ಸತ್ತ್ವ; ಕೆಚ್ಚು: ಸದಭಿಸ್ತುತಮಪ್ಪೊಕ್ಕುಂದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ (ಕವಿರಾ. ೧-೩೭); ಕುಱಿರುಳ ತಿರುಳ ಬಣ್ಣಂ ಕೂಡಿದುವೆನೆ ತೊಳಪ ದಾಡೆ ವಿಳಿರ್ವುರಿಗೇಸಂ ಪೇರೊಡಲಸೆದಿರೆ ಪುಟ್ಟಿದಂ . . . ಘಟೋತ್ಕಚಂ (ಪಂಪಭಾ. ೩-೨೦); ಎಲ್ಲಾ ಧರ್ಮದ ತಿರುಳಂ ಕೇಳ್ವುದು (ಪಂಚತಂ. ೩೭-೮); ತಿಳಿವೊಡಿದಲ್ತೆ ತತ್ತ್ವದ ತಿರುಳ್ (ದಳಕು. ೮-೪೭). ತಿರುಳು: ೧. ತೆಂಗಿನಕಾಯ ತಿರುಳುಂ ನಾರುಂ . . . ಕೆಯ್ಯೊಳು ಸಸಿಯುಂ ಪುಲ್ಲುಂ ಬೆರಸಿರ್ದೊಡಂ ಮುಖ್ಯಮಪ್ಪುದನೆ ಪೆಸರ್ಗೊಳುವಂತೆ (ಧರ್ಮಾಮೃ. ೯-೧೦೭ ಅಡಿಟಿ); ಹಸುವಿನ ಹಾಲಿನಲ್ಲಿ ಬೆಲ್ಲವತ್ತ್ರದ ತಿರುಳನಿಕ್ಕಿ ಕಾಯಿಸಿ (ಸಳವ್ಯ. ೭): ತಿರುಳು ತಿಂದರೂ ಮರುಳು ಹೋಗಲಿಲ್ಲ (ಗಾದೆ). ೨. ಕಡೆದ ತಾರೆಗಳ ತಿರುಳ ಚಂದದೋಗರದೊಳಗೆ ಚಂದ್ರಿಕೆಯ ಹೊಸ ಹಳುಕಿನಂದದೆಮ್ಮಯ ಮೊಸರು (ಸಿದ್ಧರಾ. ೨-೩೩); ಕುಲಿಶದ ತಿರುಳ ಮಾಸೆದಂತೆ . . . ಅಹಿತರಿಱಿದಾಡಿದರು (ಕುಮಾ್ಯಭೀ. ೪-೨೦); ಇದು ಪರಮಾರ್ಥ ಹಿತೋಪದೇಶದ ತಿರುಳಿದನು ಸತಿಯರೋದು ವುದು (ಹದಿಬ. ೦-೬೦) : ಏಷ್ಯದ ತಿರುಳೆಲ್ಲ ಪೋಯ್ತು (ಹಾರಿಸಿ. ೦-೦೯). ತಿಳಲು: ೧. ನಾರಿವಾಳದ ಕಾಯೊಳಗಣ ತಿಳಲು ಒಡೆ [ಪಾಠಾಂ. ತಿರುಳ ನೊಡೆ]ಯದೆ ಮೆಲಬಲ್ಲಡೆ ಬೆಡಗು (ಅವಚಂ. ೦೨೩-೫೭೨): ಇದ ರೊಳಗಿನ ತಿಳಲು ಬಲು ರುಚಿಕರವು (ಮುಂಬಯಿ. ೪-೬೦). ೨. ಸುರರ ಬನದ ಹೂವುತನದ ತಿಳಲು, ಮನದ ಅರಿವಿದು (ನಾದಲೀ. ೨೨-೦೭). ತಿಳಿಲು: 'ತಿಳಿಲುಮಾತು' ಪರಾ.

ತಿರುಳ ಕನ್ನಡ = ತಿರುಳ್ಗನ್ನಡ: ರಾಜದ್ರಾಜಕಮೆನಿಸಿದ ಸಾ ಜ ದ ಪುಲಿಗೆಱೆಯ ತಿರುಳ ಕನ್ನಡದೊಳ್ (ಪಂಪಭಾ. ೦೪-೫೮): ಆ ತಿರುಳ ಕನ್ನಡಂ ಮಧುರಮ್ಮೋತ್ಸನ್ನಂ ಸಂಸ್ಕೃತಮೆನೆ ಸಂಪನ್ನಂ ನೆಗಟ್ದು ಭಯಕವಿತೆಯೊಳ್ ಕವಿ ರನ್ನಂ (ಗದಾಯು. ೦-೪೨). ತಿರುಳಾಯ್ಮ= ಉತ್ತಮವಾದ ಆಯ್ಕೆ : ಪೊಳ್ಳಾಸೆಯಿಂದವನ್ ತಿರುಳಾಯ್ಮೆಯಾಯ್ದು ಆ ಬೀಯೋಷಿಯದ ಬಯಲ ತಣ್ಪೊಳೆ ಆ ಸೋಪಸಿನ ದಡದಲ್ಲಿ ಚಳಿಗಾಲ ವನ್ ನೂಂಕಿ ಬಿಡಿಸುವನ್ (ಹಾರಸಿ. ೩೦-೬೪೦). [ ದೇ.॥ ತುಳು. ತಿರ್ಳ್ ]

**ತಿರುಳಳಿ** (ಕ್ರಿ). ನಿಸ್ಸಾರವಾಗು; ಸತ್ತ್ವಹೀನವಾಗು: ತಿರುಳಳಿದ ಕಾಮನ ಸೊಗಕ್ಕಲೆವ ಬಗೆಯುಂ ಮಾಣ (ಸಾಳಿನಂದ. ೫-೨೩).

[ತಿರುಳ್ + ಅಳಿ$_1$ ( < ಅೞ್$_1$ ) ]

**ತಿರುಳಿ$_1$**, ತಿರುಳಿಗೆ (ನಾ). ಒಂದು ಬಗೆಯ ಔಷಧಿ ಸಸ್ಯ; P ಕಣ್ಣನ್ನು ತಂಪುಗೊಳಿಸಲು ಇದರ ರಸವನ್ನು ಉಪಯೋಗಿಸುತ್ತಾರೆ: "ತಿರುಳಿ- ಗ್ರುಸ್ಥಿಲ, ಕ್ರಕರ, ಕರೀರ" (ನಾಚಿರಾ. ೬): "ಕರೀರಃ –ಮೊಳಕೆ, ಅಗಸೆ, ಕಳಿಲೆ, ತಿರುಳಿ" (ಒಷಧಿ. ೨೦); ಕೆಂಗುಂ ತಿರುಳಿ ತಗ್ಗಿ ತುಗ್ಗಿಲು ತುಂಬುರ ಬಿಡೆ ತೊಟ್ಟೆ . . . ಚೆಲುವ ಭೂಜಂಗಳಿಂದ ವಿಗೆ ಕಾನನಂ ಕಣ್ಗೆಸೆದುದು (ಹಜಕಾ. ೫-೦೭). ತಿರುಳಿಗೆ: ತಿ(ತ್ರಿ)ರುಳಿಗೆ ಕಾಗೆದೊಂಡೆ...ರಜಮನಟ್ಟು ಕಟ್ಟೆ ಕಳೆದಿಕ್ಕುಗುವಮಾವಗಮಸ್ಥಿವೃದ್ಧಿಯಂ (ಲೋಕೋಪ. ೯-೧೨೯). [?]

**ತಿರುಳಿ$_2$** 'ತೆರಳಿ$_2$' ನೋ.

**ತಿರುಳಿಗ** (ನಾ). (?) : ಬಿಟ್ಟ ಗದೆ ಕಂಮ್ಮಂ ೫೦೦ ತಿರುಳಿಗ ಕಂಮ್ಮಂ ೫೨ ಎಳ×× ×ಕ×××ಕಮ್ಮ ೨೫ (ಎಕ. VII, ಶಿವಮೊ.೧೧೭-೨೦; 1173). [?]

**ತಿರುಳಿಗೆ** 'ತಿರುಳಿ$_1$' ನೋ.

**ತಿರುಳು** 'ತಿರುಳ್' ನೋ.

**ತಿರುಳುಣಿಸು** (ನಾ). ಪೌಷ್ಟಿಕ ಆಹಾರ; ಸತ್ತ್ವಾಂಶಗಳುಳ್ಳ ತಿನಿಸು: ಪೌಷ್ಟಿಕ ವಾದ ಅಥವಾ ಕಸುವನ್ನು ಕೊಟ್ಟು ಮೈ ಬೆಳಿಗೆ ಮಾಡುವ ತಿನಿಸು. ಇವಕ್ಕೆ ತಿರುಳುಣಿಸು (Concentrated food) ಎನ್ನಬಹುದು (ಗೋಗ್ರಾಸ. ೩೪).

[ ತಿರುಳು (< ತಿರುಳ್) + ಉಣಿಸು$_2$ ]

**ತಿರುಳುದೋಱು** (ಕ್ರಿ). ತಿರುಳು ಉಂಟಾಗಿದೆಯೆಂದು ಕಾಣಿಸು:ತಿರುಳು ದೋರ್ವ ಮಿಡಿಗಾಯಿ ಕೋಮಳಂ ಶಲಾಟುಗಳೊಣಗುದೋರ್ವಕಾಯಿ ಮಾನಂಗಳಕ್ಕು (ಮುಂಗರಾ. ೩೩-೭). [ತಿರುಳು (< ತಿರುಳ್) + ತೋಱು]

**ತಿರುಳೆತ್ತು** (ಕ್ರಿ). ಸಾರವನ್ನು ತೆಗೆ– ಸಂಗ್ರಹಿಸು: ಸಾರಶಶಿಬಿಂಬ ದೊಟ್ಟಲ ತಗೆದು ತಿರುಳೆತ್ತಿ ಕೋರ್ಯಿಸಿ ಪುಟವಿಟ್ಟ ಪುಣ್ಯದೊಬ್ಬುಳಿಯೊ (ಸಿದ್ಧರಾ. ೦-೦೪). [ ತಿರುಳ್ + ಎತ್ತು$_1$ ]

**ತಿರುಳೆಲೆ** (ನಾ). ಮಧ್ಯಭಾಗದ ಎಲೆ; ಸುಳಿಯೆಲೆ: ಬಾಟೆಯ ತಿರುಳೆಲೆಯ ಬಿಜ್ಜಣಿಗೆಗಳೊಳಂ . . . ಸಂತಾಪಮಂ ಸಂತಯಿಸಲಾಱದೆ (ಕಾದಂಬ. ೭೭೩): ಎಳಮಾಟೆಯ ತಿರುಳೆಲೆಯ ತೆರೆಸುತ್ತಿನೊಳಮೆಸೆವ ಪಸಾರ್ಮಂದರೊಳಗೆ (ಲೀಲಾವ. ೦೦-೫೦ ವ). [ ತಿರುಳ್ + ಎಲೆ$_1$ ]

**ತಿರುಳ್ಗನ್ನಡ** (ನಾ). ಸತ್ತ್ವಶಾಲಿಯಾದ ಕನ್ನಡ ಭಾಷೆ; ಸಾರವತ್ತಾದ ಕರ್ಣಾಟಕ ಭಾಷೆ: ತಿರುಳ್ಗನ್ನಡದ ಬೆಳ್ನುಡಿಯೊಳೆ ಪುರುಳೊಂದೆ ಪೇೞ್ವುದು (ರಾಮಾಶ್ವ. ೬-೧೨). [ ತಿರುಳ್ + ಕನ್ನಡ$_1$ ]

**ತಿರುಳ್ಗಾಣ್ಕೆ** (ನಾ). ಸತ್ತ್ವವನ್ನು ಕಾಣುವಿಕೆ; ಸಾರಗ್ರಹಣ: ಇದು ಬರಿ ಬುದ್ಧಿಯ ತಿರುಳ್ಗಾಣ್ಕೆಯನ್ನಾಗಲೀ . . . ಐಂದ್ರಿಯಕ ಪ್ರಜ್ಞೆಯ ಅನಿಸಿಕೆಗಳನ್ನಾಗಲಿ ನಿರೂಪಿಸುವ ಹವಣಿಕೆಯಲ್ಲಿ ನಿಂತುಬಿಡಬಾರದು (ನವ್ಯಕಾ. ೫೦). [ ತಿರುಳ್ + ಕಾಣ್ಕೆ ]

**ತಿರುಳ್ನುಡಿ** (ನಾ). ಸಾರವತ್ತಾದ ಮಾತು; ಕೆಚ್ಚುಳ್ಳ ನುಡಿ: ತಿರುಳ್ನುಡಿಯೂ ಸಂಯಮವೂ ಇಂಥ ಭಾಷೆಯಲ್ಲಿ ಸಹ ತುಂಬಿರುವುದ ರಿಂದ ಈ ಶೈಲಿಯಲ್ಲಿ ಒಂದು ಹೊಸ ಕಾಂತಿಯನ್ನೂ ಕಳೆಯನ್ನೂ ಕಾಣಬಹುದು (ನವ್ಯಕಾ. ೩೭). [ ತಿರುಳ್ + ನುಡಿ$_2$ ]

**ತಿರೆ** (ನಾ). ನೆಲ; ಭೂಮಿ: "ಎಳೆ, ಪೊಡವಿ, ತಿರೆ, ದರೆ, ರನ್ನವಸಿಱಳ್, ಬೂವಿ, ಬುವಿ–ಈ ೭ ಭೂಮಿ" (ಕಶಸಾ. ೦೦-೨೧೦): ತಿರೆಯುಂ ಪದದೆತ್ತಿ ದೈತ್ಯನಂ ಪೊಳಕಿ ಬಲೀಂದ್ರನಂ ತಗುಳ್ದು ಮಟ್ಟಿಗಿಸಿ (ಚಕವಿ. ೫-೦೪೫): ತಿರೆಯೊಳ್ ಪೆಱರ ಸಿರ್ಕಿನೊಳ್ ಮಱುಕಮುಳ್ಳರೊಳ್ ನಿನ್ನನ್ನರೊಳರೇ ? (ರಾಮಾಶ್ವ. ೦-೧೪): ಕತ್ತಲಂಬುತೋಡುತಿಹುದು, ಬೆಳಕು ತಿರೆಯ ತುಂಬುತಿಹುದು (ಮೂಂದಲ. ೯-೭). [ < ಸಂ. ಸ್ಥಿರಾ ]

**ತಿರೆಮಗಳ್** (ನಾ). ಭೂಮಿಯ ಮಗಳು; ಸೀತೆ: ತಿರೆಮಗಳ ಚೆಲುವಲರ ಬಂಡಿಡಿದ ಬಟ್ಟಲಂ ಪೀರ್ದನೆರ್ದೆತುಟಿಯಿಂದೆ ತಣಿವಿನಂ ತನ್ನಾತ್ಮತೃಷ್ಣೆ (ಶ್ರೀರಾಮಾ. ೫೫-೨೭). [ ತಿರೆ + ಮಗಳ್ ]

**ತಿರೆಹರವು** (ನಾ). ಭೂಮಿಯ ಹರವು; ಭೂವಿಸ್ತಾರ: ಹೊಟ್ಟೆ ನೋವಿಳಿಯುತಿರೆ ರಟ್ಟೆ ನೋವೆನ್ನುವುದು ಮಟ್ಟಸವೆ ತಿರೆಹರವು ? (ಮಂಕುಳ. ೩೫೯). [ ತಿರೆ + ಹರವು$_2$ (<ಪರೆಪು$_2$) ]

**ತಿರೋಧಾನ** (ನಾ). ೧. ಅಡಗಿಸಿಡುವುದು; ಮುಚ್ಚಿಡುವುದು: "ವ್ಯವಧಾನಂ, ತಿರೋಧಾನಂ, ಅಂತರ್ಧಿ, ಅಪವಾರಣಂ—ಈ ೪ ಅಪವಾರಣಂ" (ಹಲಾಯು. ೦೦೯-೩೪). ೨. ಮರೆಯಾಗುವಿಕೆ; ಕಾಣದಾಗುವಿಕೆ; ಅಂತರ್ಧಾನ: ಆಗಳ್ ತಿರೋಧಾನಮಂ ಶ್ರೀನಾಥಂ ಪಡೆದಿರ್ದುದಂ (ವಿಷ್ಣುಪು. ೪-೦೦೪). ೩. ಮರೆಮಾಡುವುದು; ತೆರೆಹಾಕುವುದು: ತಿರೋಧಾನೋತ್ಥಾನಾಂಬರಮದನೆ ತದ್ವ್ಯವಸೆಗುಂ (ಚಂದ್ರಪು. ೦೦-೬೪). ೪. ನೆವ; ನೆಪ: "ವ್ಯವಧಾನಮುಪವಾರಣಂ ತಿರೋಧಾನಮೆನೆ ನೆವನಕ್ಕು" (ಮಂಗರಾ. ೦೨೯-೦೩). ೫. ಐದು ವಿಧವಾದ ಕೃತ್ಯಗಳಲ್ಲಿ ಒಂದು; ಬಂಧ: ಪರಮೇಶ್ವರನು ... ಸೃಷ್ಟಿ, ಸ್ಥಿತಿ, ಸಂಹಾರ, ತಿರೋಧಾನ, ಅನುಗ್ರಹಗಳೆಂಬ ಪಂಚಕೃತ್ಯಗಳನ್ನು ... ನೆರವೇರಿಸುತ್ತ ಭಕ್ತಾನುಗ್ರಹಮಾಡುತ್ತಾನೆಂಬುದು ಶೈವಾಗಮದ ಸಿದ್ಧಾಂತ (ಧಾರದ. ೬೩). 'ತಿರೋಧಾನಮೂರ್ತಿ' ಪರಾ. [ಸಂ.]

**ತಿರೋಧಾನತೆ** (ನಾ). = ತಿರೋಧಾನ ೧: ಏತಕೀ ನರನಾಟಕದ ಮಾಯಾತಿರೋಧಾನತೆಯು (ತೊರರಾ. ೬-೪-೪೦). [ಸಂ. ತಿರೋಧಾನತಾ]

**ತಿರೋಧಾನಪಾಶ** (ನಾ). ಐದು ವಿಧವಾದ ಪಾಶಗಳಲ್ಲಿ ಒಂದು: ಪಾಶಪದಾರ್ಥವು ... ಮಲಪಾಶ ಮಾಯಾಪಾಶ ಕರ್ಮಪಾಶ ಬಿಂದುಪಾಶ ತಿರೋಧಾನಪಾಶವೆಂದು ಪಂಚಪ್ರಕಾರವಾಗಿರ್ಪುದು (ವಿಶೇಶ. ೦೬೩). 'ಪಂಚಪಾಶ' ಪರಾ. [ತಿರೋಧಾನ + ಪಾಶ]

**ತಿರೋಧಾನಮೂರ್ತಿ** (ನಾ). ಐದು ವಿಧವಾದ ಶಿವನ ಮೂರ್ತಿಗಳಲ್ಲಿ ಒಂದು; ಪ್ರಳಯಂಕಾಲದಲ್ಲಿ ಜ್ಞಾನ ಹಾಗೂ ಕ್ರಿಯಾಶಕ್ತಿಗಳನ್ನು ಅಡಗಿಸಿಕೊಳ್ಳುವ ಮೂರ್ತಿ: ಶಿವಮೂರ್ತಿಗಳಲ್ಲಿ ಸೃಷ್ಟಿಮೂರ್ತಿ, ಸ್ಥಿತಿಮೂರ್ತಿ, ಸಂಹಾರಮೂರ್ತಿ, ತಿರೋಧಾನಮೂರ್ತಿ, ಅನುಗ್ರಹಮೂರ್ತಿಗಳೆಂದು ಐದು ವಿಧ (ಧಾರದ. ೬೯).

[ತಿರೋಧಾನ + ಮೂರ್ತಿ]

**ತಿರೋಧಾನಶಕ್ತಿ** (ನಾ). ಪುರುಷನ ಜ್ಞಾನ ಹಾಗೂ ಕ್ರಿಯಾಶಕ್ತಿಗಳನ್ನು ತನ್ನಲ್ಲಿ ಅಡಗಿಸಿಕೊಳ್ಳುವ ಶಕ್ತಿ: ಈಶ್ವರನಲ್ಲಿ ರಾಗತತ್ವವನೇಳಿಪುದು ತಿರೋಧಾನಶಕ್ತಿ (ವೀಶ್ವಪು. ೬-೩-೩೬); ಷಡ್ವಿಧಾವಸ್ಥೆಯನ್ನುಳ್ಳ ಜೀವರು ಆಹಾರ ವ್ಯವಹಾರ ವಿಷಯ ಜ್ಞಾನಯುಕ್ತರಾಗಿ ಈಶ್ವರನ ತಿರೋಧಾನಶಕ್ತಿಯಲ್ಲಿ ಶಿಕ್ಷೆಗೊಳಗಾಗಿರ್ಪರು (ವಚಸಂ. ೩೩೬-೦೩ ಟೀಕೆ); ವಿಮರ್ಶರೂಪವಾದ ಅಹಂ ಎಂಬ ಸ್ವರೂಪದಲ್ಲಿ ... ಪರಾಪಾಕ್ ಶಕ್ತಿಮಯವಾದ ಚಿತ್ ಶಕ್ತಿಯೇ ತಿರೋಧಾನಶಕ್ತಿ (ಧಾತತ್ತ್ವ. ೬೮೬). [ತಿರೋಧಾನ + ಶಕ್ತಿ]

**ತಿರೋಧಾನಿಸು** (ಕ್ರಿ). ಅಡಗಿಸಿಡು; ಮುಚ್ಚಿಡು: ಭಾನುವಿಗೆ ದುರ್ದಿವಸವಾದಭ್ರದೊಲು ತಿರೋಧಾನಿಸಿರ್ಪಾವರಣಶಕ್ತಿಯಂ ಮಱೆಗೊಂಡು (ಕೃಕವ. ೩-೬೩-೧). [ತಿರೋಧಾನ + –ಇಸು$_3$]

**ತಿರೋಧಾಯಿಕ** (ನಾ). ಸುಖವನ್ನುಂಟುಮಾಡುವುದು: ತಿರೋಧಾಯಿಕ (ಭೋಗವನ್ನುಂಟುಮಾಡುವುದು), ಬಿಂದು (ಮೋಕ್ಷವನ್ನು ಕೊಡುವ ಈಶ್ವರತತ್ತ್ವ—ಮೋಕ್ಷವನ್ನು ಕೊಡುವದು ಈಶ್ವರನಧೀನವೆಂಬುದೂ ಒಂದು ಪಾಶವು) ಇವು ಪಂಚಪಾಶಗಳು (ಅಮೃತ. ೩-೦೩೦ ಟೀಕು). [ಸಂ.]

**ತಿರೋಭಾವ** (ನಾ). ೧. ಮರೆಯಾಗುವಿಕೆ; ಕಾಣದಾಗುವಿಕೆ: ಆಯಾ ಪಶುಗಳ ಭೋಗಾದೃಷ್ಟ ತೀರಿದ ಬಳಿಕ ಕಾರ್ಯಮಿಲ್ಲಾಗಿ ಅದು ತೋಱದಿರ್ಪುದೇ ತಿರೋಭಾವಮಕ್ಕುಂ (ವಿಶೇಶ. ೦೬೬). ೨. = ತಿರೋಧಾನಪಾಶ: ಶುದ್ಧಾಶುದ್ಧವೆಂಬ ಎರಡು ವಿಧ ಸೃಷ್ಟಿಗಳೆಲ್ಲೂ ಸೃಷ್ಟಿ, ಸ್ಥಿತಿ, ಸಂಹಾರ, ಅನುಗ್ರಹ, ತಿರೋಭಾವವೆಂದು ಐದುವಿಧ ವ್ಯಾಪಾರಗಳಿರುವುವು ... ತಿರೋಭಾವವೆಂದರೆ ಬಂಧ (ಹಿಂದಸಾ. ೩೦೦). [ಸಂ.]

**ತಿರೋಹಿತ** (ನಾ). ೧. ಮರೆಯಾದವನು; ಮಾಯವಾದವನು: ತಿರೋಹಿತನಾಗಿ ಪುರಂದರನು ಪೋದನತ್ತ ತಪದೊಳ್ ನರನಿಂತೊಂದಿನಿಲೆ (ಪಂಪಭಾ. ೮-೯): ಪುರಾರಿಯ ಪದಯುಗಕೆ ಗುರುತನುಜ ಮೈಯಿಕ್ಕಿದನು ಬೀಳ್ಕೊಂಡನು ತಿರೋಹಿತನಾದನೀಶ್ವರನೀಶನನು ಕಳುಹಿ (ಕುಮ್ಯಾಗ. ೯-೨೩). ೨. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು; ಒಂದು ಪದಾರ್ಥವನ್ನು ಪ್ರಬಲವಾದ ಇನ್ನೊಂದು ಪದಾರ್ಥವು ಅಡಗಿಸಿತೆಂದು ವರ್ಣಿಸುವುದು: ಒಂದು ಗುಣದತಿಶಯಂ ತಿರೋಹಿಸೆ ತಿರೋಹಿತಂ ತಾನಕ್ಕುಂ ... ಉದಾ:– ಕಾಳಿಂದಿಯ ಸಿತಜಲದೊಳ ಗೋಲಾಡುವ ಕೃಷ್ಣನಂ ಸವರ್ಣತೆಯಿಂ ಗೋಪಾಲಕುಮಾರರ್ ನೋಡಿಯುಮಾಲೋಲಮನಸ್ಕರಱಿಯದಾಕುಲಮುತ್ತರ್ (ಕಾವ್ಯಾವ. ೬೩೬).

[ಸಂ.]

**ತಿರೋಹಿತವೇಷ** (ನಾ). ಬೇರೆ ವೇಷವನ್ನು ತೊಟ್ಟವನಂ; ಛದ್ಮವೇಷವನ್ನು ಧರಿಸಿದವನಂ: ವಸುದೇವನಾದೇಶದಿಂ ದ್ವಾದಶದಿನಕ್ಕೆ ನಾಮಕರಣೋತ್ಸವಮಂ ಮಾಡಲೆಂದು ಗಾರ್ಗ್ಯನೆಂಬ ಪುರೋಹಿತಂ ತಿರೋಹಿತವೇಷನಾಗಿ ಬಂದು (ಜಗವಿ. ೩-೨೬ ವ). [ತಿರೋಹಿತ + ವೇಷ]

**ತಿರೋಹಿಸು** (ಕ್ರಿ). ಅಡಗು; ವಂಚಿಸ್ತು: ಕ್ರಿಯೆಯಂ ಪ್ರತಿಷೇಧಂಗೆಯ್ಯ ನಿಯತಫಳವ್ಯಕ್ತಿಯದು ... ಒಂದಂ ಗುಣದತಿಶಯಂ ತಿರೋಹಿಸೆ ತಿರೋಹಿತಂ ತಾನಕ್ಕುಂ (ಕಾವ್ಯಾವ. ೬೩೬). [<ತಿರೋಹಿತ + –ಇಸು$_3$]

**ತಿರ್ಗಾಸು** 'ತಿರಂಗಾಸ್' ನೋ.

**ತಿರ್ದಿಸು, ತಿದ್ದಿಸು** (ಕ್ರಿ). ೧. ಸರಿಪಡಿಸು; ನೇರಗೊಳಿಸು: ರಸಿಕರಿನೆಯ್ದೆ ತಿರ್ದಿಸಿದೊಡಲ್ಲದೆ ನಿಲ್ಲದು ಚಿತ್ರಮಂತೆ ತಿರ್ದಿಸುವುದೆನಲ್ ನಯಂ (ಜಗವಿ.೦-೦೩); ಕವಿಗಳಿಂ ತನ್ನ ಕೃತಿಯಂ ನಾಡೆ ತಿರ್ದಿಸಿದೊಡೆ (ಅರಾಚ. ೦-೪೭). ೨. ತರಬೇತುಗೊಳಿಸು; ಸಾಧುಮಾಡು; ಪಳಗಿಸು: ಮೊದಲೊಳಭಿನವತುರಂಗಮನೊದವಿದ ಸಹಣಿಗಳಿನ್ನೆದೆ ತಿರ್ದಿಸಿ ಬಸಮಾಡುದನೞಿದೇಱುವುದು (ರಾಜಶೇ. ೦೩-೩). ತಿದ್ದಿಸು: ೧. ಉಗುರ ತಿದ್ದಿಸುವದು ಮುಗುಳನಗೆ ನಗಿಸುವದು...ಬೋಸದ ಬಗೆಯ ನೋಡೆಂದ (ಸರ್ವಜ್ಞ. ೦೯೮೭). ೩. ಅಕ್ಷರಗಳನ್ನು ಬರೆದು ಕೊಟ್ಟಂತೆಯೇ ಅದರ ಮೇಲೆ ಮತ್ತೆ ಮತ್ತೆ ಬರೆಸು,—ತೀಡಿಸು: ಉಪಾಧ್ಯಾಯರು ಮಕ್ಕಳಿಗೆ ಅಕ್ಷರ ತಿದ್ದಿಸುತ್ತಾ ಇದ್ದಾರೆ (ರೂಢಿ). ೪. ಹಂಚು; ವಿತರಣೆಮಾಡು: ಬಡವ ಬಲ್ಲಿದ ಬುಧ ಯಾಚಕರೆನ್ನದೆ...ಪೆಟ್ಟಿಗೆ ಪೆಟ್ಟಿಗೆಗಳ ತಣಿಯಿತ್ತು ಒಡನೆ ಶರ್ಕರೆಯ ತಿದ್ದಿಸಿದ (ಜ್ಞಾನಚ. ೩೭-೦೩೪); ಪ್ರತಿ ಗೃಹಂ ತಪ್ಪದೆ ಸಕ್ಕರೆಯಂ ತಿದ್ದಿಸಿ (ಕೆಳನೃ. ೧೦-೭೦). [ತಿರ್ದು$_1$ + –ಇಸು$_3$]

**ತಿರ್ದು$_1$, ತಿದ್ದು$_1$, ತಿಟ್ಟು** (ಕ್ರಿ). ೧. ಸರಿಪಡಿಸು; ನೇರವಮಾಡು; ಸರಿಮಾಡು: "ತಿರ್ದು—ಋಜೂಕರಣೇ (ನೆಟ್ಟಗೆ ಮಾಡು)" (ಶಮದ); ಕಟಿದ ನೀರ್ಗೆ ಬಂದವುದೆ ಬಟ್ಟಿಕ ಜರೆಗಂ ತಿರ್ದಲ್ (ಅಚಪು. ೨-೩೯); ವನರುಹಭವನೆನಿಸಿದ ದಂಡನಾಯಕಂ ಕೇಶಿ ತಿರ್ದಪೇಳ್ದಂ ಕವಿರನ್ನಂ (ಗದಾಯು. ೧-೩೦); ನಾಯ ಬಾಲಮಂ ಕಾಸಿ ತಿರ್ದಿದೊಡಂ ಕೊಂಕು ಮಾಣದು (ಪಂಚತಂ. ೧೦೩-೨); ಕರಮಿಂಬಾಗಿರೆ ತಿರ್ದಿಬೈತಲೆಯಂ (ಸಮುಪ. ೬-೩೬); ಪರರು ಕೈಯಿಕ್ಕದಂತೆ ಸಸಿನೆ ಮಾಡುವುದು ತಿರ್ದುವುದು (ಹಕಳಾ. ೦-೨೦); ನುಡಿ ತಪ್ಪಿದೊಡೆ ತಿರ್ದುವುದೆನ್ನಯ ಸಂಗಡಿಗರು ಸಲೆ ಬಲ್ಲವರು (ಪೋಹಚ. ೦-೦೯); ಬುಧರೆಲ್ಲರೊಲ್ದು ಕೈಕೊಳ್ಗೆ ತಿರ್ದುಗೆ ಕೃತಿಯೊಳಧಿಕದೋಷಂಗಳೇನಾನುಮುಳ್ಳೊಡೆ (ಶ್ರೀರಾಮ. ೨-೦೦). ೨. ಹಸನುಮಾಡಂ; ಸುಧಾರಣೆಮಾಡಂ; ಶುದ್ಧಪಡಿಸಂ: ಬಗೆದರ್ಥಮನಱಿಪದೆ ಮೆಲ್ಲಗೆ ತಿರ್ದುವ ಬಗೆಯನದಱ ನೆಪದಿಂ ಪೆಱತಂ ನಿಗದಿಸುವುದು (ಕವಿರಾ. ೩-೦೩೨). ೩. ಪಳಗಿಸಂ; ದಾರಿಗೆ ತರಂ: ವಿರಾಟನಂ ಕಂಡೆಂತಪ್ಪ ದುಷ್ಟಾಶ್ವಂಗಳುಮನೇಱಲುಂ ತಿರ್ದಲುಂ ಬಲ್ಲೆನೆಂದು ಪೇೞ್ದುದಾಗಿ ತಂತ್ರಪಾಳ ವೆಸರೊಳ್ ಮಾಪಾದಿಯಾಗಿರ್ದಂ (ಪಂಪಭಾ. ೮-೩೪ ವ); ಮಾಪತಿ ವರ್ಗರ್

ನಯಕಾರರೀತನ ಗಜವ್ರಾತಂಗಳಂ ತಿರ್ದುವರ್ (ಶಾಂತಿಪು. ೫-೧೧೩); ಅವರ್ಗೆ ಪುಟ್ಟಿದ ಪೋರಿಗಳಂ ತಿರ್ದಿಯಾರಂಬಂಗೆಯ್ದು (ಪಂಚತಂ. ೧೪೬-೮); ವಿರೂಪಾಕ್ಷನಡರೆ ಬೊಮ್ಮಂ ತಿರ್ದಿ ತೋರ್ಪ ಪಟ್ಟದ ದಂತಿಯೊಂದೆನಲ್ ಕನಕಾಚಲಂ ಮೆಱೆದುದು (ಜಲಪು. ೩-೮). ೪. ಒಪ್ಪಗೊಳಿಸು; ಓರಣಗೊಳಿಸು; ಅಂದಗೊಳಿಸು: ಲೋಚು ದೋಷವೆಂಬೊಡೆ ತಿರ್ದಿದ ಪುರ್ವಿನವರಂ ತಿರ್ದಿದ ಮೀಸೆಯವರಂ ಕಾಣಲಾಗದು (ಧರ್ಮಾಮೃ. ೯-೮೯); ಕಚಭರಮನತಿಭರದಿಂ ತಿರ್ದುತ್ತಮಿರ್ದರ್ (ಗಿರಿಕ. ೧೦-೧೬); ಮೃಗತೃಷ್ಣಾಭೋಗವುಂ ತಿರ್ದಿದ ನಿಡುಮಡುವೆಂದೆಯ್ದುವಾಭೀಳ ಕಾಳೋರಗನಂ ನೇವಾಳವೆಂದೆತ್ತುವ (ಚಂದ್ರನಾ. ೬): ಗಳಕರ್ಣ ಭೂಷಣಂಗಳ ತಿರ್ದುತುಸಿರ ಬಿಡದೊಳಗೊಳಗೆ ನಲ್ಲನಂ ಪಲ್ಲುಗುರ್ಗಳ ಚುಚುಕಂಗಳನಱಿದು ಬೈವುತಂ (ಜಲಪು. ೯-೧೬). ೫. ಅಣಿಗೊಳಿಸು; ಸಿದ್ಧಗೊಳಿಸು: ಕರಗಮನೆತ್ತು ಶೀತಳಿಕೆ ಕಾಲ್ದೊಳೆ ಮಾಲಿನಿ ತಿರ್ದು ಬೋನವುಂ ತರಳಿಕೆ (ಅನಂಪು ೪-೮೫). ೬. ಮಾರ್ಗದರ್ಶನ ಮಾಡು: ಗೌಳ ನೀಂ ಸಂತೈಸು ಗಾಯಕರ ತಿರ್ದು ಪಾಂಚಾಳ ನೀಂ ಚಿಟ್ಟಿಗಳ ಗುರ್ಜರನೆ ಕಾದಿರ್ಪುದರಮನೆಯೊಳೊಳವಾಗಿಲಂ (ಭಾವಚಿಂ. ೫-೨೮). ೭. ಸರಿಯಾಗು; ಅನುಕೂಲವಾಗು: ಅದುಂ ಸುಕೃತಾನುರೂಪಮದು ನಮ್ಮ ಮನೋರಥ ದಂತೆ ತಿರ್ದಿ ಬರ್ಪುದೆ (ಅನಂಪು. ೧೨-೬೫). ೮. (ಶುಭವನ್ನು) ಸೂಚಿಸು; (ಶುಭದ)ಸೂಚನೆ ಕೊಡು: ಬಿಡೆ ತಿರ್ದಿದ ಶಕುನದ ನಯದಡಿವಿಡಿದು ಪುರೋಹಿತಂ ನೃಪಂಗೀ ನುಡಿಯಂ ನುಡಿದಂ (ಆದಿಪು. ೫-೬);ಶಕುನಂಗಳೆಲ್ಲಮುತ್ತರೋತ್ತರಂ ತಿರ್ದುವಿನಮುತ್ತರಾಭಿಮುಖರಾಗಿ ಪಯಣಂಬೋಗಿ (ಪಂಪಭಾ. ೩-೩೩ ವ): ತಿರ್ದಿದೆ ದೆವಸಂ ಮೂಣ್ದಿರ್ದು ಬಟ್ಕ್ಯಮಾ ತಿರ್ದನೆ ತಿರ್ದೆಂದು ಪಯಣಂಬೋಪಾತಂಗೆ ಪೊರ್ದದು ಲಾಭಂ ಬುಧಬಂಧು (ಕೋಕೋಪ. ೧೨-೮). ೯. (ಕಲಹ, ಜಗಳ ಮುಂತಾದುವನ್ನು) ನಿವಾರಿಸು; ಬಗೆಹರಿಸು; ತೀರಿಸು; ಕಳೆ: ಬಂಧುಗಳಂ ಬರಿಸಿ ನಿಮ್ಮಿರ್ವರೊಳಗಾರನೀ ಕನ್ನೆಯೊಲ್ದಪಳೋ ಕೈಕೊಳ್ವು ದೆಂದು ತಿರ್ದಿ ಕಳೆಯೆ (ಚಾವುಂಪು. ೧೦೬-೧೯): ಧರ್ಮಾಧಿಕರಣರ್ ನಡೆಯಿಂ ನಿಮ್ಮಿರ್ವರ ಬವರಮಂ ತಿರ್ದುವವೆಂದು ವಟವೃಕ್ಷದ ಸಮೀಪಕ್ಕೆ ವಂದು (ಪಂಚತಂ. ೧೭೬-೭). ೧೦. ನಿವಾರಣೆಯಾಗು; ಪರಿಹಾರವಾಗು: ಇತ್ತ ಗಾಂಧಾರಿಯುಂ ಕುಬೇರಕಾಂತಂಗೆ ತನ್ನಳಿಪಂ ಪ್ರಕಟಂ ಮಾಡೆ ಕುಬೇರ ಕಾಂತಂ ನಾಂ ನಪುಂಸಕನೆನೆ ವಿರಕ್ತೆಯಾಗಿರ್ಪನಂ ರತಿಷೇಣಂ ಬರೆ ನಿಮ್ಮ ಮುನ್ನಿನೌಷಧಪ್ರಯೋಗದೊಳ್ ತಿರ್ದಿತ್ತೆಂದು ನಿಜವಾಸಕ್ಕೆ ಪೋದರ್ (ಚಾವುಂಪು. ೯೩-೧೯). ೧೧. (ನೀರನ್ನು) ಎರೆ; ಬಿಡು; ಹಾಯಿಸು: ಕುಚಾಂತರದೊಳ್ ಕೊಳಗೊಂಡು ಮೋಹವಲ್ಲಿಗೆ ಬಿದಿ ತಿರ್ದಿ ಸುತ್ತಿಸಿದ ನೀರ್ಗಣೆಯಾದುದು ಬಾಷ್ಪಮೋಪಳಾ (ಶಾಂತಿಪು. ೮-೯೨); ಬಿಂಬಾಧರ ಕಾಂತಿಯಿಂ ಕಂತುರಾಗರಸದ ಪೊನಲಂ ತಿರ್ದುವಂತೆ (ಮಲ್ಲಿಪು. ೪-೭೨). ೧೨. ತೋಡು; ಅಗೆ: ಮೊಗೆಯಲ್ ಕೊಡಗೊಂಡು ತಿರ್ದಿ ಬಚ್ಚಲ ನೆಲೆದೋಂಟದೊಳ್ ಪರಿಯಿಸಲ್ (ಅಜಿಪು. ೭-೪೫); ಅಮೃತಾರ್ಣವಮನೆ ಮೇರುವಿನ ಮೇಖಳಾವನಕೆ ತಿರ್ದಿ ಪರಿಯಿಸಲ್ (ಪುಷ್ಪಪು. ೧೦-೯).

ತಿದ್ದು$_1$: ೧. ಕೃತಿಯಂ ಕಿಡೆನುಡಿವರಲ್ಲದೇಂ ಜಡರೊಡಂಬಡಲ್ತಿದ್ದಿ ನುಡಿಯ ಬಲ್ಲರೆ ಕವಿಪೋಲ್ (ಧರ್ಮಾಮೃ. ೧-೪೮); ಲೋಕದ ಡೊಂಕ ನೀವೇಕೆ ತಿದ್ದುವಿರಿ (ಬಸವ. ೧೨೪); ಸುಜನರ್ಗಳೀ ಶತಕದೊಳ್ ತಪ್ಪಿರ್ದೊಡಂ ತಿದ್ದಿ ತೋರ್ಪುದು (ಸೋಮೇಶ. ೨); ಇದರಿದರಿದು ತಿದ್ದುವೊಡೆ ಹರನೆ ಬಲ್ಲಂ ನಮ್ಮ ವಶವಲ್ಲ ತಿದ್ದುವೊಡೆ (ತಿರುಶ. ದೇ. ೧೯-೬); ದೇಸದೊಳಗೆ ಸಮಯ ಸಂಹಾಜವಾದರೆ ಅವರ ಮುಂದಿಟ್ಟು ತಿದುಹುದು ಅವರು ತಿದ್ದಿದ ಹಾಗೆ ನಡೆಉದು (ಎಕ. XII, ತಿಪ. ೭೭-೧೯; 1370); ಕಾರಣಿಕನೆನೆ ಪರೀಕ್ಷಕನೆನಲು ಸರ್ವರ ವಿಚಾರವಂ ತಿದ್ದುವವನೆನಿಕು (ಮುಂಗರಾ. ೭೨-೨೩); ಗರಿಯು ತಿದ್ದೆ ಬೆಡಗಿ ಪಕಿಯು ಕೊರಲ ಕೊಂಕಿದೆ (ಮೂಂದಳ. ೧೦-೧). ೨. ನೀತಿಸ್ಖಲಿತ ಜಡರನು ತಿದ್ದಿ ತಿಳುಹುವ ಸುಲಭತನದಲಿ ದೇವಮುನಿ ನಿನಗಾರು ಸರಿಯೆಂದ (ಕುವ್ಯಾಸ. ೧-೮೪). ೩. ಮುದಿಗುದುರೆ ತಿದ್ದೆ[ಪಾಠಾಂ. ತಿರ್ದೆ] ಬಡವಾದುದೆಂಬ ತೆಱದಿಂ (ಸಮತ. ೧೩-೭೧); ಅಡವಿಸಿಂಗವ ತಿದ್ದಲಕ್ಕು (ಸೋಮೇಶ. ೪೯). ೪. ಜವನುಂ ತಂನಯ ಗಂಡುಬಚ್ಚಣಮೆನಿಪ್ಪಾ ಮೀಸೆಯುಂ ತಿದ್ದಲಂಜುವಿನಂ(ಎಕ. V, ಹಾಸನ. ೫೩-೧೩; 1170); ಕುಂಕುಮ ಕಸ್ತೂರಿ ಕರಿನಾಮ ತಿದ್ದಿ (ಪುರಂದ. ೧-೧೪೦-೩); ಸಿರಿನೊಸಲೊಳು ಕಸ್ತೂರಿಯ ತಿದ್ದುತ ಹೆಂಗಳರಸಿಯು ರೆಸೆದರರ್ಶಿಯಲಿ (ಕಂನವಿ. ೨೪-೪೬). ೫. ಬಿಲುಗಣೆಗಳನು ತಿದ್ದಿದನು ಫಲುಗುಣ ಹೊಡಿದನು ರಥವ (ಕುವ್ಯಾಅ. ೨೨-೧೮). ೯. ಮದ್ದು ಮಂತ್ರವು ವಾದ ತಿದ್ದುವವು ಕುತ್ತಗಳ (ಸರ್ವಜ್ಞ. ೨೪೬). ೧೦. ತಿದ್ದಿ ಹೋಹುದು ನಿನ್ನ ಪಾಪಕೆ ಮದ್ದು ತಾನೊಂದಿಹುದು (ಸಂಭಪ. ೩-೩೪), ೧೧. ಅಖಂಡಮಂಡಲವೆಂಬ ಭಾವಿ ಪವನವೆ ಜಾಟಾಳ ಸುಷುಮ್ನನಾಳ ದಿಂದವೆ ಉದಕವ ತಿದ್ದಿ (ಅವಚಂ. ೧೮೦-೮೧೩): ದಯವನತ್ತಲು ತಿದ್ದಿ ನಮ್ಮನು ಭಯಮಹಾಬ್ಧಿಯೊಳದ್ದಿ . . . ನಯವ. ನೀವೊಡ್ದುವರೆ (ಕುವ್ಯಾಭೀ. ೧-೨೪): ಎದ್ದು ಬಳಿಕವನಸುರನಕ್ಷಿಗೆ ತಿದ್ದಿದನು ಹೊಂಗಲಶ ವಾರಿಯನುದ್ದಿದನು ಘಾಯದಲಿ ಶುಕ್ರಾಚಾರ್ಯನೌಷಧಿಯ (ತೊರರಾ. ೬-೨೪-೨೦); ಆರಂಭಕೃತಿಯನು ಮಾಳ್ಪರು ಗದ್ದೆಗೆ ನೀರ ಹರಿಯೆ ತಿದ್ದೆನಲು ನಾರ ಹಂಗಡವ ಮಾಡೆನಲಾಗಿ ಪಾಪದ ಬೇರ ಕೀಳುವ ಕೃಷ್ಣ ಜಯತು (ಮೋಹತ. ೪೧-೨೦); ಕೀಳೇರಿಯಲ್ಲಿ ಅಚ್ಚುಕಟ್ಟನೂ ಕಟ್ಟಿ ತಿದ್ದಿದ ಗದ್ದೆವೊಳಗೆ ದೇವರ ಭಂಡಾರಕೆ ಎರಡು ಭಾಗೆ (ಎಕ. X(೧). ಕೋಲಾರ. ೩೦೦-೮; 17ನೆಯ ಶತ). ೧೨. ಮೂಢರಂದದೊಳೂರ ಗುದ್ದಲಿಯನು ಕೊಂಡು ನಾಡ ಕಾಲುವೆಯ ತಿದ್ದುವರೆ (ಮೋಹತ. ೭-೮). ೧೩. (ತಿವಿದು) ಸಾಯಿಸು; ಕೊಲ್ಲು: ಮೃಮಾಂಗಳ ಮುಕ್ಕುಱಿಕಿದಿ ವದಿರ ತಿದ್ದಿ ಬಹೆನಿದೆಯೆನುತ ತೆಗೆದೆಚ್ಚ (ಕುವ್ಯಾದ್ರೋ. ೨-೪೪). ೧೪. ಬರೆ; ರೇಖಿಸು; ಚಿತ್ರಿಸು: ಬರೆಯಬಾರದ ತಿದ್ದಬಾರದ ಕಡೆದರೆ ದೊರೆಯಬಾರದ ರೂಪಿನಭವಾ (ಭರತ. ೪-೧೨೩). ೧೫. ಅಕ್ಷರಗಳನ್ನು ಬರೆದುಕೊಟ್ಟಂತೆಯೇ ಅದರ ಮೇಲೆ ಮತ್ತೆ ಮತ್ತೆ ಬರೆ: ಮಕ್ಕಳು ತಿದ್ದಿದಷ್ಟೂ ಅಕ್ಷರ ಚೆನ್ನಾಗುತ್ತದೆ (ಜೂಥ). ೧೬. (ಬರಹ ಮೊದಲಾದುವನ್ನು) ವ್ಯತ್ಯಾಸ ಮಾಡು; ಬದಲಾಯಿಸು: ಕೆಲಬಲದ ಮಾಮರದೊಳಿಪ್ಪ ನಿರ್ಯಾಸಮಂ ತೆಗೆದು ಕಿಱುವೆರಳುಗುರ್ಗೊನೆಯಿಂದೆ ತಿದ್ದಿ ಬರೆದು (ಜೈಮಿಭಾ. ೩೦-೨೯); ಆ ಲೇಖನವನ್ನು ಅವರು ತಮ್ಮ ಇಷ್ಟಕ್ಕನುಸಾರವಾಗಿ ತಿದ್ದಿದರು (ಜೂಥ). ೧೭. ಕಂಡರಿಸು; ಕೆತ್ತು: ಕೊರೆ: ಚಿಕ್ಕಸುಣಗಿಲ ಗುಡ್ಡದ ಮೇಲೆ ವಾಮನಮುದ್ರೆ ತಿದ್ದಿಯಿರುವ ಪುಟ್ಟುಗಲ್ಲು (ಎಕ. XIV, ಮೈಸೂರು. ೧೧೫-೩೫೮; 1674); ಶುದ್ಧ ಸ್ಫಟಿಕದ ಶಿಲೆಯೊಳು ತಿದ್ದಿದ ಜಿನಬಿಂಬದಂತೆ (ಭವ್ಯಾಮೃ. ೩೮). ೧೮. (ಸಾಲ) ತೀರಿಸು; ಮುಗಿಸು: ಎಂದು ಕೊಟ್ಟೆಹೆನಿನ್ನು ಸಾಲವನೆಂದು ತಿದ್ದುವೆವಕ್ಕಟಕಟ (ಬಸಪು. ೪೨-೧೩); ಆಗಲೀ ನಾಲಗೆಯ ಸಾಲವನೀಗ ಕೈಯಲಿ ತಿದ್ದಿ ಕೊಡುವರೆ (ಕುವ್ಯಾಕ. ೨-೧೯); ಇಂತಪ್ಪ ಋಣಂಗಳ ತಿದ್ದಿ ಸಿರಿವಂತನಾಗಿ ಭವರಾಜನ ಬಲುವ ಗೆದ್ದೆ (ಖನಪ. ೪೩-೩೮): ಕೊಂಡ ಸಾಲಗಳನ್ನು ತಿದ್ದದಾತನೆ ಹೊಲೆಯ (ಪುರಂದ. ೧-೧೭೮-೫); ಏಸು ಜನ್ಮದಿ ನಿನ್ನ ರಿಣವ ತಿದ್ದುವೆನೆಂದಾ ಸುಗುಣೆಯು ನಪ್ಪಿದಳು (ಮೋಹತ. ೩೦-೩೯): ದ್ರವ್ಯವಿದ್ದವನು ತಿಂದು ಸಾಯಲಿಲ್ಲ, ಸಾಲಾ ಮಾಡಿದವ ತಿದ್ದಿ ಸಾಯಲಿಲ್ಲ (ಗಾದೆ). ೧೯. ತೀರು; ಮುಗಿ: ತಿದ್ದಿತೆಮ್ಮಯ ದೆಸೆ ದಶಾನನುದ್ಧುರುಟಾತನದಿಂದ ನಾವ್ ಬಂದಿದ್ದ ಹದನಿದು ಜೀಯ ರಕ್ಷಿಸಬೇಕು ನೀವೆಂದ (ತೊರರಾ. ೧-೮-೫೮): ತಿದ್ದಿತೇ

ಭವದೀಯ ಕರ್ಣದ ಹೊದ್ದಿಗೆಯ ಸೌಭಾಗ್ಯವಿಂದ್ರನ ಗದ್ದುಗೆಯು ನಡರಿದನೆ ಪಿತನೆನುತೆಱಗಿದನು ವದಕೆ (ತೊರರಾ. ೨-೬-೨೫). ೨೦. (ಭಾರವನ್ನು) ಇಳಿಸು; ಕಡಮೆ ಮಾಡು : ನೆಲನ ತಿಣ್ಣನೆ ತಿದ್ದ ಲೋಸುಗ ಸುಳಿದನಱಿಯಾ ಕೃಷ್ಣನು (ಕುಮ್ಯಾದ್ರೋ. ೨-೬೨) ; ಭೂಮಿಯ ತಿಣ್ಣವನು ತಿದ್ದಲಿಕೆ ಹರಿ ನರನಾಗಿ ರೂಹಿಸಿದ (ತೊರರಾ. ೬-೨-೨೦). ೨೧. ಸಮಾಧಾನ ಪಡಿಸು ; ಸಾಂತ್ವನ ನೀಡು : ಮುಳಿಸ ತಿದ್ದಿ ತೋಱಿ ನಿರೂಪಿಸಿದ ಪ್ರಸ್ತಾವದ ವಚನ (ಶೂನ್ಯಸಂ. ೦೦೯-೦೦) ; ಕೇಳಿಯವರ ಸಂವಾದವ ತಿದ್ದಲು ಕಾಳಿ ನಿರ್ವಾಣಾಕೃತಿಯು ತಾಳಿ ಬಂದಿದಿರಾಗಿ ನಿಲಲಚ್ಚ್ಯುತ ನೋಡಿ ಹೋಳಿದ ದೃಗ್ಯುಗಳವನು (ಮೋಹತ. ೩೮-೨೪). ೨೨. ಹಂಚು; ವಿತರಣೆ ಮಾಡು : ವರಿಪವೊಂದಕ್ಕೆ ತಿದ್ದುವ ಸಮು ದಾಯ ಗದ್ಯಾಣ ೧೮೦ ಸಮುದಾಯ (ಸೌಇಇ. IX-1, ೩೯೩-೫೦ : 1261) ; ಪರಿವಾರಕುಚಿತವನಿತ್ತು ಪರಿಸೆಯು ತಿದ್ದಿರ್ದೈಯೆಂದು ಭರತೇಶ ನೇಮವನಿತ್ತ (ಭರಪ. ೬೩-೦೦೪) ; ಧಾನ್ಯಗಳ ಬಿತ್ತಿ ಬೆಳೆದುಂ ಕೊಯ್ದು ತುಳಿಸಿಯಲ್ಲವ ರಾಶಿಯಾ ಮಾಡ್ಯಾಯುಗಳ ತಿದ್ದಿ ರಾಯರಿಗೆ ಸಂಭಾಗ ಗೂಡೆಯಿಂದಳೆದಿತ್ತು (ನವಮೋ. ೨-೪೨). Δ ತಿಟ್ಟು : ೧. ಹೊಸಕೆರೆಯ ಕಟ್ಟಿಸಿ ತೂಬನಿಕ್ಕಿಸಿ ಭೂಮಿಯುಂ ತಿಟ್ಟಿ ಸೋಮೇಶ್ವರದೇವರ ದೇಗುಲವ ಅಳಿವಂ ಸೋದಿಸಿ (ಎಕ. X, ಚಿಂತಾಮ.೩೦-೦೦ : 1047) ; (ಎಇ. V, ೨೦೭-೦೦ : 1047 ನೋ).

ತಿದ್ದಿ ಕೊಳ್, ತಿದ್ದಿಕೊಳ್ಳು = ೧. (ಶಕುನವನ್ನು) ನೋಡಿಕೊಳ್ಳು ; ಗಮನಿಸು : ಅವ ಶಕುನವ ತಿದ್ದಿಕೊಂಡೆಲೆ ಭಾವ ಬಂದೆಯೊ ಅಲ್ಲ ದಿರ್ದೊಡದಾವ ಮೋಹನವಶ್ಯವಿದ್ಯೆಯ ಕಲಿತೆಯೊ (ಕೃಭುಲೀ. ೫-೪೯). ೨. ಸರಿಪಡಿಸು ; ಸುಧಾರಿಸು : ರಾಯರು ಎತ್ತಿ ತೋರಿಸುವ ತಪ್ಪು ಗಳನ್ನು ಹೋಟೇಲಿನವರು ಸಹ ತಿದ್ದಿಕೊಳ್ಳುವುದಕ್ಕೆ ಸಾಧ್ಯವಿಲ್ಲದಂತಾಗಿದೆ (ರಾಯಳ. ೯೪). ತಿದ್ದಿ ತೀಡು = ೧. ಪರಿಷ್ಕಾರಮಾಡು ; ಸುಧಾರಣೆ ಮಾಡು : ತಿದ್ದಿ ತೀಡಿ ಗೊಂಬಿ ಹಾಂಗ ಮಾಡಿ (ಜಾನಗೀ. ೪೩). ೨. ಪರಿಷ್ಕಾರವಾಗು ; ಸುಧಾರಣೆಯಾಗು : ನವಜನಾಂಗ ಮೂಡಿ ಮೊಳಗಿ ಬದುಕು ತಿದ್ದಿ ತೀಡಿವೆ (ನಲಮಾ. ೨೪-೦೦). ತಿದ್ದುಮಿದ್ದು = ಸರಿಪಡಿಸಿ ನಯಗೊಳಿಸು ; ಸಂಸ್ಕರಿಸು ; ಮಾರ್ಪಾಡುಗೊಳಿಸು : ನಮ್ಮನ್ನು ತಿದ್ದುವಿದ್ದಲು ತಿಂಮತನ ತನ್ನ ವರ್ಗದೊಡನೆ ಟಸಿಲೊಡೆದ ಹಲವು ಟೊಂಗೆಗಳಲ್ಲಿ ಕುಳಿತು ಅಣಕಿಸಲೆಂದೇ ನನ್ನ ಅವಸರದ ಆಶಯ (ತಿಂಮುಕ. ೧೨೯) ; ಪರಮಾತ್ಮನ ಗುಪ್ತಹಸ್ತವು, ಕಾಣದಂತೆ ವ್ಯಕ್ತಿ ಯನ್ನು ತಿದ್ದುಮಿದ್ದುವ ಕೆಲಸವು ಆರಂಭಗೊಳ್ಳುತ್ತದೆ (ದಾಳಿಬ. ೫೦). ತಿರ್ದಾನೆಮಲ್ಲ = ಒಂದು ಬಿರುದು : ರಾಜಮನೋಜಂ ದ್ರೋಹಚಳಿಕ್ಕಂ ಕೊಮರವಿಳಾಸಂ ತಿಟ್ಟಾನೆಮಲ್ಲ ನೊಟಮ್ಬರ ಭೀಮಂ (ಸೌಇಇ. IX-1, ೩೦-೩೦ ; 966).

[ದೇ. ೫ ತಮಿ. ತಿರುತ್ತು, ತಿರುನ್ನು; ಮಲ. ತಿರುತ್ತು ; ತುಳು. ತಿರ್ದು, ತಿದ್ದು ; ಕೊಡ. ತಿದ್ದ್ ; ತೆಲು. ದಿದ್ದು]

ತಿರ್ದು₂, ತಿದ್ದು₂ (ನಾ). ೧. ಸರಿಪಡಿಸುವಿಕೆ ; ನೇರಮಾಡುವಿಕೆ : ವಿಚಾರವುಱಿಯಂದೆ ತಿರ್ದುವ ತಿರ್ದುಂ (ಧರ್ಮಾಮೃ. ೦೦-೪೨) ; ಪೂಗಳ್, ಓದುಗಳ್, ಪೋಡುಗಳ್, ತಿರ್ದುಗಳ್ (ಶಬ್ದಾನು. ೫೪೯ ಪ್ರಯೋ). ೨. ಸರಿಯಾದುದು ; ಯೋಗ್ಯವಾದುದು ; ಉಚಿತವಾದುದು. 'ತಿರ್ದುವರ್' ಪರಾ. ೩. ಶಕುನ : ತಿರ್ದಿದ ದೆವಸಂ ಮಾಣ್ದಿರ್ದು ಬಱಿಕ್ಕಮಾ ತಿರ್ದನೆ ತಿರ್ದೆಂದು ಪಯಣಂಬೋಪಾತಂಗೆ ಪೊರ್ದದು ಲಾಭಂ (ಲೋಕೋಪ. ೦೨-೮) ; ಅನುಕೂಲಪವನನುಂ ಹಸ್ತಿನಿಕಾಯದ ಶೋಭನಾವಯವಸೂಚನವುಂ ಸುನಯದ ಶಕುನನಿಕಾಯಸ್ವನಮುಂ ದಂಪ್ತಿಗಳ ತಿರ್ದುವೊದವಿಸೆ ಮುದಮಂ (ಮಹಾನೇ. ೦೨-೦೩). ತಿದ್ದು₂ : ೧. 'ತಿದ್ದುಪಡಿ', 'ತಿದ್ದುಪಾಟು' ಪರಾ. ೩. ಹಣ ಭಾರದ್ವಾಜನುಡಿಕೆಯ ಸರಟ ನಕುಲನ ತಿದ್ದುಗಳ [ ಪಾಠಾಂ. ತಿರಿದುಗಳ ] ಕುಕ್ಕುರನ ತಾಳಿನ ಶಕುನವನು ಕೈಕೊಳುತ ನಡೆತಂದ (ಕುಮ್ಯಾಅ. ೮-೩೩).

[ <ತಿರ್ದು₁./ ತಮಿ. ತಿರುತ್ತ, ತಿರುತ್ತಲ್ ; ಮಲ. ತಿರುತ್ತು; ತುಳು. ತಿರ್ದು, ತಿದ್ದಿಗೆ; ತೆಲು. ದಿದ್ದು]

ತಿರ್ದುಂಬೋರಿ (ನಾ). ಪಳಗಿಸಬೇಕಾದ ಹೋರಿ: "ದಮ್ಯಃ, ವತ್ಸತರಃ– ಈ ೨ ತಿರ್ದುಂಬೋರಿ" (ಹಲಾಯು. ೪೪-೦೦೯).

[ ತಿರ್ದು₁ + ಪೋರಿ₂ ]

ತಿರ್ದುವಡು (ಕ್ರಿ). ತಿದ್ದಿಕೊಳ್ಳು ; ಸಾವರಿಸಿಕೊಳ್ಳು : ಸೇನಾಪತಿಗಳು (ತಿರ್ದುವಟ್ಟು, ಕತ್ತು ಬಾಗುವರು) (ಬಟ್ಟಿಅ. ೬೮-೨೩).

[ ತಿರ್ದು₂ + ಪಡು₁ ]

ತಿರ್ದುವರ್ (ಕ್ರಿ). ಉಚಿತವಾಗು ; ಯೋಗ್ಯವಾಗು : ಪೇೞ್ವಪಂ ಚರಿತ ಪುರಾಣವುಂ ಬಱಿದೆ ಪೇೞ್ವವನೆಂದೊಡೆ ತಿರ್ದುವಪ್ಪುದೇ (ಅನಂಪು. ೦-೩೬). [ ತಿರ್ದು₂ + ಬರ್₁ ]

ತಿರ್ದುಹ (ನಾ). ಸರಿಪಡಿಸುವಿಕೆ; ನೇರಗೊಳಿಸುವಿಕೆ: ನಾಯ ಬಾಲಮಂ ಕಾಸಿ ತಿರ್ದುಹವುಂ . . . ಮೂರ್ಖನಂ ಬುದ್ಧಿವಂತನೋಲ್ದೈಸುಹವುಂ ಇವಱಿಂಪಾದಿ (ಪಂಚತಂ. ೦೩೬-೪). [ ತಿರ್ದು₁ + – ಹ₂ ]

ತಿರ್ಪಡ (ನಾ). ಒಂದು ಊರಿನ ಹೆಸರು : ಚನ್ದ್ರಾರ್ಕ್ಕಂ ತಿರ್ಪ್ಪಡ ಊರಾನೆ ಯಿದಿ ದೇಸತ್ತರ್ಮ್ಮನಟಿತ್ತಾಪ ಎಯಿದಪೊನ್ (ಎಕ. IV, ಹಗ್ಗಡ. ೧೬-೫ ; ಸು. 916). [ ? ]

ತಿರ್ಪು 'ತಿರುಂಪು₃' ನೋ.

Δ ತಿರ್ಪೆ 'ತಿಪ್ಪೆ' ನೋ.

Δ ತಿರ್ಪೆಸುಂಕ 'ತಿಪ್ಪೆಸುಂಕ' ನೋ.

ತಿರ್ಬು 'ತಿರುಂಪು₃' ನೋ.

ತಿರ್ಬೂರ್ (ನಾ). ಒಂದು ಊರಿನ ಹೆಸರು : ತಿರ್ಬೂರ ಮಾರಗವುಣ್ಡ ಕೆಱಿಗೂಡಲ ದೋರಗವುಣ್ಡ (ಮೃಆರಿ. ೦೪೦೯, ೦೦-೭೪ : 900).

[ ? + ಊರ್ ]

ತಿರ್ಮರಿ (ನಾ). ಒಂದು ಊರಿನ ಹೆಸರು : ಶ್ರೀಯಂಬಾಟಕ ತಿರ್ಮ್ಮರಿ ... ಪ್ರಭೃತಿ ದಶಗ್ರಾಮವ (ಇಆ. XIX, ೦೪-೦೪; 602). [ ? ]

ತಿರ್ಯಂಚ (ನಾ). ೧.=ತಿರ್ಯಗ್ಗತಿ : ಜೀವನಿಗೆ ನರಕ, ತಿರ್ಯಂಚ, ಮನುಷ್ಯ, ದೇವ ಎಂಬ ನಾಲ್ಕು ಗತಿಗಳಿರುತ್ತವೆ (ಜೈನಪ. ೨೯೫). ೨. ತಿರ್ಯಗ್ಗತಿಯಲ್ಲಿರುವ ಜೀವ : ತಿರ್ಯಂಚರುಂ ಮನುಷ್ಯರುಮೆಂದಿ ವರ್ಗಗಳ ರಸ ರುಧಿರ ವರ್ಣ ಗಂಧ ಮೊದಲಾದುವಂ ನೋಡಿ . . . ಶುಭಾ ಶುಭಂಗಳಂ ಪೇೞ್ವುದಂಗನಿಮಿತ್ತಮೆಂಬುದು (ಪಸಾರ. ೪೭೭).

[ ಸಂ. ತಿರ್ಯಂಚ್ ]

ತಿರ್ಯಕ್ಕು (ಗು). ೧. ಅಡ್ಡವಾಗಿ ತಿರುಗುವ; ಓರೆಯಾಗಿ ಚಲಿಸುವ; ವಕ್ರವಾಗಿ ನಡೆಯುವ. (ನಾ). ೨. ಪಶು, ಪಕ್ಷಿ ಮೊದಲಾದ ಪ್ರಾಣಿ ವರ್ಗ : ನಿರುತ ನೀ ಕೇಳುವರೆ ತಿರ್ಯಕ್ ನರ ಸುರಾದಿಗಳೆಂಬ ಸಚರಾ ಚರವಿದಾನಲ್ಲದೆ ವಿಚಾರಿಸಲನ್ಯವಿಲ್ಲೆಂದ (ಕುಮ್ಯಾಭೀ. ೩-೩೬): ಈ ರೀತಿ ಬೇರೆ ಬೇರೆ ಪ್ರವೃತ್ತಿಗಳಿಂದ ದೇವ, ಮನುಷ್ಯ, ತಿರ್ಯಕ್, ನರಕ—ಈ ಲೋಕಗಳಲ್ಲಿ ಪುನಃ ಪುನಃ ಸಂಸಾರಬಂಧ ಬರುವುದು (ಹಿಂದಸಾ. ೦೨೩). ೩. [ನಾಟ್ಯ] ನೃತ್ಯದಲ್ಲಿ ಪಕ್ಕಕ್ಕೆ ತೋಳನ್ನು ನೀಡುವುದು; ಹದಿನಾರು ಬಗೆಯ ತೋಳಿನ ಅಭಿನಯ ಭೇದಗಳಲ್ಲಿ ಒಂದು : ಬಳಿಯಲ್ಲಿರ್ದುಂ ಕೆಲನಂ ಸರಿಸದೆ ತೋಳಲ್ಕೆ ತಿರ್ಯಗೆನಿಕ್ಕುಂ (ಲಾಸ್ಯರಂ. ೨-೦೨೪). ೪. [ಕಾಮಶಾ] ಚುಂಬನದಲ್ಲಿ ಒಂದು ವಿಧ : ರಸನಾಗ್ರದಿಂ ಕೋಮಲೆ ವಲ್ಲಭನಧರವೀಂಟೆ ತಿರ್ಯಗ [ಪಾಠಾಂ. ಗ] (ವೆ) ನಿಕ್ಕುಂ (ಮನ್ಮವಿ. ೦೨-೦೨): ಇದುವೆ ತಿರ್ಯಕ್ ಪ್ರಕಾರಂ (ಜನವ. ೯-೪೨). [ಸಂ. ತಿರ್ಯಂಚ್]

**ತಿರ್ಯಕ್ಕುಂಚಿತ** (ನಾ). [ನಾಟ್ಯ] ದೇಶೀಯ ಭೌಮಚಾರಿಗಳಲ್ಲಿ ಒಂದು; "ಒಂದು ಕಾಲನ್ನು ಕುಂಚಿತವಮಾಡಿ ಅನೇಕಾವರ್ತಿ ಜಾಗ್ರತೆ ನೆಲದ ಮೇಲೆ ಅಡ್ಡಲಾಗಿ ಇರಿಸುವುದು" (ಲಾಸ್ಕರಂ. ೩.೨೨ ಗದ್ಯಾನುವಾದ) : ರಥಚಕ್ರ...ತಿರ್ಯಕ್ಕುಂಚಿತ, ಮದಾಲಸ...ಸಮಸ್ಖಲಿತ ಈ ಮೂವತ್ತೈದು ದೇಶೀಯ ಸಂಬಂಧದ ಭೌಮಚಾರಿಗಳು (ಲಾಸ್ಕರಂ. ೬-೦೭ ವ). [ ಸಂ. ]

**ತಿರ್ಯಕ್ಪುಂಡ್ರ** (ನಾ). ಹಣೆಯ ಮೇಲೆ ಶೈವರು ಅಡ್ಡಲಾಗಿ ಧರಿಸುವ ವಿಭೂತಿಪಟ್ಟೆ. [ ಸಂ. ]

**ತಿರ್ಯಕ್ಪ್ರಾಣಿ** (ನಾ). ಪಶು, ಪಕ್ಷಿ ಮುಂತಾದ ಜೀವಿ: ಮಾನುಷೋತ್ತರ ಪರ್ವತದ ಹೊರಗೆ ತಿರ್ಯಕ್‌ಪ್ರಾಣಿಗಳಿರುತ್ತವೆ (ಕೃನಪ. ೪೪೯). [ ಸಂ. ]

**ತಿರ್ಯಗುನ್ನತ** (ನಾ). [ನಾಟ್ಯ] ನೃತ್ಯದ ಒಂದು ಭಂಗಿ; ಮುಖವನ್ನು ಅಡ್ಡಲಾಗಿ ಮಾಡಿ ಮೇಲಕ್ಕೆತ್ತುವುದು: ಚದುರೆ ಪರಾವೃತ್ತೋತ್ಕ್ಷಿಪ್ತದಧೋಮುಖಮೊಳ್ಪುವೆತ್ತ ಲೋಲಿತಮಾದಂ ವಿದಿತವಹ ತಿರ್ಯಗುನ್ನತವುದಧಸ್ಕಂಧಾನತಂ ಸಮಾರಾತ್ರಿಕೆಗಳ್ (ಲಾಸ್ಕರಂ. ೦-೭೭) [ ಸಂ. ]

**ತಿರ್ಯಗ್ಗತಿ** (ನಾ). [ಜೈನ] ದೇವ, ಮನುಷ್ಯ, ತಿರ್ಯಕ್ ಮತ್ತು ನಾರಕ ಎಂಬ ಚತುರ್ಗತಿಗಳಲ್ಲಿ ಒಂದು: ತತ್ಪ್ರಾಯೋಗ್ಯಾನುಪೂರ್ವತಿರ್ಯಗ್ಗತಿ ತತ್ಪ್ರಾಯೋಗ್ಯಾನುಪೂರ್ವೇಕೇಂದ್ರಿಯ ... ಸೂಕ್ಷ್ಮಂಗಳೆಂಬ ಪದಿನಾಱು ಪ್ರಕೃತಿಗಳುಮಂ ನಿರವಶೇಷಂ ಕಿಡಿಸಿ (ಆದಿಪು. ೦೦-೦೪ ವ) ; ನೀನತಿಲೋಭದೊಳಾರ್ತಧ್ಯಾನದೊಳ್ ಸತ್ತು ತಿರ್ಯಗ್ಗತಿಯೊಳ್ ಪುಟ್ಟಿ ನವೆದಪ್ಪೆ (ಪಾರ್ಶ್ವಪು. ೦೪-೨೧); ಯಶೋಧರನು ಚಂದ್ರಮತಿಯಿಂತಿರ್ಬರ್ ಗೂಡಿನ ಕೋಟುಗಳಾದರ್ ನೋಡೈ ಮತ್ತೊಮ್ಮೆ ಬಟಲಿ ತಿರ್ಯಗ್ಗತಿಯೊಳ್ (ಯಶೋಚ. ೪-೩೩). [ ಸಂ. ]

**ತಿರ್ಯಗ್ಜಂತು** (ನಾ). ಪಶು, ಪಕ್ಷಿ ಮೊದಲಾದ ಪ್ರಾಣಿ. [ ಸಂ. ]

**ತಿರ್ಯಗ್ಜಾತಿ** (ನಾ). ಪಶು, ಪಕ್ಷಿ, ಪ್ರಾಣಿಗಳ ಜಾತಿ: ಪಕ್ಷಿ ಚತುಷ್ಪದ ಸರೀಸೃಪಾದಿ ತಿರ್ಯಗ್ಜಾತಿಗಳುಂ (ಆದಿಪು. ೦೬-೪೦ ವ) ; ತಿರ್ಯಗ್ಜಾತಿಯೋಳ್ ಚಾತುರ್ಯಮಿದೇಂ (ಕಾದಂಪೂ. ೫೪). [ ಸಂ. ]

**ತಿರ್ಯಗ್ಜೀವ** (ನಾ). = ತಿರ್ಯಗ್ಜಂತು: ತಿರ್ಯಗ್ಜೀವಂಗಳಪ್ಪ ಚೇತನಾಚೇತನವಸ್ತುಗಳೆಲ್ಲಂ ನಪುಂಸಕಮೆ (ಶಮದ. ೩. ೪೦ ಪ್ರಯೋ). [ ಸಂ. ]

**ತಿರ್ಯಗ್ಡೀನ** (ನಾ). ಅಡ್ಡವಾಗಿ ಹಾರುವುದು; ಓರೆಯಾಗಿ ಹಾರಾಡುವುದು: ಉಡ್ಡೀನ ಸಂಡೀನ ತಿರ್ಯಗ್ಡೀನೋಡ್ಡೀನಾವಡೀನ ಪ್ರಕೃತಿ ಗರುಡನೇಂ ವಿಸ್ಮಯಂ ಸೌಭವೇಗಂ (ಜಗವಿ. ೦೮-೯೪). [ ಸಂ. ]

**ತಿರ್ಯಗ್ಯೋನಿ** (ನಾ). ಪ್ರಾಣಿಜನ್ಮವನ್ನು ಹೊಂದಿರುವುದು: ಶ್ಲೇಷ್ಮ ಕರ್ಮದಿಂ ಭೀಕರತೆವೆತ್ತುದಾ ವಿಕೃತ ತಿರ್ಯಗ್ಯೋನಿ (ಶ್ರೀರಾಮಾ. ೫೭೪-೪೦). [ ಸಂ. ]

**ತಿರ್ಯಗ್ಲೋಕ** (ನಾ). ಭೂಲೋಕ: ಅಧೋಲೋಕ ತಿರ್ಯಗ್ಲೋಕಂಗಳರ್ದ ಸ್ವರೂಪಮುಂ ಪ್ರಮಾಣಮುಮನೋದಿ (ವರ್ಧಮಾ. ೨೮-೦೧) ; ಆ ಸಂಖ್ಯೆಯೊಳ್ಪುತ್ತಪೆರ್ಯಂಗೆಯ್ದನ್ನವೆಂಬಗ್ಗಳಿಕೆಯಿನೆಸದತ್ತೇಕರಜ್ಜು ಪ್ರಮಾಣಂ ತಿರ್ಯಗ್ಲೋಕಂ ಸ್ವಯಂಭೂರಮಣ ಜಳಧಿಪರ್ಯಂತಮಂ ತಾಗುವನ್ನಂ (ಆದಿಪು. ೧-೪೮) ; ನಾಡೆ ಸೊಗಯಿಸುವುದು ತಿರ್ಯಗ್ಲೋಕ ಮೇಕರಜ್ಜು ವಿಶಾಲಂ (ಚಂದ್ರಪು. ೧-೭೦). [ ಸಂ. ]

**ತಿರ್ಯಗ್ವಣಿಜ್ಯೆ** (ನಾ). ೧. ಪ್ರಾಣಿಗಳ ಮಾರಾಟ. ೨. [ಜೈನ] ನಾಲ್ಕು ರೀತಿಯ ಪಾಪೋಪದೇಶಗಳಲ್ಲಿ ಒಂದು; ಪ್ರಾಣಿಗಳನ್ನು ಕೊಂಡು ಲಾಭಕ್ಕೆ ಮಾರೋದು ಸಲಹೆ ಮಾಡುವುದು: ಗೋಮಹಿಷ್ಯಾದಿಗಳಂ ಇಲ್ಲಿ ಕೊಂಡು ಪೆಱಪೂರಿಂಗೆ ಮಾಱಿದೊಡೆ ಪಿರಿದರ್ಥಲಾಭಮಕ್ಕುಮೆಂದು ಉಪದೇಶಂಗೆಯ್ವುದು ತಿರ್ಯಗ್ವಣಿಜ್ಯೆ (ತತ್ತ್ವಪ್ರ. ೨೭೭). [ ಸಂ. ತಿರ್ಯಗ್ವಣಿಜ್ಯಾ ]

**ತಿರ್ಯಗ್ವರ್ತಿತ** (ಗು). ಅಡ್ಡಲಾಗಿ ಹೋದ; ಓರೆಯಾಗಿ ಹೋದ: ಮನವನೊಲಿಸೆ ತಿರ್ಯಗ್ವರ್ತಿತಸ್ಮೇರತಾರಂ ಜನಪತಿಸುತನಾಗಳ್ ಕಾಂತೆಯಂ ನೋಡಿದಂ (ಚಂದ್ರಪು. ೬-೭೫). [ ಸಂ. ]

**ತಿರ್ಯಗ್ವಳಿತ** (ಗು). ಪಕ್ಕಕ್ಕೆ ಅಥವಾ ಅಡ್ಡವಾಗಿ ಬಾಗಿಸಿದ: ಶ್ರೀಕಮಳಲೋಚನಂ ... ತಿರ್ಯಗ್ವಳಿತ ವ್ಯಾಕುಂಚಿತಕಂಠನಮೂದುತಿರ್ದಂ ಕೊಬಲಂ (ಜಗವಿ. ೫-೧). [ ಸಂ. ತಿರ್ಯಗ್ವಲಿತ ]

**ತಿರ್ಯಙ್ಮುಖ** (ನಾ). [ನಾಟ್ಯ] ದೇಶೀಯ ಭೌಮಚಾರಿಗಳಲ್ಲಿ ಒಂದು; "ವರ್ಧಮಾನಸ್ಥಾನಕದಲ್ಲಿ ನಿಂತುಕೊಂಡು ಬಲಕ್ಕೂ ಎಡಕ್ಕೂ ದ್ರುತಕ್ರಮನುಗುಣವಾಗಿ ಜಾಗ್ರತೆ ಚಲಿಸುವುದು" (ಲಾಸ್ಕರಂ. ೩.೨೦ ಗದ್ಯಾನುವಾದ): ಎಸೆವ ರಥಚಕ್ರವೊಳ್ಪಿಂ ಮಿಸುಪ ಪರಾವೃತ್ತತಲಮುಮುಂ ನೂಪುರಮುಂ ಸಸಿಮುಖಿ ತಿರ್ಯಙ್ಮುಖಮುಂ ಪಸರಿಸುವ ಮರಾಳಿಮೊಯ್ದು ಕರಿಹಸ್ತಾಖ್ಯಂ (ಲಾಸ್ಕರಂ. ೬-೮). [ ಸಂ. ]

**ತಿರ್ಯಾಹಿತ** 'ತಿರಾಯಂತ' ನೋ.

**ತಿರ್ರನೆ** 'ತಿಜ್ಜನೆ' ನೋ.

**ತಿಲ, ತಿಳ** (ನಾ). ೧. ಎಳ್ಳಿನ ಕಾಳು; ಎಳ್ಳು: "ತಿಲಮೆನಲ್ಕೆಳ್ಳು" (ಮಂಗರಾ. ೦೦೦-೫) ; ತಿಲಮುಗಸೆ ಏಳಂಗಂ ಸಿಂಧು ಲವಣಮಿವನರೆದು (ಲೋಕೋಪ. ೬-೩೨): ಶಿಲೆಯ ಮಱೆಯ ಹೇಮದಂತೆ ತಿಲದ ಮಱೆಯ ತೈಲದಂತೆ (ಮಹಾದೇ.ಬ. ೯-೨) ; ನರಕಪಾಲದ ಪಾತ್ರೆಗಳ ತಿಲದೊರಳೆಗಳ ಕೇಶೌಘ ದರ್ಭಾಂಕುರದರಾಹವಯಜ್ಞದೀಕ್ಷಿತನಹೆನು ತಾನೆಂದ (ಕುಮಾ.ಉ. ೦೦-೦೯). ೨. ಉದ್ದಳತೆಯ ಒಂದು ಪ್ರಮಾಣ; ಎಂಟು ಕೂದಲಿನ ತುದಿಯಷ್ಟು ಅಳತೆ (?): "ಕರಿಯೆಂಟು ಕೂದಲ ಮೊನೆಯು ಕರಿ(ಕೂದಲ್)ಯ ಮೊನೆಗೆ ನೋಡೆ ತಿಲವೊಂದಕ್ಕುಂ" (ವ್ಯವಹಾ.ಅನುಬಂಧ ೧. ೬-೨): ಮೂಱು ತಿಲಕೊಂದು ಯವೆಯೆನಿಪಂದಾ ಯವೆ ಮೂಱು ಸೇರಿಸಲದಂಗುಲವ ನಾಲ್ಕು ಕೂಡಲು ಮುಷ್ಟಿ (ಭಾಸ್ಕರ. ೫೨-೯). ತಿಳ: ೧. "ತಿಲಂ = ತಿಳಂ" (ಶಮದ. ೦೭ ಪ್ರಯೋ): ಫಳಪಾಕವಿರಾಮಂಗಳಪ್ಪ ... ತಿಳಾ [ ಪಾಠಾಂ. ಲಾ ] ತಸೀಕುಸುಂಭಾದಿ ದೀಪೌಷಧಿಗಳುಂ (ಆದಿಪು. ೮-೬೦ ವ) ; ತಿಳಮಂ ಪರಿಕಿಸಿ ವಾಸಿಸು (ಲೋಕೋಪ. ೭-೩೨) ; ಉರ್ವೀವಲಯಕ್ಕಾಶ್ಚರ್ಯಮಪ್ಪಂದದಿನನುದಿನಮೊಂದಾಗಿಯುಂ ಮುನ್ನಿನಂತಾ ತಿಳಮಾ ಕಾಯೊಳ್ ಕ್ರಮಂದಪ್ಪದೆ ನೆಲಸುವವೊಲ್ ದುರ್ಲಭಂ ಮರ್ತ್ಯಜನ್ಮಂ (ಸುಕುಮಾ. ೫-೩೪).

ತಿಲಕಾಷ್ಠಮಹಿಷಬಂಧನ = ೧. ಎಳ್ಳಿನ ಕೊದಳೆಗಳನ್ನು ಎಮ್ಮೆ ಕಟ್ಟುವ ಹಗ್ಗದಿಂದ ಕಟ್ಟಿದ ಹೊರೆ. ೨. ಹುರುಳಿಲ್ಲದ ಆಡಂಬರ. ತಿಲಮಾತ್ರ = ಎಳ್ಳುಕಾಳಿನಷ್ಟು; ಕಿಂಚಿತ್, ಸ್ವಲ್ಪ: ತಿಲಮಾತ್ರವೂ ಎಂಬಾ ಪ್ರಯುಗಾತ್ರದಿ (ಕೋಗಿಲೆ. ೫೭-೫) ; ಕೆಲವು ಪಾಶ್ಚಾತ್ಯ ರಾಷ್ಟ್ರಗಳು ಅದಕ್ಕೆ ತಿಲಮಾತ್ರವೂ ಗೌರವವನ್ನು ಕೊಡುತ್ತಿರಲಿಲ್ಲ (ಜಗಸಂ. ೩೩). ತಿಲಾಂಶ = ಎಳ್ಳಿನಷ್ಟು; ಲೇಶಮಾತ್ರ; ಅಲ್ಪಪ್ರಮಾಣ: ರಿಪುಕೌಂತೇಯರಿಗೆ ಕೊಡಬೇಡವಿನ್ನು ತಿಲಾಂಶ ಭೂತಳವ (ಕುಮಾ.ಉ. ೨೧-೬೫) ; ಹೆಂಡದಿಂದ ಹಣಕ್ಕೆ ತಿಲಾಂಶವೂ ಉದ್ರೇಕವಾಗುವುದಿಲ್ಲ (ಜೀವಾತ್ಮ. ೬೦). ತಿಲಾರ್ಪಣೆ ಮಾಡು = ತಿಲಾಂಜಲಿಕೊಡು; ಕೈಬಿಡು: ತಂದೆಯಂತೂ ಸಾಂಸಾರಿಕ ಜೀವನಕ್ಕೆ ಎಂದೋ ತಿಲಾರ್ಪಣೆಮಾಡಿದ್ದರು (ಹೊಸಕ್ಕಿ. ೧೯೭). [ ಸಂ. ]

**ತಿಲಂಗ್** (ನಾ). [ಸಂಗೀತ] ಒಂದು ರಾಗದ ಹೆಸರು: ಪೂರ್ವಿರಾಗವು ರಕ್ತದ ಒತ್ತಡವನ್ನೂ ತಿಲಂಗ್, ಬಿಲಾವಲ್, ಮುಲ್ತಾನಿ, ರಾಮಕಲಿ ರಾಗಗಳು ಕ್ಷಯರೋಗವನ್ನೂ ... ಗುಣಪಡಿಸುವುವೆಂಬ ಭಾವನೆ ಉತ್ತರ ಭಾರತದಲ್ಲಿದೆ (ಭಾರದ. ೫೪೪). [ ←ಮರಾ. ತಿಲಂಗ್ ]

**ತಿಲಕ, ತಿಳಕ** (ನಾ). ೧. ಸುಂದರವಾದ ಹೂವುಗಳನ್ನು ಬಿಡುವ ಒಂದು ಬಗೆಯ ಮರ: "ತಿಲಕಂ ಕ್ಷುರಕಾಖ್ಯಂ" (ವಸ್ತುಕೋ. ೩೩-೨); ಕಮಲತಿಲಕ ಚಂಪಕ ಪಾಟಲಿ ... ಮಲ್ಲಿಕಾದ್ಯನೇಕ ಸುರಭಿಕುಸುಮಂಗಳಂ ಸಜ್ಜುಕಮುಷ್ಪವಂ ಪುಟ್ಟಿಯೊಳ್ ತೀವಿಕೊಂಡು (ಪಂಚತಂ. ೧೦೭-೫); ತಿಲಕ ತರುವಿಂ ನಿಶಾಚರಬಲವುಮಂ ಬಿಡ ಪೊಯ್ಯು ಕೊಂದು (ಪಂಪರಾಮಾ.೧೧-೧೨೧); ಪೂತುದು ಪಕ್ಷ್ಮಳೇಕ್ಷಣಾಲೋಕದಿನುದ್ಯಾನದ್ರುಮೈಕತಿಲಕಂ ತಿಲಕಂ (ಜಗವಿ. ೧೪-೩೧); ತಿಲಕಂ ಕಾಣಲೊಡಂ ಭೂತಿಲಕನನೊಲವಿಂದಮಲರ್ದು ದಂತುಟಿ ವಸುಧಾತಲದೊಳ್ ಸ್ವಪಕ್ಷದರ್ಶನ ವಿಲಾಸವೊದವಿಸದೆ ಮುದ ಮನಾರ್ಗಂ ಮನದೊಳ್ (ಚಂದ್ರಪ್ರ. ೨-೯೩); ತಿಲಕವಶೋಕೆ ಚಂಪಕ ಪೂಗ ಪುನ್ನಾಗ ನೆಲ್ಲಿ ನೇಜಿಲು ... ಕದಳಿಗಳಲ್ಲಿ ನೋಡಿದವೆ (ತೊರರಾ. ೩-೧-೨೯): ಸಾಳ ರಸಾಳ ತಾಳ ತಿಲಕಾಮಳ ಪಿಪ್ಪಲ (ಯಾದವ. ೦-೩೩). ೨. ಮೈ ಮೇಲಿನ ಚಿಕ್ಕ ಮಚ್ಚೆ; ಮತ್ತಿ: ವಾಮದೊಳತೊಡೆಯಲ್ಲಿ ಅತಿತಿಲಕ ವಿಹುದೆಂದು ನುಡಿಯಲು (ಪ್ರಾಭರಾ. ೮-೬೪). ೩. ಹಣೆಯ ಮೇಲೆ ಇಟ್ಟುಕೊಳ್ಳುವ ಕಸ್ತೂರಿ, ಕುಂಕುಮ ಮೊದಲಾದುವುಗಳ ಬೊಟ್ಟು: "ತಿಂಗಳಗೆಯೆಂದು ತಿಲಕಂ" (ಕಶಿಸಾ. ೩೩-೪೦೨); ತಿಲಕಾಕಾರ ದಿನಿರ್ಕೆ ನಿನ್ನ ನೊಸಲೊಳ್ ಸಾಮ್ರಾಜ್ಯಪಟ್ಟಂ (ಪಂಪರಾಮಾ. ೩-೮೦): ಮನ ವೊಲಿದುಡಿಸಿ ತೊಡಿಸಿ ತಿಲಕಂಗಳನನುಗ್ರೈದಾದರವೆರಸಿ ... ಎಟಗಿವುದು (ಹರಿಬ. ೮-೦೦). ೪. ಶ್ರೇಷ್ಠವಾದುದು; ಭೂಷಣವಾದುದು: ಪೇಟ್ಟಂ ಮನಮೊಸೆದು ಪುರಾಣತಿಲಕಮಂ ಕವಿತಿಲಕಂ (ಅಜಿಪು. ೦-೭೮). ೫. ಶ್ರೇಷ್ಠನಾದ ವ್ಯಕ್ತಿ; ಅಲಂಕಾರಪ್ರಾಯನಾದವನು: ಕುಲಕ್ಕೆ ತಿಲಕ ನಮ್ಮ ಮಾದಾರ ಚನ್ನಯ್ಯ ನಿಮ್ಮಿಂದಧಿಕ (ಬಸವ. ೭೩೦); ಎಮ್ಮಾರಾಧ್ಯ ವರ ಮುನಿತಿಲಕ ವೇದವ್ಯಾಸ ದೇವರು (ಕುಮ್ಯಾಗ. ೪-೪). ೬. ಒಂದು ಬಗೆಯ ಕುದುರೆ; ಹಣೆ ಬೆಳ್ಳಗಿರುವ ಕುದುರೆ: ''ತುರುಗವರ್ಣಂ ಬಿಳಿಯದಾಗೆ ಕರ್ಕನಿಕ್ಕು ... ಭಾಳ ಬೆಳ್ಳಾಗೆ ತಿಲಕಂ'' (ಮುಂಗರಾ. ೮೨-೧೫); ಅಳರಿಯಲೆಯಂತೆ ನೊಸಲೊಳ್ ತೊಳಗುವ ಬೆಳ್ಪೆಸೆದು ತೋರ್ಪೊಡಂತರದು ತಿಲಕಂ (ಅಶ್ವಶಾ. ೨-೦೨). ೭. ಹೊಟ್ಟೆಯಲ್ಲಿರುವ ನೀರಿನ ಚೀಲ: "ತಿಲಕಂ, ಕ್ಲೋಮ — ಹೊಟ್ಟೆಯ ಬಲದ ಅಳ್ಳೆಯೊಳಗಿರುವ ನೀರು ಚೀಲದ ಹೆಸರುಗಳು" (ಸಿದ್ಧಾಂತಿ. ೦೬೩). ೮. =ತಿಲಕಿತ ೩. 'ತಿಳಕೆ' ಪರಾ. ೯. [ಛಂದ] ಒಂದು ವೃತ್ತದ ಹೆಸರು: ವ್ಯೋಮಂ ಹರಿಯಿಂದೇ ಮಾರಹರಂ ತಾಮಾಗೆ ಸತೀನಾಮಂ ತಿಲಕಂ (ಛಂದೋಂಬು. ೨-೭೦). **ತಿಳಕ**: ೧. "ನಂದ್ಯಾವರ್ತಃ ... ತಿಳಕಃ, ಪದ್ಮಃ, ಸ್ಯಂದನಃ, ಮೋಕ್ಷಃ— ಎಂಬಿವು ಮರಂಗಳುಮಪ್ಪುವು'' (ಹಲಾಯು. ೦೩೫-೨೭); ತಿಳಕಾಮ್ರಾತ (ವ)ಕ ಬೆಲ್ಲ (ವ)ವತ್ಸ ಸಿಸಿಸುಂಕೋಲಾಖ್ಯ ಭಲ್ಲಾತಕಾಮಳಕಾದ್ಯಂಘ್ರಿಪ ಮೂಳಮಂ ಬಳಸಿ ಪುತ್ತಾದಂದು (ಲೋಕೋಪ. ೫-೨೭); ತಿಳಕಂ ಕಾಳಂ ತಮಾಳಂ ... ವನದೊಳೊದವಿ ಚೆಲ್ವಾದುದತ್ರಂ (ಶಾಂತೀಶ್ವ. ೦೫-೯೯): ತಿಳಕ ಬಕುಳಾದಿ ತರುನಿವಹದಾರವೆಗಳೊಳ್ ... ಪೂಗೊಯ್ಯಲೆಂದಬರೆ ಯರ್ನಿರೆದಂ (ರಾಜಶೇ. ೦೦-೫೨ ರಗಳೆ). ೩. "ತಿಳಕಂ ... ಲಲಾಟಿಕಾ— ಈ ೬ ಬೊಟ್ಟು" (ಹಲಾಯು. ೮೯-೩೮೭); ತಿಳಕಮದಿಲ್ಲದ ಬೆಳ್ದಿಂಗಳೊಳಗೆ ನಿಂದಿರದಿರಬಲೆ (ಗಿರಿಳ. ೬-೦೨೬): ತಿಳಕಮನಿಟ್ಟು ... ಮಂಜುಳ ಕಟಿ ಸೂತ್ರಮಂ ತುಡಿಸಿ ಕೆಯ್ಗೈಯ ಕಣ್ಗೆಸೆದಂ ಜನಾರ್ಭಕಂ (ಪುಷ್ಪಪು. ೧೧-೬೩). ೧, ೩: ಮತ್ತಮದು ... ಕಾಮಿನೀಜನದಂತೆ ಮೃಗಮದ ಪರಿಮಳಾಮೋದಿತಮುಂ ಕೃಷ್ಣಾಗರು ತಿಳಕ ಭೂಷಿತಮುಂ ವಿರಹಿಜನದಂತೆ ವಿವಿಧಪಲ್ಲವಾನಿಲವೀಜ್ಯಮಾನಮುಂ ಮದನಾಕ್ರಾಂತಮುಂ (ಕಾದಂಪೂ. ೦೦೦); ತಿಳಕಂ ವರವನಲಕ್ಷ್ಮೀತಿಳಕಂ ದತ್ತ ಪ್ರಿಯಾಸಮನ್ವಿತ ಜನ ಸತ್ಪುಳಕಂ (ವರ್ಧಪು. ೨-೮). ೫. ತಿಳಕಂ ವಕ್ಕಮೆ ಜಡಜನವೊಳಗ ಟಿಯದು (ಆದಿಪು. ೦೦-೬೦); ಸತ್ಕಾಶ್ರಯಕುಳತಿಳಕಂ ಚಾಳುಕ್ಯಾಭರಣಂ ... ಅಭಿವೃದ್ಧಿಗೆ ಸಲುತ್ತಮಿರೆ (ಎಇ. XX, ೬-೩; 1012).

**ತಿಲಕಪ್ರಾಯ** = ತಿಲಕದಂತೆ ಇರುವವನು; ಭೂಷಣವಾದವನು: ಭಾರತಜನನಿಗೆ ತಿಲಕಪ್ರಾಯನೇ ನಿರಂತರ ಹಿತ ಗಣಿಸಿದನೇ (ಕರ್ನಾಕ.೩೯೦). [ ಸಂ. ]

**ತಿಲಕಗುದುರೆ** (ನಾ). = ತಿಲಕ ೬: ಹೊಳೆವ ಹೇಮದ ರಥಕೆ ಹೂಡಿದ ತಿಲಕಗುದುರೆಯ ನೆಗಹಿ ... ದ್ರೋಣ ಹೊಕ್ಕನು ಕಾಳೆಗದ ಕಳನ (ಕುಮ್ಯಾದ್ರೋ. ೨-೨೦). [ ತಿಲಕ + ಕುದುರೆ ]

**ತಿಲಕರೇಖೆ** (ನಾ). ಮಚ್ಚೆಯ ಗೆರೆ: ಹೊಕ್ಕಳ ಕೆಳಗೆ ತಿಲಕರೇಖೆ ಆಗಲಿ ಬಿಂದುವಾಗಲಿ ಮತ್ತಿ ಆಗಲಿಯಿರಲು ಶುಭ (ಸಾಮುಲ. ೦೪೦-೬). [ ತಿಲಕ + ರೇಖೆ ]

**ತಿಲಕಾಲಕ** (ನಾ). ಶರೀರದಲ್ಲಿಯ ಕಪ್ಪುಮಚ್ಚೆ,—ಚುಕ್ಕಿ; ಹುಟ್ಟು ಮಚ್ಚೆ; ಸಂಗಾತಿ: "ಜಟುಲಃ, ಕಾಲಕಃ, ಪಿಪ್ಲುಃ, ತಿಲಕಃ, ತಿಲಕಾಲಕಃ— ೫ ತಿಲಕಾಕಾರಗಳಾದ ಕರೀಮಚ್ಚೆಗಳ ಹೆಸರುಗಳು, ಸಂಗೊತೀಮಚ್ಚೆ, ಹುಟ್ಟುಮಚ್ಚೆ" (ಸಿದ್ಧಾಂತಿ. ೦೫೯). [ ತಿಲ + ಕಾಲಕ ]

**ತಿಲಕಿತ** (ಗು). ೧. ತಿಲಕವುಳ್ಳ. ೨. ತಿಲಕಪ್ರಾಯನಾದ: ತಿಲಕಿತ ಭುವನಂಗೆನ್ನಯ ಬೆಳಗು ಸಲೆ ಮಾಟ್ಸೆನೆಂದು... ಮಂಗಳ ಧವಳಚ್ಛತ್ರಮೆಸೆದು ತೋಱದತ್ತು (ಕಾದಂಪೂ. ४೨೬). (ನಾ). ೩. ಆನೆಯ ಮಂದದ ಸಪ್ತಾವಸ್ಥೆಗಳಲ್ಲಿ ಒಂದು: ಸಂಚಿತ ತಿಲಕಿತ ಅರ್ಧಕಪೋಳಿತ ಅತಿವರ್ತಿತ ಅಧೋನಿಬಂಧಿನಿ ಕ್ರೋಧಿನಿ ಗಂಧಚಾರಿಣಿಯೆಂಬ ಸಪ್ತಾವಸ್ಥೆಯ ಮದದಿಂ ... ಬರ್ಪ ಮತ್ತಗಜಮಂ ಭೋಂಕನೆ ಕಂಡು (ಸಂಬಿರ. ೨-೨೦). [ ಸಂ. ]

**ತಿಲಕಿಸು, ತಿಳಕಿಸು** (ಕ್ರಿ). ೧. (ತಿಲಕವಿಡುವಂತೆ) ಗುರುತಿಸು; ರೇಖಿಸು: ಲಲನಾಜನಕ್ಕೆ ತಾನೀ ಲಲನೆ ದಿಟಂ ತಿಲಕಮೆಂದು ವರ್ಣಸುಕೋಲವಿಂ ತಿಲಕಿಸುವ ತೆಱದಿನೊರ್ವಳ್ ತಿಲಕಮನಿಟ್ಟಳ್ ತನೂದರಿಯ ಪೆಱನೊಸಲೊಳ್ (ಶಾಂತೀಶ್ವ. ४-೨४೨). ೨. ತಿಲಕದಂತೆ ಕಪ್ಪಾದ ಮದಜಲವು ಹೊಮ್ಮು; ಮದವೇರು: ತಿಲಕಿಸೆ ಮದನದ್ವಿರದಂ ತಿಲಕಮನೀ ಕನ್ನೆಗಿಡುವೆನೆನುತುಮದೊರ್ವಳ್ ತಿಲಕಮನಿಡೆ (ಜಗವಿ. ೧೦-೧೨೬). **ತಿಳಕಿಸು**: ೧. ಗೌತಮ ಸುಧರ್ಮ ಜಂಬೂಗಣಭೃತ್ತಿಳಕತ ಚಳನನಖದ್ಯುತಿ ತಿಳಕಿಸುಗೋರಂತೆ ಭವ್ಯಭಾಳಸ್ಥಳಮಂ (ಧರ್ಮನಾ. ೦-೦೬). ೨. ಇಲ್ಲಿಂ ಮುನ್ನಮೆ ತಿಳಕಿಸದಿರ್ಕುಮೆ ಮನೋಜ ವಿಜಯ ಗಜೇಂದ್ರಂ (ಮಲ್ಲಿಪು. ೫-೧೬). [ ತಿಲಕ + – ಇಸು$_3$ ]

**ತಿಲಕುಸುಮ** (ನಾ). ಎಳ್ಳಿನ ಹೂವು: ತಿಲಕುಸುಮಘ್ರಾಣೆಯುರ್ಸಂಪಗೆಯ ನನೆಗಳಂ ಜಲಜಾತಗಂಧಿಯರ್ಮಾಲತಿಯ ನನೆಗಳಂ ... ತಿಱದರಿನಿ ಗುಂಪಮಾರ್ದ ಸಕಲ ಪುಷ್ಪಂಗಳಂ (ಉದ್ಭಟ. ೯-೫೨). [ ತಿಲ + ಕುಸುಮ ]

**ತಿಲಕುಸುಮನಾಸಿಕ** (ನಾ). ಎಳ್ಳಿನ ಹೂವಿನಂತಿರುವ ಮೂಗು: ತಿಲಕುಸುಮನಾಸಿಕದ ತೆಳುರ್ವಸುರು ಸುಳಿನಾಭಿ ಕಲಶಕುಚದಿಂದಲೆಸೆವಾ ನಳಿನಸಾಯಕನರಸಿಯಾಳ ಚಲುವ ಬಣ್ಣಿಪರು (ನವಮೋ. ೯-೪). [ ತಿಲಕುಸುಮ + ನಾಸಿಕ ]

**ತಿಲಕೋಪಶೋಭಿ** (ಗು). ೧. ತಿಲಕದ ಮರಗಳಿಂದ ಶೋಭಿಸುವ. ೨. ಹಣೆಬೊಟ್ಟಿನಿಂದ ಶೋಭಿಸುವ. ೧, ೨: ಅಲಕಾಳಿರುಚಿರಮಾ ವನವಲಯಂ ತಿಲಕೋಪಶೋಭಿ ಸರದಚ್ಛವಿಮಂಜುಲವಿಂದುಕಾಂತರುಚಿ ರೋಜ್ಜ್ವಲಾಧರಸ್ಥಾನಮಾಸ್ಯಮೆನೆ ನೆಲಸಿರಿಯಾ (ರಾಜಶೇ. ೨-೭೯). [ ಸಂ. ತಿಲಕೋಪಶೋಭಿನ್ ]

**ತಿಲಗಾತಕ** (ನಾ). ಎಣ್ಣೆ ತೆಗೆಯುವವನು; ಗಾಣಿಗ: ಗಂಧಿಗ ಬೋಗಾರ ತಿಲಗಾತಕ ನಾಯಿಂದರ ತಾಮ್ರಮರ್ದಕರ ಮುಂದೊಪ್ಪುತಿಹ ಮಲ್ಲ ಜಾಲಗಾರರ ಗೃಹ ಚಂದದಿಂದೊಪ್ಪಿದುವು (ಕಂಠವಿ. ೬-೫४). [ <ಸಂ. ತಿಲಘಾತಕ ]

**ತಿಲಘಾತ** (ನಾ). = ತಿಲಗಾತಕ (?) : ರಾಮನೀಂತೀಕಪೂಜಾತಿಶಯಮಂ ಮಾಡಿ ಬಳಿಕಯೋಧ್ಯೆಯ ಪೊಕ್ಕ ಭೂತಳದ ಗುಪ್ತಚರರಿಂದೋರ್ವ ತಿಲಘಾತ ವಾರ್ತೆಯಂ ಕೇಳ್ದು (ವೀಕ್ಷಿ.ಪು. ೬-೧೦-೬೦). [ < ತಿಲಘಾತಕ ]

**ತಿಲಘಾತಕ** (ನಾ). = ತಿಲಗಾತಕ. [ ತಿಲ + ಘಾತಕ ]

**ತಿಲಜ, ತಿಳಜ** (ನಾ). ಎಳ್ಳಿನಿಂದ ತೆಗೆದ ಎಣ್ಣೆ ; ಎಳ್ಳೆಣ್ಣೆ : ತಿಲ [ ಪಾಠಾಂ. ಳ ] ಜಾಭ್ಯಂಗಮನಳ್ಕಱಿಂ ರಚಿಸಿ ಮಂದೋಷ್ಣಾಂಬುವಿಂ ಮಜ್ಜನಂಗೊಳಿಸುತ್ತೆ (ವೃಷವಿ. ೯-೧೧೦). ತಿಳಜ : ಗುರುಮಧ್ಯವಲ್ಪ ನಿಟಲಂ ರೋಮಾನ್ವಿತಂ ಜಂಘೆಗಳ್ತಿಳಜಾಮೋದಮಿದಾಗೆ ಶಂಕಿನಿಯವಳ್ (ಮದಶಿ. ೨.೨). [ ಸಂ. ]

**ತಿಲತಂಡುಲಕ** (ನಾ). ೧. ಎಳ್ಳು ಮತ್ತು ಅಕ್ಕಿ ಕೂಡಿದಂತೆ, ಬೆರೆತ ಪದಾರ್ಥಗಳು ಬೇರೆಬೇರೆಯಾಗಿ ಕಾಣುವಿಕೆ. ೨. [ ಕಾಮಂಶಾ ] ಸ್ಪೃಷ್ಟಕ, ವಿದ್ಧಕ, ಉದ್‌ಘೃಷ್ಟಕ, ಪೀಡಿತಕ, ಲತಾವೇಷ್ಟಿತಕ, ವೃಕ್ಷಾಧಿರೂಢಕ, ತಿಲತಂಡುಲಕ, ಕ್ಷೀರನೀರಕ, ಊರೂಪಗೂಹನ, ಜಘನೋಪಗೂಹನ, ಸ್ತನಾಲಿಂಗನ ಮತ್ತು ಲಲಾಟಿಕ ಎಂಬ ಆಲಿಂಗನದ ಹನ್ನೆರಡು ಪ್ರಕಾರಗಳಲ್ಲಿ ಒಂದು ; ತೊಡೆ ಮತ್ತು ತೋಳುಗಳು ಕೂಡಿದ್ದರೂ ತಿಲ ಹಾಗೂ ತಂಡುಲದಂತೆ ಬೇರೆ ಬೇರೆಯಾಗಿರುವುದು : ಕಟಿಯೋಳ್ಕಟ್ಟಿರ್ದ ಕರದ್ವಯಮಂ ತೆಗೆದೊಡ ನೋರೊರ್ಮೆಯಿಡುತ್ತಿರೆಯದುವೆ ತಳ್ಕೆ ತಿಲತಂಡುಲಕಂ (ಮನ್ಮವಿ. ೧೧-೦೩). [ ಸಂ. ]

**ತಿಲತಂಡುಲಿತ** (ನಾ). = ತಿಲತಂಡುಲಕ : ತಿಲತಂಡುಲಿತ ಪಾಲು ಜಲ ವಲ್ಲಿವೇಷ್ಟಾದಿಲಲಿತಾಲಿಂಗನ ಭ್ರಾಂತಾಂತ್ಯರಿತ (ಭೃರಸೂ. ೨೯೬). [ ಸಂ. ]

**ತಿಲತೈಲ, ತಿಳತೈಳ** (ನಾ). ಎಳ್ಳೆಣ್ಣೆ : ತಿಲತೈಲದೊಳದ ಮಂದಾನಲನಿಂದ ಟ್ಟಬಿಸಿ (ಲೋಕೋಪ. ೬-೨೦). ತಿಳತೈಳ : ತಿಳತೈಳದೊಳುತ್ತರಣೆಯ ಫಳಮಂ ... ಅಟ್ಟು(ಲೋಕೋಪ. ೯-೫೯). [ ತಿಲ + ತೈಲ ]

**ತಿಲಪರ್ಣಿ** (ನಾ). ಕೆಂಪು ಗಂಧದ ಮರ ; ರಕ್ತಚಂದನ ; ಕೆಂಪುಚಂದನ : "ತಿಲಪರ್ಣೀ, ಪತ್ರಾಂಗಂ, ರಂಜನಃ, ರಕ್ತಚಂದನಂ, ಕುಚಂದನಂ-೫ ಕೆಂಪುಬಣ್ಣದ ಚಂದನದ ವೃಕ್ಷದ ಹೆಸರುಗಳು" (ಸಿದ್ಧಾಂಶಿ. ೧೮೧). [ ಸಂ. ತಿಲಪರ್ಣೀ ]

**ತಿಲಪಿಂಜ** (ನಾ). ಗೊಡ್ಡೆಳ್ಳು ; ಜಳ್ಳೆಳ್ಳು : "ತಿಲಪಿಂಜಃ, ತಿಲಪೇಜಃ–ಈ ೨ ನ್ನು ನಿಷ್ಫಲೇತಿಲೇ–ಜಳ್ಳು ಎಳ್ಳು ... ಕಾಡೆಳ್ಳು ಎಂಬುವರು" (ಸಿದ್ಧಾಂಶಿ. ೨೫೯). [ ಸಂ. ]

**ತಿಲಪುಷ್ಪ** (ನಾ). = ತಿಲಕುಸುಮ : ಸುಲಿಪಲ್ಮೇಬವಳಂಬೊಲೊಪ್ಪುವಧರಂ ಭೃಂಗಾಳಕಂ ನುಣ್ಪೊಸಲ್ತಿಲಪುಷ್ಪೋಪಮನಾಸಿಕಂ ನಗೆಮೊಗಂ (ರಾಜಶೇ. ೩-೦೭). [ ತಿಲ + ಪುಷ್ಪ ]

**ತಿಲಪೇಜ** (ನಾ). = ತಿಲಪಿಂಜ : "ತಿಲಪಿಂಜಃ, ತಿಲಪೇಜಃ–ಈ ೨ನ್ನು ನಿಷ್ಫಲೇ ತಿಲೇ–ಜಳ್ಳುಎಳ್ಳು ... ಕಾಡೆಳ್ಳು ಎಂಬುವರು" (ಸಿದ್ಧಾಂಶಿ. ೨೫೯). [ ಸಂ. ]

**ತಿಲಬಲಿ** (ನಾ). ಎಳ್ಳುಸಹಿತವಾದ ಬಲಿ: ಗುರುಗೆ ತನ್ನಃ ಜಗೆ ತಿಲಬಲಿಯ ನೀಯಲುಂ...ಗರಿ ಮಿಂಚಿ ರೆಂಕೆಗೆದರಿದನಂತರಿಕ್ಷಕ್ಕೆ (ಶ್ರೀ ಮ. ೩೯೩-೮೪೪). [ ತಿಲ+ಬಲಿ ]

**ತಿಲಮ** (ನಾ). ಒಬ್ಬಾತನ ಹೆಸರು (?) : ಬಾಣರಸದ ××× ಸೇನೆಯಂ ತಿಲಮನಿಱಿಯೆ ದುಗಿಚೇರಕ್ಕನಟ್ಟಿ ಸತ್ತನ್ (ಎಕ. X, ಚಿಂತಾಮ. ೧೨೪-೪ ; ಸು. 890). [ ? ]

**ತಿಲಯಂತ್ರ** (ನಾ). ಎಣ್ಣೆ ತೆಗೆಯುವ ಯಂತ್ರ; ಗಾಣ : "ಗಾಣಃ –ತಿಲ ಯಂತ್ರಂ" (ಶಾಶಕ್ಕ. ೩೧); "ತಿಲಯಂತ್ರ-ಗಾಣ" (ಗಂಗಾಮ. ೧೫೩). [ ತಿಲ + ಯಂತ್ರ ]

**ತಿಲಯಂತ್ರಪೇಷಣ** (ನಾ). ೧. ಎಣ್ಣೆ ತೆಗೆಯುವ ಗಾಣಕ್ಕೆ ಹಾಕಿ ಅರೆಯುವುದು. ೨. ಒಂದು ವಿಧವಾದ ನರಕ : ಮತ್ತಂ ತಿಲಯಂತ್ರ ಪೇಷಣಂ ... ಇಕ್ಷುಯಂತ್ರ ಸಮ್ಮರ್ದನವೆಂಬ್ಬಿದು ಮಂತ್ರಿನರಕಂಗಳಿಂ ಸಹಿತಮಾಗಿ ತ್ರಿಕೋಣಪಾತವೆಂಬರಸುನರಕವಿಹುದು (ವಿವೇಕ. ೧೮೦). [ ತಿಲಯಂತ್ರ + ಪೇಷಣ ]

**ತಿಲವಿಘಾತಕ** (ನಾ). = ತಿಲಗಾತಕ : ತಿಲವಿಘಾತಕ ಕಾಳಸಿಗ ತಂಬುಲಿಗ ಜಂಗಮ ಜೋಗಿಗಳ ಜಂಗುಳಿಗಗೇಂಗಳೊಳಗೆ ರಘಾಡಿಸಿದನು ಶಿಪಾಳಿಗಳ (ತೊರರಾ. ೩-೮-೩೩). [ ತಿಲ + ವಿಘಾತಕ ]

**ತಿಲವಿಷ್ಟ** (ನಾ). ಎಳ್ಳಿನ ಹಿಂಡಿ,–ಚರಟ : ತಿಲವಿಷ್ಟ, ಗಾಣದ ಹಿಂಡಿ ಳ ಪಡಿಯನ್ನು ಪುಡಿಮಾಡಿ ಶೋಧಿಸಿಕೊಂಡು ... ಸೇವಿಸೆ (ಸಕವೈ. ೨೩೩). [ ತಿಲ + ವಿಷ್ಟ ]

**ತಿಲಸ್ಮಾತಿ** (ನಾ). ಜಾದೂವಿದ್ಯೆ ; ಇಂದ್ರಜಾಲ ; ಮಾಯಾವಿದ್ಯೆ : ನನ್ನ ದುರಾಶೆಯಿಂದ ನನ್ನ ಅಮೂಲ್ಯ ತಿಲಸ್ಮಾತಿ ಕಳೆಕೊಂಡೆ (ಮಾಂಗಲ್ಯ. ೫೦). [ ← ಅರ. ತಿರಸ್ಮಾತ್ ; ಹಿಂ. ತಿಲಸ್ಮಾತೀ, ತಿಲಸ್ಮಾತ್, ತಿಲಿಸ್ಮಾತ್, ತಿಲಿಸ್ಮಾತೀ ]

**ತಿಲಾಂಜಲಿ** (ನಾ). ೧. ಎಳ್ಳುನೀರು ಬಿಡುವುದು ; ಪಿತೃಗಳಿಗೆ ತರ್ಪಣ ಕೊಡುವುದು. ೨. (ಅಲಂ) ಬಿಟ್ಟುಬಿಡುವುದು; ತ್ಯಾಗ : ನಮ್ಮ ಸಂಸ್ಕೃತಿಯು ತನ್ನೊಳಗಿನ ದಿವ್ಯನೂತನ ಸೃಜನಶಕ್ತಿಗೆ ತಿಲಾಂಜಲಿಯನ್ನಿತ್ತಿದ್ದುದು ಬೆಳಕಿಗೆ ಬರುತ್ತಿದೆ(ಕರ್ಣಾಟ. ೫೪೮); ಕೆಲವು ದಿನಗಳ ಹಿಂದೆ ತನ್ನ ಮೇಲೆ ತಾನೇ ಹೊರಿಸಿಕೊಂಡಿದ್ದ ನೈತಿಕನಿರ್ಬಂಧಗಳಿಗೆ ತಿಲಾಂಜಲಿಯಿತ್ತನು (ಪುನರು. ೬೩); ಇಲ್ಲವಾದರೆ ಇಂದೇ ಈ ಅವ್ಯವಹಾರಕ್ಕೆ ತಿಲಾಂಜಲಿ (ರಕ್ತಧ್ವ. ೧೮೩).

ತಿಲಾಂಜಲಿ ಕೊಡು = ಮರೆತುಬಿಡು ; ಕೈಬಿಡು : ಅವರು ತಮ್ಮ ಆಕಾಂಕ್ಷೆಗೇ ತಿಲಾಂಜಲಿಕೊಟ್ಟುಬಿಟ್ಟರು(ಕೂಡಿ). ತಿಲಾಂಜಲಿ ಬಿಡು=ತಿಲಾಂಜಲಿ ಕೊಡು : ಪೌರಸತ್ತಾತ್ಮಕತತ್ತ್ವಕ್ಕೆ ತಿಲಾಂಜಲಿ ಬಿಟ್ಟಂತೆಯೇ (ಶಿಕ್ಷಣ. ೧೭೩). [ ತಿಲ + ಅಂಜಲಿ ]

**ತಿಲಾಂಬು** (ನಾ). = ತಿಲಾಂಜಲಿ ೧ : ಕುಂಬಿನಿಯೊಳೆಮ್ಮ ಕುಲದ ತಿಲಾಂಬುವ ಮುಂದಕಟ ಕುಡುವನಾವನೆನುತ್ತುಂ ನಾಂ ಬಿಡೆ ಪುತ್ರವಿಹೀನಂ ಕಂಬನಿ ದೊಳೆದುಳಿದ ಜಲವ ಪಿತೃಗಳ್ ಪೀರ್ವರ್ (ಶಾಕುಂತ. ೯೪-೧೫೩). [ತಿಲ + ಅಂಬು]

**ತಿಲಾನ** (ನಾ). (?) : ಸಕತಿಯಿಂದೆ ತಿಲಾನವೆಂಬೀ ವಾಜದಿ ಭಕುತವತ್ಸಲ ತಾನೆ ಪೇಳ್ದೆ (ಕೃಷ್ಣಗೀ. ೩-೬೦). [ ? ]

**ತಿಲಾಸ್ಥಿ** (ನಾ). ಎಳ್ಳಿನ ಆಕಾರದಲ್ಲಿರುವ ಎಲುಬು ; ಸಣ್ಣ ಎಲುಬು : "ಎಳ್ಳಿನಾಕಾರದ ಎಲುಬು ; ತಿಲಾಸ್ಥಿ" (Sesamoid. ಇಂಕನ್). [ತಿಲ + ಅಸ್ಥಿ]

**ತಿಲಿಗರುದಲಿ ?** (ನಾ). (?) : ಆ ಮಹಾಜನಂಗಳ ಸಂನಿಧಾನದಲು ಆ ಊರ ಸನಗಸರ ××× ಬಿಟ್ಟ ಬಳಿಸಿದ್ದು ಗ ೧ ತಿಲಿಗರುದಲಿಯ ನಂದದೀವಿಗೆಂದು ಹಾಡ ××× ವಣ್ಣ ಸೌಡಿ ಗ ೧ (ಕಶಿಲಂ. ೪-೨೦ ; 12ನೆಯ ಶತ). [?]

**ತಿಲಿತ್ಸ** (ನಾ). ದೊಡ್ಡಹಾವು ; ಹೆಬ್ಬಾವು ; ಅಜಗರ : "ತಿಲಿತ್ಸ–ಒಂದು ತರದ ಹಾವು" (ಗಂಗಾಮ. ೧೫೩). [ ಸಂ. ]

**ತಿಲು** (ನಾ). ತೆಲುಗುಭಾಷೆ : ನಿಜಾಂಕಮಾಲೆಯಂ ಮಾನವಮನ್ಮಥಂ ಬರೆದನಾದರದಿಂ ವಿಟಚಕ್ರವರ್ತಿ ಧಾತ್ರೀನುತಮಾಗಿ ತಿಲು ತಿವುಳ ಕಂನಡ ನಾಗರದಕ್ಕರಂಗಳ (ಸೌಇಇ. XI–i. ೧೦೮–೯೩ ; 1057). [P ಇದು 'ತೆಲುಗು' ಎಂಬುದರ ಅಪಲಿಖಿತವಿರಬಹುದು]

**ತಿಲುವನಿ** (ನಾ). ಒಂದು ಬಗೆಯ ಸಸ್ಯ : "ಬೇಳ ಪುಂಗಳ ತಿಲುವನಿ [ಪಾಠಾಂ. ತಿಳುವನಿ, ತಿಲುವಗ, ತಲುವರಿ]ಯನಿಕ್ಕು" (ಮಂಗರಾ. ೪೦-೩೦). 'ತಿಲೋಣಿ' ಪರಾ. [ ? ]

**ತಿಲೋಣಿ** (ನಾ). ಒಂದು ಬಗೆಯ ಸಸ್ಯ: ತಿಲೋಣಿ, ಶ್ರೀಕಲ, ಸೂರ್ಯಾವರ್ತ, ನಿರಿಡಿಬಿತ್ತ (ವ್ಮಡಿಗಿ. ೪೦-೮೨೦). [ ? ]

**ತಿಲೋತ್ತಮೆ** (ನಾ). ಒಬ್ಬ ಅಪ್ಸರೆಯ ಹೆಸರು . P ಪ್ರಕೃತಿಯ ಸರ್ವ ಸೌಂದರ್ಯದಲ್ಲಿಯೂ ತಿಲಾಂಶದಷ್ಟನ್ನು ತೆಗೆದು ರೂಪಿಸಿದ ಅಪ್ಸರೆಯಾದಂದರಿಂದ, ಎಲ್ಲ ಅಪ್ಸರೆಯರಿಗಿಂತಲೂ ಎಳ್ಳಿನಷ್ಟಾದರೂ ಹೆಚ್ಚು ಚೆಲುವುಳ್ಳವಳಾದ್ದರಿಂದ ಈ ಹೆಸರು ಬಂದಿತೆಂದು ಹೇಳುತ್ತಾರೆ: "ಘೃತಾಚೀ, ಮೇನಕಾ, ರಂಭಾ, ಊರ್ವಶೀ, ತಿಲೋತ್ತಮಾ, ಸುಕೇಶೀ, ಮಂಜುಘೋಷಾ—ಇವರು ಮೊದಲಾದವರ್ ಅಚ್ಚರಸಿಯರ್" (ಹಲಾಯು. ೧೫-೮೮) : ರಂಭಾತಿಲೋತ್ತಮೋರ್ವಶೀಸುಕೇಶಿಯೆಂಬ ಕೇಶಿಯುಮಂ (ಜಗವಿ. ೩-೩೩೭) ; ತಿಲೋತ್ತಮೆ ಮಂಜುಘೋಷೆಯೆಂಬೀ ನೆಗಳ್ದಗ್ಗದಚ್ಚರಿಯರಚ್ಚರಿಯಪ್ಪ ವಿಳಾಸಮಂ ನಿಜಭ್ರೂನಟನೈಕದೇಶಮೆ ತಱುಂಬಿದುದೆಂಬ ಸರೂಪವಿಭ್ರಮಶ್ರೀ ನಿಜಮಾಗೆ (ಪುಷ್ಪಪು. ೨-೬೬).

[ ಸಂ. ತಿಲೋತ್ತಮಾ (ತಿಲ + ಉತ್ತಮ + –) ]

**ತಿಲೋದಕ** ( ನಾ ). = ತಿಲಾಂಜಲಿ ೧ : " ಪ್ರೇತತರ್ಪಣಮನೆ ನಿವಾಪಮೆಂದೆನೆ ಕರ್ಮದಾ ತಿಲೋದಕಮಕ್ಕು " (ಮಂಗರಾ. ೧೦೬-೪); ತಾಯಿಗೆ ವಾಸೋದಕ ತಿಲೋದಕಗಳನ್ನು ಕೊಡಲು ತಾನು ಅನರ್ಹನೆಂದು ಪ್ರಭುವು ನಿಶ್ಚಯಿಸಿಬಿಟ್ಟರು (ಶಾಂತಲಾ. ೦೬೦).

**ತಿಲೋದಕ ಕೊಡು**=೧. ತರ್ಪಣಕೊಡು. ೨. ತೊರೆ; ಆಸೆಬಿಡು : ಹಾಗಾದರೆ ಕೀರ್ತಿಗೆ ತಿಲೋದಕ ಕೊಡುವೆಯಾ ? (ರೂಹಸ. ೬). **ತಿಲೋದಕವನ್ನು ಬಿಡು** = ತರ್ಪಣವನ್ನು ಬಿಡು : ನನ್ನಲ್ಲಿ ಆ ರಾಜಪುತ್ರಿಗೆ ದಯೆಯುಂಟಾಗುವಂತೆ ಯತ್ನಿಸಿರಿ ; ಇಲ್ಲದ ಪಕ್ಷದಲ್ಲಿ, ಅವಶ್ಯವಾಗಿ ನನಗೆ ತಿಲೋದಕವನ್ನು ಬಿಡಿ (ಶಾಕುಂತ. ೩೬-೬). [ ತಿಲ + ಉದಕ$_2$ ]

**ತಿಲೌದನ** (ನಾ). ತುಪ್ಪ, ಎಳ್ಳು, ಅನ್ನ ಮುಂತಾದುವುಗಳನ್ನು ಬೆರಸಿ ಮಾಡಿದ ಒಂದು ಬಗೆಯ ಆಹಾರಪದಾರ್ಥ : " ಎಳ್ಳುಹುಗ್ಗಿ " (ನಾಚಿರಾ. ೬). [ ತಿಲ + ಓದನ ]

**ತಿಲ್ಯ** (ನಾ). ಎಳ್ಳು ಬೆಳೆಯುವ ಭೂಮಿ : " ತಿಲ್ಯಂ, ತೈಲೀನಂ - ೨ ಎಳ್ಳು ಬೆಳೆಯುವ ಭೂಮಿಯ ಹೆಸರುಗಳು " (ಸಿದ್ಧಾಂತಿ. ೨೩೬). [ಸಂ.

**ತಿಲ್ಲ** (ನಾ). ಒಂದು ಬಗೆಯ ಸಸ್ಯ : ತಿಲ್ಲ, ಹಾರೋಗಿಡ ( ವ್ಮಡಿಗಿ ೩೬-೬೦೩). [ ? ]

**ತಿಲ್ಲವೆಡಂಗ** (ನಾ). ಒಂದು ಬಿರುದು ; P ಚಿದಂಬರತೀರ್ಥಕ್ಷೇತ್ರದ ತಿಲ್ಲೈಗೆ ಬೆಡಗನ್ನು ತಂದವನು : ತಿಲ್ಲವೆಡಂಗಂ ಗಿರಿಜಾವಲ್ಲಭಪದಕಮಳಭೃಂಗನವನಿತ[ಾ]ಪ್ರಭೂವಲ್ಲಭವಿದಳನಪಟುವೆನೆ ... ಪೆಸರ್ವಡೆದ (ಸೌಇಇ. IX–i, ೨೫೪-೨೮; 1148).

[ ತಿಲ್ಲ$_0$ ( P ← ತಮಿ. ತಿಲ್ಲೈ ) + ಬೆಡಂಗ ]

**ತಿಲ್ಲಾಣ** ' ತಿಲ್ಲಾನ ' ನೋ.

**ತಿಲ್ಲಾಣಿಸು** (ಕ್ರಿ). ೧. ತಿಲ್ಲಾನದಂತೆ ಇಂಪಾಗಿ ವಿಧವಿಧವಾಗಿ ಸ್ವರವನ್ನು ಕೂಡಿಸು. ೨. ಸುಖಪಡು ; ಸಂತೋಷಿಸು : ತಲ್ಲಣಿಸಿತು ಹರಣ ತಿಲ್ಲಾಣಿಸಿತವನೆದೆಯಂತಃಕರಣ ( ದ್ರಾಪಾಪ. ೨೫-೬ ).

[ ತಿಲ್ಲಾಣ ( < ತಿಲ್ಲಾನ ) + – ಇಸು$_3$ ]

**ತಿಲ್ಲಾನ, ತಿಲ್ಲಾಣ** (ನಾ). ೧. [ಸಂಗೀತ] ಒಂದು ಬಗೆಯ ಸಂಗೀತ ಕೃತಿ; (ಅರ್ಥಕೊಡದ) ಧ್ವನಿಗಳ ಬಹು ಇಂಪಾದ ಹೊಂದಾಣಿಕೆ: ತಾನವರ್ಣಗಳಾಗಲಿ ದಾಸರ ತಿಲ್ಲಾನಗಳಾಗಲಿ ಈಗ ಉಪಲಬ್ಧವಿಲ್ಲ (ಕಭವಿ. I, ೩೦೬): ತಿಲ್ಲಾನ – ಉತ್ತರಾದಿ ಸಂಗೀತದ 'ತರಾನ' ಎಂಬ ರಚನೆಯ ಅನುಕರಣವೇ ಈ ರಚನೆ. ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳುಂಟು. ಪಲ್ಲವಿ ಮತ್ತು ಅನುಪಲ್ಲವಿಗಳ ಸಾಹಿತ್ಯ 'ಕೊನೆಗೋಲು' ಅಥವಾ ಮೃದಂಗ ಜತಿಗಳಿಂದ ಕೂಡಿರುತ್ತದೆ ... ನರ್ತನಕ್ಕೆ ವಿಪುಲವಾದ ರಚನೆಯಿದು (ಸಂಗೀತಂ. ೭೮ ): ಮಹಾವೈದ್ಯನಾಥ ಅಯ್ಯರ್ ಅವರು ರಚಿಸಿರುವ ' ಗೌರೀ ನಾಯಕ ' ತಿಲ್ಲಾನವು ಮಹತ್ತರ ಕೃತಿ (ಸಂಗೀತ. ೧೪). ೨. [ನಾಟ್ಯ] ಒಂದು ಬಗೆಯ ನರ್ತನ : ತಿಲ್ಲಾನದಲ್ಲಿ ಆಕರ್ಷಕವಾದ ಭಂಗಿಗಳೂ . . . ವೈವಿಧ್ಯವೂ ಇರುವುದರಿಂದ ತುಂಬಾ ಪ್ರೇಕ್ಷಣೀಯವಾಗಿರುತ್ತದೆ (ಅಭಾನ್ಯ. ೫೬) : ತಿಲ್ಲಾನ : – ಪ್ರದರ್ಶನದ ಮುಕ್ತಾಯಾಂಶ ಪದವಿನ್ಯಾಸಗಳಿಂದಲೂ ಭಂಗಿಗಳಿಂದಲೂ ರಮ್ಯವಾದ ರಚನಾವಿಶೇಷ (ಭಾರದ. ೫೫೫). **ತಿಲ್ಲಾಣ** : ೧. ಕೈಯ ತಾರಮ್ಯಯ್ಯಕ್ಕೆ ತೊದಲುನುಡಿಯ ತಿಲ್ಲಾಣ(ಆಯ್ಯಾಕಿ. ೦೦೯-೫).

**ತಿಲ್ಲಾನತಿಗುಳು** = ಅರ್ಥವಾಗದ ತಮಿಳುಭಾಷೆ : ನಾನಿರುವಾಗ ನಿಮ್ಮ ತಿಲ್ಲಾನತಿಗುಳಲ್ಲಿ ಮಾತಾಡಕೂಡದು (ಮಂತ್ರಶ. ೩೬-೦೦).

[ ದೇ. ॥ ತಮಿ. ತಿಲ್ಲಾನಾ ; ತುಳು. ತಿಲ್ಲಾಣ, ತಿಲಾನಾ]

**ತಿಲ್ಲಿ** (ನಾ). ಎಳ್ಳು. 'ತಿಲ್ಲಿಎಣ್ಣೆ' ಪರಾ. [ < ಸಂ. ತಿಲ ]

**ತಿಲ್ಲಿಎಣ್ಣೆ** (ನಾ). ಎಳ್ಳೆಣ್ಣೆ : ಕೆಂಪು ಶೀಷೆಗೆ ಅಗಸೀಎಣ್ಣೆಯನ್ನು ಹಸುರು ಶೀಷೆಗೆ ತಿಲ್ಲಿಎಣ್ಣೆಯನ್ನು ಹಾಕಬೇಕು ( ಬಿಚಿಕಿ. ೮ ). [ ತಿಲ್ಲಿ + ಎಣ್ಣೆ ]

**ತಿಲ್ವ** (ನಾ). ಒಂದು ಬಗೆಯ ಸಸ್ಯ ; " ಲೋಧ್ರ, ರಕ್ತಲೋಧ್ರ " (ಪಂಡಿತ. ೨೯೯). [ ಸಂ. ]

**ತಿವಂಚ** (ನಾ). ಐದೈದರ ಮೂರು ಗರ : ಚೌಕ ದುಗ ನಟ್ಟ ಭದ್ರ ತಿವಂಚದೊಟ್ಟೈಕ...ಇನಿತುಮಂ ಬೇಗದಿಂ ಹಾಯಿಕು (ಕುರಾಜ. ೧೩-೫೯).

[ < ಸಂ. ತ್ರಿವಂಚ ]

**ತಿವಟ** (ನಾ). ಒಂದು ಬಗೆಯ ವಸ್ತ್ರ : ಕುಡುಗುಂ ಚಿತ್ರಾವಟಿ ಪಟಿಯಡವಟ್ಟೆ ಸುವರ್ಣಚೇಲಮುಮಂ ತಿವಟಂ ಪೂವಡೆ ಕರ್ಮಂ ನೆರೆವಂ ಮಣಲೆಡೆಯುಂ ರತ್ನಂಗವಸನಮುಂ ವಸನಾಂಗಂ (ಶಾಂತಿಪು. ೬-೧೦೧). [?]

**ತಿವಟಿಗೆ** 'ತಿವದಿಗೆ' ನೋ.

**ತಿವಡಿ** (ನಾ). (?) : ಹೊಚ್ಚು ತಿವಡಿ ವಿಷಮಗಳೆಂಬ ಚೌಕಳಾಸಟ್ಟಿತಾಭೃಂಗಿ ನಾಟ್ಯಗಳು (ದೇವಾಂಪು. ೫-೧೩೯). [ ? ]

**ತಿವದಿ, ತಿವಿದಿ, ತಿವುಡೆ$_1$, ತ್ರಿಪುಡೆ, ತ್ರಿವದಿ, ತ್ರಿವಿಧಿ, ತ್ರಿವುಡೆ$_2$** (ನಾ). [ಛಂದ] ಮೂರು ಪಾದಗಳುಳ್ಳ ಅಂಶಗಣಬದ್ಧವಾದ ಒಂದು ಪದ್ಯಜಾತಿ ; ತ್ರಿಪದಿ : "ತ್ರಿಪದಿಯೆನೆ ತಿವದಿಯಕ್ಕುಂ" (ಮಂಗರಾ. ೬೨-೨೧) : ಅಕ್ಕರಂ ಚವುಪದಿ ಮಾತ್ರಂ ದಲ್ ಗೀತಿಕೆ ತಿವ [ಪಾಠಾಂ. ವಿ] ದಿಗಳಂದಂಬೆತ್ತಸೆಯೆ ಪೇಳ್ದೊಡದು ಚತ್ತಾಣಂ (ಕವಿರಾ. ೧-೩೫) : ಮದನವತಿಯಕ್ಕರಂ ಚೌಪದಿ ಗೀತಿಕೆಯೊಳೆ ತಿವದಿಯುತ್ಸಾಹಂ (ಛಂದೋಂಬು. ೦-೪೭) : ಡೊಂಬಿಯ ತಂಬಟಿಗರ್ ಪಾಡುವ ತಿವದಿಯನಿರ್ಮಡಿಸಿ ಷಟ್ಪದಿಯಾದುದು (ಚಿಕವಿ. ೬-೧೫೪ ವ). **ತಿವಿದಿ** : ಮೇಲಿನ 'ಕವಿರಾ' ಪ್ರಯೋಗದ ಪಾಠಾಂತರವನ್ನು ನೋಡಿ. **ತಿವುಡೆ$_1$**: ತ್ರಿಪದಿಗೆ ತಿವದಿ, ತಿವುಡೆ, ತ್ರಿವುಡೆ, ತ್ರಿಪದಿಕಾ ಎಂಬ ಹೆಸರುಗಳೂ ಬಳಸಲ್ಪಟ್ಟಿವೆ (ಛಂರೂವಿ. ೮೮) : ಕ್ರಿ.ಶ. ೧೧೭೦ನೆಯ ಕಾಲದ ಕವಿ ನೇಮಿಚಂದ್ರನು ಒನಕೆವಾಡನ್ನು "ತಿವುಡೆ" ಎಂದು ಕರೆದಿದ್ದಾನೆ (ಸಂಶೋಧ. ೦೪೦). **ತ್ರಿಪುಡೆ** : ತ್ರಿಪುಡೆಯು ಹೊಸಗನ್ನಡ ಕವನಗಳಲ್ಲಿ ಆದಿಪ್ರಾಸವನ್ನು ಕಳೆದುಕೊಂಡು ಆಗಾಗ ಬಳಕೆಯಾಗುತ್ತದೆ (ಛಂದೋವಿ. ೨೭೩) : ಈ ಬಗ್ಗೆ ತ್ರಿಪುಡೆ ಎಂಬ ಹೆಸರುವಾಸಿಯಾದ ತಾಳಕ್ಕೆ ಒಡಗೂಡಿರುವುದರಿಂದ ತ್ರಿಪುಡೆ ಎಂಬ ಹೆಸರಾದ ಛಂದಸ್ಸಿನ ... ಉದಾಹರಣೆಯ ಸಾಂಪ್ರದಾಯಿಕ ಬೆಂಬಲವೂ ಬೇಕಾದಷ್ಟಿವೆ (ಗೋಲ್ಡ್ಥಾ. X, ಮುನ್ನುಡಿ). 'ತ್ರಿಪುಡ' ಪರಾ. **ತ್ರಿವದಿ** : ತ್ರಿವದಿ ಎಂಟುಂ ದಿಗ್ದಂತಿಗಳ್ ಕಂಟೀರವಕದಿರ್ಮನ್ತೆ ಟ್ಯಂಟಣೆಪಹಿತರ್ ತಲೆದೋಱಿರ್ (ಎಕ. VI, ಚಿಕ್ಕಮ. ೯೪-೧೯ : ಸು. 1060 ? ). **ತ್ರಿವಿಧಿ** : ತ್ರಿಪದಿಗೆ ತಿವಿದಿ, ತ್ರಿವಿಧಿ, ತಿವುಡೆ—ಎಂಬ ಹೆಸರುಗಳೂ ಕಾಣಿಸಿವೆ (ಸಂಶೋಧ. ೧೪೫) : 'ತ್ರಿವಿಧಿ' ಎಂಬುದು ಮಹಾದೇವಿಯಕ್ಕನ "ಯೋಗಾಂಗತ್ರಿವಿಧಿ"ಯೆಂಬಲ್ಲಿ ಕಾಣುತ್ತದೆ (ಸಂಶೋಧ.೧೪೫). **ತ್ರಿವುಡೆ$_2$** : ಪ್ರಾಸಗಳು ಮಾಜಾಗಿ ಲೇಸಿನಿಂ

ಬರುತಿರಲು ಮಾಸದೆ ಮಾತ್ರುಗಳ ತ್ರಿವುಡೆ ತಾನೊಗೆಗುಂ (ಛಂದಶ್ಶಾ.-೩-೦೩); ತ್ರಿಪದಿಗೆ ತಿವದಿ, ತಿವುಡೆ, ತ್ರಿವುಡೆ, ತ್ರಿಪದಿಕಾ ಎಂಬ ಹೆಸರುಗಳೂ ಬಳಸಲ್ಪಟ್ಟಿವೆ (ಛಂದೋವಿ. ೯೮). [ < ಸಂ. ತ್ರಿಪದೀ ]

**ತಿವದಿಗೆ**, ತಿವಟಿಗೆ, ತಿವಿಗೆ, ತಿವುಟಿಗೆ, ತೀವಟಿಗೆ, ತೆವಟಿಗೆ, ತೇವಟಿಗೆ, ತೌಂಟಿಗೆ, ತೌಟಿಗೆ(ನಾ). ಮೂರು ಕಾಲಿನ ಮಣೆ, – ಪೀಠ; ಮುಕ್ಕಾಲು ಮಣೆ ; ಅಡ್ಡಣಿಗೆ: "ತಿವದಿಗೆ (ತಿವಟಿಗೆ)–ತ್ರಿಪದಿಕಾ" (ಶಬ್ದಕೋ. ೧೭). **ತಿವಟಿಗೆ** : ಒಂದು ಕಟ್ಟಿಗೆಯ ತಿವಟಿಗೆಯ ಮೇಲೆ ಪ್ರಕ್ಷೇಪಕಯಂತ್ರವನ್ನು ಇಟ್ಟು (ಮುಂಬಯಿ. ೩-೨೨). **ತಿವಿಗೆ** : ಲಂಕರೊಕ್ಕಲಲ್ಲಿ ಆಱು ತಿಂಗಳ್ಗೆ ಮಣೆ ತಿವಿಗೆ ಮರವಿಯುಂಬಿವೊಂದಕ್ಕಂ (ಎಕ. XIX, ೩೩-೨೮ : 1136). **ತಿವುಟಿಗೆ** : 'ತಿವುಟಿಗೆಬುಲ್ಲು' ಪರಾ. **ತೀವಟಿಗೆ** : ಗ್ರೀಸ್ ದೇಶದ ಅರಿಸ್ಟಾಟಲನೆಂಬ ತತ್ವಜ್ಞಾನಿಯು ತಮಗೆ ತಾವೇ ನಡಿಯುವಂಥ ತ್ರಿಪಾದಗಳನ್ನು(ತೀವಟಿಗೆಗಳನ್ನು)ತನ್ನದೊಂದು ಗ್ರಂಥದಲ್ಲಿ ವರ್ಣಿಸಿದ್ದಾನೆ (ಮುಂಬಯಿ. ೬-೨೮). **ತೆವಟಿಗೆ** : ಅಡ್ಡಣಿಗೆ ಬೆಳ್ಳಿಯಲಿ ಕೆಲಬರು ದೊಡ್ಡ ಸುವರ್ನದ ತೆವಟಿಗೆಗಳಲ್ಲಿ ಅಡ್ಡಮಡಿದುನು ಸಿಕ್ಕಿ ಭರದ ಸೆಳ್ಳುಗುರಲೆಣ್ಣೆಯನೂ ಅಡ್ಡಹೋದರೆ ವೇಲೆ ಚಮ್ಮುತ (ರೇವಣ. ೨-೨೦) ; ತೆವಟಿಗೆಯ ಮೇಲೆ ತಣಿಗೆ ಇಟ್ಟು ಬಡಿಸು (ಅದೇ). **ತೇವಟಿಗೆ** : ಮೂರು ಕಾಲಿನ ತೇವಟಿಗೆಯನ್ನೂ (ತ್ರಿವಟಿಗೆ) ಅದರ ಮೇಲೆ ಚಿನ್ನದ ತಟ್ಟೆಯನ್ನೂ ಇಟ್ಟುಕೊಂಡು ಊಟ ಮಾಡುತ್ತಾರೆ (ಪ್ರವಾಇ. I, ೩೦). **ತೌಂಟಿಗೆ** : ಮುಂದೆ ತೌಂಟಿಗೆ ಇಟ್ಟುಕೊಂಡು ಅದರ ಮೇಲೆ ಪುಸ್ತಕ ಇಟ್ಟುಕೊಂಡರೆ ಸರಿಯಾಗ್ಗದೆ (ಹಂಗಾಳ್ಯ. ೨೫೩). **ತೌಟಿಗೆ** : ಕುರ್ಚಿಯ ಬದಿಯಲ್ಲಿದ್ದ ತೌಟಿಗೆಯ ಮೇಲೆ ನೀರಿನ ಹೂಜಿಯಿತ್ತು (ಪುನರು. ೩೪೫). [ < ಸಂ. ತ್ರಿಪದಿಕಾ]

**ತಿವದೆ** (ನಾ). [ಛಂದ] ಮೂರು ಪಾದಗಳುಳ್ಳ ಪದ್ಯ ; ತ್ರಿಪದಿ : ತ್ರಿಪದಾ–ತಿವದೆ (ಶಮದ. ೨೫೮ ಪ್ರಯೋ). [ < ಸಂ. ತ್ರಿಪದಾ]

**ತಿವರಿಸು** (ಕ್ರಿ). ತೀವ್ರಗೊಳಿಸು ; ಅಧಿಕಗೊಳಿಸು (?) : ಒಗುಮಿಗೆಯುರವಣೆಗುಬ್ಬರಿಸುವ ಸುಯ್ಯ ಕಿಗೆಬಗೆಯೊಳು ತಿವರಿಪುದು (ಚಕವಿ. ೩-೬೮ ಸಾಂಗತ್ಯ). [ < ತೀವ್ರ ? + – ಇಸು₁]

**ತಿವಳಿ₁** (ನಾ). ೧. ಸ್ತ್ರೀಯ ಹೊಕ್ಕುಳಿನ ಮೇಲುಭಾಗದಲ್ಲಿ ಅಡ್ಡಲಾಗಿರುವ ಮೂರಂ ಮಡಿಕೆಗಳು : ಮಸುಳೆ ತಿವಳಿ ಕರ್ಪಂ ಬಾಸೆಪೆತ್ತೊಪ್ಪೆ ... ಪೆರ್ಚಿತ್ತು ಗರ್ಭಂ (ಚಂದ್ರಪು. ೩-೮೩) : ತಿವ[ಳಿಯೊ]ಳೊಳುಪು ನಿಜಂ ತಳುಪು (ಬಂಹರಿ. ೬-೨೯) ; ತಳ್ವಸಿಱೊಳೆಸೆವ ತಿವಳಿಗಳ್ (ಕಬ್ಬಿಗಕಾ.೬೬) ; ಸುರನರನಾಗಲೋಕದಿ ನರ್ತಿಸುವ ಸೌಂದರವೆಣ್ಣು ಬಾಣನಂದನೆಯ ಸರಿಯಿಲ್ಲವೆಂದು ಮೂವೆರಲಿಂದೆ ರತಿರಾಜ ಬರೆದಂತೆ ತಿವಳಿ ರಾಜಿಸಿತು (ಮೋಹತ. ೨೩-೨೦). ೨. ಕಾಡಿನಲ್ಲಿ ಆನೆ ಮುಂತಾದ ಪ್ರಾಣಿಗಳು ಸಂಚರಿಸುವಾಗ ತಮ್ಮ ದಾರಿಯಲ್ಲಿ ಬಿಟ್ಟು ಹೋಗುವ ಮೂರಂ ಬಗೆಯ ಗುರುತುಗಳು : ಸೊವಡಿಂಗೇವಯ್ದು ಪುಲ್ಲಟ್ಟೆಯ ತಿವಳಿಯನಾರಯ್ದು ಘರ್ಮದ್ರವಂ ಮಯ್ಯುವಿರಂ ಮಯ್ಯೆರ್ಚಿ... ಮರವಾಯ್ದತ್ತು ಮತ್ತದ್ವಿಪೇಂದ್ರಂ(ಮಲ್ಲಿಪು. ೧೦-೯೦) : ತಿವಳಿಯೊಳ್ ಎಡು ಕಾಱಿದ ವಣ್ಣಂದಿಕ್ಕಿದ ಲಂಡದ ಬೆಂಕೆಯಿಂ ಕವಿವ ... ಬಟ್ಟೆಯೊಳೊಕ್ಕ ಪಲ್ಲವನಿಕಾಯದಿನಂದಱಿದಂ ಕಾಡಾನೆಗಳಾಗಡೆ ಪೋದುದಂ (ಕಾವ್ಯಾವ. ೬೩೬); ತಿವಳಿವಿಡಿದುಗ್ರೇಭಂ ಪೋದತ್ತು (ಚಂದ್ರಪು. ೯-೧೧೨) : "ಹೆಜ್ಜೆಯ ಗುರುತಂ" (ಪ್ರತಿ₂). [ < ಸಂ. ತ್ರಿವಲಿ]

**ತಿವಳಿ₂**, ತಿವಳೆ, ತಿವಿಳಿ, ತ್ರಿವಳಿ (ನಾ). ಒಂದು ಬಗೆಯ ವಾದ್ಯ : ಪಳವದ ತಿವಳಿಯ ಜುಂಕದ ವೊಳಸಿನ ಜೀಕರದ ಸಿವಿಜ ಸಿಟ್ಟಿನ ಲಯದಿಂದೆಳಲದೆ ಕುಣಿದರ್ ಕೆಲಬರ್ (ಅಜಿಪು. ೫-೩೨); ಈಶಾನ ಈಶ್ವರಮುಡಿಯಾರ್ಗೆ ಕೊಟ್ಟ ತಿವಳಿ ೧ ದಟ್ಟ ೨ ಖಣ್ಡಿಕೆ ೩ ಫಲ ೬ (ಮ್ಯಾಆರ್. ೦೯೪೩, ೨೮-೦೯ : 1032). ತಿವಳೆ. ತಿವಿಳಿ. ತ್ರಿವಳೆ.

ತಿವಳೆಪಱೆಘೋಷಣ, ತಿವಿಳಿಪಱೆಘೋಷಣ, ತ್ರಿವಳಿಪಱೆಘೋಷಣ = ತಿವಳಿಯೇ ಮೊದಲಾದ ವಾದ್ಯಗಳ ಮರ್ಯಾದೆಯುಳ್ಳವನು ; ಒಂದು ಬಿರುದಂ : ತಿವಳೆಪಱೆಘೋಷಣ ಪರಬ ××× ಮಾದಿ ಸಮಸ್ತ ಪ್ರಶಸ್ತಿಸಹಿತಂ (ಸೌಇಇ.XX, ೩೩-೧೦ : 1048) ; ತಿವಿಳಿ ಪಱೆಘೋಷಣಂ ಲತ್ತಲೂರ ಪುರವರವೇಶ್ವರಂ (ಎಇ. VII, ೨೦೬-೦೩ : 866) : ತ್ರಿವಳಿ ಪಱೆಘೋಷಣ ರಣರಂಗಭೀಷಣ ರಟ್ಟವಂಶೋದ್ಭವಂ (ಸೌಇಇ. XI-I ; ೭೮-೯ : 1041) : P ತಿವಳಿಯೇ ಮೊದಲಾದ ಮಹಾವಾದ್ಯಗಳ ಮರ್ಯಾದೆಯುಳ್ಳವನು ಎಂಬರ್ಥದ ಬಿರುದಾವಳಿಯಲ್ಲಿ ತಿವಳೆ, ತಿವಿಳಿ, ತ್ರಿವಳಿ ಶಬ್ದಗಳು ಪ್ರಯೋಗವಾಗಿವೆ.

[ < ಸಂ. ತ್ರಿವಲೀ ]

**ತಿವಳಿವಟ್ಟ** (ನಾ). (?) : ಪೊಯ್ದು ತಾಳವಟ್ಟದೊಳಂ ತಿವಳಿವಟ್ಟವಾದ ತೇರ ತಕ್ಕೆಗಳ್ ಕಲ್ಲಗಾಣದ ಕಣೆಯ ಬಾಯ್ಗೆ ಬಿಟ್ಟ ಕಳಿಕೆಯ ಚೆಂಡಿನಂತೆ ನುರ್ಗುನುಱಿಯಾಗಿರ್ದುವು (ಅನಂಪು. ೦೪-೬೩). [?]

**ತಿವಳೆ** 'ತಿವಳಿ₂' ನೋ.

**ತಿವಾಶಿ** 'ತಿವಾಸಿ' ನೋ.

**ತಿವಾಸಿ**, ತಿವಾಶಿ (ನಾ). ೧. ರತ್ನಗಂಬಳಿ; ಕಸೂತಿ ಹಾಕಿದ ಮೇಲ್ಹಾಸು: ಮುಹೂರ್ತಕ್ಕೆ ಮೊದಲೇ ಆಮಂತ್ರಿತ ಸ್ತ್ರೀಪುರುಷವೃಂದವು ಬಂದು ತಿವಾಸಿಗಳ ಮೇಲೆ ಮಂಡಿಸಿತ್ತು (ಎಧಿವ್ಯ. ೦೬೦). ೨. ಒರಗುದಿಂಬು ; ಲೋಡು : ಎರಡು ಸಿಂಹಾಸನಗಳ ಮೇಲೂ ಸುವರ್ಣಖಚಿತವಾದ ತಿವಾಸಿಗಳು (ದೇವೀಪ್ರಾ. ೦೪೩) ; ಕಣ್ವಮ್ಮನನ್ನು ರತ್ನಕಂಬಳಿ ತಿವಾಸಿಗಳಿಂದ ಅಲಂಕೃತವಾಗಿದ್ದ ಕೋಣೆಯೊಂದರಲ್ಲಿ ಕುಳ್ಳಿರಿಸಿ (ಕೂಲೇಜಾ. ೯೩) ; ತಿವಾಸಿಯಾತಕ್ಕೆ ತಿಪ್ಪೇ ಮೇಲಣವಗೆ? (ಗಾದೆ). **ತಿವಾಶಿ** : ೧. ಫಲಹಾರಾನಂತರ ಸುಸಜ್ಜಿತವಾದ ಹಜಾರದಲ್ಲಿ ಫಕೀರನು ತಿವಾಶಿಯ ಮೇಲೆ ಸುಖಾಸನದಲ್ಲಿ ಬಂದು ಕುಳಿತನು (ದಾಂಕ್. ೭).

[ ← ಫಾರ. ತಿವಾಸೀ ; ಮರಾ. ತಿವಾಸೀ, ತಿವಾಶಾ, ತಿವಾಶೀ, ತಿವಾಸಾ ]

**ತಿವಿ₁** (ಕ್ರಿ). ೧. ಮುಷ್ಟಿಯಿಂದ ಹೊಡೆ, – ಪ್ರಹಾರಮಾಡು ; ಗುದ್ದು : "ತಿವಿ–ಮುಷ್ಟಿಪ್ರಹರಣೇ" (ಶಮಧಾ) ; ನೆಲದಿಂದುರ್ಬಿ ಬಂದಾಕಾಶಕ್ಕೆ ನೆಗಪಿದೊನ ಸ್ಕಂಧಮಂ ತಿವಿದೊಂ (ಪಮ್ಪಾರಾ. ೫೦-೨೮) ; ತೊಡರ ತಡಂಗಾಲ್ ಪೊಯ್ದೊಡೆ ಕೆಡೆದುಂ ತಿವಿದೊಡೆ ಸುರುಳ್ದು ... ಬಿಟ್ಟುವು (ಶಂಪಥಾ. ೧೦-೬೮) ; ಓರೋರ್ವರಂ ತಿವಿಯೆ ನೆಗ್ಗಿರ್ದ ಕದಪಿಂದೆ (ಕಾದಂಬ. ೨೬೦) ; ಪಿತ್ತಾಧಿಕನಂತೆ ಬೀಸನುತ್ತುಂ [ಬಿಕ್ಕಿಗನಂತೆ ತಿವಿಯನುತ್ತುಂ ] (ಧರ್ಮಾಮೃ. ೨-೬೦). ೨. ಇರಿ ; ಚುಚ್ಚು : ತಿವಿದು ಸತ್ತಂ ಕಡುಗಲಿತನದಿ (ಸೌಇಇ. XI-I, ೮೦-೦೯ : 1049) ; ತಂಬುಲದಂತೆ ವಲ್ಲ ವಕ್ಷಿ ಕಿವಿದರ್ (ಧರ್ಮಾಮೃ. ೩-೬೩) ; ಜೋಡಿಯಿಂ ಕವಿದು ಹೊಕ್ಕು ಹಂದಿಯ ತಿವಿದರು (ಹಹಕಾ. ೬-೧೧); ಮಂದಿ ಪೊಱವಟ್ಟುದಿದೆ ತಿವಿಯೆಂದೆನುತುಂ ಮುಸುಱೆ (ಉದ್ಭಟ. ೨-೬೮) ; ಪ್ರಳಯದಿನದಲ್ಲಿ ತಿವಿವ ಸಿಡಿಲವ್ವಳಿಸುವಂತಿರೆ ರೌದ್ರರವ ಘೊಳುಘೊಳಿಸಿ ತಲ್ಲಣಿಸಿತ್ತು ಕೌರವರಾಯ ಪರಿವಾರ (ಕುಮ್ವಾದ್ರೋ. ೮-೪೦) ; ಬಾಗಿಲ ತಿವಿದು ನೂಂಕುವ ದಂತಿಶಿರವ ವಿಭಾಗಿಸಿ ಕೂರ್ಗಣೆಯಿಂದೆ ತಾಗಿಸಿ . . . ಸಾಗಿಸಿದನು (ಮೋಹತ. ೩೪-೭) ; ಕುಟ್ಟಿ ಕೆಡಹಿ ಕಾಲಾಳ್ಗಳನುಱೆ ಚೆನ್ನಟ್ಟಿ ತಿವಿದರುರವಣಿಸಿ (ಕಂಸವಿ. ೩-೬೦) ; ಪೆಚ್ಚಾದ ನನ್ನ ಮೋರೆಯಾ ತಿವಿದು ನೋಡಿ (ಕೋಗಿಲೆ. ೨-೪೦) ; ಅನಂತರ ತಾಯಿಯನ್ನು ತಿವಿದು "ಹೋಗೋಣವ್ಮಾ" ಎಂದಳು (ದೂಬಿಟ್ಟ. ೧೨). ೩. ಹಬ್ಬು ; ಚಾಚು ; ವ್ಯಾಪಿಸು : ಪೂರ್ಣಶಶಿಮಂಡಲದವೊಲು ತನು ಕಾಂತಿ ತಿವಿದುದು ನಿಖಿಳ ದಿಗುತಟಕೆ (ಕುಮ್ವಾಶ. ೮-೦೯). ೪. ಓಡಿಸು ; ಹರಿಸು ; ಮುನ್ನುಗ್ಗಿಸು : ಕಂಫಟಿಗೆಗಳೇಱಿದವು ಕುದುರೆಗಳುರವಣೆಸಿದವು ತೇರ ತಿವಿದರು ಹೊಂತಕಾಱಗಳು (ಕುಮ್ವಾಶ. ೦೦-೯).

೫. (ಬೇಟೆ) ನಾಯಿಯ ಕೊರಳ ಪಟ್ಟಿಯನ್ನು ಬಿಚ್ಚು : "ತಿವಿಯೆಂದು ಹಾಸಂ ಕಟಲ್ಲುವುದು" (ಕಕಶಾ. ೬-೧೦೯) ; "ತಿವಿಯೆನೆ ಹಾಸುಗಳೆಯ[ವು]ದು" (ಕಬ್ಬಸುಂ. ೩೨). ೬. [ಗಣಿತ] ಗುಣಿಸು : ತಿವಿ, ಪೊಯ್ ಪೆರ್ಚಿಸು, ನೂಂಕು, ಅರಂಕು, ಕುಂಕು, ಕುಸಿ ... ಬೆಳಸೆಂದು ಇಂತಿನಿತುಂ ಗುಣಿಸೋದಕ್ಕೆ ಹೆಸರು (ವ್ಯವಹಾ. ೧೧-೮).

ತಿವಿದಾಟ = ಪರಸ್ಪರ ಇರಿದಾಡುವಿಕೆ : "ಅಡುಪಾಡೆನೆ ತಿವಿದಾಟದ ನುಡಿ" (ಛಾಕನಿ. ೬೪). **ತಿವಿದಾಡು**=ಚಾಚಿಕೊಳ್ಳು : ಅಶ್ವಮೇಧದ ಬೇಳುವೆಯ ಸಂಭ್ರಮದ ಧಾಳಾಧೂಳಿಯಲಿ ತಿವಿದಾಡಿದವು ಜಿಹ್ವೆಗಳಾ ಹುತವಹನ (ತೊರರಾ. ೧-೭-೪೮). **ತಿವಿದುಕೊಳ್**=ಅಂಟಿಕೊಳ್ಳು ; ಹೊಂದಿಕೊಳ್ಳು : ಬಾಡಿಗೆಯ ಮನೆಗೆ ತಿವಿದುಕೊಳ್ಳ ಚಿತ್ರದ ಕೊಟ್ಟಿಗೆ ವ್ಯೆಯಾಂಪ... ಕಟ್ಟಿಗ್ಗರಂತೆ (ಧರ್ಮಾಮೃ. ೯-೧೬೨). [ ದೇ.೩ ತೆಲು. ತಿವಿಯು ]

**ತಿವಿ$_2$** (ನಾ). ಹೊಡೆತ ; ತಿವಿತ : ತಿವಿವ ತಿವಿಗಳ್ಗೆ ದನಿದೋಱಿ ಭಟರ ಕಾಯುಂ ... ಪೊಯ್ದಾಡಿದರ್ ಮಹಾಸಂಗರದೊಳು (ಚಲಪು. ೧೬-೩೮); ಅಸಿಯಿಂದ ಕರದಿಂದ ತಿವಿಯಿಂದ ಹೊಯ್ದೊರಸಿತೇನೆಂಬೆನು (ತುರಂಗ. ೫೬-೪೮): ದ್ರುಪದಸುತೆಯು ಕಂಡು ದೂರದಿ ತಿವಿಗಳನ್ನು ಕೇಳುತಿರಲು (ಯುವಿಪ. ೨೬).

[ < ತಿವಿ$_1$ ]

**ತಿವಿಗತ್ತಿ** (ನಾ). (ಬಂದೂಕಿನ ತುದಿಗೆ) ಇರಿಯುವುದಕ್ಕಾಗಿ ಸಿಕ್ಕಿಸಿದ ಕತ್ತಿ,-ಖಡ್ಗ : ತಿವಿಗತ್ತಿಯ ಬಂದೂಕು ಹಿಡಿದುಕೊಂಡು ಪಹರೆ ಮಾಡುವ ಪೋಲೀಸರು ... ಕಲ್ಲುಹೊಡೆಯುವ ಕೈದಿಗಳು (ಮುಣ್ಣಹ. ೦೫).

[ ತಿವಿ$_1$ + ಕತ್ತಿ ]

**ತಿವಿಗುಳು** (ನಾ). ಹೊಡೆತ ; ಪ್ರಹಾರ ; ತಿವಿತ : ರವಿಯ ಕೈ ಕತ್ತಲೆಯ ಹೊರಳಿಯ ತಿವಿಗುಳಿಗೆ ತೆರಳುವುದೆ (ಕುವ್ಯಾಳ. ೧೦-೪೬) : ಸಿಡಿಲ ತಿವಿಗುಳ ತಾಯಿಮನೆಯೋ ಪವನಜನ ಬಲುಘಾಯವೋ (ಕುವ್ಯಾಳ. ೦೯-೪೪): ತೋಳ ನೆಗಹಿನ ತಿರುಹುದಿವಿಗುಳ ತೀವ್ರತೆಯಲಬ್ಬರಿಸುತಿರ್ದುದಜಾಂಡ ಮಂಡಲ (ತೊರರಾ. ೪-೩-೧೦). [ ತಿವಿ$_1$ + ? ]

**ತಿವಿಗೆ** 'ಶಿವದಿಗೆ' ನೋ.

**ತಿವಿಗೋಲು** (ನಾ). ಚುಚ್ಚುವ ಕೋಲು ; ಇರಿಯುವ ಕೋಲು : "ಪ್ರಾಜನಂ, ತೋದನಂ, ತೋತ್ರಂ-೩ ತಿವಿಗೋಲು" (ಸಿದ್ಧಾಂತಿ. ೨೩೮).

[ ತಿವಿ$_1$ + ಕೋಲು$_1$ ( < ಕೋಲ್$_1$ ) ]

**ತಿವಿಟಿಕೆಬುಲ್ಲು** 'ತಿವುಟಿಗೆಬುಲ್ಲು' ನೋ.

**ತಿವಿತ** (ನಾ). ಚುಚ್ಚುವಿಕೆ ; ಇರಿಯುವಿಕೆ : ಕರ್ಣನ ಈಟಗಳ ತಿವಿತಗಳಿಂದ (ಕೃವಾಕ. ೬೦) : ಅದರ ಕೊಂಬುಗಳ ತುದಿಗಳು, ಎದುರು ಬರುವ ಶತ್ರುಗಳನ್ನು ಒಂದೇ ತಿವಿತಕ್ಕೆ ಸೀಳಿಬಿಡುವಷ್ಟು ಹದನಾಗಿದ್ದವು (ಬಂಗಾಹ. ೩೧).

[ ತಿವಿ$_1$ + – ತ$_2$ ]

**ತಿವಿದಿ** 'ತಿವದಿ' ನೋ.

**ತಿವಿನುಡಿ** (ನಾ). ಚುಚ್ಚುಮಾತು ; ಮರ್ಮಭೇದಕವಾದ ಮಾತು. 'ತಿವಿನುಡಿಗಾರ' ಪರಾ. [ ತಿವಿ$_1$ + ನುಡಿ$_2$ ]

**ತಿವಿನುಡಿಗಾರ** (ನಾ). ಚುಚ್ಚುಮಾತನಾಡುವವನು ; ಮರ್ಮಭೇದಕ : ಅರುಂತುದಃ. ಮರ್ಮಸ್ಪೃಕ್-೨ ಮರ್ಮವನ್ನು ಭೇದಿಸಿ ಹೃದಯವ್ಯಥೆಯನ್ನುಂಟುಮಾಡುವ. ಹಂಗಣೆ ಮುಂತಾದ ಮಾತುಗಳ ಹೆಸರುಗಳು. ಗುಟ್ಟನ್ನು ಎತ್ತಿ ಆಡುವಿಕೆ ಮೊದಲಾದದ್ದು. ತಿವಿನುಡಿಗಾರ (ಸಿದ್ಧಾಂತಿ. ೨೯೬).

[ ತಿವಿನುಡಿ + – ಗಾರ (< – ಕಾಱ) ]

**ತಿವಿರ್** 'ತಿಮಿರ್$_2$' ನೋ.

**ತಿವಿರು** 'ತಿಮಿರ್$_2$' ನೋ.

**ತಿವಿಸು** (ಕ್ರಿ). ಚುಚ್ಚುವಂತೆ ಮಾಡು ; ಇರಿಯುವಂತೆ ಮಾಡು. 'ತಲೆದಿವಿಸು' ಪರಾ.

**ತಿವಿಸಿಕೊಳ್** = ಚುಚ್ಚಿಸಿಕೊಳ್ಳು : ಕಣ್ಣುಬೇನೆಗಾಱದೆ ತಲೆಯಂ ತಿವಿಸಿಕೊಂಡರೆಂಬಂತೆ ಪಱಿಮೆಗಾಱದೆ ಪೂಗಿಡುಗಡಿದರೆಂಬಾತೆ (ಲೀಲಾವ. ೧೪-೪೬ ವ). [ ತಿವಿ$_1$ + – ಇಸು$_3$ ]

**ತಿವಿಳಿ** 'ತಿವಳಿ$_2$' ನೋ.

**ತಿವುಟಗೆ** 'ತಿವದಿಗೆ' ನೋ.

**ತಿವುಟಗೆಬುಲ್ಲು, ತಿವಿಟಿಕೆಬುಲ್ಲು, ತಿವುಟಿಗೆಹುಲ್ಲು, ತೆವಟಿಗೆಬುಲ್ಲು** (ನಾ). ತೆವಟಿಗೆ ಆಕಾರದಲ್ಲಿ ತೆನೆಬಿಡುವ ಒಂದು ಬಗೆಯ ಹುಲ್ಲು : "ಮಧೂಲಕಃ-ತಿವುಟಗೆಬುಲ್ಲು" (ಒಷಧಿ. ೧೧೪). **ತಿವಿಟಿಕೆಬುಲ್ಲು** : "ನೃಪಘೋಂಟಕಾರಿ-ತಿವಿಟಿಕೆಬುಲ್ಲು" (ಒಷಧಿ. ೮೯). **ತಿವುಟಿಗೆಹುಲ್ಲು** : "ಮಂಡಿಕಃ - ತಿವುಟಿಗೆಹುಲ್ಲು" (ಒಷಧಿ. ೦೧೪). **ತೆವಟಿಗೆಬುಲ್ಲು** : "ಶಬಲಃ-ಕ್ಷಪ. ತೆವಟಿಗೆಬುಲ್ಲು" (ಒಷಧಿ. ೧೫೯).

[ ತಿವುಟಗೆ (< ತಿವದಿಗೆ) + ಪುಲ್ಲು ( < ಪುಲ್ ) ]

**ತಿವುಟಿಗೆಹುಲ್ಲು** 'ತಿವುಟಿಗೆಬುಲ್ಲು' ನೋ.

**ತಿವುಡು$_1$** 'ತೀಡು$_2$' ನೋ.

**ತಿವುಡು$_2$** 'ತವುಡು' ನೋ.

**ತಿವುಡುಗಳೆ** (ಕ್ರಿ). ಹೊಟ್ಟನ್ನು ತೆಗೆದುಹಾಕು : ಕಱವೆಯ ಕೂಟ್ಟಿಗವಾಗಿಸುವ ತಿಳಿದುಪ್ಪಂ ತಿವುಡುಗಳೆದ ಪೊಂಬೆಸಱ ... ಸವಿಯಿನೊದವಿದ ತೊವೆಯಂ (ಧರ್ಮಾಮೃ. ೦-೧೪೯) : ಪಱಗಱವೆಯ ಕೂಟು ತಿವುಡುಗಳೆದ ತೊವರಿಯ ತೊವೆ (ಅವ್ಯಾವ. ೨೪೦). [ತಿವುಡು$_2$ (< ತವುಡು) + ಕಳೆ$_1$]

**ತಿವುಡೆ$_1$** 'ತಿವದಿ' ನೋ.

**ತಿವುಡೆ$_2$** 'ತ್ರಿಪುಡ' ನೋ.

**ತಿವುರ್** 'ತಿಮಿರ್$_2$' ನೋ.

**ತಿವುರ** 'ತಿಪ್ಪುರ' ನೋ.

**ತಿವುರಾಂತಕ** 'ತ್ರಿಪುರಾಂತಕ' ನೋ.

**ತಿವುರಿ** (ನಾ). ಒಂದು ಬಗೆಯ ಡೇರೆ (?) : ತಿವುರಿ ಗುಡಿ ಗೂಡಾರಂ ರಘುಪಾಳಿ ... ಮೊಗಸಾಲೆಯೆಂಬಿವಱ ಪಸುರಿಂ ಕರ್ಬುರ ಕೆಂಪಿಂ ಬಸಂತನ ಬೀಡಿನಂತವಱ ಪೊಱವೀಡೆತ್ತಂ ಮಾಡಿತ್ತು ಕಣ್ಗನುರಾಗಮಂ (ಅನಂಪು. ೧೩-೬೩) : ಬೀಗಿ ಪೞಪೞನೆ ಬೆಳೆದ ಬಾಟೆಯ ತಿವುರಿಯೊಳಂ ... ಬಿಟ್ಟ ಬೀಡು ಬರೆದಂತೆ ಕಂಡರಿಸಿದಂತೆ ಕಣ್ಗೆಸೆದಿರ್ದುದು (ಕಲ್ಯಾಕಾ. ೨೩೮) ; ತಿವುರಿ ಗುಡಿಯು ಗೂಡಾರ ಚಾಪಾಳಿಕೆಯ ನಿವಹ ... ಜಂಪೆಯ ಮಂಡಪವು ಕವಿನುತ ಬಾಗಿಲ್ಮಾಡದ ಮೊಗಸಾಲೆಯವಿರಳವಾದುವು (ಅನಂಪ. ೨೨-೬೦).

[ ? ]

**ತಿವುರು$_1$** 'ತಿಮಿರ್$_1$' ನೋ.

**ತಿವುರು$_2$** 'ತಿಮಿರ್$_2$' ನೋ.

**ತಿವುರೇಱು** (ಕ್ರಿ). ಲೇಪಿಸಿದ ಸುಗಂಧದ್ರವ್ಯ ಮೇಲೇಳು : ಅನುರಾಗ ವಿಮ್ಮಡಿಸಿ ತಿಳಿದು ಮುಖಪದಿರಾಗಿ ಪುಳಕದ ತಿವುರೇಱೆ ಪರಿಮಳದಂಕದ ಸರಸಗಾಳಿಗಕ್ಕಂ ಮೃದುಮಾಸಿಕ್ಕಿದ ಕಳನಾಗೆ (ನಂಬಿರ. ೦೦-೦೦೪).

[ ತಿವುರು$_2$ (< ತಿಮಿರ್$_2$) + ಏಱು$_1$ (< ಏಱ್$_1$) ]

**ತಿವುಳ** 'ತಿಮಿಳ' ನೋ.

**ತಿವುಳೈಲ** (ನಾ). ತಮಿಳು ದೇಶ (?) : ಕೊಂಕಣಮಂಟೆಯಿಕ್ಕಿ ಬೆಂಗಿ ಬೆಱಗಾಗೆ ತಿವುಳೈಲನಳ್ಕೆ ... ಭೀಷಣಮತಿರೌದ್ರಮದ್ಭುತಮಾಗುರ್ವಿನ ತೇಜದಳುರ್ಕೆ ಧಲ್ಲನ (ಸೌಇಇ. XI-i, ೫೨-೯ ; 1007).

[P ಇದು 'ತಿವುಳ್ನಲ' ಎಂಬುದರ ಅಪಲಿಖಿತವಿರಬಹುದು]

**ತಿವುಟ್ನಾಡು** 'ತಿಮಂಳನಾಡು' ನೋ.

**ತಿಶ್ರ** 'ತಿಸರ$_3$' ನೋ.

**ತಿಪ್ಪಿಸು** (ಕ್ರಿ). ತಳವೂರು ; ಭದ್ರವಾಗಿ ನಿಲ್ಲು : (+). [ತಿಪ್ಪ + – ಇಸು$_3$]

**ತಿಷ್ಠೆ** (ನಾ). ನಿಲ್ಲುವಿಕೆ.

**ತಿಷ್ಠೆಊರು** = ನೆಲೆಯಾಗಿ ನಿಲ್ಲಂ : ಇಲ್ಲೇ ಭದ್ರವಾಗಿ ತಿಷ್ಠೆಊರಿದರು (ಕಾಮಿಕಾಂ. ೨೩೧). **ತಿಷ್ಠೆಹಾಕು**=ತಂಗು; ನಿಲ್ಲು; ಬಿಡಾರ ಮಾಡು : (ಕ). [P ಇದು ಷ್ಠಾ (ತಿಷ್ಠ್) ಎಂಬ ಸಂಸ್ಕೃತ ಧಾತುವಿನಿಂದ ರೂಪುಗೊಂಡಿದೆ]

**ತಿಷ್ಯ** (ನಾ). ೧. ಇಪ್ಪತ್ತೇಳಂ ನಕ್ಷತ್ರಗಳಲ್ಲಿ ಎಂಟನೆಯದಂ ; ಪುಷ್ಯ ನಕ್ಷತ್ರ : "ಪುಷ್ಯಃ, ತಿಷ್ಯಃ–ಈ ೨ ಪುಷ್ಯನಕ್ಷತ್ರದ ಪೆಸರ್" (ಹಲಾಯು. ೦೦-೩೦). ೨. ಪುಷ್ಯಮಾಸ. ೩. ಕಲಿಯುಗ : "ಕಲಿಃ–ತಿಷ್ಯಯುಗವುಂ. ಪಾಪವುಂ, ತಿಳಿಯುಂ" (ಕಾಶಕ್. ೨೬೩). [ಸಂ.]

**ತಿಷ್ಯಫಲ** (ನಾ). ನೆಲ್ಲಿಗಿಡ : "ತಿಷ್ಯಫಲಾ. ಆಮಲಕೀ, ಅಮೃತಾ. ವಯಸ್ಥಾ–ಳ ನೆಲ್ಲೀಮರ" (ಸಿದ್ಧಾಂತಿ. ೧೦೯). [ಸಂ. ತಿಷ್ಯಫಲಾ]

**ತಿಸರ₁** (ನಾ). ಮೂರೆಳೆಯ ಸರ, – ಹಾರ. ಪಂಚರತುನದೊಳೆ ನೆಱೆದ ಪಸರದಿಂ ತೋರಣಂಗಳೊಳೆ ತೊಡರ್ದ ತಿಸರದಿಂ (ಪಂಪಭಾ.೩-೨೨) ; ಸಿರಿ ಕಂಡದಣ್ಪು ಮುತ್ತಿನ ತಿಸರಂ ಮೃಣಾಳಿಕೆಯ ಮುದ್ರಿಕೆ ಪೂವಿನ ಒಂದು ಗಂಕಣಂ (ಪಂಪರಾಮಾ. ೩-೦೦೬) ; ಸತಿಯ ಕುಚಯುಗಮಧ್ಯಂ ತಿಸರಕ್ಕೆಡೆಗುಡದೆಂದಾ ಅಸಿಯುಳ್ಗೆ ಸವೆಕ್ಕಸರಮನಿಕ್ಕಿದಳೊರ್ವಳ್ (ಜಗವಿ. ೦೦-೦೧೪) : ಎರ್ದೆವತ್ತಿದ ಮಲ್ಲಿಗೆಯ ತಿಸರವೇಂ ಸೊಗಯಿಸಿತೊ (ಕಬ್ಬಿಗಾ. ೦೧೦). [< ಸಂ. ತ್ರಿಸರ]

**ತಿಸರ₂** (ನಾ). ಮೂರು ಬಾಣ : ತ್ರಿಶರ—ತಿಸರ ; ತ್ರಿಶೂಲ—ತಿಸುಳ (ಶಮದ. ೨೯೦ ಪ್ರಯೋ). [< ಸಂ. ತ್ರಿಶರ]

**ತಿಸರ₃, ತಿಶ್ರ, ತಿಸರು, ತಿಸ್ರ** (ನಾ). ೧. ತಿಕ್ಕಾಟ ; ಜಗಳ ; ಕಲಹ ; ಮನಸ್ತಾಪ : ರಾತ್ರಿಯಲ್ಲ ಗಂಡಹೆಂಡಿರ ತಿಸರ (ಅವತಂ. ೦೩೦). **ತಿಶ್ರ** : ೧. ಸಂಸಾರದಲ್ಲಿ ಏನು ತಿಶ್ರ ಬಂದಿತ್ತೊ (ಕಲಿನ. ೨೪೭). ೨. ಗೊಂದಲ; ತೊಂದರೆ ; ಕಷ್ಟ : ಈ ಚಿಲ್ಲರೆ ನಾಣ್ಯದ ಎಣಿಕೆ ಮುಗಿಯದು, ಲೆಕ್ಕ ಸರಿಬೀಳದು, ಈ ತಿಶ್ರದಲ್ಲಿ ಬೆಳಗಾಯಿತು (ಅದೂಟ. ೦೦). **ತಿಸರು** : ೧. ಮೊದಲಿನಲ್ಲಿ ಸ್ವಲ್ಪ ತೊಂದರೆ ತಿಸರುಗಳಿದ್ದರೂ ಮುಕ್ತಾಯದಲ್ಲಿ ಸುಖ ಸಂತೋಷಗಳೇ ತುಂಬಿದ್ದುವು (ರಂಗಳ. ೯೧). **ತಿಸ್ರ** : ೧. ಯುವಕ ಮಕ್ಕಳೊಡನೆ ಒಂದೇ ಮನೆಯಲ್ಲಿರುವಾಗ. ತಿಸ್ರವು ಅನಿವಾರ್ಯ (ಮನೋನಂ. ೨೪೧). [?]

**ತಿಸರಿ** (ನಾ). ಒಂದು ಬಗೆಯ ತಂತಿವಾದ್ಯ : ಬಾಜಿಪ ಬೀಣೆಯಂ ತಿಸರಿಯಂ [ಪಾಠಾಂ. ತಿಸರವುಂ] ಕೊಳ್ಳೆಂದು ಬಲ್ಲಂಗಿವಂ ಕುಡಿಂ (ಅಜಿಪು. ೬-೦೦೪) ; ವೀಣೆಯ ಕಳಿಯ ಕಳಿಯೊಲ್ಲಳವೇಱ ಲುಳಿಯ ಪಿರಿಯ ದನಿಯೊಳ್ತಿಸರಿಯ ಸುಸರತನಮುಂ ಮುಹರಿಯ ಮಧುರತೆಯುಂ ಬೀಣೆಯ ಬಹುಲಿಕೆಯುಂ ಎಸೆಯೆ (ವರ್ಧಪು. ೯-೪೩ ವ) ; ಬಾಜಿಸುವಮರರಮಣಿಯರ್ಕಳ ತಿಸರಿಯ ಕಿನ್ನರಿವೀಣೆಯ ನವವಿಧದ ರವಂ (ಅನಂಪು. ೪-೮೭) ; ವಿಪಂಚಿಕೆ ... ತಿಸರಿ ... ರಾಗಮಾಲಿನೀ, ಕಾಲಕೀಯೆಂಬ ಮೂವತ್ತು ಮೂಱು ತಂತ್ರೀವಾದ್ಯಂಗಳಲ್ಲಿ (ವಿವೇಕ. ೨೩೭). [?]

**ತಿಸರು** 'ತಿಸರ₃' ನೋ.

**ತಿಸು** (ನಾ). ಒಂದು ಅನುಕರಣ ಶಬ್ದ. 'ತಿಸುಗುಟ್ಟು' ಪರಾ.

**ತಿಸುಗುಟ್ಟು** (ಕ್ರಿ). ಗೊಣಗೊಣ ಶಬ್ದಮಾಡು ; ಗೊಣಗಾಡು : (ಕ). [ತಿಸು + ಕುಟ್ಟು₁]

**ತಿಸುಳ** (ನಾ). ಮೂರು ಮೊನೆಯನ್ನುಳ್ಳ ಒಂದು ಬಗೆಯ ಆಯುಧ ; ತ್ರಿಶೂಲ : "ತಿಸುಳಮೆನಲ್ ತ್ರಿಶೂಲಂ" (ಶಕಾಣಿ. ೬೧) ; ತಿಸುಳದೊಳು ಚ್ಛಳವ ಪೊಸನೆತ್ತರೆ ಕೆಂದಳಿರಾಗೆ (ಪಂಪಭಾ.೦-೬) ; ಬಂದುಗೆಗಳ ತಿಸುಳದ ಮೊಲ್ಲೆಯಿಟ್ಟಿಗಳ ಕಾಮಿನಿಯರ್ (ಗಿರಿಳ. ೭-೫೩) ; ಬಿಸುಪಮರ್ದ ನೊಸಲ ಕಣ್ಣುಂ ತಿಸುಳಂಗಳನಾಂತ ಕೈಗಳುಂ ನೋಟ್ಪರನಂಜಿಸೆ (ಕಬ್ಬಿಗಾ. ೨೫೫) : ನೋಡುತ ತಿಸುಳಮಂ ತಿರುಪುತೆ (ಜಿಬಪು. ೦೯-೩೪). [< ಸಂ. ತ್ರಿಶೂಲ]

**ತಿಸುಳಪಾಣಿ** (ನಾ). ಕೈಯಲ್ಲಿ ತ್ರಿಶೂಲವುಳ್ಳ ವ್ಯಕ್ತಿ : ಒಂದಂಚಿನಲ್ಲಿ ತಿಸುಳಪಾಣಿಯಾಗಿ ನಿಂತು, ಸುತ್ತ ತನ್ನ ಬೆದಕುಗಣ್ಣುಗಳಿಂದ ಅಭೀಕ್ಷಿಸುತ್ತಿರುವವಳು (ನಡದಾ. I, ೪೪೯). [< ಸಂ. ತ್ರಿಶೂಲಪಾಣಿ]

**ತಿಸುಳಿ₁** (ನಾ). ತ್ರಿಶೂಲವನ್ನು ಹಿಡಿದವನು ; ಶಿವ : "ಗಿರೀಶಂ ತಿಸುಳಿ" (ಶಕಾಣಿ. ೪೮) ; ಗಂಡುತನಮುಂ ಮೆಱೆ ತಿಸುಳಿಯೊಳಿಱಗು ಪಿರಿಯವರ್ಗೆಳೆಯೊಡೆಯ(ಕಬ್ಬಿಗಾ. ೨೩೦) ; ನಿಸಿಗಡೆಯೊಳೆದ್ದರಸು ಕನಸಾದ ಹೆದೆಯದೊಳ್ ತಿಸುಳಿಯಾಡಿದ ನುಡಿಯು ಮನದೆಗೊಂಡಾಗ (ಜೀರಮ. ೯-೦೧) ; ತಿಸುಳಿಯೊಳ್ ಬಿನ್ನವಿಸುತಿರ್ದರಾ ಬೇಹಿಗಳ್ ಲೀಲೆಯಿಂದೋಲಗದೊಳು (ನಂದಿಮಾ. ೫-೪೮) ; ಕೆದರ್ದ ಕವರ್ದದಿಂ ತಿಸುಳಿ ಮುಪ್ಪೊಳಲೆಂದು ಕನಲ್ದು ಪಾಯ್ವನಂ (ಗೀತಗೋ. ೩೩-೫೪) ; ತಿಸುಳಿ ಪಣೆಗಣ್ಣುರಿಯನುರ್ವಿಸೆ (ಕಮಮಾ. ೦೫-೪೩). 'ತ್ರಿಸೂಲಿ' ಪರಾ [< ಸಂ. ತ್ರಿಶೂಲಿನ್]

**ತಿಸುಳಿ₂** (ನಾ). ಮೂರು ಶೂಲಗಳು ಒಟ್ಟಿಗೆ ಇರುವ ಆಯುಧ. 'ತಿಸುಳಿಗೆಯ್ಯ' ಪರಾ. [< ಸಂ. ತ್ರಿಶೂಲೀ]

**ತಿಸುಳಿಗೆಯ್ಯ** (ನಾ). ತ್ರಿಶೂಲವನ್ನು ಹಿಡಿದವನು ; ಶಿವ : ತಪಮುನಾಚರಿಸುತಿರಲೊಡಂ ಕೆಲವಾನುಂ ದಿನಕ್ಕೆ ತಿಸುಳಿಗೆಯ್ಯಂ ಮೆಯ್ದೋಱಿದಂ (ರಾಮಾಶ್ವ. ೦೩೭-೦೨). [ತಿಸುಳಿ₂ + ಕೆಯ್₂ + – ಅ₇]

**ತಿಸುಳಿಗೆಳೆಯ** (ನಾ). ಶಿವನ ಸ್ನೇಹಿತ ; ಕುಬೇರ : "ಪೊನ್ನಱಿಯ ತಿಸುಳಿಗೆಳೆಯಂ ಕಿನ್ನರಪತಿ" (ಶಕಾಣಿ. ೧). [ತಿಸುಳಿ₁ + ಕೆಳೆಯ]

**ತಿಸುಳಿಯಣುಗ** (ನಾ). ೧. ಶಿವನ ಮಗ ; ಷಣ್ಮುಖ. ೨. ಶಿವಭಕ್ತ : ಪಾವಕಂ ತಿಸುಳಿಯಣುಗನ ಪಾದಕೆಱಗಿ (ಗುರುಬಾ. ೦೦-೩೪). [ತಿಸುಳಿ₁ + ಅಣುಗ ( < ಅಣುಂಗ)]

**ತಿಸ್ರ** 'ತಿಸರ₃' ನೋ.

**ತಿಹುರ** 'ತಿಪುರ' ನೋ.

**ತಿಹುರಾಂತಕ** 'ತಿಪುರಾಂತಕ' ನೋ.

**ತಿಹುರಿ** 'ತಿಗುರಿ' ನೋ.

**ತಿಳ** 'ತಿಲ' ನೋ.

**ತಿಳಕ** 'ತಿಲಕ' ನೋ.

**ತಿಳಕಿಸು** 'ತಿಲಕಿಸು' ನೋ.

**ತಿಳಕೆ** (ನಾ). ಆನೆಯ ಸಪ್ತಮದಾವಸ್ಥೆಗಳಲ್ಲಿ ಒಂದು ; ತಿಲಕಿತ : ನವಯೌವನಲಕ್ಷ್ಮಿಯೊಳಾಗೆ ವಿವಾಹಂ ತಿಳಕೆಯಿಟ್ಟವೋಲ್ ತಿಳಕೆಯದೊಪ್ಪುವ ಕತ್ತುರಿಯಂ ತೊಡೆದಂತೆವೊಲರ್ಧಕಪೋಳೆ ಪುಟ್ಟಿದುದು ಗಜಪತಿಯೊಳ್ (ಪಾರ್ಶ್ವಪು. ೪-೦೦೭). [ಸಂ. ತಿಲಕ]

**ತಿಳಜ** 'ತಿಲಜ' ನೋ.

**ತಿಳತೈಳ** 'ತಿಲತೈಲ' ನೋ.

**ತಿಳಲು** 'ತಿರುಳ್' ನೋ.

**ತಿಳಿ₁** (ಕ್ರಿ). ೧. ನಿರ್ಮಲವಾಗು ; ಶುದ್ಧವಾಗು ; ಸ್ವಚ್ಛವಾಗು : ದೆಸೆಗಳ್ ವಿಳಾಸಮಾದುವು ಕೆಸಱುಂ ಪಿಂಗಿತ್ತು ಧರಣಿ ತಿಳಿದುವು ಕೊಳಗಳ್ (ಕವಿರಾ. ೨-೬೧) ; ಬಚ್ಚಲ ನೀರು ತಿಳಿದಲ್ಲಿ ಫಲವೇನು (ಬಸವ. ೧೨೦) : ತಿಳಿದ ತಡಿದಡಿಯ ಮಡಿಗಳ ಜಳದೊಳ್ ರಂಜಿಸುವ ಧಾನ್ಯಮಂಜರಿಯ ನೆಟಲ್ ಪೊಳೆಯೆ (ಚಂದ್ರಪು. ೦-೯೨) : ತಿಳಿದುದು ನೀರ್ಗಳಂತೆ ಗಗನಂ (ಅನಂಪು. ೦೦-೭) ; ಪಾವಸೆ ಕಿಡಲೊಡಂ ನೀರ್ತಿಳಿದುದು (ಶಮದ. ೨೪೭ ಪ್ರಯೋ) ; ನೀರ್ ತಿಳಿದುದು ಪುಗೊಳದೊಳ್ ದಾಂಗುಡಿ ತೋಱುದುದು ಲತಾಳಿಯೊಳು (ಜದುಕಾ. ೧೦-೪) ; ತಿಳಿಯ ಕಾಸಿದ ತುಪ್ಪವಳಿದು ಹಾಲ ಪೃಡೆ (ಸರ್ವಜ್ಞ. ೩೫೮). ೨. ಶುಭ್ರವಾಗಿ ಪ್ರಕಾಶಿಸು,–ಹೊಳೆ: ಸಳ್ಳು ಗುರ್ಗಳ ತೆಳ್ಪನೆ ತಿಳಿದ ಕಾಂತಿ ಕುಸುಮಿಸುವಿನೆಗಂ (ಅನಂಪು. ೬-೬೪) : ತಿಳಿದ ಜೊನ್ನಕೆ ಜೊನ್ನವಕ್ಕಿಗಳೆಳಸುವಂತೆಳಸುವುದ ಕೆರಳದೆ ರಾತ್ರಿಜಾಗರನು

(ಸಾಳ್ವಭಾ. ೧-೪೩) ; ಭಸಿತಲೇಖೆ ಬೆಳ್ಪಕ್ಕದ ಬಿದಿಗೆಯ ಚಂದವನೊಂದಂದದ ತಿಳಿದ ಕಳೆಯನಿಳಿಕೆಯ್ಕು (ರಾಮಾಶ್ವ. ೦೩೯-೧೦) : ತಿಳಿದು ನೀಳ್ದುವು ದಿಶಾಳಿ (ಶ್ರೀರಾಮಾ. ೫೪೩-೫೦). ೩. ಕೋಪವನ್ನುಳಿ ; ಪ್ರಸನ್ನವಾಗು ; ಸಮಾಧಾನಗೊಳ್ಳು : ಮುಳಿದಿರೆ ಪಾದಪಂಕಜಮನಾಂ ತಲೆಯೊಳ್ ನಿಲೆ ತಾಳ್ದಿ ನಲ್ಲಳೇ ತಿಳಿಯೆನೆ ನಲ್ಲಳೆನ್ನ ಪೆಸರಲ್ತೆಮಗಾ ಪೆಸರಾಳೆಯುಂಳೊಡಂ ತಿಳಿಪೆನೆ ಮತ್ತಮಾ ಪೆಸರ್ಗೆ ನೀನಿರೆ ನೋಂತವಳಾವಳೆಂಬುದುಂ ತಿಳಿದಮರ್ದಪ್ಪಿದಂದಂ (ಆದಿಪು. ೪-೧೦) : ಮುನಿಸಿನೊಳಾದಮೋಪಯಿಸಿ...ಬಯ್ದುನುಮಿಸಿ ಕಾಡಿ ನೋಡಿ ತಿಳಿದಟ್ಟುಱನಿಟ್ಟುಳಿಗೊಂಡಲಂಪುಗಳ್ ಕನಸಿನೊಳಂ ಪಳಂಚಲೆವು[ವೆ]ನ್ನರ್ದೆಯೊಳ್ (ಪಂಪಭಾ. ೪-೧೦೬) : ಕಿನಿಸಿ ಕಡುಪಿನಿಂದಂ ನಡುಗಿದಪುದು ತಿಳಿಯದೆಂತುಮಾರ್ತಿಳುಪಿದೊಡಂ (ಕಾದಂಬ. ೬೬) ; ಮುಳಿದಾಗಡೆ ಕೂರ್ಪುವರೊಳ್ತಿಳಿವುದು ತಿಳಿವುದು ಗಡೆನ್ನ ಸಾಱುವ ತೆಱದಿಂ ಗಳಪುವ ಗಿಳಿವಿಂಡಿನ ಕಳಕಳಂ (ಮ್ಯಆರಿ. ೧೯೩೮, ೧೦-೪೬ : 1180) : ಬಱದೆ ಮುಳಿದು ತಿಳಿಪೆ ತಿಳಿದು ನೆರೆವ ಬೇಡವೆಂಡಿರಿಂ (ಕಬ್ಬಿಗಕಾ. ೩೧೮) : ಬಲುಮುನಿಸು ನಿಮ್ಮಿಂದವಲ್ಲದೆ ತಿಳಿಯದೆನುತಂ (ಬಸವ. ೪೬-೪೬) : ತರುಣಿ ಕರ ಬಡವಾದೆಯನ್ನೂ ತಿಳಿಯದೇ ಮುನಿಸು (ಕೌಶಿರಾ. ೧೦-೬೫). ೪. ಅರಿ; ಕಲಿ ; ಗ್ರಹಿಸು ; ವಿಷಯವನ್ನು ಗೊತ್ತುಮಾಡಿಕೊಳ್ಳು,– ಸಂಗ್ರಹಿಸು : ಏದೊರೆತು ತಾನೆಮ್ಮಯ್ಯನೈಶ್ವರ್ಯಮಿಂತಿವನೆಲ್ಲಂ ತಿಳಿವಂತುಟಾಗಿ ಬೆಸಸಿಂ (ಪಂಪಭಾ. ೬-೦೫) ; ನೀಂ ತಿಳಿದಿರ್ದುಂ ಮದ್ವೃತ್ತಾಂತಮನೇನೆಂದು ಕೆಳೆಯ ಬೆಸಗೊಂಡಪೆ (ಕಾದಂಪೂ. ೮೪೪) ; ಜಿನೇಂದ್ರಧರ್ಮಮಂ ಸಾರಮೆನಿಪ್ಪುದಂ ತಿಳಿದು ನಂಬಿದರನ್ಯರನೇಕೆ ಪೊರ್ದುವರ್ (ಧರ್ಮಾಮೃ. ೧-೦೬೯) ; ಬೆಳಿದ ಭೂಮಿಯಲೊಂದು ಪ್ರಳಯದ ಕಸ ಹುಟ್ಟಿ ತಿಳಿಯಲೀಯದು ಎಚ್ಚಱಲೀಯದು (ಬಸವ. ೫೦) ; ಆ ಶಬ್ದಶಾಸ್ತ್ರ ವ್ಯವಹಾರಮಂ ತಿಳಿಯಲ್ಕೆ ಅಕ್ಷರಸಂಜ್ಞಾಸ್ವರೂಪಂ . . . ಪೇಟಲ್ಪಡುಗುಂ (ಶಮದ. ೧ ವೃತ್ತಿ) : ಕಳುಹಲತ್ತಲು ಹೋಗಿ ಸಾತ್ಯಕಿ ತಿಳಿದು ಮರಳಿದುದಿಲ್ಲ ಫಲುಗುಣನಳಿದನೋ ಮೇಣಾಳಿದನೋ (ಕುಮಾರವ್ಯಾ. ೧೨-೨). ೫. ಗೊತ್ತಾಗು ; ಸ್ಪಷ್ಟವಾಗು : ಅಷಡಕ್ಷೀಣಃ . . . ಮೂರನೆಯವನು ಮೊದಲಾಗಿ ಯಾರಿಗೂ ತಿಳಿಯದಂತೆ ನಡೆದ ಇಬ್ಬರ ಏಕಾಂತ ವಿಚಾರಕ್ಕೆ ಹೆಸರು (ಸಿದ್ಧಾಂತಿ. ೨೦೮) ; ನೀನು ಹೇಳಿದ್ದು ನನಗೆ ತಿಳಿಯಲಿಲ್ಲ (ರೂಢಿ). ೬. ವಿಚಾರಮಾಡು ; ಯೋಚಿಸು : ಆ ಸುಜ್ಞಾನದೃಷ್ಟಿಯಿಂ ತಿಳಿದು ನೋಡಿ . . . ಪ್ರಭುದೇವರು ನಿರೂಪಿಸುತಿರ್ದಾರು (ಶೂನ್ಯಸಂ. ೪-೦೯) ; ತಿಳಿವೊಡೆ ಶಶಿ ರವಿ ರವಿ ಶಶಿ (ಗಿರಿಜೆ. ೯-೬೪) : ಎಮ್ಮ ಶರಣರ್ಗೆ ಸಂಸಾರಸಂಗಂ ತಿಳಿಯೆ ಬಂಧವಲ್ಲಲ್ತು (ಹರ್ಮ್ಯರಾ. ೩-೮) : ತಿಳಿಯಲೆಮ್ಮವರಿಗೆ ಜೀವನದುಳಿವು ನಿನ್ನದು (ಕುಮಾರವ್ಯಾ. ೯-೪೮) ; ನಿನ್ನೊಳಗೆ ನೀನೇ ತಿಳಿದು ನೋಡು (ಪುರಂದ. ೧-೮೩-೩೮) ; ತಪ್ಪದಾರದು ತಿಳಿದು ನೋಡೆ ತಪ್ಪದಾರದು (ಗೀತಗೋ. ೬೦-೬). ೭. ಭಾವಿಸು ; ಬಗೆ : ವಿನೀತನಂ ದೂರದಿಂ ನೋಡಿ ಪಾತಕನಿವನೆಂದು ತಿಳಿದು ಪೋಗಳೆಂದಿರೆ ನಂಬದಿರ್ (ಕಾದಂಪೂ. ೫೪೯); ಬರೆದಿಹ ಲಿಪಿಯನೆತ್ತಿ ವಾಚಿಸಿಕೊಂಡು ತರಳಾಕ್ಷಿ ತಾನದಕೆ ಮತ್ತೊಂದಭಿಪ್ರಾಯಮಂ ತಿಳಿದಳು (ಕೃಮಿಭಾ. ೩೦-೨೬) ; ಅವನಂ ಪುಲ್ಲಂ ತಿಳಿದಂ (ಶಬ್ದಾನು. ೨೦೯ ಪ್ರಯೋ) ; ನನ್ನನ್ನು ಕಳ್ಳನೆಂದು ತಿಳಿದೆಯಾ ? (ರೂಢಿ). ೮. (ನಿದ್ರೆಯಿಂದ ಅಥವಾ ಮೂರ್ಛೆಯಿಂದ) ಎಚ್ಚರವಾಗು ; ಎಚ್ಚರಹೊಂದು : ಸುಗ್ಗವ್ವೆ ಕಡುಸುಖದ ಸೊಗಸಿನ ಜೊಮ್ಮು ತಿಳಿದು ಮೈಮುರಿದೆದ್ದಳು (ಸಿದ್ಧರಾ. ೧-೬೦) : ತಿಳಿದುದು ಝೊಮ್ಮಿನುಮ್ಮೋಹೆ (ಕುಮಾರವ್ಯಾ. ೦೬-೧೩). ೯. (ಸೊಕ್ಕು, ಅಮಲು) ಇಳಿ : ಸಿರಿಯೆಂಬ ಸೊರ್ಕು ತಿಳಿಯದು ಪರಿಣಾಮದಿನಂಜನಂಗಳಿಂದಂ (ಕಾದಂಪೂ. ೫೩೦) : ಕಳ್ಳಂ ಕುಡಿದಂ ತಿಳಿದಂದೊಳ್ಪಿತು ಹೊಲ್ಲೆಂದುಮಱಿವಂ (ಸಮುಪ. ೪-೦೫೩) ; ಮರುಳಾಗಿರ್ದನ ಮರುಳ್ತನಂ ತಿಳಿದವೊಲೊಸರಿಸಿರೆ ಮಿಥ್ಯಾತ್ವಂ (ವರ್ಧಪು. ೦೨-೩) : ಅವಧರಿಸು ಧೃತರಾಷ್ಟ್ರನೃಪ ನಿನ್ನವಗೆ ತಿಳಿದುದು ಸೊಕ್ಕು (ಕುಮಾರ. ೨೦-೧). ೧೦. (ಬರ) ಹಿಂಗು ; ಇಲ್ಲದಂತಾಗು : ಧರಾಜನದ ಕಣ್ಣಬಱ ತಿಳಿದವು (ಸಿದ್ಧರಾ. ೬-೪೫). ೧೧. ಕಾಣು; ನೋಡು: ದೇವರ್ಕಳಂ ತುಂಬಿಯಂ ತಿಳಿಯಲ್ ಸ್ವಪ್ನದಿ ಲೇಸಲ್ತೆ (ಸೋಮೇಶ. ೬೯). ೧೨. ಅನುಭವಿಸು : ಮನವರಿಯದ ಪಾಪವಿಲ್ಲ, ತನು ತಿಳಿಯದ ನೋವಿಲ್ಲ (ಗಾದೆ).

[ದೇ. ॥ ತಮಿ. ತೆಳಿ, ತೆಳ್, ತಳಿ ; ಮಲ. ತೆಳಿಯು ; ತುಳು. ತೆಲಿ, ಸಲಿ ; ಕೊಡ. ತೇಳಿ ; ತೆಲು. ತೆಲಿ]

ತಿಳಿ$_2$ (ನಾ). ೧. ಸ್ವಚ್ಛತೆ; ನೈರ್ಮಲ್ಯ; ಪರಿಶುದ್ಧತೆ: "ತಿಳಿ–ನೈರ್ಮಲ್ಯೇ, ಜ್ಞಾನ, ಪ್ರಸನ್ನಭಾವಯೋಃ (ಒಲಿ), ಕಾಂಜಿಕೇ ಚ (ಗಂಜಿ)" (ಶಮಧಾ). ೨. ಗಂಜಿ, ಮಜ್ಜಿಗೆ, ಸಾರು, ಹೆಂಡ ಮೊದಲಾದಂವುಗಳ ನೀರಾದ ಭಾಗ,—ಮಂದವಲ್ಲದ ಭಾಗ : ಒಡೆವ ಸಮಯದೊಳು ಹಾಲೊಳಗೆ ಸುಣ್ಣದ ತಿಳಿಯ ಬಿಡಲು ಚುಮ್ಮನೆ ತಿಳಿವುದದು (ಸೂಪಶಾ. ೨-೫) : ಬಡಿಸಿದರ್ ಮಂದನೆ ಮಜ್ಜಿಗೆ ಕಲಬರ್ಗೆ ನಿಡಿವೆತ್ತ ತಿಳಿ ಕಲಬರ್ಗೆ (ಮೋಹತ. ೧೪-೧೫) ; ಕೆಟ್ಟ ಹಾಲಿಂದ ಹುಳಿಯಿಟ್ಟಿರ್ದ ತಿಳಿ ಲೇಸು (ಸರ್ವಜ್ಞ. ೧೦೦೦) ; ಮೇಲಿನ ಕೆನೆಯನ್ನೆಲ್ಲಾ ಚೆಲ್ಲಿಬಿಟ್ಟು ಉಳಿದ ತಿಳಿಗೆ ಈ ಔಷಧ ಹಾಕಿ ಕುಡಿ (ವೈಸರ್ವ. ೬೬) 'ತಿಳಿಸುಣ್ಣ' ಪರಾ. ೩. ತಿಳಿಯಾಗಿರುವುದು ; ಲಘುವಾಗಿರುವುದು ; ಮಂದವಲ್ಲದುದು. 'ತಿಳಿನಿದ್ರೆ', 'ತಿಳಿನೀಲಿ' ಪರಾ. ೪. ಪ್ರಸನ್ನತೆ ; ಕೋಪ ಇಳಿಯುವಿಕೆ. ೫. ತಿಳಿವಳಿಕೆ ; ಜ್ಞಾನ : "ನಿರ್ಮಲ ಚಷಕ ಜ್ಞಾನ ಪ್ರಸನ್ನತ್ವಗಳೊಳಂ ತಿಳಿಯೆಂದೆನಿಕ್ಕು" (ಶಬ್ದಮಂ. ೦೧೪) : ಈ ಬಾಳ್ವೆಯೆಂಬ ಮುಗಿಲಲ್ಲಿ ತಿಳಿಯೆಂಬ ಹೊತ್ತು ಮೂಡಲಿ (ಕಗದ್ಯ. ೪೩). 'ತಿಳಿಗೇಡಿ', 'ತಿಳಿವುಟ್ಟು' ಪರಾ. (ಗು). ೬. ಸ್ವಚ್ಛವಾದ ; ಪರಿಶುದ್ಧವಾದ : ಸಂಗಮೇಶ್ವರಂಗೆ ಹೊಸ ಪುಷ್ಪಮಂ ತಿಳಿಯಗ್ಘವಣಿಯಂ ತಂದು ಓಜೆಯಿಂ ಪೂಜೆಗೈದು (ಬಸರ. ೨-೬೬). 'ತೆಳ್' ಪರಾ.

ತಿಳಿಯಾಗು = ೧. ಸ್ವಚ್ಛವಾಗು ; ನಿರ್ಮಲವಾಗು : ಬಾವಿ ನೀರು ತಿಳಿಯಾಗಿದೆ (ರೂಢಿ). ೨. ನೀರಾಗು : ಸಟ್ಟುಗದಿ ತೊಳಸಿ ಮಂದಮಂದನೆ ಘಟ್ಟಿಯಾಗುತಿಹ ಸಮಯದೊಳಗೊಂದಿನಿಸ ತೆಗೆತೆಗೆದು ತಿಳಿಯಾಗುವಾಹದಂ ಬಂದಾಗಲಿಳುಹಿ (ಸೂಪಶಾ. ೧-೪೦). ೩. ಶಾಂತವಾಗು ; ಸಮಾಧಾನ ಸ್ಥಿತಿಗೆ ಬರು : ಮನೆಯಲ್ಲಿ ನೆಲಸಿದ ಕಾತರತೆಯ ವಾತಾವರಣ ಮೆಲ್ಲನೆ ತಿಳಿಯಾಗುತ್ತಿದ್ದಂತೆ ಒಬ್ಬೊಬ್ಬರೇ ಚೇತರಿಸಹತ್ತಿದರು (ಮೂರುದಾ. ೨೬೩). ೪. ಸ್ಪಷ್ಟವಾಗು ; ಸರಳವಾಗು : ಗೀತೆಯು ಜೀವನ ಸಾರಸರ್ವಸ್ವವನ್ನು ತಿಳಿಯಾಗಿ ಸುಲಭವಾಗಿ ಹೇಳುವುದು (ಧರ್ಮಸಾ. ೧೧೦). [ <ತಿಳಿ$_1$. / ತಮಿ. ಮಲ. ತೆಳಿ, ತೆಳಿವು ; ತುಳು. ತಿಳಿ, ತೆಲಿ, ತೆಳಿ, ಸೆಲಿ, ಸೆಳಿ ]

ತಿಳಿ$_3$ (ನಾ). ಪಾನಪಾತ್ರೆ ; ಚಷಕ : "ನಿರ್ಮಲ ಚಷಕ ಜ್ಞಾನ ಪ್ರಸನ್ನತ್ವಗಳೊಳು ತಿಳಿಯೆಂದೆನಿಕ್ಕು" (ಶಬ್ದಮಂ. ೦೦೪) ; ಎಳಿ ಮಕ್ಕಳೆ ತುಂಬಿಸೀ ತಿಳಿಗೆ ತೀವೆ ಮದಿರೆ ಬತ್ತದ ಮುನ್ನ ಬಾಳ ತಿಳಿಯೆಡೆಯಿಂ (ಗೀವಿಂ. ೧೧೬-೨) ; ಹಿಂದಣನುತಾಪ ಮುಂದಣ ಭಯವ ಮರಸಿ ಇಂದನೊಸೆಯಿವ ತಿಳಿಯ ತುಂಬು ನನ್ನರಸಿ (ಗೀವಿಂ. ೧೦೮.೧೫).

[ ? . / ತೆಲು. ತೆಲೆ, ತೆಲಿಯ = ತಟ್ಟೆ . /ಸಂ. ಸ್ಥಾಲೀ ]

ತಿಳಿಗಂಪು (ನಾ). ಶುದ್ಧವಾದ ಪರಿಮಳ ; ಸುವಾಸನೆ : ಕತ್ತುರಿಗಂಪು ಸಿರಿಕಂಡದ ತಿಳಿಗಂಪು ಪೊಂಬಾಳೆ ಕರ್ಪುರಗಂಪುಗಳೆ ಸುಯ್ಯೊಳಾಣ್ಮುವ ಬೆಮರ್ಗಳೊಳ್ ಮೆಯ್ಗಳೊಳ್ ಸಲೆ ಸಾಮಜಗಮನೆಯರ್ (ಚಲಪು. ೩೬-೪೬). 'ನಱುಗಂಪು' ಪರಾ. [ ತಿಳಿ$_2$ + ಕಂಪು ]

**ತಿಳಿಗಚ್ಚು** (ನಾ). ತೆಳ್ಳಗಿರುವ ಗಾರೆ ; ಗಾರೆಯ ತಿಳಿ : "ಗೋಡೆಯ ಮೇಲ್ಮೈಗೆ ಬಳಿಯುವುದಕ್ಕೂ ಶಿಲ್ಪಾಲಂಕಾರ ಕೆಲಸಕ್ಕೂ ಉಪಯೋಗಿಸುವ ಹಲವು ಬಗೆಯ ಗಾರೆ ಅಥವಾ ಸಿಮೆಂಟು : ತಿಳಿಗಚ್ಚು" (Stucco. ಇಂಕನಿ). [ ತಿಳಿ$_2$ + ಗಚ್ಚು$_2$ ]

**ತಿಳಿಗಣ್ಣು** (ನಾ). ತಿಳಿವಳಿಕೆಯಿಂದ ಕೂಡಿರುವ ದೃಷ್ಟಿ ; ಜ್ಞಾನದೃಷ್ಟಿ : ತಿಳಿಗಣ್ಣಿಗೆ ಎಲ್ಲ ಜೀವನವು ರಸಮಯವಾದ ನಾಟಕವಾಗಿ ಅನುಭವಕ್ಕೆ ಬರುವದು (ಸಾಹಿವಿ. ೧೪೪); ತಿಳಿಗಣ್ಣಿನಿಂದ ಎಲ್ಲವನ್ನು ತಿಳಿದವರಾದ ಶರಣರು (ಶರಜ. ೭೨೯). [ತಿಳಿ$_2$ + ಕಣ್ಣು (< ಕಣ್)]

**ತಿಳಿಗನ್ನಡ** (ನಾ). ಶುದ್ಧವಾದ ಕನ್ನಡ: ಇವರು 'ಜ್ಯೋತಿಶಾಸ್ತ್ರ', 'ಪ್ರಾಕೃತಿಕ ಭೂಗೋಲ', 'ಉಪನ್ಯಾಸವಿದ್ಯೆ' ಎಂಬ ಶಾಸ್ತ್ರೀಯಗ್ರಂಥಗಳನ್ನು ತಿಳಿಗನ್ನಡದಲ್ಲಿ ಬರೆದರು (ಕಗದ್ಯ. II. ೧೨); ತಿಳಿಗನ್ನಡದ ನುಡಿಗಳಲ್ಲಿಯೇ ವಿರಚಿತವಾದ ಪದ್ಯಗಳು ಓದಲು ಇಂಪಾಗಿವೆ (ಕಾಲೂರ. ೦೪ ಮುನ್ನುಡಿ). [ ತಿಳಿ$_2$ + ಕನ್ನಡ$_1$ ]

**ತಿಳಿಗಳ್** (ನಾ). ಚೊಕ್ಕವಾದ ಮದ್ಯ ; ಬೆರಕೆಯಿರದ ಹೆಂಡ,-ಕಳ್ಳು : ತಿಳಿಗಳ್ಳೞೆಯಲ್ ಕುಡಿಯಳ್ಳೆ ಒಬ್ಗಲಾಗಳೆ ಕುಡಿದು (ದಶಕು. ೮-೨೦೫). [ ತಿಳಿ$_2$ + ಕಳ್$_3$ ]

**ತಿಳಿಗಾಸು** (ಕ್ರಿ). ಶುದ್ಧವಾಗುವವರೆಗೆ ಕಾಯಿಸು ; ತಿಳಿಯಾಗುವಂತೆ ಕಾಯಿಸು : ಕಾಬೊರ್ನ್ನ ತಿಳಿಗಾಸುತ್ತ ಜಲದೊಳಿದ್ದುವ ತೆರದಿ ಚಾಯಿ ಚಲ್ರೆಂದೆನುತೆ (ನವಮೋ. ೬-೫೯). [ ತಿಳಿ$_2$ + ಕಾಸು$_1$ ]

**ತಿಳಿಗೇಡಿ** (ನಾ). ಅರಿವಿಲ್ಲದವನು ; ಬುದ್ಧಿಗೇಡಿ ; ಅವಿವೇಕಿ : ಜಡರು ನಿನ್ನವೊಲಾರು ಪೊಡವಿಲಿ ಗೆಡಹದಿರು ತಿಳಿಗೇಡಿ ನೀ ಹೋಗೆಂದ ದಶಕಂಠ (ಕೌಶಿರಾ. ೨೪-೨೯) ; ತಿಳಿಗೇಡಿ ಕಂದನು ಕೇಳದಲೆ ಬೆಟ್ಟದ ಕೊಳ್ಳ ಕಮರಿಯೆಡೆ ಹೊರಳಿದನು (ಸಿದ್ಧಪು. ೫-೭೦) ; ಈ ಜನರು ಎಂಥಾ ತಿಳಿಗೇಡಿಗಳು (ಮುಂಬಯಿ. ೪-೨೦). [ತಿಳಿ$_2$ + ಕೇಡಿ$_1$]

**ತಿಳಿಗೇಡಿತನ** (ನಾ). ಮೂರ್ಖತನ ; ಅವಿವೇಕ : ಕೈಯಲ್ಲಿ ಹಿಡಿಯ ಬಹುದಾದುದಕ್ಕೆ ತಲೆಯನ್ನು ಕೊಡುವುದು ತಿಳಿಗೇಡಿತನ (ದಾಲುತ್ತಿ. ೦೮); ಪತಂಗವು ತಿಳಿಗೇಡಿತನದಿಂದಲೇ ದೀಪದ ಮೇಲೆ ಬಿದ್ದು ಸುಟ್ಟುಕೊಂಡು ಸಾಯ್ಯುವುದು (ಬ್ರಹ್ಮಜೀ. ೩೦). [ ತಿಳಿಗೇಡಿ + – ತನ ]

**ತಿಳಿಗೈ** (ಕ್ರಿ). ಚೊಕ್ಕಗೊಳಿಸು; ಶುದ್ಧಗೊಳಿಸು ; ಸ್ವಚ್ಛಮಾಡು: ಅನಂತು ಅದನ್ನು ಮರಳಿ ತಿಳಿಗೈಯಲು ಎಷ್ಟೊಂದು ಯತ್ನಿಸಿದರೂ ಸಾಧ್ಯವಾಗಲಿಲ್ಲ (ಒಡ್ಡಿಉ. ೧೦೫). [ ತಿಳಿ$_2$ + ಗೈ (< ಕೆಯ್$_1$) ]

**ತಿಳಿಗೊಳ** (ನಾ). ಚೊಕ್ಕವಾದ ನೀರುಳ್ಳ ಸರೋವರ; ಶುದ್ಧವಾದ ನೀರಿನ ಕೊಳ : ತಿಳಿಗೊಳನಂ ಪೋಲ್ತಿರ್ದುಂ ತಿಳಿಯದಿದೇನೆಂಬುದುಂ (ಕವಿರಾ. ೦-೮೯) ; ಸುಭದ್ರೆ ... ಅಲರಿಂ ತುಂಬಿಗಳಿಂ ತಣ್ಣೆಲರಿಂ ತುಂಬಿದ ತಿಳಿಗೊಳದಿನೆಸೆವ ಬನಮಂ ಪೊಕ್ಕಳ್ (ಪಂಪಭಾ. ೫-೨) ; ತಿಳಿದ ತಿಳಿಗೊಳದ ತಳಿತ ತಾವರೆಯುರಳ ತಂಡುಲದ ರುಚಿಯ ಕಳಹಂಸೆ ಬಯಸುವಂತೆ (ಅದವ. ೧೬-೩೬) ; ತೊಳತೊಳಗಿ ಹೊಳೆವ ತಿಳಿಗೊಳನ ತಡಿವಿಡಿದು (ಹದಶಾ. ೩-೪೪) ; ಲಲಿತ ತನುಕಾಂತಿಗಳ ಮೊಗೆದರು ತಿಳಿಗೊಳನ ಜಲವೆಂದು (ಕುವ್ಯಾಅ. ೦೦-೨೮) : ತಿಳಿಗೊಳಂಗಳೊಳಲರ್ದ ಪೊಚ್ಚ ಪೊಂದಾವರೆ (ಕ್ರಮಿಥಾ. ೩-೮): ಸ್ಫಟಿಕಶಿಲೆಗಳಿಂ ಕಟ್ಟಿರುವ ಮೆಟ್ಟಿಕೆಗಳನ್ನೊಳಕೊಂಡ ತಿಳಿಗೊಳಂ (ಸೌಗಂಧಿ. ೪-೦೭). [ ತಿಳಿ$_2$ + ಕೊಳ$_2$ ]

**ತಿಳಿಗೊಳು, ತಿಳಿಗೊಳ್ಳು** (ಕ್ರಿ). ೧. ಸ್ವಚ್ಛವಾಗು ; ಶುದ್ಧವಾಗು ; ತಿಳಿಯಾಗು : ಮಳೆಗಾಲದೊಳು ನೀರು ಕದಡಿತೆಂದಳಲೇಕೆ ತಿಳಿಗೊಳುವುದು ನೀರು ಮುಂದೆ (ಇಂಜಾಪ. ೨೦೦-೮೮). **ತಿಳಿಗೊಳ್ಳು** : ೨. ಅರಿತುಕೊಳ್ಳು; ಅರ್ಥಮಾಡಿಕೊಳ್ಳು : ತನ್ನನೆ ತಾನೇ ತಿಳಿಗೊಂಡಂತೆ ಶಿವನ ಶಕ್ತಿಯೇ ಎಳೆಗೊಂಡಂತೆ (ಸೂರ್ಯಪಾ. ೩೨-೯). [ ತಿಳಿ$_2$ + ಕೊಳು (< ಕೊಳ್$_1$) ]

**ತಿಳಿಗೊಳ್ಳು** 'ತಿಳಿಗೊಳು' ನೋ.

**ತಿಳಿಜಲ** (ನಾ). ಶುಚಿಯಾದ ನೀರು : ತೆರೆ ಪರಂಪರೆ ತೊರೆದು ಹರಿಯುವ ಹೊನಲಿಗಲ್ಲದೆ ಜೀವನ ? ನೊರೆಯು ಸರಿಸುತ ಬದಿಗೆ ತಿಳಿಜಲವೀಂಟಿ ಸ್ಫೂರ್ತಿಯ ಕೇತನ (ನಂಮು. ೫೩-೦೮). [ ತಿಳಿ$_2$ + ಜಲ$_2$ ]

**ತಿಳಿಜೊನ್ನ** (ನಾ). ಸ್ವಚ್ಛವಾದ ಬೆಳುದಿಂಗಳು : ಸಡಗರದಿಂ ಪಗಲೆಂಬಂತೊಪ್ಪಂಬಡೆದಿಳೆಯುಂ ತೀವಿತು ತಿಳಿಜೊನ್ನಂ (ಜಯಕಾ. ೦೪.೧೫); ತಿಳಿಜೊನ್ನದ ನಟ್ಟನಡುವೆ ಸಂಪೂರ್ಣೇಂದು ಥಳಿಥಳಿಸುವ ಮಾಳ್ಕೆಯೊಳ್ಪ (ಕುಹಾಸಾಂ. ೫-೨೦) ; ತನ್ನ ಮಹಾಮನೆಯ ಪ್ರಾಂಗಣದಲ್ಲಿ ಮಂಡಿಸಿ ಹುಣ್ಣಿಮೆಯ ತಿಳಿಜೊನ್ನದ ಸವಿಸೋಂಕಿನ ಸುಖವನ್ನು ಅರ್ಧನಾರೀಶ್ವರನಿಗೆ ಅರ್ಪಿಸುತ್ತಿದ್ದಾರೆ (ಹುಂಗಳ. ೮೩). [ ತಿಳಿ$_2$ + ಜೊನ್ನ ]

**ತಿಳಿತಳ** (ನಾ). ತಂಪು : ಈ ಮಂತ್ರಮನುಚ್ಚರಿಸುತ್ತ ಮುಚ್ಚಿದ ಕಣ್ ಚಂದ್ರಕರಸ್ಪರ್ಶದಿಂದೆ ತಿಳಿತಳಮಪ್ಪುದುಂ (ಚಕವಿ. ೬-೨೦೫ ವ). [ ? ]

**ತಿಳಿದುಪ್ಪ** (ನಾ). ಕರಗಿದ ತುಪ್ಪ ; ದ್ರವವಾದ ತುಪ್ಪ : ಶ್ರಾವಕರಪ್ಪವರ್ಣರಿದು ನಿಶ್ಚಯದಿಂ ಮುನಿಗಳ್ಗೆ ಕೂರ್ತು ನಾನಾವಿಧ ಭಕ್ಷ್ಯದಿಂ ಪಲವು ಬಾಡುಗಳಿಂ ತಿಳಿದುಪ್ಪದಿಂ ಸಮಂತಾವಗಮಿಾವರೊಳ್ಳುಣಿಸಂ (ಧರ್ಮಾಮೃ. ೪-೦೦೦) : ಗಟ್ಟಿದುಪ್ಪಕ್ಕೆ ತಿಳಿದುಪ್ಪಕ್ಕೆ ಭೇದವುಂಟೇ ಅಯ್ಯ (ಮಹಾದೇ.ಬ. ೭೩-೦೮೦) : ಎಳೆಮಿಂಚನೆೞೆವಂತೆ ತಿಳಿದುಪ್ಪವೆೞೆದಳು (ಭರತ. ೦೦-೨೯) : ಆವರೆ ತಂದವರಟ್ಟು ಅವರಿಕ್ಕಿ ಇವರುಣಲು ಅವರೆ ತಿಳಿದುಪ್ಪವೆೞೆದಿಹರೆ ಇವರಿಂಗೆ ಅವರೆ ತಾಯ್ತಂದೆ (ಸರ್ವಜ್ಞ. ೬೦೧). [ ತಿಳಿ$_2$ + ತುಪ್ಪ ]

**ತಿಳಿನಗೆ** (ನಾ). ಶುಭ್ರವಾದ ನಗೆ ; ಕಪಟವಿಲ್ಲದ ನಗೆ : ಮುಖದಲ್ಲಿ ಯಾವಾಗಲೂ ತೇಲಾಡುತ್ತಿದ್ದ ತಿಳಿನಗೆಯು ಜಾರಿ ಮ್ಲಾನತೆಯು ನೆಲಸಿತ್ತು (ಚಿತಸ. ೦೭೦). [ ತಿಳಿ$_2$ + ನಗೆ ]

**ತಿಳಿನಿದ್ರೆ** (ನಾ). ತೆಳುವಾದ ನಿದ್ರೆ ; ಗಾಢವಲ್ಲದ ನಿದ್ರೆ ; ಲಘುವಾದ ನಿದ್ರೆ : (೬). [ ತಿಳಿ$_2$ + ನಿದ್ರೆ ]

**ತಿಳಿನೀರ್, ತಿಳಿನೀರು** (ನಾ). ೧. = ತಿಳಿಜಲ : ಆ ಮರಕತವರ್ಣಂ ಕರಿಕಿತ ಪರಿಘದಿನೊಡನೊಡನೆ ತುಳುಕಿದಂ ತಿಳಿನೀರಂ (ಆದಿಪು. ೦೪-೦೦೭) ; ತಿಳಿನೀರ ತುಂತುರ್ವನಿಗಳಂ ಪೊರೆದೆಳವಾೞೆಯ ಸುೞೆಯ ಬಿಜ್ಜಣಿಗೆಗಳನಡಿಗಡಿಗೆ ಬೀಸಿಯುಂ (ಕಾದಂಪೂ. ೮೫೫) ; ಅಂತು ರಾಗರಸದಿಂ ಪೊಂಗಿ ತಡೆದು ತಿಳಿನೀರನುಂಡುದೆಂಬ ನಾಟ್ನುಡಿಯಂತೆ (ಧರ್ಮಾಮೃ. ೬-೮೨) ; ತಿಳಿನೀರಿಂದಂ ತೆಂಗಂ ಬಳೆಯಿಸೆ ನರನದಿಯಿನೊಸರ್ವ ತಿಳಿನೀರಿಂದಂ ಬಳೆಯಿಸೆ ತೆಂಗೊಪ್ಪಿದವವಿರಳಮೊಂದಱ ಕಡವನೊಂದು ನೀಗುವ ತೆಱದಿಂ (ಪಾರ್ಶ್ವಪು. ೯-೦೦). **ತಿಳಿನೀರು** : ೧. ಪೊೞೆವಾಱ ಪುಳಿನದ ತನುಚ್ಛವಿಯ ತಿಳಿನೀರ ಮೆೞೆವ ಮಧ್ಯದ ಮೃಣಾಳದ ಬಗೆಯ ಭೇದಮಂ ಕುಱುಪಿಡು ಪೊಡರಿಂದೆನಲ್ಸರಸಿಯೊಳ್ತರಳೆಯರ ಜಲಕೇಳಿ ಕಣ್ಗೆಸೆದುದು (ಕ್ರಮಿಥಾ. ೩೦-೬) ; ಕೆಂದಾವರೆಯ ಪೊಟ್ಟಣದೊಳು ತಿಳಿನೀರ ತಂದು ರಂಗೇಶನ ಮೇಲೆ . . . ಬಂಧುರದಿಂದ ಸೂಸಿದರು (ಕಂನವಿ. ೨೫-೦೨೦) : ತಿಳಿನೀರುಗಳಿಂದ ಕರಚರಣಂಗಳಂ ತೊಳೆದು (ಸೌಗಂಧಿ. ೦೯೫-೦೯) : ತೆಂಗಿನಕಾಯ ತಿಳಿನೀರ ತಕ್ಕೊಂಡು ಬಂಗಾರ ಮಾರಿ ತೊಳೆದೇನ (ಗರತಿ. ೮೬). ೨. ಮೊಸರು, ತುಪ್ಪ, ಗಂಜಿ ಮುಂತಾದುವುಗಳ ಮೇಲಿನ ತಿಳಿ,— ಮಂದವಲ್ಲದ ಭಾಗ : ಅಂಬಿಲದ ತಿಳಿನೀರಿನಲ್ಲಿ ಅರಿಸಿನವನ್ನರೆದು ಪಾನ ಮಾಡಿಸಲು ಶೀತಜ್ವರ ಕೆಡುವುದು (ಸಕಪ್ಯ. ೬೩) : ಮಸ್ತು=ಮೊಸರಿನ ಮೇಲಿನ ತಿಳಿನೀರು (ಗಂಗಾಮ. ೨೫೩). [ ತಿಳಿ$_2$ + ನೀರ್$_1$ ]

**ತಿಳಿನೀರು** 'ತಿಳಿನೀರ್' ನೋ.

**ತಿಳಿನೀಲಿ** (ನಾ). ತೆಳುವಾದ ನೀಲಿಬಣ್ಣ: ತಿಳಿನೀಲಿ ಬಾನೊಳು ಬೆಳ್ಳನೆ ಮುಗಿಲೊಂದು ಮೆಲ್ಲನೆ ತೇಲುತಲಿಹುದು (ಇಂಜಾಪ. ೯೬-೭೦). [ ತಿಳಿ$_2$ + ನೀಲಿ ]

**ತಿಳಿನುಡಿ** (ನಾ). ಸ್ವಚ್ಛವಾದ ಭಾಷೆ ; ಸರಳವಾದ ನುಡಿ : ಕನ್ನಡ ಶಬ್ದಸಂಪತ್ತನ್ನುಳಿಸಿ ಕನ್ನಡಿಗರ ತಿಳಿನುಡಿಯಾಗಿ ಬೆಳೆಯಿಸಲು ಈ ಕೃತಿಯು ಸಹಾಯಕವಾಗಬಹುದು (ಕಾಂಶಾರ. ೧೦ ಮುನ್ನುಡಿ). [ ತಿಳಿ$_2$+ನುಡಿ$_2$ ]

**ತಿಳಿಪು$_1$, ತಿಳಿಹು, ತಿಳುಪು$_1$, ತಿಳುಹು$_1$** (ಕ್ರಿ). ೧. ಶುಭ್ರವಾಗು ; ತಿಳಿಯಾಗು : ತಿಳಿಪುವೊಡೆ ವೊಗ್ಗೆ ಮುದ್ದುಂ ಕಳಂಕಮುಂ ತಿಳಿಯದಿರ್ಪ ದೆಸೆಗಳುಮಂ ನೀರ್ಗಳುಮಂ ತಿಳಿಪಿದ ಸರಮುಂ ತಿಳಿಪಿದುದೆ ಕಳಂಕಗತಿಯ ನಮೃತದ್ಯುತಿಯಂ (ಲೀಲಾವ. ೧೪-೫೧). ೨. ಸಮಾಧಾನ ಪಡಿಸು ; ಸಾಂತ್ವನಗೊಳಿಸು ; ಶಾಂತಗೊಳಿಸು : "ತಿಳಿಪು–ಕ್ರೋಧೋತ್ಸರ್ಜನೇ (ಕೋಪವನ್ನು ಬಿಡಿಸು)" (ಕಮಧಾ) ; ತಿಳಿಪಲಡಿಗೆಱಗಿದೋಪನ ತಳಂಗಳಾ ತೀಟದಿಂ ಪದಂಗಳೊಳೊಗೆದಾ ಪುಳಕಚಯಂಗಳ್ ಕಳೆದುವು ಮುಳಿಸಂ (ಕವಿರಾ. ೩-೧೧೯) ; ಪುರುಡಿಸಿ ಮುಳಿದಿರ್ದ ಮಹಾದೇವಿಯುಂ ತಿಳಿಪಲೆಂದು ಕಾಲ್ಗೆಱಗೆ (ಪಾವುಂಪು. ೮೫-೦೩); ವನಿತೆಯರೊಲವಿನ ಕಲಹದ ಮುನಿಸುಗಳಂ ತಿಳಿಪುವೆಡೆಯೊಳತಿಚತುರಂ (ಕಾದಂಪೂ. ೫೬) ; ಇಂತಪ್ಪವಸ್ಥೆಯಿಂದಿವಳಿಂ ತಿರೆಯುಂ ದುರ್ವಿದಗ್ಧವೆನ್ನ ಮನಂ ಮತ್ತೆಂತುಂ ನಂಬಿದುದಿಲ್ಲಾನಿಂ ತಿಳಿಪೆಂ [ ಪೆಂ ] ನಿಪುಣವಚನದಿಂ ಕಾಮಿನಿಯುಂ (ಕಾದಂಉ. ೨೪೨) ; ಮುಕುಂದಂ ತದಿಂದುವದನೆಯಂ ಪೆಱವೊಳ್ನುಡಿಗಳಿಂ ತಿಳಿಪಿ (ನೇಮಿಪು. ೮-೩೮೪) ; ಬಱಿದೆ ಮುಳಿದು ತಿಳಿಪೆ ತಿಳಿದು ನೆರೆವ ಬೇಡವೆಂದಿರಿಂ (ಕಬ್ಬಿಕಾ. ೨೦೮) : ನುಡಿಯಲಿಲ್ಲದಹಂಗೆ ಹೆದುಳಿಸಿ ಕಡೆಯೊಳಾಂ ತಿಳಿಪಿ [ಪಾಠಾಂ. ತಿಳುಹಿ]ದಪೆನೆಲೆ ನೀ ನಿದ್ರೆಗೆಯ್ಯುತಿರು (ಬಸಪು. ೪೭-೨೨) : ಮುನಿದೊಡೆ ಕಡುತವಕದಿಂ ತಿಳಿಪುವಂ (ಚಬಪು. ೧೦-೨೯). ೩. ಸಂತುಷ್ಟಿಪಡಿಸು ; ತೃಪ್ತಿಗೊಳಿಸು ; ಮುದಗೊಳಿಸು : "ಪ್ರಸಾದಃ, ಪ್ರಣಯಃ– ಈ ೨ ತಿಳಿ(ಪು)ಹುವುದು" (ಹಲಾಯು. ೧೨೭-೮೮) ; ಜಲನಿಧಿಯಂ ಮುಗಿಲ್ವನಿಗಳಿಂದಮಗುರ್ವಿಸುವಂತೆ ನಿಮ್ಮನಾಂ ತಿಳಿಪಿದಪೆ ಗಡ (ಕಾದಂಉ. ೪೨೬) ; ಅಗಜೆಯಂ ತಿಳಿಪಿದಮರಗುಂಡದ ಮಲ್ಲಿನಾಥ ಶರಣು (ಭಾವಚಿಂ. ೨-೧). ೪. ತಿಳಿಸು ; ಸ್ಪಷ್ಟಪಡಿಸು ; ವಿಶದೀಕರಿಸು : ಅವರಂ ತಿಳಿಪಲಾಱದೆ ಮತ್ತೆ ಪೂರ್ವವಿದೇಹಕ್ಕೆ ಪೋಗಿ ... ಭಟಾರರ್ಗೆ ಪೇೞ್ದು (ವಡ್ಡಾರಾ. ೧೦೪-೨೦) ; ಉಳ್ಳೋದುಗಳೊಳಗೆನಿತಱಿವುಳ್ಳರ್ಗಂ ತಿಳಿಪಲರಿಯದೆನಿಪೆಡೆಗಳುಮಂ ತೆಳ್ಳಗಿರೆ ತಿಳಿಪುಗುಂ (ಶಂಕಥಾ. ೨-೩೫); ಸ್ಥಾವರಾದ್ಯನ್ಯಲಿಂಗದ ಭಜನೆಯು ಮುನ್ನಮೇ ಬಿಡಿಸಿ ಷಟ್ಸ್ಥಳಮಾರ್ಗಮಂ ತಿಳಿಪಿ (ಚಬಪು.೧-೦೩). ೫. ಕಲಿಸು ; ಹೇಳಿಕೊಡು ; ಶಿಕ್ಷಣಕ್ಕೊಳಪಡಿಸು : ಇವರಂ ನೀತಿವಿದರಪ್ಪಂತು ತಿಳಿಪುವಂದು ಮುದುಗುದುರೆಯುಂ ತಿರ್ದುವಂತಕ್ಕುಂ (ಪಂಚತಂ. ೧೭-೧೦); ಇದು ಶಬ್ದಾಗಮನಿರ್ಣಯಂ . . . ಇಂತಿದು ಮರ್ಮಂ ಕಲೆಗಾಗಮಾನ್ವಯಮಿದೆಂಬಾಮ್ನಾಯದಿಂ ದಾರಕ ತ್ರಿದಶ ಪ್ರಶ್ನಕರಾಗೆ ತಾಂ ತಿಳಿಪುವಂ ತ್ರಿಜ್ಞಾನರತ್ನಾಕರಂ (ಅನಂಪು. ೬-೧೧) ; ಮತ್ಸ್ಯಭೂವರ ಕುಮಾರಿಗಂ ತಿಳಿಪುತಿರ್ದನು ನೃತ್ಯಮನಾ ಕಿರೀಟಿ (ಪಂಚಕ. ೬೮-೦೮). ೬. ಜ್ಞಾಪಕಮಾಡು ; ನೆನಪಿಗೆ ತರು : "ಜ್ಞಾಪಯತಿ=ತಿಳಿಪಿದಪಂ" (ಕಾಶಕ್ಕ. ೦೪೨). **ತಿಳಿಹು** : ೪. ಮಂಗಳೋದಯಲಿಂಗಕರತಳಸಂಗತ ಸ್ಥಿತಿಯಂ ತಿಳಿಹಿಯಾಸಂಗದುಃಪ್ರಾಪಂಚಿಕಾಶಾಬಂಧವಂ ಪಱಿದು (ಬಸಪು. ೪೯-೩೩). **ತಿಳುಪು$_1$** : ೨. ಕಿನಿಸಿ ಕಡುಪಿನಿಂದಂ ನದುಗಿದವುದು ತಿಳಿಯದೆಂತುಮಾರ್ತಿಳು [ ಪಾಠಾಂ. ೪ ] ಪಿದೊಡಂ ( ಕಾ ದ ಂ ಉ. ೬೬) ; ಅಂಗಜಾತನ ಮಡುಹಿದನೆಂದು ಪಾರ್ವತಿ ಸಂಗೆಕೇಱದಿರಲು ತಿಳುಪಿ ಹೊಂಗೊಡದೊಳು ನೀರ ಹೊತ್ತ ಧೂರ್ಜಟಿಯಂತೆ ತೆಂಗಾಯ ಮರಗಳೊಪ್ಪಿದುವು (ಮೋಹತ. ೨೪-೪೨). ೪. ನಿರ್ಮಳದ ಧರ್ಮಸ್ಥಿತಿರಹಸ್ಯವ ತಿಳುಪಿದವರಾರೆನುತ ತಲೆದೂಗಿದನು ಮುರವೈರಿ (ಕುಮ್ಯಾಕ. ೦೭-೦೨). **ತಿಳುಹು$_1$** : ೨. ದೇವಪ್ರಸರವನು ತಿಳುಹಿದನು ಕಾರುಣ್ಯದಲಿ ಕಾಮಾರಿ (ಕುಮ್ಯಾಕ. ೬-೩೦) : ಕುಳಿರುವೆಟ್ಟನ ಕುವರಿಯು ಶ್ರೀಪದಯುಗನಳಿನ ಸುಗಂಧವಿದ್ದೆಡೆಗೆ ಅಳಿ ಬಂದೆಱಗುವಂತೆಱಗಲ್ಕೆ ತೆಗೆದಪ್ಪಿ ತಿಳುಹಿದಳವಳ ದುಕ್ಕವನು (ಮೋಹತ. ೮-೪೬). ೩. ಲಲನೆಯುಂ ... ತಿಳುಹಿ ಮಱಹಾದಲ್ಲಿ ಜಾಣ್ಮೆಯನಲರಿಸುಕ್ರೋಯ್ಯಾರದಲಿ ಸುಳಿಸುಳಿದು (ಬಸಪು. ೪೨-೦೬) : ವೇದವ್ಯಾಸದೇವರು ... ಕಾಲಜ್ಞಾನವಾದುದನು ತಿಳುಹಲೋಸುಗ ತಮ್ಮಯಾಶ್ರಮಂ ನೆಲೆಯ ಠಾವಿಂದಾಗ ಬಂದರು (ಸಂಳಪ. ೩-೨) : ತಿಳುಹಿ ಹೋದರು ಮುನಿಗಳೀತನ ತಿಳಿವು ತೊಟ್ಟುದು ಮಱವೆಯನು (ಕುಮ್ಯಾದ್ರೋ. ೧೮-೬೪).

[ ತಿಳಿ$_1$ + – ಪು$_1$ ]

**ತಿಳಿಪು$_2$, ತಿಳುಪು$_2$, ತಿಳುಹು$_2$** (ನಾ). ೧. ಗಟ್ಟಿಯಲ್ಲದುದು ; ನೀರಾದುದು : ತಿಳಿ [ಪಾಠಾಂ. ಳು] ಪಿನಂಬಿಲಕುಪ್ಪು ನೀರುಳ್ಳಿ ಹಸಿಯಲ್ಲಗಳನು ಸೋದಿಸಿ ಹಾಕಿ (ಸೂಪಶಾ. ೩-೩೩). **ತಿಳುಪು$_2$** : ೨. ತೆಳುವು ; ತೆಳುವಾದುದು. 'ತಿಳಂಪೇಱು' ಪರಾ. **ತಿಳುಹು$_2$** : ೩. ಸ್ವಚ್ಛತೆ ; ಶುಚಿತ್ವ : ನೀರ ದಾರಿಯಲ್ಲಿ ನೀರ ತಿಳುಹ ನೋಡಿ (ಶಿವಗೀ. ೧೪೬-೬೪೮). ೪. ಜ್ಞಾನ ; ತಿಳಿವಳಿಕೆ : ನಡವಳಿಯಲಧಮನೆ ನೀನು ಶಿವಪೂಜಾಪ್ರಸಿದ್ಧನಲ ತಿಳುಹಿ [ಪಾಠಾಂ. ತಿಳಿವಿ]ನಲಿ ಬಱಿಡನೆ ಬಹುಶ್ರುತಿಗಳು ಮುಖೋದ್ಗತ ನಿನಗೆ (ತೊರರಾ. ೬-೨-೨೪). [ <ತಿಳಿಪು$_1$ ]

**ತಿಳಿಬಗೆ** (ನಾ). ಶುದ್ಧವಾದ ಅಂತಃಕರಣ ; ನಿಷ್ಕಪಟವಾದ ಮನಸ್ಸು : ಕಾವ ತಿಳಿಬಗೆಯಿರ್ಪ ನಾಡ ಹೆಣ್ಣಲ್ಲಿ (ಕಾಂಶಾರ. ೨೬-೦೫).

[ ತಿಳಿ$_2$ + ಬಗೆ$_3$ ]

**ತಿಳಿಬಣ್ಣ** (ನಾ). ತೆಳುವಾದ ಬಣ್ಣ ; ನಸುಬಣ್ಣ : "ಹೂಬಣ್ಣ ತಿಳಿ ಬಣ್ಣ" (ಗಂಗಾಮ. ೩೫೧). [ ತಿಳಿ$_2$ + ಬಣ್ಣ ]

**ತಿಳಿಬೆಳಕು** 'ತಿಳಿವೆಳಗು' ನೋ.

**ತಿಳಿಬೆಳಗು** 'ತಿಳಿವೆಳಗು' ನೋ.

**ತಿಳಿಬೆಳುದಿಂಗಳು** (ನಾ). ಶುಭ್ರವಾದ ಬೆಳುದಿಂಗಳು ; ಶುಭ್ರ ಜ್ಯೋತ್ಸ್ನೆ : ನೀನು ಚೆಲುವೆಯರರಸಿ ತಿಳಿಬೆಳುದಿಂಗಳ ತಿರುಳ ಪುತ್ಥಳಿ ! (ತುಂಗಭ. ೮೫). [ ತಿಳಿ$_2$ + ಬೆಳುದಿಂಗಳು (<ಬೆಳ್ದಿಂಗಳ್) ]

**ತಿಳಿಮಜ್ಜಿಗೆ** (ನಾ). ನೀರಾದ ಮಜ್ಜಿಗೆ : ಪಾತ್ರೆಯಲ್ಲಿ ತಿಳಿಮಜ್ಜಿಗೆ ಇದೆ (ರೂಢಿ). [ ತಿಳಿ$_2$ + ಮಜ್ಜಿಗೆ ]

**ತಿಳಿಮಣ್ಣು** (ನಾ). ಸೂಸಂಮಣ್ಣು ; ರೇವೆಮಣ್ಣು ; ವೆಂಕ್ಕಲು : ಜಗವೆಲ್ಲ ತೊಯ್ದು ಹೋಗಿದೆ, ತಿಳಿಮಣ್ಣು ತೇಲಿಹೋಗಿದೆ (ನಲಮು. ೦೬-೨೨).

[ ತಿಳಿ$_2$ + ಮಣ್ಣು (< ಮಣ್) ]

**ತಿಳಿಮುತ್ತು** (ನಾ). ಶುಭ್ರವಾದ ಮುತ್ತು ; ಚೊಕ್ಕವಾದ ಮುತ್ತು ತಳತಳಿಪ ವಜ್ರಗಳ ಗಣಿಗಳಿಂದೆಸೆವ ತಿಳಿಮುತ್ತುಗಳ ನಗೆಯು ಬೆಳಕಿಂದ ಹೊಳೆವ (ಕವಿಪು. ೪೭-೫). [ ತಿಳಿ$_2$ + ಮುತ್ತು$_6$ ]

**ತಿಳಿಮೆ** (ನಾ). ೧. ಸ್ವಚ್ಛವಾಗಿರುವಿಕೆ ; ಶುದ್ಧವಾಗಿರುವಿಕೆ : ಮಣಗೆಯೊಳು ಮದವಳಿದು ಋಣಗಳೆಲ್ಲವ ನೆನೆದು ತಿಳಿಮೆಯೊಳು ಹರಿವೆನ್ನ ಚೇತನದ ಜತೆಗೆ (ಮುಳಿದೀ. ೨೧-೪). ೨. ತಿಳಿವಳಿಕೆ ; ಅರಿವು ; ಜ್ಞಾನ : ಕ್ಲಾಂತಿಯೊಳಂ ನಿನ್ನ ಕಡುಸಂತಸದ ತಿಳಿಮೆಗಿನ್ನೆಂತು ನಿನ್ನಯ ಬಳಿಗೆ ತನ್ನ ನೆಳಲಂ ಚಿಂತೆ ಸಾರ್ಚಿತು (ಗೀವಿಂ. ೭-೯೨). [ ತಿಳಿ$_2$ + – ಮೆ$_1$ ]

**ತಿಳಿಮೆಗೊಳ್ಳು** (ಕ್ರಿ). ಸ್ವಚ್ಛವಾಗು ; ಶುದ್ಧವಾಗು : ಆ ಕಾರಣದಿಂದಲೇ ವಿಷಯೋದ್ಭವವಾದ ಜುಗುಪ್ಸೆಯೂ ಕಾವ್ಯದಲ್ಲಿ ತಿಳಿಮೆಗೊಂಡು ಭೋಗ್ಯ ರಸ ಪದವಿಗೇರುತ್ತದೆ (ಕಾವ್ಯಕು. ೩).

[ ತಿಳಿಮೆ + ಕೊಳ್ಳು$_1$ (< ಕೊಳ್$_1$) ]

**ತಿಳಿಮೆಯಡಿಕೆ** (ನಾ). ಜ್ಞಾನದ ದಾಹ ; ಅರಿವಿನ ಆಸೆ : ಆ ಕ್ವಚಿದ್ದರ್ಶನದೊಳಹುದೆಲ್ಲ ಚೇತನಕು ರಸದ ನೀರಡಿಕೆ ಅದರಿನೀ ದುಃಖಿಸಮುದ್ಯವನಮನಂ, ಅದರಿನೀ ತಿಳಿಮೆಯಡಿಕೆ (ಮುಳಿದೀ. ೨೩-೧೦). 'ನೀರಡಿಕೆ$_1$' ಪರಾ. [ < ತಿಳಿಮೆ ]

**ತಿಳಿಯಿಡು** (ಕ್ರಿ). ಶುದ್ಧಗೊಳಿಸು ; ಹಸನುಗೊಳಿಸು : ಪೂಗೊಳನಂ ತಿಳಿಯಿಟ್ಟು ನೀರ್ವಕ್ಕಿಗಳಂ ನೆಲೆವೆರ್ಚಿಸುತ್ತುಂ (ಗಿರಿಕ. ೬-೪೨ ವ). [ ತಿಳಿ$_2$ + ಇಡು$_1$ ]

**ತಿಳಿಯೆಣ್ಣೆ** (ನಾ). ಅಪ್ಪಟವಾದ ಎಣ್ಣೆ ; ಶುದ್ಧವಾದ ಎಣ್ಣೆ : ನೇಜಿಲ ಪಣ್ಣಂ ತಿಳಿಯೆಣ್ಣೆಯೊಳ್ ಬಯಸಿ ತೊಯ್ದಂತಪ್ಪ ನುಣ್ಣಪ್ಪ (ಕಾವ್ಯಾವ. ೩೦೬). [ ತಿಳಿ$_2$ + ಎಣ್ಣೆ ]

**ತಿಳಿರಕುತ** (ನಾ). ಶುದ್ಧವಾದ ರಕ್ತ ; ಹೊಸರಕ್ತ : ಎಲೆ ಮರುಳೆ ನಿನ್ನೊಡಲ ಸೀಳಿಯ ತಿಳಿರಕುತದಲಿ ತಾಯ ತುರುಬನು ನಾದಿಸುವೆನೆಂದ (ಕುವ್ಯಾದ್ರೌ. ೫-೪೪). [ತಿಳಿ$_2$ + ರಕುತ]

**ತಿಳಿರಸ** (ನಾ). ಶುದ್ಧವಾದ ದ್ರವ ; ನಿರ್ಮಲವಾದ ರಸ : ಎಳನೀರ್ಗಳ ತನಿಗರ್ಬಿನ ತಿಳಿರಸದ ... ಬಹುವಿಧದ ಪಾನಂಗಳನಲ್ಲಲ್ಲೆಱೆವರಾ ಪ್ರಪಾಪಾಲಿಕೆಯರ್ (ವೃಷವಿ. ೪-೨೯). [ ತಿಳಿ$_2$ + ರಸ ]

**ತಿಳಿಲು** 'ತಿರುಳ್' ನೋ.

**ತಿಳಿಲುಮಾತು** (ನಾ). ಸಾರವತ್ತಾದ ನುಡಿ ; ತಿರುಳುನುಡಿ : ತಿಳಿಲು ಮಾತಿಲಿ ಬಳಿಗರೆದು ... ತಕ್ಕೈಸಿ (ವಿಷ್ಣೋಸು. ೦೯-೫). [ ತಿಳಿಲು (< ತಿರುಳ್) + ಮಾತು$_1$ ]

**ತಿಳಿವಟ್ಟಲ್** (ನಾ). ಮದ್ಯವನ್ನು ಕುಡಿಯಲು ಬಳಸುವ ಬಟ್ಟಲು ; ಪಾನಪಾತ್ರೆ ; ಚಷಕ : "ಗರ್ಹಕಃ, ಅನುತರ್ಷಃ, ಚಷಕಃ, ಸರಕಃ—ಈ ೪ ತಿಳಿವಟ್ಟಲ್" (ಹಲಾಯು. ೫೪-೧೬೨) ; ಸೊಗಯಿಪ ಘಂಟೆಯುತ್ತಣಿಗೆ ಯಾರುತಿ...ತಿಳಿವಟ್ಟಲೆಸಪ್ಪ ಚಂದನಂ (ಸೌಇಇ. IV, ೨೬೦-೬೫ ; 1199) ; ಕಡುವುಟಿಗಳ್ಳನೊಂದು ತಿಳಿವಟ್ಟಲನಿಟ್ಟೆಱೆಯಲ್ಕೆ (ದಕಳು. ೮-೨೦೪). [ತಿಳಿ$_2$ + ಬಟ್ಟಲ್]

**ತಿಳಿವಡೆ** (ಕ್ರಿ). ಶುಭ್ರತೆಯನ್ನು ಹೊಂದು ; ಶುದ್ಧವಾಗು : ಮುಂದೆ, ಲೌಕಿಕರಸದಿಂದತ್ತ ಸರಿದು ಅಲೌಕಿಕವೆನ್ನಿಸುವ ಮಹಾಬಲನಈ ಸ್ಥಾಯಿಯೇ ಕ್ರಮೇಣ ತಿಳಿವಡೆಯುತ್ತಾ ಹೋಗಿ ಕಡೆಗೆ ತೀರ್ಥಂಕರಭವದಲ್ಲಿ ಅಲೌಕಿಕ ರಸವೆನ್ನಿಸುವುದು (ನಾಡೋಜ. ೩೬೮). [ ತಿಳಿ$_2$ + ಪಡೆ$_1$ ]

**ತಿಳಿವಳಿಕಸ್ತ, ತಿಳುವಳಿಕಸ್ತ** (ನಾ). ವ್ಯವಹಾರಜ್ಞಾನವನ್ನು ಹೊಂದಿರುವವನು ; ಬುದ್ಧಿವಂತ : ಅವನೇನು ಅಂಥ ತಿಳಿವಳಿಕಸ್ತನಲ್ಲ (ರೂಢಿ). **ತಿಳುವಳಿಕಸ್ತ** : ವೆನೀಸ್‌ನಗರದ ಮರ್ಯಾದಸ್ತರೂ, ತಿಳುವಳಿಕಸ್ತರೂ ಆದ ನಿಕೊಲೊಪೋಲೊ ... ಕಾನಸ್ಟಾಂಟಿನೋಪಲಿಗೆ ಹೋದರು (ಪ್ರವಾಇ. II, ೪) ; ಓದುಬರಹ ಕಲಿತು ತಿಳುವಳಿಕಸ್ತನಾದರೆ, ನಿನ್ನ ಬಾಳು ಎಷ್ಟು ಚೆನ್ನಾಗಿ ಆಗ್ತದೋ ನೀನೇ ನೋಡುವಂತೆ (ನಮ್ಮಿಳ್ಳ. ೩೫). [ತಿಳಿವಳಿಕೆ + – ಸ್ತ]

**ತಿಳಿವಳಿಕೆ, ತಿಳುವಳಿಕೆ** (ನಾ). ೧. ಅರಿವು ; ಜ್ಞಾನ : ಅಱಿತದ = ತಿಳಿವಳಿಕೆಯ (ಶಮುದ. ೦೯೬ ಟೀಕ) ; ಚಲೋ ತಿಳಿವಳಿಕೆ ಇರಬೇಕು (ಮುಂಬಯಿ. ೪-೭೪) ; ಎಲ್ಲಿಹುದು ತಿಳಿವಳಿಕೆ ಜೀವನದ ಸಲುವಳಿಕೆ (ನಾದಲೀ. ೬೩-೬). ೨. ವಿವೇಕ ; ವಿವೇಚನಾಜ್ಞಾನ : ಆ ತಿಳಿವಳಿಕೆ ಅವರಿಗೆಲ್ಲಿಯದು (ಅಶ್ರುಮ. ೫೮). ೩. ತಿಳಿಯಬೇಕಾದುದು ; ಸೂಚನೆ : ವಿದ್ಯಾರ್ಥಿಗಳ ತಿಳಿವಳಿಕೆಗಾಗಿ ಇದನ್ನು ಪ್ರಕಟಿಸಲಾಗಿದೆ (ರೂಢಿ). **ತಿಳುವಳಿಕೆ** : ೧. ತಿಳುವಳಿಕೆಗೆ ಸಹಾದೇವ ಸತ್ಯಕ್ಕೆ ಹರಿಶ್ಚಂದ್ರ ಚೆಲ್ವಿಗೆ ಮನ್ಮಥ (ಮ್ಯಆರಿ. ೦೯೩೫, ೨೮-೬ ; 1751) ; ಹಳೆಯ ದೇವಾಲಯಗಳೂ ಶಿಲ್ಪಗಳೂ ... ಅಜ್ಞಜನರ ತಿಳುವಳಿಕೆಯ ಅಭಾವದ ಮೂಲಕವಾಗಿಯೂ ನಾಶವಾಗುತ್ತ ಬಂದಿವೆ (ಮೂರುಉ. ೩ ಮುನ್ನುಡಿ). [ ತಿಳಿ$_2$ + – ವಳಿ$_1$ + – ಕೆ ]

**ತಿಳಿವಳ್ಳಿ** (ನಾ). ಒಂದಂ ಊರಿನ ಹೆಸರುಂ ; P ಧಾರವಾಡ ಜಿಲ್ಲೆಯ ಹಾನಗಲ್ ತಾಲ್ಲೂಕಿನ ಈಗಿನ ತಿಳವಳ್ಳಿ : ಶ್ರೀಮದಗ್ರಹಾರಂ ತಿಳಿವಳ್ಳಿಯ ಸಕಲ ಸಾಸಿರ್ವರ ಬೆಸದಿ...ಪಣವಂ ಬಿಟ್ಟರ್ (ಕಇ. II, ೮-೧೦ ; 1072) : ತಿಳಿವಳ್ಳಿಯುತ್ತರವಸೆಟ್ಟಿ ಕಂಚಯಾನ ಮಲ್ಲಿಸೆಟ್ಟಿ ... ಇಂತಿನಿಬರು ವಿದ್ಧುರ್ಗ ಮೂಲಸ್ಥಾನದೇವರ್ಗೆ ಬಿಟ್ಟ ಧರ್ಮ್ಮ (ಕಇ. I, ೧೯-೦೨ ; 1108). [ ? + ಪಳ್ಳಿ$_1$ ]

**ತಿಳಿವಿಕೆ, ತಿಳುವಿಕೆ** (ನಾ). ಜ್ಞಾನ ; ಅರಿವು : ತತ್ತ್ವವಿದ್ಯೆಯ ತಿಳಿವಿಕೆಯ ಹುಸಿಯೆಂದು ಕಂಡಡೆ ಹಾನಿಯೇ ತನಗೆ (ನಿಭಾಗ. ೫-೧-೧೨೯). **ತಿಳುವಿಕೆ** : ತಿಳುವಿಕಿಲ್ಲದೆ ನೆಲೆಯುಯಿಲ್ಲದೆ ತಿರುಗುವವರು (ಜ್ಞಾನಸಿಂ. ೨೨-೩೦). [ ತಿಳಿವು + – ಇಕೆ]

**ತಿಳಿವಿಗ** (ನಾ). ಅರಿವಿರುವವನು ; ತಿಳಿವಳಿಕೆಯುಳ್ಳವನು ; ಜ್ಞಾನಿ : ಪಾದರಸ ಕರತಳದಲಿರುತದನಂಟದಂದದಿ ತಿಳಿವಿಗರು ಸಂಸ್ಕೃತಿಯಲಿರೆ ನಿರ್ಲೇಪರು (ಗಗತಾ. ೧೫-೨೫). [ ತಿಳಿವು + – ಇಗ ]

**ತಿಳಿವು, ತಿಳುವು** (ನಾ). ೧. ಸಮಾಧಾನಗೊಳ್ಳುವಿಕೆ ; ಸಾಂತ್ವನ ಪಡೆಯುವಿಕೆ ; ಮುಳಿಸು ತಿಳಿಯುವಿಕೆ ; ಕೋಪ ಕಡಿಮೆಯಾಗುವಿಕೆ : "ಪ್ರಣಯಂ ಪ್ರಸಾದವೆನೆ ತಿಳಿವಕ್ಕು" (ಶುಂಗರಾ. ೦೩೪-೬೩) ; ಆಕೆಯ ತಿಳಿವಾಕೆಯ ಮುಳಿಸಾಕೆಯ ಕೂಟವೆ ದಲಿರ್ದುದರಸನ ಮನದೊಳ್ (ಕಾದಂಉ. ೭೭೨). ೨. ಅರಿವು ; ಬುದ್ಧಿ ; ಜ್ಞಾನ ; ತಿಳಿವಳಿಕೆ : ತಿಳಿವಿಲ್ಲದೆ ಶಶಿಕಾಂತದ ಕಳಶಮನೇಕಾಂತೆ ಕಾಂತೆ ನಿನ್ನ ಮುಖೇಂದೂಜ್ವಳ ಕೌಮುದಿಯಿಂದೊಸರ್ದಪುದೀಬಳಿಪೆಂದೊರ್ವ ಮುಗ್ಧೆಯಂ ಸಖಿ ನುಡಿದಳ್ (ಗಿರಿಕ. ೪-೦೨೪) ; ಮುಸುಡ ತಿರುಹಿತು ತಿಳಿವು (ಕುವ್ಯಾಸ. ೦೩-೪೪) : ತಿಳಿವೆ ಶರೀರ ತಿಳಿವೆ ರೂಪು ಬೆಳಗೆ ಮೈಯೊಳಗೆ ತಾನಾಗಿರುತಿಹುದು (ಭರತ. ೦-೧೦೯) ; ಬೇರೆ ಏತಕು ಮಣಿಯೆ ನಾ ಇಗೊ ಬಂತು ತಿಳಿವಿನ ಗಳಿಗೆ (ಅರಳು. ೧೪-೩) ; ಜೀವನದಲ್ಲಿ ನಮ್ಮ ತಿಳಿವನ್ನು ಮರೆಯಿಸಿ ಸರಿಯುವ ಗಳಿಗೆಗಳಿಗೂ ಕಡಿಮೆಯಿಲ್ಲ (ಬಾಳ್ವಿಚಿ. ೧೨). **ತಿಳುವು** : ೨. "ಮನು — ಅವಬೋಧನೇ, ತಿಳುವಿನೊಳ್" (ಕಾಶಕ್ಕ. ೨೪೧) : ದೇವ ಬೆಳಗಿನ ಬೆಳಗೆ ದೇವ ತಿಳುವಿನ ತಿಳುವೆ (ಕಲಿಕಾ. ದೇ. ೨೯೮-೦೮). [ ತಿಳಿ$_1$ + – ವು ]

**ತಿಳಿವುಟ್ಟು** (ಕ್ರಿ). ಅರಿವುಂಟಾಗು ; ಬುದ್ಧಿಬರು ; ಜ್ಞಾನೋದಯವಾಗು : ನಮದಿಂದಂ ತಿಳಿವುಟ್ಟಿರಲ್ಕೆನಗೆ ಪೇಟಲ್ಕೇಳ್ದು ಚಂಡಾಲಜಾತಿಯೊಳೀ ವಾಕ್ಯಮುಮಿಾ ವಿವೇಕಮುಮದೆಂತಾದತ್ತೊ ಪೇಟೆಂದು (ಕಾದಂಉ. ೭೫೬). [ ತಿಳಿ$_2$ + ಪುಟ್ಟು$_1$ ]

**ತಿಳಿವೆಳಕು** 'ತಿಳಿವೆಳಗು' ನೋ.

**ತಿಳಿವೆಳಗು, ತಿಳಿಬೆಳಕು, ತಿಳಿಬೆಳಗು, ತಿಳಿವೆಳಕು** (ನಾ). ನಿರ್ಮಲವಾದ ಪ್ರಕಾಶ ; ಸ್ವಚ್ಛವಾದ ಹೊಳಪು : ಅಕ್ಕ ನೀನೇಳೇಳು ನೇಸಱ ತಿಳಿವೆಳಗುಕ್ಕುತಲಿದೆ ಮೂಡಲಾಗಿ (ಶ್ರೀಪಾಲ. ೨-೨೯) ; ಎಳೆ ಮಿಂಚಿನಂದದ ಬೊಂಬೆಯೊ ತಿಂಗಳ ತಿಳಿವೆಳಗಿನೊಳಾದ ರೂಪೋ (ಭರತ.೨-೬೭) ; ತಿಳಿವೆಳಗಿನ ತಳ್ತೆಳಗಿನ ... ಬೆಳಸಿನ ಸಿರಿಯೆನೆ ತೊಳತೊಳ ತೊಳಗಿದುದು ಮೂರ್ತಿ ಚಂದ್ರಪ್ರಭನಾ (ಶಬ್ದಾನು. ೦೪೦ ವ್ಯಾಖ್ಯಾ). **ತಿಳಿಬೆಳಕು** : ಅಶಾಂತಿಯೆಲ್ಲಾ ಅಳಿದು ಶಾಂತಿಯ ತಿಳಿಬೆಳಕು ದೇಶವನ್ನೆಲ್ಲಾ ತುಂಬಲಿ (ಆಮುಗಾಂ. ೮). **ತಿಳಿಬೆಳಗು** : ತನುವಿನಲ್ಲಿ ಹುಸಿ ತುಂಬಿದ ಕತ್ತಲೆಯ ಕಣ್ಣಿಗೆ ಸತ್ಯದ ತಿಳಿಬೆಳಗು ಕಾಣುವುದು ಅಸಾಧ್ಯವೆಂದೇ ಹೇಳಬೇಕು (ಮೋಳಿವಚ. ೦ ಪ್ರಸ್ತಾವನೆ). **ತಿಳಿವೆಳಕು** : ತಿಳಿವೆಳಕು ರೂಪಾನ ಮುಖವಡರಿ ಒಂದು ಅಭೂತಪೂರ್ವ ಶೋಭೆಯನ್ನು ತಂದಿದೆ (ಜಯಂತ. ೫೦). [ ತಿಳಿ$_2$ + ಬೆಳಗು$_2$ ]

**ತಿಳಿವೊನಲ್** (ನಾ). ನಿರ್ಮಲವಾದ ಹೊಳೆ : ಅಪ್ ತೇಜಗಳು ಬೆರೆದ ತಿಳಿವೊನಲನನುಕರಿಸಿ ನನ್ನೊಳಗು ಬಾಹ್ಯಾಂತರ್ಯಭೇದವಳಿಯೆ (ಮಲಿದೇ. ೨೬-೫). [ ತಿಳಿ$_2$ + ಪೊನಲ್ ]

**ತಿಳಿಸಾರು** (ನಾ). ತೆಳ್ಳಗಿರುವ ಸಾರು : ನಮ್ಮ ಯಜಮಾನ್ರಿಗೆ ಅದರ ತಿಳಿಸಾರು ಮಾಡಿದ್ರೆ ತುಂಬ ಹಿಡಿಸುತ್ತೆ (ರೂಪಸಂ. ೧೨). [ ತಿಳಿ$_2$ + ಸಾರು$_3$ (< ಸಾಱು$_2$) ]

**ತಿಳಿಸು** (ಕ್ರಿ). ಸ್ಪಷ್ಟಪಡಿಸು ; ಅರಿಯುವಂತೆ ಮಾಡು : ಶಿಕ್ಷಕನು ಹುಡುಗರಿಗೆ ಚೆನ್ನಾಗಿ ತಿಳಿಸಿಕೊಡಬೇಕು (ಮುಂಬಯಿ. ೪-೮೪); ದಯವಿಟ್ಟು ತಿಳಿಸೋಣವಾಗಲಿ (ಹಂಗಾಳ. ೦೪೧).

**ತಿಳಿಸಿಕೊಳ್ಳು** = ಶುದ್ಧಮಾಡಿಕೊಳ್ಳು ; ಹಸನುಮಾಡಿಕೊಳ್ಳು : ಕಿಚ್ಚಿಣಿಸದಿನ್ನು ಮನವಂ ತಿಳಿಸಿಕೊಳ್ಳಿಯ್ಯು (ಹರಿಶ್ಚ. ೩೦-೦೨).

[ ತಿಳಿ$_1$ + – ಇಸು$_3$ ]

**ತಿಳಿಸುಣ್ಣ** (ನಾ). ೧. ಸುಣ್ಣ ಅರಳಿದ ಬಳಿಕ ಅದರ ಮೇಲೆ ನಿಲ್ಲುವ ನೀರು ; ಸುಣ್ಣದ ನೀರು : (ಕ). ೨. ಕೆನೆಸುಣ್ಣ : (ಕ).

[ ತಿಳಿ$_2$ + ಸುಣ್ಣ ]

**ತಿಳಿಹು** 'ತಿಳಿಪು$_1$' ನೋ.

**ತಿಳಿಹೇಳು** (ಕ್ರಿ). ಸ್ಪಷ್ಟವಾಗುವಂತೆ ಹೇಳು; ತಿಳಿಸಿ ಹೇಳು : ಬೇರೆ ಬೇರೆ ವಿಷಯಗಳ ಮೇಲೆಯೂ ವಿವರವಾಗಿ ತಿಳಿಹೇಳಿ ಅವರೆಲ್ಲರಲ್ಲಿಯೂ ಆ ವಿಷಯಗಳನ್ನು ತಿಳಿದುಕೊಳ್ಳುವ ಲವಲವಿಕೆ ಹುಟ್ಟಿಸಿದ್ದರು (ಪ್ರಬಂಧ. ೯೪).

[ ತಿಳಿ$_1$ + ಹೇಳು (<ಪೇೞ್) ]

**ತಿಳಿಹೊಳೆ** (ನಾ). = ತಿಳಿಪೊನಲ್ : ಪರಮಶಾಂತಿಯು ಪಡೆದಿಹೆ ; ಪಡೆಯದಿರಲಿಂತಂತು ಹರಿವುದು ರಾಗ ತಿಳಿಹೊಳೆಯಂದದ? (ಇಂಗೀತ. ೦೪-೦೫).   [ ತಿಳಿ$_2$ + ಹೊಳೆ$_4$ (<ಪೊೞೆ$_1$) ]

**ತಿಳುಪು$_1$** 'ತಿಳಿಪು$_1$' ನೋ.

**ತಿಳುಪು$_2$** 'ತಿಳಿಪು$_2$' ನೋ.

**ತಿಳುಪೇಱು** (ಕ್ರಿ). ತೆಳುವಾಗು; ತೆಳ್ಳಗಾಗು; ಕೃಶವಾಗು : ಬಿಳುಪೇಱಿತು ಮೊಗ ತಿಳುಪೇಱಿತು ಕೆನ್ನೆ ಹೊಳಪೇಱಿತು ಕಾಡಿನೋಟ (ಜೀವಂಸಾಂ. ೪-೭೦). 'ತೆಳುಪೇಱು' ಪರಾ.

[ ತಿಳುಪು$_2$ (<ತಿಳಿಪು$_2$) + ಏಱು$_1$ (<ಏಱ್$_1$) ]

**ತಿಳುವಳಿಕಸ್ತ** 'ತಿಳಿವಳಿಕಸ್ತ' ನೋ.

**ತಿಳುವಳಿಕೆ** 'ತಿಳಿವಳಿಕೆ' ನೋ.

**ತಿಳುವಿಕೆ** 'ತಿಳಿವಿಕೆ' ನೋ.

**ತಿಳುವು** 'ತಿಳಿವು' ನೋ.

**ತಿಳುಹಿಸು** (ಕ್ರಿ). ೧. ಶಮನಗೊಳಿಸು ; ಶಾಂತಗೊಳಿಸು; ಸಾಂತ್ವನಗೊಳಿಸು; ಸಮಾಧಾನಗೊಳಿಸು : ಈ ಗಿಣಿಯು ಸಂಗೀತ ಸಾಹಿತ್ಯವ ಬಲ್ಲುದು . . . ಅಂತಃಪುರಸ್ತ್ರೀಯರುಗಳ ಕೋಪವ ತಿಳುಹಿಸಿ ಅನುಗೊಳಿಸಬಲ್ಲುದು (ಪಚಕಾ. ೦). ೨. ತಿಳಿಸು ; ಅರುಹು.

[ ತಿಳುಹು$_1$ (<ತಿಳಿಪು$_1$) + – ಇಸು$_3$ ]

**ತಿಳುಹು$_1$** 'ತಿಳಿಪು$_1$' ನೋ.

**ತಿಳುಹು$_2$** 'ತಿಳಿಪು$_2$' ನೋ.

**ತಿಳ್ಳಿ** (ನಾ). (ಉಕ) ಒಂದು ಬಗೆಯ ಆಟ ; ಉಪ್ಪಾರಪಟ್ಟೆ : ಪ್ರಳಯ ಜಯಿಸಿ ತಾನೀಸಿಯೇ ಬರಲೀ ಆಡುತಿರಲು ತಿಳ್ಳೀ ಇಗೋ ಓಡಿ ಬಂದಿತಿಲ್ಲಿ (ಅರಳು. ೦೫೩-೪) ; ಸಂಜೆಯಲ್ಲಿ ಮಾಡುವ ವ್ಯಾಯಾಮದಲ್ಲಿ ತಿಳ್ಳಿ, ಓಡುವುದು, ಖೋಖೋ ಮೊದಲಾದವುಗಳೂ ಬರುತ್ತವೆ (ಬೃಹತ್ಕಥೀ. ೨೦೦) ; "ಹುಡುತುತುತ್ತು" "ತಿಳ್ಳಿ" ಮುಂತಾದ ಆಟಗಳನ್ನು ಆಡುತ್ತಿರುವರು (ವಿರಾಫ. ೯೩).

**ತಿಳ್ಳಿಯಾಡು** = ಉಪ್ಪಾರಪಟ್ಟೆಯಾಟ ಆಡು : ಅವನ ಅಂತರ್ಯಾದ ಭೋರ್ಗರೆವ ಕಡಲಿನ ಭಾವನೆಗಳ ಅಲೆಗಳ ಮೇಲೂ ಆಕೆಯ ಮಂಗುಲ ಮೂರ್ತಿ 'ತಿಳ್ಳಿ'ಯಾಡುತ್ತಿದೆ (ಬನಸಿ. ೨) ; ಗಾಳಿಯೊಡನೆ ತಿಳ್ಳಿಯಾಡುತಾಡುತದರ ಓಟಾ (ನಾದಲೀ. ೦೫-೧). **ತಿಳ್ಳಿಹಾದಾಡು**=ತಿಳ್ಳಿಯಾಡು : ಖೋ ಆಡಲಿಕ್ಕೂ ತಿಳ್ಳಿ ಹಾದಾಡಲಿಕ್ಕೂ ಹೆಚ್ಚು ಮಂದಿ ಬೇಕು (ಮುಂಬಯಿ. ೧-೨೬).   [ ? ]

**ತಿಱಿ$_1$**, **ತಿರಿ$_2$** (ಕ್ರಿ). ೧. (ಹೂವು, ಹಣ್ಣು ಮೊದಲಾದುವನ್ನು) ಕೊಯ್ಯು; ಬಿಡಿಸು ; ಆರಿಸು ; ಎತ್ತು : "ತಿಱಿದುದನೆಲ್ ತಾಂ ಕೊಯ್ದುದು" (ಶಕುನಿ. ೦೦೬) ; ಮುಳಿದು ತನಗರ್ಘ್ಯಮೆತ್ತಿದ ತಳಿಗೆಯೊಳಿಡೆ ತಿಱಿದ ತೆಱದೆ ತಲೆ ಪಱಿದಾಗಳ್ (ಪಂಪಭಾ. ೬-೬೪) ; ಬದರಿಯ ಬನ್ನಿಯ ರಥ ಚಕ್ರದೆಲೆಗಳಂ ತಿಱಿದು ತಲೆಯೊಳಿಟ್ಟಾತಂಗಭ್ಯುದಯಮುಂ...ಸುಖಮುಂ ಕೂಡಿಬಕ್ಕುಮೆಂಬರ್ ಮೂಢರ್ (ಸಮಯ. ೦೨-೬); ಕುಸುಮನಿಕಾಯಮಂ ತಿಱಿವ ಕೈತವದಿಂದೆ (ಅದ್ಭುತ. ೭-೨೨); ಪಣ್ಣಂ ತಿಱಿದಿಚ್ಛೆಯಿಂದೆ ಕುಡುತುಂ (ಕಬ್ಬಿಗಕಾ. ೦೫೬) ; ಕುಸುಮತತಿಯಂ ತಿಱಿದುಕೊಂಡು ತಾಂ ಬರುತ್ತಿರೆ (ಬಸವು. ೦೦-೯); ಕುಸುಮಮಾಲೆಯಂ ತಿಱಿದು ತನ್ನಮನೆ (ಪದ್ಮರಾ. ೮-೫೩); ನಳನಳಿಪ ಗಜವುಷ್ಪಮಾಲಿಕೆಯ ತಿಱಿದು ತುಳಸಿಯ ದಳವನಘಶತಹರವ ನಡೆಗೆಡೆಗಿಱುಕಿ ವೈರಿಯ ಧುರವ ಜಯಿಸಂದಿಕ್ಕಿದನು ಕೊರಳಲಿ (ತೊರವರಾ. ೪-೪-೨) ; ತಿಱಿದ ಚೆಂದಳಿರ್ಗಳಂತೊಪ್ಪುವಧರಂಗಳಿಂ...ಸುರವನಿತೆಯರ್ ಕಂಗೆಸೆದರ್ (ಜಬಪು. ೦೯-೪೪). 'ಪೂದಿಱಿ' ಪರಾ. ೨. ಎಸೆ ; ಬಿಸಾಡು. 'ತಿಱಿಕಲ್' ಪರಾ. **ತಿರಿ$_2$** : ೧. ಹಲವಾರು ತೋಟದೊಳಸವಸದೊಳು ಸುಗ್ಗಿ ಹೂಗಳ ತಿರಿದನು ಹಿಗ್ಗಿ (ಇಂಡಾಪ. ೩೦-೮೮). ೨. 'ತಿರಿಕಲ್ಲಂ' ಪರಾ.

[ ದೇ. ೩ ತಮಿ. ಮಲ. ತಿಱಿ ; ತೆಲು. ತೆಗು, ತ್ರೆಗು, ತ್ರೆಯ್ಯು ]

**ತಿಱಿಕಲ್**, **ತಿರಿಕಲ್ಲು**, **ತಿಱಿಕಲ್ಲು** (ನಾ). (ಆಟವಾಡುವಾಗ) ಮೇಲಕ್ಕೆ ಹಾರಿಸಿ ಕೈಯೊಡ್ಡಿ ಹಿಡಿದುಕೊಳ್ಳುವ ಸಣ್ಣಕಲ್ಲು ; ಅಣ್ಣೆಕಲ್ಲು : "ತಿಱಿಕಲ್ಲೆಂದು ಅಣ್ಣೆಕಲ್" (ಶಶಸಾ. ೨೭-೫೫೨) ; "ತಿಱಿಕಲ್ [ಪಾಠಾಂ. ತಿಱಗಲ್, ತಿಱುಕಲ್] ಎನಲ್ಕೆ ಶಾಸಣ್ಣೆಕಲ್ಲಕ್ಕು" (ಅಭಿನಿ.೫೯); ವಾಮೇತರಾಯತಹಸ್ತಾಗ್ರದೊಳಾಂತು ತಾಳ್ದಿದುದಱಿಂ ಬಾಳತ್ವದೊಳ್ ಕೋಟಕಾಂತಿತಮಾ ಕಲ್ ತಿಱಿಕಲ್ ತ್ರಿವೃಷ್ಟಮಹಿಪಂಗಕ್ಕುಂ ಪೆಱಂಗಕ್ಕುಮೇ (ಶಾಂತಿಪು. ೩-೨೬) ; ಮಿಱುಗುವ ನೀಲದ ಬಟ್ಟಂ ತಿಱಿಕಲ್ಗಳನಾಡುವಂತೆ ಕಣ್ಗೆಸೆದಿರ್ದಲ್ (ಕಾದಂಬ. ೨೬); ತದ್ಗೃಹದೇವತಾಜನಂ ಸೊಗಯಿಸುಮಿಂದ್ರನೀಲಮಣಿಯಂ ತಿಱಿಕಲ್ಗಳನಾಡುವಂತೆವೋಲ್ (ಸಂಧಾಮೂ. ೩-೭೭) ; ತಿಱಿಕಲ್ಲಾಡುವು ವಿಷ್ಣುಭೂಭುಜಭುಜಶ್ರೀಗಾವಗಂ ಪೆಂಪಿನೊಳ್ಕಱಿದಾ ಸಹ್ಯನಗೇಂದ್ರ ನೀಳ ××× ಗಳ್ ಪೆಱತೇನಾ ಭುಜಲಕ್ಷ್ಮಿಗೀ ನೆಗಳ್ದ ಮಾನುಂಗಲ್ (ಎಪಿ. ಕ. ಬೇಲೂರು. ೦೭-೭; 1130). **ತಿರಿಕಲ್ಲು**: 'ತಿರಿಕಲ್ಲಾಟ' ಪರಾ. **ತಿಱಿಕಲ್ಲು**: ಕುಳಿಲ್ಸಂದು ಬಟ್ಟು ತಿಱಿಕಲ್ಲಟ್ಟುಂಗರೆ ಹೊಣೆಗುಂಡೆಂಬವನಾ ಮುರಹರನಲ್ಲಿಗಾಡುತುಂ ಬರಲಿದಿರೊಳ್ (ಜಗವಿ. ೪-೪೪) ; ಸಪ್ತ ಕುಲಪರ್ವತಂಗಳನೊರ್ವ ಬಾಚಿಯುಂಗೈಯೊಳಾಂತು ಓರಂತೆ ತಿಱಿಕಲ್ಲನಾಡುತ (ವೀರಶೈವ. ೩-೨೦-೪೪) ; ಚಂಡಪ್ರತಾಪಿಯು ಜಯವಧು ತಿಱಿಕಲ್ಲ ಕೊಂಡಾಡುವಂತೆ ಚಿಮ್ಮಿದನು (ಮೋಹತ. ೩೪-೯) ; ಅವಿಳ ಕುಲಗಿರಿಗಳಂ ತಿಱಿಕಲ್ಲನಾಡಿ ಸಾರಿಪ ವಸುಂಧರೆಯನಾಕಾಶಮಂ ಪಿಡಿದು ತಾಳವ ಪೊಯ್ವ...ಮಹಾಪ್ರಮಥವರರೊಪ್ಪುತಿರ್ದರು (ಸಿದ್ಧೇಪು. ೦-೩೪). 'ಅಣ್ಣೆಕಲ್$_1$' ಪರಾ.   [ತಿಱಿ + ಕಲ್$_3$]

**ತಿಱಿಕಲ್ಲಾಟ**, **ತಿರಿಕಲ್ಲಾಟ** (ನಾ). ಕಲ್ಲುಗಳನ್ನು ಎಸೆದು ಹಿಡಿಯುವ ಆಟ ; ಅಣ್ಣೆಕಲ್ಲಾಟ : ಮತ್ತಮವರ ಪಸುಳೆಗಳ್ ಪಕ್ಕಿಯು ಸಿದಿದಲೆಯೊಳ್ ತಿಱಿಕಲ್ಲಾಟಮಂ . . . ಕಲ್ತರ್ (ಚಳವಂ. ೮-೦೨) ; ಪಂದಲೆಯ ತಿಱಿಕಲ್ಲಾಟದಿಂ ಮರುಳ್ವಡೆಗೆ ನಲವೆರ್ಚಿಸುತುಂ (ರಾಮಾಶ್ವ. ೪೯-೦೯). **ತಿರಿಕಲ್ಲಾಟ**: ಕವಣೆ ತಿರಿಕಲ್ಲಾಟ ಹಗ್ಗಕೆ ಸೆಳೆದರೋ ಹಬ್ಬಾವನು (ಶಶಪು. ೭-೦೫೨).   [ ತಿಱಿಕಲ್ + ಆಟ ]

**ತಿಱಿಕಲ್ಲಾಡು** (ಕ್ರಿ). ಕಲ್ಲುಗಳನ್ನು ಮೇಲೆ ಎಸೆದು ಹಿಡಿ; ಅಣ್ಣೆಕಲ್ಲಾಡು : ತಿಱಿಕಲ್ಲಾಡುವ ಬೊಟ್ಟುವೋರಿಸುವ ಸಂಡಂ ಪೊಯ್ವ . . . ನಾನಾಕ್ರೀಡೆಯಿಂದಿರ್ದರುಂ ತಱಿಸಂದು (ಸುಕುಮಾ. ೨-೬) ; ತಿಱಿಕಲ್ಲಾಡುವೆನೋ ಕುಲಾದ್ರಿಚಯಮಂ (ಜಗವಿ. ೭-೩೫); ಕೋಡೆಯೊಳ್ಕೋಡೆಯೊತ್ತುತುಂ

ದಂತಿಗಳನೆ ತಿಱಿಕಲ್ಲಾಡುವಂತೆಂಬರಕ್ಕೀಡಾಡುತ್ತುಂ ತುಂಗಶೈಳಂಗಳನೆ ... ಎಯ್ದುಂದುದು ಪವನಜವಂ ರುಂದ್ರಗಂಧದ್ವಿಪೇಂದ್ರಂ (ಜಾರ್ಶ್ಯ.ಪು. ೯-೦೬೬): ಅಲಿವರಲಂ ಪೊಯ್ದುಣ್ಣಕಲ್ಲಾಡಲುಂ ತಿಱಿಕಲ್ಲಾಡಲದೇಂ ತಗುಳ್ದಪೊ ಮನಸ್ಸಂಪ್ರೀತಿಯಿಂ ಚಾತಕಂ (ಅನಂಪು. ೯-೯) ; ತಲೆಗಳ ತಱಿದು ತಿಱಿಕಲ್ಲಾಡುತಿರ್ದನು ವೀರವಿಹಗೇಂದ್ರ (ತೊರರಾ.೩-೧೦-೬೮); ಗಿರಿಗಳಂ ಕಿತ್ತು ತಿಱಿಕಲ್ಲಾಡುವ ಕಾಲಮೇಘದ ಸಿಡಿಲ ತೊಡಿಗೆಯಂ ಸಲೆ ತೊಡುವ ... ಕಾಲರಾಕ್ಷಸರ್ಪದಿ ಸಂದಣಿಸಿ ನಿಂದಿರ್ದರ್ (ಚಲಪು. ೨೩-೦೫).

[ ತಿಱಿಕಲ್ + ಆಡು$_1$ ]

**ತಿಱಿಕಲ್ಲು** 'ತಿಱಿಕಲ್' ನೋ.

**ತಿಱಿಕುಳಿ** (ನಾ). = ತಿಱಿಕೊಱೆ$^3$ : "ತಿಱಿಕುಳಿ [ ಪಾಠಾಂ. ತಿಱಿಕೊಱೆ$^3$ ] ಯೆನಲ್ಕೆಯಾಯ್ಕುಳಿಯಕ್ಕು" (ಕಬ್ಬಿಮಂ. ೫೪). 'ತಿರಿಕಂಳಿ' ಪರಾ.

[ ತಿಱಿ + – ಕುಳಿ$_3$ ]

**ತಿಱಿಕೊಱೆ$^3$** (ನಾ). (ಗದ್ದೆ ಮುಂತಾದ ಕಡೆ ಕಾಳನ್ನು) ಆಯ್ದು ಕೊಂಡು ಜೀವಿಸುವವನು ; ಆಯ್ಕುಳಿ : "ತಿಱಿಕೊಱೆ$^3$ = ಆಯ್ಕುಳಿ" (ಕಮುಡ. ೫೦. ೨). [ ತಿಱಿ + ಕೊಱೆ$_6$ ]

**ತಿಱಿಕೊಱೆಗೊಳ್** (ಕ್ರಿ). ಆಯ್ದು ಕೊಳ್ಳು ; ಆರಿಸಿಕೊಳ್ಳು : ಕೊಲ್ಲುಂ ಕಱಿಯಂ ಕೊಲ್ವಂತಿರೆ ತಿಱಿಕೊಱೆಗೋಡು ಜಗಜ್ಜನಂಗಳಂ ಯಮರಾಜಂ (ಅಜಿಪು. ೧೦-೨೮). [ತಿಱಿಕೊಱೆ$^3$ + ಕೊಳ್$_1$]

**ತಿಱಿಗದಿರ್** (ನಾ). ಆಯ್ದ ಕಿರಣ,—ರಶ್ಮಿ : ತಿಱಿಗದಿರಂ ಮಱಿವಕ್ಕಿಗೆ ನೂಂಕಿ ತನಿಗದಿರನಿನಿಯಂಗೆ ನೀಡಿ (ಅನಂಪು. ೭-೮೦ ವ). [ತಿಱಿ+ಕದಿರ್$_2$]

**ತಿಱಿಚು** (ಕ್ರಿ). ವಿಭಾಗಿಸು ; ಭಾಗಮಾಡು (?) : ಮೂಱಿಱಿವೊಳ ದೆಸವಂದದ ಮರ್ಯಾದೆಯಲೂ ಕಟುಗೊಡಗೆಯನೂ ತಿಱಿಚಿ ಆ ಕಟುಗೊಡಗೆಯು ಗದೆಗೆ ಉತ್ತಮ ಮಧ್ಯಮ ಕನಿಷ್ಠವಾಗಿ ತ್ರಿಸ್ಥಾನದಲೂ ಸಿಲಾಸ್ಥಾಪನವನು ಮಾಡಿಸಿ ಕೊಡುವೆವು (ಎಕ. X, ಮುಳಬಾ. ೧೭೨-೦೦ : 1496). [ ತಿಱಿ + –ಚು$_1$ ]

**ತಿಱಿತರ್**, ತಿರಿತರ್$_2$ (ಕ್ರಿ). (ಹೂವು, ಹಣ್ಣು, ಕಾಯಿ ಮುಂತಾದುವನ್ನು) ಕೊಯ್ದು ತರು ; ಕಿತ್ತು ತರು : ಕಂಪುಳ್ಳ ಸಂಪಗೆಯ ಪೂಗಳಂ ತಿಱಿತಂದು ಹಂಪಿನಿಂ ಶಶಿಧರನ ಸಿರಿಮುಡಿಗೆ ಬೇಕೆಂದು (ಬಸರ. ೦-೨೭) ; ತಳಿರ ತಿಱಿತಂದಂದು ಮನೆ ಮಾಡಿದರು ಭೂಸುರತತಿಗೆ (ಕುಮ್ಮಾ.ಅ. ೦೭೩. ೯-೫). **ತಿರಿತರ್**$_2$. 'ತಿರಿತರಿಸು' ಪರಾ. [ ತಿಱಿ + ತರ್ ]

**ತಿಱಿತರಿಸು**, ತಿರಿತರಿಸು (ಕ್ರಿ). ಕೊಯ್ದು ತರಿಸು; ಕಿತ್ತು ತರಿಸು : ಎಳವುಲ್ಲಗಳಂ ತಿಱಿತರಿಸಿ ಮುಂದಿಟ್ಟನು (ಕೃಮಿಟಾ. ೨೯-೯೭). **ತಿರಿತರಿಸು** : ತಣ್ಣೆಳಲಿನ ತರುಮೂಲಕ್ಕೆ ತುರಂಗವನ್ನು ನೀರು ಕುಡಿಸಿ ಕಟ್ಟಿ, ಎಳಹುಲ್ಲನ್ನು ತಿರಿತರಿಸಿ ಅದರ ಮುಂದಿಟ್ಟು (ಬಿರುರಿ. ೦೬೮).

[ ತಿಱಿತರ್ + – ಇಸು$_1$ ]

**ತಿಱಿಸೇವಗೆ** (ನಾ). ಒಂದು ಬಗೆಯ ಸೇವಗೆ; "ಕತ್ತರಿಸಿ ಚೂರುಮಾಡಿದ ಸೇವಗೆ" (ಸಿದ್ಧರಾ. ಕೋಶ): ಬಳ್ಳಿಯಲ್ಲಿ ತಿಱಿಸೇವಗೆಯ ರಾಶಿಗಳ ಮಾಡಿ ಹಳ್ಳಿಕಾರ್ತಿಯರಲ್ಲದರಸುಮಕ್ಕಳು ಮಾಡಿದರು ವರಡಿ ಸರವಳಿಗೆಯ (ಸಿದ್ಧರಾ. ೮-೫೦). [ ತಿಱಿ + ಸೇವಗೆ (< ಸೇವಿಗೆ ) ]

**ತಿಱು** (ಕ್ರಿ). ೧. ಕೊಡು ; ನೀಡು : ಮಾನ್ಯಕಾಱಿಮರ್ೞಿಱು ಶ್ರಾಹೆಗೆ ಪರಿಯರ ಗದ್ಯಾಣವನ್ನಿಱುವರ್ (ಸೌಇಇ. IX – 1, ೭೭-೭೯; ೨೦೨): ಹೊಲಗೇರಿಯ ಪಡುವಣ ಕರುವಗೆಯ್ಯಿಂದಂ ತೆಂಕಲಾಱುಮತ್ತರು ಕೆಯಿಂಗವಱಿವಣಮಯ್ದು ಗದ್ಯಾಣವಮಂ ತಿಱುವರು (ಸೌಇಇ. XI-i, ೫೦-೨೦ ; 1005). ೨. ಸಲ್ಲಿಸು ; ಸಂದಾಯಮಾಡು : "ತಿಱು – (ದ್ರವ್ಯ) ವಿನಿಮಯೇ" (ಶಮರಾ). 'ತೆಱು$_1$' ಪರಾ.

[ ದೇ. ೩ ತಮಿ. ಇಱು ; ಮಲ. ಇಱು = ಕಾಣಿಕೆ ]

**ತಿಱುಕೆ** (ನಾ). ಕೊಡುಂಪಿಕೆ ; ತೆರುಂಪಿಕೆ : ಕಿಱುಕೆ, ತಿಱುಕೆ, ಪೊಱುಕೆ (ಶಬ್ದಾನು. ೫೫೭ ಪ್ರಯೋ). [ತಿಱು + – ಕೆ]

**ತಿಱುಗೆ** (ನಾ). ಒಂದು ಬಗೆಯ ತೆರಿಗೆ (?) : ಉಂಬರವಾಣೆಯ ತಿಱುಗೆಯ ಹಿರಿಯ ಕೋಲಲು ಹನೆರಡು ಮತ್ತರು (ಕಇ. II, ೨೩-೭೯ ; 1174) : ಹಾರಣರಂಳ ದೋಷದಿಂ ಪಾದ ತಿಱುಗೆಯಂ ಕೊಂಬುದಿಲ್ಲೆಂದು ಒಂದು ಹೊಂನ ಪಾದಪೂಜೆಯಂ ಕೊಂಡು (ಕಕುಲ. ೬-೭೪ : 1218).

[ತಿಱು + – ಗೆ]

**ತಿಱುನಂದೀಶ್ವರ** (ನಾ). [ಜೈನ] ಒಂದು ಹಬ್ಬ ; ನಂದೀಶ್ವರದಷ್ಟವಿಂ ; P ಜ್ಯೇಷ್ಠ, ಆಷಾಢ ಮತ್ತು ಫಾಲ್ಗುಣ ಮಾಸಗಳಲ್ಲಿ ಅಷ್ಟಮಿಯಿಂದ ಹುಣ್ಣಿಮೆಯವರೆಗೆ ಎಂಟು ದಿನಗಳು ಜೈನರು ಆಚರಿಸುವ ಒಂದು ವ್ರತ,—ಹಬ್ಬ. ಇದನ್ನು 'ಅಷ್ಟಾಹ್ನಿಕ' ಎಂದೂ ಕರೆಯುತ್ತಾರೆ : ತಿಱುನಂದೀಶ್ವರದಂದು ದಾನಮಾಡಿಯುಂ ಪೊಯ್ಸಳನ ಗುರುಗಳಪ್ಪ ಮುಳ್ಳೂರ ಶ್ರೀಗುಣಸೇನಪಂಡಿತದೇವರ್ಗೆ ಧಾರಾಪೂರ್ವಕದಿಂ ಸ್ಥಾನಮಂ ಕೊಟ್ಟರ್ (ಎಕ. VI, ಮೂಡಗೆ. ೦೩-೨೮; 1068). 'ನಂದೀಶ್ವರ' ಪರಾ. [P ಇದು 'ತಿರುನಕ್ಷತ್ರ' 'ತಿರುನಾಮ' ಮುಂತಾದ ಶಬ್ದಗಳಂತೆ, ತಮಿಳು ಪದಗಳ ಹೋಲಿಕೆಯ ಮೇಲೆ ರೂಪಿಸಿಕೊಂಡಿರುವ ಒಂದು ಶಬ್ದವಿರಬಹುದು.]

**ತಿಱುನೀರಿಕ್ಕು** (ಕ್ರಿ). (?) : ಮಂಡಲಮಿನ್ನುಂ ತಿಱುನೀರಿಕ್ಕು [ ಪಾಠಾಂ. ಕಿಱುನೀರುಕ್ಕು ] ವುದೆನಿಸಿದ ತಱಿಸಲವಿನ ಚಲದ ಬಲದ ಕಲಿನರಸಿಂಹಂ (ಪಂಪಭಾ. ೧-೩೩) ; "ತರ್ಪಣೋದಕವನ್ನು ಕೊಡಂ" (ಪಂಪದೀ. ೧೭).

[P ಇಲ್ಲಿ ಪಾಠಾಂತರವೇ ಹೆಚ್ಚು ಗ್ರಾಹ್ಯವೆಂದು ತೋರುತ್ತದೆ]

**ತಿಱುವಂಗಡಿ** (ನಾ). = ತಿರುಮಾಳಿಗೆ : ವಿದ್ಯಾರ್ಥಿತಪೋಧನರಾಹಾರ ದಾನಕ್ಕಮೆನ್ದು ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಉತ್ತಮದ ಬಳಕ್ಕೆ ತಿಱುವಂಗಡಿ ೧ ಮತ್ತಮಂಗಡಿಗಳೊಳ್ಪಣ ೧ . . . ಕೊಟ್ಟರ್ (ಎಇ. V, ೩೮೩-೫೦ : 1093). [ < ತಿರು$_2$ + ಅಂಗಡಿ (<ಅಂಗಾಡಿ) ]

**ತಿಱುವಂತ** (ನಾ). ಒಬ್ಬಾತನ ಹೆಸರು : ವತ್ತುಗದ್ಯಾಣ ಪೊನ್ನುಂ ಇಟ್ಟಾಱು ಭತ್ತವುಂ ತಿಱುವನ್ತಗೆ ಕಾದಿಯಣ್ಣಂ ಕೊಟ್ಟಂ (ಎಕ. IX, ತುಳಬಾ. ೨೦೮-೩೪ ; 1000). [ <ತಿರು$_2$ + – ವಂತ ]

**ತಿಬ್ಬಂದಿರಿ** (ಕ್ರಿ). ವೇಗವಾಗಿ ತಿರುಗು ; ಭರದಿಂದ ಸುತ್ತು : ಜಳಧಿಯ ನೀರ್ತುಳುಂಕಿದವು ಧಾತ್ರಿ ತಿಬ್ಬಂದಿರಿದತ್ತು ದಿಗ್ಗಜಂ ಮದವೆತ್ತಿ ಕಟ್ಟಿದುದು (ಮುಹಾನೀ. ೦೦-೦೫೯). [ < ತಿಬ್ಬನೆ + ತಿರಿ$_1$ ]

**ತಿಬ್ಬಗೆ** (ಅ). ತಿರುಗುವುದನ್ನು ಸೂಚಿಸುವ ಒಂದು ಅನುಕರಣಾವ್ಯಯ : ಅಸುರಂ ಗದೆಯಿಂ ತಿಬ್ಬಗೆ ತಿರುಪಿದೊಡೊಡನೆ ತಿರುಗುಗುಂ ಭೂಚಕ್ರಂ (ಜಗಪಿ. ೯-೭೩). [ ತಿಬ್$_0$ + – ಅಗೆ$_2$ ]

**ತಿಬ್ಬನೆ**, ತಿರ್ರನೆ (ಅ). ೧. = ತಿಬ್ಬಗೆ : ಬಾಣಗಳ್ಪಂದರಿಗಳನೆತ್ತಿ ತಿಬ್ಬುಸುದ್ದದೊಳು ತಿರುಗಿಸಿ (ಜಂಪ್ರಸಾಂ. ೮-೫೨). **ತಿರ್ರನೆ** : ೨. ಶೀಘ್ರವಾಗಿ; ವೇಗವಾಗಿ : "ತಿರ್ರನೆನೆ ತಿಬ್ಬಮೆನೆ ಶೀಘ್ರವಾಚಿಯಕ್ಕು" (ಕಕರ. ೪೫).

ತಿಬ್ಬನೆತಿರಿ=ಗಿರ್ರನೆ ಸುತ್ತು,—ಅಲೆ: ಆ ಗಾಲಿಯುಂ ಪದಿನಯ್ದು ದಿವಸಂ ಬರೆಗಂ ತನಗೆ ತಾನೆಯಂತರಿಕ್ಷದೊಳ್ ನೆಲನಂ ಮುಟ್ಟದೆ ತಿಬ್ಬನೆ ತಿರಿಯುತ್ತಿರ್ದುದಂ ಕಂಡು (ವಡ್ಡಾರಾ. ೦೯೭-೦೫) ; ತಿರಿಪಿದೊಡದನೆಳೆ ತಿಬ್ಬನೆ ತಿರಿದುದು ತಿರುವಾಯೊಳಿಡೆ ಸುರರ್ ಮೊಱೆಯಿಟ್ಟರ್ (ಪಂಪಭಾ. ೦೨-೦೯೨) ; ಕುಧರ್ಮೋಪದೇಶದಿಂ ಸಂಸಾರಚಕ್ರದೊಳ್ ತಿಬ್ಬನೆ ತಿರಿದು (ಜಾಪುಂಪು. ೫೦-೨೮) ; ಸಂಸಾರದೊಳಗೆ ತಿಬ್ಬನೆ ತಿರಿವಯ್ (ಅಜಿಪು. ೨-೬೦) ; ಕರುಬದ ಕದಿರಂತೆ ತಿರ್ಯಗ್ಗತಿಯೊಳ್ ತಿಬ್ಬನೆ ತಿರಿದುಂ (ಧರ್ಮಾಮೃ. ೭-೦೭೫). **ತಿಬ್ಬನೆ ತಿರಿಪು, ತಿಬ್ಬನೆ ತಿರುಹು** = ಗಿರ್ರನೆ ಸುತ್ತುವಂತೆ ಮಾಡು ; ಅಲೆಯುವಂತೆ ಮಾಡು : ಕೌಂತೇಯರಂ ಮಚ್ಚರದಿಂ ಕಾಂತಾರದೊಳ್ತಿಬ್ಬನೆ

ತಿರಿಟಿದ ಸೊರ್ಕೀಗಳೇನಾದುದು (ಗದಾಯು. ೬-೧೪) : ತಿಟ್ಟನೆ ತಿರಿಪಿದವಂ ಸುತ್ತಿವಂ ಮುತ್ತಿವಂ ಸಂಗರದೊಳ್ (ಎಕ. VIII, ಸಾಗರ. ೧೧೯-೨೫: 1042): ಗಟ್ಟನೆ ಪರಿತಂದು ಮಾಣದಚ್ಚುಳಕೋಲಿಂ ತಿಟ್ಟನೆ ತಿರಿಪಿ ದುರಾತ್ಮರ್ ...ಬಡಿದರ್ (ಧರ್ಮಾಮೃ. ೩-೧೯೦) : ಸಟ್ಟನೆ ಸೀಳ್ವ ದಿಗ್ಗಜದ ಮಂಡೆಯ ಮೆಟ್ಟಿ ಸುಟ್ಟನೆ ಸುರಿವನೇಳ್ಗಡಲ ತಿಟ್ಟನೆ ತಿರುಹುವ ಧರಣಿಯ (ಮೋಹತ. ೧೨-೧೦). ತಿಟ್ಟನೆ ತಿರುಗು, ತಿರ್‍ರನೆ ತಿರುಗು=ತಿಟ್ಟನೆ ತಿರಿ: ಆನುಂ ತೊಡೆ ಯೆಡೆಯೊಳಿರ್ದೊಡಸಂದು ಸುಟ್ಟುರೆಯು ತಟಿಗೆಲೆಯಂತೆ ತಿಟ್ಟನೆ ತಿರುಗಿ ಬೀಳ್ವಲ್ಲಿ (ಕಾದಂಪೂ. ೧೯೫) ; ಕರಟದ ಕದಿರಂತೆ ತಿಟ್ಟನೆ ತಿರುಗುತ್ತುಂ (ಧರ್ಮಾಮೃ. ೨-೧೦೨): ವಿಸುಗುವ ಡಮರುಗ ಥಂ ಥಂ ಡಣಲೆನೆ ತಿಸುಳದಿ ಹರಿಯುವ ತಾರಂ ತಿಟ್ಟನೆ ತಿರುಗುತ್ತಿರೆ (ಕಂಬರ. ಹ. ೨೫೪-೭); ಕರಹತಿಗೆ ಧಡಧಡಿಸಿ ತಿಟ್ಟನೆ ತಿರುಗಿ ಬೀಳುತ (ಕುಮಾರವ್ಯಾ. ೬-೫೯) ; ನಭೋಗ್ರದಲಿ ರಥದ ಗಾಲಿ ತಿಟ್ಟನೆ ತಿರುಗುತಿರ್ದವು (ತೊರರಾ. ೩-೬-೧೩) ; ದೈತ್ಯ ಪೀತಾಂಬರನ ಮೊಮ್ಮನನೆಚ್ಚು ಕೆಡಹಿದ ಭೂತಲ ತಿಟ್ಟನೆ ತಿರುಗೆ (ಮೋಹತ. ೩೫-೪೬) ; ಶನಿಗ್ರಹಕ್ಕೆ...ತನ್ನ ಅಕ್ಷದ ಮೇಲೆ ತಾನೊಂದು ಬಾರಿ ತಿರ್‍ರನೆ ತಿರುಗುವುದಕ್ಕೆ ಕೇವಲ ೧೦ ಗಂಟೆಗಳಾದರೆ ಸಾಕು (ಆಕಾಶ. ೨೪). ತಿಟ್ಟನೆಯ್ತರ್=ವೇಗವಾಗಿ ಬರು : ಚತುರಂಗಂ ಚತುರಂಗಸೈನ್ಯದೊಳಡು [ರ್ತುಂ] ತಿಟ್ಟನೆಯ್ತಂದು ತಾಗಿ ತಡಂಮೆಟ್ಟದೆ ಕಾದೆ (ಪಂಪಭಾ. ೧೦-೬) : ಮಿಂಚಂ ತಟ್ಟೈಸಿದ ಕಾರ ಕಾರ್ಮುಗಿಲಂತೆ ತಿಟ್ಟನೆಯ್ತರ್ಪ ದವಿತಾರಿಯಂ ನೋಡಿ (ಶಾಂತಿಪು. ೪-೫೨ವ). [ತಿಟ್$_0$ + – ಅನೆ$_1$]

**ತಿಟ್ಗಲೂರ್** (ನಾ). ಒಂದು ಊರಿನ ಹೆಸರಂ : ಬಿನಯಾದಿತ್ಯರಸರ್ ಕೊಟಿಕುನಾಡ್ಗೆ ಮೂನೂಱು ಆಳುತ್ತಿಟ್ಟು ತಿಟ್ಗಲೂರ ತಾಯನ್ಣೆಯರ ಪೂರ್ವ್ವಜರಾ ಪಡದೊದು ಉತ್ತಮಮೆಣ್ಣೆ ಎಮ್ಮಾ ಕಟನಿ (ಎಕ. XI (೩), ಹೊಳಲ್ಕೆ. ೧೯೦-೪ : 800). [ ? + ಊರ್]

**ತಿಟ್ರಮ್ಮ** (ನಾ). ಒಬ್ಬಾತನ ಹೆಸರು : ಸಡಗರರ ತಿಟ್ರಮ್ಮಂ ವಿಕ್ರಮ ಮೆಂಬ ವರ್ಷದೊ[ಳ್] ಗೋಶಹಶ್ರಮಿಟ್ಟೊ[ಂ] ಪೂದಾರುಂ ಬೆಳೆ ವತ್ತರುಂಗೊಟ್ಟೊ[ನ್] (ಸೌಇಇ. XX, ೦೬-೩ : 930). [ ? + ಅಮ್ಮ$_1$ ]

Δ ತಿಟ್ಟು ‘ತಿರ್ದು$_1$’ ನೋ.

**ತೀಂಗಿಡಿಸು** (ಕ್ರಿ). ನವೆಯನ್ನು ನಿವಾರಿಸಂ, – ಕಳೆ : ಕೋಡನಿಟ್ಟು ತೀಂಗಿಡಿವುವ ಕರ್ಣತಾಳದೆಲರಿಂ ಚೆಮರಾಜಿಪ ಕೆಯ್ತವೊಪ್ಪೆ ಬಳ್ಪಿಡಿಪಿಡಿ ದಿರ್ದುದಂಗಜನ ಕಯ್ಪಿಡಿಯಂ ಪಿಡಿಯಂ ಮತಂಗಜಂ (ಪುಷ್ಪಪು. ೫-೮೧).
[ ತೀನ್ + ಕಿಡಿಸು (<ಕೆಡಿಸು$_1$) ]

**ತೀಂಟು, ತೀಟು, ತೀಡು$_1$** (ಕ್ರಿ). ೧. ಮುಟ್ಟು ; ತಾಕಂ ; ತಗಲು : ಉಚ್ಚಳಚ್ಚೀಕರತತಿ ನಭವಂ ತೀಂಟುವನ್ನಂ . . . ಶೋಭಿಸುವುದು ಮಣಿ ಮಾಲಾಂಶುಭದ್ರಂ ಸಮುದ್ರಂ (ಕುಸುಮಾ. ೧-೨೨). ತೀಟು : ೧. ಆರು ಮಿಟುವರೆನ್ನ ತೋಟಿಯನಿಂತು ಕಾಣದ ಕೈಯಲಿ ? ಆರು ತೀಟುವರೆನ್ನ ಬಾಗಿಲನಿಂತು ಕೇಳದ ಕರೆಯಲಿ ? (ಕವಿಕ. ೮೫-೭). ತೀಡು$_1$ : ೧. ಗಾಡಿ ಒಂದು ಸಾರಿ ಬಲವಾಗಿ ‘ಜಟಕ’ ಹಾಕಿದಾಗ ನಾಗವೇಣಿಯ ಮೂಗು ಶಂಕರನ ಹೆಗಲಿಗೆ ತೀಡಿತು (೧ರಿಕಾ. ೨೩). ೨. (ಗಾಳಿಯಂತೆ) ಬೀಸು; ಸುಳಿ: “ತೀಡು– ವಾಯು ಸ್ಪರ್ಶನೇ” (ಶಮುಧಾ) ; ಹರಿಚಂದನ ಕಾಳಾಗರು ಮಲಯಜ ತು ರು ಷ್ಕಾ ದಿ ಗ ಳ ಕಂಪು ಬಂದು ತೀಡಿದೊಡೆ (ಪದ್ಮರಾ. ೫೫-೩) ; ನೀಂ ಮೆಲ್ಲಮೆಲ್ಲನೆ ಮಂದಾನಿಳ ತೀಡು ಕೋಗಿಲೆ ಸರಂದೋಱು (ಆದಿಪು. ೧೨-೪೪) ; ಭ್ರಮರರವಂಗಳೊಳ್ ಬೆರಸಿ ಮಾರುತನೊಯ್ಯನೆ ಬಂದು ತೀಡಿದತ್ತು (ಕಾದಂಪೂ. ೬೩೩) ; ತೀಡಿತ್ತು ಬಂದು ಮಂದಸಮಿರಾರಂ (ಪಂಪರಾಮಾ. ೦೬-೮೩) ; ಲೋಭದ ಗಾಳಿ ತೀಡದು ಮೋಹಕ ತೆರೆಹಿಲ್ಲ (ಬಸವ. ೮-೫೩) : ತಾವರೆಯ ತನಿ ಪರಿಮಳದ ವಿಸರದ ಹಸರದಲಿ ತೀಡಿದುದು ತಂಗಾಳಿ (ತೊರರಾ. ೨-೬-೩); ಪರಿಪರಿ ಕ ಪ್ಪು ಯ ಗ ಳ ಪರಿಮಳದಿಂಪು ಬೀದಿಯೊಳೆಡೆಯಾಡುತಿಪ್ಪರ ಮುಖಾಬ್ಜಕೆ ತೀಡುತಿಹುದು (ಕಂಸವಿ. ೬-೫೦).
[ ದೇ.॥ ತಮಿ. ತೀಣ್ಡು ; ಮಲ. ತೀಣ್ಡು ; ಕೊಡ. ತೀಂಡ್ ]

**ತೀಂಟೆ$_1$, ತಿಂತಿ, ತಿಂತೆ, ತೀಂತೆ, ತೀಟ್ಟ$_3$, ತೀಟೆ** (ನಾ). ೧. ನವೆ ; ಕಡಿತ; ತಿಮಿರು; ತುರಿಕೆ : “ಕಂಡೂಃ–ತೀಂಟೆ” (ಕಾಶಕ್ಕ. ೨೫): ಮದಕರಿ ತೀಂಟೆಗೊಲ್ದೊರಸೆ ಭೂರುಹಕಂಧರದೊಳ್ ಜಗಿಲ್ತು ಪತ್ತಿದ ಮದ ಸೌರಭಕ್ಕೆ ಸುಳಿಗೊಳ್ವಳಿಮಾಲೆ (ಕುಸುಮಾ. ೧೪-೦೨೦); ಸುರಾಸುರಾವಳಿಗಳ ಮಹಾಗರ್ವವೆಂಬ ತೀಂಟೆಯ ತೀರ್ಚುವಾ . . . ನೆವದೊಳ್ (ವೀಶೈಪು. ೨-೩-೫): ಪುಲ್ಲಂ ಮೇಯಲೆಳಸಿ ಬಂದು ಮೆಯ್ಯ ತೀಂಟೆ [ ಪಾಠಾಂ. ತಿಂಟೆ, ತಿಂತಿ ]ಗೆ ಪುಲಿ ಪೊರಳ್ದು ಪೋದ ತಾಣದೊಳ್ ನಿಂದು . . . ಹೆಮ್ಮದಂಬೋದ ಹರಿಣಾಗಳಿಂ (ರಾಜಶೇ. ೫-೫೫ವ). ೨. ಚಾಪಲ್ಯ; ತೀವ್ರವಾದ ಆಸೆ, —ಅಪೇಕ್ಷೆ : ಪುಲಿಯಂ ತೊಟ್ಟನೆ ಕಂಡು . . . ಪಾಯ್ದು ಪೊಯ್ದು ಕೋಡಿಟ್ಟು ಜಲ್ಲಿಸಿ ಬಿಸುಟ್ಟು ಸೊಸಲ ತೀಂಟೆ ತೀರದೆ ಕೊಣಕಿಟ್ಟು (೧ರಿಳ. ೦-೧೨೮ವ) : ಖಡ್ಗವಾಯ್ದಣಿಯ ನಿಜಭುಜದ ತೀಂಟೆ ಹರೆಯೆ ಹಗೆಗಳ ಕೊಂದು (ಹಪಕಾ. ೧೦-೧೪). ‘ನಾಲಗೆದೀಂಟೆ’ ಪರಾ. ತಿಂತಿ: ೧. ಮೆಯ್ಯೊಳೋರಂತಮರ್ದ ಕುಷ್ಠಾಮಯದ ತಿಂತಿಯಂ ತುಱಿಸುತ (ಪದ್ಮರಾ. ೪-೬೪). ತಿಂತೆ : ೩. (ಆಲಂ) ನಾಲಗೆಯ ತುರಿಕೆ ; ಬೇರೆಯವರನ್ನು ನಿಂದಿಸಬೇಕೆಂಬ ಲವಲವಿಕೆ, – ಆತುರ : ಜಗಳವ ಹತ್ತಿಸುವೆನೆಂದು ಚಿಂತಿಸುವ ಮನ ಕೊ ಂ ಡ ಯ ಕೈ ಳ ಸಿ ಗದಗದನೆ ತಿಂತ [ಪಾಠಾಂ. ತಿ] ಮಸಗುವ ಬಾಯಿ (ಸೋಮಪದ. ೦-೨೯) ; ಬಾಯಿ ತಿಂತೆ [ಪಾಠಾಂ. ತಿ] ಪರವಂತೆ ಪೊಗಳುತೆ ನೇಹದಿಂ ನೋಡು ತಿಪರ್ಗಳ್ (ಪದ್ಮರಾ. ೩-೬೨). ತೀಂತೆ : ೨. ‘ನಾಲಗೆತೀಂತೆ’ ಪರಾ. ತೀಟ್ಟ$_3$ : ೧. ಆ ಕುಣಿಕೆಯ ತೀಟದಿಂದೊಮ್ಮೆ ಅಶ್ರುವಂದ ಪಂಸರದಲ್ಲಿ ಅಲೆಯುತ್ತಿದ್ದನು (ನಾಡೋಜ. ೪). ತೀಟೆ : ೧. ಮೇಣೊಂದನೊಂದೊದೆದು ಹಿಂದಣ ಮಿರಾಗಳಿಂ ಮಾಣದಡಿಗಡಿಗೆ ಕಂದದ ತೀಟೆಗಳ ತೀಡಿ . . . ಬಿಱುಗೊಂಡವು (ಜೈಮಿಭಾ. ೨೫-೮) : ಪೀಠ ಮೂಢಗೆ ಹೊಲ್ಲ ಕೀಟ ನಿದ್ದೆಗೆ ಹೊಲ್ಲ ತೀಟೆಯದು ಹೊಲ್ಲ ಕಜ್ಜಿಯ (ಸರ್ವಜ್ಞ. ೮೨೦): ಕೂರ್ಮಾವತಾರ ಮಾಡಿದ ಸ್ವಾಮಿಯು ಬೆನ್ನಿನ ತೀಟೆಯ ನಿವಾರಿಸುವನ: (ಕೀಪಧ. ೨೫-೩೨); ಮಂಡೆಯ ತೀಟೆ, ಸೀನು . . . ಇವು ಜ್ವರ ಬಡುವವನ ಲಕ್ಷಣ (ವೈದ್ಯಸಾ. I, ೪೯). ೨. ಭಕ್ತರಿಂಗೆನ್ನ ಕೈಗಳ ತೀಟೆ ಹೋಗಲ್ಕೆ ತೊತ್ತಗೆಲಸಂಗೆಯ್ಕಲನುವಾಯಿತ್ತೆನುತ (ಬಸಪು. ೨೦-೭) ; ತೋಳ ತೀಟೆ ಯಾನವನ ನೆತ್ತಿಯ ಮೇಲೆ ಕಳೆವೆನು (ಕುಮಾರಭೀ. ೧-೬೦) ; ನಿನ್ನ ಯುದ್ಧದ ತೀಟೆಯನ್ನು ತೀರಿಸಿಬಿಡುತ್ತೇನೆ (ಪಕಥಾ. ೩೦೭). ೪. ಬೆದೆ ; ನಸೆ : ಆ ತೀಟೆ ತೀರಿಸಿಕೊಳ್ಳುವ ಅಭಿಲಾಷೆಯಿಂದ ಅವನು ಪಾತರ ಪಾರಿಯನ್ನು ಸಂಧಿಸಬಹುದಾಗಿತ್ತು (ದೀಪಹ. II, ೧೯೨) : ತೀಟೆಗೆ ಮಕ್ಕಳ ಹೆತ್ತು ತಿರುಮಲದೇವರ ಹೆಸರಿಟ್ಟ ಹಾಗೆ (ಗಾದೆ). ೫. ಕೀಟಲೆ ; ಚೇಷ್ಟೆ ; ತಂಟತನ: ನನ್ನ ತಮ್ಮ ತೀಟೆಯವ (ಚಂಗೂರಿ. ೧೪೦). ೬. ಕೋಟಲೆ; ತೊಂದರೆ ; ಪೀಡೆ : ಇನ್ನೊಂದು ವರ್ಷದ ತನಕ ತೀಟೆ . . . ತಪ್ಪಿತು (ನನ್ನೂರು. ೦೪೮). ೭. ಅಗತ್ಯ ; ಆವಶ್ಯಕತೆ : ಅಲ್ಲಿಗೆ ಬರೋಕೆ ನನಗೇನು ತೀಟೇನೆ ? (ಮುನಿಮಾ. ೮೦) : ತೀಟೆಯಾದರೆ ತಾನೇ ಬರುತ್ತಾನೆ (ರೂಢಿ).
[ ದೇ.॥ ತೆಲು. ತೀಟ, ತೀಂಟ್ರ ]

**ತೀಂಟೆ$_2$** ‘ತಿಟ್ಟು$_3$’ ನೋ.

**ತೀಂಟೆತ್ತು** (ಕ್ರಿ). ನವೆಯುಂಟಾಗು ; ತುರಿಕೆಯಾಗು : ಒರಿದುಂ ತೀಂಟೆತ್ತಿ ಗಂಡಸ್ಥಳಮನನುದಿನಂ ಕಾಡ ಸೊಕ್ಕಾನೆಗಳ್ಪಂದೊರಸಲ್ (ಕಾದಂಪೂ. ೨೨೨).
[ ತೀಂಟೆ$_1$ + ಎತ್ತು$_1$ ]

**ತೀಂತೆ** ‘ತೀಂಟೆ$_1$’ ನೋ.

ತೀಂತೇರಾ 'ತೀನತೇರ' ನೋ.

ತೀಕು 'ದೇಕು' ನೋ.

ತೀಕ್ಷ್ಣ (ಗು). ೧. ಚೂಪಾದ; ಹರಿತವಾದ: ಸುರಶರಾಸನದಂತೆ ನಿರ್ಗುಣರುಂ ತೀಕ್ಷ್ಣಕೌಕ್ಷೇಯದಂತೆ ನಿಸ್ತ್ರಿಂಶಭಾವರುಂ (ಸುಕುಮಾ. ೨-೩೪): ಉತ್ಪಾತ ತೀಕ್ಷ್ಣಕೌಕ್ಷೇಯಕಸನಾಥಶಯನ ಪಾರ್ಶ್ವಭಿತ್ತಿಭಾಗಮುಂ (ಚಂದ್ರಪ್ರ. ೩-೯೭ ವ). ೨. ಬಿಸುಪಾದ; ಉಷ್ಣವಾದ. 'ತೀಕ್ಷ್ಣಾಂಶು' ಪರಾ. ೩. ಕ್ರೂರವಾದ; ನಿರ್ದಯವಾದ: ಅನ್ನೆಗಮಿತ್ತ ವಿಭೀಷಣಾ ದೇಶದಿಂಬಂದ ತೀಕ್ಷ್ಣಪುರುಷರ್ ಪುರಮಂ ಪೊಕ್ಕು (ಹಂಪಾಮಾ. ೩-೨೭ವ): ತನ್ನಂ ಕೊಲಲರಸನಟ್ಟಿದ ತೀಕ್ಷ್ಣಪುರುಷಂ ಬಂದು (ಹಂಪಾಮಾ. ೦೦-೯೩ ವ). ೪. ಕಟುವಾದ; ಖಾರವಾದ. ೫. ಬಲವುಳ್ಳ; ಶಕ್ತಿಯುಳ್ಳ. ೬. ತವಕಿಸುವ; ಆತುರವುಳ್ಳ. (ನಾ). ೭. ಹರಿತವಾದುದು; ಚುರುಕು: "ತಿಕ್ಕನೆ ತೀಕ್ಷ್ಣಂ" (ಕವಿಕಂ. ೩೪); ಅವನ ಕಣ್ಣು ಹದ್ದಿನ ಕಣ್ಣಿನ ಹಾಗೆ ಬಲು ತೀಕ್ಷ್ಣ (ಮುಂಬಯಿ. ೪-೪೩); ಅವಳ ಬುದ್ಧಿ ತೀಕ್ಷ್ಣ (ಮುಕಿನಾ. ೦೫). ೮. ಉಷ್ಣತೆ; ಬಿಸಿ: "ತಿಗ್ಮಂ, ತೀಕ್ಷ್ಣಂ, ಖರಂ–ಈ ೩ ಬಿಸಿಯ ಹೆಸರು" (ಸಿದ್ಧಾಂತಿ. ೩೩) ೯. ಕಠಿನವಾದುದು; ನಿಷ್ಠುರವಾದುದು: "ತೀಕ್ಷ್ಣಂ ಪರುಷಾಪ್ರಿಯಂ" (ನಾನಾರ. ೦೨೦). ೧೦. ತೀವ್ರತೆ. ೧೧. ಉಗ್ರತೆ. ೧೨. ಆಯುಧ. ೧೩. ವಿಷ; ನಂಜು: "ಬ್ರಹ್ಮಪುತ್ರಃ... ತೀಕ್ಷ್ಣಃ–ಈ ೭ ವಿಷಂ" (ಹಲಾಯು. ೦೦೬-೨೪); "ರಸಂ ತೀಕ್ಷ್ಣಪ್ರದೀಪನ ಮದೋರಂತೆ ವಿಷಮಕ್ಕು" (ಮಂಗರಾ. ೦೨೯-೩). ೧೪. ಕಬ್ಬಿಣ; ಉಕ್ಕು: "ಶಸ್ತ್ರಂ, ತೀಕ್ಷ್ಣಂ, ಅಯಃ, ಪಾರಸವಂ–ಈ ೪ ಉಕ್ಕು" (ಹಲಾಯು. ೨೪-೦೭). ೧೫. ಕಾಳಗ; ಯುದ್ಧ. [ಸಂ.]

ತೀಕ್ಷ್ಣಗಂಧಕ (ನಾ). ಒಂದು ಬಗೆಯ ಮರ; ನುಗ್ಗೆ: "ಶೋಭಾಂಜನಃ, ಶಿಗ್ರುಃ, ತೀಕ್ಷ್ಣಗಂಧಕಃ...ನುಗ್ಗೆಮರದ ಹೆಸರು" (ಸಿದ್ಧಾಂತಿ. ೦೦೫). [ಸಂ.]

ತೀಕ್ಷ್ಣಗು (ನಾ). ಬಿಸುಪಾದ ಕಿರಣಗಳುಳ್ಳವನು; ಸೂರ್ಯ: ಏಟನೆಯ ಗೇಹಂ ಕನ್ನೆಯಾದಂಶು... ತೀಕ್ಷ್ಣಗು ಲಗ್ನಸ್ಥಿತನಾಗೆ ಪೆಣ್ಣ ಕತದಿಂ ಸಾಯ್ಗುಂ ನಿಡಾವಾಸದೊಳ್ (ಜಾತಕ. ೨೩-೮). 'ತೀಕ್ಷ್ಣಗುಜ' ಪರಾ. [ಸಂ. (ತೀಕ್ಷ್ಣ + ಗೋ + –)]

ತೀಕ್ಷ್ಣಗುಜ (ನಾ). ಸೂರ್ಯನ ಮಗ; ಶನಿ: ಪಗಲೊಳ್ ತಂದೆ ದಿವಾಕರಂ ಜನನಿ ಶುಕ್ರಂ ರಾತ್ರಿಯೊಳ್ ತಂದೆ ತೀಕ್ಷ್ಣಗುಜಂ ಮಾತ್ರ ಸುಧಾಮರೀಚಿ (ಜಾತಕ. ೩-೬). [ಸಂ.]

ತೀಕ್ಷ್ಣಗೊಳಿಸು (ಕ್ರಿ). ಉಜ್ವಲವಾಗುವಂತೆ ಮಾಡು; ಹರಿತಗೊಳಿಸು: ಯಾವುದರ ಮೇಲೆ ಗಮನವಿಡಬೇಕೋ ಅದರ ಹೊಳಪು, ಬಣ್ಣ, ಆಕಾರ, ಶಬ್ದ ಮುಂತಾದ ಗುಣಗಳನ್ನು ತೀಕ್ಷ್ಣಗೊಳಿಸುವುದರಿಂದ ಮಕ್ಕಳ ಅವಧಾನ ಅದರ ಕಡೆ ಚೆನ್ನಾಗಿ ಬೀಳುತ್ತದೆ (ಶಿಕ್ಷಣ. ೪೭೮).

[ತೀಕ್ಷ್ಣ + ಕೊಳ್$_1$ + – ಇಸು$_1$]

ತೀಕ್ಷ್ಣತೆ (ನಾ). ಚುರುಕು: ಗಮನ ವಿಸ್ತರಿಸುವ ಪರಿಮಾಣಕ್ಕೆ ವಿಲೋಮವಾಗಿ ಅದರ ತೀವ್ರತೆ ತೀಕ್ಷ್ಣತೆಗಳು ಕಡಿಮೆಯಾಗುತ್ತವೆ (ಶಿಕ್ಷಣ. ೩೦೪); ಸಹಜವಾದ ದೃಷ್ಟಿಯ ತೀಕ್ಷ್ಣತೆ ಎಂದರೆ... ಓದುವ ಚಾರ್ಟಿನ ಸಾಲನ್ನು ಗುರುತಿಸುವ ಶಕ್ತಿ (ನಿಮ್ಮಕಣ್ಣು. ೩೩). [ಸಂ. ತೀಕ್ಷ್ಣತಾ]

ತೀಕ್ಷ್ಣಧಾರೆ (ನಾ). ಹರಿತವಾದ ಅಲಗುಳ್ಳ ಕತ್ತಿ: ಸಾಲದೀವಿಗೆ ಗಳನು ಶಸ್ತ್ರಜ್ವಾಲೆ ವಿಕ್ಕವು ತೀಕ್ಷ್ಣಧಾರಾಭೀಳವಿಕ್ರಮವಿಸ್ಫುಲಿಂಗಿತ ವಾದವಡಿಗಡಿಗೆ (ಕುಮಾರವ್ಯಾ. ೮-೬). [ಸಂ. ತೀಕ್ಷ್ಣಧಾರಾ]

ತೀಕ್ಷ್ಣಬುದ್ಧಿ (ನಾ). ೧. ಚುರುಕಾದ ಬುದ್ಧಿ; ಹರಿತವಾದ ಬುದ್ಧಿ: ವಿಜ್ಞಾನಿಗಳಲ್ಲಿ ವಿಚಾರಪರತೆ, ತೀಕ್ಷ್ಣಬುದ್ಧಿ ... ಇಂತಹ ಹಲವು ಉತ್ತಮಗುಣಗಳಿದ್ದರೂ (ಜುಕ್ಕಾರಿ. ೨೬ ಪೀಠಿಕೆ). ೨. ಚುರುಕಾದ ಬುದ್ಧಿಯುಳ್ಳವನು. [ತೀಕ್ಷ್ಣ + ಬುದ್ಧಿ]

ತೀಕ್ಷ್ಣಮತಿ (ನಾ). ೧. ಚುರುಕಾದ ಬುದ್ಧಿ: ಈ ಸಣ್ಣ ವಿಷಯ ನಿನ್ನ ತೀಕ್ಷ್ಣಮತಿಗೆ ಹೊಳೆಯಲಿಲ್ಲವೆ? (ಜ್ಯೋತಿ). ೨. ಚುರುಕಾದ ಬುದ್ಧಿಯುಳ್ಳವನು: ನೆಕ್ಲದೋವ್ ತೀಕ್ಷ್ಣಮತಿಯೆಂದು ಗಣ್ಯ ನಾಗಿದ್ದುದರಿಂದ... ಅವಳ ಆಪ್ತವರ್ಗದಲ್ಲೊಬ್ಬನಾಗಿದ್ದನು (ಪುನರು. ೧೩೦): ಪ್ರತಿಯೊಂದು ಹೊಸಗ್ರಂಥವನ್ನು ತೀಕ್ಷ್ಣಮತಿಯಾಗಿ ತೀವ್ರಗತಿ ಯಿಂದ ಅವಲೋಕಿಸಬೇಕು (ಗ್ರಂಥಾಲ ೬೯). [ತೀಕ್ಷ್ಣ + ಮತಿ]

ತೀಕ್ಷ್ಣಾಂಶು (ನಾ). = ತೀಕ್ಷ್ಣಗು: ತೀಕ್ಷ್ಣಾಂಶುವಿಂ ಸೌಮ್ಯನಿಂ ತ್ವರಿತಂ ಶುಕ್ರನೆ ಮಿಕ್ಕು ಪೋಗೆ ಮಚುಗೆಗಳ್ ಕೊಳ್ಗುಂ ಧರಾಚಕ್ರದೊಳ್ (ಅಟ್ಟಮ. ೬-೦೨೪). [ತೀಕ್ಷ್ಣ + ಅಂಶು]

ತೀಕ್ಷ್ಣಾಗ್ನಿ (ನಾ). ಜಠರಾಗ್ನಿಯ ನಾಲ್ಕು ಸ್ಥಿತಿಗಳಲ್ಲಿ ಒಂದು; ಪಿತ್ತಾಗ್ನಿಯಿಂದ ಉಂಟಾಗುವ ಉಷ್ಣ: ತೀವ್ರವಾದ ಜಠರಾಗ್ನಿ ವಿಷಮಾಗ್ನಿಯಲ್ಲಿ ವಾತಹರ ಚಿಕಿತ್ಸೆಯನ್ನೂ, ತೀಕ್ಷ್ಣಾಗ್ನಿಯಲ್ಲಿ ಪಿತ್ತಶಮನ ಕ್ರಿಯೆಯನ್ನೂ ಮಾಡುವುದು (ಸಕವ್ಯ. ೦೬). [ತೀಕ್ಷ್ಣ + ಅಗ್ನಿ]

ತೀಕ್ಷ್ಣಾಪಾಂಗ (ನಾ). ಮೊನಚಾದ ಕಟಾಕ್ಷ: ತವಿರಚಿಕುರಂ ತೀಕ್ಷ್ಣಾಪಾಂಗಂ ಘನಂ ಜಘನಸ್ಥಳಂ ಕಮಳಚರಣಂ ಕಣ್ಗೊಳ್ಪಿತ್ತಾ ಧರಾಧಿಪ ಕಾಂತೆಯಾ (ರಾಜಶೇ. ೩-೦೮). [ತೀಕ್ಷ್ಣ + ಅಪಾಂಗ]

ತೀಕ್ಷ್ಣೀಕರಣ (ನಾ). ಹರಿತಗೊಳಿಸುವಿಕೆ: "ತಿತಿಕ್ಷ—ಶಾತನೇ, ಕ್ರಮಾಯಾಂಚ, ತೀಕ್ಷ್ಣೀಕರಣದೊಳಂ, ತಾಳ್ಮೆಯೊಳಂ, ದೀಪ್ತಿಯೊಳಂ" (ಶಾಕಕ್ರ. ೯೭). [ಸಂ.]

ತೀಕ್ಷ್ಣೀಕರಿಸು (ಕ್ರಿ). ತೀಕ್ಷ್ಣಗೊಳ್ಳುವಂತೆ ಮಾಡು: "ತಿತಿಕ್ಷತೇ–ತೀಕ್ಷ್ಣೀಕರಿಸಿದಪಂ" (ಶಾಕಕ್ರ. ೯೭). [ತೀಕ್ಷ್ಣೀಕರಣ + – ಇಸು$_1$]

ತೀಕ್ಷ್ಣೋಪಾಯ (ನಾ). ಪ್ರಬಲವಾದ ಉಪಾಯ; ಉಗ್ರವಾದ ಉಪಾಯ; ಕಟುವಾದ ಉಪಾಯ: (೩).

[ತೀಕ್ಷ್ಣ + ಉಪಾಯ]

ತೀಕ್ಷ್ಣೌಷಧ (ನಾ). ಕಟುವಾದ ಔಷಧ; ಕಹಿಯಾದ ಮದ್ದು: ಕೊಲು ತಿರ್ವಯ್ಯಗಳೋದು ಬೇನೆಯಳಿವಾ ತೀಕ್ಷ್ಣೌಷಧಂ...ಮುಂ ಪಲಕಪ್ಪಂ ಕಡೆಗೊಳ್ಳಿತ್ತೆ (ಸೋಮೇಶ.೯೭). [ತೀಕ್ಷ್ಣ + ಔಷಧ]

ತೀಗ 'ತಿಕ' ನೋ.

ತೀಟ$_1$ (ನಾ). ೧. ಮೃದುವಾದ ಸ್ಪರ್ಶ,—ಸೋಂಕು: ತಿಳಿಪಲಡಿಗೆಟಗಿ ದೋಪನ ತಳಂಗಳಾ ತೀಟದಿಂ ಪದಂಗಳೊಳೊಗೆದಾ ಪುಳಕಚಯಂಗಳ್ ಕಳೆದುವು ಮುಳಿಸಂ ನಲ್ಲಳ್ಗೆ (ಕವಿರಾ. ೩-೦೦೪); ಅಲರ್ದಲರ್ಗಣ್ಗಳ್ ನೋಟದೆ ಸುಲಲಿತ ತನು ಶಿಶುವ ಮೆಯ್ಯ ತೀಟದೆ ತನಗಗ್ಗಲಿಸಿದಲಂಪಂ ಕುಡೆ (ಆದಿಪು. ೬-೪೭). ೨. (ಗಾಳಿ) ತೀಡುವಿಕೆ; ಬೀಸುವಿಕೆ: "ತೀಟ ಮೆಂದುಂ ತೀಡೆಂದುಂ ತೀಡುವುದೆಂದುಂ ಊದುವುದೆಂದುಂ ವಾಯು ಸಂಚಾರಂ" (ಶಶಸಾ. ೩೦-೬೩೦); ಒದವಿ ಬಸಂತದೊಳ್ಪಯಸಿದಂದದ ತೆಂಬೆಲರೊಂದು ತೀಟವಿಲ್ಲದ ಸಹಕಾರವಲ್ಲರಿಯ ತೋರ್ಕೆಗವೊಪ್ಪುವ ಭೃಂಗ ಸಂಗವಿಲ್ಲದ ನವಪದ್ಮಿನೀಮುಕುಳದಿಕ್ಕೆಗವೆನೆ ನೆಱೆಯಾಗಿ ಶೋಭೆ ವೆತ್ತುದೊ ಪರಿಶೋಭೆವೆತ್ತಿರೆ ವಿಲಾಸದ ವಿಭ್ರಮದೇಟಗ್ಗೆ ಕನ್ನೆಯಾ (ಸುಕುಮಾ. ೫-೬೦); ದಿನಕರನ ಹಯಂ ಗಗನಾಧ್ವಖೇದಮಂ ಪಟಿಯಿಗೆಗಳ ತಣ್ಣೆಲರ ತೀಟದಿಂ ತೊಲಗಿಸುಗುಂ (ಹಂಪಾಮಾ. ೧-೦೦೬): ತೆಂಕಣಗಾಳಿಯ ತೀಟದಿ ವನತರುಸಂಕುಳ ಚಿಗುರೇಱುವಂತೆ (ಭರತ. ೫೫-೮೦); ಮರಗಳ ದಟ್ಟೈಸುವಿಕೆಯಿಂದ ತಂಗಾಳಿಯ ತೀಟಕ್ಕೆ ಅಡಚಣೆಯಾಗಿದ್ದರೂ ಅದರ ಕುಳಿರ್ಪು ಎಲ್ಲ ಕಡೆಯೂ ಹಸರಿಸಿತ್ತು (ಕಾನೂರು. ೪೨). ೩. ಚೇಷ್ಟೆ; ವಿನೋದ: ನಾಟಕಸತಿಯುರಲ್ಲವೆ ನೀನು ತಾನೆಂದು ಚಾಟಾಗಿ ನುಡಿದರೆ ನೃಪಗೆ ತೀಟವೇಳುತಿದೆ ಸುಮ್ಮನೆ ನೋಡುತಿಹವಿವರಾಟವನೆಂದೆಣಿಸಿದರು (ಭರತ. ೦೪-೯೦). [<ತೀಡು$_1$]

**ತೀಟ$_2$** 'ತೀಂಟೆ$_1$' ನೋ.

**ತೀಟಕಸಂದಿ** 'ತೀಟಕಸಿಂಧ' ನೋ.

**ತೀಟಕಸಂಧಿ** 'ತೀಟಕಸಿಂಧ' ನೋ.

**ತೀಟಕಸಿಂಧ, ತೀಟಕಸಂದಿ, ತೀಟಕಸಂಧಿ** (ನಾ). ತುರುಬೆಯ ಬಳ್ಳಿ; ನಸುಗುನ್ನಿಗಿಡ: ತೀಟಕಸಿಂಧ ಬೇರಿನ ನಾರು ಒಂದು ಹಿಡಿ...ಕುಡಿಯಲು ಬಹುಮೂತ್ರ ನಿಲ್ಲುವುದು (ಸಕವೈ. ಪರಿ. ೩೦೦). ತೀಟಕಸಂಧಿ: ತೀಟಕ ಸಂದಿಬೇರು, ಬೆಲ್ಲವತ್ತ್ರದ ಬೇರು ಇವುಗಳನ್ನು ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ಸನ್ನದಲ್ಲಿ ಬರುವ ಜ್ವರಂ ಗುಣಮಕ್ಕುಂ (ಸಕವೈ. ೦೧೧). ತೀಟಕಸಂಧಿ : " ಯಾಸಃ, ಯಾವಾಸಃ ...೧೦ ತೀಟಕಸಂಧಿ ಹೆಸರುಗಳು " (ಸಿದ್ಧಾಂತಿ. ೦೧೬) ; ತೀಟಕಸಂಧಿಬೇರು, ಕಕ್ಕೇಪಟ್ಟೆ ಇವುಗಳ ಕಷಾಯವನ್ನು ಹಾಕಿ ತೆಗೆದುಕೊಳ್ಳಲು ವಾತಶ್ಲೇಷ್ಮ ಜ್ವರಪರಿಹಾರವಾಗುವುದು (ಸಕವೈ.೯೬).

[ ← ತೆಲು. ತೀಟಕಸಿಂದ ]

**ತೀಟಕೋಗಿಲ** (ನಾ). = ತೀಟಕಸಿಂಧ : ತೀಟಕೋಗಿಲಬೇರು. ತಳಸಿಂಗ ... ಧಾನ್ಯ ಪುಟವಿಟ್ಟು ಪ್ರಾತಃಕಾಲದಲ್ಲಿ ಒಂದು ದುಡ್ಡು ತೂಕ ಸೇವಿಸಿದರೆ (ಸಕವೈ. ಪರಿ. ೪೩೨). [← ತೆಲು. ತೀಟಕೋವಿಲ]

**ತೀಟು** 'ತೀಂಟು' ನೋ.

**ತೀಟೆ** 'ತೀಂಟೆ$_1$' ನೋ.

**ತೀಟೆಗಾರ** (ನಾ). ೧. ಚಾಪಲ್ಯವುಳ್ಳವನು. 'ಬಾಯಿತೀಟೆಗಾರ' ಪರಾ. ೨. ಕುಚೇಷ್ಟೆ ಮಾಡುವವನು ; ಕೀಟಲೆ ಮಾಡುವವನು.

[ತೀಟೆ (< ತೀಂಟೆ$_1$) + – ಗಾರ (< – ಕಾಱ)]

**ತೀಟೆಜಗಳ** (ನಾ). ೧. ಕೀಟಲೆ ಜಗಳ. ೨. ಕೆಲಸಕ್ಕೆ ಬಾರದ ಜಗಳ ; ವ್ಯರ್ಥವಾದ ಜಗಳ : (ಆ).

[ತೀಟೆ (< ತೀಂಟೆ$_1$) + ಜಗಳ (< ಜಗಳ)]

**ತೀಡಿಸು** (ಕ್ರಿ). ಉಜ್ಜಿಸು ; ತಿಕ್ಕಿಸು ; ನೀವಿಸು : ನೋವು ಹೊರಟು ಹೋದ ನಂತರ ಕೈಕಾಲುಗಳನ್ನು ಚಲಿಸಬೇಕು. ಮಾಂಸಖಂಡಗಳನ್ನು ತೀಡಿಸಬೇಕು (ಕಲರಿಪೋ. ೪೮). [ತೀಡು$_2$ + –$_4$ಇಸು$_3$]

**ತೀಡು$_1$** 'ತೀಂಟು' ನೋ.

**ತೀಡು$_2$, ತಿವುಡು$_1$** (ಕ್ರಿ). ೧. ಮಸೆ ; ಉಜ್ಜು ; ತಿಕ್ಕು ; ಹರಿತಮಾಡು : "ಧಾವನಂ ತೀಡುವುದೆನಿಕ್ಕುಂ" (ಮಂಗರಾ. ೧೦೦-೨೩) ; ದಾಡೆಗಳನಡು ಯೊಳಂಬಂ ತೀಡುತ್ತುಂ ತೀವ್ರಮಾಗೆ ಬಂಡಿಯ ಬರವಂ ನೋಡುತ್ತಿರ್ದಾ ಬಕನಂ ... ಕಂಡು ಮುಳಿದಂ ಭೀಮಂ (ಪಂಪಭಾ. ೩-೨೮) : ತೀಡುತ್ತೆ ಕಲ್ಲಿಂದುರುದಂಷ್ಟ್ರಾಗ್ರಂಗಳಂ ಭೂಮಿಯುಸಿರದೆ ಬೆರಂಟುತ್ತೆ ಮುಂಗಾಲ್ಗ ಳಿಂದಂ (ಗಿರಿಕ. ೦-೦೦೫) ; ಕುಸುಮಶರಾಸ್ತ್ರಮಂ ಸಸಿಯ ಸಾಣೆಯೊಳೀ ಮಧುವೆಂಬ ಕಮ್ಮಬಿಂ ಮಸೆಯಲೆವೇಡಿ ತೀಡಿದನೋ (ಪಾರ್ಶ್ವಪು. ೯-೯೮) ; ಮುಮ್ಮೊನೆಯ ಸೂನಗೆಯ ಹೊಗರುಗಳ ತೀಡಿದರು (ಕುಮಾ್ರಭೀ. ೪-೯೧) ; ಗಂಡ ಹೆಂಡಿರ ಜಗಳಾ ಗಂಧ ತೀಡಿಧಾಂಗ (ಗರತಿ. ೭೬) : ಚೌಕಟ್ಟಿನ ಮೇಲೆ ನೀರು ಹಚ್ಚಿ ಸಣ್ಣ ಹಲಗೆಯ ತುಂಡಿನಿಂದ ಅದನ್ನು ತೀಡುತ್ತಿದ್ದನು (ಕಪಪು. ೪-೧೩). ೨. ಅನುಲೇಪನಮಾಡು ; ಲೇಪಿಸು ; ಸವರು ; ಬಳಿ : ನಲ್ಲರ ಶಿಖೆಗಾಗ ಪೂಮಾಲೆಗಳ ಸುತ್ತಿ ಮೆಲ್ಲದೆಗನುಲೇಪನವ ಸೆಳ್ಳು ಗುರೊಳು ತೀಡಿ (ಕಂನವಿ. ೨೫-೦೩೫) ; ಸವುತೆಯನು ಮೆಲುವ ನಾಲಗೆಗೆ ಸುಣ್ಣಪನು ತೀಡಿ (ಕಏಪು. ೯೨-೫). ೩. ರೇಖಿಸು; ಬರೆ : ವಿಶಾಲಫಾಲದಲ್ಲಿ ಗೀರುಚಂದನರೇಖೆ ತೀಡಿಕೊಂಡು (ದೀಪಹ. II, ೮೯). ೪. ನೇವರಿಸು; ನೀವು: ಆತನ ಸರಳ ಸಾರವಂ ನಾಲ್ಕೆಂಟು ಕೂರಂಬಿನಿಂ ಕಡಿದು ನಾರಿಯಂ ತೀಡುತೆ (ಚಲಪು. ೫೨-೩೪) : ತೀಡಿದಂ ತಿರುವನೇಱಿಸಿ ಮಿಡಿದು ಚಾಪಮಂ ತಾಗಿದಂ (ಜೈಮಿಭಾ. ೧೨-೪೬) ; ಪಿಡಿದೆತ್ತಿ ತಲೆಯ ಕೂರಲ ತೀಡಿ ಕೈಗಳಂ (ಕಾಲೂರ. ೦೭೩-೩೮೭). ೫. ಒತ್ತು; ಅದುಮು : (ಆ).

೬. ಹೊಡೆ ; ಬಡಿ ; ಥಳಿಸು : ಕುದುರೆ ಲಗಾಮು ಜಗ್ಗಿಸಿ, ಚಾಪಟಿ ಯಿಂದ ತೀಡಿ ... ಕುಳಿತುಕೊಂಡನು (ಪುನರು. ೫೫೮); ಕೆನ್ನೆಗೆ ತೀಡಿ ಕೊಡೆ ದಿದ್ದರೆ ಹೇಗೆ (ಹುಡುಹು. ೧೮) : ಅವನಿಗೆ ನಾಲ್ಕು ತೀಡು, ಆಗ ತಾನೇ ದಾರಿಗೆ ಬರುತ್ತಾನೆ (ರೂಢಿ). ೭. ಆರಿಸು ; ನಂದಿಸು : ಅಂತು ನೋಡೆ ನೋಡೆ ಗಾಳಿ ತೀಡಿದ ದೀಪ ರೂಪದಂದದಿಂ ಶಾರದನೀರದಾಕಾರದಂದ ದಿಂದದೃಶ್ಯಾಕಾರನಾಗಿ(ಸುಕುಮಾ. ೧೦-೮೪) ; ಸಿಡಿಲಂ ದುರ್ಗುಪ ಶೇಷ ನಂ ತುಡುವ ಕಲ್ಪಾಂತಾಗ್ನಿಯಂ ತೀಡಿ ಬೊಟ್ಟಿಡುವ...ಗಣಾಧಿನಾಥರೊಡ ನೇಳ್ತಂದರ್ (ಕಲಕಂ. ೩-೦೯). ೮. ಉಂಟಾಗು ; ವ್ಯಕ್ತವಾಗು ; ಪ್ರಕಟ ವಾಗು : ಎಮಗೀ ಕೂಸಂ ಕಾಣಲೊಡಮತಿಸ್ನೇಹಂ ಮನಕ್ಕೆ ತೀಡಿದಪುದು (ಸುಕುಮಾ. ೬-೪) ; ಪದಾರ್ಥನಿಶ್ಚಯಂ ತನ್ನ ಮನಕ್ಕೆ ತೀಡೆ ಖಿಳಸಂಸರಣಕ್ಕೆ ವಿರಕ್ತೆಯಾಗಿ ... ತಾಳ್ದಿದಳೆಂದು ದೀಕ್ಷೆಯಂ (ಸುಕುಮಾ. ೮-೯೦). ೯. (ಉಕ) ಬರೆದುದರ ಮೇಲೆ ಬರೆ ; ತಿದ್ದು : ಮರುದಿನದಿಂದರಮಾ ಬಾಯರು ಕಾಗದದ ಮೇಲೆ ಎ.ಬಿ.ಸಿ.ಡಿ. ತೀಡ ಹತ್ತಿದರು (ಸಮುಜೀ. ೨೨೪) : ಅ ದಿಂದ ಜ್ಞದ ವರೆಗಿನ ಅಕ್ಷರಗಳನ್ನು ತೀಡ ಹಚ್ಚಿದರು (ಸ್ವಾತಿಚ. ೦೨೦). ೧೦. ಸರಿಪಡಿಸು ; ಪರಿಷ್ಕರಿಸು : ಆಗಾಗ ಇದನ್ನು ತಿದ್ದಿ, ತೀಡಿ ... ಆಶೀರ್ವದಿಸಿದ್ದಾರೆ (ಸಾಂದಸ. ii, ಮೊದಲ ಮಾತು). ೧೧. ಉಂಟು ಮಾಡು ; ಉಂಟಾಗಿಸು : ಕೂಡಿ ವಿಟನದ ಬಟ್ಟೆ ಸುಖವನೆ ತೀಡುತಿರಲ್ (ಪ್ರಭುಲೀ. ೧೪-೬) : ಸೂಡುವರ್ ಜಂತ್ರಮಂ ನೀರ್ ಸೂಸಲಾಡುವರ್ ತೀಡುವರ್ ನಗೆಯನಗಜೆಗೆ (ಚಲಪು. ೪೫-೫೯). ೧೨. ಹೊರಹೊಮ್ಮು ; ಹೊರಸೂಸು : ವಿಭೂಷಣಂಗಳೊಳ್ ತೀಡುವ ರಶ್ಮಿಗಳ್ ಮುಸುಳ್ದುವು (ಆದಿಪು. ೩-೩) ; ಮಣಿಮಯದ ಕಳಶದ ಝಾಡಿಪೆಳಗಿನ ಹೇಮರಸದಲಿ ತೀಡಿ ತೊಳಗುವ ಸುಧೆಯ ಸೊಂಪಿನ ಸೂಸಕಂಗಳಲಿ (ತೊರರಾ. ೫-೨-೨೫) ; ರಸೋಕ್ತಿಗಳನಾಡುತ್ತ ತೀಡುತ್ತ ಬೆಳ್ನಗೆಯ ಬೆಡಗುಗಳನು (ಜೈಮಿಭಾ. ೩೦-೦೮) ; ಕಂಗೊಳಿಸುವ ದಿವ್ಯಕಾಂತಿಯ ತೀಡುತ ಬಂಗಾರಚೌಕಿಯೊಪ್ಪಿ ದುದು (ಕಂನವಿ. ೭-೩೮). ೧೩. ಇಚ್ಛಿಸು; ಬಯಸು : ಆಡುವರಂ ಕಂಡಾ ಡುವ ಪಾಡುವರಂ ಕಂಡು ಪಾಡುವಂದಾನಂದಕ್ರೀಡೆಗೆ ಮಘವನ ಬಗೆಯುಂ ತೀಡಿದುದೇಂ ಪಿರಿದೊ ಜಿನನ ಪುಣ್ಯಾತಿಶಯಂ (ಪುಷ್ಪಪು. ೧೨-೨೩). ೧೪. ಘರ್ಷಿಸು ; ತಾಕು : ಒಂದು ನುಡಿ, ಒಂದು ಕಿಡಿ–ಕೊನೆಗೆ ಕಾಟ್ಕಿಚ್ಚು : ಬೀರರಿರ್ವರ್ ತೀಡೆ, ಬಿದಿರ ಮೆಳೆಗಿಚ್ಚು (ಅಶ್ವತ್ಥಾ. ೪೩-೮೫೫). ತಿವುಡು$_1$: ೪. ಚಿಂದಿಯ ಮುರುಹಿಟ್ಟು ಧೋತ್ರವ ತಿವುಡುತ ಕುಂದು ಪೆಚ್ಚರಿದು ಬಯಿವುತಲಿ ಸಂದ ಜಗಳ ಕಾಳಗದಂತ ಕೈಮುಟ್ಟಿ ಕೊಂಡಾಡುವರು ದಿಂಡಿ ಯರು (ತರ್ಕಕಾ. ೧-೯೭).

**ತೀಡಿ ತಿದ್ದು** = ರೂಪುಕೊಡು ; ನಯಗೊಳಿಸು: ಸುಳಿಗಾಳಿಯು ಸುಳಿದು ಹೂಗಂಪಿನೊಡನೆ ತೀಡಿ ತಿದ್ದುವುದು (ಕನ್ನಡಾ. ೦೪೦).

[ದೇ. ॥ ತಮಿ. ತೀಟ್ಟು, ತೀಜ್ಜು ; ತುಳು. ತೀಂಟು, ತೀಡು; ತೆಲು. ತೀಡು ; ನಾಯ್ಕಿ. ಧೀಟ್]

**ತೀಡು$_3$** (ನಾ). = ತೀಂಟೆ$_1$ ೧ : ಎನ್ನ ದೋರ್ದ್ವಯದ ತೀಡಂ ರೂಢಿಪೆಂ ಸಂಗರಾವನಿಯೊಳ್ ಬೇಗದೊಳೀಗಳೆಂದು ಬಗೆದಂ (ಕುಸುಮಾ. ೧೧-೦೩).

[< ತೀಡು$_1$]

**ತೀದ** 'ತೀರ್' ಪರಾ.

**ತೀದು** 'ತೀರ್' ಪರಾ.

**ತೀನ್** (ನಾ). ೧. ತಿನಿಸು; ಆಹಾರ : ಈತನಂ ವಾಸುಗಿ ಗರುಡನ ತೀಂಗೊಡ್ಡಿದಂ (ಕಾವ್ಯಾವ. ೮೧೪). ೨. ಕೆರೆತ ; ನವೆ : ಅಂತುಮಾ ತ್ತೋಳ ತೀನ್ ಕರಗಲ್ಕಾರ್ತಪುದಿಲ್ಲ (ಪಂಪಭಾ.೧೨-೦೩೫); ತೀನೆರ್ದೊರ್ಡುರ್ದ ಕರಟಮನಾನೆಗಳೊಱೆದುಗುವ ಪಾಲ್ ಜಗಿಲ್ತಿರೆ (ಲೀಲಾವ. ೮-೪೫) ; ಸೊರ್ಕಿದಾನೆಯ ಕಟಿಯೊಳ್ ಸೆಲೆಸಿದ ತೀನಂ [ಪಾಠಾಂ. ತಿಮುರಂ]

ತುರಿಸಿಯೆ ತೊಲಗಿಸಿದವು ನಖಮುಖಂಗಳಿಂ ಸಿಂಹಂಗಳ್ (ಪಾರ್ಶ್ವಪು. ೧೩-೯೯). ೩. ನಸೆ ; ಬೆದೆ. 'ತೀನ್ಮಸಗು' ಪರಾ. [< ತಿನ್]

ತೀನತೇರ, ತೀಂತೇರಾ, ತೀನುತೇರಾ (ನಾ). ಚಲ್ಲಾಪಿಲ್ಲಿ; ದಿಕ್ಕಾಪಾಲು; ಮೂರಾಬಟ್ಟೆ: ಈ ಕಾಲದಲ್ಲಿ ಚೀಣಾರಾಜ್ಯದ ಸ್ಥಿತಿಯು ಬಹಳ ಗಲಭೆಯಾಗಿ ತೀನತೇರವಾಗಿತ್ತು (ಕಾಂಪೂಕ. ೮). ತೀಂತೇರಾ :(೬). ತೀನುತೇರಾ : ಅಲ್ಲಿ ರೈತರು ಹಲಾಕಾಗಿ ತೀನುತೇರಾ ಆಗಿಹೋದರು. ಗ್ರಾಮಗಳಲ್ಲಿ ದೀಪ ಉರಿಯಲಿಲ್ಲಾ. ಹಾಳುಬಿದ್ದು ಹೋಯಿತು (ರಾಜೇಂದ್ರ. ೩೨೯). [ ← ಮರಾ. ತೀನ್‌ತೇರಾ ; ಹಿಂ. ತೀನ್‌ತೇರಹ್ ]

ತೀನಾಳಿ 'ತಿನ್ನಾಳಿ' ನೋ.

ತೀನಿ 'ತಿನ್ನಿ$_1$' ನೋ.

ತೀನಿಗ (ನಾ). = ತಿನ್ನಾಳಿ: "ಗ್ರಸಕಃ, ಗ್ರಸಮಾನಃ – ಈ ೨ ತೀನಿಗಂ" (ಕಾಶಕ್ಯ.೧೨೩). [ತೀನಿ (<ತಿನ್ನಿ$_1$) +–ಗ]

ತೀನು (ನಾ). ಬೇಲಿ ಅಥವಾ ತಡಿಕೆಗೆ ಆಧಾರವಾಗಿ ಕೊಡುವ ಕಂಬ. — ದಸಿ : ಆಳು ಬೇಲಿ ಕಟ್ಟಲು ತೀನು ನೆಡುತ್ತಿದ್ದಾನೆ (ರೂಢಿ). [?]

ತೀನುತೇರಾ 'ತೀನತೇರ' ನೋ.

ತೀನೆ 'ತಿನ್ನಿ$_1$' ನೋ.

ತೀನ್ಮಸಗು (ಕ್ರಿ). ನಸೆ ಹೆಚ್ಚು ; ಕಾಮಾತುರ ಹೆಚ್ಚು: ವ್ಯೆ ಪಜು ಪಜುಯಾಗಿ ತೀನ್ಮಸಗಿ ಸೋಲಮುಗುಂದಲೆಯಾಗಿ ಕೂಡುವಟ್ಟಚಂ ಮಿಂಗೆ (ಸೂಕ್ತಿಸು. ೦೯-೩೩). [ ತೀನ್ + ಮಸಗು$_1$ ]

ತೀನ್ಮಸೆ, ತೀವ್ಮಸೆ (ಕ್ರಿ). ನವೆ ಹೆಚ್ಚಾಗು ; ತಂರಿಕೆ ಉಂಟಾಗು : ಮೆಯ್ಯು ತೀನ್ಮಸೆದೊಡೆ ಕೋಡೊಳಿಟ್ಟೊರಸಿ ನೀರ್ಗಳಸಿದೊಡೆ ತಂದು ನೀರನೂಡಿಸಿ (ಚಂದ್ರಪ್ರ. ೫-೩೪). ತೀವ್ಮಸೆ: ತೀವ್ಮಸಪ ರಸನೆ ಯಸಕಮುದಮ್ಮೊಡನೇಕಿಸಿತು ಬಿಡಿವಿದೇತಜ ಬಿಂಕಂ (ವೃಷವಿ. ೪೦-೪೪).

[ ತೀನ್ + ಮಸೆ$_1$ ]

ತೀಬನು (ನಾ). ಒಂದು ಬಗೆಯ ಔಷಧಿದ್ರವ್ಯ : ಅಜವೋದ, ತೀಬನು, ಕೊಡಸಿಗನ ತಿಗಡು....ಇಷ್ಟನ್ನೂ ಸಮಾನವಾಗಿ ಚೂರ್ಣವ ಮಾಡಿ (ವಿಷ್ಯವಿ. ೩೩). [?]

ತೀಬು (ನಾ). ಲವಂಗ : "ಲವಿ ಲವಂಗಂ ದೇವಕುಸುಮಮೆನೆ ತೀಬು" (ಮಂಗರಾ. ೪೩-೪೦). 'ತಿಬ್ಬ$_2$' ಪರಾ. [?]

ತೀಬ್ರಕರ (ನಾ). ೧. ಅಧಿಕವಾದ ಕಾಂತಿಯುಳ್ಳವನು. ೨. ಸೂರ್ಯ. ೧, ೨ : ಜಿತಪಂಚೇಷುತ್ವದಿಂದೀಶ್ವರನೆನಿಸಿಯುಮುದ್ಧತ್ವಧಾಕಾಂತ ನತ್ಯೂರ್ಜ್ವಿತತೇಜೋಲಕ್ಷ್ಮಿಯಿಂ ತೀಬ್ರಕರನೆನಿಸಿಯುಂ ದೃಶ್ಯರೂಪಂ (ಎಕ. V, ಹಾಸನ. ೦೩೦-೮ ; 1147). [< ಸಂ. ತೀವ್ರಕರ]

ತೀಬ್ರಕಿರಣ (ನಾ). = ತೀಬ್ರಕರ ೨: ವಿಜಯಲಕ್ಷ್ಮೀಕಾನ್ತನಹಿತಕ್ಷತಾನ್ತ ರಿಪುಸುದತೀವದನಕುವಳಯ ತೀಬ್ರಕಿರಣಂ (ಎಕ. XI, ಚಿತ್ರದು.೦೩-೦೪ ; 1224?). [< ಸಂ. ತೀವ್ರಕಿರಣ]

ತೀಬ್ರತೇಜ (ನಾ). ಅಧಿಕವಾದ ತೇಜಸ್ಸುಳ್ಳವನು : ಆ ಬ್ರಹ್ಮನೊಸ್ತ್ರೀಗರ್ ಭಸಿತಸಂಪತ್ತಿಗರ್ ತೀಬ್ರತೇಜರ್(ಚಬಪು.೩೯-೨೦). [<ಸಂ. ತೀವ್ರತೇಜಸ್]

ತೀಬ್ರಪಾತ (ನಾ). ಉಗ್ರವಾದ ದಾಳಿ : ತನ್ನಯ ತೀಬ್ರಪಾತದಿಂದಿ ಟ್ಟೊರಸಲ್ಕೆ ಬರ್ಪನಿನನೆಂಬಿನಿತುಮ್ಮಳಮಾಗೆ (ಶಾಂತೀಶ್ವ. ೦೦-೯೦).

[< ಸಂ. ತೀವ್ರಪಾತ]

ತೀಬ್ರಪ್ರತಾಪ (ನಾ). ಉಗ್ರವಾದ ಪರಾಕ್ರಮ ; ಅತಿಯಾದ ಶೌರ್ಯ : ಮೆಯ್ಗಲಿ ಬಲ್ಲಾಳನೃಪಂಗಂ ಅಂಗಜಜಯೋತ್ತುಂಗ ಧ್ವಜಾಕಾರ ಪದ್ಮಲ ಮಾದೇವಿಗಂ ಅಗ್ರಸೂನು ನರಸಿಂಹೋರ್ವ್ವೀಶ್ವರಂ ಪುಟ್ಟಿದಂ ದೆಸೆಯಂ ತಳ್ಪೊಯ್ಯೆ ಕೀರ್ತಿಪ್ರಸರದೊಡನೆ ಕಾಲ್ಗೂಡಿ ತೀಬ್ರಪ್ರತಾಪಂ (ಎಕ. V. (ಚನ್ನರಾ. ೨೦೩ ; 1220). [ < ಸಂ. ತೀವ್ರಪ್ರತಾಪ ]

ತೀಬ್ರರುಗ್ಮಂಡಳ (ನಾ). ಸೂರ್ಯಮಂಡಲ; ರವಿಮಂಡಲ: ಉದ್ಧತರ ನೆತ್ತಿಯುಬತ್ತಿವೊಲಾಯ್ತು ತೀಬ್ರರುಗ್ಮಂಡಳಮಂ ದಿಟಂ ಮಿಗುವ ತೇಜದ ದಳ್ಳುರಿ (ಎಕ. V. ಅರಸೀ. ೧೨೭–೨೫ ; 1152).

[ < ಸಂ. ತೀವ್ರರುಙ್ಮಂಡಲ ]

ತೀಮ್ಮಸೆ 'ತೀನ್ಮಸೆ' ನೋ.

ತೀಯ (ನಾ). ಬಯಕೆ ; ಬೆದೆ. 'ತೀಯಕಾರ್ತಿ' ಪರಾ.

[ ← ತೆಲು. ತೀಯ ]

ತೀಯಕಾರ್ತಿ (ನಾ). ತೀಟೆಯುಳ್ಳವಳು ; ಬೆದೆಕಾರ್ತಿ: ತೀಯು [ಪಾಠಾಂ. ಅತಿಯ, ತಿಯ, ತಿಯ್ಯ]ಕಾರ್ತಿಯರ್ತಾಯಲ್ಲದ ಕೂಸಿನಂತೆ ಬಾಯಂ ಬಿಡೆಯುಂ (ಅರ್ಧನೇ. ೩-೨ ವ).

[ ತೀಯ + – ಕಾಱ + – ತಿ$_1$ ( < – ಇತ್ತಿ ]

ತೀಯಾಟ (ನಾ). ತಿಕ್ಕಾಟ ; ಎಳೆದಾಟ ; ಜಗಳ : ತೀಯಾಟವೂ ಇದ್ದೇ ಇರುವುದು (ಪಾಳೇಗಾ. ೨೩) ; ಬದೋಡೆ ಸರ್ಕಾರಕ್ಕೂ ನಮ್ಮ ಅಂಗಡಿಗೂ ಮೊದಲಿನಿಂದಲೂ ಇರತಕ್ಕ ತೀಯಾಟ ತೀರದೇ ಇದೆಯಷ್ಟೆ (ಅದೂಟ. ೬).

[ ತೀಯ್ಯು (←P ತೆಲು. ತೀಯು) + ಆಟ ]

ತೀರ್, ತೀರು$_1$ (ಕ್ರಿ). ತೀದ, ತೀರ್ದ (ಭೂತಕೃ), ತೀದು, ತೀರ್ದು (ಭೂತನ್ಯೂ). ೧. ಮುಗಿ ; ಪೂರ್ಣಕೆಯಾಗು : ಪರಮ ಜಿನಾಭಿಷೇಕ ವಿಧಿ ತೀರದು ಕೂಪಜಲಂಗಳಿಂ . . . ಇಲ್ಲಿಗೆ ವೇಟ್ಟುದಗಾಧ ದುಗ್ಧ ಸಾಗರಜಲಂ (ಅಜಪು. ೪-೪೫) : ಎನ್ನ ಯಜ್ಞಂ ತೀರ್ವನ್ನೆಗಂ ಮುಱಿಯಿರೀ ಪೊಬಲೊಳಿರವೇಡಮೆಂದು ಘೋಷಣೆ ನೆಗಬ್ದುದುಂ (ಧರ್ಮಾಮೃ. ೯-೧೩೪) : ಚಿತ್ರವನಿತ್ಯನಾಟಕದ ಜೋಹಂ ತೀರ್ದುದಿಂ ಸಾಲದೇ (ಅನಂಪು. ೩-೭೭) : ಹೋದುದೊಂದಪಮೃತ್ಯು ಲೋಕಕೆ ತೀದುದಿಲ್ಲಾಯುಷ್ಯ (ಕುಮಾವ್ಯಾ. ೬-೪೭). ೨. ನಿಶ್ಶೇಷವಾಗು ; ಉಳಿಯದಂತಾಗು : ಎನಿತು ಭುಜಂಗಳಂ ತಳೆದನಿಂದ್ರನನಿತ್ತು ಘಟಂಗಳಂ ಸಮಂತನಿವಿಷಕೋಟಿ ನೀಡಿದುದನಿತ್ತಮೃತಾಬ್ಧಿಯ ವಾರಿ ತೀರ್ದುವೆಂದನುಮಿಸಲಾವನುಂ ನೆಱೆಯನೆಂಬಿನಮದ್ಭುತಮಾದ ಜನ್ಮಮಜ್ಜನದೊಳ್ (ವರ್ಧಪು. ೦೯-೩೫). ಬಂದು ಬಂದು ಮಿಗೆ ಪೀರುತಮಿರ್ಪ ಚಕೋರಪಕ್ಷಿಜಾಲಂಗಳಿನೊಮೆ; ತೀರ್ಗುಮಿರದೀ ಶಶಿಚಂದ್ರಿಕೆಯೆಂದು (ಕುಸುಮಾ. ೦೦-೭) ; ಸಂಚಿತಸಲಿಲಂ ತೀರ್ದುದು (ಉದ್ಭಟ. ೪-೩೨) ; ಮತ್ಕಾವ್ಯರಚನೆ ಸ್ವಾದು ರಸಾಯನ ತವ ಕರ್ಣಯುಗಳಕ್ಕೆ ತೀದರೆ ಮಗುಳೆ ತುಂಬಿಸದೆ (ಪೋಹತ. ೩೦-೨) : ಆದರೇನಾ ಸರಳು ಹೋದರೆ ತೀದುದೆ ತನ್ನಧಟು (ಕರ್ಣಗಿಯು. ೦೦-೩೩). ೩. ಕೊರೆಯಾಗು ; ಕ್ಷೀಣವಾಗು ; ಕ್ಷಯಿಸು : "ತೀರ್ದುದು ಬೀತುದು ಸವೆದುದೆನಲ್ ಕ್ಷಯುಮನ್ನೆದಿತೆಂದಱಿಗೆ ಬುಧರ್" (ಧಾರನಿ ೪೨) ; ವನರುಹಗರ್ಭನೆಂಬವನ ಮುನ್ನಿನ ಗೆಯ್ದ ತಪಂ ತಿಲೋತ್ತಮಾಂಗನೆ ಯಿನದಂತುಟಾದುದೆನೆ ಮತ್ತಿನ ಬೂತು ತಪಂಗಳೆಮ್ಮ ಪೂರ್ವಿನ ಕಡೆಯೊಂದು ಜರ್ವಿನೊಳೆ ತೀರ್ವುವು (ಶಂಶಥಾ. ೭-೮೧); ತೀದುದೆಮ್ಮಯ ಸೇನೆ ನಸುಸೊಪ್ಪಾದುದಿಲ್ಲರಿಸೇನೆ (ಕುಮಾವ್ಯಾ. ೭-೨೨); ಓದಿದರೆ ವಾಕ್ಪದವು ಸಾರವನಾದರಿಸ ಮತಸಿದ್ಧಿ ಕೇಳಲು ತೀದುದಾತನ ಕರ್ಮಬಂಧನ ಕಾವ ಭವಭಯವು (ಕೌಶಿರಾ. ೦-೧೩) : ತೋದುದಂಬರತಳಂ ವಿಷದ ಲೋಳಿ ಗಳಿಂದೆ ತೀದುದಮರರ ಹರುಷ (ಚಬಪು. ೪೨-೨೩). ೪. ಸಾಯು ; ಮರಣವನ್ನು ಹೊಂದು : ದಶರಥನ ಬಲ್ಲೆ ಕೇಳಿ ಪೂರ್ವದಲ್ಲಿ ತೀದನಾತನು ಬಳಿಕ ಭರತಂಗಾದುದೀ ಧರೆ ವನಪರ್ಭುಮುಹೋದಯುವು ನವಮಾಯ್ತು (ತೊರರಾ. ೩-೧-೩೭) : ಶಿವಯೋಗನಿಜಸಮಾಧಿಯಲಿ ನಿಂದು ಲೀಲೆಯಿಂದಿರಲಾಗಲಲ್ಲಿರ್ಪ ಭಕ್ತಜನಜಾಲವಿಮಾತಂ ತೀರ್ದನೆಂದು ತೆಗೆಯಲ್ಕೆ (ಚಬಪು. ೩೩-೩೭). ೫. ನಿವಾರಣೆಯಾಗು ; ಕಳೆ : ಕಿಟ್ಟಿ ನೊಳಾದ ವೇದನೆಯುಂ ಮನದೊಳಾದ ಸಂಕ್ಲೇಶಮುಂ ತೀರ್ದರ್ತಿದು

(ಧರ್ಮಾಮೃ. ೧೨-೫೭) ; ಮೋಹಮುಂ ಗರ್ವಮುಂ ತಲ್ಲಣಮುಂ ತೀರ್ಗುಂ (ಪಂಪಾಶ. ೪೫) ; ತೀರ್ದುದು ಹೃದಯಕಲಂಕಂ ಸಾರ್ದುದು ಪುಣ್ಯಾನುಬಂಧಂ (ಅನಂಪು. ೩-೬೪) ; ತೀರದುದೆಮಗೆ ವನಪ್ರವಾಸದ ಖೇದ (ಕುಮ್ಯಾಭ. ೧೦-೨೮). ೬. (ಕಾಯಿಲೆ, ಬೇನೆ, ಹುಣ್ಣು ಮೊದಲಾದುವು) ವಾಸಿಯಾಗು ; ಗುಣವಾಗು : ಬೆಜ್ಜೆಯಿಲ್ಲದ ಬೇನೆಯಂತೆ ತೀರಲರಿಯದು (ಹಂಚಶಂ. ೮೭-೨) ; ಶುಂಠಿ, ಹಿಪ್ಪಲಿಮೂಲ, ಅಮೃತದಬಳ್ಳಿ ಇವಂ ಕಷಾಯಮಿಟ್ಟು ಕುಡಿಯೆ ವಾತಜ್ವರಂ ತೀರ್ಗುಂ (ಸಕಚ. ೬೭) ; ತೀರದಿಲ್ಲವು ಬೇನೆ (ಜ್ಞಾನಸಿಂ. ೦-೨). ೭. ಸಾಧ್ಯವಾಗು ; ಶಕ್ಯವಾಗು : ಜವಂಗಿಡದೆ ಮುಟ್ಟಿ ಬರ್ಪ ಜವನಂ ಜವಂಗುಂದಿಸಲ್ ಜವಂಗೆ ಜವನಾಗಲಿಂ ಪೆಱರ್ಗೆ ತೀರ್ಗುಮೇ (ಆದಿಪು. ೦೩-೮೮) : ಅಂತವರಾಗಿ ಪುಟ್ಟಲೇನಾಗಿಯುಮೇನೊ ತೀರ್ದಪು [ದೆ] ತೀರದೊಡಂ ಮಱುದುಂಬಿಯಾಗಿ ...ಪುಟ್ಟುವುದು (ಶಂಪಥಾ. ೪-೨೯) : ತ್ರಿದಶನದೀಸುತನಿಂ ತೀರದ ಕಜ್ಜಂ ...ದ್ರೋಣಪುತ್ರನಿಂ ತೀರ್ದಪುದೇ (ಗದಾಯು. ೩-೬೦) : ಅಪ್ರತಿಮಪರಾಕ್ರಮನಪ್ಪ ನಿಮಗೆ ತೀರದ ಕಜ್ಜಮಾವುದಾನುಮಿಲ್ಲ (ಹಂಚಶಂ. ೩೪-೧೯) : ಶರ್ವಾಣಿಯ ಸೌಂದರ್ಯಮನೊರ್ವಂ ಬಣ್ಣಿಸುವೆನೆಂಬವಂ ಗಾಂಪಂ ... ಸಾಸಿರ್ವರ್ ಫಣಿರಾಜರಾದೊಡಂ ತೀರ್ದಪುದೇ (ಗಿರಿಜಾ. ೪-೦೦) : ಜಿನಗುಣಮೆಲ್ಲಮಂ ಕೊಱತೆಯಿಲ್ಲದೆ ಪೇೞ್ದಪೆನೆಂಬಿದುದ್ಧವಾಗ್ಮಿನಿತೆಗೆ ತೀರದು (ಶಾಂತಪು. ೧-೫೪) : ನಿರ್ಮಲ ಶಿವನವನ ನಿರ್ಮಾಲ್ಯ ಮೋಕ್ಷಿಸಲ್...ನಿರ್ಮಲರ್ಗಲ್ಲದುಳಿದರ್ಗೆ ತೀರ್ಗುಮೆ (ಪದ್ಮರಾ. ೦೦-೦೨೮). ೮. ಕೈಗೂಡು ; ಫಲಿಸು ; ಈಡೇರು : ಬಯಕೆ ತೀರದ ಕಾರಣದಿಂ (ಕವಿರಾ. ೦-೧೪೫) ; ಪಗೆ ತೀರ್ಗುಂ ಬಗೆ ತೀರ್ಗುಮಾ ಕುರುಕುಳ ಪ್ರಖ್ಯಾತನಂ ಕಾದಿ (ಪಂಪಭಾ. ೮-೦೦೩) ; ತನ್ನ ಬಯಕೆ ತೀರ್ದುದೆಂದು ಪೆರ್ಚಿ (ಧರ್ಮಾಮೃ. ೬-೪೭): ಕಡುಗಟ್ಟಲೆಯೊಳ್ ... ಪೊಱಮಟ್ಟಡಿಯಿಡಲಣ್ಮದೆ ಮಱುಗುವ ಮಡದಿಗೆ ಬಗೆ ತೀರೆ ಮಿಂಚು ಮಿಂಚಿದುದಾಗಳ್ (ರಸರ. ೦-೯೦). ೯. ಸಾಕಾಗು ; ತೃಪ್ತಿಯಾಗು ; ಸಮಾಧಾನವಾಗು: ನುಡಿಯಲ್ ಬಾರದು ತೀರದು ನುಡಿಯದೊಡೆ (ಅನಂಪು. ೧೦-೩೦). ೧೦. (ಕಾಲದಂತೆ) ಕಳೆದುಹೋಗು ; ಮುಗಿದು ಹೋಗು : ವೇದಮಾರ್ಗದೊಳೊಂದು ದಿನ ಪರಿ ತೀರದು ಹೋದುದು (ಸಂಭಪ. ೪-೯). ೧೧. (ಜಗಳ, ವಾಗ್ವಾದ, ಸಮಸ್ಯೆ ಮೊದಲಾದುವುಗಳು) ತೀರ್ಮಾನವಾಗು ; ಬಗೆಹರಿ : ನಿನತೊಂದೆಯೊಳಗೆ ತೀರ್ವುದೊಂದು ಮನೆವಾರ್ತೆಗಿದೇನರಸ ಬಳೆಯ ನುಡಿದಪೆ (ಆದಿಪು. ೧೪-೩೦) : ನಮ್ಮ ಜಗಳ ತೀರಿತು (ರೂಢಿ). ೧೨. ಹೋಲಿಪಾಗು ; ನಯಗೊಳ್ಳು (?). 'ತೀರಿಸು' ಪರಾ. ತೀರ್ಮ್ಯ : ೧. ಸಮಸಪ್ತಕರ ಬಲ ನಿಜಪಾಳಿಯಕೆ ತಿರುಗಿದುದು ತೀರಿತು ತರಣಿಯಾಟೋಪ (ಕುಮ್ಯಾದ್ರೋ. ೮-೧) ; ಮಿಂಡಗಾಱಿಕೆಯಲ್ಲಿ ಗಳಿಸಿದ ಸೌಖ್ಯವನುಂಡಲ್ಲದ ತೀರದೆಂದ (ಬೋಹತ. ೩೫-೬೮) ; ರಾಜಪುತ್ರಿಗೆ ತನಗೆ ಸೆರೆ ತೀರುವುದೆಂದು ಎಷ್ಟೋ ಸಂತೋಷವಾದರೂ (ಪಂಜಾಮ್ಮ. ೭) : ಊರು ಸೇರಿದ ಮೇಲೆ ದಾರಿ ತೀರಿತು (ಗಾದೆ). ೨. ತೀರಿತಾತನ ಶಕ್ತಿ (ಕುಮ್ಯಾದ್ರೋ. ೩-೬೩) : ತೀರೆ ಕೈದುಗಳಳಿದು ಬೊಬ್ಬೆಯು ತೋಱಿ ಕಡಿಗೊರಳಿನಲಿ ಕೋಟಿಸಿ ತೇರಿನಗ್ರವ ಪಿಡಿದು ತಿರುಹಿಟ್ಟುದು ಕಬಾಧಕವು (ತೊರರಾ. ೩-೬-೨೫) ; ತೀರಿದ ಅಡಿಗೆ ತಿರುಗಿ ಬಯಸಿದರೆ ಬಂದೀತೇ ? (ಗಾದೆ). ೩. ತೀರಿದುದು ತಮದೊಬ್ಬುಳಿತ ಚಂದ್ರನ ತಾರಕೆಯ ಮೈವೆಳಗು ಮಸುಳಿದವು (ತೊರರಾ. ೧-೦೪-೧). ೪. ಮಾರಹರ ನಿಮಗುಚಿತವೇ ಮತ್ತಾರಿಗಾಱದ ಕಂಟವೇಪತೆ ಸೇರಿ ಮನೆಯಮರ್ಗಾಪನೆನ್ನದೆ ಸೂನು ತೀರಿದಡೆ (ಬಸಪು. ೪೮-೧೮) : ತಂದೆ ತೀರ್ದ ಬಳಿಕ ನೀನೆ ತಂದೆ (ತೊರರಾ. ೨-೩-೨೮). ೫. ಕ್ರೂರಮಂತ ತ್ರಿತಯಮೂಱುಱು ಭಾರಮದು ಪಲ್ನಾಲ್ಕು ನಟ್ಟಡೆ ತೀರಗೆಂತಾ ಮಂತ್ರತಂತ್ರೌಷಧವಿಧಿಗಳಿಂದ (ಬಸಪು. ೪೬-೩೨) ; ವಿಶ್ವಾಸವುಳ್ಳೊಡೆ ಸಕಲ ಪಾತಕವು ತೀರುವುದಲೆ (ಸಂಭಪ. ೩-೩೬) ; ತೀರಿತು ಹೃದಯದ ತಾಪ (ಬೋಹತ. ೨೮-೩) : ತನ್ನ ಕೊರಗು ತೀರುವುದು ಕಷ್ಟವೇ ? (ಬಿತಂದಾ. ೧೬). ೮. ತನ್ನ ಆಕಾಂಕ್ಷೆ ತೀರುವುದಕ್ಕೊಂದು ದಾರಿಯಿದೆ (ಬಿತಂದಾ. ೩೫). ೧೦. ಆಯುಷ್ಯ ತೀರಿದಲ್ಲದೆ ಮರಣವಿಲ್ಲ (ಬಸರ. ೬೦೯). ೧೧. ಸಂದೇಹ ತೀರಿತು (ಬಿತಂದಾ. ೩೪). ೧೩. (ಋಣ, ಹಂಗು, ಸಾಲ, ಮುಂತಾದುವು) ಸಂದಾಯವಾಗು ; ಸಲ್ಲು : ಮುಯ್ಯಕ್ಕೆ ಮುಯ್ಯಿ ತೀರಿತು (ಪುರಂದ. ೧-೬೫ ಪಲ್ಲವಿ) ; ಅವರ ಹಂಗು ತೀರದು (ಮೂರುಉ. ೭, ಮುನ್ನುಡಿ).

ತೀರಿಕೊಳ್ಳು=ಸಾಯು ; ಮರಣವನ್ನು ಹೊಂದು : ಒಬ್ಬ ಬಡ ರೈತ . . . ಅರ್ಬುದರೋಗದಿಂದ ತೀರಿಕೊಂಡ (ಚಿತ್ರ. ೫೦) ; ಅವರು ತೀರಿಕೊಂಡಾಗಿನಿಂದ ಇಂಥ ಕೆಲಸ-ಕಾರ್ಯಗಳ ಬಗ್ಗೆ ಜನರು ನಿನ್ನನ್ನೇ ಕೇಳುತ್ತಿರುವುದು ತಪ್ಪಲ್ಲ (ಧಾರಕಿ.೦).

[ ದೇ.೫ ತಮಿ. ತೀರ್ ; ಮಲ. ತುಳು. ತೆಲು. ತೀರು./ಸಂ. ತೀರ್ ]

ತೀರ$_1$. ತೀರಾ (ಗು). ಬಹಳ ; ತುಂಬ ; ಸಂಪೂರ್ಣ : ಈಗ ಅವನು ಹಾಗೆಲ್ಲ ಮಾಡುವುದಿಲ್ಲ. ಆಗ ತೀರ ಚಿಕ್ಕವನಿದ್ದ (ಧಾರಕಿ. ೩) : ಆಂಡಯ್ಯನು ನುತಿಸಿದ ಕವಿಗಳಲ್ಲಿ ಅವನಿಗೆ ತೀರ ಸಮೀಪದವನಾದ ಜನ್ನ (ಸಾಹಿಸ. ೦೫೦) : ಈ ಎರಡು ತೆರನಾದ ಕಂಪನಗಳ ಸ್ವಭಾವವು ಪರಸ್ಪರ ತೀರ ಭಿನ್ನವಾಗಿರುತ್ತದೆ (ಜೀವಾತ್ಮ. ೦೦೦).ತೀರಾ : ಹೊಱಸವಿ ಒಳಸವಿ ತೀರಾ ಸವಿ ... ತೀರಾ ಸವಿಯಿಂದ ರುದ್ರಸತ್ತ (ವಚಶಾ. II, ೨೫೦) : ಪ್ರಾಚೀನ ಕನ್ನಡ ಗ್ರಂಥಗಳಿಂದ ಆಯ್ದುಕೊಂಡ ಪದ್ಯಗಳು ತೀರಾಕಡಿಮೆ (ಕಎಪು. I, ೩೬೩೪). [ < ತೀರ್ ]

ತೀರ$_2$ (ಅ). ಬಹಳವಾಗಿ ; ಅತಿಯಾಗಿ ; ಸಂಪೂರ್ಣವಾಗಿ : ಕೊಳುಗುಳದೊಳಗೈನೂಱಕ್ಷೋಹಿಣಿ ಬಲವನೊಬ್ಬನೇ ತೀರ [ಪಾಠಾಂ. ತಿರಿ] ಕೊಂದ (ಕುರಾಸಾಂ. ೬-೩೩); ತೀರ ಜಗ್ಗಿದರೆ ಅಧಿಕಾರದ ಹಗ್ಗವೇ ಹರಿವುದೆಂದು ಅದಕ್ಕೆ ಗೊತ್ತಿತ್ತು (ಎಚ್ಚಸಾ. ೩೬). [ < ತೀರ$_1$./ತಮಿ. ತೀರ ]

ತೀರ$_3$ (ನಾ). ದಡ ; ದಂಡೆ ; ಕರೆ : "ತೀರಮೊಂದು ತಟಂ" (ಕಶಸಾ.೮-೦೪೨): ತಣ್ಣಾವೆತ್ತಿರ್ಪ ತೀರ ಜಲಂಗಳೊಳಮೆಡವಿಡದಿಡಿದ ತಮಾಲವೀಧಿಯೊಳೊಗೆವ ಕತ್ತಲೆಯಿಂ (ಕಾದಂಪೂ. ೧೧೭); ತೊಱೆಗಳ ತೀರದೊಳ್ಗಿರಿಯ ತಪ್ಪಲೊಳಗ್ಗಳಮಪ್ಪ ಕೊಳ್ಳದೊಳ್... ಮಱುಗಿ ತೊಱಲ್ದು (ಧರ್ಮಾಮೃ. ೮-೨೦) : ಎಱಗದ ತೀರಭೂರುಹಮನೆಯ್ದೆ ಮೊದಲ್ಗಿಡೆ ಕೀೞ್ದು ಬೆಂಗೆ ಬೞ್ದಱಿಗದ ಮಂಜುಳಪ್ರಕರಮಂ ಪರಿವರ್ಧಿಪ ಸಿಂಧುತೋಯದಂತೆ (ಕೃಷ್ಣಪು. ೦೩-೬); ನಗುತನಿಲಶರದಿಂದೂದಿದನು ಜಲನಿಧಿಯ ತೆಂಕಣತೀರಕಾಖಳನ (ತೊರರಾ. ೧-೧೦-೨೦); ತೀರಕ್ಕೆ ಬಂದ ಮೇಲೆ ತೆರೆಯ ಭಯವೆ ? (ಗಾದೆ). [ ಸಂ. ]

ತೀರಂಬಿಡಿ (ಕ್ರಿ). ದಡವನ್ನು ಹೊಂದಿಕೊಳ್ಳು ; ತೀರವನ್ನು ಅನುಸರಿಸು : ಅಂತಾ ಪ್ರಭಾಸಾಮರಸಂ ನಿಜವಿಜಯಯಶಃಪ್ರಭಾಸಮೂಹದಿಂದಂ ಪುದಿದು ಸಿಂಧುನದೀತೀರಂಬಿಡಿದು ಬರ್ಪಲ್ಲಿ (ಆದಿಪು. ೧೩-೪೫); ದೂತಂ ಜೀಮೂತನಾದನೆಂಬಂ ಕೂಪಾರ ತೀರಂಬಿಡಿದು ನಡೆತರ್ಪ ಕಾಳಿಯಸರ್ಪದರ್ಪದಳನನದಿರದಿದಿರೊಳ್ ಕಂಡು (ಜಗವಿ. ೯-೫೩೫).

[ತೀರ$_3$ + ಪಿಡಿ$_1$]

ತೀರದಾಣ (ನಾ). ತಪ್ಪಲು ಪ್ರದೇಶ (?): ಗಿರಿತಲದಾ ನೇಲತಿ ××× ಸ್ಥಲಮಾನ್ ತೀರದಾಣಮಾ ಕೆಳಗೆ ನೆಲದಿ ಮಾನದಾ ಸದ್ಧಮದಾಗೇಟಿ ಸಸಾನದಿ ಪತಾನ್ (ಎಕ. II, ೨೯-೩; 700). [ತೀರ$_3$ + ತಾಣ]

ತೀರವು (ನಾ). ೧. ತೀರದೆ ಇರುವಿಕೆ : ಅಪೂರ್ಣತೆ ; ಕೊರತೆ : ಅಮೆಗೆ—ತೀರವು, ಅಟ್ಟಿಮೆ (ಕಮರ. ೨೧೦ ಪ್ರಯೋ). ೨. (ಪ್ರಯಾಣದಲ್ಲಿ) ತಡೆದಿರುವಿಕೆ ; ಮುಂದುವರೆಯದಿರುವಿಕೆ : ಆಲೋಕನಾ

ಪಮಾತ್ರದಿಂ ಮಟಿದು ಪಾಂಥಶ್ರೇಣಿ ನೀರಟ್ಟಿಯುಂ ಶ್ರಮಮುಮಂ ತೀರಮೆಯುಂ ಪ್ರಮಾಂಗನೆಯರಂ ಕಣ್ಣಾವುದಾ ದೇಶದೊಳ್ (ಶಾಂತಿಪು. ೧-೧೦೬); ಜಾನಪದಾಂಗನಾಜನದ ಗಾಡಿಗೆ ಸೋಲ್ತುಳಿನೀನಿನಾದಮುಂ ಜಾನಿಸಿ ಕೇಳ್ದು . . . ಉದ್ಯಾನದೊಳಾಡೆ ತೀರಮೆಯುಮುಂ ಪಥಿಕರ್ ಮಟಿದಿಲ್ಲೆನಲ್ ಪರಿವಸ್ತಿಾನತೆ ಸೈತು ಬಟ್ಟೆ ನಡೆಯಲ್ಪಡೆಯರ್ ವಿಷಯಾಂತರಾಳದೊಳ್ (ಮಲ್ಲಿಪು. ೨-೨೮): ಬಾಟೆಯಿಳಿಯರನೇಜಿಲ ಮಾವಿನಪಣ್ಗಳಂ ಮನಂ ನಿಲೆ ಸವಿದಲ್ಲಿ ತೀರಮೆಯುಮುಂ ಮಟಿದಿರ್ಪುದು ಪಾಂಥಸಂಕುಳಂ (ಪುಷ್ಪಪು. ೨-೪೭). [ ತೀರ್ + - ಅಮೆ$_2$ ]

**ತೀರರುಹ** (ಗು). ದಡದಲ್ಲಿ ಬೆಳೆದಿರುವ ; ದಂಡೆಯ ಮೇಲಿರುವ: ತೀರರುಹ ಫಲಪುಷ್ಪನವ್ಯಕಿಸಲಯರಮ್ಯಗುಲ್ಮತರುಪಂಕ್ತಿಮಾಲಾಸಹಸ್ರ ಜಾತೆಯುಂ ದರ್ಶಿಸಿದೊಡನೆ (ಶ್ರೀರಾಮಾ. ೯೭-೫೨೩). [ಸಂ.]

**ತೀರಸ್ಥ** (ಗು). ದಡದಲ್ಲಿರುವ: ತೀರಸ್ಥಲವಂಗಚೂತಲವಲೀಪುಷ್ಪಾಸವಾಸ್ವಾದಿತೋದಯುತೋನ್ಮದಯು . . . ಪೋಲ್ಪೆಗಿಲ್ಲ ತೊಟಿಗಳ್ ವಿಶ್ವಂಭರಾಭಾಗದೊಳ್ (ಆದಿಪು. ೧-೫೪). [ ಸಂ. ]

**ತೀರಾ** 'ತೀರ$_1$' ನೋ.

**ತೀರಿ** (ನಾ). ೧. ಅಂಬು ; ಸರಳು , ಬಾಣ : "ತೀರೀ, ತದ್ವಳ, ದಂಡಾಸನಃ –ಇವು ಮೊದಲಾದುವು ಅಂಬಿನ ಭೇದಂಗಳ್" (ಹಲಾಯು. ೬೭-೩೦೩). ೨. ಒಂದು ಬಗೆಯ ಬಿಲ್ಲು : "ದಂಡಾಸನಂ ತೀರಿ ತದ್ವಳಮೆಂದು ಬಿಲ್ಲಭೇದಂ ಗಳಕ್ಕು" (ಮಂಗರಾ. ೮೭-೩೩): P ಮಂಗರಾಜನು 'ಬಾಣ' ಎಂಬುದಕ್ಕೆ 'ಬಿಲ್ಲು' ಎಂದು ಹೇಳಿರುವಂತೆ ಕಾಣುತ್ತದೆ. [ ಸಂ. ]

**ತೀರಿಕೆ** (ನಾ). ತೀರಿಸುವಿಕೆ : "ತೀರಂ, ತೀರಣಂ, ತೀರಣೀಯಂ—ಈ ೩ ತೀರಿಕೆ" (ಕಾಶಕ್ಕೆ. ೨೮೮). [ ತೀರ್ + - ಇಕೆ ]

**ತೀರಿಕ್ಕೆ**, ತೀರಿಗೆ (ನಾ). ಒಂದು ಬಗೆಯ ಬಾಣ : ಕದುರೆಯ ಮೇಲೆ ಬಲ್ಲರಸು ಸೂಲಿಗೆ ತೀರಿಕೆ ಭಿಣ್ಡಿವಾಳವೆಂತ್ರಿದ ಕರವಾಳಿಮಾಟಡುವ ಕರ್ಕ್ಕಡೆ . . . ಎಂತು ಲಕ್ಷ್ಮಣನೊಳಾಂತು ಬರ್ದುಂಕುವರನ್ನಭೂಭುಜರ್ (ಎಕ್. VII, ಶಿಕಾರಿ. ೦೩೭-೨೮ ; 1068). **ತೀರಿಗೆ** : ಕುದುರೆಯ ಮೇಲೆ ಬಲ್ಲರಶು ತೀರಿಗೆ ಸೂಲಿಗೆ ಬಿಂಡಿವಾಳವೆತ್ರಿದ ಕರವಾಳ (ಎಕ್. XV, ೩೧೦-೦೨ ; 1071). [ < ತೀರಿ./ಸಂ. ತೀರಿಕಾ ]

**ತೀರಿಗೆ** 'ತೀರಿಕ್ಕೆ' ನೋ.

**ತೀರಿಚು** 'ತೀರ್ಚು' ನೋ.

**ತೀರಿತ** (ಗು). ತೀರ್ಮಾನವಾದ; ಮುಗಿದ; ನಿರ್ಣಯಿತವಾದ. [ ಸಂ. ]

**ತೀರಿಸು** (ಕ್ರಿ). ೧. ಮುಗಿಸು ; ಪೂರ್ಣಮಾಡು : ದಣಿ ವ್ಯಾಗ ಸೇದು ತೀರಿಸಿಕೊಣ್ಣಾಕ ನಿನಗೊಂದು ಅಪರೂಪ ಪರಸಂಗ ಒದಗಿ ಬಂದರ ಹ್ಯಾಗಲೇ (ಮೋಡಿದು. ೧೩): ಅರಿ ದೊರಕಿ ಅಲೆದ ಕಡಲಿನ ನೀರೆ ಕಡಲನೆ ಕೂಡಿತು, ಬೇರೆ ! ಹಾ ! ಹಾ ! ಎಂದು ಡೊಂಬನು ತೀರಿಸದೆ ಕಣ್ಮುಚ್ಚಿದ (ಕವಿಪು. ೪೧-೩೭) : ತನ್ನ ಕೆಲಸವನ್ನು ಮಾಡಿ ತೀರಿಸಿದ್ದನು(ರೂಢಿ). ೨. ನಾಶಮಾಡು ; ಕೊನೆಗಾಣಿಸು : ತೀರಿಸುವೆನೀ ರಕ್ಕಸರ ರಣ ಹೋರಟೆಯುನೆನುತ...ತಿರುಹಿಟ್ಟನು ನಭಸ್ಥಳಕೆ (ತೊರರಾ. ೬-೩೧-೦೭). ೩. ಕೊಲ್ಲು ; ಸಾಯಿಸು : ಕೌರವನ ಋಣ ಹಿಂಗೆ ಸುಭಟಕೋಟಿಯನು ತೀರಿಸಿಯೆ ಪತಿಯುವಸರಕ್ಕೆ ಶರೀರವನು ನೂಕುವೆನು (ಕುಮಾವ್ಯಾಉ. ೧೧-೨೦): ಈಗಲೆ ಇವರನ್ನೂ ನಿನ್ನನ್ನೂ ತೀರಿಸಿಬಿಡುತ್ತೇನೆ (ವಚರಾ. ೩೮). ೪. ನಿವಾರಿಸು ; ಪರಿಹರಿಸು : ತಾರಕನಿಂದೆ ನೊಂದಸುರರು ತಮ್ಮ ಸಂಸಾರದುಃಖವ ತನಗುಸಿರೆ ತೀರಿಸಲಜಿಯವಾನ್ಯೆತಂದೆ ಶ್ರೀ ವೀರ ನಾರಾಯಣ ಪೊರೆಯಿಂದ (ಪ್ರೋಹತ. ೫-೦೫): ಹೆತ್ತ ತಾಯಿಯ ಸಂಕಟವನ್ನು ತೀರಿಸುವವರ್ಯಾರು (ಮನೋನಂ. ೦೪೨). ೫. ಈಡೇರಿಸು ; ಕೈಗೂಡಿಸು : ಬಂದು ಕಾದಿಹ ದ್ವಿಜರನುಮತವ ತೀರಿಸದೆ ನಿಜಲೋಭ ಕತವೆಂಬಂದದಿ ಸಾಲ್ಗಟ್ಟಿ ಕುಜವಿರ್ದುದಾ ಬನಬನದಿ (ಪ್ರೋಹತ. ೨೪-೪೮). ೬. ಬಗೆಹರಿಸು ; ತೀರ್ಮಾನಮಾಡು : ಅವರಿಬ್ಬರೂ ಬಂದು ನಮ್ಮ ದಿಮ್ಮ ವ್ಯಾಜ್ಯ ತೀರಿಸು ಎಂದು ನನ್ನ ಬೇಡಿಕೊಂಡರು (ಮುಂಬಯಿ. ೪-೫೮). ೭. (ಋಣ, ಉಪಕಾರ ಮೊದಲಾದುವನ್ನು) ಕೊಟ್ಟು ಮುಟ್ಟಿಸು ; ಮರಳಿ ಸಲ್ಲಿಸು ; ಸಂದಾಯಮಾಡು : ಉಂಡು ತೀರಿಸಬೇಕು ತಾ ಮುಂಕೊಂಡು ಮಾಡಿದ ಪುಣ್ಯ ಪಾಪದ ತಂಡವನು ತೆರಹರಣವಿಲ್ಲದೆ (ಕುಮಾವ್ಯಾಉ. ೩-೦೨೦): ಎನ್ನ ಪೀಡಿಸಿ ಪರಮಭಂಡನ ಮಾಡಿ ನಿನ್ನ ಮುಯ್ಯಿಕೆ ಮುಯ್ಯಿ ತೀರಿಸಿಕೊಂಡಯ್ಯ (ಪುರಂದ ೦-೬೫-೨). ೮. ದಾಟು ; ಕ್ರಮಿಸು : ದೂರೀಕೃತನರ್ಗಾವನಂತರಿಕ್ಷದ ತೀರಿಸಿಯಾಕ್ಷಣದಲ್ಲಿ ದ್ವಾರಕಿ ಬಹಿರ್ಭಾಗದೊಳೀದಾಗ (ಪ್ರೋಹತ. ೩೦-೦೩). ೯. ಮೆರುಗುಗೊಡು ; ನಯಗೊಳಿಸು (?) : ಕಾರ್ಗಾಲದ ಕುಡುಮಿಂಚಿನ ಕಿರುಳಂ ತೀರಿಸಿ ತಿರ್ದಿದ ರೂಪಿನ ಪೊಸಮುತ್ತಿಂ ಕಡೆದಾ ಪರಿಜೆಸೆ .... ಕರಮೆಸೆದಂ ಭೂಪತಿ ಪುರಸತಿಯುರ ಕಣ್ಗಳ ಕದಿರಿಂದ (ಜಯಿನಾ. ೧೧-೫೬). [ತೀರ್ + - ಇಸು$_1$]

**ತೀರು$_1$** 'ತೀರ್' ನೋ.

**ತೀರು$_2$** (ನಾ). ೧. ತೀರ್ಮಾನ; ತೀರ್ಪು : (ಕ). ೨. ಅಂತ್ಯ; ಸಮಾಪ್ತಿ; ಮುಕ್ತಾಯ : ಆ ಮಹಾನಾಟ್ಯದೇರಂ ತೀರಂ . . . ಭಾವಿಸಿ (ಗಜೇಶ. ೨೩-೬೦೦). ೩. ರೀತಿ ; ಕ್ರಮ : ಮಾರುತ ಸುತನ ಶರೀರವ ಕಾಣದ ತೀರಿ ನೊಳಸ್ತದ ಕೂರಲಗುಗಳಂ ಭೋರನೆ ಸುರಿಯಲು (ಹನುಮ. ೬೨) ; ನಳಿ ನಾಳಿಗಳಿಗೆ ಪೋಷಿಸಿ ಪೇಳ್ವ ತೀರಿನಿಂ ಪಟ್ಟರಣನೀಕ ಜೇಂಕರಿಸುತ್ತ ಜಲಜಾತಗಳಿಗೆರಗಲು (ನವಪೋ.೧೧-೪೨); ದೊಡ್ಡ ಮಳೆ ಬಂದರೆ ಹಾಗಲ್ಲ ; ಅದರ ರೀತಿ ಬೇರೆ ... ಎಷ್ಟಾದರೂ ಅದರದು ದೊಡ್ಡ ತೀರು (ಬಾಲಕೃ. II, ೧೧೬೫). ೪. ಹಿಂತಿರುಗಿಸುವಿಕೆ ; ಸಂದಾಯಮಾಡುವಿಕೆ. 'ತೀರುವಳಿ' ಪರಾ. ೫. ಒಪ್ಪ ; ಮೆರುಗು : (ಕ). [ < ತೀರ್ ]

**ತೀರು$_3$** (ನಾ). ೧. ಅಂಬು ; ಸರಳು ; ಬಾಣ : ಸಾಣೆಯೊಳ್ ತೀಡಿದ ಮಾರನ ತೀರಿನಂತಿರುವ ಕೊರೆನೋಟ (ಶಾಗಂಧಿ. ೨೨೪-೬) : ಬೆಳ್ಳಿ ಮೇಲೆ ಚಿನದ ಮುಲಾಮ ಕಮಾನು ೧ ತೀರು ೧ (ಎಕ್. XIV, ನಂಜನ. ೫೯೨- ಪುಟ. ೧೪೦ ; 1847). ೨. ತೊಲೆ ; ಅನಿಕೆ : ಛಾವಣಿಗೆ ಹಾಕಿರುವುದು ತೆಂಗಿನ ತೀರು (ರೂಢಿ). ೩. ಗುಡಿಸಲು ; ಚಪ್ಪರ : ತೀರಿಲ್ಲ ತಿಟುವಟವಿಲ್ಲ ಜಾಥ ಮಾತ್ರಕೊಂಬೆಯಷ್ಟು (ಗಾದೆ). [ < ಸಂ. ತೀರ ]

**ತೀರುಕಣೆ** 'ತೀರ್ಕಣೆ' ನೋ.

**ತೀರುಗಡೆ** 'ತೀರ್ಗಡೆ' ನೋ.

**ತೀರುಗಾಲ** (ನಾ). ಅಂತ್ಯಕಾಲ ; ಸಾಯುವ ಹೊತ್ತು ; ಕೊನೆಗಾಲ : ಬಲ ಬಿಟ್ಟು ಹೊಡೆದು ಕರ್ಣನನ್ನು ಕೊಲ್ಲು . . . ಅವನಿಗೆ ತೀರುಗಾಲ ಬಂದಿದ (ಪತಥಾ. ೨೯೮). [ತೀರು$_1$ ( < ತೀರ್) + ಕಾಲ]

**ತೀರುತ**, ತೀರ್ಥ (ನಾ). ೧. = ತೀರ್ಥ ೧ : ಅಲ್ಲ ಜಲಮಯುವಿದುವೆ ತೀರು [ಪಾತಾಂ. ೦]ತ (ನಿಘಾಗ. ೧೧-೬೫-೦೪). Δ **ತೀರ್ಥ** : ೨. = ತೀರ್ಥ ೩: ಸ್ವಸ್ತಿಶ್ರೀ ಜಮ್ಬು ನಾಯ್ಗರ್ ತೀರ್ಥದೊಳ್ನೋನ್ತು ಮುಡಿಪ್ಪಿದರ್ (ಎಕ್. II, ೧೮ ; 700): ಶ್ರೀಮದ್ ಬೆಟ್ಟದ×ಪೊ×ನ ಮಗ್ಗ ವೃಜಬ್ಬೆ [ರ]ಬ್ಬಪ್ಪ ತೀರ್ಥದೊಳ ನೊನ್ತು ಸನ್ಯಸನಂ (ಎಕ್. II, ೬೮-೩ ; 10ನೆಯ ಶತ ?). [ < ಸಂ. ತೀರ್ಥ ]

**ತೀರುಪಡಿ** 'ತೀರ್ಪಡಿ' ನೋ.

**ತೀರುವಳಿ** (ನಾ). ೧. ತೀರಿಸುವಿಕೆ ; ಸಂದಾಯಮಾಡುವಿಕೆ : ವೇದ ರೂಪವಾದ ಸಾಲದ ತೀರುವಳಿಯು ಕ್ರಮವು ಹೀಗೆ (ನೀಲಟ್ಯ. ೭೭) ೨. ಇತ್ಯರ್ಥಪಡಿಸುವಿಕೆ : "ತೀರುವಳಿ ; ತೀರ್ವೆ" Settlement (ಪಕ್ರಿಸಿ. ೭೪). [ ತೀರು$_2$ + - ವಳಿ$_1$ ]

**ತೀರುವೆ** 'ತೀರ್ವೆ' ನೋ.

**ತೀರೆ** (ನಾ). ೧. ಒಂದು ಬಗೆಯ ಹುಳು; ಜಂತುಹುಳು: ಸಾಂಟೊನಿನ್, ಜಠರಕ್ರಿಮಿನಾಶಿನಿ, ತೀರೆಹುಳುವಿನ ಮದ್ದು (ಮೃಶಿಗ. ೯-೧೫೫). ೨. ಜಂತು ಹುಳುವಿನಿಂದುಂಟಾಗುವ ಒಂದು ಬಗೆಯ ರೋಗ: (ಕ). [ ? ]

**ತೀರ್ಕಡೆ** 'ತೀರ್ಗಡೆ' ನೋ.

**ತೀರ್ಕಣಿಸು, ತೀರ್ಗಣಿಸು** (ಕ್ರಿ). ೧. ಕೊನೆಗೊಳಿಸು; ನಾಶಗೊಳಿಸು: ಪ್ರಕಟಿತ ರಜಸ್ತಮೋಗುಣ ತೀರ್ಕಣಿಸಿ ಸಾತ್ವಿಕಫಲ ರೂಪಾದುದೆನುತ ಅಕಳಂಕಸಿತಹವ್ಯಾರ್ವೆಸೆದುದು (ಮೋಹತ. ೪-೬೬). ೨. ನಿವಾರಿಸು; ಪರಿಹರಿಸು: ಹಲವು ದಾಯದಲಿ ಬುದ್ಧಿಯ ವೇಳೆ ಮದನವ್ಯಾಕುಲವ ತೀರ್ಕಣಿಸಿ (ಮೋಹತ.೨೯-೭); ತೀರ್ಕಣಿಸು ದುಃಖವಂ ಶಿವನ ಮರೆಯೊಕ್ಕು (ನವಮೋ. ೭-೩೭). ೩. ದಾಟು; ಕ್ರಮಿಸು: ಆಕಾಶಪಥವ ತೀರ್ಕಣಿಸಿ ಗೋಕರ್ಣರಿಪು ವೈನತೇಯ ಬಂದನು (ಮೋಹತ. ೪೨-೧೪). ೪. ಇಲ್ಲವಾಗು; ಅಂತ್ಯವಾಗು; ನಾಶವಾಗು: ಉಂಟಾದ ಧೈರ್ಯ ತೀರ್ಕಣಿಸಿತು (ಮೋಹತ. ೨೮-೧೨); ಬೋಧಾರುಹನಾದ ಪರಮೇಶ ನಿಮ್ಮೊಳು ಭೇದವಿಲ್ಲೆಂದು ಸೂಚಿಸಲು ರೋದನ ತೀರ್ಕಣಿಸಿತು (ಮೋಹತ. ೪೦-೯೨). ತೀರ್ಗಣಿಸು: ೫. ರಚಿಸು; ನಿರ್ಮಿಸು: ಸೌರಭ ಸದ್ಮವೆಂದೆನಿಪ ಕೇಗೆಳಿಂ ಪುಂಡ್ರೇಕ್ಷುದಂಡದಿ ತೀ [ಪಾಠಾಂ. ಕೇ] ರ್ಗಣಿಸಿ ದೊಳ್ಪಪ್ಪರಂಗಳಿಂದಾರ್ಗೆ ಬಣ್ಣಿಸಲರಿದೆನಿಸಿ ಮೆರೆದಿಹವು ಪ್ರಪಾಶಾಲೆ (ಮುದೇಪು. ೨-೦೨). [ತೀರ್ಕಣೆ + – ಇಸು₃]

**ತೀರ್ಕಣೆ, ತೀರುಕಣೆ** (ನಾ). ೧. ಅಂತ್ಯ; ಮುಕ್ತಾಯ; ಕೊನೆ: ಯಜ್ಞದ ತೀರ್ಕಣೆ ಅವಭೃತವೆಂಬುದು (ಹರಿಾಯು.೬೯-೨೬೪): ವಿವಾದ ಸಮಾಪ್ತಿಃ = ತೋಟಿಯ ತೀರ್ಕಣೆ (ನೀತಿವಾ. ೨೭-೨೦). ೨. ನೆರವೇರಿಕೆ: ಕಾರ್ಯಸಿದ್ಧಿಶ್ಚೇತಿ = ಕಾರ್ಯದ ತೀರ್ಕಣೆಯು (ನೀತಿವಾ. ೯-೨೫). ೩. ತೀರ್ಮಾನ; ತೀರ್ಪು: ಸುವ್ಯಕ್ತವೂ ಅವಶ್ಯಕವೂ ತಪ್ಪದುದೂ ಸುಲಭವೂ ಎಂದು ಭಾಸವಾಗುವ ತೀರ್ಕಣೆಯನ್ನು ಬಾಯ್ದುಡುಕಿ (ಮುಂತ್ರಶ. ೭೨-೨೨). ತೀರುಕಣೆ: ೩. ನಿಮ್ಮ ಬಗೆಯ ದ್ರೋಹಿ ದುರಾತ್ಮರಿಗೆ ತಕ್ಕುದಾಗಿಡದ ಒಂದೇ ದಣ್ಡನೆ ಎಂದು ತರಿಸಂದು ತೀರುಕಣ[ಣೆ]ಗೊಟ್ಟರುವರು (ಬಟ್ಟಿಅ. ೨೦೪-೨೩). ೪. ವ್ಯಯ; ಖರ್ಚು: "ಅರ್ಥದ ತೀರುಕಣ[ಣೆ] ಅರ್ಥಾಪಗಮ, ವ್ಯಯ, ವೆಚ್ಚ" (ನಾಚಿರಾ. ೬). [ತೀರ್ಕೆ + – ಅಣೆ₄]

**ತೀರ್ಕಣೆಗೆಯ್** (ಕ್ರಿ). (ಆಲಂ) ರಕ್ಷಣೆಮಾಡು; ಕಾಪಾಡು (?): ನಕ್ರ ಕಂಟಕವನುತ್ತರಿಸಿ ಗಜೇಂದ್ರನ ವಕ್ತ್ರವ ತೀರ್ಕಣೆಗೆಯ್ದ ಚಕ್ರಪಾಣಿಯ ಕೂರ್ತು ಕೃತಿವೇಳು (ಮೋಹತ. ೨೭-೧). [ತೀರ್ಕಣೆ + ಕೆಯ್₁]

**ತೀರ್ಕೆ** (ನಾ). ಇತ್ಯರ್ಥ; ನಿರ್ಣಯ; ತೀರ್ಮಾನ. 'ತೀರ್ಕಣೆ' ಪರಾ. [ ತೀರ್ + – ಕೆ ]

**ತೀರ್ಗಡೆ, ತೀರಗಡೆ, ತೀರ್ಕಡೆ** (ನಾ). ೧. ತೀರಿಸುವಿಕೆ; ಪೂರೈಕೆ: ತನ್ನ ಪ್ರಜೆಗಳ ಕಾರ್ಯಗಳನುರೆ ಮುನ್ನ ತೀರ್ಗಡೆ ಮಾಡಿ (ರಘುವಂ. ೧೫೪-೨೪). ತೀರುಗಡೆ: ೨. ಸಲ್ಲುವಿಕೆ; ಸಂದಾಯವಾಗುವಿಕೆ: ಆತ್ಮಸಖಿಯೆ ನಿನಗೇನನಿತ್ತೊಡೆ ನಿನ್ನ ರಿಣ ತೀರುಗಡೆಯಪ್ಪುದೇ (ನಪಮೋ. ೨೭-೫೫). ತೀರ್ಕಡೆ: ೩. ಮುಕ್ತಾಯ; ಅಂತ್ಯ; ಕೊನೆ: ತೀರ್ಕಡೆಯೋಳ್ ಬಳಿಕ್ಕಮಾ ತತ್ತ್ವಮಸೀತಿ ವಾಕ್ಯಪದಮಪ್ಪುದು (ಶತಳ. ೧-೪೯). [ತೀರು₁ (<ತೀರ್) + ಕಡೆ₃]

**ತೀರ್ಗಣಿಸು** 'ತೀರ್ಕಣಿಸು' ನೋ.

**ತೀರ್ಚಿಸು** (ಕ್ರಿ). ಮುಗಿಸು; ಕೊಲ್ಲಿಸು; ನಾಶಗೊಳಿಸು: ಷಡಾನನನಿಂ ತಾರಕಾಸುರನಂ ತೀರ್ಚಿಸಿ . . . ವರಮಂ ಕರುಣಿಸುತಿರ್ದಂ (ಗಿರಿಕ. ೩ ಕಥಾಗರ್ಭ). [ತೀರ್ಚು + – ಇಸು₃]

**ತೀರ್ಚು, ತೀರಿಚು, ತೀರ್ಚ್ಚು** (ಕ್ರಿ). ೧. ಮುಗಿಸು; ಪೂರೈಸು: ತೀರ್ಚಿ ಸಂಧ್ಯಾನಿಯಮಂಗಳನೆಯ್ದೆ ಭಸ್ಮಶಯ್ಯಾತಳದೊಳ್ ಬಿಸುಸುಯ್ದು ಮೆಯ್ಯನಿಕ್ಕಿದಳಾಗಳ್ (ಕಾದಂಪೂ. ೯೬೯); ಮಜ್ಜನ ಭೋಜನಾದಿ ದಿವಸವ್ಯಾಪಾರಮಂ ತೀರ್ಚಿ (ಮಲ್ಲಿಪು. ೪-೯೬ವ). ೨. ಕೊಲ್ಲು; ಸಾಯಿಸು: ಕುರುನಂದನರಂ ಕೊಂದೆಂ ಕುರುಶಾಬಾನುಜನ ನೆತ್ತರಂ ಕುಡಿದೆಂ ಪೂಣ್ದಿರಡಂ ತೀರ್ಚಿದೆನಿರ್ದಪುವೆರಡುಮವಂ ತೀರ್ಚಿ ತೀರ್ಚದಿರ್ಪನೆ ಪಗೆಯಂ (ಗದಾಯು. ೦-೬೯); ನೀಂ ಪಂಪೆಗೆ ಬಂದು ಮದ್ಗುರುವಿನುದ್ಯದ್ಯಾಗಮಂ ನುಗ್ಗುವಾ ದನುಜಾಧೀಶನನೊಲ್ದು ತೀರ್ಚಿ ಮಖಮಂ ರಕ್ಷಿಪ್ಪುದು (ಉದ್ಭಟ. ೨-೨೭); ಶರಭತ್ವದಿಂದಮೆ ತೀರ್ಚಿ ತತ್ ಸಿಂಹಮಂ (ಭಾವಚಿಂ. ೩-೦೪): ಸೀಳುವೆಂ ಪುಲಿಯೊಡಲ ತೀರ್ಚುವೆಂ ಪಗೆಯಂ (ಕಾಲೂರ. ೮೪-೧೫೯). ೩. ನಾಶಮಾಡಿಸು; ಕೊಲ್ಲಿಸು: ಸ್ಕಂದನಿಂ ತಾರಕಾಸುರನಂ ತೀರ್ಚಿ ಸಮಸ್ತಲೋಕಜನತಾಸಂತುಷ್ಟಿಯಂ ಮಾಡಿ (ಗಿರಿಕ. ೧೦-೧೧೧). ೪. ಕೊನೆಗಾಣಿಸು; ಇಲ್ಲದಂತೆ ಮಾಡು: ಲೋಭತ್ವದ ಬೇರಂ ಕಿಳ್ತು ಮಾತ್ಸರ್ಯಮನುಡುಗಿ ಮದಾವಲೇಪಮಂ ತೀರ್ಚಿ (ರಕ್ಷಾಶ. ೭೯). ೫. ನಿವಾರಿಸು; ಪರಿಹರಿಸು; ಕಳೆ: "ಪರಿಹರಿಪುದಕೆ ತೀರ್ಚನಿಕ್ಕುಂ" (ಕಶಿರ. ೪೭); ಉಳ್ಳಿಯಿಂ ಕಿನ್ನರಯ್ಯಗಾದ ಮುಳಿಸುವಂ ಉಳ್ಳಿಯಿಂದವೆ ತೀರ್ಚಿ ಕಳೆವುದು ನಿರೋಧವಂ (ಬಸರ. ೦೧-೯೪); ಅಜ್ಞಾನತಿಮಿರಮಂ ತೀರ್ಚಿ (ಭಾವಚಿಂ. ೩-೩೩). ಒಲಿದೆನಗೆ ಕ್ಷುತ್ಪಿಪಾಸೆಗಳ ತೀರ್ಚಿದರಿಲ್ಲ (ಪಂಚಾರಾ. ೫-೦-೫೫). ೬. (ಖಾಯಿಲೆ, ಬೇನೆ, ಹುಣ್ಣು ಮೊದಲಾದುವು) ವಾಸಿಯಾಗು; ಗುಣವಾಗು: ಎಕ್ಕೆ ಸಾಸಿವೆ ಹರಿದ್ರಾದ್ವಂದ್ವಮಿಾ ಪೇಟ್ದ ಮರ್ದುಗಳಂ ಪುತ್ತಿನ ಮಣ್ಣುಮಂ ಕದಡಿ ಕಾಸಿಟ್ಟೆಯ್ದೆ ಪೊಯ್ವಾವ ಬಾವುಗಳುಂ ತೀರ್ಚುಗುಂ (ಲೋಕೋಪ. ೯-೨೪೦). ೭. (ಖಾಯಿಲೆ ಮೊದಲಾದುವನ್ನು) ವಾಸಿಮಾಡು; ಗುಣಪಡಿಸು: ಗುರುಭಕ್ತಿ ಭೇಷಜನಾಗಿ ರುಜೆಯಂ ತೀರ್ಚುವುದು (ಬಸಪು. ೩೯-೨೪). ೮. ಈಡೇರಿಸು; ಕೈಗೂಡಿಸು; ಪೂರ್ಣಗೊಳಿಸು: ನೀನಿದರ್ಕೇನುಮಂ ಬಗೆಯಲ್ವೇಡ ನಿನ್ನ ಬಗೆಯಂ ಬಗೆವಂತೆ ತೀರ್ಚುವೆಂ (ಪಂಪಭಾ. ೪-೭೯ವ); ನಾಥ ನೀಂ ಕರುಣದಿನೊರ್ಮೆ ಕಣ್ದೆರೆದು ತೀರ್ಚು ಮದೀಯ ಮನೋರಥಂಗಳಂ (ಕಾದಂಪೂ. ೯೨೪): ನಿಮ್ಮ ಸ್ವಾರ್ಥಮೆಲ್ಲಮಂ ತೀರ್ಚಿ ಕೊಳ್ಳಿಂ (ಪಂಚತಂ. ೦೦೩-೬); ಎನ್ನ ಬಾಧುಗಳ್ಗಕ್ಕೆ ಗಂಡಂಗಕ್ಕೆ ಪೇಟ್ವೊಡ ಮವರೀ ಬಯಕೆಯಂ ತೀರ್ಚುವರಲ್ಲಂ (ಧರ್ಮಾಮೃ. ೮-೧೨). ೨, ೮: ಪಗೆಗೊಂಡ ತುಂಬಿಯಂ ನಸುನಗುವಪೊಲಲ್ಪುಲದುಱ ಪೊಂಗಿ ಕಂಪಾದುದೆನಲ್ ಸೊಗಯಿಸಿ ಕಾಮನ ಪಗೆಯಂ ಬಗೆಯಂ ತೀರ್ಚಿದವು ಸುಗ್ಗಿಯೊಳ್ ಸಂಪಗೆಗಳ್ (ಮಲ್ಲಿಪು. ೫-೦೮). ೯. ಜರುಗಿಸು; ಮಾಡು; ನಡೆಸು: ಬಂದ ಮರರಿರ್ವರವನತರೆಂದರ್ ಭೂಪೇಂದ್ರ ಬೆಸಸು ಬೆಸಸೆವ್ಮಂ ನೀನೆಂದುದನೆ ಬಯಸಿ ತೀರ್ಚಲ್ ಬಂದೆವು ಜಾತೋಪಕಾರ ವಿಕ್ರಯಮತಿಯಿಂ (ಶಾಂತಿಪು. ೯-೭೧); ತನ್ನರಸಿಯ ಕೆಯ್ಯೊಳ್ ನಂಬಿಯಣ್ಣನಂ ಕೊಟ್ಟು . . . ಜಾತಕರ್ಮವಂ ನೆನೆದು ತೀರ್ಚಿ [ ಪಾಠಾಂ. ನಿವಿರ್ಚಿಸಿ ] (ನಂಬಿರ. ೨-೯೬); ಹರುಷಂಬೊತ್ತು ಲಿಂಗಸ್ಪರುಶನದ ನಿಯಮಂಗಳಂ ತೀರ್ಚಿ (ಬಸಪು. ೬೦-೩೩): ದೇವಂಗೆ ಸರ್ವಮಂಗಳಕಾರ್ಯಮಂ ತೀರ್ಚಿ (ಅಶಿಚಂ. ೩೭-೪೭). ೧೦. ವ್ಯಯಮಾಡು; ಕಳೆದುಬಿಡು; ನೀಗು: ತನ್ನ ಸಹಾಯನಪ್ಪ ವಿಪ್ರನ ಕೈಯೊಳ್ ವಸ್ತುವಂ ಕೊಟ್ಟು ಪೋಪುದುಮಾತನದೆಲ್ಲಮಂ ಸ್ತ್ರೀ ದ್ಯೂತ ವ್ಯಸನದಿಂ ತೀರ್ಚಿ (ಮಹಾನೇ. ೩-೧೪೭ವ). ೧೧. ದಾಟು; ಕ್ರಮಿಸು: ಆ ತ್ರಿದಿವದಾಯುರಬ್ಧಿಯನಾ ತ್ರಿದಶಂ ತೀರ್ಚಿ (ಶಬ್ದಾನು. ೧೨೭ ಪ್ರಯೋ). ೧೨. ನಿರ್ಮಿಸು; ರಚಿಸು: ಈಕ್ಷಣಾಂಶುಮಂಡಳಿಸಿದುದಿಂದುರಶ್ಮಿಯೊಳೆ ತೀರ್ಚಿ ತೊಡರ್ಚಿದ ಕೀಟ ನೇಣಪೋಲ್ (ಪಂರಾಮಾ. ೪-೧೧೩). ೧೩. ಕಳಚು: ಬೇರೆಮಾಡು: ತಿಲರಸಪಾರಿಯ ಭೇದದಂತೆ ಮಣಿಯೊಳಗಿರ್ದ ಸೂತ್ರದಂತೆ ಅಂಗವ ತೀರ್ಚಿ ಪಾಯಿದು ನಿಂದ ಅಹಿಯ ಅಂಗದಂತೆ (ಸವರವ. ೭೭-೩೬೦). ತೀರಿಚು: ೨. ತೀರದೀತನ

ಕಾರಣರಾದರು (ಛಾರದ. ೩೨೮). ೨. ನಷ್ಟ ಪರಿಹಾರವಾಗು ; ಸರಿದೂಗು : ನುಡಿಯಂತೆ ನಡೆಯದಿದ್ದರೆ ನಡೆಯಂತೆ ನುಡಿಯದಿದ್ದರೆ ದಿವ್ಯ ಜೀವನದಲ್ಲಿ ಅದೊಂದು ದೊಡ್ಡ ಕುಂದು, ತುಂಬಿಬಾರದ ಕೊರತೆ (ಮೋಕ್ಷಮಾ. ೬ ಪ್ರಸ್ತಾವನೆ); ಅವನ ಕಾಲಿನ ಕುಂಟುತನದ ಊನವು ಅವನ ಪ್ರಸಂಗಾವಧಾನದ ಚತುರತೆಯಲ್ಲಿ ತುಂಬಿ ಬಂದಿತ್ತು (ಕಂಬಹು. ೧೩). ತುಂಬಿರು = ಭರ್ತಿಯಾಗಿರು ; ಹರಡಿರು : ವಂದಿತಾವಳಿವಳಕುಟ ವರ್ಧನರಿಂದ ತುಂಬಿಹುದೆಂಟುಯೋಜನದಂದವದು (ಸುಕುಶ. ೫-೮೬); ಅದಱಿನಾ ತಱವಾಯ ಮನೆಯೊಳು ಗದೆ ಶರಾಸನ ಖಡ್ಗ ಮುದ್ಗರವಧಟು ಚಕ್ರ ತ್ರಿಶೂಲ ತುಂಬಿರೆ (ಕುವ್ಯಾ.ಅ. ೦೧೮. ೩೨-೩೨).

[ದೇ. ⁝ ತುಳು. ತುಂಬು ; ಕೊಡ. ದುಂಬ್]

**ತುಂಬು₂** (ನಾ). ಸಂಪೂರ್ಣವಾಗಿರುವಿಕೆ ; ಪೂರ್ಣತೆ ; ಅತಿಶಯಂ ; ಬಾಹುಳ್ಯ : ಅವ ತುಂಬಿಹುದಿಲ್ಲಿ ಎರೆವವರಿಗೆರೆವಷ್ಟನೀವ ಮನ ತುಂಬು ವಷ್ಟರಿವ ಎದೆ ತುಂಬುವಷ್ಟೊಲವ ಪಡೆಯೆ ಜೀವ ? (ಮುರದೀ. ೫೦-೯).

[ <ತುಂಬು₁ ]

**ತುಂಬು₃** 'ತೂಂಬು' ನೋ.

**ತುಂಬು₄**, **ತಂಬ್ಬೆ** (ನಾ). ೧. ಹಣ್ಣು, ಕಾಯಿ, ಹೂವು ಮೊದಲಾದವುಗಳ ತೊಟ್ಟು,—ನಾಳ ; ವೃಂತ ; ತೊಡಂಬೆ : "ತುಂಬು— ಪೂರಣೇ, ವೃಂತ (ಹೂವಿನ ಕಾವು), ಜಲಪ್ರಣಾಲ್ಯೋಃ (ತೂಬು)" (ಶಮದಾ) ; "ತೊಟ್ಟು ತುಂಬೆನೆ ವೃಂತನಾಮವೆಂದೇ ತಿಳಿವುದು" (ಕಬ್ಬಮಂ. ೨೩); ಉದುರಿಹೋದ ಹೂವಿನ ತುಂಬಿನತ್ತ ಲಲಿತಾ ತದೇಕ ಚಿತ್ತದಿಂದ ನಿಟ್ಟಿಸತೊಡಗಿದಳು (ಕನಸಿ. ೧); ಕಿತ್ತಳೇಹಣ್ಣು ಬುಡದಲ್ಲಿಯೂ ತುಂಬಿನಲ್ಲಿಯೂ ತುಸು ಕುಗ್ಗಿರುವಂತೆ ಪೃಥ್ವಿಯಾದರೂ ಉತ್ತರ ದಕ್ಷಿಣ ಧ್ರುವಗಳೆಡೆಗೆ ಸ್ವಲ್ಪ ಕುಗ್ಗಿಯದೆ (ಮುಂಬಯಿ. ೪-೩೪); ಮೆಣಸಿನಕಾಯಿಯ ತುಂಬು ಮುರಿದು ಅವನ್ನಾದರೂ ತಾಟನ ಬದಿಗಿರಿಸಿದಳು (ಕಳ್ಳ. ೨೨೦). ೨. ಒಂದು ಬಗೆಯ ಆಭರಣ. 'ಚಳತ್ತುಂಬು' ಪರಾ. ತುಂಬ್ಬೆ : ೧. "ತುಂಬೆಯೆನೆ ತೊಟ್ಟು" (ಕಕರ. ೪೬).

[ ದೇ. ⁝ ತಮಿ. ಮಲ. ತುಮ್ಬು = ತುದಿ, ಅಂಚು ]

**ತುಂಬುಕಣ್ಣು** 'ತುಂಬುಗಣ್ಣು' ನೋ.

**ತುಂಬುಗ** (ನಾ). ಭರ್ತಿಮಾಡುವವನು ; ತುಂಬುವವನು ; "ಪ್ರಾಯುನ್, ಪ್ರಾಪಕಃ, ಪ್ರಾತಾ ಈ ಮೂರು ತುಂಬುಗಂ" (ಶಾಕಶ್ಕ. ೦೬೬).

[ ತುಂಬು₂ + –ಗ₂ ]

**ತುಂಬುಗಣ** (ನಾ). (ಧಾನ್ಯಗಳನ್ನು) ರಾಶಿ ಹಾಕಿರುವ ಕಣ : ಇವೊತ್ತು ತುಂಬುಗಣದ ಪೂಜೆ ಇದೆ (ರೂಢಿ). [ ತುಂಬು₂ + ಕಣ₁ (<ಕಳ₃)]

**ತುಂಬುಗಣ್ಣು**, **ತುಂಬುಕಣ್ಣು** (ನಾ). ೧. ಅಗಲವಾದ ಕಣ್ಣು ; ದೊಡ್ಡಕಣ್ಣು : ತುಂಬುಗಣ್ಣಲ್ಲಿ ನೋಡಿದಳು (ಕೃದ್ಧಪಿ. ೦೨೫) ; ತನ್ನ ತುಂಬುಗಣ್ಣುಗಳನ್ನು ಹೊರಹೊರಳಿಸಿ ನೋಡುತ್ತ ಮರವಣಿಗೆಯ ಹಿಂದೆ ಸಾಗಿದಳು (ಫಲಸಂ. ೮೫). ತುಂಬುಕಣ್ಣು : ೨. (ಕಣ್ಣೀರು) ತುಂಬಿದ ಕಣ್ಣು : ಪಾಳುರಾಜಧಾನಿಯನ್ನು ತುಂಬುಕಣ್ಣಿನಿಂದ ನೋಡಿ ... ನಿಟ್ಟುಸಿರಿಟ್ಟು ಪಂಡಿತನನ್ನು ಹಿಂಬಾಲಿಸಿದ (ಚಿರಬಿ. ೩).

[ ತುಂಬು₂ + ಕಣ್ಣು (< ಕಣ್) ]

**ತುಂಬುಗಲ್ಲ** (ನಾ). ತುಂಬಿಕೊಂಡಿರುವ ಗಲ್ಲ ; ದುಂಡನೆಯ ಕೆನ್ನೆ : ಮೊದಲಿನ ತುಂಬುಗಲ್ಲದ ನಗುಮುಖದ ರವಾ ಎಲ್ಲಿ, ಒಣಗಿದ ಕೃಶವಾದ ಅಳುಮುಖದ ನೀನೆಲ್ಲಿ ? (ಕುಂಕುಮ. ೫೫). [ ತುಂಬು₂ + ಗಲ್ಲ₁ ]

**ತುಂಬುಗಾಂಭೀರ್ಯ** (ನಾ). ಅಧಿಕವಾದ ಹಿರಿಮೆ ; ದೊಡ್ಡತನ : ತುಂಬುಗಾಂಭೀರ್ಯದಲಿ ಸತ್ಯವನೆ ಎತ್ತಿ ನಿಲಿಸುವನು ಪ್ರಜೆಯು ತಂದೆ (ಹೊಂಗನು. ೬-೮). [ ತುಂಬು₂ + ಗಾಂಭೀರ್ಯ ]

**ತುಂಬುಗಾಯಿ** (ನಾ). ಬದನೆಕಾಯಿ ಮೊದಲಾದ ಇಡಿಕಾಯಿಯೊಳಗೆ ಸಂಭಾರವನ್ನು ತುಂಬಿ ಬೇಯಿಸಿ ಮಾಡಿದ ಪಲ್ಯ : "ತುಂಬುಗಾಯಿ— ಇಡಿಗಾಯಿಪಲ್ಲೆ ; ಬದನೇಕಾಯಿಯ ಪಲ್ಲೆ" (ಕಾನಕೋ. ೬೬); ಅವಳು ಬದನೆಯ ತುಂಬುಗಾಯಿ ಮಾಡುವುದರಲ್ಲಿ ಎತ್ತಿದ ಕೈ (ರೂಢಿ).

[ ತುಂಬು₂ + ಕಾಯಿ₄ (< ಕಾಯ್₄) ]

**ತುಂಬುಗುಂಕುಮ** (ನಾ). ಹಣೆಯಲ್ಲಿ ಇಟ್ಟುಕೊಂಡಿರುವ ಅಗಲವಾದ ಕುಂಕುಮ: ಮುಂಬಯಿಸಿ ಕೈಗೈದ ಸೊಬಗಿನ ಕಂಬಲರ ಮೈವೆಟ್ಟ ಕಂಬಲು ತುಂಬುಗುಂಕುಮ ತಿವಿರು ಚೆಂದುಟಿಯುಟ್ಟರುಣವಸನ (ಸಾಳ್ವಭಾ. ೩-೩೪).

[ ತುಂಬು₂ + ಕುಂಕುಮ ]

**ತುಂಬುಗೂದಲು** (ನಾ.) ದಟ್ಟವಾದ ಕೂದಲು; ಇವನು ತುಂಬುಗೂದಲಿನ ಕುವಾರನಂತೆ ಕಣ್ಣಿಗೆ ಮುದ್ದಾಗಿ ... ಸುಳಿಯುತ್ತಾನೆ (ಛಾರದ. ೨೧).

[ತುಂಬು₂ + ಕೂದಲು (<ಕೂಂದಲ್)]

**ತುಂಬುಗೆ** (ನಾ). ತುಂಬುವಿಕೆ ; ಭರ್ತಿಯಾಗುವಿಕೆ : "ಪೂರ್ತಿಃ, ಪೂರ್ತಂ ... ಈ ೧೦ ತುಂಬುಗೆ" (ಶಾಕಶ್ಕ. ೦೭೬). [ತುಂಬು₂ + –ಗೆ]

**ತುಂಬುಗೆಡು** (ಕ್ರಿ). ತುಂಬದೆ ಇರು ; ಪೂರ್ಣತೆಯಿಲ್ಲದಿರು: ತುಂಬು ಗೆಟ್ಟ ಅರಿಯಾದ ಬರಿದುವೋದ ಬಟ್ಟಲ್ಗಳನ್ನು ... ಭರಿಸುತ್ತಿರುವರು (ಬೆಟ್ಟಿಅ. ೮೩-೧೦). [ತುಂಬು₂ + ಕೆಡು₁]

**ತುಂಬುಗೆನ್ನೆ** (ನಾ). = ತುಂಬುಗಲ್ಲ : ತುಂಬುಗೆನ್ನೆ ; ನೀಳವಾದ ಮಾಟವಾದ ಮೂಗು (ಕಳಹು. ೨). [ತುಂಬು₂ + ಕೆನ್ನೆ]

**ತುಂಬುಗೆಯ್** (ನಾ). ಪುಷ್ಟವಾದ ತೋಳು, – ಬಾಹು, – ಭುಜ : ತನ್ನುಳ್ಳ ಬಲ್ಪನಿತಱೊಳಂ ಮುಂತಣ್ಗೆ ನಿಂತಂ ತುಂಬುಗೆಯ್ಯುಕ್ಕುವಿನಂ (ಜೀವಂ. ೦೬೪-೦೪). [ತುಂಬು₂ + ಕೆಯ್₂]

**ತುಂಬುಗೊಳ್ಳು** (ಕ್ರಿ). ಭರ್ತಿಯಾಗು; ಅಧಿಕಗೊಳ್ಳು; ಅತಿಶಯವಾಗು: ಮನುವ ಮನವು ಹರುಷಪಡಲಿ ಎಂಬ ಬಯಕೆ ತುಂಬುಗೊಂಡು ಆಸೆ ಬಲಿತು ಕನಸ ಕಲಿತು (ಮೂರ್ತಿಶಾ. ೦೫-೦೩). [ತುಂಬು₂ + ಕೊಳ್ಳು₁ (<ಕೊಳ್₁)]

**ತುಂಬುಗೋಡಿ** (ನಾ.) ೧. ತುಂಬಿ ಹರಿಯುವ ಕೋಡಿ: ಕೆರೆಯಲ್ಲಿ ತುಂಬುಗೋಡಿ ಹರಿಯುತ್ತಿದೆ (ರೂಢಿ). ೨. (ಅಲಂ) ಅತ್ಯಧಿಕ ; ಅತಿಶಯ : ಬೊಕ್ಕಸ ಭಂಡಾರಗಳ ತುಂಬುಗೋಡಿಯ ಮಹಾನಿಧಿಯದನ್ನು ಪರಿಪಾಲಿಸಿ ಕೊಳ್ಳಬೇಕೆಂಬ ಆ ಬೆಳ್ಪಳಿಯ ಅರಿವು ನಿನಗೆ ನಿಶ್ಚಯವಾಗಿ ಇಲ್ಲ (ಮಂತ್ರಶ. ೦೦೨-೨೫). [ತುಂಬು₂ + ಕೋಡಿ₁]

**ತುಂಬುಚೀಲ** (ನಾ). ತುಂಬಿರುವ ಚೀಲ ; ಭರ್ತಿಯಾಗಿರುವ ಚೀಲ : ಎದ್ದುಹೋಗಿ ಪೆಟ್ಟಿಗೆದೆರೆದು ನಾಲ್ಕು ತುಂಬುಚೀಲಗಳನ್ನು ಅವರತ್ತಣ್ಗೆ ... ಬಿಸಾಡುವನು (ಬೆಟ್ಟಿಅ. ೫೪-೦೮). [ತುಂಬು₂ + ಚೀಲ]

**ತುಂಬುಚ್ಚು** 'ತೂಂಬುಚುರ' ನೋ.

**ತುಂಬುಜವ್ವನ** (ನಾ). ತುಂಬಿದ ಹರಯ ; ಪೂರ್ಣವಾದ ಯೌವನ,– ತಾರುಣ್ಯ : ತುಂಬುಜವ್ವನದ ನಿತಂಬಿನಿಯರ ಕುಂಭಕುಚದಿಱುಂಬಿ ನೋಳಿಂಬುವಡೆದು (ರಾಜಶೇ. ೨-೮೪) ; ಅವನು ತುಂಬುಜವ್ವನವನ್ನು ಧರಿಸಿದನು (ಮಹಿಶ. ೬೪). [ತುಂಬು₂ + ಜವ್ವನ]

**ತುಂಬುಜವ್ವನೆ** (ನಾ). ೧. ತುಂಬು ಹರೆಯದ ಹೆಂಗಸು; ನವತರುಣಿ ; ಯುವತಿ : ನನೆಯಂಬುವಿಡಿದಂಜಿಸುವ ಬೆಡಗಿನ ತುಂಬುಜವ್ವನೆ ನಾಲ್ಕು ನೀರನು ಮಿಂದಳೊಲವಿಂದ (ಸಾಳ್ವಭಾ. ೦೩-೩೪). ೨. ತುಂಬಿದ ಎದೆಯುಳ್ಳವಳು. 'ಕಕ್ಕಸಜವ್ವನೆ' ಹೋ. [ತುಂಬುಜವ್ವನ + –ಎ₂]

**ತುಂಬುಜೀವನ** (ನಾ). ಪರಿಪೂರ್ಣವಾದ ಜೀವನ ; ತೃಪ್ತಿಯ ಬಾಳು: ತುಂಬುಜೀವನದ ತುಂಬನುಭಾವದ ಬಿಂಬಾಧರ ಶಿವಶಾಂಭವಿಯ ಮಗಳು (ಸಿದ್ಧಪು. ೨-೯೮) ; ಇದು ತುಂಬುಜೀವನದ ಭಾವಾನುಭಾವಗಳ ಪರಿಪಕ್ವತೆಯ ಫಲ (ಸಾಹಿತ. ೩೪) : ವೇದಕಾಲದ ತುಂಬುಜೀವನದಲ್ಲಿ ಬ್ರಹ್ಮ

ವಾದಿನಿಯರಾದ ಮಹಿಳೆಯರು ತಮ್ಮ ಭಾವನೆಗಳನ್ನು ಸಾಹಿತ್ಯದ ಮೂಲಕ ವ್ಯಕ್ತಗೊಳಿಸಿದರು (ಕರ್ನಾಕ. ೩೯). [ತುಂಬು$_2$ + ಜೀವನ]

**ತುಂಬುಣ್ಣು** (ಕ್ರಿ). ಚೆನ್ನಾಗಿ ಊಟಮಾಡು ; ಹೊಟ್ಟೆತುಂಬ ತಿನ್ನು : ಉಂಬ ಬಾಯ್ ಕಾಣಾಗಿ ಉಂಡೆಲ್ಲರಂ ತಣಿಪಿ ತುಂಬುಂಡು [ಪಾಠಾಂ. ಬಲದು] ಪಲವು ಕದಳಿಗಳೆಲ್ಲ ದಣಿದವೆಂದೆಂಬುದಂ ಮಾಡಿ ತೋಱದ ಮಹಾಪ್ರಭುವರನ (ಲಶಿಚಂ. ೩೨-೩೩). [ತುಂಬು$_2$ + ಉಣ್ಣು (<ಉಣ್)]

**ತುಂಬುದಣ್ಗದಿರ** (ನಾ). ಪೂರ್ಣಚಂದ್ರ; ಹುಣ್ಣಿಮೆಯ ಚಂದ್ರ: ನುಣ್ಗುರುಳ ನೀಱಗೆ ಬೆಡಂಗವುರ್ದೆಸೆವ ತುಂಬುದಣ್ಗದಿರನಂದದ ಮೊಗದ ಚೆಲ್ವಿಗೆ … ಪೆಣ್ಗಳರಸಿಗೆ ಗರ್ಭಚಿಹ್ನವಂಕುರಿಸಿದುದದಂ ಪೊಗಳ್ವ ಕವಿ ಯಾವನೋ (ಶಬ್ಧಕಾ. ೨-೩೮). [ತುಂಬು$_2$ + ತಣ್ಗದಿರ]

**ತುಂಬುದಿಂಗಳು** (ನಾ). =ತುಂಬುದಣ್ಗದಿರ: ತುಂಬುದಿಂಗಳ ಮೊಗ ತುಱು ಗೆಮೆಯಲರ್ಗಣ್ ತುಂಬಿಗುರುಳು (ಶ್ರೀಪಾಂ. ೩-೨೪); ತುಂಬುದಿಂಗಳು ಮೊಗದ ನಸುನಗೆಯೆಂಬ ಬಾಂದೊಱದೆರೆಪೊಯಿದು … ಅಂಬುಮೆಱ ವರು ಪಥಿಕರಿಗೆ (ಸಾಳ್ವಭಾ. ೧-೬೨); ತುಂಬುದಿಂಗಳ ಕನಕಬಿಂಬಕ್ಕೆ ಪೊನ್ ತನಂ ಬಾಡಿ, ಮೂಡಿದುದು ಬೆಳ್ಳಿಯತನಂ (ಶ್ರೀರಾಮಾ. ೪೮೦-೧೬೩).

[ತುಂಬು$_2$ + ತಿಂಗಳು (<ತಿಂಗಳ್)]

**ತುಂಬುದೆರೆ** (ನಾ). ಸಂಪೂರ್ಣವಾಗಿ ಮುಂಚ್ಚಿರುವ ತೆರೆ, - ಪರದೆ : ಚಂದ್ರಗಾವಿಯ ಮೇಲ್ಕಟ್ಟನೊಳುವಣ್ಣದ ತುಂಬುದೆರೆಯ… ಮುಂಚದೆ ಸೆಳೆದಪ್ಪೊ ಮೋಹನರೂಪ (ಕಂಸವಿ. ೯-೧೮೮). [ತುಂಬು$_2$ + ತೆರೆ$_4$]

**ತುಂಬುನಂಬಿಗೆ** (ನಾ). ಪೂರ್ತಿನಂಬಿಕೆ ; ಸಂಪೂರ್ಣವಿಶ್ವಾಸ : ತಂದೆ ಬಂದೆವಿದೊ ತುಂಬುನಂಬಿಗೆಯಾ ಹಡಗದಲ್ಲಿ ಕುಳಿತು (ನೆಲಮು. ೩೬-೧೫).

[ತುಂಬು$_2$ + ನಂಬಿಗೆ (<ನಂಬುಗೆ)]

**ತುಂಬುನಗೆ** (ನಾ). ಪೂರ್ಣವಾದ ನಗೆ : ಆಗಸದ ಗಂಟುಮೋರೆಯಲಿ ಹೊಂಬಿಸಿಲ ತುಂಬುನಗೆ ಹರಿಸಿ ಹರಿದಿಹುದು ನೀರು (ನೆಲಮು. ೦೫-೦೩): ಸವಿಹಸಿವೆ ಕಂಬನಿಯು ತುಂಬುನಗೆಯೊಮ್ಮೆ (ಕಾಲೂಕ. ೩೦-೨೬).

[ತುಂಬು$_2$ + ನಗೆ]

**ತುಂಬುನೀರು** (ನಾ). ಅಣೆಕಟ್ಟು ಮೊದಲಾದ ಜಲಾಶಯಗಳು ಭರ್ತಿಯಾದಾಗ ಇರುವ ನೀರು : ಮುಂದುಗಡೆಯ ಕೊಳದ (Forebay) ತುಂಬುನೀರಿನ ಮಟ್ಟ ೧೭೬೪೦ ಅಡಿ (ಶಿಲ್ಪನಾ. ೨೪೬).

[ತುಂಬು$_2$ + ನೀರು$_1$ (<ನೀರ್$_1$)]

**ತುಂಬುನೊಸಲ್** (ನಾ). ವಿಸ್ತಾರವಾದ ಹಣೆ ; ವಿಶಾಲವಾದ ಹಣೆ : ಸುಱಗುರುಳ ತುಂಬುನೊಸಲ ಅಸಿಯ ಬೊಟ್ಟಿನ ನೀಳ್ದ ಪುರ್ವಿನ … ವಿದ್ಯಾಧರವಾರನಾರೀಕದಂಬಂ (ಧರ್ಮಾಮೃ. ೮-೧೯೬).

[ತುಂಬು$_2$ + ನೊಸಲ್]

**ತುಂಬುಪಾಂಡಿತ್ಯ** (ನಾ). ಸಂಪೂರ್ಣವಾದ ವಿದ್ವತ್ತು : ತುಂಬುಪಾಂಡಿತ್ಯ, ಕವಿಸಹಜವಾದ ಕೋಮಲಹೃದಯ (ಕನ್ನಡು. I, ೦೨); ಉಪನ್ಯಾಸಕರ ತುಂಬುಪಾಂಡಿತ್ಯವು ಕೇಳುವವರನ್ನು ಆಶ್ಚರ್ಯಪಡಿಸಿತು (ರೂಢಿ).

[ತುಂಬು$_2$ + ಪಾಂಡಿತ್ಯ]

**ತುಂಬುಪೆರೆ** 'ತುಂಬುಮೆಱ' ನೋ.

**ತುಂಬುಬಸಿರ್** (ನಾ). ಹೆರಿಗೆಕಾಲ ಸಮಿಪಿಸಿರುವ ಗರ್ಭ ; ಪೂರ್ಣಗರ್ಭ : ದಶರಥಸತಿಯರಿಂತು ತುಂಬುಬಸಿರಿಂದೆಸೆಯೆ ನಲಿದತ್ತಯೋಧ್ಯೆ (ಶ್ರೀರಾಮಾ. ೦೫-೩೯೨). [ತುಂಬು$_2$ + ಬಸಿರ್ (<ಬಸಿಱ್)]

**ತುಂಬುಬಸಿರಿ** (ನಾ). ಹೆರಿಗೆಯ ಕಾಲ ಸಮಿಪಿಸಿರುವ ಗರ್ಭಿಣಿ ; ನವಮಾಸ ತುಂಬಿರುವ ಬಸಿರಿ ; ಪೂರ್ಣಗರ್ಭಿಣಿ : ತುಂಬು ಬಸಿರಿಯರು, ಹಾಲುಮಕ್ಕಳು ಸತ್ತ ಲೆಕ್ಕವ ದೇವರೆ ಬಲ್ಲ (ಜಂಗೀತ. ೩೩-೨೦).

[ತುಂಬುಬಸಿರ್ + -ಇ$_3$]

**ತುಂಬುಬಾಳ್** (ನಾ). = ತುಂಬುಜೀವನ : ನಗೆಯುತಿದೆ ಮತ್ತೊಮ್ಮೆ ನಮಗದೋ ತುಂಬುಬಾಳ್ ಬೀರಿ ಹಿರಿಯ ಬೆಳಕೊಂದು ಸಿರಿ ಸಾರಿ (ಹೊಂಗಳು. ೩೩-೧೧). [ತುಂಬು$_2$ + ಬಾಳ್$_2$ (< ಬಾೞ್$_2$)]

**ತುಂಬುಬಿಂಬ** (ನಾ). ಸಂಪೂರ್ಣವಾಗಿರುವ ಮಂಡಲ, - ಆಕಾರ, - ಸ್ವರೂಪ : ತುಂಬುಬಿಂಬಂ ತೋರಿದುದು ಪಾಡಿವದ ಪೆರೆಗೆ (ಶ್ರೀರಾಮಾ. ೬೪೯-೨೬೩). [ತುಂಬು$_2$ + ಬಿಂಬ]

**ತುಂಬುಬೆಳೆ** (ನಾ). ಅಧಿಕವಾದ ಬೆಳೆ ; ಹೆಚ್ಚಾದ ಬೆಳಸು : ಬಯಲಲಿ ಪಚ್ಚೆಯ ಪಯಿರಿನ ತುಂಬುಬೆಳೆ (ಹೊಂಗಳು. ೦೦-೦೧). [ತುಂಬು$_2$ + ಬೆಳೆ$_2$]

**ತುಂಬುಮೊಲೆ** (ನಾ). (ಹಾಲಿನಿಂದ) ತುಂಬಿಕೊಂಡಿರುವ ಕುಚ, - ಸ್ತನ: ತಾಯಿ ಚೊಚ್ಚಲಮಗುವ ನಲ್ಮೆಯಲಿ ಹೆತ್ತು, ತುಂಬುಮೊಲೆಯನು ಕೊಟ್ಟು, ಕಿನ್ನೆಯಲಿ ಮುತ್ತಿಟ್ಟು (ಪಾಂಚಜ. ೨೯-೯). [ತುಂಬು$_2$ + ಮೊಲೆ$_1$]

**ತುಂಬುಯೌವನ** (ನಾ). = ತುಂಬುಜವ್ವನ : ಕೆಲವರು ತುಂಬುಯೌವನದಲ್ಲಿ ಸಾಯುತ್ತಾರೆ (ಪಚಭಾ. ೩೪೩). [ತುಂಬು$_2$ + ಯೌವನ]

**ತುಂಬುರ್**, ತುಮರಿ, ತುಮ್ರಿ$_1$ (ನಾ). = ತುಂಬುರು$_3$ : ಅರನೇಱಲ್ ತಾಱ ತುಂಬುರ್ ತದುಕಳಿಲೆ ಲವಂ ನೆಲ್ಲಿ ಬಿಲ್ವಾರ್ಜುನಂ … ತಱಯ ದಿಂದೊಪ್ಪುತಿರ್ದತ್ತರಣ್ಯಂ (ಗಿರಿಕ. ೧-೬೨). **ತುಮರಿ** : ತುಮರಿಯ ಕೊಳ್ಳಿಯಂತೆ ಉರಿವಾತ ಭಕ್ತನೆ (ಸರ್ವವ. ೧೪೩-೮೫೦). **ತುಮ್ರಿ$_1$** : ಕಣ್ರಾಮ್ರಿ, ತುಮ್ರಿ (ವ್ಯಾಪಿಗಿ. ೩೦-೫೯೮). 'ಕಣ್ರಾಮ್ರಿ' ಪರಾ.

[< ಸಂ. ತುಂಬುರು./ತಮಿ. ತುಮ್ಬಿ, ತುಮ್ಬಿಲಿ; ತೆಲು. ತುಬಿಕಿ. ತುಮಿಕಿ, ತುಮ್ಮಿಕಿ ; ಕೊಲಾ. ನಾಯ್ಕಿ. ತುಮ್ಕಿ ; ಪರ್ಜಿ. ತುಂದ್ರಿ]

**ತುಂಬುರ್$_1$**, ತುಂಬುರಿ (ನಾ). [ಸಂಗೀತ] ಒಂದು ಬಗೆಯ ವೀಣೆ : ತುಂಬುರವಿಡಿದು ಗಾನಾಮೃತವನು ಕಿವಿಗಿಂಬಾಗಿ ಸವಿದೋಱಸುತ (ಕಂಸವಿ. ೮-೩೩); ಬಾಲಶಾರದೆಗಳೆನಲು ತುಂಬುರವನಾಂತು ಲೋಲಾಕ್ಷಿಯರಿರ್ವರಾಗ … ಪಾಡಿದರೊಲಿದು (ಕಂಸವಿ. ೮-೬೫). **ತುಂಬುರಿ** : ಸುರಮುನಿಯ ತುಂಬುರಿಯೊ, ನಂದಿಯ ಮೃದಂಗವೊ (ದುಂಬಿನಾ. ೦).

[< ಸಂ. ತುಂಬರೀ]

**ತುಂಬುರ್$_2$** (ನಾ). = ತುಂಬುರು$_3$ : ತೌಂಬುರವೀಣೆಯ ತುಂಬುರರಿಂ ಕಿನ್ನರವೀಣೆಯ ಕಿಂಪುರುಷರಿಂದಂ … ಒಪ್ಪಿದತ್ತಾ ಮಹಾಲಿಂಗದಾಸ್ಥಾನಂ (ಹಮ್ಮೀರ. ೮-೪೦೪); ವಿಷ್ಣುದೂತರಾ ತುಂಬುರನಂ ಕಯ್ವಿಡಿದು ಕರದುಯ್ಯೆ (ಅದ್ಭುತ. ೨೦-೦೦). [ಸಂ.]

**ತುಂಬುರ್$_3$** (ನಾ). = ತುಂಬುರು$_3$: "ತಿಂದುಕಃ, ಸ್ಫೂರ್ಜಕಃ, ಕಾಲಸ್ಕಂಧಃ, ಸಿತಸಾರಕಃ – ಈ ೪ ತುಂಬುರ" (ನಾಚಿರಾ. ೦೦೬) ; ಮಾಳಿಕಬ್ಬರಸಿ ತುಂಬುರ ಬೆಳದ ಬೋಗಿನಲು ಎಡೆಯೂರ ಪೊಲದೊಳ್ ಬಿಟ್ಟ ಮತ್ತ ರ್ಪ್ಪನ್ನೆರಡು (ಎಕ. XI, ಮೊಳಕಾ. ೪೦-೬ ; 987) ; ತಾಳಫಲಂಗಳೊಂದು ರುಚಿ ತುಂಬುರವಣ್ಗೊಳಗುಂಟೆ ಲೋಕದೊಳ್ (ಧರ್ಮಾಮೃ. ೪-೦೨೬) : ಬಸುರಿ ಬಿಳು ನೆತ್ತಿ ತುಂಬುರ ಬಿಕ್ಕಿ ನೆಲ್ಲ ಚಂದಣವತ್ತಿ … ಕಣ್ಗೆಸೆದುದು (ಸಿಂಗಿರಾ. ೩೦-೯). [ಸಂ.]

**ತುಂಬುರಕಾಯಿ** (ನಾ.) ತುಂಬುರುಮರದ ಕಾಯಿ : "ತಿಂದುಫಲಃ- ತುಂಬುರಕಾಯಿ" (ಓಷಧಿ. ೬೯). [ತುಂಬುರ್$_3$ + ಕಾಯಿ$_4$ (<ಕಾಯ್$_4$)]

**ತುಂಬುರಕೊಳ್ಳಿ** 'ತುಂಬುರಗೊಳ್ಳಿ' ನೋ.

**ತುಂಬುರಗುತ್ತಿ** (ನಾ). ತುಂಬುರಗಿಡದ ಪೊದರು, — ಮೆಳೆ : ಹಡಲ ಬೆಂಚೆಯ ಮುಂದಣ ಕೆಱೆಯ ತೆವರ ತುಂಬುರಗುತ್ತಿ ಮೇಳೆಗಳೊಳಗಣ ತೆಂಕಣದಿಕ್ಕಿನ ಕಲ್ಲಪೊಂದು (ಎಕ. XII, ತುಮಕೂ. ೧೧-೬೨ ; 1426).

[ತುಂಬುರ್$_3$ + ಗುತ್ತಿ$_1$]

**ತುಂಬುರಗೊಳ್ಳಿ**, ತುಂಬುರಕೊಳ್ಳಿ (ನಾ). = ತುಂಬುರುಗೊಳ್ಳಿ : ತುಂಬುರಗೊಳ್ಳಿಯಂದದಿ ಛಿಟಛಿಟಲೆಂದು ಕಣ್ಗಳ ಸೋಗೆಯೊಳು ಒಂದಿದ

ಕೆಂಪಿನಿಂದಾ ಚಕ್ರವರ್ತಿಯಿಂತೆಂದು ಬೆಸ್ಸೆಯನಾಡಿದನು (ನೇಮಿಸಂ. ೨೬-೨೦) : ಹಲ್ಲ ಕಡಿದು ಕಣ್ಣು ಕೆಂಪೇಱೆ ತುಂಬುರಗೊಳ್ಳಿಯಂತುರಿ ಛಿಟಿಛಿಟಿಱು (ಭರತೇ. ೨೪-೯೩). ತುಂಬುರಕೊಳ್ಳಿ : ಚರವಚನಮನಾಲಿಸಿ ತುಂಬುರ ಕೊಳ್ಳಿಯ ತೆಱದಿನಂಬರಕ್ಕೆ ಸಿಡಿಲ್ದು (ಶಂಕರಪು. ೪-೩೯) ; ಕೋಪಾಗ್ನಿ ಭೋಂಕೆನುತ್ತೆ ತುಂಬುರಕೊಳ್ಳಿಯ ತೆಱದಿಂದಂಬರವಂ ಮುಟ್ಟೆ (ನೇಮಿಜಿ. ೧೧-೧೯) ; ರಜಕನಂಬರಂಬರಂ ತುಂಬುರಕೊಳ್ಳಿಯಂತೆ ಸಿಡಿದಿಂತಪ್ಪ ಸಿತಗನನೆಲ್ಲಿಯುಂ ಕಾಣೆಂ . . . ಅತ್ತ ಸಾರೆಂದು ಮುಂದೀಡಾಡಿ (ಅರ್ಹನೀ. ೯-೭೭೪). [ತುಂಬುರು₁+ಕೊಳ್ಳಿ₁]

**ತುಂಬುರವೀಣೆ** (ನಾ). ಒಂದು ಬಗೆಯ ವೀಣೆ : ರುದ್ರವೀಣೆ ತುಂಬುರ ವೀಣೆ . . . ಮೊದಲಾದ ತಂತಿ ಕಟ್ಟಿ ನುಡಿವ ವಾದ್ಯವನಱುವುದು ಪ್ರಸಾದ ಲಿಂಗದಲ್ಲಿಯ ಗುರುಲಿಂಗ (ಅದವ. ೬-೧೨) : ಕೋಣನಿದಿರಲಿ ಪಾಡಿ ತುಂಬುರವೀಣೆಯಂ ಝೇಗೈದ ಪರಿ (ಗಣಸಾ. ೦೨-೮೪); ವಾಸುಗಿಯು ನಾಗಸರವೀಣೆ ತುಂಬುರವೀಣೆಯಾ ಸುನಾರದವೀಣೆ (ಸವಮೋ. ೦೭-೪೨). [ತುಂಬುರು₃ + ವೀಣೆ]

**ತುಂಬುರಿ** 'ತುಂಬುರು₁' ನೋ.

**ತುಂಬುರು₁** (ನಾ). ಒಂದು ಬಗೆಯ ಧಾನ್ಯ ; ಲವಣ ಪಂಚಕಮಿಂಗು ಒಪ್ಪಲಿ ಶುಂಠಿ ತುಂಬುರುಧಾನ್ಯಕಂ ಶಿವೆ ದುರಾಲಭೆ ಪಾಥೆ ಚಿತ್ರಕಮೋವ ಮಂಬಿವನೆಲ್ಲಮಂ ಸವನೆ ಕೊಂಡು (ಲೋಕೋಪ. ೯-೨೨೯) ; ತುಂಬುರು ಪೆರ್ಚಲ್ ಜೋಳವಳಂಬಂ (ಅಭಿಪು. ೪-೦೨).
[ <ಸಂ. ತುಂಬುರೀ ]

**ತುಂಬುರು₂** (ನಾ). ಬಿಗಿಯಾದ ಅಂಟುಳ್ಳ ಹಣ್ಣುಗಳನ್ನೂ ಬೀಡಿ ಕಟ್ಟಲು ಉಪಯೋಗಿಸುವ ಎಲೆಗಳನ್ನೂ ಬಿಡುವ ಮರ ; ತಿಂದುಕ; P ಕೆಲವು ಕೋಶಗಳಲ್ಲಿ ತಿಂದುಕ ಮತ್ತು ತುಂಬುರು ಬೇರೆ ಬೇರೆ ಎಂದು ಹೇಳಿದೆ : "ತುಂಬುರು ತಿಂದುಕಮೆನಿಪ್ಪುದಕ್ಕುಂ ಪೆಸರಿಂ" (ವಸ್ತುಕೋ. ೩೪-೦೦) : ಗುಳವತ್ತಿ ತುಂಬುರು ನಗರೆ ಮುಂತಾದ ಪಣ್ಗಳ ತಂದರಾಳ್ದನ ಬಳಿಗೆ (ಮೋಹನತ. ೦೯-೬೭). 'ತುಂಬುರುಗೊಳ್ಳಿ' ಪರಾ.
[ ಸಂ. ]

**ತುಂಬುರು₃** (ನಾ). ಒಬ್ಬ ಗಂಧರ್ವನ ಹೆಸರು : ಪುಷ್ಪಕೇತುಪರ್ವತ ದಲ್ಲಿ ನಾರದ ತುಂಬುರು ... ದೇವಮುನಿಗಳ ದಿವ್ಯಾಲಯಂಗಳುಂ (ವಿವೇಕ. ೨೦೭); ತುಂಬುರು ನಾರದರು ಪಾಡುತಿಹರೋ ದೇವ (ಪುರಂದ. ೨-೭೭-೦).
[ ಸಂ. ]

**ತುಂಬುರುಕೊಳ್ಳಿ** 'ತುಂಬುರುಗೊಳ್ಳಿ' ನೋ.

**ತುಂಬುರುಗೊಳ್ಳಿ, ತುಂಬುರಂಕೊಳ್ಳಿ** (ನಾ). ತೊಪರೆಗಿಡದ ಸೆಳ್ಳಿನಿಂದಾದ ಕೊಳ್ಳಿ ; P ತೊಬರದ ಮರ ಚೆನ್ನಾಗಿ ಉರಿಯುವುದಿಲ್ಲ. ಒಲೆಗೆ ಹಾಕಿದರೆ ಸಶಬ್ದವಾಗಿ ಕಿಡಿ ಹಾರುತ್ತದೆ : ಬಲಿ ತನ್ನನೀಂದ್ರರ ವಚನಕ್ಕೆ ತುಂಬುರುಗೊಳ್ಳಿಯಂತೆ ಸಿಡಿಲ್ದು (ಧರ್ಮಾಮೃ. ೯-೬೩); ಒಮ್ಮೆ ತುಂಬುರುಗೊಳ್ಳಿಯೆನೆ ಚಿಮ್ಮಿ ... ಹರಿತಂದುದಾ ಗಾಳಿ (ಶ್ರೀಕಾಪು. ೨೯೨-೪೦೦). ತುಂಬುರುಕೊಳ್ಳಿ: ಹಿಡಿಂಬನಾಡಂಬರಂಗೆಯ್ದು ತುಂಬುರು ಕೊಳ್ಳಿಯಂತಂಬರಂಬರಂ ಸಿಡಿಲ್ದು (ಪಂಪಭಾ. ೩-೦೭ ಪ).
[ ತುಂಬುರು₂ + ಕೊಳ್ಳಿ₁ ]

**ತುಂಬುರುಸು** (ನಾ). ಒಂದು ಬಗೆಯ ಮರ : ಮಲ್ಲಾಳಿ. ಅ ಬ ನಾ ಸಿ. ತುಂಬುರುಸು (ಮೃಹಿಗಿ. ೩೦-೬೦೦). [ ? ]

**ತುಂಬುವರಯ** (ನಾ). = ತುಂಬುಜವ್ವನ : ನಿನ್ನ ತುಂಬುವರಯದ ಗಂಡ ದೋಳ್ಗಳ ತಳ್ಪುಪ್ಪಗೆಯಲ್ಲಿ ... ಕರ್ಮಶಾಹಂಕಾರವನ್ನೊಡೆದು ಮಣ್ಣಾಳಿ ಗಳಿಬಿ ಬಾಗಿಸಿಕೊ ! (ಬಟ್ಟಳ. ೯೭-೨).
[ ತುಂಬು₂ + ಹರಯ ( < ಪರಯ) ]

**ತುಂಬುವರಿಯಿಸು** (ಕ್ರಿ). ಭರ್ತಿಯಾಗಿ ಹರಿಯುವಂತೆ ಮಾಡು : ಚಂದ್ರ ಕಾಂತದ ನೆಗೆದ ಮುಗಿಲಟ್ಟಣೆಗಳಂ ಮೆಟ್ಟಿ ಬಡಹಮನೊಡರ್ಚಿ ಬಳಸಿದ ಗಟನೊಗುಮಿಗೆ ತಿಂಬಿ ತುಂಬುವರಿಯಿಸಿಯುಂ (ಚಂದ್ರಪು. ೮-೯೩೪).
[ ತುಂಬು₂ + ಪರಿಯಿಸು ]

**ತುಂಬುವಾಳೆಗಾಯ್** (ನಾ). ಬಾಳೆಯಕಾಯಿಯಿಂದ ಮಾಡುವ ಒಂದು ಬಗೆಯ ಪಲ್ಯ ; ಏರಿದಾಗಿ ಬಲಿದ ಬಾಳೆಯಕಾಯಿಗಳನು ತಂದು . . . ಪೊಗ್ಗರಣೆಮಾಡಿ ಹೂವಿಂದ ಪೂರೆಯುಟ್ಟು ಮಡಕೆಯೊಳಿರಿಸಲದು ತುಂಬು ವಾಳೆಗಾಯ್ಯಸರಾದವು [ ಪಾಠಾಂ. ಬಾಳೆಯಕಾಯಿವೆಸರಾದುದು ] (ಸೂಪಶಾ. ೪-೭೪). [ತುಂಬು₂ + ಬಾಳೆ₁ (<ಬಾಱೆ) + ಕಾಯ್₄]

**ತುಂಬುವೆರೆ** 'ತುಂಬುವೆಱೆ' ನೋ.

**ತುಂಬುವೆಱೆ, ತುಂಬುಪೆರೆ, ತುಂಬುವೆರೆ, ತುಂಬುಹೆರೆ** (ನಾ). ತುಂಬಿದ ಚಂದ್ರ ; ಪೂರ್ಣಚಂದ್ರ : ಆ ತುಂಬುವೆಱೆಯ ತಿಳಿವೆಳಗು ವಿರಹಿವ್ರಜಕೆ ಮಾತೇನವಸ್ಥೆಯಂ ಮಾಡುತಿರಲು (ಸಪ್ತಕಾ. ೧-೪೧); ಕಱೆಯೆಂಬ ನುಡಿ ತುಱುಗಾರ್ತಿಯರೊಳು ತುಂಬುವೆಱೆಯೊಳು (ಸಂಕಾಸಾಂ. ೨-೭೪): ತುಂಬುವೆಱೆಯಂ ಪೊಱಪೊಣ್ಮುವ ಜೊನ್ನದಂತೆ (ರಾಜಶೇ. ೧-೮೪): ಬೆಳ್ಳಕ್ಕದ ತುಂಬುವೆಱೆಗಳನೊಟ್ಟಿಸಿ ... ಸಮೆದುದೆಂಬಂತಿರೆ (ರಾಮಾಶ್ವ. ೫೨-೧೭). ತುಂಬುಪೆರೆ: ತುಂಬುಪೆರೆಯನು ಕಂಡು ಕಡಲುಬ್ಬಿ ಹರಿವಂತೆ (ಮಲಿದೇ. ೪೫-೦): ಸುಗ್ಗಿಯಲಿ ತುಂಬುವೆರೆ ತಂಗಾಳಿ ಹೂಗಣೆಯರೊಡ್ಡಿ ದುರಾಳಿಗೆ ಸಿಲುಕಿ ಅಳುಕದೆ ಇಹರು ಉಂಟೇ ? (ಚಂದ್ರಸ. ೮೭-೦೭). ತುಂಬುವೆರೆ: ತುಂಬುವೆರೆ ಮೋರೆಯಂ ಮೆಟ್ಟಿ ಬಂದಿಹ ಕೆಚ್ಚು ಕುಂಬಿಡುವುದನೆ (ಕಾಲೂರ. ೦೪೯-೩೨೫) ; ಕಡಲಾಳವನುಗಿದುಬಂದ ತುಂಬುವೆರೆ ತಾನು ! (ಚಿಂತನ ೨-೫).ತುಂಬುಹೆರೆ : ಎಳೆಯ ಹೆರೆಯೊಳಿ ತೊಳಗಿ ತುಂಬುಹೆರೆಯಾಗಿ ... ಒಂದು ದಿವ್ಯ ಮಣಿ ಬೆಳಕು, ಮೂಡಿ (ಜೋಂಗಳು. ೩೪-೨೦). [ತುಂಬು₂ + ಪೆಱೆ]

**ತುಂಬುವೇಱು** (ನಾ). (ಬಂಡಿಯಲ್ಲಿ) ತುಂಬಿರುವ ಹೇರು,– ಹೊರೆ : ಸಂಬುಕ ಪಡಗು ಜೋಗುಗಳಿಗೆ ಸುಂಕವು ಕೊಂಬ ರಾಜೇಂದ್ರನಿದಿರೊಳು ತುಂಬುವೇಱಿಗೆ ಸುಂಕವ ಕೊಂಬ ನೃಪರಾಡಂಬರ ನೆರೆಯಲಾರ್ತಪುದೆ (ಕುಮಾರಾಮಂ. ೦೦-೨೦). [ತುಂಬು₂ + ಪೇಱು₃]

**ತುಂಬುಸಭೆ** (ನಾ). ಜನರಿಂದ ತುಂಬಿರುವ ಸಭೆ : ನಿನ್ನ ಮೇಲೊಂದು ಪದ್ಯವ ಬರೆದು, ಕನ್ನಡಿ ಕಟ್ಟುಹಾಕಿ ತುಂಬುಸಭೆಯೊಳು ಮಾನಪತ್ರ ಸಲಿಸುವೆವು (ಹಲಸು. ೨೭-೦೯). [ತುಂಬು₂ + ಸಭೆ]

**ತುಂಬುಹೆರೆ** 'ತುಂಬುವೆಱೆ' ನೋ.

**ತುಂಬುಱು** (ನಾ). ಒಂದು ಬಗೆಯ ಹುಳು : ಸ್ಪರ್ಶರಸಗಂಧಂಗಳೆಂಬೀ ಮೂಱನಱಿವ ... ಚಿದೆವುಱು ತುಂಬುಱು ಮೊದಲಾದವಱೊಳಂ (ಪಶಾರ. ೯೫-೦೪). [ತುಂಬು₀ + ಪುಱು]

**ತುಂಬೆ₁** 'ತುಂಬಿ₁' ನೋ.

**ತುಂಬೆ₂, ತುಂಬಿ₂** (ನಾ). ಬಿಳಿಯ ಸಣ್ಣಹೂವುಗಳನ್ನು ಬಿಡುವ ಒಂದು ಬಗೆಯ ಗಿಡ ಮತ್ತು ಅದರ ಹೂವು : "ಅತಿಚ್ಛತ್ರ = ತುಂಬೆಯ ಗಿಡ" (ಅಕಾನಿ. ೧-೨೭); ತಿಲತೈಲಮಂಬಿಲಂ ತುಂಬೆ ಲೊಕ್ಕಿ ಸೊರೆ ಸುಣ್ಣಮೆರ್ಕೆ ಯೆಲೆ ಸಾಸಿವೆ ತಂಬುಲದೆಲೆಯಿವನಿಕ್ಕುಗೆ ಗೋಕುಲಕ್ಕೆ ರುಜೆ ತೀರ್ಗುಂ (ಲೋಕೋಪ. ೯-೨೦೦) ; ತುಂಬೆ ಲೊಕ್ಕಿ ಸಹೆ (ಸಾಇಎ. ೦೯೨೯, ಮಂಗಳೂರು. ೪೭೯-೦೭ : 1870) ; ಜಾಜಿ ಬಕುಳಂ ತುಂಬೆ ... ಇವು ಶುಭ್ರಪುಷ್ಪಂಗಳೊಳು ಫಲಾಧಿಕಮಪ್ಪವು (ವೀಶೈಕು. ೭-೦೦-೦೬) : ಭ್ರಮರ ನೆರೆದೊಂದಾಗಿ ತುಂಬೆ [ಪಾಠಾಂ.ಬ]ಯ ಹೂವ ನೆಱೆ ಬಟ್ಟು ನಿವಿರ್ದ ಪಾದರಿಪೂಗೆಱಗಿದಂತೆ (ಸಾಳ್ವಭಾ. ೪-೦೮) ; ತುಂಬೆ ಹೂವಿನ ಪೂಜೆ (ಮೈಆರಿ. ೦೯೩೯, ೩೩-೧೨ ; 1680). **ತುಂಬಿ₂** : ಪಲ್ಲವಿಪ ಕಕ್ಕೆ ಬಿಳಿಯೆಕ್ಕೆಗಳ ಮೊತ್ತವಂ ರುದ್ರ

ಜಟೆಯಂ ತುಂಬಿ [ಪಾಠಾಂ.ಬೆ] ಯಂ ಕಂಚಿವಾಳಮಂ ಭದ್ರಮುಖಿ ಮೊದಲಾದ ನವಪತ್ರಜಾಲಮಂ ಕಂಡು (ಪುಷ್ಪರ. ಹ. ೩೨೩-೩) ; ಲೋಲತರ ಕಿರುಕಸಾಲೆಯ ಪುಂಡಿ ತುಂಬಿ ಬಸಳೆಯ ಭಂಗಿಸೊಪ್ಪುಗಳನು (ಮುಹಾವಿ. ೧೧-೩೩). [ದೇ.॥ ತಮಿ. ತುಮ್ಪೈ ; ಮಲ. ತುಮ್ಪ ; ತುಳು. ತುಂಬೆ, ತಂಬಿ ; ತೆಲು. ತುಮ್ಮಿ]

**ತುಂಬೆ$_5$** 'ತುಂಬು$_4$' ನೋ.

**ತುಂಬೆಗಿಡ** (ನಾ). = ತುಂಬೆ$_4$ : "ದ್ರೋಣಃ – ಕರೀಕಾಗಿ, ನಾಗಳೆ, ತುಂಬೇಗಿಡ" (ಸಿದ್ಧಾಂತಿ. ೩೩೨) ; ಯಾವ ಕೈಗಳ ಸ್ಪರ್ಶದಿಂದ ತುಂಬೆಗಿಡವೂ ತಾಳೆಯಂತೆ ಬಾನಿನೆತ್ತರ ಬೆಳೆಯಬಹುದೋ (ಅರಿರೋ.೨).

[ತುಂಬೆ$_4$ + ಗಿಡ (< ಗಿಡು)]

**ತುಂಬೆದೆ** (ನಾ). ತುಂಬಿದ ಎದೆ : ಹರಿಯುತ್ತಿರುವಳು ಕನ್ನಡತಾಯಿಯ ತುಂಬೆದೆ ಸೂಸಿದ ಸುಕುಮಾರಿ ! (ಅಗ್ನಿಹಂ. ೩೨-೨).

[ತುಂಬು$_3$ + ಎದೆ (<ಎರ್ದೆ)]

**ತುಂಬೆಪಾದಿ** (ನಾ). ಒಂದು ಊರಿನ ಹೆಸರು : ತುಮ್ಬೆಪಾದಿಯೊಳ್ಮಾದಿ ಕಾಳೆಗವಿಮ್ಬಟ್ಟಿದೊಡೆ ಆನೆಯೋಡಾನ್ಲಿಱಿದು ಸತ್ತೊಡೆ (ಎಕ. IX, ಬೆಂಗಳೂ. ೮೩-೪ : ಸು. ೬೯೦). 'ತುಂಬೆವಾಡಿ' ಪರಾ. [ ? ]

**ತುಂಬೆಮರ** (ನಾ). ಒಂದು ಬಗೆಯ ಮರ : ಬಿಳೀಜಾಲಿ, ತೊಪ್ಪಾಲೆ, ಸಾರಾಯಿಬೇಲ, ತುಂಬೆಮರ (ಪ್ರಾಣಿಗಿ. ೦-೦೭). [ತುಂಬೆ$_6$ + ಮರ$_1$]

**ತುಂಬೆವಾಡಿ** (ನಾ). ಒಂದು ಊರಿನ ಹೆಸರು : ಬಿದಿರೂರಲು ಬೂತುಗನು ತುಮ್ಬೆವಾಡಿಯ ಗಡ್ಡಯ್ಯನ ಮಗಂ ಪೊನ್ನಿಗಂ ಕಾದಿ ಸತ್ತು ಸ್ವರ್ಗ್ಗದಲಿಟ್ಟಂ (ಎಕ. XII, ಮಧ್ಯಗಿ. ೨೭-೦೮ : ಸು. ೯೫೦). [ತುಂಬೆ$_6$ + ಪಾಡಿ$_1$]

**ತುಂಬೆವಿಂಡು** 'ತುಂಬಿವಿಂಡು' ನೋ.

**ತುಂಬೆಹುಳ** (ನಾ). ಅಳಿ ; ತುಂಬಿ : " ಮಧುವ್ರತಃ ... ರೋಲಂಬಃ, ಬಂಭರಃ ಈ ೧೫ ತುಂಬಿಯ ಹೆಸರುಗಳಂ. ತುಂಬೆಹುಳ" (ಸಿದ್ಧಾಂತಿ. ೦೯೨).

[ತುಂಬೆ$_1$ (<ತುಂಬಿ$_1$) + ಹುಳ (<ಪುೞು)]

**ತುಂಬೊಲುಮೆ** (ನಾ). ಹೆಚ್ಚಾದ ಪ್ರೀತಿ ; ಅಧಿಕವಾದ ಅಕ್ಕರೆ : ಮರದೊಳೆಂತೋ ಅಂತೆ ತುಂಬೊಲುಮೆ ಸಂತನೆಡೆ ನಿಶ್ಯಂಕೆಯೊಳು ನೆರೆವ ಹಕ್ಕಿಗಳ ತೆರದಿ (ಮಲೆದೇ. ೯೩-೧). [ತುಂಬು$_2$ + ಒಲುಮೆ (<ಒಲ್ಮೆ)]

**ತುಕಡಾ** 'ತುಕಡಿ$_2$' ನೋ.

**ತುಕಡಿ$_1$** (ನಾ). (ಕರಾ) ಗೋದಿಯ ಹಿಟ್ಟಿನಿಂದ ಕರಿದು ಮಾಡುವ ಒಂದು ಬಗೆಯ ತಿಂಡಿ ; ಶಂಕರಪೋಳಿ. [← ತುಳು. ತುಕುಡಿ]

**ತುಕಡಿ$_2$**, ತುಕಡಾ, ತುಕ್ಕಡ, ತುಕ್ಕಡಿ (ನಾ). ೧. ತುಂಡು ; ಚೂರು ; ತುಣುಕು : ಅವನ ಮೈಮೇಲಿನ ಅರಿವೆಯ ತುಕಡಿಯನ್ನು ಹರಿದು ಕೊಂಡು ಅದರಿಂದ ಅವನ ಮುಖವನ್ನು ಒರೆಸಿದನು (ಬಂಗಾಕೆ. ೬೪) : ಆ ಕೋಳಿಯ ಕೊಂದು ತುಕಡಿಯ ಮಾಡಿ ರುಚಿಯನು ನೋಡಿ (ತುಕಹದ. ೩೩). ೨. ರೊಟ್ಟಿ, ಚಪಾತಿ : 'ತುಕಡಿಮುರುಕ' ಪರಾ. ೩. ಸೈನ್ಯದ ಒಂದು ಭಾಗ ; ಒಬ್ಬ ಅಧಿಕಾರಿಯ ಹತೋಟಿಗೆ ಒಳಪಟ್ಟ ಸೇನಾ ವಿಭಾಗ : ಭಾರಿಯಾದ ಒಂದು ದಂಡಿನ ತುಕಡಿಯು ಈ ಊರಲ್ಲಿ ಠಾಣ್ಯ ಹಾಕಿಕೊಂಡು ಇರುತ್ತಿತ್ತು (ಮುಸುಗ. ೯); ನಿಯಾರ್ಕಸನು ಅಲೆಕ್ಸಾಂಡರನ ಒಂದು ತುಕಡಿ ಸೈನ್ಯವನ್ನು ತೆಗೆದುಕೊಂಡು ... ಕಾರ್ಮೇನಿಯ ಮುಟ್ಟಿದನು (ಪ್ರಪಾಇ. I, ೭೩). ೪. ದೇಶದ ಒಂದು ಭಾಗ: ಪ್ರಾಂತ; ಜಿಲ್ಲೆ: ಪ್ರತಿ ತಾಲ್ಲೂಕಿಗೂ ಒಬ್ಬೊಬ್ಬ ಅಮಿಲ್ದಾರರನ್ನು ನೇಮಿಸಿದರು. ಅವರೆಲ್ಲಾ ಆಯಾ ತುಕಡಿ (ಡಿಸ್ಟ್ರಿಕ್ಟ್) ಸುಬೇದಾರರುಗಳ ಅಧಿಕಾರಕ್ಕೆ ಒಳಪಟ್ಟಿದ್ದರು (ಮುಹಾವಂ. II, ೩೨). **ತುಕಡಾ** : ೧. ಇದ್ದಲಿನ ತುಕಡಾಗಳು, ಒಂದು ಬೆಂಕಿಕಡ್ಡಿಯ ಪೆಟ್ಟಿಗೆ ಎಲ್ಲಾ ಹೊರಗೆ ಬರುತ್ತವೆ (ಸಾಹೇಬ್. ೨೦). **ತುಕ್ಕಡ** : ೧. ಮುಸಲ್ಮಾನರು ರಾಜಧಾನಿಗೆ ಮುತ್ತಿಗೆ ಹಾಕಿ ತಮ್ಮೆಲ್ಲರನ್ನೂ ತುಕ್ಕಡ ತುಕ್ಕಡ ಮಾಡಿಬಿಡುವರೆಂದುಕೊಂಡಳು (ಬಂಕಿಮು. ೩೦೪). **ತುಕ್ಕಡಿ** : ೩. ಅದು ಹೆಚ್ಚುಕಡಿಮೆ ಯುದ್ಧಕಾಲದ ತಮ್ಮದೊಂದು ತುಕ್ಕಡಿಯನ್ನೇ ಹೋಲುತ್ತದೆ (ಹೇಮುಕೊ.೦೭); ಕಾಮನಾಯಕ ಎಂಬಾತನು...ಹದಿನಾರು ಮದದ ಆನೆಗಳ ತುಕ್ಕಡಿಗೂ ಅಧಿಪತಿಯಾಗಿದ್ದನು (ಕಾವಿಜ. ೦೫೩). ೫. ಊರುಂ, ಪಟ್ಟಣ ಮೊದಲಾದುವುಗಳ ಒಳವಿಭಾಗ ; ಮೊಹಲ್ಲ ; ಹರವು : ಯಾವ ಗ್ರಾಮವನ್ನಾದರೂ ತುಕ್ಕಡಿಗಳನ್ನಾಗಿ ವಿಭಾಗಿಸಿ ಅಂಥ ಪ್ರತಿ ಒಂದು ತುಕ್ಕಡಿಗೂ ಬೇರೆಬೇರೆ ಗ್ರಾಮಕೋರ್ಟನ್ನು ಸ್ಥಾಪಿಸಬಹುದು (ಗ್ರಾಮೂಕ. ೦೫). ೬. ಗುಂಪು ; ವಿಭಾಗ ; ಬಣ : ನಮ್ಮಲ್ಲಿಯ ನಾಲ್ವತ್ತು ಆಳುಗಳು ನಾಲ್ಕು ತುಕ್ಕಡಿಗಳಾಗಿ ಕೆಲವರು ಸಾಮಾನು ಚೊಕ್ಕಟವಾಗಿಸಿದರು (ರಕ್ತಧ್ವ. ೨೬೦).

[← ಮರಾ. ತುಕಡಾ ; ಹಿಂ. ಟುಕಡೀ, ಟುಕಡಾ]

**ತುಕಡಿಮುರಕ** (ನಾ). ೧. ಬರೀ ಚಪಾತಿ ತಿನ್ನುವವನಂ; ಉಂಡಾಡಿ ಭಟ್ಟ. ೨. (ಆಲಂ) ಶಕ್ತಿಹೀನ : ಇವರೇನು ತುಕಡಿಮುರಕ ಹಾರವರೆಂದು ಯಾವನರು ತಿಳಿದಿರಬಹುದು (ಮೂರವ. ೫).

[ ತುಕಡಿ$_2$ + ಮುರಕ (< ಮುರಿಕ) ]

**ತುಕಲಿ** (ನಾ). ಒಂದು ಬಗೆಯ ಗಿಡ : (ಕ). [ ? ]

**ತುಕ್ಕಡ** ' ತುಕಡಿ$_2$' ನೋ.

**ತುಕ್ಕಡಿ** ' ತುಕಡಿ$_2$' ನೋ.

**ತುಕ್ಕಡಿದಾರ** (ನಾ). ಜಿಲ್ಲೆಯ ಅಧಿಕಾರಿ ; ಜಿಲ್ಲೆಯ ಆಡಳಿತ ನಡಸುವವನು: ತುಕ್ಕಡಿಯಲ್ಲಿ ತುಕ್ಕಡಿದಾರ ಸೇರಿ ತುಕ್ಕಡಿಯಲ್ಲ ಸುಡಿಸಿದ (ಗಾದೆ).

[ ತುಕ್ಕಡಿ (<ತುಕಡಿ$_2$) + – ದಾರ$_4$ ]

**ತುಕ್ಕಡಿಸು** (ಕ್ರಿ). ತುಂಡರಿಸಂ ; ಚೂರಂಚೂರಂ ಮಾಡಂ ; ಭಾಗ ಮಾಡು : ಅವಚಿಡಂಗುಗಳ ತುಕ್ಕಡಿಸಿ ಬಗೆಯಟ್ಟಿದು ಭಾಗೆಯಂ ಮಾಳ್ಪ ದೀವದ ಖಗಮೃಗಾವಳಿಯನು ಹಕ್ಕಿಗೆಯ್ದಿಸುವ...ಬೇಡರ ಬಂದವೊಟ್ಟಿತು (ಸಮ್ಮುಕಾ. ೦೦-೨೭). [ ತುಕ್ಕಡಿ (< ತುಕಡಿ$_2$) + – ಇಸು$_3$ ]

**ತುಕ್ಕಿಡಿ** (ನಾ). ( ? ) : ಎಚ್ಚಡ್ಡಾಯುಧಮಂ ಕಿಟ್ಟಿಚ್ಚರಿಯನೆ ನೂಂಕೆ ತುರಗಮಂ ತುಕ್ಕಿಡಿಗಳ್ ಪಚ್ಚವಳದೆಡೆಗಳಂ ಮುನ್ನೆಚ್ಚ ಸರಲ್ ತಾಗೆ ಪಱಿದುಪೋೞ್ ಚಿಚ್ಚಱದಿಂ (ಚಂದ್ರಪ್ರ. ೦೦-೭೯). [ ? ]

**ತುಕ್ಕಿಸು** (ಕ್ರಿ). ತಿರುಗಿಸು ; ಅಲೆದಾಡಿಸಂ ; ಅಲೆಯುವಂತೆ ಮಾಡು : ಸರ್ವಜೀವಿಗಳೊಳೇತಕ್ಕೆ ಎನ್ನೊಬ್ಬನ ತುಕ್ಕಿಸುವಿಯೊ ಬಕ್ಕದಾಸನೊ ನಾನು (ವಿದಾಕ್ಕೆ. ೦೫೭). [ ತುಕ್ಕು$_1$ + – ಇಸು$_3$ ]

**ತುಕ್ಕು$_1$** (ಕ್ರಿ). ೧. ಗುಂಪುಗೂಡು ; ಕಿಕ್ಕಿರಿ ; ಒಟ್ಟುಸೇರಂ : (ಕ). ೨. ಮೇಲೆ ಬೀಳಂ ; ಆವರಿಸಂ ; ಮುತ್ತು : ಅಕ್ಕಱಿಂದವರ ವರತನು ಪರಿಮಳಂಗಳ್ಗೆ ತುಕ್ಕುವೆಳದುಂಬಿಗಳ ಬಳಗಂಗಳೆಂಬಂತೆ (ಕೃಮಿಭಾ. ೨೮-೯೩) ; ಅಡವಿಗಿಡವ ತುಕ್ಕಿ ಅಗಳಿ ತರುವವಲ್ಲ (ವಿಕ್ರಾಸು. ೩೫-೨) ; ಎಕ್ಕಲಗಂ ತುಕ್ಕಿ ಮುಕ್ಕುಳಿಸಿ (ಪರಕು. ೩೦-೫). ೩. ಸಂತ್ರು ; ತಿರುಗು ; ಅಲೆದಾಡು ; ಎಡೆತಾಕಂ : ವೃಥಾ ಭವಂಗಳ ತುಕ್ಕುತಿನ್ನ ಮಹತ್ವವೆಲ್ಲವ ಮುಕ್ಕುಗಳದೆನಲಾ (ಸದ್ಗುರು. ೬-೩೦) ; ಅಕ್ಕ ನೀನೆನೆ ಗೋಸುಗೆ ಮೂಜಗವನು ತುಕ್ಕಬೇಹುದು ರಾತ್ರಿಯಲಿ (ಮೋಹತ. ೨೮-೩೪) ; ಪಾಂಡವರ ಕಾಣೆ ರಾಜ್ಯಮಂ ತುಕ್ಕಿದವು ಭೂಪತಿಯ ಕುರುಹಿಲ್ಲ (ತುರಂಗ. ೩೭-೪) ; ಲೆಕ್ಕವಿಲ್ಲದೆ ದೇಶ ತುಕ್ಕಿದರೆ ಫಲವೇನು (ಜಗದಾ. ೩೦೫).

**ತುಕ್ಕು$_2$** (ನಾ). ಕಬ್ಬಿಣಕ್ಕೆ ಹತ್ತುವ ಕಿಟ್ಟ ; ಜಂಗು : ಧಾತುಗಳ ಆಮ್ಲಜ ವಿಕಾರಗಳಿಗೆ ಕನ್ನಡದಲ್ಲಿ ಭಸ್ಮ, ಜಂಗು, ಖಿತಿ, ತುಕ್ಕು ಎಂಬ ಹೆಸರುಗಳನ್ನು ಕೊಡುವರು (ಮುಂಬಯಿ. ೬-೩೨) : ಅಗ ಕಬ್ಬಿಣವಾಗಿ ಉಳಿಯುವ ಬದಲು, ಕಬ್ಬಿಣದ ತುಕ್ಕು ಉಂಟಾಗುವುದು (ಬಾಲಪ್ರ. I, ೯೫೩).

[ದೇ. ೯ ತಮಿ. ತುಕ್ಕು, ತುಪ್ಪು; ಮಲ. ತುರುಮ್ಪು, ತುರುವು ; ತುಳು. ತುಕ್ಕ್ ; ತೆಲು. ತುಪ್ಪು, ತ್ರುಪ್ಪು]

**ತುಕ್ಕುಗೊಳ್** (ಕ್ರಿ). ಜಂಗು ತಿನ್ನು ; ತುಕ್ಕುಹಿಡಿ : ಮಸೆದ ಕಯ್ದುಗಳ್ ತುಕ್ಕು(ಳ್ಳು)ಗೊಳ್ವುಡಂ (ಅಬ್ಬಿನು. ೨-೧೦). [ ತುಕ್ಕು$_2$ + ಕೊಳ್$_1$ ]

**ತುಕ್ಕುಹಿಡಿ** (ಕ್ರಿ). ೧. = ತುಕ್ಕುಗೊಳ್ : ಕಬ್ಬಿಣಕ್ಕೆ ತುಕ್ಕುಹಿಡಿಯುವುದು (ಮುಂಬಯಿ. ೪-೧೪೯) ; ಅಲ್ಯೂಮಿನಿಯಮ್ಮಿನ ಪ್ರಯೋಜನಗಳು ಹಲವು. ಅದು ಹಗುರವಾಗಿರುತ್ತದೆ. ತುಕ್ಕುಹಿಡಿಯುವುದಿಲ್ಲ (ಆಧುಶಾ. ೪೨) : ತುಕ್ಕುಹಿಡಿದ ಖಡ್ಗ ಮಿಕ್ಕಿದವನಿಗೂ ಆಗದು (ಗಾದೆ). ೨. (ಅಲಂ) ದೋಷಗ್ರಸ್ತವಾಗು ; ಮಂಕಾಗು ; ಹೀನವಾಗು ; ಹಿರಿಯರ ತುಕ್ಕು ಹಿಡಿದ ದೃಷ್ಟಿಗೆ ಕಿರಿಯರ ಪ್ರೇಮವು ಅರ್ಥವಾಗುವುದಿಲ್ಲ (ದೂರಸ. ೧೬೮) ; ಮೇಧಾಶಕ್ತಿಗೆ ತುಕ್ಕುಹಿಡಿಯುವ ಸ್ಥಿತಿ ಒದಗಿತು (ಕಾಮಿಕಾಂ. ೩) : ಈ ರೀತಿಯಲ್ಲಿ ಮಕ್ಕಳ ಶಿಕ್ಷಣದ ಅಮೂಲ್ಯಸಾಧನವೊಂದು ತುಕ್ಕುಹಿಡಿದು ನಶಿಸಿ ಹೋಗುತ್ತಿರುವುದು (ಸಮಾಶೋ. ೧೦೯).

[ ತುಕ್ಕು$_2$ + ಹಿಡಿ$_1$ (< ಪಿಡಿ$_1$) ]

**ತುಗಚು** (ಕ್ರಿ). ಪೀಡಿಸುವವರನ್ನು ತೊಲಗಿಸಲು, ಇಷ್ಟವಿಲ್ಲದಿದ್ದರೂ ಕೊಡು : ಒಂದು ಎಳನೀರು ಬುರುಡೆ, ಒಂದು ಪಾವಲಿ ತುಗಚಿದ (ಅದೂಟಿ. ೪೪). [ ? ]

**ತುಗಿ** (ನಾ). ಒಂದು ಬಗೆಯ ಮರ : ಸುಜ್ಜಲು . . . ಬೇಳ್ಕಂಬಿ, ತುಗಿ (ಮೃಶಿಗಿ. ೪-೬೨). [ ? ]

**ತುಗಿಲ** 'ತುಗ್ಗಿಲ್' ನೋ.

**ತುಗ್ಗಲಿ** 'ತುಗ್ಗಿಲ್' ನೋ.

**ತುಗ್ಗಿಲ್, ತಗ್ಗಿಲು, ತುಗಿಲ, ತುಗ್ಗಲಿ, ತುಗ್ಗಿಲು** (ನಾ). ಒಂದು ಬಗೆಯ ಮರ : "ಅಗ್ಗಿಯೆನೆ ತುಗ್ಗಿಲಕ್ಕುಂ" (ಮಂಗರಾ. ೩೬-೧೮) ; ಕೊಗ್ಗಿ ವರಲಕ್ಷ್ಮಿ ಪುನರ್ನವಿಯೆಂಬ ಮೂಲಿಕಾಮಂ ಬೆರಸಿರೆ ಕಲ್ಲೊಳ್ ಟ್ಟರೆದು ತುಗ್ಗಿಲಣಂಬೆಯುಮಮಂ . . . ಈಂಟೆ ವಿಷಂ ಕಿಡುಗುಂ (ಖಮದ. ೦೩-೧೮). **ತಗ್ಗಿಲು** : ತಂಡಸ ತಡಸ ತ[ ಪಾಠಾಂ. ತು ]ಗ್ಗಿಲು ತದಿಕು ತಮಸಿಗಳ . . . ವನಭೂಜಾಳಿಯಲಿ ಹೋಳಿದರಕಂಪನನಸಮರಣರಥವ (ಕೊರಠಾ. ೬-೧೮-೦೮). **ತುಗಿಲ** : ಮೂಡಲು ತುಗಿಲವರದ ಮೇಲು ಗಡೆಯ ಬೆಟ್ಟದ ಬಂಡೆ ಮೇರೆ (ಶಾಇಇ. IX – ii, ೫೩೫-೩೯ : 1531). **ತುಗ್ಗಲಿ** : ಜಾಲೆ ಜಾನೆಯು ಬೋರೆ ತರೆಯು ತುಗ್ಗಲಿಯುಂಯಂ ಕೋಲೆಯುಂ (ನವಮೋ. ೮-೯). **ತುಗ್ಗಿಲು** : ಬಡಗಣ ಕೆವರ ಮೇಲಣ ತುಗ್ಗಿಲ ಮರದಲ್ಲಿ ನಟ್ಟ ಕಲ್ಲು (ದ್ರುಆಶಿ. ೧೪೪೦, ೪೯-೦೬೮ ; 1336) ; ಯೀಶಾನ್ಯದಲ್ಲು ಮಾತ್ರವೇ ತುಗ್ಗಿಲು ಹುತ್ತಹಾರೆ ಗ್ರಾಮಕೆ ಮೂಡಲು (ಎಕ. XI, ಹೊಳಲ್ಕೆ. ೯೪-೧೦೬ ; 1611). [ ? ]

**ತುಗ್ಗಿಲು** ' ತುಗ್ಗಿಲ್ ' ನೋ.

**ತುಚ್ಚ** (ಗು). = ತುಚ್ಛ : ತುಧ್ಯ – ತುಚ್ಚ (ಶಮದ. ೨೫೭ ಪ್ರಯೋ).

[ < ಸಂ. ತುಚ್ಛ ]

**ತುಚ್ಚತನ** (ನಾ). ನೀಚತನ ; ಅಲ್ಪತನ : ಎನಗೆ ನಟವೃತ್ತಿ ಕರಂ ತುಚ್ಚ ತನವೆನ್ನದಾಡಿದನಚ್ಚರಿಯೆನೆ ವಟು (ಭುಕ್ತಾ. ೦೨-೫೨).

[ತುಚ್ಚ + – ತನ]

**ತುಚ್ಚಂಗೆಱೆ** (ನಾ). ಒಂದು ಊರಿನ ಹೆಸರು : ತುಚ್ಚಂಗೆಱೆಯ ಹೊಲ್ಲಿ ಸೆಟ್ಟಿ . . . ಚವುಣ್ಡಯ್ಯಸೆಟ್ಟಿಯುನ್ನಿನಿಬರುಂ ತಂಬುಲಿಗಸಾಸಿರ್ವರುಂ (ಶಾಇಇ. XI – ii, ೧೪೮-೦೯ ; 1099). [ ? + ಕೆಱೆ ]

**ತುಚ್ಛ** (ಗು). ೧. ಜೊಳ್ಳಾದ ; ಬರಿದಾದ ; ಶೂನ್ಯವಾದ. ೨. ಅಲ್ಪವಾದ ; ಸಣ್ಣ ; ಚಿಕ್ಕ. ೩. ಕೆಳದರ್ಜೆಯ ; ತಿರಸ್ಕಾರಕ್ಕೆ ಯೋಗ್ಯವಾದ ; ನೀಚವಾದ ; ಕ್ಷುಲ್ಲಕವಾದ : ತುಚ್ಛಮಾತು ಆಡು ವವನು ಹುಚ್ಚನಿಂದ ಕಡೆ (ಗಾದೆ). (ನಾ). ೪. ಬರಿದಾದುದು ; ಖಾಲಿ ; ಶೂನ್ಯ : ವಂಧ್ಯಾಪುತ್ರ ಶಶವಿಷಾಣಾದಿಗಳೇ ಅಸತ್ತಾದ ತುಚ್ಛ ವೆಂದು ತಿಳಿಯಲಪ್ಪುದು (ವಿವೇಕ. ೨೦) : ತುಚ್ಛ (ಶೂನ್ಯ) ದಿಂದ ಮುಚ್ಚಿದ ಅದು ತಪಸ್ಸಿನ ಮಹಿಮೆಯಿಂದ ಆವಿರ್ಭಾವವಾಯಿತು (ಭಾರದ. ೨೭). ೫. ಕಡಮೆಯಾದುದು ; ಕೀಳು ; ಹೀನ : ವ್ಯೋಮಯಾನಂ ತುಚ್ಛ ವೆನೆಯಿಂ ಗ್ರಾಮಯಾನಮತುಚ್ಛಮೆನೆಯುಂ (ಶಾಂತಿಪು. ೦೫-೫೫೭) ; ಹಿಂದೆ ಲಂಕೆಯ ಸುಟ್ಟ ಕೋಡಗ ಬಂದ ಕಪಿಭಟರೊಳಗೆ ತುಚ್ಛವು (ಕಾಶಿರಾ. ೦೫-೨೦) : ಎಷ್ಟು ಹೇಳಲಿ ಬಹಳ ತುಚ್ಛವನೆ ಮಾಡುವರು (ಪುರಂದ. ೦-೧೪೪-೩). ೬. ಅಲ್ಪವ್ಯಕ್ತಿ ; ಕೀಳುಮನುಷ್ಯ : ತುಚ್ಛನ ಸಂಗಡ ಬಾಳೋದಕ್ಕಿಂತ ಹುಚ್ಚನ ಸಂಗಡ ಬಾಳೋದು ವಾಸಿ (ಗಾದೆ). [ ಸಂ. ]

**ತುಚ್ಛಾಜಿ** (ನಾ). ಕೀಳಂವಂಟ್ಟದ ಕಾಳಗ ; ಹುಲುಗಾಳಗ : ತುಚ್ಛಾಜಿ ಲಬ್ಧಾಸ್ಮಿತನಾಂತಂ ಚೋಳಗೌಳಾಸುರಸಮರಜಯಶ್ರೀಸಮಾಲಿಂಗಿತಾಂಗಂ (ಎಕ. V, ಬೇಲೂರು. ೦೭-೪ ; 1136 ). [ ತುಚ್ಛ + ಆಜಿ$_1$ ]

**ತುಚ್ಛಿಸು** (ಕ್ರಿ). ಕಡೆಗಣಿಸು ; ತಿರಸ್ಕರಿಸು : ವಂಶಕೆ ಈತನೊಬ್ಬನಾದರು ನಮಗೆ ಶಿಷ್ಟನಾಗಿರಲೆಂದು ಪೇಳೆ ಗಂಗಾದೇವಿ ತುಚ್ಛಿಸಿದ ಮಾತನೆಂದು ಮೀರಿದನು ತಾನುಯಿನ್ನುಹುದಿಲ್ಲವೆಂದಾಡಿ ಸಾರಿದಳು (ತುರಂಗ. ೯-೩೨).

[ ತುಚ್ಛ + – ಇಸು$_3$ ]

**ತುಚ್ಛೀಕರಿಸು** (ಕ್ರಿ). = ತುಚ್ಛಿಸು : ನೀನು ಚೌಡಪ್ಪನವರನ್ನು ಹಾಗೆ ತುಚ್ಛೀಕರಿಸಬಾರದು (ಹಳ್ಳಿಹಾ. ೦೦೫). [ ತುಚ್ಛೀಕರಣ$_2$ + – ಇಸು$_3$ ]

**ತುಜಾವಂತು** (ನಾ). [ಸಂಗೀತ] ಒಂದು ರಾಗದ ಹೆಸರು : ರಾಗ ತುಜಾವಂತು ಅಷ್ಟತಾಳ (ದೇವೀಪ್ರ. ೦೮). [ ? ]

**ತುಟಾಗ್ರತೆ** (ನಾ). ಕೊರತೆ ; ಅಭಾವ : ಕೆಲವು ಹಳ್ಳಿಗಳಲ್ಲಿ ನೀರಿನ ತುಟಾಗ್ರತೆ ವಿಪರೀತವಾಗುತ್ತಿತ್ತು (ಮುಕ್ಕಮು. ೦೦೩) ; ಎಲ್ಲೆಲ್ಲಿಯೂ ಕಾಳಿನ ತುಟಾಗ್ರತೆ (ಗಾಳಿಗು. ೨೨) ; ಅಲ್ಲಿ ನೀರಿನ ತುಟಾಗ್ರತೆ ಎನಿಸ ತೊಡಗಿತು (ಕೃಷಿಜಿ. ೨೬೮). [ < ತುಟ್ಟಗ್ರ ]

**ತುಟಾಯಿಸು** (ಕ್ರಿ). ಬೇರೆಯಾಗು ; ಭಾಗವಾಗು ; ಪಾಲಾಗು : ಅಲ್ಲಿ ಜೀವನಕ್ಕೆ ಸಾಲದೆ ತುಟಾಯಿಸಿ ಕೋಲಾರಕ್ಕೆ ಬಂದನು (ಮಹಾವಂ. I, ೦೬೭) ; ಕೆಲವು ದಿವಸದ ಮ್ಯಾಲೆ ಯಾ ವಂಶದ ಜನರ ಪೈಕಿ ತುಟಾಯಿಸಿ ಅಲ್ಲಿಂದಾ ಹೊರಟು (ಹೈದರ. ೨೯).

[ ತುಟಾ$_2$ (ಶ ← ಮರಾ. ತುಟಣೆ) + – ಇಸು$_3$ ]

**ತುಟಾರ, ತುಠಾರ** (ನಾ). ೧. ವಿಚಾರಮಾಡದಿರುವಿಕೆ ; ದುಡುಕು ; ಅವಿವೇಕ ; ಉದ್ಧಟತನ : ತುಟಮೀರಿದ ಹಲ್ಲು, ತುಟಾರದ ಮಾತು ಸರಿಮಾಡಲಾಗದು (ಗಾದೆ). ೨. ದುಡುಕಿ ಕೆಲಸ ಮಾಡುವವನು ; ಅವಿವೇಕಿ ; ಉದ್ಧಟ : ಆ ತುಟಾರ [ಪಾಠಾಂ. ತುಠಾರ, ತವಕಿಗ]ನ ಕಂಡು ನಿಮ್ಮಯ ತಾತ ಸೈರಿಸುವನೆ (ತೊರರಾ. ೩೦-೯). 'ದೊಠಾರ' ಪರಾ. **ತುಠಾರ** : ೧. ಎಲವೊ ರಕ್ಕಸ ನಾವು ರಣಕಲಿಬಲರೊ ದುರ್ಬಲರೋ ತುಠಾರದಿನಿಳಿಕೆಗಂಡೆಯಲಾ ಮೃಗಾಧಮ (ತೊರರಾ. ೬-೨೨-೦೩).

[ ← ತೆಲು. ತುಟಾರ]

**ತುಟಾರಿಸು, ತುಠಾರಿಸು** (ಕ್ರಿ). ದುಡುಕಿ ಮಾತನಾಡು ; ವಿಚಾರ ಮಾಡದೆ ಹರಟು : ಎಲವೊ ಛಡ ಮಾವನ ತುಟಾರಿಸಿ [ಪಾಠಾಂ. ತುಠಾರಿಸಿ, ದೊಠಾರಿಸಿ, ವಿಭಾಡಿಸಿ] ಗಳಹುವೀ ನಾಲಗೆಯ ಕೀಳುವೆ (ಕುಮಾವ್ಯಾ. ೦೫-೦೦) : ಪಾಂಡವರ ತೊಡಕಿನ್ನು ಲೇಸಲ್ಲ ಸಂಧಿಯ ಮಾಡಿಕೊಳಿ ಎಂದರೆನ್ನನು ತುಟಾರಿಸಿದನ್ನೆ ಪಾಪಿ (ತುರಂಗ. ೪೮-೬). **ತುಠಾರಿಸು** : ಸಹಜವೇನ್ನುಡಿದಡೆ ತುಠಾರಿಸಿಯುಹಿತರಾ ಕೌರವರು ನಿನಗೆ (ಗಿರಿಮಿ. ೯೯-೦೩). ' ದೊಠಾರಿಸು ' ಪರಾ.

[ತುಟಾರ + – ಇಸು$_3$/ತೆಲು. ತುಟಾರಿಂಚು]

**ತುಟಿ** (ನಾ). ಬಾಯ್ದೆರೆ; ಅಧರ; ಓಷ್ಠ: "ಅಧರಃ, ದಂತಚ್ಛದಃ, ಓಷ್ಠಃ, ದಂತವಾಸಃ—ಈ ೪ ತುಟಿ" (ಹಲಾಯು. ೮೬-೩೭೦); ಪಶ್ಚಿಮ ಪದ್ಮಾಸನದಲ್ಲಿ ಕುಳಿತು ನೆಟ್ಟಿಲುವ ಮುಖದು ತುಟಿ ಮಿಡುಕದೆ ಅಟ್ಟಿಯಾಡಿತ್ತಲ್ಲಾ (ಬಸವ. ೮೦೪); ತುಟಿ ವಿದ್ರುಮವಮಂ ಸುಧಾಂಶುವಂ ನಿರ್ಮಳವಕ್ತ್ರಬಿಂಬಮಿರದೇಳಿಸೆ (ಉದ್ಭಟ. ೨-೦೦೫); ಶಶಿಕಳೆಗೆ ಸದರವೆ ರಾಹು ರಚಿಸಿದ ತುಟಿಯ ತೋಟಿಯಾದು (ಕುವ್ಯಾಸ. ೧೪-೧೧೦); ಕೊಡೆ ಕದಪು ತುಟಿ ನಿಟಿಲವ ಚುಂಬಿಸಿ (ಕಂಸವಿ. ೯-೦೯೨); ನಗೆಯ ಚೆಲುವ ತುಟಿಯ ಚಾಚಿ (ಅನೀಳ. ೧೮-೨); ತುಟಿಗೆ ತುಪ್ಪವಿಲ್ಲ, ಕಟಿಗೆ ಪಂಚಾರ್ತಿ ಬಯಸಿದ ಹಾಗೆ (ಗಾದೆ).

ತುಟಿ ಎರಡು ಮಾಡು=ಬಾಯಿಬಿಡು; ಮಾತನಾಡು: ಧರ್ಮಪತ್ನಿ ತುಟಿ ಎರಡು ಮಾಡದೆ ಪಣತಿಯಲ್ಲಿ ತುಪ್ಪ ಸುರುವಿದಳು (ಹಬ್ಬ. ೬೬); ಇನ್ನು ಯಾವ ವಿಷಯದಲ್ಲೂ ತುಟಿ ಎರಡು ಮಾಡುವ ಹಾಗಿಲ್ಲ (ಸುವಸಂ. ೦೫). **ತುಟಿಗಟ್ಟ**=ತುದಿಯವರೆಗೆ: ವಿಷಯ ತುಟಿಗಟ್ಟಕ್ಕೆ ಬಂದು ವಿಷಮಾವಸ್ಥೆಗೆ ಇಳಿಯುವಂತಿದ್ದಾಗ ಹಣವನ್ನು ಹಿಂದಿರುಗಿಸುವುದು ಮೊದಲಾಯಿತು (ರಂಗನಾ. ೨೪). **ತುಟಿಪಿಟಕ್ಕೆನ್ನು**=ತುಟಿ ಎರಡುಮಾಡು: ನೀನು ಇದೆಲ್ಲವನ್ನೂ ಕಣ್ಣಾರ ನೋಡುತ್ತಿದ್ದರೂ ತುಟಿಪಿಟಕ್ಕೆನ್ನದೆ ಕುಳಿತಿದ್ದೀಯೆ? (ವಹಾ. ೬೦); ಯಾರೂ ತುಟಿಪಿಟಕ್ಕೆನ್ನುವುದಿಲ್ಲ (ಕ್ರಾವಾಣಿ. II, ೨೮೩). **ತುಟಿಮೀರಿದ ಹಲ್ಲು, ತುಟಿಮೀಜಿದ್ದಲ್ಲು** = ತುಟಿಯನ್ನು ಮೀರಿ ಮುಂದಕ್ಕೆ ಚಾಚಿಕೊಂಡಿರುವ ಹಲ್ಲು; ಉಬ್ಬುಹಲ್ಲು: ನುಂಗಲಾಗದ ತುತ್ತೂ, ತುಟಿಮೀರಿದ ಹಲ್ಲೂ ಒಂದೇ ಸಮ (ಗಾದೆ); ತುಟಿ ಮೀಜಿದ್ದಲ್ಲಿನಂತ ದೂತ ಎಂದಿಗು ಬೇಡ (ಕನಕ. ೧೯೦-೪). **ತುಟಿಯ ಭಾಷೆ** = (ಮೂಕರಿಗೆ) ತಮ್ಮ ಆಶಯವನ್ನು ತಿಳಿಸುವಾಗ ಮಾಡುವ ತುಟಿಯ ಅಲುಗಾಟದ ಪ್ರಯೋಗ: "ತುಟಿಗಳ ನಿಶ್ಶಬ್ದ ಚಲನೆಯಿಂದ, ಮೂಕರು ಮಾತನಾಡುವ, ಮೂಕರೊಂದಿಗೆ ಮಾತನಾಡುವ, ಮಾತನಾಡಿದ್ದನ್ನು ಅರ್ಥಮಾಡಿಕೊಳ್ಳುವ ಭಾಷೆ: ತುಟಿಯ ಭಾಷೆ; ಮೂಕರ ಭಾಷೆ" (Lip_Language. ೩೦೫೩). **ತುಟಿಹೊಲಿದುಕೊಳ್ಳು** = ಮಾತನಾಡದೆ ಇರು: ಮಾತಿಗೆ ಬೆಲೆಯಿಲ್ಲವಾದಾಗ ತುಟಿಹೊಲಿದು ಕೊಂಡಿರುವುದೇ ವಾಸಿ (ರೂಢಿ).

[ ದೇ.॥ ತಮಿ. ತುಟಿ ; ಮಲ. ಚೊಡಿ ; ತುಳು. ತುಡಿ, ದುಡಿ ; ಗೊಂಡಿ. ಟೊಟಿ ]

**ತುಟಿಕಚ್ಚು** 'ತುಟಿಗಚ್ಚು' ನೋ.

**ತುಟಿಕಡಿ** (ಕ್ರಿ). ೧. ತುಟಿಯನ್ನು ಹಲ್ಲಿನಿಂದ ಕಚ್ಚು. ೨. ತುಟಿಯನ್ನು ಕಚ್ಚಿಕೊಳ್ಳುವುದರ ಮೂಲಕ ದುಃಖ, ನಾಚಿಕೆ ಮೊದಲಾದ ಭಾವವನ್ನು ಸೂಚಿಸು: ತುಟಿಕಡಿದು ಅಧೋಮುಖಿಯಾದಳು (ಜಯಂತ. ೧೨೨).

[ ತುಟಿ + ಕಡಿ₁ ]

**ತುಟಿಗಚ್ಚು**, ತುಟಿಕಚ್ಚು (ಕ್ರಿ). = ತುಟಿಕಡಿ ೨: "ಏನೂ ಇಲ್ಲ ಸುಮ್ಮನೆ" ಎಂದು ತುಟಿಗಚ್ಚಿದಳು ಪ್ರಮೀಲ (ಪುರಳಿ. ೮೧). **ತುಟಿಕಚ್ಚು**: ಎವೆ ಬಡಿಸಿ ಕಡವು, ಬಿರುಗಣ್ಣು ಬ್ಯಾಡ, ತುಟಿಕಚ್ಚಿ ಹಿಡಿಯದಿರು ಬಿಕ್ಕ (ನಾದಲೀ. ೫೮-೨೨); ಕಣ್ಮುಚ್ಚಿ ತುಟಿಕಚ್ಚಿ ಶೋಕವನದುಮಿಟ್ಟು ಹೋದೆನು (ಇಂದಾಪ. ೩೦-೩೮). [ತುಟಿ + ಕಚ್ಚು₁ (<ಕರ್ಚು₁)]

**ತುಟಿಗೊಂಕು** (ನಾ). ತುಟಿಯನ್ನು ಕೊಂಕಿಸುವುದು: ಆಗಾಗ್ಗೆ ಒಂದು ಕಣ್ಣಿನ ಮಿಂಚೂ, ಒಂದು ಮುಗುಳುನಗೆಯ ತುಟಿಗೊಂಕಿನ ಹೊಂಚೂ . . . ಇಣಿಕಿ (ಮುರಮ. ೨೫೯). [ ತುಟಿ + ಕೊಂಕು₂ ]

**ತುಟಿತ** (ನಾ). [ಜೈನ] ಒಂದು ಬಹು ದೊಡ್ಡ ಕಾಲಪರಿಮಾಣ: ಆತನಿಂ ಬಳಿಯಮೇನಿತಾನುಂ ಕಾಲದಿಂ . . . ತುಟಿತಾ [ ಪಾಠಾಂ. ರಾ ] ಬ್ದಪ್ರಮಿತಜೀವಿತನುಮಾಗಿ (ಆದಿಪು. ೬-೫೬ ವ). [ <ಸಂ. ತ್ರುಟಿತ ]

**ತುಟಿತೆರೆ** 'ತುಟಿದೆರೆ' ನೋ.

**ತುಟಿದೆರೆ**, ತುಟಿತೆರೆ (ಕ್ರಿ). ೧. ತುಟಿಯನ್ನು ಬಿಚ್ಚು; ಬಾಯಿಬಿಡು. ೨. ಮಾತನಾಡು: ಇಬ್ಬರೂ ಮೈಯೆಲ್ಲ ಕಿವಿಯಾಗಿ ಕೇಳುತ್ತಿದ್ದರೂ ತುಟಿ ದೆರೆಯಲಿಲ್ಲ (ಪುನರು. ೩೦೦). **ತುಟಿತೆರೆ**: ೨. ಈವರೆಗೆ ತುಟಿತೆರೆಯದಿದ್ದ ವೀರಣ್ಣ ಈಗ ನಡುವೆ ಬಾಯಿ ಹಾಕಿದ (ಹಾಡುತ್ತ. ೯೫); ಪುಟ್ಟಮ್ಮನೂ ತುಟಿತೆರೆಯಲಿಲ್ಲ (ನಕದಾ. II, ೧೧೨೮).

[ತುಟಿ + ತೆರೆ₁ (<ತೆಱೆ₁)]

**ತುಟಿಬಿಚ್ಚು** (ಕ್ರಿ). = ತುಟಿದೆರೆ ೧: ತುಟಿಬಿಚ್ಚಿ ಪೇಳು ಮೇಲ್ಗತೆಯ (ಕೋಹಕ. ೨೨-೧); ಮಾಸ್ತೋವ ತುಟಿಬಿಚ್ಚಲಿಲ್ಲ (ಪುನರು. ೪೦).

[ ತುಟಿ + ಬಿಚ್ಚು₁ ]

**ತುಟಿಬೆರಳು** 'ತುಟಿವೆರಳು' ನೋ.

**ತುಟಿಮುತ್ತು** (ನಾ). ೧. ತುಟಿಗೆ ಕೊಡುವ ಮುತ್ತು; ಅಧರಚುಂಬನ. ೨. (ಅಲಂ) ಪ್ರೀತಿಗೆ ಪಾತ್ರ: ನಿರ್ಭಯದ ನಿಃಸೀಮದಲಿ ನೀ ನಮ್ಮ ತುಟಿಮುತ್ತಾದವ (ಹಾಡುಪಾ. ೫೬-೧೦). [ ತುಟಿ + ಮುತ್ತು₄ ]

**ತುಟಿರಂಗು** (ನಾ). ಅಲಂಕಾರಕ್ಕಾಗಿ ತುಟಿಗೆ ಬಳಿದುಕೊಳ್ಳುವ ಬಣ್ಣ: ಕಾಂತಿಯಿಂದ ಚೆನ್ನಾಗಿ ಕಾಣಿಸಲು ಹುಡಿ, ತುಟಿರಂಗು (ಲಿಪ್‌ಸ್ಟಿಕ್), ಕುಸುಂಬಿ (ರೂಜ್), ಉಗುರುಮೆರುಗುಗಳು (ಕವಿಕೋ. I, ೩೩).

[ ತುಟಿ + ರಂಗು ]

**ತುಟಿವೆರಳು**, ತುಟಿಬೆರಳು (ನಾ). ಎಚ್ಚರಿಕೆಯನ್ನು ಸೂಚಿಸಲು ತುಟಿಯ ಮೇಲಿಟ್ಟ ಬೆರಳು; ಮೌನವಾಗಿರಲು ಸೂಚಿಸುವ ಬೆರಳು: ತೋಳ್ವೊಯ್ಲ್ಲ ತುಟಿವೆರಳ ಬೊಬ್ಬೆಗಳ . . . ಸಂಭ್ರಮವಾರದೆ ಪಡೆಯೊರಡೀಕ್ಷಿಸುತ್ತಿರ್ದುವು (ಕಬಪು. ೨೬-೦೬). **ತುಟಿಬೆರಳು**: ಸದ್ದಿರದೆ ತುಟಿಬೆರಳಿನೊಳು ಸುಳಿವ ಮಾರುತದ (ಮುಲದೇ. ೩೪-೩).

[ ತುಟಿ + ಬೆರಳು (< ಬೆರಲ್) ]

**ತುಟಿಸನ್ನೆ** (ನಾ). ತುಟಿಯ ಅಲುಗಾಟದಿಂದಲೇ ಇಂಗಿತವನ್ನು ತಿಳಿಯಪಡಿಸುವುದು: ಮನ್ನಗೆ ತುಟಿಸನ್ನೆ ಕೆಪ್ಪಗೆ ಕೈಸನ್ನೆ ಹೆಡ್ಡಗೆ ಬಡಿಗೆಯ ಸನ್ನೆ (ಇಂದಾಪ. ೯೦-೩೬). [ ತುಟಿ + ಸನ್ನೆ₂ ]

**ತುಟಿಸು** (ಕ್ರಿ). ನುಡಿ; ಹೇಳು: ಜಗದೊಳಗೆ ಕೌತುಕ ವಿಚಿತ್ರವೇನೆಂಬೆನುಟಿ ತುಟಿಸಬಾರದು ಸೂಂಟಸಲು ಬಾರದಮ್ಮಮ್ಮ (ನಾಚಿರ. ೦೬೬-೦೯).

[ ತುಟಿ + - ಇಸು₃ ]

**ತುಟುಕರಿಸು** (ಕ್ರಿ). ೧. ಹಾತೊರೆ; ಅಪೇಕ್ಷಿಸು; ಕಾತರಿಸು: ನಟಣೆಯೊಳಗೈದುವರನೀಕ್ಷಿಸಿ ತುಟುಕರಿಸುತಿಹವಕ್ಷಿಯುಗವವನಿಪರಿಗೊಲವಿಂದ (ಜಿನಭಾ. ೦೯-೨೪). ೨. ತಳಮಳಿಸು; ಕ್ಷೋಭೆಗೊಳ್ಳು: ಅರುಹನೇ ಗತಿಯೆಂದು ಮನ ತುಟುಕರಿಸುತ್ತೈದಿದರಾ ವಿರಾಟನ ಚರರು (ಜಿನಭಾ. ೫೮-೨೮). [ <ತುಡಿ + - ಇಸು₃ ]

**ತುಟುಕು₁** 'ತಟಕು₁' ನೋ.

**ತುಟುಕು₂** 'ತಟಕು₂' ನೋ.

**ತುಟುಕುಹನಿ** 'ತಟಕುಹನಿ' ನೋ.

**ತುಟ್ಟ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು: ಬಲ್ಲಗಿ, ಬಿಂದಿಗೆ, (ದೊಡ್ಡ, ಸಣ್ಣ) ತುಟ್ಟ, ದಾಸಾಲ (ನಮ್ಮನು. ೨೩೮).

[ ← ತಮಿ. ತುಟ್ಟಿಲಿ ]

**ತುಟ್ಟಗ್ರ** (ನಾ). ತೊಂದರೆಯ ಕಾಲ; ದುರ್ಭಿಕ್ಷ: "ತುಟ್ಟಗ್ರ–ಅಡಚಣೆ ಕಾಲ" (ಜಾನಕೋ. ೩೬). 'ತುಟಾಗ್ರುತೆ' ಪರಾ. [ <ತುಟ್ಟಿ₁ ]

**ತುಟ್ಟಿ₁** (ನಾ). ೧. ಧಾರಣೆ ಹೆಚ್ಚಾಗಿರುವಿಕೆ; ದುಬಾರಿ: ನೂರಿಪ್ಪತ್ತು ರೂಪಾಯಿಗಳಲ್ಲಿ ಈ ಎಲ್ಲ ಖರ್ಚುಗಳೂ ನಡೆಯಬೇಕು . . . ತುಟ್ಟಿಯ ಕಾಲ. ಕಾಳು, ಕಡ್ಡಿ, ಸೌದೆ, ಹಾಲು, ಬಟ್ಟೆ ಎಲ್ಲವೂ ತುಟ್ಟಿ (ಜನಿವಾ. ೬):

ಹೂವುಗಳನ್ನು ತುಟ್ಟಿ ಮಾಡಿದ ಹಿಮಂತರುತುವಿಗೆ ದೋಷ ಕೊಡಿರಿ (ಮೋಹಿನೀ. ೨೦). ೨. ಅಭಾವ : ಗೋವಿಂದಭಟ್ಟನ ಉತಾವಳತನ ಅವನಲ್ಲಿ ಔಷಧಕ್ಕೂ ತುಟ್ಟಿ (ದೀಪಹ. II, ೦೬೯). ೩. (?) : ತುಟ್ಟಿಯ ದಿನವಂ ಪಣದಿಂದೊಟ್ಟೈದೆಯಿಂದಿಱಿದು ದ್ವಿಗುಣಿಸಿ (ವ್ಯವಹಾ. ಉಪಮಾನ).

ತುಟ್ಟಿಯಾಗು = ೧. (ವ್ಯಾಪಾರದ ಸರಕಂ) ಹೆಚ್ಚು ಬೆಲೆಯುಳ್ಳುದಾಗಂ ; ಅಧಿಕಮೌಲ್ಯವುಳ್ಳುದಾಗು ; ದುಬಾರಿಯಾಗಂ : ದೇಶದೊಳಗೆ ದುರ್ಭಿಕ್ಷ ಬಿದ್ದು ಕಾಳು ಬಹಳ ತುಟ್ಟಿಯಾದವು (ಮುಂಬಯಿ. ೪-೭೫); ಬಹವು ಆಗಿನ್ನೂ ತುಟ್ಟಿಯಾಗಿದ್ದಿತು (ಹಕ್ರಿಕಾ. ೦೩). ೨. ಹೀನವಾಗು ; ಬೆಲೆಯಿಲ್ಲವಾಗು : ನಾನಿಂದು ಒಂದು ತುಪ್ಪದ ಬಟ್ಟಲಿನಷ್ಟು ಅನ್ನಕ್ಕೆ ತುಟ್ಟಿಯಾದೆನಲ್ಲವೆ ? (ಸ್ವ್ಯತಿಜ. ೦೩೦).

ತುಟ್ಟಿ$_2$ (ನಾ). ತೃಪ್ತಿ ; ಸಂತೋಷ ; ಆನಂದ ; ತಣಿವು : ಶರಣಸಂಗಂ ತನಗೆ ಪರಮತುಟ್ಟಿಯನೀಯೆ (ಚೊಮ್ಮರ. ೦೦೦-೦೨); ತುಟ್ಟಿ ಸವ್ಯೋಹ ಸಮುದ್ರಕೆ ಹೊಂಬಟ್ಟದೊಟ್ಟ ಸೇತುವೆಗಟ್ಟಿದಂತೆ (ಭರಜ. ೦೩-೪೨). 'ತುಂಟ್ಟಿವಡೆ' ಪರಾ. [ < ಪ್ರಾ. ತುಟಿ. /ಸಂ. ತುಷ್ಟಿ ]

ತುಟ್ಟಿ$_3$ (ನಾ). ಒಂದಂ ಬಗೆಯ ತರಕಾರಿ ಸೊಪ್ಪು : ಸೊಪ್ಪುಗಳು : ಅಗಸೆ . . . ನಾರೋಬೇಡ, ತುಟ್ಟಿ, ಕೊತ್ತನಗೊರಜಿ, ಕೊತ್ತಂಬರಿ (ನಮ್ಮಮ. ೨೩೭). [ ? ]

ತುಟ್ಟಿಭತ್ತೆ 'ತುಟ್ಟಿಭತ್ಯ' ನೋ.

ತುಟ್ಟಿಭತ್ಯ, ತುಂಟ್ಟಿಭತ್ತೆ (ನಾ). ಪದಾರ್ಥಗಳ ಬೆಲೆ ಏರಿಕೆಯನ್ನು ಸರಿಗಟ್ಟಲು ನೌಕರರಿಗೆ ಸಂಬಳದ ಮೇಲೆ ಕೊಡುವ ಹೆಚ್ಚಿಗೆ ಮೊಬಲಗು, —ಹಣ : ರೈಲ್ವೆಯಲ್ಲಿ ಹದಿನೈದುರೂಪಾಯಿ ತುಟ್ಟಿಭತ್ಯ ಕೊಡುತ್ತಿದ್ದರು (ಸರ್ವಮಂ. ೨೩೮). ತುಟ್ಟಿಭತ್ತೆ : ಆ ಕಾರಕೂನರಿಬ್ಬರೂ ತುಟ್ಟಿಭತ್ತೆಯ ಆಸೆಗಾಗಿ ಭೂಲೋಕಕ್ಕೆ ಓಡಿಹೋದರು (ಹನ್ಮಂದ. ೦೯೩). [ ತುಟ್ಟಿ + ಭತ್ಯ ( < ಭತ್ಯಾದಾಯ) ]

ತುಟ್ಟಿವಡೆ (ಕ್ರಿ). ತೃಪ್ತಿಯನ್ನು ಹೊಂದಂ ; ಸಂತೋಷವನ್ನು ಪಡೆ : ಜಟ್ಟಿಗರ ದೊಕ್ಕರಂ ಗಳಹತ್ತಂ ಮೊದಲೆನಿಸಿದ ಪಲವುಂ ಪಟ್ಟುಗಳಂ ಕಿರಿದು ಪೊಳ್ತು ನಿಟ್ಟಿಸಿ ತುಟ್ಟಿವಡೆದು (ಮಂಡಾಕ. ೦೦-೯೯ ವ).

[ ತುಟ್ಟಿ$_2$ + ಪಡ್ಡ$_1$ ]

ತುಟ್ಟಿಸು (ಕ್ರಿ). ೧. ಶಕ್ತಿಗುಂದಂ ; ಬಲಹೀನವಾಗು ; ಕಂಗ್ಗು : "ತುಂಟ್ಟಿಸು—ಶಕ್ತಿಕ್ಷಯೇ" (ಕಮಧಾ); ಪೊಯ್ಯುತುಂ ತುಡುಕಿ ತುಟ್ಟಿಸಿ ಕತ್ತರಿವಾಣಿಯಲ್ಲಿ ಕಯ್ದುಡುಕಿದಪೊಲ್ ಬೆರಲ್ಪಱಿದುವು (ಅರ್ಜಸೀ. ೯-೦೦೯); ತುಟ್ಟಿಸಿದ ಹರುಷದಲಿ (ತೊರರಾ. ೩-೦೫-೩); ಕಿಸುಕುಳದ ಹುಳುವಾಗಿ ಮತಿ ತುಟ್ಟಿಸಿ ವಿನಿರ್ಗಮನವಾಗಿ . . . ಮೂರ್ಛಿತನಹನು (ನಿಛಾಗ. ೩-೦೪-೨೮); ನವಗೆ ತ್ರಾಣಗಳ್ ತುಟ್ಟಿಸಿತು ನಾಳೆ ಮಧ್ಯಾಹ್ನಕ್ಕೆ ಜೀವವಂ ಬಿಟ್ಟಪೆನು (ತುರಂಗ. ೭೯-೦೫). ೨. ಕಡಮೆಯಾಗು ; ಕುಂದು : ನಿಜಹರುಷ ತುಟ್ಟಿಸಲ್ಕೆರೆದಿ ನೋಡಿದನಾಗ ಕೆಲಬಲನ (ಮೃಡಾಶಾ. ೨-೭೪). ೩. ನಾಶವಾಗು : ತುಟ್ಟಿಸಲಿ ಧನ ಮಾನಗರ್ವದ ಬೆಟ್ಟ ಮುಱಿಯಲಿ (ಕುಮ್ಯಾಸ. ೦೪-೬೫); ಕೆಟ್ಟು ನುಡಿದರೆ ತನ್ನನೇನೆಂದಟ್ಟಿದರು ನಿನ್ನುವನು ತನುವಿದು ತುಟ್ಟಿಸದ ಮುನ್ನದ್ದುದನು ಹೇಳಯ್ಯ ತನಗೆ (ತೊರರಾ. ೨-೭-೪). ೪. ಅವಹೇಳನ ಮಾಡು ; ಕಡೆಗಣಿಸು : ಎಲ್ಲವರು ತುಟ್ಟಿಸುತಲಿಹಿರಿ ನಾವೆಂದುದಂ (ತುರಂಗ. ೪೦-೦೫); ಕುರುನೃಪತಿ ಮಾತೆಯಂ ತುಟ್ಟಿಸಲ್ ಗಾಂಧಾರಿ ತೆರಳಿದಳ್ (ತುರಂಗ. ೪೦-೨೪). ೫. ತಗ್ಗಿಸು ; ಶಾಂತಗೊಳಿಸು; ಸಮಾಧಾನಮಾಡು: ದುಷ್ಟದುರ್ಜನನಿವಂಗಳಲದಿರಿ ಬಹಳ ಪಾಪಿಷ್ಠ ಗುರುಗೋತ್ರಘಾತಕನೆಂದು ಶೋಕವಂ ತುಟ್ಟಿಸಿಯೆ ಮುಂದಕಂ ತೆರಳಿದರು (ತುರಂಗ. ೯೫-೦೫). ೬. ಸಿಲುಕಂ ; ಬೀಳು : ತೋಹಿನಲಿ ತುಟ್ಟಿಸಿದ ಮೃಗದವೊಲೂಹೆಯುಳಿದುದು (ಕುಮ್ಯಾಸ. ೦೪-೨೩). ೭. ಬಳುಕು ; ಕಂಪಿಸು : ಮಣಿಮುದ್ರಿಕೆಯು ನೂಪುರದ ತುಟ್ಟಿಸುವ ಬಡನಡುವಿನ ... ದೃಷ್ಟಿಮೋಹನಮೂರ್ತಿಯಸೆದಳು ಮೊಸರ ಕಡೆವುತ್ತ (ನಿಛಾಗ. ೧೦-೯-೦೬). ೮. ಬೀಳಂ ; ಕುಸಿ : ದುಷ್ಟನೃಪಕುಲಭಾರದಲಿ ಕಂಗೆಟ್ಟು ಕುಸಿದು ರಸಾತಳಕೆ ಧರೆ ತುಟ್ಟಿಸುತ (ನಿಛಾಗ. ೧೦-೩೧-೦೦).

[ ತುಟ್ಟಿ$_1$ ? + – ಇಸು$_3$ ]

ತುಟ್ಟು (ಕ್ರಿ). ೧. ನಿರ್ದೇಶಿಸು ; ಗುರಿಯಿಡು : ಬಟ್ಟಲ್ಲಿ ಬೀಡಬಿಡದ ಬೇಗದೊಳು ತಾವು ತುಟ್ಟಿದ ಪೊಳಲ ಗಡಿಯಲಿ ಬಿಟ್ಟರಲಾ ವಾರ್ತೆಗಡಿಯ ನಾಯಕರಿಂದ ಮುಟ್ಟಿದುದಾ ನೃಪವರಗೆ (ರಾಮವಿ. ೯-೩೦). ೨. ಪಣತೊಡಂ ; ಪ್ರತಿಜ್ಞೆಮಾಡಂ : ಕಟ್ಟುವೆ ಲಂಕೆಯ ಪಟ್ಟವ ನಿನಗೆಂದು ತುಟ್ಟಿ ನುಡಿದ ಮನವಮುಟ್ಟಿ (ರಾಮವಿ. ೦೬-೭೩). [< ತೊಡು$_1$]

ತುಟ್ಟೈಸು (ಕ್ರಿ). ತುದಿಗೆ ಬರಂ : ನಿಟ್ಟುಸುಸುರ್ಸೂಸೆ ಕಂಗಳು ಪೈಸರಿಸೆ ಜೀವ ತುಟ್ಟೈಸಿ (ಲಕ್ಷ್ಮೀಧಾ. ೨೭-೦೪). [ < ತುಟಿ + – ಇಸು$_3$ ]

ತುಟ್ಯಂಗ (ನಾ). [ಜೈನ] ಒಂದಂ ದೊಡ್ಡ ಕಾಲಪರಿಮಾಣ : ಕಮಲಾಂಗಂ ಕಮಲಂ ತುಟ್ಯಂಗಂ ತುಟಿಕಂ ಅಟಟಾಂಗಂ ಅಟಟಂ ಅಮಮಾಂಗಂ ಅಮಮಂ (ಹಪುರ. ೦೩೮-೫). [< ಸಂ. ತ್ರುಟಿತಾಂಗ]

ತುತಾರ 'ತುಟಾರ' ನೋ.

ತುತಾರಿ (ನಾ). ದುಡುಂಕುಸ್ವಭಾವದ ಹೆಂಗಸು : ಘೋರಕರ್ಮಾಚಾರಿ ವಂಶಕುಠಾರಿ ಬಹಳ ತುತಾರಿ ದಿವಿಜರ ಮಾರಿ ಜನಿಸಿದಳಾ ಬಳಿಕ ಶೂರ್ಪನಖೀ (ಅನಂರಾ. ೦-೭-೦೨). [ ತುತಾರ ( < ತುಟಾರ) + – ಇ$_2$ ]

ತುತಾರಿಸು 'ತುಟಾರಿಸು' ನೋ.

ತುಡಕೆ 'ತುಡಿಕೆ' ನೋ.

ತುಡರು 'ತೊಡರ್$_1$' ನೋ.

ತುಡಿ, ದುಂಡಿ$_2$ (ಕ್ರಿ). ೧. ಮಿಡಿ ; ಸ್ಪಂದಿಸಂ : ಸಾವಿತ್ರಿಗೆ . . . ನಾರದನು ಹೇಳಿದ್ದ ಮಾತೇ ಮನಸ್ಸಿನಲ್ಲಿ ತುಡಿಯುತ್ತಿತ್ತು (ವಕಥಾ. ೦೬೯) : ಯಾವುದೋ ಆಶಂಕೆ ತುಡಿಯುತ್ತಲೇ ಇತ್ತು (ಮಣ್ಣುಹ. ೦೭೮) : ಕನ್ನಡಸಂಸ್ಕೃತಿಯ ಪ್ರತೀಕ ಒಂದೇ ! ಇಲ್ಲಿ ತುಡಿಯುತ್ತಿರುವ ಹೃದಯ ಒಂದೇ ! (ಕರ್ನಾಕ. ೩೩೭). ೨. ತವಕಿಸು ; ಹಾತೊರೆ ; ಆತುರಪಡು : ನಾರಣಪ್ಪನ ಮನಸ್ಸು ಆ ಹತಭಾಗ್ಯರಿಗೆ ನೆರವಾಗಲು ಸದಾ ತುಡಿಯುತ್ತಿರುವುದು (ಅನಾಥ. ೩೭) : ಇಡೀ ಮಾನವಪ್ರಕೃತಿಯೇ ಸೌಂದರ್ಯದತ್ತ ತುಡಿಯುತ್ತಿದೆ (ಕಾವ್ಯಕು. ೦೩೩). ೩. ನೋಯಂ ; ವ್ಯಥೆಪಡು ; ತಳಮಳಿಸಂ : ನಿಸರ್ಗದ ಪಶುಪಕ್ಷಿಗಳಿಗೆ ಇರುವ ಸ್ವಾತಂತ್ರ್ಯ ತಮಗೆ ಇಲ್ಲವಲ್ಲಾ ಎಂದು ಮನಸ್ಸು ತುಡಿಯುತ್ತಿತ್ತು (ರಾಜ್ಯೋದ. ೦೭೨) ; ಮುದವಾರಲು, ಅಳಲೇರಲು, ಭಯ ಮಸಗಲು —ತುಡಿದು, ಮನ ದೇವಗೆ ಮೊರೆಯಿಡುವುದು (ಮಾಂದಳ. ೨೦-೨). ೪. ಅಲ್ಲೋಲಕಲ್ಲೋಲವಾಗು; ಹೊಯ್ದಾಡಂ ; ಕ್ಷೋಭೆಗೊಳ್ಳು: ಅವ ತವಕದಲೇನೊ ದಾನಂಚುಗಳ ತಬ್ಬಿ ತುಡಿವೀ ಅಧೀರಜಲ (ಪಪೃದ್ಯ. ೦-೫). ೫. ಮಿಂಚಂಗು ; ಹೊಳೆ : ಶಿವಜಟೆಯ ತುಳುಕಿ ತುಡಿವ ತಾರೆಯ ಬೆಳಕಿಗೀ ಬೆಳಕೆ ಚರಿತಾರ್ಥ (ಮತಿದೀ. ೨೩-೫). ದುಡಿ$_2$ : ೧. ಇನಿಯುಂ ಬಂದು ನಿಂದು ರಾಧೇ ಎನಲೇವರಿ ದುಮುದುಮುಂ ದುಡಿಯುವ ಹೃದಯವ ತಡೆವೆನೆ (ಗೋಕುನಿ. ೨೩-೪).

ತುಡಿದುಕೊಳ್ಳು = ಆತುರಪಡಂ ; ಕುತೂಹಲಗೊಳ್ಳು : ಅವ ನೊಂದಿಗೆ ಮಾತನಾಡತೊಡಗಿದುತೆಲ್ಲ ನನ್ನ ಹೃದಯವು ತುಡಿದುಕೊಳ್ಳತೊಡಗಿತು (ಎಳೆ. ೮೩); ದೂರದಲ್ಲಿ ಅವನನ್ನು ಕಂಡೊಡನೆಯೇ ಮನಸ್ಸು ತುಡಿದುಕೊಳ್ಳುತ್ತಿತ್ತು (ಅಲಚೂ. ೫೭).

[ ದೇ.೩ ತಮಿ. ತುಟ ; ಮಲ. ತುಡಿ ]

ತುಡಿಕಿ 'ತುಡಿಕೆ' ನೋ.

**ತುಡಿಕೆ, ತಂಡಕೆ, ತಂಡಿಕಿ, ತುಡುಕೆ, ತೊಡಿಕೆ** (ನಾ). ೧. ತೋಟದ ಒಂದು ಭಾಗ : ದೇವರ್ಗ್ಗೆ ಮಾನ್ಯಂ ತುಡಿಕೆ ೧ (ಸೌಇಇ. IX-i, ೧೫೯-೫೭; 1092); ತೆಂಕಲು ತುಡಿಕೆಯ ಮುನ್ನಣ ಬಟ್ಟೆ ನೀರೊತ್ತಿಂಗೆ ದೇವಣ ಭಟ್ಟರು ಕೊಟ್ಟ ಬೆದ್ದಲೆ (ಎಕ. V, ಹಾಸನ. ೧೦೭-೪೯; 1123) ; ತೋಟ ತುಡಿಕೆ ಮುಂತಾಗಿ ಆಗಾಮಿಯಾಗಿ . . . ಸರ್ವಸ್ವಾಮ್ಯವನು ಆಗುಮಾಡಿ ಕೊಂಡು (ಎಕ. IX, ಬಂಗಳೂ. ೧೨೭-೩೩ ; 1431) ; ಅವರ ತೋಟ ತುಡಿಕೆಗಳು ಹಣ್ಣು ಹಂಪಲುಗಳಿಂದ ತುಂಬಿ ತುಳುಕಲಿ (ಹುಟ್ಟಿಹ. ೧೬೦). ೨. ಹಣ್ಣುಗಳನ್ನು ಸಂಗ್ರಹಿಸಿ ಇಡುವ ಮನೆ ; ಫಲಸಂಗ್ರಹಾಲಯ : (ಕ). ೩. ಅಡಕೆಯ ಫಸಲನ್ನು ಸುಲಿದು ಬೇಯಿಸಿ ರೇಪೆ ಮಾಡುವ ಸ್ಥಳ. **ತುಡಕೆ** : ೧. ಗದೆ ಬೆದಲು ತೋಟ ತುಡಕೆ (ಷ್ಮಅರಿ. ೦೯೩೦, ೩೮-೦೩ : 1512). **ತುಡಿಕಿ** : ೧. ಗ್ರಾಮಕ್ಕೆ ಸಲುವ ಗದ್ದೆ ಬೆದ್ದಲು ತೋಟ ತುಡಿಕಿ ಅಡುಮನೆವಣ (ಎಕ. XIV, ಚಾಮರಾ. ೨೬೬.೮ ; ?). **ತುಡುಕೆ** : ೧. ಊರಿಂ ತೆಂಕದೆಸವಂದದ ತುಡುಕೆ ಯೊಳಗಣ ತುಡುಕೆ ಒಂದು (ಹೈಅಸಿ. ೮-೩೩; 1088) ; ಊರಡೆದಡದ ಬಡಗಣ ಮೂಡಣ ಗೋಟನಲ್ಲಿ ಬ್ರಹ್ಮದೇವಪಟ್ಟವರ್ದ್ಧನರು ಕೊಟ್ಟ ತೆಂಕವಾಗಿಲ ತುಡುಕೆಯೊಂದು (ಸೌಇಇ. IX-i. ೩೩೩-೩೨; 1226). **ತೊಡಿಕೆ** : ೧. ಅಯ್ಯದೇವಪರವಿಟ್ಟ ತೊಡಿಕೆ ಅಲವಿಟ್ಟೊರ್ (ಷ್ಮಅರಿ. ೦೯೩೯, ೪೨-೫ ; 10ನೆಯ ಶತ?). [←ತಮಿ. ತುಟವ್ವೈ=ತೋಟ ]

**ತುಡಿಗೆ** 'ತೊಡುಗೆ' ನೋ.

**ತುಡಿತ, ದುಡಿತ$_2$** (ನಾ). ೧. ಮಿಡಿತ; ಸ್ಪಂದನ : ಪ್ರಭುಗಳ ಉಕ್ತಿಯನ್ನು ಕೇಳಿದಾಗ ಚೆಂಗುಮಣಿಯ ಎದೆಯ ತುಡಿತ ನಿಧಾನವಾಯಿತು (ಹುಲಿಹಾ. ೧೫೯). ೨. ಆತ್ಮಾಸಕ್ತಿ ; ಆತುರ; ಲವಲವಿಕೆ; ತವಕ: ಶ್ರೀವಿರೂಪಾಕ್ಷನ ಪಂಪಾಪುರಕ್ಕೆ ಹೋಗಬೇಕೆಂಬ ತುಡಿತ ದಿನದಿನಕ್ಕೂ ಬಲಿಯುತ್ತಿದೆ (ತುಂಗಳ. ೦೩): ಎದೆಭಾರ ಎಷ್ಟೋ ಇಳಿಯುತ್ತದೆ; ತನ್ನೊಳಗಿನ ತುಡಿತ ಹಿಡಿತಕ್ಕೆ ಬರುತ್ತದೆ (ಬನಸಿ. ೦೬೦) ; ನವೋದಯ ಕವಿಗಳಲ್ಲಿ ನೂತನಚೈತನ್ಯವನ್ನು ತುಂಬಿದುದು ಬಂಧನದಲ್ಲಿ ಸಿಲುಕಿದ ಭರತಮಾತೆಯ ಬಿಡುಗಡೆಯ ತುಡಿತ (ಸಾಂದಶ. ೩೬೩). **ದುಡಿತ$_2$**: ೩. ಬೊಕ್ಕೆಯಿಂದುಂಟಾಗುವ ನೋವು : "ಅಯಾಮ = ನೋವು, ಆಕ್ಷೇಪಕ = ದುಡು[ಡಿ]ತ, ಸ್ತಂಭಾ = ಬಿಗಿಯೂದು" (ಬಾಹಟೀ. ೨-೪).
[ ತುಡಿ + –ತ$_2$ ]

**ತುಡಿಸು** 'ತೊಡಿಸು' ನೋ.

**ತುಡು$_1$** 'ತೊಡು$_1$' ನೋ.

**ತುಡು$_2$** 'ತೊಡು$_2$' ನೋ.

**ತುಡು$_3$** (ನಾ). ಒಂದು ಬಗೆಯ ಮರ : ಅರುಟಾಳಂ ಹಾರಿವಾಳಂ ತುಡು ತಡಸೊಡವಂ ಲೊಕ್ಕಿ (ಗಿರಿಕ. ೬.೭೨). [ ? ]

**ತುಡುಂಕು$_1$** 'ತೊಡಂಕು$_1$' ನೋ.

**ತುಡುಂಕು$_2$** 'ತುಡುಕು$_3$' ನೋ.

△ **ತುಡುಂಗುಣಿ** 'ತುಡಂಗುಣಿ' ನೋ.

**ತುಡುಕಿಸು** (ಕ್ರಿ). ಧರಿಸುವಂತೆ ಮಾಡು ; ಹಿಡಿಯುವಂತೆ ಮಾಡು: ಹರಿಯ ಚಕ್ರವ ತುಡುಕಿಸುವೆ ವಾನರಪತಾಕನ ರಥವ ಹಿಂದಕೆ ಮುರಿಯಲಿಸುವೆನು (ಕುವ್ಯಾಭೀ. ೦-೪೦).
[ ತುಡುಕು$_1$ (<ತೊಡಂಕು$_1$) + –ಇಸು$_3$ ]

**ತುಡುಕು$_1$** 'ತೊಡಂಕು$_1$' ನೋ.

**ತುಡುಕು$_2$** 'ತೊಡಂಕು$_3$' ನೋ.

**ತುಡುಕು$_3$, ತುಡುಂಕು$_2$** (ನಾ). ವಾದ್ಯವಾದನದಲ್ಲಿ ಒಂದು ಪ್ರಕಾರ: ಜತಿ ಜೋಕೆ ತುಡುಕು . . . ಬೆಡಂಗಿನಿತುಂ ಸಂಗತಿವಡೆಯೆ ವಾದನ ಕಳಾವತಿ ಬಾಜಿಸುತಿರ್ದಳ್ (ಶಾಂತೀಶ್ವ. ೦೩-೨೨೭) : ಆ ಸಮಯದೊಳ್: ಮದ್ದಳೆಗಂ ಮದ್ದಳೆಯಂ . . . ಚಮತ್ಕಾರ ತುಡುಕು ರಿಗ್ಗವಣೆ ಪಹರಣೆಗಳೆಂಬ ನಾನಾಶಬ್ದಂಗಳಂ ಬಾಜಿಸಿ (ಧರ್ಮಪ. ೨-೨೩ ವ) : ಪಲತೆಜದ ತಾಳಗಳ ಜತಿಗಳನಳವಡಿಸಿ ತುಡುಕ[ಕು]ಗಳ ಕತ್ತರಗಳನು ಮೂದಲಿನಾದ ಲಯದಲಿ ಕುಡುಪಡರೆ ನುಡಿಸೆ (ಸಾಳ್ವಭಾ. ೦೮-೫೭); ತುಡುಕು ಪಹರಣೆ . . . ತೋಱಿ ನುಡಿಸಿದ ಮಾರ್ದಂಗಿಕನು (ಗೋಮಟೇ. ೭-೦೭). **ತುಡುಂಕು$_2$** : ಕವುತಂದೆಂಕಾರಂ ಮಲಪವದೆ ತುಡುಂಕೊತ್ತು ಜೋಕೆಯಂತರಿ ಜತಿ ರಿಗ್ಗವಣೆ ಪಹರಣೆಯೆನಿಪ್ಪೀ ಪ್ರಬಂಧಮಂ (?) ಶ್ರೋತ್ರ ಬಂಧವೆನೆ ಬಾಜಿಸಿದರ್ (ಪಾರ್ಶ್ವಪು. ೦೨-೨೦). [ ಭರತಕೋಶದಲ್ಲಿ 'ತುಡುಕಾ' ಎಂಬ ಶಬ್ದಕ್ಕೆ 'ವಾದ್ಯಪ್ರಬಂಧ' ಎಂದು ಹೇಳಿದೆ.]

**ತುಡುಕುಗಾಯ** (ನಾ). ಬಿಗಿಯಾದ ಹಿಡಿತದಿಂದ ಉಂಟಾಗುವ ಗಾಯ : ಜಾಡಿಸುವ ಮಣಿಮಯದ ಗದೆಯಲಿ ತೋಡುವೊಯ್ಯನ ತುಡುಕುಗಾಯದ ನೀಡುಮೊನೆಗಳ ವಿಗಡನಿಕ್ಕಿದನದಟರಕ್ಕಸರ (ಕುವ್ಯಾಅ. ೧೦-೩೨). [ ತುಡುಕು$_1$ (<ತೊಡಂಕು$_1$) + ಗಾಯ ]

**ತುಡುಕುಗುದುರೆ** (ನಾ). ಮುನ್ನುಗ್ಗುವ ಕುದುರೆ : ಕಡಿದು ಬಿಸುಟನು ತಲೆವಂಗಿಗಳಲಡಿಸಿದಾ ಪಯದಳವನೊಗ್ಗಿನ ತುಡುಕುಗುದುರೆಯ ಖುರವ ತಱಿದನು (ಕುವ್ಯಾಕ. ೨-೪೫). [ತುಡುಕು$_1$ (<ತೊಡಂಕು$_1$) + ಕುದುರೆ]

**ತುಡುಕುವೆಳಗು** (ನಾ). ಬೆರೆತುಕೊಂಡ ಬೆಳಕು ; ಅಧಿಕವಾದ ಪ್ರಕಾಶ : ಜಡಿವ ಕೈದೀವಿಗೆಯ ಸಾಲಿನ ತುಡುಕುವೆಳಗಿನ ವಂದಿಜನದುಗ್ಗಡದ ರಾಜಕುಮಾರಕರು ನಡೆತಂದರೊಲವಿನಲಿ (ತೊರರಾ. ೧-೦೬-೪೦).
[ ತುಡುಕು$_1$ (<ತೊಡಂಕು$_1$) + ಬೆಳಗು$_2$ ]

**ತುಡುಕೆ** 'ತುಡಿಕೆ' ನೋ.

**ತುಡುಕೆವಟ್ಟು, ತುಳುಕೆವಟ್ಟು** (ನಾ). ಒಂದು ಪ್ರದೇಶದ ಹೆಸರು : ದೇವರ ಮೂಡಣದೆಸೆಯಲ್ ಪಳಕೆಯ ಮತ್ತರು ೪ ತುಡುಕೆವಟ್ಟನಲ್ಲಿ ಅಱುವಣದೇ ತುಣ್ಬದು ಮಣಲಕೆಯ ಮತ್ತ ೬ (ಸೌಇಇ. IX-i, ೦೨೦-೦೫ : 1068). **ತುಳುಕೆವಟ್ಟು** : ದುದ್ದಿಮಯ್ಯನ ಮಗಂ ಪದ್ಮನಾಭನ್ನೊಱೆಯ ಹತ್ತಿರಲೀಶ್ವರಯ್ಯನ ಮಾರ್ಕ್ಕಿಯಿಂ ಪಡುವಲು ಕೊಟ್ಟ ತುಳುಕೆವಟ್ಟನ ಮಾರ್ಕ್ಕಿ ಕಮ್ಮ ೪೫ (ಸೌಇಇ. IX-i, ೦೭೫-೫೯; 1099). [ ? ]

**ತುಡುಗ** (ನಾ). ಕಳ್ಳ ; ಚೋರ; ತಸ್ಕರ : ಕೂಗಿಯಾಡುವಾನು ಬರಿದೆ ತುಡುಗನು (ಚಿವಾರ. ೦೪೮-೯) : ಯಾರಿಗೂ ಕಾಣದಂತೆ ಕಳವು ಮಾಡುವ ಚತುರ ತುಡುಗನಂತೆ (ಗಾಳಿಗು. ೨೭) ; ನಿಮ್ಮ ಹುಡುಗರು ಕೆಲವರು ತುಡುಗರು ಅಷ್ಟೆ (ಬಿಲುಮ. ೨೦೨). [ತುಡುಗು + – ಅ$_7$]

**ತುಡುಗತನ** (ನಾ). ಕಳ್ಳತನ ; ಚೌರ್ಯ : ಆಗ ತುಡುಗತನ ತನ್ನ ತಾನೇ ಹೊರಬೀಳುತ್ತದೆ (ರಂಗರೊ. ೦೨). [ <ತುಡುಗು + – ತನ ]

**ತುಡುಗದನ** (ನಾ). = ತುಡುಗುಣಿದನ : ಬೇಸಿಗೆಯಲ್ಲಿ ತುಡುಗದನಗಳು ತೋಟಕ್ಕೆ ಬಾರದಂತೆ ಮಾಡುವುದೇ ಕಷ್ಟ (ರೂಢಿ).
[ <ತುಡುಗು+ದನ ]

**ತುಡುಗಾಡು** (ಕ್ರಿ).ಕಳ್ಳತನ ಮಾಡು ; ಕದಿ : ತುಡುಗಾಡುವ ಬಸವನಾರಂಬಿಗನ ಕಯ್ಯೊಳ್ . . . ಸಿಕ್ಕುವಂತೆ (ಧರ್ಮಾಮೃ. ೦೩-೦೮೫).
[ ತುಡುಗು + ಆಡು$_1$ ]

**ತುಡುಗಿ** (ನಾ). ಕಳ್ಳಿ : ಅವಳೇನು ಬೇದಿಯ ಮೇಲಿನ ತುಡುಗಿಯೆ (ಸ್ವ$_1$ತಿಚಿ. ೨೪೭). [ ತುಡುಗ + –ಇ$_2$ ]

**ತುಡುಗು** (ನಾ). ಕಳ್ಳತನ ; ಚೌರ್ಯ : ಮೊನ್ನಿನ ದಿನ ನಮ್ಮ ಗಣಿಯಲ್ಲಿ ಇಂಥದೇ ಒಂದು ತುಡುಗು ಸಂಭವಿಸಿತ್ತು (ರಂಗರೊ. ೦೦) : ತುಡುಗಿನಿಂದ . . . ಕಳ್ಳಗಂಟು ಮಾಡಿಕೊಂಡಿದ್ದಳು (ಹೊಸಕ್ಕ. ೧೮೪) : ವಿಸ್ಮಯಕಾರಕ ತುಡುಗುಗಳಲ್ಲಿ ಪ್ರಾತ್ಯಾನ ಕೈಚಳಕವಿದ್ದೇ ಇದೆ (ದೊರಾಳ. ೧೦).

**ತುಡುಗುವಮಾಡು** = ಕಳವು ಮಾಡು ; ಕದಿ : ತುಡುಗುವಮಾಡಬಾರದೆಂದು ಸಾಲೆಯ ಅಯ್ಯನವರು ಹೇಳಿದ್ದನ್ನು ಮರೆತೆಯೇ ? (ಮುಂಬಯಿ. ೨-೬೬) : ಅವುಗಳು ಸಿಕ್ಕ ಪದಾರ್ಥಗಳನ್ನು ತಿಂದು ಹಾಕುತ್ತಿದ್ದವು. ತುಡುಗುವಮಾಡಿ ಒಯ್ಯುತ್ತಿದ್ದವು (ಪೂಪಾಸಾ. ೨೩) : ತುಡುಗುವಮಾಡಿ ಗಂಡಸು ಕೆಟ್ಟ, ಹಾದರಮಾಡಿ ಹೆಂಗಸು ಕೆಟ್ಟಳು (ಗಾದೆ).

[ದೇ.ಶ ತಮಿ. ತಿರುಟು, ತಿರುಟ್ಟು ; ಮಲ. ತಿರಿಡ=ಕಳ್ಳ]

**ತುಡುಗುಗೊಳ್** (ಕ್ರಿ). = ತಂಡುಗಾಡು : ಮ ಹಾ ವಾ ಯಾ ವಿ ಯು ತುಡುಗುಗೊಂಡ ತೊಟ್ಟಿನಂತೆ (ಧರ್ಮಾಮೃ. ೬-೧೦೩) : ತುಡುಗುಗೊಂಡು ಕುಡಿಯದಿರ್ (ಅದ್ಭುತ. ೩೦-೦೪). [ ತುಡುಗು + ಕೊಳ್$_1$ ]

**ತುಡುಗುಣ್** (ಕ್ರಿ). ಕದ್ದು ತಿನ್ನು : ತುಡುಗುಣ್ಣ ತೊಟ್ಟಿನಂತೆ ಕೊಲ್ಲದ ವ್ರತಕ್ಕಲಸಿ ನಡುಗದೆ (ಧರ್ಮಾಮೃ. ೦೪-೫೪). [ ತುಡುಗು+ಉಣ್ ]

**ತುಡುಗುಣಿ**, ತುಡುಂಗುಣಿ (ನಾ) ೧. ಕಳವಿನಿಂದಲೇ ಜೀವಿಸುವ ವ್ಯಕ್ತಿ ; ಕಳ್ಳತನದಿಂದ ಹೊಟ್ಟೆ ಹೊರೆಯುವ ವ್ಯಕ್ತಿ : ತುಡುಗುಣಿ ಗೊರವರ ಮೆಚ್ಚಂ ಪೊಡವಿಗೆ ಶಿವಸಕ್ತಿ ತಾನೆ ನೈಷ್ಠಿಕವುನಿಪಾ (ಎಕ. XII, ಚಿಕ್ಕನಾ. ೩೦-೨೯: 1149): ಮನೆಮನೆದಪ್ಪದೆ ತಿರುಗುವ ತುಡುಗುಣಿಯಂತೆ ಕಾಡಲಾಗದು ಭಕ್ತನ (ಅಪಡಂ. ೦೦೩-೯೬೮) : ತು ಡು ಗು ಣಿ ಯ ನಿನಗುಂಟು ವೀರ್ಯದ ಕಡುಹು (ನಿಭಾಗ. ೯-೦೦-೯೬): ಊ ರೂ ರು ಗಳ ಹೊಕ್ಕ ತುಡುಗುಣಿ ತುರುಕವಾರ್ಬಲವ ಕಡುತವಕದೆ ಮುತ್ತಿಕೊಂಡು (ಕಂಸವಿ. ೦೩-೩೨). △ **ತುಡುಂಗುಣಿ** : ಆನೆ ತುಡುಂಗುಣಿಯಾದೊಡೆ ಭೂನಾಥಂ ಜಾರನಾದೊಡಂ...ಏ ನೆಂ ದೆ ನ ಬ ಹು ದು ನೀತಿ ತಾಂ ಭೂತಳದೊಳ್ (ನೀತಿಸಾಂ. ೩೪೯). : ೨. ಕದ್ದು ತಿನ್ನುವ ನಾಯಿ : "ತುಡುಂ ಗುಣಿಯ ಹಾಟ್ಟನೆಯ ಹಾಟನಕ್ಕಂ" (ಸಂಜೀವ. ೬).

**ತುಡುಗುಣಿಯಾಗು**= ಕಳ್ಳಬುದ್ಧಿಯಿಂದ ಕೂಡಿರು : ಸಾರಮೇಯ ಶಿಶುವಂ ಕಂಡು ಪ್ರೀತಿವಟ್ಟು ನಡವುತ್ತಿರ್ಪುದುಮದು ಗ ಂ ಡು ನೆ ರೆ ದು ಕೊಂಡು ತುಡುಗುಣಿಯಾಗಿ ಭಾಂಡಸಂಕರಂಗೆಯ್ಯುತ್ತಿರ್ಪುದುಂ (ಪಂಚತಂ. ೨೬೦-೦೯). [ ತುಡುಗು + – ಉಣಿ ]

**ತುಡುಗುಣಿಕ** (ನಾ). = ತುಡುಗುಣಿ ೧ : ಕೊಡಗೂಸು ತೊತ್ತು ಸಯ್ಯಿಮಿ ತುಡುಗುಣಿಕ ಕುಷ್ಠಾಂಗಿ ರಂಡೆ (ಚಾಸ್ತ್ರಟೀ. ೩೦-೩೬).

[ ತುಡುಗುಣಿ + – ಕ$_3$ ]

**ತುಡುಗುಣಿಗೆಯ್ತ** (ನಾ). ೧. ಕಳ್ಳತನದ ಕೆಲಸ. ೨. ಕಳ್ಳತನದಲ್ಲಿ ಕೂಡುವುದು ; ಚೋರಸುರತ : ನಾಣಿಲಿ ಮಾಣಲಾಗದೇ ತುಡುಗುಣಿಗೆಯ್ಯುವಂ (ರಸರ. ೩-೦೬೨). [ ತುಡುಗುಣಿ + ಕೆಯ್ತ$_1$ ]

**ತುಡುಗುಣಿತನ** (ನಾ). ೧. ಕಳ್ಳತನ : ಕದ್ದು ತಿಂದರೆ ಕೈಹಿಡಿದೊಮ್ಮೆ ಬಡಿದು ತುಡುಗುಣಿತನವ ಬಿಡಿಸಯ್ಯಾ (ಬಸವ. ೪೩೩). ೨. ಕಪಟವೃತ್ತಿ ; ಮೋಸ ; ವಂಚನೆ : ಎನ್ನ ಸೀಮೆಯುಂ ತುಡುಗುಣಿತನದಿ ಹೊಕ್ಕ ತುಂಟ ಬಂಟಕೆಯುಮಂ ಬಿಡಿಸಿದೊಡೆ (ಹಮ್ಮಳಾ. ೨-೬) : ಸಾಂಬಳ್ಳಿಯ ಭೂಪ ತುಡುಗುಣಿತನದಲಾಲಂಬಾಡಿಯ ಕೊಂಡ ಕಡೆಗೆ ಠಾಣೆಯವಿಕ್ಕಿದನು (ಕಂಸವಿ. ೦೭-೨೨). [ ತುಡುಗುಣಿ + – ತನ ]

**ತುಡುಗುಣಿತೊಟ್ಟು** (ನಾ). ಕಳ್ಳತನ ಮಾಡುವ ತೊತ್ತು : ಗರ್ದಭನೆರ್ದೆಯುಮಂ ಕಿವಿಯುಮಂ ತಿಂದು ತುಡುಗುಣಿತೊಟ್ಟಿನಂತೆ ಬಾಯುಂ ತೊಡೆದುಕೊಂಡು ತಾನಲ್ಲದಂತಿರ್ಪುದುಂ (ಪಂಚತಂ. ೨೬೪-೨೨).

[ ತುಡುಗುಣಿ + ತೊಟ್ಟು ]

**ತುಡುಗುಣಿದನ** (ನಾ). ಹೊಲ, ಗದ್ದೆ, ತೋಟಗಳಿಗೆ ನುಗ್ಗಿ, ಕದ್ದು ಮೇಯುವ ಸ್ವಭಾವವುಳ್ಳ ಪಶು ; ಕಳ್ಳಹಸು ; ತೊಂಡುದನ : ಹಂದಿ ಹರಿದಾಡುವಂತೆ ತುಡುಗುಣಿದನ ತಿರುಗುವಂತೆ (ಉದ್ಯೋಪ್ರ. ೧೦-೨೯-೦೪). [ ತುಡುಗುಣಿ + ದನ ]

**ತುಡುಗುಣಿನಾಯ್**, ತುಂಡುಗುಣಿನಾಯಿ (ನಾ). ಕದ್ದು ತಿನ್ನುವ ನಾಯಿ : "ಹಾಟ್ಟನೆಹಾಟಂ=ತುಡುಗುಣಿನಾಯ್" (ಶಮದ. ೫೦. ೦) ; ತುಡುಗುಣಿನಾಯ್ ಮನೆಯವರ ಕಯ್ಯೊಳ್ ... ಸಿಕ್ಕುವಂತೆ (ಧರ್ಮಾಮೃ. ೧೩-೧೪೩): ಒಡೆಯರ ಕಣ್ತಪ್ಪುವುದನೆ ತುಡುಗುಣಿನಾಯುಳಿಪಿ ನೋಡುವಂತೆ (ಶಾಕ್ಕೆಪು. ೩-೫೯); ತುಡುಗುಣಿನಾಯನು ಹಿಡಿತಂದು ಸಾಕಿದರೆ ತನ್ನೊಡೆಯಂಗೆ ಬಗುಳುವಂತೆ (ಬಸವ. ೫೬೬). **ತುಡುಗುಣಿನಾಯಿ** : ತುಡುಗುಣಿ ನಾಯಿಗೆ ಮಡಕೇ ಮೇಲೆ ಕಣ್ಣು (ಗಾದೆ). [ ತುಡುಗುಣಿ + ನಾಯ್ ]

**ತುಡುಗುಣಿನಾಯಿ** 'ತುಡುಗುಣಿನಾಯ್' ನೋ.

**ತುಡುಗುತಿನ್**, ತುಡುಂಗುತಿನ್ನು (ಕ್ರಿ). ಕದ್ದು ತಿನ್ನು : ನನ್ನದೊಂದಾಕಳು ಒಕ್ಕಲಿಗನ ಹೊಲದಲ್ಲಿ ತುಡುಗುತಿಂಬುವದಕ್ಕೆ ಹೋಗಲದ ಮನೆಗೆ ಹೊಡತರುವಲ್ಲಿ (ಭೃರಸೂ. ೧೪೯). **ತುಡುಗುತಿನ್ನು** : ಲಕ್ಷ್ಮೀ ತುಡುಗು ತಿನ್ನುತ್ತಾಳೆ (ಸ್ತ್ರೀಶಿ. ೫೯). [ ತುಡುಗು + ತಿನ್ನು (<ತಿನ್) ]

**ತುಡುಗುತಿನ್ನು** 'ತಂಡುಗುತಿನ್' ನೋ.

**ತುಡುಗುತೀನಿ** (ನಾ). ಕದ್ದ ತಿನಿಸು : ಅಡಕವಿಲ್ಲದ ಹೆಣ್ಣ ನಡತೆ ತಪ್ಪಿದ ಹೆಣ್ಣ ತುಡುಗುತೀನಿಯ ತಿಂಬ ಹೆಣ್ಣ (ಪೂಜ್ಯಕ. ೮-೪೦).

[ ತುಡುಗು + ತೀನಿ (<ತಿನ್ನಿ) ]

**ತುಡುಗುನಾಯ್** (ನಾ). ಕಳ್ಳತನ ಮಾಡುವ ನಾಯಿ : ಒಡೆಯರಿಲ್ಲದ ಮನೆಯ ಹೊಕ್ಕು ತುಡುಗುನಾಯ್ ತುಡುಗೊಳಲು ವೀರವೆ (ಕೌಶಿಕಾ. ೦೦-೬೯). 'ತುಡುಗುಣಿನಾಯ್' ಪರಾ. [ ತುಡುಗು + ನಾಯ್ ]

**ತುಡುಗುಪಶು** (ನಾ). = ತಂಡುಗಣಿದನ : ಸಡಿಲು ಬಟ್ಟಡೆ ಮನಂ ಮನುಜನಾ ಮೂಜಗದೆ ತುಡುಗುಪಶುವಿನ ಕೊರಳ ಗುದ್ದಿಯಂತೆಳದಾಡಿ ಕೆಡಿಸುವದು (ಮಲ್ಲಿಕ. ೦೩-೯). [ತುಡುಗು + ಪಶು]

**ತುಡುಗುಮೇಯಿಸು** (ಕ್ರಿ). ಕದ್ದು ಮೇಯಿಸು : ಊರ ತುಂಟ ತರುಣರು ತಮ್ಮ ದನಕರುಗಳನ್ನು ಇನ್ನೊಬ್ಬರ ಬಣಬೆಗೆ ನೂಕಿ ತುಡುಗುಮೇಯಿಸಲು ಮರೆಯಲಿಲ್ಲ (ಜಯಂತ. ೨೬೩). [ತುಡುಗು + ಮೇಯಿಸು]

**ತುಡುಗುವ್ಯಾಪಾರ** (ನಾ). ಕಳ್ಳವ್ಯಾಪಾರ : ಅರ್ಥದಾಸೆಗಾಗಿ ಬಡ್ಡಿಯ ತೆಗೆದುಕೊಂಡು ಬಡವರ ಬಂಧನಕಿಕ್ಕಿ ತುಡುಗುವ್ಯಾಪಾರವ ಮಾಡಿ (ವಚಸಂ. ೩೨೨-೦೦೦). [ತುಡುಗು + ವ್ಯಾಪಾರ]

**ತುಡುಗೆ** 'ತೊಡಂಗೆ' ನೋ.

**ತುಡುಗೊಳ್** (ಕ್ರಿ). ಕಳ್ಳತನ ಮಾಡು : ಒಡೆಯರಿಲ್ಲದ ಮನೆಯ ಹೊಕ್ಕು ತುಡುಗುನಾಯ್ ತುಡುಗೊಳಲು ವೀರವೆ (ಕೌಶಿಕಾ. ೦೦-೬೯).

[ <ತುಡುಗು + ಕೊಳ್$_1$ ]

**ತುಡುಜೊಡರ್** (ನಾ). ಹತ್ತಿಸಿರುವ ಸೊಡರು ; ಉರಿಯುತ್ತಿರುವ ದೀಪ : ತುಡುಜೊಡರಜುಗೆಯುಯಿಂಬಿವು ಪಡೆಯುವು ಬಿಂದುವನುದಂತ ವೃತ್ತಿಯನಾಳ್ದುಂ (ಶಮದ. ೧೬೦). [ತುಡು$_1$ (<ತೊಡು$_1$)+ಸೊಡರ್]

**ತುಡುತಿನ್** (ಕ್ರಿ). ಕದ್ದು ತಿನ್ನು : ಬಡದ ಕಳವಿಂದ ಲೋಗರ ಮನೆಗಳಂ ಪೊಕ್ಕು ತುಡು[ಪಾಠಾಂ. ಡಿ] ತಿಂದವನ ಭೋಜನಕ್ಕೆ ಮೃಷ್ಟಾನ್ನವಮಾದೊಡೆ ಕೆಲಬಲಂಗಳಂ ನೋಡುವನ (ಪ್ರಮಿಥಾ. ೬-೫೩); ತುಡುತಿಂದವಳಿವಳೆನುತ ದೂಟಿಕ್ಕುವರು (ಕೃಷ್ಣಗೋ. ೨-೫); ಕೆನೆಕೆನೆವೊಸರನು ದಿನ ತುಡುತಿಂಬನು (ಪ್ರಸಭಾ. ೦೭-೨೦). [ < ತುಡುಗು + ತಿನ್ ]

**ತುಡುತಿನಿ** (ಗು). ಕದ್ದು ತಿನ್ನುವ : ಯಾವನ ಭಟರು ತುಡುತಿನಿ ನಾಯು ಬಡಿವುದಕೆ ಕೋಟಿಮಡಿಯೆನೆ ಬಡಿವರು (ವೀಶೈಪು. ೭-೦೩-೪೭).

[ <ತುಡುಗು + – ತಿನ್ನಿ ]

**ತುಡುವು** (ನಾ). ೧. ದೋಣಿ, ಹಡಗು ಮೊದಲಾದುವನ್ನು ನಡೆಸಲು ಉಪಯೋಗಿಸುವ ಹುಟ್ಟು : (ಕ್ರಿ). ೨. ಮರದ ಸವುಟು : (ಕ್ರಿ).

[ ದೇ.ಶ ತಮಿ. ತುಟುಪ್ಪು ; ಮಲ. ತುಡುಪ್ಪು ]

**ತುಡುಬು** 'ತಂಡಂವಂು' ನೋ.

**ತುಡುಬೆ**, ತಂಡುವೆ (ನಾ). ಒಂದು ಬಗೆಯ ಜೇನುಹುಳು : ನಿನ್ನ ಈ ರೂಪವು ಹೆಜ್ಜೇನು ಕಣ್ಣಿಗೆ ದನಿ ತುಡುಬೆಯ ಜೇನು ಕಿವಿಗೆ (ಚಂದ್ರವೀ. ೧೬೪-೯೩); ಮಲೆನಾಡಿನಲ್ಲಿ ತುಡುಬೇಯು ಜೇನುತುಪ್ಪ ನನಗೆಂದು ತಾಯಿ ಕಳುಹೀದ (ಹಳ್ಳಿಯ. ೯೬). **ತುಡುವೆ** : ಅವಳು ಕಚ್ಚಿಸಿಕೊಂಡೂ ಹೆದರದೆ ಹುತ್ತದಲ್ಲಿದ್ದ ತುಡುವೆ ಜೇನನ್ನು ಕಿತ್ತುಕೊಟ್ಟಿದ್ದಳು (ಮಳಿಮ. ೧೬೬); ದುಂಬಿ, ಹೆಸುರುದುಂಬಿ, ತುಡುವೆ, ತೊರಿಗ (ನಮ್ಮನು. ೨೪೦). [ ? ]

**ತುಡುವು**, ತುಡಂಬು (ನಾ). ಒಂದು ಬಗೆಯ ವಾದ್ಯ : ಗಿಡಬಿಡ ನುಡಿಯಲೊದಚಿ ಕಾಳೆ ರಣಭೇರಿ ಬಿಡದೆ ವೊಳಗೆ ತುಡುವುಗಳ ಗಡಣದ ಗರ್ಜಿತ ಮುಸಗೆ ನಿಂದನು ರಾಮ ಪಡೆಗಿದಿರಾಗಿ (ಕುಂರಾಸಾಂ. ೪೩-೩೯) : ಢಕ್ಕೆ ನಾಟ್ಯಾನಕ ಚಂಪೆ ಕಿಂಕಿಣಿ ಡೌಡೆ ಕುಕ್ಕುರು ತುಡುವು ರಿಂಚೆಯುವ . . . ಕೇಳಿಸಿದರು (ಭರಕ. ೦೨-೪೦) : ಎಲ್ಲಿ ನೋಡಲು ವಾದ್ಯಗಳ ಘಲ್ಲಣೆ ತುಡುವುಗಳಬ್ಬರ ಮೊಳಗಿದುವಲ್ಲಲ್ಲಿ (ಕಂನವಿ. ೦೬-೪೩) : ತುಡುಂವುಗಳ್ ದುಂದುಭಿಯು ತೂರ್ಯತ್ರಯಂಗಳಿಂದ್ಯತಂದು (ಪರಕು. ೮-೨೧). **ತುಡುಬು** : ತುಡುಬು ಬಡಿಯದೆ ದನಿಯ ಕೊಡುವುದೇನೊ (ದಾಸಪ. ೬). [ ದೇ.॥ ತಮಿ. ತುಟುಮ್ಮೈ ; ತೆಲು. ತುಡುಮು ]

**ತುಡುರು** 'ತೊಡರ್$_1$' ನೋ.

**ತುಡುವೆ** 'ತುಡುಬೆ' ನೋ.

**ತುಡುವೊಗು** (ಕ್ರಿ). ತುಡುಂಗಿನಿಂದ ಹೊಗು ; ಕಳ್ಳತನದಿಂದ ಪ್ರವೇಶಿಸು : ಕೊಂಕಣದಂತೆಯಲ್ಲಿ ತುಡುವೊಕ್ಕು ತುರುಂಕರ ನೂಂಕಿ . . . ನೀನವರಶಂಕರನಂತೆಡೆಗೊಂಡೆ ಮಾಧವಾ (ಗಿರಿವಿಂ. ೫೨-೬).

[ <ತುಡುಗು + ಪೊಗು (<ಪುಗು)]

**ತುಡುಸೆಂಡು** (ನಾ). ಹಿಡಿದುಕೊಳ್ಳುವ ಚೆಂಡು : ತುಡುಸೆಂಡೆಂದು ಮಾರ್ತಂಡಮಂಡಳಕ್ಕೆ ಶುಂಡಾದಂಡಮನೆತ್ತಿ . . . ಆಕಾಶಮಂ ಬೆರಂಟುವುದು (ಪುಷ್ಪದಂತ. ೬-೫೦ ವ). [ < ತುಡುಂಕು$_1$ + ಸೆಂಡು ]

**ತುಡೆಚುಳ್ಳಿ** (ನಾ). ಒಂದು ಬಗೆಯ ಮರ ; "ರಬ್ಬರವೃಕ್ಷ" (ಶಂಡಿತ. ೨೨೬) : ಹೊಳೆಚುಳ್ಳಿ, ಮುಳ್ಳಚುಳ್ಳಿ, ಹರಿಕುಶ, ತುಡೆಚುಳ್ಳಿ (ಮೃಶಿಗಿ. ೨-೨೪). [ತುಡ್ಡೆ + ಚುಳ್ಳಿ$_1$]

**ತುಡೆಮದರಂಗಿ** (ನಾ). ಒಂದು ಬಗೆಯ ಗಿಡ ; "ವರಂಣ" (ಶಂಡಿತ. ೨೪೪) : ಆದಿರಾಜ . . . ತುಡೆಮದರಂಗಿ, ಹೊಡ್ಡೆಲೆನಗೆ (ಮೃಶಿಗಿ. ೨೩-೯೬೬). [ತುಡ್ಡೆ + ಮದರಂಗಿ]

**ತುಡ್ಡಿಲ** (ನಾ). (?) : ಅಮ್ಮಗೌಡ ಎಬ್ಬಾಗಿಲ ಸ್ಥಾನೀಕತನ ಮುಖ್ಯವಾಗಿ ನಡ್ಸಿ ತುಡ್ಡಿಲ ಸಮುಟಿ ತುಪ್ಪಿ ಏನಾದಡೆ ಅಲ್ಲಿ (ಎಕ. XIV, ತಿರುಮ. ೦೪೫-೩ ; 1090). [ ? ]

**ತುಣಗೆಣಸು** (ನಾ). ಒಂದು ಬಗೆಯ ಗೆಣಸು : ತೂನಗೆಣಸು, ಮುಡಿಗೆಣಸು, ನೂರೆಲೆಗೆಣಸು, ತುಣಗೆಣಸು, ದಂಡಾಲು (ಮೃಶಿಗಿ. ೩೦-೫೯೨).

[ ತುಣ್ಣ$_0$ + ಗೆಣಸು (<ಗೆಬಸು) ]

**ತುಣವ** (ನಾ). ಒಂದು ಬಗೆಯ ವಾದ್ಯ : ಪಟುಪಟಹತುಣವಭಂಭಾಮರ್ದಳೆ ಝಲ್ಲರಿಮುಕುಂದತಾಳಕಾಹಳಶಂಖವಂಶವೀಣಾಸ್ವರಂಗಳೆಸೆಯೆ (ವಡ್ಡಾರಾ. ೮೩-೨೮). [ < ಪ್ರಾ. ತುಣಯ ]

**ತುಣಿ** (ನಾ). ಒಂದು ಬಗೆಯ ಮರ; ನಂದಿಮರ. [ ಸಂ. ]

**ತುಣುಕು**, ತಂನಕು, ತುನುಕು (ನಾ). ತುಂಡು ; ಚೂರು ; ಖಂಡ ; ಶಕಲ : ರೊಟ್ಟಿಯ ತುಣುಕೊಂದು ಕೈಯೊಳಗಿದ್ದರೆ ನಾಯಿಗಳಾರೇಳು ಬಹವು (ಅಂಚಾಶ. ೦೯೬-೬೮); ಬೆರಳು ಮೂಡಿಸುವಾಗ ಅಲ್ಲಿ ಒಂದು ದಾರದ ತುಣುಕು ಬಿದ್ದಿರಬೇಕು (ಕೃಕಕ್ಕ. ೦೬೮) ; ಕನ್ನದ ಕಾಲದಲ್ಲಿ ನಾಯಿಯು ಬೊಗಳಬಾರದೆಂದು ಅದಕ್ಕೊಂದು ರೊಟ್ಟಿಯ ತುಣುಕನ್ನು ಚೆಲ್ಲಿ (ಯುಕ್ಷಪ್ರ. ೩೬). **ತುನಕು** : ಮುನಿಸಿನಿಂ ಪರಶುವಂ ಬೀಸಲ್ಕೆ ಬಾಹುಗಳ್ ತುನಕಾಗಿ ನೆಲಕುದರ್ದುವು (ಪರಕು. ೨೮-೪). **ತುನುಕು** : ಕನಕವನು ಪಂಚಾಳಗೆ ಕೊಡೆ ತುನುಕು ತುನುಕನು ಮಾಡಿ ಕಡಿದೇ ಜಿನಿಸುಜಿನಿಸಿನ ವಡವೆ ಮಾಡಿದ (ಜ್ಞಾನಸಿಂ. ೬-೮).

**ತುಣುಕುಬಿಣುಕು**=(ಹಾಡಿನಲ್ಲಿ)ಕೆಲವೊಂದು ಭಾಗ: ಭತ್ತಕುಟ್ಟುವಾಗ, ಹೆಣ್ಣುಮಕ್ಕಳು, ಕಲಹುಂಕಾರಸಹಿತವಾಗಿ ಗಮಕದ ತುಣುಕುಬಿಣುಕಿನಿಂದ ಹಿತವಾಗಿ ... ಪದ್ಯ ಹೇಳುತ್ತಿದ್ದರಂತೆ (ಮಸಾಹಿ. ೦೨). **ತುಣುಕುಮಿಣುಕು** = ಅತ್ಯಲ್ಪ ; ಅಲ್ಪಸ್ವಲ್ಪ : ಅವನ ವಿಷಯವಾಗಿ ಪ್ರಸಿದ್ಧವಾಡಿದ ತುಣುಕು ಮಿಣುಕು ಮಾಹಿತಿಯಿಂದಲೇ ನಮ್ಮ ದಾಹವನ್ನು ಹಿಂಗಿಸಿಕೊಳ್ಳಬೇಕಾಗುವುದು (ಪ್ರಬಂಧ. ೧೦೧).

[ ದೇ.॥ ತಮಿ. ತುಣುಕ್ಕು, ತುಣುಕ್ಕೈ, ತುಣಿಕ್ಕೈ ; ತೆಲು. ತುನುಕ, ತುನಕ, ತುನ್ಕ ; ನಾಯ್ಕಿ. ತುನ್ಕೆ ]

**ತುಣ್ಣೆ** 'ಶುಣ್ಣೆ' ನೋ.

**ತುಣ್ಣೆ**, ತುಣ್ಣೆ (ನಾ). ಗಂಡಸಿನ ಜನನೇಂದ್ರಿಯ ; ಶಿಶ್ನ : ಅವನ ಬಾಯಿಗೆ ಸುರಾಪಾನ ಕತ್ತೆ ತುಂಣೆ (ಸೌಇಇ. IX-ii, ೫೧೩-೫೫ ; 1521). **ತುಣ್ಣೆ** : ಕತ್ತೆ ತುಂಣೆಯ ತಾನು ತಂನ ಹೆಂಡತಿಯುಂ ತಾಯಿ ತಂದೆಯು ತಿಂದವರು (ಸೌಇಇ. IX-i, ೩೬೬-೨೩ ; 1226) : ಇದಕೆ ಅಣಿಪಿದವನು ಕತ್ತೆಯ ತುಂಣೆಯನು ಕಲುಪ್ಪನು ತಿಂದ ನಾಯಿಯದರ ಕಸಿಗೆ ಆಸೆ ಮಡಿದವ (ಮೃಅರಿ. ೦೯೩೦, ೨೩-೦೩ ; 1519).

[ದೇ. ॥ ತಮಿ. ಚುಣ್ಣಿ ; ಮಲ. ಕುಣ್ಣ, ಚುಣ್ಣಿ ; ತುಳು. ತುಣ್ಣೆ ; ತೆಲು. ಚುಲ್ಲಿ, ಚುಲ್ಲ]

**ತುಣ್ಣಣಿ** 'ತುಂತುಣಿ' ನೋ.

**ತುತಿ** (ನಾ). ಹೊಗಳಿಕೆ ; ಪ್ರಶಂಸೆ ; ಸ್ತೋತ್ರ : ಸ್ತುತಿ – ತುತಿ (ಕಮುದ. ೨೬೨ ಪ್ರಯೋ) : ಪುಷ್ಪಸರನ ರಾಣಿಗೆ ಮೆಯ್ಯೊಡವನುವೊಪ್ಪಿಸಿ ತುತಿಯ ಮಾಡಿದರು ( ಮೋಹತ. ೦೬-೪೩) ; ಮುರಹರನ ಸನಿಯದಲಿ ಪಾರ್ಥನು . . . ಉರುತರದ ತುತಿಯಿಂದ ಪೊಗಳುತ (ಕೋಗಯ. ೨೬-೪೦).

[ <ಸಂ. ಸ್ತುತಿ ]

**ತುತಿಗೆಯ್ಯು** (ಕ್ರಿ). = ತುತಿಸಂ : ತ್ರಿಣಯನ ಸಭಾಂಗಣದೊಳು ಭಕ್ತಿ ರಕ್ತಿಯಿಂ ತುತಿಗೆಯ್ಯುತ್ತಿಳ್ದಿಯುಂದ (ನಂದಿಮಾ. ೫-೩೬).

[ ತುತಿ + ಗೆಯ್ಯು (<ಕೆಯ್$_1$) ]

**ತುತಿಯಿಸು** 'ತುತಿಸು' ನೋ.

**ತುತಿಸು**, ತಂತಿಯಿಸಂ (ಕ್ರಿ). ಹೊಗಳು ; ಸ್ತೋತ್ರಮಾಡು ; ಪ್ರಶಂಸಿಸು : ತುತಿಸುವ ಪುಣ್ಯಪಾಠಕರೊಳೊಪ್ಪುತಂ (ನಂಶರ. ೩-೬೬) : ತ್ರಿಕರಣಂಗಳಿಂ ನಂಬಿ ದೃಢಭಕ್ತಿಯಿಂ ತಾಂ ತುತಿಸುತ (ಪದ್ಮರಾ. ೧೦-೬೪) ; ಮುನಿಪನ ಚರಣಗಳನು ತುತಿಸಿದನು (ತಂಪ್ರಸಾಂ. ೬-೪೭) ; ಬಗೆವಗೆಯೊಳ್ ತುತಿಸುತುಮಡಿಗೆಬಗಿದಂ (ರಾಮಾಶ್ವ. ೬೨-೦೪). **ತುತಿಯಿಸು** : ತುತಿಯಿಸಿ ಪೊಡೆವಟ್ಟು (ಶಂಕರಸಂ. ೨೬೨-೨೨) ; ದುರ್ಜನರಂ ದೂಷಿಸಿ ನೀತಿನಿಪುಣರೆನಿಸುವ ಸಜ್ಜನರಂ ಪ್ರೀತಿ ಮಿಗಲು ತುತಿಯಿಸಿ (ಜಯುಕಾ. ೧-೨೩).

[ ತುತಿ + – ಇಸು$_3$ ]

**ತುತೂರಿ** 'ತಿತ್ತಿರಿ$_1$' ನೋ.

**ತುತ್ತ**, ತಂತ್ತ್ರ, ತುತ್ತು$_3$, ತಂತ್ತೆ (ನಾ). ಒಂದು ಬಗೆಯ ರಾಸಾಯನಿಕ ವಸ್ತು ; ಮೈಲುತುತ್ತ ; ಗಂಧಕಾಮ್ಲ : "ತುತ್ಥಂ–ಪಾಷಾಣಭೇದಂ" (ಕಾಕಕ್ಕ. ೨೦೨) : "ಮಯೂರಗ್ರೀವಃ–ತುತ್ಥ" (ಒಷಧಿ. ೦೨೨) : ತುತ್ತವನ್ನು ಕರಿಹುರಳಿಯ ರಸದಿಂದ ಕುಡಿಯಲು ಗರ್ಭನಾಶ (ವಿವೈವಿ. ೦೦೯). **ತುತ್ತ್ರ** : "ಕೂಪಾರೋದಿತಂ ತುತ್ತ್ರಿ [ಪಾಷಾಂ. ತಿ]" (ಮುಂಗರಾ ೪೩-೪೨). **ತುತ್ತು$_3$** : (೬). **ತುತ್ತೆ** : (೬). [ < ಸಂ. ತುತ್ಥ ]

**ತುತ್ತರಾಟು** (ನಾ). ಅಭದ್ರವಾಗಿರುವುದು ; ಅಸ್ಥಿರವಾಗಿರುವುದು : ತಾನು ತುತ್ತರಾಟನ ಮೇಲೆ ಕೂತಿದ್ದ ಬಂಡೆಯಿಂದ ಉರುಳುವುದನ್ನು ಹೇಗೋ ತಡೆದುಕೊಂಡು (ಮಲೆಮ. ೩೦೨). [ ? ]

**ತುತ್ತಲ್** (ನಾ). ಪ್ರಾಕಾರ; ಸುತ್ತುಗೋಡೆ: ಬಟಲ್ದ ಮದಿಲಂ ಮಣ್ಗೋಡ ತುತ್ತಲ್ಗಳಿಟ್ಟೆಡೆಯಂ ಬಿಟ್ಟಬಿಡೇಗುಲಂಗಳೆಡೆಯಂ ಕಾದಿರ್ಪ ಪಾಣ್ಬರ್ಗಳುಂ (ಸೂಕ್ತಿಸು. ೮-೦೩೩). [ ←ತಮಿ. ಚುಱ್ಱು ]

**ತುತ್ತಾರಿ** ‘ ತಿತ್ತಿರಿ$_1$ ’ ನೋ.

**ತುತ್ತಿ$_1$** (ನಾ). ಒಂದು ಬಗೆಯ ಗಿಡ : "ತುತ್ತ–ತುತ್ತಿ, ತುರುವೆ" (ಓಷಧಿ. ೭೦); ಶ್ರೀಮುದ್ರೆಗಿಡ, ತುತ್ತಿ, ಕಿಸಗಿ, ತುರುಬೀಗಿಡ, ಗಿಡುತಿಂಗಿ (ಮೃಶಿಗಿ. ೦-೩). [ ದೇ.॥ ತಮಿ. ಮಲ. ತೆಲು. ತುತ್ತಿ ]

**ತುತ್ತಿ$_2$** ‘ ತಂತ್ರ ’ ನೋ.

**ತುತ್ತಿಕ್ಕು** (ಕ್ರಿ). ಆಹಾರವನ್ನು ಕೊಡು ; ಅನ್ನ ಹಾಕು : ಜೈನರ ತತಿಯ ನೀರ್ಕೈದುವಾಸರಂ ತುತ್ತಿಕ್ಕದರಿದಿಱಿದೆ (ಮದೇಪು. ೨೫-೬). [ ತುತ್ತು$_2$ + ಇಕ್ಕು ]

**ತುತ್ತಿಡು** (ಕ್ರಿ). ೧. ತುತ್ತುಮಾಡಿ ನುಂಗು; ಕಬಳಿಸು; ತಿನ್ನು; ಉಣ್ಣು : ತುತ್ತಿಡದ ಮುನ್ನ ಪ್ರಾಣ್ಯಂಗಮಂ ಕಂಡೊಡಾ ಅಶನಮಂ ಬಿಟ್ಟು ಪ:ತ್ತೊಂ ದಶನವಮನುಣ್ಗೆ (ಶಸಾರ. ೩೩೩) ; ಭವಿಯ ಮನೆಯ:ಲ್ಲಿ ಹೊಕ್ಕು ತುತ್ತಿಡುವ ನರಕಿ ಜೀವಿಗಳಿಗೊಲಿವನೇ ನಮ್ಮ ಶಂಭುಜಕ್ಕೇಶ್ವರ (ಗಣಭಾ. ೦೬೦-೫). ೨. ತಂತು ನೀಡು ; ಉಣಿಸು : ಹರಿಸರಿದು ತು [ ಪಾಠಾಂ. ಸು ] ತ್ತಿಟ್ಟು ಕುಣಿವುತಿರ್ಪರ್ ಕೆಲರು (ಬಸರ. ೭-೦೭೦) ; ದಾನಂ ದ್ರವ್ಯವೆಂಬ ಬೀಜವ ನಾತ್ಮಗಂ ತುತ್ತಿಡಲುವಾ ಧರ್ಮವೆಂಬ ಬೆಳೆಯುಂಬುದಕೆ ಸತ್ತು ಮಗುಳ್ದುಂ ದೇಹವೆತ್ತಿ ಬಂದು (ಪ್ರಭುಪು. ೭-೨೦೪). ೩.(ಆಲಂ) ನಾಶಮಾಡು ; ಪರಾಜಯಗೊಳಿಸು ; ಅಡಗಿಸು : ಅವಷ್ಟಂಭದಿಂ ತೂಗಿದ ಬಾಳ್...ಉಗ್ಗಡದ ಬಿರುದರಂ ತೂಗಿ ತುತ್ತಿಟ್ಟುದೇಂ (ಎಕ. VI, ತರೀಕೆ. ೪೫-೪೦: 1190). [ ತುತ್ತು$_2$ + ಇಡು$_1$ ]

**ತುತ್ತಿದ** (ನಾ). ಜಾಣ ; ಪ್ರೌಢ : "ಬಿತ್ತಗಂ=ತುತ್ತಿದಂ" (ಶಮದ. ಪರಿ. ೨): " ಬಿತ್ತಗನೆನಲ್ ತುತ್ತಿದಂ ಪ್ರೌಢನುಂ " (ಕಬ್ಬಿಗ. ೮೦). [ ? ]

**ತುತ್ತಿಸು** (ಕ್ರಿ). ೧. ನುಂಗು ; ಕಬಳಿಸು : ಬಳಿಕ ತುತ್ತಿಸಿದ ರಾಹು ತೊಲಗಿದ ಶಶಿಪೊಲಿರ್ದನವನು (ಜೈಮಿಭಾ. ೨೮-೩೪). ೨. ಊಟ ಮಾಡಿಸು ; ಉಣಿಸು ; ತಿನ್ನಿಸು : ಕಜ್ಜಾಯ ತುಪ್ಪ ಸಕ್ಕರೆಯ ಕೊಡ್ಜೆಯರಿಗೆ ಮೆಲ್ಲಿಸುತೆ ಮಿಕ್ಕುದ ಬಾಗಿಲಜ್ಜಿಯರಿಗೆ ತುತ್ತಿಸಿದ (ಮೋಹತ. ೦೮-೦೯) : ಮಾರೀಚನಂ ಮಾರಿಗೆ ತುತ್ತಿಸಿ (ರಾಮಾಶ್ವ. ೧೨೦-೨). [ ತುತ್ತು$_1$ + – ಇಸು$_3$ ]

**ತುತ್ತು$_1$** (ಕ್ರಿ). ೧. ತಿನ್ನು ; ನುಂಗು ; ಕಬಳಿಸು : " ತುತ್ತು–ಕಬಲನೇ " (ಶಮವಾ) ; ಅಂತು ತನ್ನ ತಂದ ಬಂಡಿಯ ಕೂಟಿಲ್ಲಮಂ ಪತ್ತೆಂಟು ತುತ್ತಿನೊಳೆ ಸಮೆಯೆ ತುತ್ತುವುದಂ ಕಂಡು (ಶಂಪಭಾ. ೩-೨೯ವ) ; ಪಗೆಯ ಬೆನ್ನಂ ಪತ್ತುವೆನೊ ದಿಶಾಗಜಂಗಳಂ ತುತ್ತುವೆನೋ (ಗದಾಯು. ೬-೦೮) : ತವೆ ದಿಕ್ಪುಂಡಾಲಮಂ ತುತ್ತುವ ದಶದಿಶೆಯಂ ಸುತ್ತುವಾಕಾಶಮಂ ಮುತ್ತುವ ... ಅಗುರ್ವಂ ತೋಱುದಪ್ಪಂ (ಜಗವಿ. ೦೩-೩೮) : ಕೋಟಿ ಮುಖದಲಿ ನೀಡಿದೆಲ್ಲವನು ತುಂಬಿ ತುತ್ತಿದ ಹೊಟ್ಟೆ (ಪ್ರಭುಲೀ. ೨೩-೨೭). ೨. (ಆಲಂ) ನಾಶಮಾಡು : ಅಡಗಿಸು ; ಪರಾಜಯಗೊಳಿಸು : ಧಾಳಿಯಿಟ್ಟಂ ಪರಿಯಿಟ್ಟಂ ಮುತ್ತಿದಂ ತೋಱ್ಟುಳಿದುಳಿದನಡಂಗೊತ್ತಿದಂ ತುತ್ತಿದಂ (ಎಕ. VII, ಶಿಕಾರಿ. ೦೦೦-೧೨ ; ಸು. 1070) ; ಧುರದೊಳ್ ಬಂದಿದಿರೊಡ್ಡೆ ಕಂಸಹರನೊಡ್ಡಂ ತುತ್ತುವೆಂ ತುತ್ತುವೆಂ (ಜಗವಿ. ೭-೩೭) : ಹತ್ತಿದರಂದು ಕಾಲವರಾ ದುರ್ಗವ ತುತ್ತುವಂತೇನ ಬಣ್ಣಿಪೆನು (ಕುರಾಸಾಂ. ೩೯-೦೫) : ಮೃಡಲೋಚನಂಗಳಿಂದೊಗೆದ ಹರುಷಾಶ್ರುಜಲಂ...ತು [ಪಾಠಾಂ. ಕು]ತ್ತಿದುದು ಸಕಲಲೋಕಂಗಳಂ ತಿಂಗಳಂ ಪೊತ್ತವಂ ಬೆಟಗಾಗಲು (ಚಬಸಪು. ೪೬-೨೯); ಸಾವಿನ ನೋವಿಗೆ ಕಲಮಲವದ್ದು ನೆಲವನ್ನೆಲ್ಲಾ ತುತ್ತುವೆನೆಂದು ಗದರುತ್ತಿಹುದು (ಗರಿ. ೬೧-೧೦). [ದೇ. ॥ ತಮಿ. ತುಱ್ಱು]

**ತುತ್ತು$_2$** (ನಾ). ೧. ಒಂದಂ ಸಲಕ್ಕೆ ನುಂಗುವಷ್ಟು ಆಹಾರ ; ಕವಳ ; ಗ್ರಾಸ : "ಗ್ರಾಸಂ ಕಬಳಂ ತುತ್ತು" (ವಸ್ತುಕೋ. ೯೩-೮) ; "ಕಬಳಮಾಹುತಿಯೆನಲ್ ತುತ್ತೆನಿಕ್ಕುಂ" (ಮಂಗರಾ. ೬೫-೭) ; ತನ್ನ ಕೆಯ್ಯ ತುತ್ತನರಶಂ ವಿಷಮಿಶ್ರಮೆಂದಱಿಯದೆ ಕೊಟ್ಟಂ (ವಡ್ಡಾರಾ. ೦೯೦-೨) ; ಅಂತು ತನ್ನ ತಂದ ಬಂಡಿಯ ಕೂಟಿಲ್ಲಮಂ ಪತ್ತೆಂಟು ತುತ್ತಿನೊಳೆ ಸಮೆಯೆ ತುತ್ತುವುದಂ ಕಂಡು (ಶಂಪಭಾ. ೩-೨೯ ವ) ; ತುತ್ತಿಗೊಮ್ಮೆ ಶಿವಶರಣೆನುತ್ತಿರಬೇಕು (ಬಸವ. ೭೮೬) ; ಚಿತ್ರವಲರಿಸಿ ತೋರ ತೋರದ ತುತ್ತುಗಳ ನೊಡನೊಡನೆ ತಾ ಮಾಡುತ್ತ (ಬಸಪು. ೮-೦೫) ; ಹಾಗೆಯೇ ಮಲಗಬಾರದು...ಎರಡು ತುತ್ತಾದರೂ ಉಂಡು ಬಾ (ತ್ಯಾಗಮು.೯೦); ಕೈಗೆ ಬಂದ ತುತ್ತು ಬಾಯಿಗಿಲ್ಲ (ಗಾದೆ). ೨. ಆಹಾರ; ಊಟ : ಹೊತ್ತು ಹೋಗದ ಮುನ್ನ ತನುವಿನ ತುತ್ತ ನೀಡುವೆ ಗುರುವಿಗೆ (ಪ್ರಭುಲೀ. ೨೩-೪೭); ಹೊತ್ತಿ ಹೋಗಿವ ಪರಾಶ್ರಯಾಗ್ನಿಯ ತುತ್ತು ಪದ್ಮವ್ಯೂಹ (ಕುವ್ಯಾದ್ರೌ. ೪-೪೫) : ಜನಕ್ಕೆ ದುಡಿಮೆಯೂ ಇದೆ. ಹಾಗೇ ತುತ್ತು, ಅಭಿವೃದ್ಧಿಗೆ ಅವಕಾಶ ಎರಡೂ ಬೇಕಾದಷ್ಟಿದೆ (ಮುನಿಮಾ. ೨೩). ೩. ಸಾಧ್ಯವಾದುದಂ ; ದಕ್ಕುವ ವಸ್ತು : ಅಣಕವಾಡು ಎಲ್ಲರ ತುತ್ತು ಅಲ್ಲ ; ಸಾಮಾನ್ಯರ ತುತ್ತೂ ಅಲ್ಲ (ನಿರಾಳ. ೧೨ ಮುನ್ನುಡಿ). ೪. (ಆಲಂ) ಅನುಭವ: ದುಃಖ, ನಿರಾಶೆ, ಸೋಲು, ಕಷ್ಟ-ಇವು ನಮ್ಮ ಬಾಳಿನ ನಿತ್ಯದ ತುತ್ತುಗಳಾದವು (ಮುಂಗಾಮು. ೦೭).

**ತುತ್ತಾಗು** = ೧. ಆಹಾರವಾಗು ; ಬಲಿಯಾಗು : ಇಲ್ಲಿ ಕಾಳೋರಗಂಗಳ್ಗೆ ತುತ್ತಾದಂ (ರಾಮಾಶ್ವ. ೦೦೬. ೨೪). ೨. ಈಡಾಗು ; ವಶವಾಗು ; ಅಧೀನವಾಗು : 'ರಾಮಾನುಜನ್' ಅಲ್ಲಿಯೇ ಕ್ಷಯರೋಗಕ್ಕೆ ತುತ್ತಾದುದರಿಂದ, ಆತನ ಸೇವೆ ... ಸಹನಿಯು ಪಾಲಿಗೆ ಬಿತ್ತು (ಸಸ್ಯಕ. ೦೩೦). **ತುತ್ತಿನ ಚೀಲ**=ಹೊಟ್ಟೆ; ಉದರ: ಸಾಲವನು ಮಾಡುವದು ಹೇಲ ತಾ ಬಳಿಸುವದು ಕಾಲಿನ ಕೆಳಗೆ ಹಾಕುವುದು ತುತ್ತಿನ ಚೀಲ ನೋಡಯ್ಯ (ಸರ್ವಜ್ಞ. ೦೯೮೨); ಬರಿದೋ ಬರಿದು ಬಡವರ ಬಗ್ಗರ ತುತ್ತಿನ ಚೀಲ (ಗರಿ. ೬೦-೦೭) : ತೋಟದಲ್ಲಿ ದುಡಿದು ಸಿಗುವ ಕೂಲಿಯಿಂದ ಈ ದಂಪತಿಗಳು ತಮ್ಮ ತುತ್ತಿನ ಚೀಲಗಳನ್ನು ತುಂಬಿಸಿಕೊಳ್ಳುತ್ತಿದ್ದರು (ನವನೀ. ೨೦). **ತುತ್ತು ಹಾಕು**=೧. ಊಟಕ್ಕೆ ಹಾಕು. ೨. ತುತ್ತು ಮಾಡಿ ಕೈಗೆ ಹಾಕು : ಮದುಮಕ್ಕಳಾಟವೆಂದು ಅಡಿಕೆ ಹಿಡಿಯುವುದು, ತುತ್ತು ಹಾಕುವುದು ಮುಂತಾದ ವಿನೋದ ಪ್ರಸಂಗಗಳು (ಸ್ತ್ರೀಗೀ. ೨೫). [ <ತುತ್ತು$_1$./ತಮಿ. ತುಱ್ಱು]

**ತುತ್ತು$_3$** ‘ತ್ರುತ್ತ’ ನೋ.

**ತುತ್ತುಗೂಳ್** (ನಾ). ನುಂಗುವ ಅನ್ನ ; ತಿನ್ನುವ ಆಹಾರ : ನಿನ್ನ ಮೆಯ್ಯಿದನೆಂತು ವೇಳೆ ಕಾಂತಾರರಾಕ್ಷಸಿಗೆ ತುತ್ತುಗೂಳ್ ಕೊಡಲಿ ? (ಶ್ರೀರಾಮಾ. ೭೯-೫೦). [ತುತ್ತು$_1$ + ಕೂಳ್ (<ಕೂಟ್$_1$)]

**ತುತ್ತುಗೆಯ್ಯು** (ಕ್ರಿ). ಊಟಮಾಡು ; ಆಹಾರವನ್ನು ಸ್ವೀಕರಿಸು ; ಭುಂಜಿಸು : ಸವಿಯೂಟಕ್ಕೆ ಮನವಿಟ್ಟು ತುತ್ತುಗೆಯ್ಯುತ್ತಿರ್ದ ಲೋಚನ ನಿಮಿಲನಾಗಿ (ವೀಕೃಪು. ೩-೪-೨೦). [ತುತ್ತು$_2$ + ಗೆಯ್ಯು (<ಕೆಯ್$_1$)]

**ತುತ್ತುಗೊಳ್, ತುತ್ತುಗೊಳ್ಳು** (ಕ್ರಿ). ೧. =ತುತ್ತುಗೆಯ್ಯು : ತುತ್ತುಗೊಂಬುದೆನುತ್ತ ಕೈವೀಸಿದಳು ಕಿಲಬಲಕೆ (ನಿಘಾಗ. ೫-೬-೩೨) ; ಪಣ್ಣಿಡಿದ ಬಿತ್ತರದ ಪೊಲಗಳನ್ ರೌದ್ರದಂಷ್ಟ್ರಂಗಳಿನ್ ತುತ್ತುಗೊಂಡಬ್ಬಾಡೆ (ಬಿಭ್ರಪ್ರ.೩೦-೪೨೫). ೨. (ಆಲಂ)ನಾಶಮಾಡು; ಧ್ವಂಸಗೊಳಿಸು: ಸಾಡವಡೆಯಂ ತುತ್ತುಗೊಂಬ ಲಂಬೋದರಿಯಸುಳಿದಸುರಿಯರ ಕೃತ್ಯವ ನೋಡಿ (ಜೈಮಿಭಾ. ೦೭-೪೪). **ತುತ್ತುಗೊಳ್ಳು** : ೨. ತುತ್ತಿನ ಚೀಲದಲ್ಲಿ ವಿಶ್ವವನ್ನೇ ತುತ್ತುಗೊಳ್ಳಲು ಹೊಂಚುತ್ತಿರುವ ಬಡಬಗ್ಗರ ಹಸಿವೆಯ ಭೀಷಣ ಗರ್ಜನೆಯಿದೆ (ಸಮಾಲೋ. ೨೮). [ತುತ್ತು$_2$ + ಕೊಳ್$_1$]

**ತುತ್ತುಗೊಳ್ಳು** 'ತುತ್ತುಗೊಳ್' ನೋ.

**ತುತ್ತುರಿ** 'ತಿತ್ತಿರಿ$_1$' ನೋ.

**ತುತ್ತುಱಂ** (ಅ). ಅತಿಶಯಂವಾಗಿ ; ವಿಶೇಷವಾಗಿ : ತೆಱೆಯೆ ವಿಮಾನವರ್ಗಧರರೀ ಪ್ರಕರಂ ನವಸಾರಸೌರಭಂ ಪೊಱಮಡೆ ಚೀನದೊಳ್ಗುಡಿಗಳಗ್ರವಿಯತ್ತಳದಲ್ಲಿ ತುತ್ತುಱಂದುಱುಗೆ (ಮಹಾನೇ. ೨-೪೭). [<ತುಱುಗು$_1$]

**ತುತ್ತೂರಿ** 'ತಿತ್ತಿರಿ$_1$' ನೋ.

**ತುತ್ತೆ** 'ತುತ್ತ' ನೋ.

**ತುತ್ಥ** (ನಾ). ೧. ಮೈಲುತುತ್ತ ; ಗಂಧಕಾಮ್ಲ : ತಾಳಕ, ತುತ್ಥ ... ಇವಿಷ್ಟನು ಸಮಾಂಶವಾಗಿ ಎಮ್ಮೆಯ ಹಾಲಿಂದ ಮರ್ದಿಸಿ ಏಳುದಿನ ಮುಖಕ್ಕೆ ಲೇಪವಂ ಮಾಡಲು ಮುಖದ ಕಪ್ಪು ತಿಳಿವದು (ವೈದ್ಯಶಾ. II, ೦೯೭). ೨. ಕಲ್ಲು ; ಶಿಲೆ. [ಸಂ.]

**ತುತ್ಥೆ** (ನಾ). ೧. ನೀಲಿಗಿಡ. ೨. ಸಣ್ಣ ಏಲಕ್ಕಿ. [ಸಂ. ತುತ್ಥಾ]

**ತುಕ್ಕ** (ನಾ).= ತುತ್ಥ೧: ನೆಲದೊಳಗೆ ಸಂಬಳಕಾರ, ತುತ್ಕ...ಮುಂತಾದ ವಿಷರೂಪ ಕ್ಷಾರಾದಿಗಳಿರುತ್ತವೆ (ಮುಂಬಯಿ. ೫-೦೫೬) : ಉಪ್ಪು, ಸೈಂಧವ ಲವಣ, ಸೋರುಪ್ಪು, ನವಸಾಗರ, ತುತ್ಕ ಇವೆಲ್ಲ ಲವಣಜಾತಿಗಳಿವೆ (ಮುಂಬಯಿ. ೬-೩೭).
[←ಮರಾ. ತುತಿಯಾ ; ಹಿಂ. ತೂತಿಯಾ./ಸಂ. ತುತ್ಥಕ]

**ತುದಾ** (ಅ). ಅಥವಾ ; ಇಲ್ಲವೆ : ಎರಡು ಗಳಿಗೆ ತುದಾ ಮೂರು ಗಳಿಗೆ ಇವರನ್ನ ನಾ ತಡೀಶೀನಿ (ಜಿಶರಾ. ೪೬೦). [?]

**ತುದಿ** (ನಾ). ೧. ಅಗ್ರ ; ಮೇಲ್ಭಾಗ ; ಶಿಖರ : "ಶಿಖರಮನಲಗ್ರಮೆನೆ ತುದಿಯೆನಿಕ್ಕುಂ" (ಮಂಗರಾ.೩೨-೨) : ಗಿಡುಗಂ ತಂದತ್ತೊ ಮೇಣ್ ಪೆರ್ವರನ ತುದಿಯಿನೇಱೆ ಬಿರ್ದುದೊ (ಕಾದಂಪೂ. ೨೦೦) : ಕೊರ್ಬಿ ಬೆಳೆದ ಪೆರ್ಬಿದಿರ ತುದಿ ತಾಗಿ ತಱಿದ ಕಿಱುಮುಗಿಲ್ಗಳಿಂದವನೀತಳಕ್ಕಾಲಿಕಲ್ಲೊಕ್ಕು ಚೆಲ್ಲಿದಂತಿರ್ಪ ಮುಕ್ತಾಫಲಗಳಂ ವಂಶತಂಡುಲಂ ಗೆತ್ತು (ಗಿರಿಕ. ೧-೦೨೮ ವ): ನಡುಗುವ ತನುವಲ್ಲಿಯ ತುದಿಯಿಂ ಪೊಡೆಗೊಡನಾದಿರ್ದಲರಂದದದಲಿ (ಶಂಸವಿ. ೦೦-೩೭). ೨. ಕಡೆ ; ಅಂತ್ಯ ; ಕೊನೆ : "ಅಂತ್ಯಮಂತಿಮಮಗ್ರ್ಯಮಗ್ರಿಮಂ ತುದಿಯುಕ್ಕು" (ಮಂಗರಾ. ೦೩೫-೩೭) : ನಿಲಿಸಿ ಲಘುಪದಮನದನಗ್ಗಲಿಸಿರೆ ಮತ್ತೊತ್ತಿ ಬರ್ಪ ಪದವಂ ತುದಿಯೊಳ್ ನಿಲೆ...ಅಸುಖಕರಂ (ಕವಿರಾ.೨-೬) : ಕೈದವವಿಲ್ಲದೆ ನಲ್ಮೆಯಿಂ ನಾಲಗೆಯ ತುದಿಗೆ ತಂದು ನುಡಿದಳ್ (ಶಂಪಥಾ. ೧೦-೪೫ ವ) ; ಸಮ್ಯಕ್ತ್ವಮಾರ್ಗಮಂ...ಕೈಕೊಳ್ ನಿನಗದು ತುದಿಯೊಳ್ ಮಾಡುಗುಮನಂತಮುಕ್ತಿಶ್ರೀಯಂ (ಸುಕುಮಾ. ೫-೩೮) ; ಹುಬ್ಬುಗಳನುಱೆ ಬಿಗಿದೌಡನೊಡೆಯೊತ್ತಿ ಬೆರಳ ತುದಿಯಱಿ ಬೊಬ್ಬಿಱಿದು ಹರಿಶರಕೆ ಕೈನೀಡಿದನು (ಕುಮಾವ್ಯಾದ್ರೋ. ೦೯-೧೩); ತುದಿಯಲ್ಲಿ ಕಾಣುವುದು ಮದುವೆ ಗುಣ (ಗಾದೆ). ೩. ಕೊನೆಯ ಮಟ್ಟ ; ಪರಾಕಾಷ್ಠೆ : ಅಂತು ಕೃತವವಿಲ್ಲದೆ ವಿಧೇಯತ್ವದ ತುದಿಯನೆಯ್ದೆ (ಶಾಂತಿಪು. ೦೦-೫೫ ವ). ೪. ಗುರಿ; ಉದ್ದೇಶ : ಕಜ್ಜದ ತುದಿಯನಱಿಯದೆ ನುಡಿವುದಿದು ನಿನಗೆ ಹಿರಿಯತನವೇ (ಬಸಪು. ೨೮-೩೪).

**ತುಟ್ಟ ತುದಿ; ತುತ್ತ ತುದಿ** (ದ್ವಿರುಕ್ತಿ)=೧. ಕೊಟ್ಟಕೊನೆ ; ಕಟ್ಟಕಡೆ : ಮಾರ್ಕೆಟಿನ ತುಟ್ಟ ತುದಿಗೆ ಬಂದರು (ಹೂಬಿಸಿ. ೩) ; ಅಂತರಿಕ್ಷದ ತುಟ್ಟ ತುದಿಗೆ ಕೂಡ ಹಾರಿ (ಜ್ಯೋತಿರ್ವಿ. ೪). ೨. ಬಹಳ ಎತ್ತರ : ಮರದ ತುತ್ತ ತುದಿಯೊಳಿರ್ದಟಲ್ಲ ಗುಂಡಿಗೆಯಂ ಕಂಡು (ಪದ್ಮರಾ. ೬೧-೦೨) : ತುತ್ತ ತುದಿಯ ಮೇಲೆ ನಿಂದು ನೋಡುವನ್ನಕ್ಕ ನಾನೆತ್ತ ಹೋದೆನೆಂದಱಿಯೆನಯ್ಯಾ (ಲಿಂಗವ. ೮೩-೯೫). ೩. ತೀರ ಕೊನೆ ; ಅಂತಿಮಾವಸ್ಥೆ : ಪರಿಭವದೊಂದು ತುತ್ತ ತುದಿ ಕೃಷ್ಣೆಯ ಬನ್ನದೊಳಾಗೆ (ಹಂಪಭಾ. ೮-೮೩): ಸಕಲೇಂದ್ರಿಯಂಗಳ ಸಂತೋಷದ ತುತ್ತತುದಿಯನೆಯ್ದಿಸುವುದು ಕಾಮವೆಂಬುದು ತಾತ್ಪರ್ಯಂ (ನೀತಿವಾ.೩-೦); ತುದಿ ಮೊದಲೆಂಬ ದಕಾರಕ್ಕುದಯಿಸುಗುಂ ದ್ವಿತ್ವವೃತ್ತಿಯಿಂದೆ ತಕಾರಂ ... ತುತ್ತತುದಿ, ಮೊತ್ತಮೊದಲ್ (ಶಮದ.೦೯೪ಪ್ರಯೋ). ೪. ಶ್ರೇಷ್ಠತೆ; ಸರ್ವೋಚ್ಚತೆ : ಆ ನೃಪನುದಾತ್ತಗುಣಗಣರ ತುತ್ತ ತುದಿಯೊಳನೂನಂ (ಶಾಂತಿಪು. ೧-೬೦). **ತುದಿಗೆ ಬರು** = ತುದಿಗೆಯ್ದು ೧: ಎಲ್ಲಾ ತುದಿಗೆ ಬಂತಲ್ಲ, ಇನ್ನೇನು? (ರೂಢಿ). **ತುದಿಗೆಯ್ದು** = ೧. ಕೊನೆಮುಟ್ಟು; ಸಮಾಪ್ತವಾಗು : ತುದಿಗೆಯ್ದ [ಪಾಠಾಂ. ಗೈದ] ದುದಂ ಫಲಮಿಲ್ಲದುದಂ...ಕಾರ್ಯಮನುದಾರಮತಿ ನೆಗಳ್ದಪನೇ (ಗದಾಯು. ೧೩-೦೨). ೨. ಅತ್ಯಧಿಕವಾಗು : ಭೀತಿಗದ್ಗದಕಂಠಂ ತುದಿಗೆಯ್ದೆ ಬಿನ್ನವಿಸಿದಂ ವಾಕ್ಯೋವಿದಂ ಸೌವಿದಂ (ಶಾಂತಿಪು. ೩-೬೫). **ತುದಿಗೇಱು** = ತುದಿಗೆಯ್ದು ೨ : ತ್ವರಿತಂ ತುದಿಗೇಱೆ ಮತ್ತೆ ಮತ್ತೆ ಮಾಸಂ ಸುಖದಳಿಲುಪತ್ತಿ (ನಂದಿರ. ೧೪-೫೫). **ತುದಿಬುಡವಾಗು** = ಆದ್ಯಂತವೂ ತಿಳಿದುಬರು; ಸಂಪೂರ್ಣ ಅರಿವಾಗು: ಇದೇ ರೀತಿಯ ಇನ್ನೂ ಅನೇಕ ಪ್ರದರ್ಶನ ವಸ್ತುಗಳು ಇದ್ದುವು. ಅದರ ವಿವರ ಹೇಳಿದರೆ ತುದಿಬುಡವಾಗದು (ಪ್ರವಾಸಿ ೪೭). **ತುದಿಹಾಕು** = (ಜಡೆಬಿಚ್ಚಿ ಹೋಗದಂತೆ) ತುದಿಗೆ ದಾರ ಮೊದಲಾದುವನಂ ಕಟ್ಟು : ಮಂದಾ ತನ್ನ ಕೋಣೆಯಲ್ಲಿ ಕುಳಿತು ಹೆಳಲು ಹಾಕಿಕೊಂಡು ಕೂದಲಿಗೆ ತುದಿಹಾಕಿ ಹೆಣೆದುಕೊಳ್ಳುತ್ತಿದ್ದಳು (ಇಪ್ಪಳ. ೨೪೬).
[ದೇ.॥ ತಮಿ. ತುತಿ ; ಮಲ. ತುಞ್ಞ, ತುಮ್ಪ ; ತುಳು. ತುದಿ ; ತೆಲು. ತುದ, ತುದ, ಸುದ]

**ತುದಿಕಂಬಿ** (ನಾ). (ಹೆಗಲಿನಲ್ಲಿ ಹೊರುವ) ಅಡ್ಡೆಯ ತುದಿ : ಸಂಗಶರಣನಂತೆ ಹೆಗಲೊಳಗಿಕ್ಕಿ ತುದಿಕಂಬಿಯೊಳು ಕರಂಡಗೆಯನೊಲಿದಳವಡಿಸಿ (ಬಸರ. ೩-೧೦). [ತುದಿ + ಕಂಬಿ$_1$]

**ತುದಿಕರ** (ನಾ). (ಆನೆಯ) ಸೊಂಡಿಲಿನ ಕೊನೆ,—ಅಗ್ರಭಾಗ; ಪುಷ್ಕರ: ತುದಿಕರದೊಳೆಳಲುವ ತಲೆಗಳಂಘ್ರಿಯೊಳೊರೆದ ನೆಣನಡಗಿನ ಮಹಾಗಜ ಮೊಗೆದುದರಿಬಲವ (ಕುಮಾವ್ಯಾದ್ರೋ. ೩-೨೯). [ತುದಿ + ಕರ$_3$]

**ತುದಿಕಳಿ** (ಕ್ರಿ). ಕೊನೆಗೆ ಬರು, – ಸಾಗು. 'ತುದಿಕಳಿಸು' ಪರಾ.
[ತುದಿ + ಕಳಿ$_1$ (< ಕಟು$_1$)]

**ತುದಿಕಳಿಸು** (ಕ್ರಿ). ತುದಿಗೆ ಬರಂ ; ಕೊನೆಗೆ ನಿಲ್ಲು : ತುದಿಕಳಿಸಿ ಬಂದಿದ್ದ ಕಣ್ಣೀರ ತಳಿಯಿಂದ ಕಣ್ಣಂಜಲು ಮಾಡಿ ಮಸಣದೊಳೆ (ಸಖೀಗೀ. ೦೦-೮೩): ಭೂತಜಾತದ ವೇದ ತುದಿಕಳಿಸಿ ನಾಲಗೆಗೆ ಇಮ್ಮು ಚಿಮ್ಮಲಿ (ಉಯ್ಯಾಲೆ. ೦೫-೦೨). [ತುದಿಕಳಿ + – ಇಸು$_3$]

**ತುದಿಕಾಲ್** 'ತುದಿಗಾಲ್' ನೋ.

**ತುದಿಕುಂಡೆ** 'ತುದಿಗುಂಡೆ' ನೋ.

**ತುದಿಕೆಯ್** 'ತುದಿಗೆಯ್' ನೋ.

**ತುದಿಕೊಳಿಸು** 'ತುದಿಗೊಳಿಸು' ನೋ.

**ತುದಿಕೋಡು** 'ತುದಿಗೋಡು' ನೋ.

**ತುದಿಖುರ** (ನಾ). ಗೊರಸಿನ ತುದಿ; ಖುರಾಗ್ರ : ಬಾಯ ಲೋಳೆಗಳೆಳೆಯ ಮೈಹಳುವಾಯಿ ಮಿಗೆ ತುದಿಖುರವನೂಱೆ...ವಾನಾಯುಜದ ಸಾಲೆಸೆದುದು (ಕುಮಾವ್ಯಾದ್ರೋ. ೦೭-೯). [ತುದಿ + ಖುರ]

**ತುದಿಗಟ್ಟೆ** (ನಾ). ಕಟ್ಟೆಯ ಅಂಚು,—ತುದಿ ; ಜಗುಲಿಯ ಕೊನೆಯಂ ಭಾಗ : ವದನೆ ಯೋಗಿಗೆ ಹೊಲ್ಲ ಬದನೆ ರೋಗಿಗೆ ಹೊಲ್ಲ ಕದನವದು ಹೊಲ್ಲ ನೆರೆಯಲಿ ನಿದ್ದೆಗೆ ತುದಿಗಟ್ಟೆ ಹೊಲ್ಲ (ಸರ್ವಜ್ಞ. ೧೨೯೩) ; ಹಡೆದವ್ವ ನಿದ್ದಾಗ ನಡುಮನೆ ನನಗಿತ್ತು ಕಡಗದ ಕೈಯ ಸೊಸೆ ಬಂದು ನಡೆದಾಗ ತುದಿಗಟ್ಟೆ ನನಗೆ ಎರವಾಯ್ತು (ಹಳ್ಳಿಯ. ೧೫೯). [ತುದಿ + ಕಟ್ಟೆ$_1$]

**ತುದಿಗಡೆ** (ನಾ). ಕೊನೆಯ ಭಾಗ ; ಅಗ್ರಪ್ರದೇಶ : ಮೈದೋಱಿದವು ಹೃತ್ತಿಮಿರ ತವಕದಲಿ ಪೊಡರ್ವ ಪೀನಪಯೋಧರದ ತುದಿಗಡೆಯ ಲಕ್ಕುಡಿಸಿದವು ಗತಿ ಬೆಳ್ಪಡಸಿದವು ಮುಖಮಂಡಲಗಳಾ ಮಾನಿನೀತ್ರಯದ (ತೊರರಾ. ೦-೮-೩). [ತುದಿ + ಕಡೆ$_8$]

**ತುದಿಗಾಣಿಸು** (ಕ್ರಿ). ಕಡೆಗಾಣಿಸು ; ಕೊನೆಮುಟ್ಟಿಸು : ಅದಱಿಂದಲಿದು ಸಾಮಾನ್ಯವಲ್ಲೆಂಬುದ ತುದಿಗಾಣಿಸಿ ನೋಡಿ ಕಡೆಗೆ (ಅಂಆಶ. ೧-೧೧೧). [ತುದಿ + ಕಾಣಿಸು]

**ತುದಿಗಾಲ್**, ತುದಿಕಾಲ್, ತುದಿಗಾಲು (ನಾ). ಕಾಲಿನ ತುದಿ ; ಪಾದಾಗ್ರ : ತುದಿಗಾಲಂ ಧರೆಗೂಱೆ . . . ಕಂಕೆಲ್ಲಿಭೂಜದ ಪುಷ್ಪಸ್ತಬಕಂಗಳಂ . . . ಕಾಂ ಕುಯ್ವಳ್ (ಕ್ರಿಪುಪಿ.೩೪-೩೬) ; ತುದಿಗಾಲ್ಗಳಿಂದೆ ನಿಂದು ಬಣ್ಣಾವಳಿಯದ ಪೂಗಳಂ ಕೊಯ್ವು (ಕೃಮಿಥಾ. ೮-೧೫). **ತುದಿಕಾಲ್** : "ಪಾದಾಗ್ರಂ, ಪ್ರಪದಂ - ಈ ೨ ತುದಿಕಾಲ್" (ಹಲಾಯು. ೮೭-೩೭೩). **ತುದಿಗಾಲು** : ತುದಿಗಾಲುಂಗಳ ಹೊರಿಗೆಯ ತಪದ ನಿಱಿಗೆಯ . . . ಹೊಸತಪಸಿ ತೊಡಗಿದನು ಬಲುತಪವ (ಕುವ್ಯಾಅ. ೯-೪೩) ; ಓರುಗುಡಿಸಿದುದವನಿ ರಾಜಕುಮಾರಕಂಠೀರವನು ತುದಿಗಾಲೂಱಿ ನಿಂದಾ ದೆಸೆಗೆ (ವಿಭಾಗ. ೪-೭-೩೦) ; ಕಾಮದೇವನ ಪೂಜೆಗಾಗಿ ತುದಿಗಾಲಲ್ಲಿ ನಿಂತು ಚೂತಾಂಕುರವನ್ನು ಕೊಯ್ಯುವೆನು (ಶಾಕುಂತ-೬೦-೭) ; ತುದಿಗಾಲೊಳ್ಗೆಲ್ಲರು ನಿಂತಿರುವವು ನಾವು ಅಲ್ಲಿಗೆ ಹೋಗುವೆವೆಂದು (ಇಂಚಾಶ. ೨೧೯-೬೦).

ತುದಿಗಾಲಿನಲ್ಲಿ ನಿಲ್ಲು = ಆತುರಪಡು; ತವಕಿಸು : ದಮಯಂತಿ ಅತ್ತೆಮನೆಗೆ ಹೊರಡಲು ತುದಿಗಾಲಿನಲ್ಲಿ ನಿಂತಿದ್ದಳು (ದೂಜಿಟ್ಟ. ೩೩). [ತುದಿ + ಕಾಲ್$_1$]

**ತುದಿಗಾಲು** 'ತುದಿಗಾಲ್' ನೋ.

**ತುದಿಗಿವಿ** (ನಾ). ಕಿವಿಯ ಕೊನೆ, — ತುದಿ : ತುದಿಗಿವಿ ಮೊದಲ್ಗಣ್ಣು . . . ನಿವಾಸನದೊಳ್ ಸುಟ್ಟಿ ಪುಟ್ಟೆ ಕಪ್ಪಮಕ್ಕುಂ (ಮಂಗರಾ. ೮೩-೧೯). [ತುದಿ + ಕಿವಿ$_1$]

**ತುದಿಗುಂಡು** (ನಾ). ಬೆಟ್ಟದ ತುದಿಯಲ್ಲಿರುವ ಕಲ್ಲು ; ಕೋಡುಗಲ್ಲು ; ಶೃಂಗ : ಕೂಟಃ, ಶಿಖರಂ, ಶೃಂಗಂ ೩ ಪರ್ವತಶಿಖರದ ಹೆಸರು, ಬೆಟ್ಟದ ತುದಿಗುಂಡು (ಸಿದ್ಧಾಂತಿ.೯೪). [ತುದಿ + ಗುಂಡು]

**ತುದಿಗುಂಡೆ**, ತುದಿಕುಂಡೆ (ನಾ). ಪಿರ್ರೆಯ ತುದಿ ; ಕೂರುವ ಭಾಗ : "೨ ಕಟಿಶೀರ್ಷಮನಲುವಾ ತುದಿಗುಂಡೆಯೆನಿಸಿಕ್ಕು" (ಮಂಗರಾ. ೯೮-೦೭). **ತುದಿಕುಂಡೆ** : "ಕಟಃ, ಕಟಿಶೀರ್ಷಕಃ — ಈ ೨ ತುದಿಕುಂಡೆ" (ಹಲಾಯು. ೮೭-೩೭). [ತುದಿ + ಕುಂಡೆ$_1$]

**ತುದಿಗೆಯ್**, ತುದಿಕೆಯ್, ತುದಿಗ್ಯೆ (ನಾ). ೧. ಕೈಯ ತುದಿ; ಹಸ್ತಾಗ್ರ : (ಕ). **ತುದಿಕೆಯ್** : ೨. ಆನೆಯ ಸೊಂಡಿಲಿನ ತುದಿ: "ಕರಿಹಸ್ತಾಗ್ರ, ಪುಷ್ಕರ—ಆನೆಯ ತುದಿಕೆಯ್" (ನಾಚಶಾ.೬). **ತುದಿಗ್ಯೆ** : ೨. "ಕರಾಗ್ರಂ, ಪುಷ್ಕರಂ—ಈ ೨ ತುದಿಗ್ಯೆ" (ಹಲಾಯು. ೩೭-೩೭). [ತುದಿ + ಕೆಯ್$_2$]

**ತುದಿಗ್ಯೆ** 'ತುದಿಗೆಯ್' ನೋ.

**ತುದಿಗೊಂಬು** (ನಾ). ೧. ಕೊಂಬೆಯ ತುದಿ ; ಶಾಖಾಗ್ರ : ಮದಕರಿಗಳ ಮದಜಳದೊಳ್ ನಿಮಿರ್ದಿರ್ದ ಮರದ ತುದಿಗೊಂಬುಗಳೊಳ್ ಪೊಳೆವುವು . . . ಕುಸುಮಾವಳಿಗಳ್ (ಕಾದಂಪೂ. ೯೪) ; ಅದಱ ಶಿಖರಮಂ ಮೆಟ್ಟಿ ಮರದ ತುದಿಗೊಂಬಿಂಗೆ ಪಾಯ್ದು (ಶಾಂತಿಪು. ೩೬೦-೯) : ಮರದ ತುದಿಗೊಂಬಿನಲಿ ತೋಱುವ ವರತಳಿರ ನೆಲೆನಿಕರವೊಂದೊಂದಱಲಿ ಥಿದ್ರವಮಾಡಲೆಸುವುದು (ಸಂಭಪ. ೦೪-೯). ೨. ಪ್ರಾಣಿಗಳ ಕೋಡಿನ ತುದಿ ; ಶೃಂಗಾಗ್ರ : ಅಗುಬ್ಬ ತುದಿಗೊಂಬಿನೊಳ್ಮೆಲ್ಲಗೆ ಪೊತ್ತಭಿಷೇಕಮೃತ್ತಿಕೆಯ ನೊಡಸಂದತ್ತಗಲದಿನಿಸುಂ ತಪೋವನಮೃಗಮಾ ಮುನಿವರನೊಳಾದ ಪರಿಚಯದಿಂದಂ (ಕಾದಂಪೂ. ೨೦೭). [ತುದಿ + ಕೊಂಬು$_1$]

**ತುದಿಗೊನೆ** (ನಾ). ತುದಿಯಲ್ಲಿರುವ ಗೊಂಚಲು,—ಗೊನೆ : ಕಡೆದವು ಕದಳಿಗಳು ಗೊನೆಸಹಿತ . . . ತುದಿಗೊನೆಯ ಚೆಂದೊಗು ಖಜ್ಜೂರದಲಿ ಕಾಣೆನು ಹುರುಳ (ಕುವ್ಯಾಅ.೦೮-೩೭). [ತುದಿ + ಕೊನೆ$_2$ (<ಗೊಲೆ$_2$)]

**ತುದಿಗೊಳಿಸು**, ತಂದಿಕೊಳಿಸು (ಕ್ರಿ). ತುದಿಯನ್ನು ತಾಕಿಸು,—ಊರು, —ಮೆಟ್ಟು : ತುದಿಗೊಳಿಸಿದಂಘ್ರಿಯಿಂದೆತ್ತಿದ ಭುಜದಿಂ ನಿಮಿರ್ದ ದೇಹದಿಂ (ಶಬಶಂ. ೨-೮೦). **ತುದಿಕೊಳಿಸು** : ತುದಿಕೊಳಿಸಿರ್ದ ವಾಮಚರಣಂ ಮಣಿಯಂ ಬಲದಂಘ್ರಿ ಮೆಟ್ಟೆ . . . ಉಯ್ಯಲೇಱಿದಳಮೃತಾಂಶುವಕ್ತ್ರೆ (ಅನಂಪು. ೮-೪). [ತುದಿ+ಕೊಳ್$_1$+—ಇಸು$_1$]

**ತುದಿಗೋಟೆ** (ನಾ). ಕೋಟೆಯ ತಂದಿ ; ದುರ್ಗದ ಮೇಲ್ಭಾಗ : ದಾಟುವೆನು ಕಡಲೇಳನವನಿಯ ವಿಸಾಟ ಸಪ್ತರಸಾತಳದ ತುದಿಗೋಟೆಗೇಳುವೆನು (ತೊರರಾ. ೪-೧೨-೩೦). [ತುದಿ + ಕೋಟೆ$_1$ (<ಕೋಂಟೆ)]

**ತುದಿಗೋಡು**, ತಂದಿಕೋಡು (ನಾ). = ತುದಿಗೊಂಬು ೧ : ಮರದ ತುದಿಗೋಡುಗಳೊಳುಲಿವ ಪಕ್ಕಿಗಳುಮಂ (ಕಾದಂಊ. ೨೬೭) ; ಪಕ್ಕಿಗಳ್ ಮರಂಗಳ ತುದಿಗೋಡ ಮೇಲೆ ದನಿಗಯ್ಯುತುಮಿರ್ದುವು ಮುಂಬಗಲ್ವರಂ (ಜಗದಿ. ೦೪-೦೦) ; ಮರದ ತುದಿಗೋಡುಗಳ್ ಕೊಳೆ ಧರೆಗಲ್ಲುಗುತಿರ್ಪ ತರಳತಾರೆಗಳೆನಿಕುಂ ಖರಸೂಕರದಂಷ್ಟ್ರಾಹತಿಪರಿಸ್ಫುಟದ್ವೇಣುಮುಕ್ತಮುಕ್ತಾನಿಕರಂ (ಚಂದ್ರಪ್ರ. ೩-೪೮) ; ತುದಿಗೋಡಂ ಮೆಟ್ಟಿ ಕೊಂಬಂ ಪಿಡಿದು ಜಡಿದು ತೂಗಾಡಿ . . . ಕುಳ್ಳಿರ್ದುದು ಕೋಡಂ (ಸೂಕ್ತಿಸು. ೩-೦೯೩). **ತುದಿಕೋಡು** : ಬೇರಿಂ ತುದಿಕೋಡಂ ಮುಟ್ಟೆ ಕಾಯ್ಪೇಱಿದ ಪಲಸು ಪುರೋದ್ಯಾನದೊಳ್ ಕುಂದದೆಂದುಂ (ಸೂಕ್ತಿಸು. ೯-೩೮). [ತುದಿ + ಕೋಡು$_6$]

**ತುದಿನಾಲಗೆ**, ತಂದಿನಾಲಿಗೆ (ನಾ). ನಾಲಗೆಯ ತಂದಿ ; ಜಿಹ್ವಾಗ್ರ : ಅಂತು ಕಡಿಯ ಕಕ್ಕರಗೆಯ್ತದಿಂ ತುದಿನಾಲಗೆಯೊಳ್ ತೊಡಳ್ವೆರಸು ನುಡಿವ ನುಡಿಗಳುಂ (ಪಂಪಭಾ. ೪-೮೮ವ) ; ಉಗಿದಡಾಯ್ದದ ಮೊನೆಯ ತುದಿನಾಲಗೆಗಳಲಿ ಮಾತಾಡಬಲ್ಲರೆ ಸೊಗಸುವವು ನಾವು (ಕುವ್ಯಾಶ. ೦೦-೪೩) ; ತುದಿನಾಲಗೆಗೆ ನರಸುಕ್ಕನಿಕ್ಕಿದಳು (ತೊರರಾ. ೨-೨-೩೮) ; ನಾರಣಪ್ಪನ ಭಾರತದಲ್ಲಿ ಪ್ರತಿಯೊಂದು ಪದ್ಯವೂ ಈಕೆಯ ತುದಿನಾಲಗೆಯಲ್ಲಿದೆ (ದೂಕಶ. ೬೩). **ತುದಿನಾಲಿಗೆ** : ಹೃದಯಂದ ಕತ್ತರಿ ತುದಿ [ಪಾಕಾಂ. ಕುಡಿ] ನಾಲಿ[ಪಾಕಾಂ. ಲ]ಗೆಯ ಬೆಲ್ಲೀಂ ಬೊ (ಬಸವ. ೨೭೯). [ತುದಿ + ನಾಲಗೆ]

**ತುದಿನಾಲಿಗೆ** 'ತುದಿನಾಲಗೆ' ನೋ.

**ತುದಿನೆಲೆ** (ನಾ). ಕೊನೆಯ ಅಂತಸ್ತು ; ಉಪ್ಪರಿಗೆಯ ಮೇಲುಭಾಗ: ಹಂಸದ ಗಿಳಿಯ ಕೋಗಿಲೆಯ ಕರ್ಕಶಕೆ ನಿಲಲಱಿಯದುಪ್ಪರಿಗೆದುದಿನೆಲೆಯ ಚಂದ್ರಶಾಲೆಗೆ ಬಂದಳಂಬುಜಾಕ್ಷಿ (ಕೃಮಿಥಾ. ೩೦-೩೭). [ತುದಿ + ನೆಲೆ]

**ತುದಿಪದ** (ನಾ). ಕೊನೆಯ ಮಟ್ಟ ; ಮೇಲ್ಮಟ್ಟದ ಘನತೆ ; ಪರಮಪದ : ಭಕ್ತರ ಕುಲಂಗಳನಹಗೆಯಿಹಗೊಂಡಱಸದದು ತುದಿಪದವಲಾ (ಬಸಪು. ೪-೩೩). [ತುದಿ + ಪದ$_2$]

**ತುದಿಪದವಿ** (ನಾ). = ತುದಿಪದ : ನಮಃಶಿವಾಯಯೆನಿಪ್ಪ ನುಡಿಯಂ ಮಱೆಯದಿರು ತುದಿಪದವಿ ನಿನಗೆನುತ (ಬಸಪು. ೨೪-೦೯). [ತುದಿ+ಪದವಿ]

**ತುದಿಬಾಲ** 'ತುದಿವಾಲ' ನೋ.

**ತುದಿಮಿಸೆ** (ನಾ). ಮೀಸೆಯ ಕೊನೆ : ಬೆರಳ ತುದಿಮೀಸೆಯಲಿ ರಾಘವ ತಿರುವಿ ಛಕುತನ ಮುಖವ ನೋಡಲು (ತೊರಿಶಾ. ೩೨-೩೩). [ತುದಿ+ಮಿಸೆ]

**ತುದಿಮುಟ್ಟ** (ಅ). ಕೊನೆಯವರೆಗೆ ; ಸಂಪೂರ್ಣವಾಗಿ : ಕೈಕೊಂಡ ಕೆಲಸವನ್ನು ತುದಿಮುಟ್ಟ ನಿರ್ವಹಿಸಬೇಕು (ರೂಢಿ). 'ತುದಿಮುಟ್ಟೆ' ಪರಾ. [ತುದಿ + ಮುಟ್ಟ]

**ತುದಿಮುಟ್ಟಿಸು** (ಕ್ರಿ). (ಹಿಡಿದ ಕೆಲಸವನ್ನು) ನೆರವೇರಿಸು ; ಗುರಿಮುಟ್ಟಿಸು ; ಪೂರೈಸು : ಇವೆಲ್ಲಮಂ ತುದಿಮುಟ್ಟಿಸುವ ಭಾಷೆ (ಬಸಪು. ೭-೭) ; ಜನರು ಸರಕಾರವನು ಜಗ್ಗಿ ಬಾಡಮೇಲಾಗ್ಯಿದರು ಚಳುವಳಿ ತುದಿಮುಟ್ಟಿಸಿದರು (ಇಂಚಾಶ. ೩೯-೮೦). [ತುದಿಮುಟ್ಟು + — ಇಸು$_1$]

**ತುದಿಮುಟ್ಟು** (ಕ್ರಿ). ಕೊನೆಗಾಣು ; ಮುಗಿ ; ಪರಿಸಮಾಪ್ತಿಯಾಗು : ನನ್ನ ವಿದ್ಯಾಭ್ಯಾಸ ತುದಿಮುಟ್ಟಿತು (ರೂಢಿ). 'ತುದಿಮುಟ್ಟಿಸು' ಪರಾ. [ತುದಿ + ಮುಟ್ಟು$_1$]

**ತುದಿಮುಟ್ಟೆ** (ಅ). ತುದಿಯವರೆಗೆ ; ಕೊನೆಯವರೆಗೆ : ಬೇರಿಂ ತುದಿ ಮುಟ್ಟೆ ಕಾಯ್ತು ಪಲಸೆಂಬಿವು ಕುಂದವು ನಂದನಂಗಳೊಳ್ (ಆಗವಿ. ೨-೧೫). 'ತುದಿಮುಟ್ಟು' ಪರಾ. [ತುದಿ + ಮುಟ್ಟೆ]

**ತುದಿಮುಱಿ** (ಕ್ರಿ). ಕೊನೆ ಮುರಿದುಹೋಗು, — ಕ್ಷತವಾಗು : ಪೊಸಗಂಧವಕ್ಷತೆ ತುದಿಮುಱಿದವೆಂದೊ (ಬಸಪು. ೪೭-೧೪). [ತುದಿ + ಮುಱಿ$_1$]

**ತುದಿಮೂಗು** (ನಾ). ಮೂಗಿನ ತುದಿ ; ನಾಸಾಗ್ರ : ತುದಿಮೂಗು ತುದಿಗಿವಿ ಮೊದಲ್ಗಣ್ಣು ಕಣ್ಣಡಿಗಳೊಳು . . . ಸುಟ್ ಪುಟ್ಟೆ ಕಷ್ಪಮಕ್ಕುಂ (ಮುಂಗರಾ. ೬೩-೦೯) ; ಏನೆಲವೊ ತುದಿಮೂಗಿನಲಿ ಬಿಳುಪೇನು (ಕುವ್ಯಾವಿ. ೩-೮). [ತುದಿ + ಮೂಗು$_1$]

**ತುದಿವೊದಲ್**, ತುದಿವೊದಲು (ನಾ). ೧. ಮೂಲ ; ಪ್ರಾರಂಭ ; ಮೊತ್ತಮೊದಲು. ೨. ಕೊನೆ ಮತ್ತು ಬುಡ ; ಆದಿ ಮತ್ತು ಅಂತ್ಯ : ತುದಿವೊದಲಪ್ಪುದಿಂಪಡರೆ ಕೂಡುವ ಕೂಟದೊಳ್ (ಅರ್ಥನೇ. ೬-೬). **ತುದಿವೊದಲು** : ೨. ನಿಮ್ಮ ಭಕ್ತಿಯ ತುದಿವೊದಲಿದೆಂದೊಮ್ಮೆಯುಂ ಸಲೆ ತೋಱದಾಗಿ (ಬಸಪು. ೦-೫೮) : ವಿಧಿಯಿಂದೆ ಶುಕ್ರದೇವರು ತನಗಱುಹಿದ ಹದಿನಾಱುಶತವಿದ್ಯವನು ತುದಿವೊದಲಿಂದೆ ವಿಸ್ತರಿಸಿದ ಕೌಟಿಲ್ಯನಿಧಿ ಶಂಬರಾಸುರ ಖಳನು (ಮೋಹತ. ೦೦-೬೯) ; ತನ್ನೊಳಗೆ ತಾನೆ ವಿಸ್ಮಿತನಾಗಿ ಪಾರ್ಥನದಱುನ್ನತಿಯ ತುದಿವೊದಲನಱುಹೆನಲ್ (ಜೈಮಿಭಾ. ೦೦-೨೨) ; ಅವನ ರಗಳೆಗೆ ತುದಿವೊದಲೇ ಇಲ್ಲ (ರೂಢಿ). [ತುದಿ + ಮೊದಲ್]

**ತುದಿವೊದಲು** 'ತುದಿವೊದಲ್' ನೋ.

**ತುದಿಮೊನೆ** (ನಾ). ತುದಿಯ ಹರಿತವಾದ ಭಾಗ; ನಿಶಿತಾಗ್ರ : ದಿನಪಕೋಟಿಯ ರಶ್ಮಿಯನು ತುದಿಮೊನೆಯೊಳುಗುಳುವ ಬಾಯಿಧಾರೆಯ ತನಿಯುರಿಯ ತೆಕ್ಕೆಯಲಿ ಥಳಥಳಿಸುವ ಮಹಾಂಕುಶವ (ಕುವ್ಯಾದ್ರೋ. ೩-೫೫). [ತುದಿ + ಮೊನೆ$_1$]

**ತುದಿಮೊಲೆ** (ನಾ). ಮೊಲೆಯ ತುದಿ ; ಕುಚಾಗ್ರ ; ಚೂಚುಕ : ಕುರವಕಕೆ ತುದಿಮೊಲೆಯ ಸೋಂಕಿನಲಿ ಹೂದೋಱದವು ಕಣ್ಣೀರೆಯಲಿ ತಿಲಕವ ಕದುಕಿದವು (ಕುವ್ಯಾಅ. ೧೮-೧೩); ಈ ಕೋತಿಯಂ ತನ್ನ ತುದಿಮೊಲೆಗಳಿಂದಪ್ಪಳಿಸಿ ನರನ ಸೈನ್ಯವಂ ಸದೆದು ಕೆಡಪುವೆನು (ಜೈಮಿಭಾ. ೧೬-೩೫). [ತುದಿ + ಮೊಲೆ$_1$]

**ತುದಿಯಂಬು** (ನಾ). ಬಾಣದ ತುದಿ ; ಬಾಣಾಗ್ರ : ಕೈನೀಡಿದನು ತುದಿಯಂಬಿನಲಿ ತುಱುಗಿದ ಕಿಡಿಯ ಬಿಱುಕೇಸುರಿಯ ಧಾಳಿಗಳ . . . ನಾರಾಯಣಮಹಾಶರಕೆ (ಕುವ್ಯಾದ್ರೋ. ೧೯-೧೪). [ತುದಿ + ಅಂಬು$_2$]

**ತುದಿಯೆಯ್ದು** (ಕ್ರಿ). ೧. ತುದಿಮುಟ್ಟು; ಪೂರ್ಣವಾಗು. ೨. ಈಡೇರು; ನೆರವೇರು : ತುದಿಯಯ್ದಿತ್ತನಗೆನ್ನ ಪೂಣ್ಕೆ ನಿನಗಂ ಪುಣ್ಯೋದಯಂ ಸಾರ್ಚೆ ಬಂದುದು (ಆದಿಪು. ೪-೧೮). [ತುದಿ + ಎಯ್ದು]

**ತುದಿಮರ** (ನಾ). ಮರದ ತುದಿ : ಮೊದಲ ಬಲುಹನು ಕಂಡೆನಿನ್ನೀ ತುದಿಮರನ ತನಿಗೆಚ್ಚು ನಮ್ಮನು ಬೆದಱಸುವುದೋ ಶಿವಶಿವಾ ತಪ್ಪೇನು ತಪ್ಪೇನು (ಕುವ್ಯಾಕ. ೨೦-೧೮). [ತುದಿ + ಮರ$_1$]

**ತುದಿವರಂ** (ಅ). ತುದಿಯವರೆಗೆ ; ಕೊನೆಯವರೆಗೆ : ಮೊದಲಿಂದೆ ತುದಿವರಂ ಬೇಱೊಂದು ರೀತಿಯಾಗದೆ (ಪದ್ಮರಾ. ೮-೨೯) : ಬೇರ್ವೆರಸಿ ತುದಿವರಂ ಕಾಯ್ತು ಪನಸಂಗಳ್ . . . ನಾಡೆ ಸಾರ್ವಕಾಲಂ ಕುಂದವು (ಜಿಲಪು. ೦೦-೨೨). [ತುದಿ + – ವರಂ]

**ತುದಿವಲಗೆ** (ನಾ). ಧ್ವಜದ ಮೇಲಿರುವ, ಲಾಂಛನವನ್ನಿಡುವ ಹಲಗೆ,- ಫಲಕ,-ಚೌಕಟ್ಟು : ನವಹೇಮದಂಡದ ಹಳವಿಗೆಯ ತುದಿವಲಗೆಯಲಿ ಹಾಯ್ಕಿದರು ಪನ್ನಗನ (ಕುವ್ಯಾದ್ರೋ. ೦೦-೪೦). [ತುದಿ + ಪಲಗೆ]

**ತುದಿವಾಲ**, ತುದಿಬಾಲ (ನಾ). ಬಾಲದ ತುದಿ, — ಕೊನೆ : ತುಱುಕಿದನು ತುದಿವಾಲದಗ್ನಿಯನು . . . ಭದ್ರಭವನದಲಿ (ತೊರರಾ. ೫-೮-೩೬) : ಪುದಿದಿರ್ಪುದು ತೇಟ್ಗೆ ವಿಷಂ ತುದಿವಾಲದೊಳ್ (ಚಿಕವಿ. ೪-೭೬). **ತುದಿಬಾಲ** : ಹುಲಿಯ ತುದಿಬಾಲವು ಕಪ್ಪಿರುತ್ತದೆ (ಮುಂಬಯಿ. ೪-೩೬). [ತುದಿ + ಬಾಲ$_1$]

**ತುದಿವೆರಳು** (ನಾ). ಬೆರಳಿನ ತುದಿ ; ಬೆಟ್ಟಿನ ಕೊನೆ : ಹರಹರ ಮಹಾದೇವಾ ಎನುತ ತುದಿವೆರಳಲಾಲಿಯ ನೀರ ಮಿಡಿದಳಲಿದನು ಕಲಿ ಭೀಮ (ಕುವ್ಯಾಕ. ೦೨-೯) : ಅಲ್ಲಾಡಿದನು ತುದಿವೆರಳನು (ತೊರರಾ. ೪-೪-೩೩) ; ತುದಿವೆರಳೊಳು ಜಪಸರವ ನೂಂಕುತ ಪಂಚಪದವ ಜಪಿಸಿದ ರೊಪ್ಪದೊಳು (ಭರತ. ೧೮-೦೪೦). [ತುದಿ + ಬೆರಳು (< ಬೆರಲ್)]

**ತುದಿಸೆಱಗು** (ನಾ). ಸೆರಗಿನ ಕೊನೆ,—ತುದಿ : ಕಂಡಳವನಂಗದೊಳೆಸೆವ ರುಚಿರಕಂಚುಕದ ತುದಿಸೆಱಗಿನೊಳ್ಕಟ್ಟಿಕೊಂಡಿರ್ದ ಪತ್ರಿಕೆಯನು (ಜೈಮಿಭಾ. ೩೦-೨೪). [ತುದಿ + ಸೆಱಗು (< ಸೆಱಂಗು)]

**ತುನಕು** 'ತಣುಕು' ನೋ.

**ತುನಿ$_1$** (ಕ್ರಿ). (?) : ಗಿಂಡಿಯಲ್ಲಾದಕವಂ ಕಯ್ಕೆತ್ತಿ ಕಯ್ಕೆತ್ತಿ ಬೇರ್ಗರೆಯಲ್ ಕಣ್ ತುನಿದೀಂಟಿ ತೇಗಿ ನಿಮಿಷಂ ಸಂತೈಸಿಕೊಂಡಿರ್ದು . . . ಏಂ ಸುಖಂಬಡೆದರೋ ಕಯ್ಗಟ್ಟಿಕೊಂಡೆಲ್ಲರು (ನಳಚ. ೪೬೮).
[ P ಇದು 'ಕುನಿ' ಎಂಬುದರ ಅಪಲಿಖಿತವಿರಬಹುದೆ ? ]

**ತುನಿ$_2$** (ನಾ). ಒಂದು ಬಗೆಯ ವಾಯುರೋಗ : ಪಕ್ವಾಶಯದಿಂದ ಕೆಳಕ್ಕಾಗಿ ಅಪಾನಪ್ರದೇಶ, ಗುಹ್ಯಪ್ರದೇಶಕ್ಕಾಗಿ ಕೀಳು ಮುಂತಾಗಿ ತೀವ್ರವಾದ ವೇದನೆಯುಂಟಾಗಿ ಚರಿಸುವಂಥಾ ವಾಯು ತುನಿಯೆನಿಸಿಕೊಂಬುದು (ವೈದ್ಯಸಾ. I, ೩೨೫). [ಸಂ.]

**ತುನುಕು** 'ತಣುಕು' ನೋ.

**ತುನ್ನ** (ಗು). ೧. ನೋವುಗೊಂಡ ; ಗಾಸಿಗೊಂಡ. ೨. ಪೀಡೆಗೊಂಡ ; ತೊಂದರೆಗೊಳಗಾದ. ೩. ಕತ್ತರಿಸಿಹೋದ. (ನಾ). ೪. ನೋವು ; ಬಾಧೆ : "ಪೀಡಿತಂ ತುನ್ನಮನೆ ನೋವಕ್ಕು" (ಮುಂಗರಾ. ೧೩೨-೨೬). ೫. ಒಂದು ಬಗೆಯ ಮರ ; ನಂದಿಮರ : "ತುನ್ನಃ, ಕುಬೇರಃ . . . ನಂದಿವೃಕ್ಷಃ—೬ ನಂದೀ ಎಂಬುವ ಮರದ ಹೆಸರು" (ಸಿದ್ಧಾಂತಿ. ೧೨೪). [ಸಂ.]

**ತುನ್ನವಾಯ** (ನಾ). ಹೊಲಿಗೆ ಕೆಲಸದಿಂದ ಜೀವನ ಮಾಡುವವನು; ಚಿಪ್ಪಿಗ ; ಸಿಂಪಿಗ ; ದರ್ಜಿ : "ತುನ್ನವಾಯಃ, ಸೌಚಿಕಃ—ಈ ೨ ಚಿಪ್ಪಿಗಂ" (ಹಲಾಯು. ೯೭-೪೩೬) : "ಚಿಪ್ಪಿಗನು ಚೇಳಿಕಂ ಸೂಚಿಕಂ ತುನ್ನವಾಯನೆನಿಕ್ಕು" (ಮುಂಗರಾ. ೦೧೦-೨). [ ಸಂ. ]

**ತುಪಟ** 'ತುಪ್ಪಟಿ' ನೋ.

**ತುಪರ** 'ತೂಪರ' ನೋ.

**ತುಪಾಕ** 'ತುಪಾಕಿ' ನೋ.

**ತುಪಾಕಸೇನೆ** (ನಾ). ಬಂದೂಕಿನಿಂದ ಯುದ್ಧಮಾಡುವ ಸೈನ್ಯ : ಭಾವನಾಯಕನ ಸಹಾಯಕ್ಕೆ ಶ್ರೀರಂಗಪಟ್ಟಣದಿಂದ ತುಪಾಕಸೇನೆಯು ...ಬರುವಂತಿಲ್ಲ (ಹುಗುಗಂ. ೧೨೪-೫). [ತುಪಾಕ (<ತುಪಾಕಿ) + ಸೇನೆ]

**ತುಪಾಕಿ**, ತುಪಾಕ, ತುಬಾಕಿ (ನಾ). ೧. ಗುಂಡುಗಳನ್ನಿಟ್ಟು ಮದ್ದು ತುಂಬಿ ಪ್ರಯೋಗಿಸುವ ಒಂದು ಬಗೆಯ ಆಯುಧ ; ಕೋವಿ ; ಬಂದೂಕು : ಹೊಡೆಯಂತೆ ಪಟಲು ತುಪಾಕಿಯ ಬಲಗೂಡಿ ಧಿಗಿಧಿಗಿನಿದಿಂಗೆ ಬಂದು ನಗೆಪೊಗದರಸಗೆ ಕೈಮುಗಿದೊಲಿದನು (ಭರತ. ೨೨-೦೯) :

ಎಡೆವಿಡದಿಡುವ ತುಪಾಕಿಯ ಗುಂಡಿನ ಕಡುಹಿಂದ . . . ಕೂಡಿದ ರಿಪುಬಲ ಕಡಿಖಂಡವಡೆದುದೇವೇಳ್ವೆ (ಕಂನವಿ. ೬-೭೬) ; ನಮ್ಮಲ್ಲಿದ್ದ ತುಪಾಕಿಗಳನ್ನು ಅವರ ಮೇಲೆ ಪ್ರಯೋಗಿಸಿದೆವು (ಕೃಶಾಪ. ೩೦): ತುಪಾಕಿ ಹೊಟ್ಟೇಲಿ ಫಿರಂಗಿ ಹುಟ್ಟಿದ ಹಾಗೆ (ಗಾದೆ). **ತುಪಾಕ:** ೧. ಪೇರಡಿ ಬಡಿಗೋಲ್ಲುವಾಕಮಿಡುಗಲ್ಲೆರೆ ಪೆರ್ಬಲೆ ಕೂಳಿ ಗಾಳಂ . . . ಓಡಿದು ಬೇಂಟೆಗೆ ಸಂದ ಪುಲಿಂದರೆಯ್ದಿದರ್ (ರಾಚಕೀ. ೫-೫೩) : ಧಮ ಧಮಧ್ವಾನಮಾದಂ ತುಪಾಕಂಗಳಪೀಗಳ್ . . . ಸಾರ್ತರ್ಪಿನಂ (ಚಕವಿ. ೬-೨೬೩) ; ಮಿಂಟೆ ಪೇರಡಿ ತುಪಾಕಂ . . . ಕೊಂಡೊಡನಾ ಲುಬ್ಧಕಸಂಚಯಂ ನಡೆದುದು (ಯಾದಕಂ. ೪-೫೧). ೨. ಕೋವಿ ಹಿಡಿದಂ ಯಂದ್ಧ ಮಾಡುವ ಸೈನಿಕ : ಹಲ್ಲಣಗಳನ್ನಾಳಬಲ್ಲ ಬಿಲ್ಲಾಳ್ಗಳ ತುಪಾಕರ ಪಡೆಗಳನ್ನೂ . . . ಅಲ್ಲಿಗೆ ಕಳಹಿರಿ (ಬಿಟ್ಟಿಅ. ೪೫-೪). **ತುಬಾಕಿ:** ೧. ತುಬಾಕಿಯಲ್ಲಿ ಮದ್ದು ತುಂಬಿ . . . ಹೊಂಚು ಹಾಕಿ ಕುಳಿತುಕೊಂಡನು (ಬಿಟ್ಟಿಹೊ. ೨೪); ತುಬಾಕಿಗಳು ಹಾರಿದವು (ಫಲಸಂ. ೮೦); ರಾಯಚೂರುಯುದ್ಧ ನಡೆಯುವ ತನಕ ತುಬಾಕಿಯಂಥ ಮದ್ದಿನ ಆಯುಧ ದಕ್ಷಿಣದೇಶದವರಿಗೆ ಗೊತ್ತಿರಲಿಲ್ಲ (ಸಂಜುಂಂದ. ೨೪).

**ತುಪಾಕಿಯವರು, ತುಪಾಕದವರ್** = ಕೋವಿ ಹಿಡಿದಂ ಯಂದ್ಧ ಮಾಡುವ ಸೈನಿಕರು: ಚಕ್ಕಮುಕ್ಕಿ ಕಲ್ಲಿನ ತುಪಾಕಿಯವರು ತಮ್ಮ ಆಯುಧ ಸಲಕರಣ ಸಮೇತ ತೆರಳಲಿ (ಹೇಟಿಮಾ. ೨) : ಅಲ್ಲಿ ತುಪಾಕದ ವರ್ಗಂ ಪೇಟದೆ ನಿಟ್ಟೋಟದಿಂ ತಿರುಚಿನಾಪಳ್ಳಿಯಂ ಸಾರ್ವುದುಂ (ಅಪ್ಪಕೆ. ೧೪೫-೨೨). 'ತೋಪು' ಪರಾ.

[← ಹಿಂ. ತುರ್ಕಿ. ತುಪಕ್ ; ಮರಾ. ತುಬಕ್]

**ತುಪಾಕಿಗುಂಡು** (ನಾ). ತುಪಾಕಿಗೆ ಹಾಕಿ ಉಡಾಯಿಸುವ ಗುಂಡು : ಬಹು ಜನರು ಹತರಾಗುವಂತೆ ಮಾಡಿರುವ ತೊಳ್ಳುಗುಂಡುಗಳನ್ನೂ ತುಪಾಕಿಗುಂಡುಗಳನ್ನೂ ಇರಿಸುವುದಕ್ಕೆ . . . ಉಗ್ರಾಣಗಳನ್ನು ಮಾಡಿಸಿದರು (ಚಾಮುವಂ. ೮೯). [ತುಪಾಕಿ + ಗುಂಡು]

**ತುಪಾನು** 'ತಂಫಾನು' ನೋ.

**ತುಪ್ಪ** (ನಾ). ೧. ಬೆಣ್ಣೆಯನ್ನು ಕಾಯಿಸಿ ತೆಗೆದ ಸಾರ, –ಸತ್ತ್ವ ; ಘೃತ ; ಆಜ್ಯ : "ಸರ್ಪಿಃ, ಘೃತಂ, ಆಜ್ಯಂ, ಆಘಾರಃ — ಈ ೪ ತುಪ್ಪ" (ಹಲಾಯು. ೪೬-೦೨೦) ; ತುಪ್ಪಮಂ ಕೊಟ್ಟು ನೀರಂ ಕೊಳ್ವ... ಗಾವಿಲನಂತಾಗಿ (ಧರ್ಮಾಮೃ. ೦೪-೦೦೬) ; ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ ಎನ್ನ ಬಾಳುವೆ (ಬಸವ. ೩೫) ; ರಾಮನಾಮ ಪಾಯಸಕ್ಕೆ ಕೃಷ್ಣನಾಮ ಸಕ್ಕರೆ ವಿಟ್ಠಲನಾಮ ತುಪ್ಪವ ಕಲಸಿ ಬಾಯಿ ಚಪ್ಪರಿಸಿರೊ (ಪುರಂದ. ೨-೯೬ ಪಲ್ಲವಿ) ; ತುಪ್ಪ ಸಕ್ಕರೆ ಪಾಲ ಸವಿವ ಮನುಜರ ತಂದೊಪ್ಪಿಸುವುದು ದೊಡ್ಡಿತಲ್ಲ (ಕಂನವಿ. ೧೧-೮೪): ತುಪ್ಪದ ಆಶೆಗೆ ಎಂಜಲು ತಿಂದ (ಗಾದೆ.) ೨. ತುಪ್ಪವನ್ನು ಹೋಲುವ ಜಿಡ್ಡು ಗುಣವನ್ನು ಹೊಂದಿರುವ ವಸ್ತುವಿಶೇಷ ; ಸಸ್ಯದ ಕೊಬ್ಬು ; ವನಸ್ಪತಿಯ ಕೊಬ್ಬು. ೧. ೨ : ತುಪ್ಪಮೆಂಬ ಪೆಸರಾವಿನ ತುಪ್ಪಕ್ಕಂ ಗೇರತುಪ್ಪಕಮುಂಟಪ್ಪೊಡಂ ತುಪ್ಪದಂತಿನಿದಕ್ಕುಮೇ (ಧರ್ಮಾಮೃ. ೦-೧೯೩). ೩. ಪ್ರಾಣಿಗಳ ಕೊಬ್ಬು: ಉಡುವಿನ ತುಪ್ಪ ಲೇಪನ ಮಾಡಿದರೆ ಮೂಳೆ ಕೂಡಿಕೊಳ್ಳುತ್ತದೆ (ರೂಢಿ). ೪. ಬಟ್ಟಿ ಇಳಿಸಿದ ದ್ರವ ; ಅರ್ಕ ; ಹಸಿಶುಂಠಿಯ ಒಂದು ಕೊಳಗದಲ್ಲಿ ರಸ . . . ಕಾಸಿ ಹದದಲ್ಲಿ ಇಳುಹಿಕೊಂಡು ಉದಯಕಾಲದಲ್ಲಿ ನಾಲ್ಕುವರಹ ತೂಕ ತುಪ್ಪವ ಸೇವಿಸಲು ಶೋಭೆ, ಕಾಸ, ಅಗ್ನಿಮಾಂದ್ಯ, ಪಾಂಡು, ಇವಿಷ್ಟೂ ಪರಿಹರವಹವು (ವೈದ್ಯಸಾ. I, ೩೫೮). ೫. [ವೈದ್ಯಶಾ] ಬೇರೆ ಬೇರೆ ಬಗೆಯ ಔಷಧಿದ್ರವ್ಯಗಳನ್ನು ಸೇರಿಸಿ ತುಪ್ಪದಲ್ಲಿ ಪಾಕಮಾಡಿ ತಯಾರಿಸಿದ ಔಷಧ ; ಘೃತ: ಅಶ್ವಗಂಧಿಯ ತುಪ್ಪವು ಆರೋಗ್ಯಕ್ಕೆ ಒಳ್ಳೆಯದು (ರೂಢಿ).

**ತುಪ್ಪದ ದೋಸೆ**=ತುಪ್ಪ ಹಚ್ಚಿ ತಯಾರಿಸುವ ದೋಸೆ: ಈ ತುಪ್ಪಾ ಸಂಜೆ, ಹೋಟಲಲ್ಲಿ ತುಪ್ಪದ ದೋಸೆ, ಕಾಫಿ ಕೊಡಿಸು (ರೂಢಿ). **ತುಪ್ಪದನ್ನ** = ತುಪ್ಪದ ಒಗ್ಗರಣೆ ಮತ್ತು ಹಪ್ಪಳ, ತೆಂಗಿನ ತುರಿ ಮುಂತಾದುವನ್ನು ಹಾಕಿ ಮಾಡುವ ಒಂದು ಬಗೆಯ ಕಲಸನ್ನ : ತುಪ್ಪದನ್ನ ಉಣ್ಣೋಕೆ ಕೊಟ್ಟೆ ನೀರಲ್ಲಿ ಕೈ ತೊಳೆಸಿದ (ಗಾದೆ).

[ < ಪ್ರಾ. ತುಪ್ಪ-/ತಮಿ. ತುಪ್ಪ, ತುಪ್ಪಕ, ತುಪ್ಪು./ ಮರಾ. ತುಪ್, ತೂಪ್ ]

**ತುಪ್ಪಕೀರೆ** 'ತಂಪ್ಪಗೀರೆ' ನೋ.

**ತುಪ್ಪಗಾಯ್** (ನಾ). ಬದನೆಕಾಯಿಗೆ ತುಪ್ಪ ಮೊದಲಾದುವನ್ನು ಸೇರಿಸಿ ಮಾಡುವ ಒಂದು ಬಗೆಯ ವ್ಯಂಜನಪದಾರ್ಥ : ಬಟ್ಟಬದನೆಯ ಕಾಯ ನಸುನೀರ ತೀದುಪ್ಪವಿಟ್ಟು . . . ತುಪ್ಪಮಂ ಬಿಟ್ಟು ಪೊಡ್ಡನಗೆಗೊಡೆ ತುಪ್ಪಗಾಯಾಯಿತು(ಸೂಪಶಾ. ೪-೦೩).

[ ತುಪ್ಪ + ಕಾಯ್₄ ]

**ತುಪ್ಪಗಾರಿಗೆ** (ನಾ). ತುಪ್ಪದಲ್ಲಿ ಕರಿದ ಗಾರಿಗೆ : ಕಾಯ್ದ ತುಪ್ಪದಲ್ಲಿ ಹಾಕಿ ಗಾರಿಗೆಯನ್ನು ತಯಾರಿಸುವುದು. ಇದರ ಹೆಸರು ತುಪ್ಪಗಾರಿಗೆ (ಸೂಪಶಾ. ೦-೨೪ ಟೀಕೆ). [ ತುಪ್ಪ + ಗಾರಿಗೆ₁ ]

**ತುಪ್ಪಗೀರೆ, ತುಪ್ಪಕೀರೆ** (ನಾ). ಆಹಾರಕ್ಕಾಗಿ ಮತ್ತು ಔಷಧಕ್ಕಾಗಿ ಉಪಯೋಗಿಸುವ ಒಂದು ಬಗೆಯ ತರಕಾರಿ ಗಿಡ ; ಹರಿತಮಂಜರಿ : ತುಪ್ಪಗೀರೆಸೊಪ್ಪಿನ ರಸದಲ್ಲಿ . . . ಪಾಕವ ಮಾಡಿ ಹದದಲ್ಲಿ ಇಳುಹಿ ಆ ತೈಲದಲ್ಲಿ ವಸ್ತಿಯ ಕಟ್ಟಲು ಗುಲ್ಮ, ಮಹೋದರಗಳು ಪರಿಹರ (ವೈದ್ಯಸಾ. I, ೩೦೪). **ತುಪ್ಪಕೀರೆ:** "ಮಾರುತಘ್ನಃ — ತುಪ್ಪಕೀರೆ" (ಚಿಕಧಿ. ೦೨೫) ; ನಾಗರ ತುಪ್ಪಕೀರೆ ಲಶುನಂ ರಸರಾಮಠಮೆಂಬಿವೆಲ್ಲಮಂ ರಾಗದೊಳೊಂದುಗೂಡಿ...ಕೊಳೆಲ್ (ಖಮದ. ೬-೫): ತುಪ್ಪಕೀರೆ ಬೇರನಾದರು ತುಲಶಿ ಬೇರನಾದರು. . .ಅರೆದು ಕುಡಿಯ ಕೊಡಿಸಲು ದುಷ್ಟ ಕೀಟ ಹರವಹುದು (ವಿಷಚಿ. ೨೨-೪). [ತುಪ್ಪ + ಕೀರೆ]

**ತುಪ್ಪಗೆಣಸು** (ನಾ). ಒಂದು ಬಗೆಯ ಗೆಣಸು : (ಕ).

[ತುಪ್ಪ + ಗೆಣಸು (<ಗೆಟಸು)]

**ತುಪ್ಪಗೊಡ** (ನಾ). ತುಪ್ಪ ತುಂಬಿದ ಕೊಡ : ತುಪ್ಪಗೊಡಂಗಳಿಂ ಧರಣಿಯೊಟ್ಟಿದೆಯಿಂ . . . ಒಪ್ಪಿದುದಂದನೂನವಿಭವಂಬಡೆದಾ ವರಯಜ್ಞಮಂಟಪಂ (ಅದ್ಭುಟ. ೪-೪೪). [ತುಪ್ಪ + ಕೊಡ₁]

**ತುಪ್ಪಟ** 'ತುಪ್ಪಟ್' ನೋ.

**ತುಪ್ಪಟಮಣ್** (ನಾ). ಒಂದು ಬಗೆಯ ಸುಗಂಧದ್ರವ್ಯ : "ಹನುಃ, ಹಟ್ಟವಿಲಾಸಿನಿ ಇವು ತುಪ್ಪಟಮಣ್ಣೆಂಬ ಗಂಧದ್ರವ್ಯಂ" (ನಾಚಿರಾ. ೦೦೦).

[ತುಪ್ಪಟ? + ಮಣ್]

**ತುಪ್ಪಡರ್** (ಕ್ರಿ). =ತುಪ್ಪೇಱು ೧ : ದಿನಪತಿ ಮಾಸಿದಡ್ಡಣದ ಕನ್ನಡಿಯಂತವೊಲಿರ್ದನಭ್ರದೊಳ್ ದಿನಕರರಶ್ಮಿ ತುಪ್ಪಡರ್ದ ಶಸ್ತ್ರದ ಮಾಟಕ್ಕೊಲಾದುದು . . . ತತ್ತುಮುಳಯುದ್ಧಸಮುದ್ಧತಧೂಳಿಜಾಲದೊಳ್ (ಸೂಕ್ತಿಸು. ೦೮-೫೨). [ತುಪ್ಪ + ಅಡರ್]

**ತುಪ್ಪದೆಱೆ** (ನಾ). ತುಪ್ಪದ ಮೇಲಿನ ತೆರಿಗೆ,—ಸುಂಕ : ರವಿ ಕಯ್ಯಂ ಕಾಲಂ ಕಟ್ಟಿ ತುಪ್ಪದೆಱೆಯಂ ಬಿಟ್ಟೊಮ್ (ಎಇ. VII, ೨೦೬-೨೦: 966); ಮಹಾಜನದ ಕಾಲಂ ಕಟ್ಟಿ ತುಪ್ಪದೆಱೆಯಂ ಸಭೋಗಸಾಧಕಮಾಗಿ ಬಿಟ್ಟರ್ (ಎಇ. VI, ೦೦೪-೨೬ ; ಸು. 666 ?); ತುಪ್ಪದೆ[ಱೆ]ನುಟು ದೋಣ್ (ಸೌಇಇ. XI-i , ೦೨-೦೩ ; 867); ಪೆರ್ಮ್ಮಾಡಿಯಂ ಪೃಥಕಾಲಯ್ಯನುಮಿಟ್ಟು ತುಪ್ಪದೆಱೆಯನೆಲ್ಲಂ ಕಾಲಕಯ್ಯಂಟು ಮಹಾಜನದ ಕಯ್ಯೊಳ್ದಾರೆಯನೆಱೆದುಕೊಟ್ಟನು (ಎಕ. XV, ಹೊಳೆನ. ೦೦೯-೦೦: 871).

[ತುಪ್ಪ + ತೆಱೆ₃]

**ತುಪ್ಪದೇವದಾರು** (ನಾ). ಒಂದು ಬಗೆಯ ಮರ : "ಅಮರದಾಮ–ತುಪ್ಪದೇವದಾರು" (ಒಷಧಿ. ೮); ತುಪ್ಪದೇವದಾರು, ಅಳಲೆಕಾಯಿ . . . ಸೇವಿಸಲು ಕಲ್ಲುಕಟ್ಟು, ಮೂತ್ರಕೃಚ್ಛ್ರ...ಗುಣವಾಕ್ಕುಂ (ಸಕಪ್ಯ. ೩೮೦).
[ತುಪ್ಪ + ದೇವದಾರು]

**ತುಪ್ಪನ್ನ** (ನಾ). ತುಪ್ಪದಲ್ಲಿ ಕಲಸಿದ ಅನ್ನ : ನನ್ನ ತಮ್ಮನಿಗೆ ತುಪ್ಪನ್ನ ಕಂಡರೆ ಇಷ್ಟ (ಜಾಪ). 'ತುಪ್ಪೋಗರ' ವರಾ. [ತುಪ್ಪ + ಅನ್ನ$_3$]

**ತುಪ್ಪಹೀರೆ, ತುಪ್ಪೀರೆ** (ನಾ). ಒಂದು ಬಗೆಯ ತರಕಾರಿ ಬಳ್ಳಿ ಮತ್ತು ಅದರ ಕಾಯಿ : "ಗಾಂಗೇರುಕೀ, ನಾಗಬಲಾ, ಝಷಾ. ಹ್ರಸ್ವಗವೇಧುಕಾ ೪ ಹೀರೆಗಿಡದ ಹೆಸರು. ಇವು ಹೀರೆ, ತುಪ್ಪಹೀರೆ, ಕಾಡುಹೀರೆ ಇವುಗಳೆಲ್ಲಕ್ಕೂ ಹೆಸರುಗಳು" (ಸಿದ್ಧಾಂತಿ. ೧೨೦); ಕಾಯಿಗಳು : ಅಗಸೆ . . . ಹೀರೆ, ತುಪ್ಪಹೀರೆ (ನಪ್ಯಸು. ೨೩೭). **ತುಪ್ಪೀರೆ:** ತುಪ್ಪೀರೆಕಾಯಿ ಬಂದಾವಂತ ಪ್ಯಾಟ್ಯಾಗ (ಗಂಮೂಯಿ. ೦೫೧).
[ತುಪ್ಪ + ಹೀರೆ$_1$ (<ಪೀರೆ)]

**ತುಪ್ಪಹೊಂಗೆ** (ನಾ). ಒಂದು ಬಗೆಯ ಮರ: "ಘೃತಪರ್ಣಕಃ—ತುಪ್ಪಹೊಂಗೆ" (ಒಷಧಿ. ೫೨). [ತುಪ್ಪ + ಹೊಂಗೆ$_1$]

**ತುಪ್ಪಳ** 'ತುಪ್ಪುಳ್' ನೋ.

**ತುಪ್ಪಳತಿಗಣೆ** (ನಾ). ಮೈಮೇಲೆ ಹಿಟ್ಟಿನಂಥ ಬಿಳಿಯ ಪುಡಿಯುಳ್ಳ ಒಂದು ಬಗೆಯ ಹುಳು, — ಕೀಟ : ತುಪ್ಪಳತಿಗಣೆ, ಸಸ್ಯಹೇನು (Mealy Bugs, Aphids). ಸಂಘಜೀವಿ ಕೀಟಗಳು ವಿವರವಾದ ಗೂಡುಗಳನ್ನು ಕಟ್ಟುತ್ತವೆ (ಕೀಟಬಿ. ೨೨).
[ತುಪ್ಪಳ (<ತುಪ್ಪುಳ್) + ತಿಗಣೆ (<ತಗಣೆ)]

**ತುಪ್ಪಳು** 'ತುಪ್ಪುಳ್' ನೋ.

**ತುಪ್ಪಟ್** 'ತುಂಪ್ಪುಟ್' ನೋ.

**ತುಪ್ಪೀರೆ** 'ತುಪ್ಪಹೀರೆ' ನೋ.

**ತುಪ್ಪು** (ಕ್ರಿ). ಉಗುಳು; ಉಗಿ : ಗಂಟಲ ಹತ್ತಿರದ ವರೆಗೆ ಹೋಗಿರುವ ಕಾಫಿಯನ್ನು ಹಿಂದಕ್ಕೆ ತುಪ್ಪಿ ಎದ್ದು ಕೂರಲು ಪ್ರಯತ್ನಪಟ್ಟಳು (ಗಂಗಾಳ.೨೯); ತೊಯ್ದಿದ್ದ ಚೌರಿಮೀಸೆಗಳನ್ನು ನೀವಿಕೊಳ್ಳುತ್ತಾ ಗಂಟಲು ಕ್ಯಾಕರಿಸಿ ಅಂಗಳಕ್ಕೆ ತುಪ್ಪಿ (ಮಲಮ. ೧೪); ಬಾಯಲ್ಲಿನ ಉಗುಳನ್ನು ತುಪ್ಪಿದ (ಸಂಸ್ಕಾರ. ೫೮).
[ದೇ.೫ ತಮಿ. ಮಲ. ತುಪ್ಪು; ಕೊಡ. ತುಪ್ಪ್, ತುಪ್ಪಿ; ತೆಲು. ತುಪ್ಪು ತುಪುಕ್ಕು; ಕುಇ. ಸೂಪ; ಕುವಿ. ಹೂಪಲಿ; ಕುರುಖ್. ತುಪ್ನಾ; ಮಲ್ತೊ. ತುಪೆ]

**ತುಪ್ಪುಳ್** 'ತುಂಪ್ಪುಟ್' ನೋ.

**ತುಪ್ಪುಳಂಚು** (ನಾ). ತುಪ್ಪಟದಿಂದ ಮಾಡಿರುವ ಅಂಚು ; ಉಣ್ಣೆಯ ಅರಿಗು : ಎಲ್ಲರೂ ನಾಗರಿಕರೀತಿಯಲ್ಲಿ ಜಾಕೀಟುಗಳನ್ನೂ, ತುಪ್ಪುಳಂಚಿನ ಮೇಲಂಗಿಗಳನ್ನೂ ಧರಿಸಿದ್ದರು (ಪುನರು. ೫೦೯).
[ತುಪ್ಪುಳ್ (<ತುಪ್ಪುಟ್) + ಅಂಚು$_2$]

**ತುಪ್ಪುಳಾಸನ** (ನಾ). ತುಪ್ಪಳದಿಂದ ನಿರ್ಮಿಸಿದ ತಲ್ಪ : ಶೀಘ್ರದೊಳು . . . ಮಲಗಿಸಿ ತುಪ್ಪುಳಾಸನದಿ (ಬಿಲ್ಹಪು. ೩೦–೧೪).
[ತುಪ್ಪುಳ್ (< ತುಪ್ಪುಟ್) + ಆಸನ]

**ತುಪ್ಪುಳು** 'ತುಂಪ್ಪುಟ್' ನೋ.

**ತುಪ್ಪುಳುಗೂದಲು** (ನಾ). ತುಪ್ಪಟದಂತೆ ನವಿರಾಗಿರುವ ಕೂದಲು : ತುಟಿಯ ಮೇಲುಭಾಗದಲ್ಲಿ ತುಪ್ಪುಳುಗೂದಲ ಕರಿಯ ಗೆರೆಗಳು ಮೊಳೆಯ ತೊಡಗಿ ಮುಖಕ್ಕೊಂದು ಮುಗ್ಧ ಮನೋಹರತೆಯನ್ನುಂಟುಮಾಡಿದ್ದುವು (ಮಲಮ. ೯೪).
[ತುಪ್ಪುಳು (< ತುಪ್ಪುಟ್) + ಕೂದಲು (< ಕೂಂದಲ್)]

**ತುಪ್ಪುಳುಮೀಸೆ** (ನಾ). ತುಪ್ಪಟದಂತೆ ನವಿರಾಗಿರುವ ಮೀಸೆ, ಚಿಗುರು ಮೀಸೆ : ಬೆಳೆವ ತುಪ್ಪುಳುಮೀಸೆ ಹಳಹಳನೆ ನಳನಳಿಸೆ (ಇಹರ. ದೇ. ೩೨–೦೨); ಮುಪ್ಪಾದ ನರರೊಮ್ಮೆ ಕೊಂಡರಾ ಕ್ಷಣದೊಳು ತುಪ್ಪುಳು ಮೀಸೆಯ ಮೂಡಿ ದಪ್ಪವೇರಿಸುವ ಶಕ್ತಿಯ ಧರಿಸಿದ ಹೆರ್ದುಪ್ಪವ ನೆರೆದಳು ಪತಿಗೆ (ಭರಕ. ೧೦–೩೩); ಇನ್‌ಸ್ಪೆಕ್ಟರ ಸಹಾಯಾಧಿಕಾರಿ ತುಪ್ಪುಳುಮೀಸೆಯ, ಸುಂದರ ತರುಣ (ಪುನರು. ೨೩೦).
[ತುಪ್ಪುಳು (< ತುಪ್ಪುಟ್) + ಮೀಸೆ]

**ತುಪ್ಪುಟ್,** ತಿಪ್ಪುಳ್, ತಿಪ್ಪುಳ, ತಿಪ್ಪುಳಂ, ತಿಪ್ಪುಟ್, ತುಪಟ, ತುಂಪ್ಪಟ, ತುಂಪ್ಪಳ, ತುಪ್ಪಳು, ತುಂಪ್ಪಟ್, ತುಪ್ಪುಳ್, ತುಪ್ಪುಳು, ತುಂಪ್ಪುಟು, ತುಂಬಟ (ನಾ). ೧. (ಕುರಿ, ಮೊಲ ಮೊದಲಾದ ಪ್ರಾಣಿಗಳ) ಮೃದುವಾದ ಹಾಗೂ ಗುಂಗುರುಗುಂಗುರಾದ ಮೈಗೂದಲು,—ರೋಮ ; ಉಣ್ಣೆ : ನಖದ ಮಾಂಸದಂತೆ [ ಪೂವಿನ ಕಂಪಿನಂತೆ ] ತುಪ್ಪುಟ ಬಣ್ಣದಂತೆ (ಧರ್ಮಾಮೃ. ೫–೦೨೫). ೨. ಹಕ್ಕಿಗಳ ಪುಕ್ಕ ; ಗರಿ : "ತುಪ್ಪುಟ್ = ಪಕ್ಕಿಯ ರೋಮಂ" (ಶಮುದ. ಶರಿ. ೦); "ತುಪ್ಪುಟಿನೆ ಖಗದ ರೋಮಂ" (ಸಂಜೀವ. ೫); ಮನಹನುರಾಗದಿಂ ನೆಗೆದು ನೀಡಿದ ಕಂಠಮರಲ್ದ ತುಪ್ಪುಟ್ . . . ರಂಜಿಸಿತ್ತನೆ (ಜಗವಿ. ೪–೦೭); ಪೆಱಯಂಚೆಯ ತುಪ್ಪುಟ್ಗಳಿಂ . . . ಜೊನ್ನದ ಪೊನಲೋ (ಚಿಳವಿ. ೬–೨೬). **ತಿಪ್ಪುಳ್ :** ೨. ನಲವಿಂದೆ ತಿಪ್ಪುಳ್ಗರ್ಚಿ ಸಂದುಗಾಣದೆ ತೆರೆಯೊಳಟ್ಟಿ ಕಡುಮೋಹದಿಂದ ಕಂದರ್ಪಕೇಳಿಯನನಾರತಂ ಬಿಡದೆ ಯಾನಂದದಿಂದೆಸಗುತಿಹ ಚಕ್ರವಕ್ಕಿಗಳಿಂದೆ (ಸಿದ್ಧೇಪು. ೨–೭). 'ಅಂಚೆದಿಪ್ಪುಳ್' ವರಾ. **ತಿಪ್ಪುಳ:** ೨. ಮರಗಳ ದಟ್ಟೈಸುವಿಕೆಯಿಂದ ತಂಗಾಳಿಯ ಶೀಟಕ್ಕೆ ಅಡಚಣೆಯಾಗಿದ್ದರೂ ಅದರ ಕುಳಿರ್ಪು ಎಲ್ಲಕಡೆಯೂ ಹಸರಿಸಿತ್ತು ; ಹುಂಜನ ಬೆಚ್ಚನೆಯ ತಿಪ್ಪುಳದ ಒಳಗೂ ನುಗ್ಗಿಹೋಗಿತ್ತು (ಕಾನೂರು. ೪೨). **ತಿಪ್ಪುಳು :** ೨. ಒಂದು ಕಡೆ ತಿಪ್ಪುಳು ಉದುರಿದ್ದು ಕಾಣಿಸಿತು (ಮಲಮ. ೧೪೭). **ತಿಪ್ಪುಟ್ :** ೨. "ತಿಪ್ಪುಟೆಂದು ಗಱ" (ಕಶಸಾ. ೬–೦೦೨) ; "ಗಱ ತಿಪ್ಪುಟ್" (ಕರ್ಣಾನಿ. ೩೭); "ಪಕ್ಕಿಗಳ ಗಱಯೆ ತಿಪ್ಪುಟ್" (ಕವಿಕಂ. ೬೩) **ತುಪಟ :** ೧. ಕುರಿಯ ತುಪಟದಿಂದ ಯಾವಾಗಲೂ ಕದರಿನಲ್ಲಿ ನೂಲುತ್ತಿರುತ್ತಾನೆ (ಬೃಸರ್ವ. ೪೫) ; ತುಪಟದ ಕಾಲುಚೀಲಗಳನ್ನು ಹಾಕಿಕೊಂಡು (ಡಾಳಕ. ೩೦) ; ತುತ್ತೂರಿ ಊದಿದರೆ ತುಪಟ ಬಾರದೇತೇ ? (ಗಾದೆ). **ತುಪ್ಪಟ :** ೧. ಕುರಿಯ ಬೆನ್ನಿನ ಚರ್ಮದಿಂದ ಬೆಳೆದ ತುಪ್ಪಟದಿಂದ ಕತ್ತರಿಸಲ್ಪಡುವ ಕೂದಲೇ ಉಣ್ಣೆ (ಗೃಹವಿ. ೩೮) : ಎಲ್ಲಾ ಕಡೆಗಳಲ್ಲಿಯೂ ವೃದ್ಧರಂಕುಮೃಗದ ತುಪ್ಪಟದ ಬಣ್ಣವುಳ್ಳ ಬಿಳುಪು ಕ್ರಮಕ್ರಮವಾಗಿ ಹರಡುತ್ತಿತ್ತು (ಸೌಂದಸ. ೦೪೫). ೨. "ಗರುತ್, ಗರಿ ಈ ೨ ಹಕ್ಕಿಯ ತುಪ್ಪಟಂ" (ಕಾಶಿಕ್ಯ. ೬೪). **ತುಪ್ಪಳ :** ೨. "ತುಪ್ಪಳಮನಲ್ ಪಕ್ಷಿರೋಮಂ" (ಕಶರ. ೪೭) ; ಅಂಚೆಯ ತುಪ್ಪಳಕ್ಕಿಂತ ನವುರಾದ ಆಕಾಶ ವರ್ಣದ ಕಿಂಕಾಬುವಸ್ತ್ರ (ಸುವಸಂ. ೪); ಅಲ್ಲಲ್ಲಿ ಉದುರಿದ್ದ ಹಕ್ಕಿಗಳ ತುಪ್ಪಳವನ್ನು ಆರಿಸಿ ತಂದು ಒಳಗೆ ಹರಡಿ ಹಾಸಿಗೆಯಂತೆ ಮಾಡಿತು (ಕಪಪು. VII. ೫೪). **ತುಪ್ಪಳು :** ೨. ಗಿಣಿಯ ತುಪ್ಪಳು ನೋಡಲು ಬಹಳ ಚೆನ್ನಾಗಿರುತ್ತದೆ (ಜಾಪ). **ತುಪ್ಪಟ್ :** ೨. ಕೆದಱುತುಂ ತುಪ್ಪಟ್ಗಳಂ . . . ಏನೊಪ್ಪಿದುರ್ದುವೋ ಕೇಕಿಗಳ್ (ಉದ್ಭಟ. ೯–೧೪೧). **ತುಪ್ಪುಳ್ :** ೨. "ತುಪ್ಪುಳೆನಲ್ ಖಗದ ರೋಮಮೆಂದಱಗೆ ಬುಧರ್" (ಛಾಂನಿ. ೯); ಹಂಸೆಯ ತುಪ್ಪುಳಹಾಸಿನ ಮೇಲೆ ಬಿಜಯಂಗೆಯ್ದು (ನಂಬಿರ. ೨–೬೪). **ತುಪ್ಪುಳು :** ೨. ಪಕ್ಷಿ ಮುಱಗಳನಿಕ್ಕುತ್ತ ಕಂಡೆ ತುಪ್ಪುಳು ಬಾರದು (ಅವದಂ. ೦೭೦–೭೬೮) : ಅರೆಮುಗಿದ ಲೋಚನದ ಸಂಪುಟವರಳೆ ಚಲಿಸುದ ಚಂಚುಪುಟದುಪ್ಪರಿಸಿದಂಘ್ರಿಯ ಕೆದಱದೆಱಕೆಯ ಬಿರಿತ ತುಪ್ಪುಳಿನ... ಸುರಿವ ನೆತ್ತರ ಪತಿಯ ಸುತ್ತಲು ತಿರುಗಿ ಚೀಱುವ ವಿಹಗಸತಿಯನು

ಕಂಡನಾ ಮುನಿಪ (ತೊರಂಗ. ೧-೨-೧೮) ; ಗಲ್ಲದಲ್ಲಿ ತುಪ್ಪುಳಿದ್ದು ಉಗ್ಗಿ ಹಿಗ್ಗಿ ನನೆಯುತಿರುವಿ (ಹಾಡುಪಾ. ೨೯-೫). **ತುಪ್ಪುಟಿ :** ೧. ಮೊಲದ ತುಪ್ಪುಟಿ–ಶಶೋರ್ಣ (ನಾಚಿರಾ. ೬). ೨. "ತುಪ್ಪುಟಿಂದು ಪಕ್ಕಿಯ ರೋಮಂ" (ಶಶಾ. ೬-೧೦೩) : ಅವಾರತನೂರುಹವ್ರಜಂ ಮಿಂಚುವ ತುಪ್ಪುಟಿಯಾಗೆ (ಉದ್ಭಟ. ೫-೧೦೫). **ತುಬಟಿ :** ೧. ಕುರಿಗಳ ಸಂತಾನ ಬೆಳೆಯಿತು. ಒಳ್ಳೆ ತಳಿ. ಅವುಗಳ ತುಬಟವಾದರೂ ಬಹಳ ನಯವೂ, ಉಷ್ಣ ಬಟ್ಟೆಬರೆಗಳ ಕೈಗಾರಿಕೆಗೆ ಬಹಳ ಉಪಯೋಗಕರವೂ ಆದದ್ದು (ಗಲಿಪ್ರ. ೦೦೩).

**ತುಪ್ಪುಳ್ದೊರಾಗು**= ತುಪ್ಪುಳದಂತೆ ಹಗುರವಾಗಿ ತೂರಿಹೋಗು : ಹಿಂದಕ್ಕೆ ಬೀಳುತ್ತಿದ್ದು, ಮೆಯ್ಯುಳಿಯ ಲುಳಿಯ ಬಿನ್ನಣದಿಂದ ತುಪ್ಪುಳ್ದೊರಾಗಿ ನಿಕ್ಕುಳಿಸಿ ನಿಂತು...ಪುದಿಗೆ ಒರಗಿಸಿ ನಿಲಿಸಿ (ಮಂಕೃಶ. ೩೦-೪).

[ ದೇ.೩ ತಮಿ. ತೂವಲ್, ತೂವಿ ; ಮಲ. ತೂವಲ್, ತೊಪ್ಪಲ್, ತೊಪ್ಪ, ಚೊಪ್ಪೆ ; ತುಳು. ತುಯಿ, ಸುಯಿ ; ಕೊಡ. ಕೊಪ್ಪಿಟ ; ತೆಲು. ತುಪ್ಪುಡು, ತ್ರುಪ್ಪುಡು]

**ತುಪ್ಪುಟಿ** 'ತುಪ್ಪುಟಿ' ನೋ.

**ತುಪ್ಪೂರು** (ನಾ). ಒಂದು ಊರಿನ ಹೆಸರು : ಇರ್ವರ್ರುಂ ತುಪ್ಪೂರಾಳ ಅರಸರಾನನುಮತಪ್ಪಡಿಸಿ (ಪ್ರುಅರಿ. ೦೯೨೫. ೧೦೬-೨೭ ; ?).

[ ತುಪ್ಪ + ಊರು$_3$ (<ಊರ್) ]

**ತುಪ್ಪೆ** 'ತೊಂಬೆ$_2$' ನೋ.

**ತುಪ್ಪೆನ್** (ಕ್ರಿ). ಉಗುಳು ; ಕಾರು ; ಕಕ್ಕು : ಸುರರುಂ ದೈತ್ಯರುಮ ಬ್ಧಿಯಂ ಕಡೆವುತಿರ್ಪ್ಪುದುಗ್ರಶೇಷಾಹಿ ಭೀಕರಕೋಪಾಗ್ರಹಿ ಕಾಳಕೂಟ ವಿಷಮಂ ತುಪ್ಪೆಂದಡೆ (ಕಇಅ. ೯೭ -೪-೩೭ ; 12ನೆಯ ಶ).

[ ತುಪ್ಪು + ಎನ್$_1$ ]

**ತುಪ್ಪೇಱು** (ಕ್ರಿ). ೧. ತುಪ್ಪದಿಂದ ಲೇಪನ ಹೊಂದು, -ಜಿಡ್ಡಾಗು : ತುಪ್ಪೇಱಿದ ದರ್ಪಣದೊಳ್ ಪಜ್ಜಳಿಸಲಾರ್ಪುದೇ ಪ್ರತಿಬಿಂಬಂ (ಯಶೋಕ. ೧-೩೬). ೨. (ಆಲಂ) ಕುಗ್ಗು ; ಕವಿಮ್ಮೆಯಾಗು: ಇನಿತು ಸುಡುನುಡಿಯೇಕೆ ತುಪ್ಪೇಱಿದೊಲವೀಗೆ ತಪ್ಪು ಕರಸಾಣೆ ಮತ್ತೆ ಪೊಸತಪ್ಪುದನಱಿಯೆ (ಅನಂಪು. ೮-೧೭ ಪ). [ ತುಪ್ಪ + ಏಱು$_1$ (< ಏಱ್$_1$) ]

**ತುಪ್ಪೊಡೆ** (ನಾ). ತಂಪ್ಪದಲ್ಲಿ ಕರಿದ ವಡೆ : ಮಾಡಿದ ಪುಳ್ಗೆ ಕಜ್ಜ ತೊಗೆ ತುಪ್ಪೊಡೆ . . . ಮೊದಲಾದವೆಲ್ಲಮುಂ ಜೋಡಿಸಿ ತೋರ್ಪವಿಂತಿವರ ಭೋಜನಕಾರ್ ಗುಱಿಯ್ಯ ಮದೀಶ್ವರಾ (ಹಾಲಾಸ್ಯ. ೦-೮೩).

[ ತುಪ್ಪ + ಒಡ್ಡೆ (< ವಡ್ಡೆ$_1$) ]

**ತುಪ್ಪೋಗರ** (ನಾ). ತುಪ್ಪದಲ್ಲಿ ಕಲಸಿದ ಅನ್ನ : ಉತ್ತರಾನಕ್ಷತ್ರದಲ್ಲಿ ಜ್ವರ ಬರಲು ಏಳುದಿವಸ ಕಾಡುವುದು. ಆ ನಕ್ಷತ್ರಾಧಿದೈವಸಾದ ಭಗದೇವತೆಗೆ ತುಪ್ಪೋಗರವ ಬಲಿಯು ಹಾಕಿಸುವುದು (ವೈದ್ಯಸಾ. I, ೦೩೨).

[ ತುಪ್ಪ + ಓಗರ ]

**ತುಫಾನ್** 'ತಂಫಾನು' ನೋ.

**ತುಫಾನಿ** 'ತಂಫಾನು' ನೋ.

**ತುಫಾನು**, ತುಪಾನು, ತಂಫಾನ್, ತುಫಾನಿ, ತೂಫಾನು (ನಾ). ೧. ಬಿರುಗಾಳಿ ; ಚಂಡಮಾರುತ : ಕಾನಡಾಜಿಲ್ಲೆಯ ಸಮುದ್ರತೀರದಲ್ಲಿ ಬಹುತರ ತುಫಾನುಗಳಾಗುವುದಿಲ್ಲ (ಕಧಾಗ. ೦೨); ಸಮುದ್ರದಲ್ಲಿ (ಉಬ್ಬರ) ತುಫಾನು ಏಕೆ ನಿಲ್ಲಲಿಲ್ಲ (ಕಮಳ. ೧೩೩); ಈ ತುಫಾನಿನಲ್ಲಿ ಎಷ್ಟೋ ಹಡಗುಗಳು ಮುಳುಗಲಿವೆ (ಕೈಲಾಳ. ೬೦). ೨. ದೂರಂ ; ಅಪವಾದ ; ದೂಷಣೆ : ತುಫಾನು ಬಂದರೂ ಬರಬಹುದು (ದೌಲತ್. ೩೦೨). **ತುಪಾನು :** ೨. ಇಂತಹ ತುಪಾನು ಮಾಡುತ್ತಲೇ ಇರುತ್ತಾಳೆ (ದೌಲತ್. ೦೩೫); ತುಪಾನು ಬಂದ ಮೇಲೆ ತಬ್ಬಿಕೊಂಡರೆ ಆದೀತೆ ? (ಗಾದೆ). **ತುಫಾನ್:** ೧. ಲಕ್ಷದ್ವೀಪದ ಕಡೆಗೆ ಹೋಗುತ್ತಿರುವಾಗ ದೊಡ್ಡದಾಗಿ ತುಫಾನ್ ಗಾಳಿ ಎದ್ದು ಹಡಗು ಮುಳುಗಿಹೋಗುವ ಸಮಯವಾಯಿತು (ಹೇಟಿಕಥಾ. ೩೩). **ತುಫಾನಿ :** ೨. ನಿನ್ನ ಮ್ಯಾಗ ಏನ ತುಫಾನಿ ಹೊರಸ್ಯಾರು (ನಡೆದಾ. I, ೨೯೮) ; ನನ್ನ ಮ್ಯಾಲೇ ತುಫಾನಿ ಹೊರಸತೀರಲ್ಲ ? (ಗ್ರಾಮಾಯ. ೩೩). **ತೂಫಾನು :** ೧. ಇವತ್ತು ಹೋಗುವುದು ಬೇಡ, ತೂಫಾನು ಉಂಟು (ಹೊಸಕ್ಕ. ೫೭)

[ ← ಮರಾ. ತುಫಾನ್ ; ಅರ. ಹಿಂ. ತೂಫಾನ್ ]

**ತುಬಟ** 'ತುಪ್ಪುಟಿ' ನೋ.

**ತುಬಾಕಿ** 'ತಂಪಾಕಿ' ನೋ.

**ತುಬ್ಬರಿಕೆ** (ನಾ). ಕಳವನ್ನು ಪತ್ತೆ ಹಚ್ಚುವಿಕೆ ; ಅಪರಾಧಿಗಳನ್ನು ಕಂಡುಹಿಡಿಯುವಿಕೆ : ತುಬ್ಬರಿಕೆಯ ಪಾತೆಗೆ ಸೇರಿ, ಯಾವುದೊಂದು ರಹಸ್ಯವಾಯ ತುಬ್ಬನ್ನು ಭೇದಿಸುತ್ತಾ (ಕಾಲಭೂ. ೩೦).

[ ತುಬ್ಬು$_1$ + ಅರಿಕೆ (< ಅಱಿಕೆ) ]

**ತುಬ್ಬರಿವಿಕೆ** (ನಾ). = ತುಬ್ಬರಿಕೆ: ರಾತ್ರಿ ೧೦ ಘಂಟೆಯಿಂದ ಈಗ ೨ ಘಂಟೆಯವರೆಗೆ ನಡೆದ ತುಬ್ಬರಿವಿಕೆಯಲ್ಲಿ ಅವನು ಯಶಸ್ವಿಯೇ ಆಗಿದ್ದನು (ಕಾಲಭೂ. ೩೦). [ ತುಬ್ಬು$_1$ + ಅರಿವು (< ಅಱಿವು) + - ಇಕೆ ]

**ತುಬ್ಬಿಸು** (ಕ್ರಿ). ೧. ಪತ್ತೆಮಾಡಿಕೊಡು ; ಹುಡುಕಿಕೊಡು : ಗಬ್ಬಿತನದೊಳಾತ ಹೊಕ್ಕಿರ್ದುದ ಕಂಡು ತುಬ್ಬಿಸಿಕೊಟ್ಟವರಾವು (ಪೋಹತ. ೩೬-೦೭). ೨. ಹರಡು ; ಪ್ರಕಟಪಡಿಸು : ನಿನಗೊಂದು ಲಂಚವನೀವೆ ತುಬ್ಬಿಸದಿರೀ ಮಾತ ಭಕ್ತರೊಳಗೆ (ಪ್ರಭುಪು. ೮-೯೬).

[ ತುಬ್ಬು$_1$ + – ಇಸು$_3$ ]

**ತುಬ್ಬು$_1$**, ತೆಬ್ಬು$_1$ (ಕ್ರಿ). ೧. ಕಳ್ಳನನ್ನು ಪತ್ತೆಹಚ್ಚು,—ತೋರಿಸು,—ಶೋಧಿಸು : "ತುಬ್ಬು–ಚೋರಸೂಚನೇ (ಕಳ್ಳನನ್ನು ತೋರಿಸು), ತಲ್ಲಂಚೇ ಚ (ಸಿಕ್ಕಿಬಿಡು)" (ಕಮುರಾ). ೨. ಹೊರಗೆಡಹು ; ಬಯಲಂ ಮಾಡು ; ಪ್ರಕಟಿಸು ; ತಿಳಿಸು : ನಾಲಗೆ ಕುಲಮಂ ತುಬ್ಬುವಪೊಲುಱದೆ ನೀಂ ಕಡೆನುಡಿವೈ (ಪಂಶಭಾ. ೧೦-೨೦); ತುಬ್ಬಿಕೊಟ್ಟುದವಿದ್ಯೆಯು ಸುಧೆಗೊಬ್ಬುಗಳ ಗಂಡಿಗರ ಗಾಢದ ಗರ್ಭವನು ಹೊಳ್ಳಿಸಿತು ಗರಳಗ್ರೀವ ಸುಪದೇಶ (ಕುಮ್ಮಾಳ. ೬-೩೦). ೩. ಹೊರಬೀಳು ; ಬಯಲಾಗು : ಪುಡುಕೆಯ ಮೊಲನಂತೆ ತುಬ್ಬು [ಪಾಠಾಂ. ಕುಂಬು] ಕಿರ್ಪರ್ ಪಗೆವರ್ (ಜಾವುಂಪು. ೪): ಸಾಕಿನ್ನು ಹೇಳದೊಡೆ ಮಾಣಲಂತಸ್ಥವದು ತಾನೆ ತುಬ್ಬುವುದೆಂದು ನಗುತಿರ್ದರು (ಕೃಮಿಧಾ. ೩೦-೩೦). ೪. ಹರಡಂ ; ವ್ಯಾಪಿಸು : ಸರ್ಬಜನರಿಗೆ ವಿರೋಧ ತುಬ್ಬದೆ ಬಿಡದು (ಅಂಜಿತ. ೪-೮೨); ತುಬ್ಬುವುದೊ ತಾ ಬಂದ ಬರವಿದು (ಕುಮ್ಮಾವಿ. ೩-೩೯) ; ಸಂಜೆಗೆಂಪಾದುದು ದಿಶಾವಳಿಯ ತು [ಪಾಠಾಂ. ತ] ಬ್ಬಿದಲಗಿನ ಬೆಳಗಿನಲಿ (ತೊರಂಗ. ೬-೨೫-೦೦): ನಾಳೆ ತುಬ್ಬುವುದು ಈ ಸುದ್ದಿ (ಚಂದ್ರಹಾ. ೩-೩೯). ೫. ತಳ್ಳು ; ನೂಕು : ನರಕದತ್ತಲು ತುಬ್ಬ ಹೇಳೋ ಖಳರನು (ಕಾಶಿರಾ. ೨೦-೪೪) ; ಉಬ್ಬಿದಳು ಹರುಷದಲಿ ದುರಿತವನೆಬ್ಬಿದಳು ಕಳವಳದ ಹಸರವ ತುಬ್ಬಿದಳು (ನಿಧಾಗ. ೮-೦೫-೬) : ಅಬ್ಬರಿಸಿ ತೋಳ್ಗಲಿ ನಭವನಾ ಗಬ್ಬರಿಸುತ್ತೈತರಲು ಚಕ್ರವ ತುಬ್ಬಿದನು ತುದಿವೆರಳ ಸನ್ನೆಯಲಿ (ನಿಧಾಗ. ೧೦-೬೯-೦೭). ೬. ಉತ್ಸಾಹಿಸು: ಬೀಕಲಿನ ಭಟರುಬ್ಬಿದರೆ ಸುವ್ಯಾಕುಲರು ತುಬ್ಬಿದರೆ ತಪ್ಪೇನೀ ಕಳುಂಬವ ಕಾಯ್ದುಕೊಳ್ಳೆಸುತೆಚ್ಚನಾ ಪಾರ್ಥ (ಕುಮ್ಮಾಕ. ೨-೩೨). ೭. ಅಪಹರಿಸಂ : ರಾಜದ್ರವ್ಯವನು ಬಯಸಿ ತುಬ್ಬಿದರೆ... ಕಾಲಿಗೆ ಕಬ್ಬುನದ ಕಡೆಯಾವನು ತೊಡಿಸುವರು (ನಿಧಾಗ. ೦೦-೩೭-೫). **ತೆಬ್ಬು$_1$:** ೪. ಕೋಪದಿಂದುಬ್ಬಿ ಕೊಬ್ಬಿಱಿದು ಕುಬುಬುಬುಬೆಂದು ಕೂಗಿಟ್ಟಡೊಡನಂಬರಂ ಕೂಗಲು ತೆಬ್ಬುತೆಣ್ಣೆಸೆಯ ಮೂಲೆಯ ಕರ್ಣ ಕೋಟರಗಳಾರ್ಭಟದೆ ಕಿವುಡುವಡೆದವು (ಅಶಿಚಂ. ೦೮-೨೯) : ಅಬ್ಬರಕೆ

ಹಿಂಡೊಡೆದು ಹಾಯ್ವುವು ಸೂಸಿದವು ದೆಸೆಗೆ ತೆಬ್ಬಿದವು . . . ವೇಡೆಯ ವರಿಗೆ ಹಬ್ಬವಾಯ್ತು (ಶುಪ್ಪಾ.ಅ. ೦೩-೨೩). ೮. ತೂರು ; ಎಸೆ : ತೆ [ಪಾಠಾಂ. ತು] ಬ್ಬಿ ತುಳುಕುವ ಕಣೆಯ ಕಣೆಯಲಿ ಹಬ್ಬಿ ಹರೆದುದು ತೋರದಲಿ ಬಲಿದುಬ್ಬುಗವಳದ ಕಣ್ಣುಗಳು ಕರ್ಣಾವಸಾನದಲಿ (ಕುಪ್ಪಾ.ಕ. ೨೬-೫೦). [ದೇ.॥ ತಮಿ. ತುರುವು]

**ತುಬ್ಬು₂** 'ತೊಬ್ಬು' ನೋ.

**ತುಬ್ಬು₃** (ನಾ). ೧. ಕಳ್ಳತನ ಮೊದಲಾದ ಅಪರಾಧವನ್ನು ಕಂಡು ಹಿಡಿಯುವಿಕೆ,–ಅಪರಾಧದ ಪತ್ತೆ : ಕಳವುಗಳು ನಿಲ್ಲಲಿಲ್ಲ. ಒಂದಾದರೂ ತುಬ್ಬು ಆಗಲಿಲ್ಲ (ವಾಗ್ದೇವಿ. ೧೧೦) ; ಆದರೂ ಕಳ್ಳರ ತುಬ್ಬು ಆಗಲಿಲ್ಲ (ಕುಕಥ. ೧೦೨). ೨. ಬೇಹುಗಾರಿಕೆ ; ಗೂಢಚರ್ಯೆ : ಪೋಲೀಸರು ಇತ್ತೀಚೆಗೆ ನಡೆದ ಕೊಲೆಯ ಬಗ್ಗೆ ತುಬ್ಬು ನಡೆಸುತ್ತಿದ್ದಾರೆ (ರೂಢಿ). ೩. ಪ್ರೋತ್ಸಾಹ : ಉಬ್ಬಿದನು ನಿನ್ನಾತನಾತನ ತುಬ್ಬಿನಲಿ (ಕುಪ್ಪಾ.ಕ. ೨೬-೫೦).

**ತುಬ್ಬಾಗು**=ಗೊತ್ತಾಗು ; ಪತ್ತೆಯಾಗು : ಏದ್ಮನ್ನಾಲಿವೆಸರ ರಕ್ಕಸನ ಪೆರ್ವಡೆ ತುಬ್ಬಾದತ್ತು (ರಾಮಾಶ್ವ. ೧೧೧-೧೬) ; ಇಷ್ಟು ದಿನಗಳ ಅಭಾವದ ಹೊಲಬು ತುಬ್ಬಾಗಿ (ವೀರಂಂ. ೩೯) ; ತೋಟದ ಎಲಕ್ಕಿ ಕದ್ದುಹೋದದ್ದು ಮಾತ್ರ ತುಬ್ಬಾಗದೆ ಉಳಿಯಿತು (ಕುಡಿಕೊ. ೧೮೦) : ತುಬ್ಬಾಗದ ಕಳವು ಮಬ್ಬಾದ ಮೇಲೆ ಸಿಕ್ಕೀತೆ ? (ಗಾದೆ). **ತುಬ್ಬಿನವದಿರು** = ಗೂಢಚರ್ಯೆ ಮಾಡುವವರು ; ಗೂಢಚಾರರು : ಉಬ್ಬಿದನಲ್ಲ ಮಧುರವಚನದ ಹಬ್ಬ ದಲಿ ನಿನ್ನಾತನತ್ತಲು ತುಬ್ಬಿನವದಿರು ತಂದು ಬಿಸುಟರು ನಿಮ್ಮ ಪಾಳೆಯದ ಸರ್ವವೃತ್ತಾಂತವನು (ಕುಪ್ಪಾ.ಕ. ೧-೨೦). **ತುಬ್ಬುವಾಡು** = ಪತ್ತೆಮಾಡು; **ಕಂಡುಹಿಡಿ** : ಹುಲಿಯ ಹೆಜ್ಜೆಗಳ ಜಾಡನ್ನು ಹಿಡಿದು ಹುಲಿ ಹೋದ ದಾರಿಯನ್ನು ತುಬ್ಬುಮಾಡಿದ (ಹುಲಿಹಾ. ೧೮) ; ನೋಡಿ ತುಬ್ಬುಮಾಡ ಬೇಕಾದವನು ನೀನು (ಕುಡಿಕೊ.೨೬೪). **ತುಬ್ಬುಹಚ್ಚು** = ತುಬ್ಬುಮಾಡು : ಸರಲಾಕ್ಷರಾಯರು ಅಪರಾಧಿಗಳ ತುಬ್ಬುಹಚ್ಚುವುದರಲ್ಲಿ ಒಳ್ಳೇನಿಪುಣರೂ, ದಕ್ಷರೂ ಆಗಿರುವರು (ಕೋಳಿಮು. ೨೫೦).

[<ತುಬ್ಬು₁./ತಮಿ. ತುವ್ವು ; ಮಲ. ತುನ್ಪು ; ತುಳು. ತುಬ್ಬು]

**ತುಬ್ಬುಕಾಱ**, ತುಬ್ಬುಗಾರ (ನಾ). ರಹಸ್ಯಗಳನ್ನು ಪತ್ತೆಹಚ್ಚು ವವನು; ಪತ್ತೇದಾರ ; ಗೂಢಚಾರ : ಆಕರಿಸಿ ಬೆಸಗೊಂಡು ಬಿಟ್ಟರನೇಕ ನೃಪರನು ಬೇಹು ಹರಿದುದು ನಾಕುವಯ್ಯಲಿ ತುಬ್ಬು ಕಾಱರಿಗಿತ್ತು ಬಹುಧನವ (ಕುರರಾ. ೮-೯-೧೧). **ತುಬ್ಬುಗಾರ** : ತುಬ್ಬು ಗಾರರ ಶೋಧಕ್ಕೆ ತುಬ್ಬುಗಾರರನ್ನು ನಿಯಮಿಸುವ ಸಮಯ ಬಂದಿದೆ (ಕೃತಕ್ಕ. ೧೩೦) : ನರಸಿಂಗರಾಯರಂತಹ ಚಾಣಾಕ್ಷ ತುಬ್ಬುಗಾರ ಮಂಕು ಹಿಡಿದು ಕುಳಿತಿರುವಾಗ ನನ್ನಂತಹವನಿಂದ ಏನು ತಾನೇ ಆದೀತು ? (ಕರ್ಣಪಿ. ೮೩). [ ತುಬ್ಬು₃ + – ಕಾಱ ]

**ತುಬ್ಬುಗಾರ** 'ತುಬ್ಬುಕಾಱ' ನೋ.

**ತುಬ್ಬುಗಾರಿಕೆ** (ನಾ). ಬೇಹುಗಾರಿಕೆ ; ಗೂಢಚರ್ಯೆ : ತುಬ್ಬುಗಾರಿಕೆಯ ಸನ್ನಿವೇಶಗಳಲ್ಲಿ ಅವನ ಮತವನ್ನು ವಿಚಾರಿಸುತಲಿದ್ದರು (ಕೃತಕ್ಕ. ೮೩).

[ ತುಬ್ಬುಗಾರ ( < ತುಬ್ಬುಕಾಱ) + – ಇಕೆ ]

**ತುಬ್ಬುಗೊಡು** (ಕ್ರಿ). ಗರುತುವಮಾಡಿ ತೋರಂ : ಉಬ್ಬಿ ರಣದೇವತೆಗೆ ಮಿಕ್ಕಿನ ಕರ್ಬುರರ ಕೋಱಸಲಿಕಸುರನ ತುಬ್ಬುಗೊಟ್ಟನು ತೋಟಿ ನಿಂದುದು ತಾಮಸೀಚರನ (ಕುರರಾ. ೬-೪೯-೨೩).

[ತುಬ್ಬು₁ + ಕೊಡು₁ ]

**ತುಮಕಿ** (ನಾ). ಒಂದು ಬಗೆಯ ಮರ ; ತಿಂದುಕ : ಕುಪರಥ, ಹಿಗೆ, ತುಮಕಿ, ತಿಂಡುಕ,ಹೊಳೆತುಮ್ರಿ, ಬಂಧ (ವ್ಯಾಶಿಗಿ. ೩೦-೬೦೩).

[← ತೆಲು. ತುಮಿಕಿ, ತುಮ್ಮಿಕಿ, ತ್ರುಮ್ಮಿಕಿ ]

**ತುಮರಿ** ' ತುಂಬುರ್ ' ನೋ.

**ತುಮರು** ' ತುಮುಂರಂ ' ನೋ.

**ತುಮಾನ್** (ನಾ). ಸಡಿಲವಾದ ಹಾಗಂ ನೀಳವಾದ ಚಲ್ಲಣ : ಅವನ ತುಮಾನ್, ಅವನ ಶೇರವಾನ್, ಅವನ ಮಂದೀಲ ಮುಂತಾದವುಗಳನ್ನು ನೋಡಲಾಗಿ ಅವನು ಒಳ್ಳೇ ಮನೆತನಸ್ಥನಾಗಿ ತೋರಿದನು (ಕೋಳಿಮು.೨೮೪).

[← ಮರಾ. ತುಮಾನ್ ; ಪಾರ. ತುಂಬಾನ್]

**ತುಮಿಸು** (ಕ್ರಿ). (?) : ಮೇಲ್ಮಲ ಮುಚ್ಚಿ ತುಮಿಸಿ ತಳವೆಳಗಾಗುವಂತೆಸಗೆ (ಜಿನಮು. ೦೭-೧೪). [ ? + – ಇಸು₃ ]

**ತುಮುಕು₁** (ಕ್ರಿ). "ತುಳುಕು" (ಜಾನಕೋ. ೬೬) : ಕೆರೆ ತುಂಬಿ ತುಮುಕುತ್ತಿದೆ (ರೂಢಿ). [← ತುಳು. ತುಮುಕು,ತಿಮುಕು,ದಿಮುಕು ]

**ತುಮುಕು₂** ' ಟುಮುಕು ' ನೋ.

**ತುಮುರು**, ತುಮುಂರಂ (ನಾ). ೧. ಚೂರಂ ; ಭಾಗ ; ಖಂಡ : ಹುರಿದ ಬಡಗಸಂಡಗೆಯ ತುಮುರಿತ್ತು ಬಿಳಿಯುಪ್ಪುಳ್ಳಿಯಿಕ್ಕಿ (ಸೂಶಶಾ. ೩-೧೭): ಸಬಳಚಕ್ರವಾಕ್ಷಣಂ ತುಮುರಾದುವು (ಜಬಧು. ೪೪-೦೩) ; ತುಮುರೆ ದ್ದೊಡೆದ ನಿಸ್ಸಾಳೆಗಳ ವಾದ್ಯದ ಗಡಣದಿಂದಲಿ ರೂಢಿ ವಿಗೆ ರಂಜಿಸಿತು ರಣಭೂಮಿ (ಪ್ರಹ್ಲಾ.ಚ. ೦೫-೩೩); ಹಡಗನು ಕೀಲಿಸಿ, ತುಮುರನು ತೇಲಿಸಿ, ದಡದಲಿ ಝಾಡಿಸಿ...ಬರುತಿದೆ (ಕಪಿತ್ಥ. ೨೬-೩). ೨. (ಕರಾ) ತಾಳೆಗರಿ ಛತ್ರಿಯ ಬಿದಿರಿನ ಕೀಲುಕಡ್ಡಿ : ಸ್ವತಃ ಐತಾಳರು ಹಿಡಿದ ಕಾಲುಕೊಡೆ, ಮದುವೆಯ ಮನೆಯನ್ನು ಏರುವಾಗ ತುಮುರು ಮಾತ್ರ ಉಳಿದಿತ್ತು (ಮರಜು. ೩). **ತುಮರು** : ೧. ಆ ಸಂಘಟ್ಟನದಲ್ಲಿ ಅವರಿಬ್ಬರ ಭರ್ಜಗಳೂ ತುಮರು ತುಮರಾಗಿ ಒಡೆದುಹೋದವು (ಭಾರವೀ. ೦೨೪).

**ತುಮುರು ತುಮುರು**, ತುತ್ತುಮುರು, ತುಮುರ್ತುಮುರು (ದ್ವಿರುಕ್ತಿ): ಅವರು ಎಸೆದ ಆಯುಧಗಳಂ ತಮ್ಮ ಬಾಣಗಳಿಂ ತುಮುರುತುಮುರಾಗಿ ಮಾಡುತ (ಸೌಗಂಧಿ. ೨೯೬-೦೩) ; ಸೂತನಂ ರಥ ರಥಾಂಗಂಗಳಂ ತುಮುರು ತುಮುರಾಗಿಸಿದರು (ಶೀಕಹಾ. ೦೭೫-೩೩) : ಆ ಕುಲಿಶದೇಹಿಯನು ಶರಹತಿ ತಾಕೆ ತುತ್ತುಮುರಾಗಿ ಬೀಳಲನೇಕ ನಿಶಿತಾಯುಧಂಗಳಿಂದುಬ್ಬರಿಸಿ ಘಾತಿಸಲು (ಅನಂರಾ. ೮-೫-೯) ; ಅರ್ಜುನನು ಹತ್ತು ಬಾಣಗಳನ್ನು ಪ್ರಯೋಗಿಸಿ ಅದರ ತಲೆಯನ್ನು ತುತ್ತುಮುರು ಮಾಡಿದನು (ಕೃಪಾಅ. ೨೪೪) ; ಅವನ ಕೇರ್ತು ಮುರ್ತುಮುರಾಗಲೆಚ್ಚು ವಸುಮತಿಗೆ ಕೆನ್ನೀರ್ ತುಳ್ಕೆ ತುಳ್ಕಿದಂ (ಜಬಧು. ೪೪-೪೦): ಪುಷ್ಪಾಸ್ತ್ರದಿಂದಂ ರತಿಕಾಂತಂ ರೋಷವಾಂತೆನ್ನೆರ್ದೆ ತುಮುರ್ತು ಮುರವೃಂತೆ ಪೊಯ್ದಪ್ಪಂ (ರಮುಕ್ಕ.೦-೦೨೪). **ತುಮುರುವಾಡು** = ಚೂರು ಮಾಡು; ತುಂಡಂವಾಡು: ಅವು ಕಾಣದ ರೀತಿಗೆ, ಆ ಸರ್ಪಂಗಳಂ ಹಿಡಿದು ತುಮುರುವಾಡಿ (ಕೃಪಾಅ. ೫೬).

[ದೇ.॥ ತುಳು. ತಿಬುರು ; ತೆಲು. ತುಮುರು]

**ತುಮುಲ**, ತುಂಮುಳ (ಗು). ೧. ಗಡಿಬಿಡಿಯಿಂದ ಕೂಡಿದ ; ದೊಂಬಿ ಯಿಂದ ಕೂಡಿದ; ಗಲಾಟೆಯುಳ್ಳ: ಆಶ್ರಮದ್ರುಮಶಿಖರನೀಡ ನಿಕಟಾಭಿ ಮುಖ ಕಲಕಲ ತುಮುಲ ಪಕ್ಷಿಗಾನಂ (ಶ್ರೀರಾಮಾ. ೦೭೬-೫). ೨. ತೀಕ್ಷ್ಣ ವಾದ ; ಘೋರವಾದ: ತುಂಟೆಪಾಡಿಯಲ್ಲಿ ಇವರೆಡು ಪಕ್ಷದವರಿಗೂ ತುಮುಲವಾದ ಯುದ್ಧವಾಯಿತು (ಕರ್ಣಾಕಅ.೦೬೩). (ನಾ). ೩. ಗೊಂದಲ; ಗಲಿಬಿಲಿ; ಗಲಭೆ; ಹುಯಿಲು : ಎಲ್ಲಾ ಕಲೆಗಳೂ ಕ್ಷಣಿಕವಾದ ತುಮುಲ ಗಳನ್ನು ಹಿಡಿದಿಡಲು ಯತ್ನಿಸದೆ...ಸಾರ್ವಕಾಲಿಕವಾದ ಭಾವಗಳನ್ನೇ ಅಭಿ ವ್ಯಕ್ತಿಗೊಳಿಸಲು ಹೊರಟಿದ್ದು ಒಂದು ವಿಶೇಷ (ಸೌಂದಶ. ೦೩೬) ; ಆಕೆಯ ಮಾನಸದಲ್ಲಾವುದೋ ಭಯಂಕರ ತುಮುಲವೊಂದು ನಡೆಯುತ್ತಿದೆ (ದಾಂಪ. ೨೦): ಪ್ರಶ್ನೋತ್ತರಗಳ ತುಮುಲ ಮನದಲ್ಲಿ ಭರದಿಂದ ಸಾಗುತ್ತಿದ್ದಿತು (ತ್ಯಾಗಮು.೦೨೫). ೪. ಗುಂಪುಗೂಡಿ ನಡೆಸುವ ಕಾಳಗ; ದೊಂಬಿಯುದ್ಧ : "ತುಮುಲ, ರಣಸಂಕುಲಂ–೨ ಸೇನೆಗಳೂ ದೊಂಬಿಯಾಗಿ ಸೇರಿ ಹರಡುವ

ದ್ವಂದ್ವಯುದ್ಧದ ಹೆಸರು" (ಸಿದ್ಧಾಂ.ಶಿ. ೨೩೦). **ತುಮುಳ** : ೧. 'ತುಮುಳ ಕೇಳಿ' ಪರಾ. [ಸಂ.]

**ತುಮುಲಕಾಳಗ** (ನಾ). = ತುಮುಲ೪ : ಕುದುರೆ ಕುದುರೆಯೊಳ್ಕಟ್ಟಿ ಅತಿತುಮುಲಕಾಳಗ ಪೆಚ್ಚೆ (ಎಕ. VIII, ಸೊರಬ. ೧೦-೫ : ಸು.೬೦೦).
[ ತುಮುಲ + ಕಾಳಗ (< ಕಾಳೆಗ) ]

**ತುಮುಲಕೇಳಿ**, ತುಮುಳಕೇಳಿ (ನಾ). ಗಲಭೆಯಿಂದ ಕೂಡಿರುವ ಸಾಮೂಹಿಕ ಕ್ರೀಡೆ, – ಆಟ : ಅನಂತರಂ ತುಮುಲಕೇಳಿಯಿಂದೋ ರೊರ್ವರಂ ತುಳುಂಕಾಡುವಾಗಳ್ (ಚಂದ್ರಪ್ರ. ೭-೦೧೩ ವ). **ತುಮುಳಕೇಳಿ** : ಲಲಿತ ಲತಾಂಗಿಯರ್ ತುಮುಳಕೇಳಿಯ ವಾರಿವಿಹಾರದೊಳ್ ... ಒಡ್ಡಿದರ್ ಪೊದಟ್ಟಲರ್ಗಣೆಗೊಡ್ಡಿದಡ್ಡಣವಿದೆಂಬಿನಮುಟ್ಟವಿಚಿತ್ರಪತ್ರಮಂ (ಶಾಂತಿಪು. ೮-೩೮) ; ಶಾತಕುಂಭಕುಂಭಂಗಳಿಂ ಜಂಭಾರಿ ಶಂಭುಗಭಿಷವಮಂ ತುಮುಳಕೇಳಿಯಿನೊಡರ್ಚಿದಾಗಳ್ (ಚಂದ್ರಪ್ರ. ೦೨-೦೫೦ ವ).
[ತುಮುಲ + ಕೇಳ್$_2$ (= ಕೇಲಿ)]

**ತುಮುಲಯುದ್ಧ**, ತುಮುಳಯುದ್ಧ (ನಾ). = ತುಮುಲ ೪ : ತುಮುಲಯುದ್ಧದೊಳ್ ಪಟುಭಟರಂ ನೂಂಕುವ ಸಮರಂಗಾಜಿನ ಮಾಂಕರಣೆಯ ಗಂಡುತನದ ಕಿರುಳೆನಿಪೆಚ್ಚುಂ (ಕಣ್ಣಾಸು. ೩೦೪ ವ್ಯಾಖ್ಯಾ); ತುಮುಲಯುದ್ಧದಲ್ಲಿ ಪಾಂಡವರ ಕೈ ಮೇಲಾಯಿತು (ಪಡಭಾ.೧೬೨): ಇಬ್ಬರಿಗೂ ತುಮುಲಯುದ್ಧವಾಯಿತು (ಶ್ರೀಕಾಯ. ೨೦೪). **ತುಮುಳ ಯುದ್ಧ** : ತುಮುಳಯುದ್ಧದೊಳಿಂತೆ ನಿರಂತರಂ ತಮುಟ್ಟು (ನೇಮಿಪು. ೦೨-೨) ; ಅನಿಮಿಷಮಾರ್ಗದೊಳ್ ನೆರೆದ ದೇವಗಣಂ ಪೊಗೆಗೊಂಡ ಚಿತ್ರಮಂ ನೆನೆಯಿಸಿದತ್ತು ತತ್ತುಮುಳಯುದ್ಧಸಮುದ್ಧತಧೂಳಿಜಾಲದೊಳ್ (ಸೂಕ್ತಿಸು. ೦೮-೫೨). [ತುಮುಲ + ಯುದ್ಧ]

**ತುಮುಲರಂಗ** (ನಾ). ಕ್ಷೋಭೆಯ ರಂಗ, – ಪ್ರದೇಶ; ಘರ್ಷಣೆಯ ಸ್ಥಳ: ಅವನ ಹೃದಯ ಮಿಶ್ರಭಾವಗಳ ತುಮುಲರಂಗವಾಗಿತ್ತು (ಪುನರು. ೦೮೫);
[ತುಮುಲ + ರಂಗ]

**ತುಮುಳ್** (ನಾ). ದೊಂಬಿಯುದ್ಧ (?) : ಅಂತು ಮುಂಬಗಲ್ವರಂ ತುಮುಟ್[ಳ್] ಕಾದುವ ಸಮ[ರಭರಂ] ಮನೋರಾಗಮಂ ಮಾಡೆಯುಂ (ಪಂಪಭಾ. ೦೩-೭೭ ವ) ; "ತುಮುಟ್ ಕಾದುವ = ತುಮುಲ ಯುದ್ಧವನ್ನು ಮಾಡುವ? " (ಪಂಪದೀ. ೫೨೩). [?]

**ತುಮುಳ** 'ತುಮುಲ' ನೋ.

**ತುಮುಳಕೇಳಿ** 'ತುಮುಲಕೇಳಿ' ನೋ.

**ತುಮುಳಯುದ್ಧ** 'ತುಮುಲಯುದ್ಧ' ನೋ.

**ತುಮುಟ್** (ಕ್ರಿ). ೧. (ಕಣ್ಣು) ಅರ್ಧ ಮುಚ್ಚು : ನೊರೆವಲ್ಲಂ ಮೇದೆ ರಟ್ಟಿಣ್ ತುಮುಟಿ ಕುಡಿದು ಪೂರಾಂಬುವಂ (ಚಂದ್ರಪ್ರ. ೪-೪೮) ; ನೀಟ್ಟ ಕಣ್ ತುಮುಟಿ ಚಂದ್ರಿಕೆಯಂ ಪದೆಪಿಂದಮಿಂಟಿ . . . ದಂಪತಿ ಚಕೋರಚಯಂ ನಲಿದು (ಕುಸುಮಾ. ೪-೫೫) ; ಶಿಥಿಲದ್ವಿತ್ವಕ್ಕೆ — ಶಂಮುಟ್ಟಿಂ, ನುಸುಟ್ಟಿಂ (ಶಬ್ದ. ೩೭ ಪ್ರಯೋ); ತೀವಿದ ಕೀಲಾಲಾಂಬುವಂ ಕಣ್ಣುಮುಟಿ ಪದೆಪಿನಿಂದೀಂಟ (ರಸರ. ೨-೦೨೪). ೨. ಅಡಗು ; ನಾಶವಾಗು : ಅಮುಟ್ಟ[ತ್ರ]ತ್ಯುಗ್ರತೇಜಪ್ರಸರಮರಿಬಳಧ್ವಾನ್ತಪಿಣ್ಡಪ್ರಕಾಣ್ಡಂ ತುಮುಟ್ಟತ್ತು (ಸೌಇಇ. XI-i, ೭೮-೭೦; 1045). ೩. ಅಡಗಿಸಿಕೊಳ್ಳು; ಮುಚ್ಚಿಟ್ಟುಕೊಳ್ಳು : ತುಮುಟಲ್ಕೈರಾವತಂ ದರ್ಪಮನೆರ್ದೆಯೊಡೆಯಲ್ಪುಂಡರೀಕಂ (ಶೀಲಾವ. ೬-೪). ೪. (?) : ಧಾತ್ರಿಯ ಬಿಣ್ಪೆ ನಗೆಂದಿನಂದವಲ್ಲಣಕವಿದೆಂದು ಕಣ್ ತುಮುಟಿ (ಪಂಪಭಾ. ೯-೯೯); "ಕಣ್ಣುಮುಟಿ=ಕಣ್ಣು ಹೊರಕ್ಕೆ ಬರಲು" (ಪಂಪದೀ. ೩೩೬) ; "ವಿಕಾರವಾಗು" (ಪಂಪನಿ.) ; ಕೊರ್ಮರ್ಚಿಶಿರಂ ಪೊಣಿಪಾಯ್ದು ಕಣ್ಣುಮುಟ್ಟಿಡೆ ವನಿತಾಗೆ ತನ್ನ ಭರದಿಂ ತಳರ್ದತ್ತು ನರೇಂದ್ರಸೈನಿಕಂ (ಮಲ್ಲಿಪು. ೮-೦೪೦) : ಪೆರ್ವುಲಿ ಪಾಯೆ ಕಯ್ದು ಕೆಯ್ಗದೆ ಕೆಲಸಾರ್ದು ಮಯ್ಗೊಣರ್ದು ಬಂಚಿಸಿ ಗಂಟಲನೊತ್ತಿ ಕಿಬ್ಬಸಿರ್ಗಿದಿಯಪ್ಪೊಲಾಗೆ ಕಣ್ಣುಮುಟ್ [ಪಾಠಾಂ. ಕಣ್ಣು ಗುಳ್] ಬಿರ್ದು ಮಸುಂಬಿ ಜವಂಗೆ ಬಿರ್ದನಿಕ್ಕಿದಂ . . . ಶಬರಂ (ಮಲ್ಲಿಪು. ೧೦-೭೩) : ಕಣ್ಗಳ್ ತುಮುಟ್ಟ ಸಲಿಯಿದಜಂಬೊಳ್, ಸಂಕಲೆ ಬಿಗಿದಾನಾಮಗವಿರ್ದುಂ ಅರಂ ಕಲಿಬದ ಕಾಪನ್ ನಿಲ್ಪೆನ್ (ಬದ್ಧಪ್ರ. ೯-೦೫೦) ; "ತೇಲುಮೇಲಾಗು ; ವಿಕಾರಗೊಳ್ಳು" (ಬದ್ಧಪ್ರ. ಕೋಶ).

**ತುಮ್ಮಡಿ**, ತುಂಬಡಿ (ನಾ). (ಉಕ) ಶರೀರದಿಂದ ರಕ್ತ ತೆಗೆಯುವ ಒಂದು ಬಗೆಯ ಸಾಧನ : ನಾದಿಗರ ಬಳಿಯಲ್ಲಿ ರಕ್ತ ತೆಗೆಯುವ ತುಮ್ಮಡಿ ಇರುತ್ತದೆ (ಮುಂಬಯಿ. ೫-೭೭) ; ಈ ಗೊಲ್ಲರಲ್ಲಿ ಕೆಲವರು ... ತುಮ್ಮಡೀ ಹಚ್ಚಿ ರಕ್ತ ತೆಗೆಯುವದರಲ್ಲಿಯೂ ಕುಶಲರಿರುತ್ತಾರೆ (ಕಥಾಗ. ೧೬೩). **ತುಂಬಡಿ** : ಹೊಟ್ಟೆಯೊಳಗಿನ ಹವೆಯು ತುಂಬಡಿಯೊಳಗಿನ ನಿರ್ವಾತಸ್ಥಲವನ್ನು ತುಂಬಲಿಕ್ಕೆ ಯತ್ನೈಸುವದರಿಂದ (ಮುಂಬಯಿ. ೫-೭೭).
[←ಮರಾ. ತುಮಡೀ, ತುಂಬಡೀ ]

**ತುಮ್ಮಲಿ** (ನಾ). ಒಂದು ಸ್ಥಳದ ಹೆಸರು : ಮಹಾರಾಜರ್ ತುಮ್ಮಲಿ ತೊಱುವಾ ಸವ್ವಪರಿಹಾರಂಗೊಟ್ಟರ್ (ಎಕ. X, ಬಾಗೇಪ. ೭೨-೧೦ : ಸು. ೬೦೦?). [ ? ]

**ತುಮ್ಮೆಗೂರ್** (ನಾ). ಒಂದು ಊರಿನ ಹೆಸರು; P ಈಗಿನ ತುಮಕೂರು: ತುಮ್ಮೆಗೂರ ಕಟಿಯ ಪೊಳಿದೊ x x ಬಿಣ್ಬರ ಬಸದೊಳೆ (ಎಕ. XII, ತುಮಕೂ. ೫-೨ ; ೯೬೬). [ ? + ಊರ್ ]

**ತುಮ್ಮಿ**$_1$ 'ತುಂಬುರ್' ನೋ.

**ತುಮ್ಮಿ**$_2$ 'ಠುಮರಿ' ನೋ.

**ತುಯ್**$_1$ (ಕ್ರಿ). ಒದ್ದೆಯಾಗು ; ಹಸಿಯಾಗು ; ತೊಯ್ಯು : "ತೊಯ್ (ತುಯ್) – ಸಾರ್ದ್ರತ್ವೇ" (ಶಮಧಾ). 'ತೋ$_1$' ಪರಾ.
[ ದೇ.॥ ತಮಿ. ತುವ್ವೈ ; ಮಲ. ತುವೆ ]

**ತುಯ್**$_2$, ತುಯಿ, ತುಯ್ಯು, ತೂಯ್ (ಕ್ರಿ). ತುಯ್ದು, ತೂದು (ಭೂತಕೃ). ೧. ಎಳೆ ; ಸೆಳೆ ; ಜಗ್ಗು : ವಲ್ಗನವಾಡುವ ಬಿಲ್ಗಳ ಪೆಡೆಗೆ ಸರಲ್ಗಳ ಸಾರ್ಚಿ ತುಯ್ದಿಸಮ (ಚಂಪ್ರಸಾಂ. ೮-೪೨) ; ದೊರೆಗಳು ಸೇನೆವೆರಸಿ ಸನ್ನತಿಯ ತುಯ್ದಿದ್ದಾ ನಯದಿಂದ ತಪೆನೆಂದು ನುಡಿದು (ಭರತೇ. ೫೭-೨೨) ; ಪರಿಮಳೋದಕವ ಜಳಯಂತ್ರದಿಂ ತೊಡೆಸಿಯಲ್ (ಪ್ರಭುಲಿಪು.೪-೧೦೦) ; ತೆಂಕಣ ಬಿಱುಗಾಳಿಗಳೊಳ್ ತುಯ್ದು, ನರಗಡಲನ್ ತಾನ್ ದಾಂಟಿದವನ್ (ಅಂತಿಗೊ.೧೬-೩೧೨). **ತುಯಿ** : ೧. ಪಾಳೆಯಗಾರನು . . . ಹೆದೆಗೆ ಅಂಬನ್ನೇರಿಸಿ ಆನೆಯ ಹಣೆಗೆ ಗುರಿಗಟ್ಟಿ ಎಡಗಯ್ಯಿಂದ ತುಯಿದು (ಎಳೆದು) ಬಿಟ್ಟನು (ಕವೀರ. ೧೩೭). **ತುಯ್ಯು**: ೧. ಮನಸ್ಸನ್ನು ಯಾವೆಡೆಗೋ ತುಯ್ಯುವ ಆ ಏಕನಾದ (ರೂಪಸ. ೧); ಆಚೆ ದಡದೆಡೆ ಸದಾ ತುಯ್ಯುತಿರಲಿ (ಚಂಡಮ. ೫೭-೧೨). ೨. ತುಡಿ ; ಮಿಡಿ ; ಸ್ಪಂದಿಸು : ನಮ್ಮ ಭಾರತೀಯ ಹೃದಯವು ತುಯ್ಯುತ್ತದೆ (ನಿಬಂಧ. II, ೧೦೭). **ತೂಯ್**: ೧. ಆಡ ಮೇಯಿಸುವ ಮಕ್ಕಳುಗಳೆಲ್ಲರು ಬಂದು ಕೂಡಿ ತೂಯ್ದೊಡೆ ಬಾರದಿರಲು (ನೇಮಿಸಂ. ೧೦-೨೩೨) ; ಪದೆದು ತೂಯ್ವಾಗ ನೂರಾಸೆವಾಗ ಸಾಸಿರ (ಚಂಪ್ರಸಾಂ. ೧೧-೭೧) ; ನಮ್ಮೆತ್ತು ಮುಂದೆ ಮೂರ್ಛಿಚ್ಚೆ ತೂಯೊಲ್ಲೊ (ಹಳ್ಳಿಲಾ. ೩೫).

ತುಯ್ದಾಡು=ಎಳೆದಾಡು; ಜಗ್ಗಾಡು: ವೆಂಕಟರ ಮೇರೆಯನ್ನು ಮೀರಿ ಮಿತ್ರಮಂಡಲಿಯವರೆಗೂ ಈ ವಿಚಾರ ತುಯ್ದಾಡಿತ್ತು (ಶ್ರೀಪಪ್ರ. ೨೧೦). ತುಯ್ದೊಗೆ=ಎಳೆದು ಬಿಸಾಡು : ತಲೆವೊಯ್ದುನ್ ಒಂದನ್ ತುಯ್ದೊಗೆದನ್ ಒಂದನ್ (ಅಶ್ವತ್ಥಾ. ೦೨-೩೭೭). ತೂದು ಹಿಡಿ=ಎಳೆದು ಹಿಡಿ : ಕುದುರೆಯ ಲಗಾಮನ್ನು ತೂದು ಹಿಡಿದರು (ಚಂಗಾಳ್ಳಿ. ೪೮).
[ ದೇ.॥ ತೆಲು. ದುಯ್ಯು, ದೂಯು ]

**ತುಯಿ** 'ತುಯ್$_2$' ನೋ.

**ತುಯಿತ** 'ತುಯ್ತ' ನೋ.

**ತುಯ್ತ**, ತುಯಿತ (ನಾ). ಎಳೆತ; ಸೆಳೆತ; ಎಳೆದಾಟ; ಜಗ್ಗಾಟ: ಅದರ ತುಯ್ತವನ್ನು ನಾನು ಬಲ್ಲೆ (ಈಡಿ. ೩೪); ಆನಂದದೀ ತುಯ್ತ ಕನಸುವಾಗುವಾ ಮತಿಗೆ ಇಂಥ ನಡೆಯೇ ಸಹಜ (ಗಡೀಕ. ೦೫-೨೦); ಇಂಥ ತುಯ್ತಗಳ ಆಯಕಟ್ಟಿಗೆ ಸಿಕ್ಕಿದ ಜೀವಾತ್ಮಸಂಸ್ಥೆ ಕಾವ್ಯಕ್ಕೂ ಕಲೆಗೂ ಮಾತೃಕೆಯಾಗುತ್ತದೆ (ಕಾವ್ಯಕು. ೧). **ತುಯಿತ**: ಎಂಥ ವಿದ್ವಾಂಸನಾದರೂ ಇಂದ್ರಿಯಗಳ ತುಯಿತಕ್ಕೆ ಸಿಕ್ಕುವವನೇ (ಬಂಕಿಮ. ೨೬೬); ಎಲ್ಲಿಯೂ ಈ ಜೇಡನ ನೂಲಿನ ಮೇಲೆ ಸ್ವಲ್ಪವೂ ತುಯಿತವಿಲ್ಲ (ನಿಬಂಧ. II, ೩೫೪).

[ ತುಯ್$_2$ + – ತ$_2$ ]

**ತುಯ್ಯ** (ನಾ). ಒಂದು ಬಗೆಯ ಹಕ್ಕಿ: ಗಿಡುಗ ಸಾಳುವ ತು [ಹಾಕಾಂ. ಕು] ಯ್ಯ ಓರಣ ... ಹಕ್ಕಿಗಳನವರು ಪಿಡಿದು (ಸಾಳ್ವಭಾ. ೫-೨೦). [?]

**ತುಯ್ಯಲ್**, ತುಯ್ಯಲು (ನಾ). ಹಾಲು, ಸಕ್ಕರೆ ಮೊದಲಾದ ಪದಾರ್ಥಗಳಿಂದ ತಯಾರಿಸುವ ಒಂದು ಬಗೆಯ ಸಿಹಿ ಪದಾರ್ಥ; ಪಾಯಸ: "ಕ್ಷೈರೇಯಂ ತುಯ್ಯಲ್" (ವಸ್ತುಕೋ. ೬೩-೦೦): "ಕ್ಷೈರೇಯಂ, ಪಾಯಸಂ, ಪರಮಾನ್ನಂ–ಈ ೩ ತುಯ್ಯಲ್" (ಹಲಾಯು. ೫೩-೦೬೫); ಪೊನ್ನ ತಳಿಗೆಯೊಳ್ ನಾಯ್ ತುಯ್ಯಲನುಣ್ಬುದಂ ಕಂಡು (ವಡ್ಡಾರಾ. ೮೬-೨೬); ತವುಡಂ ತಿಂದು ತುಯ್ಯಲನುಂಡೆನೆಂಬಂತೆ (ಧರ್ಮಾಮೃ. ೧೩-೧೮೦); ಕಾಟ್ಪಿಕ್ಕಿಗೂಡುವವೊಲ್ತುಯ್ಯಲಂ (ಅನಂತಪು. ೧-೬೦); ಅಣ್ಣೆವಾಲಿಂ ಬೆರಸಿದ ಸಕ್ಕರೆಯ ತುಯ್ಯಲಿಕ್ಕಿದರರಬರ್ (ನಳಚಂ. ೪೪೧). **ತುಯ್ಯಲು**: ತುಯ್ಯಲಾದಡೆ ಉಂಬೆ ಹುಯ್ಯಲಾದಡೆ ಓಡುವೆ (ಬಸವ. ೦೨೦); ತುಯ್ಯಲು ತುಪ್ಪವ ಬಡಿಸಿ ಬಳಿಕ ನಮ್ಮ ಕೈಯ ಪರಿಯನೀಕ್ಷಿಸದೆ ... ಉಸುರುವರೇ ಬಲುಗೈಯರಿಗಾಗದ ಬೆಸನ (ನೇಮಿಸಂ. ೫೬-೨೬೦); ತುಯ್ಯಲನು ತನ್ನಂಗಿ ತನ್ನಯ ಕೈಯಲೇ ಬಡಿಸಿದಳು (ನಿಧಾಗ. ೦೦-೦೫-೪೬); ಹುಯ್ಯಲಿನ್ನಿಲ್ಲ ಸಂತಸವೊಂದು ನಲಿದುದು ತುಯ್ಯಲನುಂಡಂತೆ ಕಟಕ (ಭರತೇ. ೫೦-೦೨೩); ತುಯ್ಯಲೂಟಕೆ ಲೇಸು ಬಯ್ಯದ ಸೊಸೆ ಲೇಸು ಅಯ್ಯ ಬಾರೆಂಬ ಮಗ ಲೇಸು ಧರ್ಮವದು ಕೈಯಾರ ಲೇಸು (ಸರ್ವಜ್ಞ. ೬೨೬).

**ತುಯ್ಯಲಚಂದಯ್ಯ** (ನಾ). ಒಬ್ಬಾತನ ಹೆಸರು: ಉಬ್ಬ ಕಾವಾಣ ಸೆಟ್ಟಿಯ ತಮ್ಮಂ ತುಯ್ಯಲಚನ್ದಯ್ಯಂ ಪ್ರಸ(ಶ)ಸ್ತಿಯಂ ಬರೆಯಿ[ಸಿ] ದಂ (ಎಇ. XIX, ೩೯೦-೪೫; 963). 'ತುಯ್ಯಲಬೇಗೂರ್' ಪರಾ.

[ <ತುಯ್ಯಲ್ ? + ಚಂದಯ್ಯ ]

**ತುಯ್ಯಲಬೇಗೂರ್** (ನಾ). ಒಂದು ಊರಿನ ಹೆಸರು: ಆ ನಾಗರಖಂಡದೊಳಗಣ ತುಯ್ಯಲಬೇಗೂರ ಗೌಂಡನ ವಂಶಾವತಾರವೆಂತೆಂದಡೆ (ಕಇ. IV, ೨೨-೦೩; 1024). [ <ಗುಯ್ಯಲ್ ? + ಬೇಗೂರ್ ]

**ತುಯ್ಯಲು** 'ತುಯ್ಯಲ್' ನೋ.

**ತುಯ್ಯಲುಗೆಯಿ** (ನಾ). ನೀರಾವರಿಭೂಮಿ; ಗದ್ದೆ: ಎಲವಸೆಗೆಱೆಯ ಕೆಳಗೆ ತುಯ್ಯಲುಗೆಯಿ ಮತ್ತರು ನಾಲ್ಕು ಕಂಭ ನಾನುಜಯ್ಯತ್ತು (ಸೌಇಇ. IX-1, ೩೨೯-೬೩; 1206). [P ಇದು 'ಗುಯ್ಯಲುಗೆಯಿ' ಇರಬಹುದು]

**ತುಯ್ಯಾಟ** (ನಾ). ಎಳೆದಾಟ; ಸೆಳೆದಾಟ; ತುಯ್ತ: ಇಬ್ಬರ ತುಯ್ಯಾಟವನ್ನೂ, ವಿಚಾರದ ಅರಿವಿಲ್ಲದೆ ನೋಡುತ್ತಾ ನಿಂತಿದ್ದ ಕಿಟ್ಟಯ್ಯ (ನಿಕಲಾ. ೧೨೬); ಈ ತುಯ್ಯಾಟದಲ್ಲಿ ಅವಳು ಬಂದಾಗ ... ತನ್ನ ಪಾಡಿಗೆ ತಾನು ಇದ್ದನು (ಥಾಟೀಮು. ೯೯). [ ತುಯ್ಯು (<ತುಯ್$_2$) + ಆಟ ]

**ತುಯ್ಯು** 'ತುಯ್$_2$' ನೋ.

**ತುಯ್ಲಾಟ** (ನಾ). = ತುಯ್ಯಾಟ: ಈ ಯೋಚನೆಗಳ ತುಯ್ಲಾಟದೊಡನೆ ಶೇಷ, ಸುಬ್ರಾಯರೊಂದಿಗೆ ಹೊಸನಗರ ತಲುಪಿದ್ದನು (ದಾಳಿವ್ಯ. ೦೯೯).

[ ತುಯ್ಲು + ಆಟ ]

**ತುಯ್ಲು** (ನಾ). = ತುಯ್ತ. 'ತುಯ್ಲಾಟ' ಪರಾ.

[ ತುಯ್$_2$ + – ಅಲು (< – ಅಲ್$_2$) ]

**ತುರ$_1$** (ನಾ). ಕುದುರೆ; ಅಶ್ವ: ತೇಜಿಗೆ ತಪ್ಪದು ಒಂದು ಕಾಲಕೆ ಬರೆದ ಲಿಪಿಗಳು ಇರುವ ತನಕವು ತುರದ ಬಾಲಕೆ ತೇಜಿಗೆ ಮಾಳ್ಪರು (ಕಾಲಸಂ. ೨೨-೩): ಯಾವತ್ತು ಬಲಜಲಧಿಯಿಂದ್ವೈದಿದಂ ಕರಿಘಟೆ ತುರಂಗಳಿಂ ತೇರ್ಗಳಿಂದ (ತುರಂಗ. ೮೦-೨೪). 'ತುರಗ' ಪರಾ.

[ <ಪ್ರಾ. ತುರಯ. / ಹಿಂ. ತುರ, ತುರಾ. / ಸಂ. ತುರಗ ]

**ತುರ$_2$** (ನಾ). ವೇಗ: "ತುರ – ತ್ವರಣೇ. ತವಕದೊಳ್" (ಕಾಶಕ್ಕ. ೦೬೬).

[ ಸಂ. ]

**ತುರಂಗ$_1$** (ನಾ). ೧. ಕುದುರೆ; ಅಶ್ವ: ಭಾಸುರ ತುರಂಗಮನೇಱಿದನೊಲ್ದು ಭೂಭುಜಂ (ಹಮ್ಮಿರ. ೩-೩೬); ಕಟ್ಟಾಯದಿಂ ಬಱಿಪೋಪ ರಾಮನಧ್ವರ ತುರಂಗಮಂ ತಡೆದು ನಡೆಗಿಡಿಪಯ್ (ರಾಮಾಶ್ವ. ೧೩೬-೨); ತುರಂಗಕ್ಕೂ ಕುರಂಗಕ್ಕೂ ಸಮವೇ? (ಗಾದೆ). ೨.=ತುರಂಗಪ್ರಾಸ: ಹರಿ ಕರಿ ವೃಷಭ ತುರಂಗಂ ಶರಭಮಜಂಗಳುಮೆನಿಪ್ಪ ಷಟ್ಪ್ರಾಸಕ್ಕಂ ತರುಣಿ ನಿಜದೀರ್ಘ ಬಿಂದುವಿಸರ್ಗದೊತ್ತುಂ ವ್ಯಂಜನಂ ವಿಸರ್ಗದಿ ಬರ್ಕುಂ (ಛಂದೋಂಬು. ೬. ೦-೪೨). ೩. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ. ೪. [ಕಾವ್ಯಮಿ] ಒಂದು ಬಗೆಯ ಚಿತ್ರಕಾವ್ಯ; ಕುದುರೆಯ ಆಕಾರದಲ್ಲಿರುವ ಪದ್ಯಬಂಧ: ಶರಶೂಲಚಾಪಚಕ್ರಾಸಿರೂಪವಿಭಿರಥ ತುರಂಗಪದಗತವಾಹಂ ... ಸರ್ವತೋಭದ್ರಂಗಳ್ (ಕಾವ್ಯಾವ. ೫೬೯). [ಸಂ.]

**ತುರಂಗ$_2$** (ನಾ). ಸೆರೆಮನೆ; ಕಾರಾಗೃಹ: ಇನ್ನೊಮ್ಮೆ ಹೀಗೆ ಮಾಡಿದೆಯೆಂದರೆ ತುರಂಗಕ್ಕೆ ಕಳಿಸುತ್ತೇನೆಂದು ನಾನವನಿಗೆ ಒಳ್ಳೇ ಹೆದರಿಕೆ ಹಾಕಿದ್ದೇನೆ (ಸ್ವಾತಿಚಿ. ೨೦೫); ಎಷ್ಟೋ ಜನ ತುಡುಗರನ್ನು ಹಿಡಿದು ತುರಂಗಕ್ಕೆ ಕಾಣಿಸಿರುವೆನು (ಕಳ್ಳಕಾ. ೩).

[ ←ಮರಾ. ತುರಂಗ, ತುರುಂಗ. / ಇಂ. Tronk. / ಪೋರ್ಚ್. ಡಚ್. Tronco. / ಮಲ. ತುರುಙ್ಕ್; ತುಳು. ತುರುಂಗು ]

**ತುರಂಗತಾನಕ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ: ಮುಂದುಗತೆಯಲ್ಲಿ ಬಲದ ಪಾದವನ್ನು ಚಾಚಿ ಪಾರ್ಶ್ವಗಳಲ್ಲಿ ಆ ಬಲಪಾದದ ಹೆಜ್ಜೆಯು ನಿಕ್ಕುವುದೂ ಮುಂದುಗಡೆಯಲ್ಲಿ ಗತಿಯೂ ಆದವು ಅದು ತುರಂಗತಾನಕಯೆಂದು ನುಡಿಯಲ್ಪಡುವುದು (ಖಡ್ಗಲೇ. ೫-೦೪). [ತುರಂಗ$_1$ + ತಾನಕ]

**ತುರಂಗತ್ವ** (ನಾ). ಕುದುರೆಯ ಸ್ವರೂಪ,–ಆಕಾರ: ತುರಂಗತ್ವಮೆನಗೆ ಮೂಡಿದೊಡಮೆನ್ನ ಕೆಳೆಯನೊಡಗೂಡಿ ಕಾಲಮಂ ಕಳಿಪುವಂತು ನಿನ್ನ ದಿವ್ಯಚಕ್ಷುಗಳಿಂ ನೋಡಿ ಬೆಸಸೆಂಬುದುಂ (ಕಾದಂಬ. ೬೦೬). [ಸಂ.]

**ತುರಂಗದಳ** (ನಾ). ಕುದುರೆಯ ಸೈನ್ಯ: ತುರಗಂ ನೂಱನಿತುಂ ತುರಂಗದಳಮೊಂದೊಂದರ್ಕೆ ನೂಱಾಳ್ ತಗುಳ್ದಿರೆ ಬಲ್ಲರ್ ನಡೆ ನೋಡಿ ಕೂಡೆ ಪಡೆದತ್ತಕ್ಷೋಹಿಣೀಸಂಖ್ಯೆಯಂ (ಪಂಪಭಾ. ೯-೯೫).

[ತುರಂಗ$_1$ + ದಳ$_2$(= ದಲ)]

**ತುರಂಗಪ್ರಾಸ** (ನಾ). [ಛಂದ] ಆರು ಬಗೆಯ ಪ್ರಾಸಗಳಲ್ಲಿ ಒಂದು; ಪ್ರತಿ ಪಾದದ ಮೊದಲೆರಡು ಸ್ವರಗಳ ನಡುವೆ ಒಂದೇ ವಿಧದ ಸಂಯುಂಕ್ತವ್ಯಂಜನಗಳು ಬರುವ ಪ್ರಾಸ: ತುರಂಗಪ್ರಾಸಕ್ಕೆ ಲಕ್ಷಣಂ ಮತ್ತಚಕೋರಲೋಚನೆ ಚಿತ್ರಜರಾಜಧಾನಿ ಇದು ಲಕ್ಷಣದಲ್ಲಿ ಭಗಣಂ (ಛಂದೋಂಬು. ೬. ೦-೪೩ ಆದಿಟ). [ ತುರಂಗ$_1$ + ಪ್ರಾಸ ]

**ತುರಂಗಮ** (ನಾ). ೧.=ತುರಂಗ$_1$ ೧: ಮದಗಜಬೃಂಹಿತಧ್ವನಿ ತುರಂಗಮಹೇಷಿತಘೋಷನಾದಮೊರ್ವೊರ್ದಲೆ ಪಯೋಧಿಮಂಥನಮಹಾರವಮಂ ಗೆಲೆ (ಪಂಪಭಾ. ೩-೩೦); ಇಕ್ಕುವುದೆಲ್ಲಮಂ ತುರಂಗಮಕೆಂದುಂ (ಲೋಕೋಪ. ೯-೨೨೦): ಮೇಲು ಸುಯಿಧಾನದ ತುರಂಗಮಜಾಲಸಹಿತಗಲದಲಿ ... ಅಱಸಿದನು ನೃಪನ (ಕುಮಾರಾಗ. ೨-೦). ೨. [ಛಂದ] ಒಂದು ವೃತ್ತದ

ಹೆಸರು : ಪಾವಕಂ ತ್ರಿದಶಪಾವಕಂ...ನೆಲಸಿ ನಿಲ್ವಿನಂ ದೇವದೇವಕೃತಮಿಾ ವಿಧಾನದೊಳಿಳಾವಿನೂತಯತಿ ರಂಧ್ರದೊಳ್ ಭಾವಿಸುತ್ತುಮಿರೆ ಭಾವಿಸಿಂತಿ ದನೆ ಪೀವರಸ್ವನೆ ತು[ಪಾಠಾಂ. ತ] ರಂಗವುಂ (ಛಂದೋಂಬು. ೨-೧೮೦). [ಸಂ.]

**ತುರಂಗಮದಟ** (ನಾ).=ತುರಂಗಘಟೆ : ದನುಜಬಳಜಳಧಿ ಬಾಡಬಾನಲನ ಬಾಣಂಗಳೌರ್ವಶಿಖಿಯಂತೆ ತುರಂಗಮದಟತರಂಗಿತಾರ್ಣವಮನಟ್ಟು ಡಿಸೆಯುಂ (ಜಗವಿ. ೬-೮೪ ವ). [ ತುರಂಗಮ + ದಟ ]

**ತುರಂಗವಕ್ತ್ರ** (ನಾ). = ತುರಂಗವದನ : (ಶ). [ ತುರಂಗ$_1$ + ವಕ್ತ್ರ ]

**ತುರಂಗವದನ** (ನಾ). ೧. ಕುದುರೆಯ ಮುಖದಂತೆ ಮುಖವುಳ್ಳವನು; ವಿಷ್ಣುವಿನ ಒಂದು ಅವತಾರ ; ಹಯಗ್ರೀವ : ಮಾತಂಗವರದ ವಿಹಂಗ ಗಮನ ಭುಜಂಗಶಯನ ತುರಂಗವದನ (ವಿರಾಕ್ಕ. ೪೬-೧). ೨. ಕುದುರೆ ಯಂತೆ ಮುಖವೂ ಮನುಷ್ಯನಂತೆ ಉಳಿದ ಅಂಗಗಳೂ ಉಳ್ಳ ಒಂದು ದೇವತಾವರ್ಗಕ್ಕೆ ಸೇರಿದವನು ; ಕಿನ್ನರ : "ಕಿನ್ನರಃ. ಕಿಂಪುರುಷಃ. ತುರಂಗವದನಃ. ಮಯುಃ-ಳ ಕಿನ್ನರರ ಹೆಸರುಗಳು" (ಸಿದ್ಧಾಂತಿ. ೨೬). [ ತುರಂಗ$_1$ + ವದನ ]

**ತುರಂಗವದನೆ** (ನಾ). ಕಿನ್ನರಸ್ತ್ರೀ ; ಕಿನ್ನರಿ : ಗುರುಕುಚಭರಕ್ಕೆ ಮನದೊಳ್ ಕರಮೆ ಕನಲ್ವರ್ ತುರಂಗವದನೆಯರದಟರೊಳ್ (ಚಂದ್ರಪು. ೧೦-೩೬). [ ಸಂ. ತುರಂಗವದನಾ]

**ತುರಂಗವಾಹಳಿ** (ನಾ). ಕುದುರೆಗಳ ಸಾಲು: ಸುಟ್ಟ ತುರಂಗವಾಹಳಿಯ ಪೂವಲಿಯೊಳ್ ಪೊರೆದಂಕದಾನೆಯಗ್ಗಟಿಯ ಮದಾಂಬುಕರ್ದಮ ದೊಳದ್ದು ... ಕೀಡುವುದು ತತ್ಪುರಬಾಹಿರ ಮಂದಮಾರುತಂ (ಅನಂಪು. ೩-೦೭) [ ತುರಂಗ$_1$ + ವಾಹಳಿ ]

**ತುರಂಗಸಂಗರ** (ನಾ). ಕುದುರೆಯ ದಳದ ಯುದ್ಧ ; ಅಶ್ವಸೈನ್ಯದ ಕದನ : ಭಯಂಕರವಾಯ್ತು ತುರಂಗಸಂಗರಂ (ಶಂಶಾವಮಾ. ೧೩-೬೩). [ ತುರಂಗ$_1$ + ಸಂಗರ ]

**ತುರಂಗಸಾಧನ** (ನಾ). ಕುದುರೆಯ ದಳ ; ಅಶ್ವಸೈನ್ಯ : ಪದಿನೆಂಟು ಕೋಟಿವರೆಗಂ ತಳರ್ದತ್ತು ತುರಂಗಸಾಧನಂ (ಆದಿಪು. ೧೦-೩೧). [ ತುರಂಗ$_1$ + ಸಾಧನ ]

**ತುರಂಗಿ$_1$** (ನಾ). ಕುದುರೆಯ ಸವಾರ ; ಅಶ್ವಾರೋಹಿಯಾದ ಸೈನಿಕ : ಓರ್ವರೋರ್ವರಂ ಪೊಯ್ವರ್ ಮಾಮಸಕದ ಪಣೆದಂಬೊಯ್ವಂತಸಿಯಂ ಪಿಂಗದೆ ತುರಂಗಿಗಳ್ ಸಂಗರದೊಳ್ (ಚಂದ್ರಪು. ೧೦-೮೧): ಮುತ್ತಿನ ಸತ್ತಿಗೆ ಮೊತ್ತಂಬೆತ್ತಿರೆ ಸುತ್ತಿ ತುರಂಗಿಗಳೊತ್ತರಿಸುತ್ತಿರೆ (ರಾಜಶೇ. ೯-೪೧ ರಗಳೆ). [ ಸಂ. ತುರಂಗಿನ್ ]

**ತುರಂಗಿ$_2$** (ನಾ). ೧. = ತುರಗಿ. ೨. [ಸಂಗೀತ] ಒಂದು ರಾಗದ ಹೆಸರು: ತುರಂಗಿ [ಪಾಠಾಂ. ತರಂಗಿಣಿ] ಗಾಂಧಾರಿ...ವಸಂತ ಬಂಗಾಳಮೆಂಬಿಪ್ಪತ್ತೆರಡು ರಾಗಂಗಳು ಶ್ರೀಯಾಂಗದಿಂದ ಪುಟ್ಟಿದವು (ವಿವೇಕ. ೨೩೪). [ಸಂ. ತುರಂಗೀ]

**ತುರಂಜಿ, ತೋರಂಜಿ** (ನಾ). ೧. ಈಳೆ ಜಾತಿಗೆ ಸೇರಿದ ಮರ; ಚಕ್ಕೋತ, ಹೇರಳೆ ಅಥವಾ ನಿಂಬೆ. ೨. ಮಾದಲ ; "ಮಾತುಲುಂಗ" (ಶಂಷಿತ. ೨೯೧). ೩. ಸೊಗಸಾದುದು; ಶ್ರೇಷ್ಠವಾದುದು: (ಶ). **ತೋರಂಜಿ:** (ಶ). [ ← ಪಾರ. ಹಿಂ. ಮರಾ. ತುರಂಜ್./ಕೊಂಕಣಿ. ತೋರಂಜ./ತಮಿ. ತುರಿಞ್ಞಿ ]

**ತುರಂತ** (ನಾ). ವೇಗ ; ಶೀಘ್ರತೆ: ಈ ಸಂದರ್ಭದಲ್ಲಿ ತುರಂತವಾಗಿ ಜನ ರನ್ನು ಒಂದುಗೂಡಿಸುವುದು ದುಷ್ಕೃತವಾಗಬಹುದು (ಘೂರಾತಿ. ೨೦೦). 'ತುರಿತ್ತ$_2$' ಪರಾ. [ ← ಹಿಂ. ಮರಾ. ತುರಂತ್ ]

**ತುರಃಕ** 'ತುರುಕ' ನೋ.

**ತುರಕ** (ನಾ). ೧. ತುರ್ಕಿದೇಶದವನು. ೨. ಮುಸಲ್ಮಾನ ; ತುರುಕ. 'ತುರಕವಿಗ್ರಯ' ಪರಾ. [ ಸಂ. ]

**ತುರಕಬೇವು** (ನಾ). = ತುರುಕಬೇವು : ನಮ್ಮ ಹೊಲದ ಬದುವಿನಲ್ಲಿ ಒಂದು ತುರಕಬೇವಿನ ಮರವಿದೆ (ರೂಢಿ). [ ತುರಕ + ಬೇವು ]

**ತುರಕವಿಗ್ರಯ** (ನಾ). ಮುಸಲ್ಮಾನರೊಂದಿಗೆ ಮಾಡುವ ಕಾಳಗ ; ಹೋರಾಟ : ಹೊಯಿಸಣಶ್ರೀವೀರಬಲ್ಲಾಳ ದೇವರ್ಸರು ಸುಖರಾಜ್ಯಂ ಗೆಯುತ್ತಮಿರೆ ತುರಕವಿಗ್ರಯಾದಲ್ಲಿ ... ವೀರಬಲ್ಲಾಳರಾಯ ಪಟ್ಟಣ ಪ್ರವೇಶ ಮಾಡು ವವಸರದಲ್ಲಿ (ಎಕ. VII, ಶಿವಮೊ. ೬೮-೧ ; 1318). [ P ಇದು 'ತುರಕವಿಗ್ರಹ'ದ ಅಪಲಿಖಿತವಿರಬಹುದೆ ? ]

**ತುರಕಿ** 'ತುರ್ಕಿ' ನೋ.

**ತುರಗ** (ನಾ). ೧. ಕುದುರೆ ; ಅಶ್ವ : "ತುರಗಂ ಯಯು ಸಪ್ತಿ ಹಯಂ ತುರಂಗಮಂ ವಾಜಿ ... ತುರಂಗಮನೆ ಕುದಿರೆ" (ವಸ್ತುಕೋ. ೮೫-೨೨) : ಕರಿತುರಗರಥಪದಾತಿಯ ಚರಣಾಸಂಘಾತಜಾತರಜಮಾಜಸ್ರಂ ನೆರೆದಂಬರ ಕೋಗೆಯರ್ (ಶಂಶಭಾ. ೧೦-೬೮) : ತುರಗಮಯಂ ನೆಲಂ ಚಮರಜಾಲ ಮಯಂ ದಿನಂ ... ಮದಗಂಧಮಯಂ ಸಮೀರಣಂ (ಕಾದಂಪೂ. ೬೦೧). ೨. = ತುರಂಗಪ್ರಾಸ ; ಹರಿ ... ತುರಗಂ ಶರಭಭುಜಂಗಳುಮೆನಿಪ್ಪ ಷಟ್ಪ್ರಾಸಕ್ಕಂ ತರುಣ ನಿಜದೀರ್ಘ ಬಿಂದುವಿನಿರದೊತ್ತುಂ ವ್ಯಂಜನಂ ವಿಸರ್ಗಂ ಬಕ್ಕುಂ (ಕವಿಪಿ. ೨-೨). ೩. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : ವಿಶ್ರಮಣಂ ತುರಗವ್ರಾತ ಗಜವ್ರಜದೊಳ್ ಬರೆ (ಛಂದೋಂಬು. ೨-೧೮೫) ; ತುರಗ ಹಯಂ ವಿಬುಜ ನಾಮಂ (ವ್ಯವಹಾ. ೯-೬) ; ತಾನೆಳಿಯೂರ ಮಾಡಾಸಾಸಿರಮೆನೆ ಮತ್ತೆ ಬಾಣ ತುರಗೇಂದ್ರಿಯ ಖಂಡುಗದ (ಭಾಸ್ಕರ. ೩೧-೧).

**ತುರಗಗೊಳ್ಳಾಗಿ** = (?) : ಶ್ರೀಮತ್ ನಗರಮಪ್ಪ ವಯಚಯನ್ ತುರಗಗೊಳ್ಳಾಗಿ ದುಗ್ಗದರಸನುಂ ತೊದಳ್ದು ವೇಳೆಯವನಾಳು × ಪಟಿ ಯುತ್ತಂ ಬಪ್ಪುದಂ (ಸೌಇಇ. IX-೧, ೨೨-೪ ; 923). **ತುರಗರೇವಂತ** = ಕುದುರೆಯ ಸವಾರಿಯಲ್ಲಿ ರೇವಂತನಂತೆ ಪ್ರಸಿದ್ಧನಾದವನು; ಒಂದು ಬಿರುದು : ಕಲಿಗಳಾಭರಣನಣ್ಣನಸಿಂಗಂ ತುರಗರೇವಂತಂ (ಎಕ. XI, ಚಿತ್ರದು. ೪೬-೦೬ ; 1067) ; ಮಣಲರ ಭೀಮಂ ತುರಗರೇವನ್ತಂ ಪರಬಳ ಕ್ರಿ ತಾನ್ತಂ (ಸೌಇಇ. XX, ೪೬-೨೨: 1074); ವಿಬುಧ ವರದಾಯಕಂ ಸುಜನ ಪ್ರಸನ್ನಂ ಗೋತ್ರಪವಿತ್ರಂ ವರಾಂಗನಾಪುತ್ರಂ ತುರಗರೇವನ್ತಂ ವೈರಿ ಕೃತಾಂತಂ (ಕಇಇ. ೩೬-೪೪-೧೦: 1197). **ತುರಗವೆಡಂಗ** = ಕುದುರೆಸವಾರಿ ಯಲ್ಲಿ ಪ್ರವೀಣ ; ಒಂದು ಬಿರುದು : ಚಾಲಿವಂಶೋದ್ಭವಂ ಶ್ರೀಮತ್ತು ರಗವೆಡಂಗಂ ಕಾಳಿಗಕೆ ನಡವುತ್ತು (ಎಕ. XIII, ೧೮೭-೨ ; ಸು. 875) : ಸಮಧಿಗತಪಂಚಮಹಾಶಬ್ದ ಮಹಾಸಮನ್ತ ತುರಗವೆ[ಡೆ]ಙ್ಗ ಬಿಳಿ ಯಂಬಿನಾತನಾಹವಸೂದ್ರಕಂ (ಸೌಇಇ. IX-I, ೬೪-೩ ; ೪೪೪). [ಸಂ.]

**ತುರಗಗಳ** (ನಾ). ಕುದುರೆಯ ಕತ್ತಿನಂತೆ ನೀಳವಾದ ಕತ್ತುಳ್ಳವನು : ತುರಗಗಳಂ ಕಾನನಮಲಯರುಹಗತಂ ... ಕರ್ಕಟಾದಿಮದ್ರೇಕ್ಕಾಣಂ (ಜಾತಕ. ೧೯-೧೦). [ ತುರಗ + ಗಳ$_2$ ( = ಗಲ) ]

**ತುರಗಚಯ** (ನಾ). ಕುದುರೆಗಳ ಸಮೂಹ : ತುರಗಚಯಂಗಳಂತಿರೆ ತರಂಗಚಯಂ ... ರಾಜಗೇಹದಂತಿರೆ ಕೊಳನಲ್ಲಿ ತಾಮರಸರಂತಿರೆ ತಾಮ ರಸಂಗಳೊಪ್ಪುಗುಂ (ಶಂಶಭಾ. ೫-೫೮). [ತುರಗ + ಚಯ]

**ತುರಗಘಟ್ಟು** (ನಾ). ಕುದುರೆಗಳ ಸೈನ್ಯ ; ಅಶ್ವದಳ : ಅಗಣಿತ ತುರಗ ಘಟ್ಟುಗಳ್ಬೈದೆ ಕವಿದುವು ಚತುರಗತಿಗಳಲಿ (ಕಾಶಿರಾ. ೨೧-೫). [ತುರಗ + ಘಟ್ಟು$_2$]

**ತುರಗದಳ** (ನಾ). = ತುರಗದಟ : ರಾವಣನು ಮರುಳುಗೊಂಡನು ತುರಗದಳವನು ನೆರಹಿ ತಾನಿವ ನೆಚ್ಚಿ ಕಟ್ಟನು (ಕಾಶಿರಾ. ೨೦-೨೫) : ತುರಗ ದಳವ ಕೂಡಿ ಕೊಟ್ಟು ಕರ್ಣಾಟವನಿರದೆ ಸಾಧಿಸು ಹೋಗೆಂದ (ಕಂನವಿ. ೦೦-೮).) [ ತುರಗ + ದಳ$_2$ (= ದಲ) ]

**ತುರಗದಳ** (ನಾ). ಚತುರಂಗಬಲದಲ್ಲಿ ಒಂದು ಅಂಗ ; ಕುದುರೆಗಳ ಸೈನ್ಯ; ಅಶ್ವದಳ: ಮಾವಾತಕಂ, ತುರಗದಟಂ, ಮಂಗಳಾರತಿ (ಧಾಪಾಥೂ. ೬-೧೩೨ ಪ್ರಯೋ) ; ಆಟಿಜನಂ, ತುರಗದಟಂ (ಕಮರ. ೧೭೪ ಪ್ರಯೋ).
[ತುರಗ + ದಳ]

**ತುರಗಮನೆ** (ನಾ). (ಚದುರಂಗದ ಆಟದಲ್ಲಿ) ಕುದುರೆ ನಿಲ್ಲುವ ಮನೆ : ಉಕ್ಕುವಾ ತುರಗಮನೆಯಿಂದಾಳುಮಂ ನೂಂಕೆ ದಕ್ಕಿತರಸಿನ ಹಿಂದೆ ಬಂದಾನೆ (ಚಲಪು. ೧೦-೯೩). [ತುರಗ + ಮನೆ]

**ತುರಗಮೇಧ** (ನಾ). ಅಶ್ವಮೇಧಯಾಗ : ತರುಣ ಕೇಳ್ ತುರಗ ಮೇಧಾಧ್ವರದ ಮೇಲಾರೈಕೆ ನಡೆದುದು (ತೊರರಾ. ೧-೭-೨೪) : ಅವನಾದಿ ಯೊಳ್ತುರಗಮೇಧಂಗಳೇಳಂ ಮಾಡಿ ನರ್ಮದಾತಟಕೆ ಬಂದು (ಕೃಮಿಥಾ. ೨೩-೬). [ತುರಗ + ಮೇಧ]

**ತುರಗರತ್ನ** (ನಾ). [ಜೈನ] ಏಳು ಜೀವರತ್ನಗಳಲ್ಲಿ ಒಂದು ; ಶ್ರೇಷ್ಠ ವಾದ ಕುದುರೆ : ದ್ವಾದಶಯೋಜನೋಲ್ಲಂಘನ ರಂಹೋನಿವಾಸಭೂಮಿ ಯುಮಪ್ಪ ಪವನಂಜಯಮೆಂಬ ತುರಗರತ್ನಮುಂ (ಆದಿಪು. ೧೧-೩ ವ).
[ತುರಗ + ರತ್ನ]

**ತುರಗರಶ್ಮಿ** (ನಾ). ಕುದುರೆಗೆ ಕಟ್ಟಿರುವ ಲಗಾಮು : ಪಿಡಿ ತುರಗರಶ್ಮಿಯ ನಿನಿತು ದೃಢಮುಷ್ಟಿಯಿಂ (ಶ್ರೀರಾಮಾ. ೬೦೭-೧೪೪).
[ತುರಗ + ರಶ್ಮಿ]

**ತುರಗಾಟ** (ನಾ). ಮಕ್ಕಳು ಆಡುವ ಒಂದು ಬಗೆಯ ಆಟ : ಸುಳಿದಾಟ ಚಿಣಿಕೋಲು ಕುಣಿಗಳು ತುರಗಾಟ (ವಿಶೂ್ಯೇಸು. ೧೯-೩). 'ತುರಿಗೆ' ಪರಾ.
[ತುರಗ ? + ಆಟ]

**ತುರಗಾರೂಢ** (ನಾ). ಕುದುರೆಯನ್ನು ಹತ್ತಿರುವವನು; ಅಶ್ವಾರೋಹಿ : ತುರಗಾರೂಢನೀ ಬರ್ಪನಸ್ಮದ್ಧರಣೀಶಂ (ಶಾಂತಿಪು. ೫-೩೯).
[ತುರಗ + ಆರೂಢ]

**ತುರಗಾರೋಹ** (ನಾ). ಕುದುರೆಯನ್ನು ಹತ್ತುವುದು ; ಕುದುರೆ ಸವಾರಿ : ಮುಂತೆ ತುರಗಾರೋಹಮಂ ಕಲಿಸಿ ವಿಸ್ತರಂ ಮತ್ತಂ ಗಜಾ ರೋಹಣಾದ್ಯಖಿಳವಿದ್ಯೆಯಂ ಪುತ್ರಂಗೆ ಮಾಡಿಸಿ (ಸಂಬಿರ. ೩-೪೫).
[ತುರಗ + ಆರೋಹ]

**ತುರಗಾರೋಹಣ** (ನಾ). = ತುರಗಾರೋಹ : ತುರಗಾರೋಹಣ ದಿಂದಮೊರ್ವ ಗಜಶಿಕ್ಷಾಲೀಲೆಯಿಂದೊರ್ಮ ... ಪೊಟ್ಟುಗಳಿಂ ಶ್ರೀ ಗೋಮಿನೀವಲ್ಲಭಂ (ಚಂದ್ರಪ್ರ. ೪-೨೫). [ತುರಗ + ಆರೋಹಣ]

**ತುರಗಾಸ್ಯ** (ನಾ). ೧. = ತುರಂಗವದನ. ೨. [ಜ್ಯೋತಿ] ಕುದುರೆಯ ಮುಖದಂತೆ ಇರುವ ನಕ್ಷತ್ರ ; ಅಶ್ವಿನಿ : ತುರಗಕ್ಕೆ ನೆಗಟ್ದ ಪಕ್ಷಿಗೆ ... ಕರಮೊಳ್ಳಿತು ಪತ್ತುಮರಂ ತುರಗಾಸ್ಯಂ [ಸ್ಯಂ] ಕಟಿಯೆ ನೆಟಿಯ (ಜಟ್ಟಮ. ೮-೩೭). [ತುರಗ + ಆಸ್ಯ]

**ತುರಗಿ** (ನಾ). ಹೆಣ್ಣುಕುದುರೆ : ಗುರುಗುಂಜೆಯ ಬೇಳೆಯಂ ... ತುರಗಿಯ ಕೊರಲೊಳ್ ಕಟ್ಟಿದೊಡೆ ಮಾಸನಿಕ್ಕುಗುಮನಿಶಂ (ಲೋಕೋಪ. ೯-೧೯೨) : ಸಮವೃತ್ತಮರುಣಚವಿಯುಂ ಸಮನಿಸೆ ತಾಂ ತುರಗಿ ನೋಡಲುತ್ತಮ ಮಕ್ಕುಂ (ಅಶ್ವಶಾ. ೧-೩೯). [ಸಂ. ತುರಗೀ]

**ತುರಚಿ** 'ತುಜುಚಿ' ನೋ.

**ತುರಚಿಅವರೆ** (ನಾ). ಒಂದು ಬಗೆಯ ಬಳ್ಳಿ ; ನಸುಗುನ್ನಿ : ನಸುಗುನ್ನಿ, ನಾಯಿಸೊಣಕುಬಳ್ಳಿ, ತುರಚಿಅವರೆ (ಮೃಶಿಗಿ. ೫೩-೧೦೦೪).
[ತುರಚಿ (< ತುಜುಚಿ) + ಅವರೆ$_1$]

**ತುರಚಿಬಳ್ಳಿ** (ನಾ). = ತುರಚಿಅವರೆ : ಅಂಟುಸುರುಸುರಿಗೆಬಳ್ಳಿ, ತುರಚಿಬಳ್ಳಿ, ಚೇಳಂಗಿಡ (ಮೃಶಿಗಿ. ೭೫-೧೫೩೨).
[ತುರಚಿ (< ತುಜುಚಿ) + ಬಳ್ಳಿ]

**ತುರಚೆ** 'ತುಜುಚಿ' ನೋ.

**ತುರನ** (ನಾ). "ನಿರಂಕುಶಾಧಿಕಾರಿ" (ಅಂತಿಗೊ. ಕೋಶ) : ತುರನರಾ ಜಾತಿ ಯಾದು ಒಲ್ದುದಟಿಲಾಭಮನ್ (ಅಂತಿಗೊ. ೪೩-೯೭೨).
[ ← ಇಂ. Tyrant ]

**ತುರವ** (ನಾ). ಒಂದು ಬಗೆಯ ವಾದ್ಯ : ವೇದಗಳ ಕಾಲದಲ್ಲಿ ಉಪಯೋಗ ದಲ್ಲಿದ್ದ ಬಕುರ, ನಾಡಿ, ತುರವ...ಮೊದಲಾದ ವಾದ್ಯಗಳ ರೂಪರಚನೆ ಗಳನ್ನೂ ... ಶಿಲ್ಪಕಲಾಭಿತ್ತಿಗಳಿಂದ ನಾವು ಗ್ರಹಿಸಬಹುದು (ಸಂಗೀಡಂ. ೦೯೫). 'ತುರ್ಹಿ' ಪರಾ.
[ ? . /ಮರಾ. ತುರ. ತುರೇ./ಪ್ರಾ. ತೂರ./ತಮಿ. ತುರ ]

**ತುರಸು** (ಕ್ರಿ). ( ? ) : ಅರಸು ಪರಶಗಳೇನು ಪ್ರಯೋಜನ ತುರಸಿ ಹೋಹವ್ಯ ತುಟ್ಟಮನಸಿನ ಕೇಳು ಸಜ್ಜನವೇ ಮನಸು ನಿಂದಡೆ ಮೋಹ ನಿಲ್ಲುವುದು (ಉರತ್ನಾಕೃ. ೦-೪-೨೨). [ ? ]

**ತುರಾ**, ತುರಾಯ, ತುರಾಯಿ, ತೂರಾಯ, ತೂರಾಯಿ (ನಾ). ೧. ಪೇಟ, ಟೋಪಿ, ಕಿರೀಟ ಮುಂತಾದುವುಗಳಿಗೆ ಸಿಕ್ಕಿಸುವ ಹೂವಿನ ಅಥವಾ ಮುತ್ತಿನ ಆಭರಣ, -ಅಲಂಕಾರದ ಕುಚ್ಚು. ೨. ಲಾವಣಿಗಳಲ್ಲಿ ಒಂದು ಪ್ರಕಾರ ; ೫ ಪ್ರಕೃತಿಗಿಂತ ಪುರುಷನೇ ಹೆಚ್ಚು ಎಂಬ ತತ್ತ್ವದಿಂದ ರೂಪುಗೊಂಡ, ಹೆಣ್ಣಿಗಿಂತ ಗಂಡೇ ಹೆಚ್ಚು ಎಂಬ ಅಭಿಪ್ರಾಯವನ್ನು ಸಮರ್ಥಿಸುವ ಲಾವಣಿ : ಈ ಜಾತಿಯ ಹಾಡುಗಳಲ್ಲಿ 'ತುರಾ', 'ಕಲ್ಗಿ' (ಕಲ್ಕಿ) ಎಂಬವು ಮುಖ್ಯವಾದ ಪ್ರಭೇದಗಳು (ಕರ್ಣಾಸಂ. ೨೩) ; ಈ ಲಾವಣಿಗಳು ವಿಶೇಷವಾಗಿ 'ತುರಾ' ಮತ್ತು 'ಕಲ್ಕಿ'ಗಳೆಂಬ ಲಾವಣಿಕಾರರ ಸಂವಾದಗಳಾಗಿ ಬಳಕೆಯಲ್ಲಿ ಬಂದಿವೆ (ಕನ್ನಡಾ. ೯೦) ; ತಗೋ ಷುರು ಆಯ್ತು ವಾಗ್ವಾದ. 'ತುರಾ' ನೇ ಎಚ್ಚೂಂತ ಅವ್ರು ಕಲ್ಕಿ ತುರಾನ ನುಂಗ್ಬಿಡ್ತು ಅಂತ ರಂಗಸಾಮಪ್ಪ (ದಯ್ಯಮು. ೨೨). 'ಕಲ್ಗಿ' ಪರಾ. **ತುರಾಯ** : ೧. "ಶೇಖರಃ = ತುರಾಯಂ" (ಕಾಶಿಕ. ೯೧) ; ರತ್ನ ತುರಾಯ ಸಹಿತಂ ಮುತ್ತಿನ ಸತ್ತಿಗೆಯ ಘಂಟೆ ನೃಪವರಗಿತ್ತಂ (ಬೀಳಪಂ. ೦-೯೫) ; ಸುತ್ತಿದನು ಚಿಮ್ಮುರಿಯ ಸತ್ಯ ಪಾಲಕ ಬಸವ ಮತ್ತದರ ಮೇಲಿಟ್ಟ ಮುತ್ತಿನ ತುರಾಯ (ಕರಲೀ. ೦೩೩-೨). ೩. ಒಂದು ವಿಶೇಷ ರೀತಿಯ ಹೂದಂಡೆ,-ಪುಷ್ಪಗುಚ್ಛ : ಅತಿಥಿಗಳಿಗೆ ಹಾರ ತುರಾಯಗಳನ್ನು ಅರ್ಪಿಸಲಾಯಿತು (ರೂಢಿ). ೪. ಕೆಲವು ಬಗೆಯ ಹೂವು, ತರಕಾರಿಗಳ, ಕಟ್ಟಿನಂತಿರುವ ತುದಿ,-ಅಗ್ರ : (+). **ತುರಾಯಿ** : ೧. ನವರತ್ನಖಚಿತದ ಸಿರಪೇಚ್ ತುರಾಯಿ ಕಲ್ಗಿಯನು ಸರಸಿಜಮುಖಿಯೊರ್ವೆ ಪಿಡಿದು ನಿಂದಿರ್ದಳು (ಕಂಸವಿ. ೨೪-೬೯) ; ಮುತ್ತಿನ ತುರಾಯಿಗಳು ಮುದದಿಂದ ಧರಿಸಿ (ಯುವಳ. ೫೪). ೨. ಕಲ್ಗಿ, ತುರಾಯಿ ಎರಡು ಪಕ್ಷಗಳ ಮೇಳಗಳನ್ನು ಕರೆಯಿಸುವದಪರೂಪ (ದಾಸಹು. ೫೨) ; ಲಾವಣಿಗಳಲ್ಲಿ ಎರಡು ವಿಧ. ಗಂಡಿನ ಪಕ್ಷಕ್ಕೆ ನಿಂತು ಹಾಡುವ ಲಾವಣಿ ; ಹೆಣ್ಣಿನ ಪಕ್ಷಕ್ಕೆ ನಿಂತು ಹಾಡುವ ಲಾವಣಿ...ತುರಾಯಿ ಕಲ್ಗಿ ಎಂಬ ಬೇರೆ ಹೆಸರುಗಳೂ ಉಂಟು (ಸುವರ್ಣ. ೪೦). ೩.ರಾಯರಿಗೆ ಹಾರ, ತುರಾಯಿ ಅರ್ಪಿಸಬೇಕಾಗಿತ್ತು (ರಾಯಚ. ೬೩). ೫. ನವಿಲು, ಕೋಳಿ ಮೊದಲಾದ ಹಕ್ಕಿಗಳ ಜುಟ್ಟು,— ಕೊಟ್ಟು : ಹುಂಜದ ತುರಾಯಿ ಬಲು ಮೋಜು (ನವ್ಯಗೃ. ೮೯) ; ಜುಟ್ಟೇ ಎಂಬ ಪಾರಿವಾಳಗಳಿಗೆ ತುರಾಯಿ ಇರುತ್ತದೆ (ಮುಂಬಯಿ. ೩-೧೦೪): **ತೂರಾಯ** : ೧. ಮುತ್ತಿನ ತೂರಾಯ ಕೆತ್ತಾನೆ ಬಾವಿಲಿ ಕಡುಕು (ಹಾಂದಶಾ. ೩-೦೦೫) ; ಮುತ್ತೀನ ತೂರಾಯ ಹಿಡ್ಕೊಂಡು ರಾಮಣ್ಣ ಧೊರ್ಗಾರ್ಣಿಗುಲೂವೆ ಕಳಿಸಾನು (ಹುಟ್ಟಿಹ. ೨೭). **ತೂರಾಯಿ** : ೧. ವಾರೆ ತೂರಾಯಿಗಳ ಸಿಕ್ಕಿಸಿ (ಜ್ಞಾನಸಿಂ. ೦-೩೫) ಹೊಳೆವ ಯಂತ್ರಗಳು ಮುಂದಲೆಗೆ ಕಟ್ಟಿ ಥಳಥಳಿಸುವ ಪಿಂಛ ತೂರಾಯಿ ಗಳನಿಟ್ಟು ಸುಳಿನಾಭಿಯಲ್ಲಿ ಕಟ್ಟಿದರೆಳ್ಳೊನ್ನಘಂಟೆ (ಶ್ರೀಕೃಪಾ. ೫೫).

**ತುಳಿಲ್ಗೆಯ್** 'ತುಟಿಲ್ಗೆಯ್' ನೋ.

**ತುಳಿಲ್ಗೊಳ್** 'ತುಟಿಲ್ಗೊಳಂ' ನೋ.

**ತುಳಿವೆಡೆ** (ನಾ). ಒಂದು ಬಗೆಯ ವಸ್ತ್ರ (?) : ಪಟ್ಟುವಡೆಗಳೊಳೆಲ್ಲಂ ಪಾಸಿ ಕಾರೋಹಣದ ಕಕ್ಕರವಟಿಯಿಗೆಯ ಚಿತ್ರಾವಳಿಯ ಪಳಿವೆಡೆಯ ತುಳಿವ [ಪಾಠಾಂ. ಲೆ] ಡೆಯ ನೆಳಲಪಾಣಿಯ ಬಣ್ಣದ ಕಣದ ಬಣ್ಣ ವಣ್ಣಿಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಆದಿಪು. ೪-೩೪ ವ). [?]

**ತುಳಿಸು** 'ತುಟಿಯಿಸು' ನೋ.

**ತುಳು, ತುಲು, ತುಳುವ$_1$, ತುಟುವ** (ನಾ). ೧. ಕನ್ನಡನಾಡಿನ ಪಶ್ಚಿಮಕರಾವಳಿಯ ಒಂದು ಪ್ರದೇಶ : ಆಂಧ್ರ ದ್ರಾವಿಡ ಹೈವ ತುಳು ಮಲೆಯ ಕಲರ ಕಲಾಮೂಲ (ಎಕ. VII, ಶಿಮೊ. ೭೯-೩೦ ; ಸು. 1154 ?). ೨. ತುಳು ದೇಶದ ಭಾಷೆ ; ದ್ರಾವಿಡಭಾಷೆಗಳಲ್ಲಿ ಒಂದು : ತುಳು ಭಾಷೆಯನ್ನು ಆಡುವ ಪ್ರದೇಶ ಮೊದಲು ಮದರಾಸು ಪ್ರಾಂತ್ಯಕ್ಕೆ ಸೇರಿತ್ತು (ದ್ರಾವಿವಿ. ೧೪೧). △ **ತುಲು :** ೩. ತುಳು ದೇಶದವನು : ತೆಲುಗರು ತೆರುವ ಗ ೩೨ ಪ ೫ ತುಲು ಮಳಿಯಾಲರು ತೆರುವ ಗ ೩೨ ಪ ೫ (ಎಕ. XV, ಬೇಲೂರು. ೨೯೮-೭೩ ; 1278). **ತುಳುವ$_1$ :** ೧. ದ್ವಾರಾವತೀ ಪುರವರಾಧೀಸ್ವರಂ ತುಳುವಬಳಜಳಧಿ ಬಡಬಾನಳಂ (ಮೈಆರ್. ೧೯೩೮, ೯-೨೧ ; 1133) ; ಉಲಿವ ಗೆಜ್ಜೆಯ ಚೆಲ್ಲಣದ ಹೊಂಬಳಿದ ಹರಿಗೆಯ ಹೊಳೆವ ಕಡಿತಲೆಗಳ ವಿಲಾಸದೊಳಂದು ಹೊಕ್ಕುದು ತುಳುವಪಡೆ ಕಡುಗಿ (ಕುವ್ಯಾಭೀ. ೪-೩೩) ; ಈ ಗ್ರೀಕ್‌ಪ್ರಹಸನದ ದೃಶ್ಯ ತುಳುವದೇಶದ ಸಮುದ್ರತೀರದ್ದೇ ಇರಬೇಕೆಂದೂ . . . ವಿದ್ವಾಂಸರೂ ಊಹಿಸಿದ್ದಾರೆ (ದ್ರಾವಿವಿ. ೭೮). ೩. "ತುಳುಪು ತುಳುವನಕ್ಕು" (ಮಂಗರಾ. ೦೧೨-೭) ; ಅಯ್ಯಯ್ಯ ಎಂಚ ಪೊರ್ಲಾಂಡೆಂದು ತುಳುವರು ಮೆಯ್ಯುಬ್ಬಿ ಕೇಳ ಬೇಕಣ್ಣ (ಭರಜ. ೧-೭). △ **ತುಟುವ :** ೩. ಬಟಿಕೀಶ್ವರನರಸಮುಖರ್ ತುಟಿಲಾಳ್ಗಳ್ ದೊರೆಗಳೆನಿಸಿ ತೊಲಗಿದರ್ಸೈವರ್ ತುಟುವರ್ (ಚಕವಿ. ೨-೦೪).

[ದೇ.॥ ತಮಿ. ತುಳು. ತುಳು, ತುಳುವ ; ಮಲ. ತೆಲು. ತುಳು]

**ತುಳುಂಕಾಡು, ತುಳುಂಕಾಡು, ತುಳ್ಕಾಡು** (ಕ್ರಿ). ೧. (ನೀರು ಮೊದಲಾದುವು) ಹೊರಹೊಮ್ಮು, – ಉಕ್ಕಿ ಹರಿ, – ಹೊರಸೂಸು : ವಜ್ರವೈಡೂರ್ಯಶಿಲಾಪಟ್ಟಕಂಗಳವಿರಳದೀಧಿತಿಯ ಕೊಳಂಗಟ್ಟಿ ತುಳುಂಕಾಡುವಂತೆ ತಿಳಿದೊಪ್ಪುವ ಸರೋವರದ ತಡಿಗಳೊಳ್ (ಜಗವಿ. ೧೭-೩೪ ವ); ನೆರೆದ ಪುರಜನದ ಸಂಭ್ರಮಂಗಳಿನಾ ಪುರದ ಕ್ಷೋಭಂ . . . ತೆಕ್ಕನೆ ತೀವಿ ತುಳುಂಕಾಡುತಿರ್ದುದು (ಅನಂಪು. ೯-೫೯ ವ). ೨. ಕದಡು ; ಕ್ಷೋಭೆಗೊಳ್ಳು ; ಅಲ್ಲೋಲಕಲ್ಲೋಲವಾಗು : ಮರುತ್ತರಂಗಿಣಿ ಮಟಿಲ್ತೋಜಲ್ ತುಳುಂಕಾಡೆ (ದಶಕು. ೩-೫). ೩. (ನೀರನ್ನು) ಚಿಮುಕಿಸು,– ಎರಚು : ಅನಂತರಂ ತುಮುಲಕೇಳಿಯಿಂದೋರೊರ್ವರಂ ತುಳುಂಕಾಡುವಾಗಳ್ (ಚಂದ್ರಪು. ೭-೦೪೨ ವ). ೪. ಮುಳುಗಿ ಏಳು ; ಓಲಾಡು : ಕೊಳಂಗಳೊಳ್ ತುಳುಂಕಾಡುವ ಬಾಳೆ . . . ನೋಡುವರಟ್ಟಿಯನುಂಟುಮಾಡುಗುಂ (ಶಬ್ದಾನು. ೯೭ ಪ್ರಯೋ). **ತುಳುಕಾಡು :** ೧. ನಿಜ ತುಂಬಿದ ಭಕ್ತಿ ತುಳುಕಾಡದವರ ಸಂಗವೇನು ಬಾತೆ (ಬಸವ. ೬೩೪) ; ದರಹಸಿತ ಸಿತಕಾಂತಿ ಮುಖಪಂಕೇರುಹದೊಳು ತುಳುಕಾಡೆ (ಬಸಪು. ೫೨-೩೯) ; ಕರುಣಾರಸ ತುಳುಕಾಡೆ ಕಪಿಕುಂಜರನ ಕಂಜದಳಾಯತಾಕ್ಷನು ಬರಸೆಳೆದು ಬಿಗಿಯಪ್ಪಿದನು (ತೊರರಾ. ೪-೭-೪) ; ತುಳುಕಾಡಿತಾ ನಾಡ ಸಿರಿ (ಕೃಮಿಥಾ. ೨೯-೦೨) ; ತುಳುಕಾಡುತಾವ ತೂಕಡಿಕೆ (ಗಂಗಾಶ. ೭೦-೩) ; ಆವೇಶ ತುಳುಕಾಡುತ್ತದೆ (ಶಿಕ್ಷದ. ೧೧೩). ೨. ಅಬುಜಭವಾಂಡಘಟ ಬಿರಿಯೆ ವನಧಿಗಳು ತುಳುಕಾಡೆ . . . ಬೊಬ್ಬಿರಿದುಬ್ಬಿದನು ರಘುಜ (ತೊರರಾ. ೩-೬-೭).

೪. ಯಶೋದೆ-ರಾಗರಸಾಬ್ಧಿಯೊಳ್ತುಳುಕಾಡೆ . . . ಮುರಾರಿ ಕೈಪಜಿಗಾಡಿದು (ಜಗವಿ. ೩-೫೭). **ತುಳ್ಕಾಡು :** ೨. ಮೌರ್ವೀಲತಾಸ್ಫಾಲನಂಗೆಯ್ಯೆ . . . ವ್ಯೋಮಗಂಗಾಸಲಿಲಂ ತುಳ್ಕಾಡೆ (ಜಗವಿ. ೮-೫೦) ; ಬಹುಚರಣದಾಟಕೆ ನೆಲ ನಡುಗುತಿರೆ ವಾರಿನಿಧಿ ಬೆಂಬಳಿಯಲುಬ್ಬಿ ತುಳ್ಕಾಡಿ ತಾಂಡವವಾಡಿದನು ಸುರಪ (ಸಾಳ್ವಭಾ. ೩೩-೧೦೪). ೩. ನವನಾಳಿಕೇರ ರಸಪೂರಮಂ ತುಳ್ಕಾಡಿ . . . ಪೊಟ್ಟುಗಳೆವುದು ನೃಪನ ಪೆಂಡವಾಸಂ (ಪುಷ್ಪಪು. ೨-೪೪). [ತುಳುಂಕು$_1$ + ಆಡು$_1$]

**ತುಳುಂಕು$_1$, ತುಳುಕು, ತುಳ್ಕು** (ಕ್ರಿ). ೧. ತುಂಬಿ ಹೊರಸೂಸು – ಹೊರಹೊಮ್ಮು : ತಮ್ಮಣ್ಣನ ಬಿನ್ನನಾದ ಮೊಗಮುಮಂ ಕಂಡು ಕಣ್ಗಳಿಂ ನೆತ್ತರ್ ತುಳುಂಕೆ (ಪಂಪಭಾ. ೭-೫ ವ) ; ಸ್ಮರರಾಗಾಮೃತಮಂ ತುಳುಂಕೆ (ಅರ್ಧನೇ. ೨-೭೮) ; ದರಹಾಸಂ ಮುಖದಿಂ ತುಳುಂಕುತಿರೆ (ಕುಸುಮಾ. ೧೨-೭೯) ; ಗಾನರಸವಾರ್ಧಿಯನ್ನೆದೆ ತುಳುಂಕುವಾ ಲಸದ್ವೀಣಾ ವಿಂಚರಗಳನೆ ಪೊಣ್ಮಿಪ ಮೋಹನರೂಪದಂಗನಾಶ್ರೇಣಿ ವಿರಾಜಿಕುಂ (ಉದ್ಭಟ. ೧-೭೮) ; ಪೊಣ್ಮುವ ಸುಖಬಾಷ್ಪಂ ತುಳುಂಕೆ ಪೇಳ್ವುದು ಕೃತಿಯಂ (ರಾಜಶೇ. ೧-೫೨). ೨. ಕದಡು ; ಕ್ಷೋಭೆಗೊಳ್ಳು : ಜಳಧಿಯ ನೀರ್ ತುಳುಂಕಿದವು ಧಾತ್ರಿ ತಿಟ್ಟಂದಿಟಿದತ್ತು (ಮುಹಾನೇ. ೧೦-೦೨೯). ೩. ಕ್ಷೋಭೆಗೊಳಿಸು ; ಕದಡುವಂತೆ ಮಾಡು : ಗಂಗೆಯ ನೀರಂ ತೋಳೊಳ್ ತುಳುಂಕಿ ಮಗುಟ್ದು ಬಂದಂಗೆ ವಿಷದ ಲಡ್ಡುಗೆಯನಿಕ್ಕಿಯುಂ (ಪಂಪಭಾ. ೨-೩೨ ವ). ೪. ಚಿಮುಕಿಸು ; ಎರಚು ; ಸಿಂಪಡಿಸು : "ತುಳುಕು, ತುಳುಂಕು – ಸೇಚನೇ" (ಶಮಧಾ) : ವಾರಸ್ತ್ರೀಜನವಿದಿರೊಳ್ ತುಳುಂಕಿ ನೀರಂ ನೀರಧ್ರುಸ್ತನತಟದೊಳ್ ಕೃತೋಪಹಾರಂ ಹಾರಶ್ರೀಗೆಣೆಯೆನಿಸಿತ್ತು ವಾಃಕಣೌಘಂ (ಕಾವ್ಯಾವ. ೫-೪೮) ; ನಾಡೆ ಮುಳುಂಗಿ ಪೂಡಿದರಲಿಂಬಿ ತುಳುಂಕಿದರಂಬುವಂ (ಹಮ್ಮೀರ. ೪-೨೭). ೫. ಚೆಲ್ಲು; ಒಗೆ ; ಬಿಸುಡು ; ಹೊರಹಾಕು : ಮುಗಿಲ ನೀರಂ ನಚ್ಚಿ ಡೋಣಿಯ ನೀರಂ ತುಳುಂಕಿದ ಕೋಡಗದಂದಂ ನಿನಗಕ್ಕುಂ (ಪಂಚತಂ. ೭೮-೮). **ತುಳುಕು :** ೧. ಅನುರಾಗ ರಸಂ ಕಟಾಕ್ಷದಿಂ ತುಳ್ಕೆ ಕುಚಾಗ್ರದಿಂ ತುಳುಕೆ ಹಾರಮರೀಚಿ (ಜಗವಿ. ೦೪-೧೦೩) ; ವೀರಭಕ್ತನ ಪದನಿಹತಿಗೆ ಶಿರೋರುಗಂಗಾವಾರಿ ತುಳುಕಿಯಪಾರ ಪಾದೋದಕವೆನಿಸಿ (ಬಸಪು. ೧೮-೪೮) ; ಹೃದಯಶಿಖಿಯುಬ್ಬೆ ತಳಿತು ಲೋಚನ ವಾರಿ ತುಳುಕಿತು ಪವನಜಾದಿಗಳ (ಕುವ್ಯಾದ್ರೋ. ೭-೮) ; ಸಲೆ ಮೋಹರಸ ವಧಿಕ ಭಕ್ತಿರಸವೊಡವೆರದು ತುಳುಕಲ್ (ಚಬಪು. ೬-೪) ; ಅಶ್ರು ನಯನದೊಳ್ತುಳುಕೆ (ಕೃಮಿಥಾ ೧೮-೫೨) : ಲಾಲಾಜಲಂ ತುಳುಕಲ್ ಬರ್ಪತೊದಲ್ ಮನಂಗೊಳಿಸಲ್ (ಶಾಕುಂತ. ೧೦೫-೧೮೦) ; ತುಂಬಿದ ಕೊಡ ತುಳುಕುವುದಿಲ್ಲ (ಗಾದೆ). ೨. ಧರೆಯೊಗ್ಗುಡಿಸಲಿ ಶರನಿಧಿ ತುಳುಕಲಿ (ದೀಕ್ಷಾಬೋ. ೯೧-೧೫) : ವಿಕಲ್ಪಬಿಂದಾಗೆ . . . ತುಳುಂಕಿದಂ, ತುಳುಕಿದಂ (ಶಮದ. ೩೬ ಪ್ರಯೋ) : ನೆಳಲು ಸುಳಿಯಲು ದುತಿಯೆಂದಪ್ಪಳಿಸೆ ವಾಸುಕಿ ನೊಂದನಬುಧಿ ತುಳುಕಿದವು (ಕುವ್ಯಾದ್ರೋ. ೩-೦೪) ; ಜಲಚರಗಳಟ್ಟುಳಿಗೆ ತುಳುಕಿ ಮೇಲಕೇಳ್ವ ಬಲುಸೀರ್ಪನಿಗಳ ಮೊತ್ತದಿಂದಂಬುಧಿಯಳವಟ್ಟು ಮೆಟಿದುದಲ್ತಿಯಲಿ (ಕಂನವಿ. ೪-೨೩). ೪. ಭರದಿಂದು ತುಳುಕಿದ ನೀರುರದೊಳ್ ಹಾರಾಂಶುರುಚಿಯನಿಕುರ್ಬಿಗೊಳೆ (ಆದಿಪು. ೦೪-೧೦೮) ; ಕರತಳವಾರಿ ತಳ್ತು . . . ತನೂದರಿಯರಲಂಪಿನಿಂ ತುಳುಕೆ ಕೃಷ್ಣನ ಮೇಲೆ (ಜಗವಿ. ೧೪-೯೮). ೫. ನಿನ್ನ ರಕುತವ ತುಳುಕುವೆನು ಹಿಂದಿಕ್ಕಿಕೊಂಬನ ತೋಟು ತೋಟಿಸುತ...ಕೈಮಾಡಿದನು (ಕುವ್ಯಾಕ. ೧೨-೨೪) ; ಮಳೆಯ ಮುಗಿಲ ನೋಡಿ ಮನೆಯೊಳಗಿರ್ದುದಕವ ತುಳುಕುವ ಕಡು ಹೆಡ್ಡರಂತೆ (ಶೀಮಿಸಂ. ೩೪-೩೨). ೬. (ಬಾಣ ಮೊದಲಾದ ಆಯುಧಗಳನ್ನು ಎದುರಾಳಿಯ ಮೇಲೆ) ಎಸೆ,—ಪ್ರಯೋಗಿಸು : ಶರಾಳಿಯ ತುಳುಕಿ ಹೊಕ್ಕನು ಸತ್ಯಜಿತು (ಕುವ್ಯಾದ್ರೋ. ೨-೪೩) ; ತುಳುಕಿ

ದನೂನ ಶರಜಾಲಮಂ ಕರಿತುರಗರಥ ಪದಾತಿಗಳ ಸಂದಣಿ ದಣಿಯಲು (ಕೃಮಿಥಾ. ೪-೪೩): ಬಿಲ್ಗೊಂಡು ದಿವ್ಯಾಸ್ತ್ರಮಂ ತುಳುಂಕಿದನು ಝೇಂಕರಿಸುತ (ತುರಂಗ. ೮೩-೨೯). ೭. ಸೇರಿಸು ; ಹೂಡಂ ; ಸಂಧಾನಮಾಡಂ : ಸೆಳೆದನಿಷುಧಿಯಲಂಬ ತಿರುವಿಗೆ ತುಳುಕಿ ಕೋಲನು ಕೋಡಕೈಯಿಂದಳವಿಗೊಯ್ಯನೆ ನಿಲುಕಿದನು ನಿಗುರಿದ ಶರೀರದಲಿ (ಕೂರಾ. ೩-೮-೭೯). **ತುಳ್ಕು** : ೧. "ಸೂಸಿದುದನೆ ತುಳ್ಕಿತೆಂಬುದು" (ರನ್ನಕಂ. ೬) ; ಚಾರು ವೀರಭಟಕೋಟಿಗೆ ರಾಗರಸಂ ಪೊದಟ್ಟು ತುಳ್ಕುತ್ತಿರೆ ಬಂದು ಮುತ್ತಿ ಮೊಗೆದಂ ವಿಭು ಗೋಕುಲಮಂ ವಿರಾಟನಾ (ಪಂಪಭಾ. ೮-೯೨) : ತುಳ್ಕಿದರಸ್ಮಿತಂ ವದನದಿಂದನುರಾಗರಸಂ ಕಟಾಕ್ಷದಿಂ ತುಳ್ಕೆ (ಜಗವಿ. ೦೪-೦೦೩): ಕಂಗೊಳಿಸಿತ್ತು ತುಂಗಭದ್ರೆ ತುಳ್ಕುತೆ ಸೊಗಸಂ (ಉದ್ಭಟ. ೩-೮೨). ೨. ನೆಲನಂ ನುಂಗಲುಮಂಬುಧಿ ಜಲಮಂ ತವೆ ತುಳ್ಕಲುಂ . . . ಒಡರ್ಚಿದಂ ಚಕ್ರಧರಂ (ಶಾಬ್ದ್ಯಾವ. ೦೦೮) : ಕಡಲೇಳುಂ ಕದಡೆಳ್ದು ತುಳ್ಕೆ (ರಾಜಶೇ. ೬-೧೦). ೪. ಸವತಿಯ ಮೇಲೆ ಮುಂ ತುಳುಕಿ ತನ್ನಯ ಮೋಲಧಿಪಂ ಬಟಿಕ್ಕೆ ತುಳ್ಕುವ ವಿಮಲಾಂಬುಗಳ್ ತನಗೆ ಮನ್ಮಥನಂಬುಗಳಂತಿರೆ (ಜಗವಿ. ೦೪-೦೦೦) ; ಕೊಳ್ಕೊಳ್ಳೆಂದೊಡನೊಡನೆಯೆ ತುಳ್ಕುವ ಯುವತಿಯರ ಕರಪರಿಚ್ಯುತ ಸಲಿಲಂಗಳ್ಕೊಳೆ (ಶಪದ. ೨೩೦ ಪ್ರಯೋ). ೫. ಸರೋವರಾಂಬುವನಿತಂ ತವೆ ತುಳ್ಕೆ ರಸಾತಳಂಬರಂ ಬೆದರಿಯುವೆಂತು ಮಷ್ಪಳಿಸಿ ಕೊಂದಪೆಂ (ಪಂಪಭಾ. ೦೩-೮೦) ; ಬೇಸಱಿಂದಳ್ ತುಳ್ಕಿದ ಕೊರ್ಮೆಯ ಕಣ್ಣನೀರ್ಗಳಂ (ಶೃಂಗಾರ. ೩-೫೮) ; ತುಳ್ಕುತಿರ್ಪುದಂ ನೆತ್ತರೆಲ್ಲರಂ ಕರೆಗೆ (ಕಾವ್ಯಾವ. ೦೭೧-೩೫೫). ೬. ಇಂತಿರದೆ ಮೂದಲಿಸಿ ಸಮ್ಮುಖವಾಗಿ ತುಳ್ಕಿದರ್ ಶರವರುಷಮಂ (ಜಲಪು. ೨೪-೦೬). ೮. ಹುಟ್ಟು ; ಮೂಡು ; ಉಂಟಾಗು : ಮದಕರಿಕುಳಮೋವದೆ ಬಳ್ಳಿವಾಯ್ದುಗಱಿ ತುಳ್ಕಿದ ಗಿರಿ ಪರಿವಂತೆ ಪರಿದು ಮರವಾಯ್ದಿರ್ಕುಂ (ಶಾಂತಿಪು. ೯-೦೪೦) ; ವಸುಮತಿಗೆ ಕೆನ್ನೀರ್ತುಳ್ಕೆ ತುಳ್ಕಿದಂ ಕೈಗೆಡದೆ ಸಾಯಕ ಸಮುದ್ರಮಂ ಶಾರ್ಙ್ಗಿ ಬಳಿಕ (ಜಲಪು. ೪೯-೪೧).

[ದೇ.॥ ತಮಿ. ತುಳಬ್ಕು, ತುಳಕ್ಕು, ತುಳುಮ್ಬು ; ಮಲ. ತುಳುಮ್ಬು; ತೆಲು. ತೊಲುಕು, ತೊನಕು ; ಪರ್ಜಿ. ತೊಲ್ಕ್ ]

**ತುಳುಂಕು$_2$**. ತುಳುಕು$_2$ (ನಾ). ಹೊರಸೂಸುವಿಕೆ ; ಹೊರಹೊಮ್ಮುವಿಕೆ. 'ತುಳುಂಕಂಗುಟ್ಟು' ಪರಾ. **ತುಳುಕು$_2$**. 'ದೊಂಬಿದಂಳಂಕು' ಪರಾ.

[ <ತುಳುಂಕು$_1$. / ತಮಿ. ತುಳಕ್ಕು : ಮಲ. ತುಳಣ್ಣು ]

**ತುಳುಂಕುಗುಟ್ಟು** (ಕ್ರಿ). ಅತಿಶಯವಾಗಿ ತುಳುಂಕಂ : ಹೆಚ್ಚಾಗಿ ಹೊರಸೂಸಂ : ಅಕಗಳಂಗೋಪಾಂಗದೊಳಿಂತು ನಾಟ್ಯರಸಮ ತೀವಿ ತುಳುಂಕುಗುಟ್ಟ ... ಅತ್ಯಾಶ್ಚರ್ಯಮಂ ಮಾಡಿದಾಗಳ್ (ಆದಿಪು. ೬-೦೨೫ ವ).

[ ತುಳುಂಕು$_2$ + ಕುಟ್ಟು$_1$ ]

**ತುಳುಂಕುದುಂಬು** (ಕ್ರಿ). ಹೊರಚೆಲ್ಲುವಂತೆ ಭರ್ತಿಮಾಡು ; ತುಳುಂಕುವಷ್ಟು ತುಂಬು : ನಿನ್ನ ಬಟ್ಟಲನ್ನು ತುಳುಂಕುದುಂಬಿ ಜನ್ಮ ಸಾರ್ಥಕ ಮಾಡಿಕೊಳ್ಳುವೆನು (ಚಿಟ್ಯಅ. ೯೮-೧). [ ತುಳುಂಕು$_1$ + ತುಂಬು$_1$ ]

**ತುಳುಕಾಡು** 'ತುಳುಂಕಾಡು' ನೋ.

**ತುಳುಕಿಸು** (ಕ್ರಿ). ಹೊರಸೂಸು; ಹೊರಚೆಲ್ಲು : ಮುಗುಳುನಗೆ ತುಳುಕಿಸುತ್ತ ಕುಳಿತಿದ್ದಳು ಬಾಲಿ (ಕುಡ್ಯಹ. ೯೫).

[ ತುಳುಕು$_1$ ( <ತುಳುಂಕು$_1$ ) + - ಇಸು$_2$ ]

**ತುಳುಕು$_1$** 'ತುಳುಂಕು$_1$' ನೋ.

**ತುಳುಕು$_2$** 'ತುಳುಂಕು$_2$' ನೋ.

**ತುಳುಕುನೀರಾಡು** (ಕ್ರಿ). ನೀರನ್ನು ಚಿಮುಕಿಸಿ ಆಟವಾಡು,-ಕ್ರೀಡಿಸು: ಧೊಮ್ಮಳಿಸಿ ತುಳುಕುನೀರಾಡಿದಂ (ಕುಳುವಹ. ೯-೪೩).

[ ತುಳುಕು$_1$ ( <ತುಳುಂಕು$_1$) + ನೀರ್$_1$ + ಆಡು$_1$ ]

**ತುಳುಕುವರಿಗೆ** (ನಾ). ಒಂದು ಬಗೆಯ ಗುರಾಣಿ (?) : ತುಳುಕುವರಿಗೆಯ ಗುಳವ ವಜ್ರದ [ದಿ] ನಲಗ ಮುಱಿಯೊಡೆಯಬ್ಬು ಜೋದರ ತಲೆಗಳನು ತುಂಡಿಸಿದನಿಭವನು ಹೊಕ್ಕು ಬೀದಿಯಲಿ (ಕುಮಾರ್ದ್ರೋ. ೭೮೩. ಪ೦. ೨೮೯).

[ ತುಳುಕು ? + ವರಿಗೆ$_3$ ]

**ತುಳುಕೆವಟ್ಟು** 'ತುಡುಕೆವಟ್ಟು' ನೋ.

**ತುಳುಗತ್ತಿ**, ತುಳುವಕತ್ತಿ (ನಾ). ಈಳಿಗೆ ; ಮೆಟ್ಟುಗತ್ತಿ ; "ಈಲಿ, ಕರವಾಲಿಕೆ" (ನಾಚಿರಾ. ೩). **ತುಳುವಕತ್ತಿ** : "ಈಳೀ, ಕರವಾಳಿಕಾ, ೨ ತುಳುವಕತ್ತಿ ... ಈಳಿಗೆಕತ್ತಿ" (ಸಿದ್ಧಾಂತಿ. ೨೨೮). [ ತುಳು ? + ಕತ್ತಿ ]

**ತುಳುನಾಡು** (ನಾ). = ತುಳು ೧ : ತುಳುನಾಡ ಸತ್ಯ ಮನೆಯಂತೆ ಪಟಯಿಸುವರ್ ...ಪಾವಿನಂತೆ ಪೊರಳ್ವರ್ (ಧರ್ಮಾಮೃ. ೩-೮೦) ; ಈ ತುರವರನಾಡೇ ನಮ್ಮ ತುಳುನಾಡೆಂದು ನಿರ್ಧರಿಸಲು ಅನೇಕ ಕಾರಣಗಳುಂಟು (ತುಳುನಾ. ೧೩). [ತುಳು+ನಾಡು]

**ತುಳುವ$_1$** 'ತುಳು' ನೋ.

**ತುಳುವ$_2$** (ನಾ). (ಕರಾ) ೧. ಮೃದುವಾದುದು; ಮೆದುವಾದಂದು. 'ತುಳುವಗಾಯ್' ಪರಾ. ೨. ಒಂದು ಬಗೆಯ ಹಲಸಿನ ಹಣ್ಣು ; ಬಹಳ ಮೃದುವಾದ ಹಲಸು. [←ತುಳು. ತುಳುವೆ]

**ತುಳುವಕತ್ತಿ** 'ತುಳುಗತ್ತಿ' ನೋ.

**ತುಳುವಗಾಯ್** (ನಾ). (ಹೀರೆಯ ಕಾಯಿಯಿಂದ ಮಾಡುವ) ಒಂದು ಬಗೆಯ ಖಾದ್ಯ : ಕೆಲವ ನವಜಿಹ್ವೆಯ ಸೊದೆಯ ಕೆಲವ ತುಳುವಗಾಯುಂ ಕೆಲವ ಶೂಲ್ಯಕವನು ... ಮಾಡಿ ಹಲವು ಚಂದದೊಳು ಹೀರೆಯಕಾಯ ಪಾಕಮಂ ಹಿರಿದಾಗಿ ಹಸಮಾಳ್ಪುದು (ಸೂಪಶಾ. ೫-೬).

[ ತುಳುವ$_2$ + ಕಾಯ್$_4$ ]

**ತುಳುವಬದನೆಕಾಯ್** (ನಾ). ಬದನೆಕಾಯಿಯಿಂದ ಮಾಡುವ ಒಂದು ಬಗೆಯ ಖಾದ್ಯ : ಹದನಾದ ಬದನೆಯ ಕಾಯ ಹೊದಟ ವಗ್ಗರಣೆಯಂ ಮಾಡಿ ಪರಿಮಳವಿಕ್ಕಲದು ತುಳುವಬದನೆಕಾಯ್ಸರಾದುದು (ಸೂಪಶಾ. ೪-೬). [ ತುಳುವ$_2$ + ಬದನೆಕಾಯ್ ]

**ತುಳ್ಕಾಡು** 'ತುಳುಂಕಾಡು' ನೋ.

**ತುಳ್ಕು** 'ತುಳುಂಕು$_1$' ನೋ.

**ತುಳ್ಕುವೊಳೆ** (ನಾ). ತುಂಬಿ ತುಳುಕಾಡುತ್ತಿರುವ ಹೊಳೆ,-ನದಿ : ಮಸಗಿತು ತುಂಬಿ ತುಳ್ಕುವೊಳೆ ಕಾರ್ವಗಲವ್ವಳಿವಂತೆ (ಚಳವಿ. ೨-೦೦೬).

[ ತುಳ್ಕು ( <ತುಳುಂಕು$_1$) + ಪೊಳೆ$_3$ ( <ಪೊಟೆ$_1$) ]

**ತುಳ್ದಿಲ್ಲಾಲ್** 'ತುಟ್ದಿಲ್ಲಾಲ್' ನೋ.

**ತುಳ್ಳಾಡು** (ಕ್ರಿ). ೧. ಹೊರಳಾಡು ; ಉರುಳಾಡು. ೨. ಜಿಗಿದಾಡು ; ನೆಗೆದಾಡು ; ಕುಣಿದಾಡು : ತುಳ್ಳಾಡಿ ತುಳ್ಳಾಡಿ ಮುಳ್ಳಿನ ಮೇಲೆ ಬಿದ್ದ (ಗಾದೆ). [ ತುಳ್ಳು + ಆಡು$_1$ ]

**ತುಳ್ಳು** (ಕ್ರಿ). ೧. ಉರುಳು ; ಹೊರಳು. ೨. ಜಿಗಿ ; ನೆಗೆ ; ಹಾರು ; ಕುಣಿ. 'ತುಳ್ಳಾಡು' ಪರಾ.

[ದೇ.॥ ತಮಿ. ಮಲ. ತುಳು. ತೆಲು. ತುಳ್ಳು ; ಕೊಡ. ತುಳ್ಳ್ ]

**ತುಱಿ**, ತುರಿ$_3$ (ನಾ). ೧. ಕಡಿತ ; ಕೆರೆತ ; ನವೆ ; ತಿಂಡಿ (ಉಕ). 'ತುಱಿಸು' ಪರಾ. ೨. ಒಂದು ಬಗೆಯ ಚರ್ಮರೋಗ: "ಕಂಡೂಃ, ಖರ್ಜೂಃ, ಕಂಡೂಯಾ ಈ ೩ ತುಱಿ" (ನಾಚಿರಾ. ೧೨೦) ; ಕೆರಕಿಂ ತುಱಿಯಿಂ ತೀವಿದ ಕರಚರಣಂ ಬೋಟಮುಂಡೆ ಕಾಗ್ಗಿದ ದೇಹಂ (ಧರ್ಮಾಮೃ. ೬-೨೨೪) ; ತುಱಿಯ ಮೇಲೆ ಉಗುರನಿಕ್ಕಿದರೆ ಹಿತವಾಗಿಹುದು (ಸಿದ್ಧೇಶ. ೪೧-೦೦೨) ; ಆ ರೂಪಂ ಪಲ್ಲಟಿಸಿ ಕೆರಕುಂ ತುಱಿಯುಂ... ಗುಂಡವೇಷಂ ತನಗವುರೆ (ಬಂಹರಿ.೯-೩೦ ವ). ೩. ಕಾಮಾಸಕ್ತಿ ; ವಿಷಯಾಭಿಲಾಷೆ ; ಕಾಮಲಂಪಟತೆ. 'ತುಱಿಪ' ಪರಾ. **ತುರಿ$_3$** :

೨. ಮೈಯೆಲ್ಲಾ ತುರಿ, ಕಜ್ಜಿ ತುಂಬಿತ್ತು (ನೀತಿಚಿಂ. I, ೨೦) ; ತುರಿಯಿದ್ದ ವಗೆ ನಾಚಿಕೆಯಿಲ್ಲ, ಮರೆಯಿದ್ದವಗೆ ಮಂದತ್ವವಿಲ್ಲ (ಗಾದೆ). [ದೇ. ‖ ತಮಿ. ತುರುತ್ತೈ, ಚೊಱಿ; ಮಲ. ಚೊಱಿ ; ತೆಲು. ದುರದ]

**ತುಱುಕೆ, ತುರಿಕೆ** (ನಾ). ೧. = ತುಱು ೨ : (೩). **ತುರಿಕೆ** : ೧. ತುರಿಕೆಯಾದವನೆಯೆ ತುರಿಸಿಕೊಳ್ಳುವನಲ್ತೆ ತುರಿಯಿಲ್ಲದವಗೇಕೆ ಚಿಂತೆ (ಇಂಬಾಶ. ೧೯೭-೨೩). ೨. ಒಂದು ಬಗೆಯ ಗಿಡ : ತುರಿಕೆ, ಸುರುಸುರಿಕೆ (ಬ್ರುಶಿಗಿ. ೩೯-೭೭೦). ‘ ತುಱುಚೆ ’ ಪರಾ. [ ತುಱು + -ಕೆ ]

**ತುಱುಗ** (ನಾ). ತುರಿರೋಗದಿಂದ ಪೀಡಿತನಾದ ವ್ಯಕ್ತಿ : ತುಱುಗರ ತೊನ್ನರ . . . ಮುಟ್ಟಲಕ್ಕುಮೊ ಸೂಳೆಯರಂ (ಬ್ರಹ್ಮಶಾ. ೧೨೨-೩). [ ತುಱು + – ಗ$_2$ ]

**ತುಱುಚ** ‘ ತುಱುಚೆ ’ ನೋ.

**ತುಱುಚೆ** ‘ ತುಱುಚೆ ’ ನೋ.

**ತುಱುಪ** (ನಾ). ಕಾಮಾತುರತೆ ; ಬೆದೆ. ‘ ತುಱುಪಗಾಱ ’ ಪರಾ. [ ತುಱು + – ಪ$_2$ ]

**ತುಱುಪಗಾರ್ತಿ** (ನಾ). ಕಾಮಾತುರೆ ; ಕಾಮುಕಿ : ಮಾನವಮದನನಂ ಕಂಡು ಕೈಗಟ್ಟಿಯೆ ಕಣ್ಗೋಲ್ಲಾ ಕಾಮಕಾತರೆಯಾಗಿ ತುಱುಪಗಾರ್ತಿ ಕೂರ್ತು ನಿತ್ತರಿಸಲಾಱದೆ...ಮೇಲ್ವಾಯ್ದು (ಲೀಲಾವ. ೦೪-೧೦೪ ವ). [ ತುಱುಪಗಾಱ + – ತ್ತಿ$_1$ (< – ಇತ್ತಿ) ]

**ತುಱುಪಗಾಱ** (ನಾ). ಕಾಮಾಸಕ್ತನಾದವನು ; ವಿಷಯಲಂಪಟ. ‘ ತುಱುಪಗಾರ್ತಿ ’ ಪರಾ. [ ತುಱುಪ + –ಗಾಱ ]

**ತುಱುಸು, ತುರಿಸು** (ಕ್ರಿ). ೧. ಮೈಯಲ್ಲಿ ಕಡಿತ ಹೋಗುವಂತೆ ಕೆರೆ : “ತುಱುಸು–ಕಂಡೂತಿಕರ್ಷಣೇ ” (ಶಮದ): ಪಲ್ಲಂ ಸುಲಿವೊಡಂ ಕಿವಿ ಕೀಂಟೊಡೆ ತುಱುಸುವೊಡಂ ಪುಲ್ಲಿಂದೆನಿತುಂ ಪ್ರಯೋಜನಮುಂಟು (ಶಂಚತಂ. ೩೪-೦೪) ; ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುಱುಸುವಂತೆ (ಬಸವ. ೬೬೦); ಹೆಡತಲೆಯ ತುಱುಸುವರೆ ಹಾವಿನ ಹೆಡೆಯೊಳಕಟಾ(ಕುಮಾ.ಸ. ೧೪-೩೬); ಇನಿಸು ತಲೆಯ ತುಱುಸುವೊಡೆ ಹೊತ್ತಂ ಕನಸಿನಲ್ಲಿ ಕಾಣೆ (ಸಮ್ಮುಖಾ. ೫-೧೯). ೨. ಕಿವಿ; ಚುಚ್ಚು: ಅಪ್ಪೋಪಳಿನರಸಂ ಮಕರಂದನಂ ತುಱುಸಿ ತೋಱುತ್ತಂ ಪೋಪಾಗಳ್ (ಲೀಲಾವ. ೨-೩೭ ವ). **ತುರಿಸು** : ೧. ಕುಸುಮೆಯನ್ನು ಕಾಣದೆ ತಲೆ ತುರಿಸುತ್ತ ಬಾಗಿಲಲ್ಲಿ ನಿಂತಿದ್ದಾರೆ (ಕಹಾರ.೨೩ ).

**ತುಱುಸಿಕೊಳ್, ತುರಿಸಿಕೊಳ್ಳು** = ಕೆರೆದುಕೊಳ್ಳು: ಇಱುಸಿಕೊಳುತಂ ತುಱುಸಿಕೊಳುತ . ಕೊಱೆಯಿಸಿಕೊಳುತ...ತೆರಳುತುರುಳುತುಂ (ಸಾನಂಚ. ೪-೨೦೦): ತುಱುಸಿಕೊಳುತಿರ್ದ್ದ ಸೆಯ ಐದಿಗಳ ಹೊಱಗನಾಲಿಸುತ...ಇರ್ದನಾ ಹನುಮಾ (ತೊರರಾ. ೫-೫-೨): ತುರಿಕೆಯಾದವನೆಯೆ ತುರಿಸಿಕೊಳ್ಳುವನಲ್ತೆ ತುರಿಯಿಲ್ಲದವಗೇಕೆ ಚಿಂತೆ (ಇಂಬಾಶ. ೧೯೭-೨೩) : ಕೊಳ್ಳಿಯಿಂದ ತಲೆ ತುರಿಸಿಕೊಂಡ ಹಾಗೆ (ಗಾದೆ). [ತುಱು + – ಸು$_1$]

**ತುಱುಹಿಡಿ** (ಕ್ರಿ). ತುರಿಯುಂಟಾಗು; ತುರಿಯೆಂಬ ಚರ್ಮರೋಗ ಅಂಟು : “ಪ್ರಸರ, ವಿಸರ್ಪಣ—ಚಿಬ್ಬು, ತುಱುಹಿಡಿವುದು” (ನಾಚಿರಾ. ಕಿ). [ತುಱು + ಹಿಡಿ$_1$ (< ಪಿಡಿ$_1$)]

**ತುಱು, ತುರು, ತೊಱು** (ನಾ). ೧. ಹಸು; ದನ; ಆವು; ಗೋವು : “ ತುಱುಗಳೆನಲ್ಕಾಕಳೆಂದು ತಿಳಿಗೆ ” (ಛಾಂದಿ. ೯೬). ‘ತುಱುಗಾಱ’ ಪರಾ. ೨. ದನಗಳ ಗುಂಪು ; ದನಗಳ ಮಂದೆ ; ಗೋಸಂಪತ್ತು : “ಗೋಧನಂ ತುಱುವೆನಿಕ್ಕು” (ಮಂಗರಾ. ೫೬-೦೦); ಕೊತ್ತುಪುಣ್ಣ ಲಮನಿಱಿದು ತುಱುವಂ ಕೊಂಡು ಪೋಗುತ್ತಿರೆ (ಎಕ. IV, ಹೆಗ್ಗ.ದ. ೦೦೩-೬ ; ಸು. 910) ; ಗೋಗ್ರಹಣದೊಳ್ ತನಗಾಗಿ ಕಾದಿ ತುಱುವಂ ಮಗುೞ್ಚಿದುದುಮಂ ನೆನೆದು (ಪಂಪಭಾ. ೧೨-೦೭ ವ); ಪಾದಿರಾಜನತಿಕೋಪದಿನ[ನ್ರ]ರ[ದ] ಬೆನತೂರ ತುಱುವಂ [ತಬ್ಬಿ]ಸಿದನನ್ನಣ್ಣಿಗೆಱೆಗೆ ತ[ಱು]ಸಲನಿನ್ನಂ (ಸೌಇಇ. XI-i, ೮೦-೦೦ ; 1049) ; ಗೋವರ್ಧನಗಿರಿಯತ್ತ ತುಱುವ ಕಾದಂತೆ (ಮೋಹತ. ೪೦-೫೦); ಗೋವಳಂ ತುಱುಗಳಂ ಮನೆಯಂ ಪುಗಿಸಿದಂ (ಶಬ್ದಾನು. ೨೦೫ ಪ್ರಯೋ). **ತುರು** : ೧. ಕಚ್ಚಲ ಕರುವನು ನೆಕ್ಕುವ ತುರುವೋ (ಅನಿಕೇ. ೩೦-೦೨) : ಹಟ್ಟಿಯಲ್ಲಿ ತುಂಬಿದ ತುರುಗಳ ಆರೈಕೆಯನ್ನೂ ಅವಳೇ ನೋಡಿಕೊಳ್ಳುತ್ತಿದ್ದಳು (ಹಾಹುತ್. ೬೬). ೨. ಶತ್ರುಗಳು ಮುಱಿದೋಡಿದರು ತುರು ಮರಳಿತು (ಕಸಾಕ. ೬೬). **ತೊಱು** :೨. ಕೇಸರಿ ತೊಱುವಾಳ್ವನಾ ಮಗನ್ ಆಲನ ತೊಱು ಇಕ್ಕಿಸಿ ಬಿಟ್ಟಾನ್ (ಎಕ.X (೩), ಮೂಲಬಾಗಿ. ೦೫೬-೩; 8ನೆಯ ಶತ); ಶ್ರೀ [ಮಾ]ವಲಿವಣರಸರ್ × × ಮಗ ಗ × × × ಮುಣ್ಣನು ತೊಱುವ ಕೊಳ್ವಾ ... ಆಯಿಕುಳೆ ಗ ಟಾನಿ ಕೊಟ್ಟದು (ಸೌಇಇ. IX-i, ೦೦-೫; 9ನೆಯ ಶತ); ತೊಱುಗೊಳೆ ತೊಱುವಂ ಪರಿಯಲೀಯದೆ (ಮ್ಯಾಎಆ. ೦೯೩೨, ೦೯೬-೭; 9ನೆಯ ಶತ).

ತುರುವಿನ ಮಾಳ=ದನಗಳು ಮೇಯುವ ಮೈದಾನ; ಹುಲ್ಲುಗಾವಲು ; ಗೋಮಾಳ: ವಾಯುವ್ಯದಲ್ಲಿ ಒಂದು ಮೈಲಿ ದೂರದಲ್ಲಿ ಗಿರಿಜಾಪುರದ ಕಡೆಗೆ “ತುರುವಿನ ಮಾಳ” ಇದೆ (ಹೊಯ್ಸಳವಾ. ೨೩೪). **ತುಱುಕಱು, ತುರುಕರು**=ದನಕರು : ತುಱುಕಱು ಕಟಿದರೆ ಉಣಬಹುದಣ್ಣ ತುಱುಕಱು ಕಟಿದರೆ ಅತಿ ಪುಣ್ಯವಯ್ಯ (ಪುರಂದ. ೧-೦೭೯ ಪಲ್ಲವಿ); ತುಱುಕಱುವು ಇರದೂರು ನರಕಭಾಜನಮಕ್ಕು ತುಱುಕಱುಂಟಾದವರುಣಲುಂಟು ಜಗಕೆಲ್ಲ ತುಱುಕಱುವೆ ದೈವ (ಸರ್ವಜ್ಞ. ೦೩೬೫) ; ಒಯ್ಯ ಹುಲಿಯಂ ಕಂಡು ತುರುಕರುಗಳೋಡುತಿವೆ (ಶಾಂಬಿರ. ೯೦-೦೭೪). **ತುಱುವನಿಕ್ಕಿಸು, ತೊಱುವನಿಕ್ಕಿಸು** = ಅಪಹಾರವಾದ ಗೋವುಗಳನ್ನು ಮರಳಿಸು : ಮಟ್ಟಿಯರ ಬೂವಯ್ಯನ ಮಗಂ ಐದಿಯಾಯ್ತು ತುಱುವನಿಕ್ಕಿಸಿ ಕಾದಿ ಸತ್ತ (ಎಕ. II, ೩೯೪-೯ : ಸು. 854) ; ಕುಸುಮುಬ್ಬರಿ ತುಱುವನಿಕ್ಕಿಸಿ ಸತ್ತ (ಎಕ. XVI, ಚಿಕ್ಕನಾ. ೭೨-೫ ; ?) : ಅಣೆರೆಯರ ಮಗ ನೆಲ್ಲಲ್ಲ ಅಣ್ಣಮ್ಮನಟಿಯ ತೊಱುವನಿಕ್ಕಿಸಿ ಸಗ್ಗಿಯಾದಂ (ಎಕ. IX, ಹೊಸಕೋ. ೧೦೦-೬ ; ಸು. ೯೦೦). **ತುಱುವನಿಕ್ಕು**=ತುಱುವನಿಕ್ಕಿಸು : ಗೋತ್ರಪವಿತ್ರ ಬಮ್ಮಸೆಟ್ಟಿಯ ಸ × × × ಗೆಱೆಯ ತುಱುವನಿಕ್ಕಿ (ಎಕ. XVI, ಚಿಕ್ಕನಾ. ೭೫-೭೨ ; ?). **ತುಱುವಿಗೆ ಹೋಗು** = ತುಱುವನಿಕ್ಕಿಸು : ರಾಮಗಉಡನ ಮಗ ಬೊಂಮಣ್ಣನು ತುಱುವಿಗೆ ಹೋದಗ (ಎಕ. IX (೬), ಚನ್ನಪ. ೨೯೪-೩ : 16ನೆಯ ಶತ). **ತುಱುವಿನ ಮಂದೆ** = ದನಗಳ ಹಿಂಡು,— ಗುಂಪು : “ವ್ರಜಃ, ಗೋಕುಲಂ, ಗೋಷ್ಠಂ—ಈ ೩ ತುಱುವಿನ ಮಂದೆ” (ಹಲಾಯು. ೪೪-೦೦೭).

[ದೇ.‖ ತಮಿ. ತುಱು, ತೊಱು ಮಲ; ತುಱು ; ತೆಲು. ತೊರ್ರು]

△ **ತುಱುಂಕು** ‘ತುಱುಕು$_1$’ ನೋ.

**ತುಱುಂಗಲ್, ತುರಂಗಲು, ತುಱುಗಲ್, ತುಂಱುಗಲು** (ನಾ). ಗುಂಪು; ಸಂದಣಿ ; ಸಮೂಹ : ಆತಂಗೆ ತುಱುಂಗಲುಂ ಬಂಬಲುಮಾಗೆ ಬೀಸುವ ಚಾಮರದ ಪೊಳೆವುಗಳ್ ದೆಸೆದೆಸೆಗೆಸೆವಂತೆ ಪಸರಿಸಿ (ಆದಿಪು. ೦೦-೫ ವ); ವಿದ್ಯಾಧರವಧೂಜನದ ಸೋಪರ್ಮಡಿಯಿಂ ಸೂಸಿದ ಪೊಂಗೇದಗೆಯ ಕುತ್ತುಂಗಱಿಯ ತುಱುಂಗಲುಮಂ...ನೋಡುತ್ತ (ಪಂಪರಾಮಾ.೨-೦೩ವ); ಪರಾಗಮಂ ಪಸರಿಸುವ ಸರಸೀರುಹದೆಸಳ ತುಱುಂಗಲ ಸಿಂಹಾಸನದೊಳ್ ಸುರತರುವಂ ಮಲಂಗಿ (ಗಿರಿಕ. ೭-೦೦ ವ) ; ಎಳನೀರ್ಗಾಯ ತುಱುಂಗಲಿಂ ತೊನೆವ ತೆಂಗಿಂ ತೋರಪಣ್ದೊಂಗಲಿಂ .... ಪೂತಿರ್ದ ನಾನಾಲತಾನಿಳಯಾನೀಕದಿನಾತನೊಳ್ ಪಡೆದುದತ್ಯಾನಂದಮಂ ನಂದನಂ (ಮಹಾನೀ. ೪-೨೩). **ತುರುಗಲು** : ಒಗೆಮುಗಿಲ ತುರುಗಲನು ಕಳೆದು ತನ್ನೆಳನಗೆಯ ಮೊಗವಾಡವನು ತೊಡುವನಾವ ಭಾನು ? (ಭಾರಂಗ. ೦೨-೫); ಎನ್ನ ಬಗೆ ... ಮಾಮರದೆಲೆಯ ತುರುಗಲೊಳು ತಂಗುವುದು ತವರ ಕಂಡಂತೆ (ಮಳೆದೇ. ೪೨-೬). **ತುಱುಗಲ್** : ಗುಡಿಯ ತೋರಣಂಗಳುಮಂ ತುಱುಗಲುಂ

ಬಂಬಲುವಾಗಿ ಕಟ್ಟಿಸಿ (ಪಂಪಭಾ. ೪-೩೭) : ತಂಬೆಲರ ಪೊಯ್ಲಿನಿಂ ತಣ್ಪು ವಡೆಯಲೆಂದು ನೆಱೆಬಿದಂತಿರ್ದ ನೀಗರ್ಗಳ ತುಱುಗಲಿಂದೆಸಗಿದ ನಾಳಿಕೇರಭೂರುಹಂಗಳುಂ (ಚಂದ್ರಪ್ರ. ೧-೧೦೩ ವ) ; ಎಱಪ ಶರಧರದ ತುಱುಗಲ್ಕಱಿವ ಘನೋಪಳಕದಂಬಮುಡುಗಣಮೆನೆ (ರಾಜಶೇ. ೦-೧೨೦). 'ಎಮೆದುಱುಂಗಲ್' ಪರಾ. ತುಱುಗಲು : "ಬಂಬಲ್ ತುಱುಗಲು ಮೊತ್ತಂ ಗಡಣವೊಟ್ಟಿಲೊಟ್ಟಜೆ ... ಸಂದಣಿ ಜಾಳಗೆಯುಮೆನೆ ಶ್ರೇಣಿ ಕಾಪ್ಯಂ" (ಅಭ್ಯಿಕ್ಕ. ೦೬) ; ಕರಗಿದಳು ಗಾಂಧಾರಿ ಕಂಬನಿದುಱುಗಲಲಿ (ಕುಮಾವ್ಯಾಸ. ೧೨-೩೩) : ಅಱಸಿದೆವಮ್ಮ ಲತಾಮಂಟಪಗಳ ಮಱೆಯೊಳು ನಾಗವಲ್ಲಿಗಳ ತುಱುಗಲೊಳು (ಕುರಾಸಾಂ. ೩೨-೩೩).

[ತುಱುಂಗು (< ತುಱುಕು₁) + – ಅಲ್₂]

△ ತುಱುಂಗು 'ತುಱುಕು₁' ನೋ.

**ತುಱುಂಗೊಳ್** 'ತಂಱುಂಗೋಳ್' ನೋ.

**ತುಱುಂದಪೊಟಲ್** (ನಾ). ಒಂದು ಊರಿನ ಹೆಸರು : ವಾಚಿಗಂ ಗುತ್ತಿಯ ಗಂಗನ ಬಸದಿಯೊಳ್ ತುಱುನ್ದಪೊಱಲು ಕಾಳೆಗದೊಳ್ ನೊಳಂಬಾಧಿರಾಜ ರಾಜನೊಳ್ ಕಾದಿ ಸತ್ತಂ (ಎಕ. ೧೪, ಹೆಗ್ಗಡ. ೧೦೦-೧೨; ಸು. ೯೦೦).

[ತುಱುಂದ₀ + ಪೊಟಲ್₂]

**ತುಱುಂಬು₁, ತುರುಂಬು₁, ತುಱುಬು₁** (ಕ್ರಿ). ೧. ಹೂವನ್ನು ಮುಡಿ,– ಸೂಡು : ರತಿಗೆ ಮುಡಿಯಲ್ಕೆ ಮದನಂಗೆ ತುಱುಂಬಲ್ಕಿರ್ದುದೆಂದು ... ಇರುವಂತಿಯಂತೆ ನೋಂತಬರೊಳವೇ (ಆದಿಪು. ೦೦-೧೦೦) ; ತುಱುಂಬಿದ ನವಮಾಲಿಕಾಕುಸುಮವಿಕ್ಕಿದ ಮುತ್ತಿನ ಲಂಬಣಂ ... ಅಮರಲ್ಕೆಸೆದಂ ನೃಪರೂಪಚಂದ್ರಮಂ (ಕಾದಂಪೂ. ೩೮೨); ಜಾದಿಯ ಪೂವಂ ಬಿಟ್ಟು ಬೇವಿನ ಪೂವಂ ತುಱುಂಬುವಂತೆ (ಧರ್ಮಾಮೃ. ೦೦-೧೭೨) ; ಸಜ್ಜಕಮಂ ತುಱುಂಬಿ ಮೊಲೆಗಳ್ಗೆ ಕರಂಟವುನಿಕ್ಕಿ ... ವೃದ್ಧವಾರಯೋಷಿಜ್ಜನವೊಪ್ಪಿತಲ್ಲಿ (ಉದ್ಭಟ. ೦೦-೭೦). ೨. ಮುಡಿಸು : ಸಹಚರಿಯರ್ಬಂದು ಸೇವಂತಿಗೆಯ ಪನಿನೀರಂ ಮಜ್ಜನಕ್ಕಿಱಿದು ಪರಾಗದಂಗರಾಗವುನಮರ್ಚಿ ತಾವರೆಯ ನೂಲ ದುಕೂಲವುನುಡಿಸಿ ಕದಂಬಕುಸುಮವುಂ ಸಿರಿಮುಡಿಯೊಳ್ ತುಱುಂಬಿ (ಗಿರಿಕ. ೩-೭೬ ವ). ೩. ತುಂಬು; ಸಂದಣಿಸು; ಕೂಡು: ಹೊಂಬಾಟೆ ತುಱುಂಬಿದೀಳೆ ಬನದೊಳ್ ಪೆಣ್ಣುಂಬಿ ನಿಂದಂಬುಜಂ ... ರಮ್ಯಂ ಪುರೋದ್ಯಾನದೊಳ್ (ಅನಂಪು. ೦-೯೩) ; ಕುಂಭಿಣಿ ಬೆಸಲಾದುದೆಂಬಂತೆ ಜನರು ತುಱುಂಬಿತು ಹೊನ್ನಗಸೆಯೊಳು (ಪ್ರೋಹತ. ೯೧-೩೮).

**ತುರುಬು₁**: ೨. ಪ್ರಸೂನಮಂ ತಿರಿತಂದು ... ರುಕ್ಮಿಣಿ ಸತ್ಯಭಾಮೆಯರಿಗಂ ಮುಡಿಸಿ ಪುಳಿದ ಗೋಪಾಲವಧುಗಳಿಗೆ ಕರೆಕರೆದಿತ್ತು ... ಮಸ್ತಕದಿ ತುರುಬಿ (ನವಪೋ. ೦೦-೭೧). **ತುಱುಬು₁** : ೧. ನವಪ್ರಸೂನವಂ ಮಗಮಗಿ ಪಂದದಿಂ ತುಱುಬಿ ಬಂದಳ್ (ಪಳಕಂ. ೭೪೪) ; ಅವಿರಳಾವೋದ ಜಾತಿಯ ನಲ್ಲದುಳಿದ ಕುಸುಮವನು ತುಱುಬದ ... ಲತಾಂಗಿಯರು (ಸೌಂದಪು. ೭-೨೬). ೨. ಇರವಂತಿಯಂ ತಂದು ಸಿರಿಮುಡಿಯೊಳಗೆ ತುಱುಬಿ ಬೆರಸಿ ಯುವಱೆಡೆಗೆಡೆಗೆ ಸೇವಂತಿಗಳ ತುಱುಬಿ (ಪುಷ್ಪರ.ಹ. ೩೨೬-೦೬); ಪೊಸ ಕುಸುಮಂಗಳಂ ತುಱುಬಿದರು ಸತಿಗಾ ಪುಣ್ಯವನಿತೆಯರು (ಬಸಪು. ೪-೩೪). ೪. ಮುಡಿಗಟ್ಟು ; ಕೂದಲನ್ನು ಗಂಟುಕಟ್ಟು ; ತುರುಬು ಕಟ್ಟು ; ಹೆಳಲು ಕಟ್ಟು : ಮತ್ತಪೊರ್ವಳ್ಬಟ್ಟಸದ ಜಗದಿಟ್ಟ ಸೋರ್ಮುಡಿಯಂ ತುಱುಬಿ ಕಬಲಂ ಕಬಲ್ದಿ ... ನೀರನಿಱಿದಳ್ (ರಾಮಾಶ್ವ. ೧೨೩-೦೬).

[ದೇ.೩ ತಮಿ. ತುಱುಮ್ಬು, ತುಱುಮು ; ಮಲ. ತುಱು ; ತೆಲು. ತುಱುಮು, ತುರುಮು]

**ತುಱುಂಬು₂, ತುರುಬು₂, ತುಱುಬು₂** (ನಾ). ೧. ಕೂದಲಿನ ಮುಡಿ,– ಗಂಟು : ತೋರಪಲ್ಲಿಗೆಯ ತುಱುಂಬು ರಾಹು ತವೆ ನುಂಗಿದ ಚಂದ್ರನ ನೊಯ್ಯನೊಯ್ಯನುದುಗುಟ್ಟುವೊಲೊಪ್ಪಿರಲ್ (ಪಂಪಭಾ. ೭-೯೭) ; ನಱು ಗಂಪುವೊಱೆದ ಜಾದಿಯ ತುಱುಂಬು ಕಣ್ಗೊಳಿಸೆ ಶೂದ್ರಕಂ ಕರಮೆಸೆದಂ (ಕಾದಂಪೂ. ೩೨); ಭಯದಿಂದೋಡುತ್ತಿರೆ ಕಾಡೊಳೊಂದು ಮರದ ಕೊಂಕು ಗೊಂಬಾತನ ತುಱುಂಬಂ ಪಿಡಿದು ತಡೆಯೆ (ಧರ್ಮಾಮೃ. ೨-೫೭) ; ಬಂಬಳ ಬಾಡಿದ ದೇಹ ಕಟ್ಟಳಿದ ತುಱುಂಬು ಕಂದಿದ ಮೊಗ (ಭರತೇ. ೭೧-೭೯). ೨. ಗುಂಪು ; ಸಮೂಹ : ಪರ್ವಿ ಪಸರಿಸಿದ ಪೊಂಬಾಟೆಯ ಕಂಬಂಗಳ ತು [ಪಾಠಾಂ. ತ]ಱುಂಬಿನೊಳ್ ಬಳ್ಳಿ ಬೆಳೆದ ಮೃದ್ವೀಕಾಲತೆಯ ಕಾಯ ಮಾನಂ (ಅನಂಪು. ೭-೧೧೪). **ತುರುಬು₂** : ೧. ಹುರುಮಂಜಿಮುತ್ತುಗಳ ತುರುಬಿಂಗೆ ಕೊರಳಿಂಗೆ ಮೆರೆವ ಹಾರಂಗಳಿದು (ಪಂಕಾಂ. ೫-೩-೦೭) ; ತುರುಬಿನ ಸುತ್ತಲೂ ಮಲ್ಲಿಗೆಯ ದಂಡೆ ಕಟ್ಟಿಕೊಂಡಿದ್ದಳು (ಅಪನಾ. ೨೪೮) ; ಅತ್ತೆ ತುರುಬು ಮಾವಗೆ ದಾನ (ಗಾದೆ). **ತುಱುಬು₂** : ೧. "ತುಱುಬು ಹಿಣಿಲು ಪಾಶಂ" (ಮಂಗರಾ. ೯೪-೬); ತಳ್ಪತಳದೊಳ್ ಬಳಿಕಾತನ ತುಱುಬಂ ತಿರ್ದುತ್ತಂ ಮೊನಸಿದ ಪಳಿತವನೆ ಕಂಡು (ಪುಣ್ಯಾಸ್ರ. ೧೧-೧೦) ; ವಾಮ ಹಸ್ತದ ತುಱುಬಿನೊಳಿಟ್ಟು (ಪೋಹತ. ೦೬-೩೭) ; ಮುಡಿದ ಪೂವಿನ ತುಱುಬು ಮೃಡಗಂಧಗಜದಿಱುಬು (ಚಿಬಪು. ೩೬-೨೨).

**ತುತ್ತುಱುಂಬು, ತುತ್ತುಱುಬು** (ದ್ವಿರುಕ್ತಿ) : ತುತ್ತುಱುಂಬಾಗಿಯಾಗಳಿಗೆ ಬಿಳ್ದು ಕೋಟೆಯಂ ಹತ್ತಲೆಂದಂಗವಿಸುವಾ ಹರಿಗೆಯಾಳ್ಗಳ್ (ಸಮ್ಯಕ್ತ್ವ. ೮-೩೭) : ಕಾಳೋರಗನ ಹುತ್ತನೊಳಹೊಕ್ಕ ವಾಳ್ಕೆಯೊಳ್ಕಗತ್ತಲೆ ತುತ್ತುಱುಂಬಾಗಿ ತುಂಬಿದಾಭೀಳಮಪ್ಪಾರಣ್ಯಮಧ್ಯದೊಳ್ದಬ್ಬುದಲೆಗೊಂಡು ದಾರಿಯ ತಪ್ಪಿದ (ಸಮ್ಯಕ್ತ್ವ. ೦೦-೩೭) ; ಅಳಿಯಂದಿರಿಂದಾಪ್ತರಿಂದ . . . ತುಳಿಲಾಳ್ಗಳ ತುತ್ತುಱುಬಿಂ ಸಭೆ ಕಣ್ಗೆ ತಳೆದುದು ಗಾಡಿ ಗಮಕವ (ರಾಮವಿ. ೦೦-೭೭); ಕುತ್ತುಱು ಮೆಳವಱೆಗಳೊಳು ತುತ್ತುಱು ಬಾಗಿ ನಿಂದರು ಬೆಟ್ಟಬೆಟ್ಟಗಳೊತ್ತಿನೊಳಗೆ ಕಾಲವರು (ಕುರಾಸಾಂ. ೩೯-೮).

[ < ತುಱುಂಬು₁. /ತುಳು. ತುರುಟು ]

**ತುಱುಂಬುಗೊಳಿಸು** (ಕ್ರಿ). ತುಂಬುವಂತೆ ಮಾಡು ; ಭರ್ತಿ ಮಾಡು : ಅಂಬಳಿಪ್ರಹರಣನಿವಾರಂಗಳವ್ವಾಳ್ವಱಿಯ ತುಱುಗಲಂ ತುಱುಂಬುಗೊಳಿಸಿಯುಂ (ಪುಷ್ಪಪು.೭-೬೯ ವ). [ ತುಱುಂಬು₂ + ಕೊಳ್₁+ –ಇಸು₃ ]

**ತುಱುಕಾರ್ತಿ** 'ತುಱುಗಾರ್ತಿ' ನೋ.

**ತುಱುಕಾಱ** 'ತುಱುಗಾಱ' ನೋ.

**ತುಱುಕು₁, ತುರುಕು₁,ತುರುಗು₁, ತುಱುಂಕಂ,ತುಱುಂಗು, ತಂಱುಗು** ೧. (ಕ್ರಿ.) ಒತ್ತಿ ತಂರಬು; ಗಿಡಿ; ಅಡಕು; ಬಲವಂತದಿಂದ ಒಳಕ್ಕೆ ಸೇರಿಸು: "ತುಱುಕು–ಗಾಢಪ್ರವೇಶೇ" (ಶಮಧಾ) ; ಪೊಱಗೊಂದು ಹಡಗೆ ಮಣ್ಣಂ ನೆಱೆ ಶೌಚಂಗೆಯ್ದುರೊಳಗೆ ಪಲತೆಱದಡಗಂ ತುಱುಕುವರ್(ಸಮಪ.೧೪-೧೩೦). **ತುರುಕು₁**: ೧. ಕೋಣೆಯಲ್ಲಿ ಬಾಗಿಲ ಸಂದಿನಿಂದ ನನಗೊಂದು ಕಾಗದ ತುರುಕಿತ್ತು (ಅಂಹೂ. ೧೫೨); ಕೆಲವರು ಓದಿದರೂ ಅವುಗಳನ್ನು ಎಲ್ಲಿಯೋ ಪೆಟ್ಟಿಗೆಯಲ್ಲಿ ತುರುಕಿಬಿಡುತ್ತಿದ್ದರು (ರಂಗಕ. ೪೭). **ತುರುಗು₁** : ೨. ದಟ್ಟೈಸು ; ಸಂದಣಿಸು; ಇಟ್ಟಣಿಸು : ತಾರಕೆ ವಿರುಗೆ ಅಗಸ ತುರುಗೆ ಹಲ್ಲಲ್ಲೊರಗುವಳು (ಹಾಡುಪಾ. ೧೯-೧೭). ೩. ಹೆಚ್ಚಾಗು ; ಅಧಿಕವಾಗು ; ಅತಿಶಯವಾಗು ; ತಂಂಬಿರು : ವೃಕೋದರನಿಗೆ ಸಹೋದರನ ಮರಣದಿಂದ ಒಡಲೊಳಗೆ ಅಳಲು ತುರುಗಿತು (ಬಿದುಕ. ೧೧೧). ೪. ಸಂಗ್ರಹಿಸು ; ಒಟ್ಟುಮಾಡು : ತಂದನೊಬ್ಬಂ ಪೇಳ್ದ ಬೆಲೆಗೊಟ್ಟು ನವಿರುಡೆಯನಂದಿನಂತುರಲ ಬಡವಂ ತುರುಗಿ ತಂದಂ (ಕಾಲೂರ. ೭೮-೦೪೪). ೫. ಎದುರಿಸು ; ಕಾದು ; ಇದಿರಿಸುವ ಗಂಡರ್ ... ತಾನೊಬ್ಬನೇ ತುರುಗುವೆನೆಂದು ಮುಂಬರಿದು ಬರುವ ವೀರರನ್ನು ... ದಿಂಡುಗೆಡವಿದನು (ಕವೀರ.೩೦). △ **ತುಱುಂಕು** : ೧. ಮಯ್ಯಂ ಕಿಱಿಕಿಱಿದಾಗಿ ಕತ್ತರಿಸಿ ಬಾಯೊಳ್ತುಱುಂಕಿಯುಂ (ಧರ್ಮಾಮೃ. ೩-೭೩). △ **ತುಱುಂಗು** : ೨. ಪರಿವ ಕರೆಕರೆವ ಸೂಱಯ್ಯರ ಸೂಱುಗಳೊಳ್ತುಱುಂಗಿದಬ್ಬುಳಾ

ಯ್ತ್ರ ಕಳಕಳರವದಿಂ ಭೋರ್ಗರೆದುಲಿವಂಬುಧಿಯನಂತದೇಂ ಮಗುೞ್ಚಿಸಿತೋ (ಸುಕುಮಾ. ೧೧-೨೩). ೩. ತನಿವಣ್ಗಳ ಸಂತತಿಯಿಂ ತುಱುಂಗಿ ನೆಱೆ ಕಣ್ಗತಿಶಯವಾಗಿರ್ದುದಲ್ಲಿ ನಾರಂಗಕುಜಂ (ಶಾಂತೀಶ್ವ. ೧೧-೯೮).

**ತುಱುಗು$_1$** : ೧. ಕಂಪುಳ್ಳ ಸೇವಂತಿಯುಂ ತಂದು ತುಱುಗೆಂಬ ಜಾದಿಯುಂ ಮೊಲ್ಲೆಯುಂ ಬೆರಸಿ ನೀಡಮಗೆಂಬ...ಶರಣರಂ ನೋಡುತಂ (ಬಸವ. ೬-೪೦) ; ಮುಱಿದು ಮಾರನನು ಭೀಮಸಹಿತರ ತುಱುಬಿದನು ಹೊಕ್ಕೆಱಗಿದನು ತುಱುಗಿದನು ಭಟರ ಭದ್ರವಿಮಾನದಲಿ (ಕುಮಾ.ಅ. ೨೨-೨೯); ಕಿಱಿ ದಿನೊಳಗೆ ನೋಡೆ ನಿಯಮಸಾರಂದೊಲು ತೆಱಗೆ ಪ್ರಾಭೃತದಂತೆ ತುಱುಗಿ ಭೂಪತಿ ಹೇಳಿದಧ್ಯಾತ್ಮಸಾರದ ತೆಱದೊಳಧ್ಯಯನ ಮಾಡಿದರು (ಭರತ. ೧೯-೦೨೬). ೨. ತಾಪಸಕನ್ಯೆಯರ್ ನಡಪಿದೆಳಲತೆಗಳೊಳೆಱಗಿ ತುಱುಗಿ ಸಾಮವೇದಧ್ವನಿಯೊಳ್ ಮೊರೆವ ದುಂಬಿಗಳುಮಂ (ಶಂಕರಾ. ೧-೧೦೩ ವ); ಆಗಸಂ ಹೂತಂತೆ ಪುಷ್ಪಕಂಗಳು ತುಱುಗೆ (ಇಷರ.ದೇ.೪೬-೧೭); ದಂತಿಘಟೆಗಳು ತುಱುಗಿದವು ... ಚೂಣಿಯ ನೃಪರ ಜೋಕೆಯಲಿ (ಕುಮಾ.ದ್ರೋ. ೧-೪೬); ನಱುಗಂಪ ಸವಿಯಲೆಂದೆಲರ ಬೆಂಬಳಿವಿಡಿದು ತುಱುಗಿ ಬಂಬಲು ಪಾಳೆಗೊಂಡು...ಎಱಪೆಳಗೆಳೋಲ್ಯೆಪ ಪರಿವಾರವೆನೆ (ಭೀಷ್ಮ. ೧-೨೪); ಸಿಂಹಾಸನದ ಸುತ್ತಲುಂ ತುಱುಗಿದ ಸುರವ್ರಜದ ಮಧ್ಯದೊಳ್ ಮೆಱೆವವಂ ಕುಱಿಯೊ...ನೀಂ ಪೇಳೆಂದನು (ಜಬವು. ೦೬-೩). ೩. ಮೊದಲೊಳ್ ಮಾಡುಪಳದ ಕಾಯ್ ತುಱುಗಿರ್ಕುಂ (ಲೋಕೋಪ. ೬-೩೪); ಸುಲಲಿತವಾಗಿ ನೀಳ್ದ ತುಱುಗಿರ್ದಮೆಗಳ್ ತಮಮಂ ಬೆಳರ್ಪ ಕಣ್ಮಲರ್ಗಣಿಯಂದಮಂ ನೆಱೆಯೆ ಪೋಲ್ತಿರೆ (ಧರ್ಮಾಮೃ. ೬-೧೯೭); ಅಂತು ನಿಧಾನ ಕೈಕಗುವ ದೀಪವರ್ತಿಯಂತೆಱಗಿ ತುಱುಗಿದರ್ಚನೆಗಳಿಂದರ್ಚಿಸಿ ಗುರುಭಕ್ತಿಪೂರ್ವಕಂ ಬಂದಿಸಿ (ಅರ್ಧನೇ. ೧-೧೨೦); ತುಱುಗಿದ ಕಾಯಿ ಪಣ್ಗಳ ಸಾಲವೃಕ್ಷವ ಮುಱಿದು (ಪ್ರೋಹಿತ. ೪-೩೭): ಫಲವೃಕ್ಷಂಗಳೆತ್ತಂ ತುಱುಗಿ ಬೆಳೆದಿರೆ (ರಾಮಾಶ್ವ. ೪೩-೦೩). ೬. ತುಂಬಿಕೊಳ್ಳು ; ಅಡಕಿಕೊಳ್ಳು : ಬಾಯೊಳು ತುಱುಗಿದೆಲೆ ಬಾಯೊಳಗೆ ಮಡಿದೆಲೆ ಕೈಯೊಳಂಗನೆಯ ಸ್ಥಿರದೊಳೆವೆಯಿಕ್ಕದೆ ನಿರೀಕ್ಷಿಸುತರಸನೊರ್ವನು ... ಇರ್ದನು ಲಲಿತಭಿತ್ತಿಯ ಚಿತ್ರದಂದದಲಿ (ಜೀವಂಧ. ೮-೩೩). ೭. ಮುಚ್ಚು ; ಕವಿ ; ಆಚ್ಛಾದಿಸು : "ತುಱುಗು–ಸಂಚ್ಛನ್ನೇ (ಕವಿದುಕೊಳ್ಳು)" (ಶಮಧಾ); ತುಱುಗಿದ ಮುಗಿಲಾ ಮುಗಿಲಿಂದೆಱಗುವ ಮಟೆ (ಆದಿಪು. ೬-೬೨); ಎಱಗುವ ನರೇಂದ್ರನಿಕರದ ಮಿಱುಗುವ ಮಣಿಮೌಳಿ ಮಂಜುಳಪ್ರಭೆ ತನ್ನೊಳೆ ತುಱುಗೆ (ಕಾದಂಪೂ. ೪೬೯); ತುಱುಗಿರ್ದ ನೀಲಮೇಘದ ತುಱುಗಲ್ ನೆಱೆ ಪಿಂಗಿ ಪೋಗೆ (ಜಗವಿ. ೪-೩೯) ; ಕೆಱುಮೊನೆಯ ಮುಗುಳಂಬುಗಳ ಸೈಗೆಱೆದನಭಿಮನ್ಯುವಿನ ಮೆಯ್ಯಲಿ ತುಱುಗಿದವು ಮಱಿದುಂಬಿ ಕೆಂದಾವರೆಗೆ ಕವಿವಂತೆ (ಕುಮಾ.ದ್ರೋ. ೩-೩೪) : ಧುರದೊಳು ತುಱುಗಿರ್ದ ಕೃತಕಾಂಧಕಾರವಿಸ್ತರವ ನಿರ್ಮೂಲನಗೆಯ್ವುದಕೆ ವರವಮೂಡಿಗೆಯಿಂದೆ ತೆಗೆದೆಚ್ಚ ಕೃಷ್ಣ (ಪ್ರೋಹಿತ. ೪೦-೪೩). ೮. ಹರಡು; ವ್ಯಾಪಿಸು : ಪೊಸ ಮಸೆಯಂಬಸದಳಮೊಡನೆಱಗಿ ತುಱುಗಿ ಪಾಯ್ವುವು ಕೆಲವುಂ (ಶಾಂತಿಪು. ೩-೬೦) ; ತುಱುಗಿದ ತನುತಾಪದಿಂದೆ ಪಕ್ಕಿಯ ತೆಱದ್ ತಱಗೆಲೆಯಾಗಿ ತೋಱಿಸಲು (ಪ್ರೋಹಿತ. ೨೮-೦೬) ; ಮಣಿಕೋಟಿರಾಂಶುವೆತ್ತಂ ತುಱುಗೆ...ಕನಕಲಸತ್ಸಿಂಹಾಸದೊಳ್ ಭೂಪನಿರ್ದಂ (ಹಾಹಿತ. ೩-೦೭). ೯. ಜೋಡಿಸು ; ಹೊಂದಿಸು ; ಕುಂದಣಗೊಳಿಸು : ತರತರದಿಂ ತುಱುಗಿದ ವಿವಿಧ ರತ್ನಮಯಮಪ್ಪ ಪೊನ್ನ ಕುಱಿವಟ್ಟುಗಳಿಂ ನಿರುಪಮ ಕನಕಸರೋಜಾಕರಮಲರ್ದಂತಿರ್ದುದನ್ನಪಾಸವಿಲಾಸಂ (ಸು ಕು ಮಾ. ೧೧-೨೭). ೧೦. ತಾಗು ; ತಗುಲು; ಅಂಟು: ತುರಗದ ವ್ಯಾಧಿನಿದಾನವನಱಿಯದ ವೈದ್ಯನನೆ ಶಿಕ್ಷಿಸಿಗೆಯ್ಯದ ನೃಪಗಂ ತುಱುಗುವುದಶ್ವೀತಿ ಪಾತಕಮಱಿದವನಂ ತಡೆಯಲಶ್ವಮೇಧದ ಫಲಮುಂ (ಅಶ್ವಶಾ. ೧೧-೩).

**ತುಱುತುರುಗು** (ದ್ವಿರುಕ್ತಿ) : ನೀನುಳಿವೆ ಎಂದಿನೊಲು ಎಲ್ಲೆಡೆಗೆ ತುರುತುರುಗಿ ಗಾಳಿಯೊಲು ಜನಗಾಗಿ ಜೀವನಕೆ ಉಸಿರಾಗಿ (ಜಾಸಿಗ. ೨೬-೯). [ದೇ. ‖ ತಮಿ. ಮಲ. ತುಱು ; ತೆಲು. ತುರುಗು, ತುಱುಗು]

**ತುಱುಕು$_2$** (ನಾ). (?) : ಇಱಿದುದಕದಂತೆ ಹಾಲಿನ ನಱುಸೋನೆಯಲುಂಡ ಬಣ್ಣದರಲ್ಗಳ ಸೊನೆಯಿಂ ತುಱುಕಿನ ಜೋಲುವ ಕಿಳಿಗಳ ನೆಱೆಗಿದರಾ ಜನಮನಗಳುರೆ ಹೊಸ ರಸವಣಿಗರ್ (?) (ಸೂಕ್ತಿಸು. ೦೩-೧೯).

[ ? ]

**ತುಱುಗಲ್** ‘ ತುಱುಂಗಲ್ ’ ನೋ.

**ತುಱುಗಲು** ‘ ತುಱುಂಗಲ್ ’ ನೋ.

**ತುಱುಗಲೂರ್** (ನಾ). ಒಂದು ಊರಿನ ಹೆಸರು : ಈಶ್ವರಶರ್ಮನಾಖ್ಯಾಯ ತುಱುಗಲೂರ್ ವಸ್ತವ್ಯಾ (ಮೈಆರಿ. ೧೯೧೪, ೧೦.೮:728).

[ ? + ಊರ್]

**ತುಱುಗಲ್ಗೊನೆ** (ನಾ). ದಟ್ಟವಾಗಿ ಕಾಯಿ ಅಥವಾ ಹಣ್ಣುಗಳನ್ನು ಒಳಗೊಂಡಿರುವ ಗೊನೆ. ‘ ತುಱುಗಲ್ಗೊನೆವಣ್ ’ ಪರಾ.

[ ತುಱುಗಲ್ ( < ತುಱುಂಗಲ್) + ಕೊನೆ$_3$ ( < ಗೊಲ್ಲೆ$_2$ ) ]

**ತುಱುಗಲ್ಗೊನೆವಣ್** (ಕ್ರಿ). ದಟ್ಟವಾದ ಕಾಯಿ, ಹಣ್ಣುಗಳಿಂದ ತುಂಬಿದ ಗೊನೆಯನ್ನು ಬಿಡು;ಫಲಿಸು : ತೊರೆದುದೊ ಕಾಮಧೇನು ತುಱುಗಲ್ಗೊನೆವಣ್ತುದೊ ಕಲ್ಪವೃಕ್ಷಂ (ಗದಾಯು. ೧೧-೨೨ ಅಡಿಟಿ).

[ ತುಱುಗಲ್ಗೊನೆ + ಪಣ್$_2$ ]

**ತುಱುಗಲ್ಗೊಳ್** (ಕ್ರಿ). ಗುಂಪುಗೂಡು ; ಒಟ್ಟಾಗು : ಪೊಕ್ಕು ಕೇದಗೆಯ ಪೂಗೊಯ್ಯಲ್ಕೆ ಘರ್ಮಾಂಬುಗಳ್ ತುಱುಗಲ್ಗೊಂಡವು ತಂಗೆ ಬಲ್ಲಿಕೆ ಬಿಸಿಲ್ ಪೂದೊಟಂಟದೊಳ್ (ಸೂಕ್ತಿಸು. ೧೧-೬೦).

[ ತುಱುಗಲ್ ( < ತುಱುಂಗಲ್ ) + ಕೊಳ್$_1$ ]

**ತುಱುಗಳವು** (ನಾ). ಹಸುಗಳ ಅಪಹಾರ ; ಗೋಗ್ರಹಣ : ತುಱುಗಳವೊ[ ಪಾಠ. ಗೊಳಿಸಿ]ಳ್ ಪೆಣ್ಬುಯ್ಯಲೊಳ್...ತಱಿಸಂದು ಗಂಡು ತನಮನೆ ನೆಱಪದವಂ ಗಂಡನಲ್ಲನೆಂತುಂ ಪಂಡಂ (ಗದಾಯು.೨-೨೪).

[ತುಱು + ಕಳವು]

**ತುಱುಗಾ, ತುಱುಗಾಯ್** (ಕ್ರಿ). ದನಕರುಗಳನ್ನು ಕಾಯು,— ಮೇಯಿಸು : ತುಱುಗಾವ ಗೋವರುಂ ಮತ್ತಱಿಕೆಯ ಕಬ್ಬಿಲರನೆಯ್ದೆ ಬೆಸಗೊಳುತಂ (ಧರ್ಮಾಮೃ.೮-೨೩). ತುಱುಗಾವ ಕಿಱುಕುಳದ ಕೆಳೆಯರುಮಂ ನೋಡುತ್ತುಂ (ಕಬ್ಬಿಗ.೨೩೪); ಆರ ಬಸುಱಲಿ ಬಂದು ... ಆರ ಹೆಂಡಿರ ಕೊಂಡು ಕಱು ತುಱುಗಾದು ಕಳವಿನಲಿ ವೀರದೈತ್ಯನ ಸದೆಬಡಿದು ಕುರುವೀರವಂಶದ ರಾಯರೆಮ್ಮೊಳು ವೈರಬಂಧವ ಬಿತ್ತಿ ಕೊಂಡವೆ ಕೃಷ್ಣ ನೀನೆಂದ (ಕುಮಾ.ಗ.೮-೩೮) ; ತುಱುಗಾವ ಪಳ್ಳಿಯಂ ಬಿಟ್ಟು ಬಳಿಕಿರವಿಲ್ಲದೆ ಹೊದ್ದಿ ಪಾಂಡವರನು (ಕೃಮಿಧಾ. ೬-೪೭). **ತುಱುಗಾಯ್**: ಮಾಯದೀ ಮಗ ಹೊಲದೊಳಗೆ ತುಱುಗಾವುತಿರಲೊಂದು ಬಾಯು ಬಿದುತಿದಿಕಾದೆ ಕತ್ತೆಯು ಸಾಯು ಬಡಿದನು (ಹಾಲ್ಕಡಾ.೨೨-೧೩).

ತುಱುಗಾವ = ದನಕಾಯುವವನು ; ದನಗಾಹಿ : ತುಱುಗಳು ತುಱುಗಾವರನು ನೆಱೆದಾಡುವರ್ಭಕರ ಎಱಗಿ ನೋಡುವ ತನ್ನನು ... ಕಾಣುತವೆ ಮೈಮಱೆದಳಂಗನೆ (ನಿಘಂ. ೧೧-೮-೫೮). [ತುಱು+ಕಾ$_1$]

**ತುಱುಗಾಡು, ತುರುಗಾಡು** (ನಾ) . ದನಕರುಗಳು ಮೇಯುವ ಕಾಡು ; ಹುಲ್ಲುಗಾವಲು ; ಗೋಮಾಳ : ತುಱುಗಾಡು, ಕುಱುಗಂಟು, ಕುಡುಗೋಲ್ (ಶಬ್ದಾನು. ೮೭ ಪ್ರಯೋ). **ತುರುಗಾಡು** : "ಅಶಿತಂ [ ಗವೀನಂ ] – ತುರುಗಾಡು" (ಅಕಾನಿ. ೩-೭). [ತುಱು + ಕಾಡು$_2$]

**ತುಱುಗಾಯ್** ‘ತುಱುಗಾ’ ನೋ.

**ತುಱುಗಾಯಿ** ‘ತುಱುಗಾಹಿ’ ನೋ.

**ತುರುಗಾರ್ತಿ,** ತಂಜುಕಾರ್ತಿ (ನಾ). ಗೊಲ್ಲರವಳು ; ಗೊಲ್ಲಿತಿ ; ಗೋಪಿ : "ತುರುಗಾರ್ತಿ [ ಪಾಠಾಂ. ವಳ್ತಿ] ಯೆಂದು ಗೋಪಿ" (ಶಶಸಾ. ೭-೧೨೭) ; "ತುರುಗಾರ್ತಿಯರೆನಲು ಗೋಪಿಯರ್" (ಶವಿಶಂ. ೮೩) : ಮನೆ ನಿನಗೆ ನಂದಗೋಪಾಲನ ಮನೆ ತುರುಗಾರ್ತಿ ನಿನಗೆ ಮನೆವೆಂಡತಿ (ಹಂಪಧಾ. ೬-೩೨) ; ತನ್ನ ಪೆಂಡತಿಯಪ್ಪ ನಂದೆಯೆಂಬ ತುರುಗಾರ್ತಿಯುಂ ಕರೆದು... ಪಟ್ಟಣಮಂ ಕೊಟ್ಟು (ಧರ್ಮಾಮೃ. ೧೦-೦೫೦) ; ಕರುವಂ ಬಿಡು... ಮುರುವಂ ಸುರಿಯೆಂಬ ಸವಸೆ ತುರುಗಾರ್ತಿಯರೊಳ್ (ಲೀಲಾವ. ೫-೦೩೦) ; ಕರೆಯೆಂಬ ನುಡಿ ತುರುಗಾರ್ತಿಯರೊಳು (ಕೆಂಧಾಸಾಂ. ೨-೬೫). **ತುರುಕಾರ್ತಿ** : ತುರುಕಾರ್ತಿಯರ್ ಕಿಚಿದು ತಂದು ಪಾಜಿತನಕ್ಕೆ ಪರವೆ ಪರೆದು ಕೊರಗಿರ್ದ ಕರುವ ನೆಯ್ದಲ್ಗಳಂ ... ಮನೋಹರಮಾದ ಮಾಧವೀಮಂಟವದ ಮೊಗಸಾಲೆಯೊಳ್ ಕುಳ್ಳಿರ್ದ (ಲೀಲಾವ. ೫-೫೯ವ).

[ ತುರುಗಾಱ + -ತ್ತಿ (< -ಇತ್ತಿ) ]

**ತುರುಗಾಹಿ,** ತುರುಗಾಯಿ (ನಾ). ದನಕರುಗಳನ್ನು ಕಾಯುವವನು : ಗೊಲ್ಲ : ತುರುಗಾಹಿ ಕಾಜಿನ ಮಣಿಯ ಬಲ್ಲನು ಗಡ (ಕುವ್ಯಾ. ಕ. ೯-೧೪) ; ತುರುಗಳ ತಿರುಹಿಕೊಂಡೆಯ್ದುವ ಬೇಡರ ತುರುಗಾಹಿಗಳು ಕಂಡು ನಡುಗಿ (ಜೀವಂಸಾಂ. ೮-೨೩) ; ಈತನೇ ತುರುಗಾಹಿ ಪುರಾಣನೆಂಬಾತನು (ಹಬಪು. ೫೭-೬೦) : ಸಲಹುವನೆ ಮನೆಯ ತುರುಗಾಹಿ ಸ್ತ್ರೀಯರಿಗೆ ಒಲಿಯುವನೆ ಯೋಗಿ (ಸರ್ವಜ್ಞ. ೫೦೯). **ತುರುಗಾಯಿ** : ಇದು ತುರುಗಾಯಿ[ಪಾಠಾಂ. ಹಿ]ಯುಂ ಬಂದಿಜಿಯದವನೆನಗೆ ಸಂದ ಪಗೆ (ಜೈಮಿಥಾ. ೭-೩೦). [ ತುರು + ಕಾಹಿ ]

**ತುರುಗಾಱ,** ತುರುಕಾರ, ತುರುಕಾಱ (ನಾ). ದನಕರುಗಳನ್ನು ಕಾಯುವವನು : ಗೊಲ್ಲ ; ಗೋಪಾಲ : ಒರ್ವರಿನೊರ್ವರ್ ಮಿಕ್ಕು ಪಾರ್ದು ಸಾರ್ದಿಸೆ ತುರುಗಾಱರಿಂದಿನಿಸು ಬಲ್ಲಿದನಾದುದದೆಂದು ಕಾಳೆಗಂ (ಹಂಪಧಾ. ೮-೯೩); ಆ ಶಿಶುವನೆತ್ತಿಕೊಂಡು ಬಂದು ಗೋವಿಂದನೆಂಬ ತುರುಗಾಱಂಗೆ ಕುಡುವುದುಂ (ಧರ್ಮಾಮೃ. ೧೦-೦೫೦) : ಏಱಿದರು ಭಂಡಿಗಳನಾ ತುರುಗಾಱರಾ ಸ್ತ್ರೀಬಾಲವೃದ್ಧರು (ನಿಘಾಗ. ೧೧-೧೧-೧೧). **ತುರುಕಾರ** : ಹಿಂದೆ ಕುಱಿತು ತೀರಿಸಗು ಎಂದು ಅಪ್ಪಣೆಮಾಡುವವನು ಅಂಬಿಗ, ಯುದ್ಧರಂಗದಲ್ಲಿ ಮುಂದೆ ಸವಾರನಾಗಿ ಬಂದಿರುವವನು ತುರುಕಾರ (ಭಾಪುಚಿ. ೨೪). **ತುರುಕಾಱ** : "ಗೋಪಾಲ್, ಗೋವಿಪಾ, ಗೋಸ್ವಾಮಿನಾ—ಈ ೩ ತುರುಕಾಱರ್" (ಹಲಾಯು. ೪೪-೧೦೭) ; ಪೆಚ್ಚ ಪಸಿಯ ತುರುಕಾಱಂಗಗ್ಗಳಿಕೆಯನೆ ಮಾಡಿ ನೀನುಂ ಪಟುಯಂ ಕಟ್ಟಿದೆಯೊ ಭೂಪರಿನಿಬರ ಕೊರಲೊಳ್ (ಹಂಪಧಾ. ೭-೯೬). [ ತುರು + -ಕಾಱ ]

**ತುರುಗಾಱಪಳ್ಳಿ** (ನಾ). ಗೋವಳರ ಗ್ರಾಮಂ ; ಗೊಲ್ಲರ ಹಳ್ಳಿ : ಪಕ್ಕಣಗಳಲಿ ತುರುಗಾಱ[ಪಾಠಾಂ. ವ] ಪಳ್ಳಿಯಲಿ . . . ಅಱಸಿದರಾ ನಿಶಾಚರನ (ಕೊರರಾ. ೪-೧೨-೦೫). [ ತುರುಗಾಱ + ಪಳ್ಳಿ$_1$ ]

**ತುರುಗು$_1$** 'ತುರುಕು$_1$' ನೋ.

**ತುರುಗು$_2$,** ತುರುಗು$_2$ (ನಾ). ಸಂಪಣೆ ; ದಟ್ಟಣೆ : ಸಪ್ತಮುಖದಿಂದೆ ವಿಪೋನ್ನತಿಯಿಂದೆ ಭೋಗದೊಳ್ ತುರುಗಿರವಿಂದೆ ಪೋಲ್ತುದು ಮಹಾನದಿ ರುಂದ್ರಫಣೀಂದ್ರರಾಜನಂ (ಕಾವ್ಯಸಾ. ೭೪೭ ತೂಪ್ರಳ); ಮಜಿವ ದೇಹಪ್ರಭೆಗಳಲಿ ಮಿಱುಪಿಱುಪ ದಿವ್ಯಾಭರಣಕಿರಣದ ತುರುಗಿನಲಿ ಒಪ್ಪಿದರಿಂದ್ರತೇಜದಲಿ (ಸಂಭವ. ೩೩-೫೭). **ತುರುಗು$_2$** : "ತಿಂತಿಣಿ, ಕಿಕ್ಕಿರಿ, ತುರುಗು, ಬಂಬಲು, ಜಂಗುಳಿ, ಹಿಂಡು, ಗುಂಪು...ಮುಂದಿ" (ಶಂಸುಹು. ೮೩). [ <ತುರುಕು$_1$./ಮಲ. ತುರುಕು ]

**ತುರುಗುಗೂಂದಲ್,** ತಂರಂಗುಂಗೂದಲು (ನಾ). ದಟ್ಟವಾಗಿರುವ ಕೂದಲು; ತುಂಬುಗೂದಲು : ತುರುಗುಗೂಂದಲ್ ಕೊಕ್ಕರಿಸೆ ಕೊನೆವಾಲರ್ಮಿಸು ನಿಮಿರ್ದು ಸಂಚಲಿಸೆ (ರಾಮಾಶ್ವ. ೧೪೨-೯). **ತುರುಗುಂಗೂದಲು** : ಇದೀ ಕೃಶ್ರುಸಂಕಟವಾದರೋ, ವಿಪರೀತವಾಗಿ, ಕರಿಯ ಚಾಮರದ ಚವರಿಯ ತುರುಗುಂಗೂದಲಂತೆ...ರೂಕ್ಷತೆಯ ಕಡು ಗಪ್ಪಾಗಿ ಗೋಳಾಡುತ್ತಿರುವುದು (ಮುಂಕೃಶ. ೯೩-೦೮).

[ತುರುಗು$_1$ (<ತುರುಕು$_1$) + ಕೂಂದಲ್]

**ತುರುಗೆವೆ,** ತುರುಗೆವೆ, ತಂಜುಗೆವೆ (ನಾ). ದಟ್ಟವಾದ ಕೂದಲುಳ್ಳ ರೆಪ್ಪೆ ; ಒತ್ತಾದ ಕೂದಲುಳ್ಳ ರೆಪ್ಪೆ: ತುರುಗೆವೆ ನೀಳ್ದ ಪುರ್ವು ನಿಡು ಗಣ್ (ಹಂಪಧಾ. ೧-೧೨೮) : ಘನಸ್ತನಂ ತುರುಗೆವೆ ಕೋಮಲಾಂಗಮುಳ ವೃತ್ತ ಕುರುಳ್...ರಮಣೀಯಮಾಗೆ (ಧರ್ಮಾಮೃ. ೪-೦೪೨): ತುರು ಗೆವೆಯ ಕೆರ್ಪಿನೊಳ್ ಬಂಬಲಿಪ ಕಣ್ಣನಿಗಳೊಸರೆ (ವರ್ಧಪು. ೪-೬೧ವ). **ತುರುಗೆವೆ** : ತುರುಗೆವೆ ನಿಡುಹುಬ್ಬು ಡಾಳಿಪ ಕದಪು...ಅಂಚೆಯ ನಡೆ ನುಡಿಯ ಜಾಣೆಯರು (ಸೌಂದರ್ಯ. ೬-೭೬). **ತುರುಗೆವೆ** : ತುರುಗೆವೆ ನಿಂದು ನೋಡೆ ಕಡೆಗಣ್ಣಿದಿರ್ಗೊಳ್ಳಲಿವಾಡೆ ಪೊಕ್ಕು ಸೈಪೆಜಗಿದಿರ್ಗೊಳ್ಳ ಸೋಂಕು. . . ಅಲ್ಲೆಯಿದಿರ್ಗೊಂಡುದು ಕೂಟದ ಕಾಯ್ಪುವೋಪರಾ (ಅರ್ಥನೇ. ೨-೩೬): ತುರುಗೆವೆಯ ನಿಟ್ಟೆಸಳುಗಂಗಳ . . . ನೀಜಿಮುರ್ಮೈದಿ ತೊಗ್ಗಿನಲಿ (ಕುಮ್ಮಾ.ಅ. ೧೩-೩೦); ತುರುಗೆವೆಯ ನಿಡುಗಂಗಳಿನ ಕಡೆಸೆಜಗಿನ ವಾರಿಸುತ...ಬಂದಳು ರಾಮನಿದ್ದೆಡೆಗೆ (ಕೊರರಾ.೩-೪-೮): ಪಾಮರಿಯರ ಕುಡುಪುರ್ವಿನ ಕೊನೆಮುಟ್ಟದ ತುರುಗೆವೆಗಳ ನಡುವೆ ಕರಿಯಾಲಿಗಳೆಸೆದುವು (ಜಯುಕಾ. ೧-೪೦). [ತುರುಗು$_1$ (<ತುರುಕು$_1$) + ಎವೆ]

**ತುರುಗೆವೆಗಣ್,** ತುರುಗೆವೆಗಣ್, ತುರುಗೆವೆಗಣ್ಣು (ನಾ). ದಟ್ಟವಾದ ಕೂದಲುಳ್ಳ ರೆಪ್ಪೆಯಿಂದ ಕೂಡಿದ ಕಣ್ಣು : ಭವನಾಂತರಮಂ ನೆಱ ಧವಳಿಸುತಿರ್ದಪುದೀ ತುರುಗೆವೆಗಣ್ಗಳಗು ಪುಂಡರೀಕೇಕ್ಷಣನಾ (ಕಾದಂಪೂ. ೪೨೦): ಪುಂಡರೀಕದಳಧವಳವಿಲೋಚನೆಯರಾ . . . ತಮ್ಮ ನಿಡಿಯ ಬಿಳಿಯ ತುರುಗೆವೆಗಣ್ಗಳಿಂ ಕಣ್ಬೇಟಂಗೊಳಿಸಿಯುಂ (ಸುಕುಮಾ. ೧೦-೦೨೭ವ) ; ನಳಿನದೆಸಱೊಳ್ ಮುಸುಱಿ ಮುತ್ತಿದ ಮತ್ತಮಧುಕರಕುಳಮಂ ಕಿಲಕ್ಕೆ ತೊಲಗಿಸುವಂತೆ ತಳ್ತ ತುರುಗೆವೆಗಣ್ಗಳಿಂ ತೆಗೆದು (ಲೀಲಾವ. ೩-೭೫): ಕಾವನ ತೋಳಂ ಬಿಡದಪ್ಪಿದುದುಮದಾಕೆಯ ಕೊಡಕೆವರಂ ನಿಮಿರ್ದು ಪೊಳೆವ ತುರುಗೆವೆಗಣ್ಗಳ್ (ಕಬ್ಬಿಕಾ. ೩೨೮). **ತುರುಗೆವೆಗಣ್** : ನಿಡಿಯ ಬಳ್ಳಿಯ ತುರುಗೆವೆಗಣ್ಗಳಂ ಕಿಣ್ಣೆಯನೆಯ್ದುವ ಪುರ್ವುಗಳಂ . . . ಪಡೆದ ಕಾಮದೇವತ್ವಮನವಗಯಿಸುವಂತಿರ್ದ ರೂಪಿನ ಬಾಲಕನಂ . . . ಎತ್ತಿ ಕೊಂಡಿಂದ್ರುನ ದೇವಿ ಬಂದಳ್ (ಶಾಂತಿಪು. ೧೧-೯); ತುರುಗೆವೆಗಣ್ಣ ಕಾಂತಿ ಮರಗಟ್ಟಲೆಯಂ ಬೆದಱಿಟ್ಟೆ (ಜಗವಿ. ೧೬-೨೫): ತುರುಗೆವೆಗ [ ಪಾಠಾಂ. ನಿಡಿಯಲರ್ಗ ]ಣ್ಣೊಣರು . . . ಕಡುಚೆಲ್ವಂ ನೆನೆಯಿಸುತೊಪ್ಪಿದುವು (ಜಯುಕಾ. ೨-೪೩). **ತುರುಗೆವೆಗಣ್ಣು** : ತುರುಗೆವೆಗಣ್ಣ ಕಟಾಕ್ಷ ಕೆಂಬಲ್ಗಳ ಮಿಱುಗುವ ತೊಂಡವಣ್ದುಟಿಯ ಬೆಡಗಿಂದ ಮಾತನಾಡಿದಳು (ಸೋಮಶ. ೧೬-೨೪) ; ತುರುಗೆವೆಗಣ್ಣ ನೋಟವೆಸೆದುದು (ಹಲಪು. ೪-೧೧)

[ತುರುಗೆವೆ+ಕಣ್]

**ತುರುಗೆವೆ** 'ತುರುಗೆವೆ' ನೋ.

**ತುರುಗೆವೆಗಣ್** 'ತುರುಗೆವೆಗಣ್' ನೋ.

**ತುರುಗೆವೆಗಣ್ಣು** 'ತುರುಗೆವೆಗಣ್' ನೋ.

**ತುರುಗೊಳ್$_1$,** ತೊರುಗೊಳ್$_1$ (ಕ್ರಿ). ದನಕರುಗಳನ್ನು ಅಪಹರಿಸು; ಹಸುಗಳನ್ನು ಹಿಡಿ; ಗೋಗ್ರಹಣಮಾಡು; ದನಗಳನ್ನು ಅಪಹರಿಸಲು ಯುದ್ಧಮಾಡು : ನೆಲ್ಲಿಗೆಱೆಯ ತುರುಗೊಣ್ಡಲ್ಲಿ ತುರುವನಿಕ್ಕಿಸಿ ರೊಸಗರಲಯನ್ ಪೊಸಮಣ್ಣ ಸಗಮೇಱಿದನ್ (ಎಕ. IX (೩), ಹೊಸಕೋ. ೯-೩; 875); ಚಿ ತುರುಗೊಳೆ ಬಾಱೆಮೆಂದು ತುರುಗೋಳೊಳೆ ಸಾವುದು ಸೈಪಿದೊದು ಪಾಯ್ದುಱಿಕೆಯ ಗೋವರಣ್ಮ ಬರೆ (ಹಂಪಧಾ. ೮-೯೫): ಮಾರವ್ರರ ಪರಿವಂಪರಿದಿಱಿಯಲಾಱದ ಕಳ್ದ

ತುಱುಗೊಣ್ಡು (ಎಕ. IV. ಹುಣಸೂ. ೧೧-೬; 1020?): ಸುಶರ್ಮನೃಪಂ ವೀತಾಂಕುಶಂ ತುಱುಗೊಳಲ್ ಪೊಱಮಟ್ಟಂ (ಕಾವ್ಯಾಶ. ೦೨೨); ಪಟ್ಟಯೆ ಧರೆ ತುಱುಗೊಳಲ್ ಬಂದಟ್ಟುವುದೆ ರಣದೊಳ್ ಕನಿಷ್ಠವಿದೆ ಚೀ ಕಷ್ಟಂ (ನೇಮಿಪು. ೧೦-೦೫೭). **ತೊಱುಗೊಳ್₁** : ಸೋವಣವೆಂಕ್ಯವಾವಿ ಕಣವ್ವನ್ನು ತೊಱುಗೊಳ್ವಲ್ಲಿ ಪಲರುಮನೋಡಿಸಿ (ಎಕ. X, ಕೋಲಾರ. ೨೩೨-೩; ಸು. 750). [ತುಱು + ಕೊಳ್₁]

**ತುಱುಗೊಳ್₂** 'ತುಱುಗೋಳ್' ನೋ.

**ತುಱುಗೋಳ್,** ತುರಂಗೋಳಂ, ತುಱುಂಗೊಳ್, ತುಱುಗೊಳ್₂, ತೊಱುಕೊಲ್, ತೊಱುಕೊಳ, ತೊಱುಕ್ಕೊಳ್, ತೊಱುಗೊಳ್₂, ತೊಱುಂಗೊಳ, ತೊಱುಗೊಳ್ಳ, ತೊಱುಗೋಳ್ (ನಾ). ಶತ್ರುಗಳು ದನಗಳನ್ನು ಹಿಡಿದುಕೊಂಡಾಗ ಅವುಗಳ ರಕ್ಷಣಾರ್ಥವಾಗಿ ಮಾಡುವ ಕದನ; ಗೋಗ್ರಹಣಕಾಲದಲ್ಲಿ ಅವುಗಳನ್ನು ರಕ್ಷಿಸಲು ಮಾಡುವ ಯುದ್ಧ : ತುಱುಗೋಳೊಳೆ ಸಾವುದು ಸೈಪಿದೆಂದು ಪಾಯ್ದುಱೆಯ ಗೋವರಣ್ಣ ಬರೆ (ಪಂಪಭಾ. ೮-೯೩); ತುಱುಗೋಳೊಳ್ ಸತ್ತೊಡೆ ಪುಣ್ಯಮಕ್ಕು (ಜಾಪುಂಪು. ೨೬೩). 'ತುಱುವರಿಗಾಳಗ' ಪರಾ. **ತುರುಗೋಳು** : ಈ ವೀರಗಲ್ಲಿನಲ್ಲಿ . . . ಕನ್ನಯನು ಕಾತಿಕವಳ್ಳಿಯ ತುರುಗೋಳಿನಲ್ಲಿ ಕಾದಿ ಸತ್ತನೆಂದು ಹೇಳಿದೆ (ಶಾಶಪಮಂ. ೫೧೨ ಸೂಕ್ತಿ). **ತುಱುಂಗೊಳ್** : ಸಿನ್ದಮ್ಮನಾಜ ಬವರದೊಳು ಕಲ್ಲಂಗೆಱೆಯ ತುಱುಂಗೊಳೊಳ್ xxx ಸತ್ತ (ಎಕ. V, ಅರಸೀ. ೯೯-೭ : ಸು. 900). **ತುಱುಗೊಳ್₂** : ಗಂಗವಾಡಿಪಾರಾಗರಾ ಮಗನ್ವಾದಿಯನ್ನಿರಟ್ಟ ತುಱುಗೊಳೊಳ್ ಕಾದಿ ತುಱುವನಿಕ್ಕಿಸಿ ಸುರಲೋಕದ ಭೋಗಿ ಆದನ್ (ಎಕ. IX, ಹೊಸಕೋ. ೮೪-೩ : 720) : ಕುಗ್ಗಲ್ಲಗಾವುಣ್ಡ ತಮುತ್ತಿದ್ರೋರ್ ತುಱುಗೊಳೋಳ್ಕಾದಿ ಸತ್ತರ್ (ಎಕ. IV, ಹುಣಸೂ. ೯೨-೮ : ಸು. 920); ಕಾಡಿಗಾವುಣ್ಡ ತನ್ನೂರ ತುಱುಗೊಳೊಳ್ ತುಱುವ x ಕ್ಷಿಸಿ ಕಾದಿ ಸತ್ತ (ಎಕ. IV. ಗುಂಡ್ಲುಪೇ. ೦೪-೯ : 996 ?). **ತೊಱುಕೊಲ್** : ತೊಱು ಕೊಲ್ವಳಿ ಪೆರಿಯವನ್ ಕೋಲ್ಗಲಾಂ[ತು] ಭಿಳ್ದನ್ (ಸೌಇಇ. IX-i, ೨-೮ : 9ನೆಯ ಶತ). **ತೊಱುಕೊಳ** : ಸ್ವಸ್ತಿಶ್ರೀ ಕೊನ್ದಗೊಲೆ ಉಕ xx ತೊಱು ಕೊಳ x ಸತ್ತೋನ್ (ಎಕ. X, ಚಿಂತಾಮ. ೦೦೩-೩; ?). **ತೊಱುಕ್ಕೊಳ್** : ತೊಱುಕ್ಕೊಳುಳ್ಬಿಟಾನ್ (ಎಕ. X(8), ಮಾಲೂರು. ೧೧೯-೧; 8ನೆಯ ಶತ). **ತೊಱುಗೊಳ್₂** : ಎಱೆಯಮ್ಮಂ[ನಿ]ವುದಿ ತೊಱುಗೊಳೊಳ್ಕಾದಿ ಸತ್ತೋನ್ (ಸೌಇಇ. XI-i, ೧೯-೩ ; 983) ; ಮದಲೂರ ಕುಪ್ಪ ನ್ದೊಱುಗೊಳೊಳಿಱಿದು ಸತ್ತು ಸಗ್ಗಿಯಾದನ್ (ಎಕ. X, ಕೋಲಾರ. ೦೮೩-೨ ; 1000 ?). **ತೊಱುಂಗೊಳ** : x x x ಮೇರು ತೊಱುಗೊಳ ಕಟ್ಟಿತ್ತೊಡೆ ಮೆಚ್ಚಿ ಕಲ್ನಾಡೊಂದು ಕೊಟ್ಟಂ (ಸೌಇಇ. IX-ii, ೬೦೭-೦; ಸು. 8ನೆಯ ಶತ). **ತೊಱುಗೊಳ್ಳ** : ಸಿಂಗಪ್ಪ ದುಗ್ಗಯ್ಯ ಸಾನ್ತನೊರ ತೊಱು ಗೊಳ್ಳ ಧಾಳಿ ಕಳ್ಳರೊಳ್ಳಿಱಿದು ಅಟ್ಟಿ ಸತ್ತಂ (ಎಕ. IX (8), ಕಾನಕಾ. ೪೮-೦೩ ; 900). **ತೊಱುಗೋಳ್** : ಶ್ರೀ ಹೆಮ್ಮಯನ ಮಗ ಸಾನ್ತಂ ತೊಱುಗೋಳೊ ಕಾದಿ ಸತ್ತು ಸಗ್ಗಿಯದಂ (ಎಕ. IX (8), ಹೊಸಕೋ. ೦೯೩-೪ ; ಸು. 1000). [ತುಱು + ಕೋಳ್]

**ತುಱುಘಟಿ** (ನಾ). ಒಂದು ಪ್ರದೇಶದ ಹೆಸರು (?) : ಆ ದೇವರ ಅಂಗರಂಗಭೋಗಕ್ಕಂ...ನೈವೇದ್ಯಕ್ಕಂ ತಂಮ ಪ್ರವಿಷ್ಟದ ತುಱುಘಟಿಯ ಮೂಡಣ ಬಂಟಿ ಯಿಶಾನ್ಯದಲ್ಲಿ ... ಧಾರಾಪೂರ್ಬ್ಬಕಮ್ಮಾಡಿಕೊಟ್ಟ ಮತ್ತರಾಱು (ಸೌಇಇ. IX-I, ೨೯೩-೦೮ ; 1172). [?]

**ತುಱುಚ₁** 'ತುಱುಚಿ' ನೋ.

**ತುಱುಚ₂** (ನಾ). ತುರಿಯೆಂಬ ಚರ್ಮರೋಗವುಳ್ಳವನು : ಸಾವಂ ಬಯಸುವ ತೊನ್ನರುಂ ತುಱುಚರುಂ ಮಹಾರೋಗಾವಿಳರುಂ ಬಂದಾ ಮರನ ಫಲಮಂ ಮೆಲೆ ನಿರೋಗಿಗಳಾಗಿ (ಧರ್ಮಾಪ. ೭-೪೫).

[ ತುಱುಚಿ + – ಅ₇ ]

**ತುಱುಚಿ** 'ತುಱುಚಿ' ನೋ.

**ತುಱುಚಿ,** ಚುಱಚಿ, ತುರಚಿ, ತುರಚೆ, ತುರಿಚೆ, ತುರಂಚ, ತುರುಚಿ, ತುರಂಚಿ, ತುಱಿಚ, ತುಱಿಚೆ, ತುಱುಚ₁, ತುಱುಂಚಿ, ತುಱುಜೆ (ನಾ). ೧. ಶರೀರಕ್ಕೆ ತಗುಲಿದರೆ ನವೆಯುಂಟುಮಾಡುವ ಒಂದು ಬಗೆಯ ಗಿಡ; ತುರಿಕೆಗಿಡ ; ಉರಿಸಣಿಕೆ (ಕರಾ) : " ದುಸ್ಪರ್ಶಮೆನೆ ತುಱುಚೆಯಾಕಸ್ಯಂ" (ಮಂಗರಾ. ೪೪-೪೪) ; ಹೆಗ್ಗುಱುಟಗೆಯಂ ತುಱುಚೆಯ ನೊಗ್ಗಿರೆ ತಾಂ ಕೈಪೆಸೋರೆಯು ಬೇಗರ್ಗಳೊಳೆಲ್ಲಂತಗ್ಗಳ ಮೂಸೂರ್ಗಟ್ಟ ರೆಗಂ ತೆಗ್ಗಿಲ್ಲದೆ ರಚಿಸಿ (ಜಕುವ. ೦೬-೦೯೫); ವನಜವನದಲಿ ತುಱುಚಿ ಕಬ್ಬಿನ ಬನದಿ ಕಡಸಿಗೆ ಚೂತವಾಯು ಕಾನನದಿ ಬೊಬ್ಬುಲಿ ಭೀಮಸೇನನ ಇರವು ತವೊಳ್ಳಗೆ (ಕುವ್ಯಾಅ. ೮-೫) : ತೊಳಚಿದೋಂಟದೊಳ್ ತುಱುಚಿ ಪುಟ್ಟುವಂತಿರೆ (ರಾಜಶೇ. ೨೭-೭). **ಚುಱಚಿ** : ೧. ಹಾಳೂರ ಚುಱಚಿ ನಸುಗುನ್ನಿ ತಿಗುಳರ ಗಾಳಿ ಬೇಡೆಂದ (ಸರ್ವಜ್ಞ. ೦೩೯೫). **ತುರಚಿ** : ೧. 'ತುರಚಿಬಳ್ಳಿ' ಪರಾ. **ತುರಚೆ** : ೧. ತುರಚೆಯ ಜಾತಿಯ ಗಿಡ (Archangel. ಇಂಕಿನಿ). **ತುರಿಚೆ** : ೧. ಧರಣಿಪತಿಯುಹ ನಳನ ಸಭೆ ಯಲಿ ತುರಿಚೆ ಮಕ್ಕಣದಂತೆ ದುರ್ವಾತಿ ದುರುಳ ಪುಷ್ಕರನೆಂಬ ದಾಯಿಗ ... ಇರುತಿಹಂ (ಅಂಬಿಕಾ. ೩-೫೯) ; ಅವನ ಸಹವಾಸ ಅಂದರೆ ತುರಿಚಿ ಮುಟ್ಟಿದ ಹಾಗೆ (ರೂಢಿ). **ತುರುಚ** : ೧. ತುರುಚನ ಬೇರು, ನೀಲಿಬೇರು ಇವು ಪ್ರತ್ಯೇಕ ಹತ್ತು ಹಲಗಳನ್ನಿಡಿದು (ಸಕಚ್ಚ. ೭೦). **ತುರುಚಿ** : ೧. ಬಂಜರು ನೆಲದಲ್ಲಿ ಯಥೇಚ್ಛವಾಗಿ ಬೆಳೆಯುವ ಕುಟುಕುಗೂದಲು ಗಳಿಂದ ಕೂಡಿದ, ಕೆಲವು ಜಾತಿಯ ತುರುಚಿಯು, ಚುರುಚುರುಕನ, –ಗಿಡ (Nettle. ಇಂಕಿನಿ) ; ತೋಟಕ್ಕೆ ಕರೆದುಕೊಂಡು ಹೋಗುವುದು ಅಲ್ಲಿ ಬೇಕೆಂದು ನೆಪ ತೆಗೆದು ಜಗಳವಾಡಿ ತುರುಚಿ ಮುಟ್ಟಿಸುವುದು (ಕಳಕು. ೦೦). **ತುರುಚೆ** : ೧. ಮಳೆಗಾಲದಲ್ಲಿ ಆ ಪ್ರದೇಶ ಜಿಗಣೆ, ಚೆತ್ತದ ಬೀಳಲು, ತುರುಚೆಗಿಡಗಳಿಂದ ಪ್ರವೇಶಕ್ಕೆ ಅಸಾಧ್ಯವಾಗುತ್ತಿತ್ತು (ಕುಡಿಕೊ. ೧೦೪); ಆ ನೋಟದಿಂದಾಗಿ ತುರುಚೆಯನ್ನೊರಸಿದಂತಾಯಿತು (ನಾಡೋಜ. ೦೯೬) ; ರಾಣಿ...ಅಸೂಯೆ ಸಂಶಯವೆಂಬ ತುರುಚೆಯ ಗಿಡಕ್ಕೆ ನೀರೆರೆದು ಪೋಷಿಸಿರಬೇಕು (ಹಾಹುತ್. ೦೯). **ತುಱಿಚ** : ೧. ತಳವಲು ತುಂಬೆ ನೆಲ್ಲಿ ತುಱಿಚ ಕಿಱುನೆಲ್ಲಿ (ಜಮದ. ೫-೮೯). **ತುಱಿಚೆ** : ೧. "ಮರ್ಕಟಿಯೆನಿಕು ಕಪಿಕಚ್ಛು ದುರಾಲಭೆ ತುಱಿಚೆ" (ಪಸ್ತುಕೋ. ೩೬-೨೦). ೨. ಒಂದು ಬಗೆಯ ಚರ್ಮರೋಗ ; ತುರಿ ರೋಗ : ಹೞುವಾಯ ತುಱಿ[ಪಾಠಾಂ. ಱು]ಚೆಗಳ ಬತ್ತಲೆಯ ಬಾಳ್ವಣಂ ಗಳು ಸುತ್ತ ಮುತ್ತಿರಲು (ವಾಗೀರ. ದೀ. ೨೫೪-೨೬). **ತುಱುಚ₁** : ೧. "ಮರ್ಕಟಃ –ಎಕ್ಕೆ, ತುಱುಚ, ಹಿಪ್ಪಲಿ, ಕೋಡಗ" (೭ಷಧಿ. ೦೦೩); ಮೆಣಸು ... ಅಪಾಧಿ, ಸಹದೇವಿ, ತುಱುಚ, ನೀಲಿ, ರುದ್ರಜಡೆ, ಇವ ಸಮಾನಂ ಗೊಂಡು ಸಹದೇವಿರಸದಲ್ಲಿ ಲೇಪವಂ ಮಾಡಿದುದು ಜ್ವರ ಹರ (ವಿಶ್ವವಿ. ೦೫೩) ; ಹಂಬಿನ ತುಱುಚನಾ ಬೇರು ಸಸಿಗುಪ್ಪೆ . . . ಹತ್ತಿ ಹರಳ ರಸವಂ ಪೂರೈಸಿ ಕಾಸಿ (ಸೂಪಶಾ. ೨-೦೯) ; ತುಱುಚನ ಬೇರು, ಪರ್ಪಾಟಕ, ಅಮರ ದವಳ್ಳಿ, ಶುಂಠಿ ಇವಿಷ್ಟನು ... ಕಷಾಯವ ಕಾಸಿ (ವೈದ್ಯಸಾ . I, ೩೬೩) : ತುಱುಚನ ಗಿಡು ಸೋಂಕಿದಂತೆ ಬಿಱುಬುಗೊಂಬಳು ಬೆದಱುವಳು (ಹದಿಬ. ೭-೨೬). **ತುಱುಚಿ** : ೧. "ದುರಾಲಭಾ – ತುಱುಚಿ" (ಶಾಹಟೀ. ೨-೨-೮೮) ; ಹಸಿದಡಣಬಹುದೇ ನಸುಗುನ್ನಿ ತುಱುಚಿ [ಪಾಠಾಂ. ಱುಚೆ] ಯನು (ಅಪಚಂ. ೭೦-೩೦೫): ಹಿತ್ತಲ ತುಱುಚಿಯ ತಂದು ಪನ್ನೀರನೆಱೆದರೆ ಒತ್ತಿದವರ ಹಱಿಕೊಂಡು ತಿಂಬೋದು ಬಿಡಬಲ್ಲುದೆ (ಪುರಂದ. ೫-೫೬-೩). **ತುಱುಚೆ** : ೧. "ಕಚ್ಛುಭಃ –ತು(ಱು)ರುಚೆ" (೭ಷಧಿ. ೨೧); ಕಬ್ಬುನದ

ಬಡಿಗೆಗಳ ನಸುಗುನ್ನಿದುಱುಜೆ [ಪಾಠಾಂ. ತುಱುಚೆ]ಯ ಪುಡಿಯ ತೀವಿದ ತಿತ್ತಿಗಳ ... ಹರಹಿನಲೆಸೆದುದಾ ದುರ್ಗ (ತೊರರಾ. ೬-೭-೧೧).

[<ತುಱು./ತೆಲು. ತುರುಜ = ಮಂಗರವಳ್ಳಿ]

**ತುಱುಜೆ** ' ತುಱುಚೆ ' ನೋ.

**ತುಱುತುಱು** (ನಾ). ಒಂದು ಅನುಕರಣ ಶಬ್ದ. ' ತುಱುತುಱುತಿನ್ ' ಪರಾ.

**ತುಱುತುಱುತಿನ್**, ದುಱುದುಱುದಿನ್ (ಕ್ರಿ). ಬಹಳ ನವೆಯುಂಟಾಗು,– ಕಡಿತವುಂಟಾಗು ; " ಚುರುಚುರುಂ ಉರಿ " (ಪ್ರಭಶ) : ಏಱುಗುವ ದಾಡೆಯಿಂದಣೆದು ಪೆರ್ದರಿಯಂ ಕರದಿಂದಮೆತ್ತುತುಂ ತುಱುತುಱುತಿಂಬ ಕಂದರಮನೊತ್ತರಗೊಂಡು ಮಹಾಮಹೀಜದೊಳ್ ತಱತಱನಾಗಿ ಮಾಱೊರಸುತುಂ ... ಬರುತಿರ್ದುದು ಭೀಕರನೊಂದು ಸೂಕರಂ (ಕಾವ್ಯಸಾ. ೧೧೧೨). **ದುಱುದುಱುದಿನ್** : ಉದಯಿಸುಗುಂ ಶೂಲಂ ವಾತದಿನುರಿಪಂ ಪಿತ್ತದೇಟ್ಗಿಯಿಂ ದುಱುದುಱುದಿಂಬುದು ಕಫದಿನಾ ತ್ರಿದೋಷದ ಪುದುವಿಂದಾಮಿಶ್ರಮಾಗಿ ತೋರ್ಕುಂ ತವ್ವೊಳ್ (ಲೋಕೋಪ. ೯-೬). [ತುಱುತುಱು + ತಿನ್]

**ತುಱುನೆಲೆ** (ನಾ). ದನಕರುಗಳನ್ನು ಕಟ್ಟುವ ಅಥವಾ ಕೂಡುವ ಸ್ಥಳ ; ಕೊಟ್ಟಿಗೆ : ಮಾನವಮದನನುಂ ಮಕರಂದನುಮಾ ತುಱುಪಟ್ಟಿಯ ತುಱುನೆಲೆಯೊಳ್ ನಿಂದು ನೋಡುತ್ತುಮಿರೆ (ಲೀಲಾವ. ೩-೧೧೧).

[ ತುಱು + ನೆಲೆ ]

**ತುಱುಪಟ್ಟಿ**, ತುರುಂಪಟ್ಟಿ, ತುರುಹಟ್ಟಿ, ತುಱುವಟ್ಟಿ, ತುಱುಹಟ್ಟಿ (ನಾ). ೧. ದನಕರುಗಳ ಹಟ್ಟಿ ; ದನಕರುಗಳನ್ನು ಕಟ್ಟಿಹಾಕುವ ಸ್ಥಳ ; ಕೊಟ್ಟಿಗೆ ; ಗೋಸ್ಥಾನ : "ಗೋಷ್ಠಂ, ಗೋಸ್ಥಾನಕಂ, ಈ ೨ ತುಱುಪಟ್ಟಿಯ ಹೆಸರು" (ನಾಚಿರಾ. ೧೦೩) ; ಗೋಟ್ಟೀ–ತುಱುಪಟ್ಟಿ [ಪಾಠಾಂ. ಳ್ಳಿ] ಯೊಳ್ (ವರ್ಧಾರಾ. ೦೮೦-೫) ; ತುಱುಗಿದ ತುರಗಗಳೆಂದೆಂಬ ಪಶುಗಳ ಮುಱಿದಿಕ್ಕಿ ರಣಮೆಂದೆಂಬ ತುಱುಪಟ್ಟಿ[ಪಾಠಾಂ. ಟ್ಟಿ]ಯೊಳು ರಾಮನೆಂದೆಂಬ ಪೆರ್ಬುಲಿ ಬಿಱುವರಿದುದು (ಕುರಾಸಾಂ. ೨೦-೬೫). ೨. ಗೊಲ್ಲರು ವಾಸಿಸುವ ಹಳ್ಳಿ ; ಗೊಲ್ಲರ ದೊಡ್ಡಿ : ತುಱುಗಾರ್ತಿಯಂ ಕರೆದು ಪುತ್ರಲಾಭಮಾದುದೆಂದು ಮಗನಂ ಕೊಟ್ಟು ತುಱುಪಟ್ಟಿಯೊಳೊ ಸಗೆಯಂ ಮಾಡಿ (ಧರ್ಮಾಮ್ಮ. ೧೧-೦೫೦) ; ಅಲ್ಲಿಗೆ ಸಮಿಪದೊಳೊಂದು ತುಱುಪಟ್ಟಿಗೆಲ್ಲಂ ಪ್ರಧಾನ ನಂದಗೋವನೆಂಬಂ (ಬಂಹರಿ. ೬-೫೭) ; ಗಂಗಾ ತೀರದ ತುಱುಪಟ್ಟಿ[ಟ್ಟಿ]ಯೊಳಗೆ ವೃಷಭಂಗಳಾಗಿ ಸಂಜನಿಸಿ (ನೇಮಿಸಂ. ೬-೨೨) ; ಸಂತತಾಶ್ರಮ ತಪೋವನಗಳು ತುಱುಪಟ್ಟಿ ಮುಂತಾದುವು ಘೋಷಾಕರವು (ಶಾಂತೀಶ. ೮-೭೨); ಸಲೆ ಪೆಂಪೂಗೆದ ಡಂಗುರ ಸಾಱಿಸಲು ತುಱುಪಟ್ಟಿಯಲಿ (ಸಾಳ್ವಭಾ. ೨೨-೨೩). ೩. (ಅಲಂ) ಹಳ್ಳಿಯ ಜನ : ಅನ್ನೆಗಮಾ ತುಱುಪಟ್ಟಿಯುಮಲ್ಲಿಂದೆರ್ದು ನಾಡೆ ಗೆಂಟುವೋದತ್ತು (ವರ್ಧಾರಾ. ೧೦೩-೨೩). **ತುರುಂಪಟ್ಟಿ** : ೧. ಅಮೃತಶಿಲೆಯ ಗೋಶಾಲೆ ತಂತುಕಾರಸಹಸ್ರಜಾಲವ್ಯೆರೂಪ್ಮದಿಂ . . . ಖಿನ್ನವಿದೆ ಪಾಳೂರ ತುರುಪಟ್ಟಿಯೋಲ್ (ಶ್ರೀರಾಮಾ. ೮೫೦-೧೧). **ತುರುಹಟ್ಟಿ** . ೧. ಒಮ್ಮೆ ನಮ್ಮ ತುರುಹಟ್ಟಿಗೆ ಹುಲಿ ನುಗ್ಗಿತ್ತು (ರೂಢಿ). **ತುಱುವಟ್ಟಿ** : ೧. ಸುರಧೇನುಸಂಚಯಂ ಸರ್ಪಭೂಷಣನ ತುಱುವಟ್ಟಿಯನೆ ಚೆನ್ನಾದುದರಸು ತನಮಂದೀಶನ (ಚಬಸು. ೨೯-೪೨) ; ತುಱುವಟ್ಟಿಯಿಂದ ತೊಪ್ಪಿಂದ ತಣ್ಣೆಳಲಿಂದ ಕೆಱೆ ಕಟ್ಟೆಯಿಂದ (ನಂದಿಮಾ. ೦೫-೦೬). **ತುಱುಹಟ್ಟಿ** : ೧. ಗೋಷ್ಠಾಧ್ಯಕ್ಷ, ಗೋವಿಂದ–ತುಱುಹಟ್ಟಿಯ ಅದ್ದಿಕದವನು(ನಾಚಿರಾ.೬). ೨. ನಾಡೊಳಗೆ ತುಱುಹಟ್ಟಿಯಲಿ ಹೊಲನಾಡಿ ಹಟ್ಟಿದ ಗೋಕದಂಬವ ನೋಡುವುದು ನೆವ (ಕುಮ್ಮಾ.ಅ. ೧೭-೨೦). ' ಕಱುಹಟ್ಟಿ ' ಪರಾ.

[ ತುಱು + ಪಟ್ಟಿ$_1$ ]

**ತುಱುಪರಿ** 'ತುಱುವರಿ' ನೋ.

**ತುಱುಪರಿಗ** (ನಾ). = ತುಱುಗೋಳ್(?) : ಅಂತಾತನನುಜ ದೇಕರಸ ತುಱುಪರಿಗವೆಂಬ ಪುಯ್ಯಲ ನೆಱೆಯಾಲಿಸಿ ಕೇಳ್ದು (ಎಕ. XII, ಚಿಕ್ಕನಾ. ೧೮-೨೬ ; 1215 ?). [ P ಇದು 'ತುಱುಪರಿಗಂ' ಎಂಬುದರ ಅಪಲಿಖಿತ ವಿರಬಹುದು]

**ತುಱುಪಳ್ಳಿ** ' ತುಱುವಳ್ಳಿ ' ನೋ.

**ತುಱುಪಳ್ಳಿಕಾಱ** (ನಾ). ಗೊಲ್ಲರ ಹಳ್ಳಿಯವನು ; ಗೊಲ್ಲ; ಗೋವಳಿಗ : ಧರಣಿಪಾಲರ ಮಧ್ಯದಲಿ ಭಾಸ್ಕರನು ಗಡ ತುಱುಪಳ್ಳಿಕಾಱರ ಪುರದ ಭಾಸ್ಕರನೀತನಲ್ಲಾ (ಕುಮ್ಮಾಸ. ೮-೧೭).

[ ತುಱುಪಳ್ಳಿ (<ತುಱುವಳ್ಳಿ) + – ಕಾಱ ]

**ತುಱುಬಿಕ್ಕು**, ತುರುಬಿಕ್ಕು (ಕ್ರಿ). ತುರುಬನ್ನು ಹಾಕು ; ಕೂದಲನ್ನು ಗಂಟುಕಟ್ಟು : ತುಂಬಿಗುರುಳ ತುಱುಬಿಕ್ಕಿ ದಾದಿಯರು ನಿತಂಬಿನಿ ಯೊಡನೆ ಪೇಳಿದರು (ಪೋಹತ. ೯-೧೬). **ತುರುಬಿಕ್ಕು** : ಉಳ್ಳಲರ ಹೂವೀಡ ತುರುಬಿಕ್ಕಿ ಮುಡಿಸಿ (ಕಾಲೂರ. ೦೮೩-೯೦೪).

[ ತುಱುಬು$_2$ (<ತುಱುಂಬು$_2$) + ಇಕ್ಕು ]

**ತುಱುಬು$_1$** ' ತುಱುಂಬು$_1$ ' ನೋ.

**ತುಱುಬು$_2$** ' ತುಱುಂಬು$_2$ ' ನೋ.

**ತುಱುಮಂದೆ**, ತುರುಂಮಂದೆ (ನಾ). ೧. ದನಗಳ ಹಿಂಡು, – ಗುಂಪು : " ತುಱುಮಂದೆಯಕ್ಕೃತಿ ಗೋವೃಷಂ " (ಮಂಗರಾ. ೫೭-೧೧) ; " ತುಱು ವಿಂಡು ತುಱುಮಂದೆಯುಕ್ಕು ಗೋಸಮುದಾಯವು " (ಕಬ್ಬಮಂ. ೩೪) : ನಾನಾರೆಂಬುದ ತಾನಱಿತು ತಿಳಿದಲ್ಲಿ ತುಱುಮಂದೆಯೊಳಗಾಯಿತ್ತು (ತುಱುಗಾ. ೪-೬) ; ಈಗಳೊ ನೀನ್, ನಿನ್ನಯ್ಯನಮೆ ತುಱುಮಂದೆಗಳ್ ವೇಱೆಣ್ ತುಱುಪಟ್ಟಿಗಳ ಬಟ್ಟೆಯ ... ಪುಲ್ಗಾವಲೆಡೆಗೊರ್ವಳೀ ಬೆಚ್ಚರಂ ಬೋಗು (ಬದ್ಧಪ್ರ. ೩೪-೭೪೨). ೨. ಗೋವುಗಳಂ ಇರುವ ನೆಲೆ ; ಕೊಟ್ಟಿಗೆ ; ಗೋಸ್ಥಾನ ; ಗೋಕುಲ : (೫). **ತುರುಮಂದೆ** : ೧. " ತುರುವಿಂಡೆನಲು ತುರುಮಂದೆಯೆನಲು ಗೋಸಮುದಾಯವುಕ್ಕು " (ಕಕರ. ೪೭) ; ತುರುಮಂದೆಯಲ್ಲಿ ಇರುವ ಪದ್ಧತಿಯಾಗಿದ್ದುದರಿಂದ (ನಮ್ಮೂರ. ೬೬). [ ತುಱು + ಮಂದೆ ]

**ತುಱುವಿಂಡಿ**, ತರಿವಿಂಡಿ, ತಱಿವಿಂಡಿ, ತಱುವಿಂಡಿ, ತುರುವಿಂಡಿ (ನಾ). ೧. ಹೊಸಪ್ರಾಯದವಳು ; ಪ್ರೈನೆರೆದ ಹೆಣ್ಣು ; ನವ ಯೌವತಿ : " ತುಱುವಿಂಡಿಯೆನೆ ನೆಱೆದ ಪೆಣ್ಣಕ್ಕು " (ಕಬ್ಬಮಂ. ೭೪) ; ಪಾಡಿದರ್ ತುಱುವಿಂಡಿಯರವ್ಯತೋಪಮಾನಗಾನವನೊಲವಿಂ (ಉದ್ಭಟ. ೨-೧೦೪). ೨. ಮುಂಟ್ಟಾದವಳು : " ತುಱುವಿಂಡಿಯಾರಯ್ಯ ಪುಷ್ಪವತಿಯಾದವಳ್ " (ಕಬ್ಬಕ್ಕ. ೨೬). **ತರಿವಿಂಡಿ** : ೧. ತರಿವಿಂಡಿ ಯರ್ನಡೆದರೊಡಲಳವಿನಿಂ ಮಲೆಯ ಬೆರವ ಪೊರೆಯಂ ಪೊತ್ತು (ಕಾಲೂರ ೦೨೪-೨೬೧). **ತಱಿವಿಂಡಿ** : ೧. ತುಱುಗಿದಾಭರಣಗಳೋರೆಕೋರೆಯ ತಿದ್ದಿ ತ [ಪಾಠಾಂ. ಸ]ಱಿವಿಂಡಿಯಯನುವಾದಳಾಗ (ಭರತ. ೦೦-೭೬) ; ರಣಕೆ ಪೋಪವಸರದೊಳ್ ತಱಿವಿಂಡಿಯಪ್ಪ ತನ್ನಯ ಮಡದಿಯನಿಕ್ಷುವಃತಿಯಂ ಕಂಡು (ರಾಮಾಶ್ವ. ೦೫೦-೨೬). ೨. " ತಱಿ[ ಪಾಠಾಂ. ತುಱು ]ವಿಂಡಿ ಯೆಂದು ಪುಷ್ಪಿತೆಯಾದ ಕಾಂತೆ " (ಕಕಸಾ. ೬೨-೬೭೨) ; " ತಱಿ [ಪಾಠಾಂ. ತುಱು ]ವಿಂಡಿಯೆನಲು ಪುಷ್ಪಿತೆ " (ಕವಿಕಂ. ೦೬೪). **ತುಱುವಿಂಡಿ** : ೨. "ತುಱುವಿಂಡಿ_ರಜಸ್ವಲೆ, ಮುಟ್ಟಾದ ಹೆಂಗಸು, ಪುಷ್ಪಿತೆ" (ಪ್ರಭಶ). **ತುರುಮಿಂಡಿ**:೧."ತುರುಮಿಂಡಿಯೆಂದೆನಲ್ ಪ್ರಥಮಋತುವಾದ ಕಾಮಿನಿ" (ಕಕರ. ೪೭): "ತುಱುವಿಂಡಿ–ತುರುವಿಂಡಿ=ಬೆಳೆದ ಹುಡಿಗೆ, ಹೆಣ್ಣಾದವಳು" (ಜಾನಕೋ. ೬೬). 'ಸಱಿವಿಂಡಿ' ಪರಾ. [<ತುಱುಗು$_1$ + ವಿಂಡಿ]

**ತುಱುಯ್ಯಲು** 'ತುಱುಹುಯಲು' ನೋ.

**ತುಱುವಟ್ಟಿ** 'ತುಱುಪಟ್ಟಿ' ನೋ.

**ತುಱುವರಿ**, ತುಱುಪರಿ, ತುಱುಹರ್ಬ$_2$ (ನಾ). = ತುಱುಗೋಳ್: ಮಾಡೆಯ ಹರಿಹರಂಗಳು ಸಂಕರಸೆಟ್ಟಿಯ ಹಳ್ಳಿಯ ತುಱುವರಿಯಲು ಹರಿದು ಸ್ವರ್ಗಸ್ಥನಾದನು (ಮ್ಯಆರಿ. ೧೯೪೮, ೪-೪; 1291). **ತುಱುಪರಿ**: ಬೆಳ್ಳತ್ತುರ್ಗದ ಗಾವುಣ್ಡಂ ತುಱುಪರಿಯಲಿ ಸತ್ತಂ (ಎಕ. XII, ತಿಪಟೂ. ೧೦-೩; ಸು. ೨೨೦); ಗೆನಪಳ್ಳಿಯ ಎಱ×ಸಂದೆಂ ಶಾಸನರ ಭೀಮಂ ಉರಱಿವಿನೊಳ್ ತುಱುಪರಿಯ ಮಾಣ್ಚಿ...ಸುರಲೋಕಕ್ಕೆ ಸಂದನ್ (ಎಕ. VIII(s). ಸೊರಬ. ೩೭೩-೩; 981). **ತುಱುಹರಿ$_2$**: ಶ್ರೀಪಟ್ಟದುಂಬರ ಸಾನ್ತ ಯ ದೇವ ಗುಡುವೆಯನಿಱಿದು ತುಱುಹರಿಯ ಕಾದಿಸಿ ತುಱುವಿಂಗಡ್ಡಂ ಬನ್ದು (ಎಕ. VIII, ಸೊರಬ. ೬೦-೧೭; 1032); ತುಱುಹರಿಯಲು ಕಾದಿಸಿದವರು ...ಸುರಲೋಕಪ್ರಾಪ್ತವಾದರು (ಎಕ. XVI, ಚಿಕ್ಕನಾ. ೬೦-೩; 1123); ಮತ್ತಿಗಟ್ಟದ ಮುದ್ದಗ × × × ಗಡಕ್ಕಗವುಣ್ಡಂಗಂ ಪುಟ್ಟ × ಮಾರಗವುಡ ತುಱುಹರಿಯಲು...ಸುರಲೋಕಪ್ರಾಪ್ತನಾದಂ (ಎಕ. XII, ತಿಪಟೂ. ೩೯-೮: 1291). [ತುಱು + ಪರಿ$_3$]

**ತುಱುವರಿಗಾಳಗ** (ನಾ). ಹಸುಗಳನ್ನು ಅಪಹರಿಸಂವಾಗ ಮಾಡುವ ಯುದ್ಧ; ಗೋಗ್ರಹಣನಿಮಿತ್ತವಾದ ಕಾಳಗ,-ಯುದ್ಧ: ತುಱುವರಿ [ಪಾಠಾಂ. ಬರಿ, ಹರಿ] ಗಾಳಗದೊಳ್ಱೊದೆಮುಱಿದು ಗೋವರು ಧೂಳಿಗೋಟೆಯ ಕೊಂಡರವಾರರ ರಾಜಧಾನಿಗಳ (ಶಬ್ದಾವಿ. ೫-೩). 'ತುಱುಗೋಳ್' ಪರಾ. [ತುಱುವರಿ + ಕಾಳಗ (<ಕಾಳೆಗ)]

**ತುಱುವಳ** 'ತಂಱುವಾಳ' ನೋ.

**ತುಱುವಳ್ತಿ**, ತುರುವಳ್ತಿ (ನಾ). ಗೊಲ್ಲರ ಹೆಂಗಸು; ಗೊಲ್ಲಿತಿ; ಗೋಪಿ: "ತುಱುವಳ್ತಿಯರು ಗೊಲ್ಲತಿಯರೆನಲ್ ಗೋಪಿಯರು" (ಶಬ್ದಮಂ. ೩೪). **ತುರುವಳ್ತಿ**: "ತುರುವಳ್ತಿಯೆನೆ ಗೋಪತರುಣಿ" (ಕಶರ. ೪೭). [ತುಱುವಳ (<ತುಱುವಾಳ) + -ತಿ$_1$ (< -ಇತ್ತಿ)]

**ತುಱುವಳ್ಳಿ**, ತುಱುಪಳ್ಳಿ (ನಾ). = ತುಱುಪಟ್ಟಿ ೨: "ಘೋಷ ತುಱುವಳ್ಳಿಯು ತಾಂ" (ಕವಿಕಂ. ೮೫). **ತುಱುಪಳ್ಳಿ**: ತುಱುಪಳ್ಳಿಯ ಗೋವುಳಿಗರೊಳ್ಪೋಟಗೆಯ್ದು ಱಿದಾಡುವ ಬೀಡಿನೆರ್ಮೆಗಳಂ ಪಿಡಿದಂತರಸ ಗೋಟ್ಟಿಸುವುದುಂ (ಸುಕುಮಾ. ೬-೩೫ ವ); ತುಱುಪಳ್ಳಿಗಳ ನೋಡಿ ವನಾಳಿದಪ್ಪದೆ ಬೇಟೆಯಾಡಿ ಸಮಸ್ತದಳಸಹಿತ ... ನೃಪ ಬಿಡಿಸಿದನು ಪಾಳೆಯವ (ಶಬ್ದಾಉ. ೭೮೩. ೧೯-೦). [ತುಱು + ಪಳ್ಳಿ$_1$]

**ತುಱುವಟ್ಟಿ** (ನಾ). (?): ಕರಪುರನ್ ಬನ್ದು ಬಲ್ಲದಾ ತೊಱುಗೊಳೆ ಊರಾ ತೊಱುವಳ್ಳ ಉವಟನ್ ತುಱುವಟ್ಟಿ ಇದಿರೆ ನಡದಿಱಿದು ಬಿಟ್ಟ್ದೀನ್ (ಎಕ. X, ಮುಳಬಾ. ೯೨-೭; ಸು. 780). [?]

**ತುಱುವಾಳ**, ತುರುವಳ, ತುಱುವಳ, ತೊಱುವಳ್ಳ, ತೊಱುವಾಳ (ನಾ). ದನವನ್ನು ಕಾಯುವವನು; ಗೊಲ್ಲ; ಗೋವಳ: "ಗೋಪತಿ ಗೋವಿಯೆನಲು ತುಱುವಾಳನಕ್ಕು" (ಮಂಗರಾ. ೩೭-೧೦). **ತುರುವಳ**: "ತುರುವಳರೆನಲ್ಕೆ ಗೋಪರಂ" (ಕಶರ. ೪೭). **ತುಱುವಳ**: "ತುಱುವಳನೆಂದು ಗೋಪಾಳಂ" (ಕಶಸಾ. ೭-೧೨೬): "ತುಱುವಳರೆನೆ ಗೋಪಾಲರ್" (ಕವಿಕಂ. ೮೫); ನರಸಿಂಹಸೆಟ್ಟಿ ಕೊಟ್ಟ ಗ ೨ ತುಱುವಳ ಮಾಳಗತಿ ಕೊಟ್ಟ ಗ ೧ (ಎಕ. VI. ತರೀಕೆ. ೮೭-೧೦; 1239); ಪಳ್ಳಿಯ ತುಱುವಳನಂತಿರೆ ಹಸುವನೇನೆಂದು ಕಟ್ಟಿದಯ್ (ರಾಮಾಶ್ವ. ೧೫೩-೨೦). **ತೊಱುವಳ್ಳ**: ಕರಪುರನ್ ಬನ್ದು ಬತದಾ ತೊಱುಗೊಳೆ ಊರಾ ತೊಱುವಳ್ಳ ಉವಟನ್ ತುಱುವಟ್ಟಿ ಇದಿರೆ ನಡದಿಱಿದು ಬಿಟ್ಟ್ದೀನ್ (ಎಕ. X, ಮುಳಬಾ. ೯೨-೬; ಸು. 780). **ತೊಱುವಾಳ್ಳ**: ಸೆಬ್ಬೆಣ್ಣಾಡ ಮಾಜನ ಮೂವತ್ತಿರ್ಚ್ಚರ ಅಳ್ವೊಡುಗೆಯನ್ ಕೇಸರಿ ತೊಱುವಾಳ್ಳನಾ ಮಗನ್ ಆಲನ ತೊಱು ಇಕ್ಕಿಸಿ ಬಿಟ್ಟಾನ್ (ಎಕ. X (s), ಮಾಲೂರು. ೧೫೭-೬: ೩ನೆಯ ಶತ). [ತುಱು + -ವಾಳ$_1$]

**ತುಱುವಿಂಡು**, ತುರುವಿಂಡು (ನಾ). ದನಗಳ ಮಂದೆ; ದನಕರುಗಳ ಸಮೂಹ: ಮೇವ ತುಱುವಿಂಡಿನೊಳು ದಾರಿಯೊಳು ಸುತ್ತಿ ಸುಳಿದಬಿಸಿದಂ ಸಿದ್ಧರಾಮನಾ ಪರ್ವತಾಗ್ರಣಿ ಮಲ್ಲಿಕಾರ್ಜುನನನು (ಸಿದ್ಧರಾ. ೨-೩೬); ತುಱುವಿಂಡನೊತ್ತಟ್ಟನೊಳ್ಪಿಟ್ಟು ... ಐತಂದರ್ (ಶ್ರೀರಾಮ. ೪-೧೪). **ತುರುವಿಂಡು**: "ತುರುವಿಂಡೆನಲು ತುರುಮಂದೆಯೆನಲು ಗೋಸಮುದಾಯವಕ್ಕು" (ಕಶರ. ೪೭); ವರುಣನು ಒಂದು ಹೋರಿಯನ್ನು ಕಳುಹಿಸಿದನು ... ಅದರ ಸಾಧು ಸ್ವಭಾವವನ್ನು ನೋಡಿ ಚಕ್ರವರ್ತಿಯು ಅದನ್ನು ತನ್ನ ತುರುವಿಂಡಿನಲ್ಲಿ ಸೇರಿಸಿಕೊಂಡನು (ಮಹಿಸ. ೯೫). [ತುಱು + ಪಿಂಡು$_2$]

**ತುಱುವಿಡು** (ಕ್ರಿ). (ಅಪಹಾರವಾದ) ದನಗಳನ್ನು ಮರಳಿಸು,-ಕಾಪಾಡು (?): ತುಱುಕೊಳೆ ಪಳ್ಳಿ ಅರಕ್ಕಮನ್ ತುಱುವಿಟ್ಟು ಬಿಟ್ಟಂ (ಎಕ. X, ಮುಳಬಾ. ೨೬೩-೨; ಸು. ೩೦೦). [ತುಱು + ಬಿಡು$_1$]

**ತುಱುವೆ**, ತುರುಬಿ, ತುರುಬೆ, ತುರುಮೆ, ತುರುವೆ$_2$ (ನಾ). ೧. ಒಂದು ಬಗೆಯ ಹೂವಿನ ಗಿಡ: ತುಱುವೆಯ ಬೇರನಿಕ್ಕಿ ... ಘೃತಮಂ ಬೆರಸಿಟ್ಟು (ಲೋಕೋಪ. ೮-೧೦); ಪೊಂಗಳನೆ ಗೋಪಿಯರ್ ಕೆದಱಿದಪೋಲ್ ತುಱುವೆಯ ನೆಗ್ಗಿಲ ಪೂಗಳ್ ತುಱುಪಟ್ಟಿಯ ಪೊಱಗೆ ತುಱುಗಿ ಕರಮೆಸೆದಿರ್ಕುಂ (ಲೀಲಾವ. ೫-೧೦೫); ತುಱುವೆಯ ಕಾಯ್ಗಳುಮಂ ಮಂಗುಱುವಳ್ಳಿಯನಿಡಿದ ಚೂರ್ಣಮಂ ಶರ್ಕರೆಯಿಂ ನೆಱೆ ತಿಂದು ಬಿಸಿಯ ನೀರಂ ಕಿಱುದುಗೊಳಲ್ಕುಱಿಯದುಱುಗುವೋ ಕೆಯ್ಮಸಕಂ (ಖಮರ. ೦೪-೪೨); ತುಱುವೆಯ ಬೇರು ಮಾದಲದ ಕಡ್ಡಿಗಳನು ಇಟ್ಟು ತೊಳಸಿದೊಡೆ (ಸೂಪಶಾ. ೨-೩). ತುಱುವೆ:—ಈ ಬೇರಂ ನರಮೂತ್ರದಿಂದ ಅರೆದು ತೆಗೆದುಕೊಳ್ಳೆ ಬಾಣಂತಿಸನ್ನಿ ಹರ (ವಿಪ್ರವಿ. ೪). ೨. ಒಂದು ಬಗೆಯ ಹಕ್ಕಿ: ಲಾವುಗೆ ಹರಡೆ ಗೌಜು ಟಿಟ್ಟಿಭ ಕುಕಿಲ ತುಱುವೆ ಕಳ [ಪಾಠಾಂ. ತುರುವೆಗಣ್ಣಂ] ಹಂಸೆ ಶುಕ ಪಾರಿವದ ದನಿಗಳಿಂದೊದಱಿ ತಾವ್ ಕರೆವುತಿರಲು (ಸೋಮಿಚ. ೫೦. ೨೦೪); (ಹಕಾ. ೫-೪೨ ನೋ). **ತುರುಬಿ**: ೧. ಶ್ರೀಮುದ್ರೆಗಿಡ... ತುರುಬೀಗಿಡ, ಗಿಡುತಿಂಗಿ (ಮೈಜಿಗಿ. ೦-೬). **ತುರುಬೆ**: ೧. ಬೇವಿನ ಸೊಪ್ಪಿನ ಕಿಚ್ಚುಮಾಡಿ ಅದರಲ್ಲಿ ತುರುಬೆ, ತುಂಬೆ, ಗಣಜಲಿ, ಹಬ್ಬೇವು ಮೊದಲಾದ ತಪ್ಪಲುಗಳನ್ನು ಚೆಲ್ಲಿ (ಕನ್ನಜಾ. ೦೬೬); ನಮ್ಮ ಹುಡುಗಿ ಮಾಘಗೌರೀಪೂಜೆಗೆ ತುರುಬೆ ಹೂವು ಕೊಯ್ದುಕೊಂಡು ಬರಲು ಹೋಗಿದ್ದಾಳೆ (ಬೂಧಿ). **ತುರುಮೆ**: ೧. "ತುತ್ತ-ತುತ್ತಿ, ತುರುಮೆ" (ಓಷಧಿ. ೬೦). **ತುರುವೆ$_2$**: ೧. "ಭೂಂಬಲಾ-ತುರುವೆ" (ಓಷಧಿ. ೦೦೨); ಮೂಲಿಕಾ ಪ್ರಯೋಗ ... ತುರುವೆಯ ಬಡಗ ಹರಿದ ಬೇರಂ ತಂದು ಕಿವಿಗೆ ಕಟ್ಟಲು ಛಳಿ ಬಿಡುವುದು (ಸಕವೈ. ೭೫).

**ತುಱುಸೆಱೆ** (ನಾ). ಹಸುಗಳನ್ನು ಸೆರೆ ಹಿಡಿಯುವುದು; ಗೋಗ್ರಹಣ: ಅರಿ ವಿರಾಟನ ಪುರಕೆ ಹಾಯಿದು ತುಱುಸೆಱೆಯ ತೆಗೆಸುವೆವು (ಶಬ್ದಾವಿ. ೪-೧೯); ಸಂಗಂಣ್ಣನು ಮೂಡೂರಿಂಗೆ ಹಳ್ಳಿಹಿರಿಯರ ಸಮಸ್ತ ಪ್ರಜೆಗಳುಡುಗಳ ತುಱುಸೆಱೆಯನಿಱಿದು ಕೊಂಡು ಹೋದಲ್ಲಿ (ಎಕ. XIV, ತಿರುಮ. ೨೨೩-೪: ?). [ತುಱು+ಸೆಱೆ$_2$]

**ತುಱುಸೆಱೆಗೊಳ್** (ಕ್ರಿ). ಹಸುಗಳನ್ನು ಸೆರೆಹಿಡಿ: ಅರಮನೆಯ ಸೀಮೆಯೊಳ್ ದಾಟಿಟ್ಟು ತುಱುಸೆಱೆಗೊಂಡುದಱಿಂದುದಂದಿಗೆಪರ್ವ ಧನಧಾನ್ಯಂಗಳಡಂಗಿ (ಚಿಕದಂ. ೪೫-೧೦). [ತುಱುಸೆಱೆ + ಕೊಳ್$_1$]

**ತುಱುಸೆಱೆವಿಡಿ** (ಕ್ರಿ). ಹಸುಗಳನ್ನು ಸೆರೆಹಿಡಿಯುವ ಹಾಗೆ ಗುಂಪು ಗುಂಪಾಗಿ ಹಿಡಿ: ಒಱಲ್ದೆಱಗುವ ಪಱಿಮೆವಱಿಗಳಂ ತುಱುಸೆಱೆವಿಡಿವ ನಱುಗಂಪಿನ ಸೊಂಪುಗಳ್ಗಿಂಬಾದ ಪೊಂಬಾಱೆಗಳಿಂ ಬಳ್ಕುವಡಕೆಯ ಸಾಲಕೊಳಂ (ಅದ್ವಿಕಾ. ೬೦). [ತುಱುಸೆಱೆ + ಪಿಡಿ$_1$]

**ತುಱುಹಟ್ಟಿ** 'ತುಱುಪಟ್ಟಿ' ನೋ.

**ತುಱುಹತಿ** (ನಾ). = ತುಱುಗೋೞ್(?) : ಕಲೋಜ ಹೆಗಡೆ ಕೀರ್ತ್ಯಯ [೦] ಗಳು... ತುಱುವ ಕೊಂಡು ಹೋಹಂದು ಅವರ ಕೂಡೆ ಕಾದಿ ತುಱುಹತಿಯು ಸತ್ತು ಸ್ವರ್ಗಬಡದರು (ಕಇ. IV, ೩೫-೬; ?). [P ಇದು 'ತುಱುಹರಿ' ಎಂಬುದರ ಅಪಲಿಖಿತವಿರಬಹುದು]

**ತುಱುಹರಗೋಳು** (ನಾ). = ತುಱುಗೋೞ್ : ಶ್ರೀಮಾದಿ ಅಬಲದಲ ಸ್ಥಲದ ಚಿಕಾನ್ನ ತುಱುಹರಗೋಳುಗಳಲ್ಲಾದಿ ಸತ್ತಂ (ಪ್ಕುಅರಿ. ೧೯೩೨, ೫೪-೯ ; ೪ನೆಯ ಶತ). [<ತುಱುಹರಿ + ಕೋಳು₂ (<ಕೋೞ್)]

**ತುಱುಹರಿ₁**, ತುರುಹರಿ (ಕ್ರಿ). ಗೋವುಗಳನ್ನು ಹಿಡಿದುಕೊಂಡು ಹೋಗು : ಖೂಟೆಯ ಕಿಱಿಯ ತುಱುಹರಿವಲ್ಲಿ ಕಾದಿ ತುಱುವಂ ಮಗುೞ್ಚಿ ತಾಂ ಸುರಲೋಕಪ್ರಾಪ್ತನಾದ (ಎಕ. V, ಹಾಸನ. ೧೦೮-೯ ; 1147). **ತುರುಹರಿ:** ರಾಕ್ಷಸರ್ತುರುಹರಿದು ತಮ್ಮ ಹಗೆಯರ ಗುರುವಿನಾ ಮಗನಿಲ್ಲಿ ಗೈತರಲುಬಹುದೇ ದುರುಳನಿವನೆಂದಾತನಂ ಕೊಂದುಹಾಕಿರಲ್ (ತುರಂಗ. ೮-೧೨). [ ತುಱು + ಹರಿ₂ (<ಪರಿ₂)]

**ತುಱುಹರಿ₂** ' ತುಱುಂಪರಿ ' ನೋ.

**ತುಱುಹುಯಲು**, ತುಱುಯ್ಯಲು (ನಾ). ೧ = ತುರುಗಾಳೆಗ: ರಾಮಯನು ತುಱುಹುಯಲಲಿ ಸುರಲೋಕವ ಸಂದೊಡೆ (ಪ್ಕುಅರಿ. ೧೯೩೮, ೦೨-೩ ; ?). **ತುಱುಯ್ಯಲು :** ೨. ಹಸುಗಳ ಕೂಗು : ಅವರ ಮಗನ ಮಗಂ ಜಕ್ಕ ಪೆಣ್ಡಿರುಡೆಯುಬ್ಬುವ ಪುಯ್ಯಲು ತುಱುಯ್ಯಲುವ ಕೇಳ್ದು ತಾಗಿ ಕಾದಿ ... ಸತ್ತಂ (ಎಕ. XII, ಶಿರಾ. ೪೩-೩ : ಸು. 1000). [ ತುಱು + ಹುಯಲು (<ಪೊಯ್ಯಲ್ )]

**ತುೞಿ₁**, ತುಳಿ₁ (ಕ್ರಿ). ೧. ಕಾಲಿನಿಂದ ಮೆಟ್ಟು, -ಆಮಂಕಂ, -ಘಟ್ಟಿಸು : "ತುೞಿ-ಪಾದಸಂಘಟ್ಟನೇ" (ಶಮದ) ; ತುಱು ಪರಿಪಾಗೆಳಿಮ್ಮ ಪೆಣನಂ ತುೞಿದುಂ ಪರಿಗುಂ ದಲ್ (ಪಂಪಭಾ. ೨-೯೩) ; ಈ ಧೂರ್ತನನಾ ಗಜಂ ತುೞಿವುದಕ್ಕೇ ಪೆಚ್ಚದೇ ಮಂತಣಾ (ಧರ್ಮಾಮೃ. ೧೩-೭೪) ; ಗಂಧಗಜೋತ್ತಮಂ ತುೞಿದು ಕಿಟ್ಟೀಡಾಡುಗಾನಂದಚಂದ್ರವಿರುದ್ಧಸ್ಥಿತಿಯಂ ವಿಶುದ್ಧಜಿನಧರ್ಮದ್ರೋಹಪಂಕೇಜಮಂ (ಅರ್ಧನೇ. ೦-೮). ೨. ನಾಶಮಾಡಂ ; ಸೋಲಿಸಂ ; ಹಾಳುಮಾಡು : ರಿಪುಸೇನೆಯಂ ತುೞಿದು ತೊಟ್ಟುೞಿಮಾಡುವಂ (ಪಂಪಭಾ. ೧೩-೪೪) : ಬಡವಂ ಬಾೞ್ಗಿಂಗುವೊ ...ಪೆಣ್ಬಡೆಯೆಂಗುವೊ ತುೞಿದು ಪರಿಗುವಂತಕರಾಜಂ (ಅಜಿಪು. ೧೦-೨೩) ; ಮನವಂ ಕಟ್ಟ ಗುಣಂಗಳಿಂ ತುೞಿದು ಪಂಚಾಚಾರದಿಂ ಪಂಚಬಾಣನ ಬಾಹಾಬಲವಂ (ಪಂಪಾಮ. ೦-೩). ೩. ಹತ್ತಿಕ್ಕು ; ಅದುಮಿಡು ; ತಲೆ ಎತ್ತದಂತೆ ಮಾಡು : ತೊಲಗಿಸು ಕಾಮವಂ ತುೞಿದು ಕೋಪವಂ...ಎಮ್ಮನಾಳ್ಗೆ ನೞಿನಾಕ್ಷಚರಿತ್ರದ ಚೈತ್ರಭೇರಿಗಳ್ (ಜಗವಿ. ೧-೯). ೪. ನೋಯಿಸು ; ಪೀಡಿಸು ; ಕಾಡಿಸು : "ತುೞಿದಂ...ಘಾಸಿಮಾಡಿದಂ" (ಶಮದ. ಪರಿ. ೧) ; "ಘಾಸಿಯೊಳ್ ಪದದೆ ಮರ್ದಿಸು ವಲ್ಲಿಯುಂ ತುೞಿವೆಸರ್" (ಸಂಜೀವ. ೦೨) ; ಗಂಡರಳ್ಕೆರ್ದೆಗಳಂ ತುೞಿ ಪೋಜೆಯನುಂಟುಮಾಡುವಂದದೆ...ಸೂಸಿದುದು ಸೇಸೆಯನಾ ಪುರಾಂಗನಾಜನಂ (ಪಂಪಭಾ. ೪-೩೩). ೫. ಕಿವುಚು ; ಜಜ್ಜು ; ಹಿಂಡು ; ಅರೆ : "ಕಿಮುಟ್ಚಿನಲ್ ತುೞಿವುದು" (ಸಂಜೀವ. ೩) : ಗುರುಗುಂಜಿಯೆಲೆಯೊಳಲ್ಲದೊಡರಬಿಚ್ಚಗಯರಲೊಳೆಳ್ಳುಮಂ ಬೆಲ್ಲಮುಮಂ ಬೆರಸಿ ತುೞಿದಿಟ್ಟದಂ ತಿನೆ ಮರಾಂಗಿ ಲತೆಯಂತೆ ಪುಷ್ಪವತಿಯಾಗಿರ್ಕುಂ (ಲೋಕೋಪ. ೯-೧೬೪) ; ತಿಲತೈಲ ಸೈಂಧವಂ ಪಿಪ್ಪಲಿ ಮರಿಚಂ ವಿಶ್ವಮೆಂಬಿವಂ ಸಮನಾಗಲ್ತುೞಿದು ಮೆಲುತ್ತಿರೆ ತೊಲಗುಗುಮಲಸಂದೆಯ ಸೊರ್ಕು (ಖಮದ. ೨-೧೬೮) ; ಒರ್ಪಲಮುಪ್ಪಂ ತ್ರಿಕಟುಕಮೊರ್ಪಲಮುಂ ಬೇವಿನೆಲೆಯುಮಂ...ತುೞಿದು ಸಮರ್ಪಿಸುವುದು (ಅಶ್ವಶಾ. ೭-೩೪). **ತುಳಿ₁** : ೧. ಭಾಳಲೋಚನಾಗ್ನಿಯಿಂ ಪಂಚಶರನುರಿದು ನಿಲೆ ಪರಿತಂದು ಪದತಳದಿಂ ತುಳಿದು ಸ್ಮರಭಸ್ಮವಮುವನಾಗಿ (೧ರಿಕ. ೨ ಕಥಾಗರ್ಭ) : ಕೊಂಡು ಬಂದಾ ದೈತ್ಯಗಣವನು ದಿಂಡುಗೆಡಹಿಯು ತುಳಿಯೆ (ಸಂಭಪ. ೭-೩೮) ; ದಿಕ್ಕರಿ ನಡುಗೆ ಚೌಕದ ಕಳನ ತುಳಿದುಡು ಸುಪ್ರತೀಕಗಜ (ಕುಮಾರ್ಮ್ಯ. ೩-೦೦); ವೈಂದನ ಸದೆದ ನೀಲನ ತುಳಿದ ... ಗದೆಯಲಪ್ಪಳಿಸಿದ ಗವಾಕ್ಷನ (ಕೌಶಿರಾ. ೨೩-೨೨); ಹಾವಿನ ಹೆಡೆಯಂ ತುಳಿವರೇನೆ ಅಂಜಿಕಿಲ್ಲವೆ (ಪುರಂದ. ೨-೬೩-೮); ತ್ರಿವಿಕ್ರಮನು ಬಲಿಯ ತಲೆಯ ಮೇಲೆ ಪಾದವನ್ನಿಟ್ಟು ಅವನನ್ನು ಪಾತಾಳಕ್ಕೆ ತುಳಿದು ಅಲ್ಲಿಯೇ ಅಳಿಕೊಂಡಿರುವಂತೆ ಅಪ್ಪಣೆ ಮಾಡಿದನು (ನೀತಿಚಿ. XV, ೨೯). ೨. ಕೌರವಸೇನೆಯಂ ತುಳಿದು ಗೆಲ್ದಾ ಗಣ್ಡರುಂ ... ವೀತಮತ್ಸರದಿಂ ಭಾವಿಸುವಾಗಳೇ ಸಮರಕೊಳ್ಗಣ್ಡಂಬರಂ ಗಣ್ಡರೇ (ಸೌಇಇ. XI – i, ೩೨-೦೨; 1008); ಕದನದೊಳಂತರಂ ತುಳಿದು ಕೊಲ್ವೆಡೆಯೊಳು ಲಯಕಾಲಕಾಲನೆಂಬುದು (ಎಇ. XVI, ೩೩-೧೬; 1102). ೩. ಆಗ ಇತರರ ಹಕ್ಕುಬಾಧ್ಯತೆಗಳನ್ನು ತುಳಿಯಲೂ ಹಿಂಜರಿಯರು (ಶಿಕ್ಷದ. ೦೦೧). ೪. ಸುಲಿದು ವಿಪ್ರನಿಕಾಯವಾದದ ತುಳಿದು ದೇಶಾಂತರವ ಮಾಡಿಯೆ ... ಬಂದು ಕಂಡನು ಜಗದ ವಲ್ಲಭನ (ಸಂಭಪ. ೨೬-೭೧). ೫. ಕಗ್ಗಲಿಯ ತೊಪ್ಪಲನು ತುಳಿದು ರಸವ ಹಿಂಡಿಕೊಂಡು ಅದಂ ಮೈಗೆ ತೊಡೆವುದು (ಅಶ್ವಟೀ.೬೯-೦). ೬. ಹಾದಿಯಲ್ಲಿ ನಡೆ,-ಸಾಗು : ಎಷ್ಟು ತುಳಿದರೂ ದಾರಿ ಮುಗಿಯಲೊಲ್ಲದು (ರೂಢಿ).

**ತುಳಿತುಳಿ** (ದ್ವಿರುಕ್ತಿ) : ಮದವಲರ್ದ ತನುವಂ ಕುಸುರಿದಱಿದುಱಿ ಕಲ್ಲೊರಳೊಳಿಕ್ಕಿ ತುಳಿತುಳಿದು ತಾಂ ಹರಿವ ತೊಱೆಯಲಿ ಕಲಸ ಬಗೆವನು (ಬಸಪು. ೪೩-೨೮): ರಣವ ಶೋಧಿಸಲೆಂದು ಕಳನೊಳು ಹೆಣನ ತುಳಿತುಳಿದಣಿಸೆ ಕುರುಧಾರುಣಿಯ ಪತಿಯನು ಕಂಡು ನೆಱೆ ಮಱುಗಿದಳು ಗಾಂಧಾರಿ (ಕುಮಾಗ. ೦೨ ಸೂಚನೆ): ಸಲೆ ಸೇರಿಸಿದೇಣಿಗಳ ಮೇಲೆ ಸುಭಟರು ... ಅಲಗಿನ ಗಾಯವನೆಣಿಸದೆ ಹೆಣಗಳ ತುಳಿತುಳಿದೊಡನೇಱಿದರು (ಕಂನವಿ. ೧೪-೪೬). **ತುಳಿದ ಹಾದಿ**=೧. ಜನರಂ ನಡೆದಾಡಿರುವ ದಾರಿ ; ಸಿದ್ಧವಾದ ಮಾರ್ಗ. ೨. ಸಂಪ್ರದಾಯ ; ಪರಿಚಿತವಾದ ಕ್ರಮಂ; ಪದ್ಧತಿ : ಮಾಡಿರುವ ಪ್ರಯತ್ನವು ಮುಂದೆ ಸತ್ಯಾನ್ವೇಷಣ ಮಾಡುವವರಿಗೆ ತಳಹದಿ ಅಥವಾ ತುಳಿದ ಹಾದಿ ಆಗದೆ? (ಸಂಶೋಧ. IV, ಅರಿ೪). **ತುಳಿದಾಡು**=ತುಳಿ; ಮೆಟ್ಟು : ವಿಗಡಕರಿ ತುಳಿದಾಡಿಕಿದಿರಿದಿರಾದ ಪಟುಭಟರ (ಕುಮಾರ್ಮ್ಯ. ೩-೦೬). **ತುಳಿಮಣ್ಣು**= (ಗೋಡೆ ಮೊದಲಾದುವನ್ನು ಕಟ್ಟಲು) ಚೆನ್ನಾಗಿ ತುಳಿದಂ ಹದ ಮಾಡಿದ ಮಣ್ಣು : ತುಳಿಮಣ್ಣು ಚೆನ್ನಾಗಿದ್ದಷ್ಟೂ ಗೋಡೆ ಬಿಗಿಯಾಗುತ್ತದೆ (ರೂಢಿ). **ತುೞಿದಿಕ್ಕು** = ಅದುಮು ; ಹತ್ತಿಕ್ಕು : ಪ್ಪೂಸ್ ದೇವನೆಂದುಂ, ಎನ್ನೆರ್ದೆಯ ಬಯಕೆಯಂ ತುೞಿದಿಕ್ಕಲೆಂದು, ತನ್ನಯಾ ಬಲ್ಮೆಯುಮ್ ಒತ್ತದಿರ್ಕೆಂದುಂ (ಬದ್ಮಪ್ರ. ೨೮-೫೯೬).

[ದೇ.॥ ತಮಿ. ತೊಟ್ಚಿ ; ಮಲ. ತೊೞಿ]

**ತುೞಿ₂**, ತುಳಿ₂ (ನಾ). ಮೆಟ್ಟುವಿಕೆ ; ತುಳಿತ : ಆ ಖಳನ ತುೞಿಯು [ಪಾಠಾಂ. ವು] ಮಂ ಸೋಂಕುಮನಾರವಧರಿಪರ್ (ಆದಿಪು. ೪-೬೬). **ತುಳಿ₂** : ಸುಮಮಕರಂದದಿಂದೆ ಕಪಿ ಕೈದೊಳೆದಾ ದ್ರುಮಪತ್ರಪಾತ್ರೆಯುಂ ಸಮೆದದಱಲ್ಲಿ ತುಂಬಿ ತುಳಿವೊಂದದ ಪೂಗಳನ್ನೆದೆ ತುಂಬಿಕೊಂಡು..ಬಂದು ಸಂಯಮಿಗಳ ಮುಂದೆ ನಿಂದೆಱಗಿ ಕಾಣ್ಕೆಯನಿತ್ತುದು (ರಾಜಶೇ.೧-೧೨೬). 'ಕಾಲ್ದುೞಿ₂' ನೋ. [< ತುೞಿ₁]

**ತುೞಿಕಲ್**, ತುಳಕಲು, ತುೞಿಕಲ (ನಾ). ೧. ತುಳಿತಕ್ಕೆ ಸಿಕ್ಕಿದುದಂ. ೨. ಬಾಡಿದುದು ; ಸೊಪ್ಪಾದುದು ; ರಸಹೀನವಾದುದಂ : "ತುೞಿಕಲ್ (ತೞಿಕಲ್, ತೞಿಕಲ್) = ಸೊಪ್ಪಾದುದು'' (ಶಮದ. ಪರಿ.೧): ತುೞಿಕಲಡುಗೆಗಳೊಳೇಂ ಪೞಿಗಟವೆಯ ಕೂೞ್ ತಿವುದುಗಳೆವ ತೊಮರಿಯ

ತೊವೆ ಕಾಯ್ದುೞಿಪಿದ ತುಪ್ಪಂ ಕೋಡುವ ಕಬಲಲ್ಲದೆ ದಿವ್ಯಭೋಜನಂ ಪೆಱತುಂಟೇ (ಕಾವ್ಯಾವ. ೨೪೦). **ತುಳಕಲು** : ೩. ತುಳಿತ; ಮೆಟ್ಟುವಿಕೆ : ಕುದುರೆ, ಎತ್ತು, ಮನುಷ್ಯರು ಇವರ ತುಳಕಲಿನಿಂದ ತಮಗೆ ತಾವೇ ಬಿದ್ದ ಮಾರ್ಗಗಳಿಂದಲೇ ಯಾವತ್ತು ವ್ಯವಹಾರ ನಡಿಯುತ್ತಿತ್ತು (ಕಥಾಗಿ. ೨೯೪). **ತುೞಿಕಲ** : ೨. " ತುೞಿಕಲಮೆನೆ ಸೊಪ್ಪಾದುದು" (ಕರ್ಣಾನಿ. ೮೨).

[ತುೞಿ$_1$ + – ಕಲ್$_4$]

**ತುೞಿಕಲ** 'ತುೞಿಕಲ್' ನೋ.

**ತುೞಿಯಿಸು**, ತುಳಿಯಿಸು, ತುಳಿಸು, ತುೞಿಸು (ಕ್ರಿ). ೧. ಕಾಲಿನಿಂದ ತುಳಿಯುವಂತೆ ಮಾಡು; ಮೆಟ್ಟಿಸು : ಲೀಲಾಕಮಲಾಕರಾನೀಕರಕ್ತ ಕಮಳಂಗಳನಾಸ್ಯಾನುಶೋಣಿತಶೋಣರಿಪುನೃಪಶಿರಂಗಳಿಂದೆ ತುೞಿಯಿಸಿಯುಂ (ಆದಿಪು. ೮-೪೦ವ). ೨. (ಅರೆದು) ಕೂಡಿಸು ; ಮಿಶ್ರಮಾಡು : ಕ್ರಿಯೆಯಿಂ ಬೀಜಂಗಳನಲ್ಲಿಯೇ ಮಣ್ಣೊಳ್ ಬಿತ್ತಿ ತಳಿಗೆ ತುೞಿಯಿಸಿ ಪಾಲ್ ಪಂದಿಯ ನೆಣಗಳುಮೆಂಬಿವನನುನಯದೆ ಮೊದಲ್ಗೆೞೆಯೆ ಸದ್ಯಃಫಲದೊಳ್ ನೆೞೆಗುಂ (ಲೋಕೋಪ. ೬-೨೪). **ತುಳಿಯಿಸು** : ೧. ಎತ್ತುಗಳಿಂದ ರಾಗಿಯನ್ನು ತುಳಿಯಿಸಿದರು (ಕೂ೧). ೩. ನಾಶಪಡಿಸು : ಸಿದ್ಧಪದಮಂ ಕೆಯ್ಕೊಳ್ಳುದರ್ಕಡ್ಡಮೊಡ್ಡಣಮೊಡ್ಡಿದರ್ಘ ಸೈನ್ಯಮಂ ತುೞಿಯಿಸಲ್ (ಶಾಂತಿಪು.೦-೭). **ತುಳಿಸು** : ೧. ಎಲವೊ ಸಂಶಯ ಬೇಡ ಗಜದಲ್ಲಿ ತುಳಿಸು ತಂಗಿಯ ಮಕ್ಕಳನು (ನಿಭಾಗ. ೧೦-೩೧-೩೨); ರಾಗಿ ತುಳಿಸುವುದಕ್ಕೆ ನಿಮ್ಮ ಎತ್ತುಗಳನ್ನೂ ಸ್ವಲ್ಪ ಕೊಟ್ಟರೆ (ಕೂ೧). **ತುೞಿಸು**: ೧. ಸಿಂಧುರದಿಂ ನುಗ್ಗಾಗೆ ಕಾಲ್ಕೆಲ ಮುೞಿಯೆ ತುೞಿಸಿ... ದಂಡಿಸುವ ನರಕಜಗೋರ್ವೋ ಮಯ್ಕೊಡ್ಡಲಾೞಿಂ (ಧರ್ಮಾಮೃ. ೧೩-೧೫೭).

[ ತುೞಿ$_1$ +– ಇಸು$_3$ ]

**ತುೞಿಲ್**$_1$, ತುಳಿಲ್$_1$, ತುಳಿಲು$_1$ (ನಾ). ೧. ಎರಗುವಿಕೆ ; ಮಣಿಯುವುದು ; ನಮಸ್ಕಾರ; ಪ್ರಣಾಮ : "ತುೞಿಲ್ ಪ್ರಣಾಮದೊಳ್" (ಕರ್ಣಾನಿ. ೩೭): "ತುೞಿಲೆಂದು ಮೊೞಗೆಂದು ಕುಂಬೆಂದು ಯಱಗೆಂದು ಬೞಿಕ ಮಣಿಯನೆ ನಮಸ್ಕಾರಕ್ಕೆ ಪೆಸರಕ್ಕುಂ" (ಕಬ್ಬಿಗ. ೩೩) ; ಬ್ರಹ್ಮಋಷಿಯರೆಲ್ಲರುಮಂ ತುೞಿಲ ಪರಿಕೆಯ ಸಮಾನ ಪ್ರತಿಪತ್ತಿಯಿಂ ಕಿಱಿಯರಱಿದು ಪೊಡೆವಟ್ಟು (ಶಂಕಭಾ. ೬-೩೩ವ) ; ಉಮಾಂಘ್ರಿಗೊಳ್ಪಿನಿಂ ತುೞಿಲನೊಡರ್ಚೆಲ್ (ವೀರವಿ. ೦-೭೦); ಬೀಗುತ್ತುಂ ಶರಣೆಂದು ಮಾಟ್ಪ ತುೞಿಲೇಂ ಬೇರೋರ್ವರಂ ಸೇರ್ವುದೇ (ಬ್ರಸೂಮ. ೦-೧). ೨. ಆಳಂತನ; ದಾಸ್ಯ; ಸೇವೆ. 'ತುೞಿಲ$_1$' ಪರಾ. **ತುಳಿಲ್**$_1$ : ೧. "ನತಿಃ—ತುಳಿಲ್" (ಕಾಕಶ. ೪೦): ತು [ಪಾಠಾಂ. ತ]ಳಿಲಾಂತು ಬಂದು ನಿರ್ಮಳನದ್ವಿತೀಯನಚಳಪರಂಜ್ಯೋತಿರಾಕಾರ ನ ೯ ನ ಜಾ ೦ ಡ ಗಳ ತನ್ನೊಳು ಪೆತ್ತಮೂರ್ತಿ ಕಂಗೊಳಿಪ ಸೋಮೇಶನಾಲಯಕೆ (ಭೃಕವೀ. ೪-೦೦) ; ನಾಗನಾಥಂಗೆ ಸಲುಗೆಯಿಂ ತುಳಿಲೆಸಗಿ (ಸಿದ್ಧೇಪು. ೭-೪೯) : ಬೆನ್ನ ಬಿಸಿಲೇ ಕಾಣ್ಕೆ ಗೆಯ್ಮೆಯೊಡೆಯನ ತುಳಿಲ್ (ಕಾಲಜ್ಞ. ೨೯-೨೧). **ತುಳಿಲು**$_1$ : ೧. ಮನೆಯ ಮೂಲೆಮೂಲೆಗೂ ತುಳಿಲೆಂದು, ಮಗಳನ್ನು ಕಾಪಾಡಿರೆಂದು ಕೋರಿ ಪತಿಯೊಡನೆ ತವರಿಗೆ ಹೋಗುತ್ತಾಳೆ (ಕರಜ. ೨೧). ೨. 'ತುಳಿಲಾಳು$_1$' ಪರಾ.

[ದೇ.॥ ತಮಿ. ತೊೞು=ಪೂಜಿಸು ; ಮಲ. ತೊೞು = ನಮಸ್ಕರಿಸು; ತುಳು. ತುರ್ಲಿ; ತೆಲು. ದೋಯಿಲಿ]

**ತುೞಿಲ್**$_2$, ತುಳಿಲ್$_2$, ತುಳಿಲು$_2$ (ನಾ). ಶಕ್ತಿ ; ಸಾಹಸ; ಪರಾಕ್ರಮ: " ತುೞಿಲ್=ಪೊಡವಡಿಕೆ : ವೀರಂ " (ಶಮದ. ಶರಿ. ೧): " ತುೞಿಲೊದು ಶೌರ್ಯದೊಳ್" (ಕರ್ಣಾನಿ.೩೬); "ತುೞಿಲೆನಲ್ ಪೊಡವಡಿಕೆಗಂ ವೀರಕಂ ಪೆಸರ್" (ಸಂಜೀವ. ೧೦). 'ತುೞಿಲಾಳ್$_2$' ಪರಾ. **ತುಳಿಲ್**$_2$ : ತುಳಿಲಾಂತರಳಿದರುಳಿಯದೆ ಬಳಿಯಂ ನೆಱೆ ಕಾಣದಲ್ಲಿ ದಳದುಳದಿಂದಂ (ಹಮ್ಮೀರ. ೩-೫೩). **ತುಳಿಲು**$_2$: ಕರಚಮತ್ಕಾರಕ್ಕೆ ಚಮತ್ಕಾರಮಾರ್ಬಟೆಗೆ ಯರ್ಬಟೆ ತುಳಿಲ್ಗೆ ತುಳಿಲು ... ಸರಿಯಾಗೆ ನಂದೀಶ ಶುಂಭಾಸುರರ್ ಮಹಾಧುರದೊಳೆಚ್ಚಾಡಿದರ್ (ಚಿಬಸ. ೨೬-೨೫).

ತುೞಿಲ್ಗೆ ಪಸಂತ=ಒಂದಂ ಬಿರುದಂ: ಮಾನಸೂರರಳಿ ಕಯ್ಪೆ ಮಗನನ್ನ ಭುಕಯ್ಪ ತುೞಿಲ್ಗೆ ವಸನ್ತನ್ ಗಣ್ಡಪದಿಚನ್ದನ್ ... ಕುದುರೆಇನ್ದಿೞಿದು ನಡದಿಱಿದೊಟ್ಟಕೆಯ್ದು ಬಿಟ್ಟರ್ (ಎಕ. X, ಶ್ರೀನಿಪಾ. ೫-೫; ಸು. 780).

[ದೇ.॥ ತಮಿ. ತುಣಿವು; ಮಲ. ತುನಿ=ಸಾಹಸಮಾಡು]

**ತುೞಿಲ**$_1$ (ನಾ). ೧. ಸೇವೆಯಿಂದ ಜೀವಿಸುವವನು ; ಭೃತ್ಯ; ದಾಸ : ಅೞಿಪಿ ಕಿಱಿದಕ್ಕೆ ಕೆಮ್ಮನೆ ಗಳಗಳಿಸುತ್ತೇಳಿದರ್ಕಳೊಳ್ ಬಿಡದೆ ತಗುಳ್ದೆೞಿ ಪೞಿಯಾಡುವ[ನೆಂತುಂ] ತುೞಿಯ[ಲ]ಕ್ಕುಂ ತುೞಿಲಸಂದನಕ್ಕುಮ ಧರೆಯೊಳ್ (ಬಂಹರಿ. ೦೦-೧೦೫). ೨. ಪಂಚಮವರ್ಗಕ್ಕೆ ಸೇರಿದವನು ; ಅಂತ್ಯಜ : "ತುೞಿಲನೆನಲ್ಕೆ ಪಂಚಮನೊಳ್" (ಕರ್ಣಾನಿ. ೮೩).

[ ತುೞಿಲ್$_1$ + – ಅ$_7$ ]

**ತುೞಿಲ**$_2$ (ನಾ). ವೀರ; ಶೂರ; ಪರಾಕ್ರಮಶಾಲಿ : "ಕರಮೊಲ್ದನೊಳಂ ಸುವೀರನೊಳ್ ತುೞಿಲನೆನಲ್ಕೆ" (ಕರ್ಣಾನಿ. ೮೩). [ ತುೞಿಲ್$_2$ + – ಅ$_7$ ]

**ತುೞಿಲಸಂದ**$_1$ 'ತುೞಿಲ್ಸಲ್$_1$' ಪರಾ.

**ತುೞಿಲಸಂದ**$_2$ 'ತುೞಿಲ್ಸಲ್$_2$' ಪರಾ.

**ತುೞಿಲಾಳ್**$_1$, ತುಳಿಲಾಳಂ$_1$ (ನಾ). ಆಳು; ಸೇವಕ; ದಾಸ : ಆದೊಡೆ ಪೆಣ್ಗಳ್ ಮೇಣ್ ತುೞಿಲಾಳ್ಗಳ್ ಅವನ ಜಸಮಂ ಪಾಡುಮೆಡೆಯೊಳ್ ನಿರ್ಬಂಧಮಿಲ್ಲಂ (ಅದ್ಭುತ. ೨೨-೨೨). **ತುಳಿಲಾಳು**$_1$ : ದಳಪತಿ ಮನ್ನೆಯ ಮಾಂಡಲಿಕರು ನೆಱೆ ತುಳಿಲಾಳು ರಾಯರಾವುತರು...ಒಬ್ಬದರು (ಕಂಸವಿ. ೮-೨೮) ; ರಾಷ್ಟ್ರಕೂಟಸಿಂಹಾಸನಕ್ಕೆ ತುಳಿಲಾಳಾಗಿ ಬದ್ದೆಗನು ಚಾಳುಕ್ಯ ಭೀಮನನ್ನು ಗೆದ್ದನೆಂಬುದರಿಂದ (ಸಾಡೂಇಉ. ೩೨೭). [ತುೞಿಲ್$_1$+ಆಳ್$_3$]

**ತುೞಿಲಾಳ್**$_2$, ತುಳಿಲಾಳ್, ತುಳಿಲಾಳು$_2$ (ನಾ). ಪರಾಕ್ರಮ ಉಳ್ಳವನು ; ಶೂರ ; ವೀರ : "ತುೞಿಲಾಳ್ ಪರಾಕ್ರಮಮುಳ್ಳಂ" (ಕಕಶಾ. ೧೪-೨೭೪); "ತುೞಿಲಾಳೆ ಧೀರನೊಳ್" (ಕರ್ಣಾನಿ.೩೦); ಪದ್ದೆಗನ ಕೋಣೆಯ ಗಂಗನ ಮೊತ್ತಮೆಲ್ಲಮಂ ಬೆದಱುವಿನಂ ತೆರಳ್ಚಿ ಪಲರುಂ ತುೞಿಲಾಳ್ಗಳನಿಕ್ಕಿ (ಎಕ. II, ೧೩೪-೦೨ ; 940) ; ಪಸಾಯ್ತರ ಬೞಿಸಲ್ದ ತುೞಿಲಾಳ್ಗಳಡ್ಡಣದೊಳೆಡ್ಡಮಾಗೆ (ಕಬ್ಬಿಕಾ. ೪೪) ; ಕೊಳನಂ ನಿಸ್ಸಾರಮೆಂದು ಪುರುಳ್ಗಂದಿ ದಾಣ್ಮನಂ ತೊಱೆದು ಪೋಪ ತುೞಿಲಾಳ್ಗಳಂತಿರೆ ನೀರ್ವಕ್ಕಿಗಳ್ ದೆಸೆದೆಸೆಗೆ ಪೋದುವು (ರಾಜಶೇ. ೫೦-೨೩). **ತುಳಿಲಾಳ್**: "ತುಳಿಲಾಳೆನೆ ಪರಾಕ್ರಮಿಗೆ ...ಅಭಿಧಾನವು" (ಕಶರ. ೪೭); ತುಳಿಲಾಳ್ಗಳು ತನ್ನಾ ನೂರ್ವರು ಸುತರೆಳಸಿ ಬಳಸಿ ಬಂದನಾಗ (ನೇಮಿಸಂ. ೨೫-೦೭೪) ; ತಳುವದೆ ಜೀವಿತಗೊಂಬ ತುಳಿಲಾಳ್ಗಳಲ್ಲದೆ ರಾಮನ ಮೆಯ್ಗಾವಲೊಳಗಿಲ್ಲ ಲೆಕ್ಕದಾಳುಗಳು (ಕುಶಾಸಾಂ. ೯-೧೦) ; ಬಿರುದಿನ ಬೆನ್ನ ಝಲ್ಲಿಯ ತುಳಿಲಾಳ್ಗಳ ನೆರವಿ ಮಧ್ಯದೆ ಬಹನಾರ (ಕಂಸವಿ. ೨೫-೪೭). **ತುಳಿಲಾಳು**$_2$: ತುಳಿಲಾಳಿಗೆ ಕೈವಶವಾದ ಸುದತಿಯರಳಿವಿಟರಿಗೆ ಮೋಹಿಸುವರೆ (ನೇಮಿಸಂ. ೦೦-೦೯೪) ; ನಳಿನನಾಭನ ಸುತನಂತೆ ತುಳಿಲಾಳಿನಂತೆ ... ಸಲೆ ಭೂಜವೆಸೆಯೆ (ಭೃಕವೀ. ೧-೫೩) ; ಹೈದರಸು ಮತ್ತೆ ಒಂದು ಲಕ್ಷ ತುಳಿಲಾಳುಗಳನ್ನು ಕೂಡಿಕೊಂಡು ದುರ್ಗದ ಮೇಲೆ ಧಾಳಿಮಾಡಿದನು (ಕವೀರ. ೧೨೫).

[ ತುೞಿಲ್$_2$ + ಆಳ್$_3$ ]

**ತುೞಿಲಾಳಾಯ್ತ** (ನಾ). ವೀರರ ಧರ್ಮ ; ವೀರವೃತ್ತಿ ( ? ) : ಅಂತು ಮೂದಲಿಸದೆ ಇೞಿವುದು ತುೞಿಲಾಳಾಯ್ತಮಲ್ಲೆಂದು ಮುಟ್ಟೆ ಮೂದಲಿಸಿ (ಗದಾಯು. ೮-೨೫ ವ).

[ P ಇದು 'ತುಳಿಲಾಳ + ಆಯತ' ಎಂದು ಭಿನ್ನಪದವಾಗಿರಬಹುದೆ ? ]

**ತುಟಿಲಾಳ್ತನ** (ನಾ). ಶೌರ್ಯ ; ಪರಾಕ್ರಮಂ : ಪೆಣ್ಣುಡೆಯುಟ್ಟರೆ ಪುತ್ತ ನೇಱ ಕೊಲ್ಲದ ತುಟಿಲಾಳ್ತನಕ್ಕೆ ಸಮನಾವನೊ ಸಾಹಸಭೀಮಭೂಪನೊಳ್ (ಗದಾಯು. ೧-೨೨) ; ಚಾಳುಕ್ಯರಾಜ್ಯಕ್ಕೆ ಕಾರಣಮಾದಳ್ ತುಟಿಲಾಳ್ತನಕ್ಕೆ ನೆಱದಾಳ್ (ಎಇ. XV, ೩೪೦-೯ ; 1071): ತುಟಿಲಾಳ್ತನಕ್ಕವಂ ನೀರಿಟಿವಂತಳವಟಿದು ಸೂಸೆ ಕಣ್ಣೀರ್ತೀರಿಂದಿಟಿದಂ (ಶಂರಾಮೂ. ೪-೬೦).

[ ತುಟಿಲಾಳ್$_2$ + – ತನ ]

**ತುಟಿಲ್ಗೆಯ್, ತುಳಿಲುಗೆಯ್, ತುಳಿಲುಗೆಯಿ, ತುಳಿಲ್ಗೆಯ್, ತುಳಿಲ್ಗೆಯ್** (ಕ್ರಿ). ವಂದಿಸು ; ನಮಸ್ಕರಿಸು : "ತುಟಿಲ್ಗೆಯ್ – ನಮಸ್ಕಾರೇ" (ಶಮುಧಾ) : "ಬಾಗೆಱಗು ಪೊಡೆವಡು ತುಟಿಲ್ಗೆಯ್ಯೆನ್ನಲ್ ಬಿಡದದುವೆ ವಂದನಾರ್ಥದಿ ತೊಡರ್ಗುಂ" (ಕವಿಕಂ. ೧೮೯) ; ತಾಯುಂ ಕಂಡು ತುಟಿಲ್ಗೆಯ್ದು ಪಂಡಿತರಾಗಿ ಬಂದುದಂ ಪೇಟ್ದು (ವಡ್ಡಾರಾ. ೪-೨೨) ; ಜನಕನುಂ ವಿದೇಹಿಯುಂ ದಶರಥಂಗವುಪರಾಜಿತಾಮಹಾದೇವಿಗಂ ತುಟಿಲ್ಗೆಯ್ವುದುಂ (ಶಂರಾಮೂ. ೬-೪೮ವ): ನಂಜುಗೊರಲನ ಗಾಡಿಯುಂ ನೋಡಿ ಬಗೆಯೊಳಚ್ಚರಿವಡುತಂ ಬಂದು ತುಟಿಲ್ಗೆಯ್ದು ಕೈಗಳಂ ಮುಗಿದು (ಶಬ್ದಿಕಾ. ೧೬೮) ; ನಿಜರಾಜಮಂದಿರಮಂ ಪೊಕ್ಕು ತಾಯ್ಗೆ ತುಟಿಲ್ಗೆಯ್ದು ತನ್ನ ಬಟಿಯೊಳ್ಬಂದ ವಿದ್ಯಾಧರರ್ಗೆಲ್ಲಮುಡಲುಂ ತೊಡಲುಂ ಕೊಡಿಸಿ (ಪುಣ್ಯಾಸ್ರ. ೧-೮೮ವ); ಎನ್ನ ಬಿನ್ನಪಂ ಪಾಪೆಯಂ ತುಟಿಲ್ಗೆಯ್ದಂತಿರೆ ಪೊಚ್ಚಱದಾಯ್ತು (ರಾಮಾಶ್ವ. ೩೬-೨೧). **ತುಳಿಲುಗೆಯ್** : ಬಳಿಕ ತುಳಿಲುಗೆಯ್ದಿಂತೆಂದನು (ನೇಮಿಸಂ. ೬-೦೦) ; **ತುಳಿಲುಗೆಯಿ** : ವಸುದೇವ ... ಮುನಿಪಗೆ ತುಳಿಲುಗೆಯಿದೆಯಿ[ಪಾಠಾಂ. ಗೈದೈ]ತಂದು ನಿಜಮಂದಿರದೊಳಿರೆ (ಸಾಳ್ವಭಾ. ೦೯-೫೩). **ತುಳಿಲ್ಗೆಯ್** : ಸಗ್ಗಿಗರೆಱಯಗೆ ತುಳಿಲ್ಗೆಯ್ವ (ತ್ರಿಭುತಿ. ೨೪-೧); ಬಾಗಿಲ್ಗಾಟಿನ ಪಡಿಯರತಿಯರು ಬಾಗಿ ತುಳಿಲ್ಗೆಯ್ವಾಗ ಒಡತಿಯ ಮುಖವನ್ನು ನೋಡುತ್ತಿದ್ದರು (ಸವತಿ. ೨೦೧). **ತುಳಿಲ್ಗೈ** : ಯತಿ ನಿಶ್ಚಳಾನಂದಮುಯನಡಿದಾವರೆಗೆ ತುಳಿಲ್ಗೈದು ಕೃಪೆಯಿಂದೆ ಬಿಜಯಂಗೈವುದೆಂದು ಬಿನ್ನವಿಸೆ (ಸಿದ್ಧೇಶು. ೧೬-೩೦) ; ಕಾಲನಂ ಕಂಡು...ತುಳಿಲ್ಗೈದನು (ರುಕ್ಮಾಂಗ. ೮-೪). [ತುಟಿಲ್$_1$ + ಕೆಯ್$_1$]

**ತುಟಿಲ್ಗೊಳು, ತುಳಿಲ್ಗೊಳ್** (ಕ್ರಿ). ೧. ನಮಸ್ಕರಿಸು ; ವಂದಿಸು : ಕಾಣ್ಕೆಯನಿಕ್ಕು ಚೋಳ ಮಲೆಯಾಳ ತುಟಿಲ್ಗೊಳು (ಉದ್ಭಟ. ೨-೨೧). **ತುಳಿಲ್ಗೊಳ್** : ೨. ನಮಸ್ಕಾರವನ್ನು ಕೈಗೊಳ್ಳು ; ವಂದನೆಯನ್ನು ಸ್ವೀಕರಿಸು : ಪಲಗಣ್ಣಮುಖದಮರ್ದನುಂಬರಿಂ ತುಳಿಲ್ಗೊಂಬ ಗೊಂದೆವಳವಿಗ ಗೊರವನೇ (ಸವಮೋ. ೩೨-೦).

[ ತುಟಿಲ್$_1$ + ಕೊಳು (<ಕೊಳ್$_1$) ]

**ತುಟಿಲ್ವಾಡು** (ನಾ). ಶೌರ್ಯವನ್ನು ಕುರಿತು ಹಾಡುವ ಹಾಡು ; ವೀರಗೀತೆ : ಶ್ರೀರಘುಪ್ರವರನಡಿಯ ತುಟಿಲ್ವಾಡಿನ ಬೀಣೆಯ ಜವಳಿಮದ್ದಳೆಯ ... ಮೇಳದವರ್ (ರಾಮಾಶ್ವ. ೬೮-೧೮).

[ತುಟಿಲ್$_2$ + ಪಾಡು$_2$ ]

**ತುಟಿಲ್ಸಂದ$_1$** 'ತುಟಿಲ್ಸಲ್$_1$' ಪರಾ.

**ತುಟಿಲ್ಸಂದ$_2$** 'ತುಟಿಲ್ಸಲ್$_2$' ಪರಾ.

**ತುಟಿಲ್ಸಲ್$_1$** (ಕ್ರಿ). ಸೇವೆಗೆ ಸೇರು ; ಊಳಿಗದಲ್ಲಿ ಪ್ರವರ್ತಿಸು ; ದಾಸನಾಗು.

**ತುಟಿಲ್ಸಂದ$_1$, ತುಟಿಲಸಂದ$_1$** = ೧. ಸೇವಕ ; ದಾಸ. ೨. ಪಂಚಮವರ್ಗಕ್ಕೆ ಸೇರಿದವನು ; ಅಂತ್ಯಜ. "ತುಟಿಲ್ಸಂದಂ = ವೀರಂ ; ಪಂಚಮಂ" (ಶಮುದ. ಪರಿ. ೦) : "ತುಟಿಲಸಂದಂ ಪಂಚಮಂಗೆ ವೀರಂಗೆ ಪೆಸರ್" (ಸಂಜೀವ. ೧೧). [ತುಟಿಲ್$_1$ + ಸಲ್$_1$]

**ತುಟಿಲ್ಸಲ್$_2$** (ಕ್ರಿ). ಪರಾಕ್ರಮದಿಂದ ಪ್ರಸಿದ್ಧನಾಗು ; ಬಲದಿಂದ ಹೆಸರುವಾಸಿಯಾಗು ; ಶೂರನೆನಿಸು.

**ತುಟಿಲ್ಸಂದ$_2$, ತುಟಿಲಸಂದ$_2$**=ಶೂರ; ಪರಾಕ್ರಮಿ; ಶೂರನಾದ ಯೋಧ : "ತುಟಿಲ್ಸಂದಂ = ವೀರಂ ; ಪಂಚಮಂ" (ಶಮುದ. ಪರಿ. ೧) ; ನೀಮುಮಿಂತಿನಿತೆರ್ದೆಗೆಟ್ಟರಿಂ ತುಟಿಲಸಂದರನಾರುಮನೆಂತು ನಂಬುವರ್ (ಪಂಪಭಾ. ೧೦-೧೧೯); ಕೆಲರ್ ತುಟಿಲಸಂದರಟಿಯೆ ನೊಂದರ್ (ಪಂಪಶಂ. ೨೦೬-೧೯) ; ಕೆಲಬರಂ ಕಡೆವಾಯೊಳವುಂಕಿ ಕೊಂದುದುಳ್ಕಟಿಯದೆ ನಿಂದರಂ ತುಟಿಲಸಂದರನಾ ವನಕೇಳಿವಾರಣಂ (ಚಂದ್ರಪು. ೧೦-೯೬) ; ಪರಧನಮಂ ಕರವೊಪ್ಪುವ ಪರವನಿತಾಜನಮನಳಿಪಿ ಕಳಲುಂ ಕೊಳಲುಂ ದೊರೆಗಾಗದೆಂಬ ಶೌಚದಭರಮುಂ ತಾಳ್ದಿದನೆ ತುಟಿಲಸಂದಂ ಜಗದೊಳ್ (ಬಂಹರಿ. ೧೦-೧೦೦). **ತುಟಿಲ ಸಂದಿಕೆ** = ಯುದ್ಧದಲ್ಲಿ ತೋರುವ ಪರಾಕ್ರಮ, – ಶೌರ್ಯ : ನೇಸಱನೊಳದಂದೆನ್ನುಂ ಸಾಸಿಸುವಂ ಸುರಪಸೂನುವಲ್ಲದೊಡಟಿವಂ ಭಾಸುರ ವಸುವೊಕ್ಕಂತಿದೆ ಲೇಸೆಂದುಟಿದಿರಲೆ ತುಟಿಲಸಂದಿಕೆಯಟಿಗುಂ (ನೇಮಿಪು. ೧೨-೬೩) ; ಕೆಲರ್ ತುಟಿಲಸಂದಿಕೆಯ ಪಸುಗೆಗಳಂ ಮುನ್ನಱಯದೆ ನೆಗಟ್ದು (ಬಂಹರಿ. ೧೧-೮೦ವ). [ ತುಟಿಲ್$_2$ + ಸಲ್$_1$ ]

**ತುಟಿವು** (ನಾ) ತುಳಿತ ; ಪೆಟ್ಟುವಿಕೆ : ಆ ಖಳನ ತುಟಿವು [ಪಾಠಾಂ. ಯು] ಮಂ ಸೋಂಕುಮೆನಾರಪಧರಿಪರ್ (ಆದಿಪು. ೪-೬೬).

[ತುಟಿ$_1$ + – ವು]

**ತುಟಿಸು** 'ತುಟಿಯಿಸು' ನೋ.

**ತುಟಿಹ** (ನಾ). ಹಿಂಡುವುದು ; ರಸ ತೆಗೆಯುವುದಂ ; ಅರೆಯುವುದು : "ಸುತ್ಯಾ, ಅಭಿಷವಃ, ಸವನಂ–ಯಜ್ಞಾರ್ಥವಾಗಿ ಸೋಮವ ತುಟಿಹ" (ನಾಚಿರಾ. ೬). [ತುಟಿ$_1$ + – ಹ$_2$]

△ **ತುಟುವ** 'ತುಳಂ' ನೋ.

**ತುಟ್ಬಿಲ್** (ನಾ). ಒಂದು ಬಗೆಯ ಮರ ; ಚುಜ್ಜಲುಮರ ( ? ) : ತಸ್ಯ ಸೀಮಾನ್ತರಂ ಕೊಳ್ತಿನಿ ತೊಱಪ್ಪಿ ಪೆರಿವ್ಪೆಳಿ ಪಾಣ್ಡಿಕೆರ್ಱ ತುಟ್ಬಿಲುಂ ದೇವಸಾಲೆಯುಂ (ಎಕ. XVI, ಗುಬ್ಬಿ. ೬೫-೫೦ ; 733) : ದಕ್ಷಿಣಸ್ಯನ್ದಿಶಿ ಪಡುವ ನೋಡಿ ಪೋದ ಪೇಱಱಪ್ಪಿಯ ಅನ್ತೆ ತುಟ್ಬಿಲ ಪೇಱಱಪ್ಪಿಯ (ಎಕ. XVI, ತಿಪಟೂ. ೧೪೦-೬೮ ; 900). [ ? ]

**ತುಟ್ಬಿಲ್ಗಾಲ್, ತುಳ್ಬಿಲ್ಕಾಲ್** (ನಾ). ಒಂದು ಸ್ಥಳದ ಹೆಸರು : ತಸ್ಯ ಸೀಮಾನ್ತರಂ ಪೂರ್ವಸ್ಯಾನ್ದಿಶಿ ತುಟ್ಬಿಲ್ಗಾಲೆ ಅನ್ತೆ ಬನ್ದು ಕಳರಾಬಾಯ್ಕಾಲುಳ್ ಕೂಡಿ ... ಅನ್ತೆ ಬನ್ದು ತೊಱಯುಳ್ ಕೂಡಿತ್ತು ... ಅನ್ತೆ ಬನ್ದು ಬೆಟ್ಟದಾ ಮೂಡಾಯ್ ಪೊರೆವ ಬನ್ದು ತುಟ್ಬಿಲ್ಗಾಲೊಳ್ಕೂಡಿತ್ತು (ಮ್ಯಆರಿ. ೦೯೩೬, ೫೩-೨೪ ; 700 ?). **ತುಳ್ಬಿಲ್ಕಾಲ್** : ಅರಸರಾನನುಮತಪ್ಪಡಿಸಿ ಪೊಯ್ದದು ತುಳ್ಬಿಲ್ಕಾಲ್ಕಿಲ್ಲಿಪುಸೂರ್ ಕಿಡಿಯಕ್ಕ (ಮ್ಯಆರಿ. ೦೯೩೫, ೦೦೬-೨೮ ; ?). [ತುಟ್ಬಿಲ್ ? + ಕಾಲ್$_2$]

**ತೂ** (ನಾ). (ಅವಹೇಳನ, ಅಸಹ್ಯಗಳನ್ನು ಸೂಚಿಸುವ) ಒಂದು ಅನುಕರಣ ಶಬ್ದ : ತೂ ನಿನ್ನ ಯೋಗ್ಯತೆಗೆ ಇಷ್ಟು ಬೆಂಕಿ ಹಾಕು (ರೂಢಿ).

**ತೂತೂ** (ದ್ವಿರುಕ್ತಿ) : ಶಿವನ ತನುವಂ ನೋಡಿ ತೂತೂ ಎಂದು ತೂಟಱದ ಯುವತಿಯಂ ಕಂಡು (ಬಸಪು. ೧೩-೨೦). 'ಥೂ' ಪರಾ.

**ತೂಂಕಂಗೊಳ್** (ಕ್ರಿ). ತೂಗಿಬೀಳು; ಮೂರ್ಛೆಹೋಗು : ವಿಷವಿಷಮ ಕನತ್ಕಿಂಜಲ್ಕಮನುತ್ಪಲವೊಂದಂ ಜನಪತಿ ಕಂಪುಗೊಂಡು ತೂಂಕಂಗೊಂಡಂ (ಶಾಂತಿಪು. ೬-೯೨). [< ತೂಂಕು$_2$ + ಕೊಳ್$_1$]

**ತೂಂಕಡ** 'ತೂಂಕಡು' ನೋ.

**ತೂಂಕಡಂಗಾಣ್** (ಕ್ರಿ). ತೂಕಡಿಸು ; ಜೂಗರಿಸು : ಹಂಸೆಗಳೆರಡುಮಯೊಂದಾಗಲೀಯಳ್ ನವಿಲ್ವಾಣತಿಯಂ ಕಣ್ಮುಚ್ಚಲೀಯಳ್ ಗಟಪುವ ಗಿಳಿಯಂ ತೂಂಕಡಂಗಾ [ಪಾಠಾಂ. ಕಾ]ಣ ಲೀಯಳ್ (ಅರ್ಧನೇ. ೩-೦೦೬).

[< ತೂಂಕಡು + ಕಾಣ್]

**ತೂಂಕಡಿಕೆ,** ತೂಕಡಿಕೆ, ತೂಗಡಿಕೆ (ನಾ). = ತೂಂಕಡು ೧ : ಜೃಂಭ ಮತಿ ಜಡಶ್ವಾಸಂ ದೃಮಿನಾಳನಂ ತೂಂಕಡಿಕೆಯುವನುಭಾವಂಗಳ್ (ಚಕರ. ೪-೧೨೦). **ತೂಕಡಿಕೆ :** ಬರಬರ ಭಕ್ತಿಯರೆಯಾಯಿತ್ತು ಕಾಣೆರಣ್ಣಾ ಮೊದಲ ದಿನ ಹಣೆ ಮುಟ್ಟಿ ಮಱುದಿನ ಕೈಯ ಮುಟ್ಟಿ ಮೂಱಿಂಬ ದಿನಕ್ಕೆ ತೂ[ಪಾಠಾಂ. ಮಾ]ಕಡಿಕೆ ಕಾಣೆರಣ್ಣಾ (ಬಸವ. ೨೨೦) ; ಸೆಜ್ಜೆವನೆಯೊಳಗೆ ಮೃದುವೆನಿಪ ತಳ್ಪದ ಮೇಲೆ ಸಜ್ಜನಂ ನೆಲಸಿ ತೂಕಡಿಕೆ ಮನವಂ ಜೋರೆ (ಬಸರ. ೯-೧೩೦) ; ಕಣ್ಣೆವೆಗಳಲಿ ನಸು ತೂಕಡಿಕೆ ತೋಱಿದೊಡೆ ವೈಗೆದಱುವನು (ಕುವ್ಯಾಅ. ೯-೮); ತುಳುಕ್ಕಾಡತಾವ ತೂಕಡಿಕೆ (ಗಂಗಾತ. ೭೦-೩) ; ತನಗೆ ತೂಕಡಿಕೆ ಬಂದಾಗ ಅಲ್ಲಿ ಕೊಂಚ ಹೊತ್ತು ಕುಳಿತುಕೊಂಡ (ಪಠಾಕೆ. ೧೨೦). **ತೂಗಡಿಕೆ :** "ಜೃಂಭಣಂ-ತೂಗಡಿಕೆ" (ಕಾಶಕೃ. ೭೭) ; ಸುಂದರಿಯರೇ ನಿಮಗೆ ತೂಗಡಿಕೆಯೇ (ಮಲಿನಾ. ೭೦).

[ತೂಂಕಡು + – ಇಕೆ]

**ತೂಂಕಡಿಕೆಗಣ್** (ನಾ). ತೂಕಡಿಸುವ ಕಣ್ಣು ; ನಿದ್ದೆಗಣ್ಣು : ಕಳ್ಳನೆಂದು ತೂಂಕಡಿಕೆಗಣ್ಣಿಂದಾಕೆಯ ಮುಂದಲೆಯನಡಸಿ ಒಡಿದು (ಧರ್ಮಾಮೃ. ೨-೪೭).

[ತೂಂಕಡಿಕೆ + ಕಣ್]

**ತೂಂಕಡಿಸು,** ತೂಕಡಿಸು (ಕ್ರಿ). ೧. ನಿದ್ರೆಯ ಭಾರದಿಂದ ತಲೆಯನ್ನು ತೂಗಾಡಿಸು ; ನಿದ್ರೆಯಿಂದ ಜೋಲು ; ಜೂಗರಿಸು : ತೂಂಕಡಿಸಿಯು ಮಲಸಿಯುಮಿಾಗಳು ಜಡತ್ವಮಾಯ್ತೆಂದು ಮನಮನಜಾಗಬಲೆಯರ(೦) (ಮದತಿ. ೧೦-೫೭) ; ಬಡವಪ್ಪೊಡೆ ... ತೂಂಕಡಿಪೊಡೆ ಪಶುಗಳ್ಗೆಲ್ಲಂ ಕೊಡುವುದು ಬೇವಿನ ಕಷಾಯಮಂ (ಲೋಕೋಪ. ೯-೨೦೭) ; ತೂಂಕಡಿಪ್ಪವರ ನೊಪ್ಪುವ ಪಾಸಿನ ಮೇಲೆ ನೂಂಕಿದಂತಾದುದು (ಪಾರ್ಶ್ವಪು. ೩-೧೦೩) ; ತನು ಬಡವಪ್ಪ ತೂಂಕಡಿಸುವಾಗುಳಿ ಪುಟ್ಟ ... ಪೊಂಗಿ ಬಸಿಱ್ ಬಿಗಿದನ್ನಗರ್ಭಿಣೀಜನದ ವಿಕಾರಮಾ ಸತಿಯೊಳಾಗವೆ (ಪುಷ್ಪಪು. ೯-೧೧೭) : ನಿದ್ದೆಯ ಬಿಣ್ಪಿಂ ತೂಂಕಡಿಪ ನಿನತೊಂದು ಗುಣಂ ಹೀನಂ (ರಾಮಾಶ್ವ. ೯೩-೧೧). ೨. ನಿದ್ರೆಮಾಡು : ಲೋಕಪಾಲನಿರುಳ್ ತೂಂಕಡಿಸುವಾಗಳ್ (ಶಾಪುಂಪು. ೮೫-೬) ; ತೂಂಕಡಿಪ ವನ್ಯಮೃಗಂಗಳ ಮಗ್ಗುಲೊಳ್ ತೆಱಂದಿರಿದು ಹಿಮಾಂಶುರಶ್ಮಿಗಳನುಜ್ಜ್ವಳಿಸಿದುಟಜಾಂಗಣಗಳೊಳ್ ಪರೆದೆಸಗಿತ್ತತಿಪ್ರಮುದಕಾರಣನಂದು ನಿಶಾಸಮೀರಣಂ (ಕಾದಂಪೂ ೨೮೩) ; ಚೇರಮನಲ್ಲಿ ತೂಂಕಡಿಸೆ ಕನಸಿನೊಳಗೆಲ್ಲವಂ ಪುರಹರನೊಡಂಬಡಿಸೆ (ನಂಬಿರ. ೧೭-೧೧) ; ಆತನೊಂದು ಲತಾಭವನದೊಳ್ ಮಱಿದು ತೂಂಕಡಿಸೆ (ಪುಣ್ಯಾಸ್ರ. ೦-೯೦೨). ೩. (ಅಲಂ) ಕಾರ್ಯಗತವಾಗದಿರು ; ಆಚರಣೆಗೆ ಬಾರದಿರು : ನಿಯಮ ನಿಬಂಧನೆಗಳ ಕಟ್ಟುಪಾಡು ನಿಶ್ಚಯವಾಗಿ ತೂಂಕಡಿಸುತ್ತಿರುವುವು (ಚಿಟ್ಕ್ರಿಅ. ೩೪-೧೭). **ತೂಕಡಿಸು :** ೧. ಕೋಕನದಷಂಡತಟದೊಳ್ ತೂಕಡಿಸುವ ಹಂಸನಂತಿರೆ (ದಶಕು. ೦೪-೧೩) ; ಕೃತವರ್ಮನೊರೆದಾಗುಳಿಸಿ ತೂಕಡಿಸಿದನು ತೆಗೆದುದು ನಿದ್ರೆ ತನುಮನವ (ಕುವ್ಯಾಗ. ೯-೩): ಭಂಗಿಯ ತಿಂದಂತೆ ತೂಕಡಿಸುತ ಮತ್ತೆ ಕಂಗಳ ಮುಚ್ಚಿ ತೆಱೆವುತ ಬಿಂಗಿಯಂತಾಡುವ ಕಂಥೆಯ ಜೋಗಿಣಿಯಂಗದಾಟವೆ ನಮ್ಮ ನೃತ್ಯ (ಭರತ. ೦೪-೩೨); ಕಿರಣಸಿಂಗ ತೂಕಡಿಸುತ್ತಿದ್ದ (ದೇವಸಾ. ೫೦): ತೂಕಡಿಸುತ್ತಿದ್ದವನಿಗೆ ಹಾಸಿಗೆ ಹಾಸಿ ಕೊಟ್ಟಂತೆ (ಗಾದೆ). ೪. (ಅಲಂ) (ಹೂವನ್ನು) ಬಾಡಿಸು ; ಮುಚ್ಚಿಕೊಳ್ಳುವಂತೆ ಮಾಡು : ನಗಿಸಿಯೆ ಕುಮುದಿನಿಯ ತೂಕಡಿಸಿ ಕಮಲಿನಿಯ ... ಸಂಧ್ಯಾಮಡದಿಯೊಪ್ಪಿದಳು (ಜೀವಂಕ. ೪-೦೭). [ತೂಂಕಡು + – ಇಸು$_3$]

**ತೂಂಕಡು,** ತೂಂಕಡ, ತೂಕಡು (ನಾ). ೧. ನಿದ್ರೆಯ ಜೊಂಪು ; ತೂಕಡಿಕೆ; ಮಂಪರು : ತುಂಗಭದ್ರನೆಂಬ ಪೊಡಂಗಾಱ ಸೊಕ್ಕಿ ತೂಂಕಡಿಂದಿರುಳ್ ಕಟ್ದಿಂಗಳ್ ಕಡುಗತ್ತಲೆಯೊಳ್ ಬಂದು (ವಡ್ಡಾರಾ. ೧೯೭-೨೨). ೨. ನಿದ್ರೆ : ಆ ತೂಂಕಡಿನೊಳ್ ಪರವಶತೆ ಬೆರಸಿತರಸನೊಳಾಗಳ್ (ಲೀಲಾವ. ೩-೫೩): ಪದೆದಿರ್ದ ವನವಿಹಂಗಂಗಳಂ ಕೊಂಬುವೆರಸಿ ತೂಗಿ ತೂಂಕಡನೊಡರ್ಚಿಯುಂ (ಚಂದ್ರಪು. ೮-೪೭) ; ಪತತ್ರಿಗಳೊರ್ವಾ ತೂಂಕಡಂ ನೂಂಕುತುಂ ತಣ್ಣನೆ ತೀಡಿತ್ತೆನಸುಂ ಪ್ರಭಾತಸಮಯ ಪ್ರೋದ್ಭೂತಶೀತಾನಿಲಂ (ಕುಸುಮಾ. ೧-೫೨). **ತೂಂಕಡ :** ೨. ತೂಂಕಡದ ಮೆಯ್ಮಲಸಿನಿಂದೇಳಲೊಲ್ಲದೆ (ಮಂತ್ರಕ. ೦೨೯-೪). **ತೂಕಡು :** ೨. ಪುರ್ಬಿನ ಕುಡಿವೆರಸು ತೂಕಡನೊಳಕೊಂಡ ಜಾಡ್ಯಮುಂ ಸೊಕ್ಕು ಮುಕ್ಕುಳಿಸಿದಂತಿರ್ದಿರವುಂ ... ದೊರೆಕೊಳ್ಳುಮೆಂದು ಭಾವಿಸಿ (ಕಾದಂಪೂ. ೭೫೯).

[ದೇ. ॥ ತಮಿ. ತೂಙ್ಕಲ್ ; ಮಲ. ತೂಙ್ಙಲ್ ; ತುಳು. ತೂಗಡಿ]

**ತೂಂಕಡುಗೆಡು** (ಕ್ರಿ). ನಿದ್ರೆ ತಿಳಿ ; ಎಚ್ಚರವಾಗು : ಅಗಳಾತನುಂ ನೇಸರ್ಮೂಡುವಾಗಳ್ ತೂಂಕಡುಗೆಟ್ಟು ದೆಸೆಗಳಂ ನೋಟ್ಟಂ (ವಡ್ಡಾರಾ. ೫೪-೦೯). [ತೂಂಕಡು + ಕೆಡು$_1$]

**ತೂಂಕಿಡು** (ಕ್ರಿ). ಇಡಿ ; ತುಂಬು ; ತುರುಕು (?) : ಧರೆಗಂ ವ್ಯೋಮಕ್ಕಂ ಮೆಂಟುಂ ದೆಸೆಗಮಾಡಸಿ ತೂಂಕಿಟ್ಟವೊಲ್ ಭೂತಸೈನ್ಯಂ ಬರೆ (ಜಗಪಿ. ೦೪-೦೯). [P ಇದು 'ತೂಂಕಿಡು' ಎಂಬುದರ ಅಪಲಿಖಿತವಿರಬಹುದು]

**ತೂಂಕು$_1$,** ಜೂಗು, ತೂಕು$_1$, ತೂಗು$_1$ (ಕ್ರಿ). ತೂಂಪ, ತೂಂಬ, ತೂಪ (ಭವಿಕೃ). ೧. ತಕ್ಕಡಿ ಮೊದಲಾದ ಸಾಧನಗಳಿಂದ ಭಾರವನ್ನು ಕಂಡುಹಿಡಿ, -ತೂಕಮಾಡು, -ತೋಲನಮಾಡು: ತೂಂಕಿ ನೋಡಿದರ್ ದಿಟ್ಟದೊಲೆಯೊಳೊರ್ವರನೊರ್ವರ್ (ಜಗಪಿ. ೯-೭೦); ನಿತ್ಯಬಿಂದುಗೆ-ಬೆಡಂಗು, ಕಡಂಗು ... ಕೂಂಕಿದಂ, ತೂಂಕಿದಂ (ಶಮದ. ೩೬ ಪ್ರಯೋ). ೨. ತೂಗಾಡಿಸಂ ; ಅಲ್ಲಾಡಿಸಂ ; ಅಲುಗಾಡುವಂತೆ ಮಾಡು : ತಮ್ಮ ಗದೆಗಳ ನಾಗಳ್ ಕಿಱಿಕಿಱಿದೆ ತಿರುಪಿ ಮೊಣಿದೆ ಕಿಱಿಕಿಱಿದನೆ ತೂಂಕಿ ತೂಂಕಿ ನೂಂಕಿದರೆನಸುಂ (ಗದಾಯು. ೮-೭): ಅವಷ್ಟಂಭದಿಂ ತೂಗಿದ ಬಾಳ್ಪಾಳ್ತತ್ತು ಬಾಳ್ವೆಗ್ಗಡದ ಬಿರುದರಂ ತೂಗಿ ತುತ್ತಿಟ್ಟುದೇಂ ತಾಳ್ದಿದನೋ ವಿಕ್ರಾನ್ತಮಂ ಯಾದವಕುಳತಿಳಕಂ ವೀರಬಲ್ಲಾಳದೇವಂ (ಎಕ. IV, ಕರಿಳೆ. ೪೫-೪೦; 1196). ೩.ನೇತಾಡು; ಜೋಲು; ಇಳಿಬೀಳು : ಫಲದ ಬಿಣ್ಪಿಂ ತೂಂಬವೊಲ್ ಜೋಲ್ದಿಳಾಂತರಮಂ ತಳ್ತು ವಿರಾಜಿಸಿತ್ತಭಿನ ತೋದ್ಯನ್ಮಾತುಳುಂಗವ್ರಜಂ (ಕುಸುಮಾ. ೯-೩೦) : ತೂಂ [ಪಾಠಾಂ. ತೂ] ಪೆಳಗಾಯ್ಗಳೆಂಬ ಕುಂಡಲಮುಮಾರ್ದಾಡೆ ನಂದನಮೆ ನಂದನಮಾದುದು ಚೈತ್ರರಾಜನಾ (ವೃಷಪಿ. ೪-೫೭). **ಜೂಗು :** ೪. ತೂನೆ ; ಒಲೆ ; ತೂಗಾಡು : ಬಳಲುತ್ತ ಕೊಳಲುತ್ತಿರ್ಪ ಭವರೋಗದಲ್ಲಿ ಜೂಗುತ್ತಿರ್ಪ ಬಂಧನದ ಈ ದುಂದುಗವಿನ್ನೆಂದಿಗೆ ಪೋಪುದು (ವಚನ. 11, ೦೫೩). **ತೂಕು$_1$:** ೪. ಬೀಳುವಂಬಿನ ಹೊಯ್ಲು ಬಿದ್ದದ ತೂಳುವಾನೆಯ ತೂಕಿ ಕಾಗುವ ಶೂಲಿಗೆಯ ... ಧಾಳಾಧೂಳಿ ಮಸಗಿತು (ಕುವ್ಯಾಕ. ೧೧-೯). ೫. ತೂಕವನ್ನು ತೋರು : ಏನದಕೆ ಸುರಪತಿಯ ದಂತಿ ಸಮಾನವೆಂಬರದಷ್ಟದಿಕ್ಕುಗಳಾನೆಗಳ ಪಡಿಕಟ್ಟು ತೂಗಲು ತೂಕುವವು [ಪಾಠಾಂ. ತೂಕಕವು] ಕಿಱಿದು (ತೊರರಾ. ೬-೩೨-೦೪). ೬. ಸಮಾನವಾಗೆನಿಸು : ಮಂದರಾಚಲದಿಂದ ತೂಕಿಯೆ ವರಪಿನಾಕವ ಕೊಟ್ಟನಾ ಶಿವನು (ಸಂಭವ. ೨೪-೧೭). **ತೂಗು$_1$ :** ೧. ಧರೆಯಱಿಯಲೊಡಂ ತೂಗಲ್ ಧರೆಗೆ ತುಲಾದಂಡಮಲ್ತೆ ಮದ್ಭುಜದಂಡಂ (ಆದಿಪು. ೧೪-೮೧): ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ (ಬಸವ. ೪೪೦) ; ದೇವದ್ರುಮವಂ ಲಕ್ಷ್ಮಾದೇವಿಯುಮಂ ಕಮಳಸಂಭವಂ ತೂಗಿದೊಡಾ ದೇವದ್ರುಮಕ್ಕೆ ಲಕ್ಷ್ಮಾದೇವಿ ದಶಾಫಲದ ಬಿಣ್ಪಿನಿಂ ಘನವಾದಳು (ಸೌಇಇ. IX-1, ೨೬೩-೫೭; 1179) ; ಓರಂತೆ ಮರಕಾಲರು ಹಡಗಿನ ವ್ಯವಹಾರದಿ ಗಳಿಸಿದ ಹಣವ ಭಾರಸಂಖ್ಯೆಯಲಿ ತೂಗುವರು (ಮೋಹತ. ೩-೨೯) ; ವರುಣಗಿರಿ ಪೂರ್ವಾದ್ರಿಗಳ ಹೆಚ್ಚು ಕುಂದುಮಂ ಸರಸಿಜಭವಂ ನೋಳ್ಪೆನೆಂದು ತೂಗಲ್ (ಜಬಪು. ೯-೦೭) ; ಶಶಿ ರವಿ ತ್ರಾಸಲೀ ಪುರವ ಸಗ್ಗವನೊಲ್ದು ಬಿಸರುಹಾಸನ ತೂಗುತಿರಲು

(ಕಂಸವಿ. ೫-೪). ೨. ಮೆಯ್ಯಂ ತೂಗುತ್ತುಂ ಉನ್ಮತ್ತ ಚೇಷ್ಟೆಯಿಂದೆರೆಯಂತಿಂದ ಮಿಡಿನಂತೆ ಪೊಳೆಯುತ್ತುಂ (ಧರ್ಮಾಮೃ. ೫-೦೫೮); ನಿವ್ಮ ಸೈನ್ಯವ ಸಂಹರಿಸಿದಿರಿ ಸಾಕೆಂದು ಸಂಜಯ ತೂಗಿದನು ಶಿರವ (ಕುಮ್ಮಾ.ಶ. ೧-೦೫). ೪. "ತೊನೆ, ಒಲೆ, ತೂಗು, ಸೆಡವು, ಅಲ್ಲಾಡು, ನಡುಕಂ– ಈ ೬ ಕಂಪನಂ" (ಶಶಿಸಾ. ೩೧-೬೫೦): ತೂಗಿ ಪಣ್ಣಲೆಯಿಂ ಬಳ್ಕುವ ಕೌಂಗು (ಆದಿಪು. ೧-೬೭); ತನು ಪುಳಕಾಳಿಭಾರದೊಳೆ ತಾಂ ತೂಗುತ್ತಿರಲ್ (ಕುಸುಮಾ. ೬-೮೪); ಕಿಂದು ತೇಗಿ ತೂಗಿ ಕೆಲೆಕೆಲೆದು . . . ನಲಿದಾಡುವ ಭಲ್ಲೂಕ ನಿಕಾಯದಿಂ (ಗಿರಿಜಾ. ೦-೦೫೮ ವ): ನಸುಗೆಂಪಿನಿಂ ಬೀಗಿ ಬಾಗಿ ತೂಗುವ ... ತೆನೆಗಳಂ ತಿಱಾತಿಱಾದು ತಂದು ತಂದು (ಸಿದ್ಧರಾ. ೫-೫೯); ಬಾಗಿಗಳು ಬಲವೆರಡಱೊಳಗೊಯ್ಯಾರದಲಿ ತೂಗಿದವು (ಕುಮ್ಮಾ.ದ್ರೋ. ೧-೫೦): ಎಡಗೆಯ್ಯ ಮುಷ್ಟಿಯಂ ತಾಣದೊಳಗೆ ಕೆಯ್ಯಡಗಿ ತೂಗುವ ಪಾದದ್ವಯದಿ ಪೊಡವಿ ತಲ್ಲಣಿಪಂತೆ ಖಳರಾಯ ಗರ್ಜಿಸಿ ವ್ಯಾಡತವಧ್ವಂಸಿಯ ತಿವಿದ (ಮೋಹತ. ೦೫-೮೭): ನೆಳಲ ಚಪ್ಪರದಲ್ಲಿ ಹಣ್ಣುಗಳೂ ಅಡಕೆಯ ಗೊಂಚಲುಗಳೂ ತೂಗುತ್ತಿದ್ದುವು (ಕಾಂತಿ. ೦೩ ಕಥಾಸಾರ). ೬. ನೇತು ಹಾಕು; ಇಳಿಬಿಡಂ: ಭಾಳಾಕ್ಷನ ರೂಹು ನಿನಗೇಕೆನುತ ನಾರಿಕೇಳಫಲವ ಕಟ್ಟಿ ತೂಗಿ . . . ಹೋಳ ಮಾಡಿದರು ಜೂದಿನಲಿ (ಮೋಹತ. ೧೦-೫೫). ೮. ತೊಟ್ಟಿಲು, ಉಯ್ಯಾಲೆ ಮೊದಲಾದಂವುಗಳನ್ನು ಆ ಕಡೆಯಿಂದ ಈ ಕಡೆಗೆ ಚಲಿಸಂವಂತೆ ಮಾಡಂ; ಜೀಕು: ಇದು ಲೀಲಾಂದೋಳ ವಿಂದೋಳದ ದನಿ ನೆಱೆಗೊಳ್ವನ್ನಗಂ ಪಾಡಲೆಂದೇಱಿದಳಂ ತೂಗುತ್ತ ಮಿರ್ದನ್ನಯ ಪರಿಜು (ಆದಿಪು. ೪-೯); ಉನ್ಮದದಂತಿದಂತಯುಗದೊಳ್ತಂ ನರ್ತ್ತಿಯಿಂ ಕಟ್ಟಿದುಯ್ಯಲನಾನಂದದೊಳೇಱಿ ದಿಗ್ವನಿತೆಯತ್ತೂಗಲ್ಕೆ (ಎಕ. VIII. ಸಾಗರ. ೦೦೯-೪೦; 1042); ಪಾಡುತೆ ತೂಗಿದರಖಿಳಪ್ರಪಂಚ ವಾಡಿವ ಶಿಶುವಂ (ಗಿರಿಜಾ. ೩-೬೭); ಮಣಿಲೀಯ ಸುತವಾಲೆಯುರಿಗೆ ಪುಟ್ಟಿದ ಕಂದನ ತೂಪಲ್ಲಿ (ಜೀರಮ. ೮-೩೦); ತೂಗಿರೆ ರಂಗನ ತೂಗಿರೆ ಕೃಷ್ಣನ ತೂಗಿರೆ ಅಚ್ಯುತಾನಂತನ (ಪುರಂದ. ೩-೦೩೭ ಪಲ್ಲವಿ). ೯. ಉಯ್ಯಲಾಡು; ಜೀಕಿಕೊಳ್ಳು: ಬಾಗಿಲ ಮುಂದಣ ನವಿಲುಯ್ಯಲನೇಱಿ ತೂಗುತಿರ್ಪಳ ವೆಣ್ಣುಗಳ ಸೋಗೆಗಣ್ಣಱಿವಿಮಾನು ಸುಳಿದಾಡುವ ಜನಸಾಗರದೊಳಗೊಪ್ಪು ತಿಹುವು (ಕಂಸವಿ. ೬-೯). ೧೦. ಜಗ್ಗು; ಸೆಳೆ: ತೂಗಿ ಕಿವಿವರೆಗುಗಿದು ಯಂತ್ರವ ತಾಗಿಸಿದನಂಬಿನಲಿ (ಕುಮ್ಮಾ.ಆ. ೧೫-೩೯); ಪಾರ್ಥ ಸಾಕಿನ್ನೇಳು ಬಾಣವ ತೂಗು ಮಾತಾಡಿಸು ಮಹಾಧನುವ (ಕುಮ್ಮಾ.ಛೀ. ೩-೨೪). ೧೧. ಎಸೆ; ಬೀಸಂ; ಹೊಡೆ: ತರಳಾಪಾಂಗಂಗಳೊಳ್ ಮಚ್ಚರಿಪಲರ್ಗಣೆಯಂ ಕಟ್ಟಿ ತೂಪಂದದಿಂ ಚಾಮರಮಂ ವಕ್ಷೋಜಪೀಠಸ್ಥಿತ ಮದನನ್ನಪಂಗೆತ್ತುವಂತೆ (ಲೀಲಾವ ೬-೦೪). ೧೨. ಹೋಲಿಸಂ; ತಾಳೆನೋಡು: ಪಾವಿನ ನಂಜುಮುನವರುಮನೋವಿನಿಸಂ ತೂಗಿ ನೋಡೆ (ಧರ್ಮಾಮೃ. ೩-೦೦೬); ನಿಮ್ಮಾರುಭಟೆಯನು ನವ್ಮ ಬಾಹುವಿಕಾರ ಬಲವನು ತೂಗಿ ಯೆನುತೆಚ್ಚನು ಧನಂಜಯನ (ಕುಮ್ಮಾ.ಶ. ೨೦-೫೭); ಭೂಗಗನಪಾತಾಳ ದರಮನೆಗಳದಱೊಡನೆ ತೂಗೆ ಸರಿಬಾರವು (ಚಿಬಪು. ೫-೫೨); ರಾಘವಾನು ಜಂಗೆ ಕೆಲಬಲನ ವನಂಗಳಂ ತೋಱೆ ಅಂದಿನ ದಂಡಕೆಗೊರೆಯಾಗದೆಂದು ತೂಗಿ ಬಣ್ಣಿಪರ್ (ರಾಮಾಶ್ವ. ೩೩-೦೫). ೧೩. ಪರೀಕ್ಷಿಸಂ; ವಿವಂರ್ಶಿಸಂ; ಯೋಗ್ಯತೆಯನ್ನು ನಿಷ್ಕರ್ಷಿಸಂ: ಕರದಿಂ ಸರಲಂ ಕಣ್ಣಿಂದ ರಾಶಿಯಂ ತೂಗಿದೂಗಿ (ಶಾಂತಿಪು. ೪-೫): ದಂಡುವೇಟ್ಟರಸಿನಂತೆ ತೂಗಿ ಬಿಡುವ ನಾಯಕನಂತೆ ಕಲಹಂ ಮಾಣ್ಬ ಕೊಂಡೆಯನಂತೆ ಲೇಸಲ್ಲದ ಸುಖಕ್ಕೆ ಪಾಯಿಸಿ ನೋಯಿಸುವಿಂದ್ರಿಯಂಗಳುಮಂ (ಧರ್ಮಾಮೃ. ೯-೨೩); ದೂರಕೆ ದಿಟ್ಟಿಯ ಪಸರಿಸಿ ಕೊರಲೆತ್ತಿ ದಾರಿದಾರಿಯ ತೂಗಿ ನೋಳ್ಪ (ಭರತ. ೩-೩೭): ತೂಗಬೇಕು ಮನದೊಳಗೆ ತೂಕವುಳ್ಳವರ ಮಾತು ಹಿಡಿದು (ಸಂಮು. ೪೯-೯): ಗದ್ಯವನ್ನೋ ಪದ್ಯವನ್ನೋ ಓದಿ, ಆನಂದಿಸಿ ಅದರ ಬೆಲೆಯನ್ನು ತೂಗಿದ ಮೇಲೆ ಅದರಲ್ಲಿರುವ ಉದಾತ್ತ ಧ್ಯೇಯಗಳನ್ನೂ ಕೌಶಲ್ಯವನ್ನೂ ಅನುಭವಿಸುವ ಶಕ್ತಿಯುಂಟುಮಾಡುವುದು (ಶಿಕ್ಷದ. ೨೩೯). ೧೪. ಸಾಧ್ಯವಾಗು: ಕಾಳೆಗಂ ತೂಗದಿವರೊಡನೆವ್ಮ ವರ್ಗನುತ ನೋಟಕರ್ ನುಡಿವುತಿರೆ (ಚಬಪು. ೪೨-೦೬). ೧೫. ನಿಲುಕಂ; ಮುಟ್ಟು; ಹಿಡಿತಕ್ಕೆ ಬರಂ: ನವ್ಮ ಸಾಮಾನ್ಯ ವ್ಯವಹಾರದಲ್ಲಿಯೇ ಎಷ್ಟೋ ಮಾತು ತಲೆಗೆ ತೂಗದೆ ಹೋಗುವಾಗ, ಶಾಂತಿಯ ನೆಲೆಯು...ಅಳತೆಗೆ ಸಿಕ್ಕದಿರುವುದು ಆಶ್ಚರ್ಯವಲ್ಲ (ಸಾಹಿವಿ. ೦೫೭). ೧೬. ಸಾಟಿಯಾಗು; ಸವಾನವಾಗಂ: ರಮಾದಿ ಸಮಸ್ತ ಪ್ರಪಂಚದ ಸುಖವು ಒಟ್ಟುಗೂಡಿದರೂ ಪರಮಾತ್ಮನ ಸುಖಾನಂದದ ಒಂದಂಶಕ್ಕೂ ತೂಗಲಾರದು (ಜಗದಾ. ೨೦೪). ೧೭. ತೇಲಿಸು: ಸಾಗರದ ತೆರೆಗಳಲಿ ಗಿರಿಗಳ ತೂಗಿ ಸೇನೆಯ ನಡೆಸಿ (ಕುಮ್ಮಾ.ಆ. ೨೨-೫೨).

ತೂಗ ಕಟ್ಟು=ನೇತುಹಾಕು: (ಕ). ತೂಗಿಕೊಳ್ =ನೆಗೆ; ಹಾರು; ಬೀಳಂ: ತಾಗುವ ತಗರು ಬರಲೋಡಿ ಬಾವಿಯ ತೂಗು [ಗಿ] ಕೊಂಡಂತೆ (ಸರ್ವಜ್ಞ. ೦೦೦೦). ತೂಗಿ ತೊನೆ=ತೂಗಾಡಂ; ಒಲೆ: ಅಂತಾಕೆಗಳ್ ತೂಗಿ ತೊನೆವ ತೊನೆಪಂಗಳುಮುಂ ... ನೋಡಿ (ಪಂಪಭಾ. ೪-೧೦೫). ತೂಗಿ ನೋಡು=೧. ತೂಕವಮಾಡಿ ನೋಡು; ಭಾರ ಕಂಡಂಹಿಡಿ: ಹರಿಯ ಭಕ್ತರ ಕೆರಹನೊಂದೆಸೆಗಿರಿಸಿವೊಂದೆಸೆಯಲಿ ಮಹೀಸುರವರರ ನೇಱಿಸಿ ತೊಲೆಯನೆಲ್ಲರು ತೂಗಿ ನೋಡಲ್ಕೆ (ಬಸಪು. ೫೫-೫೭). ೨. ವಿವಂರ್ಶಿಸು; ಪರೀಕ್ಷಿಸಂ: ಗೋವಿಂದನ ಮತದಲಿ ತೂಗಿ ನೋಡುವೆನಿದಱ ತೂಕವನೆಂದನಾ ಭೂಪ (ಕುಮ್ಮಾ.ಸ. ೨-೫). ತೂಗಿಬಿಡು=ಸೆಳೆದು ಬಿಡು; ಜಗ್ಗಿಬಿಡು: ಹೂಡಿ ಮಂಡಿಯ ಕಿವಿವರೆಗೆ ಕರಾಂಗುಲಿಗೂಡಿ ಬಾಣವ ತೂಗಿಬಿಡುತ ಕೂಡೆ ವೈರಿಗಳ ಕೆಡಹಿ ಪತಿರುಣವ ನೀಗಾಡಿದರು (ಕಂಸವಿ. ೦೯-೬೫). ತೂಗುಹಾಕು, ತೂಗಹಾಕು, ತೂಗಂಹಾಕು = ನೇತುಹಾಕಂ; ಇಳಿಬಿಡು: ಮನೆಯ ಗೋಡೆಯ ಮೇಲೆ ದೇವರ ಪಟಗಳನ್ನು ತೂಗುಹಾಕಿದ್ದಾರೆ (ರೂಢಿ); ತೂಗಾಸರೆಯಿಂದ, ಜೋಲಿಯಲ್ಲಿ,–ತೂಗಹಾಕು: ಜೋಲಹಾಕು (Sling. ೩೦ಕನಿ): ತನಿಗಂಪು ಹೂವುಗಳ ಪೊರೆಯೊತ್ತಿ ತಂಗರಗಕನುವಾಗಿ ತುಂಬಿ ತೂಗಂಹಾಕಿ ಬಿಜ್ಜಣಿಗೆಯನಿಲನಿಂ ಬೀಸಿ ಮಾಡಿದುದು ಹಂಸೋದಕಂ (ಸೂಪಶಾ. ೨-೪೦).

[ದೇ.॥ ತಮಿ. ತೂಙ್ಕು, ತೂಕ್ಕು; ಮಲ. ತೂಕ್ಕು, ತೂಙ್ಙು; ಕೊಡ. ತುಂಗ್; ತುಳು. ತೂಂಕು, ತೂಂಗು, ತೊಕು, ತೂಗು; ತೆಲು. ತೂಂಗು, ತೂಗು; ಕುವಿ. ತೊಂಗಲಿ, ತೂಬಲಿ]

ತೂಂಕು$_2$, ತೂಕು$_2$, ತೂಗು$_2$ (ನಾ). ೧. ತೂಗಾಡಂವಿಕೆ; ಒಲೆದಾಟ; ತೊನೆತ. 'ತೂಂಕಂಗೊಳ್' ಪರಾ. ತೂಕು$_2$: ೨. ತೂಕ; ಭಾರ: ನಗದ ತೂಕೇರಬೇಕೆಂದು ... ಪೊಟ್ಟತನದಿಂದ ತುಂಬಿದ್ದಾದರೆ ಆವಾಗಲೆ ತಿಳಿದು ಬರುವುದು (ಮುಂಬಪ್ಪಾ. ೪೨). ತೂಗು$_2$: ೧. ಶಿರದ ತೂಗಿನ ತಳ್ವವಾಱಿಸಲಳಲಿದಳು ಕಾಂತೆ (ತೊರರಾ. ೨-೩-೪೦). (ಗು). ೩. ತೂಗಾಡುವ; ಒಲೆದಾಡುವ. 'ತೂಗುಗುಂಡು' ಪರಾ.

[ <ತೂಂಕು$_1$./ತುಳು. ತೂಂಕು, ತೂಕು; ತೆಲು. ತೂಕು ]

ತೂಂತಿದ್ದು, ತೂತಿದು (ಕ್ರಿ). ೧. ತಂಬು; ತುರುಂಕು; ಇಡಿ; ಗಿಡಿ (?): ಆತನ ಕೆಲದೊಳ್ ಬಾಳಬಟ್ಟಂ ತೂಂತಿಟ್ಟಂತೆ ಸಂದಣಿಸಿ ನಿಂದ ಗೋಪ ಕುಮಾರರಣಿಯ ನಡುವೆ...ನಿಂದಾತನೆನ್ನ ತಮ್ಮಂ (ಪಂಪಭಾ. ೦೦-೫೭ವ). ೨. ಉಕ್ಕು; ತುಂಬಿ ಬರು: ಎನಸುಂ ಭಿನ್ನಘಟಕ್ಕೆ ತೂಂತಿಡುವುವೇ ನದ್ಯಾದಿಗಳ್ (ಅರ್ಧನೇ. ೪-೫೭); ತುಂತುಱು ತೆರೆ ನೊರೆ ಘುಳುಘುಳುರವ ತೂಂತಿಟ್ಟು ಹೊಳೆವ ವಾರಿಧಿಯ ಕಾಂತೆಯರೆಲ್ಲರೀಕ್ಷಿಸುತಿರೆ (ಭರತ. ೨೩-೪೭). ತೊತಿದು: ೧. ಕಿವಿಯೊಳ್ ಬೆರಳಂ ತೂತಿಟ್ಟು (ಶ್ಯಾಶಾ. ೦೫೬-೧೫). [ ತೊಂತು$_1$ + ಇಡು$_1$ ]

**ತೂಂತಿಡು₃** (ಕ್ರಿ). ಕಂಡಿಮಾಡು ; ರಂಧ್ರಮಾಡು ; ವೆಜ್ಜಮಾಡು ; ಚುಚ್ಚು : ಗಾತ್ರಂ ವಿಯನ್ಮಂಡಲಕೆ ತಡೆಯೆ ತೂಂತಿಟ್ಟನೆಂಬಂತೆ ನಿಂದಂ (ಧರ್ಮಾಮೃ. ೯-೩೩೦) : ಬಾಂಗೆ ತೂಂತಿಟ್ಟವೊಲಪ್ಪ ಮೆಯ್ (ಚಂದ್ರಪ್ರ. ೫-೭೦); ವಿದ್ಯಾಧರಬಲಂ ನೆಲಕಮಂಬರಕಂ ತೂಂತಿಟ್ಟಂತೊಡ್ಡಿ ನಿಲ್ವುದುಂ (ವರ್ಧಪು. ೮-೪೦ವ) ; ಅಲ್ಲಿ ತೂಂತಿಟ್ಟಂತೆ ನಿರುತರಂ ಸುಳಿವ ನಾನಾದೇಶ ಪ್ರಸಿದ್ಧರಾಜಪುತ್ರ ವಣಿಗ್ವಲ್ಲಭವಾರನಾರೀಭಾರತಿಕನಿಕರದ ... ಪರಿವಾಳ ಪ್ರವಾಹಸಮೂಹದಿಂ (ಅನಂಪು. ೦-೧೧೫ವ). [ ತೂಂತು₃ + ಇಡು₁ ]

**ತೂಂತಿಚು** (ಕ್ರಿ). ೧. ತುಂತುರುಹನಿಯನ್ನು ಹೊರತಳ್ಳು,-ಹೊರಹಾಕು: ಹರಿ ಹರಿದದ್ರಿಕುಂಭದಿನೊಬಿಲ್ದೊಗೆದಿಂದುವನಿಪ್ಪಗಸ್ತ್ಯನಚ್ಚರಿ ವಿಗೆ ನೀಳ್ದ ತನ್ನ ಕರದಿಂ ಮೊಗೆದಂಧತಮಸ್ಸಮುದ್ರವಂ ತುರಿವದಿನೀಂಟು ತಾಗಳೆಡೆ ಸಿಲ್ಕಿದ ಮುತ್ತುಗಳಂ ತೆರಳ್ಚಿ ಪುಷ್ಕರದೆಡೆಯಲ್ಲಿ ತೂಂತಿಚಿದ ವೋಲ್ಬುಬಗಿರ್ದುದು ತಾರಕೋತ್ಕರಂ (ವೃಷವಿ. ೮-೫೦). ೨. ಬಾಯಿಂದ ಗಾಳಿಬಿಡು ; ಊದು : ತಲ್ಲಿಂಗಾಗ್ರದೊಳ್ಪತ್ತಿ ಮೇಣ್ಣಂತೆವೊಂದು ಸೆಲಂದಿಯಂ ಜವದಿನಾಗಳ್ಕಂಡು ತತ್ಕಾಂತೆ ಬಾಯೆರಲಿಂ ತೂಂತಿಚಿದಲ್ (ವೃಷವಿ. ೯-೫೬) : ಬಾಯುಗುಳ್ದಿಡಿಯ ತೂಂತಿಚಿದಪ್ಪೆ (ವೃಷವಿ. ೯-೫೭). [ ತೂಂತು₄ + ಇಚು₁ ]

**ತೂಂತು₁** (ಕ್ರಿ). ಇಡಿ; ತಂಬು; ಗಿಡಿ ; ತಂರಂಕು; ತೂರಿಸಂ: ಉಗ್ರಗಜೇಂದ್ರಂ ಬೆರಸೋವದಂತಕನ ಬಾಯೊಳ್ ತೂನ್ತಿ (ಎಇ. XIII, ೩೨೯-೪ ; ೫೫೦) ; ಅವನಂ ಮಾರುತಿ ನಿವಿಷಕ್ಕೆ ತೂಂತಿದಂ ಯಮಮುಖ ದೊಳ್ (ಪಂಪಾಮಾ. ೧೧-೬೦) : ಕರಮಂ ತೂಂತಿ ತದಾಸ್ಯದೊಳ್ ಬಳೆಯಿಸಲ್ (ಜಗವಿ. ೫-೯೬) : ತನ್ನ ಗೋತ್ರಾವಳಿಯು ಕ್ರಮಾಗಿ ನೆಟಿ ತೂಂತುವೆನಂತಕನಾಸ್ಯರಂಧ್ರದೊಳ್ (ಶಾಂತೀಶ್ವ. ೬-೧೧೭); ಅವನ ಮೈಯನು ಕೊಟಿಕೊಟಿದು ತೂಂತುವರು ಬಾಯೊಳಗೆ (ವರ್ಧಷ. ೮-೮೯); ಬೀರ್ವಗ್ಗಮಂ ಹಾಯ್ಕಿ ಸೇದಿದರ್ ಮರುಳ್ಗಳ್ಗಳಿಂ ತೂಂತರಂ (ಜಿಣಪು. ೪೫-೩೩); ದೇವಿಯರನೇವೊಬ್ಬುಂ ಸೇವಿಸಿಯುವಿಂದೀಗಳ್ ಪುಲಿ ಕರಡಿ ಸಿಂಗಂಗಳ ಬಾಯೊಳ್ ತೂಂತಲೆಂದೆ ಕೊಂಡುಯ್ವುವೆಂ (ರಾಮಾಶ್ವ. ೨೯-೦೦). [ ದೇ.೫ ಕುವಿ. ತೂಥಲಿ ]

**ತೂಂತು₂** 'ತೂನ್' ಪರಾ.

**ತೂಂತು₃**, ತೂತಂ₁ (ನಾ). ಕಂಡಿ; ರಂಧ್ರ; ಬಿಲ : ಮಣಿಕುಟ್ಟಿಮಮಪ್ಪ ಬಾವಿಯಂ ಪೊಕ್ಕು... ಛಿದ್ರಕದ್ವಾರದ ತೂಂತನುರ್ಚಿ ನೀರಂ ಕಳೆದಾಗಳ್ (ವಡ್ಡಾರಾ. ೨೬-೨೦) : ಪೆಡತಲೆಯ ತೂಂತಿಂದುಬ್ಬುವರಿಕ್ಕುಟಿಸಿ ನಾರಕರ್ ನಾಲಗೆಯಂ (ಸುಕುಮಾ. ೧೧-೪೪); ಕವಲಂಬಿಂ ಕಡಿವೋದ ಕೂರಲಗಿನಂಬಿಂ ಕೂಡೆ ತೂಂತಾದ ತಾಗುವ ನಾನಾಯುದ್ಧದಿಂದನೇಕವಿಧಂ (ಮಹಾನೇ. ೧೨-೪೫). **ತೂತು₁**: ಷಡಾಧಾರ ಬಳಿವಿಡಿದು ನೆತ್ತಿಯಿಂದುತ್ತರಕ್ಕೆ ಉಚ್ಚಳಿಸಿ ಹಾಯ್ದು ನಡುನೆತ್ತಿ ತೂತಾದರೂ ಲಿಂಗಸಾಹಿತ್ಯವಿಲ್ಲ (ಅದವ. ೦೦-೨೦); ಚಲಿಸಿ ಮೂತ್ರವೊಸರ್ವ ತೂತುಗಳೆಳಪಿದವದಿರು (ಬಸಪು. ४०-೬೯); ಎಲ್ಲರ ಮನೆಯ ದೋಸೆಯೂ ತೂತು (ಗಾದೆ); ಮಾತು ಮನೆ ಕೆಡಿಸಿತು ತೂತು ಒಲೆ ಕೆಡಿಸಿತಂ (ಗಾದೆ).

**ತಾತಾತೂತು, ತಾತತೂತು, ತಾತುತೂತು** (ದ್ವಿರುಕ್ತಿ) : ಕಂದರ್ಪ ನೊಡಲು ನಿಶಾಚರನಾಥನ ಕೂರ್ಗಣೆಯಿಂದ ತಾತಾತೂತಾದುದು(ಕೋಚಶತ. ೩೫-೩೩) : ತಾತಾತೂತಾಗೆ ವಜ್ರಾಂಗಿ (ಕುಮಾರಾಂ. ೩೯೯) : ಕೂರಂಬು ವಸ್ನೆಸೆಯ ಸಚಿವನ ಮೈಯಂ ತಾತತೂತಾಗಲೊಡನೆ (ನವಮೋ. ೫೬-೬೯); ದಾನವನ ವಜ್ರಕವಚವನೊಡೆದು ಸರ್ವಾಂಗ ತಾತುತೂತಂ ಗೈಯಲು (ನವಮೋ. ೧೨-೬೮). **ತೂಂತನಿಡು** = ೧. (ಯಾವುದಾದರೂ ವಸ್ತುವನ್ನು) ಗಿಡಿ,–ತುರುಕು: ಬಸದಿಯೊಳ್ ಧನ್ವಂತರಿ ವಿಶ್ವಾನು ಲೋಮನ ಮುನ್ನಿನ ಸೂರುಳಂ ನೆನೆದು ಕಿವಿಯೊಳ್ ತೂಂತನಿಟ್ಟು ಪಟ್ಟಿರ್ದಂ (ಧರ್ಮಾಮೃ. ೨-೧೬೨). ೨. ರಾಶಿಹಾಕು ; ತುಂಬು : ರೋದೋಂತಂ ಕೂಡೆ ರತ್ನೋಜ್ವಳಗಿರಿಕುಳದಿಂ ತೂಂತನಿಟ್ಟಂತೆ ನೀಲಾಂಭೋದಂಗಳ್ ಕೂಡೆ (ಆದಿಪು. ೧೪-೯೬). **ತೂತಾಗು** = ರಂಧ್ರಬೀಳು ; ಕಂಡಿಬೀಳು : "ವ್ಯಣತಿ = ತೂತಾದಪುದು" (ಶಾಶಳ್ಳ. ೨೨೦) : ವಾತಿನಾ ಬೊಮ್ಮನ ತೂತಾದ ಮಡಿಕೆಯು ಪಾತಕನ ನೆರೆಯು ಇವು ಮೂಱು ಲೋಕದೊಳಗೇ ತಕ್ಕು ಬೇಡ (ಸರ್ವಜ್ಞ. ४೩೦). **ತೂತುಬೀಳು** = ತೂತಾಗು ; ರಂಧ್ರವಾಗು : "ವಿದ್ಧ=ತೂತುಬಿದ್ದದ್ದು" (ಗಂಗಾಮು. ೨೯೦): ಮಾತ ತಾನಱಿಯದಧಮಂಗೆ ಮಾಣಿಕವು ತೂತುಬಿದ್ದಂತೆ (ಸರ್ವಜ್ಞ. ೧೩೫೩) ; ಓಲೆಗರಿ ತಂಡಾಗುವ – ತೂತುಬೀಳುವ ಸುಭವವುಂಟು (ದ್ರಾವಿಪಿ. ೫೯). **ತೂತುಮಾಡು** = ರಂಧ್ರವನ್ನು ಮಾಡು,–ಕೊರೆ : ಆಸ್ಫೋಟನೀ = ರತ್ನಗಳನ್ನು ತೂತುಮಾಡುವ ಶಸ್ತ್ರ (ಗಂಗಾಮು. ೩೦) : ಬೆಲೂನಿಗೆ ತೂತು ಮಾಡಿದೆ. ಒಡೆದುಹೋಯಿತು (ರೂಢಿ).

[ <ತೂಂತಂ₁./ ತೆಲು. ತೂಟಂ ; ಮಲ್ಯಾ. ತೂತ್ರಾ ]

**ತೂಂತು₄** (ನಾ). ೧. ಹೊರಸೂಸುವಿಕೆ. ೨. ಊದುವಿಕೆ. 'ತೂಂತಿಚು' ಪರಾ. [ ? ]

**ತೂಂತುಗೊಟು**, ತೂತಂಕೊರೆ, ತೂತಗೊಟು (ಕ್ರಿ). ತೂತನ್ನು ಕೊರೆ; ತೂತುಮಾಡು ; ರಂಧ್ರವನ್ನು ಮಾಡು : ಲೋಹದೊಂದು ಧಾರ ಗುಂಡನಿಳಿಯಬಿಟ್ಟು ಮರ್ಮವೆರಡಱೊಳುಮವೆರಡನೊತ್ತಿ ತೂಂತುಗೊಟಿದು ಕಯ್ಯೊಳಮರ್ಚಿ (ಸಾನಂಚ. ೬-೧೫೪ ರಗಳೆ). **ತೂತುಕೊರೆ** : ಮುಖದಲ್ಲಿ ಹೇಗೆ ತೂತುಕೊರೆಯಬೇಕೆಂಬುದನ್ನು ಹೆಣ್ಣಲ್ಲದೆ ಇನ್ನಾರು ಹೇಳಬೇಕು ? (ಗಾಳಿಪ. ೧೫೨). **ತೂತುಗೊಟು** : ದುಟ್ಟ ಕಡಂದುಱು ಗಳಂದೆ ತನುವನೆಯ್ದೆ ತೂತುಗೊಟಿದು ಒಡಲನೆಯ್ದೆ ಶೀವುವಂತೆ ಕ್ಷಾರರಸವನೆಱೆದುವೆಱೆದು (ಸಾನಂಚ.೬-೯೮ ರಗಳೆ).

[ ತೂಂತು₃ + ಕೊಡು₁ ]

**ತೂಂತುವೋಗು**, ತೂತುವೋಗು (ಕ್ರಿ). ೧. ತೂತಾಗು ; ರಂಧ್ರಬೀಳು: ಧರಣಿಯಂ ಪೊಯ್ಯನೋ ತೂಂತುವೋಗರ್ (ಧರ್ಮಾಮೃ. ೯-೧೮೩) : ಪೊಸಬಸದಿಯಂ ಮಾಡಿ ತೂಂತುವೋದ ಕಳಶಮನಿಡುವಂತೆ (ಧರ್ಮಾಮೃ. ೯-೦೮೭). **ತೂತುವೋಗು** : ೨. ಇಳಿ ; ಕಂಸಿ : ಪೃಥ್ವೀತಳಂ ಪಾತಾಳಕ್ಕೆ ತೂತುವೋಗೆ (ಅರ್ಜನೇ. ೮-೨೨ವ). [ತೂಂತು₃ + ಪೋಗು₁]

**ತೂಂಪೆ** 'ತೂಂಕಂ₁' ಪರಾ.

**ತೂಂಬ** 'ತೂಂಕು₁' ಪರಾ.

**ತೂಂಬು**, ತುಂಬು₃, ತೂಪು, ತೂಬು (ನಾ). ೧. ಕಂಡಿ ; ರಂಧ್ರ. ೨. ಕೊಳವೆ; ಕೊಳಾಯಿ; ನಳಿಕೆ. ೩. ಕೆರೆ, ಕಟ್ಟೆ ಮೊದಲಾದ ಜಲಾಶಯಗಳಲ್ಲಿ ನೀರು ಬಿಡಲು ಮಾಡಿರುವ ಕಂಡಿ,–ದ್ವಾರ ; ನೀರುಗಂಡಿ : ಮೊಱಗಲೂರ ಮಟ್ಟಿಯುಳ್ಳಯ್ದೂಱು ಇನ್ತು ತಾಗೆ ಮೂಱಡಿ ತೂಂಬುಂ ದೇವಭೋಗಂ (ಎಕ. X, ಚಿಂತಾಮಣಿ ೧೦-೯; ಸು. 753); ಜಲಗರಂ ಬಿಡೆ ಪರಿಗುಮೆಗುವರ್ಗಾಗಿ ತೂಂಬನುರ್ಚಿದ ತೆಱದಿಂ (ಲೋಕೋಪ. ೯-೦೧೬);ಈ ಕೆಱೆಯ ನೀರಂ ತೂಂಬನುರ್ಚಿ ಕಳೆದು ಕಿಱಿದಾನುಮುಱಿದ ನೀರಂ ತುಳುಂಕಿ ಕಳೆದೊಡೆ ನಿನ್ನಱಿಸುವುದಂ ಕಾಣಲಕ್ಕುಂ (ಜೀವಸಂ. ೧೬೩-೦೫) : ವಾಪೀಕೂಪದೀರ್ಘಿಕಾಘಟೀಯಂತ್ರಪ್ರವಾಹಂ ಪುಗುವ ಬಚ್ಚಲ್ಗಳ ಪೊಱಮಡುವ ತೂಂಬುಗಳ ಬೆಡಂಗು ... ಮೆಱೆದಿರ್ದುದು (ಅಜಿಂಪು. ೬-೨೦ವ) ; ಇಳೆಯಾಣ್ಮನ ಕರುಣರಸಂ ತೀವಿದ ಲಲಿತತಟಾಕಮದಾಗಲ್ಕರ ಮನೆ ತೊಳಗುವ ಬಾಗಿಲ್ವಾಡಮಱ ತೂಂಬೆಂಬವೊಲೊಪ್ಪಿದುದು (ಜಯುಕಾ. ೧-೬೫). ೪. ಭೂಮಿಯ ಒಂದು ಅಳತೆ. 'ಅಯ್ದೂಂಬು' ಪರಾ. ೫. ಒಂದು ಊರಿನ ಹೆಸರು : ಕರಿಪೊಡವಿಷಯೇ ತೂಂಬು ವರವು ಪೂರ್ವತಃ ವಾಂವೊಱ ತೂಂಬುನಾಮಗ್ರಾಮಯೋಃ

(ಮೈಆರಿ. ೧೯೦೯, ೨-೧೯ ; 749). **ತುಂಬು₃ :** ೩. ತುಂಬಿನ ನೀರನುರ್ಚಿದಾಗಳಡೆ ಪರಿದು (ಹಂಪಭಾ. ೫-೯೬ಪ) ; ಹಿರಿಯ ಕೆಱೆಯ ಕೆಳಗೆ ಎರಡು ತುಂಬಿನ ನಡುವೆ ಬಿಟ್ಟ ಗದ್ದೆ (ಎಕ. XII, ಚಿಕ್ಕನಾ. ೦೩-೩೮ : 1181) ; ಮಹಾಜನಂಗಳು ಬಸವಯ್ಯನ ಕೆಱೆಯ ನೀರ ತುಂಬನತ್ತಿ ಹಱಿಸಿಕೊಳ್ಳದೆ ಅಱುವತ್ತೊಂದು ಪ್ರಿತ್ತಿಗೆ ನಿಲ್ವರು (ಎಕ. VI, ತರೀಕೆ. ೫೫-೮ ; 1291 ?). ೬. ಚಕ್ರದ ಮಧ್ಯಭಾಗ ; ಗುಂಬ ; ಚಕ್ರನಾಭಿ ; ಓಂಡಿಕೆ: "ನಾಭಿಃ, ಪಿಂಡಿಕಾ – ಈ ೨ ತುಂಬು" (ಶಿರಾಯು. ೭೩-೨೯೩). **ತೂಪು :** ೪. ಮಂದುವೂರ ತೂಱುಕೊಳ್ವಲ್ಲಿ ಏಟ್ಟ್ರೀರ್ ಪೆರಾಣ್ಕೋಇರ್ ಅವಂಗೆ ಪದಿ ತೂವು ಕಟಿಸಿ ನೆತ್ತಪಡಿ (ಎಕ. X, ಶ್ರೀನಿವಾ. ೨೦-೭ ; ಸು. 750). **ತೊಬು :** ೩. ನೈರುತ್ಯದೊಳ್ ಕಟ್ಟಿಯ ಕಡೆಯ ತೂಬು ಪಶ್ಚಿಮದೊಳ್ಕುಪ್ಪರಣೆ (ಎಕ. VIII, ಸಾಗರ. ೦೦೯-೭೦ : 1042) ; ತೂಬಿಲ್ಲದ ಕೆಱೆಯಂ ಕಟ್ಟುವೆನೆಂಬ ಕಾಲಿಲ್ಲದೆ ಪರಿವೆನೆಂಬ ... ಪಚ್ಚಪಸಿಯೆಗ್ಗನಂ ಪೋಲ್ಸುಂ (ಧರ್ಮಾಮೃ. ೧-೬೭) ; ಅರ್ದಿಱಿದು ಕಾಲನ ಬನಕೆ ರಕುತದ ಕೆಱೆಯ ತೂಬೆತ್ತಿದರು ಸೇವಣರಾಯರಾವುತರು (ಕುಮಾ.ಭೀ. ೪-೭೭); ತೊಬು ಉಳ್ಳ ಕೆರೆಯ ತುಳುಕಿದರೆ ಬತ್ತೀತೆ? (ಗಾದೆ). ೬. "ಓಂಡಿಕೆ, ನಾಭಿ–ಬಂಡಿಯ ತೊಬು" (ನಾಚಿರಾ.೬). ೭. ಕೊಡಲಿ, ಗುದ್ದಲಿ ಮೊದಲಾದ ಸಾಧನಗಳಲ್ಲಿ, ಕಾವನ್ನು ಒಳಗೆ ಸೇರಿಸಲು ಮಾಡಿರುವ ಕಣ್ಣು,–ತೂತಂ,–ರಂಧ್ರ: (೬). ೮. ಕಿವಿಯೋಲೆಯ ಕೊಳವೆ: (೬). ೯. (ಆಲಂ) ಹಾಳುಮಾಡುವವನು: ಅಪ್ಪನ ಖಜಾನೆಗೆ ಮಗ ತೂಬಾಗಿದ್ದಾನೆ (ರೂಢಿ).

**ತೂಬನಿಕ್ಕು**=ಕೆರೆ ಮೊದಲಾದುವುಗಳಿಗೆ ತೂಬನ್ನು ಮಾಡಿಸು,–ಕಂಡಿಯನ್ನು ಇಡು : ಸಿರಿಯಮಯ್ಯನೆರಡು ಕೆಱೆಯಂ ತೂಬನಿಕ್ಕಿ... ಮೂಱು ಕೆಱೆಯ ಬಿತ್ತುವಟ್ಟವಂ ಪಡೆದಂ (ಎಕ. IX, ಬೆಂಗಳೂ. ೭೯–೬ ; ಸು. 870).

[ ದೇ.॥ ತಮಿ. ತೂಮ್ಬು ; ಮಲ. ತೂಮ್ಬು ; ತುಳು. ತೂಂಬು, ತೊಂಬೆ, ಸೂಂಬು ; ತೆಲು. ತೂಮು ]

**ತೂಂಬುರ್ಚು, ತುಂಬುಚ್ಚು** (ಕ್ರಿ). ತೂಬಿನ ಬಾಗಿಲನ್ನು ಎತ್ತು, — ತೆಗೆ : ಮಿಾಂಬೊಲಸು ನಾರ್ಪ ಮಯ್ಗಮಳುಂಬಂ ತೂಂಬುರ್ಚಿದಂತೆ ಸುರಿವರುಣಜಳಕ್ಕಂ ಬಿಡದೆ ಕಾಗೆಯುಂ ಪದುಂ ಬಳಸುವವು (ಸುಕುಮಾ. ೪-೩೯) ; ಅರದಚಯಂ ... ಪತ್ರಿಚಯಮುದೆತ್ತಂ ಗಗನೋದರಮಂ ಶೀವಿ ದುದಳಕಾವುರದಿಂ ತೂಂಬುರ್ಚಿದಂತೆ ಕವಿದವಿರಳಿತಂ (ವರ್ಧಮಾ. ೯-೪೦). **ತುಂಬುಚ್ಚು :** ಒಂಭತ್ತುದ್ವಾರದಿ ಮಲವು ತುಂಬುಚ್ಚಿದಂದದಲಿಳಿವ (ಚಿದಾಕೋ. ೪೧-೫). [ ತೂಂಬು + ಉರ್ಚು ]

**ತೂಕ** (ನಾ). ೧. ತೂಗುವುದು; ತೂಕಮಾಡುವುದು : (೬). ೨. ಯಾವುದಾದರೂ ವಸ್ತುವನ್ನು ತಕ್ಕಡಿಯಲ್ಲಿಟ್ಟು ತೂಗುವುದರಿಂದ ಗೊತ್ತಾಗುವ ಪದಾರ್ಥದ ಭಾರ,—ಗುರುತ್ವ: ಅಂತೆಗೆ ತೂಕಕ್ಕಣೆಕೆಗವೊಳಗಾದುವು ಸಕಳವಸ್ತುಗಳ್ ಭುವನಜನಕ್ಕೆಳೆಯಲ್ ತೂಗಲ್ಕೆಣೆ ಸಲ್ಕಳಂಬಮೆನಿಸಿದುದು ನಿನ್ನ ಗುಣಗಣಮರ್ಹಾ (ಅದಿಪು. ೧೦-೫೫) ; ಬಲ್ಲವರೊಡಗೂಡಿ ಬಣ್ಣದಿಂದೊರೆಯಿಂ ತೂಕದಿಂ ಮರ್ಚಿಯಿಂದಂ ಪೊನ್ನಂ ತೊಪ್ಪುಗುಂ ... ಅಂತೆ ಸ ಮ್ಯ ಕ್ತ್ವದೊ ಳ್ ಕೂಡಿ...ಶ್ರಾವಕನು ಮೊಪ್ಪುವುದು (ಧರ್ಮಾಮೃ. ೦೩-೫) ; ಸೌರಾಷ್ಟ್ರಸೋಮನಾಥಂಗತಿಭಕ್ತಿಯಿಂ ತನ್ನ ತೂಕದ ಧೂಪವಂ ... ಓಹಿಲದೇವನರ್ಪಿಸುತಿರ್ದಂ (ಉದ್ಭಟ. ೦೦-೯೯ ಪ); ತಲೆವೊರೆಯ ತೂಕದಲಿ ಫಣಿಪತಿ ಬಳುಕಿತೊಡಗಿದ (ಕುಮಾ.ಉ. ೦೦-೦೫) : ಗುರುಕುಚದಲಘುನಿತಂಬದ ತೂಕದ ಸರಿಮಿಗಿಲಂ ಪಿಡಿದೆತ್ತಿ ನಿರೀಕ್ಷಿಪರಿಯಿಂ ಪ್ರಾಣೇಶ್ವರನಂಗೈಯಂ ತನುಮಧ್ಯದೊಳಿಡಲು (ಜಯುಕಾ. ೦೦-೪೪); ತೂಕಕ್ಕೆ ದಯವಿಲ್ಲ ಪಾಕಕ್ಕೆ ಹಸಿಯಿಲ್ಲ (ಗಾದೆ). ೩. ಒಂದು ವರಹದಷ್ಟು ಭಾರ : ಸಿಕ್ಕಿಸಲ್ಪೆಳೆಯೆರಡುಮನೊಂದು ಪಾಗವುವು ನಾಲ್ಕಾಗೆ ಪಣಮೆನಿಕ್ಕವು ದಶಂ ತೂಕಕ್ಕೆ (ಮಂಗರಾ. ೦೦೪-೦೦) ; ಹೊಸಸುಣ್ಣದ ನೀರನ್ನೂ ಬೆಲ್ಲದ ಪಾಕವನ್ನೂ ಒಲೆ ಮೇಲಿಕ್ಕಿ, ಎರಡು ತೂಕ ಬಿಳೀ ಪಾಷಾಣವನ್ನು ಹಾಕಿ ಕುದಿಸಿ ... ಕೊಡಲು ಥಳಿಜ್ವರಂ ನಿಲ್ಲುಂ (ಶಿಶುಚಿ. ೭೪). ೪. ಎರಡು ಕೈಯಲ್ಲಿ ತೂಗಿ ತರುವಷ್ಟು (ನೀರಿನ) ಅಳತೆ : ಎಷ್ಟು ತೂಕ ನೀರು ಹಾಕಿದ್ದೀರಿ ? (ರೂಢಿ). ೫. ಸಮತೋಲ ; ಸಮಚಿತ್ತ : ಕೆಳಗು ಮೇಲಾಗದೊಲು ತೂಕವಿರಲಿ !! (ಅಂಬ್ಯಾಳಿ. ೭೯-೦೬). ೬. ಸಮಾನವಾದುದು ; ಸದೃಶವಾದುದು : ಋಷಿಪ್ರತಿಪನ್ನ ಮಂತ್ರವಪೋಘವದಱಿಂದೆನ್ನ ತೂಕದ ಮಗನಹನು (ಕುಮಾ.ಆ. ೩-೧೯); ಸರೋಜಜಗೆ ಸಂಭವಿಸಿದಗ್ಗದ ತನ್ನ ತೂಕದ ಬವರಿಗರ ತೋಱಿಸಿದನನಿಲಜನು (ಕೂಂರಾ. ೪-೭-೨೪). ೭. ಗೌರವ ; ಘನತೆ ; ಮಹತ್ವ : ಬರಿಸಿದನು ತೂಕದ ಮಹಾಮಂಡಳಿಕಮನ್ನೆಯರ (ಕುಮಾ.ಉ. ೮-೨೧) : ಏಕೆ ನುಡಿಯನೋ ಇನ್ನೊಮ್ಮೆಯೆಂಬಂತೊಂದು ತೂಕದೊಳೆಸೆದನಾ ರಾಯ (ಭರಹ. ೦-೩೦) : ತೂಗಬೇಕು ಮನದೊಳಗೆ ತೂಕವುಳ್ಳವರ ಮಾತು ಹಿಡಿದು (ನಿಂಮು. ೪೯-೯) ; ತಾನು ಈ ಪ್ರೊಫೆಸರರ ಬಾಲವನ್ನು ಹಿಡಿದು ಹೋದರೆ, ತನ್ನ ತೂಕ ಸ್ವಲ್ಪ ಹೆಚ್ಚೀತು (ಒಂಟಿದ. ೮). ೮. ಒಂದು ಬಗೆಯ ತೆರಿಗೆ : ಕಿಱುಕುಳ ತೂಕ ನೋಟವಣ ಅಭ್ಯಾಗತವಳ . . . ಯೆಲ್ಲವನೂ ಕಾರುಣ್ಯಂಮಾಡಿ ಧಾರಾಪೂರ್ವಕಂ ಮಾಡಿಕೊಟ್ಟರು (ಎಕ. VI, ಕಡೂರು. ೪೯-೪೦ : 1291). ೯. ಒಲೆತ; ತೂಗುವಿಕೆ ; ತೊಗಾಟ; ತೊನೆದಾಟ : ಗೋಪೀನಟಿ ತೋಱಿದಳ್ ಮಿಸುಗುವೋಲೆಯ ತೂಕಮ ತೋಱ³ ನೃತ್ಯಮಂ (ಜಗವಿ. ೫-೦೪) : ಕೊಟ್ಟಲ ತೂಕದೊಳ್ ಪೊಣರ ಕಂಕಣರುಝಂಕೃತಿ (ಸೂಕ್ತಿ.ಸು. ೭-೭೨). 'ತೂಕವಣೆ' ಪರಾ.

**ತೂಕತೂಗು**=ಘನತೆಯನ್ನು ಹೊಂದು ; ಗೌರವವನ್ನು ಗಳಿಸು : ಭಾರತದ, ಲೋಕದಾ ಮಕ್ಕಳಲಿ ಹಿಂದಾಗಿ ತೂಕತೂಗುವಿರಾ ? (ಹೊಂಗಳು. ೨೦-೨). **ತೂಕದ ಕೋಲ ತೂಲೆ** = ತಕ್ಕಡಿಯ ಕೋಲು ; ತುಲಾದಂಡ : ವನಿತೆ ... ಚಿಂತಿಸುತ ತೂಕದ ಕೋಲ ತೂಲೆಯಾದಳು (ಹರಿಶ್ಚ. ೦೨-೪೭). **ತೂಕದ ಗುಂಡು** = ಗೋಡೆಯನ್ನು ಕಟ್ಟುವಾಗ ನೇರಸ್ಥಿತಿಯನ್ನು ಕಂಡುಹಿಡಿಯಲು ಬಳಸುವ ಸಾಧನ : ತೂಕದ ಗುಂಡನ್ನು ಹಿಡಿಯದೆ ಗಾರೆ ಬಳಿದರೆ ಗೋಡೆ ಸಮನಾಗುವುದಿಲ್ಲ (ರೂಢಿ). **ತೂಕದ ಮಾತು** = ಬೆಲೆಯುಳ್ಳ ಮಾತು ; ಗೌರವದ ಮಾತಂ; ನ್ಯಾಯವಾದ ಮಾತು; ನಿಷ್ಪಕ್ಷಪಾತವಾದ ನುಡಿ: ಅವರದು ಒಳ್ಳೆಯ ತೂಕದ ಮಾತು (ರೂಢಿ). **ತೂಕದಾಳ್** = ಘನತೆಯನ್ನು ಹೊಂದಿರುವವನು : ಬಾಣಸ್ಥಾಪನಕೆ ಮೆಚ್ಚಿದನು ಮೇಲಣ ತೂಕದಾಳವನು ಈ ಪರಿಯಲೆಂದಱಿಯಿನಹುದ್ಯ ಚಾಪವಿದ್ಯಾಪಾತ್ರವಿಂದ ವನೀಪತಿಯಲಾ ಪೂತು ಮಝು ಎಂದೆಚ್ಚನಾ ಕರ್ಣ (ಕುಮಾ.ಕ. ೧೧-೪೪). **ತೂಕಮಾಡು** = ೧. ತಕ್ಕಡಿ ಮೊದಲಾದುವುಗಳ ಸಹಾಯದಿಂದ ಭಾರವನ್ನು ಕಂಡುಹಿಡಿ : ಈ ಹುರುಳೀಕಾಯನ್ನು ಬೇಗ ತೂಕಮಾಡು (ರೂಢಿ). ೨. ವಿಮರ್ಶಿಸು ; ಬೆಲೆಕಟ್ಟು : ನಮ್ಮಿಬ್ಬರ ಹೇಳಿಕೆಯನ್ನೂ ತೂಕಮಾಡು. ಯಾವುದು ಸರಿ ಎಂದು ನಿನಗೇ ಗೊತ್ತಾಗುತ್ತದೆ (ರೂಢಿ). ೩. ತೂಕಡಿಸು : ಅವನೆಲ್ಲೋ ತೂಕಮಾಡುತ್ತಾ ಕುಳಿತಿರಬೇಕು (ರೂಢಿ).

[ ದೇ.॥ ತಮಿ. ಮಲ. ತುಳು. ತೆಲು. ತೂಕ ]

**ತೂಕಗಾಣ್** (ಕ್ರಿ). ಗಾಂಭೀರ್ಯವನ್ನು ಗಮನಿಸು ; ಘನತೆಯನ್ನು ತಿಳಿ : ಆಕೆಯಿಚ್ಛಾದೇವಿಯಿನುಱೆ . . . ತೂಕಗಾಣದೆ ನುಡಿದಳು (ಭರಹ. ೫೦-೫೦). [ ತೂಕ + ಕಾಣ್ ]

**ತೂಕಗುಂದು** (ಕ್ರಿ). ವಿಮರ್ಶೆ ಇಲ್ಲದಾಗು,–ತಪ್ಪು : ತೂಕಗುಂದದ ನೋಟವ ನೋಡುವೆನಯ್ಯ (ಅದವ. ೨೭-೭೭). [ ತೂಕ + ಕುಂದು₁ ]

**ತೂಕಡಿಕೆ** 'ತೂಂಕಡಿಕೆ' ನೋ.

**ತೂಕಡಿಸು** 'ತೂಂಕಡಿಸಂ' ನೋ.

**ತೂಕದು** 'ತೂಂಕಡಂ' ನೋ.

**ತೂಕರಿಸು** (ಕ್ರಿ). ೧. ದೃಷ್ಟಿದೋಷ ಪರಿಹಾರಕ್ಕಾಗಿ ಹಾಗು ರಕ್ಷೆಗಾಗಿ ನೆತ್ತಿಯಂ ಮೇಲೆ ಊದಂ; ತೂಪಿರಿ: ತೂಕರಿಸಿ ಪರಸಲೆಂದು ಶಚೀಕಾಂತೆಯೊಡರ್ಚೆ ನಾಣ್ಚಿ ತಲೆವಾಗಿ (ಚಂದ್ರಕು. ೦೨-೧೫೮). ೨. ತಿರಸ್ಕರಿಸು ; ಅವಹೇಳನ ಮಾಡು : ನಿಮ್ಮನೆಮ್ಮಗಲುವೆಂದು ಮೂದಲಿಸಿ ತೂಕರಿಸಿ ದಿವ್ಯಾದಿರಗೊಡುತಲೊಲೆದಕ್ಕಿತ್ತ (ಜಿನಮು. ೧೩-೬೪).

[ <ತೂತ್ಕಾರ + – ಇಸು$_3$ ]

**ತೂಕವಣೆ** (ನಾ). [ನಾಟ್ಯ] ನೃತ್ಯದಲ್ಲಿ ಒಂದು ಗತಿ,_ಚಲನೆ : ಥಾಳದ ಮೇಲೆ ತೂಕವಣೆ ರೇಖೆಯನಾಳ್ದಿರೆ ಪಾದದೊಳ್ಪೆಯಂ ಮೇಳಿಸಿ ಝುಂಕೆ ಬಿಂಗದೊಳೊಡಂಬಡೆ ... ಸಿಂಹಸೇನಭೂಪಾಳನ ಚಿತ್ರವಲ್ಲಭೆಗೆ ಸಂದುದು ರಂಭೆಯ ಲಾಸ್ಯವಿಭ್ರಮಂ (ಅನಂಪು. ೪-೯೦) ; ರೂಪು ರೇಖೆ ಧಾವಣೆ ತೂಕವಣೆಯಂಕೆ ಝುಂಕೆ... ಉಲ್ಲಾಸದಚ್ಚರಿವಡೆಯ ನರ್ತಿಸುತ್ತು ವಿಂರೆಯುಂ (ಶಾಂತೀಶ್ವ. ೦೬-೬೭೫). [ ತೂಕ + – ಅಣೆ$_4$ ]

**ತೂಕು$_1$** 'ತೂಂಕು$_1$' ನೋ.

**ತೂಕು$_2$** 'ತೂಂಕು$_2$' ನೋ.

**ತೂಗಡಿಕೆ** 'ತೂಂಕಡಿಕೆ' ನೋ.

**ತೂಗಾಟ** (ನಾ). ೧. ತೂಗಾಡುವಿಕೆ ; ಒಲೆದಾಡುವಿಕೆ : ಸಾಲುಝಲ್ಲರಿಗಳ ಪತಾಕಾಜಾಲದಲಿ ಸಬಳದ ಹೊದಟ ಗೋವಳಿಗೋಲ ತೂಗಾಟದಲಿ ಸಮರಕೆ ದ್ರೋಣ ನಡೆತಂದ (ಕುಮಾರವ್ಯಾಸ. ೯-೧೬). ೨. ಡೋಲಾಯಮಾನವಾದ ಮನಸ್ಸಿನ ಸ್ಥಿತಿ ; ನಿರ್ಣಯಕ್ಕೆ ಬಾರದಿರುವ ಸ್ಥಿತಿ: ಬಾಬಣ್ಣ ತೂಗಾಟದಲ್ಲಿ ಬಿದ್ದ. ಹೆಂಡತಿಯ ಮುಂದೆ ಸಾಲದ ವಿಷಯ ಹೇಳಬೇಕೋ ಬೇಡವೋ ಎಂದು ಯೋಚಿಸತೊಡಗಿದ (ಅಕೋಳ. ೩೩).

[ ತೂಗು$_1$ (<ತೂಂಕು$_1$) + ಆಟ ]

**ತೂಗಾಡಿಸು** (ಕ್ರಿ). ೧. ನೇತುಹಾಕು ; ತೂಗಬಿಡು : ಕಪ್ಪು ಮತ್ತು ಭರಣಿಗಳನ್ನು ಕೊಂಡಿಗಳಲ್ಲಿ ತೂಗಾಡಿಸಿದರೆ ವ್ಯವಸ್ಥೆ ಚೆನ್ನಾಗಿ ಕಾಣುವುದು (ಅಡುಗೆ. ೪೫). ೨. ಬಾಗಿಸು ; ಮಣಿಸು : ಯೋಗಕೆ ಮುಖವಿಕ್ಕಿದಾಗ ಮೂಲೋಕವ ತೂಗಾಡಿಸದೆ ಸುಮ್ಮನಿಹನೆ (ಭರತೇ. ೭೬-೫೬).

[ತೂಗಾಡು + – ಇಸು$_3$]

**ತೂಗಾಡು,** ಜೂಗಾಡಂ (ಕ್ರಿ). ೧. ಒಲೆದಾಡಂ ; ತೊನೆ: ಮೇಲಿಂಗೆ ತೂಗಾಡುವ ಯಾಮಾನೇಕಪಂ ಎಳ್ಳಿಸಿ ಸೂಪಡನಾರಯ್ದುದು (ಪರ್ವಪು. ೬-೩೪) ; ತಾಯನಪ್ಪುತ್ತ ಮೊಲೆಗೆ ಲಲ್ಲೈಸಿ ನಿಟಿಲವಿಡಿದು ಮೊಗವಂ ನೋಡುವ ತೂಗಾಡುವ ಮಗನ ಮುದ್ದುತನವಂ ಬಸವರಾಜಂ ಕಂಡು (ಬಸರ. ೧೧-೦೨೦) : ಸೆಳೆಗೊಂಬೆಲರಿಂ ತೊನೆದೆಬ್ಬು ತಟ್ಟಿ ತೂಗಾಡಿದೊಡಂತದಂ ಪಿಡಿದುಕೊಂಡಲರಂ ನೆಟ್ಟಿ ಕೊಯ್ದು ಕಾಂತೆ . . . ಪರ್ಚಿದಳ್ (ಕುಸುಮಾ. ೫-೧೧೮);ತೀಡುವ ತೆಂಬೆಲರ್ಗೆ ಚಲಿಪಚ್ಚೆತೆಳಿರ್ಗಳ ಘಾತದಿಂದೆ ತೂಗಾಡುವ ಪಣ್ಗಳ್ಗೆದೆ ಮುಸೆದಂದೊಡೆಯುತ್ತೊಗುತಿರ್ಪಿನಂ ರಸಂ (ಉದ್ಭಟ. ೬-೦೨) ; ಬೆಳಗಿನ ತುಟಾಗಲಲಿ ತೂಗಾಡುತಿದ್ದುದು ಕೈದು ತೊಡವಾಗಿ (ಕುಮಾರವ್ಯಾಸ. ೩-೬೦) ; ಮುಂದೆ ಸಾಗುವಾಗ ಅವಳ ಎಡತೋಳು . . . ಚುರುಕಾಗಿ ತೂಗಾಡುತ್ತಿತ್ತು (ಪುನರು. ೨೬೫). ೨. ಅಲ್ಲಾಡಿಸು ; ಅಲುಗುವಂತೆ ಮಾಡಂ : ನೆಳಲುಗಂಡವ್ವಳಿಸುವುದು ಸುಂಡಿಲನು ತೂಗಾಡುವುದು . . . ಹಿಡಿಹಿಂಗೆ ಲಾಗಿಸುತಿರ್ದುದಾ ದಂತಿ (ಕುಮಾರವ್ಯಾಸ. ೩-೩೭) : ಮೈಯೆಲ್ಲ ತೂಗಾಡದೊಂದಿನಿಸು ... ಸಲ್ಲಲ್ಲಿತದೊಳು ಹಾಡಿದರು (ಭರತ. ೦-೬೦) ; ಪಾಡಿದರ್ ಪೊಂದೊಟ್ಟಿಲಂ ಸಖಿಯರೊಡನೆ ತೂಗಾಡಿದರ್ (ಚಂದ್ರಪ್ರ. ೪೬-೬). ೩. ತೂಕಡಿಸು : ಈ ಕಾರಣದಿಂದ ಗೌರೀದೇವಿಯು ಮಲಗಿಕೊಳ್ಳುವುದಕ್ಕೆ ಹಾಸಿಗೆಯಾದರೂ ದೊರೆಯದೆ ಒಂದು ಗೋಡೆಯನ್ನೊರಗಿಕೊಂಡು ಹಾಗೆಯೇ ತೂಗಾಡಬೇಕಾಯಿತು (ಕವಿಕ. ೫೩). ೪. ಹೊಯ್ದಾಡುತ್ತ ನಡೆ : (೩). ೫. ಡೋಲಾಯಮಾನವಾಗು ; ನಿರ್ಣಯಕ್ಕೆ ಬಾರದಿರು ; ಅನಿಶ್ಚಿತ ಪರಿಸ್ಥಿತಿಯನ್ನು ಪಡೆ: ಈ ಜಂಜಾಟದಲ್ಲಿ ತೀರ್ಮಾನವು ತೂಗಾಡುತಿತ್ತು (ಚಿದೇಶ. ೪೬) ; ವಾದವಿವಾದಗಳ ತಕ್ಕಡಿಯಲ್ಲಿ ತೂಗಾಡುವ ಈ ವಿಷಯದ ವಿಮರ್ಶೆ ಮುಂದೆ ಬರುತ್ತದೆ (ದ್ರಾವಿಡ. ೪೫). ೬. (ಆಲಂ) ಓಲಾಡು ; ನಲಿದಾಡು : ಲಲ್ಲೆಯಿಂ ತೊನೆಯುತ್ತಿರ್ದ ನಿಜಾಂಗದಿಂದವೊಲೆಯುತ್ತುಂ ತೊಟ್ಟಲಂ ತತ್ಕುಮಾರನಿಳಾಧೀಶನ ಚಿತ್ರಮುತ್ಸವದೊಳೆಂ ತೂಗಾಡೆ ತೂಗಾಡುವಂ (ಕುಸುಮಾ. ೬-೦೪೩). **ಜೂಗಾಡು :** ೧. "ಜೂಗಾಡು = ತೂಗಾಡು" (ಶಾನಕೋ. ೩೦). [ ತೂಗು$_1$ (<ತೂಂಕು$_1$) + ಆಡು$_1$ ]

**ತೂಗಿಸು** (ಕ್ರಿ). ೧. ತೂಕ ಮಾಡಿಸು : ತೂಗಿಸಿ ತೊಲೆಯೊಳ್ ಬಾಯಂ ಮೂಗುಮನೊಡೆಯೊತ್ತಿ ಕೊಂದ ಕಳ್ಳನ ದೇಹಂ ತೂಗಿದೊಡೆ ಕುಂದದಾತ್ಮವಿಭಾಗಂ ಬೇಱಿಲ್ಲ ಜೀವನೆಂತುಂ ದೇಹಂ (ಯಕೋಶ. ೪-೨೦). ೨. (ಮೆಚ್ಚುಗೆಯಿಂದ ತಲೆಯನ್ನು) ತೂಗುವಂತೆ ಮಾಡು : ಶಿರವ ತೂಗಿಸುವುದೀ ವಚನದ ರಚನೆ (ಮೋಹತ. ೦-೨೫). ೩. ನೇತುಹಾಕು ; ಇಳಿಬಿಡಂ: ಲಿಂಗವ ಎದೆಗೆ ಕಟ್ಟನ್ನಾಗ ಬಳಿದನು ಭಸಿತ ವದನಕೆಯಂಗಸಂಗದಲಿ ತೂಗಿಸಿದ ರುದ್ರಾಕ್ಷಿಸರಗಳನು (ಬಿಜ್ಜಪು. ೯೧-೨). ೪. ತೊಟ್ಟಿಲನ್ನು ತೂಗು : ಹೆಸರನಿಕ್ಕಿದರನಿರುದ್ಧನೆಂದೆನುತ ತೂಗಿಸಲೊಡರ್ಚಿದರು ಜೋಗುಳವ (ಮೋಹತ. ೦೬-೫೦). ೫. ನಿಭಾಯಿಸು ; ನಿರ್ವಹಿಸು ; ಸಂಭಾಳಿಸಂ : ಈ ಕೆಲಸವನ್ನು ನೀನು ತೂಗಿಸಬಲ್ಲೆಯಾ? (ಶಾಪ).

**ತೂಗಿಸಿಕೊಂಡು ಹೋಗು**=ನಿಭಾಯಿಸು; ಸಾಗಿಸು ; ಸಂಭಾಳಿಸು : ಪಾತ್ರರಚನೆಯ ದೃಷ್ಟಿಯಿಂದ ಎಡ್ವಿನ್‌ನ ವ್ಯಕ್ತಿತ್ವದಲ್ಲಿ ಕತೆಯ ಬೌದ್ಧಿಕತೆಯನ್ನು ತೂಗಿಸಿಕೊಂಡು ಹೋಗುವ ನಿರ್ಲಿಪ್ತತೆಯಿಲ್ಲ (ಹೊಸಕ. ೨೯೦) : ಅಷ್ಟು ತಾಪತ್ರಯದಲ್ಲೂ ಅವನು ಹೇಗೋ ಸಂಸಾರವನ್ನು ತೂಗಿಸಿಕೊಂಡು ಹೋಗುತ್ತಿದ್ದಾನೆ (ಶಾಪ).

[ ತೂಗು$_1$ (<ತೂಂಕು$_1$) + –ಇಸು$_3$ ]

**ತೂಗು$_1$** 'ತೂಂಕು$_1$' ನೋ.

**ತೂಗು$_2$** 'ತೂಂಕು$_2$' ನೋ.

**ತೂಗುಂಗೊಂಬು** (ನಾ). ನೇತಾಡುತ್ತಿರುವ ಕೊಂಬೆ : ತುಱುಗಿರ್ದ ಬಲ್ಮಿಡಿಯ ತೂಗುಂಗೊಂಬಿನೊಳ್ಪಾಯ್ದು ಮಂಡಳಿಸುತ್ತಿರ್ಪ ಶಾಕಾಳಿ (ಆದಿಪು. ೧೧-೯೬). [ ತೂಗು$_1$ (<ತೂಂಕು$_1$) + ಕೊಂಬು$_1$ ]

**ತೂಗುಂಜೊಡರ್,** ತೂಗುಂಜೊಡರಂ (ನಾ). ನೇತುಹಾಕಿರುವ ದೀಪ ; ತೂಗುದೀಪ : ಜಕಾರಕ್ಕೆ—ತೂಗುಂಜೊಡರ್, ಅಟ್ಟುಂಜಗಳಂ (ಶಮದ. ೧೬೦ಪ್ರಯೋ) ; ಮಾಲವವೆಸರ ವಿಷ್ಣುಭಕ್ತಂ ಆ ಕ್ಷೇತ್ರದ ದೇಗುಲದೊಳ್ ತೂಗುಂಜೊಡರನುರಿಯಿಸುವಂ (ಅದ್ಯುಕ. ೦೬-೨೪). **ತೂಗುಂಜೊಡರು:** ಹಸಿರ ಬಸಿರೊಳೊಗೆದಲರಿನ ತೂಗುಂಜೊಡರಾದಿಸುತಿವೆ ಇಲ್ಲಿ ಕೆಂಡಸಂಪಿಗೆ (ಹೊಚಾರಿ. ೯-೫).

[ ತೂಗು$_1$ (< ತೂಂಕು$_1$) + ಸೊಡರ್ ]

**ತೂಗುಂಜೊಡರು** ' ತೂಗುಂಜೊಡರ್ ' ನೋ.

**ತೂಗುಂದಲೆ** (ನಾ). ೧. ನೇತಾಡುತ್ತಿರುವ ತಲೆ : ಪೊಸ ದೂವೆ ದೂ[ಹಾಕಾಂ. ದಂಬೆತೂ]ವ ತೂಗುಂದಲೆ ಬಾಚಿಸಿಣಂ ಪೊಡರೆ ಬಳ್ಕುವ ಸಮ್ಮಾನ ಸೂಲಮಾಲದೊಳ್ ಸಾದಣೆಯಾಗಿ ನೇಲ್ವ ಪೆಣನೊಂದಿರೆ (ಕಾವ್ಯಾವ. ೫೬); ದಕಾರಕ್ಕೆ–ಕಡುಕುಂದಱ ... ಆಡುದೊಲೆ, ತೂಗುಂದಲೆ (ಶಮದ. ೦೬೦ಪ್ರಯೋ). ೨. (ಒಪ್ಪಿಗೆ, ಮೆಚ್ಚುಗೆ ಮುಂತಾದುವನ್ನು ಸೂಚಿಸುವ

ದಕ್ಕಾಗಿ) ತೂಗುವ ತಲೆ: (ತೂಗುಂದಲೆಯಿಂದ ಪ್ರೋತ್ಸಾಹಿಸಿ ಎರ್ದೆ ಗುಡುವವನು) (ಚಟ್ಟಿಲಿ. ೦೦೩-೯). [ತೂಗು$_1$ (< ತೂಂಕು$_1$) + ತಲೆ$_1$]

**ತೂಗುಂದೆನೆ** (ನಾ). ಅತ್ತಿಂದಿತ್ತ ಆಡುತ್ತಿರುವ ತೆನೆ–ಹೊಡೆ: ಅನಿಲಾಯತ್ತೋಚ್ಚಲಚ್ಚಾಳಿಯೊಳವಯುವದಿಂ ಪಾಯ್ದು ಕಾಲ್ ಜಾಱಿ ತೂಗುಂದೆನೆಯಂ ತಟ್ಟೈಸಿ (ಲೀಲಾವ. ೫-೫೯); ತೂಗುಂದೆನೆಯಾ ಕಳವುಮಲ್ಲಲ್ಲಿ ಕಾಸಾರವಲ್ಲಲ್ಲಿ . . . ಮೆಱೆವುದೆನೆ ಸುಖಾವಾಸವಪ್ಪ ದೇಶವಲ್ತೇ (ವೃಷವಿ. ೪-೪). [ತೂಗು$_1$ (< ತೂಂಕು$_1$) + ತೆನೆ$_1$]

**ತೂಗುಂದೊಟ್ಟಿಲ್, ತೂಗುತೊಟ್ಟಿಲು** (ನಾ). ಅತ್ತಿಂದಿತ್ತ ಆಡುತ್ತಿರುವ ತೊಟ್ಟಿಲು; ಜೀಕುತ್ತಿರುವ ತೊಟ್ಟಿಲು: ಎಸೆವ ತೂಗುಂದೊಟ್ಟಿಲೊಳ್ ಪಟ್ಟ ಪುತ್ರನ ವಕ್ತ್ರೇಂದುವನಂಜನಾಂಕಿತವಮನಾನಿನ್ನೆಂದು ಪೇೞ್ ಕಾಣ್ಬೆನೋ (ಶಾಂತಿಪು.೩.೫೫); ದಶಾರಕ್ಕೆ–ಕಡುಕುಂದಣಂ, ಉಱಂಗಿ ಬೊಱ, ತೂಗುಂದೊಟ್ಟಿಲ್, ಆಡುಂದೊಲೆ (ಕಮಚ. ೦೭೦ ಪ್ರಯೋ); ತೂಗುಂದೊಟ್ಟಿಲೊಂದು ಪಾಂಗಿನಿಂ ಬಗೆ ಮನವಮಱಕದ ಗಂಡಗರ್ವದಿರ್ದೆಸಿಮೂಲೆಗಳೊಳಮುಯ್ಯಲೆಲಾತ (ಜಾಮೂತ್ಕ. ೯೩-೩೪) **ತೂಗುತೊಟ್ಟಿಲು**: ಮಂಡೋದರಿಯ ಸೊಸೆಯ ಶಿಶು ಕೂಗಿದನು ತೂಗುತೊಟ್ಟಿಲೊಳಿದ್ದು ಕುಳಿತಂ (ಶ್ರೀರಾಮಾ. ೯೫೦-೭); ತೂಗುತೊಟ್ಟಿಲಿನ 'ಕಿರೀಂ', 'ಕಿರೀಂ' ಸದ್ದು (ವಾತ್ಸಲ್ಯ. ೨). [ತೂಗು$_1$ (< ತೂಂಕು$_1$) + ತೊಟ್ಟಿಲ್$_1$]

**ತೂಗುಂಮಂಚ, ತೂಗುಮಂಚ** (ನಾ). ತೂಗಲು ಅನುಕೂಲವಾಗುವಂತೆ ಕಟ್ಟಿರುವ ಮಂಚ; ಉಯ್ಯಾಲೆ ಮಂಚ: ತೂಗುಂಮಂಚದೊಳ್ ಶಶಿಪ್ರಭಾಮಹಾದೇವಿಯುಂ ತಾನುಂ ಕುಳ್ಳಿರ್ದು (ಚಂದ್ರಪ್ರ. ೭-೯೫ವ); ಸೀತೆಯೊರ್ವಳ್... ತೂಗುಂಮಂಚಮನೇಱಿ ಚೆಲ್ವಿನಿಂ ಕುಳ್ಳಿರ್ದು (ರಾಮಾಕ್ಯ. ೦೭-೩೦). **ತೂಗುಮಂಚ**: "ಆಂದೋಳ ಪರಿಯಂಕಮೆನೆ ತೂಗುಮಂಚ ಮಕ್ಕುಂ" (ಮಂಗರಾ. ೬೦-೦೭); ಮಂಚಕ್ಕೆ—ಕಾಂಚನಮಂಚ. ತೂಗುಮಂಚ, ರತ್ನಮಂಚ (ಕಮಚ. ೨೯೫ ಪ್ರಯೋ); ಅರಸು ಪವಡಿಪ ತೂಗುಮಂಚದ ಸರಪಳಿಯ ಬಳಿವಿಡಿದು ಪಟುಭೀಕರವಿಷೋರಗವಾಗಳೊಂದು ರವಣಿಸಿ ಹರಿತಂದು (ಬಸವಪು. ೪೭-೨೦); ತೂಗುಮಂಚದ ಹಂಸತೂಲದ ಹಾಸಿಗೆ (ಕುರಂಗ. ೩-೦೩೦-೨); ಆಗಲಾ ದಮಯಂತಿ ಚಿತ್ರದ ಬಾಗಿಲುಪ್ಪರಿಗೆಯಲಿ ರತ್ನದ ತೂಗುಮಂಚದ ಹಾಸಿನಲಿ ಕುಳ್ಳಿರಲು (ನಳಚ. ೩-೨೮); ತೂಗುಮಂಚದ ಮೇಲೆ ಪೊಱಗುಮುಱೆಗೆ ವಾಮಭಾಗವನಿಟ್ಟು ಕುಳಿತನು (ಭರತ. ೪-೦೦೭): ನಂದಗೋಪನ ಮನೆಯ ತೂಗುಮಂಚದ ಮೇಲೆ ನಿದ್ದೆ ಮೇಲುದುವಾತ್ಮ ಹೊದೆಯಲಿರೆ (ಗೋಕುಲನಿ. ೯-೦೯). [ತೂಗು$_1$ (< ತೂಂಕು$_1$) + ಮಂಚ]

**ತೂಗುಕುದುರೆ** (ನಾ). ಹಿಂದಕ್ಕೂ ಮುಂದಕ್ಕೂ ಆಡುವ, ಮಕ್ಕಳ ಆಟದ ಕುದುರೆ: ಮಗು ಸವಾರಿ ಮಾಡುವ ಮರದ ತೂಗುಕುದುರೆ (cock-horse. ಇಂಕನಿ). [ತೂಗು$_1$ (< ತೂಂಕು$_1$) + ಕುದುರೆ]

**ತೂಗುಕೋಲು** (ನಾ). (ವಿಶೇಷವಾಗಿ ಹಳ್ಳಿಗಳಲ್ಲಿ) ಬೆಣ್ಣೆ ಮೊದಲಾದುವನ್ನು ತೂಕಮಾಡಲು ಬಳಸುವ, ಒಂದೇ ಪರಡಿ ಅಥವಾ ತಟ್ಟೆಯಿರುವ ಮರದ ಕೋಲು: ಚಿಂತಾಲು, ತಕ್ಕಡಿ, ತೂಗುಕೋಲು ...ಖಂಡಿ ಮುಂತಾದವುಗಳಿಂದಲೂ ಮೂರು ಬಗೆಯಾಗಿದೆ (ಸಿದ್ಧಾಂತಿ. ೩೦೦); ತೂಗುಕೋಲು ತಂದಿದ್ದೀಯಲ್ಲ, ತಕ್ಕಡಿ ಬಟ್ಟು ಎಲ್ಲಿ? (ಕೂಡಿ). [ತೂಗು$_1$ (< ತೂಂಕು$_1$) + ಕೋಲು$_1$ (< ಕೋಲ್$_1$)]

**ತೂಗುಗುಂಡು** (ನಾ). (ಗಡಿಯಾರದ) ಲೋಲಕ; ತೂಗಾಡುವ ಗುಂಡು: ಕವಿಯ ಮನಸ್ಸು . . . ಹೀಗಿಂದ ಹಾಗೆ ಗಡಿಯಾರದ ತೂಗುಗುಂಡಿನಂತೆ ತೋರುತ್ತಿತ್ತು (ಅಲಹೂ. ೦೨೦). [ತೂಗು$_1$ (< ತೂಂಕು$_1$) + ಗುಂಡು]

**ತೂಗುಜೋಕಾಲಿ** (ನಾ). ತೂಗಾಡುವ ಉಯ್ಯಾಲೆ: ಬಾಳುವೆಯು ಹೊಸದೊಂದು ಒಗಟವಾಗಿಹುದು. ನೆಲೆಯರಿಯದೇ, ತೂಗುಜೋಕಾಲಿಯಾಗಿ ತಲೆತಿರುಗಿಸುವುದೊಮ್ಮೆ, ಕೆಳಗೆ ಮೇಲಾಗಿ (ಉಯ್ಯಾಲೆ. ೭೭-೭). [ತೂಗು$_1$ (< ತೂಂಕು$_1$) + ಜೋಕಾಲಿ]

**ತೂಗುತೊಟ್ಟಿಲು** 'ತೂಗುಂದೊಟ್ಟಿಲ್' ನೋ.

**ತೂಗುತೊಲೆ** 'ತೂಗುದೊಲೆ' ನೋ.

**ತೂಗುದೀಪ** (ನಾ). =ತೂಗುಂಜೊಡರ್: ಭವ್ಯವಾದ ದೇವಮಂದಿರ. ಬೆಳ್ಳಿಯ ತೂಗುದೀಪಗಳು (ಶ್ರೀರಾಯ. ೨೩೦). [ತೂಗು$_1$ (< ತೂಂಕು$_1$) + ದೀಪ$_1$]

**ತೂಗುದೀವಿಗೆ** (ನಾ). =ತೂಗುಂಜೊಡರ್: ಜೋಲುವ ತೂಗುದೀವಿಗೆಯ ಸಾಲುಗಳೊಳು [ಪಾಠಾಂ. ಜೋಲುವ ದೀಪಸಾಲುಗಳೊಳು ಕೇರಿ] ದೀಪಾಳಿಯ ಹಬ್ಬದಂತಿಹುದು (ಭರತ. ೦೫-೨೩). [ತೂಗು$_1$ (< ತೂಂಕು$_1$) + ದೀವಿಗೆ]

**ತೂಗುದೊಲೆ, ತೂಗುತೊಲೆ** (ನಾ.) ೧. ಒಂದು ಬಗೆಯ ಯುದ್ಧ ಸಾಧನ; ಲಗ್ಗೆಯಲ್ಲಿ ಶತ್ರುಗಳ ಮೇಲೆ ತೂಗಿ ಎಸೆಯುವ ಮರದ ದಿಮ್ಮಿ: ಸಾಲ ಮುಗಿಲಟ್ಟಣೆಯ ಡೆಂಕಣಿಯ ಪಂದಿದಲೆಯೋಳಿಗಳ ಮರುಳ ಕೈಗಳ ತೂಗ[ಗು]ದೊಲೆಯ . . . ವಿಶಾಲಶಾಲಮನಿರದೆ ದಿವಿಜಪತಿ ಕಂಡು (ಚಲಪು. ೯೭-೨೨). ತೂಗುತೊಲೆ: ೨. ಇಳಿಬಿಟ್ಟಿರುವ ತೊಲೆ; ನೇತುಹಾಕಿರುವ ಮರದ ದಿಮ್ಮಿ: ಎಂಥ ಭಾರಕು ಜೋಲಿ ಹೊಡೆಯದಿಹ ತೂಗು–ತೊಲೆ (ನಲಮು. ೩೦-೭). [ತೂಗು$_1$ (< ತೂಂಕು$_1$) + ತೊಲೆ$_2$]

**ತೂಗುನೀರು** (ನಾ). ೧. ಎರಡು ಕೈಗಳಲ್ಲೂ ಕೊಡಗಳನ್ನು ಹಿಡಿದುಕೊಂಡು ಗಿಡ, ಮರ, ಬಳ್ಳಿ ಮೊದಲಾದುವುಗಳಿಗೆ ಒದಗಿಸುವ ನೀರು: ಅರಮನೆಯಲ್ಲಿ ಪ್ರತಿದಿನದಲ್ಲಿಯೂ ನಡೆಯುವಂತೆ ಕಟ್ಟುಮಾಡಿದ ಊಳಿಗಗಳ ವಿವರ...ಕರಗದ ಊಳಿಗ, ತೂಗುನೀರಿನ ಊಳಿಗ (ಚಾಮುವಂ. ೯೫). ೨. ನೇತುಹಾಕಿದ ಪಾತ್ರೆಯಲ್ಲಿಟ್ಟ ನೀರು: ತೂಗುನೀರಿನಲ್ಲಿ ಲವಂಗ, ಏಲಕ್ಕಿ, ಸಬ್ಬಸಿಗೆಬೀಜ, ತಾಳೀಶಪತ್ರೆ ಸಹ ಅರೆದು...ಸೇವಿಸೆ ವೈತ್ಯರೋಗಂ ಗುಣಮಕ್ಕುಂ (ಸಕವೈ. ೦೩೪). [ತೂಗು$_1$ (< ತೂಂಕು$_1$) + ನೀರು$_1$ (< ನೀರ್$_1$)]

**ತೂಗುಪಾತ್ರೆ** (ನಾ). ೧. ನೇತುಹಾಕಿರುವ ಪಾತ್ರೆ: ಆಗಾಗ ದೈವಿಕ ಪರಿಮಳದ ತೂಗುಪಾತ್ರೆಗಳು ಗಾಳಿಯಲ್ಲಿ ಓಲಾಡಿದ ಶಬ್ದ ನನಗೆ ಕೇಳುತ್ತಿತ್ತು (ಯೋಗಪು. ೪೬). ೨. ನೇತುಹಾಕಲು ಅನುಕೂಲವಾಗುವಂತೆ ಹಿಡಿ ಇರುವ ಪಾತ್ರೆ. [ತೂಗು$_1$ (< ತೂಂಕು$_1$) + ಪಾತ್ರೆ]

**ತೂಗುಬಿಡು** (ಕ್ರಿ). ಜೋಲಾಡುವಂತೆ ಮಾಡು; ನೇತುಬಿಡು; ಇಳಿಬಿಡು: ಅವರ ಖಗೋಳಸಿದ್ಧಾಂತದ ಪ್ರಕಾರ ಭೂಮಿಯು ಗೋಳಾಕಾರವಾಗಿದ್ದು ಅಂತರಿಕ್ಷದಲ್ಲಿ ತೂಗುಬಿಟ್ಟ ಹಾಗಿದೆ (ಶಿಲ್ಪಾಣ. ೯೫). [ತೂಗು$_1$ (< ತೂಂಕು$_1$) + ಬಿಡು$_1$]

**ತೂಗುಮಂಚ** 'ತೂಗುಂಮಂಚ' ನೋ.

**ತೂಗುಮಣಿ** (ನಾ). ಜೋಲಾಡುವಂತೆ ಹರಳನ್ನಿಟ್ಟು ಮಾಡಿರುವ ಒಂದು ಬಗೆಯ ಆಭರಣ: ಕೈಗಡಿಯಾರದ ಜೊತೆಗೆ ಚಿನ್ನದ ಬಳೆಗಳು. ಕಿವಿಗೆ ತೂಗುಮಣಿಗಳನ್ನು ಇಳಿಬಿಟ್ಟು ಹಣೆಗೆ ತಿಲಕವನ್ನಿಟ್ಟಿದ್ದಳು (ದೂರಕಿಸ. ೮೭). [ತೂಗು$_1$ (< ತೂಂಕು$_1$) + ಮಣಿ$_3$]

**ತೂಗುಮಣೆ** 'ತೂಗುವಣೆ' ನೋ.

**ತೂಗುಮರ** 'ತೂಗುವರ' ನೋ.

**ತೂಗುಯ್ಯಲೆ, ತೂಗುಯ್ಯಾಲೆ** (ನಾ). ೧. ತೂಗಾಡುತ್ತಿರುವ ಉಯ್ಯಾಲೆ: ಲಕ್ಷ್ಮಣಂ ... ಎಂದುಮುಗಲದಣ್ಣನ ಕಡೆಗೆ ದೂಳ್ಮಾಯು

ದೊಳ್ಪತ್ತಿ ಪೊರಳ್ದ ಸೀತೆಯ ಕಡೆಗೆ ತೂಗುಯ್ಯಲೆವೊಲಾದನು (ಕೃವಿಭಾ. ೦೯-೫೯): ಕೊಂಬೆಯಂ ತೂಗುಯ್ಯಲೆಯಾಲಿ ಹಕ್ಕಿ ಸುರಗಾನದ ಹೊಳೆಹರಿಸಿತು ಸೊಕ್ಕಿ (ಶಾಂಚಜ. ೫೭-೩). ೨. (ಅಲಂ) ಡೋಲಾಯಮಾನವಾದ ಸ್ಥಿತಿ; ಸಂದಿಗ್ಧಪರಿಸ್ಥಿತಿ: ಅವಳ ಪ್ರೇಮ ತೂಗುಯ್ಯಲೆಯಾಗಿತ್ತು (ಪುಪರು. ೫೬೦). **ತೂಗುಯ್ಯಾಲೆ**: ೨. ಹಳೆಯುದನ್ನು ಬಿಡಬೇಕೋ ಕಟ್ಟಿಕೊಳ್ಳಬೇಕೋ ಎಂಬ ತೂಗುಯ್ಯಾಲೆಯಲ್ಲಿದೆ ನನ್ನೂರು (ನನ್ನೂರು. ೩೦೯).

[ ತೂಗು$_1$ (< ತೂಂಕು$_1$) + ಉಯ್ಯಲೆ (< ಉಯ್ಯಲ್) ]

**ತೂಗುಯ್ಯಾಲೆ** ‘ ತೂಗುಯ್ಯಲೆ ’ ನೋ.

**ತೂಗುವಣೆ**, ತೂಗುವಂಣೆ (ನಾ). ಉಯ್ಯಾಲೆ; ಜೋಕಾಲಿ: ತಳಿರ ತೊಂಗಲ ತೂಗುವಣೆಯಲ್ಲಿ . . . ಸುಳಿದಾಡುವ ಮಂದಮಾರುತ ಮತ್ಕಾಂತನ ಬಳಿಗೆನ್ನ ಸಾರ್ಚಿಂದಳಳುತ (ಕೋಹಕ. ೯-೨೮). **ತೂಗುಮಣೆ**: ತೂಗುಮಣೆ ಇರೋದೆ ಮಕ್ಕಳಾಟಕ್ಕೆ, ಆಡಬೇಡ ಅನ್ನಬೇಡ (ಜಾಪ). [ ತೂಗು$_1$ (< ತೂಂಕು$_1$) + ಮಣೆ ]

**ತೂಗುಮರ**, ತೂಗುಮರ (ನಾ). ೧. = ತೂಗುದೊಲೆ ೧: ತಳಿವರ ನೂಲಹರಿಗೆ ಕಬ್ಬಿನದ ಬಲ್ಲಲಗೆ ಬದ್ದರ ಸಾರವಾರಿ ತೊಲೆ ತೂಗುಮರ ಬಲೆಹಗ್ಗ ಮಾಕರದಿಬ್ಬ ಸಲೆ ಮೆರೆದವು ದುರ್ಗದೊಳಗೆ (ಕುಮಾಸಾಂ. ೩೭-೫೬). **ತೂಗುಮರ**: ೨. ನೇಣುಮರ; ಗಲ್ಲುಗಂಬ: ನಾನು ಈಗಲೆ ಹೇಳಿದ್ದೇನೆ. ಇವನು ಒಂದು ದಿನ ತೂಗುಮರ ಏರುತ್ತಾನೆ (ಜಾಪ).

[ ತೂಗು$_1$ (< ತೂಂಕು$_1$) + ಮರ$_1$ ]

**ತೂಗುವೆರಳು** (ನಾ). (ಮೆಚ್ಚುಗೆಯಿಂದ) ಅಲ್ಲಾಡಿಸುತ್ತಿರುವ ಬೆರಳು: ಮರ್ಛು ಪೂತು ಭಾಪೆನುತ ತೂಗುವೆರಳಿನ ಮಕುಟದೊಲಹಿನೊಳಾಗರುವಘಟರುಲಿಯೆ (ಕುವ್ಯಾದ್ರೋ. ೦-೩೭).

[ ತೂಗು$_1$ (< ತೂಂಕು$_1$) + ಬೆರಳು (< ಬೆರಲ್) ]

**ತೂಗುವೊಡಲು** (ನಾ). ಜೋಲುತ್ತಿರುವ ಶರೀರ; ನಿಲ್ಲಲಾರದೆ ತತ್ತರಿಸುತ್ತಿರುವ ದೇಹ: ತೂಗುವೊ[ಪಾಠಾಂ. ಗಿದೊ]ಡಲರೆಮುಚ್ಚುಗಂಗಳ...ಮೂರ್ಛೆಯಲಿ ರವಿಸೂನು ಮೈಮರೆದ (ಕುವ್ಯಾಕ. ೧೦-೩೦).

[ತೂಗು$_1$ (< ತೂಂಕು$_1$) + ಒಡಲು (< ಒಡಲ್)]

**ತೂಗುಸೇತುವೆ** (ನಾ). "ತಳದಲ್ಲಿ ಆಧಾರವಿಲ್ಲದೆ ಎರಡುಕೊನೆಗಳಲ್ಲೂ ಸ್ತಂಭ, ಮೊ.ಕ್ಕೆ ಬಿಗಿದು ಕಟ್ಟಿ, ಹೊಳೆ, ಮೊ. ಗಳಿಗೆ ಅಡ್ಡವಾಗಿ ತಂತಿ ಹೊರಜಗಳಿಂದ ಜೋಲ ಹಾಕಿರುವ ಸೇತುವೆ" (Suspension-bridge. ಇಂಕನ್ನ); ೧೫೫೦ರಲ್ಲಿ ಮೊದಲ ಬಾರಿ ಪಲೇಡಿಯೊ ಕಬ್ಬಿಣದ ತೂಗುಸೇತುವೆಯನ್ನು ಕಟ್ಟಿದನು (ಶಿಲ್ಪಶಾ. ೦೫೪).

[ತೂಗು$_1$ (< ತೂಂಕು$_1$) + ಸೇತುವೆ]

**ತೂಗುಹಲಗೆ** (ನಾ). (ಅಂಗಡಿ ಮೊದಲಾದುವುಗಳ ಮುಂದೆ ಅದರ ಹೆಸರನ್ನು ಬರೆದು) ತೂಗುಹಾಕಿರುವ ಹಲಗೆ; ನಾಮಫಲಕ: ಆಮೇಲೆ ಬರುವಿ ನೀ ದತ್ತತಾಯಾಗಿ ಕರ್ತವ್ಯಗಳ ತೂಗುಹಲಗೆಯನೆ ತೂಗಿ (ನವ್ಯರ್ಧ. ೭-೦೫): ಬಾಂಬೇ ಸೈಕಲ್ ಸ್ಟೋರ್ಸ್ ಎಂಬ ತೂಗು ಹಲಗೆ ಅದರ ಮುಂದೆ ನೇತಾಡುತ್ತಿತ್ತು (ನಿಸುತ. ೦).

[ ತೂಗು$_1$ (< ತೂಂಕು$_1$) + ಹಲಗೆ (< ಪಲಗೆ) ]

**ತೂಗೋಲೆ** (ನಾ). ತೂಗಾಡುತ್ತಿರುವ ಓಲೆ; ಲೋಲಕ: ಕತ್ತಿನಲ್ಲಿ ವಜ್ರದ ಹಾರ. ಕಿವಿಗಳಿಗೆ ವಜ್ರದ ತೂಗೋಲೆ (ಪ್ರಕಾಶ. ೨).

[ತೂಗು$_1$ (< ತೂಂಕು$_1$) + ಓಲೆ]

**ತೂಟಿಸು** (ಕ್ರಿ). ನಾಶಮಾಡು; ಪರಾಭವಗೊಳಿಸು: ನಿನ್ನಿನ ರಣವನ್ನೆಯ ತಾ ತೂಟಿಸಿದುದೇನಾಯ್ತೆನುತ್ತ, ಹೆಂಗಳ ನೋಟದಿಂದುತ್ತರಂ ನುಡಿದನು (ಕುರಂಗ. ೩೭-೨೩). ‘ತುಟ್ಟಿಸು’ ಪರಾ.

[ < ತುಟ್ಟಿಸು ]

**ತೂಟೆದಾರ** (ನಾ). (ಕರಾ) ಉತ್ಸವಾದಿಗಳಲ್ಲಿ ತೆಂಗಿನ ಗರಿಗಳ ಕೊಳ್ಳಿಗಳನ್ನು ಹಿಡಿದು ಮಾಡುವ ಒಂದು ಬಗೆಯ ಹುಸಿಕಾಳಗ: ತೂಟೆದಾರ . . . ಬೇಂಟೆ (Hunting) ಇತ್ಯಾದಿಗಳು ತುಳುವರ ಧೈರ್ಯ, ಸ್ಥೈರ್ಯ, ವೀರತ್ವದ ಕುರುಹುಗಳೆಂಬುದಾಗಿ ಸೂಚಿಸಿದ್ದಾರೆ (ತುಳುನಾ. ೨೦). [ ← ತುಳು. ತೂಟೆದರ ]

**ತೂಡಿಲ್** (ನಾ). ಒಂದು ಸ್ಥಳದ ಹೆಸರು: ಅಸ್ಯ ಸೀಮಾನ್ತರಂ ಪೆರ್ವ್ವಟ್ಟಿಯೂರ ಸೀಮೆ ಮೂಡಯ್ತೂಡಿಲ ಪೆರ್ವ್ವಳ್ಳಮೋ . . . ಬಡಗಾಯ್ ಪೆರ್ವ್ವಳ್ಳಮ ಸೀಮೆ (ಎಕ. IV, ಹೆಗ್ಗಡ. ೪-೨೫; ಕ್ರಿ. 750). [ ? ]

**ತೂಣ$_1$** ‘ ತೂಳ$_1$ ’ ನೋ.

**ತೂಣ$_2$**, ತೂನ (ನಾ). ಕಂಭ; ಸ್ತಂಭ: " ತೂಣ(ನ) – ಸ್ಥೂಣ = ಗೂಟ, ಕಂಬ " (ಕದ್ಯಕೋ. ೧೮); ಮುಡದಿಯ ನುಣ್ದೊಡೆಗಳನ್ನು ಕಡೆಗೆ ಬಣ್ಣಸಲಾನೆಯಿಯ ಮೋಹನಮೆಂಬ ಗುಡಿಗಟ್ಟಿ ತೂಣದಂತಿಹುದು (ಅಂಜಕ. ೫-೦೨೪); ಸುರರ ಸಂದಣಿ ಭರದಿಂದ ಪರನಾಕವಿಳಿದು ಕೂಡದೊಲಜ ತೂಣವನಿರಿಸಿದಂತಿಹುದಲ್ಲಿ ಮೇರು (ವರ್ಧಕ. ೦-೪೮). **ತೂನ್**: (ಕ). ‘ ತೂನಗೆಣಸು ’ ಪರಾ. [ < ಸಂ. ಸ್ಥೂಣಾ ]

**ತೂಣ$_3$** (ನಾ). = ತೂಣೀರ: ಚಾಪಬಾಣಂಗಳ ತೂಣವೆಂದನಿಸಿ ರಂಜಿಸುತೊಂದು ಮನೋಜ್ಞಮಂಟಪಂ (ಉದ್ಯಟ. ೫-೦೭); ತೂಣದಿಂ ಸರಳ್ಗಳ ನುರ್ಚಿ ತೊಟ್ಟು ತಿರುವಂ ತೆಗೆದೆಚ್ಚಂ (ಶ್ರೀಪುವಿ. ೨೪-೩೫೨). [ ಸಂ. ]

**ತೂಣ$_4$** (ನಾ). ಯಮ: ತೂಣನ ತೋಳಂ ತುಂಡಿಸಿ ಪೂಷನ ಕೋಣೆಯ ಹಲ್ಲೆಲ್ಲ ಘಲ್ಲಿಸಿ . . . ತಿರುಗಿದನಧ್ವರದೆಡೆಗೆ (ವೀಶೇಕ. ೨-೪೩): ಓಹೋ ಹೋಯೆನ್ನಸುವಿಗ ತೂಣನ ತೋಹಿಗೆ ಸಿಲ್ಕದು (ಉದ್ಯದೀ. ೩-೪೩): ತೂಣನಂ ತುಳಿದ ಪೆಬ್ಬಾವಿನೆಂಜಲುಂಡಾ ... ಕಚ್ಚಿಗೊರಲ ಶಿವ ರಕ್ಷಿಸೈ ನಿಶ್ಚಲದೊಳು (ನಂದಿಪು. ೨೦-೫೫). ‘ತೂಣಕೋಡು’, ‘ತೂಣಕೋಣ’ ಪರಾ. [ ? ]

**ತೂಣಕೋಡು** (ನಾ). ಯಮನ ವಾಹನದ ಕೋಡು: ಮನಂಜವತಿ ಜವಹರಂಬುಗುವವನೆನುತುಂ ಬಿನ್ನೈಸುತಿರ್ಪ ಸಮಯದೊಳಗೆ ಪಡಿಹಾರಿಯೊರ್ವನೆಯ್ತಂದು ತಬ್ಬೋಳನೆಡೆಯಿಡದಡರಿದಂ ತೂಣಕೋಡುಗಳನೆನುತೊಡನೆ ಬಿನ್ನೈಸಿದಂ ತದ್ವೃತ್ತಸಂದೋಹಕಣಿಯರಂ ಮುಂದದೊಳು (ಅರಾಚ. ೪-೭೪). [ ತೂಣ$_4$ + ಕೋಡು$_1$ ]

**ತೂಣಕೋಣ** (ನಾ). ಯಮನ ವಾಹನವಾದ ಕೋಣ,– ಮಹಿಷ: ಸುರಪುಕರಿದಂತಮಂ ತೂಣಕೋಣನ ಕೊಂಬನಿರದೆ ಕಿಳ್ತಿರದನುಜಿ ಪಿಡಿದು ತಾಳಂಗುಟ್ಟುತ (ಅರಾಚ. ೦೭-೮). [ ತೂಣ$_4$ + ಕೋಣ$_1$ ]

**ತೂಣಗೊಳ್ಳು** (ಕ್ರಿ). ಪರವಶವಾಗು; ಆವೇಶ ಹೊಂದು: ವನದೇವಿಯೋಲಗದೊಳುತ್ಸವದಿಂದಮಡಿಗಡಿಗೆ ತೂಣಗೊಂಡವನಂತಸವ. ಮಂದಮಾರುತನ ನೋಡೆಂದನು (ಕೃಮಿಥಾ. ೩-೩೨): ನವಿಲ ನಾಟ್ಯವನ್ನು ನೋಡಿ ನೆನಸಿ ನೆನಸಿ ತೂಣಗೊಂಡೆ (ಪಯಣ. ೭೭-೭): ತೂಣಗೊಂಡಿಹೆನಿಂತು ಮಹಾದ್ಭುತಪವಾಡಸಂದರ್ಶನಕ್ಕೆ (ಅನಿಕೇ. ೫೯-೯).

[ ತೂಣ$_1$ (< ತೂಳ$_1$) + ಕೊಳ್ಳು$_1$ (< ಕೊಳ್$_1$) ]

**ತೂಣಮನ** (ನಾ). (ಕಂಬದಂತೆ) ಸ್ಥಿರವಾಗಿರುವ ಮನಸ್ಸು: ತೂಣಮನಗೈದಡವಿಯಂ ಸಾರ್ದೆಡಂ (ಶ್ರೀಣಾಪು. ೪-೩೩).

[ ತೂಣ$_2$ + ಮನ$_1$ ]

**ತೂಣಿ** (ನಾ). = ತೂಣೀರ: "ಮೂಡಿಗೆ, ತೂಣಿ; ಬತ್ತಳಿಕೆ – ಈ ೩ ದೆನ್ನ ಹೊದೆ" (ಕಕಸಾ. ೫೨-೦೦೭); ನಮಿಸಿ ಮುನಿಗಳಿಗಾಗ ಧನುವನಂ ಬಹುತೂಣಿಗಳಂ ಸಮರಜಯಕಾಂಕ್ಷೆಯಲಿ ಧರಿಸುತ (ಶಾಕ್ತರಾ. ೩೨-೭೦): ಪತಿಭಕ್ತಿಜಾಣೆಯುಂ ಸುಲಭಪ್ರವೀಣೆಯುಂ ಚಿದ್ಘಾಣತೂಣಿಯುಂ . . . ಪಶುಪತಿಯ ರಾಣಿಯುಂ ವಿಗೆ ಪೊಗಳುವೆ (ಗುರಚ. ೦-೭). [ ಸಂ. ]

**ತೂಣೆಕಾರ** (ನಾ). ಬತ್ತಳಿಕೆಯನ್ನು ಹಿಡಿದಿರುವ ವೀರ (?) : ಕಾಣಸಿಳ ದೇವಕೂಟದ ತೂಣೆಕಾರ x x x ದ್ದಲ್ಲಿ (ಶಿಅ. I, ೪೭-೧೦; 1425). [ ತೂಣೆ + - ಕಾರ$_1$ ( < - ಕಾಱ ) ]

**ತೂಣೀರ** (ನಾ). ಬಾಣವನ್ನು ತುಂಬುವ ಚರ್ಮದ ಚೀಲ; ಬತ್ತಳಿಕೆ : "ತೂಣೀರಂ . . . ಕಳಾಪಃ–ಈ ೮ ಮೂಡಿಗೆ" (ಹಲಾಯು. ೭೬-೩೧೧) ; ಸನ್ನಹತೂಣೀರಚಾಪಕಂಬಳಸಹಿತಂ ರಸ್ಸದ ಚಿತ್ರಿತ ಘಟಮಂ ತನ್ನಯ ಭುಜದೆ ತಳೆವಂ ಮೃಗಾಂತ್ಯತ್ರ್ಯಂಶಂ (ಜಾತಿತಿ. ೧೯-೩೦) ; ಕವಚಂದೊಟ್ಟು ಶ ರಾ ಸ ನ ಂ ಬಿ ಡಿ ದು. ತೂಣೀರಂಗಳಂ ತಾಳ್ದಿ (ಪಂಪಭಾ. ೯-೪೬) : ತೂಣೀರದೊಳ್ ಶರಂ ಪೋಗುವಂತೆ ತಲೆಯೊಳಗೆ ಮಾಣದೆ ಪೋಗಲು ಮೂರ್ಛೆಯೊಳಾಳ್ದು ಬೀಳೆ (ಕಪುಪು. ೩-೮.೯೪): ಸಾರ್ಥಕಂಗೆಯ್ದ್ ನನ್ನೈ ಕೊಟ್ಟು ಧನುರ್ಬಾಣಮಂ ದಿವ್ಯತೂಣೀರಮಂ (ಶ್ರೀರಾಪಾ. ೧೯೩-೪೬೯) [ ಸಂ. ]

**ತೂತ** (ನಾ). ೧. ಹುರುಳಿಲ್ಲದವನು; ಪೊಳ್ಳಾದವನು: ಆಶೆಗೆ ಸಿಲುಕಿ ಸಾವ ತೂತರಿಗೆಲ್ಲಿಯದೋ ಲಿಂಗ (ಪ್ರಭುವಚ. ೪೮-೨೦೦) : ನಾಡಿ ಸೂತ್ರಗಳ ಭೇದವನರಿಯದೆವೆಂದು ದೀಪನ ಪಚನ ವೈತ್ಯಕ್ಕೆ ಶ್ಲೇಷ್ಮವಿದೆಯೆಂದು, ಆತ್ಮನ ಹಿತವನರಿಯದ ತೂತ ವೈದ್ಯನಲ್ಲ (ಸಚವ. ೨೨-೬೦೨). (ಗು). ೨. ಪುರುಳಿಲ್ಲದ; ಪೊಳ್ಳಾದ. 'ತೂತಜ್ಞಾನಿ' ಪರಾ. [ ತೂತು$_1$ ( < ತೂಂತು$_3$ ) + - ಅ$_7$ ] ೨|

**ತೂತಜ್ಞಾನಿ** (ನಾ). ಪೊಳ್ಳುಜ್ಞಾನಿ ; ಅಜ್ಞಾನಿ : ಮಾತಿನ ಮಾಲೆಯ ಕಲಿತು ಸಂತೆಯ ಹೋತಿನಂತೆ ಹೋರುವ ತೂತಜ್ಞಾನಿಗಳಿಗಿನ್ನೆಂತಹ ವಿರಕ್ತಿಯೋ (ಪ್ರಭುವಚ. ೧೬೦-೬೩೩): ಮಾತಿನ ಮಾಲೆಯ ಬೋಧೆ ತೂತ ಜ್ಞಾನಿಗಳ ಸಂಸರ್ಗ (ಅಪರೀ. ೯೭). [ ತೂತ + ಜ್ಞಾನಿ ]

**ತೂತಪ್ಪಚ್ಚಿ** (ನಾ). ೧. ವಂಧ್ಯೆ ತೂತಂ ಮಾಡಿರುವ ರೊಟ್ಟಿ ಮೊದಲಾದ ತಿನಿಸು ; ತಪ್ಪಲೆರೊಟ್ಟಿ ಇತ್ಯಾದಿ. ೨. ಸ್ತ್ರೀಯ ಗುಹ್ಯಾಂಗ ; ಯೋನಿ : (*). [ ತೂತು$_1$ ( < ತೂಂತು$_3$ ) + ಅಪ್ಪಚ್ಚಿ ]

**ತೂತಾಲಂಬ** (ನಾ). ತಪ್ಪನ್ನೇ ಹಿಡಿದು ಹೋರಾಡುವವನು ; ದೋಷಗ್ರಾಹಿ (?) : ಮಾತಿಗೆ ಮಾತ ಗಂಟನಿಕ್ಕಿ ನಿಹಿತವರ್ತನವಿಲ್ಲದ ಸರ್ವ ತೂತಾಲಂಬರ ಮಾತು ಸಾಕಂತಿರಲಿ (ಅಪರೀ. ೮೦). [ ತೂತು$_1$ ( < ತೂಂತು$_3$ ) + ಆಲಂಬ ]

**ತೂತಿಡು** 'ತೂಂತಿಡು$_1$' ನೋ.

**ತೂತು$_1$** 'ತೂಂತು$_3$' ನೋ.

**ತೂತು$_2$** (ನಾ). ಒಂದು ಬಗೆಯ ವಿಮಾನ : ತೂತು ತೆಂತಲು ಸಿಸಿಲು . . . ಆನೆವೊಗನೆಂಬ ಪರಿಪರಿಯ ವಿಮಾನ್ಗಳಿಂ ಗುಡಿಗೆಯ್ದರು (ಹರಿಶಾ. ೩-೪೩). [ ? ]

**ತೂತುಕೆಡವು** (ಕ್ರಿ). ರಂಧ್ರವನ್ನುಂಟುಮಾಡು ; ತೂತಂಮಾಡು : "ಅವಿಧ ತೂತುಕೆಡವತಕ್ಕದು" (ಗಂಗಾಪು. ೨೮). [ ತೂತು$_1$ ( <ತೂಂತು$_3$ ) + ಕೆಡವು ( <ಕೆಡಪು ) ]

**ತೂತುಕೊರೆ** 'ತೂಂತುಗೊಱೆ' ನೋ.

**ತೂತುಗೆಯ್** (ಕ್ರಿ). = ತೂತಂಕೆಡವು : ಕಪೋತನೊಂದು ಕಾಂ ಠಕ್ಕಿಸಿ ಕಲ್ಲಿಯಂ ಕಡಿದು ಕನ್ನದೊಳೋಡಿದುದಂತೆ ಕಲ್ಲಿಯಂ ಚಿಕ್ಕನೆ ತೂತುಗೆಯ್ದು ಗಿಳಿಗಳ್ ಕರೆತಂದವು ತಮ್ಮ ಪೋತವಂ (ಪಮ್ಮಿಸ್ಕ. ೪-೬೨). [ ತೂತು$_1$ ( <ತೂಂತು$_3$ ) + ಗೆಯ್$_1$ ]

**ತೂತುಗೊಱೆ** 'ತೂಂತುಗೊಱೆ' ನೋ.

**ತೂತುತೆಗೆ** (ಕ್ರಿ). = ತೂಂತುಗೊಱೆ : ಗೋಡೆಯಲ್ಲಿ ಮೊದಲು ತೂತು ತೆಗೆದು ಆಮೇಲೆ ವೊಳೆ ಹೊಡೆ (ರೂಢಿ). [ ತೂತು$_1$ ( <ತೂಂತು$_3$) + ತೆಗೆ$_1$ ]

**ತೂತುಬಾಯ್**, **ತೂತುಬಾಯಿ** (ನಾ). ಯಾವ ವಿಷಯವನ್ನಾದರೂ ಗುಟ್ಟಾಗಿಡದೆ ಬಹಿರಂಗ ಪಡಿಸುವ ಬಾಯಿ ; ಒಡಕುಬಾಯಿ : ಮರ್ತ್ಯದ ಮನುಜರು ಸತ್ತರೆನುತ್ತ ಕತ್ತಲೆಯೊಳು ಮುಳುಗಿ ಈ ಮಾತು ಕಲಿತುಕೊಂಡು ತೂತುಬಾಯೊಳಗೆ ನುಡಿದು ... ಹುಟ್ಟುಗೊಂಡು ತಿರುಗುವ ಕತ್ತೆಮನುಜರ ಮೆಚ್ಚರು ನಮ್ಮ ಅಪ್ಪಣ್ಣಪ್ರಿಯಚನ್ನಬಸವಣ್ಣ (೦೦ಗವ. ೬೬-೩೯). **ತೂತುಬಾಯಿ** : ಅವಳದು ತೂತುಬಾಯಿ, ಯಾವುದೂ ಗುಟ್ಟಾಗಿ ಉಳಿಯುವುದಿಲ್ಲ (ರೂಢಿ). [ ತೂತು$_1$ (<ತೂಂತು$_3$) + ಬಾಯ್ ]

**ತೂತುಬಾಯಿ** 'ತೂತುಬಾಯ್' ನೋ.

**ತೂತುವೋಗು** 'ತೂಂತುವೋಗು' ನೋ.

**ತೂತೇಳು** (ಕ್ರಿ). ರಂಧ್ರವುಂಟಾಗು : ಮಾತುಗಾಱಿಕೆ ಬೇಡ ಹಿಡಿಯೆಂದು ಭಾಳದ ತೂತೇಳಲೆಚ್ಚು ಬೊಬ್ಬಿಱಿದ (ಮೋಹಕ. ೧೨-೩೯). [ ತೂತು$_1$ (<ತೂಂತು$_3$) + ಏಳು$_1$ (<ಏೞ್$_1$) ]

**ತೂತ್ಕಾರ** (ನಾ). ಒಂದು ಅನುಕರಣ ಶಬ್ದ : ಗೋವಳರೂತ್ತುವ ತಿತ್ತಿರಿಗಾಳೆಯ ತೂತ್ಕಾರಮುಮಂ (ಅರ್ಧನೇ. ೮-೬೩೪).

**ತೂದ** (ನಾ). ಒಂದು ಬಗೆಯ ಮರ; ಹೂವರಸಿ ; ಬ್ರಹ್ಮದಾರಂ : ತೂದಃ, ಪೂಗಃ, ಯೂಪಃ . . . ತೂಲಂ–೬ ಹುವ್ವರಸೆ ಗಿಡ . . . ಕಾಡಡಿಕೇಮರವೆಂದು ಕೆಲವರನ್ನುವರು (ಸಿದ್ಧಾಂತಿ. ೧೨೧). [ ಸಂ. ]

**ತೂದು** 'ತುಯ್$_2$' ಪರಾ.

**ತೂನ್**, ತೂನು (ಕ್ರಿ). ತೂಂತು$_2$ (ಭೂತನ್ಯೂ). ೧. ಜಗ್ಗು ; ಮುಂದಕ್ಕೆ ಎಳೆ : ಬಳ್ಳು ಎತ್ತಿನುವರದಿಂ ಪೊಱಮಟ್ಟು ಓಡುವುದಂ ಶ್ವಾನಂಗಳ್ ಕಂಡು ತೂನುತ್ತಿರಲ್ (ಪಂಚತಂ. ೨೦-೬) ; ಆ ಧನುವನು ತೂನಲ್ಕಾಱದೆಯಂಗಾಧೀಶ ತಿರುಗಿ ಲಜ್ಜೆಯೊಳು (ನೇಮಿಸಂ. ೨೩-೨೬೬) : ಕೆಲರಲ್ಲಿ ತಲೆಗೂಡಲಂ ಕಟ್ಟಿ ಬಿಡದೆ ಅಲೆದು ತೂನುತ್ತೊಯ್ವರು (ವೀಕ್ಕಪು. ೪-೦೯-೨೭); ಸಸಿ ಸಾಣೆಯನು ತೆಂಕಣೆಲರ್ವರ್ಗದೊಳು ತೂಂತು ಮಸೆಯ (ನಾಗಕು. ೩೦-೨೭). **ತೂನು** : ೨. ಕಿತ್ತುಕೊಳ್ಳು ; ಸೆಳೆದುಕೊಳ್ಳು ; ವಸೂಲುಮಾಡು : ಇಂದು ಗೌರಿಯ ಹಬ್ಬವಿಂದು ದೀಪಾವಲಿ ಇಂದು ಕೇತಾರನ ದಿನವೂ ಇಂದು ಯುಗಾದಿ ಮತ್ತಿಂದು ಸಂಕ್ರಾಂತಿಯೆಂದೆಂದು ಧನವ ತೂನುತಿಹರು (ಅಂಜಕ. ೫-೧೨೫).

**ತೂನ** 'ತೂಣ$_3$' ನೋ.

**ತೂನಗೆಣಸು** (ನಾ). ಒಂದು ಬಗೆಯ ಗೆಣಸು ; ಮರಗೆಣಸು : ತೂನ ಗೆಣಸು, ಮುಡಿಗೆಣಸು, ನೊರೆಲೆಗೆಣಸು, ತುಣಗೆಣಸು, ದಂಡಾಲು (ಮೃಶಿಗಿ. ೩೧-೫೯೨). [ ತೂನ (< ತೂಣ$_3$) + ಗೆಣಸು (< ಗೆಟಸು) ]

**ತೂನಿಹುಳ** (ನಾ). ಒಂದು ಬಗೆಯ ಹುಳು : ತೂನಿಹುಳ, ಗದ್ದಲು (ನಮ್ಮಸು. ೨೪೦). [ ತೂನಿ$_3$ + ಹುಳ (< ಪುೞು) ]

**ತೂನು** 'ತೂನ್' ನೋ.

**ತೂಪ** 'ತೂಂಕು$_1$' ಪರಾ.

**ತೂಪರ**, ತುಪರ, ತೂಪರೆ$_2$, ತೂಪುರ, ತೂಪ್ರ, ತೂಬರ$_1$, ತೂಬರೆ (ನಾ). = ತುಂಬುರು$_2$ : ಮಾತ್ತಂಗ್ಟ ಮಗಳಲ್ಲ ತಾಟ್ಗಿತ್ತಿ ಸೊಸೆಯಲ್ಲ ತೂಪರದ ಚೆಕ್ಕೆ ಒಲೆಗಲ್ಲ (ಹಳ್ಳಿಹಾ. ೮೭). **ತುಪರ** : ಮರಗಳು : — ಹೆಸವ ... ಹಸರಗನ್ನೆ, ತುಪರ (ನಮ್ಮಸು. ೨೩೬). **ತೂಪರೆ$_2$** : (*). **ತೂಪುರ** : ತೂಪುರದ ಕೊಳ್ಳಿಯೋಪಾದಿಯಲ್ಲಿ ಛಟಛಟಗುಟ್ಟುವಂಥ ಕಟ್ಟುಗ್ರದ ಕಡುಗೋಪವೇ ರೋಷವು (ವಚಶಾ. II, ೧೧೩). **ತೂಪ್ರ** : ಕಂಬಳಿಕರೀಮರ, ಬೀಡಿಎಲೆಮರ, ತೂಪ್ರ, ತೂಬರೆ (ಮೃಶಿಗಿ. ೩೧-೬೦೪). **ತೂಬರ$_1$** : ತೂಬರದ ಬೀಜ, ಕೊಡಸಿಗನ ಬೀಜ...ಇವಱ

ಕಷಾಯವ ಜೇನುತುಪ್ಪವೆರಸಿ ಸೇವಿಸಲು ರಕ್ತಪಿತ್ತಾತಿಸಾರ ಪರಿಹರ (ವೈದ್ಯಸಾ. I, ೨೦೦) : ಇಂಗು, ತೂಬರದ ಬೇರು, ಶುಂಠಿ ಈ ಮೂಱನು ಸಾಸುವೆಯ ಎಣ್ಣೆಯಲ್ಲಿ ಕಾಸಿ ಕಿವಿ ತುಂಬ ಬಿಡಲು ಕರ್ಣಶೂಲೆ, ಕರ್ಣ ದೋಷಗಳು ಶಮನವಹವು (ವೈದ್ಯಸಾ. II, ೯೬). **ತೂಬರೆ :** "ತಿಂದುಕಃ, ಸ್ಫೂರ್ಜಕಃ, ಕಾಲಸ್ಕಂಧಃ, ಶಿತಸಾರಕಃ – ಳ ತುಂಬರಗಿಡ, ತೂಬರೇಗಿಡ" (ಸಿದ್ಧಾಂತಿ. ೧೦೬). [< ಸಂ. ತುಂಬುರು]

**ತೂಪರಿಡು** (ಕ್ರಿ). = ತೂಪಿಱು ೨ (?): ಕಟ್ಟ ವಿಾಸಲ ತೂಪರಿಟ್ಟು ನೆಟುಕನು ಮುರಿವಳು (ಜನಮು. ೧೨-೭). [<ತೂಪಿಡು]

**ತೂಪರು, ಜುಬ್ಬುರ್$_1$, ಜೂಪರ, ತೂಪರ್$_1$, ದೂಮರ** (ನಾ). ತುಂತುರು ಹನಿಗಳಿಂದ ಕೂಡಿದ ಮಳೆ ; ಜಿನುಗುವಮಳೆ : ಈ ತೂಪರು ಸಾಕಾಗಿ ಹೋಗಿದೆಯಪ್ಪ (ರೂಢಿ). **ಜುಬ್ಬುರ್$_1$ :** ಇಷ್ಟೇ ಜುಬ್ಬುರ ಬಂದು ನಿಂತೀ ತೆಂಬುವ ಹಾಗಿಲ್ಲ. ಇದಕ್ಕೂ ದೊಡ್ಡಮಳೆ ಬರುವ ಹಾಗೆ ಕಾಣುತ್ತದೆ (ಮುಂಬಯಿ. ೫-೫೦). **ಜೂಪರ ;** "ಜೂಪರ = ಜಿನಗುಡುವ ಮಳೆ, ಜುಬರುಮಳೆ" (ಜಾನಕೋ. ೬೦). **ತೂಪರ್$_1$ :** "ತೂಪರೆ = ಜಿಟಜಿಟ, ಸಣ್ಣ ; (ತೂಪರೆಮಳೆ ; ತೂಪರೆ ಕಾಳು)" (ಜಾನಕೋ. ೬೭). **ದೂಮರ :** "ದೂಮರ = ಜಿಟಜಿಟ ಮಳೆ" (ಜಾನಕೋ. ೬).

[ದೇ.೩ ತಮಿ. ತೂವಲ್, ತುವಲ್ಲೈ ; ಮಲ. ತೂವಲ್ ; ತೆಲು. ತುಪ್ಪರ. ತುಂಪರ, ತುವ್ವರ]

**ತೂಪರ್$_1$** 'ತೂಪರು' ನೋ.

**ತೂಪರ್$_2$** 'ತೂಪರ' ನೋ.

**ತೂಪಿಡು** (ಕ್ರಿ). = ತೂಪಿಱು ೨ : ಭಸಿತದ ತಿಲಕಮನಿಟ್ಟು...ಪ್ರಸಾದದ ತುಂತುಱುಂ ತೂಪಿಟ್ಟು (ಬಸವ. ೧೧-೧೦೦) ; ರಾಕಾಚಂದ್ರುಮಃನಂದವಮಂ ಶರಧಿ ಕಂಠಿ ಮರ್ತ್ಯರ್ಗಿಂ ದೃಷ್ಟಿದೋಷಾಕೌಟಲ್ಯತೆಯಕ್ಕುಮೆಂದಿರದೆ ... ತೂಪಿಟ್ಟಂತೆವೋಲ್ ತೋರ್ಕುಂ (ಕಮಮಾ. ೨-೨೮). [<ತುಪ್ಪು + ಇಡು$_1$]

**ತೂಪಿರಿ** 'ತೂಪಿಱು' ನೋ.

**ತೂಪಿಱು, ತೂಪಿರಿ** (ಕ್ರಿ). ೧. ಬಾಯಿಯಿಂದ ಉರುಂಬು,– ಊದಂ : ಶಿವನ ತನುವಂ ನೋಡಿ ತೂತೂ ಎಂದು ತೂಪಿಱಿದ ಯುವತಿಯಂ ಕಂಡು (ಬಸವು. ೧೩-೨೦) ; ಲಿಂಗದೆಡದಂಗದೊಳ್ ಸಲದಿ ತತ್ರಿಯನಿಕ್ಕಿ... ಲಿಂಗದದ ತೂಪಿಱಿಯ (ಲಿಶಿಲಿಂ. ೩೫-೨೬) ; ಜೇಡವ್ವಳು ತಾಂ ಪರಿಯ ಲಿಂಗದಗ್ರದೊಳು ತೂಪಿಱಿದ ಸತಿಯಂ ವಾಪಿಯೆಂದಟ್ಟಿ (ರಾಘಪ. ೬-೨೪). ೨. (ಮಕ್ಕಳಿಗೆ) ದೃಷ್ಟಿದೋಷ ಪರಿಹಾರಕ್ಕಾಗಿ ಹಾಗು ರಕ್ಷೆಗಾಗಿ ನೆತ್ತಿಯಂ ಮೇಲೆ ಊದಂ : ನಿಜಾಯ ಸೆಱಂಗನೋಸರಿಸಿ ಕಂದಲದಿಂದವು ಕರ್ಚಿಕೊಂಡು ತೂಪಿಱಿದೊಗೆದಟ್ಟುಱಿಂದ...ಕಣ್ದೆಱೆಯದ ಕಂದನೆಂದೆನಗೆ ಕಣ್ದೆಱಿಯಿಪ್ಪನೊ ಮಂದಹಾಸಮಂ (ಅರ್ಧನೇ. ೦-೧೦೦); ಸೊಡರ್ವಕ್ಕಿನ ಬೊಟ್ಟನಿಟ್ಟು ತೂಪಿಱಿದು ಪಲವರ್ಯಯುಂ ಪರಸಿ (ಚಂದ್ರಪು. ೩-೪೫) ; ಪರಾಗದ ತಿಲಕಮನಿಕ್ಕಿ ಸೌರಭದ ತುಂತುಱುಂ ತೂಪಿಱಿದು (ಗಿರಿಜೆ. ೨-೭೦೫) ; ತನ್ನ ಮಗಳಿಗೆ ಸಮವಹ ರೂಪಜೀವೆಯರಿಲ್ಲೆಂದು ಚಾಪಳ ... ಪೇಟು ತೂಪಿಱಿದುಪ್ಪ ಸೂಸುವಳು (ಅಂಜನ. ೩-೧೪೫) ; ತರಳಂಗೆ ಕಣ್ಣೀಜಲೆಂದು ತೂಪಿಱಿದು (ಮೋಹತ. ೧೭-೬೩); ಕನ್ನೆಗೆ ಕಣ್ಣೇರಾದು ದಕ್ಕಟಯೆಂದು ಚೆನ್ನೆಯರತ್ತಿ ತೂಪಿಱಿದು . . . ಬೀಸಿದರಾಲವಟ್ಟದಿಂ (ನಾಗಕು. ೨೫-೬೩). ೩. ಎಸೆ ; ಚೆಲ್ಲು : ಸಭೆಯಲಿ ಸುಲಿದು ಬಿಸುಡುವ ಸೀರೆಗಳ ತೂಪಿಱಿದು ಸುಳಿವುಪ್ಪಾರತಿಯ ತನಿಹರಕೆ ತಳಿತುದು ತಾಯ ನೇಮದಲಿ (ಕುಮ್ವ್ಯಾ. ೬-೩೦). ೪. ಹೊರಹೊಮ್ಮು : ಧಾರಾವಿಭಿನ್ನ ಘ್ರಾಣಮುಖ ಬಳಿಕ ಹಾಯಿದಳು ಹೊಱವಡುವ ನೆತ್ತರ ಬಾಯ ತೂಪಿಱ ವಶ್ರುಜಲಪೂರಾಯದಭಿಮಾನಚ್ಯುತಿಯ ರೋದನನಿನಾದದಲಿ (ತೊರವಾ. ೩ ೫-೧) ; ಉಱುಬಿನುಸುರಲ್ಪೆಗಳ ಮಿಗೆ ತೂಪಿಱಿವ ರಕುತದ ರಣದ ನಾಟಕದಱಕೆಱಿರು ತಾವುರಿಯರೊದಗಿದರು ಸರಿಸದಲಿ (ತೊರವಾ. ೬-೧೪-೩೨). ೫. ಉಗಿ ; ಉಗುಳು ; ತುಪ್ಪು : ದಾಸಿಮಯ್ಯಂ ಮುದದಿ ತೂಪಿಱಿಯಲಿಂ[ಪಾಠಾಂ. ವೀಳ್ಯೆಯವನುಗುಳ್ವೆನೆಂ]ದು ಕಿಲನಂ ನೋಡೆ (ಶಂಕರದಾ. ೧೪-೭೦). ೬. ಶಾಂತಪಡಿಸು ; ಸಮಾಧಾನಮಾಡು : ಅನುವುಳ್ಳ ಬುದ್ಧಿಯಂ ಕಂಡೆನೆಂದತಿ ಮೆಚ್ಚಿ ತನಗೆ ತಾ ತೂಪಿಱಿದುಕೊಂಡು (ಹದಳಾ. ೩-೧೨); ಅಂಜದಿರೆನುತ ತೂಪಿಱಿದು ಹರಸಿದರ್ಮೈದೆಯಾಗೆಂದವನಿ ನಂದನೆಯ (ತೊರವಾ. ೬-೦೨-೫೪). **ತೂಪಿರಿ :** ೨. ಚಂಡಭುಜಬಲನೆಂದು ಶಾರದೆ ಗಂಡನುಮಱರಿಸಿದಳು ತೂಪಿರಿದಧಿಕಹರುಷದಲಿ (ಅಂಬಿಕಾ. ೩೭-೯೦): ನಾಲ್ದೆಸೆಯ ಸುತನಿಗುಂ ಕ್ರಮದಿ ತೂಪಿರಿಯಲುದುರಿದ ಕಣಂಗಳ ತೆರದಿ ನಕ್ಷತ್ರಗಣಮೆಸೆದುವು (ವಂಕಾಶಾ. ೫-೬-೦೬); ತಾಯಿಯ ದೃಷ್ಟಿ ನಾಯಿಯ ದೃಷ್ಟಿ ಎಂದು ತೂಪಿರಿಯುತ್ತ (ಸಂಚತ್ರ. ೦೬). ೫. ಗೊಳ್ಳನೆ ನಕ್ಕು ಮೂದಲಿಸಿ, ಮೊಗದಿ ತೂಪಿರಿದು (ಗೊಲಿಷ್ಮ.ಥಾ. ೯-೨೪೭). ೭. (ಆಲಂ) ಧ್ವನಿಮಾಡು; ಮೊಳಗು : ಹವ್ಮಿನಿಂ ಕಹಳೆಗಳ್ ತೂಪಿರಿಯೆ ನಿಸ್ಸಾಳ ಬಿಮ್ಮಗಂ ಒದಗಿದುವು (ತುರಂಗ. ೬೨-೨೦). [< ತುಪ್ಪು ? + ಇಱು$_1$]

**ತೂಪು** 'ತೂಂಬು' ನೋ.

**ತೂಪುರ** 'ತೂಪರ' ನೋ.

**ತೂಪುರಗೊಳ್ಳಿ** (ನಾ). = ತುಂಬುರುಗೊಳ್ಳಿ : ತೂಪುರಗೊಳ್ಳಿಯಾದದಿ ಛಟಛಟಲೆಂದು ಕೋಪವ ಮನಕೆ ತಾ ತಂದು (ಜ್ಞಾನಪ. ೫-೮೫).

[ತೂಪುರ (< ತೂಪರ) + ಕೊಳ್ಳಿ$_1$]

**ತೂಪ್ರ** 'ತೂಪರ' ನೋ.

**ತೂಫಾನು** 'ತುಫಾನು' ನೋ.

**ತೂಬರ$_1$** 'ತೂಪರ' ನೋ.

**ತೂಬರ$_2$** (ನಾ). ೧. ಗಡ್ಡ, ವಿಾಸೆ ಹುಟ್ಟದಿರುವ ಪುರುಷ. ೨. ನಪುಂಸಕ ; ಷಂಡ : ಭೀಮಸೇನನನ್ನು ನೋಡಿ–ಗಡ್ಡ ವಿಾಸೆಗಳಿಲ್ಲದ ತೂಬರ, ತೂಬರ ಎಂದು ಬಾರಿಬಾರಿಗೆ ಹಂಗಿಸಿ (ಕೃಷ್ಣಾಬು. ೨೩೨). ೩. ಕೊಂಬಿಲ್ಲದ ಪಶು : "ಕೊಂಬಿಲ್ಲದುವು ತೂಬರಾಖ್ಯಂ" (ಮಂಗರಾ. ೫೩-೯) ; "ಕೊಂಬಿಲ್ಲದ ಪಶುವುಮಂ; ಗಡ್ಡ ವಿಾಸೆಯಿಲ್ಲದ ಗಂಡಗೂಸುಮಂ ತೂಬರವೆಂಬುದು" (ಹಲಾಯು. ೯೬-೦೨೩). [ಸಂ.]

**ತೂಬರಕ** (ನಾ). ಷಂಡ ; ನಪುಂಸಕ : ನಿಜಾಂಗನೆಯನನ್ಯರಿಗೆ ಕೊಟ್ಟವನ ಹೆಸು ತೂಬರಕ (ನಿಘಾಗ. ೫-೦೨-೦೦). [ಸಂ.]

**ತೂಬರೆ** 'ತೂಪರ' ನೋ.

**ತೂಬಾಕ** (ನಾ). (?) : ಸಣ್ಣದ ಬೊಟ್ಟನಿಟ್ಟಂತೆ ಕಿಱುಗಣ್ಣಲಿ ತೂಬಾಕ ನೊಣ ನೋಡಿದಂತ ನಿನ್ನೊಳಾ ಪರಿಲಕ್ಷನಿಂತೆ ತೇಜನಂತಾಗಿ ಬೆಳಗೋದು ಬಿರಿಸುಕ್ಕಿದಂತೆ (ಚಿದಾಕೋ. ೫೬-೫). [?]

**ತೂಬು** 'ತೂಂಬು' ನೋ.

**ತೂಯ್** 'ತುಯ್$_2$' ನೋ.

**ತೂರಣಿಗೆ** (ನಾ). "ತೂರುವ ಸಾಧನ: ತೂರಣಿಗೆ" (Fanner. ೩೮೫೧).

[ತೂರು$_1$ (< ತೂಱು$_1$) + – ಅಣಿಗೆ]

**ತೂರಲ್** 'ತೂಱಲ್' ನೋ.

**ತೂರಲು** (ನಾ). ತುಂತುರುಮಳೆ : ಬೆಳಗ್ಗೆಯಿಂದ ಹಿಡಿದಿರುವ ಈ ತೂರಲಿ ನಿಂದ ಎಲ್ಲಿಗೂ ಹೋಗಲಾಗಲಿಲ್ಲ (ರೂಢಿ).

[<ತೂಱು$_2$ + – ಅಲ್./ತಮಿ. ತೂಱಲ್, ತೂಱ್ಱಲ್; ಮಲ. ತೂಱ್ಱಲ್; ತೆಲು. ತೂರ]

**ತೂರಲ್ಗೊಂಬು** 'ತೂಱಲ್ಗೊಂಬು' ನೋ.

**ತೂರಾಡು** (ಕ್ರಿ). ೧. ತೂಗಾಡು; ಜೋಲಾಡು : ನೀನು ಕಮರಿಯ ತುದಿಯಲ್ಲಿ ತೂರಾಡುತ್ತಿರುವುದು ತಿಳಿಯುತ್ತಿಲ್ಲವಲ್ಲ ! (ವಚಥಾ. ೯೬೪)

(ಎಕ. X (೩), ಚಿಕ್ಕಬ. ೧೦೭-೬೬; 850); ಮೂಡಾಯ್ಯೊಳ್ ತೆಂಕಾಯ್ವಾಟಾರನ ಮಾಡವೆ ... ಸನ್ನು ವೆಗ್ಗೊರ್ಲ್ಲಿಯುಳ್ಳುಡಿತ್ತು (ಎಕ. IV, ಎಡತೊ. ೬೦-೭೩; ಸು. 890). ತೆಂಕ್ಕೆ : ಪ್ರಥಮಂ ದುಗ್ಗನ್ಕೆಱ್ ... ಕೆಱೆಯ ನ್ತೆಂಕ್ಕೆ ನಟ್ಟ ಕಲ್ಲೆ (ಎಕ. X (೩), ಚಿಕ್ಕಬ. ೬೬-೦೭ ; ಸು. 850).

[ತೆಂಕು + – ಆಯ್ಕ್./ತುಳು. ತೆಂಕಾಯಿ, ತೆನ್ಕಾಯಿ]

**ತೆಂಕು, ಟೆಂಕ್ಕ**[1]**, ತೆಂಕ** (ನಾ). ದಕ್ಷಿಣದಿಕ್ಕು, — ದೆಸೆ : ತೆಂಕು, ಬಡಗು, ಪಡುದಿಕ್ಕುಗಳಲ್ಲಿಯೂ ಬೆಳಕು ಹರಡುವುದನ್ನು ಕಂಡಿದ್ದೇವೆ (ನಿಬಂಧ. I, ೪೯೪) ; ಗಿರಿಜ ಸತ್ತು ಪ್ರೇತವಾಗಿ ಸರೋವರದ ತೆಂಕಿನ ಹೊನ್ನೆಮರವನ್ನು ಆಶ್ರಯಿಸಿದ್ದಾಳೆ (ಪದ್ಮಸ. ೧೦). ಟೆಂಕ್ಕ[1] : ಕನಕಶೈಲಕೆ ಟೆಂ[ಪಾಠಾಂ. ತೆಂ]ಕಮೆನಿಸಿ ರಾರಾಜಿಪುದು...ಅಯೋಧ್ಯಾಭಿಧಾನ ಪಟ್ಟಣಂ (ಶಂಕರಾ. ೦-೪-೦). 'ಟೆಂಕದೆಸೆ' ಪರಾ. ತೆಂಕ : ತೆಂಕ ಪೇರೂರ ಪಳ್ಳಂ (ಎಕ. X, ಮುಳಬಾ. ೨೭-೬ ; 962) ; ತೆಂಕ ಪಾಲ್ವಳ್ಳಂ ... ಮೂಡಲೆರಡು ಪಳ್ಳದ ಕೂಡಲೆ ಮೇರೆಯಾಗೆ (ಸಾಇಇ. XI–1, ೫೨-೫೬; 1007); ಸುತರೆಲ್ಲಂ ಬಡಗಲು ನೆರೆದಿರೆಯಾ ದೆಸೆ ಕುಸಿದು ತೆಂಕ ನೆಗೆದೊಡೆ (ಸಮುಪ. ೧೦-೦೧೪); ಅದಱಿಂದೆ ತೆಂಕ ಕಿಂಪುರುಷವರ್ಷ ತೆಂಕ ಹರಿವರ್ಷ (ಕಇ. IV, ೦-೦೩; 1204); ತೆಂಕ ಮುಂತಾಗಿ ನಡೆದನವನಿಪ ಸಮರಾಂಕಣಕಂದು ಲೀಲೆಯೊಳು (ಶಂರಾಸಾಂ. ೦೦-೮೦).

**ತೆಂಕಣ್** = ದಕ್ಷಿಣದಿಕ್ಕು : ಮಂದಾನಿಲಂ ತೆಂಕಣಿಂ ಬರೆ ಚೈತ್ರಂ ಕುಡುವರ್ಘ್ಯಲಾಜತತಿಯೋ (ಕಾದಂಪೂ. ೭೪೦) : ಮೇರು ಪಡುವಣ್ಗೆ ಕ್ಷೀರಾತೀರಂ ತೆಂಕಣ್ಗೆ . . . ತನಗೆ ಸೀಮೆಯೆನಿಕ್ಕುಂ (ಮಲ್ಲಿಪು. ೨-೧೨) : ತೆಂಕಣ್ಗಾಗ ನಿರುಪಮ ದಿವ್ಯವಾಜಿ ನಡೆದತ್ತಾಗಳ್ (ಕುಸುಮಾ. ೦೦-೧೩೪) : ಕಂಪಿನೊಳೊಂದಿ ತೆಂಕಣಿಂ ಗಾಳಿ ಮೆಲ್ಲನೆ ಕೀಡುತಿದೆ (ಕಬ್ಬಿಕಾ. ೬೩). **ತೆಂಕಣ, ಟೆಂಕಣ, ತೆಂಕಳ** = ೧. ದಕ್ಷಿಣ ದಿಕ್ಕಿನ ; ದಕ್ಷಿಣಕ್ಕೆ ಇರುವ : ಪುಲಿಪದಿಯ ತೆಙ್ಕಣ ಪೇರೊಟ್ಟಿಯ ಪೇರ್ಬೆಳಿಕೆ ಎಟಗಲ ಕಱಙ್ಗಲೋ ಮುಕೂಡಲ್ (ಇಅ. XII, ೧೭-೦೭; 785) ; ಮೂಡಣ ದೆಸೆಯ ವ[ರಾಹ] ಕೆಱೆಯಂ ಮೂಡಣ ಪಳ್ಳ ಅದಱ ತೆಙ್ಕಣ ದೆಸೆ [ಮಣ್ಣಗೆಱೆ] (ಸಾಇಇ. XI–1, ೯-೨೮; 862); ತೆಂಕಣೆಲರಲೆಪದಿಂದಂಕುರಿಸಿದ ಚೂತದಂತೆ ರೋಮಾಂಚಕಂಚುಕಿತಶರೀರನಾಗಿ (ಆದಿಪು. ೪-೨೦ ವ) ; ತೆಂಕಣ ಗಾಳಿ ಸೋಂಕಿದೊಡಂ . . . ನೆನೆವುದನ್ನ ಮನಂ ವನವಾಸಿದೇಶಮಂ (ಪಂಪಭಾ. ೪-೩೦); ತೆಂಕಣ ಭೂಪಾಲಕರಂ ಭೋಂಕನೆ ಪರಿದೆಯ್ದಿ ದರ್ಪಮಂ ಕಿಡಿಸಿ (ಧರ್ಮಾಮೃ. ೦-೧೦೨೨); ಅನಿಲಶರದಿಂದಱಿದನು ಜಲನಿಧಿಯ ತೆಂಕಣ ತೀರಕಾ ಖಳನ (ತೊರರಾ. ೦-೦೦-೨೦); ಗಣನೆಯಿಲ್ಲದ ಕಪಿಗಳಂ ಕೂಡಿಕೊಂಡು ತೆಂಕಣ ಕಡಲ ತೀರದೊಳ್ಬಿಟ್ಟು ಬಂದೊಡೆ (ಕೃಮಿಭಾ. ೦೮-೭); ತೆಂಕಣ ಗಾಳಿಯು ಕೊಂಕಣ ಸೀಮೆಗೆ ಬಂತ್ತೆ ! (ಕಿಪು. ೨೯-೬); ಪೂಗೊಳನ ತೆಂಕಳ ಗಾಳಿ ಸಂಚರಿಸಿತುಱ್ ಬನದೊಳು (ಬಕೋಪು. ೩-೮೦). ೨. ದಕ್ಷಿಣ ದಿಕ್ಕು: ಕರೆನಾಡು ಎಂಬುದು ... ತೆಂಕಣದ ಸೀಮೆಯನ್ನು ನಿರ್ದೇಶಿಸುವ ಹೆಸರು (ದ್ರಾವಿ. ೮೨); ಬರುತ ಕರ್ನಾಟಕವನು ಕಳಿದುತ್ತರದಿಶಾಮುಖದಿಂದ ಟೆಂಕಣದೆಸೆಯ ಕೊಂಕಣಕೆ ಪರಮಪಾವನಮೂರ್ತಿ ಬಂದನು (ವಿಭಾಗ.೫-೪ -೩೯): ವಿಜಯಾದ್ರಿ ಟೆಂಕಣ ಶ್ರೇಣಿಯೊಳು ... ಪದ್ಮವರೂಥಖಚರವಿನೋದದೊಳು ತೆರಳಿದನು ದೇಶಭ್ರಮಣೆಗೆ (ಜಿನಭಾ. ೫೦-೦೮). ತೆಂಕಣಂ=ದಕ್ಷಿಣದೇಶಕ್ಕೆ ಸೇರಿದವನಂ: ಆಕಾರಕ್ಕೆ–ಮೂಡಣಂ, ತೆಂಕಣಂ, ಬಡಗಣಂ (ಶಮದ. ೧೦೧ ಪ್ರಯೋ); ತೆಂಕಲ್ ಪುಟ್ಟಿದಂ, ತೆಂಕಣಂ (ಶಬ್ದಾನು. ೨೯೨ ಪ್ರಯೋ). **ತೆಂಕಣರ್**=ಪಿತೃದೇವತೆಗಳು : ತೆಂಕಣರ್ ದೈವಂ ಬಿದಿರ್ಗೊಕ್ಕರ್ ತಾನೆಂಬಿವ್ವೆಡೆ ನಿಱಿಯೋವುದು ತಲೆ (ಕುಆಳ್. ೦-೫-೩). **ತೆಂಕಣರಾಯ**=ದಕ್ಷಿಣದೇಶದ ಅಧಿಪತಿ : ರಣದೊಳ್ ತೆಂಕಣ ರಾಯನಂಕದ ಚತುಃಸೈನ್ಯೋತ್ಕರಂ ದಂಡೆಯುದ್ದಣವೀತಂ (ಎಕ. XI. ದಾವಣ. ೨೫-೫೬ : 1224); ಹಣದಂಬೊಯ್ಯಲ್ ಜವಂ ರಾಯರನೆ ಬಯಸಿ ಬರ್ಪಂತೆ ಸೋಮೇಶ್ವರಂ ತೆಂಕಣರಾಯಂ ಬಂದಂ (ಸೂಕ್ತಿಸು. ೦-೨೧). **ತೆಂಕಣಾದಿತ್ಯ** = ಹೊಯ್ಸಳರಾಜನಾದ ವಿಷ್ಣುವರ್ಧನನ ಒಂದು ಬಿರುದು: ವಿಷ್ಣುವರ್ಧನ ತೆಂಕಣಾದಿತ್ಯ ತೆಂಕಣಚಕ್ರವರ್ತ್ತಿ (ಎಕ. VII. ಶಿಪಶೊ. ೬೯-೯ : 1320). **ತೆಂಕಣಾಸೀಮೆ** = ದಕ್ಷಿಣದ ಸೀಮೆ : ಪಡುವಣ್ಣಾ ಸೀಮೆ ತಣ್ಣಳ್ಳಿಗಾರ ಪಾಟಿ ತೆಙ್ಕಣ್ಣಾಸೀಮೆ ನೆಯ್ದಲ್ಗೆಱೆ (ಎಇ. XXI, ೦೭೮-೧೨೦ ; 8ನೆಯ ಶತ). **ತೆಂಕಲ್, ತೆಂಕಲು**=ದಕ್ಷಿಣದಿಕ್ಕು: "ಅವಾಚೀನಂ, ಅವಾಕ್—ಈ ೨ ತೆಂಕಲಾದುದಱ ಪೆಸರ್" (ಕರಾಯು. ೧೭-೦೨೩) ; ತೆಂಕಲಾವುದೆನುತಂ ನೋಡುತ್ತಮಿಂ ಪೋಗವೇಟ್ಟುದಿದಂ ತಲ್ಲದೆ ಬೇಱುಪಾಯಮಣಮಿಲ್ಲ (ಕಾದಂಪೂ. ೬೨೮) ; ತದ್ದವಾಡಿಗೆ ತೆಂಕಲ್ ತೋಱುಗಲೆಗೆ ಬಡಗಲಿರ್ದುದು ನೆಱಿಯ ಸುಪೋದ್ದೀಪಮೆನಿಸಿ ಬೆಳುಗಲಿ ದೇಶಂ (ಅಜಿಪು. ೧೨-೪೪) : ಆ ಕನಕಾದ್ರಿಯಾ ತೆಂಕಲ್ ಭೂಕಾಂತಾ ಕುಂತಳೋಪಮಂ ಕುಂತಳಮಂತಾ ಕಾಂತವಿಷಯರಕ್ಷಕರೀ ಕಲಿಯುಗದಲ್ಲಿ ಪುಟ್ಟಿದಚ್ಚಾಲುಕ್ಯರ್ (ಎಇ. XX, ೦೨-೫ ; 1167) : ಉದ್ಭಟ ಭೂಮಿಪನುತ್ತರದಿಂ ಕೂರ್ತು ತೆಂಕಲಭಿಮುಖನಾದಂ (ಉದ್ಭಟ. ೨-೩೩) ; ಅದಱೊಪ್ಪುವ ತೆಂಕಲ್ ಪರ್ಚಿದ ಹಿಮವಾನ್ ಹೇಮಕೂಟನಿಷಧಂ ಬಡಗಲ್ ಸದಮಳನೀಲಶ್ವೇತಂ ಪದೆಪಿಂ ಶೃಂಗಿಗಳೆನಲ್ಕೆ ವರ್ಷಗಿರೀಂದ್ರಂ (ದಚಕು. ೭-೧೧) ; ಮೇರುಗೆ ತೆಂಕಲು ಸದಮಲ ಭರತಾವನಿ (ಇಅ. IX, ೯೭-೬ ; 1169) ; ಅತ್ತಲಿಹುದಾ ವರುಷ ಕಿಂಪುರುಷೋತ್ತಮ ಮದಱಿಂದ ತೆಂಕಲು ವರ ಹಿಮಾಚಲವು (ಸಂಭಪ. ೦೧-೫೦) ; ಮರಳಿ ಬಂದವರು ತೆಂಕಲು ಪಡುವಲು ಮೇವ ತುಱುವಿಂಡನು ಕೊಂಡು ಪೋಗಿ . . . ಒಟ್ಟಿಸಲು (ಜೀವಂಸಾಂ. ೮-೨೨).

[ದೇ.೫ ತಮಿ. ತೆಱ್ಕು, ತೆಕ್ಕು; ಮಲ. ತೆಕ್ಕು, ತೆಕ್ಕನ್;
ಕೊಡ. ತೆಕ್ಕಿ, ತೆಕ್ಕ್ಯ]

**ತೆಂಕುದಿಕ್ಕು** (ನಾ). ದಕ್ಷಿಣದಿಕ್ಕು : ತೆಂಕುದಿಕ್ಕಿನಲ್ಲಿರುವ ಐದಂಕಣದ ಮನೆಯನ್ನು ಅವರಿಗೆ ಕೊಟ್ಟು ತಾವು ಮಲೆನಾಡಿಗೆ ಹೊರಟು ಹೋಗಿದ್ದರು (ಜೀವಹಿಂ. ೩೦). [ತೆಂಕು + ದಿಕ್ಕು]

**ತೆಂಕ್ಕೆ** 'ತೆಂಕಾಯ್' ನೋ.

**ತೆಂಗಡೆ** (ನಾ). = ತೆಂಕಕಡೆ: ತೆಂಗಡೆಯಿಂ ಸುಳಿವ ಸುರಭಿವಾಯುವ ಘಾಟನದಿಂ ತಳುವದೊಲೆವ ಲತೆಯಂತೆ (ಜಯನೃ. ೮-೫೯) ; ನಡೆತಂದಾ ಬಿಙ್ಕಾಧರ ಪೊಳಲ ತೆಂಗಡೆಯ ಶಬಾಲಯಕಾಗಿ ಕಡುನೀರರತಿ ಮುದದಿಂ ಪೋಗುತಿರೆ (ಶ್ರೀಪಾಲ. ೭-೧೫೨). [ತೆಂ + ಕಡೆ[3]]

**ತೆಂಗಲೆ, ತೆಂಕಲೈ** (ನಾ). [ವಿಶಿಷ್ಟಾ] ವಿಶಿಷ್ಟಾದ್ವೈತಿಗಳಲ್ಲಿ ಹಣೆಯ ನಾಮದ ಕೆಳಗೆ ಪೀಠವನ್ನು ಹಚ್ಚುವ ಪಂಗಡ ; ರಾಮಾನುಜ ಭಕ್ತರ ಒಂದು ಪಂಥ : (ಕ). 'ಬಡಗಲೆ' ಪರಾ. **ತೆಂಕಲೈ:** ಶ್ರೀವೈಷ್ಣವಮತದ ಈ ತತ್ವ ಕ್ರಮೇಣ ಬಡಗಲೈ ತೆಂಕಲೈ (ಉತ್ತರ ದಕ್ಷಿಣ) ಭಾಗಗಳಾಗಿ ಒಡೆದವು (ಧಾರದ. ೨೯೭). [← ತಮಿ. ತೆನ್ಕಲೈ]

**ತೆಂಗಾಯ್, ತೆಂಗಾಯಿ, ತೆಂಗುಗಾಯ್, ತೇಂಗಾಯ್** (ನಾ). ತೆಂಗಿನ ಕಾಯಿ ; ತೆಂಗು ; ನಾರಿಕೇಳ : ತೆಂಗಾಯ ಪಾಸಟಿಯ ಕರ್ಕಶಕುಚಂಗಳ್ (ಸೌಂದಪು. ೭-೫೩) : ತೆಂಗಾಯನು ಪರೆದದರ ಮೇಲಿಕ್ಕಿ (ಸೂಪಶಾ. ೩-೯) ; ಒಟ್ಟಿದ ಕಬ್ಬು ತೆಂಗಾಯಿಂದ ಮೆಱೆವುತ್ತಿದ್ದುದು ಖಡ್ಗಪೂಜೆ (ಭರತೇ. ೨೦-೦೨೯) ; ತಟ್ಟೆಯ ತೆಂಗಾಯನು ಒಡೆದಲ್ಲಿಡು ಕೊಡು ಹಣ್ಗಳನಿಲ್ಲಿ (ಕೋಗಿಲೆ. ೮೦-೩೭). 'ಬೆಂದೆಂಗಾಯ್', 'ತೆಂಗಾಯ್ಗೊನೆ' ಪರಾ. **ತೆಂಗಾಯಿ:** ಸಣ್ಣಿಸಿದ ತೆಂಗಾಯಿ ತನಿಪಾಲುಗಳ ಬೆರಸಿ . . . ಗಾರಿಗೆಯಡುವುದು (ಸೂಪಶಾ. ೦-೨೪); ತೆಂಗಾಯಿ ಪಲಸು ... ಬಹುಫಲಾದಿಗಳ ತೋಂಟಿಗರು ಸಾರಂಗಪಾಣಿಗೆ ಸಾರ್ಚಿದರು (ಶಿಜೀಚ. ೪-೬೨) : ತೆಂಗಾಯಿ

ಯೊಳಗೆ ಪರಿಪೂರ್ಣಜಲ ಬಲಿದು ಹಿಂಗಿದಪ್ಪಂದ (ಶವರಾ. ೦೬೪). **ತೆಂಗುಗಾಯ್** : ಮುಡಿವು ಕಟ್ಟುವವರರೆ ತೆಂಗುಗಾಯ್ ಬಾಳೆಗಾಯ್ . . . ನೈವೇದ್ಯನಿವಹಂಗಳಂ (ಕ್ರೀಡಾವಿ. ೭೦೩-೭೫೦). **ತೇಂಗಾಯ್** : ಹೊಂಗೊಡದೊಳು ನೀರ ಹೊತ್ತ ಧೂರ್ಜಟಿಯಂತೆ ತೇಂಗಾಯ್‌ಮರ ಗಳೊಪ್ಪಿದುವು (ಪೋಹತ. ೩೪-೧೫); ಅವಲುಂ ಪುರಿಗಡಲೆಯು ಮುದ್ದ ಣಂಗೆ; ಕಬ್ಬು ಕಬ್ಬಿಗಂಗೆ; ತೇಂಗಾಯೆನಗೈಸೆ (ಹಮ್ಮಸ್ಕ. ೮೯-೫).

[ ತೆಂಗು$_3$ + ಕಾಯ್$_4$ ;/ತಮಿ. ತೇಙ್ಙಾಯ್ ; ಮಲ. ತೆನ್ನಂಕ್ ಕಾಯ ; ತೆಲು. ತೆಂಕಾಯ, ಟೆಂಕಾಯ ]

**ತೆಂಗಾಯಿ** 'ತೆಂಗಾಯ್' ನೋ.

**ತೆಂಗಾಯ್ಗೊನೆ** (ನಾ). ತೆಂಗಿನ ಕಾಯಿಂಗಳ ಗೊನೆ,-ಗೊಂಚಲು: ಕಕ್ಕಸದೆ ಬೆಳೆದ ತೆಂಗಾಯ್ಗೊನೆಗಳಂ ... ವನಪಾಲಕಂ ಪೂಜಿಸಿಕೊಂಡೈತಂದನು (ಜಬಪು. ೪೩-೨೯). [ ತೆಂಗಾಯ್ + ಗೊನೆ$_2$ (<ಗೊಲೆ$_2$) ]

**ತೆಂಗಾಯ್ಮೊಲೆ, ತೇಂಗಾಯ್ಮೊಲೆ** (ನಾ). ತೆಂಗಿನಕಾಯಿಯಂತಹ ಮೊಲೆ: ತೆಂಗಾಯ್ಮೊಲೆಯ ನುಣ್ಮೊಲೆಯ... ಮಹಾಪ್ರೌಢವನಿತೆಯರ್ ಕಣ್ಗೆಸೆದ ರಳ್ಳಿಗಳ್ಳಿ (ಜಬಪು. ೧೧-೩೦). **ತೇಂಗಾಯ್ಮೊಲೆ**: ನವೀನಲತಾಂಗದ ತೇಂಗಾಯ್ಮೊಲೆಯ...ತರಳಾಕ್ಷಿಯರೆಯ್ದುಂದೀಕ್ಷಿಸಿದರ್ ನೃಪನ (ಅದುಶಾ. ೧೦-೪೯). [ ತೆಂಗಾಯ್ + ಮೊಲೆ$_1$ ]

**ತೆಂಗಾಳಿ, ತೆಙ್ಗಾಳಿ** (ನಾ). ದಕ್ಷಿಣ ದಿಕ್ಕಿನಿಂದ ಬೀಸುವ ಗಾಳಿ : ಮದನೇಭ ಕ್ಕಾವೃಂದಮೊಂದಂಬುಜಮೆರಡು ಕೊಳಂ ಮೂಱು ತೆಂಗಾಳಿ ನಾಲ್ಕು . . . ಅಳಿ ಪದಿಮೂಱಲ್ತೆ ಮತ್ತೋಪಚಾರಂ (ಶಾಂತಿಪು. ೯-೮೫) : ತೆಂ[ಪಾಠಾಂ. ತಂ]ಗಾಳಿ ಪೇಟ್ ಒರಿದೊಂದುತ್ಸವವಾಯ್ತು (ಕಾದಂಪೂ. ೯೦೦) : ತನುಲತೆಯನ್ನೆದೆ ತೆಂಗಾಳಿಗೊಡ್ಡುವ ಕೋಮಲಾಂಗಿಯರು (ಹಕಶಾ. ೪-೩೯); ಈ ತೆಂಗಾಳಿ ತನ್ನಿಚ್ಛೆಯಿಂ ನಡೆತಂದಪ್ಪುದು (ಕಬ್ಬಿಕಾ. ೫೫) : ಆಗರದೊಳು ರಸದಾಳಿ ತೆಂಗಾಳಿಯಂ ತಾಗಲೊಂದಱೊಳೊಂದು ಹಳಚಿ ಮೇಗೋಲ್ಗಳೊಡೆದಿನಿರಸದ ಪರಿಯೊಳಿಕ್ಷುಸಾಗರ ತುಂಬಿದಂತಾಯ್ತು (ಪೋಹತ. ೩-೪೮). **ತೆಙ್ಗಾಳಿ**: ತೆಙ್ಗಾಳಿಯಲೆಪದಿಂದೊಲೆದು ಪುಣ್ಯ ಪಣ್ಯಾರ್ಥಿಭವ್ಯಸಾರ್ಥಮನಿತ್ತಲೆಟ್ಟರ್ವುದೆಂದು ಕೈಸನ್ನೆಯಿಂ ಕರೆವಂತೆ ಕರಮ ಸೊಗಯಿಸುವ ತಳಿರ್ಗೊಂಬುಗಳುಂ (ಚಂದ್ರಪು. ೨-೧೦೫).

[ ತೆಂ + ಗಾಳಿ$_1$ ]

**ತೆಂಗು$_1$** 'ತೇಂಗು$_2$' ನೋ.

**ತೆಂಗು$_2$** (ಕ್ರಿ). (?): ಕರಂ ಬಿಂಕಂ ತೆಂಗುವ ಗೋಧಜತು ಸುದೃಢಾಯ ದ್ವಾಹುಕಾಂಡಂ (ಚಳಿವಿ. ೩-೨೦). [ ? ]

**ತೆಂಗು$_3$, ಟೆಂಗು** (ನಾ). ಒಂದು ಬಗೆಯ ಮರ ಮತ್ತು ಅದರ ಕಾಯಿ; ನಾರಿಕೇಳ: "ನಾಳಿಕೇರಃ ಲಾಂಗಲೀ; ಈ ೨ ತೆಂಗು" (ನಾಚಿರಾ. ೧೧೩); "ನಾರಿಯಳಿ ನಾಳಿಕೇರಂ ತೆಂಗೆನಿಕ್ಕುಂ" (ಮಂಗರಾ. ೩೪-೧೧) : ಎಲೆಯಡಕೆ ಯುಮಮಂ ತೆಂಗಿನೆಳನೀರುಮಮಂ ಕೊಳಲಿಂಬಪ್ಪಂತಿರೆ ಮಾಡಿ ನಟ್ಟ ಕೌಂಗಿನ ತೆಂಗಿನ ಮರಂಗಳುಮಮಂ (ಶಂಪಘಾ. ೫-೪೬ ವ); ಶೀತಳಮಪ್ಪ ತೆಂಗಿನೆಳ ನೀರೊಳ್ . . . ಪುಂಡ್ರೇಕ್ಷು ಪಾನೀಯದೊಳ್ ಬೆಳೆದೋರಂತೊಱಗಿರ್ದು ತೋರ್ಪ ವಿಲಸತ್ಕರ್ಪೂರಶಾಳೀವನಾವಳಿಯಿಂದಂ ಕ ರ ಮೊ ಪ್ಪಿ ತೋರ್ಪುದು ಬನಂ (ಸುಕುಮಾ. ೧೦-೬೧); ತೆಂಗಿನ ಪೊಸನೇಣಂದಱು ದಿಂಗಳ್ವರಮಡಸಿ ಕಂಬಿಯಂ ಕಟ್ಟಿದೊಡಂ ತಾಂ ಗಡ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ (ಧರ್ಮಾಮೃ. ೨-೯೨) : ನಾಯ್ಗಿಂ ತೆಂಗೇವುದೊ ಕಾಗೆಗೇವುದೂ ರಸಾಯನಯುಕ್ತದ ಸಾರಭೋಜನಂ (ಲೀಲಾವ. ೨-೧೦೦೦); ಗಂಜೆಯನಾಗಳ್ ತೆಂಗಿನ ಕಿಳಿವಟ್ಟಲೊಳಾ ತೆಂಗೆಱದರ್ (ದಶಕು. ೦೨-೧೨೫); ತೆಂಗಿಗೆ ನೀರನೆಱೆದರೆ ಅಂಗೈಯಲ್ಲಿ ಫಲವು ಕಾಣುವಂತೆ (ಅಹಂಡೇ. ೬೦-೧೧); ತೆಂಗನು ಲಾಗಿಸಿ, ಅಡಕೆಯ ಬಾಗಿಸಿ . . . ಬಂತೈ ! ಬಂತೈ ! (ಕವಿಪ್ರ. ೨೮-೫) : ಸಿಂಹಲದ್ವೀಪದಲ್ಲಿ . . . ತೆಂಗು ಮೊದಲಾದ ಫಲಗಳೂ ಬಹಳ ಆಗುತ್ತವೆ (ಮುಂಬಯಿ. ೪-೨೦೧); ತಲೆದೂಗಿ ತೆಂಗುಗಳ್ ಮೆರೆವ ಕಾಲೂರು (ಕಾಲೂರ. ೪೭-೬೭). **ಟೆಂಗು** : ಟೆಂಗು ಬಾಳೆಹಣ್ಣು ... ದ್ರಾಕ್ಷೆ ತಂದಿಹರು (ಸಿದ್ಧಪು. ೦೯-೮) ; ದೂರದ ದ್ವೀಪದ ಮೇಲಿನ ಟೆಂಗಿನಗಿಡಗಳು ... ಗೊಂಬೆಗಳಂತೆ ನಿಂತಿದ್ದವು (ಭೂಮಿತಾ. ೮೧).

ತೆಂಗಿನಕಾಯ್, ಟೆಂಗಿನಕಾಯಿ, ತೆಂಗಿನಕಾಯಿ = ತೆಂಗಾಯ್ : ತೆಂಗಿನ ಕಾಯದೊಂದು ಕಠಿನತ್ವಮನೊರ್ಮೆಯೆ ಕಂಡು ಪೊಲ್ಲದೆಂದೇಂ ಗಳ ಬೆಟ್ಟ ಭೀರುತನದಿಂ ಬಿಡದೊಯ್ಯನೆ ಮೂಸಿ ನೋಡಿ ನಾಯ್ಬಿಂಗಿದುದು (ಧರ್ಮಾಮೃ. ೧೦-೪೩) ; ಅಕ್ಕಿಯಡಕೆ ಓಲೆ ತೆಂಗಿನಕಾಯಿ ಕಂಡೆ (ಮಹಾದೇ. ಬಿ. ೪೦.೮೭) : ಈಚೆಗೆ ಟೆಂಗಿನಕಾಯಿ ಬಹಳ ತುಟ್ಟಿ ಆಗಿವೆ (ರೂಢಿ) ; ತೆಂಗಿನ ಕಾಯಿ ಹೋಳ ಮಾಡಿದರು ಜೂದಿನಲಿ (ಪೋಹತ. ೨೦-೨೨); ಆಡಿ ಬಾ ಎನ ಕಂದ ಅಂಗಾಲ ತೊಳದೇನ ತೆಂಗೀನ ಕಾಯಿ ತಿಳಿನೀರ ತಕ್ಕೊಂಡು ಭಂಗಾರ ಮಾರಿ ತೊಳದೇನ (ಗರತಿ. ೮೭) : ಉಪ್ಪಿನವ ಕೆಟ್ಟ ನೆಂದರೆ ತೆಂಗಿನಕಾಯಿಯಿತ ಹೊರಳಿ ಹೊರಳಿ ಅತ್ತ (ಗಾದೆ). ತೆಂಗಿನ ತಿರುಳೋಲೆ = ತೆಂಗಿನ ಎಳೆಯ ಗರಿಯಿಂದ ಮಾಡಿದ ಓಲೆ : ಮಂಗಳ ಪ್ರಸಾಧನಮೆಸೆದತ್ತು ಕರ್ಪೂರದ ಕಂಠಿಕೆ ಬಣ್ಣದ ಸಣ್ಣ ಮಾಲೆ ತೆಂಗಿನ ತಿರುಳೋಲೆ ತಾವರೆಯ ನೂಲುಡೆನೂಲ್ (ಪಂಪಾಶತ. ೩-೧೦೬) ; ಪೂವಿನ ಕಂಕಣ ತೆಂಗಿನ ತಿರುಳೋಲೆ ತಾವರೆನೂಲುಡೆನೂಲು ... ಭೂಷಾವಳಿ ಯಾದುದವಳಿಗೆ (ಕುಮಾರಾಸಾಂ. ೮-೩೪). ತೆಂಗಿನ ಮರ = ಒಂದು ಬಗೆಯ ಮರ ; ತೆಂಗು : ಎಲೆಯಡಕೆಯುಮಮಂ ತೆಂಗಿನೆಳನೀರುಮಮಂ ಕೊಳಲಿಂ ಬಪ್ಪಂತಿರೆ ಮಾಡಿ ನಟ್ಟ ಕೌಂಗಿನ ತೆಂಗಿನ ಮರಂಗಳುಮಮಂ (ಶಂಪಘಾ. ೫-೪೬ ವ) ; ತೆಂಗಿನ ಮರ ಯಾಕೆ ಹತ್ತುತ್ತಿ ಎಂದರೆ ಚೆಕ್ಕಿಗೆ ಹುಲ್ಲು ಕುಯ್ಯೋದಕ್ಕೆ ಅಂದ (ಗಾದೆ) ; ತೆಂಗಿನ ಮರಕ್ಕೂ ಅಡಿಕೆ ಮರಕ್ಕೂ ಒಂದೇ ತಳೆಯೇ ? (ಗಾದೆ). ತೆಂಗಿನ ಹಣ್ಣು = ಬಲಿತ ತೆಂಗಿನಕಾಯಿ ; ತಳಲು : ಅಕ್ಕ ಕರಿಯವ್ವ ತಂಗೀಯು ಭದ್ರಕಾಳಿ ತೆಂಗಿನ ಹಣ್ಣಾ ಒಲಿ ಹೂಡಿ ಅಟ್ಟಲ್ಲೊ ... ಅಡಿಗೇಯಾ (ಹುಟ್ಟುಹ. ೪೫). ತೆಂಗಿನೋಲೆ = ತೆಂಗಿನ ತಿರುಳೋಲೆ : ಮುಡಿದ ಪಾದರಿ ತೊಟ್ಟೆಳಮುತ್ತು ಸುತ್ತಿ ನೊಳ್ ಮಾಸದ ತೆಂಗಿನೋಲೆ ... ಸಂದ ಭೋಗಿಗೆ ವಿಲಾಸದ ದೇಸೆಯ ನುಂಟುಮಾಡುಗುಂ (ಸೂಕ್ತಿಸು. ೦೦-೦೩೯).

[ ದೇ.೫ ತಮಿ. ತೆಙ್ಙು, ತೆಙ್ಙ ; ಮಲ. ತೆಙ್ಙು ; ತುಳು. ತೆಂಗ್ ; ಕೊಡ. ತೆಂಗೆ ]

**ತೆಂಗುಗಱು** (ನಾ.) ತೆಂಗಿನ ಗರಿ, – ಸೋಗೆ : ತೆಂಗುಗಱು ಕೊಡೆಯಿರ್ದ ಕಡಲುಲಿಯ ಮನೆಯೇ (ಅಕ್ಕಕ್ಕಾ. ೩೫.೬೭೦). [ ತೆಂಗು$_3$ + ಗಱು ]

**ತೆಂಗುಗಾಯ್** 'ತೆಂಗಾಯ್' ನೋ.

**ತೆಂಗುದಿ** (ನಾ). ಕೆಂಪು ಬಣ್ಣದ ಪ್ರಾಣಿ : ಹರಿಣ–ಎರಳೆ, ಶಶ–ಮೊಲ, ಲೋಹಿತ–ತೆಂಗುದಿ (ಶಾಬಟೀ. ೨-೨-೬೨ ವ).

[ P ಇದು 'ಕೆಂಗುಱಿ' ಇರಬಹುದೆ ? ]

**ತೆಂಗುಹ** 'ತೇಂಗುಹ' ನೋ.

**ತೆಂಟು, ತೆವಟು** (ಕ್ರಿ). ಮೊರದಿಂದ ಕೇರು : '' ತೆಂಟು–ಶೂರ್ಪಕರಣೇ (ಕೇರು) '' (ಶಮಧಾ). **ತೆವಟು** : (ಕ).

[ ದೇ.೫ ತಮಿ. ಮಲ. ತೆಳ್ಳು ; ಕುರುಖ್. ತೆಲ್ಡಾ ; ಮಲ್ಟೊ. ತೇಲೆ ]

**ತೆಂಟೆ** (ನಾ). ಜೂಜುಕಟ್ಟೆ : ಕಂಡನವಂ ತೆಂ[ಪಾಠಾಂ. ತೇಂ, ದೀಂ] ಟೆಯೊಳಿ ನಿಂದು ಜೂಜಾಡುವವನಂ (ಪಾರ್ಶ್ವಪು. ೪-೨೦). 'ಶಿಂಟೆ' ಪರಾ.

[ < ಪ್ರಾ. ಟಿಂಟಾ ]

**ತೆಂಡೆ** 'ತೆಟ್ಟೆ' ನೋ.

**ತೆಂಡೆಸುತ್ತು** (ಕ್ರಿ). ಬೆಳೆಯುತ್ತಿರಲು ಕಬ್ಬಿನ ಜಲ್ಲೆಗಳು ಕೆಳಗೆ ಬೀಳದಂತೆ ಗರಿಗಳಿಂದ ಸುತ್ತಿಕಟ್ಟು : (ಶಿ).
[ ತೆಂಡೆ (< ತೆಟ್ಟೆ) + ಸುತ್ತು₁ ]

**ತೆಂಡೆಸೆ** (ನಾ). = ತೆಂಕದೆಸೆ: ಬಲಿತನವನು ಬಡವಾಗಲ್ ಸಲೆ ತನ್ನಯ ನೆಳಲು ತೆಂಡೆಸೆಗೆ ಪೋಗುವದಂ ಭೆಳಿಲನೆ ಕಾಣಲ್ ಪ್ರಾಣಂ ಅಳಿವುದು ತಾ ಸತ್ಯವೈದುದಿನದೊಳಗೆ (ಶಂಚಶ. ೯೮-೩೨). [ ತೆಂ + ದೆಸೈ ]

**ತೆಂಪು** (ನಾ). ಶೌರ್ಯ ; ಸಾಹಸ : ತೆಂಪಿನಿಂದ್ಯತರಃವಕಂಪನನ ಭರಕೆ ಭೂಕಂಪವಮಾಗಲ್ಪವನತನಯ ಕೋಪದಲಾ ನಿಲಿಂಪತತಿ ಸಂತಸಂಗೊಳುವಂತೆ ದೈತ್ಯನಂ ಸಂಹರಿಸಿದಂ ರಣದೊಳು (ವಂಕಾರಾ. ೭-೨೦ ಸೂಚನೆ). [ ದೇ.೩ ತಮಿ. ತೆವ್ವು ; ತೆಲು. ತೆಂಪು ]

**ತೆಂಪುಗಾರ** (ನಾ). ದುಂದುಗಾರ (?) : ಅಂಥ ತೆಂಪುಗಾರನಾದ ನೀನು ನಮ್ಮ ಸಾಲವನ್ನು ಹೇಗೆ ತೀರಿಸುವಿ (ಕಥಾಮಂ. IV, ೪).
[ ತೆಂಪು? + – ಗಾರ (< – ಕಾಱ) ]

**ತೆಂಬ** (ನಾ). ತಿಟ್ಟು ; ದಿಣ್ಣೆ ; ತೆವರು : ಬೆಟ್ಟಕ್ಕಿಂತಲೂ ಚಿಕ್ಕದಾದರೆ ಗುಡ್ಡ, ದಿಣ್ಣೆ, ಬೋರೆ, ತೆಂಬ, ತೆವರು ಎಂಬ ಹೆಸರುಗಳು ಬರುತ್ತವೆ (ಭೂಗೋ. ೧೧) ; ಇಂಬು ಮಾಡ್ಯಾರ ಅಣೆಗೇರಿ ತೆಂಬೊಳ್ಳೇದೆಂದೂ ಇಳಿದಾರ (ಕಜಾಗೀ. ೯೯) : ಆ ಎತ್ತುಗಳು . . . ತಿಪಟೂರು ಕುಣಿಗಲುಗಳಿಗೆ ಕಾಯಿ ಕೊಬರಿ ಬೆಲ್ಲ ತುಂಬಿದರೆ ಎಂಥ ತೆಂಬದಲ್ಲಿಯಾದರೂ ಸಲೀಸಾಗಿ ಎಳೆಯುತ್ತಿದ್ದುವು (ಪನ್ನೂರು. ೩೩). [ ? ]

**ತೆಂಬಾಲ** (ನಾ). ಒಂದು ಪ್ರದೇಶದ ಹೆಸರು (?): ಬಸದಿಯ ಪೂಜಿಗಣ ಪಿತ್ತಿಲೋದ್ಭವಮುಂ ತೆಂಬಾಲದೊಳು . . . ಕೊಟ್ಟ ವಣ್ಣು (ಎಕ. X, ಕೋಲಾರ. ೯೦-೯೦ ; ೨೦೩). [ ? ]

**ತೆಂಬುಟಿ** (ನಾ). (?) : ತೆಂಬುಟಿ [ ಪಾಠಾಂ. ವೆಂಪುಳಿ ] ಯೊವಗ್ಗದನೇಕ ಭಂಗಿಯ ನವೀನಸ್ವಾದುವೆತ್ತಾಪೂರ್ಗಾಯ್ಗಳನಾಳಿಯಿಸಿ ತಂದು ಬಡ್ಡಿಸಿದರ್ (ಶಾಂತೀಶ್ವ. ೦೫-೬೦). [ ? ]

**ತೆಂಬೆರಲ್** 'ತೆಂಬೆಲರ್' ನೋ.

**ತೆಂಬೆಲತ್ತಪಳ್ಳ** (ನಾ). ಒಂದು ಪ್ರದೇಶದ ಹೆಸರು (?) : ಕೆಱೆಯ ಕೆಱೆಗೆ ತೆಂಬೆಲತ್ತಪಳ್ಳ ಕಟನಿ ಮೂಗಣ್ಣುಗವಡೆ (ಎಕ. X ಕೋಲಾರ. ೯೦-೮೮ ; ೨೦೩). [ ? + ಪಳ್ಳ ]

**ತೆಂಬೆಲರ್, ತೆಂಬೆರಲ್, ತೆಂಬೆಲರು** (ನಾ). = ತೆಂಗಾಳಿ : ಊದುವ ತೆಂಬೆಲರಿಂ ಬೆಡಂಗುವೆತ್ತು (ಎಕ. XIII, ೩೩೦-೨೮ ; ೯೨೮) : ಬೀಸಿದುದು ತೆಂಬೆಲರಪ್ಪಿಕೊಳ್ವಪೊಲ್ (ಆದಿಪು. ೨-೬೫) : ತೆಂಬೆಲರರೆಪದ ಪೊಲತೆಯಿಂಬಿನವೊಂಕುರಿಸೆ ಪುಳಕವೊರ್ವೊದಲೊಳೆ ಬಿಲ್ಲುಂಬೆಜಗುಮಾಗಿ ಸತಿ ಚೋದ್ಯಂಬಟ್ಟಳ್ (ಶಾಂತಿಪು. ೧೦-೭) : ಮೆಲ್ಲಗೆ ನಡೆದಪ್ಪುದು . . . ತೆಂಬೆಲರ್ (ವರ್ಧಪು. ೧-೬೬) ; ಪೂಗಳ ಪೊಸಗಂಪಿನೊಳ್ ಪೊರೆದು ಕೀಡುವ ತೆಂಬೆಲರಂತೆ . . . ಸೋಲಿಸದೆ ಕಾವನ ಕಬ್ಬುಮದಾರನಾದೊಡಂ (ಕಬ್ಬಿಗ. ೦೯): ತೆಂಬೆಲರ್ ತೀಡೆ ತುಂಬಿಗಳಾಡೆ (ಶ್ರೀರಾಮಾ. ೪೯೬-೨೯೭) **ತೆಂಬೆರಲ್** : ಬಂದಾಡುವ ತೊಂಡುವೆಣ್ಬುರುಳಿ ಕೀಡುವ ತೆಂಬೆರಲ್ (ಪಂಪಭಾ. ೩-೬೭) ; ತೆಂಬೆರಲ್ ಪೊರೆಪೊರೆಯ ಸಡಿಲ್ಚೆ ನಡು ಪೊಂಗಿರೆ ಮಲ್ಲಿಗೆಗಳ್ ಬಸಂತಮೊಳ್ ಬಿರಿದೊಡೆ (ಪಂಪಭಾ. ೫-೩೩) ; ಪಾರದೆ ವಸಂತವಂ ಕೈವಾರದೆ ತೆಂಬೆರಲ[ ಪಾಠಾಂ. ತೆಂಬೆಲರ]ನಾ ಮುನೀಶನ ಬರವಿಂ ಪಾರೈಸಿದಂದದಿಂ ಸಹಕಾರಂ ಶಿಖ್ಖತ್ತು ಪುಳಕಮನೆ ಕಳಿಕೆಗಳಂ (ಚಂದ್ರಪು. ೨-೯೦). **ತೆಂಬೆಲರು** : ತೆಂಬೆಲರೊಯ್ಯನೆ ತೀಡೆ ನಿದ್ರಾಂಗನೆ ಗಿಂಬುಗೆಯ್ವನು ತನ್ನೊಡಲ (ಕರ್ಣವ. ೪-೩). [ತೆಂ + ಎಲರ್]

**ತೆಂಬೆಲರು** 'ತೆಂಬೆಲರ್' ನೋ.

**ತೆಕಿಮುಕ್ಕಿ** 'ತಕ್ಕಿಮುಕ್ಕಿ' ನೋ.

**ತೆಕಿಮುಕ್ಕಿಬೀಳು** 'ತೆಕ್ಕಿಮುಕ್ಕಿಬೀಳು' ನೋ.

**ತೆಕ್ಕನೆ** (ಅ). ೧. ತಕ್ಷಣ; ಕೂಡಲೆ; ಒಡನೆ: ಆತನ ಭಾವ ಭಣಿತೆದುನಜೀವಪೊಲು ನಾನೊಂದುವಾಯವನು ತೀವಿ ತೆಕ್ಕನೆ ಸಿಕ್ಕಿಸುವೆನು (ಪ್ರಭುಲೀ. ೨೦-೮) ; ಅಸುರರ ಸಂತತಿಯುಂ ಮುಂ ತೀವಿದ ಕೃತಕಧ್ವಾಂತಮುಮಾ ಜಯಭೂಪತಿ ದಿನಕರಶರವಂ ಬಿಡಲೊಡನೆ ತಾಂ ತೆಕ್ಕನೆ ಪರೆದತ್ತು (ಜಯನೃ. ೭-೩೩): ಏನು ತೆಕ್ಕನೆ ಚಿಂತಾಗ್ರಸ್ತರಾದಿರಿ? (ಚಂದ್ರಸ. ೦೨): ದಾಳಿಂಬೆಹಣ್ಣನು ತಿನ್ನುವ ಕವಿ ಅದನ್ನು ತಿನ್ನುತ್ತಾ ತೆಕ್ಕನೆಯೇ ಆ ಸವಿಯ ಮೂಲಕ್ಕೆ ಹೊರಟರುವುದು ಇದರ ವಿಶೇಷ (ಶಾಂಚಸ. ೩೩). ೨. ಹೆಚ್ಚಾಗಿ; ಅತಿಶಯವಾಗಿ; ಅಧಿಕವಾಗಿ; ಬಹಳವಾಗಿ : ಆ ಶಿಶುವಿನಟ್ಟೆ ತೆಕ್ಕನೆ ತೀವಿತ್ತನಿತುಂ ದಿಕ್ಪಟವಂ (ಜಗವಿ. ೩-೧೨): ಜನನಿಯ ಶರೀರದೊಳ್ ತೆಕ್ಕ[ಪಾಠಾಂ. ಕೈ]ನೆ ತೀವಿದ ರಾಗರಸದೊಳೋಲಾಡಿಯ . . . ಬಳೆವಂತೆ (ಚಂದ್ರಪು. ೩-೯೯): ಆ ರವವೊಳ್ದೆಸೆಯಲ್ಲವುಂ ತೆಕ್ಕನೊತ್ತರಿಸಿ ತೀವಿರೆ (ಧರ್ಮಪು. ೩-೩).

**ತೆಕ್ಕತೆಕ್ಕನೆ** (ದ್ವಿರುಕ್ತಿ) : ಕಾಳೋರಗನಿಶ್ವಾಸಾನಿಳನಿಂ ಜಗುನೆಯ ವಡು ತೆಕ್ಕತೆಕ್ಕನುಕ್ಕುತಿರ್ಕುಂ (ಅರ್ಧನೇ. ೪-೯೧) ; ಕಮಂಡಲಜಲಂ ತೆಕ್ಕತೆಕ್ಕನೆ ಕುದಿಯೆ (ಜಜಕಾ. ೨-೩೩) : ಪವಪದಾರ್ಥಂಗಳುಂ ಪಚನಕಾಲದೊಳೊಡನೊಡನೆ ತೆಕ್ಕ[ಪಾಠಾಂ. ಕ್ಕು]ತೆಕ್ಕನೆ ಕುದಿಯೆ (ಬಸಪು. ೩೬-೪೬): ಜಲಕ್ಕನಾದಾನಂದರಸಭರಿತನೇತ್ರದಿಂ ತೆಕ್ಕತೆಕ್ಕನೆ ನೆಗೆವುತಿರ್ಪ ಬೆಮರ್ವನಿಗಳಿಂದಿರದೆ ಸೆರೆ ಬಿಗಿವ ಕೊರಲಿಂ...ಮೆಯ್ಯಿಕ್ಕೆ (ಪದ್ಮರಾ. ೫-೨೫). **ತೆಕ್ಕನೆ** ತೀವು=ಜಡಿದು ತುಂಬು; ಅಂಚು ಮುಟ್ಟ ತುಂಬು: ಕರಿಯ ಕರಗಮುಂ ತೆಕ್ಕನೆ ತೀವಿ (ಪಮ್ಮಾರಾ. ೧೧೪-೨೭); ತೆಕ್ಕನೆ ತೀವಿದ ಕಣ್ಣ ನೀರೊಳ್ ದೆಸೆಗಾಣದೆ ನಿಂದಿರ್ದ ಸುಯೋಧನನಂ ಸಂಜಯನಿಂತೆಂದಂ (ಪಂಪಭಾ. ೧೩-೫೭ ವ); ಮನದೊಳ್ ತೆಕ್ಕನೆ ತೀವಿದೊಂದು ವರವುಸ್ನೇಹಾಮೃತಂ ಕಣ್ಗಳಿಂದೆನಸುಂ ಪೊಣ್ಮದುದೆಂಬಿನಂ ಸುರಿವಿನಂ ಹರ್ಷಾಶ್ರು (ಜಗವಿ. ೬-೮೫): ಹೊಕ್ಕಳು ಗುಣ್ಣುಗೆಟ್ಟುದು ಪೊಡಲೊಳು ಶಿಶು ತೆಕ್ಕನೆ ತೀವಿ ಜೀವಿಸಲು (ಮೋಹತ. ೧೭-೭). [ ? + – ಅನ್ನೆ]

**ತೆಕ್ಕನೆಪೋಗು** (ಕ್ರಿ). ೧. ವಿಸ್ಮಯಪಡು; ಅಚ್ಚರಿಗೊಳ್ಳು : ಆ ಭವದೊಳ್ ನೀಂ ವನಚರನ ಎನಲೊಡಂ ತೆಕ್ಕನೆಪೋದು ಜನ್ನನಾಟಕಕ್ಕವನೀಶಂ (ಅರ್ಧನೇ. ೪-೩). ೨. ಗಾಬರಿಯಾಗು : ಇತ್ತ ಲೀಲಾವತಿ ನಿಜವಲ್ಲಭಂ ಮಲ್ಲಿಕಾಮಂಡಪದೊಳಿಲ್ಲದುದಂ ಕಂಡು ತೆಕ್ಕನೆಪೋಗಿ (ಲೀಲಾವ. ೧೪-೧೦೬ ವ). [ < ತೆಕ್ಕು₂ + ಪೋಗು₁ ]

**ತೆಕ್ಕಾಡು** 'ತೇಂಕಾಡು' ನೋ.

**ತೆಕ್ಕಾಮುಕ್ಕಿ** 'ತಕ್ಕಿಮುಕ್ಕಿ' ನೋ.

**ತೆಕ್ಕಾಮುಕ್ಕಿಬೀಳು** 'ತೆಕ್ಕಿಮುಕ್ಕಿ ಬೀಳು' ನೋ.

**ತೆಕ್ಕಿಮುಕ್ಕಿ** 'ತಕ್ಕಿಮುಕ್ಕಿ' ನೋ.

**ತೆಕ್ಕಿಮುಕ್ಕಿಬೀಳು, ತೆಕಿಮುಕ್ಕಿಬೀಳು, ತೆಕ್ಕಾಮುಕ್ಕಿಬೀಳು** (ಕ್ರಿ). ೧. ಬಲವಾಗಿ ತಬ್ಬು; ಗಟ್ಟಿಯಾಗಿ ಅಪ್ಪಿಕೊಳ್ಳು : ನಿಮ್ಮ ತಾಯಿ ಪುನರ್ಜನ್ಮವನ್ನು ಹೊಂದಿದ್ದಾಳೆ ಬಹಳ ಹೊತ್ತು ತೆಕ್ಕಿಮುಕ್ಕಿಬೀಳಬನ್ನಿರಿ (ಉಗಾಪ. ೦೩೦) : ಮುಳುಗುವವನು ಬೆಂಡಿಗೆ ತೆಕ್ಕಿಮುಕ್ಕಿಬಿದ್ದಂತೆ ಏನನ್ನಾದರೂ ಹಿಡಿಯ ಹೋಗುವನು (ಬಾಳುಬು. ೨೬). ೨. (ಆಲಂ) ಕೂಡಿಕೊಂಡು ಬರು; ಜೊತೆಯಲ್ಲಿ ಬರು : ಇತ್ತೀಚಿನ ಆರು ವರ್ಷಗಳಲ್ಲಿ ಮತ್ತೆ ಸುಖ ದುಃಖ ತೆಕ್ಕಿಮುಕ್ಕಿಬಿದ್ದು ಬಂದಿವೆ (ಕಂನಾಸಾ. ೦೦೮). **ತೆಕಿಮುಕ್ಕಿಬೀಳು** : ೧. ಮುಳುಗಾಂವ ಬೆಂಡಿಗೆ ತೆಕಿಮುಕ್ಕಿಬಿದ್ದಾಂಗ (ಗಾದೆ. ೦೦೦-೪). **ತೆಕ್ಕಾಮುಕ್ಕಿಬೀಳು** : ೧. ವೆಂಕಣ್ಣಶಾಸ್ತ್ರರನ್ನು ಮತ್ತೆ ಕುಂತಿ ಗಾಂಧಾರಿಯರು ತೆಕ್ಕಾಮುಕ್ಕಿ ಬಿದ್ದಿದ್ದರು (ದೀಪಚ. I, ೪೯).
[ತೆಕ್ಕಿಮುಕ್ಕಿ ( <ತಕ್ಕಿಮುಕ್ಕಿ) + ಬೀಳು₁ (< ಬೀೞ್₁)]

**ತೆಕ್ಕಿಸು** 'ತಟ್ಕಿಸಂ' ನೋ.

**ತೆಕ್ಕು$_1$** 'ತೇಗು$_1$' ನೋ.

**ತೆಕ್ಕು$_2$** (ಕ್ರಿ). ೧. ಅಂಜು; ಹೆದರು; ಭಯಂಪಡು: ಮುನಿದೊಡಂ ಮುಟ್ಟಿ ನೋಯಿಸಿದಡಂ ತೆಕ್ಕನೀತನನೆಂತು ಹುಸಿಯ ನುಡಿಸುವೆನೆಂದು ಚಿಂತಿಸುತ (ಶಬರ. ೮-೪೬); ಕಾಡುವಂ ಶಿವನೆಂತದರ್ಕೆ ತೆಕ್ಕದೆ ಭಕ್ತ ರಾಡಿದುಕ್ರಿಯನೆ ಮನ್ನಿಸುತೆ (ಚನ್ನ.ರಾ. ೩-೯); ಮನೋಜನ ಸಡಗರಕ್ಕೆ ತೆಕ್ಕದಳು...ಬೆಚ್ಚಿದಳಂಗಜಾಸ್ತ್ರದಲಿ (ಕುಮಾ.ಅ. ೮-೨೦); ತೆರಳದೆ ತಕ್ಕದೆ ತೆಲಹುಗೊಂಡದೆ ರಾವುನಿರೆ ಮೆಚ್ಚಿದರು ದೇವತೆಗಳು (ಕುಮಾ.ಹಾಂ. ೨೦-೨೪). ೨. ಹಿಮ್ಮೆಟ್ಟು; ಸೋಲು: ಎಂತಪ್ಪ ವಿದ್ವಾಂಸರುಂ ತನಗೆ ತೆಕ್ಕುವರ್ (ಸಾಮುರ.ಹ. ೨೩೮-೧); ಓಡಿ ಗುರಿಗಾಲ್ಗಳಂ ಕಟ್ಟಿ ಗೋತವಂ ತೆಗೆ ತೆಕ್ಕದೊಡೆ ಕುತ್ತಿ ಕೆಡಹು (ಸಿಂಗಿರಾ. ೩-೧೮); ಸಿಡಿಲ ಪೊಡರ್ಪು ತೆಕ್ಕುವಂತು ಗುಡುಗುಡಿಸಿ ಗುಡುಗಿ ಬೊಬ್ಬಿಱಿದಂ ಕಲಿಯುಣಾವಂ (ರಾ.ಮಾ.ಕ್ಕ. ೧೬೦-೩೦). ೩. (?): ನಿಱಿ ತೆಕ್ಕಿದ[ದ]ರೆಳೆ ತೆರೆಗಳ್ ಪೊಜಿವಾಜಿಂ ಭೋಂಕನಪ್ಪ ಘನನುಣ್ಕೊಡೆಯಂ ನಿಱಿ ಸೋಂಕಿ ಸೋಂಕಿ ಕೊಳನಂ ತುಱುಗಿವೆಗಳ್ ತುಱುಗೆ ಪೊಕ್ಕುದಬಲಾನೀಕಂ (ಸೂಕ್ತಿ.ಸು. ೧೨-೨೩).

**ತೆಕ್ಕು$_3$** (ಕ್ರಿ). (ಪ್ರಾಣಿಗಳಂತೆ) ನವಗೆ ನ್ಯೆ ನೆಕ್ಕಿಕೊಳ್ಳು: "ತೆಕ್ಕ–ತಿರ್ಯಕ್ಕಂಡಾತಿ ಲೇಹನೇ (ನವಗೆ ನೆಕ್ಕು)" (ಶಮದಾ).

[ಈ ಇದು 'ಶಿಕ್ಕು' ಎಂಬುದರ ಅಪಲಿಖಿತವಿರಬಹುದು]

**ತೆಕ್ಕೆ$_1$** 'ತಟ್ಕೆ' ನೋ.

**ತೆಕ್ಕೆ$_2$** 'ತೆಕ್ಕು$_3$' ನೋ.

**ತೆಕ್ಕೆಗಟ್ಟು, ತಕ್ಕೆಗಟ್ಟು$_1$** (ಕ್ರಿ). ೧. ಸುರುಳಿಗಟ್ಟು; ಸುರುಳಿ ಸುತ್ತು; ಸಿಂಬೆ ಸುತ್ತು: ಕುಂಡಲೀ. ಜಿಹ್ಮಗಃ—ಈ ೨ ತೆಕ್ಕೆಗಟ್ಟಿದ ಹಾವು (ಹಲಾಯು. ೦೦೫-೦೯); ತಲೆಸುತ್ತ ತೆಗೆದೊಡನೀಡಾಡಲಾ ಕೇಶ ನೆಲದೊಳಿರ್ದುದು ತೆಕ್ಕೆಗಟ್ಟಿ (ಭರತ. ೭೦-೯೨). ೨. ರಾಶಿಯಾಗು; ದಟ್ಟೈಸಂ; ಸಂದಣಿಸು: ಪರಿಖೆಯ ತೆರೆಪೊಯ್ಯಿಂದಂ ತೆರಳ್ದು ತಡಿವಿಡಿದು ತೆಕ್ಕೆಗಟ್ಟಿದ ಪೊಂದಾವರೆಯ ರಜದಂತೆ (ಮಲ್ಲಿಕಾ. ೨-೩೪); ಹೊಡಕರಿಸಿ ಹೊದೆಱಿದ್ದ ಮುಂದಕ್ಕೆ ನಡನಡೆದು ಕೈ ವಡಿ ಕಾಯದ ತೊಡಕನೊಲ್ಲದೆ ತೆಕ್ಕೆಗ[ ಪಾಠಾಂ. ಗೆ ]ಟ್ಟಿತು ಭಟರು ನಾಕದಲಿ (ಕುಮಾ.ಭೀ. ೯-೧೮). ೩. ಒಂದ ರೊಡನೊಂದಂ ಬೆರೆ; ಕೂಡು; ತೊಡಕಂಹಾಕಿಕೊಂಡಿರು: ತೆಕ್ಕೆಗಟ್ಟಿರ್ದ ಫಣಿಪತಿಯ ಭಾವದಿಂದೆಸೆವ ಬಜ್ಜರವರಲ ಬಾಹುಪೂರಕ (ಸೌಂದರ್ಯ. ೬-೨೭). **ತೆಕ್ಕೆಗಟ್ಟು$_1$**: ೪. ಒಟ್ಟಿಗೆ ಸೇರಿಸಿ ಕಟ್ಟು; ಪಿಂಡಿ ಮಾಡು: ಆ ಹುಲ್ಲೆಲ್ಲವನ್ನೂ ತೆಕ್ಕೆಗಟ್ಟು (ರೂಢಿ).

[ತೆಕ್ಕೆ$_1$ (<ತಟ್ಕೆ) + ಕಟ್ಟು$_1$]

**ತೆಕ್ಕೆಗೆಡಿಸು** (ಕ್ರಿ). ಗುಂಪುಗೆಡಿಸು; ಚೆದರಿಸು: ಕಕ್ಕಸದೊಳಿಕ್ಕುತುಳಿಕ್ಕೆತಂದ ವೀರರಂ ಮುಕ್ಕುರಿಕಿ ತೆಕ್ಕೆಗೆಡಿಸಿದಂ (ಜೈಮಿಭಾ. ೦೯-೩).

[ತೆಕ್ಕೆ$_1$ (<ತಟ್ಕೆ) + ಕೆಡಿಸು$_1$]

**ತೆಕ್ಕೆಗೆಡೆ** (ಕ್ರಿ). ಗುಂಪಾಗಿ ಬೀಳು; ರಾಶಿಯಾಗಿ ಬೀಳಂ: ಮಿಕ್ಕು ನೂಕುವ ಕುದುರೆಕಾಲಿರು ತೆಕ್ಕೆಗೆಡೆದರು ಸಂದಣಿಸಿ ಕೈಯಿಕ್ಕಿದಾನೆಯ ನೇನನೆಂಬೆನು ಕಾಳೆನಳವಿಯಲಿ (ಕುಮಾ.ದ್ರೋ. ೫-೩).

[ತೆಕ್ಕೆ$_1$ (<ತಟ್ಕೆ) + ಕೆಡೆ$_1$]

**ತೆಕ್ಕೆಗೆಯ್** 'ತಟ್ಕೆಗೆಯ್' ನೋ.

**ತೆಕ್ಕೆಗೈ** 'ತಟ್ಕೆಗೆಯ್' ನೋ.

**ತೆಕ್ಕೆಗೈಸು** (ಕ್ರಿ). ಅಪ್ಪುವಂತೆ ಮಾಡು; ತಬ್ಬಿಸು: ನಿನ್ನ ಉರಿವ ಗಾಜಿನ ಕಂಭಕೆ ತೆಕ್ಕೆಗೈಸಿ ಪರಿಭವದೊಳು ಬಳಲುವಾಗ ಹರಿಪುರುಷೋತ್ತಮನ ನಾಮ ನೆನೆಗೊಡದಲೆ ಮನ (ಪುರಂದ. ೧-೧೧೨-೩).

[ತೆಕ್ಕೆಗೈ (< ತಟ್ಕೆಗೆಯ್) + – ಸು$_1$]

**ತೆಕ್ಕೆಗೊಳ್** ತಟ್ಕೆಗೊಳ್' ನೋ.

**ತೆಕ್ಕೆಗೊಳ್ಳು** 'ತಟ್ಕೆಗೊಳ್' ನೋ.

**ತೆಕ್ಕೆಗೋಲ್** (ನಾ). ಗುಂಪಾಗಿ ಬರುವ ಬಾಣ: ಪೊಕ್ಕವಾನೆಗಳೆರಡು ಸೇನೆಯೊಳೊಕ್ಕಲಿಕ್ಕಿದವೆಸುವ ಜೋದರ ತೆಕ್ಕೆಗೋಲಿನ ಮಾಲೆ ಮುಕ್ಕುಳಿಸಿದವು ದಿಗುತಟವ (ಕುಮಾ.ಭೀ. ೪-೭೫). [ತೆಕ್ಕೆ$_1$ (<ತಟ್ಕೆ) + ಕೋಲ್$_1$]

**ತೆಕ್ಕೆತುರುಬು** 'ತೆಕ್ಕೆದುಱುಂಬು' ನೋ.

**ತೆಕ್ಕೆದುಱುಂಬು, ತೆಕ್ಕೆತುರುಬು, ತೆಕ್ಕೆದುಱುಬು** (ನಾ). ಸುರುಳಿ ಸುತ್ತಿ ಕಟ್ಟಿದ ಮುಡಿ: ತೆಕ್ಕೆದುಱುಂಬಿನ ತೊಂಡಿಲು ಮಣಿಬಲೆ ಚೊಕ್ಕ ಬೊಟ್ಟಕ್ಕಿದ ರವಕೆ ಇಕ್ಕಿ ಲೆಕ್ಕಿಸಿ ತಿದ್ದಿ ನಿಱಿವಿಡಿದುಡಿಸಿದ ಸುಕ್ಕಿನಂಬರದೊಳೆಸೆದರು (ಭರತ. ೩೦-೪೧). **ತೆಕ್ಕೆತುರುಬು**: ಅಡ್ಡ ಮುಡಿ, ಸೋರುಮುಡಿ, ದೊಡ್ಡಮುಡಿ, ತೆಕ್ಕೆತುರುಬು ಮುಂತಾದ ಶೃಂಗಾರದ ತುರುಬುಗಳನ್ನು ತೋರದೆ ಬೇಸರುಮುಡಿಗಟ್ಟಿ ಬಂದರು (ಮೂಮಲ್ಲಿ. ೧೨೫). **ತೆಕ್ಕೆದುಱುಬು**: ಅಡ್ಡಮುಡಿಯು ಸೋರುಮುಡಿಯು ಸೊನ್ನಾರದ ದೊಡ್ಡಮುಡಿಯು ತೆಕ್ಕೆದುಱುಬು ಒಡ್ಡುದೋಱದೆ ಬಿಟ್ಟು ಬೇಸಱುಮುಡಿಗಟ್ಟಿ...ಐತಂದರು (ಭರತ. ೦೬-೨೪).

[ತೆಕ್ಕೆ$_1$ (<ತಟ್ಕೆ) + ತುಱುಂಬು$_2$]

**ತೆಕ್ಕೆದುಱುಬು** 'ತೆಕ್ಕೆದುಱುಂಬು' ನೋ.

**ತೆಕ್ಕೆಬಡಿ** (ಕ್ರಿ). ಗುಂಪಾಗಿ ಬೀಳಿಸಂ; ರಾಶಿಯಾಗಿ ಕೆಡವು: ಅಡ್ಡ ಮಳೆ, ಸಡ್ಡು ಹೊಡೆಯುವ ಸಿಡಿಲು, ಸಿಕ್ಕುದನು ತೆಕ್ಕೆಬಡಿಯುವ ಗಾಳಿ (ನಿಂಮು. ೬೦-೦೦). [ತೆಕ್ಕೆ$_1$ (<ತಟ್ಕೆ) + ಬಡಿ$_1$]

**ತೆಕ್ಕೆಬೀಳು** 'ತಕ್ಕೆಬೀಳು' ನೋ.

**ತೆಕ್ಕೆಯಾಡು** (ಕ್ರಿ). ಗುಂಪುಗುಂಪಾಗಿ ಚೆಲ್ಲಾಪಿಲ್ಲಿಮಾಡು; ಗುಂಪುಗುಂಪಾಗಿ ನಾಶಗೊಳಿಸು,–ಚೆದರಿಸು: ಮಿಕ್ಕುಟಾದ ನಿಮ್ಮ ಸೊರ್ಕಿದ ಜವ್ವನಿಗರಂ ತಿಕ್ಕಿ ತೆಕ್ಕೆಯಾಡುವೆನೆಂತಿದು ದಿಟ್ಟಮೆಂದಂ (ರಾಮಾಶ್ವ. ೧೧೨-೨೮). [ತೆಕ್ಕೆ$_1$ (<ತಟ್ಕೆ) + ಆಡು$_1$]

**ತೆಕ್ಕೆಯಿಸು** 'ತಟ್ಕೈಸು' ನೋ.

**ತೆಕ್ಕೆಯ್ಸು** 'ತಟ್ಕೈಸಂ' ನೋ.

**ತೆಕ್ಕೆವರಿ** (ಕ್ರಿ). ರಾಶಿಯಾಗಂ; ಗುಂಪಾಗಂ: ತೆಕ್ಕೆವರಿದೇಳ್ವ ಕರ್ಬೊಗೆಯ ಹೊರಳಿಗಳ ದಶದಿಕ್ಕುಗಳನವ್ವಳಿಪ ಕೇಸುರಿಯ ಜೂಣಿಗಳ . . . ಪೆರ್ಗಿಚ್ಚುಗಳ ವೆಂಕೆ ಮೇಲಿಕ್ಕಿದುದು ಹಂಸಧ್ವಜನ ಸೇನೆ ಬೆಂದು ಬೇಗುದಿಗೊಂಡುದು (ಜೈಮಿಭಾ. ೦೩-೦೨); ಫಣನಿಕರ ಘೋಳೇಂದು ತೆಕ್ಕೆವರಿದಿಂಗಳದ ಮೇಲ್ಬಿದ್ದು ಸುಡುತಿರಲ್ (ತುರಂಗ. ೬-೩೫).

[ತೆಕ್ಕೆ$_1$ (<ತಟ್ಕೆ) + ಪರಿ$_2$]

**ತೆಕ್ಕೆವರಿಗೆ** (ನಾ). ಒಂದಂ ಬಗೆಯ ಗುರಾಣಿ (?); ಗುರಾಣಿಗಳ ಸಾಲು (?): ನಡೆಗೋಟೆಯನೆ ಮಂಡಳಿಸಿ ಬಲಿದರು ತೆಕ್ಕೆವರಿಗೆಗಳ (ಕುಮಾ.ಭೀ. ೪-೨೫); ಬಲುವಾನಿಸದ ಬಂಡಿಗಳನೊಡ್ಡಿದರಾ ನಿರಂತರ ಶರವ ತಡೆದರು ತೆಕ್ಕೆವರಿಗೆಯಲಿ (ಕುಮಾ.ಶ. ೧೧-೩೦); ಲಗ್ಗೆವರಿಗೆ ತೆ[ಪಾಠಾಂ. ತ]ಕ್ಕೆವರಿಗೆಗಳಂ ಬಂದು ಮುಗ್ಗಿ ಕವಿದು (ಕುಂಬಾಸಿಂ. ೧೦-೩೨); ಸಾಲು ಕಿಂಚಿನ ತೆಕ್ಕೆವರಿಗೆಯೊಳರಿಕುಲಕಾಲಾಂತಕಬಲಬಲನು ಶೂಲ ಧರನು ಖಗರಾಜಗೆ ಪಕ್ಷದವೋಲೆಸೆದಳು ಜೀವದೊಡತಿ (ಪರ್ವತ. ೬-೭೭).

[ತೆಕ್ಕೆ$_1$ (<ತಟ್ಕೆ) + ಪರಿಗೆ$_3$]

**ತೆಕ್ಕೆವೆಳಗು** (ನಾ). ಅಧಿಕವಾದ ಬೆಳಕಂ; ಹೆಚ್ಚಾದ ಕಾಂತಿ: ಹತ್ತು ಸಾವಿರ ಕೈಪ್ರಮಾಣದ ಸುತ್ತುವಳಯದ ಮಣಿಯ ಶಿಲೆಗಳ ತತ್ತ್ರವಣೆಗಳ ತೆಕ್ಕೆವೆಳಗಿನ . . . ವೈಡೂರ್ಯ ಶಿಲೆಗಳ ಮತ್ತವಾರಣ ವರವಿಧಾನದಲೆಸೆದುದಾಸ್ಥಾನ (ಕುಮಾ.ಸ. ೦-೦೪).

[ತೆಕ್ಕೆ$_1$ (<ತಟ್ಕೆ) + ಬೆಳಗು$_2$ (<ಬೆಳಕು$_2$)]

**ತೆಕ್ಕೆವೇಱು** (ಕ್ರಿ). ರಾಶಿಯಾಗು ; ದಟ್ಟೈಸು : ಸಂದಣಿಗೊಳ್ಳು : ತದೀಯತನುವಂ ಪ್ರಾಳೇಯಸಂಸ್ಪರ್ಶಮವಿಶ್ರಮವುಮಂದಿಕ್ಕಿದ ತೆಕ್ಕೆವೆತ್ತರಲೆ ವೋಲ್ ಪತ್ರಿರ್ಪಿನಂ ನಿಂದನಶ್ರಮದಿಂದಂ ತಟನೀತಟಾಕತಟದೊಳ್ ಯೋಗೀಂದ್ರಂ (ನೇಮಿಪು. ೨-೬೪) : ತನಯಂ ಬಂದಾ ವಾರ್ತೆಗೆ ತನುಪುಳಕದ ತೆಕ್ಕೆವೆತ್ತು ಶಿಶಿರದ ಸೋಂಕಿಂ ನನೆವೆತ್ತೊಪ್ಪುವ ಮಾಲತಿ ಯನೆ ವಿಜಯಾವತಿ ಸಮಂತು ಪೋಲ್ತೆಸೆದಿರ್ದಳ್ (ಕುಸುಮಾ. ೧೫-೯೮).

[ ತೆಕ್ಕೆ₁ (<ತಟ್ಕೆ) + ವೇಱು₁ ]

**ತೆಕ್ಕೆಹಾಯ್**, ತೆಕ್ಕೆಹಾಯು (ಕ್ರಿ). ೧. ಅಪ್ಪಿಕೊಳ್ಳು ; ತಬ್ಬು : ಕಮಲೆಯು ಅಳುತ್ತ ... ಅವನಿಗೆ ತೆಕ್ಕೆಹಾಯ್ದಳು (ರಕ್ತಾಕ್ಷಿ. ೧೫೭). **ತೆಕ್ಕೆಹಾಯು** : ೨. = ತೆಕ್ಕೆಬಡಿ : ದಿಕ್ಕುದಿಕ್ಕಿಗೆ ಮೋಡ ಪಕ್ಕ ಬೀಸು ವುದು. ಎದುರು ಬಂದುದನವರಿ ತೆಕ್ಕೆಹಾಯುವುದು ! (ನಲವು. ೧೫-೨೩).

[ ತೆಕ್ಕೆ₁ (<ತಟ್ಕೆ) + ಹಾಯ್₁ (<ಪಾಯ್₁) ]

**ತೆಕ್ಕೆಹಾಯು** 'ತೆಕ್ಕೆಹಾಯ್' ನೋ.

**ತೆಗಪು**, ತೆಗೆಪು₁ (ಕ್ರಿ). ೧. ಹೋಗುವಂತೆ ಮಾಡು; ಹೊರಡಿಸು; ತೆರಳಿಸು. ೨. ಕಂದಿಸು ; ಬೇಯಿಸು : ಕುದಿವ ಕಬ್ಬೊಣ್ಣ ಕಾಯ್ಗೊಂಡೆಣ್ಣೆಯೊಳ್ ಬಳಲೆ ತೆಗಪು[ಪಾಠಾಂ. ತೆಗೆ]ವರುಂ(ಆದಿಪು. ೩-೮೫೭): ಕುದಿಯಿಸುಗೆ ಸುಣ್ಣದಿಂ ಕಯ್ಬಿದೊಂಡೆಯುಂ ಕೋಕಿಲಾಕ್ಷಿವೆರಸು ಸಿತೇ ರಂಡದ ತೊಟ್ಟಿಯಲೆಗಳಿಂ ಪಡಲದ ಕಾಯಂ ತೆಗಪುಗವೞ ಕೈಪೆಗಳಟ್ಟಿಗುಂ (ಲೋಕೋಪ. ೮-೩೦) : ತಳಿರ್ಗಳ್ ಮೆಯ್ವೊಂಕೆಯಿಂದಂ ತೆಗಪಿದ ತಳಿರಂತಾದುವಾದಂ ಮೃಣಾಳೀವಳಯಂ ಕೆಯ್ವೊಂಕೆಯಿಂದಂ ಕರಿಯ ಬಳೆಗಳಂತಾದುವು (ಲೀಲಾವ. ೧೧-೪೪) : ತುಲಸಿಯ ನುಗ್ಗಿಯ ತಗ್ಗಿಯ . . . ಪತ್ರಂಗಳನೊಡನೆ ತೆಗಪಿಕೊಂಡದಱೊಳೆ ಸೇಕಂಗೆಯ್ಯೆ (ಅಶ್ವಶಾ. ೦೦-೨೦). **ತೆಗೆಪು₁** : ೧. ಜಲನಿಧಿಯಂ ಪೀರ್ದಲ್ಲಿಯ ಜಲಚರಮಂ ಕೂಡೆ ತೆಗೆಪಿದಂ ತೆಗೆಪುವೆನಿಂ ಸ್ಥಲಚರಮನೆಂದು ವಡವಾನಲನೇಟ್ಟುವೊಲೊಗೆ ದುದರ್ಕಮಂಡಳಂ (ಕಾದಂಬ. ೪೬೩). ೨. ತೆಗೆಪಿ ಕುಡಿಯಿಸುಗೆ ಶಿವ ಕಳವಿಗೆ ಬಾಳಂ ... ಎಂಬಿನಿತುವಮಂ (ಲೋಕೋಪ. ೯-೦೮).

[ ತೆಗ್₁ + – ಪು₁ ]

**ತೆಗಲಮುಗು** (ನಾ). ಒಂದು ಬಗೆಯ ಸಸ್ಯ : (ಮೃಶಿಗಿ. ೪೨-೫೩೦). [ ? ]

**ತೆಗಲೆ** (ನಾ). ೧. ಎದೆ ; ವಕ್ಷಸ್ಥಳ : ಪುಲಿ ಬಂದು ಪಾಯ್ದು ಬಸಿಱಂ ಪೋಟ್ದು ನೆತ್ತರಂ ಕುಡಿದು ತೆಗಲೆಯಂ ಪೋಟ್ದು ತಿಂಬಾಗಳ್ (ವಡ್ಡಾರಾ. ೪೮-೧೯); ಅಡಿ ತೊಡೆ ಪೊರ್ಕುಳುಂ ತೆಗಲೆ ಕೈ ಕಣಕಾಲ್ ಕೊರಲೆಂಬಿವುಂ . . . ಸೀಟ್ದುವು ಪಾರ್ಥನಂಬುಗಳ್ (ಪಂಪಭಾ. ೧೦-೧೩೬); "ಹೆಕ್ಕತ್ತು ; ಹೆಗಲು" (ಪಂಪಭಾ. ಕೋಶ); ದೇಸಿಯಾದ ತೆಗಲೆ ಪದಕ್ಕೆ ವಕ್ಷಸ್ಥಳದ ಮೇಲ್ಗಡೆ ಎಂಬ ಅರ್ಥ ಮಾತ್ರವಲ್ಲದೆ ಒಳಗಡೆ ಎಂಬರ್ಥವಿಲ್ಲ (ನಾಡೋಜ. ೨೪೮) ; ತೆಗಲೆ ಎಂಬುದು ಉರಸ್ಥಳಕ್ಕೆ ನಮ್ಮಿ ಕನ್ನಡನಾಡಿನಲ್ಲಿ ಮಾತ್ರ ರೂಢವಾದ ಹೆಸರು . . . 'ತಗಲೆ' ಎಂದರೆ ತೆಗಲೆಯ ಮೇಲೆ ಬಿಗಿದು ಕಟ್ಟುವ ಬಟ್ಟಲಿನಾಕಾರದ ಒಂದು ಪದಾರ್ಥ (ಪಾಠಕೇಸು. ೪೭). ೨. ಹೆಗಲು ; ಭುಜ : "ತೆಗಲೆ[ಪಾಠಾಂ. ಳ್]ಯೆಂದು ಪೆಗಲ್" (ಶಮದ. ಸ. ೩೪೩ ಪ್ರಯೋ). ೩. (ಕರಾ) ಸೊಕ್ಕು ; ಮದ ; ಅಹಂಕಾರ : ಯಾವ ಇನ್ಸ್ಪೆಕ್ಟರರೇ ಬರಲಿ ವರದಿಪುಸ್ತಕದಲ್ಲಿ 'ಲಾಯ್ಕು' ಎಂದು ಬರೆದು ಹೋಗುತ್ತಾರೆ. ಅದರಿಂದ ಇವರಿಗೆಲ್ಲ ತಿಂದ ತೆಗಲೆ (ಸ್ವಪ್ನಹೂ.೩೪).

[ದೇ.॥ ತಮಿ. ಚುವಲ್, ಚಕಿಲ್ ; ತುಳು. ತಿಗಲ್]

**ತೆಗವು**, ತೆಗುವು (ನಾ). ೧. ಭಾರವಾದುದು; ಜಡವಾದುದು. ೨. ಕಠಿನ ವಾದುದು ; ಕಷ್ಟಕರವಾದುದು : ಅವನ್ನ ಹೊರಗೆ ಹಾಕೂದಂದ್ರ ಓಟು ತೆಗವ ಹರೀತೇತಿ (ಗ್ರಾಮಾಯ. ೪೮). **ತೆಗುವು₂** : ೨. ಅವಳಿಗೆ ಅಡುಗೆ ಮಾಡುವುದು ತೆಗುವೆನಿಸಹತ್ತಿತು (ಜವಿಸಾಹ್ಯಾ.೭೩). [ ? ]

**ತೆಗಸು** 'ತೆಗೆಯಿಸು' ನೋ.

**ತೆಗಹು** (ನಾ). ೧. ಹಿಂದಕ್ಕೆ ತೆಗೆಯುವಿಕೆ,– ಎಳೆಯುವಿಕೆ ; ಸೆಳೆಯು ವಿಕೆ : ಅಳು ವಿಗೆ ಕುರುಭೂಪಾಲಕನ ಹಿಂದಿಕ್ಕಿ ಕಿವಿಗಡಿಗೋಲ ತೆಗಹಿ ನೊಳೊದಗಿದರು ದುಶ್ಶಾಸನಾದಿಗಳು (ಕುವ್ಯಾದ್ರೋ. ೨-೬೪) : ಭರಿತ ವಿಷ ದಹಿವರನ ತೆಗಹಿನ ತೆರಳಿಕೆಯುಲುದಿಸಿದ ತಪೋನಿರ್ಭರಶರೀರದ ಸುಭಟರದೆ ನರನಾಥ ನೋಡೆಂದ (ತೊರರಾ. ೬-೨೦-೬೪). ೨. ಹಿಂದೆಗೆ ಯುವಿಕೆ; ನಿರ್ಗಮನ. 'ಬಿಸಿಲುದೆಗಹು' ಪರಾ. ೩. ತೆರವು ; ಬಿಡುವು ; ಅವಕಾಶ : ಹಗಲಿರುಳೆಡೆವಿಡದೀ ಮಳೆ ಕಱೆದುದು ತೆಗಹಿಲ್ಲ ಮುಂದೆ ಹೆಚ್ಚುತಿದೆ (ಭರತ. ೩೪-೭೨). ೪. ದೃಢತೆ ; ಕೆಚ್ಚು ; ಸತ್ವ : ಬಾಹುಸತ್ವದ ಹೊಗರು ಹೋಗದು ಮನದ ಖಾತಿಯು ತೆಗಹು ತಗ್ಗದು ಹೊಕ್ಕು ತಿವಿದಾಡಿದರು ಬೇಸಱದೆ (ಕುವ್ಯಾಸ. ೨-೦೦೦) : ಕ್ಷತ್ರಧರ್ಮದ ತೆ[ಪಾಠಾಂ. ತ]ಗಹು ಸಾಯದು ನಿನಗೆನುತ ಗಹಗಹಿಸಿದನು ಶಕುನಿ (ಕುವ್ಯಾಸ. ೦೯-೨).  [ ತೆಗ್₁ + – ಹು₂ ]

**ತೆಗಳ್₁** 'ತೆಗಟ್₁' ನೋ.

**ತೆಗಳ್₂** 'ತೆಗಟ್₂' ನೋ.

**ತೆಗಳಿ₁** 'ತೇಮಳು' ನೋ.

**ತೆಗಳಿ₂** (ನಾ). = ತೆಗಳಿಕೆ₂. 'ತೆಗಳಿಗೊಳ್', 'ಸೆಗಳಿ' ಪರಾ. [ ? ]

**ತೆಗಳಿಕೆ₁** (ನಾ). = ತೆಗಟ್ಕೆ ೧: ಪೊಗಳಿಕೆಗೆ ಹಿಗ್ಗಲೊಲ್ಲದ, ತೆಗಳಿಕೆಗೆ ಕುಗ್ಗಲಾರದ, ಲತೆ ಫಲಕೆ ಸಿಗ್ಗಲೇಕೆ ? (ಗೀವಿಂ. ೦೦೪-೪೪) : ಹೊಗಳಿಕೆ ತೆಗಳಿಕೆಗಳ ಕಡೆಗೆ ಲಕ್ಷ್ಯಕೊಡಬಾರದು (ಗೀತಾಸಂ. ೨೬).

[ ತೆಗಳ್₁ (<ತೆಗಟ್₁) + – ಇಕೆ ]

**ತೆಗಳಿಕೆ₂** (ನಾ). ಹೆಕ್ಕಳೆ; ಪದರ : ಸುರಿತಂದಶ್ರುಪ್ರವಾಹಂ ಬಱಿಕೊಣಗಿದ ಬಾಸುಟಲ್ಗೊಗಂ ಪೂಸಯುಂ ಕಾಯ್ದಿರದೆಟ್ಟಾ ಚಂದನಾಲೇಪದ ತೆಗಳಿಕೆ ಗಳ್ . . . ಬೆರಸಲರ್ವಸೆಯೊಳ್ ಕಾಂತೆಯಂತಿರ್ದಳ್ (ಕುಸುಮಾ. ೧೩-೭೯). 'ಸೆಗಳಿಕೆ' ಪರಾ. [ ತೆಗಳಿ₂ + – ಕೆ ]

**ತೆಗಳಿಗೆ** (ನಾ). ಪದರ ; ಹೆಕ್ಕಳೆ ; ನಿರಿಗೆ : ಮುಗಿಲ ತೆಗಳಿಗೆಯು ನೆಗೆದ ಪೊರೆಗಳೊಳದೃಶ್ಯನಾದಂ ನಭದೊಳ್ (ಶಾಂತಿಪು. ೯-೯೪) ; ಮುಗಿಲ ತೆಗಳಿಗೆಯ ಪೊರೆಯೊಳಗೊಗೆದ ಶರಶ್ಚಂದ್ರನಂದದಿಂದುದಯಿಸಿದಂ (ವರ್ಧಮಾ. ೬-೩೭) ; ಶರದದ ಮುಗಿಲ ತೆಗಳಿಗೆಯುದೆನಿಪ ಮೇಲ್ಕಟ್ಟನ ಬೆಳ್ಪುಂಬಟ್ಟೆಯುಂ (ಚಂದ್ರಪ್ರ. ೦೨-೦೦೪). 'ಸೆಗಳಿಗೆ' ಪರಾ.

[ತೆಗಳಿ₂ + – ಗೆ]

**ತೆಗಳಿಗೆಬೀೞ್** 'ತೆಗಳಿಗೆವೀೞ್' ನೋ.

**ತೆಗಳಿಗೆವೀೞ್**, ತೆಗಳಿಗೆಬೀೞ್ (ಕ್ರಿ). ಹೆಕ್ಕಳೆ ಉಂಟಾಗು ; ಪದರ ವಾಗು : ತೆಗಳಿಗೆವಿರ್ದೊ[ಪಾಠಾಂ. ಬಿಡ್ದೊ]ಡಲುಂ ನಾಲಗೆಗಿತ್ತರ ಬಱತ ಬಾಯುಂ ... ತಾಜುವ ತಾಳ್ಗಳುಮಗುರ್ವಿಸಲ್ ಕಾಡ ಕೋಣನೆಯ್ದು ದುದಱಲಂ (ಜಗವಿ. ೦೭-೬೬). **ತೆಗಳಿಗೆಬೀೞ್** : ಮೃಗಕುಲಂ ... ಬೆಂದೊವಲ್ ತೆಗಳಿಗೆಬೀೞೆ ಬಾಯ್ಗೆ ಕರಿಸಂ ಬರೆ ನಾಲಗೆಗಿಟ್ಟು ನಟ್ಟ ದಿಟ್ಟಗಳೊಡನಳ್ಳೆ ಪೊಯ್ಯೆ ನಡೆಗೆಟ್ಟುವು ತೃಷ್ಣೆಯಿಂ (ಪಂಪರಾಮಾ. ೬-೯೩).

[ತೆಗಳಿಗೆ + ಬೀೞ್₁]

**ತೆಗಳಿಗೊಳ್** (ಕ್ರಿ). ಸುಕ್ಕಾಗು ; ಪದರವಾಗು : ಅಂಗಜತಾಪದಿಂ ಕೊಱಗಿದಬ್ಜಮುಖಂ ಪರೆದಿರ್ದ ನುಣ್ಗೊರಲ್ ತುಂಗಕುಚುಗಳೊಳ್ ತೆಗಳಿಗೊಂಡ ಲಸನ್ಮಳಯೋದ್ಭವಂ ... ರಂಜಿಸಿರ್ದಂಗನೆ ಕಾಮದೇವ ನೆಡೆಯಾಡಿಪ ಪುತ್ರಿಕೆಯಂತಿರೆಯ್ದಿದಳ್ (ದಶಳು. ೬-೧೨೯).

[ತೆಗಳಿ₂ + ಕೊಳ್₁]

**ತೆಗಳಿಸು** 'ತೆಗಟಿಸು' ನೋ.

**ತೆಗಳು₁** 'ತೆಗಟ್₁' ನೋ.

**ತೆಗಳು$_2$** (ಕ್ರಿ). ತಳ್ಳು; ನೂಕು: ಬಂಗಾರ ಅಳದೀರ ಬಾಯ್ಮೇಲೆ ಪೊಯ್ದೀರ ಬಾಗ್ಲಿಂದಾಚೆಗೆ ತೆಗಳೀರ ಅಪ್ಪಾಜಿ ಹುಟ್ಟದಾ ಮನೆ ತಿರುವೀರಾ (ಹಳ್ಳಿಹಾ. ೩೩). [ ? ]

**ತೆಗಳು$_3$** 'ತೆಗಟ್$_2$' ನೋ.

**ತೆಗಳುಗಾರ** (ನಾ). ತೆಗಳುವವನು; ನಿಂದಿಸುವವನು; ಅವಹೇಳನ ಮಾಡುವವನು: ಕನ್ನಡಕದ ತೆಗಳುಗಾರ ನಡುವೆ ಮಾತು ಹಾಕಿದ (ಯೋಧಪು. ೫೭). [ತೆಗಳು$_1$ (<ತೆಗಟ್$_1$)+-ಗಾರ (< -ಕಾಱ)]

**ತೆಗಳುನಗೆ** (ನಾ). ತಿರಸ್ಕಾರದಿಂದ ಕೂಡಿದ ನಗೆ: ಸುಲೋಚನ ಧರಿಸಿದ್ದವನು ತನ್ನ ಮುಖದ ಮೇಲೆ ನೆಲಸಿದ್ದ ತೆಗಳುನಗೆಯನ್ನು ಎಲ್ಲರ ಮೇಲೆಯೂ ಚೆಲ್ಲಿ ಹೇಳಿದನು (ಯೋಧಪು. ೫೭).

[ತೆಗಳು$_3$ (<ತೆಗಟ್$_2$) + ನಗೆ]

**ತೆಗಳ್ಕೆ** (ನಾ). ತೆಗಳಿಕೆ; ನಿಂದೆ: ಇಲಿಗಂ ಮರಕುಟಿಗವಕ್ಕಿಗಮಲಸದೆ ಕರ್ದುಕುತ್ತೆ ಕಡಿಯುತಿರ್ಪುದೆ ಸಹಜಂ ಸಲೆ ಚಪಲಂಗಂ ಕುಕವಿಗಮಲಸದೆ ತೆಗಳ್ವುದುವೆ ಸಹಜವುಮಪ್ಪಂತೆ ಕರಂ (ಧರ್ಮಾಮೃ. ೧-೪೬).

[ತೆಗಳ್$_1$ (<ತೆಗಟ್$_1$) + - ಕೆ$_2$]

**ತೆಗಟ್$_1$**, ತೆಗಳ್$_1$, ತೆಗಳು$_1$ (ಕ್ರಿ). ೧. ಹೀಯಾಳಿಸು; ನಿಂದಿಸು; ಅವಹೇಳನ ಮಾಡು; ತಿರಸ್ಕರಿಸು: "ತೆಗಟ್=ನಿಂದಾಯಾಂ" (ಶಮದ): ಕಂಜನಾಭನ ಸಮುಂಜಸಿಕೆಯೊಳ್ಳನ್ನಂ ತೆಗಟ್ದು ನುಡಿದು ವರ್ತಿಪೈಸಿ (ಗದಾಯು. ೭-೪೨೮); ಅಂತಾ ದುರಾತ್ಮಂ ... ಜಗಂ ತೆಗಟೆ ಜೀವಿಸುತ್ತುಂ (ವರ್ಧಪು. ೩-೧೨೪). ೨. ವಿನೋದಮಾಡು; ಹಾಸ್ಯ ಮಾಡು: ನೀಂ ಮಹಾದೇವಿಯ ಮುಂಚುಮಂಜದೇಜ಼್ ಆಕೆಯೊಡನೆ ನಗುತ್ತುಂ ತೆಗಟುತ್ತುಮಿರ್ದು ಕಲ್ಪಿಸಿದಂ (ವಡ್ಡಾರಾ. ೧೭೭-೦೯); ಇಚ್ಚೆಯಱಿದು ತೆಗಟ್ವ ತೆಗಟ್ಕೆಗಂ ಪದನಱಿದು ಪತ್ತುವ ಪತ್ತುಗೆಗಂ ... ಮನಂಬೆಚ್ಚು ಪತ್ತೆ ಪೊಯ್ದಂತಾಗಿರೆ (ಶಾಂತಿಪು. ೩-೫೯೮). **ತೆಗಳ್$_1$**: ೧. ಭಗವತಿಯೀಜಾ ಶೌಚಗುಣಮತ್ತಿಯ ಪಣ್ಣಿನಿಮೇಳಪ್ಪುದಂ ತೆಗಳ್ವುದುದಾರ ಚಾರುರ್ಚಿತಪ್ರಭೆಯಂ ಪಡೆವಳ್ಳೈಲನ (ಸೌಇಇ. XI-i, ೫೨-೩೪ ; 1007 ?); ಉರಗ ನರ ಕಿಂಪುರುಷ ಕಿನ್ನರತರುಣಿಯರ ವ್ರತಗೆಡಿಸಿ ಭೋಗಿಸಿ ನರಳಿಸುವ ರೈದಿದರೆ ಕೊಲುವರು ತೆಗಳ್ದು ವಲ್ಲಭರ (ಅಂಬಿಕಾ. ೩೪-೩೭). **ತೆಗಳು$_1$**: ೧. ಅಗಿದು ವೈದೆಗೆದು ಸಿಗ್ಗಾಗಿ ತಮ್ಮಿಂ ತಾವೆ ತೆಗಳಿ ಬೈಬೈದು ಬಾಯಳಿದು ಶೋಕಿಸಿ ತಾವೆ (ಸಾನಂತ. ೪-೩೫೬೦ರಗಳೆ); ರಗಳೆಯ ಕವಿಯೆಂದು ತೆಗಳಿ ವಾದಿಗಳೆಲ್ಲ ಹರಿಯಣ್ಣನ ಪದಯುಗಳಕೆಱಗುವೆನಲ್ಲಿಯೊಳು (ಶುರಾಸಾಂ. ೧-೩೫); ಕಂಡವರ ತೆಗಳುವನೆ ... ಕಂಡಿಹರೆ ತೊಲಗು (ಸರ್ವಜ್ಞ. ೧೫೭೩); ಪೊಡವಿಯೊಳಗಡಗಿರುವ ತಳಹದಿಯ ತೆಗಳುವರೆ? (ಪಾಂಚಜ. ೫-೧೮).

[ದೇ.ಕ ತುಳು. ತೆಗು; ತೆಲು. ತೆಗಡು, ತೆವಡು]

**ತೆಗಟ್$_2$**, ತೆಗಳ್$_2$, ತೆಗಳು$_3$ (ನಾ). ೧. ನಿಂದೆ; ತಿರಸ್ಕಾರ; ಅವಹೇಳನ: "ತೆಗಟ್ ... ಅಣಕಂ-ಈ ೬ ನಿಂದೆ" (ಕಶಸಾ. ೧೬-೩೫೭); "ತೆಗಟಿಸ್ಲಲದು ತಾಂ...ನಿಂದಾಪ್ಪಿಂ" (ಕವಿಕಂ. ೧೨೩); ತಮ್ಮೊಡನಾಡಿಗಳಪ್ಪ ಮೇಳದ ಸಬ್ಬವದ ನಗೆಯ ತೆಗಟಿನವರನೆಮ್ಮ ಬಱಿಯಟ್ಟಿದಂದು ಬನ್ನಿಮೆಂದು ಪ್ರಿಯಂ ನುಡಿದಿರಿಸಿ (ಶಂಪಕಥಾ. ೨-೯೫೮). ೨. ಕುಂದು; ಕಳಂಕ; ದೋಷ: ಮಾಷಮುಖದಂತೆ ದೋಷಗವೇಷಣಪರರೆಂದೊಡದು ತೆಗಟಲ್ತೆ (ಆದಿಪು. ೧-೩೦); ಅರೋಚಿಗಳದಂ ತೆಗಟೆಂದಾ ಗದ್ಯ ಪದ್ಯ ಕಾವ್ಯದೊಳಿಕ್ಕರ್ (ಕಮುದ. ೬೦). ೩. ವಿನೋದ; ಚೆಲ್ಲಾಟ: ರಮಿಯಿಪುದಮರಿಯರೊಳ್ ತೆಗಟುಮರಿಯರೊಳ್ ತವದ ಮೇಳವು ಮರಿಯರೊಳ್ (ಶಾಂತಿಪು. ೭-೭೭); ನಗೆ ತೆಗಟ್ ಪಾಟಂ ಬಿಯಂ ಜವ್ವನ . . . ಇಂತಿವಂ ಬೇಟಕ್ಕಾಗರಮೆಂಬೆಂ (ಕಾವ್ಯಾವ. ೭೩೩). **ತೆಗಳ್$_2$**: ೧. ವಿಕ್ರಮಾದಿತ್ಯನೃಪಂ ಜ್ಯಾಯಂ ತನಗೆನೆ ಜಗದೊಳಗಾ ಯುವತಿಯ ಸತ್ಕುಲೀನತೆಗೆ ತೆಗಳಂಟೇ (ಎಕ. XI, ದಾವಿದ. ೪೧-೫೯ ; 1148). **ತೆಗಳು$_3$**: ೧. "ತೆಗಳು ನಿಂದೆಗೆ" (ಕಕರ. ೪೮): ದಕ್ಷನಾತ್ಮಜೆ ಗೌರಿ ಎಣೆಗೆ ತನ್ನ ಜನಕನೀಶ್ವರನನೇಳಿಸೆ ಬಹಳ ತೆಗಳನಾಲಿಸಿ ತನ್ನ ದೇಹಮಂ ಜ್ವಾನಾಗ್ನಿಯೊಳ್ದಹಿಸಿ (ಚಾಸೋಕೃ. ೮-೨೨): ಇದು ಹೊಗಳೋ ತೆಗಳೋ? (ಶಾಂತಲಾ. ೫೪). [<ತೆಗಟ್$_1$]

**ತೆಗಟಿಸು**, ತೆಗಳಿಸು (ಕ್ರಿ). ೧. ತೆಗಳುವಂತೆ ಮಾಡು; ನಿಂದಿಸುವಂತೆ ಮಾಡು: "ತೆಗಟಿಸು-ನಿಂದಾಯಾಂ (ನಿಂದಿಸುವಂತೆ ಮಾಡು)" (ಶಮದ). **ತೆಗಳಿಸು**: ೧. ಮಱಿದುಂ ಪುಸಿದು ನುಡಿವ ಹುಸಿ ಸಿರಿಯುಂ ಪಱಿಪಡಿಪುದು ಸಂತಾನಂ ಕೆಡಿಸುವುದಱಿನಂ ತೆಗಳಿಸುವುದು ಪಳಿಯುಂ ಪುಟ್ಟಿಸುವುದು (ಜಯುಕಾ. ೧೦-೧೨). ೨. ವಿರಾರು; ಸೋಲಿಸು: ಒಳವ ಹಸುಳೆಲತೆಯುಂ ಸಲೆ ತೆಗಳಿಪ ನಳತೋಳ್ಗಳ ಸಿಂಗದ ಶಿಶುವಂ ತಾನಿಳಿಕೆಯ್ವೊಳ್ಪಡುವಿನ ಸ್ಮಪತನುಜೆಯ ತರುಣಿಮುಮೊಪ್ಪಿದುದು (ಜಯುಕಾ. ೩-೨೨).

[ತೆಗಟ್$_1$ + - ಇಸು$_3$]

**ತೆಗಟ್ಕೆ** (ನಾ). ೧. ನಿಂದೆ; ಅವಹೇಳನ. ೨. ವಿನೋದ; ಹಾಸ್ಯ: ಇಚ್ಚೆಯಱಿದು ತೆಗಟ್ವ ತೆಗಟ್ಕೆಗಂ ಪದನಱಿದು ಪತ್ತುವ ಪತ್ತುಗೆಗಂ ... ಮನಂಬೆಚ್ಚು ಪತ್ತೆಪೊಯ್ದಂತಾಗಿರೆ (ಶಾಂತಿಪು. ೩-೫೯೮).

[ತೆಗಟ್$_1$ + - ಕೆ]

**ತೆಗಟ್ತೆ** (ನಾ). ವಿನೋದ; ಸರಸ; ಲಲ್ಲೆ (?): ಲಾಲಿಸುವ ಲಲ್ಲೆ ಮರಲ್ಚುವ ಮಾತು ಚಿತ್ರಮುಂ ತೆಗೆವ ತೆಗಟ್ತೆ (ಚಂದ್ರಪ್ರ. ೪-೬೧).

[ ತೆಗಟ್$_1$ + - ತೆ$_2$ ]

**ತೆಗಿಸು** 'ತೆಗೆಯಿಸು' ನೋ.

**ತೆಗುವು** 'ತೆಗವು' ನೋ.

**ತೆಗೆ$_1$** (ಕ್ರಿ). ೧. ಈಚೆಗೆ ತರು; ಹೊರ ತರು; ಬೇರೆ ಮಾಡು: ಸಿಂಧುರಾಜನ ಬಸಿಱಿಂ ಪೋಟ್ಟಿನ್ನ ಮಗನನಾಂ ತೆಗೆಯದಿರೆಂ (ಪಂಪಭಾ. ೧೧-೧೨೦): ಕೋಮಳಕುಕಶಾಬಕಪ್ರಕರಮಂ ತೆಗೆದಂ ದಯೆಗೆಟ್ಟು ಲುಬ್ಧಕಂ (ಕಾದಂಪೂ. ೧೭೪); ದೋಣಿಯಿಂದಂ ತೆಗೆವಾಗಳೊಂದು ತುಡುವಾಗಳ್ಪತ್ತು ಬಾಣಂ (ಗದಾಯು. ೩-೩): ಬೆಳ್ಮುಗಿಲ ತೆಳ್ಸೊರೆಯಿಂ ನಿಂದ್ರಚಾಪರೇಖೆಯಂ ತೆಗೆವ ಶರಲ್ಲಕ್ಷ್ಮಿಯುಂ ಪೋಲ್ತು ನಿಜೋತ್ತರೀಯ ಪಲ್ಲವದ ಪೊರೆಯಿಂ ತೆಗೆದು ... ಮಣಿದೊಡವನೊರ್ವಳಂಗನೆಗಿತ್ತಳ್ (ಮಲ್ಲಿಪು. ೪-೬೧): ನವ್ಯದುಕೂಲವುಂ ತೆಗೆದುಟ್ಟು ದಿವ್ಯವಸ್ತ್ರಮಂ ಪೊದೆದು (ಬಸರ. ೨-೪೩); ಅಂಬಿಲದೊಳಗೆ ಹೊಸ ಬೆಣ್ಣೆಯುಂ ತೆಗೆಯಲು (ಬಸಪು. ೪೨-೩): ಹೊಟ್ಟುಗರ ತೆಗೆ ಹೋಗಹೇಳೆಂದೆಚ್ಚನತಿರಥರ (ಕುಮಾವ್ಯಾ. ೨-೬೧); ತೆಗೆ ಹಯ ತೇರುಗಳ ತಳ್ಳಂಕ ಬೇಡೆಂಬಾರುಭಟೆ ಬಲುಹಾಯ್ತು (ತೊರರಾ. ೫-೮-೭೩): ಇದ್ದವಳು ತೆಗೆದು ಉಟ್ಟರೆ ಇಲ್ಲದವಳು ಕೊಡವಿ ಉಟ್ಟಳು (ಗಾದೆ). ೨. ಎತ್ತಿಕೊಳ್ಳು; ತೆಗೆದುಕೊಳ್ಳು: ತಾರಗೆಯಂ ವಿದ್ಯಾಧರಿಯರ್ ಮುತ್ತೆಂದು ತೆಗೆದು ತುಡಲ ವ್ವೆಳಿಪರ್ (ಗಿಂಕ. ೦-೫೪); ಕೆಲಬಲದ ಮಾಮರದೊಳಿಪ್ಪ ನಿರ್ಯಾಸವಂ ತೆಗೆದು ಕಿಱುವರಳುಗುರ್ಗೊನೆಯಿಂದೆ ತಿದ್ದಿ ಬರೆದು (ಕ್ರಮಿಥಾ. ೬೦-೨೯); ಅನರ್ಘ್ಯಮಣಿಯಂ ಬಾಲದಿನಮಣಿಯಂ ತುಡುಂಕುವ ರಾಹುವನಿಸಿ ನಿಜ ಕರಮುಸೆಯ ತುಡುಂಕಿ ತೆಗೆದು ತತ್ಪಾದಪೀಠದೊಳಿಳಿಪಿದಾಗಳ್ (ರಾಜಶೇ. ೫-೨೫೫). ೩. ಏಳುವಂತೆ ಮಾಡು; ಎಬ್ಬಿಸು; ಮೇಲಕ್ಕೆತ್ತು: ಅಲ್ಲಿರ್ಪುದೊಂದು ಕಪಿ ಬೇಗವಿದಿರಂ ಬಂದು ಅಂಜದಿರೆಂದು ಕೈಯಂಪಿಡಿದು ತೆಗೆವುದುಂ (ಶಂಶತಂ. ೦೦೭-೨೨); ಸುರಿವ ರಕುತದ ಸರಿಯ ಸೆಱಗಿನೊಳೊರಸಿ ರಥದಚ್ಚುಗಳನೊದೆದನು ತಿರುಹಿ ಗಾಲಿಯ ತೆಗೆದು ಮುಂಗೈಗೊಂಡು ನಡನಡೆದು ಅರಿಬಲವನಿಡೆ (ಕುಮಾವ್ಯಾ. ೭-೫೫). ೪. ಉದ್ಧಾರ ಮಾಡು; ಉದ್ಧರಿಸು: ಧಗಧಗಿಸಿದಱುವತ್ತುಸಾವಿರ ಸಗರರನು

ಸಂಸ್ಕಾರವಮುಖದಲಿ ತೆಗೆಯಲೋಸುಗ ತಪದಲಿದ್ದನು ಕಮಲಗರ್ಭಂಗೆ (ತೊರಠಾ. ೦-೧೨-೦೩). ೫. ಆಕರ್ಷಿಸು ; ಎಳೆ ; ಜಗ್ಗು ; ಎಳೆದು ಕೊಳ್ಳು : "ತಗೆ-ಆಕರ್ಷಣೇ" (ಶಮುಠಾ) : ಕೃಷ್ಣೆಯ ಕಚಪ್ರಾರಂಭಮಂ ಬಾಹುವಿಕ್ರಮಿ ದುಶ್ಶಾಸನ ಮುಂದೆ ತೆಗೆವಂದಲ್ಲಿರ್ದ (ಗದಾಯು. ೬-೩೨) ; ಪೊ ಸ ನ ನೆ ಯ ಬಿರಿಮುಗುಳ ಕುಸುಮ ಬಾಣಂಗಳಂ ... ಕಿವಿವರಂ ತೆಗೆದು ನೇರನಚಿದೆಸೆವುದುಂ (ಧರ್ಮಾಮೃ. ೧೦-೩೦) : ಧರಾಧೀಶ್ವರನಾಶೀರ್ವಾಕ್ಷವೋತಂ ತೆಗೆದು ಬಗಿದು ತಕ್ಕೈಸಿದಂ (ವರ್ಧಪು. ೧-೯೦) ; ಶರಣ ಇನ್ನೇಳೇಳೆನುತ...ಕರಕಮಲದಿಂ ತೆಗೆದು ಬಿಗಿಯಪ್ಪಿ (ಬಸಪು. ೨೦-೬) ; ಅತಿಶಯಪ್ರೀತಿಯಿಂ ತೆಗೆದು ಬಿಗಿಯಪ್ಪಿ (ಪ್ರಮಿಥಾ. ೪-೭೦). ೬. (ಗಾಳಿಯನ್ನು) ಎಳೆದುಕೊಳ್ಳು : ಆತ್ಮನಂ ಭೇದಿಸಿ ಪ್ರಾಣವಾಯು ನಾಡಿಗಳನಚಿತು ಹಿಡಿವ ಭೇದಮಂ ತಿಳಿದು ತೆಗೆವ ಬಿಗಿವ ಸಂಚಮಂ ಕಂಡು (ಆದಪ. ೨೯-೮೭). ೭. ಬಿಲ್ಲಿನ ಹೆದೆಯನ್ನು ಸೆಳೆ ; ಶರಸಂಧಾನ ಮಾಡು : ತೆಗೆದೆಚ್ಚ ನರ್ಜುನನಂಬು ತೀವೆ ತುದಿಯಿಂ ಬಾಲಂಬರಂ ಪಂದಿ ಸೌಳಗೆವೋಪಂತಿರೆ (ಪಂಪಭಾ. ೮-೧೬) ; ಮುಂದಿರ್ದ ಪಾಪೇಭಕಂಠೀರವನುಮಂ ಬಗೆದು ತೆಗೆದಿಸುವುದುಂ (ಶಾಂತಿಪು. ೪-೧೦೦ಪ) : ಬಗೆಯದೆ ವಿರಹಿಗಳಂ ವಿಂಗೆ ತೆಗೆದೆಚ್ಚು ಬಟಲ್ದ ಮಧುಸಖನ ಸುಯ್ಯಾಲ ವೋಳೀಲ್ ... ತಣ್ಣೆಲರದಿನಿಸು ಶೀಡಿತ್ತಾಗಳ್ (ಕಾದಂಊ. ೧೬೩) ; ತೆಗೆದೆಚ್ಚನಾ ಪಾರ್ಥ (ಕುವ್ಯಾದ್ರೋ. ೩-೪೯). ೮. ಕೀಳಂ; ಕಿತ್ತು ಹಾಕು : ನಡುವಂ ಕೊಜಿ[೩] ಕುತ್ತಿ ಕರುಳ್ಗಳಂ ತೆಗೆ ಮೊಗಮಂ ಸುಡು (ವದ್ಯಾರಾ. ೨೨೮-೦೦) : ಮಾದೆಗನಂತೆ ಬಾರೆತ್ತುವರ್ ನಾಯಂತೆ ಕಚ್ಚಿ ತೆಗೆವರ್ (ಧರ್ಮಾಮೃ. ೩-೭೩) : ಆಸಯಾಮಿಷ...ಕ್ರೋಧ ಕ್ಷುದ್ರ ಮಿಥ್ಯೆ ಇವನೆನ್ನ ನಾಲಗೆಯ ಮೇಲಿಂದತ್ತ ತೆಗೆದು ಕಳೆಯಯ್ಯಾ (ಬಸವ. ೪೬) : ಪಂದಿಯ ಬಳಿಯೊಳ್ ನೊಪ್ಪು ನೆಗೆದುರ್ಬಿ ಪಾಯುತೆ ಚಪ್ಪರಿಸುತ್ತುಗಿದು ಬಗಿದು ತೆಗೆದುವು ನಾಯ್ಗಳ್ (೧೧೦ಕ. ೦-೦೦೩) ; ನಿನ್ನ ಕಣ್ಣಂಗೆನ್ನ ಕಣ್ಣೀ ಮದ್ದೆನುತ ಚಿತ್ತಂ ನಲಿದು ತನ್ನೇತ್ರವ ತನ್ನಂಬಿನಲಿ ತೆಗೆದು (ಬಸಪು. ೧೮-೭೦) : ಅಗೆವೊಯ್ಯ ಕಳೆಗೀಳ್ವ...ಸಸಿಯ ತೆಗೆವ ನಡುವ ನಗೆಮೊಗದ ಪಾಮರಿಯರ ಬಗೆ ಬೆಡಗಾಗಿಹುದಲ್ಲಿ (ಕುರಾಸಾಂ. ೨-೩೫). ೯. ಕಿತ್ತುಕೊಳ್ಳು ; ದೋಚು ; ಕಸಿದುಕೊಳ್ಳು : ಮ್ಲೇಚ್ಛವರ್ಗವ ತಜಿದು ಶೋಧಿಸಿ ತೆಗೆದನಲ್ಲಿಯ ಸಾರವಸ್ತುಗಳ (ಕುವ್ಯಾಸ. ೪-೧೨) ; ಕುಳಿಂದನಂ ದುಡಿಸಿದನಾ ದುಷ್ಟಬುದ್ಧಿ...ಹಿಂಡಿ ಹಿಳಿದರ್ಥಮಂ ತೆಗೆದಂ ಸೆಚಿ[೩]ಮನೆಗಿಕ್ಕಿ ನಿಗಳಮಂ ಕಾಲ್ಗೆ ಮಾಡಿ (ಪ್ರಮಿಥಾ. ೨೧-೨೬) : ಮುಂದ್ದುಮಾತಿನಲಿ ಮೋಹವ ಬೀಜಿ[೩]ಯಾವನೊಳಗಿದ್ದ ಹಣವ ತೆಗೆ ಮಗಳೆ (ಕಂಪವಿ. ೬-೧೫೦). ೧೦. ಕದಿ ; ಕಳವು ಮಾಡು; ಅಪಹರಿಸು: "ಅಪಹಾರ, ಅಪಚಯ = ಬಹಳದ ಒಳ್ಳುವಂ ತೆಗೆವುದು" (ನಾಚಿರಾ. ೬) : ಅಜ್ಞಾನಿಗಳಿರಾ ಕಣ್ಣ ಕಾಣೆರೆ ಈ ನುಡಿಗಳೇಕಿಂತು ತೆಗೆದವೆ ನಿಮ್ಮ ಸಾಮ್ಯವನು (ಬಸಪು. ೫೮-೩೩) : ಧೇನುವನು ತೆಗೆಯಲಿಕೆ ತನ್ನಯ ಸೇನೆಯಧಿಪನ ಕಳುಹಿ (ಸಂಭಪ. ೨೬-೨೦) ; ಕರುಣದೊಳಾತ ಕೊಟ್ಟ ಸೌಭಾಗ್ಯವ ತೆಗೆಯಲೋರ್ವರಿಗಳವಲ್ಲ (ಮೋಹತ. ೩೦-೦೭). ೧೧. ಕಳಚು ; ಬಿಚ್ಚು ; ತೆರೆ : ಬಲ್ಲಿದನ ಹಗೆಯು ತೆಗೆವನ್ನಬರ ಬಡವನ ಹರಣ ಹೋದ ತೆಜನಂತಾಯಿತ್ತು (ಮಹಾದೇ. ಬ. ೩೩-೭೦): ಉತ್ತರದ್ವಾರದ ಬಾಗಿಲ ಬಿಯಗವ ತೆಗೆದಲ್ಲಿ ನಾದವಮೊರುತಿ ಯಪ್ಪ ಪ್ರಸಾದವ ಕಂಡೆ (ಅದವ. ೨೪-೬೯) : ಕಾಲ ಕೆರಹುಗಳಂ ತೆಗೆಯದಿಂತಿರ್ದಡೆಲೊ ನಿನ್ನ ಬೀಳ ಹೊಡೆವೆನು (ಬಸಪು. ೪೬-೦೦) : ಕಿತ್ತ ಕದ ತೆಗೆಯದು (ಕುವ್ಯಾಅ. ೧೨-೭); ಅರುಣಾಬ್ಜನಿಳಯಕವಾಟ ಕೌಸ್ತುಭಮಣಿ ಕಿರಣದಿಂ ತೆಗೆದೊಳಪೊಕ್ಕು (ಮೋಹತ. ೧-೬). ೧೨. ಪ್ರಕಟವಾಗು ; ಕಾಣಿಸಿಕೊಳ್ಳು ; ತೋರಂ ; ಹೊಳೆ : ರತ್ನಾಭರಣಂಗಳ ರುಚಿ ... ತೆಜಂ ಬೊಳೆಯುಲ್ಕಿಂದ್ರಾಯುಧಮೇಂ ಪೊಳೆದುದೋ ನೃಪಸುತನ ಮುಂದೆ ತೆಗೆದು ಬರುತ್ತುಂ (ಕಾದಂಪೂ. ೫೯೮) ; ತೆಗೆಯಬಹುದೆ ಕಡವರವು ದರಿದ್ರಂಗೆ (ಬಸವ. ೨೬೭) : ಧರ್ಮವಮುಖವರಲ್ಲಂತೆ ಮುಕ್ತಿಯ ಸಜ್ಜೆ ತೆ[ ಪಾಠಾಂ. ದೆ ]ಗೆವಂತೆ ವೃಷಭನಮುಖಂ ವಿಕಾಸಮನೆಯ್ದೆ (ಬಸರ. ೪-೮೦) . ೧೩. ತೋರ್ಪಡಿಸು; ಕಾಣುವಂತೆ ಮಾಡು : ತೆಗೆದಯ್ ಮೋಕ್ಷದ ಬಟ್ಟೆಯಂ (ಶಮದ. ೨೦೭ ಪ್ರಹೋ). ೧೪. ಹೊರಬರಂ ; ಹೊರಸೂಸು : ಮೆಯ್ಯ ನೀರ್ತೆಗೆವನ್ನಂ ಜವಜವಜವನಂಜಿಸಿದುವು ಜವನಾಳ್ಗಳ ತೆಜಿದೆನ್ನ ಕೆನ್ನೆಯ ನರೆಗಳ್ (ಅಜಿಪು. ೨-೭೯). ೧೫. ಸಂಹರಿಸಂ ; ನಾಶಮಾಡು ; ಧ್ವಂಸಮಾಡು : ನಿನ್ನ ಧೈರ್ಯಾವಲೇಪಮಂ ಪ್ರಾಣಂಬೆರಸು ತೆಗೆಯದೆ ಮಾಣೆನೆಂದು ಮನೋಭವನಿಂ ನಿರ್ಭರ್ತ್ಸಿತೆಯಾದಂತೆಯುಂ (ಕಾದಂಊ. ೫೩) : ಈ ಪುಸಿವನಂ ಕುಸಿಯೊತ್ತಿ ಬಟ್ಟೆಯೊಳ್ ಪಟ್ಟಮಟಚಿದು ಬಳಸಿದ ದಸಿಯೊಳ್ತೆಗೆಯಿಮೆಂದು . . . ಪೇಚಿ (ಸುಕುಮಾ. ೬-೩೭) ; ನೈಷಧಭೂಮಿಪನ ಕೈಹಿಡಿದು ಬಾಳುವ ನೇಮವನು ತೆಗೆದ [ ಪಾಠಾಂ. ಬಿಸುಟ ] ಡವಿಗಟ್ಟಿತೆ ಕಠಿನವಹ ವಿಧಿಯು (ನಳಚ. ೭-೦೩). ೧೬. ನಾಶವಾಗು; ಹಾಳಾಗು : ಒಬ್ಬ ಜಂಗಮದಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು (ಬಸವ. ೬೨೬). ೧೭. ಆಕ್ರಮಿಸು ; ಆವರಿಸಂ ; ಮೇಲೆ ಬೀಳು : ಕಾಳಿಯೆಂಬ ಜಲದೇವತೆ ಪೂ ರ್ವ ಭ ವ ಬ ದ್ಧ ವೈ ರ ದೊ ಳು ಗ್ರ ಗ್ರಾಹಾಕಾರದಿಂ ತೆಗೆಯೆ (ಚಾವುಂಪು. ೫೭) ; ಮ ಹಾ ರ ಣ್ಯ ದೊ ಳ ಗೆ ಬ ರ್ಪ ನ ನೊ ರ್ವ ಬೊಮ್ಮರಕ್ಕಸಂ ಕಂ ಡು ಪಿ ಡಿ ದು ತಿನಲೆಂದು ತೆ ಗೆ ವು ದು ಂ (ಪಂಚತಂ. ೦೫೨-೯) ; ತಾರೆಗಳು ನೆ ಣ ಗೊ ಬ್ಬಿ ನ ಲಿ ರಾಹುವ ತೆಗೆದು ಬ ದು ಕ ಲು ಬಲ್ಲವೇ (ಕುವ್ಯಾದ್ರೋ. ೫-೩೩). ೧೮. ತಡೆ ; ಅಡ್ಡಿಪಡಿಸು : ಪೋಗದಿರೀಶ್ವರನಾಣೆಯೆಂದು ಫಲ್ಗುರುಳಿನಿ ಸಾನುಮಂ ತೆಗೆದು ಕಾಡಿದುದಲ್ಲಿ ಫಣೇಂದ್ರಕೇತುವಂ (ಪಂಪಭಾ. ೦೩-೫೫): ಕಾಲಮೇಲೆ ಮುಟ್ಟಿಗ್ಗದ ವಿನಯಾಭರಾಮನಂ ತೆಗೆದು ತಟ್ಟೈಸಿ (ಕಾದಂಊ. ೨೭೫) ; ಇಂದು ಪೋಗಲಾಗೆನ್ನನವಜ್ಞೆಗೆಯ್ದು ಬಿಸಿಲಾದುದು ನಿಮ್ಮಡಿ ನಾಳೆ ಪೋಪುದೆಂದುನ್ನತಶೀಲರಂ ತೆಗೆವುದುಂ (ಧರ್ಮಾಮೃ. ೦೨-೬೭) ; ದಂಡಾಗ್ರದೊಳ್ ರಂಜಿಪ ಬಿರುದ ಪಟಪ್ರಾತಮೋರಂದದಿಂ ವಾಯುಗಮವ್ಯಾಪಾರಮಂ ನೆಟ್ಟಗೆ ತೆಗೆಯೆ ... ಬರುತುಮಿರ್ದಂ ಪುರಕ್ಕುರ್ವರೇಶಂ (ಕುಸುಮಾ. ೪-೦೦೪). ೧೯. ನಿ ವಾ ರಿ ಸಂ ; ಹೋಗಲಾಡಿಸು ; ಕಳೆ : ಬಯ್ವ ಜನರು ಜರಿವ ಜನರುಂ ಅ ವ ರಿ ಗೇ ನು, ಬಾಯಿ ಕೊಬ್ಬು ನೋವು ತೆಗೆವರೆ ? (ಕವಿಕೋ. ೬೦-೨೦) ; ಪಿಸುರು ಕೆಗೆದರೂ ಪಿಶಾಚಿ ಬಿಡುವುದಿಲ್ಲ (ಗಾದೆ). ೨೦. ತೊಡಗು ; ಉಪಕ್ರಮಿಸು; ಆರಂಭಿಸು : ಮೆಲ್ಲನೆ ಮಾತ ತೆಗೆದನು (ಕುವ್ಯಾಕ. ೫-೫) ; ಸಿಂಹಳಕ್ಮಾಳ್ದನ ಬಂಟರುರ್ವಿ ವಿಂಗೆ ಕಾಳೆಗಮಂ ತೆಗೆದರ್ (ರಾಜಶೇ. ೫-೦೨೪). ೨೧. ಉಂಟುಮಾಡಂ ; ಆಗಿಸು : ಬಗಸೆಗಳ್ ಕುಡಿನೋಟವಮಮ ಪೊಸಗಾಡಿಯಂ ತೆಗೆಯೆ ... ದಿಟ್ಟಗೇನೆಸದಳೋ (ಪದ್ಮರಾ. ೩-೩೦) : ಸುಮನ ಸುಗಂಧ ಕದಂಬದ ಕಂಪನು ತಿಮಿರಿ ತೆಗೆಯಲಾಗಿ (ಭರತ. ೧-೫೬). ೨೨. ಮಾಡು ; ರಚಿಸಂ ; ನಿರ್ಮಿಸು : ಕಡೆದರೊ ಶಂಖದಿಂ ತೆಗೆದರೋ ನವಮೌಕ್ತಿಕದಿಂ ... ಪೇಚಿ[೩]ನಲ್ಕರವೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ (ಕಾದಂಪೂ. ೬೭೭) ; ಗಗನಗಂಗಾನದಿಯ ಕಾಲುವೆ ತೆಗೆದರನೆ ಶಕ್ಕೆಯದ ಪಲ್ಲವವಗಿಯೆ ಮೆಚಿ[೩]ದುದು ಬಿಗಿದ ಮೊಗರಂಬದ ವಿಳಾಸದಲಿ (ಕುವ್ಯಾದ್ರೋ. ೩-೯) ; ತೆಗೆದ ತೊಜಿ[೩] ಕಾಲುವೆಗಳುದ್ಯಾನಗಳ . . . ಈಕ್ಷಿಸುತಿರಸನೈತಂದ (ತೊರಠಾ. ೦-೬-೦೦). ೨೩. ಬರೆ ; ರೇಖಿಸಂ ; ಚಿತ್ರಿಸು : ಎರಡು ಬರೆಯಂ ತೆಗೆದು[ಪಾಠಾಂ. ತೇಪು]ದನರಸಂ ಕಂಡು ಕಡು ಮುಳಿದು (ವದ್ಯಾರಾ. ೦೦೮-೨೮) ; ಗಾಡಿವೆತ್ತಡರ್ದ ಕತ್ತುರಿಯೊಳ್ ಮದವಟ್ಟೆಯಂ ವಿಳಾಸದೆ ತೆಗೆದಂತೆ ಕಣ್ಗೆಸೆದು ತೋಚಿ[೩]ದುದಾ ಕದನತ್ರಿಣೇತ್ರನಾ (ಪಂಪಭಾ. ೩-೭೬) ; ಹೊಗರುಮೊಗಕೆ ಕಣ್ಗಳ ದಿಟ್ಟಿತಾಕದೊಲ್ತೆಗೆದ

ಕತ್ತುರಿರೇಖೆಯಂತೆ (ಶಂಸವಿ. ೯-೦೦೪); ಖಲೀಲ ಜಿಬ್ರಾನನು ಮಹಾ ಕವಿಯೂ, ತತ್ವಜ್ಞಾನಿಯೂ, ಹಾಗು ಚಿತ್ರಕಾರನೂ ಆಗಿದ್ದನು ... ಅವನು ತೆಗೆದ ಚಿತ್ರಗಳು ಪಾಶ್ಚಾತ್ಯದೇಶದೊಳಗಿನ ಬಹುಶಃ ಎಲ್ಲಾ ಪ್ರಮುಖಪಟ್ಟಣಗಳಲ್ಲಿಯೂ ಪ್ರದರ್ಶಿತವಾಗಿವೆ (ಪ್ರಬಂಧ. ೦೦೩). ೨೪. ಸರಿಸು ; ತಳ್ಳು : ಅಡಿಯಿಂ ಮೇಗಣ್ಗೆತ್ತುವ ಕಡುಗಾಳಿಯ ಪೊಯ್ಲೋಳದಟ ನೀರೊಗೆದಪುದಾರ್ದಡಿಗೆ ಬರೆ ತೆಗೆವ ಗಾಳಿಯನಡಿಗಿಟ್ಟದ ಪುದಿದಟ ನೀರಿದೊಂದಚ್ಚರಿಯೇ (ಆದಿಪು. ೦೩-೫೨) ; ಎಲೆಎಲೆ ಹಿಡಿ ಭೀಮನನು ತೆಗೆ ಕಲಕಿ ದುರ್ಯೋಧನನ (ಕುಮ್ಮಾಅ. ೬-೩೬) ; ಪಾಂಡವರ ಮಾತ ತೆಗೆಯಾಡದಿರಿ (ತುರಂಗ. ೪೬-೧೨). ೨೫. ಓರೆಯಾಗು ; ಅರುಗಾಗು ; ಪಕ್ಕಕ್ಕೆ ಸರಿ: ಒತ್ತೊತ್ತಿನಿಂ ನಿತ್ತರಿಸಲ್ಕಾನಾಟದೇನೊಂದೆಡೆಗೆ ತೆಗೆದುದೋ ವಿಶ್ವದಿಕ್ಚಕ್ರಂ (ಶಾದಂಉ. ೪೩೨) ; ಇದು ಹರಿಯ ಸಮರಲಕ್ಷ್ಮಿಯ ಮದುವೆಯೊಳೆಡೆವಿಡಿದ ಕಾಂಡಪಟಮೆನಿಸಿದ ಕೌಮುದಿ ತೆಗೆವಿನಂ ಮಗುಟ್ಟುದೆನಿಸಿದತ್ತು ಮಂನ್ನೀರೊಳಿಂದುಘಟಕಾಪಾತ್ರಂ (ವರ್ಧಪು. ೮-೩೫). ೨೬. ಒಯ್ಯು; ಸಾಗಿಸು : ಕೀರಂಗೆ ಕುಟುಕನಿಕ್ಕೆಂಬ ಚಕೋರಿಗಳಂ ಚಂದ್ರಕಾಂತದ ನೆಳಲ್ಗೆ ತೆಗೆಯೆಂಬ ... ಕೆಲಸದ ನೆವದಿಂ (ನಂಬಿರ. ೦೪-೩೬). ೨೭. ತೆರಳಿಸು; ಹಿಂತಿರುಗಿಸು : ಇಚ್ಛೆಯಣಮಿಲ್ಲದೊಡಂ ತೆಗೆದಳ್ ಕರು ಮನಂ ಕಿಡೆ ಪೊಸತಪ್ಪುದೊಂದು ಪಿಡಿಗಂಕುಶಮಿಟ್ಟು ಮರಳ್ಚು ವಂದದಿಂ (ಕಾದಂಪೂ. ೬೬೨); ಪಡೆಯ ತೆಗೆ ತರುವಲಿಯ ಕೊಲ್ಲದೆ ಹಿಡಿ (ಕುಮ್ಮಾದ್ರೋ. ೬-೭); ಬಗೆವೆತ್ತ ಬಾಗಿಲ ಕದ ವಜ್ರಲಾಳವಿಂಡಿಗೆಗಳ ಬಂಧನಗೊಳಿಸಿ ಮಿಗೆ ವಿಶ್ವಾಸಿ ಕಠೋರ ರಾಕ್ಷಸಿಯರ ತೆಗೆಯದೆ ಕಾಪನಿಕ್ಕಿದಳು (ಮೋಹತ. ೩೩-೩೭). ೨೮. ಹಿಂತೆಗೆದುಕೊಳ್ಳು ; ವಾಪಸ್ಸು ತೆಗೆದುಕೊಳ್ಳು : ಪದಪಿಂ ನಟ್ಟಿರೆ ದಿಟ್ಟಿಯಂ ತೆಗೆದನೆಂತೆಂತಾನುಮುದ್ವೇಗದಿಂ (ಕಾದಂಪೂ. ೬೬೪); ಹಗೆಯರಿಗೆ ವರವೀವರಿಬ್ಬರು ತೆಗೆಯಲಟಿಯರು ಕೊಟ್ಟ ವರಗಳ (ಹರಿಸಾ. ೨೮). ೨೯. ಹೋಗು; ತೆರಳು : ಇತ್ತಲೀ ಪ್ರಾಣೇಶನಿದ್ದ ನಿಮಿತ್ತದಲಿ ಪಶುಗಳು ಬೆಳೆದ ಹೊಲದತ್ತ ತೆಗೆಯಲು (ಬಸಪು. ೬೦-೨೩). ೩೦. ಹಿಮ್ಮೆಟ್ಟು; ಹಿಂದೆಗೆ : ಆಹವಧರೆಯೊಳ್ ಪತಿತಂ ಪ್ರಸ್ಕನ್ನಂ ಕಾದಿ ತಟ್ಟುಗಿದು (ರಣದೆ) ತೆಗೆದನಕ್ಕುಂ ನಷ್ಟಂ (ವಸ್ತುಕೋ. ೮೨-೫); ಕೈಕೊಳ್ಳದಗ್ಗದ ಬೀರರ್ ತೆಗೆದೋಡೆ (ಕಬ್ಬಿಕಾ. ೩೦೪): ತೆಗೆಯೆ ರಿಪುಬಲ ಕೊಲುತ ಬಂದುದು ದಿಗಿಭವು (ಕುಮ್ಮಾದ್ರೋ. ೩-೪೨) ; ಹಗಲು ಸವೆದುದು ಹೊಂಬಿಸಿಲು ನೆಟ್ ತೆಗೆದುದತಿ ವೇಗದಲಿ (ನಳಚ. ೫-೪೩). ೩೧. ಮುಚ್ಚು ; ರದ್ದುಪಡಿಸು : ಬಜಾರಿನ ಅಂಗಡಿಯು ಈಗ ತೆಗೆದು ಇರುತ್ತೇವೆ (ಮುಂಬಪ್ಪಾ. ೨೩ ಪ್ರಸ್ತಾವನೆ). ೩೨. ಹಿಡಿದುಕೊಳ್ಳು; ಹಿಡಿ: ಚೇಟ್ ಚಿಕ್ಕದೆಂದಟ್ಟಿಟಂ ತೆಗೆಯಲ್ ಕಚ್ಚದೆ (ಸೋಮೇಶ. ೪೧). ೩೩. ಆಯ್ದಿಡು; ಆರಿಸಿಡು; ವಿಶಾಸಲಿಡು: ಸರ್ವಸ್ವಮುಮಂ ಕುಡದಿರಲುರ್ವೀಪತಿ ಬಂದೊಡಾಗದೆಂದತಿಭಕ್ತರ್ ಖರ್ವಡನಿವಾಸಿಗಳ್ ಕೆಲರುರ್ವೀಶರ್ ತೆಗೆದರಾನೆಯಂ ಕುದುರೆಯುಮಂ (ಆದಿಪು. ೯-೦೨೮). ೩೪. ಬಳಸು; ಉಪಯೋಗಿಸು : ನಿತ್ಯವು ತೆಗೆಯುತಲಿರಬೇಕು ಹುಟ್ಟನು ತಾನೆಯೆ ತೊರೆಯೊಳಂಬಿಗನು (ಇಂಡಾಪ. ೨೦೦-೩೬). ೩೫. ಕ್ರಯ ಕೊಟ್ಟು ಪಡೆ; ಕೊಂಡುಕೊಳ್ಳು: ಇದನ್ನು ಎಷ್ಟು ದುಡ್ಡು ಕೊಟ್ಟು ತೆಗೆದಿರಿ ? (ರೂಢಿ). ೩೬. ಉಚ್ಚರಿಸು; ಹೇಳು: ಮಾತು ಕೇಳದ ಮಕ್ಕಳ ಹೆಸರು ತೆಗೆಯಬಾರದು (ಪುರಂದ. ೨-೫೮-೧). ೩೭. ತೋರಿಬಿಡು : ತೆಗೆಯೆ ಬೀರರವ [ದೆ] ಮೇಲೆ ಪರಿವ ಮದಗಜಂಗಳಿಂ ಚಳತ್ತುರಂಗಮಂಗಳಿಂ (ಪಂಪಭಾ. ೧-೫೮ ರಗಳೆ). ೩೮. ನಿಲ್ಲಿಸು; ಸುಮ್ಮನಿರು : ಎಂತುಂ ತೆಗೆ ಮೇಘನಾದ ಸಹಿತಂ ತತ್ಪಾದಪದ್ಮೋಪಜೀವಿಗಳಾಗಿರ್ದಗ ಮಕ್ಕಳಿಲ್ಲವಿದೆ ನಮ್ಮಂ ಕಾಣಲೆಂದೀಗಳಲ್ಲಿಗೆ ಮಂಂತೀ ಬರುತಿರ್ಪರ್ (ಕಾದಂಉ. ೬೬೪): ಧರೆಯೊಳಗೆ ತಾರಕಂಗೆನಗಂ ಮೇಘ ಮಹಾಬಲಂಗೆ ಸಮರಾಂಗಣದೊಳ್ . . . ಸುರಪತಿಗಿರಪತಿಯಜಂಗಿಜಂ ತೆಗೆ ಸರಿಯೇ (ಗಿರಿಜ. ೬-೩೮); ಘಡ ಘಡುರವಣೆ ಬೇಡ ತೆಗೆ ಬಾಯ್ಬಡಿಕತನವಿದು (ಕುಮ್ಮಾದ್ರೋ. ೨-೩೯). ೩೯. ಸುಡು; ಮರಳಿಸು: ಕುದಿಸು: ನೇಱಲ ಬೀಜಂ ಕಡಸಿಗೆಯುನ ಬೇರಂ ಸುಣ್ಣಂ ಜಲವಿಮಳಂ ತೆಗೆಯಲ್ ವಿಷಮಂಟಗುಂ (ಲೋಕೋಪ. ೮-೨೩). 'ತೆಗೆಪು$_1$' ಪರಾ. ೪೦. ತೇಯು; ಅರೆ : (+). ೪೧. [ಗಣಿತ] ಭಾಗಿಸು: "ತೆಗೆಯೆನಲು ಭಾಗಿಸುಹಮಕ್ಕು" (ಮಂಗರಾ. ೦೦೪-೦೦೨).

**ತಕ್ಕೊ, ತಗೊ, ತಕ್ಕೊ**=ತೆಗೆದುಕೊಳ್ಳು; ಸ್ವೀಕರಿಸು : ತಕ್ಕೋ ಗಂಟ ನಿನ್ನಾಟವ ತಿಳಿಸುವೆ (ವಿದಾಕ. ೩೫ ಪಲ್ಲವಿ): ನಿನ್ನ ಹಣವನ್ನು ನೀನೇ ತಗೋ (ರೂಢಿ); ತಕ್ಕೋ ನೀ ಮುನ್ನ ಕೊಟ್ಟ ಹೊನ್ನ (ಶರಲೀ. ೩೫೯-೪). **ತೆಗೆದಿಕ್ಕು** = ಧರಿಸು: ಕಾಸೆಯನುಟ್ಟು ಜನ್ನವಿರಮಂ ಪಗಲೊಳ್ ತೆಗೆದಿಕ್ಕಿ ವೇದದಭ್ಯಾಸಮನುಂಟುಮಾಡಿ ಪೌಲಸಂ ಪಸುತಿರ್ಪ ನಿಶಾಚರರ್ಕಳಂ ಗ್ರಾಸಮನುಣ್ಬುದೆಂದೊಡೆ (ಕಾವ್ಯಸಾ. ೫೩೫). **ತೆಗೆದಿಡು** = ಜೋಪಾನ ಮಾಡು; ಎತ್ತಿಡು: ಹೊಸಬಟ್ಟೆಯನ್ನು ಪೆಟ್ಟಿಗೆಯಲ್ಲಿ ತೆಗೆದಿಡು (ರೂಢಿ). **ತೆಗೆದಿರಿಸು** = ಬೇರೆಯಾಗಿರಿಸು ; ವಿಶಾಸಲಾಗಿರಿಸು : ಸಕಲ ದೇವಾನ್ನವ ಒಡೆಯರಿಂದಲೂ ಮಿಗಿಲಾಗಿಕ್ಕಲು ತೆಗೆದಿರಿಸಿದೆನು (ಬಸವ. ೪೩೯) ; ನೊಣವನೆ ಬೇಯಿಸಿ ಬಡಿಸುವುದಾದರು ರೆಕ್ಕೆಯನೊಂದನು ಅಡುಗೆಯ ಭಟ್ಟರು ತಮಗಾಗಿ ತೆಗೆದಿರಿಸುವರು (ಇಂಡಾಪ. ೨೨೧-೯೪). **ತೆಗೆದುಕೊಳ್, ತಕೊಳ್, ತಕ್ಕೊಳ್, ತಕ್ಕೊಳ್ಳು, ತೆಕೊಳ್, ತೆಕ್ಕೊಳ್, ತೆಕ್ಕೊಳ್ಳು, ತೆಗಕೊಳ್, ತೆಗೆಕೊಳ್** = ೧. ಸ್ವೀಕರಿಸು: ಸಮ್ಯಗ್ವ್ರತಂಗಳುಮಂ ತೆಗೆದುಕೊಳ್ವಂತೆ ವಿಚಿತ್ರವಸ್ತ್ರಂಗಳಂ ತೆಗೆದುಕೊಂಡು ... ಬನಮಂ ಪೊಕ್ಕು (ಸುಕುಮಾ. ೦೦-೩೩ ವ); ಆ ವಿಭೂತಿಯಂ ಸುಕೃತದಿಂ ತೆಗೆದುಕೊಂಡು . . . ಧರಿಸಿ ಲಿಂಗಾರ್ಚನೆಯ ಮಾಡುವ ಶರಣನಾತನೆ ವೇದವಿತ್ತು (ಅದವ. ೦೮-೪೩) ; ಆ ಜಂಗಮವೇ ಸಾಕ್ಷಿಯಾಗಿರ್ದು ವಿಭೂತಿ ವೀಳೆಯವ ತಕ್ಕೊಂಡು (ಚನ್ನವ. ೦೨-೯) ; ಲಿಂಗ ಕೆಲದೊಳಿರೆ ಕರದಲ್ಲಿ ತಕ್ಕೊಂಡು (ಗುರುಚಾ. ೫-೬೪) ; ಬೆಣ್ಣೆ ತಕ್ಕೊಂಡ ಬಳಿಕ ಉಳಿಯುವುದೇನು ಮಜ್ಜಿಗೆ (ಮುಂಬಯಿ. ೦-೨೫) ; ತೋಟ ಮಠ ಕೆರೆಯ ಅಪಹರಿಸಿ ತೆಕೊಂಡಂಥಾ ಪಾಪಿಗಳು ದೇವಲೋಕ ಮರ್ತ್ಯಲೋಕಕೆ ಹೊರಗು (ಎಕ. XVI, ಚಿಕ್ಕನಾ. ೦-೦೯ ; 1622) ; ತಾಂಮ್ರ ಶಾಸನ ಸಹವಾಗಿ ಕ್ರಯವನೂ ತಕ್ಕೊಂಡು (ಸೌಇಇ. IX-ii, ೫೦೬-೨೪; 1538) ; ಖಂಡಪರಶುವಿನ ಕೈಯಿಂದಲಾ ಹೊನ್ನ ತಕ್ಕೊಂಡು (ಹಲಪು. ೬೨-೬೨) ; ದುಡ್ಡುಗಳನ್ನೆಲ್ಲಾ ತಕ್ಕೊಂಡು ಪೇಟೆಗೆ ಹೋಗಿ (ಕಥಾಮಂ. IV, ೦೪) ; ವಿವಿಧವಾದಕರೊಳಗದೊರ್ವನ ಹೆಗಲ ಹಟ್ವೊಂದ ತವಕಿಸದೆ ತೆಗಕೊಂಡು ತನ್ನೊಪ್ಪುವ ಹೆಗಲಿನೊಳು ಕೋದು (ಸಾಳ್ವಭಾ. ೦೮-೫೫) ; ಪೂವಸೆಗೆಲದೊಳವ ಮುನ್ನಿರಿಸಿ ದಸಿ ಖೇಡಯುವಿರಲು ತೆಗೆಕೊಂಡು ನೋಡುತಿರೆ (ಸಾಳ್ವಭಾ. ೦೬-೦೫). ೨. ಪಡೆ ; ಹೊಂದು : ತಮ್ಮ ಅಪ್ತರು ಇಷ್ಟರು ಸ್ನೇಹಿತರು ಮುಂತಾದವರ ಭೆಟ್ಟಿಯನ್ನು ತಕೊಳ್ಳಬೇಕು (ಮುಂಬಯಿ. ೪-೩೪). ೩. ವಹಿಸು : ಇನ್ನು ಮುಂದೆ ಹೆಚ್ಚು ಶ್ರಮ ತಕ್ಕೊಂಡು ಕಲಿಯಬೇಕಾಗುವುದು (ಮುಂಬಯಿ. ೪-೦). ೪. ದೋಚು; ಕಸಿ; ಕೀಳು : ಬಿಕ್ಕು ಬಿಕ್ಕನೆ ತೋಱ ಇಕ್ಕುವಳು ಕಣ್ಣೀರ ಸಿಕ್ಕಿದಳು ಸೂಳೆಯೆನಬೇಡ ಅದು ರೊಕ್ಕ ತಕ್ಕೊಂಬುವುದಕೆ (ಸರ್ವಜ್ಞ. ೦೯೨೪). **ತೆಗೆದುನೋಡು**=ನೋಡಿಯೂ ನೋಡದ ಹಾಗೆ ಈಕ್ಷಿಸು,–ನೋಡು : ಪರೆದ ಕುರುಳಲುಗೆ ಘಟ್ಟಿಯನರೆಯುತ್ತುಂ ನಾಣ್ಚೆ ತೆಗೆದು ನೋಟ್ಟುದುಮೆನ್ನಂ (ಪಂಪಭಾ. ೮-೬೫). **ತೆಗೆದು ಹಾಕು** = ೧. ಹೊಡೆದು ಹಾಕು : ಇಲ್ಲಿ ಬಂದಿರುವ ಅನಾವಶ್ಯಕ ವಾಕ್ಯವನ್ನು ತೆಗೆದುಹಾಕಬಹುದೆ ? (ರೂಢಿ). ೨. ವಜಾಮಾಡು : ಅವನನ್ನು ಕೆಲಸದಿಂದ ತೆಗೆದು

ಹಾಕಿದರು (ಲೂಥಿ). ೩. ನಿರಾಕರಿಸು ; ಅಲ್ಲಗಳೆ : ಆ ಮಾತನ್ನು ತೆಗೆದುಹಾಕುವಂತಿಲ್ಲ (ಲೂಥಿ). **ತೆಗೆದು ಹೋಗು** = ಕೃಶವಾಗು ; ದುರ್ಬಲವಾಗು : ದಿನೇ ದಿನೇ ಮೊದಲಿಗಿಂತ ಹೆಚ್ಚಾಗಿ ತೆಗೆದು ಹೋಗುತ್ತಾ ಬಂದರು (ಚಿಕ್ಕದೇ. ೨೬೯) : ನೀವು ಬಹಳ ತೆಗೆದು ಹೋಗಿದ್ದೀರಿ (ಮುದುಕು. ೯೯). **ತೆಗೆಬೀಯ** = ಕೊಡುಂಗೈಯವನು ; ವಂಶಕ್ತ ಹಸ್ತ ; ಉದಾರಿ ; ಒಂದು ಬಿರುದು (?) : ಅನ್ವಾತನ ಕಾಳೆಯ ಬಿರುದೆನ್ನಂದಡೆ ಆಳಿಂ ಮುಂಂನಿಜಿವಂ ಸಿತಗರ ಗಂಡಂ ತೆಗೆಬೀಯ ಚಲದಂಕರಾಮನ ಗಂಧವಾರಣಂ ವಾಲಿವರ ಮಾರಿ (ಶಾಇಇ. XX. ೦೨೭-೮ ; 1186). **P** ಈ ಧಾತು ಅನೇಕ ಶಬ್ದಗಳ ಮುಂದೆ ಸೇರಿ ಸಂಯುಕ್ತ ಧಾತುವಾಗಿ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ:—ಕಾಲ್ತೆಗೆ, ಚಿತ್ರತೆಗೆ, ಪ್ರಾಣತೆಗೆ, ಬಾವಿತೆಗೆ, ಮೈದೆಗೆ, ಹೊರತೆಗೆ ಇತ್ಯಾದಿ.

[ ದೇ.॥ ತಮಿ. ತೆಕ್ಕು ; ತೆವ್ವು : ತುಳು. ದೆಪ್ಪು ; ತೆಲು. ತಿಗಿಯು, ತಿಗುಚು ; ತಿಗುವು, ತಿವ್ವು ; ಕೊಲಾ. ತಿಕ್, ತಿವ್ ; ನಾಯ್ಕಿ. ತಿಕ್, ತಿವ್]

**ತೆಗ್₂** (ನಾ). ೧. ತೆಗೆದುಕೊಳ್ಳುವಿಕೆ : (ಕ). ೨. ಆಕರ್ಷಣೆ ; ಸೆಳೆತ : "ಆಕರ್ಷಣ ಪಲಾಯನಗಳೊಳ್ ತೆಗೆ" (ಶಬ್ದಮಂ. ೯೦). ೩. ಹಿಮ್ಮೆಟ್ಟುವಿಕೆ ; ಹಿಂದೆಗೆಯುವಿಕೆ ; ಪಲಾಯನ : ಅಮರ್ಚುವ ನಿಲ್ವಡೆಯಂ ಬಗೆವಂ ತೆಗೆಯನಲ್ಲಾಟವಂ ಕಾಟವಂ ನೋವುದಂ ಸಾವುದನೆಲ್ಲಂದದಿಂ ಬಗೆದಾಗಳ್ (ಶಂಕಥಾ. ೩-೪೩). ೪. ಇಳಿತ ; ಇಳಿಯುವಿಕೆ : ತೆರೆ ನೊರೆ ಬುದ್ಬುದಂ ಸುಬಿಜಲಂ ತೆಗೆ ಪೆರ್ಚುಗೆ ಗುಣ್ಪು ಘೋಷಣಂ ವರುಣ ನಗಂ ವಧೂಟಜನನಂ . . . ನೀರ್ವೊಗೆ ವಭ್ರಮುರ್ವರಾಪರಿವೃತಿ ನಾಗರಿಕ್ಕಿ ಬಗೆದಾಡೊಡೆ ಸೈತು ಸಮುದ್ರ ವರ್ಣನಂ (ಸೂಕ್ತಿಸು. ೨-೦). [ <ತೆಗ್₁ ]

**ತೆಗೆತ** (ನಾ). ತೆಗೆದುಕೊಡುವಿಕೆ ; ದಾನ : "ದಯ—ದಾನ, ಗತಿ ಹಿಂಸಾದಾನೇಷು ಈವಿಯೊಳಂ, ನಡೆಯೊಳಂ, ಝುಂಕಣೆಯೊಳಂ, ತೆಗೆತದೊಳಂ" (ಶಾಶಕ್ಕ. ೦೦೦). [ತೆಗ್₁ + – ತ್ಪ]

**ತೆಗೆತರ್** (ಕ್ರಿ) ೧. ತೆಗೆದುಕೊಂಡು ಬರು. 'ತೆಗೆತರಿಸಂ' ಪರಾ. ೨. ಸೆಳೆದುಕೊಂಡು ಬರು : ಹೆಣ್ಣಾಳ್ಗಳೆನ್ನದೆ ತಬಿದಿಕ್ಕಿ ತೆಗೆತಂದು ಚಿಣ್ಣನನೆವುಗೊಟ್ಟಿಸೆಂದ (ಮೋಹತ. ೩೩-೩೦). [ತೆಗ್₁ + ತರ್]

**ತೆಗೆತರಿಸು** (ಕ್ರಿ). ತೆಗೆದುಕೊಂಡು ಬರುವಂತೆ ಮಾಡು : ಪೆಟ್ಟಿಗೆಗಳಂ ತೆಗೆ [ಪಾಠಾಂ. ಗ] ತರಿಸಿ ಮುಂದಿಟ್ಟು (ಬಸಪು. ೦೦-೦೫). [ತೆಗೆತರ್+–ಇಸು₃]

**ತೆಗೆನೆಱ್** (ಕ್ರಿ). (ಬಾಣ ಬಿಡಲು ಸಿದ್ಧವಾಗಿ) ಪೂರ್ತಿಬಾಣವನ್ನು ಎಳೆ : "ತೆಗೆನೆಱ್ – ಆಕರ್ಣಾಂತೇ (ಪೂರಾ ಎಳೆ)" (ಕಮಧಾ) : ಗೆಱ್ ಸನ್ನೆಗೆಯ್ದು ತೆಗೆನೆಱ್ದೆಱಗಿ ಪರಂಕಲಿಸಿ ಪರ್ವಿ ಕೂಕಿಱ್ದಿಸೆ (ಶಂಕಥಾ. ೦೦-೭೩) : ಅಗಳಂಬರಚರಬಲದ ಧನುರ್ವಲಂ ತೆಗೆನೆಱ್ದು ಪೊಕ್ಕು (ಶಾಂತಿಪು. ೪-೮೭) ; ಕಡೆಗಣ್ಣಿಂ ಕಯ್ಯುಮಿಂದಾಗಿರೆ ತೆಗೆನೆಱ್ದವ್ಯಗ್ರನೇಕಾಗ್ರಚಿತ್ತಂಬಡೆದಿರ್ದಂ (ಶಂರಾಮಾ. ೦೪-೧೭೭) ; ತೆಗೆನೆಱ್ದಬ್ಜನಾಭನಿಸೆ (ಜಗವಿ. ೭-೮೩) ; ಸಂಚಳಿಸದ ಶಂಕರನ ಮನಂ ಚಳಿಯಿಪುದುಂ ಸಾರ್ದು ಪಾರ್ದು ತೆಗೆನೆಱ್ದಿರ್ದಂ (ಗಿರಿಕ. ೮-೪೪) ; ಓಸರಿಸದೆ ತೊಡರ್ಚಿ ಸಾರ್ಚಿ ತೆಗೆನೆಱ್ದು ನಿಂದು (ರಾಜಶೇ. ೬-೯೭೫). [ತೆಗ್₁ + ನೆಱ್₁]

**ತೆಗೆನೇಣು** (ನಾ). ಎಳೆಯುವ ಹಗ್ಗ ; ಕಡೆಗೋಲಿನ ಹಗ್ಗ : ಮಂದರದ ಕಡೆಗೋಲ ಮೇಳವಿಸಿ ವಾಸುಗಿಯ ತೆಗೆನೇಣನಿಂದಸುರರೋಳಿಯಿಂ ನೀವು ಸಹಿತೆರಡು ಕಡೆಯಂ ಪಿಡಿದು ಮಥಿಸಲು (ಐಶಿಕಂ. ೦೨-೩) ; ನಳನಳಿಪ ತೋಳುಗಳ ನಿಜಕರತಳದ ತೆಗೆನೇಣುಗಳ ಮುಖದಲಿ ಹೊಳೆವ ಹೊನ್ನೋಲೆಗಳ . . . ಮೋಹನಗಾತ್ರಿಯೆಸೆದಳು ಮೊಸರ ಕಡೆವುತ್ತ (ನಿಭಾಗ. ೦೦-೯-೦೫) : ಹರಿಗೆ ತಲ್ಪವಾಗಿರ್ದನು ಸಮುದ್ರಮಥನದಲ್ಲಿ ತೆಗೆನೇಣಾಗಿ ನೊಂದನು (ಕೃರಸೂ. ೨೦). [ತೆಗ್₁ + ನೇಣು (<ನೇಣ್₁) ]

**ತೆಗೆಪು₁** 'ತೆಗಪು' ನೋ.

**ತೆಗೆಪು₂** (ನಾ). ನೆನೆಸುವಿಕೆ : ಅಳಿಯೊಳ್ ತೆಗೆಪಾದರಳಿಯ ತಳಿರಂ ಮಾರುತದ ಪತ್ತಿಯೆಳಗಾಯುಮನಾ ಜಳದೊಳ್ ಗೋಕ್ಷೀರಾನ್ವಿತಮಾ ಮಳೆಕಾಮ್ರಫಳಂಗಳಾವಗಂ ಮೃದುವಕ್ಕುಂ (ಲೋಕೋಪ. ೬-೨೦). [?]

**ತೆಗೆಬಗೆ, ತೆಗೆಬಿಗಿ** (ನಾ). ೧. ತೊಂದರೆ ; ಕಷ್ಟ : ಭೂಪತಿ ಹೆಗಡು ಗೊಳುತ್ತೈತಂದು ಕೇಳಲು ತೆಗೆಬಗೆಯಲುಸುರುತ್ತ ತಂದೆಯ ನೆಲೆಯ ತಿಳುಹಿದನು (ಕಾತಿರಾ. ೦-೩೦) ; ಮಸೆದು ಕರಗಳನೊರ್ವರೊರ್ವರು ಮಸಗಿದರು ಮುಷ್ಟಿಪ್ರಹಾರದಲುಸಿರ ತೆಗೆಬ[ ಬ ]ಗೆಯಿಂದ ಮಂಡಿಯ ನೊಡ್ಡಿ ಸಮವಾಗಿ (ಕೋಗಯ. ೨೪-೦೯). ೨. ಪ್ರಾಣ ಹೋಗುವ ಸ್ಥಿತಿ ; ಉತ್ಕಟಾವಸ್ಥೆ : ಬಾಯ ಮುಡುಹಿನ ಬಳಲುಗಂಗಳಿನಾಯುವಿನ ತೆಗೆಬಗೆಯ ರಕ್ತಸರಾಯನನು ಕೊಂಡೊಯ್ದು ಬೀಸಿದರಾಲವಟ್ಟದಲಿ (ಕೊರಡಾ. ೧-೦೩-೨೭). ೩. ಅತಿಶಯ ; ಆಧಿಕ್ಯ ; ಹೆಚ್ಚಳ : ವಿಕ್ರಮದ ತೆಗೆಬಗೆಯಿಂದಲರಿನೃಪರುಗಳ ಬಗೆಗೆಡಿಸುತ ನಡೆದಳು (ಕುರಾಸಾಂ. ೪೦-೮೪). 'ತಗೆಬಗೆ' ಪರಾ. **ತೆಗೆಬಿಗಿ** : ೧. ಸೊಗಸು ಬೆಳೆಯ ಕೊಯ್ದು ಪೊಜುವ ಜನಕೆ ತೆಗೆಬಿಗಿಯಿಲ್ಲವಾವ ಕಾಲದೊಳು (ರಾಮವಿ. ೨-೩೭). ೪. ಬಿಂಕ ; ಬಿಗುಮಾನ : ಸೊಗಯಿಪ ಸತ್ಕಾರದಿಂದ ತೆಗೆಬಿಗಿಯಿಲ್ಲದ ಸಮರತಿಯಿಂದವಳಗಣಿತಸುಖವಿತ್ತಳವಗೆ (ನೇಮಿಸಂ. ೦೦-೯೦) : ಮೊಗವ ಕಾಣಾತ ನಮ್ಮೊತ್ತಿಗೆ ಬಹನಲ್ಲದೆ ತೆಗೆಬಿಗಿಯವನಲ್ಲ ನಿಮ್ಮ ಮಗ (ಕುರಾಸಾಂ. ೩೭-೦೨೪). 'ತಗಿಬಗಿ' ಪರಾ.

**ತೆಗೆಬಗೆಮಾಡು** = ತೊಂದರೆಯನ್ನುಂಟುಮಾಡು ; ಇಕ್ಕಟ್ಟನ್ನುಂಟುಮಾಡು : ಶಿಶುವ ನೋಡಿ ಭಿ ಮನ್ನು ಸುಭಟಪ್ರಸರದಿನಿಬರ ನೊಂದು ಘಾಯದೊಳುಸಿರ ತೆಗೆಬಗೆ ಮಾಡಿದನು (ಕುವ್ಯಾದ್ರೂ. ೩-೨೩). **ತೆಗೆಬಗೆಯಾಗು** = ೧. ಹೊಯ್ದಾಡು ; ಅನಿಶ್ಚಯವಾಗು : ಮುಗಿದ ಸರೋಜಮಾಲೆಗಮರಲ್ವಸಿತೋತ್ಪಲಮಾಲೆಗಂ ಮನಂ ತೆಗೆಬಗೆಯಾಗಿ ಸ್ಪೈರಿಸದೆ ಷಟ್ಟದಸಂತತಿ ... ಎಡೆಯಾಡಿದುವಂಬುರುಹಾಕರಂಗಳೊಳ್ (ಅನಂಪು. ೭-೬೯). ೨. ಸಂಕಟವಾಗು ; ಕಷ್ಟವಾಗು : ಉಸುರು ತೆಗೆಬಗೆ ಯಾಯ್ತು ಜೀವರಿಗೆ (ಕಾತಿರಾ. ೨೭-೩೯) ; ಇಳೆಯ ಭಾರಕರುಸುರು ತೆಗೆಬಗೆಯಾಗೆ ತೆರಳಿಕು ಸೇನೆ ಪಶ್ಚಿಮಾಕೆ (ಕೊರಡಾ. ೪-೯-೦).

[ತೆಗ್₁ + ಬಗ್₃]

**ತೆಗೆಬಿಗಿ** 'ತೆಗೆಬಗೆ' ನೋ.

**ತೆಗೆಮಿಳಿ** (ನಾ). ಪ್ರಾಣ ತೆಗೆಯುವ ಹಗ್ಗ ; ನೇಣು (?) : ಚಕೋರಿಗಳ್ ನಲಿಯೆ ಪಾಣ್ಬರಿಯರ್ಕಳ ಚಿತ್ತದಲ್ಲಿ ಪೆಂಪೊಗೆಯೆ ವಿಯೋಗಿಗಳ್ ಮುನಿಯೆ ಕತ್ತಲೆವತ್ತಲೆಯಾಗಿ ಸಂಜೆಯೊಳ್ ತೆಗೆಮಿಳಿಯಾಡೆ [ಪಾಠಾಂ. ತೆಗೆಯೆ ಮುಳಿಯಾಡೆ] ಸೂರ್ಯನಪರಾಬ್ಧಿಯೊಳೊಯ್ಯನೆ ಮೆಯ್ಯನಿಕ್ಕಿದಂ (ಪುಣ್ಯಾಸ್ರ. ೩-೩೮). [ತೆಗ್₁ + ಮಿಳಿ₂ ]

**ತೆಗೆಮೆಟ್ಟು** (ನಾ). (ಕಾಳಗದಲ್ಲಿ ವಂಚಿಸುಗಲು) ಹಿಂದಕ್ಕೆ ತೆಗೆದು ಇಟ್ಟ ಹೆಜ್ಜೆ : ಬೆದಱುಗಾಗೆಯ ನೋಟ ಸಾಳುವನೊದವು ಮಿಗಾಗಳ ಝುಳಕ ಕೇಸರಿಯಧಟು ಶಾಖಾಮೃಗದ ಲಂಘನ ತಗರ ತೆಗೆಮೆಟ್ಟು . . . ಸೊಕ್ಕಿದ ರದನಿಗಳ ಧೂಳಾಟ ಒಬ್ಬದವರ ಯುದ್ಧದಲಿ (ಸಾಳ್ವಭಾ. ೨೨-೭೦).

[ತೆಗ್₁ + ಮೆಟ್ಟು₂ ]

**ತೆಗೆಯಾಳ್** (ನಾ). ಆಕ್ರಮಿಸುವ ಯೋಧ ; ಧಾಳಿಯಿಡುವ ವೀರ : ದಿವ್ಯವಾಗ್ವಿದಿತ ಸುಧರ್ಮಮಾ ಸಭೆಯೊಳಿಂದು ವಿರಕ್ತನೃಪಾಳಜಾಳ ಮಿರ್ದುದು ತೆಗೆಯಾಳನಾಯ್ತುತ್ತೆಗೆದಂತೆ ಕೊಳಲ್ಕಪವರ್ಗದುರ್ಗಮಂ (ಅನಂಪು. ೯-೪೪). [ ತೆಗ್₁ + ಆಳ್₃ ]

**ತೆಗೆಯಿಸು, ತೆಗಸು, ತೆಗಿಸು, ತೆಗೆಸು** (ಕ್ರಿ). ೧. ಹೊರಕ್ಕೆ ತರು ; ಹೊರ ಬರುವಂತೆ ಮಾಡು : ಸುಬಂಧುವಂ ನೆಲಮನೆಯಿಂ ತೆಗೆಯಿಸಿ ಸನ್ಮಾನ ದಾನಂಗಳಿಂದಾತನಂ ಸತ್ಕರಿಸಿ (ವಡ್ಡಾರಾ. ೦೧೩-೨೩) ; ಎಲ್ಲಂ ನಟ್ಟುಡಿದ ಬಾಳ ಕಕ್ಕಡೆಯುಡಿಗಳುಮನಯಸ್ಕಾಂತಮಂ ತೋಱಿ ತೆಗೆಯಿಸುತ್ತುಂ (ಪಂಪಭಾ. ೧೦-೨೭) ; ನಾನಿಂದಧರ್ಮದೊಳಿದ್ದರೆ ತೆಗೆಯಿಸು ಅಲ್ಲಿಯೆ ನೆಲೆನಿಲ್ಲದಂತೆ (ಶಂಕಾಶ. ೪೦೭-೬೯). ೨. ಬರುವಂತೆ ಮಾಡು ; ಆಕರ್ಷಿಸು : ಆ ಸ್ಥಿರಪ್ರಕೃತಿಯು ಸತ್ತ್ವ ಪ್ರಕೃತಿಯ ತೆಗೆಯಿಸಿದವುದಾ ದಕ್ಷಿಣಹೃದಯೆಯು ದಕ್ಷಿಣತ್ವಮ ಗಮಿಯಿಸಿದವುದಾ . . . ಮ ಹೋ ೕ ದಾ ರೆ ಯು ದಾ ರ ತೆ ಯ ಮನಂಗೊಳಿಸಿದವ್ವುದು (ಕಾದಂಬ. ೪೦೪). ೩. ಇಳಿಸು ; ಕೆಳಕ್ಕೆ ತರಿಸು : ಅಡವಿಯೊಳ್ ನಿಡಿಯ ಮರದ ತುತ್ತತುದಿಯೊಳಿರ್ದಬಲ್ಲ ಗುಂಡಿಗೆಯುಂ ಕಂಡು ತೆಗೆಯಿಸಿ ಕೊಂಡು ಪೋಗಿ (ವಡ್ಡಾರಾ. ೯೦-೦೬). ೪. ಸಾಗಿಸು ; ಕಳುಹಿಸು : ಕನಕರತ್ನಾಭರಣದಾಳಿಮನೊಪ್ಪುಗೊಂಡು ಭಂಡಾರಕ್ಕೆ ತೆಗೆಯಿಸುತ್ತಂ (ಆಸರ. ೬-೩೩). ೫. ಹೊರ ಹಾಕು ; ಬಹಿಷ್ಕರಿಸು : ನಾಳೆ ಒಬ್ಬನನ್ನು ಜಾತಿಯಿಂದ ತೆಗೆಯಿಸುವ ವಿಷಯ . . . ಅಲ್ಲಿ ಬರುತ್ತದೆ (ಉಡಿಕೆಎ. ೦೩೬). ೬. ಕೊಂಡುಕೊಳ್ಳು ; ಕ್ರಯಕೊಟ್ಟು ಪಡೆ : ಗಜನೂರಿನಲ್ಲಿ ಏನಾದರೂ ತಿಂಡಿ ತೆಗೆಯಿಸಿಕೊಂಡು ತಿನ್ನೋಣವೆಂದಂದು ಕೊಂಡೆ (ಹಂಗಾಳ್. ೪೯). ೭. ಬಿಡು ; ತೊರೆ ; ತ್ಯಜಿಸು : ಕುಮ್ಮಟವನು ತೆಗೆಯಿಸಿದರೆ ಕಾರ್ಯವನುಗೆಡುವುದು . . . ಅದಱಿಂದದ ಬಿಡುವುದು ಮನುಜೇಶ್ವರ ನೀತಿಯಲ್ಲ (ಕುರಾಸಾಂ. ೩೬-೪೮). ೮. ಕಳಚುವಂತೆ ಮಾಡು ; ಬಿಚ್ಚುವಂತೆ ಮಾಡು : ವೇಷವನ್ನು ತೆಗೆಯಿಸಿ, ಬಣ್ಣವನ್ನು ತೊಳಸಿ ಕಳಿಸಿದಾಗ ಬೆಳಗಾಗಿತ್ತು (ಜಂಘಿ). ೯. ಕೊಲ್ಲಿಸು ; ಸಂಹರಿಸು ವಂತೆ ಮಾಡು : ಬಂಟರಂ ಕೊಂಡಾಡುವರ ಗಂಟಲೊಳ್ ನೇಣನಿಕ್ಕಿ ತೆಗೆಯಿಸುವಂ (ಧರ್ಮಾಮೃ. ೩-೬೭). **ತೆಗಸು** : ೪. ಹಿರಿಯ ಕಣಜದ ದವಸವೇನುವನಿರಿಸದೀಗಳ್ ತೆಗ[ಪಾಠಾಂ. ಗೆ]ಸು (ಬಸವು. ೩೩-೦೪) ; ತೆಗ[ಪಾಠಾಂ. ಗೆ]ಸಿದನು ಬಳಿಕುತ್ತಮದ ತೊಡವುಗಳ ದಿವ್ಯದುಕೂಲರತ್ನಾಳಿ ಗಳಿನನುಪಮ ಗಜಹಯಾದಿ ಸಮಸ್ತವಸ್ತುಗಳ (ತೊರರಾ. ೦-೬-೨). ೯. ಲೋಹಶೂಲದೊಳಿನಿಬರಂ ತೆಗ[ಪಾಠಾಂ. ಗೆ]ಸುವೆನು ತಲೆಕೆಳಕಾಗಿ ನಿಮ್ಮು ವನು (ಬಸವು. ೩೦-೩೦). ೧೦. ಹೂಳು, ಕಸ ಮೊದಲಾದುವನ್ನು ಹೊರಗೆ ಹಾಕು ; ಎತ್ತಿಹಾಕು : ಪ್ರತಿ ವರುಷಉ ಕೆಱೆಯ ತೆಗಸುವ ಹಾಗೆ ಕೊಟ್ಟ ಸ್ವಾಸ್ತಿ (ಎಕ. VII(8), ಶಿಕಾರಿ. ೨೩೪-೦೦; 1626). ೧೧. ಕೀಳುವಂತೆ ಮಾಡು ; ಕೀಳಿಸು : ಅವರಂ ಕರೆಸಿ ಕಣ್ಣಂ ತೆಗ[ಪಾಠಾಂ. ಗೆ]ಸಿದನು (ಬಸವು. ೬೦-೪). ೧೨. ನಿವಾರಿಸು ; ಹೋಗಲಾಡಿಸು : ಒಱಲುವಮರರ ಬಾಯ ಕೈಗಳ ಮೊರೆಯ ತೆಗಸಿ ಮಹಾಗಣಂಗಳೊಳಿರುವ ನಂದೀಶ್ವರನು ಹೊಕ್ಕನು ಹೊಯ್ದು ದಾನವರ (ಕುವ್ಯಾ. ೬-೬೯). ೧೩. ಹಿಂದಕ್ಕೆ ತೆಗೆದುಕೊಳ್ಳು ; ವಾಪಸ್ಸು ತೆಗೆದುಕೊಳ್ಳು : ಬಲುಕಾಳೆಗವನೊಯ್ಯಾರಿಸುತ ರಾಯರು ತೆ ಗ ಸಿ ದ ರು ಸೇನೆಯನು (ಕುವ್ಯಾ.ಭೀ. ೪-೦೦). ೧೪. ಹಿಂದಕ್ಕೆ ಬರುವಂತೆ ಮಾಡು ; ಹಿಮ್ಮೆಟ್ಟಿಸು : ತೆಗಸಿದನು ಸಾತ್ಯಕಿಯನೀತನ ಬಿಗಿದನಂಬಿನಲವನ ಬಾಣಾಳಿಗಳ ಕಡಿದನು ಘಾಸಿಮಾಡಿದನವನ ರ ಥ ಹ ಯ ವ (ಕುವ್ಯಾ. ೪-೩) ; ಪ್ರವೀರನಂ ತೆಗ[ಪಾಠಾಂ. ಗೆ]ಸಿದರ್ಬಿನ್ನೆಲೆಗೆ (ಜೈಮಿಭಾ. ೮-೩೦). ೧೫. ತೆರೆಯುವಂತೆ ಮಾಡು ; ತೆರೆಯಿಸು : ಬಂದನಿತಱಿಂದಿಂದುಶೇಖರನಿಂದೆ ಕದಹುಗಳಂ ತೆಗ[ಪಾಠಾಂ. ಗೆ]ಸಿ (ಬಸವು. ೪೪-೦೮). **ತೆಗಿಸು** : ೧೦. ಎಂಜಲ ತೆಗಿ [ಪಾಠಾಂ. ಗೆ]ಸಿ ಸಾರಿಸಿದನು (ಕುವ್ಯಾ.ಸ. ೬-೧೬). ೧೫. ಸೌರಾಷ್ಟ್ರೇಶ ಸೋಮೇಶ ನೀಂ ತೆಗಿಸೀ ಬಾಗಿಲ ಪೊಂಗದಂಗಳನೆನುತ್ತಂ (ಅಲ್ಲಮಲ. ೧೧-೬೦). **ತೆಗೆಸು** : ೧. ಫಲುಗುಣ ಹೊಕ್ಕನಾಯುಧಶಾಲೆಯನು ತೆಗೆಸಿದನು ಧನು ಮೊದಲಾದ ಕೈದುಗಳ (ಕುವ್ಯಾ.ದ್ರೋ. ೯-೦) ; ತೆಗೆಸಿದನು ಬಳಿಕಿನಕುಲದ ಹೀಳಿಗೆಯ ನೃಪರಾರ್ಜಿಸಿದ . . . ಅಖಿಳ ವಸ್ತುಗಳ (ತೊರರಾ. ೦-೬-೪). ೭. ಹೊಸಮಲೆಯನು ಬಲಿಯಿಸು ಕುಮ್ಮಟವನಸಮಸದಿಂದ ತೆಗೆಸು (ಕುರಾಸಾಂ. ೩೬-೪೬). ೮. ಬ್ರಾಹ್ಮಣ ನಿಯೋಗಿಗಳು ಪರಶ್ರೇಷ್ಠರಾಗಿ ಬಂದರಮನೆವಾಗಿಲ ಕದಬೀಯಗವ ತೆಗೆಸಿ ದರು (ಪೋಹಕ. ೦೯-೪). ೧೪. ಸೂಳವಿಸಿದವು ಸನ್ನೆಯಲಿ ನಿಸ್ಸಾಳ ಸೇನೆಯು ತೆಗೆಸಿದವು ಹೆಗ್ಗಾಳೆ ಮೊಳಗಿದವಾನೆವಱಿ ಗಜಱಿದವು ಥೌಡೆಗಳು (ಕುವ್ಯಾ.ಭೀ. ೩-೨೮). ೧೫. ಬಾಗಿಲ ತೆಗೆಸಂಬನಿಷ್ಠುರದ ವಾಕ್ಯಗಳ ಮುಂಬರಿತಂದೊರ್ವಳುಸಿರಲ್ಕೆ (ಪೋಹಕ. ೩೪-೩). ೧೬. ನಿಲ್ಲಿಸು ; ಸ್ಥಗಿತಗೊಳಿಸು ; ಅಡ್ಡಗಟ್ಟು : ಸಮಸಪ್ತಕರ ಬಲ ನಿಜಪಾಳೆಯಕೆ ತಿರುಗಿದುದು ತೀರಿತು ತ್ರರಣಿಯಾಟೋಪ ಕಾಳೆಗವ ತೆಗೆಸಿದರು ಕೌರವರು (ಕುವ್ಯಾ.ದ್ರೋ. ೮-೦). ೧೭. ತೋಡಿಸು ; ಅಗೆಯುವಂತೆ ಮಾಡು : ಅವನು ಬಾವಿ ತೆಗೆಸಲು ಸಾಲ ಮಾಡಿದ್ದಾನೆ (ಜಂಘಿ). ೧೮. ಕಂದಿಸು ; ಬೇಯಿಸು : ಗರಗಸದಿಂದಂ ಮಿಗೆ ನಿಷ್ಕರುಣೆಗಳೊಡನಿಕ್ಕಿ ನಕ್ತ್ರಿಯಿಂದಂ ಪಾದಂಬರೆಗಂ ಸೀಳ್ದು ಭಾಗವನುನಿವೆಣ್ಣೆಯೊಳಿಕ್ಕಿ ತೆಗೆಸುವರ್ಪಱುಗುವಿನಂ (ಧರ್ಮಾಮೃ. ೩-೬೦). [ ತೆಗ್$_1$ + – ಇಸು$_3$ ]

**ತೆಗೆಸು** ‘ತೆಗೆಯಿಸು’ ನೋ.

**ತೆಗೆಹ** (ನಾ). ತೆಗೆಯುವಿಕೆ ; ಬೇರ್ಪಡಿಸುವಿಕೆ : ಉಪ್ಪು ಮಿಗಿಲಾದವಱ ಉಪ್ಪು ತೆಗೆ(ಹ)ಯೋಣ. ಕಹಿ ಮಿಗಿಲಾದವಱ ಕಹಿ ತೆಗೆ(ಹ)ಯೋಣ (ಭೀಮಸೂ. ೨). [ ತೆಗ್$_1$ + – ಹ$_2$ ]

**ತೆಗ್ಗು$_1$** ‘ತಟ್ಟು’ ನೋ.

**ತೆಗ್ಗು$_2$** ‘ತಗ್ಗು$_2$’ ನೋ.

**ತೆಗ್ಗುಬೀಳು** ‘ತಗ್ಗುಬೀಳು’ ನೋ.

**ತೆಜಿಸು** (ಕ್ರಿ). ಬಿಟ್ಟುಬಿಡು ; ತೊರೆ ; ತ್ಯಜಿಸು : ತೆಜಿಸಿದಂ ಮಗುಳೆತ್ರಲೆಸೆ ವಂಗದೇಶಮಂ ಪೊಕ್ಕೊಡನೆ ಬಾಚಿದಂ ಬಹುನಾಣ್ಯವಾ (ಪರಕು. ೦೦-೦೪) ; ನಿನ್ನ ಸುತನೀಕ್ಷಣ ತೆ[ಪಾಠಾಂ. ತ್ಯ]ಜಿಸೆ ರಾಮಗಂ ಪಟ್ಟಗಟ್ಟೆ . . . ಸು ಖ ಮಿ ರ್ಪೆ ನು (ವೆಂಕಾರಾ. ೨-೬-೦೩) ; ಭೂರಿದಾರಿದ್ರ್ಯದಲಿಯಾ ಸಂಸಾರವನು ಮಾಡುವುದಕಿಂತಲೂ . . . ಈ ಶರೀರವನೆ ತೆಜಿಸುವುದು ಲೇಸು (ಸುದಾಮ. ೩-೮). [ < ತ್ಯಜಿಸು ]

**ತೆಟ್ಟಂದೆಱಿ** ‘ತೆಱಿ$_1$’ ಪರಾ.

**ತೆಟ್ಟುಂತೆಱಿ** ‘ತೆಱಿ$_1$’ ಪರಾ.

**ತೆಟ್ಟುಂದೆಱಿ** ‘ತೆಱಿ$_1$’ ಪರಾ.

**ತೆಟ್ಟೆ, ತೆಂಡೆ, ತೆಮಟೆ, ತೆವಡೆ** (ನಾ). ೧. ಗುಂಪು ; ಸಮೂಹ ; ಸಂದಣಿ. **ತೆಂಡೆ** : ೨. (ಹುಲ್ಲು ಮುಂತಾದುವುಗಳ) ಕಟ್ಟು ; ಪಿಂಡಿ ; ಕಂತೆ : ಈ ನಾರಿಯನ್ನು ಮೆಯ್ಯೊಳಗೆ ಹುಲ್ಲು ತೆಂಡೆಯಿಂ ನೀನಿಂತು ಬಿಗಿಸಿದೊಡಿಸೆ ಮಾಳ್ಪ ಪಾಪವೇನಯ್ಯಾ (ಸಾತಂಗ. ೪೩). ೩. ಮರ ಗಿಡಗಳ ಬುಡ ; ಬೇರುಗಳು ಹೊರಡುವ ಭಾಗ : ತೆಂಗಿನ ತೆಂಡೆ ಮುರಿದು ತಳಕೆಳಕಾಗಿ ಗಂಗಾಧರನ ಪೂಜಕನ ಹಿಂಗದೆ ನೆನೆಯೆ ರಾಯಗೆ ಮಣಿದೊರತಾ ಅಂಗೈಗಳಲಾಂತ ಬಸವ (ಬಸವ. ೨-೬೪). ೪. ಮೂಲ ; ವಂಶ ; ಬುಡಕಟ್ಟು : ಉಳಿದವರೆಲ್ಲ ಅಣ್ಣತಮ್ಮದಿರಾಗಿ ಒಂದೇ ತೆಂಡೆಗೆ ಸೇರಿದವರು (ಸನ್ನೂರು. ೨೦೯) : ಒಬ್ಬ ಪ್ರಸಿದ್ಧ ಪುರುಷನಿಂದ ಅವರ ಮಕ್ಕಳು ಮೊಮ್ಮಕ್ಕಳುಗಳನ್ನು ಇಂತಹವರ ತೆಂಡೆ, ವಟಾರ, ಪಟ್ಟಡೆ ಎಂಬುದಾಗಿ ಕರೆಯುವ ವಾಡಿಕೆ (ಹುಟ್ಟಿಹ. ೧೮). ೫. ತೊಡರಿಕೊಂಡಿರು ವಿಕೆ ; ಸುತ್ತಿಕೊಂಡಿರುವಿಕೆ : (+). **ತೆಮಟೆ** : ೬. ಹೊಲ ಉಳುವಾಗ ಕುಂಟೆಯ ಕುಳಕ್ಕೆ ತೆಕ್ಕೆತೆಕ್ಕೆಯಾಗಿ ಸುತ್ತಿಕೊಳ್ಳುವ ಮಣ್ಣು, – ಕೆಸರು : ಎರಡು ಸಾರಿ ಕುಂಟೆಯನ್ನು ಎತ್ತಿ ಕುಡಕ್ಕೆ ಸುತ್ತಿಕೊಂಡಿದ್ದ

ತೆವುಟೆಯನ್ನು ಕುರುಚಿಗೆಯಿಂದ ತೆಗೆಯುವುದಕ್ಕೇ ಇವನ ರಟ್ಟೆ ಬಿದ್ದು ಹೋಗಿದ್ದಾವು (ಬೆಳುಮ. ೨೬೯). **ತೆವಡೆ :** ೭. ಹೊಲ, ಗದ್ದೆಗಳಲ್ಲಿ ಪಾತಿ ಅಥವಾ ಮಡಿಗಳ ಮಧ್ಯೆ ಕಟ್ಟುವ ಸಣ್ಣ ಬದು : (ತು).

**ತೆಟ್ಟೆತೆಟ್ಟೆ** (ದ್ವಿರುಕ್ತಿ) : ತಟ್ಟೆತೆಟ್ಟೆಯೊಳೋಡುವ ಕುರುಸೈನಿಕ ಕೆಟ್ಟುದ ನೋಡಿ ಗೊಳ್ಳೆಂದು ದಿಟ್ಟರವರು ನಗುತವೆ ತುಟಿಗಳನು ಹಿಮ್ಮೆಟ್ಟಿಸಿದರು (ಸೇಮಿಸಂ. ೨೩-೦೩೩); ಬಟ್ಟಜವ್ವನೆಯರಾರತಿವಿಡಿದವನಿಗೆ ತೆಟ್ಟೆತಟ್ಟೆಯೊಳೆತ್ತಿದರು (ರಾಮವಿ. ೦೯-೮೦) : ಬೆರೆಯದ ತೆಟ್ಟೆತೆಟ್ಟೆಯೊಳು ಸಂಗ್ರಾಮಕೆಂಡೆರಡು ಪಡೆಗಳೊಪ್ಪಿದವು (ಕಂಪ್ರಸಾಂ. ೨೦-೦೨೦) ; ಕಟ್ಟೆತೋ ಪಲವಣ್ಣ ಮೇಘ ಬಾನದೊಳೆನೆ ತಟ್ಟೆತಟ್ಟೆಯೊಳು ತೋಱಿದುದು (ಜ್ಞಾನಚ. ೦೪-೭೦). **ತೆಂಡೆತೇಲು** = ೧. ಮರದ ಬೇರಿನ ಭಾಗ ಮೇಲೆ ಬರು ; ಮರ ಒಣಗತೊಡಗು. ೨. ವಂಶವು ನಿರ್ನಾಮವಾಗು ; ವಂಶದಲ್ಲಿ ಯಾರೂ ಇಲ್ಲದಂತಾಗು : ಆ ದೊಡ್ಡ ಬರದಲ್ಲಿ ತೆಂಡೆತೇಲದೇ ಇದ್ದದ್ದೇ ಹೆಚ್ಚು (ಕೂ೧). [ದೇ.॥ ತೆಲು. ತಟ್ಟ, ಕೆಟ್ಟು]

**ತೆಡಾಯು** (ನಾ). ಒಂದು ಬಗೆಯ ಆಯುಧ (?) : ಕತ್ತಿ ತೆಡಾಯು ಖಡಲ್ಲಿ ತೆಯುಲ್ಲಿ ಬಿಲ್ಲು ನಾರಾಚ ಗದೆ ಸೂಲ್ಲಿ ... ಮೊದಲಾದಾ ಬತ್ತೀಶಾಯುಧಾ ಶಸ್ತ್ರ ಸಮರ್ಥಕರಾದಾ (ಎಕ. XVI, ಗುಬ್ಬಿ. ೭೪-೨೧ ; 1776).

[ ? ಇದು 'ಷಡೆಯು' ಎಂಬುದರ ಅಪಲಿಖಿತವಿರಬಹುದೇ ? ]

**ತೆಣರು** 'ತೆಣಱು' ನೋ.

**ತೆಣಱು, ತೆಣರು, ತೆಳಱು** (ಕ್ರಿ). ಭಾರದಿಂದ ಉಸಿರು ಕಟ್ಟು,- ತಿಣುಕು,-ನರಳು : ನೆಲನಂ ಪೊತ್ತ ಫಣಿ ತೆಣಱು [ಪಾಠಾಂ. ಪೊಱಲು] ತಿರೆ ನಡೆದತ್ತಾಗಳ್ ಸಗರ ಚಕ್ರವರ್ತಿಯ ಕಟಕಂ (ಅಜಿಪು. ೯-೦೬) ; ಕ್ಷಿತಿ ಚಕ್ರಂ ನಿಜಭಾರದಿಂ ತೆಣಱಿದತ್ತೆಂಬನ್ನೆಗಂ (ಪಂರಾಮಾ. ೦೩-೭೭). **ತೆಣರು :** ಕುದಿಪೊಡಲ ಮದುಮಗಳ್ ತೆಣರುತಿಹಳೆಲ್ಲಿ ? (ರಾಧೂಕ. ೦೩೩-೩೩೬). **ತೆಳಱು :** ನಾಗರಾಜಂ ತೆಳಱೆ ಪೆಳಱೆ ದಿಗುದನ್ತಿಗಳು (ಬೊಂಕಶಾ. ೦೯೨೯, ನವಿಲುಗುಂದ. ೨೦೭-೦೦ ; 1184). 'ತಿಣುಂಬು' ಪರಾ. [ದೇ. ॥ ತಮಿ. ತಿಣಱು]

**ತೆಣೆ** 'ದಿಣ್ಣೆ' ನೋ.

**ತೆಣ್ಗಾಳಿ** 'ತೆಂಗಾಳಿ' ನೋ.

**ತೆತಾವು** (ನಾ). ಒಂದು ಪ್ರದೇಶದ ಹೆಸರು (?) : ಮೂಡಾಯ್ನೋಡಿ ನೀರಿಟಿವೆ ತಾಱೆ ಎ ತೆತಾವಿನ್ಯೊಲ್ಲಿ ಎ ಪೋಗಿ ಕುಣ್ಣು ಸೋಮೆ ಎ ಕರ್ಗಲ್ಲಾಱದೆ ಆನೆಗಲ್ಲೆ ಕಮ್ಮಾರ್ ಕೊಟ್ಟರೆಯ ಮುದುಪುಣಸೆ ಮಾಳ್ದಿಯಾಳ್ ಕೂಡಿತ್ತು ಸೀಮೆ (ಎಕ. XVI, ಗುಬ್ಬಿ. ೭೫-೫೨ ; 733). [ ? ]

**ತೆತ್ತ$_1$** 'ತೆಱು$_1$' ಪರಾ.

**ತೆತ್ತ$_2$** (ನಾ). ಮಾಲುಗಣ್ಣುಳ್ಳವನು ; ಮೆಳ್ಳೆಗಣ್ಣಿರುವವನು : ಅವನನ್ನು ತೆತ್ತಹನುಮ ಎಂದೇ ನಮ್ಮ ಹುಡುಗರು ಹಾಸ್ಯಮಾಡುತ್ತಾರೆ (ಗರುಡಾ. ೦೪೭). [ ತೆತ್ತು$_1$ + - ಅ$_7$ ]

**ತೆತ್ತಕಣ್ಣು** 'ತೆತ್ತಗಣ್ಣು' ನೋ.

**ತೆತ್ತಗಣ್ಣು, ತೆತ್ತಕಣ್ಣು** (ನಾ). ಮಾಲುಗಣ್ಣು ; ಮೆಳ್ಳೆಗಣ್ಣು ; ಓರೆಗಣ್ಣು : ಇನ್ನುಮೇಲೆ ನಿನ್ನ ತೆತ್ತಗಣ್ಣಿನ ಹಂಗೇ ನನಗೆ ಬೇಡ (ಗರುಡಾ. ೦೪೯). **ತೆತ್ತಕಣ್ಣು :** ನಮ್ಮೂರ ಕ್ಷೌರಿಕ ಹನುಮನಿಗೆ ಸ್ವಲ್ಪ ತೆತ್ತಕಣ್ಣು, ಎಡಗಡೆ ಅವನು ನೋಡಬೇಕಾದರೆ ಬಲಗಡೆ ನೋಡುವಂತೆ ತೋರುತ್ತದೆ (ಗರುಡಾ. ೦೪೭). [ <ತೆತ್ತು$_1$ + ಕಣ್ಣು (< ಕಣ್) ]

**ತೆತ್ತವಣೆ** (ನಾ). ಜೋಡಣೆ (?) : ಇತ್ತಲೀ ಮಹದೇವಿ ಮಿಗೆ ಜಳಪುತ್ತಲಿದ್ದಳು . . . ಉತ್ತಮದ ಮೈಲುಳಿಯ ಕಾಂತಿಯ ಮತ್ತಗಜಗಮನದ ವಿಳಾಸದ ತೆತ್ತವಣೆಯ ನವೀನರೀತಿಯ ಜಾತಿಭಾವದಲಿ (ಪ್ರಭುಲೀ. ೧೦-೨). [ ತೆತ್ತಿಸು$_1$ + - ಅಣೆ$_4$ ]

**ತೆತ್ತಿಗ** (ನಾ). ೧. ಬಂಧು ; ನಂಟ : ಮತ್ತಮಲ್ಲಿ ಬೇಟದ ತೆತ್ತಿಗನುಂ ಮೊತ್ತಮೊದಲಿಗನುಮಪ್ಪನೋರ್ವಂ . . . ಇಂತೆಂದಂ (ಶಾಂತಿಪು. ೮-೯೪ವ) ; ಸ್ವಬಂಧುನಿಕಾಯಕ್ಕುಪಕಾರಿ ತೆತ್ತಿಗನೆನಿಕ್ಕುಂ ಕೌಟಗೇಹೋದ್ಭವಂ (ಜಾತಕ. ೧೬-೭) ; ಗುರುವೆ ತೆತ್ತಿಗನಾದ ಲಿಂಗವೆ ಮದವಳಿಗನಾದ (ಮುಹಾದೇ. ಬ. ೧೧೩-೨೩೮) ; ಪನ್ನಗಾಭರಣನಾತನ ಭಕ್ತಿಯೋಗವುಂ ತಾಂ ನೋಡಿ ತಲೆದೂಗಿ ಮುಂಡಾಡಿಯೆನ್ನಣ್ಣ ಎನ್ನ ತೆತ್ತಿಗಯೆನ್ನ ಭದ್ರಗಜವೇ . . . ಎಂದೊರೆದು (ಪದ್ಮರಾ. ೭-೪೩) ; ತಾವರೆಯ ತೆತ್ತಿಗನ ಕುಮುದದ ಜೀವಿಗನ ವಿಗೆ ಮೇಲುನೋಟದೊಳಾ ವಿಗಡರುಗಳಡು ತಿವಿದಾಡಿದರು (ಕುಮ್ಯಾಸ. ೨-೧೦೯) ; ಬಾಗಿಲ ಬೀಗ ಮುದ್ರೆಯ ಮಾಡಿಸಿಕೊಂಡು ಪೋಗಿ ತೆತ್ತಿಗರ ಬೀಳ್ಕೊಂಡು (ಮೋಹತ. ೧೮-೯೮) ; ಮೃತ್ಯು ಬೆನ್ನಿನೊಳಿಹುದು ತಾವಿನ್ನತ್ತ ಮಾಡುವುದೇನು ಪೂರ್ವದ ತೆತ್ತಿಗನು ನೀನೀಗ ರಕ್ಷಿಸು (ಹರಿಸಾ. ೯೨). ೨. ಸೇವಕ ; ಆಳು : ನಿಮ್ಮ ತೆತ್ತಿಗನು ಬೊಮ್ಮಯ್ಯನ ಕೀರ್ತಿ ಮಹತ್ತು ಘನವಂದೊಮ್ಮೆ ರಾಗಂಬೆತ್ತು ಕೈಲಾಸಕ್ಕೆ ಹೋಗಿ ಮರಳ್ದುದನುವಾಯ್ತು (ಬಸಪು. ೨೯-೨೯) ; ತಿಲಕವನು ತೆತ್ತಿಗರಲಂಕರಿಸಿದರು ಹೊಳಹಿನ ಹೊಗರ ಹೊಸ ಜವ್ವನದ ಜೋಡಿಯ ಜಾಡಿಯಿಮ್ಮಡಿಸೆ (ಕುಮ್ಯಾಅ. ೮-೩) ; ಹನುಮ ನೀನು ನರನ ತೆತ್ತಿಗನಾಗಿ ಸಾಯದಿರು (ಕೌಶಿರಾ. ೦೯-೧೩) ; ದೆಂಬತ್ತಿಬಾರದೆ ಮಾಣರಭವನ ತೆತ್ತಿಗರು (ನಿಭಾಗ. ೪-೩-೨) : ತನ್ನ ತೆತ್ತಿಗರಹ ನಂದೀಶ್ವರರಾದಿ ಪ್ರಮಥರ ಕೆಳೆಹು (ಪ್ರಭುಪು. ೪-೦೦). ೩. ಹೊಣೆಗಾರ ; ರಕ್ಷಕ : ಗುತ್ತಿಯ ಗಂಗಮಹೀಪ × × × ರಾಜ್ಯಕ್ಕೀತಂ ತೆತ್ತಿಗಂ (ಎಕ. IV. ನಾಗಮಂ. ೩೦-೧೪ ; 972) ; ಅಂಕ ಓಡಿದರೆ ತೆತ್ತಿಗಂಗೆ ಭಂಗವಯ್ಯಾ ಕಾದಿ ಗೆಲಿಸಯ್ಯಾ ಎನ್ನನು (ಬಸವ. ೨೯೯) ; ಸೂನಗೆಯನೆತ್ತಿ ಪಂವ ತೆತ್ತಿಗವೀರರುಮಂ (ಲೀಲಾವ. ೫-೦೩೪) ; ಈ ಖಳ್ಗವನೊಲವಿಂ ಸಾಧಿಸುತಿರ್ದಾ ಖೇಚರತನುಜನ ಮಾತಾಪಿತೃವಾಕೆಯ ತೆತ್ತಿಗರಾಗಲ್ವೇಳ್ಕುಂ (ಕುಮುಂರಾ. ೮-೩೮) ; ನಿಮ್ಮ ವಿಪತ್ತು ತನ್ನದು ನಿಜಪದಾಶ್ರಿತ ಭಕ್ತರಸುಗಳಿಗೆ ತೆತ್ತಿಗನಲಾ ತಾನು (ನಿಭಾಗ. ೬-೯-೩೩) ; ನೀಂ ಪಸುಳೆ ನಿನಗೆ ತೆತ್ತಿಗರದಾರಕಟ (ಕೃಮಿಥಾ. ೨೦-೧೪) ; ಚಿತ್ತೈಸೆಲೆ ಸ್ವಾಮಿ ಭೃತ್ಯನ ಬಿನ್ನಪ ತೆತ್ತಿಗರಾರು ನಿನ್ನಿಂದ (ಕೋದಚ. ೧-೪೩). [ ತೆತ್ತು$_1$ + - ಇಗ ]

**ತೆತ್ತಿಸು$_1$** (ಕ್ರಿ). ೧. ಹೊಂದಿಸು ; ಜೋಡಿಸು ; ಅಳವಡಿಸು; ಹೂಡು: ಹರನೊಳೆ ಪತ್ತಿ ತೆತ್ತಿಸಿದ ಚಿತ್ರಮನಿರ್ಜಗಿಯಾಗೆ ಮೋಹಮೊತ್ತರಿಸೆ . . . ಅತ್ತಣ ಪಂಬಲ ಬಂಬಲೊಳ್ ತೆಱಂದಿರಿದುದು ಚಿತ್ತಂ (ಪಂಪಭಾ. ೧೩-೬೩); ತೋರಣಸ್ತಂಭಂಗಳೊಳ್ ತೆತ್ತಿಸಿದ ಜಂತ್ರದ ಹಂಸ ಕೀರ ಮಯೂರ ಪಾರಾವತ ವಾರಣಂಗಳಿಂ (ಗಿರಿಕ. ೦೦-೭೪ ವ) : ತೆತ್ತಿಸಿದ ಪುತ್ತಳಿಗಳಾ ಭರಣಕಿರಣದಿಂ ಸೇಸೆಯಂ ಸೂಸುವಂತೆ ದೇಸವಡೆದೆಸೆವ ಸಿವಿಗೆಯಂ (ಪುಷ್ಪಪು. ೦೩-೮೪ ವ) ; ಪಿರಿದುಂ ಬಿನ್ನಣದಿಂದೆ ನಿರ್ಮಿಸಿದ ನಾನಾ ಚಿತ್ರ ಸತ್ಕೃತ್ರಿಕೋತ್ಕರಮುಂ ತೆತ್ತಿಸಿ ಸುತ್ತಲುಂ (ವಾಧಪು. ೪-೩೩) ; ಶರವನು ತೂಗಿ ಬಿಲ್ಲಿಗೆ ತೆತ್ತಿಸಿದನು (ಕುಮ್ಯಾದ್ರೋ. ೦೯-೩೨) ; ಸುತ್ತಿನುಂಗುರ ಮುದ್ದುಮಣಿಯಂತ್ರಗಳ ತಂದು ತೆತ್ತಿಸಿದರು ಕಾಲ್ಬೆಸೆಯ (ಮೋಹತ. ೦೭-೦೩) : ಜಲಕಾಂತ ಶಿಲೆಯಿಂದ ನಿರ್ಮಿಸಿದ ತೊಟ್ಟಿಲಿಕ್ಕೆಲದಲ್ಲಿ ತೆತ್ತಿಸಿದ ವಿವಿಧಮಣಿದೀಪ್ತಿಯಿಂ (ಜ್ಞಾನಚಂ. ೦-೪೭). ೨. ತೊಡಿಸು ; ಧರಿಸುವಂತೆ ಮಾಡು : ಎತ್ತಲುಂ ಕೇಳ್ದಱಿಯೆವೀ ರುದ್ರಾಕ್ಷಿ ಮೂಗಿನಲಿ ತೆತ್ತಿಸುವುದಾವುದು ವಿಶೇಷವೊ (ಲಸಪು. ೦೨-೨೦); ಪೆಱನೇಸಱಂ ಮುಂಗುರುಳ ಮೇಲೆ ತೆತ್ತಿಸಿ (ಸೌಂದಪು. ೭-೨೪) ; ಕಾಯವಿರಹಿತನೆಂದು ಧರೆಗಱುಪುವಂತೆ ಮಾಗಾಯನಾ ಕರ್ಣಯುಗಳದೊಳೆಂದು ತೆತ್ತಿಸಿದರು (ಲಶಿಚಂ. ೩೦-೩೩). ೩. ಮಂಡಿಯುವಂತೆ ಮಾಡು ; ಮಂಡಿಸು : ಸೋಮರ್ಮಡಿಯೊಳೆಡೆಗೆಡೆಗೆ ಭಾವಕಿಯರರೆವಿರಿದ ಮಲ್ಲಿಗೆ ಜಾಜಿಯರಲ ತೆತ್ತಿಸಿದರಶಿಸೊಬಗಿ

ನಿಂದ (ಸೌಂದಪು. ೬-೨೩) ; ಪ್ರಂಡ್ರೇಕ್ಷುದಂಡಗಳನವುಚಿರ್ದ ಬಾಳವೇರ್ಗಳಿಂ ಜಗಿದೆಡೆದೆಡೆಯೊಳ್ ಸಂಪಗೆಯ ಬಿರಿವುಂಗುಳ್ಗಳಂ ತೆತ್ತಿಸೆ (ರಾಜಶೇ. ೧೦-೩೦ ವ). ೪. ಒಳಹೊಗು ; ನಾಟಿಕೊಳ್ಳು ; ಚುಚ್ಚಿಕೊಳ್ಳು : ಬಾಳಂ ಕೊಂಡತ್ತಿ ಪೊಯ್ಯುದುಮಾ ಬಾಳ್ ನಾಗವೇದಿಕೆಯಂ ತಾಂಗಿ ತೆತ್ತಿಸೆ [ಪಾಠಾಂ. ಕೀಲಿಸೆ] ಮೇಗಂ ನೋಡಿ (ಪಂಪಭಾ. ೧೪-೧೦) : ಶರಾವಳಿಯೆಱಗಿದವು ತುಱುಗಿದವು ತೆತ್ತಿಸಿದವು ರಥಾಂಗದಲಿ (ಕುವ್ಯಾ.ಕ. ೧೦-೧೬) ; ತೆತ್ತಿಸಿದುವುಭಯವೀರರ ಮೆಯ್ಯೊಳಂಬುಗಳ್ (ಕೃಮಿಥಾ. ೨೩-೯೦). ೫. ಚುಚ್ಚು ; ತಿವಿ ; ತುರುಕು : ರಿಪುವರ್ಗ್ಗದ ಬಾಯ ಬಾಗಿಲೊಳು ತೆತ್ತಿಸಿದಂ ಪಲರ್ಬ್ಬೆದಱೆ ಕೂರಲಗಂ (ಎಕ. VIII, ಸೊರಬ. ೩೧೫-೩೪ : 1171) ; ಕಕ್ಷದೊಳ್ ಬಯಿಯೊಳ್ ನೇತ್ರದೊಳೆಯ್ದೆ ತೆತ್ತಿಸಿದ ನತ್ಯಾಭೀಳಬಾಣಂಗಳಂ (ಜಗದ. ೧೪-೧೦೩) ; ತೆತ್ತಿಸಿದಂಬಿನ ಗಱಿ ಮಿಱುಗುತ್ತಿರೆ (ವರ್ಧಪು. ೮-೫೫) ; ಪರವ ಕಣ್ಗಳೊಳಾಲಿವ ಕರ್ಣಗಳೊಳ್ ಗುಳ್ದುರಿವುವಯಶ್ಕಲಾಕೆಯನೆ ತೆತ್ತಿಸುವರ್ ಪರವೆಣ್ಗೆ ಕೂರ್ಪರಂ (ಅನಂಪು. ೯-೩೭) ; ಒತ್ತಿನಂಗಡಿಯ ಕಜ್ಜಾಯಮಂ ಬಲ್ಲೆಹದಿ ತೆತ್ತಿಸುತ ಬಸವ ಕೋಯೆನಲ್ (ಅಶಿಜಂ. ೩೨-೨೩) ; ಗಜವ ಒತ್ತಿ ಕಿವಿಗಳನೊದೆದು ಶಿರದಲಿ ತೆತ್ತಿಸಿದರಂಕುಶವನು (ಕುವ್ಯಾದ್ರೋ. ೩-೬) ; ನರನವನ ರೋಮರೋಮಂಗಳಂ ಭೇದಿಪಪೊಲು ತೆತ್ತಿಸಿದನಂಬುಗಳನು (ಕೃಮಿಥಾ. ೨೫-೯೭). ೬. ಕೊರೆಯಿಸು ; ಕೆತ್ತಿಸು ; ಕಂಡರಿಸು : ದಿಙ್ಮುಖ ದಂತಿದಂತದೊಳ್ ತೆತ್ತಿಸಿದಂ ನಿಜಾಂಕ ಮಹಿಮಾಕ್ಷರಮಾಲಿಕೆಯಂ (ಜಾಪಮ. ೩೪೦) ; ಕಂಬಳ ಬತ್ತಿನಂದದಿ ಕೊಱೆಕೊಱೆದು ತೆತ್ತಿಸಿದಂತೆ (ಭರಕ. ೬-೫೩). ೭. (ಹರಳಿನಂತೆ) ಕೂಡಿಸು ; ಕುಂದಣಿಸು ; ಮೆಟ್ಟು : ಮುತ್ತು ಮಾಣಿಕ ನವರತ್ನ ತೆತ್ತಿಸಿದಂತಿಹ ಉಪ್ಪರಿಗೆ ಮೇಗಳ ಶಿವಾಲಯವ ಕಂಡು (ಲಿಂಗಪ. ೭೭-೫೦) ; ಸುತ್ತುವಳಿಯವ ತೊಳಗಿ ಬೆಳಗುವ ಮುತ್ತು ವಜ್ರದ ನಡುವೆ ಮಾಣಿಕ ತೆತ್ತಿಸಿದ ಬೊಟ್ಟೊಂದು (ಪ್ರಭುಲೀ. ೯-೦೬) ; ತೆತ್ತಿಸಿದ ನವರತುನದಿಂದಲಿ ಮುತ್ತಿನಂಡೆಯ ಜಾಳಿಯಂಗಳ ಪತ್ತಿ ಪಚ್ಚೆಯ ಹಲಗೆ ಪವಳದ ಕಡೆದ ಬೋದಿಗೆಯ . . . ರಥ ಕಳಶ ಮೇಲೆಸೆಯೆ (ಕುವ್ಯಾದ್ರೋ. ಓರಿಷ. ಪಠಿ. ೨೭೮) ; ಅಮಲವಜ್ರಂಗಳ ತೀವಿ ತೆತ್ತಿಸಿದ ಪೊನ್ನುಡೆ ನೂಲ್ಗಳಂ ತಳೆದು (ಸೌಂದಪು. ೧೧-೨೩) ; ಅಗಣಿತ ಕನಕದಂಡದ ಪಲ್ಲವಛತ್ರ ನೆಗಹಿರೆ ರತ್ನ ತೆತ್ತಿಸಿದ ಸೊಗಯಿಪ ಮಣಿಸೊಡರ್ವೆಳಗಿನೊಳ್ ಮೆಱೆದುವು (ಮೋಹತ. ೦೫-೩೦) ; ಬಳಸಿರೆ ಕಟ್ಟಿಬಟ್ಟ ಪೊಸಮಲ್ಲಿಗೆಮಾಲೆ . . . ಮೌಕ್ತಿಕ ಪ್ರಸರಮಂ ಹರಿನೀಲಮಣಿಪ್ರತಾನದೊಳ್ಕೆಳೆಗೊಳಿಸುತ್ತ ತೆತ್ತಿಸಿದಪೋಲ್ಕೆಱೆದಿರ್ದುದು ಮಂಟಪಾಗ್ರದೊಳ್ (ರಾಜಶೇ. ೮-೩). ೮. ಹೊಂದು ; ಸೇರು ; ಅಂಟು : ಬಸಿಱೆತ್ತಿ ಕಟ್ಟಿ ಮೆಯ್ ಕೀಲಿಸಿದಂತಿರೆ . . . ಕಿವಿ ತೆತ್ತಿಸಿದಂತಿರೆ . . . ಹರಿಣ ರೋಗಂ ತಡೆಯದೆ ಮಡಿಗುಂ (ಅಶ್ವಶಾ. ೦೩-೯೧) ; ಹತ್ತೆ ಬಂದಿರೆ ಸೂಜಿಗಲ್ಲನು ಹತ್ತಿ ಮೋಹಿಪ ಸೂಜಿಯಂತಿರೆ ತೆತ್ತಿಸಿದುದಾ ಸಚ್ಚಿದಾನಂದ ಸ್ವರೂಪನಿಪ ನಿತ್ಯವಲ್ಲಭನಂಶವಾದ ನಿಮಿತ್ಯವಾಕ್ಷಣ ಕಾಣುತವೆ ಮೈಯೆತ್ತಿತೊಯ್ಯನೆಯನಿಮಿಷಯ್ಯನ ಕೈಯ ಶಿವಲಿಂಗ (ಪ್ರಭುಲೀ. ೦೦-೨೭). ೯. ನಿರ್ಮಿಸು ; ರಚಿಸು : ಅಸುರನ ಗದೆ ಭೂತ ಪಿಶಾಚ ಸಮಿತಿಗೆಱೆಯಿಸುವ ನೆತ್ತರಟವಟ್ಟಗೆ ತೆತ್ತಿಸಿದೆಲ್ವಿನ ಸೊದೆವನೆ (ಜಗದ. ೯-೩೦) ; ವಸುಧಾಮಂಡಳಮೆಯ್ದೆ ತೆತ್ತಿಸುವ ಚೈತ್ಯಂಗಳ್ಗೆ ದಾನಕ್ಕೆ ಪಾತ್ರ ಸಮೂಹಂ ದಿಟಮೆಯ್ದೆದಯ್ದದು ದಿಶಾಚಕ್ರಂ (ಅನಂಪು. ೯-೨) ; ಉರಿಯ ಜಾಳಿಗೆ ತೆತ್ತಿಸಿತು ಹರಿದಶ್ವಶತವನು (ಕುವ್ಯಾದ್ರೋ. ೦೯-೩೨). ೧೦. ಬಳಿ ; ಹಚ್ಚು ; ಲೇಪಿಸು : ಚಿತ್ರಜಂಗತ್ತಿದ ತಳಿರ್ಗಳ ಸತ್ತಿಗೆಯೊದಿವಿಜೇಭಕುಂಭದ ತೆತ್ತಿಸಿದ ಸಿಂದೂರಪೋ . . . ಎನಲೆಸೆಯಿತ್ತು ರಾಗದಲಿಂದುಮಂಡಲ (ಜೀವಂಧ. ೦೭-೨೩). [ ತೆತ್ತು₁ + – ಇಸು₃ ]

ತೆತ್ತಿಸು₂ (ಕ್ರಿ). ಕೊಡುವಂತೆ ಮಾಡು ; ಕೊಡಿಸು ; ತೆರಿಸು : ದಾಪಿತಃ – ಸಾಧಿತಃ – ೨ ತೆರಿಗೆ ತೆತ್ತಿಸಲ್ಪಟ್ಟವನು, ಕೊಡಿಸಲ್ಪಟ್ಟವನು, ಕೊಡುವ ಹಾಗೆ ಮಾಡಲ್ಪಟ್ಟವನು (ಸಿದ್ಧಾಂತಿ. ೨೮೪). [ ತೆತ್ತು₂ + – ಇಸು₃ ]

ತೆತ್ತೀಸ, ತೆತ್ತೀಸು (ನಾ). ಒಂದು ಸಂಖ್ಯಾವಾಚಕ ; ಮೂವತ್ತಮೂರು : ಹರಿಬ್ರಹ್ಮಾದಿಗಳು ಮೊದಲಾದ ತೆತ್ತೀಸಾದಿ ದೇವರ್ಕಳಂ ಉಘೆ ಉಘೆ ಎನುತಿರಲು (ಬಸವ. ೪೪೪) ; ಖಳಪಳದ ಕಟ್ಟುಲುಹು ಮೂರ್ಧಾಕುಳ ವನಿತ್ರವು ತರುಣ ಕೇಳ್ ತೆತ್ತೀಸ ದೇವರಿಗೆ (ಕೊರಠಾ. ೬-೩೦-೬) ; ತೆತ್ತೀಸವೆಂದೆನಿಪ ಸ್ಥಲವಿವು (ಸಿದ್ಧೇಪು. ೨೯-೩೩). ತೆತ್ತೀಸು.

ತೆತ್ತೀಸಕೋಟಿ, ತೆತ್ತೀಸುಕೋಟಿ = ಮೂವತ್ತಮೂರು ಕೋಟಿ : ಮಱೆಯಲಾಗದು ತೆತ್ತೀಸಕೋಟಿ ದೇವರ್ಕಳ (ಬಸವ. ೫೩೦) ; ದಕ್ಷನೊಬ್ಬ ಯಾಗವನಿಕ್ಕಲು ತೆತ್ತೀಸಕೋಟಿ ದೇವರ್ಕಳೆಲ್ಲಾ ತೊತ್ತಳದುಳಿಸಿಕೊಂಡು ನುಚ್ಚುನುಱೆಯಾಗಿ ಹೋದರು (ಸರ್ವವ. ೯೦-೩೦೨) ; ನರ್ತಿಪ ನವಿಲ ನಾಟ್ಯಕೆ ಮೆಚ್ಚಿ ಪುರುಹೂತ ತೆತ್ತೀಸಕೋಟಿ ನಿರ್ಜರರು ಮುತ್ತಿನ ಕ್ಯಾಗವ ಕೊಟ್ಟಂತೆಯಾಲಿಕಲ್ ಬಿತ್ತಿಕ್ಕಿ ಬಿರ್ದುದುರ್ವಿಯಲಿ (ಮೋಹತ. ೯-೩೮) ; ಉರಿನಾಲಿಗೆಯ ಗರಪೊಟ್ಟಗೆಯ ತೊಳಲಿಕೆ ತರಳಿಚಿತು ತೆತ್ತೀಸುಕೋಟಿಗಳ (ಕುವ್ಯಾಅ. ೨೦-೫೬). [ <ಪ್ರಾ. ತೇತೀಸ, ತೇತ್ತೀಸ./ಹಿಂ. ತ್ಯಂತಿಸ್, ತ್ಯಂತೀಸ್, ತೇತೀಸ್ ; ಮರಾ. ತೇತೀಸ್. / ಸಂ. ತ್ರಯಸ್ತ್ರಿಂಶತ್ ]

ತೆತ್ತೀಸು 'ತೆತ್ತೀಸ' ನೋ.

ತೆತ್ತು₁ (ಕ್ರಿ). ೧. ಸಂಬಂಧಿಸಿರು ; ಹೊಂದಿಕೊಂಡಿರು : ಚಿತ್ರಜಂ ಕತ್ತಿಯಂ ಕಿತ್ತುಕೊಂಡತ್ತಿ ಹೊಯ್ಯುತ್ತೆ ಬರಲಂತ್ಯಂಗಪ್ಯತ್ರಕುಚಿಯರ್ತ ಮಗೆ ತೆತ್ತಿರ್ದ ತೆತ್ತಿಗರನೊತ್ತಿಗರ ಸುತ್ತಿರ್ದರಾಗಳನುರಾಗದಿಂದ (ಕೃಮಿಥಾ. ೨೬-೬). 'ತೆತ್ತಿಗ' ಪರಾ. ೨. ಹೆಣೆದುಕೊಂಡಿರು ; ತೊಡಕಿಕೊಂಡಿರು: (೩). ೩. ತಿರಿಚು ; ಸಂತ್ತು. 'ತೆತ್ತಗಣ್ಣು' ಪರಾ. ೪. ಒಳಸೇರು ; ಅಡಗು : ಕಿರಣ ತೆತ್ತಿದವಭ್ರದಲಿ ತಾರಕೆಯ ತೇರುಗಳು ಹರಿವ ಮಂಜಿನ ನದಿಯ ಹೂಳ್ದವು (ಕುವ್ಯಾದ್ರೋ. ೯-೦೨). ೫. ಕೇವಣಿಸು; ಕುಂದಣಿಸು; ಮೆಂಟ್ಟು ; ಕೂಡಿಸು : ಮುತ್ತಿನ ಸೇಸೆಯೊಳೆಸೆವ ರತ್ನಂಗಳ ತೆತ್ತಿರ್ದ ಹಸೆಯ ವಿಷ್ಟರದಿ ಹತ್ತಿದ ದಂಪತಿಗಳ ವಿಗ್ರಹಂಗಳು ತೆತ್ತಿಸಿದಂತೆ ಶೋಭಿಸಿತು (ಮೋಹತ. ೦೩-೭೨). [ ದೇಶ. ತಮಿ. ತೆತ್ತು. ತೆಱು ]

ತೆತ್ತು₂ (ಕ್ರಿ). ತೆರು ; ಕೊಡು : ಶಚಿಪತಿಯು . . . ಕೃತ್ತಿವಾಸನ ತೋತ್ರರವ ಮಾಡುತ್ತ ವಾಸವ ತೆತ್ತಿ ಮಸ್ತಕವನ್ನು ಪಾದಕೆ ಸತತ ಮಣಿಯುವವನು (ಪಾರ್ವತಿ. ೨೦-೮೧) ; ಕೈತುಂಬ ವರದಕ್ಷಿಣೆ ತೆತ್ತಬೇಕು (ಕುಂದರಿ. ೦೦೩) ; ಹಲ ಜನುಮ ಕಳೆದರೂ ನೀ ತೆತ್ತಲಾರೆ ಬರಿ ಅಂಚೆ ವೆಚ್ಚ (ಉಯ್ಯಾಲೆ. ೯೧-೪) ; ಆತ ವಿಧಿಸಿದ ದಂಡವನ್ನೂ ತೆತ್ತಲು ಸಿದ್ಧರಿದ್ದರು (ಸಮುಚೀ. ೩೦೭). 'ಕಿತ್ತು₁' ಪರಾ. [ <ತೆಱು₁ ]

ತೆತ್ತು₃ 'ತೆಱು₁' ಪರಾ.

ತೆತ್ತು₄ (ನಾ). ಮೋಸ ; ವಂಚನೆ. 'ತೆತ್ತುತನ' ಪರಾ.

[ ದೇ.ಶ ತಮಿ. ತೆತ್ತು ]

ತೆತ್ತುತನ (ನಾ). ಮೋಸಮಾಡುವಿಕೆ; ವಂಚನೆ ಮಾಡುವಿಕೆ: ತೆತ್ತುತನಕ್ಕೆ ತೆತ್ತುತನಮಂ ಪುಸಿನಲ್ಗೆಗೆ ಮೋದಿ ನಲ್ಮೆಯಂ ಜತ್ತುಕಱಿಂಗೆ ಜತ್ತುಕಱ ನಾಸೆಗಮಾಸೆಯನಾದಲಂಪಿನಿಂ ಪತ್ತಿದ ಮೆಯ್ಗೆ ಪತ್ತುಗೆಯನುಕ್ಕಿದ ಕುಕ್ಕಿಮಗೆಯ್ಮೆಮಂ ಪೊಣರ್ಚುತ್ತುಮುಪಾಯದಿಂ ಕಳಿಯೆ ಕೂಡುವನಂ ವಿಭು ಕಂಡು ಮೆಚ್ಚಿದಂ (ಕಾವ್ಯಸಾ. ೯೮೩ ಚೂಡ್ರಾ).

[ ತೆತ್ತು₄ + – ತನ ]

ತೆನಂದಾಕ 'ತೆನ್ನಂದಾರ್ಕ' ನೋ.

ತೆನಂದಾಕಕೆಱೆ, ತೇನಂದಾಕಗೆಱೆ (ನಾ). ಒಂದು ಕೆರೆಯ ಹೆಸರು : ತೆನನ್ದಾಕಕೆಱೆ ಎ ಪೆಂಮೂರ್ಗಗೆಱೆ ಎ ವಡಗಾಯ್ ಸನ್ನು ಕಿಱುಮಾವಿ

ಪಂಕ್ತಿವೆ (ಎಳ. IV, ಎಡತೊ. ೬೦-೭೮ ; ಸು. ೫೫೦): ತೇನಂದಾಕಗೆಱೆ³ : ತೇನನ್ದಾಕಗೆಱೆ³ ದಕ್ಷಿಣಾನ್ನ ಭಾಗತತಃ (ಮ್ಯಲರಿ. ೧೯೯೨,೭೫-೦೦೭ ; ೫೧೮).

[ ತೆನಂದಾಕ (<ತೆನ್ನಂದಾರ್ಕ) + ಕೆಱೆ³ ]

**ತೆನುಂಗು** 'ತೆಲುಂಗು' ನೋ.

**ತೆನುಗು** 'ತೆಲುಂಗು' ನೋ.

**ತೆನೆ₁** (ನಾ). ೧. ಧಾನ್ಯದ ಹೊಡೆ ; ಕಾಳಿನ ಕದಿರಂ : "ಕಣಿಶಂ, ಧಾನ್ಯಶೀರ್ಷಕಂ – ಈ ೨ ತೆನೆ "(ಅಭಿಧಾ. ೯೫-೪೨೫) : "ತೆನೆಯೊಳು ಕದಿರು" (ಕಬ್ಬಿಗ. ೧೧೬) ; ಪ್ರಬಳ ಫಳಭಾರದಿಂ ಕೂಡಿ ಬಳ್ಕಿ ತೆನೆ ನೆಲನನಲೆಯೆ ಪವನಹತಿಯಿಂದೆ (ಸುಕುಮಾ. ೯-೫೨) ; ಪಿಂಗಳವಾದ ನೆಲ್ಲ ತೆನೆಯಂ ನಸುಗರ್ಚಿದ ರಕ್ತಚಂಚು ಪಕ್ಷಂಗಳ ಶಾದ್ವಲಚ್ಛವಿ ಮನಂಗೊಳೆ ಪಾಱುವ ಕೀರಮಾಲೆ (ಜಗವಿ. ೪-೭೬) ; ಪೊಸಕಮ್ಮಂಗಳವೆಯು ತೆನೆಯ ತುದಿಯ ತನಿಗಂಪಂ ಭುಂಜಿಸಲ್ (ಜಯುಕಾ. ೦-೩೯); ದನಗಳ ಜೋಳದ ತೆನೆಯನ್ನು ಬಿಡಿಸಿದರೆ ಹೇಗೆ ? (ಮಹಾತ್ಮಾ. ೬). ೨. ಕೋಟೆಯ ಗೋಡೆಯ ಮೇಲ್ಭಾಗದ ರಚನೆ; ಕೋಟೆಯ ಪ್ರಾಕಾರದ ತುದಿಯ ಗಾಲಿಯಾಕಾರದ ರಚನೆ: "ಕೋಟೆಯ ತೆನೆಯಲ್ಲಿಯಂ ಕಪಿಶೀರ್ಷಮೆಂಬುದು" (ಅಭಿಧಾ. ೦೩೧-೨) ; ನಿರಾಳದಲ್ಲಿ ನೀರಕೋಟೆಯನಿಕ್ಕಿ ಬಯಲ ಅಗಳ ತೆಗೆದು ವಾಯುವ ತನೆ ಹೂಡಿ (ಅಕ್ಕಮಾ. ೧೩೬-೫೦೯) ; ರಥಾಂಗವೆ ಗೆತ್ತರುಣಂ ತೆನೆಯನೆತ್ತಿ ನಗಿಸುವನಿನನಂ (ಅನಂಪು. ೦-೦೦೦) ; ತುಱುಗಿತ ಮರರು ಖಳನ ದುರ್ಗದ ತುದಿಯ ತೆನೆಗಳಲಿ (ಕುಮಾವ್ಯಾ. ೦೨-೩೩) : ಕೆಡಹಿದರು ಕೋಟೆಗಳ ತೆನೆಗಳನೊಡೆಡಬಡಿದರಟ್ಟಳೆಗಳನು (ಕೊ ರ ರಾ. ೬-೦೭-೬) : ಕೋಟೆಯ ನೂತನ ತೆನೆಗಳೊಪ್ಪಿದುವು (ಕಂಠವಿ. ೨-೬೦). 'ಕೋಟೆದೆನೆ' ಪರಾ. [ ದೇ. ■ ತಮಿ. ತಿನ್ನೆ ; ಮಲ. ತಿನ ]

**ತೆನೆ₂** 'ತನೆ' ನೋ.

**ತೆನೆಂದಕ** 'ತೆನ್ನಂದಾರ್ಕ ನೋ.

**ತೆನೆಂಧಕ** 'ತೆನ್ನಂದಾರ್ಕ' ನೋ.

**ತೆನೆಗಟ್ಟು₁** (ಕ್ರಿ). ತೆನೆ ಬಿಡಂ ; ಕಾಳಿನ ಹೊಡೆ ಕಟ್ಟು ; ಕಾಳಾಗು : ಅದೆ ಕಾಣ್ ಅದೊ, ಈ ನಾಡಿನ ನಡೆಪಾಡಿನ ಹಿಂಜಾಣ್‌ನ ತೆನೆಗಟ್ಟಿದ ಬೆಳಸು (ದ್ರಾಕ್ಷಿಪಾ. ೨-೨೦). [ ತೆನೆ₁ + ಕಟ್ಟು₁ ]

**ತೆನೆಗರ್ಚು** (ಕ್ರಿ). ಧಾನ್ಯದ ಗೊಂಚಲನ್ನು ಕಚ್ಚು,—ಕಡಿ : ತಮ್ಮ ಕೆಯ್ಪುಱಿಗೆ ಬೆರ್ಚಿ ಶುಕಂ ತೆನೆಗರ್ಚಿ ಬೇಗದಿಂ ಪಾಱೆ³ . . . ಪಾಮರಿಯ ರೀಕ್ಷಿಪರಾದರ್ ನಭೋವಿಭಾಗವಂ (ಧರ್ಮಾಮ. ೨-೨೮).

[ ತೆನೆ₁ + ಕರ್ಚು₁ ]

**ತೆನೆಗಾಯಿ** (ನಾ). ವರ್ಷದ ಮೊದಲ ಫಲ : ಗೌರೀ ಹಬ್ಬಕ್ಕೆ ಸರಿಯಾಗಿ ತೆನೆಗಾಯಿ (ಜಾನಿ). [ ತೆನೆ₂ (<ತನೆ) + ಕಾಯಿ₄ (< ಕಾಯ್₄) ]

**ತೆನೆಗೊನೆ** (ನಾ). ಕೋಟೆಯ ಬುರುಜಿನ ತಂದಿ : ತಾರಗೆಗಳ್ ತೆನೆಗೊನೆಗಳೊಳೋರಂದದೆ ಬೆಳವ ಸೂಡರ್ಗಳಂತಿರೆ (ಚಂದ್ರಪ್ರ. ೧-೦೦೯) ; ಹೊಂಗೋಂಟೆದೆನೆಗೊನೆಗಳಿಂದೇಳ್ವ ದೂಳಿಲ್ಗಗಲ್ಗೆ ಸ್ಥೂಲದಂಡಾಕೃತಿಯ ನಾಂತವೋಲ್ . . . ಡೆಂಕಣೆಯ ಕೈಗಳಾಲಿಗಚ್ಚರಿಯಾಗಿ ತೋಱುತಿವೆ (ಕೃಮಿಥಾ. ೩-೨೦). [ ತೆನೆ₁ + ಕೊನೆ₂ ]

**ತೆನೆಗೊಳ್** (ಕ್ರಿ). ೧. = ತೆನೆಗಟ್ಟು. 'ತೆನೆಗೊಳಿಸು' ಪರಾ. ೨. ಕೋಟೆಯ ತುಂದಿಗೆ ತಾಗು : ಮುತ್ತಿನೋಳಿ ತೆನೆಗೊಂಡು ಪಱಿದ ಮುಗಿಲಿಂ ಸುರಿಗುಂ (ಮಲ್ಲಿಪು. ೨-೫೩). [ ತೆನೆ₁ + ಕೊಳ್₁ ]

**ತೆನೆಗೊಳಿಸು** (ಕ್ರಿ). ಹೊಡೆ ಮೂಡುವಂತೆ ಮಾಡು ; ತೆನೆಯಾಗುವಂತೆ ಮಾಡು : ಬಿತ್ತಿ ಬೆಳೆಯಿಸಿ ಪರಾಂಬರಿಸುವುದು ಒಕ್ಕಲಿಗನಾದರೆ, ಕೈಯನ್ನು ತೆನೆಗೊಳಿಸಿ ಮಾಗಿಸುವುದು ಕಾಲದ ಕೈವಾಡ (ವೀರಬಂ. ೪೮).

[ ತೆನೆಗೊಳ್ + – ಇಸು₃ ]

**ತೆನೆತೀವು** (ಕ್ರಿ). ಬಸಿರು ತುಂಬು : ಅಲ್ಲಿಯೆ ಪೋಂತಪ್ಪುದುವದು ಮೆಲ್ಲನೆ ತೆನೆತೀವಿ ಸುಟಿಯೆ (ಹರಿಕೋಡ. ೩-೫೫).

[ ತೆನೆ₂ (< ತನೆ) + ತೀವು₁ ]

**ತೆನೆತುಂಬು₁** (ಕ್ರಿ). = ತೆನೆಗಟ್ಟು : ಕನ್ನಡ ನುಡಿ ಪಯಿರ್ ಮುನ್ನಡೆ ತನೆ ತುಂಬಿ ಪೊನ್ನಡಕಲ್ಗಂ ಪೊನ್ನಕ್ಕೆ (ಹೊಂಗಳು. ೪೫ ಹಾರೈಕೆ).

[ ತೆನೆ₁ + ತುಂಬು₁ ]

**ತೆನೆತುಂಬು₂** 'ತನೆತುಂಬು' ನೋ.

**ತೆನೆದರ್ಭೆ** (ನಾ). ತೆನೆ ಬಿಡುವ ಒಂದು ಬಗೆಯ ದರ್ಭೆ : "ಚಾಮರ ಪುಷ್ಪಃ – ತೆನೆದರ್ಭೆ" (ಓಷಧಿ. ೫೬). [ ತೆನೆ₁ + ದರ್ಭೆ ]

**ತೆನೆದುಱುಗಲ್** (ನಾ) ಕಾಳಿನ ಗೊಂಚಲಿನ ಗುಂಪು; ಕಣಿಶಗಳ ಸಮೂಹ: ಅನಿಳಾಹತಿಯಿಂ ಕಟಮೆಯ ತೆನೆದುಱುಗಲೊಳೊಱೆ³ತುಪರಿವ ಪಾಲಂ ಕಳಹಂಸ ನಿಕಾಯಮಿಮಾಂಟ ಪಾಳಿಯನನವರತಂ ಬಿಡದು ಪಾಳಿಯಂ ಪಾಳಿವ ವೋಲ್ (ಶಾಂತೀಶ್ವ. ೧-೯೪). [ ತೆನೆ₁ + ತುಱುಗಲ್ (< ತುಱುಂಗಲ್) ]

**ತೆನೆನಿಲ್ಲು** 'ತನೆನಿಲ್' ನೋ.

**ತೆನೆಬಲಿ** 'ತನೆಬಲಿ' ನೋ.

**ತೆನೆಬಿಡು** (ಕ್ರಿ). ಕಾಳಿನ ಗೊಂಚಲನ್ನು ಬಿಡು ; ಹೊಡೆಯಾಗಂ: ಹೊಲದಲ್ಲಿ ಜೋಳ ತೆನೆಬಿಟ್ಟಿದೆ (ಜಾನಿ). [ ತೆನೆ₁ + ಬಿಡು₁ ]

**ತೆನೆಬಿದಿರು** (ನಾ). ಪೊದರಾಗಿ ಬೆಳೆಯುವ ಒಂದು ಬಗೆಯ ಬಿದಿರಂ : (ಮೈಸೂರಿ. ೫೯-೦೦೫೦) [ ತೆನೆ₁ + ಬಿದಿರು₂ (< ಬಿದಿರ್₂) ]

**ತೆನೆಮಗುಟು್** (ಕ್ರಿ). ಗರ್ಭಸ್ರಾವವಾಗು; ವ್ಯಯಿಳಿ: "ತನೆಮಗುಚ್ಚುದು ವೇಹತ್ತು" (ವಸ್ತುಕೋ. ೯೦-೮). [ ತೆನೆ₂ (< ತನೆ) + ಮಗುಟು್ ]

**ತೆನೆಯಾವು** 'ತನೆಯಾವು' ನೋ.

**ತೆನೆವಳಿ** (ನಾ). ಕೋಟೆಯ ತುದಿ; ದುರ್ಗದ ಉನ್ನತಭಾಗ: ಕಲುವಳಿಯ ಕೋಲಾಹಲಕ್ಕೆವರಳಂಕದಿಱಿದರು ಸುರಗಿಯಲಿ ತೆನವಳಿಯ ಹಿಡಿದರು ಹೊಯ್ದು ಕೇಶಾಕೇಶಿಯುದ್ಧದಲಿ (ಕುಮಾವ್ಯಾಸ. ೩-೫೦).

[ ತೆನೆ₁ + ಬಳಿ₃ ]

**ತೆನೆವಾಲ್, ತೆನೆಹಾಲು** (ನಾ). ಹೊಡೆಯಲ್ಲಿ ಕಾಳು ಗಟ್ಟಿಯಾಗುವುದಕ್ಕೆ ಮುಂಚಿನ ಹಾಲು ; ಎಳೆಯ ತೆನೆಯೊಳಗಿನ ರಸ : ಫಳರಸದಿ ಬೆಳವ ನವಶಾಳೀವನಂಗಳಿಂ ತೆನೆ[ಪಾಠಾಂ. ತನಿ]ವಾಲನುಂಡು ಬಳೆವರಗಿಳಿಗಳಂರ್ಕಿನಿಂ (ತಿರುಕ. ದೇ. ೨-೦೦) ; ತೆನೆವಾಲನುಂಡು ಬಳೆದುವು ಗಿಳಿಗಳು (ಸಂಬಿಕ. ೯-೦೭). **ತೆನೆಹಾಲು** : ತೆನೆಹಾಲು ದಕ್ಕಲಿ ಕಕ್ಕಿಸಬೇಡದನು ನಿನ್ನ ನಂಜಿನ ಸೆರಗ ಬೀಸಾಡಿ (ಗರಿ. ೦೭೬-೦೬) ; ಜನಕೆ ನಿನ್ನೀ ಹಾಡು ಕೆನೆಹಾಲು ಇದ್ದಂತೆ ತೆನೆಹಾಲು ನಿನಗೆ ಒಕ್ಕಲಿಗ ಇಂಪಾಗಿ ಮನಸೋತು ಮಲಗೆ ಶಿವಲೋಕ (ಕನ್ನಡಾ. ೨೦೭). [ ತೆನೆ₁ + ಪಾಲ್₁ ]

**ತೆನೆವೆರಸು** (ಕ್ರಿ). ತೆನೆಗಳಿಂದ ಕೂಡಿರು: ತನವೆರಸಿದಿಕ್ಷುಗಳ ಹೊರೆಗಳಗೊನೆ ವೆರಸಿ ಶೋಭಿಸುವ ಕದಳಿಯ (ನಿಘಂಗ. ೪-೮-೫೪). [ ತೆನೆ₁ + ಬೆರಸು₁ ]

**ತೆನೆವೊಱು** (ಕ್ರಿ). ಕಾಳಿನ ಗೊಂಚಲನ್ನು ಹೊತ್ತುಕೊಳ್ಳು ; ಹೊಡೆಯಾಗು: ಕಿಳದ ತಡಿವಿಡಿದ ಮಡಿಗಳ ಜಳದೊಳ್ ರಂಜಿಸುವ ಧಾನ್ಯ ಮಂಜರಿಯ ನೆಟಲ್ ಪೊಳೆಯೆ ತೆನವೊತ್ತು[ಪಾಠಾಂ. ವೋದು]ವಿವು ಬೇಗಳಿನೆನಿಪುದು ಬೆಳೆದ ಕಟವೆ ಭೂಸಾರತೆಯಿಂ (ಚಂದ್ರಪ್ರ. ೦-೯೨) ; (ಕಾವ್ಯಸಾ. ೦೦೦ ಸೂಕ್ತ). [ ತೆನೆ₁ + ಪೊಱು ]

**ತೆನೆವೋಗು** (ಕ್ರಿ). ೧.= ತೆನೆಬಿಡು: ತೃಣಮುಂ ತನವೋದ ಬುಱಿಕ್ಕೊಣಗುವುದು (ಅನಂಪು. ೩-೬೦). ೨. (ಕೋಟೆಯ) ತೆನೆಯಾಕಾರವಾಗು. ೧, ೨: ವಸುಧೆಯ ಮಿಸುನಿ ಬೆಳೆದು ತೆನೆವೋದಂದಂಬೆಸಕವನೀಕ್ಷಿಸುವರಿಗೆ ಪೊಸಯಿಸುತಾ ಪುರವರದ ಪೊಂಗೋಂಟೆ ಕಣ್ಗೆಸೆದುದು (ಕುರಾಸಾಂ. ೩-೬೩). [ ತೆನೆ₁ + ಪೋಗು₁ ]

**ತೆನೆಹಾಲು** 'ತೆನೆವಾಲ್' ನೋ.

**ತೆನೆಹುಲ್ಲು** (ನಾ). ೧. ತೆನೆಬಿಡುವ ಹುಲ್ಲು: ಕೈತೋಟದಲ್ಲೆಲ್ಲಾ ತೆನಹುಲ್ಲು ಬೆಳೆದಿದೆ (ರೂಢಿ). ೨. ತೆನೆಸಹಿತವಾದ ಹುಲ್ಲು.
[ ತೆನೆ$_1$ + ಹುಲ್ಲು (< ಪುಲ್) ]

**ತೆನ್ನಂದಾರ್ಕ, ತೆನಂದಾಕ, ತೆನೆಂದಕ, ತೆನೇಂಧಕ** (ನಾ). ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದವನು (?) : ವಾಣಿಗ ತೋಟ್ಟಮ್ ತನ್ನಕ್ಕಣ್ಣಮುಂ ವಡಕಣ್ಣಮುಂ ವಿನೀತೇಶ್ವರಕ್ಕಮ್ ಪೊಯ್ದರ್ ಮಾನ್ದ ತೆಂನನ್ದಾರ್ಕರುಂ ಮಾರಾಟ್ಟ ತೆಂನನ್ದಾರ್ಕರುಂ ಅವರ ಕುಂಬು ಪೊಯ್ದಾರ್ (ಎಕ. IV, ಹಾಸನ. ೬೩-೮ ; ಸು. 750). **ತೆನಂದಾಕ** : ಪೆರ್ಮ್ಮಡಿಯಲ ಕಿಟರುಂ ತೆನನ್ದಾಕರುಂ ಕೊಳನೆಲ್ಲೂರ ಸಾಲತ್ತರುಂ ವಾರದರುಂ ಎನೆಪ್ಪರುಂ ನರಸಾಕ್ಷಿ (ಎಕ. IV, ಎಡತೊ. ೬೦-೬೩ ; ಸು. 890) ; ತೆನಂದಾಕಗಾದೆಯುಂ ಕಣ್ಣಮಂಗಲದೊಳ್ಬಸದಿ ಮಾಡಿಸಿ ಆ ಬಸದಿಗೆ ಕೊಟ್ಟ ಮಣ್ಣು (ಎಕ. X, ಕೋಲಾರ. ೯೦-೬೩ ; 903). **ತೆನೆಂದಕ** : ನೊಕ್ಕಿ ಊರೊಳೆ ಅಗ್ಗಡಿ ಕಳೊಸ ಕೊಟ್ಟ ನೆಲ ತೆನೆನ್ದಕ ಕಾಡೆಯಂಕು ಸಾಕ್ಷಿ (ಮ್ಯಆರಿ. ೧೯೧೬, ೧೩-೮ ; 728). **ತೆನೇಂಧಕ** : ಕೊಟ್ಟ ನೆಲ ತೆನೆನ್ಧಕ ಕಾಳೆಯಂಕು ಸಾಕ್ಷಿ (ಎಕ. III, ಮೈಸೂರು. ೨೩-೩ ; 750). [ ? ]

**ತೆನ್ನಮರ** (ನಾ). ೧. ತೆಂಗಿನ ಮರ. ೨. ತೆಂಗಿನ ಮರದ ಮೇಲೆ ಹಾಕುವ ಒಂದು ಬಗೆಯ ತೆರಿಗೆ: ತೆನ್ನಮರಂ (ಎಇ. XVIII, ೧೮೩-೪೮ ; 1434). [ ← ತಮಿ. ತೆನ್ನಮರ ]

**ತೆನ್ನೆಲೆಹುಳಿಗ** (ನಾ). ಒಂದು ಬಗೆಯ ಮಂಲಿಕೆ ; ಅಗಳುಶುಂಠಿ : "ಅರಣ್ಯಮಾಸಿನಿ –ತೆನ್ನೆಲೆಹುಳಿಗ" (ಓಷಧಿ. ೯): "ವಲ್ಲೀಕಾ–ತೆನ್ನೆಲೆಹುಳಿಗ, ಹಿಡಿಹಿಡಿಕೆ, ಶ್ರೀವಲ್ಲಿ, ಅಗಳುಶುಂಠಿ" (ಓಷಧಿ. ೦೯೩). 'ತನ್ನೆಲೆಹುಳಿಗ' ಪರಾ. [ ? ]

**ತೆನ್ನೊಟ್ಟಿ** (ನಾ). ದಕ್ಷಿಣಕ್ಕಿರುವ ಬೇಲಿ : ದಕ್ಷಿಣಸ್ಯಾನ್ದಿಸಿ(ಶಿ) ಕ (?) ಋ ಪೊಟಿಕ್ಕಾಲ್ ತೆನ್ನೆ(ನ್ನೊ)ಟ್ಟಿ . . . ಏಕಿಮುವ ದಿಕ್ಕಾಲ್ ತೆನ್ನೊಟ್ಟಿ ಏಕುಟ್ಟಿಕ್ಕಾಲ್ ತೆನ್ನೊಟ್ಟಿ (ಇಇ. XVIII, ೩೩೬–೨೩ ; 8ನೆಯ ಶತ).
[ತೆಂ + ಒಟ್ಟಿ (<ಒಟ್ಟಿ) ]

**ತೆಪರ** (ನಾ). ಬುದ್ಧಿಯಿಲ್ಲದವನು ; ದಡ್ಡ : ಸೈಕೋಲ್ ಕೊಟ್ಟು ಬುಡೋ ವಸ್ತು ತೆಪರಾ ಅಂತ ತಿಳಕೊಂಡಿಯೇನೋ ? (ಇತಿಮೋ. ೨೨). [ ? ]

**ತೆಪ್ಪ, ತೆಪ್ಪೆ** (ನಾ). ೧. ನದಿ ಅಥವಾ ಹೊಳೆಯನ್ನು ದಾಟಲು ಬಳಸುವ ಸಾಧನ ; ಹರಿಗೋಲು ; ನಾವೆ : "ತಳ್ಪಂ, ಉಡುಪಂ, ಪ್ಲವಂ – ಈ ೩ ತೆಪ್ಪಂ" (ನಚಂಯು. ೧೦೦–೯೯) ; "ಉಡುಪ ಪ್ಲವ ಕೋಲ" (ನಾಚರಾ. ೬) ; ಪರಿವರ್ತ ಪರ್ಬಗಳ್ಬದೊಳ್ ಪಿರಿದಪ್ಪ ತೆಪ್ಪದ ಮೇಲೆ ತೇಂಕುತ್ತುಂ (ಶಂಪಕಂ. ೨೯೬-೦೮) ; ತೊಟಿಯೊಳ್ ಪೋಪನಂಗೆ ತೆಪ್ಪವನಿಕ್ಕಿದಂತೆ (ಧರ್ಮಾಮೃ. ೧-೦೪೮) ; ಬಾಲಮರಾಳಂಗಳಂ ಪದ್ಮಪತ್ರದಿನೊಪ್ಪುವ ತೆಪ್ಪದೊಳಟ್ಟು ದಾಂಟಿಸುತಿರ್ಪ ರಾಜಹಂಸರಾಜಿಗಳಂ (ನಿರಿಕ. ೨-೬೦ ವ) ; ತೆರೆಯ ಮೇಲಣ ತೆಪ್ಪದಂತಿರೆ ಧರಣಿಯೊಲೆದುದು ಗಾಲಿಗಳ ಹಾವರದ ಭಾರಿಗೆ (ಕುಮಾವಿ. ೬.೨೩. ೬-೩೯) ; ಉರುಳುತಿರ್ದವು ರಣದೊಳಗೆ ಹೆಣನೆರಡು ಸೇನೆಯುಲರುಣಜಲವುಬ್ಬರಿಸುತಿರ್ದುದು ನೆಗಹಿ ನಾಲುಕು ಬಲದ ತೆಪ್ಪಗಳ (ತೊರಭಾ. ೬-೦೩-೪೦) : ನದಿಯ ದಂಡೆಯಲ್ಲಿ ಒಂದು ತೆಪ್ಪವು ಕಟ್ಟಿ ಹಾಕಲ್ಪಟ್ಟಿದ್ದಿತು (ಶ್ರೀಚಾಯು. ೧). ೨. ಬಿದಿರು, ಹಲಗೆಗಳಿಂದ ನಿರ್ಮಿಸಿದ ಚಪ್ಪಟೆಯಾದ ತೇಲುಸಾಧನ. 'ತೆಪ್ಪೋತ್ಸವ' ಪರಾ. **ತೆಪ್ಪೆ** : ೧. ಉದಕದಲ್ಲಿ ತೇಲಾಡುವ ತೆಪ್ಪೆಯ ವಿಧದಿಂದ ಮಹಾತ್ಮರು ಲೋಕ ಸಮುದ್ರದಲ್ಲಿ ಮುಳುಗದೆ ದಡವನ್ನು ಸೇರುವರು (ಮಡಿಕ್ಕಾ. I. ೨೨೦)
[ ದೇ.? ತಮಿ. ತೆಪ್ಪ, ತೆಪ್ಪಲ್, ತೆಪ್ಪೈ ; ತುಳು. ತೆಪ್ಪ, ಚೆಪ್ಪೊ, ತೆಪ್ಪೊ ; ತೆಲು. ತೆಪ್ಪ, ತೇಪ./ಅರ. ತಾಂಫಾ ; ಮರಾ. ತಾಪಾ, ತಾಫಾ ]

**ತೆಪ್ಪಗೆ** (ಅ). ೧. ಸುಮ್ಮನೆ ; ನಿಶ್ಚಲವಾಗಿ ; ಮೌನವಾಗಿ : ಮೊಳೆವು ದೊಮ್ಮೊಮ್ಮೆ ಚಿತ್ತದೊಳು ವಿಕಲ್ಪ ಕೂಡಲಿವುದಂತೆನೆ ಘಾಳಿಯಿಂದ ಜಲದಲ್ಲಿ ತೆರೆಯೇಳುವಂತೆ ಮತ್ತಾ ಘಾಳಿ ನಿಲೆ ಜಲ ತೆಪ್ಪಗಿಹಂತೆ (ಭಕಚ. ೧೮-೯೯); ಅಡ್ಡೆ ಕೊಡಲಾರದೆ ತೆಪ್ಪಗೆ ನಿಂತುಕೊಂಡರು (ನಾಪೋಲೀ. ೮೦) ; ತೆಪ್ಪಗೆ ಕುಳಿತುಕೋ (ರಂಗಕ. ೦೦೯). ೨. ಪೆಚ್ಚಾಗಿ ; ಬೆಪ್ಪಾಗಿ : ನಾನೂ ತೆಪ್ಪಗೆ ಅವನ ಮುಖವನ್ನೇ ನೋಡುತ್ತಾ ನಿಂತಿದ್ದೆ (ಅಂಕಹೂ. ೪೯). ೩. ಆರಾಮವಾಗಿ ; ಸುಖವಾಗಿ ; ಹಾಯಾಗಿ : ತೆಪ್ಪಗೆ ಮದುವೆಯಾಗಿ ಸಂಸಾರಿಯಾಗು (ವಿದ್ಯಾರಿ. ೩೬).

**ತೆಪ್ಪಗಾಗು** = ಸುಮ್ಮನಾಗು ; ಮಾತನಾಡದಿರು ; ಮೌನವಾಗಿರು : ಪೈದಿಗಳೆಲ್ಲ ಸದ್ದು ನಿಲ್ಲಿಸಿ ತೆಪ್ಪಗಾದರು (ಪುನರು. ೩೩೮); ಈ ಮಾತುಗಳನ್ನು ಕೇಳಿ ಕುಡುಕನು ತೆಪ್ಪಗಾದನು (ಹಳ್ಳಿಬ. ೨೦೦) ; ಇಬ್ಬರೂ ತೆಪ್ಪಗಾದರು (ಮುರುಳು. ೬). **ತೆಪ್ಪಗಿರು**=೧. ಸುಮ್ಮನೆ ಇರು; ಮೌನದಿಂದಿರು: ಟಪ್ಪ ತನ್ನ ಹಗೆತನವನ್ನೂ ಹಿರಿಯಾಸೆಯನ್ನೂ ತೊರೆದು ತೆಪ್ಪಗಿರಲಿಲ್ಲ (ಭಾರತ. ೯೨೩) ; ಅವನು ಹೆದರಿ ತೆಪ್ಪಗಿದ್ದರೆ ಅವನ ಸಹೋದ್ಯೋಗಿಗಳು ಹೇಡಿಯೆಂದು ಭಂಗಿಸಿ, ಅವನನ್ನು ಸೈನ್ಯದಿಂದ ಹೊರಹಾಕುತ್ತಿದ್ದರೆಂದೂ ವಾದಿಸಿದನು (ಪುನರು. ೩೯೪). ೨. ಹಾಯಾಗಿರು; ನೆಮ್ಮದಿಯಿಂದಿರು: ನಾನೆ ಪೋಪೆನಮ್ಮಾಜ ತೆಪ್ಪಗಿರಿ ನೀವೆಂದ (ಭರತ. ೩೬-೩೩) ; ಕೆಲವರು ರಾಜಕಾರಣವನ್ನು ಬಿಟ್ಟು ತೆಪ್ಪಗಿರಬೇಕೆಂದು ಯೋಚಿಸುತ್ತಿದ್ದರು (ಹಂಚಿಪಂ. ೧೮೦). 'ಸಪ್ಪಗೆ' ಪರಾ.

**ತೆಪ್ಪತೇರು** (ನಾ). ತೆಪ್ಪೋತ್ಸವದ ತೇರು ; ತೆಪ್ಪದ ರಥ : ಅವನ ತೆಪ್ಪತೇರಿನ ಮೇಲೆ . . . ನವಿಲುಹಿಂಡು ಕುಳಿತುಕೊಂಡು ಕಳಸಕ್ಕೆ ಕಪ್ಪು ತುಂಬುತ್ತಾವೆ (ಹಳ್ಳಿಬಾ. ೧೭). [ ತೆಪ್ಪ + ತೇರು$_2$ (<ತೇರ್$_2$) ]

**ತೆಪ್ಪತ್ತ** 'ತೆಪ್ಪಟು' ಪರಾ.

**ತೆಪ್ಪತ್ತು** 'ತೆಪ್ಪಟು' ಪರಾ.

**ತೆಪ್ಪನೆ** (ಅ). ೧. ಸುಮ್ಮನೆ ; ತೆಪ್ಪಗೆ : ಎಲೆ ಮರುಳೆ ! ನೀಂ ಭಯಂಬಡ ಬೇಡ, ತೆಪ್ಪನೆ ಸಡೆ (ಮಿತ್ರಗೋ. ೨೩) ; ಇಬ್ಬರೂ ತೆಪ್ಪನೆ ನಡೆದು ಬರುತ್ತಿದ್ದವು (ಮಗಮಾಂ. ೩೯). ೨. ಒಮ್ಮೆಲೆ ; ಇದ್ದಕ್ಕಿದ್ದಂತೆ ; ನಿಷ್ಕಾರಣವಾಗಿ : ಮುಪ್ಪಾಗ ಬೆಣ್ಣೆಯನ್ನು ತಪ್ಪದೆ ನಾ ಹಾಕಿ ಸಾಕಿದೆ ಒಪ್ಪದಿಂದ ಗಿಳಿಯಂ ಈಗ ತೆಪ್ಪನೆ ಹಾರಿ ಹೋಯಿತಯ್ಯೊ (ಪುಕಂದ. ೦-೦೦೩-೪). ೩. ಹಾಯಾಗಿ; ಸಂಖವಾಗಿ : ತೆಪ್ಪನೆ ಬೀಣೆವಾಡದೊಳಗಾಡುವ ವಾಣಿಯ ನೂಪುರಸ್ವರಂ (ಚಿಕವಿ. ೪-೧೧೪).

**ತೆಪ್ಪತೆಪ್ಪನೆ** (ದ್ವಿರುಕ್ತಿ) : ಅವ್ಯಯ ಪದಾಂತ ಲೋಪಕ್ಕೆ . . . ತೊಪ್ಪತೊಪ್ಪನೆ, ತೆಪ್ಪತೆಪ್ಪನೆ ಪುರುಳ್ (ಶಮದ. ೦೯೩ ಪ್ರಯೋ). **ತೆಪ್ಪನಾಗು** = ತೆಪ್ಪಗಾಗು ; ಸುಮ್ಮನಾಗು : ಸುಮ್ಮನಿರುವುದರಲ್ಲಿ ಪುರುಷಾರ್ಥವಿದೆಯೆಂದು ಭಾವಿಸಿ ಬಸಗೋಂಡ ತೆಪ್ಪನಾಗುತ್ತಿದ್ದ (ದೀಪಹ. II, ೧೯೩). **ತೆಪ್ಪನಿರು** = ತೆಪ್ಪಗಿರು ; ಸುಮ್ಮನಿರು : ಹುಟ್ಟುಗುಣಗಳ ಮನಶ್ಶಕ್ತಿ . . . ಗುಪ್ತಮನಸ್ಸಿನಲ್ಲಿ ಅಡಗಿಬಿಡುತ್ತದೆ. ಅಡಗಿದರೆ ಅಡಗಿರಲಿ, ಎಂದು ತೆಪ್ಪನಿರುವಂತಿಲ್ಲ (ಶಿಕ್ಷರ. ೬೪೯).

**ತೆಪ್ಪರಿಗೆ** (ನಾ). (ಕರಾ) ತೆಂಗಿನ ಗರಿಯ ಬುಡದಲ್ಲಿರುವ ಎಳೆಎಳೆಯಾದ ಹೊದಿಕೆ ; ತೆಂಗಿನ ಸೀರೆ ; ಸೀಬಿ : ನಾವು ಗವಿಯೊಳಗೆ ಹೋಗುವಾಗ ತೆಂಗಿನ ಗಿಡದ 'ತೆಪ್ಪರಿಗೆ'ಯ ಸೂಟಿಗಳನ್ನು ಬೆಳಕಿಗೆಂದು ಒಯ್ದಿದ್ದೆವು (ಗಂಗಾವ. ೬೩). [←ತುಳು. ತೆಪ್ಪರಿಗೆ, ಚಿಪ್ಪರಿಗೆ ]

**ತೆಪ್ಪರಿಸು** (ಕ್ರಿ). ಚೇತರಿಸು ; ಎಚ್ಚೆತ್ತುಕೊಳ್ಳು : ಶ್ರೀರಾಜ ಒಡೆಯ ಮಹಾಸ್ವಾಮಿಯವರು ಆ ಮಹಾಸಭೆಯ ವಿಕಾರ ವಿಲಾಸಗಳ ಉಮ್ಮಹವದನ್ನು ತರೆಗಿಡಿಸಿ ತೆಪ್ಪರಿಸಿ ನೇರ್ಪಡಿಸಿಕೊಂಡರು (ಮುಂತ್ರಕ. ೦೩೩-೨೨). [ತೆಪ್ಪರು (< ತೆಪ್ಪಟು ) + – ಇಸು$_3$ ]

**ತೆಪ್ಪರು** 'ತೆಪ್ಪಳು' ನೋ.

**ತೆಪ್ಪಸ** (ನಾ). = ತೆಪ್ಪ ೧ : ನರರ ತುರಂಗಂಗಳ . . . ಶರಹತಿಯಿನಾದ ವಲ್ಲಟಗಡಿಗಳ್ ಪರಿವರಣಜಲದ ತೊಳಿಯೊಳ್ ತೆರಳ್ದು ತೆಪ್ಪಸದ ತೆಱದೆ ಪೆಂದವು ಧುರದೊಳ್ (ಮಹಾನೇ. ೫-೯೮). [< ತೆಪ್ಪ]

**ತೆಪ್ಪಹಾಂಸೆ** (ನಾ). ನೀರಿರುವ ಪ್ರದೇಶದಲ್ಲಿ, ಬೇರು ಆಳಕ್ಕಿಳಿಯದೆ ನೀರಿನ ಮೇಲೆ ತೇಲಿ ಬೆಳೆಯುವ ಒಂದು ಬಗೆಯ ಸಸ್ಯ ; ಅಂತರ ಗಂಗೆ : ಅಂತರಗಂಗೆ ಅಥವಾ ತೆಪ್ಪಹಾಂಸೆ (ಮುಂಬಯಿ. ೬-೨೬೫). [ತೆಪ್ಪ + ಹಾಂಸೆ (<ಪಾವಸೆ)]

**ತೆಪ್ಪಳು, ತೆಪ್ಪರು, ತೆರ್ಪಳು** (ಕ್ರಿ). ತೆಪ್ಪೃತ್ತ (ಭೂತಕೃ), ತೆಪ್ಪತ್ತು, ತೆರ್ಪತ್ತು (ಭೂತನ್ಯೂ). ಎಚ್ಚರಗೊಳ್ಳು ; ಚೇತರಿಸಿಕೊಳ್ಳು : "ತೆಪ್ಪಳು—ಚೇತನಕರಣೇ" (ಶಮದ) ; ಅಗಳ್ ತೆ[ಪ್ಪ]ತ್ತುಮೆಲ್ಲಿದನೆತ್ತಣ ನೆಂದು ಕರ್ಣನ ಕಳೇವರಮಂ ನೋಡಿ ನೋಡಲಪ್ಪಿದೆ ಕಣ್ಗಳಂ ಮುಚ್ಚಿ (ಪಂಪಭಾ. ೧೩-೫೮ ವ) ; ಕೂಸು ಕಾಣದೆ ಬೆರ್ಚಿ . . . ಪೊದರ್ಪುಗೆಟ್ಟು ಮರವಟ್ಟಂತೆ ತೆಪ್ಪತ್ತು . . . ಕಾಂತೆ ಪುಯ್ಯಲ್ಚಿದಳ್ (ಬಂಹರಿ. ೮-೫); ಮೂರ್ಛೆಗೆ ಸಂದ ರಾಯಂ . . . ಶೈತ್ಯೋಪಚಾರದತ್ತಣಿಂ ತೆಪ್ಪತ್ತನಾಗೆ (ರಾಮಾಶ್ವ. ೦೩-೨೨). **ತೆಪ್ಪರು** : ಕರೆಕರೆಯೂಂಪಳೊರ್ವೆ ನಿಜದೈವಮ ನೊರ್ವೆ ಕಡಂಗಿ ಬಯ್ದು ತೆಪ್ಪರುವವಳದೊರ್ವೆ ಚಿಂತೆ ತಲೆದೋರೆ ಪಲುಂಬುವಳೊರ್ವೆ (ಚಂದ್ರಪ್ರಭ. ೬-೨೬). △ **ತೆರ್ಪಳು**: "ತೆರ್ಪತ್ತಂ—ಮೂರ್ಛೆತಿಳಿದಂ" (ಶಮದ. ಪರಿ. ೨) ; ತೆರ್ಪತ್ತು ಬಿಟ್ಟು ನಮೆಯು ತ್ತಿರ್ಪರ್ ನಾರಕರ್ (ಶಾಂತಿಪು. ೬-೯೯) ; ಎಚ್ಚಱಬೆರ್ದೆಯಿಂದುರ್ಚಲ್ . . . ತೆರ್ಪತ್ತಾಗಳ್ (ವೀರವಿ. ೦೨-೩೬).

**ತೆಪ್ಪತ್ತುಕೊಳ್ಳು**=ಚೇತರಿಸಿಕೊಳ್ಳು; ಎಚ್ಚತ್ತುಗೊಳ್ಳು : ಸ್ವಲ್ಪಕಾಲ ದಲ್ಲಿಯೇ ಮೊಗಲನು ತೆಪ್ಪತ್ತುಕೊಂಡು . . . ರಂಗಸ್ಥಳದಿಂದ ಹೊರಕ್ಕೆ ಹೋದನು (ಭಾರವೀ. ೦೩೩); ಅಂದಿನಿಂದ ಅವರು ಸ್ವಲ್ಪ ತೆಪ್ಪತ್ತುಕೊಂಡು ಎದ್ದು ಊಟ ಮಾಡಲೂ ಅಲ್ಲಲ್ಲಿ ತಿರುಗಲೂ ಅನುವಾದರು (ನಗೆಗ. ೭೬). [ದೇ.॥ ತೆಲು. ತೆಪ್ಪಱು, ತೆಪ್ಪರು, ತೆಪ್ಪಿರು, ತೆಪ್ಪಿಱಿಲು, ತೆಪ್ಪಿಱು]

**ತೆಪ್ಪೆ** 'ತೆಪ್ಪ' ನೋ.

**ತೆಪ್ಪೋತ್ಸವ** (ನಾ). ತೆಪ್ಪದಲ್ಲಿ ದೇವರನ್ನು ಕೂರಿಸಿ ಮಾಡುವ ಉತ್ಸವ,—ಮೆರವಣಿಗೆ: ನಮ್ಮ ದೇವಾಲಯಗಳ ಲಕ್ಷದೀಪ ತೆಪ್ಪೋತ್ಸವ, ದೀಪಾರಾಧನೆಗಳಲ್ಲಿ ಅಸಂಖ್ಯಾತ ದೀಪಗಳನ್ನು ಹಣತೆಯಲ್ಲಿ ಉರಿಸುತ್ತೇವೆ (ದಾಲಪ್ರ. III, ೦೩೬೯). P ಈ ರೂಪ ವ್ಯಾಕರಣ ಶುದ್ಧವಲ್ಲ.

**ತೆಬ್ಬಱಿಸು** (ಕ್ರಿ). ೧. ಹಾರು ; ನೆಗೆ ; ಚಿಮ್ಮು ; ಪುಟನೆಗೆ : ಎತ್ತಂ ತೆಬ್ಬಱಿಸಿಯಾಡುವಟ್ಟೆಗಳುಬ್ಬರದಿಂದೊಱೆದು ಪರಿವ ರುಧಿರಸ್ರೋತಂ (ನೇಮಿಪು ೧೧-೦೮೪). 'ಟೆಪ್ಪರಿಸು' ಪರಾ. ೨. ಉತ್ಸಾಹಗೊಳ್ಳು ; ಹುರುಪನ್ನು ಪಡೆ : ಇರ್ವರುಂ ಪರಸಿ ತಡವರಿಸಿಯುಂ ತೆಬ್ಬಱಿಸಿ ಯುಎಮಟ್ಟಿಱಿಳಪ್ಪಿಕೊಂಡು (ಪಂಪಭಾ. ೦೩-೮ ವ) ; ಆನಂದಿತಚಿತ್ತರಾಗಿ ತಡವರಿಸಿಯುಂ ತೆಬ್ಬಱಿಸಿಯುಂ ತೆಗೆದಪ್ಪಿಯುಂ (ಗದಾಯು. ೩-೮೪ವ) : "ಚೇತರಿಸಿಕೊಳ್ಳುವಂತೆ ಮಾಡು" (ಗದಾಸಂ. ಟಿಪ್ಪಣಿ) ; ಕರವಾಳ ಘಾತದಿಂ ಪರಿದುರುಳ್ವ ತಲೆಗಳೆನವುಂಕಿ ಒಡಿದರಬರ್ ತೆ[ಪಾಠಾಂ. ಟೆ]ಬ್ಬಱಿಸಿ ಮಗುಟ್ದಟ್ಟೆಯೊಳ್ ಬಿತ್ತರದಿಂ ಬೀರಕ್ಕೆ ಕಳಶವಿಡುವಂತಿಟ್ಟರ್ (ಚಂದ್ರಪು. ೧೦-೭೩). [< ತೆಬ್ಬು₁ + – ಇಸು₃]

**ತೆಬ್ಬು₁** 'ತುಬ್ಬು₁' ನೋ.

**ತೆಬ್ಬು₂** 'ತಿರುವು₃' ನೋ.

**ತೆಮಟೆ** 'ತೆಟ್ಟೆ' ನೋ.

**ತೆಮರ್₁, ತೆಮರು₁, ತೆಮಱು, ತೆವರು₁** (ಕ್ರಿ). ೧. ಅಟ್ಟು; ಓಡಿಸು; ನಿವಾರಿಸು : ತಿಮಿರಭ್ರಮರವ್ರಜಮಾಕ್ರಮಿಸಿರೆ ಭಗಣಪ್ರಸೂನಕುಲಕಿಂದ್ರ ದಿಶಾರಮಣಿ ತೆಮರಲ್ಕೆ ಚಂಪಕಸುಮಕಂತುಕವಿಟ್ಟಳೆನಿಕುಮಾ ವಿಧು ಬಿಂಬಂ (ರಾಜಶೇ. ೦೧-೯೬) ; ಪರಿತಂದು ತಿಮಿರ ಮಧುಪೋತ್ಕರಮುಡು ಸುಮಚಯಕೆ ಬಳಸಿ[ಸೆ] ತೆಮರಲ್ ಭರದಿಂ ಹರಿದಿಗ್ವಧುವಿಟ್ಟತಿಭಾಸುರ ಚಂಪಕದಿಂಡೆಯೆನೆ ನಿಶಾಕರನೆಸೆಗುಂ (ವಿಷ್ಣುಪು. ೫-೩-೧೧೦) ; ನೋಡಿದನ ವಿಳಾಸಮಂ ತೆಮರ್ವ ಕಣ್ಗಳಿಂ (ಶಬಶಂ. ೫-೪೦) ; ಐದು ಕೋಶಗಳ ಹೊಕ್ಕೈದು ಯೋಗಗಳ ಮಿಕ್ಕೈದು ಲಕ್ಷಣವ ತೆಮರ್ದೈದು ವಿಷಯಗಳ ನೆಮರ್ದು (ಕೃಕವ. ೧-೨೦-೩). ೨. ಹೆದರು ; ಬೆದರು ; ಹಿಮ್ಮೆಟ್ಟು : ಸೆಡೆದನೆಂದುಂ, ನಡುಕಂಗೊಂಡನೆಂದುಂ . . . ತೆಮರ್ದನೆಂದುಂ – ಈ ರ ಭಯಂಗೊಂಡವಂ (ಕಕಸಾ. ೦೨-೨೨೫) ; ಜನ್ಮಾರ್ಜಿತಾಘಂಗಳುಂ ತೆಮರ್ಗುಂ (ಶಮಗೂ. ೩-೩೯೬). ೩. ಹೀಯಾಳಿಸು ; ತಿರಸ್ಕರಿಸು : ಎಮೆದುಱುಗಲ್ಕಮಲ್ತು ಕುಡಿಗೊಂಡವೊಲಾಗಿರ ಸೋಗೆ ಸೋಗೆಯಂ ತೆಮರ್ವವೊಲೊಪ್ಪೆ ಸೋರ್ಮುಡಿ . . . ಕಂಗೆಸೆದುದಗ್ಗದ ಪೂರ್ವವಿಳಾಸಿನೀಜನಂ (ರಾಜಶೇ. ೦೨-೫೫) **ತೆಮರು₁** : ೧. ವಿಭ್ರಮ ಮಟ್ಟಿದಿರ್ಪುಗುಂದಿ ಬಸಿಱಂ ಪೊಸೆದೆತ್ತಿನೊಳೊಂದಿ ನಿಂದರಂ ತೆಮರಿ ತೆರಳ್ಚಿ ಕಾರ್ಯಮಣಮಿಲ್ಲದ ಬಣ್ಣಟಿದೊರ್ವಳೊಪ್ಪಿದಳ್ (ರಸರ. ಪರಿ. ೦೦೯). △ **ತೆಮಱು** : ೧. ನಡೆದುಚ್ಚಂಗಿಗೆ ಬಂದ ರಾಯದಳಮಂ ಕಯಿ ಕೊಳ್ಳದೊಂದಂಗದಿಂ ಬಿಡದೆಚ್ಚಾಡಿ ಸರಂಗಳಿಂ ತೆಮಱಿಯಂತಾ ಸೇನೆ ಪಿಂಗಲ್ಕೆ ತಾಂ ಪಡೆದಂ ವೀರದ ಪೆರ್ಮೆಯಂ (ಎಕ. V, ಅರಸೀ.೦೦೮–೨೧ ; 1255). **ತೆವರು₁** : ೧. ತುಂಬಿ ತುಂಬಿಯನಟ್ಟುವಂತಳಕವಳಕವರಲಂಬಱು ತೆವ[ಪಾಠಾಂ. ಮ]ರುವಂತೆ . . . ಚಿಟ್ಟುಮುಂರಿಯಾಡುತಿರ್ದರು ಸತಿಯರು (ಹಕಶಾ. ೪-೦೦) : ಮಕ್ಕಳನು ತಱಿದಿವರ ತೆವರಿಯೆ ರಾಜ್ಯಮಾಡುತಲಿ (ಕುಮಾ.ಆ. ಓರಿಇ. ೨೬-೦೦೫) ; ಭವಾಂತರದೋಷತಮವ ತೆವರುವ ನೇಸಱಿಂದೆನಿಪುದು (ಸೌಂದಪು. ೬-೯೫) ; ಗಿಳಿಗಳಂ ತೆವರುವ ಪಾಮರ ಸ್ತ್ರೀಯರ್ (ರೇವಣ. ೨೩-೯) ; ವಿಷಮನವ್ಯಮೃತಂ ಪುಣ್ಯಮಾ ಪಾಪವ ಸಲೆ ತೆವರುವಂತೆ ಪರವಾದಮಂ ಗೆಲ್ದು (ಚಬಪು. ೩-೨೮) ; ಅಪ್ಪಳಿಸಿ ಹೊಯ್ದೆ ಳದು ಸದೆದಿಟ್ಟೊರಸಿ ಮೆಟ್ಟಿ ಸೊಪ್ಪಿಸಿ ಪೂರಳ್ದರದು ತೆವರಿ ಪರಿದರೆಯಟ್ಟಿ ಚಿಪ್ಪುಚೀರಾಗಿಸಿತು ಸಕಲ ಪರಿವಾರವಂ (ಪ್ರಮಿಭಾ. ೦೩-೫೦). ೨. ಇವನ ಕಾಣುತ ಸಕಲಸುರಮುನಿನಿವಹಮಾಚರಿಸಿತು ದಸೆದೆಸೆಗವಯವದ ಭೀತಿ ಯೊಳಗೋಡಿತು ಬ್ರಹ್ಮವಟುನಿವಹ ತೆವರುತಿರ್ದವು ಖಗ ಮೃಗಾವಳಿ (ಅಂಬಿಕಾ. ೭-೪೪). ೩. ಅರೆನಗೆಯ ಬಿಱುನಗೆಯ ನಗೆಗಳ ಹೊರಳಿಗಳ ಲಡಬಿದ್ದು ಕೈದಾವರೆಯ ಕಮಲಂಗಳಲಿ ತೆವರಿದರಿಟ್ಟು ಭೂಭುಜರ (ತೊರಕಾ ೧-೦೫-೮).

**ತೆಮರ್₂, ತೆಮರು₂, ತೆವರ್, ತೆವರ, ತೆವರಿ, ತೆವರು₂** (ನಾ). ೧. ದಿಣ್ಣೆ ; ಬೋರೆ ; ದಿಬ್ಬ ; ತಿಟ್ಟು : ಅಡವಿ ಬಯಲಾಗೆ ನದ ಮೊಟ್ಟುಮಡುಗೆ ತೆಮರ್ಸರಿಸಮಾಗೆ (ಕಾವ್ಯಾ.ವ. ೨೯೪) ; ತೆವರೆಲ್ಲಂ ಜೈನ ರಾಜಾಯತನಮೆ ಕುಱಿಯೆಲ್ಲಂ ನವಾಂಭೋಜಿನೀಷಂಡಮೆ ಪೌರೋದ್ಯಾನ ಮೆಲ್ಲಂ ಸುರಕುಜಮೆ (ಅನಂಪು. ೩-೭) ; ಮುಂಡಿಗೆಯ ತುದಿಗಳಂ ಕುಟಿ ತೆಮರಂ ಪಸರಿಸಿ ತೆಳ್ಗಲ್ಲೊಳ್ ಘಟಯಿಸುವುದು ಸುಸ್ಥಾನಶಯನನಪ್ಪಂತೆ ನೆಲಂ (ಅಶ್ವಶಾ. ೭-೫). **ತೆಮರು₂** : ೧. ಪಳ್ಳದ ಬಡಗಣ ತೆಮರು (ಮ್ಯಆರಿ. ೦೯೨೯, ೩೮-೯; 8 ನೆಯ ಶತ). **ತೆವರ್** : ೧."ದ್ವೀಪಃ, ಅಂತರೀಪಂ ಈ ೨ ನೀರ ನಡುವಣ ಕುರುವದ ಪೆಸರು. ಉದಕದ ತೆವರೆಂದು ಎಂಬರು" (ನಾಚಿರಾ. ೯೯) ; "ತೆವರಾರಯಲುಂದ್ದ ನೆಲಂ" (ಶಬ್ದಮ. ೩೫) ; ಮುಂಗಿಲಿಂದೆ ಱಿಗುವ ಮಟಿ ಕದಡಿ ಬರ್ಪ ತೊಱೆ ಬೆಟ್ಟು ತೆವರ್ ಮೊರಡುಪ ಜಲಧಿಗಳೆನೆ (ಆದಿಪು. ೬-೬೨) ; ತೆವರೆಲ್ಲಂ ದೇವತಾಮಂದಿರನಿವಹಮೆ (ಎಇ. XVI, ೩೮-೨೪ : 1162) ; ಕಲ್ಲಾಗಿ ಮಣ್ಣಾಗಿ ಕುಳಿಯಾಗಿ ತೆವರಾಗಿ (ಬಿಂದೋರೆ.ಹ. ೫೦೦-೭) ; ಕುಟಾಯುಂ ತೆವರುಂ ಸಮನಾಯ್ತುದೆತ್ತಲುಂ

(ಪುಷ್ಪಪು. ೫-೪೬) : ಭೂಮಿಯ ಕುಳಿ ತೆವರ್ವೋದಲಾದುದಂ ನೋಡಿ (ಶ್ರಾವಣಾ. ೯೩-೨೨) ; ತೊರಳೆಗುಪ್ಪೆ ಮಜ್ಜೆಯ ತೆವರ್ ಸುಂಟಗೆಯ ಸಾಲ್ (ಚಬಪು. ೪೮-೫೬). **ತೆವರ :** ೧. ಆ ತೆವರದ ಶಿಲೆಯ ಕಂಬ (ಎಕ. XII, ತುಮಕೂ. ೩-೧೨ ; 1516) : ತಿಟ್ಟೆಯೊಳು ತೆವರದೊಳು ಹುಟ್ಟಿಹನೆ ಪರಶಿವನು ಹುಟ್ಟು ಸಾವುಗಳು ಅವಗಿಲ್ಲ ಜಗವನ್ನು ಬಿಟ್ಟಿಹನು ನೋಡ (ಸರ್ವಜ್ಞ. ೩೩೩). **ತೆವರಿ :** ೧. ತನೆ ತಿಂದ ಎತ್ತು ತೆವರಿಯನ್ನು ಏರಿತು (ಗಾದೆ). **೨. ಹೊಲ ಗದೆ ಮೊದಲಾದುವುಗಳ ಬದು,–ಏರಿ,–ಅಂಚು :** ಗದ್ದೆಯ ತೆವರಿಯಲ್ಲಿ ಬರುತ್ತಿದ್ದ ದೊಡ್ಡನನ್ನು ದೂರದಿಂದಲೇ ಬೆಳ್ಳಿ ನೋಡಿದಳು (ಕಾಲಜ್ಞಾ. ೪ ಕಥಾಸಾರ). **ತೆವರು₂ :** ೧. ತಬ್ಬಿಣ ತೆವರು ಪಡುವ ಪಳೆ ಮೇರೆ (ಎಕ. V, ಅರಕ ೨೪-೧೩ ; ಸು. 900) : ಉಗುಳ ನುಂಗಿ ಹಸಿವ ಕಳೆದು ತೆವರ ಮಲಗಿ ನಿದ್ರೆಗೆಯ್ದೆನಲ್ಲಾ (ಅವಕಂ. ೮೨-೩೬೪) ; ಕಡೆಯ ಹೊಲದ ತೆವರಿನಲ್ಲಿ ಮರ ತಾಗಿ ನೇಗಿಲು ಮುರಿಯಿತ್ತು (ಮೋಳಿಮಾ. ೧೩೪-೩೧); ಗುರುಸೇವೆ ಕೈಕೊಂಡು ಹಿರಿದಾಗಿ ಮಾಡದರೆ ಹಂದೇಱಿ ಮುಕ್ತಿ ಪಡೆಯುವಡೆ ಅದು ತಾನು ಹಿರಿದಾದ ತೆವರೆ (ಸರ್ವಜ್ಞ. ೩೬) ; ಸಂದಿಗೊಂದಿಯೊಳೆ ಹಿಡಿಸದೆ ತುಂಬಿದ ತಗ್ಗಿಲ್ಲ ತೆವರಿಲ್ಲ (ಸಖೀಗೀ. ೨೪-೪೧೯) **೨.** ಗದ್ದೆಗೆ ತೆವರು ಗಟ್ಟಿಯಿರಬೇಕು(ಸಂಸ್ಕಾರ. ೨೬) ; ನಮ್ಮ ಏರೆಹೊಲದ ತೆವರಿನಲ್ಲಿ ಒಂದು ಒಳ್ಳೆ ಹಲಸಿನ ಮರವಿದೆ (ಕಂಗಾಳ್ವ. ೬೫). [ ? ]

**ತೆಮರು₁** 'ತೆಮರ್₁' ನೋ.

**ತೆಮರು₂** 'ತೆಮರ್₂' ನೋ.

**ತೆಮಲಿಸು (ಕ್ರಿ).** ನೂಕು; ತಳ್ಳು; ಕದಲಿಸು : ವಹಾರಿಯಂದದಿ ನಿಂದಿಹನ ಮತ್ತಾರು ತೆಮಲಿಪರೆಂದು ಬಳಲಿಕೆ ಸಾರಿದರು ಮೊದಲಿಂದ ಸಣಸಿದ ಖಚರಸಂತತಿಯೂ (ಜಿನಭಾ. ೫೨-೩೬).

[ತೆಮಲು (<ತೆಮಟ್) + – ಇಸು₃]

**ತೆಮಲು** 'ತೆಮಟ್' ನೋ.

**ತೆಮಳ್** 'ತೆಮಟ್' ನೋ.

**ತೆಮಳು** 'ತೆಮಟ್' ನೋ.

**ತೆಮಳ್ಚು, ತೆವರ್ಚು (ಕ್ರಿ).** = ತೆಮಲಿಸು : ಮೇಲುದಂ ತೆಮಳ್ಚಿ ಕುಚ ಮಂಡಳಂ ಕುಣಿಯೆ . . . ಘಟ್ಟವಣ್ಣಿಯರದೇಂ ಮನಂಗೊಂಡರೋ (ಧರ್ಮನಾ. ೨-೮೪). **ತೆವರ್ಚು :** ಮೇಲುದಂ ತೆವರ್ಚುತ ಸುಯ್ಯು ಬಿನ್ನಣದಿಂ ಬೇಟಮಂ ಬೀರಿ ಮುಂಬರಿವವಳ (ರುಕ್ಮಾಂಗ. ೬-೬೧).

[ತೆಮಳ್ (<ತೆಮಟ್) + – ಚು₁]

**ತೆಮಳ್ದು** 'ತೆಮಟ್ದು' ನೋ.

△**ತೆಮಱು** 'ತೆಮರ್₁' ನೋ.

**ತೆಮಟ್, ತೆಮಲು, ತೆಮಳ್, ತೆವಂಕಂ,-ತೆವಳ್, ತೆವಳು (ಕ್ರಿ).** ೧. ಸೇರು ; ಕೂಡು ; ಬೆಂಬಲಿಸು : ಅಮಳರುಮಿಪ ಬೇಳ್ವೆಯ ಮಾತಂ ತೆಮಟ್ [ಪಾಠಾಂ. ತಮಗೆ] ನುಡಿದೊಡೆಮ್ಮ ಗಂಡವಾತುಮಳುಂಬಂ ಭೃತಮಕ್ಕುಮೆಂದು (ಪಂಪಭಾ. ೬-೨೬ ವ). **೨.** ತಿರುಗು ; ಹೊರಳು : ತೆಮಟ್ಟನ್ನೆಗಂ ನುಣ್ಪಂ ತಿಣ್ಪುಮನೊಳಕೊಂಡು (ಶಾಂತಿಪು. ೯-೧೪೩ ವ). **೩.** ಹೊಟ್ಟೆ ಮೇಲೆ ಭಾರ ಹಾಕಿ ಮುಂದೆ ಸರಿ; ದೇಕು : ಏಱು ದಿವಸದೊಳ್ ತೆಮಟ್ಟು ಪೆಱವೇೞುದಿವಸಕ್ಕೆ ತಳರ್ನಡೆ ನಡೆದಂ (ಆದಿಪು. ೫-೪೦ ವ) ; ತಡೆಯದೆ ಕುಳ್ಳಿರಲ್ ತುರಿಪದಿಂ ತೆಮಟಲ್ ತದನಂತರಂ ತಳರ್ನಡೆ ನಡೆಯಲ್ (ಶಾಂತಿಪು. ೬-೧೦೬). **೪.** ಮಾಸು : ಮಂಕಾಗು; ಮಸುಳು: ಮುಟ್ಟಿ ಮಾಡೆ ಸುಕರತ್ವಂ ತೆಮಟ್ದುಪ್ಪುದೆಂದು ಮನೋಜಾತ ನನಂಗನಾಗಿ ಮನದಿಂದಂ ಮಾಡಿದಂ ಪೆಣ್ಣ ವಿದ್ದಮಂ (ಅನಂಪು. ೨-೦೩). **೫.** ಸಮನಾಗಿರು; ಮಟ್ಟಸವಾಗಿರು: ತೆಮಟ್ದ ಕುಟಿಯಿಲ್ಲದೆಯುಂ ಸುಮನೋಹರಮಪ್ಪ ಕಕ್ಷಮತಿಶುಭದಂಗಳ್ (ಲೋಕೋಪ. ೧೧-೦೦). **ತೆಮಲು :** ೬. ಅಲುಗು; ಕದಲು; ಜರುಗಂ: ಜೈನರು ಬಸದಿಗಂ ಪೋಗಿ ಹೇಮಗದಗಳ ಬೀಗಮಂ ತೆಗೆದು ನೂಂಕಲುದ್ದಾಮದಿಂ ತೆಮಲದಿರಲವರು ವಾದಯ್ಯನಿಂದಾದ ವಿಘ್ನವಿದೆನ್ನಲು (ಪ್ರಭುಪು. ೮-೫೦) **ತೆಮಳ್ :** ೩. ಮರಳಿ ಕೆಲಬರ್ ಕಾಲ್ಗಳೊಡೆದು ಮುಂದಣ್ಣಡಿಯನಿರದಿಡಲ್ಕಾಱ ದಂಬಳ್ಗೆಗಳಿಂ ತೆಮಳ್ದು ಭರದೆ ಬರ್ಪರ್ ಕೆಲರ್ (ಅರಾಜ. ೪-೩೩). **೩.** 'ತೆಮಳ್ಚು' ಪರಾ. ೭. ಹಿಮ್ಮೆಟ್ಟು ; ದೂರವಾಗು : ಮದಂಭ್ರಿಯಂ ಸಮರ್ಚಿಪುದದಱಿಂ ತೆಮಳ್ಗಂ ದ್ವಿಜಘ್ನದೋಷಂ (ಹಮ್ಮಿಮಾ. ೯-೨೪) **ತೆಮಳು :** ೮. ನಡೆಸು ; ಚಲಿಸುವಂತೆ ಮಾಡು : ಸುಮತಿಸಾಗರ ಮುಂದೆ ಭರದಿ ವಿಮಾನವ ತೆಮಳಿಕೊಂಡೆಯ್ದು ವಾರ್ತೆಯನು ನಮಿರಾಜಗಱುಹೆ (ಭರತೇ. ೩೮-೮). **ತೆವಳ್ :** ೩. ಕೋಲ್ಗಳಿಂ ತೊಡೆಗಳಂ ಕತ್ತರಿಸೆ ನಾದಿದುವು ದೂಳ್ಗಳರುಣಾಂಬುವಿಂದೆದೆಯೊಳ್ವೆವಳ್ದ ಹಿಯಪೋಲ್ಗಂಡುಗಲಿ ಧನಂಜಯನ ಸಮ್ಮುಖಕೆ ಮೇಲ್ವಾಯ್ದನು (ಜೈಮಿಭಾ. ೧೪-೦೬) : ಗ ಟ್ ಗೆ ಯ ನಿ ತು ತವಳಲಿರ್ಪ ಉಸಿರಿಗಳಾ ಸಾಹಸಮ್ (ಬದ್ರಪ್ರ. ೨೯-೬೦೯). **ತೆವಳು :** ೩. ಕರಯುಗದೊಳೆರಡು ಕೈಮಣಿವಿಡಿದುಕೊಂಡು ಪುರವರದ ಬೀದಿಯೊಳೊರ್ವ ಕುಂಭಕಾರಂ ತೆವ[ಪಾಠಾಂ. ಮ]ಳ ಬರುತಿರಲ್ಕೆ (ಸಮ್ಯಕಾ. ೨-೪೨) ; ಮೆಲ್ಲನೆ ತೆವಳಿ ಆಡುವ ಕಿಱುವರೆಯದಂದಂಗಳದೊಳಾಡುತಲು ಹರಿಯಿರಲು (ಸಾಳ್ವಭಾ. ೨೦-೪೩) ; ಕಾಲೊಡೆದು ಕೆಲವು ದೂರ ತೆವಳುತ್ತ ಪೊರಳುತ್ತ ರಕ್ತಂ ಸುರಿವುತಾ ರಮಣ ಬರುತ್ತಿರಲ್ (ಪಾಕೋಪು. ೪-೦೪೮) : ಇರದಮ್ಮುತ ಕಾಂತೆಯಂ ಕೈವೀಸಿ ಕರೆವಂತೆ ಕರವ ಮುಂದಿಟ್ಟಲ್ಲಿ ತೆವಳುವಳು ಬಳಲುವಳು (ಸಿದ್ಧಕಾ. ೫-೩೦); ಕೊನೆಯ ನಾಲ್ಕೈದು ಮೈಲಿಗಳನ್ನಂತೂ ತೆವಳಿಕೊಂಡು ಬಂದ ಹಾಗೇ ಬಂದಿದ್ದ (ಅನಾಥ. ೨೬೩) ; ಉತ್ತು ಬರುವ ಮಗ ತೆವಳಿ ಬಂದರೆ ಹೆತ್ತ ತಾಯಿಯ ಪುಣ್ಯ (ಗಾದೆ). **೯.** ನಿಧಾನವಾಗು; ಮಂದಗತಿಯಾಗಂ : ದೈಹಿಕ ಶಿಕ್ಷಣಕ್ಕೆ ನೆರವಾಗುವ ಚಟುವಟಿಕೆ ತೆವಳುವುದು (ಶಿಕ್ಷರ. ೭೮).

[ದೇ.೫ ತಮಿ. ತವಟ್, ತಿವಳ್; ಮಲ. ತವಿಟು; ತೆಲು. ತೆವಲು]

**ತೆಮಟ್ಟು, ತೆಮಳ್ದು (ಕ್ರಿ).** ೧. ಒಟ್ಟುಮಾಡು ; ಒಂದುಗೂಡಿಸು ; ಕೂಡಿಸು ; ಸಂಗ್ರಹಿಸು : ತುಮುಳಯುದ್ಧದೊಳಿಂತ ನಿರಂತರಂ ತೆಮಟ್ದಿ ಕಾದಲೆ ನಮ್ಮಯ ಸತ್ಪರಾಕ್ರಮಮನೆಂತಱಿಗುಂ ಜಗಮಂತಱಿಂ ಕ್ರಮದಿನೊರ್ವರೊಳೊರ್ವರೆ ಕಾದುವಂ (ನೇಮಿಪು. ೦೨-೨); ವಿರಹಾನಲನಾಳಿಯರೊಂದಹರ್ನಿಶಂ ತಳಿಯೆ ತೆಮಟ್ದು [ಪಾಠಾಂ. ದರ್ಪ] ಪೀರ್ದ ಪಟನೀರ್ಗಳನಟ್ಕಿಸಲಾಱದೆಯ್ದೆ ಕಂಟಳಿಸಿ ಮಗುಳ್ಚಿದಪ್ಪ ದೆನಲುಮ್ಮನೆ ಕಾಮಿನಿಯೇಂ ಬಿಮರ್ತಳೋ (ಲೀಲಾವ. ೦೨-೩೮) : ಮೂಲೋಕಮುಮಂ ತನ್ನೊಂದು ಜೋಗದ ಜಾಣ್ಮೆಯ ಪ್ಪಿಮೆಯ ಬಲ್ಮೆಯಿನೊರ್ವೋದಲೊಳೆ ತೆಮಟ್ದಿ ಬಿಚ್ಚಟಿಸಿ ನೋಡಲ್ (ರಾಮಾಶ್ವ. ೩೯-೦೩). **೨.** ಬಳಿದುಕೊಳ್ಳು ; ಪೂಸು ; ಹಚ್ಚಿಕೊಳ್ಳು : ಕುಮುದದ ಕೇಸರರಜಮಂ ತೆಮಳ್ದಿ ತಟ್ಟೈಸಿ (ಲೀಲಾವ. ೫-೦೫). **ತೆಮಳ್ದು :** ೧. "ತೆಮಳ್ದು – ಚಯನೇ (ಕೂಡಿ ಹಾಕು) (ಶಮಭಾ)". ೩. ಒಟ್ಟಾಗು ; ಒಂದುಗೂಡು : ತಾಳ್ದನಸುರಾರಿ ಭೀತಿಯನೆಳ್ದೋಡಿದನಿಂದ್ರನವಿಳದೇವ ಪ್ರತತಿ ತೆಮಳ್ದುದು (ವೀರವಿ. ೦೦-೮).

**ತೆಮಟ್ದುಕೊಳ್** = ೧. ಒಟ್ಟುಮಾಡಂ ; ಒಂದುಗೂಡಿಸಂ : ಜಾತರೂಪಧರನಾಗಿ ತನ್ನ ಪೞದು ಬಿಸುಟ ಸಹಸ್ರಕುಂತಳಂಗಳಂ ತನ್ನ ತಳದೊಳ್ ತೆಮಟ್ದುಕೊಂಡು ತುಂಬಿಯ ಬಂಬಲ್ಗಳಂ ಕೆಂದಾವರೆಯರಲ್ಗಳೊಳ್ ಪುದಿದುಯ್ವಂತುಯ್ದು (ಆದಿಪು. ೨-೩೯ ವ) ; ತಾನುಗುಱುತ್ತು ಮಿರ್ಪ ಪೊಸಗಂಪುಮನಿತ್ತ ತೆಮಟ್ದುಕೊಂಡು ಮಂದಾನಿಳನುಯ್ಯುತಿರ್ಪ

ತನಿಗಂಪುವುನಿತ್ತು . . . ಗಡಂ ಪ್ರಫುಲ್ಲಮಲ್ಲೀನವಪುಷ್ಪಮೋಗರದ ಕಂಪು ಗಳಾಗರವಾಯ್ತು ಸುಗ್ಗಿಯೊಳ್ (ಚಂದ್ರಪ್ರ. ೬-೪೯). ೨. ಬಳಿದಂ ಕೊಳ್ಳು; ಪೂಸಂ; ಲೇಪಿಸಿಕೊಳ್ಳು : ಕಿದಚಾತ್ಕಂ ವಣಲಂ ತೆಮಟ್ಟಿ ಕೊಳುತಂ ಭೂರೇಣುವಂ . . . ಪೊಕ್ಕುದು ಬೀಡಂ ಲಯಕಾಲಕಾಲ ವಿಚಲದ್ವೀಮಾರುತಂ ಮಾರುತಂ (ಕಾವ್ಯಾವ. ೪೦೯). [ <ತೆಮಟ್ ]

ತೆಮ್ಮ 'ತೊಂಬೆ₁' ನೋ.

ತೆಮ್ಮಲ್, ತೆಮ್ಮಲಂ (ನಾ). ಗುಂಪು; ಸಮೂಹ : "ಬಂಬಲ್, ತುಱುಗಲ್ . . . ತೆಮ್ಮಲ್, ಗುಪ್ಪಿ, ಗೊಂದಣ (ಉಂದಲ್) ಈ ೪೦ ಸಮೂಹಂ" (ಕಶಸಾ. ೫೯-೨೨೨); "ತಂಡಂ ತೆರಳ್ಕೆ . . . ತೆಮ್ಮಲ್ . . . ಪಂಡಿತರಿಂ ಗಡಣ ವಂಗಡಂ ಕಿಕ್ಕಿಂದಂ" (ಕವಿಕಂ. ೦೦೬). ತೆಮ್ಮಲು : ತೆಮ್ಮಲಿನ ತಿಂಡಿಗಳ್ ಹಸುರಲೆಯು ತಟ್ಟೆ (ಕಾಲೂರ. ೬೩-೦೦೯). "ಸಂಗ್ರಹ" (ಕಾಲಊರ. ಕೋಶ). [ ತೆಮ್ಮ (<ತೊಂಬೆ₁) + -ಅಲ್₂ ]

ತೆಮ್ಮಲು 'ತೆಮ್ಮಲ್' ನೋ.

ತೆಮ್ಮೊಡಲು 'ತೆಂ' ಪರಾ.

ತೆಮ್ಮೊಡು 'ತೆಂ' ಪರಾ.

ತೆಮ್ಮೆ 'ತೊಂಬೆ₁' ನೋ.

ತೆಮ್ವೊಲ (ನಾ). ದಕ್ಷಿಣ ದಿಕ್ಕಿನಲ್ಲಿರುವ ಹೊಲ : ಬಸದಿಗೆ ಪಡುವಣ ಕೆಙ್ಗತೋಣ್ಣಮುಂ ತೆಮ್ವೊಲದೊಳ್ನಾಲ್ಗೊಳಿವೆಡೆ ಪಳ್ಳ ಕಳನಿ (ಎಕ. X, ಕೋಲಾರ. ೯೦-೯೩ : ೯೦೩). 'ತೆಂಬಾಲ' ಪರಾ. [ ತೆಂ + ಪೊಲ ]

ತೆಯ್ 'ತೇ₁' ನೋ.

ತೆಯಲಯ್ಯಜೂಬು (ನಾ). ಒಬ್ಬಾತನ ಹೆಸರು : ತೆಯಲಯ್ಯಜೂಬು ಕಾಲಂ ಕಟ್ಟಿ . . . ಎಱೆಯ[ರ]ಸಂಗೆ ಬಿಟ್ಟಗ್ರಹಾರ (ಎಕ. I, ೯೦-೦ ; 10ನೆಯ ಶತ). . [ ? ]

ತೆಯಲ್ಲಿ (ನಾ). ಒಂದು ಬಗೆಯ ಆಯುಧ (?) : ಖಡಲ್ಲಿ ತೆಯಲ್ಲಿ ಬಿಲ್ಲು ನಾರಾಚ ಗದೆ . . . ಚಲುತಲಿ ಮೊದಲಾದ ಬತ್ತೀಶಾಯುಧಾ ಶಕ್ತಿಸಮರ್ಥಕರಾದಾ (ಎಕ. XVI, ಗುಬ್ಬಿ. ೭೯-೨೦ ; 1776). [ ? ]

ತೆರ₁ 'ತೆಱ₁' ನೋ.

ತೆರ₂ 'ತೆಱೆ₃' ನೋ.

ತೆರಂ 'ತೆಱಂ' ನೋ.

ತೆರಂಗುಣಿ (ಕ್ರಿ). ಚೆನ್ನಾಗಿ ಕುಣಿ ; ಅತಿಶಯವಾಗಿ ನರ್ತಿಸಂ : ಎನಗಿದ ಎಂತೆ ಮೆಯ್ಯನ್ನಡುಕವೋಪೂ ನವಿಗುಂಡಿಗಟ್ಟುತಂ ಚಿಳಿಲ್ಲನೆ ಬೆಮರಶ್ರು ಮಾಲೆ ಬಗೆದೇಂಕು ತೆರಂಗುಣಿವಾಸೆ ಪೊಂಕಮೇಕೆನಿತೊ (ಸಂಕಪ. ೨೦-೩೩). [ ತೆರಂ (<ತೆಱಂ) + ಕುಣಿ₁ ]

ತೆರಂಟು, ತೆರಟ್ಟು₁ (ಕ್ರಿ). ವಧೂವರರಿಗೆ ಉಡುಗೊರೆಯನ್ನು ಕೊಡು; ಮುಯ್ಯಿಕೊಡು: "ತೆರಂಟುನಿವಸನೋದ್ವಹನೇ (ಮುಯ್ಯ ಸೀರೆ ಕೊಡು) (ಕಮುಧಾ); ನಿತ್ಯ ಬಿಂದುಗೆ-ಬೆಡಂಗು ... ತೆರಂಟು, ಸೀಂಟು (ಕಮುದ. ೩೬ ಪ್ರಯೋ). ತೆರಟ್ಟು₁: "ತೆರಟು-ನಿವಸನೋದ್ವಹನೇ" (ಕಮುಧಾ. ಪ). 'ತೆಲ್ಲಂಟ್' ಪರಾ. [ <ತೆಱು₁ ]

ತೆರಂಬಿಡು (ಕ್ರಿ) ತೆರವಾಗಿ ಬಿಡು ; ಖಾಲಿ ಮಾಡು : ಅವು ಮುನ್ನ ತಮಗಿರ್ದ ಗೌರವಕ್ಕೆಳ್ಳು ನೀರ್ ಕೊಟ್ಟು ದಿಕ್ಕುಗೆಟ್ಟೋಡುವುವು, ಬಾಳ್ ಭೂಮಿ ಸರ್ವಮುಂ ವೈರಿಗೆ ತೆರಂಬಿಟ್ಟು (ಶ್ರೀರಾಮಾ. ೬೩೩-೧೧೪). [ ತೆರ₂ (<ತೆಱೆ₃) + ಬಿಡು₁ ]

ತೆರಕೊಡು 'ತೆಱಕೊಡು' ನೋ.

ತೆರಗಾಲ (ನಾ). ಒಂದು ಪ್ರದೇಶದ ಹೆಸರು (?): ಪೆರ್ಮಾಡಿಗಾವುಣ್ಡನ ಪೆಣ್ತಿ ಚಾವುಣ್ಡಬ್ಬೆ ಇ ದೇಗುಲವ ಮಾಡಿಸಿ ತೆರಗಾಲಂ ದೇವಟ್ಟ ಬಿಟ್ಟಳ್ (ಮೈಅರಿ. ೦೯೩೦, ೦೪-೯ ; ಸು. 870). [ ? ]

ತೆರಟು₁ 'ತೆರಂಟು' ನೋ.

ತೆರಟು₂ (ಕ್ರಿ). ೧. ದುಂಡಗೆ ಮಾಡು ; ಸಂತ್ರು ; ಸಂರಂಳಿ ಮಾಡು. ೨. ಸೇರಿಸು : ಕೂಡಿಸು ; ಹೊಂದಿಸು : (ಕ). [ ದೇ.೩ ತಮಿ. ಮಲ. ತಿರಟ್ಟು ]

ತೆರಟು₃ (ನಾ). ಹಿಂದಕ್ಕೆ ಬೀಳುವಿಕೆ ; ಹಿಂದಿರಂಗುವಿಕೆ ; ಕೆಳಗೆ ಬೀಳುವಿಕೆ (?) : ಮುಗ್ಗಿಗಳ ಮಿಗೆ ಕೂಡಿ ಕಳೆದರೆ ಸಗ್ಗವಹುದೇ ಮುಂದೆ ಭಾಗಿಸಿಯುಂಗ್ಗಡದ ಘನವರ್ಗಮೂಲವನಱಿದೊಡೀ ಭವದ ಹಗ್ಗ ಹರಿದೇಱುವನೆ ಮುಕ್ತಿಯ ದುಗ್ಗವನು ಕೇಳಯ್ಯ ತೆರಟಿನ ಬುಗ್ಗಿಯಲ್ಲದೆ ಬರೆದೊಡಂತ್ಯದೊಳಿಲ್ಲ ಸುಖವೆಂದ (ಪ್ರಹ್ಲಾಚ. ೬-೦೯): "ಕಷ್ಟ" (ಪ್ರಹ್ಲಾಚ. ಕೋಶ). [ ? ]

ತೆರಟುವಾಲ್ (ನಾ). ಕುದಿಸಿ ಗಟ್ಟಿಗೊಳಿಸಿದ ಹಾಲು : ಬಟ್ಟವಾಲ್ ತೆರಟು[ಪಾಠಾಂ. ಡು]ವಾಲ್ ಚಿಲುವಾಲುವೆಸರನದಕಿಟ್ಟು ಹಸಮಾಡು ವುದು (ಸೂಶಾಶಾ. ೨-೩). [ ←ತಮಿ. ತಿರಟ್ಟುಪ್ಪಾಲ್ ]

ತೆರಣಿ₁ 'ತೆರಳಿ' ನೋ.

ತೆರಣಿ₂ 'ತೆರಳಿ₂' ನೋ.

ತೆರಣಿ₃ (ನಾ). ಒಂದು ಬಗೆಯ ಸಸ್ಯ : ಹೆತ್ತರಾಣಿಕೆ, ಸಲ್ಲ, ಹೆದ್ದರಣೆ, ಬಿಳಚಿ, ತೆರಣಿ, ಕಕೋರ್ಲ (ಮೈಶಿಗಿ. ೬೩-೦೨೬೯). [ ? ]

ತೆರಣಿಗಟ್ಟು (ಕ್ರಿ). ಒಟ್ಟುಗೂಡಿಸಿ ಕಟ್ಟು ; ಉಂಡೆಗಟ್ಟು : ಕಂಚಿನ ಕರಡಗೆಯೊಳಗೆ ಕಂಬಿಯ ತೆರಣಿಗಟ್ಟಿ ನಿಂತಾಳು (ಅವಕಂ. ೨೯೭-೦೩೦೦). [ ತೆರಣಿ₂ (< ತೆರಳಿ₂) + ಕಟ್ಟು₁ ]

ತೆರಣೆ 'ತೆರಳಿ' ನೋ.

ತೆರತವಳಿ (ನಾ). ಒಂದು ಬಗೆಯ ಸೀರೆ : ಕುಂಬಳಗಂಟಿ ತೆರತ [ಪಾಠಾಂ. ಥ] ವಳಿ ತೆಲುಗಾವಿಯುಂ ಬಿಳಿದಿನ ಸೀರೆ ಬರಹ ನಿಂಬೆಯ ಕಾಯ ಪೊಪ್ಪಳಿ ಕರ್ಕವಾಡಗಳೆಂಬ ಸೀರೆಗಳೊಪ್ಪೆ ಮೆಱೆಯೆ (ಅಮುಸಾಂ. ೪-೦೯). [ ? + ಪಳಿ₆ (< ಪಟ್ಟೆ) ]

ತೆರಪಿಚು (ಕ್ರಿ). ತೆರವುಮಾಡು (?) : [ ಕೊ ] ಡಕುಣಿಯ ಸ್ಥಳದ ಸೇನ ಬೋವನೂ ಕರಸಿ ಆತನ ಮಹಿಪ್ರಮಾಣಿನಲೂ ನೇಮಿಚಂದ್ರದೇವರೂ ಮಾಡಿಕೊಂಡ ಬಾಳ ತೆರಪಿಚಿ ಪಾಲಿಸಿದ ವಿವರ (ಕಇ. III, ೦೦-೦೪; 1542). [ ತೆರಪು (<ತೆಱಪು) + -ಚು₁ ]

ತೆರಪು 'ತೆಱಪು' ನೋ.

ತೆರಪುಕೊಡು 'ತೆಱಪುಗೊಡು' ನೋ.

ತೆರಪುಗಾಣಿಸು 'ತೆಱಪುಗಾಣಿಸು' ನೋ.

ತೆರಪುಗೆಯ್ (ಕ್ರಿ). ಹೋಗಲಾಡಿಸು ; ಕಳೆ ; ನಿವಾರಿಸು : ಭಾಸ್ಕರ ಬಾಣಮುಂ ತೆಗೆದು ಪೂಡೆಚ್ಚು ಖಳನ ಕೃತತಿಮಿರಮಂ ತೆರಪುಗೆಯ್ಯೆ ಹರಿದುದು ಕತ್ತಲೆಯು (ನವಮೋ. ೩೨-೨೦). [ ತೆರಪು (< ತೆಱಪು ) + ಕೆಯ್₁ ]

ತೆರಪುಗೊಡು 'ತೆಱಪುಗೊಡು' ನೋ.

ತೆರಪುಮೊಳೆ (ನಾ). ಅಕ್ಷರದ ಮೊಳೆಗಳನ್ನು ಜೋಡಿಸುವಾಗ ಜಿಡುವಿ ನಲ್ಲಿ ಸೇರಿಸುವ ತಗ್ಗು ಮೊಳೆ : ಸೂಚೀ ಚಿಹ್ನೆಗಳು . . . ತೆರಪು ಮೊಳೆ ಗಳು . . . ಮತ್ತು ಸಂಯುಕ್ತಾಕ್ಷರಗಳೂ ಇರುತ್ತವೆ (ಮುದ್ರಕ. ೦೯). [ ತೆರಪು ( <ತೆಱಪು) + ಮೊಳೆ₂ ]

ತೆರವು₁ 'ತೆಱವು₁' ನೋ.

ತೆರವು₂ 'ತೆಱವು₂' ನೋ.

ತೆರವೆ 'ತೆಱವೆ' ನೋ.

ತೆರಸ 'ತೇರಸ' ನೋ.

ತೆರಸಿ 'ತೇರಸಿ' ನೋ.

**ತೆರಸು** (ನಾ). ತೆರೆಯುವಿಕೆ ; ವಿಕಾಸ : ಕಣ್ದೆರೆಯು, ನಿನ್ನ ಕಣ್ಣಿಂದುವಿನ ದೆರಸಂ ಮರಸದೆಸ್ನಲಿ ಎನ್ನು ! (ಗಿರಿವಿಂ. ೫೦-೦೩).

[ ತೆರ್$_1$ (< ತೆಱ್$^3_1$) + – ಸು$_2$ ]

**ತೆರಹು$_1$** (ಕ್ರಿ). ಬಿಚ್ಚು ; ತೆರೆ : ಸರಸಿಗೆ ತೆರಹಿ ತೋರುವದು ಜಗವು ಹೃದಯವ (ಉಯ್ಯಾ.ಕಿ. ೨೨-೬). [ ತೆರ್$_1$ ( < ತೆಱ್$^3_1$ ) + – ಹು$_1$ ]

**ತೆರಹು$_2$** 'ತೆಱಪು' ನೋ.

**ತೆರಹು$_3$** (ನಾ). ಕಾಣಿಕೆ ; ಕಪ್ಪ ; ತೆರಿಗೆ : ತೆರಹುಗಳ ತತ್ತು ವರಹದ ಭಂಡಾರ ...ಂತು (ಎಕ. IX(3), ಕಾನಕಾ. ೩೩-೬ : 17ನೆಯ ಶತ).

[ ತೆರ್$_2$ (< ತೆಱ್$^3_2$) + – ಹು$_2$ ]

**ತೆರಹುಗುಡು** 'ತೆಱಪುಗೊಡು' ನೋ.

**ತೆರಳ್, ತೆರಳು** (ಕ್ರಿ). ೧. ಹೋಗು ; ಚಲಿಸು ; ಸರಿ ; ನಡೆ : ದಿಗ್ಗಜಂ ದೆಸೆಯಿನತ್ತ ತೆರಳ್ದುವು (ಪಂಪಭಾ. ೧೧-೭೧) : ಎಸೆವ ನಭಸ್ಸರೋವರದೊಳುಣ್ಮೆ ಕೆಲಕ್ಕೆ ತೆರಳ್ದ ನೀಲಿಕಾಪ್ರಸರವೊ . . . ಎಂದೆನಿಸಿತಂದು ಪುರಂದರಚಾಪವಿಭ್ರಮಂ (ಚಂದ್ರಪ್ರ. ೪-೩೦) : ಮಹಾಸಂಗರದೊಳೊಬ್ಬರನೊಬ್ಬರೊಪ್ಪಿಸಿ ತೆರಳಲಾಗದು (ಕುವ್ಯಾದ್ಯೂ. ೨-೭) ; ಹಸಿವು ನೀರಡಿಕೆ ಸಂತಾಪವ ನೆಱೆ ವಾರಿಸಿಕೊಂಡು ಬಲಗೂಡಿ ತೆರಳ್ದು (ಮೋಹತ. ೧೯-೩೦) : ತೆರಳು, ತೆರಳುವೊಡನಿಯು ; ಪಥದಲಿ ನಿನಗೆ ಮಂಗಳವೊದಗಲಿ (ಭಾರವಿಪೂ. ೫೯೧). ೨. ಹರಿ ; ಪ್ರವಹಿಸು : ಕಡಲ್ ಕಡಲಂ ಮುಟ್ಟೆ ತೆರಳ್ವ ನೆತ್ತರ ಪೊನಲ್ ಕಣ್ಗೊಂಡುದುಗ್ರಾಜಿಯೊಳ್ (ಪಂಪಭಾ. ೧೧-೯೦) ; ಕುರವದಿಂ ಕೂಡೆ ನೆತ್ತರ್ತೆರಳ್ದುನ್ಮಾವಿನಂ ಮೆಯ್ಯೆಲ್ಲಮಂ ಜರ್ಜರಿಸಿ(ಸುಕುಮಾ.೭-೩೩) ; ನೆಲನನಿತುಂ ತೆರಳ್ದಡಸಿ ಬಿಟ್ಟೋಣಿಯುಂ ತವದೊಂದ ಮಾಟ್ಕೆಯುಂ ನೆರೆ ನೆಲೆವೆರ್ಚೆ ಮುಂಪರಿವ ಪೆರ್ದೊಱೆಗಳ್ (ಕಾವ್ಯಸಾ. ೪೬೩). ೩. ವ್ಯಾಪಿಸು ; ಆವರಿಸು : ದಿನಕರಕರನಿಕರಂಗಳ್ ಘನವಿವರಪ್ರಸರಮಾಗಿಯುಂ ತಮ್ಮಂ ಕಂಡನಿತಱೊಳೆ ತೆರಳ್ದನ್ನಾ ಮನೋಗತಧ್ವಾಂತಬಂಧಮಳಱಿತ್ತಿಲ್ಲಂ (ಕವಿರಾ ೨-೬೭) : ನಟ್ಟ ಕೋಲ ಬಟ್ಟವಿಡಿದೆತ್ತಂ ಸುರಿದುವವಂದಿರ ಮುಳಿಸಿನ ತೆರಳ್ದ ದಳ್ಳುರಿಯನಿಱಿಸಿ ನವರುಧಿರಂಗಳ್ (ಪಂಪಭಾ. ೦೩-೦೪೮). ೪. ಎಬ್ಬಿಸು ; ಹೊಮ್ಮಿಸು : ತೆರಳ್ದು ಸುರಭೂರುಹಪ್ರಸವಧೂಳಿಯುಂ ...ನಯದಿನಾಡಿಸತ್ತಾಗಳಷ್ಪದಃಪ್ರಕರದೊಳ್ಗುರುಳ್ಗಳನಡೋದು ಮಂದಾನಿಳಂ (ಆದಿಪು. ೭-೬೬). ೫. ಮೇಲೇಳು ; ಚಿಮ್ಮು ; ನೆಗೆ : ಕಂಕರಶೀಕರಮದಜಳತುರಂಗಲಾಲಾಂಬುಸೇಕದಿಂದಱುದುಱುದಿರ್ದ ರಜಂ ನರೇಂದ್ರಚಾಮರಮರುದಭಿಹತಿಯಿಂ ತೆರಳ್ದು ತೂಳ್ದತ್ತಾಗಳ್ (ಆದಿಪು. ೧೧-೩೮). ೬. ಒಟ್ಟುಗೂಡು ; ಒಂದಾಗು : ಅಡಿಯೊಳ್ ಪಾಸಿದ ಚರ್ಮರತ್ನಪಟಮುಂ ತಚ್ಛತ್ರರತ್ನಂ ಬೆಡಂಗಿಡಿದೋರಂತಿರೆ ಮುಟ್ಟೆ ಪೊರ್ದೆ ತೆಱದಿಂದಿಂಬಾಗೆ ತನ್ಮಧ್ಯದೊಳ್ಸೊಡರಿರ್ಪಂತಿರೆ ಚಕ್ರರತ್ನಮದಱೊಳ್ನಿರ್ಬಾಧಮಿರ್ದತ್ತು ಪೆರ್ವಡೆ ವಾರಾಶಿಯೊಳಿರ್ದ ಭೈತ್ರದೊಳಗಂದೆತ್ತಂ ತೆರಳ್ದಿರ್ದಪೊಲ್ (ಆದಿಪು. ೦೩-೭೦) ; ತೆಳ್ದರ್ ಕುಳಾಯದಿಂ ಬಿದಿರ್ದೆಱಂಕೆಯ ನೀರ್ವನಿಯಂ ತೆರಳ್ದ ತುಪ್ಪುಱನೊನೆದಂಟಿ ಚಂಚುಪುಟದಿಂ . . . ಪಕ್ಕಿಗಳ್ ಮರಂಗಳ ತುದಿಗೋಡ ಮೇಲೆ ದನಿಗೆಯ್ಯುತುಮಿರ್ದುವು (ಜಗವಿ ೦೪-೧೧). ೭. ಅಲುಗು ; ಅಲ್ಲಾಡು : ಮಲಯಾನಿಲನೊಡೆ ತೆರಳ್ವ ಚೂತಪಲ್ಲವದ ತೆರಳ್ಕೆ (ಪಂಪಭಾ. ೨-೧೪). ೮. ಹಿಮ್ಮೆಟ್ಟು ; ಹಿಂಜರಿ ; ಹೆದರು : ಬಿಸಿಲಂ ಬೆಳ್ದಿಂಗಳುಮಂ ಪಸರಿಸೆ ಕಟ್ಟಿಲೆ ತೆರಳ್ದು ತೂಳ್ದೊಡೆ (ಆದಿಪು. ೦೩-೩೦) : ಸಂತಾಪಭೀತಿಯಿಂ ತನುಕಾಂತಿ ತೆರಳ್ದೋಡಿದಪುದೆನಲ್ (ಕಾದಂಬ. ೨೨೩) ; ನಿದಾಘದ ದೀಪ್ತಿವರ್ತಿಯೊಳ್ ಕಾಸೆ ತೆರಳ್ದ ಪಂಜರಿಯ ಪೋಲ್ ಕಿಸುಸಂಜೆ ತೆರಳ್ಚಿನಂ ಪಟಂಗಾಸಿನ ಪೊನ್ನಗಂಟೆಯುಮೊಲೊಪ್ಪಿದುದ್ಗತಭಾನುಮಂಡಲಂ (ಅಜಿಪು. ೬-೭೦) ; ಕರಿ ಕೆಡೆಯೆ ಕಾಲಿನಲಿ ಜೋದರು ತೆರಳದೆಚ್ಚಾಡಿದರು (ಕುವ್ಯಾ.ಕ. ೦೩-೨೮). ೯. ಮುರಂಟು ; ಸುಕ್ಕುಗಟ್ಟು : ಮುಸು ಮುತ್ತಂತೆ ತೆರಳ್ದ ತನ್ನ ಮೊಗಮುಂ ಕಂಡಳ್ಕಸೋ ಕೂಡೆ ಜೋಲ್ದು ಸಡಿಲ್ದಿರ್ದೊಡಲಳ್ಕೆಜೊಳ್ಳೆತನಮುಂ ಮೇಣ್ಕಾಣನೋ (ಆದಿಪು. ೨-೪೩) ; ಭೀಮಸೇನನ ಗದಾಘಾತದೊಳೊರು ಭಂಗಮುಂ ಪದಘಾತದೊಳ್ ಮಕುಟಭಂಗಮುಮಾಗಿ ಸುರುಳ್ದು ತೆರಳ್ದ ಸುಯೋಧನನಿರೆ (ಗದಾಯು. ೯-೦೬ ವ). **ತೆರಳು** : ೧. ಹೈಮವತಿ ಕೈಲಾಸಗಿರಿಗೆ ತೆರಳಿದಳು (ಸಿದ್ಧರಾ. ೦-೬೦) ; ಸರ್ವಾಭಿಸಾರ, ಸರ್ವೌಘ, ಸರ್ವಸನ್ನಹನ–ಎಲ್ಲಾ ಸೇನೆಯೂ ತೆರಳುವುದು (ನಾಚಿಂ. ೩) ; ತೆರಳಿ ಮುಂದಕೆ ಹೋಗಬಾರದು ಮರಳಿ ಹಿಂದಕೆ ಬರಲು ಬಾರದು (ಬಸಪು. ೪೦-೮) ; ಧನಂಜಯು ತೆರಳಿದನು ಪಾಳೆಯದ ಪಥವಿಡಿದು (ಕುವ್ಯಾ.ಕ. ೦೪-೩೨) ; ಸರಸಿಜಗಂಧಿಯ ದಿವ್ಯಾಂಗ ಲಾವಣ್ಯಶರಧಿಯೊಳ್ಸರವಿಗರಕ್ಷ ವರ ವಿಸಾನಗಳು ನೆಱೆ ಪೊರಳುತ ತೆರಳುತ ಮರಳಿ ಮುಳುಗುತೊಪ್ಪಿದುವು (ಕಂಸವಿ. ೯-೯೩). ೨. ಕಣ್ಗಳಿಂ ಶೋಕಜಲಬಿಂದು ತೆರಳೆ . . . ಗದುಗದಿಸಿ ಬಿಕ್ಕುತ ಬಿದ್ದು (ಬಸರ. ೫-೦೯). ೮. ಅರಸನಂ ಕೆಡಿಸಿ ಹೊಸಿ ತೋಱೊಂದಡೆನಗವಂ ತೆರಳುವವನೇ (ಹರಕಾ. ೯-೦೭) ; ರವಿಯ ಕೈ ಕತ್ತಲೆಯ ಹೊರಳಿಯ ತಿವಿಗುಳಿಗೆ ತೆರಳುವುದೆ (ಕುವ್ಯಾ.ಕ. ೧೦-೪೬). ೯. ಒಳಗೆ ಮಂಚದ ಮೇಲೆ ನಡುಗುವ ತಲೆಯ ತೆರಳಿದ ಮೈಯ . . . ಚಲಿತವಚನದ ವೃದ್ಧರನು ತೋಱಿದನು (ಕುವ್ಯಾ.ಅ. ೦೩-೧೧). ೧೦. ಅಳಿಸಿ ಹೋಗು ; ಇಲ್ಲವಾಗು : ಪೂರೆದ ದುಕೂಲವೊಂದಿನಿಸು ಮಾಸದೆ ಭಾಳದೊಳಿಟ್ಟ ಚಂದನಂ ತೆರಳದೆ (ದಶಕು. ೧೧-೨೦). ೧೧. ತೆಗೆ; ಕಳೆ; ಬಿಡಿಸು : ಹಿರಿದು ಪೊರೆಗಳನೊಂದನೊಂದಂ ತೆರಳಿ ಸುಲಿಯಲು ಬಾಳೆಯದು ತಾನೊರೆಯಲಿಲ್ಲದೆ ಮುನ್ನಿನಾಕೃತಿಯಿಲ್ಲದಿಪ್ಪವೊಲು (ಬಸಪು. ೩೫-೩೮).

[ ದೇ. ■ ತಮಿ. ತಿರಳ್ ; ತೆಲು. ತೆರಲು. ತೆರ್ಲು ]

**ತೆರಳಿ, ತಿರುಳಿ$_2$, ತೆರಣ್$_1$, ತೆರಣೆ, ತೆರಳಿ$_1$** (ನಾ). ೧. ಮಣ್ಣು, ಮಲ ಮೊದಲಾದುವುಗಳನ್ನು ಉಂಡೆಗಟ್ಟಿ ಸಾಗಿಸುವ ಒಂದು ಬಗೆಯ ಹುಳು : ಸ್ಪರ್ಶ ರಸ ಗಂಧ ರೂಪುಗಳೆಂಬೀ ನಾಲ್ಕುಮಸಜೀವ . . . ಮಿಡುತ ತೆರಳಿ ಕೊಟ್ಟಾರಿಗಂ ಯೆಡೆವುಟುಯೆಂದಿತ್ಯೇವಮಾದಿಗಳೊಳಂ (ಹಸಾರ. ೪೯). ೨. ತನ್ನ ಶ್ಲೇಷ್ಮದಿಂದ ತನ್ನ ಸುತ್ತಲೂ ಎಳೆಯನ್ನು ನೆಯ್ದು ಸುತ್ತಿಕೊಳ್ಳುವ ಒಂದು ಬಗೆಯ ಹುಳು ; ರೇಷ್ಮೆಹುಳು : ನಿಷ್ಕಾರಣಂ ತೆರಳಿಯ ಪುಟುವಿನಂತೆ ನಿನ್ನಂ ನೀನೆ ದುಷ್ಪರಿಣಾಮದಿಂ ಸುತ್ತಿಕೊಂಡು (ಧರ್ಮಾಮೃ. ೦೪-೮೪) ; ತೆರಳಿ[ಪಾಠಾಂ. ತೆರಣೆ, ತೋರಣೆ]ಯ ಪುಟುವಂ ತನಗೆ ಮನೆ ಮಾಟ್ಪೆನೆಂದು ತನ್ನೊಳ್ ಪುಟ್ಟಿದ ನೂಲಿಂ ತನ್ನನೆ ಸುತ್ತಿಕೊಂಡು ಪೊಱಮಡಲಱಿಯದೆ ಸಾವಂತೆ (ಜೀವಸಂ. ೧೯೦-೧೧ ವ) ; ಹಲವು ಮಾಯಾಮೋಹಪಾಶದ ಬಲೆಯೊಳಗೆ ನೆಱೆ ಸಿಲುಕಿ ತೆರಳಿಯ ಹುಳುವಿನಂತೊಳಗಿರ್ದು ತಾಪತ್ರಯದ ದುಃಖದಲಿ (ನಿಘಾಗ. ೭-೬-೧೩). **ತಿರುಳಿ$_2$** : ೨. ಹಲವು ಮಾಯಾಮೋಹಪಾಶದ ಬಲೆಯೊಳಗೆ ತನು ಸಿಲುಕಿ ತಿರುಳಿಯ ಹುಳುವಿನಂತಳವಳಿದು ತಾಪತ್ರಯದ ಬೇಗೆಯಲಿ (ನಿಘಾಗ. ೩-೧೪-೪). **ತೆರಣ್$_1$** : ೨. ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ ತನ್ನ ನೂಲು ತನ್ನನೇ ಸುತ್ತಿ ಸುತ್ತಿ ಸಾವ ತೆಱನಂತೆ (ಮಹಾದೇ. ಬ. ೧೫-೧೭). **ತೆರಣೆ** : ೨. ಮೇಲಿನ 'ತೆರಳಿ' ಉಲ್ಲೇಖದ 'ಜೀವಸಂ' ಪ್ರಯೋಗದ ಪಾಠಾಂತರವನ್ನು ನೋಡಿ. **ತೆರಳಿ$_1$** : ೨. ಕೌಶೇಯ–ತೆರಳಿಯ ಹುಟು ಮುಕುಲಾಕಾರದಿಂದ ಮಾಡಿದುದ ಬಿಡಿಸಿ ನೆಯ್ದ ಸೀರೆ (ನಾಚಿರಾ. ೬) ; ಪರಿಪರಿಯ ಸಂಸಾರವಿಷಯದಿ ಹಿರಿದು ಬಿಗಿವಡೆದಿರ್ಪ ಮನುಜಗೆ ದೊರಕುವುದೆ ಪರತತ್ವ ತೆರಳಿಯ ಹುಳುವಿನಂತಿಹಗೆ (ಅಮೃತ. ೧-೩೭). [ <ತೆರಳ್ ]

**ತೆರಳಿಕೆ** 'ತೆರಳ್ಕೆ' ನೋ.

**ತೆರಳಿಚು** 'ತೆರಳ್ಚು' ನೋ.

**ತೆರಳಿಸು** (ಕ್ರಿ). ೧. ಹೋಗುವಂತೆ ಮಾಡು; ಹೊರಡಿಸು; ಕಳುಹಿಸು: ಬೆಸವೇಳ್ದು ತೆರಳಿಸಿದನನುಜನನು (ತೊರರಾ. ೪-೫-೨೬) ; ಆತನನಲ್ಲಿಂದ ತೆರಳಿಸಿ ಬಿಟ್ಟಳು (ಕಂನವಿ. ೬-೦೬೪). ೨. ಹೊಗಿಸು; ಪ್ರವೇಶ ಮಾಡಿಸು: ಇಂತು ಸಿಂಗರವಾದ ಸ್ವಯಂವರಮಂಟಪಕಂ ತೆರಳಿಸಲು ಸುಮತಿಯು ಮಂತಣದಿಂದ ಸಿಂಗರಿಸಿದರಾ ದೇವಕಾಂತೆಯ ಶೃಂಗಾರ ದಂತೆ (ಶಾಂತೀಶ. ೩-೬೫). ೩. ಕೆದರು; ಚೆಲ್ಲಾಪಿಲ್ಲಿ ಮಾಡು: ತೆರಳಿಸಿತು ಬಿರುಗಾಳಿ ತಾರೆಯ ನೆರವಿಯನು (ಸಾಳ್ವಭಾ. ೧೬-೩೪).

[ ತೆರಳ್ + – ಇಸು₃ ]

**ತೆರಳು** 'ತೆರಳ್' ನೋ.

**ತೆರಳಿ**₁ 'ತೆರಳಿ' ನೋ.

**ತೆರಳೆ**₂, **ತೆರಣೆ**₂ (ನಾ). ತುತ್ತು; ಮುದ್ದೆ; ಉಂಡೆ: ತರಳೆ ಕೈಯೊಳಗಿದೆ ಬಾಯೆಮ್ಮ ತಂದೆ ಕುಳ್ಳಿರುಯೆಂದು ಕರೆದರಚ್ಯುತನಾ (ಕೃಷ್ಣಗೋ. ೨-೮೨); ಭಕ್ತನು ಒಂದು ಹೊತ್ತು ಅಡಿಗೆ ಮಾಡಿಕೊಟ್ಟ ಊಟದ ತೆರಳೆಯನ್ನು ಮಧ್ಯಾಹ್ನ ದೇವರೆದುರಿಗೆ ಭಿಕ್ಷವಾಗಿ ಸ್ವೀಕರಿಸಿ ಉಂಡು (ಸಿದ್ಧ.ಶ. VI, ೨೬). **ತೆರಣೆ**₂: 'ತೆರಣೆಗಟ್ಟು' ಪರಾ.

[ ದೇ.॥ ತಮಿ. ತಿರಳ್ಳೆ, ತಿರಣ್ಣೆ ; ತೆಲು. ತೆರಲ ]

**ತೆರಳ್ಕೆ, ತೆರಳಿಕೆ** (ನಾ). ೧. ಚಲನೆ; ಅಲುಗಾಟ; ಸ್ಪಂದನ: ಮಲಯಾನಿಲನಾಡೆ ತೆರಳ್ವ ಚೂತಪಲ್ಲವದ ತೆರಳ್ಕೆ ತದ್ವನವಿಳಾಸಿನಿಯುಟ್ಟ ದುಕೂಲದೊಂದು ಪಲ್ಲವದ ತೆರಳ್ಕೆಯಂತೆಸೆಯೆ (ಪಂಪಭಾ. ೨-೧೪); ಕಲಶಮನೆತ್ತಿ ನೀರೆಱೆವ ಕಾಂತೆಯ ತೋಳ ತೆರಳ್ಕೆ ಮೇಲುದಂ ತೊಲಗಿಸೆ (ಚಂದ್ರಪ್ರ. ೧-೯೮); ಚರಣನ್ಯಾಸದ ತುಱುಗಲ ತೆರಳ್ಕೆಯಭಿನಯದೊಳಭಿನವಂಬೆತ್ತು ಮನೋಹರಮಾಗೆ (ಮಹಾನೇ. ೯-೦೦); ಉರಿಯುಂ ಮೇಣ್ ಕಣ್ಗಳ ತೆರಳ್ಕೆಯುಂ ಪೋಲ್ವ ರಶ್ಮಿ ತುರಗಂ ಕಿಳಿಱುತ್ತಿರೆ (ಅಶ್ವಶಾ. ೪-೭೨). ೨. ಓಡುವಿಕೆ; ಓಟ: ಪೂಡಿದ ವಾರುವಂಗಳ ತೆರಳ್ಕೆಗೆ ನೇಸಱ ತೇರ ತೇಜಿಗಳಂ ಪಾಡಟಿದಿರ್ಚಿನಂ . . . ಪರಿತಂದುವು ತೋರ್ಕೆಯ ತೇರ್ಗಳೋಳಿಯಿಂ (ಕಬ್ಬಿಗಕಾ. ೨೦೫). ೩. ವ್ಯಾಪಿಸುವಿಕೆ; ಹರಡುವಿಕೆ: ರಾಜ್ಯಸಂಪದದ ಪೂದಳ್ಕೆ ತೇಜದ ತೆರಳ್ಕೆ ವಿರೋಧಿಯ ಬಾಳ್ಕೆ ತನ್ನದೆಂಬುದನೆನೆ ಪೆರ್ಮೆಯುಂ ತಳೆದನೋ ನೃಪರೊಳು ನೃಪಶೈಲಶಾನ್ತರಂ (ಎಕ. VIII, ಸಾಗರ. ೦೫೯-೧೩ : 1159). ೪. ಹೆಚ್ಚಳ; ಆಧಿಕ್ಯ; ಅತಿಶಯ: ಸೋರ್ವ ಕಂಬನಿಯ ತೆರಳ್ಕೆ ಗದ್ಗದಿಕೆಗೊಳ್ವ ಸರಂ (ಆದಿಪು. ೯-೭೬); ಸಿರಿಯ ತೆರಳ್ಕೆ ಜವ್ವನದ ಪೆರ್ಚುಗೆ ರೂಪವಿಳಾಸದೇಳ್ಗೆ . . . ಮೂರ್ತಿವೆತ್ತಿರ್ದು (ವರ್ಧಪು. ೨-೩೪). ೫. ಸಮೂಹ; ಗುಂಪು; ನೆರವಿ: "ತಂಡಂ ತೆರಳ್ಕೆ . . . ಪಂಡಿತರಿಂ ಗಡಣವಂಗಡಂ ಕಿಕ್ಕಿಂದಂ" (ಕವಿಕಂ. ೦೦೬); ಈಳೆಯಿಟ್ಟೆಡೆಯುಂ ತಿಲಕದ ತೆರಳ್ಕೆಯುಂ ಅಸುಗೆಯ ಕಿತ್ತುಱುಂ . . . ಎನಿಸಿದ ದೇವರಮಣೋದ್ಯಾನಮಂ . . . ಪುಗುತರ್ಪಾಗಳ್ (ಶಾಂತೀಶ. ೧೦-೭೮ ವ); ಸುವಿಲಾಸದಿಂದಪ್ಸರಸಂಗಳ ತೆರಳ್ಕೆ ಘನಜವದಿಂದ ಸಪ್ತಋಷಿಗಳ ನೆರವಿ . . . ಓಲಗಕೆ ಬಂದುದು (ಚಲಪು. ೨-೧೬); ಸುಯ್ವಿಟ್ಟ ಪೊರೆಗಳಂ ಬಿಟ್ಟು ಪೈಗರೆದು . . . ಪೆಣ್ ತೆರಳ್ಕೆಯುಂ ತೆರಳೆ (ಕಾಲೂರ. ೧೩೧-೨೭೯). ೬. ಮಡಿಕೆ; ನಿರಿಗೆ. 'ತೆರಳ್ಕೆವೆಱು' ಪರಾ. ೭. ರೀತಿ; ಒಯ್ಯಾರ; ಬೆಡಗು: ಸ್ಮರಶರಮುಂ ತದೀಯಮೃದುಗೇಯಮುಮುರ್ಚದ ಪುಣ್ಣನೊಕ್ಕ ನೆತ್ತರನಱಿಸಲ್ಕೆವೇಡ . . . ಬರ್ಬರೆಯ ಕಿರಾತೆಯೊಟ್ಟಜೆಗೆ ಕಿನ್ನರರೊಟ್ಟಜೆಯುಂ ತೆರಳ್ಕೆಯುಂ (ಶಾಂತಿಪು. ೨-೨೨); ಮಾತಿನ ತೆರಳ್ಕೆಗಳಂ ರಸಗೇಯವಂತಿರೀ ಕೃತಿ ಪೊಸದೇಸಿಯಿಂದಸೆದು ಸೋಲಿಪುದಚ್ಚರಿಯೇ ರಸಜ್ಞರಂ (ಲೀಲಾವ. ೪-೭೩); ಧರೆಗೆಸೆದತ್ತು ತಾರಕನಾಜ್ಞೆ ತಾರಕಾಸುರನ ತೆರಳ್ಕೆ ತಾರಕನ ತೀವ್ರತೆ ತಾರಕನುರ್ಬು (ಗಿರಿಕ. ೬-೧೧); ಮಳಿಯ ತೆರಳ್ಕೆಯುಂ ವಹಣಿ ಯೊಟ್ಟಜೆಯುಂ ಪಸರಂಗಳಿಂಪನುಜ್ಜ್ವಳಿಸುವ ಡಾಳಮುಂ . . . ಅಱಿವನ್ನರಾರ್ (ಅನಂಪು. ೪-೮೮). **ತೆರಳಿಕೆ**: ೫. ನೆರದರಬರಿಯ ರಂಗವಟ್ಟದ ಪರಿಮಳದ ಮುತ್ತಿಗೆಯ ತುಂಬಿಯ ತೆರಳಿಕೆಯ ಕತ್ತಲೆಯ ಕೆದಱುವ ಕಣ್ಣ ಬೆಳಗುಗಳ (ಕುಮಾ.ಅ. ೮-೬); ತೇರುಗಳ ತೇಜಿಗಳ ಬಲುಮದವಾರಣಂಗಳ ತೆರಳಿಕೆಯ ರಣಚೋರಗಂಡಿಯ . . . ವೀರ ವಱೆಗಳ ರಭಸವರಿ ರಂಜಿಸಿದುದಾ ದುರ್ಗ (ತೊರರಾ. ೬-೭-೧೫); ಶಿಖರಿದಶನದ್ಯುತಿಯ ಬೆಳ್ಗೆಯ ಸೂಸಲೆನೆ ನಖರುಚಿಯ ತೆರಳಿಕೆಯ ಹೊರಳಿಯೆನೆ . . . ತಿಳಿನೀರ ತುಂತುರ್ವನಿಗಳೆಸೆದಿರ್ದುವು (ಜೈಮಿಭಾ. ೩೦-೦೧). ೮. ತೆರಳಿಸುವಿಕೆ; ಸಾಗಿಸುವಿಕೆ: ಪುರವರವನಲ್ಲಿಂದ ಮೌಲ್ಯದ ತೆರಳಿಕೆಯ ಮಾಡಿದನು ಮೊದಲು ಹರಿದು ಮುರಿದು ಸಮುದ್ರಸೇನನ ಸರ್ವಗವತೆಯಲಿ ತೆರಳಿಯಲ್ಲಿಂದಿಂದ್ರಸೇನನನೊರೆಸಿ ಭಂಡಾರವನು ಹೇರಿಸಿ ಮರಳಿ ಮಂಗನನಪ್ಪಳಿಸಿದನು (ಕುಮಾ.ಸ. ೪-೯). ೯. ಆಕ್ರಮಣ; ಮುನ್ನುಗ್ಗುವಿಕೆ; ರಭಸ: ಸರಳ ತೆರಳಿಕೆಗೆ ಮರಳಿತು ಕರುಳ ಸುರುಳಿಯೊಳು ಹೊರಳುತ್ತ ಬೀಳುತ್ತಲು . . . ಹಾದಿ ಮರಳಿ ಕಾನನಕೆಯ್ದಿತು (ಹದಶಾ. ೬-೩೦); ಇಂದಿನೀ ಬಲವೀ ಸಮರಜಯದಂದವೀ ಸೌರಂಭವೀ ಸರಳಂದವೀ ತೆರಳಿಕೆಯದಾವಂಗೆಂದನವನೀಶ (ಕುಮಾ.ದ್ರೋ. ೫-೧೭).

[ ತೆರಳ್ + – ಕೆ ]

**ತೆರಳ್ಕೆಯಿಡು** (ಕ್ರಿ). ಅಧಿಕಗೊಳಿಸು; ಒತ್ತುಗೊಳಿಸು: ಇತ್ತಲೆಳ್ದು ಮಳೆಯ ರಾಜನುತ್ಸವಕ್ಕೆ ಹೆಚ್ಚುಗೊಟ್ಟು ಚಿತ್ರದೊಳ್ಸಮಸ್ತಸಂತಸಂಗಳು ತೆರಳ್ಕೆಯಿಟ್ಟು ರಂಗಮಂಟಪಕ್ಕೆ ಬಂದು (ಮಳರ.ಹ. ೨೩೧-೧೧).

[ ತೆರಳ್ಕೆ + ಇಡು₁ ]

**ತೆರಳ್ಕೆವೆಱು** (ಕ್ರಿ). ಪದರವಾಗು; ನಿರಿಗೆಯಾಗು: ಕರವೆರಸಿದ ಪೊಸದುಗುಲವ ತೆರಳ್ಕೆವೆತ್ತಿಡೆ ಹಟತ್ಕಟೀಸೂತ್ರಪರಿಸ್ಫುರಿತದೊಳಂ . . . ಜನಮನೇಂ ಮನಂಗೊಳಿಸಿದುದೆಣೋ (ಆದಿಪು. ೪-೩೬).

[ ತೆರಳ್ಕೆ + ಪೆಱು₁ ]

**ತೆರಳ್ಚು, ತೆರಳಿಚು** (ಕ್ರಿ). ೧. ಚಲಿಸುವಂತೆ ಮಾಡು; ಚಲನಗೊಳಿಸು; ಸರಿಸು; ತಳ್ಳು: "ತೆರಳ್ಚು–ಚಲನೇ, ಜಯನೇ ಚ" (ಶಮದಾ); ಅಂತೀತನ ಕಟಕಕ್ಕೆ ನಿತ್ಯಕ್ಷಯಮುವ್ಯಯಪ್ರತ್ಯವಾಯಂಗಳಂ ಪಾಡಿಬೇಸಱಿಸಿ ನೆಲದಿಂ ತೆರಳ್ಚುವಂ (ಆದಿಪು. ೧೩-೫೮ ವ); ಉಪವನದ ತರುಲತಾಗುಲ್ಮಜಾಲಮಂ ಸೋಂಕಿ ಬಂದು ತಿಳಿಗೊಳಂಗಳೊಳ್ ತೆರೆಯ ನೆರವಿಯುಂ ತೆರಳ್ಚಿ . . . ಸಾಯಂತನಸಮಯ ಸಮೀರಣಂ ಸೌಖ್ಯಸಾರ ಸರ್ವಸ್ವಮೆನಿಸಿದಾಗಳ್ (ಚಂದ್ರಪ್ರ. ೮-೪ ವ); ವಾಯುವು (ನಸ್ಸ) ಹಟ್ಟಿಯ ಬಾಗಿಲ ರಜಗಳಂ ತೆರಳ್ಚುವನು (ಕುಕಸ. ೧೪೪). ೨. ಅಲುಗಾಡಿಸು; ಕಲಕು; ಕ್ಷೋಭೆಗೊಳಿಸು; ಕದಲಿಸು: ಮಿಡಿಯುಂ ತೆರಳ್ಚಿ ತೆಗೆದೋವದೆ ಕಾಯದೆ ಕೂರಕವರ್ಗದಿಂ ಸೊನೆ ಸುರಿವನ್ನೆಗಂ ಪಱಿದು ನೋಯಿಸಿ ಕಾಡಿದೆವು (ಆದಿಪು. ೧೧-೧೩೨); ಅಸುಂ ಕುಲಗಿರಿಗಳ ಸಪ್ಪೊಪ್ಪಂತುಂ ತರಳ್ಚಲಾಱಿನದಱಿಂದೆನಗಂ ಸಗಂಗಳ್ ಪಿರಿಯವೆನೆ (ಪಂಚತಂ ೨೫೯-೬); ಸಾಗರಮಂ ಕೂಡೆ ತೆರಳ್ಚಿದಂ ತೊಱಿಸಿದಂ ತುಳ್ಕಾಡಿದಂ (ಜಗವಿ. ೭-೦೮); ತೆರಳ್ಚಿ ತರಂಗಾವಳಿಯುಂ . . . ಭುಜಂಗನಪೋಲ್ ಸುಳಿಗುಂ ಸಮೀರಣಂ (ಕಬಶಂ. ೨-೭೦). ೩. ಅಲುಗಾಡು; ಕದಲು: ಇಡುಮೊಲನಂ ತೆರಳ್ಚದಿಸು ಪುಲ್ಲೆಗಳಂ (ಗಿರಿಕ. ೧-೮೩). ೪. ಕಳುಹಿಸು; ಸಾಗಿಸು: ಗೋವ್ರಜಂಗಳುಮನಿಂದ್ರಪ್ರಸ್ಥಕ್ಕೆ ತೆರಳ್ಚಿ (ಪಂಪಭಾ. ೬-೩೩ ವ). ೫. ಸುತ್ತಿಸು; ತಿರುಗಿಸು: ವಿರಹಿಗಳಂ ತೆರಳ್ಚಿ ತುಱುವಲ್ಲಿಗೆ ನೀಂ ನೆರಮಯ್ಯೊಳಕ್ಕೆ (ಆದಿಪು. ೧೧-೦೦೦ ಅಡಿಟ.); ಇರದೊಯ್ಯುದು ತನ್ನಿಚ್ಛೆಗೆ ವರಯುವ್ವನದಂದು ಪುರುಷನಂ ಪ್ರಕೃತಿರಜಂಬೊರೆದು ತಿರುಪುತ್ತೆ ಸುಟ್ಟುಱಿ ತೆರಳ್ಚಿ ತಱಿಗೆಲೆಯನುಯ್ವ ತೆಱದಿಂದೆತ್ತಂ (ಕಾದಂಪೂ. ೫೩೫); ಕೆಂದಳದಿಂ ಸಣ್ಣಗೆಯುಂ ತೆರಳ್ಚಿ ತಿರುಪುತ್ತುಂ (ಕುಸುಮಾ. ೨-೧೦೬). ೬. ಒಂದ

ಗೂಡಿಸಂ ; ಸೇರಿಸು ; ಕೂಡಿಸು : ಮೂಜಗಾಲೋಕದ ಚೆಲ್ವೆಲ್ಲವಂ ವಿಧಾತ್ರನೊಂದೆಡೆಗೆ ತೆರಳ್ಚಿದಂತೆ (ಹಂಪಭಾ. ೦-೩೮ ವ) : ಮಾಂಸ ವ್ಯಾಕ್ತವಂ ಪೊತ್ತು ಕೇಸರಿಚಮರೀವಾಲಂಗಳಂ ತಾಳ್ದು ಬಂದರನೇಕರ್ (ಕಾದಂಪೂ. ೦೬೯) ; ತಂತವಮ್ಮ ಭಂಟರರ್ಥವಂ ತೆರಳ್ಚಿ ಕಟ್ಟಿಕೊಂಡು ಪೊಟಲ್ಗೆವಂದು (ಧರ್ಮಾಮೃ. ೩-೧೯೩). ೭. ಹರಡು ; ಪಸರಿಸು ; ಪುಷ್ಪಕೇಸರಂ ತರಳೆ ತೆರಳ್ಚಿ ಬೀಸಿದುದು ತಂಬೆಲರ್ (ಆದಿಪು. ೩-೬೩) ; ಓಡೆಯರ್ ತೊಡೆದಂಗಾನುಲೇಪನದ ಸೌರಭ್ಯಮಂ ತೆರಳ್ಚಿ ವಿಟಜನ ಘ್ರಾಣಕೆ ಪಾರಣೆಯನೊಡರ್ಚೆಯುಂ (ಕುಸುಮಾ. ೪-೩೧ ವ); ಇಂಬುವೆತ್ತ ತಣ್ಬುಟಿಲೊಳಗೊಲ್ದು ಕೂಡುವಿನಿಯರ್ಗೆ ತೆರಳ್ಚಿದ ಕಂಪು ತಣ್ಪು ಪೊಂಪುಟಿಯನಲರ್ಚೆ ಕೀಡುವುದು ತತ್ಪುರಬಾಹಿರ ಮಂದಮಾರುತಂ (ಅನಂಪು. ೩-೦೬) ; ಸರ್ಬದಳವಂ ತಗುಳ್ದುವು ಬೇಸಗೆಯ ಬಿಟುವ ಲರ್ಬೀಸಿ ರಜವಂ ತೆರಳ್ಚುವಂತಾಗ ವೀರದರ್ಪಂಕದಿಂದಾಂತು ನಿಂದರ್ (ಜೈಮಿಭಾ. ೨೫-೨೬). ೮. ಅಧಿಕವಾಗಿಸು ; ಅತಿಶಯವಾಗಿಸು : ಗುರು ಗಳುವಂ ಸುತರಂ ಸೋದರರಂ ಕೊಲಲಾಟಿನೆಂದ ಪಾರ್ಥನನಾಗಳ್ ಹರಿ ರಥವಂ ಹರಿಯಿಸುತುಂ ತೆರಳ್ಚಿ ತತ್ವಮನೆ ಪೇಟ್ದು ಗಡ ಕಾದಿಸಿದಂ (ಸಮಪ. ೧೦-೧೬೨). ೯. ಉಂಟುಮಾಡು ; ಹೊಂದಿಸು : ಕಳೆಯುಂ ಪತ್ತಿಸಿ ರಾಗವಂ ನಿಲಿಸಿ ನುಣ್ಪಂ ನಣ್ಪುಗೆಯ್ದಂಪನಿರ್ಕಾಳಿಗೊಂಡು . . . ತೆರಳ್ಚಿ ಜತಿಯಂ ಸ್ಥಿತೋಜೆಯಂ ತಾಳ್ದಿ ಗೋವಳರಾಯಂ ಕೊಟಲೂದಿದಂ ನೆಗಟ್ವಿನಂ ಮಾಧುರ್ಯಂ ತೂರ್ಯಸ್ವನಂ (ಜಗವಿ. ೫-೨) ; ಕವಿಕಂದರ್ಪನ ಬಾಳಚಂದ್ರುನ ಲಸದ್ವಾಣೋತ್ಕರಂ ಕೂರ್ತುವಂದವರ್ಗಂ ನೆಟ್ಟನೆ ಕೂರ್ತು ಕೂಡಿದವರ್ಗಂ ರಾಗಾದಿ ಕಲ್ಲೋಲವಂ ಕಿವಿಯಂ ತಾಗಲೊಡಂ ತೆರಳ್ಚುವುದು (ಅನಂಪು. ೦-೩೩). ೧೦. ಹಿಮ್ಮೆಟ್ಟಿಸು ; ಓಡಿಸು ; ಅಟ್ಟು : ಪುಂಖಾನುಪುಂಖವಿಸುತ್ರಿಪೆಡೆಯೊಳ್ ತೆರಳ್ಚಿದುವಗುರ್ವಿಂ ಪರ್ವಿ ಬಾದಿರ್ದ ಮೇಘಮುಂಖಾಹೀಂದ್ರರ ಪೊಂಕಮಂ ಜಯಕುಮಾರೋನ್ಮುಕ್ತ ಬಾಣಾಳಿಗಳ್ (ಆದಿಪು. ೧೩-೬೦) ; ಗಂಗನ ಮೊತ್ತಮೆಲ್ಲಮಂ ಬೆದಱುವಿನಂ ತೆರಳ್ಚಿ ಪಲರುಂ ತುಟಿಲಾಳ್ಗಳನಿಕ್ಕಿ (ಎಕ. II, ೧೩೪-೦೨ : ಸು. ೯೪೦). ೧೧. ಹೋಗಲಾಡಿಸು ; ನಿವಾರಿಸು ; ಕಳೆ : ಭುಜಕಂಡುವಂ ತೆರಳ್ಚುವುದರ್ಕೆದುವೆ ಪದನೆಂದು ಕದನೋದ್ಯುಕ್ತನಾಗಿ (ಜಗವಿ. ೭-೬೦ ವ). **ತೆರಳಿಚು** : ೪. ಅಲ್ಲಿಗಲ್ಲಿಗೆ ನಡೆದು ಸಾಧಿಸಿ ಕೆಲ್ಲೆ ಕುಹರದ ಕೋಣೆ ಬಾಗು ಗಳೆಲ್ಲವನು ಹೊಕ್ಕಱಸಿ ತೆರಳಿಚಿದನು ಮಹಾಧನವ (ಕುವ್ಯಾ.ಸ. ೩-೪೬) ; ಸಂಧಾವುನ ವರಕತಾನಂದನನ ತೆರಳಿಚಿ[ಪಾಠಾಂ. ಸಿ]ದನು ಮಹೀಪಾಲ (ತೊರಲಾ. ೦-೧೬-೧). ೭. ಅಲಿಗಳನರಳಿಚುತ ನಗೆಗಳ ಮಾಲೆಗಳ ತೆ[ಪಾಠಾಂ., ಕೆ]ರಳಿಚುತ ಕರಿ ಕಟ್ಟೊಳಿಗದ ಕಾತರರನೆಂದನು ಹರಿ ಸುಪರ್ಣಂಗೆ (ತೊರಲಾ. ೦-೪-೫೪). ೧೦. ಕರ್ಣನ ತೆರಳಿಚಿದನ್ಯನೂಱು ಹಜ್ಜೆಯಲಿಂದ್ರಸುತಸೂನು (ಕುವ್ಯಾದ್ರೋ. ೬-೫೦) ; ನೀನಿಂದು ಮುರವೈರಿಯಂ ತೆರಳಿಚಿದೆ . . . ಕರ್ಣಜನೆ ನಿಲ್ಲೆನುತೆ ತೆಗೆದೆಚ್ಚು ಬೊಬ್ಬಿಱಿದನು (ಜೈಮಿಭಾ. ೭-೫೬). ೧೧. ಶಂಕರನ ಪರಮಮೂರ್ತಿಯ ಹೃದಯಕಮಲದೊಳಿರಿಸಿ ಸಂಧಾನದಲಿ ಜೀವನ ತೆರಳಿಚಿದನು (ತೊರೆರಾ. ೨-೫-೦೯). ೧೨. ಅಧಿಕವಾಗು ; ಹೆಚ್ಚಾಗು : ಕರಿಯ ಬರಿಕೈಗೆಣೆಯೆನಿಪ ನಿಷ್ಠುರದ ಧಾರಾಸಾರ ತೆರಳಿಚಿ ಸುರಿದುದು (ಕುವ್ಯಾ.ಅ. ೨೦-೩೩). [ ತೆರಳ್ + -ಚು₁ ]

**ತರಾಣೆ** (ನಾ). ಕೊಡುವ ಹಣ ; ಸುಂಕ ; ತೆರಿಗೆ : ಸರಕಾರಕ್ಕೆ ತೆರ ಬೇಕಾದ್ದೆಷ್ಟು ? ಹೊರಗಿನ ತೆರಾಣೆ ಎಷ್ಟು ? . . . ನೇರವಾಗಿ ತೆರುವ ಅಥವಾ ಸಾಲ ಸಿಟ್ಬಂದಿಗಳ ರೂಪದಲ್ಲಿ ತೆರುವ ತೆರಾಣೆ ಎಷ್ಟು ? (ಹಂಪ್ರ. ೨೬೩). [ ತೆರು₁ (< ತೆಱು₁) + ಆಣೆ₆ ]

**ತೆರಿಗಲು** (ನಾ). ಗಡಿಯ ಗುರುತಿಗಾಗಿ ನೆಟ್ಟ ಕಲ್ಲು : ಅಲಿಂದಂ ಪಡುವ ನಡುದು ನಟ ಗುಡುಕಲು ಅಲಿಂದಂ ಪಡವ ನಡದು ನಟ ತೆರಿಗಲು ಅಲಿಂದಂ ಪಡುವ ನಡದು ನಟ ಹಲಗೆಗಲು (ಎಕ. XII, ತಿಪಟೂ. ೧೩೯-೬೮ : ?). P ಇದು 'ಕರಿಗಲ್ಲು' ಇರಬಹುದೇ ?

[ ತೆರಿ? + ಕಲು₁ (< ಕಲ್₃) ]

**ತೆರಿಗೆ** 'ತೆಱಿಗೆ' ನೋ.

**ತೆರಿಗೆದಾರ** (ನಾ). ತೆರಿಗೆಯನ್ನು ಕೊಡುವವನು : (Rate payer. ಪತ್ರಿನಿ. ೬೭). [ ತೆರಿಗೆ (< ತೆಱಿಗೆ) + -ದಾರ₄ ]

**ತೆರಿಮೆದ್ದು** (ನಾ). ಒಂದು ಬಗೆಯ ಸಸ್ಯ : (ಕಿ). [ ? ]

**ತೆರಿವಿಳಾಸ** (ನಾ). ಒಂದು ಬಿರುದು : ಮಹಾರಾಜಾಧಿರಾಜಪರಮೇಶ್ವರ ನೆಲ್ಲರ ಮರುಳಂ ತೆರಿವಿಳಾಸಂ ಮದಗಜಮಲ್ಲ . . . ಮಾಡಿದ ಮರ್ಯ್ಯಾದೆ (ಸೌಇಇ. IX-1, ೬೬-೫ ; 991). [ ತೆರಿ? + ವಿಳಾಸ ( = ವಿಲಾಸ) ]

**ತೆರಿಸು** 'ತೆಱಿಸು' ನೋ.

**ತೆರು₁** 'ತೆಱು₁' ನೋ.

**ತೆರು₂** 'ತೆಱು₂' ನೋ.

**ತೆರುಗಡೆ** 'ತೆಱುಗಡೆ' ನೋ.

**ತೆರುವಣ** (ನಾ). ಸುಂಕ ; ತೆರಿಗೆ : ಶಾಸನಗಳಲ್ಲಿ ಬರುವ ತೆರುವಣಗಳು :- ತೆರು, ಮುಂಡಗಡಿ, ಅರುಗಡಿ (ತುಳುನಾ. ೨೬೦).

[ತೆರು₂ (< ತೆಱು₃) + ವಣ₃ ]

**ತೆರೆ₁** 'ತೆಱೆ₁' ನೋ.

**ತೆರೆ₂** 'ತೆಱೆ₂' ನೋ.

**ತೆರೆ₃** 'ತೆಱೆ₃' ನೋ.

**ತೆರೆ₄** (ನಾ). ೧. ಅಲೆ ; ತರಂಗ : "ವೀಚೀ, ಭಂಗಃ, ತರಂಗಃ – ಈ ೩ ತೆರೆ" (ಹಲಾಯು. ೧೦೮-೩೦); ಪಾಲ್ಗಡಲ ತೆರೆಯ ನೊರೆಯ ದೊರೆಯ ದುಕೂಲಾಂಬರಮನುಟ್ಟು (ಆದಿಪು. ೪-೪೦ ವ) ; ಗಂಗಾದೇವಿಯುಮಾ ಕೂಸಂ ಮುಟುಗಲೀಯದೆ ತನ್ನ ತೆರೆಗಳೆಂಬ ನಳಿತೋಳ್ಗಳಿನೊಯ್ಯ ನೊಯ್ಯನೆ ತಟ್ಕೈಸಿ ತರೆ (ಪಂಪಭಾ. ೦-೯೫ ವ) ; ಕುಳಿರ್ವಟ್ಟೊದದ ತೆರೆಯಲರೊಳೆ ಪುಳಕಂ ಪೊಣ್ಮಿದಂತೆ ತಣ್ಗದಿರ್ಗಳ್ ಕಣ್ಗೊಳಿಸಿರೆ ಶಶಿಕಾಂತ ಶಿಲಾತಳಮೊಂದುಜ್ವಳಿಸಿತಾ ಲತಾಮಂಟಪದೊಳ್ (ಕಾದಂಪೂ. ೪೪೨) ; ಸಮುದ್ರದ ತಡಿಯಲೊಂದು ಮನೆಯ ಮಾಡಿ ನೊರೆ ತೆರೆಗಳಿಗಂಜ ದೊಡೆಂತಯ್ಯ (ಮಹಾದೇ. ಕ. ೫೦-೦೩೪) ; ತುಂತುಱುಂ ತೆರೆಯಿಂ ಪೆರ್ದೆರೆಯಿಂ . . . ಒಪ್ಪಿತ್ತು ನೀರಾಕರಂ (ಗಿರಿಕ. ೦-೪೬) ; ವಾರ್ಧಿಯೊಗ್ಗಿನ ತೆರೆಯಂತೆ ಗಾಳಿಗಿದಿರೊಡ್ಡಿದ ಕೆಂಡೊಡರಂತೆ (ದಕಕಾ. ೦೪-೨೬): ತೆರೆಯ ಮೇಲಣ ತಪ್ಪದಂತಿರೆ ಧರಣಿಯೊಲೆದುದು (ಕುವ್ಯಾವಿ. ೬೦೩. ೬-೫೯) ; ತೇಜಿಯ ಸಾಲೋ ಶರಧಿಯ ತೆರೆಗಳ ರಾಜಿಯೊ . . . ಎನೆ ತಿರುಮಲರಾಜನೈತಂದನುಬ್ಬಿನಲಿ (ಕಂನವಿ. ೩-೩೩); ತೀರಕ್ಕೆ ಬಂದ ಮೇಲೆ ತೆರೆಯ ಭಯವೇನು ? (ಗಾದೆ). ೨. ಸುಕ್ಕು ; ಮಡಿಕೆ : ಜರೆಯಿಂದಂ ಪುರ್ಬು ಜೋಲಲ್ತೆರೆ ತರತರದಿಂದುಣ್ಮಿ ಪೊಣ್ಮಲ್ಕೆ (ಕಾದಂಪೂ. ೦೬೫) : ನೆರೆ ಕೆನ್ನೆಗೆ ತೆರೆ ಗಲ್ಲಕೆ ಶರೀರ ಗೂಡುವೋಗದ ಮುನ್ನ . . . ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೧೬೧); ಕಯ್ಯ ಕೊಡೆಯಿಂ ಮಯ್ಯ ತೆರೆಯಿಂ ಜೋಲ್ವ ಪುರ್ವಿಂ . . . ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡೆ (ನಂಬಿರ. ೬-೨೩) ; ನರೆ ತೆರೆಗಳಿಡಿದಡರಿ ತನು ಜರ್ಜರಿತವಾಗಿಯನೇಕ ದಿನದಲಿ ಹಿರಿಯರೆಂದೆನಿಸಿದರೆ ಹಿರಿಯರೆ (ಪ್ರಭುಲೀ. ೧೭-೦೮). ೩. ಪರದೆ; ಜವನಿಕೆ; ಮುಸುಕು: "ಅಪಟೀ, ಕಾಂಡಪಟಃ, ಪ್ರತಿಸೀರಾ, ಯವನಿಕಾ, ತಿರಸ್ಕರಿಣೀ – ಈ (೫) ತೆರೆ" (ಹಲಾಯು. ೫೨-೦೫೪) ; ಕಿಮ್ಮುಗಿಲ ತೆರೆಯ ಪೊರೆಯೊಳ್ ಸೆಗೆದು ಪೊಱಮಡುವ ವಿದ್ಯಾಧರಿಯಂತೆ . . . ಚೌಪಳಿಗೆಯ ಬಾಗಿಲೊಳ್ ನಿಂದು (ಪಂಪಭಾ. ೪-೩೯ ವ) : ಅಸುರೇಂದ್ರಂ . . . ಅಂಬರದ ನಿಱಿಮುಗಿಲ ತೆರೆಗಳ ಪೊರೆಯೊಳಗಣ ನಿಜ

ವಿಮಾನದೊಳಗಂ ಪೊಕ್ಕಂ (ಶಾಂತಿಪು. ೮-೫೩) : ರವಿ ಬಂಧನಸ್ವಾಚಲಕ್ಕು ದಯಕಾಲಕ್ಕೆ ಸುತ್ತಿದ ಕರಿಯ ತೆರೆಯೊ ಎನಿಸಿ (ಸಿದ್ಧರಾ. ೧-೫೪) : ಗುರು ಕಾರುಣ್ಯಮುಹೂರ್ತಕ್ಕೆ ಜನನಮರಣಂಗಳೆಂಬ ತೆರೆಯರ್ ಒಡಿದ ಸಂಸಾರದ ತೆರೆ ಸರಿಯೆ (ಬಸರ. ೪-೧೧೩) ; ತೆರೆಯ ಹಿಡಿದುದು ಮಱವೆ ಸಮ್ಯಜ್ಞಾನ ದೀಧಿತಿಗೆ (ಕುಮಾರರಾಮ. ೦೮-೬೦) ; ತೆರೆಯ ಹಿಂದೆ ನಾನು ಅವಳ ಅಪೂರ್ವ ನೃತ್ಯವನ್ನು ನೋಡುತ್ತಿದ್ದೆ (ಪಾಂಡವ. ೮೯); ಅತಿಪ್ರಚ್ಛನ್ನ ಪಟ ದೇಹ ಸುರ್ಕುರ್ ತೆರೆಯು (ಕಲ್ಲಮಂ. ೧೦೭). 'ತೆರೆವಿಡಿ' ಪರಾ. ೪. (ಪ್ರಕಾಶಗ್ರಾಹಿಯಾದ) ಕಣ್ಣಿನ ಪೊರೆ ; ದೃಷ್ಟಿಪಟಲ : ತೆರೆಯ ಮೇಲೆ ಬಿಂಬವು ಬೀಳಲು, ಆ ಅನುಭವವನ್ನು ಅಲ್ಲಿರುವ ಸೂಕ್ಷ್ಮ ನರಗಳು ಮಿದುಳಿಗೆ ತಿಳಿಸುವುವು (ಪಾಲಪ್ರ. I, ೪೫೪). ೫. ಒಂದು ಬಗೆಯ ಕಣ್ಣಿನ ರೋಗ ; ಕಣ್ಣಿನ ಪೊರೆ : ಪೂವರಸೆ ತೆರೆಯೆಂಬ ಪಲ ವಕ್ಷಿರೋಗಮಂ ಕಳೆಗುಂ (ಅಶ್ವಶಾ. ೧೫-೦೫) ೬. ಬೇಟೆಗಾರರು ಉಪ ಯೋಗಿಸುವ ಒಂದು ಬಗೆಯ ಸಾಧನ ; ಮುಸುಂಕಿನ ಆಕಾರದಲ್ಲಿ ಮಾಡಿರುವ ಬಲೆ : "ಪಟಹಂ = ಬೇಂಟೆಯ ತೆರೆ" (ಕಮದ. ಶಬಿ. ೧): ತೆರೆಯ ಸರಳಿಸುವೆರಳೆ ಬಲು ನಾಯ ಬಾಯಿಂದ ಮುರುಚಿ ಕೊಂಡೋಡುವ ಮೊಲಂ (ಸೋಮಮಣ. ೩-೭) ; ತೆರೆಯ ತೋಹಿನ ಮೇಹಿನ ನೀರ ಬೇಂಟೆಯುರ್ವರೆಗಳನೀಕ್ಷಿಸುತವರು (ಅನಂತ. ೦೭-೦೫). 'ತೆರೆವೇಂಟೆ' ಪರಾ. ೭. ಛಾಯಾಚಿತ್ರಪ್ರದರ್ಶನಕ್ಕಾಗಿ ಬಳಸುವ ಬಿಳಿಯ ಪರದೆ ; ಸಿನಿಮಾದಲ್ಲಿ ಚಿತ್ರವನ್ನು ಮೂಡಿಸುವ ಪಟ ; ರಜತಪರದೆ : ಹೆಚ್ಚು ಮಂದಿ ನಟನಟಿಯರನ್ನು ಏಕಕಾಲದಲ್ಲಿ ತೆರೆಯ ಮೇಲೆ ಅವರಿಗೆ ತೆರುವುದು ಸಾಧ್ಯವೇ ಇಲ್ಲ (ನಾಟಿಗೀ. ೬೦).

**ತೆರೆಯ ಊಳಿಗ** = ಪರದೆಯನ್ನು ಹಿಡಿಯುವ ಸೇವೆ : ಅರಮನೆ ಯಲ್ಲಿ ಪ್ರತಿದಿನದಲ್ಲಿಯೂ ನಡೆಯುವಂತೆ ಕಟ್ಟು ಮಾಡಿದ ಊಳಿಗಗಳ ವಿವರ . . . ಬೀಸಣಿಗೆಯ ಊಳಿಗ, ತೆರೆಯ ಊಳಿಗ . . . ಚಾವಡಿ ಕಾವಲು ಊಳಿಗ (ಚಾಮವಂ. ೪೫). **ತೆರೆಯ ಸೀರೆ** = ಅಂತಃಪಟ : ತೆರೆಯ ಸೀರೆ ಚನ್ನೆಯುರೊಲಿದು ಕಟ್ಟಿದರು (ಅಂಜಜ. ೪-೪೦) ; ವೇದಿಕಾಗ್ರದೊಳ್ ತೆರೆಯ ಸೀರೆಯಂ ಪಿಡಿದು ವರನಂ ಕನ್ನಿಕೆಯಂ ಇಕ್ಕೆಲದೊಳಿರಿಸಿ (ಧರ್ಮಾಪ ೬-೫ ಪ). 'ತೆರೆಸೀರೆ' ಪರಾ.

[ ದೇ.೫ ತಮಿ. ತಿರೈ ; ಮಲ. ತಿರ ; ತುಳು. ಸೆರೆ ; ತೆಲು. ತೆರ ]

**ತೆರೆಗಟ್ಟು** (ಕ್ರಿ). ನಿರಿಗೆಗಳಿಂದ ಕೂಡಿರು ; ಪದರ ಪದರವಾಗಿರು : ಮಿಱುಮಿಱುನಾದ ಮೈ ಹೊಳಹಿಂದ ತೆರೆಗಟ್ಟಿ ನಿಱಿದೇಳ್ವ ಹೊಂಗಾಸೆ ಯಿಂದ . . . ಬಯಲ್ಗೊಳ್ಳೆ ಹೊಳೆವಂತೆ ಹೊಳೆವರು (ಭರತ. ೧೩-೧೧೧).

[ ತೆರೆ$_4$ + ಕಟ್ಟು$_1$ ]

**ತೆರೆಗಣ್ಣು** (ನಾ). ಬಿಟ್ಟಿರುವ ಕಣ್ಣು ; ಬಿಡುಗಣ್ಣು : ತೆರೆಗಣ್ಣಾಗಿ ನೋಡು ತಿರೆ, ಗುರುತಿಸಿದೆನಯ್ ಪಿತನನು (ಶ್ರೀರಾಮಾ. ೦೦೪-೦೦೭) ; ಅವನೆಲ್ಲ ತೆರೆಗಣ್ಣಿನಿಂದ ನೋಡಲು ಕಲಿತಿದ್ದಾನೆ (ಸ್ವಪ್ನಹೊ. ೩೦೩).

[ ತೆರೆ$_1$ (<ತೆಱೆ$_1$) + ಕಣ್ಣು (< ಕಣ್) ]

**ತೆರೆಗಯ್** 'ತೆಱೆಗಯ್' ನೋ.

**ತೆರೆಗೂಡು$_1$** (ಕ್ರಿ). ಅಲೆಗಳಿಂದ ಕೂಡಿರು,-ತುಂಬಿರು : ದೇವಗಂಗಾನದಿ ಗಗನಗಾಮಿನಿಯಾದ ಭಾವವ ನೋಡಬೇಕೆನುತ ಭಾವಿಸಿ ತೆರೆಗೂಡಿ ಕಾವೇರಿ ನೆಱೆ ಗಗನಾವಲಂಬಿತೆಯಾಗಿಹಳು (ಕಂನವಿ. ೫-೪೪).

[ ತೆರೆ$_4$ + ಕೂಡು$_1$ ]

**ತೆರೆಗೂಡು$_2$** (ನಾ). ಒಳಗಿರುವುದು ಕಾಣುವಂತಿರುವ ಗೂಡು,-ಕೋಶ : ದಿಂಡುಗಳು ಆವರಿಸಿದ್ದರೆ ಆವರಣಗಳು (Closed Cells) ; ಗೂಡು ರೆಕ್ಕೆ ಅಂಚಿನವರೆಗೂ ಇದ್ದರೆ ತೆರೆಗೂಡುಗಳು (Open Cells) (ಕೀಟಜಿ. ೧೯). [ ತೆರೆ$_1$ (<ತೆಱೆ$_1$) + ಗೂಡು ]

**ತೆರೆಗೆಯ್ಸು** (ಕ್ರಿ). ಪರದೆಯನ್ನು ಹಾಕಿಸು ; ಮರೆಮಾಡಿಸು : ವೃಷ ಭೇಂದ್ರನಂ ಕರೆಯಲ್ಕೆಂದದೆಳಸಿ ತೆರೆಗೆಯ್ಸಿ ಬಸವಂ . . . ಅದಱ ಮುಱಿ ಯೊಳಗಿರ್ದಂ (ವೃಷಭಪ. ೪೧-೫). [ ತೆರೆ$_4$ + ಕೆಯ್ಸು ]

**ತೆರೆಗೈ** 'ತೆಱೆಗಯ್' ನೋ.

**ತೆರೆಗೊನೆ** (ನಾ). ಅಲೆಯಮೇಲ್ಭಾಗ,-ನೆತ್ತಿ,-ತುದಿ: ಎಲರಲೆಪದಿನೊಗೆದ ತೆರೆಗೊನೆ[ಪಾಠಾಂ. ಮೇಗೊನೆ]ಯ ತೂರ್ಪನಿಯ ತುಂತುಱುಗಳಿಂ ಮಸಗುವ ಮಂಜಿನೊಳಂ ಅಂಜದೆ ಪೊಕ್ಕು (ಕಾದಂಪೂ. ೧೧೭) ; ನೀರ್ವಾನಸಂ ಮೆಲ್ಲನೆ ಬಸುಱೆ ಪಸರಿಸುವ ತೆರೆಗೊನೆಯೊಳ್ ತೇಂಕಿ ಬರ್ಪ ಜಳಮೃಣಾಳನಾಳಮಂ ಜಳವ್ಯಾಳಮೆಂದು ಕೆಲದ ಬಿಲದಿಂ ಒಡಿಯಲೆಂದು ಧೀಂಕಿಡುವ ವಿಷಾಪಹಾರಶಾಲೂರಜಾಲಂಗಳ್ (ಚಂದ್ರಪ್ರ. ೫-೪೦ ವ) ; ತೆರೆಗೊನೆಯೊಳ್ ತೆರಳ್ದು ನಿಱಿಗಟ್ಟಿದ ಕತ್ತುರಿಯೊಳ್ಳಿಸಱ್ . . . ಮನಕ್ಕೆ ಬಂದಿರೆ (ವರ್ಧಪು. ೪-೭೩). [ ತೆರೆ$_4$ + ಕೊನೆ$_2$ ]

**ತೆರೆಗೊರಳು** (ನಾ). ತೆರೆದ ಕೊರಳು ; ಮುಕ್ತಕಂಠ: ಈ ಗೀತವದ್ಧತಿ ಶಕ್ತಿಯುತವಾದದ್ದು, ಹಾಗೆಯೇ ಗಟ್ಟಿಯಾಗಿ ... ತೆರೆಗೊರಳಿನಿಂದ ಹಾಡ ಬೇಕಾದುದು (ಯಕ್ಷಲ. ೬೭). [ತೆರೆ$_1$ (<ತೆಱೆ$_1$)+ಕೊರಳು (<ಕೊರಲ್)]

**ತೆರೆಗೊಳ್** (ಕ್ರಿ). ೧. ತರಂಗಗಳಿಂದ ಕೂಡಿರು ; ಅಲೆಅಲೆಯಾಗು : ಪರಿಕಲಿಸಿ ಕಲಸಿ ಕಪ್ಪುರದ ರಜಂ ಕುಂಕುಮದ ರಜಂ ಮೃಗೋದ್ಭವರಜ ಮೇಂ ತೆರೆಗೊಂಡುವೊ ಸಿತಚಾಮರಮರುದಭಿಹತಿಯಿಂದಮಾ ಸಭಾ ಕುಟ್ಟಿಮದೊಳ್ (ಜಗವಿ. ೧೧-೬೩). ೨. ಮಡಿಕೆಯಾಗು; ನಿರಿಗೆಗಟ್ಟು; ಸುಕ್ಕುಗಟ್ಟು : ತೆರೆಗೊಂಡ ಮೊಗಂ ನಡುಗುತ್ತುಮಿರ್ಪ ಕೈ . . . ಸೆರೆ ಗೊಂಡ ಕಾಲ್ಗಳಿಂ ಮನಕೆ ವಿರಕ್ತಿಯಂ ಪಡೆವ ಮುಪ್ಪಿನ ಪಾರ್ವನ ದೂರ್ಬನೊಪ್ಪಿದಂ (ಪುಣ್ಯಾಸ ೩-೮೦) ; ನೆರೆದರೆಗೆ ಮುಸಿಡೊಡೆದು ತೆರೆಗೊಂಡೊಡಲನು ಕತ್ತಲೆಯು ಮುಱಿಗೆಯ್ದು (ಜಲಪು. ೧೦-೬೭).

[ ತೆರೆ$_4$ + ಕೊಳ್$_1$ ]

**ತೆರೆಚಿಮ್ಮಿಸು** (ಕ್ರಿ). ಅಲೆಯನ್ನು ಹೊಮ್ಮಿಸು,-ಉಂಟುಮಾಡು : ಈಗ ಚಕಾರ ಎತ್ತರದ ಈ 'ಮಹಾಪ್ರಾಣ' ಆಮೇಲೆ ಒಂಟಿಯಾಗಿ ತೆರೆಚಿಮ್ಮಿಸುವ ಅಲೆಲ ಮೊರೆ (ಬದ್ಧಪ್ರ. IV, ೩೬೫). [ ತೆರೆ$_4$ + ಚಿಮ್ಮಿಸು ]

**ತೆರೆದುಱುಗಲ್** (ನಾ). ಅಲೆಗಳ ಸಮೂಹ,-ಗುಂಪು : ಜಲಚರಂಗಳ ಪೊಳಪಿನಸಕದಿಂ ಮಸಗಿ ಮೊಱೆವ ತೆರೆದುಱುಗಲ್ (ಕಾದಂಪೂ. ೧೧೭) ; ಮಿಥ್ಯಾತ್ವವಿಷಜಳಧಿಯ ತೆರೆದುಱುಗಲೆನಿಸಿ ಪೊಱಪೊಣ್ಮದಸಂಖ್ಯಾತ ಲೋಕಮಾತ್ರ ದುಃಪರಿಣಾಮಂಗಳುಂ (ವರ್ಧಪು. ೧೦-೫೯ ವ) ; ಪೊಳೆಪು ವಡೆದ ಪಾಲ್ಗಡಲ ತೆರೆದುಱುಗಲೊಳ್ ಪವಡಿಸುವ ಸಿರಿಯಂ ಪೋಲ್ತಿ ರ್ಪಳ್ (ಅಭಿಶಾ. ೩೦೫). [ ತೆರೆ$_4$ + ತುಱುಗಲ್ ( <ತುಱುಂಗಲ್) ]

**ತೆರೆದೆಗೆ** (ಕ್ರಿ). ೧. ಪರದೆಯನ್ನು ಓಸರಿಸು,-ಸರಿಸು : ನಾಂದಿಯನೋದಿ ಸೂತ್ರಧಾರಕಂ ಛೋಂಕನೆ ತೆರೆದೆಗೆಯೆ (ರಾಜಶೇ. ೫-೧೯ ವ) ; ತೆರೆದೆಗೆಯ ಲಲರಿಚಂ ಬೇಡೆಂಬ ಬಗೆಗೆ ಪೊರೆಯಲ್ಲಿ ? (ಕಾಲೂರ. ೧೮೫-೩೫೬). ೨. ಅಂತಃಪಟವನ್ನು ಎತ್ತು : ಅಂತು ತೆರೆದೆಗೆಯಲೊರ್ಬರೊರ್ಬರ ಮೊಗಮಂ ನೋಟ್ಪ ಸಮಯದೊಳ್ ಹೇಮದತ್ತಂ ಕೈನೀರೆಱೆಯೆ (ದಶಕು. ೪-೦೨೪ ವ). [ ತೆರೆ$_4$ + ತೆಗೆ$_1$ ]

**ತೆರೆದೆಗೆಸು** (ಕ್ರಿ). ೧. ಪರದೆಯನ್ನು ಓಸರಿಸು,-ಸರಿಸು: ೨.=ತೆರೆದೆಗೆ ೨ ಸುಮುಹೂರ್ತಮಂ ಕೇಳ್ದು ತೆರೆದೆಗೆಸಿ ಭೂದಿವಿಜರ ನಲ್ವರಕೆವೆತ್ತು . . . ಧಾರೆಯನೆಱೆದನು (ಜೈಮಿಥಾ. ೩೦-೦೬).

[ ತೆರೆ$_4$ + ತೆಗಸು ( ≮ ತೆಗೆಯಿಸು ) ]

**ತೆರೆದೊಂಗಲ್** (ನಾ). = ತೆರೆದುಱುಗಲ್ : ತೆರೆದೊಂಗಲ್ಕೊರೆದಿರ್ದ ತಣ್ಣೆ ಲರ್ಗಳಿಂ . . . ಮೆಲ್ಲನೆಣ್ಣರಂಗೆಯ್ದ ಹಂಸ ರಥಾಂಗಂಗಳಿಂ (ಕಾದಂಬ. ೩೩೭). [ ತೆರೆ$_4$ + ತೊಂಗಲ್ ]

**ತೆರೆದೊಗಲು** (ನಾ). ಸುಕ್ಕುಗಟ್ಟಿದ ಚರ್ಮ,_ತೊಗಲು: ಬಟ್ಟಹೊಟ್ಟೆಯ ತೆರೆದೊಗಲ ಜೀರ್ಣಾಂಗದ ಗಡವ ಗರುಡಿಯ ನಿನ್ನ ಜಗಜಟ್ಟಿತನವನ್ನು ಎಕ್ಕತುಳದಿಂದ ಸವಿಗೊಳ್ಳಬೇಕೆಂಬ ರಣರಣಿಕೆಯಿಂ ನನ್ನನ್ನೀ ವೀರತಾಣ್ಡವದಿಂದಾಡಿಸುತ್ತಿದೆ (ಮಂತ್ರಶ. ೬೩-೧೨).

[ ತೆರೆ$_4$ + ತೊಗಲು (<ತೋಲ್$_1$) ]

**ತೆರೆದೋಱು** (ಕ್ರಿ). ಅಲೆಗಳನ್ನು ಕಾಣಿಸು,_ತೋರು; ಚಂಚಲವಾಗು: ಕಲೆ ಇಲ್ಲದ ಮೌಕ್ತಿಕದಂತೆ ಜರವಿಲ್ಲದ ರತ್ನದಂತೆ ತೆರೆದೋಱದ ಅಂಬುಧಿಯಂತೆ ಒಡಲಿಲದವಂಗೆ ನೆಱೆ ಅಱಿದವಂಗೆ . . . ಬೇಱೊಂದೆಡೆ ಇಲ್ಲ (ಮೋಳಿಮಾ. ೧೧೧-೪೩೮). [ ತೆರೆ$_4$ + ತೋಱು ]

**ತೆರೆಪೊಡೆ** (ನಾ). ಮಡಿಲು; ಉಡಿ: "ತೆರೆಪೊಡೆಯೆಂದುಂ ಸೋಗಿಲೆಂದುಂ ಮಡಿಲ್" (ಕಶಸಾ. ೬೩-೩೯೭); "ತೆರೆಪೂಡೆಯೆನೆ ಮಡಿಲ್" (ಕನ್ನಿಕ್ಕ. ೭೫).

[ ತೆರೆ$_4$ + ಪೊಡೆ$_3$ ]

**ತೆರೆಬಟ್ಟೆ** (ನಾ). ಜವನಿಕೆ; ಪರದೆ: "ಪ್ರತಿಸೀರಾ, ಯವನಿಕಾ, ತಿರಸ್ಕರಣೀ_ಹಿ ತೆರೆಬಟ್ಟೆ, ಫರದ" (ಸಿದ್ಧಾಂತಿ. ೧೭೫).

[ ತೆರೆ$_4$ + ಬಟ್ಟೆ$_2$ ]

**ತೆರೆಬಾಯಿ** 'ತೆಱೆವಾಯ್' ನೋ.

**ತೆರೆಬೀಳು** (ಕ್ರಿ). ೧. ಪರದೆ ಕೆಳಕ್ಕೆ ಬರು: ದೃಶ್ಯ ಮುಗಿಯುವ ಮೊದಲೇ ತೆರೆಬಿತ್ತು (ರೂಢಿ). ೨. (ಆಲಂ) ಮುಗಿ: ಪೂರೈಸು: ಅಲ್ಲಿಗೆ ಆ ಕೆಲಸಕ್ಕೆ ತೆರೆಬಿದ್ದ ಹಾಗೆಯೇ (ರೂಢಿ).

[ ತೆರೆ$_4$ + ಬೀಳು$_1$ (<ಬೀೞ್$_1$) ]

**ತೆರೆಮಗುಳ್ಚು** (ಕ್ರಿ). ಅಲೆಯನ್ನು ಹೊಮ್ಮಿಸು,_ಅಪ್ಪಳಿಸು: ಕಾಳಜಲಶರಧಿ, ಮೆಯ್ಯ ಮುರಿಯುವ ತೆರದಿ ತೆರೆಮಗುಳ್ಚುತೆ, ಭರದಿ ಮಲೆತುದು, ಮಹೇಂದ್ರ ಶಿಖರಂಗಳಂ ನಾಣ್ಚದರಿ ಗೋಣ್ಣಳ್ಗುವೋಲ್ (ಶ್ರೀರಾಮಾ. ೫೮೭-೭೫). [ ತೆರೆ$_4$ + ಮಗುಳ್ಚು (<ಮಗುಟ್ಚು) ]

**ತೆರೆಮರೆ** 'ತೆರೆಮಱೆ' ನೋ.

**ತೆರೆಮಸಗು** (ಕ್ರಿ). ೧. ಅಲೆಯು ಉಂಟಾಗು,_ಏಳು,-ಉಕ್ಕೇರು: ಎಸೆವುದು ವಳಿತ್ರಯಂಗಳಿನೆಸೆವಸಿಯಳ ತನ್ವಸಿಱ್ . . . ತೆರೆಮಸಗಿದ ಲಾವಣ್ಯರಸದ ಪೊನಲೆಂಬಿನೆಗಂ (ಮಲ್ಲಿಪು. ೩-೬೭); ಕವಲಿಱಿದ ಕುಂತಳಂ ಗಂಗಾಧರನೊಳ್ ಪುರುಡಿಸಿ ತೆರೆಮಸಗಿದ ಕಾಳಿಂದೀನದಿಯಂ ಶಿ[ರೋ]ಗ್ರದೊಳ್ ಧರಿಸಿದಂತಿರ್ದುದು (ನೇಮಿಶ. ೪-೨೪); ಸಾಂದ್ರಚಂದ್ರಿಕೆಯಿಂದಾನಂದಸುಧಾಬ್ಧಿ ತೆರೆಮಸಗಿದಂತೆ ಪಲ್ಗಳಗು ಪಸರಿಸೆ (ರಾಜಶೇ. ೩-೮೦ ವ). ೨. (ಆಲಂ) ಹೆಚ್ಚಾಗು; ಅಧಿಕವಾಗು; ಅತಿಶಯವಾಗು: ಆತ್ಮಜಮುಖಸರೋಜವಮಂ ಮೋಹರಸಂ ತೆರೆಮಸಗೆ ನೋಟ್ಪ ಜನನಿಯ ಕರಿಯಾಲಿಗಳೆಂಬ ತುಂಬಿಗಳ್ ಧನ್ಯಂಗಳ್ (ಮಲ್ಲಿಪು. ೩-೧೨೦); ತೆರೆಮಸಗೆ ಕಾಂತಿ ನಾಭೀಸರೋಜವಮಲ್ಲಾಡೆ (ಗಿರಿಶ. ೩-೪೪); ದಳ್ಳುರಿದುಱುಗಲನು ತನಬಿಗಿದು ಭೀಮನ ರಥದ ಸುತ್ತಲು ಸೂಸಿ ತೆರೆಮಸಗೆ . . . ಉರವಣಿಸಿತಮಳಾಸ್ತ್ರ (ಕುಮಾರವ್ಯಾ. ೧೯-೪೭); ಸಿರಿವೆತ್ತ ಮೆಲ್ಲಡಿಯ ಚೆಲ್ವಿಕೆಗೆ ಮಂಗಳಂ ತೆರೆಮಸಗುವುಗುರ ಕಾಂತಿಗೆ ಮಂಗಳಂ (ಗೀತಗೋ. ೩೪-೪); ಮರುಳ್ಗೆ ಧೂಪಂದೋಱಿತಾ ಮನಃಕ್ಷೋಭಂ ತೆರೆಮಸಗೆ ಊದಿದೆನ್ (ಅಶ್ವತ್ಥಾ. ೩-೪೮). [ ತೆರೆ$_4$ + ಮಸಗು$_1$ ]

**ತೆರೆಮಱೆ,ತೆರೆಮರೆ** (ನಾ). ೧. ಪರದೆಯ ಹಿಂಭಾಗ: ತೆರೆಮಱೆಯೊಳಿರ್ದವಂ ನುಡಿಯ ಹಾಹೆಗಳುಲಿದೊಲಱಿಸುವುದು ಜಗದೊಳು (ನಂದಿಮಾ. ೧-೧೮). ೨. ಮುಚ್ಚುಮರೆ; .ಗುಟ್ಟು; ರಹಸ್ಯ: ಪ್ರಾಣಕ್ಕೆ ಪ್ರಾಣ ಸಮದರುಶನವಾಗಿದ್ದವರಲ್ಲಿ ತೆರೆಮಱೆ ಎಂಬುದಿಲ್ಲ ನೋಡಯ್ಯ (ಶೂನ್ಯಸಂ. ೯೨-೩). **ತೆರೆಮರೆ**: ೧. ಅವುಲಾಂಗೆ ತೆರೆಮರೆಯಲ್ಲಿ ತಾಂ ಕುಳಿತು (ಸಾಗಂಧಿ. ೮೨-೪). 'ಕಱೆಮಱೆ' ಪರಾ.

ತೆರೆಮರೆಯ ಪದ್ಧತಿ = ಬುರಕಿಯನ್ನು ಧರಿಸುವ ಪದ್ಧತಿ; ಘೋಷಾ ಪದ್ಧತಿ: ಈ ಕಾಲದಲ್ಲಿ ತೆರೆಮರೆಯ ಪದ್ಧತಿ ಪ್ರಚಾರದಲ್ಲಿ ಬರುತ್ತಿದ್ದೇಬುದು . . . ತಿಳಿದು ಬರುತ್ತದೆ (ಕರ್ನಾಟ. ೧೩).

[ ತೆರೆ$_4$ + ಮಱೆ$_2$ ]

**ತೆರೆಮಾಲೆ** (ನಾ). ಅಲೆಗಳ ಮಾಲೆ,-ಸಾಲು: ಕೂಡೆ ಮಸಗಿತು ರಿಪುಚತುರ್ಬಲ ಜೋಡು ಮಾಡಿತು ಕಡಹದವರರು ಹೂಡಿದದ್ರಿಯ. ನೀಂಬುಧಿಯ ತೆರೆಮಾಲೆ ಕವಿದಂತೆ (ಕುಮಾರವ್ಯಾ. ೧೦-೩೯); ಶರಧಿಯ ತೆರೆಮಾಲೆಗಳಂತೆ ಪಾನರ ತುರಗದ ಘೌಜೇಱುದುದು (ಕುಂದಸಾಂ. ೨೦-೨೪). [ ತೆರೆ$_4$ + ಮಾಲೆ ]

**ತೆರೆಮುಗಿಲ್, ತೆರೆಮುಗಿಲು** (ನಾ). ಅಲೆಅಲೆಯಾದ ಮೋಡ: ತೆರೆಮುಗಿಲ ಮಱೆಗೆ ನಲ್ಲಂ ಬರೆ ತೆಗೆದೆಳಸುವುದುಮೊಗೆವ ಸುಯ್ಯೆಲರ್ಗಳಿನಾನೆರೆದ ಮುಗಿಲ್ ಕರಗೆ ವಿಯಚ್ಚರಿಗೀಂ ಕಲಿಸಿದುದೂ ಲಜ್ಜೆಯೊಳ್ ಕರಗುವುದಂ (ವರ್ಧಪು. ೫-೨೭); ತೆರೆಮುಗಿಲ ಬಱಿವಿಡಿದು ಭಾಸ್ಕರರಥ ಪರಿಪರಿವ ತೆಱದ (ಪಾರ್ಶ್ವಪು. ೧೧-೧೧೨); ತೆರೆಮುಗಿಲನಡರ್ವ ವಿದ್ಯಾಧರಿ (ಯಶೋಧ. ೪-೯). **ತೆರೆಮುಗಿಲು**: ದೊರೆಮುಗಿಲು ತೆರೆಮುಗಿಲು ನಿಡುಮೋಹರದ ಮುಗಿಲು (ತೊರವೆ. ೪-೬-೫). [ ತೆರೆ$_4$ + ಮುಗಿಲ್ ]

**ತೆರೆಮುಗಿಲು** 'ತೆರೆಮುಗಿಲ್' ನೋ.

**ತೆರೆಮುಳುಗು** (ಕ್ರಿ). ಅಲೆಯಲ್ಲಿ ಮುಳುಗು ನೆತ್ತರಿಯಮಿದುಳೊಡೆದುಣ್ಮುವ ನೆತ್ತರ ಧಾರೆಗಳ ತೀವೆ ತನ್ನಯ ಮುಖದೊಳ್ಳೆತ್ತರನೆ ಕಾಱೆ ಕುರುಪತಿ ನೆತ್ತರ ಕಡಲೊಳಗೆ ತೇಂಕಿ ತೆರೆಮುಳುಗಿರ್ದಂ (ಗದಾಯು. ೯-೧೭). [ ತೆರೆ$_4$ + ಮುಳುಗು$_1$ (< ಮುೞುಂಗು) ]

**ತೆರೆಯ** (ನಾ). ಪರದೆಯನ್ನು ಹಿಡಿಯುವವನು: ಜನನ ಮರಣಂಗಳೆಂಬ ತೆರೆಯರ್ ಪಿಡಿದ ಸಂಸಾರದ ತೆರೆ ಸರಿಯೆ (ಬಸವ. ೪-೧೧೨).

[ ತೆರೆ$_4$ + _ಅ$_7$ ]

**ತೆರೆಯಾಡು** (ಕ್ರಿ). ಅಲೆಗಳ ಚಲನೆಯನ್ನು ಹೊಂದು: ಇರವಿನಲ್ಲಿ ಆ ತೆರವು ತುಂಬಿ ತೆರೆಯಾಡುವಂತೆ ಕಡಲು ಅರಿವಿನೊಂದು ಹೊಸಬರವಿಗಾಗಿ ಹಾತೊರೆಯುತಿಹುದು ಒಡಲು (ನಲಮು. ೩೬-೩). [ ತೆರೆ$_4$ + ಆಡು$_1$ ]

**ತೆರೆಯಿಸು** 'ತೆಱೆಯಿಸು' ನೋ.

**ತೆರೆಯುಲಿಪು** (ನಾ). ಅಲೆಗಳ ಧ್ವನಿ,_ಮೊರೆತ: ಪಲತೆಱದ ಪಱೆಯ ದನಿ ತೆರೆಯುಲಿಪಿನೆ ಪೊಕ್ಕತ್ತು ಕಟಕಮಂ ನೋಟ್ಪರ ಕಣ್ಣಲಸೆ ವಿಭೀಷಣವಾಹಿನಿ ಜಲನಿಧಿಯಂ ಬಂದು ಪುಗುವ ಕುಲವಾಹಿನಿವೋಲ್ (ಪಂಪರಾಮಾ. ೧೨-೮೦). [ ತೆರೆ$_4$ + ಉಲಿಪು ]

**ತೆರೆಯೇೞ್** (ಕ್ರಿ). ಅಲೆಯೇಳು; ಉಬ್ಬರ ಹೊಂದು: ಸಾಗರವಂ ಕೂಡೆ ತೆರಳ್ಚಿದಂ ತೊಟಸಿದಂ . . . ತೆರೆಯೇೞಲ್ ಕಡಲ್ ಕೆಸರ್ವಸಗಗಲಂತಾ ದೇವಕೀನಂದನಂ (ಜಗವಿ. ೭-೦೮). [ ತೆರೆ$_4$ + ಏೞ್$_1$ ]

**ತೆರೆಯೊಟ್ಟಿಲ್** (ನಾ).=ತೆರೆದುಱುಗಲ್: ತರುಣಿಯರಂಬುಕೇಳಿಗೆ ಲಸಜ್ಜಳವಂ ಪುಗುವಾಗಳೊರ್ಬರೊರ್ಬರ ನೆಬಲೊಂದನೇಕವಿಧದಿಂ ತೆರೆಯೊಟ್ಟಿಲೊಳೆಯ್ದೆ ತೋಱಲ್ (ರಶಕು. ೧೧-೮೭). [ ತೆರೆ$_4$ + ಒಟ್ಟಿಲ್ ]

**ತೆರೆವಂಕು** (ನಾ). ಅಲೆಯ ಡೊಂಕು,_ವಕ್ರತೆ: ಆಗಸದ ಬಾಗು, ಚಂದ್ರಮನ ಗುಂಡಿನ ನುಣ್ಪು, ಸಾಗರದ ತೆರೆವಂಕು ... ಈ ಸೃಷ್ಟಿಯಿಂ ನಮ್ಮೊಳಾಗಿಹುದು ರೂಪರುಚಿ (ಮಂಕುತಿ. ೨೧೭). [ ತೆರೆ$_4$ + ವಂಕು$_2$ ]

**ತೆರೆವಳಿಗೆ** (ನಾ). ಗೌಸು; ಅವಕುಂಠನ: ಆ ಸಮರಸಂಭ್ರಮದೊಳ್ ಹೊರಜೆಯೊಳ್ ಕಾಲ್ಗೋದು ನಿಂದ ಮಂದರಾಚಲಧರನಗಲದೆಗೆದ ಮೊಗದ ಹರಿಗೆಯಿಂ ಮುಗಿಲ ತೆರೆವಳಿಗದ [ಪಾಠಾಂ. ತೆರವಳಗೆದ, ತೆರೆಯೊಳೊ]ಗೆದ ಬೞಸಿಡಿಲಂತೆಯುಂ (ಅನಂಪು. ೧೪-೬ ವ).

[ ತೆರೆ$_4$ + ವಳಿಗೆ$_2$ ]

**ತೆರೆವಾಯ್** 'ತೆಱೆವಾಯ್' ನೋ.

**ತೆರೆವಾಯಿ** 'ತೆಱೆವಾಯ್' ನೋ.

**ತೆರೆವಿಡಿ** (ಕ್ರಿ). ೧. ಅಲೆಗಳನ್ನು ಅನುಸರಿಸು, ಹಿಂಬಾಲಿಸು : ಕಲುಷರ ಹಿತಂಗಳನಿಸುವ ಕೊಳದೊಳಗೆ . . . ಕಣ್ಗೊಳಿಪುವು ತೆರೆವಿಡಿದು ಪೊಳೆವ ರವಿಬಿಂಬಂಗಳ್ (ಕಾದಂಪೂ. ೨೦೯) ; ನಡುನೀರೊಳೊಗೆದ ನಳಿನವಂ ಮುಱಿಯಲೆಳಸಿ ಮಗುಳ್ದು ತೆರೆವಿಡಿದೀಸುವೆಳವೇಡಿತಿ (ರಾಜಶೇ. ೬-೨೪ ವ). ೨. ಅಂತಃಪಟವನ್ನು ಹಿಡಿ : ಜೋಯಿಸರ್ . . . ಅಚ್ಚದುಗುಲದಿಂದೆರೆವಿಡಿದರ್ (ಉದ್ಭಟ. ೮-೫೭) ; ಮೃದುಶುಭ್ರತೆಯಿಂ ಮೆಱೆದಿರ್ಪ ಸೀರೆಯಂ ತೆರೆವಿಡಿದರ್ (ದಶಕು. ೪-೧೨೩) ; ನೆಟ್ಟನೆ ತೆರೆವಿಡಿದರು ಕ್ಷತ್ರವಿಧಿಯಿಂದೆ ಮೆಟ್ಟಕ್ಕಿಯ ಮೇಲೆ ನಿಲಿಸಿ (ಮೋಹತ. ೧೩-೬೮). ೩. ಮರೆ ಮಾಡು ; ಮುಚ್ಚು : ನಾರಿಯರು ಕಂಡರು ಸುಲಜ್ಜಾಭಾರದಲಿ ತಡಿಗಡಿಗೆ ಹಾಯಿದು ಸೀರೆಗಳ ತೆರೆವಿಡಿದರಂಗೋಪಾಂಗಲತೆಗಳಿಗೆ (ಕುವ್ಯಾಅ.೧೧-೩೦).

[ ತೆರೆ$_4$ + ಪಿಡಿ$_1$ ]

**ತೆರೆವಿಡು** (ಕ್ರಿ). ಪರದೆಯನ್ನು ಬಿಡು : ದೆಸೆಗೆ ತೆರೆವಿಡಲ್ವೋಮದರ ಯಕ್ಕುಂ (ಮಂಗರಾ. ೬೦-೧೭). [ ತೆರೆ$_4$ + ಬಿಡು$_1$ ]

**ತೆರೆವೇಂಟೆ** (ನಾ). ಮುಸುಕಿನ ಆಕಾರದ ಬಲೆಯನ್ನು ಹಾಕಿ ಬೇಟೆಯಾಡುವಿಕೆ : ಕಂತು ವಸಂತರ್ ತೆರೆವೇಂಟೆಗಿಟ್ಟ ದುಗುಲಂ ಪರ್ವಿತ್ತು ಚಂದ್ರಾತಪಂ (ಅನಂಪು. ೭-೮೬). 'ಪಟವೇಂಟೆ' ಪರಾ.

[ ತೆರೆ$_4$ + ಬೇಂಟೆ ]

**ತೆರೆವೊಯ್ಲು, ತೆರೆಹೊಯ್ಲು** (ನಾ). ಅಲೆಗಳ ಹೊಡೆತ : ಪರಿಖೆಯ ತೆರೆವೊಯ್ಲಿಂದಂ ತೆರಳ್ದು ತಡಿವಿಡಿದು ತಕ್ಕೆಗಟ್ಟಿದ ಪೊಂದಾವರೆಯ ರಜದಂತೆ (ಮಲ್ಲಿಪು. ೨-೬೪) ; ತೆರೆವೊಯ್ಲಿಂದಾದ ತುಂತುರ್ವನಿ ನಿಜತನುವಂ ತೀವಿ ನಿದ್ರಾಂಗನಾನಿರ್ಭರ ಸಂಭೋಗಾಂತ್ಯದೊಳ್ಪೊಣ್ಮಿದ ಬೆಮರ್ವನಿಯುಂ ಪೋಲೆ (ಜಗವಿ. ೧-೫೩) ; ಮರದುಱುಗಲ್ಗಿರದೆಗಿ ಮುಱಿವ ಕರಿಕರಕಂಜ ನೀರ್ವೊಕ್ಕು ನಡುಗುವಂತೆ ತೆರೆವೊಯ್ಲಿಂ ಕಂಪಿಪದಱ ಪಡಿನೆಳಲ್ ಪರಿರಂಜಿಸಯ್ಯುಂ (ರಾಜಶೇ. ೬-೨೪ ವ) ; ಲಾಲಾಜಲದಿಂ ತೀವಿದ ಬಾಲೆಯ ಬೆಳರ್ಗೆಂಪನಾಂತ ಬಾಯ್ ಕಂಗೊಳಿಸಿತ್ತಾಲೋಕಿಸೆ ತೆರೆವೊಯ್ಲಿಕಾಱದ ಬಾಯ್ದೆರೆದ ಸಜಲ ಶುಕ್ತಿಪುಟಂಬೊಲ್ (ದಮಸ್ಕ. ೧-೪೨). **ತೆರೆಹೊಯ್ಲು** : ಲವಣಾಬ್ಧಿ . . . ಬಡವರಿಗೆ ಬದುಕಿಲ್ಲವೆಂದಳ್ಳಿ ಹೊಯ್ವಂತೆ ತೆರೆಹೊಯ್ಲಿನಿಂ ಮೆರೆದುದು (ನವಮೋ. ೨-೯).

[ ತೆರೆ$_4$ + ಪೊಯ್ಲು ]

**ತೆರೆಸೀರೆ** (ನಾ). ೧. ಪರದೆಯಾಗಿ ಉಪಯೋಗಿಸುವ ವಸ್ತ್ರ ; ಕಾಂಡಪಟ ; ಜವನಿಕೆ : "ಕಂಡವಡಂ ತೆರೆಸೀರೆ" (ಕರ್ಣಾನಿ. ೪) ; ಅರುಣ ಮಣಿಭೂಷಣಂಗಳ ಕಿರಣಂಗಳ್ ಪಸರಿಸಲ್ಕೆ ಮಣಿಭಿತ್ತಿಗಳಾಧರಿಸುತ್ತಿರ್ದವು ಕಂಪಿನ ತೆರೆಸೀರೆಗಳೆಂಬ ಶಂಕೆಯಂ ಭರದಿಂದಂ (ಬಾಹುಪು. ೫-೯೫); ತೊಂಬಳಿಯ ತೆರೆಸೀರೆಗಳ . . . ಸುವರ್ಣಾವಳಿಯ ದಿಂಡುಗಳೊಟ್ಟದವು ಬಂಡಿಗಳ ಜವ ಜಡಿಯೆ (ಕುವ್ಯಾಗ. ೪-೦೪) ; ಸುತ್ತುವಳಸಿನ ತೆರೆಸೀರೆ ಕಣ್ಗೆ ರಂಜಿಸಿತು (ಮೋಹತ. ೩೭-೬೯) ; ಹೊಳೆವ ದೀಪಂ ಸೋಂಕಿ ತೆರೆಸೀರೆ ಬೇವುತಿರಲು (ಹಬಪು. ೬೨-೫೩); "ತೆರೆ" ಯಾಗಿ ಉಪಯೋಗಿಸುವ ಸೀರೆ ( = ವಸ್ತ್ರ ) ಇದು, ಬಯಲಾಟಗಳಲ್ಲಿ ವೇಷವು ಮೊದಲ ಬಾರಿ ರಂಗಸ್ಥಳಕ್ಕೆ ಬರುವಾಗ ಕೆಲವು ವೇಷಗಳಿಗೆ " ತೆರೆಸೀರೆ " ಹಿಡಿವ ಕ್ರಮವಿದೆ (ಸಕಶೋಧ. ೧೭೮). ೨. ಬೇಟೆಯಲ್ಲಿ ಪ್ರಾಣಿಗಳನ್ನು ಹಿಡಿಯಲು ಉಪಯೋಗಿಸುವ ಒಂದು ಬಗೆಯ ಬಟ್ಟೆ : ಹೆಬ್ಬಲೆ ತೆರೆಸೀರೆ ಕಾಲ್ಕಣ್ಣಿ ಬೆಳ್ಳಾರ ಹಬ್ಬುಗೆವಲೆಗಳ . . . ಹೊತ್ತು ನಡೆದರಂದಬ್ಬರ ಮಸಗೆ ಶಬರರು (ಕುರಾಸಾಂ. ೨೭-೪೩). [ ತೆರೆ$_4$ + ಸೀರೆ$_2$ ]

**ತೆರೆಸು** 'ತೆಱೆಯಿಸು' ನೋ.

**ತೆರೆಸುತ್ತು$_1$** (ಕ್ರಿ). ಪರದೆಯಿಂದ ಸುತ್ತುಗಟ್ಟು, ಆವರಿಸಂ : ತನ್ನ ಕೇಸಡಿಯ ಕೆಂಪಿನೊಳುಜ್ಜ್ವಲಚಿತ್ರಭಿತ್ತಿನಿಸ್ಸಳ ನಿಜಮೌಕ್ತಿಕಾಭರಣ ದೀಧಿತಿಯಿಂ ತೆರೆಸುತ್ತಿದಂತೆ ಕಣ್ಗೊಳಿಸೆ (ಮಲ್ಲಿಪು. ೩-೯೭) ; ತುರಗಾವಳಿಯಿಂ ತೆರೆಸುತ್ತಿದಂತೆ ಕಾಯಾರವ ಬೀಸಿದಂತೆ (ಎಕ. XI, ಚಿತ್ರದು. ೧-೨೨ ; 1319). [ ತೆರೆ$_4$ + ಸುತ್ತು$_1$ ]

**ತೆರೆಸುತ್ತು$_2$** (ನಾ). ಅಲೆ ಅಲೆಯಾಗಿ ಸುತ್ತಿಕೊಂಡಿರುವುದು : ಎಳವಾಱೆಯ ತಿರುಳಲೆಯ ತೆರೆಸುತ್ತಿನೊಳಮೆಸೆವ ಪಸುರ್ವಂದರೊಳಗೆ (ಲೀಲಾವ. ೧೦-೫೦ ವ) ; ಆದಿಮೂರ್ತಿಯ ಸುತ್ತುಗಳೆ ತೆರೆಸುತ್ತುಗಳಾಗೆಯ್ಯುಂ (ಅಂತ್ರ್ಯಪು. ೬-೮೭ ವ). [ ತೆರೆ$_4$ + ಸುತ್ತು$_2$ ]

**ತೆರೆಸೇಲೆ** (ನಾ). = ತೆರೆಸೀರೆ ೧ : ತೆರೆಸೇಲೆ ಮುಱಿಯೊಳಾ ತೆಱೆದ ಗವಾಕ್ಷದೊಳೊರೆದು ನೋಡುತ ಬಾಹ್ಯಜನವ ಅರಸಿಯರಿದ್ದರು . . . ಸಾಲಾಗಿ (ಭರತ. ೧೨-೩೨). [ ತೆರೆ$_4$ + ಸೇಲೆ ]

**ತೆರೆಹೊಯ್ಲು** 'ತೆರೆವೊಯ್ಲು' ನೋ.

**ತೆರ್ಕಯ್ಸು** 'ತಱ್ಕೈಸು' ನೋ.

**ತೆರ್ಕೆ** 'ತಱ್ಕೆ' ನೋ.

**ತೆರ್ಕೆಗಡಲ್** (ನಾ). ಇನ್ನೊಂದು ಸಮುದ್ರದೊಡನೆ ಸೇರಿದ ಸಮುದ್ರ ; ಒಟ್ಟುಗೂಡಿದ ಬೇರೆಬೇರೆ ಕಡಲುಗಳು : ಆದಱ ಕರ್ಣಚಮರದ ಝಲ್ಲಿಯಂತೆ ಜಲ್ಲನೊಕ್ಕಿ ಧಾರೆಗೆದಱಿ ಪೇರೈಸಿ ಸೂಸುವುಭಯಕಟತಟದ ಸೋರ್ಕರ್ಕದಡಿನ ತೆರ್ಕೆಗಡಲ್ಗಳೊಕ್ಕೈಸಿ ಜಗಮನಿಕ್ಕಲೆಂದು ಮಹಾವ್ರತವನೆತ್ತಿಕೊಂಡ ಕಲ್ಪಾಂತಕಾಳನ ಕೂರ್ಚಜಾಳಂ ಪರ್ಚಿಕ್ಕಿ ಬೇಱೆ ಬೆರ್ಚಿದಂತಿರ್ದಪುದು (ಅನಂಪು. ೧೩-೨೦ ವ). [ ತೆರ್ಕೆ (<ತಱ್ಕೆ) + ಕಡಲ್$_2$ ]

**ತೆರ್ಕೆಗೊಳ್** 'ತಱ್ಕೆಗೊಳ್' ನೋ.

**ತೆರ್ಪಂಬಡೆ** 'ತೆಱಪುವಡೆ' ನೋ.

**ತೆರ್ಪತ್ತು** 'ತೆಪ್ಪಱು' ಪರಾ.

△ **ತೆರ್ಪಱು** 'ತೆಪ್ಪಱು' ನೋ.

**ತೆರ್ಪು** 'ತೆಱಪು' ನೋ.

**ತೆರ್ಪುಱು** (ಕ್ರಿ). ಅವಕಾಶವನ್ನು ಹೊಂದು : ಇನಿತಂ ಕೋಪಾವಳೇಪ ಭ್ರುಕುಟನಿಟಲದೊಳ್ ಪುಟ್ಟೆ ತೆರ್ಪುರ್ತ್ತಿವಂ ತೊಪ್ಪನೆ ಮಾಪ್ಪರ್ಯಯುಂ ದಿಶಾಧೀಶರನಿದರ ದಿಶಾಧೀಶರೊಳ್ ತಾಗಿಕುಂ (ಎಕ. VI, ಚಿಕ್ಕಮ. ೧೭೦-೨೦ ; 1103 ?). [ ತೆರ್ಪು (<ತೆಱಪು) + ಉಱು ]

**ತೆರ್ಬು** 'ತಿರುವು$_3$' ನೋ.

**ತೆಲಂಬಯು** (ನಾ). ಒಬ್ಬಾತನ ಹೆಸರು : ಇದಕ್ಕೆ ಸಾಕ್ಷಿ ಅಮುಜ್ಜಾರ್ ತೆಲಮ್ಬಯರ್ ಕರಾಸರ್ (ಎಕ. IV, ಗುಂಡ್ಲುಪೇ. ೮೭-೫ ; ಸು. 750).

[ ? + ಅಯು$_1$ (<ಅಯ್ಯ$_1$) ]

**ತೆಲವಿ** 'ತೆಲಿವಿ' ನೋ.

**ತೆಲಸಂಗ** (ನಾ). ಒಂದು ಊರಿನ ಹೆಸರು ; ಈಗಿನ ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನಲ್ಲಿರುವ ಊರು: ಅಯ್ಯಾವೊಳ್ವರ್ವಿದ್ಯಾ ಕುಶಳಧರಾಮರರಿಂ ಲೋಕೋತ್ತರವೆಸೆವುದಸದಳಂ ತೆಲಸಂಗ (ಕಇ. II, ೧೯-೧೧ ; ?). [ ? ]

**ತೆಲಿಗ** 'ತೆಲ್ಲಿಗ' ನೋ.

**ತೆಲಿಗೆ, ತೆಲುಗೆ** (ನಾ). ಒಂದು ಬಗೆಯ ಮರ ; ತಿಲಕವೃಕ್ಷ : "ತಿಲಕಃ = ತಲಿಗೆಯ ಮರಂ " (ಕಾಶಕ್ಕ. ೪೭). **ತೆಲುಗೆ** : " ತಿಲಕಃ – ತಲುಗೆಯ ಮರನುಂ, ಹಣೆಯ ಬೊಟ್ಟುಂ " (ಕಾಶಕ್ಕ. ೨೨೬). [ <ಸಂ. ತಿಲಕ ]

**ತೆಲಿವಿ, ತೆಲವಿ, ತೆಲುಮೆ, ತೆಲ್ಮೆ** (ನಾ). ಜಾಣತನ ; ಬುದ್ಧಿವಂತಿಕೆ ; ತಿಳಿವು : ತೆಲಿವಿಯ ತಪ್ಪಿಸಿ ಬಲವನ್ನು ಹೋಗಾಡಿ ಅಲೆಯಪಡಿಸಿದನಾಗ ಚಲದೊಳು ಶನಿಯು (ಯಶನ. ೮೭). **ತೆಲವಿ** : ತೆಲವಿಗೆ ತಾನು

ತಲವಿಯಾಗಿಯು ಯಾ ಭೇದಭಾವಗಳನ್ನೆಲ್ಲ ಗುರು ಅನುಗ್ರಹದಿಂದ ತಿಳಿದು (ತತ್ವಚಿಂ. ೨೮-೨). **ತೆಲುವೆ :** ವಿಶೇಷವಾಗಿ ತೆಲುವೆಯುಳ್ಳ ಮಹಾಪುರು ಷರು ತಮ್ಮ ತರುವಾಯ ಹೆಸರು ನಿಲ್ಲುವ ಹಾಗೆ ಮಾಡಿಕೊಳ್ಳಬೇಕು (ಕಾಂಪೂಡ. ೫೩). **ತೆಲ್ಮೆ :** ಯುಕ್ತಿಗಳೊಳ್ ತೆಲ್ಮೆಯುಂ (ಜಗಂಂರಿ. ೨೨೦-೪). 'ತಿಳ್ಮೆ$_2$' ಪರಾ.

[ ದೇ.॥ ತಮಿ. ಮಲ. ತೆಳಿವು. ತುಳು. ತೆಲಿವು ; ತೆಲು. ತೆಲಿವಿ ]

**ತೆಲುಂಗ,** ತೆಲುಗ, ತೇಲುಂಗ, ತೈಲಂಗ (ನಾ). ೧. ತೆಲುಗು ಭಾಷೆ ಯನ್ನಾಡುವ ಜನರ ದೇಶ ; ಆಂಧ್ರ : ಕೊಂಗು ಕಳಿಂಗ ಸಿಂಗಳ ಸುಲಾಟ ವರಾಟ ತೆಲುಂಗ ಮಾಗಧೋತ್ತುಂಗ ನೃಪಾಳರಾರುಮಿದಿರಾಂ ಪವರಿಲ್ಲೆನಗೆ (ಎಕ. VI, ಕಡೂರು. ೦೪೬-೪ ; ಸು. 1180) ; ಪಾಂಚಾಳ ಚೋಳ ತೆಲುಂಗ ಭೂಭುಜರವನೆಸುಗೆಯು ತಾಳಲಾಜದೆ ತೊಲಗಿದರು (ನೇಮಿಸಂ. ೧೨-೬೩). ೨. ಆಂಧ್ರ ದೇಶಕ್ಕೆ ಸೇರಿದವನು : ಕಿಕ್ಕಿಜಿ ಗಿಜಿದು ಕುಳ್ಳಿರ್ದ ಲಾಳ ಗೌಳ . . . ತೆಲುಂಗ ಗುರ್ಜರ ಹಮ್ಮೀರ ನೇಪಾಳವೊರ್ದಲಾದ ರಾಜಪುತ್ರರ ಪಂಙ್ತಿಗಳೊಳಂ (ಗಿರಿಕ. ೨-೦೦೫ ವ). **ತೆಲುಗ ;** ೨. "ತೆಲುಗನಾಂಧ್ರನೆನಿಕ್ಕು" (ಮಂಗರಾ. ೦೦೨-೬) ; ನಡುಭವ ಗಾ[ವು]ಣ್ಣಂಗೆ ತೆಲುಗರ ಮಾರಿಗಾವುಣ್ಣನೊಳ್ಪಟಜ್ಜಟ (ಎಕ. IV, ಹಗ್ಗಡ. ೦೦೪-೦೮ ; 1037) ; ತೆಲುಗರ ಮಾಗೆಯು ಕೃಮಿತರ ಮನೆ (ಎಕ. XIII, ೪೮-೬೯ ; 1112) ; ಇವನು ತೆಲುಗನಿವ ಮಗಧ ಇವನು ಕನ್ನಡಿಗ (ನೇಮಿಸಂ. ೨೩-೨೩೩) ; ಅಯ್ಯಯ್ಯ ಚೆನ್ನಾದುದೆನೆ ಕನ್ನಡಿಗರು ರಯ್ಯಾ ಮಂಚಿದಿಯನೆ ತೆಲುಗ ಅಯ್ಯಯ್ಯ ಎಂಚಪೊರ್ಲಾಂಡೆಂದು ತುಳುವರು ಮೆಯ್ಯುಬ್ಬಿ ಕೇಳಬೇಕಣ್ಣ (ಭರತ. ೧-೭). **ತೇಲುಂಗ:** ೧. ದೊರೆಕೊಳ್ಳಿ ಬಲುಹೀತದಲ್ಲದಡೆಯಾ ತೇಲುಂಗ ರಾಜ್ಯಂಗಳಂ ಪುರ ಮೂಲಿಕ್ಕೆಣೆಯಾಗಿ ಮಾಡಿ ಕಳದಾ ತೇಜೋಗ್ರುಮೆಂತಾದುದೋ (ಎಕ. XI, ದಾವಣ. ೫೯-೨೮; 1290). **ತೈಲಂಗ :** ೨. ತೆಲುಗು ಬ್ರಾಹ್ಮಣರು (ತೈಲಂಗರು) (ಕಥಾಗಿ. ೮೩).

**ತೆಲ್ಗರ ಮಾರಿ** = ಒಂದು ಬಿರುದು : ಆಚರಸನ ಪುತ್ರಂ ಸರ್ವ್ವಾಧಿ ಕಾರಿ ತೆಲ್ಗರಮಾರಿ ಪತಿಕಾರ್ಯದುರಂಧರಂ (ಎಕ. XIV, ೨೬೨-೩೪ ; 1103). **ತೆಲ್ಲಂಗರಾಯಸ್ಥಾಪನಾಚಾರ್ಯ** = ಒಂದು ಬಿರುದು : ತೆಲ್ಲಂಗ ರಾಯಸ್ಥಾಪನಾಚಾರ್ಯ . . . ಕರ್ನಾಟರಾಯ ದಿಸಾಪಟ್ಟ ದ್ವಾರಾವತೀ ಪುರವರಾಧೀಶ್ವರ ವಿಷ್ಣುವಂಸೋದ್ಭವ (ಕೊಲ್ಹಾ. ಶಾ. ೧೯-೩ ; 1261).

[ ತೆಲುಂಗು + – ಅ$_7$ ]

**ತೆಲುಂಗಿತಿ,** ತೆಲುಗಿತಿ (ನಾ). ತೆಲುಗು ಭಾಷೆಯನ್ನಾಡುವವಳು ; ತೆಲುಗಿನವಳು ; ಆಂಧ್ರಸ್ತ್ರೀ : ಕುಟುಂಬಿತಿ, ತೆಲುಂಗಿತಿ, ತೆಲ್ಗಿಗಿತಿ (ಶಮದ. ೨೦೮ ಪ್ರಯೋ). **ತೆಲುಗಿತಿ :** (ಶ).

[ ತೆಲುಂಗ + – ಇತಿ$_1$ (< – ಇತ್ತಿ) ]

**ತೆಲುಂಗು,** ತೆನುಂಗು, ತೆನುಗು, ತೆಲುಗು (ನಾ). ೧. ದ್ರಾವಿಡ ಭಾಷಾ ವರ್ಗಕ್ಕೆ ಸೇರಿದ ಒಂದು ಭಾಷೆ; ಆಂಧ್ರಭಾಷೆ. 'ತೆಲುಂಗ' ಪರಾ. **ತೆನುಂಗು :** ೧. ತೆಲುರಾಗು, ತೆನುಗು, ತೆನುಂಗು ಎಂಬುದಾಗಿ ತೆಲುಗು ಭಾಷೆಗೆ ರೂಪಗಳನ್ನು ಕೊಡುವುದು (ನೀತಿಸಾ. ೬ ಟೀಕೆ). **ತೆನುಗು :** ೧. ಮೇಲಿನ 'ನೀತಿಸಾ' ಪ್ರಯೋಗವನ್ನು ನೋಡಿ. **ತೆಲುಗು ;** ೨. ತೆಲುಗುದೇಶ ; ಆಂಧ್ರ : ಒಡೆಯಗೆ ಕೈಮುಗಿದೊಯ್ಯನೆ ತೆಲುಗು ನಾಡೊಡೆಯ ಸಾಗಿದನೊಂದು ಬಳಿಗೆ (ಭರತ. ೨೨-೨೦); ಭುಜ ಬಲಾನ್ವಿತರಾದ ತೆಲುಗು ಭೂಪಾಲರ ತ್ರಿಜಗ ಮೆಚ್ಚಲು ಗೆದ್ದು ತಂದ ಗಜಘಟೆಗಳ ಶಾಲೆಗಳೊಪ್ಪಿದುವಾಗ (ಕಂಪವಿ. ೬-೩೦).

[ ದೇ.॥ ತಮಿ. ತೆಲುಕು, ತೆಲುಙ್ಕು ; ಮಲ. ತೆಲುಙ್ಗ ; ತುಳು. ತೆಲುಂಗು, ತೆಲಂಗು ; ತೆಲು. ತೆಲುಂಗು. ತೆನುಂಗು ]

**ತೆಲುಗ** 'ತೆಲುಂಗ' ನೋ.

**ತೆಲುಗಕಾಂಬೋದಿ** (ನಾ). [ಸಂಗೀತ] ಒಂದು ರಾಗದ ಹೆಸರು: ಗುಮ್ಮ ಕಾಂಬೋದಿ ತೆಲುಗಕಾಂಬೋದಿ ಎಂಬಿವೇ ಕಾಂಬೋದಿಯ ವಿಶ್ರರಾಗಂ ಗಳು (ವಿವೇಕ. ೨೩೩). [ ತೆಲುಗ (<ತೆಲುಂಗ) + ಕಾಂಬೋದಿ ]

**ತೆಲುಗಾಣೆಯ** (ನಾ). ಆಂಧ್ರ ಪ್ರದೇಶ : ತೆಲುಗಾಣ [ಪಾಠಾ. ತಿಗುಳಾಣ] ಯ ತೆರಬೀದಿ ತಿಗುಳನಾಡು ತೀರದೆಡೆಯಾಡುವ ದಾರಿ (ಕುರಾಸಾಂ. ೫-೪೭). 'ತುರುಂಕಾಣ್ಯ' ಪರಾ.

[ ತೆಲುಗು + ಅಣ್ಯಂ (P ← ತೆಲು. ಆಣ = ದೇಶ) ]

**ತೆಲುಗಿತಿ** 'ತೆಲುಂಗಿತಿ' ನೋ.

**ತೆಲುಗು** 'ತೆಲುಂಗು' ನೋ.

**ತೆಲುಗೆ** 'ತೆಲಿಗೆ' ನೋ.

**ತೆಲುವೆ** 'ತೆಲಿವಿ' ನೋ.

**ತೆಲ್ಮೆ** 'ತಲಿವಿ' ನೋ.

**ತೆಲ್ಲ$_1$** (ನಾ). ಶುಭ್ರವಾದುದು ; ಹೊಳಪುಳ್ಳದು. 'ತೆಲ್ಲವಣ್ಣ' ಪರಾ.

[ ←ತೆಲು. ತೆಲ್ಲ ]

**ತೆಲ್ಲ$_2$** (ನಾ). ಎಳ್ಳೆಣ್ಣೆ : ತೈಲ . 'ತೆಲ್ಲಿಗ' ಪರಾ.

[ ←ಪ್ರಾ. ತೇಲ್ಲ. / ಸಂ. ತೈಲ ]

**ತೆಲ್ಲಂಟಿ,** ತೆಲ್ಲಂಟೆ, ತೆಲ್ಲಟಿ, ತೆಲ್ಲಟೆ, ತೆಲ್ಲಟ್ಟಿ, ತೆಲ್ಲಟ್ಟು (ನಾ). ೧. ಉಡುಗೊರೆ ; ಬಹುಮಾನ : ಏನಗೆನ್ನೋಪನ ಬಂದುದರ್ಕಿದುವೆ ದಲಾ ತೆಲ್ಲಂಟಿ (ಆದಿಪು. ೧೨-೪೪) ; ಈಶ್ವರಂ ಕೊಟ್ಟುದರ್ಕೆ ತೆಲ್ಲಂಟಿಯೆಂದು ಗೌರಿದೇವಿಯುಮಂಜಲಿಕಾಸ್ತ್ರಮೆಂಬಮೋಘಾಸ್ತ್ರಮಂ ವಿಕ್ರಮಾರ್ಜುನಂಗೆ ಕುಡೆ (ಪಂಪಭಾ. ೮-೨೬ ವ) ; ಲೆಕ್ಕವಿಲ್ಲದೆ ತೆಲ್ಲಂಟಿಯುನಾತ್ಮರ್ಗೆ ಕೊಟ್ಟು ನೆಗಳ್ದಂ (ಎಕ. XIII, ೩೦೩-೨೪ ; 1125) ; ಅದಂ ಕಂದರ್ಪದ್ವಾಸದೇವಂ ಕಾಮದೇವಂಗೆ ಪಟ್ಟಂಗಟ್ಟಿ ಕೊಟ್ಟ ರಾಗರಾಜ್ಯಕ್ಕೆ ತೆಲ್ಲಂಟಿಯಾಗಿ (ಅರ್ಧನೇ. ೨-೩೮ ವ) ; ನಾನು ಹೋಗಿದ್ದೆ ಪಾಪಿ. ನನ್ನ ಸಿರಿಗೌರಿಗೆ ತೇರು ಹಬ್ಬದ ತೆಲ್ಲಂಟಿ ತರಲೆಂದು (ತುಂಗಳ. ೫೩). ೨. ಮದುವೆಯ ಕಾಲಕ್ಕೆ ವಧೂ ವರರಿಗೆ ಕೊಡುವ ಬಳುವಳಿ ; ಮುಯ್ಯಿ : " ತೆಲ್ಲಂಟಿ – ನಿಬ್ಬಣಂ " (ಶಮದ. ಪರಿ. ೨) ; ಕರವೊಸೆದಾ ದ್ರುಪದಜೆಯೊಳ್ ನೆರೆದೊಸಗೆಗೆ ತಮ್ಮ ಬೀರಮುಮಂ ಬಿಂಕಮುಮಂ ತೇಜಮುಂ ತೆಲ್ಲಂಟಿಯುಮಾಹೊಂದರಿಕೇಸರಿಗಾಗಳೀವ ವೋಲ್ ಬೆನ್ನಿತ್ತರ್ (ಪಂಪಭಾ. ೩-೬೨). **ತೆಲ್ಲಂಟೆ :** ೨. ಪ್ರಣತೇಂದ್ರಂ ವರನೆಂದು ಬಂದೆಸೆವ ಸೌಧರ್ಮಾದಿಗಳ್ ಬಂದ ನಿಬ್ಬಣಿಗರ್ ಕಲ್ಪದನಲ್ಪವಸ್ತುನಿವಹಂ ತೆಲ್ಲಂಟೆ (ಪುಷ್ಪಪು. ೦೨-೦೦೯). **ತೆಲ್ಲಟಿ :** ೧. ತೆಲ್ಲಟಿಯೆಂದು ಗಿರಿಜೆಯ ಮೆಚ್ಚಿ ಕೊಟ್ಟ ನಿಶಿತಾಸ್ತ್ರಮಂ . . . ಕೊಂಡು (ಪಂಪಭಾ. ೧೨-೨೦೦ ವ) ; ಮುಡಿಗೆ ಜೋಳಿಯ ತೆಲ್ಲಟಿಯೆಂಬ ನಾಟ್ಯಡಿ ಯಂತೆ (ಧರ್ಮಾಮೃ. ೬-೦೭೩) ; ಈ ಧರ್ಮಕ್ಕೆ ತೆಲ್ಲಟಿಯಾಗೆ . . . ಕರಂಬಂ ಮತ್ತರು ಹತ್ತುಮನಿತ್ತ (ಕಇಅ. ೮೨-೬೮-೮೮ ; 1117) ; ಚಲ್ಲಿದವು ರಥ ಗಾಲಿ ಮುಟಿದವು . . . ಎಲ್ಲಿಯವು ರಥವಾಜಿ ವಾಜಿಗೆ ತೆಲ್ಲಟಿಯುಲೇ ರಥಿಕ ಸೂತರು (ಕುಮ್ವಾ.ಗ. ೧-೩೦) ; ಮೆಲ್ಲಲ್ಲ ಕುಳಿರ ತೆರೆ ಚೆಲ್ಲಾಡುತ್ತಿರಲು ತೆಲ್ಲಟಿಯ ನಗೆನುಡಿಯ ದೊಡ್ಡನೆಂದಂ ಪೋಪೆ (ಕಾಲೂರ. ೭೦-೦೨೮). **ತೆಲ್ಲಟೆ :** ೨. " ತೆಲ್ಲಟೆ[ಪಾಠಾ. ಟ್ಟು]ಯೆನಲ್ಕೆ ಮುಯ್ಯ್ " (ಚತುನಿ. ೭೦) . **ತೆಲ್ಲಟ್ಟಿ :** ೧. ರಸದಂಬುಲದಿನಿಗುಟಿಂದೆಸೆ ದರ್ಪಮ್ಮೆರ್ದೆಯೊಳೊಪ್ಪುವನುರಾಗವನೇ ರಸನೆಯೊಳಟಿ ತೆಲ್ಲಟ್ಟಿಯ ನೊಸೆದೊರ್ವರ್ಗೊರ್ವರೀವವೋಲ್ (ವೀರವಿ. ೬-೭೩). **ತೆಲ್ಲಟ್ಟು :** ೨. 'ತೆಲ್ಲಟೆ' ಪ್ರಯೋಗದ ಪಾಠಾಂತರವನ್ನು ನೋಡಿ.

[ ←ತೆಲು. ತೆಲ್ಲಂಟ, ತೆಲ್ಲಟ ]

**ತೆಲ್ಲಂಟಿಗೆ,** ತೆಲ್ಲಟಿಗೆ (ನಾ). ೧. ಬಹುಮಾನ ; ಉಡುಗೊರೆ. ೨. ಬಳು ವಳಿ; ಮುಯ್ಯಿ: 'ತೆಲ್ಲಂಟಿಗೆಗೊಡು' ಪರಾ. **ತೆಲ್ಲಟಿಗೆ :** ೧. "ತೆಲ್ಲಟಿಗೆ

ಯೆನಲ್ ಮರ್ಯಾದೆಯುಕ್ಕು" (ಕಶರ. ೪೮) ; ಮತ್ತಮಿಾ ಧರ್ಮಕ್ಕೆ ತೆಲ್ಲಟಿಗೆಯಾಗೆ (ಎಪಿ. IX, ೨೬೪-೮೮ ; 1117). ೨. "ತೆಲ್ಲಟಿಗೆವೆಸರು ಮುಯ್ಯೆಂದಕ್ಕು" (ಶಬ್ದಮಂ. ೬೩). P ಇಲ್ಲಿ 'ತೆಲ್ಲಟಿ' ಎಂಬ ಶಬ್ದದ ಚತುರ್ಥೀವಿಭಕ್ತಿಯ ರೂಪವಾದ 'ತೆಲ್ಲಟಿಗೆ' ಎಂಬುದನ್ನು ಸ್ವತಂತ್ರ ರೂಪವನ್ನಾಗಿ ಕೆಲವರು ಸ್ವೀಕರಿಸಿರುವಂತಿದೆ. [ <ತೆಲ್ಲಂಟಿ ]

**ತೆಲ್ಲಂಟಿಗೆಗೊಡು, ತೆಲ್ಲಟಿಗೆಗುಡು** (ಕ್ರಿ). ೧. = ತೆಲ್ಲಂಟಿಗೊಡು: ಪುರವೆಂಬ ನಲ್ಲನೊಡನೆ ಸಿರಿ ಕೂಡಲು ಶರಧಿ ತನ್ನಯ ವಸ್ತುಗಳನೂ ತರಿಸಿ ತೆಲ್ಲಂಟಿಗೆಗೊಟ್ಟಪೊಲ್ (ವರ್ಧಕ. ೧-೧೦೯). **ತೆಲ್ಲಟಿಗೆಗುಡು:** ೨. ಉಡುಗೊರೆಯಾಗಿ ಕೊಡು: ತನ್ನಸುವಂ ತೆಲ್ಲಟಿಗೆಗುಡುವ ತೆಱದೊಳ್ಕೊಟ್ಟಂ (ಗದಾಯು. ೨-೧೩). [ ತೆಲ್ಲಂಟಿಗೆ + ಕೊಡು$_1$ ]

**ತೆಲ್ಲಂಟಿಗೊಡು** (ಕ್ರಿ). ಬಳುವಳಿ ಕೊಡು: ವಸ್ತುವಾಹನಸಂದೋಹವುಂ ತೆಲ್ಲಂಟಿಗೊಟ್ಟು ವಧೂವರರಂ ತದೀಯಾಗಾರಕ್ಕೆ ಕಳಿಪಿ (ನೇಮಿಪು. ೧-೬೭ ವ). [ ತೆಲ್ಲಂಟಿ + ಕೊಡು$_1$ ]

**ತೆಲ್ಲಂಟಿದರ್, ತೆಲ್ಲಟಿದರ್** (ಕ್ರಿ). ಕಾಣಿಕೆಯನ್ನು ತರು ; ಉಡುಗೊರೆಯನ್ನು ತರು: ತೆಲ್ಲಂಟಿದರ್ಪ ಸಾಮಂತಸಂದೋಹದಿಂ . . . ಕರಮೆ ಕಣ್ಗೆಸೆದುದು ನರೇಂದ್ರಭವನಾಂಗಣಂ (ಅಜಿಪು. ೪-೭ ಕಗಳ). **ತೆಲ್ಲಟಿದರ್:** ಚೆಲ್ವಾದರಾ ಕಾಮನುತ್ಸವದಿಂ ತೆಲ್ಲಟಿದಂದ ಮಾಧವಪುರ ಶ್ರೀಲೀಲೆಯಂ ಬಾಲೆಯರ್ (ಶಾಂತಿಪು. ೮-೧೩). [ ತೆಲ್ಲಂಟಿ + ತರ್ ]

**ತೆಲ್ಲಂಟೆ** 'ತೆಲ್ಲಂಟಿ' ನೋ.

**ತೆಲ್ಲಕಾಕಮುಷ್ಟಿ** (ನಾ). ಒಂದು ಬಗೆಯ ಸಸ್ಯ: ಬಿಳೀಕಾಕಮುಷ್ಟಿ, ಪೆಲ್ಲೆ, ತೆಲ್ಲಕಾಕಮುಷ್ಟಿ (ಮೃಜಿಗಿ. ೧೯-೩೩೪). [ ? ]

**ತೆಲ್ಲಟ** 'ತೆಲ್ಲಂಟಿ' ನೋ.

**ತೆಲ್ಲಟಿಗ** (ಗು). ಹೊಳಪುಳ್ಳ ; ಪ್ರಕಾಶಮಾನವಾದ: ಅಲ್ಲಿ ರಂಜಿಪ [ ಪ ] . . . ಪಲ್ಲವಿತವಾದ ಮರಕತ ನೀಲವಜ್ರದಿಂ ತೆಲ್ಲಟಿಗ ಮಣಿಗಳಿಂದ (ಲಿಂಗಪು. ೩-೨೭). [ <ತೆಲ್ಲ$_1$ ]

**ತೆಲ್ಲಟಿಗೆ** 'ತೆಲ್ಲಂಟಿಗೆ' ನೋ.

**ತೆಲ್ಲಟಿಗೆಗುಡು** 'ತೆಲ್ಲಂಟಿಗೆಗೊಡು' ನೋ.

**ತೆಲ್ಲಟಿಗೊಳ್** (ಕ್ರಿ). ೧. ಬಹುಮಾನವಾಗಿ ಪಡೆ. ೨. ಬಳುವಳಿಯನ್ನು ಸೆಳೆ; ಮುಯ್ಯಿಯನ್ನು ತೆಗೆದುಕೊಳ್ಳು: ಅವನಿಪ ಕಂತುವೆಚ್ಚ ಭವಬಾಣಮದೋವದೆ ಕೊಂಡು ಚಂಡವಿಕ್ರಮನ ಶಿರಕ್ಕೆ ತನ್ನ ಶಿರಮಂ ತವೆ ತೆಲ್ಲಟ [ಪಾಠಾಂ. ತಲೆ]ಗೊಳ್ಗುಮೆಂದು . . . ಓಡಿದಂ ನಿಜಪುರಕ್ಕೆ (ಕುಸುಮಾ. ೧೧-೫೮). [ ತೆಲ್ಲಟ (<ತೆಲ್ಲಂಟಿ) + ಕೊಳ್$_1$ ]

**ತೆಲ್ಲಟಿದರ್** 'ತೆಲ್ಲಂಟಿದರ್' ನೋ.

**ತೆಲ್ಲಟೆ** 'ತೆಲ್ಲಂಟಿ' ನೋ.

**ತೆಲ್ಲಟ್ಟ** 'ತೆಲ್ಲಂಟಿ' ನೋ.

**ತೆಲ್ಲಟ್ಟು** 'ತೆಲ್ಲಂಟಿ' ನೋ.

**ತೆಲ್ಲಪುನಿ** (ನಾ). ಒಂದು ಬಗೆಯ ಸಸ್ಯ ; ಬಿಳಿಯ ತಾಳೆ: ಬಿಳಿಪೊಳಿಕು . . . ಬಿಳಿತಾಳೆ, ತೆಲ್ಲಪುನಿ (ಮೃಜಿಗಿ. ೩೯-೭೬೩). [ ? ]

**ತೆಲ್ಲಯಿಸು, ತೆಲ್ಲಯ್ಸು, ತೆಲ್ಲೈಸು** (ಕ್ರಿ). ೧. ದಪ್ಪವಾಗು ; ಮಂದವಾಗು: (+). ೨. ಗಟ್ಟಿಯಾಗು ; ಬಲಗೊಳ್ಳು; ಶಕ್ತಿಯುತವಾಗು: (+). ೩. ಹೆಚ್ಚಾಗು ; ಅಧಿಕವಾಗು: (+). ೪. ಒಟ್ಟಾಗು ; ಗುಂಪಾಗು: ಕಲ್ಲದಾಡುವ ತೆಲ್ಲಯಿಸಿದ ಮಲ್ಲಗಿಳಿಯ ಸವಿನುಡಿಗೆ . . . ತಲ್ಲಣಂಗೊಂಡು (ರಾಮಾಶ್ವ. ೬೩-೪). ೫. ಜಿಡ್ಡಿನಿಂದ ಕೂಡಿರು ; ಸ್ನಿಗ್ಧವಾಗು ; ಅಂಟಂಟಾಗು: (+). ೬. ಬೆಳಗಿಸು ; ಪ್ರಜ್ವಲಗೊಳಿಸು: ತೆಲ್ಲಯಿಸಿ ಮಂಗಳಾರತಿಯ ವನಿತೆಯರೆಲ್ಲ ಭುಲ್ಲಯಿಸಿ ಹಾಡಿ ಹರಸುವ ಹೊತ್ತು (ಸಿದ್ಧರಾ. ೮-೮೮) ; ತೆಲ್ಲಯಿಸಿದಂ ಮೇಳಯಿಸಿದಂ (ಶಮತ. ೩೪ ಪ್ರಯೋ) ; ಪೊಲ್ಲಮೆಯುಂ ನಿರ್ಗುಣಮುಂ ತೆಲ್ಲಯಿಸುತೆ ತಮಗೆ ತಮಗೆ ಪುದುವಲ್ಲದೊಡಂ ನಿಲ್ಲದೆ ಜಗದೊಳ್ಪಾಳ್ವರೆ ಸಲ್ಲಲಿತರ್ (ಚಂದ್ರಪ್ರ. ೧೨-೨೭). **ತೆಲ್ಲಯ್ಸು:** ೬. ಅಲ್ಲಲ್ಲಿ ಕೈದೀವಿಗೆಗಳು ತೆಲ್ಲಯ್ಸೆ [ಪಾಠಾಂ. ತೆತ್ತೈಸೆ, ಬೆಳಗೆ]ಪಲ್ಲವಿಸೆ ಪಲ್ಲವಸಶ್ರೀಗೆ ಮೇಲ್ವಸಗೆ (ನಂದಿಕ. ೧೦-೪೯). **ತೆಲ್ಲೈಸು:** ೧. "ತೆಲ್ಲೈಸಿತೆಂದು ಮಂದೈಸಿದಕ್ಕೆ ನಾಮವದು" (ಶಬ್ದಮಂ. ೫೦) ; "ತೆಲ್ಲೈಸಿತೆನೆ ಬುಧರಿನದು ಮಂದೈಸಿಯೆ ನಿಂದರ್ಥಮಪ್ಪುದು" (ಕವಿಕಂ. ೨೦೨). ೩. ತಂಪಿನಿಂ ತೆಲ್ಲೈಸಿ ಕೋಡುಗುಟ್ಟುವ ಗಾಳಿ (ಕಾಲೂರ. ೭೫-೧೩೮). ೬. ಭರದಿಂ ತೆಲ್ಲೈಸಿದ ಬಹು ಕರದೀಪಿಕೆಗಳ ಮರೀಚಿಮಾರ್ಗಮನಂತಾ ಪುರಲಕ್ಷ್ಮಿಯ ಸೀಮಂತದ ಸುರುಚಿರಕುಂಕುಮದ ರೇಖೆಯೆನಿಸಿತ್ತಾಗಳ್ (ಮಹಾನೇ. ೦೪-೪೭). ೭. ಅಳವಡಿಸು (?): ಅಂತು ದೇವತೆ ಕೊಟ್ಟ ಗದಾದಂಡಮನುರ್ಚಿದವರಿಯುಂ ನಿಮಿರ್ಚಿ ಪುಲ್ಲಿಯುಂ ತೆಲ್ಲೈಸಿ ಗೊಂಡೆಯುಮಂ ದಂಡೆಗೊಳಿಸಿ ಚಾರಣಾಕೃತಿಯುಂ ಪಿಡಿದಾಗಳ್ (ದಶಕು. ೨-೨೫ ವ). [ ತೆಲ್ಲ? + –ಇಸು$_3$ ]

**ತೆಲ್ಲಯ್ಸು** 'ತೆಲ್ಲಯಿಸು' ನೋ.

**ತೆಲ್ಲವಣ್ಣ** (ನಾ). ಶುಭ್ರವಾದ ಬಣ್ಣ ; ನುಣುಪಾಗಿ ಹೊಳೆಯುವ ಬಣ್ಣ: ಚೊಲ್ಲಣಗವಡೆದ ಚಿಂತಾರತ್ನಕಳಶದಿಂ ತೆಲ್ಲವಣ್ಣದ ಬಾಗಿಲಿಂ ಕನಕವಲಗೆಯಿಂ (ಲಿಂಗಪು. ೩-೨೧) ; ಪಲ್ಲವಿತಮಾದ ಹಲಸವರೆ ಪಕ್ಕರೆಯವರೆ ತಲ್ಲಣಿಪ ಸವಿಗೊಡುವ ಸಾಲವರೆ ಸರಳವರೆ . . . ತೆಲ್ಲವಣ್ಣದ ಸೊಂಪಿನವರೆ (ಲಿಂಗಪು. ೮-೪೫). [ ತೆಲ್ಲ$_1$ + ಬಣ್ಣ$_2$ ]

**ತೆಲ್ಲಿಗ, ತೆಲಿಗ, ತೇಲಿಗ$_2$** (ನಾ). ಎಣ್ಣೆಯನ್ನು ತೆಗೆದು ಮಾರಿ ಜೀವಿಸುವವನು ; ಗಾಣಿಗ: "ತೆಲ್ಲಿಗ=ತೈಲಿಕ=ಎಣ್ಣೆವ್ಯಾಪಾರಿ" (ಕರ್ಣಕೋ. ೧೮); ತೆಲ್ಲಿಗ ಸೇಣಿಗ ಮನೆವೀಡಿಲ್ಲಾದದು ತೆಱೆಯುಂ (ಎಪಿ. XIV, ೧೯೧-೨೯; 725); ಅಲ್ಲಿಯ ತೆಲ್ಲಿಗರು ಬಿಟ್ಟ ಧರ್ಮವೆಂತೆಂದಡೆ . . . ಸೊಟಿಗೆಯೆಣ್ಣೆಯುಂ ಬಿಟ್ಟರು (ಎಕ. VII (S), ಶಿಕಾರಿ. ೩೩೪-೨೭; ಸು. 1100); ಹಿಂಡಿಯುಂ ನಂಬಿಯೆಣ್ಣೆಯನುಗುವ ತೆಲ್ಲಿಗನುಮಂ (ಧರ್ಮಾಮೃ. ೮-೫೦); ಪಡಮಂದಿಗಂ, ಪತ್ತಳಿಗಂ, ತೆಲ್ಲಿಗಂ (ಭಾಷಾಭೂ. ೦೬೩ ಪ್ರಯೋ) ; ಹೇಱಿ ಬಂದೆಳ್ಳ ರಾಸಿಗಳ ತೆಲ್ಲಿಗರೊಯ್ದು ಗಾಣವಾಡೊಳ್ಪಿತೆನಿಸಿದ ತೈಲಕುಂಭಕೋಟಿಗಳ ತಂದರು (ಸಿದ್ಧರಾ. ೮-೫೧) ; ಖಲಪ್ರವರ್ತನಂ ತೆಲ್ಲಿಗರೊಳ್ . . . ಅಲ್ಲದೆ ತನ್ನೊಳಿಲ್ಲೆನಿಸಿರ್ಪುದು (ದಶಕು. ೦-೨೨ ವ) ; ತೆಲ್ಲಿಗಂಗೆಳ್ಳನುದಿನಂ ಬೆಳೆದುಂದವಾಯ್ತು (ಬಸಪು. ೪೩-೭೦). **ತೆಲಿಗ:** ತೆಲಿಗರು ಸೇಡೆಯುಂ ಬಿಟ್ಟರು ಸಖರ ಸೇಡೆಯುಂ ಬಿಟ್ಟರು (ಎಕ. V, ಬೇಲೂರು. ೦೭೭-೨೮ ; 1162). **ತೇಲಿಗ$_2$:** ಪಟ್ಟಣಸಾಮಿ ಸೋಮಿಶೆಟ್ಟಿಯರು ಮುಖ್ಯವಾದ ಸಮಸ್ತ ನಗರಂಗಳುಂ ತೇಲಿಗರುಮಿದ್ದುರ್ ಬಿಟ್ಟ ದತ್ತಿ (ಎಕ. VIII, ಸೊರಬ.೦೪೦-೮೫ ; 1195); ದೂಸಿಗರುಂ ಮುಖ್ಯವಾಗುಳಿದ ಪರದರುಂ ತೇಲಿಗರುಂ (ಎಪಿ. XIII, ೨೧-೫೦ ; 1204) ; ತೇಲಿಗರ ಗಾಣವೊಳಗಾಗಿ ಅರಮನೆಯ ನ್ಯಾಯವನ್ಯಾಯ ಮಳ ಬ್ರಿಯ ಏನು ಬಂದಡಂ ಆ ಸ್ಥಳದಾಚಾರ್ಯರು ತಾವೇ ತೆತ್ತು ನಿರ್ನ್ನಯಿಸುವರು (ಎಕ. II, ೩೩೩-೦೭ ; 1206 ?) ; ತೇಲಿಗ ಹಿರಿಯ ತಂಮನ ಮಗ ರಾಮಗೆ ಪೊಂದು ಗ ೧ (ಎಕ. III, ತಿರುಮ. ೨-೭; 1367). [ ತೆಲ್ಲ$_2$ + –ಇಗ./ಸಂ. ತೈಲಿಕ ]

**ತೆಲ್ಲಿಗಗೆಱೆ** (ನಾ). ಒಂದು ಕೆರೆಯ ಹೆಸರು: ಹಿರಿಯ ಕೆಱೆಯ ಕೆಳಗೆ ಗದ್ದೆ ಮ ೧ ತೆಲ್ಲಿಗಗೆಱೆಯ ಕೆಳಗೆ ಗದ್ದೆ ಮತ್ತರ್ ೧ ಕ ೪೫೦ (ಎಕ. XI, ದಾವಣ. ೨೦-೦೯ ; 1045). [ ತೆಲ್ಲಿಗ + ಕೆಱೆ ]

**ತೆಲ್ಲಿಗಗೇರಿ** (ನಾ). ಗಾಣಿಗರ ಬೀದಿ,–ಕೇರಿ: ಮಂತ್ರವಾದಿಯುಂ ಕಂಡ ಗ್ರಹದಂತೆ ತೆಲ್ಲಿಗರ್ ತಲ್ಲಣಿಸೆ ತೆಲ್ಲಿಗಗೇರಿಯುಂ ಪೊಕ್ಕು (ಧರ್ಮಾಮೃ. ೨-೨೧). [ ತೆಲ್ಲಿಗ + ಕೇರಿ ]

**ತೆಲ್ಲಿಗವನೆ** (ನಾ). ಗಾಣಿಗನ ಮನೆ : ಮೂಡಣ ತ[ಳ]ದ ಮೂಱು ಹ[ತ್ತಿ]ಯ ತೆಲ್ಲಿಗವನೆಯುಮನಾ ಶತದೊಳಗೆ . . . ಸರ್ವ್ವಬಾಧಾಪರಿಹಾರವಾಗಿ ಬಿಟ್ಟರು (ಕಇ. II, ೧೦-೩೦ ; 1090) ; ದೇವರ ನಂದಾದೀ[ವಿ]ಗೆಗೆ ಬಿಟ್ಟ ××× ತೆಲ್ಲಿಗವನೆ (ಸೌಇಇ. XI-II, ೧೨೯-೩೪ ; 1083).
[ ತೆಲ್ಲಿಗ + ಮನೆ ]

**ತೆಲ್ಲಿಗಿತಿ** (ನಾ). ಗಾಣಿಗರ ಹೆಂಗಸು ; ಗಾಣಿಗಿತ್ತಿ : ತಲುಗಿತಿ, ತೆಲ್ಲಿಗಿತಿ, ಚಿಪ್ಪಿಗಿತಿ (ಶಮದ. ೨೦೮ ಪ್ರಯೋ). [ ತೆಲ್ಲಿಗ + – ಇತಿ$_1$ (< – ಇತ್ತಿ) ]

**ತೆಲ್ಲೈಸು** ‘ತೆಲ್ಲಯಿಸು’ ನೋ.

**ತೆವಟಿಗೆ** ‘ತಿಪದಿಗೆ’ ನೋ.

**ತೆವಟಿಗೆಬುಲ್ಲು**’ ತಿವಟಿಗೆ ಬುಲ್ಲು’ ನೋ.

**ತೆವಟು** ‘ತೆಂಟು’ ನೋ.

**ತೆವಡೆ** ‘ತೆಟ್ಟೆ’ ನೋ.

**ತೆವಡೆಗಟ್ಟು** (ಕ್ರಿ). ಕಂತೆಕಟ್ಟು ; ಸಿವುಡುಗಟ್ಟು : ಹೊಲದಲ್ಲಿ ಆಳುಗಳು ಜೋಳದ ತೆನೆಗಳನ್ನು ತೆವಡೆಗಟ್ಟುತ್ತಿದ್ದಾರೆ (ರೂಢಿ).
[ ತೆವಡೆ (< ತೆಟ್ಟೆ) + ಕಟ್ಟು$_1$ ]

**ತೆವರ್** ‘ತೆಮರ್$_2$’ ನೋ.

**ತೆವರ** ‘ತೆಮರ್$_2$’ ನೋ.

**ತೆವರಿ** ‘ತೆಮರ್$_2$’ ನೋ.

**ತೆವರಿಕೆ** (ನಾ). ಹೀಯಾಳಿಕೆ : ಆಗವೋಡಲ್ಕವರು ಪಿಡಿತಂದು ನಮ್ಮ ತೆವರಿಕೆ ಗುಮ್ಮಟಲಿಲ್ಲಲೆ ಈಗ ದಂಡಂ ಮಣಿಯೆನುತ್ತ ಬಗ್ಗಿಸಿ ಕೆಡಹೆ (ಚತುಪು. ೨-೩-೩೭). [ ತೆವರು$_1$ (< ತೆಮರ್$_1$) + – ಇಕೆ ]

**ತೆವರಿಸು** (ಕ್ರಿ). ೧. ಅಟ್ಟು ; ಓಡಿಸು : ಇಲ್ಲಿಗಾತಂ ಬರಲು ಕದಹುದೆಙ ಯುದೆ ಕಟಕಿಗಳನಾಡಿಸಿ ಕೆಳದಿಯರ ಕಯ್ಯಿಂದ ತೆವರಿವುದೆನುತ ಬುದ್ಧಿಗಲಿಸಿ (ಸೌಂದಪು. ೧೩-೨೦) ; ತವಕದಲಿ ತತ್ಕ್ಷಣದಿನಭ್ರಕೆ ನ ವ ರು ಧಿ ರ ಮುಬ್ಬೆದ್ದು ಸುರಸೈನ್ಯವನು ತವ[ಪಾಠಾಂ. ಬೆದ]ರಿಸಿತೇನನೆಂಬೆನು ಸಮರ ಸಂಭ್ರಮವ (ತೊರರಾ. ೬-೩೩-೪) ; ಬ ವ ರ ಕೈ ದು ವ ಸಿದ್ಧಸಾಧ್ಯರ ತೆವರಿಸುತೆ ರಣವಿಜಯ ರಭಸದ ರವಳಿಯಿಂ ಸಂಚರಿಪ ಸಾಲ್ವನ ಕಂಡ ವಿಹಗೇಂದ್ರ (ಅಂಬಿಕಾ. ೨೨-೧೪). ೨. ಧ್ವಂಸ ಮಾಡು; ನಾಶಗೊಳಿಸು: ತೆವರಿಸಿದನನಿಬರ. [ ಪಾಠಾಂ. ಸವರಿದನು ಮತ್ತಾ ] ಚತುರ್ಬಲನಿವಹವನು ನಿಮಿಷಾರ್ಧದಲಿ (ಕುಮ್ಯಾಗ. ೨-೩೨) . ೩. ಕಳೆ ; ನಿವಾರಿಸು ; ಪರಿಹರಿಸು : ಲಿಂಗವಿದು ತಾಪತ್ರಯಂಗಳಂ ತೆ ವ ರಿ ಪು ದು (ಸಿದ್ಧೇಪು. ೨೨-೧೦೭) ; ತಂದೆ ಪಂಚಾಕ್ಷರಿಯ ಮಂತ್ರಲಸದುಪದೇಶಮಂ ದಯದೊಳಿತ್ತೆನ್ನ ಪಾ ಪ ಕು ಲ ಮ ೦ ತೆವರಿಸು (ರಾಘಶ. ೧೦-೧೯). ೪. ಜರೆ; ಹೀಯಾಳಿಸು : ಇರುಳರಸನಂ ಜಱಿವ ವದನವನಜವಯೆಸಳ ತೆಱನಂ ತೆವರಿಸುತಿರದೆ ತೊಳಗುವ ನಯನವಳಹರಿಯಿರವ ನೆಱೆ ನಗುವ ನಡು . . . ನೆಲವರೆಗಿಳಿದ ನಿಡುಜಡೆಯ ತರುಣಿಯರು (ನಂದಿಮಾ. ೯-೩೪).
[ ತೆವರು$_1$ ( <ತೆಮರ್$_1$) + – ಇಸು$_3$ ]

**ತೆವರು$_1$** ‘ತೆಮರ್$_1$’ ನೋ.

**ತೆವರು$_2$** ‘ತೆಮರ್$_2$’ ನೋ.

**ತೆವರೇರು** ‘ತೆವರೇಱು’ ನೋ.

**ತೆವರೇಱು, ತೆವರೇರು** (ಕ್ರಿ). ದಿಣ್ಣೆಯನ್ನು ಹತ್ತು ; ಗುಡ್ಡವನ್ನು ಏರು: ಕಾಲುವೆಯುಗಳು ಕುಳಿತವರೇಱಲರಿದೆನಲು ಗಾಲಿವೊಗದುವು ಕೀಲು ಮುಱಿದುವು ಗೋಳುಗುಟ್ಟಿತು ಪುರಜನಂಗಳು (ಕೌಶಿರಾ. ೧೦-೪೪) ; **ತೆವರೇರು** : ತವರುಮನೆಯಾ ದೀಪ ತೆವರೇರಿ ನೋಡೇನು (ಹಳ್ಳಿಯ. ೯೩). [ ತೆವರು$_2$ ( < ತೆಮರ್$_2$) + ಏಱು$_1$ ( < ಏಱ್$_1$) ]

**ತೆವರ್ಚು** ‘ತೆಮುಳ್ಚು’ ನೋ.

**ತೆವಲು, ತೆವುಲು** (ನಾ). ೧. ಉತ್ಕಟವಾದ ಇಚ್ಛೆ ; ಗೀಳು; ಚಟ : ಈ ಮಾತುಗಳಿಂದ ಮಾಸ್ತೋವಳಿಗೆ ಹೆಂಡದ ತೆವಲು ಹತ್ತಿತು (ಪುನರು. ೧೪೭) ; ಆ ಕೊಟಕ್ಕೆ ಹೊಗೇಸೊಪ್ಪು ಎಲೆ ಅಡಿಕೆ ನಶ್ಯ ಸುಣ್ಣ ಮುಂತಾದ ತೆವಲು ಸಾಮಾನುಗಳನ್ನೊದಗಿಸಿ (ಹುಲ್ಯಹ. ೨೦). ೨. ಬೇನೆ ; ವ್ಯಾಧಿ : ನಿನಗೇನು ಬಂತು ತೆವಲು (ಸಮ್ಮನು. ೧೧೨) ; ಸುಳ್ಳು ಹೇಳಲಿಕ್ಕೆ ನನಗೆ ಏನು ತೆವಲು (ಮರಿಮ. ೫೯೨). **ತೆವುಲು** : ೧. ಅವಳಿಗೆ ಅಡಕಲೆ ತೆವುಲು ಜಾಸ್ತಿ (ರೂಢಿ). ೩. ತೀಟೆ ; ಬೆದೆ ; ನಸೆ: ತೆವುಲು ತೀರಿದ ಮೇಲೆ ಲೌಡಿಯ ಸಂಗವೇಕೆ ? (ಗಾದೆ).
[ದೇ.ಶ ತುಳು. ತೆವಲ್ ; ತೆಲು. ತೆವುಲು, ತೆಗುಲು ]

**ತೆವಲುಗಾರ** (ನಾ). ಗೀಳು ಹಿಡಿದವನು ; ಚಟವುಳ್ಳವನು :(+).
[ ತೆವಲು + – ಗಾರ ( < – ಕಾಱ) ]

**ತೆವಳ್** ‘ತೆಮಱ್’ ನೋ.

**ತೆವಳಾಟ** (ನಾ). ತೆವಳುವಿಕೆ ; ದೇಕುವಿಕೆ : ಎಳೆಯ ಮಕ್ಕಳ ತೆವಳಾಟವೂ ಹಾವಿನ ಹರಿದಾಟವೂ ಒಂದು ದೃಷ್ಟಿಯಲ್ಲಿ ಇದೇ ರೀತಿಯದು (ಮನೋನಂ. ೧೭೭). [ ತೆವಳು( < ತೆಮಱ್) + ಆಟ ]

**ತೆವಳು** ‘ತೆಮಱ್’ ನೋ.

**ತೆವಳಿ** (ನಾ). ಅಲಕ್ಷ್ಯ ; ಉದಾಸೀನ. ‘ತೆವಳಿಗಾಣ್’ ಪರಾ. [ ? ]

**ತೆವಳಿಗಾಣ್** (ಕ್ರಿ). ಉದಾಸೀನಮಾಡು; ಕಡೆಗಣಿಸು: ಸತಿ ಪುಯ್ಯಲ್ಚಿವಳ್ ರಘೂದ್ವಹ ಕುಲಸ್ತ್ರೀ ಸೀತೆ ಪೆಣ್ಬುಯ್ಯಲಂ ಶ್ರುತಿ ಕಯ್ಕೊಂಡುದು ಕೇಳ್ದಿದಂ ತೆವಳಿಗಂಡಂದೆನ್ನ ವಿಖ್ಯಾತಿ ದೂಷಿತಮಕ್ಕುಂ (ಪಂಪರಾ. ೯-೧೪೪). [ ತೆವಳಿ + ಕಾಣ್ ]

**ತೆವುಲು** ‘ತೆವಲು’ ನೋ.

**ತೆಳ್, ತೆಳಂ** (ಗು). ತೆಳ್ಳಿತು, ತೆಳ್ಳಿತ್ತು ಎಂಬುದಕ್ಕೆ ಸಮಾಸದ ಪೂರ್ವಪದವಾಗಿದ್ದಾಗ ಬರುವ ಆದೇಶ ರೂಪ. ‘ತೆಳ್ಗನ್ನಡ’, ‘ತೆಳ್ನಡಂ’, ‘ತೆಳ್ವರಿಜು’ ಪರಾ. ತೆಳು. ‘ತೆಳುಗದಪು’, ‘ತೆಳುವಸಿಱ್’ ಪರಾ. ‘ತಿಳಿ$_2$’ ಹೋ.

**ತೆಳ್ಳನೆಯ** = ತೆಳ್ಳಗಿರುವ : ತಳ್ಳನೆಯ ಕೋಟು ಧರಿಸಿದುದರಿಂದ ನೆಕ್ಲದೋವನ ಮೈಯಲ್ಲಿ ನಡುಕ ತಲೆದೋರಿತ್ತು (ಪುನರು. ೩೦೯); ದೃಷ್ಟಿಪಾಟವುಳ್ಳವರ ಬರಿಯ ಕಣ್ಣುಗಳಿಗೆ, ಮಬ್ಬಿನಲ್ಲಾಗಲಿ ತೆಳ್ಳನೆಯ ಮೋಡ ಮುಚ್ಚಿಕೊಂಡಿರುವಾಗಾಗಲಿ, ಶುಕ್ರನ ಕಲೆಗಳು ಅನೇಕ ವೇಳೆ ಕಾಣುವುದುಂಟು (ಜ್ಯೋತಿರ್ವಿ. ೧೧೭). [ < ತೆಳ್ಳಿತು ]

**ತೆಳಗು** (ನಾ). ಕೆಳಭಾಗ; ಅಡಿಭಾಗ: ಆ ಪುಸ್ತಕ ಪೆಟ್ಟಿಗೆಯ ತಳಗಿದೆ (ರೂಢಿ).

**ತೆಳಗಣ** = ಕೆಳಗಿರುವ ; ತಳದ : ನಾಲು ಆಳುವ ರಾಜ್ಯಪಟ್ಟದ ಮೇಲಣ ಆಣೆಯ ಘಟ್ಟತ್ತೆಳಗಣ ಆಣೆಯಗಳಲ್ಲಿ (ಮೈಆರಿ. ೧೯೪೩, ೩೭-೦೭ ; 1642). [ <ಕೆೞಗು ]

**ತೆಳಗೆ** (ಅ). ಕೆಳಗೆ ; ಅಡಿಯಲ್ಲಿ : ಇದೊ ತಗ್ಗು, ಅದೊ ಗುಡ್ಡ, ಅಗೊ ಮಲೆಯ ಬೆಟ್ಟ ನೆಲ ತಳಗೆ ಬಿಟ್ಟ (ಗಂಗಾತ. ೪೦-೦೨). [ <ಕೆೞಗೆ ]

**ತೆಳಱು** ‘ತೆಣಱು’ ನೋ.

**ತೆಳು** ‘ತೆಳ್’ ನೋ.

△ **ತೆಳುಂಪು** ‘ತೆಳ್ಪು’ ನೋ.

**ತೆಳುಕಾಗದ** (ನಾ). ದಪ್ಪವಲ್ಲದ ಕಾಗದ : ತೆಳುಕಾಗದದ ಮೇಲೆ ಊರಿ ಬರೆಯಬಾರದು (ರೂಢಿ). [ತೆಳು (<ತೆಳ್) + ಕಾಗದ ]

**ತೆಳುಗದಪು** ‘ತೆಳ್ಗದಂಪು’ ನೋ.

**ತೆಳುಗನ್ನಡ** ‘ತೆಳ್ಗನ್ನಡ’ ನೋ.

**ತೆಳುಗಲ್ಲ** ‘ತೆಳ್ಗಲ್ಲ’ ನೋ.

**ತೆಳುಗಟಿ** ‘ತೆಳ್ಗಟಿ’ ನೋ.

**ತೆಳುಗಾವಿ** (ನಾ). ತಿಳಿಯಾದ ಕಾವಿಬಣ್ಣದ ಸೀರೆ : ಸಾರಂಗವಟ್ಟ ಪಳಿ ಸಂಧ್ಯಾರಾಗಂ ತ್ರಿವಳಿ ಮಂಚಟಿಗೆ ಪಲ್ಲಕ ನಲ್ಲೂರ. ತೆಳು[ಪಾಠಾಂ. ಳ] ಗಾವಿಯೆಂಬಾ ಸೀರೆಗಳಂ ಸತಿಯರೊಲಿಯೊಳುರುಪಿದರಾಗಳ್ (ತ್ರಿಪುವಿ. ೧೧-೨೪) ; ಕುಂಬಳಗಂಟ ತೆರತವಳಿ ತೆಳುಗಾವಿಯುಂ ಬಿಳಿದಿನ ಸೀರೆ (ಅಮುಸಾಂ. ೪-೧೯). [ ತೆಳು ( < ತೆಳ್ ) + ಕಾವಿ ]

**ತೆಳುಗಾಳಿ** (ನಾ). ಮೆಲ್ಲನೆ ಬೀಸುವ ಗಾಳಿ ; ಮೆಲುಂಗಾಳಿ ; ಮಂದ ಮಾರುತ : ತೆಳುಗಾಳಿಯುಂ ಬಯಸಿ ಭದ್ರದೊಳು ಚರಿಸುವ ರಕಾಂತ ಸತಿಯರ ಕಂಡನು (ಹಡಶಾ. ೪-೩೩); ಬಳಲಿಕೆಯಿಲ್ಲವುಗಣ್ಣಾಜನಿನ್ನಯ ನಿಳಯಕ್ಕಿನ್ನೆಯ್ದು ಬಹಾಗ ತೆಳುಗಾಳಿಯಲ್ಲದೆ ಬಿಜುಗಾಳಿಯಿಲ್ಲ (ಭರತ. ೩೯-೧೮) ; ತೆಳುಗಾಳಿಗೊಯ್ಯನೆಯೆ ನಿರಿನಿರಿ ವಿಕಂಪಿಸುವ ಪಟಿಕನಿರ್ಮಲ ನದಿಯ ಪುಳಕಿತಮುಕುರದಲ್ಲಿ ಮಜ್ಜನಕ್ಕುಜ್ಜುಗಿಸಿ (ಶ್ರೀರಾಮಾ. ೧-೯). [ ತೆಳು( < ತೆಳ್ ) + ಗಾಳಿ$_1$ ]

**ತೆಳುಗೊರಳು** (ನಾ). ತೆಳ್ಳನೆಯ ಕೊರಳು : ನೀಳವಾದ ತೆಳುಗೊರಳಿನ . . . ಎಂಟು ವರ್ಷದ ಹುಡುಗನೊಬ್ಬ . . . ನಾವಿಕ ಟೋಪಿಯನ್ನು ಧರಿಸಿಕೊಂಡಿದ್ದನು (ಪುಸರು. ೪೪೦). [ ತೆಳು ( < ತೆಳ್ ) + ಕೊರಳು ( < ಕೊರಲ್ ) ]

**ತೆಳುತೆರೆ** 'ತೆಳ್ದೆರೆ' ನೋ.

**ತೆಳುದಗಡು** (ನಾ). ತೆಳುವಾದ ಲೋಹದ ಹಲಗೆ,-ಫಲಕ : ಝಗ ಝಗಿಪ ಬೆಳುದಿಂಗಳಿನ ತೆಳುದಗಡನಲು ತೊಳಗುವ ದುಕೂಲವ ಬಿಗಿದು (ಕುವ್ಯಾಗ. ೫-೪೦). [ ತೆಳು ( < ತೆಳ್ ) + ತಗಡು ]

**ತೆಳುದುಗುಲ** (ನಾ). ಶುಭ್ರವಾದ ಬಟ್ಟೆ : ಮಳಯಜದ ಮಲ್ಲಿಗೆಯ ಮುತ್ತಿನ ತೆಳುದುಗುಲ ಸುಲಿಪಲ್ಲ ನಿಡುಗಂಗಳ ಬೆಳಗು ದೆಸೆ ಮುಸುಕು ತಿರೆ (ಸಾಳ್ವಭಾ. ೩-೩೫). [ ತೆಳು ( < ತೆಳ್ ) + ದುಗುಲ ]

**ತೆಳುದೊಗಲು** (ನಾ). ಸೂಕ್ಷ್ಮವಾದ ಚರ್ಮ ; ನವುರಾದ ಚರ್ಮ : ತೆಳುದೊಗಲ ನಿಡುಸೋಗೆಯುಡುಗೆಯುನೆಳಗರುಳ ಸಿಂಗಾರದುಜುಬಿನ... ಕಾಳಿಜದಟ್ಟುಗಳಿಗಳ ಕೆಳಗೆಳೊಳು ಕೊಡಗೂಸು ಪೂತನಿನಿಕರವೊಪ್ಪಿದವು (ಕುವ್ಯಾಭೀ. ೫-೩೪). [ ತೆಳು ( < ತೆಳ್ ) + ತೊಗಲ್ ( < ತೋಲ್$_1$ ) ]

**ತೆಳುನಿದ್ರೆ** (ನಾ). ಸಣ್ಣ ನಿದ್ರೆ ; ಮಂಪರು : ಸಿರಿಮಂಚಮಂ ಸುತ್ತಿ ಮುತ್ತಿ ಕುಳ್ಳಿರ್ದ ಸತಿಯರು ಕೂಡೆ ಮಾತಾಡುತಿರುತಿರಲು ತೆಳುನಿದ್ರೆ ಕವಿದುದೇಂ ವರ್ಣಿಸುವೆನು (ಸೋಮಚ. ೧-೮೪). [ತೆಳು (<ತೆಳ್)+ನಿದ್ರೆ]

**ತೆಳುನೀರು** (ನಾ). ತಿಳಿಯಾದ ನೀರು ; ಶುಭ್ರವಾದ ನೀರು : (ಶ). [ ತೆಳು (<ತೆಳ್) + ನೀರು$_1$ (<ನೀರ್$_1$) ]

**ತೆಳುನೋಟ** (ನಾ). ಸ್ವಚ್ಛವಾದ ನೋಟ ; ನಿರ್ಮಲವಾದ ನೋಟ : ಸನ್ನೆಯ ನೋಟ ಸನ್ಮಾನದ ಸವಿನೋಟ . . . ಭಿನ್ನದೋಬಿದ ತೆಳು ನೋಟದ ಲಲಿತಾಂಗಿ [ಪಾಠಾಂ. ಬಿನ್ನಣದ ತೇಲ್ವ ನೋಟವ ನೋಡುತಲಾಗ] ಚೆನ್ನೆಯರಿರ್ದರೊಂದೆಸೆಯ (ಅಭ್ರಲಿಂ. ೩-೧೦೭). [ತೆಳು (< ತೆಳ್) + ನೋಟ ]

**ತೆಳುಪು** 'ತೆಳ್ಪು' ನೋ.

**ತೆಳುಬಣ್ಣ** 'ತೆಳ್ವಣ್ಣ' ನೋ.

**ತೆಳುಮಜ್ಜಿಗೆ** (ನಾ). ತಿಳಿಯಾದ ಮಜ್ಜಿಗೆ ; ನೀರುಮಜ್ಜಿಗೆ : ಪನಸ ಮಾವು ಕಜ್ಜೂರದ ಪಣ್ಗಳ ರಸಾಯನವನೀಂಟ ತೆಳುಮಜ್ಜಿಗೆಯ ಕೊಂಡು ನೀರ್ಗುಡಿದು ಹೊಟ್ಟೆಯ ತಡಹುತಳ್ದು ಕಯ್ದೊಳೆದರು (ಸಮ್ಯಕೌ. ೭-೨೦). [ ತೆಳು (<ತೆಳ್) + ಮಜ್ಜಿಗೆ ]

**ತೆಳುಮೆಯ್**, **ತೆಳುಮೈ** (ನಾ). ಸ್ಥೂಲವಲ್ಲದ ದೇಹ ; ಕೃಶ ಶರೀರ : ಕಚ್ಚುಕನ್ನಡಕದ ತೆಳುಮೆಯ್ಯ ಬಾಲೆಯೊಬ್ಬಳು ಆ ಭಾಷಣವನ್ನು . . . ತರ್ಜುಮೆ ಮಾಡುತ್ತಿದ್ದಳು (ಪುಸರು. ೩೪೫). **ತೆಳುಮೈ** : ಅತ್ತಿಂದಿತ್ತ ತಿರುಗಾಡುತ್ತಿದ್ದ ತೆಳುಮೈಯ ಗುಜ್ಜಾರಿಯನ್ನು ಕಂಡು ಅವನು ಬಳಿ ಸಾರಿದನು (ಪುಸರು. ೧೪೭). [ ತೆಳು ( < ತೆಳ್ ) + ಮೆಯ್ ]

**ತೆಳುಮೈ** 'ತೆಳುಮೆಯ್' ನೋ.

**ತೆಳುಮೊಗ** (ನಾ). ತೆಳುವಾದ ಮುಖ ; ಕೃಶವಾದ ಮುಖ : ಅವರಲ್ಲೊಬ್ಬಳ ವಯಸ್ಸು ಸುಮಾರು ನಲವತ್ತು. ಅವಳ ತೆಳುಮೊಗ ಬಿಳಿಚಿಕೊಂಡಿತ್ತು (ಪುಸರು. ೧೪೦). [ ತೆಳು ( < ತೆಳ್ ) + ಮೊಗ ]

**ತೆಳುವಸಿಜ್** 'ತೆಳ್ವಸಿಜ್' ನೋ.

**ತೆಳುವಸಿಜು** 'ತೆಳ್ವಸಿಜ್' ನೋ.

**ತೆಳುವಸುಜು** 'ತೆಳ್ವಸಿಜ್' ನೋ.

**ತೆಳುವಳುಕು** 'ತೆಳ್ವಳಿಕು' ನೋ.

**ತೆಳುವಾಸೆ** 'ತೆಳ್ವಾಸೆ' ನೋ.

**ತೆಳುವು** 'ತೆಳ್ವು' ನೋ.

**ತೆಳುವುಡಿ** (ನಾ). ಸಣ್ಣ ಪುಡಿ ; ನವುರಾದ ಹುಡಿ : ತೆಳುವುಡಿಯ ಮಳಲಿಡಿಯಲಿತ್ತಡಿಯ ತಳಗಡಿಯ ಪೊಳೆ ನೆಜೆಯಲುಜೆ . . . ಸಲೆ ಕಣ್ಗೆಸೆದಳಂದು ದಿವಿಜಸಿಂಧು (ಕ್ರಮಿಥಾ. ೯-೨೪). [ ತೆಳು (<ತೆಳ್) + ಪುಡಿ$_2$ ]

**ತೆಳುವೆಣ್ಣು** (ನಾ). ತೆಳುವಾದ ಶರೀರವನ್ನುಳ್ಳ ಹೆಣ್ಣು ; ಕೋಮಲೆ : " ತೆಳುವೆಣ್ಣು, ಲತಾಂಗಿ " (Sylph. ಅಂಕನ). [ ತೆಳು (<ತೆಳ್) + ಪೆಣ್ಣು (<ಪೆಣ್) ]

**ತೆಳುವೆಲರ್** 'ತೆಳ್ವೆಲರು' ನೋ.

**ತೆಳುವೆಳಗು** 'ತೆಳ್ವೆಳಗು' ನೋ.

**ತೆಳ್ಗದಂಪು**, **ತೆಳಂಗದಪು**, **ತೆಳ್ಗದಪು** (ನಾ). ಸುಂದರವಾಗಿರುವ ಕೆನ್ನೆ ; ನುಣುಪಾದ ಕೆನ್ನೆ ; ಕೋಮಲವಾದ ಕಪೋಲ: ದೇವಿಯ ತಾಂಬೂಲ ಚ್ಛಾಯಾವಿಷ್ಕೃತಮಾದ ತೆಳ್ಗದಂಪುಗಳೆಸೆಗುಂ (ಪುಷ್ಪಪು. ೩-೪೮) ; ಕರ್ಮಧಾರಯಕ್ಕೆ – ತೆಳ್ಗದಂಪು, ಒಳ್ಗನ್ನಡಂ (ಶಮದ. ೧೬೪ ಪ್ರಯೋ); ಸೊಗಸುವ ತೊಳಗಣ್ಗಳ ತೆಳ್ಗದಂಪುಗಳ ಸಂಪಗೆಯ ಪಳಿವ ಮೂಗಿನ . . . ಪೆಣ್ಗಳಿರ್ದರು (ಜಬಪು. ೭-೧೨). **ತೆಳಂಗದಪು** : ಅವನ ಕುಳ್ಳಿರಿಸಿ ತೆಳಂಗದಪಮಾಳಾಧರವ ಚುಂಬಿಸಿ ಸುಖದಳೆದಳು (ಕಂನವಿ. ೧೧-೩೦). **ತೆಳ್ಗದಪು** : ಭುಜಂಗಳ ತಣ್ಪನೊತ್ತು ಬಿಂಕಂಬಡೆದಿರ್ದ ತೆಳ್ಗದಪಿನೊತ್ತು (ಸೂತ್ರಸು. ೧೦-೨೬೧) ; ಪಸರಿಪೆಳನಗೆಯ ತೆಳ್ಗದಪಿನಂ . . . ಕಾಂತೆ ಕಣ್ಗೆಸೆದಿರ್ದಳು (ಕ್ರಮಿಥಾ. ೦೮-೩೯) ; ಮೆಲ್ಲಡಿ, ಒಳ್ಪಾಳ್, ತೆಳ್ಗದಪು (ಶಬ್ದಾನು. ೩೦ ಪ್ರಯೋ) ; ಪೆರೆನೊಸಲ ಚೆಂದುಟಿಯ ನುಣ್ದನಿಯ ತೆಳ್ಗದಪಿನ . . . ಮುಗ್ಧೆ (ಪಂಕಾಂಧ. ೫-೭-೫೪). [ ತೆಳ್ + ಕದಂಪು ]

**ತೆಳ್ಗದಪು** 'ತೆಳ್ಗದಂಪು' ನೋ.

**ತೆಳ್ಗನ್ನಡ**, **ತೆಳಂಗನ್ನಡ** (ನಾ). ತಿಳಿಯಾದ ಕನ್ನಡ ; ಶುದ್ಧವಾದ ಕನ್ನಡ : (ಶ). **ತೆಳುಗನ್ನಡ** : ಒಳುಗನ್ನಡವಚ್ಚಗನ್ನಡಂ ಪೊಸತೆಂಬುದು ತೆಳಗನ್ನಡ ಮಿಶ್ರದಿನಿದನಿಳೆಯೊಳ್ ಸತ್ಪುರುಷರೋದಿ ಕೇಳ್ವುದು ಸತತಂ (ಕವಿಚ. III, ೧೪೯. ರಾಜಾವಳೀ ಕಥೆ). [ ತೆಳ್ + ಕನ್ನಡ$_1$ ]

**ತೆಳ್ಗಪ್ಪುರ** (ನಾ). ಶುಭ್ರವಾದ ಕರ್ಪೂರ : ನೋಡಿದ ಕಣ್ಣಿಳಿಟ್ಟ ತೆಳ್ಗಪ್ಪುರದ ಸಲಗೆಯಂತಚ್ಚರಿಂ ಕೂಡೆ ಕೊಂಡಾಡಿದ ಬಾಯ್ಗೋರಂದದಿಂ ತೀವಿದ ತನಿಗೆನೆವಾಲಂತೆ ನೇರ್ಪಟ್ಟ ನಿನ್ನಗ್ಗದ ದೇಹಚಾಯೆಯಿಂ ತಣ್ಣನೆ ತಣಿಯದೆ ಲೋಕತ್ರಯಂ ಚಂದ್ರನಾಥ (ಧರ್ಮನಾ. ೫-೭೩). [ ತೆಳ್ + ಕಪ್ಪುರ ]

**ತೆಳ್ಗಲ್** (ನಾ). ಸಪುರವಾದ ಕಲ್ಲು,_ಚಪ್ಪಡಿ : ಕುಟಿಃ ತವುರಂ ಪಸರಿಸಿ ತೆಳ್ಗಲ್ಲೊಳ್ ಘಟಿಯಿಸುವುದು ಸುಸ್ಥಾನಶಯನನ[ ಮು ]ಪ್ಪಂತೆ ನೆಲಂ (ಅಶ್ವಶಾ. ೭-೫). [ ತೆಳ್ + ಕಲ್$_3$ ]

**ತೆಳ್ಗಲ್ಲ, ತೆಳಂಗಲ್ಲ** (ನಾ). = ತೆಳ್ಗದಂಪು : ಗಲ್ಲಕ್ಕೆ – ಗಲ್ಲಗಿವ . . . ಗಲ್ಲ ಸ್ಥಳಂ, ತೆಳ್ಗಲ್ಲ (ಶಬ್ದಮ. ೨೪೬ ಪ್ರಯೋ) ; ತೆಳ್ಗಲ್ಲ ಪೂಸರನ ತೋಳ್ಗೆಲ್ಲ ವಟ್ಟಿಡಿಗಳೊಳ್ಗಾಡಿ ಜೋಗಿಗಳ ಬಾಳ್ಗೇಡಿ ನಳಿಸುಳಿಗುರುಳ್ಗರ್ಚಿನೊಳ್ಪಿನೊಂದೇಳ್ಗೆ ವಿಟರೆರ್ದೆವಾವುಗಳ್ಗಟ್ಟ ಪೇಳ್ಗೆ (ಉದ್ಭಟ. ೫-೨೦). **ತೆಳುಗಲ್ಲ** : ತನುರುಚಿ ನಗುವುದು ರನ್ನದ ತೊಡವ ವಿಗೆ ಪಚ್ಚೆಗೆಂವ ಲತಗೆಯ ಹುರುಡಿಪ್ಪುದು ತೆಳುಗಲ್ಲವಾ ಸ್ವಯಂಪ್ರಭೆಗೆ (ವರ್ಧಪು. ೪-೮೦).

[ ತೆಳ್ + ಗಲ್ಲ$_1$ ]

**ತೆಳ್ಗಟಿ, ತೆಳಂಗಟಿ** (ನಾ). ತಿಳಿಯಾದ ಗಂಜಿ,_ಅಂಬಲಿ : ಎರಡುಂ ಬಾಳಕ ಪದ್ಮಕವೆರಡುಂ ಚಂದನವೆನಿಪ್ಪುವಂ ತೆಳ್ಗಟಿಯಿಂದರೆದು ನಡುನೆತ್ತಿಯೊಳ್ ಪೂಸೆ ರುಜಾರ್ತನ ತೃಷೆಯ ದಾಹದೊದವಂ ಕಳೆಗುಂ (ಲೋಕೋಪ. ೯_೨೮). **ತೆಳುಗಟಿ** : "ಗಂಜ . . . ಕಾಂಜಿಕವೆನೆ ತೆಳುಗಟಿ" (ವಸ್ತುಕೋ. ೯೨-೪). [ ತೆಳ್ + ಕಟ್$_4$ (<ಕಳ್$_6$) ]

**ತೆಳ್ಗೂದಲು** (ನಾ). ನವುರಾದ ಕೂದಲು ; ತೆಳ್ಳಗಿರುವ ಕೂದಲು : ನೀಟಾಗಿ ಬಾಚಿಕೊಂಡಿದ್ದ ತೆಳ್ಗೂದಲಿನ ಬಿಳಿಚುವರೋರೆಯ ತರುಣ ಕಲಾವಿದ (ಪುನರು. ೩೩೩). [ ತೆಳ್ + ಕೂದಲು (< ಕೂಂದಲ್) ]

**ತೆಳ್ಟುಟಿ** (ನಾ). ತೆಳುವಾದ ತುಟಿ ; ತೆಳ್ಳಗಿರುವ ತುಟಿ : ಕೆದರ್ದ ತಲೆ ನವಿರಿರವ ಮುಗಿದ ಕಣ್ಗಳ್ ಜೋಲ್ದ ವದನದಿಂ ಭುಜದೊಳೊಱಗಿದ ಕೊರಲ್ ತೆಳ್ಟುಟಿಯ ತುದಿ (ಚಬಪು. ೧೦-೬೩). [ ತೆಳ್ + ತುಟಿ$_2$ ]

**ತೆಳ್ದೆರೆ, ತೆಳಂತೆರೆ** (ನಾ). ೧. ಸಣ್ಣ ಅಲೆ,_ತರಂಗ : ಶರದೊಳ್ಮಳುಂಗಿ ನೆಗಪಿದ ಕರಿಕುಂಭಂ ಫೇನ ಪಿಹಿತವಿಂಬಾದುದು ತೆಳ್ದೆರೆ ಮೇಲುದಱಿಂ ಪೊಣ್ಮದ ಸರಸಿಯ ಮಲಯಜ ವಿಲಿಪ್ತ ಕುಚಕುಂಭದವೋಲ್ (ಶಬಶಂ. ೨-೫೬). **ತೆಳುತೆರೆ** : ೧. ತೆಳುತೆರೆಯಿಲ್ಲದಿಂಗಡಲೊಳು ತೇಲುವ ಪೊಳೆವ ಚಂದಿರನೊಲು . . . ಬೆಳ್ಳಿಯ ಪೊಳೆಗೆವಟ್ಟಲು ರಂಜಿಸುದುದು (ವರ್ಧಪು. ೫-೪೦). ೨. ತೆಳುವಾದ ಮುಸುಕು,_ಪರದೆ : ತೆಳುತೆರೆಯ ಮರೆಯಲ್ಲಿ ಅವಳ ಸುಂದರವಾದ ಮುಖ ಕಾಣಿಸುತ್ತಿತ್ತು (ರೂಧಿ). [ ತೆಳ್+ತೆರ್$_4$ ]

**ತೆಳ್ದೇಹ** (ನಾ). = ತೆಳಂಮೆಯ್ : ಇಂತಪ್ಪ ಶೂರೆಯರೆನುತಿರ್ದು ತೆಳ್ದೇಹವಮಂ ತಾಳ್ದರೇಕೆಂದೆಳವಳು (ಮೋಹತ. ೪-೩೪).

[ ತೆಳ್ + ದೇಹ ]

**ತೆಳ್ನಡು** (ನಾ). ಕೃಶವಾಗಿರುವ ಸೊಂಟ; ಸಣ್ಣ ನಡು : ಬಂದರ್ ಗಡಣದೆ ತೆಳ್ನಡುವಿನ ಸೆಳಸಡುವಿನ ಬಡನಡುವಿನಸಿಯನಡುವಿನ ಸತಿಯರ್ (ಅಗವಿ. ೪-೦೨೦) ; ತೆಳ್ನಡು ಬಳ್ಕೆ ಸಖೀಕರದಂಬಕಂ ನಲಿದೊಡನೇಱೆ ನೀಱೆ ಬಿಡದೇಱಿದಳೊಯ್ಯನೆ ರಮ್ಯಹರ್ಮ್ಯಮಂ (ರಾಜಶೇ. ೭-೦೭).

[ ತೆಳ್ + ನಡು$_2$ ]

**ತೆಳ್ಪಟಿ** (ಕ್ರಿ). ಕೃಶತೆ ಅಳಿದಂಹೋಗು ; ದಪ್ಪವಾಗು : ಪೆತ್ತುಂ ತೆಳ್ಪಟಿಯದ ನಡು . . . ಮುನಿದುಂ ಚಿಲ್ರೊತ್ತಿರಿವ ನಗೆವೊಗಂ ಮೆಯ್ವೆತ್ತಿರೆ ಕರವೊಪ್ಪಿದಪ್ಪರಲ್ಲಿಯ ಪೆಂಡಿರ್ (ಕಾವ್ಯಾವ. ೭೪೪).

[ ತೆಳ್ಪು + ಅಟಿ$_1$ ]

**ತೆಳ್ಪು, ತೆಳಂಪು, ತೆಳಂಪು** (ನಾ). ೧. ಪರಿಶುದ್ಧತೆ ; ನಿರ್ಮಲತೆ ; ಶುಭ್ರತೆ : ನೀರ ತೆಳ್ಪು ದುಗ್ಧಾಬ್ಧಿಗೆ ದೊರೆ ಸರಿ ಪೋಲ್ವೆಯೆಂಬೆನಱಿಯೆಂ ಪೊಗಟಲ್ (ಶಾಂತಿಪು. ೩-೫); ದಯೆಯಿಂದೊಲ್ಪಿನ ತೆಳ್ಪಿನ ಗುಣಗಣಾಳಂಕಾರದಿಂ ಮಾರ್ಗನಿರ್ಣಯದಿಂ ತತ್ತ್ವವಿಚಾರದಿಂ . . . ಅಧಿಕನೆಂದು (ಸೌಇಇ. XX, ೧೯-೧೯ ; ೨೨೦) ; ಕಲಿಕಾಲದೇಳ್ಗೆಯುಂ ದೆಸೆಗಿಡೆ ತೂಳ್ದಿ ತಾಳ್ದಿ ಕೃತಲಕ್ಷ್ಮಿಯನೊಲ್ಪಿನ ತೆಳ್ಪುಗಳ್ ಜಗಕ್ಕೆಸದಿರೆ (ಎಕ. VII, ಶಿಕಾರಿ. ೧೨೫-೧೫ ; 1019) ; ಪೂತ ಪೂಗೊಳಗಳ ತೆಳ್ಪು [ಪಾಠಾಂ. ತಣ್ಪು] ತೆಂಕಣೆಲರೊಳ್ಪು ಲತಾಳಿಯ ತಳ್ಪು (ಬಂಚರಿ. ೨-೫) ; ನಿಳ್ಪುಂ ಬೆಳ್ಪುಂ ತೆಳ್ಪುಂ ತಳ್ಪೊಯ್ದಿರೆ . . . ಒಳ್ಪಂ ಗೆಡೆಗೊಂಡು ಸೊಗಯಿಸುವ ಮುಂಡಗೆಯುಂ . . . ಇಟ್ಟರ್ (ಪಾರ್ಶ್ವಪು. ೮-೫೦) ; ಶೋಭಿಸಿ ತೆಳ್ಪಂ ತಾಳ್ದ ಚಂದ್ರೋಪಳಮಮಳ ಶರತ್ಪೂರ್ಣ ಶುಭ್ರಾಂಶುವಂ (ಪುಷ್ಪಪು. ೩-೭೬). 'ಕಡುದೆಳ್ಪು' ಪರಾ. ೨. ತೆಳುವಾಗಿರುವುದು ; ಸಣ್ಣಗಿರುವುದು ; ಕೃಶವಾಗಿರುವುದು : ನುಣ್ಪುಸಿಱಿನೊಳ್ ತೆಳ್ಪು ಬಾಳೆದೊಡೆಯೊಳ್ ನುಂಪು ನುಡಿಯೊಳ್ ಸೊಗಸಿನಿಪ್ಪ ಸಂಜನಿಸಿ ಮೆಱೆಯೆ (ಚಬಪು. ೩೪-೬). △ **ತೆಳುಂಪು** : ೨. ಬಸಿಱ ತೆಳುಂಪು ಕುಂದದೆ . . . ನುತ ತ್ರಿವಳಿ ಕೆಟ್ಟರದೆ (ನೇಮಿಪು. ೮-೦೦೨). **ತೆಳುಪು** : ೨. "ತೆಳು ಪಾದುದು–ಪೇಲವ, ವಿರಲತನು" (ನಾಚಿರಾ. ೩); ಲೋಲಲೋಚನಂಗಳ ಪೊಳೆಪುವಂ ತೆಳ್ವಸಿಱ ತೆಳುಪುವಂ (ಮಹಾನೇ. ೧೪-೬೦ ವ).

[ ತೆಳ್ + – ಪು$_2$./ತಮಿ. ತೆಳಿವು ; ತೆಲು. ತಿಲ್ಪು, ತೆಲುಪು ]

**ತೆಳ್ಪುಗೆಡು** (ಕ್ರಿ). ಶುಭ್ರತೆಯನ್ನು ಕಳೆದುಕೊಳ್ಳು ; ಮಲಿನವಾಗು : ಮದವದ್ದಂತಿ ವರೂಥವಾಜಿಭಟ ಸಂಘಾತಂಗಳ್ . . . ತೆಳ್ಪುರ್ವಿ ಪರ್ವಿದೊಡಾ ಮುನ್ನಿನ ತೆಳ್ಪುಗೆಟ್ಟು ಕೆಸಱಾಯ್ತಾಕಾಶಗಂಗಾಜಲಂ (ಶಂಪಥಾ. ೧೦-೨೯).

[ ತೆಳ್ಪು + ಕೆಡು$_1$ ]

**ತೆಳ್ಪುವೆಱು** (ಕ್ರಿ). ಶೋಭೆಯನ್ನು ಪಡೆ,_ಹೊಂದು ; ಶೋಭಿಸು : ಶರೀರಮುಬ್ಬ ಜನ್ಮನೆ ಸಮೆದಿಂದುಕಾಂತವನಕಾಂತೆಪೊಲೇಂ ತನೆ ತೆಳ್ಪುವೆತ್ತುದೋ (ಶಾಂತಿಪು. ೯-೧೯೦). [ ತೆಳ್ಪು + ಪೆಱು$_1$ ]

**ತೆಳ್ಪೊಡೆ** 'ತೆಳ್ವೊಡೆ' ನೋ.

**ತೆಳ್ಪೊರೆ** 'ತೆಳ್ವೊರೆ' ನೋ.

**ತೆಳ್ಪೊಟಲ್** (ನಾ). ಕಿರಿದಾದ ಪೊಟರೆ,_ಡೊಗರು : ಪರ್ಮರನ ಪಾಱುಗೊಂಬಿನೊಳ್ ಪೊಡೆಯ ತೆಳ್ಪೊಟಲೊಳೊತ್ತುಗಟ್ಟಿದ ಕಿಱುನೊಱನ ಸವಿಜೇನ ಸಜ್ಜನೀಬಸಿಯನಱೆದು (ರಾಮಾಶ್ವ. ೦೦೦-೨೯).

[ ತೆಳ್ + ಪೊಟಲ್$_1$ (< ಪೋಟಲ್) ]

**ತೆಳ್ಮಡಿ** (ನಾ). ಶುಭ್ರವಾದ ವಸ್ತ್ರ ; ಸ್ವಚ್ಛವಾದ ಬಟ್ಟೆ : ಬೆಳ್ದೆರೆಯ ಮುಗಿಲ ಹತ್ತಿಯ ತೆಳ್ಮಡಿಯನುಟ್ಟು ಪೂರ್ಣಮಾರಜನಿಯಂತೆಸದಳಾ ಕೌಸಲ್ಯೆ (ಶ್ರೀರಾಮಾ. ೧೪-೩೫೦). [ ತೆಳ್ + ಮಡಿ$_6$ ]

**ತೆಳ್ವಣ್ಣ, ತೆಳಂಬಣ್ಣ** (ನಾ). ೧. ತಿಳಿಯಾಗಿ ಬಳಿಯುವ ಬಣ್ಣ : ತೊಡವ ಬೆರಸುವ ತೆರಲ್ಪುವಿಡುವರ್ಣದ ತೆಳ್ವಣ್ಣ[ಪಾಠಾಂ. ರ್ಣ]ವರ್ಧೋದಕದ ಬಹುವಿಧದ ವರ್ಣಕ್ರಮಮುಂ (ವರ್ಧಪು. ೭-೩ ವ). **ತೆಳುಬಣ್ಣ** : ೨. ತಿಳಿಯಾದ ಬಣ್ಣ : ಗಂಡ ಮಾಟವಾಗಿ ಹೊಲಿದ ತೆಳುಬಣ್ಣದ ದೊಳು ಕೋಟನ್ನೂ ದೊರೆಟೋಪಿಯನ್ನು ಧರಿಸಿದ್ದನು (ಪುನರು. ೪೩೯).

[ ತೆಳ್ + ಬಣ್ಣ$_2$ ]

**ತೆಳ್ವದ** (ನಾ). ಮನ್ಮಥದ್ರವ ; ಕಾಮರಸ : ತುಳ್ಕಿದವು ತೆಳ್ವದದಂತೆ ನವ ದ್ರವಾಂಬುಗಳ್ (ರೀರಾವ. ೨-೪) ; ಪೊಜವಾಱೊಳುಚ್ಚಳಿಪ ತೆಳ್ವದವಿವರ್ರೊಳೊಪ್ಪೆ (ಕಲ್ಯಾಕಾ. ೩೩೨) ; ತಳ್ವಿಲ್ಲದ ತೆಳ್ವದಂ ಸುರಿಯೆ (ಸೂಕ್ತಿಸು. ೧೪-೫೭) ; ಮಾನಿತ ವರಾಂಗದೊಳ್ ತೆಳ್ವದಂ ಸೂಸೆ (ಚಬಪು. ೨೦-೨೦).

[ ತೆಳ್ + ಪದ$_1$ ]

**ತೆಳ್ವರಿಜು** (ನಾ). ನವುರಾದ ಉಡುಪು,–ಉಡುಗೆ : ತೊಟಲ್ವ ಕಣ್ಮಲರು ಮನೋಕುಳಂ ತಳೆದ ತೆಳ್ವರಿಜುಂ . . . ಅಪೂರ್ವಭಾವಮಂ ಲಲನೆಗೆ ತಂದುವಂದನುದಿನಂ ಬಳೆಯುತ್ತಿರೆ ಗರ್ಭದರ್ಭಕಂ (ಪುಷ್ಪಪು. ೪-೦೫).

[ ತೆಳ್ + ಪರಿಜು ]

**ತೆಳ್ವಸಿರು** 'ತೆಳ್ವಸಿಱ್' ನೋ.

**ತೆಳ್ವಸಿಱ್, ತೆಳಂಪಸಿಱ್; ತೆಳಂಪಸಿಱು, ತೆಳಂಪಸುಱು, ತೆಳ್ವಸಿರು, ತೆಳ್ವಸಿಱು, ತೆಳ್ವಸುರು, ತೆಳ್ವಸುಱು** (ನಾ). ಕೃಶವಾದ ಹೊಟ್ಟೆ,– ಉದರ : ತನುರೇಖೆಗೊಂಡ ಕೊರಲೊಡ್ಡಿದ ಪರ್ಮೊಲೆ ತೆಳ್ವಸಿಱ್ (ಶಂಪಥಾ. ೧-೦೦೪) ; ಸುದತಿಯ ತೆಳ್ವಸಿರ್ನೆಱೆ ಪೊದಟ್ದುದು ವಕ್ತ್ರ

ಸರೋರುಹಂ ಬೆಳರ್ತುರ್ದು (ಸುಕುಮಾ. ೧೦-೧೪) : ಎಸೆವುದು ವಳಿತ್ರಯಂ ಗಳಿಸಿಸೆವಸಿಯಳ ತೆಳ್ವಸಿಱ್ (ಮಲ್ಲಿಪು. ೩-೬೬) ; ಅವಳ ತೆಳ್ವಸಿಱಸೆಗುಂ (ಜಗವಿ. ೧೦-೨೬) ; ತೆಳ್ವಸಿಱೊಳೆಸೆವ ಸೋಂಪಿನಿಂ ತಾನುಂ ನೆಗೆತರೆ (ಕುಸುಮಾ. ೫-೮). **ತೆಳುವಸಿಱ್ :** ಸಿದ್ಧರಾಮನರಿಷಡ್ವರ್ಗಮಂ ಗೆಲಲು ನಡೆವಡಜನಿಟ್ಟ ಗೂಡಾರವಾ ಕಂಗೊಳಿಸಿತೆನೆ ತೆಳುವಸಿಱ್ ಪರ್ಚಿತು (ಸಿದ್ಧರಾ. ೧-೪೯). **ತೆಳುವಸಿಱು :** ಹೊಳೆವ ಕಂಗಳ ದೀರ್ಘ ಕೇಶದ ತೆಳುವಸಿಱ . . . ಶಂಕಿನಿಯರ ನೃಪಾಲನೀಕ್ಷಿಸಿದ (ಜೀವಂಧ. ೧೬-೪೨). **ತೆಳುವಸುಱು :** ತೆಳುವಸುಱ ಬಱುವೊಯ್ಲ . . . ಹಾಹಾರವದ ಕಾಯದಲಿ ಲಲನೆ ಬರೆ (ಕರ್ಣಾಟಭಾ. ೭-೧೨) ; ಸೂಳುವೊಯ್ಲಿನ ತೆಳುವಸುಱ ಕರತಾಳದಲಿ ಹಾಹಾವಿರಾವದ ಮೇಳವದ ಗೀತದಲಿ ಬಂದಳು ದ್ರೌಪದೀದೇವಿ (ಕರ್ಣಾಟಭಾ. ೧೦-೦೪) ; ತ್ರಿದಶರ ಹೊಟ್ಟೆ ತೆಳುವ ಸುಱಾಯ್ತು ಬೀತುದು ದೈವಗುರುಭೀತಿ (ನಿಘಾಗ. ೪-೧೦-೧೬). **ತೆಳ್ವಸಿರು :** ಸುಳಿಗುರುಳು ತೆಳ್ವಸಿರು ಬಡನಡುವು ನಡುಗೆ (ಪಂಪಾರಾ. ೫-೬-೩೯). **ತೆಳ್ವಸಿಱು :** ಕಂಪಿಸುವ ನುಣ್ದೊಡೆಗಳ ಬದಿರುವ ಜಘನ ತೆಳ್ವಸಿಱ (ಮೋಹತ. ೦೯-೬೩). **ತೆಳ್ವಸುರು:** ಅಡಿ ಜಘನ ನಡು ತೆಳ್ವಸುರು . . . ಮುಡಿಗಡಣದಿ ಸಲೆ ಸೊಗಸುತಿರ್ಪ್ಪಳು (ನವಮೋ. ೨೪-೦೯). **ತೆಳ್ವಸುಱು :** ನಗೆಮೊಗದಲರ್ಗಣ್ಣ ಬಡಬಾಸೆ ತೆಳ್ವಸುಱ ತೊಂಗಲ್ಗುರುಳ ವಿಮಲ ಪದ್ಮಾವತಿಯು ನಿಟ್ಟಿಸಿದನು (ರಾಜಶೇ. ೧೩-೨೪).

[ ತೆಳ್ + ಬಸಿಱ್ ]

**ತೆಳ್ವಸಿಱು** 'ತೆಳ್ವಸಿಱ್' ನೋ.

**ತೆಳ್ವಸುರು** 'ತೆಳ್ವಸಿಱ್' ನೋ.

**ತೆಳ್ವಸುಱು** 'ತೆಳ್ವಸಿಱ್' ನೋ.

**ತೆಳ್ವಳಿಕು, ತೆಳುವಳಿಂಕು** (ನಾ). ಶುಭ್ರವಾದ ಸ್ಫಟಿಕ ; ನಿರ್ಮಲವಾದ ಪಟಿಕ : ಪಗಲನುದಂಶುವಿಂದುಗುಟ್ಟಿ ದೀವಿಗೆ ತೆಳ್ವಳಿಕಿಂದವಾದ ನುಣ್ಣಗ ಲಿಯೊಳ್ . . . ಸಜ್ಜೆಯೋವರಿಯಿದೋವರಿ ಮಾಡಿತು ಕಂತುಗೆಮ್ಮಮಂ (ಚಂದ್ರಪು. ೮-೬೦). **ತೆಳುವಳುಕು :** ಕಡೆಗಣ್ಣಳಿಗೆಸೆದುವು ತತ್ಕಳವೆಗೆಬಗ ಲೆನುತಾಗಸದೊಳ್ನಿಂದ ಗಿಳಿಯಂ ಸೆಳೆಯಲೆನುತ್ತವರೆತ್ತಿದ ತೆಳುವಳುಕಿನ ಸೆಳೆಯೋ ವಸುವರ್ಟೈಯ ತೊಳಗುವ ಗಾಳಿಪಟಕೆ ಕಟ್ಟಿದ ರಜ್ಜುವಿದೋ ಎಂಬಂತೆ (ಜಯಚಾ. ೧-೪೧) ; ತೆಳುವಳುಕಿನ ಬಟ್ಟಬಟ್ಟಲೊಳಗೆ ಕಣ್ಗೊಳಿ ಸುವ ಕಸ್ತುರಿಗೆಸಱು ಎಳಸಿದುದಿಂದುಮಂಡಲದ ನಡುವೆ ನಳನಳಿಪ ಕಳಂಕವಿದೆನಲು (ಕುಮಾರಸಾಂ. ೮-೧೩). [ತೆಳ್ + ಪಳಿಕು₂ (<ಪಟಿಕ₁)]

**ತೆಳ್ವಳ್ಳಿ** (ನಾ). ತೆಳ್ಳಗಿರುವ ಅಳ್ಳೆ ; ತೆಳುವಾದ ಪಕ್ಕೆ : ಅಱದ ಚಮರ್ ನಿಟ್ಟುಸುರ್ಗಳಿಂ ಪೊಯ್ವ ತೆಳ್ವಳ್ಳೆ[ಪಾಠಾಂ. ತೆಳ್ವಳಿಯ]ಬಳಲ್ದ ಕೈ ವ್ಯೆಯ ಪೊಸಗಂಪು ಕೆದಱಿದ ನಿಱಿಯ ಸುರತಾಂತೆಯರ್ ದೇವಕಾಂತೆಯರ್ ಬರುತಿರ್ದರು (ಜಬಪು. ೦೯-೨೫). [ ತೆಳ್ವು + ಅಳ್ಳೆ₁ ]

**ತೆಳ್ವಾಸೆ, ತೆಳುವಾಸೆ** (ನಾ). ನವುರಾದ ಬಾಸೆ : ಸಣ್ಣನಡು ಬಳೆಯು ತಿವಳಿಗಳೆಡೆಗೆ ತೆಳ್ವಾ[ಪಾಠಾ. ಳುವಾ]ಸೆ ನುಣ್ಣನೆ ಪೊಗರ್ವಡೆಯೆ (ಭ್ರಮಿಥಾ. ೧೯-೩೪). **ತೆಳುವಾಸೆ :** ಮೇಲಿನ ಪ್ರಯೋಗದ ಪಾಠಾಂತರವನು. ನೋಡಿ. [ ತೆಳ್ + ಬಾಸೆ₁ ]

**ತೆಳ್ವು, ತೆಳುವು** (ನಾ). ೧. = ತೆಳ್ಪು ೨ : ನಿಱಿಯ ಸಿಂಗರದುಡೆ ತೆಳ್ವು ದಸಿಯ ಪೊಡೆಯ . . . ಸೌಂದರಿಯದರಸಿ (ಭ್ರಮಿಥಾ. ೧೦-೯). **ತೆಳುವು :** ೨=ತೆಳ್ಪು ೧ : "ಸ್ವಚ್ಛ – ತೆಳುವು, ವಿಶಾಸವು" (ಕಾಶ್ಯ. ೩). ೩. ಅಸ್ಥಿರವಾದುದು ; ಬೇಗ ಮರೆತುಹೋಗುವಂತಹು : ಜನತೆಯ ನೆನಪು ತೆಳುವಾದುದು ; ತಾತ್ಕಾಲಿ ಪ್ರಮೇಯ ಪ್ರಸಂಗಗಳಲ್ಲಿ ಅದಕ್ಕೆ ಹೆಚ್ಚು ಆದರ (ಚರೀವ. ೦೫೬). [ ತೆಳ್ + – ವು ]

**ತೆಳ್ವುಸುರು** 'ತೆಳ್ಪುಸಂರಂ' ನೋ.

**ತೆಳ್ವಿಮರ್** (ನಾ). ಕಿರಂಬೆವರಂ ; ಸಣ್ಣನೆಯ ಬೆವರಂಪನಿ : ವಿಭೂಷಣಾಂಶುಲತೆ ತಂದಲ ಬಿಂದುವೊಲುಣ್ಮೆ ತೆಳ್ವಿಮರ್ಗಳಿಯಿಸೆ ಮೇಘಮಾಳೆವೊಲದೇನೆಸೆದತ್ತೊ ಸಭಾಪ್ರಯಾಣದೊಳ್ . . . ಖಚರಾಂ ಗನಾಜನಂ (ವರ್ಧಪು. ೫-೨೭). [ ತೆಳ್ + ಬೆಮರ್₂ ]

**ತೆಳ್ವೆಳಗ** (ನಾ). ಶುಭ್ರವಾದ ಬೆಳಕನ್ನುಳ್ಳವನು ; ಚಂದ್ರ : ವಿಂಗಲ ಚ್ಚಣಂ ತೆಳ್ವೆ[ಪಾಠಾಂ. ತಣ್ಪೆ]ಳಗನಮರ್ದುಕಳಿವೆಳಗ . . . ಶಶಿಯ ನಾಮಂ (ಅಭಿಧಾ. ೪೩). [ ತೆಳ್ವೆಳಗು + – ಅ₇ ]

**ತೆಳ್ವೆಳಗು, ತೆಳುವೆಳಗು** (ನಾ). ಬೆಳ್ಳನೆಯ ಬೆಳಕು ; ಶುಭ್ರವಾದ ಬೆಳಕಂ : ತಿಳಿವೆಳಗಿನ ತೆಳ್ವೆಳಗಿನ ಬಳಿವೆಳಗಿನ ಬಳ್ಳಿವೆಳಗಿನೊಳ್ಳೆಳಗಿನ ಬೆಳ್ಪೆಳಗಿನ ಬೆಳಸಿನ ಸಿರಿಯೆನೆ ತೊಳತೊಳ ತೊಳಗಿದುದು ಮೂರ್ತಿ ಚಂದ್ರಪ್ರಭನಾ (ಶಬ್ದಾನು. ೧೧೦ ವ್ಯಾಖ್ಯಾ). **ತೆಳುವೆಳಗು :** ಪಳಿಕಿನ ಕಲಶದ ತೆಳುವೆಳಗಿನೆಳಕದಿನೆಳನೀರ ಪೊನಲೊಳ್ ಮುಬುಗಿಸುವಂತೆಯುಂ (ಅನಂಪು. ೫-೭೦ ವ). [ ತೆಳ್ + ಬೆಳಗು₂ ]

**ತೆಳ್ವೆಱ** (ನಾ). ಗೆರೆಯಾಗಿರುವ ಚಂದ್ರ ; ಬಾಲಚಂದ್ರ : ಜಡಗಳ ಬಾಬರೇ ತಲೆದಳಿರ್ ಫಣಿ ಸುತ್ತಿದ ಬಳ್ಳಿ ತಾಳ್ದ ಬಾನ್‌ಗಡಲದು ಪುಷ್ಪ ಮಾಲೆ ಗಱವೂ ಗಱ ತೆಳ್ವೆಱ (ಶಬಶಂ. ೩-೩). [ ತೆಳ್ + ಪೆಱ ]

**ತೆಳ್ವೊಗೆ** (ನಾ). (ಹಿತವಾದ ಪರಿಮಳದ) ತೆಳುವಾದ ಹೊಗೆ,–ಧೂಪ: ಚೌಮೂಲೆಗಳಲ್ಲಿಯೂ ಸೋಂಬಿನಿಂದ ಪಲವಾಕೃತಿಗಳಿಂದ ತೆಳ್ವೊಗೆಯು ಸಂಪದವನ್ನೊಯ್ಯನೆ ಏರಿಸಿ ಕುಡುತ್ತಿರುವ ಅಗುರು (ಜಬ್ಬಿ. ೮೨-೧೪).

[ ತೆಳ್ + ಪೊಗೆ₂ ]

**ತೆಳ್ವೊಡೆ, ತೆಳ್ಪೊಡೆ** (ನಾ). = ತೆಳ್ವಸಿಱ್ : ತೆಳ್ವೊಡೆ ಕಡುಚಪ್ಪಡೆದುದು (ಅನಂಪು. ೬-೫). **ತೆಳ್ಪೊಡೆ :** ಕಡು ಬಿಣ್ಪು ವೆತ್ತ ಪೊಱಿ . . . ರ್ಜುಗಿರ್ದವೆ ಸಣ್ಣ ಪುರ್ಬು ತೆಳ್ಪೊಡೆ ಸುಳಿವಲ್ಗಳಿಂದದ ಕದಂಬಿರವೊಪ್ಪಿ ಕಣ್ಗೆ ತೋಱಿದಲ್ (ರಾಜಶೇ. ೧೧-೮೫). [ ತೆಳ್ + ಪೊಡೆ₃ ]

**ತೆಳ್ವೊರೆ, ತೆಳ್ಪೊರೆ** (ನಾ). ನವುರಾದ ಪೊರೆ,–ಪದರ: ಬೆಳ್ಮುಗಿಲ ತೆಳ್ವೊರೆ ಯನಿಂದ್ರಚಾಪಲೇಖೆಯುಂ ತೆಗೆವ ಶರಲ್ಲಕ್ಷ್ಮಿಯುಂ ಪೋಲ್ತು ನಿಜೋತ್ತ ರೀಯ ಪಲ್ಲವದ ಪೊರೆಯಿಂ ತೆಗೆದು . . . ಮಣಿದೊಡವನೊರ್ವಳಂಗ ನೆಗೆತ್ತಳ್ (ಮಲ್ಲಿಪು. ೪-೬೦ ವ) ; ಕೆಮ್ಮುಗಿಲ ತೆಳ್ವೊರೆಯ ಮಱಯೊಳ್ ಏಱುವ ಸಂಜೆವೆಱಯ ಮುಱುಕಮಂ ಮೆಱದುಂ (ವರ್ಧಪು. ೧೦-೫ ವ). **ತೆಳ್ಪೊರೆ :** ಕರಗಿಸೆ ಬೆಳ್ಳಿಯಪ್ಪುಡಿದು ತೆಳ್ಪೊರೆಯೆತ್ತ ದುಕೂಲವಪ್ಪ ಕಂಡರಿಸೆ ಮರಾಳವಪ್ಪ . . . ಅಗುರ್ವನೊಳಕೊಂಡುದು ಚಂದ್ರಿಕೆ ಸಾಂದ್ರ ಭಾವದಿಂ (ಜಗವಿ. ೦೬-೦೦೯) ; ಪಿಡಿದ ಜವನಿಕೆಯ ಮಱಯೊಳ್ ಕುಡು ಮಿಂಚಿನ ಬಳ್ಳಿ ಮುಗಿಲ ತೆಳ್ಪೊರೆ[ಪಾಠಾಂ. ತೆಣ್ಪೊರೆ]ಯೊಳ್ ಕಣ್ಗೆಸರಂ ಪೊಲಡರೆ ತೋರ್ದುವು ತೊಡವಿನ ಬಿಡುವುಂ ಬಿಡೌಜನಂಗಚ್ಛ . . . ಯುಂ (ಅನಂಪು. ೫-೯೪). [ ತೆಳ್ + ಪೊರೆ₆ ]

**ತೆಳ್ಸರಿ** (ನಾ). ಸಣ್ಣನೆಯ ಮಳೆ ; ಹನಿಮಳೆ : ಮೆಲ್ಸರಿ ಸೂಳ್ಸರಿ ದುಂಗು ಲೊಳ್ಗಲ್ಸರಿ ತೆಳ್ಸರಿ ಕರಂ ಪೊಸಲ್ವರಿಯಿವ ಬಂಬಲ್ಸರಿ (ರಾಜೇಂ. ೮-೦೦.) ; ಮೆಲ್ಸರಿ ತೆಳ್ಸರಿ ಸಾಲ್ಸರಿ ಸೂಳ್ಸರಿ ಕಾಲ್ಸರಿ ಸುರಿದವು ಉಧೋ ಉಧೋ (ಕ್ರೌಂಚಪ. ೫೨-೨೦). [ ತೆಳ್ + ಸರಿ₆ ]

**ತೆಳ್ಳ** (ನಾ). ೧. ಒಬ್ಬಾತನ ಹೆಸರು : ತೊರೆ ಕಾವಗದನುಂ ಬೀವಗವರ್ಸ ವಾರಬದಿಗದಾಲನುಂ ತೆಳ್ಳನುಂ ತಾಬಲಿಯುನುಂ (ಎಕ. III, ನಂಜನ. ೦೩೯-೬; 916 ?). ೨. ಒಂದು ಕುಲದ ಹೆಸರು: ಶ್ರೀತಿಪ್ಪೂರುತೀರ್ತ್ಥದ ಹಳ್ಳಿ ಹಾದಿಲವಾಗಿಲ ಭೂವಿಗಾರಂ ತೆಳ್ಳರ ಕುಲದ . . . ಱಯಂಗ ಗಾಉಂಡನ ಮಗಂ (ಎಕ. III, ಮಳವ. ೪೮-೦೦ ; 1690). [ ? ]

**ತೆಳ್ಳಗೆ** (ಅ). ೧. ಸ್ಪಷ್ಟವಾಗಿ ; ನಿಷ್ಕೃಷ್ಟವಾಗಿ ; ತಿಳಿಯುವಂತೆ : ಉಳ್ಳೋದುಗಳೊಳಗೆನಿತಱವುಳ್ಳರ್ಗಂ ತಿಳಿಪಲಱಯದನಿಪೆಡಗಳುಮಂ

ತೆಳ್ಳಗಿರೆ ತಿಳಿವುಗುಂ (ಶಂಪಭಾ. ೨-೩೩). ೨. ತಿಳಿಯಾಗಿ ; ನೀರಾಗಿ ; ಅಳ್ಳಕವಾಗಿ : ಒತ್ತರಿಸಿಯದನು ತೆಳ್ಳಗೆ [ಪಾಠಾಂ. ನೆ]ಮಾಡಿ (ಸೂಪಶಾ. ೧-೨೩) ; ಜೀರಿಗೆ, ಮೆಂತ್ಯ, ನುಚ್ಚು ಈ ಮೂರನ್ನೂ ಮಜ್ಜಿಗೆಯೊಡನೆ ಅರೆದು ತೆಳ್ಳಗೆ ಕಲಸಿ . . . ಕೊಡಲು ಮತ್ತೊಂದು ಸಲ ವಾಂತಿಯಾಗು ವುದು (ಸಕಪ್ಪ. ಪರಿ. ೪೮೮). ೩. ತೆಳುವಾಗಿ; ಸಪುರವಾಗಿ; ಕೃಶವಾಗಿ: ಒಂಟಿಯ ಶರೀರವು ತೆಳ್ಳಗೆ ಇರುತ್ತದೆ (ಮುಂಬಯಿ. ೩-೬೪); ಗೆಡ್ಡೆಗಳನ್ನು ತೊಳೆದು ಸಿಪ್ಪೆ ತೆಗೆದು, ತೆಳ್ಳಗೆ ಕೊಯಿದು . . . ನೀರಿನಲ್ಲಿ ಬೇಯಿಸ ಬೇಕು (ಅಡುಶಾ. ೦೧೩).

ತೆಳ್ಳಗಾಗು = ೧. ನೀರಾಗು : ಅಂಬಲಿ ತೀರ ತೆಳ್ಳಗಾಗಿದೆ (ರೂಢಿ). ೨. ತೆಳುವಾಗು ; ವಿರಳವಾಗು ; ಹಗುರವಾಗು : ಹವೆಯು . . . ಮೇಲಕ್ಕೆ ಹೋದ ಹಾಗೆ ತೆಳ್ಳಗಾಗಿರುತ್ತದೆ (ಮುಂಬಯಿ. ೪-೬೦). ೩. ಸಣ್ಣಗಾಗು ; ಸೊರಗು : ಪ್ರೇಮಿಯಾದವನು ಯೋಚಿಸಿ ಯೋಚಿಸಿ ಸಣ್ಣಗಾಗಬೇಕು, ತೆಳ್ಳಗಾಗಬೇಕು (ಅಲಪೂ. ೩೩). [ ತೆಳ್ + -ಅಗ್₃ ]

**ತೆಳ್ಳನೆ** (ಅ). ೧. ಸ್ಪಷ್ಟವಾಗಿ ; ಚೆನ್ನಾಗಿ : ಮುನಿವಚನದೊಳಂ ನಂದನ ರೊಳವಾಗಳ್ ಯಶೋಮತಿ ಕ್ಷಿತಿಪಂ ತೆಳ್ಳನೆ ತಿಳಿದು (ಯಶೋಚ. ೪-೬೨); ಬಂದ ಕಾರ್ಯವ ನೀವು ತೆಳ್ಳನೆ ತಿಳಿವೊಲು ಪೇಳಿ (ವರ್ಧಚ. ೬-೦೪). ೨. ತೆಳುವಾಗಿ : ಕಳ್ಳಿಯುಮುಮೆಕ್ಕೆಯುಮುಮಂ ಸುಟ್ಟಿಳ್ಳಿಂ ಮಸಿಯಾಗಿ ಪುರಿದು ಚೂರ್ಣಸಮೇತಂ ತೆಳ್ಳನೆ ಪೂಸುಗೆ (ಅಶ್ವಶಾ. ೦೩-೨೦).

ತೆಳ್ಳತೆಳ್ಳನೆ, ತೆಳ್ತೆಳ್ಳನೆ (ದ್ವಿರುಕ್ತಿ) : ಅದಂ ಚಾರಿಸಲು ತೆಳ್ಳತೆಳ್ಳನೆ ಮಡಕೆಯಡಿಯೊಳಗೆ ಬಿಳ್ದು ಹಳೆಯಂತೆ ಹಾಲಹುದು (ಸೂಪಶಾ. ೨-೩); ತೆಳ್ದೆಳ್ಳನಾ[ಪಾಠಾಂ. ತೆಳ್ದೆಳ್ಳಮಾ]ದ ಪಾಲ್ಗಡಲಳ್ದರೆಯೊಳ್ ಮಸುಳ ಮಸುಳನೆಸೆದುವು ಮಣಿಗಳ್ (ಅನಂಪು. ೩-೬೩) ; ತೆಳ್ದೆಳ್ಳನಾದ ಪಾಲ್ಗಡ ಲೊಳು ತಳತಳಿಸುವ ಮಣಿನಿಚಯ (ಅನಂಚ. ೭-೦೨೬). [ತೆಳ್ + -ಅನೆ₁]

**ತೆಳ್ಳಿತು, ತೆಳ್ಳಿತ್ತು** (ಗು). ೧. ತೆಳ್ಳಗಿರುವ ; ಕೃಶವಾದ ; ತೆಳುವಾದ : ಬೆಟ್ಟಿತು ತೆಳ್ಳಿತು . . . ನಿಡಿದಿನಿದೆಂಬಂತುಳ್ಳುವು ತುದು ಕಡೆಯನೆ ಕೈಕೊಳ್ಳಿಂ ಗುಣವಾಚಿ ಮೇಣ್ ತುಕಾರಂ ದ್ವಿತ್ವಂ (ಶಮದ. ೭೭ ಪ್ರಯೋ). 'ತೆಳ್ಗದಲು' ಪರಾ. ೨. ಸುಂದರವಾದ ; ಕೋಮಲವಾದ. 'ತೆಳ್ಗದಂಪು' ಪರಾ. ೩. ಶುಭ್ರವಾದ ; ಬೆಳ್ಳ ಗಿರುವ. 'ತೆಳುದುಗುಲ', 'ತೆಳ್ಮಡಿ' ಪರಾ. **ತೆಳ್ಳಿತ್ತು** : ೧. "ಕೃಪ್ಪಂ, ಕೃಷ್ಟಿಃ ... ಕರ್ಶಿತವ್ಯಂ-ಈ ೭ ತೆಳ್ಳಿತ್ತು " (ಕಾಶಕ್ಕ. ೦೯೪) ; ತೆಳ್ಳಿತ್ತು ಕೆಂಪಸಿದನಿಪ್ಪ ನಾಲಗೆ ಲೇಸು ಕಕ್ಕು ಕವಲಾಗೆ ಪೊಲ್ಲಂ (ಮಂಗರಾ. ೮೨-೦೬).

ತೆಳ್ಳಿದ = ತೆಳ್ಳಗಿರುವವನು ; ಸಣ್ಣಗಿರುವವನು : "ಕೃಶಾನುಃ - ಬೆಂಕಿಯುಂ, ತೆಳ್ಳಿದನುಂ" (ಕಾಶಕ್ಕ.₁ ೧೯೪); ದಕಾರಾದೇಶಕ್ಕೆ - ಒಳ್ಳಿದಂ, ತೆಳ್ಳಿದಂ, ಮೆಲ್ಲಿದಂ (ಶಮದ. ೧೫೨ ಪ್ರಯೋ). ತೆಳ್ಳಿದುವು (ಬಹುವ): ನಡ ನೋಟ್ಳಿಡಮಂತುಮಿಂತು ಮೂಱಿಸಿಯವು ಮೂಱು ದೊಡ್ಡಿದುವು ಮೂಱೆಡೆ ತೆಳ್ಳಿದುವಂಬುಜಾಕ್ಷಿಯಾ (ಶಂಪಭಾ. ೪-೬೨) ; ಒಳ್ಳಿದುವು ಮೆಲ್ಲಿದುವು, ತೆಳ್ಳಿದುವು (ಶಬ್ದಾನು. ೨೩೭ ಪ್ರಯೋ).

[ ದೇಶಿ ತಮಿ. ಮಲ. ತೆಳಿ, ತೆಳಿವು; ತುಳು. ತೆಳಿ, ತೆಲಿ, ಸೆಲಿ ]

**ತೆಳ್ಳಿತ್ತು** 'ತೆಳ್ಳಿತು' ನೋ.

**ತೆಳ್ಳುಸುರು, ತೆಳ್ಳುಸಿರಂ** (ನಾ). ನಿಧಾನವಾದ ಉಸಿರು ; ಮಂದ ನಿಶ್ವಾಸ : ಸಂಭೋಗಿಸುವಾಗ ಬೊಟ್ಟು ಕಲಕಿ ತುಱುಬಳಿದು ತೆಳ್ಳು ಸುರುಬ್ಬಿ ಪುಟ್ಟದಿಹುದ ಮೈಗೆ ಬೆಮರು (ಭರಚ. ೦೩-೬೪). ತೆಳ್ಳುಸುರು: ಎಂದೆಂದು ದನಿಗೆ ತೆಳ್ಳುಸುರಿಗೆ ಸರಿಯಿಲ್ಲವೆಂದು ಜಱಿವರೆಮ್ಮನೆಂದು ಅಂದು ವೇಳೆಯ ಕಂಡು ಕೊಂದರಾ ಕಳಕಂಠ ಮಂದ ಮಾರುತರು ನೀಱಿಯರ (ಭರಚ. ೪೮-೮೨). [ ತೆಳ್ + ಉಸುರು₂ (<ಉಸಿರ್₃) ]

**ತೆಳ್ಳಿ** (ನಾ). ೧. (ಕೆಸರು) ನೀರಾಗಿರುವಂತೆ ಮಾಡಿರುವುದು : ಎರಡು ಸಾಲಾಗಿದ್ದ ಗದ್ದೆಗಳನ್ನು 'ತೆಳ್ಳಿ' ಮಾಡಿ ಸಸಿಹಾಕಿ, ಹೆಂಗಸರು ಬರುವ ನಿರೀಕ್ಷಣೆಯಲ್ಲಿ . . . ಕಾದರು (ಗಂಗಾಳ. ೧೩೨). ೨. ಆಳವಿಲ್ಲದ ನೀರಿನ ಜಾಗ, ಸ್ಥಳ : ದಡದೆಡೆಯ ತೆಳ್ಳಿಯೊಳಿರಿದು ಕೆಲಕೆಲರ್ ಮಿಂದರೆದೆ ಯಾಳದಾ ನೀರೊಳಗೆ (ಶ್ರೀರಾಮಾ. ೩೪೪-೦೨೦). ೩. (ಆಲಂ) ಹಗುರ; ಲಘು : ಅವರದೆಲ್ಲ ಅದೇ ಬಾಳಿಯಲ್ಲವೆ ? ನಾನಂತು ಪೊಳ್ಳಾಗಬಾರದು; ತೆಳ್ಳಿಯಾಗಬಾರದು ; ಹಾಗಾಗುವುದಾದರೆ ನನ್ನ ಗತಿ ಮುಗಿದಂತಯೆ (ಪುನರು. ೦೬೪). [ <ತೆಳ್ಳಿತು ]

**ತೆಳ್ಳಿಗಂಪು** (ನಾ). ತೆಳುವಾದ ಕಂಪು ; ಹಿತವಾದ ಸುವಾಸನೆ : ತನೆ ಪಾಲೇಱಿದ ಶಾಲಿಗಂಪುಗಡಲೊಳ್ ಮುೞುಗಾಡಿ ಮುೞುಗಾಡಿ ಕೌಂಗಿನ ಪೊಂಬಾಳೆಯ ನಟ್ಟಗಂಪುಗಡಲೊಳ್ ಜಳ್ಕಾಡಿ ಜಳ್ಕಾಡಿ ಮಾವಿನ ರಲ್ಗೊಂಚಲ ತೆಳ್ಳಿಗಂಪುಗಡಲೊಳ್ ತೇಂಕಾಡಿ ತೇಂಕಾಡಿ ಪದ್ಮಿನಿಯೊಳ್ ತುಂಬಿ ಮುಲಂಗಿ ಸೇದೆಗಟುಗುಂ ಕಾಸಾರತೀರಂಗಳೊಳ್ (ಅನಂಪು. ೩-೧೧).

[ ತೆಳ್ಳಿ + ಕಂಪು ]

**ತೆಳ್ಳಿನೀರು** (ನಾ). ಆಳವಿಲ್ಲದ ನೀರು; ದಡದಲ್ಲಿರುವ ನೀರು : ಧರ್ಮ ಹೊಳೆಯ ಅಂಚಿನ ತೆಳ್ಳಿನೀರಿಗಿಳಿದನು (ಮಾಲಿಮ. ೩೦೩).

[ ತೆಳ್ಳಿ + ನೀರು₁ (<ನೀರ್₁) ]

**ತೆಳ್ಳಿಲರು, ತೆಳುವೆಲರ್** (ನಾ). ತೆಳುವಾಗಿ ಬೀಸುವ ಗಾಳಿ; ಸುಳಿಗಾಳಿ; ಮಂದ ಮಾರುತ : ಸಕ್ಕರೆ ತೀವಿದ ತನಿವಾಲೂಡುವ ತಂಕಣ ತೆಳ್ಳಿಲರು (ಜಯಶಾ. ೧-೨೪). **ತೆಳುವೆಲರ್** : ನವ್ಯಪರಿಮಳದಿಂದೆ ಸೊಗಸು ತೀಡುವ ತೆಳುವೆಲರ್ಗೆ ಮೈಯೊಡ್ಡಿ ಮಾರ್ಗಶ್ರಮವನು ಕಳೆದರು (ಕ್ಷಮಿಭಾ. ೮-೫). [ ತೆಳ್ + ಎಲರು (<ಎಲರ್) ]

**ತೆಱ₁, ತಱ, ತೆರ₁** (ನಾ). ೧. ರೀತಿ ; ಕ್ರಮ; ಬಗೆ: ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ಕಂಜವೋಲ್ಕೋಜು ಬೇಗಂ ಪರಿಗುಂ ಶ್ರೀರೂಪ ಲೀಲಾಧನವಿಭವಮಹಾರಾಶಿಗಳ್ನಿಲ್ಲವಾಗ್ಗ್ರ (ಎಕ. II, ೮೮-೦ ; ಸು. 700) ; ಮುನಿ ವೀತರಾಗನೆಂದುಂ ಬನಮಂ ಸಾರ್ತಕ್ಕುಮಾವ ತೆಱದಿಂ ಪೋಪಂ (ಕವಿರಾ. ೧-೬೮) ; ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ ನಾನಾಪ್ರಕಾರದ ಪಾನಂಗಳುಮಂ ಭಟ್ಟಾರರ್ಗೆ . . . ಬಡ್ಡಿಸಿದೊಡೆ (ವಡ್ಡಾರಾ. ೬೮-೦೬) ; ಪುಂಡ್ರೇಕ್ಷುದುಡಂಗಳಂ ಕಡಿಕಡಿದು ಯಂತ್ರ ಪೀಡನೆಯಿಂ ರಸಂಗೊಳ್ವ ತೆಱನುಮಱಿಯೆ ಪೇಟ್ದು (ಆದಿಪು. ೬-೭೭ ವ); ಮುನಿವಿಧದೋಷಮಾವ ತೆಱದಿಂ ಕಳೆಗುಂ (ಕಾದಂಪೂ. ೮೭೬) ; ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ ತನ್ನ ನೂಲು ತನ್ನನೇ ಸುತ್ತಿ ಸುತ್ತಿ ಸಾವ ತೆಱನಂತೆ (ಮಹಾದೇ. ಬ. ೧೩-೦೬) ; ತೆಱನಂ ಕಾಣದ ತಾಣ ದಲ್ಲಿ ಕಪಟಂಗಳ್ ಮಾಟ್ಪರಿರ್ಪಲ್ಲಿ . . . ಇರ್ದೊಡೆ ಹಾನಿಯೈ (ಸೋಮೇಶ. ೨೫) ; ಸುಮುಹೂರ್ತವೇ ಗಂಡುರೂಪಾದ ತೆಱನಾಗೆ ಅಮುಮು ಕಾರಣಿಕ ಶಿಶು ಜನಿಯಿಸಿದನನುವಾಗೆ (ಬಸರ. ೦-೦೩೦) ; ತೆಱನಱಿದೀವ ಕಾರ್ಯ ಮೆಱೆದಂಜುವ . . . ಊರ್ಜಿತ ಬುದ್ಧಿಯಿಲ್ಲದಿಂಬೞಿಯದ ಗಾವಿಲಂಗೆ ದೊರೆಕೊಳ್ವರೆ ಸೂಳೆಯರೆಂಬ ಡಾಳೆಯರ್ (ಸೂಕ್ತಿಸು. ೮-೪೦೨) ; ಭರತ ಸಂತತಿ ಫಲಿತ ಕದಳಿಯ ತೆಱದೊಳಾಯಿತಲಾ (ಕುಮ್ಮಾಅ. ೨-೨೦); ದೂಱು ಬರುವ ತೆಱ ನಂಬಿಕೆ ಕೊಟ್ಟರೆ ದುರ್ಜನ ಬರುವುದು ತಪ್ಪೀತೆ (ಪುರಂದ. ೦-೦೩೭-೦). ೨. ಅಂದ; ಮನೋಹರತೆ: ತಂನನೆ ಜಗಂ ಸಂಪ್ರೀತಿಯಿಂ ಬಣ್ಣಿಸಿತ್ತೆನೆ ತಾನುಂ ತೆಱದಿಂ ಜಸಕ್ಕೆ ನೆರೆಯಾದಂ ನಾಚಿದಣ್ಣಾಧಿಪಂ (ಎಇ. XXVIII, ೫-೨೩ ; 1082). ೩. ಸಂಗತಿ ; ವಿಷಯಂ : ಪೆಱರಂ ದೂಱುವರೊಳ್ ತೆಱನಱಿಯದೆ ನುಡಿವವರೊಳ್ . . . ಬಱುದಲೆ ಯೆಂದೆಳಸಿ ಕೇಳಲಾಗದು ಪುರುಷಂ (ಧರ್ಮಾಮೃ. ೭-೨೦೩) ; ಅಜೀವಿ ನೊಳಗಣ ಅಜೀವ ತೆಱದೊಳಗಣ ತೆಱವ ಕುಱುಹಿಟ್ಟು ಕುಱುಹ ಕುಱುಹೊ

ಅವಗವಿಸಿ ಭಿನ್ನವಿಲ್ಲದೆ ನಿರ್ವಾಹ ನಿರ್ಲೇಪವಾದುದು (ಮುದೀಪ. ೨೭೪-೧೬); ಆ ನೃಪ ಸುವ್ರತಾಖ್ಯಮುನಿ ಬರಲೆಱಗಿ ತನಗುದಯಿಸಿದ ಪುತ್ರರು ನಿರಾಯುಷರೇಕೆ ತನಗೀ ತೆಱನ ಪೇೞೆನೆ ಕರ್ಮವಶ ತಾನೆಂದನಾ ಮಾನಿಪ (ಜೀವಂಚ. ೭-೩೫). ೪. ಮಾರ್ಗ; ಹಾದಿ; ಉಪಾಯ: ಚಿಂತಿಸಿದೞೊಂದು ತೆಱನಂ ಶಿವಂ ಮೆಚ್ಚುತಿರೆ . . . ಪನ್ನಗಾಭರಣನ ಪಸಿವನಾಱಿಸುವುದೆಂದು (ಇಶರ. ದೀ. ೫೩-೨೦). ೫. ಸ್ಪಷ್ಟವಾದಂದಂ; ವ್ಯಕ್ತವಾದಂದು. 'ತೆಱದರುಶನ' ಪರಾ. ತೆಱ: ೧. ನಿಜಪರಿಭವವ ನೆಲ್ಲವನು ಹರಿಪದಸರಸಿಜಕೆ ತೆಱವಾಗಿ ಬಿನ್ನಹ ಮಾಡಿದನು (ನಿಭಾಗ. ೧೦-೬೯-೨). ತೆರ$_{1}$: ೧. ಶ್ರುತಿಯೊಳಗಾಡುವ ಹಾಡಿನ ತೆರದಿ ಸ್ವತಂತ್ರ ನೀನೀ ಪಾರತಂತ್ರ್ಯದಿ (ಗಣೇಶ. ೪-೮೩); ಶುದ್ಧ ನೀಲಿ ಬಣ್ಣಕ್ಕೂ ಶುದ್ಧ ಬಿಳಿಯ ಬಣ್ಣಕ್ಕೂ ಮಧ್ಯೆ ಒಂದು ತೆರನಾದ ಬಣ್ಣವಿರುತ್ತದೆ (ಜೀವಾತ್ಮ. ೦೫೩); ಭಕ್ತಿಯಲ್ಲಿ ನಾನಾ ತೆರ (ಜಗದಾ. ೧೮).

**ತೆಱತೆಱ, ತೆಱಂತೆಱ, ತೆಱತೆಱ** (ದ್ವಿರುಕ್ತಿ): ದಿವಕ್ಕೆ ಪೋಪ ಬಟ್ಟೆಗೆ ಸೋಪಾನಂಗಟ್ಟಿದಂತೆ ತೆಱತೆಱದಿಂ ನೆಗೆದೊಗೆದ ಪೊಗೆಯುಂ ಕಂಡು (ಶಂಕಶಂ. ೧೧೬-೬); ತೆಱತೆಱದ ಕಲ್ಲೋಲಮಾಲೆಗಳ ಲೀಲೆಗಳ ಬೆರೆಬೆರೆವ ರಾಜಹಂಸಾಳಿಗಳ ಕೇಳಿಗಳ . . . ಮುನಿಜನಂ ಸೇವಿಸುವ ಭಾವಿಸುವ ಗಂಗೆಗವನಿಜೆ ಬಂದಳು (ಜೈಮಿಭಾ. ೧೯-೫); ತೆಱಂತೆಱದಿಂ ಶಿರೋಜಮುಂ ನೆಗವುವ ಭಂಗಿ (ಜಗವಿ. ೧೦-೯೯); ತೆಱತೆಱ ಮೆಟ್ಟ ರಾಗದೊಡಗೂಡಿ ಬೆಡಂಗು ಪರಿಶ್ರಮಂಗಳೊಳ್ ನೆಱೆದಿರೆ . . . ನರ್ತಿಸಿದಾಕೆಯರೊಪ್ಪಿ ತೋಱಿದರ್ (?) (ಸೂಕ್ತಿಸು. ೧೩-೧೮). ತೆಱತ್ತು = ಹೀಗೆ; ಈ ರೀತಿಯಲ್ಲಿ: ನೀತಿನಿರಂತರಾನುಗತವೃತ್ತಿವಿಕಲ್ಪಿತಮುಂ ತದೀಯ ನಿರ್ಣೀತಿಮುನೀ ತೆಱತ್ತು ತಱಿಸಲ್ಗೆ ಬುಧೋತ್ತಮರುಕ್ತಿಪೂರ್ವಕಂ (ಕವಿರಾ. ೨-೧೦೦). [ ದೇ.॥ ತಮಿ. ತಿಱ; ಮಲ. ತಿಱ, ತಿಱವು; ತೆಲು. ತೆಱಂಗು, ತೆಱವು ]

**ತೆಱ$_{2}$** 'ತೆಱ$^{3}_{3}$' ನೋ.

**ತೆಱಂ,** ತೆರಂ (ಅ). ಚೆನ್ನಾಗಿ: ಅಧಿಕವಾಗಿ. 'ತೆಱಂಬೊಳೆ' ಪರಾ. **ತೆರಂ**. 'ತೆರಂಗುಣಿ' ಪರಾ. [ < ತೆಱ$_{1}$ ]

**ತೆಱಂದಿರಿ** (ಕ್ರಿ). ೧. ಬಹುವಾಗಿ ಅಲೆದಾಡು, _ಸುತ್ತು: ಅದೇಂ ತೆಱಂದಿರಿದು ಪಾಯ್ದುಪೋ ಕೇತಕಿಯೊಳ್ ಮಧುಪಾಳಿಗಳ್ (ಆದಿಪು. ೧೦-೦೨೦): ಅತ್ತಣ ಪಂಬಲ ಬಂಬಲೊಳ್ ತೆಱಂದಿರಿದುದು ಚಿತ್ತಮಾ ದೊರೆಯ ಯೋಗಿಗಮಿಂತುಟೆ ಮೋಹಮಾಗದೇ (ಶಂಕಥಾ. ೧೩-೬೩); ಅಲರ್ವಂಡನುಂಡು ತನಿಸೋರ್ಕಿಂ ಸೊರ್ಕಿ ತೆಱಂದಿರಿದು ಪಾಱುವ ಪೊನ್ದುಂಬಿಗಳ ಬಳಗಮನೊಳಕೊಂಡ ಲತಾಮಂಟಪಂಗಳೊಳಂ (ಕಾದಂಉ. ೫೨೬). ೨. ಒಮ್ಮೆಲೇ ಹೊರಳು; ರಭಸದಿಂದ ತಿರುಗು: ಮೆಯ್ಮಸಮೊಂದ ಪೂವಿನೊಳೆ ಪೋಗಿ ತೆಱಂದಿರಿದಳ್ಳೆಗೆಱಂಬಿನೊಳ್ ಪಾಯ್ವುದುಂ (ಶಾಂತಿಪು. ೦-೬೩); ತೆಱಂದಿರಿದಾಂತ ಮೆಯ್ದುಸಂ ಸುತ್ತುವ ಬಲ್ಪು . . . ತಮ್ಮೊಳೆಯ್ದೆ ಮೆಯ್ವತ್ತಿರೆ ಬಿಚ್ಚತಂ ಪೊಣರ್ದುಂ ಪಂದೆರಡುಂ ಬಲದಂಕದಾನೆಗಳ್ (ಚಂದ್ರಪು. ೦೦-೮೪): ಬದಿರ್ಚಿ ದಳಂಗಳಂ ತೆಱಂದಿರಿದುದು ಚಕ್ರವಕ್ಕಿ (ಅನಂಪು. ೬-೬೧): ಭರದಿ ತೆಱಂದಿರಿವಾ ತಿಹುರಿಯ ಮೇಲೆ ಇರದಿಟ್ಟು ಕುಂಬಳಿಗೋಲಾ ಪರಿಯನೆ ಗಜವಡೆಯಾದಶ್ವನ ಮೇಲೆ ಪಿರಿದೊಪ್ಪಿದಮ ವಾಹಕನು (ಶ್ರೀಪಾಲ. ೪-೧೨). ೩. ಮನೋಹರವಾಗಿ ತಿರುಗು; ಸುಂದರವಾಗಿ ಸುತ್ತು: ಒಲವಿನೊಳಾದ ಕಾಯ್ಪು ಮಿಗೆ ಕಾದಲನಂ ಬಿಸುಟಂತೆ ಪೋಪ ಕಾದಲಳಟಾತುಂ ತೆಱಂದಿರಿದು ನೋಡಿದ ನೋಟದೊಳ್ (ಶಂಕಥಾ. ೪-೦೦೮). [ ತೆಱ$_{1}$ + ತಿರಿ$_{1}$ ]

**ತೆಱಂದಿರಿಪು** (ಕ್ರಿ). ಬಗೆ ಬಗೆಯಾಗಿ ತಿರುವು, – ಹೊರಳಿಸು: ಬಿಡದೊಯ್ಯನೆ ನೀವಿಯಂ ತೆಱಂದಿರಿಪುತುಮಲ್ಲಿ ತೀಡುವುದು ಕಾಮುಕನಂದದೆ ಸಾರವಾರುತಂ (ಕುಸುಮಾ. ೨-೧೧೧). [ ತೆಱ$_{1}$ + ತಿರಿಪು$_{1}$ ]

△ **ತೆಱಂಪು** 'ತೆಱಪು' ನೋ.

**ತೆಱಂಬಾಯ್** (ಕ್ರಿ). ಚೆನ್ನಾಗಿ ಓಡಾಡು: ಮೊರೆವುನ್ಮತ್ತಮಧುವ್ರಜಂ ಸುಟಾವ ಕಾದಂ[ಬಂ] ತೆಱಂಬೊ[ಬಾ]ಯ್ದು ಭೋರ್ಗರೆದೆತ್ತಂ ಪುಗಲೆಂಬ ಕೋಕಿಲೆ (ಸುಕುಮಾ. ೧-೭೩). [ ತೆಱಂ + ಪಾಯ್$_{1}$ ]

△ **ತೆಱಂಬು** 'ತೆಱಪು' ನೋ.

**ತೆಱಂಬೊಯ್** (ಕ್ರಿ). ಚೆನ್ನಾಗಿ ಹೊಡೆ: ಕಾಲ್ಗಳ್ಗಳಿಂ ಪಿಡಿದೀಡಾಡಿಯುಂ ಮರ್ದಿಯುಂ ತಿರಿಪಿಯುಂ ತೀದುಂ ತೆಱಂಬೊಯ್ದುಮಾ ದಡಿಗಂ ದಾನವವೃಂದದಿಂ ಕೆಡಪಿದಂ ಸಂಗ್ರಾಮರಂಗಾಗ್ರದೊಳ್ (ಸುಕಾಸೀ. ೧೨ ೨೦೪). [ ತೆಱಂ + ಪೊಯ್$_{1}$ ]

**ತೆಱಂಬೊಳೆ** (ಕ್ರಿ). ಚೆನ್ನಾಗಿ ಪ್ರಕಾಶಿಸು; ಅಧಿಕವಾಗಿ ಹೊಳೆ: "ತೆಱಂಬೊಳೆದುದೆಂದು ತೋರ್ಕೆವಡೆದ ಕಾಂತಿ" (ಶಶಸಾ. ೫೬-೨೧೬): ಪೊಱಪೊಣ್ಮುವ ಕಣ್ಣ ಬೆಳ್ಪುವೋಪರ ಮನದೊಳ್ ತೆಱಂಬೊಳೆವ ಬಾಳೆಗಳಂತಿರೆ (ಆದಿಪು. ೧೧-೯೬): ತೆಱಂಬೊಳೆವ ಮಿಗಾಂಗಳನಾಳ್ಕುವ ಕೈದುಗಳ್ ನಿರಾಕರಿಸಿರೆ ಮೇರೆದಪ್ಪಿ ಕವಿದತ್ತು ನರಾಧಿಪ ಸೈನ್ಯಸಾಗರಂ (ಶಂಕಥಾ. ೩-೬೮): ಪುಷ್ಪಶರಪನ್ನಾಗಘಟಿಯು ಕಟದಿನು ತೃಟವಾದ ಮದವೃಷ್ಟಿಯಿಂ ತೆಱಂಬೊಳೆವ ಮಱಿದುಂಬಿಯ ಬಂಬಲಿಂ . . . ಅತಿ ರಮಣೀಯವಾಗಿ (ಮಲ್ಲಿಪು. ೨-೩೩): ಒಪ್ಪಂಬೂಸಿದ ಪೋಲ್ ತೆಱಂಬೊಳೆವ ಕೊಂಕುಂ (ಕಬ್ಬಿಗಕಾ. ೫): ಕೆಂಬಟ್ಟೆಯ ಮೃದುತಲ್ಪದೊಳೊಱಗಿ ತೆಱಂಬೊಳೆದೊಪ್ಪುವ ರತಿಯನೆ (ಆಯುಕಾ. ೩-೮). [ ತೆಱಂ + ಪೊಳೆ$_{1}$ ]

**ತೆಱಂಬೊಳೆಯಿಸು** (ಕ್ರಿ). ಚೆನ್ನಾಗಿ ಪ್ರಕಾಶಿಸುವಂತೆ ಮಾಡು; ಹೆಚ್ಚು ಶೋಭೆಯುಂಟಾಗುವಂತೆ ಮಾಡು: ಪನಪಾಧ್ಯಮದೇಂ ದೇವನ ವನಮಾಲೆಯುಂ ತೆಱಂಬೊಳೆಯಿಸಿತೋ (ಜಗವಿ. ೨೦-೫೬).

[ ತೆಱಂಬೊಳೆ + – ಇಸು$_{3}$ ]

**ತೆಱಕಾಱ** (ನಾ). ತೆರಿಗೆಯನ್ನು ವಸೂಲು ಮಾಡುವವನು: ನೀನಿತ್ತಪಧಿಕಿದೀವರಿಲ್ಲ ಧನವಂ ಗಳಿಸಿ ತಂದೀವೆನೆನಲು ದಿನವಿರ್ಪತ್ತೊಂಬಟ್ಟ ತೆಱಕಾಱನಂ ಕೊಟ್ಟೊಡಾತಂಗೆ ನಿರ್ಣಯಿಸಿ ಕೊಡುವೆನೆನಲು (ಹಱಕಾ. ೮-೫೬): ಸುರಿದನರ್ಥವನು ಕೌಶಿಕಮುನಿಯ ತೆಱಕಾಱ ತಲೆದೂಗಲು (ಹಱಕಾ. ೧೦-೨೬). [ ತೆಱ$_{2}$ (< ತೆಱ$^{3}_{3}$) + – ಕಾಱ ]

**ತೆಱಕೈ** (ನಾ). (ಹಣವನ್ನು) ಸೆಳೆದುಕೊಳ್ಳುವ ಕೈ; (ಸಿರಿಯನ್ನು) ದೋಚುವ ಕೈ: ಕೌಶಿಕಾಜತನ ತೆಱಕೈ ಬಱಬೋಸರಣೆ ಹೇಪ ಹಳವು ಬೆಳ್ಪುಕ್ಕಿ ಬೆಳ್ಪುನಿಸು ಕೈತವಮಂ ಕನಸಿನೊಳ್ ನೆನೆಯದೆ ಮದನಾಗಮವೆಂಬ ಮಹಾನಾಟಕಮನಭಿನೈಸುತೆ (ವಿರೂಪಾ. ೬೮).

[ ತೆಱ$_{2}$ (< ತೆಱ$^{3}_{3}$) + ಕೈ$_{2}$ (< ಕಯ್$_{2}$) ]

**ತೆಱಕೊಡು,** ತೆರಕೊಡು (ಕ್ರಿ). ೧. ತೆರಿಗೆಯನ್ನು ತೆರು, –ಕೊಡು: ಬಾಳ ಬಡವರು ತೆಱಕೊಟ್ಟು ಬಾಹರು (ಶಾ. I, ೫೦-೨೮ : 1482?). **ತೆರಕೊಡು**: ೨. ತಪ್ಪುಕಾಣಿಕೆಯನ್ನು ಕೊಡು; ದಂಡ ತೆರು: ಬಿಡುಗಡೆಯಾಗಬೇಕಾದರೆ ತೆರಕೊಡಬೇಕು (ಊದುಗ೨. ೬). ೩. ಕನ್ಯಾಶುಲ್ಕವನ್ನು ಕೊಡು, _ತೆರು: ಬಿಟ್ಟಿಯೇ ಸಿಕ್ಕುವುದಾದರೆ ಹೆಣ್ಣೊಂದು ನನಗೊಂದು ನಮ್ಮಪ್ಪಗೊಂದು ತೆರಕೊಟ್ಟು ತರುವ ಹಾಗಿದ್ದರೆ ಮುದುಕನು ನಮ್ಮಪ್ಪ, ಹುಡುಗನು ನಾನು (ಇಂದಾಹ. ೧೦೦-೮೬).

[ ತೆಱ$_{2}$ (< ತೆಱ$^{3}_{3}$) + ಕೊಡು$_{1}$ ]

**ತೆಱಗೊಳ್** (ಕ್ರಿ). ಸುಂಕವನ್ನು ಕೊಳ್ಳು; ತೆರಿಗೆಯನ್ನು ವಸೂಲು ಮಾಡು: ಘೋಷಾಕರಸಂಗ್ರಾಹಕರ ಗೋವೃಜಂಗಳುಮಂ ಅವನಾಳ್ವ ತೆಱ[ಪಾಠಾಂ. ಱ$^{3}$]ಗೊಳ್ವ ಬಿಟ್ಟಿಬೆಸಕೆಯಿಸಿಕೊಳ್ವ ಭೋಗಿಪ ನಿಯೋಗಂಗಳುಮಂ ಮಾಡಿದಂ (ಆದಿಪು. ೮-೬೩ ವ). [ತೆಱ$_{2}$ (< ತೆಱ$^{3}_{3}$) + ಕೊಳ್$_{1}$]

**ತೆಱತ್ತು** 'ತೆಱ$_{1}$' ಪರಾ.

**ತೆಱದರುಶನ** (ನಾ). ಸ್ಪಷ್ಟವಾದ ನೋಟ,_ಕಾಣ್ಕೆ : ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನೆಂಬ ಷಟ್ಸ್ಥಲವನಱಿಯಬೇಕೆಂಬಿರಿ ಅಱಿವುದಕ್ಕೆ ಕುಱುಹು ತೆಱದರುಶನವ ಕಾಣಿರಣ್ಣಾ (ಬೋಳಿಮಾ. ೦೫೧-೫೬೩). [ ತೆಱ$_1$ + ದರುಶನ ]

**ತೆಱದರ್ಶನ** (ನಾ). = ತೆಱದರುಶನ : ಕುಱು ಹಿಂಗೂ ಅಱುವಿಂಗೂ ತೆಱದರ್ಶನವಿಲ್ಲವಾಗಿ ಸೊಪ್ಪನೊಳಕೊಂಡ ಬಿತ್ತಿನಂತೆ (ಬೋಳಿಮಾ. ೮೪-೩೩೧). [ ತೆಱ$_1$ + ದರ್ಶನ ]

**ತೆಱಪಱ್** (ಕ್ರಿ). ೧. ಅವಕಾಶವನ್ನು ತಿಳಿ : ಬರವಂ ಪಡಿಯಱರ್ಗಱಿಪಿ ತೆಱಪಱಿದೋಲಗದೆಡೆಯಂ ಪುಗಲು (ಕಬ್ಬಿಕಾ. ೧೬೦). ೨. ಎಡೆಯನ್ನು ತಿಳಿ ; ಸ್ಥಳವನ್ನು ಅರಿ : ಕೆಲಬಲದೊಳಲ್ಲಲ್ಲಿ ತೆಱಪಱಿದು ಕುಳ್ಳಿರಲು ನಲಿನಲಿದು ತುಂಬುರಂ ಬಲವಂಕದೊಳಗಿರಲು (ನಂಬಿರ. ೫-೯೯). ೩. ಗುರುತನ್ನು ತಿಳಿ: ತೆಱಪಱಿದಾ ಋತುಪರ್ಣಂಗಱಿಪದೆ ವಾರಾಂಗನಾ ನಿವೇದಿತನಾಗಲ್ ಪೊಱಮಟ್ಟು ಬಂದನೆಲ್ಲರ್ಬೆಱಗಾಗಲ್ ಸತಿಯ ಮನೆಗೆ ಬಾಹುಕಂ (ನಳಚಂ. ೬೨೩). [ ತೆಱಪು + ಅಱ್ ]

**ತೆಱಪೀ** (ಕ್ರಿ). ಅವಕಾಶವನ್ನು ಕೊಡು : ನೆಗಟ್ದ ಚತುರ್ದಶರತ್ನದೆ ಸೊಗಯಿಪೆನಾನನ್ಯವಾಹಿನಿಗೆ ತನ್ನವೊಲಾನಗಿದು ತೆಱಪೀಯೆನೆನುತಂ ನಗುವುದು ವಿಜಯಾರ್ಧಕಟಕಕ್ಕೆ ವಿಭುಕಟಕಂ (ಪಾರ್ಶ್ವಪು. ೧೦-೭೯) : ಬಾಯನೊಡೆ ಬಡಿ ಮಾಸಗೀಳ್ ಕುರುಳ್ಗೊಯ್ ಪುಗಲ್ ಕಾಯೊಡಲ್ ತೆಱಪೀವುದೇ ನಿಮಗೆ ಪೊಯ್ದಾಡಿ ಸಾಯಲೂಣೆಯವಹುದೆ ಸುಡು ನಿಮ್ಮ ಬಾಳ್ಕೆಗಳನೆನುತೆ ಜಱಿದವರಕುಲವಮಂ (ಚಿಲಪು. ೯೯-೯೯).

[ ತೆಱಪು + ಈ$_2$ ]

**ತೆಱಪು**, ತೆರಪು, ತೆರಹು$_2$, ತೆರ್ಪು, ತೆಱಂಪು, ತೆಱಂಬು, ತೆಱಹು, ತ್ರೆಱಪು (ನಾ). ೧. ತೆರೆದ ಸ್ಥಿತಿ ; ಮರೆಯಿಲ್ಲದಿರುವುದು ; ಬಯಲು : ಮಱಸಿರ್ದಂಬರಮೆಯ್ದೆ ನಾಂದ ತನುವಂ ಪತ್ತಿರ್ದ ಕಣ್ಗಲ್ಲಿಯುಂ ತೆಱಪಂ ಮಾಡಿ (ಆದಿಪು. ೧೧-೧೫೩) ; ಬಾಲೆಯರುರದೊಳ್ ಕೆಱುವೋಲೆ ಮೇಲುದು ನಸುದೊಲಗೆ ತೋರ್ಪ ತೆಱದಿಂ ಸರಸೀಮಾಲೆಯೊಳೆಸೆದುವು ನವಪತ್ರಾಲಿಯ ತೆಱಪಿಂದೆ ತೋರ್ಪ ಕಮಲದ ಮುಗುಳ್ಗಳ್ (ಜಗವಿ. ೪-೬೩) : ಮೇಲುದಿನ ತೆಱಪಿನೊಳು ಮೊಲೆಗಳೆಲುಗಲು (ಹಡಕಾ. ೪-೧೩). ೨. ಎಡೆ ; ಸ್ಥಳ ; ಜಾಗ : ದಿಗ್ಭಿತ್ತಿಗಳನೊಡೆದು ತೆಱಪಂ ಮಾಡಲ್ ಪರಿವಂತೆ ದುಂದುಭಿಧ್ವನಿ ಪಾವಿನೆಗಂ ದಿಗ್ಮಯಕೆ ಹರಿ ಪೊಱಮಟ್ಟಂ (ವರ್ಧಪು. ೮-೬೬); ಮಾಣಿಕವರಿಗೆಯ ತೆಱಪುಗಳೊಳ್ ಪೊಳೆವ ಬಾಳ ಬೆಳ್ವೆಳಗಂದೇಂ ಮೆಱೆದುವೊ (ಕಬ್ಬಿಕಾ. ೨೫೯) ; ತುಱುಗಿದ ತೂಱಲ್ಗೊಂಬಿನ ತೆಱಪುಗಳೊಳ್ ಕೂಡಿ ನುಸುಳಲಾಱದೆ ಸಿಲ್ಕಿಂ ಪಱಿದಿರ್ದ ಬೆಳ್ಮುಗಿಲ್ಗಳ ಮುಱಿಗಳವನಿಸಿದುವು ಶಾಲ್ಮಲೀಫಳತೂಳಂ (ಪುಷ್ಪಪು. ೫-೮೫) ; ಅನುದ್ದಂಡತ್ವದಿಂದಾಕ್ರಮಿಸಿದೊಡಮದಂ ಸ್ಥೈರಿಸಿರ್ದಂ ನಭಶ್ರೀ ತಾನೀಗಳ್ ಕೊಟ್ಟಳಾದಂ ತೆಱಪುಮನೆವಗಿಂತೆಂದು (ಶಾಂತಪು. ೧-೦೦೪) : ತಿಂತಿಣಿಯ ರಘುವರಚರಿತೆಯಲಿ ಕಾಲಿಡಲು ತೆಱಪಿಲ್ಲ (ಕುಮಾವ್ಯಾ. ೦-೦೬). ೩. ಅವಕಾಶ ; ಸಮಯ ; ಸಂದರ್ಭ ; ಬಿಡುವು : ತೆಱಪನೆ ಪಾರ್ದಿರ್ಪಂ ಮಾಯ್ದಱಗುಲಿ ಜಪನದಱಿನಿಸು ಪೊಟ್ಟುಂ ತನ್ನಂ ಮಱಿದಿರಲಕ್ಕುಮೆ ತಳರದೆ ತಱಿಸಲದಿನ್ನೆಱಿದುಮಱಿದುಮಿರ್ಪುದೇ ಚದುರಂ (ಆದಿಪು. ೪-೭೬) : ನೆಱನೀತಂಗಾರುಯುಗ್ಮಂ ನೆಱನನಱಿಯದಾ ನಿನ್ನೆಗಂ ಮಾಣ್ದನಿಂ ಪೋ ತೆಱಪಂ ಪಾರ್ದಿರ್ಪಂ (ಪಂಪಭಾ. ೧೩-೯೬) : ತೆಱಪಂ ನಿಟ್ಟಿಸಿ ಕುರುಪತಿ ಬಱಸಿಡಿಲೆಱಗುವವೊಲೆಱಗಿ ಪೊಯ್ಯಲ್ (ಗದಾಯು. ೮-೨೬) : ತೆಱಪಂ ಪಾರ್ದು ಸುಗ್ರೀವನಂ ಮಾಯಾಸುಗ್ರೀವಂ ಗದಾದಂಡದಿನಡಸಿ ಸಿಡಿಲ್ ಪೊಯ್ವವೋಲ್ ಕಾಯ್ದು ಪೊಯ್ದಂ (ಪಂಪರಾಮಾ. ೦೦-೨೬); ಬಲಂ ಪಱಿವಡೆ ಜೊಮ್ಮನೆ ಜೋಲ್ದಂ ತೆಱಪಂ ಪಾರ್ದಿರದೆ ತಡೆಯದೊರ್ಮೆಯೆ ಮುನಿವಂ (ಧರ್ಮಾಮೃ. ೪-೧೬೨). ೪. ವಿಸ್ತಾರ ; ಹರಹು : ಭರದಿಂ ಭೂದೇವಿ ಭೂಪಾಳಗೆ ಬಯಸಿ ಕೊಳಲ್ ನೀಡಿದಳ್ ಕೈಗಳಂ ನೀಟ್ದರು ತಾರಾಮಾಲೆಗೆಂಬಂತಿರೆ ತುಱುಗಿದ ಶಾಖಾಳಿಯುಂ ಚುಂಬಿಸುತ್ತಂಬರಮಂ ತಾನಿರ್ದುದಾ ಶಾಖೆಗಳ ತೆಱಪುಗಳ್ (ಕುಸುಮಾ. ೦-೦೦೦) ; ತೆಱಪಿನೆದೆಯ ಹೊನ್ನ ಜನ್ನಿವಾರದ ರೇಖೆ ಮೆಱೆಯೆ ರಾಜೇಂದ್ರ ಮೆಱೆದನು (ಭರತ ೧-೩೩). ೫. ಸ್ಪಷ್ಟತೆ : ನೀಂ ಪಲವುಂ ರಾಯಧಾರಿಗಳೊಳಂ ಮೆಲ್ಪುಂ ಬಲ್ಪುಂ ತೆಱಪುಂ ಮಱಪುಂ ಅನುವುಂ ಮೊನೆಯುಮಾಗಿ ನುಡಿದು ನಿನ್ನ ಬಿನ್ನಣಮುಂ ಬಿತ್ತರಿಪಂತಾನುಮಿವಳ್ಗೆ ರಂತರಮುಂ ತಿಳಿದು ನುಡಿವೆಂ (ಲೀಲಾವ. ೬-೦೩೩ ವ). ೬. ಗುರುತು; ಚಿಹ್ನೆ: ತೃಣ ತ್ರಿಣಯನ ಹೆಡಗೈಯ ಕಟ್ಟಿತ್ತು ಭವಕಾಲನ ಸಂಕೋಲೆಯ ಸಿಕ್ಕಿತ್ತು ಕುಱುಹು ಅಱಿವವರ ಕೈಯಲ್ಲಿ ನೆಱಿ ನಂಬಿ ಎಂದು ತೆಱಪ ಹೇಳಿತ್ತು (ಬೋಳಿಮಾ. ೨೩೨-೬೮೦). ೭. ರೀತಿ; ಬಗೆ: ಸೆಱಗ ಹಿಡಿದೆಳೆದಪ್ಪಿ ಮುದ್ದಿಸಿ ತುಱುಬ ಪಲ್ಲಟಗೈದ ಮದನನ ತೆಱಪನೆಲ್ಲವ ಪೇಳು ತಿಳಿಪಿದನತಿ ವಿನಯದಿಂದ (ಸಾಳ್ವಭಾ. ೩೦-೫). **ತೆರಪು** : ೩. ದಾರಿಗಾಣದ ಮನಸ್ಸಿಗೆ ಈ ಸಂದರ್ಭವೇ ಒಂದು ತೆರಪನ್ನೊದಗಿಸಿತು (ನಾಡೋಜ. ೩೬೯); ತೆರಪನರಿಯದೆ ಪರಿವ ಕಾಲಪ್ರವಾಹದಲಿ ಪುರುಷರಚಿತಗಳೆನಿತೂ ತೇಲಿಹೋಗಿಹವು (ಮಂಕುತಿ. ೪೧೧); ಹಗಲುರಾತ್ರಿ ತೆರಪಿಲ್ಲದೆ ಮಳೆ ಹತ್ತಿದ್ದರಿಂದ ಇದ್ದ ಉರುವಲು ಒದ್ದೆಯಾಗುವುದು ಸಹಜವೇ (ಚಲ್ಯಹೊ. ೪೩) : ತೆರಪಿಲ್ಲವೆಂತ ತರಿಗೆ ಇಟ್ಟುಕೊಂಡು, ಚರಿಗೆ ತವಲೆ ಮಾರಿಸಿಕೊಂಡ (ಗಾದೆ). ೮. ಬರಿದಾದ ಸ್ಥಳ,-ಎಡೆ ; ಖಾಲಿಜಾಗ : ಈಗ ಇರುವ ಸಂಸ್ಕೃತ ಸಾಹಿತ್ಯದಲ್ಲಿ ಭಾರಿ ತೆರಪು ಅಥವಾ ಖಾಲಿಜಾಗಗಳಿವೆ (ತತ್ವಪ್ರಾ. ೪೮೨). **ತೆರಹು$_2$** : ೪. ಇಳೆಯ, ಗಾಳಿಯ ತೆರಹನೆಲ್ಲವ ಕಿರಿವ ನಿನ್ನುಲಿ ತುಂಬಿತು (ಇಂಗೀತ. ೦೨-೬). ೮. ಈ ಗುಡಿಯ ಶೂನ್ಯತಗೆ ಪೂರ್ಣತೆಯ ಪಾ ನೀರ ತೆರಹಿಗೊಲವಿನ ಅಚ್ಚಕುರುಹಾಗಿ ಬಾ ! (ಮೂನಸ. ೪೬-೦೦). **ತೆರ್ಪು** : ೨. "ಆತಂಕ=ತೆರ್ಪಿಲ್ಲದೆ ಇಡು : ಬಿಡತೆ ಇಲ್ಲದೆ ಇಡು" (ಗಂಗಾಮ. ೫). 'ತೆರ್ಪಂಬಡೆ' ಪರಾ. △ **ತೆಱಂಪು** : ೨. ತಂಪಿನೊಳಗೆ ನಡೆಸುವನು ಸೇನೆಯನು ತೆಱಂಪನಱಿದು ಬಿಡಿಸುವನು (ಭರತ. ೨೭-೯). △ **ತೆಱಂಬು** : ೧. ನೆಱಿದಾಯುಷ್ಯಮೆ ಮಿಟ್ಟುವನಱಿಸುವ ತೆಱದಿಂದಮವರ ಪೋಟಱಿಯನೆ ಬಂದಱಿಸಿ ಸಭಸ್ಥಳದೊಡವಿಡ ತ[ತೆ]ಱಂಬು ಕಳನಾಗಿ ಕಾದಲೆಂದಿರ್ದವರಂ (ಶಾಂತಿಪು. ೩-೬೪); ತದ್ದಿವ್ಯರಥಮನಾ ಫಣಾಧರನೆ ಸಾರಥಿಯಾಗೇಱೆ ಗಗನಕ್ಕೆ ನೆಗೆದಂಬರದ ತೆಱಂಬ ಕಳನಾಗಳುಂಬಮಾಗೊಡ್ಡಿಸಿಂದ ವಿದ್ಯಾಧರವರೂಥಿನಿಯಂ ನೋಡಿ (ಚಂದ್ರಪು. ೬-೨೭ ವ) ; "ಸ್ಥಾನ, ಪ್ರದೇಶ" (ಶಬ್ದ.). ೨. ತನುವಿನೊಳಾದ ಜಲ್ಲಮಲಮಾಭರಣಂ ಪುಲಿಯಿರ್ಪುದೊಂದು ಕಾನನದ ಗುಹಾಂತರಂ ಮನೆ ಪೆರಲ್ಗಳ ಸುಳ್ಳ ತ[ತೆ]ಱಂಬು ಪಾಸು (ಜೀವಸಂ. ೫೦-೨೨) : "ನೊರಜಾಕಲ್ಲಿನ ನೆಲ" (ಜೀವಸಂ. ಕೋಶ) : ಪೌರೋದ್ಯಾನಮೆಲ್ಲಂ ಸುರಕುಜಮೆ ತ[ತೆ]ಱಂಬೆಲ್ಲಮುತ್ಕೀರ್ಣಕೇದಾರಮೆ (ಅನಂತಪು. ೩-೬). ೩. ಇಡಿದಿರೆ ರೋಮಕೂಪದೊಳಗುರ್ಚಿದ [ ಸಾಲ ] ಸರಲ್ಗ[ಳುಂ ತೆಱಂಬಿಡಿದಿರೆ ಬೆಟ್ಟುವೋ] ಗುರ್ಡಿಸಿದಂತೆ ನೆಱಲ್ದಿರೆ . . . ಬಿಟ್ಟದೇನೆಸೆದನೋ ಶರಶಯ್ಯೆಯೊಳಂದು ಸಿಂಧುಜಂ (ಪಂಪಭಾ. ೦೩-೬೨). "ತೆಱಂಬಿಡಿದರೆ-ನಾನಾತೆರನಾಗಿ" (ಪಂಪದೀ. ೫೩೪). **ತೆಱಹು** : ೨. ಹರಿಯಂತರ ವಿಶಾಲ ಮಹಾಸಭಾ ವಿಸ್ತರಣ ಪದದಲಿ ತೆಱಹ ಕಾಣೆನು (ಕುಮಾವ್ಯಾ. ೦೩-೩೨). ೩. ಬೆರಣೆಯನಾಯಲಲ್ಲದೆ ಅಟ್ಟುಣ್ಣ ತೆಱಹಿಲ್ಲವೆನಗೆ (ಬಸವ. ೨೬೦) : ಅತ್ತಲಾ ಕೋಳಾಹಳದಲಿರಲಿತ್ತಲಾದುದು ಜೂಜು ನಿಮ್ಮ ವಿಪತ್ತು ಕಂಡುದು ತೆಱಹ ತಪ್ಪಿಸಿ ನಮ್ಮ ಸುಳಿವುಗಳ (ಕುಮಾವ್ಯಾ. ೨೨-೨೬) : ತೆಱಹಿಲ್ಲ ತೆಱಹಿಲ್ಲವಯ್ಯಾ ನುಡಿಗಡಣಕ್ಕೆ (ಅಜಂಡೇ. ೩೩೮-೫೦). ೪. ಉರುಪ

ಭಂಡಾರದ ಮಹಾರ್ಘದ ನೆಱವಣಿಗೆ ಗಾಢಿಸಿತು ಬೀದಿಯ ತೆರಹು ಕೆತ್ತವು ಹೊತ್ತ ಸರಕಿನ ಬಹಳ ಬಂಡಿಗಳ (ಶಬ್ದಾ.ಗ. ೪-೧೬). ೬. ಕಾಣ ಬಾರದ ಘನವ ಹೇಳಬಾರದಾಗಿ ಹೇಳುವುದಕ್ಕೆ ನುಡಿಯಿಲ್ಲ ನೋಡುವುದಕ್ಕೆ ರೂಪಿನ ತೆರಹಿಲ್ಲ (ಲಿಂಗವ. ೬೦-೪೭). ೯. ಭೇದ ; ವ್ಯತ್ಯಾಸ ; ಅಂತರ : ತೆರಹಿಲ್ಲದ ನಡೆ ತೆರಹಿಲ್ಲದ ನುಡಿ ತೆರಹಿಲ್ಲದ ಸಂಧಾನಣೆಯ ಸಂಬಿವು (ಬಸವ. ೯೧೮); ಎನಗೆ ತನಗೆ ತೆರಹಿಲ್ಲದಂತೆ ಮಾಡಿ ತೋಱಿದನು (ಮಹಾದೇ. ಬ.೩೩-೪೧) ; ಪರಶಿವನೇ ಲಿಂಗವಾ ಪರಮಾತ್ಮನೇಯಂಗವೆರಡ ಱೊಳ್ ತೆರಹಿಲ್ಲದಿರ್ಪುದೇ ಸಂಯೋಗ (ತಿಲಕ. ೬೦-೬೭). ೧೦. ಶಕ್ಯತೆ ; ಸಾಧ್ಯತೆ (?): ಮಹಾದೇವಿಯಕ್ಕನ ನಿಲವ ಕೊಂಡಾಡುವುದಕ್ಕೆ ತೆರಹಿಲ್ಲ ಕಾಣಾ (ಅವಚಂ. ೨೯೬-೧೧೧೮). ತೆಱಪು: ೧. ಹರಿತರಯಂತ್ರಾಂಬು ಧಾರಾವಳೀಸ್ಪರ್ಶನಸೌಖ್ಯಾಪೇಕ್ಷೆಯಿಂ ಭೋಂಕನೆ ಪೊಲಿದೆಱೆವಂ ಪೆತ್ತ ಪೋಲ್ ಶೋಭೆವೆತ್ತಳ್ (ಅಗವಿ. ೧೪-೧೦೫).

ತೆರವಾಗು, ತೆರಪಾಗು= ೧. ತೆರೆ ; ಬಿಚ್ಚು ; ಬಯಲಾಗು : ಅಱುವು ಮಱವೆ ಎರಡ ನೂಂಕಿ ನಿಂದರೆ ಮುಂದೆ ಕಣ್ಣು ತೆರವಾಗಿ ತೋಱುವ ಬಯಲೇ ಲಿಂಗದ ಬೆಳಗು (ವಚನಸಂ. ೫೩೨-೧೧೬); ಇನಿಯನನೆಯ್ದೆ ಸಮ್ಮುಖ ದೊಳೀಕ್ಷಿಸಲಣ್ಮದೆ ಮುಗ್ಧೆ ಪಾರ್ಶ್ವಯಾಯಿನಿ ತೆರವಾಗೆ ನೋಟ್ಟ ನಯನೇಂದ್ರಿಯದೊಳ್ ಸಕಲೇಂದ್ರಿಯಂಗಳಂ . . . ಸಲಿಪ್ಪನಿತಂವರಂ ಕಡಂಗಿ ಕರಗಣ್ಣದಳಣ್ಮದ ಘರ್ಮವಾರಿಯಿಂ (ಅನಂಪು. ೬-೬೦). ೨. ವಿಸ್ತಾರವಾಗು ; ವಿಶಾಲವಾಗು : ಪಂಚಾಗ್ನಿದೀಕ್ಷಿತರೂ ಕೋಡಿಯನೂ ತೆರವಾಗಿ ತೆಗಿಸಿ (ಎಕ. IX, ಮಾಗಡಿ. ೫೭-೫ : 1369 ?); ಶ್ಲೇಷ್ಮಪ್ರಕೃತಿ ಯುಳ್ಳ ಪುರುಷನು... ತೆರವಾದ ಹಣೆಯುಳ್ಳವನಾಗಿ ಹೊದಱಾಗಿ ಕಪ್ಪಾದ ಕೇಶಪಾಶವುಳ್ಳವನಾಗಿಹನು (ವೃದ್ಯಸಾ. I, ೧೭). ೩. ಖಾಲಿಯಾಗು ; ಬರಿದಾಗು : ಕೆಲವು ಸದಸ್ಯರ ಸ್ಥಾನಗಳು ತೆರವಾಗಿ ಹೊಸ ಚುನಾವಣೆ ಗಳಾದುವು (ದಿಲ್ಲಿಪ. ೧೩೩). ತೆರವು ಮಾಡಿಸು = ಖಾಲಿ ಮಾಡಿಸು ; ಬರಿದು ಮಾಡಿಸು ; ದೂರ ಕಳುಹಿಸು : ಎಲ್ಲರ ತೆರವು ಮಾಡಿಸಿ ಎಂದಳೇನೆಂದುಸುರಬಹುದೀ ಬೆಂದ ಬಯಕೆಯ ನಿನ್ನದೆಯನಲಗಿಂದಿಱಿದು ಹರಿದು ಬಂದ ನೆತ್ತರನೀಂಟಬೇಕೆಂಬೊಂದು ಬಯಕೆಯಂ ಪುಟ್ಟಿತೆನಗೆ ... ಎಂದಳು ಭೂಪರಸ ರಾಣಿ (ಸಾಳ್ವಭಾ. ೦೯-೪೫). ತೆರವುಮಾಡು, ತೆರಹು ಮಾಡು = ೧. ತೆರೆ ; ಬಿಚ್ಚು : ದಕ್ಷಿಣದಿಶಾಂತದೊಳಗೆಲರು ತಣ್ಣನೆ ತೀಡೆ ಕೋಕಿಲಂಗಳ್ ಕೊರಲ್ದೆರೆವು ಮಾಡೆ (ಭಾರತಿಂ. ೪-೧೬) ; ಉದಯ ಕಾಲದಲಪ್ಪದಳಮುಂಟಪವ ತೆರಹುಮಾಡಯಮ್ಮ (ಶಿವಗೀ. ೧೩೩-೭೯೩ ವ). ೨. ಎಡೆಮಾಡು ; ಜಾಗಮಾಡು : ಮುಱಿದು ಕೋಟೆಯನೀಂದು ಕಡೆಯಲಿ ತೆರಹುಮಾಡಿ ಮಹಾರಥರು ಜನಪಱಿಯುದಪೊಲೊಳಹೊಕ್ಕು (ಕುಮಾವ್ಯಾ.ಗ. ೯-೧೪). ತೆರಪಿನ ಶಿಕ್ಷಣ= ಅವಕಾಶ ಸಿಕ್ಕಾಗ ವಿದ್ಯೆ ಕಲಿಯುವ ವಿಶೇಷ ಶಿಕ್ಷಣವ್ಯವಸ್ಥೆ : ಇತ್ತೀಚೆಗೆ ವಿಶ್ವವಿದ್ಯಾಲಯಗಳು ತೆರಪಿನ ಶಿಕ್ಷಣಕ್ಕೆ ಅವಕಾಶವನ್ನು ನೀಡುತ್ತಿವೆ (ರೂಢಿ).

[ ತೆಱ[1] + – ಪು./ತಮಿ. ತಿಱಪ್ಪು ; ಮಲ. ತುಱಪ್ಪು ; ತುಳು. ತೆರಪು ; ತೆಲು. ತೆಱವ, ತೆಱಪಿ ]

ತೆರಪುಗಣ್, ತೆರಪುಗಣ್ಣು (ನಾ). ವಿಶಾಲವಾದ ಕಣ್ಣು ; ಅಗಲವಾದ ಕಣ್ಣು : ತೆರಪುಗಂಗಳ ತೆಳುವಸಿಱ ತರುಣಿ ನಿನ್ನೊಱಕವನಿರದುಸುರುವೆನು (ನೇಮಿಸಂ. ೨೦-೬೧). ತೆರಪುಗಣ್ಣು : ಎವೆಪೊಯ್ಯದೆ ತೆಱದ ತೆರಪುಗಣ್ಣು ಬೆಳಲುವಂದದಿ ನೆಱೆ ನೋಡಿ (ನೇಮಿಸಂ. ೩೩-೧೩೧).

[ ತೆರಪು + ಕಣ್ ]

ತೆರಪುಗಣ್ಣು 'ತೆರಪುಗಣ್' ನೋ.

ತೆರಪುಗಾಣ್, ತೆರಹುಗಾಣ್ (ಕ್ರಿ). ೧. ಅವಕಾಶವನ್ನು ಕಾಣು ; ಅನುಕೂಲವನ್ನು ಕಾಣು : ತಮ್ಮ ಮೆಯ್ಯೊರೆದ ರವಿಕಿರಣಕವಚ ಮೊಪೊರ್ದಲೆ ತೊಲಗೆ ತೆಱಪುಗಂಡು ತೂಳ್ದಿ ಸುತ್ತಿ ಮುಱಿಯುಟ್ಟುವಂಗ ಭವನಾಟಿಡಿಗೆ ಬೆಗಡುಗೊಂಡು ಕಲ್ಲೆಣಿಸಿದಂತೆ ನಲ್ಲಳಂ ಬಿಸುಟು ದೆಸೆಗೆಟ್ಟು ಚಕ್ರವಾಕಂ ಕೋಕನದಸದನದಿನೆಟ್ಟು ಪೋಗೆಯುಂ (ಪರ್ವಪು. ೬-೩೩ ವ) ; ಆ ಕುಟಿಲನಾಕೆಯೊಳ್ ತೆಱಪುಗಾಣದೆ ಮುಳಿದು (ಅನಂಪು. ೧೦-೯೪ ವ). ೨. ಬಿಡಂವನ್ನು ಕಾಣು ; ಕೊನೆಗಾಣು : ಸಂಸಾರಾನುಯಾತ್ರೆಗೆ ತೆರಪುಗಾಣನುಪದ್ರವದ ಬಹುವಿಧ ಪರಾಭವಕೆ (ನಿಘಾಗ. ೪-೧೮-೩೫). ತೆರಹುಗಾಣ್ : ೩. ಮಾರ್ಗವನ್ನು ತಿಳಿ,–ಅರಿ: ತೆರಹುಗಾಣದಱುಹು ಗುಂದಿ ಮಱುಹುಗೊಂಡೆನೆನ್ನ ಗುರುವೆ (ಹಂಪೆರ. ಹ. ೫೦೦-೧೩).

[ ತೆರಪು + ಕಾಣ್ ]

ತೆರಪುಗಾಣಿಸು, ತೆರಪುಗಾಣಿಸಂ (ಕ್ರಿ). ಬಿಡಂವು ಕಾಣಿಸು ; ಎಡೆ ಬಿಡು: ಭೂ ದಿವಗಳ ಕಟ್ಟಪಂದದ ಕಿಂದೂಳಿ ಹಾದಿಯ ತೆರಪುಗಾಣಿಸದ ವೇದೋ ಜಿಯು ಬಲುಗುದುರೆ ಸಹಿತ ನೆಱೆ ಕಾದುವೊಡ್ಡೆತಂದನಾಗ (ಕಂಸವಿ. ೧೪-೮೧). ತೆರಪುಗಾಣಿಸು: ಆರು ಜೀವವನಿಂತು ಸೆಳೆವರು ದಿವ್ಯಶಾಂತಿಯ ಧಾಮಕೆ ? ತೀರದಾಸೆಗೆ ತೆರಪುಗಾಣಿಸಿ ವಿಶ್ವತತ್ವವಿರಾಮಕೆ ? (ಕವಿಶಾ. ೮೮-೧೪). [ ತೆರಪುಗಾಣ್ + – ಇಸು[3] ]

ತೆರಪುಗುಡು 'ತೆರಪುಗೊಡಂ' ನೋ.

ತೆರಪುಗೊಡು, ತೆರಪುಕೊಡಂ, ತೆರಪುಗೊಡಂ, ತೆರಹುಗಂಡಂ, ತೆರವು ಗಂಡಂ, ತೆರಹುಕೊಡು, ತೆರಹುಗುಂಡಂ, ತೆರಹುಗೊಡಂ (ಕ್ರಿ). ೧. ಸ್ಥಳ ಕೊಡಂ ; ಎಡೆ ಕೊಡಂ : ಪುದಿದಿರ್ಪ ಸಕಲಸಾಮ್ರಾಜ್ಯದ ಪಟ್ಟಸ್ಥಿತಿಗೆ ಪದೆಪಿನಂ ಮುನ್ನಮೆ ತಾನದು ತೆರಪುಗೊಟ್ಟುದೆನಲೆಸೆದುದು ಬಾಲನ ಭಾಳಮಾ ವಿಶಾಲತೆಯಿಂದಂ (ಕುಸುಮಾ. ೬-೧೩೧). ೨. ಅವಕಾಶ ಕೊಡಂ ; ಸಮಯ ಕೊಡು : ಬೆಱಗಿದೇನ್ನೆ ಮೊದಲು ಬದಬ್ಬರದ ರಕ್ಕಸನಂತೆ ನೋಟಕೆ ತೆರಪುಗೊಡುತಿದೆ ಚಿತ್ರವಿವನ ವನಲ್ಲವಲೆ ನೋಡು (ಕೊಂಡಿಲಾ. ೬-೨೮-೧೦). ತೆರಪುಕೊಡು : ೧. ದೂರದೂರ ಇಡು; ತೆರವುಕೊಡು; ಅಂತರ ಬಿಟ್ಟು ಇಡು (Space. ಶಕ್ತಿನಿ. ೭೭). ತೆರಪುಗೊಡು : ೨. ಇಂಧನವನಟ್ಟಗ್ನಿದುರಿವನಂದ ಸಂಸಾರ ದೊಳುಯಿನಿತೊಂದುಯಚ್ಚುತಲ್ಯೆದೆ ಪರಿಗ್ರಹ ತೆರಪುಗೊಡದಂತೆ (ಜಿನಸಾ. ೭೯). ತೆರಹುಗುಡು : ೨. ಅಂತರಿಕ್ಷದ ತೆರದೊಳಾ ಶರಣರಿಕ್ಕೆಗಂ ತೆರಹುಗುಡುವಂ ಶಿವನೊಲು ಸಂತತಂ (ಬಸವ.ಪು. ೬-೪೭). ತೆರವು ಗುಡು : ೧. ಪೊಣರ್ವಕ್ಕಿ ವಿಳಾಸಮನೆನಿಸಂ ತಳೆದ ಘನಕುಚಂ . . . ಹಾರವಾಣಿಗೆ ನುಸುಳಲ್ಕೆ ತೆರಪುಗುಡದನವರತಂ (ಅಗವಿ. ೧೦-೩೦) : ವಿಕಾಸಲಕ್ಷ್ಮಿಯ ಬರವಿಂಗೆ ತೆರಪುಗುಡುತಲಿರ್ದು ಕುವಲಯಂಗಳ ಕಿಱಿಸ ಟ್ಟಳೊಳ್ ಪೊಕ್ಕು . . . ಸಾಯಂತನಸಮಯ.ಸಮಿರಾಣಂ ತೀಡುತ್ತು ವಿಹಾರಗಳ್ (ಕುಸುಮಾ. ೪-೩೯ ವ); ಬೆಂಗದಿರ್ಗಂ ತಣ್ಗದಿರ್ಗಂ ತೆರಪುಗುಡದ ಮರದುಱುಂಗಲ ಕಟ್ಟಲೆಯಂ ಕಾರಿರುಳ್ಗೆತ್ತು ಸುಱಿಯಲನುಗೆಯ್ದು ಗೂಗೆ ಗಳುಮಂಂ (ಕಲ್ಯಾಕಾ. ೨೩೪). ೨. ಇರುಳುಂ ಪಗಲುಂ ಜೀರೆನುತಂ ತೆರಪು ಗುಡದೆ ಕಱಿದುವು ಮಳೆಗಳ್ (ಗಿರಿಕ. ೯-೪೯) : ಓದಿ ಕೇಳಿಸುತ್ತಾ ಭ್ರಮರಿಕೆ ಪರಿಮಳಿಗೆ ತೆರಪುಗುಡಲೊಡಂ (ಅನಂಪು. ೬-೮೦ ವ). ತೆರಹುಕೊಡು : ೨. ತೆರಹುಕೊಡದಿರಿ ಸೋತ ಕರ್ಣನ ಹಱಿಬವೆಮ್ಮದು ನೂಕುನೂಕೆಂದು ರವಣಿಸಿದರು ಮತ್ತೆ ಕೌರವನನುಜರವಗಡಿಸಿ (ಕುಮಾವ್ಯಾದ್ರೋ. ೧೩-೨೭). ತೆರಹುಗುಡು : ೧. ತನುವಿನೊಳಗೆ ತೆರಹುಗು[ಹಾಕಾಂ. ಗೊ]ಡದೆ ತೀವಿ ನಿಲ್ಲು ಹಂಪೆಯರಸ (ಹಂಪೆರ. ಹ. ೫೦೩-೩೭). ೨. ಎನ್ನಲ್ಲಿ ನಾನಱಿದೆನೆಂಬ ಅಱಿವಿಂಗೆ ತೆರಹುಗುಡದೆ (ಶಿವಗೀ. ೧೩೦-೬೪೪) ; ಅಱಿಪಿ ಪೊಗಲು ಮ್ಮಾಯ ನಿಕರಕೆ ತೆರಹುಗುಡದ ಪರಸ್ಪರರೂಪನು (ಕುಮಾವ್ಯಾಭೀ. ೬-೧೬) : ಕರಣದುಪಹತಿಗೆ ತೆರಹುಗುಡದವನುಭವಿಸು (ಅನುಸಾ. ೮-೩-೯) ; ತೆರಹು ಗುಡದೊರ್ವರೊರ್ವರ ಮೇಲೆ ಮುಳಿದು ಜಱಿದೆಟ್ಟಿದಿರ್ದರದೊಳು

(ಭ್ರಮಿಭಾ. ೧೨-೨೦). **ತೆಱಹುಗೊಡು** : ೧. ಗೌಳ ತೆಱಹುಗೊಡು ಲಾಳ ವ್ಯಾಯಿತ್ತು ಗುರ್ಜರ ಬಿನ್ನವಿಸು (ಬಸರ. ೬-೨೬); ತರಣಿಗುಂಟೇ ಸಮಯ ವನಿಲಗೆ ತೆಱಹುಗೊಡುವವರಾರು (ಕುಮಾ. ೧೨-೩); ಒಱಲಿ ಫಲವೇನರಸ ಬಟ್ಟೆಯ ತೆಱಹುಗೊಡಿರ್ದೈ ಹೋಗಲೀ ನೃಪರು (ತೊರವೆ. ೪-೩-೨೪) : ಕಿಱುಬಿದಿರುಗಳ ಕಂಟಕಿಗಳು . . . ಧರಣಿಯೊಳ್ಪಸರಿಸಿಕೊಂಡು ಪಚ್ಚಿಗೆಗೆ ತೆಱಹುಗೊಡದೆ ಮುಸುಕಿಹುವು (ಕಂಪಿ. ೦೮. ೪೩). ೨. ಮುಟ್ಟಿದಹೆನೆಂದು ಭಾವಿಸಹೋದರೆ ತೆಱಹುಗೊ [ಪಾಠಾಂ. ಗು]ಡದು (ಅವಚಂ. ೯೮-೪೪೨) ; ಬಾಯಿಬಿಡಿಕರು ನಾವು ನೀ ಗರುವಾಯಿಕಾಱನು ಬಯ್ಯ ಬಿರುದಿನ ಬಾಯ ನೋಡಾಯೆನುತ ತೋಟಿಗೆ ತೆಱಹುಗೊಡದೆಸಲು (ಕುಮಾ.ಭ. ೪-೪).

[ ತೆಱಪು + ಕೊಡು₁ ]

**ತೆಱಪುಗೊಳ್,** ತೆಱಹಂಗೊಳ್ (ಕ್ರಿ). ೧. ಎಡೆಯನ್ನು ಪಡೆ ; ವ್ಯಾಪಿಸು; ಸ್ಥಳವನ್ನಾಕ್ರಮಿಸು: ಅಚ್ಚಸೊಗದ ಪೋಲ್ ಬೆಳೆಯುತ್ತುಂ ತೆಱಪುಗೊಳುತ್ತಿರೆ ಮೇನೆಯ ಪೊಟ್ಟಗೊಗೆದುದು ಗರ್ಭಸೂಚನಾ ಸೌಂದರ್ಯಂ (ಗಿರಿಕ. ೩-೩೬). ೨. ತೆರೆ ; ಬಿಚ್ಚು ; ತೆರವಾಗು : ಕೋಗಿಲೆಯ ಕೊರಲೂ ತೆಱಪುಗೊಂಡಿತು (ತಿಮ್ಮ.ಅ. ೫-೨). **ತೆಱಹುಗೊಳ್** : ೧. ಎನ್ನ ಮನವ ತನ್ನತ್ತ ಸೆಳೆದು ಮಱಹ ಮಾಣಿಸಿ ಕುಱುಹಳಿದ ತೆಱಹುಗೊಂಡ ಸೌರಾಷ್ಟ್ರ ಸೋಮೇಶ್ವರಲಿಂಗವ ಬಲ್ಲರೆ ಬಲ್ಲೆ (ಆದಯ. ೨೨-೬೦). [ ತೆಱಪು + ಕೊಳ್₁ ]

**ತೆಱಪುವಡೆ,** ತೆರ್ಪಂಬಡೆ (ಕ್ರಿ). ೧. ಸ್ಥಳವನ್ನು ಪಡೆ,–ಹೊಂದು : ಮುಂದೆ ಕೆಱಪುವಡೆಯದೆ ಸುತ್ತಂ ಪರಿವಡೆದುದು ಪುರಜನಂ (ವರ್ಧಪು. ೫-೫೦). ೨. ಅವಕಾಶವನ್ನು ಪಡೆ,–ಹೊಂದು : ತೆಱಪುವಡೆದಂಗಜಂ ಕೆಯ್ಸೋಱಗೊಳೆ ನೋಟಕರ ಮನಮನಾಗಳ್ (ಶಂಶಧಾ. ೫-೬೭) ; ತೆಱಪು ವಡೆದಡೆ ರುಜೆ ಮೆಯ್ಯೊಳಗುವಿನಮುಂ ಸೋಂಕಿ ನೀಕರುಣತೆಯಿಂ (ಸುಕುಮಾ. ೨-೦೦): ಅಂತು ಪಾಯದಟವೆಲ್ಲಮೆಚ್ಚು ಮುಟ್ಟಿದುಂ ಕುಱಿ ದಟ್ಟಯಾಗೆ ತೆಱಪುವಡೆದಿದಿರೊಡ್ಡಿನ ತೇರೊಡ್ಡುಗಳ್ ಶೂರಸಾರಥಿ ಪ್ರೇರಣದಿನೋರೊಂದು ಪತ್ತೆಸಾರ್ಚಿದಾಗಳ್ (ಚಂದ್ರಪು. ೧೧-೭೪ ವ). **ತೆರ್ಪಂಬಡೆ** : ೩. ತೆರವಾಗು ; ಖಾಲಿಯಾಗು ; ಬರಿದಾಗು : ಕೆಸಱು ಬರ್ಪೆಟ್ಟೀಟ್ ನೀರ್ಬೊಬ್ಬುಳಿಸಿ...ತೆ[ಪಾಠಾಂ. ನೆ]ರ್ಪಂಬಡೆದಱುಗೆಟ್ಟಗಳ್ ಬೀಡೆವೋಗಿರ್ದ ತಣ್ಣೀರೊಸರ್ದಾಣಂ ಬಾವಿಯಾದತ್ತು (ಜಗವಿ. ೦೭-೬೨). P ಇದಂ ಛಂದಸ್ಸಿಗಾಗಿ ಮಾಡಿಕೊಂಡ ರೂಪ. [ ತೆಱಪು + ಪಡೆ₁ ]

**ತೆಱಪುವಾರ್** (ಕ್ರಿ). ಅವಕಾಶವನ್ನು ನೋಡು,–ನಿರೀಕ್ಷಿಸು ; ಸಮಯಂ ಕಾಯಿಸಿ: ಬಂದಿಕಾಱನಂತೆ ತೆಱಪುವಾರ್ದು ಒಡಿವ ಶಾಕಿನಿಯರಿಂ (ಕಾವ್ಯಸಾ. ೫೨೯ ಕಂದ್ರಳ) ; ತೆಱಪುವಾರ್ದು ನನೆವಿಲ್ಲ ಬಲ್ಲಹನಂ ಕಂಡು (ಅಬ್ಬಿಕಾ. ೦೮೮). [ ತೆಱಪು + ಪಾರ್₁ ]

**ತೆಱಪುವೆಱು** (ಕ್ರಿ). = ತೆಱಪುವಡೆ ೨ : ತೆಱಪುವೆತ್ತು ಪಾಪೇಭಕಂಠೀರವ ನೆಚ್ಚೊಂದಪೂರ್ವಸಾಯಕಂ ಚಿತ್ರಾನೀಕನಂ ನೆರೆಗೊಳ್ವುದುಂ (ಶಾಂತಿಪು. ೪-೩೩ ವ) ; ಅಂತೆಚ್ಚ ಮುನಿಕರಮನೋರಂತಿರೆ ತಱತಱದು ಕಾದೆ ಪಾಂಚಾಳನ ವಿಕ್ರಾಂತತೆಗೆ ವಿಳಯಕಾಲಕೃತಾಂತನ ತೆಱದಿಂದೆ ತೆಱಪುವೆತ್ತಾ ಕ್ಷಣದೊಳ್ (ನೇಮಿಪು. ೧೨-೧೩೦). [ ತೆಱಪು + ಪೆಱು₁ ]

**ತೆಱಯಪ್ಪೆ**(?) (ನಾ). (?) : ಶ್ರೀಮುಖಮಾಣಿ ಪರಮಸುಭಗನ್ ಪಗೆವರ ಗನ್ಧಾಸ್ತಿ ಪಾರ್ವ್ವರ ಇಚ್ಚೆನತ × × × ಪೂರ್ವ್ವಾಚಾರದಾ ಈ ತೆಱಯಪ್ಪೆ ಈಯೆಮನೊಡ್ಡೆ ಭೂನ್ನರನಂ ಚೋಲಮಹಾರಾಜನಂ ಮೂಂದಿವಪ್ಪಾರ್ವ್ವರಾನ್ನೊನ್ದಾ (ಎಕ. XVI, ಮದ್ರ.ಗಿ. ೦೦೮-೩ ; ೮ನೆಯ ಶತ). [ ? ]

**ತೆಱವಲಿತನ** (ನಾ). ಬಾಲಿಶಭಾವ ; ದಡ್ಡತನ ; ಅವಿವೇಕ: ಬಱು ವಲಿಯರ ಮಾತಂ ಕೇಳ್ದಱಯದೆ ದೆಸೆಗೆಟ್ಟು ಜೀವಮುಂ ಗತಿಯುಂ ಕೇಳಱನುಂ ತಾವೊಳವೆಂಬೀ ತೆಱವಲಿತನವೇಕೆ ನಿನಗೆ ಭುವನಾಧಿಪತೀ (ಧರ್ಮಾಮೃ. ೯-೪೦).

[ P ಇದು 'ತೆರುವಲಿತನ' ಎಂಬುದರ ಅಪಲಿಖಿತವಿರಬಹುದು ]

**ತೆಱವಾಳಿಕೆ** (ನಾ). ಒಂದು ಬಗೆಯ ತೆರಿಗೆ: ಆ ಸೀಮೆಯ ದೇವರ ಸ್ಥಾನಿಕರದಲು ಸ್ಥಾನಿಕರ ಮನೆ ಮೊದಲಾದ ಮದವಳಿಕೆ ಸಲು × × ರಾಯ ಕಾಣಿಕೆ ಸುಂಕ ತೆಱವಾಳಿಕೆ ಸಹ ಸರ್ವ ಮಾ × × (ಎಕ. x, ಕೋಲಾರ. ೯೪-೦೭ ; 1406). [ <ತೆಱ₂ ? ]

**ತೆಱವಿ** (ನಾ). = ತೆಱಪು ೧. 'ಕಣ್ದೆಱವಿ' ಪರಾ.

[ ತೆಱ¹₁ + – ವಿ ]

**ತೆಱವಿಡು** (ಕ್ರಿ). ಪಣವಾಗಿ ಇರಿಸು ; ಶುಲ್ಕವನ್ನಾಗಿ ಇಡು : ಆಯುಧಕೆ ತೆಱವಿಟ್ಟೆನ್ನ ನಿನ್ನಾಯುಷವ ಹಿಂದಿಕ್ಕಿಕೊಂಬನ ತಾಯೆನುತ ಬೊಬ್ಬಿಱದು (ಕುಮಾ.ದ್ರೋ. ೦೬-೫೨). [ ತೆಱ₂ (<ತೆಱ¹₃) + ಇಡು₁ ]

**ತೆಱವು₁**, ತೆರವು₁ (ನಾ). ೧. ಎಡೆ ; ಸ್ಥಳ ; ಜಾಗ : ತೆಱವಿಂ ನೀಳ್ಕೆ ಗವಾಕ್ಷಮಂ ತಱಿವ ನೀರಂ ಮುತ್ತುಗಳೊಳ್ ತೀವಿಕೊಂಡೆಱವ . . . ಓಪರಟ್ಟಱಲಂಪಂಗನೆಯರ್ಗೆ ರಾಗಮನದೇಂ ಮಾಡಿತ್ತೊ ರತ್ನಾಂತರದೊಳ್ (ವರ್ಧಪು. ೩-೫೨) ; ಉತ್ತುಂಗಸವಲಯದೊಳದ್ದಂಗೆಡೆವ ಸಾರ್ದ್ರ ಕಬರೀ ಭಾರಮುಂ ತೆಱವಿನೊಳ್ ಪೊಱಮುಯ್ಯುಂಗೆಱೆದು ನೂಂಕುತ್ತುಂ (ಅನಂಪು. ೭-೫೦ ವ). **ತೆರವು₁** : ೧. ಉರುವಲು ತುಂಬಲು ಎದುರಿನಲ್ಲಿ ತೆರವು ಇದೆ (ಅಡುಸಾ. ೨೨). ೨. ಅವಕಾಶ ; ಬಿಡುವು : ಪ್ರೇರಣೆಯಾದಾಗಲ್ಲ ಕಾವ್ಯವು ಮನದಲ್ಲಿ ರಚಿತವಾಗಿ ತೆರವು ದೊರೆತಾಗ ಅದನ್ನು ಕಾಗದದ ಮೇಲೆ ಬರೆಯುವವರೆಗೂ ಅದು ಸಮಗ್ರವಾಗಿ ಸ್ಮರಣೆಯಲ್ಲಿ ಉಳಿಯು ತ್ತಿತ್ತು (ಮಹಾಯೋ. ೦೮೩). ೩. ಖಾಲಿಯಾದುದು ; ಬರಿದಾದುದು : ಬರಿದೋ ಬರಿದು ತೆರವೋ ತೆರವು ಬಡವರ ಬಗ್ಗರ ತುತ್ತಿನ ಚೀಲಾ (ಗರಿ. ೬೦-೦೮) ; ಭೋಜನಶಾಲೆಯನ್ನು ಪ್ರವೇಶಿಸಿ ಎಡಬಲಕ್ಕೆ ನೋಡದೆ ತೆರವಿದ್ದ ಒಂದು ಎಲೆ ಹಿಡಿದು ಕುಳಿತು (ಹಲುನಿ. ೧೧) : ಎರಡನೆಯ ನಂಬರ ಶಾಲೆಯಲ್ಲಿ ಒಂದು ಸ್ಥಳವು ತೆರವಿರುವದು (ಸ್ವಾಮಿ. ೫) ; ಇರವಿನಲ್ಲಿ ಆ ತೆರವು ತುಂಬಿ ತೆರೆಯಾಡುವಂತೆ ಕಡಲು ಅರಿವಿನೊಂದು ಹೊಸ ಬರವಿಗಾಗಿ ಹಾತೊರೆಯುತಿಹುದು ಒಡಲು (ನಂಕುಮ. ೩೬-೩).

**ತೆಱವುಮಾಡು,** **ತೆರವುಮಾಡು** = ೧. ಬರಿದು ಮಾಡು; ಖಾಲಿ ಮಾಡು : ಮೆಱಿವ ಮಣಿಭವನವನು ರವಿಜಗೆ ತೆಱವುಮಾಡಿದ (ಕಾಶಿಂ. ೪೪-೫೦) : ಹಿತ್ತಲಲ್ಲಿಯ ಒಂದು ಕೋಣೆಯನ್ನು ತೆರವುಮಾಡಿ ನೀಲಾಂ ಬರಿಯು ಇರುವಂತೆ ವ್ಯವಸ್ಥೆಮಾಡಲಾಗಿದ್ದಿತು (ಜಯಂತ. ೪೨೬). ೨. ಅವಕಾಶ ಮಾಡಿಕೊಡು : ಆ ಗಡಿಯಾರ . . . ತಡವಾಗಿ ಶಾಲೆಗೆ ಬಂದರೂ ಬೇಗನೇ ಮನೆಗೆ ತೆರಳಲು ತೆರವುಮಾಡಿಕೊಡಲು ಪೂರ್ಣ ಸಹಕರಿಸುತ್ತಿದ್ದಿತು (ರೂಪಸಂ. ೬೦). **ತೆರವಾಗು** = ೧. ಬಿಡುವಾಗು ; ಪುರಂಸೊತ್ತು ಹೊಂದು : ಈಗ ಸಾಹೇಬರು ತೆರವಾಗಿದ್ದಾರೆ. ನೀವು ಸುದ್ದಿ ಮುಟ್ಟಿಸಿರಿ (ಜಮಿನ್ದಾ. ೦೫೨). ೨. ಖಾಲಿಯಾಗು : ಆ ಮನೆ ತೆರವಾಗಿದೆ (ರೂಢಿ).

[ ತೆಱ¹₁ + – ವು./ತಮಿ. ತೆಱವು ; ಮಲ. ತುಱವು ]

**ತೆಱವು₂**, ತೆರವು₂ (ನಾ). ೧. ಕಾಣಿಕೆ ; ಕಪ್ಪ : ತಮ್ಮ ಬೀರಮುಂ ಬಿಂಕಮುಮಂ ತೆಱವುಂ ತೆಲ್ಲಂಟಿಯುಮೆಂದರಿಕೇಸರಿಗಾಗಳೀವಪೋಲ್ ಬೆನ್ನಿತ್ತರ್ (ಶಂಶಧಾ. ೩-೬೨). ೨. ತಪ್ಪುಕಾಣಿಕೆ. **ತೆರವು₂** : ೩. ಕನ್ಯಾ ಶುಲ್ಕ; ತೆರ : ತೆರವಿನ ಹಣ ಪಡೆದು ಸಾಲ ತೀರಿಸಿ ಗದ್ದೆ ಜಮೀನು ಉಳಿಸಿಕೊಳ್ಳಬಾರದೇಕೆ? (ಮನಕ. ೦೬೧); ಹೆಣ್ಣಿನ ತಂದೆಗೆ ಒಂಬತ್ತುನೂರು ರೂಪಾಯಿ ತೆರವು ಎಣಿಸಿ, ಒಂಬತ್ತುವರುಷದ ಎಳೆಹುಡುಗಿಯನ್ನು ಅವನು ಮದುವೆಯಾಗಿದ್ದ (ಎರಡ. ೪). ೪. ಸಾಲ ; ಕಡ : ಉಪದೇಶ.

ವ್ಯವಹಾರಜ್ಞಾನಗಳು ಕಾವ್ಯದಲ್ಲಿ ಸೇರಬೇಕಾದರೆ ಕಾಂತೆಯರ ನಾಲಿಗೆಯನ್ನು ತೆರವು ತರಬೇಕು (ಸಾಹಿವಿ. ೯೪). 'ತೆಱ³' ಪರಾ.

[ ತೆಱು₁ + – ವು ]

**ತೆಱವೆ, ತೆರವೆ** (ನಾ). ೧. ತೆರೆಯುವಿಕೆ : ತೆಱವೆ, ಪಳವೆ, ಎಳವೆ (ಶಬ್ದಮ. ೨೦೦ ಪ್ರಯೋ). 'ಕಂದೆಱವೆ' ಪರಾ. ೨. ಕಾಣಿಸಿಕೊಳ್ಳುವಿಕೆ ; ಉಂಟಾಗುವಿಕೆ : ತೆಱವೆಯಾದುದು ಭೀತಿ ಬಲು ಬೊಬ್ಬಿಱಿತಕಸುರನ ಧೈರ್ಯ ಕಾಲನ ಮಱೆಯ ಹೊಕ್ಕುದು (ತೊರಠಾ. ೩-೬-೩೦). **ತೆರವೆ** : ೨. ಹೊಳೆದವು ರಥಗಳಾನೆಯ ಮೇಲೆ ಜೋಂಪಾಡಿ ತಲೆಮುಟ್ಟಿ ನಿಂದವಾಳುಗಳೂ ಹಲವೇನು ತೆರವೇನು ತೆರವೆ ಮರವೆಯಿಲ್ಲ (ಸೌಂದಕಾ. ೦೧-೦೯). [ ತೆಱ¹ + – ವೆ ]

**ತೆಱಪೊನ್** 'ತೆಱೆಪೊನ್' ನೋ.

**ತೆಱಸಲಿಕೆ** (ನಾ). ಕಂದಾಯವನ್ನು ಸಲ್ಲಿಸುವಿಕೆ ; ಸುಂಕವನ್ನು ತೆರುವಿಕೆ: ವಲ್ಲಿಗ್ರಾಮದವರು ಅರಮನೆಗೆ ತೆಱುವ ಕುಳದ ಹೊಂನಿನ ವೊಳಗೆ ತೆಱಸಲಿಕೆಯ ಹಂನೆರಡು ಹೊಂನನೂ (ಎಕ. I, ೩೮-೧೬ : 1446).

[ ತೆಱ₂ (<ತೆಱ³) + ಸಲಿಕೆ₁ ]

**ತೆಱಸು** 'ತೆಱೆಯಿಂಸು' ನೋ.

**ತೆಱಹಾರ** (ನಾ). (?): ಮೋಱಹಾರ ನೀಡಿದರೆ ತೆಱಹಾರ ಕೈಕೊಳ್ಳುತ್ತೈದಾನೆ ಅಹುದಹುದು ದೇವರ ಹುಸಿವು ನಮಗೆ ಪೊಸತು ದೆಸೆದಿಕ್ಕಿಲ್ಲ ವಿಶ್ವತೋಮುಖದ ಕೂಡಲಸಂಗಮದೇವಂಗೆ ದೆಸೆದೆಸೆಯಲ್ಲಿ ನೀಡಿ (ಬಸವ. ೧೦೮-೩೨೩): "ತೆರವಿಲ್ಲದೆ" (ಬಸವ. ಕ. ಕೋಶ). [ ? ]

**ತೆಱಹು** 'ತೆಱವು' ನೋ.

**ತೆಱಹುಕೊಡು** 'ತೆಱವುಗೊಡು' ನೋ.

**ತೆಱಹುಗಾಣ್** 'ತೆಱವುಗಾಣ್' ನೋ.

**ತೆಱಹುಗುಡು** 'ತೆಱವುಗೊಡಂ' ನೋ.

**ತೆಱಹುಗೊಡು** 'ತೆಱವುಗೊಡಂ' ನೋ.

**ತೆಱಹುಗೊಳ್** 'ತೆಱವುಗೊಳ್' ನೋ.

**ತೆಱಹುದೋಱು** (ಕ್ರಿ). ಅವಕಾಶವನ್ನು ಕೊಡಂ ; ಎಡೆಮಾಡಿಕೊಡು : ಅಱಸದಿರಿ ಬೇಱತ್ತಲಿತ್ತಲು ತೆಱಹು [ಪಾಠಾಂ. ವು]ದೋಱುವೆ ನೋಡಿ ಸಮರದ ಮೆಱೆವುದುಳ್ಳಡೆ ಮೈಗುಡುವುದಗ್ಗಳಿಕೆ ನಿಮಗೆನುತ (ತೊರಠಾ. ೩-೯-೨). [ ತೆಱಹು (<ತೆಱವು) + ತೋಱು ]

**ತೆಱಹುಮಱಹು** (ನಾ). ೧. ಮೈಮರೆವು ; ತಲ್ಲೀನತೆ: ಇಂತು ಬಸವರಾಜದೇವರು ಲಿಂಗಾರ್ಚನೆಯಂ ಮಾಡುತ್ತಾ ತೆಱಹುಮಱಹಾಗಿರ್ದ ವೃತ್ತಾಂತವಂ ಪ್ರಭುದೇವರು ಎಚ್ಚಱಿಸಿ (ಶೂನ್ಯಸಂ. ೧೦೩-೪೦). ೨. ಉದಾಸೀನತೆ ; ಉಪೇಕ್ಷೆ ; ಅಸಡ್ಡೆ : ಒಡೆಯರು ಮನೆಗೆ ಬಂದುದ ಕಂಡು ತೆಱಹುಮಱಹಾಗಿಪ್ಪನೆ ಭಕ್ತನು (ಚನ್ನವ. ಕ. ೦೨೦-೩೬೬).

[ ತೆಱಹು (<ತೆಱವು) + ಮಱಹು./ತೆಲು. ತೆಱವುಮಱವು ]

**ತೆಱೆಗೆ, ತೆರಿಗೆ, ತೆಱಂಗೆ, ತೆಱಿಗೆ** (ನಾ). ೧. ಸಂಕ ; ಕರ : ನಿಮಗೆ ತೆಱಗೆ ಕಾಣಿಕೆ ಬೇಡಿಗೆ ಬಿರಾಡಯೇನುಂಟಾದದನೂ ನಾಲು ನಿಮಗೆ ಬಿಟೆಲು (ಮೈಆರ್. ೦೯೪೬, ೨-೮ : ಸು. 1554) ; ಹಾಗದ ತೆಱಗೆ ಬೇಕೆಂದು ನಾ ನಿನ್ನೂರ ಬಾಗಿಲ್ಗೆ ಭಟರನಟ್ಟಿದೆನೆ (ಭರತ. ೩೦-೬೨). ೨. ಕಾಣಿಕೆ : ಕಿರೀಟಿಯ ತಲೆಯ ತೆಱಗೆಗೆ ಶಾವೆ ಹೊಣೆಯೆಂದುದು ಭಟಸ್ತೋಮ (ಕುವ್ಯಾಕ. ೨೨-೨೩). **ತೆರಿಗೆ** : ೧. ಯಿಾ ತೆರಿಗೆ ಹಣವಿ ×× (ಎಕ. VII, ಶಿಮಮೊ. ೨೦-೦೦ : ?) ; ಜನರಕ್ಷಣೆಯಗರೆಯದೆ ತೆರಿಗೆ ದಂಡಗಳಾಸೆಗೈವರೆ (ಬಿಜ್ಜಳ. ೬೦-೩೨): ಪ್ರಜೆಗಳಿಂದ ಹೆಚ್ಚು ತೆರಿಗೆ ವಸೂಲು ಮಾಡಬೇಕೆಂಬುದು ನನ್ನ ಸಲಹೆ (ಪ್ರತಾಪ. ೯೦) ; ವೃತ್ತಿಗಳಲ್ಲದರ ಮೇಲೂ ತೆರಿಗೆಗಳು ಕ್ಲುಪ್ತವಾಗಿದ್ದುವು (ಭಾರತ. ೩೫೮). **ತೆಱಗೆ**: ೨. ಕ್ರತುವಿನಲಿ ತೆಱಗೆಯ ತೆಱುವರೆಮಗೆ ಮನ್ನಿಸುವರೆಂತಾದರೂ (ನಿಭಾಗ. ೦೦-೮-೨೪). **ತೆಱಿಗೆ** ಹದಿನಲಯ್ದು ಹಣವಿನ ತೆಱಿಗೆಯ ಭೂಮಿ (ಎಕ. VIII, ತೀರ್ಥಹ. ೦೪೮-೨೦ : 1417) ; ಸಮಸ್ತ ತೆಱಿಗೆ ಹೊಱಗೆ ಎಲ್ಲವನು ಕುಳವ ಕಡಿದು ಬಿಟ್ಟು ಸರ್ವಮಾನ್ಯದ ಅಗ್ರಾರವಾಗಿ ಚಿಕ್ಕರಾಯಪುರವೆಂಬ ಹೆಸರನು ಯಿಟ್ಟು (ಎಕ. IV, ಗುಂಡ್ಲುಪೇ. ೩೬-೪೭ : 1506).

[ ದೇ.ಶಿ ತುಳು. ತೆಂಗೆ ]

**ತೆಱಿಗೆದೆಱು** (ಕ್ರಿ). ೧. ಸುಂಕವನ್ನು ಕೊಡಂ. ೨. (ಆಲಂ) ಒಡ್ಡು ; ನೀಡು: ಮಲಯಪವನಗೆ ತೆಱಿಗೆದೆತ್ತರು ಮಯ್ಯ ಮನುಜರು (ತಿಮ್ಮಳ. ೫-೨). [ ತೆಱಿಗೆ + ತೆಱು₁ ]

**ತೆಱಿದಾರ** (ನಾ). ಒಬ್ಬಾತನ ಹೆಸರು (?) : ಕಡುಕಲ್ಲ ಪುಲ್ಲಮಬ್ಬೆಲ ತೆಱಿದಾರ ಪನ್ನಡನಾಳೆ (ಎಕ. IX, ದೇವನ. ೯೩-೩; ಸು. 900 ?). [ ? ]

**ತೆಱಿಸು, ತೆರಿಸು** (ಕ್ರಿ). ೧. ಕೊಡುವಂತೆ ಮಾಡಂ : ಅವರ್ ಪೊಳ್ಳನೆ ನಕ್ಕು ಕ್ರಮದಿಂ ತಿಳುಪಿ ಕನ್ನಡಿಯ ಬೆಲೆಯಂ ತೆಱಿಸಿದರ್ (ಧರ್ಮಾಮ. ೬-೦೩). ೨. ತಪ್ಪುಕಾಣಿಕೆ ಕೊಡಿಸು; ದಂಡ ಕೊಡುವಂತೆ ಮಾಡು: ಭೂಧವ ತೆಗೆ ನಿನ್ನ ಮುಸುಕನಿವಳೊಳಪರಾಧವ ತೆಱಿಸಿಕೊಡುವೆವು (ಭರತ. ೧೪-೦೨೯). **ತೆರಿಸು** : ೧. ಹತ್ತುರೂಪಾಯಿ ತೆರಿಸಿದರು (ರೂಢಿ).

[ ತೆಱು₁ + – ಇಸು₃ ]

**ತೆಱು₁, ತೆರು₁** (ಕ್ರಿ). ತೆತ್ತ₁ (ಭೂತಕೃ), ತೆತ್ತು₃ (ಭೂತನ್ಯೂ). ಕೊಡು ; ನೀಡಂ: ಅವರಾ ಪಡೆಯಂ ಪೆರ್ವ್ವಟ್ಟೆಯೂರುನ್ನು ತೆಱ³ ಪೆರ್ನ್ನಿಗನ್ನಿ ಎರಡು ತೆಱುವುದು (ಎಕ. IV, ಹೆಗ್ಗಡ. ೪-೨೨; ಸು. 750) ; ಪರವಂಂತಳವ್ಯಸನಮನಾರಯ್ಯುಮುಪ್ಪುಡಿತ್ತುಂ ತೆತ್ತುಂ ಬಾಟ್ಟ ಮಂಡಲ ಮಲ್ಲದೆ ಕೀಱಿಯುಂ ಮಿಾಱಿಯುಂ ನೆಗಟ್ಟ ಮಂಡಲಮಿಲ್ಲ (ಪಂಪಭಾ. ೬-೬೬ ಪ) ; ಮಧುಕರಂ ಮಧುಕರಮಂ ತೆಱಲಾರದೆ ಮಲ್ಲಿಗೆಯೊಳೆ ಸೆಱಿಗೆಯ್ದಂತಿರ್ದುದೊಂದು ಪರಿಮಳಫಲಮಂ (ಅಜಿತಪು. ೬-೦೫): ಇರುಳು ರಾಯನ ಮನೆಗೆ ಕಪ್ಪವ ತೆಱುವುದೋ ಹಗಲು (ಕುವ್ಯಾದ್ರೋ. ೫-೫೪) ; ತೆಱುವರೀತಗೆ ಕಪ್ಪವನು ಸಾಗರಪರೀತಸಮಸ್ತಪೃಥ್ವೀಶ್ವರರು (ತೊರಠಾ. ೦-೩-೨೨). **ತೆರು₁**: ಹಣವನ್ನು ತೆತ್ತು ನೀ ಹೊತ್ತನು ಕೊಳಲ್ಪಾರ ಹೊತ್ತಿಗೆ ದೆರೆ ಹೆಚ್ಚು ಗೊತ್ತೆ (ಅಂಜಾಪ. ೦೫೪-೫೬) ; ಕನ್ನಡಿಯ ಮೇಲಣ ನಲ್ಮೆಯಿಂದ ಕೆಲವರಾದರೂ ತಪ್ಪನ್ನು ಊದಿ ಓದಿದರೆ ಬರೆಹಕ್ಕೆ ಕೀಳ್ಪಟ್ಟದ ಬೆಲೆಯನ್ನಾದರೂ ತೆತ್ತಂತಾಗುವುದು (ಕಾಂಠಿ. ೫ ಮುನ್ನುಡಿ); ಎಲ್ಲವನ್ನು ತೆರಲು ಅವರು ಹಿಂಜರಿಯುವುದಿಲ್ಲ (ಮುನಿಪಾ. ೨೮). 'ತೀಱು' ಪರಾ.

[ ದೇ.ಶಿ ಕೊಡ. ತೆರ್=ದಂಡ ಕೊಡು; ಕುಇ. ತಹ್ಪ=ಹಿಂದಿರುಗಿಸು ]

**ತೆಱು₂** 'ತೆಱ³' ನೋ.

**ತೆಱುಗಡೆ, ತೆರಂಗಡೆ** (ನಾ). = ತೆಱಿಗೆ ೧: ಆ ಖಂಡಿಕದ ವ್ರಿತ್ತಿಗೆ ತೆಱುಗಡೆ ಹೊಱುಗಡೆ ನಿಮಿತ್ತವಾಗಿ ಆ ಮಹಾಜನಂಗಳು ಕೊಟ್ಟ ನಾಗಂಡುಗ ಗದ್ದೆ (ಎಕ. XII, ಚಿಕ್ಕನಾ. ೨-೨೦; 1261). **ತೆರುಗಡೆ** : ಶ್ರೀವಿಶ್ವನಾಥ ದೀಕ್ಷಿತೈಯ್ಯನವರಿಗೆ ದಣಾಯಕ ಸಿಂಗಮಗುಮಂಣ್ಣಂಗಳು ಕೆರೆಯ ಕಟ್ಟಿಸಿದದ ಕೊಡಗೆಯಾಗಿ ಯಾವ ತೆರುಗಡೆಯಂಯಿಲ್ಲದೆ ಸರ್ವಮಾನ್ಯವಾಗಿ ಬೀಜವರಿಯಲಿ ಕೊಟ್ಟರು (ಮೈಆರ್. ೦೯೩೦, ೮-೬; ?).

[ ತೆಱು₁+ಕಡೆ ? ]

**ತೆಱುಗೆ** 'ತೆಱಿಗೆ' ನೋ.

**ತೆಱುಮಾನ್ಯ** (ನಾ). ತೆರಿಗೆಯಿಲ್ಲದುದು ; ತೆರಿಗೆಯ ವಿನಾಯಿತಿ : ಬೇಣ ಬೀರು ಭಟು ಚಿಟಿ ಸೀಮೆ ಸಾಮ್ಯ ಮುಂತಾದ ಉತ್ಪತ್ತಿಯೆಲ್ಲವನು ತೆಱುಮಾನ್ಯವಾಗಿ . . . ಪಾಲಿಸಿಕೊಂಡು (ಎಕ. III-I, ೯-೩೫ : 1589).

[ ತೆಱು₂ (<ತೆಱ³) + ಮಾನ್ಯ ]

**ತೆಱುಮಾರು** (ನಾ). (?) : ಪ್ರಥಮಸ್ತ್ರೀಸಂಜಾತವಾದ ಹಳಿಕಾಱ ಹರವಾಗಿ ಗೌಡುಂಕೆಯಾಗಿ ಆತವನೆ ತೆಱುಮಾರುಗಳನೂ ಉಂಡಿಗೆಯು ಕಿರುಕೊಳ ಸಲ್ಲ (ಸೌಇಇ. IX-11, ೪೩೩-೩೭; 1408). [ ? ]

**ತೆಱುವಟ್ಟಲ್** (ನಾ). ಒಂದು ಬಗೆಯ ಪಾತ್ರೆ (?) : ತಳಿಗೆ ಕನ್ನಡಿ ಸಿಪ್ಪು ಕಂಚಿನ ಸಟ್ಟುಗಂ ತೆಱುವಟ್ಟಲಗ್ಗಳದ ಕೈಮಳೆ ತಾಳವೊಪ್ಪುವ ಗಿಣ್ಣಲೆಂಬಿವನಾವಗಂ ಕಳೆದುಕೊಂಡೊಡನಿರ್ದ ಧೂರ್ತಜನಕ್ಕೆ ಜೀವಿತ ಮೊಂದು ತನ್ನೊಳೆ ವಿಚಾರಿಸಿ ನಿಚ್ಚಲುಂ ಕುಡುವಂ ನೃಪಾತ್ಮಜನರ್ತಿಯಿಂ (ಧರ್ಮಾಮೃ. ೨-೨೬). [ ℙ ಇದು 'ಕಿಱುವಟ್ಟಲ್' ಇರಬಹುದೇ ? ]

**ತೆಱುವಾಳು** (ನಾ). (?) : ತೋಳು ಸಾವಿರವಮರಪತಿ ತೆಱು [ಪಾಠಾಂ. ಱೆ]ವಾಳಿನೊಕ್ಕಲು ಕಂತುಕದ ವೈಹಾಳಿ ಪಾತಾಳದಲಿ ಸಪ್ತದ್ವೀಪ ಮನೆ ತನಗೆ (ಕುಮಾವ್ಯಾಸ. ೯-೬೦). "ಜೀತಗಾರ ; ದಂಡ ಕೊಡುವವನು" (ಪ್ರಭಾ). [ ℙ 'ಇದು ತೆಱು + ಬಾಳು' ಇರಬಹುದೇ ? ]

**ತೆಱುವೆ** (ನಾ). = ತೆಱಿಗೆ ೧ : ಗುತ್ತಿಗೆ ಭೂಮಿ ೩.೩೦೦ಕ್ಕೆ ಸಿದ್ದಾಯದ ೨೦ ವನು ತೆಱುವೆ ಬಿಟ್ಟು ಕೊಟ್ಟ (ಮ್ಯಾಆರಿ. ೧೯೩೮, ೩೭-೧೭ : 1501).

[ ತೆಱು$_2$ (< ತೆಱೆ$_3$) + _ ವೆ ]

**ತೆಱೆ$_1$, ತೆರೆ$_1$** (ಕ್ರಿ). ೧. (ಮುಸುಕು, ಬಾಗಿಲು ಮುಂತಾದುವನ್ನು) ತೆಗೆ,-ಬಿಚ್ಚು : "ತೆಱೆ – ಅನಾವರಣೋದ್ಘಾಟನಯೋಃ . ಕರೇ ಚ (ಕಪ್ಪ, ಕಾಣಿಕೆ)" (ಶಮುಧಾ) : ತೆಱೆಯದೆ ಮುನ್ನ ಕೆತ್ತ ಪಡಿಗಳ್ ಸವಸೌರಭಮುಣ್ಮೆ ಪೊಕ್ಕಳಂ ತೆಱೆದುವು (ಆದಿಪು. ೨-೬೩) : ಕರಮಂ ಪೇಱೆ ರದಂಗಳೊಳ್ ತೆಱೆದು ಕರ್ಣದ್ವಂದ್ವಮಂ ತಾಮ್ರಭೀಕರಮಂ ಬಿಚ್ಚಿಸೆ ಬಿಟ್ಟು ಕಣ್ಣನೆರಡುಂ . . . ವನದಂತಿ ಪೋರ್ವುದು (ಶಾಂತಿಪು. ೨-೧೦೨) : ಮಗಳೆ ತೆಱೆ ನೀಂ ಕಣ್ಣಂ (ಕಾದಂಬ. ೬೮೧) ; ಅರೆಮುಗಿದ ಱೆಪ್ಪೆಗಳ ಬೆಳ್ಪಿನ ತಿರುಗದಿಹ ಕಣ್ಣಾಲಿಗಳ ನಸುಮುರಿದ ಕೊರಳ್ಗಳ ಬಿಗಿದ ಸರಗಳ ತೆಱೆದ ನೊರೆವಾಯ (ಲಕ್ಷ್ಮೀಪು. ೪೬-೫೬) : ಲಲಾಟನೇತ್ರವ ತೆಱೆದರೆ ನೀನು ಬೆಂದುಹೋದವೆ (ಮೋಹತ. ೭-೨೬). ೨. ಸೀಳು ; ಬಿರಿ : ತೆಱೆದಿರ್ದ ಪುಣ್ಗಳೆಸವಕ್ಕರದಂತಿರೆ (ಪಂಪಭಾ. ೧೧-೪೬) ; ಸುತಶೋಕದಿಂದಾವಗೆಯುಂತೊಳಗುರಿಯೆ ಭೋಂಕನೆರ್ದೆ ತೆಱೆಯಲ್ (ಪಂಪಭಾ. ೧೨-೨೮) : ಕೇಳ್ದರೆರ್ದೆ ತೆಱೆವಿನವೊಳಱೆ ಪೊಟೆಯ ಪೊಟ್ಟೆಯಂ ಕರ್ಚಿ ಸೆಳೆಯೆ (ಅರ್ಧನೇ. ೭-೯೧ ವ). ೩. ಸ್ಪಷ್ಟಪಡಿಸಂ ; ಸ್ಪಷ್ಟಗೊಳಿಸು : ಕುಱೆತಂತು ಪೆಱರ ಬಗೆಯಂ ತೆಱೆದಿರೆ ಪೆಱರ್ಗಱೆವಲಾ ರ್ಪವಂ ಮಾತಱಿವಂ (ಕವಿರಾ. ೦-೧೫); ಗಂಭೀರೋದಾರ ಸಾರ ಭಿನ್ನನಯ ಸಂತತಿ ಸಮನ್ವಿತಮಸಱಿಯೆ ತೆಱೆಯೆ ನೆಱೆಯೆ ನುಡಿದು (ಶಾಂತಿಪು. ೩-೮೯ ವ). **ತೆರೆ$_1$** : ೧. ತಟ್ಟದೊಡನೆಯೆ ತೆರೆವ ಕದವದಲ್ಲ (ಅನಿಕೇ. ೨-೧೦) : ದಿನಸಿಯ ಜವಳಿಯ ಅಂಗಡಿ ತೆರೆಯಿತು (ಇಂಬಾಪ. ೭-೨೪). ೪. ಆರಂಭಮಾಡು ; ಪ್ರಾರಂಭಿಸು : ೧೭೮೧ರಲ್ಲಿ ಒಂದು ಶಾಲೆಯನ್ನು ತೆರೆದರು (ಭಾರದ. ೪೨೬).

**ತಿಟ್ಟಂದೆಱೆ, ತಿಟ್ಟಂತೆಱೆ, ತಿಟ್ಟುಂದೆಱೆ** = ಪೂರ್ಣವಾಗಿ ತೆರೆ ; ತಡೆಯಿಲ್ಲದಂತೆ ತೆರೆ : ತನ್ನ ಹೃದಯಕವಾಟಮಂ ತಿಟ್ಟಂದೆಱೆದತ್ತಳಗ ಮಾದುತ್ತುಂಡವೇಟಮಂ ಬಯಸೊಳಿಕ್ಕಿ ಬಾಯಟಿದ ನಿಜಪತಿಯ ನುಡಿಗೆ ಸುದರ್ಶನನೆಂದಂ (ಅನಂಪು. ೧೧-೩೨ ವ) : ನೆಟ್ಟನೆ ತನ್ನಯ ಮನಮಂ ತಿಟ್ಟಂತೆಱೆದುಸಿರ್ವ ನೃಪಮನೋಜನ ಮಾತಂ ತೊಟ್ಟನೆ ತಾಂ ಕೇಳ್ದು (ಕುಸುಮಾ. ೧೦.೧೨೪) ; ಕೀಟಿೞಂಬಿಸೊಳಪ್ಪಂ ಮೆಟ್ಟಿ ತಿಟ್ಟಂದೆಱೆಯೆ ಗಳಪಿದತ್ತಾಮ್ರವುದೊಳ್ ತಾಮ್ರತುಂಡಂ (ಚಂದ್ರಪು. ೭-೮೬). **ತೆರೆದ ಹೃದಯ** = ಬಿಚ್ಚುಮನಸ್ಸು ; ನಿಷ್ಕಪಟತೆ : ಮುಚ್ಚುಮರೆಯಿಲ್ಲದಿರುವುದು; ತೆರೆದ ಹೃದಯ : ನಿಷ್ಕಪಟ್ಯ ; ಸಂಶಯರಾಹಿತ್ಯ ; ದಯಾಪರತೆ ; ಸೌಹಾರ್ದ (Open-Heart. ಇಂಕನಿ). **ತೆಱೆದ ಹಸ್ತ, ತೆರೆದ ಹಸ್ತ** = ಕೊಡುಗೈ ; ಮುಕ್ತಹಸ್ತ ; ಔದಾರ್ಯ : ತೆಱೆದ ಹಸ್ತವು ಲೇಸು . . . ಸರ್ವಕು ಶಿವನಿಗೆ ಶರಣವೇ ಲೇಸು (ಸರ್ವಜ್ಞ. ೨೪೦); ದಾನ ಮಾಡುವುದರಲ್ಲಿ ಅವರದು ತೆರದ ಹಸ್ತ (ಕಾಇ). **ತೆಱೆಯೆ ನುಡಿ** = ಸ್ಪಷ್ಟವಾಗಿ ಹೇಳು ; ನೇರವಾಗಿ ನುಡಿ : ತೆಱೆಯೆ ನುಡಿದುದರ್ಕೆ ಕಡು ಮುಳಿದು (ಪಂಚಮಾ. ೯-೯೩ ವ). **ತೆಱೆಯೆ ಬಣ್ಣಿಸು** = ಚೆನ್ನಾಗಿ ತಿಳಿಯುವಂತೆ ವರ್ಣಿಸು : ಸಂಗತಜಿನಧರ್ಮಮತಿಗೆ ನಾಂಗಳ್ ನಿನಗಱೆಯೆ ತೆಱೆಯೆ ಬಣ್ಣಿಸವಾದಿತ್ಯಂಗೆ ಸೊಡರೆತ್ತುವೀ ಗಾಂಪಿಗಾಗರಮಾಗಿ ತೊಱೆಗೆ ನೀರಡುಕುವವೋಲ್ (ಅಜಿಪು. ೬-೭೯). **ತೆಱೆಯೆ ಮೆಱೆ** = ಅಧಿಕವಾಗಿ ಮೆರೆ : ರಾಜ್ಯಯತನಕ್ಕೆ ನೊಸಲ ಕಣ್ಣನಿಸಿ ತೇಜಮಂ ತೆಱೆಯೆ ಮೆಱೆವಾ ಪೂರ್ವದ್ವಾರಂ (ಪರ್ಶ್ವಪು. ೧-೦೩).

[ ದೇ.॥ ತಮಿ. ತಿಱ ; ಮಲ. ತುಱ ; ತೆಲು. ತೆಱಚು, ತೆರಚು ]

**ತೆಱೆ$_2$, ತೆರೆ$_2$** (ನಾ). ತೆರೆಯುವಿಕೆ ; ತೆರೆದಿರುವ ಸ್ಥಿತಿ. 'ಬಾಯ್ದೆಱೆ$_2$' ಪಗಾ. **ತೆರೆ$_2$** : 'ಕಣ್ದೆರೆ', 'ಬಾಯ್ದೆರೆ$_2$' ಪರಾ. [ < ತೆಱೆ$_1$ ]

**ತೆಱೆ$_3$, ತೆರ$_2$, ತೆಱು$_2$, ತೆರೆ$_3$, ತೆಱಿ$_2$, ತೆಱು$_2$** (ನಾ). ೧. ಕಾಣಿಕೆ: ದೇವರ ಸನ್ನಿಧೀವಿಗೆಗೆ ಬಿಟ್ಟ ಗಾಣ ಮೂಱು ದೇವರಂಗಭೋಗಕ್ಕೆ ಅವರ ತೆಱೆಯೊಳಗಾಗಿ ಬಿಟ್ಟ ಸೊಳೆಯರೆ ೧೨ (ಎಕ. XI, ದಾವಣ. ೦೧-೨೬) ; 1060). ೨. ಕರ; ಸುಂಕ; ತೆರಿಗೆ: "ತೆಱೆ–ಅನಾವರಣೋದ್ಘಾಟನಯೋಃ, ಕರೇ ಚ (ಕಪ್ಪ, ಕಾಣಿಕೆ) " (ಶಮುಧಾ) ; ದೇಶಾಧಿಪತಿಗಳಪ್ಪೊರ್ಗೆ ಕುಡುವ ತೆಱೆ (ಎಇ. XIV, ೦೯೦-೦೩ ; 726); ಪೆಱಗಣ ಮುಂತಣ ರಿತುಗಳ ತೆಱೆಯಂ ನಿಶ್ಚಯಿಸಿ ಮಧುಕರಂ ಮಧುಕರಮಂ ತೆಱಿಸಱದೆ ಮಲ್ಲಿಗೆಯೊಳ್ ಸೆಱೆಗೆಯ್ದಂತಿರ್ದುದೊಂದು ಪರಿಮಳಫಲವಂ (ಅಜಿಪು. ೬-೦೪); ಭೂಪರ್ ತೆಱೆಯೊಳ್ ಮಗಂ ಮುಷ್ಟಿನೊಳ್ ಪೊಡತಿ ಕುತ್ತದೊಳ್ ಫಲಮಂ ತೋರ್ಪಂತೆ (ಧರ್ಮಾಮೃ. ೧೨-೩೮) ; ಪ್ರಾದೆಗೆ ಬಿಟ್ಟ ಧರ್ಮ್ಮವಂ ಮಂನಿಸಿ ಕಾಪುದಲ್ಲದಿನಿಸಂ ತೆಱೆ ಕಾಣಿಕೆ ಸೇಸೆಯಾಸೆಗಳ ಮುಂನೆಯ ವಾಯದಾಯಮಿವು ಸಲ್ಲವು (ಎಇ. XXVII, ೦೩-೦೭ ; 1114) ; ಬಿಟ್ಟ ಬೀಡಾರಂ ಪೊಱೆಗೆ ತೆಱೆ ಕೊಟ್ಟಣಂ ಕಾಣಿಕೆಯುಂ (ಬಸಪು. ೨೬-೫೨). **ತೆರ$_2$** : ೨. ತೆರದ ರೂಪದಲ್ಲಿ ಸಂಬಳ, ಕಂದಾಯ, ಬಡ್ಡಿ ಮುಂತಾದ ಸಲುವಳಿಗಳ ರೂಪದಲ್ಲಿ ಹಣವು ಬಳಕೆಯಲ್ಲಿ ಬರುವುದು (ಮೂವಾದ. ೦೦೭); ಬನ್ನಿ, ನೋಳ್ಪಂ ! ನಿಮ್ಮುಲ್ಲಸಮೆ ತೆರಂ ! ಕಾಣ್ಬಮಾ ಕುಂಭಕರ್ಣನ ಕರಡಿಯಾಟಮಂ ! (ಶ್ರೀರಾಮಾ. ೬೮೯-೩೦೪). ೩. (ಮದುವೆಯ ಕಾಲಕ್ಕೆ) ವಧುವಿಗೆ ಕೊಡಬೇಕಾದ ಶುಲ್ಕ ; ಕನ್ಯಾಶುಲ್ಕ : ನಾನೂ ಆ ಕುದುರೆಗಳನ್ನು ತೆರವಾಗಿ ಕೊಟ್ಟು ಈಕೆಯಲ್ಲಿ ಒಬ್ಬ ಪುತ್ರನನ್ನು ಪಡೆಯುವೆನು (ಕೃವಾಊ. ೦೮೭) : ನೀರೀಗೆ ಹೋಗೋಲೆ ನೀಲದುಂಗುರದವಳೆ . . . ವೈಯ್ಯಾರ ಬಿಟ್ಟು ತೆರ ಹೇಳೆ (ಹಳ್ಳಿಯ. ೫೪); ಮದುವೆಯ ಖರ್ಚಿಗಾಗಲೀ, ಮದುಮಗಳ ತೆರಕ್ಕಾಗಲೀ ಸಿದ್ದಣ್ಣ ಸಾಲ ಮಾಡಬೇಕಾದ ಪ್ರಮೇಯವಿರಲಿಲ್ಲ (ಪಂಚಪಂ. ೫೪) : ಮದುವೆ ಮಾಡಿಕೊಳ್ಳಬೇಕಾದರೆ . . . ತೆರ ಕಟ್ಟಬೇಕು (ಹಳ್ಳಿಜಾ. ೨೦) ; ಮದುವೆಯ ಕಾಲಕ್ಕೆ ಕೊಡಬೇಕಾಗಿದ್ದ, 'ತೆರ' ದ ಹಣದಲ್ಲಿ ಅರ್ಧಭಾಗವನ್ನು ಆತನಿನ್ನೂ ತಂದು ಕೊಟ್ಟರಲಿಲ್ಲ (ಬೀದಿಬ. ೨೪). ೪. ದಂಡ ; ತಪ್ಪುಕಾಣಿಕೆ. 'ತೆರಕೊಡು' ಪರಾ. **ತೆರು$_2$** : ೨. ಮೂವರಿಂದ ಸಲುವ ಕಾಶವರ್ಗದ ತೆರು ಯಾ ಆರುಮಂದಿಗೂ ಹರುಗೋಲತ್ತೆರು ಸಹಾ ಬಿಟಧೇವೆ (ಎಕ. VII, ಶಿಕಪೂ. ೩-೨೮ ; 1071) : ತೆರುವಿ ಮಂದಿ ನೋಯಿಸಂ (ಸೌನಂದ. ೨-೨೬) : ಶಾಸನಗಳಲ್ಲಿ ಬರುವ ತೆರುವಣಗಳು : _ ತೆರು, ಮುಂಡಗಡಿ, ಅರುಗಡಿ (ಕುಳುನಾ. ೨೭೧). **ತೆರೆ$_3$** : ೨. ಕಯ್ಕೊಳ್ಳಂ ರಾಷ್ಟ್ರದಿಂದೆಂದುಂ ತೆರೆಯಿಂ ಪೆರತೇನನುಂ (ಸೌನಂದ. ೨-೩೩). **ತೆಱಿ$_2$** : ೨. ನಾಲ್ಕುಱ ಮೇಲೆ × × ಬಹ ತೆಱಿನೂ ದನಿಯರು ತಮ್ಮ ಬದ್ದ ಭೋಜನ ಸವಮಂತವಾಗಿಯಿಕ್ಕಿ

ಕೊಂಡು (ಸೌಇಇ. IX-II, ೪೧೯-೨೭ ; 1365). **ತೆಱು₂** : ೨. ಅರಸಂಗೆ ತಪ್ಪು ಕಾ ಗ [೨]೦೦೦ ಹೊಂನ ತೆಱು ಅಡಕು ಅರಸು (ಸೌಇಎ. ೦೯೨೯, ಮಂಗಳೂರು. ೪೭೦-೨೦ ; 1297) ; ತೆಱವ ತೆಱು ಕಟಿಗ ೪ರ೨ ಹೊಂನ ಬಳಿಯು ಭತ ನಾಗಂಡುಗದಲು ಮೂಡ ೪ (ಸೌಇಇ. IX-II, ೪೩೪-೪೦; 1401) ; ಮಲ್ಲಪ್ಪನಾಯಕನ ಮಕ್ಕಳ ೮ ಗದಗೆ ತೆಱು ದೇವರಿಗೆ ವರುಷ ೧ಕ್ಕೆ ದೆಳ್ಳ ಗ ೧ (ಕಇ. I, ೫೦-೨೭ ; 1432).

[ ದೇ.॥ ತಮಿ. ತಿಱೈ ; ಮಲ. ತಿಱ ]

**ತೆಱಿಕುಱುಪು** (ನಾ). ತೆರೆಯಲು ಮಾಡಿದ ಗುರುತು ; ತೆಗೆಯುವ ಸ್ಥಳದ ಕುರುಹು : ಅಂಬುಜೋದ್ಭವನತಿಪ್ರೀತಿಯಿಂ ಪೊಂಗಳಸವೆರಡಱಲ್ಲಿ ಪಿರಿದು ಸುಧೆಯಂ ನಿಜದೆ ತುಂಬಿ ಜತುಮುದ್ರೆಯಂ ತೆಱಿಕುಱುಪುಗೆಯ್ದು ನೋಯೆನಲೆಸಕದಿಂ ಪಯೋಧರದ ಚೂಚುಕವೆಯ್ದೆ ಕಪ್ಪನಾಂತಿರ್ದುವು (ಜಾಸೋಕು. ೨-೩೩). [ ತೆಱಿ³₁ + ಕುಱುಪು (< ಕುಱುಪು) ]

**ತೆಱಿಗಯ್**, ತೆರೆಗಯ್, ತೆರೆಗೈ (ನಾ). ಬಿಚ್ಚಿದ ಕೈ ; ಚಾಚಿದ ಕೈ : ಎನ್ನ ಕಡುಪಗೆಯಿದಿರ್ ಸೆಱಗೊಡ್ಡಿ ಮೊಱೆಯಿಟ್ಟು ತೆಱಿಗಯ್ಯನೆತ್ತುವೆನ್ (ಬಧ್ರಕೃ. ೫೩-೦೦೬೦). **ತೆರೆಗಯ್** : ಕಡುಪಗೆಸು ಎದುರಿನಲ್ಲಿ ಬಿಡುಗಡೆಗಾಗಿ . . . ತೆರೆಗಯ್ಯನ್ನು ಎತ್ತುವ ಕ್ಷುದ್ರತರ ದೈನ್ಯ ತನ್ನಲ್ಲಿ ಇಲ್ಲ ಎನ್ನುತ್ತಾನೆ (ಬಧ್ರಕೃ. XXII, ಪೀಠಿಕೆ). **ತೆರೆಗೈ** : ಅವ್ವಾ ನೋಡಿರೆ! ಭೂವೈಕುಂಠನಿವಾಸಿ ವೆಂಕಟರಮಣನ. ತೆರೆಗೈ ತಿರುಕನ (ಉಯ್ಯಾಳಿ. ೯೬-೦೬) ; ಸತ್ಯವನ್ನು ಮೊದಲು ಯಾರು ತೆರೆಗೈಗಳಿಂದ ತಬ್ಬಿಕೊಂಡಿಲ್ಲ (ಐಬಲಿ. ೮೩). [ ತೆಱಿ³₁ + ಕಯ್₂ (< ಕೆಯ್₃) ]

**ತೆಱಿಗೆ** 'ತೆಱಿಗೆ' ನೋ.

**ತೆಱಿಗೊಳ್** (ಕ್ರಿ). ಸುಂಕವನ್ನು ತೆಗೆದುಕೊಳ್ಳು,–ಪಡೆ ; ಕಂದಾಯ ಎತ್ತು : ಸ್ವಾತಿತ್ರಯದೊಳ್ ಗಮನೋದ್ಯೋತಾಸ್ಪದಮಯಿಪ್ಪ ಶುಕ್ರನಿಂ ಹಶುಗೆ ಭಯಂ ಪಾತೇಂ ತೆಱಿಗೊಳ್ಳರ್ ಸಂಪ್ರೀತಿಯು ನೃಪಸಮಿತಿ ಮುಳಿದು ತವೊಳ್ಮೊಗಿಱುವರ್ (ಅಲ್ಪಸು. ೭-೦೩೭).

[ ತೆಱಿ³₃ + ಕೊಳ್₁ ]

**ತೆಱಿದೆಱು** (ಕ್ರಿ). ತೆರಿಗೆಯನ್ನು ಕೊಡು,–ಸಲ್ಲಿಸು : ಕ್ರಿಯಾಸಮಾಸಕ್ಕೆ . . . ತೆಱಿ[ಪಾಠಾಂ. ಱ]ದೆತ್ತಂ, ಮಱಿಪೊಕ್ಕಂ (ಶಮದ. ೦೬೭ ಪ್ರಯೋ). [ ತೆಱಿ³₃ + ತೆಱು₁ ]

**ತೆಱಿಪಡು** (ಕ್ರಿ). ಸುಂಕವನ್ನು ಕೊಡಬೇಕಾಗಿ ಬರು (?) : ದೇವರ್ಗೆ ದೇವಪೂವಿನ ಮುಂದನೆವಯ್ಯ ತೆಱಿವಟ್ಟ ಪಾಳಿಯ ಪೊನ್ನರ ಕೊಟ್ಟು ಮಣ್ಣರ ಕೊಣ್ಣು ಬಿಡಿಸಿದಡೆ ಶ್ರೋತ್ರಿಯೂರ ಮಾರಯ್ಯಸೆಟ್ಟಿಯು ಮಗಂ ದೊರೆಯ್ಯಸೆಟ್ಟಿ (ಪ್ರಾಲಿ. ೦೯೪೭, ೨೮-೨೦ ; 1032).

[ ತೆಱಿ³₃ + ಪಡು₁ ]

**ತೆಱಿಪು** 'ತೆಱಿವು' ನೋ.

**ತೆಱಿಪೊನ್**, ತೆಱುವೊನ್ (ನಾ). ತೆರಿಗೆಯಾಗಿ ಕೊಡುವ ಧನ,–ಹಣ : ಐನ್ನೊ ಸಲೆ ಬಾಣರಾಜರ ವಿಷಮದ ಅಗ್ರಹಾರಂಗಳನ್ನೆಱಿಪೊನ್ನೇಡಿ ಕೊಣ್ಣು (ಸೌಇಇ. IX-I, ೪೬-೭; ಸು. ೫ನಯ ಶಕ). **ತೆಱುವೊನ್**: ತೆಱುವಿನ ಪೊನ್, ತೆಱುವೊನ್ (ಶಬ್ದಾಸು. ೩೩೨ ಪ್ರಯೋ). [ ತೆಱಿ³₃ + ಪೊನ್ ]

**ತೆಱಿಯಿಸು**, ತೆರೆಯಿಸು, ತೆರೆಸು, ತೆಱಸು (ಕ್ರಿ). ತೆಗೆಯುವಂತೆ ಮಾಡು; ಬಿಚ್ಚಿಸು: ಕದವಂ ತೆಱಿಯಿಸಿರೆ ಎಲೇ ಅಪ್ಪರೇ (ಪಾಗೀಲ. ದೇ. ೨೭೬-೧). **ತೆರೆಯಿಸು** : ತೆಗೆದ ಬಾಗಿಲ್ಗಳಿಂ ದಾರಿ ತೆರೆಯಿಸಿತು (ಕಾಲೂರ. ೪೯-೫೮): ಆಸ್ಮದಲ್ಲುಂಟಾದ ಮಹಾಪರಿವರ್ತನೆ ಭಾಂಡವಾಳಿಶಾಹಿ ಜನಾಂಗಗಳ ಕಣ್ಣು ತೆರೆಯಿಸುತ್ತದೆ (ಕಾಲಯೂ. ೩೭). **ತೆರೆಸು** : ಅನೇಕ ದಿನಗಳಿಂದ ಬೀಗ ಹಾಕಿದ ಬಾಗಿಲನ್ನು ತೆರೆಸಿದರು (ಕೂಠಿ). **ತೆಱಸು** : 'ಬಾಯ್ದೆಱಸು' ಪರಾ. [ ತೆಱಿ³₁ + – ಇಸು₃ ]

**ತೆಱಿವಾಯ್**, ತೆರೆಬಾಯಿ, ತೆರೆವಾಯ್, ತೆರೆವಾಯಿ (ನಾ). ೧. ತೆರೆದ ಬಾಯಿ ; ಅಗಲಿಸಿದ ಬಾಯಿ ; ಬಿಟ್ಟ ಬಾಯಿ : ತೈವಿಗವಲ್ಲ ಮಾಸಸ ರೂಪಲ್ಲ ಕೇಸರಿವೊಗ ತೆಱಿವಾಯ ಪಲ್ಗಿಱಿದು ನಖದಿಂದಲೆಹಿತನ ಗೊಂಡಿಕೊಂಡೞುಹಿದ ಪ್ರಕಟಿತ ಬಲುಹ ತೋಱಿನೆಗೆ (ಜೋಹಕ. ೪೦-೨೨). **ತೆರೆಬಾಯಿ** : ೧. ನನ್ನ ಭಾಷಣಕ್ಕಾಗೆನ್ನಿಮ್ಮ ತೆರೆಬಾಯಿ ನೀರೊಡೆದಿರಬಹುದು (ಹುಡುಗುಕು. ೦೦೩). ೨. ಪಕ್ಕನೆ ಬಾಯಿ ಬಿಡುವ ಸ್ವಭಾವ ; ಒಡಕುಬಾಯಿ : ನೋಡು ನೀನು ತೆರೆಬಾಯಿ ಮನುಷ್ಯ: ಪಿಸಕ್ಕನೆ ನಕ್ಕುಬಿಡುವಿ (ಕುಂಹಿಂ. ೧೭). **ತೆರೆವಾಯ್** : ೧. ಮರಿಯು ತೆರೆವಾಯ್ಗಿಡುತೆ ತನ್ನ ಕೊಕ್ಕಂ ಕುಟುಕು ಕೊಡುತಿರ್ದ ತಾಯ್ಯಕ್ಕಿಯಂ ಕಂಡು (ಶ್ರೀರಾಮಾ. ೮-೦೯೫). **ತೆರೆವಾಯಿ** : ೧. ಈ ಗುಚ್ಛಗಳು ಅನೇಕ ವೇಳೆ ಕಿರೀಟಗಳಂತೆಯೂ . . . ತೆರೆವಾಯಿಗಳಂತೆಯೂ . . . ಮೆರೆಯುತ್ತಿರುವುವು (ಜ್ಯೋತಿವಿ. ೭೪). [ ತೆಱಿ³₁ + ಬಾಯ್ ]

**ತೇ₁**, ತೆಯ್, ತೇಯ್, ತೇಯು (ಕ್ರಿ). ತೆಯ್ದು, ತೇದಂ, ತೇಯಿದು, ತೇಯಂದ (ಭೂತನ್ಯೂ). ೧. ಅರೆ ; ಉಜ್ಜು ; ನುಣ್ಣಗೆ ಮಾಡು : ಇಱಿಯದೆ ಕಿವ್ವುನಂತೆ ಭುವನಂಗಳಸುಂಗೊಳೆ ತಕ್ಕುದೆಂದೊಡೇ ಮಱುಕಮನೆಂಬುದೇವಿರಿದಿದೆನ್ನ ಭುಜಾಸಿಗೆ ತೇದು ಪೂಸಲುಂ ನೆಱಿಯದು (ಕಾವ್ಯಸಾ. ೪೧೧ ಪೂದ್ರಕ) : ಅದ ಮುಳಿಸಿಂದಮೆಲ್ಲಂ ತೇದುಂ ಕುಡಿಯಲ್ಕೆ ತಕ್ಕ ಪಗೆವನ ರುಧಿರಾಚ್ಛೋದಮನೆ ಕುಡಿದು ಮಾಣ್ದ ವೃಕೋದರನೇನಾವ ತೆಱದೊಳಂ ದೂಷಿಗನೇ (ಪಂಪಭಾ. ೧೨-೦೫೯) ; ಚಂದನವ ಕಡಿದು ಕೊಱೆದು ತೇದೊಡೆ ನೊಂದೆನೆಂದು ಕಂಪ ಬಿಟ್ಟಿತ್ತೆ (ಮಹಾದೇ. ಬ. ೨೮-೫೮) ; ಒರೆಯೆ ಸುವರ್ಣಂ ತೇಯೆ ಮಳಯಜಂ . . . ಪರಿಮರ್ದಿಸೆ ಹಿಮಕುಂಕುಮಮೃಗಮದಮೊರಸೆ ಕರಂ ಸಾದಿನ ಪುಣುಗಿನ ಘನಪರಿಮಳಮೆನೆ ಮತ್ಕೃತಿ ಮಾಡುವುದು ಚಮತ್ಕೃತಿಯಂ ಸಂಘರ್ಷಿಸಲು (ಕುಮುರಾ. ಪೀಠಿಕಾಸಂಧಿ ೪೩): ಮುಸುಡನಮರಾದ್ರಿಯಲಿ ತೇವೆನು ದೇವ ಸಂತತಿಯ (ಕುವ್ಯಾವಿ. ೩-೬೮); ಕರದ ಕಂಕಣ ಝಣರೆನಲು ಗಂಧವ ತೇವ ತರುಣಿಯರೊಪ್ಪಿದರು (ಕಂನವಿ. ೬-೪೯) ; ಗಂಧವನು ತೇವಲ್ಲಿ ಒಂದು ನೊಣವನು ಕಾಣೆ (ಸರ್ವಜ್ಞ. ೮೧೮). ೨. ಸವೆ; ಕ್ಷಯಿಸು : ನೆಲನೆಲ್ಲ ಜವುಗಾಯ್ತು ಮೊದಲು ಮುತ್ತ್ಯಱಿ ತೇದು ತೊಳೆದುಹೋದಾವು ಬಡಬೆಟ್ಟ (ಧರಜ. ೩೪-೬೦). ೩. ಸವೆಯಿಸು ; ಸವೆಯುವಂತೆ ಮಾಡು ; ಕೃಶವಾಗಿಸು : ಖುಷ್ಯಾಶ್ರಮದೊಳೆ ತನುವಂ ಮುಪ್ಪಿನೊಳ್ತೇದು ಮೋಕ್ಷಾಸ್ಪದಮಂ ಕೈಕೊಳ್ಗೆಂ (ಕಾದಂಉ. ೩೮೭); ಮಾಱುಡೆ ಗಾಣದಂತಿರಟ್ಟುಂಬರಿಗೊಂಡು ತೇದವುದು ಬೇಟಮಿದೆನ್ನಯ ಪಾಪಮಲ್ಲದೇ (ಲೀಲಾವ. ೨-೦೦೩) ; ಮುತ್ತಜ್ಜಿಯು ತಂದೆ ತಾತಂದಿರ ಕಾಲದಿಂದಲೂ ಅರಮನೆಯ ಸೇವೆಯಲ್ಲಿ ಶರೀರವನ್ನು ತೇದಿದ್ದ ರಾಜಭಕ್ತನಾಗಿದ್ದನು (ಶ್ರೀರಾಯ. ೦೨೮). ೪. ಹಿಮ್ಮೆಟ್ಟು ; ಮರಳಿಹೋಗು : "ತೇ-ಅಪಸರಣೇ (ಹೊರಟುಹೋಗು)"(ಶಮದಾ). **ತೆಯ್** : ೧. ಮಲಯರುಹಕ್ಕುದ್ಧತಿಯಿಂ ಸಾಪಮನಿತ್ತೊಡೆ ಚತುರಾಸ್ಯಂ ತೆಯ್ದು ಬೊಟ್ಟನಿಡುವರ್ಪಲರುಂ (ದರ್ಶನಮ್ಮ. ೩-೦೬೦). ೩. ತನುವಂ ತೆಯ್ದಪ್ಪಳಕ್ಕಂ ಬ್ರತದೊಳ್ (ಕಾದಂಉ. ೬೯). **ತೇಯ್** : ೧. ಶ್ರೀಗಂಧವಂ ತೇ[ಪಾಠಾಂ. ತೆ]ಯ್ದಂಗದಲಿ ಪೂಸಿ (ಬಸಪು. ೪೩-೬೦). ೩. ಕೊಳೆಯು ತೊಳೆಯಬೇಹುದಿಲ್ಲಿ ಒಡಲ ತೇಯಬೇಹುದಿಲ್ಲಿ (ವಿಟೀಗೀ. ೮೨-೨) ; ಅಖಂಡ ಆಯುಷ್ಯವನ್ನು ಅವಳ ಸೇವೆಯಲ್ಲಿ ತೇಯ್ದ ರಘು (ದೀಪಹ. II, ೪೧೩). **ತೇಯು** : ೧. ಕಾಲುಗಳಿಂದ ತೇಯುವುದೂ (ಕೃಪಾಕ. ೦೦೯). ೩. ದಿನದ ಇಪ್ಪತ್ನಾಲ್ಕು ತಾಸು ಪಿರಿಪಿರಿ ತಿರುಗಿ ದೇಶದುದ್ಧಾರಕ್ಕೆ ದೇಹವನು ತೇಯುಬಲ್ಲ (ನಲಮು. ೨೮-೨೩).

[ ದೇ.॥ ತಮಿ. ತೇಯ್ ; ಮಲ. ತೆಲು. ತೇಯು ; ಕೊಡ. ತೆಯ್ ]

**ತೇ₂** 'ಟೇ' ನೋ.

**ತೇಂಕಾಡಿಸು, ತೇಕಾಡಿಸು** (ಕ್ರಿ). ತೇಲುವಂತೆ ಮಾಡು ; ತೇಲಾಡಿಸು ; ತೇಲಿಸು : ಅಂಗಪ್ರಭೆಯೊಳಖಿಲಕಾಂತಾರಮಂ ಕೂಡೆ ತೇಂಕಾಡಿಸುತಂ . . . ಬಂದನೆಂಬರ್ಪಂ ಕುಮಾರಂ (ಕಾದಂಬ. ೫೪೭); ಕೂಡೆ ಮೂಜಗವಂ ಮುಸುಕಿ ತೇಂಕಾಡಿಸುವ ಗಂಗೆಯನುಮೇಶನು ಸೂಡಿದನಲಾ ಮಲ್ಲಿಕಾ ದಳದಂತೆ ಮೌಳಿಯುಳಿ (ಬಸವು. ೩೯-೫೫) : ನೀಜಿಯುರ ಮಂಕು ಮಾಡುವ ಮತಿದೋಱುವ ಸುಖವಲ್ಲಿ ತೇಂಕಾಡಿಸುವನೇನನೆಂಬೆ (ಭರತ. ೭-೮೫). **ತೇಕಾಡಿಸು** : ಪಗೆವಡೆಯ ನೆತ್ತರ ಪೊನಲಿನಲಿ ತೇಕಾಡಿಸಲು (ಸಾಳ್ವಭಾ. ೨೩-೫೯). [ ತೇಂಕಾಡು + – ಇಸು₃ ]

**ತೇಂಕಾಡು, ತೆಕ್ಕಾಡು, ತೇಕಾಡು, ತೇಗಾಡು** (ಕ್ರಿ). ೧. ತೇಲು ; ತೇಲಾಡು : ಇಳೆ ಜಲದ ಮೇಲೆ ತೇಂಕಾಡುತ್ತಿರ್ದಂತೆ ಬಾದ ಮಳೆಯೊಳು ಕವಿದ ಕತ್ತಲೆ ಕರಂ ಹೆಚ್ಚೆ (ಜೈಮಿ. ದೇ. ೫೧-೨೬); ಜನನಾಥಾ ಜನಿತಾನುರಾಗರಸದೊಳ್ ತೇಂಕಾಡುತಿರ್ದರ್ಗಳ್ (ಕುಸುಮಾ. ೮-೩೩) : ವಲ್ಮೀಕನಗರಿ ಬಲ್ದೆರೆ ತೆಪ್ಪವಾಗೆ ತೇಂಕಾಡಿ ಕೊಳೆತೊಳಗಿ ಬೆಳಗುತ್ತ ಬರಬರಲು (ಶಾಂತಪು. ೫-೮೭) ; ನಿದ್ದೆ ಎಚ್ಚರಗಳಲಿ ಒಂದೆ ಬಾಳಿನ ಬಂಬ ತೇಂಕಾಡುವವು (ಉಯ್ಯಾಲೆ. ೩-೧೨). ೨. ತುಂಬಿ ತುಳುಕು : ಅಮೃತಾ ಸಾರದಿನಾ ಪ್ರದೇಶವನಿತುಂ ತೇಂಕಾಡಲ್ (ಕಾ ದಂ ಉ. ೭೦೨). ೩. ಮುಳುಗಿ ಏಳು : ಅಖಿಳ ಕಾಮುಕನಿಕಾಯಮವಿರಳಸುಖಾವಗಾಹ ದೊಳ್ ನಾಡೆ ತೇಂಕಾಡಿ ತಣಿವಿನಂ (ಪರ್ವಪು. ೬-೫೨ ಪ) ; ಕೊಳೆಯೊಳ್ ತೇಂಕಾಡಿ ವಿಣ್ಯಾತ್ರದೊಳ್ ಪುದಿದೇತಕ್ಕೆ ಬಟ್ಟೆ ಬೇಟ್ವರದಾಂ ಮರ್ತ್ಯಾಂ ಜಗುಪ್ಸಾಕರಂ (ಅನಂಪು. ೩-೭೫); ಸುರತಾಂಭೋನಿಧಿಯೊಳ ಗೆಂಗುವಿಗೆ ತೇಂಕಾಡಿದನರಸಂ ಮದನಾಗ್ನಿ ತವಿಪ ತೆಱದಿ (ಜಯಚಾ. ೮-೫೯). **ತೆಕ್ಕಾಡು** : ೩. ನೀರಿದೆ ಕೊಳ್ಳಿಯೊಂದು ಕಮಂಡಲವ ಮರುಗೆ ತೊಱೆಮಾದುದದು ಬಾಲವೃದ್ಧರು ಮೊಱೆಯಿಡುತ ತೆಕ್ಕಾ[ಪಾಠಾಂ. ತೇಕಾ]ಡುತಿರ್ದರು (ಸಾಳ್ವಭಾ. ೫೦-೭೭). **ತೇಕಾಡು** : ೧. ವಹಣಿಯ ತೆರೆಯೊಳ್ ತೇ[ಪಾಠಾಂ. ತೇಂ]ಕಾಡುತ್ತಿರೆ (ಭೃಂಗೀಶ. ಹ. ೪೩೭-೧೫) ; ಸಟಿಯ ಸಾಗರದೊಳಗೆ ತೇಕಾಡುತಿರ್ದರು ಕೆಲವರು (ಗಣಭಾ. ೧೬೯-೨) ; ತಾಳೋಡುವಾಗ ಇತ್ತ ತೇಕಾಡುತಾವ ಚಿತ್ತ (ಗಂಗಾಪ. ೧೯-೪). ೩. ಭಯ ಜಲಧಿಯಲಿ ತೇಕಾಡಿದರು ಕೌರವಜನವರು (ಕುಮಾರವ್ಯಾಭೀ. ೧೦-೧೩). **ತೇಗಾಡು** : ೧. ಗಣಿಕಾಜನಗಳು ಭೋಗಸಾಗರಮಧ್ಯದೊಳಗೆ ತೇಗಾಡುತ ವಿಟಜನಗಳ ಚಿತ್ತವನಾಕರ್ಷಣಮಾಡುತಿಹರು (ಅಂಜಪ. ೩-೩೦೯).

[ ತೇಂಕು₁ + ಆಡು₁ ]

**ತೇಂಕಿಸು₁** (ಕ್ರಿ). ತೇಲಾಡಿಸು; ತೂಗಾಡಿಸು: ಸುಣ್ಣವಡೆದ ಸಳತೋಳ್ಗ ಳೆಂಬ ಸೆಳೆಗೆಂಬುಗಳ್ ಕಾವನೆಂಬ ಗಾಡುಗೋಗಿಲೆಯುಂ ತೇಂಕಿಸಯುಂ (ಅಭ್ಯಾಸಾ. ೧೨೩) ; ಲಾವಣ್ಯರಸದ ಪೊನಲ್ ಜನಲೋಚನ ಪಾಠೀನವುಂ ತೇಂಕಿಸೆಯುಂ (ಪುಷ್ಪಪು.೫-೩೯ ಪ). [ ತೇಂಕು₁ + – ಇಸು₃ ]

**ತೇಂಕಿಸು₂** (ಕ್ರಿ). ಬಳಲಿಸು ; ದಣಿಸು ; ಆಯಾಸಗೊಳಿಸು : ವಜ್ರ ಬಾಣನಾದಾ ತೇಂಕಿಸಿ ರಾವುತಪಾನನನಂತದೆ ಗೆದ್ದಸವ ಮುನಿಲಪಾನನ ಮುಂಜಿದಾ (ಕೆಳನ್ನ. ೨-೦೨). [ ತೇಂಕು₂ (< ತೇಗು₁) + – ಇಸು₃ ]

**ತೇಂಕು₁, ತೇಂಗು₁, ತೇಕು₁** (ಕ್ರಿ). ೧. ತೇಲು : "ತೇಂಕಿಂದು ತೇಲ್ವುದು" (ಶಶಸಾ. ೩೦-೭೩೫) ; ಜನಸವನಾಂಬುವಿನೊಳ್ ಭೋಂಕಿನೆ ಚಂದ್ರಂ ತೇಂಕಿ (ಆದಿಪು. ೭-೯೯) ; ಅಬ್ಧಿಯಿದಲ್ಲಿ ತೇಂಕಿರ್ದುದು ಭಾರದಿಂ ಬಡಗೆ ಸಲ್ ಪೊಪಾರ್ಗಗಸ್ತ್ಯಬರಂ (ಪಂಪಭಾ. ೪-೨೦) ; ಪೂಗೊಳಂಗಳೊ ಳ್ತೇಂಕಿ ಪಾಱುವ ಪಕ್ಕಿಗಳ' (ಕಾದಂಬ. ೫೨೭) ; ನೆತ್ತರನೆ ಕಾಱೆ ಕುರುಪತಿ ನೆತ್ತರ ಕಡಲೊಳಗೆ ತೇಂಕಿ ತೆರೆಮುಬುಗಿರ್ದಂ (ಗದಾಯು. ೯-೦೭) ; ತೆರೆಯಂತೆ ನೂಂಕದೆ ಬೆಂಡಿನಂತೆ ತೇಂಕದೆ . . . ಶುಭಧ್ಯಾನಾರೂಢ ನಾಗಿರ್ಪುದಂ (ಧರ್ಮಾಮೃ. ೭-೧೦೫) ; ತೀವಿದ ತಿಂಗಳ ಬೆಳಗಿನೊಳಗ ತೇಂಕುವ ರಾಜಶಶಾಂಕನಂತೆ ಶಾಂತನುಂ ನಿರ್ವಿಕಾರನುಂ ನಿರೀಹಿತನಂ ನಿರ್ಮಲನುಮಾಗಿ (ಅನಂಪು. ೬-೨೨ ಪ) ; ಬೆಳ್ದಿಂಗಳ ಬೆಳ್ಪದೊಳಗೆ ಬಿನದದಿ ತೇಂಕುವ ಕುಸುಮಾಯುಧನೋ . . . ಎನಲಂಗನೆಯರ ಕಣ್ಬೆಳಗಿನ ಕಾಲ್ಪೂರದೊಳಾ ವಿಭು ನಡೆದಂ (ಜಯಚಾ. ೧೦-೬೨ ಪ). ೨. ತೇಲಿದಂತಾಗು ; ತಲೆ ಸುತ್ತು ; ಬವಳಿ ಬರು : ಅರಸಂ ನಿಟಿಲದ ಗಾಯಕ್ಕೆ ತೇಂಕಿ ಮೈಮಱೆದಂ (ವಡಕು. ೨-೩೦). ೩. ಪರವಶತೆಗೆ ಒಳಗಾಗು ; ಮೈಮರೆ ; ಪರವಶಗೊಳ್ಳು : ಸೂಡಿದ ಪಾರಿಜಾತ ದಲರ್ಗಂಪಿಂ ತೇಂಕಿ ವೈಮಾನಿಕಂ ( ಅನಂಪು. ೪-೭೦). ೪. ತುಂಬಿ ತುಳುಕು: ತೆಂಕಣದೆಸೆಯೊಳ್ ಮೆಱೆಗುಂ ಸಂಕರ್ಷಣನರಾಜಧಾನಿ ನಿರರುತಿದೆಸೆ ಯೊಳ್ ತೇಂಕುವುದವನರಸಿಯ ತನಿಬಿಂಕದ ಸರಸತಿಯ ರಾಣಿವಾಸಂ ಲೇಸಾ (ಚಳವಿ. ೫-೧೨೯). **ತೇಂಗು₁** : ೧. ಮೃಗೋದ್ಭವಕಲ್ಕಂ ಘನಸಾರ ರೇಣುಪಟಲಂ ಶ್ರೀಖಂಡಜಂ ಬಾಳೆಯಿಂಬಿನಜಂ ತೇಂಗೆ ತರಂಗಮಾಲೆ ರತಿಕಂದರ್ಪಂಗೆ ಕೀವಿಟ್ಟ ಬಣ್ಣವುರಂ ತಾನೆನೆ ಕಣ್ಗೆ ಮಾಡಿದುದು ಕಾಸಾರಂ (ಅನಂಪು. ೭-೩೨). **ತೇಕು₁** : ೧. ಸಂತೋಷಾರ್ಣವದೊಳು ಮೂಡಿ ಮುಳುಗಿ ತೇಕುತಿರ್ದಾ (ಗೊಮ್ಮಟ. ೬-೫೦). [ ದೇ.॥ ತಮಿ. ತೇಙ್ಕು ]

**ತೇಂಕು₂** 'ತೇಗು₁' ನೋ.

**ತೇಂಕು₃** 'ತೇಗು₃' ನೋ.

**ತೇಂಕುದಾಣ** (ನಾ). ನಾಡಿ ಮಿಡಿಯುವ ಸ್ಥಳ, ಉಸಿರಾಡುವ ಜಾಗ ಮುಂತಾದವು : ತೇಂಕುದಾಣಂಗಳನೊಟ್ಟಾಟಿಲ್ಲಿಯುಂ ಕಾಣದೆ ಹರಣ ಮನತ್ಯುಷ್ಣದಿಂ ಸುಯ್ಯೆ (ಲೀಲಾಪ. ೯-೨೦) ; ಜೀವವಿಕ್ಕೆಂಬಾಸೆಯಿಂ ತೇಂಕುದಾಣಂಗಳಂ ಬಗೆದಳು (ಹಚಕಾ. ೧೨-೨೫) ; ಎಳೆದು ಬಾಯ್ ನಸುನಗುತ್ತಿದೆ ತೇಂಕುದಾಣಂಗಳಲುಗುವರಂಗಂಗಳತಿ ಬಿಸಿವತ್ತಿವೆ (ಸಿದ್ಧರಾ. ೨-೫). [ ತೇಂಕು₂ (< ತೇಗು₁) + ತಾಣ ]

**ತೇಂಕುಮ್ಮುಗಿಲ್** (ನಾ). ತೇಲುವ ಮೋಡ,-ಮುಗಿಲು : ತೇಂಕು ಮ್ಮುಗಿಲ್ಗೆ ಕಾಲ್ಗೊಳಿತಂತೆ ಕನಸಿನೊಳ್ ಚರಿಯಿಪಂಬೊಲ್ ಪೋಗುತಿರ್ದನ್ (ಸಂಸಪ. ೩೨-೦೯೭). [ ತೇಂಕು₁ + ಮುಗಿಲ್ ]

**ತೇಂಗಾಯ್** 'ತೆಂಗಾಯ್' ನೋ.

**ತೇಂಗಾಯ್ಗೊಲೆ** 'ತೆಂಗಾಯ್ಗೊಲೆ' ನೋ.

**ತೇಂಗು₁** 'ತೇಂಕು₁' ನೋ.

**ತೇಂಗು₂, ತೆಂಗು₁, ತೇಗು₂** (ಕ್ರಿ). ೧. ನೆಲಸು : ಜವದೀದಾಗಸದೊಳ್ ಪಾಱುವ ಪಕ್ಕಿಯುಮವಂತುಗಾಣಲಣಮಾಱದೆ ತೇಂಗುವುದು ಪತಾಕಾಗ್ರ ದೊಳ್ (ಚಂದ್ರಪು. ೧೦-೨೫). **ತೆಂಗು₁** : ೨. (ಹಕ್ಕಿಯಂತೆ) ಎರಗು : (೬). 'ತೆಂಗುಪ' ಪರಾ. **ತೇಗು₂** : ೧. ಸಕಳಾವನಿ ರಾಗಿಸಿ ಬೀಗೆ ಕೀರ್ತಿ ದಿಕ್ತ್ರತಿಗಳ ಮೇಗೆ ತೇಗೆ ತಳೆದಾ ಭುವನಪ್ರಭು ರಾಜ್ಯಲಕ್ಷ್ಮಿಯಂ (ಪುಷ್ಪಪು. ೧೩-೨). [ ? ]

**ತೇಂಗು₃** (ನಾ). ಹೋಲಿಕೆ ; ಎಣೆ ; ಸಾದೃಶ್ಯ : "ಸದೃಶಾರ್ಥತೆಗೆ ತೇಂ[ಪಾಠಾಂ. ತೆಂ]ಗು" (ಅಭ್ಯಾಸ. ೨೦). 'ಪಾಂಗು' ಪರಾ. [ ? ]

**ತೇಂಗುಹ, ತೆಂಗುಹ** (ನಾ). ೧. ಹಕ್ಕಿಯು ಎರಗುವಿಕೆ: "ತೇಂಗುಹವೆಂದು ಪಕ್ಕಿಯೆಱಗುಹಂ" (ಶಶಸಾ. ೫೦-೦೦೪). ೨. ಹಕ್ಕಿಯಂತೆ ಎರಗುವಿಕೆ : ರಾಯಗದ್ದುಗೆಯ ಸಜ್ಜೆಗೆ ಮುಟ್ಟಲು ತೇಂಗುಹದ ಹವಣಾ ಒಂದೆರಡು ಅಂಗುಲಗಳಷ್ಟು ಸಾಲದೆ . . . ಬಿದ್ದು (ಚಟ್ಟಿ. ೧೦೯-೧೩). **ತೆಂಗುಹ:** ೧. "ತೆಂಗುಹಂ–ಹಕ್ಕಿಯೆಱಗುಹಂ" (ಕಮರ. ಪರಿ. ೨); "ತೆಂ[ಪಾಠಾಂ. ತೇಂ] ಗುಹವೆಂಬ ನುಡಿ ಹಕ್ಕಿಯೆಱಗುವುದಕಕ್ಕು" (ಅಭ್ಯಾಸ. ೮೫) : " ತೆಂಗುಹ ಮೆನಲ್ ಪಕ್ಕಿಯೆಱಗುವುದಕಪ್ಪುದು " (ಶಬ್ದಮಾಂ. ೩೦).

[ ತೇಂಗು₂ + – ಹ₂ ]

**ತೇಂಗೊಳಲು** (ನಾ). ಅಕ್ಕಿಹಿಟ್ಟು ಮತ್ತು ಉದ್ದಿನ ಹಿಟ್ಟು ಮುಂತಾದುವುಗಳನ್ನು ಕೂಡಿಸಿ, ಎಣ್ಣೆಯಲ್ಲಿ ಕರಿದು ಮಾಡುವ ಒಂದು ಬಗೆಯ ತಿಂಡಿ : ಕೈಗಾವಲು ತಿಂಡಿ ಇರಲೆಂದು ಮಾಡಿಕೊಟ್ಟಿದ್ದ ತೇಂಗೊಳಲು, ಚಕ್ಕುಲಿ ಮತ್ತು ಬೇಸಿನ್‌ಲಾಡುಗಳು ಅದರಲ್ಲಿದ್ದುವು (ರಂಗಕ. ೬೧) ; ಎದುರಿಗೆ ತಟ್ಟೆಯಲ್ಲಿ ಗರಿಗರಿಯ ಚಕ್ಕುಲಿ, ಖಾರವಾದ ತೇಂಗೊಳಲು . . . ಹೊಳೆಯುತ್ತಿದ್ದುವು (ಪ್ರಕೃವಿ. ೧೦೯) ; ತೇಂಗೊಳಲನ್ನು ಮಜ್ಜಿಗೆಯಲ್ಲಿ ಮುರಿಮುರಿದು ಮುಕ್ಕಿದ ಹಾಗೆ (ರಾಮರಾ. ೬೮) ; ರಾಮಾನುಜರು ಕಂಡ ವೈಕುಂಠ ಕನಸು ಆಹಾ ನಮಗಾಗುತಿದೆ ತೇಂಗೊಳಲ ನನಸು (ಗಣೇಶ. ೬೦-೨೬).

[ ದೇ.॥ ತಮಿ. ತೇಙ್ಕುಳಲ್ ; ತೆಲು. ತೇನೆತೊಲ, ತೇನೆತೊನ ]

**ತೇಕರೆ** (ನಾ). ಕಮರುತೇಗು ; ಅಜೀರ್ಣದ ತೇಗು : ಲೋಕರಕ್ಷಕ ಮಂತ್ರಕಾರಣ ನಾಕಜಾಧಿಪ ಮುಖ್ಯಸುರರಿಗೆ ತೇಕರೆಯ ಮಾಡಿದರು ನುಂಗುವ ಮೃತ್ಯುಕೇಳಿನಲು (ಸಂಭಪ. ೮-೮೪). 'ಕಟ್ಟಜಿ' ಪರಾ.

[ ತೇಕು$_3$ (<ತೇಗು$_3$) + ಅರೆ$_5$ ]

**ತೇಕಲ್** (ನಾ). ಒಂದು ಊರಿನ ಹೆಸರು ; P ಮಾಲೂರು ತಾಲ್ಲೂಕಿನ ಈಗಿನ ಟೇಕಲ್ : ಅವಜಿ ಮೇಗೆ ಬಾಣರಾಜಸರ್ ತೇಕಲ್ಲ ಟೆ × × × ದೆಯೊನ್ ಅಗ್ಗಳಾ ಅರಸರು ಬೆಸಸಿದೊಡೆ (ಎಕ. X (3), ಬಾಗೇಪ. ೯೬-೬ ; ಸು. 820) : ನಾಯಕತನಕ್ಕೆ ಪಾಲಿಸಿದ ತೇಕಲಸೀಮೆಪ್ರೊಳಗಣ ಉಳ್ಳಿಯರ ಹಳ್ಳಿ (ಎಕ. X, ಮಾಲೂರು. ೩೩-೪ : 1525). [ ? ]

**ತೇಕಾಡಿಸು** 'ತೇಂಕಾಡಿಸು' ನೋ.

**ತೇಕಾಡು** 'ತೇಂಕಾಡು' ನೋ.

**ತೇಕು$_1$** 'ತೇಂಕು$_1$' ನೋ.

**ತೇಕು$_2$** 'ತೇಗು$_1$' ನೋ.

**ತೇಕು$_3$** 'ತೇಗು$_3$' ನೋ.

**ತೇಕೆ** (ನಾ). ಅಳತೆಯಲ್ಲಿ ಧಾನ್ಯವನ್ನು ತಲೆಸವರಿ ಅಳೆಯುವಿಕೆ.

[ <ತೇಂಕು$_1$ ]

**ತೇಗ$_1$**, 'ತೇಗು$_4$' ನೋ.

**ತೇಗ$_2$**, ತೇಹ (ನಾ). ಒಂದು ಬಗೆಯ ಬಾಗಿರುವ ಕತ್ತಿ : ಕತ್ತಿ, ಕಠಾರಿ, ಕೈಚೂರಿ, ಪತಾತ, ಖಿಸ್ತೂಲ, ಕರುಳಿ, ತೇಗ (ಪಾಕ್ಯವಿ. ೩೧೩). **ತೇಹ** : ಸುರಾಯು, ಬಾಕು, ಕಠಾರಿ, ತೆ[ತೇ]ಹ ಮೊದಲಾದ ಆಯುಧಗಳನ್ನು ತಂದು . . . ಆತನ ಸಮಯವನ್ನು ನೋಡುತ್ತಿದ್ದರು (ಕೃಪಾಸ. ೧೦೮).

[ ←ಪಾರ. ಅರ. ಹಿಂ. ತೇಗ್ ; ಮರಾ. ತೇಗಾ, ತೇಘಾ ]

**ತೇಗಟ್ಟೂರ್** (ನಾ). ಒಂದು ಊರಿನ ಹೆಸರು : ತೇಗಟ್ಟೂರ್ವಿಷಯೋ ಬಾರದೂನಾರ್ಣಮಗ್ರಾಮ (ಮೈಆರಿ. ೧೯೪೪, ೧೫-೩೩ ; 725).

[ ? + ಊರ್ ]

**ತೇಗಳಿ** 'ತೇಮಂಳಂ' ನೋ.

**ತೇಗಾಡು** 'ತೇಂಕಾಡು' ನೋ.

**ತೇಗು$_1$**, ಡೇಗು$_1$, ತೆಕ್ಕು$_1$, ತೇಂಕು$_2$, ತೇಕು$_2$ (ಕ್ರಿ). ೧. (ತೃಪ್ತಿಯಿಂದ) ಢರಕೆಹೊಡೆ ; ಉದಾನವಾಯು ಬಿಡು : " ತೇಗು– ಉದಾನವಾಯೌ, ವೃಕ್ಷ ಭೇದೇ ಚ " (ಶಮಧಾ); ಕೆನ್ನೆತ್ತರೊಳೊರ್ಮೊರ್ವರಂ ತಳ್ಕಿಱಿದುಂ ಬೊಬ್ಬಿಱಿದುಂ ತ್ರಿಪುಂಡ್ರವಿಟ್ಟುಂ ಕೂಕಿಱಿದುಂ ತೇಗಿಯುಂ . . . ಆಡುವಾಗಳ್ (ಪಂಪಭಾ. ೧೨-೦೩೮ ವ) ; ಗಜಿಣ್ಗೆಂದೋಪದೆ ತೇಗಿಯುಂ ಮಿಡಿಗಳಂ ಕುಂಟಾಗೆ ಕೊಯ್ದುಂ ಖಳರ್ (ಧರ್ಮಾಮೃ. ೬-೦೮೯) : ಭಕ್ತಿಯಿಂದವೆ ತಣಿದು ತೇಗಿ ತೂಗಾಡುತಂ (ಕಣ್ವರ. ದೇ. ೦೩೦-೨೨) : ತೇಗಿದನು ಡಜ್ಜನೆ . . . ಖಳನಧಿಕತೃಪ್ತಿಯಲಿ (ತೊರರಾ. ೬-೨೬-೩೯) : ಉಂಡವ ತೇಗುವಂತಾತ್ಮನ ಭಾವಿಸಿ ಕಂಡು ಕಂಡವ ಪೇಳಬೇಕು (ಭರತ, ೨-೯೬) : ಕುರುಡ ಕುಂಟ ಹೆಳವರಲ್ಲಿ ಮರುಕಗೊಂಡು ಬೋನವಿಕ್ಕುಹರನು ಮೆಚ್ಚಿ ತೇಗಿ ತಾನು ಹರಸಿ ಪೊರೆವನು (ಕವಿಕೋ. ೪೪-೩). ೨. ಏಗು ; ಕಷ್ಟಪಡು ; ಆಯಾಸಪಡು : ಬೆವರುತಂ ಬಿಕ್ಕುತಂ ತೇಗುತಂ ತೂಗುತಂ ಕ್ರಮವಳಿದು ಸುಳಿದು ಸಂಖಿಯಾಗುತಂ (ಬಸರ. ೩-೧೦೬). ೩. (ಆಲಂ) ತಿಂದು ಮುಗಿಸು : ಕದನದಲಿ ದುಶ್ಶಾಸನನ ತೇಗಿದನಲಾ ಬಕವೈರಿ (ಕುವ್ಯಾಗ. ೩-೨೯). **ಡೇಗು$_1$** : ೧. ಬಿರಿಮಂತಾಯಿತುದರವೆಂದಂಜಿ ಬಿಟ್ಟನೋ ಎಂಬವೊಲ್ ಡೇಗಿ ಭೋಜನವ ಮುಗಿಸಿ (ಮಲ್ಲಕ. ೫-೧೫) ; ಜನನಿ ತುಷ್ಟನಾದೆನು ಸಾಕು . . . ಎಂದಾತನುವೆ ಡೇಗಲು (ಮಲ್ಲಕ. ೮-೪೪). **ತೆಕ್ಕು$_1$** : ೨. ತೆಕ್ಕುವಳ್ಳಿಯು ಬಿಟ್ಟ ಮಂಡೆಯ ಉಕ್ಕಿ ಸೊರೆಗಟ್ಟಳಿವ ರಕ್ತದ ಲಕ್ಕಿ ಬಾಯೆತ್ತಿರದು (ಕಾಶಿರಾ. ೫-೨೦) ; ತೆಕ್ಕುತಿಹ ಕಿಬ್ಬದಿಯ ಬಸುಱಿಂಗೊಲಿವ . . . ಚಿಂತಾಹೃದಯ ನೋಡುತ ಮಱಿಯ ಹೊಕ್ಕನು ದೈತ್ಯ ದಲಪತಿಪು (ಕಾಶಿರಾ. ೩೯-೨೮). **ತೇಂಕು$_2$** : ೧. ಆರೋಗಣೆಯನಾ ಹೊಟ್ಟೆಯೊಡೆವ ಮರ್ಯಾದೆಯೊಳಗುಂಡು ತೇಂಕು [ಪಾಠಾಂ. ಗು]ತ್ತಿರ್ದರು (ಸದ್ಮಕಾ. ೬-೨೬). ೨. ತಪೋವನಮಂ ಶಶಿಮೌಳಿ ಪೊಕ್ಕು ಮೆಲ್ಲನೆ ಬರುತುಂ ಪಥಶ್ರಮವನಾಂತು ಬಳಲ್ದವೊಲಾಗಿ ತೇಂಕುತುಂ (ಗಿರಿಕ. ೯-೮೯); ಹಣೆಯಿಂದ ಬೆವರುಗೆ ಸೆತ್ತಿ ಪೊತ್ತಿ ತೇಂಕುತ್ತ ಹರಿತಪ್ಪಗಳ್ (ಹಡಕಾ. ೧೨-೬) ; ಕೆಮ್ಮುಗುಂ ತೇಂಕುಗುಂ (ಬಾಲಚಿ. ೧೨೬-೪). **ತೇಕು$_2$** : ೨. ಮೊಗ ಬೆಮರೆ ತೇಕುತಂ ಪರಿತಂದು (ಬಸರ. ೯-೯೬) ; ತೇಕಿ ತಲೆಕೆಳಕಾದನೀ ಯುವಿವೇಕಸಾಗರನೆಲೆ ನೃಪತಿ ಜಗದೇಕವೀರನು ಕರ್ಣ ತಾನಿರೆ ಸಂಧಿಯೇಕೆಂದ (ಕುವ್ಯಾಉ. ೫-೦೩) ; ಮುನಿಮನಂಗಳು ತೇಕಿ ತಲೆಕೆಳಗಾದುವೈ ಕಾಣಿಸದೆ ನಿಜಪದವ (ನಿಭಾಗ. ೩-೬-೨೨) ; ಕೌರವಂ ನೋಡಿ ಹಸುಮಕ್ಕಳಂ ಬರಿದೆ ನೀ ಕೊಂದೆಯಾಯೆಂದು ಪ್ರಾಣೋತ್ಕಟಾಗಳಿಂ ತೇಕುತಿರೆ (ತುರಂಗ. ೬೬-೫೬); ಅದಾಗ ಏದುತ್ತ ತೇಕುತ್ತ ಅಲ್ಲಿ ಬಂದು ತಲುಪಿದ ಸುರೇಶ (ಅಬೋಲೀ. ೯೬) ; ಬಾಗಿಲು ಕಾಯುವವನು ತೇಕುತ್ತಾ ಬಂದ (ಜಮಿನಾ. ೯).

**ತೇಗಿ ತೊಣೆ = ತೃಪ್ತಿಪಡು** : ಗಣಪತಿಯು ಶಿವನ ಮುಂದೆ ಜಗತ್ತಿನಲ್ಲಿ ಎಲ್ಲಿ ನೋಡಿದರೂ ಸುಖವೇ ಉಂಟೆಂದೂ ಆ ಸುಖವನ್ನುಂಡು ತೇಗಿ ತೊನೆದು ಉಬ್ಬಿ ಬಾದನೆಂದೂ ಮುಂಚಿತವಾಗಿ ಹೇಳಿರಲು (ಕನ್ನಡಾ. ೧೫೬). [ ದೇ.॥ ತಮಿ. ಮಲ. ತೇಕ್ಕು ; ತುಳು. ತೇಗು, ತೇಂಕ್, ಸೇಂಕ್; ತೆಲು. ತೇನು, ತೇಪು, ತ್ರೇಪು ]

**ತೇಗು$_2$** 'ತೇಂಗು$_2$' ನೋ.

**ತೇಗು$_3$**, ಡೇಗು$_2$, ತೇಂಕು$_3$, ತೇಕು$_3$ (ನಾ). ೧. ತೇಗುವಿಕೆ ; ಢರಕೆ : ಆಗುಳಿಕೆ ತೇಗು ಸೀನಿದನಾಗಿಸುಗುಂ (ಕಲ್ಯಾಕಾ. ೨-೧೬); ಮಹೇಶ್ವರಾಲಯದಂತೆ ಗೊರವು . . . ತಣಿಯುಂಡನಂತೆ ತೇಗು (ಬಂಹರಿ. ೨-೩೮ ವ) : ಎರಡಳ್ಳೆ ಪಿಟ್ಗಿ ತೇಗುಬ್ಬರಿಸಲ್ ಕುಳಿರ್ವಮಳಜಲಮನೀಂಟಿದಂ (ದಶಕು. ೪-೩೪) ; ವರಸವಾಧಾನದಲಿ ಕೈದೊಳೆದುರವಣಿಪ ತೇಗಿನ ತರಂಗದ ಪರಬಲಾಂತಕನೆದ್ದು ನಿಂದನು (ಕುವ್ಯಾಆ. ೧೦-೩೪). **ಡೇಗು$_2$** : ೧. 'ಅಬ್' ಎಂದು ಡೇಗುಹಾಕುತ್ತಾ ಮಧ್ಯಮದ ವಯಸ್ಸಿನ ಸಮಾಪಿಸಿದ ಆ ಪಟೇಲರು . . . ಕುಳಿತಿದ್ದರು (ಬರಹಾ. ೬೩). **ತೇಂಕು$_3$** : ೨. ಏದುಸಿರು ; ಮೇಲುಸಿರು : ಪಿಪ್ಪಲಿಯುಂ ತ್ರಿಫಳೆಯುಮನರೆದು . . . ತಿನೆ ನೆಗಡಿ ತೇಂಕರೆತಲೆಬೇನೆ ಜ್ವರಂಗಳಂಬಿಮಿನಿತುಂ ಕಿಡುಗುಂ (ಕೋಕೋಪ. ೯-೯೨). **ತೇಕು$_3$** : ೨. ಬಾಯಂ ಬಿಡುತುಂ ತೇಕುಣ್ಣೆ ಜಿಹ್ವಾಲತೆಯೆಟಲೆ ಜವಂಗುಂದುತುಂ ಬಂದು (ಶಾಂತೀಶ್ವ. ೦೨-೩೬) : ಓಡಿ ಓಡಿ ಬಾದುದರಿಂದ ಅವನಿಗೆ ತೇಕು ಹೆಚ್ಚಾಗಿತ್ತು (ಬನಸಿ. ೬೬).

[ <ತೇಗು$_1$./ತಮಿ. ತೇಕ್ಕು : ತುಳು. ತೇಗ್, ತೇಂಕೆ ]

**ತೇಗು$_4$, ಚೇಗು$_1$, ತೇಗ$_1$** (ನಾ). ಒಂದು ಬಗೆಯ ಮರ ; ಸಾಗುವಾನಿ: "ತೇಗಿನ ಮರನದೆ ಸಾಕಂ" (ವಸ್ತುಕೋ. ೩೫-೦೬) ; "ತೇಗು ~ಉದಾನ ವಾಯಸೌ, ವೃಕ್ಷ ಭೇದೇ ಚ" (ಶಮಧಾ) ; "ತೇಗುವುಂರಿವೋಷವಕ್ಕು" (ಮಂಗರಾ. ೩೬-೦೮) ; ಸಿರಿಸಂ ಸೀರೆ ಬೆಳಲ್ಲವಂಗವೆಲವಂ ಬಳ್ಳಾರಲೆರಂ ಬಿಕ್ಕೆ ತೇಗು (ಕಾವ್ಯಸಾ. ೦೦೧೦ ಕೂರ್ದ್ರಳ) ; ಮೊಗವುಂ ತೊಳೆವಂತೆ ಬಾಗಿ ಮಾತಙಿಯದಳಂತೆ ಮೂಗಿ ಮಿಗಿಲುಂಡವರಂತಿರೆ ತೇಗು ... ಕರೆವಂತೆ ಪಾಲೆ ಶಂಕರಸಖನಂತೆ ಹೊನ್ನೆಯೊಯಂತೆರದಂತಿರಣ್ಣವೊಪ್ಪುಗುಂ (ಮಲ್ಲಿಕಾ. ೩-೦೩೬) ; ತೇಗಾಲದ ನೇಱಲ . . . ಹೊನ್ನೆಯ ತರುಗಳ್... ಮೆಱೆಗುಂ (ಹಮ್ಮಿರ. ೪-೬೫) ; ತೇಗರುತಾಳ ಚಿಲ್ಲ ನೆಲ್ಲಿಯುಂ ಹೊಂಗೆ ನೇಱಲು . . . ಸೂರವರ್ಮಾರ್ಗವ ತಡೆದಿಹುವು (ಕಂಖವಿ. ೧೮-೩೬) ; ಎಕ್ಕೆ ಯಂಬಟೆ ತೇಗು ಮತ್ತಿಯು . . . ಕಿಕ್ಕಿಱಿದು ಬೆಳೆದಿರ್ದುವು (ಪ್ರಹ್ಲಾ.ಚ. ೪-೧೧) ; ಭಸಿತಧಾರೆ ಪೊಣ್ಮುವ ರಂಧ್ರವುಂ ಭೋಂಕನೊಂದು ತೇಗಿನೆಳೆ ದಳಿರಿಂ ಕಟ್ಟಿ ಬಂಧಿಸುತ (ವೃಷವಿ. ೫೯-೦೩೫ ಪ) ; ತೇಗಿಗಿಂತ ಗಟ್ಟಿಯಲ್ಲ ಜೋಗಿಗಿಂತ ಕುಂಬು ಇಲ್ಲ (ಗಾದೆ). **ಚೇಗು$_1$** : ಚೆನ್ನಾಗಿ ಬಲಿತ ಚೇಗಿನ ಮರ ; ಒಂದಕ್ಕೊಂದು ತಟ್ಟಿದರೆ ಖಣಖಣಿಗುಟ್ಟುವಂತಿರುತ್ತದೆ (ಪಾಪರ. ೪ ಪರಿಚಯ). **ತೇಗ$_1$** : ನಿಗುರ್ದ ಹೆತ್ತೇಗದಿಂ ಷೇಗದಿಂ ಕಾನನಂ ಕಣ್ಗೆಸೆದುದು (ರಾಘವ. ೦೭-೩೪) : ಬಿದಿರುಮೆಳೆ ಮತ್ತು ತೇಗದ ಮರಗಳ ಭೀಕರ ಕಾಡಿನ ಮಧ್ಯೆ ಹತ್ತು ಮನೆ (ಹೊಸಕ್ಷಿ. ೦೨೩) : ತೇಗದ ಮರ, ಸಾಗವಾನಿ (ಮ್ಯಜಿಗಿ. ೭೩-೦೩೦೫).

[ ದೇ.॥ ತಮಿ. ಮಲ. ತೇಕ್ಕು ; ತೆಲು. ಟೇಕು ; ಟೇಕು ; ಕೊಲಾ. ಟೆಕ್ ; ಪರ್ಜಿ. ಟೇಕ್ ; ಗೊಂಡಿ ; ತೇಕಾ./ಇಂ. Teak ]

**ತೇಗುರು** (ನಾ). ಒಂದು ಊರಿನ ಹೆಸರು : ಯಿದಕ್ಕೆ ಸಾಕ್ಷಿ ಮುಗುಳಿ ಚಣ್ಣಯೂರ ಪಲ್ಮಾಡಿ ಅವ್ವಾಳಿ ಕಿರಿಯ ಮುಗುಳಿ ಮುಟಿವಳ್ಳಿ ನಲ್ಲೂರು ಮಾಗುಣ್ಣ ತೇಗುರು ಆರಮಣ್ಣಂ ಬಿಟ್ಟ ಮಂಗಳಂ (ಎಕ. VI, ಚಿಕ್ಕಮ. ೪೨-೨೨ ; 959).

[ ಇದು 'ತೇಗೂರು' ಎಂಬುದರ ಅಪಲಿಖಿತವಿರಬಹುದು ]

**ತೇಜ$_1$** (ನಾ). ೧. ಹೊಳಪು ; ದೀಪ್ತಿ ; ಪ್ರಕಾಶ ; ಕಾಂತಿ : ತೇಜಕ್ಕೆ ನ್ನೊಳ್ ಸಣಸುವನೀ ಜನಪತಿಯೆಂದು ಕಾಯ್ದು ತೞಿದರ್ದಂ ನೀರೇಜ ಸಖಂ (ಲೀಲಾವ. ೬-೪೫) ; ರತಿಪತಿಗೆ ಮೂಲೋಕವಾವರಿಸುವ ರೂಪಂ ಸರಿತ್ಪತಿಗೆ ಗಂಭೀರತೆಯನು ಸ್ವಾಹಾಪತಿಗೆ ತೇಜವಂ ಕೊಟ್ಟ ಗುರು ಮೂರ್ತಿ (ಹರಿಕಾ. ೧-೧) ; ಪೃಥ್ವೀಪಾಲರಿದ್ದರು ತರಣಿಕಿರಣವನೇಳಿಸುವ ಮಣಿಭೂಷಣಂಗಳ ಬಹಳ ತೇಜದಲಿ (ತೊರರಾ. ೧-೦೧-೬). ೨. ಕದಿರು; ರಶ್ಮಿ ; ಕಿರಣ : ತೇಜಂ ಪುದುವಿಲ್ಲೆನಿಸಿ ವಿರಾಜಿಸೆ ಪರರಾಜಮಂಡಲಂ ತನ್ನಿಂ ನಿಸ್ತೇಜಂಬೆತ್ತಿರೆ ಬೆಳಗಿದನೀ ಜಗಮಂ ಭಾನುವೆಂಬಿನಂ ಭಾನುರಥಂ (ಪಂಪಾರಾಮ. ೨-೬೬). ೩. (ಪಂಚಭೂತಗಳಲ್ಲಿ ಒಂದಾದ) ಬೆಂಕಿ ; ಅಗ್ನಿ : ಈ ಅವಸ್ಥೆಗಳಲ್ಲಿರುವ ಬ್ರಹ್ಮನೇ ಪೃಥಿವ್ಯಪ್ತೇಜೋವಾಯ್ವಾಕಾಶ ವೆನ್ನಲ್ಪಡುವವನು (ಹಿಂದಸಾ. ೨೩೩). ೪. ಸೂರ್ಯ ; ರವಿ. ೫. ಹರಿತವಾಗಿರುವಿಕೆ; ತೀಕ್ಷ್ಣತೆ. ೬. ಶಕ್ತಿ; ಸಾಮರ್ಥ್ಯ; ಪರಾಕ್ರಮ; ಪೌರುಷ : "ಪೌರುಷಂ ತೇಜಂ ಪ್ರತಾಪಂ ಪರಾಕ್ರಮಮಂ ವೀರಕ್ಕೆ ಪೆಸರು" (ಮಂಗರಾ. ೧೩೦-೦೬) ; ಅರಾನುಂ ತೇಜದವರ್ ವಲ್ಲಿಯೆಂದು ಸುಟ್ಟಿಸಿ ತೋಱಲ್ ಸಲ್ಲದು (ಎಕ. XII, ೨೮೪-೨೫೬ ; 1077) ; ಶತ್ರುಸಂತತಿ ತಲೆವಾಗೆ ಶಿಷ್ಟಜನದಾಱಿಡಿ ನಾಟ್ಯಡೆವೋಗೆ ತೇಜಮುದ್ಧತರನ ಕೊಂದು ಕೂಗೆ (ಪುಷ್ಪಪು. ೦೩-೨) : ತೇಜ ಇದ್ದವನೇ ಪೂಜ್ಯ (ಗಾದೆ). ೭. ಹೆಚ್ಚಳ ; ಗೌರವ ; ಮಹತ್ವ ; ಘನತೆ : ವಿಶ್ವಾಮಿತ್ರಮುನಿಸುತೆಯರಂ . . . ಹರಿಶ್ಚಂದ್ರರಾಯಂ ತಂದನೆಂಬೊಂದು ತೇಜಮಂ ಕೊಡಬೇಕೆಂದೆನಗೆ (ಹರಿಕಾ. ೮-೩೦) ; ಸುಮ್ಮನಾಕೆಗೆ ತೇಜವಿತ್ತು ತಂದಾಳ್ದರೆ ಹೆಮ್ಮಕ್ಕಳೇನ ಮಾಡುವವು (ಭರತೇ. ೩೭-೦೦೬) : ಒಡೆಯನ ತೇಜವ ಕೆಡಿಸಿಯಾಡದವನ ತಡೆಯದೆ ಕಾರ್ಯ ಮಾಳ್ಪವನ . . . ನೀಂ ಪೊರೆವೆ (ಶತಸಾಂ. ೪೮-೪೦); ಅನವರತವಗಲದಲೆ ಜನಪತಿಯನೋಲಯಿಸು ಧನಮಕ್ಕು ತೇಜ ಪಿರಿದಕ್ಕು (ಸರ್ವಜ್ಞ. ೭೩೩). ೮. ತನಂ ; ದೇಹ ; ಶರೀರ. ೯. ಮನೆ ; ಗೃಹ. ೧೦. ಹೊನ್ನು ; ಸಿರಿ ; ಚಿನ್ನ : "ಕಿರಣಂದ್ಯುತಿ ರುಗ್ದೀಧಿತಿ . . . ದೀಪ್ತಿ . . . ಅಂಶು ಭಾ ಭಾನು ರಶ್ಮಿ ಘೃಣಿವಸು ಗಭಸ್ತಿ ಪಾದಂ ತೇಜಂ" (ವಸ್ತುಕೋ. ೧೨-೬೫) ; "ತನು ಭವನಾ ನಲಾರ್ಕಕಿರಣಂಗಳು ತೇಜಸ ಮಾಹ್ವಯಂ" (ನಾನಾರ. ೫೨). ೧೧. (ಬಹುವ್ರೀಹಿ ಸಮಾಸದಲ್ಲಿ) ಕಾಂತಿಯನ್ನುಳ್ಳವನು ; ತೇಜಸ್ಸಿನಿಂದ ಕೂಡಿದವನು : ಅತುಳತರ ತೇಜಂ ಮಲಪರೊಳ್ಗಂಡಪ್ರಚಂಡನಸಹಾಯಶೂರನೇಕಾಂಗವೀರಂ . . . ಸುಕಸಂಕಥಾವಿನೋದದಿಂ ಪೃಥ್ವೀರಾಜ್ಯಂಗೆಯುತ್ತಮಿರೆ (ಎಕ. VI, ತರೀಕೆ. ೪೫-೫೦ ; 1190). ೧೨. [ಛಂದ] ಒಂದು ಅಕ್ಷರ ಗಣ ; ರಗಣ(–∪–): ತೇಜಮರ್ಕನೀಶನಿಂದೋಜೆವೆತ್ತು ಬಂದೊಡಂ ಭೋಜನೇತ್ರೆ ಕೇಳ ನೀನೀ ಜಗದ್ವಿಭೂತಿಯಂ (ಛಂದೋಂಬು. ೨-೮೫).

**ತೇಜಮಾರ್ತಂಡ** = ತೇಜಸ್ಸಿನಲ್ಲಿ ಸೂರ್ಯನಂತಿರುವವನು ; ಒಂದು ಬಿರುದು : ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾ ಸಾಮನ್ತಂ ತೇಜಮಾರ್ತಣ್ಡಂ (ಸೌಇಇ. XX,೦೯-೫೯ ; 1016).

[ ಸಂ. ತೇಜಸ್ ]

**ತೇಜ$_2$, ತೇಜಿ$_2$** (ನಾ). (ವ್ಯಾಪಾರದಲ್ಲಿ) ಬೆಲೆಯೇರಿಕೆ, ಉತ್ಕರ್ಷ : ವ್ಯಾಪಾರಕ್ಕೆ ಬಹಳ ತೇಜ ಬಂದದರಿಂದ ಅವನಿಗೆ ಬಹಳ ಲಾಭ ವಾಗುತ್ತಿತ್ತು (ಮುಂಬಯಿ. ೫-೨೮೧). **ತೇಜಿ$_2$** : ಹೊರದೇಶದ ವ್ಯಾಪಾರ ಬಹಳ ತೇಜಯುಳ್ಳಿದೆ (ಹೇಮಕೊ. ೦೫) ; ಎಲ್ಲಾ ಮಾಲುಗಳಿಗೂ ಒಳ್ಳೆಯ ತೇಜಿಯ ಸಮಯ ಬರುತ್ತದೆ (ಚಾರುದಾ. ೦೪೫) ; ಆ ಕಾಲಕ್ಕೆ ಮರಗಳ ವ್ಯಾಪಾರವೇ ತೇಜಿಯಲ್ಲಿತ್ತು (ಕೊಳವು. ೧೪೦). 'ಮಂದಿ$_2$' ಮರಾ.

**ತೇಜಿಮಾಡು** = ಬೆಲೆಯನ್ನು ಹೆಚ್ಚು ಮಾಡು,–ಏರಿಸು : ಆ ರೇಶಿಮಿ ಮಾರುವವನು ಬೆಲೆಯು ಹೆಚ್ಚು ಬೆಳಸುತ್ತಾನೆ. ಅಂದರೆ ತೇಜಿ ಮಾಡುತ್ತಾನೆ (ಮುಂಬಾ. ೬೬). [ ←ಪಾರ. ಹಿಂ. ಮರಾ. ತೇಜೀ ]

**ತೇಜಂಗಿಡಿಸು** (ಕ್ರಿ). ೧. ಕಾಂತಿಹೀನಗೊಳಿಸು. ೨. ಪರಾಕ್ರಮವನ್ನು ಕುಗ್ಗಿಸು ; ಶಕ್ತಿಗುಂದಿಸು. ೧, ೨: ಜಾಂಬವನಂ ಪಿಂಬಗಲಾದಿತ್ಯನಂತೆ ತೇಜಂಗಿಡಿಸಿ ಹನುಮನನುಮಾನಂ ಮಾಡದೆ ನೆಲಕಿಕ್ಕಿ (ಧರ್ಮಾಮೃ. ೬–೯೫). [ ತೇಜಂಗಿಡು (<ತೇಜಂಗೆಡು) + – ಇಸು$_3$ ]

**ತೇಜಂಗಿಡು** 'ತೇಜಂಗೆಡು' ನೋ.

**ತೇಜಂಗುಂದು** (ಕ್ರಿ). = ತೇಜಂಗೆಡು : ತಾರಗೆಗಳ್ತೇಜಂಗುಂದೆ ಕೊರಗೆ ಚಾರುಚಕೋರಂಗಳ್ (ಉದ್ಭಟ. ೧೧-೬). [ ತೇಜ$_1$ + ಕುಂದು$_1$ ]

**ತೇಜಂಗೆಡು, ತೇಜಂಗಿಡು** (ಕ್ರಿ). ೧. ಕಾಂತಿಗುಂದು ; ಕಾಂತಿಹೀನ ವಾಗು : ಪಗಲ ಚಂದ್ರನಂತೆ ತೇಜಂಗೆಟ್ಟು (ಧರ್ಮಾಮೃ. ೧-೦೬೮) ; ತರಣಿ ತೇಜಂಗೆಡದಿರಗ್ನಿ ಬಿಸುಪಾಱದಿರು (ಹರಿಕಾ. ೨-೩೦). **ತೇಜಂಗಿಡು** : ೨. ಪರಾಕ್ರಮ ಕುಂದು,–ಕುಗ್ಗು. 'ತೇಜಂಗಿಡಿಸು' ಮರಾ.

[ ತೇಜ$_1$ + ಕೆಡು$_1$ ]

**ತೇಜಂಬೊಂದಿಸು** (ಕ್ರಿ). ಕಾಂತಿಯನ್ನು ಹೊಂದುವಂತೆ ಮಾಡು,– ಹೊಂದಿಸು : ಅರ್ಗಂದೆಡಕೂಳಲ್ಲದೆ ತೇಜಂಬೊಂದಿಪರ್ಗಲ್ಲದದೆಂತುಂ (ಎಕ. VII, ಶಿವಮೊ. ೯೭-೪೧ ; 1113). [ ತೇಜ$_1$ + ಪೊಂದಿಸು ]

**ತೇಜಃಕಣ** (ನಾ). ಬೆಂಕಿಯ ಕಣ,–ಅಂಶ : ಧಾರಾವಿಸರಧೂತಪರಿಸ್ಫುಲಿಂಗಪ್ರಸರತೇಜಃಕಣಪರಿಷ್ಕೃತನವ್ಯಶತಭಾನು (ಕುವ್ಯಾ.ಸ. ೧೦-೭೭).

[ ಸಂ. ]

**ತೇಜಃಕ್ಷಯ** (ನಾ). ಕಾಂತಿಯಂ ಅಳಿವು ; ತೇಜೋಹೀನತೆ : ಕಾಲವಶದಿಂ ತೇಜಃಕ್ಷಯಂ ಭಾನುಗೆಂದಗಿದಾರ್ತೆಬಡುವಂತೆ (ಪುಷ್ಪಪು. ೬-೪೦).

[ ಸಂ. ]

**ತೇಜಃಪಿಂಡ** (ನಾ). ಅಗ್ನಿಯಂ ರಾಶಿ: ರ ಘೂ ದ್ವ ಹ ೦-ಗೆ ಪರಿತಾಪಂ ಲಕ್ಷ್ಮಣಂಗಾಗಳುಬ್ಬರವಾದತ್ತು ಲತಾಂಗಿ ಸೀತೆ ಪುಗೆ ತೇಜಃಪಿಂಡಮಂ ಕುಂಡಮಂ (ಕುಂರಾಮ. ೧೬-೨೭). [ ಸಂ. ]

**ತೇಜಃಪುಂಜ** (ಗು).೧. ಪ್ರಕಾಶದಿಂದ ಕೂಡಿದ ; ಕಾಂತಿಯುತವಾದ : ಮರೆಯಾದುದಾ ದೇವ ತೇಜಃಪುಂಜ ಮುಖಮೂರ್ತಿಯಗ್ನಿ ಮೆಯ್ ಜ್ವಾಲಾನಿಮಗ್ನಮೆನಲ್ (ಶ್ರೀರಾಮಪ. ೧೪-೩೬೩); ತೇಜಃಪುಂಜ ಮುಖದ ಅಧಿಕಾರಿಯೊಬ್ಬನನ್ನು ನೋಡಿದನು(ಪುನರು. ೩೦೦).(ನಾ).೨. ಕಾಂತಿಯ ಸಮೂಹ: ಮಿಱುಪ ತೇಜಃಪುಂಜಮುಕ್ಕಿತು ಹೊದಱ ಹೊಳಹಿನಲಿ (ಕುಮ್ಯಾಸ. ೧೦-೭೮) ; ಧೂಮಕೇತು. . . ಪ್ರಕಾಶಮಾನವಾಗಿ ಇರುತ್ತದೆ. ಬಾಲ ಬಹಳ ಉದ್ದವಾಗಿ ತೇಜಃಪುಂಜವಾಗಿ ಇರುತ್ತದೆ (ಆಕಾಶ. ೩೭). ೩. ಸೂರ್ಯ: ಅಂತು ಬಾಹುಬಲಿ ತೇಜಃಪುಂಜಮೆ [ ಪಾಠಾಂ. ತೇಜಸ್ಸ್ಫುರಿತಮೆ ] ಕಣ್ಣೊಳುಳ್ಕುವಂತೆ ಸ್ಫುರಿಸಿದಮೆಯ್ಯಿಕ್ಕಿ ದೃಷ್ಟಿಯುದ್ಧದೊಳ್ ಸೋಲೆ (ಆದಿಪು. ೧೪-೧೦೩ ವ). [ ಸಂ. ]

**ತೇಜಃಪ್ರಸರ** (ನಾ). ಕಾಂತಿಯ ವಿಸ್ತಾರ,-ಹರಹು: ಎಸೆವ ಕಿಸುಗಲ್ಲ ತೇಜಃಪ್ರಸರಂ ದಾವಾಗ್ನಿಶಂಕೆಯಂ ಮನದೊಳ್ ಪುಟ್ಟಿಸಿ (ಶಾಂತಿಪು. ೨೯-೯೭) ; ಕರಣಗಣದ ತೇಜಃಪ್ರಸರದೊಡನೆ ಬಿಸಿಲ ಬಿಸುಪಸದಳಮಾಗೆಯುಂ (ಚಂದ್ರಪ್ರ. ೭-೭೦ ವ). [ ಸಂ. ]

**ತೇಜನಕ** (ನಾ). ಒಂದು ಬಗೆಯ ಹುಲ್ಲು ; ಕಾಗೆಬಿದಿರು : "ಗುಂದ್ರಃ, ತೇಜನಕಃ, ಶರಃ – ಈ ೩ ಕಾಕಬಬ್ಬು" (ನಾಚಿರಾ. ೧೦೩) ; "ಗುಂದ್ರಃ, ತೇಜನಕಃ, ಶರಃ – ೩ ಕಾಗೆ ಬಿದಿರು" (ಸಿದ್ಧಾಂತಿ. ೧೩೦). [ ಸಂ. ]

**ತೇಜನಿ** (ನಾ). ೧. ಕುರಂಟಗೆಯಂ ಗಿಡ. ೨. ಜ್ಯೋತಿಷ್ಮತೀಲತೆ. ೩. ತೃಣ ; ಹುಲ್ಲು. [ ಸಂ. ತೇಜನೀ ]

**ತೇಜಪುಂಜ** (ನಾ). ಕಾಂತಿಯ ಸಮೂಹ : ನೀ ತೇಜಪುಂಜ, ನಾನೊಂದು ಚುಕ್ಕಿ (ಹೃದಮ. ೨೨-೦೩). [ < ತೇಜಃಪುಂಜ ]

**ತೇಜಫಲ** (ನಾ). ಒಂದು ಬಗೆಯ ಹಣ್ಣಿನ ಮರ: "ಶಾಲ್ಮಲೀಫಲಃ-ತೇಜಫಲ" (ಓಷಧಿ. ೧೬೩) ; ತೇಜಫಲ, ಜಿವ್ನಿ, ತುಂಬುರು (ಮೃಜಿಗಿ. ೬-೦೬೨೦). [ <ಸಂ. ತೇಜಃಫಲ ]

**ತೇಜಮಾನ್ಯ** (ನಾ). ಅಷ್ಟಭೋಗಗಳಿಂದ ಕೂಡಿರುವಕೆ ಕೊಟ್ಟ ಮಾನ್ಯದ ಭೂಮಿ (?) : ನೀವೆಲ್ಲರೂ ತೆತ್ತು ನಿಂ × × × ತೇಜಮಾನ್ಯ ಸಂಕ (ಸೌಇಇ. ೧೯೩೨, ಉಡುಪಿ. ೩೦೩-೦೦ ; 1397).

[ ತೇಜ$_1$ + ಮಾನ್ಯ ]

**ತೇಜವಂತ** (ನಾ). ಕಾಂತಿಯಿಂಳ್ಳವನು ; ತೇಜಸ್ವಿ : ರವಿಯ ತೆರದಿ ತೇಜವಂತನಾದ ಕವಿಯೆ (ಪಯಂಣ. ೬-೦೯). [ ತೇಜ$_1$ + - ವಂತ ]

**ತೇಜಶ್ಚಕ್ರ** (ನಾ). ಕಾಂತಿಯಿಂದ ಕೂಡಿದ ಚಕ್ರ ; ತೇಜೋಮಂಡಲ : ಉಗ್ರಪ್ರತಾಪೋರ್ಜಿತ ತೇಜಶ್ಚಕ್ರಮಿದೆರ್ತ್ತೊಳಪೊಗದೆ ಪುರೋಪಾಂತದೊಳ್ ಚಕ್ರರತ್ನಂ (ಆದಿಪು. ೧೪-೩); ತೇಜಶ್ಚಕ್ರಧರಂ ರಿಪುರಾಜ್ಯಾಪಹಾರಿ ತನ್ನ ಪೊಲುರ್ವೀಧರ ವಿಭ್ರಾಜಿತಕರನುದಯಿಪಂ ತನೂಜಂ (ಪಾರ್ಶ್ವಪು. ೭-೬೨). [ ಸಂ. ]

**ತೇಜಸಾಮ್ಯ** (ನಾ). = ತೇಜಸ್ವಾಮ್ಯ : ಹಳ್ಳದಿಂ ಮೂಡಣ ತ್ರಿಭೋಗ ಸುಂಕ ತೇಜಸಾಮ್ಯ ದೇವರ್ಗೆ ಸರ್ವಬಾಧಾಪರಿಹಾರಮಾಗಿ ಕೊಟ್ಟರು (ಸೌಇಇ. XX, ೨೩-೨೭ ; 1029) ; ಕೊಳ್ಳಂಪೂರ ಸಗರದಕೆಯಿಮನ ತೇಜಸಾಮ್ಯವೆಲ್ಲಿಮಂ ಮಲ್ಲಿಮಯ್ಯಂಗಮರ್ಕ್ಗಳಂಗವೊಬ್ಬಸಿತಾವ್ವ ವಿತ್ರಿಗಂ ಜೊತಗಂದೊಜಂಗಾಗಿ ಪೊದರವರನಾ ಕೈಕೊಣ್ಡಾಡ ಸಮಾಚರಿಸಿದೊಡೆ (ಕಇಇ. ೦೨೪-೩೩-೭ ; 1085) ; ಆ ಹೆಬ್ಬಾಳ ಹನ್ನೆರಡಱ ಬಳಿಯ ಬಾಡಂ ಬಡಗನೂ ಯಷ್ಟಭೋಗ ತೇಜಸಾಮ್ಯವಂ ಯಾ ಬಾಳ ಸೋವರಸಂಗಳಃ ಕ್ರಯಮಂ ಕೊಂಡು ತಮ್ಮ ದೇವರ್ಗ್ಗೆ ಬಿಟ್ಟರು(ಕೊಲ್ಲಾ, ೧೪-೪೫; 1176).

[ <ತೇಜಸ್ವಾಮ್ಯ ]

**ತೇಜಸ್ಕಾಯ** (ನಾ). [ಜೈನ] ಐದು ವಿಧವಾದ ಸ್ಥಾವರವಸ್ತುಗಳಲ್ಲೊಂದು ; ಅಗ್ನಿ : ಪೃಥ್ವೀಕಾಯ, ಅಪ್‌ಕಾಯ, ತೇಜಸ್ಕಾಯ, ವಾಯುಕಾಯ, ವನಸ್ಪತಿಕಾಯ ಎಂದು ಸ್ಥಾವರಗಳಲ್ಲಿ ಐದು ಪ್ರಕಾರಗಳು (ಜೈನಧ. ೩೦). [ ಸಂ. ]

**ತೇಜಸ್ತತ್ತ್ವ** (ನಾ). [ಜ್ಯೋತಿ] ದಿನದ ಕಾಲಮಾನದ ಒಂದು ಭಾಗ : ದಿನದ ಕಾಲಮಾನವನ್ನು ಪಂಚತತ್ತ್ವಗಳನ್ನಾಗಿ ವಿಂಗಡಿಸುವಾಗ ತೇಜಸ್ಸಿನ ಭಾಗಕ್ಕೆ ಬರುವ ಕಾಲ : ದೂರಪ್ರಯಾಣಕ್ಕೆ ಚಂದ್ರಸ್ವರ ಸಮೀಪಪ್ರಯಾಣಕ್ಕೆ ಸೂರ್ಯಸ್ವರ ಚಿರಕಾಲಪ್ರಯಾಣಕ್ಕೆ ಅಪ್ತತ್ತ್ವ ಕ್ಷಿಪ್ರ ಪ್ರಯಾಣಕ್ಕೆ ತೇಜಸ್ತತ್ತ್ವವಿರಬೇಕೆಂಬುದು ಮೊದಲಾದುವುಗಳಂ ತಿಳಿದು (ವಿವೇಕ. ೦೪೩). [ ಸಂ. ]

**ತೇಜಸ್ಪತಿ** (ನಾ). ತೇಜಸ್ಸಿನ ಒಡೆಯ; ಸೂರ್ಯ: ರಾಜಪುತ್ರಾಪನುಪಮಿತ ತೇಜಸ್ಪತಿ ಖಚರರಾಜಂ (ಶಾಂತಿಪು. ೩-೩೩). [ ಸಂ. ]

**ತೇಜಸ್ವಾಮ್ಯ** (ನಾ). ಅಷ್ಟಭೋಗಗಳೊಂದಿಗೆ ಕೂಡಿದ ಭೂಮಿಯ ಒಡೆತನ,-ಸಂಪೂರ್ಣ ಒಡೆತನ : ಅಷ್ಟಭೋಗ ತೇಜಸ್ವಾಮ್ಯವನೂ ಸೂಖದಿಂ ಬೋಗಿಸಿ ಬಹಿರಿ (ಮೈಆರಿ. ೧೯೪೦, ೨೮-೨೫ ; 1509) ; ಈ ಭೂಮಿಯೊಳ್ಳಿಯಾದೊಡಾ ಸುಂಕಂ ದಂಡಂ ತೇಜಸ್ವಾಮ್ಯಂ ಮೊದಲಾಗೆ ಮತ್ತಂ ತೇಜಮೆನಿಸಿದವೆಲ್ಲಂ ದೇವರ ಸೊಮ್ಮಾಗಿ ಸರ್ವಬಾಧಾಪರಿಹಾರಂ ಮಾಡಿದೆರ್ (ಎಕ. XII, ೨೮೪--೨೫೫ ; 1877). 'ಅಷ್ಟಭೋಗ' ಪರಾ. [ <ಸಂ. ತೇಜಸ್ಸ್ವಾಮ್ಯ ]

**ತೇಜಸ್ವಿ** (ನಾ). ೧. ಕಾಂತಿಯುಳ್ಳವನು: ಅಂಜದರಾರ್ ಮುಟ್ಟುವಲ್ಲಿ ತೇಜಸ್ವಿಗಳಂ (ಪುಷ್ಪಪು. ೧೦-೧೮) ; ವಾಲ್ಮೀಕಿ ತಾಂ ನಡೆತಂದನ್ . . . ತೇಜಸ್ವಿ, ತರುಣಂ, ತಪೋವಲ್ಕಲವಸ್ತ್ರಶೋಭಿ (ಶ್ರೀರಾಮಾ. ೦-೩). ೨. ಪ್ರಭಾವಶಾಲಿ ; ಸಮರ್ಥ : ರಾಜಮಕಿಯುಕ್ಕುಮಲ್ಲದೆ ರಾಜನ್ವತಿಯಾಗದಲ್ತೆ ಧರೆ ಮತ್ತೂರ್ವಂ ತೇಜಸ್ವಿ ಪೊದರ್ಪೊಡದಱಿಂ ರಾಜನ್ವತಿ ಮಾಡು ಧರಣಿಯಂ (ಆದಿಪು. ೧೪-೨೦) ; ಎನ್ನ ಪಕ್ಕದೆ ತೇಜಸ್ವಿಯನಂತಾಡಿದನಾ ಕಳಶಯೋನಿ (ಗದಾಯು. ೨-೦೯). ೩. ಒಂದು ಬಗೆಯ ಸಸ್ಯ ; ತುರಂಮೆಗಿಡ; ಕಾಸಂಗಿ: "ತುಱುವೆ ತೇಜಸ್ವಿ ಕಾಸಂಗಿಯಕ್ಕು" (ಮುಂಗರಾ ೩೯-೨೭). [ ಸಂ. ತೇಜಸ್ವಿನ್ ]

**ತೇಜಸ್ಸು** (ನಾ). ೧. ಹೊಳಪು ; ಪ್ರಕಾಶ ; ಕಾಂತಿ : ವಿಕಲ್ಪಾರ್ಥದಿಂ ಸಕಾರಾಂತದಲ್ಲಿ–ಯಶ, ಯಶಸ್ಸು; ತೇಜ, ತೇಜಸ್ಸು (ಶಮದ. ೮೭ ಪ್ರಯೋ); ತೇಜಸ್ಸುಮಗ್ರು ನೀನು (ವೀಶ್ವಪು. ೩-೦೯-೨೭) ; ಮೂರ್ತಿ ಸಣ್ಣದಾದರೂ ನೀತ ಆ ನಿಲುವಿನಲ್ಲಿ ಒಂದು ತೇಜಸ್ಸಿತ್ತು (ಹೊಸಕ್ಷ. ೩೩). ೨. ಬೆಂಕಿ ; ಅಗ್ನಿ : ಮತ್ತಂ ತೇಜೋಂಶಮರ್ಧಮುಂ ಮಿಕ್ಕ ನಾಲ್ಕುಂ ಭೂತಂಗಳಷ್ಟಮಾಂಶಂಗಳ್ ನಾಲ್ಕುಂ ಕೂಡಿ ತೇಜಸ್ಸೆನಿಕ್ಕುಂ (ಚಕಲಿ. ೨೭); ಪೃಥ್ವಿ ಜಲ ತೇಜಸ್ಸು ವಾಯು ಮನಸ್ಸು ಎಂಬ ಐದು ದ್ರವ್ಯಗಳು ಪುದ್ಗಲದಲ್ಲಿ ಸೇರಿದವು (ಹಿಂದಸಾ. ೮೦) ; ಪ್ರಪಂಚವು ಪೃಥಿವೀ, ಉದಕ, ತೇಜಸ್ಸು ಮತ್ತು ವಾಯುಗಳೆಂಬ ನಾಲ್ಕು ತತ್ತ್ವಗಳನ್ನು ಉಳ್ಳದು (ಧಾತತ್ತ್ವ. ೦೮೩). ೩. ಪರಾಕ್ರಮ ; ಶೌರ್ಯ: ಕೌರವರಲ್ಲಿ ತೇಜಸ್ಸನ್ನು ತೋರಿಸುವುದಕ್ಕೆ ಕಾಲವೆಂದು ನಾನು ತಿಳಿದಿದ್ದೇನೆ (ವಚಭಾ. ೧೦೯). ೪. ಗೌರವ ; ಮರ್ಯಾದೆ. 'ತೇಜೋಭಂಗ', 'ತೇಜೋವಧೆ' ಪರಾ.

ತೇಜಸ್ಸಿನ ಸ್ವರ = ಪಂಚಭೂತಗಳಲ್ಲಿ ಒಂದಾದ ತೇಜಸ್ಸಿಗೆ ಸಂಬಂಧಿಸಿದ ನಾಳದಿಂದ ಹೊರಡುವ ಸ್ವರ ; ಪಂಚಸ್ವರಸಂಜ್ಞೆಗಳಲ್ಲಿ

ಒಂದಂ: ಒಂದೊಂದು ನಾಳದಲ್ಲಿ ಪೃಥ್ವೀಸ್ವರ ಅಪ್ಪುಸ್ವರ ತೇಜಸ್ಸಿನ ಸ್ವರ ವಾಯುವಿನ ಸ್ವರ ಆಕಾಶಸ್ವರ ಇಂತೀ ಪಂಚಸ್ವರಸಂಜ್ಞೆಯಂ ತಾಳಿ (ವಿವೇಕ. ೦೮೭). [ ಸಂ. ತೇಜಸ್ ]

**ತೇಜಿ$_1$** (ನಾ). ಕುದುರೆ ; ಅಶ್ವ : ಕಾಯವೆಂಬ ಪಟ್ಟಣದೊಳಗೆ . . . ವಶೀಕರಣವೆಂಬ ಸೇನಬೋವ ಸಂಚಲವೆಂಬ ತೇಜಿ ಅಷ್ಟಮದವೆಂಬ ಆನೆ (ಚನ್ನವ. ಕ. ೪೪೪-೪೯೨) ; ತೇಜಿಯ ತಿರುಹಿದನು ಶಲ್ಯ (ಕುಮ್ವ್ಯಾಸ. ೧೩-೪೮) ; ಬಿಳಿಯ ತೇಜಿಯ ಹೇಮರಥವನು ಸುಳಿಸಿದನು (ಕೌಶಿಕಾ. ೨೬-೨) ; ಊರ್ಗೆ ಮರಳುವ ತೇಜಿಗಳ ಸಾಲ್ಗಳಾ ಮಧ್ಯಮಾರ್ಗದೊಳ್ತವೆ ತೀವಿ ಸಂದಣಿಸುತಿವೆ (ಕೃಮಿಥಾ. ೩-೪೦) ; ಪಲಾಯನ ತೇಜಿಯನ್ನೇರಲ್ಕೆ ತವಕಿಸಿತು ಜೀವವಾ ಜಾನಕೀಜೀವಿತೇಶ್ವರಗೆ ! (ಶ್ರೀರಾಮಾ. ೨೬೫-೫೨) ; ಕಪಿಲವರ್ಣದ ಮೂರು ತೇಜಿಗಳನ್ನು ಸಂಪಾದಿಸಿದ್ದಾನೆ (ಪುನರು. ೨೬೩).
[ ←ಮರಾ. ತೇಜೀ, ತೇಜಿಕಾ ; ಪಾರ. ಹಿಂ. ತಾಜೀ ]

**ತೇಜಿ$_2$** 'ತೇಜ$_2$' ನೋ.

**ತೇಜಿತ** (ಗು). ೧. ಹರಿತ ಮಾಡಿದ ; ಮಸೆದ ; ಮೆರುಗು ಕೊಟ್ಟ. (ನಾ). ೨. ಮಸೆದಂದಂ ; ಹರಿತವಾದಂದಂ : "ನಿಶಾತಂ, ನಿಶಿತಂ, ಧೌತಂ, ತೇಜಿತಂ – ಈ ೪ ಮಸೆದುದು" (ಹಲಾಯು. ೬೮-೩೨೦).
[ ಸಂ. ]

**ತೇಜಿಮಂದಿ** 'ತೇಜೀಮಂದಿ' ನೋ.

**ತೇಜಿವಾರು** (ನಾ). ಕುದುರೆಗೆ ಕಟ್ಟುವ ಚರ್ಮದ ಬಾರಂ,–ಪಟ್ಟಿ : ಪೊನ್ನ ಪಲ್ಲಣಂ ಪಕ್ಕರೆ ತೇಜಿವಾರು ಕಟಿದಿರ್ಕಡಿಯಾದುವು (ಕಬ್ಬಿಗಕಾ. ೨೮೦). [ ತೇಜಿ$_1$ + ಬಾರು$_1$ (<ಬಾರ್$_4$) ]

**ತೇಜಿವಿಂಡು** (ನಾ). ಕುದುರೆಗಳ ಸಮೂಹ ; ಅಶ್ವಸೈನ್ಯ : ಇತ್ತರದಲಿ ತಳ್ವರ್ಪಡೆದಿರ್ದ ಮಾಮರ ಮತ್ತೇಭ ಗಿರಿ ತೇಜಿವಿಂಡು ವೃತ್ತ ವಿಹಂಗಂ ಚಕೋರ ಕಾಲಾಳ ಳ ಮೊತ್ತದಿ ನಡೆದನಳ್ತಿಯಲಿ (ಮೋಹತ. ೩-೦೯).
[ ತೇಜಿ$_1$ + ಪಿಂಡು$_2$ ]

**ತೇಜಿಷ್ಠ** (ನಾ). ೧. ಕಾಂತಿಯಂತನಾದವನಂ ; ತೇಜಸ್ವಿ : ಬಹಳ ಮನ್ನಣೆಯ ತೇಜಿಷ್ಠಗಣವಿರ್ದುದೇವೊಗಳ್ವೆನು (ಸಿದ್ಧ ರಾ. ೦-೦೮). ೨. ಅಧಿಕನಾದವನಂ ; ಶ್ರೇಷ್ಠ : ಶೌರ್ಯನಿಕುರುಂಬದೊಳ್ ತೇಜಿಷ್ಠವರ್ಜುನಂ (ಕುರಂಗ. ೮೦-೬). ೩. ಕೋಪಿಷ್ಠ ; ದಂಡುಕಂಪವನಂ: ಮಳಯಕೇತುವೆಂಬ ರಾಜತನೂಜನತಿತೇಜಿಷ್ಠನಾಗಿ ತನ್ನ ಮಂತ್ರಿ ಮುದ್ರಾರಾಕ್ಷಸಂಗೆ ತಥ್ಯಾಭಿಯೋಗಮಾಡೊಡು ಮಿಥ್ಯಾಭಿಯೋಗಮೆಂದು ನಿಶ್ಚೈಸಿ (ಪಂಚತಂ. ೨೪೮-೦೭). [ ಸಂ. ]

**ತೇಜೀಮಂದಿ, ತೇಜಿಮಂದಿ** (ನಾ). ೧. ಮಾರುಕಟ್ಟೆಯಲ್ಲಿ ಸರಕಿನ ಬೆಲೆ ಹೆಚ್ಚು ಅಥವಾ ಕಡಮೆಯಾಗುವುದಂ ; ಬೆಲೆಗಳ ಏರಿಳಿತ : ವಿಶ್ವಾಸನಿಗೆ ತೇಜೀಮಂದಿಯ ಅರ್ಥವಾಗಲಿಲ್ಲ (ದೀಪಹ. I. ೯೭). ೨. ವಾಣಿಜ್ಯೋದ್ಯಮಂಗಳಲ್ಲಿ ಶೇರುಗಳನ್ನು ಕೊಂಡು ಮಾರಂವುದಂ. ೩. ತುರಂಗವನ್ನು ಕೊಂಡಂ ಆಡಂವ ಒಂದಂ ಬಗೆಯ ಜೂಜಂ : ಅವನು ತೇಜೀಮಂದಿಯಲ್ಲಿ ಆಡುತ್ತಿದ್ದನೆಂದು ಹಲವರು ಊಹಿಸಿದ್ದರು. ಆದರೆ ಆ ಆಟಗಾರರಲ್ಲಿ ಇವನು ಅಪರಿಚಿತನಾಗಿದ್ದನು (ರಕ್ತಾಕ್ಷ. ೪೪). **ತೇಜಿಮಂದಿ:** ೧. ಇಂಗ್ರೆಜಿ ಪತ್ರವ್ಯವಹಾರವನ್ನಿಟ್ಟು ತೇಜಿಮಂದಿಯ ತಾರುಗಳನ್ನು ಮಾಡುವುದು (ಮುಂಬಯಿ. ೨೭೯). [ ← ಮರಾ. ತೇಜೀಮಂದೀ ]

**ತೇಜೋಜೀವಿ** (ನಾ). ೧. ಕಾಂತಿಯುಳ್ಳವನು. ೨. ಆಧ್ಯಾತ್ಮಿಕ ಕಾಂತಿಯುಳ್ಳವನು : ಋಷಿಯೂ ಭಕ್ತನಂತೆ ತೇಜೋಜೀವಿ (ಸಾಹಿವಿ. ೩೪) ; ಇಂದ್ರಿಯಜೀವಿಯದು ಪ್ರಾಣಾನುಭವ ; ಭಾವಜೀವಿಯದು ಕಾವ್ಯಾನುಭವ ; ತೇಜೋಜೀವಿಯದು ಶಿವಾನುಭವ (ಸಾಸಮಾ. ೩೯).
[ ಸಂ. ತೇಜೋಜೀವಿನ್ ]

**ತೇಜೋತಿಶಯ** (ನಾ). ಅಧಿಕವಾದ ತೇಜಸ್ಸು,– ಕಾಂತಿ : ಜಾತಪ್ರಿಯನಾತಂ ತನುಜಾತನೆ ತಾನಾಗೆ ತನ್ನ ಕಣ್ಗಂ ಮನಕಂ ಜಾತಕುತೂಹಲನಾ ತೇಜೋತಿಶಯಮನರಸನಚಲದೆಂಕಿರೆ ನೋಟ್ಟಂ (ಅಜಿಪು. ೩-೫೩). [ಸಂ.]

**ತೇಜೋದ್ವಯ** (ನಾ). (ಬ್ರಾಹ್ಮತೇಜ ಮತ್ತು ಕ್ಷಾತ್ರತೇಜಗಳೆಂಬ) ಎರಡಂ ಬಗೆಯ ಶಕ್ತಿ,– ಸಾಮರ್ಥ್ಯ : ನೀವಿರಲು ಕೃಪನಿರಲು ದಳವಾಯ್ ನಾವಹೆವೆ ನೀವೆಂದು ತೇಜೋದ್ವಯದಲಧಿಕರೆ ನಾವು ತೆಜುವಾಯವರು (ಕುಮ್ವ್ಯಾಸ. ೦-೨೦). [ ಸಂ. ]

**ತೇಜೋನಿಧಿ** (ನಾ). ೧. ಕಾಂತಿಯ ನಿಧಿ,–ಆಗರ. ೨. ಸಾಮರ್ಥ್ಯದ ನಿಧಿ. ೧, ೨ : ತೇಜೋನಿಧಿ ಕರಹತ ಪರರಾಜಕ ನವನೋಪದಿಗ್ವಯಂ . . . ಉಪಚಿತ ತೇಜಸ್ಸತಿ ಖಚರರಾಜಂ (ಶಾಂತಿಪು. ೩-೫೩) ; ವೀರ ವೈರಾಗ್ಯದ ತೇಜೋನಿಧಿ ಅಕ್ಕ (ಕರ್ನಾಕ. ೭೩). [ ಸಂ. ]

**ತೇಜೋನಿಳಯ** (ನಾ). ಕಾಂತಿಗೆ ನೆಲೆಯಾದವನಂ ; ತೇಜಸ್ವಿ : ಅಮರೇಜ್ಯಂ ಕುಜಗೇಹದೊಳ್ ನಿರೆ . . . ಕ್ಷಮಿ ತೇಜೋನಿಳಯಂ . . . ಗುಣಾತ್ಮನೆನಿಕುಂ (ಜಾತಕಿ. ೦೭-೨೬). [ ಸಂ. ತೇಜೋನಿಲಯ ]

**ತೇಜೋಪಾರ್ಜನೆ** (ನಾ). ಒಡೆತನದ ಭೂಮಿಯಿಂದಾದ ಗಳಿಕೆ : ಈ ಗ್ರಾಮದ ಸ್ಥಳ ಸುಂಕಕೆ ಸಲುವ ಏನುಂಟಾದ ತೇಜೋಪಾರ್ಜನೆಯನು ನಾನು ಶ್ರೀವಿಟಲದೇವರಿಗೆ ಸರ್ವಮಾ(ಂ)ನ್ಯವಾಗಿ ಸಮರ್ಪಿಸ್ತೆನೂ (ಸೌಇಇ. IX-II, ೬೦೭-೨; 1545). [ ಸಂ. ತೇಜೋಪಾರ್ಜನ ]

**ತೇಜೋಭಂಗ** (ನಾ). ಗೌರವದ ಹಾನಿ; ಅಭಿಮಾನಕ್ಕೆ ಬೀಳುವ ಪೆಟ್ಟು; ಅವಮಾನ : ಹೊಗೆ ಬಿಡುತ್ತಿರುವ ಜ್ವಾಲಾಮುಖಿಯಂತೆ ವಿಷ್ಣು ತೇಜೋಭಂಗವನ್ನು ಸಹಿಸುತ್ತ ಕುಳಿತ (ಸಮಜೀ. ೭೦೭). [ ಸಂ. ]

**ತೇಜೋಭಿಮಾನ** (ನಾ). ಆತ್ಮಗೌರವದಲ್ಲಿ ವಿಶ್ವಾಸ : ಆನತರ ತೇಜೋಭಿಮಾನವ ನೀನೊಲಿದು ಸಲಹೆಂದು ಮುದದಲಿ ಭಾನುಮತಿ ಮೈಯಿಕ್ಕಿದಳು ಮುರಹರನ ಚರಣದಲಿ (ಕುಮ್ವ್ಯಾಉ. ೨-೦೭). [ ಸಂ. ]

**ತೇಜೋಭಿರಾಮ** (ನಾ). ಪರಾಕ್ರಮದಿಂದ ಶೋಭಿಸುವವನಂ : ಒಲ್ದೀಕ್ಷಿಸಿದಂ ನಿಜಾಗ್ರುಭವನಂ ದೈತ್ಯಾರಿ ತೇಜೋಭಿರಾಮನನುಗ್ರಾರಿವಿರಾಮನಂ (ಜಗವಿ. ೪-೫೦). [ ಸಂ. ]

**ತೇಜೋಮಂಡಳ** (ನಾ). ಬೆಳಕಿನ ಮಂಡಲ ; ಕಾಂತಿಯ ವಲಯ : ಬಳೆವಾ ನೃಪತೇಜೋಮಂಡಳಕ್ಕೆ ಕಣ್ಣಾಳ್ಕೆ ವಿನಯಮವಿನಮಿತನವನೀತಳದೊಳೆ ಮಯ್ಯಿಕ್ಕೆ (ಶಾಂತಿಪು. ೩-೩೧). [ ಸಂ. ತೇಜೋಮಂಡಲ ]

**ತೇಜೋರಾಶಿ** (ನಾ). ತೇಜಸ್ಸಿನ ರಾಶಿ ; ಬೆಳಕಿನ ಪುಂಜ : ಮತ್ತಮಾ ಪರಮಕ್ಷತ್ರ ತೇಜೋರಾಶಿಗೆ (ಶಾಂತಿಪು. ೯-೧೫೨ ವ); ವಿಪರೀತವಾದ ನಕ್ಷತ್ರರಾಶಿ ಒಂದೆಡೆ ನೆರೆಸಿ ಸುಳಿ ಸುತ್ತುವಂತೆ ಸುತ್ತುತ್ತಿದ್ದರೆ ನಾವು "ತೇಜೋರಾಶಿ" ಎನ್ನುತ್ತೇವೆ (ಆಕಾಕ. ೬೩) ; ವ್ಯಾಧಖಡ್ಗದ ಮಧ್ಯತಾರೆಯನ್ನು ದೂರದರ್ಶನಿಯಿಂದ ನೋಡಿದರೆ ಅದು ಒಂದು ವಿಶಾಲಾಕಾರದ ತೇಜೋರಾಶಿಯಾಗಿ ಹರಡುವುದು ಕಾಣುತ್ತದೆ (ನಕ್ಷತ್ರ. ೫). [ ಸಂ. ]

**ತೇಜೋಲಿಂಗ** (ನಾ). ಈಶ್ವರನ ಐದು ಲಿಂಗಸ್ವರೂಪಗಳಲ್ಲಿ ಒಂದಂ ; ಅಗ್ನಿಸ್ವರೂಪವಾದ ಲಿಂಗ : ಕಾಂಚೀಪುರದಲ್ಲಿ ಪಾರ್ಥಿವಲಿಂಗ, ಜಂಬೂಕ್ಷೇತ್ರದಲ್ಲಿ ಅಪ್ಪಲಿಂಗ, ತಿರುವಣ್ಣಾಮಲೆಯಲ್ಲಿ ತೇಜೋಲಿಂಗ, ಕಾಳಹಸ್ತಿಯಲ್ಲಿ ವಾಯುಲಿಂಗ, ಚಿದಂಬರದಲ್ಲಿ ಆಕಾಶಲಿಂಗ – ಹೀಗೆ ವಿಶ್ವದಲ್ಲಿ ಕಾಣುವ ಪಂಚಭೂತಗಳ ರೂಪದಲ್ಲಿಯೂ ಪರಮಾತ್ಮನು ಸಾದಾಖ್ಯಗಳೆನಿಸಿ ವಿರಾಜಿಸುತ್ತಿರುವುದನ್ನು ನಾವು ಸ್ಪಷ್ಟವಾಗಿ ಕಾಣುತ್ತೇವೆ (ಶಕ್ತಿವಿ. ೨೬) : ತೇಜೋಲಿಂಗವೆಂದರೆ ಪ್ರಕಾಶವೇ ಲಿಂಗವಾಗಿಯೂ . . . ಆಕಾಶಲಿಂಗವೆಂದರೆ ಬಯಲೇ ಲಿಂಗವಾಗಿಯೂ ಹಿಂದೆ ತಿಳಿಸಿದ ಕ್ಷೇತ್ರಗಳಲ್ಲಿ ಈಗಲೂ ಕಾಣುತ್ತಿವೆ (ಶಕ್ತಿವಿ. ೩೦). 'ಜ್ಯೋತಿರ್ಲಿಂಗ' ಪರಾ. [ ಸಂ. ]

**ತೇಜೋವಧೆ** (ನಾ). ಅವಮಾನ ; ಮಾನಹಾನಿ: ಆದೊಡಾ ಕರ್ಣಂಗೆ ಸಾರಥಿಯಾದಿರಾದೊಡೆ ಸಮರಮುಖದಲಿ ಪಾದ ತೇಜೋವಧೆಯ ಮಾಡುವುದವಸನವಗಡಿಸಿ (ಕುಮ್ಮಾಉ. ೨-೦೭) ; ದ್ರುಪದನಿಗೆ ತೇಜೋವಧೆಯಾಯಿತು (ವಚಭಾ. ೪೯) ; ವೀರಾಜಯ್ಯನಿಗೆ ತೇಜೋವಧೆಯಾಯಿತು (ಒಡೆಳ. ೦೩). [ ಸಂ. ತೇಜೋವಧ ]

**ತೇಜೋವೃತ್ತಿ** (ನಾ). ಹೊಳಪುಂಟಾಗುವಿಕೆ ; ಕಾಂತಿಗೂಡುವಿಕೆ : ಖರಶಾಣಕಷಣದಿಂ ಮಣಿಗುರುತೇಜೋವೃತ್ತಿ ನೆಗಬ್ಬಪೋಲಕ್ಕುಂ ನಿಷ್ಕೃರವಾಕ್ಯಪಾಣ ಪರಿಸ್ಫುರಿತಂ ಕೃತಿರತ್ನದೊಳ್ ಸಮುಜ್ವಲಭಾವಂ (ಚಂದ್ರಪು. ೧-೪೪). [ ಸಂ. ]

**ತೇಟ್** 'ಥೇಟ್' ನೋ.

**ತೇಟಗೀತೆ** (ನಾ). [ಛಂದ] ಒಂದು ಬಗೆಯ ದೇಶೀಯ ಛಂದೋರಚನೆ ; ಅಂಶಗಣದಿಂದಾಗುವ ಪದ್ಯ: ತೇಟಗೀತೆ ಒಂದು ಬ್ರಹ್ಮ, ಎರಡು ವಿಷ್ಣು, ಎರಡು ಬ್ರಹ್ಮ–ನಾಲ್ಕು ಸಲ (ಕೃಶಿಡಿ. ೦೩೨).

[ ← ತೆಲು. ತೇಟಗೀತಿ ]

**ತೇಟಗ** (ನಾ). (ಸಾಣೆ ಹಿಡಿದು) ಹೊಳಪುಗೊಳಿಸುವವನು ; ಒಪ್ಪಹಾಕುವವನು : ಸಾಣೆಯ ಮೇಲೆ ರತ್ನಗಳಿಟ್ಟು ಮಸೆದೊಪ್ಪಗಾಣಿಸಿ ಕುಡುವ ತೇಟಗರು (ಪುೋಹತ. ೩-೨೬). [ ತೇಟು (<ಥೇಟ್) + – ಇಗ ]

**ತೇಟು**, 'ಥೇಟ್' ನೋ.

**ತೇಡಿಸು** (ಕ್ರಿ). (ಶಿವಿದು) ಹೀಯಾಳಿಸು ; ರೇಗಿಸು ; ಚುಡಾಯಿಸು : ಸುರ್‌ಸುರ್ವವ ಮುಟ್ಟದರು ಧೌತಾಂಶುಕದೊಳಗೆ ತಂಬುಲವ ಕಟ್ಟಿದ ರಕಟು ಪಾಥ್ಕರ ಮೋಟಿಯನು ತೇಡಿಸುತ ಬೆರಳಿನಲಿ (ಕುಮ್ಮಾಉ. ೦೮-೮). 'ಏಡಿಸು' ಪರಾ. [ < ಥೇಡಿಸು ]

**ತೇದಿ** (ನಾ). (ಸೌರಮಾನದ) ದಿನಾಂಕ ; ತಾರೀಖು : ಪ್ರಜೋತ್ಪತ್ತಿ ಸಂವತ್ಸರದ ತುಲಾಮಾಸ ೨೬ನೇ ತೇದಿ ಷಷ್ಠಿಯೂ ಸೋಮವಾರ (ಮ್ಯಆರಿ. ೦೯೩೫, ೨೮-೦೨ ; 1751) ; ಕಾಂಗ್ರೆಸ್ ಅಧಿವೇಶನವು ಜನವರಿ ಇಪ್ಪತ್ತಾರನೇ ತೇದಿಯನ್ನು ಸ್ವಾತಂತ್ರ್ಯದಿನವಾಗಿ ಆಚರಿಸಬೇಕೆಂದು ದೇಶಕ್ಕೆ ಕರೆ ನೀಡಿತ್ತು (ಆತ್ಮಾಕ. ೦೩೭) ; ಅಥರ್ವವೇದ ಪರಿಷ್ಕರಣದಲ್ಲಿ ಮುಹೂರ್ತಗಳು ಚಂದ್ರನ ತೇದಿಗಳು, ಕರಣಗಳು ಮತ್ತು ಯೋಗಗಳು ಇದ್ದು ವಾರದ ದಿವಸಗಳು ತಿಳಿಸಲ್ಪಟ್ಟಿವೆ (ತತ್ತ್ವಪ್ರಾ. ೪೮೩).

[ದೇ.॥ ತಮಿ. ತೇತಿ; ತುಳು. ತೆಲು. ತೇದಿ ]

**ತೇದಿರೇಖೆ** (ನಾ). ದಿನದ ಗೊತ್ತುಪಾಡಿಗೆ ಸಂಬಂಧಿಸಿದ ಒಂದು ಸಂಕೇತ,-ಗುರುತು ; P ಶಾಂತಸಾಗರದಲ್ಲಿರುವುದೆಂದು ಭಾವಿಸಲಾಗಿರುವ ಗ್ರಿನಿಚ್ ಪಟ್ಟಣದಿಂದ ೧೮೦ನೆಯ ಡಿಗ್ರಿಯ ಮಧ್ಯಾಹ್ನರೇಖೆ ; ಈ ಗುರಿರೇಖೆಯಲ್ಲೂ ಇತರ ಎಲ್ಲಾ ಪ್ರದೇಶಗಳಲ್ಲೂ ಪಂಚಾಂಗದ ದಿನದ ಆರಂಭಾಂತ್ಯಗಳು ಮಧ್ಯರಾತ್ರಿಯಿಂದ ಮಧ್ಯರಾತ್ರಿಯವರೆಗೆಂದು ಎಣಿಸಲಾಗಿದೆ. ದಿನದ ಆರಂಭಾಂತ್ಯಗಳ ಸಮಯ ವ್ಯತ್ಯಾಸ ಹೊಂದುವುದರಿಂದ ಈ ರೇಖೆಯ ಪೂರ್ವಕ್ಕೂ ಮತ್ತು ಪಶ್ಚಿಮಕ್ಕೂ ಒಂದು ದಿನದ ಅಂತರವುಂಟಾಗುತ್ತದೆ. ಈ ಸಂಕೇತಕ್ಕೆ ಎಲ್ಲಾ ರಾಷ್ಟ್ರಗಳೂ ಸಮ್ಮತಿಸಿವೆ: "ತೇದಿಗಳಿಗೆ ಸಂಬಂಧಪಟ್ಟ ರೇಖೆ : ತೇದಿರೇಟ್" (Date-Line. ಇಂಕಿನಿ). [ ತೇದಿ + ರೇಖೆ ]

**ತೇದಿಸು** (ಕ್ರಿ). ಕಾಲಕ್ರಮವನ್ನು ನಿರ್ಧರಿಸು ; ತಾರೀಖನ್ನು ನಿರ್ಣಯಿಸು : ಕಳಚುರ್ಯ ಬಿಜ್ಜಳನೇ ಬಸವೇಶ್ವರನ ಬಿಜ್ಜಳನೆಂದು ನಿಷ್ಪನ್ನವಾಗುವುದರಿಂದ, ಇನ್ನು ಬಸವೇಶ್ವರನ ಜೀವಮಾನದಲ್ಲಿಯ ವಿಶೇಷ ಘಟನೆಗಳನ್ನು ಹೀಗೆ ತೇದಿಸಬಹುದು (ಮೂರುಉ. ೮೭).

[ ತೇದಿ + – ಸು₁ ]

**ತೇನಂದಾಳಗೇಟಿ³** 'ತೆನಂದಾಳಕೇಟಿ³' ನೋ.

**ತೇನತೇನ** 'ತೇನತೇನಂ' ನೋ.

**ತೇನತೇನಂ, ತೇನತೇನ** (ಅ). ಹೆಚ್ಚು ಹೆಚ್ಚಾಗಿ : ಮೇಲಿಂದ ಮೇಲೆ : "ತೇನತೇನಂ = ಮೇಲೆವೇಲೆ" (ಕಮಿದ. ಶಿರಿ. ೨) ; ತರವೇಟಿಯೊಡಂ ಸುರರೊರ್ವರೊರ್ವರಂ ಕಟಿಯೆ ತೇನತೇನಂ ತಳರ್ದು೦ ಭರದಿಂ ನೀರಂ ಮೊಗೆದುಂ ಪರಿತಂದರ್ ಕನಕಕಳಶವಿಶದೋದಕಮಂ (ಶಾಂತಿಪು. ೧೧-೩೯) ; ಇದು ಚಿತ್ರಂ ತೇನತೇನಂ ನೆಗೆದುದು (ಜಗವಿ. ೮-೬೦) ; ಅಂತು ಕೈಕೊಳ್ಳದೆ ಬೆಂಬತ್ತಿ ತೇನತೇನಂ ಮುಸಗಿ ಸಂದಣಿಸಿ ಬರ್ಪ ಸೊರ್ಕಾನೆಗಳ್ (ಕಬ್ಬಿಕಾ. ೨೮೪) : **ತೇನತೇನ** : "ತೇನತೇನಮೆಂದು ಮೇಲೆಮೇಲೆಂಬರ್ಥಂ" (ಕಶಸಾ. ೭೧-೬೦೯) ; "ಮೇಲೆಮೇಲೆಂಬರ್ಥಮುಂ ತೇನತೇನಮೆನಲ್" (ಕಬ್ಬಿಕ್ಕೆ. ೮೯) ; ನವೀನ ನಾಟಕಶಾಲೆಯಲ್ಲಿ ತೇನತೇನದೊಳು ಲೀಲೆಯ ತೋಜಿ (ಭರತ. ೩೮-೩೨). [ ? ]

**ತೇನು** 'ಜೇನ್ನ್₁' ನೋ.

**ತೇನೆ** (ನಾ). ಒಂದು ಬಗೆಯ ಪಕ್ಷಿ: ಪಾರಿಜಾತದ ರೆಂಬೆಯೊಂದರ ಮೇಲೆ ಕುಳಿತ ತೇನೆ ಹಾಡೊಂದ ಹಾಡುತ್ತಿತ್ತು (ಹೇಮುಕೊ. ೩೧) ; ಆಗಾಗ ತೇನೆ, ಕಾಜಾಣ, ಗಿಳಿ . . . ಮಲೆವಕ್ಕಿಗಳ ಉಲ್ಲೇಖ ಬರುತ್ತಿದೆ (ಸಾಸಮೂ. ೯೪). [ ದೇ.॥ ತೆಲು. ತೇನೆಪಿಟ್ಟ ]

**ತೇನೆಹಕ್ಕಿ** (ನಾ). = ತೇನೆ : ತೇನೆಹಕ್ಕಿಗಳ ಹಾಡನ್ನೂ ಕಪ್ಪೆಗಳ ವಟವಟ ಧ್ವನಿಯನ್ನೂ ಕೇಳಿದಾಗ . . . ಮಂಗಳ ಸಂಗೀತದ ನೆನಪಾಯಿತು (ಪುನರು. ೨೬೭); ತೇನೆಹಕ್ಕಿಯೊಂದು ವಾಣಿ ಕೇಳುತ್ತಿತ್ತು (ಅನಿಕೇ. ೯೩-೫).

[ ತೇನೆ + ಹಕ್ಕಿ₁ (<ಪಕ್ಕಿ₁) ]

**ತೇಪಾಡು** (ಕ್ರಿ). ತುಂಬಿ ಸೂಸು ; ತುಳುಕು : ದೊಡ್ಡದೊಂದು ಕರೆ ... ತುಂಬಿ ತೇಪಾಡುತ್ತಿರುತ್ತದೆ (ನನ್ನೂರು. ೩). [ ತೇಪು + ಆಡು₁ ]

**ತೇಪು, ಚೇಪು₁** (ಕ್ರಿ). ೧. ಎರಚು; ಚೆಲ್ಲು: ಆ ಬಟ್ಟಲು ಹಿಡಿದುಕೊಂಡು ತೋಡಿನಲ್ಲಿ ನಿಂತು ತೇಪಿದಿರಿ (ಬಾಳಿಗ. ೦೦೯). ೨. ಉಜ್ಜು ; ಶಿಕ್ಕು : ಮುಂದೆ ಅದರ ಮೈಯ ಬಾಗುವಿಕೆಯು ಅತಿ ಶುದ್ಧವಾಗುವಂತೆ ತೇಪುತ್ತಾರೆ (ದಾಲಕ್ಷ. III, ೦೪೨೮). **ಚೇಪು₁** : ೧. ವರ್ಷವೆಲ್ಲ ದಂಬೆ ನೀರಿದ್ದರೂ ನೀರಿನ ಹನಿಯನ್ನು ಅದಕ್ಕೆ ಚೇಪಿದವರಿಲ್ಲ. ಮರಗಳೆಲ್ಲ ಬಾಡಿದ್ದುವು (ಶಿದಾಉ. ೩೩೦). [ ←ತುಳು. ತೇಪು, ಚೇಪು ]

**ತೇಪೆ₁** (ನಾ). ೧. ಹರಿದುದನ್ನು ಕೂಡಿಸುವುದಕ್ಕಾಗಿ ಸೇರಿಸಿ ಹೊಲಿದ ತುಂಡು: ಉಟ್ಟ ಧೋತರ ಹಲವಾರು ತೇಪೆಗಳಿಂದ ಕೂಡಿದ್ದಿತು (ಅನಕೇ. ೦೨೭). ೨. ಹರಿದುದನ್ನು ಸರಿಪಡಿಸಿದ ಸ್ಥಿತಿ. ೩. ಬಟ್ಟೆ ಮುಂತಾದುವುಗಳ ಹರಿದ ಭಾಗಕ್ಕೆ ಬೇರೊಂದು ತುಂಡನ್ನು ಹೊಂದಿಸುವುದು. ೪. ಅಲ್ಲಲ್ಲಿ ಬಿಟ್ಟುಹೋದುದು : ಕಲಿತ ಗಿಳಿಯ ಪಾಠ ತಲೆಕೆಳಗಾಗಿ, ಸೊಟ್ಟಾಗಿ, ಚೂರಾಗಿ, ತೇಪೆಯಾಗಿ ಏನೇನೋ ಆಗಿ ಹೋಗಿ ತನ್ನ ಆಕಾರವನ್ನೇ ಕಳೆದುಕೊಂಡಿತ್ತು (ರಂಗನಾ. ೦೫).

**ತೇಪೆಹಚ್ಚು** = ೧. ಹರಿದಿರುವುದರ ಮೇಲೆ ಚೂರುಬಟ್ಟೆ ಕೂಡಿಸಿ ಹೊಲಿಗೆ ಹಾಕು : ಒಬ್ಬ ಹೆಂಗಸು, ತನ್ನ ಮತ್ತು ತನ್ನ ಮಕ್ಕಳ ಬಟ್ಟೆಗಳಿಗೆ ತೇಪೆಹಚ್ಚುವುದು ನೋಡುವುದಾಗುತ್ತಿರಲಿಲ್ಲ (ಮುಹಾತ್ಮಾ. ೨೦). ೨. ತಾತ್ಕಾಲಿಕ ದುರಸ್ತಿಮಾಡು : ಆದರ ಹರಕಮುರಕ ಛಿದ್ರಕ್ಕೆ ತೇಪೆ ಹಚ್ಚುವ ಕಾಲವಿನ್ನೂ ಸಂಪೂರ್ಣ ಕೈವಿವಾರಿ ಹೋಗಿಲ್ಲ (ಇಪ್ಪಕ. ೪೭೯).

**ತೇಪೆಹಾಕು** = ೧. ತೇಪೆಹಚ್ಚು ೧ : ಅವಳು ಬಹಳ ಒರಟಾದ ತೇಪೆ ಹಾಕಿದ್ದ ಒಂದು ಹಳೆಯ ಲಂಗವನ್ನು ಧರಿಸಿದ್ದಳು (ಮಲಿನಾ. ೯೪) ; ಹರುಕಿಗೆ ತೇಪೆಹಾಕುವುದೇ ಹೊರತು ಅದು ಬೇರೆ ಸರಿಯಾಗುವುದಿಲ್ಲ (ಬಂಕಿಮು. ೦೭೭). ೨. = ತೇಪೆಹಚ್ಚು ೨ : ಈ ಮುರುಕಲು ಮನೆಗೆ ವೃಥಾ ತೇಪೆಹಾಕಿದರೆ ಏನು ಪ್ರಯೋಜನ (ಯೋಧಪು. ೨೮).

[ ದೇ.॥ ಮಲ. ತ್ರೈಪ್ಪು = ಹೊಲಿಗೆಕೆಲಸ ]

**ತೇಪೆ₂** (ನಾ). ೧. ವೇಶ್ಯೆ; ಗಣಿಕೆ: ಪತ್ರ್ಯದರಾರೊ ಧೂರ್ತ ವಿಟಹೃತ್ಪಂತಾವೆಯ ತೇಪೆಯಂ (ಲೀಲಾವ. ೬-೯೬); ಆತ್ಮಸಾರಸರ್ವಸ್ವಮುಮಂ ನೆಱಿಗೊಂಡು ತೇಪೆ ಬರೆ ಮಂತ್ರ್ಯರು ದಂಡಂ ಕೊಂಡೊಡಲ್ಲದಂತುಂ ನಡಸಲ್ (ಪುಷ್ಪಪು. ೧೩-೩೭); ಕಥೆವೇಳ್ವ ತೇಪೆಯೊಡನಾಡಿದ ಪೆಂಡತಿಗುಂಟೆ ಸದ್ಗುನಂ (ಮಸ್ತವಿ. ೧೫-೭); ತೇಪೆಯೊಡನಿರ್ದ ಗರುವನ ಪಾಪದ ಫಲವೆಂತೋ (ನೀತಿಶಾ. ೦೦೩೦). ೨. ಚೆಲ್ಲಾಟವಾಡುವವಳು; ಆಟಗಾತಿ; ವಿನೋದಗಾತಿ: ಗಣಿಕಾಸಂದೋಹದೊಳ್ತೇಪೆಯೆ ಪುರುಷಗುಣಶ್ರೀ ಗಳಗ್ರಾಹಿಯಲ್ತೇ (ಲೀಲಾವ. ೬-೯೭). 'ತಾಪು', ತಾಪು₁' ಪರಾ. [ ? ]

**ತೇಪೆಕೆಲಸ** (ನಾ). ೧. "(ಬೇರೆ ಬೇರೆ ಬಗೆಯ ವಸ್ತ್ರ, ಬೇರೆ ಬೇರೆ ಬಣ್ಣದ ತುಂಡುಗಳನ್ನು ಸೇರಿಸಿ ಮಾಡಿದ) ತೇಪೆಕೆಲಸ" (Patch Work. ಇಂಕಿನಿ). ೨. ಅರ್ಧಂಬರ್ಧ ಮಾಡುವ ಕೆಲಸ; ಪೂರ್ಣವಾಗಿ ಮಾಡದ ಕೆಲಸ: ಅವನದೆಲ್ಲಾ ತೇಪೆಕೆಲಸವೇ (ರೂಢಿ).

[ ತೇಪೆ₁ + ಕೆಲಸ ]

**ತೇಮ** (ನಾ). ನೆನೆದಿರುವಿಕೆ; ಹಸಿ; ಒದ್ದೆ; ತೇವ: ಕಟಿತ್ಯಕುಜದಿಂದ ತೆಂಕದಿಸೆಯೊಳ್ ಕರಂ ಸಾರ್ಕವೆತ್ತ ಪುತ್ತು ದೊರೆಕೊಂಡೊಡೆ ... ಪಂಚಪುರುಷ ಪ್ರಮಾಣದೊಳೆ ತೇಟು [ ಮ ] ಮಕ್ಕುಂ (ಲೋಕೋಪ. ೫-೩೦); "ಉದಕ" (ಲೋಕೋಪ. ಟೀಕೆ). [ ಸಂ. ]

**ತೇಮಗೊಳು** (ಕ್ರಿ). ಒದ್ದೆಯಾಗು; ಹಸಿಯಾಗು; ತೇವಗೊಳ್ಳು: ಗಗನದಮೃತದ ಮೊಲೆಯ ಸೀಪುವೆಲೆಗಳ ನಡುವೆ ಮುದದಿ ಹನಿಯಾರಿಸುತ ತೇಮುಗೊಳುವಂತೆ (ಪಾಲಿಡೇ. ೩೪-೮).

[ ತೇಮ + ಕೊಳು (<ಕೊಳ್₁) ]

**ತೇಮನ** (ನಾ). ೧. ಒದ್ದೆಮಾಡುವಿಕೆ. ೨. ಒದ್ದೆ; ಹಸಿ; ತೇವ. ೩. ಒಂದು ಬಗೆಯ ವ್ಯಂಜನ,-ಪದಾರ್ಥ: "ತೇಮನಂ, ನಿಷ್ಠಾನಂ-೨ ತೇವನವೆಂಬ ಮಜ್ಜಿಗೆಪಳದ್ಯ, ಹಸೀಮಜ್ಜಿಗೆ, ಪಳದ್ಯ, ಮೊಸರುಚಟ್ನಿ" (ಸಿದ್ಧಾಂತಿ. ೨೪೬); "ತೇಮನ=ಪಳದೆ" (ಗಂಗಾಮು. ೦೫೭). [ ಸಂ. ]

**ತೇಮಳು**, ತಿಗಳಿ, ತೆಗಳಿ₁, ತೇಗಳಿ, ತೇವುಳ್, ತೇವುಳಿ, ತೇವ್ರುಳು (ನಾ). ಕೂದಲು ಉದುರುವ ಒಂದು ಬಗೆಯ ರೋಗ: "ಕೇಶಘ್ನ ಮೆನಲು ತೇಮ[ಪಾಠಾಂ. ಉ]ಳು" (ಮಂಗರಾ. ೦೦೪-೩). **ತಿಗಳಿ**: ಏನು ತಲೆ ಬಣ್ಣಸಲಿ ತಿಗಳಿ ಮೇಯುವ ಹೊಲವ? (ನಾರದೀ. ೫೩-೩); ತಿಗಳಿ ತಿಂದು ಮರುಳುಗಾಡಾದ ಅವಶೇಷಗಳನ್ನೂ ಕುಹಕಿಗಳ ಕಣ್ಣಿಗೆ ಬೀಳದಂತೆ ತನ್ನ ಎದೆಯಲ್ಲಿ ಅಡಗಿಸಿಟ್ಟು ಟೊಪ್ಪಿಗೆ ಒಡೆಯನ ಮಾನ ಕಾಯುತ್ತಿದೆ (ಗಾಳಿಪ. ೦೩೪). **ತೆಗಳಿ₁**: ಇಂದ್ರಲುಪ್ತಕ = ತಲೆಯ ಮೇಲಿನ ಕೂದಲು ಇಲ್ಲದ ಹಾಗಾಗುವ ಬೇನೆ; ತಗಳಿ ನೆಕ್ಕ್ಯೋಣ (ಗಂಗಾಮು. ೩೨). **ತೇಗಳಿ**: ಇಂದ್ರಲುಪ್ತ ಅಥವಾ ತೇಗಳಿ ಅಂದರೆ ತಲೆಯ ಇಲ್ಲವೆ ಮೋರೆಯ ಮೇಲಿನ ಕೂದಲು ಉದುರುವುದು (ಗೃಹವೈ. ೭೭). **ತೇವುಳ್**: ಗುಳ್ಳದ ಪಣ್ಣಂ ಗುರುಗುಂಜೆಯೆಂಬಿವಂ ... ಪೂಸಿದಂದು ತೇವುಳ್ [ಪಾಠಾಂ. ತೆಗುಳು] ಕಿಡುಗುಂ (ಲೋಕೋಪ. ೯-೫೫). **ತೇವುಳಿ**: "ಕೇಶಘ್ನಂ, ಇಂದ್ರಲುಪ್ತಂ – ಈ ೨ ತೇವುಳು [= ತೇವುಳಿ]" (ಹಲಾಯು. ೯೯-೪೫೦). **ತೇವ್ರುಳು**: ಮೇಲಿನ 'ಹಲಾಯುಧ' ಪ್ರಯೋಗವನ್ನು ನೋಡಿ.

[ ದೇ.॥ ತಮಿ. ತೇಮಲ್ = ಮಚ್ಚೆ, ಹುಳುಕಡ್ಡಿ, ಒಂದು ಬಗೆಯ ಚರ್ಮರೋಗ ]

**ತೇಮಾನ** (ನಾ). ೧. (ಲೋಹಗಳು) ತಿಕ್ಕುವಿಕೆಗೆ ಒಳಪಟ್ಟು ಸವೆಯುವಿಕೆ; ತಿಕ್ಕುವುದರಿಂದಾಗುವ ನಷ್ಟ; ತೇಯುವುದರಿಂದ ಆಗುವ ನಷ್ಟ: ಘರ್ಷಣಕ್ಷಯ; ತೇಮಾನ (Attrition. ಇಂಕಿನಿ); ಚಿನ್ನದ ಒಡವೆಗೆ ತೇಮಾನ ತಗೆದು ನಯ ಮಾಡಿದಂತೆ (ಕನ್ನಡು. II, ೦೩೬). ೨. ನಷ್ಟ; ಹಾನಿ: ಮಾಡಬೇಕಾಗಿದ್ದ ಎಷ್ಟೋ ಕೆಲಸ ಮಾಡದೆ ಹೋಯಿತು ಇಲ್ಲವೆ ತೇಮಾನವಾಯಿತು (ಕಂನಾಸಾ. ೮೩). ೩. ಯಂತ್ರ ಮೊದಲಾದುವುಗಳ ಸವೆತದಿಂದಾದ ನಷ್ಟ ಎಂದು ವರ್ಷಾಂತ್ಯದಲ್ಲಿ ತೆಗೆದಿಡುವ ಹಣ: ಈ ವರ್ಷದ ಉಳಿಕೆಯ ಕಾಲುಭಾಗದ ಹಣವನ್ನು ತೇಮಾನವೆಂದು ತೆಗೆದಿರಿಸಲಾಯಿತು (ರೂಢಿ).

[ದೇ.॥ ತಮಿ. ತೇಯ್ಮಾನ; ಮಲ. ತೇಮಾನ; ತುಳು. ತೇಮಾನ, ತೇಮಾನೊ, ತೇಮನ; ತೆಲು. ತೇಮಾನ = ಹಣದ ಮೇಲಿನ ಬಡ್ಡಿ]

**ತೇಮೋಷ್ಣ** (ಗುಂ). ತೇವವೂ ಉಷ್ಣವೂ ಕೂಡಿರುವ: ಸಮಭಾಜಕವೃತ್ತದ ತೇಮೋಷ್ಣ ವಾಯುಗುಣ (ಭೂವಿಜ. ೦೯೨). [ ತೇಮ + ಉಷ್ಣ ]

**ತೇಯ್** 'ತೇ₁' ನೋ.

**ತೇಯಿಸು** (ಕ್ರಿ). ಸವೆಯುವಂತೆ ಮಾಡು: ಈಯಿಸಿದಂ, ತೇಯಿಸಿದಂ (ಶಮದ. ೨೩೦ ಪ್ರಯೋ). [ ತೇ₁ + – ಇಸು₃ ]

**ತೇಯು** 'ತೇ₁' ನೋ.

**ತೇಯೆಲೆ** (ನಾ). ಚಹದ ಎಲೆ; ಟೀಸೊಪ್ಪು: ತೇಯೆಲೆ, ಟೀಸೊಪ್ಪು (Tea-leaf. ಇಂಕಿನಿ); ಹತ್ತಿ, ತೇಯೆಲೆ, ಕರ್ಪೂರ, ದಾಲ್ಚಿನ್ನಿ ... ಈ ಪದಾರ್ಥಗಳಲ್ಲಿ ಚೀಣಾದೇಶದೊಡನೆ ವ್ಯಾಪಾರ ನಡೆಸುತ್ತಿದ್ದರು (ಭಾಗ್ಯಶಿ. ೮). [ ತೇ₂ (<ಟೀ) + ಎಲೆ₁ ]

**ತೇರ್₁** 'ತೇರು₁' ನೋ.

**ತೇರ್₂**, ತೇರು₂(ನಾ). ೧. ಒಂದು ಬಗೆಯ ವಾಹನ,-ಬಂಡಿ; ರಥ; ಸ್ಯಂದನ: ಸಾರಥಿ ಕಣ್ಣಱಿದೊಯ್ಯನೆ ತೇರಂ ಕೊಸಗೊಂಡು ಚಕ್ರಿಯುಂ ಬಿನ್ನವಿಕುಂ (ಆದಿಪು. ೧೦-೫೭); ಪೆಱಗಿರ್ಕೆ ತೇರನೆಸಪಂ ಧರ್ಮಾನುಜಂಗೇಕೆ ಕಿಂಕರನಾದಂ ... ಆದಿದೇವನೆನಿಸಲ್ ಕೃಷ್ಣಂಗದೆಂತೊಪ್ಪುಗುಂ (ಗದಾಯು. ೩-೪೩); ತೇರ್ಗಳುಮನೋಜೆಯಿಂ ಪಣ್ಣಿದರ್ (ಹಲಪು. ೨೩-೨೫). **ತೇರು₂**: ೧. ನವಿಪಕೆ ಹೂಡಿದುವು ತೇರುಗಳು (ಕುಮಾರವ್ಯಾ. ೨-೦೪); ದಾರಿದೆಗೆದುವು ಮುಂದೆ ಹೂಡಿದ ತೇರುಗಳು (ತೊರವೆರಾ. ೨-೩-೩೦); ಧರೆಯ ತೇರನು ಮಾಡಿ ಅಜನ ಸಾರಥಿ ಮಾಡಿ ಹರಿಯ ಶರವಮಾಡಿ ತ್ರಿಪುರವನು ಅರಿದಂಗೆ ಸರಿ ಯಾರು (ಸರ್ವಜ್ಞ. ೨೨೦). ೨. ದೇವರ ವಿಗ್ರಹವನ್ನಿಟ್ಟು ಮೆರೆಯಿಸುವ ಅಲಂಕಾರದ ಬಂಡಿ: ಬಾರೊ ಸಾಧನಕೇರಿಗೆ ... ಮಳೆಯು ಎಳೆಯುವ ತೇರಿಗೆ (ಗಂಗಾಕ. ೧೩-೩). ೩. ರಥದಲ್ಲಿ ದೇವರ ವಿಗ್ರಹವನ್ನಿಟ್ಟು ಮಾಡುವ ಉತ್ಸವ; ರಥೋತ್ಸವ; ಜಾತ್ರೆ: ರೈತರಿಗೆ ತೇರಿಗಿಂತ ದೊಡ್ಡ ಹಬ್ಬ ಯಾವುದೂ ಇಲ್ಲ (ಹಳ್ಳಿಶಾ. ೦೯); ತೇರು ನುಂಗುವವನಿಗೆ ಪರಿಸೆ ಹಪ್ಪಳ ಸಂಡಿಗೆ (ಗಾದೆ).

**ತೇರ ಕಾಣಿಕೆ** = ರಥೋತ್ಸವ ನಡೆಸಲು ಕೊಡುವ ಕಾಣಿಕೆ: ಯಿ ತೇರ ಕಾಣಿಕೆಯ ಹೊನ್ನ ×ತೆರಕಹಾಂಟೆಯ ಚಾವಡಿಗೆ ... ಕೊಟ್ಟು (ಎಕ. XIV, ಗುಂಡ್ಲುಪೇ. ೮-೦೪; 1620). **ತೇರ ಬೀದಿ** = ತೇರು ಹರಿದು ಬರುವ ಮಾರ್ಗ; ರಥಬೀದಿ: ಇಳೆಯ ಮೇಲಣ ಸರ್ವಜನರು ನಳಿನಾಕ್ಷ ರಂಗಧಾಮನ ತೇರ ಬೀದಿಯೊಳಗವಟ್ಟು ಮೆಱೆದರತಿಯಲಿ (ಕಂನವಿ. ೨೪-೧). **ತೇರಾಗು** = ರಥೋತ್ಸವವಾಗು; ಜಾತ್ರೆಯಾಗು; ಮೆರವಣಿಗೆಯಾಗು: ಸೋಮೆಯದೇವರಿಗೂ ರಾಮಚಂದ್ರದೇವರಿಗೂ ಪರದೇಗಿನ ತೇರಾಗಿ ... ರತೋತ್ಸವ ನಡೆಯಬೇಕೆಂದು ಮಾಡಿಸಿದನು (ಎಕ. X(S), ಮಾಲೂರು. ೦೪೭-೦೪; 1498); ತೇರಾದ ಮೇಲೆ ಜಾತ್ರೆ ನೆರೆಯಿತು (ಗಾದೆ).

[ ದೇ.॥ ತಮಿ. ಮಲ. ತುಳು. ತೇರ್; ತೆಲು. ತೇರು ]

**ತೇರ** 'ಥೇರ' ನೋ.

**ತೇರಂಜಿಸು** (ಕ್ರಿ). ಸಾಣೆ ಹಿಡಿದಂ ಹೊಳೆಯುವಂತೆ ಮಾಡು,–ಹೊಳಪು ಕೊಡು : ಮಣಿಯಂ ತೇರಂಜಿಪಂತೊಪ್ಪುವನೆಸಗುಗೆ ಕೆಯ್ಯೆಂಡು . . . ಅನುಪಮ ಮತ್ಕಾವ್ಯಮಂ ಸತ್ಕವೀಂದ್ರರ್ (ಪುಷ್ಪಪು. ೧-೩೫).
[ P ಇದು 'ನೀರಂಜಿಸು' ಎಂಬುದರ ಅಪಲಿಖಿತವಿರಬಹುದೇ ? ]

**ತೇರಂಟಿ** 'ತೇರಂಟೆ' ನೋ.

**ತೇರಂಟೆ, ಚೇರಟೆ, ತೇರಂಟಿ** (ನಾ). ಸಾವಿರಕಾಲಿನ ಹುಳು; ಕಪ್ಪರ ಚಟ್ಟಿ ; ಒನಕೆವಂಡಿ ; ಬೆಟ್ಟಬೆನಕ (ಉಕ) : ಬೆಸದಪರಂತೆ ಮುಯ್ಯುಂ ನೋಡದೆ ತೇರಂಟೆಯಂತೆ ಕುಮತಕ್ಕೆ ಸೂರುಳದೆ . . . ಧರ್ಮದೊಳ್ ನಿಶ್ಶಂಕನುಮಪ್ಪುದು (ಧರ್ಮಾಮೃ. ೪-೪೬). **ಚೇರಟೆ** : ಚಳಿಯ ಹಿಡಿತ ಕ್ಕೊಳಗಾಗಿ ಬೆರಳು ಮುಟ್ಟಿದ ಚೇರಟೆ(ಶತಪದಿ)ಯಂತೆ ಎಂಟುಗೇಣಿನ ಮೈ ಎರಡುಗೇಣಾಗಿ ಜನಸಂದಣಿಗೆ ಸಂದಣಿ ಸುತ್ತಿ ಸುರುಟಹೋಗಿತ್ತು (ವೀರಲಿಂ. ೪೮). **ತೇರಂಟಿ** : ಸ್ಪರ್ಶರಸಗಂಧಂಗಳೆಂಬೀ ಮೂಱಿನಱಿವ ಇಱುವೆ . . . ಇಂದ್ರಗೋಪ ತೇರಂಟಿ (ಜಸಾರ. ೪೯).
[ ←ತುಳು. ತೇರಂಟೆ, ಚೇರಟೆ, ಚೋರಟೆ, ಶೇರಂಟೆ, ಶೇರಟೆ ]

**ತೇರಜೆ** (ನಾ). ಒಂದು ಬಗೆಯ ಪ್ರಾಣಿ : ಶ್ರೀಮದಮುಳ್ಳಂ ಮೊಸಳೆಯಾಗಿಯುಂ ರೂಪಮದಮುಳ್ಳಂ ಕಟ್ಟಿಯಾಗಿಯುಂ ಆಜ್ಞಾ ಮದಮುಳ್ಳಂ ತೇರಜೆಯಾಗಿಯುಂ ಪುಸಿಯುಳ್ಳಂ ಕರಡಿಯಾಗಿಯುಂ ... ನರಕದೊಳ್ ಪುಟ್ಟಿ (ಧರ್ಮಾಮೃ. ೬-೧೮೪).
[ ?./ಮರಾ. ತರಸ್=ಕತ್ತೆಕಿರುಬ./ಪ್ರಾ. ತರಚ್ಛ=ವ್ಯಾಘ್ರ./ಸಂ. ತರಕ್ಷು ]

**ತೇರಣ$_1$, ತೇರಣೆ, ತ್ಯಾರಣ** (ನಾ). ೧. ಒಂದು ಬಗೆಯ ಸಸ್ಯ ; ಕುರವಕ ; ಗೋರಂಟಿ : "ತೇರಣಂ ಪ್ರಣಯುಕ್ಕು" (ಮಂಗರಾ. ೩೫-೧೫) ; ತೇರಣದ ಬೀಜವಂ ಮೊಸರ ನೀರಿಂದ ಕೇದು (ವಿವ್ಯವಿ. ೩೩) ; ತೇರಣದ ಹೂವನ್ನು (ಕುರವಕ) ಧರಿಸುವುದರಿಂದ–ವ್ಯಾಪ್ತವಾದ ಪರಿಮಳ ಉಂಟಾಗಿ (ಸಳವ್ಯ. ೪೪). 'ಗಿಡಂದೇರಣ' ಪರಾ. **ತೇರಣೆ** : ೨. ಒಂದು ಬಗೆಯ ಮರ : ಒಬಟೆ, ಅತ್ತಿ, ಅರಳೆ, ತೆಂಗು, ತೇರಣೆ (ಶಿವದ. ೭-೧೬). **ತ್ಯಾರಣ** : ೧. ಕೆಂಪಿನ ತ್ಯಾರಣದ ಹೂವಿನಂತೆ ಶುದ್ಧರಕ್ತದಂತೆಯೂ ಹೊಳಪುಳ್ಳ ರತ್ನವು (ಸೌಗಂಧಿ. ೩೩೬-೨೦). ೨. ಹದ್ದರಣ ತ್ಯಾರಣ ಗೊರವಿ . . . ಮೊದಲಾದ ಗಗನವಂ ಕುಡುಕುವ ವೃಕ್ಷಂಗಳ್ (ಸೌಗಂಧಿ. ೫೪-೫). [ ? ]

**ತೇರಣ$_2$** (ನಾ). ಗೆದ್ದಲುಹುಳು (?) : ಪೇಣನಂತೆ ತಲೆಯಂ ಪತ್ತಿ ಪಲ್ಕಡಿವರ್ ತೇರಣದಂತೆ ತಳವಂ ಪತ್ತಿ ಕತ್ತರಿಸುವರ್ ಕಂಕಣದಂತೆ ಮುಂಗೈಯಂ ಪತ್ತಿ ಕೊಱೆವರ್ (ಧರ್ಮಾಮೃ. ೩-೭೩). [ ? ]

**ತೇರಣೆ** 'ತೇರಣ$_1$' ನೋ.

**ತೇರಯ್** (ಕ್ರಿ). ೧. ಆಕ್ರಮಣ ಮಾಡು ; ಮೇಲೆ ಬೀಳು: ಕಡುಪಿಂದಾ ಕಾಕನಂ ಕುಪ್ಪಳಿಸಿದೆಡೆಯಿಂದಾ ಪೂತನಿ ರಕ್ತಮಂ ಪೀರ್ದೆಡೆಯಾ ತೇರಯ್ದು ತೇರಂ ಪರಿಪಿಡೆಡೆಯಿಂದಂ (ಅರ್ಜನೀ. ೮-೨೩). ೨. ತವಕಪಡು; ತವಕಿಸು: ಆಡಿಸುವ ತೋಳ್ ತೇರಯ್ಪುಬಾಯ್ ತಪ್ಪಿ ಬರ್ಪರೆವಾತುಣ್ಮುವ ಕಿತ್ತುಸಿರ್ (ಪರ್ವಪು. ೪-೬೦). [ ? ]

**ತೇರಯಿಸು, ತೇರಯ್ಸು, ತೇರ್ಯ್ಸು** (ಕ್ರಿ). ೧. ಆಕ್ರಮಿಸು ; ಮೇಲೇರಿ ಹೋಗು : ಅಂತು ರಕ್ಕಸವಡೆ ತನ್ನ ಪಡೆಯೆಲ್ಲಮಂ ತರಳ್ಚಿ ತೇರಯಿಸಿ ನುಂಗಿದೊಡೆ (ಪಂಪಭಾ. ೦೨-೮ ವ). ೨. ಅಧಿಕವಾಗಿರು ; ಹೆಚ್ಚಾಗು ; ಮಿಱು : ಬೆಳ್ಮುಗಿಲ್ಗಿಱಿಗಲಂ ತರತರದಿಂ ತೇರಯಿಸುವ ತೆರೆಗಳಿಂ (ದಳಕು. ೪-೩೫ ವ). ೩. ಆತುರಪಡು ; ತವಕಿಸು ; ಲವಲವಿಸು : ಒಡನುಡಿಯಲ್ಕೆ ತೇರಯಿಸೆ ನಾಲಗೆ (ಜಗವಿ. ೧೭-೧೨೦) ; ತೇರಯಿಸ [ಪಾಠಾಂ. ತೇರ್ಯ್ಸ]ದಿರ್ದನವನತಿಸತ್ವದಿಂದೆ (ಜ್ಞಮಿಭಾ. ೮-೨೮). **ತೇರಯ್ಸು** : ೧. ತುಂಬಿಗಳುಮೊಡನೊಡನೆ ತೇರಯ್ಸುತಿರೆ ಪಾಡಿ (ಪುಷ್ಪಪು. ೨-೪೪) ; ದುರ್ಧರ ಗ್ರೀಷ್ಮರಾಜನ ನೆಗಳ್ದ ಚತುರಂಗಮನಲು ರವಿಯ ಕಡುಗಾಯ್ಪು ಗಳ್ತೇರಯ್ಸಿ[ಪಾಠಾಂ. ರೈಸ]ಲೊತ್ತರಿಸಿ ಕವಿದವು (ಜ್ಞಮಿಭಾ. ೧೫-೪) ; ಥಟ್ಟುವರಿಯಿಪ ತೇರಯ್ಸು [ಪಾಠಾಂ. ತೇರ್ಯ್ಸಿಪ] ಬೋಳ್ಕೆಪ ಬೋಹರ ದೊಳ್ಸಿಱಿಗೆಯ್ವ ಚೌಪಟದೇಱಿಪಾಟದೊಳ್ (ರಾಜಶೇ.೬-೧೧ ವ). **ತೇರ್ಯ್ಸು**: ೧. ವೃಕೋದರಂ ಚತುರ್ದಶಭುವನಂಗಳೆಲ್ಲಮಂ ತರಳ್ಚಿ ತೇರ್ಯ್ಸಿ ನುಂಗು ವಂತು ಮುಸಕದಿಂ ಭಗದತ್ತನಂ ಮಾರ್ಕೊಂಡು (ಪಂಪಭಾ. ೧೧-೮ ವ) ; ಸುರಪನುಱುಬೆಗೆ ಸೀವರಿಸಿ ಮೋಹರಿಸಿ ಮುಂದಿದೆಱಗುವ ಮಹೀಧರದುರ ವಣೆಯ ತೆಱನಂತೆ ತೇರ್ಯ್[ಪಾಠಾಂ. ರಯಿ]ಸಿದವು ಗಗನದಲಿ (ತೊರವೆ. ೪-೪-೦೬). ೨. ಬುದ್ಧಿಯೊಳಗಂ ಸಾರ್ಚಿಸಿ ಅಹಂಕಾರಮಂ ತೇರ್ಯ್ಸಿ ಚಿತ್ತದೊಳು ಪೂರ್ಯ್ಸಿ (ಬಸವ. ೪-೬೧) ; ನೀರಾಟಕ್ಕೆಳಸಿದೈರಾವತವಾರಣ ಶರೀರ ಗೌರವರ್ಣಂ ತೇರ್ಯ್ಸಿದಂತೆಯುಂ . . . ನೈರ್ಮಲ್ಯದಿಂ ನೂರ್ಮಡಿ ಸಿರ್ದ ಅಮರನದಿಯಂ ಕಂಡು (ದಳಕು. ೯-೯ ವ) ; ಅಂಧಕಾರವನು ತೆವರಿ ತೇರ್ಯ್ಸುತಿಹ ತೇಜದೇಳ್ಗೆ (ಸೌಂದಪು. ೦-೨೬) ; ನೀಡಿಡುವಾ ಮೊಗ ನಿಡುಸುಯ್ಯು ನಾಸಿಕ ತೇರ್ಯ್ಸುವಾ ತಳ್ಪಂಕ (ಶ್ರೀಪಾಲ. ೪-೯೫). ೩. ದುಶ್ಶಾಸನೋರಸ್ಥಳೋಪ್ಪಸೃತಾಸೃಗ್ಜಲಪಾನಮಂ ಬಯಸಿ ಬಾಯ್ ತೇರ್ಯ್ಸೆ ಸೈತಿರ್ಪನೇ (ಪಂಪಭಾ. ೬-೫೮); ಹಸ್ತಿ ಹಾರ್ಯ್ಸಿ ತೇರ್ಯ್ಸಿ . . . ಪರಿಪರಿದಾಡಿ (ಬಸವ. ೯-೨೬) ; ಚುಂಬನಕೆ ಬಾಯ್ತೇರ್ಯ್ಸಿಯಾಲಿಂಗನಕ್ಕೆ ನಿಜೋದ್ಯದ್ಭುಜ ಶಾಖೆಗಳ್ ನಿಮಿರೆ ಮೇಲ್ವಾಯ್ದಂ ಪಟಾಲೇಖದಂಗನೆ ಗಾಗಳ್ (ಕುಸುಮಾ.೯-೬೦) ತನುರೋಮೋದ್ಗಮ ಘರ್ಮದೊಳ್ಪುದಿಯೆ ಬಾಯ್ ತೇರ್ಯ್ಸೆ (ಶಾಂತೀಶ್ವ. ೫-೩೩). ೪. ಗುಂಪಾಗು; ಒಟ್ಟಾಗು; ಮೇಲಿ ಮೇ ುಬ್ಬೇಳ್ವ ರಿಪುಶರಜಾಲಧಾರಾಧೂಮವಹ್ನಿಜ್ವಾಲೆಗುಱಿ ತೇರ್ಯ್ಸಿ ಕೋರ್ಯ್ಸಿತು ಕುರುಸ್ತೋಮ (ಕುಮಾ.ವ್ಯಾ. ೦೯-೦) ; ತೇರ್ಯ್ಸಿ ಮಾಗಧ ಹಿಮ ವಂತರೊಳಗಾದ ಭೂರಿವ್ಯಂತರರಿಗೆ ಕೂಡೆ ಬಾರು ರತ್ನಾಂಬರಗಳನಿತ್ತ ನೊಲ್ದು (ಭರತೇ. ೭೩-೨೦೬);ತೇರ್ಯ್ಸಿ ಬರ್ಪ ತುಂಬಿಗಳ ಮೈಗಪ್ಪು ಮುಂಗಾರ ಮುಗಿಲ್ (ಚಂಪು. ೪೫-೨೨). ೫. ನಿಧಾನವಾಗು; ಮಂದವಾಗು: ಒಳಗೆ ಗರ್ಭಂ ಬೆಳೆಯೆ ಪೊಱಗೆ ತನು ಸಳಸಳಿಸಿ ತಿಳಿದು ಮೆಲ್ಲಡಿ ಜಘನಭಾರದಿಂ ತೇರ್ಯ್ಸಿತ್ತಿರ್ಪಳಿ ಮೈಗರೆಯ (ಕಲ್ಲರ. ೨೨೯-೪). [ ತೇರಯ್ + – ಇಸು$_3$ ]

**ತೇರಯ್ಕೆ** (ನಾ). ೧. ತವಕ ; ತಂಡಿತ ; ಲವಲವಿಕೆ : ಅಚ್ಚವಣ್ಣೇಱಿದ ದಾಳಿಂಬಂ ತೆದುದ್ಯಾನದೊಳೊದವಿಸುಗುಂ ಬಾಯ್ಗೆ ತೇರಯ್ಕೆಯುಮಂ (ಚಂದ್ರಪು. ೦೧-೫೪). ೨. ಕಾಳಗದ ಒಂದು ಪಟ್ಟು ; ಯಂದ್ವದ ಒಂದು ರೀತಿ : ತೆಱಪು ಪಸರವಾರ್ಯ್ಕೆ ತೇರಯ್ಕೆ ಕೂರ್ಪಂ ಕಿತವಾಕಾರಂ ತಡಂ ಕಿತ್ತಡವೆನಿಪ ಭೃಗು ಪ್ರೌಢಿಯಿಂ ಕೊಲ್ವನುಗ್ರಾಹಿತನಂ (ಎಕ. VIII, ಸೊರಬ. ೦೪೦-೩೪ ; 1198). [ ತೇರಯ್ + – ಕೆ ]

**ತೇರಯ್ಸು** 'ತೇರಯಿಸು' ನೋ.

**ತೇರವಾದ** (ನಾ). [ಬೌದ್ಧ] ಮಹಾತ್ಮರ ಉಪದೇಶ ; ಸ್ಥವಿರವಾದ : ತೇರವಾದವೆಂದರೆ ಮಹಾತ್ಮರ ಉಪದೇಶವೆಂದರ್ಥ (ಧಾತತ್ತ್ವ. ೧೯೦).
[ ತೇರ (< ಥೇರ) + ವಾದ$_2$./ಪಾಲಿ. ಥೇರವಾದ ]

**ತೇರಸ, ತೆರಸ** (ನಾ). ೧. ಒಂದು ಸಂಖ್ಯಾವಾಚಕ ; ಹದಿಮೂರು : "ತೇರಸ – ತ್ರಯೋದಶ" (ಶಬ್ದಕೋ. ೧೪) ; ಕರೆಯುಬಹೆನಾ ನಿನ್ನನಾಯು ವಸರಕೆ ತೇರಸವೀರಷೋಡಶವರ ಗಣಾರ್ಚನೆಗೆ (ಬಸಪು. ೦೪-೧೨) ; ದಶಗಣ ತೇರಸ ಷೋಡಶ ದ್ವಾದಶ ವಿಸುವೇಕಾದಶ ರುದ್ರರುಗಳು . . . ಬಂದರು (ಬಸಪು. ೧-೨೩). ೨. = ತೇರೆಸಿ : ಮಾಘಶುದ್ಧ ತೇರಸದೊಳ್ ಗುರುಯೋಗದೊಳ್ ಪುಟ್ಟಿ (ಚಾವುಂಪು. ೪೪-೦೪) : ಎಸೆವಾಶ್ವಯುಜದ ತೇರಸದಿಂ ತೊಟ್ಟಯ್ದುದಿವಸ (ಮು)ಂ ಮಾಱಿ ಕಱಿಯಲ್ (ಅಟ್ಟಮ. ೮-೦೬೪). **ತೆರಸ** : ೨. ಫಾಲ್ಗುಣ ಶುದ್ಧ ತೆರಸ[ಮುಂ] ಆದಿತ್ಯವಾರ ಮುಮಾದನ್ದು (ಸೌಇಇ. XX-i, ೩೦-೨ ; 10ನೆಯ ಶಶ).

ತೇರಸರ್ = ಪ್ರಸಿದ್ಧರಾದ ಹದಿಮೂರು ಜನ ಶಿವಶರಣರು; P (ಪಾಲ್ಕುರಿಕೆ ಸೋಮನಾಥನು ಹೇಳಿರುವಂತೆ) ಕಲ್ಯಾಣಪಟ್ಟಣದಲ್ಲಿ ಪ್ರಸಿದ್ಧರಾಗಿದ್ದ ಬಸವರಾಜ, ಸಂಗಯ್ಯ, ಬೊಮ್ಮಿಸೆಟ್ಟಿ, ಸಾತ್ವಿಕ ಸಂಗಯ್ಯ, ಮೋಳಿಗೆ ನಿಜಸಂಗವ್ವೆ, ದೇವರಸ, ಕನ್ನಮರಸಿ, ಪಡಿಹಾರಿ ಬಸವಯ್ಯ, ಹೂವಿನ ಬಾಚಿದೇವಯ್ಯ, ದೇವಯ್ಯ, ಒಹಿಲದೇವಯ್ಯ, ಬೊಪ್ಪದೇವ ಮತ್ತು ಕಾಮಲದೇವಿ ಎಂಬ ಹದಿಮೂರು ಮಂದಿ ಶರಣರು: ಸರರು ಕೇಳಲು ಕೂಡೆ ಸಾಚಿಸಿ ಭರದೊಳವರೊಳು ತೇರಸರುಮೆನೆ ಬರ್[ರು]ದೆಸವ ಪದಿಮೂವರುಂ (ಬಸಪು. ೩೧-೭೦); ಹರುಷದಿಂ ಪ್ರಮಥರುಂ ರುದ್ರರುಂ ತೇರಸರನುರುದಶ ಗಣಂಗಳಂ . . . ಭಕ್ತಿಯಿಂದೊರೆದು (ಅಶಿಚಂ. ೩೪-೩೩); ಕಾಣುತೊಲವಿಂ ಸಂತವಿಸಿ ತೇರಸಗರ್ಣಡಿ . . . ಲಿಂಗಮುಂ ಪೂಜಗೈದು (ಸಿದ್ಧೇಪು. ೭-೭೦).

[ < ಪ್ರಾ. ತೇರಸ./ಸಂ. ತ್ರಯೋದಶ ]

ತೇರಸಿ, ತಿರಸೆ, ತೆರಸಿ, ತೇರಸೆ (ನಾ). ಚಾಂದ್ರಮಾನಮಾಸದ ಪಕ್ಷಗಳ ಹದಿಮೂರನೆಯ ದಿನ,-ತ್ರಯೋದಶಿ: "ತೇರಸಿಯೆ ತ್ರಯೋದಶಿ" (ಚತುನಿ. ೭೪); ವೈಶಾಖಶುದ್ಧತೇರಸಿಯ ಬೆಳಗಪ್ಪ ಜಾವದೊಳು (ಬಾಪುಂಪು. ೪೪-೯); ಕದನಾ ಮಾರ್ಗಶಿರದ ಶುದ್ಧದಿನಂ ತೇರಸಿ . . . ಅಮಾವಸೆಯ ದಿವಸದೊಳಂ ನಿರ್ಮೂಲವಾಯ್ತು ಕೌರವವಂಶಂ (ಗದಾಯು. ೯-೩೭). ತಿರಸೆ: "ತ್ರಯೋದಶಿ-ತಿರಸೆ" (ಹೊಸಗ. ೧೦೯). ತೆರಸಿ: "ತೆರಸಿ ತ್ರಯೋದಶಿ" (ಕವಿಕಂ. ೨೭೦). ತೇರಸೆ: ಸಿತಪಂಚಮಿ ಸಪ್ತಮಿ ದಶಮಿ ತೇರಸೆ ಬಿದಿಗೆ ತದಿಗೆಯೇಕಾದಶಿಯೆಂಬತಿಶಯದಿನಂಗಳೊಳ್ . . . ಯಾತ್ರೆಗೆ ಶುಭದಂ (ಲೋಕೋಪ. ೨-೪೩); ತ್ರಯೋದಶಿ, ತೇರಸೆ (ಶಬ್ದಾನು. ೧೬೦ ತ್ರಯೋ).

[ <ಪ್ರಾ. ತೇರಸೀ./ಸಂ. ತ್ರಯೋದಶೀ ]

ತೇರಸೆ 'ತೇರಸಿ' ನೋ.

ತೇರಹಪಂಥ (ನಾ). [ಜೈನ] ಒಂದು ಪಂಥದ ಹೆಸರು: ಹದಿಮೂರು ತರದ ಚಾರಿತ್ರವುಳ್ಳವರಾದುದರಿಂದ ತೇರಹಪಂಥದವರೆಂದೂ ಹದಿಮೂರು ಜನರು ಕೂಡಿ ಈ ಪಂಥದ ಸ್ಥಾಪನೆ ಮಾಡಿದುದರಿಂದ ಇದಕ್ಕೆ ಈ ಹೆಸರು ಬಂದಿತೆಂದೂ ಕೆಲವರು ಹೇಳುತ್ತಾರೆ (ಜೈನಪ. ೭೬).

[ ತೇರಹ$_0$ (P ←ಪ್ರಾ. ತೇರಹ) + ಪಂಥ$_2$ (< ಪಂತ$_3$) ]

ತೇರಾಳ್ (ನಾ). ಬಂಡಿಯನ್ನು ನಡೆಸುವವನು; ರಥಿಕ; ಸಾರಥಿ: ತೇರಾಳ್ಗಳ ಚಪ್ಪರಣೆಯೊಳ್ . . . ಕಿಡುಗಿಡುವ ಪೊಂದೇರೊರಣಮಿಂ ಬಡಿದಿರೆ (ರಾಮಾಶ್ವ. ೩೦-೩); ಕುದುರೆಯಾಳಕ್ಕೆ, ತೇರಾಳಕ್ಕೆ, ಕಾಲಾಳಕ್ಕೆ, ಮೇಣಾನೆಯಾಳಕ್ಕೆ, ನಿಮ್ಮೊಳಿರೋರ್ವನುಂ ಕಾಳೆಗಂಗುಡುವಸು (ಶ್ರೀರಾಮಾ. ೬೩೧-೭೧). [ ತೇರ್$_2$ + ಆಳ್$_3$ ]

ತೇರಿಸು (ಕ್ರಿ). ಮುಟ್ಟಿಸು; ತಲುಪಿಸು: ಕನ್ನಡ ಸಂಸ್ಕೃತ ವಾದವನ್ನು ಆಂಡಯ್ಯನು ಒಂದು ಘಟ್ಟಕ್ಕೆ ತೇರಿಸಿದನೆಂದು ಹೇಳಬಹುದು (ಕನ್ನನು. I, ೧೩೨). [ ತೇರು$_1$ + – ಇಸು$_3$ ]

ತೇರೀಜು (ನಾ). ೧. ಒಟ್ಟು ಮೊತ್ತ: ಕಲಿತು ದಿನದಿನದಿಯತಿ ಚಮತ್ಕಾರದಿಂ ಗುಣಿತಗಳ ಭಾಗಿಸಿ ಲೆಖ್ಖ ತೇರೀಜುಬೇರೀಜುಮಂ (ನವಮೋ. ೧೩-೬೨). ೨. ಕೂಡುವಿಕೆ; ಸಂಕಲನ.

[ ← ಮರಾ. ತೇರೀಜ್; ಹಿಂ. ತೇರಿಜ್ ]

ತೇರು$_1$, ತೇರ್$_1$ (ಕ್ರಿ). ೧. ಬಲವಾಗು; ಅಭಿವೃದ್ಧಿಹೊಂದು; ಅಧಿಕವಾಗು: ಕುವರಂ ನವಯೌವನದೊದವಿಂಗೆ ನೆಲೆವೆಲೆಯಂತಿರೆ ತುಂಬಿ ತೇರಿದೊಂದು ಮೆಯ್ಸಿರಿಯಿಂ ಸೊಗಯಿಸಿದನಪ್ಪುದುಂ (ರಾಮಾಶ್ವ. ೦೦೮-೮); ವಯಸ್ಸೇರಿದಂತೆ ಜೀವದಾಸೆಯೂ ಲೋಭವೂ ತೇರಿ ಬೆಳೆಯುತ್ತಿರುವುವು (ಮಂತ್ರಶ. ೬೨-೧೬); ಅವುಗಳ ವರ್ಣನೆಯನ್ನು ನನಗಿಂತ ಬರವಣಿಗೆಯಲ್ಲಿ ತೇರಿದವರಿಗೆ ಬಿಟ್ಟುಕೊಟ್ಟಿದ್ದೇನೆ (ಭಾರವೀ. ೧೩೩). ೨. ಉತ್ತೀರ್ಣವಾಗು: ಶಿಕ್ಷಕನಾಗಬೇಕೆಂಬ ಹುರುಪಿನಿಂದ ಬಿ. ಟಿ. ಪರೀಕ್ಷೆಯಲ್ಲಿ ತೇರಿ . . . ಸಂಸಾರವೂ ಕಾವ್ಯಸಂಸಾರವೂ ಹೊಸ ಹುಮ್ಮಸ್ಸಿನಿಂದ ಮೊದಲಾದುವು (ಕಂಪಾಸಾ. ೪೬). ೩. ತಿಳಿಯಾಗು; ಸ್ವಚ್ಛವಾಗು: ನೀರು ತೇರಿತು (ರೂಢಿ). ೪. ನಿರ್ಣಯವಾಗು; ತೀರು; ಫಲಿತಾಂಶಕ್ಕೆ ಬರು: ಲೆಕ್ಕ ಇಷ್ಟಕ್ಕೆ ತೇರಿತು (ರೂಢಿ). ೫. ಸೇರು; ತಲುಪು. 'ತೇರಿಸು' ಪರಾ. ತೇರ್$_1$: ೨. 'ತೇರ್ಗಡೆ' ಪರಾ.

[ ದೇ.॥ ತಮಿ. ತೇಱು, ತೇಱ್ಱು; ಮಲ. ತೇಱು; ತೆಲು. ತೇರು, ತೇಱು ]

ತೇರು$_2$ 'ತೇರ್$_2$' ನೋ.

ತೇರು$_3$ (ನಾ). ಒಂದು ಬಗೆಯ ಔಷಧಿ ಸಸ್ಯ,-ಮಗಾಲಿಕೆ: "ಕರ್ಕಶಚ್ಛದಃ-ಸುರಸುರಲಿಕೆ, ತೇರು, ಮಿಟ್ಟಲಿ, ಸೌತೆ" (ಓಷಧಿ. ೨೬). [ ? ]

ತೇರುಕಟ್ಟು (ಕ್ರಿ). ೧. ರಥೋತ್ಸವಕ್ಕಾಗಿ ರಥವನ್ನು ಸಿದ್ಧಪಡಿಸು,-ಅಲಂಕರಿಸು: ರಥಸಪ್ತಮಿಗಾಗಿ ದೇವಾಲಯದಲ್ಲಿ ತೇರುಕಟ್ಟುತ್ತಿದ್ದಾರೆ (ರೂಢಿ). ೨. ಶವವನ್ನು ಸಾಗಿಸುವುದಕ್ಕಾಗಿ ವಿಮಾನವನ್ನು ರಚಿಸು; ಚಟ್ಟ ಕಟ್ಟು: ಆ ತಮ್ಮನ ಹೆಣಾ ಕೆಡವಿ, ತೇರುಕಟ್ಟಿ ಎಳ್ಯೋ ಮಟ ನನಗಂತೂ ಸಮಾಧಾನ ಇಲ್ಲ (ಹೊಸಂಸಾ. ೨).

[ ತೇರು$_2$ (<ತೇರ್$_2$) + ಕಟ್ಟು$_1$ ]

ತೇರುತಕ್ಕೆ (ನಾ). ಕೈವಾಡ; ಕುತಂತ್ರ: ತಂತಮ್ಮನಿಯರಂ ನೆನೆದು ಪುರಜನಂ ಮಂತಣಂಗೊಂಡು ಮಱುಗುತ್ತಿರಲ್ಕಾಣುತಾ ಕೇಶು ಮಾಡುವ ತೇರುತಕ್ಕೆಯಿಂದಾ . . . ಕೆಟ್ಟೆವಿನ್ನೇವೆವೆನುತಿರ್ದರು (ಸಮ್ಯಕ್ತ್ವ. ೩-೧೯); ಇದು ನಿಮ್ಮ ಮಗಳು ಕಮಲೆಯ ತೇರುತಕ್ಕೆಯಿಂತಿದ ನೀವು ಬಲ್ಲಿರೋ (ಸಮ್ಯಕ್ತ್ವ. ೦೦-೨೩). [ ? ]

ತೇರುಬೀದಿ (ನಾ). ದೇವರ ವಿಗ್ರಹವನ್ನಿಟ್ಟ ರಥವನ್ನು (ಮಾಮೂಲಾಗಿ) ಎಳೆಯುವ ದೊಡ್ಡರಸ್ತೆ; ರಥಬೀದಿ: ನಮ್ಮೂರಿನಲ್ಲಿ ತೇರುಬೀದಿಯೊಂದು ಬಿಟ್ಟರೆ ಉಳಿದವುಗಳೆಲ್ಲಾ ಚಿಕ್ಕ ರಸ್ತೆಗಳೇ (ರೂಢಿ).

[ ತೇರು$_2$ (< ತೇರ್$_2$) + ಬೀದಿ ]

ತೇರುಹಬ್ಬ (ನಾ). ರಥೋತ್ಸವ; ಜಾತ್ರೆ: ಕೆಸರೂರಿನಲ್ಲಿ ತೇರುಹಬ್ಬದ ಸಂದರ್ಭದಲ್ಲಿ ಇನ್ನೊಂದು ವಿಶೇಷಸಮಾರಂಭ ನಡೆಯಲು ಏರ್ಪಾಡಾಗಿದ್ದಿತು (ಬೆಳುಮ. ೦೬೬). [ ತೇರು$_2$ (< ತೇರ್$_2$) + ಹಬ್ಬ (< ಪರ್ಬ) ]

ತೇರೆಸಗು (ಕ್ರಿ). ರಥವನ್ನು ನಡೆಸು; ಸಾರಥಿಯಾಗು: ಮಿಳಿರ್ವ ಪೊಸದಳಿರೆ ಪಟಿಯಾಗೆ ಗಿಳಿಗಳೆ ಪೂಡಿರ್ದ ಕುದುರೆ ತೆಂಗಾಳಿಯೆ ಕಡ್ಗೋಳೆ ತೇರೆಸಗುವನೆನೆ ಬಂದೆಳಮಾವಿನ ತೇರನೇಱಿ ನಡೆದಂ ಕಾಮಂ (ಕಬ್ಬಿಗಕಾ. ೨೦೯).

[ ತೇರ್$_2$ + ಎಸಗು$_1$ ]

ತೇರೆಳೆ (ಕ್ರಿ). ದೇವರ ವಿಗ್ರಹವನ್ನು ಕೂರಿಸಿದ ರಥವನ್ನು ಎಳೆ: ಜಾತ್ರೆಯಲ್ಲಿ ತೇರೆಳೆಯುವಾಗ ಉಂಟಾದ ನೂಕುನುಗ್ಗಲಿನಿಂದ ಜನ ಕಂಗೆಟ್ಟರು (ರೂಢಿ). [ ತೇರು$_2$ (< ತೇರ್$_2$) + ಎಳೆ$_1$ ]

ತೇರೈಸು 'ತೇರಯಿಸು' ನೋ.

ತೇರೊಡ್ಡು (ನಾ). ರಥಗಳ ಗುಂಪು; ರಥಗಳ ಸೈನ್ಯ: ತೇರೊಡ್ಡು ಗಾಳಿಗೊಡ್ಡಿದ ನೀರದದೊಡ್ಡಿನವೊಲಾಗೆ (ಪಂಪಾಭಾ. ೧೬-೭೩); ತೆಱಪು ವಡೆದಿದಿರೊಡ್ಡಿನ ತೇರೊಡ್ಡುಗಳ ಶೂರಸಾರಥಿ ಪ್ರೇರಣದಿನೋರೊಂದು ಪಕ್ತಿಸಾರ್ಚಿದಾಗಳ್ (ಚಂದ್ರಪು. ೧೦-೭೪ ವ).

[ ತೇರ್$_2$ + ಒಡ್ಡು$_2$ ]

ತೇರೋಟ (ನಾ). ೧. ರಥದ ಓಟ. ೨. (ಆಲಂ) ರಥವನ್ನು ವೇಗವಾಗಿ ಓಡಿಸುವ ಕೌಶಲ್ಯ: ಬಿಲ್ಲ ಜಾಣನ್ ಈಮಿನಾಯಸ್ . . . ತೇರೋಟದ ಸೊನ್ಸ್ಥಾನೀಸ್ (ಪಾರಸಿ. ೩-೬೦). [ ತೇರ್$_2$ + ಓಟ ]

ತೇರ್ಗಡೆ (ನಾ). ಜಯ; ಗೆಲುವು; ಉತ್ತೀರ್ಣತೆ; ಸಫಲತೆ: ತೇರ್ಗಡೆಯಾಯಿತು ನನಗೆಂಬ ಗೆಲುವಿನ ಸುದ್ದಿಯು ಬರುವಷ್ಟರೊಳಗೆ

ಸ್ವರ್ಗಸ್ಥರಾದರು ತಂದೆ (ಇಂಜಾಪ. ೨೦-೯೩) ; ವರ್ಷದಲ್ಲಿ ಕೆಲವು ವಾರ ದುಡಿದಿದ್ದರೆ ಒಂದೆರಡು ವಿದ್ಯಾರ್ಥಿಗಳಾದರೂ ತೇರ್ಗಡೆ ಹೊಂದುತ್ತಿದ್ದರು (ಸ್ಮಾಲಮಿ. ೬೧).

[ ತೇರ್$_1$ (< ತೇರು$_1$) + ಕಡ್ಡೆ./ತುಳು. ತೇರ್ಗಡೆ ; ತೆಲು. ತೇರುಗಡ ]

**ತೇರ್ಗುದುರೆ** (ನಾ). ರಥಕ್ಕೆ ಹೂಡಿದ ಕುದುರೆ ; ರಥಾಶ್ವ : ಒಯ್ಯನೆ ನಡೆವ ತೇರ್ಗುದುರೆಯುಂ ಕಂಡು (ಕೃಮಿಥಾ. ೩-೪೦). [ ತೇರ್$_2$+ ಕುದುರೆ ]

**ತೇರ್ದೆಗೆ** (ಕ್ರಿ). ರಥವನ್ನು ಎಳೆ : ಆ ಸುಧನ್ವನಿಪ್ಪತ್ತುನಾಲ್ಕುಂಬಿನಿಂ ತೇರ್ದೆಗವ ಕುದುರೆಗಳ ಕಾಲ್ಗಳಂ ಗಾಲಿಗಳ ಕೀಲ್ಗಳಂ ಮೂಡಿಗೆಯನು ಮಿಾರ್ದಿಸುವ ಚಾಪವಂ . . . ಕ್ಷಣಾರ್ಧದೊಳ್ ಕಡಿಯೆ (ಕೃಮಿಥಾ. ೦೩-೩೩). [ ತೇರ್$_2$ + ತೆಗೆ$_1$ ]

**ತೇರ್ನೊಗ** (ನಾ). ರಥದ ನೊಗ : ಏಗಡ ತೇಜಿಗಳುಮನ್ ತೇರ್ನೊಗಕೆ ತಂದೆನ್ (ಬದ್ಮಪ್ರ. ೨೫-೩೩೨). [ ತೇರ್$_2$ + ನೊಗ ]

**ತೇರ್ಮನೆ** (ನಾ). ೧. ರಥವನ್ನಿಡುವ ಮನೆ. ೨. ರಥದ ಹಾಗೆ ಅಂತಸ್ತು ಗಳಿಂದ ಕೂಡಿರುವ ಭವನ, -ಸೌಧ : ವಿಭೀಷಣಂ . . . ತೇರ್ಕೈಸಿದನು ನೇರವುಲ್ಲಿಂ ತನ್ನ ತೇರ್ಮನೆಗೆ (ಶ್ರೀರಾಮೂ. ೫೬೪-೬೦೮).

[ ತೇರ್$_2$ + ಮನೆ ]

**ತೇರ್ಮರ** (ನಾ). ರಥವನ್ನು ಮಾಡಲು ಬಳಸುವ ಮರ : ತೇರ್ಗೆ ಮರಂ ತೇರ್ಮರಂ . . . ಮರಂ ತೇರ್ಗೆ, ಬಣ್ಣಂ ಮನೆಗೆ (ಶಬ್ದಾಪು. ೨೯೩ ಪ್ರಯೋ). [ ತೇರ್$_2$ + ಮರ$_1$ ]

**ತೇರ್ವಾಯ್** (ಕ್ರಿ). ರಭಸದಿಂದ ಮುಂನುಗ್ಗು, -ಹಾಯು : ತನ್ನುವ ಚಮೂಪತಿಗಳಂ ಕಡಿದು ತನ್ನುರುವ ಕಡಿತಲೆಗೆ ಬಲಿಗೊಟ್ಟುದಂ ಕಂಡು ನವ್ಯ ಕಲಿ, ನಿಮ್ಮಾನೆ, ತೇರ್ವಾಯ್ದನೈ ಪ್ರಹಸ್ತಂ (ಶ್ರೀರಾಮೂ. ೬೫೩-೩೬೪). [ ತೇರ್$_1$ (<ತೇರು$_1$) + ಪಾಯ್$_1$ ]

**ತೇಲ್, ತೇಲು$_1$** (ಕ್ರಿ). ನೀರಿನಲ್ಲಿ ಮುಳುಗದೆ ಬೆಂಡಿನಂತೆ ಮೇಲೆ ಇರು; ನೀರಿನ ಮೇಲೆ ಚಲಿಸು : "ಬೆಂಡೇಟ್ಟುದೆಂದೊಡೆ ತೇಲ್ವುದಕ್ಕು" (ಅಬ್ದಕ್ಕೆ. ೬೬); ಪೊಸತೆರೆಗಳೊಳ್ಸಲ್ಲಿ ತೇಲ್ವ ಹಂಸಂಗಳಂ (ಉದ್ಭಟ. ೩-೮೬) : ಶಾರ್ಙ್ಗಭೃತ್ಸುಧಾಸರಸಿಯೊಳಟ್ಟು ತೇಲ್ದು ಕಣಿದಾಂ ಕಳೆವೆಂ ಭವದಾವ ತಾಪವುಂ (ಚಕವಿ. ೦-೪). ೨. (ಗಾಳಿಯಲ್ಲಿ) ಹಾರು ; ಹಗುರವಾಗಿ ಚಲಿಸು : ಗಾಳಿಗೆ ತೇಲ್ವ ಮುಗಿಲುಗಳಂದದಿಂದೋಡಿದವು (ಹಾಕೈಥಾ. ೦೬-೦೨); ನಡುಸುಯ್ವ ಗಾಳಿಗೆ ತೇಲ್ವ ದುಕೂಲದ ನೆಱಗು (ಭರತ. ೦-೩೩); ಕೈವಡಿಗಟ್ಟುವಂಡಲೆಗೆ ತೇಲ್ದು ಮೇಲುದು ಜಾಱೆ (ಕೃಮಿಥಾ. ೩-೬). ೩. ಪಕ್ಕಕ್ಕೆ ಸರಿ ; ನುಣುಚಿಕೊಳ್ಳು ; ಜಾರು; ತಪ್ಪಿಸಿಕೊಳ್ಳು : ತೇಲ್ವುದು ರಣಾಗ್ರದಿಂದಲ್ಲದೊಡಾಳುಹೆನೆಸುತೆ ಕೋಲ್ವಳೆಗಱೆದನವಂ (ಕೃಮಿಥಾ. ೦೨-೩೬). ೪. ಸ್ಥಿರತೆಯಿಲ್ಲದಿರು ; ತಾರಾಡು ; ಹೊಯ್ದಾಡು : ಮದಿರಾಪಾನವಂ ಮಾಡಿಯುರ್ಕಿ ಸೊರ್ಕಿ . . . ಜೋಲುತುಂ ತೇಲುತುಂ ಮಲೆಯುತುಂ ಮನಂಗೊಳಿಪ ಶದ್ವನಿತಾಜನ ಮಧ್ಯದಲ್ಲಿ . . . ಇರ್ದಂ (ಉದ್ಭಟ. ೫-೯೦ ಪ) : ಪುಸಿಲಜ್ಜೆಯಿಂದೆ ತೇಲ್ದವಳ ಕೆಱೆದಿಂದೆ ನಸುನಗೆಯು ಮಸರಿಸುತೆ (ಕೃಮಿಥಾ. ೩-೬೦). ೫. ಮೂರ್ಛೆಯುಂಟಾಗು ; ಮೈಮರೆ : ಅಳವಳಿದು ಪವನಜಂ ತೇಲ್ಬನಿ ತಱೆಯೊಳ್ಕಂಡು . . . ಅಚ್ಯುತಂ ತಾನೆ ಕೋಪದಿಂದಾಹವಕೆ ನಡೆತಂದನು (ಕೃಮಿಥಾ. ೬-೪೯). **ತೇಲು$_1$** : ೧. ಗುರುಕರುಣವಾರ್ಧಿಯೊಳಗೋಲಾಡುತಂ ಸಂಭ್ರಮಾನಂದದೊಳಗಿಕ್ಕಾಡಿ ತೇಲು[ಹಾಡಾಂ. ಗು]ತಂ (ದೀಕ್ಷಾಬೋ. ೩೪-೧೮); ನೀತಿಯೆಂಬುದು ನೀರ ಮೇಲೆ ತೇಲುವ ತಪ್ಪ ಮಾತ ಬಲ್ಲವರತ್ತ ತೆಗೆದಂತೆ ಬಹುದು (ಸಮ್ಮುಕಾ. ೮-೦೮) ; ವನಚರಶ್ರೇಣಿ ಬೆಂಡಿದ್ದು ತೇಲಿದುವು (ಪೋಳಕ. ೦೯-೪೩) : ಕರ್ಪೂರ ನೀರಿಗಿಂತ ಹಗುರವಾಗಿರುವುದರಿಂದ ನೀರ ಮೇಲೆ ತೇಲುತ್ತದೆ (ಮುಂಬಯಿ. ೪-೬೦) : ಬಾಳೆಯ ಹೊಳೆಯೊಳು ಕಸದಂತೆ ತೇಲಿದರಾಗದು ಗಂಬಿ ಬೇಕು ಕಂದ (ಇಂಜಾಪ. ೦೦೬-೬೧). ೨. ಬಿಳಿಯ ಮೋಡ ಬೆಳಕಿನಲ್ಲಿ ತೇಲುವಂತೆ ಬಂದಳೋ (ಗಂಗಾತ. ೯೬-೦೧). ೬. ಲಾಭವಾಗಿ ಬರು ; ಒದಗು : ತೊಡಗಿಸಿದ ಹಣದ ಮೇಲೆ ಸ್ವಲ್ಪವಾದರೂ ಬಡ್ಡಿ ತೇಲಬೇಡವೆ ? (ರೂಢಿ). ೭. (ಎಳೆಯ ಸಸ್ಯಗಳಂತೆ) ಬೇರು ಬಿಡದೆ ಮೇಲೆ ಬರು: ತೆಂಡೆ ತೇಲಿದೆ (ರೂಢಿ). ೮. ಭೂಮಿಯ ಮೇಲೆ ಕಾಣಿಸು : ಹುಲು ಬೇರ್ಕೆ ಕರಿಕೆ ಕಣ್ಣಿಗ ತೇಲುವಂದದಿಂದಲಿ ಹೊಡೆ ಹಣವಿನ ಹೊಲನ (ಅಮುಸಾಂ. ೩-೦೨೨).

**ತೇಲಕಟ್ಟು** = ಜೋಲುಬಿಡು ; ತೂಗುಹಾಕು : ತೇಲಕಟ್ಟಿದ ಕಂಠ ಮಾಲೆಗಳ ಗಳಿತಮುಕ್ತಾಳಿಗಳಗಲಕೆ ಪಂದೆಸೆಯ ಮುತ್ತಿನ ರಂಗವಾಲಿಗಳನಿಕ್ಕಿದರು ದರುಶನೋತ್ಸವಕೆಂಬ ತೆಱನಾದುದು (ಕೃಮಿಥಾ. ೦೬-೨೮). **ತೇಲಬಿಡು, ತೇಲಿಬಿಡು** = (ನೀರಿನಲ್ಲಿ) ಮುಳುಗದ ಹಾಗೆ ಮುಂದುವರಿಯಲು ಬಿಡು : ಆ ಹುಡುಗನ ಕೈಗೆ ಸಿಗುವ ಹಾಗೆ ಹೊಳೆಯಲ್ಲಿ ತೇಲಬಿಟ್ಟನು (ಮುಂಬಯಿ. ೪-೩೮) ; ನನ್ನವೀ ನುಡಿಗಳಿರ ! ಕಾಲದಲೆಗಳಲಿ ನಿಮ್ಮಾನುರಿಹಣತೆಯಂತಿದೊ ತೇಲಬಿಡುವೆ (ಗೀವಿಂ. XIII) ; ಸಾನುರಾಗದಿಂದ ಇಂದು ದೀಪ ತೇಲಿಬಿಟ್ಟೆವೇ – ದೀಪ ತೇಲಿಬಿಟ್ಟೆವು (ನಾದಲೀ. ೬೨-೨೦) : ವಿಶ್ವದಂಚಿನವರೆಗು ತೇಲಿಬಿಡು ನೌಕೆಗಳ (ನಂದಮು. ೦೮-೫). **ತೇಲಿಬರು** = ನಿಧಾನವಾಗಿ ಬರು : ಗಾಳಿಗಡಲಿನಲ್ಲಿ ತೇಲಿಬರುತಲಿಹವು ನಾದಾ (ಗಂಗಾತ. ೦೦೩-೦). **ತೇಲಿಹಾಕು** = ಮೇಲಿರುವಂತೆ ನೆಡು ; ಆಳವಾಗಿ ನೆಡದಿರು : ತೆಂಗು ತೇಲಿಹಾಕು, ಬಾಳೆ ಬಗೆದು ಹಾಕು (ಗಾದೆ). **ತೇಲಿಹೋಗು** = ೧. ನೀರಿನಲ್ಲಿ ಮುಳುಗದಂತೆ ಮುಂದುವರಿ. ೨. ಕೊಚ್ಚಿಹೋಗು : ಪ್ರವಾಹದಲ್ಲಿ ಈಜಿ ಈಜಿ ಶಕ್ತಿ ಗುಂದಿ ತೇಲಿಹೋಗುತ್ತಿದ್ದೆ (ರಾಮಾನ. ೦೦೦) ; ಜಗವೆಲ್ಲ ತೊಯ್ದು ಹೋಗಿದೆ, ಕಿಳಿಮಣ್ಣು ತೇಲಿಹೋಗಿದೆ (ನಂದಮು. ೦೬-೨೨).

[ ದೇ.೫ ತುಳು. ತೇಲ್, ತೇಲು ; ತೆಲು. ತೇಲು ; ಪರ್ಜಿ. ಗಡಬ. ತೇಲ್; ಕುವಿ. ತೇಲಲಿ ]

**ತೇಲಾಡಿಸು** (ಕ್ರಿ). ನೀರಿನ ಮೇಲೆ ಚಲಿಸುವಂತೆ ಮಾಡು, -ಓಲಾಡಿಸು : ಚಿಕ್ಕಹುಡುಗರಿದ್ದಾಗ ಕಾಗದದ ದೋಣಿಯನ್ನು ಮಾಡಿ ನೀರಿನಲ್ಲಿ ತೇಲಾಡಿಸುವುದೂ ಒಂದು ಆಟ (ರೂಢಿ).

[ ತೇಲಾಡು + – ಇಸು$_3$ ]

**ತೇಲಾಡು** (ಕ್ರಿ). ೧. ನೀರಿನ ಮೇಲೆ ಚಲಿಸು ; ನೀರಿನಲ್ಲಿ ಮುಳುಗದ ಹಾಗೆ ಇರು : ಕುಲಪರ್ವತಗಳು ಸಮುದ್ರದಲ್ಲಿ ತೇಲಾಡಿದರೂ . . . ಅರ್ಜುನನು ಕರ್ಣನನ್ನು ಜಯಿಸಲು ಸಮರ್ಥನಾದಾನೆ (ಕೃಪಾಕ. ೦೬೮). ೨. (ಅಲಂ) ಉತ್ಸಾಹದಿಂದ ಕೂಡಿರು ; ಸಂತೋಷಿಸು : ತೇಲಾಡುವಾಗ ಮನಸು ಮೇಲಾಡತಾವ ಕನಸು (ಗಂಗಾತ. ೦೮-೧).

[ ತೇಲು$_1$ (<ತೇಲ್) + ಆಡು$_1$ ]

**ತೇಲಿ** (ನಾ). ಗಾಣಿಗ : ಉಜ್ಜನಿಪುರದಾ ತೇಲಿ ಕಾಮಲಿಂದಾಪುರಕೆ ತನ್ನ ಮಗಳನು ಕೊಟ್ಟು ಲಗ್ನ ಮಾಡಿರಲು (ಕವಿಮಾ. ೦೬). 'ತೆಲ್ಲಿಗ' ಪರಾ.

[ <ಸಂ. ತೈಲಿನ್ ]

**ತೇಲಿಕೆ** (ನಾ). ೧. ನೀರಿನಲ್ಲಿ ಮುಳುಗದಂತೆ ಇರುವುದು: "ತೇಲುವುದು, ತೇಲಿಕೆ, ಪ್ಲವನ" (Floatation. ಇಂಕಪಿ). ೨. ಹಗುರವಾದುದು : ಸಮುದ್ರವು ಉಪ್ಪಾಗಿಯಿರುವುದರಿಂದ ಅನೇಕ ಗುಣಗಳು ಉಂಟು . . . ಅದರ ನೀರು ಸೀನೀರಿಗಿಂತಲೂ ತೇಲಿಕೆಯಾಗಿ ಇರುತ್ತದೆ (ಅನಂಶ. ೫೪).

[ ತೇಲು$_1$ (<ತೇಲ್) + – ಇಕೆ./ತಮಿ. ತೇಲಿಕ್ಕೈ; ತೆಲು. ತೇಲಿಕೆ ]

**ತೇಲಿಗ$_1$** (ನಾ). ತೇಲುವವನು : ನೀಲಾಕಾಶದ ತೇಲಿಗನಾಗಿ ಓಲಾಡಿ ಪುಣ್ಯರ ನಾಡಿಗೆ ಹೋದೆ (ಹಂಸದ. ೦೬೨-೦೮). [ ತೇಲು$_1$(<ತೇಲ್) + – ಇಗ]

**ತೇಲಿಗ₂** ‘ತೆಲ್ಲಿಗ’ ನೋ.

**ತೇಲಿಸು** (ಕ್ರಿ). ೧. ನೀರಿನಲ್ಲಿ ಮುಳುಗದಂತೆ ಮಾಡು; ತೇಲಾಡಿಸು: ರಾಯರ ಉತ್ಸಾಹವು ನನ್ನನ್ನೂ ಸಂತೋಷದ ಕೆರೆಯಲ್ಲಿ ಮುಳುಗಿಸಿ ತೇಲಿಸಿತು (ರಾಯುಳ. ೯೦); ಸಾವಿನಲಿ ಮುಂದೋಡಿ ಆತ್ಮಜಯವಾದಾಗ ನೆಲ ಮುಗಿಲ ತೇಲಿಸುವ ಬೆಳಕಿನುಬ್ಬು (ನವಿಲ. ೬೩-೬). ೨. ಅಮುಖ್ಯ ವೆಂದು ಪರಿಗಣಿಸು; ಗೌಣವಾಗಿಸು: ನಾನು ಆ ಮಾತನ್ನು ತೇಲಿಸಲು ಯತ್ನಿಸಿದೆ (ಆಲಹೂ. ೬೨): ಮಾತುಗಳನ್ನು ಲಘುವಾಗಿ ತೇಲಿಸಬೇಡಿ (ಬದುಕ. ೧೦೩). ೩. ಶಿಥಿಲವಾಗಿ ಉಚ್ಚರಿಸು; ಹಗುರವಾಗಿ ಉಚ್ಚರಿಸು: ಉಚ್ಚಾರಣೆಯಲ್ಲಿ ಒಮ್ಮೆ ಒತ್ತಿ ಹೇಳುತ್ತೇವೆ. ಇನ್ನೊಮ್ಮೆ ತೇಲಿಸಿ ಹೇಳುತ್ತೇವೆ (ದ್ರಾವಿ. ೩೨೪). ೪. ಚಾಚು; ನೀಡು: ಬೆನ್ನನು ಕೋದು, ಕೈಕಾಲ್ಗಳನು ತೇಲಿಸಿ, ಹೊಳೆದಳು ಮಳೆಯ ಬಿಲ್ಲಿನ ಹಾಗೆ ಸ್ಥಾಣುವಿನೆಳೆಯ ಚಂದ್ರನ ಚಂದದಿ (ಕವಿಶು. ೩೮-೦೩). ೫. (ಆಲಂ) ಪಾರುಮಾಡು; ರಕ್ಷಿಸು: ತೇಲಿಸೋ ಇಲ್ಲ ಮುಳುಗಿಸೋ ನಿನ್ನ ಪಾಲಿಗೆ ಬಿದ್ದನೊ ಪರಮಕೃಪಾಳೋ (ಪುರಂದ. ೨-೧೮೪ ಪಲ್ಲವಿ). ೬. (ಆಲಂ) ನಿವಾರಿಸು; ಪರಿಹರಿಸು: ಪೆಱರುಪದ್ರಂಗಳಂ ತೇಲಿಸುವವರ್ ತಾವೆ ಲೋಕಕಂಟಕರಾದರಿದ ಪರಿಹರಿಸದಿರ್ಪುದು ಬಾಲೇಂದುಮೌಳಿಗೇಂ ಸ್ಮರಣೆಯೇ (ಕಲಶು. ೦೬-೨೬). [ತೇಲು₁ (<ತೇಲ್) + – ಇಸು₃ ]

**ತೇಲೀಜು** (ನಾ). ನೀರಿನ ಮೇಲೆ ಹೊಟ್ಟೆ ಮೇಲಾಗಿ ಮಲಗಿರುವಂತೆ ಈಜುವುದು: ಅವರು ತೇಲೀಜನಲ್ಲಿ ಗಟ್ಟಿಗರು. (ರೂಢಿ).

[ ತೇಲು₁ (<ತೇಲ್) + ಈಜು₃ (< ಈಸು₄) ]

**ತೇಲು₁** ‘ತೇಲ್’ ನೋ.

**ತೇಲು₂** (ನಾ). ೧. ನೀರಿನ ಮೇಲೆ ಚಲಿಸುವಿಕೆ: (+). ೨. (ಉಕ) ಕೋಡಿ; ಹೆಚ್ಚಿನ ನೀರು: ನಿನ್ನಿನ ಮಳೆಯಿಂದಲೇ ಹಿರಿಕೆರೆಯು ತೇಲು ಬಿದ್ದು, ಇನ್ನೂ ತೇಲು ಹರಿಯುತ್ತಿದೆ (ರೂಢಿ). [ < ತೇಲ್ ]

**ತೇಲುಂಗ** ‘ತೆಲುಂಗ’ ನೋ.

**ತೇಲುಗಣ್ಣ** (ನಾ). ಬಸವಳಿದ ಕಣ್ಣುಗಳನ್ನು ಉಳ್ಳವನು: ನಿನ್ನ ಕಣಕಿ ಶ್ವಾಸಬಿತ್ತ ತೇಲುಗಣ್ಣನಾಗಿ ಚಿತ್ತವ್ಯಾಕುಲವಿರೆ ಹಗಲಿರುಳೂ ನಿದ್ದೆಯಿಲ್ಲ (ಜಂಕನ. ೨೨-೨೦). [ ತೇಲುಗಣ್ಣು + – ಅ₇ ]

**ತೇಲುಗಣ್ಣು** (ನಾ). ೧. ಸ್ಥಿರತೆ ತಪ್ಪಿದ ಕಣ್ಣು; ಬಸವಳಿದ ಕಣ್ಣು: ತೇಲುಗಣ್ಣು ಹಾಕುತ್ತ ನಡೆದ ಅವನಿಗೆ ನವಚೈತನ್ಯ ಬಂದಂತಾಯಿತು (ಕಂದುಟ. ೩೯); ಆ ಭಯಂಕರದೃಶ್ಯದಿಂದ ತನಗೆ ತೇಲುಗಣ್ಣಾದು ದಾಗಿಯೂ ಹೇಳಿ . . . ತನ್ನ ಕಥೆ ಮುಗಿಸಿದಳು (ಪುನರು. ೨೦೯). ೨. ಚಂಚಲವಾದ ಕಣ್ಣು: ಆ ಪಾಂಡಿತ್ಯವನ್ನು ಗೌರವಿಸುತ್ತ ಮೂರ್ತಿಯ ತೇಲುಗಣ್ಣುಗಳನ್ನೆ ನೋಡುತ್ತಿರುವ ಚಪಲ ಯಾಕೆ? (ಪಾತ್ರಲ್ಯ. ೨೨೪).

ತೇಲುಗಣ್ಣು ಮೇಲುಗಣ್ಣು=೧. ಆಯಾಸಗೊಂಡ ಸ್ಥಿತಿ; ಬಳಲಿರು ವಿಕೆ: ಏಕಾದಶೀಭಕ್ತವುಂಡಳಿ ಅನಶನಸ್ಥಿತಿಯಲ್ಲಿ ಕುಳಿತು, ಮಲಗಿ ತೇಲುಗಣ್ಣುಮೇಲುಗಣ್ಣು ಹಾಕತೊಡಗಿತ್ತು (ದೀಪಹ. II, ೩). ೨. ಸಾಯುವ ಸ್ಥಿತಿ: ಸ್ವಲ್ಪ ಹೊತ್ತಿಗೆ ಮುಂಚೆ ಅವರ ಸ್ಥಿತಿ ತೇಲು ಗಣ್ಣು ಮೇಲುಗಣ್ಣು ಆಗಿತ್ತು (ರೂಢಿ).

[ ತೇಲು₁ (< ತೇಲ್) + ಕಣ್ಣು (<ಕಣ್) ]

**ತೇಲುನೋಟ** ‘ತೇಲ್ನೋಟ’ ನೋ.

**ತೇಲುನೋಟಕ** (ನಾ). ಮೇಲುಮೇಲಿನದನ್ನು ಮಾತ್ರ ನೋಡು ವವನು; ಆಳವಾಗಿ ಅಭ್ಯಾಸ ಮಾಡದವನು: ಕವಿ ಶೃಂಗಾರವನ್ನು ಹೆಚ್ಚು ಬಳಸಿರುವುದಾಗಿ ತೇಲುನೋಟಕರಿಗೂ ಅನಿಸದಿರದು (ನಂಜುಂಡ. ೧೦೦). [ ತೇಲು₁ (<ತೇಲ್) + ನೋಟಕ ]

**ತೇಲುಪಟ್ಟಿ** (ನಾ). ಸಮುದ್ರಪ್ರಯಾಣದಲ್ಲಿ ಹಡಗಿನಲ್ಲಿಟ್ಟಿರುವ ಪ್ರಾಣರಕ್ಷಣೆಯ ಸಾಧನಗಳಲ್ಲಿ ಒಂದು; ತೇಲುವುದಕ್ಕೆ ಸಹಾಯ ವಾಗುವಂಥ ಸಾಧನ: ಪ್ರತಿಯೊಬ್ಬರಿಗೂ ಒಂದೊಂದು ತೇಲುಪಟ್ಟಿ ಯನ್ನು ಒದಗಿಸಿರುವರು (ಕಪಶು. ೫-೦೨೩).

[ ತೇಲು₁ ( < ತೇಲ್) + ಪಟ್ಟಿ₃ (< ಪಟ್ಟಿ₂) ]

**ತೇಲುಮನೆ** (ನಾ). ನೀರಿನ ಮೇಲೆ ಚಲಿಸುವ ಮನೆ; ದೋಣಿ; ತೆಪ್ಪ: ಸುತ್ತಲೆಲ್ಲ ತನ್ನವರ ‘ತೇಲುಮನೆ’ಗಳು, ಕೆಳಗೆ ಅನ್ನವನ್ನು ನೀಡುವ ತಾಯಿಕಡಲು (ಪುಂಗಾಮು. ೬೪).

[ ತೇಲು₁ ( < ತೇಲ್) + ಮನೆ ]

**ತೇಲುಮಾತು** (ನಾ). ಅಮುಖ್ಯವಾದ ಮಾತು; ಗೌಣವಾದ ಮಾತು; ಹಾರಿಕೆಯ ಮಾತು: ಛೆ, ಛೆ, ಇದೆಲ್ಲ ಬರೀ ತೇ ಲು ಮಾ ತು! (ಹೊಸಕ್ಕ. ೫೬). [ ತೇಲು₁ (< ತೇಲ್) + ಮಾತು₁ ]

**ತೇಲ್ನೋಟ, ತೇಲುನೋಟ** (ನಾ). ಅಸ್ಥಿರವಾದ ನೋಟ: ಐದು ತೇಲ್ನೋಟದಿಂದಾಸ್ಯವ ನಿರೀಕ್ಷಿಸಲು ಕಂದರ್ಪ ಕಂಡು (ನವಮೋ. ೫-೨೦). ತೇಲುನೋಟ: ಅವಳತ್ತ ತೇಲುನೋಟದಿಂದ ನೋಡಿದನು (ರೂಢಿ). [ ತೇಲ್ + ನೋಟ ]

**ತೇಲ್ಮುಗಿ** (ಕ್ರಿ). ನಿಧಾನವಾಗಿ ಮುಚ್ಚು: ಕರಣದಿಂ ಬೆರಸಿ ಬೋಸರಿಸಿ ದೈನ್ಯದಿ ನಾಮೋಚ್ಚರಣೆಗೈವುತ ನೇಮಂಗಳಿಗೆ ಕರವಿಡೆ ತೇಲ್ಮುಗಿವರೆ ಗಣ್ಬುವಿಮ್ಮಿಱಿದು ತಂಪೂರೆದೊಗುವರಲುಬುಜಲವು (ಭೃರಸೂ. ೨೯೬).

[ ತೇಲ್ + ಮುಗಿ ]

**ತೇಲ್ಮೆ** (ನಾ). ನೀರಿನ ಮೇಲೆ ಚಲಿಸುವಿಕೆ: “ತೇಲುವುದು: ತೇಲ್ಮೆ” (Floatage. ಇಂಕನಿ). [ ತೇಲ್ + – ಮೆ₁ ]

**ತೇವ** (ನಾ). ಹಸಿ; ಒದ್ದೆ; ಆರ್ದ್ರತೆ: “ತೇವಂ = ಆರ್ದ್ರಂ” (ಕಾಕಕ್ಕ. ೦೦೫): ದ್ರಾಕ್ಷೆ, ಖರ್ಜೂರ . . . ತೇವ ತಾಗಿದರೆ ಹಾಳಾಗಬಹುದು (ಅಡುಸಾ. ೫೪); ಕೆಸರುಗದ್ದೆಯ ವಿನಾ ಭೂಮಿಗಳನ್ನು ಉಳುವಾಗ ಭೂಮಿಯಲ್ಲಿ ತೇವ ಹೆಚ್ಚಾಗಿರಬಾರದು (ವ್ಯವಸು. ೦೪): ದೀದಿಯ ಕಣ್ಣುಗಳು ತೇವವಾಗಿರುವುದು ನನ್ನ ಕಣ್ಣಿಗೆ ಬಿದ್ದಿತು (ಬಾಣಿಳ. ೫).

[ <ಸಂ. ತೇಮ ]

**ತೇವಗೊಳ್ಳು** (ಕ್ರಿ). ಒದ್ದೆಯಾಗು; ಹಸಿಯಾಗು: ಬಡಬ್ರಾಹ್ಮಣನ ಒಣಗಿದ ನಾಲಗೆ ಆಗಲೇ ತೇವಗೊಂಡಿತ್ತು (ಪರ್ವಸ. ೦೩೬): ಭಟ್ಟನಿಯ ಕಣ್ಣುಗಳು ತೇವಗೊಂಡವು (ಬಾಣಿಳ. ೦೪೨); ಕಣ್ಣುಗಳತ್ತರೆ ಬಹು ಬೇಗ ಮೂಗುವೆ ತಾನಾಗಿ ತೇವಗೊಳ್ಳುವುದು (ಇಂಚಾಪ. ೨೩೬-೬೦).

[ ತೇವ + ಕೊಳ್ಳು₁ (<ಕೊಳ್₁) ]

**ತೇವಟಗೆ** ‘ತಿವದಿಗೆ’ ನೋ.

**ತೇವನ** (ನಾ). ಒಂದು ಬಗೆಯ ಮೇಲೋಗರ: “ತೇವನ – ತೇಮನ = ಒಂದು ಬಗೆ ಮಜ್ಜಿಗೆ, ತೇವ” (ತರ್ಕಕೋ. ೧೯); “ತೇಮನಂ, ನಿಷ್ಠಾನಂ– ೨ ತೇವನವೆಂಬ ಮಜ್ಜಿಗೆಪಳಿದ್ಯ, ಹಸೀಮಜ್ಜಿಗೆ . . . ಚಟ್ನಿ” (ಸಿದ್ಧಾಂಕಿ. ೨೪೬). [ <ಸಂ. ತೇಮನ ]

**ತೇವಾರ** (ನಾ). ತಮಿಳುನಾಡಿನ ಪ್ರಾಚೀನ ಶಿವಶರಣರು ಶಿವನನ್ನು ಕುರಿತು ರಚಿಸಿದ ಭಕ್ತಿಗೀತೆಗಳ ಸಂಗ್ರಹ: ಕನ್ನಡಗೀತಾಸಾಹಿತ್ಯದ ಮೇಲೆ ತಮಿಳುನಾಡಿನ ಶಿವಶರಣರ ತೇವಾರಗಳ ಪ್ರಭಾವ ಅಪರಿಮಿತ ವಾಗಿ ಆಗಿರುವುದು (ಅಪಕಂ. ೧೪ ಪೀಠಿಕೆ); ವೀರಶೈವರು ಶಿವಶರಣರ ವಚನಗಳನ್ನೂ ತಮಿಳು ಶೈವಸಿದ್ಧಾಂತದವರು ತೇವಾರಗಳನ್ನೂ ಪ್ರಮಾಣ ಗಳಾಗಿ ಅಂಗೀಕರಿಸಿದ್ದಾರೆ (ಭಾರದ. ೨೦೦). [ ←ತಮಿ. ತೇವಾರ ]

**ತೇವಿಸು** (ಕ್ರಿ). ತೇವಮಾಡು; ಒದ್ದೆಯಾಗುವಂತೆ ಮಾಡು: ಜಲಿತ = ತೇವಿಸಿದವು (ಕಾಕಕ್ಕ. ೦೪೬). [ ತೇವ + – ಇಸು₃ ]

**ತೇವುಳ್** 'ತೇವಂಳಂ' ನೋ.

**ತೇವುಳಿ** 'ತೇವಂಳಂ' ನೋ.

**ತೇವುಳು** 'ತೇವಂಳಂ' ನೋ.

**ತೇಹ** 'ತೇಗ$_{2}$' ನೋ.

**ತೇಳ್** 'ತೇಟ್$_{2}$' ನೋ.

**ತೇಳು** 'ತೇಟ್$_{2}$' ನೋ.

**ತೇಳ್ದೇರ** 'ತೇಟ್ದೇರ' ನೋ.

**ತೇಱಿತು** (ನಾ). ಪುಷ್ಟಿಯಾದುದುಂ; ಬಲವಾದಂದುಂ; ಗಟ್ಟಿಯಾದುದುಂ: ಘನಮಪ್ಪುದು ಗಂಭೀರಸ್ವನಮಪ್ಪುದು ತೇಱಿತವಪ್ಪುದುತ್ಸಾಹೋನ್ಮೀಲನಮಪ್ಪುದು ಹೇಷಿತಮದು ಧನಕನಕಸಮೃದ್ಧಿಮಾಡಲಾರ್ಕುಂ ಜಯಮಂ (ಅಶ್ವಶಾ. ೬-೨೫).

**ತೇಱಿದಂ** = ಪುಷ್ಟನಾದವನಂ ; ಬಲಿಷ್ಠ : "ತೇಱಿದನೆನೆ ಪುಷ್ಟಿಯಾದಂ" (ಕರ್ಣಾನಿ. ೬೦).

[ ದೇ.॥ ತಮಿ. ಮಲ. ತೇಜ್ಜ = ಉತ್ಕರ್ಷ, ಬೆಳವಣಿಗೆ ]

**ತೇಟ್$_{1}$** (ಕ್ರಿ). ನಾಶವಾಗು ; ಅಳಿ (?): ಬೀಟುವಿನಂ ಕಣ್ಣಾಳ್ಕೆ ನಿರಾಳಂಬನಮಾಗೆ ಮನದ ಮೋಹಸ್ತಂಭಂ ಬೀಟೆ ವಿಷಯಾನುರಾಗಂ ತೇಟೆ ನಭಸ್ಥಲದೊಳಾದುದುಲ್ಕಾಪಾತಂ (ಅಜಿತಪು. ೬-೪೬).

[ P ಇದು 'ಕೀಟ್' ಎಂಬುದರ ಅಪಲಿಖಿತವಿರಬಹುದು ]

**ತೇಟ್$_{2}$**, **ಚೇಳಂ$_{1}$**, **ಚೇಟ್**, **ಚೋಳಂ**, **ತೇಳ್**, **ತೇಳು**, **ತೇಟು** (ನಾ). ಬಾಲದಲ್ಲಿ ಕೊಂಡಿಯನ್ನು ಉಳ್ಳ ಒಂದುಂ ಬಗೆಯಂ ವಿಷಜಂತುಂ ; ವೃಶ್ಚಿಕ: "ದ್ರುತಃ, ಅಳಿಃ, ವೃಶ್ಚಿಕಃ –ಈ ೩ ತೇಟ್ (ಚೇಳು)" (ಹಲಾಯು. ೦೦೬-೨೩) ; "ತೇಟೆಂದೆನೆ ವೃಶ್ಚಿಕದೊಳ್" (ಕರ್ಣಾನಿ. ೮೦): ಪುಟ್ಟಿದ ತಾಣಕ್ಕಟಿವಂ ಪುಟ್ಟಿಸಲೊಡರಿಸುವ ಕಿಚ್ಚು ತೇಟ್ ಕ್ರಿಮಿಕುತ್ತಂ ಪುಟ್ಟುವವೋಲ್ ದುಷ್ಕೃತದಿಂ ಪುಟ್ಟಿದನೀ ಪಾಪಕರ್ಮನೆನ್ನಯ ಬಸುಱಿಂ (ಕಾದಂಬ. ४೮೨) ; ಪರ್ದಿನಂತೆ ಕೀಟ್ಟಿರ್ ತೇಟಿನಂತೆ ನೋಯಿಸುವರ್ (ಧರ್ಮಾಮೃ. ೩-೬೩) ; ತಿಂದ ತೇಟಿನಂತೆಯುಂ ಪೊಡೆವ ಸಿಡಿಲಂತೆಯುಂ . . . ಪೋದಳ್ (ಲೀಲಾವ. ೦४-೦೦೬ ವ); ಕೇಡುಗಾಲಕ್ಕೆ ತಾಮೊಗೆವರ್ತೇಟಿಗೊಗೆವಂತಿವರ್ನಿನಗೆ (ಅನಂಪು. ೦೩-४೯) ; ಮಾಡಿದ ನೇಕೆಯೊ ಮೇಲಂ ನೋಡದೆ ಬಿದಿ ವಿಷಮಫಣಿಗಣಲ್ಗಳ ಪಲ್ಲಂ ರೂಢಿಸಿದ ತೇಟ್ಗೆ ಮುಳ್ಳಂ ನಾಡಱಿಕೆಯ ದುರ್ಜನಂಗೆ ನಿಡುನಾಲಗೆಯಂ (ಧರ್ಮಪಾ. ೦-೬೨) ;ಪುದಿದಿರ್ಪುದು ತೇಟ್ಗೆ ವಿಷಂ ತುದಿವಾಲದೊಳ್ (ಚಿಕವಿ. ೦-೩೫). **ಚೇಳು$_{1}$** : ಊಱದ ಚೇಳಿನ ವಿಱದ ಬೇನೆಯಲ್ಲಿ ಮೂಱುಲೋಕವೆಲ್ಲಾ ನರಳಿತ್ತು (ಅವಚಂ. ೮४-೩೬೫) : ಚೇಳಿಂಗೆ ಬಸುಱಾಯಿತ್ತು ಕಡೆ ದಾಳಿಗೆ ಫಲವಾಯಿತ್ತು ಕಡೆ (ಬಸವ. ೬೬४); ಚೇಳ ಬೆನ್ನಿನೊಳೊಡೆದು ಮೂಡುವ ಬಾಲ ವೃಶ್ಚಿಕದಂತೆ (ಕುಮಾ.ಭೀ. ೦೦-೯) : ಚೇಳಿನ ಮಂತ್ರ ಬಾರದವನು ಹಾವಿನ ಗುದ್ದಿಗೆ ಕೈ ಹಾಕಿದನಂತೆ (ಗಾದೆ) ; ಹಾವಿಗೆ ಹಲ್ಲು, ಚೇಳಿಗೆ ಬಾಲ (ಗಾದೆ). **ಚೇಟ್** : "ದ್ರುತಮಾಲಿ ವೃಶ್ಚಿಕಂ ಕ್ರೂರಚೇಟಿನಿಕಂ" (ಮಂಗರಾ. ೦೦೯-೫); ಚೇಟ್ ಚಿಕ್ಕದೆಂದಟ್ಟಿಱಿಂ ತೆಗೆಯಲ್ ಕಚ್ಚದೆ (ಸೋಮೇಶ. ४೦). **ಚೋಳು** : ಚೋಳಿಗೆ ಪಾರುಪತ್ಯ ಕೊಟ್ಟ ಹಾಗೆ (ಗಾದೆ). **ತೇಳ್** : ಅಹಿ ಕೊಣ್ಡಡೆ ತೇಳ್ ತಿನ್ದಡೆ (ಎಇ. XII, ೨೮೨-೦೯೩ ; 1077). **ತೇಳು** : ವೇಣು ಕದಳಿ ತೇಳು ಕರ್ಕಟಗಳು ಕೇಡು ಮಾಣದೆ ತಮಗಾಗುವಲ್ಲಿ ಹುಣಿಸೆ ಫಲವಾಗುವಂತೆ ನೀ ಮಕ್ಕಳ ಜಾಣ ಪಡದೆ ಕೆಡುವುದಕೆ (ಅನಂಚ. ೨೦-೧೨೬) : ನಾನೊಂದು ತೇಳಾಗಿ, ಆವೆಯಾಗಿ, ಅಂತಹ ಇನ್ನೇನಾದರೂ ಆಗಿ ಹುಟ್ಟಬಾರದಾಗಿದ್ದಿತೇನು (ಸುಗುಗಂ. ೦೦४-೬). **ತೇಟು**: ಸ್ಪರ್ಶ ರಸ ಗಂಧಂಗಳೆಂಬೀ ಮೂಱನಱಿವ . . . ವೇನು ಸೀರು ತೇಟು ಇಂದ್ರಗೋಪ ತೇರಂಟೆ (ಪಸಾರ. ४೯).

**ತೇಟ ಬಾಲ** = ೧. ಚೇಳಿನ ಬಾಲ : "ಅಳಂ, ವೃಶ್ಚಿಕಲಾಂಗೂಳಂ – ಈ ೨ ತೇಟ (ಚೇಳ) ಬಾಲಂ" (ಹಲಾಯು. ೦೦೬-೨೩). ೨. ಒಂದುಂ ಬಗೆಯಂ ಸಸ್ಯ ; "ಕತ್ತರಿ" (ಚಕುನಿ. ೬. I, ೬೩).

[ ದೇ.॥ ತಮಿ. ಮಲ. ತೇಳ್ ; ತುಳು. ತೇಳ್, ತೇಲ್, ಚೇಳ್ ; ಕೊಡ. ತೇಳೀ ; ತೆಲು. ತೇಲು ; ಮಲ್ತೊ. ತೇಲೆ ]

**ತೇಟು** 'ತೇಟ್$_{2}$' ನೋ.

**ತೇಟ್ಕುಟಿಗ** (ನಾ). ಚೇಳಿನ ವಿಷವನ್ನು ನಿವಾರಿಸುವ ಒಂದು ಬಗೆಯ ಮೂಲಿಕೆ: ಜಲದಿಂದಂ ತೇಟ್ಕುಟ (ಡಿ) [ ಟ ] ಗನ ನೆಲಗುಂಬಳವೆಂಬಿವಂ ಸಮಂಗೊಂಡರೆದಿಂ ಪಲವಱಿಂ ಕುಡಿಸಲ್ಕಂ ಖಲ ವೃಶ್ಚಿಕ ವಿಷಮುದಾಕ್ಷಣಂ ಪಱಿಪಡುಗುಂ (ಖಮದ. ೧೧-೨೬).

[ ತೇಟ್$_{2}$ + – ಕುಟಿಗ$_{1}$ ]

**ತೇಟ್ದೇರ**, **ತೇಳ್ದೇರ**(ನಾ). ಚೇಳನ್ನು ವಾಹನವಾಗಿ ಉಳ್ಳವನಂ; ಭೈರವ: "ತೇಟ್ದೇರಂ ಬಿಗುರ್ವರಿಜಂ – ಈ ೨ ಭೈರವಂಗೆ ಪೆಸರ್" (ಕಶಸಾ. ೦-೮) ; "ಬಿಗುರ್ವರಿಜಂ ತೇಟ್ದೇರಂ ಬಗೆಯಲ್ಕಂ ಭೈರವಂಗೆ" (ಕವಿಕಂ. ೨೩) ; ಪೊದರ್ದಲೆಯ ಕರ್ಮೋಗದ ತೇಟ್ದೇರನೊಂದು ಪೊಡರ್ಪಿನ . . . ಜವನ ದೂಱುಗಾಱರ ಜಂಗುಳಿ (ರಾಮಾಶ್ವ. ೬೯-೧೯). **ತೇಳ್ದೇರ** : "ಭೈರವಂಗೆ ತೇಳ್ದೇರನೆಂಬ.ವ ಪೆಸರ್" (ಕಶರ. ४೮).

[ ತೇಟ್$_{2}$ + ತೇರ್$_{2}$ + – ಅ$_{7}$ ]

**ತೈ** (ನಾ). ಕುಣಿತದ ತಾಳವನ್ನು ಸೂಚಿಸುವ ಒಂದುಂ ಅನುಕರಣ ಶಬ್ದ : (ಕ).

**ತೈಜಸ** (ಗು). ೧. ಹೊಳಪುಳ್ಳ; ಪ್ರಕಾಶಮಾನವಾದ. (ನಾ). ೨. ಕಾಂತಿ ; ಹೊಳಪು ; ಪ್ರಕಾಶ : ತೀಡುವೆಲರಿನ ಗುಂಪು ತೀವ್ರಾಭ್ರಗಳ ಗುಂಪು ಮೂಡಿ ಬಹ ಚಪಲಾತಿಶಯದಿಂಪು ತೈಜಸದಿ ಕೂಡಿರುವ ವೈಭವದ ಲಂಪು . . . ಚಿರಮೆನುತ ಲಾಲಿಸುವ ಮೂಢರಿಂಗೇನೆಂಬೆನು (ವೆಂಕಾಚಾ. ೨-೯-೨೩) : ಮಿಂಚಿ ರೋಮಾಂಚನಿಸಿತೆಂಬವೋಲ್ ಮೊಗಕೆ ತುಳ್ಕಿದುದು ತೈಜಸಂ (ಶ್ರೀರಾಮಾ. ೩೯೯-೯೯೬). ೩. ತೇಜಸ್ಸಿಗೆ ಸಂಬಂಧಿಸಿದ ಇಂದ್ರಿಯ ; ನಯನೇಂದ್ರಿಯ ; ಕಣ್ಣು : ರೂಪವುಳ್ಳ ನಯನವು ತೈಜಸ (ಭಾತತ್ತ್ವ. ೩೬೩); P ಶಾಸ್ತ್ರಗಳಲ್ಲಿ ಘ್ರಾಣಕ್ಕೆ ಭೂಮಿ, ರಸನಕ್ಕೆ ಜಲ, ನಯನಕ್ಕೆ ತೇಜಸ್ಸು, ಸ್ಪರ್ಶಕ್ಕೆ ವಾಯು, ಶ್ರವಣಕ್ಕೆ ಆಕಾಶ –ಹೀಗೆ ಪಂಚೇಂದ್ರಿಯಂಗಳಿಗೂ ಪಂಚಭೂತಗಳಿಗೂ ಸಂಬಂಧವನ್ನು ಹೇಳಿದೆ. ४. ಲೋಹ : "ಎಲ್ಲ ಲೋಹಂ ತೈಜಸಂ" (ಮಂಗರಾ. ೩೦-೫). ೫. [ತತ್ತ್ವಶಾ] ಮೂರಂ ವಿಧವಾದ ಅಹಂಕಾರತತ್ತ್ವಗಳಲ್ಲಿ ಒಂದು ; ರಜೋಗುಣಪ್ರಧಾನವಾದ ಅಹಂಕಾರ : ಮತ್ತೆ ಆದಹಂಕಾರವದಱಿಂ ಸತ್ತ್ವದಿಂ ವೈಕಾರಿಕವು ತಿಳಿ ಮತ್ತೆ ತೈಜಸ ರಜದಿ ತಾಮಸದಿಂದ ಭೂತಾದಿ (ಅಮೃತ. ४-೦೦) ; ವೈಕಾರಿಕ, ತೈಜಸ, ತಾಮಸವೆಂದು ಮೂರು ವಿಧ ಅಹಂಕಾರತತ್ತ್ವಗಳಿರುವುವು (ಹಸಾರ. ೦४-೧ ತಾತ್ಪರ್ಯ) ; ಸಾತ್ತ್ವಿಕಾಹಂಕಾರಕ್ಕೆ ವೈಕಾರಿಕವೆಂದೂ ರಾಜಸಾಹಂಕಾರಕ್ಕೆ ತೈಜಸವೆಂದೂ ತಾಮಸಾಹಂಕಾರಕ್ಕೆ ಭೂತಾದಿಯೆಂದೂ ನಾಮಾಂತರಗಳು ಶಾಸ್ತ್ರದಲ್ಲಿ ಹೇಳಿವೆ (ತತ್ತ್ವಸು. ೬). ೬. (ಸಂಖ್ಯಾದರ್ಶನದ ಮೇರೆಗೆ) ಸತ್ತ್ವಗುಣಪ್ರಧಾನವಾದ ಅಹಂಕಾರ : ತೈಜಸಂ ವೈಕಾರಿಕಾಯತ್ತ ಭೂತಾದಿಯಂದಹಂಕಾರದಿಂತೀಯುವನಿಯಲ್ಲಿ ಮೂದೆಱನಾದುದಾ ತೈಜಸವೆ ಸಾತ್ತ್ವಿಕದ ಗುಣವು (ವೀಕೃಪು. ೬-೫-೧೦) ; ತೈಜಸದಲ್ಲಿ ಸತ್ತ್ವಗುಣವು ಪ್ರಧಾನವಾಗಿಯೂ ವೈಕೃತದಲ್ಲಿ ರಾಜಸಗುಣವೂ ಪ್ರಧಾನವಾಗಿ ಇರುವುವು (ಭಾತತ್ತ್ವ. ೬೬४). ೭. ಸ್ವಪ್ನಾವಸ್ಥೆಯನ್ನು ಅನುಭವಿಸುವ ಜೀವ ; ಆತ್ಮನ ಒಂದು ಅವಸ್ಥೆ : ಸೂಕ್ಷ್ಮಶರೀರದಲ್ಲಿರುವ ಜೀವನಿಗೆ ತೈಜಸನೆಂದೂ ಅಂತರಾತ್ಮನೆಂದೂ . . . ಹೇಳುವರು (ಶಿವಾಸೂ. ४೯) ; ಈ ವಿಧದವಸ್ಥೆ

ಯಲಿ ಹೊಳೆಯುವ ಜೀವನೆನಿಸುತ ವಿಶ್ವ ತೈಜಸನೋವಿ ಪ್ರಾಜ್ಞನೆನಿಪ್ಪ ಪೆಸರನು ತಿಳಿದು ತೋಱುವನು (ಅಮೃತ. ೯-೦೨) : ಸೂತ್ರವೈಶ್ವಾನರರಧಿಗತವಿಶ್ವಾತ್ಮನುಂ ತೈಜಸಂ ಪ್ರಾಜ್ಞಕನಾದಾ ನೀನೆ (ಶಬಶಂ. ೫-೩೫); ಈ ರೀತಿಯಾದ ಪ್ರಾಜ್ಞ ತೈಜಸ ವಿಶ್ವರೆಂಬ ಹಂತಗಳನ್ನು ಹತ್ತಿ ಶಿವನೇ ಆಗುವವನು (ಭಾಶರ. ೨೦೭); ೫ ಶಾಸ್ತ್ರಗಳಲ್ಲಿ ಸ್ಥೂಲ ಶರೀರದಲ್ಲಿರುವ ಜೀವನಿಗೆ ವಿಶ್ವನೆಂದೂ ಸೂಕ್ಷ್ಮ ಶರೀರದಲ್ಲಿರುವ ಜೀವನಿಗೆ ತೈಜಸನೆಂದೂ ಕಾರಣಶರೀರದಲ್ಲಿರುವ ಜೀವನಿಗೆ ಪ್ರಾಜ್ಞನೆಂದೂ ಹೇಳಿದೆ ೮. [ಜೈನ] ಔದಾರಿಕ, ವೈಕ್ರೀಯಕ, ಆಹಾರಕ, ತೈಜಸ ಮತ್ತು ಕಾರ್ಮಣಗಳೆಂಬ ಐದು ಬಗೆಯ ಶರೀರಗಳಲ್ಲಿ ಒಂದು; ಸ್ಥೂಲ ಶರೀರದಲ್ಲಿ ದೀಪ್ತಿಯನ್ನುಂಟುಮಾಡುವಂಥ ಸೂಕ್ಷ್ಮ ಶರೀರ: ಅನುಕ್ರಮದಿನಯ್ದು ಭೇದದಿನೌದಾರಿಕ ವೈಕ್ರೀಯಕ(ಮಾ)ಹಾರಕ ತೈಜಸ ಕಾರ್ಮಣಂಗಳವು ತನುವೆನಿಕುಂ (ಸುಕುಮಾ. ೯-೦೦) : ಔದಾರಿಕ, ವೈಕ್ರೀಯಕ, ಆಹಾರಕ, ತೈಜಸ, ಕಾರ್ಮಣ ಎಂಬ ಐದು ತರದ ಶರೀರಗಳುಂಟು . . . ತೇಜಸ್ಸು ಹುಟ್ಟುವ ಯೋಗ್ಯತೆಯುಳ್ಳ ಶರೀರವು ತೈಜಸವು (ಜೈನಧ. ೩೨). [ ಸಂ. ]

**ತೈಜಸಾವರ್ತನಿ** (ನಾ). ಲೋಹವನ್ನು ಕರಗಿಸುವ ಮೂಸೆ: "ತೈಜಸಾವರ್ತನೀ, ಮೂಷಾ – ೨ ಚಿನ್ನ ಮೊದಲಾದ್ದು ಕರಗಿಸುವ ಮೂಸೆಯ ಪೆಸರು" (ಸಿದ್ಧಾಂತಿ. ೩೬೦). [ ಸಂ. ತೈಜಸಾವರ್ತನೀ ]

**ತೈತಿಕ್ಕು** (ಕ್ರಿ). (?) : ಸಂಕಲಿನಾಚಯರ ನೋಟದೊಡನೆ ತನ್ನ ನೋಟಂ ಘಳಿಲನೆ ಸಂದಿಸೆ . . . ನಡೆಗೆಟ್ಟು ಕಂಪಿಸಿ ನಸುಬೆಮರ್ತು ಹೊಸ ನೋಟಂ ಹೋರಟೆಗುಟ್ಟ ತೈತಿಕ್ಕಿ[ಪಾಠಾಂ. ಕೈತೆಕ್ಕಿ]ತಳರದೆ ತಂತಮ್ಮೊಳ ಪೊಕ್ಕ ರೂಪು ಮಗುಳಲಾಱದೆ ನಟ್ಟು ನೋಡುತ್ತಿರಲ್ (ಸಂಬಿರ. ೦೩-೫೪). [ ೫ಇದು 'ಸೈತಿಕ್ಕು' ಎಂಬುದರ ಅಪಲಿಖಿತವಿರಬಹುದು ]

**ತೈತಿಕ್ಷೆ** (ನಾ). ಸಹನೆ; ತಾಳ್ಮೆ: ಮಿತಿಯನರಿತಾಶೆ, ಸಮುಚಿತವ ಮರೆಯದ ಯತ್ನ ತೈತಿಕ್ಷೆ ಕಷ್ಟಾಂಶದಪರಿಹಾರ್ಯತೆಗೆ (ಮಂಕುತಿ. ೮೬೦). [ ಸಂ. ತೈತಿಕ್ಷ ]

**ತೈತಿಲ** (ನಾ). ೧. ಖಡ್ಗಮೃಗ; ಘೇಂಡಾಮೃಗ. ೨. ಒಬ್ಬ ದೇವತೆ. ೩. ಒಂದು ದೇಶದ ಹೆಸರು: ಬಿಸಕಾಂಭೋಜಕ ಬಾಹ್ಲೀಕ ಸ್ಯಂಧ ವಾರಟ್ಟ ತೈತಿಲಂ ವಾನೇಯಂ ಮೊದಲ ಕ್ಷೇತ್ರದ ಹಯಂಗಳ ಪೆಸರೆ ಪೆಸರ್ ಜಾತಿಗಳ್ ಗುಣಾಧಾರಂಗಳ್ (ಅಶ್ವಶಾ. ೬-೭೬). ೪. [ಜ್ಯೋತಿ] ಹನ್ನೊಂದು ಕರಣಗಳಲ್ಲಿ ನಾಲ್ಕನೆಯದು. [ ಸಂ. ]

**ತೈತ್ತಿರ** (ನಾ). ೧. ಖಡ್ಗಮೃಗ; ಘೇಂಡಾಮೃಗ. ೨. ಗೌಜಲುಹಕ್ಕಿ; ತಿತ್ತಿರಿ. ೩. ಗೌಜಲುಹಕ್ಕಿಗಳ ಸಮೂಹ, ಗುಂಪು. [ ಸಂ. ]

**ತೈತ್ತಿರೀಯ** (ಗುಂ). ೧. ತಿತ್ತಿರಿಶಾಖೆಗೆ ಸೇರಿದ: ತೈತ್ತಿರೀಯ ಆರಣ್ಯಕವಂತೂ ಪ್ರತಿಮಾಶಿಲ್ಪಿಗಳಾದ ತ್ವಷ್ಟಾ, ವಿಶ್ವಕರ್ಮ ಮತ್ತು ತಕ್ಷಪರ ಹೆಸರುಗಳನ್ನು ಸ್ಪಷ್ಟವಾಗಿ ಹೇಳುವುದು (ಭಾಶರ. ೩೦೦). (ನಾ). ೨. ಈಶ, ಕೇನ, ಕಠ, ಪ್ರಶ್ನೆ, ಮುಂಡಕ, ಮಾಂಡೂಕ್ಯ, ತೈತ್ತಿರೀಯ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕಗಳೆಂಬ ದಶೋಪನಿಷತ್ತುಗಳಲ್ಲಿ ಒಂದು; ತಿತ್ತಿರಿ ಶಾಖೆಗೆ ಸೇರಿದ ಉಪನಿಷತ್ತು. [ಸಂ.]

**ತೈನಾತಿ** (ಗು). ೧. ನಿಯುಕ್ತ ಮಾಡಿದ; ನೇಮಿಸಿರುವ: ಮಹಾಗಣದ ತಾಬೆಯಲ್ಲಿ ತೈನಾತಿ ಜವಾನರು ಕುಳವಾಡಿಗಳು . . . ಮುಂತಾದ ಚಾಕರರು ಉಂಟು (ಕಥಾಮಂ. IV, ೩೦); ತಾಲ್ಲೂಕಿನ ತೈನಾತಿ ಜವಾನನೊಬ್ಬ ಅವನನ್ನು ಎದುರುಗೊಂಡನು (ಸಾವ್ಯ. VI, ೫೯); ಟಿಳಕರ ತೈನಾತಿ ನೌಕರರಲ್ಲಿ ಭಿಸ್ತಿ ಎಂ ಪಕಾಲಿಯಮನಿದ್ದ (ಸ್ಮೃತಿಚಿ. ೩೦೩). (ನಾ). ೨. ಪರಿಚರ್ಯೆ; ಸೇವೆ; ಚಾಕರಿ; ಊಳಿಗ: ಕತ್ರಿ ಗೋಪಾಲಯ್ಯ ಅರಸಿನವರ ತೈನಾತಿಯಲ್ಲಿಯಿದ್ದರು (ಹೈದರ. ೩೦); ಮುಂದೆ ಇವಳನ್ನು ಬಾದಶಹ ಬೇಗಮಳು ತನ್ನ ಖಾಸ ತೈನಾತಿಗೆಂದು ಕರಸಿಕೊಂಡಳು (ಹಂಸಾ. ೦೩೨); ತೈನಾತಿಗೊಂದು ಮನೆಯ ಆಳೂ ಹೋಗಲಿತ್ತು (ದೀಅಹ. I, ೬೦); ನನ್ನ ತೈನಾತಿಯಲ್ಲಿ ಷೇಕ್ ಮೊಹದಿನ್ ಎಂಬ ಕಾನ್ಸ್ಟೇಬಲ್ ಇದ್ದ (ಕಲಿತ. ೦೦೯). ೩. ಊಳಿಗಕ್ಕೆ ಇರುವವನು; ಚಾಕರ; ಕೈಯಾಳು: ಕಿಗ್ಗಟ್ಟನಾಡ ಮೋದೀಖಾನೆಯಲ್ಲಿ ಜೋಪಾನದಿಂದ ಮಡಗಿಸಿ ಅದಕ್ಕೆ ಒಬ್ಬ ತೈನಾತಿ ಮಾಡಿ (ರಾಜೇಂದ್ರ. ೬೭); ಜತೆಗೆ ತೈನಾತಿಯೊಬ್ಬ (ಕುಡಿಕೊ. ೩೪); ಅವರಿಬ್ಬರ ಬೆನ್ನ ಹಿಂದೆ ತೈನಾತಿಗಳು ಹೊರಡುವಂತೆ ಹಿಂದಿನಿಂದ ಹಿಂಬಾಲಿಸುವ ಜನರು ಇದ್ದೇ ಇದ್ದಾರೆ (ಜಾರುದಾ. ೪೪). [ ←ಹಿಂ. ಮರಾ. ತೈನಾತ್, ತೈನಾತೀ; ಅರ. ತಇನಾತ್ ]

**ತೈಮಾಸ**, ತಯಿಂಮಾಸ (ನಾ). ಸೌರಮಾನ ವರ್ಷದ ಒಂಭತ್ತನೆಯ ತಿಂಗಳು: ಸಂಕ್ರಾಂತಿ ಬಂದು ತೈ(ಮಾಘ–ಫಾಲ್ಗುಣ)ಮಾಸ ಹುಟ್ಟಿ ಬಿಟ್ಟಿತು (ಕೊನಸ್ಟ. ೩೭). ತಯಿಮಾಸ: ಸಾಧಾ[ರಣ]ಸಂವತ್ಸರದ ತಯಿಮಾಸ ೫ ದಿಯಲೂ . . . ಆ ಸ್ಥಾನಿಕರಿಗೆ ಕೊಟ್ಟ ಸಂಸ್ತೆ (ಶಾಇಇ. IX-II, ೪೦೩-೪ ; 1870). [ ←ತಮಿ. ತೈಮಾಚ ]

**ತೈರು** (ನಾ). ಮೊಸರು. 'ತೈರುವಡೆ' ನೋ.
[ ದೇ.೫ ತಮಿ. ಮಲ. ತಯಿರ್; ತೆಲು. ತೈರು ]

**ತೈರುವಡೆ** (ನಾ). ಮೊಸರಲ್ಲಿ ನೆನೆಸಿದ ವಡೆ; ಮೊಸರುವಡೆ: ಹೈಡ್ರೊಜನ್ ಬಾಂಬಿನಿಂದ ಹಿಡಿದು ರಾಜಭವನದ ಪೂರಿ, ತೈರುವಡೆಗಳ ವಿಸ್ತಾರಕ್ಕೂ ನಮ್ಮ ಹರಟೆ ಹಬ್ಬಿತ್ತು (ಇಚನೋ. ೪೬). [ ತೈರು + ವಡೆ ]

**ತೈರೂರ್** (ನಾ). ಒಂದು ಊರಿನ ಹೆಸರು: ತೈರೂರ ಕೌಣ್ಡಿಲ್ಯಗೋತ್ರದ ಗಾಮುಂಡ ಸಾಮಿಗಳ ಮಗನ್ (ಎಕ. XIV, ಮಂಡ್ಯ. ೦೩-೬ : 895).
[ ? + ಊರ್ ]

**ತೈಲ₁** (ನಾ). ೧. ಎಳ್ಳಿನಿಂದ ತೆಗೆದ ಎಣ್ಣೆ; ಎಳ್ಳೆಣ್ಣೆ: "ತಿಲಮೆನಲ್ಕೆಳ್ಳು ತೈಲಮದೆಣ್ಣೆ ತೈಲಕಂ ಹಿಂಡಿ" (ಮಂಗರಾ. ೦೦೦-೫). ೨. ಎಣ್ಣೆ: ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ (ಧರ್ಮಾಮೃ. ೦-೪೨); ತಿಲದ ಮಱೆಯ ತೈಲದಂತೆ . . . ಚೆನ್ನಮಲ್ಲಿಕಾರ್ಜುನನ ನಿಲವನಾರೂ ಅಱಿಯಬಾರದು (ಮಹಾದೇ. ಬ. ೯-೨); ಮಳಲೊಳ್ ತೈಲಂಗಳಂ ಹಿಂಡಲಕ್ಕು . . . ಕಡುಮೂರ್ಖರ್ಗಂ ಹಿತ ಕೇಳ್ವನೇ (ಸೋಮೇಶ. ೪೯); ಕಮಲಾಕ್ಷಿಯರು ಪೂರಿತ ಪರಿಮಳದ ತೈಲವನು ಮೊಗದು . . . ನೇವರಿಸಿದರು ಸೆಳ್ಳುಗುರ್ಗಳಲಿ ಶಶಿಮುಖಿಯ ಸಿರಿಮುಡಿಯ (ತೊರೆರಾ. ೦-೦೪-೦೩); ರಘುರಾಮಚಂದ್ರನಿನಿಯಳ ಜೀವದೀವಿಗೆಗೆ ತೈಲಮುಂ ಕಾಂತಿಯುಂ ತಾನಾಗಿ ರಸವಾಹದೊಳ್ ತೇಲುತಿರ್ದನು (ಶ್ರೀರಾಮಾ. ೫೫-೨೭); ಇಂದು 'ಎಣ್ಣೆ' ಎಲ್ಲಾ ತರದ ತೈಲಕ್ಕೂ ಅನ್ವಯಿಸುತ್ತದೆ (ಸಂಕೋಲ.೮೮). ೩. ಕೆಲವು ಔಷಧಗಳನ್ನು ಸೇರಿಸಿ ತಯಾರಿಸಿದ ಎಣ್ಣೆ.
[ ಸಂ. ]

**ತೈಲ₂**, ತೈಳ (ನಾ). = ತೈಲಪ: ಮೊಲೆವೊತ್ತ ತೈಲಜನನಿಯ ಕಿಲದೊಳ್ ರಂಜಿಪರೆ ವಿಕಾಸಿವೊತ್ತಣ್ಣಂಗಳ್ (ಅಜಿಪು. ೦-೬೫): ಶ್ರೀತೈಲಭೂಪಾಳ (ಶಾಇಇ. XI-II, ೦೩೬-೨೯ : 1091). ತೈಳ: ತೈಳಭೂಪ(ಃ)ಸ್ತತೋ ಜಾತೋ ವಿಕ್ರಮಾದಿತ್ಯಭೂಪತಿಃ (ಶಾಇಇ. XI-II, ೦೩೬-೨೨ : 1091).
**ತೈಲನ ಸಿಂಘ** = ಒಂದು ಬಿರುದು: ವೈರಿನಿಃಕಂಟಂ ತೈಲನ ಸಿಂಘಂ ಸಾಹಸೋತ್ತುಂಗಂ (ಶಾಇಇ. XX, ೪೦-೦೦ : 1068). [ ? ]

**ತೈಲಂಗ** 'ತೆಲಂಗ' ನೋ.

**ತೈಲಕ** (ನಾ). ಎಣ್ಣೆಯನ್ನು ತೆಗೆದ ನಂತರ ಉಳಿಯುವ ಸಾರವಿಲ್ಲದ ವಸ್ತು; ಹಿಂಡಿ: "ತಿಲಮೆನಲ್ಕೆಳ್ಳು ತೈಲಮದೆಣ್ಣೆ ತೈಲ[ಪಾಠಾಂ. ಲಿ]ಕಂ ಹಿಂಡಿ" (ಮಂಗರಾ. ೦೦೦-೫). [ ಸಂ. ]

**ತೈಲಕಾರ** (ನಾ). ಎಣ್ಣೆಯನ್ನು ತೆಗೆಯುವವನು; ಗಾಣಿಗ: ಸುವರ್ಣಕಾರ . . . ತೈಲಕಾರಾದಿ ಅನಾಥಪ್ರೇಷ್ಯ ದಾಸೀದಾಸಪ್ರಭೃತಿ ಕಪಟ್ಟರಣಕ್ಕೆ ಅಯೋಗ್ಯಂಗಳಪ್ಪ ಹೀನಜಾತಿಗಳ್ (ಜಾಾರ. ೫೦). [ಸಂ.]

**ತೈಲಚಿತ್ರ** (ನಾ). ತೈಲವರ್ಣದ ಚಿತ್ರ; ತೈಲವರ್ಣವನ್ನು ಉಪಯೋಗಿಸಿ ಬರೆದ ಚಿತ್ರ: ಛಾಯಾಚಿತ್ರಗಳು, ತೈಲಚಿತ್ರಗಳು, ನೀರು ಬಣ್ಣದಿಂದ ಬರೆದ ಚಿತ್ರಗಳು, ಇವೆಲ್ಲವೂ ಹಾಫ್‌ಟೋನ್ ಪಡಿಯಚ್ಚಿಗೆ ಯೋಗ್ಯವಾದ ಮೂಲಪ್ರತಿಗಳು (ಮುದ್ರಣ. ೬೦); ಅರಸರ ತೈಲಚಿತ್ರಕ್ಕೆ ನಂದಾದೀವಿಗೆ ತಗುಲಿ, ಅದು ಉರಿದುಹೋಗುತ್ತದೆ (ಸಂಸಾ. ೯೯).
[ತೈಲ$_1$ + ಚಿತ್ರ]

**ತೈಲಧಾರೆ** (ನಾ). ಎಣ್ಣೆಯ ಸುರಿತ,-ಸುರಿಯುವಿಕೆ: ಕಾಲವಕ್ಷಯು ದೀಪವದರ ಪಾತ್ರಯಪಾರ ಬಾಳ್ ಅದರಿನಾದೊಂದು ಕಿರುಹಣತೆ ಮಿಣುಕು ಗಾಳಿಯಾರಿವುದೊಂದನಿನ್ನೊಂದ ಹೊತ್ತಿಪುದು ತೈಲಧಾರೆ ಯಖಂಡ (ಮಂಕುತ. ೦೦೪). [ತೈಲ$_1$ + ಧಾರೆ]

**ತೈಲನಿಕ್ಷೇಪ** (ನಾ). ಭೂಮಿಯೊಳಗಿರುವ ಎಣ್ಣೆಯ ದಾಸ್ತಾನು,-ನಿಕ್ಷೇಪ: (Oil Reserve. ಪತ್ರಿಸಿ. ೫೯). [ತೈಲ$_1$ + ನಿಕ್ಷೇಪ]

**ತೈಲಪ** (ನಾ). ಚಾಳುಕ್ಯವಂಶದ ಒಬ್ಬ ಪ್ರಸಿದ್ಧ ದೊರೆಯ ಹೆಸರು: ಚಕ್ರವರ್ತಿಯೊಳ್ತೈಲಪನೊಳ್ ಪಡೆದು ಮಹಿಮೋನ್ನತಿಯಂ . . . ರನ್ನಂ (ಗದಾಯು. ೦-೩೭); ಶ್ರೀಮಚ್ಚಾಳುಕ್ಯಚಕ್ರೇಶ್ವರನತುಳಬಳಂ ತೈಲಪಂ (ಕಾ. IV, ೨೦೮-೨; 1076); ಕಾಲಾಗ್ನಿರುದ್ರನೆನಿಸಿದುದು ತೋಳ ಬಾಳ್ ತೈಲಪನಾ (ಕಮುದ. ೦೦೭ ಪ್ರಯೋ). [?]

**ತೈಲಪಕ್ವ** (ನಾ). ಎಣ್ಣೆಯ ಸ್ವರೂಪಕ್ಕೆ ಬರುವಂತೆ ಪಾಕವಾಗುವುದು: ಅರಗಿನ ಪುಡಿ ೧ ಪಡಿಯನ್ನು . . . ತೈಲಪಕ್ವವಾಗಿ ಅಟ್ಟು, ಶೋಧಿಸಿ ಕೊಂಡು, ಈತೈಲದಿಂ ಶರೀರಕ್ಕೆ ಲೇಪ ಅಭ್ಯಂಗನಾದಿಗಳಂ ನಡೆಸಲು . . . ಶೋಭೆ ಮೊದಲಾದ ರೋಗಗಳು ಗುಣಮಕ್ಕುಂ (ಸಕಚಿ. ೧೨೮).
[ತೈಲ$_1$ + ಪಕ್ವ]

**ತೈಲಪರ್ಣ** (ನಾ). ೧. ಗಂಧ; ಚಂದನ: "ತೈಲಪರ್ಣ – ರಕ್ತ ಚಂದನ" (ಗಂಗಾಮು. ೦೫೭). ೨. ಸಾಂಬ್ರಾಣಿ; ಹಾಲುಮಡ್ಡಿ; ಲೋಬಾನ. ೩. ದೇವದಾರುವೃಕ್ಷದಿಂದ ತೆಗೆದ ಎಣ್ಣೆ: (೩).
[ಸಂ. ತೈಲಪರ್ಣೀ]

**ತೈಲಪರ್ಣಿಕ** (ನಾ). ಒಂದು ಬಗೆಯ ಗಂಧದ ಮರ: "ತೈಲಪರ್ಣಿಕಂ, ೧ ಬಹಳ ತಣ್ಣಗಿರುವ ಚಂದನವು" (ಸಿದ್ಧಾಂತಿ. ೨೦೮).
[ಸಂ. ತೈಲಪರ್ಣಿಕಾ]

**ತೈಲಪಾಕ** (ನಾ). ೧. ಎಣ್ಣೆಯಲ್ಲಿ ಹುರಿದ ಅಥವಾ ಕರಿದ ಪದಾರ್ಥ. ೨. ಎಣ್ಣೆಯನ್ನು ಉಪಯೋಗಿಸಿ ಒಂದು ಹದದಲ್ಲಿ ಕಾಯಿಸಿ ತಯಾರಿಸಿದ ಔಷಧಿಯ ವಸ್ತು: ತೈಲಪಾಕವನ್ನು ಮಾಡಲು ಎಣ್ಣೆಯನ್ನು ಹೇಳದಿರುವಲ್ಲಿ ಎಳ್ಳೆಣ್ಣೆಯೆಂದು ತಿಳಿಯಬೇಕು (ಸಕಚಿ. XII). ೩. (?): ಅನವರತ ಪ್ರಮುಖ್ಯವಮಾನಪ್ರಚುರನಿಜನಾರಾಚ ರಾಜಿಯಿಂದವಿರಳ ಮದಜಲ ತೈಲಪಾಕ ದುರಾಲೋಕಂಗಳಪ್ಪ ತದ್ಬಲ ಕರಟಿಘಟಂಗಳನಲ್ಲತುಚ್ಛಚ್ಚಿದ್ರಂಗಳ್ಪಾಡಲ್ಪಡೆಯದೆಯುಂ (ಆ ಪಿ ಪು. ೦೪-೦೦೩ ವ). [ತೈಲ$_1$ + ಪಾಕ$_1$]

**ತೈಲಪಾಯಿಕೆ** (ನಾ). ೧. ಜಿರಳೆ; ತೊಂಡಂಗಿ. ೨. ಒಂದು ಬಗೆಯ ಕೀಟ; ಜೀರುಂಡೆ. ೩. ತೊಗಲಬಾವಲಿ: "ತೈಲಪಾಯಿಕೆ–ತೊಗಲ ಬಾವಲಿ" (ಗಂಗಾಮು. ೦೫೭). [ಸಂ. ತೈಲಪಾಯಿಕಾ]

**ತೈಲಯ** (ನಾ). ಒಬ್ಬಾತನ ಹೆಸರು: ಬಾಗಿಗಳ ಬಲ್ಲಹಂ ಮಾರಹೂರ ತೈಲಯ (ಎಕ. VIII, ಸಾಗರ. ೭-೦೪; 1026).
[ತೈಲ$_2$ + ಅಯ$_1$ (<ಅಯ್ಯ$_{31}$)]

**ತೈಲಯಂತ್ರ** (ನಾ). ೧. ಎಣ್ಣೆಯನ್ನು ತೆಗೆಯುವ ಯಂತ್ರ; ಗಾಣ. ೨. ಎಣ್ಣೆಯ ಹಬೆಯ ಸ್ಫೋಟನದಿಂದ ನಡೆಯುವ ಯಂತ್ರ,-ಎಂಜಿನು: ತೈಲಯಂತ್ರ (Oil-Engine)–ಇದರಲ್ಲಿ ಡೀಸಲ್‌ಎಣ್ಣೆಯಂಥ ಭಾರವಾದ ಎಣ್ಣೆಗಳನ್ನು ಇಂಧನವಾಗಿ ಬಳಸುತ್ತಾರೆ (ಶಿಲ್ಪಶಾ. ೨೦೩).
[ತೈಲ$_1$ + ಯಂತ್ರ]

**ತೈಲರಂಧ್ರ** (ನಾ). "ಯಂತ್ರಗಳಲ್ಲಿ ತಿಕ್ಕಾಟ, ಮಸೆದಾಟ, ಕಡಮೆ ಮಾಡಲು ಘರ್ಷಣಾಪಹರಣಕ್ಕಾಗಿ ಎಣ್ಣೆ ಒಳಹೊಸರುವಂತೆ ಮಾಡಿರುವ ರಂಧ್ರ" (Oil-Hole. ಇಂಕನಿ). [ತೈಲ$_1$ + ರಂಧ್ರ]

**ತೈಲವರ್ಣ** (ನಾ). "ವರ್ಣದ್ರವ್ಯಕ್ಕೆ ಎಣ್ಣೆಹಾಕಿ ಅರೆದು ಮಾಡಿದ ಬಣ್ಣ" (Oil-Colour. ಇಂಕನಿ): ಅನಂತರ ಈ ಕೆಲಸಗಳಿಗೆ ತೈಲವರ್ಣ (Oil-Colours) ವನ್ನು ಉಪಯೋಗಿಸತೊಡಗಿದರು (ಛಾಂಶ್ರ. I, ೩೯೩).
[ತೈಲ$_1$ + ವರ್ಣ]

**ತೈಲವರ್ತಿ** (ನಾ). ೧. ಎಣ್ಣೆಯಲ್ಲಿ ಅದ್ದಿದ ಬತ್ತಿ. ೨. ಎಣ್ಣೆಯ ಬತ್ತಿಯಿಂದ ಕೂಡಿದ ದೀಪ: ತೈಲವರ್ತಿ, ಘೃತವರ್ತಿ, ಕರ್ಪೂರವೆಂಬ ತ್ರಿವಿಧದೀವಂಗಳಂ (ವಿವೇಕ. ೧೧೨). [ತೈಲ$_1$ + ವರ್ತಿ]

**ತೈಲವಾಯು** (ನಾ). ಇಂಗಾಲ ಮಿಶ್ರವಾದ ವಾಯು: ಕಾರ್ಬೊನ್ನು, ಜಲವಾಯುಗಳ ಮಿಶ್ರಣದಿಂದ ಹುಟ್ಟುವ ಅಪಕಾರಕ ವಾಯುಗಳು-ಇವು ಕರ್ದಮೋತ್ಥವಾಯುವೆಂತಲೂ ತೈಲವಾಯುವೆಂತಲೂ ಎರಡು ಇರುತ್ತವೆ (ಮುಂಬಯಿ. ೭-೪೦). [ತೈಲ$_1$ + ವಾಯು]

**ತೈಲಶೋಧನಾಗಾರ** (ನಾ). ಎಣ್ಣೆಯನ್ನು ಶುದ್ಧೀಕರಣಗೊಳಿಸುವ ಕಾರ್ಖಾನೆ: (Oil-Refinery. ಪತ್ರಿಸಿ. ೫೯).
[ತೈಲ$_1$ + ಶೋಧನ + ಆಗಾರ]

**ತೈಲಸಿಕ್ತ** (ನಾ). ಎಣ್ಣೆಯನ್ನು ಲೇಪಿಸಿಕೊಂಡಿರುವವನು: ತೈಲಸಿಕ್ತಂ ವಿರೋಧಿಪನೊರ್ವಂ ದ್ವಿಜ ಮುಕ್ತಕೇಶಿ . . . ಧೂಮವುಂ ನಿಪುಣರ್ ಕಂಡರೆ ಪೋಗರ್ಕೆ (ಸೋಮಚು. ೬೮). [ತೈಲ$_1$ + ಸಿಕ್ತ]

**ತೈಲಸ್ಫಟಿಕ** (ನಾ). ಒಂದು ಬಗೆಯ ಹವಳ; ಶಿಲಾರಾಳ; ಕರೋಬಾಮಣಿ: ಕಾರಾಬಾಮಣಿ, ಶಿಲಾರಾಳ, ತೃಣಮಣಿ, ತೈಲಸ್ಫಟಿಕ, ಅಂಬರ್ (Amber. ಇಂಕನಿ). [ತೈಲ$_1$ + ಸ್ಫಟಿಕ]

**ತೈಲಾಭ್ಯಂಗನ** (ನಾ). ತಲೆ ಮತ್ತು ಮೈಗೆ ಎಣ್ಣೆಯನ್ನು ಹಚ್ಚಿಕೊಂಡು ಮಾಡುವ ಸ್ನಾನ; ಎಣ್ಣೆ ಸ್ನಾನ: ಅಂಗನೆಗೆ ಸೌರಭ್ಯ ತೈಲಾಭ್ಯಂಗನ ವನಾಚರಿಸಿ . . . ತಂದುಡಿಸಿದರು ನವದುಕೂಲವನು (ಬಸಪು. ೪-೩೪).
[ತೈಲ$_1$ + ಅಭ್ಯಂಗನ]

**ತೈಲಾಭ್ಯಂಜನ** (ನಾ). =ತೈಲಾಭ್ಯಂಗನ: ಅಂದು ಎಲ್ಲರೂ ತೈಲಾಭ್ಯಂಜನ ಮಾಡಿ . . . ಕಣ್ತುಂಬ ನಿದ್ರೆಮಾಡಬೇಕೆಂದು ರಾಜನ ಆಜ್ಞೆ (ನಟಿಕಾ. ೬೪೦). [ತೈಲ$_1$ + ಅಭ್ಯಂಜನ]

**ತೈಲಾರಿ** (ನಾ). ಎಣ್ಣೆಯ ಶತ್ರು; ಎಣ್ಣೆಯನ್ನು ಹೋಗಲಾಡಿಸುವುದು; ಸೀಗೆ: "ತೈಲಾರಿಯೆನಲಾ ಸೀಗೆಯಕ್ಕು" (ಮಂಗರಾ. ೪೫-೪೮).
[ತೈಲ$_1$ + ಅರಿ$_6$]

**ತೈಲಾರ್ಚಿ** (ನಾ). ಎಣ್ಣೆಯ ದೀಪ: ಒಂದಾದ ಮೇಲೊಂದು ನಿರ್ವಾಣ ವೊಂದಲಾ ತೈಲಾರ್ಚಿತತಿ ಮಂಜುಮಂಜಾಗಿ ತೋರ್ದದಂ, ಕೈಗಣ್ಣ ದೋಲಾಯ್ತು ಶೈಶಿರಜ್ಯೋತ್ಸ್ನೆ (ಶ್ರೀರಾಮಾ. ೪೪೪೦-೧೦೪).
[ತೈಲ$_1$ + ಅರ್ಚಿ]

**ತೈಲಿ** 'ಥೈಲಿ' ನೋ.

**ತೈಲಿಕ** (ನಾ). ಎಣ್ಣೆ ತೆಗೆಯುವವನು; ಗಾಣಿಗ. [ಸಂ.]

**ತೈಲಿಗ** (ನಾ). = ತೈಲಿಕ: ಮಿಗೆ ತೈಲಿಗಂಗೆಳ್ಳು ಬೆಳೆದಂದದವಾಯ್ತು (ಅರಾಜ. ೮-೪೯). [ತೈಲ$_1$ + – ಇಗ]

**ತೈಲೀನ$_1$**, ತೈಳೀನ (ನಾ). ಎಳ್ಳು ಬೆಳೆಯುವ ಹೊಲ; ಎಳ್ಳಿನ ಹೊಲ: "ತಿಲ್ಯಂ, ತೈಲೀನಂ–ಈ ೨ ಎಳ್ಳ ಕೆಯ್" (ಹಲಾಯು. ೨೬–೮); "ಎಳ್ಳ ಬೆಳೆವ ಕೆಯ್ ತೈಲೀನವೆನಿಸಿಕ್ಕು" (ಪುಂಗರಾ. ೨೯–೪); ಲೀಲೆಯಿನದಱ ನೆಲಂ ಪರಿಪಾಲಿಸಿದುವು ಕಣ್ಗೆ ನಾಡೆ ಪೌದ್ಗಲ . . . ತೈಲೀನಂ ಕೌದ್ರವೀಣಮೌಮ್ಯಂ ಯವ್ಯಂ (ಚಂದ್ರಪ್ರ. ೧–೯೧). ತೈಳೀನ : ಏನೆಸೆವುವೊ ಕೌದ್ರವೀಣದೌಮಾನದ ತೈಳೀನದ ಮಾಷೀಣದ ಮೌದ್ಗೀನದ ಬಹುಸಾರ ಸಸ್ಯಸಕಳಫಳಂಗಳ್ (ಪುಷ್ಪಕ. ೨–೧೨). [ ಸಂ. ]

**ತೈಲೋಕಪೊಟಲ್** (ನಾ). ಒಂದು ಸ್ಥಳದ ಹೆಸರು : ತೈಲೋಕಪೊಟಲಂ ದೊಮ್ಬಬ್ಬೆ ಆಳುತ್ತಿರೆ ಅಲ್ಲಿ ಕೊಟ್ಟದು ಅಱುಗಣ್ಣುಗ ಮಣ್ಣು (ಎಕ. XII, ಶಿರಾ. ೨೯–೪೩; ಸು. ೯೦೦). [ ತೈಲೋಕ$_3$ + ಪೊಟಲ್$_2$ ]

**ತೈಳ** 'ತೈಲ$_2$' ನೋ.

**ತೈಳೀನ** 'ತೈಲೀನ' ನೋ.

**ತೊಂಗಲ್**, ತೊಂಗಲು (ನಾ). ೧. (ತೂಗಾಡುವ) ಗೊಂಚಲು ; ಗಂಚ್ಚು ; ಕಂಚ್ಚು ; ಗೊಂಡೆ : "ತೊಂಗಲ್ ತೊಂಬೆ ಗೊಂಚಲ್ ತೊಡಂಬೆ ನುಣ್ಕೊದೆದ ಜೊಂಪಂ ತೊಂಗೆ ಗುಚ್ಛಮೆಂದಿರದೊಪ್ಪೆ ಪದೆದ ನಾಮಂ" (ಕಬ್ಬಿಗ. ೦೯); ಪೊಂದಳರ ತೊಂಗಲ್ಗಳ ಸುತ್ತುಗೊಂಡ ಸುರಿಗೆಯ ಮುತ್ತಿನ ಬುಂಭುಕಂಗಳ ನಡುವೆ ಕಡೆಯಿಕ್ಕಿದ ಬಿಡುಮುತ್ತಿನ ಪೊದರ್ದುಣ್ಮುವ ಬೆಳಗು (ಆದಿಪು. ೮–೧೫ ವ); ಘನನಿತಂಬಬಿಂಬಮಂ ಬಳಸಿದ ನೂಲ ತೊಂಗಲ ಮಧುರಧ್ವನಿ . . . ಪೊಣ್ಮೆಯುಂ (ಮಲ್ಲಿಪು. ೪–೯೭); ತಳಿರ ತೊಂಗಲ ಗದ್ದುಗೆಯೊಳೋಲಗಂಗೊಟ್ಟು . . . ಮುನಿನಾಥ ಕಣ್ಗೆಸೆದಿರ್ದನು (ಹರಿಶ್ಚ. ೩–೬೬); ತಳಿರ ತೊಂಗಲ್ ಕೆಂಜೆಡೆಯ ಬಿಂಕಮಂ ಬೀಱೆ . . . ನೇಱಿಲ್ವರಂ ಚೆಲ್ವಾದುದು (ಪದ್ಮರಾ. ೮–೩೦). ೨. ಹೂವಿನ ಗೊಂಚಲು: "ತೊಡಂಬೆ . . . ತೊಂಗಲ್, ಜೊಂಪಂ, ಗೊಂಚಲ್, ಗುಚ್ಛಂ–ಈ ೭ ಪುಷ್ಪಮಂಜರಿ"(ಕಕಶಾ. ೦೦–೦೯೬). ೩. ಗುಂಪು; ರಾಶಿ; ಸಮೂಹ: ಸಂಗಡಿಸಿದ ಕಿಱುಜಡೆಗಳ ತೊಂಗಲ್ಗಳೆನೊಪ್ಪೆ ಜಾನು ಚಂಕ್ರಮಣಂ . . . ಸಿಂಗದ ಮಱಿಯಂತಿರೆಸೆದು ತೋರ್ಪ ಕುಮಾರಂ (ಕಾದಂಪೂ. ೩೩೭); ಧರಿತ್ರಿಯೊಳ್ ಕೆದಱುತುಮಿರ್ಪ ತಣ್ಗದಿರ ತೊಂಗಲ ಡಂಗೆ . . . ಮಾಸಿದ ಮುಕುರಂಬೊಲಂತೆ ವಿಗತಪ್ರಭನಾಯ್ತುಮೃತಾಂಶು ಮಂಡಲಂ (ಕುಸುಮಾ. ೪–೬೭); ನೆಣವಸೆಯ ತೊರಳೆಯ ತೊಂಗಲಿ ನೊಂದೆಸೆವ ಚಕ್ರವ ನೋಡಿದನು ದೈತ್ಯಾರಿ (ಕುಮಾ.ಭಾ. ೬–೩೨). ೪. ತಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ: ಒಪ್ಪುವ ವೀರಪಟ್ಟ ಮುದಯಂಗೆಯ್ವುದುವಮಂ ತೋರ್ಪ ತೊಂಗಲೆ ಜಂಬೂವಿಟಪಪ್ರಹಾರ ರುಚಿಯಂ ವಕ್ಷಾರುಣಂ ಸಂಚಿಯಂ ಗೆಲೆ ಪೋಲ್ತುತ್ತು (ಕಾವ್ಯಸಾ. ೩೨೫ ಕೊಡ್ರಳ); ಹರನರಸಂ ಸುರನ್ರ್ನರದ ಗುಣ್ಣು ಜಟಾವಳಿ ತೊಂಗಲಿನ್ದ್ರ ದುರ್ಧರ ಗಿರಿಸೇತು ಧರ್ಮ್ಮಗಳೆಯಂಕದ ಮದ್ದಳೆ (ಎಕ. XII, ಶಿರಾ. ೨೯–೬೭ ; ೯೪೩); ಆದಿತ್ಯನ ಎಲಮೆ ಮಾಬಲಮಾಗೆ ಚನ್ದ್ರನೆ ಚನ್ದ್ರಬಲ ಮಾಗೆ ನಕ್ಷತ್ರ ತಾರಾಗಣಗಳೆ ತೊಂಗಲಾಗೆ (ಎಕ. X, ಕೋಲಾರ. ೦೭೦–೦೫; ಸು. 1180 ?). ೫. ತೂಗಾಟ ; ನೇತಾಡುವಿಕೆ. 'ತೊಂಗಲಿಸು' ಪರಾ. ೬. ಒಂದು ಬಗೆಯ ಆಯುಧ (?) : ರಾಹುವೇ ತೊಂಗಲಾಗಿ ಕೇತುವೇ ಸುರಿಗೆಯಾಗಿ ಕುಳಿಕನೇ ಮೊನೆಯಾಗಿ (ಎಕ. VII, ಶಿಕಾರಿ. ೦೦೮–೪೩ ; 1056). ೭. ಜುಟ್ಟು (?) : ಪ್ರಗದಿದೆಮಾಡು ಚಪ್ಪರಿಸು ರೂಪಿಡು ಕೂಪಿಡು ಕೂರ್ಪುದೋಱು ಪಾಱಿಗಿಯುದೆ ಕೂರ್ಮೆ ಮಿಕ್ಕು ತೆಗೆ ತೊಂಗಲನೀಬೆನೆ ನೂಂಕು ಯುದ್ಧಮಂ (ಕಾವ್ಯಾವ. ೪೦೬).

**ತೊಂಗಲು** : ೧. "ತೊಂಗಲಿನೆ ಕೊಡಂಬೆಯೆನಲ್ಕೆ ಗುಚ್ಛಂ" (ಕಕಶ. ೪೪); ತೊಡಕುಗರುಳಿನ ತೊಂಗಲಿನ ಹೊಱಪಡುವ ನೆತ್ತರ ಬಾದಣದ . . . ಹೊರಳುವ ಹೆಣನ ರಾಶಿಯಲಿಡಿದುದಿಳೆ ಕಲಿಕುಂಭಕರ್ಣನ ಕರದ ಕದನದಲಿ (ತೊರವೆ. ೬–೨೮–೫೦) ; ಹೊಂಗೇದಗೆಯದಿರ್ಗಂಚಿ ಕಮ್ಮಲರ್ಗಳ ತೊಂಗಲು ಮೆಱೆದುವಪ್ಪುದಲಿ (ಮೋಹತ. ೦೬–೦೯). ೬. ತುಱುಗಲಸಂದಂಗನುವರಂ ಮುಟ್ಟದೊಡಂ ಶ್ರಾವಕಂಗೆ ಬೋಧಿ ಪುಟ್ಟದೊಡಂ ಆತಂ ತೊಂಗಲ[ಪಾಠಾಂ. ತೊವಲ]ನೇಱಿಸಿ ಕೊಂಡು ನಡೆವುದು ಈತಂ ಮಹಾವ್ರತಂಗಳನೇಱಿಸಿಕೊಂಡು ತಪೋವನಕ್ಕೆ ನಡೆವುದು (ಜೀವಸಂ. ೨೦೨–೩).

**ತೊಂಗಲಾಡು** = ತೂಗಾಡು ; ಅಲುಗಾಡು : ಉರಿಗಣ್ಣ ಜಾಲ ದಳ್ಳಿಸೆ ನಿಚ್ಚವಚ್ಚದ ಪಂದರೆ ತೊಂಗಲಾಡೆ . . . ಮಾರುತಿಗೈ ವೊಗಂ ಮುಪ್ಪೊಗನಾಗೆ ಜಡಿದಂ (ರಾಮಾಶ್ವ. ೦೩೨–೮).

[ ದೇ. ೬ ತಮಿ. ತೊಂಙ್ಗಲ್ ; ಮಲ. ತೊಂಙ್ಗಲ್ ; ತುಳು. ತೊಂಗೆಲ್, ದೊಂಕೆಲ್ ; ತೆಲು. ತೊಂಗಲಿ ]

**ತೊಂಗಲಿಸು** (ಕ್ರಿ). ತೂಗಾಡು ; ನೇತಾಡು : ಚೆಲ್ವ ದಶಾಂಗಮುಖ್ಯದ ನಱುಪೊಗೆಗಳಿಂ ತೊಂಗಲಿಪ ಸರಘಂಟೆಯಿಂ ಮೆಱೆವುದನರಸ ಕಂಡ (ಸಾಳ್ವಭಾ. ೪–೪೦). [ ತೊಂಗಲ್ + – ಇಸು$_3$ ]

**ತೊಂಗಲು** 'ತೊಂಗಲ್' ನೋ.

**ತೊಂಗಲುಗುರುಳ್** 'ತೊಂಗಲ್ಗುರಂಳ್' ನೋ.

**ತೊಂಗಲ್ಗಂಟೆ** (ನಾ). ಗಂಟೆಗಳ ಗುಚ್ಛ ; ಗಂಟೆಸರ : ತೋಳ ಕಚ್ಚಳಿಯ ತೊಂಗಲ್ಗಂಟೆಯ ಜೋಡುಶಂಖದ ಜಗಜಂಪಿನ ಸತ್ತಿಗೆಯ ಪಲಬಿರುದು ಗಳ್ಗೆಗಳ್ತೆವಡೆಯ (ರಾಜಶೇ. ೬–೦೦ ವ). [ ತೊಂಗಲ್ + ಗಂಟೆ$_2$ ]

**ತೊಂಗಲ್ಗುರುಳ್**, ತೊಂಗಲುಗುಗಂಳ್ (ನಾ). ದಟ್ಟವಾದ ಕೂದಲು; ಒತ್ತೊತ್ತಾಗಿರುವ ಮುಂಗೂದಲು : ನೊಸಲಂ ತೊಂಗಲ್ಗುರುಳ್ ಮೇಲುದನೊಗೆವ ಕುಚಂ ಚೆನ್ನನಾ ನೀಲಕೇಶಪ್ರಸರಂ . . . ಓರಂತಲೆಯ ಭರತನಂ ನೋಡಲ್ಕೆತಂದರೊರ್ವಳ್ (ಆದಿಪು. ೧೧–೦೬); ರವಿ ಹಿಮಕರಣಂ ಕುಂಡಲಂ ನೀಲಮೇಘಪ್ರಕರಂ ತೊಂಗಲ್ಗುರುಳ್ಗಳ್ (ಧರ್ಮಾಮೃ. ೯–೨೫೦) : ನಗೆಮೊಗಂ ತೊಂಗಲ್ಗುರುಳ್ ಕೆಂದಳಂ . . . ಚೆಲ್ವಾಗಿರೆ ನಿಂದ ಚೇಡಿತಿಯರಂ ಕಂಡಂ ಮಹೀವಲ್ಲಭಂ (ಕಾವ್ಯಾವ. ೨೦೬); ತೆಳ್ವಸುಱ ತೊಂಗಲ್ಗುರುಳ ವಿಮಲ ಪದ್ಮಾವತಿಯ ನಿಟ್ಟಿಸಿದನು (ರಾಘಶ. ೦೩–೨೪).

**ತೊಂಗಲುಗುರುಳ್** : ತೊಳವಗಂಗಳ ನಗೆಮೊಗದ ತೊಂಗಲುಗುರುಳ ಸುಲಿಪಲ್ಲ . . . ಕಡು ಚೆಲುಶಬರಿಯರು ಕಾಳರಾತ್ರಿಯು ಸಿರಿಗಳೆನಿಸಿದರು (ಸಾಳ್ವಭಾ. ೦೬–೭). [ ತೊಂಗಲ್ + ಕುರುಳ್$_1$ ]

**ತೊಂಗಲ್ಗೊಳ್** (ಕ್ರಿ). ೧. ಗೊಂಚಲಾಗು ; ಜೊಂಪೆಯಾಗು : ತೊಂಗಲ್ಗೊಂಡುರು ಕರ್ಣಿಕಾರದಲರಂ ನಲ್ವಾಟವಣ್ಣಂ ಮಹೀಶಾಗಿತ್ತಳ್ (ಉದ್ಭಟ. ೯–೦೨) ; ತೊಂಗಲ್ಗೊಂಡಿರ್ದ ಕೆಂಪಾದಸುಗೆಯ ತಳಿರಂ . . . ಕೊಟ್ಟನೊರ್ವಂ (ಕಬ್ಬಿಗ. ೮೪). ೨. ರಾಶಿಯಾಗು ; ಒಟ್ಟಾಗು : ಸದ್ಯಕ್ಕೋತ್ಕ್ರ ತೊಂಗಲ್ಗೊಂಡಿರ್ಪಿನವೊಲ್ದು ನಿಟ್ಟಿಸಿ ಸಮಂತಾ ನಂದದಮಂ ತಾಳ್ದು (ಉದ್ಭಟ. ೧೧–೭೪). [ ತೊಂಗಲ್ + ಕೊಳ್$_1$ ]

**ತೊಂಗಲ್ದೊಂಗು** (ಕ್ರಿ). ಗೊಂಚಲಾಗಿ ತೂಗಾಡು : ಬಳ್ಳಿಯೊಳೆ ಪಣ್ಣು ತೊಂಗಲ್ದೊಂಗುವ ತೊಂಡೆಯ ಕಟಾವನ್ (ರಾಮಾಶ್ವ. ೬೦–೧೧).

[ ತೊಂಗಲ್ + ತೊಂಗು$_1$ ]

**ತೊಂಗಲ್ವರಜಿ** (ನಾ). (ಅಲಂಕಾರದ) ಗೊಂಡೆಗಳಿಂದ ಕೂಡಿದ ಹಗ್ಗ : ಕನಕಘಂಟೆಗಳ್ಕೀರ್ವ ಕೊರಲ ಮಿಸುನಿಯ ತೊಂಗಲ್ವರಜಿಯ ಚನ್ನಮಣಿ ಪುದಿದ ಪಕ್ಕಗಂಟೆಯ . . . ಗಂಧಸಿಂಧುರಸಂದೋಹದಿಂ (ರಾಜಶೇ. ೬–೦೦ ವ). [ Pಾದು 'ತೊಂಗಲ್ವೊರಜೆ' ಎಂಬುದರ ಅಪಲಿಖಿತ ]

**ತೊಂಗಳೆ** (ನಾ). (?) : ತೊರಳೆ ತೊಂಗಳೆ ಮಜ್ಜೆ ಮಾಂಸಗಳನು ಸವಿದುರು ಭೂತದಂಜಲು ಕೈಗೆ ಎಱೆವ ಘಟದ ವಾರಿಗಳೆನೆ ರಕ್ತವ ಕಱೆದುವು ಭಟರ ಖಡ್ಗಗಳು (ಶಂಕವಿ. ೦೫–೩೩). [ ? ]

**ತೊಂಗಿಸು** (ಕ್ರಿ). ಒದಗಿಸು ; ಒಡ್ಡು : ಅಂಗಜ ಹೆಂಗಳ ಸಿಂಗರ ವನದೊಳು ತೊಂಗಿಸಿ ಮುನಿವ್ಯಗಾವಳಿಯು ಜಂಗುಳಿಗೊಡ್ಡಿದ ಬೆಳ್ಳಾರ ವಲೆಯೆನೆ ಕಂಗೊಳಿಸಿತು ಸೂಳೆಗೇರಿ (ಕಂನವಿ. ೬-೯೧).

[ ತೊಂಗು$_1$ + – ಇಸು$_3$ ]

**ತೊಂಗು$_1$** (ಕ್ರಿ). ೧. ತೂಗಾಡು ; ಜೋಲಾಡು ; ತೂನೆದಾಡು : ತೊಂಗುವ ಫಲಾವಳಿಯು ಭಾರಂಗಳಾವಗು ಪಿಂಗವು (ಕ್ರಮಿಥಾ. ೧೯-೬) ; ಕಮ್ಮಲರ್ಜೊಂಪವೆ ಜಲ್ಲರಿಯಾಗೆ ಪಣ್ತು ತೊಂಗುವ ಪಣ್ ಫಲಾವಳಿಯಾಗೆ (ರಾಮಾಕ್ಕ. ೫೬-೨೬). ೨. ಬಾಗು ; ಬಗ್ಗು : ತೊಲಗು ಚಿಂತೆಯೆ ವಿಕಟಗುಹೆಯೊಂದು ನಿನಗಿರಲಿ . . . ತೊಂಗಿದರೆಗಲ್ಲುಗಳ ಮರೆಗೆ ಬೇಗನೆ ಹಾರು (ಭಾವಗೀ. ೨೨೬). ೩. ಹೊರಟುಹೋಗು; ಸರಿ : ಅವಳ ಪೊತ್ತ ಮನದ ತಲೆಗೆ ನೋವು ತೊಂಗದಾ ನೋಟಕಜನದ (ಕುಮಾಸಾಂ. ೨೦-೬೨) ; ತೊಂಗಿದ ಹಲ್ಲು ಬಹವೆ (ಧರಪ. ೩೯-೯೦). ೪. ಒದಗಂ ; ಉಂಟಾಗು ; ದೊರಕು : ಅಲಘುರುಜೆಗಳ್ತೊಂಗೆ ನಾರುಬೇರ್ಮಣಿ ಮಂತ್ರಗಳನೊಲ್ಲದಿಹುದು ಮೂವತ್ರಂಟನೆಯು ಶೀಲ (ಶಾಸೋಕು. ೨-೬೬); ಲಿಂಗದ ಹಾರ ಜಂಗಮದರ್ಥದಾಗರ ತೊಂಗುವ ಭವಕೆ ನೀ ದೂರ (ಅಮುಸಾಂ. ೫-೯೩); ವೈಭವಂ ಪಿಂಗಿ ತೊಂಗಿದ ದರಿದ್ರದುಃಖದೊಳಾರ್ಯರ್ ಚೂಡಾಮಣಿಯು ಬಳಿಗೆ ಬಂದು (ಕೊಟ್ಟೂರು. ೦೩-೩೪). ೫. ಬಯಸು ; ಆಸೆಪಡು : ಹೊಂಗುವ ಮನ ಶಿವಪೂಜೆಗೆ ತೊಂಗುವ ಮನ (ಶಂಕರಂ. ೨೬). [ ದೇ.॥ ತಮಿ. ಮಲ. ತೊಜ್ಕು ; ತೆಲು. ತೊಂಗು ]

**ತೊಂಗು$_2$** (ನಾ). ೧. ಜೋಲು ಬಿದ್ದಿರುವುದು ; ನೇತಾಡುವಿಕೆ : (?). ೨. ಆಧಾರವಿಲ್ಲದಿರುವಿಕೆ : ಹಂಗು ಹರಿದ ಮೇಲೆ ತೊಂಗೇನು ತೊಡರೇನು? (ಗಾದೆ).

**ತೊಂಗುತೊಸಗು** = ತಪ್ಪನ್ನು ಹುಡುಕುವಾಗ ಆಡುವ ಮಾತು : ಎಂಥ ಪದಾರ್ಥವನ್ನು ತಂದುಕೊಟ್ಟರೂ ತೊಂಗುತೊಸಗು ಎಂದು ಹೇಳುತ್ತೀರಿ (ಪಂಚತಂತ್ರ. ೫೫). [ <ತೊಂಗು$_1$ ]

**ತೊಂಗೆ, ಜೊಂಗೆ** (ನಾ). ೧. ಗೊಂಚಲು ; ಗುಚ್ಛ : "ತೊಂಗಲ್ ತೊಂಬೆ . . . ತೊಂಗೆ ಗುಚ್ಛಮೆಂದಿರದೊಟ್ಟ ಪದೆದ ನಾಮಂ" (ಕರ್ನಾಕ. ೦೯) : "ತೊಡಬೆ . . . ಗುಚ್ಚಂ ಸೊಗಯಿಪ ತೊಂಗೆಯೆ ತೊಂಗಲ್ ಬಗೆಯಲ್ ಬುಧರಿಂದ ಗುಚ್ಛಕಕ್ಕಂ ನಾಮಂ" (ಕವಿಕಂ. ೬೪). ೨. ಹೂವಿನ ಗೊಂಚಲು : "ತೊಡಂಬೆ, ತೊಡಬೆ, ತೊಂಗೆ . . . ಗುಚ್ಛಂ–ಈ ೭ ಪುಷ್ಪಮಂಜರಿ" (ಕನಸಾ. ೫೫-೦೯೬). **ಜೊಂಗೆ** : ೧. ತ್ರಿಕೂಟವೆಂದೆಂಬ ತ್ರಿವಿಧಮೂಲೆಯು ಜೊಂಗೆ (ಚಬಾಪ. ೫೮-೬).

[ ದೇ.॥ ತುಳು. ತೊಂಗೆ, ಜೊಂಕೆ, ದೊಂಕೆ ]

**ತೊಂಚವಂಚ, ತಂಚಾವಂಚ, ತೊಂಚಾವಂಚ** (ನಾ). ಹಿಂದು ಮುಂದು ನೋಡುವಿಕೆ ; ಅನುಮಾನ ; ವಿಮಾನಾಮೇಷ : ಎಣಿಸುವುದು : ಏನು ಹೇಳಬೇಕೋ ತಿಳಿಯದೆ ತೊಂಚವಂಚಪಡುತ್ತ ಇದ್ದ ಆನಂದ (ಮರಳಿ. ೩೬). **ತಂಚಾವಂಚ** : ಈ ತಂಚಾವಂಚದಲ್ಲಿಯೇ ಕಾಲ ಕಳೆದು ಹೋಗಿತ್ತು (ರೂಪಸ. ೧೬). **ತೊಂಚಾವಂಚ** : ವಿಷಯವನ್ನೇ ಆಯ್ಕೆ ಮಾಡಿ ಎಂದರೆ ಕೊಂಚ ತೊಂಚಾವಂಚ (ಮನೋಸಂ. ೦೪೪). [?]

**ತೊಂಚಾವಂಚ** 'ತೊಂಚವಂಚ' ನೋ.

**ತೊಂಟತನ** (ನಾ). ತೊಂಡುತನ (?) : ಏಳನೆ ಗುಣ ಜಟಿದು ಎಂಟನೆ ಗುಣದ ತೊಂಟತನವ ಬಂಧಿಸಿ ತೋಱುವದಕ್ಕೆ ಮುನ್ನವೇಮನ ಜಾಣಿನಿಂದ ಮತ್ತ ವಿಮಾಚಲಿಲ್ಲವಾಗಿ (ಮೋಳಿಸೂ. ೦೯೩-೬೨೬).

[ ತೊಂಟ$_0$ + – ತನ ]

**ತೊಂಡ$_1$, ತಂಡು$_3$** (ನಾ). ೧. ಸೇವಕ ; ಗುಲಾಮ : ತೊತ್ತು ತೊಂಡರ ಕಾಲ ತೊಳೆದು ಸೇವೆಯು ಮಾಡಿ ಬದುಕುವನ ಪಡಿದೊತ್ತಿನ ಮಕ್ಕಳೆಂದು ಎಂಬರಲ್ಲದೆ ರಾಜಕುಮಾರನೆಂದೆನ್ನರು (ಜನ್ನತ. ೪. ೦೪೫-೪೦೫) ; ಮಡದಿ ತೊಂಡನೆನುತ್ತ ನೀರೆಱೆಯದಿರೆ ಕೈಯು ಕಡಿದು ಹಾಯ್ಕುಯೆ ಮೆಱೆದ ಕಲಿಕಂಬರು (ಅಶಿಕಂ. ೩೫-೪೩) : ತೊತ್ತುಗೈವುದು ಲೋಕವೀತಗೆ ವ್ಯತ್ಯಗಿತ್ತುಗಳಿವನ ತೊಂಡರು (ಶಾಶಿರಾ. ೨೫-೬) : ಚಾಮುಂಡಿಯನೊಲಿಸಿ ಕೊಂಡವನ ತೊಂಡನ ಮಾಡಿಕೊಡುವೆನು ನಿನಗೆ (ಕುಮಾಸಾಂ. ೨೪-೩೬). ೨. ಭಕ್ತ; ಆರಾಧಕ: ಮಾಡುವವರೆಲ್ಲರೂ ಮಹಾಲಕ್ಷ್ಮಿಯ ತೊಂಡಂದಿರು (ಸರ್ವಪ. ೬೩-೩೩೯) ; ಪುರಂದರವಿಠಲನು ತೊಂಡರಿಗೆ ತೊಂಡನಾಗಿ ಸಂಚರಿಸುತಿಹನು (ಪುರಂದ. ೦-೧೪೬-೩) : ತಿರುಕುರುಂಬೆಯು ತೊಂಡರಂದು ಕಂಥೆಯನೊಗೆದು . . . ಕೈಲಾಸಮಂ ಪೊಕ್ಕರು (ಚಲಪು. ೫೫-೩೬). ೩. ಮುದಂಕ ; ವಯಸ್ಸಾದವನು ; ವೃದ್ಧ. 'ತೊಂಡಜ್ಜ' ಪರಾ. **ತಂಡು$_3$** : ೧. ನೀನಾಡಿಸಿದಂತೆ ನಾನಾಡುತ್ತಿದ್ದೆ ಸಂಜ್ಞೆಯನಱಿದ ತಂಡಿನಂತೆ ವೇದಿಸಿದುದ ನಾ ಸಾಗಿಸಿದೆ (ಸಗಕೋ. ೮೫).

**ತೊಂಡಮಂಡಳಿಕ** = ಮಲೆತ ಸಾಮಂತ ; ಸೊಕ್ಕಿದ ಮಾಂಡಳಿಕ: ಅಹಿತಮಂಡಳಿಕ ಕಾ ಳಾ ನ ಳ ತೊಂಡಮಂಡಳಿಕ ಮಂಡಳಪ್ರಚಂಡ ದೌವ್ವಾರ್ನಳ (ಎಕ. II, ೦೪೩-೨೫ : 1131); ತೊಣ್ಡಮಣ್ಡಳಿಕ ಕುಳಾಚಳ ವಜ್ರದಣ್ಡ ಬಿರುದ ಭೇರುಂಡ್ನ ಕಂದುಕಾಚಾರ್ಯ್ಯಂ (ಮೈಆರಿ. ೦೯೩೦, ೬೯-೫ : 1191). **ತೊಂಡರ ತೊಂಡ** = ಸೇವಕರ ಸೇವಕ ; ತೊತ್ತಿನ ತೊತ್ತು; ದಾಸಾನುದಾಸ : ನಮ್ಮ ನೀಲವರ್ಣ ತೊಂಡರ ತೊಂಡ (ವಾದಿಕೀ. ೦೨೬-೧೪). [ ದೇ.॥ ತಮಿ. ತೊಣ್ಡ ; ಮಲ. ತೊಣ್ಡ ]

**ತೊಂಡ$_2$, ತುಂಡ$_1$** (ನಾ). ೧. ಮಲೆತವನು ; ತಂಟ ; ಸ್ವೇಚ್ಛಾವೃತ್ತಿಯವನು ; ಉದ್ಧಟ : ತೊಂಡ ಬೇಡನು ಇಂತು ಮಾಡುವನೆ (ಕಮ್ಮರ. ದೇ. ೦೪೫-೪); ತೊಡರ್ದರನೊತ್ತಿ ತೊಂಡರನವುಂಕಿ ಕಡಂಗುವರಂ ಕಳಲ್ಚಿ (ಎಕ. VII, ಸಾಗರ. ೦೫-೩೨ ; 1218) : ದಯಾವಿಹೀನನಧರ್ಮಂ ತೊಂಡನತಿಕಲುಷಿತಪಾಪದ ಪಿಂಡನೆನಿಪ್ಪವನೆ ಕೃಷ್ಣಲೇಶ್ಯೆಯು ಜೀವಂ (ಜ್ಞಾಪಕಾ. ೬೦-೯); ತೊಂಡ ಕೇಳೈ ನಿನಗೆ ಸತಿಯರು ಹೆಂಡಿರಾಗಿಯು ಮಕ್ಕಳಾಗಿಯು ಹಿಂಡು ಗೋಧನವಿದ್ದು ನೀವೇ ಮತ್ತೆ ಬೇಱಿಲ್ಲ (ಶಾಶಿರಾ. ೩೩-೨೬) : ಪಡಿಮಾತೇನಾ ಪಾತಕ ತೊಂಡನ ಕೆಡಹಿ ಕೊರಲ ಕೊಯಿಸುವೆನು (ಕುಮಾಸಾಂ. ೩೪-೦೫೬); ಬಡಿ ಬಡಿ ತೊಂಡರ ಬಾಯನೆಂದನು ಚಕ್ರಿ (ಧರಪ. ೩೬-೮೪). ೨. ಕಳವು ಮಾಡುವವನು; ಕಳ್ಳ; ಚೋರ : (?). **ತುಂಡ$_1$**: ೧. ದ್ರವ್ಯಾಪಹಾರರಿಗೆ ತುಂಡರಿಗೆ . . . ಇದು ತಾ ಯೋಗ್ಯವಲ್ಲೆಂದ (ಜ್ಞಾಸಿಂ. ೩೧-೪೬) : ಜಗಳಗಂಟರೂ ತುಂಡರೂ ಅಪ್ರಮಾಣಿಕರೂ ಇರುತ್ತಾರೆ (ಕಥಾಗ. ೨೨೮). ೩. ನಿಷ್ಕರುಣಿ; ಕಠೋರಮನಸ್ಸಿನವನು: ತುಂಡನಾದ ಯಮನು ಬಂದು ಮಂಡೆ ಮೇಲೆ ಹೊಯ್ಯುವಾಗ ಹೆಂಡಿರು ಮಕ್ಕಳು . . . ಬಿಡಿಸೋದಿಲ್ಲ (ಪುರಂದ. ೩-೮೦-೫). 'ತುಂಟ' ಪರಾ.

**ತೊಂಡರ ಗಂಡ** = ದುಷ್ಟರನ್ನು ನಾಶಮಾಡುವವನು ; ಒಂದು ಬಿರುದು : ತೊಣ್ಡರ ಗಂಡನುದ್ಧತರ ಗಂಡನೋಱಂಟರ ಗಂಡನುಕ್ಕಿದುದ್ದಂಡರ ಗಂಡನೀ ಬೇಡರ ಗಂಡ (ಸೌಇಇ. IX-i, ೨೫೬-೨೧ ; 1150).

[ ತೊಂಡು$_1$ + – ಅ$_7$./ಮಲ. ತೊಣ್ಡ ]

**ತೊಂಡ$_3$** (ನಾ). ೧. ಬಾಯಿ; ಮುಖ: ನೀಳ್ದ ನಿಡುಗಣ್ ಬೆಳಗೆ ತೊಂಡಂ ಬೆಳಗೆ ತೊಂಡರದ [ಪಾಠಾಂ. ಚೆಂಬುದರ]ಮಾಟ್ಕೆ[ಯನೊಡಂಬಡುತ ಲಾಡಿದಳು ಬೆಂಬಱಿಯು ಸಂಭ್ರಮದಲೊರ್ವಳ್] (ಸೂಕ್ತಿಸು. ೧೩-೦೦). ೨. ಕೊಕ್ಕು; ಚಂಚು: ಮಂಡಲವೃತ ವಿಹಗರಾಜ ತೊಂಡದಿಂದಲೀ ತುಂಡಿಸಲ್ಕೆ (ದೇವೀಪು. ೬೬). ೩. (ಆನೆಯ) ಸೊಂಡಿಲು : ಬಂಧು ಜನರೆಲ್ಲರನ್ನೂ ಖಡ್ಗಪ್ರಹಾರದಿಂದ . . . ಗಜತೊಂಡಕ್ಕೆ ಸಿಕ್ಕಿದ ಬಾಳೆಯು ಗಿಡದಂತೆ ಛಿನ್ನಭಿನ್ನವಾಗಿ ಖಂಡಿಸಿದರು (ಪುರಾವಿ. ೬೫).

[ <ಸಂ. ತುಂಡ ]

**ತೊಂಡ₄** (ನಾ). ಒಬ್ಬಾತನ ಹೆಸರು: ಆತನಿಂ ಬಳಿಕಂ ಗಾವುಣ್ಡಗೆ ನಿನ್ದನಾಹವಶೌಣ್ಡಂ ತೊಣ್ಡಂ (ಸೌಇಇ. XI-1, ೪೩-೦೩ ; ೯೬೦). [ ? ]

**ತೊಂಡಂಗಿ, ಜೊಂಡಿಂಗ, ಜೊಂಡಿಗ, ತಂಡಂಗಿ₂, ತೊಣ್ಣಂಗಿ** (ನಾ). ಒಂದಂ ಒಗೆಯ ಹುಳು ; ಜಿರಲೆ: "ಮುಖಲೋಮಿ ತೊಂ [ ಪಾಠಾಂ. ತುಂ]ಡಂಗಿಯಕ್ಕುಂ" (ಮಂಗರಾ. ೪೯-೦೩). **ಜೊಂಡಿಂಗ** : ಸಣ್ಣ ಸಣ್ಣ ಇಲಿಗಳೂ ಜೊಂಡಿಂಗಗಳೂ ಪರಸ್ಪರ ಅಹಿಂಸಾಭಾವದಿಂದ ಸ್ವಚ್ಛಂದವಾಗಿ ಅತ್ತಿತ್ತ ಓಡಾಡುತ್ತಿವೆ (ಕುರಿಹಿಂ. ೦೧೪). **ಜೊಂಡಿಗ** : ರಾಜ್ಯದ ಹೆಗ್ಗಣಗಳ ತಾನೊಕ್ಕಿ ಜೊಂಡಿಗದಾ ಹುಲುಗಡಣವ ಮುಕ್ಕಿ . . . ಬೆಕ್ಕು ಹಾರುತಿದೆ ನೋಡಿದಿರಾ (ಗಿರಿ. ೮೩-೦೭) : ಬಡಪಾಯಿ ಜೊಂಡಿಗದ ಜೀವ ತಕ್ಕೊಳ್ಳುವದು ನನ್ನ ಬೆಕ್ಕು (ಸ್ವ.ತಿತಿ. ೩೮೯). **ತುಂಡಂಗಿ₂** : ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. **ತೊಣ್ಣಂಗಿ** : ತೇವವಿರುವ ಜಾಗದಲ್ಲಿ ತೊಣ್ಣಂಗಿಗಳು ಬಹಳವಾಗಿ ಇರುತ್ತವೆ (ಕೂ೨).

**ತೊಂಡಜ್ಜ** (ನಾ). (ಕರಾ) ಅಜ್ಜನ ತಂದೆ ; ಮುತ್ತಾತ.

[ ತೊಂಡ₁ + ಅಜ್ಜ₂ ]

**ತೊಂಡತನ**, ತಂಡತನ (ನಾ). ಔದ್ಧತ್ಯ; ಉದ್ಧಟತನ : ವೀರವಳಿದುದು ತೊಂಡತನಗಳು ಹೋಗಿ ಕೈಕಾಲೊಡೆದು ನಾಚುತ್ತ . . . ತೆರಳಿದ (ಛಾತಿರಾ. ೦೯-೩೩). **ತಂಡತನ** : ತಂಡತಂಡಾಗಿ ತಿರುಗುವ ನಾರಿಯರ ತುಂಡತನವನು ನೋಡು (ಕಾಲಸಂ. ೩೩) : ಚಂಡವಿಕ್ರಮಭೀಮನಡಿಗೆಜಗಿ ಕೀಚಕನ ತುಂಡತನವಂ ಪೇಳ್ದಳು ಭಾವೆ (ಪಾಂಡಚ. ೩೭-೨).

[ ತೊಂಡ₂ + – ತನ ]

**ತೊಂಡನೂರ್** (ನಾ). ಒಂದಂ ಊರಿನ ಹೆಸರು : ತೊಣ್ಡನೂರ್ ಬೋಯಸ್ಯ ಕೌಶಿಕಗೋತ್ರ ರೇವಶರ್ಮ್ಮಣ (ಇಸಿ. VII, ೪೨-೩೭ ; ೬೬೮).

[ ? + ಊರ್ ]

**ತೊಂಡಬಡಿಗೆ** (ನಾ). ಒಂದಂ ಬಗೆಯ ಆಯುಧ: ಬೇಟಿ‌ವೇಟಿತ್ತಿ ತತ್ರಿಸಿದ ತೋಮರದ ತೋರದೊಂಗಲ ತೊಂಡಬಡಿಗೆಯ ಗಂಡರ ದಾವಣಿಯ ... ಸುಭಟವೇಟಕಂ . . . ಅಜಾಂಡವೊಡೆಯೆ ಗಜಬ್ ಗರ್ಜಿಸುತ್ತುಂ (ಮಹಾಸೀ. ೦೨-೧೯ ಆ). [ ತೊಂಡ₀ + ಬಡಿಗೆ ]

**ತೊಂಡಬ್ಬೆ** (ನಾ). ಒಬ್ಬಾಕೆಯ ಹೆಸರು: ನಾಗತ್ತರನ ಮಗಳ್ತೊಂಡಬ್ಬೆಯು (ಎಕ. IX, ಬೆಂಗಳೂ. ೮೪-೨; ಸು. ೧೦). [ ತೊಂಡ₄ + ಅಬ್ಬೆ₁ ]

**ತೊಂಡಮಂಡಲ** (ನಾ). ಚೋಳಮಂಡಲ; ಪ್ರಾಚೀನ ತಮಿಳುರಾಜ್ಯದ ಒಂದು ಭಾಗ ; ಕಾಂಚಿಯನ್ನು ರಾಜಧಾನಿಯಾಗಿ ಹೊಂದಿದ್ದ ಆರ್ಕಾಟು, ಚೆಂಗಲ್ಪಟ್ಟು ಮತ್ತು ನೆಲ್ಲೂರುಗಳನ್ನೊಳಗೊಂಡ ಭಾಗ : ತೊಂಡಮಂಡಲದಲ್ಲಿ ಶೋಭಿಪ ಶಕ್ಕರಣ್ಯವೆನಿಪ್ಪ ನಿಖ್ಖಂಡ ತೋತ್ಸವವೊಂದು ಪಟ್ಟಣವಿರ್ಪುದು (ಉದ್ಭಟಿ. ೦೨-೦೯).

[ ←ತಮಿ. ತೊಣ್ಣೈಮಣ್ಡಲ ]

**ತೊಂಡಲ್**, ತೊಂಡಲ, ತೊಂಡಲು₁, ತೊಂಡಿಲ್, ತೊಂಡಿಲು₁ (ನಾ). ೧. ತಲೆಯಲ್ಲಿ ಧರಿಸುವ ಒಂದು ಬಗೆಯ ಮುತ್ತಿನ ಆಭರಣ,– ಶಿರೋಭೂಷಣ : ದಂಡೆಯುಂ ತೊಂಡ[ಪಾಠಾಂ. ಡಿ]ಲಂ ನೂಂಕುತಂ ಛಂದದಿಂ ಚೆಂಡಿಕೆವಿಡಿದು ಮಗಳನುದ್ಧರಿಸುವಂದದಿಂ (ಪಾರ್ಶಚ. ದೇ. ೦೬೯-೩); ಪಾಂಡ್ಯಸತಿಯರ ತೊಂಡಲ್ಗಿವಿದ ಘನರತ್ನಂಗಳ್ ಪಾವುಗೆಗಳ ಬಳಸು ದೊಂಗಲೆಡೆಯೊಳ್ ತೋರ್ಕುಂ (ಚಿತಪಿ. ೩-೩೬) ; ತೊಂಡಲವು ಶಿವಗಣಕೆ ಗುಂಡಯ್ಯ ನೀನಾದಿ (ಕನ್ನಕಾ. ೩೦೨). ೨. ಸಾಲು ; ಶ್ರೇಣಿ : ಅಲ್ಲಲ್ಲಿಗೆ ಪರಿಯುತಿರ್ಪಜುಂವೆಯ ತೊಂಡಲ್ (ಧರ್ಮಾಮೃ. ೩-೭೪). ೩. ಹೂವಿನ ಹಾರ, – ದಿಂಡು, – ದಂಡೆ : ರೂಢಿಸಿತ್ತು ಕೆಂಪಿಡಿದ ಬೆಡಂಗಿನಿಂದಮ . . . ವಿಳಾಸದಿಂ ಮುಡಿದ ಮಹೇಂದ್ರದಿಗ್ವಧುವ ಬಣ್ಣದ ತೊಂಡಲ ನಿಂದುಮಂಡಲಂ (ಲೀಲಾವ. ೨-೬) : ತೊಂಡ[ ಪಾಠಾಂ. ಡಿ ]ಲ ಮುಡಿದು ಕೊಂಡು ತಮ್ಮ ತಮ್ಮ ಗಂಡರ ಹಿಂದುಗೊಂಡು ನಾಡುವಿಂದರ ನೋಡುತ್ತಲಿ ಇಂದು ನಮ್ಮ ಹುಲಿ ಹೋಯಿತ್ತು (ಬಸಪು. ೬೦-೦೩೭) : ವಿಯಚ್ಚರಿಯರ ವೇಣಿಯಿಂ ಜಗುಟ್ದ ತೊಂಡಲ ದಂಡೆಯೊ (ದಕಳ. ೯-೪೦) : ಪೊಸತೊರಳೆಗಳ ದಂಡೆದೊಂಡಲ್ಗಳಂ ಮುಡಿದುಮೆಲ್ಗಳ ತೊಡಂಗಳನೆ ತೊಟ್ಟು . . . ಮೆರುಳ ಮದವರ್ತಳೆಸಿಯರ್ (ಜಗನ್ನಾ. ೩೨-೨೦) : ಪರಿಪರಿಯ ಚಂದು ತೊಂಡಲ ಮಾಲೆಗಳ ಕೊಂಡು ತೆರಳ್ದು ಸೊಗಸಿಂ ಸೂಳೆಗೇರಿಗೈತರಲು (ನವಮೋ. ೦೭-೩೩). **ತೊಂಡಲ** : ೧. ದಂಡ್ಯಾಗ ಒರಗಿರುವ ಮಂಡಲದ ಗಿಣಿರಾಮ ತೊಂಡಲವು ತೂಗಿದಳವೆಲ್ಲಿ (ಕೋಲಗೀ. ೪೦). ೩. ಖಂಡೆಯಕೆ ಪೊಂದಿರ್ದ ತೊಂಡಲವ ಕೂಡೆ ತೆಗೆದುಕೊಂಡು ಮುದದಿಂದ ಬರೆ (ಪ್ರಾಥರಾ. ೦೩-೨೭). **ತೊಂಡಲು₁** : ೧. ದುಂಡುಮುತ್ತಿನ ರತ್ನ ಕೀವಣಿಸಿದ ಹೊನ್ನ ತೊಂಡಲ ಸೂಡಿದು ಮುದದಿ (ಕೋಚಕ. ೦೩-೬೫) ; ಕರುಳ ತೊಂಡಲು ಖಂಡದ ಬಣ್ಣಬಾಸಿಗ ನರದ ಹಂಜರ ಚಪ್ಪರದಲಿ ನೆರೆದು (ಕಂಸವಿ. ೦೫-೭೩) ; ೩. ಅಂಗಜ ವಿಭಂಗನವರಡಿದಾವರೆಗಳುತ್ತಮಾಂಗಕವರಿದ ದಂಡೆ ತೊಂಡಲುಗಳನ್ನೇಕೆ (ಮುದೇಪು. ೨೩-೫) : ಕಾಂತೆಯರುಯತಿಕುಶಲದಿಂ ಮಾಲೆ ಕಂಕಣಂ ಚೆಂಡು ತೊಂಡಲುಗಳಿರದೇ ಸಾತಿಶಯದಿಂ ಕಟ್ಟಿ (ನವಮೋ. ೦೦-೬೦) ; ತೊಂಡಲ ಮೇಗಣ್ಗೆ ಸೆರಗನ್ನೆಳೆದುಕೊಳ್ಳುತ್ತ ಕೊರಲ್ವಾಗಿ ಹೊರಡುವಳು (ಬಿರುಗಂ. ೨೮-೦೨). **ತೊಂಡಿಲ್** : ೧. ದಂಡೆ ತೊಂಡಿಲ ಮುಡಿಸಿ ಶಂಡಾಲ ಗಾಮಿನಿಯು ಮಂಡೆಯೊಳು (ಜ್ಞಾನಕಂ. ೬-೨೪); ನರಮೌಕ್ತಿಕದ ತೊಂಡಿಲನು ಸಿರಿಮುಡಿಯೊಳಗಳವಡಿಸಿ (ಜ್ಞಾನಕ. ೩೬-೯೩) ; ಇಳೆಯೊಳ್ಪೆಂಡಿರ ತೊಂಡಿ ಲೊಳ್ಮಣಿಯನೀ ಚಂದ್ರಾಸ್ಯೆಯುಂ ಸೃಷ್ಟಿಗೈದು(ಮಿತ್ರಗೋ. ೫೦). ೩. ನಿರಾಳ ಬೋಳಿಂಗೆ ತೊಂಡಿಲ ಮುಡಿಸುವಂತೆ (ಅವಹಂ. ೦೩೩-೬೦೭). ೪. ಮದುವೆಯಲ್ಲಿ ಹೆಣ್ಣಿನ ತಲೆಗೆ ತೊಡಿಸುವ ಬಾಸಿಗ: ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ (ಮಹಾದೇ. ಬ. ೩೭-೭೪) **ತೊಂಡಿಲು₁** : ೧. "ತೊಂಡಿಲು ಶಿರೋಗ್ರಂಥಿಯೆನಿಸಿಕ್ಕು" (ಮಂಗರಾ. ೯೯-೨೦): ಮುಡಿಗೆ ಮಂಗಳಮಪ್ಪ ಮಣಿದೊಂಡಿಲಿಟ್ಟು (ಜೀರಮ. ೫-೪೧) : ತೊಂಡಿಲುಂಗುರ ತಾಳಿ ಬಂದಿ ಭೂಷಣದ ಕರಂಡಗೆಗೊಟ್ಟು ಕಳುಹಿದ (ಭರತ. ೩೭-೦೨೭): ಮಣಿವ್ರಜಮಂಡಿತವೊಂದಿ ತೊಂಡಿಲಾ ಸೋಮ್ಮುಡಿಯಲ್ಲಿ . . . ಇಟ್ಟು ಸಿಂಗರಿಸಿ (ರಾಜಶೇ. ೮-೩೪): ಮೆರವ ತೊಂಡಿಲ ಧರಿಸಿ (ಯಜಸ. ೫೪). ೩. ಮಲ್ಲಿಗೆಯಲರ್ಗಳಿಂ ಸಮೆದ ತೊಂಡಿಲಿನಿಂದ ಪೊಲ್ಲೆಯ ದಂಡೆಗಳಿಂದ (ಚಂಪ್ರಸಾಂ. ೦೨-೦೦೩). ೪. ತೊಂಡಿಲು ಬಾಸಿಗವನು ಸೂಡಿದರು ಚಂದ್ರ ಮಂಡಲ ರತಿಮನ್ಮಥರ್ಗೆ (ಬೋಚಕ. ೧೫-೨೩).

**ತೊಂಡಲ** 'ತೊಂಡಲ್' ನೋ.

**ತೊಂಡಲಿಪಿ** (ನಾ). ಉದ್ಧತರ ಬರವಣಿಗೆ ; ಉದ್ಧತರಾಜರ ಶಾಸನ : ತೊಡೆ ತೊಂಡಲಿಪಿಯನೆಂದನು ಧೂಳಿಲಿಪಿಗಳ ತೊಡೆವಂತೆ ತೊಡೆದನಾ ಭೃತ್ಯ (ಭರತ. ೩೭-೯೮). [ ತೊಂಡ₂ + ಲಿಪಿ ]

**ತೊಂಡಲು₁** 'ತೊಂಡಲ್' ನೋ.

**ತೊಂಡಲು₂** (ನಾ). ಒಂದು ಬಗೆಯ ಹಕ್ಕಿ : ಗರುಡ ಕೊಣಕನು ಮೇಣು ಟೀವನು ಗರಗೆ ತೊಂಡಲು ಗಜಿಗ . . . ಪೆರುವರ್ದವಟಿಳೊಲೊಪ್ಪಿದವು (ಸಾಳ್ವಭಾ. ೫-೨೩). [ ? ]

**ತೊಂಡಲ್ವಚ್ಚ** (ನಾ). ತಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ ; ಬೈತಲೆಮಣಿ : ಬೆಳ್ಳಿಗರಡಿಗೆಯೊಳ್ ತಳತಳಿಪ ಪಟನುಡಿವೆಂಡಿರ ಪಚ್ಚೆಯ ತೊಂಡಲ್ವಚ್ಚದಂತೆಯುಂ (ಚಿತಪಂ. ೮೬-೬೦). [ ತೊಂಡಲ್ + ಪಚ್ಚ₂ ]

**ತೊಂಡಲ್ಹೂವು** (ನಾ). ಗೊಂಚಲಾಗಿರುವ ಹೂವು : ತೊಂಡಲ್ಹೂವಿನ ಗಾಳಿ ನನೆಯ ನಿಡುದಂಡೆ ಮನೋಹರವಾದಚ್ಚು (ಜಯಕಾ. ೫-೬).

[ ತೊಂಡಲ್ + ಪೂವು (<ಪೂ₁) ]

**ತೊಂಡವಾಡಿ** (ನಾ). ಒಂದು ಸ್ಥಳದ ಹೆಸರು: ತೊಣ್ಡವಾಡಿಯ ಪಳ್ಳಿಯ ಮಳೆಬುತ್ತಯ್ಯನ ಮಗ ಅಯ್ಯಪಯ್ಯ (ಎಕ. IV, ಗುಂಡ್ಲುಪೇ. ೦-೯೩; 975). [ ತೊಂಡ + ಪಾಡಿ₂ ]

**ತೊಂಡಾಣೆ** (ನಾ). ಭಕ್ತನ ಆಣೆ: ಕೇಳನ್ನು ನಿನ್ನಾಣೆ ತೊಂಡಾಣೆ ಹೋಗೆಂದು ಕರುಣೆ ಕೆಳುವಲ್ಕೆ (ಸಿದ್ಧರಾ. ೬-೩೦).

[ ತೊಂಡ₁ + ಆಣೆ₂ ]

**ತೊಂಡಾಲ** (ನಾ). ಒಂದು ಸ್ಥಳದ ಹೆಸರು: ಅಲ್ಲಿಂದ ತಂಕ ಪಡುವಲು ಉತ್ತನೂರ ತೊಂಡಾಲದ ಮುಕ್ಕೂಟಲ ಮಣ್ಣೊಬಿಡಿ (ಮೈಅರಿ. ೧೯೩೩, ೧೦೩-೯೩; 934). [ ? ]

**ತೊಂಡಿ₁** (ನಾ). ದಾಸಿ; ಸೇವಕಿ: ಬಸುರಿಳಿಯೆ . . . ಮಾಂಸದ ಚೀಲದಿಂ ಬೀಳಿಯೊಡನೆ ಗಾಂಧಾರಿಯುಂ ಮುಳಿಸಿಯದನೂ ಕಂಡಿದಕ್ಕಾಗಿ ತಾನೆರಡುವರುಷಂ ಧರಿಸಿಕೊಂಡೆನೆ ಗರ್ಭಮಂ ಬಿಸುಡು ಬಿಸುಡೆಂದಾಗ ತೊಂಡಿಯರಿಗುಸುರುತಿರಲು (ಲಕ್ಷ್ಮೀಶಾ. ೨೩-೩೬).

[ ತೊಂಡ₁ + -ಇ₂ ]

**ತೊಂಡಿ₂** 'ತೊಂಡೆ₁' ನೋ.

**ತೊಂಡಿಕೆ** (ನಾ). ತುಂಟತನ; ತಂಟಾಟ: ಕರುಮಾಡದ ಪೊಱಗನೆ ಪೋಪಳಂ ವಸುದೇವಂ ಕಂಡವಳ ಕೈಯಿಂದವಾ ಕರಂಡಕಮಂ ಕೊಂಡೊಡ ವಳಂತಂಬಳ್ ತೊಂಡಿಕೆಯನೊಪ್ಪೆ ನಿನ್ನೊಳ್ ಕಂಡುದಱನುಪಾಯದಿಂ ವನಾಂತರದೊಳ್ ಭೂಮಂಡಳಪತಿ ಸೆಱೆಯಿಟ್ಟುಂ ಕೊಂಡಾಟದೊಳಿರ್ದ ನೆಂದು ಬಗೆಯದೆ ಕಂಡಾ (ಬಂಹರಿ. ೨-೬). 'ತೊಂಡಿಕೆಗೆಯ್' ಪರಾ.

[ ತೊಂಡು₁ + -ಇಕೆ ]

**ತೊಂಡಿಕೆಗೆಯ್** (ಕ್ರಿ). ತಂಟಾಟವಾಡು: ನಿಚ್ಚನಿಚ್ಚಂ ತೊಂಡಿಕೆಗೆಯ್ದು ಪುಯ್ಯಲ ಮಾಡುತ್ತಿರೆ (ಬಂಹರಿ. ೩-೩೦ ವ). [ ತೊಂಡಿಕೆ + ಗೆಯ್₁ ]

**ತೊಂಡಿಗ₁** (ನಾ). ಒಂದು ಬಗೆಯ ಪಕ್ಷಿ: ಶಕುನಿ ಕಂಕಂ ತೊಂಡಿಗಂ . . . ರತ್ನಖಗಮಿರ್ಕುಂ ತದ್ವನಾಗೌಘದೊಳ್ (ರಾಜಶೇ. ೩-೩೯); "ರಣಹದ್ದು" (ರಾಜಶೇ. ಕೋಶ); ಟಿಟ್ಟಭಂ ತೊಂಡಿಗನುರುಳಿಗನಿಬ್ಬಾ ಯನುಂ ಚಾತಕಂ . . . ಶಿಖಿ ಶುಕಂ ತದ್ವನಾಂತಸ್ಥಮಿರ್ಕುಂ (ಕಬಿಕಾಂ. ೩-೩೩). [ ? ]

**ತೊಂಡಿಗ₂** (ನಾ). ಒಬ್ಬಾತನ ಹೆಸರು: ಓರಿಯ ಮಗಂ ಕಾಳಿಧುರಂಧರ ನಾತಂ ತೊಣ್ಡಿಗ[ಂ]ಗೆ ಮೆಚ್ಚಿಸಿದೋಂ (ಸಾಇಇ. XI-1, ೪೫-೦೭; 980).

[ ? ]

**ತೊಂಡಿಲ್** 'ತೊಂಡಲ್' ನೋ.

**ತೊಂಡಿಲು₁** 'ತೊಂಡಲ್' ನೋ.

**ತೊಂಡಿಲು₂** (ನಾ). =ತೊಂಡೆ₁: ಯಾಕವ್ವಾ ಕೆರದು ತೊಂಡಿಲ ಬಾಯಿ ಸಾಕವ್ವಾ ಮನವು ಮಾವಿನಕಾಯಿ (ಸೋಗೀ. ೯೦-೦೬); ಸಂಜೆ ಬಂಡತನವ ಹರಿಸಿ ಮೆರೆಯ ತುಟಿಯ ತೊಂಡಿಲ (ಸೂರ್ಯಕಾ. ೧೦೮-೪).

[ <ತೊಂಡೆ₁ ]

**ತೊಂಡು₁**, ತಂಡುಂ₂ (ನಾ). ೧. ಉದ್ದಟತನ; ದಂಷ್ಟತನ; ಸ್ವೇಚ್ಛಾ ವೃತ್ತಿ; ಪುಂಡಾಟ: ತೊಂಡಿನೊಳುರ್ಕಿ ಕಟ್ಟಿ ದಶಕಂಠನನಕ್ಕಟ ಕೊಂಡ ಪೆರ್ಮರುಳ್ ಕೊಂಡುದೆ ತನ್ನುಮಂ (ಪಂಪಭಾ. ೬-೩೩): ತೊಂಡಿನೊಳಮ್ಮ ಪೇರಡವಿಯುಂ ಪುಗುತಂದಪರೆಂದು ಲುಬ್ಧಕರ್ ತಂಡದೆ ಸುತ್ತಿಮುತ್ತೆ (ಶಂರಾಮಾ. ೬-೧೦೩); ಕೊಂಡು ಕಮಂಡಲಜಲದೊಳ್ ದಂಡಿತರಿಪ್ಪ ತೀವೆ ಕಂಡು ಗುಂಡುಲಿಯ ಕರಂ ತೊಂಡಿಂದಾ ಪುರವರದೊಳ್ ಗುಂಡಿಗೆಯಂ ನೆಗಪಿ ಸುರಿಯೆ ಪರಿದುದು ನದಿಪೋಲ್ (ನೇಮಿಪು. ೭-೦೮೩); ತೊಂಡಿನ ಕೊಟ್ಟಿರ್ ಪಾಪದ ಪಿಂಡಮನಿಪ್ಪಂಗನಾಜನಂ ಬೆರಸಲ್ (ಜಯದ. ೧೯-೬೨); ಕೊಂಡಿನ ತವರುಮನೆ ಬಾಹಿರರಿಗಾಶ್ರಯಭವನ ಖಳರಧಿದೇವ ಭೀಷ್ಮನ ಕೊಲುವರಿಲ್ಲೆಂದ (ಕುಮ್ಯಾ.ಸ. ೦೦-೦೨). ೨. ಸೊಕ್ಕಿನ ನಂಡಿ; ಉದ್ದಟತನದ ಮಾತು: ಕಂಡುಳಿದವುಳಿದರಲ್ಲದ ತೊಂಡಂ ನುಡಿದೆಡೆಱ ತೊಡರ್ವರುರವಣೆಯುಂ ಕಂಡಿದಿರಲೆಬ್ಬು ಮುಳಿಸಿಂ ಖಂಡಿಪನೆನೆ ಹಬ್ಬಣಂಗಿದಿರ್ಚುವನಾವಂ (ಮುಂಬಿಕಾ. ೫೯೩-೫೯; 1219). ೩. ಉದ್ದಟ ವ್ಯಕ್ತಿ; ಸ್ವೇಚ್ಛಾಚಾರಿ: ತೊಂಡನೆನಿಸಿ ಬದುಕಿದವ ಪೆಣ ನಂತೆ ನಿಪ್ಪಲವು (ನಿಘಾಗ. ೦೧-೨೮-೧೬). ೪. ವಾಕ್ಚಟುತ್ವ: ಜನ್ನನ ದೇಸಿ ಪಂಪನ ಗುಣಂ ಗುಣನಂದಿಯ ತೊಂಡು ಪೊನ್ನನೊಳ್ ಸನ್ನಿದವಾದ ಜಾಣ್ನುಡಿ . . . ನೆಲಸಿರ್ಪುವೀ ಸುಕವಿಮಲ್ಲನ ಕಾವ್ಯವಿಲಾಸಗೇಹದೊಳ್ (ಸೂಕ್ತಿಸು. ೦-೨೬). ೫. ಪರಾಕ್ರಮ; ಶೌರ್ಯ: ಪೇಟೀಪುದೊ ಕುಟಿಯಿಲ್ಲದವನ ಗಂಡುಂ ತೊಂಡುಂ (ಪಂಚಳಿ. ೮-೮೨); ಗಂಡಿನ ತೊಂಡಿನಂಕಧಟಲ್ ಪೊಂಕಾಳ್ತನಂ (ಹೈಅಸಿ. ೦೪-೬-೬೩; 1090): ತೊಂಡಿನೊಳ ಮಲೆಮಹೀಪರ ಮಂಡಳಮಂ ಸೂರೆಗೊಂಡು (ಎಕ. V, ಅರಸೀ. ೦೦೨-೬೩; 1100 ?); ಭೇರುಂಡಪರಾಕ್ರಮಂಗೆ ಸಹದೇವ ಚಮೂಪತಿಗೆಂತು ಗಂಡಿನೊಳು ತೊಂಡನಿದಿರ್ಚಿ ಬಾಳ್ವದಟನಾರ್ಗ್ಗಳ ಮೈಳುಗಿಯಾಂಕ[ಕಾ]ರನೊಳು (ಸಾಇಇ. XV, ೦೫೩-೫೩; 1206); ಬಲಂ ಗೊಂಡಂ ತೊಂಡಂ ಬಿಡದೆ ಗಜಕರ್ಣಾವನಿಭುಜಂ (ಪುಷ್ಪಪು. ೬-೫೦): ತೋಱಸಿದೆ ನೀ ತೊಂಡಿನೋಳಿಯಕಾಱಿತನವನು (ಕುಮ್ಯಾ.ಕ. ೦೬-೦೩). ೬. ಮದ; ಸೊಕ್ಕು: ಬಲವಂ ನೆಚ್ಚಿ ವಿರೋಧವಂ ಪಡೆವುದೇ ತೊಂಡಿಂದೆ ಸಾಮನ್ತರಂ ಕಲಹಂ ಬೇಡೆನೆ (ಎಕ. VI, ಕಡೂರು. ೩೫-೫೨: 1136); ಕೂರ್ತನಂ ತೊಂಡಿನಿಂ ಕುಂಟಣಿ ಮಾಬ್ಬಿಲ್ಕೆಣದಿಂ ನಾಣೊಡೆಯ ನನೆಡೆಯೊಳ್ಪರ್ಧನಂ ಮಾಬ್ಬಲ್ (ಲೀಲಾವ. ೨-೯೬); ಬಾದೊರ್ವ ಭಿಪ ಯೆನಿಪ ವಿಪ್ರಂಗೆ ತೊತ್ತಾಗಿ . . . ಅರಮನೆಯ ಕೆಲಸವಂ ಮಾಡುತುಂ ತೊಂಡು ಮಿಕ್ಕುದು (ನಿಂಬಕ. ೧೨೩-೦೬); ಜನಪನಾಣಿಡಿಯನಾನೆಯ ದೊಂದು ತೊಂಡ ಗುರುವಿನ ದುರಾಚಾರವಂ ಮಾಣಿಸಲ್ಬಲ್ಲರೇ (ಸಮ್ಮಕಾ. ೨-೬೩). 'ತೊಂಡುಗೆಡೆ₁' ಪರಾ. ತುಂಡು₂: ೩. ಬಂಡು ಹೆಂಡತಿಯಾಗಿ ತುಂಡೊಬ್ಬ ಸೊಸೆಯಾಗಿ ಕಂಡಲ್ಲಿ ಹರಿವ ಮಗನಾದರಾ ಮನೆಗೆ ದಂಡ ತಪ್ಪುವದೆ (ಸರ್ವಜ್ಞ. ೦೬೩೩).

**ತೊಂಡನಿಕ್ಕು** = ದಂಷ್ಟತನದಿಂದ ವರ್ತಿಸು: ಕೊಂಡನಿಕ್ಕಿ ಠವಾಳ ತನದಲ್ಲಿ ಭಂಡುಗೆಲೆವುತ ಮಲುಹಣಿಯ ತಾಯ್ ಮಿಂಡನಂ ಪೊಱಪಡಿಸಿ ತಾ ತನ್ನಾತ್ಮಜೆಯನೊಬ್ಬ ಮಂಡಳೇಶನ ಪೊರೆಗೆ ಕಳುಹಲು (ಬಸಪು. ೪೨-೦೯). **ತೊಂಡಿನ ದನ** = ತೊಂಡುದನ: ಮನಕ್ಕೆ ಲಿಂಗ ಬಾಹಾಗ ತೊಂಡಿನ ದನವೇ (ವಚನಕಮ. ೦೦೯-೪೬೬).

**ತೊಂಡು₂** (ನಾ). ಅಂಕೆ; ಹತೋಟಿ: ಮದವೆದ್ದಾನೆಗೆಲ್ಲಿಯ ತೊಂಡು (ಅನಂರಾ. ೬-೨೩-೨೬). [ ದೇ.ಕ ತಮಿ. ತೊಣ್ಡು ]

**ತೊಂಡು₃** (ನಾ). ಗುಂಪು; ಸಮೂಹ: ಇಡೀ ಜಗತ್ತೆಲ್ಲ ಮೋಹವಿಭ್ರಾಂತ ರಾದ ಜನರ ತೊಂಡಿನಂತೆಯೂ . . . ಅವಳಿಗೆ ಕಂಡಿತು (ಪುಸರು. ೧೯೪).

[ < ತಂಡ ]

**ತೊಂಡು₄** (ನಾ). (ಕರಾ) ಮಣ್ಣಂಸರೆಯನ್ನು ಹಾಕುವ ಬಾನಿ.– ಕೂನಿ.

[ ? ]

**ತೊಂಡುಗಿಳಿ** (ನಾ). ಧ್ವನಿಮಾಡುವ ಗಿಳಿ; ಗಳಪುವ ಗಿಳಿ: ಗಂಡು ಗೋಗಿಲೆಯ ತಂಡಮುಂ ತೊಂಡುಗಿಳಿಯ ಪಿಂಡುಂ ಮುಂ ಪಯಣಮಾಗೆ (ಶಾಂತಿಪು. ೬-೦೨೯ ವ); ಪರಿವಿಡಿಗೆಯ್ಕೆ ತೊಂಡುಗಿಳಿ ತಂದೆಯ ತಾಯ ಸವಿಮಾಪದೊಳ್ (ರಸರ. ೪-೦೬೬). [ ತೊಂಡು₁ + ಗಿಳಿ ]

**ತೊಂಡುಗೂಳಿ** (ನಾ). ಸ್ವೇಚ್ಛೆಯಾದ ಬಸವ; ದೇವರಿಗೆ ಬಿಟ್ಟ ಗೂಳಿ; ಪುಂಡುಗೂಳಿ: ತೊಂಡುಗೂಳಿ ಬೆಳೆದ ಹಾಗೆ ಬೆಳೆದಿದ್ದೆ (ಸಂಧ್ಯಾರಾ. ೧೨).

[ ತೊಂಡು₁ + ಗೂಳಿ₁ ]

**ತೊಂಡುಗೆಡೆ$_1$** (ಕ್ರಿ). ೧. (ಗಿಳಿಯು) ಧ್ವನಿಮಾಡಂ,-ಗಳಹಂ: "ತೊಂಡುಗೆಡೆವುದೆಂದು ಶುಕವಿಲಾಸಂ" (ಶಶಿಶಾ. ೫೫-೨೦೪) : "ತೊಂಡು ಗೆಡೆದುದೆನೆ ಗಿಳಿಯವಾತು" (ಕಬ್ಬಿಕೈ. ೨೩) : ತೊಂಡುಗೆಡೆದು ವಸಂತ ರಾಜನ ಪಡಿಯಜಿರಂತೆ ವಿರಹಿಗಳಂ ಚಪ್ಪರಿಪ ರಾಜಕೀರಂಗಳ್ (ಗಿರಿಶ. ೩-೦೦೩ ವ); ಕಂಗೊಳಿಸಿದುದೆಂದು ತೊಂಡುಗೆಡೆಯುತ್ತುಮತೀವ ವಿಲಾಸ ದಿಂ ಶುಕಾವಳಿ (ಅದ್ಭುಟ. ೦೦-೯); ತೊಂಡುಗೆಡೆಯಿತ್ತುಪದೇಶಿಕನಂತೆ ಕಾಮ ತಂತ್ರದ ತಿರುಳಂ ಕನತ್ಕನಕಪಂಜರಪಂಜರಿತಾಂಶುಕಂ ಶುಕಂ (ಸೂಕ್ತಿಸು. ೦೯-೩) ; ಗಿಳಿಗಳೆಮ್ಮನೆ ಕಂಡು ಮೂಗ ಕಿಚ್ಚನೆ ಮಾಡಿ ತೊಂಡುಗೆಡೆದವ ವೆಂದೆಳೊರ್ವ ವನಿತೆ (ಧಾವಜಂ. ೬-೨೬) ; ಬಗ್ಗಿವ ಕಳಕಂಠಂ ತೊಂಡು ಗೆಡೆವ ಗಿಳಿ ಪೂತಸೆದಿರ್ವಲಚೆರ್ಣಂವಂ (ರಾಜಶೇ. ೨-೩೮). ೨. (ಸ್ವೇಚ್ಛೆಯಿಂದ ವಾಗಿ) ಕೂಗು,-ಕಂಕಿಲಂ: ತೊಂಡುಗೆಡೆಯುತ್ತೆ ಪಿಕಾಳಿ ಶುಕಾಳಿ ಯೊಪ್ಪುಗುಂ (ಗಿರಿಶ. ೨-೩೬) ; ಪುಗಲ್ ಪುಗಲೆಂದು ಬಂಡಳಿಸಿ ತೊಂಡು ಗೆಡೆವ ಗಂಡುಗೋಗಿಲೆಗಳುಂ (ಪುಷ್ಪಪು. ೨-೩೯ ವ) ; ಶುಕಪಿಕಂ ತೊಂಡು ಗೆಡೆದುಜಿ ಕೂಗಲ್ (ಧಾವಜಂ. ೯-೦೭). ೩. (ಅಲಂ) ಕೂಗಾಡು; ಜರುಚು : ಬಾಣದ ಮೊನೆಯೊಳು ಲೇಖೆಯಿಂ ಕಟ್ಟಿ ತೊಟ್ಟನೆಸೆವುದದಂ ಮಾಗಧಂ ಕಂಡು ತೊಂಡುಗೆ[ಪಾಠಾಂ. ಕೆ]ಡೆವುದುಂ ಮಂತ್ರಿಗಳು ಮಾಣಿಸಲ್ (ಪುಣ್ಯಾಸ್ರ. ೦೦-೨೮ ವ) ; ಭಂಡ ನೀ ಬಾಯ್ಬಡಿಕತನದಲಿ ತೊಂಡುಗೆಡೆವರೆ (ಭಾರಿತಾ. ೨೦-೫೦): ಅಲ್ಲಿಗೆ ಪೋಗಿ ತೊಂಡುಗೆಡೆದು ನಿಂದಿಸಿ ನಮ್ಮ ಕಾಡಿದ ದಿಂಡೆಯದೇನ ಮಾಡುವೆನೆಂದ (ಕ್ರಿಭುಶಿ. ೯-೪೨).

[ ತೊಂಡು$_1$ + ಕೆಡೆ$_2$ ]

**ತೊಂಡುಗೆಡೆ$_2$** (ಕ್ರಿ). ರಾಶಿಯಾಗಿ ಬೀಳಂ ; ಗುಂಪಾಗಿ ಕೆಡೆ : ಕರಚಂಡ ಘಾತದೊಳ್ ತೋದುಗೆಡೆದ ತುರಗದಳಂಗಳುಂ (ಅಜಿಂಪು. ೦೯-೬ ವ) ಕಡಿದು ಖಗಚಯ ತೊಂಡುಗೆಡೆದ ಕಾಯಿಪಣ್ಗಳೊಳು (ನವಮೋ. ೨೯-೫೬). [ ತೊಂಡು$_3$ + ಕೆಡೆ$_1$ ]

**ತೊಂಡುಗೆಡೆತ** (ನಾ). ಮಧುರವಾದ ಧ್ವನಿ,-ಕೂಗಂ: ಇಂದಿನ ಕನ್ನಡ ಕಾವ್ಯಪ್ರಪಂಚವು ಈ ಗಿಳಿವಿಂಡಿನ ತೊಂಡುಗೆಡೆತಕ್ಕೆ ಕಿವಿಗೊಟ್ಟೀತೆ ? (ಗಿಳಿವಿಂ. XI, ಮುನ್ನುಡಿ). [ ತೊಂಡುಗೆಡೆ$_1$ + - ತ$_2$ ]

**ತೊಂಡುಗೆಡೆಪ** (ನಾ). ಮಧುರವಾಗಿ ಮಾತನಾಡುವುದಂ : ತಂಬೆಲರ ತನಿಸೋಂಕು ನಾಂ ಪುಗಲ್ಪುಗಲಂತೆ ತೊಣ್ಣುಗೆಡೆಪಂ ಪುಷ್ಪವಿಕಸನವ ಮುದ್ದಿಪಲರ್ವಕ್ಕಿಯಾವೋದಮುಂ (ಸಂಚಿಪ. ೩೦-೦೬೨).

[ ತೊಂಡುಗೆಡೆ$_1$ + - ಪ$_2$ ]

**ತೊಂಡುಗೆಯ್** (ಕ್ರಿ). (ಗಿಳಿಯು) ಧ್ವನಿಮಾಡಂ,-ಗಳಹು: ಇನಿ ವಣ್ಣುಂಡು ಗಿಳಿವಿಂಡು ತೊಂಡುಗೆಯುಲೆಳಸಿತು (ಜಿಲಪು. ೯೫-೦೦).

[ ತೊಂಡು$_1$ + ಕೆಯ್$_1$ ]

**ತೊಂಡುಗೇಡು** (ನಾ). ಸೊಕ್ಕು ಇಳಿಯುವಿಕೆ ; ಅಹಂಕಾರದ ಕೇಡಂ : ಗಂಡುಗುಂದಿನ ಬೀತ ಬಿರುದಿನ ತೊಂಡುಗೇಡಿನ ಜಯದ ಜಾಜಿನ ಖಂಡಶೌರ್ಯದ ಧೀರರಿದ್ದುದು ನೃಪನ ಬಳಸಿನಲಿ (ಕುಮ್ಯಾಳ. ೦೩-೪೭).

[ ತೊಂಡು$_1$ + ಕೇಡು ]

**ತೊಂಡುಗೊಳ್** (ಕ್ರಿ). ಸ್ವೇಚ್ಛೆಯಾಗಿ ಓಡಾಡಂ: ಭಂಡಿಯಂ ನಲವಿಂದ ನೂಂಕೆ ತದುಲ್ಲಸತ್ಪುರವೀಥಿಯೊಳ್ ತೊಂಡುಗೊಂಡಿರಲೊಂದು ತರ್ಣಕಂ . . . ಬಿರ್ದಟಿಯಲ್ (ಅದ್ಭುಟ. ೦೨-೬೬). [ ತೊಂಡು$_1$ + ಕೊಳ್$_1$ ]

**ತೊಂಡುತನ, ತಂಡುತನ** (ನಾ). ೧. ಸ್ವೇಚ್ಛಾವೃತ್ತಿ: (ಶ). ತುಂಡುತನ : ೨. ತಂಟತನ : (ಶ). [ ತೊಂಡು$_1$ + - ತನ ]

**ತೊಂಡುತೆರೆ** (ನಾ). ಪ್ರಕ್ಷುಬ್ಧವಾದ ಅಲೆ : ತೊಂಡುತೆರೆಗಳ ಮುಸುಕಿನಲ್ಲಿ ಕಂಡು ಮಗಳ ಕರಗಿಹೋದ (ಜಂಗೀತ. ೬೬-೨೦).

[ ತೊಂಡು$_1$ + ತೆರೆ$_4$ ]

**ತೊಂಡುತೊಳಸು$_1$** (ಕ್ರಿ). ಮನಬಂದಂತೆ ಸುತ್ತು,-ತಿರುಗು : ತೊಂಡು ತೊಳಸುವ ದೋಣಿಯನ್ನ ನಂಬಿ ಬಂದೆನೆ ? (ಗಿಳಿವಿಂ. ೫೫-೨೪).

[ ತೊಂಡು$_1$ + ತೊಳಸು$_2$ (<ತೊಟಸು$_1$) ]

**ತೊಂಡುತೊಳಸು$_2$** (ನಾ). ಸ್ವೇಚ್ಛಾವೃತ್ತಿ ; ಉದ್ಧಟತನ: ತೊಂಡು ತೊಳಸೆಕ್ಕಸಿಕ್ಕ ವಂಚನೆ ಕುಹಕ ಜೂದು ಕುತ್ಸಿತ ಲಂಡು ಭಂಡು ದುರ್ಜನ ಮೆಂಬಿವೆಲ್ಲ ದುಷ್ಟಸ್ವಭಾವಂ (ಸಜ್ಜುಳಾ. ೬-೩೩) : ಈ ನರದೇಹ ಕ್ರಿಮಿಗಳ ಮೊತ್ತದಾಗರ . . . ಇದು ಮುರಾರಿಯು ಶಕ್ತಿಯನಿಸುವ ಮಾಯೆ ಮಾಡುವ ತೊಂಡುತೊಳಸೆಂದ (ನಿಭಾಗ. ೦೦-೫೨-೨೦) : ಉದ್ದಾಲಕಂ ಸಂತಸಗೊಂಡು . . . ಸಂಪ್ರೀತಿಯಿಂ ವಿಪರೀತದ ತೊಂಡು ತೊಳಸಂ ಮಚಿದು (ಕ್ರಮಿಥಾ. ೦೦-೫೦); ಕಂಡಿರಾ ಗುರುಗಳರ ತನಯನ ತೊಂಡುತೊಳಸಿನ ಮಾತ (ಕೃಷ್ಣಾಕ. ೬-೫೬).

[ ತೊಂಡು$_2$ + ತೊಳಸು$_4$ ( < ತೊಟಸು$_2$ ) ]

**ತೊಂಡುತೊಳಸುಗ** (ನಾ). ಮನಬಂದಂತೆ ವರ್ತಿಸುವವನು ; ತೊಂಡು ತೊಳಸುಗರನವನಿಯೊಳಂಡಲೆದಗಲಕ್ಕೆ ಪರಿದು (ಧರ್ಮನಾ. ೫-೯೦).

[ ತೊಂಡುತೊಳಸು$_1$ + - ಗ$_2$ ]

**ತೊಂಡುದನ** (ನಾ). ಅಗಡುದನ ; ಸ್ವೇಚ್ಛೆಯಾಗಿ ಅಲೆಯುವ ದನ ; ತುಡುಗುಂದನ : ಕಂಡವರ ಹೊಲಕಿಳಿವ ತೊಂಡುದನವಲ್ಲು (ಕಾಲೂಕ. ೮೦-೦೫೨) ; ನಾಲ್ಕುದಿಕ್ಕುಗಳಿಂದಲೂ ತೊಂಡುದನಗಳು ನುಗ್ಗಿ, ಮೇದು ತುಳಿದು ಹಾಳುಮಾಡಿದ ತೋಟವಾಯಿತು (ಕನ್ನಸು. II, ೫) ; ಜಗತ್ತಿಗೆ ಶಾಂತಿ ಸಂತೋಷಗಳನ್ನು ಕೊಡುವ ಹೂವೇ ಧನ್ಯ, ಮಾನ್ಯ. ಮುಳ್ಳು ಉಪಯೋಗಕ್ಕೆ ಬಂದರೆ ತೊಂಡುದನಗಳಿಗೆ ಅಡ್ಡಿಯಾಗುವಂತೆ ಬೇಲಿಹಾಕು ವುದಕ್ಕೆ (ಬಂಕಿಮ. ೦೬೧). [ ತೊಂಡು$_1$ + ದನ ]

**ತೊಂಡುನಗೆ** (ನಾ). ತಂಟನಗೆ ; ಚೇಷ್ಟೆಯಂ ನಗೆ : ತೊಂಡುನಗೆಯು ತೊಂಡೆಬಾಯು ಕಂಡು ಕಂಡು ಮುತ್ತನಿಟ್ಟು (ನಾದಲೀ. ೬೬-೦೯).

[ ತೊಂಡು$_1$ + ನಗೆ ]

**ತೊಂಡುನಡೆ** (ನಾ). ಸ್ವೇಚ್ಛಾವೃತ್ತಿ; ಉದ್ಧಟತನ: ವಿರಸವನು ಬಿತ್ತುತ್ತ ತೊಂಡುನಡೆ ನಡೆದು ಕೊಲೆಗೆ ಕೊಲೆ ಸಂತತಿಯನಿಡುವವರ ಬೇಡಿದಿರಿ (ಅಮೃತಂ. ೨೩-೯). [ ತೊಂಡು$_1$ + ನಡೆ$_2$ ]

**ತೊಂಡುನುಡಿ** (ನಾ). ಚೇಷ್ಟೆಯಂ ಮಾತಂ ; ತಂಟತನದ ನಂಡಿ : ನಗೆವೆರಸಿರ್ದ ತೊಂಡುನುಡಿಯಿಂ ತಗುಳ್ದಳ್ ಸಲೆ ಧೀರೆ (ಚಶರ. ೩-೯೦ ಸೂತ್ರ). [ ತೊಂಡು$_1$ + ನುಡಿ$_2$ ]

**ತೊಂಡುಪಾಳೆಯಗಾರ** (ನಾ). ಉದ್ಧಟನಾದ ಪಾಳೆಯಗಾರ ; ಸೊಕ್ಕಿದ ಪಾಳೆಯಗಾರ : ಚೆನ್ನರಾಜನು ಇದಿರುಬಿದ್ದು, ಉದ್ಧುರುಟು ತನದಿಂದ ತೊಣ್ಣುಪಾಳೆಯಗಾರರೊಡನೆ ಸೇರಿಕೊಂಡು . . . ಸ್ವತಂತ್ರನಾಗಲು ಸಾಹಸಪಡುತ್ತಿರುವನು (ಚಿಟ್ಟಿಇ. ೪೪-೦೭).

[ ತೊಂಡು$_1$ + ಪಾಳೆಯಗಾರ ]

**ತೊಂಡುಬಂಡು** (ನಾ). (ಗಿಳಿಯು) ಧ್ವನಿಮಾಡಂವ ಗದ್ದಲ,-ಗಳಹಂವ ಕೋಲಾಹಲ : ತುಂಬಿಗಳ ಪಲ್ಮೊರೆಪದಿಂ ಗಿಳಿಯು ತೊಂಡುಬಂಡಿಂ ಬೆಟ್ಟಿತಾದ ನುಡಿಯಿಂ . . . ಮೆಚಿದುದಾ ವನಂ (ಶರ್ಮಿಷ್ಠಾ. ೮-೨೫).

[ ತೊಂಡು$_1$ + ಬಂಡು$_3$ ]

**ತೊಂಡುಬೀಳು** (ಕ್ರಿ). ಸ್ವೇಚ್ಛಾವೃತ್ತಿಗೆ ಬೀಳು ; ತಂಟಾಗು : ಸಾಧು ಕುದುರೆಯಾಗಿ ಮನೆಗೆ ಬಂದರಂತೂ ಸರಿಹೋಯಿತು ; ಇಲ್ಲದೆ, ತೊಂಡುಬಿದ್ದರೆ ? (ಬಂಕಿಮು. ೬೯). [ತೊಂಡು$_1$+ಬೀಳು$_1$ (<ಬೀೞ್$_1$]

**ತೊಂಡುಮರುಳ್** (ನಾ). ದುಷ್ಟಪಿಶಾಚಿ : ಸುಭಟರಟ್ಟೆಗಳನೆಟ್ಟಿಟ್ಟ ಕುಟ್ಟುವ ತೊಂಡುಮರುಳ್ಗಳುಂ (ಶಂಕರಾ. ೦೦-೦೦೭ ವ).

[ ತೊಂಡು$_1$ + ಮರುಳ್$_3$ ]

**ತೊಂಡುಮೇ,** ತೊಂಡುಮೇಯಂ (ಕ್ರಿ). ಸ್ವೇಚ್ಛೆಯಾಗಿ ತಿನ್ನು,-ಮೇಯಿಂ ; ತುಡುಗುವುಮೇಯು : ತೊಂಡುಮೇವ ಪಸುವಿಂಡಿನ ತಪ್ಪೋ ಕಂಡು ಕಾ ಮು ದ ತು ಬು ಗಾ ವ ನ ತಪ್ಪೋ (ಗೀತಗೋ. ೬೦).

**ತೊಂಡುಮೇಯು :** ಅಲ್ಲಿ ಯಾವ ಕಾಲದಲ್ಲಾದರೂ ಬರುವ ಮೂರು ವರ್ಷದ ಕೋಣಗಳು ತೊಂಡುಮೇಯುತ್ತಿರುತ್ತವೆ (ಸಜ್ಜ.ಶ. VI, ೩) ; ಹಳ್ಳ ಅಡಗಿ ಹರಿದಲ್ಲಿ, ತುಡುಗುದನ ತೊಂಡುಮೇಯುವಲ್ಲಿ ದಿಕ್ಕು ತಪ್ಪತಾರ ತಪ್ಪಿ ಹೊಕ್ಕರ ಕಕ್ಕಾವಿಕ್ಕಿಯಾಗಿ (ಗಂಗಾಕ. ೭೭-೨).

[ ತೊಂಡು$_1$ + ಮೇ ]

**ತೊಂಡುಮೇಯು** 'ತೊಂಡುಮೇ' ನೋ.

**ತೊಂಡುವಾಡೆ** (ನಾ). ಪುಂಡುದನಗಳನ್ನು ಹಿಡಿದು ಹಾಕುವ ಸ್ಥಳ ; ದೊಡ್ಡಿ ; ಪೌಂಡಿಮನೆ ; **ಕೊಂಡವಾಡೆ :** ಯಾವ ರಾಸುಗಳಾಗಲಿ . . . ಮೇಯುತ್ತಿರುವ ಕಾಲದಲ್ಲಿ ಹಿಡಿದು ಅಥವ ಹಿಡಿಸಿ ಸಾವಕಾಶ ಮಾಡದೆ ಸಮೀಪವಾದ ತೊಂಡುವಾಡೆ ದೊಡ್ಡಿಗೆ ದಾಖಲ್ಮಾಡಬೇಕು (ಗ್ರಾ.ಮು.ಕ. ೦೦೭).'ಕೊಂಡವಾಡೆ' ಪರಾ. [ ತೊಂಡು$_1$ + ವಾಡ$_3$ ]

**ತೊಂಡುವೆಣ್** (ನಾ). ಸ್ವೈರಿಣಿಯಾದ ಹೆಣ್ಣು; ಜಾರೆ: ತೊಂಡುವೆಣ್ಗಳ ನೇ ಹ ದೊ ಡ ಕಿ ಗೆ ಸಿಲುಕದೆ . . . . ನಲ್ಲಂದಿರೊಡನ ಬೆರಸುವುದು (ಹರಿಬ. ೮-೯೬). [ ತೊಂಡು$_1$ + ವೆಣ್ ]

**ತೊಂಡುವೆಣ್ಬುರುಳಿ** (ನಾ). ಗಳಹುವ ಹೆಣ್ಣುಗಿಳಿ ; ಹರಟುವ ಹೆಣ್ಣುಗಿಳಿ : ನಡಪಾಡುವ ರಾಜಹಂಸೆ ಬಂದಾಡುವ ತೊಂಡುವೆಣ್ಬುರುಳಿ (ಪಂಶಭಾ. ೩-೩೭). [ ತೊಂಡು$_1$ + ವೆಣ್ಬುರುಳಿ ]

**ತೊಂಡುವೆಸರ್** (ನಾ). ಹೆಮ್ಮೆಗಾಗಿ ಪಡೆದ ಬಿರುದಂ : ನೀಚಂಗೆ . . . ಗಾವಿಲನೊರ್ವಂ ಕುಡೆ ಕೊಂಡ ತೊಂ[ಪಾಠಾಂ. ಕೊಂ]ಡುವೆಸರಿಂದೇಂ ಸಲ್ಬುದೇ ನಿಲ್ವುದೇ (ಧರ್ಮಾಮ. ೦-೯೯). [ ತೊಂಡು$_1$ + ಪೆಸರ್ ]

**ತೊಂಡುಸಲಗ** (ನಾ). ಪಂದಿಸಿದ ಸಲಗ ; ಮದ್ದಾನೆ : ತೊಂಡುಸಲಗನನ್ನು ಹಳ್ಳಕ್ಕೆ ಕೆಡವಿದ ಬೇಟೆಗಾರನ ಹೆಮ್ಮೆಯಿತ್ತು ಆ ಧ್ವನಿಯಲ್ಲಿ (ರಾಗಿಪ. ೬). [ ತೊಂಡು$_1$ + ಸಲಗ ]

**ತೊಂಡುಹೋಗು** (ಕ್ರಿ). ಸ್ವೇಸ್ಛೆಯಾಗಿ ತಿರುಗು: ಎಮ್ಮೆ ಕೋಣ ಕುಲವ ನಾ ಕಾಯಲಿಲ್ಲ ಅವು ಎನ್ನ ತುರುವಿಗೆ ಹೊಟಗು ತೊಂಡುಹೋಗದಂತೆ ಕಾದೊಪ್ಪಿಸುವೆ (ತುಕಾಗಾ. ೧) : ಹಸುವಿಂಗೆ ಒಂದು ಕಚ್ಚು . . . ಕರು ವಿಂಗೆ ಮೂರು ಕಚ್ಚು ಇಂತಿವ ನೋಡಿ ಮೇಯಿಸಿಕೊಂಡು ತೊಂಡು ಹೋಗದಂತೆ ನಾ ಕಾದೊಪ್ಪಿಸಬೇಕು (ತುಕಾಗಾ. ೨).

[ ತೊಂಡು$_1$ + ಹೋಗು$_1$ (< ಪೋಗು$_1$) ]

**ತೊಂಡುಚಿಸು** (ಕ್ರಿ). (?) : ಹರಿಣನಾ ಹಿಂಡ ಸವಟುತಲೆಸುತ ಖಂಡಿಸುತ ಶಬರಕುಳ ತೊಂಡುಚಿಸಿ ಬೇಂಟೆಯಿಂ ಪೆಚ್ಚುತಿರಲು (ಲಿಂಗಪು. ೬-೩೫) : ಸುರುಚಿರಾಭರಣದಿಂ ಖಂಡಶಶಿನೊಸಲ್ಗಳಿಂದಾ ತೊಂಡುಚಿಸಿ ವಿಟರ ಮೇಲ್ವಾಯ್ದು ಪಿಡಿದಪ್ಪುತಂ (ಲಿಂಗಪು. ೨೫-೯೭). [ ? ]

**ತೊಂಡೂರ್** (ನಾ). ಒಂದಂ ಊರಿನ ಹೆಸರಂ: ಮದರಕಲ್ಲೂ ತೊಣ್ಣೂರು ಮಲ್ಲುರ್ಮ್ವನ್ನೆರಡು ಅಮ್ಮವಳ್ಳಿ ಪನ್ನೆರಡು (ಎಕ. XI, ಹೊಳ. ೩೯-೦೬ ; ಪು. ೨೨೬). [ ? + ಊರ್ ]

**ತೊಂಡೆ$_1$** (ನಾ). ಒಂದಂ ಬಗೆಯು ಬಳ್ಳಿ ಮತ್ತು ಅದರ ಹಣ್ಣು : "ಓಷ್ಠೀ, ಬಿಂಬೀ, ತುಂಡಿಕಾ-ಈ ೩ ತೊಂಡೆ" (ಅಲಾಯು. ೩೯-೫೦): "ತುಂಡಿಕೇರೀ, ರಕ್ತಫಲಾ, ಬಿಂಬಿಕಾ, ಪೀಲುಪರ್ಣೀ ಈ ೪ ತೊಂಡೆ" (ನಾಚಿರಾ. ೧೧೧) : ಗಾಣರ್ಗೆ ಬುಧರ್ಗೆ ಕವಿಶ್ರೇಣಿಗೆ ಪಗೆಯಾದೆವೆಂದು ತೊಂಡೆಯ ಪಣ್ಗಳ್ ನಾಣುಂ ಬೆಳರ್ತು ತೋರ್ಪವೊಲೀಣಾಕ್ಷಿಯರಧರಮಂದು ಬೆಳ್ಪ ಮರ್ದಿಸಗುಂ (ಉದ್ಭಟ. ೯-೦೨೬) : ಮದಕರಿ ಮತ್ತೆ ಮೆಟ್ಟಿದ ಹಿರಿಯ ತೊಂಡೆಯ ಹಣ್ಣನಂದದಿ ಕರುಳನೋಕರಿಸಿದನು (ಭಾಕಿರಾ. ೨೨-೨೨) : ಬಿಲುಪಾಲುಪೆಸರನದಕಟ್ಟು . . . ಹಸಿಯ ತೊಂಡೆಯ ಬೇರ ಕಟ್ಟಿ ತೊಳಸಿದೊಡೆ ಬಿಳುಪಹುದು (ಸೂಪಶಾ. ೨-೩) : ತರುಣಿಯೋರ್ವಳ ತುಟಿಯು ತೊಂಡೆಯ ಪಣ್ಣಿಂದರಗಿಣಿಯೆಚಿಗಲು (ಅಂಶವಿ. ೫-೦೦೬).

[ ದೇ.॥ ತಮಿ. ತೊಣ್ಟೈ ; ಮಲ. ತೊಣ್ಡ ; ತೆಲು. ದೊಂಡ ]

**ತೊಂಡೆ$_2$**, ದೊಣ್ಣೆ$_1$, ದೊಣ್ಣೆ$_2$ (ನಾ). ಓತಿಕೇತ ; ಗೋಸುಂಬೆ ; ಊಸರವಳ್ಳಿ : "ಸರಟ, ಕೃಕಲಾಸ-೨ ಕೊಂಡೆ ಹೆಸರು" (ಸಿದ್ಧಾಂಶಿ. ೦೩೭). 'ತೊಂಡೆಕೇತ' ಪರಾ. **ದೊಣ್ಣೆ$_1$ :** 'ದೊಣ್ಣೆಕೇತ' ಪರಾ. **ದೊಣ್ಣೆ$_2$ :** 'ದೊಣ್ಣೆಕಾಟ' ಪರಾ. [ ← ತೆಲು. ತೊಂಡ ]

**ತೊಂಡೆ$_3$,** ತೊಂಡಿ$_2$, ದೊಂಡೆ$_2$ (ನಾ). ೧. [ಸಂಗೀತ] ಒಂದು ರಾಗದ ಹೆಸರು : ಆ ವಧು ಲಾಗು ಬಾಗು ಮೋಹ ಚಾಳಿಯಂ ನೆಲೆ ವಾಡಿ ತೊಂಡೆ ವೇಳಾವಳಿ ದೇಶಿ ಗುಜ್ಜರಿ ವರಾಳಿಗಳಿಂದಮ ನಾಡೆ ಪಾಡುತಂ (ಧರ್ಮಾಮ. ೩-೯೦). **ತೊಂಡಿ$_2$ :** ೨. ಮಧುರವಾದ ಸ್ವರ ; ಇಂಪಾದ ಧ್ವನಿ : ಶರೀರದ ಬಾಗು ಲಾಗಿನೊಳ್ ನೆಲಸಿದ ರೂಪು ರೂಪಿನೊಳ ಗುರ್ವಿಸುವನ್ನಿತ ದೇಸಿ ದೇಸಿಯೊಳ್ ನೆಲಸಿದ ಗಾಡಿ ಗಾಡಿಯೊಳನಾರತ ಮೊಪ್ಪುವ ತೊಂಡಿ ತೊಂಡಿನೊಳ್ಗೆಲೆ ಬಳಸಿರ್ದ ಭಾವವಳವಟ್ಟಿರೆ ನರ್ತಕಿ ನಾಡೆ ರಂಜಿಪಳ್ (ಧರ್ಮಾಮ. ೨-೨೪). **ದೊಂಡೆ$_2$ :** ೩. ಗಂಟಲು ; ಕಂಠ : "ಅಯ್ಯೋ" ಎಂದು ಕಂಪಿತ ಚೀರ್ದನಿ ಮುನಿಯನ ದೊಂಡೆ ಯಿಂದ ಹೊರಟಿತು (ಶಾಬಝೂ. ೬೭).

[ ದೇ.॥ ತಮಿ. ತೊಣ್ಟೈ ; ಮಲ. ತೊಣ್ಡಾ ; ತುಳು. ದೊಂಡೆ ; ಕೊಡ. ತೊಂಡೆ ]

**ತೊಂಡೆ$_4$** 'ದೊಂಡೆ$_1$' ನೋ.

**ತೊಂಡೆ$_5$** (ನಾ). ಕಬ್ಬಿನ ಜಲ್ಲೆಯ ನಿಸ್ಸಾರವಾದ ಮೇಲುಭಾಗ ; ಕಬ್ಬಿನ ಸೋಗೆ : ತೊಂಡೆ ಹೊಯ್ದು ಒಂದೇ ಅಳತೆಗೆ ಕಬ್ಬುಗಳನ್ನು ಕತ್ತರಿಸಿ ರಾಶಿ ಹಾಕಬೇಕು (ಪನ್ನೂರು. ೨೦೫). [ ? ]

**ತೊಂಡೆಕಾಯಿ** (ನಾ). ತರಕಾರಿಯಾಗಿ ಬಳಸುವ ಒಂದು ಬಗೆಯ ಕಾಯಿ : ತೊಂಡೆಕಾಯಿ, ನೆಲ್ಲಿಕಾಯಿ . . . ಬೆಣ್ಣೆ, ದ್ರಾಕ್ಷಿಹಣ್ಣು, ಇವಿಷ್ಟು ಪಾಂಡುರೋಗ, ಕಾಮಿಲೆ, ಹಲೀಮಕಂಗಳಲ್ಲಿ ಪಥ್ಯವರ್ಗಂಗಳು (ವೃದೃಶಾ. I, ೩೯೯) : ಕಾಗೆದೊಂಡೆ, ಸಿಹಿತೊಂಡೆ, ತೊಂಡೆಕಾಯಿ (ಮುಕಿಗಿ. ೨೩-೪೨೩). [ ತೊಂಡೆ$_1$ + ಕಾಯಿ$_4$ (< ಕಾಯ್$_4$) ]

**ತೊಂಡೆಕೇತ,** ದೊಣ್ಣೆಕಾಟ, ದೊಣ್ಣೆಕೇತ, ದೊಣ್ಣೆಕಾಟ (ನಾ). ಹಲ್ಲಿಯ ಜಾತಿಗೆ ಸೇರಿದ ಒಂದು ಬಗೆಯ ಪ್ರಾಣಿ ; ಹೆಂಟೆಗೊದ್ದ : ಗಿಡದ ಮೇಲಿದ್ದ ತೊಂಡೆಕೇತವನ್ನು ನೋಡಿ ಮಗು ಹೆದರಿಕೊಂಡಿತು (ಕೂಡಿ). **ದೊಣ್ಣೆಕಾಟ :** ಅವುಗಳಿಗೆ ಸರ್ಪಜಾತಿಗಳಿಂದರೂ ಸರಟ (ದೊಣ್ಣೇಕಾಟ) ಜಾತಿಗಳಿಂದರೂ ಸಲ್ಲುವುದು (ಮುಂಬಯಿ. ೬-೨೫೯). **ದೊಣ್ಣೆಕೇತ :** ದೊಣ್ಣೆಕೇತವನ್ನು ಕಂಡರೆ ಮಕ್ಕಳು ಅದರ ಮೇಲೆ ಕಲ್ಲೆಸೆಯುತ್ತಾರೆ (ಕೂಡಿ). **ದೊಣ್ಣೆಕಾಟ :** ವೆಂಕಟನ ಮೊಗ ತಮ್ಮನ ಕಲ್ಲಿನೇಟಿಗೆ ಬಿದ್ದ ಆ 'ದೊಣ್ಣೆಕಾಟ'ದ ಮೃತಶರೀರವನ್ನು ನೋಡುತ್ತಿರುವಂತೆ ಎವರ್ಣವಾಯಿತು (ಬನಸಿ. ೦೧೪). [ ತೊಂಡೆ$_2$ + ಕೇತ$_2$ ]

**ತೊಂಡೆಗರುಳು** 'ದೊಂಡೆಗರಂಳ್' ನೋ.

**ತೊಂಡೆದಾಳಿದ** (ನಾ). ತೊಂಡೆಕಾಯಿಯಿಂದ ಮಾಡಿದ ಪಲ್ಯ : ತೊಂಡೆದಾಳಿದ ಪಟಲದಾಳಿದವ ಸವಿವುತಂ (ಲಿಂಗಪು. ೧೬-೦೬).

[ ತೊಂಡೆ$_1$ + ತಾಳಿದ ]

**ತೊಂಡೆಬಾಯ್** 'ತೊಂಡೆವಾಯ್' ನೋ.

**ತೊಂಡೆವಣ್,** ತೊಂಡೆವಣ್ಣು, ತೊಂಡೆಹಣ್ಣು (ನಾ). ತೊಂಡೆಯ ಬಳ್ಳಿಯಲ್ಲಿ ಬಿಡುವ ಹಣ್ಣು ; ಬಿಂಬಫಲ : ಅವಳ ಚೆಂದುಟಿಯಂ ಪೊಸ ತೊಂಡೆವಣ್ಣದೊಂದಚ್ಚರಿಯಲ್ಲಿ ಸ್ಪಟಿತನುತಲ್ಬಾಯಿನೊಲ್ದು ಕರ್ದುಂಕಲ್

(ಉದ್ಭಟ. ೬-೭೪) ; ತಳಿರಡಿಗೆ ತೊಂಡೆವಣ್ಣುಟಿಗೆ ತಾವರೆ ಮೊಗಕೆ . . . ಕೋಗಿಲೆ ಗಿಳಿಗಳಂಚರಕೆ ಸೋಲ್ದ ವಯುವಂಗಳೊಳ್ಕೆಲಸಿದುವು (ಕೃಮಿಥಾ. ೩೦-೪). **ತೊಂಡೆವಣ್ಣು** : ಮುದದಿಂದ ಗಿಳಿ ತೊಂಡೆವಣ್ಣಿನ ರಸವನು ಕರ್ದುಕಿ ಪೀರ್ವಂತೆ (೪೦ಷವಿ. ೯-೧೨೦) ; ನಾರಿಯರಧರಂಗಳಂ ಕಂಡು ತೊಂಡೆವಣ್ಣುಗಳೆಂದು ತಿಳಿದು ಎಳೆಗಿಣಿಗಳೆಲ್ಲ ಒಟ್ಟುಗೂಡಿ ಬರುತ (ಸೌಗಂಧಿ. ೯೭೪-೬). **ತೊಂಡೆಹಣ್ಣು** : ಬಿಂಬ, ಬಿಂಬಿಕೆ – ತೊಂಡೆಹಣ್ಣು (ನಾಚರಾ. ೪. ೭೯) ; ತೊಂಡೆಹಣ್ಣು ಮಣಿಯೆ ನಾಚೆ ನಗೆಯು ಚೆಲುವ ತುಟಿಯು ಚಾಚಿ (ಅನೀಳ. ೦೮-೧). [ ತೊಂಡ$_1$ + ಪಣ್$_3$ ]

**ತೊಂಡೆವಣ್ಣು** 'ತೊಂಡೆವಣ್' ನೋ.

**ತೊಂಡೆವಣ್ದುಟಿ** (ನಾ). ಬಿಂಬಫಲದಂತಿರುವ ತುಟಿ ; ಬಿಂಬಾಧರ : ಬಂದುಗೆದುಟಿ ತೊಂಡೆವಣ್ದುಟಿಯವರು ಮಂದಗಮನೆಯೊಳ್ಪಿದಿದರು (ಜೀವಂಸಾಂ. ೦೦-೯೭) ; ತುಱುಗೆವೆಗಣ್ಣ ಕಟಾಕ್ಷ ಕೆಂಬಲ್ಗಳ ಮಿಱುಗುವ ತೊಂಡೆವಣ್ದುಟಿಯ ಬೆಡಗಿಂದೆ ಮಾತನಾಡಿದಳು (ಮೋಹತ. ೦೬-೨೪) ; ಕಣ್ದೆಱೆದಾಕ್ಷಣ ಬರಿಸಳದಾ ತೊಂಡೆವಣ್ದುಟಿಯಬಲೆಯನಪ್ಪಿ . . . ತೋಱಿದನು ಸ್ವರ್ಗಸುಖವ (ಭರತ. ೦೩-೬೨).

[ ತೊಂಡೆವಣ್ + ತುಟಿ ]

**ತೊಂಡೆವಾಯ್**, **ತೊಂಡೆಬಾಯ್**, **ತೊಂಡೆವಾಯಿ** (ನಾ). ತೊಂಡೆಯ ಹಣ್ಣಿನಂತೆ ಕೆಂಪಾಗಿರುವ ಬಾಯಿ,–ತುಟಿ : ಬಂದರ್ ಪವಳವಾಯ ತಳಿರ್ವಾಯ ತೊಂಡೆವಾಯೊಳ್ವೆಂಡಿರ್ (ಜಗವಿ. ೯-೦೨೨) ; ನಿಡುಸುಯ್ಯುತ್ತುಂ ತನ್ನನೊತ್ತಂಬರಿಸೆ ನಿಲುವುತುಂ ನೀಳ್ದ ನಳ್ಕೇಶದಿಂದಂ ತೊಡೆಯುತ್ತುಂ ತೊಂಡೆವಾಯುಂ ಶ್ರಮಜಲಕಣಮಂ ಮೇಲುದಿಂ ವಾರಿಸುತ್ತುಂ . . . ಬಂದು ನಿಂದಳ್ (ಸೂಕ್ತಿಸು. ೮-೦೭೬) ; ಎನಗುಳಿದ ಗಂಡುಗಳೆಲ್ಲ ಸಹೋದರರೆಂದೀ ತೊಂಡೆವಾಯಬಲೆ ನುಡಿದಳು (ಶ್ರೀಪಾಂ. ೫-೮೬) ; ರಾಯ ಪರಾಕೆಂದು ಕೈವಾರಿಪ ತೊಂಡೆವಾಯ ಪಾಠಕಿಯರೊಪ್ಪಿದರು (ಮೋಹತ. ೪-೬). **ತೊಂಡೆಬಾಯ್** : ತೊಂಡುನಗೆಯ ತೊಂಡೆಬಾಯ ಕಂಡು ಕಂಡು ಮುತ್ತನಿಟ್ಟು (ನಾದರ್. ೭೭-೦೯). **ತೊಂಡೆವಾಯಿ** : ತುಱುಗೆವೆಯಲರ್ಗಣ್ಣು ತುಂಬುಗುರುಳ ತೊಂಡೆವಾಯಿ . . . ಇಂಬಾದವಾ ಬಾಲಕೆಗೆ (ಶ್ರೀಪಾಂ. ೩-೨೪). [ ತೊಂಡ$_1$ + ಬಾಯ್ ]

**ತೊಂಡೆವಾಯಿ** 'ತೊಂಡೆವಾಯ್' ನೋ.

**ತೊಂಡೆವಾಯ್ದೆರೆ** 'ತೊಂಡೆವಾಯ್ದೆಱೆ' ನೋ.

**ತೊಂಡೆವಾಯ್ದೆಱೆ**, **ತೊಂಡೆವಾಯ್ದೆರೆ** (ನಾ). = ತೊಂಡೆವಣ್ದುಟಿ : ತುಱುಗೆವೆಗಣ್ಣ ಕಾಂತಿ ಮರಗಟ್ಟಲೆಯುಂ ಬೆದಱಿಪ್ಪ ತೊಂಡೆವಾಯ್ದೆಱೆ ಕಿಸುಸಂಜೆವೀಱೆ (ಜಗವಿ. ೦೬-೨೩) ; ಸಕ್ಕರೆಸವಿಯ ತೊಂಡೆವಾಯ್ದೆಱೆಯ ಸೊಗಸನುಗುಳ್ವಕ್ಕಜದ ಮುದ್ದುವಾತಿನ . . . ಪೆಣ್ಮಕ್ಕಳಿಯ್ಪಂದರೊಸದು (ಶಬ್ದಶಾ. ೩-೬೭) ; ತೊಂಡೆವಾಯ್ದೆಱೆಯ ಕಂಬು ಕಂಠದ . . . ನಿತಂಬಿನಿಗೆಣೆಯಾದರುಂಟೆ (ಜೀವಂಸಾಂ. ೦೦-೨೩) ; ಬೆಳರ್ವಣ್ಣಮಂ ತಳೆದ ತೊಂಡೆವಾಯ್ದೆಱೆಯ ಕೆಂಬೊಳಪದರ್ದ ನಿಡುಗಣ್ಣ . . . ಎಳವೆಣ್ಣು (ಉದ್ಭಟ. ೪-೩೪). **ತೊಂಡೆವಾಯ್ದೆರೆ** : ತೊಳಗುವ ತೊಂಡೆವಾಯ್ದೆರೆಯ ಮುದ್ದು (ಯಾದಕಂ. ೨-೭೦).

[ ತೊಂಡ$_1$ + ಬಾಯ್ದೆಱೆ$_2$ ]

**ತೊಂಡೆಹಣ್ಣು** 'ತೊಂಡೆವಣ್' ನೋ.

**ತೊಂಡೇಳ್** (ಕ್ರಿ). = ತೊಂಡುಬೀಳು : ತೊಂಡೆದ್ದ ದಿಂಡಿಗತನದ ಪುಂಡ ಹೆಣ್ಣು (ಮಂತ್ರಕ. ೩೪-೦೬). [ ತೊಂಡು$_1$ + ಏಳು$_1$ (< ಏೞ್$_1$) ]

**ತೊಂತಗವಿತೆ** (ನಾ). ವ್ಯರ್ಥಪದಪೂರಿತವಾದ ಕವಿತೆ ; ಹುರುಳಿಲ್ಲದ ಕಾವ್ಯ : ಮುಂತೆ ಸರಿಯಿಲ್ಲೆಂದು ಪೊಗಳ್ದವರು ಪೊಱಮಟ್ಟ ಪಿಂತವನ ಕವಿತೆಯೇನೆಂದು ನಿಂದಿಸಿ ತಮ್ಮ ತೊಂತ[ಪಾಠಾಂ. ಕೊಂತ, ತೂಂತ]ಗವಿತೆಯ ತೊಂಬನುರ್ಚೆ (ಹರಿಶ್ಚ. ೦-೨೯) ; (ಸೋಮನಾ. ೦-೦೭ ಸೋ೧) ; ತೊಂತಗವಿತೆಯ ಗುಣ್ಪೇಂ . . . ಸುಪ್ರಬಂಧದೊಳ್ಪಿಂಗಣೆಯೇ (ಹಮ್ಮಿರ. ೦-೨೩).

[ ☞ ಇದು 'ತೂಂತಗವಿತೆ (< ತೂಂತು$_3$ + ಕವಿತೆ)' ಎಂದೇ ಇರಬಹುದು]

**ತೊಂತು$_1$** (ಕ್ರಿ). ೧. ಮೇಲೇರು ; ಆಕ್ರಮಿಸಂ ; ಮಯುತ್ತು : ಮನ್ಮಥ ಕುಮಾರಕ ತನ್ನ ತೊಂತಿದ ಖಳರನುತ್ತರಿಸಿ ಪಂತಿಯೊಳ್ ಕೆಡಹಲ್ಕೆ (ಮೋಹತ. ೩೪-೭೬) ; ಮಂತ್ರೀಶ್ವರನ ಮೆಯ್ಯುಸ್ಗವಲ ರಥರಾಜಿ ದಂತಿಗಳಾ ಹವದೊಳಗೆ ತಿಂತಿಣಿ ಭರವಸದಿಂದಾಗ ಪರಿತಂದು ತೊಂತಿತು ನೀಲಾಂಬರನ (ಮೋಹತ. ४೦-೬೩). ೨. ಸಂತೃಪ್ತಿಹಾಕಂ ; ಬಳಸು : ನೀಂನೀತನ ವರೂಥಮಂ ತೊಂತಿ ವಾಲಾಗ್ರದಿಂ ಗಗನದೊಳ್ಪರಿಪಿಡು (ಕೃಮಿಥಾ. ೨೬-೪೩); ಕಾಲು ತೊಂತಿದ ಹಾವು ಕಚ್ಚದೆ ಬಿಡದು(ಗಾದೆ). ೩. ಪ್ರೇರಣೆ ಮಾಡಂ ; ಎತ್ತಿಕಟ್ಟು ; ಪ್ರಚೋದಿಸಂ : (೩).

**ತೊಂತಿಕೊಳ್** = ೧. ಸಂತೃಪ್ತಿಗಟ್ಟು : ಬಸವಣ್ಣನ ತೊಂತಿಕೊಂಡು ಬಸವಣ್ಣನ ಧರಿಸಿಕೊಂಡು ....ನಾವು ಬಸವ ಬಸವಾ ಎನುತಿರ್ದನಯ್ಯಾ (ಅಜಂದೇ. ೩೦೪-೮೩). ೨. ಹಬ್ಬು ; ವ್ಯಾಪಿಸಂ ; ತುಂಬಿಕೊಂಡಿರು : ಮೂವತ್ತಾರುತತ್ತ್ವದೊಳನಂತ ಜನ ದೇವ ದಾನವರಾದಿಯಾಗಿಹರು ತೊಂತಿಕೊಂಡಿಹರು (ಲಕ್ಷ್ಮೀಶಾ. ३-೦೯-೬೨) : ಈ ಮದನಕಾಂತೆ ಮನದೊಳ ಹೊರಗೆ ತೊಂತಿಕೊಂಡಿರ್ದತುಳಚಿಂತಾಗ್ನಿ ಶಾಂತರಸದೋಳ್ಮುಳುಗಲು (ನವಮೋ. ೯-೪೭). ೩. ಸಿಕ್ಕಿಕೊಳ್ಳು : ತೊಂತಿಕೊಂಡಿರೆ ಶೋಕಸಾಗರದಿ ತೊಳಲುತಿರೆ ಪ್ರಾಣಂಗಳುಳಿಯವೆನಗೆ (ಜಂಗಾರಾ. ೨-೨೨-೬೭).

[ ← ತಮಿ. ತೊತ್ತು ]

**ತೊಂತು$_2$** (ನಾ). ದಟ್ಟಣೆ ; ನಿಬಿಡತೆ : ಅಂತರಾತ್ಮ ಕನ್ಯದುವವ ನಿಶ್ಚಿಂತನೈ ಸಂಸಾರಸಾಗರ ತೊಂತಿನಿಂ ಕಡೆದಿಹರು ನೃಪ ನಿಶ್ಚಿಂತರಲ್ಲೆಂದ (ಅಂಬಿಕಾ. ३೭-२३) ; ಮರಗಳ ತೊಂತು ಬಹಳ ಜಾಸ್ತಿಯಾದ್ದರಿಂದಲೂ . . . ಕತ್ತಲೆಯಾದ ಮೇಲೆ ಜನರು ಆ ದಾರಿಯನ್ನು ಉಪಯೋಗಿಸುತ್ತಿರಲಿಲ್ಲ (ಕಂಗಾಕೈ. ೪೩೩). [ < ತೊಂತು$_1$./ತಮಿ. ತೊತ್ತು ]

**ತೊಂತುಳಿ** (ನಾ). ಅಜಿಗಿಜಿಯಾದ ಸ್ಥಿತಿ ; ಅಸ್ತವ್ಯಸ್ತವಾದ ಸ್ಥಿತಿ: ನೆಲೆ ಪೊಲಮುಚ್ಚು ತಮ್ಮ ಮನದೊಳ್ ಸಲೆ ಕಬ್ಬಸು ಪರ್ಮದುರ್ವಿಯೊಳ್ ಚಲದಿಱಿದಾಂತು ಬಿಟ್ಟ ಭಟರಂತ್ರದ ತೊಂತುಳಿಯೊಳ್ ಸಿಲುಂಕಿ (ನೇಮಿಪು. ೦೦-೦೩೩).

[ ☞ ಇದು 'ತೊಟ್ಟುಳಿ' ಶಬ್ದದ ಅಪಲಿಖಿತವಿರಬಹುದು ]

**ತೊಂದರೆ** (ನಾ). ೧. ಕಷ್ಟ ; ಪೇಚಾಟ : ಇಲ್ಲದ ಸಲ್ಲದ ಹೆಚ್ಚಿನ ತೊಂದರೆಗಳೂ,ಕಾರ್ಯಭಾರವೂ . . . ಸಹನಿಗೆ ಬಂದೊದಗಿತು (ಸಕ್ಕಳ. ೦೩೦) : ಮನೆಮನೆಗಳಲ್ಲಿಯ ಜನಗಳಲ್ಲಿ ಒಮ್ಮನಸಿಲ್ಲದಾಗಿ, ತೊಂದರೆಗಳು ತಾಂಡವವಾಡುತ್ತವೆ (ಗಾಳಿಗು. ३೦). ೨. ತೊಡಕಂ ; ತಡೆ ; ಅಡ್ಡಿ ; ಅನನಂಕೂಲ : ಮುಂದಡಿಯಿಡಬೇಕೆನ್ನುವವರಿಗೆ ಇನ್ನೂ ಕೆಲವು ತೊಂದರೆಗಳಿವೆ (ಯುಕ್ತಕ್ರ. ೦೮೨) ; ಅವನ ಈ ಒಡನಾಟದಿಂದ ನನಗಾದ ಒಂದು ತೊಂದರೆಯೆಂದರೆ ಸಂಜೆ ಯಮುನಾ, ಲಲಿತೆಯರನ್ನು ನೋಡಲು ಸಮಯ ಸಿಗದುದು ! (ಅಂಜಹೂ. ೬೬). ೩. ಕಿರಂಕುಳ ; ಕಾಟ ; ಹಿಂಸೆ : ರಾಮಪ್ಪನವರು ಒಂದು ಪಿಳ್ಳೆಗೂ ಯಾವ ತೊಂದರೆಯನ್ನೂ ಕೊಡಲಿಲ್ಲ (ಕಂಬಹು. ೦೨೦).

[ ದೇ.೩ ತಮಿ. ತೊನ್ನರವು, ತೊನ್ನಲ್ಲೈ ; ಮಲ. ತೊನ್ನರ ;
ತುಳು. ತೊಂದರೆ ; ತೆಲು. ತೊಂದರ ]

**ತೊಂದರೆಗೊಳಿಸು** (ಕ್ರಿ). ಅಡ್ಡಿಪಡಿಸು ; ತೊಡಕಿಗೆ ಈಡುಮಾಡಂ : ಇತರರನ್ನು ಕಾರಣವಿಲ್ಲದೆ ತೊಂದರೆಗೊಳಿಸುವುದೇ ಕೆಲವರ ಸ್ವಭಾವ (ಲೂಥಿ). [ ತೊಂದರೆ + ಕೊಳ್$_1$ + – ಇಸು$_3$ ]

**ತೊಂದರೆಪಡು** (ಕ್ರಿ). ಕಷ್ಟಪಡಂ : ಕುಡಿವನೀರು . . . ಇಲ್ಲದಿದ್ದಾಗ ಅನೇಕ ಕೀಟಗಳು ನಿಸ್ಸಹಾಯ, ತೊಂದರೆಪಡುತ್ತವೆ (ಕೀಟಪ. ೧೪) : ನನ ಗೋಸ್ಕರ ನೀನು ತೊಂದರೆಪಟ್ಕೋಬೇಡ (ರೂಢಿ). [ ತೊಂದರೆ + ಪಡು$_1$ ]

**ತೊಂದಿರ** (ನಾ). (?) : ನಾಲುವಿರುದ್ರವು ಮುಖ್ಯವಾದಾವ ಕೊದಲುಂ ತೊನ್ದಿರರುವ್ವೆ ನೂರ್ವ್ವರು ಮಿರ್ದ್ದು ವಿಟ್ಟ ಧರ್ಮ್ಮವೆನ್ತೆಂದಡೆ (ಇಇ. XI. ೨೬೪-೨೬ : 1168). [ ? ]

**ತೊಂಪೆ** 'ತೊಂಬೆ$_1$' ನೋ.

**ತೊಂಬತು** 'ತೊಂಬತ್ತು' ನೋ.

**ತೊಂಬತ್ತು, ತೊಂಬತಂ, ತೊಂಭತಂ, ತೊಂಭತ್ತು** (ನಾ). ಒಂದಂ ಸಂಖ್ಯಾವಾಚಕ ; ಒಂಬತ್ತನ್ನು ಹತ್ತರಿಂದ ಗುಣಿಸಿದರೆ ಬರುವ ಗುಣಲಬ್ಧ; ಹತ್ತುಕಡಮೆನೂರು: ಅರಕೆಸಿಗಳಾಣತ್ತಿ ಆಗವಳ್ಳಿಟ್ಟುಟ್ಟು ಪ್ರಸಾದಂಗೆಯ್ದಾರಿದರ್ಕ್ಕೆ ತೊಂಬತ್ತಱುಸಾಸಿರದಾ ಪ್ರಕೃತಿಗಳೆಲ್ಲೋರುಂ (ಎಕ. III. ತಿರುಮ. ೧-೯ : 726) : ತೊಂಬತ್ತೊಂಬಯ್ಸಾಸಿರದ ಇನ್ನೂಱಿಣ್ಬತ್ತು ನಾಲ್ಕು ವ್ಯಾಧಿಗಳುಂ (ವಡ್ಡಾ. ೮೮-೪) ; ಮುಂದ ಲಕ್ಷದ ಮೇಲೆ ತೊಂಬತ್ತಾಱುಸಾವಿರ ಶಿವಾಲಯಂಗಳಂ ಮಾಡುತಿಪ್ಪರಂ ಕಂಡು (ಹೊನ್ನ.ಸಂ. ೩೩-೩). **ತೊಂಬತು**: ಲಕ್ಷದ ಮೇಲೆ ತೊಂಬತಾರ್ಸಾಸಿರ ಮಹಾಜಂಗಮಕ್ಕೆ ವ್ಯಷ್ಟಾನ್ನಮಂ ದಾಸೋಹಮಂ ಮಾಡುತ (ಚಬಸ. ೩-೩೨). **ತೊಂಭತು**: ಬರಿಸಮಾಱಾಗೆ ಮತ್ತಂ ಶಕಾಬ್ದಂ ವಿಸ್ತಾರಂ ತೊಂಭತೇಟೊಂಭತುವೆನೆ (ಎಕ. VI, ೨೦೫-೭ : 1057) ; ತೊಂಭತೊಂಬತ್ತು [ ಪಾಠಾಂ. ತೊಂಬತ್ತೊಂಬತ್ತು ] ಸಹಸ್ರಯೋಜನ ಗಳಿಂದಂಬರವನು ಮುಟ್ಟುತ್ತ . . . ಮೇರುವಿಂಬಾಗೆ ಲಕ್ಷಯೋಜನದಿ (ಜೀವಂಧಾಂ. ೧-೨೪). **ತೊಂಭತ್ತು**: ಪ್ರಿಥುವೀರಾಜ್ಯಕೆಯ್ ಕಂಭರಸರ್ ತೊಂಭತ್ತಱುಸಾಯಿ × × × (ಎಕ. IV. ಹೆಗ್ಗಡ. ೯೩-೨; ಸು. 780) ; ತೊಮ್ಬತ್ತಱುಸಾಸಿವ್ವರು ಮಯ್ಸಾಮನ್ತರು . . . ಇದಕ್ಕೆ ಸಾಕ್ಷಿ (ಎಕ. I, ೨-೯; 887) ; ತನ್ನೊಡನಾಡಿಗಳಪ್ಪ ತೊಂಭ[ ಪಾಠಾಂ. ಬ]ತ್ತಾಱು ಸಾಸಿರ ಗೋಪಕುಮಾರರೊಡನೆ ಕೂಡಿ (ಹಂಪಥಾ. ೯-೦೨ ವ) ; ಎಳೆಯೊಳಟ್ಟುದು ಸಾಸಿರಯೋಜನಂ ಗಗನಕ್ಕೆ ತೊಂಭತ್ತೊಂಭಯ್ಸಾಸಿರಂ ಬಳೆದುದು . . . ಮೇರುಮಹೀಧರೇಂದ್ರಂ (ಶಾಂತಿಪು. ೧೧-೬೬) ; ಅಂತು ತೊಂಭತ್ತ[ ಪಾಠಾಂ. ತ್ತಾ ]ಱುಸಾಸಿರಮಂತಃಪುರಂಗಳಿಂ . . . ನೆಱೆದ ಸಾಮ್ರಾಜ್ಯಲಕ್ಷ್ಮಿಗಧಿಪತಿಯಾಗಿ (ಅಜಿಪು. ೧೧-೦ ವ).

**ತೊಂಬದಿಂಬರ್** = ತೊಂಬತ್ತು ಮಂದಿ ; ತೊಂಬತ್ತು ಜನ : ಸಿಂಹಸೇನಂ ಮೊದಲಾಗೆ ತೊಂಬದಿಂಬರ್ ಗಣಧರರುಂ (ಅಜಿಪು. ೮-೨೫ ವ). **ತೊಂಬಯ್ಸಾಸಿರ** = ತೊಂಬತ್ತುಸಾವಿರ : ತೊಂ[ ಪಾಠಾಂ. ಒಂ. ಎಂ] ಬಯ್ಸಾಸಿರ್ವರ್ ನಿಮ್ಮಂಬಿನ ಬಂಬಲೊಳೆ ಮಕುಟಬದ್ಧರ್ ಮಡಿದರ್ (ಹಂಪಥಾ. ೧೧-೨೯) ; ಕೇಶಿರಾಜನ ಮೇರೆಗೆ 'ಒಂಬತ್ತು + ಪತ್ತು' ಎನ್ನುವುದಂ ಈ ಶಬ್ದದ ವ್ಯುತ್ಪತ್ತಿ.

[ ದೇ.॥ ತಮಿ. ಮಲ. ತೊಣ್ಣೂಱು ; ಕೊಡ. ತೊಂಬದೀ ; ತೆಲು. ತೊಂಬದಿ. ತೊಂಭೈ ]

**ತೊಂಬರೆ** (ನಾ). ಒಂದೆಡೆ ನಿಲ್ಲದವನು; ಅಲೆದಾಡುವವನು; ಅಲೆಮಾರಿ: ಅಂಬಲಿಯಲ್ಲದೆ ಉಂಬರೆ ಕೂಳಿಲ್ಲ ಕಂಬಳಿಗಳ ಹೊದ್ದಿಹವು . . . ತೊಂಬರೆ ಬದುಕು ಕೇಳ್ ನಮಗೆ (ಕವಿಚ. II, ೩೮೯ ಪ್ರಸಾದಸಾಂಗತ್ಯ).

[ ದೇ.॥ ತಮಿ. ತೊಮ್ಬರೈ ]

**ತೊಂಬಲ$_1$** 'ತಂಬುಲ' ನೋ.

**ತೊಂಬಲ$_2$** (ನಾ). (ಉಕ) ತೇವ : ಮಳೆಗಾಲದಲ್ಲಿ ಹವೆಯು ತೊಂಬಲ ವಾಗಿರುತ್ತಿದ್ದರೂ ನೆಲದ ಮೇಲಿನ ನೀರು ಸ್ವಲ್ಪ ಸ್ವಲ್ಪ ಬಾಷ್ಪವಾಗಿ ಹೋಗುತ್ತಿರುತ್ತದೆ (ಮುಂಬಯಿ. ೫-೧೩೮). [ <ತಂಬಲ ]

**ತೊಂಬಲು** 'ತಂಬುಲ' ನೋ.

**ತೊಂಬಾರ$_1$, ತೊಂಭಾರ** (ನಾ). ೧. (ಧಾನ್ಯದ) ರಾಶಿ.–ಗುಂಪು.–ಸಮೂಹ : (ಕ). ೨. ಗುಂಪಿನ ಜನರಿಗಾಗಿ ಮಾಡಿದ ಅಡುಗೆ ; ಸಾಮೂಹಿಕ ಭೋಜನ : ತಂಡದ ಊಟ : ಆವುದೊಂದು ಸಿಂಗರ ಹೊಡೆದಲ್ಲಿ ಪಾಕಭೇದವಾಗಿ ತೊಂಬಾ[ ಪಾಠಾಂ. ಬ]ರಕ್ಕೆ ಬೇಱೆ ಮಾಡಿದುದು ರಾಜಾನ್ನವು (ಬಸಪು. ೦೦೮-೩೫೫) ; ತನ್ನ ಜೊತೆಯಲ್ಲಿಯೇ ಕೂತ ಉಳಿದವರಿಗೆ ತೊಂಬಾರದ ಅಡಿಗೆಯನ್ನು ಮಾಡಿಸಿ . . . ಹಾಕಿಸುತ್ತಿದ್ದನು (ನೀತಿಚಿಂ. X, ೦೫) ; ಗುಂಪಿನ ಅಡಿಗೆ, ಅಷ್ಟೇನೂ ಅಚ್ಚುಕಟ್ಟಿಲ್ಲದ್ದು . . . ತೊಂಬವಾರ, ತೊಂಬಾರ (ಸಮ್ಮಸ. ೧೦೮). **ತೊಂಭಾರ** : ೩. ಆಧಿಕ್ಯ ; ಅತಿಶಯ : ಬಸವೇಶ್ವರದೇವರು . . . ಸರ್ವಾಲಂಕಾರಶೃಂಗಾರದ ತೊಂಭಾರದಿಂದಲಂಕಾರಂಗೊಂಡು (ಯತೀಶ್ವರ. ೩೦).

[ ದೇ.॥ ತಮಿ. ತೊಮ್ಪರ, ತೊಪ್ಪರ ; ತುಳು. ತೊಂಬರ : ತೆಲು. ತೊಮ್ಮರ ]

**ತೊಂಬಾರ$_2$** (ನಾ). ಭವನ ; ಸೌಧ : ಅಪ್ಪಾಜಯ್ಯನು ತನ್ನ ಸಂಗಡ ಚನ್ನವೀರನನ್ನು ಕರದುಕೊಂಡು, ಹಿತ್ತಲ ಬಾಗಿಲಿಗಾಗಿ, ತೊಂಬಾರದ ಹಿಂದಟ್ಟಗಾಗಿ . . . ಕೆರೆಬಾಗಿಲಿಗಾಗಿ ನುಗ್ಗಿ (ರಾಜೇಂದ್ರ. ೨೬೬).

[ ← ತಮಿ. ತೊಮ್ಪಾರ, ತೊಮ್ಪರ, ತೊಪ್ಪಾರ ]

**ತೊಂಬುವ್ವೋಯ** (ನಾ). ಒಬ್ಬಾತನ ಹೆಸರು : ತೊಮ್ಬುವ್ವೋಯನ ಮಕ್ಕಳ್ ನಾಗಯ್ಯನು ಕಣ್ಣಯ್ಯನು (ಎಕ. X. ಕೋಲಾರ. ೯-೪ : ಸು. 925). [ ? ]

**ತೊಂಬೆ$_1$, ತೆಮ್ಮ, ತೆಮ್ಮೆ, ತೊಂಪೆ, ತೊಮ್ಮೆ$_2$, ತೋಮೆ** (ನಾ). ೧. ಗೊಂಚಲುಂ ; ಗುಚ್ಛ : "ಮಂಜರಿಯೊಳ್ತೊಂಬೆ ತೊಡಂಬೆ ಜೊಂಪ ಗೊಂಚಲ್ ತಿಳಿಗುಂ" (ಕರ್ಣಾನಿ. ೦೨) : "ಜೊಂಪವೆನಲ್ ತೊಂಬೆ" (ಕರುನಿ. ೯) : ತಳ್ತ ಬಣ್ಣವಣ್ಣದ ಗುಡಿ ತೊಂ[ ಪಾಠಾಂ. ಕೊಂ]ಬೆ ಗೊಂಚ [ಲಲೆ]ಯಿಕ್ಕಿದ ಕಾವಣವೆಲ್ಲಿಯುಂ ಪೊದಟ್ದೊದವಿರೆ (ಹಂಪಥಾ. ೩-೩೮) ; ತಳಿರ ತೊಂಬೆಯುನಲ್ಲಾಡಿ ಹೂಗೊಂಚಲೊಳ್ ಸುಟಾದು (ಅಂಜನ. ೨-೫೦) ; ನನೆಗಳಿಂ . . . ತೊಂಬೆಗಳ ಕಾಯ್ಗಳಿಂ (ಜ್ಞಾನಚಿಂ. ೧-೬೩) : ಹೀರಖಚಿತದ ಬೊಂಬೆ ಚಾರು ಪೂವಿನ ತೊಂಬೆ ತೋರಮುಡಿಯ ವಧೂಟಿ (ಮಂಕಾರಾ. ೫-೬-೫೬). ೨. ಗುಂಪು ; ಸಮೂಹ ; ಸಂದಣಿ ; "ಬಂಬಲ್" (ಕರುನಿ. ಕ. I, ೨೫) : "ದೊಂದಣಿ ತೆರಳ್ಕೆ ಸಾಲೊಬ್ಬುಳಿ . . . ಗಡಣಂ ಜಾಳಿಗೆಯು ತೊಂಬೆಯೆನೆ ಶ್ರೇಣಿಕಾಖ್ಯಂ" (ಕಬ್ಬಮಂ. ೫೫). ೩. ಸಾಲು; ಶ್ರೇಣಿ; ಪಂಕ್ತಿ: "ತೊಂದೆಯೆನಲಕ್ಕದು ಶ್ರೇಣಿಗೆ" (ಕಕರ. ೪೯). **ತೆಮ್ಮ**: ೪. ಹೆಚ್ಚಳ ; ಆಧಿಕ್ಯ ; ಮೇಲ್ಮೆ. "ತೆಮ್ಮಂ ಶ್ರೇಣಿಯೊಳ್ ಪೆರ್ಚುಗೆಯೊಳಪ್ಪುದು" (ಕಕರ. ೪೮). **ತೆಮ್ಮೆ** ; ೨. ತೆಮ್ಮೆ ತೆಮ್ಮೆಯೊಳೆಯ್ದಿ ಸರ್ವರು ಮಾಡಿದ ಸಮ್ಮತಾರ್ಥವನೊಪ್ಪುಗೊಂಡು (ಧರಕ. ೬೦-೬೪). **ತೊಂಪೆ**: ೧. ಎದೆಯ ಮೇಲೆ ಬಹುಮಾನಗಳ ಕೊಂಪೆಯನ್ನು ನೇತುಹಾಕಿಕೊಂಡಿದ್ದ ಏಾಸೆ ಪೋಲೀಸಿನವನ ಕಡೆಗೆ ತಿರುಗಿ . . . ಆಜ್ಞಾಪಿಸಿದನು (ಪುನರು. ೦೪೮). **ತೊಮ್ಮೆ$_2$** : ೪. 'ತೊಮ್ಮೆವಡೆ' ಪರಾ. **ತೋಮೆ** : ೨. ಮಂದಿಯ ಗೊಂದಳದಂತೆಯುಂ ಅಮ್ಮಾವಿನ ತೋಮೆಯಂತೆಯುಂ . . . ಎತ್ತಲುಂ ಮಿಡುಂಕಲ್ಪಡೆಯದ ಸಿಡಿಮಿಡಿಗೊಂಡು (ಪುಷ್ಪಪು. ೩-೧೨೬ ವ).

[ ದೇ.॥ ತಮಿ. ತುಮ್ಪೈ ; ತೆಲು. ತೊಂಬ, ತೊಪ್ಪ ]

**ತೊಂಬೆ$_2$, ಟೊಮ್ಮೆ, ತಂಪ್ಪೆ** (ನಾ). ೧. ಧಾನ್ಯಗಳನ್ನು ಶೇಖರಿಸಿಡುವ ಬಿದಿರಿನಿಂದ ಹೆಣೆದ ದೊಡ್ಡ ಬುಟ್ಟಿ,–ಗೂಡೆ; ಗಳಗೆ : "ಗೊಂಚಲು ಗಳಗೆ ತೊಂಬೆಯೆನಿಕ್ಕು" (ಕಬ್ಬಮಂ. ೧೦೨) : ಸೀರೆಯನ್ನು ಪೊರ

ತೆಗೆದು ಹತ್ತಿರದಲ್ಲಿದ್ದ ಅರೆ ತುಂಬಿದ ಭತ್ತದ ತೊಂಬೆಯೊಳ್ಕೆ ಹಾಕಿದ (ನಿಕಲು. ೩೩೪); ಶೀರಿಲ್ಲ ಕಿಟುವಟವಿಲ್ಲ ಜಂಭ ಮಾತ್ರ ತೊಂಬೇ ಅಷ್ಟು (ಗಾದೆ). ೨. ಹೊಟ್ಟೆ; ಉದರ: ತೋಕಿನ ನಳಿಗೆಯಿಂದ ಹಾರಿದ ಬಿಡಿ ಕಿರುಬನ ಪಕ್ಕೆಗೆ ತಗಲಿ ಅದರ ತೊಂಬೆಯನ್ನು ಸೀಳಿತು (ಹುಲಿಶಾ. ೧೦೦). 'ತೊಪ್ಪೆ₁' ಪರಾ. ಟೊಮ್ಮೆ: ೧. ವಿಟ್ಟವಿಟ್ಟನೆ ವಿಡುಕೆ ಟೊಮ್ಮೆಯ ಹೊಟ್ಟು ತವುಡಂ ಕರ್ಚಿ (ಮುದೇಕು. ೫-೩೪). ತುಪ್ಪೆ: ೩. ಧಾನ್ಯದ ರಾಶಿ,-ಸಂಗ್ರಹ; ಕಾಳಿನ ಗುಡ್ಡೆ: ನೂರು ಮುಡಿ ಭತ್ತ ಆ ಬಾಕಿ ಪಾರಿನಿಂದ ಪ್ರತಿವರುಷ ಭಟ್ಟರ ಮನೆಯ 'ತುಪ್ಪೆ'ಯಲ್ಲಿ ಬಿದ್ದೇ ತೀರುತ್ತದೆಂದರೆ ಆಶ್ಚರ್ಯಪಡಬೇಕಾಗಿಲ್ಲ (ದಂಬಿನಾ. ೧೨).

[ದೇ.ಶ ತಮಿ. ತೊಮ್ಪೈ, ತೊಮ್ಬೈ; ತುಳು. ತುಪ್ಪೆ]

**ತೊಂಬೆಗಡುಕು** (ನಾ). ಗೊಂಚಲಿನಂತಿರುವ, ಕಿವಿಯಲ್ಲಿ ಧರಿಸುವ ಒಂದು ಬಗೆಯ ಆಭರಣ: ಹಸ್ತಕಡಗದ ನೀಲಮುತ್ತಿನ ತೊಂಬೆಗಡುಕಿನ ಕೊರಳ ದಾರಗಳ...ಧರಿಸಿ (ಬಸವಪು. ೬೧-೩೭); ಒಡನೆ ಕಿವಿಯೊಳೊಪ್ಪುವ ತೊಂಬೆಗಡುಕಿನ ಕಡುಚೆಲ್ವ . . . ಕೊಡಗಿತಿಯರು ರಾಜಿಸಿದರು (ಕಾಂಸವಿ. ೨೦-೮೭). [ತೊಂಬೆ₁ + ಕಡುಕು₃]

**ತೊಂಭತು** 'ತೊಂಬತ್ತು' ನೋ.

**ತೊಂಭತ್ತು** 'ತೊಂಬತ್ತು' ನೋ.

**ತೊಂಭಾರ** 'ತೊಂಬಾರ₁' ನೋ.

**ತೊಕಡಕನ ಮರ** (ನಾ). ಒಂದು ಬಗೆಯ ಮರ: ಪೇನಾರಿಮರ, ಪೀನಾರಿ, ಪಾತಾಳಮರ, ಭೇತಾಳ, ತೊಕಡಕನ ಮರ, ಭಾಕಾಳ (ವೃಕ್ಷಿಗ. ೬೨-೧೪೬೨). [? + ಮರ₁]

**ತೊಕ್ಕಡ** (ನಾ). (?): ಚೊಕ್ಕವಲ್ಲಗಳು ದಟ್ಟ ಸಣ್ಣವು ವೃಕ್ಕ ನವರಸ ಲಗ್ಗೆ ಯೆಂಬುದು ತೊಕ್ಕಡವು ಕಾನಾದ ದಂತವು ಕ್ಷತಕೆ ಅದು ಹಿತವು (ಕಕ್ಕೋಶ. ೧೧-೧೭). [?]

**ತೊಕ್ಕಲು** (ನಾ). ಒಂದು ಬಗೆಯ ವ್ಯಂಜನಪದಾರ್ಥ: ಅವನಿಗೆ ಮಜ್ಜಿಗಂಬರ . . . ಮಸೊಪ್ಪು, ತೊಕ್ಕಲು, ಒಂದೆಸರು – ಇವು ಸುತರಾಂ ಬೇಕಿಲ್ಲ (ನನ್ನಕು. ೫೭). [< ತೊಕ್ಕು₁]

**ತೊಕ್ಕಸ** (ನಾ). ವಲ್ಲಯುಂದ್ದದ ಒಂದು ವರಸೆ (?): ಸಂದ ತೊ[ಪಾಠಾಂ. ಕೊ]ಕ್ಕಸ ಗುಂಡು ಗೋಣಿಯ ವಿಂದವಟ್ಟಸು ಚೇಣಪಟ್ಟಸು ವೆಂದೆನಿಪ ವಿಂದಾಣದಲಿ ಕಾದಿದರು ಜಟ್ಟಿಗಳು (ಸಾಕ್ಷ್ಯಾ. ೨೨-೬೨).

[?]

**ತೊಕ್ಕು₁** (ನಾ). ಹುಣಸೆಕಾಯಿ, ನೆಲ್ಲಿಕಾಯಿ, ಮಾವಿನಕಾಯಿ ಮೊದಲಾದವುಗಳು ಬಲಿತ ಮೇಲೆ ಹದಗೊಳಿಸಿ ಮಾಡುವ (ಚಟ್ನಿಯಂಥ) ಒಂದು ಬಗೆಯ ವ್ಯಂಜನಪದಾರ್ಥ: ಹುಣಸೆಕಾಯಿ ತೊಕ್ಕು ರುಚಿಯಾಗಿರುತ್ತದೆ (ಜಾಥ). [ದೇ.ಶ ತಮಿ. ತೆಲು. ತೊಕ್ಕು]

**ತೊಕ್ಕು₂** (ನಾ). ೧. ತೊಗಲು; ಚರ್ಮ: "ತೊಕ್ಕು (ತೊಗ)–ತ್ವಕ್ (–ಚ್)" (ತದ್ಭಕೋ. ೧೮); ನಯನ ಕರ್ಣ ನಾಸಾ ರಸನೆ ತೊಕ್ಕು ಮನವೆಂಬ ಕರಗಳೊಳು ಬಿಡದರ್ಪಿಪಂ (ಸಿದ್ಧೇಪು. ೨೩-೫೦); ತ್ವಕ್ಕಿಂಗೆ ತೊಕ್ಕು ನೇತ್ರಕೆ ನೇತ್ರವು . . . ಆಗಿಹುದು ಲಿಂಗಮುಖವು (ಬಲಪು. ೬೦-೪೫): ಪ್ರತಿ ನಿತ್ಯವೂ ಮೈ ತಿಕ್ಕಿಸಿ ಅಥವಾ ಹಿಸಿಕಿಸಿಕೊಂಡಲ್ಲಿ . . . ತೊಕ್ಕು ಬಲಿತು, ಸಂದುಗಳಲ್ಲಿ ತ್ರಾಣವು ಹುಟ್ಟಿ (ಸಳವ್ಯ. ೩೦). ೨. ತೊಗಟೆ; ಸಿಪ್ಪೆ: ನೀರುಳ್ಳಿ ಹಸಿಯಲ್ಲವಮಂ ತೊಕ್ಕ ತೆಗೆದಗುಳ ತೋರದೊಳು ಕತ್ತರಿಸಿ (ಸೂಪಶಾ. ೩-೩೫); ಪರಿಶುದ್ಧವಾಗಿರ್ಪ ಪಾಲ್ಮರಗಳ ತೊಕ್ಕನಿರದೆತ್ತಿ ಕಾಸಿದ ಜಲವ (ಚಂಪ್ರಸಾಂ. ೦೪-೪೨); ಅಂಬಟೆಯ ತೊಕ್ಕು . . . ಹುಣಸೇಮೂಲದ ತೊಕ್ಕು . . . ಇವಚ ಕಷಾಯ ಶ್ಲೇಷ್ಮಾತಿಸಾರ ಮೊದಲಾದ ಹೊಟ್ಟೆಯ ಬೇನೆಯ ಪರಿಹರಿಸುವುದು (ವೈದ್ಯಸಾ. I, ೨೦೨). ೩. ಚೆಕ್ಕೆ: ಗಂಧ ಲವಂಗದ ತೊಕ್ಕು (ಅಕಾನಿ. ೮-೭). ೪. ಚರ್ಮದ ಹೊದಿಕೆ: ಇಕ್ಕಿದ ಪಕ್ಕರಕ್ಕೆ ನಿಡುರುಳ್ಳಿ . . . ದಿಟ್ಟಸರ ಪೊಂಬಲೆಗಳ್ ಮೊಗರಂಬಮೊಂದು ಪೊಂಬಕ್ಕಿಯ ತೊಕ್ಕು ಮೆಯ್ಯಗ್ಗರೆಯಿ ಬಾಸಿಗದಿಂ ಮೆಚಿದತ್ತು ಸಪ್ತಿಗಳ್ (ಚಳವಿ. ೨-೯೬). ೫. ಸೋಂಕು; ಸಂಸರ್ಗ: ಮೂತ್ರ ಮಲ ಮಾಂಸ ರಕ್ತಂಗಳೊಳಗಿಕ್ಕುಮೇ ಶಿವಮೂರ್ತಿಯೆನ್ನು ದರದೊಳಗವಚ ತೊಕ್ಕಿಲ್ಲಮೆನೆ (ಬಲಪು. ೪-೨೭). 'ತ್ವಕ್ಕು' ಪರಾ.

[ಸಂ. ತ್ವಚ್]

**ತೊಗಟು**, ತೊಗಟೆ, ತೊಗಡು, ತೊಪ್ಪಟೆ, ತೊಪ್ಪಡೆ, ತೊಬಟೆ, ತೊವಟೆ, ತೊವಡು, ತೋಟೆ₁ (ನಾ). ಹಣ್ಣು, ಕಾಯಿ, ದ್ವಿದಳ ಧಾನ್ಯ ಇತ್ಯಾದಿಗಳ ಗಟ್ಟಿಯಾದ ಮೇಲುಹೊದಿಕೆ,-ಸಿಪ್ಪೆ: ತೊಗಟ ನೊಳಗಣ ಬೀಜ ಬೀಜದೊಳಗಣ ಅಂಕುರ (ಸರ್ವವ. ೧೦೯-೫೮೪); ತಚ ದರೆಯು ಪರ್ಣಗಳ ಕಾಷ್ಟಕೆ ಮುಚದರಾ ಶಾಖೆಗಳ ರೋಗಕೆ ಕೊಚ ದರೆಯು ಬೇರುಗಳ ನಾರಿಗೆ ಸುಗಿದರೆಯು ತೊಗಟ ತರು ತನುವ ತೆಚುವಂತೆ (ನಿಥಾಗ. ೧೧-೦೩-೨೪); ಹಣ್ಣಿನ ಒಳಗೆ ನಾಲ್ಕು ರಸವು ಐದು ದೊಡ್ಡ ಹರೆ ಕಾಣವು ಆರು ಬಗೆಯ ಸ್ವರೂಪ ಕೇಳು ಏಳು ಬಗೆಯ ತೊಗಟುಂಟಣ್ಣ (ಪುರಂದ. ೧-೧೫೦-೫). ತೊಗಟೆ: ಕಮಲಮುಖಿ ನಾರಿನಾ ತೊಗಟೆಯನು ಕೊಳ್ಳೆ (ಕರಲೀ. ೨೦೬-೧೪); ಮಾದಾಳದ ತೊಗಟೆ (ಟ) ಯು ಕಹಿ, ಒಗರು (ಅಷ್ಟಾಂಗ. ೧೪೮); ತೊಗಲುಬಾವಲಿ ಮರದ ಚೋಲು ತೊಗಟೆ (ಸವ್ಯಸ. ೮೭-೩). ತೊಗಡು: ತೊಗಡುಗಳೆದೆಳ್ಳುಗಳ ಕೇದಗೆಯಿಂ ವಾಸಿಸಿ (ಲೋಕೋಪ. ೭-೨೩). ತೊಪ್ಪಟೆ: ಆವರಿಕೆಬೇರಿನ ತೊಪ್ಪಟೆಯನು ೧ ಮೊರದಷ್ಟು ಹರವಿಯಲ್ಲಿ ಹಾಕಿ ನೀರ ಹೊಯ್ದು . . . ಇಳಿಸಿಕೊಂಡಿರಲು ಆ ನೀರು ಮೆಂದವಾಗುವುದು (ಸಳವ್ಯ. ೩೮೩). ತೊಪ್ಪಡೆ: ಉಲಗನ ಬೇರಿನ ತೊಪ್ಪಡೆ, ಬೇವಿನ ಬೇರಿನ ತೊಪ್ಪಡೆ ... ಮೊಳಗದ ಬೇರಿನ ತಿಗಡು ಇವಂ ಸಮಾನಂಗೊಂಡು ಚೂರ್ಣವಂ ಮಾಡಿ (ವಿಷ್ಣುವಿ. ೯೯). ತೊಬಟೆ: ಸುಟ್ಟ ಬಾಳೆಯ ಕಾಯ ಸೀದ ತೊಬಟೆಯ ತೆಗೆದು ಒಳಗಣ ತಿರುಳ ತೆಗೆದು (ಭೀಮಸೂ. ೬೨). ತೊವಟೆ: ಚೆಕ್ಕು = ತೊವಟೆ (ಕಾಕಕ್ಕೆ. ೯೦). ತೊವಡು: ಗಿಡುಕಳ್ಳಿಯ ತೊವಡು ಕಟ್ಟಿ ನಿರ್ವಿಷಮಕ್ಕುಂ (ಖಚುದ. ೧೬-೭೯). ತೋಟೆ₁: ಬಾಳೆಯ ಹಣ್ಣಿನ ತೋಟೆಯ ಸುಲಿದು ನೋಡಿದರೆಯೂ ಮೃದುವಾಗಿ ತೋಚುವುದಲ್ಲದೆ ಕಠಿಣವಾಗಿ ತೋಚದೆಂಬ ಹಾಗೆ (ವಚನಾ. I, ೧೯೩); ಕೆಲವು ಗಿಡಗಳ ತೋಟೆಗಳಿಂದ ಸಹ ಕಾಗದ ಮಾಡುವುದುಂಟು (ಮುಂಬಯಿ. ೦-೨೪). 'ತಿಗಡು₁' ಪರಾ.

**ತೊಗಟೆ** 'ತೊಗಟು' ನೋ.

**ತೊಗಡು** 'ತೊಗಟು' ನೋ.

**ತೊಗರ್** 'ತೊವರ್₂' ನೋ.

**ತೊಗರ₁** (ನಾ). ಕೆಂಬಣ್ಣದ ಒಂದು ಬಗೆಯ ಬೇಟೆಯ ನಾಯಿ: ಏಣಕುಲಕ್ಕೆ ಚಂಚುವಾಲಂ ದಣಿದಿರ್ದ ಕೊಂಡಗುಚಿಗೀ ತೊಗರಂ ರುರು ಸಂಕುಳಕ್ಕೆ ಜೂಗಂ ದಿಟಮಲ್ತು ಮಾರಿ (ಚಳಕ. ೨-೧೦೯); ತರವೇಟ್ ಸಾಳುವವೇಗನಂ ತೊಗರನಂ ಹಗ್ಗಾಳನಂ ಜೂಗನಂ (ಸಳಹಂ. ೬೭).

[ತೊಗರು₁ + – ಅ₇]

**ತೊಗರ₂** (ನಾ). ಒಂದು ವಂಶದ ಹೆಸರು (?): ಮಣಿಗಾಜ ನಾಗಿಸಟ್ಟಿಯುಂ ತೊಗರ ಮಾಚಿಸಟ್ಟಿಯುಂ ವಿಂದಗುದ್ದಲಿ ನಾವಿಸಟ್ಟಿಯುಂ ... ಕೊಟ್ಟ ಕೆಯ ಕಂಮ್ಮವಯ್ವತ್ತು (ಎಕ. VII, ಶಿಕಾರಿ. ೧೦೭–೩೭ :1098).

[?]

**ತೊಗರತ್ತಿ** (ನಾ). ಒಂದು ಬಗೆಯ ಸಸ್ಯ: ತೊಗರತ್ತಿ, ಸಿಡಿಸಾಲೆ (ವೃಕ್ಷಿಗ. ೫-೭೪). [?]

**ತೊಗರಿ$_1$** 'ತೊವರಿ' ನೋ.

**ತೊಗರಿ$_2$** 'ತೊವರ್$_2$' ನೋ.

**ತೊಗರು$_1$**, ಚೊಗರು$_2$ (ನಾ). ೧. ಕೆಂಪುಬಣ್ಣ; ಅರುಣವರ್ಣ: ತೊಗರಂ ವಿಗಿಲಪ್ಪ ಬಣ್ಣವುಂ ಸವುನಿವ ಗಂಧವಸ್ತುಗಳನಾದರದಿಂ ಒಡಿದು (ಅಟ್ಟಪು. ೬-೪೦). **ಚೊಗರು$_2$**: ೨. ಹಸಿಅಡಕೆಯನ್ನು ಬೇಯಿಸಂವಾಗ ಅದಕ್ಕೆ ಬಣ್ಣ ಬರಲು ಬೆರಸುವ ಒಂದು ಬಗೆಯ ಕೆಂಪುದ್ರವ; ❡ ಇದನ್ನು ನೇರಿಲಚಕ್ಕೆ, ರತ್ನಹೊನ್ನೆಗಿಡದ ಚಕ್ಕೆ ಮುಂತಾದುವುಗಳಿಂದ ತಯಾರಿಸುತ್ತಾರೆ: ನಾನೇ ತ್ವಾಟವಾಗಿ ಕದರಡಿಕೆ ಹೆರಕಿ, ಸುಲಿದು, ಚೊಗರು ಹಾಕಿ ಬೇಯಿಸಿ ಮಾಡಿದ್ದು (ಮಲೆಮ. ೪೩೮). 'ತೊಗರು ಕಷಾಯ' ಪರಾ. [ ದೇ.೫ ತೆಲು. ತೊಗರು, ತೊವರು ]

**ತೊಗರು$_2$** 'ತೊವರ್$_2$' ನೋ.

**ತೊಗರುಕಷಾಯ** (ನಾ). ಹಸಿ ಅಡಕೆಯನ್ನು ಬೇಯಿಸಂವಾಗ ಅದಕ್ಕೆ ಬಣ್ಣ ಬರಲು ಬೆರಸುವ ಒಂದು ಬಗೆಯ ಕೆಂಪುದ್ರವ,-ಕಷಾಯ: ಮೊದಲೇ ಸಿದ್ಧವಾಡಿ ಇಟ್ಟುಕೊಂಡಿದ್ದ ಅಡಿಕೆ ತೊಗರುಕಷಾಯವನ್ನು ಸೀಸೆಯಲ್ಲಿ ತುಂಬಿಕೊಂಡು ನಡೆದುಕೊಂಡೇ ಹೋದರು (ಕೊನಷ್ಟ$_4$. ೧೧೭). [ ತೊಗರು$_1$ + ಕಷಾಯ ]

**ತೊಗರೆಳೆ** (ನಾ). ಕೆಂಪುಬಣ್ಣದ ಎಳೆ: ಕಾಂತೆಯುಟ್ಟುದು ಬಿಳಿದು ತೊಗರೆಳೆಯದು (ವೀಕ್ಷೃಷ. ೪-೨೧-೫). [ತೊಗರು$_1$+ಎಳೆ$_2$ (<ಎಟ$^2_2$)]

**ತೊಗಲ್** 'ತೋಲ್$_1$' ನೋ.

**ತೊಗಲು** 'ತೋಲ್$_1$' ನೋ.

**ತೊಗಲುಗೊಂಬೆ** (ನಾ). ಚರ್ಮದಿಂದ ಮಾಡಿದ ಬೊಂಬೆ; ಚಕ್ಕಳ ಗೊಂಬೆ: ಈ ಅವಧಿಯಲ್ಲಿ ಯಕ್ಷಗಾನ ಆಟಕ್ಕೆ ಸಂಬಂಧಿಸಿದ ಬೊಂಬೆ, ತೊಗಲುಗೊಂಬೆಗಳ ಚಿತ್ರವೂ ಬೇಕೆನಿಸಿತು (ಯಕ್ಷಬ. IV, ಮುನ್ನುಡಿ); ನೆರೆಕೆರೆಯ ಕೇರಳ, ಆಂಧ್ರದೇಶಗಳಲ್ಲೂ ಇದೇ ಬಗೆಯಲ್ಲಿ ತೊಗಲು ಗೊಂಬೆ ಆಡಿಸುವವರಿದ್ದಾರೆ (ಯಕ್ಷಬ. ೧೫೦).

**ತೊಗಲುಗೊಂಬೆ ಆಟ** = ಚರ್ಮದಿಂದ ಮಾಡಿದ ಬೊಂಬೆಗಳ ಸಹಾಯದಿಂದ ತೋರಿಸುವ ಆಟ,-ಮನರಂಜನೆ: ಜಾನಪದಕಲಾ ಮೇಳದಲ್ಲ ತೊಗಲುಗೊಂಬೆ ಆಟ ಬಹಳ ಆಕರ್ಷಕವಾಗಿತ್ತು (ರೂಢಿ). [ ತೊಗಲು (<ತೋಲ್$_1$) + ಗೊಂಬೆ$_1$ ]

**ತೊಗಲುಡೆ** 'ತೋಲುಡೆ' ನೋ.

**ತೊಗಲುಪಟ್ಟಿ** (ನಾ). ಚರ್ಮದ ಪಟ್ಟಿ: ನಾಯಿಯ ಕೊರಳಿಗೆ ತೊಗಲು ಪಟ್ಟಿ ಕಟ್ಟಿದ್ದಾರೆ (ರೂಢಿ). [ ತೊಗಲು (<ತೋಲ್$_1$) + ಪಟ್ಟಿ$_2$ ]

**ತೊಗಲುಪೆಟ್ಟಿಗೆ** (ನಾ). ಚರ್ಮದಿಂದ ತಯಾರಿಸಿದ ಪೆಟ್ಟಿಗೆ: ಕನ್ನಡಿ ಯಿದ್ದ ಮೇಜಿನ ಮೇಲೆ ತೆರೆದಿದ್ದ ತೊಗಲುಪೆಟ್ಟಿಗೆಯಿತ್ತು (ಪ್ರಜಕು. ೨೫೬). [ ತೊಗಲು (<ತೋಲ್$_1$) + ಪೆಟ್ಟಿಗೆ ]

**ತೊಗಲುಬಾವಲಿ** 'ತೋಲ್ವಾವಲ್' ನೋ.

**ತೊಗಲುಬೊಂಬೆ** (ನಾ). = ತೊಗಲುಗೊಂಬೆ: ತೊಗಲುಬೊಂಬೆಗಳಂತೆ ನಾಲುಕುಬಗೆಯ ನಿವರ್ತಣದಲಿ . . . ಬಗೆಬಗೆಯ ನಾಮಾಂಕಿತದ ಜೀವಿ ಗಳೆಲ್ಲವು ನಿನ್ನ ನಾಮದಿ ಜಗಕೆ ತೋಚುತ್ತಿಹುದು (ಹರಿಶಾ. ೮೪). [ ತೊಗಲು (<ತೋಲ್$_1$) + ಬೊಂಬೆ ]

**ತೊಗಲುಹಕ್ಕಿ** (ನಾ). ಒಂದು ಬಗೆಯ ಪಕ್ಷಿ; ತೊಗಲಂಬಾವಲಿ: ಲಿಂಗ ಯೋನಿಗಳ ತಂಡ, ತೊಗಲುಹಕ್ಕಿಗಳ ಹಿಂಡದಿನ್ನು, ಸುತ್ತುಗಟ್ಟಿರಲು (ಚಂಶನ. ೫೪-೨೨). [ ತೊಗಲು (<ತೋಲ್$_1$) + ಹಕ್ಕಿ$_1$ (<ಪಕ್ಕಿ$_1$) ]

**ತೊಗಲ್ವೇಟು** (ನಾ). ಚರ್ಮದ ಚೀಲ: ತಿತ್ತಿ ಸಿದ್ದಿಗೆ ತೊಗ [ಪಾಠಾಂ. ವ]ಲ್ವೇಟುನೊಳಗೆ ಬಂದತ್ತು ಗಂಗಾಸಾಗರವು (ಕುಮಾರಾಂ. ೧೯-೦೦). [ ತೊಗಲ್ (< ತೋಲ್$_1$) + ವೇಟು$_3$ ]

**ತೊಗೆ$_1$** 'ತೊವ್ವೆ' ನೋ.

**ತೊಗೆ$_2$**(ನಾ). (?): ಸ್ವಯಂಬುವದೇವರ್ಗ್ಗೆ ದತ್ತಿದೆಗಾಗಂಡ ಹಡುವಕ್ಕೆ ಬಿತೊಗೆ (ಮೈಆರಿ. ೦೯೪೬, ೧೦-೦೫; ಸು. 15 ನೆಯ ಶ). [ ? ]

**ತೊಟ್** (ನಾ). ಒಂದು ಅನುಕರಣಶಬ್ದ: ಖಲನಾಕಾಶಕ್ಕೆ ತೊಟ್ಟೆಂದೊ ಗೆದಂ (ಜಗವಿ. ೦೫-೨).

**ತೊಟ್ಟೆನಲ್** = ಇದ್ದಕ್ಕಿದಂತೆ; ತಟ್ಟನೆ: ಈ ಮಹಾತ್ಮನಂ ತೊಟ್ಟೆನ ಲಿಂತು ದೇವ ಯುವರಾಜನನೀ ತೆಬಿದಿ ಪೆಸರ್ವುದೇ (ಕಾದಂಅ. ೪೬೯); ವಸುಧಾರವುಣೀರವುಣಂಗೆ ತೊಟ್ಟೆನಲ್ ಪುಟ್ಟಿಸಿದತ್ತು ಮೆಯ ವಿರ್ಗಳಂ ರಥವೀರವಚಸ್ಸುಧಾರಸಂ (ಹಂರಿಮಾ. ೬-೬೦).

**ತೊಟ** (ನಾ). ಒಂದು ಅನುಕರಣ ಶಬ್ದ. 'ತೊಟಗುಟ್ಟು' ಪರಾ.

**ತೊಟಕಿಕ್ಕು** (ಕ್ರಿ). ಹನಿಹನಿಯಾಗಿ ಬೀಳಂ; ಒಸರಂ; ತೊಟ್ಟಿಕ್ಕು: ಕಾವ್ಯಸುಧೆಯು ತೊಟಕಿಕ್ಕುತಿಹುದು ರಸಪಾನಕಾಗಿ ರಸಿಕ (ಹಂದ್ರಮಾ. ೦೬-೦೫). [ ತೊಟಕಂ$_1$ ( < ತಟಕು$_1$) + ಇಕ್ಕು ]

**ತೊಟಕು$_1$** 'ತಟಕು$_1$' ನೋ.

**ತೊಟಕು$_2$** 'ತಟಕು$_2$' ನೋ.

**ತೊಟಕುಹನಿ** 'ತಟಕುವನಿ' ನೋ.

**ತೊಟಗುಟ್ಟು** (ಕ್ರಿ). ಹನಿಹನಿಯಾಗಿಬೀಳಂ; ತೊಟ್ಟಿಕ್ಕು: ಎದ್ದವರು ಗೆದ್ದವರು ಬಾಂದುಂಬ ಕಾಣುವರು ಚುಕ್ಕಿ ತೊಟಗುಟ್ಟುತಿಹ ಬೆಳಕು, ಜೇನು (ಸೂರ್ಯಪಾ. ೨೬-೮). [ ತೊಟ + ಕುಟ್ಟು$_1$ ]

**ತೊಟ್ಟು** 'ತೊಡಂ$_1$' ಪರಾ.

**ತೊಟ್ಟಗೆ** (ಅ). ೧. ಕೂಡಲೆ; ಬೇಗನೆ; ತಟ್ಟನೆ; ಶೀಘ್ರವಾಗಿ: ಕುರುಕುಳಪ್ರಖ್ಯಾತನಂ ಕಾದಿ ತೊಟ್ಟಗೆ ಗೋವ್ಯಂದವನಾಂ ಮಗುಟ್ಚು ದವೆಂ (ಪಂಪಭಾ. ೮-೦೦೩); ಮುಟ್ಟಿ ಮತ್ತುರಿಚಯಕ್ಕಾದಂ ಮಹಾಶ್ವೇತೆ ತೊಟ್ಟಗೆ ತನ್ನಂ ತನುವಿಂದೆ ಪತ್ತುವಿಡಲಲ್ಲೇ ಬಂದೆ (ಕಾದಂಅ. ೩೬೮); ತೊಟ್ಟಗೆ ಕೊಳೆ ಮೇಲೆವಾಯ್ದು ಮಹಿಷಾಸುರನಂ ತವೆ ಕೊಂದಳ್ (ಛಂದೋಂಬು. ೧-೪); ತನ್ನಯ ಸೂಚಿಯಾನೆ ತೊಟ್ಟಗೆ ಸಮರಾಗ್ರದೊ ಳ್ಪರಿಯೆ (ಗದಾಯು. ೧-೦೬); ತೊಟ್ಟಗೆ ತದ್ವಾ [ಪಾಠಾಂ. ದ್ವಾ] ಹವುವಂ ಗಜೇಂದ್ರಮುಮನೋರ್ತುತ್ತೆಂಬನಂ ತುತ್ತಿ . . . ಪಾಟಿ ಸುರ ರಾಜಾವಾಸಮಂ ಮುಟ್ಟಿದಂ (ಕಾವ್ಯಾವ. ೫೯). ೨. ಒಮ್ಮಿಂದೊಮ್ಮೆ; ಇದ್ದಕ್ಕಿದ್ದಂತೆ; ಹಠಾತ್ತಾಗಿ: ಸಿಂಧುದೇಶಾಧೀಶ್ವರಂ . . . ಮೃಗಯಾ ಕ್ರೀಡೆಗೆ ಪಾಂಡುರಾಜತನಯರ್ ಪೋಪನ್ನೆಗಂ ಬಂದು ತೊಟ್ಟಗೆ ಪಾಂಚಾಳಿಯನೆತ್ತಿ ತನ್ನ ರಥದೊಳ್ ತಂದಿಟ್ಟುಕೊಂಡುಯ್ವಂ (ಪಂಪಭಾ. ೭-೩೦); ಒರ್ವ ವನಚರಂ ಮಹಾವನದೊಳ್ ವನದಂತಿಯಂ ಕಂಡ ನಿಮಿತ್ತಂ ಕೊಂದು ನಿಂದಿರ್ಪನವೊಂದು ಮಹಾಹಿ ತೊಟ್ಟಗೆ ಬರೆ (ಪಂಚತಂ. ೩೦೦-೦೯); ಜನಪದದೊಳ್ ತೊಟ್ಟಗೆ ಕಿರ್ಚು ನಂದೆ ಮೇಣ್ ಪುಳ್ಳಿಯಿಲ್ಲ ದುರಿಯುತ್ತಿರೆ. . . ದೇಶಂ ಕಿಡುಗುಂ (ಲೋಕೋಪ. ೪-೪೪); ನಾಯ್ಸುಗ ದೆಡೆಯಲ್ಲಮಂ ಪುಗಿಸಿ ಬಯ್ಕದ ಭಾಜನಮಾಗೆ ಮಾಡಿ ತೊಟ್ಟಗೆ ವಿಭು ಸಾಯೆ (ಸುಕುಮಾ. ೨-೬೩). [ ತೊಟ್ + - ಅಗೆ$_3$ ]

**ತೊಟ್ಟನೆ** (ಅ). ೧. ಕೂಡಲೇ; ಬೇಗನೆ: ತೊಟ್ಟನೆ ಸರ್ವಾಂಗಮಲಧಾರಿ ಗಳೊಂದು ಶಿಲಾತಳದ ಮೇಗಿರ್ದು . . . ಸ್ವಾಧ್ಯಾಯದೊಳ್ ತಗುಳ್ದಿ ರ್ದೊರಂ . . . ಕಂಡು (ವಡ್ಡಾರಾ. ೯೬-೨); ಭವಪ್ರತ್ಯಯಜ್ಞಾನ ತೊಟ್ಟನೆ ಪುಟ್ಟೆ (ಆದಿಪು. ೨-೬೬); ಶಿವಭೂತಿಗೆ ತೊಟ್ಟನೆ ಬಗೆದನಹಿತವುಂ ತದ್ವನಚರಂ (ಪಂಚತಂ. ೦೦೨-೦೦); ಭವಸ್ಮರಣೆ ತೊಟ್ಟನೆ ಪುಟ್ಟೆ (ಮಲ್ಲಿಪು. ೪-೨೩); ನೆಗಳ್ದ ನೇತ್ರಜ್ವಾಲೆಯಿಂ ತೊಟ್ಟನೋವದೆ ಸುಟ್ಟಂ ಮದನಾರಿ (ಹಂಪಾಶ. ೪೦). ೨. ಇದ್ದಕ್ಕಿದ್ದಂತೆ; ಹಠಾತ್ತಾಗಿ: ಆ ನರಕಾಂತಕ ನೀಕೆಗಂಡು ತೊಟ್ಟನೆ ನಿಜಲಕ್ಷ್ಮಿಯಂ ಮಟಿಿದಂ (ಪಂಪಭಾ. ೪-೮೫);

ರಸೆಯಿಂ ಕಾಲಾಗ್ನಿರುದ್ರಂ ಪೊಱಮಡುವವೊಲಂತಾ ಸರೋವರಮಧ್ಯದಿಂ ಸಾಹಸಗರ್ವಾಲಂಕೃತಂ ತೊಟ್ಟನೆ ಕೊಳೆ ಪೊಱವಂಟು (ಗದಾಯು. ೭-೪೦); ಮರಣಭ್ರಾಂತಿಯಂ ಚಿಂತಿಸಿ ಬರುತ್ತುಂ ತೊಟ್ಟನೆ ಮುಂದಿರ್ದ ಪುರಾಣ ಕೂಪಮುಂ ಕಂಡು (ಪಂಚತಂ. ೮೪-೨೦); ಒಂದು ದಿವಸಂ ವಿಶ್ವಂಧರ ಮಹಾರಾಜಂ . . . ಪೊನ್ನುಯ್ಯಲನಾಡುವ ಸುಬಂಧುಶ್ರೀಯಂ ತೊಟ್ಟನೆ ಕಾಣ್ಬುದುಂ (ಧರ್ಮಾಮೃ. ೧೧-೨೮); ತೊಟ್ಟನೆ ಸಾವುದೊಳ್ಳಿತು ತೊಡಂಕದೆ ಕಾಮನ ಡಾಮರಂಗಳೊಳ್ (ಚಂದ್ರಪ್ರ. ೮-೬೬); ತೊಟ್ಟ ನಿಂತು ಕಣ್ ನೋಡದೆ ಹುಣ್ಣ ನೋಡದೆ ಹೋಗೆಂಬರೆ (ಬಸವ. ೪-೨೮): ಒಟ್ಟಿ ಲುಲಾಯ ಗರ್ದಭ ರಥಂಗಳನೇಱಿದವಂ . . . ನಟ್ಟ ವಿಲೋಚನಂಗಳೊಳೆ ಮೇಗನೆ ನೋಡುತುಮಿರ್ಪ ಮಾನಿಸಂ ತೊಟ್ಟನೆ ಬಂದು ಪೇೞಲ ಶುಭಂ (ಜಗುದ. ೩-೫೬). ೩. ಸುಮ್ಮನೆ; ವ್ಯರ್ಥವಾಗಿ: ನಿನಗೆ ಪತಿ ಪಾಶುಪತಿ ಇರೆ ತೊಟ್ಟನೆ ಪಶುಗಳಂ ಕೊಲುವ ಮೆಲುವ ಕುಮನದ ಪಶುಕರ್ಮಿಗಳ ದುಃಕರ್ಮಂಗಳೊಳಗಿರಲು(ಬಸವು. ೬೦-೪೦); ರಾಜಬೀದಿಯೊಳಗಟ್ಟಿಹಾಸದೆ ಬಟ್ಟಬಯಲ ತೊಟ್ಟನೆ ನಿಟ್ಟಿಪಂ (ಕೊಟ್ಟೂರು. ೭-೩೬).

**ತೊಟ್ಟನೆ ತೊಳಲು** = ಸುಮ್ಮನೆ ಅಲೆದಾಡು,–ಸುತ್ತಾಡು,–ತಿರುಗಾಡು: ಸದ್ಭಕ್ತರಿಗೆ ಉಳ್ಳುದೆಲ್ಲವ ಕೊಟ್ಟು ಐದರೇ ಎಂದು ಮುಱುಗುವ ಏಕೋಗ್ರಾಹಿ ಶರಣನ ತೊಟ್ಟನೆ ತೊಳಲಿ ಅಱಿಸಿ ಕಾಣೆನು (ಸಮಾವ. ೬-೨೦): ಅಱುವತ್ತುದಿವ್ಯಸಹಸ್ರಾಬ್ದಂಬರಮಿಂತಿಱದಿಂ ತೊಟ್ಟನೆ ತೊಳಲ್ದು (ಸಾಸಂಅ. ಕಥಾಗರ್ಭಸಂಧಿ ೨೩ ವ): ಬೆಟ್ಟಂಗೆ ಬೆಟ್ಟತ್ತನೆಸಗೆ ಪೃಥುಲಶ್ರೋಣಿ ತೊಟ್ಟನೆ ತೊಳಲ್ವಂತೆ ಮಾಡೆ (ಪದ್ಮರಾ. ೩-೨೮); ಕಾನನದೊಳಗೆ ತೊಟ್ಟನೆ ತೊಳಲಿ ಹದಿಮೂಱಬುದ ಬಂದಾಪತ್ತನನುಭವಿಸಿ (ಕುಮಾ.ಭೀ. ೩-೩೮). [ತೊಟ್ + – ಅನೆ$_1$]

**ತೊಟ್ಟಿಲ್** (ನಾ). ಒಂದು ಸ್ಥಳದ ಹೆಸರು: ಸ್ವಸ್ತಿಶ್ರೀವಲ್ಲಭ ಪೃಥವೀರಾಜ್ಯಂಕೆಯ . . . ಗುಣ್ಣಗೆವಾಟಕ್ಕ ತೊಟ್ಟಿಲಾಳುತ್ತುಮ್ ಕಾಡವಟ್ಟಿದೋಳದುಳ್ಳಿ ಪೆಬ್ಬೀಳನಲ್ಲಕ್ಕಳ್ ಎಱಿದುವಿಟ್ಟಾರ್ (ಎಕ. XVI, ತುರುಕೆಪ. ೯೬-೧; 780 ?). 'ತೊಟ್ಟಿಲ್$_1$' ಪರಾ. [?]

**ತೊಟ್ಟಿಲ** 'ತೊಟ್ಟಿಲ್$_1$' ನೋ.

**ತೊಟ್ಟಿಲಿ** 'ತೊಟ್ಟಿಲ್$_2$' ನೋ.

**ತೊಟ್ಟಿಲು** 'ತೊಟ್ಟಿಲ್$_1$' ನೋ.

**ತೊಟ್ಟಿಲ್ಲ** 'ತೊಟ್ಟಿಲ್$_2$' ನೋ.

**ತೊಟ್ಟಿ$_1$, ದೊಡ್ಡಿ$_1$** (ನಾ). ೧. ಮನೆಯ ಹಜಾರದ ಮಧ್ಯದಲ್ಲಿರುವ ಚಾವಣಿಯಿಲ್ಲದ ಚಚ್ಚೌಕವಾದ ಸ್ಥಳ: "ಗೃಹಭೇದ ಲತೆಯೊಳು ತೊಟ್ಟಿ" (ಶಬ್ದಮಂ. ೯೦); ತೊಟ್ಟಿಯ ಸುತ್ತುವೆತ್ತ [ಪಾಠಾಂ. ಕಟ್ಟಿಯ ಸುಟ್ಟುವೆತ್ತ, ತಟ್ಟಿಯ ಸುತ್ತುವೆತ್ತ] ಪಸುರ್ವಂದಲ ಮುತ್ತಿನ ಮಂಟಪಂಗಳೊಳ್ ಕಟ್ಟಿದ ಪಚ್ಚೆದೋರಣದ ಬಾಜಿಪ ತೂರ್ಯದ ಸಂಭ್ರಮಂಗಳಿಂ . . . ನೇಪರ್ಥ್ಯದು ವೋಟಕಗೊರ್ಸಗೆಯುಬ್ಬಣಮಪ್ಪಿನಮಾ ವಿವಾಹದೊಳ್ (ಸೂಕ್ತಿಸು. ೬-೨೨); ತೊಟ್ಟಿಗಳುಪ್ಪರಿಕೆ ಹೊಂಗಳಸಗಳು ಮೆಱೆವ ಮೇಲುಕಟ್ಟಿನ ಚಿತ್ರಗಳ . . . ಕಾಯ್ವನೆಯಿದೆಂಬಂತೆಸೆದು ದೊಗ್ಗಿನಲಿ (ಪ್ರಹ್ಲಾ.ಚ. ೪-೪೨); ರಂಗುವಡದ ನವರಂಗದ ತೊಟ್ಟಿಯ ಸಾಲು (ಸೌಂದರಾ. ೪-೩೨); ಊರಿನ ಗಂಡಸರೆಲ್ಲಾ ಆಗಲೇ ಆ ತೊಟ್ಟಿಯಲ್ಲಿ ಸೇರಿದ್ದರು (ಕಳಹು. ೯); ಹಟ್ಟಿ ಗುಡಿಸೀರಿ ತೊಟ್ಟೀಯ ಗುಡಿಸೀರಿ ಪುಟ್ಟ ಮಲ್ಲಿಗೆಯ ಹರಡೀರಿ (ಜನಪ್ರಿ. ೪೮). ೨. ಅಂತಃಪುರ; ರಾಣೀವಾಸ: ತದ್ಧರಣೀಸತಿಯ ಕಾಂತಿರಸಭರಿತನಾಭಿಯೋ ಎನೆ ತೊಟ್ಟಿ ಕಣ್ಗೆಸೆದುದು (ಪದ್ಮರಾ. ೬ ೬೨); ದಿಟ್ಟಿಗೆ ನೂತನವಾದವರಂಜಿಯ ಕಟ್ಟಿರಕದ ಭಿತ್ತಿಯಿಂದ ಸೃಷ್ಟೀಶನ ರಾಣಿಯರ ನವರತ್ನದ ತೊಟ್ಟಿಗಳೆಹುವರ್ತಿಯಲಿ (ಕಂಸವಿ. ೭-೪೨); ಚಾಮರಾಜನಗರದಲ್ಲಿ ಮದನವಿಲಾಸತೊಟ್ಟೀಪುಟ್ಟಸ್ವಾಮಿಯಾಯವರ ಹೆಸರಿನಿಂದ ಪ್ರತಿಷ್ಠಿತರಾದ . . . ದೇವಸ್ಥಾನಕ್ಕೆ . . . ಪಪ್ಪಿಸಿದ ನಿಲುವಿನ ಸೇವಾರ್ಥ (ಎಕ. XIV, ಚಾಮರಾ. ೨೦೮-೧; 1868); ಆ ರಾಜಕುಮಾರರಿಬ್ಬರನ್ನೂ ತಮ್ಮ ಅರಮನೆಯಲ್ಲಿ ಪೂರ್ವದಲ್ಲಿ ಇಳಿದಿದ್ದ ತೊಟ್ಟಿಯಲ್ಲಿಯೇ ಇರುವಂತೆ ನಿಯಮಿಸಿದಳು (ಧಾಮುವಂ. ೧೫): ಶಾಂತಲಾದೇವಿ ತೊಟ್ಟಿಯಿಂದ ಹೊರಟಳು (ಸವತಿ. ೩೦); ದೊರೆ ಇವಳ ತೊಟ್ಟಿಗೆ ಕೊಡುತಾ ಇದ್ದ ಖಾಸಾ ಸೋಬಸ್ಕರವನ್ನು ದಿನಕ್ರಮೇಣ ಕಡಿಮೆ ಮಾಡುತ್ತಾ ಕಡೆಗೆ ಕಗ್ಗಲ ರಾಗಿ ಮುಗ್ಗಲ ಹುರುಳಿಗೆ ಇಳಿಸಿದನು (ಕೇಟಿಪ್ರ. ೧೬). ೩. ದರ್ಬಾರು ನಡೆಯುವ ಸ್ಥಳ; ಓಲಗಶಾಲೆ; ಆಸ್ಥಾನಮಂಟಪ: ಶ್ರೀರಂಗಪಟ್ಟಣದ ಅರಮನೆಯಲ್ಲಿ ಸಂಜೆಯ ಸನ್ನಿಧಾನದ ತೊಟ್ಟಿ (ಸಂಕಳ. ೧೨೦). ೪. ಹಸು, ಕುದುರೆ ಮುಂತಾದುವನ್ನು ಕೂಡುವ ಸ್ಥಳ; ಕೊಟ್ಟಿಗೆ: ಕುರಿಗಳೆಲ್ಲಾ ರೊಪ್ಪದಲ್ಲಿ, ದನಗಳೆಲ್ಲಾ ತೊಟ್ಟಿಯಲ್ಲಿ, ಜನಗಳೆಲ್ಲಾ ಹಟ್ಟಿಯಲ್ಲಿ ಬಳಲಿ ಕೆಡೆದರು ತಪ್ಪಗೆ (ಇಂಗೀತ. ೫೨-೧). **ದೊಡ್ಡಿ$_1$**: ೪. ಗುಡ್ಡ ಬೆರಳೊಳಿತ್ತಿ ದೊಡ್ಡಿ ಗೋವ್ಗಳ ಕಾಯ್ದು ಒಡ್ಡಿ ಜಗನ್ನಾಥ ಗಿಡ್ಡಾಗಿದ್ದನೆ (ಪುರಂದ. ೨-೩೨-೩); ನರಪಶುಗಳಿಹ ದೊಡ್ಡಿ ನರಕದ ದಿಡ್ಡಿ ಸಕಲರಿಂಗಿಕ್ಕಿದಡ್ಡಿ (ಹರಿಲ. ೨-೬೧); ಅಲ್ಲಲ್ಲಿ ದೊಡ್ಡಿಗಳಲ್ಲಿರುವ ಸಂತೋಷಕರಗಳಾದ ಗೋವುಗಳ ಹಿಂಡುಗಳನ್ನೂ ನೋಡುತ್ತ (ಕೃಪಾಲು.೧೪೨); ಗಿರಿಗಳೆಡೆಯೊಳು ಅಡವಿ ಮಧ್ಯದಿ ತುರುವ ದೊಡ್ಡಿಯ ಮಾಡಿಕೊಂಡು ಇರುವ ಕಾಳಿಂಗನೆಂಬ ಗೊಲ್ಲನ ಪರಿಯ ನಾನೆಂತು ಪೇಳ್ವೆನು (ಗೋಹಾಡು. ೨೦); ಆ ಎರಡು ತರಗತಿಯೂ ದೊಡ್ಡಿಯಂತಾಗಿದೆ (ಕಾಕೇರಿ. ೯೬). ೫. ಜನರು ವಾಸಿಸುವ ಸ್ಥಳ; ಹಟ್ಟಿ: ಅವನು ತನ್ನ ದೊಡ್ಡಿಯನ್ನು ತಲುಪಿ ಕಾರ್ಯನಿರತನಾದ ನಂತರ ಮನಸ್ಸಿನ ಮುರುಸು ಬೇಸರಗಳೆಲ್ಲ ಮಾಯವಾದುವು (ಪುನರು. ೨೬೪). ೬. ಕೆಲವುಹಳ್ಳಿಗಳ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ. ೭. ಪೌಂಡಿಮನೆ; ಕೊಂಡವಾಡ(ಉಕ). ೮. ಕಾಡಾನೆಗಳನ್ನು ಪಳಗಿಸುವ ಸ್ಥಳ; ಖೆಡ್ಡಾ: (ಓ).

[ದೇ.॥ ತಮಿ. ತೊಟ್ಟಿ; ಮಲ. ದೊಟ್ಟಿ; ತೆಲು. ದೊಡ್ಡಿ]

**ತೊಟ್ಟಿ$_2$** (ನಾ). ೧. ನೀರು ತುಂಬುವುದಕ್ಕಾಗಿ ಕಲ್ಲು, ಮಣ್ಣು, ಸಿಮೆಂಟು ಮತ್ತು ಮರ ಮೊದಲಾದುವುಗಳಿಂದ ಮಾಡಿದ ಬಾನೆ; ಹೌದು; ಟ್ಯಾಂಕು: ತೊಟ್ಟಿಯ ನೀರು ಕಾಲುವೆಯಲ್ಲಿ ಹರಿಯುತ್ತಿತ್ತು (ಕಪಪು. ೩-೧೫). ೨. ಮಾಯುಹಡಗಿನ ತಳಕ್ಕೆ ಕಟ್ಟಿರುವ ಒಂದು ಬಗೆಯ ತೂಗುದೊಟ್ಟಿಲು,–ದೋಣಿ: ಇದರ ಕೆಳಮಗ್ಗುಲಲ್ಲಿ ಒಂದು ತೊಟ್ಟಿಯನ್ನು (Gondala) ನಿರ್ಮಿಸುವರು. ಈ ತೊಟ್ಟಿಯಲ್ಲಿ ಜನರು ಕುಳಿತುಕೊಳ್ಳುವ ಅನುಕೂಲತೆಯಿದೆ (ಪಾಲಿಶ್ಯ. II, ೧೧೨೬). ೩. ಕಸ, ಕುಪ್ಪೆಗಳನ್ನು ಹಾಕುವ ಗುಂಡಿ: ಕಸವನ್ನು ತೊಟ್ಟಿಗೆ ಹಾಕು (ರೂಢಿ). ೪. (ಆಲಂ)ವ್ಯಭಿಚಾರಿಣಿ; ವೇಶ್ಯೆ; ಜಾರೆ.

[ದೇ.॥ ತಮಿ. ಮಲ. ತುಳು. ತೆಲು. ತೊಟ್ಟಿ]

**ತೊಟ್ಟಿ$_3$** 'ತೋಟಿ$_2$' ನೋ.

**ತೊಟ್ಟಿ$_4$** (ನಾ). ಒಂದು ಬಗೆಯ ಬಳ್ಳಿ: "ತೊಟ್ಟಿ[ಪಾಠಾಂ. ಟ್ಟಿ] ತುಷ್ಟಿಯಕ್ಕುಂ" (ಚುಂಗರಾ. ೪೨-೩೭): "ಗೃಹಭೇದ ಲತೆಯೊಳು ತೊಟ್ಟಿ" (ಶಬ್ದಮಂ. ೯೦); ಕುದಿಯಿಸುಗೆ ಸುಣ್ಣದಿಂ ಕೈಪೆದೊಂಡೆಯಂ ಕೋಕಿಲಾಕ್ಷಿವೆರಸು ಸಿತೇರಂಡದ ತೊಟ್ಟಿಯೆಲೆಗಳಿಂ ಪಡಲದ ಕಾಯುಂ ತೆಗವುಗವಱ ಕೈಪೆಗಳಟಿಗುಂ (ಕೋಕೋಪ. ೮-೩೦); ತೊಟ್ಟಿಯೆಲೆಯ ಕಷಾಯಮಟ್ಟಮೆಯುಂ ಕಳೆವುದು (ಧರ್ಮಾಮೃ. ೯-೧೧೮); ಬಸವೇಶ್ವರದೇವರ ಬಲದ ಕರ್ಣದಲ್ಲಿ ತೊಟ್ಟಿಗಿಡ ಹುಟ್ಟುವುದೇ ಕುಱುಹು (ಶಾಂಸಂ. ೮೪-೪); ನೆಲದಾಳ್ ದಾಗುಡಿ ಹೇರೀಚಲು ಮಾಳಂ ತರಣಿ ತೊಟ್ಟಿ... ಸತಕ್ರಪಾನಂ ವಿಷಹಂ (ಜಗುದ. ೫-೯೬): ಸೀಗೆ ಗದಾಗು ಕೀಚಕ ತೊ[ಪಾಠಾಂ. ದೊ]ಟ್ಟಿ

. . . ಗಡಣದಿಂದಾ ಕಾಡು ಕಡುಗುರ್ವುವಡೆದು ರಾಜಿಪುದು (ರಾಜುವಿ. ೧೫-೬೦); ತೊಂಡೆ ತೊಟ್ಟಿಯುು ಸೊಂಡೆಗಿಡ ಭೂವಂಡಲಾದೊಳು ಬೆಳೆವ ತೊಳಸಿಯುು . . . ತಂಡತಂಡದಿ ಮೆರೆದುವು (ಗೋಹಾಡು. ೬).

[ ದೇ.॥ ತಮಿ. ತೊಟ್ಟಿ ]

**ತೊಟ್ಟಿಕ್ಕು** (ಕ್ರಿ). ಹನಿಹನಿಯಾಗಿ ಬೀಳು : ಕದಡಿ ತೊಟ್ಟಿಕ್ಕುವ ವಿಭೂತಿಗಳ ದೆವರಿನಿಂ (ಜಬಪು. ೩೫-೦೫) ; ತೊಟ್ಟಿಕ್ಕೆ ಕಂಬನಿಯು ಜೇನೆದೆಯ ಹೂವಿಂದ (ಕಾಬೂಠ. ೦೬೫-೩೭೭); ಸುಮತಿಯು ಕಂಗಳಲ್ಲಿ ಕಂಬನಿ ತುಂಬಿ ಕೊಂಡು, ಮುತ್ತುದುರಿದಂತೆ ಅವಳ ಗಲ್ಲಗಳ ಮೇಲೆ ತೊಟ್ಟಿಕ್ಕುತ್ತಿದೆ (ಈಷೋಡ. ೬೫) ; ಎಲೆ, ಕೊಂಬೆ ಮತ್ತು ಹುಲ್ಲುಗಳಿಂದ ನೀರು ತೊಟ್ಟಿಕ್ಕುತ್ತಿತ್ತು (ಪುಸರು. ೨೭೮). [ ತೊಟ್ಟು₂ + ಇಕ್ಕು ]

**ತೊಟ್ಟಿಗ** (ನಾ). (?) : ಅಳಹರನು ಕಾವನ ತಗೆದಚ್ಚ ಬಾಣದ ಮಗನ ಹಿಡಿದು ತೊಟ್ಟಿಗರು ವಗೆಗೆ ವಾರಲ್ಕಂಜ ಫಿಗಿದು ಪರ್ವರ ಕಂಡು ಸುಗಿದು ಸೊರಗಿದೆವೆಂಬ ಪಸರಾ (ಕೋಡಹ. ೧-೬೦). [ ? ]

**ತೊಟ್ಟಿಗಾಲ್** (ನಾ). ಒಂದು ಕಾಲುವೆಯ ಹೆಸರು : ಅನ್ತೆ ಬನ್ದು ತೊಟ್ಟಿಗಾಲ ತಜ್ಜಣಪೇರೊಟ್ಟಿಯಿಂ ಅನ್ತೆ ಬನ್ದು ಬಾಣಗಗೆಱೆಯ ಏರಿಯ ಮೇಗಣಂ (ಎಕ. III, ನಂಜನ. ೦೬೯-೨೦; 916 ?).

[ ತೊಟ್ಟಿ ? + ಕಾಲ್₂ ]

**ತೊಟ್ಟಿಡು** (ಕ್ರಿ). = ತೊಟ್ಟಿಕ್ಕು : ಸಡಿಲಿದ ಮುಡಿ ಬೆವರ್ವನಿಗಳು ತೀವಿ ತೊಟ್ಟಿಡುವಾಸ್ಯದ . . . ಹೆಂಗಳಡಸಿದಂಗಡಿಗಳೊಪ್ಪಿದವು (ಮೋಹತ. ೩-೦೪) : ತನಿಸುಧೆಯೊಸರ್ದು ತೊಟ್ಟಿಡುವ ಬಿಂದುಗಳ ಸಾಲಿದೆನಲು . . . ಮುತ್ತುಗಳ ಮಣಿಗಳೆಡೆವಿಡದೆ ಸೂಸುತಿರೆ (ಕೃಮಿಧಾ. ೦೦-೦೬): ತೊಟ್ಟಿಡುವ ಬೆವರುಗಳ ಮಸ್ತಕದಿ ರೋಷದಿಂದೊಗುವಾ (ದೇವೀಕು. ೩-೪೯); ನಿರ್ಮಳಾಂತಃಕರಣದಾನಂದಾಶ್ರುಗಳು ಕಂಗಳಲಿ ತೊಟ್ಟಿಡಲು (ಅನಂರಾ. ೦-೨-೩೦); ಮುಖದಲ್ಲಿ ಬೆವರು ತೊಟ್ಟಿಡುತ್ತಿದ್ದಿತು (ನಿರಾತ. ೨೦). [ ತೊಟ್ಟು₂ + ಇಡು₁ ]

**ತೊಟ್ಟಿಮನೆ** (ನಾ). ಹಜಾರದ ಮಧ್ಯದಲ್ಲಿ ಚಾವಣಿಯಿಲ್ಲದ ಚಚ್ಚೌಕವಾದ ಸ್ಥಳವನ್ನುಳ್ಳ ಮನೆ: ಇದ್ದಿರಬಹುದು ನಮ್ಮೂರಲ್ಲೂ ಕೋಟೆ, ಪೇಟೆ, ಅರಮನೆ . . . ಹನ್ನೆರಡು ಕಂಬದ ತೊಟ್ಟಿಮನೆ (ಹಂಗೂರಿ. ೮) ; ನಾನು ಈಗಲೇ ಹೋಗಿ ತೊಟ್ಟೀಮನೆ ಕೃಷ್ಣಪ್ಪನೋರನ್ನು ಕಾಣುತ್ತೀನೆ (ಷೂಂಗಲ್ಯ. ೯). [ ತೊಟ್ಟಿ₁ + ಮನೆ ]

**ತೊಟ್ಟಿಲ್**₁, ತೊಟ್ಟಿಲ, ತೊಟ್ಟಿಲು, ತೊಟ್ಟಿಲಂ₁ (ನಾ). ೧. ಮಗುವನ್ನು ಮಲಗಿಸಿ ತೂಗಲು ಮರ, ಬೆತ್ತ ಅಥವಾ ಲೋಹದಿಂದ ಮಾಡಿದ ಒಂದು ಬಗೆಯ ಸಾಧನ ; ತೂಗುಹಾಸಿಗೆ : "ಶೈಶವಿ ಬಾಲಶಯ್ಯೆಯನೆ ತೊಟ್ಟಿಲಕ್ಕುಂ" (ಮಂಗರಾ. ೬೦-೦೬) : ನಿನ್ನ ತಂದೆವಿರ್ ಸಿದ್ಧಾರ್ಥರೆಂಬೊರ್ ನೀನ್ ತೊಟ್ಟಿಲೊಳಿರ್ದಂತೆ ನಿನಗೆ ಸಟ್ಟವಟ್ಟಂಗಟ್ಟಿ . . . ತಪಂಬಟ್ಟು (ವಡ್ಡಾರಾ. ೪೬-೨೭); ಮದದಂತಿದಂತದೊಳ್ ಕಟ್ಟಿದ ತೊಟ್ಟಿಲಂ ನಯದಿಂದಮೇಱ[ಸ] ಬಾಳಕಾಲದೊಳೆ ತೊಟ್ಟಿಲಿಗಂ ಗಜಪ್ರಿಯನಪ್ಪುದಂ ಸಲೆ ತೋಱದಂ (ಶಂಶಶಾ. ೧-೪೩) ; ದೇಹಿವರ್ಗದ ಕೃತಪಾಪಪುಣ್ಯಫಲಮಂ ಸಲೆ ತೂಗುವ ಕರ್ಮಸಾಕ್ಷಿಯಂ ಪದುಳದೆ ತೊಟ್ಟಿಲೊಳ್ ಪಡಿಸಿ ತೂಗಿದರ್ (ಜಗವಿ. ೩-೨೮) ; ಕೂಸಂ ಚಿವುಂಟುವ್ವೆ ತೊಟ್ಟಿಲಂ ತೂಗುವ್ವೆ (ಸಂಬಿರ. ೦೫-೦೪೧) ; ಎಳನೇಸಜ ತೊಟ್ಟಿಲುದಗ್ರ ದಾನವರೆಱವಟ್ಟು ಲಕ್ಷ್ಮಿಯ ತಪವರ್ಣನೆ . . . ಮಹಾರ್ಣವಂ (ಸೂಕ್ತಸು. ೨-೩೮). ೨. ಒಂದು ಊರಿನ ಹೆಸರು : ಪಚಯ್ಯನುಂ ತೊಟ್ಟಿಲ ಪುಟ್ಟಗಾವುಣ್ಡನುಂ ಎಜೆಯಣ್ಣ ಪೆರ್ಮ್ಮಾಡಿ ಕೆಱೆಯ ಕಟ್ಟ ಕಲ್ಲ ತುಂಬನಿಕಿಸಿದ (ಮೈಆರಿ. ೦೯೩೨, ೧೦-೪ ; 886 ?). 'ತೊಟ್ಟಿಲ್' ಪರಾ. **ತೊಟ್ಟಿಲ** : ೧. ತನುವೆಂಬ ತೊಟ್ಟಿಲಕೆ ಮನವ ಸರಪಳಿ ಮಾಡಿ (ಅಜಂದೀ. ೩೪೯-೦೫).

**ತೊಟ್ಟಿಲು** : ೧. ಭಕ್ತನ ಹಸ್ತವೆ ತೊಟ್ಟಿ[ಪಾಠಾಂ. ಟ್ಟಿ]ಲು ತನಗಂ ಭಕ್ತ್ಯಮೃತಂ ಮೊಲೆವಾಲದು ತನಗಂ (ದೀಕ್ಷಾಬೋ. ೬೪-೫) : ಅಲ್ಲಿನ ಮಕ್ಕಳು ತಮ್ಮ ತೊಟ್ಟಿಲುಗಳಲ್ಲಿ ಸುಖವಾಗಿ ಮಲಗಿ ನಿದ್ರಿಸಲಿ (ಹುಟ್ಟಿಹ. ೦೯೦).

**ತೊಟ್ಟಿಲು**₁ : ೧. ತೊಟ್ಟಿ ೨ ಶಿಶುವಿಂಗೆ ಜೋಗುಳವಲ್ಲದೆ ಹೊಟ್ಟೆಯ ಶಿಶುವಿಂಗೆ ಜೋಗುಳವುಂಟೇ (ವಚನ. ೪೦೬-೫೯) ; ಶರಣರ ಚರಣದ ತೊಟ್ಟಿಲೊಳು ವಟ್ಟರಿಸಿ ಪುರಾತನರ ಗೀತದಿಂ ಜೋಗುಳಂಬಾಡಿ (ಬಸವ. ೧೦-೦೦೦) : ಭೀಷ್ಮನ ತೋಳ ತೊಟ್ಟಿಲಿನೊಳಗೆ ಬೆಳೆದವ (ಕುಮಾ.ಭೀ. ೬-೨೮) ; ಅಂಗದನ ತೊಟ್ಟಿಲಲಿ ವೀರೋತ್ತುಂಗ ದಶಕಂಧರನ ಕಟ್ಟಿದ ತುಂಗವಿಕ್ರಮುವೆತ್ತ ಸರಿದುದು (ತೊರರಾ. ೪-೫-೯) ; ಬೆಟ್ಟಬೆಟ್ಟಕೆ ಕಟ್ಟಿ ಜೋಗುಳದ ತೊಟ್ಟಿಲನು ತೂಗಿದತ್ತು! (ಅನೀಕ. ೫೩-೫) ; ತೊಟ್ಟಿಲ ಹೊತ್ತುಕೊಂಡು ತೌರುಬಣ್ಣ ಉಟ್ಟುಕೊಂಡು . . . ತೌರೂರ ತಿಟ್ಟತ್ತಿ ತಿರುಗಿ ನೋಡ್ಯಾಳು (ಜಗೀತ. ೩೦). ೩. ಬಂಡಿಯಲ್ಲಿ ಜನ ಕೂರಲು ಅಥವಾ ಸಾಮಾನು ತುಂಬಲು ಇರುವ ಜಾಗ,-ಸ್ಥಳ.

**ತೊಟ್ಟಿಲುಗಾಯಿ** = ಒಡೆದಾಗ ಉದ್ದುದ್ದವಾಗಿ ವಿಭಾಗವಾಗುವ ತೆಂಗಿನಕಾಯಿ : ತೊಟ್ಟಿಲುಗಾಯಿ ಒಡದರೆ ಮನೆಯಲ್ಲಿ ಮಗುವಾಗುವ ಸೂಚನೆಯೆಂದು ನಂಬಿಕೆಯಿದೆ (ರೂಢಿ). **ತೊಟ್ಟಿಲ ಕಾರ್ಯ** = ಮಗುವನ್ನು ಮೊದಲ ಬಾರಿ ತೊಟ್ಟಿಲಿಗೆ ಹಾಕುವ ಶಾಸ್ತ್ರ,-ಸಮಾರಂಭ : ಪರಮಹರುಷದಿಂದ ಪುರಜನರೆಲ್ಲರು ನೆರೆದು ತೊಟ್ಟೀಲ ಕಾರ್ಯಕ್ಕೆ (ಸಿದ್ಧಪು. ೩-೨೫). **ತೊಟ್ಟಿಲ ಕೂಸು** = ಚಿಕ್ಕಮಗು ; ಎಳಗೂಸಂ : ಎರಡು ಸಪ್ತಕ ಜಗವ ಮಾಡಿದ ಸರಸಿರುಹಸಂಭವನೆ ನಾಭಿಯ ನಿರುತ ತೊಟ್ಟಿಲ ಕೂಸು (ಸಂಭಥ. ೬-೨). **ತೊಟ್ಟಿಲ ಚಪ್ಪರ** = ಅಂಬಾರಿ: ಆನೆಯ ಮೇಲೆ ತೊಟ್ಟಿಲ ಚಪ್ಪರದಲಿ . . . ಬರುವ ವಾನರುಗಳು (ಕಂಚವಿ. ೦೦-೩೦). **ತೊಟ್ಟಿಲ ಜೀಕ, ತೊಟ್ಟಿಲು ಜೀಕ** = ತೊಟ್ಟಿಲನ್ನೊಳಗೊಂಡ ತಿರುಗುಯಂತ್ರ ; ರಾಟಣದುಯ್ಯಾಲೆ : ತೊಟ್ಟಿಲಜೀಕವ ತೂಗಿ ಕೈಬಿಟ್ಟರೆ ಗಾಳಿಯ ರಾಟಾಳದೊಳು ಪ್ರಾಣವು (ಸಹಗೀ. ೩೦-೦೦) ; 'ರಾಟಣದುಯ್ಯಾಲೆ' ಎಂದರೆ ನಮ್ಮಲ್ಲಿ ಈಗಲೂ ಪ್ರಚಾರದಲ್ಲಿದ್ದ ತೊಟ್ಟಿಲು ಜೀಕ (ಕಹಾಜ. ೮೩). **ತೊಟ್ಟಿಲನಿಕ್ಕು** = ಮಗುವನ್ನು ಮೊದಲ ಬಾರಿ ತೊಟ್ಟಿಲಿಗೆ ಹಾಕುವ ಶಾಸ್ತ್ರ ಮಾಡಂ ; ತೊಟ್ಟಿಲಿಡಂ : ಕುಮಾರನಿಗೆ ತೊಟ್ಟಿಲನಿಕ್ಕುವ ಉತ್ಸವವಂ ಬೆಳೆಯಿಸಬೇಕು (ಸೌಗಂಧಿ. ೪೨-೮). **ತೊಟ್ಟಿಲ ಮಗ** = ತೊಟ್ಟಿಲ ಕೂಸು : ತೊಟ್ಟಿಲ ಮಗಂಗೆ ಪಟ್ಟಂಗಟ್ಟಿ . . . ಜಿನದೀಕ್ಷೆಗೊಂಡಂ (ಶಂಕಾಮೂ. ೨-೩೭). **ತೊಟ್ಟಿಲ ಹಬ್ಬ** = ತೊಟ್ಟಿಲ ಕಾರ್ಯ : ಕುಸುಮಾಸ್ತ್ರನಂಗನೆಯುು ಪಡೆದ ಶಿಶುವಂ ನೋಡಿ . . . ಸಸಿನೆ ತೊಟ್ಟಿಲ ಹಬ್ಬ ರಚಿಸುತ್ತ ನಾಮಕರಣಂಗೈಯೆ (ನಪಮೋ. ೦೫ ಸೂಚನೆ). **ತೊಟ್ಟಿಲಿಗೆ ಹಾಕು** = ತೊಟ್ಟಿಲಿಕ್ಕು : ಎಂತಿದ್ದರೂ ಅಕ್ಕಯ್ಯನ ಬಾಲೆ ತೊಟ್ಟಿಲಿಗೆ ಹಾಕೋ ಮನೆಗೆ ನಾನು ಬಂದೇ ಬರ್ತೀನಲ್ಲಾ? (ಹುಲಿಮು. ೨೨೭). **ತೊಟ್ಟಿಲು ಗಾಡಿ** = ಕಮಾನಿಲ್ಲದ ಎತ್ತಿನ ಗಾಡಿ. **ತೊಟ್ಟಿಲು ಮುಂದಾಗಿ ಬರು** = ಬಾಣಂತನವನ್ನು ಪೂರೈಸಿಕೊಂಡು ಗಂಡನ ಮನೆಗೆ ಮಗುವಿನೊಡನೆ ಬರಂ.

[ ದೇ.॥ ತಮಿ. ಮಲ. ತುಳು. ತೊಟ್ಟಿಲ್; ತೆಲು. ತೊಟ್ಟಿಲ, ತೊಟ್ಲ, ತೊಟ್ಲಿಯ, ತೊಟ್ಲಿ ]

**ತೊಟ್ಟಿಲ್**₂, ತೊಟ್ಟಲಿ, ತೊಟ್ಟಲ್ಲ, ತೊಟ್ಟಿಲ, ತೊಟ್ಟಿಲಂ₂, ತೊಟ್ಟಿಲಿ (ನಾ). (ಮಂಳಲ್ಗಳಂಳ್ಗ) ಒಂದಂ ಬಗೆಯಂ ಸಸ್ಯ : ತಗರಂ ಕೊಳ್ಳುಳಿ ಸುಗಿ ಕಗ್ಗೊಜಲೆ ತೊಟ್ಟಿಲ್ ಸೂರಣಂ . . . ಪುತ್ತಿನ ಮಣ್ಣುಮಂ ಕದಡಿ ಕಾಸಿಟ್ಟೆಯ್ದೆ ಪೊಯ್ಯುವ ಬಾವುಗಳಂ ತೀರ್ಚುಗುಂ (ಲೋಕೋಪ. ೯-೨೪೦). **ತೊಟ್ಟಲಿ:** ಕಾಯಿಗಳು: ಅಗಸೆ, ಹಲಸು, ತೊಂಡೆ, ತೊಟ್ಟಲಿ (ನಮ್ಮಮು. ೨೩೭). **ತೊಟ್ಟಲ್ಲ** : ರಪ್ಪೆ, ತೊಟ್ಟಲ್ಲ (ವೃಕಿಗ. ೦೬-೩೦೫).

**ತೊಟ್ಟಿಲ**: ತೊಟ್ಟಿಲ (ವಾಘಾಂಟಿ).–ಮುಳ್ಳುಗಳುಳ್ಳ ಬಹು ಸಾಧಾರಣವಾದ ಬಳ್ಳಿಯು (ಕಥಾಗಿ. ೯೦). **ತೊಟ್ಟಿಲ್ಲು**₂: ಕಂಪುನೊಳ, ತೊಟ್ಟಿಲು, ಪ್ರಿಯಂಗು (ಮೃಡಿಗಿ. ೪-೫೭). **ತೊಟ್ಟಿಲೆ**: ಹೊಟ್ಟೆನೊಳ, ಕೊಟ್ಟಿಲೆ (ಮೃಡಿಗಿ. ೬-೯೯). [ ದೇ.॥ ತೆಲು. ತೊಟ್ಲ ]

**ತೊಟ್ಟಿಲ** 'ತೊಟ್ಟಿಲ್₂' ನೋ.

**ತೊಟ್ಟಿಲಿಕ್ಕು** (ಕ್ರಿ). ವಂಗಂವನ್ನು ಮೊದಲ ಬಾರಿ ತೊಟ್ಟಿಲಿಗೆ ಹಾಕುವ ಶಾಸ್ತ್ರವನ್ನು ಮಾಡಂ: ತೊಟ್ಟಲಿಕ್ಕುವೆವೆಂದು ಹನ್ನೆರಡಿರುಳಿಂಗೆ ನಟ್ಟನೆ ಕೈಕೊಂಡರೊಲಿದು (ಜೋಹತ. ೦೭-೪೦).

[ ತೊಟ್ಟಿಲು₁ (< ತೊಟ್ಟಿಲ್₁) + ಇಕ್ಕು ]

**ತೊಟ್ಟಿಲಿಗ** (ನಾ). ತೊಟ್ಟಿಲ ವಂಗಂ; ಎಳಗೂಸು: ಬಾಳಕಾಲದೊಳ್ ತೊಟ್ಟಲಿಗಂ ಗಜಪ್ರಿಯನಪ್ಪುದಂ ಸಲೆ ತೋಱಿದಂ (ಹಂಪಥಾ. ೧-೪೩).

[ ತೊಟ್ಟಿಲ್₁ + – ಇಗ ]

**ತೊಟ್ಟಿಲಿಡು** (ಕ್ರಿ). = ತೊಟ್ಟಿಲಿಕ್ಕು: ತೊಟ್ಟಿಲಿಡುವ ದಿವಸ ಎಲ್ಲಿದ್ದರೂ ಬಂದೇವು (ಸವತ. ೨೬). [ ತೊಟ್ಟಿಲು₁ (< ತೊಟ್ಟಿಲ್₁) + ಇಡು₁ ]

**ತೊಟ್ಟಿಲು**₁ 'ತೊಟ್ಟಿಲ್₁' ನೋ.

**ತೊಟ್ಟಿಲು**₂ 'ತೊಟ್ಟಿಲ್₂' ನೋ.

**ತೊಟ್ಟಿಲುಹಬ್ಬ** (ನಾ). ವಂಗುವನ್ನು ಮೊದಲ ಸಲ ತೊಟ್ಟಿಲಿಗೆ ಹಾಕುವ ಉತ್ಸವ,–ಸಮಾರಂಭ; ತೊಟ್ಟಿಲ ಕಾರ್ಯ: ಗೌಡರ ಮೊಮ್ಮಗನ ತೊಟ್ಟಿಲುಹಬ್ಬ ನಿನ್ನೆ (ಪ್ರಜಸ. ೦೦).

[ ತೊಟ್ಟಿಲು₁ (< ತೊಟ್ಟಿಲ್₁) + ಹಬ್ಬ (< ಪರ್ವ) ]

**ತೊಟ್ಟಿಲೆ** 'ತೊಟ್ಟಿಲ್₂' ನೋ.

**ತೊಟ್ಟಿಲ್ದುಂಬಿಸು** (ಕ್ರಿ). = ತೊಟ್ಟಿಲಿಕ್ಕು: ಧಾರಿಣಿ ಪೊಗಳ್ವಂತೆ ವೊಲುತ್ಸಾಹದಿ ತೊಟ್ಟಿಲ್ದುಂದಿಸಿದಂ (ಜಯುಕಾ. ೨-೬೦).

[ ತೊಟ್ಟಿಲ್₁ + ತುಂಬಿಸು ]

**ತೊಟ್ಟಿಸು** (ಕ್ರಿ). ಹನಿಸು; ಚಿವಂಕಿಸುಂ: ಒಕ್ಕಲಿಗರ ಮನೆಯ ಸುಣ್ಣದ ಮೇರೆ, ಮಜ್ಜಿಗೆಯನ್ನು ತೊಟ್ಟಿಸಿದರೆ . . . ಅದರ ದೋಷನಿವಾರಣೆ ಯಾಯಿತೆಂದು ಹೇಳಿ ಉಪಯೋಗಿಸುತ್ತಿದ್ದರಲ್ಲಾ ? (ಬೃಸರ್ವ. ೧೨೨).

[ ತೊಟ್ಟು₂ + – ಇಸು₃ ]

**ತೊಟ್ಟು**₁ 'ತೊಡು₁' ಪರಾ.

**ತೊಟ್ಟು**₂ (ಕ್ರಿ). ತೊಟ್ಟಿಡಂ; ಹನಿಹನಿಯಾಗಿ ಬೀಳಂ: ಮೋಟಾರ್ ವಾಹನಗಳಿಂದ ತೊಟ್ಟಿದ ಎಣ್ಣೆಯು ತೆಳುವಾಗಿ ಹರಡಿ ಎಣ್ಣೆಯ ಪೊರೆಯು ಉಂಟಾಗಿರುತ್ತದೆ (ಭೌತವಿ. ೨೦೬); ಅವಳ ಕಣ್ಣಿನಿಂದ ಒಂದೆರಡು ಬೊಟ್ಟು ನೀರು ತೊಟ್ಟಿತು (ದೇವೀಕಾ. ೧೬೬).

[ ದೇ.॥ ತಮಿ. ಚೊಟ್ಟು; ತೆಲು. ತೊಟ್ಟು ]

**ತೊಟ್ಟು**₃ (ನಾ). ೧. ಹನಿ; ಬಿಂದು: "ವೃಷಂತಿ, ಬಿಂದುಃ, ಪೃಷತಃ, ವಿಪ್ರುಷಃ, ೪ ಜಲಬಿಂದುಗಳ ಹೆಸರುಗಳು ಅಂದರೆ ನೀರಿನ ತುಂತುರುಗಳು; ಉದಕ ತೊಟ್ಟುಗಳು" (ಸಿದ್ಧಾಂತಿ. ೬೯); ತೊಟ್ಟು ಕೂಡ ಬಿಡದಂತೆ ಸವರಿ ಹಿಗ್ಗನ್ನು ಹುಡುಕಿ ಕುಡಿವೆ (ಅರಳು. ೨೦೯-೦೩). 'ತೊಟ್ಟಿಡು' ಪರಾ. ೨. ಕೊಂಚ; ಸ್ವಲ್ಪ: ನೀವು ಇನ್ನೂ ಚಿಕ್ಕವರು . . . ಇಲ್ಲವಾದರೆ ಒಂದುತೊಟ್ಟು ಬೈದು ಮುಂದೆ ಸಾಗುತ್ತಿದ್ದೆ (ಕಾಬಲ. ೬೯).

[ < ತೊಟ್ಟು₂./ತಮಿ. ಚೊಟ್ಟು ]

**ತೊಟ್ಟು**₄ (ನಾ). ೧. ಹಣ್ಣು, ಹೂವು, ಎಲೆ ಮೊದಲಾದುವುಗಳ ತುಂಬು,–ಕಾವು; ದೇಟು: "ವೃಂತಂ, ಪ್ರಸವಬಂಧನಂ ಈ ೨ ಪುಷ್ಪ ಪತ್ರಂಗಳ ತೊಟ್ಟು" (ನಾಚಿರಾ. ೦೦೬); "ತೊಟ್ಟು ತುಂಬೆನೆ ವೃಂತನಾಮವೆಂದೇ ತಿಳಿವುದು" (ಕಬ್ಬಸಾಂ. ೨೩); ತೊಟ್ಟ ಬಿಟ್ಟ ಹಣ್ಣು ಮತ್ತೆ ಹತ್ತುವುದೇ (ಸರ್ವವ. ೨೬-೦೨೦); ತೊಟ್ಟು ಪಿಂಡಿಗೆಯಾಗೆ ಫಲವು ಲಿಂಗಮದಾಗೆ (ಬಸರ. ೯-೫೭); ಫಲದಲ್ಲಿ ತೊಟ್ಟುವೊಣಗದ ವೇಳೆಯಲ್ಲಿ ದಿರಿಟ್ಟು ಹಣ್ಣನು [ಹಾಂ. ಫಲವನು ತೊಟ್ಟ ಸರಿಸಕೆ ಕಾಲದಲ್ಲಿ ತಂದಿರಿ] ನಿಮ್ಮನುಕೂಲಧರ್ಮಂಗಳನು ಬೇಗದಿ ಹೇಳಿ (ಕುಮ್ಮಾಭ. ೩-೨೪); ಕೀಟಕವು ಕರುಕಿ ಕಡಿಯದ ತೊಟ್ಟುಗಳು ಪತ್ರಿದ ಸುಪುಷ್ಪವ . . . ಶಿವಲಿಂಗಕರ್ಪಿಸಿದಂ (ಶಂಕರಾ. ೫-೫೦); ತೊಟ್ಟ ಕಳಚಿದ ತೆರದಿ ಜೀವವ ಬಿಟ್ಟನೈ (ದೇವೀಪು. ೪-೨೦). ೨. ಮೊಲೆಯ ತಂದಿ; ಚೂಚುಕ: "ತೊಟ್ಟು ಚೂಚುಕಮೆನಿಕ್ಕುಂ" (ಮಂಗರಾ. ೯೫-೬): ಬಟ್ಟದುವಪ್ಪ ಮೊಲೆಗಳ ತೊಟ್ಟು ಕರಂಗುವುದುವೊಡನೆ ಸರ್ವಸ್ವಮುಮಂ ಕೊಟ್ಟು ಕರಂಗಿದರಹಿತರ್ ಕೆಟ್ಟುವು ವೇಳೆಯೊಡನೆ ವೈರಿವಂಶಾವಳಿಗಳ್ (ಪಂಪಾಭಾ. ೩-೯೬); ಬಟ್ಟಮೊಲೆಗಳ ತೊಟ್ಟೊಳು ಕಪ್ಪು ರಂಜಿಸಿತು (ಅಂಜನ. ೯-೬); ತೊಟ್ಟು ಹಿಡಿದು ಎನ್ನ ತೊಟ್ಟ ಕುಪ್ಪಸಗಂಟು ಬಿಟ್ಟು ಬೇಗ ಮುದ್ದಿಟ್ಟು . . . ನೆಟ್ಟನೆ ನಡೆದ ಶ್ರೀಕೃಷ್ಣನೆಂಬವನು (ಪುರಂದ. ೧-೭೫-೧).

**ತೊಟ್ಟಿಡೆ** = ದೇಟಿನ ಭಾಗ: ನೆಟ್ಟನೆ ಬಳೆದು ನೆಗಟ್ಟು ಕೊಟ್ಟಿಡೆ ಯೋರೆವಟ್ಟಲದಾವರೆಯಂತೆ ಬಟ್ಟವೊಗವನೋರೆಗೊಳಿಸಿಯುವನ ಮೊಗವಿಟ್ಟ ದಿಟ್ಟಿಯೊಳು ನಟ್ಟವುದು (ಚಳವಿ. ೬-೦೫೭ ಸಾಂಗತ್ಯ).

[ ದೇ.॥ ಮಲ. ತೊತ್ತು; ತುಳು. ತೊಟ್ಟು ]

**ತೊಟ್ಟು**₅ (ನಾ). (ಕರಾ) ತೆಕ್ಕೆ; ಕಂತೆ: ಈ ಹುಲ್ಲು ಎರಡು ತೊಟ್ಟು ಆಗುತ್ತದೆ (ರೂಢಿ).

[ ದೇ.॥ ತುಳು. ತೊಟ್ಟು = ತೆಕ್ಕೆಯಲ್ಲಿ ಹಿಡಿ, ತಬ್ಬು ]

**ತೊಟ್ಟು**₆ (ಅ). ಮೊದಲಾಗಿ; ಹಿಡಿದಂ; ಆರಂಭವಾಗಿ: ಪುಟ್ಟಿದಂದಿಂ ತೊಟ್ಟಂತವ್ವಣಿಸಂ ಕನಸಿನೊಳಪ್ಪೊಡಂ ಕಂಡಱಿಯದವುಗಂ ಚೋದ್ಯಂ ಬಟ್ಟು . . . ಆಕಂಠಪ್ರಮಾಣಂ ಬರೆಗಂ ತಣಿಯುಂಡು (ವಡ್ಡಾರಾ. ೭೮-೨೦); ಕೊರಲೊಳ್ ಕಟ್ಟಿದ ದೇವಿಯಿಂತಿರುರದೊಳ್ ಶ್ರೀ ತೊಟ್ಟಲೊಳ್ ತೊಟ್ಟನಂತರವೆನ್ನೊಳ್ ನೆಲಸಿತ್ತು (ಪಂಪಭಾ. ೦೦-೯): ಬಾಲಕಾಲದಿಂ ತೊಟ್ಟು . . . ಖಲಜನಸಂಗತನುವಾಗಿಯುಂ ನಡೆಯುತ್ತುವಿರೆ (ಹಂಪಶಂ. ೨೭-೨೦); ಆ ಬಾಲಕರ್ ಬಾಲ್ಯದಿಂ ತೊಟ್ಟು ಗೋಳಾಂಗೂಳರಂತೆ ಸಹಜಚಾಪಲ್ಯರುಂ . . . ಎನಿಸಿ (ಸುಕುಮಾ. ೨-೫ ಐ); ಅಂಗುಷ್ಠ ತೊಟ್ಟು ಪಾಣಾಗ್ರ ಪರಿಯಂತರದಲ್ಲಿ ಸ್ನಾನವ ಮುಟ್ಟ ನೋಡಿ (ಸರ್ವವ. ೨೨-೦೦೦); ಕೆಱೆಯಂ ಕಟ್ಟಿಸು ಭಾವಿಯಂ ಸವಸು . . . ಶಿಷ್ಟರಂ ಪೊರೆಯನುತ್ತಿಂತೆಲ್ಲವಂ ಪಿಂದೆ ತಾಂ ಯಿಟಿದಲ್ಲಾಲೆಜವಂದು ತೊಟ್ಟು ಕಿವಿಯೊಳ್ (ಶಾಇಇ. IV, ೨೬೬-೪೫; ಸು. 1411); ನೀವು ಆ ಊರಿಗೆ ಹೋದಾಗಿನ ತೊಟ್ಟು ಎಷ್ಟು ಸುಧಾರಿಸೀರಿ (ಸುಳವು. ೪೨).

[ < ತೊಡು₁./ತಮಿ. ತೊಟ್ಟು ]

**ತೊಟ್ಟುಕಳಚು** (ಕ್ರಿ). = ತೊಟ್ಟುಬಿಡು: ಮರದಲ್ಲಿದ್ದ ಹಣ್ಣು ತೊಟ್ಟು ಕಳಚಿ ಉದುರಿದೆ (ರೂಢಿ). [ ತೊಟ್ಟು₄ + ಕಳಚು (< ಕಟಲ್ಚು₁) ]

**ತೊಟ್ಟುಕಟಲ್** (ಕ್ರಿ). = ತೊಟ್ಟುಬಿಡು: ನಿಂದು ಕೀಲಿಸಿದೊಡುರ್ವರೆಯೊರ್ಗುಡಿಸಿತ್ತು ಸಾಗರಂ ವೇಳೆಯನುರ್ಕಿ ಸೂಸಿದುದು ತೊಟ್ಟುಕಟಲ್ದುವು ತಾರಕಾಳಿಗಳ್ (ಅನಂಪು. ೦೦-೫೮). [ ತೊಟ್ಟು₄ + ಕಟಲ್₁ ]

**ತೊಟ್ಟುಬಿಡು** (ಕ್ರಿ). ತೊಟ್ಟಿನಿಂದ ಕಳಚಿಕೊಳ್ಳು,–ಬೇರೆಯಾಗಂ: ತೊಟ್ಟು ಬಿಡದನ್ನಕ್ಕರ ಮುತ್ತು ಬುಡದಾಸೆ ಬೇಕು (ಶೂನ್ಯಸಂ. ೨೨೪-೮); ತೊಟ್ಟು ಬಿಟ್ಟ ಹಣ್ಣಿನಂತೆ ದ್ರುವ ತಟ್ಟಾಱದ ಫಲದಂತೆ (ಮೋಳಿಗೆಮಾ. ೧೨-೪೨). [ ತೊಟ್ಟು₄ + ಬಿಡು₁ ]

**ತೊಟ್ಟುವಾಯ್** 'ತೊಡು₁' ಪರಾ.

**ತೊಟ್ಟುಳಿಕೆ** 'ತೊಟ್ಟುಟಿಕೆ' ನೋ.

**ತೊಟ್ಟುಟಿಕೆ, ತೊಟ್ಟುಳಿಕೆ** (ನಾ). ರುಂಡ ಮುಂಡಗಳು ಒಟ್ಟು ಸೇರಿರುವ ಭಾಗ; ಕಂಠ; ಕೊರಳುಂ: ತುಡುಂಕಲವ್ವಳಿಸುವ ಚಂಚು

ಘಾತಿಯಿಱಿದಾರ್ದೊಡೆ ಮಾರಿ ಮಿಡುಂಕುತಿರ್ಪ ತೊಟ್ಟುಬೞಿಕೆ (ದಕಳು. ೧೧-೫೦). **ತೊಟ್ಟುಳಿಕೆ:** ಇಟ್ಟಣಿಸುವೀ ರಣಮದಾಂಧನ ತೊಟ್ಟುಳಿಕೆಯನು ಕೀಳ್ವ ರಾಯಘರಟ್ಟಸಿಲ್ಲಾ (ಕುಮಾ.ಳ. ೨೦-೨) : ರಾಮನನೊಟ್ಟವಿಸಿ ಮುಂಬರಿದು ಮುನಿಪನ ತೊಟ್ಟು [ಪಾಠಾಂ. ತುಟ್ಟ, ತೊಟ್ಟ]ಳಿಕೆಯಲಿ ಚಾಟಿದಳು ಚಾಪಳಚಪೇಟಕವ (ತೊರರಾ. ೮-೧೦-೦೨) : ಆರುಭಟೆ ಗಂಬುಗಳಳಿದವು ಮೇರೆಯನು ಸುರನಿಕರದಸುಗಳು ಸೇರಿದವು ತೊಟ್ಟುಳಿಕೆ ಗಿಟ್ಟಣಿಸಿತ್ತು ಸಂಗ್ರಾಮ (ನಿಧಾಗ. ೬-೬-೪೪). [ <ತೊಟ್ಟು₄ + ? ]

**ತೊಟ್ಟೂರಮ್ಮಳಿ** (ನಾ). ಒಂದುಂ ಊರಿನ ಹೆಸರು : ಶ್ರೀ ಶಿವಮಾರ ಭಟಾರರ್ ಜಗವೆಲ್ಲಮನ್ ಆಳುತ್ತಿರೆ ತೊಟ್ಟೂರಮ್ಮಳಿಯುಳ್ ಇಱಿದು ಪಿಡಿವಲ್ಲಿ (ಮೈಆರ್. ೦೯೨೪, ೪೬-೧ : ?). [ ? ]

**ತೊಟ್ಟೆ** (ನಾ). ೧. (ಕರಾ) ತೆಂಗಿನ ಗರಿಗಳಿಂದ ಮಾಡಿದ ಕುಕ್ಕೆ.- ಬುಟ್ಟಿ : ತೊಟ್ಟೆ ಕಟ್ಟಿಕೊಂಡು ಮೊಟ್ಟೆ ಹೊತ್ತ (ಗಾದೆ). ೨. ಪೊಟ್ಟಣ : ಸಾವುಕಾರ ಕಾಗದದ ತೊಟ್ಟೆ ಮಾಡಿ ಒಂದೊಂದಾಗಿ ಎಣಿಸಿ ಲೆಕ್ಕ ಗುಣಿಸಿದ (ಕಾಳಗಿ. ೫೦). 'ಚೊಟ್ಟೆ₃' ಪರಾ. [ ←ತುಳು. ತೊಟ್ಟೆ ]

**ತೊಟ್ಯಾನದಿ** (ನಾ). ಒಂದುಂ ನದಿಯು ಹೆಸರು : ತೂಟ್ಯಾನದೀ ಪಶ್ಚಿಮತೋ ಪೇರೂರಾತ್ಪೂರ್ವ್ವಸ್ಥಿತಮ್ (ಮೈಆರ್. ೦೯೫೦, ೮೮-೮೨ ; ಸು. 475). [ ತೊಟ್ಯಾ₀ + ನದಿ ]

**ತೊಡ** (ನಾ). ೧. ಆಭರಣ; ಒಡವೆ : "ಪಸದನಂ, ಪಚ್ಚಂ, ತೊಡಂ – ಈ ೩ ಆಭರಣಂ" (ಕಶಸಾ. ೬೩-೪೦೯) : "ಪಚ್ಚಂ ತೊಡಂ ಪಸದನಮೆನಲ್ ತೊಡಿಗೆಯೆಂದಿಳೆಗೆ ನಾಮಮಕ್ಕುಂ" (ಕಬ್ಬಿಕೈ. ೨೫) ; ವಿನುತ ಮುತ್ತಿನ ತೊಡಗಳಂ ತೊಟ್ಟು (ಚಬಪು. ೦೦-೩೫) : ಮೋಕ್ಷವೇ ಮಣಿಯಾದ ವರ ರುದ್ರಾಕ್ಷದೊಡಗಳ ತೊಡಿಸಿ (ಶಂಕದಾ. ೪-೮).೨.ಉಡಂಪು ; ವಸ್ತ್ರ : (೬). [ ತೊಡು₁ + – ಅ₆ ]

**ತೊಡಾಕಿಕ್ಕು** (ಕ್ರಿ). ಕಷ್ಟಕ್ಕೆ ಗುರಿಮಾಡು ; ತೊಂದರೆಗೀಡುಮಾಡು : ನೀಮಾರ್ಗಲೆ ನಿಮ್ಮನಾವಱಿಯೆವೆಂದೆಮ್ಮಂ ತೊಡಂಕಿಕ್ಕುವಂದಿನ . . . ಸೊರ್ಕಕ್ಕಟ ಮುಕ್ಕುವೋಗಿ (ಸುಕುಮಾ. ೪-೨೬). [ ತೊಡಂಕು₃ + ಇಕ್ಕು]

**ತೊಡಂಕು₁**, ತಂಡಂಕು₁, ತುಡಂಕು₁, ತೊಡಕು₁, ತೊಡಗು₁ (ಕ್ರಿ). ೧. ಸಿಲುಕಿಕೊಳ್ಳು ; ಸಿಕ್ಕಿಕೊಳ್ಳು : ಅದಟರ ಚೆನ್ನಪೊಂಗರ ಸಬಂಗಳ ತೊಟ್ಟುಬೞಿಯೊಳ್ ತೊಡಂಕಿ ನಿಲ್ಲದೆ ಪೊ[ಱಮಟ್ಟ] ತಮ್ಮ ಮನದೊಳ್ ಮಿಗೆ ಬೆಚ್ಚಿಸಿದಂತೆ ತೋಱುವ . . . ಕರ್ಬಸುಗಳ್ ಪರಿಗೊಂಡುವಾಜಿಯೊಳ್ (ಪಂಪಭಾ. ೮-೦೦೪) ; ತೊಟ್ಟನೆ ಸಾವುದೊಳ್ಳಿತು ತೊಡಂಕದೆ ಕಾಮನ ಡಾಮರಂಗಳೊಳ್ (ಚಂದ್ರಪು. ೮-೩೬) : ನೇಣ್ಬಲೆಯ ತೊಡರೊಳ್ ತೊಡಂಕಿ ನಡುಗುವ ಕುರಂಗಿಯೊಳ್ದೊರೆಯಪ್ಪಳ್ (ವರ್ಧಪು. ೪-೫೮ ವ) : ದಿಟ್ಟಿ ತೊಡಂಕೆ ರೂಪಿನ ಬೆಡಂಗಿನೊಳ್ (ಲಂಹರಿ. ೮-೫೩) : ಆರುಮಸತ್ಯದೊಳ್ . . . ಪರಸ್ತ್ರೀರತಿಯೊಳ್ ತೊಡಂಕದಿರಲೆಂಬುದು ನಿನ್ನ ಮತಂ (ಪುಷ್ಪಪು. ೬-೦೨) ; ಮೃದುಮೃಣಾಳನಾಳ ತಂತುಜಾಲಕದೋಳೊಯ್ಯನೊಯ್ಯನೆರಯ್ಯಮನೆ ನಡೆವೆಡೆಯೊಳಡಿ ತೊಡಂಕಿ ತಡೆಗೆಡೆವ ತರುಣ ಮರಾಳಂಗಳಂ ಕಂಡು (ರಾಜಶೇ. ೬-೨೪ ವ). ೨. ಸಿಕ್ಕಾಗು ; ಗೋಜಾಗು ; ಗಂಟುಗಂಟಾಗು ; ಹೆಣೆದುಕೊಳ್ಳು ; ತಿರಂಚಿಕೊಳ್ಳು : ತೊಡಂಕಿ ಪೀಱಿದ ಕುರುಳ್ಗಳೆ ಚಿತ್ರದೊಳಾದ ಬೇಸಱಂ ನುಡಿವವೊಲಾಗೆ (ಪಂಪಭಾ. ೧೩-೯೯) ; ಪೊರೆದು ಸರೋಜರೇಣುಗಳನೊಂದಱೊಳೊಂದು ತೊಡಂಕಿ ಮಾಃಕಣೋತ್ಕರದೊಡಗೂಡಿ ಕಣ್ಗೆ ಕವಿತರ್ಪ ಜಟಾಳಿ (ಕಾದಂಬ. ೩೦೬); ಬಿಡದೆ ತೊಡಂಕಿ ತೋರ್ಪ ಜಡೆ (ಉಮೂಶ. ೦೪). ೩. ಅನುಮಾನದಿಂದ ಹಿಂದುಮುಂದುಂ ನೋಡು ; ತಡವರಿಸು : ಇವನಱಿವರೆ ಕನ್ನಡಗಬ್ಬದೊಳ್ ತೊಡಂಕದೆ ಸಲ್ವರ್ (ಕಮದ. ೪೮). ೪. ಹೋರಾಡು ; ಸೆಣಸು : ಜಯದ್ರಥನನಿಕ್ಕುಟಿದಾರೊಳವಿಂ ತೊಡಂಕವೇಡೆನುತುಂ (ಪಂಪಭಾ. ೧೦-೦೪೫) : ಎಮ್ಮದೀ ಮಣಿಯೆನುತ್ತಿರದೆಯ್ದಿ ತೊಡಂಕಿ . . . ಕಾಳೆಗಮಂ ತೆಗೆದರ್ (ರಾಜಶೇ. ೫-೦೨೪). ೫. ಅಡ್ಡಿಮಾಡು ; ಅಡಚಣೆಯೊಡ್ಡು ; ನಿರೋಧಿಸು : "ತೊಡಕು (ತೊಡಂಕು) – ವಿಪರ್ಯಾಸೇ (ಅಡ್ಡಿಮಾಡು)" (ಕಪುಧಾ). ೬. ತೊಡರು ; ತೊಡರಿಕೊಳ್ಳು : ಕರುಳ ಪಿಣಿಲು ಕಾಲಂ ತೊಡಂಕೆಯುಂ ಮುಂದೆಗರುಳ್ಗಳಿಂದೆ ದಾಡೆ × × ಯುಂ . . . ಕೊಂಗೆಯ ಸಾಹಣಿ ಸುರಲೋಕ ಪ್ರಾಪ್ತನಾದ (ಎಕ. VIII, ಸೊರಬ. ೦೩೯-೦೪ : 1173). ೭. ಕೂಡು ; ಸೇರು : ತೊಡೆ ತೊಡಂಕಿದ ನುಣ್ಪೊಡೆಯಿಂ ಮನಂ ನಿರಂತರ ಸುರತ ಪ್ರಪಂಚಸುಖದಿಂ ಪೆಱಪಿಂಗದೆ (ಚಂದ್ರಪು. ೪-೬೦). **ತುಡುಂಕು₁** : ೮. ಮುಟ್ಟು ; ತಾಗು ; ಸೋಕು : ಇಂತು ಭೂಮಿ ಆಕಾಶಮಂಡಲಮಂ ತುಡುಂಕುತುಂ (ಶೂನ್ಯಸಂ. ೩೯-೨೦) ; ಇರ್ದುದೊಂದು ಕುಧರಂ ಗಗನಸ್ಥಳಮಂ ತುಡುಂಕುತುಂ (ದಕಳು. ೦೧-೬೨) : ನಿರುಪಮಮಪ್ಪ ರತ್ನ ಶಿಖರಂಗಳಿನಾಗಸಮಂ ತುಡುಂಕುತಿರ್ದ . . . ಪೊನ್ನಕೋಂಟೆಯಂ ತರಣಿಹಯಂಗಳೀಕ್ಷಿಸಿ (ಬಾಧಪು. ೧-೧೧೯). ೯. ಬೇಗನೆ ಹಿಡಿ ; ಚುರುಕಾಗಿ ಹಿಡಿ ; ಥಟ್ಟನೆ ಹಿಡಿ : "ತುಡುಕು, ತುಡುಂಕು – ಸತ್ವರ ಗ್ರಹಣೇ (ಥಟ್ಟನೆ ಹಿಡಿ)" (ಕಪುಧಾ) ; ತಾಳವಟ್ಟಮಂ ಸೆಳೆದು ತುಡುಂಕಿ (ಚಂದ್ರಪು. ೫-೬೫) ; ಪರಿವ ಪಾವುಗಳಂ ತುಡುಂಕಿ (ಸುಕುಮಾ. ೦೪-೨೯ ವ) : ನಖರ ದ್ಯುತಿಯಂ ಮಲ್ಲಿಕಾಕುಟ್ಮಲಮೆಂದಾ ನಲ್ಲಳ್ಬಯಲಂ ತುಡುಂಕಿ ಕೌತುಕ ಮಾಂತಳ್ (ಉದ್ಭಟ. ೯-೬೨) ; ಆ ನೃಪಂ . . . ದಿವ್ಯಗದಾಯುಧಮಂ ತುಡುಂಕಿದಂ (ದಕಳು. ೨-೨೫) : ಅಳಿಕುಳಮಂ ಹರಿನೀಲಮೆಂದು ತಿಱಿಯಲ್ ಸುರತರುಣಿ ತುಡುಂಕಿ ಸಖಿಯನೇಂ ನಗಿಸಿದಳೋ (ರಾಜಶೇ. ೩-೩೮) : ಕಂಡರಿಸಿದ ಶುಕಕೋಲ್ಗೆಸಿ ತುಡುಂಕೆ ನೋಡಿ ಯಾರುಂ ನಗುವರ್ (ಮೃಸೂಮ. ೫-೨೧). ೧೦. (ಕಾಮಾತುರದಿಂದ) ಆಕ್ರಮಣ ಮಾಡು : ಮದುವೆಯಾದ ಮೂಱುದಿವಸಮೊದವಿ ಮುಟ್ಟಲಾಗದ ವಳನದಱ ಮೇಲೆ ಬಲ್ಮೆಯಿಂ ತುಡುಂಕಲಾಗದು (ಜನವ. ೦೦-೫೦) ; ನೇಹಂದಳೆದು ಮೇಲ್ವರಿದು ಬರೆ ತುಡುಂಕುವ ಬರ್ದಿನಿನಿಯನ ವಿಲಾಸದಂತೆ (ಭಾಪಚಂ. ೬-೧೬). ೧೧. ಹರಡು ; ವಿಸ್ತರಿಸು : ಸೋಗೆಯಂ ನೆಗಪಿ ತುಡುಂಕಿ ಮೆಟ್ಟುವ ಸವಿಲ್ . . . ನಗುವ ಶುಕಾಳಿ (ಸೂಕ್ತಿಸು. ೦೦-೬೪). **ತುಡುಕು₁** : ೪. ಘನಸಂಗರದೊಳಗೆ ನನ್ನೊಡನೆ ತುಡುಕಿದಡಱಿಯಬಹುದು (ಕುಮಾದ್ರೋ. ೪-೪೩) ; ತುಡುಕಲಮ್ಮುವರಿಲ್ಲ ಬಲದಲಿ ಮಿಡುಕಲಮ್ಮುವರಿಲ್ಲ (ಕುಮಾದ್ರೋ. ೬-೪೮) ; ಎರಡೂ ಮಹಾಸೈನ್ಯಗಳು ಒಂದನ್ನೊಂದು ತುಡುಕಿ, ಕಡಂಗಿ ಕಾದಿದವು (ಕಕಚ್ಚ. ೫೮). ೮. ಪೊನ್ನ ಕೋಂಟೆ ಮುಗಿಲಂ ತುಡುಕುತ್ತಿರೆ (ಪಂರಾಮಾ. ೩-೩೫) ; ವಿಷದ ಕೊಡನ ತುಡುಕಲೆ ಬಾರದು (ಚನ್ನಪ. ೪. ೩೩-೬೨) ; ತೆರೆಗೈಯಿಂ ತುಡುಕುತ್ತುಮೊಳ್ಪೊಡೆಯನಾದಂ . . . ಕಾಮುಕನವೊಲ್ ನೀರೇಱುತಿರ್ದತ್ತು . . . ಪದ್ಮಾಕರಂ (ಚಂದ್ರಪು. ೬-೧೨೬) ; ತುಡುಕಿದ ಜಲಂ ಸಿದ್ಧಾಂಬು ನುಡಿದ ನುಡಿಗಳು ಮೂಲಮಂತ್ರವು (ಸಿದ್ಧರಾ. ೨-೨೦) : ಪ್ರಸಾದವ ಬೆಕ್ಕು ತುಡುಕುತಿಪ್ಪ ದಾಯುಮಂ ಪೇಳ್ದಂದು (ವೀಕ್ಷಪು. ೮-೦-೫೨) : ಕಡಗ ಕಂಕಣ ಬಳೆಗೈ ಝಣರೆನೆ ನಾರಿ ಬಿಡದಾಗ ಕಲೆಯ ತಾಣಗಳ ತುಡುಕಿ ತಾಡನಗೈದು (ಕೊಸವಿ. ೧೦-೪೫). ೯. ಕರಿಪೋತಂ . . . ಕೇಸರಿಣಿಯ ಕೆಚ್ಚಲಂ ತುಡುಕುತುಂ ಪರಿದತ್ತು (ಪಂಪಭಾ. ೬-೮೦) : ಘಟಸರ್ಪನ ತುಡುಕಿ (ಬಸವ. ೬೨೫) : ಮಿಱುಗುವ ಬೆಳತಿಗೆಗಣ್ಪೊಣರೊಱಿತೆಯ ಜಲದೊಳಗೆ ಪೊಳೆಯೆ . . . ಎಳವಿಮಾನ್ಗಳ್ಗೆತ್ರೇಂ ಕಿಱುವೇಡಿಶಿ ತುಡುಕಿ ಶಬರನಂ ನಗಿಸಿದಳೊ (ಲೀಲಾವ. ೬-೪೩) : ಒಡನೆ ಧಾಳಿಯನಿಕ್ಕಿ ಶುಕ್ರನ ತುಡುಕಿ ತೇಜವ ಕೊಂಡು (ತೊರರಾ. ೦-೮-೩೪) ; ಸೆಱಗುವಿಡಿಯೆ ಸಾರ್ಸಾರೆಂಬ ಕರವನು ಭರದೆ ತುಡುಕಲೊಡೆಮುರಿವ . . . ತರಳೆಮಣ್ಣು

ಗಳೊಪ್ಪಿದರು (ಶಂಸವಿ. ೬-೧೭೫) ; ಮುತ್ತುಗಳ್ . . . ಪಾರೆ ಪಸಿಗೆತ್ತು ನವಿಲ್ ತುಡುಕೆ (ರಾಜಶೇ. ೫-೪೦) ; ಕೊಡನ ಮಱಿಯ ಪಡೆಯಂ ತುಡುಕುವೆಗ್ಗನಂತೆ (ರಾಮಾಶ್ವ. ೬೪-೨೬) ; ಯುವಕನೆ ತುಡುಕು ಕಠಾರಿಯನು ! (ಪಾಂಡವಿ. ೦೪-೧೪). ೧೦. ಮಹದೇವಿಯನು ಕಂಡರಸನೇಕಾಂತದಲಿ ತುಡುಕಿದೊಡೆ (ಶ್ರೃಖುಲೀ. ೦೦-೨೧) ; ಕಾಮಾತುರದಿ . . . ಬಂದವ ಭರದಿ ತುಡುಕಲು ಪುಷ್ಪವತಿ ತಾನೆಂದಳಿದೆ ಬೆದರಿ (ಅಂಬೀಕಾ. ೮-೬೨) : ದ್ರೌಪದಿಯನ್ನು ಕೀಚಕನು ಬಲಾತ್ಕಾರದಿಂದ ತುಡುಕಿದನು (ಸೀಗಟ್ಟು. ೧೩೬).೧೨. ಎರಗು ; ಮುತ್ತು : ಪುಷ್ಪದೊಳು ಗ ಂ ಧ ವಿ ರ ಲಾ ಆ ಡಿ ತುಡುಕುವುದೆಂದು ನೆಲದೆ ನಿಡುಬೇರಿನೊಳ್ ಪರಿಮಳವೆತ್ತು ರಂಜಿಪ ಮುಡಿವಾಳ (ಚಂಡೀಹತ. ೩-೦೬); ಕಮ್ಮಲರ್ಗಂಧಗಂಧಿಯರು ತಮ್ಮ ನಾಳುವ ಕೃಷ್ಣರಾಯನ ತುಡುಕಿದ ಪೆರ್ಮೆಯನೇನ ಬಣ್ಣಿಪೆನು (ಚಂಡೀಹತ. ೦೪-೬೮). ೧೩. ಮುನ್ನುಗ್ಗು ; ಆಕ್ರಮಿಸು : ತುಡುಕಿದವು ತೇಜಿಗಳು ವಾಘೆಯ ಗಡಣದಲಿ (ಕುಮಾರವ್ಯಾ.ದ್ರೋ. ೬-೩೯). ತುಡುಕುವಾನೆಯನೀಸಿನಲಿ ಖುರವಿಡುವ ಕುದುರೆಯನೊತ್ತಿಹಾಯ್ಸುವ (ಕುಮಾ.ಕ. ೦೫-೨೩) . ೧೪. ಆವರಿಸು ; ತುಂಬು ; ವ್ಯಾಪಿಸು : ತುಡುಕಿದವು ತಂಬಟದ ದನಿ ಜಗದಡಕಿಲನು (ಕುಮಾ.ದ್ರೋ. ೧-೪೭) ; ಓಡಿವ ಕಾಳೆಗಳ ಬಾಜಿಪ ಡಕ್ಕೆಗಳ ದನಿ ತುಡುಕಿತಜಾಂಡಮಂಡಲವ (ವರ್ಧಕ. ೬-೮೪). ೧೫. ತೆಗೆದುಕೊಳ್ಳು ; ಹಿಡಿ ; ಎತ್ತಿಕೊಳ್ಳು : ಪರವಧುವ ನೆರೆಯದೆ ಪರಧನವ ತುಡುಕದೆ (ದೇವಾವ. ೩೩ ೩೦) ; ನಾರಿಯಂ ತುಡುಕಿ ಕರ್ಣದ ಕಡೆಗೆ ಸೆಳೆಯೆ (ಹರಿಕಾ. ೬-೩೬): ತುಡುಕುವಂಕುಶದಿಂದ ಮುನ್ನಿಳೆಯೊಡೆಯೆ ಗಜ ಗಾಧಿಸಿದವು (ಕುಮಾ.ಭೀ. ೨-೨); ತು ಡು ಕಿ ದ ರೆ ಕೈ ಬೇವುದು (ಕುಮಾ.ದ್ರೋ. ೪-೬೦) ; ತುಡುಕಿ ತೊಳುವ ಸೂತ್ರಯಂತ್ರದ ಗಡಣದಲಿ ಗತಿಗೊಂಡು ಬೇಡಿತ ಕೊಡುವ ಮಣಿಪುತ್ರಿಕೆಗಳೆಸೆದವು ವಿವಿಧ ರಚನೆಯಲಿ (ತೊರವೆ. ೦-೦೩-೦೦) ; ರಾಹು ತುಡುಕಿದ ಚಂದ್ರಮಂಡಲವೋ (ಜೈಮಿಭಾ. ೪-೧೩). ೧೬. ಧರಿಸು ; ಹೊಂದು ; ತಳೆ : ಬಿಸಿಲಂ ಕಳೆದು ಬೆಳುದಿಂಗಳಂ ತುಡುಕುವ ಗಗನಲಕ್ಷ್ಮಿಯಂತೆ ಕೆಂಪಿನ ಪ ಸ ದ ನ ಮ ಂ ಕಳೆದು . . . ಬೆ ಳ್ಪ ಸ ದ ನ ಂ ಗೈ ದು (ಅರ್ಧನೇ. ೨-೧೩ ವ)

**ತೊಡಕು1** : ೧. ಕಡುಭವದ ಬಾಧೆಗೆ ತೊಡಕಿ ಮೊಱೆಯಿಡುವ ಭವಿಗಳ ನಾಲಿಸುವವೊಲು (ಬಸವು. ೩-೩೮); ಮಿಡುಕುವುದು ಬಾಯ್ ಚಿತ್ರವವಳಲಿ ತೊಡಕಿಹುದು (ಕುಮಾ.ಅ. ೦೯-೩೬) ; ಮಡದಿ ಮದನನ ಬಲೆಯ ಬಾಯಲಿ ತೊಡಕಿ ಬಿರ್ದುವನಱದರಾಗಳೆ (ಶ್ರೃಖುಲೀ. ೫-೨೩) ;ಒಡನೆನ್ನ ನಿಟ್ಟಿಸಿದರಾ ಮೋಹವಲೆಯೊಳು ತೊಡಕದರಿಲ್ಲ ನಿನ್ನಾಣೆ (ಶಂಸವಿ. ೦೦-೩೪) : ಕಾಮುಕರ . . . ಕಡೆಗಂಗಳ ಸರಳಿಯೊಳು ತೊಡಕಿ ಹವ್ವಯಿಸುವರು (ಕೊಲ್ಲಾಪ. ೨೯). ೨. ತೊಡಕಿದ ಗಳದ ಹಾರದ ಕೆಂಪು ಗದಡಿದಧರದ . . . ಕೋಮಲೆಯರು (ಜೈಮಿಭಾ. ೦೦-೫೦). ೩. ಬೆದಱುಗಂಗಳ ಬಿಟ್ಟ ಮಂಡೆಯ ಹುದಿದ ಹಾಹಾರವದ ತೊಡಕಿದ ಪದಯುಗದ . . . ವರಸುದತಿ ಬಂದಳು ರಾಜಸಭೆಗೆ (ಕುಮಾ.ಸ. ೦೪-೬೧). ೪. ಮುನ್ನ ತೊಡಕಿ ತನಗಾದ ಭಂಗಂಗಳಂ ಹೇಳನೇ ನಿನಗೆ ಕಮಲಜಕಂದನು (ಹರಿಕಾ. ೮-೧೫) ; ತೊಡಕಲಱಿಯದವಂ ತೊಡಕಿದವನಂ ತೊಡಕುವವನು (ಬಸವು. ೫೦-೪೮) : ಅಧಿಕರೊಳಿರದೆ ತೊಡಕುವುದಾಗದೆಂಬುದನಱಿಯಯಾ ನೀನು (ಕುಮಾ.ಉ. ೭ರಿ೩. ೯-೫೩) ; ಕಡಗಿದಡೆ ಕೋದಂಡರುದ್ರನ ತೊಡಕಿ ಬದುಕುವವರಾರು (ಕುಮಾ.ದ್ರೋ. ೦-೫೬) ; ತೊಡಕಿದವರ ಗಂಡನೆಂದೆಂಬೆಡದ ಕಾಲ ತೊಡರೆಸೆದುದು ರಾಮನಿಗೆ (ಕುರಾಸಾಂ. ೦೯-೩೦) : ವಿಚಾರಿಸೆ ನೀನೆನ್ನೊಳೋರಂತೆ ತೊ ಡ ಕಿ ದೆ ಮಹಾರಣಾಂಗಣದೊಳು (ಹಬಸು. ೫೦-೩೪): ಫಣಿಲೋಕವಮಂ ಸುಡುವೆನು ಕಂಜಜ ಕಪರ್ದಿಗಳ್ತೊಡಕಿದೊಡೊರಲ್ಬುವೆಂ (ಜೈಮಿಭಾ. ೨೪-೩).

೫. "ತೊಡಕು (ತೊಡಂಕು) _ವಿಪರ್ಯಾಸೇ (ಅಡ್ಡಿಮಾಡು) " (ಶಮದ). ೬. ಬುದ್ಧಿಗೆ ಸಂಶಯಾಳಾಪ ತೊಡಕಿಕೊಂಡುದು (ತೊರವೆ. ೩-೯-೪). ೮. ನುಡಿಸಿಯಱಿಯೆವು ಕಂಡು ಕೇಳ್ದುಂ ತೊಡಕಲಱಿಯೆವು ನಿನ್ನನೆಂದುಂ ಗಡಬಡಿಸಿ ನೀನೆನ್ನುವಂ ರ್ಝುಂಕಿಸಲಿಹಗೆ ಬಹುದು (ಬಸವು. ೪೦-೩೮). ೧೭. ಅಡಗಿರು ; ಮರೆಯಾಗಿರು : ತಳ್ತ ಕಲ್ಪಭೂಮಿರುಹನಿಕುಂಜಮಂಜರಿಗಳೊಳ್ ತೊಡಕಿರ್ಪನೋ (ವರ್ಧಪು. ೧೦-೫೬). **ತೊಡಗು1** : ೪. ಇತ್ತಲೆನ್ನಯ ಹಸಿವು ಹೆಚ್ಚಿದೆ ತುತ್ತು ಹೊಗದೊಳಗಿವನ ತೊಡಗಲದೆತ್ತಲಕಟಾ ವಿಧಿಯೆನುತ ಮುರಿದೆದ್ದನಮರಾರಿ (ಕುಮಾ.ಅ. ೧೦ ೩೨).

**ತೊಡಂಕುಸೊನ್ನೆನೂಲ್** = ಹೆಣೆಗೆಗೊಂಡ ಬಂಗಾರದ ಉಡಿದಾರ: ಬಜ್ಜರಮಂಕಿ ತೊಡಂಕುಸೊನ್ನೆನೂಲ್ ತಳತಳೆನಿಪ್ಪ ಸಣ್ಣ ಪೊಸಪೊನ್ನುಡೆ (ಚಿಕವಿ. ೩-೯೦).

[ ದೇ.॥ ತವಿ. ತೊಟಕ್ಕು, ತುಟಕ್ಕು ; ತೆಲು. ತೊಡಗು, ತೊಡುಗು ]

**ತೊಡಂಕು2, ತೊಡಂಗು, ತೊಡಕು2, ತೊಡಗು2** (ಕ್ರಿ). ೧. ಪ್ರಾರಂಭಿಸು ; ಮೊದಲುಮಾಡು ; (ಕೆಲಸದಲ್ಲಿ)ಪ್ರವರ್ತಿಸು : ಸರ್ವಜ್ಞ ಭೂಪನೋಲಗದೊಳ್ಕುಂದಿರೆ ದಂಡಾಧೀಶಂ ಕುಳ್ಳಿರೆ ಮಂತ್ರಿ ತೊಡಂಕೆ ಕವಿ ಜನಾರ್ದನದೇವಂ (ಅನಂಪು. ೦-೫೬). **ತೊಡಂಗು**: ೧. ಮತ್ತಮೊಂದು ದಿವಸಂ ಮಹಾಮಹಿಮೆಯಂ ಮಾಡಲ್ ತೊಡಂಗಿದೊಡೆ (ವಡ್ಡಾರಾ. ೧೦೭-೦೫) ; ಚಿರಕಾಲಂ ತೊ ಡ ಂ ಗಿ ಪರಿಗೃಹೀತಬ್ರಹ್ಮಚರ್ಯವ್ರತ ಪರಿಣತನಾದಂ (ಗದಾಯು. ೫-೪೪ ವ). **ತೊಡಕು2** : ೧. ಅವನಿಜೆಯ ಕಾಬೆಣಿಕೆ ಕಡೆಗೆ ನಿಲಲಱಿಯದು ನಿರರ್ಥಕ ತೊಡಕಬಹುದೆ (ತೊರವೆ. ೪-೦೨-೩೧); ವೀರಚಿಕದೇವಂ . . . ಸೀಸಂ ಕರಂ ಕೊಂಕಸಾ ಮಗುಟ್ದಿಂತೀಗತಿಭೇದದಿಂ ತೊಡಕಿ ತೋರ್ಕುಂ ಸಾಧಕಪ್ರೌಢಿಯಂ (ಚಿಕವಿ. ೪-೦೪೬) : ಮೇಲಱಿಯದಧಿಕರೊಳು ಕಾಳಗವ ತೊಡಕಿ[ಪಾಠಾಂ. ೧]ದರೆ ಬಾಳುವೆಯು ಕೆಟ್ಟು ಬಡವಕ್ಕು (ಸರ್ವಜ್ಞ. ೭೪೧). ೨. ಪ್ರಾಪ್ತವಾಗು ; ಒದಗು ; ಉಂಟಾಗು : ಒಡಲ ಜಡಿದವು ರೋಮರೋಮದೊಳಡಸಿದಂಬುಗಳಂಗವೇದನೆ ತೊಡಕಿತು (ಕುಮಾ.ಭೀ. ೦೦-೨೪). **ತೊಡಗು2** : ೧. "ತೊಡಗು – ಪ್ರಾರಂಭೇ" (ಶಮದ) : ಸುರಿವುದು ತಡೆಯದಯೋಧ್ಯಾಪುರದೊಳ್ ನೀನಿಂದೆ ತೊಡಗಿ ವಸುಧಾರೆಯನಾದರದಿನೆನೆ (ಆದಿಪು. ೭-೩) ; ಕರಂ ಸಂಪ್ರೀತಿಯಿಂ ನೂತನಂ ತಾನಿಂತೆಂದು ನಿವೇದಿಸಲ್ತೊಡಗಿದಂ (ವರ್ಧಪು. ೩-೫೬) : ಸುರಪತಿಯ ಕೆಟ್ಟ ಸಂಪದಮಂ ತರಲ್ಕೆಂದು ಉರವಣಿಸಿ ತೊಡಗಿದರು ಕಡಲ ಕಡೆಯಲ್ಕೆಂದು (ನಂಚಿರ. ೦-೪): ಹೊಸ ತವಸಿ ತೊಡಗಿದನು ಬಲುತಪವ (ಕುಮಾ.ಅ. ೪-೪೩) ; ಯಜ್ಞಮಂ ತೊಡಗೆ ದಕ್ಷಂ (ಭಾವಚಿಂ. ೩-೦೩). ೨. ಇದು ದಲ್ ವಿಸ್ಮಯಮಾಗಿ ತೋಱದವುದೇನಿಂತೀಗಳೆಂದಮಾದುದೋ ಮೇಣಲ್ಲದೊಡಾಳ್ದನಿಂ ತೊಡಗಿತೋ (ಸುಕುಮಾ. ೨-೩೦) ; ತೊಡಗಿತ್ತು ಕಿರಾತಭೀಕರಧ್ವನಿ ವನದೊಳ್ (ಗಿರಿಜಾ. ೧-೮೧) ; ನಾರಿ ತೊಡಗಿದ ಕೋಟಿದುಃಖದಿಂ ನುಡಿದ ನುಡಿ ಕೂರಂಬಿನಂದದಿಂ ಹೃದಯಮಂ ತಟ್ಟುಗಿಯಲು (ಭಾವಚಿಂ. ೮-೩೩) ; ಮಕ್ಕಳಿರ ನಿಮಗೆ ರಘುವರನ ಸೇನೆಯೊಳಾಯ್ತು ಗಡ ಕಲಹವೇಕೆ ತೊಡಗಿತು (ಜೈಮಿಭಾ. ೨೧-೪೪) : ಅರಸುಗಳಿಗಾದರೋ ಇಷ್ಟಾರ್ಥಸಿದ್ಧಿಯ ಸಂಗಡಲೇ ದುಃಖ ತೊಡಗಿರುವುದು (ಶಾಕುಂತ. ೬೨-೨೪).

**ತೊಡಗಿ** = ಮೊದಲುಮಾಡಿ ; ಆರಂಭಿಸಿ ; ಮೊದಲ್ಗೊಂಡು : ಅಲ್ಲಿಂ ತೊಡಗಿ ದಕ್ಷಿಣಾಪಥದೊಳದು ತೀರ್ಥಮಾಯ್ತು (ವಡ್ಡಾರಾ. ೧೧೭-೫) : ಉಡೆವಣಿ [ಪ]ಱಿಯದ ಮುನ್ನಮೆ ತೊಡಗಿ ಚಲಂ ನೆಗೞೆ (ಪಂಪಭಾ. ೦-೪೬) ; ಮಗನಂ ಕಿಱಿಯಂದಿಂ ತೊಡಗಿ ಶಿಕ್ಷಿಸದಿರ್ದುದಱಿಂ ನಿಂತಾಯ್ತು (ಧರ್ಮಾಮೃ. ೨-೮೩) ; ಹಲವು ಕಾಲಂ ತೊಡಗಿಯಾಲದ ನೆಲೆಯೊಳಿದ್ದನ್ನಿರವಳಿದು ನಿಃಫಲವೆನಿಸಿತಲ್ಲಾ (ಬಸವು. ೫೬-೧೫) :

ಹಿಮಗಿರಿ ತೊಡಗಿ ಸಾಗರ ವೇಲೆ ಪರಿಯಂತಖಿಳನಗರಗ್ರಾಮಪುರವರದ . . . ಸಮಸ್ತಭೂಜನಜಾಲ ಹಸ್ತಿನಪುರಿಗೆ ಬಂದುದು (ಕುವ್ಯಾ.ಗ. ೧೩-೧); ಕೃತಿಯ ಪಲ್ಲವಿ ತೊಡಗಿ ಪೂರ್ಣಮಪ್ಪನ್ನವಿ ಕೃತಿಯೊಳುತ್ಪ್ರೇಕ್ಷೆಯಿಲ್ಲದುದೊಂದು ಪದವಿಲ್ಲ (ಭಾವಿಜಂ. ೧-೦೬).

[ದೇ.॥ ತಮಿ. ತೊಟಙ್ಕು, ತುಟಙ್ಕು; ಮಲ. ತುಡಙ್ಙು; ತುಳು. ತೊಡಗು; ತೆಲು. ತೊಡಂಗು]

**ತೊಡಂಕು₃**, ತುಡುಕು₂, ತೊಡಕು₃, ತೊಡಗು₃, (ನಾ). ೧. ಸಿಕ್ಕು; ಗೋಜು; ಗೊಂದಲ: ಮದಿರಾಮದದೊಳಮಳವಿಗಳಿಯ ಸೊರ್ಕೆ . . . ಕೂಕಿಡುವ ಕುಕಿಲ್ವ ಬಿಕ್ಕುಳಿವ ತೇಗುವ ತನ್ನ ತೊಡಂಕದೆಯ್ದೆ ನೊರ್ಮುಡಿ ಮನದೊಳ್ ಪಳಂಚಲೆಯ ದಕ್ಕೆಯೊಳಟ್ಟುಜವಾಗೆಯಾಡಿದಳ್ (ಶಂಪಭಾ. ೪-೯೦); ಕರುಳ ತೊಡಂಕಂ ಬಿಡಿಸಿ ನಡೆ ನೋಟ್ಪಿನೊಳಗೆಲುವಡಗಿರ್ಪುದು ಜೀವನಿರ್ಪೂಡಲ್ಲಿಗೆಪೋದಂ (ಜಗನ್ನಾಥ. ೪-೦೯); ಜಡಿವ ಹಾರವಲಯಗಳ ತೊಡಂಕ ತಪ್ಪಿಸದೆ . . . ತಲ್ಲಣಿಸಿ ಸೊಪ್ಪಡಗಿ ಕೆಡೆಯಲು (ನವಪೋ. ೬-೬). ೨. ತೊಡಕಿಕೊಳ್ಳುವಿಕೆ; ಸಿಕ್ಕಿಹಾಕಿಕೊಳ್ಳುವಿಕೆ; ಕೂಟ: ನಳಿತೋಳಿಂದಿರ್ಗೊಳ್ವ ತೊಡಂಕಿನಪ್ಪು ಬಾಯ್ದೊಡೆಯಿದಿರ್ಗೊಳ್ವ ಚುಂಬನಂ (ಅರ್ಜುನೀ. ೨-೩೭); ಸೋಂಕು ಯುವತಿ ಸುರೊಳಲ್ಲದೆ ಬಿಡದ ತೊಡಂಕುಂ ಬೇಟದ ತೋಟಿಯೊಳಲ್ಲದೆ ಕೋಟಲೆಗಳು [ತಾಂ] ಬೇಡಿಲ್ಲ (ಕುಮುದಾ. ಪೀಠಿಕಾಸಂಧಿ. ೫೯); ಸೋಂಕಿ ಚೆಂದುಟಿ ಗಚ್ಚಿದಿನಿಯಗೆ ಮುಗ್ಧೆ ತೊಡಂಕು ಸಾಕೆಂದು ಕೈದೊದರ್ವ ಕಂಕಣದುಲು ಹೊಯೆಂಬಂತೆ (ಭರತ. ೧೧-೧೬). ೩. ಅಡ್ಡಿ; ಅಡಚಣೆ: ಉಡಿಗೆ ತೊಡಿಗೆಯ ತೊಡಂಕಿಲ್ಲ[ಪಾಠಾಂ. ತೊಡಕಿಲ್ಲ, ಹಂಗಿಲ್ಲ]ದೆ ರನ್ನಗನ್ನಡಿಯ ಜಿನೇಂದ್ರನಾದಂತೆ (ಭರತ. ೬೬-೩೬); ಕಾರ್ಯಸಿದ್ಧಿಗೆ ತೊಡಂಕು ತೋರ್ಪುದೆ (ರಾಜಶೇ. ೦೪-೪೪). ೪. ಕಷ್ಟ; ತೊಂದರೆ; ಕ್ಲೇಶ: ಪಟುನುಡಿಯ ತೊಡಂಕನಡಿಗಡಿಗೆಡವದಂತಿರೆವಿಡದೆ ಬಿಚ್ಚುಟಿಸಿ ಶಿಷ್ಯರ್ಗೆ ನಿರವಿಪ ಕುಲಪತಿಯಂ (ರಾಮಾಶ್ವ. ೧೩೬-೨೯). **ತುಡುಕು₂**: ೫. ಬೇಗನೆ ಹಿಡಿಯುವುದಂ; ಸತ್ವರಗ್ರಹಣ. 'ಕೈದುಡುಕು₂' ಪರಾ.

**ತೊಡಕು₃**: ೧. ನಿನ್ನಂ ನುಡಿಯ ತೊಡಕಿನ ಬೆಡಂಗಿನಿಂ ಸೋಲಿಸಿ . . . ತಗುಳ್ವುದಿದು ದೈವಿಕಂ (ಹರಿಶಾ. ೦೦-೦೩). ೩. ವಿಶ್ವಾಮಿತ್ರಮುನಿಯನಗೆ ಮತ್ತೆ ಮಾಡಿದ ತೊಡಕಿದಾಗದಿರದು (ಹರಿಶಾ. ೦೨-೪೦); ನಿನ್ನವೃತ್ತಾಂತವ ಖಿಳರಾಯಗಜಹಿ ಮುಂದಾವ ತೊಡಕಿಲ್ಲದಂತೆ ಮಾಡುವೆ (ಮೋಹತ. ೧೧-೩೨); ಬಾಳ್ಕೆಯಲಿ ನೂರೆಂಟು ತೊಡಕು ತಿಣುಕುಗಳುಂಟು (ಮಂಕುತ. ೬೪೩); ನಮ್ಮ ಹಾದಿಯಲ್ಲಿ ತೊಡಕುಗಳು ವಿಪರೀತ (ಮುರುಳಿ. ೧೮). ೪. ಬಿಡಿಸಿದಿರೆನ್ನಂ ರಾಜ್ಯದ ತೊಡಕಂ [ಪಾಠಾಂ. ರಂ] ಕೈಕೊಂಡು ನೀಮೆ (ವರ್ಧಪು. ೯-೧೧); ಕೌರವ ಜೀವಿಸಲಿ ಮೇಣಳಿಯಲಿಮಗಿನ್ನಾ ತೊಡಕಿಲ್ಲ (ಕುವ್ಯಾ.ಶ. ೧-೦೨); ಕಕುಸ್ಥಜನೊಪ್ಪದಿರ್ದಡೆ ತೊಡಕು ನಿನಗಹುದು (ತೊರಾ. ೪-೯-೩೪). ೧, ೪: ನದಿಯೊಳ್ಬೃಗತಿ ಕೇಶತತಿಯೊಳ್ ತೊಡಕಬ್ಬದೊಳಾಜಿಡಿ ವರಕುಚಯುಗ್ಮದೊಳಲ್ಲದೆ ಕಠಿಣವೃತ್ತಿಯಿಲ್ಲಾ ನಾಡೊಳ್ (ಧರ್ಮಾಪ. ೦-೩೮). ೬. ಸಂಬಂಧ; ಸಹವಾಸ: ಕಾಯದ ತೊಡಕನೊಲ್ಲದೆ ತಕ್ಕಿಗಟ್ಟಿತು ಭಟರು ನಾಕದಲಿ (ಕುವ್ಯಾ.ಭೀ. ೯-೦೮); ಮೇಳದೊಳು ತೊಡಕ ಬಿಡದವನ ಜಪವದುವೆ ಹಾಳುಮನೆಯಂತೆ (ಸರ್ವಜ್ಞ. ೧೬೩); ಕೋಪಭಾವದಿಂ ತೊಡವುಗಳ ತೊಡಕುಗಳನುಳಿದು ರಾಜೀವಾಕ್ಷಿ ತಿರೆಬೊಳೊರಗಿರ್ಪಳು (ವಂಶಾರಾ. ೨-೬-೫); ತನುಕಾಂತಿ ಮೋಹವಿಕೃತಿಗಳುಮಾ ತೊಡಕಿನವು ಕೊನೆಯಿರದ ಬಲೆಯೊ ಅದು (ಮಂಕುತ. ೧೬೮); ಒಲವು ಹಾಕಿದ ತೊಡಕನೆಂತು ಬಿಡಿಸಲು ಬಹುದು (ಸ್ವದರ್ಶಿ. ೬). ೭. ಗೊಡವೆ; ಉಸಾಬರಿ: ತರಣಿಯೋಲಗಕೆ ಸೊಡರಂ ಪಿಡಿವ ತೊಡಕೇಕೆ (ಸಿದ್ಧರಾ. ೧-೪); ಒಡೆಯ ಚಿತ್ತೈಸಭಿಮತಂ ಗಳತೊಡಕವೇತಕೆ ನಿಧಿಯಿದಿರೊಳಿರೆ ಕಡೆಗೆ ಜಲಗಂ ತೊಳೆಯ ಹೋದಹೆವೆಂಬ ಮರುಳುಂಟೆ (ಬಸವು. ೫೬-೬೨); ನಮಗಿದೇಕರವಿಂದವದನೆಯ ತೊಡಕು (ಕುವ್ಯಾ.ಅ. ೦೫-೬): ಗೊಡವೆ ತಪ್ಪಿತು ಹೋಗಲಿನ್ನೆನಗದರ ತೊಡಕೇಕೆ (ಕೌಶಿಕಾ. ೦೯-೬). ೮. ಜಟಿಲವಾದುದು; ಇಕ್ಕಟ್ಟು: ಸಾಂಖ್ಯದರ್ಶನದಲ್ಲಿರುವ ಬಹುದೊಡ್ಡ ತೊಡಕೆಂದರೆ: ಪ್ರಕೃತಿ ಪುರುಷರ ಸಂಬಂಧದ ಸಾಧ್ಯತೆ (ತತ್ತ್ವಪ್ರಾ. ೨೬೬). ೯. ಸಂಶಯ; ಅನುಮಾನ: ಎಂತುಟು ಮೇಘನಾದ ತೊಡಕಿಲ್ಲದೆ ಪೇಟ್ ಮಗನಿರ್ದದೊಂದು ವೃತ್ತಾಂತಮಂ (ಶಾದಂಅ. ೬೬೮). ೧೦. ಸಂದಿಗ್ಧಪ್ರಶ್ನೆ; ಸಮಸ್ಯೆ; ಒಗಟು: ರಾಯರಾಜಗುರು ಜಗದ ಬಿನ್ನಾಣಿಯ ತೊಡಕ ಬಿಡಿಸಬಾರದು (ಬಸವ. ೭೨೪); ಕೊಡುವಡಿದು ವರವಲ್ಲದಿದ್ದರೆ ನುಡಿಗೆ ಮೊಳೆ ಹೊಮ್ಮುವರೆ ನಿಮ್ಮಯ ತೊಡಕನೊಲ್ಲುವವನಲ್ಲ (ಕುವ್ಯಾ.ದ್ರೋ. ೦-೪೧); ಅಜಗಣ್ಣನು . . . ಕಡೆಯಲೀ ಪರಿ ಕಾಣಬಾರದ ತೊಡಕನೊಡ್ಡಿದನು (ಪ್ರಭುಲೀ. ೦೨-೮). ೧೧. ಜಗಳ; ಕದನ: ಎನ್ನ ನೀ ಮೊದಲು ನೂಂಕಿದ ಕಾರಣದಿಂದೆ ನಿನ್ನನಾ ನೂಂಕಿದೆನ್ನೆಸೆ ಇನ್ನಾವ ತೊಡಕು ಬೇಡ (ಮೋಹತ. ೧೪-೮೦): ಅವನೊಳು ತೊಡಕು ಸಲ್ಲದು ನಿಮಗೆಂದ (ಶಂಸವಿ. ೧೩-೬). **ತೊಡಗು₃**: ೩. 'ಇಡುಗುತೊಡಗು' ಪರಾ.

**ತೊಡಕುಬೀಳು** = ಗೋಜಾಗು; ಸಿಕ್ಕಾಗು: ಭೂಮಿಯನ್ನು ಅಳೆಯುವುದಕ್ಕೆ ಮೊದಲಿಟ್ಟ ಮೇಲೆ ಸರಪಣಿಯು ತೊಡಕುಬಿದ್ದಿರುವುದನ್ನು ನೋಡಬೇಕು (ಭೂಮಿಅ. ೪). [< ತೊಡಂಕು₁]

**ತೊಡಂಕುವಲೆ**, **ತೊಡಕುವಲೆ** (ನಾ). (ಕಾಲಿಗೆ) ತೊಡರುವ ಒಂದು ಬಗೆಯ ಬಲೆ: ಮಿಳಿರ್ವ ಬಂಬಲ್ಗುರುಳ್ಗಳೆಂಬ ತೊಡಂಕುವಲೆ ಬಸಂತನ ಕೆಳೆಯನಂಚೆರಲೆಯಂ ಸಿಲ್ಕಿಸೆಯಂ (ಅದ್ಭುರಾ. ೦೨೩); ಪೆರ್ವಲೆ ತೊಡಂಕುವಲೆ ಕೊಲ್ವಲೆ... ಬಿಡುವಲೆಗಳೆನಿಪ್ಪುವೆಸೆದಿವಾ ಬೇಂಟೆಗರೊಳ್ (ಕಬಿಕಂ. ೩-೨೪). **ತೊಡಕುವಲೆ**: ಬಳ್ಳಿವಲೆ ತೊಡಕುವಲೆ . . . ಮಡಿಕೆವಲೆ ಮೊಂದುಸಿನವಲೆಯ ಹೊಟಗಳ ಬೇಡವಡೆ ನೆರೆದುದು (ಹರಿಶಾ. ೫-೮); ದಂಡಿವಲೆಗಳ ತೊಡಕುವಲೆಗಳ . . . ಕಿರಾತರು ಕೆದರುತಗಲದಲಿ (ಕುವ್ಯಾ.ಅ. ೦೩-೨೩); ಪುತ್ರಮೋಹದ ತೊಡಕುವಲೆಯಲಿ ತಂದೆ ನೀ ಕಾಲಿಡದಿರು (ನಿಭಾಗ. ೩-೧-೬): ತಡಿಕೆವಲೆ ಶಟ್ಟವಲೆ ಸಾಲುವಲೆ ಕೋಲುವಲೆ ತೊಡಕುವಲೆ . . . ಮರವಲೆಗಳಿರ್ದುವಾ ಶಬರರಲ್ಲಿ (ಸಿದ್ಧೇಪು. ೮-೬); ಉರುಲುವಲೆ ತೊಡಕುವಲೆ ಸಿಕ್ಕುವಲೆ ಸಿಡಿಲುವಲೆ . . . ಮೊದಲಾದ ಪರಿಪರಿಯ ವಲೆ ಸಮೂಹವ ನೋಡುತ (ನವಪೋ. ೧೬-೨೦). [ತೊಡಂಕು₃ + ಬಲೆ₁]

**ತೊಡಂಗ** (ನಾ). ಒಂದು ಬಗೆಯ ಆಯುಧ: ಆ ಬೀರೆಗೌಡನ ಕೈಲಿದ್ದ ಚಿನ್ನದ ಬಳೆ ಎರಡು, ತೊಡಂಗದ ಸರಪಣಿ, ಬೆಳ್ಳಿಕಟ್ಟಿದ ಚೂರಿ, ವರಚೂರಿ, ಇದನ್ನು ಅವನ ಮೈಯಿಂದಾ ತೆಗೆದು . . . ಮುಟ್ಟಿ ಮಡಗಿ ಬಂದರು (ರಾಜೇಂದ್ರ. ೨೬೬). [?]

**ತೊಡಂಗಟ್ಟು** (ಕ್ರಿ). ಅಲಂಕಾರಮಾಡು: ಅಬ್ಜಮಂ ಮಾಣ್ದು ದುತ್ತುರದ ಕುಸುಮದ ತೊಡಂ[ಪಾಠಾಂ. ತೊಡವು]ಗಟ್ಟುವಂತೆ ಉತ್ತಮವಿದೆಂದು ಕೃಷ್ಣಾರ್ಜುನರ ಬಿಟ್ಟು ತಂದಿತ್ತ ತುರಂಗಂಗಳಂ (ಕೃಮಿಭಾ. ೨೫-೬೧). [ತೊಡ + ಕಟ್ಟು₁]

**ತೊಡಂಗು** 'ತೊಡಂಕು₂' ನೋ.

**ತೊಡಂದುಡಿಸು** (ಕ್ರಿ). ಒಡವೆಯನ್ನು ಹಾಕು; ಆಭರಣವನ್ನು ತೊಡಿಸು: ಅಡಿಮಾಡುವ ಮುಡಿಯಿಕ್ಕುವ ತಿಲಕವಿಡುವ ತೊಡಂದುಡಿಸುವ ನಿಱಿವಿಡಿದು ನೀಡುವ ನೆಲನನಗ್ಗಡಿಸುವ ಮುಕುರಮಂ ತೋಱುವ ಮಕರಿಕಾಪತ್ರಮಂ ಚಿತ್ರಿಸುವ . . . ನಿಖಿಳಪರಿಚಾರಿಣೀಜನಂ (ಕುಸುಮಾ. ೬-೬ ವ). [ತೊಡ + ತುಡಿಸು (<ತೊಡಿಸು)]

**ತೊಡಂದೊಡು** (ಕ್ರಿ). ಆಭರಣವನ್ನು ತೊಡು,-ಧರಿಸು: ಒಡನಂ ಟ್ಟೊಡನೆ ತೊಡಂದೊಟ್ಟೊಡನಿರದಾಡಿಯೊಡನೆ ಹೊಸ ಹರೆಯಂಬಡೆದ ಕೆಳೆಯರಿಂ . . . ಸುಕುಮಾರಂ ಸಡಗರದಿಂ ಸಲೆ ಸಂಪದದೊಳ್ ದಿನಮಂ ನೂಂಕುತ್ತಿಹನು (ಜಯುಕಾ. ೨-೬೬). [ ತೊಡ + ತೊಡು$_1$ ]

**ತೊಡಂಬೆ$_1$**, ತೊಡಬೆ$_1$ (ನಾ). ೧. (ಹಣ್ಣು, ಹೂವು, ಕಾಯಿ ಮೊದಲಾದವುಗಳ) ತೊಟ್ಟು; ತುಂಬು: "ಪ್ರತಾನಮುಳವಂ ತೊಡಂಬೆಯಂತದು ವೃಂತಂ" (ವಸ್ತುಕೋ. ೩೧-೮); "ವೃಂತಂ ಪ್ರಸವಬಂಧನಂ ಈ ೨ ಹೂವಿನ ತೊಡಂಬೆ" (ಹಲಾಯು. ೩೧-೩೦); ಲತಾಳಿಯ ತಳ್ಪು ಬಿರ್ಚಿದಂತೆಲೆಯ ತೊಡಂಬೆಗಳ್ ಪಱಿಯದಂತು . . . ಎಲರೊಲವುಣ್ಮೆ ತೀಡಿದುದು (ಚಂದ್ರಪ್ರ. ೨-೧೦೦); ಅಗ್ಗದ ಗಾಳಿಯಿಂದೊಡನೊಡನೆ ಬೀತು ತೊಡಂಬೆಗಳು ಕಡು ಸಡಲಿ ತಮತಮಗವನಿಯಲಿ ಬಿದ್ದರಳು ಗಳನುಳಿದು (ಬಸಪು. ೨೨-೮); ಬಿಟ್ಟ ತೊಡಂಬೆಯನೆಂದು ಮುಟ್ಟವು ಪಣ್ (ಪರಮಾ. ೨೮-೮೩). ೨. ಮೂಲ; ಬುಡ: ನೋಟದ ಸೋಲಂ . . . ಸುಯ್ಯ ಕಂಪಾಟಿಸಲಲ್ಲೆ ಮೆಯ್ಪುಟಲೆ ಸಂದಪುವೆ ಮಲರ್ದಯ್ದು ವಿಂದ್ರಿಯಂ ಬೇಟದ ಗೊಂಚಲಂತೆ ಮನವೆಂಬ ತೊಡಂಬೆಯೊಳೂ ಪ್ಮೊದಲ್ ಸುಖಾಸ್ಫೋಟವನೀಯವೆನ್ನವು ಮನಃಪ್ರವಿಚಾರದ ಕಾಮ ಕೇಳಿಗಳ್ (ಅನಂಪು. ೮-೮೬). **ತೊಡಬೆ$_1$**: ೨. ಉಲುಕಿದರೆ ನಾಲಗೆಯ ತೊಡಬೆಯು ಕಳಚುವೆನು (ಕುಮ್ಯಾ.ಕ. ೧೧-೨೩).

[ ದೇ.೫ ತೆಲು. ತೊಡಿಮೆ, ತೊಡಿಮ ]

**ತೊಡಂಬೆ$_2$**, ತೊಡಬೆ$_2$ (ನಾ). ೧. ಗೊಂಚಲು; ಗುಚ್ಛ: "ತೊಡಂಬೆ ಸುಣ್ಣೊದೆದ ಜೊಂಪಂ ತೊಂಗೆ ಗುಚ್ಛಮೆಂದಿರದೊಪ್ಪಿ ಪದೆದ ನಾಮಂ" (ಕಬ್ಬಿಗ. ೦೯); ಮುಂಗುಳ ತೊಡಂಬೆ ಗಂಟೊಡೆಯೆ ಮೊಲ್ಲೆಗೆ ಬೆಳ್ಪುಟಾ ಪುಟ್ಟಿ . . . ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ (ಪಂರಾಮಾ. ೬-೧೩೯); ತಳಿರ ತೊಡಂಬೆಯಂ ಕಳೆದ ಮಾಮರಂ (ದಶಕು. ೦-೨೬); ಮಲ್ಲಿಗೆಯಲರ ತೊಡಂಬೆಯ ಮಧ್ಯದೊಳುಲ್ಲಸದಿಂದೆ ಕುಳಿತ ಮಧುಕರನಂ . . . ಗೆಲ್ಲಂಗೊಂಡೆಸೆದುದು ಚಿಹ್ನಂ ಸಂಪೂರ್ಣ ಸುಧಾಕರನ (ಜಯುಕಾ. ೦೮-೦೩); ಒಳಪೊಟಗಾಗಿರ್ದ ಗೆದುಗಿನ ಕಾಯಂತೆ ಕೆಳಮೊಗವಾದ ಯೋನಿಗಳು ಬಲದಗ್ರದ ಕಟು ಗಳೊಳಗಿರ್ಪವವು ಪಾ ಪ ಫ ಲ ದ ತೊಡಂಬೆಗಳಂತೆ (ವರ್ಧಮ. ೮-೬೬). ೨. ಹೂವಿನ ಗೊಂಚಲು: "ತೊಡಂಬೆ, ತೊಡಬೆ . . . ಗುಚ್ಛ – ಈ ೭ ಪುಷ್ಪಮಂಜರಿ" (ಕಕಶಾ. ೩೩-೦೯೬): ಬಿಟ್ಟ್ಕುಳಿಯ ಕಕ್ಕುಂಬ ತೊಡಂಬೆಯ ಮುಡಿಗೆಯ ಕದಳಿಕೆಯ ಕಂಡಪಟಂಗಳುಮಂ (ಪಂಪಭಾ. ೩-೮೬ ವ); ತೊ[ಡಂಬೆ]ಯಂತಪ್ಪಳಸುವ ಪೆಣ್ದುಂಬಿಗಳಂತೆ ಲಲಾಟರಂಗದೊಳುಂಗುರಿಸಿ ಕುಣಿವ ನೀಳಾಳಕಂಗಳ . . . ಸೌಂದರಿಯದಿಂ ದೇಸೆವಡೆದ ಹದಿನಾಱಱ ಹರೆಯದ ಹರಂ (ಬಸರ. ೦೨-೮೦); ಬಂಡುಣವಿಂಡುಗಳುಂಡಾಡಲೇಗಳುಮೊಡೆದ ತೊಡಂಬೆಗಳಿಂದೆ ನದಿಯ ದಡಂಗಳಲಸುಗೆಯ ಮರಗಳು ಬೋಳಾದುವಹ ಕಾಲವಶದೆ (ಗಾಥಾಸ. ೦೦೩-೨೨). ೩. ಗುಂಪು; ರಾಶಿ; ಸಮೂಹ: ಅಂಬರದೊಳು ಬಹುವರ್ಣದ ಮುಗಿಲ ತೊಡಂಬೆಗಳೆಡೆಯಾಡುವಂತ (ಭರಕ. ೦೮-೩೯). **ತೊಡಬೆ$_2$**: ೧."ತೊಡಬೆ, ತೊಡಂಬೆ . . . ಗುಚ್ಛಕಕ್ಕುಂ ನಾಮಂ" (ಕವಿಕಂ. ೬೮); ಕಳಿತ ಹೂವಿನ ತೊಡಬೆಗಳೊ ರಿಪುಬಲವೊ ಬಿಱುಗಾಳಿಯೊ ವೃಕೋದರನಳವ ಬಲ್ಲವನಾವನೈ (ಕುಮ್ಯಾದ್ರೋ. ೨-೮೦). ೨. "ತೊಡಂಬೆ, ತೊಡಬೆ, ತೊಂಗೆ, ತೊಂಗಲ್, ಜೊಂಪಂ, ಗೊಂಚಲ್ ಗುಚ್ಛಂ—ಈ ೭ ಪುಷ್ಪಮಂಜರಿ" (ಕಕಶಾ. ೩೩ ೦೯೬). ೩. ಸೀಗುರಿಸಿಮುರಿ ವಿಷದ ಲೋಳಿಯ ಲಾಗಿಸುವ ನಾಲಗೆಯ ಸುಯ್ಲಿನ ಬೇಗುದಿಯ ತೊಡಬೆಗಳ ಹಾವ್ ತುಡುಕಿದವು ಘಟ್ಟನಲಿ (ಕುಮ್ಯಾ.ಕ. ೨೩-೩೯).

[ ದೇ.೫ ತುಳು. ತೊಡುಂಬೆ, ತೊಲುಂಬೆ ]

**ತೊಡಂಬೆಪಱ್** (ಕ್ರಿ). ತೊಟ್ಟು ಕತ್ತರಿಸಿಹೋಗು: ಬಡಿ ಕೊಳೆ ಕಾಯುಂ ಪಣ್ಣುಂ ತೊಡಂಬೆಪಱುದಿರ್ದ ಮಾಟ್ಕೆಯಿಂ ಕಱುವಿರಿಯರ್ ಮಡಿವರ್ (ಪಂರಾಮಾ. ೧-೮೩). [ ತೊಡಂಬೆ$_1$ + ಪಱ್$_1$ ]

**ತೊಡಂಬೆವಿಡು** (ಕ್ರಿ). ತೊಟ್ಟನ್ನು ಕಳಚಿಕೊಳ್ಳು,-ಬಿಡು: ತನಿತು ತೊಡಂಬೆವಿಟ್ಟುದಿರ್ದ ಪಣ್ಗಳನಟ್ಟಿಯ ಮೆಲ್ದು ಸೋರ್ವ ತೆಂಗಿನ ತಿಳಿನೀರನೀಂಟಿ . . . ಪೌರನಂದನದೊಳಗಿಂತಯತ್ನಸುಖಮಂ ಪಥಿಕರ್ ಪಡೆವರ್ (ಚಂದ್ರಪ್ರ. ೩-೦೩). [ ತೊಡಂಬೆ$_1$ + ಬಿಡು$_1$ ]

**ತೊಡಕಂಬು** (ನಾ). ಒಂದು ಬಗೆಯ ಬಾಣ,-ಸರಳು: ಸಿಲುಕಂಬು ತುದಿವೊನೆಯ ಬೋಳೆ ತೊಡಕಂಬು . . . ದಡಿಮುಖ್ಯವಾದ ಕೈದುಗಳ ಪಿಡಿದು (ಸೌಂದಪು. ೦೮-೩೬). [ತೊಡಕು$_3$ (<ತೊಡಂಕು$_3$)+ಅಂಬು$_2$]

**ತೊಡಕಾಲು** 'ತೊಡಕುಗಾಲು' ನೋ.

**ತೊಡಕಿಸು** 'ತೊಡಗಿಸು$_1$' ನೋ.

**ತೊಡಕು$_1$** 'ತೊಡಂಕು$_1$' ನೋ.

**ತೊಡಕು$_2$** 'ತೊಡಂಕು$_2$' ನೋ.

**ತೊಡಕು$_3$** 'ತೊಡಂಕು$_3$' ನೋ.

**ತೊಡಕುಗಾಲು**, ತೊಡಕಾಲು (ನಾ). ೧.=ತೊಡರುಗಾಲು. ೨. (ಅಲಂ) ಅಡಚಣೆ; ಅಡ್ಡಿ: ಪೂಜ್ಯ ಪೂಜಕ ಸಂಬಂಧದಲ್ಲಿ ವ್ಯತ್ಯಾಸವಾಗಿ . . . ಈ ಅಹಿಂಸಾಮತಗಳು ವೈದಿಕಪದ್ಧತಿಗೆ ತೊಡಕುಗಾಲಾಗಿ ನಿಂತಿತು (ಭಾರತದ. ೨೮೯). **ತೊಡಕಾಲು**: ೨. ಆ ವೇದವ್ಯಾಸಾಚಾರಿ ಹಾಕಿದ್ದ ತೊಡಕಾಲು (ಹರಿಚ. ೨೬).

[ ತೊಡಕು$_3$ (<ತೊಡಂಕು$_3$) + ಕಾಲು$_1$ (<ಕಾಲ್$_1$) ]

**ತೊಡಕುನೇಣು** (ನಾ). (ಕಡೆಗೋಲಿಗೆ) ಸುತ್ತುವ ಹಗ್ಗ; ಕಡೆಯುವ ಹಗ್ಗ: ಕಡಲನು ಕಡೆವುದಾ ಮಂದರಮಹಾದ್ರಿಯುನಿಟ್ಟು ವಾಸುಗಿಯ ತೊಡಕುನೇಣಲಿ ಕಡದೊಡಮೃತವ ಪಡೆವಿರಹಿತರು ಬಱದೆ ದುಃಖಂಬಡು ವರು (ನಿಭಾಗ. ೮-೬-೦೩).

[ ತೊಡಕು$_3$ (<ತೊಡಂಕು$_3$) + ನೇಣು (<ನೇಣ್$_1$) ]

**ತೊಡಕುಬೇರು** (ನಾ). ಹೆಣೆದುಕೊಂಡ ಬೇರು; ಜಡೆಗಟ್ಟಿದ ಬೇರು: ಕಾಂಡದ ಕೆಳಭಾಗದಿಂದ ಹೊಸಹೊಸ ಬೇರುಗಳು ಬೆಳೆಯುತ್ತವೆ. ಈ ಬೇರುಗಳು ಭೂಮಿಯ ಮೇಲ್ಪದರುಗಳಲ್ಲಿಯೇ ಪಸರಿಸುತ್ತವೆ. ಇವುಗಳ ಗಾತ್ರ ಒಂದೇ. ಇಂತಹ ಬೇರುಗಳಿಗೆ ತೊಡಕುಬೇರಿನ ಸಮೂಹವೆಂದು ಹೆಸರು (ಸಸ್ಯಶಾ. ೦೩).

[ ತೊಡಕು$_3$ (<ತೊಡಂಕು$_3$) + ಬೇರು (<ಬೇರ್) ]

**ತೊಡಕುಮೆಳೆ** (ನಾ). ದಟ್ಟವಾಗಿ ಹೆಣೆದುಕೊಂಡಿರುವ ಪೊದೆ,-ಪೊದರು: ಕುಹರದ ತೊಡಕುಮೆಳೆಗಳಲದ್ರಿಕೂಟದಲೆಡಬಲದ ತಪ್ಪಲಲಿ . . . ಅಡಗಿ ತೋಱುತೆ (ತೊರರಾ. ೩-೮-೪೬).

[ ತೊಡಕು$_3$ (<ತೊಡಂಕು$_3$) + ಮೆಳೆ ]

**ತೊಡಕುವಲೆ** 'ತೊಡಂಕುವಲೆ' ನೋ.

**ತೊಡಕುವಳೆ** (ನಾ). ಸರಪಳಿಯ ಆಕಾರದ ಬಳೆ: ಕೊಡಲಿ ಮಾರಗತ್ತಿ ಬಲ್ಲೆಯಂ ಚಕ್ರ ಗಿರುಗಟೆ ತೊಡಕುವಳೆ ವಂಕಿ ಕಲ್ಲಮಣಿ ಪದ್ಮಮಣಿ ಪುತ್ರಜೀವಿಯು ಹುಲ್ಲುಮಣಿ ಪಟಿಕಮಣಿಭೂಷಣಂ (ಗುರುಬಾ. ೩-೩೦).

[ ತೊಡಕು$_3$ (<ತೊಡಂಕು$_3$) + ಬಳೆ$_3$ ]

**ತೊಡಕುವೀಥಿ** (ನಾ). ಅಡ್ಡಲಾಗಿ ಹಾಯುವ ಬೀದಿ; ಅಡ್ಡಬೀದಿ: ಸಿಡಿದು ನೋಡಿದ ನಿಳಯನಿಳಯಂಗಳಲಿ ನಿಮಿಷದಲಿ ತೊಡಕುವೀಥಿಯ ಕೇರಿಕೇರಿಗಳೆಡೆಯೆಡೆಯ ಮನೆಮನೆಯ . . . ಕೋಟೆಯ ಸುತ್ತು ವಳಯದಲಿ (ತೊರರಾ. ೩-೨-೦೩).

[ ತೊಡಕು$_3$ (<ತೊಡಂಕು$_3$) + ವೀಥಿ ]

**ತೊಡಕೆ** (ನಾ). ಗಾಡಿಯಂ ತೊಟ್ಟಿಲಂ; ಬಂಡಿಯ ಒಳಗಿನ ಖಾಲಿಜಾಗ: ಎಲವೋ ಕುನ್ನಿ ಕೊಳದೆ ತಿನ್ನು ಬಾಯೆನುತ ತೊಡಕೆಯಲಿ ಕಲು ಮುಳ್ಳು ತುಂಬಿಯ ಬಿಡದೆ ಬುತ್ತಿಯನೊಂದು ಕೈಯಲಿ ಹಿಡಿದು ಬಂದನು ದೈತ್ಯನಲ್ಲಿಗೆ ಭೀಮ ಬೇಗದಲಿ (ಕುಮ್ಮಾ.ಆ. ೭೦೩. ೨೩-೬೬). [ ? ]

**ತೊಡಗಿಸು$_1$**, ತೊಡಕಿಸಂ (ಕ್ರಿ). ೧. ತಗುಲಿಸು; ಸಿಕ್ಕಿಸು: ತಮ್ಮ ಜೀರ್ಣ ವಿಚಾರದ ಶೃಂಖಲೆಯನ್ನು ಅವರ ಕಾಲುಗಳಲ್ಲಿ ತೊಡಗಿಸುವ ಪಾಪವನ್ನು ಮಾಡಕೂಡದು (ಪ್ರಬಂಧ. ೧೦೧). ೨. ಹೂಡು; ಬಳಸು; ವಿನಿಯೋಗಿಸು: ನನ್ನ ಹತ್ತಿರ ಹೇರಳವಾಗಿ ಹಣವಿದೆ. ಅದನ್ನು ಯಾವ ಕಾರ್ಯದಲ್ಲಿಯೂ ತೊಡಗಿಸಿಲ್ಲ (ಪರಿಚೀ. ೩೦); ಒಮ್ಮೆ ಕರಗತವಾದ ಧನವನ್ನು ಸಂರಕ್ಷಿಸಿ, ವೃದ್ಧಿಗೊಳಿಸಿ, ಉದ್ದಿಮೆಯಲ್ಲಿ ತೊಡಗಿಸತಕ್ಕದ್ದು (ಮಿತವ್ಯ. ೧೧): ಇಷ್ಟೊಂದು ಹಣವನ್ನು ಇಂಥ ರತ್ನದಲ್ಲಿ ತೊಡಗಿಸುವುದು ರಾಯರಿಗೇನೂ ಕಷ್ಟದ ಕೆಲಸವಲ್ಲ (ರತ್ನಗೋ. ೨೮). **ತೊಡಕಿಸು**: ೧. ಆ ಕಂಬಗಳಿಗೆ ನಾಲ್ಕು ಬಂಗಾರದ ಸರ್ಪಳಿಗಳನ್ನು ತೊಡಕಿಸಿ ... ಜೋಲಿ ಬಿಟ್ಟಿದ್ದರು (ಮುಂಬಯಿ. ೩-೨೯೯); ರೈತನು ಆ ಹಲಿಗೆಯನ್ನು ಆ ದನದ ಕಣ್ಣಿಯಲ್ಲಿ ತೊಡಕಿಸದರಾಯಿತು, ಆ ದನ ಇದ್ದಲ್ಲಿಂದ ಓಡಿ ಬರುತ್ತಿತ್ತು (ಹಳ್ಳಿ ಬ. ೨೪). ೩. ಪ್ರತಿಭಟಿಸುವಂತೆ ಮಾಡು: ಮುಱುವೇನೇ ಮುನಿದಿವರು ನೂರ್ವರು ಕೊಱುವರನ್ನನು ತೊಡಕಿಸುವೆನೇ ತಱಿದು ಬಿಸುಡುವರವರು ಕೌರವಶತಕವನು (ಕುಮ್ಮಾಸ. ೦೨-೬೯).

[ ತೊಡಗು$_1$ (< ತೊಡಂಕು$_1$) + – ಇಸು$_3$ ]

**ತೊಡಗಿಸು$_2$** (ಕ್ರಿ). ೧. ಆರಂಭಿಸು; ಮೊದಲುಮಾಡು: ಒಳ್ಳಿತಪ್ಪ ದಿವಸವಾರನಕ್ಷತ್ರಮುಹೂರ್ತದೊಳ್ ಸಿದ್ಧಾಂತಮಂ ತೊಡಗಿಸೆ (ವಡ್ಡಾರಾ. ೬-೧೫); ಸಕಲವಿದ್ಯಾಬೀಜಪುಂಜಂಗಳಂ ಮೊದಲ್ ತೊಡಗಿಸಿ ನಿರ್ಬಂಧದಿಂದವೋದಿಸುತ್ತುಂ (ಸುಕುಮಾ. ೨-೩೭ ವ); ಕುಮಾರರ್ಗೆ ಮುನಿಪತಿ ಚೌಲಕರ್ಮಂಗಳಂ ಮಾಡಿಸಿ ಕೊಡಗಿಸಿದನಕ್ಷರಾಭ್ಯಾಸಮಂ (ಜಮಿಧಾ. ೦೯-೩೦). ೨. ಉಂಟುಮಾಡು; ಆಗಿಸು: ಕೆಡುಕು ತೊಡಗಿಸಲಿಳಿಯನುಡುಗಿಸಲಡಗಿ ನಡುಗಿಸಿ ನಗುವೆನು (ಕವಿಪು. ೨೯-೮).

[ ತೊಡಗು$_2$ (< ತೊಡಂಕು$_2$) + – ಇಸು$_3$ ]

**ತೊಡಗು$_1$** 'ತೊಡಂಕು$_1$' ನೋ.

**ತೊಡಗು$_2$** 'ತೊಡಂಕು$_2$' ನೋ.

**ತೊಡಗು$_3$** 'ತೊಡಂಕು$_3$' ನೋ.

**ತೊಡಗುಹ** (ನಾ). ಆರಂಭ; ಕೈಕೊಳ್ಳುವಿಕೆ: "ಪ್ರಕ್ರಮಂ, ಆರಂಭ" (ನಾಚಿರಾ. ೪). [ ತೊಡಗು$_2$ (<ತೊಡಂಕು$_2$) + – ಹ$_2$ ]

**ತೊಡಚು** 'ತೊಡರ್ಚು' ನೋ.

**ತೊಡಪ** (ನಾ). ಪೂರಕೆ; ಕಸಬರಿಗೆ: "ತೇವವಾದ ಹಡಗಿನ ಅಟ್ಟವನ್ನು ಅಥವಾ ಬೀದಿಯನ್ನು ಗುಡಿಸಲು ಉಪಯೋಗಿಸುವ, ರಬ್ಬರಿನ ಅಲಗನ್ನು ಉದ್ದವಾದ ಹಿಡಿಗೆ ಅಳವಡಿಸಿ ಮಾಡಿದ ಸಲಕರಣೆ: ರಬ್ಬರು-ಪೊರಕೆ, ತೊಡಪ " (Squeegee. ಇಂಕಿನಿ). 'ತೊಡೆಪ' ಪರಾ.

[ ದೇ.೫ ತಮಿ. ತುಟುಪ್ಪ, ತುಟೈಪ್ಪ; ಮಲ. ತುಡೆಪ್ಪ ]

**ತೊಡಪು$_1$**, ತೊಡಹು$_1$ (ಕ್ರಿ). ೧. ನಿವಾರಿಸು; ಕಳೆ: ಮೊಗದೊಳ್ ಮೊಗವಿಟ್ಟೊಡನೊಂಕಿ ಶಂಕೆಯಂ ತೊಡಪಿ (ಚಳಪಿ. ೬-೨೦೨). **ತೊಡಹು$_1$**: ೨. ಹಚ್ಚಿಕೊಳ್ಳು; ಅಂಟಿಕೊಳ್ಳು: ಇವ ಸಂಸಾರಧರ್ಮವ ತೊಡಹಿದವನಲ್ಲ (ಪ್ರಭುಲಿಮಾ. ೧೮೮-೭೦೮). [ ತೊಡು$_1$ + – ಪು$_1$ ]

**ತೊಡಪು$_2$**, ತಡಪು$_2$. ತಡುಪು, ತೊಡಹು$_2$, ತೊಡುಪು (ನಾ). ೧. ಆಭರಣ; ತೊಡಿಗೆ: ತೊಡಪಿನ ಸವಗ ಬಟ್ಟಲ ಕೌಳಿ ಮೈಜೋಡು ಹಿಡಿದ ಖಂಡೆಯ ... ರಂಜಿಸೆ ಬಂದರೊಡನೊಡ್ಡಿಯ ರಾವುತರು (ಕುಂಬಾಸಾಂ. ೧೧-೨೩); ಭರದಾ ಉಡಿಗೆ ತೊಡಪುವುಲಿವಾ ಬಾವಲಿ ಧೀರಾಪುರುಷಹರಾಕ್ರಮನ ಕಂಡೆ (ತೀರ್ಥಸು. ೨೨೦-೩): ಯುಧಿಷ್ಠಿರನು ಮೊದಲಾದ ಕೌರವಕುಮಾರಕರು . . . ಕೈಗಳಿಗೆ ತೊಡಪುಗಳನ್ನು ತೊಟ್ಟು (ಕೃಪಾಳ. ೨೩೦). ೨. ಒಂದು ಬಗೆಯ ಆಯುಧ: ದುಷ್ಟವಾದ ಮೃಗಗಳನ್ನು ಕೆಣಕಿ ಬೇಟೆಯಾಡುತ . . . ತೊಡಪು, ಕಬ್ಬಿಣದೊಣ್ಣೆ, ಪಟ್ಟಾಕತ್ತಿ, ಒನಿಕೆ, ಭರಜಿ ಮೊದಲಾದ ನಾನಾವಿಧ ಆಯುಧಗಳಿಂದ . . . ಕೊಲ್ಲುತ (ಕೃಪಾಳ. ೦೫೦). **ತಡಪು$_2$**: ೩. ದಟ್ಟಿ; ಲುಂಗಿ: ತ[ಪಾಠಾಂ. ಉ] ಡ [ಪಾಠಾಂ. ಡು]ವ ನೊ೦ದ೦ ನೆಯಿದುಕೊಟ್ಟಾಪಡೆ ಮೃಡನ ಕೈಯಿಂದಲಿನ್ನುಂ ಪಡೆಯದೇಂ ದವಸವನು (ಬಸಪು. ೨೩-೩೭); ನಡೆದನಲ್ಲಿಂ ಏವ್ರು ಹೆಗಲಿನ ಹಡವ ಸುತ್ತಿದ ತಡಪು ನೊಸಲಲಿ ಬಡಿದ ಮಟ್ಟೆಯ (ಜೂಬರ. ೦೦-೨೦). **ತಡುಪು**: ೨. ತಡುಪು ಡೊಂಕಣಿ ಭಂಡಿವಾಳುಗ್ಗಡದ ಭೋಜವು ಚಕ್ರ ನಾನಾಘಡಬಡೆಯ ಕೈದುಗಳ ತಳವಳವೆಸದುದಗಲದಲಿ (ಅಂಬಿಕಾ. ೦೯-೪೮). ೩. ತಲೆಗೆ ಬಟ್ಟೆ ಕಟ್ಟಿಕೊಂಡಿದ್ದ ಬಟ್ಟೆಯ ತರಹದ್ದೇ ಒಂದು ತಡುಪು ಸುತ್ತಿದ್ದ (ಹಂಗಾಳ್ಳಿ.೩೩೩). **ತೊಡಹು$_2$**: ೧. ಆತನ ಕರುಳವಸಾಲೆಕು ಎಡದ ಕೈಯಲಿ ಹಿಡಿದು ಕಂಠಕೆ ತೊಡಹು ಮಾಡ್ದ ನೃಸಿಂಹ (ಗಗಹಾ. ೦೯-೨೮). **ತೊಡುಪು**: ೨. ಜಯಬಾಡಿ ಶೃಂಗಾರ ತೊಡುಪೂ ಸಂಣ ಚಂದ್ರಾಯುಧಾ ಚಲುತಲಿ ಮೊದಲಾದಾ ಬತ್ತೀಶಾಯುಧಾ ಶಕ್ತಸಮರ್ತರಾದಾ (ಎಳಿ. XVI, ಗುಬ್ಬಿ: ೬೪-೨೦; ಸು. 1672). ೪. (?): ಬಿಲ್ಲ ಹೆದೆ ಹಱಿದು ಬಿಲ್ಲಿನ ಹೆದೆಯಕೊಪ್ಪು ಅಲ್ಲಲ್ಲಿಗೆ ತೊಡುಪು ಮೆಲ್ಲಗೆ ಇರಿಸಿದಡೆ ಅದಬಲ್ಲಿಯೆ ಸಿಕ್ಕಿತ್ತು (ಮೋಳಿಮಾ. ೦೮೬-೬೯೯).

[ < ತೊಡು$_1$ + – ಪು$_2$/ತೆಲು. ತೊಡುಪು ]

**ತೊಡಪ್ಪು$_3$** 'ತೊಡರ್ಪು' ನೋ.

**ತೊಡಬೆ$_1$** 'ತೊಡಂಬೆ$_1$' ನೋ.

**ತೊಡಬೆ$_2$** 'ತೊಡಂಬೆ$_2$' ನೋ.

**ತೊಡಬೆಗಳಚು** (ಕ್ರಿ). ೧. ತೊಟ್ಟನ್ನು ಕತ್ತರಿಸು,-ಬೇರೆಮಾಡು: ನುಡಿಗೆ ಮುಂಚುವ ಬಾಣ ಮಾರುತನಡಸಿ ಬೀಸುವ ಲಾಗ ತಲೆಗಳ ತೊಡಬೆಗಳಚುವ ಬೇಗವನು ಬಣ್ಣಿಸುವರೆನ್ನಳವೆ (ಕುಮ್ಮಾದ್ರೋ. ೦೮-೦೯). ೨. (ಅಲಂ) ಸಾಯು; ದೇಹತ್ಯಾಗ ಮಾಡು: ಛಾಯವಡೆದನು ಭೀಷ್ಮ ಬಳಿಕಿನೊಳಾಯುಧದ ಗುರು ತೊಡಬೆಗಳಚಿದನೀಯವಸ್ಥೆಗೆ ನಮ್ಮ ತಂದನು ಭಾನುನಂದನನು (ಕುಮ್ಮಾಕ. ೧-೦೩).

[ ತೊಡಬೆ$_1$ (< ತೊಡಂಬೆ$_1$) ಕಳಚು. (<ಕಟಲ್ಚು$_1$) ]

**ತೊಡಮೆ** 'ತಡಮೆ' ನೋ.

**ತೊಡರ್$_1$**, ತುಡರು, ತಂಡಂರು, ತೊಡರು$_1$ (ಕ್ರಿ). ೧. ಸಿಱುಕು; ಸಿಕ್ಕಿಕೊಳ್ಳು; ತೊಡಕಿಕೊಳ್ಳು: ಏಕಟಾಕ್ಷರಂಗಳೊಳ್ ತೊಡರದೆ ಸಕ್ಕದಂಗಳ ಪದಂ ಪವಣಾಗಿರೆ . . . ಪೇಟ್ಟುದು ನೀತಿ ನಿರಂತರ ಕ್ರಮಂ (ಕವಿರಾ. ೧-೧೪೯); ತೊಡರ್ದೀ ಪುತ್ರಕಲತ್ರಮೋಹದೊಳಿದೇಂ ಕಟ್ಟಿದರ್ಪೆ (ಆದಿಪು. ೧-೬೯); ಉಡೆನೂಲ್ ಸಡಿಲ್ದು ಮೇಗಾಲ್ಪುಡಿಗೆಯ ಕುಸುರಿಯೊಳೆ ತೊಡರೆ (ಶಾಬಂಕಾ. ೦೩೪); ನರಿ ತೊಡರ್ವಂತಿರಲೇಂ ಕೇಸರಿ ತೊಡರ್ಗುಮೆ ಬಲೆಯೊಳ್ (ಕಮಪ. ೧೨-೯೨); ತೊಡರ್ವೀ ಗಾಣದ ಗೂಳಿಯಂತೆ ತಿರಿಯುತ್ತಿಂತಿರ್ಪರೇ (ಅರ್ಥನೀ. ೩-೫); ತೊಡರ್ವ ನಿನ್ನಾವನರಿಷಡ್ವರ್ಗತತಿಗೆ (ಸಿದ್ಧರಾ. ೨-೪೦). ೨. ಸಿಕ್ಕಿಬೀಳುವಂತೆ ಮಾಡು; ಸಿಕ್ಕಿಸು; ತೊಡಕಿಸು: ನಾಗರಖಂಡಗಳನಾ ನಾಗರಖಂಡದೊಳೆ ತೊಡರೆ ನರನಿಸುವುದುಂ (ಪಂಪಭಾ. ೩-೮೯); ಹಿಡಿದು ದಧಿಯಂಬಾಸದೋಱಿಸಿ ಕೊಡುತ ಪುಷ್ಕರಣಿಕೆ ತಳುವನು ತೊಡರ್ದು ನಿಗ್ಗವದೆದೆಯಲಂಟ್ರಿಗಳೆಡೆಯಲೆಲರಂತೆ ಒದಲೆಡೆಯ ಲೊಲೆದಾಡೆ (ಸಾಕ್ಕಭಾ. ೦೭-೧೪). ೩. ಹೊಂದಿಕೊಳ್ಳು; ಕೂಡಿ

ಕೊಳ್ಳು ; ಸೇರು : ತಂಕಣಗಾಳಿಯೊಳಾದ ಸೊಂಕಿನೊಳ್ ನಡುಗುವ ಶೋಕವಲ್ಲರಿಯ ಪಲ್ಲವದೊಳ್ ನವಚೂತಪಲ್ಲವಂ ತೊಡರ್ದಪ್ಪೊಲಾಗೆ (ಪಂಪಭಾ. ೩-೬೫) ; ನುಡಿಯಂ ಕೇಳ್ದಾಯತ್ತ್ರದೊಳೊಡಂಬಡದು ನುಡಿವ ಪೊಳ್ನುಡಿಯ ಯರ್ದೆಯೊಳ್ ಮಾರ್ನುಡಿವ ನುಡಿಗಳೊಳಮೆಂತುಂ ತೊಡರ್ದುತ್ತರಿಸಿದ ನುಡಿಯು ಕರಂ ಬಲವಂತಂ (ಶಬ್ದಮಣಿ. ೦೨-೫೬) : ಸಿರಿಸದ ಮಾಲೆಯೊಳ್ ತೊಡರ್ದ ನೆಯ್ದಿಲ ಮಾಲೆಯೊ (ಮಲ್ಲಿಪು. ೮-೦೦೬); ಮನದಿಂ ಜಾಣ್ನುಡೆಗೊಳೆ ತೊಡರ್ದರಿನಿಯಕೂಟದೊಳಿನಿಯರ್ (ಚಂದ್ರಪ್ರ. ೮-೬೯) ; ಘನಪಾಂಸುಪಟಲದೊಳ್ ತೊಡರ್ದ ನಿಲಂ ಸುಟಿವಂತೆ (ಉದ್ಭಟ. ೧೦-೮೬); ಸರ್ವಾರ್ಥದ ಸಿದ್ಧಿಯೊಳ್ ತೊಡರ್ದು ಬೋಧಂ ಭವ್ಯಸಂಸೇವ್ಯಮಾಯ್ತು (ಪುಷ್ಪ. ೧-೨೪) : ಕೋಪಾಟೋಪದಿ ನಿಂತೆಂದನೆನಗೆ ತೊಡರ್ದ ಕನ್ಯಾರತ್ನಮನೊಯ್ದು ಮನುಜಂ ಧರಿತ್ರಿಯೊಳಿಲ್ಲಿರ್ದಪನೆಂದು (ಕಾಮಳ. ೧-೪೪ ವ). ೪. ಅಂಟಿಕೊಳ್ಳು ; ಹತ್ತಿಕೊಳ್ಳು : ತೊಡರ್ದುವು ಸಮುದ್ರದಿಂ ಪೊಱಮಡುವವಸರದಲ್ಲಿ ಮೌಕ್ತಿಕ ಪ್ರಕರ ಮೆನಲ್ ಕಡುಪಿಂದೆ ರೋಮರೋಮದೆ ಬಿಡದೆಸೆದುವು ಹರಿಗೆ ಚೆಮರ ಬಿಂದುಗಳಾಗಳ್ (ಕಾದಂಪೂ. ೯೫೫) ; ತರುಕಿನ ಮರದ ಮುಱಿಗಣ್ಗೊಳೊಗೆದ ಪಗಿನೊಳಗ್ಗಿವೆಗಡಿಂ ಕಾಲ್ತೊಡರ್ದು ಮಿಡುಕಿ ಕಳವಳಿಪ ಕಳವಿಂಕಸಂಕುಳಂಗಳುಂ (ಚಂದ್ರಪ್ರ. ೫-೬೫ ವ). ೫. ಸುತ್ತಿಕೊಳ್ಳು ; ಬಳಸು : ನಿಗಳಂದೋಲ್ ತೊಡರ್ದುದು (ಭಾಷಾಭೂ. ೧೬೫ ಉದಾ): ಕುಡಿದೊಡೆ ಪೊಟ್ಟೆಯಿಂದೆ ಬಱಿನೀರ್ ಪೊಱಪಾಯ್ವುವೆ ಸುತ್ತಿ ಕಾಲನೇಂ ತೊಡರ್ವುವೆ ದಾಂಟುವಲ್ಲಿ ನಿಱಿ (ಚಂದ್ರಪ್ರ. ೮-೬೦) : ಬೆಳ್ಪಡಿಮಿಡಿದಿರ್ಪ ರೂಪ್ಯಮಯಶೃಂಖಲೆ ರಾಜಕುಮಾರನಂಘ್ರಿದೊಳ್ ತೊಡರ್ದಿರೆ (ದಶಕು. ೭-೩೬) ; ತೊಡರ್ದಡರ್ದಲವಳ್ಳಿಗಳ ಮಂಟಪಂಗಳಿಂ . . . ತದ್ರಾಜಕೇಳೀವನಂ ಕಣ್ಗೆಸೆದುದು (ಕೃಮಿಭಾ. ೨೯-೪೫). ೬. ಬಂಧಿಸು ; ಕಟ್ಟು : "ತೊಡರ್-ಬಂಧನೇ" (ಶಮುಧಾ) : ತನಯುವಿಮೋಹಮೆಂಬ ನಿಗಳಂ ತೊಡರ್ದಿರ್ದಪುದು (ಸುಕುಮಾ. ೧೦-೩೨) ; ತದೀಯ ಶುಕದಿರವನು . . . ನೋಡಿ ತೊಡರ್ದ ಬಲೆಯಂ ಕಟಲ್ಚಿ ಕಡೆಗೆದೆಗೆದು ಮೆಲ್ಲನೆತ್ತಿ ತಂದು (ಉದ್ಭಟ. ೯-೦೨೬ ವ) ; ತಮ್ಮನಿಯರ ತೊಡರ್ದ ತೆಕ್ಕೆಯನೊದ್ದು ನೂಂಕುತ (ಜಬಪು. ೧೯-೮). ೭. ಹೋರಾಡಲು ಬಿಡು ; ಕಾದಾಡಲು ತೊಡಗಿಸು ; ಎದುರಿಸುವಂತೆ ಮಾಡು : ತೊಡರ್ದು ಬಿಡಿಂ ಸುಯೋಧನನೆನ್ನುಮಂ (ಪಂಪಭಾ. ೦೩-೯೧) : ಇವರಂ ಕೌರವರ್ಗೆ ತೊಡರ್ದು ಬಿಡು (ಪಂಚತಂ. ೨೦೯-೧೬). ೮. ಎದುರಿಸು ; ಪ್ರತಿಭಟಿಸು : "ತಳ್ತೆಯ್, ತಡಂಬರೆ, ಪೋರ್ಕುಳಿ, ತೊಡರ್ದುದು . . . ತಡಂಬೊಯ್-ಈ ೨೫ ಪ್ರತಿಹತಕ್ಕೆ ಪೆಸರ್" (ಕಶಸಾ. ೫೯-೨೯೬) : ತೊಡರದೆ ನೀಮುಮಾ ನೆಗಟ್ದ ಪಾಂಡುವುವೊಂದಿಯೆ ಬಟ್ಟಿರೊಂದೊಡಂಬಡು ನಿಮಗಿಲ್ಲ (ಪಂಪಭಾ. ೦೩-೦೮) ; ತಮ್ಮ ತಕ್ಕಿನ ಮೂಱುಂ ತಕ್ಕುಗಳುಮನದರಿಯುಂ ತೊಡರಿಯುಂ ನುಡಿದಂತೆ ತಂತಮ್ಮಾನೆಯೊಳ್ಳನಮುಮಂ ಬಿನ್ನಣಮುಮಂ ಮೆಱೆದು (ಶಾಂತಿಪು. ೩-೨೬ ವ) : ಅರಸುಗೆಯ್ವಾತಂ ಶರಣೆನೆ ಕಾವುದು ಬೇಡಿದೊಡಿರದೀವುದು ತೊಡರೆ ಸೆಡೆಯದಿಱಿವುದು (ಪಂಚತಂ. ೨೫೪-೨) ; ಮೃಗಲಕ್ಷ್ಮನದೇನೆಂದೀ ನಗೆಮೊಗದೊಳ್ತೊಡರ್ವನೆಂದು ಹಾರಾಂಶುಗಳಿಂ ನಗುವಂತೆ (ಮಲ್ಲಿಪು. ೩-೬೬) ; ತೊಡರ್ದರಿಯಂ ಕೇಸರಿಯೊಳ್ ತೊಡರ್ದಿಭಮೆಂತಂತೆ ಮಾಡುವಂ ಭುಜಬಳದಿಂ (ಅರ್ಧನೇ. ೪-೦೦೦) : ತೊಡರ್ದ ರಾಯರನೊರಸಿದಪೆನೆಂದು ನುಡಿನುಡಿದು (ಹದಶಾ. ೧-೪೫) ; ಈರೇಳು ಲೋಕದಲಿ ತೊಡರ್ವರಾರ್ ನಿಮ್ಮಡಿಗಳೊಳು (ಬಸಪು. ೨೨-೪೧); ಹರಿಯ ಬಳಗಂ ತೊಡರೆ ಗರುಡನರದೋಡುವನೆ (ಜಬಪು. ೩೩-೪೬). ೯. ಅಡ್ಡಿ ಹೊಂದು ; ನಿಲ್ಲು ; ತಡೆ ಹೊಂದು : ರಜತಗಿರಿಗುಹಾದ್ವಯದೆಡೆಯೊಳ್ ಪೋಪಂದುಮಣಮುಂ ತೊಡರದುದೀ ಪುರಗೋಪುರದೊಳೇಕೆ

ತೊಡರ್ದುದೋ ಚಕ್ರಂ (ಆದಿಪು. ೦೪-೮). ೧೦. ಮುಟ್ಟು ; ಹಿಡಿ : ಗಾಳಿ ಸೋಂಕಿದತ್ತು ಪಿಶಾಚಂ ತೊಡರ್ದುದು ಭೂತಂ ಬನ್ನಂಬಡಿಸಿದುದೆನೆ ಸಿರಿಯೊಳರಸುಗಳ್ಮೆಯ್ಯಱಿಯರ್ (ಕಾದಂಪೂ. ೫೬೩). ೧೧. ಆವರಿಸು ; ವ್ಯಾಪಿಸು : ನೀಂ ತಡೆಯೆ ತೊಡರೆ ಮನದೊಳ್ ಚಿಂತೆ ಸಮಂತಿಂತು ಬಂದೆವೆನೆ (ನೇಮಿಪು. ೪-೦೦೨); ಕಾಲ್ ತಡತಡವರೆ ತೊಡರ್ದಳಿಪಿಂದೆಳಸಿ ನೋಟ್ಪ ಮೃಗಲೋಚನೆಯಂ (ಕಾವ್ಯಾವ. ೬೨) : ಚಿಂತಾತುರಂ ತೊಡರ್ದಿರ್ಪಾ ವಿಜಯಾವತೀಸತಿಯ ದೀನವ್ಲಾನವಕ್ತ್ರಾಬ್ಜಮಂ ಪೊಡವೀಶಂ ಪುಗುತಂ ನಿರೀಕ್ಷಿಸಿ (ಕುಸುಮಾ. ೩-೩೬). ೧೨. ತೊಡಗು ; ನಿರತವಾಗು : ಮನಮನದೆ ಬಹುಪರಿಗ್ರಹವಿನೋದದೊಳ್ ತೊಡರ್ದ ಜಡರ್ಗೆ ಸಯ್ತಿರ್ದಪುದೆ (ಅಜಿಪು. ೨-೮೯) ; ಈ ಕಜ್ಜದೊಳ್ ನೀಂ ತೊಡರ್ದು ಮರುಳೆ ಬೆಂಡಾಗದಿರ್ಪೋಗು (ಗರಾಯು. ೯-೦೫) ; ಬಿಡದಾಡುವನಿತು ಪೊತ್ತುಂ ತೊಡರ್ದು ವಿಭಾವದೊಳೆ ಬಸನಿ ತನ್ನುಮನಱಿಯಂ (ಸಮುಪ. ೬-೫೨) ; ನೀನಾದಿಕೂರ್ಮನಾದಂದಾನಱಿದೊಡೆ ಪಿಡಿದು ತಂದದಂ ಮತ್ಕ್ರೀಡೋದ್ಯಾನಸರೋವರಸಲಿಲಸ್ಥಾನದೊಳಿರಿಸುವ ವಿನೋದದೊಳ್ ತೊಡರ್ದಿರೆನೇ (ಜಗವಿ. ೦೬-೩೫). ೧೩. ಉಂಟಾಗು ; ಪ್ರಾಪ್ತವಾಗು : ನೀನೆನ್ನಂ ಕಾಡವೇಡಾಂ ತೊಡರ್ದವಸರದೊಳ್ ಪ್ರತ್ಯಯಂಗೆಯ್ದನೊರ್ವಂಗೇನುಂ ತಳ್ವಿಲ್ಲದಾನೀಗಳೆ ಚಟುಲತೆಯಿಂ ನಿನ್ನನೆಯ್ತರ್ಪೆಂ (ಸುಕುಮಾ. ೭-೨೧) ; ಮರಣದ ದಂದುಗಂ ತೊಡರದನ್ನೆಗಮರ್ಚಿಪುದರ್ಥಿಯಿಂ ಜಿನೇಶ್ವರನಂ (ಸಮುಪ. ೧-೧೦೫) ; ಅಸ್ತ್ರಮಂ ತಿರಿಪಿದನುಗ್ರವೈರಿಗೆ ಭಯಂ ತೊಡರ್ವನ್ನೆವರಂ (ಜಗವಿ. ೦೨-೩೨) : ಇನಿತಾನುಮಱಿಪಿದರ್ ತೊಟ್ಟನೆ ಕುಸುಮಾವಳಿಗೆ ತೊಡರ್ದ ಮೂರ್ಛೆಯ ತೆಱನಂ (ಕುಸುಮಾ. ೦೨-೦೦೬) ; ಶಿವನಿಂ ಕಲಾಯೋಗಭೋಗ ತೊಡರ್ದ ಕರ್ಮಕ್ಷಯಂ ಮಲದ ಪರಿಪಾಕಮುಂ ಪಡೆದು (ಪಾಸೋಪು. ೦೦-೦೪೦). ೧೪. ತತ್ತರಿಸು ; ತಡವರಿಸು : ನಡುಗಲ್ಕಿರ್ದ ಬೆಮರಲ್ ತನು ತೊಡರಲ್ ನಾಲಗೆ ತಗುಳ್ದುದಾ ಮಾರ್ಗಣದಿಂ (ಪಂಪಭಾ. ೦೨-೭೨) ; ತೊಡರೆ ಕೊದಳ್ ಪೊದಟ್ದು ತುದಿನಾಲಗೆಯೊಳ್ . . . ತಡತಡಮೆಟ್ಟಿ ಪಾಡಿ ಪೊಸ ಕಳ್ಗಳನೀಂಟಿದುದಂಗನಾಜನಂ (ಸೂಕ್ತಿಸು. ೧೩-೭). ೧೫. ತಾಕು ; ಗೀರು ; ಗೀಚು : ಉಗುರ್ ತೊಡರ್ದಾಯೆಡೆ ರೇಖೆ ಪತ್ತಿ ಚೆಲ್ವಂ ತಳೆದಿರ್ಪುದು (ಚಂದ್ರಪ್ರ. ೮-೭೧). ೧೬. ತಂಗು ; ನಿಲ್ಲು : ಗಗನಗತಿಶ್ರಮಮಂ ನೆಟ್ಟಗೆ ಕಳೆವರ್ ಖಚರರದೞ[ರನ್ನದ]ನೆಗಳೋಳಿಗಳೊಳ್ ತೊಡರ್ದಿರ್ದು (ಕುಸುಮಾ. ೨-೭೭). ೧೭. ವಾದಿಸು ; ವಿವಾದ ಮಾಡು : ವೇದಾಂತ ಸಿದ್ಧಾಂತ ಪ್ರಮಾಣ ಶಾಸ್ತ್ರಂಗಳನೋದಿ ತರ್ಕಿಸುವ ಪಂಡಿತರ್ಕಳೊಡನೆ ತೊಡರ್ದು ನುಡಿದು ಸದುತ್ತರಂಗುಡುತಿರ್ಪ ಶುಕಶಾರಿಕಾನಿಕಾಯಂಗಳುಮಂ (ಪಂಚತಂ. ೧೧೮-೭). **ತುಡರು** : ೧೮. ಆಕ್ಷೇಪಿಸು ; ತರಾಟೆಗೆ ತೆಗೆದುಕೊಳ್ಳು ; ಜರಿ : ಅಣ್ಣ ಗಂಗಾಧರನನ್ನು ತುಡರಿ ಇದರ ಇತ್ಯರ್ಥಮಾಡಿಕೊಳ್ಳಬೇಕೆಂದು ಹಂಬಲಿಸಿದಳು (ಚಪರಿ. ೦೪೨); ನಾನು ಯಾವ ದೃಷ್ಟಿಯಿಂದ ಕಡಿಮೆಯೆಂದು ಈ ಅನಾಚಾರಕ್ಕೆಳದಿರಿ ಎಂದು ತುಡರುತ್ತೇನೆ (ಮುಕ್ತ್ಯ.ಡ. ೨೬). **ತುಡುರು** : ೧೯. ಈಗೀಗ ಅವನು ಅವರನ್ನು ಒಮ್ಮೊಮ್ಮೆ ತುಡುರುತ್ತಿದ್ದನು (ಕಪಲು. ೩೬); 'ದೇವರ ಗುಡಿಗಪ್ಪೇಸು ಕಾಯಿಪಲ್ಲಾ ಕೊಡು ಹಾಂಗಿಲ್ಲೇನು' ಅಂತ ತುಡುರಿದೆ (ಮಿಂಚಹು. ೯೧): ಅವರನ್ನೆಲ್ಲ ತುಡುರಿ, ಅಸ್ತವ್ಯಸ್ತವಾಗಿ ಬಿದ್ದ ಸಾಮಾನುಗಳೆಲ್ಲವನ್ನು ಜೋಕೆಯಿಂದ ಒಳಗೆ ಇಡಿಸಿದನು (ಗ್ರಾಮಾಯ. ೩೦೬). **ತೊಡರು₁** : ೧. ಕರ್ಮವೆಂಬ ಅಂಕದೊಡನೆ ತೊಡರಿದೆ (ಬಸವ. ೬೯೯) : ಆ ತೆಲುಗ ಬೊಮ್ಮಯನ ಶರನಿರ್ಘಾತಪಾತಕೆ ತೊಡರ್ದು ಮಡಿಯಲು (ಬಸಪು. ೩೪-೨೫) : ತೇಜಿಯ ದಾಂಟಿಸಿದನಾಹ ತೊಡರರಭವನ ಶರಣರಾ ಚತುರ್ವಿಧ ಪದಕ್ಕೆಂಬಂದದಿಂ ತಪ್ಪಿಕೆ (ಭಾವಚಿಂ. ೮-೧೮) ; ನರದೊಳ್

ತೂಡರಿ ರಕ್ತದೊಳ್ ನನೆದು ಪೇರೆಲುಗಳುಮನೊದೆದು . . . ದೈತ್ಯಸೇನಾಭಟರ್ ತಲೆದಡವುತೋಡಿದರ್ (ಚಲಪು.೪೪-೪೪). ೨.ಕೈದುಗಳೊಳಿಟಿದೊಡೀಯತ್ತು ಗಡಣೆಗೂಳ್ಳದು ಬಹಳ ಪಾಶಂಗಳ ಬೀಸಿ ತೊಡರಿ ಕೆಡಪಲ್ವೇಳ್ಕುಂ (ಚಲಪು. ೪೪-೧೫) ; ಭುಜಯುಗ್ಮಮಂ ತೊಡರಿಕೊಂಡುಪ್ಪರಿಸಿ ನರಕೃಷ್ಣರಿರ್ವರಂ ಬಿಡುಕಲೀಯದೆ ಬಿಗಿದು (ಜೈಮಿಭಾ. ೨೫-೫೪). ೩. ಮಹಾರಿಯ ಸ್ಥಿರಪರದೈವದೊಳ್ ತೊಡರದಿಂತು ಬರ್ದುಂಕಿದೆನ್ನೆ (ಹಂಪಾಶ. ೨೩). ೫. ಬಿಡದೆಯಲಿಸುವ ಬಳ್ಳಿ ಕಾಲನು ತೊಡರಿತು (ಕೃಭಾಲೀ. ೧೦-೨೪) ; ಪಲ್ಲವಿಸಿದ ನಿರ್ಜರವೃಕ್ಷವ ಕಲ್ಪವಲ್ಲಿಯು ತೊಡರಿಕೊಂಬಂತೆ (ಮೋಹತ. ೦೪-೮೩) ; ಬಿಡದಟಿಸಿ ತೊಳಲುತಿಹ ಬಳ್ಳಿ ತಾನೇ ಕಾಲ್ಗೆ ತೊಡರಲೇನೊಳ್ಳಿತಲ್ಲವೆ (ಚಲಪು. ೪೩-೧೪). ೬. ಕೊಡಹುವಂ ನರಮೃಗಶರೀರಿ ಚರಣಂಗಳಿಂ ತೊಡರುವಂ ಶರಭಾವತಾರಿ (ಚಲಪು. ೩೩-೨೧). ೮. ಐಯಾವೊಳೆಯ ಪುರಪರಮೇಶ್ವರರ್ ಕೇಹ ಸಂಪುಂನರಾಚಾರಗಲಿಗಳ್ ತೊಡರೆ ಬಲುಗಂಡರ್(ಕಇ. IV, ೫೫-೯; 1000?) ;ಕಣನೊಳಗೆ ತೊಡರಿದವರಿಗೆ ಬೆಂಗೊಡುವನಲ್ಲೆಂದುದುಗ್ಗಡವ ಕೇಳ್ಪೆ (ತ್ರಿಪುಶಾಂ. ೧೬೩) ; ರಾವುತರು ರಾವುತರನ್ನೂ ಕಾಲ್ಬಂದಿಯು ಕಾಲ್ಬಂದಿಯನ್ನೂ ತೊಡರಿಕೊಂಡು ...ಯುದ್ಧವನ್ನು ಮಾಡಿದರು (ಕೃಪಾವಿ. ೫೬). ೯. ತೊಡರಿಯುದ್ಧಂಪಾರ್ವಜೀವಿಗಳೆಡೆಗುಪದ್ರವದಹುದೊ ತಾ ಪೋಪೆಡೆಯೊಳೆನುತಂ ಕೈಗಳಂ ತವೆ ಬೀಸದಿಹನಂತೆ (ಬಸಪು. ೩೮-೯) . ೧೧. ಹರಿಪದದಿಂದೊಗೆದ ರಜಂ [ಹರಿ] ಪದಮಂ ತೊಡರೆ ನಡೆದುದಾ ನೃಪಸೈನ್ಯಂ (ಕುಸುಮಾ. ೦೫-೮೫) ; ಗುಹೆಯೊಳ್ ಪ್ರತಿಧ್ವನಿಗುಡುತ್ತುಂ ನಿಮ್ನಗಾಸ್ಥಾನದೊಳ್ ತೊಡರುತ್ತುಂ . . . ಶೀಡಿದುದೊಂದು ಘೋರಪವನಂ (ದಳಕು. ೭-೬೧); ಮಿಡಿವ ಮರುತನ ತಂಪು ತೊಡರುವಳಿಗಳ ಪೆಂಪು (ಶಂಕಾರಾ. ೨-೧೮-೧೦). ೧೨. ನಿಂದೆಯೊಳ್ ತೊಡರದೆ ಸರ್ವರುಂ ತನಗೆ ಕೆಯ್ಮುಗಿದಿರ್ಪತಿಭಾಗ್ಯದೊಳ್ಪುಮಂ ಪಡೆದವಳಾವಳೀಕೆಯವೊಲ್ (ದಳಕು. ೦೨-೮೫); ರಾಜ್ಯಕಾರ್ಯಗಳಲ್ಲಿ ತೊಡರುವುದರಿಂದ ಧರ್ಮವನ್ನು ಮಾತ್ರವೇ ಅಲ್ಲ ಅಧರ್ಮವನ್ನು ಕೂಡ ಮಾಡಬೇಕಾಗುವುದು (ಭೀಷ್ಮಕ. ೨೨೭). ೧೩. ಮನಕೆ ಲವಾಲಸು ತೊಡರದಂತೆ ವಿಚಿತ್ರವಿನೋದಕೋಟಿಯಂ ವಿನಯದಿನೂರ್ಮೆಯಿಂ ನೆಗಳುತುಂ (ಕುಸುಮಾ. ೬-೫) : ಅನುಲೇಪನಂಗುಡುವ ವೇಳೆಯುಮಂ ಕಿಗಿದೀವ ದಂದುಗಂ ತೊಡರೆ ಮನಂಗೊಳಲ್ ನೆರೆದರಿಂದ್ರಲತಾಂಗಿಯು ರನ್ನವಾಸದೊಳ್ (ಕೃಷ್ಣಪು. ೯-೮೭); ಎನಗೆ ಮತ್ತೀ ರೂಪು ತೊಡರಿದುದು ದೈವಯೋಗಾನುಗತಿಯಿಂದಕಟ (ಶೀಂಕಾರಾ. ೦-೦೮-೦೩). ೧೯. ಹಾಕಿಕೊಳ್ಳು; ಧರಿಸು ; ತೊಡು : ಬಿಡದುಟ್ಟ ಪಟ್ಟೆಯ ದಟ್ಟಿ ಕುಂಕುಮಗಾಸೆ ತೊಡರಿದ ದಿವ್ಯಭೂಷಣದ . . . ಸುಭಟರ ಗಡಣವೈತಂದುದರ್ತಿಯಲಿ (ಕಂನವಿ. ೨೩-೮೬).

**ತೊಡಂತೊಡರ್** = ಒಟ್ಟುಗೂಡು; ಸೇರು : ನಡುಕಮುಮಲ್ಕಟುಂ ಬೆರಸಗಲ್ಕೆಯೊಳಿಂದಿನಿತೆಂಬವೋಲ್ತೊಡಂ[ತಾಂ. ಲ್ತರಂ]ತೊಡರೆ (ಆದಿಪು. ೧೨-೨೬). **ತೊಡರ್ದರ ಗಾಣ, ತೊಡರ್ದರ ಗಾಳ** = ಪ್ರತಿಭಟಿಸುವವರಿಗೆ ಗಂಟಲ ಗಾಳದಂತಿರುವವನು; ಒಂದು ಬಿರುದು : ತೊಡರ್ದ್ದರ ಗಾಣ ಮಟಿಹೊಕ್ಕರೆ ಕಾವ ಕೊಟದ ನಾಯಕರ ಗಂಡ ಕಾಡನೂರ ಮಡಯನಾಯಕನ ಮಗ (ಎಕ. XII, ಗುಬ್ಬಿ. ೧೮-೩ ; 1366) : ಕೊಡಗರ ಕೇತಂ ಪಡವಳರೆರೆಯಮ್ಮಂ ವಿಕ್ಕದಾನಿ ಗಡಿಯರ ಸಿಂಗಂ ತೊಡರ್ದ್ದರ ಗಾಳಂ ಕೆಂಚಂ (ಸೌಇಇ. XI-ii, ೦೩೩-೩೮ ; 1087). **ತೊಡರ್ದರ ಜವ** = ಪ್ರತಿಭಟಿಸುವವರ ಪಾಲಿಗೆ ಯಮನಂತಿರುವವನು ; ಎದುರಿಸಿದವರನ್ನು ನಾಶಮಾಡುವವನು ; ಒಂದು ಬಿರುದು : ಗಡಿಯಂಕಮಲ್ಲನೆನಿಪ್ಪ ತೊರ್ದ್ದರ್ದರ ಜವನೆನಿಪರಾಶ್ರಿತರ್ಬ್ಬೇಡಿದಡಂ ಕುಡುವತ್ಥಿಗಂಡರನೆ ಪೆಸರ್ವ್ವಡೆದರ್ (ಕಇ. I, ೨೪-೧೨ ; 1149). **ತೊಡರ್ದರ ದೊಂಕಿ, ತೊಡರ್ವರ ದೊಂಕಿ** = ಪ್ರತಿಭಟಿಸುವವರಿಗೆ ದೊಂಕಿಯಾಗಿರುವವನು; ಒಂದು ಬಿರುದು : ಮಾನ್ಯಖೇಡಪುರವರಾಧೀಶ್ವರಂ ಚತುರ್ಮುಖದಾಯಿಗಗೊಂಡಳಂ ಬಡಿವಂ ತೊಡರ್ದರ ದೊಂಕಿಯದಳರಾದಿತ್ಯಂ (ಎಕ. XII, ತುಮಕೂ. ೯-೦೦ ; 1161) ; ಮಾದಿರಾಜವಿಭು ತೊಡರ್ವರ ದೊಂಕಿಯೆನಿಪ್ಪ ಬಿರುದನಿರದೆತ್ತಿಸಿದಂ (ಮುಂಲಶಾ. X, ೨೬೪-೨೭ ; 1229).

[ ದೇ.॥ ತಮಿ. ತೊಟರ್, ತುಟರ್; ಮಲ. ತುಡರು; ತೆಲು. ತೊಡರು ]

**ತೊಡರ್**$_2$, ತೊಡರು$_3$ (ನಾ). ೧. ಹೊಂದಿಕೆ ; ಸಂಬಂಧ ; ಸೇರುವುದು : (ಕ). ೨. ಕಟ್ಟು ; ಬಂಧನ : ಮೊದಲೊಳ್ಪಟಿದ್ದ ಸಂಸಾರದ ತೊಡರಂ ನಿಂದೆ ಮುಕ್ತಿಪದದೊಳ್ (ಕಾದಂಉ. ೭೦೯) ; ತೊಡರ್ದಿರ್ದ ಮೋಹಪಾಶದ ತೊಡರಂ ಪಱಿಪಡಿಸಿ ಬಿಡಿಸಿ (ಸುಕುಮಾ. ೮-೫೨): ತೀರ್ಥಕರರ್ ನಿರ್ವಾಕುಳಮೊಲ್ಲರ್ ಮೋಹೋದ್ರೇಕವಿಹೀನರ್ಕಳಿಲ್ಲಿ ರಾಜ್ಯದ ತೊಡರಂ (ನೇಮಿಪು. ೧೩-೪೭); ಮುಂಗಡೆಯೊಳ್ ಪೊರಳ್ವ ಪೆಂಡಿರ ಕುರುಳೋಳಿಯೆಂಬ ತೊಡರೊಳ್ ತಡವಾಗದೆ . . . ಸಂತತಂ ವನಾಂತರಮನೆ ಗೊತ್ತುಮಾಡಿ ಭರದಿಂ ತಳರ್ದತ್ತಧಿರಾಜಕುಂಜರಂ (ಅನಂಪು. ೩-೧೦೪) ; ತೊಡರದಿರು ಮೋಹಪಾಶದ ತೊಡರಂ (ಜೀವಸಂ. ೨೭-೫೦). ೩. ಬೇಡಿ ; ಸಂಕೋಲೆ : ತೊಡರಂ ಪೊಸೆದು ಪಱಿವ ಮದಕರಿಯಂತೆ (ಶಾಂತಿಪು. ೮-೫೦ ವ): ತೊಡರ್ಪಱಿವ ವನ್ಯವಾರಣದ ಮಾಟಿಯಿಂ (ಪಂಪರಾಮಾ. ೨-೨೦); ಪಡೆಯೆ ನವೀನಯೌವನಮನಾ ಸತಿ ತಾಳ್ದಳಿಚಿತ್ರಜಾತನುಂ ತೊಡರನತರ್ಕ್ಯನೀ ಜಗತಿಗಿಕ್ಕಿದನಾಕೆಯ ರೂಪಿನೇಟಿಗಂಡೆಡರಿದನುರ್ಕಿನಿಂ ಹರಿಹರಾಂಬುಜವಿಷ್ಟರರ್ಗೆಂಬಿನಂ ಕರಂ ಗೆಡೆಗೊಳೆ ರೂಪು ತನ್ನ ಸುತೆಗೆ (ನೇಮಿಪು. ೯-೬೦) : ತೊಡರ ಬಿಗಿ ಮದನಂಗೆ ಮದವನು ತೊಡೆ ವಸಂತನ ಮಾರುತಗೆ ಮಱುವಿಡಿಯನಿಕ್ಕು (ತೊರರಾ. ೩-೪-೧೮) : ಆವ ಕೆಯ್ಮುಂ ಬಿಡಿಸಲ್ಕೆ ಬಾರದ ಬಱುಬೆಸೆದ ತೊಡರಿಂದೆ . . . ಬಿಗಿದವೆನ್ ನಿನ್ನನ್ (ಬದ್ಮಪ್ರ. ೨-೨). ೪. ತೊಡಕು; ಗೊಂದಲ; ಗೋಜು : ಮನದೊಳ್ತೊಡರಿಲ್ಲದಾಗಳುಂ ಪರಮಜಿನೇಂದ್ರಪಾದದೊಳೆ ಕಾಂಕ್ಷಿತನಪ್ಪುದು(ಧರ್ಮಾಮೃ. ೩-೨೮೦);ದುಗುಗದ ತೊಡರಟುವ ಮನವನು ತಂದು ವೈರಾಗ್ಯದೊಳು ಶ್ರೀಜಿನಮಂದಿರದೊಳು (ಆದಿಪ. ೪೧-೧). ೫. ಕಟ್ಟುವ ಸಾಧನ; ಹಗ್ಗ, ಸರಪಳಿ ಮೊದಲಾದುವು: ವಸಂತಗೃಹಮಂಪೊಕ್ಕು ನಡುಮಣೆಳಗೌಂಗಿನ ಬಾಳ್ಗಂಬದೊಳ್ ತೊಡರ್ಚಿದ ಲತೆಯ ತೊಡರ ತೂಗುಂಮಂಚದೊಳ್ . . . ಕುಳ್ಳಿರ್ದು (ಚಂದ್ರಪು. ೭-೯೫ ವ): ತಳಸಂಕಲೆಯ ತೊಡರಂಕಣಿಯ ಕೊಂಡೆಯ . . . ಬಲುಪೊರಜೆಗಳ ಬಾರಸಂಕಲೆಗಳನು ಬಿಗಿದರು ಜೋಡಿಸಿದರುಬ್ಬರದ ಮದಗಜವ (ಕುಮಾರರಾ. ೩-೨). ೬. ಸ್ಪರ್ಧೆ; ಹುರುಡು; ಸವಾಲು ಹಾಕುವುದು: ಅತಿಕಾಮಿ ಚನ್ನಮಲ್ಲಿಕಾರ್ಜುನಯ್ಯಂಗೆ ತೊಡರನಿಕ್ಕಿ ಎರಡಱಿಯದೆ ಕೂಡಿದೆನು (ಮಹಾದೇ. ೫. ೬೦-೧೬೪). ೭. ಒಡವೆ ; ಆಭರಣ ; ಭೂಷಣ : ಸುರಯಿಯ ಚೊಲ್ಲೆಯುಮುಂ . . . ಪೊಂಬಾದರಿಯ ಕಿಱುಮುಗುಳ ತೊಡರುಂ ಪರಿವಡೆದಿರೆ ಬಂದನಟ್ಟಿಯಿಂದೆ ಬಸಂತಂ (ಕಬ್ಬಿಕಾ. ೩೨೫). ೮. ಬಿರುದಿನ ಸಂಕೇತವಾಗಿ ಧರಿಸುವ ಕಾಲ ಬಳೆ ; ಬಿರುದಿನ ಪೆಂಡೆಯ : "ತೊಡರ್–ಬಂಧನೇ, ಬಿರುದ ಶೃಂಖಲಾಯಾಂ ಚ (ಬಿರುದಿನ ಸರಪಣಿ)" (ಕಮಧಾ): "ತೊಡರೆಂದೊಡಕ್ಕು ಬಿರಿದಿನ ಪಾಹೆ" (ಕಬ್ಬಿಕೈ. ೬೬) ; ಬಿರುದಿನ ಅಂಕಮಾಲೆ ತೊಡರಿಕ್ಕಿದ ಕಾಲಲು ಗಂಡಪೆಂಡರಂ (ಸೌಇಇ. IX-i, ೨೬೬-೩೨ ; 1183) ; ಪೊಳೆಪೊಳೆವುತಿಪ್ಪ ಪೊಂಬಟ್ಟೆಯಂ ಬಿಗಿದುಟ್ಟು ಘುಳುಘುಳಿಪ ಹೊಸ ತೊಡರನೆಡಗಾಲೊಳೂಲಿದಿಟ್ಟು (ಇಹರ. ದೇ. ೪೦-೧೦): ಬಾವುಲಿಯ ಕಾಲ ತೊಡರ ಮಹಾವೀರರ್ ಜೋಣೆ ಬವರಮಂ ಕೆಣಕಲ್ (ದಳಕು. ೨-೧೬) ; ನಿಮ್ಮ ನೂರ್ವರ ಬಣಗುಗಳಿಗೆಡಗಾಲ ತೊಡರಿದೆ ಬನ್ನಿ ನೀವೆನುತ

(ಕುವ್ಯಾ.ಆ. ೬-೪); ಕಡುಸಡಗರಂ ಮಿಕ್ಕು . . . ಬಿರುದಿನ ತೊಡರ್ ಝುಣ ಝುಣಿಸಲೇಳ್ದು (ರಾಜಶೇ. ೬-೦೦ ವ). 'ಕಾಲ್ದೊಡರ್' ಪರಾ. ೯. ಅಡ್ಡಿ; ಅಡಚಣೆ; ತೊಂದರೆ: "ಪ್ರತಿಬಂಧದೊಳು ತೊಡರೆನಿಕ್ಕು" (ಶಶಶ. ೧೨೪); ಜಯಕೇಶಿದೇವಮ[ಹಿ]ಪಂ ತಳದಂ ವಾ[ನ]ನಿಧಿ ಸಕಳ ಧಾತ್ರಿಯನೇನುಂ ತೊಡರಿಲ್ಲ ತಂನ ದಕ್ಷಿಣಭುಜದೊಳು (ಶಾ. V. ೩೨-೦೦; 1215); ಈ ಮುಖವನ್ನೆದೆ ನಡೆಸುವುದನ್ನಯಕ್ಕೆ ತೊಡರಪ್ಪುದು ವಿಚಾರದೊಳ್ಕೈಕೊಂಬುದು (ಕೃಮಿಥಾ. ೨-೬೨); ತೊಡರ್ಗಳನೆಲ್ಲ ಮುಂದೆ ಸರಿಗಯ್ಯುವದು (ಕಾಲಜಿ. ೧೬೮-೩೬೬). ೧೦. ವ್ಯಾಜ್ಯ; ವಿವಾದ: ಸೀಮಾವಿವಾದದಿಂ ತದ್ಭೂಮಿಜರೋರೊರ್ವರಂ ಪಳಂಚಲೆವೆಡೆಯೊಳ್ ಸೀಮೆಗಳ ತೊಡರನುಡುಗಿಸಿ ಸೀಮಂಕರನೆಂಬುದೊಂದು ಪೆಸರಂ ಪಡೆದಂ (ಅದಿಪು. ೬-೫೭). ೧೧. ಯುದ್ಧ; ಜಗಳ; ಕದನ: "ತೊಡರೆಂದೊಡೆ ತೋಟಿಯುಕ್ಕುಂ" (ಛಾಂದಿ. ೨೨). ೧೨. ವ್ಯವಹಾರ; ಕೆಲಸ; ಉದ್ಯೋಗ: ಅರ್ಥಿಸಂತತಿಗೀಯಲ್ ಬಿಡುವೊನ್ನುಮನಾಳ್ಗಟ್ಟುವ ತೊಡರೊಳ್ ತೊಡರ್ದಿರ್ದರರಸುಮಕ್ಕಳ್ಕೆಲಬರ್ (ಜಂಪಥಾ. ೧೦-೩೮).

ತೊಡರು$_2$: ೩. ಪಟ್ಟಮಾಧಿಯನೊಂದಿರಲಿ ವಾಚಿಸಲಿ . . . ಕರ್ಮದ ತೊಡರ ಬಿಡಿಸುವುದು (ಗಗಹಾ. ೧೬-೫೩); ಎಳೆಹರೆಯದಲ್ಲೇ ಸಂಸಾರದ ತೊಡರನ್ನು ಹರಿದು . . . ಹೊರಟ ಈ ತೇಜಸ್ವಿನಿಯ ಏಕನಿಷ್ಠೆ ಹಿರಿಯ ಅನುಭಾವಿಗಳನ್ನೇ ಬೆರಗುಗೊಳಿಸಿತು (ಅಷ್ಟಕ. ೧೦೨). ೪. ಛೀಮಫಲು ಗುಣರಿಟ್ಟ ತೊಡರಿನೊಳಾರು ಸಿಲುಕರು ದಿವಿಜದನುಜರಲಿ (ಕುವ್ಯಾದ್ರೋ. ೧೮-೨೮); ೫. ಪ್ರದಕ್ಷಿಣಂಗೈದು ತೊಡರು ಕಾಡಕೆಯಂ ತೆಗೆಸಿ ಇಮ್ಮಡಿ ಘಂಟೇಂದ್ರ ನರೇಂದ್ರಂ ಹನುಮಗತಿಯಿಂದೇರಿದನು (ದೀಳಿವಂ. ೦-೪೫ವ). 'ಕಾಡಣೆ' ಪರಾ. ೬. ಅನುಪಮಪ್ರಣವಮಂದುಗೆ ದಯೆಯ ತೊಡರು . . . ಚಿತ್ತಿನ ನೊಸಲುಗನ್ನಡಿಯೊಳೆಸೆದನು (ಸಿದ್ಧರಾ. ೩-೪೬); ಸಿರಿಯ ಸಡಗರದ ತೊಡರ ಝುಣಝುಣರವದ ಮಲ್ಲಡಿಯಿಡುವ ಗಮನದ ಭರದಿ ಕಿಟುಬೆಮರಿಡುತ ಬಂದಳು (ನಳಚ. ೩-೫೬); ಚಾಮಿಸಾಕರದ ತೊಡರಿನೊಳ್ಳೆಳಗು ಪೊಂಬಿಸಿಲೆಸಕಮಾಗೆ (ನಂದಿವಾ. ೯-೪). ೮. ಕಲಿಯ ಕಾಲ ತೊಡರು ಛಲದಾಳಿಗಲ್ಲದೆ ಇಕ್ಕಬಾರದು (ಬಸವ. ೬೬೫); ಬಾವುಲಿಯ ತೊಡರುಗಳ ವೀರಗಣಾವತಾರದ ವೀರಭಕ್ತರು (ಬಸಪು. ೫-೪೦); ತೊಡರ ತೆಗೆದರು ಕೈಯಡಾಯ್ದವ ಜಡಿಯಲಮ್ಮರು...ಕೈದೀವಿಗೆಯ ಮುಟಿಯಲಿ ಮಿಡುಕದಿರ್ದುದು ರಾಯನೋಲಗದೊಳಗೆ ಪರಿವಾರ (ಕುವ್ಯಾಶ. ೦-೦೮); ತೊಡರ ಝುಣಝುಣರವದ ಸುರರುಪ್ಪಡಣದ ಬಿರುದಿನ ಬಾವುಲಿಯ . . . ರಾಯರಕ್ಕಸನೈದಿದನು ಧನುವ (ತೊರರಾ. ೦-೫೫-೦೦); ಸೀಸಕದ ಪುಸ್ತಂಗ ತೊಡರಗಾವಳಿಯಿಂದ ಭೂಪೋತ್ತಮ ನಡೆದನುಬ್ಬಿನಲಿ (ಕಂಠವಿ. ೧೫-೦೨). ೯. ಪಾಶ್ಚಾತ್ಯ ದರ್ಶನಕಾರರೂ ಎಷ್ಟೋ ತೊಡರುಗಳಿಗೆ ಗುರಿಯಾಗಿರುತ್ತಾರೆ (ಜೀವಾಕ್ಕ. ೪೫). ೧೪. ಹೊಡೆತ; ಪೆಟ್ಟು (?): ಬಾಳ ಹೊಯ್ಲೋ ಸಿಡಿಲ ತೊಡರಿನ ಸೂಳುಗಳೋ ಸಿಡಿದಲೆಯ ಗಿರಿಗಳ ಬೀಳುಗಳೊ (ಕುವ್ಯಾಸ. ೨-೦೦೪).

ತೊಡರ ಬಾವುಲಿ = ಬಿರುದಿನ ಪೆಂಡೆಯ: ತೊಡರ ಬಾವುಲಿಯೊಳಗೆ ಜವಿ ಹಲವು ದಂಡೆಯಿಂ ಗುರುಗಂಜಿಯಿಂ ಸವೆದ ದಂಡೆ ಮಂಡೆಯೊಳೊಪ್ಪೆ (ಬಸರ. ೯-೯೮).

[ <ತೊಡರ್$_1$./ತಮಿ. ತೊಟರ್, ತುಟರ್; ಮಲ. ತುಡರ್; ತುಳು. ತೊಡರ್, ತೊಡರು ]

ತೊಡರಿಕ್ಕು (ಕ್ರಿ). ೧. ತೊಡಕಿಸು; ತೊಂದರೆಯನ್ನುಂಟುಮಾಡು: ಎನಿತಾನುಮುಪದ್ರವಂಗಳೊಳ್ ತೊಡರಿಕ್ಕೆಯುಂ ಗೆಲಲಾಱದೆ (ಜಂಪಥಾ. ೨-೩೨ವ); ಅನ್ಯಮಂತ್ರಿನಿಕರಕ್ಕದಟಿಂ ತೊಡರಿಕ್ಕಿದಂ (ಎಕ. VIII, ಸೊರಬ. ೧೪೮-೫೪; 1199). ೨. ಹುರುಡಿಸು; ಸವಾಲು ಹಾಕು; ಸ್ಪರ್ಧಿಸು: ಸಾಯಿಸುವ ಸಾವಂಜಿತನಗೆ ಚಿರಾಯು ತೊಡರಿಕ್ಕಿದನು ಮಾರ್ಕಂಡೇಯಮುನಿಗೆಂದರಸ ದೊಪ್ಪನೆ ಕೆಡೆದನವನಿಯಲಿ (ಕುವ್ಯಾಶಿ. ೦-೩). ೩. ಸಂಕೋಲೆ ಹಾಕು; ಬಂಧಿಸು. [ ತೊಡರ್$_2$ + ಇಕ್ಕು ]

ತೊಡರಿಚು 'ತೊಡರ್ಚು' ನೋ.

ತೊಡರಿಸು (ಕ್ರಿ). ೧. ಸಿಕ್ಕಿಸು; ತೊಡಕಿಸು: ಬಲದ ಕಡೆಯ ಮಿಣಿವಲೆಯನೊಡ್ಡಿ ತೊಡರಿಸಿ ಹಿಂದಣ ಬೇಟೆಯ ನಾಯ್ಗಳ ಕೆಡಹುವ ಮುಂದಣ ಬೇಡನು (ಶಿಕಗೀ. ೬೫೩); ಕೂಟದ ತೋಟಿಯೊಳ್ ತೊಡರಿಸಿಯುಂ ಅಗಲ್ದ ಮನಮಂ ಮಣಿಯಿಸಿಯುಂ . . . ಸುಪ್ರಭಾತ ಸಮೀರಣಂ ಕೀಡುತ್ತಿರೆ (ಲೀಲಾವ. ೩-೨೦); ಕಡೆಗಣ್ಣ ಪಾಶಮಂ ತೊಡರಿಸುತ (ಪಂಶಾರಾ. ೫-೬-೫೨). ೨. ಕೂಡಿಕೊಳ್ಳು; ಸೇರು: ತೊಡರಿಸುತ ಕೊಡಹಿ ಕಳುಹುವ ಸೂಳೆಯನು ಕೊಡಚುವವನೆಗ್ಗ (ಸರ್ವಜ್ಞ. ೦೯೩೬). ೩. ಸೇರಿಸು; ಕೂಡಿಸಂ: ತೊಡರ್ಪಂ ತೊಡರಿಸುವ ನರಕಗತಿಯೊಳ್ ತೊಡರ್ವುದೆ (ಅಜಪು. ೨-೬೦); ನಿನಗೆ ಅಪಯಶಸ್ಸಿನ ಮೇಲೆ ಆಸೆಯಿದ್ದರೆ ನಮ್ಮ ಹೆಸರನ್ನೇಕೆ ಇದರಲ್ಲಿ ತೊಡರಿಸಿದ(ಮುಧ್ಯಮ. ೨೦೦). ೪. ನಿಯಮಿಸಂ; ನಿಯೋಜಿಸಂ: ಅತಿ ಭಟರಂ ತೊಡರಿಸಲವರತಿವೇಗದೆ ನಡೆತಂದಾ ಕಡಬ ದುರ್ಗ್ಗವನಮಂ ಪೊಕ್ಕರ್ (ಹಾರಾಸ್ಯ. ೦-೪-೬೩). ೫. ಪ್ರವರ್ತಿಸು; ಉದ್ಯೋಗಿಸು: ಬಿಡದೆ ಸೋಂಕುವ ಕೈಗಳಾದಡೆ ತೊಡರಿಸು [ಪಾಠಾಂ. ಚು]ವ ಸತ್ಕ್ರಿಯೆಗಳೊಡನೊಡನುಡುಗೆ ಗದ್ಗದಕಂಠಸಂಗತಿಯಿಂದೆ ದನಿಗೊಡುವ (ಬಸಪು. ೩೫-೫). ೬. ಬಂಧಿಸು; ಕಟ್ಟು.

[ ತೊಡರ್$_1$ + – ಇಸು$_3$ ]

ತೊಡರು$_1$ 'ತೊಡರ್$_1$' ನೋ.

ತೊಡರು$_2$ 'ತೊಡರ್$_2$' ನೋ.

ತೊಡರು$_3$, ತೊದುರು (ನಾ). ಒಂದು ಬಗೆಯ ತೆರಿಗೆ: ಆನೆಯ ಸೇಸೆ ಗ ೨ ಪ ೬ ತೊಡರು ಹಾ ೧ ಖಾಣ ನಿಬಂಧ ವ ೯ (ಎಕ. VI, ಕಡೂರು. ೬೮-೩೫; ?). ತೊದುರು: ಕಲುಕು ಹಾ ೨ ತೊದುರು ಗ ೪ ಆನೆಯ ಸೆಗ ೬ ಅ ೧ ವ ೨ (ಎಕ. V,ಹಾಸನ. ೬೪-೬೪; ಸು. 1280). [ ? ]

ತೊಡರುಗಟ್ಟು (ಕ್ರಿ). ಹುರುಂಡಿಸು; ಸ್ಪರ್ಧಿಸಂ: ತೊಡರುಗಟ್ಟುವ ಜೈವ ಭಟ್ಟರ ಬಿಡುವ ಕಾದುವ ವೀರಭಟರಿಂದಿಡಿದುದಮರಾವತಿಯ ಸೊಂಪಿನ ಸೂಳೆಗೇರಿಗಳು (ಕುವ್ಯಾಛೀ.೫-೨೦).[ತೊಡರು$_2$(<ತೊಡರ್$_2$) + ಕಟ್ಟು$_1$ ]

ತೊಡರುಗಾಲು (ನಾ). ೧. ಅಡ್ಡಲಾಗಿ ಒಡ್ಡುವ ಕಾಲು; ಅಡ್ಡಗಾಲು: ಅವರು ನೂರೊಂದು ಜನವಿದ್ದರೂ ಅವನೊಬ್ಬನೇ ಎಲ್ಲರನ್ನೂ ಮರ್ದನ ಮಾಡಿಬಿಡುವವನು. ತೊಡರುಗಾಲು ಕೊಟ್ಟು ಬೀಳಿಸುವವನು (ಪಕಥಾ. ೧೬). ೨. ನಡೆಯುವಾಗ ಹರಡುಗಳು ಪರಸ್ಪರ ತಗಲುವ ಕಾಲಂ. ೩. (ಆಲಂ) ಅಡ್ಡಿ; ಅಡಚಣೆ. 'ತೊಡಕುಗಾಲು' ಪರಾ.

[ ತೊಡರು$_1$ (< ತೊಡರ್$_1$) + ಕಾಲು$_1$ (< ಕಾಲ್$_1$) ]

ತೊಡರುಗೊಳ್ಳು (ಕ್ರಿ). ಬಿಗಿಯಾಗು; ಬಿಗಿದುಕೊಳ್ಳು: ಅವಯವದ ಸಂದುಗಳೆಲ್ಲವೂ ತೊಡರುಗೊಂಡು . . . ಮಧ್ಯಮವಾದ ಜ್ವರವೇಗ ವುಂಟಾಗಿರುವುದೇ ವಾತಶ್ಲೇಷ್ಮಜ್ವರವೆನಿಸಿಕೊಳ್ಳುವುದು (ಸಳಶ್ಯ. ೯೫).

[ ತೊಡರು$_2$ (< ತೊಡರ್$_2$) + ಕೊಳ್ಳು$_1$ (< ಕೊಳ್$_1$) ]

ತೊಡರುಮುಳ್ಳು (ನಾ). ತೊಡಕಿ ಹಿಡಿದಂ ಕೊಳ್ಳುವ ಕೊಕ್ಕೆಯಾತಿರುವ ಮುಳ್ಳು: ತೊಡರುಮುಳ್ಳಿಗೆ ತಗುಲಿ ಬಟ್ಟೆಯೆಲ್ಲಾ ಹರಿದುಹೋಯಿತು (ರೂಢಿ).

[ ತೊಡರು$_1$ (< ತೊಡರ್$_1$) + ಮುಳ್ಳು (< ಮುಳ್) ]

ತೊಡರುಲಿ (ನಾ). ಆಭರಣದ ಧ್ವನಿ; ಒಡವೆಯ ಸದ್ದು: ಮಾತೆಯ ಬಳಿಗೆ ಪರಿದೈದಿ ತೊಡರುಲಿಯೊಳು ಮಾಡುತ್ತೆ ಮುದ್ದ (ಸವಮೋ. ೧೫-೫೮). [ ತೊಡರು$_2$ (<ತೊಡರ್$_2$) + ಉಲಿ$_2$ ]

**ತೊಡರ್ಚು, ತೊಡಚು, ತೊಡರಿಚು** (ಕ್ರಿ). ೧. ಕಟ್ಟು; ಬಂಧಿಸು: "ತೊಡರ್ಚು – ಬಂಧನೇ" (ಶಮದ); ತನ್ನ ನಿರ್ಭರಪ್ರಣಯಿನಿಗಳದೊಳೆ ತೊಡರ್ಚೆ ತಾಗಿದಳ್ (ಆದಿಪು. ೧೨-೩೬ ವ); ದಾಮೋದರನಾಂ ಪುತ್ರಿಯನೀ ಮುೞಿದಪೆನೆಂದದೊಂದು ಕುಜಮಂ ಕಾಂಚೀದಾಮದೆ ತೊಡರ್ಚಿ . . . ಮೆಟ್ಟಿದಳ್ (ಜಗವಿ. ೫-೨೦); ತೊಡರ್ಚಿದ ತೊಡಕ ಬಿಡಿಸ ಪೋಗಿ ಕಪ್ಪಿನೊಳ್ಕೆಡದೊಲಾಯ್ತು (ಸೊಬಗಿ. ೨೦-೬೯); ಪಿಂಗಾಲ್ಗೆ ತೊಡರ್ಚಿದಗ್ಗರಣೆಯಂ ಛಟಛಟನೆ ಕೀಳ್ತು (ರಾಜಶೇ. ೬-೧೦ ವ). ೨. ಸಿಕ್ಕಿಸು; ತೊಡಕಿಸು: ದೇವರೆನ್ನಂ ಧರಾಭರದೊಳ್ ತಂದು ತೊಡರ್ಚೆ ಪೂಣ್ದು ತಲೆಗೋದಿರ್ದುಂ (ಆದಿಪು. ೪-೮೧); ನಿಜೋದ್ಯ ಸೆಜ್ಜಂಗನೆತ್ತಿ ನಿಜನೀವಿಯೊಳಾಯ್ದು ತೊಡರ್ಚಿ (ಕುಸುಮಾ. ೬-೭೮). ೩. ಸೇರಿಸು; ಹೊಂದಿಸು; ಕೂಡಿಸು; ಜೋಡಿಸು: ತಡವಡಿಸಿ ಯತಿಯನಿಂತಿರೆ ತೊಡರ್ಚೆ ಕಿಡೆಪೇಳ್ದೊಡಕ್ಕುಮದು ಯತಿಭಂಗಂ (ಕವಿರಾ. ೧-೭೩); ತಡೆಯದೆ ಭಮ್ಮರನಖದೊಳ್ ತೊಡರ್ಚೆ ಕಯ್ಗೊಳಿಪ ಸರ್ವಯಶರಂ ನೀಂ ಕಂಡು (ಶಾಂತಿಪು. ೪-೬೭); ಮಾಂಗಾಯ ಫಲಾವಳಿಗಳೊಳಂ ತೊಡರ್ಚಿದ ಪುನ್ನಾಗದ ಸೂಸಕಂಗಳೊಳಂ . . . ಪೊಂಬಾೞೆಯ ಚಾಮರಂಗಳೊಳಮೆಸೆವ ಮಂಟಪಂಗಳ್ (ಕಾದಂಉ. ೭೮೩); ದೇವಾಂಗವಿತಾನಮಂ ತೊಡರ್ಚುವ ನವಮುಕ್ತಾವಳಿಯಂ ಕಟ್ಟುವ ದಿಗ್ದೇವಿಯರೇಂ ರಾಗರಸದೊಳೋಲಾಡಿದರೋ (ಮಲ್ಲಿಪು. ೧೪-೨೩೦); ತದೀಯ ಪಾಣಿಪಲ್ಲವಮನನುರೂಪ ಕನ್ಯಾಕರಕಿಸಲಯದೊಳ್ ತೊಡರ್ಚಲ್ ಬಗೆದು (ಅರ್ಧನೇ. ೨-೩೪ ವ). ೪. ಧರಿಸುವಂತೆ ಮಾಡು; ತೊಡಿಸು: ಬೇಡವೇಡನೆಯುಂ ಕಿವಿಯೊಳ್ತೊಡರ್ಚೆ ಪೋದಳೀ ಕುಸುಮ ಮಂಜರಿಯಂ (ಕಾದಂಪೂ. ೭೬೮); ಒಲವಿಂ ಮಣಿನೂಪುರಮಂ ತೊಡರ್ಚಿದಳ್ (ಉದ್ಭಟ. ೮-೩೯); ಮೆಚ್ಚಿ ವಸುದೇವನ ಕೊರಳ್ಗೆ ತೊಡರ್ಚಿದಳು ನವರತ್ನಮಾಲೆಯ (ಸಾಳ್ವಭಾ. ೧೮-೩೬); ಫುಲ್ಲಶರನ ಪಲ್ಲವಶರಕ್ಕೆ ಕೆಂಗಱಿಗಟ್ಟಿದಂತೆ ಕೆಂಬೆಳಗಂ ಕಱೆವ ಕೆಂಬೆರಲುಂಗುರಮನಂಗುಲಿಯೊಳ್ತೊಡರ್ಚಿಯುಂ (ರಾಜಶೇ. ೧೩-೫೯ ವ). ೫. ಮುಡಿಯುವಂತೆ ಮಾಡು; ಮುಡಿಸು: ಲಳನೆಯ ಕೇಶದಲ್ಲಿಯಲರುಂ ತಳಿರುಂ ಪೊಳೆವಂದದಿಂದೆ . . . ದೇಸೆಯ ಪೂಮುಡಿಯಂ ತೊಡರ್ಚಿದರ್ (ಚಂದ್ರಪು. ೬-೩೪). ೬. ಪೋಣಿಸು; ಸರಕಟ್ಟು: ಧಾತ್ರೀಶನ ಸಾಂದ್ರಮನಸ್ಸೂತ್ರದೊಳಾ ಸತಿಯ ಗುಣಗಣೋದ್ಗಮತತಿಯಂ ಚಿತ್ರವಿಧದಿಂ ತೊಡರ್ಚಿದ ಧಾತ್ರಂ ಮುಂ ಮಾಲೆಗಾಱರೊಡನಾಡಿದನೋ (ಚಂದ್ರಪು. ೩-೨೮); ನಳಿನಗುಣದೊಳ್ ತೊಡರ್ಚುತುಂ ಮೆಲ್ಲಮೆಲ್ಲನಿರವಂತಿಯ ಪೂದೊಡಗೆಗಳಂ ವಿರಚಿಸಿದರ್ (ಗಿರಿಕ. ೫-೭೨); ಮಲ್ಲಿಗೆ ಮುಗುಳ ಸೂಸಕಂಗಳಂ ತೊಡರ್ಚಿ ನಿರ್ಮಿಸಿದ ಚೂತಪಲ್ಲವದ ಚುಂಚುಲೋವೆಯಿಂ (ರಾಜಶೇ. ೧೦-೩೧ ವ). ೭. ತೊಡಗಿಸು; ನಿಯೋಜಿಸು: ಕರ್ಣನಂ ದ್ವಂದ್ವಕಲಹದಿಂ ದೇವಾಂಗನಾ ರತಿಕಲಹದೊಳ್ ತೊಡರ್ಚಿ (ಜಗವಿ. ೧೫-೫ ವ). ೮. ಉಂಟುಮಾಡು; ಆಗಿಸು: ಅಳೀಕ ಲಜ್ಜೆಯಿನೇಂ ನಿನಗೆ ಗಮನಾಯಾಸಮನೆ ತೊಡರ್ಚಿದಪ್ಪೆಂ (ಕಾದಂಉ. ೩೯೯); ಮತಿ ಸಮ್ಮೋಹಮನಿದಿರವರ್ಗೆ ತೊಡರ್ಚಲ್ಕೇಟ್ಟೊಡಲ್ಲಿಗಲ್ಲದು ದೋಷಂ (ಕಾವ್ಯಾವ. ೪೫೬); ವಿರಹಾತುಳಾಗ್ನಿ ತಾಪವನಿದನೆಂತು ನಂದಿಸುವೆನೇನನೊಡರ್ಚುವೆನಾವುದಂ ತೊಡರ್ಚುವೆಂ (ಕುಸುಮಾ. ೧೦-೨೩). ೯. ಆರಂಭಿಸು; ತೊಡಗು; ಪ್ರಾರಂಭಮಾಡು: ಮೆಯ್ಗಲಿತನದಿಂ ತೊಡರ್ಚಿದವು ಕಾಳೆಗಮಂ ಕಡುಕೆಯ್ದು ಕೋಟಿಗಳ್ (ದಶಕು. ೧೧-೫೦); ಕಳಲೆನಾಡೊಳೊಡರ್ಚಿ ತೊಡರ್ಚಿ ತೋಟಿಯಂ . . . ಬಂದ ಮಲೆನಾಡಿನ ಸಿಂಗಳರಾಯ (ಚೆಳವಿ. ೨-೬೮). ೧೦. (ಬಿಲ್ಲಿಗೆ ಬಾಣವನ್ನು) ಹೂಡು,–ಸಂಧಾನ ಮಾಡು,–ತೊಡು: ಮಲ್ಲನೆ ಬಿಲ್ಲೊಳಂಬಂ ತೊಡರ್ಚಿ (ನೇಮಿಪು. ೧-೭೫ ವ); ಬಿಲ್ಗೆಸುವ ಬಾಣಮಂ ತಿರುಪಿ ತಿರ್ದುವ ಮಾರ್ಕಿರುವಂ ತೊಡರ್ಚೆ ನೋಟ್ಪಾ ಸಹಜ ಕ್ರಿಯಾವನ ವನೇಚರರಿಂ ಬಗೆಗೊಂಡುದಾ ವನಂ (ಜಗವಿ. ೧೬-೧೬); ಹೊಸಮಸೆಯ ಬಾಣಂಗಳಂ ತೊಡರ್ಚಿ ಹೞಿದಲೆಯನಾತ್ಮಜನನೆಚ್ಚು ಮರಳೆಚ್ಚು ಬೊಬ್ಬಿಱಿದು ಕೈಯೊಡನೆಸೆಯ (ಜಿನಪು. ೪೦-೧೨). **ತೊಡಚು**: ೧. ಸಿದ್ಧಪತಿಯೊಂದು ದಿನ . . . ಪದ್ಮಾಸನಂಗೆಯ್ದು ಶಶಿರವಿಗಳಂ ಬಲಿದು ಕರಣಂಗಳ ತೊಡಚಿ ಕುಂಡಲಿಗೊತ್ತಿ (ಸಿದ್ಧರಾ. ೪-೨೬); ರಘಾಡಿಸುವ ತೆಗೆವ ತೊಡಚುವ ಬಿಡಿವ . . . ವಿರೋಧಿಯಿಂಗಿತವಱಿವ ಭಿನ್ನಣಾ ಹರನರರೊಳೆಸೆದಿರ್ದುದು (ಕಬಪು. ೫೩-೫೦). ೨. ಬಲಿದಂತಃಕುಂಡಲಿಯೊಳ್ ಪ್ರಾಣವ ತೊಡಚಿ . . . ನೆಗೆದಳ್ ಗಗನಾಂಗಣಕೆ (ವೀರೇಶ. ೦-೬೮); ವರಮಂದಿರದ ಮೇಲ್ವಲಗೆಯ ಕೊಂಡಿಗೆ ಸರಪಳಿಯನು ತೊಡಚಿದರು (ಮೋಹತ. ೧೬-೪೯). ೩. ಕಡಿಗಳ ಹದಿನೆಂಟನೊಡಗೂಡಿ ಸಂಧಿಸಿ ತೊಡಚಿ ಕಟ್ಟಿದ ನರರ ಬಂಧನದಲ್ಲಿ (ದೇವಾಪ. ೩೬-೭೨); ನೇಹದ ನಲ್ಲರ ತೋಳೊಳ್ ತೊಡಚಿದ ಬಾಹುಲತಿಕೆದೆಗೆದೊಯ್ಯನೆ ಕುಲಟಾವ್ಯೂಹಂ ನಡೆತಂದುದು (ಜಯನೃ. ೦೪-೨). ೪. ಮಾಲೆ ತೊಡಚುವ ಕಜ್ಜಮಂ ಮಱೆದು ನಿಬ್ಬೆಱಗಾವಡೆದು ಲೆಪ್ಪದ ಪೆಣ್ಣನಂತಿರ್ದಳು (ಸೌಂದಪು. ೧೨-೪೦). ೯. ಖಗರಾಜನೊಳು ಹಿಂದೆ ಕಾದಿ ನುಗ್ಗಿದ್ದವರ್ ಜಗಳವ ತೊಡಚಲುಬಹುದೆ (ಮೋಹತ. ೩೯-೨೦). ೧೦. ಕಡೆಗಾಗಳಿಸಿಪ ಬಾಣವನು ಭೂಚಾಪದಿಂ ತೊಡಚಿ ಎಸುವುದು (ಅಂಬಿಕ. ೩-೧೫೫); ಒಂದನಲ್ಲದೆ ನಿನ್ನ ತಲೆಗೆರಡಂಬ ತೊಡಚಿದರೆ ಇಂದು ನಿನ್ನಯ ಬಾಯ ತಂಬುಲ ತಿಂದವನು ನೋಡು (ಕುಮಾರರಾ. ೧೬-೩೮); ಎಚ್ಚ ಬಾಣವ ತಱಿದು ತೊಡಚಿದನುಚ್ಚಿ ತೋಮರದಂಬನು (ತೊರರಾ. ೩-೬-೫೫); ಸದ್ಭಾವವೆಂಬ ಬಿಲ್ಲಿಂಗೆ ಸುಮನವೆಂಬ ನಾರಿಯ ಹೂಡಿ ಸುಜ್ಞಾನವೆಂಬ ಅಂಬ ತೊಡಚಿ (ಮೋಳಿಮಾ. ೨೪೫-೭೯೬ ಟೀಕೆ). ೧೧. ಸೇರು; ಕೂಡು; ಹೊಂದು: ನಿಮ್ಮ ಗರ್ಭದೊಳು ತೊಡಚಿ ಏಳೇ ತಿಂಗಳಿಗೆ . . . ಉದಯಿಸುವವನು (ಸಾಳ್ವಭಾ. ೨೦-೯೩); ತೊಡರಿಸುತ ಕೊಡಹಿ ಕಳಹುವ ಸೂಳೆಯನು ತೊಡಚುವವನೆಗ್ಗ (ಸರ್ವಜ್ಞ. ೦೯೩೬). ೧೨. ಎದುರಿಸು; ವಿರೋಧಿಸು: ಕರ್ಣನ ನಾವು ತೊಡಚುವರಲ್ಲ ತೆರಳಿಚು ಪಾಳಯಕೆ ರಥವ (ಕುಮಾಕ. ೦೪-೩೬) ತೊಡಚಬೇಡ ಕುರುವಂಶದ ಹೊದಱನು ಕಡಿವ ಕಠೋರವಿಕ್ರಮನ ಒಡನಳಿಗಲಿಗಳೆನುತ ಕೌಂತೇಯರ ಕಡೆಯ ಕಾಳೆಗಳೊದಱಿದುವು (ನೇಮಿಸಂ. ೨೯-೪೪). ೧೩. ಪ್ರಾಪ್ತವಾಗು; ಉಂಟಾಗು: ಆಗಲೀ ವೈಷ್ಣವಕೆ ನಮ್ಮಯ ತಾಗುಥಟ್ಟನ ರಕ್ಷೆ ತೊಡಚಿದುದಾಗಳಿದ್ದುದು ಪಾಶುಪತ ಶರವದಱ ಬಳಿವಿಡಿದು (ಕುಮಾಅ. ೧೪-೧೦). **ತೊಡರಿಚು**: ೧೨. ಒಡನೆ ಬೊಬ್ಬಿಡುವನು ಮಹಾಹವ ತೊಡರಿಚುವರಿಲ್ಲಾ ಎನಂತ (ಕುಮಾವಿ. ೬೦೩. ೪-೧೧).

**ತೊಡರ್ಚಿಕೊಳ್, ತೊಡಚಿಕೊಳ್** = ೧. ಕಟ್ಟಿಕೊಳ್ಳು; ಬಂಧಿಸಿಕೊಳ್ಳು: ಆ ಕನ್ನಿಗಳಂ ತಮ್ಮ ಶ್ರೋತ್ರನಾಳದೊಳ್ ತೊಡರ್ಚಿಕೊಂಬುದುಂ (ಪಂಪಭಾ. ೨೦-೫). ೨. ಸಿಲುಕಿಸಿಕೊಳ್ಳು; ಸಿಕ್ಕಿಸಿಕೊಳ್ಳು: ಮಾಯಾ ಮೋಹನಂಗಳಲಿ ತೊಡಚಿಕೊಂಬ ಸಮಸ್ತವಸ್ತುವನಡಕಿಕೊಂಬ ವಿದಗ್ಧಮುಗ್ಧೆಯರು . . . ಎಸೆದರು (ತೊರರಾ. ೮-೫-೩೦). ೩. ಧರಿಸಿಕೊಳ್ಳು; ತೊಟ್ಟುಕೊಳ್ಳು: ಮನಿಯು ವೇಷವ ತೊಡಚಿಕೊಂಡಿಹ ಕಾಲನೇಮಿಪ್ಪಂತೆ ರಂಜಿಸಿದ (ತೊರರಾ. ೬-೩೬-೬೮).

[ ತೊಡರ್$_1$ + – ಚು$_1$ ]

**ತೊಡರ್ಚುವಲೆ** (ನಾ). ಒಂದು ಬಗೆಯ ಬಲೆ: ತೊಡರ್ಚುವಲೆ ತೋಳುವಲೆ ಮರೆವಲೆ ಸಗಾಢವಲೆಗಳ ಹೊರೆಗಳೋಳಿಯಂ ಪೊತ್ತು ನಡೆತಂದುದು . . . ಭೂತಗಣಂಗಳು (ಸೌಂದಪು. ೧೮-೩೯). [ ತೊಡರ್ಚು + ಬಲೆ$_1$ ]

**ತೊಡರ್ಪು, ತೊಡಪ್ಪು$_3$** (ನಾ). ೧. ಕಟ್ಟು ; ಬಂಧನ : ಕಿಡುಗುವೆ ರಾಜ್ಯಂ ರಾಜ್ಯದ ತೊಡರ್ಪದೇವಾಟಿ[1] (ಶಂಪಥಾ. ೧-೮೨) ; ದಯಿತಾಸಂಬಂಧ ಬಂಧಂ ಭವಪರಿಣತಿ ತನ್ಮೂಲವಿವಾ ಬೇವಸಂ ನಿಶ್ಚಯಮೆಂದಿತಾತಂ ತೊಡರ್ಪಂ ಬಿಡಿಸಿ ಕಿಡಿಸಿ ದುರ್ವ್ಯೋಹಮಂ (ಶಾಂತಿಪು. ೯-೧೪) ; ಪರಿಜನಕ್ಕೆಡಱಾದೊಡೆ ಪೊರೆವುದುಂ ಪಡೆದುದಂ ಪಚ್ಚುಕುಡುವುದುಂ ತೊಡರ್ಪಾಗೆ ಬಿಡಿಸುವುದುಂ . . . ಉತ್ತಮಗುಣಂಗಳೊಳವು (ಶಂಡಕಂ. ೨೯೪-೨) ; ಸುಕುಮಾರನ ಮೋಹಬಂಧದ ಬಳ್ಳಿವಳ್ಳಿಯ ತೊಡರ್ಪಂ ಪಱಿಪಡೆ ಬಿಡಿಸುವಂತೆ (ಸುಕುಮಾ. ೧೧-೩೦ ವ) ; ಮನದೊಳ್ಳನ್ನಮ ರಾಜ್ಯವಲ್ಲಿಯ ತೊಡರ್ಪಂ ನಾಡೆಯುಂ ಬಟ್ಟು (ಶಾಂತೀಶ್ವ. ೧೩-೭೯). ೨. ಗೋಜು ; ತೊಡಕು ; ಗೊಂದಲ; ಸಿಕ್ಕು : ಮೋಹಬನ್ಧನದ ತೊಡರ್ಪಿನೊಳ್ಗೊದಬ್ಬು ಮೋಹಿಸಿ (ಎಕ. VII, ಶಿಕಾರಿ. ೨೦೨-೨೪ ; 919) ; ಗಾಂಗೇಯಂ ದಾಶರಾಜನಲ್ಲಿಗೆ ಮಂದಾತನ ಮನದ ತೊಡರ್ಪಂ ಪಿಂಗೆ ನುಡಿದು (ಶಂಪಥಾ. ೧-೬೨ ವ); ಪಾಪಬಂಧನದ ತೊಡರ್ಪಿದೆಂತು ಪಱಿಗುಂ ದಯೆಯಿಂ ಬಿಸಸಿಂ (ವರ್ಧಪು. ೧೨-೪). ೩. ಸಂಬಂಧ ; ಹೊಂದಿಕೆ : ಒಡಹುಟ್ಟಿಯುಮೊಡವಳೆದುಂ ಕಡೆಯೊಳ್ ನೀನೆನ್ನನಿಂತು ಕಂಡುಂ ಬಂದಿದಿರ್ದೂಡೆಯುಡಿದೀ ನಮ್ಮಿರ್ವರ ತೊಡರ್ಪಿಂದಂ ನೀಂ ಪುನರ್ನವಂ ಮಾಡಿನ್ನುಂ (ಶಾಂತಿಪು. ೭-೧೧೪) ; ಇಂತು ಚಿಂತಿಸುವಂಗೆ ಬಾಹ್ಯವಸ್ತುಗಳೊಳ್ ತೊಡರ್ಪಿಲ್ಲ (ತತ್ತ್ವಾರ್ಥ. ೩೩೭). ೪. ಅಡ್ಡಿ ; ವಿರೋಧ : ಅರಸುಮಕ್ಕಳೆಲ್ಲರ್ ಬರೆ ನೀಂ ನಡುವೆಸೆದು ಬಾರದಾವುದು ತೊಡರ್ಪಿನಿಂ ಪೆಱಗೆ ನಿಂದೆಯೊರ್ವನೆ ಕಂಡಾ (ಕಾದಂಬ. ೬೬೬) ; ತೊಳ್ದೆನ್ನ ತೊಡರ್ಪುದೋಱದಿನಿಸಂ ಮುನಿಸಂ ಮುನಿಸಾನದಂತ ಬಟ್ಟನ್ನರೆ ಕೀರ್ತಿಲಕ್ಷ್ಮಿ ಬಿಡುಗುಂ ಕಿಡುಗುಂ ಕಡುಪೆಂಪಿನೆಟ್ಟರಂ (ಪುಷ್ಪಪು. ೭-೬೮). ೫. ಆಭರಣ ; ತೊಡವು : ತೋಳ ತೊಡರ್ಪು ಕಣ್ಗೆಸೆಯೆ . . . ಬಾಜಿಸಿದಲ್ ಸುವಿಲಾಸೆ ವೀಣೆಯಂ (ಸೂಕ್ತಿಸು. ೫-೧೯); ಅಲಸುವ ಮೆಯ್ಯುಂ . . . ಬಿಗು [ಬಿಗು] ರೇಜುತಿರ್ಪ ಮೇಖಳೆಯ ತೊಡರ್ಪು ಕಣ್ಗೊಳಿಪ ಯಾನದ ಮಲ್ಪುಮಪೂರ್ವಭಾವಮಂ ಲಲನೆಗೆ ತಂದುವಂದನುದಿನಂ ಬಳೆಯುತ್ತಿರೆ ಗರ್ಭದರ್ಭಕಂ (ಪುಷ್ಪಪು. ೪-೦೫). ೬. (ಆಲಂ) ಅಪ್ಪುಗೆ; ಆಲಿಂಗನ : ಅಡಿಮುಡಿ ಸಂಚು ಮಂಚನೆ ವಿಡಾಯಮಡರ್ಪು ತೊಡರ್ಪು ತೋಟ . . . ನುಸುಳ್ ಗಣಿಕಾಂಗನೆಯರ್ಗೆ ಶಾಶ್ವತಂ (ಪ್ರಪವಿ. ೨೮-೬೩). **ತೊಡಪ್ಪು$_3$** : ೩. ಆ ಮರದ ಶಾಖೆಯ ತೊಡಪಿಂದ ಆ ಮರದ ಫಲವ ಕೈಗೆ ತಾಹಂತೆ (ಶಂಪುಗಾ. ೩೭).

[ ತೊಡರ್$_1$ + – ಪ್ಪು$_2$./ತಮಿ. ತೊಟರ್ಪು ]

**ತೊಡವ** 'ತೋಡ್ವ$_2$' ನೋ.

**ತೊಡವಣಿಕ** (ನಾ). (ಕರಾ) ಚೊಚ್ಚಲು ಕರುವನ್ನು ಈದ ಎಮ್ಮೆ, –ಹಸು : ತೊಡವಣಿಕ=ಮೊದಲ ಬಾರಿ ಕರು ಹಾಕಿರುವ ಹಸು ಅಥವಾ ಎಮ್ಮೆ (ಸಂಕೋಧ. ೧೭೮). [<ತೊಡಂಕು$_1$ + ಮಣಿಕ (<ಮಣಿಕ) ]

**ತೊಡವು** (ನಾ). ೧. ಆಭರಣ ; ತೊಡಿಗೆ : "ಪ್ರತಿಕರ್ಮಂ ನೇಪಥ್ಯಂ . . . ವಿಭೂಷಾಪ್ರಸಾಧನಮಾಭರಣಮೆಂಬವವು ತೊಡವಕ್ಕುಂ" (ವಸ್ತುಕೋ. ೬೫-೧) ; "ಪಚ್ಚಂ ತೊಡವುಂ ಪಸದನಮೆನಲಾಭರಣಂ" (ಕವಿಕಂ. ೧೭೮); ಈ ತೊಡವೇವುದೊ ರೂಪೆ ಸಾಲದೇ (ಶಂಪಥಾ. ೩-೪೬) ; ತೊಡವಿಂಗೆ ತೊಡವು ನಿರತಂ ತೊಡವೇಂ ಪೆಱತುಂಟೆ ಜನನ ತೊಡವೆನೆ ಮತ್ತಾ ತೊಡವೆದ್ದಮಪ್ಪ ರೂಪಿನ ಬೆಡಂಗು ಭೂಷಣವಿಶೇಷಮಂ ಬಾರಿಸದೇ (ಶಾಂತಿಪು. ೧೦-೫೭); ಕುಂತಳ ಭೂತಳಕ್ಕೆ ತೊಡವಾದುದು ತಾಂ ವನವಾಸಿ ದೇಶಂ (ಎಕ. VIII, ಸೊರಬ. ೨೬೨-೪ ; 1077) ; ಪೊಸಸುಗ್ಗಿಯ ತೊಡವು ಪೆಱತೆ ಮಲ್ಲಿಗೆಯ ಪೊಲಂ (ಮಲ್ಲಿಪು. ೫-೦೫) ; [ಉ]ಡೆವಣಿಯ ತೊಡವು ಫಲಫಲಿಸುವಂದುಗೆ (ಬಸರ. ೧-೦೫೫) ; ಚಂದ್ರಾನನೆ ತೊಡವಿನ ಪೆಟ್ಟಿಯ ನಾನಂದದಿನೀಯಲು (ದಶಕು. ೮-೯೮); ತೊಡವುಗಳ ತೊಡಕಿಲ್ಲದವಯವಂ (ಕ್ರಿಮಿಥಾ. ೧೮-೨೫). ೨. ಅಲಂಕಾರಪ್ರಾಯನಾದವನು ; ಶ್ರೇಷ್ಠನಾದವನು: ಎಲೆ ಭೂಪಾಲ ವಂಶದ ತೊಡವೆ ಮೆಚ್ಚಿದೆ ನಾನು (ನಿಥಾಗ. ೪-೯-೪೧). ೩. ಉಡುಪು : (ಕ).

**ತೊಡವುಮಾಡು** = ಆಭರಣವನ್ನಾಗಿ ಮಾಡು ; ಒಡವೆಯಾಗಿಸು: ಜವ್ವನಿಗನಿಯನಿತ್ತ ನಖರದಕ್ಷತಂಗಳನೆ ತೊಡವುಮಾಡಿ ಮೆಱೆವುದನವಳೊಡನಾಡಿ ನೋಡಿ (ಚಂದ್ರಪು. ೮-೫೫ ವ).

[ ತೊಡು$_1$ + – ವು./ತೆಲು. ತೊಡವು ]

**ತೊಡವುಲಿ** (ನಾ). ಆಭರಣಗಳಿಂದ ಉಂಟಾಗುವ ಧ್ವನಿ; ಒಡವೆಗಳ ಶಬ್ದ : ಕಡೆಗಣ್ಗಳ ಹೊಳಹಿನ ಬಳ್ಳಿಮಿಂಚಿನ ತೊಡವುಲಿಗಳ ಘನರವದ ಮುಡಿಯ ಮುಂಗಾರ ಮೇಘದ ಸೋಗೆನವಿಲಾಟದಡವ ತೋಱಿದ ರಂಗನೆಯರು (ಕಂಪವಿ. ೮-೬೫). [ ತೊಡ + ಉಲಿ$_2$ ]

**ತೊಡವೆ** (ನಾ). ಹೊಂದಿಕೊಂಡಿರುವವಳು ; ಸಹಚರಿ : ನಂಬಿದ ತೊಡವೆಯು ತಿಂಬರ್ಗೆ ನಡುವಪ್ಪಂ ಬಡಿಯೊಳಗಟ್ಟೊವವಗೆ ಇಂಬಿನ ನಂಟನ ಸತಿಗಳುಪಿದರ್ಗೆ ಕುಂಭಿನಿನರಕವಾದಪುದು (ಶರ್ಕಗಾ. ೧೩-೫೭).

[ ← ತಮಿ. ತೊಟುವೈ ]

**ತೊಡವೆಳಗು** (ನಾ). ಆಭರಣದ ಕಾಂತಿ,-ಬೆಳಗು : ತೊಳಪ ಮಾಣಿಕದ ಮುತ್ತಿನ ನೀಲದ ತೊಡವೆಳಗೆನಲೊಪ್ಪಿದವಾಗ (ಶ್ರೀಪಾಲ. ೪-೧೨೫) ; ಕತ್ತಿವೆಳಗು ತೊಡವೆಳಗುಗಳ್ ಮಾಡೆ ಬೆಳಗಂ (ಜಬಪು. ೫೦-೨೩) ; ತೊಡವೆಳಗಿಂದ್ರಚಾಪಲತೆ ಸೋರ್ಮುಡಿ ಕಾರ್ಮುಗಿಲಾ (ರಾಜಶೇ. ೧೩-೯೩).

[ ತೊಡ + ಬೆಳಗು$_2$ ]

**ತೊಡಹ$_1$** 'ತೊಡೆಪ' ನೋ.

**ತೊಡಹ$_2$** (ನಾ). ೧. ತೊಡುವಿಕೆ ; ಧರಿಸುವಿಕೆ. ೨. ಉಡುಪು ; ಉಡುಗೆ : ಧೂರ್ತವೇಷದ ತೊಡಹವನು ತೊಟ್ಟಲ್ಲಮಪ್ರಭು ಬಂದು ನಿಂದಿರ್ದ (ಪ್ರಭುಲೀ. ೫-೭). ೩. ವೇಷ : ತೊಡು ಮಹಾಸ್ತ್ರವನಿಸಗೆ ಕಪಟದ ತೊಡಹದವನಿಪ ವಿಪ್ರನಲ್ಲಿವ (ತೊರಭಾ. ೧-೧೧-೨೦).

[ ತೊಡು$_1$ + – $_2$ ]

**ತೊಡಹಗಾಱಿಕೆ** (ನಾ). ನಯಗಾರಿಕೆ : ತೊಡಹಗಾಱಿಕೆಯೊಳಾ ಮಂತ್ರಿಯಾಡಿದ ಮಾತಿಗೊಡನಹುದಹುದೆಂದ ನಗುತ (ಧರಣ. ೩೦-೧೨೩).

[ ತೊಡಹ$_1$ (<ತೊಡೆಪ) + – ಕಾಱ + – ಇಕೆ ]

**ತೊಡಹತರ್** (ಕ್ರಿ). ಸಮಾಧಾನಗೊಳ್ಳು ; ಅಂಕೆಯಲ್ಲಿಟ್ಟುಕೊಳ್ಳು : ತನ್ನೊಳು ತಾನೆ ತೊಡಹತಂದುಕೊಂಡನು ಮನವ (ತೊರಭಾ. ೬-೨೭-೦೩).

[ ತೊಡಹ$_1$ (<ತೊಡೆಪ) + ತರ್ ]

**ತೊಡಹು$_1$** 'ತೊಡಪ್ಪು$_1$' ನೋ.

**ತೊಡಹು$_2$** 'ತೊಡಪ್ಪು$_2$' ನೋ.

**ತೊಡಹು$_3$** (ನಾ). ಲೇಪನ : ಮೃಡಪಿತಾಮಹಪೂಜೆಗಾ ಸತಿ ಹಿಡಿಹಿನಲಿ ಮನವರಳೆ ಮುದ್ರೆಯ ತೊಡಹು ಹೊಱಗೊಳಗಿಂದುಮುಖಿಯರ ನ್ಯಾಸ ಮುದ್ರೆಯಲಿ (ಕುಮಾರ್ಯಾ. ಓಕಿಇ. ೩೭-೮೪). [ <ತೊಡಪ್ಪು$_1$ ]

**ತೊಡಾಯ** (ನಾ). (?) : ಚಿಕದೇವರಾಜ ಒಡೆಯರು ತಮ್ಮ ಸಾಮಾಜಿಕರೊಡನೆ ಆಲೋಚನೆಮಾಡಿ ೧೮ ಕಛೇರಿ ಎಂಬುದಾಗಿ ನಿಬಂಧನೆ ಮಾಡಿದರು ಯಾವವೆಂದರೆ ೧. ನಿರೂಪದ ಚಾವಡಿ , . . ೯. ತೊಡಾಯದ ಚಾವಡಿ (ಚಾಮವಂ. ೧೪೦) ; ತೊಡಾಯದ ಚಾವಡಿ–ಇದರಲ್ಲಿ ಪೊಮ್ಮಿನ ಐವಜನಲ್ಲಿ ಶ್ರೀರಂಗಪಟ್ಟಣದಲ್ಲಿ ಮಾತ್ರ ಅರ್ಧ ಐವಜು ಕೆಗೆದುಕೊಳ್ಳುವಂತೆ ಕಟ್ಟು ಮಾಡಿದರು (ಮಹಾಮಂ. I, ೧೪೮). [ ? ]

**ತೊಡಿ** (ನಾ). ಕೈತೋಟ ; ಮನೆಯ ಮುಂದಿನ ಅಥವಾ ಹಿಂದಿನ ತೋಟ : ಕಾಯಿ ಮತ್ತು ಮಗ ಅನ್ಕರ ಗದ್ದೆ ಮತ್ತು ತೊಡಿಗಳಲ್ಲಿ

ಗೇಯಬೇಕಾಯಿತು (ಹುಲಿಹಾ. ೪) ; ಅಂದಿನಿಂದ ಕೊಳುಂಬನು ಪಾಪನ ತೊಡಿಯಲ್ಲಿ ಕೆಲಸ ಮಾಡಲು ಬರಲಿಲ್ಲ (ಧೂಮಪು. ೪೦).

[ ದೇ.॥ ತಮಿ. ತೊಟು ; ಮಲ. ತೊಟ್ಟ ; ಕೊಡ. ತೊಡಿಯ ]

**ತೊಡಿಕೆ** 'ತುಡಿಕೆ' ನೋ.

**ತೊಡಿಗೆ** 'ತೊಡುಗೆ' ನೋ.

**ತೊಡಿಲಿ.** (?). (?) : ನಾವದಕ್ಕರಲ್ಲಿ ಆಳ ಆಳ ತೊಡಿಲಿ ಮು[೭]ಆಲ್ಲಳದ ಬೆಟಲಿ (ಸೌಇಎ. ೧೯೩೦, ಉಡುಚು. ೫೭೫-೨೭ ; ?). [ ? ]

**ತೊಡಿಸು**, ತುಡಿಸು (ಕ್ರಿ). ೧. (ಆಭರಣ, ವಸ್ತ್ರ ಮೊದಲಾದುವನ್ನು) ಧರಿಸುವಂತೆ ಮಾಡು,–ಇಕ್ಕು : ತೊಡಿಸಿದನಾವನೀ ಕುಸುಮಮಂಜರಿಯಂ ನಿನಗೆ (ಕಾದಂಪೂ. ೭೯೩); ತರಿಸಿ ಬೊಂಬೆಯನೊಂದಂ . . . ಪೊನ್ನೋಲೆ ಯಂ ತೊಡಿಸಿ ಚೆಲ್ವನಪ್ಪ ಪೂವಮಾಲೆಯಂ ಮುಡಿಯಿಸುತ್ತುಮರ್ತಿಯಿಂ (ಧರ್ಮಾಮೃ. ೩-೯) ; ಸೌಂದರಿಗೆ . . . ತೊಡವಂ ತತ್ತರುಣೀಮಣಿಯ ರೊಲ್ದು ತೊಡಿಸಿದರೊಲವಿಂ (ಉದ್ಭಟ. ೮-೬೫); ಶೋಭನಾರ್ಥಕ್ಕಾದಡಂ ಕೆಲವಾಭರಣಮಂ ತೊಡಿಸವೇಳ್ಕು ಮದೇಭಗಮನೆಗೆನುತ್ತ (ಬಸಪು. ೪-೩೩) ; ಸುರೇಶ್ವರನಿತ್ತ ಭೂಷಣವ . . . ನಕುಲಾದಿಗಳ ಮೈಯಲಿ ತೊಡಿಸಿದನು ಕೈಯಾರೆ ಕಲಿಪಾರ್ಥ (ಕುವ್ಯಾಅ. ೧೧-೨೪) ; ಚೈತ್ರದ ಚೆಂಗ ದಿರನು ಚೆಂಬಿಸಿಲ ಚೆಂದುಡುಗೆಯನು ವಿಂಧ್ಯಯ ಗಿರಿಶಿಖರಗಳಿಗೆ ತೊಡಿಸು ತ್ತಿದ್ದಾನೆ (ಮಹಸ. ೧). ೨. ಆ ಳ ವ ಡಿ ಸು; ಜೋಡಿಸಂ : ಬಿಲ್ಲನು ಕೊಂಡು ತಿರುವನು ತೊಡಿಸಿ ತೆಳೆದನು ಒಲಿದು ಮಂಡಿಯಲಿ (ಸಂಥಪ. ೧೯-೩೧) ; ಪಾವಕಮಹಾಬಾಣಮಂ ತಿರುವಿನೊಳ್ತೊ [ಪಾಠಾಂ. ಳ್ತು]ಡಿಸಿ ಕಿವಿವರೆಗೆ ತಗೆದೆಚ್ಚೊಡೆ (ಜೈಮಿಭಾ. ೪-೩೬) ; ತುಡುಕಿ ಚಾಪವ ನೆಗಪಿ ಬಾಗಿಸಿ ತೊಡಿಸಿ ನಾರಿಯ ಠಂಕರಿಸಿ ಮುರಿದಿಡಲು (ಅನಂರಾ. ೧-೨೩-೩೩). ೩. ಹದಿ ; ಹೊಂದಿಸು ; ಕೂಡಿಸು : ಗಿಳಿ ಸೋಂಕದ ಮಾವಿನ ಪಣ್ಣನಂತೆ ಪೊನ್ ತೊಡಿಸದ ರತ್ನದಂತೆ (ಮಲ್ಲಕಾ. ೬-೭೦) ; ಒಡಲು . . . ತೊಗಲನು ತೊಡಿಸಿದೆಲುವಿನ ಜಂತ್ರ (ನಿಭಾಗ. ೭-೯-೪೪). ೪. ತೊಡಕಿಸು ; ತಗಲುಹಾಕು : ಕಡುಗಿ ಕೊರಳಲದಾರೊ ಪಾಶವ ತೊಡಿಸಿ ಕೆಳಯಿಂಕೆಳದ ದಾಡೆಯುದಡಿಗರಾರೋ ಮರಳಿಬಿಡಿಸಿದ ಪುಣ್ಯತರರ್ (ನಿಭಾಗ. ೬-೨-೨೭) ; ಕೊರಳಿಗೆ ಕೋಳವನು ಬಲವಾಗಿ ತೊಡಿಸುವ ಪೋಲು (ಅಮೃತ. ೦-೩೫). **ತುಡಿಸು** : ೧. ತುಡಿಸಿದನೆನಗಜೀಕೆಯುಪ್ಪ ಮಣಿಭೂಷಣಮಂ (ಕವಿರಾ. ೩-೨೩೪) ; ಸುರಾಸುರೇಂದ್ರವಂದಿತಪಾದಂಗೆ ಮೃದುಪದಂಗಳೊಳ್ ಕಳರವರಣಿತ ನೂಪುರಂಗಳಂ ತುಡಿಸಿ (ಆದಿಪು. ೭-೧೦೫ ವ) ; ಆ ಲಾವಣ್ಯವತಿಯ ಪದನಖಮಯೂಖಂಗಳಂ ಜಲಧಾರೆ ಗೆತ್ತುತ್ತುಂಠಂಗಳಾದ ಸೋಗೆಗಳ ಕೇಗುಗಳ್ಗಿದವಜ ಕೊರಲಂ ಬಿಗಿವಂತೆ ಕಯ್ಯಿಂದಮುರ್ಚುವ ಮಣಿಕಂಕಣಂಗಳಂ ತುಡಿಸುತ್ತಂ (ಕಾದಂಬಾ. ೨೦೩); ಕಡಗ ಕಂಕಣ ಹಾರ ನೂಪುರಮಾದಿ ಭೂಷಣರಾಜಿಯಂ ತುಡಿಸಿ (ಧರ್ಮಾಮೃ. ೮-೧೩೪); ತುಡಿಸಿದ ಬೇಗಡೊಳಾ ಪೂದೊಡವನಿತುಂ ಕೊರಗಿ ಕಾಡೆಯುಂ ಶಿಖಿಮುಖವಂ ತೊರ್ದರ್ಪಂತಾಯ್ತು (ಕುಸುಮಾ. ೧೦-೨೭) ; ಜನ್ಮಾಭಿಷೇಕಂ ಮಾಡಿ ತದನಂತರಮನೇಕ ಬಾಲದುಡಿಗೆಗಳಂ ತುಡಿಸಿ (ಪುಣ್ಯಾಸ್ರ. ೦೦-೦೭ ವ) ; ರನ್ನದಾಭರಣಮಂ ತುಡಿಸಿ (ಸೌಂದಪು. ೩-೪೯). ೨. ಕೂರ್ಗಣೆಗಳಾಜಿಂ ಮತ್ತ ವಕ್ಷದೊಳ್ತುಡಿಸಿದಂ (ಜೈಮಿಭಾ. ೨೦-೩೦).

[ ತೊಡು$_1$ + – ಇಸು$_1$ ]

**ತೊಡು$_1$**, ತುಡು$_1$ (ಕ್ರಿ). ತೊಟ್ಟ (ಭೂತಕೃ). ತೊಟ್ಟು$_1$ (ಭೂತನ್ಯೂ). ೧. (ಆಭರಣ, ವಸ್ತ್ರ ಮೊದಲಾದುವನ್ನು) ಧರಿಸು,–ಹಾಕಿಕೊಳ್ಳು : ಶೀತಕ್ಕಾಜದಳ್ಕಿ ತೊಟ್ಟರ್ದ ಧರಾತಳಮಂಬ ಪೆಣ್ಣ ಪೊಸ ಕಂಚುಳಿಕೆಯ ಸೀಮರ್ಮುತ್ತಿನಂದವಾದುವು ಪನಿಗಳ್ (ಕಾವ್ಯಸಾ. ೬೯೪ ಶೂದ್ರಕ) : ಪಿಂಡು ಗಂಕಣಮಂ ತೊಟ್ಟ ಕೈಯಿಂದಂ ಪೊನ್ನ ಸಟ್ಟುಗಮಂ ತೀವಿ (ವಡ್ಡಾರಾ. ೮೯-೭) ; ತೊಟ್ಟೆಕ್ಕವಡಂ . . . ತೊಟ್ಟಂಗಿಗೆ ತನ್ನೊಳಮರೆ ಬೇಂಟೆಯ ನೊರ್ವಂ ಬಂದು (ಪಂಪಭಾ. ೫-೩೬) ; ಜವ್ವನಿಗ ತವಸಿ ತೊಟ್ಟಪರ್ಣ ಕರ್ಣಾವತಂಸಂ ಪೊಸತೀ ಲೋಕಕ್ಕೆ (ಕಾದಂಪೂ. ೭೬೦) ; ತೊಟ್ಟು ತೀವಿ ಬಳೆಯುಂ ನಿಡುದೋಳ್ಗಳೊಳ್ (ಕಾವ್ಯಾವ. ೩೭೨) ; ನೀರ ಬೊಂಬೆಯು ಚೋಹವ ತೊಟ್ಟು ಅಗ್ನಿಯ ಬಣ್ಣದ ಹೊದಿಕೆಯ ಹೊದ್ದು (ಅರಹಂ. ೨೦೭-೯೩೧) ; ಪೊಸ ಮುತ್ತಂ ತೊಟ್ಟವೋಲ್ ಪೊಣ್ಮುವ ಬೆವರ್ವನಿಯಿಂ (ಲೀಲಾವ. ೧೦-೪೭) ; ತೊಡುವಲ್ಲಿ ಪೊದೆವಲ್ಲಿ ಸಂಗ ಶರಣೆಂದೆನುತೆ (ಬಸರ. ೩-೧೩೬) ; ಇಟ್ಟರೆ ತೊಟ್ಟರೆ ಪುಟ್ಟಕ್ಕ ಚಂದ (ಗಾದೆ). ೨. ಪಡೆ ; ಹೊಂದು ; ತಳೆ : ಕಾಮದ ಕಳವಳದಲ್ಲಿ ಹುಟ್ಟಿ ಸಂಸಾರವ ತೊಟ್ಟು ಲಿಂಗಮುಖ ಭವನಜೀಯದವರೆಲ್ಲರು ಅಂತಿರಲಂತಿರಲಿ (ಸಮೂವ. ೫-೧೬); ತಿಳುಹಿ ಹೋದರು ಮುನಿಗಳೀತನ ತಿಳಿವು ತೊಟ್ಟುದು ಮಱವೆಯನು (ಕುವ್ಯಾದ್ರೋ. ೦೮-೬೪) ; ಕೊಂದೆನು ನಿನ್ನ ತಮ್ಮನ ದಹಿಸಿ ಲಂಕೆಯ ಬಳಿಕ ಮೌನವ ತೊಟ್ಟೆ ತಾನೆಂದ (ತೊರೆರಾ. ೨೮-೬೦) ; ತೆಗೆದ ಚಿತ್ರದ ನಟ್ಟ ನೋಟದ ಮೊಗದ ಭಾವದ ಭಕ್ತಿಯುಂಗವ ತೊಟ್ಟನಲ್ಲವನು (ಪ್ರಭುಲೀ. ೧೧-೩೪) ; ಮೆಟ್ಟಪ್ಪುದಾಸೆಯನು ಕಟ್ಟಪ್ಪುದಿಂದ್ರಿಯವ ತೊಟ್ಟಪ್ಪುದುಳ್ಳ ಸಮತೆಯನು (ಸರ್ವಜ್ಞ. ೩೦೬) ; ದೀಕ್ಷೆ ತೊಟ್ಟೆ ; ತಪದ ಕಠಿಣಕಿದೆಯ ಕೊಟ್ಟೆ (ಅಸೀಕೀ. ೧೭-೧೯). ೩. ಮೊದಲಾಗು ; ಆರಂಭವಾಗು : ಪೂರ್ವಭವದೊಳ್ತೊಟ್ಟೊಂದು ವೃತ್ತಾಂತಮಂ ನೆಜೆ ಯಱಿದು (ಆದಿಪು. ೨-೬೬) ; ಎಮ್ಮೊಳಾದ ಕಲಹಕ್ಕೆಂತಾದೊಡಂ ಕೇಳ ನೊರ್ವರ ದಲ್ ಕೌರವರಾಮುಮಯ್ವರೆ ವಲಂ ಮತ್ತೂರ್ವರೊಳ್ ತೊಟ್ಟ ಸಂಗರರಂಗಕ್ಕೆ ಜಸಕ್ಕೆ ಕೂಡುವೆಡೆಯೊಳ್ ನೂಱಯ್ವರಾವಲ್ಲವೇ (ಪಂಪಭಾ. ೭-೩೬). ೪. ಮೊದಲು ಮಾಡು ; ಆರಂಭಿಸು : ಕ್ರಮಗಣನೆಗೆ ತಾನುಂ ಮಧ್ಯಮಪಾಂಡವನಾದನಹಿತನೊಳ್ತೊಟ್ಟ ಮಹಾಸಮರಕ್ಕೆ ನರಾಗ್ರಜನಗ್ರಿಮಪಾಂಡವನಲ್ತೆ ಪಗೆಗೆ ಮೊದಲಪ್ಪುದಱಿಂ (ಗದಾಯು. ೭-೩೩) ; ಬಿಲ್ಲ ಪಡೆ ತಾಗಿದುದು ಬೇಗದಿ ಚೆಲ್ಲಿದೊಡೆ ತನ್ನಡ್ಡಣಾಯ್ವರು ಕಾಳಗವ ತೊಡಲು (ಸಾಳ್ವಭಾ. ೧೯-೧೩). ೫. ಬಿಲ್ಲಿಗೆ ಬಾಣವನ್ನು ಹೂಡು ; ಶರಸಂಧಾನ ಮಾಡು : "ಕಣೆಯ ಸಂಧಾನದೊಳ್ ಪಚ್ಚದೊಳ್ ತೊಡು [ಪಾಠಾಂ. ತುಡು]ವದು" (ಶಬ್ದಮಂ. ೯೩) ; ಮುಂ ತೊಟ್ಟಂಬನದನುಗಿದು ಕುಂದಿಸಿದಂ ಭಯದಿಂ ಕರ್ಣನೆಂದು ಲೋಕಂ ನಗದೇ (ಪಂಪಭಾ. ೧೨-೧೯೯); "ತೊಟ್ಟಗುರಿಯಿಟ್ಟು ಹೊಡೆದ" (ಪಂಪರೀ. ೫೦೦) ; ತೊ [ಪಾಠಾಂ. ತು]ಡುವಾಗಳೊಂದು ಬಿಲ್ಲಿಂ ಬಿಡುವಾಗಳ್ ಲಕ್ಕ ವೈರಿಸೇನೆಯ ಮೆಯ್ಯೊಳ್ ನಡುವಾಗಳ್ ಕೋಟಿಯಪ್ಪುದು ಗಡ ಪಾರ್ಥನ ಬಾಣಂ (ಸಮಪಾ. ೦೦-೦೬೬) ; ತೊಟ್ಟನಿದಂ ನಿಟ್ಟಿಸಿದಂ ಬಿಟ್ಟನಿ ದೆಂಬೊಂದು ಬಿಲ್ಲ ಬಲ್ಮೆಯನಾರ್ಗಂ ದಿಟ್ಟಿಸುವುದರಿದು (ಕಬ್ಬಿಗಕಾ. ೦೭೧); ತೊಡು ಕೋಲಂ ಹರಿಣಂಗೆ ಹಾಸು ಬಲೆಯಂ ಕೋಕಂಗೆ (ಮಲ್ಲಕಾ. ೩-೨೭೩) ; ಆದೊಡೈವರ ಮಕ್ಕಳನು ತಲೆಗಾಯ್ದು ತೋಱು ಕಂದ . . . ಹೋದ ಬಾಣವ ಮರಳಿ ತೊಡದಿರು (ಕುವ್ಯಾಉ. ೦೦-೩೫) ; ತೊಡು ಮಹಾಸ್ತ್ರವನಿವಗೆ (ತೊರರಾ. ೧-೦೦-೨೦). ೬. ಉಂಟಾಗು ; ಹುಟ್ಟು : ನಿನ್ನೊಳ್ ತೊಟ್ಟೊಂದು ಭಕ್ತಿಯುನಾದರಂಬೆರಸು ಪೆಱತೊಂ ದೇವುಟ್ಟುವೊಲ್ಲಂ (ಶಾಂತಿಪು. ೧೧-೨೦) ; ಬಗೆಯೊಳ್ಪೀಟದ ಬೀಜವಂ ತಳೆದು ನೀರ್ವೊಯ್ಯುಂದದಿಂ . . . ನೀರ್ವೊಯ್ಯುದುಂ ಪಾಂಥರಾಕೆ ಗಳೊಳ್ತೊಟ್ಟೊಲವಿಂಗಲ್ತೆ ಬಟಿನೀರಂಬಂದದಿಂದೀಂಟ ದಿಟ್ಟಗಳಿಂ ದೀಂಟುವರಾ ಪ್ರಪಾಪ್ರಣಯಿನೀಲಾವಣ್ಯನೀರಂಗಳಂ (ಮಲ್ಲಪು. ೨-೨೯) ; ಹೊದಱನಲಿ ಮಿಗೆ ತೊಟ್ಟ ಕಬ್ಬಿಗೆ ಝಗೆಯ ಹೊರಳಿಯ ಕಿಡಿಯ ಗಡಣದಲೆ ಹುಟ್ಟಿದುರಿ ಹೆಮ್ಮರನ ಸುತ್ತಲು ಕಟ್ಟಿತು (ಕುವ್ಯಾಆ. ೨೦-೫೫). ೭. ಪಡೆ ; ಹೊಂದು : ಈತನೊಳ್ ತೊಟ್ಟ ಕಿಂಕರ

ಭಾವಂ ನವುಗಕ್ಕಿಗೊಟ್ಟು ವುಡಗೂಟುಣ್ಬಂದವಮಂ ಪೊ೦ಲದೇ (ಆದಿಪು. ೧೪-೩೨) ; ೮. ಸೇರು ; ಕೂಡು : ನಿಟ್ಟೆಯ್ದಿಯಾಗು ಪತಿಯೊಳ್ ತೊಟ್ಟನುವಶಯಾಗು ಶೀಲವತಿಯಾಗು ಚಿರಂ ನಿಟ್ಟಾಯುವಾಗು ನೀನೆಂದಿಟ್ಟರ್ ಸೇಸೆಯಂ (ಶಾಬ್ದಾ. ೨೨೩). **ತುಡು₁ :** ೧. "ತುಡು – ಶರಸಂಧಾನೇ, ಭೂಷಣಾವರಣೇಚ (ಒಡವೆಯನ್ನು ಇಟ್ಟುಕೊ)" (ಶಮಧಾ) ; ಅನರ್ಘ್ಯಮಪ್ಪ ಮಾಣಿಕ್ಕದುಂಗುರವಮಂ ಕಳೆದು ತನಗೆ ತುಡಲ್ಕೆಂದು ಕೊಟ್ಟೊಡೆ (ವಡ್ಡಾರಾ. ೫-೨) ; ಇವು ರತ್ನಕುಂಡಲಂ ಜಿತರವಿಮಂಡಳಮಿವು ತುಡಲ್ಕೆ ಯೋಗ್ಯಮೆ ನಿನಗೆ (ಆದಿಪು. ೦೨-೧೦೮) ; ತುಡನೆ ಕವಚಮಂ ರಾಧೇಯಂ (ಪಂಪಭಾ. ೧೨-೧೦೯) ; ನಿಮ್ಮ ತುಡುವಾಭರಣಂಗಳಂ ಪಲವಮೂಲ್ಯ ವಸ್ತುಗಳಂ ತಂದು (ಪಂಚತಂ. ೧೧೨-೧೪) ; ಉಟ್ಟ ನವಾಂಬರಕ್ಕಮರೆ ಪೂದೊಡವಂ ತುಡುವೊಂದು ಕೌತುಕಂ ಪುಟ್ಟೆ (ಜಗವಿ. ೬-೧೨) ; ತಾರಗೆಯಂ ವಿದ್ಯಾಧರಿಯರ್ ಮುತ್ತೆಂದು ತೆಗೆದು ತುಡಲವ್ವಳಿಪರ್ (ಗಿರಿಶ. ೦-೫೪). ೨. "ತುಡು–ಶರಸಂಧಾನೇ, ಭೂಷಣಾವರಣೇಚ (ಒಡವೆಯನ್ನು ಇಟ್ಟುಕೊ)" (ಶಮಧಾ) ; ಮತ್ತಮೈಂದ್ರ ವಾರುಣ ವಾಯವ್ಯಾಗ್ನೇಯ ಪಾರ್ವತಾದಿ ಬಾಣಂಗಳಂ ತುಡೆ (ಪಂಪಭಾ. ೨-೬೬ ವ) ; ಸೀಳ್ನಾಯ್ಗಳಂ ಬಿಡು ಕೋಲಂ ತುಡು (ಶಾರಂಪೂ. ೧೫೯) ; ದೋಣೆಯಿಂದಂ ತೆಗೆವಾಗಳೊಂದು ತುಡುವಾಗಳ್ಪತ್ತುಬಾಣಂ (ಗದಾಯು. ೩-೩) ; ನೆನೆದು ನಿಜಜನನಿಗಿತ್ತುದನನುವರದೊಳ್ ದಿವ್ಯಬಾಣಮಂ ತುಡದುದನಾ ದಿನಪಸುತಂ ತುಡನೆ ಅದಂ (ನೇಮಿಪು. ೦೨-೦೭೨) ; ಕರುಣಿಸಲೆ ಶಬರ ತುಡದಿರು ಸರಲಂ ನೀಂ (ಕುಸುಮಾ. ೦೪-೪೨); ಬತ್ತಳಿಕೆಯಿಂದುಗಿವ ಸಮಯದೊಳಗೊಂದು ತುಡೆ ಪತ್ತು (ಕಬಪು. ೪೩-೦೭) ; ಒಡಿವಾಗಳೊಂದು; ಒಡಿಯಂ ತುಡುವಾಗಳೆರಡು . . . ಪಂಚಾಯುಧನ ಪೊಸಮಸೆಯ ವಿಶಿಖಂಗಳ್ (ರಾಮಾಶ್ವ. ೫೮-೨೭).

**ತೊಟ್ಟುವಾಯ್** = ಗುರಿಯಿಟ್ಟು ಮೇಲೆ ಬೀಳು : ಸ್ಫುರಿತ ಕೃಪಾಣಪಾಣಿಗಿದಿರಂ ನಡೆದಳ್ಕುಟಿ ತೊಟ್ಟುವಾಯ್ದು . . . ನೆಲಕಿಕ್ಕಿ ಪತ್ತಿ (ಪಂಪಭಾ. ೧೧-೧೧೪).

[ ದೇ.॥ ತಮಿ. ತೊಟು ; ಮಲ. ತೊಡು ; ತೆಲು. ತೊಡು, ತೊಡುಗು ]

**ತೊಡು₂,** ತಡು₂ (ನಾ). ಬಾಯಿಚಪಲ : ಮಗುವಿಗೆ ಮಳಿಗಾಲಕ್ಕ ತೊಡುವಿಗೇನಾದರೂ ಮಾಡು (ಮರಿಮ. ೩೪೪) ; ಸಂಜೆ ಮಕ್ಕಳಿಗೆ ತೊಡುವಾಗಿಯೇ ಆಗುತ್ತದೆ (ಸ್ವಕೃಕೊ. ೧೧೩) ; ದೋಸೆ ತಿನ್ನುವ ಆಸೆಯಿಂದ ಇದ್ದ ಸೊಸೆಗೆ ದ್ರೋಹವಮಾಡಿದ ಪಾಪ ನನ್ನದು . . . ಎಷ್ಟು ತೊಡುವಾಗಿತ್ತೋ ಅವಳಿಗೆ (ಪದ್ಮಸ. ೬೧). **ತುಡು₂ :** ತುಡುವಾಗತ್ತೆ ಎಂದರೆ 'ತುಡುವಾಗತ್ತೆ ತುಡುವಾಗತ್ತೆ ತುಳಸಿನಾರಾಯಣ' ಎಂದು . . . ಕೋಡುಬಳೆ ರವವುಂಡೆಯನ್ನು . . . ಕೊಟ್ಟು ಕಳಿಸುತ್ತಿದ್ದಳು (ಪ್ರಕೃ. ೯೩) ; ಬೇಕು ಬೇಕಾದಾಗ, ತುಡು ಬಂದ ಕೂಡಲೆ, ಸಿಹಿ ತರಿಸಿ (ಚಂದ್ರಸ. ೪). [ ದೇ.॥ ತಮಿ. ತೊಟು = ತಿನ್ನು ; ತುಳು. ತೊಡು ]

**ತೊಡುಗೆ,** ತುಡಿಗೆ, ತುಡುಗೆ, ತೊಡಿಗೆ (ನಾ). ೧. ಒಡವೆ ; ಆಭರಣ ; ಅಲಂಕಾರ : "ನೇಪಥ್ಯಮಾ ಭೂಷಣಮಲಂಕಾರವಾಭರಣಮೆಂದೆನಲು ತೊಡು [ಪಾಠಾಂ. ಡಿ] ಗೆಗಭಿಧಾನಮಕ್ಕುಂ" (ಮಂಗರಾ. ೯೮-೧೧) ; "ಮಂಡನಂ, ಮಂಡನೀಯಂ, ಈ ೨ ತೊಡುಗೆ" (ಕಾಶಕೈ. ೨೬೯). ೨. ಉಡುಪು : (೬). 'ಉಡುಗೆ' ಪರಾ. **ತುಡಿಗೆ :** ೧. ಪೊಸಮುತ್ತಿನ ತುಡಿಗೆ ಪೊದಟ್ಟಿಸೆಯೆ (ಪಂಪಭಾ. ೨-೬೮) ; ಬಳೆ ತುಡಿಗೆಯಾಗಿಯುಂ ಸರಿಗೆಯಲ್ಲದಂತೆ . . . ದೂರಭವ್ಯರುಮಭವ್ಯರುಂ ಶ್ರಾವಕರಾಗಿಯುಂ . . . ಮೋಕ್ಷಗಾಮಿಗಳಲ್ಲರ್ (ಧರ್ಮಾಮೃ. ೧೧-೦೫೭); ವಾಸಂತಋತುಕಾಲ ಸಮಯ ಕುಸುಮವನಾ ವಿಳಾಸಿನೀಜನ ತು [ಪಾಠಾಂ. ತೊ]ಡಿಗೆಯಂ ಮಾಡಿ ತಂದೊಲ್ದು ಭೂಸುದತಿವಲ್ಲಭಂಗೀಯಲು (ಹರಿಕಾ. ೩-೪೮) ; ತುಡಿ [ಪಾಠಾಂ. ಡ, ಡು] ಗೆಯಂ ತೊಟ್ಟಂ ; ಪೂವಂ ಮುಡಿದಂ (ಶಮುದ. ೧೨೭ ಪ್ರಯೋ). 'ಕಿವಿದುಡಿಗೆ' ಪರಾ. **ತುಡುಗೆ :** ೧. "ಭೂಷಣಃ, ಅಲಂಕಾರಃ, ನೇಪಥ್ಯಂ, ಆಭರಣಂ–ಈ ೪ ತುಡುಗೆ" (ಹಲಾಯು. ೮೯-೩೦೫) ; ಅನರ್ಘ್ಯಮಪ್ಪ ತುಡುಗೆಗಳುಮಂ ಬಟ್ಟವಟ್ಟಿಗೊಟ್ಟು (ವಡ್ಡಾರಾ. ೦೫೦-೨) ; ತುಡಲ್ಕೆ ತುಡುಗೆಯನುಡಲ್ಕೆ ದಿವ್ಯಾಂಬರಮಂ . . . ಕುಡುವಮರಿ ಕಲ್ಪಲತೆಯನೆ ಪೋಲ್ಗುಮ್ (ಆದಿಪು. ೭-೧೧); ರತ್ನದ ತುಡು [ಪಾಠಾಂ. ತೊಡಿ] ಗೆಯನಿತ್ತುಂ ಯತ್ನದೆ ರಕ್ಷಿಸುವನೆಂಬ ನುತ್ತಮಾಜ್ಞೆನಂ (ಸಮುಪ. ೫-೦೫೦) ; ಮೊದಲ ಯುಗಳದೊಳೆ ಸುದತಿಯರುದಯಿಪರ್ . . . ಮಹಿಗೆ ತುಡುಗೆಯೆನಿಸುವ ತೆಱದಿಂ (ಪಾರ್ಶ್ವಪು. ೫-೮೧) ; ತುಡು [ಪಾಠಾಂ. ಡಿ] ಗೆಯ ತೊಟ್ಟು ಪಟ್ಟಾವಳಿಯ ಮುಂಜೆಱ ಗುಟ್ಟು ಕುಳಿತಿರೆ (ಕೌಶಿಲಾ. ೨೪-೧೫). ೨. ತೊಡರ್ದಮರ್ದ ಬಾಳವಣ್ಣದ ತುಡುಗೆ ಪಳಂಚಲೆವ ಪಂಚಜಡೆ . . . ಚೆಲ್ವಿದಿದಿರ್ದುದು (ಪಂಪಭಾ. ೨-೪)

**ತೊಡಿಗೆ :** ೧. "ತೊಡಿಗೆ–ಅಲಂಕಾರ, ಆಭರಣ, ಪರಿಷ್ಕಾರ, ವಿಭೂಷಣ, ಮಂಡನ" (ನಾಚಿರಾ. ೬) ; ಮುತ್ತಿನ ತೊಡಿಗೆಗಳಂ ತೊಟ್ಟು ದರ್ಪಣಶಯನದೋಳಿರ್ದು (ಪಂಪಭಾ. ೦-೧೦೪ ವ) ; ತನ್ನ ತೊಟ್ಟ ತೊಡಿಗೆಗಳೆಲ್ಲವುನನೆಗಂಗಚಿತ್ರಮನಿತ್ತಂತಾನುಂ ಬೀಟ್ಕೊಳಿಸಿ ಕಟಿಪಿ (ಶಾರಂಕಾ. ೩೨೪) ; ಅಂತು ತೊಡಿಗೆಗಳಂ ಪುಲಿಯಿಂ ಪಡೆದು (ಪಂಚತಂ. ೦೧೧-೧೧) ; ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು (ಬಸವ. ೨೫೦) ; ಹಳದಿಯ ಉಡುಗೆ ಸವೆಯದೂದುವ ಕೊಳಲು ಮೈಯ ತವರದ ತೊಡಿಗೆ ಎಸೆವುತಿರೆ (ಬಸರ. ೯-೦೦೨) ; ಕೆಂಡದ ತೊಡಿಗೆಗೆ ಮನವಿಟ್ಟರಗಿನ ಪುತ್ಥಳಿಯಂತಂತೆ (ವೀರೇಶ. ೦-೨೦) ; ತೊಡಿಗೆಗಳೆಲ್ಲವಂ ತೊಡುವಳ್ (ಸೂಕ್ತಿಸು. ೧೫-೨೯) ; ತೊಡಿಗೆಗಳು ಥಳಥಳಿಸೆ ಕಡೆಗಂಗಳ ಬೆಳಗು ಹೊಳೆಯೆ (ಬಸಪು. ೫-೨೮).

[ ತೊಡು₁ + –ಗೆ ]

**ತೊಡುಗೊರೆ** (ನಾ). ಉಡುಗೊರೆ; ಬಳುವಳಿ: (೬). ℙ ಸಾಮಾನ್ಯವಾಗಿ ಈ ಪದ 'ಉಡುಗೊರೆ, ಎಂಬ ಪದದೊಡನೆ ಬರುತ್ತದೆ.

[ ತೊಡು₁ + ಕೊರೆ₇ ( < ಕೊಟ ]

**ತೊಡುಪು** 'ತೊಡಪು₂' ನೋ.

**ತೊಡುವಡ್ಡಿ** (ನಾ). ೧. ಹಣವನ್ನು ತೊಡಗಿಸುವುದರಿಂದ ಬರುವ ಬಡ್ಡಿ. ೨. ಚಕ್ರಬಡ್ಡಿ : ಧನುವಾಸದ ತಿಂಗಳವೊಂದರ ನಿತ್ಯೋತ್ಸವದ ರಂಗಪೂಜೆ ಬೀಜವೊಂನ ತೊಡುವಡ್ಡಿಇಂದ ನಡಮಂತಾಗಿ (ಎಕ. XV, ಬೇಲೂರು. ೨೪೮-೪ ; 1297).

[<ತೊಡಗು₁ + ಬಡ್ಡಿ₂. / ತಮಿ. ತೊಟವರ್ಟ್ಟ]

**ತೊಡುವಿಲ್** (ನಾ). ಒಂದು ಬಗೆಯ ಬಿಲ್ಲು: ತೊಡುವಿ[ಪಾಠಾಂ. ತೊಡುಬಿ, ತೋಡುವಿ]ಲ್ಲಂಬು ತರಕಸ ಬಲ್ಲೆಯ ಜೋಡಚೇಡೆಯ ಸವಗ ಸೀಸಕದ ಗಾಡಿ ಕೈಮಿಗೆ ಪೊಱಮಂಟರು ರಾವುತರು (ಕುಮಾರಾ. ೦೧-೦೭).

[ ತೊಡು₁ + ಬಿಲ್₂ ]

**ತೊಡೆ₁** (ಕ್ರಿ). ೧. ಲೇಪಿಸು ; ಬಳಿ ; ಪೂಸು ; ಸವರು ; ಹಚ್ಚು : ಮನ್ಮಥೋತ್ಸವಾಭಿಮುಖ ಮುಖಚಂದ್ರನಂ ಚಂದ್ರಕವಳದಿಂ ತೊಡೆದು (ಆದಿಪು. ೪-೪೦ ವ) ; ಕುಡಿ ಮುಜಿದಿರ್ದೊಡಂ . . . ಆಯದೆಡೆಯೊಳ್ ಬಿಸಿಯಪ್ಪ ತುಪ್ಪಮಂ ತೊಡೆದು (ಲೋಕೋಪ. ೬-೦೩) ; ಒಪ್ಪವ ನುಡಿವರಯ್ಯಾ ತುಪ್ಪವ ತೊಡೆದಂತೆ (ಬಸವ. ೭೭೫) ; ತೊಡೆದ ಭಸಿತಂ ಧೂಮವಿಡೆ ಮೈಯ ರೋಮ ಕೌಱಿಡೆ . . . ಕೌಶಿಕಂ ಮುನಿದನು ವಸಿಷ್ಠಮುನಿಗೆ (ಹರಿಶಾ. ೨-೩೩); ಮಂತ್ರಿಸಿದ ಸುರುಚಿರಭಸಿತವಂ ತಳಿದು ತಾಂ ತೊಡೆಯಲ್ಕೆ (ಬಸಪು. ೪೯-೨೯) ; ಆದ ಮೈಗಂಡಿಯೊಳು ರಕುತವ ಶೋಧಿಸುತ ಹಳದುಪ್ಪವನು ತೊಡೆದಾದರಿಸಿದುದು ವೈದ್ಯಸಂತತಿ ವೀರಭಟರುಗಳ (ಕುಮಾ್ಯಥೀ. ೫-೪೦); ಕಡುಮೂರ್ಖನಾದರೇನು ದುಷ್ಕರ್ಮದಿಂ

ತೊಡೆದಾತನಾದರೇನು (ಪುರಂದ. ೧-೧೯೩-೧). ೨. ತೀಡು; ಸೋಕು: ಪರಿತಂದಾಗಳ್ ಚಂಚುವಿಂ ತೊಡೆದು ಮೆಯ್ಯುಂ (ಕುಸುಮಾ. ೧-೫೩); ಪುಗಿಲುಪುಗಿಲೆಂದುಡೆಯ ತೊಡೆಯುತಿರೆ ತಂಗಾಳಿ (ಕಾಂಚೀರ. ೬೦-೯೯). ೩. ಒರಸು: ತದೀಯಪಾದಪಲ್ಲವಂಗಳನಾನಂದಾಶ್ರುಮಿಶ್ರಿತಜಳಂಗಳೊಳ್ ತೊಳೆದುಂ ನಿಜೋತ್ತರೀಯ ಪಲ್ಲವಂಗಳೊಳ್ ತೊಡೆದುಂ (ಆದಿಪು. ೫-೪೬ ವ); ಜಳದಿಂದೆ ಕರ್ಚಿ ವಲ್ಕಾಂಚಲದಿಂ ನಿಜವದನದಿಂಬಮಂ ಸತಿ ತೊಡೆದಳ್ (ಕಾದಂಪೂ. ೬೦೨); ಅಂಬರಣವಾಂಸು ಪತ್ತಿರೆ ಶರೀರವಮಂ ತೊಡೆದು ಕಳೆದೆ ವಸ್ತ್ರಾಂಚಲದಿಂ (ಗದಾಯು. ೯-೨೬); ನನೆದುಂಬಂ ತಾವರೆಪೂವಿನ ಕೈಪೊಡೆಯಿಂ ಮನೋಭವಂ ತೊಡೆವವೊಲಾ ವನಿತೆಯ ಸಬಾಷ್ಪಲೋಚನಮನವನಿಪತಿ ಶೋಣಪಾಣಿತಳದಿಂ ತೊಡೆದಂ (ಮಲ್ಲಿಪು. ೮-೧೬); ಕಣ್ಬನಿಯುಂ ತನ್ನ ಕರಾಗ್ರದಿಂದೆ ತೊಡೆದಂ ವಿಶ್ವಂಭರೋರ್ವೀಶ್ವರಂ (ಕುಸುಮಾ. ೩-೪೯); ಬಾಷ್ಪೋದಕಬಿಂದುಸಂದೋಹಮಂ ತೊಡೆದು ನಿನ್ನ ದುಃಖಕ್ಕೆ ಕಾರಣವೇನೆನುತ್ತ ಮತ್ತಿಂತೆಂದಂ (ಪುಣ್ಯಾಸ್ರ. ೧-೬೨ ವ); ದುರ್ವ್ರಣವ ತೊಡೆದು ಕಟ್ಟುವ ಹಸ್ತವೈದ್ಯರ ಗಡಣ (ಕುಮಾ.ಭಾ. ೫-೪೦). 'ಕಂಬನಿದೊಡೆ' ಪರಾ. ೪. ಅಳಿಸು; ಉಜ್ಜು ತೆಗೆ: ಮನಸಿಜನ ತಲೆಯ ಬರೆಹವ ತೊಡೆದೆನು (ಮುಹಾದೇ. ಬ. ೬೧-೦೭೩); ತೊಡೆವೆಂ ಶಕ್ರನ ನಾಮಮಂ ತುಡುಕಿ ನೀರೊಳ್ ಮೆಟ್ಟುವೆಂ ಮಚ್ಚಿಯಂ (ಜಗವಿ. ೩-೨೦); ತೆಕ್ಕನೆ ತೀವಿರೆ ತಾಪಕ್ಕಿಕ್ಕಿದ ಸಿರಿಗಂಪು ಪಣೆಯೊಳಿಸೆದುದು ಕೋಪಂ ವಿಕ್ಕತನು ಬೆಸಸಿದೊಡೆ ನೊಸಲಕ್ಕರಮಂ ತೊಡೆಯಲೆಂದು ಬಂದಿಂದುವವೋಲ್ (ಚಂದ್ರಪು. ೮-೮೬); ಎಡಬಿದನೋ ಅವನ ನೊಸಲಕ್ಕರವಂ ತೊಡೆದುದಕ್ಕುಂ(ಶಮದ.೫೬ ಪ್ರಯೋ); ಸರಸಿಜಾಸನನಂದು ನೊಸಲಲಿ ಬರೆದ ಲಿಪಿ ಹೆಡತಲೆಗೆ ಹೋಹುದೆ . . . ಮರೆಳೆ ತೊಡೆಯಲು ಕಾಯಲುಂ ವಂಕರುಹಗರ್ಭಂಗಾಗದು (ಲಕಪು. ೪೬-೦೩); ತೊಡೆದನಾಗಳೆ ನೊಸಲ ಕಣ್ಣಿನ ಕಿಡಿಯನೆಲ್ಲರನುಳುಹಿದನು (ಪ್ರಭುಲೀ. ೧೩-೬೨); ಲೀಲೆಯಿಂದೀ ಭೀಮ ದೈತ್ಯರ ಭಾಳಲಿಪಿಯನು ತೊಡೆದ (ಕುಮಾ.ಭಾ.ಆ. ೬ಪಿ೫. ೧೫-೧೪); ಶರದ ಘನರಾಜೇಂದ್ರಪದವಿಯ ಬರಹ ತೊಡೆದುದು (ತೊರರಾ. ೩-೨-೨); ಬರೆಬರೆದಂತದಂ ತೊಡೆದು ತೊಟ್ಟನೆ ನಿಟ್ಟಿಸಿ . . . ತೋರ್ಪ ದುಷ್ಕವಿ ಮಹಾಕವಿಮಧ್ಯದೊಳೊಪ್ಪಲಾರ್ಪನೇ (ರಾ ಜ ಶೇ. ೧-೩೩); ತೊಡೆಯಲಪ್ಪುದೆ ನೊಸಲ ಬರೆಹಗಳ ಕುಂದಂ (ಕಾಲೂಕ. ೧೧೧-೨೨೮). ೫. ಗುಡಿಸು; ಉಡುಗು: "ತೊಡೆ-ಸಂಮಾರ್ಜನೇ, ಅಂಗೇಚ" (ಶಮಧಾ); ಉತ್ಪಲಿಕೆಯಂ ಕದಳೀಗೃಹಮರಕತವೇದಿಯಂ ಕಮಲದಲಂಗಳಿಂ ತೊಡೆಯಲುಂ . . . ಪೆಸರ್ವೆಸರೊಳೆ ಕರೆದು ಪೇಟ್ದ (ಕಾದಂಪೂ. ೧೧೦೬); ಊರ ಚೌವಟ್ಟದೊಳಂ ತೊಡೆದು ಬರೆದಲ್ಲಿ ರಂಗಮನಡುಗೆಗಳಂ ಸುರಿದು ಸೂಸಿ ಕೆಡುವಮರ್ೂಢರ್ (ಸಮಾಜ. ೯-೧೩೦); ಕಡುಸೊಗಯಿಪ ಮಣಿಮನೆಯಂಗಣಮಂ ತೊಡೆವ . . . ಮಡದಿಯರ ವೊತ್ತಂ ಕಣ್ಗೊಪ್ಪಿದುದು (ಜಯುಕಾ. ೧೨-೦೩). ೬. ಶುದ್ಧಿಮಾಡು; ಶುಭ್ರಮಾಡು: ವರಮುಕುರವಂ ತೊಡೆವ[ಶಾಣಂ. ಚೆಳವ]ರಾರ್ (ಹಕಶಾ. ೧-೨೨). ೭. ನಿರ್ಮೂಲಮಾಡು; ನಾಶಮಾಡು: ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ (ಮುಹಾದೇ. ಬ. ೨೩-೪೩); ಜಿನಬುದ್ಧಸಮಯವಿದೆಂದುಲಿವ ಪೆಸರಿಲ್ಲದಂತಾತನು ತೊಡೆದು ಕಳೆದು (ಬಸಪು. ೫೦-೫೦); ಜಯವಿಜಯರಾ ದೈತ್ಯಜನ್ಮವನು ಈತ ತೊಡೆದನು (ಕುಮಾ.ಭಾ.ಉ. ೬ಪಿ೫. ೧೦-೨೪); ಮೇಘಪ್ರಸರಕೋಳಗಹನೊಮ್ಮೆ ರವಿ ತೋರುವನು ಮತ್ತೊಮ್ಮೆ ಅಸಮಸಮರದೊಳೀತನಾ ಪರಿಮಸುಳುವನು ತೋರುವವೊ ತೊಡೆವನು ದೆಸೆಗೆಡಿಸುವನು ಬಳಿಕ ಮುಳಿಸಿನೊಳಾ ಮಹಾರಥರ (ಕುಮಾ.ಭಾ.ಕ. ೧೧-೩೭) ೮. ನಾಶವಾಗು; ಇಲ್ಲವಾಗು: ತಪ್ಪಿತ ತೊಡೆಯಿತ್ತು ಭವಬಂಧನ ಹಿಂಗಿತ್ತು (ಶರಗೋ. ೨); ಪಾಂಡವರೂ, ಕುಂತಿಯೂ ಬದುಕಿಕೊಂಡು, ದ್ರೌಪದಿಯನ್ನು ಪಡೆದಿದ್ದಾರೆ . . . ದುಃಖ ತೊಡೆದಿದೆ! (ವಕಥಾ. ೬೬); ಎಂದಾದರೊಮ್ಮೆ ತುಸು ಕದನ ಸುಳಿದರೆ . . . ಹೇಗೋ ತೊಡೆದು ಬಿಡುತ್ತಿತ್ತು (ಚಟ್ಟಹೊ. ೪). ೯. ಪರಿಹರಿಸು; ನಿವಾರಿಸು: ಸಯ್ತಡವಡಿಕೆಗಳಂ ತೊಡೆದತ್ತೆಡವಟಿಯದೆ ಪೊಳೆವ ಮಿಂಚು (ಕವಿರಾ. ೩-೧೨೫); ಕೋಪಪಮಂಗಜರಸಪೂರದೊಳ್ ತೊಡೆದವೋಲ್ ತಳರ್ದತ್ತು (ಶಾಂತಿಪು. ೮-೧೧೧);ಎನ್ನ ಕಾಯದ ಕರ್ಮವ ತೊಡೆದು . . . ಕಾರುಣ್ಯವ ಮಾಡು (ಅವಕಂ. ೧೬೬-೬೫೩).

**ತೊಡೆದುಕೊಳ್, ತೊಡೆದುಕೊಳ್ಳು** = ೧. ಲೇಪಿಸಿಕೊಳ್ಳು; ಬಳಿದುಕೊಳ್ಳು: ಎದುರಿಗೇ ಇದ್ದ ತಮ್ಮ ದೃಷ್ಟಿಯ ಸುಪ್ರಭೆಯನ್ನು ತೊಡೆದುಕೊಂಡಿದ್ದ (ಸುವಸಂ. ೧೬). ೨. ಒರೆಸಿಕೊಳ್ಳು: ತುಡುಗಣೆ ತೊಟ್ಟಿನಂತ ಬಾಯಂ ತೊಡೆದುಕೊಂಡು (ಶಂಕಶಂ. ೨೮೪-೨೩). **ತೊಡೆದುಹಾಕು** = ೧. ಅಳಿಸಿಹಾಕು; ಅಳಿಸು: ನಿನ್ನ ಹಣೆಯ ಬರಹವನ್ನು ತೊಡೆದು ಹಾಕುತ್ತೇನೆ (ರಾಜಸಾ. ೨೦). ೨. ನಾಶಮಾಡು; ನಿರ್ಮೂಲಮಾಡು: ರಾಜರ ದುಷ್ಟಸಹವಾಸಗುಣ ಅವರ ವಿವೇಕವನ್ನು ತೊಡೆದುಹಾಕಿತ್ತು (ಮಠಕ. ೧೬೩); ಗ್ರಹಗಳು ರೂಪುಗೊಳ್ಳುವ ಕ್ರಿಯೆ ಅತ್ಯಂತ ಅಪೂರ್ವ ಸಂಭವವಾದುದು ಎಂಬುದು-ಮತಾಭಿಪ್ರಾಯವನ್ನು ತೊಡೆದುಹಾಕಲು ಇಚ್ಛಿಸದಿದ್ದ ಜನಸಾಮಾನ್ಯರ ದೃಷ್ಟಿಯಲ್ಲಿ ಒಂದು ಪ್ರಧಾನಗುಣವಾಗಿ ಪರಿಣಮಿಸಿತು (ಭೂಹುಟ್ಟು. ೨೯). **ತೊಡೆದು ಹೋಗು** = ಇಲ್ಲವಾಗು: ಅವರಿಗೆ ಉಂಟಾದ ಅಂತಹ ವಿಷಮವಿಪತ್ತಿನಲ್ಲಿ ಸಮಯಸ್ಫೂರ್ತಿಯು ತೊಡೆದುಹೋಯಿತು (ರಾವಿಜ. ೨೩).

[ದೇ.೫ ತಮಿ. ತೊಟ್ಟೈ, ತುಟ್ಟೈ; ಮಲ. ತುಡೆ; ತುಳು. ತೊಡೆ, ತುಡೆ; ತೆಲು. ತೊಡೆಯು. ತುಡ್ಚು]

**ತೊಡೆ₂** (ನಾ). ಸೊಂಟದಿಂದ ಮಂಡಿಯವರೆಗಿನ ಭಾಗ; ಊರು: "ಪ್ರಸೃತಾಸ್ಯೆ ಜಂಘೆ ತೊಡೆಯೂರು" (ವಸ್ತುಕೋ. ೬೬-೩); ವೀರಶ್ರೀ ಮಹಾದೇವಿಯರರಸನ ತಲೆಯಂ ತನ್ನ ತೊಡೆಯ ಮೇಲಿಟ್ಟು (ವಡ್ಡಾರಾ. ೧೦೭-೧೦); ವದನಂ ತೋಳ್ ತೊಡೆ ಪಾದವೆಂಬವನಿವಂ ಶುಶ್ರೂಷೆಗೆಯ್ವಲ್ಕೆ (ಆದಿಪು. ೮-೬೩); ಕುರುರಾಜನ ತೊಡೆಯನುಡಿವೆನೆಂದಂ ಭೀಮಂ (ಗದಾಯು. ೨-೨೮); ತೊಡೆಯ ಮೇಲಿದ್ರ್ದೊಡಂ ಸ್ತ್ರೀಯನಾರ್ಯೆದುಕೊಂಡಿರಬೇಕು (ಶಂಕಶಂ. ೧೩೩-೧೬); ಸುರಪತಿಯ ಬೇಳಂಬವನು ವಿಸ್ತರಿಸಲೇತಕೆ ವಜ್ರಕೀಟೋತ್ಕರವ ಕಳುಹಿದರೆನ್ನ ತೊಡೆಗಳನಾಗಿದವವು ಬಳಿಕ (ಕುಮಾ.ಕ. ೯-೩೧).

[ದೇ.೫ ತಮಿ. ತೊಟ್ಟೈ, ತುಟ್ಟೈ; ಮಲ. ತುಡ; ತುಳು. ತೊಡೆ, ತುಡೆ; ಕೊಡ. ತೊಡೆ; ತೆಲು. ತೊಡ]

**ತೊಡೆಗಟ್ಟ** (ನಾ). ಒಂದು ಬಗೆಯ ಸಸ್ಯ: ಬೀಟೆ, ತೊಡೆಗಟ್ಟ, ಕರೇವ್ಯಾಡಿ (ಮೃಚಿನಿ. ೨೮-೫೧೮). [?]

**ತೊಡೆಚಲ್ಲಣ** (ನಾ). ಒಂದು ಬಗೆಯ ಚಲ್ಲಣ; ಮೊಳಕಾಲಿನವರೆಗೆ ಬರುವ ಉಡುಪು; ಅರ್ಧೋರುಕ: ತೊಡೆಚಲ್ಲಣ ತೊಟ್ಟ ಜೋಡು ಬಿಡದೆ ಮೆಟಿಯ ಬಿಲ್ಲವರು ನಡೆತಂದರು (ಕುಠಾಸಾಂ. ೧೧-೩೫); ಹೆಜ್ಜೆ ಹಜ್ಜೆಗೆ ತೊಡೆಚಲ್ಲಣವಡಸಿರ್ದ ಗೆಜ್ಜೆಯು ಗಲಿರೆಂಬ ರವದಿ. . . ಬಂದನು (ಪೋಹಕ. ೧೨-೪೯). [ತೊಡೆ₂ + ಚಲ್ಲಣ]

**ತೊಡೆಚಾಟುಗೊಳ್** (ಕ್ರಿ). ತೊಡೆಗೆ ಮರೆಮಾಡಿಕೊಳ್ಳು,-ರಕ್ಷಣೆಯಾಗಿಟ್ಟುಕೊಳ್ಳು: ಬೆಳ್ಳಿಪೊಂಗುಬ್ಬವರಿಗೆಯಂ ತೊಡೆಚಾಟುಗೊಳುತೊಡನೆ ಖಡ್ಗಂಗಳ ಝಳಪಿಸುತೆ . . . ಪೊಯ್ದಾಡುತಿರ್ದರಾ ಹರಿಗೆಯವರು (ಚಲಪು. ೪೮-೫೦); ಕಾಳೆಯಿಂದೆ ಬೆದಬಿದಿರಿ ನೇಜಯಂಗಳನೂದು ಹರಿಗೆಯಂ ಕದಲಿಸು ವರೂಥಮಂ ತೊಡೆಚಾಟುಗೊಳ್ಳೆನುತೆ ಕದನವಿಕ್ರಮರೆಲ್ಲರುಂ ಬಿದಟಿ ಕಂಡ ಕಡೆಗೋಡಿದರು (ಚಬಪು. ೫೦-೧೬).

[ತೊಡೆ₂ + ಚಾಟು₃ + ಕೊಳ್₁]

**ತೊಡೆತ** (ನಾ). ೧. ಲೇಪನ ; ಬಳಿಯುವಿಕೆ : "ಲೇಪನಂ ತೊಡೆತಂ" (ಅಾಹಟು. ೨-೧-೮೬) ; (ಬಣ್ಣ, ಸುಣ್ಣ ಬಳಿಯುವುದರಲ್ಲಿ) ಮೊದಲನೆಯ ತೊಡೆತ (First Coat. ಇಂಕನ.). ೨. ನಾಶ: ಗಡ್ಡೆ ಇರ್ಬ್ಬುದು, ಕಿರಿದು, ಸಲವಿುಸಿನ ಮುಂದುಗಡೆ, ನಾವೆಗಳ ತೊಡೆತ (ಪಾರಿಕ. ೧೬-೪೯೩).
[ ತೊಡೆ$_1$ + – ತ$_2$ ]

**ತೊಡೆತಟ್ಟು** 'ತೊಡೆದಟ್ಟು' ನೋ.

**ತೊಡೆದಟ್ಟು**, ತೊಡೆತಟ್ಟು (ಕ್ರಿ). ೧. ಚಂಕ್ಕುತಟ್ಟು : ಚಂಡವಿಕ್ರಮ ನೊಣಗಿದನು ನಾರಿಯರ್ ನಿಖಿಲೋಪಚಾರವ ಮಾಡಿ ಕೈವಾರಿಸಿ ತೊಡೆ ದಟ್ಟಲೊಡನೆ ಪಾರಿಯ ವಾದ್ಯ ಘೋಷಣಸಲ್ಕೆ ದಿವ್ಯವಿಭೇರಿಯ ಹೊಡೆದರ್ರೂರೊಳಗೆ (ಮೋಹತ. ೧೮-೧೦೦). **ತೊಡೆತಟ್ಟು** : ೨. ಮಲ್ಲ ಯುದ್ಧಕ್ಕೆ ಸಿದ್ಧವಾಗು ; ಸಡ್ಡುಹೊಡೆ : ಜಟ್ಟಿಗಳು ತೊಡೆತಟ್ಟಿ ಮಲ್ಲಯುದ್ಧಕ್ಕೆ ಸಿದ್ಧವಾದರು (ಜೂ೧). [ ತೊಡೆ$_2$ + ತಟ್ಟು$_1$ ]

**ತೊಡೆಪ**, ತೊಡಹ$_1$, ತೊಡೆಹ (ನಾ). ೧. ಬಳಿಯುವಿಕೆ ; ಲೇಪನ : ತೊಡೆಪಂ, ನಡೆಪಂ, ಮೊಗೆಪಂ (ಶಬ್ದಾನು. ೫೬೧ ಪ್ರಯೋ). **ತೊಡಹ$_1$** : ೧. ಜಡೆದಲೆಯ ತೊಡಹದ ವಿಭೂತಿಯ ಮುಡಿವೆರಳ ಜಪಸರದ . . . ಮುನಿಯ ವೇಷವ ತೊಡಚಿಕೊಂಡಿಹ ಕಾಲನೇಮಿಪ್ಪಂತೆ ರಂಜಿಸಿದ (ತೊರಠಾ. ೬-೫೭-೬೮) ; ಹೇಮದ ತೊಡಹದುರುನಿಸ್ಸಾಳತತಿಯಲಿ ನುಡಿ ವಡಚ್ಚರಿಯೆನಲು ಮಿಗೆ ಸಂಭ್ರಮಿಸಿತಾ ನಗರ (ತೊರಠಾ. ೬-೫೫-೧೭). ೨. ಗಿಲೀಟು ; ಲೇಪ : ತೊಡಹದ ಕೆಲಸದ ಬಣ್ಣದಂತೆ ಕಡಿಹಕ್ಕೆ ಒರೆಗೆ ಬಾರದು ನೋಡಾ (ಬಸವ. ೨೪೯) ; ಚಿಗಿವ ಚಲನೆಯ ಚಂಗುವಾಚಿನ ಮೃಗ . . . ತರುಕದಂಬದಲಿ ಅಡಗಿ ತೋರುತ ನಿಲುತ ನಿಗುರುತ ತೊಡಹದಳಿಮನದಧಮಪುರುಷನ ನುಡಿಯವೊಲು ವಂಚಿಸುತ ಹಾಯ್ದುದು ವಿಪಿನದಲಿ ಸ್ವಪನ (ತೊರಠಾ. ೩-೮-೪೭). ೩. ಕಪಟ ; ಠಕ್ಕು ; ನಟನೆ : ಕಡಿಗಳ ಹದಿನೆಂಟನೊಡಗೂಡಿ ಸಂದಿಸಿ ತೊಡಚಿ ಕಟ್ಟಿದೆ ನರರ ಬಂಧನದಲ್ಲಿ ಈ ತೊಡಹದ ನಾಯ ನಿಚ್ಚ ನೀನಿಕ್ಕಿ ಕಡಿಸಿದೆಯಯ್ಯ (ದೇದಾವ. ೩೭-೬೨) ; ತೊಡಹದಧಟನೆ ತಳೆದು ಯುದ್ಧಕೆ ತಡಹುಸಿ ಸಮಸತ್ತ್ವದಲಿ ಫಣಿಶಯನು ಕಾದಿದನು (ಸಾಳ್ವಭಾ. ೨೨-೬೮). **ತೊಡೆಹ** : ೨. ಕನಕದ ತೊಡೆಹದೊಳಾ ಸರವಣೆಯಂತೆ ಜನಪನಿನ್ನೊಬ್ಬ ಮಾಡುವನೆ (ಭರತ. ೪೯-೧೪೦) ; ಹೊಸ ಹೊನ್ನ ತೊಡಹದಂತೆಸೆವ ಮೈಬಣ್ಣ (ಭರತ. ೭೭-೧೯). ೪. ತೋರಿಕೆ: ವೀರ ರೆಂದೆನಿಸುವರು ತೊಡಹದ ಶೌರಿಯದ ಸಿರಿವಂತರರಸುಕುಮಾರಕರು ನಿನ್ನವರು (ಕುಮಾರವ್ಯಾ. ೧೩-೪೭) : ಹೊಳೆಹೊಳೆದು ತಂಬುಲದ ರಸದಲಿ ಮುಳುಗಿ ಮೂಡುವ ಧಗೆಯ ತೊಡೆಹದ ಮಲುನಗೆಯ . . . ಭೂಪಾಲನಿರವನು ಕಂಡು (ಕುಮಾರವ್ಯಾ. ೧೮-೯). [ ತೊಡೆ$_1$ + – ಪ$_2$ ]

**ತೊಡೆಮಡ** (ನಾ). ೧. ಆನೆ ಅಥವಾ ಕುದುರೆಯನ್ನು ಏರುವ ಒಂದು ಬಗೆಯ ವಿದ್ಯೆ,–ವರಸೆ : ಸರಸನ್ನೆ ತೊಡೆ[ಪಾಠಾಂ. ಡ]ಮಡಂ ಕಸೆಕಟ್ಟು ಕಡಿಯಾಣ ಸರಸಮುಂ ಸೈರಿಸದ ಚಳಬಳಿಕೆಗಳ ಚಾರು ತುರಗಕುಲ (ಸೋಮಶ. ೫-೨೮) ; ಬಳಕೆಯೊಳು ತೊಡೆಮಡ ಕಸಿ[ ಕಸೆ ] ಕಂಬಿಯ ಸರಸನ್ನೆಗಳಾಟದ ತೊಡಕಂ ಹೊದ್ದದೆ (ವೀರೇಶ. ೨-೨೯) ; ತೊಡೆಮಡ ದನಿ ಚಮ್ಮಟಿಗೆಗಳನೊಯ್ಯನೊಯ್ಯನೆ ಮೈವಳಿಗೆ ತಂದೊಡಂಬಡಿಸಿ (ರಾಜಶೇ. ೬-೧೧ ವ). ೨. ಸವಾರಿ: ಎನ್ನ ತೊಡೆಮಡದ ಮದಕರಿಯೆ ಭಕ್ತರ ಸಿರಿಯೆ ದುರಿತಗಜ ಹರಿಯೆ ಸಾಮರ್ಥ್ಯಗಿರಿಯೆ (ಸಿದ್ಧರಾ. ೮-೪೨): ೩. ಸವಾರಿಯ ಒಂದು ಕ್ರಮ : ಥಾವನೆ ಬಯ್ಸಿಕೆ ತೊಡೆಮಡಕಯ್ದುನಿ ಯೆಂಬ ಚಡಾಯತಿಕೆಗಾಯತಿಕೆಪಡೆದಾರೂಢ ವಿದ್ಯಾವಿಳಾಸ (ಸೌಇಇ IX-1, ೩೪೩-೨೦ ; 1226). ೪. (ಅಲಂ) ಸಲಿಗೆ; ಆತ್ಮೀಯತೆ: ಪೊಚಿಮಡಿಸಿದಂ ಪುರಹರನ ತೊಡೆಮಡದ ಸುಕುಮಾರನು (ಸೋಮಶ. ೫-೨೨). [ ತೊಡೆ$_2$ + ಮಡ$_1$ ]

**ತೊಡೆಯಿಸು** (ಕ್ರಿ). ೧. ಬಳಿಯುವಂತೆ ಮಾಡು ; ಲೇಪಿಸು : "ತೊಡೆಯಿಸು – ಲೇಪ್ಯಕರಣೇ" (ಶಮುಧಾ). ೨. ಅಳಿಸು ; ಉಜ್ಜಿ ತೆಗೆ ; ಇಲ್ಲದಂತೆ ಮಾಡು : ಪುರಾತನ ಚಕ್ರವರ್ತಿಗಳ ದಿಗ್ವಿಜಯ ಕೀರ್ತಿಗಳಂ . . . ದಂಡರತ್ನದಿಂ ತೊಡೆಯಿಸಿ ಕಳೆದು (ಅಜಿಪು. ೯-೩೪ ವ); ಆಂ ಬಂದು ಪೋದ ಪಜ್ಜೆಯನಂಬುಜಮುಖಿ ಪೆಱನದೊರ್ಬನಱಿಯದ ತೆಱದಿಂ . . . ತೊಡೆಯಿಸುವುದೆನುತುಮಾಂ ಪೊಱಮಟ್ಟೆಂ (ದಶಕು. ೧೦-೯೦); ತನ್ನರೇಂದ್ರನ ನೊಸಲ ಬರೆಹವ ಮುನ್ನೊರೆಸಿ ಬಿಜ್ಜಳನ ಸಾಮ್ರಾಜ್ಯೋನ್ನತಿಯನೀಶನ ಕವಳಿಗೆಯೊಳಂತು ತೊಡೆ[ಪಾಠಾಂ. ಡ] ಯಿಸುತ (ಬಸಪು. ೬೧-೭). [ ತೊಡೆ$_1$ + – ಇಸು$_3$ ]

**ತೊಡೆಯೇಱಿಸು** (ಕ್ರಿ). ತೊಡೆಯ ಮೇಲೆ ಕೂರಿಸಿಕೊಳ್ಳು : ಬಯಸಿ ಪಡೆದು ತೊಡೆಯೇಱಿಸಿ ಮುದ್ದನೊಱಲ್ದು ನೋಡಿ ನಡೆಪಿದ ಜನನೀ ಜನಕರ್ಗದೆನಿತಲರ್ ಜನಿಯಿಕುಮೋ (ಶಾದಂಉ. ೪೭೫) ; ಅರಸನೆಂಬ ಪಾತಕನೆನ್ನಂ ತೊಡೆಯೇಱಿಸಿ ಕೇಳಿಕೆಯಾದೊಡೆ ನೋಡುತಿರ್ದೆಂ (ಯಶೋಚ. ೨-೫೧). [ ತೊಡೆ$_2$ + ಏಱಿಸು ]

**ತೊಡೆವಾಳ** 'ತೊಡೆವಾಳೆ' ನೋ.

**ತೊಡೆವಾಳೆ**, ತೊಡೆವಾಳ (ನಾ). ತೊಡೆಯ ಸಂದಿಯಲ್ಲಿ ಬಾಳೆಯ ಕಾಯಂತೆ ಏಳುವ ಬಾವು ; ಉಡುಚು ; ಒಂದು ಬಗೆಯ ಗುಹ್ಯ ರೋಗ : "ಜುಂಗಃ = ತೊಡೆವಾಳೆ" (ಕಾಶಕ್ಕ. ೧೦); ರಕ್ತಧಾತು, ಮಾಂಸ ಧಾತು ... ಇವಱಿಂದ ತೊಡೆಗಳ ಸಂದಿನಲ್ಲಿ ಆ ಗ್ರಂಥಿ ಉಂಟಾಗುವುದು. ಅದನ್ನೇ ತೊಡೆವಾಳೆ ಎಂದೆಂಬರು (ವೈದ್ಯಸಾ. II, ೧೭೪). **ತೊಡೆವಾಳ** : ಈ ಬೇರಂ ನಿಂಬೇಹುಳಿಯಲ್ಲಿ ತೇದು ಕೊಡೆಯಲು ೩ ದಿನಕ್ಕೆ ತೊಡೆವಾಳ ಗುಣ (ವಿಷವಿ. ೪) : ದೇಹದ ಗ್ರಂಥಿಗಳಿರುವ ಪ್ರದೇಶದಲ್ಲಿ (ಮು. ಕಂಕುಳಲ್ಲಿಯೂ ತೊಡೆಯ ಸಂದಿಯಲ್ಲಿಯೂ) ಏಳುವ ಗೆಡ್ಡೆ; ಕೊಡವಾಳ; ಉಡುಚು (Bubo. ಇಂಕನ.).
[ ತೊಡೆ$_2$ + ಬಾಳೆ$_1$ (< ಬಾಟ್$^3$)./ತಮಿ. ತೊಟ್ಟೈವಾಟ್$^3$, ತುಟ್ಟೈವಾಟ್$^3$; ಮಲ. ತುಡವಾಟ್$^3$; ತುಳು. ತೊಡೆವಾಳ್, ತೊಡೆವಾಳೊ ]

**ತೊಡೆವೇನೆ** (ನಾ). ತೊಡೆಯ ನೋವು,–ವೇದನೆ : ಕುರುರಾಜಂ ತೊಡೆ ವೇನೆಗೆ ನರಳನೆ (ಗದಾಯು. ೯-೧೯). [ ತೊಡೆ$_2$ + ಬೇನೆ ]

**ತೊಡೆವೊಯ್** (ಕ್ರಿ). ತೊಡೆಯನ್ನು ಮೃದುವಾಗಿ ಬಡಿ,–ಮೆಲ್ಲನೆ ತಟ್ಟು : ಹೊತ್ತು ಹೋಯಿತ್ತೇಳಿರೇ ಶಿವಾರ್ಚನೆಗೆಂದು ತೊಡೆವೊಯ್ದು ಮೆಲ್ಲನೆಬ್ಬಿಸೆ (ಬಸರ. ೯-೧೪೯). [ ತೊಡೆ$_2$ + ಪೊಯ್$_1$ ]

**ತೊಡೆಸಂಕಲೆ** (ನಾ). ೧. ತೊಡೆಗೆ ಹಾಕುವ ಸಂಕೋಲೆ,–ಸರಪಣಿ : ತೊಡೆಸಂಕಲೆಯಿಕ್ಕಿದವೊಲ್ಕುಡಿಯಳ್ಗಳಿಂದೆ ಸುರಿದುವಿರ್ಕೆಲಕೆ ಕರುಳ್ (ಶಮುದ. ೧೦೭ ಪ್ರಯೋ). ೨. ಬಿರುದಿನ ಬಳೆ : ಮೊಕ್ಕಳಮೆನೆ ಬಸಿಱೀ ಱಿಂದೊಕ್ಕ ಕರುಳ್ ತೊಡೆಯೊಳಾವಗಂ ತೊಡರ್ದನಸುಂ ಮಿಕ್ಕುವು ಬಿರುದರ ಬಿರುದಿಂಗಿಕ್ಕಿದ ನಂಟ್ಟಿಸದ ಮಿಸುಪ ತೊಡೆಸಂಕಲೆಯುಂ (ಚಂದ್ರಪು. ೧೦-೭೪). ೩. (?) : ಬಿರುದಿನುಬ್ಬಟೆಯ ಠಳಪಟದೊಳೌಕಿದರು ತೊಡೆಸಂಕಲೆಯ ತೊಲಗದ ಕಂಭದಪ್ರತಿಬಲರು ಹಾಣಾಹಾಣಿಯಲಿ ಹೊಯಿದಾಡಿದರು ಕಡುಗಿ (ಕುಮಾವ್ಯಾ. ೪-೨೭). [ ತೊಡೆ$_2$ + ಸಂಕಲೆ ]

**ತೊಡೆಸಕ್ಕಿ**, ತೊಡೆಸಕ್ಕೆ (ನಾ). ೧. ಪ್ರತ್ಯಕ್ಷ ಸಾಕ್ಷಿ : ವಿಕ್ರಮಾಕ್ರಾಂತದಿಂ ದಿಗಧೀಶತೆತ್ತೊರ್ಡೆಸಕ್ಕಿಯಾಗೆ ಧರೆಯಂ ನಿಃಕಂಟಕಂ ಮಾಡಿದಂ (ಸೌಇಇ. IX-1, ೧೫೩-೧೩ : 1083); ನನೆಯಂಬುಗಳಂ ತೊಡೆಸಕ್ಕಿ ಮಾಡಿ ಕಾಂತೆಯ ತೊಡೆ ತೊಡೆದವು ಕನಕಕದಳಿಕಾವಿಲಸನಮು (ಮಲ್ಲಿಪು. ೩-೬೦) ; ಈವ ಗುಣಕ್ಕೆ ತಂನ ತೊಡೆಸಕ್ಕಿ ನಿಜಾಶ್ರಿತ ಪಂಡಿತರ್ಕ್ಕಳೊಳ್ ತೀವಿದುದಗ್ರ ಲಕ್ಷ್ಮಿ ನಿಜದೋರ್ಬ್ಬಳದೇಳ್ಗೆಗೆ ಸಕ್ಕಿ (ಎಕ. VII, ಶಿಕಾರಿ. ೧೨೩-೧೫ ; 1149). ೨. ತೊಡೆ ತಟ್ಟಿ ಮಾಡುವ ಪ್ರತಿಜ್ಞೆ (?) : ವಜ್ರವೇದಿಕೆಯಂ

ತಾಂ ತೊಡೆಸಕ್ಕಿ[ಪಾಠಾಂ. ಸಾಕ್ಷಿ]ವೊಯ್ವವೋಲ್ ಪೊಯ್ದೊಡನೊಡನುಚ್ಚಳಿ ಪುವಿದಱ ತುಂಗತರಂಗಂ (ಆದಿಪು. ೧೩-೧೩೪). **ತೊಡೆಸಕ್ಕೆ:** ೧. ತೊಡೆಗಳ ನುಡಿಯಲ್ಲುರಗಳ್ ತೊಡೆಸಕ್ಕೆಗಳಾಗೆ (ಗದಾಯು. ೧-೭೮);"ಪ್ರತಿಬಾಧಕ" (ಶ್ರಳ್ಳ.); ಪರ್ಚಿ ಬಿರ್ದ ಪೆರ್ದೊಡೆ ತೊಡೆಸ[ಸ]ಕ್ಕೆಯಾಗಗಿದು ಕೆತ್ತುವ ಪೊಣ್ಗಳ ಬಾಯ್ಗಳೀಱನುಪ್ಪುಡಿಸುವ ಬಾಯ್ಗಳಾಗಿರೆ ಕಱುತ್ತಿಱಿವಂ ನೃಪ ಸೈನ್ಯಮಂ (ಶೃಂಗಾರ. ೧-೮೩); ನಖಂ ಮುಡುಪನವುಂಕೆ ಕಂಡು ಸತಿ ಕಂಟಱು ಕಾಡುವಳೆಂದು ತನ್ನೊಡನೆಯ ಬೇಂಟಕಾಱವಡೆಯಂ ತೊಡೆಸಕ್ಕೆ ಯನುಂಟುಮಾಡಿದಂ (ಸೂಕ್ತಿಸು. ೩-೧೪೦); ತೊಡೆಯು ಸ[ಪಾಠಾಂ. ಸೆ]ಕ್ಕೆ= ತೊಡೆಸ[ಪಾಠಾಂ. ಸ]ಕ್ಕೆ (ಶಮದ. ೧೬೨ ಪ್ರಯೋ).

[ ತೊಡೆ₂ + ಸಕ್ಕಿ ]

**ತೊಡೆಸಕ್ಕೆ** 'ತೊಡೆಸಕ್ಕಿ' ನೋ.

**ತೊಡೆಸನ್ನೆ** (ನಾ). (ಕಂದುರೆಸವಾರಿ ಮಾಡುವಾಗ) ತೊಡೆಯ ಅವುಕು ವಿಕೆಯಿಂದ ಮಾಡುವ ಸನ್ನೆ.–ಸೂಚನೆ : ಆನೆಗೆ ಅಡಿಸನ್ನೆ ಕುದುರೆಗೆ ತೊಡೆಸನ್ನೆ ಹೆಣ್ಣಿಗೆ ಕಣ್ಣಿನ ಸನ್ನೆ (ಇಂಬಾಪ. ೯೦-೩೭).

[ ತೊಡೆ₂ + ಸನ್ನೆ₂ ]

**ತೊಡೆಸೋಂಕು** (ನಾ). ೧. ತೊಡೆಯು ಸ್ಪರ್ಶವಾಗುವಷ್ಟು ಹತ್ತಿರ,– ಸನಿಹ: ವಾಸವನ ತೊಡೆಸೋಂಕಿನಲಿ ಕುಳ್ಳಿಹರೀ ಮಹೇಶ್ವರರು (ಕುಮ್ಯಾಸ. ೮-೧೮). ೨. (ಆಲಂ) ಸಲಿಗೆ ; ಆತ್ಮೀಯತೆ : ಎನಗೆ ನಿಮ್ಮಡಿಗಳಲಿ ಸಮಸೇವನೆಯ ದೇವ ಮುರಾರಿಯಂಜುವೆನೆನಲು ತೊಡೆಸೋಂಕಿನಲಿ ಸಾರಿದು ಶೌರಿಯಿಂತೆಂದ (ಕುಮ್ಯಾಉ. ೧೦-೨). [ ತೊಡೆ₂ + ಸೋಂಕು₂ ]

**ತೊಡೆಹ** 'ತೊಡೆಪ' ನೋ.

**ತೊಣಚಿ** 'ತೊನಸೆ' ನೋ.

**ತೊಣಚೆ** 'ತೊನಸೆ' ನೋ.

**ತೊಣಸಿ** 'ತೊನಸೆ' ನೋ.

**ತೊಣಸೆ₁** 'ತೊನಸೆ' ನೋ.

**ತೊಣಸೆ₂** (ನಾ). ಒಂದು ಬಗೆಯ ಸಸ್ಯ,–ಸೊಪ್ಪು : (ಕ).

[ ? ]

**ತೊಣೆ₁**, ತೊನ್ನೆ₂ (ನಾ). ೧. ಸರಿ ; ಸಮಾನ ; ಎಣೆ ; ಸಾಟಿ : "ಸರಿ ದೊರೆ . . . **ಎಣೆ ತೊಣೆ** . . . ಸಂಗಡಂ–ಈ ೧೮ ಸಮಾನಕೆ ಪೆಸರ್" (ಕಕಶಾ. ೧೩-೨೯೧); ಕರ್ಣನೆಣೆಗಂ ತೊಣೆಗಂ ನೃಪರಾರುಮಿಲ್ಲ (ಪಂಪಭಾ. ೧೨-೧೦೦); ಶಶಭೃತ್ಕಾಂತಿಗೆ ಮಿಂಚುಂಬಾಟು ಸಮ ನೆಂತಕ್ಕುಮೊ ದೊರೆಗಮೊರೆಗಮೆಣೆಗಂ ತೊಣೆಗಂ (ಶಾಂತಿಪು. ೧೨-೬೭); ವಿದ್ಯಾವಿಭವಮಂಶಸಂಪತ್ತಿಯೊಳಿಂದೀ ವರನೀಕೆಗೆ ತೊಣೆಯೆನೆ (ಪರ್ಧಪು. ೯-೪೩); ತೊಣೆಯಾಂಡಿಗಳೆಯೊಳಾತರ್ೊಣೆ (ಧೃರಪೀ. ೧-೩೩೮); ಸಹದೇವಂಗೆ ಸತ್ಯವಂತಂ ತೊಣೆ (ರಾಘೂಶ್ನ. ೧೪೪-೨). ೨. **ಜೊತೆ** ; ಒಡನಾಟ; ಸಹವಾಸ: ಅವಳ ತೊಣೆ ಪೂವಿಗೂ ಹರ್ಷವನ್ನೊದಗಿಸುತ್ತಿದೆ (ಹುಂಹಾ. ೨೬೭). ೩. ಸಂಗಡಿಗ ; ಒಡನಾಡಿ : ರಕ್ಷಿಸು ನಮಃಶಿವಾಯ ನೀನೆ ತೊಣೆ ನೀನೆ ಹೊಣೆ ಎಂದು ಕಟಿಗೊರಲಂಗೆ ಮೊಱೆಯಿಡೆ (ಪಾಗೀರ. ದೀ. ೭೨೬-೯). 'ಎಣೆತೊಣೆ' ಪರಾ. **ತೊನ್ನೆ₂** : ೧. ನಿರುಪಮ ಧರ್ಮ್ಮಕಾರ್ಯ್ಯದೆಡೆಯೊಳು(ಳ್)ಸಲೆ ಶೋಭನಸಟ್ಟೆಯೊಳು(ಳ್) ದಿಟಂ ಸರಿ ದೊರೆ ಪಾಟಿ ಪಾಸಟಿ ಸಮಂ ತೊನೆಯೆಂದಡೆ ದೋಸಮಾಗದೇ (ಕಇ IV, ೧೦-೪೯; 1121).

**ತೊಣೆ ನಡೆಯರ್**=ಜೊತೆಗೂಡಿ ನಡೆಯುವವರು; ಒಡನಾಡಿಗಳು: ಬರ್ಪ್ಪಮಾವ್ ತೊಣೆನಡೆಯರ್ : ಇರ್ವ್ವರುವ್ ನೋಡುತ್ತುಮೊರ್ವ್ವನಾ ಕಣ್ಗಳಿನ್ (ಅಂಶಿಗೊ. ೪೬-೯೧೨).

[ ದೇ.೩ ತಮಿ. ತುಣೈ ; ಮಲ. ತುಣ ; ಕೊಡ. ತೊಣೆ ]

**ತೊಣೆ₂**, **ಡೊಣೆ₃**, **ದೊಣೆ₂** (ನಾ). ಬಾಣದ ಕೋಶ ; ಬತ್ತಳಿಕೆ ; ತೂಣೀರ : "ಮೂಡಿಗೆ ತೊಣೆ ಬತ್ತಳಿಕೆಯು" (ಕವಿಕಂ. ೮೧) ; ನಿನ್ನ ಶರಕೊಂದೆ ವಾಹನಕವೆರಡು ಆರ್ವೊಗಕೆ ಮೂರ್ಬಿಲ್ಗೆ ನಾಲ್ಕು ತೊ[ಪಾಠಾಂ. ಡೊ]ಣೆಗೈದೆನುತ ಕೂರ್ವೊನೆಯ ಸರಳ್ಗಳಿಂದೆಸೆಯಲ್ಕೆ (ಜಬಪು. ೪೩-೧೯). **ಡೊಣೆ₃** : "ತೂಣೀರಮುಪಾಸಂಗಂ ಬಾಣಧಿ ಬಾಣಾಶ್ರಯಂ ನಿಷಂಗಂ ಡೊಣೆಗಳ್" (ವಸ್ತುಕೋ. ೮೩-೧೯); ಅಂತುಮಾ ರೂಪನೆ ಚಿಂತಿಸಿ ಚಿಂತಿಸಿ ಕಾಂತೆಯರ್ ಪತಿಗೆ ರತಿ ಸೋಲ್ತು ಕೆಂದಳಿ ರಂತಲರ್ಗಣೆಗೆ ಡೊಣೆಯಾದರ್ (ಶಾಂತಿಪು. ೧೦-೯೨) ; ಮಸೆವೆತ್ತ ಕೂರ್ಗಣೆಗಳಂ ಡೊಣೆಗಳಿಂದುಗಿದುಗಿದು ತೆಗೆದೆಸೆಯಲು (ಜಲಪು. ೩೯-೧೯); ಡೊಣೆಯಿಂ ಕಣೆಯಂ ತೆಗೆದಾರ್ದು ಬಿಲ್ಗದಂ ಪೂಡಿ (ಕಬಕಂ. ೩-೫೨). **ದೊಣೆ₂** : ತನುತ್ರವಿಾ ಭಯಂಕರಧನು ಖಟ್ಗಮತ್ತಪರಮಿಂತೆರಡುಂ ದೊಣೆ ಕೀವಿದಂಬುಪೊಂದಿರವು ತಪಕ್ಕಿದೆಂತುಟೊ (ಪಂಪಭಾ. ೮-೧೭) ; ದೊಣೆಯಿಂದಂ ತೆಗೆವಾಗಳೊಂದು ತುಡುವಾಗಳ್ಪತ್ತು ಬಾಣಂ (ಗದಾಯು. ೩-೩) ; ಕಾಮನ ದೊಣೆಗೆ ತೂಣೆಯೆನಿಪ್ಪ ಕಿಱುದೊಡೆ (ಕಾರಿರ.ದೀ. ೨೮೯-೭); ಇಂತೀ ನುಡಿಗೆ ಪುಷ್ಕಲಾ ಕರಂ ಕನಲ್ದು ದೊಣೆಯಿಂ ನಂಜನುಗುಟ್ವ ಕವಲಂಬುಗಳನುರ್ಚಿ ಮೊಗೆದಿಸುತಂಮಿರೆಯಿರೆ (ಕಾಮೂಶ್ನ. ೯೩-೩) ; ಗುರಿ ಸಿಕ್ಕಿತನುವಾಗ ದೊಣೆ ಬರಿದಾಗಿತ್ತು (ಚಂದ್ರವೀ. ೪೦-೬೦).

[ <ಪ್ರಾ. ತೋಣ./ಸಂ. ತೂಣ ]

**ತೊಣೆಗಾಣು** (ಕ್ರಿ). ಸಮಾನತೆಯನ್ನು ಕಾಣು : ಭೂಚಕ್ರದೊಳಗೀತಂಗೆ ತೊಣೆಗಾಣೆವೆಂದು ಸಜ್ಜನಸಮಿತಿ ಪೊಗಳುತಿರಲು (ಗುರುಚಾ. ೧೨-೩೨).

[ ತೊಣೆ₁ + ಕಾಣು (<ಕಾಣ್) ]

**ತೊಣೆವಕ್ಕಿ** (ನಾ). ಜೊತೆಯಾಗಿರುವ ಪಕ್ಷಿ ; ಅವಳ್ವಕ್ಕಿ ; ಚಕ್ರವಾಕ: "ಕೋಕಮೆನಲ್ ತೊಣೆವಕ್ಕಿ [ಪಾಠಾಂ. ಪೊಣರ್ವಕ್ಕಿ]" (ಚಜುನಿ. ೧೧೮) ; ಪಾರಿವಮಂಚೆ ಕೊಂಚೆ ಗಿಳಿ ಸೋಗೆ ಕುಕಿಲ್ ತೊಣೆವಕ್ಕಿ . . . ದನಿ ಗೆಯ್ದುವು (ಸೂಕ್ತಿಸು. ೧೪-೩೦) ; ಪಾಡುತಿಹಾಱಿಡಿ ನೆಱೆ ಹೆಱಸಾರುವ ತೊಣೆವಕ್ಕಿ (ಉದ್ಭರೀ. ೪-೧೦). 'ಎಣೆವಕ್ಕಿ' ಪರಾ.

[ ತೊಣೆ₁ + ಪಕ್ಕಿ₁ ]

**ತೊಣೆವರ್** (ಕ್ರಿ). ಜೊತೆಯಲ್ಲಿ ಬರು : ಸೋಮಂ ಸೌಮ್ಯದೆ ಸಾನ್ರನುಂ ತೊಣೆವರಲ್ . . . ಜ್ಞಾನಕ್ಕೆ ಮೇಣ್ಬೊದ್ದನುಂ ತಾವಮಾರರ್ಗಡಮೆಂದು ತೋರ್ಪ ನಲವಿಂ ಗೆಲ್ದಾಂಪನಾ ಗುಮ್ಮಟಂ (ಪ್ರುಸೂಮ. ೨-೭೮).

[ ತೊಣೆ₁ + ಬರ್ ]

**ತೊಣೆವೆಱು** (ಕ್ರಿ). ಜೊತೆಯಾಗು ; ಸರಿಸಾಟಿಯಾಗು ; ಸರಿಸಮಾನತೆ ಯನ್ನು ಹೊಂದು : ಪೊಣರ್ದೊಡಮುನುಮರಮಿವನೊಳ್ [ತೊಣೆ] [ಪಾಠಾಂ. ದೊರೆ]ವೆತ್ತಪುದೆನಗೆ ನರನೊಳ್ (ಪಂಪಭಾ. ೧೨-೧೬೪).

[ ತೊಣೆ₁ + ಪೆಱು₁ ]

**ತೊಣೆಹೋಗು** (ಕ್ರಿ). ಜೊತೆಯಲ್ಲಿ ಹೋಗು : ಚಲುವೈಯನು ಹೊಂಗ ನೂರಿಂಗೆ ಚಿಕ್ಕಕೇತಯ್ಯ ದಣ್ಣಾಯ್ಕರು ತೊಣೆಹೋಹುತವಿದ್ದಲ್ಲಿ (ಎಕ. IX, ಚನ್ನಪ. ೧೩-೬ ; 1338).

[ ತೊಣೆ₁ + ಹೋಗು₁ (<ಪೋಗು₁) ]

**ತೊಣ್ಣಂಗಿ** 'ತೊಂಡಂಗಿ' ನೋ.

**ತೊಣ್ಣಂದ** (ನಾ). ಒಬ್ಬಾತನ ಹೆಸರು : ಬಿನಮಿಕಿಅಬ್ಬೆ ಊರಾಳೆ ಮುದುಗಾರೆ ತೊಣ್ಣನ್ದರ ಮಗನುಂ ಪೊಂಗೊಣ್ಣನ್ದಮ್ಮಗನುಂ ಶ್ರೀಯಮ್ಮನೆ[ಮ್ಬೊ] × × ಯ್ಮಸರ್ ಅರಿಧೀರನೆ[ಮ್ಬೋ]ದ × × × (ಸೌಇಇ. XX, ೧೦-೨ ; ?). 'ಕೊಣ್ಣಂದ' ಪರಾ. [ ? ]

**ತೊಣ್ಕೆ** (ನಾ). ಪ್ರಾಚೀನ ; ಮೂಲ (?) : ಭೂತಿಗೆ ಕುಱುವೆಂಬ ಕಿಂಕರರ ತೊಣ್ಕೆಯಿದೆಂಬ ವಿಲಾಸಮೆಂಬ ದೇಸಗೆ ದಶಲಕ್ಷಲೆಕ್ಕದಸಿಪೇಟಕ

ಕೋಟಿಯ ಮಿಂಚುಬಳ್ಳಿದೀವಿಗೆಯನಲರ್ಚ ದೇವಸಭೆಯೊಳ್ ಮೆಱೆವರ್ ದಿವಿಜಾಂಗರಕ್ಷಕರ್ (ಅನಂಪು. ೪-೩೨). [ ←ತಮಿ. ತೊನ್ಳ್ಳು ? ]

**ತೊತ್ತಳ** 'ತೊಟ್ಟುಟ' ನೋ.

**ತೊತ್ತಳಂತುಳಿ** 'ತೊಟ್ಟುಟದುಟ' ನೋ.

**ತೊತ್ತಳಂದುಳಿ** 'ತೊಟ್ಟುಟದುಟ' ನೋ.

**ತೊತ್ತಳಂದುಳಿಯಿಸು** (ಕ್ರಿ). ಅಜಿಗಿಜಿಯಾಗುವಂತೆ ತುಳಿಸು ; ನುಗ್ಗು ನುರಿಯಾಗುವಂತೆ ತುಳಿಯಿಸು : ಅನೇಗಳಂ ತೊತ್ತಳಂದುಳಿಯಿಸಲು ಬಗೆದು (ಪಾಗೀರ. ದೇ. ೨೬೬-೧).

[ ತೊತ್ತಳಂದುಳಿ (<ತೊಟ್ಟುಟದುಟ) + – ಇಸು₃ ]

**ತೊತ್ತಳತುಳಿ** 'ತೊಟ್ಟುಟದುಟ' ನೋ.

**ತೊತ್ತಳದುಳಿ** 'ತೊಟ್ಟುಟದುಟ' ನೋ.

**ತೊತ್ತಳದುಳಿತ, ತೊತ್ತಳಿದುಳಿತ** (ನಾ). ನುಗ್ಗುನುರಿ ಮಾಡುವಿಕೆ ; ಉಗ್ರವಾದ ಆಕ್ರಮಣ : ಅವರ ತೊತ್ತಳದುಳಿತದಿಂದ ತಮ್ಮ ಕಾವಲ ಹುರಿಗಡಲೆಯ ರಾಶಿಯನ್ನೂ ಚೀಲಗಳನ್ನೂ ರಕ್ಷಿಸಿಕೊಳ್ಳುತ್ತಿರುವರು (ಬಿರುಗು. ೧೩-೧೨) ; ಉರ್ಲ್ಲೋಲ ಕರ್ಲ್ಲೋಲ ಜೀವನಾಂಭೋನಿಧಿಯ ರುದ್ರತಾಂಡವದ ತೊತ್ತಳ ದುಳಿತಕಾಳಾಗಿ (ನಡಬಂ. ೩೨-೭) ; ಪರಕೀಯರ ತೊತ್ತಳದುಳಿತವನ್ನು ಆಮಂತ್ರಿಸಿದ ಭಾರತೀಯರಿದ್ದಾರೆ (ಕರ್ನಾಟ. XV ಮುನ್ನುಡಿ). **ತೊತ್ತಳಿದುಳಿತ:** ಈ ಭೈರವಿಯ ತೊತ್ತಳಿದುಳಿತಕ್ಕೆ ಪರಕೀಯ ಸೊತ್ತಿನ ನೊಗ ಜಬ್ಬೆಜಬ್ಬೆಯಾಯಿತು (ಸುವರ್ಣ. ೨೨೩).

[ ತೊತ್ತಳ (<ತೊಟ್ಟುಟ) + ತುಳಿತ ]

**ತೊತ್ತಳಿ** 'ತೊಟ್ಟುಟ' ನೋ.

**ತೊತ್ತಳಿಗೊಳ್** (ಕ್ರಿ). ನಜ್ಜುಗುಜ್ಜಾಗು ; ಅಜಿಗಿಜಿಯಾಗಂ : ಹಿಂಬರಿಕೆಯಡಿಯಲ್ಲಿ ಸಿಕ್ಕು ತೊತ್ತಳಿಗೊಂಡು ಸಾವವರ ನರಳಿಕೆಯ ಕಿವುಡುಗೇಳಿ, ಇಲ್ಲಿಯೂ ಅಲ್ಲಿಯೂ ಕೊನೆಗಾಣದಾಸೆಗಳ ಅಂತರ ಪಿಶಾಚಿಯೇ ! (ಉಯ್ಯಾಲೆ. ೪೩-೩). [ ತೊತ್ತಳಿ (<ತೊಟ್ಟುಟ) + ಕೊಳ್₁ ]

**ತೊತ್ತಳಿದುಳಿತ** 'ತೊತ್ತಳದುಳಿತ' ನೋ.

**ತೊತ್ತಟ** 'ತೊಟ್ಟುಟ' ನೋ.

**ತೊತ್ತಟಂದುಟ** 'ತೊಟ್ಟುಟದುಟ' ನೋ.

**ತೊತ್ತಟದುಟ** 'ತೊಟ್ಟುಟದುಟ' ನೋ.

**ತೊತ್ತಿ** (ನಾ). ಊಳಿಗದವಳು ; ದಾಸಿ: ಮತ್ತೊಂದು ಕಾರ್ಯಮೇನುಂ ಬತ್ತರಿಪೊಡಮಿಲ್ಲ ನಿನ್ನ ವಲ್ಲಭೆಗೆ ಕರಂ ತೊತ್ತಿಯರಾಗಿಯೆ ಬೆಸನಂ ನೆತ್ತಿಯೊಳಾಂತಯ್ದೆ ಮಾಟ್ಟುದಲ್ಲದೆ ನಮಗಂ (ಜಾಧಪು. ೬-೪೦) ; ರಾಮ ನಿನ್ನೀ ಹತ್ತುತಲೆಗಳ ಕಡಿಯೆ ಬಳಿಕವರೆನ್ನ ತೊತ್ತಿಯರು (ತಾಶಿರಾ. ೧೦-೭೦) ; ಇವರು ತೊತ್ತಿಯರಂದದಿಂದೀ ದಿವಿಜಲೋಕದ ನಾರಿಯರು ನಾವಿವರ ನೋಡುವರಲ್ಲವೆನೆ (ನಿಧಾಗ. ೧೧-೮-೩೩).

[ ತೊತ್ತು (<ತೊಟ್ಟು) + – ಇ₂ ]

**ತೊತ್ತಿಗ** (ನಾ). ಊಳಿಗದವನು ; ಸೇವಕ : ದಿನುಗು ಕೋಡಗಿಗಳರ ನೀವೀತನಿಗೆ ತೊತ್ತಿಗರಾಗಿ ಸಾಯದಿರೆಂದು ಬೊಬ್ಬಿಱಿದ (ತಾಶಿರಾ. ೧೯-೪೦) ; ಸಾಲವಿರುವವನು ತೊತ್ತಿಗನು ಲೋಕದೊಳ್ ಸಾಲವೇ ಶೂಲ (ನೀತಿಚಿಂ. XI, ೧೯). 'ಗಂಡುತೊತ್ತಿಗ' ಪರಾ.

[ ತೊತ್ತು (< ತೊಟ್ಟು) + – ಇಗ ]

**ತೊತ್ತು** 'ತೊಟ್ಟು' ನೋ.

**ತೊತ್ತುಗೆಯ್ಸು, ತೊತ್ತುಗೈಸು** (ಕ್ರಿ). ಊಳಿಗವನ್ನು ಮಾಡಿಸು: ಸುರರ ನೆಟ ಗೋಳುಂಡೆಗೊಳಿಸಿದ ತೊತ್ತುಗೆಯ್ಸದೆ ನೆರೆದ ಮರ್ಕಟರ (ತಾಶಿರಾ. ೨೦-೫೨). **ತೊತ್ತುಗೈಸು :** ಎನ್ನಯ ಹೆಂಡಿರೆಲ್ಲರನು ತೊತ್ತುಗೈಸುವೆ (ತಾಶಿರಾ. ೧೦-೭೦). [ ತೊತ್ತು (< ತೊಟ್ಟು) + ಕೆಯ್ಸು ]

**ತೊತ್ತುಗೆಲಸ** 'ತೊಟ್ಟುಗೆಲಸ' ನೋ.

**ತೊತ್ತುಗೆಲಸಂಗೆಯ್** (ಕ್ರಿ). ಆಳಿನ ಕೆಲಸವನ್ನು ಮಾಡು ; ಊಳಿಗವನ್ನು ಮಾಡು ; ಸೇವೆಯನ್ನು ಸಲ್ಲಿಸಂ : ತೊತ್ತುಗೆಲಸಂಗೆಯ್ಯುವೇಳ್ವು[ಪಾಠಾಂ. ಲಿತ್ತು]ದ್ದರಿಸು (ಬಸಪು. ೨೩-೨೯).

[ ತೊತ್ತುಗೆಲಸ (<ತೊಟ್ಟುಗೆಲಸ) + ಕೆಯ್₁ ]

**ತೊತ್ತುಗೈ** 'ತೊಳ್ತುಗೆಯ್' ನೋ.

**ತೊತ್ತುಗೈಸು** 'ತೊತ್ತುಗೆಯ್ಸು' ನೋ.

**ತೊತ್ತುಗೊಡು** 'ತೊಟ್ಟುಗೊಡಂ' ನೋ.

**ತೊತ್ತುಗೊಳ್** 'ತೊಟ್ಟುಗೊಳ್' ನೋ.

**ತೊತ್ತುತನ** 'ತೊಟ್ಟುತನ' ನೋ.

**ತೊತ್ತುಬಡಕ** 'ತೊತ್ತುಬಡಿಕ' ನೋ.

**ತೊತ್ತುಬಡಿಕ, ತೊತ್ತುಬಡಕ** (ನಾ). ಜಾರ; ವಿಷಯಲಂಪಟ: ತೊತ್ತುಬಡಿಕಂಗೇಕೆ ತತ್ತ್ವವಿಚಾರ (ಅಮೃತ. ೧-೪೩). **ತೊತ್ತುಬಡಕ :** ತೊತ್ತುಬಡಕನಿಗೆ ಪರತತ್ತ್ವದ ವಿಚಾರವೇಕೆ (ಪುರಂದ. ೧-೩೧-೧); ತೊತ್ತುಬಡಕರಿಗೆ ತತ್ತ್ವ ಉಸುರದಿರು (ವಿಜಾಸು. ೭೮-೩) ; ತೊತ್ತುಬಡಕಗೆ ಬಹು ತತ್ತ್ವ ವಿಚಾರವ್ಯಾತಕೆ (ಪ್ರಸಕೀ. ೫೦-೧). [ ತೊತ್ತು (<ತೊಟ್ಟು) + – ಬಡಿಕ ]

**ತೊತ್ತುಬುದ್ಧಿ** (ನಾ). ವೇಶ್ಯಾಬುದ್ಧಿ : ಉಪರತಿಗೆ ಪರಪುರುಷನ ಬಯಸುವ ತೊತ್ತುಬುದ್ಧಿಯನೆಲ್ಲ ಬಿಡು ಕಂಡ್ಯ ಮನವೆ (ವಿಜಾಕೃ. ೫೧-೩).

[ ತೊತ್ತು (< ತೊಟ್ಟು) + ಬುದ್ಧಿ ]

**ತೊತ್ತುಮಗ** 'ತೊತ್ತುವಗ' ನೋ.

**ತೊತ್ತುವಗ, ತೊತ್ತುಮಗ** (ನಾ). ತೊತ್ತಿನ ಮಗ ; ದಾಸೀಪುತ್ರ : "ದಾಸಂ ತೊತ್ತುವಗನಕ್ಕು" (ಮಂಗರಾ. ೭೦-೧೭). **ತೊತ್ತುಮಗ :** (ಶ).

[ ತೊತ್ತು (< ತೊಟ್ಟು) + ಮಗ ]

**ತೊತ್ತುವೆಗ್ಗಡೆ** (ನಾ). ರಾಣೀವಾಸದ ಮೇಲ್ವಿಚಾರಕ ; ಅಂತಃಪುರದ ಅಧಿಕಾರಿ : "ತೊತ್ತುವೆಗ್ಗಡೆಗಳಂತರ್ವಂಶಿಕರಕ್ಕು" (ಮಂಗರಾ. ೭೮-೭). 'ಅಂತರ್ವಂಶಿಕ' ಪರಾ.

[ ತೊತ್ತು (< ತೊಟ್ಟು) + ವೆಗ್ಗಡೆ (< ಪೆರ್ಗಡೆ₁) ]

**ತೊತ್ತುವೆಸ** 'ತೊಟ್ಟುವೆಸ' ನೋ.

**ತೊತ್ತುವೇಟ** (ನಾ).ವೇಶ್ಯೆಯ ಪ್ರಣಯ: ಕಡಿದರೋ ಸುರತಕರುವನೆಲವದ ಮಿಡಿಯ ಬಯಕೆಗೆ ತೊತ್ತುವೇಟಕೆ ಹಡೆದ ತಾಯನು ತೊಱಿಸಿದರೋ (ಕೂಕರಾ. ೪-೫-೧೧).

[ ತೊತ್ತು (< ತೊಟ್ಟು) + ಬೇಟ (< ಬೇಂಟ) ]

**ತೊತ್ತುವೊಗು** (ಕ್ರಿ). ಕಿಂಕರನಾಗು ; ದಾಸನಾಗು : ಲಿಂಗಜಂಗಮಕ್ಕೆ ತೊತ್ತುವೊಕ್ಕು ಲಿಂಗಜಂಗಮವುಪ್ರಸಾದಿಯಾದ (ಚನ್ನವ. ಕ. ೩೮೮-೮೩೦) : ತೊತ್ತುವೊಕ್ಕಂ ಮಹೇಶ್ವರ ನೀಂ ರಕ್ಷಿಪುದೆನ್ನನು (ಶಂಕಶ. X, ೩೬೩೪).

[ ತೊತ್ತು (< ತೊಟ್ಟು) + ಪೊಗು (< ಪುಗು) ]

**ತೊತ್ತುವೋಗು** (ಕ್ರಿ). ದಾಸಿಯಾಗಂ ; ಸೇವಕಿಯಾಗು: ಜೀಯ ತೊತ್ತುವೋದಳು ನಮಗೆ ಜಯವನಿತೆ (ಶ್ರೀರಾಮಾ. ೬೫೫-೩೪೮).

[ ತೊತ್ತು ( < ತೊಟ್ಟು) + ಹೋಗು₁ (<ಪೋಗು₁) ]

**ತೊತ್ತುಳಿ** (ಕ್ರಿ). ಅಜಿಗಿಜಿಯಾಗುವಂತೆ ತುಳಿ ; ಧ್ವಂಸಮಾಡು : ತೊತ್ತುಳಿದರೂನೂ ಥಥ್ಥಳಿಸಿ ಹೊಳೆವೆ ಸಂಜೀವಭ್ರಮರನಂತ (ಅಕಳು. ೨೧೫-೮) ; ಈ ದಿಬ್ಬವು . . . ಪುಣೆಯನ್ನೆಲ್ಲ ಒಂದು ದಿನ ತೊತ್ತುಳಿದು ಹಾಳುಮಾಡುವಂತೆ ಇದು ನನ್ನನ್ನು ಅಂಜಿಸಿದೆ (ಸಮುಜೀ. ೧೦೯).

[< ತೊಟ್ಟುಟದುಟ ]

**ತೊತ್ತುಟ** 'ತೊಟ್ಟುಟ' ನೋ.

**ತೊದ** 'ತೋಡ್ಡ' ನೋ.

**ತೊದನಾಡು** (ನಾ). ತೊದವರ ನಾಡು: ಹದಿನಾಡ ಹಲಸೀನ ತೊದನಾಡ ಬಾಳೇಯು . . . ನನಗೆಂದು ತಂದೆ ಅಣ್ಣಯ್ಯ (ಜಗೀತ. ೫೮).

[ತೊದ (< ತೋಡ$_2$) + ನಾಡು]

**ತೊದಭಾಷೆ** (ನಾ). ನೀಲಗಿರಿಯ ತೋಡಜನಾಂಗದವರು ಆಡುವ ಭಾಷೆ: ೧೯೭೧ರ ಜನಗಣತಿಯಲ್ಲಿ ೭೭೫ ಜನ ತೊದಭಾಷೆಯನ್ನು ಆಡುವವರಿದ್ದಾರೆಂದು ಹೇಳಿದೆ (ದ್ರಾವಿ. ೧೫೫).

[ತೊದ (< ತೋಡ$_2$) + ಭಾಷೆ]

**ತೊದರ್$_1$** 'ತೊದಳ್$_1$' ನೋ.

**ತೊದರ್$_2$** 'ತೊದಳ್$_2$' ನೋ.

**ತೊದಲ** 'ತೊದಳ' ನೋ.

**ತೊದಲಾಟ** (ನಾ). ಮಕ್ಕಳ ಅಸ್ಪಷ್ಟವಾದ ಮಾತು: ತಪ್ಪಡಿ ತಪ್ಪೀಸಿ ತೊದಲಾಟ ಬಿಟ್ಟೊ (ಮೂರ್ತಿಕಾ. ೪೧-೫).

[ತೊದಲು$_2$ (< ತೊದರ್$_2$) + ಆಟ]

**ತೊದಲಿಸು** 'ತೊದಳಿಸು' ನೋ.

**ತೊದಲು$_1$** 'ತೊದಳ್$_1$' ನೋ.

**ತೊದಲು$_2$** 'ತೊದಳ್$_2$' ನೋ.

**ತೊದಲುನಾಲಗೆ** (ನಾ). ತಡವರಿಸುವ ಜಿಹ್ವೆ; ತೊದಲುವ ನಾಲಗೆ: ಮೊದಲು ಭಜಿಸಿದೆನು ಈಶನನು ಸ್ತುತಿಗೈದು ತೊದಲುನಾಲಗೆಯಲ್ಲಿ ತಾಯ್ನುಡಿಯ ಹಿಡಿದು (ಕಎಪು. ೧೦-೭).

[ತೊದಲು$_2$ (< ತೊದರ್$_2$) + ನಾಲಗೆ]

**ತೊದಲುನುಡಿ** 'ತೊದಳ್ನುಡಿ$_2$' ನೋ.

**ತೊದಲುಮಾಡು** 'ತೊದಳ್ಮಾಡು' ನೋ.

**ತೊದಲುಮಾತು** 'ತೊದಳ್ಮಾತಂ' ನೋ.

**ತೊದಲುಲಿ$_1$** (ಕ್ರಿ). ತೊದಲಂಮಾತನಾಡಂ: ಮಗು ತೊದಲುಲಿವೊಲು ತಾಯನು ಕರೆಯೆ, ಉಲಿವೆನು ಮಗುಳ್ನುಲಿವೆನು ಶ್ರೀಹರಿಯ ನಿನ್ನ ನಾಮವನು (ಗೀವಿಂ. ೨೭-೭). [ತೊದರ್$_2$ (<ತೊದಳ್$_2$) + ಉಲಿ$_1$]

**ತೊದಲುಲಿ$_2$** 'ತೊದಳುಲಿ' ನೋ.

**ತೊದಲ್ನುಡಿ$_1$** 'ತೊದಳ್ನುಡಿ$_1$' ನೋ.

**ತೊದಲ್ನುಡಿ$_2$** 'ತೊದಳ್ನುಡಿ$_2$' ನೋ.

**ತೊದಲ್ವಾತು** 'ತೊದಳ್ವಾತು' ನೋ.

**ತೊದಲ್ಸೊಲ್ಲಿಸು** (ಕ್ರಿ). =ತೊದಲುಲಿ$_1$: ತಲ್ಲಣಿಸುತ್ತೈದಿಯವ್ವಳ್ಳಿಬೇಯೆಂಬ ತೊದಲ್ಸೊಲ್ಲಿಸುತೆ . . . ಬಂದು ತೊಡೆಯಡರೆ (ನವಪೂ. ೧೫-೫೪).

[ತೊದರ್$_2$ (< ತೊದಳ್$_2$) + ಸೊಲ್ಲಿಸು]

**ತೊದಳ್$_1$, ತೊದಲ್$_1$, ತೊದಲು$_1$, ತೊದಬ್** (ಕ್ರಿ). ೧. ಮಾತಿನಲ್ಲಿ ತಡವರಿಸು: ನಿಮ್ಮನರ್ಚಿಪಾ ಬಾಯ್ಗೆ ನಮೋನಮೋ ತೊದಳದುನ್ನತ[ಪಾಠಾಂ. ದುಣ್ಣುತ]ಭಕ್ತಿಯೊಳೆಯ್ದೆ ಪಾಡುವಾ (ಹಂಪಾಶ. ೧೯). ೨. ಎದುರಿಸು; ಪ್ರತಿಭಟಿಸು: ವಯಚಯನ್ ತುರಗಗೊಳ್ಸಾಗಿ ದುಗ. ದರಸನುಂ ತೊದಳ್ದು ವೇಳೆಯವನಾಳು × ಪಟುಯುತ್ತಂ ಬಪ್ಪುದ ನನ್ನಗನ್ನಾದೆ (ಸೌಇಇ. IX-i, ೨೨-೫; ೯೭೩); ಸಂಗರಾಗ್ರದೊಳು ತೊದಳ್ದ ಪರಾರುದಾತ್ತಕಲಿತೇಜಚಮೂಪನೊಟುಗ್ರಕೋಪನೊಳು (ಎಕ. XI, ದಾವಣ. ೪೪-೯೭: ಸು. 1180). Pಇದು ಬಹುಶಃ 'ತೊಡರ್' ಎಂಬುದರ ಅಪಲಿಖಿತವಿರಬಹುದು. **ತೊದಲ್$_1$**: ೩. ಮಕ್ಕಳು ಮುದ್ದಾಗಿ ಮಾತನಾಡು: ಸುರಿವ ಸುರಯಿಯರಲ ಮುಗುಳ್ಗೆ ಮೊಗಸಿದಳಿಕುಳಂಗಳಿಂ ತೊದ[ಲ್ವ][ಪಾಠಾಂ. ಳ್ವ] ಶಿಶುಶುಕಂಗಳಿಂ(ಹಂಪಚಾ. ೧-೫೮). **ತೊದಲು$_1$**: ೧. ಅವಳ ಮಾತ ಕಲಿಯಲೆಂದು ತೊದಲುತಿಹುದು ಬಾಯಿಯು (ಅರಕು. ೪೪೪-೨೨); ನನಗೆ ಭಯವಾಗಿತ್ತು ಎಂದು ತೊದಲಿದ ಕೋಷವ್ವ (ಶಾಲಿಮ. ೧೭೦). ೩. ತೊದಲುತ ಮುದ್ದುಮುದ್ದಾಗಿ ರಸವೊಗಲು ಮಾತಾಡಿ (ಅಸಂಆ. ೦-೧೮-೦೦). △**ತೊದಬ್**: ೨. ನುಡಿದಡೆ ಕರ್ಣ್ಣಾಹವದೋಳಿನ್ನೆಸುತಂ ವಗೆಗೊಣ್ಣ ದರ್ಪ್ಪ[ದಿಂ] ತೊದಟ್ಟನಾಟಂಗೆ ವಾಯುತನಯಂ (ಸೌಇಇ. XX, ೩೦-೦೪; 1044). ೪. ಸುಳ್ಳು ಹೇಳು: ಮೋಹಬನ್ನದ ತೊದರ್ಪ್ಪನೊಳ್ಕೊದಬ್ಬು ಮೋಹಿಸಿ (ಎಕ. VII, ಶಿಕಾರಿ. ೨೧೯-೨೪; 918); ಪರನಾರೀಪುತ್ರಕ ನಣ್ಣರ ತೊಟ್ಟು . . . ತೊದಬ್ಬರ ಬೀವ (ಎಕ. II, ೩೦೭; ಸು. 950); ಖಣ್ಣಾಳಿ ವಾಸುದೇವ ಮೂಳ ಭದ್ರೋದ್ಭವನ್ನುಡಿದು ಪುಸಿಯತರ್ತ್ತೊದಬ್ಬು ಕುಸಿಯಂ (ಎಕ. IV, ಹೆಗ್ಗ.ಡ. ೧೭-೧೨; 1033). 'ಕೊದಲು$_1$' ಪರಾ.

[ದೇ. ೫ ಹರ್ವ. ತೊತ್ತ್ರ; ಕುವಿ. ತೊಥಲಿ./ ಹಿಂ. ತುತಲಾನಾ: ಪಂಜಾ. ತೊತ್ಲಾವುಣಾ; ಒರಿ. ತೊತಲಾ, ತೊತಲಾ; ಗುಜ. ತೊತ್ಲೂ, ಕೊತ್ಲೂ, ಕೊತ್ರೂ]

**ತೊದಳ್$_2$, ತೊದಲ್$_2$, ತೊದಲು$_2$, ತೊದಳು** (ನಾ). ೧. ತಡವರಿಸುತ್ತ ಮಾತನಾಡುವಿಕೆ: ಉಣ್ಮಿದ ಬೆಮರೋಳವಟ್ಟ ನಿಡುಸುಯ್ ತೊದಳಿಂಗೆಡೆಗೊಂಡ ಮಾತು (ಹಂಪಚಾ. ೪-೭೦); ರಸನಾಗ್ರದೊಳ್ ತೊದಳ್ಪೆರಸಿದ ಮಾತಿನಿಂದೆಸೆದರಂಗನೆಯರ್ ಮಧುಪಾನಕೇಳಿಯೊಳ್ (ಕುಸುಮಾ. ೧೧-೧೬೦); ತೊದಳಂ ಮಾಟ್ಟ ಕೊ [ದಳ್] ವಿಕಾರವಶವಂ ಕೈಕೊಂಡ ಮೆಯ್ (ಬಂಹಿಪ. ೩-೫೭). ತೊದಳಿನಿತಿಲ್ಲದೊಳ್ಳಿಸವ ವಾಣಿಯ ಹಾಣ್ನುಡಿ ಕೇಳಲಾಯ್ತು (ದಶಕು. ೧೨-೫). ೨. ಮಕ್ಕಳ ತೊದಲಂ ಮಾತು, – ಅಸ್ಪಷ್ಟವಾದ ಮಾತು: "ತೊದರ್ ಶಿಶುವಚಂ" (ಕರ್ಣಾನಿ. ೪೯); ಕಿವಿಗಿಂಪಂ ತೊ[ಪಾಠಾಂ. ಕೊ]ದಳೊಳ್ ಪೊದಟ್ಟ ನುಡಿಗಳ್ ಕಣ್ಗಾಟ್ಟಬಿಂ ರಾಗದಾಡುವ ಕೂಸಾಟದ ಚೆಲ್ವುಗಳ್ ಕುಡೆ . . . ಬಾಲನಿಂತೊದವಿದಂ(ಆದಿಪು. ೭-೧೨೮); ಶಿಖುನಗೆ ಲೋಳಿವಾಯ್ ತೊದಳೊಂದಿದ ನಾಲಗೆ . . . ನೆಬಿ ತನಗೊಪ್ಪುವರ್ಭಕನನೊರ್ವನನಾಂ ಪಡೆವಂದ ಮಾವುದೋ (ಸುಕುಮಾ. ೯-೯೯); ತೊದಳಿಸದ ತೊದಳ್ ಕೊಂಕಿಲ್ಲದ ದಟ್ಟಡಿ . . . ಭಾಲಭಾವಮಚ್ಚರಿ ಜಿನನಾ (ಅನಂಪು. ೬-೮); ತೊದಳಿಂ[ಪಾಠಾಂ. ಲಿಂ]ದೆ ನುಡಿಯೆ ಶಿಶುವದಜಲ್ಲಿ ತಪ್ಪನಾ ಚದುರನಾರ್ಯೆಯುದಂತೆ (ಅನುಸಾ. ೦-೨೧೩). ೩. ಸುಳ್ಳು; ಹುಸಿ: "ತೊದರ್=ಪುಸಿ" (ಶಮದ. ಹರಿ. ೨); "ತೊದಲೆಂದುಂ ಸುಳ್ಳೆಂದುಂ ಅನೃತಂ" (ಕಕಸಾ. ೨೭-೫೫೧); ಪರ್ವುವುದು ಕೀರ್ತಿ ಪುರಾಕೃತಪುಣ್ಯದಿಂದೆ ಸಂಗಳಿಸುವು ವೆಂದೊಡೀ ಮಖದೊಳೇಂ ತೊದಳುಂಟೆ (ಹಂಪಚಾ. ೭-೦೯); ಮನ್ನಿಸಿ ಓರಿದೀವಂ ಕೊದಳಂನ್ನುಡಿಯನೊನ್ನುದರ್ದು ಮಾಣನ್ (ಎಕ. II, ೦೩೩-೫೮; 982); ಇಳಿವಬೆಡಂಗನ ಕೊರಲೊಳ್ಕೊಂಕುಂಟೆ ನುಡಿಯೊಳೇಂ ತೊದಳುಂಟೆ (ಗದಾಯು. ೨-೭); ತನ್ನುನಿ ಪೇಟ್ಟಣಾವ್ರತಮನಾನೀಗಳ್ ಬಿಸುಟಪ್ಪೆಗಳೇಂ ತೊದಳಿಲ್ಲಂ ನುಡಿವಂದವಿಂತ (ಸುಕುಮಾ. ೬-೫೦); ತೊದಳಲ್ಲ ನಾರದಂ ಪೇಟ್ಟುದು (ಜಗವಿ. ೨-೪೭). ೪. ಅನುಮಾನ; ಸಂಶಯಂ; ಶಂಕೆ: ಮೊದಲೊಳ್ ಸಮಾಸಪದಮುಮನೊದವಿಸಿ ಪೇಟ್ಟದಱ ತುದಿಯೊಳಸಮಾಸಪದಾಸ್ಪದಮಾಗಿ ನಿಲಿಸೆ ಕಬ್ಬಿನ ತುದಿಯಿಂತಿರೆ ವಿರಸಮಕ್ಕುಮದು ತೊದಳುಂಟೇ (ಕವಿರಾ. ೨-೮೭); ಧರಣಿತಳಂ ಕೀರ್ತಿಸೆ ಕೇಳ್ದು ರಾಗಿಸುತ್ತಿರ್ಪವಿನ್ನುಮೇಂ ತೊದಳುಂಟೇ (ಆದಿಪು. ೦೪-೪೯); ಇಂತಾದ ಗಣದ ಮಾತ್ರಾಸಂತತಿ ನಾಲ್ಕಕ್ಕು ಮಂತವರ್ಕೆೞೀರೊಂದರ್ಕಂತಯ್ದುಗಣಂಗಳ್ ಬರ್ಕುಂ ತೊದಳೇಂ ಸ್ಕಂಧ ಜಾತಿಯೊಳ್ (ಛಂದೋಂಬು. ೪-೨೨೯); ಎನ್ನ ಚಿತ್ರದೊಳೊಂದುಂ ತೊದಳಿಲ್ಲ[ಪಾಠಾ. ತಡವಿಲ್ಲ]ವೆನ್ನ ಸುಗುಣಕ್ಕುತ್ಕ್ರಾಂತಿಯಂ ಮಾಡುವಂ (ಗದಾಯು. ೯-೨೯); ಪರಮಜಿನಚರಣಯುಗಮುಂ ಸ್ಮರಿಯಿಸಿ ತೊದಳಿಲ್ಲ ದೆರಡುಗೇಳದ ಮನದೊಳ್ ಜಬಿಯದ (ಧರ್ಮಾಮೃ. ೦೩-೭೨); ಚಂದ್ರ

ಸೂರ್ಯರೆ ಮನುಷ್ಯಕುಮಾರಕರಾಗಿ ಬಂದರೇನಂ ತೊದಳಲ್ತು (ಜಗವಿ. ೭-೧೩). ೫. ವಂಚನೆ ; ಮೋಸ ; ಕಪಟ : ಏನಭಿಮತಮಮರ್ಗ ವರ್ಗದನೇನಂ ತೊದಳಿಲ್ಲದಿತ್ತು ಮನ್ನಿಸಿದಂ ಸನ್ಮಾನಪುರಸ್ಸರಂ (ಆದಿಪು. ೧೪-೧೨) ; ಮನದೊಳ್ ತೊದಳಿಲ್ಲದ ನಲ್ಮೆ (ಹಂಪಭಾ. ೪-೧೦೨) ; ನೀನುಂ ಪಾಂಡುತನೂಜರುಮೇನುಂ ತೊದಳಿಲ್ಲದೊಂದಿ ನಡೆವುದು ಮಗನೆ (ನೇಮಿಪು. ೧೦-೩) ; ದೂಷ್ಕರಂಗಳ ವಸ್ತುಗ್ರಹಣ ನಿಂದಿತರ್ಗೆಸ್ನದಾನಂ ಬಳಿಕ್ಕ ಬಗೆಯೆ ತೊದಳಿಂ ಮಾಳ್ಪ ಬೆವಹಾರ ದೀಕ್ಷೆಯಿಂದು (ಜಾಸೋಪು. ೩-೭೩). ತೊದಲ್$_{2}$: ೨. ವಶ್ಯಮಂತ್ರಾಕ್ಷರದಂತೆಪೊಲೆಲ್ಲರುಮಂ ಸೋಲಿಸಿದವು ತೊದಲಿ ನುಡಿವ[ಪಾಠಾಂ. ತೊದಳೊಳ್ಪುದಿದ] ರಾಮಚಂದ್ರನ ನುಡಿಗಳ್ (ಹಂಪರಾಮಾ. ೩-೧೨೭); ಕಂದನಾಡುವ ಬಾಲಲೀಲೆಯಂ ನೋಡಿ ತೊದಲೊಂದಿದಿನಿವಾತನುಜಿ ಕೇಳ್ದು (ಕೃಮಿಭಾ. ೧೮-೨೦) ; ಲಾಲಾಜಲಂ ತುಳುಕಲ್ ಬರ್ಪ ತೊದಲ್ ಮನಂಗೊಳಿಸಲ್ (ಜಾಕುಂತ. ೧೦೫-೧೮೦). ೩. "ತೊದಲ್[ಪಾಠಾಂ. ತೊದಳ್, ತೊವಲ್] ನೂಳೆಂದು ನೆಜಿ ಪುಸಿಯೆನಲ್ಕನೃತಮಕ್ಕು" (ಕಬ್ಬಿಕ್ಕೆ. ೫೯) ; ದೊರೆಯ ಸಹವಾಸಮದರಿಂ ದೊರೆವುದು ಗುಣವೆರಡುಮೆಂದು ನುಡಿವುದು ತೊದಲೇಂ (ನರಚ. ೮೭-೨೩೦) ; ಕಳ್ಳರಿರ್ಕೈಗಳಂ ಬಿಗಿಸಿ ತೊದಲಂ ನುಡಿಸಿ ಸುಳ್ಳು ನಾಲಗೆಯ ನಡುಗಿಸುತರವನೆರೆಗುಂ (ಜಾಲೂರ. ೭೭-೧೪೧). ತೊದಲ್ಪು$_{2}$: ೧. ವಿಷಮರಣಭೀತಿಯಿಂ ಕಂದಿದ ಮುಸುಡ ತೊದಲಿನ ನುಡಿಯ ಮರಣದ ದೆಸೆಯ ಕೈಸನ್ನೆಗಳ ಕಾತರರ್ಕ್ಕಿದಿರು ಪುರವ (ಕುಮಾವ್ಯವಿ. ೪-೩೮). ೨. ಮೊದಲಿವೆಗಳವು ಮುಕುಳಿಸೆನ್ನ ಸಿರಿಯೇ ತೊದಲನ್ನು ನಿಲ್ಲಿಸೆನ್ನಯ ಹೊಸ್ನ ಮರಿಯೇ (ಕವಿಪು. ೨೪-೨) ; ಮೊಳೆವಲ್ಲು, ಉಗುವ ಜೊಲ್ಲು, ದಟ್ಟತಡಿ, ತೊದಲ ನುಡಿ (ಚಂದ್ರಸ. ೧೭-೧೯). ೩. ಬದಲು ಮಾತಾಡಿದರೂ ತೊದಲು ಹೋಗಲಿಲ್ಲ (ಗಾದೆ). ತೊದಳು: ೧. ಪೊಳೆವ ನಿಡಿಯಲರ್ಗಣ್ಗಳ್ಗೆ ಮಳಮಳಿಪ ನೋಟಮುಮನುಂತೆ ತೊದಳಿಸುವ ನುಡಿವ ನುಡಿಗಳ್ಗೆ ತೊದಳುಮನೆಕ್ಕೆಯಿಂ ತಳೆಯೆ (ಹಂಪಭಾ. ೭-೮೧ ವ); ತೊದಳಿನಿಂದೊರ್ಮೆ ಗದುಗದುಕೆಯಿಂದೊಮ್ಮೊಮ್ಮೆ . . . ಬೊಬ್ಬಿಡುತೆ (ತಿರುಕ. ದೇ. ೫-೩). ೩. "ತೊದಳು,ಸುಳ್ಳು... ಸಟೆ, ತಗಲು" (ಕಂನುಹು. ೮೬). ೬. ಗದ್ಗದ : ನೋಡಿ ಪರಮಾನಂದ ಮೂಡಿ ಸಂತಸದೊಳೊಲಾಡಿ ಪುಳಕ ಸ್ವೇದ ತೊದಳು ಕಂಪನ ಮಜಿವೆಗೂಡಿ (ಹಳಕಾ. ೫-೮೦). 'ಕೊದಲ್ಪು$_{2}$' ಪರಾ.

ತೊದಲುತೊದಲು (ದ್ವಿರ-ಕ್ತಿ) : ಮಕ್ಕಳಕ್ಕರೆಯಿಂದೆ ತೊದಲುತೊದಲಕ್ಕರಂ ನುಡಿದು ಕೈಮುಗಿದು ಕಂಪನಿಗರೆವನಂ ನೋಡಿ (ಶ್ರೀರಾಮಾ. ೩೦-೭೭) ; ನಾವು ಮಾತನಾಡಲು ಪ್ರಾರಂಭಿಸಿದಂದಿನಿಂದ ಈ ನಾನು, ನನ್ನ ಎಂಬ ಪದಗಳನ್ನು ತೊದಲುತೊದಲಾಗಿ ಉಚ್ಚರಿಸುತ್ತೇವೆ (ಜೀವಾತ್ಮ. ೯). ತೊದಳಾಗು, ತೊದಲಾಗು = ೧. ಸುಳ್ಳಾಗು ; ಹುಸಿಯಾಗು : ಪಾವಕನುರ್ಕೆಗೆಟ್ಟದಂತುವೊ ತೊದಳಾಯ್ತು ದಾನಂ (ಹಂಪಭಾ. ೫-೯೭) ; ತೊದಳಾಯ್ತೆನ್ನಯ ಪೂಣ್ದ ಪೂಣ್ಕೆ (ಗದಾಯು. ೬-೧೭) ; ನುಡಿ ತೊದಳಾದೊಡೊಂದು . . . ಅಧಿಪಂಗೆ ತಪ್ಪಿ ಬರ್ದ್ದಡೆ ಗಡಿವೇಳುವೇಳು ನರಕಂಗಳಿವೆಂದಪನಲ್ತೆ ಗಂಗಣಂ (ಎಕ, V. ಬೇಲೂರು. ೧೨೪-೪೨; 1133); ತೊದಳಾಗದಾನೆಂದ ನುಡಿ, ದಿಟಂ ! (ನಡಿದಾ. I, ೪೫೦); ನಿನ್ನ ಶಾಪವು ತೊದಲಾಗದು (ನಡಿದಾ. I, ೫೫೧). ೨. ವಿರುಪೇರಾಗು : ತೋಹಿಸಲಿ ತೊದಳಾಗಿ ಗೋರಿಯು ಗಾಹಿನಲಿ ಗುಜಿ ಗಡಬಡಿಸೆ ಬಲು ಸಾಹಸಕಾಜುವವೆ (ಕುಮಾವ್ಯಅ. ೧೩-೧೭).

[ <ತೊದಳ್$_{1}$./ತುಳು. ತೊವಳ./ಹಿಂ. ತುತಲೀ, ತುತಲಾ ; ನೇಪಾ. ತೊತೆ ; ಬಂಗಾಲಿ. ತೊತ್ಲಾ ]

ತೊದಳ, ತೊದಲ (ನಾ). ತೊದಲು ಮಾತನಾಡುವವನು ; ಉಗ್ಗ ; ಗುಕ್ಕ (ಉಕ): ವೃಷಭದೊಳ್ ಚಂದ್ರನೊಂದಿ ನಿಲೆ ಮೂಗನೆನಿಕ್ಕುವನಂತಾ ಶಶಿಯಂ ನೋಡುವೊಡೆ ಶುಭಪ್ರಕರಮಾತನನಿಕುಂ ತೊದಳಂ (ಜಾತತಿ. ೪-೩೯). ತೊದಲ : ರಾಶಿಯ ಕೊನೆಯಲ್ಲಿ ಪಾಪಗ್ರಹಗಳಿದ್ದು . . . ಆ ಚಂದ್ರನನ್ನು ಶುಭಗ್ರಹಗಳು ನೋಡಿದರೆ ಆತ ತೊದಲನಾಗುತ್ತಾನೆ (ಜಾತತಿ. ೪-೩೯ ಟೀಕೆ).

[ ತೊದಳ್$_{1}$ + – ಅ$_{7}$./ತುಳು. ತೊದಲೆ./ಹಿಂ. ತೋತಲಾ; ಮರಾ. ತೋಂತ್ಯಾ, ತೋತ್ರಾ, ತೋಂತ್ರಾ ]

ತೊದಳಿಲಿ (ನಾ). ೧. ಸುಳ್ಳಿಲ್ಲದುದು;ನಿಜವಾದಂದು. (ಗು). ೨. ಸಂಳ್ಳಿನಿಂದ ಕೂಡಿರದ ; ನಿಜವಾದ: ತಾಂ ಪದನರಿದು ಲೋಕಕ್ಕೆ ಪುಟವಹ ಬಾಯ್ಗಿನಿದಪ್ಪವು ತೊದಳಿಲಿ ನಾಣ್ನುಡಿಗಳಂ ಕಲ್ಪಿಪ್ಪನನಿತ್ತೆ ದಲ್ (ಸಂಸಪ. ೩೮-೩). [ ತೊದಳ್$_{2}$+ – ಇಲಿ$_{3}$ ]

ತೊದಳಿಸು, ತೊದಲಿಸು (ಕ್ರಿ). ೧. ಮಾತಿನಲ್ಲಿ ತಡವರಿಸು : ಉಂತೆ ಪೊಳೆವ ನಿಡಿಯಲರ್ಗಣ್ಗಳ್ಗೆ ಮಳಮಳಿಪ ನೋಟಮುಮನುಂತೆ ತೊದಳಿಸುವ ನುಡಿವ ನುಡಿಗಳ್ಗೆ ತೊದಳುಮನೆಕ್ಕೆಯಿಂ ತಳೆಯೆ (ಹಂಪಭಾ. ೭-೮೧ ವ) ; ಸುಯ್ಯು ಬಹಳದ ಭಟರು ತೊದಳಿಸುತೊಯ್ಯನೆಂದರು (ಕುಮಾವ್ಯಅ. ೧೯-೬). ೨. ಮಕ್ಕಳಂತೆ ತೊದಲು ಮಾತನಾಡು: ತೊದಳಿಸದ ತೊದಳ್ ಕೊಂಕಿಲ್ಲದ ದಟ್ಟಡಿ . . . ಮುಳಿಸಿಲ್ಲದ ಕಾಟಂ ಬಾಲಭಾವಮಚ್ಚರಿ ಜಿನನಾ (ಅನಂಪು. ೬-೮) ; ನಸುನಗೆಯ ತೋಜಿದನು ಮಿಗೆ ತೊದಳಿಸಿದನಿಂತುಟನೇಕ ಬಾಲ್ಯವಿನೋದವನು ತೋಜಿ (ಜಾಳ್ಮಭಾ. ೩೦-೪೭) ; ತೊದಳಿಸಿ ನುಡಿವ ದಟ್ಟಡಿಯಿಡುವ . . . ಕುಣಿವ ಲೀಲೆಯಂ ನೆಟ್ಟನೆ ಕುಮಾರಕತರ್ೋಜಿದರ್ಜುನಕಿಗೆ (ಕೃಮಿಭಾ. ೧೯-೫೦). ತೊದಲಿಸು : ೧. ನಾನು . . . ತೊದಲಿಸಹತ್ತಿದೆ (ಚಂದುಟಿ. ೧೦೮) : ಈ ಮಾತುಗಳನ್ನಾಡುವಾಗ ಅವರ ನಾಲಿಗೆಯು ಸ್ವಲ್ಪ ಕೊದಲಿಸಿತು (ಚಂಗಾಳ್ಮ. ೧೬೭). ೨. ಮನದಲ್ಲಿ ಕೇಳ್ವನು ನಸು ತೊದಲಿಸುವ ಸೊಲ್ಲುಗಳ ನೋರಂತೆ ಪಂಚಾಕ್ಷರಿಯನೋದಿಸುವ (ಬಸಪು. ೪೭-೩೨).

[ ತೊದಳ್$_{1}$ + – ಇಸು$_{8}$ ]

ತೊದಳು 'ತೊದಳ್$_{2}$' ನೋ.

ತೊದಳುನುಡಿ 'ತೊದಳ್ನುಡಿ$_{2}$' ನೋ.

ತೊದಳುಲಿ. ತೊದಲುಲಿ$_{2}$ (ನಾ). ಮಕ್ಕಳ ತೊದಲುಮಾತು : ಹಕ್ಕಿಯಿಂಚರದಲ್ಲಿ ಮಗುವ ತೊದಳುಲಿಯಲ್ಲಿ . . . ನಲಿವ ಮೂರುತಿಯೆ (ವಿಪೀಗೀ. ೪೫-೨). ತೊದಲುಲಿ : ತೊದಲುಲಿಯ ಚುರುಕಿಂದ ಚಪ್ಪರಿಸಿ ಚೀರಿ, ಕುದುರೆ ಆಟವ ಗೈದ ನೆನಪು (ಕವಿಪು. ೨೫-೨); ಪುಟ್ಟ ಕಂದಮ್ಮನ ...ತೊದಲುಲಿ ಕೇಳಿತು ಮೆಟ್ಟಿತು ಕೊಳಲಿನ ಸವಿಯ (ಜಂಬಾಪ. ೪೧-೯೫).

[ ತೊದಳ್$_{1}$ + ಉಲಿ$_{8}$ ]

ತೊದಳ್ನುಡಿ$_{1}$, ತೊದಲ್ನುಡಿ$_{1}$ (ಕ್ರಿ). ೧. ಅಸ್ಪಷ್ಟವಾಗಿ ಮಾತನಾಡು ; ಮಾತಿನಲ್ಲಿ ತಡವರಿಸು : ಲೋಹಲಃ, ಅಸ್ಫುಟವಾಕ್ = ತೊದಳ್ನುಡಿವವನು (ನಾಚಿರಾ. ೬). ೨. ಮಕ್ಕಳಂತೆ ತೊದಲುಮಾತನಾಡಂ : ಚೆಂಬಾಯಿಂದಿನಿರಸದಂತೆ ನಸುಜೊಲ್ಲು ಸುರಿಯೆ ತೊದಳ್ನುಡಿವ ಸೊಗಸಂ (ಚಳವಿ. ೪-೮೯). ೩. ಸುಳ್ಳು ಹೇಳಂ ; ಸುಳ್ಳಾಡು : ತೊದಳ್ನುಡಿಯದೆ ಪೋಗು (ಹಂಪಭಾ. ೮-೨೯) ; ನೆರೆದತ್ತಿರ್ಗೆಗರ್ತ್ಥಮಂ ಕುಡುವ ಚಲಂ ತೊದಳ್ನುಡಿಯದಿರ್ಪ್ಪ ಚಲಂ (ಎಕ. II, ೧೩೩-೨೨; 982) ; ಆ ಧರ್ಮಪುತ್ರಂ ದಯಾಪರನೆಂದೆಲ್ಲರ ಪೇಟ್ದ ಮಾತು ಪುಸಿಯಾಯ್ತು ಕಾರ್ಮುಕಾಚಾರ್ಯನಂ ಗುರುವಂ ಬ್ರಾಹ್ಮಣನಂ ತೊದಳ್ನುಡಿದು ಕೊಂದಾಗಳ್ (ಗದಾಯು. ೩-೨೩). ತೊದಲ್ನುಡಿ$_{1}$ : (೬). [ ತೊದಳ್$_{2}$ + ನುಡಿ$_{1}$ ]

ತೊದಳ್ನುಡಿ$_{2}$. ತೊದಲುನಂಡಿ, ತೊದಲ್ನುಡಿ$_{2}$, ತೊದಳಂನಂಡಿ (ನಾ). ೧. ಮಕ್ಕಳ ತೊದಲುಮಾತು : ಮುಖಸರಸಿಜದೊಳ್ ದರಹಸಿತಂ ನೆಗಟ್ವಿನಂ ತೊದಳ್ನುಡಿ ನುಡಿದು (ಆದಿಪು. ೮-೩); ಜನೋಕ್ತಿ ಮೊದಲಲ್ತು

ಮದಂಗದೊಳಿಂಬುವೊಲ್ ತೊದಳ್ನುಡಿ ನುಡಿ ? (ಪು. ೧೧-೮೩) : ನುಡಿಗಲ್ವಂತೆ ತೊದಳ್ನುಡಿ ನುಡಿಯಿಸಿದಂ ತನಗೆ ಪೋಲ್ತ ವಾಕ್ಕನ್ನಿಕೆಯಂ (ಅರ್ಧನೇ. ೨-೩೧): ಇಡಿದ ಲಾಲಾಜಲಂ ಶಿವಪ್ರಸಾದಂ ತೊದಳ್ನುಡಿ ಯೆಲ್ಲ ಶಿವಕೀರ್ತನೆಯು (ಶಾಂದಪು. ೩-೧೧) ; ಜೊಲ್ಲು ಸುರಿವ ಮುದ್ದು ಮೊಗದಲ್ಲಿ ನಗೆಯಾಂತು ಸೊಲ್ಲಿಸುವನು ತೊದಳ್ನುಡಿಯು (ವೀರೇಶಚ. ೧೬-೬೯). ೨. ಸುಳ್ಳುಮಾತು : ಮನುಕುಲದೊಳ್ ತೊದಳ್ನುಡಿ ಪೊದ ಟ್ಟುಮೆ (ಶಂಕರಾಮಾ. ೬-೯೫). ೩. ಮೆಲುದನಿಯಲ್ಲಿ ಆಡುವ ಗಂಭೀರ ವಾದ ಮಾತು : ನೆಗಟ್ದ ಮರಾಂಗನಾಜನದ ರೂಪುಗಳಲ್ಲಮದೀಕೆಯೊಂದು ದೇಸೆಗೆ... ನೆಗೆಟೊಂದು ಮೆಲ್ಪಿನ ತೊದಳ್ನುಡಿಗಳ್ಪೊಡಮೆಯ್ದೆ ವಾರವೇಂ (ಆದಿಪು. ೨-೬೫) ; ಆಕೆಯ ಮುದ್ದು ವೆರಸಿದ ತೊದಳ್ನುಡಿಗಂ ಪೂಮಾಲೆ ವೆರಸಿದ ಬಬಲ್ಪುಡಿಗಮಲಂಪುವೆರಸಿದ ನೋಟಕ್ಕಂ . . . ನಾಣ್ವೆರಸಿದ ಭಾವಕ್ಕಮೊಲ್ದುಮೊಟಲ್ದುವಿರೆಯರೆ (ಹಂಪಭಾ. ೪-೧೭ ವ) ; ತೊದಳ್ನುಡಿ ಗಳೊಪ್ಪೆ ಪುಷ್ಪಚಯಮಂ ಸುಗಂಧಂಗಳಂ . . . ಎದಗ್ದೆ ಮಡಗಿಟ್ಟು ತಂದು ತನಗೀವೊಡೆ (ಮದಕ. ೧೧- ೫೦). ೪. ಇಂಪಾದ ಧ್ವನಿ,-ಕುಕಿಲು : ಒಲವಿಂದೋಲಗಿಸುವೆನೀ ನೆಲದಳಿಯನನೆಂದು ಬರ್ಪವೋಲ್ ಬಗ್ಗಿಪ ಕೋಗಿಲೆಯ ತೊದಳ್ನುಡಿ ಬಿರಯಿಯನಲೆಯುತ್ತಿರೆ ಬಡದೆ ಬಂದು ದಂದು ಬಸಂತಂ (ಕಬ್ಬಿಗಕಾ. ೫೩). **ತೊದಲುನುಡಿ :** ೧. ತೊದಲುನುಡಿ ಗಲಿತು ಮುದ್ದಾಗಿ ಬಾಳ್ವವನಯ್ಯೋ ಪದೆದು ದಟ್ಟಡಿಯಿಟ್ಟು ನಡೆದು ಬಾಳ್ವವನಯ್ಯೋ (ಶಾನಂದ. ೪-೮೧ ರಗಳೆ) : ಪರಮತತ್ವಾಮೃತವೆ ಮೊಲೆವಾಲ್ . . . ಮೃದುಸೂಕ್ತಿಗಳೆ ತೊದಲುನುಡಿ (ಬಸಪು. ೨-೧೧) ; ತೊದಲುನುಡಿಗಳಂಬೆಗಾಲು ದಟ್ಟಡಿ ಮುದವೊದವಿದ ಧೂಳಾಟದಿಂದ... ಕುಮಾರರೊಪ್ಪಿದರು (ಕಂಸವಿ ೪-೮೦). ೨. ಶಿಪ್ಪಂಗೆ [ಪಾಠಾಂ. ಸೆಟ್ಟಿಗೆ] ತೊದಲುನುಡಿಯೇಕೆ (ಸರ್ವಜ್ಞ. ೧೯೬೪). **ತೊದಲ್ನುಡಿ₂ :** ೧. ನುಡಿಗಲಿ ಸಿದಂ ತೊದಲ್ನುಡಿ ಪಡೆವಿನೆಗಂ ಪಿತ್ರಯುಗಕ್ಕೆ ಕರ್ಣಾಮೃತಮಂ (ಶಂಕರಾಮಾ. ೧-೭೯) : ತೊದಲ್ನು [ಪಾಠಾಂ. ಳ್ನು]ಡಿಗೇಳ್ದಲಂಪಿನಿಂ . . . ಸಲೆ ನುಡಿಸುತ್ತುಮಿರ್ಪ ನೆವದಿಂ ನುಡಿಗಲ್ಪನಿಳೇಶನಂದನಂ (ಕುಸುಮಾ. ೬-೧೫೧) : ಪರಮಶಿವಭಕ್ತತತಿ ತಮ್ಮ ಕಂದನ ತೊದಲ್ನುಡಿಗಳೆಂದು ಮೆಯ್ಯುರ್ಬಿ ಪುಳಕಂದಾಳ್ದು ಲಾಲಿಸುತಿರೆ (ಹದ್ಮರಾ. ೧-೩೩) ; ಪಾಡು ವಿಂಚರಕೆ ಕೋಗಿಲೆ ತೊದಲ್ನುಡಿಯು ಮಾತಾಡುವುದಕೆ ರಾಜಕೀರ . . . ಜೋಡಿಸಿಕೊಟ್ಟರು ತ್ಸವದಿ (ವೀರೇಶಚ. ೧೯-೭೭). ೨. ಪಿತರಂ ಪುತ್ರನಂ ತೊದಲ್ನುಡಿಯಂ ನುಡಿಸಿದಂ[ಪಾಠಾಂ. ತೊದಲ್ನುಡಿಯನೆನಿಸಿದಂ] (ಕಲ್ಯಾಸು. ೨೦೫ ಪ್ರಯೋ). ೩. ಆ ಹುಡುಗನು ತೊದಲ್ನುಡಿಯಲ್ಲಿ . . . ತಮ್ಮ ಬಳಿ ವಿದ್ಯಾದಾನವನ್ನಪೇಕ್ಷಿಸಿ ಬಂದಿರುವೆನು ಎಂದು ಹೇಳಿ (ಮುಚಸ. ೬೦). **ತೊದಳುನುಡಿ :** ೧. ಬಾಲರ ತೊದಳುನುಡಿಯ ತಂದೆತಾಯಿ ಗಳಾಲಿಸಿ ಕೇಳ್ದು ತಪ್ಪಿರಲು ಆಲೋಕಿಸರಂತೆ ಕೃತಿದೋಷಮಾರೆ ತಿದ್ದಿ ಬಾಲನಹೆನು ನಾ ನಿಮಗೆ (ಅಂಜನ. ೧-೧೦೪). ೩. ನಡೆತಂದರ್ ಚೆಲ್ವಿಂ ದೊಳ್ನುಡಿಯ ತಡನುಡಿಯ ತೊದಳು[ಪಾಠಾಂ. ಳ]ನುಡಿಯೊಳ್ವಿಂಡಿರ್ (ಜಗವಿ. ೪-೧೨೬) ; ಗದುಗದಗಂಠದಿಂ ತೊದಳುನುಡಿಗಳಿಂದ ಹೃದಯ ಸಖನೊಲಿಂತೆಂದು . . . ಕೇಳಿದೆನು (ಅಂಜನ. ೫-೧೧೧) ; ರಂಜಿಸುವ ಯುವರಾಜನೋಲಗ ಕಂಜನಾಭಮುಕುಂದಗಾಯ್ತು . . . ಎಂಬೀ ತೊದಳು ನುಡಿಗೇಳ್ದು (ನಿಭಾಗ. ೬-೩-೪). [ ತೊದಳ್₂ + ನುಡಿ₂ ]

**ತೊದಳ್ಮಾಡು,** ತೊದಲುಮಾಡು (ಕ್ರಿ). ೧. ತಡವರಿಸುವಂತೆ ಮಾಡು: ಬಾದಿನೊಳವೋದಿನೊಳಂ ವಿಬುಧರ್ಕಳಂ ತೊದಳ್ಮಾಡುವ ರಾಜಕೀರತತಿ (ಸೌಇಇ. IX-1, ೨೬೭-೨೩ : 1160). **ತೊದಲುಮಾಡು :** ೨. ಹುಸಿಯಾಗು ವಂತೆ ಮಾಡಂ : ಒಮ್ಮೆ ಆಡಿದ ಮಾತನ್ನು ತೊದಲುಮಾಡುವುದಕ್ಕೆ ಬಲಿಯು ಒಪ್ಪಲಿಲ್ಲ (ನೀಗಟ್ಟು. ೦೭೮). [ ತೊದಳ್₃ + ಮಾಡು₁ ]

**ತೊದಳ್ಮಾತು,** ತೊದಲುಮಾತಂ, ತೊದಲ್ಮಾತು (ನಾ). ೧. ಮಕ್ಕಳ ತೊದಲುನುಡಿ : ತೊದಲ್ಮಾತ ಮಾತನಾಡುವ ಮುದ್ದುಗೆಯ್ಯ ಭೂತಳ ದೊಳಗಂಬೆಗಾಲಿಟ್ಟು ನಡೆವಂತೆ ಚೇತನವಾದುದಂಗಜಗೆ (ಪ್ರೋ ೀ ಹ ಕ. ೧೧-೫೯) : ಶಿಪ್ಪೋಕ್ತಿಗಳಂ ತಾಂ ಪೇಳ್ದು ಪೇಳ್ವಂತಿರೆ ಕಲಿಸಿ ತೊದಳ್ಮಾತು ಚೆಲ್ವಾಗೆ ಪಾಪಮಾತ್ತಿಗೆ ಪುರ್ಬಿಂ ಜರ್ಬಿನಿಂ ನೋಡೆನುತಳಿಪಿ ನೃಪಂ (ರಾಜಶೇ. ೪-೭೦). ೨. ವ್ಯರ್ಥವಾದ ಮಾತು: ತೊದಲ್ಮಾತಿನೊಳೇನೋ ಪಾಂಡವರ ಕೈಯೊಳೆ ನಿನ್ನ ನಿಸೇಕವಾಗದೇ (ಹಂಪಭಾ. ೯-೪೯). **ತೊದಲು ಮಾತು :** ೩. ಅಸ್ಪಷ್ಟವಾದ ಮಾತು: ಕೆಲಂಬರು ತೊದಲುಮಾತುಗಳ ನಾಡುತ ಕಣ್ಣುಗಳಂ ಮುಚ್ಚಿ ಕೈಸನ್ನೆಗಳಂ ಮಾಡುವರು (ಸೌಗಂಧಿ. ೧೪೨-೧೧); ಲೋಹಲಃ, ಅಸ್ಫುಟವಾಕ್-೨ ವ್ಯಕ್ತವಾಗದೆ ತೊದಲು ಮಾತನಾಡುವವನ ಹೆಸರುಗಳು (ಸಿದ್ಧಾಂತಿ. ೨೮೭). **ತೊದಲ್ಮಾತು :** ೧. ಪಸುಳೆತನದೊಳ್ ಪುಣಮಮಂ ಶರಣಗಣಕೆ ಬೋಧಿಸುವನೀ ಕುವರ ನೆಂಬೊಲ್ ತೊದಲ್ಮಾತು ರಂಜಿಸಿದುವು (ಚಬಪು. ೫-೪೧). ೪. ಮುದು ಮಾತು : ಮಾತೆಯ ಪಕ್ಷಪುಟವ ಸೇರುವ ತೊದಲ್ಮಾತ ನುಡಿದು ಬಿನದಿಸುವ . . . ಗಿಳಿವಜ್ಜೆಗಳ ರೀತಿಯು ಕಂಡಳಾ ಸೀತೆ (ಕಂಸವಿ. ೪-೪೭). [ ತೊದಳ್₂ + ಮಾತು₁ ]

**ತೊದಳ್ಳಿ** (ನಾ). ಒಂದು ಸ್ಥಳದ ಹೆಸರು: ಬನವಸೆಯ ಚಟ್ಟ ನಾಗರಕಣ್ಡಕ್ಕೆ ಮುನಿದು ಪರಿಯನಟ್ಟಿದಡೆ ತೊದಳ್ಳಿಯನಿರಿದು (ಎಕ. VIII, ಸೊರಬ. ೨೩೪-೮ ; ೯೯೯). [ ? ]

△ **ತೊದಟ್** 'ತೊದಳ್₁' ನೋ.

**ತೊದಟ್ಟು** (ಕ್ರಿ). ಎದುರಿಸು; ಪ್ರತಿಭಟಿಸು : ಕುಲದೀಪತಿಲಕ ಗೋಪಾಲ ರಾಜ . . . ಅಟ್ಟಿ ಪೊಯ್ದು ನುಗುಟ್ಟುಟ್ಟಿ ತೊದಟ್ಟು ಮಲ್ಲಮಾಟ್ ಯೊನ್ನಾಸುರಮಪ್ಪಿನಂ ಪೆಣೆದು ಕಟ್ಟಿದಂ (ಎಕ. VI, ಚಿಕ್ಕಮ. ೭೭-೩೦ : ಸು. 1060 ?). [ ತೊದಟ್ (<ತೊದಳ್₁) + -ಚು₁ ]

**ತೊದುರು** 'ತೊಡರು₃' ನೋ.

**ತೊನಗು** 'ತೊಲಗು' ನೋ.

**ತೊಣಚ** 'ತೊಣಸೆ' ನೋ.

**ತೊಣಚೆ** 'ತೊಣಸೆ' ನೋ.

**ತೊಣಪೆ** (ನಾ). ಒಂದು ಬಗೆಯ ಮರ ; ಹೊಂಗೆ : " ಗುಚ್ಛಕರಂಜಃ- ತೊಣಪೆ, ಹೊಂಗೆಮರ " (ಓಷಧಿ. ೫೦). [ ? ]

**ತೊಣಸಿ** 'ತೊಣಸೆ' ನೋ.

**ತೊಣಸೆ,** ತೊಣಚ, ತೊಣಚೆ, ತೊಣಸಿ, ತೊಣಸೆ₁, ತೊನಚಿ, ತೊನಚೆ, ತೊನಸಿ (ನಾ). (ನಾಯಿ, ಕುದುರೆ ಮುಂತಾದುವುಗಳ ಮೈಯಲ್ಲಿ ಸೇರಿಕೊಳ್ಳುವ) ಒಂದು ಬಗೆಯ ನೊಣ : ಪಶುವಿನೊಳಲ್ಲಿರಲೀಂ ತಾನೆಂತೊ ತೊಣಸೆಯೋ ನೊಣವುಗಳೋ (ಸಮುಶ. ೯-೬೧) : ಅಗಸೆಯ ಮರಕ್ಕೆ ತೊಣಸೆ ಮುಟ್ಟಿದುಂಬಿಯೆಂಬಂತೆ (ಧರ್ಮಾಮೃ. ೭-೨೨೯); ತುಂಬಿ ಪತಂಗ ನೊಣ . . . ತೊಣಸೆ ಮೊದಲಾದುವಕ್ಕೆ ಸ್ಪರ್ಶನ ರಸನ ಘ್ರಾಣಮುಕ್ಕು (ಚಾಸ್ತ್ರಟೀ. ೧೧೭-೬); ನೀನು ತೊಣಸೆಯ ಕೊಲೆಯ ಮಾಡಿದೆ ಮುಳ್ಳುಮೊನೆಯಲಿ (ಸಂಧಶ. ೧೪-೧೭). **ತೊಣಚ:** ತೊಣಚಿ; ಗೋಮಕ್ಷಿಕ (Breeze. ಇಂಕಲಿ). **ತೊಣಚೆ :** (ಕ). **ತೊಣಸಿ:** ಹಾಲುಗೆಚ್ಚಲು ಬಳಿಯ ತೊಣಸಿ ಹತ್ತಿಕೊಂಡು ಕಾಲವನು ಕಳೆವ ಬಗೆ ಬಲ್ಲಿರಲ್ಲ ಪೇಳವೇಳೆಗೆ ಹಸುಪ ಕರೆದುಂಬ ನರನಂತೆ ಕೀಳು ತೊಣಸಿಯು ಉಂಡು ಹರುಷ ಪಡ ಬಲ್ಲುದೆ (ವಿದಾಕ್ಕ. ೧೮-೨). **ತೊಣಸೆ₁ :** ಬೆನ್ನಟ್ಟುವ ಘೋರರೂಪಿ ಅರ್ಗಸ್, ಕಡಿದು ರೂಪುಗೆಡಿಸಲೆಂದು ಎಡೆಬಿಡದೆ ಹಾಯ್ದು ಬರುವ ತೊಣಸ . . . ಅವಳ ಪಾಲಿಗೆ ಬೆನ್ನಟ್ಟಿದ ಬೇತಾಳಗಳು (ಜದ್ರಪ್ರ. LI. ನಾಟಕದ ಸಮುಕ್ಕಿ). **ತೊನಚಿ :** ತೊನಚಿಯಂ ಕೊಂದ ಪಾಪಸಮೇತ

ಮಾಂಡವ್ಯನಾ ಶೂಲದೊಳು ಬೀಳ್ವ (ವೀಶೈಪು. ೯-೫-೩೧). **ತೊನೆಚೆ :** ವಾನರಕೊದಗಿದ ತೊನಚೆಯು ಕಾಟ (ಅವಧೂ. ೧೧) ; ಜ್ಞಾನೋತ್ತರ ಮಾರ್ಗಕೆ ಜಂಜಾಟ ವಾನರಕೊರಲಿದ[ದಗಿದ]ತೊನಚೆ ಕಾಟ (ಅಡಷ. ೧-೦೦೭). **ತೊನಸಿ :** ಲಿಂಗದ ಚಿತ್ರದಲ್ಲಿ ಕರ್ಣದೊಳಗೆ ತೊನಸಿ ಹೊಕ್ಕು ಗೋಳಿಟ್ಟು ಬಾಧಿಸಿದಂತಾಯಿತ್ತಯ್ಯಾ (ವಚಸಂ. ೧೫೪-೬೮) ; ವರತಪವ ಕೆಡಿಸಬೇಕೆಂದು ತೊನಸಿಗಳಾಗಿಯಜಗೆಬಗಿ ಕರ್ಣಕ್ಕೆ (ಪ್ರಾಭರಾ. ೪-೨೪) ; ತೊನಸಿ ಮುಂದಿ ಎತ್ತ ಹಜಿತಿಂದು ಹುಳಗಳನು ಜನಿಸಿ ಬಿಟ್ಟಂತೆ (ಸರ್ವಜ್ಞ. ೧೮೫೭) ; ತೊನಸಿಯು ತನ್ನ ತತ್ತಿಗಳನ್ನು ದನಗಳ ತೊಗಲಿನೊಳಗೆ ಹಾಕುತ್ತದೆ (ಮುಂಬಯಿ. ೫-೧೪೫).

**ತೊನಹು** (ನಾ). ತೂಗಾಟ; ಒಲೆದಾಡುವಿಕೆ: ಕೆಂಚುಗೂದಲ ನಿಟ್ಟೊಪ್ಪದಲಿ ನಿಡುದೋಳ ತೊನಹಿನ ಮುಟ್ಟದವೆಗಳ ನಟ್ಟನೋಟದ ... ಪ್ರಭುಲಿಂಗ (ಪ್ರಭುಲೀ. ೨೨-೩೩). [ ತೊನೆ$_1$ + – ಹು$_2$ ]

**ತೊನೆ$_1$** (ಕ್ರಿ). ೧. ಅಲುಗಾಡು ; ಅಲ್ಲಾಡು : "ತೊನೆದುದು ತೂಗಿದು ದೊಲೆದುದುವೆನುತಲಲ್ಲಾಡಿದುದು ನಡುಗಿತೆಂದೆನಲದು ಕಂಪನಮಕ್ಕು" (ಕವಿಕಂ. ೨೫೪); ಮನಸಿಜನೃಪಲೀಲಾಲಾಂಛನಂ ಸ್ವಸ್ತಿಕಂ ಸ್ತ್ರೀಜನದೊಳೆಸೆದು ನಿಂದತ್ತುತ್ತರೀಯಾಂತರೀಯಂ ತೊನೆಯೆ (ಆದಿಪು. ೧೧-೦೫೨) ; ಅರಿವ ನಡುವುಡಿವ ನೇರ್ಗೋಲ್ವರಿದುರ್ಚುವ ನಟ್ಟು ತೊನೆವ ಕಣೆಗಳ್ಗೆ ಮೊಗಂದಿರಿಯದೆ (ಪಂಪಭಾ. ೦೦-೭೪) ; ತೊನೆಯೆ ಕುರುಳ್ ಕದಕ್ಕದಿಸೆ ತುಂಗಕುಚಂ (ಮಲ್ಲಿಪು. ೧೨-೩೦) ; ತೊನೆವ ಬಾಲಂ ಕುಸಿದ ತಲೆ . . . ದೈನ್ಯವಿಡಿದ ಕಿಱುದನಿವೆರಸು ಬಂದೊಂದು ಕೃಷ್ಣಶುನಕ ಬಿರ್ದುದು (ಸಿದ್ಧಲ. ೭-೪೩) ; ತೊನೆವುತಿಹ ಚಿತ್ರದ ಪತಾಕೆಗಳ ಜೋಕೆಗಳ ಕೋಟಾವಳಿಯುಮೆಸೆದುದು (ಜಲಪು. ೪೨-೨೧) ; ಮುತ್ತಿನ ಲಂಬಣಂ ತೊನೆವ ತೊಂಡಲ ಬಜ್ಜರಬೊಟ್ಟು (ಚಕವಿ. ೩-೪೯). ೨. ತೂಗಾಡು ; ಒಲೆದಾಡಂ : "ತೊನೆ ಆಂದೋಲನೇ (ತೂಗಾಡು)" (ಕಮುಧಾ); ಪಂಚಬಾಣ ಕೃಪಾಣ ಪಟ್ಟದೊಡನೆ ಕೊನೆಯು ಬಿಣ್ಪಂ ತೊನೆದು ತೂಗದ ಪೂಗವನವಿಲ್ಲ (ಪಂರಾಮಾ. ೧-೦೦೭ ವ) ; ತೂಗಿ ತೊನೆದು ಮೆಯ್ಮಱೆವ ಹಂದಿಯನು ಕೌಶಿಕ ಕಂಡನು (ಹಚಕಾ. ೭-೬೦) ; ಹರಿಸದಿಂ ತೂಗುತುಂ ಬಾಗುತುಂ ತೊನೆಯುತುಂ ಭರವಸದಿ ನಲಿವುತುಂ ... ಅದೇಂ ನೆಗಳ್ದರೋ (ಪದ್ಮರಾ. ೬-೬೨) ; ಕೋಳ ಮೈಯಲಿ ತೊನೆದು ನೋಟದ ಥಾಳದಲಿ ಧವಳಿಸಿಯೆ . . . ಒಪ್ಪಿರ್ದಳಾ ಮಾಯೆ (ಪ್ರಭುಲೀ. ೪-೫೭) ; ತೂಗುತೆ ತೊನೆಯುತೆ ಬಳ್ಕುತೆ ಬಾಗುತೆ . . . ಸೊಂಪಾಗಿರ್ದುವು ಕಣ್ಗೆ ಗಂಧಶಾಲಿವನಂಗಳ್ (ರಾಜಶೇ. ೨-೧೧) ; ಗಿಡವೂ ಒಪ್ಪಿಕೊಂಡು ತಲೆಯಾಡಿಸುವಂತೆ ಗಾಳಿಗೆ ಅತ್ತಿತ್ತ ತೊನೆಯಿತು (ಜಕಥ. ೭೪); ಆತನ ಮನಸ್ಸು ಒಮ್ಮೆ ತೊನೆಯಿತು (ನಡದಾ. II, ೧೪೯೫). ೪. ಅಲುಗಾಡಿಸು ; ಅಲ್ಲಾಡಿಸು : ಪಲ್ಲಂ ಕುಱುಕುತ್ತುಂ ಮೆಯ್ಯಂ ತೊನೆಯುತ್ತುಂ ಭೋಗಂಗಳಂ ಚಿಂತಿಸುತ್ತುಂ (ಧರ್ಮಾಮೃ. ೫-೧೩೭) ; ಮೈಯಂ ತೊನೆದುದ್ದಂ ನೀಡಿ ಗೋಣಂ ನವದಿನ ಮುಖದೊಳ್ ಕುಕ್ಕುಟಂ ಕೂಗಿತಾಗಳ್ (ಕುಸುಮಾ. ೪-೬೨); ಘನಕೋಪಾಟೋಪದಿಂದಂ ಕುಲಕುಧರಮಹಾಶೃಂಗಮಂ ಕೋಡ ಕೊಟ್ಪಿಂ ತೊನೆದೀಡಾಡುತ್ತೆ ಬಪ್ಪ ದ್ವಿರದಪತಿಯಂ . . . ನೋಡುತ್ತೆ (ಸೂಕ್ತಿಸು. ೩-೩೪) ; ನೆಣನ ತಿಂದು ತಣಿದು ತಲೆಗಳ ತೊನೆವ ಬೇತಾಳತತಿ (ಜಲಪು. ೪೦-೨೭); ನಗೆಮೊಗದೊಳಂಗಮಂ ತೊನೆಯುತ್ತೆ ಸಂತಸಂಬಡುತಿರ್ದರು (ಶೀಪರಾ. ೨೪-೩೫). ೫. ನಡಂಗು ; ಕಂಪಿಸು : "ತೊನೆ, ಒಲೆ, ತೂಗು, ಸೆಡೆವು, ಅಲ್ಲಾಡು, ನಡುಕಂ – ಈ ೬ ಕಂಪನಂ" (ಕಕಸಾ. ೩೧-೬೫೦) ; ಗ್ರಹಪೀಡಿತನಂತೆ ತೊನೆಯುತ್ತುಂ . . . ತಾಯ್ ಸತ್ತ ಶಿಶುವಿನಂತೆ ಬಾಯ್ಬಿಡುತ್ತುಂ (ಧರ್ಮಾಮೃ. ೧-೧೪೪); ಮುನಿಯುತ್ತುಂ ಮುದ್ದಿಸುತ್ತುಂ ತೊನೆದು ತವಕಿಸುತ್ತುರ್ವುತುಂ (ರ ಕ್ಷಾ ಶೆ. ೬೫) ; ಸೆಳೆಗೊಂಬೆಲರಿಂ ತೊನೆದೆಲ್ದು ಕಟ್ಗೆ ತೂಗಾಡಿದೊಡಂತದಂ ಪಿಡಿದುಕೊಂಡಲರಂ ನೆಱೆ ಕೊಯ್ದು (ಕುಸುಮಾ. ೫-೧೧೧) ; ಮೇಲೆ ಅಟ್ಟದ ನೆಲ ಆವನ ಓಡಾಟದ ರಭಸಕ್ಕೆ ತೊನೆಯುತ್ತಿದ್ದಿತು (ಕಾಗೆಕ. ೧೨೭). ೬. ಬೀಸು ; ತೀಡು : ಸಂಪಗೆಯ ಷಂಡದೊಳಾವ್ರುಮಹೀಜವಾಲೆಯೊಳ್ ಫಲದ ತುಱುಂಗಲೊಳ್ ತೊನೆವುದೊರ್ಮೆಯುಮಲ್ಲಿಯ ಮಂದಮಾರುತಂ (ಮಹಾಸೀ. ೧೫-೪೪) ; ಗಾಳಿ ತೊನೆಯಿತು, ಗಂಧ ಹರಡಿತು (ಕರುಶ್ರಾ. ೨೭-೮). ೭. ಬಳುಕಂ ; ಒನಪುಮಾಡು: ರೂಹಿಲ್ಲದೊಡಂ ಕೆಲಬರ ಸಹಾಯದಿಂ ಬಱಿದೆ ತೊನೆದು ಕೆಮ್ಮನೆ ವಿಟಸಂದೋಹಮನೊಲಿಸುವರ್ (ಧರ್ಮಾಮೃ. ೩-೧೩೦); ಪುಷ್ಪ "ನಾಚಿಸುತ್ತೀರಿ" ಎಂದು ತೊನೆದಳು (ಸುಖಿವಿ. ೬೯). ೮. ಒಲಿ; ಮನಸೋಲು; ಮೆಚ್ಚು : ಕಾಲೂರ ಸೂಳೆಯಂತೆ ಬಱಿದೆ ದುರ್ಮತಕ್ಕೆ ತೊನೆಯದೆ . . . ಧರ್ಮದೊಳ್ ಕೂಡಿ ಜನವಾದಸೇವೆಯೊಳಿರ್ದು ಸ್ವರ್ಗಾಪವರ್ಗ[ಸುಖ]ಕ್ಕೆ ಭಾಜನನಾಗು (ಧರ್ಮಾಮೃ. ೧೪-೮೪) ; ಕರಂ ನನ್ನಿಗನೆನ್ನನೇ ತೊನೆವನೆನ್ನನೆ ಬೇಡುವನೆನ್ನೊಳಾಡುವಂ (ಚಕವಿ. ೬-೧೬೦) ; ತಾಯಿಯ ಹೃದಯ ತೊನೆಯುತ್ತದೆ–ತನಯಳ ಮಾತುಗಳನ್ನು ಕೇಳಿ (ಕರಜ. ೨೦). ೯. ಮಿಡಿ ; ಮಿಡಿ : ಕೆಂದಳಮಿಂದು ವೀಣೆಯಡೆಯಾಡುವುದಲ್ಲಿದು ಹೃತ್ಸರೋಜದಾನಂದದ ನಾಡಿಯಂ ತೊನೆದು ಸೋಲಿಸಿ ಗಳ್ಕನೆ ಸೊರ್ಕನೇಱಿಕುಂ (ಚಕವಿ. ೪-೧೨೦). ೧೦. ತೂಗು ; ತೂಗಾಡಿಸು: ತೊನೆದು ಕತ್ತಿಯು ತಿರುಹುತಿರಲಿಕೆ ಸುತನ ನುಂಗೆನಲು (ಸಂಭಪ. ೮-೪೮); ಸಿಂಹಮಧ್ಯದ ಕನ್ಯೆಯರು ತೋಳ್ಗಳಂ ತೊನೆಯಲು (ಭಾವಚಿಂ. ೯-೫೮) ; ತೊನೆದಿಡುವ ಹಸ್ತಬಲದಿಂದಂಬು ನಡೆದು ವೆರರನು ಕೊಂಬುದಲ್ತೆ (ವಂಕಾರಾ. ೫-೪-೪೨) ; ಜಡಿದು ಕೈದುವ ತೊನೆವುತಂದರು ತಮ್ಮೊಳೊಳಗೊಳಗೆ (ಅಂಬಿಕಾ. ೫-೨೧) ; ನೆತ್ತರ್ ತವಕಿಪ ಕೂರ್ಮೊನೆ ಸಬಳಗಳನ್ ತೊನೆದನವನ್ (ಅಂತಿಗೊ. ೬-೧೦೧). ೧೧. ತಲೆಯನ್ನು ಆಡಿಸು : ತೊನೆವವರ್ಮಾತಿಗೆ ಸೋಲ್ದು ತನ್ನ ತಲೆಯೊಳ್ ತಾನಿಟ್ಟು . . . ಲಜ್ಜೆಯಿಲ್ಲದನಿಬರ್ ಕಾಂ ಮಾನ್ಯನೆಂದೆನ್ನದಾ ಮನುಜಂ ಸದ್ಗತಿ ಕಾಣನ್ಯೆ (ಸೋಮೇಶ. ೫೦); ನುಡಿದ ನುಡಿಯಂ ಪರಿವಿಡಿಯಿಂ ನನ್ನಿ ಮಾಡಿದೆಯೆಂದು ತೊನೆಯುತ್ತೆ ಕಿಱಿದೆಡೆಯಂ ಪೋಗೆಪೋಗೆ (ಕಬ್ಬಿಕಾ. ೧೧೦). ೧೨. ಕೊಡಹಂ ; ನಿವಾರಿಸು : ಅನಿತರೊಳಗನಿತಾತ್ಮ ತಿವಿಗುಳ ನೆನೆದು ಮರವೆಯು ತೊನೆದು ನಿಂದನು (ಕೃಷ್ಣಾಕ. ೨೧-೧೮). ೧೩. (ಆಲಂ) ಜಂಬಪಡು ; ಗರ್ವಿಸು ; ಬೀಗು : ಕುಲಮುಂ ದಳಮುಂ ಜಳಬೊಟ್ಟುಳಿಕೆಯವೋಲ್ ಕಿಡುವುವೇಕೆ ತೊನೆವರ್ ಮೂಖರ್ರ್ (ಧರ್ಮಾಮೃ. ೭-೧೬೧) ; ತಲೆಗೇಱಿ ಸೊಕ್ಕು ತೊನೆವರ್ (ಸೋಮೇಶ. ೪೮) ; ಪಾರ್ಥನಂ ರಕ್ಷಿಸುವೆ ನೀಂ ಕೃಪೆಯೊಳಾವು ಬಱಿದೆ ತೊನೆದೊಡೇನಹುದಿನ್ನು (ಕ್ರಮಿಥಾ. ೧೩-೩೪) ; ಅಂತರಿಸದಾವಗಂ ತುಳ್ಕುತಿಹ ರೌದ್ರರಸದಿಂ ತೊನೆವ ಚಂಡಾಖ್ಯಭೈರವ ಮಹಾತೇಜದಿಂ ತರಣಿಯಂ ಜಱೆಯುತ (ನಂದಿಪಾ. ೩-೭). 'ಒನೆ' ಪರಾ.

**ತೊನೆ$_2$** 'ತೋಣೆ' ನೋ.

**ತೊನೆಪ, ತೊನೆಹ** (ನಾ). ೧. ತೂಗಾಟ: ಸೊನೆಯಿಂ ದಾನಜಲೌಘಮುಂ ತೊನೆಪದಿಂ ಕೊಂಬಾಟಮುಂ ಕೋಕಿಲಸ್ವನದಿಂ ಬೃಂಹಿತನಾದಮುಂ ... ಒಪ್ಪಲ್ (ಜಗವಿ. ೧೪-೬೪). ೨. ಒನಪು; ಒಲಪು : ಆತಾಕೆಗಳ್ ತೂಗಿ ತೊನೆವ ತೊನೆಪಗಳುಮಂ . . . ನೋಡಿ (ಪಂಪಭಾ. ೪-೯೦ ವ) ; ತೊನೆಪಂ ಲೇಸು ಸಖಿಗೆಯರಿದೆಂಬಂತೆ . . . ಸಂಸಾರಸುಖಂ ಲೇಸು ಮೇಗಣ ನರಕದುಃಖಂಗಳರಿಯವು (ಧರ್ಮಾಮೃ. ೮-೮೦). **ತೊನೆಹ :** ೩. (ಆಲಂ) ಓಲಾಟ; ಮೆರೆತ: ಮನೆಮನೆವಾರ್ತೆಯ ಮಡದಿ ಮಕ್ಕಳುಗಳ ತೊನೆಹದ ತೊಡಕಿನೊಳೊತ್ತಡರಿ ಮನಗೆಟ್ಟು ಮತಿಯಳ್ಗಿ ಮಱುಗದವೊಲ್ ನಿನ್ನ ನೆನೆದೆನುಳುಹು (ಶಕಸಾಂ. ೧೬-೯೨). [ ತೊನೆ$_1$ + – ಪ$_2$ ]

**ತೊನೆಯಿಸು** (ಕ್ರಿ). ೧. ತೂಗು ; ಜೀಕು : ಲಲಿತಾಂಗಂ ಬಳ್ಳಲು ಉಯ್ಯಲಂ ತೊನೆಯಿಸಿದಳ್ (ಮಲಾಹ. ೪-೪೬). ೨. ಪ ಲು ಕ ನ್ನು ಮೂಡಿಸು: ನಾದಾನುಸಾರವಾಗಿ ಗವುಕದ ಗುಂಪು ಗುಂಗುಮಿಸುವಂತ ಹಾಡನ್ನೆತ್ತುವ, ಎತ್ತಿ ತೊನೆಯಿಸುವ ತೊನೆಯಿಸಿ ಕೊನೆಗಾಣಸುವ ಹಿಡಿತ (ಹಾರ್ತಿಸು. ೪೨). [ ತೊನೆ$_1$ + – ಇಸು$_3$ ]

**ತೊನೆಹ** 'ತೊನೆಪ' ನೋ.

**ತೊನ್ನ** (ನಾ). ತೊನ್ನುರೋಗವುಳ್ಳವನು : ತಾಂ ತೊನ್ನನಾಗಿ ಮುರುಂಟಿದ ಕೈಯುಂ ಕಾಲುಂ ಬೆರಸು . . . ಲೋಗರ ಮನೆಗಳೊಳ್ ಭೈಕ್ಷವಮಂ ಬೇಡಿ (ವಡ್ಡಾ. ಆ. ೧೩೨-೨೨) ; ಪಂಚಮ ನವ ಸ್ಥಾನಂಗಳೊಳ್ ಕರ್ಕಟಾಳಿ ಮೃಗೋಕ್ಷೋದಯಮುಗ್ರರೊಂದಿದೊಡವರ್ ಮೇಣ್ ನೋಡೆ ತೊನ್ನಂ ನರಂ (ಜಾತಿ. ೨೧-೧೫) ; ತೊನ್ನಂಗೆ ತುಳಿಲುಂಗೆಯ್ಯಂ ಗೆನ್ನಂತಾಗೆಂದಂ (ಸಮಪ. ೯-೭೪) ; ಈ ತೊನ್ನಂಗೀ ಕಪ್ಪಂಗೀ ತೊಡವಿ ದೇಕೆ (ಧರ್ಮಾಮೃ. ೪-೭೦) ; ಒಡಲಂ ಪತ್ತಿದ ತೊನ್ನರ ತುಟಿಯಂತೆ (ಲೀಲಾವ. ೨-೧೧೬) ; ತೊನ್ನನ ಕೊಟದಿನಾದುದು ತೊನ್ನು (ಯಶೋಧ. ೩-೭೪) ; ಸಾವಂ ಬಯಸುವ ತೊನ್ನರುಂ ತುಱುಚರುಂ . . . ಬಂದಾ ಮರನ ಫಲವಮಂ ಮೆಲೆ ನಿರೋಗಿಗಳಾಗಿ (ಧರ್ಮಪ. ೭-೪ ವ).

[ ತೊನ್ನು + – ಅ$_7$ ]

**ತೊನ್ನಿ** (ನಾ). ತೊನ್ನುರೋಗವುಳ್ಳವಳು. [ ತೊನ್ನ + – ಇ$_3$ ]

**ತೊನ್ನು** (ನಾ). ಚರ್ಮವು ಬಿಳಿದಾಗುವ ಒಂದು ಬಗೆಯ ರೋಗ ; ಶ್ವಿತ್ರ : " ಕುಷ್ಠಮೆನೆ ತೊನ್ನು " (ಮಂಗರಾ. ೧೧೩-೨) ; ಆ ಮಯೂರನ ತೊನ್ನಾದೊಡಲುಂ ಸುವರ್ಣಮಾದುದು (ಸಮಪ. ೯-೨೨) ; ತೊನ್ನಿನಂತೆ ರಸಿಗೆಯನುಳ್ಳುದು ಸೊ ೦ ಬ ನ ೦ ತೆ ಅಲಸಮವ್ವುದು (ಧರ್ಮಾಮೃ. ೪-೧೭೫) ; ಪಿರಿಯ ಬಿಳಿದಪ್ಪ ತೊನ್ನುಳ್ಳವನೆ ಪೂರ್ವದೊಳು ಬೆಳ್ಳಿಯ ಕದ್ದವಂ (ವೀಶ್ವಕು. ೪-೨೨-೨೫) ; ತೊನ್ನುರೋಗಕ್ಕೆ:– ನೆಲದಾಳವ ಗೋಮೂತ್ರದಿಂ ಅರೆದು ಪೂಸಲು ತೊನ್ನು ಮಾಣ್ಗುಂ (ವಿಷ್ಯವಿ. ೧೩೦) ; ಕುಷ್ಠಾಶ್ರಯಾ–ತೊನ್ನಿಗಾಲಯವಾಗಿರ್ಪುದು (ಶಾಹಟೀ. ೨-೩-೮ ವ). [ ದೇ.॥ ತೆಲು. ತೆನ್ನು ]

**ತೊನ್ನುಗೊಳ್** (ಕ್ರಿ). = ತೊನ್ನುವಿಡಿ : ಮನೆಮನೆಯಂ ತೊಟಲ್ದು ತನ್ನ ತೊನ್ನುಗೊಂಡಿರ್ಪುದನಱಿವುತ್ತುಂ (ವಡ್ಡಾ. ಆ. ೧೩೨-೨೫) ; ಮೆಯ್ಯೆಲ್ಲಂ ತೊನ್ನುಗೊಂಡು ದುಃಖಂಬಟ್ಟೋಪೊಯ್ಯೆಂದೊಳಱುತ್ತಿರ್ಪರ್ ಚರ್ಯಾದಿ ಜಿನೇಂದ್ರಧರ್ಮವಮಂ ಪಟಿದವರ್ಗಳ್ (ಧರ್ಮಾಮೃ. ೬-೧೭೭).

[ ತೊನ್ನು + ಕೊಳ್$_1$ ]

**ತೊನ್ನುಬಡಕ** (ನಾ). ತೊನ್ನು ಹತ್ತಿದವನು : ತೊನ್ನುಬಡಕ ಮಾವ ಅನ್ನಕಾರಿ ಅತ್ತೆ . . . ಎನ್ನ ಗೋಳು ತಾನೆ ನಾಶವೆಂದಿಗಹುದೊ (ಪುರಂದ. ೨-೮೪-೩). [ ತೊನ್ನು + – ಬಡಕ$_1$ (< – ಬಡಿಕ) ]

**ತೊನ್ನುವಿಡಿ, ತೊನ್ನುಹಿಡಿ** (ಕ್ರಿ). ತೊನ್ನುರೋಗ ಹತ್ತು : ತೊನ್ನು ವಿಡಿದಾವರಿಸಿ ರೂಪಳಿದಿಂತಿರುತ್ತಿರಲು (ಬಸವು. ೫೭-೫೬). **ತೊನ್ನುಹಿಡಿ :** ತೊನ್ನುಹಿಡಿದವರ ಹೆಣಗಳನ್ನು ಸುಟ್ಟುಬಿಡುತ್ತಿದ್ದರು (ಹುಟ್ಟಿಹ. ೬೯).

[ ತೊನ್ನು + ಪಿಡಿ$_1$ ]

**ತೊನ್ನುಹಿಡಿ** 'ತೊನ್ನುವಿಡಿ' ನೋ.

**ತೊನ್ನೆ** (ನಾ). ತೊನ್ನು ಹತ್ತಿದವಳು: ಅರಸಿಯರ ಸೂಳೆಯರ ಕಣ್ಗಳೊಳ್ ಘುಟಕಾಂಜನಂಗಳನೆಟ್ಟಿದೂಡನಿಬರುಂ ತೊನ್ನೆಯರಾಗಿರ್ಪನ್ನೆಗಂ(ವಡ್ಡಾ. ಆ. ೧೩೪-೧೭). [ ತೊನ್ನ + – ಎ$_2$ ]

**ತೊಪ್, ತೊಪ್ಪು** (ನಾ). ಒಂದು ಅನುಕರಣ ಶಬ್ದ. 'ತೊಪ್ಪನೆ' ಪರಾ. **ತೊಪು :** ಬೆನ್ನಟ್ಟಿ ತಗುಳ್ದಿಡುವುದುಂ ಖಳಿಲ್‌ಖಳಿಲ್ ತೊಪ್ಪು ತೊಪ್ಪು ಛಳಿಲ್ ಧಳಿಲೆಂದು ಕೊಳ್ವ ಬಡಿಗಂ ಚೆಲಿತು (ಧರ್ಮಾಮೃ. ೭-೮೪).

**ತೊಪತೊಪ** (ನಾ). ಒಂದು ಅನುಕರಣ ಶಬ್ದ. 'ತೊಪತೊಪನೆ' ಪರಾ.

**ತೊಪತೊಪನೆ** (ಅ). ತೊಪತೊಪ ಎಂದು ಸದ್ದಾಗುವಂತೆ; ನೀರು ತೊಟ್ಟಿಕ್ಕುವಂತೆ: ಅವನು ಮಳೆಯಲ್ಲಿ ತೊಪತೊಪನೆ ತೊಯ್ದು ಬಂದನು (ರೂಢಿ). 'ತಪತಪನೆ' ಪರಾ. [ ತೊಪತೊಪ + – ಅನೆ$_1$ ]

**ತೊಪ್ಪಟೆ** 'ತೊಗಟು' ನೋ.

**ತೊಪ್ಪಡೆ** 'ತೊಗಟು' ನೋ.

**ತೊಪ್ಪನೆ** (ಅ). ತೊಪ್ ಎಂದು ಸದ್ದಾಗುವಂತೆ ; ತಲೆ ಪಱಿದು ಜೋಲ್ದು ತೊಪ್ಪ[ಪಾಠಾಂ. ಪ್ಪೆ]ನೆ ನೆಲದೊಳ್ ತನು ಬೀಟೆ (ಧರ್ಮಾಮೃ. ೧೩-೧೬೨) ; ಬಿಡೆ ಕೆವ್ವಿ ಕೇಕರಿಸಿ ತೊಪ್ಪನುಗುಳುತ (ಸಾಂಗತ್ಯ. ೮-೫೭) ; ಕುವರಿ . . . ತೊಪ್ಪನೆ ಬಿದ್ದಳುರ್ವಿಯಲಿ (ವೀರೇಹತ. ೩೫-೫೧) ; ಚೀಲವನ್ನು ತೊಪ್ಪನೆ ಒಂದು ಮೂಲೆಗೆಸೆದ (ಕೂನೆಕೀ. ೧೯೭).

**ತೊಪ್ಪತೊಪ್ಪನೆ** (ದ್ವಿರುಕ್ತಿ) : ಅವ್ಯಯಪದಾಂತಲೋಪಕ್ಕೆ–ಕವ್ವು ಕವ್ವನೆ . . . ತೊ ಪ್ಪ ತೊ ಪ್ಪ ನೆ, ತಪ್ಪತಪ್ಪನೆ (ಶಮದ. ೧೯೩ ಪ್ರಯೋ) ; ತಪ್ಪತಪ್ಪದೆ ಶರಶರಂಗಳಂ ತೆಗೆದೆಚ್ಚು ತೊಪ್ಪತೊಪ್ಪನೆ ಮೃ ಗ ಮೃ ಗ ಂ ಗ ಳ ಂ ಕೆಡಹಿದರ್ಕಾನನದೊಳು (ಕೃಮಿಭಾ. ೨೮-೪೧).

**ತೊಪ್ಪನೆ ತೊಯ್, ತೊಪ್ಪನೆ ತೋ** = ೧. ಸಂಪೂರ್ಣವಾಗಿ ಒದ್ದೆಯಾಗು ; ಪೂರ್ತಿಯಾಗಿ ನೆನೆದು ಹೋಗು : ತೊಪ್ಪನೆ ತೊಯ್ದು ಕಾಮರಸದಿಂ ಲಲಿತಾಂಗಿಯೊಪ್ಪಿದಳ್ (ಲೀಲಾವ. ೧೩-೧೭); ನಿಪ್ಪಸತಪ್ಪ ರತ್ನಚಯವಮಂ ಪಿಡಿದಾಯ್ದು ಸುಧಾರಸಂಗಳಿಂ ತೊಪ್ಪನೆ ತೊಯ್ದವೋಲ್ ಪೊಳೆವ ಪಲ್ಗಳಂ (ಶಾರಪು. ೨-೫೦) ; ಹರಶರಣಕರುಣಾಮೃತದ ಮಳೆ ಸುರಿಯೆ ತೊಪ್ಪನೆ ತೋದು ತೋದೀಶ್ವರಗಣಾಂಘ್ರಿಜಲದ ಕಡಲೊಳೋಲಾಡಿವೋಲಾಡಿ (ಬಸವು. ೭-೨೫) ; ನೀರ ಧಾರೆಗಳಿಂದ ತೊಪ್ಪನೆ ತೋದುದೊಡಲು (ಬಸವು. ೧೮-೭೫) ; ೨. ಸಂಪೂರ್ಣವಾಗಿ ನೆನೆಯಿಸು,– ತೋಯಿಸು : ಇಪ್ಪತ್ತು ಕೂರ್ಗಣೆ ಕಣ್ಣೀರ ಮಳೆಯಿಂದ ತೊಪ್ಪನೆ ತೊಯ್ದನು ಖಳನ (ತೋಹತ. ೩೪-೧೭). [ ತೊಪ್ + – ಅನೆ$_1$ ]

**ತೊಪ್ಪಲ** 'ತೊಪ್ಪಲು' ನೋ.

**ತೊಪ್ಪಲು, ತಪ್ಪಲ, ತಪ್ಪಲು$_1$, ತೊಪ್ಪಲ, ತೊಪ್ಪಾಲೆ** (ನಾ). ೧. ಮರಗಿಡಗಳ ಎಲೆ, ಚಿಗುರು ಮೊದಲಾದಂವು ; ಸೊಪ್ಪು : ಹಸಿಯ ತೊಪ್ಪಲನೆ ತಂದು ಆ ದೇವರ ಮಸ್ತಕದ ಮೇಲೊಟ್ಟುವ ಆ ತೊಪ್ಪಲನೆ ತಂದು ಬಿಸಿಮಾಡಿ ಪಶುಪತಿ ಎಂಬ ಜಂಗಮಕ್ಕೆ ನೀಡಿದೊಡೆ (ವಚಸಂ. ೧೯೦-೫೦ ಅಂಬಿಗ) ; ಬಿಸಿಲಲ್ಲಿ ಕಟ್ಟ ಕಗ್ಗಲಿಯ ತೊಪ್ಪಲನು ತಱಿದು ರಸವ ಹಿಂಡಿಕೊಂಡು (ಅಶ್ವಟೀ. ೬೯-೧) ; ಅನ್ನನ ಬಿಟ್ಟು ತೊಪ್ಪಲ ತಿನ್ನುವನ ಕಂಡು ಕೊರಡುಯೆಂಬೆ (ಚಿದಾವ. ೩೩-೯) ; ಉಡುಗಿ ಮೈನಯದ ನೆಯ್ಗೆ ತೊಪ್ಪಲು ; ಹರೆಯ ಚಿಗುರಡಗಿ ನೆತ್ತರದ ನೆರೆಗಂಪು ಹಳಸುತಿದೆ ಭರದಲ್ಲಿ (ಉಯ್ಯಾಲೆ. ೧೨-೩). ೨. ಒಂದು ಬಗೆಯ ಸಸ್ಯ : ಈಶ್ವರೀಬೇರು , ತೊಪ್ಪಲು, ಗೋಪಾಲಪುಟ್ಟತೊಪ್ಪಲು (ವ್ಯುತ್ಪಿ. ೯-೧೫೩) ; ಮರಗಳು : ಹೆಸವ, ಪೆಬ್ಬಲಸು . . . ಜಾಲಿ, ಕರೀಜಾಲಿ, ಗೊಬ್ಬಳಿ, ತೊಪ್ಪಲು, ಬಿಲವತ್ರೆ (ನಮ್ಮನು. ೨೩೭). **ತಪ್ಪಲ:** ೧. ದಪ್ಪಗನಣಾಗನ ಬಲದ ಮಸ್ತಕದ ಮೇಲಪ್ಪಳಿಸಿದ ಬಿಸಿಲ್ಗಿಡಿಗೆ ಕುಪ್ಪಟಿಯಾದುದುರುವೀರುಹ ಕಳತಿರ್ದ ತಪ್ಪಲ ತಱಗೆಲೆಯಾಯ್ತು (ವೀರೇಹತ. ೧೯-೪೪). 'ಮೊಪ್ಪಿತಪ್ಪಲ' ಪರಾ. **ತಪ್ಪಲು$_1$:** ೧. ಮೇವಿನ ಸೊಪ್ಪಿಯ ಕಿಚ್ಚು ಮಾಡಿ ಅದರಲ್ಲಿ ತುರುಬಿ, ತುಂಬಿ, ಗಣಜಲಿ, ಹೆಬ್ಬೇವು ಮೊದಲಾದ ತಪ್ಪಲುಗಳನ್ನು ಚೆಲ್ಲಿ (ಕನ್ನಅಾ. ೧೬೭). **ತೊಪ್ಪಲು$_1$ :** ೧. ತೊಪ್ಪಲದ ಆಚ್ಛಾದನೆಯಿಂದ ಚಪ್ಪರವು ... ಶೋಭಿಸಿತು (ಹಲ್ಮಿಬ. ೪೭); ತಾಯಿಗೆ ಹೇಳಿ ಆಡನ್ನು ಬಿಚ್ಚಿಕೊಂಡು ತೊಪ್ಪಲ ತರಲು ಊರ ಹೊರಗೆ

ನಡೆದನು (ಜಿಯಂತ. ೩೨). ತೊಪ್ಪಾಳೆ : ೨. ಬಳೀಜಾಲಿ, ತೊಪ್ಪಾಳೆ, ಸಾರಾಯಿಬೇಲ, ತುಂಬೆಮರ (ವೃ.ಶಿ. ೧-೧೬). 'ಸೊಪ್ಪು₃' ಪರಾ.

**ತೊಪ್ಪಲು ಪಲ್ಲೆ** = ಸೊಪ್ಪಿನ ಪಲ್ಯ : ಸಾಧ್ಯವಿದ್ದಷ್ಟು ಪುಟ್ಟಗೆ ತೊಪ್ಪಲು ಪಲ್ಲೆಯನ್ನೂ ಚಪ್ಪರಬದನೇಕಾಯಿಯನ್ನೂ ತಿನ್ನಲು ಶಿವರಾಮ ನಿಗೆ ಸೂಚನೆ ಕೊಟ್ಟರು (ಪಿಲಿನಿ. ೩೮).

[ದೇ.॥ ತಮಿ. ಚುಪ್ಪಲ್ = ಒಣಗಿದ ಕುಡಿ ; ತುಳು. ತಪ್ಪು ; ಕೊಡ. ತೊಪ್ಪಿ, ಚಪ್ಪಲ]

**ತೊಪ್ಪಾಳೆ** 'ತೊಪ್ಪಲು' ನೋ.

**ತೊಪ್ಪಿಗೆ** 'ಟೋಪಿ' ನೋ.

**ತೊಪ್ಪು** 'ತೋಪ್' ನೋ.

**ತೊಪ್ಪೆ₁** (ನಾ). ಬೊಜ್ಜು. 'ತೊಪ್ಪೆಮೈ' ಪರಾ.

[ದೇ.॥ ತಮಿ. ತೊಪ್ಪೈ₁]

**ತೊಪ್ಪೆ₂** (ನಾ). ಹಸಿಯಾದ ಸಗಣಿಯ ಮುದ್ದೆ : ಅಪ್ಪ ಉಳ್ಳನ್ನಕ್ಕ ತೊಪ್ಪೆ ಕಿಚ್ಚಿಗೊಳಗಪ್ಪುದೆ ಅಪ್ಪುವಾಜಿ ಕಿಚ್ಚು ಮುಟ್ಟಿದ ಮತ್ತ ತೊಪ್ಪೆಯೆಂಬ ನಾಮ ಎತ್ತ ಹೋಯಿತ್ತು (ಷೂಡೂಳ. ೯೬೭-೫೮) ; ತೊಪ್ಪೆ ಮೇಲೆ ಹೆಜ್ಜೆ ಇಟ್ಟು ಮುಖಕ್ಕೆ ಸಿಡಿಸಿಕೊಂಡು, ಇದನ್ನ ಗೃಹಚಾರಾಂದರೆ ನಾವು ಮನುಷ್ಯರೇ! (ಉಮಾಶಿ. ೧೨೪) ; ತೊಪ್ಪೆ ಬರುವುದೇ ಹಬ್ಬಿಗೆ ? (ಗಾದೆ).

**ತೊಪ್ಪೆ ತಟ್ಟು** = ಸಗಣಿಮುದ್ದೆಯನ್ನು ತಟ್ಟು ; ಬೆರಣಿ ತಟ್ಟು : ತೊಪ್ಪೆ ತಟ್ಟಬೇಡವ, ರಾಗಿ ಮಾಡಬೇಡವ . . . ಹೊಟ್ಟೆಗಿಲ್ಲದೆ ಇದೆಲ್ಲಾ ಮಾಡಾಕಾದೀತಾ (ಮುಸುಗ. ೧೫೦). **ತೊಪ್ಪೆ ಹಾಕು** = (ಹಸು, ಎಮ್ಮೆ ಮೊದಲಾದುವು) ಸಗಣಿ ಹಾಕು : ರಸ್ತೆಯ ಮಧ್ಯದಲ್ಲಿ ಹಸು ತೊಪ್ಪೆ ಹಾಕಿದೆ (ಲೂ೦).

**ತೊಪ್ಪೆ₃** (ನಾ). ತೊಗಟೆ ; ಚಕ್ಕೆ : ಆ ಮರನನೇಱ . . . ಕೊಂಬ ಕಡಿವುತ್ತಿರಲಾಗಿ ಒಂದು ಹೊಯಿಲಿಗೆ ಅದಱಂಗದ ತೊಪ್ಪೆ ಹಱಿದು (ಸರ್ವಟ. ೧೦೫-೩೬೬) ; ಇಸುಬಿನ ಹುಣ್ಣಿಗೆ :–ಹುಳಿಸೊಡಲಿಯ ತೊಪ್ಪೆಯಂ ನಿಂಬೆಯ ಹುಳಿಯಲ್ಲಿ ಅರೆದು ಪೂಸೆ ಮಾಣ್ಗುಂ (ವಿಷ್ಣಿವಿ. ೭೫) ; ಇಂಗಳದ ತೊಪ್ಪೆಯನು ಹಿಟ್ಟುಮಾಡಿ (ಅಶ್ವಚಿ. ೯೮-೩).

**ತೊಪ್ಪೆಮೈ** (ನಾ). ಬೊಜ್ಜು ಬೆಳೆದ ಶರೀರ ; ನಿಸ್ಸಾರವಾದ ದಪ್ಪ ದೇಹ : ಈ ಪ್ರಕಾರದಲ್ಲಿ ಉದಯಕಾಲದಲ್ಲಿ ಸಂಚಾರವಮಾಡುವುದು ಹೀಗೆ ಮಾಡಿದಲ್ಲಿ ಶರೀರವು ಲಘುವಾಗಿರುವುದು . . . ತಾಮಸವಾದ ತೊಪ್ಪೆಮೈ ಹೋಗುವುದು (ಸಕಪ್ಪ. ೨೯).

[ತೊಪ್ಪೆ₁ + ಮೈ (<ಮೆಯ್)]

**ತೊಬಟೆ** 'ತೊಗಟು' ನೋ.

**ತೊಬ್ಬು, ತುಬ್ಬು₂** (ಕ್ರಿ). (ಊಳಿಗದ) ಕೆಲಸಮಾಡು; ದುಡಿ: ಸೀಲವಂತ ರೆಲ್ಲರೂ ಮಹಾಲಕ್ಷ್ಮಿಯ ಮನೆಮನೆಯ ಎತ್ತಾಗಿ ಉತ್ತುತೊತ್ತಾಗಿ ತೊಬ್ಬಿ ಕತ್ತೆಯಾಗಿ ಹೊತ್ತು, ಸಾವರೆಲ್ಲರೂ ಸದ್ಭಕ್ತರೆ (ಖಲೀಕ್ಷ. ೪೦). **ತುಬ್ಬು₂** : ಹೊಸ್ತು ಮೂಡಿ ಮುಳುಗುವನ್ನೆವರ ತೊತ್ತುಗೆಲಸವನೆ ತುಬ್ಬಿ ಬೆಂದೊಡಲ ಬೇಗೆಯವನೇತಱದಿ ತಂಬಿಸುವೆಂ (ಸಮ್ಯಕ್ತ್ವ. ೫-೨೨).

[?]

**ತೊಮ್ಮೆ₁** (ನಾ). ಒಂಬತ್ತು ಸಲ ; ಒಂಬತ್ತು ಬಾರಿ : ತೊಂಬತ್ತು, ಒಂಬತ್ತುಪತ್ತು, ತೊಮ್ಮೆ, ತೊಂಬರ್ (ಶಬ್ದಾನು. ೩೬೧ ಪ್ರಯೋ); ತೊಮ್ಮೆ, ನವವಾರಾನ್ (ಶಬ್ದಾನು. ೩೬೧ ವ್ಯಾಖ್ಯಾ). [<ಒಂಬತ್ತು + – ಮೆ₂]

**ತೊಮ್ಮೆ₂** 'ತೊಂಬೆ₁' ನೋ.

**ತೊಮ್ಮೆ₃** (ನಾ). (?) : ಬಾಗಿಲ ಗದೆ ತೊಂಮೆ ಉಪಾಧ್ಯಯನ ಗದ್ದೆ (ಸೌಇಎ. ೧೯೩೦, ಉಡುಪಿ. ೫೭೫-೨೨ : ?). [?]

**ತೊಮ್ಮೆವಡೆ** (ಕ್ರಿ). ಅಧಿಕಗೊಳ್ಳು ; ಆಧಿಕ್ಯಹೊಂದು : ತಿರಿವು ತೊಮ್ಮೆ ವಡೆಯೆ ಗತಿ ಸಂಗತಿವಡೆಯೆ (ಶಾಂತೀಶ್ವ. ೧೬-೭೭ ವ).

[ತೊಮ್ಮೆ₂ (< ತೊಂಬೆ₁) + ವಡೆ₁]

**ತೊಯ್** 'ತೋ' ನೋ.

**ತೊಯಿ** 'ತೊವ್ವೆ' ನೋ.

**ತೊಯಿಸು** 'ತೋಯಿಸು' ನೋ.

**ತೊಯೆ** 'ತೊವ್ವೆ' ನೋ.

**ತೊಯ್ಪು** (ನಾ). ಹಸಿಯಾಗಿರುವಿಕೆ ; ತೇವ ; ಆರ್ದ್ರತೆ : ತೊಯ್ಪುಂ, ತೊಯ್ಪುಂಗಳ್ ; ಕಾಯ್ಪುಂ, ಕಾಯ್ಪುಂಗಳ್ (ಶಬ್ದಾನು. ೫೫೩ ಪ್ರಯೋ).

[ತೊಯ್ (< ತೋ) + – ತ₂]

**ತೊಯ್ಯಿಸು** 'ತೋಯಿಸು' ನೋ.

**ತೊಯ್ಯು** 'ತೋ' ನೋ.

**ತೊಯ್ಸು** 'ತೋಯಿಸು' ನೋ.

**ತೊರಂಗಲು** (ನಾ). ಒಂದು ಬಗೆಯ ಮರ ; ಹೊಂಗೆ ; ಹುಲಿಗಲು : ತೊರಂಗಲ ಎಣ್ಣೆ ಹಾಕಿದ್ದ ಹಣತೆಯ ಬತ್ತಿಯನ್ನು ಹೊತ್ತಿಸಿ ದೀಪ ಮಾಡಿದನು (ಮಲೆಮ. ೩೦೯). [?]

**ತೊರಕೆ** (ನಾ). (ಕರಾ) ಒಂದು ಬಗೆಯ ವಿಮಾನು. [←ತುಳು. ತೊರಕೆ]

**ತೊರಕೆಬಲೆ** (ನಾ). (ಕರಾ) ಒಂದು ಬಗೆಯ ಬಲೆ ; ತೊರಕೆಮೀನು ಹಿಡಿಯುವ ದೊಡ್ಡ ಕಣ್ಣಿನ ಬಲೆ. [ತೊರಕೆ + ಬಲೆ₁]

**ತೊರಟೆ** (ನಾ). ಗಡ್ಡೆ ; ಮುದ್ದೆ ; ಗರಣೆ : ಕೇಕರಿಸಿ ಉಗುಳಿದರೆ ತೊರಟೆ ಯಾಗಿ ರಕ್ತ ಬಾಯಿಂದ ಬೀಳುವುದು (ವೃದ್ಯಸಾ. I. ೮೩). 'ಕೊರಟೆ' ಪರಾ. [?]

**ತೊರತಿ** 'ತೋರತ್ತಿ' ನೋ.

**ತೊರತೆ** (ನಾ). ಜಿನುಗುವಿಕೆ; ಒಸರುವಿಕೆ; ಒರತೆ: ಮಳಮೂತ್ರಾಂಗಮನೇ ತನು ಕೊಳೆ ನೆತ್ತರ ಬಱಿಯ ತೊರತೆ[ಪಾಠಾಂ. ಬರಿಯ ತೊಱತೆ]ಯೋನಿಯ ತಾನೆಂದೆರಸದೆ ಲಲನಾಸಂಗಮನುಱದಿರ್ದಂ ಬ್ರಹ್ಮಚಾರಿ ವಿಜಿತವಿರಾಜಂ (ಶಾಂತೀಶ್ವ. ೧೩-೭೩). [ತೊರೆ₂ + – ತೆ₃]

**ತೊರತ್ತಿ** 'ತೋರತ್ತಿ' ನೋ.

**ತೊರನಿ** (ನಾ). ಒಂದು ಬಗೆಯ ಸಸ್ಯ : (ವೃಶಿಗಿ. ೭೮-೧೬೦೭).

[?]

**ತೊರಮರ** (ನಾ). ಒಂದು ಸ್ಥಳದ ಹೆಸರು : ತೊರಮರವಿಷಯೀ ಚಿತ್ರಸೇದುಗ್ರಾಮಮಧಿವಸತಿ (ಇಅ. XIX, ೧೫೦-೧೯ ; 692).

[?]

**ತೊರಲೆ** (ನಾ). ಒಂದು ಬಗೆಯ ಮರ: ಸರಲೆಯಿಂ ಹಾಲೆಯಿಂ ಹೀಲೆಯಿಂ ನೀಲಿಯಿಂ ತೊರಲೆಯಿಂ ಹೊಂಗೆಯಿಂ . . . ಕಾಡೆಸೆದುದು (ಸಂದಿಮಾ. ೧೩-೧೨). [?]

**ತೊರವಿ** 'ತೊಱವಿ' ನೋ.

**ತೊರಸು** 'ತೊಱೆಯಿಸು' ನೋ.

**ತೊರಳಿ** 'ತೊರಳೆ' ನೋ.

**ತೊರಳೆ, ತೊರಳಿ, ತೊಳಲೆ, ತೊಳ್ಳೆ** (ನಾ). ಗುಲ್ಮ ; ಪ್ಲೀಹ : ಸರಳರ್ಚಿ ನರಳುತ್ತ ತೊರಳೆಯುಡಸಲು ಮೂಗನರಳೆಸೆಚ್ಚೆಂಬ ಹೊತ್ತು ರುಳ್ಳ ಕಂಬನಿಯಿಂದ ತರಳೆಚಿತ್ರದ ಹಂದಿ ಮರಳಿ ಕಾನನಕೆಯ್ದಿತು (ಹಜಕಾ. ೭-೩೦) ; ಕೊಳ್ಳಿಗಿಡಿ ತಾಗಲ್ಕೆವೊಯ್ದು ಬೀಟ್ಟ ಬೆಳ್ಳಿರಳೆಗಳಿಂ ಉರಿಯಟ್ಟೆ ಪರಿಪರಿದು ತೊರಳೆವಾಯ್ದುರುಳ್ವ ಮರೆವಿಂಡುಗಳಿಂದ . . . ಸರ್ವಾಂಗವಂ ಕರ್ಚಿರ್ಗೆ ಸುತ್ತ ಕೊರ್ಬಿದೊಡಲಂ ಬದುವ ಪರ್ಬಾವುಗಳಿಂದ ಗುರ್ಬುವೆತ್ತುವು (ನಳಚಂ. ೫೮೮ ವ) ; ತೊರಳೆಯ ತೊಂಗಲಿನೊಳಂದೆಸೆವ

ಚಕ್ರವ ನೋಡಿದನು ದೈತ್ಯಾರಿ ಕೋಪದಲಿ (ಶುಭ್ಯಾ೦ಳೀ. ೬-೩೩) ; ಪೊಸ ತೊರಳೆಗಳ ದಂಡೆದೊಂಡಲ್ಗಳಂ ಮುಡಿದುಮಲ್ಗಳ ತೊಡಂಗಳನೆ ತೊಟ್ಟು (ಚಂಪೂ. ೩೩-೨೦) ; ತೊರಳೆ ತೊಂಗಳೆ ಮಜ್ಜೆ ಮಾಂಸಗಳನು ಸವಿದು (ಶಂಸವಿ. ೧೫-೫೩) ; ಕಡಿದು ಬಡಿದು ಕುಂದರಿಯೊಟ್ಟುವೆನು . . . ಬಂದವರೊಡಲ ತೊರಳೆ ಮಾಂಸಂಗಳಂ (ಶ್ರೀರಾಮಾ. ೬೮೫-೩೮೭). 'ನಿಡುದೊರಳೆ' ಪರಾ. ತೊರಳೆ: ಹೊಂಡೆಯದ ತೊರಳೆಗಳ ಕೊರಳಿನ ತುಂಡುಗಳ ಕಾಲಾಂತಕನ ಹೆಚ್ಚಿಳಸು ಹುಲುಸಾಯ್ತು (ಶುಭ್ಯಾ೦ಳೀ. ೯-೧೩). ತೊಳಲೆ: ಕಣೆವೋದ ಕಣೆಕಾಲ್ಗಳುಂ ಕೊಬಡು ಬೀಟ್ಟ ತೊ[ಹಾಕಾಂ. ಕೊ] ಳಲೆಗಳುಂ ಬಟ್ಟಲು ಕಟಲ್ದ ಮೊಣಕಾಲ್ಗಳುಂ . . . ಮಹಾಭಯಂ ಕಾರಮಾಗೆ (ಮಹಾನೀ. ೧೨-೫೪ ಪ). ತೊಳ್ಳೆ : ನನಗೇಕೋ ತೊಳ್ಳೆ ನಡುಗುತಿದೆ (ಚಂದ್ರಸ. ೨೪-೨೦) ; ನಾನೂ ಗಟ್ಟಿಯಾಗಿ ಕೂರಾಕೆ ಪರ್ಯತ್ನ ಮಾಡಿದೆ, ಆಗಲಿಲ್ಲ, ತೊಳ್ಳೆ ನಡುಗಾಕೆ ಸುರುವಾಯ್ತು (ಮಲೆಮ. ೩೦೩). [ ದೇ.೫ ತುಳು. ತೊಳ್ಳೆ = ಬೊಜ್ಜುಹೊಟ್ಟೆ ]

ತೊರಿಗ (ನಾ). ಒಂದು ಬಗೆಯ ಕೀಟ: ದುಂಬಿ, ಹಸುರುದುಂಬಿ, ತುಡುವೆ, ತೊರಿಗ (ನಮ್ಮನು. ೨೪೧). [ ? ]

ತೊರೆ$_1$ 'ತೊಱೆ$_1$' ನೋ.

ತೊರೆ$_2$ (ಕ್ರಿ). ೧. ಮೊಲೆಯಲ್ಲಿ ಹಾಲು ತುಂಬಿಕೊಳ್ಳು, ಕೂಡಿಕೊಳ್ಳು: ಕಳಮಾಕ್ಷತಚೂರ್ಣಂ . . . ಏರ್ಮೆಯ ಪಾಲಿಂ ಕಲಸಿ ಕುಡಿಯಿಸುಗೆ ತೊರೆಗುಂ ಮೊಲೆಗಳ್ ಬಾಣ(ಳ)ಂತಿಗೆಚ್ಚು ಪಾಲ್ ಪಾಯ್ವಿನೆಗಂ (ಲೋಕೋಪ. ೯-೧೮೨). ೨. ಮೊಲೆಯಿಂದ ಹಾಲು ಸ್ರವಿಸು,-ಸುರಿಸು: "ತೊರೆ-ಸ್ತನ್ಯೇ (ಎದೆಹಾಲು ಸ್ರವಿಸು)"(ಶಮಧಾ); ತೊರೆದುದು ಕಾಮಧೇನು ತುಱುಗಲ್ಗೊನೆವಣ್ಣಾದುದು ಕಲ್ಪವೃಕ್ಷಂ (ಹಂಪಭಾ. ೧೪-೨೦); ತೊರೆದ ಕುಚಕಲಶದಿಂದಂಬಿಱಿವಿಟ್ಟೊಗೆತಂದ ಪಾಲ ಧಾರೆಯಿಂ (ಅಜಿಪು. ೫-೫೬); ಬಜಡಿಯ ಕೈಯಲ್ಲಿ ಮಕ್ಕಳಿದ್ದಡೆ ತೊರೆವುದೆ ಮೊಲೆ (ಪೋಶಿವಾ. ೨೫-೧೦೦) ; ಕುಮಾರನನಜಿತಸೇನಮಹಾದೇವಿ ನಲ್ಮೆರಕೆಯಿಂ ಪರಸಿ ಮೋಹರಸಪರವಶತೆಯಿಂ ತೊರೆದ ಮೊಲೆಗಲಕ್ಕೆ ತೆಗೆದು (ಚಂದ್ರಪು. ೬-೯೦ ಪ); ತೊರೆದೆಚ್ಚು ಪಾಯ್ವ ಮೊಲೆವಾಲಿಂ ಮಗನಂ ಮಜ್ಜನಂಬುಗಿಸಿ (ಅರ್ಧನೇ. ೮-೨೦ ಪ) ; ಹೆತ್ತ ತಾಯ ಮೊಲೆ ತೊರೆಯೆ (ನಂದಿರ. ೮-೩೬); ಧರಣಿಯೊಳು ಬಸವಂಗೆ ಸರಿ ಮೊಲೆ ತೊ[ಹಾಕಾಂ. ಸೊ]ರೆದು ಕಱು ವಂತಾಯ್ತು (ಬಸಪು. ೫೬-೮೩) ; ದೊರೆಯಬಹುದೆ . . . ಎರೆದು, ಹೊಟ್ಟೆ ಎದೆಹಾಲು ತೊರೆವ ಪಾದೋದಕ ಪ್ರಸಾದ ? (ನಲಮು. ೩೬-೨). ೩. ಒಸರು ; ಜಿನುಗಂ; ತೊಟ್ಟಿಕ್ಕು: ಕಾಡ ವಂದಿಗಳ ಬಲ್ಮೆನದಿಂ ಪೊಲಸಂಟೆ ನಾರ್ವ ಜೇವಡೆಗಳ ಪುಣ್ಗಳಿಂ ತೊರೆವ ನೆತ್ತರ ಕೆಯ್ ನಡುಗಲ್ಕೆ ನೀಡಿ ಕೀಳಡಿಯಿಡೆ ಗಂಟಲಂ ಮುಱಿದನೊರ್ವೆಯ ನಿರ್ಘೃಣನೆನ್ನ ತಂದೆಯಂ (ಕಾದಂಪೂ. ೧೮೪) ; ಹಿಂಗದೆ ನೋಳ್ಪವರ ಕಂಗಳ್ ತೊರೆಯೆ (ನಂದಿರ. ೮-೩೬) ; ತೊರೆದುದು ಚಂದ್ರಕಾಂತಮಣಿ . . . ನೆಟ್ಟನೊಗೆಯಲ್ ಬಗೆದಂದೊಡೆ ಚಂದ್ರಮಂಡಲಂ (ಅನಂಪು. ೬-೬೬); ತೊರೆದುದು ಚಂದ್ರಕಾಂತಂ ಎಣೆವಕ್ಕಿಗಳಪ್ಪ ಸಡಿಲ್ದುವು (ಸೂಕ್ತಸು. ೮-೨೦೧) ; ತೊರೆದು ತೊಟ್ಟಿಡುವ ಪ್ರವಾಳಾಧರವ ಚುಂಬಿಸಿದ (ಪೋಹಟ. ೧೮-೯೦). ೪. ಜಿನುಗಿಸು ; ಒಸರುವಂತೆ ಮಾಡು : ತೊರೆಯುತ ಮೊರೆಯುತ ಸುರಿಯುತ ರಕ್ತವ . . . ಅರಿಪೆಣಗಳು ಲೆಕ್ಕವಿಲ್ಲದೆ ನೋಟಕಚ್ಚರಿಯ ಪುಟ್ಟಿಸುತೊಪ್ಪಿದುವು (ಶಂಸವಿ. ೧೫-೬೦). ೫. ಹರಿ; ಪ್ರವಹಿಸು: ಬೆಟ್ಟ ಸುರಿವುದು ಕೊಳ್ಳಕ್ಕೆ, ಕೊಳ್ಳ ತೊರೆವುದು ನದಿಗೆ (ಹೃದಸ. ೫೮-೧೨). ೬. ವ್ಯಾಪಿಸು ; ಹರಡು : ಸರಸಿಜಾಕ್ಷಿಗೆ ತತ್ಸುರತಾಂತ್ಯದ ಕೆಂಪು ತೊರೆದ ಕಣ್ಗಡೆಗಳೊಪ್ಪಿದವು (ಶ್ರೀಪಾಲ. ೯-೩೮). ೭. ಪುಷ್ಟವಾಗು ; ದಪ್ಪವಾಗು : ಕಿಱುಗಾಯ್ಗಳಿಂ ತೊರೆದ ದೋರೆಗಳಿಂ ತನಿವಣ್ಣ ಪಂಕ್ತಿಯಿಂದಂ . . . ಚಪ್ಪರಿಪ ರಾಜಶುಕಾಳಿಯಿನಾಮ್ರಮೊಪ್ಪುಗುಂ (ಗೀಕ. ೨-೩೩). ೮. ಉಂಟಾಗು: ಪಾರಿವಪಕ್ಕಿಯನರವಿಂದವಿಲೋಚನೆ ಕರವಿನ್ಯಾಕ್ಷಿಸಿ ತೊರೆದ ಮಱವೆಯಿಂದವೆ ಮಣಿಗದ್ದುಗೆಯೊಳ್ ಮೆಯ್ಯಿಕ್ಕಿದಳು (ಅಜಿಪು ಶಾ. ೧೨-೨೫). 'ಸೊರೆ$_1$' ಪರಾ.

[ ದೇ.೫ ತಮಿ. ಚುರ ; ಮಲ ಚುರ, ಚೊರಿಯು , ತೆಲು. ತೊರಗು, ತೊರುಗು ]

ತೊರೆ$_3$ 'ತೊಱೆ$_2$' ನೋ.

ತೊರೆಂಗುಳ 'ತೊಱೆಯಿಂಗುಳ' ನೋ.

ತೊರೆಕರೆ 'ತೊಱೆಗರೆ$_1$' ನೋ.

ತೊರೆಗರೆ (ಕ್ರಿ). (ಮೊಲೆ ತುಂಬಿ) ಹಾಲನ್ನು ಸುರಿಸು : ಕರುವಿನ ಕರೆ ಕೇಳಿ ತೊರೆಗರೆಯುದ ಹಸು ಇರಬಹುದೇನಲ್ಲಿ (ಸೂರ್ಯಪಾ. ೮೨-೧).

[ ತೊರೆ$_2$ + ಕರೆ$_2$ (< ಕಱೆ$_1$) ]

ತೊರೆಗರೆಯಿಸು (ಕ್ರಿ). ಹಾಲನ್ನು ಸುರಿಸುವಂತೆ ಮಾಡು : ಬಂಜೆಗೆ ತೊರೆಗರೆಯಿಸಿತ್ತು ಈ ಮುಖರಸ (ಉದ್ಯಾಕ. ೧೦೬-೯).

[ ತೊರೆಗರೆ + – ಇಸು$_3$ ]

ತೊರೆದವನ 'ತೊಱೆದವನ' ನೋ.

ತೊರೆಬಿಡಿಸು (ಕ್ರಿ). = ತೊರೆಗರೆಯಿಸು : ರಾಧಾಕಾಕೂ ಅವರೇ ಕೆಚ್ಚಲಿಗೆ ಕೈಹಾಕಿ ತೊರೆಬಿಡಿಸಬೇಕೆಂದಿಲ್ಲ (ರೀಪಹ. II, ೩೬೦).

[ ತೊರೆಬಿಡು + – ಇಸು$_3$ ]

ತೊರೆಬಿಡು (ಕ್ರಿ). ೧. = ತೊರೆಗರೆ : ಕಾಮಧೇನು ತೊರೆಬಿಟ್ಟಂತೆ ಅಂದು ಧರ್ಮಾಮೃತವನ್ನು ಹರಿಸಿದರು (ದಾನಚಿಂ. ೧೦೮). ೨. ಜಿನುಗು ; ಒಸರು: ಮೃಗಶಿರದ ಮಂಚಿಕೆ ಚಂದಿರ ಬರುವಾಗ ಚಂದ್ರಿಕೆಯ ವಾತ್ಸಲ್ಯ ತೊರೆಬಿಟ್ಟಿತ್ತು (ಸಹೇಗೀ. ೨೨-೩೬೨) ; ಆತ್ಮಾನುಬಂಧ ಆನಂದದಿಂದ ತೊರೆಬಿಟ್ಟು ತುಟಿಗೆ ಚಿಮ್ಮಿ (ಮುಳ್ತೆಂ. ೧೬-೫). 'ಸೊರುಬಿಡು' ಪರಾ. [ ತೊರೆ$_2$ + ಬಿಡು$_1$ ]

ತೊರೆಮಾವು 'ತೊಱೆಮಾವು' ನೋ.

ತೊರೆಮೆಂತೆ (ನಾ). ಹೊಳೆಯ ತಡಿಯಲ್ಲಿ ಬೆಳೆಯುವ ಒಂದು ಬಗೆಯ ಸಸ್ಯ : (೩). [ ತೊರೆ$_3$ (< ತೊಱೆ$_2$) + ಮೆಂತೆ (< ಮೆಂತೆಯ) ]

ತೊರೆಯ 'ತೊಱೆಯ' ನೋ.

ತೊರೆಯಿಟುಪು (ಕ್ರಿ). ಹಾಲು ಸುರಿಸು ; ತೊರೆಗರೆ ; ಸೊರಬಿಡಂ : ಆ ತುಱು . . . ಮೊಲೆಯುಣವಂದ ಕಱುವಿನ ಮೆಯ್ಗಂಪಂ ಸವಿದು ತೊರೆಯಿಟುಪಲೊಡಂ (ಚಿಕಪಂ. ೬೮-೧೪).

[ ತೊರೆ$_2$ + ಇಟುಪು$_3$ (< ಇಟಿಪು) ]

ತೊರೆಯೊಳ್ಕು (ಕ್ರಿ). ನದಿಯಂತೆ ಹರಿ,-ಪ್ರವಹಿಸು : ಅಶ್ರು...ಅಕ್ಷೀಣ ಸೋರ್ವ ಅನವರತ ರಸಧಾರೆಯೋಲ್, ತೊರೆಯೊಳ್ಕಿದುದು ಹನುಮ ನಕ್ಷಿಯ ಕೃತಜ್ಞತಾಶತಪತ್ರದಿಂ (ಶ್ರೀರಾಮಾ. ೪೭೮-೧೧೨).

[ ತೊರೆ$_3$ (< ತೊಱೆ$_2$) + ಒಳ್ಕು$_0$ (< ಒಟ್ಕು$_1$) ]

ತೊರೆವಳ್ಳಿ 'ತೊಱೆವಳಿ' ನೋ.

ತೊರೆಹ 'ತೊಱೆಹ' ನೋ.

ತೊರೆಹಾಲು (ನಾ). (ಮೊಲೆಯಿಂದ) ಹೊರಸೂಸುವ ಹಾಲು : ಕಂಬನಿ, ತೊರೆಹಾಲು, ಬೆವರು, ರಕ್ತ, ವೀರ್ಯ ಮೊದಲಾದ ರಸಭೇದಗಳು ಬೇರೊಂದು ರಸನೆಯ ಪ್ರವಾಹಗಳಾಗಿವೆ (ಸಾಹಿವಿ. ೧೦).

[ ತೊರೆ$_2$ + ಹಾಲು$_1$ (< ಪಾಲ್$_1$) ]

ತೊರ್ತು 'ತೊಟ್ತು' ನೋ.

ತೊರ್ತುವೆಸ 'ತೊಟ್ತುವೆಸ' ನೋ.

ತೊರ್ತುವೆಸಗೆಯ್ 'ತೊಟ್ತುವೆಸಗೆಯ್' ನೋ.

**ತೊಲ** 'ತೊಲ್ಕೆ$_3$' ನೋ.

△ **ತೊಲಂಗಿಸು** 'ತೊಲಗಿಸು' ನೋ.

△ **ತೊಲಂಗು** 'ತೊಲಗು$_1$' ನೋ.

**ತೊಲಗಿಕೆ** (ನಾ). ೧. ಅಗಲುವಿಕೆ ; ದೂರವಾಗುವುದು ; ವಿಯೋಗ ; ವಿರಹ : ಆರಯೆ ರತಿಯಿಂದಂ ಶೃಂಗಾರಂ ಸ್ತ್ರೀಪುಂಸಯೋಗದಿಾ ತೊಲಗಿಕೆಯಿಂ ಸಾರಂ ಸಂಭೋಗಂ ಶೃಂಗಾರಂ ಸವಿಯೆನಿಪ ವಿಪ್ರಲಂಭ ಸಮಾಖ್ಯಂ (ರಸರ. ೧-೧೪ ಸೂತ್ರ). ೨. ನಾಶ ; ಅಳಿಯುವಿಕೆ : "ಧ್ವಂಸಃ, ಧ್ವಂಸಃ, ಧ್ವಂಸಾ, ಧ್ವಂಸನಂ, ಧ್ವಂಸನೀಯಂ, ಧ್ವಸ್ತಿಃ ಈ ೬ ತೊಲಗಿಕೆ" (ಕಾಶಕ್ಕ. ೧೩೨). [ ತೊಲಗು$_1$ + – ಇಕೆ ]

**ತೊಲಗಿಸು**, ತೊಲಂಗಿಸು (ಕ್ರಿ). ೧. ದೂರ ಸರಿಸು; ಅಗಲಿಸು ; ದೂರ ಮಾಡು : ಪಲಕಾಲಂ ತಪದಿಾದಂ ಚಲದಿಂ ಸಂದಿರ್ದ ನಿನ್ನ ನಚ್ಚಿನ ಮುನಿಯಂ ತೊಲಗಿಸಿದೆನೊಂದು ವಚನದಿಂ (ಧರ್ಮಾಮೃ. ೨-೨೨೬); ನಿದ್ದೆಯಂ ತೊಲಗಿಸಿದಂಚೆವೆಣ್ಣೆಸೆವ ಗಾಂದವದಿಂ ದನಿದೊಂಗಲೊಳ್ ತಡಂಗಲಿಸಿ (ಚಂದ್ರಪ್ರ. ೮-೯೬) ; ಒಯ್ಯನೆ ನುಡಿಗಲಿಯಲೆಂದು ಬಂದ ಪುರುಳಿಗಳನಾಳಿಯರಿಂದೆ ತೊ ಲ ಗಿ ಸು ತ್ತೆ (ಚಬಪು. ೭-೧೪). ೨. ಇಲ್ಲದಂತೆ ಮಾಡು ; ನಿವಾರಿಸು ; ಕಳೆ ; ಪರಿಹರಿಸು : ಜಡಧಿ ಸಂಗತಿಯಿಂ ಜಡಬುದ್ಧಿ ಬುದ್ಧಿಯಂ ತೊಲಗಿಸಿತಕ್ಕುಂ (ಪಂಪಭಾ. ೯-೪೪); ಮನಕ್ಕೆ ಸಂಕೆಯನ್ನೊಲಗಿಸಿದಂ (ಶಾಇಆ. XI-I, ೪೧-೩೬; 969); ಕರದೀಪಿಕಾನಿಕಾಯಂ ತರದಿಂದಂ ಮುಂದೆ ತೊಲಗಿಸುತ್ತಿರೆ ಕಕ್ಷ್ಯಾಂತರ ತಿಮಿರಮಂ (ಕಾದಂಪೂ. ೩೯೨) ; ದಿನಕರನ ಹಯಂ ಗಗನಾಧ್ವಖೇದಮಂ ಪಟಯಿಗೆಗಳ ತಣ್ಣೆಲರ ತೀಟದಿಂ ತೊಲಗಿಸುಗುಂ (ಪಂಚಾಮಾ. ೧-೧೧೬) ; ಇಳೆಯೊಳೆಸೆವ ಭವ್ಯಜನಗಳ ಚಿತ್ತದ ಮಳವಸಿರದೆ ತೊಲಗಿಸುವಾ . . . ಶ್ರುತಕೀರಿತಿಗಳಿಗೊಲಿದಾನೆಱಗುವೆನು (ಅಂಜಚ. ೧-೩೩); ಗಾರುಡಮಂತ್ರ ಸಂಸ್ಕಾರವಿವಶದಿಂದಾ ... ವಿಷ ತೊಲಗಿಸುವುದಾತಂಗೆ (ಬಸಪು. ೪೭-೩೦); ಭಕ್ತರ್ಗೆ ಮನ್ಮನದ ಚಲನೆಮಂ ತೊಲಗಿಸಿ ಶಿವಾಂಘ್ರಿಯೊಳ್ ಬೆಚ್ಚಂತೆ ನಿಲಿಸುಗೆಂದಾಂ ವಂದಿಪೆಂ (ಪದ್ಮರಾ. ೧-೧೦); ಪಗೆಯಾದ ಪಗಲಂ ತೊಲಗಿ ಪಂಧಕಾರಮೆನಲು (ಜೈಮಿಭಾ. ೨೮-೪೦) ; ಒಳವಿರ್ದ ವಿಟರ ಸೋಕಿದ ಕಾಮಗ್ರಹವನು ತೊಲಗಿಸುತಿಹರಂಗನೆಯರು (ಕಂಸವಿ. ೨-೧೦೦). ; ನಿಮ್ಮೊಳು ಭೇದವ ಗೈಯುವ ಬುದ್ಧಿಯ ತೊಲಗಿಸಿರಿ (ಸನಲ್ಲ. ೧೧೮). ೩. ಎಸೆ ; ತ್ಯಜಿಸು ; ಕಳಚು ; ತೆಗೆದಂಹಾಕು : ತ್ರಿಸಾಕ್ಷಿಕನಾಗಿ ವಸ್ತ್ರಾಭರಣಮಾಲ್ಯಾದಿಗಳಂ ಮೆಯ್ಯಿಂ ತೊಲಗಿಸಿ ಪೂರ್ವಾಭಿಮುಖನುಂ ನಿಬಿಡಬದ್ಧಪಲ್ಯಂಕಾಸನನುಮಾಗಿ (ಆದಿಪು. ೯-೭೭ ವ); ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದು ವಸ್ತ್ರಾಭರಣಾದಿಗಳಂ ತೊಲಗಿಸಿ ... ದೀಕ್ಷೆಯಂ ಕೈಕೊಂಡಂ (ಚಾವುಂಪು. ೩೭); ನೆಲಸಿರ್ದ ವಾಸ್ತುಪುರುಷನ ತಲೆ ಹೃದಯಂ ನಾಭಿಪಾದಮೆಂಬಿವಱೆಯಂ ತೊಲಗಿಸಿ ಮುಂದಣ ಮೆಯ್ಯೊಳ್ ನಿಲಿಸುಗೆ ಕಂಭಮನಂ (ಲೋಕೋಪ. ೩-೨೫) ; ತೊಲಗಿಸಿ ಭೂಷಣಪ್ರತತಿಯಂ . . . ಬಟಲ್ದು ತೊಟಲ್ದು ಜಾನಿಪಳ್ (ಜಗವಿ. ೧೧-೨೩) ;ತನುಗುಣಂಗಳ ನುಳಿದುಳಿದು ಧಿಕ್ಕನೆ ತೊಲಗಿಸುತ ಸಾನುರಾಗಂ ಕೊನರ್ದು ಕೊನರ್ದಾ ಶಿವಶರಣರಂ ಕಂಡು (ಬಸಪು. ೩೫-೩). ೪. ತಳ್ಳು; ನೂಕು; ಸರಿಸು: ಮುಂದಣ ಮಾನಸರಂ ಪಡಿಯಱರ್ ತೊಲಗಿಸುತ್ತಂ ಬರೆ (ಪದ್ಮಾರಾ. ೮೦-೧೪) ; ತೊಲಗೆನೆ ಬಟ್ಟೆಯಿಂ ತೊಲಗಲಾಱನಶಕ್ತನೆನಾರ್ಪೊಡೆನ್ನನಿಂ ತೊಲಗಿಸಿ ಪೋಗು ನೀನೆನೆ (ಪಂಪಭಾ. ೮-೩೨); ಕಲಶಮನೆತ್ತಿ ನೀರೆಱೆವ ಕಾಂತೆಯ ತೋಳ ಕೆರಳ್ಕೆ ಮೇಲುದಂ ತೊಲಗಿಸೆ (ಚಂದ್ರಪ್ರ. ೧-೯೮) ; ತೊಲಗಿಸಿ ಮೇಲುದಂ ಬೆಮರ ಬಿಂದುಗಳಂ ತವೆ ಪೀರ್ದು ... ಮನ್ಮಥ ಜಯಾದಿ ಪುನಃಪ್ರಿಯನಂತೆ ಸಾರ್ದದೇಂ ತಳೆದುದೊ ಕಾಂತೆಗುಣ್ಮಿದ ರತಿಕ್ರಮಮಂ ನವಮಂದಮಾರುತಂ (ಮಲ್ಲಿಕಾ. ೪-೧೯೮) ; ನಿಳಯಮಂ ಪೊಱಮಟ್ಟು ಬರಲತಿಬಳವೃಷಭ ಕೆಲವುತ್ತ ಮಂದಿಯ ತೊಲಗಿಸುತ ಮುಂದೆಸೆಗೆ ದಾರಿಯ ತೋಱ ನಡೆವುತಿರೆ (ಬಸಪು. ೬೧-೨೩). ೫. ಮರಳಿಸು ; ಹಿಂದಕ್ಕೆ ಸರಿಸು ; ಹಿಂದಿರುಗಿಸು ; ಹಿಮ್ಮೆಟ್ಟಿಸು : ರಾಯನನು ತೊಲಗಿಸಿದರಾ ಕರ್ಣಾಯತಾಸ್ತ್ರರು (ಕುಮಾದ್ರೋ. ೫-೨೪) ; ಕಂಗಳ ಬಳೆ ಮರಳಿ ಬಸವಳಿಯೆ ಸಾರಥಿ ತೊಲಗಿಸಿದನಾ ರಥವನು (ಕುಮಾದ್ರೋ. ೫-೩೩) ; ಸಂದಣಿಸಿ ದಳ ನೂಕಿಕೊಂಡೈತಂದುದಿದು ರವಿಸುತನ ತೊಲಗಿಸಿ ಮುಂದೆ ಮೋಹರದೆಗೆದು ಮೂದಲಿಸಿತು ಮರುತ್ಸುತನ (ಕುಮಾಕ. ೧೩-೨೫). ೬. ಚೆದರಿಸು ; ಚೆಲ್ಲಾಪಿಲ್ಲಿ ಮಾಡಂ : ಹವ್ಯವಾಹನಸಖಂ ತೊಲಗಿಸುವ ಬಹಳ ಮೇಘವ್ಯೂಹಸಂಘಾತದೊಡ್ಡವಣೆ ಮುಱಿವುದೆ ಕೃತತ್ಯಜನವಾತದಿಾದ (ಜೈಮಿಭಾ. ೧೩-೯). ೭. ಕತ್ತರಿಸು ; ತುಂಡಂಮಾಡು : ಕಾಂಭೋಜಭೂಪನ ಮಕುಟಮಸ್ತಕವ ಕೊರಳ ತೊಲಗಿಸಿ ಮುಂದೆ ನೂಕುವ ವರಶ್ರುತಾಯುವಿನೊಡನೆ ಘನಸಂಗರಕೆ ತೆಗೆದನು (ಕುಮಾದ್ರೋ. ೧೦-೧೬). △ **ತೊಲಂಗಿಸು**: ೨. ನಿರಂತರ ಪಾರಮಾರ್ಥಸಚ್ಚಿಂತನೆಯಂ ತೊಲಂಗಿಸಿ (ಅಮಶ. ೫೫).

**ತೊಲತೊಲಗಿಸು** (ದ್ವಿರುಕ್ತಿ) : ವಿಲೋಚನೋತ್ಕೀರ್ಣಮುದಶ್ರು ಮಾಲೆಯಂ ಪಕ್ಷ್ಮಾಪಾಳಿನೀಜಾಲದಿಂ ತೊಲತೊಲಗಿಸಿ (ಕುಸುಮಾ. ೧೫-೧೧೩ ವ). [ ತೊಲಗು$_1$ + – ಇಸು$_3$ ]

**ತೊಲಗು$_1$**, ತೊನಗು, ತೊಲಂಗು (ಕ್ರಿ). ೧. ಸ್ಥಳವನ್ನು ಬಿಡು ; ಹೊರಟು ಹೋಗು : ನಿಲ್ಲದೆ ತೊಲಗಿದಿರೀದಂ (ಕವಿರಾ. ೩-೨೦೦) ; ತೊಲಗೆನೆ ಬಟ್ಟೆಯಿಂ ತೊಲಗಲಾಱನಶಕ್ತನೆನಾರ್ಪೊಡೆನ್ನನಿಂ ತೊಲಗಿಸಿ ಪೋಗು ನೀನೆನೆ (ಪಂಪಭಾ. ೮-೩೨) ; ಅಂತಃಪುರದ್ವಾರದೇಶದೊಳಿರ್ದ ರಾಜಲೋಕಮೆಲ್ಲಮುಂ ಸಂಭ್ರಮಂಬೆರಸು ತೊಲಗಲ್ (ಕಾದಂಪೂ. ೪೨೫); ಅಳಿಯನಂ ಕಂಡತ್ತೆಯಂತೆ ತೊಲಗುತ್ತುಂ (ಧರ್ಮಾಮೃ. ೪-೭೭); ಸಾರೆಂಬರಸಾಳ್ಗಳ ತೊಲಗೆಂಬ ಪಡಿಯಱರ ಮುಂಗುಡಿಯ ಕುರುಳ ಕೊಂತದ ವೀರವೃಂದದ ಕೋಳಾಹಳಂ ಬೆರಸಿ ಬಂದು (ಬಸರ. ೬-೮) ; ಜಡರುಗಳಿರಾ ತೊಲಗಿ ಭೋ ಎನುತ (ಬಸಪು. ೨೧-೧೦); ಮಂದಿ ತೊಲಗಲಿ ತೆಱಹುಗೊಡು (ಕುಮಾಅ. ೭-೮೬). ೨. ಅಗಲು ; ತೊರೆ ; ಬಿಟ್ಟು ಹೋಗು: "ತೊಲಗು – ವಿವಿಕ್ತೇ" (ಕಮಧಾ) ; ಎಲವೊ ದೇವೇಶನನೇಂ ಸೆಱೆವಿಡಿದೆ ತೊಲಗು ದೇವನ ಮಱೆಯಂ ಬಟೆಕಱೆಯಲಕ್ಕುಂ (ಪಂಪಭಾ. ೧೦-೧೨೧) ; ನಿಲೆ ನಿಜವಕ್ಷಸ್ಥಲವಜ್ರಲೇಪವಿಪುಲೋಪಲಪ್ರದೇಶದೊಳೆಂದುಂ ತೊಲಗದೆ ಸಾಮ್ರಾಜ್ಯಶ್ರೀಲಲನೆ ತಾಂ ನರೇಂದ್ರನಂ ಸುರೇಂದ್ರನಂ ಗೆಲೆವಂದಂ (ಮಲ್ಲಿಪು. ೩-೨೨) ; ಅಳಿಯನ ಕಂಡರೆ ನಾಚೆಂಬೆ ಮಗಳೆ ಅಳಿಯನ ಕಂಡರೆ ತೊಲಗೆಂಬೆ ಮಗಳೇ ನಾಚುವರೆ ಮೋಱೆಯಿಲ್ಲ ತೊಲಗುವರೆ ನೆಲನಿಲ್ಲ (ಬಸವ. ೯೧೨) ; ನಿನ್ನ ಕಣ್ಣೆಂಬಲಗಿನಲಿ ತನ್ನೆದೆಯ ನೋಯಿಸಿ ತೊಲಗಬಹುದೇ (ಕುಮಾವಿ. ೨-೨೦) ; ಸೋಲಿಸಿ ತೊಲಗಿ ಪೋದವನ ನಿಟ್ಟಿಸುವ ಸಲೀಲೆಯಿಂದೆದ್ದಳಾ ಕುವರಿ (ಪ್ರೋಪತ. ೨೮-೬) ; ಖಂಡಿತದಿ ಲಕ್ಷ್ಮಿ ತೊಲಗುವಳು ಶಿವನೊಲುಮೆ ಕಂಡುಕೊಳದಿರಲು (ಸರ್ವಜ್ಞ. ೨೪೮). ೩. ಅಗಲಿಸು ; ಬೇರೆಯಾಗಿಸು : (ಕ). ೪. ಜಾರು ; ಓರೆಯಾಗು: ಮನಸಿಜನೃಪಲೀಲಾಲಂಭನಂ ಸ್ವಸ್ತಿಕಂ ಸ್ತ್ರೀಜನದೊಳೆಸೆದು ನಿಂದತ್ಪುತ್ತರೀಯಾಂತರೀಯಂ ತೊನೆಯೆ ತೊಲಗಿ ನಿಂದಿರ್ದಲ್ಲಿ ತಂದಿತ್ತು ದುಚ್ಚಸ್ತನದೊಳಮರ್ದ ಹಸ್ತಸ್ವಸ್ತಿಕಂಗಳ್ ಬೆಡಂಗಂ (ಆದಿಪು. ೧೧-೧೫೨); ನಿಡುಸುಯ್ಯೆಲರಿಂ ಮೇಲುದು ತೊಲಗೆ (ಕಾದಂಅ. ೩೭) ; ಪೊದೆದ ಪೊಸದುಗುಲಂ ಕೆಲಕ್ಕೆ ತೊಲಗೆ (ಪರ್ಧಪು. ೧೩-೬೨ ವ) : ಮೊಲೆಗಳ ಮುಸುಕು ತೊಲಗಿದುದೆಂದೊ ಸರಸದ ನುಡಿಗಳಿನಿದೊಂದಿನಿತು ತಪ್ಪಿದಂದೋ (ಬಸಪು. ೪೩-೧೪). ೫. ಪಕ್ಕಕ್ಕೆ ಸರಿ ; ದಾರಿಯಿಂದ ಕದಲು ; ಅರುಗಾಗು : ನಿಮ್ಮ ಪಟ್ಟಣದಲ್ಲಿ ಹೊಲ್ಲ ಹನಸಗನೊಬ್ಬನಿ ಬಲ್ಲ

ಭಕ್ತನೆನುತ್ತ ಗರ್ವಿಸಿ ತೊಲಗನಾರಿಗೆಯುಂ (ಬಸಪು. ೨೦-೧೪) ; ನೀ ಕೃಪೆ ಮಾಡಿ ತನ್ನನು ಕಳುಹಬೇಹುದು ಸವ್ಯೋಳಿದಿರೇ ರಣಕೆ ತಾನೆನುತ ಸೆಳೆದ ಬಾಣವನಿಳುಹಿದರೆ ಗುರು ತೊಲಗಿ ಕೊಟ್ಟನು ಪದವನಹಿತಾವಳಿಗೆ ಸಾತ್ಯಕಿ ವೊಳಗಿದನು ಕಳಶಜನ ನೇಮದಲಿ (ಕುಮಾರವ್ಯಾ. ೧೧-೯). ೬. ಹಿಂದೆಗೆ ; ಹಿಂಜರಿ ; ಹಿಮ್ಮೆಟ್ಟು : ಗೆಲಲುಂ ಸಾಯಲುಮಾಱದೆ ತೊಲಗಿದೊಡೆ ನೆಗಟ್ಟಿ ತೋಱುಗುವೆ ಸಿರಿಮೆಯ್ಯಂ (ಗದಾಯು. ೨-೨೦) ; ಕೆಟ್ಟನೊಳ್ಳೊಲಗದೊರ್ಮೆಯೆ ಪಾಯಲಪ್ಪುದು (ಧರ್ಮಾಮೃ. ೦-೧೬೯) ; ಪುಲಿ ಬಂದು ಗರ್ಜಿಸುತ್ತಿರೆ ಕೆಲದೊಳ್ ಪಾವದರ್ದು ಕೂಡೆ ಸುತ್ತಲ್ ಮೆಯ್ಯಂ ತೊಲಗದೆ ಕೆಯ್ಯಿಕ್ಕಿರ್ದಂ (ನೇಮಿಪು. ೧-೧೫) ; ಕಾವಿನಿ ಬೆದಱಿದಳು ... ತೊಲಗಿ ಹಿಂದಡಿಯಿಡಲು ಕೀಚಕನಳುಕದ್ಯೆತಂದಬುಜವದನೆಯ ಬಳಿಗೆ ಬಂದನು (ಕುಮಾವಿ. ೨-೧೭); ತೊಲಗದೆ ನಿಂದ ವೀರನಂ ತಲೆಗಡಿದುರುಳ್ಚುವ ಮೂದಲಿಪ ವೀರನಂ ತೌದಲೆಗಾಣಿಪ ... ಕಟ್ಟಾಳ್ಗಳನಂಬೆತ್ತಂತೆ ಮೆಱೆದು ನೆರೆದ ಪದಾತಿವ್ಯೂಹದಿಂ (ರಾಜಶೇ. ೬-೧೧೫). ೭. ಹಿಂತಿರುಗು ; ಮರಳು : ಯೋಗವೈದ್ಯರು ಬಂದು ಮಂತ್ರಿಸಿ ನಾಗವಿಷದಿಂ ಮಡಿದ ರಾಯನನಾಗದಯ್ಯೋತವ್ಮ ಕೈಯಲೆನುತ್ತ ತೊಲಗಿದರು(ಬಸಪು. ೪೬-೨೩); ತೊಲಗಿರ್ಪ ಕಾಲಾಳು ಮೇಲಾಳಳವಿಗೊಡಲಿ ಮಹಾರಥರು ಮುಂಕೊಳಲಿ (ಕುಮಾರವ್ಯಾ. ೫-೯) ; ಸಪ್ಪಳಾಗದ ತೆಱದೊಳೆದ್ದು ಮೆಲ್ಲನೆ ಮಂತ್ರಿಸುತ ತೊಲಗಿ ಬರುತಿರ್ದಳ್ (ಜೈಮಿಭಾ. ೩೦-೨೯). ೮. ದೂಡು ; ಅಟ್ಟು : ನಿಜಮೋಹರವನಂದ್ಯನೂಱು ಬಿಲ್ಲಂತರಕೆ ತೊಲಗಿ ಮಂತ್ರವ ಜಪಿಸಿದನು ಪಾರ್ಥ (ಕುಮಾರವ್ಯಾ. ೯-೨೪). ೯. ಕಣ್ಣಿಗೆ ಕಾಣಿಸದಿರು ; ಅದೃಶ್ಯವಾಗಂ: ದಿವಸಕರ ಚಂದ್ರತಾರಾನಿವಹಂ ತೊಲಗಿರ್ದ ಗಗನವಿಸ್ತಾರದವೊಲ್ (ಕಾದಂಪೂ. ೬೮) . ೧೦. ಮುಳುಗು ; ಅಸ್ತವಾಗು : ನಾಳೆ ಪಡುವಣ ತರಣಿ ತೊಲಗದ ಮುನ್ನ ಕೊಲುವೆನು ವೈರಿ ಸೈಂಧವನ (ಕುಮಾರವ್ಯಾ. ೮-೩೫). ೧೧. ನಿವಾರಣೆಯಾಗು ; ಪರಿಹಾರವಾಗು : ಕೊಲಗಿದವು ಜನಮನದ ಬಲುಗತ್ತಲೆ (ಕುಮಾಉ. ೮-೫). ೧೨. ತೀರಿಹೋಗು ; ಮುಗಿದುಂ ಹೋಗು : ತೊಲಗದು ಪುಚ್ಛಕೋಟಿವರಿಸಂಖ್ಯೆವರಂ ಪರಮಾಯು (ಆದಿಪು. ೦-೫೨) ; ಮಬ್ಬು ಕ್ರಮೇಣ ಬೆಳೆಯುತ್ತಿದೆ; ಸಂಜೆ ತೊಲಗಿ ಇರುಳಾಗುತ್ತಿದೆ (ಜ್ಯೋತಿರ್ವಿ. ೨). ೧೩. ನಾಶವಾಗಂ ; ಅಳಿ : ತೊಲಗದ ಜವ್ವನಂ ತವದ ಮೆಚ್ಚು ಮರಲ್ಚುವ ನೋಟಮಟ್ಟಿಯಿಂ ಸಲಿಸುವ ಭೋಗಂ (ಆದಿಪು. ೫-೪೨) ; ತರಮಳಗಾಗದ ತನು ಪೆಪ್ಪಳಿಸದ ನೆಲೆ ತೊಲಗದಱಿವು . . . ತಮಗವರೆ ಮಡಿಪಿದರ್ ಮಣಿಚೂಳರ್ (ಶಾಂತಿಪು. ೬-೮೦) ; ಅಕ್ಕಟಿಂದಡಿಗಡಿಗೆ ನಿನ್ನಂ ತಕ್ಕವಿಸಲೆಂದಾಶಿಸುವ ಕರ್ಮಕ್ಕೆ ತೊಲಗುವುಪಾಯವಾವುದೊ ಹೇಳೆಕಟ ಕಾಯ (ಬಸಪು. ೪೫-೯); ಕೆಟ್ಟುದಪಮೃತ್ಯು . . . ನೆಲಗುಂದಿದಲ್ ಮಾರಿ ತೊಲಗಿತಘಚಯ (ಚಬಪು. ೪-೩೫). ೧೪. ಸೋತುಹೋಗು; ಸೋಲು: (ಕ).೧೫. ಕಳಚು; ಬಿಚ್ಚು : ಪರೆಯದ ಜವ್ವನಂ ತೊಲಗದಾಭರಣಂ ಸಲೆ ಮಾಸದಂಬರಂ . . . ಬಾಡಿರದ ಪೂಮುಡಿಯೊಪ್ಪುವ ದೇವಲೋಕಸುಂದರಿಯರನಿಂದ್ರಜಾಲಿಕ ನತೀವಮನೋಹರಮಾಗೆ ತೋಱಿದಂ (ದಶಕು. ೬-೧೩೮). ತೊನಗು : ೨. ಘನಭಕುತಿಯು ನೇಣನೆ ಮಾಡಿ ನಿನ್ನಾ ಚರಣಕೆನ್ನ ಕೊರಳಗೆ ಸನುರುಚಿಯಿಂದ ಗಂಟನೆ ಹಾಕಿಕೊಂಡು ತೊನಗದೆ ಬಿಡನೊ ನಿನ್ನನು ಎಂದೆಂದಿಗೆ (ಮೋಕ್ಷದೀ. ೨೦-೪). △ ತೊಲಂಗು : ೧. ಮಂತ್ರಿಪುತ್ರನ ಕಣ್ಣಱಿದು ವಿಳಾಸಿನೀಜನಂ ಕಾಮಸಂಚಾರಚ್ಚಲದಿಂ ತೊಲಂಗೆಯುಂ (ಲೀಲಾವ. ೪-೩೪ ವ); ಕುಲವಿಹೀನರು ಕನಿಷ್ಠರು ಕುಲಜರುತ್ತಮವುರುಷರೀ ನಾಲ್ವರು ತೊಲಂಗದೆ ಪೋಪ ಬಟ್ಟೆಗಳು (ಬಸಪು. ೪೦-೭೦). ೪. ಕೀಲು ತೊಲಂಗಿ ಡೊಂಕುಗಳೆಡೆಗೆಡೆಗೆ ನೆಲಗೊಂಡ ಕೈಕಾಲ . . . ಹೇಸಿಕೆಯು ನಾತವಧಿಕ ಭಯಂಕರವು (ಬಸಪು. ೪೭-೫೮); ಮೇಲುಂದಱ ಸೆಱಗಂ ತೊಲಂಗೆ ನೂಕುವ . . . ಭಾವೆಯರ್ ಬರುತಿರ್ದರು (ಚಬಪು. ೩೭-೪೩). ೫. ಸಮಸ್ತ ಭಕ್ತಾವಳಿಗಳಂ ನೃಪನೆಯ್ದೆ ಗಡಣಿಸಿ ಅಲಗನರ್ಚಿ ಕರದೊಳಮರ್ಚಿ ತೊಲಂಗಿ ನಿಂದಿರಲು (ಬಸಪು. ೩೩-೦೪). ೧೩. ನಯನಂಗಳಂ ಬಲುಹಿಂದ ತೆಱೆದುಱೆ ನೋಡಲಾ ಜಿನನ ಅಂಗವದು ಧಟಧಟ ಎನುತ್ತ ತೊಲಂಗಿ . . . ಕೆಡೆದಿರಲು(ಬಸಪು. ೫೦-೮೦) ; ಮಹಾಪುರುಷವರ್ಯನ ಕೃಪಾಪಾಂಗವು ಸಂಗಳಿಸೆ ಭವಭಾರಿಗಳ ದುರಾಚಾರಂ ತೊಲಂಗಿ ಸದ್ಗುಣವೊದಗುವುದು (ಕೊಟ್ಟೂಬ. ೩-೦೭) ; ವನಿತಾದಿ ವಿಷಯವ್ಯಾಮೋಹಂ ತೊಲಂಗುವದಿನ್ನು (ಮಲ್ಲಕ. ೧-೦೭).

ತೊಲ ತೊಲಗು (ದ್ವಿರುಕ್ತಿ) : ಪುಲಿ ಪುಲಿ ಪರಿ ಪರಿ ... ಮನವನಂಜದಂಜದೆ ತೊಲ ತೊಲಗೀ ಮೆಳೆಗೆ ಪುಲಿಯೆಂಬುದು ಧ್ವಾರ್ಗಂ (ಕವಿರಾ. ೨-೨೭) ; ಇರದೀ ಠಾವಿನಲಿ ತೊಲತೊಲಗೆನುತ ಸಿದಿಗೆಯನಿಳುಹವೇಳ್ದು (ಬಸಪು. ೩೨-೪೩) ; ತೊಲತೊಲಗು ಮನ್ಮಥನ ಹೊಗರಿಟ್ಟಲಗು ಬರುತಿದೆ (ಕುಮಾಅ. ೦೫-೩೩).

[ ದೇ.II ತುಳು. ತೊಲಗು, ತಲವು, ತೆಲಾವು ; ತೆಲು. ತೊಲಗು, ತೊಲಂಗು, ತೊಲುಗು ]

ತೊಲಗು$_2$ (ನಾ). ೧. ಮಲ್ಲಯುದ್ಧದ ಒಂದು ವರಸೆ ; ಹಿಡಿತದಿಂದ ತಪ್ಪಿಸಿಕೊಳ್ಳುವುದು : ಎಡ ಬಲದಲ್ಲಿ ಕೈಕಾಲು ಸಿರಸುಗಳ ಯತ್ನದಿಂದ ತೊಲಗುವದು ಅವದು ಅದು ತೊಲಗುಯೆಂಬುದು (ಮಲ್ಲಯು. ೪-೩೮). ೨. (ಬಾಣವನ್ನು) ನಿರೋಧಿಸುವ ಒಂದು ಬಗೆಯ ಸಾಧನ (?) : ಅಲಗಿನ ಮೞೆ ಉಳ್ಳವಂಗೆ ಶಸ್ತ್ರದ ಭಯವೇತಕ್ಕೆ ಬಾಣದ ತೊಲಗುಳ್ಳವಂಗೆ ಅಂಬಿನ ಘಾಯವೇತಕ್ಕೆ (ಮದೀವ. ೨೮೦-೪೧). [ <ತೊಲಗು$_1$ ]

ತೊಲಗೆ (ನಾ). ಒಂದು ಬಗೆಯ ಸಸ್ಯ : (ವೃಕ್ಷಜೀ. ೨೪-೪೪೩). [ ? ]

ತೊಲಿ 'ಟೊಳ್ಳು' ನೋ.

ತೊಲೆ$_1$ (ಕ್ರಿ). ತೊಲಗು ; ದೂರ ಸರಿ : ಜಾತಿಗೆಟ್ಟಾ ಹುಡುಗಿಯು ತೊಲೆದು ಹೊರಟುಹೋದಳೊ ? (ದೇವೀಜಾ. ೦೭).

[ ದೇ.II ತಮಿ. ತೊಲ್ಯೆ, ತುಲ್ಯೆ ; ಮಲ. ತುಲಯು ]

ತೊಲೆ$_2$ (ಕ್ರಿ). ೧. ತೂಗಾಡು ; ಜೋಲಾಡು ; ಒಲೆದಾಡು : ಅಲಘು ಕುಚದ್ವಯಂ ಕಚಭರಂ ತೊಲೆಯುತ್ತಿರೆ ಹಸ್ತಕಂಕಣಂ ಘಲಕೆನೆ . . . ವೊಸರ್ಕಡೆದರ್ಲತಾಂಗಿಯರ್ (ಮಲ್ಲಕಾ. ೪-೫೫).. ೨. ಅಲುಗಾಡಿಸಂ ; ಅಲ್ಲಾಡಿಸು : ಸಿಂಹಮಧ್ಯದ ಕನ್ನೆಯರು ತೋಳ್ಗಳಂ ತೊಲೆ[ಪಾಠಾಂ. ನೆ] ಯಲು (ಭಾವಚಿಂ. ೯-೫೮). [ <ತೊನ್ನೆ ]

ತೊಲೆ$_3$, ತೊಲ (ನಾ). ೧. ಮಾಳಿಗೆಗೆ ಅಥವಾ ಚಾವಣಿಗೆ ಆಧಾರವಾಗಿ ಗೋಡೆಗಳ ಮೇಲೆ ಅಡ್ಡಲಾಗಿ ಹಾಕುವ (ಮರದ) ದೂಲ: ಪವಳದ ಕಂಭಂ ಪಳಿಕಿನೆಸೆವ ತೊಲೆ ವಜ್ರದ ಮತ್ತವಾರಣಂ ಮುತ್ತಿನ ಮಂಡವಿಗೆ (ಸುಕುಮಾ. ೧೧-೪೫) ; ಆ ಮನೆಯ ನೋಡಲೆಂದು ಹೋದರೆ . . . ಅದಕ್ಕೆ ಕಂಭ ಒಂದು ತೊಲೆಯಾಱು (ಅವಕಂ. ೨೨೨-೧೦೦೮) ; ಮಱುಹುಲ್ಲೆ ಸಿಂಹದ ಮುಸಕಕಿದಿರೇ ಲತೆಯ ಎಳಗುಡಿ ಮಾಳಿಗೆಗೆ ತೊಲೆಯೆ (ಕುಮಾಭೀ. ೩-೮೪) ; ಆ ಲಲಿತಪಟ್ಟಿಗಳ ತೊಲೆ ರನ್ನ ಬೋದುಗೆಗಳಾ ಪ್ರವಾಳಂಗಳಿಂದೆ ಮೇಲೆಸೆವ ಜಂತೆಗಳ್ (ಚಬಪು. ೫-೪೮), ಎಲುಬುಗಳ ತೊಲೆಗಳಲಿ ಮಾಂಸದಾ ಮಣ್ಣಿನಲಿ . . . ಬಿಡುಗಡೆಯ ಸಿರಿಗುಡಿಯ ಮಸಣದಲಿ ಕಟ್ಟು ! (ಪಾಂಚಜ. ೮-೭). 'ಅಡ್ಡತೊಲೆ' ಪರಾ. ೨. ಮರದ ದಿಮ್ಮಿ : ನೀರ್ಗೆ ಬಾಗುವೇತದ ತೊಲೆ ಕೊಳ್ಳೆ ಕೊಳ್ಳದೆರಡುಂ ಕಡೆಯಿಂದಱಿಪುತ್ತವಿರ್ಪುದು (ಜೀವಸಂ. ೧೫೭-೧೪) ; ನೂರಾರು ತೊಲೆಗಳನು ತಂದಿಲ್ಲಿ ರಾಶಿಗ್ಯೆಯೆಂದನಗೆ ಕಟ್ಟಾಣೆಯ ಬೆಸಸಿ ಪೋದನ್ (ಬಿಗಾರ. ೫೫). ೩. ಯುದ್ಧದಲ್ಲಿ ಬಳಸುವ ಮರದ ದಿಮ್ಮಿಯಂಥ ಒಂದು ಬಗೆಯ ಸಾಧನ: ಹಾಯಿಕುವ ಗುಂಡು ಮೇಲುಱೆ

ಕೆಡಹುವ ತೊ[ಪಾಠಾಂ. ತ]ಲೆ . . . ಎಸೆದವು ದುರ್ಗದೊಳು (ಕುಂಠಸಾಂ. ೩೭-೫೩); ತೊಲೆಯುರುಳೆ ಕರಚರಣಮುಡಿದು ಕೆಡೆದರ್ (ಹಲಪು. ೬೨-೩೭); ತೊಲೆಗಳೊಳಗೆ ದಸಿಗಳ ಬೆಟ್ಟಿ ಲಂಭಿಪ ಬಲುಮೊಕಾಣರ ಮೇಲೆ ನೂಕೆ (ಕಂಸವಿ. ೧೯-೭೦). ೪. ಉಯ್ಯಾಲೆ: ಇತ್ತ ಹೊಂದೋರಣದ ತೊಲೆಯಲಿ ಅತ್ತಲಿತ್ತಲಾ ಹನುಮ ತಿರುಗಲಾ ಮುತ್ತಿತವರಾರಿಗಳು ಶಿಖಿಯನು ಶಲಭ ಕವಿವಂತೆ (ಕೌಶಿರಾ. ೧೧-೨೬). ೫. ಒಂದು ರೂಪಾಯಿ ನಾಣ್ಯದ ತೂಕ : " ಬೇಸಿಗೆ . . . ಐ ದಾ ಗೊ ೦ ದು ತೊಲೆ " (ಮಂಗರಾ. ೧೦೪-೧೧) ; ತೊಲೆ ಪದಿನಯ್ದುಱ ಬೆಣ್ಪೆಂದಿಲಾಧಿಪಂ ಪತ್ತು ತೊಲೆಯ ಬೆಣ್ಪಂ ಧನ್ಯಂ ತೊಲೆಯಯ್ದುಱ ಬೆಣ್ಪಂ ಸುಖಿ ಖಲನಿರ್ತೊಲೆವರೆಯ ಬೆಣ್ಪು ಸವನಿಸಿದಾತಂ (ಲೋಕೋಪ. ೧೧-೪೩) ; ವರ್ಷ ಸಿಬಂಧಿಯಾಗಿ ಹೂವಿನ ಪಡಿಗೆ ಜಾತಿಹವಳಕ್ಕೆ ತೊಲೆಗೆ ತಾ ೧ ಕರಿದಕ್ಕೆ ವೀಸ ೧ (ಎಕ. II, ೨೪೧-೨; ಸು. 1175); ಗುಗ್ಗುಳವೊಂದು ತೊಲೆಯನವರ್ಚ ಕಂಬಿಯೊಳಂದ ಮಾಗಿರೆ ಪೊತ್ತುಕೊಂಡುರವಣಿಸಿ ಬರುತಿರಲು (ಬಸವು. ೪೩-೮೩). ೬. ತಕ್ಕಡಿ : ರಿಪುಭೂಪದಂತಿದಂತದ ತೊಲೆಯೊಳ್ ಪರಾಕ್ರಮದಿನೆನ್ನನೆ ಭೂಪತಿ ತೂಗಿ ತೋಱಿನೇ (ಶಂಶಭಾ. ೧೧-೪೦); ಅವರ ದುರ್ಣಯಚೇಷ್ಟೆಗಳಿಂ ನೃಪನೈಶ್ವರ್ಯಂ ತೊಲೆಯಲ್ಲಿ ತೂಗಿಸಿಕೊಂಬುದು (ಶಂಚಕಂ. ೧೬೯-೧೧) ; ಕೈಲಾಸಮಂ ತೂಗಿದೀ ತೊಲೆಯೊಳ್ ದಕ್ಷಿಣಬಾಹುದಂಡ ದೋರ್ದಿರ್ಚಲ್ ಗಂಡನಾರೆಂದು ಮೆಯ್ಗ್ಗಲಿ ಪಾಯ್ದಂ (ಶಂ ಉ ಮಾ. ೧೪-೧೮೮) ; ಇಂತು ಭಕ್ತಿಯನೆ ತೂಗುವ ತೊಲೆಯನಳವಡಿಸಿ (ಷಟ್‌ರ. ದೇ. ೯೬-೭) ; ಹಿರಿಯ ಭಕ್ತರ ಕೆರಹನೊಂದೆಸೆಗಿರಿಸಿವೊಂದೆಸೆಯಲಿ ಮಹೀಸುರವರರನೇಱಿಸಿ ತೊಲೆಯನೆಲ್ಲರು ತೂಗಿ ನೋಡಲ್ಕೆ (ಬಸವು. ೫೫-೫೭); ಹರದನು ಲೆಕ್ಕ ತಕ್ಕಿಸಿ ಹೊಡೆವನಳತೆಯ ತೂಕ ತೊಲೆಗಳಲಿ (ಕೌಶಿರಾ. ೧೧-೨೪) ; ದೈವಂ ಕೆಡಿಸಿದುದು ಸರಿಯಾಗಿ ತೂಗದೆಯ ತೊಲೆಯನ್ (ಪಾರಸಿ. ೧೪-೩೩). ೭. ಸಮಾನತೆ; ಸಾದೃಶ್ಯ; ಸಾಮ್ಯ: ತನ್ನ ತೂ ಕ ದ ತೊಲೆಯ ಮಹಿಪಾಕ್ಷಿಪ್ರಮುಖುಗುಗ್ಗುಳವನೀವೆನು (ಬಸವು. ೪೩-೩೧) ; ಈ ಸುರ ನರೋರಗರೊಳಗೆ ದಾ ನ ವ ರೊ ಳ ಗೆ ಮಹಿಮನ ತೊಲೆಗೆ ಬಹ ತೂಕದ ಮಹಾತ್ಮರದಾರು ಭುವನದಲಿ (ಸಿಭಾಗ. ೩-೫-೨೪) ; ಪುದಿ ತನಿಗೆಂಡದ ಬೂದಿಯ ಪಡಿ ನೆಲಮಟ್ಟೊಲೆಯ ತೊಲೆಯಲಲರ್ ಬಿರಯಿಯ ಬಾಯಡೆಯಲರ್ಗೆಣೆಯುರಿಗಿದು ಸರಿ ಕಡು ವಿಸಿಲೆನಿಸಿರೆ ನಿದಾಘವೇಂ ಪಸರಿಸಿತೋ (ಲಾಜಕೀ. ೫-೩೪) ;ಪಾರ್ಥನೀಕ್ಷಿಸಿದ ವಿಶ್ವಶರೀರಗೆ ಜೋಡೆಲೆ ತುಳಸಿಯನಿತೆ ತೊಲೆಯೆ ? (ಗಿಳಿವಿಂ. ೪೧-೭). ೮. [ಜ್ಯೋತಿ] ತುಲಾರಾಶಿ: ಭಾವಿಸೆ ಮೇಷದಿಂ ತೊಲೆಯನೆಯ್ದುವಿನಂ ತೊಲೆಯಿಂದೆ ವಿಷಾನವಂ ತಾಪೊಸೆದೆಯ್ದುವನ್ನವುವರುಣ್ಬ ವಿನಾಟ್ ಗಳೆಂದು ಪೇಟ್ದಂ (ಜಟ್ಟಮ. ೭-೩೪). ೬, ೮ : ಓವದೆ ವಿಷಾನ ಮೇಷ ವೃಷಭಾದಿಗಳಂ ಕ್ರಮದಿಂ ದಿನಾಧಿಪಂ ಸೇವಿಸಿ ಮತ್ತೆ ಕನ್ನೆಯೊಡಗೂಡಲೊಡಂ ಕಿಡೆ ತನ್ನ ತೇಜಮಿನ್ನಾವುದು ಕಜ್ಜಮೆಂದು ತೊಲೆಯಂ ಜನರಂಜನೆಗೇಱಿ ರಾಗಮಂ ಭೂವಲಯಕ್ಕೆ ಬೀಱಿದಂ (ಶಂಥಾಮಾ. ೭-೧೬೬); "ಕೃಶಮುಂ ವೇಶ್ಯಾಂಗವಸ್ತ್ರಂ ಸಮಂಜಸ ತೂಕಂ ತೊ[ಪಾಠಾಂ. ತು]ಲೆಯಕ್ಕು" (ನಾಸಾರ. ೦೫೪). **ತೊಲ :** ೫. ೧೦ ಮಾಷ = ೧ಕರ್ಷ (ಒಂದು ತೊಲ ಅಥವಾ ೧೧.೬ ಗ್ರಾಂಗಳು) (ಸಕಪ್ಪ. XIII ಪ್ರಸ್ತಾವನೆ) ; ೫ ಅಂಗುಲ ಬಾಹುವಿರುವ ಕಡೆ ಎಂಟು ತೊಲ ತೂಕವನ್ನು ಹಾಕಿರಲಿ (ಭೌತವಿ. ೪೦).

[ <ಸಂ. ತುಲಾ ]

**ತೊಲೆಗೋಲ್**, ತೊಲೆಗೋಲು(ನಾ). ೧. ತಕ್ಕಡಿಯ ಕೋಲು; ತೂಗು ಕೋಲು ; ದಂಡಿಗೆ ; ತಕ್ಕಡಿ : ಗೃಹಸ್ಥಾಶ್ರಮಮೇ ಒಂದು ತಟ್ಟುಂ ವಿಕ್ಕಾದ ಮೂಱುಮಾಶ್ರಮಂಗಳುಮೊಂದು ತಟ್ಟುಂ ಆಗಿ ನಾಲ್ಕೊಗಂ ತೊಲೆಗೋಲಿಂ ತೂಗಿ ನೋಡಿದನೆಂದು ಬಲ್ಲವರ್ಪೇಳ್ವರು (ಧಾರಕಾಂ. ೧೨-೫೦). **ತೊಲೆಗೋಲು :** ಕೂರಲಗು ತೊಲೆಗೋಲಿನಲಿ ನಿಮ್ಮಾರು ಭಟೆಯನು ನಮ್ಮ ಬಾಹುವಿಕಾರಬಲವನು ತೂಗಿಯನುತಚ್ಚನು (ಕುವ್ಯಾಕ. ೨೦-೨೭). [ ತೊಲೆ$_3$ + ಕೋಲ್$_1$ ]

**ತೊಲೆಗೋಲು** 'ತೊಲೆಗೋಲ್' ನೋ.

**ತೊಲ್ಮೊಱಡಿ** (ನಾ).ಒಂದು ದಿಣ್ಣೆಯ ಹೆಸರು: ಅನ್ತೆ ಬನ್ದು ತೊಲ್ಮೊಱಡಿಎ ಕಲ್ಕುಪ್ಪೆಎ ಅನ್ತೆ ಬನ್ದು ಕೊನ್ದವಡಿಎ ... ತುಬ್ಬಿಲ್ಲಾಗ್ಗಿರೊಳ್ಮಡಿತ್ತು (ಮ್ಯಆರಿ. ೧೯೩೬, ೫೩-೨೮ ; ಸು. 560).

[ ತೊಲ್ ? + ಮೊಱಡಿ (<ಮೊರಡಿ) ]

**ತೊವಗೂರು** (ನಾ). ಒಂದು ಸ್ಥಳದ ಹೆಸರು : ಬೆಂಪೂರು ತೊವಗೂರು ಪೂವಿನ ಪುಲ್ಲಿಮಬ್ಬಲ ಕೂತನಿಡುನಲ್ಲೂರು (ಎಕ. IX, ಬೆಂಗಳೂ. ೮೩-೬ ; ಸು. 890) ; (ಎಇ. I, ೩೫೦-೬ ; 900 ನೋ.)

[ ? + ಊರು$_3$ (<ಊರ್) ]

**ತೊವಟೆ** 'ತೊಗಟು' ನೋ.

**ತೊವಡು** 'ತೊಗಟು' ನೋ.

**ತೊವರ್**$_1$ (ಕ್ರಿ). ಒಗರಾಗು ; ಒಗಚಾಗು : ಎಸಟ್ಮಸಗಿ ಮುಗುಳ್ಗೆ ನಕ್ಕು ತೋಱ ಮದಾಳಿಗಳ್ ನುಸುಳೆ ತೊವರ್ತಿರೆ ಕಂಪಲರ್ಚುವನಂಬುಜ ಪ್ರಸರಮನಾಳೆ ಬೆಳಪ್ಪನೀಗೆ ವರಂಗಳಂ (ಕಾವ್ಯಾವ.೯೧೬). 'ತೊವರ್ಚು' ಪರಾ. [ ದೇ.॥ ತಮಿ. ತುವರ್ ]

**ತೊವರ್**$_2$, ಚೊಗರು$_1$, ತೊಗರ್, ತೊಗರಿ$_3$, ತೊಗರು$_2$, ತೊವರು$_1$ (ನಾ). ರುಚಿಯಲ್ಲಿ ಒಂದು ಬಗೆ ; ಷಡ್ರಸಗಳಲ್ಲಿ ಒಂದು ; ಒಗರು ; ಒಗಚು : ಅವುದೊಂದು ಭೂಮಿಯನಗುಟಲ್ ಆ ಪುಟ್ಟಿದ ಮಣ್ ಕಪ್ಪಾಗಿರಲ್ ಅಲ್ಲಿ ಪುಟ್ಟಿದ ಉದಕಂ ತೊವರ[ಪಾಠಾಂ. ಒಗರ, ತೊಗರ] ಪ್ಪುದು (ಲೋಕೋಪ. ೫-೮ ಟೀಕು): ಉದಧಿಗಳೇಟುಮೆಯ್ದೆ ತೊವರಾದುವು ದಾನಜಲೌಘದಿಂ (ಸೂಕ್ತಿಸು. ೧-೪); ಪುಳಿ ಮಧುರಮುಪ್ಪು ತಿಕ್ತಂಗಳೆಂದು ತೊವರೆಂದು ಕಟುಕಮೆಂದಪ್ಪವು . . . ಕುಡುಗೆ ಹರಿಗೆ ಪಾನಾದಿಗಳಂ (ಅಕ್ಕಿಪು. ೭-೮೦). **ಚೊಗರು**$_1$ : ಆರೋಗಣೆಯ ವಿವರಗಳಲ್ಲಿ :-ಇನಿದು, ಸಿಹಿ, ಕಹಿ, ಕೈಪೆ, ಪುಳಿ, ಉಪ್ಪು, ಚೊಗರು (ಭಾಷಾಶಾ. ೨೫೭) ; ವರ್ಜ್ಯ - ಮಲಬದ್ಧತೆಯಾಗುವ ಚೊಗರುಳ್ಳ ವಸ್ತುಗಳು (ಮನಿಮ. ೯೪). **ತೊಗರ್**: ಅಣಲೆಗೆ ತೊಗರೆಂತು ಸಹಜಂ ಸುಂಟಿಗೆ ಕಾರಮೆಂತು ಸಹಜಂ ತಾನಂತೆ ... ದೂಷಣಮುಂ ಔದಾಸೀನ್ಯಮುಂ ನರಕದು:ಖದೆಡೆಗೆ ಸಲ್ವ ಪುರುಷಂಗೆ ಸಹಜಮಾಗಿರ್ಕುಂ (ಧರ್ಮಾಮೃ. ೯-೪೦); ಪುಳಿ ಮಧುರಮುಪ್ಪು ತಿಕ್ತಂಗಳು ತೊಗರೆಂದುಂ (ಅಕ್ಕಿಪು. ೯-೯೩). **ತೊಗರಿ**$_3$ : "ಕಷಾಯ, ತುವರ = ತೊಗರಿ" (ನಾಚಿರಾ. ೬). **ತೊಗರು**$_2$: ವಾತದಿಂದ ಹುಟ್ಟಿದ ಅರೋಚಕದಲ್ಲಿ ಬಾಯಿ ತೊಗರಾಗಿ ಇಹುದು (ವೈದ್ಯಸಾ. I, ೧೬೭) ; ನೇರಿಲ ಚಿಗರು ಮಾವಿನ ಚಿಗರು ಅದರ ತೊಗರು (ಜಾತ್ರಾಚ. ೩೭-೬). **ತೊವರು**$_1$ : ಸಿಹಿಯುಂ ಕಾರಮುಮಾಮ್ಲಮುಂ ತೊವರುಮುಪ್ಪುಂ ಕೈಪೆಯುಂ ಬೇಱವೇಱ ಹಿತಂದೋರ್ಕುಂ (ರತ್ನಾಕ. ೫೦).

**ತೊವರ್ತೊವರ್** (ದ್ವಿರುಕ್ತಿ) : ಊದಿದುದು ತನ್ನಲರ್ ಕಳನಾದಂ ಸಾದರದೊಳೊಂದಿ ನೆಗಟ್ದುದು ಪದ್ಮಾಮೋದಮಿನಿಸುಂ ತೊವರ್ತೊವ ರಾದುದು ಕೂಗಿದುವು ತಾವುಚುಡಕುಳಂಗಳ್ (ಕಾವ್ಯಾವ. ೫[illegible]). 'ಒಗರ್' ಪರಾ.

[ ದೇ.॥ ತಮಿ. ತುವರ್ ; ತುಳು. ಚೊಗರ್ ; ತೆಲು. ತೊಗರ, ತೊವರ ; ಕೂ॰. ತೊರ್ಪ್ [illegible]/ಸಂ. ತುವರ ]

**ತೊವರಮಣ್ಣು** 'ತುವರಮಣ್ಣು' ನೋ.

**ತೊವರಿ**, ತೊಗರಿ$_1$, ತೊವರು$_2$ (ನಾ). ೧. ಒಂದು ಬಗೆಯ ಸಸ್ಯ ಮತ್ತು ಅದರ ದ್ವಿದಳಧಾನ್ಯ : "ಆಢಕಿಯೆನಲ್ ತೊವ (ಗ) [illegible]"

(ಮಂಗರಾ. ೧೦೦-೫) ; "ತೊವರಿಯೆಂದು ತೊಗರಿ" (ಕಕಸಾ. ೨೮-೫೮೩) ; ತೊವರಿ ಗೋದುವೆ ಜೋಳಂ . . . ಎಂಬಿವಱೊಳೊಂದಱೊಳಾದ ತೈಲಮಂ. . . . ತಂದು ಪೂಸುವುದು (ಲೋಕೋಪ. ೯-೧೦೬) ; ಪಟಗಟವೆಯು ಕೊಟ್ ತಿವ್ರಡುಗಳೆದ ತೊವರಿಯು ತೊದೆ (ಕಾವ್ಯಾವ. ೨೪೧) ; (ಸೂಕ್ತಿಸು. ೧೧-೮೩ ನೋ) ; ಒಡಗೂಡಿ ಬಿಲ್ವಮೂಲಂ ಕಡಲೆ ತೊವರಿ ಶುಂಠಿ ಎಂಬಿವಂ ಗಂಜಿಗೆ ಮೇಣ್ ಕುಡಿವಾಗಳ್ (ಕಲ್ಯಾಕಾ. ೩-೨೬). ೨. ಸುಗಂಧಯುಕ್ತವಾದ ಭೂಮಿ : (೬). **ತೊಗರಿ$_1$** : ೧. "ಆಢಕೀ, ತುವರೀ . . . ಈ ೨ ತೊಗರಿ" (ಹಲಾಯು. ೯೬-೪೩೦); ದೇವಗ್ಗೆ . . . . ಕಡಲೆ ತೊಗರಿಯಾದಿಯಾಗಿ ಸಲುವುದು (ಎಕ. VIII, ಸೊರಬ. ೩೨೮-೬೨ ; 1159) ; ಮೂವತ್ತೆತ್ತಿನೊಳು ತೊಗರಿ ಜೋಳದಕ್ಕಿ ಕಡಲೆಗಳನೊಡತಿಃವಿ ಕೊಡುವುದೆನುತ್ತಂದು ಶಿವ ಪ್ರೇರಣೆಯಿಂ ನುಡಿಯೆ (ಬಸರ. ೧೨-೪೮) ; ಸೂಪಕವರ್ಗಕೆ ತೊಗರಿ ಹೆಸಱಾ ಚಣಾಖ್ಯವಿನ್ನೋಲ್ವರ್ದಿನುತ್ತವಂ ಹೊಟ್ಟ ಕಳದಿರ್ದವಿನ್ನಾ ಪರಿಯು ಮಧ್ಯಮಂ (ವೀಕ್ಷಿತು. ೭-೧೧-೭೪) ; ವಿಸುನಿಯು ವಣ್ಣದ ತೊಗರಿಯ ಬೇಳೆ (ಕಂಜವಿ. ೮-೮೬) ; ತೊಗರಿ ಬಿತ್ತಿ ಅವರೆ ಕೊಯ್ದರು (ಗಾದ). **ತೊವರು$_2$** : ೧. ಬೀಜದ ಒಳಗಿನ ತಿರುಳಂ ಅರೆದು ಶ್ರೀಗಂಧದಲ್ಲಿ ಹುದುಗಿಸಿ ಅವರೇ ತೊವರಷ್ಟು ನುಂಗಲು ಛೇ, ತಾಪಜ್ವರ ಸಹ ಮಾಣ್ಗುಂ (ವಿಷ್ಣುವಿ. ೧).

[ ದೇ.॥ ತಮಿ. ತುವರೈ ; ಮಲ. ತುವರ ; ತುಳು. ತೊಗರಿ, ತೊಗರೆ, ತೊಗೊರಿ ; ತೆಲು. ತೊವರಿ, ತೊಗರಿ ; ಕೊಲಾ. ತೊಗರ್ ; ನಾಯ್ಕಿ. ತೊಗರಿ./ಸಂ. ತುವರೀ ]

**ತೊವರು$_1$** 'ತೊವರ್$_2$' ನೋ.

**ತೊವರು$_3$** 'ತೊವರಿ' ನೋ.

**ತೊವರೇಱು** (ಕ್ರಿ). ಒಗರಾಗು : ಮಾಂಗೊನರಂ ನಸುಗರ್ಚಿ ಸೊರ್ಕಿನಿಂ ತನು ದಳವೇಱ ಕಂಠವಿವರಂ ತೊವರೇಱ ಪಟುತ್ವವೇಱ ಕಾಮನ ನನೆಯಂಬುಗಳ್ ವಿರಹಿವ್ರಂದದ ಮಲ್ಲೆರ್ದೆಯಂ ಪುಗಲ್ . . . ಪುಗಲ್ ಪುಗಲೆಂದುದು ಕೋಕಿಲವ್ರಜಂ (ಜಗವಿ. ೧೪-೩೮).

[ ತೊವರ್$_2$ + ಏಱು$_1$ (<ಏಱ್$_1$) ]

**ತೊವರ್ಗಂಪು** (ನಾ). ಒಗರಾದ ಸುವಾಸನೆ,-ಸುಗಂಧ : ಅಲರ್ವೀ ವನಜವನಂಗಳ ತೊವರ್ಗಂಪನಾಂಪ ಬಗೆ ಬಳೆಯು ಮೊರೆವುವಳಿಗಳ ಬಳಗಂ (ಆದಿಪು. ೦೨-೫೦); ತೊವರ್ಗಂಪಂ ತನಿಗಂಪನೇಕೆ ಕನರ್ಗಂಪಂ ಪೊತ್ತುವೇ ಕೋರಕದ್ರವವುಂ ತನ್ನಲರ್ಗೊಂಚಲುಂ ಮಿಡಿಗಳುಂ ತಮ್ಮತ್ತಲೇಂ ಕೂಗಿ ನೋಡುವುವೇ ಕೋಗಿಲೆಯೆಂದು ಸೊಕ್ಕಿದಳಿಯೆಂದೋವೆಂದು ಪೋ ಬಂದೂ ಮೋವುವೊ ಮಾವಲ್ಲದವೆಂಬವೋಲ್ ಬಳೆದುದೆತ್ತಂ ಕೀರಕೋಳಾ ಹಳಂ (ಅನಾಪ. ೧೩-೩೯). [ ತೊವರ್$_2$ + ಕಂಪು ]

**ತೊವರ್ಚು** (ಕ್ರಿ). ಒಗರಾಗು ; ಒಗಚಾಗು : ಅಸುಗೆಯು ನಾಗಕೇಸರದ ಬಲ್ಮುಗುಳಂ ಬಿರಿಯೊತ್ತಿ ತುಂಬಿ ಚುಂಬಿಸೆ ರಜದಿಂ ತೊವರ್ಚಿದ ಕೊರಳ್ ಸವಿಯಂ ತರೆ ಪಾಡಿ (ಶಾಂತಿಪು. ೭-೫೩). [ ತೊವರ್$_1$ + -ಚು$_1$ ]

**ತೊವಲ್$_1$** (ಕ್ರಿ). ೧. ಚಿಗುರು ; ಪಲ್ಲವಿಸು : ಪರಿವ ತೊಱಗಳುಮಂ ತ್ರೊವಲ್ತು ಸೊಗಯಿಸುವಡವಿಗಳುಮಂ . . . ಕಂಡು ತಮ್ಮ ಕಣ್ಗಂ ಮನಕಂ ಸೊಗಯಿಸೆ (ಪಂಪಭಾ. ೭-೨೫ ವ) ; ಎಲೆವಳ್ಳಿ ತೊವಲ್ತೆಲೆವಳ್ಳಿ ನಗಂ ಕೃತಕನಗಂ ಪಲಸು ಬಕ್ಕೆವಲಸಾ ಬನದೊಳ್ (ಜಗವಿ. ೭-೧೪). ೨. ತುಂಬು ; ಆವರಿಸು : ವಿಳಾಸಿನೀಘನಸ್ತನಶತಪತ್ರಪತ್ರಶತದಿಂದೆ ತೊವಲ್ತು . . . ಅಗರುಧೂಮಲತಾವಳಿಯಿಂ ಮಡಲ್ತು ಮೆಲ್ಲನೆ ಸುಟಿದತ್ತು ಸದ್ಮಸರಸೀಶರಶೀಕರಮಂದಮಾರುತಂ (ಮಲ್ಲಿಪು. ೭-೪೮).

[ ದೇ.॥ ತಮಿ. ತುವಲ್ ]

**ತೊವಲ್$_2$, ತೋಲ್$_2$** (ನಾ). ಎಳೆದಳಿರು; ಚಿಗುರು: "ಎಳೆದಳಿರ್ವೆಸರದು ತೊಪಲೆ[ಪಾಠಾಂ.ರೆ]ನೆ (ಚತುನಿ.೧೦೪) ; ಸೋಮಶರ್ಮಭಟ್ಟಂ ಪಿರಿದೊಂದು ತೊವಲಂ ಪಿಡಿದಬ್ರಹ್ಮಣ್ಯಂ ಭೋ ಅಬ್ರಹ್ಮಣ್ಯಂ ಭೋಎಂದಟುತ್ತ . . . ಅರಮನೆಗೆ ಪೋಗಿ (ವಡ್ಡಾರಾ. ೨೩-೨); ಇದಂ ನೀನವಧಾರಿಸೆಂದು ತೊವಲಂ ಮುಂದಿಕ್ಕಿದಂ ಭೂಪನಾ (ಸುಕುಮಾ. ೭-೪೩) ; ಉಱ ಕಾವ ಸೂರ್ಯರಶ್ಮಿಗೆ ಮೊಱಯಿಡಲೆಂದೆತ್ತಿ ಪಿಡಿದ ತೊವಲೆಂಬಿನೆಗಂ ತುಱುಗಿ ದಾವರೆಗೊಂಬಂ ಮುಱದು ನೆಬಲ್ಮಾಡಿಕೊಂಡು ನಡೆವರ್ ಪಥಿಕರ್ (ಜಗವಿ. ೧೭-೬೯) ; ತೆಗೆದು ನನೆಗೊಯ್ದು ಬಿಡೆ ಮೇಲೊಗೆವಳದಳಿ ಗೊಂಬು ಪೋಲ್ತುದಾ ಪೂವಿನ ಸೂಱಗೆ ತೊವಲಂ ಪಿಡಿದು ಮದಾಳಿಗಳುಲಿಯಿಂ ಪುಯ್ಯಲಿಡುವಶೋಕೆಯ ಕೈಯುಂ (ಚಂದ್ರಪು. ೭-೧೦೦) ; ತಮ್ಮ ಕರಾಗ್ರದೊಳ್ತೊವಲನಾಂತು ನೆಟಲ್ಗೆ ತೊಟಲ್ದವಾನೆಗಳ್ (ಜಾಥಪು. ೪-೮೨) ; ಕಲಶದ ತೊವರಂ [ಲಂ] ರತ್ನಾವಲಿಯೊಳ್ ಸಮ್ಮಿಶ್ರ ಪುಷ್ಪಮಂ ಮಸ್ತಕದೊಳ್ ತಳೆದಲ್ಲಿ ಬಣ್ಣಪುರದೊಳ್ ಬಟದು ಬಟಕಿ ಮೇಖಲಾಲಂಕೃತಿಯಂ . . . ಕಟ್ಟುಗೆ ಪಟ್ಟವ(ಂ) ಲಲಾಟಪಟ್ಟಾಂತರದೊಳ್ (ಅಕ್ಷಕಾ. ೮-೧೫). **ತೋಲ್$_2$**. 'ತೋಲ್ವಿಡಿ' ಪರಾ.

**ತೊವಲನಿಕ್ಕು** = ತೊವಲಿಕ್ಕು ೨ : ಬೇಂಟೆಯಾತಂಗೆ ಮೃಗವ್ಯಾಯಾಮಕಾರ್ತಿಕೇಯಂ ಮೆಚ್ಚಿ ಮೆಚ್ಚುಗೊಟ್ಟು ತೊವಲನಿಕ್ಕೆಂದು ಮುಂದೆ ಪೇಟ್ದಟ್ಟ . . . ಬೇಂಟೆಗೆ ಪೊಱಮಟ್ಟು (ಪಂಪಭಾ. ೫-೪೭ ವ).

[ <ತೊವರ್$_1$ ]

**ತೊವಲ್$_3$** 'ತೋಲ್$_1$' ನೋ.

**ತೊವಲಿಕ್ಕು** (ಕ್ರಿ). ೧. ಪಲ್ಲವಿಸು ; ಚಿಗುರು : ತೊವಲಿಕ್ಕಿದ ಪೆರ್ವಟು ಬೇಗೆಗಿರ್ಚಿನೊಳ್ ಬೇವಪೊಲಿದರ್ವಿರ್ವಲದ ಬಿಲ್ಲಣೆಗಳ್ ರಣರಂಗ ಭೂಮಿಯೊಳ್ (ಪಂಪಾಮಾ. ೧೩-೪೮). ೨. ಹಳ್ಳ ಕಾಣದಂತೆ ಮೇಲೆ ಸೊಪ್ಪು ಮುಚ್ಚು : ಆಡಲಾಡಿಸಲ್ ಪಾಟಿಯುಂ ನಿಱಸಲುಂ ಪರಿಗೊಳಲ್ ತೊಪಲಿಕ್ಕಲೊಳಗು ಬರಲ್ . . . ಪಾಣಂ ನೀರ್ದಾಣ ಮೆಂದೆಡೆಯುಱದುಂ ಮಾಡಲ್ ಮಾಡಿಸಲ್ ಪಡೆ ಮೆಚ್ಚೆ ನೀಂ ಬಲ್ಲೆ (ಪಂಪಭಾ. ೫-೪೧) ; " ಬಲೆ ಬೀಸು " (ನಾಡೋಜ. ೩೦೪).

[ ತೊವಲ್$_2$ + ಇಕ್ಕು ]

**ತೊವಲು** 'ತೋಲ್$_1$' ನೋ.

**ತೊವಲುಡಿಗೆ** 'ತೊವಲುಡುಗೆ' ನೋ.

**ತೊವಲುಡುಗೆ, ತೊವಲುಂಡಿಗೆ** (ನಾ). ಚರ್ಮದ ಉಡುಗೆ ; ತೊಗಲಿನಿಂದ ಮಾಡಿದ ವಸ್ತ್ರ : ಬರಿ ತೊವಲುಡುಗೆಯವರ ನಾಡೊಂದಿದ್ದಿತು (ಬಿದುರಿ. ೬೬). **ತೊವಲುಡಿಗೆ** : ನಲಿದು ಬಿಗಿದುಟ್ಟ ತೊವ [ಪಾಠಾಂ. ಗ] ಲುಡಿಗೆಯಲಗುಗಳೆಸೆಯೆ (ಕಣ್ಣರ. ದೇ. ೧೨೭-೧೨).

[ ತೊವಲ್$_3$ (< ತೋಲ್$_1$) + ಉಡುಗೆ ]

**ತೊವಲುಡೆ** 'ತೋಲುಂಡೆ' ನೋ.

**ತೊವಲುಡೆಯ** (ನಾ). ಚರ್ಮವನ್ನು ಬಟ್ಟೆಯಾಗಿ ಧರಿಸಿದವನಂ ; ಚರ್ಮಾಂಬರಧಾರಿ ; ಶಿವ : "ಈಶ್ವರಂದೊಪಲುಡಿ [ಡೆ] ಯನೆಂದನಲ್" (ಕಶರ. ೫೨) ; ನಡುವಿನೊಳುಟ್ಟ ವಲ್ಕಲಂ ತೊವಲುಡೆಯನ ಕೃತ್ತಿವಾಸಂಬೋಲ್ ಮನೋಜ್ಞಮಾಗಿರೆ (ರಾಮಾಶ್ವ. ೪೦-೨೯).

[ ತೊವಲುಡೆ (<ತೋಲುಂಡೆ) + -ಅ$_7$ ]

**ತೊವಲ್ಗೊಳ್** (ಕ್ರಿ). = ತೊವಲ್ವಿಡಿ : ಪೊಂಗಿ ಕಡಂಗಿ ಬೀರದೊಳೆ ಬೀಗುವ ನಿನ್ನಣುಗಾಳೆ ನೋಡೆ ನಿನ್ನಂಗನೆಯರ್ ತೊವಲ್ಗೊಳೆ ಭಯಂಗೊಳೆ ಕೋಡಗಗಟ್ಟುಗಟ್ಟೆ ಚಿತ್ರಾಂಗದನುಯ್ಯೆ (ಪಂಪಭಾ. ೯-೫೪) ; "ತೊವಲ್ಗೊಳೆ = ಕೈಯಲ್ಲಿ ಚಿಗುರನ್ನು ಹಿಡಿದಿರಲು" (ಪಂಪದೀ. ೩೨೩).

[ ತೊವಲ್$_2$ + ಕೊಳ್$_1$ ]

**ತೊವಲ್ವಲೆ** (ನಾ). ಚರ್ಮದಿಂದ ಮಾಡಿದ ಒಂದು ಬಗೆಯ ಬಲೆ: ಪುಲಿವಲೆ ಕೊಂಬು ಕಣ್ಣ ಮಿಡಿಗಣ್ಣು ತೊವಲ್ವಲೆ . . . ಎಂಬಿನಿತುಂ ಪೊಱಗಟ್ಟಿ (ದಶಕು. ೨-೦೦೫). [ ತೊವಲ್$_3$ (< ತೋಲ್$_1$) + ಬಲೆ$_1$ ]

**ತೊವಲ್ವಿಡಿ, ತೋಲ್ವಿಡಿ** (ಕ್ರಿ). (ಶರಣಾಗತಿಯಾಗಿರುವುದನ್ನು ಸೂಚಿಸಲು) ಚಿಗುರನ್ನು ಕೈಯಲ್ಲಿ ಹಿಡಿ; (ಸೋಲನ್ನೊಪ್ಪಿರುವುದರ ಸಂಕೇತವಾಗಿ) ತಳಿರನ್ನು ಕೈಯಲ್ಲಿ ಹಿಡಿ; ಮರೆಹೊಗು: ಕಾಯದೆ ಕಾಮನಾರ್ದಿಸೆ ತೊವಲ್ವಿಡಿವಂತೆಡಗಯ್ಯೊಳೊಪ್ಪೆ ತೋರ್ಪಾಯೆಲೆ (ಪಂಪಭಾ. ೮-೩೭); ಸರಿದ್ವಲ್ಲಭಂ ಹರಿನೀಳಚ್ಛವಿಯಂ ತೊವಲ್ವಿಡಿದು ವೀಚೀಹಸ್ತದೊಳ್ ಘೂರ್ಣಿತಾತುರನಿರ್ಘೋಷಮುಂ ಜ್ಞೆ ವುಯ್ಯಲಿಡುವಂತಿರ್ದತ್ತು (ಮಲ್ಲಿಪು. ೧೨-೦೩೨). **ತೋಲ್ವಿಡಿ:** ತೋಲ್ವಿಡಿದು ಸಾಱ್ ವೇಟ್ಟಪೆಂ . . . ನೀಂ ಬಲ್ವಿಡಿವಿಡಿ ಜನಪದಾಬ್ಧಿಯುಗಮಂ ಬಗೆಯೊಳ್ (ಉಸಾರ. ೫೭). [ ತೊವಲ್$_2$ + ಪಿಡಿ$_1$ ]

**ತೊವಲ್ವೆರಸು** (ಅ). ಚಿಗುರು ಸಹಿತವಾಗಿ; ಎಲೆಗಳಿಂದ ಕೂಡಿ: ಪಣ್ವೆರಸು ನಟ್ಟ ಮೃಂದವಾಟಿಗಳುಮಂ ತೊವಲ್ವೆರಸು ನಟ್ಟಾಲಂಗಳುಮಂ (ಪಂಪಭಾ. ೫-೪೭ ವ). [ ತೊವಲ್$_2$ + ಬೆರಸು$_2$ ]

**ತೊವಲ್ವೊದೆಯು** (ನಾ). ೧. ಚರ್ಮವನ್ನು ಹೊದೆದವನು. ೨. ಸಿಪ್ಪೆಯಿಂದ ಆವರಿಸಿರುವುದು. ೧, ೨: ತಿಸುಳಿಯಂತೆ ಮುಕ್ಕಣ್ಣನುಂ ತೊವಲ್ವೊದೆಯನುಂ ಮುಗಿಲಂತೆ ನೀರೊಡಲನುಮೆನಿಪ ತೇಂಗಾಯುಂ . . . ಪುರಂ ಕಣ್ಗಿಂಬಾದುದು (ರಾಮಾಶ್ವ. ೧೦೩-೦೭).

[ ತೊವಲ್$_3$ (< ತೋಲ್$_1$) + ಪೊದೆ$_2$ + – ಅ$_7$ ]

**ತೊವೆ** 'ತೊವ್ವೆ' ನೋ.

**ತೊವ್ವೆ, ತೊಗೆ$_1$, ತೊಯಿ, ತೊಯೆ, ತೊವೆ, ತೋಯ$_1$, ತೋಯಿ, ತೋಯೆ, ತೋವೆ** (ನಾ). ತೊಗರಿ, ಅವರೆ ಮುಂತಾದ ಬೇಳೆಗಳನ್ನು ಬೇಯಿಸಿ ತಯಾರು ಮಾಡುವ ಒಂದು ಬಗೆಯ ಮೇಲೋಗರ: ಹುಲಿಗಿಲ ಬೇಳೆಗಳುಂ ನೇಱಲ ಬೀಜಂ ... ತೊವ್ವೆಯಡೆ ಸವಿವಡೆಗುಂ (ಶೋಕೋಪ. ೮-೨೩); ಕೂಟುಂ ತೊವ್ವೆಯುಂ ಮೊದಲಾದುವ ನಟ್ಟಪರೆಂಬುದು ವ್ಯವಹಾರದೊಳಪ್ಪ ಸತ್ಯಮೆಂಬುದು (ಪಸಾರ. ೫೯೧); ವರ ಸಣ್ಣಕ್ಕಿಯೋಗರ ತೊವ್ವೆ ಪಳಿದ್ಯವ ತಳಿತಳಿದಲಿ ಬಡಿಸಿದರು (ಮೋಹತ. ೩-೫೧). **ತೊಗೆ$_1$:** ತೊಗೆ ತೊಗೆಯ ರಸ ಪುಣಾಗುರಾಜಾನ್ನಮಿಶ್ರಿತದ ... ನೈವೇದ್ಯಮಂ ಧಗಧಗಿಪ ಕಲಧೌತಕನಕಹರಿವಾಣದೊಳು ತಂದಿಡಲು (ಪ್ರಭುಪು. ೯-೫೭); ಜೋಳದ ಬೋನಕ್ಕೆ ಬೇಳೆಯ ತೊಗೆಯಾಗಿ ಕಾಳೆಮ್ಮೆ ಕಱೆದ ಹಯನಾಗಿ (ಸರ್ವಜ್ಞ. ೧೬೧೭); ಕಡುಬ್ಬಾಯ್ದು ಕಡಲೆ ತೊಗೆ ಮಾಡಿ ತುಪ್ಪ ಹಾಕಿ ಕೊಡದೋಳಿಗಿಕ್ಕೆ ಹದಿನಾರ (ನಾಪದ. ೭೭). **ತೊಯಿ:** ಅನ್ನ, ಉದ್ದಿನ ತೊಯಿ, ಕಡುಬು, ಹಾಲು, ತುಪ್ಪ, ಮೊಸರು ಸಹ ಬಲಿಯುಂ ತುಂಬಿ (ಕಾಲಜ. ೧೨೬-೩); ತೊವರಿಯ ಹಳಚಗಿರುವ ತೊಯಿ ರಸ ಹುಣಿಸೆಪಳದ್ಯವ ಎಳೆವೆಣ್ಣುಗಳಿಕ್ಕಿದರು (ಜ್ಞಾನಜ. ೩೯-೦೩೭). **ತೊಯೆ:** ಮಠದಲು ನಡೆವ ಛತ್ರ ಅಯಿದು ಪರಿ ಶಾಕ ತೊಯೆ ತುಪ್ಪ ವಿಳೆಯ ಸಹಿತ ಅಟ್ಟುವ ಬ್ರಾಹ್ಮಣ ೧ (ಸಾಇಇ. IX-ii, ೪೫೦-೯; 1447); ಸಣ್ಣಕ್ಕಿಯೋಗರು ಹೆಸಱ ತೊಯೆ ಹೊಚ್ಚಹೊಸ ಬೆಣ್ಣೆ ಕಾಸಿದ ತುಪ್ಪ (ಸಮ್ಯಕ್ತ್ವಾ. ೭-೨೪); **ತೊವೆ:** ಉಪಾಧ್ಯಾಯಂಗೆ ಕಲಮೆಯ ಕೂಟುಂ ತುಪ್ಪಮಂ ತೊವೆಯು [ಪಾಠಾಂ. ತೋಯು] ಮ ನು ಣ ಲ್ಕೊ ಟ್ಟು ಕುಮಾರನನೋದಿಸುಗೆಂದೋಲೆಯನಟ್ಟಿದೊಡೆ (ವಡ್ಡಾರಾ. ೭೫-೧೫); ಸಂದ ತಿರಿಕಂಗೆ ತೊವೆ ತುಪ್ಪಂ ದೊರೆಕೊಳಲುಣ್ಮೆ ನಲಿವ ತೆಱದಿಂ (ಧರ್ಮಾಮೃ. ೯-೩೦); ಶಿವುಡುಗಳೆದ ತೊವರಿಯ ತೊವೆ ಕಾಯ್ದುಱಿದ ತುಪ್ಪಂ ಕೋಡುವ ಕಲಿಲಲ್ಲದೆ ದಿವ್ಯಭೋಜನಂ ಪೆಱತುಂಟೇ (ಲಾವ್ಯಾಮ. ೨೪೧); ಸುವರ್ಣದ ಸಟ್ಟುಗದಿಂ ತೊವೆಯೊಳ್ ಕಲಸಿದ ಕಲವೆಯ ಕೂಟುಂ ತುಪ್ಪಮುಂ ನೀಡಿರೆ (ಪುಣ್ಯಾಸ್ರ. ೯-೧೭ ವ); ಪ್ರಸಾದ ತೊವೆ ಮೂರು ಮೇಲೋಗರ (ಎಕ. VIII, ತೀರ್ಥಹ. ೧೫೮-೧೮; ಸು. 1400). **ತೋಯ:** ಉಂಡಹೆನೆಂಬಲ್ಲಿ ಅನ್ನವನಿಕ್ಕದೆ ಸತ್ತ ಮತ್ತೆ ಅಕ್ಕಿಯ ಹೇಱ ಮಸ್ತಕದಲ್ಲಿಂಸಿ ಘಟ್ಟತುಪ್ಪ ತೋಯುವ [ಪಾಠಾಂ. ತುಯ್ಯಲ]ನುಣ್ಣೆಂದು ಬಿಕ್ಕಿಬಿಕ್ಕಳುವನಂತೆ (ಉರಿವ. ೩೩-೩೫); ಹೆಸಱು ತೋಯ ಪಳದ್ಯ (ದೊಂಕಲ. ೦೯೪೦, ಕುಮುಟ. ೦೦೩-೨೬; 1475). **ತೋಯಿ:** ಉದ್ದಿನ ತೋಯಿ, ಅಲಸಂದೆಯ ಗುಗ್ಗುರಿ . . . ಇವಂ ಮಂತ್ರಸಮನ್ವಿತವಾಗಿ . . . ಬಲಿಯುಂ ಕೊಡಲು (ಕಾಲಜ. ೧೩೦-೩); ತುಪ್ಪ ಕುಡುತೆ ೨ಕ್ಕೆ ತಾರ ೫ ತೋಯಿ ತಾ ೨ ಶಾಕ ೫ (ಸಾಇಎ. ಮಂಗಳೂರು, ೪೭೫-೩೩; 1312). **ತೋಯೆ:** ಸಣ್ಣಗಳಮೆಯೋಗರ ತೊಗರಿಯ ತೋಯೆ ಬೆಣ್ಣೆಗಾಸಿದ ತುಪ್ಪವೆಱೆದು ಅಣ್ಣಂದಿರುಣಬನ್ನಿ ಯೆನಬೇಕಲ್ಲದೆ ಹೆಣ್ಣಗೆಂದಮ್ಮ ಕರೆವರೆ (ನೇಮಿಸಂ. ೨೩-೨೭೯); ತೋಯೆ ಪಾಯಸ ತುಪ್ಪ ಕಲಸು ಮೇಲೋಗರ ಕಾಳಿಲ ಮುಂತಾದ ಪಂಚಭಕ್ಷಕ್ಕೆ (ಎಇ. VIII, ೧೩೨-೨೯; 1686) **ತೋವೆ:** ಸಣ್ಣ ಛತ್ರದೋಗರವುಂ ಕಟ್ಟಿಸರ ತೋವೆಯುಂ ದೆಸೆದೆಸೆಗೆ ಪಸರಿಸುತ್ತ ಪರಿಮಳದಿಂ ಮಗಮಗಿಪ ಸದ್ಯ ಗಟ್ಟಿಮೊಸರು (ಧರ್ಮಪ. ೨-೫೭ ವ); ಹೆಸಱು ತೋವೆ ತುಪ್ಪ ನಾಲ್ಕು ಪರಿಯ ಶಾಕ ವೀಳೆಯ ಸಹ ಪ್ರತಿದಿನ ಒಂದಕ್ಕಂ ಕಾಟಿಹಣ ಒಂದಱ ಲೆಕ್ಕದಲು (ಸಾಇಇ. IX-ii, ೪೧೭-೩೩; 1377); ತೋವೆಯಿಲ್ಲದ ಊಟ ಲೋವೆಯಿಲ್ಲದ ಮನೆಯು ನೋವನಱಿಯದಳ ಮನೆವಾರ್ತೆ ಸಿಹಿಯಱಿಸಿ ಬೇವು ತಿಂದಂತೆ (ಸರ್ವಜ್ಞ. ೦೭೧೯); ಮದುವೇ ಮನೇಲಿ ತೋವೆಗತ್ತರು ಗೌರೀಹಬ್ಬದಲ್ಲಿ ಕಾಯಿಗತ್ತರು (ಗಾದ).

[ ದೇ.॥ ತಮಿ. ತುವ್ವೈ; ತುಳು. ತೋವೆ ]

**ತೊಸಕ್** (ನಾ). ಒಂದು ಅನುಕರಣ ಶಬ್ದ: ಕೆಸರಿನಲ್ಲಿ ತೊಸಕ್ಕೆಂದು ಕಾಲು ಹೂತು ಹೋಯಿತು (ರೂಢಿ).

**ತೊಸಕ್ ತೊಸಕ್** (ದ್ವಿರುಕ್ತಿ): ದಾರಿಯ ಕೆಸರಿನಲ್ಲಿ ಗಾಡಿ ತೊಸಕ್ ತೊಸಕ್ ಎಂದು ಶಬ್ದಮಾಡುತ್ತಾ ಹೋಯಿತು (ರೂಢಿ).

**ತೊಳಂಕು, ತೊಳಕಂ, ಸೊಳಕ** (ನಾ). ೧. ದೇಹದ ಮಧ್ಯಭಾಗ: ಭ್ರೂ ವಕ್ಷಂ ತೋಳ್ ತೊಳಂಕು ತೊಡೆಯೆಂಬೆಡೆಯೊಳ್ ಕೀಲಿದುವು ಭೀಮನಿಸೆ ವಿಶಿಖಾವಲಿ ಮಾಱಾಂತರಾತಿಸೇನೆಯ ಮೆಯ್ಯೊಳ್ (ಕಾವ್ಯಾವ. ೧೬೯); ಏಕಲ್ಪಬಿಂದುಗೆ – ಕದಂಪು, ಕದಪು . . . ತೊಳಂಕು, ತೊಳಕು (ಶಮದ. ೩೭ ಪ್ರಯೋ); "ಕೀಲಂ; ಸಂದಂ" (ಪ್ರಭಿನ್ನ). **ತೊಳಕು:** ೧. ಅಡಿ ತೊಡೆ ಪೊರ್ಕುಳುಂ ತೆಗಲೆ ಕೈಕಣಕಾಲ್ ಕೊರಲೆಂಬಿವುಂ ಬೆರಲ್ ನಡುವುರ ಬೆನ್ ಬಸಿಱ್ ತೊಳಕು ಕರ್ಚೆರೆ ಮುಯ್ಯು ಮುಸುಂಬು ಮೂಗು ಪೆರ್ದೊಡೆ ಕಟಿ ಮುಂಮಡಂ ಪರಡು ಸಂದಿ ನೊಸಲ್ ಪಣೆ ಕಣ್ ಕದಂಪೆಂಬೆಡೆಯನೆ ನಟ್ಟುವುರ್ಚಿದುವು ನೇರ್ದುವು ಸೀಳ್ದುವು ಪಾರ್ಥನಂಬುಗಳ್ (ಪಂಪಭಾ. ೧೧-೧೩೭). ೨. **ಸೊಳಕ:** ಸೊಂಟ; ನಡು: "ಸೊಳಕ = ಟೊಂಕ; ನಡು" (ಹಾನಕೋ. ೫೦). 'ಸೊಳಲಂ' ಪರಾ.

**ತೊಳಂಚಿ$_1$** 'ತೊಳಸಿ' ನೋ.

**ತೊಳಂಚಿ$_2$** 'ತೊಳಂಚಿ$_2$' ನೋ.

**ತೊಳಂಚಿ$_1$** 'ತೊಳಸಿ' ನೋ.

**ತೊಳಂಚಿ$_2$, ತೊಳಂಚಿ$_2$** (ನಾ). ಒಂದು ಸ್ಥಳದ ಹೆಸರು; **P** ಈಗಿನ ಮಂಡ್ಯ ಜಿಲ್ಲೆಯ ತೊಣಚಿ ಎಂಬ ಊರು: ತೊ ಳಂ ಚಿ ಯ ದ ಸೀಮೆಯೊಳ್ ತಾಗಿ ಅರಸಿಯು (ಎಕ. XII, ನಂಜನ. ೨೭೯-೯೨; 904). **ತೊಳಂಚಿ$_2$:** ಹದಿನೆಣ್ಟು ವಿಷಯದ ದೇಸಿಯು ಕರೆದು ತೊಳಞ್ಚಿಯ ಅಬ್ಬಿಕಾಱದೇವರು ನಗರೀಸ್ವರದೇವರ್ಗ್ಗೆ ಕೊಟ್ಟ ಧರ್ಮಂ (ಮ್ಯಆರಿ. ೦೯೨೫, ೨೧-೧೧; 1047). [ ? ]

**ತೊಳಕಲು** (ನಾ). (ಉಕ) ಮುಸುರೆನೀರು ; ಕಲಗಚ್ಚು : ಈ ಹಸು ಕೊಡುವುದು ಒಂದು ಸಿದ್ದೆ ಹಾಲು, ಒಂದು ಉಸುರಿಗೆ ಮೂರು ಬಾನಿ ತೊಳಕಲನ್ನು ಕುಡಿಯುತ್ತದೆ (ರೂಢಿ).

[ ತೊಳೆ₁ + – ಕಲು₂ (< – ಕಲ್₄ ]

**ತೊಳಕು** 'ತೊಳಂಕು' ನೋ.

**ತೊಳಗು₁** (ಕ್ರಿ). ಹೊಳೆ ; ತಳತಳಿಸು ; ಪ್ರಕಾಶಿಸು ; "ತೊಳಗು–ಕಾಂತೌ (ಪ್ರಕಾಶಿಸು" (ಶಮ ಧಾ) ; ಅತಿಧವಳಜಳಧರವಥಮುಂ ತೊಳಪೆಳೆ ವಟಿಯಂ ಕಳೆದುವು ಮುಳಿಸಂ (ಕವಿರಾ. ೩–೧೭೭) ; ಶ್ರೀಗೆ ಕುಳಸದನ ಮನೆ ತೊ[ಪಾಠಾಂ. ಬೆ]ಳಪ ಮಣಿಭವನದೊಳ್ (ಆದಿಪು. ೭–೨೭ ಉಗಳ) ; ತೊಳಗುವ ಪಾರಿಜಾತದಲಗೊಂಚಲಿನೊಪ್ಪುವ ಕರ್ಣಪೂರಮಂ ಕಳೆದೊಡಂ (ಶಾಂತಪು. ೮೩೩) ; ಭಾಸುರಮಾಯ್ತು ಜನೇಂದ್ರಾವಾಸಂ ತೊಳಗುವ ಸುವರ್ಣಕಳಶೋನ್ನತಿಯಿಂ (ಸೌಇಇ. XI–1, ೫೨–೯೫ ; 1007) ; ಮೃಗನೇತ್ರೆಯ ತೊಳಗುವ ಕಾಲುಗುರ್ಗಳ ನೂಪುರದ ಪೊಳೆವ ವಜ್ರಂಗಳ ಕಾಂತಿಗಳಡರೆ (ಜಗನ್ನಪು. ೩–೯೫) ; ನಿಡುಗಣ್ ತೊಳಪ್ಪ ಕದಪ್ಪುದ್ದ ನೊಸಲ್ . . . ಎಂಬಿವಱಿನೊಪ್ಪಿದುದಿರ್ದ ವನೇಚರೀಜನಂ (ಪುಷ್ಪಪು. ೫–೯೦).

**ತೊಳತೊಳಗು** (ದ್ವಿರುಕ್ತಿ): ರಕ್ತಾಶೋಕಪಲ್ಲವದಂತೆ ತೊಳತೊಳಗುವ . . . ಕರತಳಪಲ್ಲವಂಗಳ್ (ಪಂಪಭಾ. ೨–೫೯ ವ) : ಅಂದೇ ಮಣಿಮಂದ ಪುತ್ರೂರ್ಗೆ ಕಳುಪುತ್ರವಿರೆ . . . ತೊಳತೊಳಪ ದಿವ್ಯಾಭರಣಮಣಿ ಪ್ರಕರಮಂ (ನಂದಿರ. ೫–೨೨) ; ಶಕ್ರನ ನೊಱಮಡಿ ತೇಜದಲಿ ತೊಳತೊಳಗಿದನು ಕಲಿಪಾರ್ಥ (ಕುವ್ಯಾಳ. ೭–೮೪). **ತೊಳಗಿ ಬೆಳಗು** = ಅತಿಶಯವಾಗಿ ಪ್ರಕಾಶಿಸು : ತಳತಳಿಸಿ ತೊಳಗಿ ಬೆಳಗುವ ಪಳಿಕಿನ ಸಱಿಯೊಂದು . . . ಒಪ್ಪಿ ತೋಱಿತ್ತಾಗಳ್ (ಕವ್ಯಾಸಾ. ೧೦೫೦ ಓದ್ರಶ) ; ಮದನನ ಸೋದರದೇವಿಗೆಯೆನೆ ತೊಳಗಿ ಬೆಳಗಿದಂ ತುಹಿನಕರಂ (ಪಂಪಭಾ. ೪–೫೨) ; ಇನಬಿಂಬಂ ಕಣ್ಗಳುಂಬಂ ತೊಳಗಿ ಬೆಳಗೆ (ಕಾದಂಪೂ. ೩೫೪) ; ಪುಳಂ ವನಬ್ಬಿಸುತೆಯ್ತಪ್ಪನೆ ಜಯ ತೊ ಳ ಗಿ ಬೆ ಳ ಗು ತ ನ್ನೊ ಳ ಗಿ ಪ್ಪ ನೆ ಜಯ (ಜಯುಕ. ೮–೧೪) ; ಹ ಬ್ಬು ಗೆ ಯ ಹದಿನಾಲ್ಕು ಲೋಕಂ ಮೊಬ್ಬುಗಳನೀಡಾಡಿ ನಭದೊಳಗೊಬ್ಬನೇ ರವಿ ತೊಳಗೆ ಬೆಳಗುವ ಪೋಲು (ಕುವ್ಯಾಳ. ೮–೯). **ತೊಳತೊಳತೊಳಗು** = ಉ ಜ್ವ ಲ ವಾ ಗಿ ಬೆಳಗು ; ಬಹಳ ಪ್ರಕಾಶಮಾನವಾಗಿ ಕಾಂತಿಯನ್ನು ಬೀರು : ದಿವ ತಳ್ಪತಳದ ಪೊರೆಯೊಳಗೆ ತೊಳತೊಳತೊಳಗಿ ಪೊಱಮಡುವವೆಳನೇಸಱ ಬಳಗದ ಬೆಳಗನೊಳಕೊಂಡು (ಆದಿಪು. ೨–೬೦ ವ) ; ತೇಜಂ ಪಜ್ಜಳಿಸ ತಟತಟಿಸಿ ತೊಳತೊಳತೊಳಗಿದನಸ್ತಮಯಸಮಯದೊಳ್ ದಿನಪಸುತಂ (ಪಂಪಭಾ. ೧೨–೨೦೦) ; ತೊಳತೊಳತೊಳಗುವ ಬೆಳ್ದಿಂಗಳ ಪಕ್ಕದ ಪೊಳೆವ ರಶ್ಮಿಜಾಲವಿದೆನೆ . . . ಆದೇನೊಪ್ಪಿದುವೊ ಧವಳಚಮರರುಹಂಗಳ್ (ಕಾದಂಅ. ೯೩) ; ಹಂಸನ ಚೆಲ್ವಂ ತಳೆದೇನೆಸೆದುವೊ ತೊಳತೊಳ ತೊಳಗುವ ಶಶಿಕಾಂತಮಣಿಕಮಂಡಲಂ ಕೆಲದೊಳ್ (ಚಂದ್ರಪು. ೯–೨೭) ; ಮೂಲಪ್ರಕೃತಿಗಳನ್ನುತ್ತರಿಸಿ ತೊಳತೊಳತೊಳಗೆ ಬೆಳಗುವ ಪರಮಶಿವನಲಿ ಸೆಣಸಿದೆವಲಾ (ಕುವ್ಯಾಳ. ೬–೩೫).

[ ದೇ.॥ ತಮಿ. ಮಲ. ತುಳಙ್ಙು, ತುಳಕ್ಕು ; ತೆಲು. ತುಲಕಿಂಚು ]

**ತೊಳಗು₂** (ನಾ). ಬೆಳಕು ; ಕಾಂತಿ ; ಪ್ರಕಾಶ : "ಕಳೆಗದಿರು . . . ತೊಳಗು ಬೆಳಗುಂ ಚವಿಯು ತೀವೆಸರ್ ಕಾಂತಿಗೆ" (ಕಬ್ಬಮಂ. ೦೬) ; "ತೊಳಗೆನೆ ಮಿನುಗೆನೆ . . . ಕಾಂತಿಯೆನಿಕ್ಕುಂ" (ಕವಿಕಂ. ೦೦೦) ; "ತೊಳಗು ಕಾಂತಿ" (ಶಶಂ. ೯೮). [ <ತೊಳಗು₁ ]

**ತೊಳಚಿ** 'ತೊಳಸಿ' ನೋ.

**ತೊಳಚೆ** 'ತೊಳಸಿ' ನೋ.

**ತೊಳಪು₁** (ನಾ). = ತೊಳಗು₂ : "ತೊಳಗು . . . ತೊ[ಪಾಠಾಂ. ತ]ಳಪಂ. ಮಸೆ–ಈ ೧೪ ಕಾಂತಿ" (ಶಕಸಾ ೧೦–೨೦೨) ; "ಮಸೆಯೆಂದು ತೊಳಪ [ಪಾಠಾಂ. ತಳಪ, ತೊಳಪ]" (ಅಭಿಕೃ. ೫೩). [ ತೊಳಗು₁ + – ಪು₂ ]

**ತೊಳಪು₂, ತೊಳಹು₁** (ನಾ). ಒಂದು ಮನೆತನದ ಹೆಸರು ಮತ್ತು ಆ ಮನೆತನಕ್ಕೆ ಸೇರಿದವನು : ವಿನಯನಿಧಿ ರಾಜಗೌಡಿಗೆ ಮನುಚರಿತನೆನಿಪ್ಪ ತಿಪ್ಪಗೌಡಂಗಂ ಕೇತನು ಸಾತನೆಂಬ ಮಕ್ಕಳು ಜನಿಯಿಸಿದರು ತೊಳಪ ಕುಳಕೆ ತಿಳಕರೆನಲ್ಕಂ (ಕಇ I, ೨೪–೩೦ ; 1148). **ತೊಳಹು₂** : ಶಿವ ನಂದಯೋಗಿ ನಿವೇದ್ಯಶಾಲೆಯಂ ಮಾಡಿ[ ಸೂ ]ರಲಲಂ ತೊಳಹನೆ ಕಯ್ಯಲೂ . . . ಬದಿರೆ ಗದ್ದೆಯ ಮೇಲಿಕ್ಕಿದ ವಾಣ್ಣ್ಯಗದ್ಯಾಣಂ (ಸೌಇಇ. VII. ೩೮೦–೦೩ ; 1140) ; ಶ್ರೀಶಂಖರನಾರಾಯಣದೇವರಿಂಗೆ ಮಾದಾಡಿ ತೊಳಹರು ಮಾಡಿ[ದ] ಧರ್ಮಪ್ರತಿಷ್ಠೆ (ಸೌಇಇ. IX–ii, ೪೨೫–೦೦ ; ಸು. 1401) ; ತುಳುವದ ತೊಳಹರ ಮೂಲವು ಬೆಳಗಾವಿಯ ತೊಳಹರ ಕುಟುಂಬವೆಂಬುದಾಗಿ ಅನುಮಾನಿಸಲಾಗಿದೆ (ತುಳುನಾ. ೨೭೨).

**ತೊಳಹರ ಬಳಿ** = ತೊಳಪರ ವಂಶ : ತೊಳಹರ ಬಳಿಯ ಅನತಕ ಸೆಟ್ಟಿತಿಯ ಮಗ ಆದಿಸೆಟ್ಟಿ (ಪ್ರಾಆರಿ. ೧೯೪೭, ೭–೨ ; 14ನೆಯ ಶತ) : ತೊಳಹರ ಬಳಿಯ ಮಾಣಿಕ್ಯಸೆಟ್ಟಿಯ ಗಡಿಯಿಂದಂ ಬಡಗಲು (ಸೌಇಇ. IX–ii, ೪೩೪–೦೭ ; 1472) ; ತೊಳಹರ ಬಳಿಯ ಹರಿಯ ದೇವ[ಕ] ನಾಯಿಕಿತಿಯ ಮೊಂಮಗ (ಕಇ. I, ೭೭–೯ ; 1494). [ ? ]

**ತೊಳಪು₃** (ನಾ). (?) : ಆ ಗ್ರಾಮದ ಸೀಮೆಯಂತೆ[೦]ದೊಡ ಅಲಿ ಗೊಂದದಿಂ . . . ತೊಳಪ ಬಳಪ ಬಳಿಯಳಿಯಿಂ . . . ಒಳಗುಳ್ಳ ಭೂಮಿ (ಇಆ. XVIII, ೩೦೨–೦೮ ; 11ನೆಯ ಶತ). [ ? ]

**ತೊಳಪು** (ನಾ).ಕಾಂತಿ; ಪ್ರಕಾಶ: "ತೊಳಪುಂ[ಪಾಠಾಂ. ತೊಳಪಂ, ತಳಪುಂ] ಮಿಱುಗು . . . ಡಾಳಂ ತಾವೆನಲ್ಕಾಂತಿಗೆ ಪೆಸರ್" (ಅಭಿಕೃ. ೨೪) ; ತೊಳಪಿಂದೆ ರತ್ನವೊಪ್ಪೆ (ಸೌಇಇ. IX–i, ೨೯೮–೦೭ ; 1196) ; ಎಳವೆಣ್ಗಳ ಕಣ್ಣೆಳಗುಜ್ಜಳಭಟರ ಕೃಪಾಣಲತೆಯ ತೊಳಪುಂ . . . ಪರ್ವಿತಾ ಸಭಾಮಂದಿರಮಂ (ಅದ್ಭುಟ. ೨–೦೭) ; ಬಲು ಬೊಬ್ಬೆ ಸಿಡಿಲು ಖಡ್ಗಗಳ ತೊಳಪೂ ಮಿಂಚು ಸಲೆ ತುರಗದ ದನಿ ಗುಡುಗು (ಕಂನವಿ. ೧೮–೦೦೦).

[ ತೊಳಗು₁ + – ಪು₂ ]

**ತೊಳಮಿ**(ನಾ). (?):ಪಿತೃಕಳತ್ರ ಮಿತ್ರಜನಮಂ ಕಾಯ್ವಾನ್ಸ ತಾಬ್ದಪ್ಪೊಡೀ ನಂಡಿಯಲ್ಲೇಬ್ಬುವೇ ಪೆಂಪನೊಪ್ಪ ಗುಣತೆ ತೊಳಮಿ ಕಿಟ್ಟ ಗೋಪಯ್ಯನಂ (ಎಕ. III, ಮೈಸೂರು, ೬–೦೦ ; ಸು. 760). [ ? ]

**ತೊಳಲ್₁** 'ತೊಟಲ್₁' ನೋ.

**ತೊಳಲ್₂** 'ತೊಟಲ್₂' ನೋ.

**ತೊಳಲಾಟ** (ನಾ). ೧. ಸಂತ್ರಾಟ ; ಅಲೆದಾಟ ; ೨. ಕಷ್ಟ ; ಬವಣೆ ; ಗೋಳು : ಈ ತೊಳಲಾಟದೊಳಗೆ . . . ಬಾಳುವೆಗಾಗಿ ಚಿಂತಿಸುತ್ತಾ ತಾಪಕ್ಕೊಳಗಾಗಿ (ಬದುಕಿ. ೦೪೭) ; ಈ ಗೋಳಾಟವು ಅವಳ ಅಂತರಂಗದ ತೊಳಲಾಟವಾಗಿತ್ತು (ಭಾರತಿ. ೦೫೩) ; ಇನ್ನು ಈ ತೊಳಲಾಟ ಯಾಕೆ ? (ದೂಟಿಬ್ಬ. ೦೦೯) ; ಹೆಂಗಸರ ಈ ತೊಳಲಾಟ ಇದ್ದೇ ಇದೆ (ಸಮುಕಿ. ೯೩).

[ ತೊಳಲ್₁ (<ತೊಟಲ್₁) + ಆಟ ]

**ತೊಳಲಾಡು** (ಕ್ರಿ). ೧. ಸುತ್ತಾಡು ; ಅಲೆದಾಡು : ದಿನವೆಲ್ಲಾ ಕಾಡಿನಲ್ಲಿ ತೊಳಲಾಡಿ ಅವರೆಲ್ಲಾ ಬಹಳ ಆಯಾಸಗೊಂಡರು (ರೂಢಿ). ೨. ಕಷ್ಟಪಡು; ತೊಂದರೆಪಡು; ಗೋಳಾಡು: ನಮ್ಮ ಕೈಯಾರ ಬಂಧನವನ್ನು ತೊಡಗಿಸಿ ಅದರಲ್ಲಿ ಸಿಕ್ಕಿ ತೊಳಲಾಡುವುದು ನನಗೆ ಸರ್ವಥಾ ಇಷ್ಟವಿಲ್ಲ (ಅನಾಮಿ. ೮೯) : ಹಿಂದೂಸ್ಥಾನವೇ ದಾಸ್ಯದಲ್ಲಿ ತೊಳಲಾಡುವವರಿಗೆ ಚಟಗಳಿಗೆ ದಾಸನಾಗದ ಹಿಂದೀಯನು ಯಾರು (ಮುಂಗಾಪು. ೩೮).

[ ತೊಳಲ್₁ (<ತೊಟಲ್₁) + ಆಡು₁ ]

**ತೊಳಲಿಕಲ್ಲು** 'ತೊಟಲಿಕಲ್' ನೋ.

**ತೊಳಲಿಕೆ** 'ತೊಟಲ್ಕೆ' ನೋ.

**ತೊಳಲಿಚು** 'ತೊಟಲ್ಚು' ನೋ.

**ತೊಳಲಿಸು** (ಕ್ರಿ). ಸುತ್ತುವಂತೆ ಮಾಡು ; ತಿರುಗುವಂತೆ ಮಾಡು : ಬಂದುದೊಂದು ಸುಳಿಗಾಳಿ ಧರೆ ನಡಗುವಂತೆ . . . ತೊಳಲಿಸಿತಜಾಂಡ ಶತಕೋಟಿಗಳನು (ಜೈಮಿಭಾ. ೩೨-೩೯) ; ಅರ್ಜುನನನ್ನು ಸುಮ್ಮಸುಮ್ಮನೆ ಸೂಳೆಗೇರಿಯಲ್ಲಿ ತೊಳಲಿಸಿರುವುದೂ ಇದಕ್ಕೆ ನಿದರ್ಶನ (ಕಾವ್ಯಸ. ೮೧).
[ ತೊಳಲ್$_1$ (<ತೊಟಲ್$_1$) + – ಇಸು$_2$ ]

**ತೊಳಲು$_1$** 'ತೊಟಲ್$_1$' ನೋ.

**ತೊಳಲು$_2$** (ನಾ). ಚಿಗುರು ; ತಳಿರು : ಆ ಗಾಳಿ ತಾನೆ ಬೀಸಣಿಗೆಯಾಗಿ ತನ್ನನ್ನೆ ಬೀಸಿಕೊಳಲು ತಲೆಯಲ್ಲಿ ಹೂವು ಅರಳಿರಲು ಮುಡಿಸಿಕೊಳಲೇಕೆ ತಳಿರ ತೊಳಲು ? (ಅರಳು. ೧೦೦-೧೯). 'ತೊವಲ್$_2$' ಪರಾ.
[ <ತಳಲ್$_2$ ]

**ತೊಳಲೆ** 'ತೊರಳೆ' ನೋ.

**ತೊಳಲ್ಕೆ** 'ತೊಟಲ್ಕೆ' ನೋ.

**ತೊಳಲ್ವಲೆ** (ನಾ). ಒಂದು ಬಗೆಯ ಬಲೆ : ಕೋಲುವಲೆ ಹಬ್ಬಲೆ ತೊಳಲ್ವಲೆ ಸಗಾಢವಲೆಗಳ ಹೊಟಿಗಳೊಳಿಯಂ ಪೊತ್ತು (ಸೌಂದಪು. ೧೮-೩೯). [ ತೊಳಲ್ ? + ಬಲೆ$_1$ ]

**ತೊಳವಿಗೆ** (ನಾ). ಸಮೂಹ ; ಗುಂಪು (?) : ವಾರಿಯೊಳರ್ದಿಕೊಳ್ಳರಣ್ಯ ವಾರಣಂಗಳೊಡನೆ ಭರದಿಂ ಪೊರ್ಗಂ ಮೊಗಂಬುಗುವ ನೀರ ಪೇರಾನೆಗಳ ತೊಳವಿಗೆಗಳೊಳಂ (ಚಂದ್ರಪು. ೩-೪೦ ವ). [ ? ]

**ತೊಳಸಂಬಟ್ಟೆ** (ನಾ). ಅಸ್ತವ್ಯಸ್ತತೆ; ಅವ್ಯವಸ್ಥೆ; ಗೊಂದಲ : ಪಲ್ಯದ ಸ್ವರ್ಗ ಅನುಭವಿಸುತ್ತಾ ಇರುವಾಗ ಅಧೀನದ ನರಕದ ತೊಳಸಂಬಟ್ಟೆ ಜ್ಞಾಪಿಸುತ್ತೀಯಲ್ಲೇ ! (ನಡದಾ. I. ೫೨೬) ; (ನೀತಿ, ಮೊ.ಗಳ ವಿಷಯದಲ್ಲಿ) ತೊಳಸಂಬಟ್ಟೆಯ, ಸೊಟ್ಟಪಟ್ಟ, ಸುತ್ತುಬಳಸಿನ; ವಕ್ರ, ಕುಟಿಲ (Tortuous. ಇಂಕನಿ). 'ಕಂಡಾಬಟ್ಟೆ' ಹೋ. [< ತೊಟಸು$_1$]

**ತೊಳಸಾಟ** (ನಾ). ಜಗಳ ; ಕಲಹ : ಆಚಾರ್ಯರಿಗೆ ಕವುಟಲ್ಯಬುದ್ಧಿಯಂ ಕಲಿಸಿ ಒಂದಕೊಂದ ನೆನೆದು ತೊಳಸಾಟವಂ ಮಾಡಿ (ಎಕ. II, ೩೩೩-೨೨ ; 1206 ?) ; ತೊಳಸಾಟವಿದು ಗೋಚರಿಸಲಚಿಯದು ಗೋಮಿನೀಧವ ನೊಡನೆ ನಿನಗೆಂದ (ತೊರೆರಾ. ೬-೨-೨೪) ; ಮರುಳೆ ಸುಮ್ಮಗಿರು ನಮ್ಮ ಕಣ್ಣಾರೆ ತೊಳಸಾಟವಂ ಮಾಡದಿರಿ (ತುರಂಗ. ೩೪-೪೫).
[ ತೊಳಸು$_4$ (< ತೊಟಸು$_2$) + ಆಟ ]

**ತೊಳಸಿ, ತೊಳೇಚಿ$_1$, ತೊಳಂಚಿ$_1$, ತೊಳಚಿ, ತೊಳಟಿ** (ನಾ). = ತುಲಸಿ : "ತುಳಸೀ – ತೊಳಸಿ" (ಒಷಧಿ. ೬೧) ; ರುದ್ರಾಕ್ಷಿಯ ಧರಿಸ ಲೊಲ್ಲದೆ ಪದ್ಮಾಕ್ಷಿ ತೊಳಸಿಯ ಮಣಿಯಂ ಕಟ್ಟಿಕೊಂಬಿರಿ (ಸರ್ವಜ್ಞ. ೦೬೮-೮೫) ; ನಾಗದೇವನು ಮಾಡಿಸಿದ ತೊಳಸಿಯ ವೃಂದಾವನಕೆ ಸರ್ವ್ವರೂ ಅನುಕೂಲರು (ಎಕ. III, ಮಳವ. ೧೫-೩ ; 1389 ?) ; ಇದ ವಿಚಾರಿಸೆ ಬಟಾಯ ತೊಳಸಿಯ ವುದಕದಂತಿರೆಯಲ್ಲಿ ನೋಳ್ಪುದು ಪದುಮನಾಭನ ಮಹಿಮೆ ಧರ್ಮವಿಚಾರ ಮಾತ್ರವನು (ಕುಮ್ಮಾಅ. ೧-೧೪) ; ಅಮೃತಪಡಿಗೆ ಅಕ್ಕಿ . . . ತೊಳಸಿ ಹೂವಿನ ಮಾಲೆ (ಎಕ. VI, ಮೂಡಗೆ. ೫೯-೭ ; 1620) ; ಕೊರಲ ದಂಡೆಯ ತೊಳಸಿಯ ಪೊಸ ಚಿಗುರು (ಗೀತಗೋ. ೦೩-೨೦). **ತೊಳಂಚಿ$_1$** : ಬನ್ನಿಯೆಕ್ಕೆಯುತ್ತರ ಣೆಯ ಬೆಲ್ಲವತ್ತ್ರದ ತೊಳಂಚಿ [ಪಾಠಾಂ. ಚಿ] ಯ ಪತ್ರಿಯನೊಂದಿನಿತ್ತು ಚೆಚ್ಚರಮಮರತ್ವಮಂ ಪಡೆಯಿಮೆಂಬರ್ (ಸಮುಪ. ೮-೧೨) ; ಒಪ್ಪುವ ಯಜ್ಞಸೂತ್ರಕಂ ಕಿವಿಯ ತೊಳಂಚಿಯುಟ್ಟುಡೆಯ . . . ವಿಲಾಸಮೊಪ್ಪೆ (ಮಹಾನೀ. ೧೧-೮೭). **ತೊಳಂಚಿ$_1$**: "ತೊಳಂಚಿ ತೊಳಚಿ" (ಚತುನಿ. ೬೧); ಸೂರಣಕ್ಕೆಲ ಕುಮಾರಿ(ಗೆ)ಯ ಕಳ್ಳಿಯ ಬೂದಿ . . . ಲವಣಕ್ಕೆ ತೊಳಂಚಿ ವಿಷಾಪಹಾರಕಂ (ಶೋಕೋಪ. ೮-೨೭). **ತೊಳಚಿ** : "ತೊಳಚಿ ಯೆನೆ ತುಳಸಿ" (ಶಬ್ದಮಂ. ೨೪) ; ಪೊಸವ ಮರನಂ ಬಿಲಂ ತೊಳಚಿ [ಪಾಠಾಂ. ಲಿ] ಸಮಸ್ತಂ ದೆಯ್ವಮಿಂತಿವೆಂಬವರ್ಮೂರ್ಧರ್ (ಸಮುಪ. ೯-೮೨) ; ಬಹುಳದಿಂ ಸತ್ವಕ್ಕೆ ಚಿತ್ತಂ – ಅಪ್ಸರಸ್ – ಅಚ್ಚರಿ . . . ತುಳಸಿ – ತೊಳಚಿ (ಕಮದ. ೨೬೩ ಪ್ರಯೋ) ; ಅಣೆಯರದ ತೊಳಚಿ ಗೊರಟನ ಮಣೆದೊಡವಿನ . . . ಮಟ್ಟಿಗರೆಸೆದರ್ (ಹಮ್ಮಿರ. ೭-೧೯) ; ತೊಳಚಿಯು ಪಸುರ್ವೆಳಗು ದುಗುಲದ ಪೊಂಬೆಳಗು . . . ಎನ್ನ ತಿಳಿವು ಬೆಳ್ವಳಗಿನೊಳೆಡವಿದರ್ದಿ (ಕರ್ಣಪ್ರ. ೧-೩೪); ಎಂತೂ ತೊಳಚಿದೋಂಟ ದೊಳ್ ತುಬುಚಿ ಪುಟ್ಟುವಂತಿರೆ ನಿನ್ನೀ ಬಟಿಯೊಳ್ ಜಾಳಿನೆ ಪಂಚಮನಾಂ ಪುಟ್ಟಿದೆಂ (ರಾಮಾಕ್ಕ. ೨೭-೭). **ತೊಳಚಿ** : ಇತ್ವಕ್ಕೆತ್ವಂ – ಅತಸಿ – ಅಗಸೆ . . . ತುಲಸಿ – ತೊಳಚಿ (ಶಬ್ದದ. ೨೬೯ ಪ್ರಯೋ) ; ದೇವಿಯರು ಬ್ರಹ್ಮನ ಕೈಯಲ್ಲಿ ಒಂದು ಬೀಜವ ಕೊಡಲು, ಅದ ತಂದು ಬೂದಿಯ ಮೇಲೆ ಬಿತ್ತಲು, ತೊಳಚಿ ಪುಟ್ಟಿತ್ತಾಗ (ಭೃಂಕಮ. ೧೧೭).
[ < ಸಂ. ತುಲಸೀ ]

**ತೊಳಸು$_1$** 'ತಳಿಸು$_1$' ನೋ.

**ತೊಳಸು$_2$** 'ತೊಟಿಸಂ$_1$' ನೋ.

**ತೊಳಸು$_3$** 'ತಳಿಸು$_3$' ನೋ.

**ತೊಳಸು$_4$** 'ತೊಟಿಸು$_2$' ನೋ.

**ತೊಳಸುಗ** (ನಾ). ಎದುರಿಸುವವನು ; ಪ್ರತಿಭಟಿಸುವವನು : ಸೆಳೆದು ಕೊಂಡನು ಖಡುಗವನು ಭುಜವಳಯದಿಂದವುಚಿದನು ತೋಟಿಯ ತೊಳ ಸುಗರ ಹೊಯ್ ಹೊಯ್ಯೆನುತ ಗರ್ಜಿಸಿದನಾ ಭೀಷ್ಮ (ಕುಮ್ಮಾಸ. ೦೦-೨೬).
[ ತೊಳಸು$_4$ (<ತೊಟಸು$_2$) + – ಗ$_2$ ]

**ತೊಳಸುಗೊಳ್ಳು** (ಕ್ರಿ). ಸಿಕ್ಕಿ ಬೀಳು ; ತೊಡಕಿಕೊಳ್ಳು : ತರ್ಕತಂತ್ರದ ತಣಿದ ಯುಕುತಿಗೆ ತೊಳಸುಗೊಳ್ಳದ ಠಾವಲಾಯೆಂದ (ಕುಮ್ಮಾಅ. ೧-೨೨).
[ತೊಳಸು$_4$ (<ತೊಟಸು$_2$)+ಕೊಳ್ಳು$_1$ (<ಕೊಳ್$_1$) ]

**ತೊಳಹ$_1$** (ನಾ). ತೊಳೆಯುವಿಕೆ; ಶುದ್ಧಿಮಾಡುವುದು: ಹಸ್ತಶುದ್ಧಿಂ–ಕೈ ತೊಳಹವಂ (ಪ್ರಕಟೀ. ೬-೧೫) ; ಪರಶುರಾಮನ . . . ಪರಶುವಿನ ನೆಣವಸೆಯ ತೊಳಹದ ಪರನದಿಯ. ವಿಸ್ತರಣವನು ಕೇಳಿದನು ಯಮಸೂನು (ಕುಮ್ಮಾಅ. ೯-೧೫) ; ಎಲವೋ ಮಡಿವಳ ನಿನ್ನ ತೊಳಹವು ಚೆಲುವನಾದವು . . . ತೊಳೆದು ಕೊಡು ನಾವುಟ್ಟುದನು ನೀ (ಸಾಳ್ವಭಾ. ೨೨-೫೯). [ ತೊಳೆ$_1$ + – ಹ$_2$ ]

**ತೊಳಹ$_2$** 'ತೊಳಪ$_2$' ನೋ.

**ತೊಳಿಸು** 'ತಳಿಸು$_1$' ನೋ.

**ತೊಳೆ$_1$** (ಕ್ರಿ). ೧. ಸ್ವಚ್ಛಮಾಡು ; ಶುದ್ಧಮಾಡು: "ತೊಳೆ–ಪ್ರಕ್ಷಾಲನೇ, ಘಲ ತೂಲಾಯಾಂ ಚ" (ಕಮುಧಾ) ; ನಿಮ್ಮ ಕಾಲಂ ತೊಳೆವೆ[ಪಾಠಾಂ. ಕರ್ಚುಪೆ,ಕರ್ಚುವ]ಮೆಂದು ಮಹಾದೇವಿ ತಾನೆ ಕಾಲಂ ಕರ್ಚೆ (ವಡ್ಡಾರಾ. ೭೮-೧೧) ; ಪಳುಕಿನ ಪಾಪೆಯನಮರ್ದಿಂ ತೊಳೆದಂತೆ (ಆದಿಪು. ೬-೩೯) ; ತೊಳೆವೊಡದು ಜನಪತಿಮತಸಳಿಳಂ ತೊಳೆಗುಂ ವಿಶೋಧಿ ತೊಳೆಗುಂ ನಿಯಮಂ ತೊಳೆಗುಂ (ಶಾಂತಿಪು. ೪-೭೯) ; ಮುರಹರನಾಗಸಕಿತ್ತಿದ ಚರಣ ಮನಜನಲ್ಲಿ ತೊಳೆದನಾ ನೀರೆ ಗಡಂ ಸುರಸಿಂಧುವಾಗಿ ಬರುತಿರೆ (ಸಮುಪ. ೮-೩೩) ; ಕುದುರನೇಸು ತೊಳೆದರೆಯೂ ಕೆಸಟು ಮಾಣ್ಬುದೆ (ಬಸವ. ೨೬೦) ; ಗುರುಗಳಿಗೆ ಕಾಲ ತೊಳೆದು ಧಾರಾಪೂರ್ವ್ವಕವಾಗಿ ಕೊಟ್ಟರು (ಎಕ. VII, ಶಿವಮೊ. ೭೧-೧೭ ; 1287) ; ತನ್ನಡಿಗಳಿಗೆ ತಪ್ಪಗ್ರೈವಣೆಯುಂ ತಾನೆ ಕಳಕೊಂಡು ಅಡಿಗಳಂ ತೊಳಕೊಳುತ ಬಸವಂ ಸಡಗರಿಸಿ (ಬಸಪು. ೩೦-೯) ; ತೊಳೆದರೆ ಮಸಿಗೆ ಧವಳತೆಯುಂಟೆ (ಕೌಶಿರಾ. ೩೬-೪೭).

೨. ಅಳಿಸು ; ತೆಗೆದುಹಾಕು : ಅಜ ಬರೆದ ಬರಹವನು ತೊಳೆಯಬಲ್ಲನೆ ಬಾಣ (ಪುರಂದ. ೨-೪೯-೩). ೩. ನಿವಾರಿಸು ; ಪರಿಹರಿಸು : ಹಿಂದಿನವ ಮಾನಗಳ ತೊಳೆಯಿರೇಳಿ (ವಿಜಗೀ. ೯೩-೬) ; ಈ ಪುರೋಚನವೃತ್ತಾಂತ ದಿಂದ ಬಂದಿರುವ ಕಳಂಕವನ್ನು ತೊಳೆದುಕೊಂಡಂತಾಗುತ್ತದೆ (ವಚಭಾ. ೬೩). ೪. ಇಲ್ಲವಾಗು : ತನಗಿಂದು ತೊತ್ತಿನ ಕೆಲಸ ಕೊಂಡಿಹುದ ನಿಲಿಸುವೊಡೆ ಕದ್ರುವಿಗೆ ಕೊಟ್ಟರೆಯೊಲಿದು ಸುಧೆಯನು ದಾಸಿತನವದು ತೊಳೆದುಹೋಹುದು (ಸಂಛಪ. ೫-೩೪). ೫. ಹಾಳುಮಾಡು ; ನಾಶ ಮಾಡು : 'ನೀ ಬಂದು ಈ ಮನೆ ತೊಳೆದೆ' ಎಂದು ಅವಳು ದಿನಾ ಸೊಸೆ ಯನ್ನು ಛೇಡಿಸ ಹತ್ತಿದಳು (ಹೂಸಕ್ಕ. ೨೦). 'ತೊಡೆ₁' ಪರಾ.

**ತೊಳೆದ ಕೆಂಡ** = ಆರಿಸಿದ ಕೆಂಡ ; ಇದ್ದಲು : ಅವನ ಕ್ರೂರವಾದ ಕಣ್ಣು, ತೊಳೆದ ಕೆಂಡದಂಥ ಮೈಬಣ್ಣ ನೋಡುವವರಿಗೆ ಹೆದರಿಕೆಯನ್ನು ಹುಟ್ಟಿಸುವಂತಿತ್ತು (ಜಂಂ). **ತೊಳೆದ ಮುತ್ತು** = ಶುಭ್ರಗೊಳಿಸಿದ ಮೌಕ್ತಿಕ ; ಶುದ್ಧವಾದ ಮುತ್ತು : ಆ ಮಗು ತೊಳೆದ ಮುತ್ತಿನಂತೆ ಬಹಳ ಮುದ್ದಾಗಿದೆ (ಜಂಂ). [ ದೇ. ≡ ತೆಲು. ತೊಲಂಚು ]

**ತೊಳೆ₂, ಸೊಳೆ₂, ಸೋಳೆ** (ನಾ). ಕಿತ್ತಳೆ, ಹಲಸು ಮುಂತಾದ ಹಣ್ಣು ಗಳ ಹಾಗು ಹತ್ತಿ ಮೊದಲಾದುವುಗಳ ಒಳಗಿನ ಒಂದೊಂದು ಭಾಗ,-ಖಂಡ : "ತೊಳೆ - ಪ್ರಕ್ಷಾಲನೇ, ಫಲತೂಲಾಯಾಂ ಚ" (ಕಮುಧಾ) ; ಪಲಸಿನ ತೊಳೆ(ಟೆ)ಗಳನರನೇಱಲ ಕೊನೆ ಕರ್ಪೂರಮಣ್ಣೆ ಯಂಬಿನಿತಱಿಂ ಕಲಸಿ ಕಡುವಿಸಿರೊಳವನಿರಿಸಲೊಡಂ ದ್ರವಿಯಿಸುಗು ಮಚ್ಚರಸಮಪ್ಪನೆಗಂ (ಕೋಕೋಱಶ. ೮-೩೫) ; ಕಡಲೆಯಂದದೊಳು ಹಲಸಿನ ತೊಳೆಯನುತ್ತರಿಸಿ ಹುಡಿಮೆಣಸು ಶುಂಠಿ ಯಾಲಕ್ಕಿಯಂ ಮೊಸರ ಕೆನೆಯೊಡನಿಕ್ಕಿ (ಸೂಪಶಾ. ೫-೩೯) ; ನಾನೊಂದು ತರಲ ಮರುಕಾಂತಾರ ದಲ್ಲಿ ತೊಟ್ಟು ಕಳಚಿದ ಹತ್ತಿಯ ತೊಳೆಯಂತೆ ಇಳಿಯುತ್ತಿದ್ದೆ (ಬಾಚಿಲ. ೧೯೩) ; ತೊಗಲು ತೊಳೆ ಆದೀತೆ ? (ಗಾದೆ). **ಸೊಳೆ₂** : ಆಲೂಗಡ್ಡೆ . . . ಹಲಸಿನಕಾಯಿಯ ಸೊಳೆ ಇತ್ಯಾದಿಗಳನ್ನೂ ತುಂಡುಮಾಡಿ ಈ ರೀತಿ ಕರಿಯಬಹುದು (ಅಡುಶಾ. ೯೦) ; ಬಳಿಕ ಮೂವರೂ ಸೊಳೆಗಳನು ತಿಂದರು (ಹುಳಿಪ. ೧೦೩). **ಸೋಳೆ:** ರುಚಿ ನೋಡೋಣವೆಂದು ಒಂದೆರಡು ಸೋಳೆ ಬಾಯಿಗೆ ಹಾಕಿಕೊಂಡೆ (ಜಾಲಿಗಿ. ೧೯೯) ; ರಟ್ಟೆ ! ಹುಲ್ಲು ! ಯಾರಿಗದು ಸೋಳೆ ಇಲ್ಲದಿದ್ದರೆ ? (ಮೊಮುಗು. ೬೪).
[ ದೇ.≡ ತಮಿ. ಚುಳೈ; ಮಲ. ಚುಳ; ತೆಲು. ತೊಲ, ತೊನ; ಕುವಿ. ತೋಲ ]

**ತೊಳೆ₃** 'ಸೊಳ್ಳೆ₁' ನೋ.

**ತೊಳೆ₄** (ನಾ). ದೋಣಿ ನಡೆಸುವ ಹುಟ್ಟು : ಆಗ ಸಾಲು ಸಾಲಾಗಿ ಜನರನ್ನು ಹಡಗಿನ ಬಾಣೆಗಳಲ್ಲಿ ಕುಳ್ಳಿರಿಸಿ ತೊಳೆ (oar)ಗಳಿಂದ ನೀರನ್ನು ತಳ್ಳಬೇಕಾಯಿತು (ಪಾಂಪ್ರ. II, ೬೪೩) ; ಆಗ ದೋಣಿಯ ತೊಳೆಗಳನ್ನು ಒಚ್ಚಬೇಕಾಗಿಲ್ಲ (ಒಂಟಿದ. ೧೩೬); ನೀನು ಒಂದು ತೊಳೆ ಹಿಡಿ, ನಾನೊಂದು ಹಿಡಿಯುತ್ತೇನೆ (ಕಿದಾಉ. ೧೬೧).

**ತೊಳೆಹಾಕು** = ಹುಟ್ಟುಹಾಕು : ರಾತ್ರಿ ಒಂದು ಹರದಾರಿ ತೊಳೆ ಹಾಕುವುದು ; ಅನಂತರ ಸ್ವಲ್ಪ ಹೊತ್ತು ತಣ್ಣಗೆ ಕುಳಿತಿರುವುದು (ಒಂಟಿದ. ೧೩೬). [ <ತೊಟಸು₁/ತಮಿ. ತುಟವೈ ; ಮಲ. ತುಟ ]

**ತೊಳೆತ** (ನಾ). ಶುದ್ಧಮಾಡುವಿಕೆ ; ತೊಳೆಯುವುದು : "ಕ್ಷಾಲನಂ = ತೊಳೆತಂ" (ಶಾಶಕ್ಕ. ೨೬೦). [ ತೊಳೆ₁ + -ತ₂ ]

**ತೊಳೆಯಿಸು** (ಕ್ರಿ). ಶುದ್ಧ ಮಾಡಿಸು ; ಸ್ವಚ್ಛ ಮಾಡಿಸು : ಭಕ್ತರ ಕೂಡ ಬಂದವನೀಗ ಕಾಲಂ ನೀಡಿ ತೊಳೆಯಿಸಿಕೊಂಡಹನು (ಬಸಪು. ೨೬-೪೦) ; ನಿಮಗೆ ಮುಖ ತೊಳೆಯಿಸಿ ಮಾತ್ರ ಕೊಡುವುದಕ್ಕೆ ಕಾಯ್ದು ಕೊಂಡಿದೇವೆ (ಜಂಗಾಳ್ಯ. ೧೩೪). [ ತೊಳೆ₁ + -ಇಸು₃ ]

**ತೊಳ್ತಳ** 'ತೊಟ್ಟುಟು' ನೋ.

**ತೊಳ್ತಳಂದುಳಿ** 'ತೊಟ್ಟುಟಾದುಂಟು' ನೋ.

**ತೊಳ್ಬಾಳ್** 'ತೊಟ್ಬಾಳ್' ನೋ.

**ತೊಳ್ತು** 'ತೊಟ್ಟು' ನೋ.

**ತೊಳ್ತುಗೆಯ್, ತೊತ್ತುಗೈ** (ಕ್ರಿ). ೧. ತೊತ್ತಾಗಿ ಮಾಡಿಕೊಳ್ಳು ; ಸೇವೆಮಾಡಿಸಿಕೊಳ್ಳು : ನಿಜಮೋಕ್ಷಲಕ್ಷ್ಮಿಯಂ ತ್ವರಿತದಿಂ ತೊಳ್ತು ಗೆಯ್ವಾಳ್ವ ಬಲ್ಗಾಡಿಯಿಂ (ಪದ್ಮರಾ. ೫-೩೪). **ತೊತ್ತುಗೈ** : ೨. ಸೇವೆ ಮಾಡು : ತೊತ್ತುಗೈವುದು ಲೋಕವೀತಗೆ (ಕಾಶಿಂಖ. ೨೫-೭).
[ ತೊಳ್ತು (<ತೊಟ್ಟು) + ಕೆಯ್₁ ]

**ತೊಳ್ತುಗೆಯ್ಮೆ** (ನಾ). ತೊತ್ತಿನ ಕೆಲಸ ; ಸೇವೆ ; ಊಳಿಗ : ತೊಳ್ತು ಗೆಯ್ಮೆಯ ಪೆರ್ಮೆಗೊಳ್ಪನೆಸಗುವೆನೆಂದು ಕಜ್ಜಮಂ ಕೈಕೊಂಡೊಡೇಂ ಸ್ವಾರ್ಥದೋಷಮಂ ಕಾಣ್ಬರಾರ್ (ಶ್ರೀಕಾಮಾ. ೧೧೫-೯೭).
[ ತೊಳ್ತು (<ತೊಟ್ಟು) + ಗೆಯ್ಮೆ (<ಕೈಮೆ₁ ]

**ತೊಳ್ತುಗೆಲಸ** 'ತೊಟ್ಟುಗೆಲಸ' ನೋ.

**ತೊಳ್ತುಗೊಡು** 'ತೊಟ್ಟುಗೊಡಂ' ನೋ.

**ತೊಳ್ತುಗೊಳ್** 'ತೊಟ್ಟುಗೊಳ್' ನೋ.

**ತೊಳ್ತುಬಾಳ್** (ಕ್ರಿ). ತೊತ್ತಾಗಿ ಜೀವಿಸು ; ಗುಲಾಮನಾಗಿರು : ನಾ ತೊಳ್ತುಬಾಳೆನು ನಿನಗೆ (ಮೂರುನಾ. ೧೧೨-೪೬೦).
[ ತೊಳ್ತು (<ತೊಟ್ಟು) + ಬಾಳ್₁ (<ಬಾೞ್₁) ]

**ತೊಳ್ಪಟ್ಟ** 'ತೊಟ್ಟುಪಟ್ಟ' ನೋ.

**ತೊಳ್ಮಗ** (ನಾ). ತೊತ್ತುಮಗ ; ಆಳುಮಗ : ಅವ [ ನಾ ] ತೊಳ್ಮಗ ಗೊಣ್ಡೊವ್ (ಸೌಇಇ. ೧೯೩೨, ಪುಂಗನೂರು. ೧೯೭-೭ ; ೨ನೆಯ ಶತ). 'ತೊಟ್ಟುಪಟ್ಟ' ಪರಾ. [ <ತೊಟ್ಟು + ಮಗ ]

**ತೊಳ್ಳು** (ಕ್ರಿ). ಸ್ವಚ್ಛವಾಗು : ಮೂವರು ಮೂರು ಒನಕೆಗಳನ್ನಿಟ್ಟಿ ಅನುಕ್ರಮವಾಗಿ ನೆಲಕುಳಿಗೆ (ಒರಳಿಗೆ) ಗುರಿತಪ್ಪದೆ ಕುಟ್ಟುವಾಗ ಹೊರಕ್ಕೆ ಹಾರುವ ಧಾನ್ಯವನ್ನು ತಂತಮ್ಮ ಒಂದೊಂದು ಪಾದದಿಂದ ಕೂಡುವರು. ಹೀಗೆ ಕೂಡದಿದ್ದರೆ ಅಕ್ಕಿ ಸರಿಯಾಗಿ ತೊಳ್ಳದು (ಸಂಶೋಧ. ೧೧೯). 'ತಳಿಸು₁' ಪರಾ. [ ದೇ. ≡ ತುಳು. ತೊಳ್ಳು ]

**ತೊಳ್ಳುಗುಂಡು** (ನಾ). ಕೆಳಗೆ ತಳ್ಳುವ ಗಂಡು (?) : ಬಹು ಜನರು ಹತರಾಗುವಂತೆ ಮಾಡಿರುವ ತೊಳ್ಳುಗುಂಡುಗಳನ್ನೂ ತುಪಾಕಿಗುಂಡು ಗಳನ್ನೂ ಇರಿಸುವುದಕ್ಕೆ . . . ಉಗ್ರಾಣಗಳನ್ನು ಮಾಡಿಸಿದರು (ಹಾಮುವಂ. ೮೯). [ < ತಳ್ಳು + ಗುಂಡು ]

**ತೊಳ್ಳೆ** 'ತೊರಳೆ' ನೋ.

**ತೊಳ್ಳೆಮೀನು** (ನಾ). ಒಂದು ಬಗೆಯ ಮೀನು; ಆ ಪೊಟ್ಟಣದಲ್ಲಿ ಕೆಲವು ಬೆಳ್ಳೇಡಿ, ಸೋಸಲು, ತೊಳ್ಳೆಮೀನುಗಳಿದ್ದು, ಒಂದು ತೊಳ್ಳೆಮೀನಿಗೆ ಇನ್ನೂ ಜೀವವಿದ್ದುದರಿಂದ ಚಿಮ್ಮಿ ಹಾರಿ ಒಲೆಯ ಬೂದಿಗೇ ಬಿದ್ದಿತು (ಮಲೆಮ. ೫೮೮). [ ತೊಳ್ಳೆ ? + ಮೀನು₂ (<ಮೀನ್₂) ]

**ತೊಱಗಲೆ, ತೊಱಗೆಲೆ** (ನಾ). ಒಂದು ಊರಿನ ಹೆಸರು ; P ಈಗಿನ ಬೆಳಗಾವಿಜಿಲ್ಲೆಯ ತೊರಗಲ್ಲು : ತದ್ವಾಪಿಗೆ ತೆಂಕಲ್ ತೊಱಗಲೆಗೆ ಬಡಗಲಿರ್ದುದು ನೆಱೆಯ ಸುಪೋದ್ವೀಪಸಮೆನಿಸಿ ಬೆಳುಗಲಿದೇಶಂ (ಅಜಿಪು. ೧೨-೪೪) ; ಕಿಸುಕಾಡೆಪ್ಪತ್ತುಮಂ ಬಾಗಡಗೆ ಯೆಪ್ಪತ್ತುಮಂ ತೊಱಗಲೆ ××× ಮಂ ಮಾಸೆಯವಾಡಿ ನೂಱ ನಾಲ್ವತ್ತುಮಂ . . . ರಾಜ್ಯಂಗೆಯ್ಯುತ್ತಂ (ಸೌಇಇ. XI-i, ೮೬-೮ ; 1050). **ತೊಱಗೆಲೆ :** ತೊಱಗೆಲೆ ಐಟ್ಟಹಳ್ಳಿ ನೆಗೞ್ದಾಜರಗೋಳ ಮೊಸಿಪ್ಪಗುರ್ವುವೆತ್ತಱಿಕೆಯ ಬೇಡವಟ್ಟುಗಳ . . . ಕಿಡಿಸಲಂಕದ ಮುನ್ನಿನ ಚಕ್ರವರ್ತಿಗಳ್ ಪೆಱರಳವಲ್ಲು (ಶಾಬ್ದಾವ. ೨೧೨). [ ? ]

**ತೊಱಗೆಲೆ**'ತೊಱಗಲೆ' ನೋ.

**ತೊಱಡು** (ನಾ). ಮರದಿಂದ ಹಣ್ಣನ್ನು ಕೀಳಲು ಉಪಯೋಗಿಸುವ ಕೊಕ್ಕೆ; ದೋಟಿ: (ಒ).

[ದೇ.॥ ತಮಿ. ತುಱಟು, ತುಱಟ್ಟಿ; ಮಲ. ತುಱಡು]

**ತೊಱಹ, ತೊಱಹ** (ನಾ). ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದವನು : ತೊಱಪರ ಬೂತಯ್ಯಂ ಪೂಲಿಯ ತುಱವಂ ಕೊಂಡಡೆ (ಎಇ. XVIII, ೨೦೦-೩; 1107). **ತೊಱಹ** : ತಂಬುಲಿಗ ಸಾಸಿರ್ವರ್ಗರರ್ತ್ಥಂ ತೊಱಹರು ಕೊಣ್ಣಡಾಯತ್ಥರ್ತ್ಥಂ ಸಿಂಗಗಾವುಂಣ್ಣನಿಕ್ಕಿಸಿ ತಂದ[ಡೆ] (ಸೌಇಇ. XI-1, ೧೪೮-೨೩; 1099); ಆ ಗ್ರಾಮದ ತುಱವಂ ತೊಱಹರ ಕಾಳಯ ಆ ಪುಯ್ಯಲಿಂಗೆಱಗಿ ಮೇಲಾಳಂ ನಿಱಿದು . . . ತುಱುವಂ ಮಗುರ್ಚ್ಚಿ (ಎಕ. VII, ಶಿಕಪೂ. ೩೭-೭; 1140); ಕಾವಗೌಡಂ ನೆಗರ್ದ ತೊಱಹರ ಕುಳಕ್ಕೆ ತಿಳಕಂ (ಕಇ. I, ೨೪-೧೫; 1148); ತೊಱಹನಂ ಬೆಂಕೊಂಡು ತುಳ್ದಿಯ್ದು ಮುಟ್ಟಿ (ಎಇ. XIX, ೨೩೦-೩೩; 1179). 'ತೊಳಪ್ಪ' ಪರಾ.

**ತೊರಹರ ಮಾರಿ** = ಒಂದು ಬಿರುದು : ತೊರಹರ ಮಾರಿ ವೈರಿ ಸಂಹಾರಿ ದುಡಿಂ ಮುಂನಿಱಿವಂ ಶೌರ್ಯ್ಯಮಂ ಮೆಱೆವಂ (ಎಕ. VIII, ಸಾಗರ. ೧೦೯-೫ ; 1042). [ ? ]

**ತೊಱಬು** (ನಾ). ಅಣಕ ; ಹಾಸ್ಯ : "ತೊಱಬೆಂದಣಕಂ" (ಕರ್ಣಾನಿ. ೬೮).

[ P ಇದು 'ಕೊಱಬು' ಎಂಬುದರ ಅಪಲಿಖಿತವಿರಬಹುದು ]

**ತೊಱರಗಣಿಗಿಲು** (ನಾ). ಒಂದು ಬಗೆಯ ಸಸ್ಯ : "ಕಾಂತಃ – ತೊಱರ ಗಣಿಗಿಲು, ನಂದಿವೃಕ್ಷ . . . ಸೂಜಕಲ್ಲು" (ಓಷಧಿ. ೨೮). 'ತೊಱ್ ಗಣಿಗಿಲು' ಪರಾ. [ ? + ಗಣಿಗಿಲು (< ಕಣಗಿಲೆ$_1$) ]

**ತೊಱವಿ, ತೊರವಿ** (ನಾ). ೧. ತ್ಯಜಿಸಂವಿಕೆ; ವರ್ಜಿಸುವುದು; ತ್ಯಾಗ: ಕ್ರೋಧದ ತೊಱವಿಯುಂ ಲೋಭದ ತೊಱವಿಯುಂ . . . ಎಂಬಿವಯ್ದುಂ ಪುಸಿಯರ ವ್ರತದ ಭಾವನೆಗಳು (ಚಾಸ್ತ್ರಟೀ. ೬೪-೬); ವಕಾರಕ್ಕೆ-ತೊಱವಿ, ಅಳವಿ, ಬಳವಿ (ಶಮದ. ಸ. ೨೨೦ ವೃತ್ತಿ). ೨. ಬಿಡುಗಡೆ; ವಿಮೋಚನೆ: ನೀವಲ್ಲಿಗೆ ಬಿಜಯಂಗೆಯ್ದು ತತ್ಪಣಿಗೆ ತೊ ಱ ವಿ ಯ ಂ ಕುಡುವು ದೆಂಬುದುಂ (ಧರ್ಮಾಮೃ. ೧೪-೯೩). **ತೊರವಿ**: ೧. ಅತಿಕಾಂಕ್ಷೆಗಳ ತೊರವಿ ಯಲಿಲ್ಲವು ಪಾಪಗಳೆಂದು ಕೊಟ್ಟನು (ಕದಂಪು. ೯) ; ತೊರವಿಯ ರಸ ಪರಿತ್ಯಾಗವೆಂಬುದು ತಾನರಿವುದು ಭವ್ಯರಿಂತಿದನು (ಪೂಜ್ಯಕ. ೧೨-೬೯). ೩. ತ್ಯಜಿಸಲು ಯೋಗ್ಯವಾದುದು : ಅಂತಹ ಧರ್ಮಗೊಡ್ಡಿನ ಹುಟ್ಟಾಟವು ಈ ಸನ್ನದ್ರ್ಭದವಸರಕ್ಕೆ ತೊರವಿಯುದಹುದು (ಮುಂತ್ರಕ. ೧೫೨-೨೪). [ ತೊಱ್$_1$ + – ವಿ/ತಮಿ. ತುಱವಿ ]

**ತೊಱಸು** 'ತೊಱಿಯಿಸು' ನೋ.

**ತೊಱಹ** 'ತೊಱಪ' ನೋ.

**ತೊಱಿಸು** 'ತೊಱಿಯಿಸು' ನೋ.

**ತೊಱು** 'ತುಱು' ನೋ.

**ತೊಱುಕೋಲ್** 'ತುಱುಗೋಳ್' ನೋ.

**ತೊಱುಕೊಳ** 'ತುಱುಗೋಳ್' ನೋ.

**ತೊಱುಕ್ಕೊಳ್** 'ತುಱುಗೋಳ್' ನೋ.

**ತೊಱುಗರೆ** (ನಾ). ಒಂದು ಪ್ರದೇಶದ ಹೆಸರು : ಅಕ್ಕಾದೇವಿಯರ್ ಕ್ಕೆಸುಕಾಡೆಟ್ಟತ್ತುಮಂ ತೊಱುಗರೆಯುಱುವತ್ತುಮಂ . . . ಆಳುತ್ತಮಿರೆ (ಎಇ. XV, ೭೮-೭; 1050). 'ತೊಱಗಲೆ' ಪರಾ. [ ? ]

**ತೊಱುಗೊಳ್$_1$** 'ತುಱುಗೊಳ್$_1$' ನೋ.

**ತೊಱುಗೊಳ್$_2$** 'ತುಱುಗೋಳ್' ನೋ.

**ತೊಱುಗೊಳ** 'ತುಱುಗೋಳ್' ನೋ.

**ತೊಱುಗೊಳ್ಳ** 'ತುಱುಗೋಳ್' ನೋ.

**ತೊಱುಗೋಳ್** 'ತುಱುಗೋಳ್' ನೋ.

**ತೊಱುಮಣ್ಣು** (ನಾ). (?) : ಬೊಂಬಸಮುದ್ರದ ಹಿಂದೆ ಗದ್ದೆ ಸ ೨ ಕೊ ××× ಗಗರಿಯ ಕಟ್ಟದೊಳಗೆ ಗದ್ದೆ ಸ ೨ ಕೊ ೧೦ × ಮುಂದಣ ಕೆಱೆಯ ಹಿಂದೆ ಗದ್ದೆ ಕೊ ೧೦ . . . ಇವೆಲ್ಲ ತೊಱುಮಂಣು ಚತುಸೀಮೆಗೆ ನಟ್ಟ ಕಲ್ಲೆ ಮೇರೆ ಸಾಲು (ಎಕ. XVI, ಚಿಕ್ಕನಾ. ೫೮-೨೮ ; 1260).

[ ತೊಱು ? + ಮಣ್ಣು (< ಮಣ್) ]

**ತೊಱುವಳ್ಳ** 'ತಂರುವಾಳ' ನೋ.

**ತೊಱುವಾಳ್ಳ** 'ತುಱುವಾಳ' ನೋ.

**ತೊಱ್$_1$, ತೊರೆ$_1$** (ಕ್ರಿ). ೧. ಬಿಟ್ಟು ಬಿಡಂ ; ಪರಿತ್ಯಾಗ ಮಾಡಂ ; ವರ್ಜಿಸಂ ; ತ್ಯಜಿಸು : "ತೊಱ್ –ವಿಸರ್ಜನೇ, ಸದ್ಯಾಂ ಚ" (ಶಮುಧಾ) ; ಪರರ ದೋಷಂಗಳುಮಂ . . . ತೊಱುವುದು ತೊಱುವಂತಸಾಧುಜನ ಸಂಗತಿಯಂ (ಕವಿರಾ. ೧-೬೭) ; ಉತ್ತಮಕುಲದೊಳವ್ವಭಿಮಾನಮಂ ತೊಱದು ಬಾಟುಸ್ಮಾರಣವಾಗಿ ಕುಲಜರಲ್ಲದವರ್ಗಳಾಗಿ ಬಾಳ್ವರ್ (ವಡ್ಡಾರಾ. ೮೬-೩೦) ; ಎಲ್ಲಮಂ ತೊಱದು . . . ದಿಗಂಬರವಿಳಾಸಮಂ ಬಯಕೆ ತೀರ್ವಿನಂ ತಾಳ್ದಿದಂ (ಆದಿಪು. ೩-೫೭); ಮಹಾಶ್ರೀಯಂ ಕೊಳದ ಪುಲ್ಲ ಕಡ್ಡಿಯಂ ತೊಱುವಂತೆ ತೊಱದು (ಧರ್ಮಾಮೃ. ೯-೩೨); ಪರನಾರಿ ಯರ ಸಂಗವ ತೊಱಯಿಂ ಭೋ (ಬಸವ. ೬೪೨); ಪರಾಂಗನೆಗೆ ಕೂರ್ತು ಒಸೆದು ತಾಯಂ ತೊಱುವ ಬೆಸನಿ ಜೋ (ಸಿದ್ಧರಾ. ೦-೫೯) ; ಭೀತಿಯಂ ತೊಱದು ಕಾಂತೆಯ ಕೂಡೆ ರಮಿಸಿದಂ (ಜೈಮಿಭಾ. ೧೦-೨೦). ೨. ಪ್ರಾಪಂಚಿಕಸುಖವನ್ನು ತ್ಯಾ ಗ ಮಾ ಡು ; ವಿರಕ್ತಿಹೊಂದಂ : ಸಸಿಮತಿಶ್ರೀಗನ್ತಿಯರ್ . . . ಕಟ್ವಪ್ಪಿನುಳ್ ತೊಱದಾರಾಧನೆ ನೋನ್ತು ತೀರ್ತ್ಥಗಿರಿ ಮೇಲ್ಸ್ವರ್ಗ್ಗಾಲಯಕ್ಕೇಱಿದಾರ್ (ಎಕ. II, ೬೭-೪ ; ಸು. ೭೦೦) ; ಪರ್ವತದೊಳಿರ್ದ ಶಾರ್ದೂಲಂ ಜಾತಿಸ್ಮರನಾಗಿ ತೊಱದಿರ್ದು ದೆಂಬುದನಾ ಮುನಿಪನವಧಿಯನಱಿದು (ಚಾಪುಂಪು. ೨೫) ; ನರರರೆಬರ್ ವೈರಾಗ್ಯಂ ದೊರಕೊಂಡಡೆ ತೊಱುವವೆಂಬರ್ (ಆಚಪು. ೨-೮೫). **ತೊರೆ$_1$** : ೧. ಮರೆಯರೊ ನೀ ಮಾಡಿದ ಅನಿಮಿತ್ಯೋಪಕಾರ ತೊರೆಯರೊ ನಿನ್ನಂಘ್ರಿಸೇವೆ ಪ್ರತಿವಾಸರ (ಜಗದಾ. ೩೯-೧) ; ತರಿದು ಬಿಡು, ತೊರೆದು ಬಿಡು, ತೊಡೆದು ಬಿಡು ನೆನಹಿಂದ ಕರಕರೆಯ ಬೇರುಗಳ ಮನದ ಗಂಟುಗಳ (ಮುಂಕುಕ. ೬೪೮) ; ನಂಬಿರುವ ಸುಚರಿತರ ತೊರೆಯಯೆಂಬಾ ಕೀರ್ತಿ ಎಂದಿನಂತೆಯೆ ನೆರೆದು ಪೂಜ್ಯವಾಗುವುದು (ವಿಜೀಗೀ. ೨೩-೧೧).

[ ದೇ.॥ ತಮಿ. ತುಱ ; ತುಳು. ತೊರೆವು ; ತೆಲು. ತೊಱಂಗು ]

**ತೊಱ್$_2$, ತೊರೆ$_3$** (ನಾ). ೧. ನದಿ ; ಹೊಳೆ : "ಸಿಂಧುಃ, ಸ್ರವಂತೀ . . . ಸರಿತ್, ರೋಧೋವಕ್ರಾ – ಈ ೨೧ ತೊಱ್" (ಹಲಾಯು. ೧೧೧-೪೩) ; ವಾರಿ ಮರಳ್ಪೊಣಾಸ ಪೆರಿ ×× ತೊಱಯು ಅಲರ್ ಮೇರೆ (ಎಕ. II, ೩೫-೭ ; ಸು. 800) ; ತೊಱಯು ಪಳ್ಳದ ನೀರ್ಗಳಂ ಕುಡಿದು (ವಡ್ಡಾರಾ. ೯೦-೨೨); ಶಿರದೊಳ್ [ ತೊ ]ಱ್ ತೊಱಯ ಕೆಲದೊಳೆಸೆದಿರೆ ಪೆಱ(ಹಂಪಧಾ. ೮-೨೪);ಹಾಲ ತೊಱಗೆ ಬೆಲ್ಲದ ಕಸಱು ಸಕ್ಕರೆಯ ಮಳಲು (ಬಸವ. ೨೯೦) ; ತೊಱಯು ಹೊನಲಲಿ ಹೋಹ ಕರಡಿಯನಱಿಯದದು ಕಂಬಳಿಯೆನುತ್ತಾಸಱದೆಯುಂಬಿಗನೆಯ್ದು ಹಿಡಿಯಲು (ಬಸಪು. ೨೦-೨೨) ; ಮರೀಚಿಯ ತೊಱಗೆ ಹಱಗೋಲಿಡುವರುಂಟೇ (ಕುಮಾರದ್ರೋ. ೪-೩೮). ೨. ಪ್ರವಾಹ ; ನೆರೆ ; ಹರಿವು : ಎಱುವ ತೊಱಯನದಿರಿಸುವುದೆಲ್ಲಿಯು ಗಾಂಪು (ಆದಿಪು. ೧೨-೧೧೮) ; ರಸದ ತೊಱ್ ಪರಿದುದು (ಸುಕುಮಾ. ೧೧-೨೩) ; ಹಣ ಸಾಲಿಟ್ಟ ತೊಱ್ [ಪಾಠಾ. ಟ್ಟುದುಱ್] ಯೆನಲರುಣಜಲ ನಗರೋಪಕಂಠದಲಿ (ಕುಮಾರಾಭ. ೧೨-೨೫) ; ಉದಕಪ್ರವಾಹಮಂ ತೊಱ್ ಯೆಂಬರು . . . ಉರು ಶಿಲೆಯನಱಯೆಂಬರಲ್ಲದಿವ ನುಡಿಯರವನಾಳ್ದ

ಳಿಯೊಳು (ಜೈಮಿಭಾ. ೨-೯) ; ತೊಱೆಗೂಡಿದ ನದಿ ನದಿಯ ಕಾಲುವೆಗಳು . . . ರಂಜಿಸುತಿಹ ಪುರವಿಹುವಾ ದೇಶದೊಳಗೆ (ಕಂನವಿ. ೨-೧೧).

**ತೊರೆ**$_3$ : ೧. "ಹೊಳೆಗೆ ತೊರೆಯೆಂದಕ್ಕು" (ಶಶಿ. ೪೯) ; ಏಱೆ ತೊರೆ ಕಳವೃತ್ತಿ ಕಟಿಪ್ರೊನ್ನುಳ್ಳಾ ಮಹಾಪಾತಕನಕ್ಕುಮ್ (ಎಕ. XVI, ತುಮಕೂ. ೧೦೨-೩ ; 750) ; ನಿತ್ಯವು ತೆಗೆಯುತಲಿರಬೇಕು ಹುಟ್ಟನು ತಾನೆಯೆ ತೊರೆಯೊಳಂಬಿಗನು (ಇಂಚಾಕ. ೨೧೦-೩೯) ; ಕುದಿವುದು ವೋಡವು ಕೊಟ್ಟಡದಿದೆ ವಳೆ ಬತ್ತಿತು ಹಳ್ಳವು ಅತ್ತಿತು ತೊರೆ ಹೊಳೆ (ಉದ್ಭಾ.ಕ. ೬೪-೪) ; ಬಾಳ ಗುಬ್ಬಿಗೆ ಗುಟುಕಿವಾಗಲಿ ಬಾಳ ತೊರೆಯಲಿ ಹರಿಯಲಿ (ಕದ್ರೋ.೪ಲ. ೧-೦೨).

**ತೊಱೆತೊಱೆ, ತೊರೆತೊರೆ** (ದ್ವಿರುಕ್ತಿ) : ನಡುಗಿತಿಳೆ . . . ಜಮ್ಮರ ನುಡಿದು ಬಿದ್ದವು ಸಲಿಲವುಕ್ಕಿತು ಕೂಡೆ ತೊಱೆತೊಱೆ [ಪಾಠಾಂ. ಕೆಱೆ ತೊಱೆ]ಯ(ಕುಮಾ.ಭಾ.೧೫-೪೬); ತೊರೆತೊರೆಯಾಗಿ ಹೊಳೆಬಸಿಯುಂತಿಹುದು (ಇಂಗೀಕ. ೬೧-೧೧). **ತೊರೆ ಬಸಿ** = ಪ್ರವಾಹದಂತೆ ಉಕ್ಕಿ ಹರಿ :ಕಣ್ಣೀರು ತೊರೆಬಸಿವರಡು ತೋಳ್ಗಳಂ ಮುನ್‌ಚಾಚಿ (ಶ್ರೀರಾಮಾ. ೬೯೬-೪೮೯).

**ತೊಱೆಗಳಾಣ್ಮ** = ನದಿಗಳ ಒಡೆಯ,-ಅಧಿಪತಿ ; ಸಮುದ್ರ : "ತೊಱೆಗಳಾಣ್ಮಂ ಮುನ್ನೀರ್, ನೀರೊಟ್ಟಿಲ್ (ಕಡಲ್) – ಈ ೪ ಸಮುದ್ರಂ" (ಕಕಶಾ. ೮-೧೪೧) ; "ಮುನ್ನೀರ್ ನೀರೊಟ್ಟಿಲುಮಂ ದೆನ್ನುತ್ತುಂ ತೊಱೆಗಳಾಣ್ಮ ಕಡಲೆನೆಯುಂ ತಾಂ . . . ಸಾಗರಮನಿಕುಂ" (ಕವಿಕಂ. ೮೯). **ತೊಱೆದಾಳ್ದ** = ಗಂಗೆಯನ್ನು ಧರಿಸಿದವನಂ ; ಶಿವ; ತೊಱೆದಾಳ್ದನ ಕಾರ್ಮುಕವ ಸಿಂಜಿನಿಯಿಂದೆ ನೆಱೆ ಬಾಗಿಸಿದರಂಬಂತೆ (ಪೋಹಕ. ೨-೩೬). [ದೇ.ಶ ತಮಿ. ತುಱೈ; ಮಲ. ತುಱ; ತುಳು. ತುದೆ]

**ತೊಱೆಕಡವ** (ನಾ). ನದಿಯ ತೀರದಲ್ಲಿ ಬೆಳೆಯುವ ಕಡವ ವೃಕ್ಷ "ನದೀಕದಂಬಃ – ತೊಱೆಕಡವ" (ಒಷಧಿ. ೮೪).

[ ತೊಱೆ$_2$ + ಕಡವ$_1$ (<ಕಡಂಬ) ]

**ತೊಱೆಕಾರಾಟ್ಟ** 'ತೊಱೆಕ್ಕಾರಾಟ್ಟ' ನೋ.

**ತೊಱೆಕ್ಕಾರಾಟ್ಟ, ತೊಱೆಕಾರಾಟ್ಟ** (ನಾ). ಒಂದು ಸ್ಥಳದ ಹೆಸರು : ತೊಱೆಕ್ಕಾರಾಟ್ಟಉ ಪೆಕ್ಕ ವಿಯಮುಪೂಲ್ಗೊಗೆಯು ಕೂಡಲೂರು (ಎಕ. IV, ಗುಂಡ್ಲುಪೇ. ೮೮-೪ ; ಸು. 750). **ತೊಱೆಕಾರಾಟ್ಟ** : ಶ್ರೀಮತು ತೊಱೆಕಾರಾಟ್ಟಯ ಆಚಯ್ಯನ ಮಗಂ ಕೇಸವಭಟ್ಟಂ ದೇಗುಲವಂ ಮಾಡಿಸಿ . . . ಕೊಟ್ಟ ಭೂಮಿ (ಎಕ. IV, ಗುಂಡ್ಲುಪೇ. ೯೩-೨೦; 1049).

[ P ಇದು 'ತೊಱೆಕಾರರ ಹಟ್ಟಿ ಇರಬಹುದೆ' ? ]

**ತೊಱೆಗಟ್ಟು** (ಕ್ರಿ). ಪ್ರವಾಹವಾಗು ; ಪ್ರವಹಿಸು : ಕಾಳಮೇಘವೆಂಬ ಭೂಮಿಯಲ್ಲಿ ಕಾಳರಾತ್ರಿಯೆಂಬ ಏರಿಗಟ್ಟಿ ಮಂಜಿನ ನೀರು ತೊಱೆಗಟ್ಟಿ ಹಾಯ್ದು ತುಂಬಿತ್ತು (ವಚಸಂ. ೫೪೬-೧). [ ತೊಱೆ$_2$ + ಕಟ್ಟು$_1$ ]

**ತೊಱೆಗಣಗಿಲೆ, ತೊಱೆಗಣಗಿಲು, ತೊಱೆಗಣಗಿಲೆ** (ನಾ). (ತೇವದ ನೆಲದಲ್ಲಿ ಬೆಳೆಯುವ) ಒಂದು ಬಗೆಯ ಕಣಗಿಲೆ. "ನಿಚುಲ, ಅಂಬುಜ, ಹಿಜ್ಜಲ = ತೊಱೆಗಣಗಿಲೆ" (ನಾಚಿರಾ. ೬) ; "ತೊಱೆಗಣ[ಪಾಠಾಂ. ಣೆ]ಗಿಲಾ ಲೋಮಕಂ ಪಿಚುಳಮದು" (ಮುಂಗರಾ. ೩೪-೧೧). **ತೊಱೆಗಣಗಿಲು** : "ರಕ್ತಕಾರ್ಮುಕಃ– ತೊಱೆಗಣಗಿಲು" (ಒಷಧಿ. ೧೩೩); ತೊಱೆಗಣಗಿಲ ಕಸ್ತುರಿಯೆಸೆವ ಮೂಲವಂ ಕತಕಕುಜಾವಳಿಯ ಪರಿಪಕ್ವ ಫಲರಸ ಜಳದಿಂದರೆದು (ಜಮದ. ೭-೨೦). **ತೊಱೆಗಣಗಿಲೆ** : "ನಿಚುಲಃ, ಹಿಜ್ಜಲಃ, ಅಂಬುಜಃ ಈ ೩ ತೊಱೆಗಣಗಿಲೆ ಹೆಸರು" (ನಾಚಿರಾ. ೧೦೮).

[ ತೊಱೆ$_2$ + ಕಣಗಿಲೆ$_1$ ]

**ತೊಱೆಗಣಜಿಲು, ತೊಱೆಗಣಜಿಲಂ, ತೊಱೆಗಣಜಿಲೆ** (ನಾ). (ತೇವದ ನೆಲದಲ್ಲಿ ಬೆಳೆಯುವ) ಒಂದು ಬಗೆಯ ಸಸ್ಯ : "ದೀರ್ಘಪತ್ರಃ– ಕಪ್ಪುತ್ತಿ, ತೊಱೆಗಣಜಿಲು, ನೀರಿಪ್ಪೆ, ಹಬ್ಬೆಯ ಭೇದ" (ಒಷಧಿ. ೭೭). **ತೊಱೆಗಣಜಿಲು**: ನೆಱೆ ಕು(ದಿ)ಸಿ ಕಟ್ಟುಗಿಂ ತೊಱೆಗಣಜ[ಪಾಠಾಂ. ಗಿ]ಲ ದಳಮನಾದೊಡಂ ಬಾತ ವಿಷಕ್ಕುಱೆಸಲ್ಕುಪನಾಹದೆ ತೊಱೆಯುಱೆಗುಂ (ಜಮದ. ೧೬-೭೨). **ತೊಱೆಗಣಜಿಲೆ**: ನಱುವಲ್ ಮಙ್ಗಾರೆಯ ಕಾಯ್ ತೊಱೆಗಣ(ಜ)ಗಿಲೆ ದೇವದಾಳಿ . . . ಇವನರೆಯಲ್ ಜಲದಿಂದೆ ಫಣಿಯ ವಿಷನಿರ್ಹರಣಂ (ಜಮದ. ೫-೧೦೪).

[ ತೊಱೆ$_2$ + ಗಣಜಿಲು (< ಗಣಜಿಲೆ$_1$) ]

**ತೊಱೆಗಣಗಿಲು** 'ತೊಱೆಗಣಗಿಲೆ' ನೋ.

**ತೊಱೆಗಣಗಿಲೆ** 'ತೊಱೆಗಣಗಿಲೆ' ನೋ.

**ತೊಱೆಗಣಜಿಲು** 'ತೊಱೆಗಣಜಿಲು' ನೋ.

**ತೊಱೆಗಣಜಿಲೆ** 'ತೊಱೆಗಣಜಿಲು' ನೋ.

**ತೊಱೆಗರೆ$_1$, ತೊರೆಕರೆ** (ನಾ). ಹೊಳೆಯ ತಡಿ ; ನದೀತೀರ : ಕಡಲ ಕಡೆಯಲ್ಲಿ ಸಾರ್ಚಿರ್ಪುದೋ ಅತರ್ ವೋಡನದ ತೊಱೆಗರೆಯ ತೆಮಿಸಿರದೆ ಎಂದಾನುವೊರ್ಮೆ ಮನೆ ಮಾಟ್ಟರನ್ (ಬಡ್ಡಕ್ಕ. ೩೮-೮೩೨). **ತೊರೆಕರೆ** : ಗೋವತ್ಸಲೀಲೆ ತೊರೆಕರೆಯ ಮೇರೆ ವನವಾಟ ಸಡ್ಡೆಸಾರೆ (ಸೂರ್ಯಾ.ಪಾ. ೩೫-೧). [ ತೊಱೆ$_2$ + ಕರೆ$_4$ ]

**ತೊಱೆಗರೆ$_2$** (ನಾ). ಒಂದು ಸ್ಥಳದ ಹೆಸರು : ಲೋಕಾಪುರಂ ಪನ್ನೆರಡು ತೊಱೆಗರೆಯಱುವತ್ತು ಇನ್ನು ಮೂಱವತ್ತೊರ್ಚ್ಛಾಸಿರದ ನೂಱೆರಡು ಬಾಡಮಂ ಲೋಕಟಿಯರಾಳೆ (ಎಕ. VII, (S), ಶಿಕಾರಿ. ೩೭೮-೭ ; ೨೦೭೨). 'ತೊಱೆಗಲೆ ಪರಾ'. [?]

**ತೊಱೆದಡಿ** (ನಾ). = ತೊಱೆಗರೆ$_1$ : ಬಲ್ಲಪಳ್ಳಿಗಳೆಲ್ಲಂ ತೊಱೆದುವು ತೊಱೆದಡಿಗಳನಾರ್ ತೊಱೆಯಾದರನುಕೂಲವೃತ್ತಿಗೆಟ್ಟಸಗುವರು (ಜಗವಿ. ೪-೧೧) ; ಅಂದು ನವ್ಯನು ರಜತವಾಳುಕಿಯೆಂದೆನಿಪ ತೊಱೆದಡಿಯೊಳೀತನು ಬಂದು ಬಂಧುವೆಯಾಗಿ ರಕ್ಷಿಸಿದನು (ಸಾಳ್ವಭಾ. ೧೭-೯೦).

[ ತೊಱೆ$_2$ + ತಡಿ$_2$ ]

**ತೊಱೆದಲೆಯ** (ನಾ). ತಲೆಯಲ್ಲಿ ನದಿಯನ್ನು ಧರಿಸಿದವನು ; ಗಂಗಾಧರ ; ಶಿವ : ತೊಱೆದಲೆಯನ ಮುಂದಲೆಗೆ ಸೀಸಕವನಳವಡಿಸಿ, ಫಣಿಕುಂಡಲನ ಕರ್ಣಕ್ಕೆ ಮಕರಕುಂಡಲಮನಿಟ್ಟು (ರಾಜಶೇ. ೧೫೦-೯೦).

[ ತೊಱೆ$_2$ + ತಲೆ$_1$ + – ಅ$_7$ ]

**ತೊಱೆದವನ, ತೊರೆದವನ** (ನಾ). ನೀರಿರುವ ಜಾಗದಲ್ಲಿ ಬೆಳೆಯುವ ಒಂದು ಬಗೆಯ ದವನ : "ತಪೋಧನಃ – ಬೋಟತಟ, ತೊಱೆದವನ" (ಒಷಧಿ. ೭೭) ; ಗಿಣಿಮೂಗನ ಬೇರ್ ತೊಱೆದವನ ಕೊಟ್ಟ ಮುಸ್ತೆಯ ನುಱೆ ಚೂರ್ಣಿಪುದು (ಜಮದ. ೫-೯೪). **ತೊರೆದವನ** : "ವನಾದೀ – ದವನ, ತೊರೆದವನ" (ಒಷಧಿ. ೧೪೯). [ ತೊಱೆ$_2$ + ದವನ ]

**ತೊಱೆನಾಡು** (ನಾ). ಒಂದು ಪ್ರದೇಶದ ಹೆಸರು : ವಿದಿಮುರಸರ್ ತೊಱೆನಾಡಯ್‌ನೂಱುಂ . . . ಆಳೆ (ಎಕ. IV, ಹೆಗ್ಗಡ. ೯೩-೩ ; ಸು. 740) ; ಎಱೆಗಙ್ಗ ನಾಮಧೇಯಃ ತೊಱೆನಾಡು ಅಯನೂಱು[ಂ] . . . ಆಳೆ (ಇಕ. XIV, ೨೩೨-೪೯ ; ಸು. ೮ನೆಯ ಶತ).

[ ತೊಱೆ ? + ನಾಡು ]

**ತೊಱೆನಾಯ್** (ನಾ). ನೀರುನಾಯಿ: ತೊಱೆನಾಯ್ ಸತ್ತಡೆಯು ಮಾಕ್ ಶುಕಾಸ್ಯಂ ಮದ್ಯಂ ಮುಱೆದೊಂದೆಯುಬವಂ ಪೆಸರಱೆಯದ ಬಾಹುಗಳೊಳೊರಸೆ ಪೊಱಸಿ(ಸು)ಗೆ ಪೋಕುಂ (ಲೋಕೋಪ. ೯-೨೦೨).

[ ತೊಱೆ$_2$ + ನಾಯ್ ]

**ತೊಱೆಮತ್ತಿ** (ನಾ). ೧. ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಮತ್ತಿಗಿಡ : "ನದೀಸರ್ಜಃ, ವೀರತರುಃ ಈ ೨ ತೊಱೆಮತ್ತಿ" (ನಾಚಿರಾ. ೧೦೭) ; "ತೊಱೆಮತ್ತಿ ನೀಶಿ ಕಕುಭಾಹ್ವಾನಂ" (ನಾನಾರ. ೦೨೯) ; "ನದೀಸರ್ಜಃ – ಮತ್ತಿ, ತೊಱೆಮತ್ತಿ" (ಒಷಧಿ. ೮೩).

೨. ಒಂದು ಬಗೆಯ ಸಸ್ಯ: "ಮುರುಕಿಲಾ ತೊಱೆಮತ್ತಿ ಸಿಂಧುಕಿ ಯನಿಕ್ಕು" (ಮಂಗರಾ. ೩೫-೧೪). [ ತೊಱೆ$_2$ + ಮತ್ತಿ$_3$ ]

**ತೊಱೆಮಲ್ಲಿಗೆ** (ನಾ). ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಮಲ್ಲಿಗೆ: ತೊಱೆಮಲ್ಲಿಗೆಯುಂ ಪ್ರವಿಲೇಪನಮಂ ಮಾಡುತ್ತಮಿರಲ್ಕಚ್ಚರಿಯಿ ದೆಂಬಿನಂ ಕ್ರಿಮಿ ಕಿಡುಗುಂ (ಲೋಕೋಪ. ೯-೧೧೫); ತೊಱೆಮಲ್ಲಿಗೆ ಪುನ್ನಾಗಂ... ತೊಟ್ಟ ಮುಸ್ತೆಯನುಱೆ ಚೂರ್ಣಿಪುದು (ಖಮದ. ೫-೯೪). [ ತೊಱೆ$_2$ + ಮಲ್ಲಿಗೆ ]

**ತೊಱೆಮಾವು, ತೊರೆಮಾವು** (ನಾ). ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಮಾವಿನ ಮರ: ತೊಱೆಯ ಮಾವು = ತೊಱೆಮಾವು (ಶಮದ. ೧೬೨ ಪ್ರಯೋ); ಹಲಸು ಕೊಡಸಿಗ ಮಾವು ಕೊ[ಪಾಠಾಂ. ತೋ]ಱೆಮಾವುಲಿಯ ಕಣಗಿಲು .... ಹಾದರಿಯುಮರ ಮೊದಲಾದುವುರ್ವಿಹವು (ಸಾಳ್ವಭಾ. ೫-೩). **ತೊರೆಮಾವು**: "ಅಮ್ರುಪತಾಕಾ – ತೊರೆಮಾವು" (ಟಿಷಧಿ. ೧೨). [ ತೊಱೆ$_2$ + ಮಾವು ]

**ತೊಱೆಯ, ತೊರೆಯ** (ನಾ). ೧. ಮೀನಂ ಹಿಡಿಯುವವನು; ಮೀನುಗಾರ; ಬೆಸ್ತ: ಅರ್ಥಮುಂಟೆಂದಹಂಕರಿಸಿ ಮಾಡುವನ ಭಕ್ತಿ ತೊತ್ತಿನ ಕೂಟ ತೊಱೆಯನ ಮೇಳದಂತೆ [ಪಾಠಾಂ. ತೊತ್ತಿನ ಕೂಟದ ತೂರ್ಯರ ಮೇಳದಂತೆ](ದೇದಾವ೩೦-೫೩). ಕಾಡತುಱುಕಾಱನೋ ಮೀನ್‌ಬಿಡಿವ ತೊಱೆಯನೊ(ಅಶ್ವಶಾ. ೩೬-೩೮೮). **ತೊರೆಯ**:೧. "ಬಿಸ್ತಃ=ತೊರೆಯಂ"(ಕಾಶಕ್ಕ. ೨೬೦); ಇಲ್ಲಿಯ ಬೆಸವಕ್ಕಳಾರೆನ್ದೊಡೆ ಕಾಱಗೊಡೆಯನುಂ . . . ತೊರೆಯರಾಳ ಪಡಿಯನುಂ (ಎಕ. III, ನಂಜನ. ೧೪೯-೯; 916 ?); ಸ್ವಸ್ತಿ ಶ್ರೀಮತ್ ಪಱಮೆಯರ ಕುಲದ ತೊರೆಯರ ಮಾರಣ್ಣಗಂ ಅನ್ನವ್ವೆಯಕ್ಕಂಗಂ ಪುಟ್ಟಿದ ವರ ತಾತಣ್ಣ (ಎಕ. IV, ಗುಂಡ್ಲುಪೇ. ೮೪-೨; 1000 ?); ೨. ದೋಣಿ ನಡೆಸುವವನು; ಅಂಬಿಗ: ಪಡುವ ದಿಬ್ಬದ ಗೌಡನೊಬ್ಬನು ಬಿಡದೆ ತೊರೆಯನ ಕೂಗಿಕೊಂಡನು (ಜಂಗೀತ. ೬೪-೨); ತೊರೆಯರೆರೆಯಾ ಏಕೆ ನಿನ್ನಹೊತ್ತಿಗಲ್ಲದೆ ಬಾರೆ ಮುನ್ನ? (ಗೀವಿಂ. ೫೫-೩೩). [ ತೊಱೆ$_2$ + – ಅ$_7$./ತಮಿ. ತುಱೈಯ ]

**ತೊಱೆಯಣುಗ** (ನಾ). ನದಿಯ ಮಗ; ಗಾಂಗೇಯ; ಭೀಷ್ಮ: ತೊಱೆಯಣುಗನು ಪರಿತಂದು ಅಱಗುಲಿ ಕೌರವನಾಡುವ ಜೂಡಿನ ತೆಱನನು ಧೃತರಾಷ್ಟ್ರಗುಸುರೆ (ನೇಮಿಷಂ. ೨೪-೩೬). [ ತೊಱೆ$_2$ + ಅಣುಗ (<ಅಣಾಂಗ) ]

**ತೊಱೆಯಿಂಗುಳ, ತೊರೆಇಂಗುಳ** (ನಾ). ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಇಂಗುಳದ ಗಿಡ: "ತೊಱೆಯಿಂಗುಳಂ ದುರಾಲಂಬ ಮೆನಿಸಿಕ್ಕು" (ಮಂಗರಾ. ೩೬-೧೬). **ತೊರೆಇಂಗುಳ**: ನೆಲಗುಳ್ಳ ತೊರೆ ಇಂಗ[ಗು]ಳ . . . ಕಷಾಯ ಕಾಯಿಸಿ, ಹಿಪ್ಪಲಿ ಪ್ರತಿವಾಕವಿಕ್ಕಿ ಸೇವಿಸೆ ಶ್ಲೇಷ್ಮಜ್ವರ ನಾಶವಾಗುವುದು (ಸಕವೈ. ೮೯). [ ತೊಱೆ$_2$ + ಇಂಗುಳ ]

**ತೊಱೆಯಿಸು, ತೊರಸು, ತೊಱಸು, ತೊಱಿಸು** (ಕ್ರಿ). ೧. ತ್ಯಜಿಸುವಂತೆ ಮಾಡು: ತವರೂರ ಮಱೆಯಿಸಿ ನಿದ್ರೆಯ ತೊಱೆಯಿಸಿ ಸವಿಗಳ ನಱೆಯಿಸಿ . . . ಸುಖದೊಳೋಲಾಡಿಸುವವಗಡ ಯಾತಱಿಂದಾಯ್ತು (ಭರತ. ೬-೩೯). ೨. ವೈರಾಗ್ಯವನ್ನು ಹೊಂದುವಂತೆ ಮಾಡು; ವೈರಾಗ್ಯದೀಕ್ಷೆಯನ್ನು ಕೊಡು: ಪರಮಾಯುಷ್ಯಾಂತಂಬರಂ ನಿರಾಕುಳ ಮಾಗಿರ್ಪಾ ಯಿರವಿನ ಜೈನಾಭಿಪ್ರಾಯಂ ಪ್ರಾಯೋಪಗಮನದಿಂ ತೊಱೆಯಿಸಿದಂ (ಆದಿಪು. ೨-೫೩). **ತೊರಸು**: ೧. ಶರೀರದಭಿಲಾಷೆಯಂ ಕೆಡಿಸುವರೆ ನೆರೆ ಸ್ವಬಂಧುವನೆಲ್ಲ ಮರಸುವಡೆ ತೊರಸುವಡೆ ತಿರುತಿರುಗಿ (ತಿಕುಶ. ೧-೬೮). **ತೊಱಸು**: ೧. ತೊತ್ತುವೇಟಕೆ ಹಡದ ತಾಯನು ತೊಱಸಿದರೋ[ಪಾಠಾಂ. ತೋಱಿದರು] (ತೊರರಾ. ೪-೫೧೧). **ತೊಱಿಸು**: ೧. ಅವನ ಮಾತಾಪಿತರ ತೊಱಿಸಿ[ಪಾಠಾಂ. ತೊಲಗಿಸಿ] ಪ್ರೀತಿಪಡಿಸಿ ಹಣವ ಸೆಳೆದು ರೀತಿಗೆಡಿಸಿ (ಪುರಂದ. ೨-೧೬-೨). ೩. ಕುಂಗ್ಗಿಸು; ಕಡಿಮೆಮಾಡು: ಕರ್ಪೂರಕ್ಕುಳ್ಳ ಗುಣಂಗಳಂ ತೊಱಿಸಿ ಮಲ್ಲಿಗೆಯೊಳ್ ಸಮನಾಗಿ ತೋರ್ಪ ನೀರುಳ್ಳಿಯ ಗಡ್ಡೆಯಂ . . . ಮೆಲ್ಲದ ಮಾನವನೇನ ಬಲ್ಲಂ (ಸೂಕ್ತಿಸು. ೧೦-೯೩). [ ತೊಱೆ$_1$ + – ಇಸು$_3$ ]

**ತೊಱೆಯೆಱೆಯ** (ನಾ). ನದಿಯ ಒಡೆಯ,– ಪ್ರಭು; ಸಮುದ್ರ: "ಪಾರಾವಾರ ಶಬ್ದಂ ತೊಱೆಯೆಱೆಯನೆನಲ್" (ಕಹಾಸ. ೪೦); ಎಱಗಿದ ನಿಱಿಮುಗಿಲೊಳ್ಮಿಱೆ ಮಿಱುಗುವ ಮಿಂಚುಗಳನುಡಿದು ಓಡಿದನೊ ಕಡುಪಿಂ ತೊಱೆಯೆಱೆಯಂ ತರೆಗೈಗಳಿನುಱಿದನೆ ಕಮ್ಮಾನ್ಗಳೇಂ ಮನಂಗೊಳಿಸಿದವೋ (ರಾಜಶೇ. ೧-೯೯). [ ತೊಱೆ$_2$ + ಎಱೆಯ ]

**ತೊಱೆವನಿ** (ನಾ). ಪ್ರವಾಹವಾಗಿ ಹರಿಯುವ ಹನಿ: ಒಱೆವನಿಗಳಿದಿರ್ಪನಿ ಮಸ್ತಕವನಿ ತೊಱೆವನಿಗಳನಾಂತು ಬಿಡದ ನೆಱೆ ವಿಶ್ವರೂಪಾದಂತೆ ಸಂತತಧಾರೆ ಸುರಿದುದೀಗಳೆಯಿಳೆಯೊಳಗೆ (ಸೋಹತ. ೪-೩೯). [ ತೊಱೆ$_2$ + ಪನಿ$_2$ ]

**ತೊಱೆವರಿ** (ಕ್ರಿ). ತೊರೆಯಾಗಿ ಹರಿ; ನದಿಯಾಗಿ ಪ್ರವಹಿಸು: ಕಱೆಯು ಬಱಗೆಱೆಯಾಗಲೀಕ್ಷಿಸಿ . . . ನೀರಿದೆ ಕೊಳ್ಳೆಯೆಂದು ಕಮಂಡಲವ ಮಗುಗೆ ತೊಱೆವರಿದುದು (ಸಾಳ್ವಭಾ. ೩೦-೩೬). [ ತೊಱೆ$_2$ + ಪರಿ$_2$ ]

**ತೊಱೆವಳಿ, ತೊರೆವಳ್ಳಿ** (ನಾ). ಒಂದು ಊರಿನ ಹೆಸರು: ತೊಱೆವಳಿಯ × × × ಗಟ್ಟಿ (ಎಕ. VI, ಚಿಕ್ಕಮ. ೬೦-೨೦ ; 1068 ?). **ತೊರೆವಳ್ಳಿ**: ಪಡುವಣ ತೊರೆವಳ್ಳಿಯ ದಾಸಂಬಾಳ್ಳಿಯಾರ ಮುಂದಣ ಕೆಱೆಯೊಳ್ (ಎಕ. IV,ಮೈಸೂರು. ೩೬-೧೫; ಸು. 990?); (ಮೈಆರಿ. ೧೯೧೬, ೨-೧೫ ನೋ). [ ? ]

**ತೊಱೆವಾಯ್** (ಕ್ರಿ). ನದಿಯನ್ನು ದಾಟು: ನಗುತ ತೊಱೆವಾಯ್ದುಂಬಿಗರ ಗಂಡನೆಂಬ ಕೀಳ್ಪಗೆ ನಿಮಗೆ ನೈಜ (ಸಿಂಗಿರಾ. ೪೪-೧೦). [ ತೊಱೆ$_2$ + ಪಾಯ್$_1$ ]

**ತೊಱೆವು** (ನಾ). ಇಲ್ಲವಾಗುವಿಕೆ; ಬಿಟ್ಟುಹೋಗುವಿಕೆ: ವೀರನನಿಮಗ್ಗದ ಮಾತದು ದೂರಮಾಯ್ತು ನಿಷ್ಠುರನಿವನೆಂಬ ಮಾತು ಕೊಱೆವಾದುದು ಪೆಂಪಿನ ಮಾತು ಕೆಟ್ಟುದು (ಧರ್ಮಾಮೃ. ೧೩-೧೧೦). [ ತೊಱೆ$_1$ + – ವು./ತಮಿ. ತುಱವು ]

**ತೊಱೆವೇಂಟೆ** (ನಾ). ನೀರಿನಲ್ಲಿ ಆಡುವ ಬೇಟೆ; ಮೀನು ಹಿಡಿಯುವಿಕೆ: ಇಂತು ಪನ್ನತಿಕೆಯಿಂ ಪಲವೇಂಟೆಯಾಡಿ ಕಾಡೊಡೆಯಾಂ ತೋಡಿಲ್ಲದ ತೊಱೆವೇಂಟೆಯಾಡಲು . . . ಪೆರ್ದೊಱೆಗೆಯ್ದೆ ಸಾರ್ದು (ರಾಜಶೇ. ೫-೧೧೪ ಪ). [ ತೊಱೆ$_2$ + ಬೇಂಟೆ ]

**ತೊಱೆಹ, ತೊರೆಹ** (ನಾ). ತ್ಯಜಿಸುವುದು; ಬಿಡುವಿಕೆ; ತ್ಯಾಗ: ಸಂಕಾಕುಳಂ ಪುಲ್ಲೆಯೊಳ್ ತೊಱೆ[ಪಾಠಾಂ. ಱ]ಹಂ ಕ್ಷೀಣವಾದಂಗಳೊಳ್ ಬಡತನಂ ಸ್ತ್ರೀಮಧ್ಯದೊಳ್ . . . ಅಲ್ಲದಿಲ್ಲ ಪೆಱತೇನಾರಯ್ವಡಾ ದೇಶದೊಳ್ (ಪುಣ್ಯಾಸ್ರ. ೧-೧೧೬). **ತೊರೆಹ**: ತೊರೆಹ: (ಅಧಿಕಾರ, ಹಕ್ಕು, ಬಾಧ್ಯತೆ, ಮೊ.ಗಳ) ವಿಧಿಗನುಸಾರವಾದ ಪರಿತ್ಯಾಗ (Abdication. ಇಂಕನಿ). [ ತೊಱೆ$_1$ + – ಹ$_2$ ]

**ತೊಱೆೞಗಂಗ** (ನಾ). (?) : ಸರಿಸೆ ತೊಱೆೞಗಂಗಗೆ ಕಟ್ಟಿದ × ಡಿಯ . . . [ಯ]ದು (ಸೌಇಇ. XX, ೨೯-೨೨ ; 1044). [ ? ]

**ತೊಱ್ತುೞಿದುೞಿ** 'ತೊಟ್ತುಱಿದಂಟು' ನೋ.

**ತೊಟಕಲ್** (ನಾ). ತಿರುಗುವಿಕೆ; ಸುತ್ತುವಿಕೆ: "ತೊಟಕಲ್ ತೊಟಲ್ವುದು" (ಶಮದ. ಪರಿ. ೧). [<ತೊಟಲ್$_1$ + – ಕಲ್$_4$ ]

**ತೊಟಲ್$_1$, ತೊಳಲ್$_1$, ತೊಳಲು$_1$, ತೊಟಲು** (ಕ್ರಿ). ೧. ತಿರುಗಾಡು; ಸಂಚರಿಸು; ಅಲೆದಾಡು: ಚಱಗೆವೊಕ್ಕಡವಿಯಂ ತೊಟಲ್ವಲ್ಲಿಯೊಂದು ಮರದ ಪೊಟಲೊಳಿರ್ದು (ವಡ್ಡಾರಾ. ೮೯-೬); ಅಂತು ಭರತೇಶ್ವರಂ

ಸಕಲಾಂತಃಪುರಸಹಿತಮಲ್ಲಿ ವಿಶ್ರಮಿಯಿಸಿ ವನಾಭ್ಯಂತರವುಂ ತೊಟಲಿ (ಆದಿಪು. ೧೧-೮೩); ಒಂದು ದಿವಸಂ ಯುವರಾಜನಿಂದ್ರಾಯುಧಮನೇಱಿ ಬೇಂಟೆಯ ವಿನೋದದಿಂ ತೊಟಲುತ್ತುಮಿರೆಯಿರೆ (ಕಾದಂಪೂ. ೬೧೭); ಈ ಕಾಂತಾರದೊಳ್ ವ್ಯಾಘ್ರರಾಗಡೆಯತ್ಯಾಗ್ರಹದಿಂ ತೊಟಲ್ವರ್ (ಶಂಖಿತಂ. ೯೬-೧೪); ಶಾಸ್ತ್ರದಪೇಕ್ಷೆಯಿಂದೆ ತೊಟಲುತಿರ್ದಂ ಧರಾಮಧ್ಯದೊಳ್ (ನೇಮಿಪು. ೩-೧೬೨); ನೀಂ ತೊಟಲದ ಪಟ್ಟಣಂ ಪುಗದ ನಂದನಂ . . . ಆವುದು (ಜಗವಿ. ೧೭-೦೨೩); ಗಗನದೊಳೂರ್ಮಿಯುಂ ತೊಟಲುತಿರ್ಪ ವಿಯಚ್ಚರಸಂಕುಲಕ್ಕೆ . . . ಫಲಸಾರವನಿತ್ತು (ಕುಸುಮಜ. ೯-೨೭). ೨. (ಸಂಸಾರಚಕ್ರದಲ್ಲಿ) ತಿರಂಗಂ; ಸಂತ್ರಿ ಬರಂ; ಭ್ರಮಣೆ ಹೊಂದಂ: "ತೊಟಲ್–ಭ್ರಮಣೇ" (ಶಮುಧಾ); ಬಗೆದೀಡಾಡೆ ದುರಂತ ದುಃಖತತಿಗಳ್ . . . ಇನ್ನೆಗಮೋರಂತೆ ತೊಟಲ್ದನಿಂ ತಿರಿಯಲಾಱಿಂ ಭವಾಂಭೋಧಿಯೊಳ್ (ಆದಿಪು. ೯-೬೦); ಅರ್ಧಚಕ್ರವರ್ತಿಯಾಗಿ ಭೋಗಂಗಳನುಂಡು ಮತ್ತಂ ಸಂಸಾರಚಕ್ರದೊಳ್ ತೊಟಲ್ದು ಕಡೆಯ ತೀರ್ಥಕರನಕ್ಕುಂ (ಚಾವುಂಪು. ೫೦); ಗಾಣದೆತ್ತಿನಂತೆ ನಿಯಮಂಗೆಟ್ಟು ತೊಟಲುತ್ತಿರದೆ ಆಲದ ಬಿಟಲಂತೆ ನೆಲಕ್ಕೆಱಗದೆ (ಧರ್ಮಾಮೃ. ೫-೯೯). ೩. ಸುಳಿದಾಡಂ; ಸಂಚಲಿಸು; ಹೊಳೆ: ಸುಭದ್ರೆಯ ರೂಪು ಕಣ್ಣ ಪಾಪೆಯಂತೆ ಕಣ್ಣೊಳೆ ತೊಟಲೆ (ಪಂಪಭಾ. ೪-೬೯ ವ); ಕಣ್ಣೊಳ್ ತೊಟಲ್ವಂದದಿಂದಾ ನಿದ್ರಾಂಗನೆ ಸೂಚಿಗ್ಗಿವಂದಳಿರುಳೊಳ್ ತತ್ಕೇಚರಾಧೀಶನಾ (ಶಾಂತಿಪು. ೫ ೮೦); ಪ್ರಿಯೆಯ ಭಂಗಿ ತೊಟಲ್ವಪುದೆನ್ನ ಚಿತ್ತದೊಳ್ (ಶೃಂಗಾರ. ೩-೩೮); ಎನ್ನ ಚಿತ್ತಮಂ ನೋಯಿಸೆ ಕಣ್ಗಳೊಳ್ ತೊಟಲು ತಿರ್ದಪನಂಗಜಂ (ಬಂಹರಿ. ೮-೩೫); ಉಲಸುವ ಮೆಯ್ಯುಮಾಗುಳಿಸು ವಾನನಮುಂ ನಯದಿಂ ತೊಟಲ್ವ ಕಣ್ಮಲರುಂ (ಪುಷ್ಪಪು. ೪-೧೫). ಪೆಣ್ಣು ಕಣ್ಣೊಳ್ ತೊಟಲೆ ಧೈರ್ಯಂಗೆಟ್ಟು ಬಾಯ್ಬಿಟ್ಟು ಕನ್ಯಾರತ್ನಂ ತನಗೆಂತು ಸಾಧ್ಯಮಪ್ಪುದೆಂದು ವಿಚಾರಿಸಿ (ಪುಣ್ಯಾಸ್ರ. ೩-೪೨ ವ); ೪. ಗಸ್ತು ತಿರುಗಂ; ಪಹರೆ ಮಾಡಂ: "ಗರವಟಿಗೆವಂದಂಗೆ ವಾತಿಗೆಟ್ಟವಂಗಂ ತೊಟಲ್ದುಪ್ಪದೆಂದೆಂಬ ನಾಮಮುಂ" (ಸಂಜೀವ. ೦೪); ರವಿಕಿರಣನಿಕರದ ತಱಿದಿಂ ತೊಟಲುತ್ತುಮಿರ್ಪ ದಂಡಕನೆಂಬಾ ತಳಾಱಿಂ ಕಂಡು(ಧರ್ಮಾಮೃ.೩-೧೨೭). ೫. ಹೋಗು; ಗಮಿಸು; ನಡೆ: ಇಡುವಂತೆ ಪುಯ್ಯಲಂ ತಮ್ಮ ಕರಾಗ್ರದೊಳ್ ತೊವಲನಾಂತು ನೆಟಲ್ಗೆ ತೊಟಲ್ದವಾನೆಗಳ್ (ಚಾರುಪು. ೪-೮೨). ೬. ಸುತ್ತಾಡಿ ಪ್ರಚಾರ ಮಾಡು: ಆತಂಗೆಯಾತನ ಬೇಡುವುದೆಲ್ಲವಂ ಕುಡುವೆನೆಂದು ತೊಟಲ್ದು ಗೋಸಣೆಯಂ . . . ಅರಸಂ ಕೇಳ್ದು (ವಡ್ಡಾರಾ. ೫೦-೨೨). ೭. ಹುಡುಕು; ಶೋಧಿಸು: ಕುರುಡರ್ಕುರುಡರ ಬಟಿಯಂ ಪರಿಪರಿದುಂ ತೊಟಲ್ವತೆಱದೆ (ಸಮುಪ.೧೧-೧೪೪);ಎಣ್ಬಟ್ಟೆಗೆಳೊಳ್ ನೃಪನಂ ಕಾಣ್ಬನ್ನಂ ತೊಟಲಿಮೆಂದು ... ಒಂದೊಂದು ದೆಸೆಗೆ ಪೊಱಮಟ್ಟಾಗಳ್ (ದಶಕು. ೪-೧೯). ೮. ಕಷ್ಟಪಡು; ಹಿಂಸೆಪಡು; ಸಂಕಟಗೊಳ್ಳು: ಮನದೊಳ್ ತೊಟಲುತ್ತಂ ತಾಂ ಮನಪೊಲ್ಲದ ತನಗೆ ಸೇವಮೆಂದೆನು ತೊರೆದಳ್ (ಕಾದಂಬ. ೫೦); ಮೂಱುಂ ಭುವನದೊಳಂ ತೊಟಲುತಿರ್ಪ ಜೀವಾವಳಿಯುಂ ಭುವನಾಗ್ರಕ್ಕೆಯ್ದುಸುವರ್ತಪತವಗೆ ಪಿರಿಯರಾ ಮಹಾತ್ಮರ ಜೈನರ್ (ಸಮುಪ. ೪-೯೫); ಚೊಚ್ಚಲ್ ಪೆಱುವಳಂತೆ ತೊಟಲುತ್ತುಂ (ಧರ್ಮಾಮೃ. ೧-೧೬೦); ಮೃಗಾವಳಿ ತೃಷೆಯಿಂ ತೊಟಲ್ದು ಪರಿತಾಪಮನ್ನೆಯ್ದೆ ವನಾಂತರಾಳವಮಂ ಬಳಸಿ ದವಾನಳಂ ಬಳಸಿತ್ತುಪ ಮರೀಚಿಮರೀಚಿಸಂಚಯಂ (ಉದ್ಭಟ. ೯-೮೪); ಎರೆವರ್ ತಮ್ಮಯ ಬಡತನದಿರವಿಂಗೆ ತೊಟಲ್ವರ್ (ದಶಕು. ೬-೧೧೫); ಈ ಪರಿಯ ತೊಟಲುತ್ತುಮವಸರದೊಳಾನ್ ತಳ್ವಿ ಬಿಡುವಾಗಿ ಪಱದೆನ್ (ಅಂಜಿಗೊ. ೧೧-೨೦೩). ತೊಳಲ್$_1$: ೧. ಅಱಿಸಿ ತೊಳಲಿದರಿಲ್ಲ . . . ತಪಸ್ಸು ಮಾಡಿದರಿಲ್ಲ ಅದು ತನ್ನ ತಾನಹ ಕಾಲಕ್ಕಲ್ಲದೆ ಸಾಧ್ಯವಾಗದು (ಮಹಾದೇ. ೮. ೬೪-೧೫೭); ಕೂಡ ಹಡೆಯದೆ ತೊಳಲ್ವ ನವಿಲ ತಂಡಂಗಳಂ . . . ನೋಡುತುಂ ಕೊಂಡಾಡುತಿರ್ದನಾ ವನದೊಳಗೆ (ನಂಬಿರ. ೫-೧೧೫). ಸತತಮುಂ ಕಾಲು ನಿಲ್ಲದೆ ತೊಳಲ್ವ ಸೂರ್ಯನು ದೈವವೆಂತಹನು (ಬಸವು. ೫೪-೧೨); ಬನದೊಳು ಬೇರು ಬಿಕ್ಕೆಯನಱಿಸಿ ತೊಳಲ್ವುದು ಸಾಲದೇ (ಕುಮಾವ್ಯಾವಿ. ೯-೪೦); ಅಱಿಸಿ ಕಾಲ್ಗೆಱಗುವೆನೆನುತದ್ದು ತನು ತರಹರಿಸುತ ತೊಳಲ್ದಳಾಲಯುವ (ಪ್ರಭುಲಿಂ. ೨೭-೪೯). ೨. ತ್ರೇತೆಯಲಿ ರಘುರಾಮನಾಮದಿ ಸೀತೆಯಂ ಹೋಗಾಡಿ ದಶಶಿರದಾತನಿಂ ಬ್ರಹ್ಮತಿಗೆ ಸಿಕ್ಕಿ ತೊಳಲ್ದಱಸುತಿರನೇ (ಬಸವು. ೫೪-೩೯); ಶಿವಪದವನಱಿಯದ ಕರ್ಮೆಳಲ್ವರಿಂತು ಭವಾರ್ಣವದೊಳ್ (ಪದ್ಮಣಾ. ೧೧-೧೭೭). ೫. ನೆಳಲ ನುಂಗಿದ ಮಾತ್ರದಿಂದ ಬಾನೆಡೆಯೊಳಂ ತೊಳಲಲಾಱದುದು ಪದಂ (ಪಂಚಾಕ್ಷರಿ. ೫-೧-೫೭). ತೊಳಲ್ಲು: ೧. ಬೆಳುದಿಂಗಳು ಬಿಸಿಲಾಯಿತ್ತು ಕೆಳದಿ ಹೊಳಲ ಸುಂಕಿಗನಂತೆ ತೊಳಲುತ್ತಿರ್ದೆನವ್ವ (ಮಹಾದೇ. ಬ. ೯೩-೧೦೦); ಆಗಮಂಗಳ ಹಿಂದೆ ತೊಳಲದಿರು ತೊಳಲದಿರು (ಅದವ. ೨೦-೫೫); ತೊಳಲಿದೆನು ಮಧ್ಯಾಹ್ನ ಮೊದಲಾಗಿ ಕಡೆಹಗಲ ತನಕ (ಹರಿಶ. ೧೧-೧೪); ವನಿತೆ ನಿನ್ನೊಡನೆಂತು ತೊಳಲುವಳನವರತ (ಕುಮಾವ್ಯಾಸ. ೧೭-೬೨); ನಿಮ್ಮಾಜ್ಞೆಯೊಳು ಲೋಕಂಗಳ ತೊಳಲಿದಂ (ಚಬಸು. ೩-೭); ಬಹುದೇಶಂಗಳ ತೊಳಲಿ . . . ಮಣಿಪುರಕೆ ನಡೆತಂದನು (ಜೈಮಿಭಾ. ೧೭ ಸೂಚನೆ). ೨. ತಮ್ಮ ಮಾನಸಿಕ ಪಾಪದ ಫಲವಾಗಿ ಅವರಿಬ್ಬರೂ ತಿರ್ಯಗ್ಯೋನಿಯಲ್ಲಿ ಆರಾರು ಸಲ ತೊಳಲಬೇಕಾಗುವುದು (ಕಾವ್ಯಸ. ೬೩); ಆ ಮಿಾನ ನುಂಗಿದುದು ಬಳಿಕೊಂದು ಮಿಾನದಂ ಮತ್ತೊಂದು ಮಿಾನ್ನುಂಗಿತಾ ಮಿಾನ ನುಂಗಿತೊಂದು ತೊಳಲುತೊಂದೊಂದನೊಂದಿಂತು ನುಂಗಲ್ (ಜೈಮಿಭಾ. ೭-೮); ಯುವಮುಖಸರಸಿಜದೊಳ್ ನೃಪನ ಕಣ್ಗಳಿಂ ತೊಳಲಿ [ಪಾಠಾಂ. ೧]ದವೋ (ರಾಜಶೇ. ೪-೧೧೫). ೬. ಅವನನಱಸಿದ ನಿರುತ ಮಾರುತತನಯ ಕಾಣದೆ ಹಳ್ಳವನು ತೊಳಲಿ (ಸಂಭಪ. ೨೩-೭೭); ಮದುಮಗಂ ಕಾಣದಿರಲು . . . ಕೆರೆ ಕುಂಟೆಗಳನೆಲ್ಲ ತೊಳಲಿ ಪೊನ್ನಂಗೆ ದೊರಕಿದುದಳಲ ಪಾಲು(ಕಾಲೂರ. ೧೭೯-೪೦೫). ೮. ಹಿರಿದಾಗಿ ಮನದಲಿ ತೊಳಲಿದಿರಿ (ನಳಚ. ೨-೪೭); ಕಾಲುಗಂಜಿಗಳಲಿ ತೊಳಲಿ ಕೂಲಿ ಮಾಡಿ ಉಂಬ ಹೆಣ್ಣು . . . ಬಂದಳು (ಕವಿಸೋ. ೪೦-೯); ಹಲವು ಯೋಜನೆಗಳ ಸುಳಿಯಲ್ಲಿ ಸಿಕ್ಕಿ ಅವಳು ತೊಳಲುತ್ತಿದ್ದಳು (ತ್ಯಾಗಮು. ೧೩೪); ಹೇಗಾದರೂ ಆಸೆ ಫಲಿಸೀತೋ ಏನೋ ಎಂಬ ಕನಸಿನಲ್ಲೇ ತೊಳಲುವರು (ಶಿಕ್ಷಕ. ೬೬೭). ತೊಟಲು: ೨. ತ್ರಿಪಿಷ್ಟನರೇಂದ್ರರ ಭವವಾಲಿಯೊಳ್ ತೊಟಲಿಯುಂ ತಾನನಂತತೀರ್ಥೇಶನಪ್ಪನುಮಂದಾ ಭರತಂಗೆ ಪೇಟ್ದ ನೋಲವಿಂ (ಶಾಂತೀಶ. ೨-೬೫).

[ದೇ. ೫ ತಮಿ. ಚುಟಲ್; ಮಲ. ಚುಟಲು; ತುಳು. ತುಲಿಪು, ತುಲಿಯುಂ, ಸುಲಿಪು; ತೆಲು. ಸುಡಿಯು]

**ತೊಟಲ್$_2$, ತೊಳಲ್$_2$** (ನಾ). ೧. ಸುತ್ತಾಟ; ತಿರಂಗುವಿಕೆ: (೩). ೨. ದಿಗ್ಭ್ರಮೆಂಗೊಳ್ಳುವಿಕೆ; ತಬ್ಬಿಬ್ಬಾಗುವುದು: (೩). ತೊಳಲ್$_2$: ೨. 'ಕಣ್ದೊಳಲ್$_2$' ಪರಾ. ೩. ಬವಣೆ; ದುಃಖ; ಚಿಂತೆ: ಕಣ್ಣನೆನ್ನ ಕಣ್ಣಲಿ ನೆಟ್ಟು . . . ತೋಡಿದಳು ತೊಳಲ (ಹೊಂಗಳು. ೧೭-೦೭). [< ತೊಟಲ್$_1$]

**ತೊಟಲಿ** (ನಾ). ೧. ಸುತ್ತಲೂ ತಿರುಗುವಿಕೆ, 'ಕಣ್ಣಂದೊಟಲಿ' ಪರಾ. ೨. = ತೊಟಲಿಕಲ್ ೧.: ಕಾಯ್ದು ಶೃಂಖಲೆಗಳಿಂದಪಳಿಸಿಯುಂ ತೊಟಲಿಯೊಳ್ಪೇಸಿಯುಂ ಎಣ್ಣೆಯೊಳ್ಕಾಸಿಯುಂ . . . ಇಂತನೇಕ ಪ್ರಕಾರಂಗಳಿಂ ಪೀಡಿಸಿ (ಪಸಾರ. ೦೪೯). [ತೊಟಲ್$_1$ + – ಇ$_3$]

**ತೊಟಲಿಕಲ್, ತೊಳಲಿಕಲ್ಲು, ತೊಟಲಿಕಲ್ಲು** (ನಾ). ೧. ಮರ ಅಥವಾ ಕಲ್ಲಿನಿಂದ ಮಾಡಿದ ಬತ್ತ ಒಡೆಯುವ ಕಲ್ಲು; ಬತ್ತ ಬೀಸುವ ಕಲ್ಲು;

ಒಡೆಗಲ್ಲು : "ತೊಟಲಿಕಲ್ಲಿನಲ್ ಸಂಘಟಿಗೆ ನಾವುಮಕ್ಕುಂ" (ಸಂಜೀವ. ೫) ; ಪಟಯಿಗೆ, ತೊಟಲಿಕಲ್ [ಪಾಠಾಂ. ತೊಟರಿಕಲ್] (ಶಬ್ದಾನು. ೧೧೦ ವ್ಯಾಖ್ಯಾ). ೨. "ತಿರುವುವ ಗುಂಡು" (ಶ್ರಭಿಧ). ತೊಳಲಿಕಲ್ಲು : "ತೊಳಲಿಕಲ್ಲು = ಭತ್ತ ಒಡೆಯುವ ಕಟ್ಟಿಗೆ ಕಲ್ಲು" (ಜಾನಕೋ. ೬೮). ತೊಟಲಿಕಲ್ಲು : ೧. ಕೊಡಲಿ ಕತ್ತಿ . . . ತೊಟಲಿಕಲ್ಲ ಅಸುವೆಕಲ್ಲು ಕಲ್ಲೊರಳು ಕಲ್ಲೊನಕೆಯಂದಿವು ಮೊದಲಾಗೊಡೆಯುವಂ ಮೊದಲನೆಯ ಅನರ್ಥದಂಡಮಕ್ಕುಂ (ಶಶಾಂ. ೩೦೩). [ ತೊಟಲಿ$_1$ + ಕಲ್$_3$ ]

ತೊಟಲಿಕಲ್ಲು 'ತೊಟಲಿಕಲ್' ನೋ.

ತೊಟಲು 'ತೊಟಲ್$_1$' ನೋ.

ತೊಟಲ್ಕೆ, ತೊಳಲಿಕೆ, ತೊಳಲ್ಕೆ (ನಾ). ೧. ಅಲೆದಾಡುವಿಕೆ ; ಸುತ್ತಾಟ : ಚತುರ್ಗತಿಭ್ರಮಣರೂಪದಿನನೇಕಕ್ಲೇಶಂಬಡುವ ಜೀವ ರಾಶಿಯ ತೊಳ[ಟ]ಲ್ಕೆಯುಂ ಸಂಸಾರಮೆಂಬುದು (ಜಶಾರ. ೫೩೬). ತೊಳಲಿಕೆ : ೧. ತಿಳಿಗೊಳನ ತಂಪಗಿವ ತಳ್ಕೆಯ ತೊಳಲಿಕೆಯ ತಾವರೆಯ ತನಿಪರಿಮಳದ ವಿಸರದ ಹಸರದಲಿ ತೀಡಿದುದು ತಂಗಾಳಿ (ತೊರಶಾ. ೨-೬-೩). ೨. ಗಸ್ತು ತಿರುಗುವಿಕೆ ; ಪಹರೆ : ಗರವೊಟ್ಟಿಗೆಯು ತೊಳಲಿಕೆ ತೆರಳಿಚಿತು ತಿತ್ತೀಸು ಕೋಟಿಗಳ (ಕುಮ್ಯಾಅ. ೨೦-೫೬) ; ವಾಳಯವು ಗಜಬಜಿಸೆ ತೊಳಲಿಕೆಯಾಳು ನೆರೆದುದು (ಕುಮ್ಯಾದ್ರೋ. ೮-೪೪). ೩. ತೊಳಲಾಟ ; ಬವಣೆ : ಮಱುಗಿದನಂದಿನಿರುಳಲಿ ಕರುಳುಗಳ ತೊಳಲಿಕೆಯ ತಾಪದಲಿ (ತೊರಶಾ. ೬-೨೯-೩). ತೊಳಲ್ಕೆ : ಹುರಿ ಮಣಲ ಭರವಸಮುಂ ತೊಳಲ್ಕೆಯುಂ ಬಳಲ್ಕೆಯುಂ ಕಾಳಿಗದೞಗಮುಂ ಕನಸಿನೊಳವಿ ಲ್ಲೆನಿಸಿ (ಎಕ. XI, ಮೊಳಕಾ. ೨೦-೭೨; 1276 ?). [ತೊಟಲ್$_1$ + - ಕೆ]

ತೊಟಲ್ಚು, ತೊಳಲಿಚು (ಕ್ರಿ). ೧. ತಿರುಗುವಂತೆ ಮಾಡು ; ಸುತ್ತಾಡಿಸು ; ಅಂಗನೆ . . . ಎಟ್ಟರುತ್ತಿರೆ ಜನಂ ಕಂಡೆಯ್ದೆ ವಿಭ್ರಾಂತಿ ಗೊಂಡಿರಲಂತಂತೆ ತೊಟಲ್ಚಿ ವಿದ್ಯೆಗಳನಂಗಾಗಾರದತ್ತೊಯ್ಯೆ (ನೇಮಿಪು. ೮-೫೮) ; ವೇದೋದಯಾಮಫಳಕ್ಕತಮಂದೇದೊರೆಯನುಮಂ ತೊಟ ಲ್ಚುಗುಂ ಸಂಸ್ಕೃತಿಯೊಳ್(ವರ್ಧಪು. ೧೩-೨೦); ಅವಿತಕ್ರಮದಲ್ಲಿಯಳ್ಕಾಡೆ ತೊಟಲ್ಚಿ ತೂಳ್ದು ಕಡುಹಿಂ ಕೆದಱಿಟ್ಟು ಮಹಾಂಧಕಾರಮಂ ಕೂಡೆ ಗುಹಾಳಿಯಂ ಪುಗಿಸುತಿರ್ದುದು ಚಂದ್ರಿಕೆ (ಕುಸುಮಾ. ೧೧-೧೩). ೨. ಪ್ರಕಟಿಸು ; ಸಾರು : ಪೊಟಲೊಳಗಲ್ಲಂ ಗೋಸನೆಯಂ ತೊಟಲ್ಚಿ [ಪಾಠಾಂ. ತಗುಲ್ಚಿ]ದೊಡೆ (ಶಬ್ದಾಕಾ. ೭೮-೪). ತೊಳಲಿಚು : ೧. ಆಳಿಯಸನು ಕಾಣದೆ ವಿದರ್ಭನು ತೊಳಲಿಚಿದನನುಚರರ ನಾನಾ ಹಳುವ ದಲಿ ಹಳ್ಳಿಯಲಿ (ತೊರಶಾ. ೩-೨-೧೬). [ ತೊಟಲ್$_1$ + - ಚು$_1$ ]

ತೊಟಲ್ತರ್ (ಕ್ರಿ). ಸುತ್ತಾಡಿ ಬರು ; ಅಡ್ಡಾಡು : ವ್ಯಗಯಾವ್ಯಾಜದಿ ನೊರ್ವೆ ಶಂತನು ತೊಟಲ್ತರ್ಪಂ ಪಳಂಚಲ್ಕೆ ತನ್ಮೃಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೋಲ್ ಸೋಲ್ತು (ಪಂಪಭಾ. ೧-೭೦) ; ಕುಂದದ ಮುಗುಳ್ಗಳುಮಸುಗೆಯ ಕೆಂದಳಿರ್ಗಳುಮಬ್ಜದಲರ್ಗಳುಂ ಬೆರಸು ತೊಟಲ್ತಂದಪುವು ತಮಾಳಲತೆಗಳಿಂದಮರರ್ ನೋಡೆ ಚರಿಯಿಪರ್ ವನಚರಿಯರ್ (ವರ್ಧಪು. ೧೦-೧೯). [ ತೊಟಲ್$_1$ + ತರ್ ]

ತೊಟಸು$_1$, ತೊಳಸು$_2$ (ಕ್ರಿ). ೧. (ನೀರನ್ನು) ಕದಡು ; ಅಲ್ಲಾಡಿಸು ; ಕಲಕು : ಆಟೋಪದಿಂ ಪೊಕ್ಕು ಸಾಗರಮಂ ಕೂಡೆ ತರಳ್ಚಿದಂ ತೊಟಸಿದಂ ತುಳ್ಕಾಡಿದಂ (ಜಗವಿ. ೭-೧೮). ೨. (ಸೌಟಿನಿಂದ ಸಾರು ಮೊದಲಾದುವುಗಳನ್ನು) ತಿರುಗಿಸು ; ತಿರುವು ; ಗೊಟಾಯಿಸು : ಬ್ರಹ್ಮಾಂಡವೆಂಬ ಕೊಪ್ಪರಿಕೆಯ ಮಧ್ಯದಲ್ಲಿ . . . ಮಾಸಮುತುಗಳೆಂಬ ಸಟ್ಟುಗದಿಂ ತೊಟಸುತ್ತುಂ ಭೂತಂಗಳಂ ಜವನಡುತಿರ್ದನಿಂತೆಂಬುದೆ ವಾರ್ತೆ (ಪಂಚತಂ. ೬೫-೫) ; ಮಸಣದ ಕಿಚ್ಚಿನಿಂ ನರಕಪಾಲದ ಭಾಂಡಮ ನಿಟ್ಟು ಮಜ್ಜೆಯ ರಸವೆಸರಾಗೆ ಕೀಲಿಗನ ಹೆಂಡತಿ ತಾಂ ತೊಟಸುತ್ತ ಮೂಳೆಯೊಳ್ (ಧರ್ಮಾಮ್ಮ. ೧೧-೧೮೨) ; ಆತಕ್ಕಿಯಂ ಪೊಯ್ದು ತೊಟಸಿ ಕುದಿ ಬರಲೊಯ್ಯನೆ ಮೇಲುರ್ಬಿದ ನೊರೆಯುಂ ತೆಗೆದು ಬಿಸುಟು (ದಶಕು. ೧೨-೧೨೧ ವ). ೩. ಹೊಟ್ಟೆ ಕಲಕು ; ಓಕರಿಕೆ ಬರುವಂತಾಗು : (೬). ೪. ಕ್ಷೋಭೆಗೊಳ್ಳು ; ಕ್ಷೋಭೆಯುಂಟಾಗು : ಅಂಗನೆಯಂ ಪಿಡಿದೊಯ್ದರೆಂದು . . . ಪುಯ್ಯಲ ಗಾವಳ ಕೆಯ್ಯನಿಟ್ಟುದೀ ತೊಟಸಿದ ಪಾಂಗೆ ಕಿಟ್ಟಲೆ ಕಿಟಂದಲೆಯಾದುದು ಕೂಡೆ ಪಟ್ಟಣಂ (ಅನಂಪು. ೧೦-೭೩). ೫. ಹುಟ್ಟುಹಾಕು; ದೋಣಿ ನಡೆಸು : ನೆತ್ತರ ತೂಱೆಯಂ ಮರುಳ್ತೊ ಟಸಿ ಪಾಯಿಸುತಿರ್ದುವು (ಪಂರಾಮಾ. ೧೩-೭೭). ತೊಳಸು$_1$ : ೨. ಎಲ್ಲರ ಹೆಂಡಿರೂ ತೊಳಸಿಕ್ಕುವರು ಎನ್ನ ಗಂಡಂಗೆ ತೊಳಸುವುದಿಲ್ಲ (ಸರ್ವವ. ೭೪-೩೪೨) ; ಅಲಗನೊಡಲೊಳು ತೊಳಸಿದಂತಿರೆ ಬಳಲಿದನು ಭೂಪಾಲ (ಕುಮ್ಯಾದ್ರೋ. ೭೧೨. ಪರಿ. ೨೮೨) ; ಕುದಿ ಬಂದಾಗ ಒಮ್ಮೆ ಹಾಲ ಹುಯಿದದನು ಸಟ್ಟುಗದಿ ತೊಳಸಿ (ಸೂಶಶಾ. ೧-೪೦) ; ೩. ವಾಂತಿ ಬರೋ ಹಾಗೆ ಆಗುಲ್ಲ, ಹೊಟ್ಟೆ ತೊಳಸುಲ್ಲ (ಮನೋನಂ. ೫೮); ಅವನಿಗೆ ಹೊಟ್ಟೆ ತೊಳಸಿ ಬಂತು (ದಾದಾನ. ೭೨). ೬. ಸುತ್ತಾಡು ; ಅಲೆ : ತೊಳಸದಿರು ಬ್ರಾಹ್ಮಣನು ಭಕ್ತಿಸ್ಥಳವು ಬೇಱೆಯ ಮಾರ್ಗ ವಹುದಿದು ತಿಳಿದು ನೋಡಾ ದರ್ಶನಂಗಳನೆಲ್ಲ (ಬಸಪು. ೩-೭೧); ಆ ನೃಪ ತಿಳಕನ ವಾಗ್ವೈಭವಕ್ಕೆ ಮೂಱುಂ ಜಗಮಂ ತೊಳಸಿದೊಡೊರ್ವನೆ ಸಮನಾಗುಳಿದುದಱಿಂ ಶೇಷನೆನಿಪನಿನ್ನುಂ ಶೇಷಂ (ಧರ್ಮನಾ. ೩-೨೮). ೭. ಬಳಸು ಮಾತಾಡು; ಸುತ್ತು ಮಾತಾಡು : ತೊಳಸಲೇನೂರ್ವಸಿಗೆ ಜನಿಸಿದ ಅಲಘುಮುನಿ ಮಾತಂಗನೆಂಬಗ್ಗಳಿಯನುದ್ಧವಿಸಿದನಲಾ ಮಾತಂಗಿಯುದರದಲಿ (ಬಸಪು. ೫೭-೭೨). ೮. ಕಾದಾಡು ; ಎದುರಿಸು : ಅಱಿದನಱಿದನೆಂದು ಮಱವೆಯ ತೋಟಿಯ ತೊಳಸುತ್ತ (ಪ್ರೋಲಿವಪ. ೧೭೩-೭೭೦). ೯. ಕೀಲು ; ಕಳಚು (?) : ಕಾಳುಗೆಡದರೆಯಗ್ನಿಯಾದರು ಕೀಳುವರು ನಾಲಿಗೆಯ ಕೃತಕವ ಮೇಳಯಿಸಿದರೆ ಸುರಪನಾದರು ಕಣ್ಣ ತೊಳಸುವರು (ಕಂಕದಾ. ೯-೭೪) ; "ಕುಟ್ಟು" (ಕಂಕದಾ. ಕೋಶ).

[ ದೇ.೩ ತಮಿ. ತುಟ, ಕುಟ್ಟು, ತುಟಾವು, ಚುಲವು ;
ಮಲ. ತುಟಯು ; ತುಳು. ತುಳಾವು, ಸುಲಾವು ]

ತೊಟಸು$_2$, ತೊಳಸು$_3$ (ನಾ). ೧. ಸುತ್ತಲೂ ತಿರುಗುವಿಕೆ ; ಪರಿ ಭ್ರಮಣ : (೬). ೨. (ಮನಸ್ಸಿನ) ಅಲೆದಾಟ ; ಚಂಚಲತೆ : (೬). ತೊಳಸು$_4$ : ೩. (ಕಣ್ಣು) ಹೊರಳುವುದು : ಮುಚ್ಚಿರ್ದ ಕಣ್ಗಳಂ ತೆರೆದು ತೊಳಸಿನ ಬೆಳ್ಪು ಚುಚ್ಚೆ (ಕಾಲಿರ. ೧೭೩-೩೮೮). ೪. ಘರ್ಷಣೆ ; ತಿಕ್ಕಾಟ : ಅಱಿಯದುದನಱಿದಲ್ಲಿ ಮಱೆದು ಮಱೆದುದನಱಿದಲ್ಲಿ ಕಂಡು ಉಭಯದ ತೋಟಿಯ ತೊಳಸು ನಿಂದಲ್ಲಿ ನಿಃಕಳಂಕ ಮಲ್ಲಿಕಾರ್ಜುನಲಿಂಗದ ಅಂಗ ಕರತಳಾಮಳಕವಾಯಿತ್ತು (ಪ್ರೋಲಿಮಾ. ೯೩-೩೭೯) ; ಬಳಿಕಮಗೆ ಬಲವದ್ವಿರೋಧದ ತೊಳಸು ಬಿದ್ದುದು ತೋಟಿ ಗಾಱದೆ ಜಲಧಿಮಧ್ಯದಲೂರ ಕಟ್ಟಿದೆವು (ಕುಮ್ಯಾಸ. ೨-೧೮). ೫. ತೊಡಕು ; ಸಿಲುಕಿಕೊಳ್ಳುವಿಕೆ ; 'ತೊಳಸುಗೊಳ್ಳು' ಪರಾ. ತೊಳಸಾಗು = ಗೊಂದಲಗೊಳ್ಳು ; ಕೆಡು : ಯಮುನಂದನನ ನುಡಿ ಸಂಧಾನದಲಿ ಸಂಜನಿಸಿತಾದೊಡೆ ಕಾಣೆನವನಿಯ ಹೊರೆಗೆ ಹರಿವುಗಳ ಮನದೊಳನುಸಂಧಾನವಂತಕತನುಜನಲಿ ತೊಳಸಾಯ್ತು ತೋಟಿಯ ನೆನಹು (ಕುಮ್ಯಾಉ. ೩-೭). ತೊಳಸುಮೆಳಸು = ಗೋಜು ; ಸಿಕ್ಕು : ತಿಳಿಯ ಬಾರದು ಖಳರ ಕುಟಿಲದ ತೊಳಸುಮೆಳಸು (ಅಂಬಿಕಾ. ೨೦-೧೭).

[ <ತೊಟಸು$_1$ ]

ತೊಟ್ಟುತ್ತು (ನಾ). (?) : ಒಕ್ಕಲುಳಿದುಣ್ಣು ಕಾದುವೊಂಗಿದು ಕಣ್ಗಟ್ಟು ತೊಟ್ಟುತ್ತುವೆ [ಕ್ಕೆ] (ಮ್ಯಾಆರಿ. ೧೯೩೦, ೫೭-೧೧ ; ಸು. 800).

[ ಇದು 'ತೋಳ್ಕುತ್ತು' ಎಂಬುದರ ಅಪಲಿಖಿತವಿರ ಹುದೆ ? ]

**ತೊಟ್ಟಾಳ್**, ತೊಳ್ವಾಳ್ (ಕ್ರಿ). ತೊತ್ತು ಮಾಡಿ ಆಳು ; ಪ್ರಭುತ್ವ ನಡೆಸಂ: ಸಿರಿಯಂ ನೀನುಯ್ದು ತೊಟ್ಟಾಳ್ದು [ಪಾಠಾಂ. ಳು] ರಾಗದಿನೆನ್ನೊಳ್ ಸುಕಮಿರ್ಪುದು (ಪಂಪಭಾ. ೮-೬೬). **ತೊಳ್ವಾಳ್**: ನೀನೆ ಆಳ್ವಾಡಿಕೊಳಲಲ್ಲೆನಲ್ ಬಪ್ಪುದೇ ನೀನೆ ತೊಳ್ವಾಳ್ವ [ಪಾಠಾಂ. ತ್ವಾಳ್ವ, ತ್ವಾಳ್ದ]ಡಿನ್ನಲ್ಲೆನಲ್ ಬಪ್ಪುದೇ (ನಂದಿರ. ೭-೧೫೦).

[ ತೊಟ್ಟು + ಆಳ್$_1$ ]

**ತೊಟ್ಟು**, ತೊತ್ತು, ತೊರ್ತು, ತೊಳ್ತು (ನಾ). ೧. ದಾಸಿ ; ಸೇವಕಿ: "ಪೋಟಾ, ಚೇಟಾ, ಚೇಟೀ, ದಾಸೀ, ಕುಟಹಾರಿಕಾ – ಈ ೫ ತೊಟ್ಟು" (ಹಲಾಯು. ೮೧-೩೩೫); ತೊಟ್ಟನುಟಿದಂತುಟಿದ ಮಹಾಪುರುಷರಟಿಯದುಟಿದರೆ ಸಿರಿಯಂ (ಕವಿರಾ. ೩-೧೭೫) ; ಧರೆಯಂ ಪಟಿಕೆಯ್ಸು ತೊಟ್ಟನುಟಿವಂತುಟಿದಂ ಸಾಮ್ರಾಜ್ಯಲಕ್ಷ್ಮಿಯಂ ಚಕ್ರಧರಂ (ಆದಿಪು. ೪-೧೬) ; ನಿನ್ನ ತೊಟ್ಟಿರೊಳನಿತೇಕೆ ಭಕ್ತಜನವತ್ಸಲ ನಿರ್ದಯನಾದ (ಕಾದಂಪೂ. ೯೨೪) ; ಪೊಲೆಯರಾಡಿನ ಪೆಸರ್ ಮಾಣಿಕದೇವಿಯೆಂಬಂತೆ ತೊಟ್ಟಿನ ಪೆಸರ್ ಸಿರಿಯ ದೇವಿಯೆಂಬಂತೆ (ಧರ್ಮಾಮ್ಮ. ೮-೦೬೬). ೨. ದಾಸ ; ಸೇವಕ : ತೊಟ್ಟೆಂದು ದಾಸನುಂ ದಾಸಿಯುಮಕ್ಕುಂ (ಶಮದ. ಸ. ೩೩ ಪ್ರಯೋ). ೩. ಹಾದರಗಿತ್ತಿ; ಜಾರೆ: ಮತ್ತಮೊಂದೆಡೆ ಯೊಳೊರ್ವರ ತೊಟ್ಟು ಲಲಿತಾಂಗಂ ಬಂದನಿನ್ನಾವಾತನ ತೋಟ ಓಂಗುವಿನಂ ನೆರೆವನೆಯೊಳಿರ್ದು ಬರ್ಪಮೇಟಿಮೆಂದು ತನ್ನಾಳ್ದಿಚ್ಚೆಯರಪ್ಪ ಬಧಿರೆಯರ್ಗಂ ಮೆಲ್ಲನೆ ಪೇಟ್ಟುದುಂ (ಧರ್ಮಾಮ್ಮ. ೨-೪೯). **ತೊತ್ತು**: ೧."ಕುಟಹಾರಿ ಚೈಟಂ ಚೇಟಿ ದಾಸಿಯೆನೆ ತೊತ್ತಕ್ಕು" (ಮಂಗರಾ. ೯೦-೪); ಎಲೆ ತೊತ್ತ ನಿನಗಿನಿತು ಸಾಮರ್ಥ್ಯವನಾರ್ಮಾಡಿದರ್ (ಶಂಕಶಂ. ೦೩೩-೩) ; ಪ್ರಭುದೇವರ ತೊತ್ತಿನ ತೊತ್ತಿನ ಮಜುದೊತ್ತಿನ ಮಗಳು (ಮುಹಾದೇ. ಬ. ೬೯-೦೯೮) ; ಹೆತ್ತ ತಾಯಂ ಮಾಜಿ ತೊತ್ತ ಕೊಂಬರೆ (ಹಡಕಾ. ೮-೭೬). ೩. ತೊತ್ತೇರಿಗುಂಟು ತಾಟಕಿಗುಂಟು ಹೆತ್ತ ತಾಯಿ ಗಿಲ್ಲವೀ ಕಾಲ (ಪುರಂದ. ೦-೦೨೦-೨). 'ತೊತ್ತುಬಡಿಕ', 'ತೊತ್ತುಬುದ್ಧಿ' ಪರಾ. **ತೊರ್ತು** : ೧. ಆ ದೇವರ ತೊರ್ತ್ತು (ಎಇ. XIII, ೩೨೦-೩೦ ; 1126). **ತೊಳ್ತು** : ೧. ವ್ಯಡ ತಾಂ ಭಿಕ್ಷವ ಬೇಡನೇ ಮಖಿಜೆ ತಾಂ ತೊಳ್ತಾಗಳೆ . . . ನರರ್ ಪೂರ್ವದೊಳ್ ಪಡೆದಪ್ಪುಣ್ಣದೆ ಪೋಪರೇ (ಸೋಮೇಶ. ೩೨) ; ತೊಳ್ತಿಗೆ ಚಮ್ಮಟಿಗೆವಿಡಿದಂತೊಡ್ಡಿದೊಡ್ಡಣದ ಕಡುಗಲಿಗಳನು ಕೈದೆತ್ತದಂದದಿ ಹುಯ್ಯದೊಡೆ ಪಂಥವೆಲ್ಲಿಯದೆಮಗೆ (ನೇಮಿಸಂ. ೨೯-೬) ; ವರಮಿಳ್ತು ನಿಮಗೆ ತೊಳ್ತುವೆ ಬಿಡಿ ಮರುಳ್ತನಂ (ಮುಹಾವಿ. ೬-೩೬). ೨. 'ಗಂಡುದೊಳ್ತು' ಪರಾ.

**ತೊತ್ತಿನ ಕೂಸು** = ದಾಸಿಯ ಪುತ್ರ; ಸೂಳೆಯ ಮಗ : ಪುಷ್ಪಾಸವವನ್ನು ಕಳುವ ತೊತ್ತಿನ ಕೂಸಾದ ಈ ದುರುದುಂಬಿ ತುಂಬಿಯು ಪೂಜ್ಯಳಾದ ಈಕೆಯ ಮುಖಕ್ಕೆ ಎರಗುವುದು (ಶಾಕುಂತ. ೯೦-೦೬) **ತೊತ್ತಿನ ತೊತ್ತು** = ಸೇವಕನ ಸೇವಕ : ನಿಮ್ಮ ತೊತ್ತಿನ ತೊತ್ತು ನಾನು (ಜನ್ನವ. ಕ. ೨೭-೬೦). **ತೊತ್ತಿನ ಮಗಳು** = ದಾಸಿಯ ಪುತ್ರಿ ; ಕೀಳು ಸೇವಕಿ : ಮನೆಯ ತೊತ್ತಿನ ಮಗಳ ಮಕ್ಕಳಿಗಿನಿತು ವೃಂ ಸರಿಯಾಗದೆನ್ನನವನಿಯೊಳುತ್ತಮ ಭಕ್ತಿ ನಾನೆಂದಾತ್ಮದೊಳು ನೆನೆದು (ಬಸಪು. ೪೮-೨೭) ; ತೊಲಗು ತೊತ್ತಿನ ಮಗಳೆ ಮುಟ್ಟದಿರೆಳೆಯ (ತೊರರಾ. ೧-೦೦-೦೩). **ತೊತ್ತು ತೊಡಿಕೆ** = ಸೇವಕಿಯಂತೆ ಹೊಂದಿಕೊಂಡಿರುವವಳು : ಹೆತ್ತಯ್ಯನ ಮನೆಯಾ ತೆತ್ತಿಗಳು ನಾನಲ್ಲ ತುತ್ತಿನಾಸೆಗೆ ಬಂದಾ ತೊತ್ತು ತೊಡಿಕೆಯಲ್ಲಾ (ಶ್ರೀಕೃಪಾ. ೩೫). **ತೊಟ್ಟಿನ ಮಗ**, **ತೊತ್ತಿನ ಮಗ** = ದಾಸಿಯ ಮಗ : "ಗೋಪ್ಯ ೧ , ದಾಸೀಸುತ ೭–ಈ ೨ ತೊಟ್ಟಿನ ಮಗಂ" (ಹಲಾಯು. ೮೨-೩೪೭) ; ತೊಟ್ಟಿನ ಮಗನಧ್ಯಯನಮೆ ಬಾಟಿಕ್ಕಿ ಮದಾತ್ಮಜರ ಬುದ್ಧಿಯುಂ ವೃದ್ಧಿಯುಮೇಂ ಬಾಟಿಕ್ಕಿ ನಿನ ಗೆಂದಟಿಲ್ದರ್ (ಶಾಂತಿಪು. ೬-೬೪); ಗ್ರಾಸಕಿಲ್ಲದೆ ತೊತ್ತಿನ ಮಗನ ಮನೆಲುಂಡ (ಪುರಂದ. ೨-೧೧-೧). **ತೊಟ್ಟಿರ್**, **ತೊತ್ತಿರು** (ಬಹುವ): ಎನ್ನ ಪರಿವಾರಮನ್ನ ತೊಟ್ಟಿರನ್ನ ಮಾಣಿಕಭಂಡಾರಂ . . . ಎಂದಿವ ಱಿೞ್ ಮೋಹಿಸಿದ ಬುದ್ಧಿಯನೊಡೆಯನಾಗಿಯಾರ್ತಧ್ಯಾನದಿಂ ಸತ್ತು (ವಡ್ಡಾರಾ. ೦೪೦-೨೧) ; ಸಗ್ಗಂಗಳೊಳಿರ್ಪ ದೇವಡಿತಿ ತೊಟ್ಟಿರೊಳಟ್ಟಿ ಯನಾಗಲೀವೆನೇ (ಪಂಪಭಾ. ೧೦-೪೫) ; ಕಾದಿದ್ದರಯ್ಯ ಪಡುವರ್ಗವೆಂಬ ತೊತ್ತಿರು ಮುಟ್ಟದಂತೆ (ಅವಚಂ. ೨೭೭-೦೨೮೦) ; ನಾವಿನ್ನು ನಿಮ್ಮ ಶ್ರೀಪದಾಂಬುಜನಿತ್ಯಸೇವೆಯೊಳೋವ ತೊತ್ತಿರ ತೊತ್ತಿರಾಗಿರಲು (ಬಸಪು. ೩೨-೯೬) ; ರಂಭೆಯೂರ್ವಶಿ . . . ಮೊದಲಾದ ಸುರಸತಿಯ ರೆನ್ನರಮನೆಯ ತೊತ್ತಿರುಗಳಾದರು (ಕುಮಾರಾ. ೦೩-೬೫).

**ತೊಟ್ಟುಮಾಡು** = ಸೇವಕನನ್ನಾಗಿಸು : ಎನ್ನಾನೆಯಿಂದೆ ಪಗೆಗಳ ಬೆನ್ನೆಲ್ವಂ ಮೆಟ್ಟಿ ಮುಱಿಸಿ ಸರ್ವಾಂಗದ ಸೊಂಪನ್ನಿನಗೆ ತಂದು ಕುಡ ದೊಡೆ ನಿನ್ನಹಿತನ ಮನೆಗೆ ತೊಟ್ಟುಮಾಡುವುದೆನ್ನಂ (ದಶಕು. ೭-೫೦).

[ ದೇ.೫ ತಮಿ. ತೊಟುತ್ತ್ಯ, ತೊತ್ತು; ಮಲ. ತೊಟಿಲ್ = ಕೆಲಸ ; ತುಳು. ತೋಳಿಲ್ = ಕೆಲಸ, ಉದ್ಯೋಗ ; ತೆಲು. ತೊತ್ತು ]

**ತೊಟ್ಟುಗೆಲಸ**, ತೊತ್ತುಗೆಲಸ, ತೊಳ್ತುಗೆಲಸ (ನಾ). ಸೇವೆ ; ಊಳಿಗ : ಓರ್ವ ಸೊರ್ಕಿದ ತೊಟ್ಟು ತೊಟ್ಟುಗೆಲಸಕ್ಕರಮನೆಯಂ ಪುಗುವ ಪೊಱಮಡುವ ಸೂಟಿಯೊಳ್ (ಶಂಕಶಂ. ೦೭೯-೪). **ತೊತ್ತುಗೆಲಸ** : ತೊತ್ತಿಂಗೆ ತೊತ್ತುಗೆಲಸವಲ್ಲದೆ ಅರಸರ ಸುದ್ದಿ ಎನಗೇಕಯ್ಯಾ (ಬಸವ. ೪೦೦) ; ಎಂಬತ್ತು ವರುಷಂಗಳು ಶಿವೈಕ್ಯರ ತೊತ್ತುಗೆಲಸಂ ಮಾಡಲು (ಬಸಪು. ೨೭-೬೨) ; ಅರಸುಮಗಳನಾ ತೊತ್ತುಗೆಲಸಕ್ಕೆ ಪರುಠವಿಸಿದಿರೆ (ಕುಮಾರಾ. ೦೯-೩೩) ; ಹೊತ್ತು ಮೂಡಿ ಮುಳುಗುವನ್ನ ವರ ತೊತ್ತುಗೆಲಸವನೆ ತುಬ್ಬಿ (ಸಮ್ಯಕ್ತ್ವ. ೫-೫೨). **ತೊಳ್ತುಗೆಲಸ** : ಲೋಕವನಗಿವ ಕಾಲನೆಂಬ ದರ್ವೀಕರನ ದಾಡೆಯಂ ಕಿಳ್ತವಧಿವಿಧಿಗಳ ವರ್ಗೆ ತೊಳ್ತು [ಪಾಠಾಂ. ತ್ತು] ಗೆಲಸವನಿತ್ತು (ಪದ್ಮರಾ. ೨-೦೬ .)

[ ತೊಟ್ಟು + ಕೆಲಸ ]

**ತೊಟ್ಟುಗೊಡು**, ತೊತ್ತುಗೊಡು, ತೊಳ್ತುಗೊಡು (ಕ್ರಿ). ಪರಿಚಾರಕನನ್ನಾಗಿಸು; ಸೇವೆಗೆ ತೊಡಗಿಸಂ,–ಇಡು: ರಾಗೋದಯಮೆನ್ನನೋವದೆಟಿದೊಯ್ದೀಂ ತೊಟ್ಟುಗೊಟ್ಟತ್ತೊ (ಕಾದಂಬ. ೮೧). **ತೊತ್ತುಗೊಡು** : ತನುವನೀಶ್ವರಂಗೆ ಹಿಂಗದೊಪ್ಪಿಸುತ್ತ ತೊತ್ತುಗೊಟ್ಟು (ನಮರ. ದೇ. ೦೯೬-೦೨). **ತೊಳ್ತುಗೊಡು** : ಪುರಹರ ನಿಮಗೆನ್ನಂ ಸದಾ ತೊಳ್ತು ಗೊಟ್ಟೆಂ (ರಕ್ಷಾಶ. ೭೮). [ ತೊಟ್ಟು + ಕೊಡು$_1$ ]

**ತೊಟ್ಟುಗೊಳ್**, ತೊತ್ತುಗೊಳ್, ತೊಳ್ತುಗೊಳ್ (ಕ್ರಿ). ಊಳಿಗಕ್ಕೆ ಇಟ್ಟುಕೊಳ್ಳು ; ಸೇವಕನನ್ನಾಗಿ ಮಾಡಿಕೊಳ್ಳು : ದೆಸೆವೆಂಡಿರ್ಗೆ ಪಸದನಂಗೈದು ಬರ್ದಿಲವೆಣ್ಗಳಂ ತೊಟ್ಟುಗೊಂಡರ್ (ರಾಮಾಶ್ವ. ೦೪-೨೭). **ತೊತ್ತುಗೊಳ್**: ನಿನ್ನ ಕರುಣದ ಬಲವುಂಟೆನಗೆಂದು ಸಾಯಿದೇವನ್ನಂ ಬಲು ಸಲೆ ತೊತ್ತುಗೊಣ್ದ ದಯಕೇಂ ಸಲೆವುಂಟೆ (ಸೌಇಇ.IX-1, ೨೯೭-೬೦; 1177) ; ದೇವ ಸಂಸಾರಂ ನೆಱೆ ಪುಗದ ಮುನ್ನ ನೀನೆಂದು ಬಂದೆನ್ನಂ ತೊತ್ತು[ಪಾಠಾಂ.ಳ್ತು]ಗೊಂಬೆಯೆಂಬುಮ್ಮಳಿಕೆಯಿಂದಲುಮಂದದಿಂ (ನಂಬಿಶ. ೨-೧೧). **ತೊಳ್ತುಗೊಳ್** : ಕೃಪೆಯೊಳೆನ್ನಂ ತೊಳ್ತುಗೊಂಡಾಳ್ದನಂ . . . ಕಂಡೆಂ ವಿರೂಪಾಕ್ಷನಂ (ಪಂಪಾಶ. ೩೬). [ ತೊಟ್ಟು + ಕೊಳ್$_1$ ]

**ತೊಟ್ಟುತನ**, ತೊತ್ತುತನ (ನಾ). ಸೇವೆ ; ಊಳಿಗ ; ಪರಿಚರ್ಯೆ : ನಿಜಜೀವಿತಮುಮಂ ತನ್ನುಮನಿರದಿತ್ತು ತೊಟ್ಟುತನಮಂ ತಾಂ ಕೊಂಡುಂ (ಕಾದಂಬ. ೧೧೪). **ತೊತ್ತುತನ**: ಬೆಟ್ಟದ ಬೆದಜದ ತೊತ್ತುತನವ ಮಾಡಲು ತನ್ನನೀವ ಕೂಡಲಸಂಗಮದೇವ (ಬಸವ. ೧೪೮) ; ಕಂದ ನೀವಿರಲೆನಗೆ ಸವತಿಯ ತೊತ್ತುತನವಾಯ್ತು (ಸಂಭಶ. ೫-೪೬). [ ತೊಟ್ಟು + – ತನ ]

**ತೊಟ್ಟುತೊಡರ್** (ನಾ). ಗುಲಾಮಗಿರಿಯ ಬಂಧನ; ದಾಸ್ಯಶೃಂಖಲೆ : ತೊಟ್ಟುತೊಡರಿನಿಱುಕಿಯನ್ನನಿಱುಯುತಿರ್ಪವನ್ (ಬದ್ಧಪ್ರ. ೧೧-೨೦೬). [ ತೊಟ್ಟು + ತೊಡರ್೨ ]

**ತೊಟ್ಟುವೆಸ, ತೊತ್ತುವೆಸ, ತೊರ್ತುವೆಸ** (ನಾ). ಊಳಿಗ ಸೇವೆ : ನೀಮೆಸಗೆಡೆಮಡಗದೆ ಬೆಸವ ತೊಟ್ಟುವೆಸಸಂ ಬೆಸಸಿಂ (ಹಂಪಭಾ. ೯-೮೧); ಲವಣಾರ್ಣವದ ನಿಖಿಳ ವಸ್ತುಗಳಂ ಕಸ್ತೂರಿ(ಸಿ) ವಿಸ್ತಾರಿಸಿ ವೆಸರ್ವ ಸರಿಖಿಳೆ ಪೇಟ್ಟುವಟಯ್ಸ ವರಶನು ತೊಟ್ಟುವೆಸನಂ ಪೂಣ್ದಾಳಾದಂ (ಶಾಂತಿಪು. ೧೧-೧೦೫); ಇನ್ನನ ಸುಸತ್ವಗುಣಸಂಪನ್ನನ ಸತಿಗೆನಗೆ ತಗದು ತೊಟ್ಟುವೆಸಂ (ನೇಮಿಪು. ೧೩-೩೮); ನನ್ನ ಈ ಕಡುಕಷ್ಟಂಗಳನ್ ನಿನ್ನ ಈ ತೊಟ್ಟುವೆಸಕಾಗಿ ಮಾಱಾಡೆ ನಾನ್ (ಬದ್ಧಪ್ರ. ೫೦-೧೧೧೩). **ತೊತ್ತುವೆಸ**: ಆಂ ತೊತ್ತುವೆಸದೊಳಿರ್ಪ್ಪೆಂ (ಬಂಕಿಶ. ೯-೨). **ತೊರ್ತುವೆಸ**. 'ತೊರ್ತುವೆಸಗೆಯ್' ಪರಾ. [ ತೊಟ್ಟು + ಬೆಸ೧ ]

**ತೊಟ್ಟುವೆಸಗೆಯ್, ತೊರ್ತುವೆಸಗೆಯ್** (ಕ್ರಿ). ತೊತ್ತಿನ ಕೆಲಸವನ್ನು ಮಾಡು ; ಊಳಿಗಮಾಡು : ತೊಟ್ಟಿ ತೊಟ್ಟುವೆಸಗ[ಪಾಠಾಂ. ಕೆ]ಯ್ ಪೋ ಪೋಗು ನೀನೆಂದು ಬಯ್ದು (ಹಂಪಭಾ. ೭-೫). **ತೊರ್ತುವೆಸಗೆಯ್**: ತೊರ್ತುವೆಸಗೆಯ್ವುದ ಮಂಡಲನೊಳಗಿಲ್ಲ (ಎಇ. XIII, ೪೪-೩೦; 1112). [ ತೊಟ್ಟುವೆಸ + ಕೆಯ್೧ ]

**ತೊಟ್ಟುಟ್, ತೊತ್ತಳ, ತೊತ್ತಳಿ, ತೊತ್ತಟ, ತೊತ್ತುಟ್, ತೊಳ್ತಳ** (ನಾ). ೧. ನುಗ್ಗುನುರಿ ; ಅಜಿಗಿಜಿ ; ಅಸ್ತವ್ಯಸ್ತವಾದ ಸ್ಥಿತಿ : "ತೊಟ್ಟುಟ್ (ತೊಟ್ಟುಟ್) = ಸೊಪ್ಪಾದುದು" (ಕ ಮ ದ. ಶಬ್. ೧); "ಸೊಪ್ಪಾದುದು ತೊಟ್ಟುಟ್" (ಕರ್ಣಾನಿ. ೭೮). ೨. ತಂಳಿತ; ತುಳಿಯಂ ವಿಕೆ : ಅರಟರ ಚಿನ್ನಪೊಂಗರ ಸಬಂಗಳೆ ತೊಟ್ಟು[ಪಾಠಾಂ. ತ್ತು]ಟ್ಯೊಳ್ ತೊಡಂಕಿ ನಿಲ್ಲದೆ (ಹಂಪಭಾ. ೮-೧೦೪); ಪರ್ವಿದಾ ಪಡೆಯ ತೊಟ್ಟುಟ್ಯಿಂ ಗಿಡು ಬಳ್ಳಿ ಭೂರುಹಾವಳಿ ಪೊದಱುಳ್ಳ ಬಲ್ಲಡವಿ ಪರ್ವಯಲಾಯ್ತು (ಪುಷ್ಪಪು. ೫-೪೬). ೩. (ಆಲಂ) ಸ್ವಾಧೀನಪಡಿಸಿಕೊಳ್ಳುವಿಕೆ ; ಆಕರ್ಷಿಸುವಿಕೆ : ತೊಟ್ಟುಟ್ಯುಮಂಗಿಯುಂ ಬಗಿಯುಂ ಮಾಡಿ ಮನಮನುಟ್ ಸೆಟ್ವಿಡಿದ ಸೀಯನಪ್ಪ ಗೇಯರಸಾಬ್ಧಿಪೂರದೊಳ್ ಮೂಡಿ ಮುಂಬುಗಾಡುತ್ತುಂ (ಶಾಂತಿಪು. ೨-೨೨ ಪ). **ತೊತ್ತಳ** : ೧. 'ತೊತ್ತಳತಂಳಿ' ಪರಾ. ೪. ರಭಸ; ವೇಗ : ಬಿರುಗಾಳಿಯ ತೊತ್ತಳ ದೊಳು ಬಂಡೆ ಬಂಡೆ ಬಡಿ ಬಡಿಯಲು (ನಡಬಂ. ೬೮-೭). **ತೊತ್ತಳಿ** : ೧. 'ತೊತ್ತಳಿಗೊಳ್' ಪರಾ. **ತೊತ್ತಟ**: ೧. 'ತೊತ್ತಟದುಟ್' ಪರಾ. **ತೊತ್ತುಟ್** : ೨. ನೋಡಿರೆ ಕರ್ಣನಿತ್ತ ಕನಕೋತ್ಕರರಾಶಿಯನಂದು ವಂದಿಗಳ್ ನಾಡೆಯುಮೆಯ್ದೆಪೊತ್ತಡಕಲಾಱದೆ ಮಿಕ್ಕೊಡೆ ರಾಶಿಗೆಯ್ದಿರಲ್ ಕೂಡೆ ಮದೇಭರಾಜಿಘಟಕೋಟಿಯ ತೊತ್ತುಟ್ಪೊಲ್ಲದಲ್ಲಿ ಬಟ್ಟೋದೆ ನೆಲಂ ಸುವರ್ಣಮಯಮಾದುದು ತಚ್ಚಿಬಿರಾಂತರಾಳದೊಳ್ (ನೇಮಿಪು. ೧೧-೧೧೫). ೫. ಬಿಗಿತ; ಸವಿ ತಲೆಗಾದುದೀಯಧರದಿಂ ಪುಳಕಾಂಕುರ ಮಾಪ್ಪುಮಾಯ್ತು ಮೆಯ್ಗುವಳ ಕುಚಕ್ಕೆ ಕರ್ಕಶತೆ ಜೀವಸಮಾಯ್ತುಟ್ ದಂತಿರೆನ್ನ ಬಾಯ್ದವರದೊಳಿನ್ನ ತೋಳ್ಗೋಣರ ತೊತ್ತುಟ್ಯೊಳ್ ಕಡಿಕೆಯ್ದುವಿಂತು ಬಟ್ಟುವೆ ಪೊಣರ್ವನ್ನುರೋಹತಿಯೊಳೆಂಬಪೊಲೀಕ್ಷಿಸು ತಿರ್ದ ನಲ್ಲನಾ (ಲೀಲಾವ. ೧೩-೩೧). **ತೊಳ್ತಳ** : ೧. 'ತೊಳ್ತಳಂದುಳಿ' ಪರಾ.

**ತೊಟ್ಟುಟ್ಮಾಡು** = ನುಗ್ಗುನುರಿ ಮಾಡು ; ಅಸ್ತವ್ಯಸ್ತಗೊಳ್ಳು ವಂತೆ ಮಾಡು : ರಿಪುಸೇನೆಯಂ ತುಟಿದು ತೊಟ್ಟುಟ್ಮಾಡುವಂ (ಹಂಪಭಾ. ೧೩-೪೪) ; ಜನರಾಜಾ ವನವಾರಿಕೇಳಿ ವಿಭವಂ . . . ಶ್ರೀಯಂ ಪುದೀಯ ಪ್ರಿಯಾಬ್ಧಿನಿಯಂ ತೊಟ್ಟುಟ್ ಮಾಡಿ ಕೀಟ್ಬಡಿಸಿದು (ಅನಂಪು. ೭-೫೭). [ <ತುಟ್೧ ]

**ತೊಟ್ಟುಟ್ದುಟ್, ತತ್ತಟದುಟ್, ತೊತ್ತಳಂತುಳಿ, ತೊತ್ತಳಂದುಳಿ, ತೊತ್ತಳತುಳಿ, ತೊತ್ತಳದುಳಿ, ತೊತ್ತಟಂದುಟ್, ತೊತ್ತಟದುಟ್, ತೊಳ್ತಳಂದುಳಿ, ತೊಱ್ತುಳಿದುಳಿ, ತೋರ್ತಳದುಳಿ** (ಕ್ರಿ). ಪುಡಿ ಯಾಗುವಂತೆ ತುಳಿ ; ನುಗ್ಗುನುರಿಯಾಗುವಂತೆ ತುಳಿ ; ಸೊಪ್ಪಾಗು ವಂತೆ ಮಾಡು; ಮುದ್ದೆಯಾಗುವಂತೆ ಮಾಡು: ಸುಪ್ರತೀಕ[೦]ಕೆಯ್ಯ ಕಾಲ ಕೋಡೇಱಿನೊಳ್ ಬಲಮನೆಲ್ಲಂ ಜವನ ಜವುಟ್ದುಟ್ವಂತೆ ತೊಟ್ಟುಟ್ದುಟ್ದು (ಹಂಪಭಾ. ೧೧-೬೨ ಪ) ; ರಾಗರಸದಾಗರಮಪ್ಪ ವಲ್ಲಭನ ಮನಮನಾಗಳಾಗಳೆ ತೊಟ್ಟುಟ್ದುಟ್ದು ಬಂದಳೆನಿಸಿ (ವರ್ಧಪು. ೭-೯ ಪ). **ತತ್ತಟದುಟ್** : ನಾಡಂ ದಾಟ್ಟು, ಒಳ್ಳಿದರಂ ಪೊರೆದು, ಕೂಟರಂ ತತ್ತಟದುಟ್ದುಂ, ಬರ್ಕವಾತನಡಿಯಾಣತಿಯೊಳೆ ಸೇನೆ (ರಾಮಾಶ್ವ. ೧೨೦-೭). **ತೊತ್ತಳಂತುಳಿ**: ಒತ್ತಿದ ಜಗಳಕ್ಕೆ ಸುತ್ತ ಮುತ್ತಿಗೆ ಯಾಗಿ ತೊತ್ತಳಂತುಳಿದು ಕೊಲುವಾಗ ಉಳುವೆಯ ಕರ್ತ ಬಂದಾನು (ಸರ್ವಜ್ಞ. ೧೦೫೨). **ತೊತ್ತಳಂದುಳಿ** : ಮುಂದಲೆವಿಡಿದು ಕೆಡಹಿ ಪಾದಂ ಗಳಿಂ ತೊತ್ತಳಂದುಳಿದು ತಾಂಡವರೂಪವಂ ಧರಿಸಿ ಕುಣಿವುತಿರೆ (ಚಬಪು. ೨೦-೩೨) ; ಧರೆಯೊಳಗುಳ್ಳ ಬಲ್ಗೊರಗಳೆಲ್ಲ . . . ಪರಿತರೆ ತೊತ್ತಳಂ ದುಳಿದನಪ್ರತಿಮಂ (ಅಪ್ರತಿ. ೨೭-೫೦). **ತೊತ್ತಳತುಳಿ**: ಬುಧಜನಾಧಾರಂ ತೊತ್ತಳತುಳಿವಂ (ಬೊಂಕಶಾ. ೧೯೩೪, ಬಂಕಾಪುರ, ೩-೧೨; 954) ; ಅಧೈರ್ಯ, ಭಯ, ಹೆದರಿಕೆ ತೊತ್ತಳತುಳಿದವು (ಕಕಂಡ. ೧೩೮). **ತೊತ್ತಳದುಳಿ** : ಮಲೆವತ್ತುದ್ವಿತ್ರರಂ ತೊತ್ತಳದುಳಿದು ನಿಜ ಪ್ರಾಜ್ಯ ಸಾಮ್ರಾಜ್ಯಮಂ ತೋಳ್ವಲದಿಂ ನಿಷ್ಕಂಟಕಂ ಮಾಡಿದನಧಿಕಬಳಂ (ಎಕ. II, ೧೩೨-೨೨ ; 1123) ; ಗೂಳಿಯಾಗಿ ಹೋಗಿ ಎಲ್ಲರ ತೊತ್ತಳದುಳಿದು ಒಕ್ಕಲಿಕ್ಕಿ (ಕೂನ್ನಸಂ. ೧೫೦-೨೧); ತೊತ್ತಳದುಳಿದನರಿನಳಿನವನಮಂ ಬಸವ ಕುಂಜರನು (ಬಸಪು. ೫೯-೫೪) ; ಕದಳಿಯನು ಮದಕರಿಯು ತೊತ್ತಳ ದುಳಿದಪೊಲು (ಕುಮಾರರಾ. ೪-೬೩) ; ವರ ಜಿತೇಂದ್ರಿಯರ ತೊತ್ತಳದುಳಿದ ಧೀರೋದಾತ್ತ ಜಯಯೆಂದು ಚಿತ್ತಜನನು ಹೊಗಳಿದರು (ಮೋಹತ. ೧೭-೮). **ತೊತ್ತಟಂದುಟ್** : ಕೋಪಾಟೋಪದಿಂ ತೊತ್ತಟಂದುಟ್ ಯಲ್ಕೆಟ್ಟರೆ ರಾಸಭಾಕೃತಿಯಿನಾಗಳ್ ರೌದ್ರಮಂ ಬೀಱುತಂ (ಮಹಾನೀ ೬-೧೯) ; ಪಾರ್ವನಂ ತೊತ್ತಟಂದುಟ್ದರ್ (ಚಕವಿ. ೬-೧೧೯) ; ತುಱುಗೆಱೆಯುವವನಂ ತೊತ್ತಟಂದುಟ್ದು ಬೆಂಗಳೂರವನಂ ಭಂಗಂಬಡಿಸಿ (ಚಿಕವಂ. ೫೭-೧೨). **ತೊತ್ತಟದುಟ್** : ಹೀನಬಲನನಧಿಕಬಲಂ ತೊತ್ತಟ ದುಟ್ದನೆಂಬ ಲೋಕದ ಪಟ್ ಪೊರ್ದದೆ ಮಾಣೆ ಧರ್ಮಯುದ್ಧ ದೊಳೆಸಗಿಂ (ಆದಿಪು. ೧೪-೧೦೨) ; ಕೊತ್ತಾಗಾಲಮಂ ತೊತ್ತಟದುಟ್ದು (ಚಕವಿ. ೨-೨೯); ದುಱುದುಂಬಿಗುದುರೆ . . . ಪೊಕ್ಕು ಪೊಱದೋಂಟವಂ ತೊತ್ತಟದುಟ್ದು ಪಾಟ್ಗೆಡಿಕುಂ (ರಾಮಾಶ್ವ. ೧೩೨-೧೩). **ತೊಳ್ತಳಂದುಳಿ**: ಅಖಿಳ ಜೀವರಂ ತೊಳ್ತಳಂದುಳಿದುಟ್ಟುತ ಮಾರಾಹನಿಂತು ಕೋಲಾಹಲಂ ಮಾಡಿ (ವೀಶೈಪು. ೩-೧೧-೧೭). **ತೊಱ್ತುಳಿದುಳಿ**: ಕಲಿ ತೊಱ್ತುಳಿದುಳಿದಿಕ್ಕೆ ಪರೆಯ ಭಾನೂದಯದೊಳ್ಕೃರ್ತಲೆಯನ್ನಿರೆ ರಿಪುಗಳ್ಕೃರ್ತಲೆವೆಸರಾದು ದಾತನೊಕ್ಕಲ್ವೆಸರುಂ (ಸೌಇಇ. XI-I, ೪೫-೫; 980). **ತೋರ್ತಳದುಳಿ**: ಕಾಲ್ದುಳಿಯೊಳೆಱಾಗೆ ತ್ರೋರ್ತ್ತಳದುಳಿವಂ ರಣರಂಗಭೈರವಂ ಗೋವಿನ್ದ (ಸೌಇಇ. XX, ೮೭-೨೮; ?). [ ತೊಟ್ಟುಟ್ + ತುಟ್೧ ]

**ತೊಟ್ಟುಟ್ಟಿ, ತೊಳ್ಪುಟ್ಟಿ** (ನಾ). ದಾಸಿಯ ಪುತ್ರ ; ತೊತ್ತಿನ ಮಗ : ಎಟ್ಗೋಗು ದೂತನಪ್ಪನ ಬೆಟ್ಟನ ನುಡಿಗೇಳ್ದು ಮುಳಿಯಲಾಗದು ನೀನುಂ ಮೆಟ್ಟಿಟ್ಟು ವಿದುರನೆಂಬೀ ತೊಟ್ಟುಟ್ಟಿಯ ಮನೆಯ ಕೂಟ್ ನುಡಿಯಿಸೆ ನುಡಿದೈ (ಹಂಪಭಾ. ೯-೫೪). **ತೊಳ್ಪುಟ್ಟಿ** : ಮೂರು ತಲೆ ತೊಳ್ಪುಟ್ಟಿ ತಾಯ ಮಗನೆಂದು (ಮಾಱುರುನಾ. ೦೩೩-೧೧೧೬).

[ <ತೊಟ್ಟು + ಪುಟ್ಟು೧ + – ಇ೩ ]

**ತೊಟ್ಟುಟ್ಟು** (ನಾ). = ತೊಟ್ಟುಟ್ಟು : ನಾಲ್ಕುಂ ಗ್ರಹಂ ನೀಚ ಶತ್ರು ನಿವಾಸಂಗಳೊಳಕ್ಕೆ ನವಾಂಶಕದೊಳೊಂದಿರ್ದಂದು ತೊಟ್ಟು[ಪಾಠಾಂ. ಪು]ಟ್ಟು (ಜಾತತಿ. ೨೧-೨೧). [ <ತೊಟ್ಟು + ಪುಟ್ಟು ]

**ತೋ, ತೊಯ್, ತೊಯ್ಯು, ತೋಯು** (ಕ್ರಿ). ತೋದ$_1$ (ಭೂತಕೃ) ತೊಯ್ದು, ತೋದು, ತೋಯ್ದು (ಭೂತನ್ಯೂ). ೧. ತೇವವಾಗು; ನೆನೆ ; ಹಸಿಯಾಗು : ಏನೆಂಬೆಂ ಬಾಲ್ಯದೊಳ್ ಮೇಲಟಿಯದೆ ಮಲದಿಂ ಮೂತ್ರದಿಂ ಶ್ಲೇಷ್ಮದಿಂ ತೋದಾ [ಪಾಠಾಂ. ತೊಯ್ದಾ] ನಾರೆಂದೇನುಮಂ ಭಾವಿಸದೆ(ರತ್ನಾಶ. ೪) ; ತೋದುದು ತೇರು ರಕ್ತದಲಿ (ಕುಮಾ್ಯರಾ. ೫-೫೫) ; ತೋದುದಂಬರತಳಂ ವಿಷದ ಲೋಳೆಗಳಿಂದ ತೀದುದಮರರ ಹರುಷವು (ಜೈಮಿ. ೪೩-೨೩) ; ಮಳೆಗಟೆದುದಿದೇತರ್ಕೆವಳ್ ತೋದೊಡೇ ಕುದ್ಯವಿಸಿತ್ತೋ ಪ್ರೀತಿ (ದಿವ್ಯಾ. ೬-೪೯) ; ಪಾದಪಗಳಡಿಗೆರೆಯ ಸಲಿಲವ್ರ ತೋದು ಕೊಂಬೆಗಳುಬ್ಬಿ ಪುಷ್ಪ ಸ್ವಾದುಫಲವೀವಂದದಲಿ (ಹಸಾರ. ೩-೧೩). ೨. ನೆನೆಯಿಸು ; ಒದ್ದೆಮಾಡು : "ತೋ–ಆರ್ದ್ರಕರಣೇ (ನೆನೆಯಿಸು) " (ಶಮುಧಾ) ; ಅರಗಿನರಮನೆಗುರಿಯುಬಟ್ಟಂತರಟಿ ದಾನವ ವನಚರಂಗಳ ಸರಳ ಮಳೆಯಲಿ ತೋದನದ್ದಿದನಮಮ ಮುಳುಗಿಸಿದ (ಜಾಶಿರಾ. ೩೨-೩೬). **ತೊಯ್** : ೧. "ತೊಯ್ (ತುಯ್)=ಸಾರ್ದ್ರತ್ವೇ" (ಶಮುಧಾ) ; ಹಾಯ್ದು ಕರುಳಿನ ವಿದುಳ ಜೋರಿನ ತೊಯ್ದು ರಕ್ತಾಂಬರದಿ ತಾನಿರಲ್ಕೆದಿ (ಕುಮಾ್ಯಶ. ೮-೪೧). ೨. ಹಳಮುಖನುಂ ಬೇಟೆಯನೆಣ್ಣೆಯೊಳ್ ತೊಯ್ದು [ಪಾಠಾಂ. ಶೋದು]ನಖಾಗ್ರದಿಂ ತೊಟ್ಟು ನೆತ್ತಿವರೆಗಂ ಬಳಸಿಯುಂ . . . ಕಿಟ್ಟಂ ತಗುಳ್ಚಿ (ಪಮ್ಯರಾ. ೧೫೪-೬); ಕನಲ್ದ ಕೆಂಡದ ಮೇಲೆ ಪಟೆಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ (ಪಂಪಭಾ. ೩-೭೦ ವ) ; ನೀಲಿಯ ರಸದೊಳ್ ಕರಡಿಯ ತೋಲಂ ತೊಯ್ದಟ್ಟಿ ಮಸಿಯೊಳದಟೆಳ್ ಪುದಿದತ್ತೀ ಲೋಕಮಕ್ಕುಮೆನಿಸಿತ್ತಾ . . . ತಮಸಂ (ಕಾವ್ಯಾವ. ೭೩೫) ; ಪೊಸ ಮುತ್ತನಾಯ್ದುಮರ್ದಿನೊಳ್ತೊಯ್ದಂತೆ ನೇರ್ಪಟ್ಟ ನಿರ್ಮಲದಂತಚ್ಛವಿ ಬೇಡಿದರ್ಗೆ ವರವೀವಂತಿರ್ಪುವು (ಅನಂಪು. ೨-೧೪). **ತೊಯ್ಯು** : ೧. "ನೆನೆ = ತೊಯ್ಯು" (ಗಂಗಾಮ. ೧೯೦). **ತೋಯು** : ೧. ಬಿಸಜಾಕ್ಷಿಯರು ತೋಯ್ದು ಪೊಱಮಟ್ಟು ಬಂದಾಗ . . . ದೇಹಲಾವಣ್ಯಪರಿಪೂರ್ಣರಸ ಸುರಿವಂತಾದುದು (ಪೋಹಕ. ೧೪-೫೭) ; ನೀಸು ನೋಯೆ ಕಣ್ಣು ತೋಯೆ ರುದ್ರಭೂಮಿ ಈ ಜಗ (ಪಾನಸ. ೧೪-೧೫) ; ನೆಲವೆಲ್ಲಾ ಕಣ್ಣೀರಿನಿಂದ ತೋಯ್ದು ಹೋಗಿದೆ (ಮುಹಾಂ. ೧೦೪).

[ ದೇ. ೫ ತಮಿ. ತೋಯ್ ; ಮಲ. ತೋಯು ; ತೆಲು. ತೋಗು ]

**ತೋಂಟ, ತೋಟ$_1$** (ನಾ). ಹೂವು, ಹಣ್ಣು, ಕಾಯಿಪಲ್ಯೆಗಳು ಅಥವಾ ತೆಂಗು, ಅಡಿಕೆ ಮಾವು ಮೊದಲಾದುವುಗಳು ಬೆಳೆಯುವ ಭೂಮಿ ; ಬಾಗಾಯತ ಭೂಮಿ : ಶ್ರೀಪುರದಾ ದಣ್ದುಗಾವುಣ್ದರಾ ತೋಣ್ಟದಾ ಪಡುವಾಯೊನ್ದು ತೋಣ್ಟ (ಎಕ. IV, ನಾಗಮಂ. ೮೫-೬೭ ; 776) ; ಕಬನಿ ಮತ್ತಂ ಮಣ್ಣಯೊಲರ ಕಿಱಿಯ ಕಿಟಗಣ ತೋಣ್ಟಮುಂ (ಎಕ. IX, ನೆಲಮಂ. ೬೦-೧೨೫ ; 797); ಕಳ್ಳಿಯಂ ನಂಬಿ ಕೌಂಗಿನ ತೋಂಟಮಂ ಕಡಿವ ತೋಂಟಿಗನುಮಂ (ಧರ್ಮಾಮೃ. ೮-೫೧) ; ಕುಱಿವಿಂದು ಕಬ್ಬಿನ ಉಲಿವ ತೋಂಟ [ಪಾಠಾಂ. ಹೊಲ]ವ ಹೊಕ್ಕು ತಱಿನನಱಿಯದೆ . . . ಮೇದುವು (ಬಸವ. ೫೯೮) ; ಎಲರ್ವೊಯ್ಲಿಂದೆಸೆವಿಕ್ಷುಕಾಂಡರಸದಿಂ ತೋಂಟ [ಪಾಠಾಂ. ನಾಂದಿ]ಕ್ಕೆ ತವ್ಮೊಳ್ ಪಳಂಚಲೆವೊಳ್ಗೊಂಬಲ ಕಾಯೊಳುರ್ಕೆವೆಳನೀರಿಂದಂ ಬನಂಗಳ್ಗಗುಂದಲೆ ನೀರೂಟಮಿದೇಕೆ (ವರ್ಧಪು. ೧-೪೩) ; ಕಂಡವರ್ ಕಾವಿಸೆ ಮಾಲೆಗಾಱರೊಸೆದೋವಿದ ಪೂವಿನ ತೋಂಟಮೊಪ್ಪುಗುಂ (ಗಿರಿಕ. ೨-೬೦). **ತೋಟ$_1$** : ಗಳೆಯ ಮಂತ್ತರ್ ೩ ಬೆದ್ದಲೆ ಮತ್ತರ್ ೫ ಅಡಕೆಯ ತೋಟದಲು ಮರ್ಪಕ್ಕೆ ಮರದಲೊಂದಡಕೆ ಎಲೆಯ ಸುಂಕ (ಎಕ. VII, ಶಿಕಾರಿ. ೨೦-೧೫ ; 1032) ; ನಾಡಿಲ್ಲದರಸುಂ ಫಲಮಿಲ್ಲದ ತೋಟಮುಂ ... ಒಪ್ಪಲಾರ್ಕುಮೆ (ಧರ್ಮಾಮೃ. ೦-೭೫) ; ತನುವ ತೋಟವ ಮಾಡಿ ಮನವ ಗುದ್ದಲಿ ಮಾಡಿ ಅಗೆದು ಕಳೆದೆನಯ್ಯ ಭ್ರಾಂತಿನ ಬೇರೊಡೆದು(ಅವಕಂ.೧೮೦-೮೧೨);ಮುಳಿದು ಕಬ್ಬಿನ ತೋಟದಲಿ ನರಿ ಹುಲಿಯವೋಲ್ ಗರ್ಜಿಸಿತು (ಕುಮಾ್ಯಕ. ೧೩-೪೪); ಬನ್ನಿ ಓ ಬಾನಲೆವರೆ, ನಮ್ಮ ತೋಟಕೆ (ಅನಿಕೀ. ೨೦-೧) ; ತೋಟ ಮೂರು ಮೊಳ ಕಾಯಿ ಆರು ಮೊಳ (ಗಾದೆ).

[ ದೇ. ೫ ತಮಿ. ಮಲ. ತೋಟ್ಟ ; ತುಳು. ತೋಟ, ತೋಟೊ ; ಕೊಡ. ತೆಲು. ತೋಟ ; ಗದಬ. ತೋಂಟ ]

**ತೋಂಟಕಂಡ** (ನಾ). ತೋಟದ ಭಾಗ,–ತುಣುಕು : ಮೊಳವಡೆ ಪದಿಕ್ಕೊರ್ಳಂ ಆರಾತೋಣ್ಟದಿಂ ಮೂಡಣ ತೋಣ್ಟಕಣ್ಡಮುಂ ಮಾರಿ ಬೆಱೆತಿಯಿಂ ಒಡಗಣ ಮಣ್ಣು (ಎಕ. IV, ಎಳಂದೂ. ೨೫-೭; ಸು. 926 ?).

[ ತೋಂಟ + ಕಂಡ$_1$ ]

**ತೋಂಟಖಂಡ** (ನಾ). = ತೋಂಟಕಂಡ : ಶ್ರೀ ದೇಕಬ್ಬೆ ಮಹಾದೇವರ್ಗೆ ಬಿಟ್ಟ ಪೊಂಬೊಲಂ ತೋಂಟಖಂಡಮುಮಂ (ಎಕ. IV, ಹೆಗ್ಗಡ. ೧೮-೩೩ ; 1057). [ ತೋಂಟ + ಖಂಡ ]

**ತೋಂಟವಾಳ, ತೋಟವಳ, ತೋಟವಾಳ** (ನಾ). ತೋಟದಲ್ಲಿ ಕೆಲಸ ಮಾಡುವವನು ; ತೋಟಗಾರ. 'ತೋಂಟವಾಳತಿ' ಪರಾ. **ತೋಟವಳ** : ಬನ್ನಪಂಗೆಯ್ದು ತೋಟವ [ಪಾಠಾಂ. ವಾ]ಳಂಗೆ ಪಸಾಯನ ಮನಿತ್ತು (ರಾಜಶೇ. ೧೭-೫ ವ). **ತೋಟವಾಳ** : ಮೇಲಿನ 'ರಾಜಶೇ' ಪ್ರಯೋಗದ ಪಾಠಾಂತರವನ್ನು ನೋಡಿ. [ ತೋಂಟ + – ವಾಳ$_1$ ]

**ತೋಂಟವಾಳತಿ** (ನಾ). ತೋಟದಲ್ಲಿ ಕೆಲಸ ಮಾಡುವವಳು ; ತೋಟಗಾರ್ತಿ : ಇತ್ತಳರಸಗೊರ್ವ ತೋಂಟವಾಳತಿ ಹೊಂಗೇದಗೆ ಹೂವ (ಸೊಬಸೋ. ೩-೪೩). [ ತೋಂಟವಾಳ + – ತಿ$_1$ (<– ಇತ್ತಿ) ]

**ತೋಂಟವಾಳಿಗ, ತೋಟವಾಳಿಗ** (ನಾ). = ತೋಂಟವಾಳ : ಪುರವ ಪೊಗದ ಮುನ್ನ ತೋಂಟವಾಳಿಗನದನೊರೆಯಲು ಯುವರಾಜ ಮುಳಿದು (ವರ್ಧಕ. ೩-೬೩). **ತೋಟವಾಳಿಗ** : ತೋಟವಾಳಿಗ ಪೇಳಲಂದಾ ಬಸವಂದ ವನೇ ನೋಳ್ಪೆನೆಂದು . . . ಪೊಱಮಟ್ಟ (ಶ್ರೀಪಾಂ. ೩-೧೭).

[ ತೋಂಟವಾಳ + – ಇಗ ]

**ತೋಂಟವೆಸ** (ನಾ). ತೋಟದ ಕೆಲಸ,–ಕಾರ್ಯ. 'ತೋಂಟವೆಸಂಗೆಯ್' ಪರಾ. [ ತೋಂಟ + ಬೆಸ$_1$ ]

**ತೋಂಟವೆಸಂಗೆಯ್** (ಕ್ರಿ). ತೋಟದ ಗಿಡ, ಮರಗಳಿಗೆ ಆರೈಕೆ ಮಾಡು ; ತೋಟವನ್ನು ಕೃಷಿಮಾಡು : ಮಂದಾನಿಲಂ ತೋಂಟವೆಸಂಗೆಯ್ದಟ್ಟಱಿಂ ಪೆರ್ಚಿಸಿದ ವಿಚಕಿಳಂ ರಯ್ಯಮಲ್ಲಲ್ಲಿಗೆಲ್ಲಂ (ಚಂದ್ರಪು. ೧-೫೭). [ ತೋಂಟವೆಸ + ಕೆಯ್$_1$ ]

**ತೋಂಟ$_1$** 'ತೋಟ$_1$' ನೋ.

**ತೋಂಟ$_2$** 'ತೋಟ$_2$' ನೋ.

**ತೋಂಟಿಗ, ತೋಟಿಗ** (ನಾ). ತೋಟದ ಕೆಲಸ ಮಾಡುವವನು : ಅಂತಃಪುರಕಾಂತಾಸಂತತಿಲತಾಪ್ರತಾನಮಂ ಜಲಧರ ಧಾರಾಂತಾಭಿಷೇಕದಿಂ ತಳಿದಂ ತೋಂಟಿಗನಂತೆ ಸಂತತಂ ಯುವರಾಜಂ (ಶಾಂತಿಪು. ೮-೩೬) ; ಮದನಂ ಗಡ ಯೌವನವನಕ್ಕೆ ತೋಂಟಿಗನಾದಂ (ಅಜಿಪು. ೨-೩೧) ; ಕಳ್ಳಿಯಂ ನಂಬಿ ಕೌಂಗಿನ ತೋಂಟವಂ ಕಡಿವ ತೋಂಟಿಗನುಮಂ (ಧರ್ಮಾಮೃ. ೮-೫೧) ; ಸೊಂಪಿನಿಂ ಬೆಳ್ಪುವೆತ್ತಿರ್ದಿಂಗೋಲಂ ಪಣ್ತ ದಾಳಿಂಬಗಳನೊಲವಿನಿಂ ತೋಂಟಿಗಂ ಕೊಟ್ಟನೋರ್ವಂ (ಅದ್ಭುಕಾ. ೮೮) ; ಲೋಗರ ಕಣ್ಣಂಜಲ್ ತಾಗದಂತು ಬೆರ್ಚನಿಟ್ಟು ಪಕ್ಕಿಗಳಂ ಬೆದರ್ಚಲೊಡರ್ಚಿದ ತೋಂಟಿಗನೊಂದಾಯತಿಯಂ ಕಂಡನಕ್ಕುಂ (ರಾಮಾಶ್ವ. ೮೫-೨೮).

**ತೋಟಿಗ :** ಸಮಸ್ತ ತೋಟಿಗರುಂ ಕೊನೆಕಾಜರು ವೃಳಿಯ ಮೂನೂರ್ವರುಮಿದ್ರ್ದು . . . ಬಿಟ್ಟ ಧರ್ಮವಪ್ಪುದು (ಸೌಇಇ. IX-1, ೧೪೧-೩೩; 1136) ; ಬಾಳೆವಣ್ಣೊನೆಯು ಕಾಣಿಕೆಯಿತ್ತು ಭೂವರಗೊರ್ವ ತೋಟಿಗನೆಂದ (ಸೊಬಸೋ. ೩-೧೦) ; ಬಳಿಕಲಾ ತೋಟಿಗನ ಬುದ್ಧಿಗೆ ತಿಳಿವ ತೀಡುವೆನೆನುತ ಮಿಗೆ ಕಂಗಳಿಗೆ ಕಟ್ಟಿದಿರಾಗುತಲಿ ಶರಣಾರ್ಥಿಯೆಂದೆನಲು (ಪ್ರಭುಲೀ. ೦೧-೭) ; ತೋಟ ತೋಟಿಗಗಾಸೆ ಕೋಟೆ ಮನ್ನೆಯಗಾಸೆ (ಸರ್ವಜ್ಞ. ೧೯೦೩) ; ಅಗೆದು ಗೊಬ್ಬರವಿಕ್ಕಿ ನೀರೆರೆದು ತೋಟಿಗನು ಜಗಿವ ಮುಳ್ಳಿರಿತಗಳ ಸೈರಿಸೆ ಗುಲಾಬಿ ನಗುವುದೊಂದರೆನಿಮಿಷ (ಮುಂಕುಳ. ೪೭೮). [ ತೋಂಟ + – ಇಗ ]

**ತೋಂಟಿಗವೆಸ** (ನಾ). ತೋಟಗಾರನ ಕೆಲಸ,–ಕಾರ್ಯ. ‘ತೋಂಟಿಗವೆಸಂಗೆಯ್’ ಪರಾ. [ ತೋಂಟಗ + ಬೆಸ$_1$ ]

**ತೋಂಟಿಗವೆಸಂಗೆಯ್** (ಕ್ರಿ). ತೋಟಗಾರನ ಕೆಲಸ ಮಾಡಂ: ನನೆಯುಂಬಂ ನನೆವಾಡಿ ಚಾಪಲತೆಯಂ ನೀಳೇಕ್ಷಣಗಳ್ಗಿತ್ತು ಕೇತನವಂ ಖ್ಯಾತಿಯೊಳಿಕ್ಕಿ ತೋಂಟಿಗವೆಸಂಗೆಯ್ದಂಗಜಂ ತಿರ್ದ (ಅನಂಪು. ೧೦-೩೩). [ ತೋಂಟಿಗವೆಸ + ಕೆಯ್$_1$ ]

**ತೋಂಟಿಗಸಮಯ** (ನಾ). ತೋಟ ಮಾಡುವವನನ್ನು ನೇಮಿಸುವುದು,–ಕರಾರು ಮಾಡಿಕೊಳ್ಳುವುದು : ಮೂಱು ಮತ್ತರ ತೋಂಟವೊಂದದುಂ ಜೈನಪ್ರತಿಪಾಳಿಸುವರಾ ತೋಂಟಕ್ಕೆ ತೋಂಟಿಗಸಮಯ ಮಿಲ್ಲದನಾರೋರ್ವರ್ವಮ್ಮರ್ಪ್ಪರವರ್ಬ್ಬರ್ಸದಿಗೆ ಸಮಭಾಗಮಿಕ್ಕಿಯುಣ್ಬರ್ (ಸೌಇಇ. XI-1, ೫೩-೭೩ ; 1007). [ ತೋಂಟಗ + ಸಮಯ ]

**ತೋಂಟಗೊಳ್** (ಕ್ರಿ). ಯುದ್ಧಕ್ಕೆ ತೊಡಗು : ರಾಜನೃಪನೊಳ್ ತೋಂಟಗೊಳಲೆಂದು ಎಡದೊಱೆಯೆಂಬ ಗಡಿಗೋಂಟೆಯೊಳ್ ಕಟ್ಟಿರ್ದ ಮೇಘಪುಷ್ಪಮೆಂಬ ಕೇಜಯಂ ಕಳವಿನಿಂದೆ ಕೊಂಡೊಯ್ವುದುಂ (ಚಿಕವಂ. ೫೦). [ ತೋಂಟ$_1$ (<ತೋಟ$_1$) + ಕೊಳ್$_1$ ]

**ತೋಂಡಿಗೆಱೆ** (ನಾ). ಒಂದು ಸ್ಥಳದ ಹೆಸರು : ಪಶ್ಚಿಮಾಂತ ಭಾಗ ತತಃ ತೋಣ್ಡಿಗೆಱೆ ದಕ್ಷಿಣಾಂತ ಭಾಗಃ (ಮೈಆರಿ. ೧೯೪೩, ೭೫-೧೧೫ ; 813). [ ತೋಂಡಿ ? + ಕೆಱೆ ]

**ತೋಂಡಿ ಪರೀಕ್ಷೆ** (ನಾ). ಮೌಖಿಕ ಪರೀಕ್ಷೆ : ಮೌಖಿಕ ಪರೀಕ್ಷೆಗೆ ತೋಂಡಿ ಪರೀಕ್ಷೆ ಎಂದೂ ಹೆಸರಿದೆ (ರೂಢಿ). [ ತೋಂಡಿ$_0$ ( P ←ಮರಾ. ತೋಂಡೀ) + ಪರೀಕ್ಷೆ ]

**ತೋಕ** (ನಾ). ಮಗ ಅಥವಾ ಮಗಳು; ಸಂತಾನ : “ಸೂನುಃ, ಸಂತತಿಃ . . . ತೋಕಂ, ತನಯಃ, ಸ್ತನಂಧಯಃ, ಅಪತ್ಯಂ – ಈ ೧೨ ಮಗವು” (ಹಲಾಯು. ೮೩-೩೪೩) ; ಬಿಚ್ಚಲೋರ್ವ್ವೀಶನ ತೋಕಂ ಸೋವಿದೇವಂ (ಸೌಇಇ. XV, ೧೪೩-೯ ; ?) ; ಘನಸಂಸಾರಸುಖಕ್ಕೆ ಸಾರಮಿದು . . . ಸುತಶಿರೋದಾಘ್ರಾಣನಂ ಸೂನುಲೋಚನರೋಚಿಪ್ಪರಿಚರ್ಚೆ ತೋಕತನುಲಿಪ್ತಕ್ಷೋದ ಸಂದರ್ಶನಂ (ಕುಸುಮಾ. ೩-೫೮) ; ‘ಜೀವತ್ತೋಕೆ’ ಪರಾ. [ ಸಂ. ]

**ತೋಕಿಸು** (ಕ್ರಿ). ೧. ಹೊಡೆ ; ಪ್ರಯೋಗಿಸು ; ಬಿಡು : ಸಂಗರಕೆ ಬಿಲ್ಗೊಂಡು ಸರಳುಗಳ್ತೋಕಿಸುತಮತಿರಥರು ಪೊಕ್ಕು ಸೇನಾಜಲಧಿಯನ್ನೊರಸಿ (ತುರಂಗ. ೪೯-೪೧). ೨. ಬಾರಿಸು ; ಮೊಳಗು ; ಶಬ್ದವಾಗು : ಏಕಶಂಖಧ್ವನಿ ಭಡಾಳಿಸಲ್ಪರುಠವಣೆಯಿಾ ಕ್ರತುವು ಮುಗಿದ ಪರಿಯಂತರಮ್ಮೇಳುದಿನ ತೋಕಿಸಿತು ಪಗಲಿರುಳು (ತುರಂಗ. ೩೩-೪೭). [ ತೋಕು$_1$ + – ಇಸು$_2$ ]

**ತೋಕು$_1$** (ಕ್ರಿ). ೧. ಹೊಡೆ ; ಪ್ರಹಾರ ಮಾಡು ; ಪ್ರಯೋಗಿಸು : ತೋಕುವಂಬಿನ ಜೋದರೊಗ್ಗಿನೊಳೌಕಿದುವು ಸಾವಿರಮದೇಭಾನೀಕ ಬೊಬ್ಬೆಯ ಲಳಿಯ ತಾಕಿತು ಲಕ್ಕ ಪಾಯದಳ (ಕುವ್ಯಾಗ. ೧-೩೮) ; ಒಡನೆ ನೂಕಿತು ತೋಕುವಂಬಿನ ತಡೆವ ಶೂಲದ ಹೊಯ್ವ ಖಡ್ಗದ ಬಿಡುವ ಚಕ್ರದ ಬೀಸುಗವಣೆಯ ಬಹಳ ಭಟನಿಕರ (ತೊರರಾ. ೫-೭-೧೧); ತೋಕುತಂಬನು ರಥದಿ ಕಲಿಬಲನಾಕರಸಿ ಮುಂದುಬ್ಬಿ ಬೊಬ್ಬಿಡೆ (ಅಂಲಿಕಾ. ೧೪-೪೩) ; ಷಡ್ರಥರು ಸೊಕ್ಕಿ ಕೋಪಾಗ್ನಿಯಿಂ ತೋಕಿದರು ತನಿಸರಳ (ತುರಂಗ. ೫೩-೩೭). ೨. ಸುರಿಸು ; ವರ್ಷಿಸು : ತೋಕಿದವು ನಾರಾಚ ದೆಸೆದೆಸೆಯೊಳ್ಕರಿಸಿದವೊ ಸರಳನೆನೆ (ಕುವ್ಯಾಅ. ೧೯-೧೩) ; ಮಾನವಸೂರ್ಯ ಭಾಪೆನುತ ತೋಕೆ ಪುಷ್ಪಾಂಜಲಿಯಲಮರಾನೀಕ ಕೈವಾರಿಸಲು (ನಿಭಾಗ. ೪-೧೦-೩೯) ; ಮರದ ಬುಡಕ್ಕೆ ನೀರು ತೋಕುತ್ತಿದ್ದ ರಾಮನಾಥನನ್ನು ಕರೆದು . . . ಗುಡುಗಿದನು (ಮೂರುದಾ. ೩೩). ೩. ಹೊರಹಾಕು ; ಚೆಲ್ಲು ; ತುಳುಕು : ನೆಱೆ ತೋಕಿದನು ಗಂಧರ್ವ ಜಲಧಿಯನೊಂದು ನಿಮಿಷದಲಿ (ಕುವ್ಯಾಅ. ೧೯-೧೭) ; ಹೊದೆದ ಹರೆಗಡಿದೌಕಿದನು ತೋಕಿದನು ಸುಭಟರ ಜೀವವನು (ಕುವ್ಯಾದ್ರೋ. ೦೭-೩೫) ; ಕುಹಕದಲಿ ಮಳೆತರೆ ತೋಕುವೆನು ತನಿಗರುಳ ರುಧಿರವ ಶಾಕಿನಿಯರಿಗೆ (ನಿಭಾಗ. ೩-೭-೪೧). ೪. ಅಲ್ಲಾಡು ; ಬೀಸು : ತೋಕಿದವು ಸೀಗುರಿಗಳೆಡಬಲದಾಕೆಯಲಿ (ಕುವ್ಯಾಸ. ೧೫-೭೭). ೫. ಓಡು ; ಚೆದರು : ಬಲಜಲಧಿ ತೋಕಿದುದು ದೆಸೆದೆಸೆಗೆ ರಿಪುಬಲದ ಸುಭಟರಂ ನಾಕವಂ ಕಾಣಿಸಿತು (ತುರಂಗ. ೪೯-೩೮). [ ದೇ.II ತಮಿ. ತುಕ್ಕೈ, ತುವ್ವೈ ; ತುಳು. ತೊಯಿಪ್ಪ ; ಕುಯಿ. ತೋಗ ; ಕುರುಖ್. ತೋಕ್ನಾ ]

**ತೋಕು$_2$** (ನಾ). ಕೋವಿ ; ಬಂದೂಕು : ಮಾದಪ್ಪ ಹಗಲ ಮೇಲೆ ತೋಕನ್ನು ಏರಿಸಿ ಸೊಂಟಕ್ಕೆ ಪಡಿಕತ್ತಿಯನ್ನು ಸಿಕ್ಕಿಸಿ . . . ನರಿಬೇಟೆಗೆ ಹೊರಟ (ಹುಲಿಹಾ. ೧೭). ‘ತುಪಾಕಿ’ ಪರಾ. [ದೇ.II ತಮಿ. ಮಲ. ತೋಕ್ಕು ]

**ತೋಕು$_3$** (ನಾ). ಉತ್ಸಾಹ (?) : ಜಂಝಾನಿಲ ಸುಳಿದೇಳ್ವ ರಭಸವೋಯೆನೆ ಕಾದಿದರ್ಕಲಿಗಳಿಗೆ ಪೊಸತೆನಲು ಹಾಣಾಹಣೆಯಿಂದಲುಚ್ಚಳಿಸಿದರ್ . . . ಗಜಗಳಿಂ ತುಳಿಸಿದರ್ ತೋಕಿನಿಂದ (ಲಕ್ಷ್ಮಿಭಾ. ೬-೩-೩೩). [ ←ಮರಾ. ತೋಕ್, ತೋಖ್ ; ಹಿಂ. ತೋಖ್ ; ಅರ. ಶೌಕ್./ಸಂ. ತೋಷ ]

**ತೋಕುಳಿ** (ನಾ). ೧. ನೆನೆಸುವಿಕೆ ; ಅದ್ದುವಿಕೆ : (ಶ). ೨. ತೊಗಲು ಹದ ಮಾಡುವುದಕ್ಕಾಗಿ ನೆನೆಯಿಡುವ ಗುಳಿ : ಹರಳಯ್ಯಗಳ ತೋಕುಳಿಯ ನೀರ ತಂದು . . . ತಂಬುಗೆಗಳೊಳು ಮೊಗೆದು ಹರುಷದಿ ಮಧುವರಸಗೆಱೆಯಲು (ಪ್ರಭುಪು. ೯-೧೦೩) ; ಪೊಲೆಯರ ತೋಕುಳಿಯ ಕೊಳದೊಳಂಬುಜಮಂ ನೀನಲಸದೆ ಪುಟ್ಟಿಸಿದಂತೆ (ವೃಷವಿ. ೩೪-೧೦೮). [ ತೋ + ಕುಳಿ$_2$ (<ಕುಟ್ಟಿ$_2$) ]

**ತೋಕೆ** ‘ಸೋಗೆ’ ನೋ.

**ತೋಕೆಗೋಧಿ** (ನಾ). ಉದ್ದವಾಗಿರುವ ಒಂದು ಬಗೆಯ ಗೋಧಿ : ಓಟ್ಸು, ತೋಕೆಗೋಧಿ (ವ್ಯಾಶಿಗಿ. ೧೦-೧೮೧) ; ತೋಕೆಗೋಧಿ, ಜವೆ ಗೋಧಿ, ರೈ ಎಂಬ ಚಿಕ್ಕ ಗೋಧಿ . . . ಇವು ಸಮಶೀತೋಷ್ಣ ವಲಯದ ಇತರ ಮುಖ್ಯ ಬೆಳೆಗಳು (ಭೂವಿವ. ೧೮೭). [ ತೋಕೆ (<ಸೋಗೆ) + ಗೋಧಿ$_1$ (<ಗೋದುವೆ) ]

**ತೋಚಿಕೆ** (ನಾ). ತೋರುವಿಕೆ ; ಗೋಚರವಾಗುವಿಕೆ; ಹೊಳೆಯುವಿಕೆ; ಭಾಸವಾಗುವಿಕೆ : ಆ ಕತೆ . . . ರಂಜನೀಯವಾಗಬಹುದೆಂದು ಮನಸ್ಸಿಗೆ ತೋಚಿತು, ಆ ತೋಚಿಕೆಯ ಫಲವೇ ‘ಕಡುಗಲಿ ಕುಮಾರ ರಾಮ’ ಗ್ರಂಥದ ಪ್ರಕಟಣೆ (ನಂಜುಂಡ. 111, ಪ್ರಸ್ತಾವನೆ). [ ತೋಚು + – ಇಕೆ ]

**ತೋಚು**(ಕ್ರಿ). ೧. ಗೋಚರವಾಗು ; ಕಾಣು ; ತೋರು : ನವೋನವದ ಜಾಗೃತಿಯಲೆದ್ದ ಜೀವಾಗ್ನಿ ತೋಚುತಿಹುದು (ಪ್ರಕ್ಷಾಂ. ೬-೧೪). ೨. (ಮನಸ್ಸಿಗೆ) ಹೊಳೆ ; ಭಾಸವಾಗು : ಕೀಚಕನಾಡಿದ ನೀಚನುಡಿ ಕೇಳಿ . . . ಮುಂದೆ ತೋಚದೆ ಖಳನ ವಿಚಾರಿಸಿಕೊಳ್ಳೊ ಶ್ರೀ ಚಕ್ರಪಾಣೀ . . . ಎಂದು ನುಡಿದಳು (ಪಾರಿಕೀ. ೬೫-೯) ; ಏನಗೇನು ತೋಚುವ ಪರಿಯು ಕಾಣೆನು (ಜನಪ. ೬೩-೩೭).

**ತೋಚಿಕೊಳ್ಳು** = ಭಾವಿಸಂ ; ಯೋಚನೆ ಮಾಡು : ಪಠಃ- ಕಾಂತಿಃ ೨ ಮನಸ್ಸಿನಲ್ಲಿ ನೆನವುಂಟಾಗುವಿಕೆ; ತನ್ನೊಳಗೆ ತೋಚಿಕೊಳ್ಳುವಿಕೆ, ಬುದ್ಧಿಯಲ್ಲಿ ಸ್ಫುರಿಸುವಿಕೆ (ಸಿದ್ಧಾಂತ. ೩೦೭); ವೀರರಾಜ ಅದೇನು ತೋಚಿ ಕೊಂಡನೊ ಯಾವ ಪ್ರತಿಯನ್ನೂ ಹೇಳದೆ . . . ಸಾಗಿದನು (ಚಿಕರಾ. ೧೩೩). [ <ತೋಚು + – ಚು$_1$./ತುಳು. ತೋಜು, ಸೋಜು; ತೆಲು. ತೋಚು ]

**ತೋಟ$_1$** 'ತೋಂಟ' ನೋ.

**ತೋಟ$_2$** 'ತೋಟಾ$_1$' ನೋ.

**ತೋಟಕ** (ನಾ). [ಛಂದ] ಪ್ರತಿ ಪಾದದಲ್ಲಿ ಹನ್ನೆರಡು ಅಕ್ಷರಗಳುಳ್ಳ ವೃತ್ತ : : ಪವಮಾನ ಚತುಷ್ಕಯುತಂ ಯತಿಯುಂ ದಿವಸಾಧಿಪರೊಳ್ ನಿಲೆ ವಸ್ತು ಕವಿಪ್ರವರಸ್ತುತಮಪ್ಪುದು ತೋಟಕಮೆಂದವಧಾರಿಸು (ಛಂದೋಂಬು. ೨-೫೬). [ ಸಂ. ]

**ತೋಟಗಟ್ಟು** (ನಾ). ತೋಟದ ಪ್ರದೇಶ ಅಥವಾ ಸ್ಥಳ: ಬಿಟ್ಟ ಮೇಲು ಮಕ್ಕಿಯ ಗಡಿಯ ತೋಟಗಟ್ಟು ಕಮ್ಮ ೪೦೦ (ಸೌಇಇ. IX-1, ೯೫-೫೦; 1041); ಮನ್ನೆಯಗೆಱೆಯ ಕೋಡಿಯಿಂ ತೆಂಕ ತೋಟಗಟ್ಟು ಮತ್ತರೊಂದು ಆ ಕೆಱೆಯ ಕೆಳಗೆ ಗದ್ದೆ ಮತ್ತರೆರಡು (ಸೌಇಇ. IX-1; ೩೨೯-೩೩; 1200); ಮಂನೆಯಗೆಱೆಯ ಕೆಳಗೆ ಹಿರಿಯೂರಡೆಯರ ತೋಟಗಟ್ಟು ಮತ್ತರೆರಡು (ಸೌಇಇ. IX-1, ೩೩೩-೪೭ ; 1216).

[ ತೋಟ$_1$ (<ತೋಂಟ) + ಕಟ್ಟು$_2$ ]

**ತೋಟಗಾರ** (ನಾ). ೧. ತೋಟಮಾಡುವವನು ; ತೋಟಿಗ : ಅಶಿಗೆ ತಕ್ಕ ಹಾಗೆ ಮುತುವರ್ಜಿಯಿಂದ ಕೆಲಸ ಮಾಡುವ ತೋಟಗಾರರಿರಬೇಕು (ತರಿಚಿ. ೧). ೨. ತೋಟದ ಮಾಲೀಕ, –ಒಡೆಯ.

[ ತೋಟ$_1$ (<ತೋಂಟ) + – ಕಾರ$_1$ (<– ಕಾಱ ]

**ತೋಟಗಾರಿಕೆ** (ನಾ). ತೋಟವನ್ನು ಬೆಳೆಸುವುದು ; ತೋಟ ಮಾಡುವುದು ; ತೋಟದ ಬೇಸಾಯ : ಮೈಸೂರುಸಂಸ್ಥಾನದಲ್ಲಿ ತೋಟಗಾರಿಕೆಯನ್ನು ಕುಲಕಸಬನ್ನಾಗಿ ಪಡೆದಿರುವ ಅಲ್ಪಸಂಖ್ಯಾತ ಪಂಗಡ ವೊಂದಿದೆ (ತರಿಚಿ. ೨). [ ತೋಟಗಾರ + – ಇಕೆ ]

**ತೋಟಗಾವಲ್** (ನಾ). ತೋಟವನ್ನು ಕಾಯುವುದು ; ತೋಟಕ್ಕೆ ಕಾವಲಾಗಿರುವಿಕೆ : ಪುಲ್ಗಳ ಪಸುರ್ಗಳಿಸಿ ಪೊಕ್ಕಡಾ ತೋಟಗಾವಲ್ಗೆ ತನ್ನೊಡನಾಡಿಗಳ ಕೂಡೆ ಲೀಲೆ ಮಿಗೆ ಬಿಲ್ಗೊಂಡು ನಡೆತಂದವಂ ಕಂಡ ನರ್ಚಿತ ಸುವಾಜಿಯಂ (ಜೈಮಿಭಾ. ೨೦-೫).

[ ತೋಟ$_1$ (<ತೋಂಟ) + ಕಾವಲ್$_1$ ]

**ತೋಟತುಡಿಕೆ** (ನಾ). ತೋಟ ಮತ್ತು ಅದಕ್ಕೆ ಸಂಬಂಧಿಸಿದ ಭಾಗ : ಯಿಂತೀ ಚತುಸ್ಸೀಮೆಯೊಳಗುಳ್ಳ ಗಡಿಗ್ರಾಮ . . . ಹಟ್ಟಿಹಕ್ಕಲು ತೋಟತುಡಿಕೆ (ಮೈಆರಿ. ೧೯೩೪, ೫೬-೦೮ ; 1406) ; ಆ ದಂಣ್ಣಾಯಕ ಪುರಕ್ಕೆ ಸಲುವ ಚತುಸೀಮೆಯೊಳಗುಳ್ಳ ತೋಟತುಡಿಕೆ ಗದ್ದೆ ಬೆದ್ದಲು (ಎಕ. VII, ಶಿವಮೊ. ೭೧-೨೭ ; 1431).

[ ತೋಟ$_1$ (<ತೋಂಟ) + ತುಡಿಕೆ ]

**ತೋಟಪಟ್ಟಿ** (ನಾ). ತೋಟದ ಭೂಮಿ, –ಪ್ರದೇಶ : ತೋಟಪಟ್ಟಿಗಳ ಮೇಲೆ ಪ್ರಾತಃಕಾಲೀನ ಪ್ರಕಾಶ ಬೀರುವ ಹೇ ಪರಮಾತ್ಮಾ . . . ನಿನ್ನ ಕೃಪೆಯನ್ನು ಸುರಿಸು (ಅಶ್ರುಮು. ೨೩) ; ಬೆಲ್ಲದ ನಾಡವರು. ತೋಟಪಟ್ಟಿ ಇದ್ದವರು (ಅಶೋಕ. ೭) ; ಆನುವಂಶಿಕ ಹಕ್ಕುದಾರಿಯು ಕಾಲರಾ ತನ್ನ ತೋಟಪಟ್ಟಿಯ ಕೃಷಿಮಾಡಲು ಬಂದಿತು (ಸ್ಮೃತಿಚಿ. ೨೦೬). 'ತೋಟಪ್ಪಿ ಪಟ್ಟು' ಪರಾ. [ ತೋಟ$_1$ (<ತೋಂಟ) + ಪಟ್ಟಿ$_2$ ]

**ತೋಟಮಲ್ಲಿಗೆ** (ನಾ). ತೋಟದಲ್ಲಿ ಬೆಳೆಯುವ ಮಲ್ಲಿಗೆ : ನಾಟಿರಾಗವು ಲೇಸು ತೋಟಮಲ್ಲಿಗೆ ಲೇಸು ಕೂಟವದು ಲೇಸು ಹಿರಿಯರೊಳು (ಸರ್ವಜ್ಞ. ೬೨೨). [ ತೋಟ$_1$ (<ತೋಂಟ) + ಮಲ್ಲಿಗೆ ]

**ತೋಟಮಾದಳ** (ನಾ). ತೋಟದಲ್ಲಿ ಬೆಳೆಯುವ ಮಾದಳ : ತೋಟ ಮಾದಳದ ಹಣ್ಣಿನ ರಸದಲ್ಲಿಯಾದರೂ ಹುಳಿಹುಂಡಿರಸದಲ್ಲಿಯಾದರೂ ಕೊಡಿಸಲು . . . ಸಕಲ ರೋಗಂಗಳೂ ಪರಿಹರ (ವೈದ್ಯಸಾ. I, ೨೯೮).

[ ತೋಟ$_1$ (<ತೋಂಟ) + ಮಾದಳ ]

**ತೋಟವಳ** 'ತೋಂಟವಾಳ' ನೋ.

**ತೋಟವಾಳ** 'ತೋಂಟವಾಳ' ನೋ.

**ತೋಟವಾಳಿಗ** 'ತೋಂಟವಾಳಿಗ' ನೋ.

**ತೋಟಾ$_1$**, **ತೋಟ$_2$**, **ತೋಟೆ$_2$** (ನಾ). ಬಂದೂಕಿನಲ್ಲಿಟ್ಟು ಹಾರಿಸುವ ಕೊಳವೆಯಾಕಾರದ ಗುಂಡು ; ಕಾಡತೂಸು : ಮೊದಲನೆ ಈಡು ಕಡತಿನ ತೋಟಾದ್ದಾದ್ದರಿಂದ ಒಡೆದೆರಡು ಕಡಕುಗಳು ಗಿಡಗಳಿಗೆ ತಗುಲಿದ್ದುದು ಕಂಡು ಬಂದಿತು (ಕಾನೂರು. ೧೧೪). **ತೋಟ$_2$** : ಸುಲ್ತಾನಿ ತೋಟ ತುಂಬಿದಂಥಾ ತೋಸ್ತಾನಿ ಒಂದು . . . ಈ ಮೇರೆ ಎರಡು ಜನಕ್ಕೂ ಜಂಗಿ ಸಾಮಾನು ಕೊಟ್ಟು (ರಾಜೇಂದ್ರ. ೧೦೫). **ತೋಟೆ$_2$**: ಅದರ ಪಿಸ್ತೂಲುಗಳನ್ನು ಇಟ್ಟುಕೊಳ್ಳುವುದು ಹೇಗೆ ? ಅದಕ್ಕೆ ಹತ್ತಾರು ರೂಪಾಯಿಗಳನ್ನು ಖರ್ಚುಮಾಡಿ ಮೇಲೆ ಮೇಲೆ ತೋಟೆಗಳನ್ನು ಕೊಳ್ಳುತ್ತಲೇ ಇರಬೇಕು (ಪಂಚಾತ್ರ. ೪೭).

[ ←ಮರಾ. ತೋಟಾ ; ಹಿಂ. ಟೋಟಾ ]

**ತೋಟಾ$_2$** 'ತೋಡಾ' ನೋ.

**ತೋಟಾವಳಿ** (ನಾ). ತೋಟಗಳ ಸಾಲು : ಹತ್ತಿರದಲ್ಲಿಯೇ ಕೆರೆ, ಅದರ ಕೆಳಗೆ ಅಂದವಾದ ತೋಟಾವಳಿಗಳು (ಡಂಗಾಳ್ಕ. ೩೦೯).

[ ತೋಟ$_1$ (<ತೋಂಟ) + ಆವಳಿ$_1$ (= ಅವಲಿ) ]

**ತೋಟಿ$_1$**, **ತೋಂಟಿ$_1$** (ನಾ). ೧. ಕಲಹ ; ಜಗಳ ; ಕದನ : "ತೋಟಿ ಯೆಂದು ಜಗಳಂ" (ಕರ್ಣಾನಿ. ೦೪) ; ಎರಡು ರಥವೊಳವು ನೋಟಕ್ಕೆ ರಡಱೊಳವನೊಂದು ರಥಮೆ ತೋ[ಪಾಠಂ. ಕೋ]ಟಿಗೆ ಪಲವಾಗಿರೆ ಪರಿದು (ಪಂಪಭಾ. ೫-೯೫) ; ಸುರಕೋಟಿ ವಿನೋದದ ತೋಟ ಯೊಳ್ ಚರಾಚರಗುರುವಿಂಗೆ ಪೊಟ್ಟುಗಳೆಯುತ್ತಿರೆ (ಶಾಂತಿಪು. ೧೦-೯೦); ತೊಡಗಿದರು ತೋಟಿಯನು ತಮತಮಗೆ (ಪ್ರಭುಲಿಂ. ೦೩-೭) ; ತೋಳನ ತೋಟಿ ಸದರವ ಕುಱಿಯ ಜಂಗುಳಿಗೆ (ತೊರಾ. ೬-೩೬-೩೫) ; ಭರತೇಶ ನೊಳು ತೋಟಿ ಬೇಡೆಂದು ಮೊದಲೆ ಪೇಳ್ದರೆ ಕೇಳದುಕ್ಕಿ ಕಾದಿದರು (ಭರತೇ. ೩೪-೯೯) ; ತೊಡರ್ಚಿ ತೋಟಿಯಂ ಪಡಿದಟವಾಂತು ಬಂದ ಮಲೆನಾಡಿನ ಸಿಂಗಳರಾಯನಂ ಮೊಗಂಗಿಡಿಸಿ (ಚಿಕವಿ. ೨-೬೮). ೨. ಹೊಯ್ದಾಟ; ತೊಳಲಾಟ ; ಭಾವನೆಗಳ ತಾಕಲಾಟ : ಕಣ್ಬೇಟದ ತೋಟಿಯೊಳ್ತೊಡರ್ದು ದುಸ್ಸಹ ವಿರಹತಾಪಕ್ಕಳ್ಕಿ ವನದುರ್ಗವಂ ಪುಗು ವಂತೆ ಲತಾಗೃಹವನಂಗಳಂ ಪೊಕ್ಕು (ಮಲ್ಲಿಪು.೩-೩೨); ಅಱಿದೆನಱಿದೆನೆಂದು ಮಱವೆಯು ತೋಟಿಯ ತೊಳಸುತ್ತ (ಪೋಲಿಮಾ. ೧೬೫-೬೬೦). ೩. ಹಾವಳಿ ; ತೊಂದರೆ : ಮತ್ತವೊಂದೆಡೆಯೊಳೊರ್ವರ ತೊಟ್ಟು ಲಲಿತಾಂಗಂ ಬಂದನಿನ್ನಾವಾತನ ತೋಟಿ ಪಿಂಗುವಿನಂ ನೆರೆವನೆಯೊಳಿರ್ದು ಬರ್ಪಮೇಟಿಮೆಂದು . . . ಪೇಟ್ವುದುಂ (ಧರ್ಮಾಮೃ. ೨-೪೯) ; ಬಿರುದ ಬಿಸುಟರೆ ತೋಟಿಯೇನೆಂದ (ತೊರಾ. ೧-೯-೩೨). ೪. ತಂಟೆ; ಗೊಡವೆ; ಗೋಜು : ಚೆಲ್ಲಂ ಬೇಂಟದ ತೋಟಿಯೊಳ್ ತೊಡರೆ ಕಂಡು

(ಕಾವ್ಯಸಾ. ೫೫೧ ಪೂದ್ಯಳ) ; ಅದಱಿಂ ನಿನಗಿದಱ ತೋಟಿ ಬೇಡ (ಪಂಚತಂ. ೨೪೨-೨೩) ; ಬೇಟದ ಪದನೆಂದು ಕೂಟದ ಮದವೆಂದು ನೋಟ ದೊಳ್ಗಂಡರಱಿವೊಡೆ ಹಡಹಿನ ತೋಟಿಯೋಕೆಲಗೆ ಬೆಲೆವೆಣ್ಣ (ಲೀಲಾವ. ೨-೩೪) ; ಕಾಮದೇವನ ತೋಟಿ ಬೇಡೆಂದು ಬಿರುದೆತ್ತಿ ಕರೆವ ಕಂದರ್ಪನ ಕಹಳೆಗಳೆಂಬಂತೆ ತಂಡ ತಂಡದಿಂ ಕೂಗುವ ಗಂಡುಗೋಗಿಲೆಗಳಂ (ಗಿರಿಜಾ. ೩-೧೦೩ ವ) ; ಅಸುರಕುವರನ ತೋಟಿ ಬೇಡ (ಕೌಶಿರಾ. ೩೫-೧೮) ; ಈ ಕೊಡಲಿಕಾಱನ ತೋಟಿ ಬೇಡೆಂದ (ಕುಮಾ.ಸ. ೯-೪೮). ೫. ಸಾಮರ್ಥ್ಯ; ಪರಾಕ್ರಮ : ನಾನಾವ ಮಂತ್ರದ ತಂತ್ರ ತೊಡಕಿನ ತೋಟಿಯುಳ್ಳವಳು (ಕುಮಾ.ಅ. ೧೫-೨೩) ; ತೋಟಿಯಿಂದೊಳಪೊಕ್ಕು ಪುರಗಳೊಳಗೆ ಬಲು ಬೇಟೆಯ ನಾಯು ಹಿಡಿವರು (ಕುರಾಸಾಂ. ೦೦-೩). **ತೋಂಟಿ$_1$** : ೧. 'ತೋಂಟಿಗೊಳ್' ಪರಾ. ೬. ಮಾತ್ಸರ್ಯ ; ಹೊಟ್ಟೆಕಿಚ್ಚು : ಕವಿಶಿವನೆಸೆದಂ ತೋಂಟಿಯನುಳಿದ ಕವೀಶರ್ಗುಂಟೆನಿಸುತೆ ದಿವ್ಯ ಬೋಧೆಯಂ ದಕ್ಷಿಣೆಯಿಂ (ಹಾಲಾಸ್ಯ. ೪-೩-೬೧).

**ತೋಟಿ$_2$, ತೊಟ್ಟಿ$_3$, ತೋಂಟಿ$_2$** (ನಾ). ೧. ಗ್ರಾಮಸೇವಕರಲ್ಲಿ ಒಬ್ಬ ; ಕಸಗುಡಿಸುವವನು; ಜಾಡಮಾಲಿ: ತೋಟಿ-ತಳವಾರ, ವೆಟ್ಟಿ, ಬಾರೀಕಿ ಅಥವಾ ಕೋಲುಕಾರನೆಂದು ಹೆಸರುಂಟು (ಗ್ರಾಮಜೀ. ೧) ; ತೋಟಿ (Scavengers)ಗಳೇ ಅವಶ್ಯವಿಲ್ಲದ, ಬಾವಿ-ಪಾಯಿಖಾನೆ (Bore-hole Latrines)ಗಳನ್ನು ಯಾರೂ ಮಾಡಬಹುದು (ಬಾಂಶ್ರ. I, ೨೯೬) ; ಇವನ ಹೆಣವೂ ತೋಟಿಗ ಪಾಲಾಗಬೇಕೋ ಏನೋ (ದೀಪದ. ೫೦). ೨. (ಅಲಂ) ಕೀಳಾದವನು ; ಅಲ್ಪ ; ಕ್ಷುದ್ರ : ಭಂಡರ್ಗೆ . . . ತೋಟಿ ತೊನ್ನರಿಗೆ ಕೊಂಡೆಯರ್ಗೆಲೆ ರಂಗ ನಿನ್ನಯ ಪದಪದ್ಮಗಂಡಲ್ಲಿ ಮೋಕ್ಷ ಸಿದ್ಧಾಂತ (ನೀತಿಸಾಂ. ೪೭-೩೩). **ತೊಟ್ಟಿ$_3$** : ೨. ಇವನೆಂತಹ ತೊಟ್ಟಿ (ರೂಢಿ).**ತೋಂಟಿ$_2$**: ೩. ಸೇವಕ; ಪರಿಚಾರಕ: ಚಾವುಣ್ಡಯ್ಯಂಗೆ ನಾಲ್ಕು ಮತ್ತ ತೋರ್ಣ್ಣಗಳ್ಗೆ ನಾಲ್ಕು ಮತ್ತರ್ನಿವೇದ್ಯಕ್ಕೆ ನೆಲ್ಲ ಮಡಿ ಎರಡು (ಸೌಇಇ. IX-i, ೬೦-೧೫ ; 931). **P** 'ತೋಂಟಿ' ಎಂಬುದೇ ಮೂಲ ರೂಪವಾಗಿರಬಹುದೇ ?

[ ದೇ. ಶ ತಮಿ. ಮಲ. ತೊಟ್ಟಿ ; ತುಳು. ತೆಲು. ತೋಟಿ ]

**ತೋಟಿ$_3$** (ನಾ). ೧. ಪಕ್ಷಿಯ ಚುಂಚು,-ಕೊಕ್ಕು. ೨. ಬಾಯಿ: ಇತ್ತಲು ಭೀಮ ಬಲುದುತ್ತುಗಳ ತೋಟಿಯುಲಿ ಮರನ ಮುಱಿದೆಱಗಿದರೆ ಪುನರಪಿ ಮುಱಿದು ನೋಡಿದು ಬಹೆನು ನಿಲ್ಲೆನುತರೆಗೆಲಸ ಪೂರ್ಯಸಲೆಂದನು (ಕುಮಾ.ಅ. ೧೦-೩೩). ೩. ಪಾತ್ರೆ ಮುಂತಾದಂವುಗಳ ಮೂತಿ : ನೀರು . . . ಪಾತ್ರೆಗೆ ಹಚ್ಚಿದ ತೋಟಿಯೊಳಗಿಂದ ಹೊರಗೆ ಬೀಳುತ್ತದೆ (ಮುಂಬಯಿ. ೫-೮೨). [ <ಸಂ. ತ್ರೋಟೀ./ಮರಾ. ತೋಟೀ ]

**ತೋಟಿಕಾಱ** 'ತೋಟಿಗಾಱ' ನೋ.

**ತೋಟಿಗ** 'ತೋಂಟಿಗ' ನೋ.

**ತೋಟಿಗಾಱ, ತೋಟಿಕಾಱ** (ನಾ). ಯುದ್ಧಾಸಕ್ತ ; ಯುದ್ಧ ಮಾಡು ವವನು : ಬಲು ತೋಟಿಗಾಱರು ತೊಡಗಿದರು ರಣವ (ನಿಘಂ. ೪-೯-೧೨). **ತೋಟಿಕಾಱ** : ನೋಟದವರರ ನಯನಗಳಿಗಲ್ಲಾಟವೆನೆ ವಿಚಿತ್ರ ಗತಿಗಳ ತೋಟಿಕಾಱರು ಹೊಕ್ಕು ತಾಗಿದರುಭಯಸೇನೆಯುಲಿ (ಕುಮಾ.ಭೀ. ೪-೨೫) ; ಜಯದ ತವಕದ ತನಿಮನದ ಕಡುತೋಟಿಕಾಱರು ಕಾದಿದರು ಕಡುಗಿ (ಕುಮಾ.ಗ. ೬-೨೯) ; ಶ್ರೀಮಂನಾಡಪ್ರಭು ಗಡಿಯಂಕ ಭೀಮಕಟಕ ತೋಟಿಕಾಱ (ಎಕ. XI, ಹೊಳಲ್ಕೆ. ೧೦೨-೩ ; 1691 ?).

[ ತೋಟಿ$_1$ + – ಗಾಱ (< – ಕಾಱ) ]

**ತೋಟಿಗಿತಿ** (ನಾ). ತೋಟದ ಕೆಲಸದವಳು : ಸುಂಕಿಗಿತಿ. ತೋಟಿಗಿತಿ (ಶಬ್ದಾಮ. ೯೯೧ ಪ್ರಯೋ).

[ ತೋಟಿಗ$_1$ (<ತೋಂಟಿಗ) + – ಇತಿ$_1$(< – ಇತ್ತಿ) ]

**ತೋಟಿಗೈ** (ಕ್ರಿ). ಯುದ್ಧಮಾಡು ; ಕದನಮಾಡು : ಪೊಯ್ವು ತೊಡು ಕುವ ತೋಟಿಗೈವ ಕೂಂಕುವ ನೆಱೆ ನೂಂಕುವೇಳ್ಗೆಯ ಬಲು ಬಗೆ ಗೊಂಡುದು (ರಾಜಶೇ. ೦೩-೮೪). [ತೋಟಿ$_1$ + ಗೈ (<ಕೆಯ್$_1$) ]

**ತೋಟಿಗೊಳು** (ಕ್ರಿ). ಜಗಳವಾಡು ; ಕಲಹ ಮಾಡು : ತೋಟಿಗೊಳುವ ದುಷ್ಟ ದಂಪತಿಗಳು ಬೂಟಾಟಗಳಿಂದನುಗೆಟ್ಟು ಊಟ ನಿದ್ದೆಗಳೊಂದ ಱೊಳು ಸುಖವಿಲ್ಲದೆ ಕೋಟಲೆಗೊಂಡು ಕುಗ್ಗುವರು (ಹದಿಬ. ೬-೭).

[ ತೋಟಿ$_1$ + ಕೊಳು (<ಕೊಳ್$_1$) ]

**ತೋಟಿಯ** (ನಾ). ಶೂರ; ಪರಾಕ್ರಮಿ (:) ತೋಟಿಯರ್ ತಱಿದಿಕ್ಕಿದ ರಾಂಪದ್ಯೆತ್ಯವಧೂಟಿಯ ಕರೆದು ತನ್ನೊಡನೆ ಸೂಟಿಯೊಳ್ ಸಾಮಂತ ಕೆಯ್ಯ ಖಡ್ಗವನಿಕ್ಕಿ ದಾಟಿಸಿಕೊಂಡಳೆಲ್ಲರನು (ಮೋಹತ. ೩೩-೩೮).

[ ತೋಟಿ$_1$ + – ಅ$_7$ ]

**ತೋಟಿ** 'ತೊಗಟು' ನೋ.

**ತೋಟ್ಟಿ$_2$** 'ತೋಟಾ$_1$' ನೋ.

**ತೋಟ್ಟಿ$_3$** (ನಾ). ಒಂದು ಬಗೆಯ ಔಷಧಿ ಮೂಲಿಕೆ : ತೋಟಿಯ ಬಡಗ ಹರಿದ ಬೇರು ನೀರಲ್ಲಿ ಅರೆದು ಯೋನಿಯಿಂದಿಳಿದು ಪೂಸಲು ಪ್ರಸವ ಮಾಗುವುದು (ವಿಷ್ಣವಿ. ೧೦೭). [ ? ]

**ತೋಟ್ಟಪಟ್ಟು** (ನಾ). ತೋಟದ ಭೂಮಿ,-ಪ್ರದೇಶ: ಪುತ್ರ್ಯರತ್ತಾಣಗೆ ಅಯ್ಯಾಂಬು ಕಟನಿಯುಂ ಅಯ್ಯಾಂಬು ತೋಟ್ಟಪಟ್ಟುಂ ಕೊಟ್ಟರ್ (ಎಕ. X, ಕೋಲಾರ ೨೨೪-೫; ಸು. 750); ಅಯ್ಯಾಂಬು ಮೊದಕಟನಿಯು ಎಟ್ಟೂಮ್ಬು ಬಾಳೆ ತೋಟ್ಟಪಟ್ಟು ಬ್ರಹ್ಮದೇಯಂ ಕೊಟ್ಟೋದು (ಎಕ. X, ಕೋಲಾರ. ೨೩೧-೫ ; ಸು. 800 ?). 'ತೋಟವಟ್ಟೆ' ಪರಾ.

[ ತೋಟ$_1$ (<ತೋಂಟ) + ಪಟ್ಟು$_3$ (<ಪಟ್ಟೆ$_3$) ]

**ತೋಡ$_1$** (ನಾ). ಬೆಳೆಯನ್ನು ನಾಶಪಡಿಸುವ ಬಿಳಿಯ ಇಲಿ : ಸುಂಡನ್ಗೆ ಶೂಲದ ಕತ್ತಿ ತೋಡನ್ಗೆ ಬಿಲ್ ಬಾಣ, ಮುಂದೋಗೋ ಹೆಣ್ಣಾನ್ಗೆ ನಾಗಸ್ವರದ ಕೊಳಲು (ಹುಟ್ಟಿಹ. ೧೪೫) ; ತೋಡ, ಹೆಗ್ಗಣ, ಗೋಲಂದಿ (ನಮ್ಮನು. ೨೩೯) ; ದೇವಸ್ಥಾನದ ಪ್ರಾಕಾರದ ಗೋಡೆಯ ಕೆಳಗೆ ಒಂದು ತೋಡ (ಬಿಳಿ ಇಲಿ) ಮನೆ ಮಾಡಿಕೊಂಡು ಸಂಸಾರ ಮಾಡಿಕೊಂಡಿದೆ (ಗರುಹಾ. ೧೮೧). [ <ತೋಡು$_1$ ]

**ತೋಡ$_2$, ತೊಡವ, ತೊದ** (ನಾ). ಒಂದು ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದವನು; ನೀಲಗಿರಿಯ ಆದಿವಾಸಿ: ನೀಲಗಿರಿಯ ತೋಡರು ಹೊರಗಿನ ಜನರೊಡನೆ ಈಗೀಗ ಬೆರೆಯತೊಡಗಿರುವರು (ಬಾಂಶ್ರ. I, ೪೯೯); ತೋಡರು ಹಾಲು, ಮೊಸರು, ಮಜ್ಜಿಗೆ ಮಾಡು ವರು (ದ್ರಾವಿವಿ. ೧೫೭). **ತೊಡವ** : ತುಳುವರು ತೊಡವರು ಬಡಗರು (ಅರಳು. ೩೦೪-೭). **ತೊದ** : (ಕ). [ ದೇ.ಶ ತಮಿ. ತೋಟ, ತುಟವ ]

**ತೋಡ$_3$** 'ತೋಡಾ' ನೋ.

**ತೋಡರ** (ನಾ). (?) : ನಂದಿಧ್ವಜನ ಚರಣಪಂಕೇಜಗಳು ಶೋಭಿಸಿದವಾಗ ದೃಕ್ಕರಣ ತೋಡರಗಳಿಂದ (ಮಲ್ಲಾರಿ. ೫-೧೨). 'ತೋಡಾ' ಪರಾ. **P** ಇದು 'ತೊಡರು' ಎಂಬುದರ ಅಪಲಿಖಿತವಿರಬಹುದು.

**ತೋಡಾ, ತೋಟಾ$_2$, ತೋಡ$_3$, ತೋಡೆ$_1$** (ನಾ). ೧. ಮುಂಗೈಗೆ ತೊಡುವ ಒಂದು ಬಗೆಯ ಆಭರಣ ; ಹಸ್ತಾಭರಣಗಳಲ್ಲಿ ಒಂದು; ಕಂಕಣ ; ಕಡಗ : ತನಗೆ ಮಹಾರಾಜರು ಬಹುಮಾನವಾಗಿ ಕೊಟ್ಟ ತೋಡಾ, ಮಕರಕಂಠಿ ಮುಂತಾದ ಒಡವೆಗಳಿಂದ ಆತನನ್ನು ಅಲಂಕರಿಸಿ (ಗಾನಕ. ೬೮) ; ಮಹಾರಾಜರು ಅವರ ಎರಡು ಕೈಗಳಿಗೂ ರತ್ನಖಚಿತ ಚಿನ್ನದ ತೋಡಾ (ಬಳೆಗಳನ್ನು) ಹಾಕಿ ಬಹುಮಾನಿಸಿದರು (ಸಂಗೀತ. ೨೭). **P** ರಾಜ, ಮಹಾರಾಜರು ಕಲಾವಿದರು ಅಥವಾ ವಿದ್ವಾಂಸರಿಗೆ ಬಿರಂದಿನೊಡನೆ ಬಹುಮಾನರೂಪವಾಗಿ ಕೊಡುವ ಅಲಂಕಾರ

ಸಾಧನ. ತೋಟಾ₂: ೨. ಹಣದ ಚೀಲ ; ಥೈಲಿ. ೩. ನಳಿಗೆಯಾಕಾರದಲ್ಲಿ ನಾಣ್ಯಗಳನ್ನು ಸುತ್ತಿದ್ದು ; ಒಂದೇ ಸಮನಾಗಿ ಜೋಡಿಸಿದ ನಾಣ್ಯಗಳ ಕಟ್ಟು: ಕಚೇರಿಯಾದ ಮೇಲೆ ಒಂದು ಬೆಳ್ಳಿಯ ತಟ್ಟೆಯಲ್ಲಿ ತಾಂಬೂಲಸಮೇತವಾಗಿ ಎರಡು ಹಣದ ತೋಟಾಗಳನ್ನಿಟ್ಟು ಕೃಷ್ಣಪ್ಪನವರಿಗೆ ಕೊಟ್ಟರು (ನಾಕಠಾ. ೫೮). ತೋಡ್ಯ₂: ೧. ಸಜ್ಜುಕ ಸರ ತೋಡ ಮುಕುರ ಬಾಚಣಿಗೆಯು ಕಜ್ಜಳದರೊಜಗಿರ್ದರು ಸುತ್ತ (ಸೂಬಸೋ. ೨೩-೨೬). ೪. (ಬಿರುದಿನ ಸಂಕೇತವಾಗಿ) ಕಾಲಿಗೆ ಹಾಕಿಕೊಳ್ಳುವ ಕಡಗ ; ಪೆಂಡೆಯಂ : ಪ್ರಭುಗಳು, ಮುತ್ತಿನ ಜೊಂಪೆಗಳಿಂದ ಕೂಡಿದ, ನವರತ್ನಖಚಿತವಾದ ಗಂಡಪೆಂಡೇರವೆಂಬ ಚಿನ್ನದ ತೋಡವನ್ನು ಕುವರನ ಬಲಗಾಲಿಗೆ ಬಹುಮಾನಿಸಿದರು (ಶಾಂತಲಾ. ೨೦೬). ತೋಡ್ಯ₁: ೧. ಜಡೆಯ ಮಾದರಿ, ತೋಡೆಯ ಮಾದರಿ ಇತ್ಯಾದಿ ಕೆಲವು ಮಾದರಿಯ ಮಾಲೆಗಳನ್ನು ಹೆಣ್ಣುಮಕ್ಕಳು ಕಟ್ಟುತ್ತಾರೆ (ಹ್ಯಾಮುಹಾ. ೨೦). ೫. ಒಂದು ಬಗೆಯ ಆಭರಣ ; ಕಾಲ್ಗಡಗ : ಶ್ರೀಕೃಷ್ಣವಿಲಾಸದ ಲಿಂಗಾಜಮ್ಮಣ್ಣೀಯವರು ಮಾಡಿಸಿದ ಬೆಳ್ಳಿ ಬಸವನ ಆಭರಣದ ಲಿಷ್ಟು . . . ೧. ಕಾಲಿಗೆ ತೋಡೆ. ೨. ಮುಂಗಾಲಿಗೆ ಹೂವು (ಎಕ. XIV, ನಂಜನ. ೨೮೯-೨ನೇ ಕಾಲಂ ; 1940).

[ ←ಹಿಂ. ಮರಾ. ತೋಡಾ ]

**ತೋಡಿ** (ನಾ). [ಸಂಗೀತ] ಒಂದು ರಾಗದ ಹೆಸರು : ಮಲಹರಿ ಮೇಘರಂಜಿ ಳಳಮಂಜರಿ ತೋಡಿ ವಸಂತವೆಂಬ ಮಂಜುಳತರ ರಾಗ ರಂಜನದೆ . . . ಪಾಡಿ ಮುದಂ ಮಿಗೆ ಮೆಚ್ಚಿಸುತ್ತುಂ (ಪಾರಪು. ೬-೧೪) ; ಮಲಹರಿ ದೇಸಿ ತೋಡಿಯನೆ ಪಾಡಿ ಪೊಸರ್ ಕಡೆದರ್ ಲತಾಂಗಿಯರ್ (ಮಲ್ಲಿಕಾ. ೪-೫೫) ತೋಡಿ ಮಕರಂದಿ ವಸಂತರಾಗು ಇತ್ಯಾದಿಯಾದ ರಾಗಂಗಳಂ ಪಾಡುತ್ತಿರೆ (ಹಮ್ಮಿರ. ೨-೯೦) ; ಆಹಿರಿಯಲ್ಲಿ ತೋಡಿಯೊಳು . . . ರಾಗಿಸಿ ಸಭೆಗೆ ಸಮ್ಮೋಹನರಸವ ಸೂಸಿದರು (ಭರತ. ೧೨-೪೩) ; ತೋಡಿ-೮ನೇ ಮೇಳಕರ್ತ ಹನುಮತೋಡಿಯ ರಾಗಾಂಗ ರಾಗ . . . ಈ ರಾಗ ಶುದ್ಧಕರ್ನಾಟಕವೆಂದೂ ಔತ್ತರೇಯವೆಂದೂ ಮತಭೇದವುಂಟು. ಸಾಯಂಕಾಲದಲ್ಲಿ ಹಾಡಬೇಕಾದ ರಾಗ. ಕರುಣಾರಸ ಪ್ರಧಾನರಾಗ (ಸಂಗೀಕಂ. ೧೪೫). [ ಸಂ. ತೋಡೀ./ಮರಾ. ತೋಡೀ ]

**ತೋಡಿಟ್ಟ** (ನಾ). ಎರಡು ತುದಿಗಳುಳ್ಳ ಒಂದು ವಿಧವಾದ ಈಟಿ: ಬಲು ಸರಳು ತೋಡಿಟ್ಟ ಮುದ್ಗರ ಪಿಡಿವಾಳಚೆಯು (ಕುಮ್ಮಾಭೀ. ೩-೨೦) ; ಬಡಿಗೋಲ್ಸ್ನಕ್ಕಿನ ಮುರ್ದು ಕೂಳಿ ಪದವಿಲ್ ತೋ[ ಪಾಠಾ. ಕೋ ]ಡಿಟ್ಟ ಕೈಗಲ್ಲುರುಳ್ ವಿಡಿಬಲ್ಪೆರ್ಬಲೆ . . . ಖಡ್ಗಂ ಗಾಳವಿಂಬಾಗೆ ಕೊಂಡೊಡನಾ ಲುಬ್ಧಕಸಂಚಯಂ ನಡೆದುದಾಗಳ್ (ಯಾದಚಂ. ೪-೫೧).

[ ತೋಡು₃ + ಇಟ್ಟಿ₂ ]

**ತೋಡಿಸು₁** (ಕ್ರಿ). ಅಗೆಯಿಸು ; ಹಳ್ಳ ತೆಗೆಸು ; ಗುಣಿ ಮಾಡು : ಕೊಂಡವ ತೋಡಿಸಬೇಡ ಕುಷ್ಕವ ಸುಟ್ಟು ಕೆಂಡವ ಮಾಡಿಸಬೇಡ ಖಂಡೇಂದುಶೇಖರ ಕಣ್ಗೆಟ್ಟನಿಂದೆನ್ನ ಗಂಡನನಾರುಪಿದಂತುರುಹು (ಬೋಹತ. ೮-೩೬); ಒಂದು ಬಾವಿಯನ್ನು ತೋಡಿಸಯ್ಯಾ (ಹ್ಯಮುಹ. ೪೬).

[ ತೋಡು₁ + -ಇಸು₃ ]

**ತೋಡಿಸು₂** (ಕ್ರಿ). ಸರಿಗಟ್ಟು ; ಸಮಂ ಏಂದು ಎಣಿಸು : ಪಾಳ . . . ದುಷ್ಕರ ಲಂಕಾಪುರಮಂ ನಭೋಗಪುರಮಂ ಕ್ರೌಂಚಾದ್ರಿಯಂ ದ್ವಾರಕೀಪುರಮಂ . . . ಸುಸ್ಥಿರ ಹಮ್ಮಿರಪುರಕ್ಕೆ ತೋಡಿಸಲೊಡಂ ಪಂಥೋಕ್ತಿ ವಂಶಾಲೋಕದೊಳ್ (ಹಮ್ಮಿರ. ೧-೬೪). [ ತೋಡು₁ + -ಇಸು₃ ]

**ತೋಡು₁** (ಕ್ರಿ). ೧. ಅಗೆ ; ಬಗಿ ; ಹಳ್ಳವನ್ನು ಮಾಡು ; ಕೊರೆ : ತೋಡುವೆನೆಂಬುದಲ್ಲದಿಡಲಾಗದು ನಿಕ್ಕುವ ತೋಟಿಪ್ಪೆನೆಂಬುದು (ಕವಿರಾ. ೨-೧೦೧); ಕಾಯೋತ್ಸರ್ಗದಿಂ ನಿಂದೊಡೆ ಗೃಧ್ರವಾಯಸಾದಿಗಳ್ ಪುಣ್ಣಂ ತೋಡಿ ತಿನೆ ಮೇರುಪರ್ವತಂಬೋಲಚಳಿತಧೈರ್ಯನಾಗೊಂದು ತಿಂಗಳ್ದೆಗಂ ಸೈರಿಸಿ (ವಡ್ಡಾರಾ. ೬೫-೧) ; ಪಥಿಕರಜಿಲ್ಗೊಂಡು ತೋಡಿದಬುಂಬನೀರ ಬಗರಗೆಗಳುಮನೊಳಕೆಯ್ದು ಬತ್ತಿದ ಪಳ್ಳಂಗಳೊಳಮತಿರೌದ್ರಮಾದ ಪೇರಡವಿಯೊಳಗೆ ಬರ್ಪಾಗಳ್ (ಕಾದಂಬ. ೩೬೬) ; ಇಲಿಗಳ್ ಮನೆಯೊಳ್ ಪುಟ್ಟಿಯುಮಲಸದೆ ತವೆ ತೋಡಿ ಮನೆಗಳಂ ಕಿಡಿಸುವವೋಲ್ (ಪಂಚತಂ. ೧೦೬-೧೮) ; ತವರಾಜದ ನೊರೆ ತೆರೆಯಂತೆ ಆದ್ಯರ ವಚನವಿರಲು ಬೇಱೆ ಬಾವಿಯ ತೋಡಿ ಉಪ್ಪ ನೀರನುಂಬವನ ವಿಧಿಯಂತೆ ಆಯಿತೆನ್ನ ಮತಿ (ಬಸವ. ೨೯೦) ; ಗೋಡೆಗನ್ನಮಂ ತೋಡಿ ಮನೆಯೊಳ್ಪೊಕ್ಕು ಪರಿಕಿಸಿ ನೋಡುವಲ್ಲಿ (ಬಸಪು. ೩೧-೬) ; ಬೇಡುವುದು ಗದೆ ನಿಮ್ಮ ವಕ್ಷವ ತೋಡಿ ನೆತ್ತರುಗೊಳದಲೋಕುಳಿಯಾಡುವುದನು (ಕುಮ್ಮಾಅ. ೧೦-೪೯) ; ಮಾಡಿದ ಪುಣ್ಯಕ್ಕೆ ಫಲವೇ ಸಾಕ್ಷಿ ಕೋಡಿದ ಬಾವಿಗೆ ಜಲವೇ ಸಾಕ್ಷಿ (ಗಾದೆ). ೨. ಚುಚ್ಚು ; ತಿವಿ : ಐದುಬಾಣದೊಳುರವ ತೋಡಿದನು(ಕುಮ್ಮಾದ್ರೋ. ೫-೩೨); ದೈತ್ಯನ ಮೆಯ್ಯ ತೋಡಿದನ್ಯದಂಬಿನಲಿ (ಬೋಹತ. ೩೪-೧೪); ತೋಡಿದು ಮೂವತ್ತು ಬಾಣದಿಂ ತಾಪಮಂಕುರಿಸುವಂತವನೊಡಲೊಳು (ಕೃಮಿಭಾ. ೧೨-೪೬) ; ೩. ಹೊರ ತೆಗೆ ; ಹಿರಿ ; ಹಿರಿದುಕೊಳ್ಳು : ಧುರದೊಳು ಬಂದೊಡ್ಡಿ ವೈರಿಪ್ರಕರವಿರಲ ವಷ್ಟಂಭದಿಂ ಬಿಟ್ಟದೇವಂ ಕರವಾಳಂ ತೋಡಿ ಕೊಂಡಿಂ ಬಳಿಕ (ಎಕ. IV, ನಾಗಮಂ. ೨೮-೧೩ ; ಸು. 1126) ; ಕರವಾಳಂ ತೋಡಿಕೊಂಡು (ಕವಿಕ. I, ೧೦೪). ೪. (ಅಡಿಗೆ, ನೀರು ಮುಂತಾದುವನ್ನು ಒಂದು ಪಾತ್ರೆಯಿಂದ ಮತ್ತೊಂದಕ್ಕೆ) ಮೊಗೆದು ಹಾಕು : ಎಡಗೈಯೊಳೆ ತೋಡಿ ಬೆಣ್ಣೆಯಂ ತಿನುತಿರೆ (ಜಗಪಿ. ೩-೫೧) ; ತೋಡಿ ಬಡಿಸುವ ಕಿವಿ ಗರೋಚಕ ವಾಯ್ಸು ತೆಗೆಯೆಂದ (ಕುಮ್ಮಾಸ. ೧೦-೨೦) ; ನೀರು ತೋಡಿ ಇಟ್ಟಿದ್ದೇನೆ ಜಳಕ ಮಾಡಿರಿ (ಪುತ್ತ್ಯದ. ೨೩೦). ೫. ಹೊರಕ್ಕೆ ಹೋಗು ; ಆಚೆ ಹೋಗು : "ತೋಡು – ನಿಷ್ಕ್ರಮಣೇ (ಹೊರಟು ಹೋಗು). ಯುಗ್ಮೇ ಚ (ಜತೆ)" (ಕಮುಧಾ) ;" ನಿಷ್ಕ್ರಮಣಯುಗಸಾಮ್ಯಂಗಳೊಳ್ ತೋಡಲಾ" (ಶಬ್ದಮಂ. ೯೨). ೬. (ಮನಸ್ಸನ್ನು ತೆರೆದು) ವ್ಯಕ್ತಪಡಿಸು ; ತಿಳಿಸು ; ಹೇಳಿಕೊಳ್ಳು : ದುಃಖಮಂ ತೋಡುವೆನಾರ ಕೂಡೆ (ಕಾವ್ಯಸಾ. ೫೭೬); ಈ ಭವದ ಯೋಗಗಳ, ಭೋಗಗಳ, ರೋಗಗಳ ತೋಡ ಬಾ, ಹಾಡ ಬಾ (ನವ್ಯಕ್ಕ. ೩-೬). ೭. ಎಳೆಯನ್ನು ಬಿಚ್ಚಿ ಹಾಕು ,–ತೆಗೆದುಹಾಕು : ನಾರಸಿಂಹನ ರೂಪಿಂ . . . ಪಟ್ಟಗಾಜನೆ ಪಾಸಂ ತವೆ ತೋಡುವಂತೆ ಕರುಳಂ ನೀಂ ಕೋಡಿದ್ಯೆ ದೈತ್ಯನಾ (ಕಾಪ್ಯಾಪ. ೩೫೫) ; ಅವ್ವ ರೇಶಿಮೆ ತೋಡುವ ಕೆಲಸ ನಿಲ್ಲಿಸಿ ಅಡುಗೆಗೆ ತೊಡಗುತ್ತಿದ್ದಳು (ಪಾಕರ. ೩೮).

**ತೋಡಿಕೊಳ್ಳು** = ಮನಸ್ಸಿನ ಆಳಲನ್ನು ಹೇಳಿಕೊಳ್ಳು : ಕಂಡ ವರೆದುರೊಳು ನಿನ್ನೆದೆಯೊಳಗನು ತೋಡಿಕೊಂಡಳಲಾಗ ನೋಡ (ನಾಜಾಪ. ೨೩೦-೩೬).

[ ದೇ.I ತಮಿ. ತೋಣ್ಡು; ಮಲ. ತೋಣ್ಡು; ತುಳು. ತೆಲು. ತೋಡು; ಕೊಡ. ಪರ್ಜಿ. ತೋಡ್ ]

**ತೋಡು₂** (ನಾ). ೧. ಅಗೆದಿರುವ ಸ್ಥಳ ; ಗುಂಡಿ ; ಹಳ್ಳ, ಕಾಲುವೆ ಮೊದಲಾದುವು : ಉಂಡ ಹಾಳೆಗಳನ್ನು ಮಡಿಸಿ . . . ತೋಡಿಗೆ ಎಸೆದು ಕೈ ತೊಳೆದು ಬಂದಳು (ನಂಬಿನಾ. ೨೦೯) ; ಅಂಗಳದ ಕೆಳಗಿನಿಂದ ಒಂದು ನೀರಿನ ತೋಡು ಸದಾ ಹರಿಯುತ್ತದೆ (ಕಂಬಹು. ೬೮) ; ೨ ಇಳಿಜಾರಾದ ಮಾರ್ಗ,–ಜಾಡು : ಈ ತೋಡು ಕಣಾಂತರದಲ್ಲಿರುವ ಬಾಯಿ ಮೂಲಕ ಗಂಟಲನ್ನು ಪ್ರವೇಶಿಸುತ್ತದೆ (ಪ್ರಾಚಿಶಾ. ೫೬). ೩. ಝರಿ ; ಅಬ್ಬಿ ; ಪ್ರವಾಹ : ಬೆಟ್ಟದ ಗುಣ ತೋಡಿನಿಂದಳಿಯಿತ್ತು ಸಾಗರದ ಗುಣ ಕೋಡಿಯಿಂದಳಿಯಿತ್ತು (ಪೋಕಮೂ. ೦೦೩-೪೦೦) ; ಗಣಸಲೆ ನೀರ ತೋಡಿನಿಂದ ಪಡುವಲು (ಬೊಂಕಶಾ. ೧೯೩೦, ಮಂಗಳೂರು.

ಈಶಾನ್ಯ ಹೊಳೆ (ಹಾಶಿ-೨೯ ; 1376) ;ತೋಡಿಗೆ ತೆಂಕ ಒತ್ತ್ರು ಬದರು ತಾಳ ತೋಡಿ ತೆವರಿನ ಮಲಪಡುವ ಮುಖವಾಗಿ ನೆಟ್ಟ ಕಲ್ಲು(ಎಕ. III, ತಿರುಮ. ೬೩-೩೬೯ ; 1748); ಅಲ್ಲಲ್ಲಿ ತಡೆತಡೆವ ಕಾಡುಗಳ ತೋಡುಗಳ ಕಲ್ಲ ಚೆಲ್ಲಿದ ಪಸರೆಗಳ ನೊಸಲ ತುಳಿದಂ (ಕಾಲೂಕ. ೧೦೧-೨೨೨); ಆ ದಾನವರಾದ ನಮ್ಮವರು, ಎಂಬವರ ಸ್ವಭಾವ ವರ್ತನೆಗಳು ಆ 'ಕಾಡ ಸೊಪ್ಪು ತೋಡ ನೀರಿನ' ಬಡಮುನಿಗಳ ಮೇಲೆ ಹೇಗೆ ಹೇಗೆ ಕಾಂಡವವನ್ನಾಡಿದ್ದುವು? (ಪಾತೀಸು. ೫೦) ; 'ಕಾಡ ಸೊಪ್ಪ'ನ್ನು 'ತೋಡ ನೀರಿ'ನಲ್ಲರದು ಕುಡಿಸಿ ಗುಣ ಗೊಳಿಸುವ ಎಷ್ಟೋ ಮಂದಿ ಹಳ್ಳಿಗರೀಗಲೂ ಇದ್ದಾರೆ (ನಾಡೋಜ ೨೩೦).
[ <ತೋಡು$_1$./ಮಲ. ತುಳು. ತೋಡು; ಕೊಡ. ತೊಡಿ]

**ತೋಡು$_3$** (ನಾ). ೧. ಜೊತೆ ; ಯಂಗಳ : "ತೋಡು – ನಿಷ್ಕ್ರಮಣೇ (ಹೊರಟು ಹೋಗು), ಯುಗ್ಮೇ ಚ (ಜತೆ)" (ಶಮಧಾ) ; "ತೋಡು ಜೋಡಿಯು" (ಶಬ್ದಮಂ. ೫೬) ; ಬಿಸುಸುಯ್ದು ತ್ರಗಲ್ದಿರ್ದ ನೀರ್ವಕ್ಕಿಗಳಾಗಳ್ ಕೂಡಿ ತೋಡಾದುವು (ಆದಿಪು. ೧೨-೯) ; ನೀರ್ವಕ್ಕಿಗಳ್ ಕೂಡಿ ತೋಡಾಗೆ ದಿಗಂತಂಗಳ್ ನಿತಾಂತಂ ತೊಳಗಿ ಬೆಳಗೆ . . . ಉದಯಂಗೆಯ್ದುತ್ತು ಶೋಭಾರುಣಕಿರಣಗಣಾಳಂಬವಾದಿತ್ಯಬಿಂಬಂ (ಸುಕುಮಾ. ೦೨-೧೬) ; ತವಕದಿನಪ್ಪಿ ತಲ್ಲಣದೆ ಚುಂಬಿಸಿ ನಿಲ್ಲದೆ ಕೂಡಿ ತೋಡಗಲ್ಚುವ ದಿವಸಾವಸಾನಸಮಯಕ್ಕೆ . . . ಅಗಲಲಾಱದಗಲ್ದುವು ಜಕ್ಕವಕ್ಕಿಗಳ್ ಕನಲ್ದು (ಅನಂಪು. ೭-೭೦) ; ಓಲೆಯ ತೋಡುಳಿಯಲ್ ಪೊಕ್ಕಳಬಳೆ ಜನಕಾಲಯಮಂ (ನೇಡಂ. ೫೭೦); ಬಿನ್ನಣದಿಂದ ಸಮೆದ ದಂಡೆ ತೊಂಡಿಲು ಹೊನ್ನೋಲೆಯ ತೋಡುಗಳನು (ಜಂಪ್ರಸಾಂ. ೦೨-೨೪೪). ೨. ಸಮಾನ ; ಸಾಟಿ: "ಸರಿ, ದೊರೆ, ಪಡಿ...ತೋಡು, ಓರಗೆ, ಜೋಳಿ, ಹೊಯ್ಕೆಯ್ ಹೋಟಿ, ಸಂಗಡಂ – ಈ ೧೮ ಸಮಾನಕ್ಕೆ ಪೆಸರ್" (ಕಶಸಾ. ೧೫-೨೯೧) ; ಪಾರ್ವ್ವತಿಗೆ ತೋಡು . . . ಪಾಸವಾಂಗನೆಗೆ ಪಾಸಟಿ ಚಾಗಲ ದೇವಿ ಧಾತ್ರಿಯೊಳ್ (ಎಕ. VIII, ಸಗರ. ೪೭-೦೦೩ ; 1062) ; ಕರಿವರಮಸ್ತಕದೊಳ್ ತೋಡಿಲ್ಲದೆ ಬಗೆಬಗೆದುತ್ಸುಕದೊಳ್ . . . ಒಱದುತ್ಸುಪದಿಂ ದೇಳ್ವಂದಾಗಳ್ (ರಾಜಶೇ. ೯-೪೧ ರಗಳೆ) ; ಇನ್ನೆಬರಂ ತವಗೆ ಜಗಂ ತೋಡಾಗದೆಂದು ಸೊರ್ಕಿನೊರ್ಕಿಂ ಬೞಗೊಂಡೆ ಪಂದೆ ರಾಯರಂ ಕಾಡಿ ಬೇಡಿ ಕೂಡಿದ ಜಾಳಿಗೆವೊನ್ನಂ ಕೀಳುಗೊಂಬೆಂ (ರಾಮಾಶ್ವ. ೧೨೭-೨೮) ; ನಾನಾ ಜಾತಿಯ ರಾಯರೊಕ್ಕು ಬನಮಂ ಮೈಸೂರ ಕಾಡೊಳ್ಗಿನೊಳ್ ಮಾನಾತೀತಮನೋವಿಕಾಸವಡೆಯಲ್ಕೀ ಕಾಡ ತೋ ೯ ಡಾ ವು ದೋ ೯ (ಮೈಸೂರು. ೦-೩೫) ; ಅವನ್ನಿಗ್ವಳ್ಗಿ ಬೆಳೆದ ಪತ್ತುಗೆಗೆ ತೋಡಿಲ್ಲಮ್ (ಅಂತಿಗೊ. ೨೭-೫೪೬). ೩. ಸಂದಣಿ; ಗುಂಪು: ಹೂಡಿದಂಬಿನ ಹೊದೆಯ ಬಂಡಿಯು ತೋಡ ಕಡಿದನು ಛತ್ರ ಚಮರದ ರಥಾಡಿಗಳ ತಟಿದೊಟ್ಟದನು ಕಲಿಪಾರ್ಥ (ಕುಮ್ಮಾ. ೨೭-೯). [ ದೇಶ. ತಮಿ. ತೆಲು. ತೋಡು ]

**ತೋಡು$_4$** (ನಾ). ಬಾಣವನ್ನು ತೊಡುವಿಕೆ ; ಶರಸಂಧಾನ : ತೋಡು ಬೀಡಂ ಕಾಣ್ಬುದು ನಾಡೆಯುಮರಿದೆನಿಸಿ ಕೃಷ್ಣನಾರ್ದಿಸೆ (ಪಂಪಭಾ. ೯-೬೩);ತೋಡುಡುಗಡೆಸುತವಿರೆ ಮಾರ್ಪಡೆಯ[ರುಮುವ]ರವಯವಂಗಳಿ ನಿಶಿನಿತಱೊಳಂ ಕೂಡೆ ನಡೆ ಮಯ್ಗ್ಗಳಂಬಿನ ಮೂಡಿಗೆಯನೆ ಪೋಲ್ತು ಕೆಡೆದರುಗ್ರಾಹವದೊಳ್ (ಬಂಹರಿ. ೧೧-೧೦೧); ತೋಡು[ವಂ]ಬಿಡುವಂದ ಲೀಕ್ಷಿಸಿ ನೋಡಿಯಱಿಯಲು ಬಾರದಂಬಿನ ಕೂಡೆ ಬಿಳ್ದಿಭ ತುರಗ ರಥ ಕಾಲಾಳ್ಗಳಿಂದಱಿಯೆ (ಕುಮುಕ್ರಾ. ೨-೩೩).

**ತೋಡುಂ ಬೀಡುಂ, ತೋಡು ಬೀಡು**=(ಬಾಣವನ್ನು) ತೊಡುವುದುಂ ಮತ್ತು ಬಿಡುವುದು: ಎರಡುಂ ಕೆಯ್ಯೊಳ್ ತೋಡುಂ ಬೀಡುಂ ಕಾಣಲಾಗದಂತಿಸೆ (ಪಂಪಭಾ. ೫-೯೭ ವ); ತೋಡುಂ ಬೀಡುಮಿಲ್ಲೆಚ್ಚುಕೆ ಪಣಮಯ ಪಮದಪ್ಪುದೋ...ಎಂಬಂತಿರೆಚ್ಚಂ (ಅನಂಪು.೧೯-೧೭);ಕೃತವರ್ಮನೆಸುಗೆಯ ತೋಡುಬೀಡಿನ ಭರವ ಬಲ್ಲವನಾರು (ಕುಮ್ಮಾ.ಗ. ೨-೬). [<ತೊಡು$_1$]

**ತೋಡು$_5$** (ನಾ). ೧. ಉಪಾಯ ; ಹಂಚಿಕೆ ; ತಂತ್ರ ; ಯುಂಕ್ತಿ : ಶ್ರಮವನ್ನೂ ತೊಡಕುಗಳನ್ನೂ ತಕ್ಕ ತೋಡುಗಳಿಂದ ನಿವಾರಣಮಾಡಿ ಕೆಲಸವನ್ನು ಕೊನೆಗಾಣಿಸಿ ತೋರಿಸುವ ವಿವೇಕವೇ ಜ್ಞಾನಾಂಜನವನ್ನಿಸಿಕೊಳ್ಳುವುದು (ಕಾಂತೂಕ. ೩೯) ; ಇದು ಬಿಕ್ಕಟ್ಟಿನ ಪ್ರಶ್ನವು. ಇದಕ್ಕೆ ಏನಾದರೊಂದು ತೋಡು (ಉಪಾಯ) ತೆಗೆಯಲುಬೇಕು (ಬೀರಬ. ೧೪೧). ೨. ಕಟ್ಟು ; ಪ್ರತಿಬಂಧಕ ಉಪಾಯ ಆದರ ತೋಡು ತಿಳಿದವರು ಮೂರುದಿನಗಳೊಳಗಾಗಿ ಬದುಕಿಸಿಕೊಳ್ಳಬಹುದು (ಚದೇವ. ೧೨೭) ; ನಾವು ಒಬ್ಬ ಮಾಂತ್ರಿಕನ ಕೈಯಲ್ಲಿ 'ತೋಡು' ಮಾಡಿಸಿದರೊ ? (ಕಣ್ಣಮು. ೭೮).

[ ತಮಿ. ತೋತು ; ಕೋತ. ತೋದ್./ಮರಾ. ತೋಡ್ ]

**ತೋಡುಂಗಿಱು** (ಕ್ರಿ). ಜೊತೆಯಾಗಿ ಎಸೆಸಂ; ಸಮಾನವೆಂದು ಭಾವಿಸಂ: ಆರಂ ತೋಡುಂಗಿಱದೆ ತನ್ನೊಂದು ಗರಗರಿಕೆಯ ಸೊಮ್ಮಿನಭ್ಯುದಯದ ಪದುಳಮರಸಾಳ್ವ ಬಸಂತರಾಯನುರ್ಕುಂ ಸೊರ್ಕುಂ ಸೋರ್ದು ಬಯಲಪ್ಪನೆಗಂ ದಾಟಿಗೆಯ್ದು (ರಾಮಾಶ್ವ. ೫೦-೧೪).

[ ತೋಡು$_3$ + ಗಿಱು ]

**ತೋಡುಕ್ಕೆ** 'ತೊಡಂಗ್ಯೆ' ನೋ.

**ತೋಡುಗವಣೆ** (ನಾ) ಜೋಡಿ ಕವಣೆ : ತೋಡುಗವಣೆಯು ತೂಱಗಲ್ಲಿನ ಝಾಡಿ ಝುಮ್ಮಿಡಿಸಿದವು ಗಗನವ (ತೊರರಾ. ೬-೧೧-೬).

[ ತೋಡು$_3$ + ಕವಣೆ$_1$ ]

**ತೋಡುಗಾಲುವೆ** (ನಾ). (ಅಗೆದು ಮಾಡಿದ) ಸಣ್ಣ ಕಾಲುವೆ : ದೊಡ್ಡ ನಾಲೆಯಿಂದ ಕಬ್ಬಿನ ಗದ್ದೆಗೆ ತೋಡುಗಾಲುವೆ ಅಗೆಯಬೇಕು (ಜಾಂ).

[ ತೋಡು$_1$ + ಕಾಲುವೆ (<ಕಾಲ್ವಾಯ್) ]

**ತೋಡುಗೆಲಸ** (ನಾ). (ಭೂಮಿಯನ್ನು) ಅಗೆಯುವ ಕಾರ್ಯ ; ಅಗೆತ : ನಾಲೆಯನ್ನು ಅಗೆಯಲು ೫೬ ಮಿಲಿಯ ಸಲೆ ಅಡಿ ತೋಡುಗೆಲಸವನ್ನು ೧೦೦೦ ಸಲೆ ಅಡಿಗೆ ೨೫ ರೂಪಾಯಿನ ದರದಲ್ಲಿ ಮಾಡಲಾಯಿತು (ಶಿಲ್ಪಶಾ. ೨೪೭). [ ತೋಡು$_1$ + ಕೆಲಸ ]

**ತೋಡುಗೈ, ತೋಡುಕ್ಕೆ** (ನಾ). ೧. ಬಗಿಯಂತ್ತಿರುವ ಕೈ : ತೋಡುಗೈಗಳ ಮಿದುಳ ಬಾಯ್ಗಳ ಬಾಡುಗರುಳಿನ ಚೀತ್ಕೃತಿಯ ತಲೆಯೋಡುಗಳ ತನಿರಕುತಪಾನದ ಶಾಕಿನೀಜನವ . . . ಕಂಡೋಸರಿಸುವನದೊಂದು ದೆಸೆಗಾಗಿ (ಕುಮ್ಮಾ.ಗ. ೩-೧೧). **ತೋಡುಕ್ಕೆ**: ೨. ಮೊಗೆಯಲು ಉಪಯೋಗಿಸುವ, ಚಿಕ್ಕ ಹಿಡಿಯುಳ್ಳ ಕೈಯ ಆಕಾರದ ಒಂದು ಬಗೆಯ ಸಲಕರಣೆ: (ಧಾನ್ಯ, ಸಕ್ಕರೆ, ಇದ್ದಿಲು, ಮೊ.ನ್ನು ತೋಡಿ ಮತ್ತೊಂದಕ್ಕೆ ಹಾಕಿಕೊಳ್ಳಲು ಅನುಕೂಲಿಸುವ, ಮೋಟುಹಿಡಿಯು, ಆಳವಾದ ಪಾತ್ರವುಳ್ಳ) ತೋಡುಕ್ಕೆ, ಗೋರಿಗೆ. ಉದ್ದ ಹಿಡಿಯ, ಸೌಟನಾಕಾರದ, ಅದ್ದುಪಾತ್ರೆ (Scoop. ಇಂಕಸಿ.). 'ಮಗುಚುಕ್ಕೆ' ಪರಾ.

[ ತೋಡು$_1$ + ಕೈ$_2$ (<ಕೆಯ್$_3$) ]

**ತೋಡುದಾರಿ** (ನಾ). ದಿಣ್ಣೆಯನ್ನು ಅಗೆದು ಮಾಡಿದ ಹಾದಿ,– ಮಾರ್ಗ: ತೋಡುದಾರಿಯ ಪಕ್ಕದಲ್ಲಿ . . . ನೆಲಗಟ್ಟಿನ ಕಡೆಗೆ ನೆಕ್ಕದೋಪನ ದೃಷ್ಟಿ ಹರಿಯಿತು (ಪುನರು. ೪೭೬).

[ ತೋಡು$_1$ + ದಾರಿ ]

**ತೋಡುದೋಣಿ** (ನಾ). ೧. ಮರದ ದಿಮ್ಮಿಯನ್ನು ಕೊರೆದು ಮಾಡಿದ ದೋಣಿ: ತೋಡುದೋಣಿಯಿಂದ ಹಿಡಿದು ಸಮುದ್ರಯಾನದಲ್ಲಿ ಹಡಗಿನ ನಿರ್ಮಾಣದ ಹಾಗೆ ಆಕಾಶಯಾನದ ಬೆಳವಣಿಗೆಯೂ ವೈಜ್ಞಾನಿಕ ಸಾಧನೆಯಾಗಿರಲಿಲ್ಲ (ಶಿಲ್ಪಶಾ. ೧೪೪). ೨. ದನಕರುಗಳು ಕುಡಿಯಲು ನೀರನ್ನು ತುಂಬಿಡುವ ಕಲ್ಲಿನ ಅಥವಾ ಮರದ ದೋಣಿ,–ತೊಟ್ಟಿ.

[ ತೋಡು$_1$ + ದೋಣಿ$_3$ ]

**ತೋಡುವಡಿ** (ನಾ). ಸಮಾನವಾದ ಅಳತೆ.–ಪ್ರಮಾಣ : ತಿಂಗಳಿಗೆ ಸಲ್ವ ಮಾಱುವೀಸ ದೋಪಾದಿಯ ಬಡ್ಡಿಯಲು ತೋಡುವಡಿಯಾಗಿ ವರ್ಷಂ ಪ್ರತಿ ಬಂದ ಬಡ್ಡಿ ಇಂದ ಆ ಇಂದ್ರಧರ್ಮ್ಮ ನಡವಂತಾಗಿ (ಎಳ. V. ಬೇಲೂರು. ೨೪೭-೬ ; 1293). [ ತೋಡು₂ + ವಡಿ₁ ]

**ತೋಡುವೊಯ್ಲು** (ನಾ). (ದೇಹದಲ್ಲಿ ರಕ್ತವನ್ನು ಚಿಮ್ಮಿಸುವ) ಹೊಡೆತ ; ಗಾಯಂ ಕೊರೆಯಂಬ ಹೊಡೆತ: ಜಾಡಿಸುವ ಮಣಿಮಯದ ಗದೆಯಲಿ ತೋಡುವೊಯ್ಲಿನ ತುಡುಕುಗಾಯದ ನೀಡುಮೊನೆಗಳ ವಿಗಡನಿ ಕ್ಕಿದನದಟರಕ್ಕಸರ (ಕುಮ್ಕಾ.ಆ. ೧೧-೩೨). [ ತೋಡು₁ + ಪೊಯ್ಲು ]

**ತೋಡುಹಾವುಗೆ** (ನಾ). "ಒಂದೇ ಮರದ ತುಂಡನ್ನು ಕೆತ್ತಿ ಮಾಡಿದ ಪಾದರಕ್ಷೆ ; ಮರದ ಅರೆಜೋಡು ; ಪಾವುಕೊರಡು ; ತೋಡು ಹಾವುಗೆ ; ಮರದ ಅಟ್ಟೆಯ ಪಾದರಕ್ಷೆ" (Sabot. ಇಂಕನ್ನ).
[ ತೋಡು₁ + ಪಾವುಗೆ ]

**ತೋಡೆ₁**, 'ತೋಡಾ' ನೋ.

**ತೋಡೆ₂**, ಥೋಡೆ, (ನಾ). ಸ್ವಲ್ಪ ; ಕಿಂಚಿತ್ತು ; ಅಲ್ಪ : ನಂಗೆ ಒಂದು ಹಂಚಿಕೆ ಹೊಳೀತಯ್ತು. ಮನೋಗ ಹೇಳು : ಧನೇರ ಕಡೇನೇ ಹೋಗಿ ಕೈಕಾಲು ಬೀಳ್ತಿ. ಅಲ್ಲಿ ನಾನೂ ತೋಡೆ ಹೇಳ್ತಿನು (ಪ್ರೇಮಕ್ರ. ೧೩). ಥೋಡೆ : ಏನೋ ಥೋಡೇ ತುಸಾ ಯಾರರ ಥಾಂದಲೆ ಹಾಕತಾರ, ಅದನ್ನೆಲ್ಲ ಥಮ್ಮಣ ಮಾಡತೀವಿ (ಧನಂಜ. ೩೦).
[ ←ಹಿಂ. ಮರಾ. ಥೋಡಾ ]

**ತೋತಾಪುರಿ** (ನಾ). ಒಂದು ಬಗೆಯ ಮಾವಿನ ಮರ ಮತ್ತು ಅದರ ಕಾಯಿ ; ಗಿಣಿಮೂತಿಮಾವು : ನಮ್ಮ ತೋಟದಲ್ಲಿ ತೋತಾಪುರಿ ಮರ ಇದೆ (ರೂಢಿ). [ ←ಹಿಂ. ಮರಾ. ತೋತಾ = ಗಿಣಿ ]

**ತೋತಾಯ** (ನಾ). ೧. ಕೃತ್ರಿಮ ದಾಖಲೆ ಮೊದಲಾದುವನ್ನು ಹುಟ್ಟಿಸುವಿಕೆ. ೨. ಮೋಸಗಾರ ; ಡಾಂಭಿಕ. ೩. ಖೋಟಾ ವಾರಸುದಾರ : (೬). [ ←ಮರಾ. ತೋತಯಾ. / ಹಿಂ. ತೋತ ]

**ತೋತ್ತರ** (ನಾ). ಸ್ತೋತ್ರ ; ಸ್ತುತಿಸುವಿಕೆ : ಶಚಿಪತಿಯು ಎತ್ತು ಹತ್ತುವ ಕೃತ್ತಿವಾಸನ ತೋತ್ತರವ ಮಾಡುತ್ತ ಮಾನವ ತೆತ್ತಿ ಮಸ್ತಕವನ್ನು ಪಾದಕೆ ಸತತ ಮಣಿಸುವನು (ಪಾರ್ವತೀಶ. ೨-೮೦).
[ <ಸಂ. ಸ್ತೋತ್ರ. /ತಮಿ. ತೋತ್ತಿರ ; ತುಳು. ತೋತ್ರ ]

**ತೋತ್ರ** (ನಾ). ಆನೆ, ಕಂದುರೆ, ಎತ್ತು ಮೊದಲಾದ ಪ್ರಾಣಿಗಳನ್ನು ನಡೆಸಲು ತಿವಿಯುವ ಸಾಧನ ; ತಿವಿಗೋಲು : "ಪ್ರತೋದ, ಪ್ರಾಜನಂ, ತೋತ್ರಂ-೩ ಮುಳುಕುಗೋಲ್" (ಹಲಾಯು. ೯೪-೪೨೨) ; "ತೋತ್ರಂ, ವೈಣುಕಂ–ಆನೆಯನ್ನು ತಿವಿದು ಶಿಕ್ಷಿಸುವ ಬಿದುರಿನ ಕೋಲಿನ ಹೆಸರು" (ಸಿದ್ಧಾಂತಿ. ೨೦೩) ; ಧೈರ್ಯದ್ವೈರಾವತಂ ಹೋರಾಡುತಿರ್ಪುದಂ ಕಾಣುತೆ ಗುರು ವಸಿಷ್ಠನಾಡಿದನ್ ಮಾವುತಂ ತೋತ್ರದಿ ತಿವಿಯುವಂತೆ (ಶ್ರೀರಾಮಾ. ೧೭೦-೪೮೬). [ ಸಂ. ]

**ತೋದ₁** 'ತೋ' ವರಾ.

**ತೋದ₂** (ನಾ). ೧. ದನ, ಕರು, ಕುದುರೆ ಮುಂತಾದುವುಗಳನ್ನು ಹೊಡೆದು ಕೊಂಡು ಹೋಗುವಿಕೆ,–ನಡೆಸಿಕೊಂಡು ಹೋಗುವಿಕೆ. ೨. ನೋವು ; ಯಾತನೆ : ಅಂಬುಧಿಸಂಗಸಂಜನಿತಶುಬರನಿರ್ಭರಗರ್ಭ ಬಾಧು ಕಾದಂಬಿನಿ ತತ್ಪ್ರಸೂತಿಸಮಯಂ ಬರೆ…ನರಲ್ದು ರಾವದಂತೇಂ ಬಗೆಗೊಂಡುದೋ ಗುಡುಗು ಸೂತಿಮರುತ್ಕೃತತೋದದೇಳ್ಗೆಯಿಂ (ರಾಜಶೇ. ೮-೧೦೩). [ ಸಂ. ]

**ತೋದನ** (ನಾ). ೧. ಹೊಡೆತ ; ಬಡಿತ : (೬). ೨. = ತೋತ್ರ : "ಪ್ರಾಜನಂ, ತೋದನಂ, ತೋತ್ರಂ–೩ ತಿವಿಗೋಲು" (ಸಿದ್ಧಾಂತಿ. ೨೩೪). ೩. ತೀವ್ರವಾದ ನೋವು,–ಯಾತನೆ,–ವೇದನೆ. [ಸಂ.]

**ತೋದೆ** (ನಾ). ತೋರಿಕೆಯ ನೆವ ; ಕುಂಟುನೆಪ : ಅವರುಲ್ಲಾದರು ಹೇಳಿದುದಕ್ಕೆಲ್ಲ ಅವನು ಒಂದು ತೋದೆ (ಕುಂಟುನೆವ) ಹಾಕುತ್ತಿದ್ದನು (ಗರುಡಾ. ೧೦೭). [ ←ತಮಿ. ತೋತು ]

**ತೋದ್ಯ** (ನಾ). (ಹೊಡೆಯಬಹುದಾದ ಅಥವಾ ಬಾರಿಸಬಹುದಾದ) ಒಂದು ವಾದ್ಯವಿಶೇಷ : ಸುದತಿ ಘನತೋದ್ಯದಳಿಗೀತದ ವಾದ್ಯದ ಹೃದ್ಯದುಚಿತ ವತ್ರದ ರಸಚಿತ್ರದ ಮಾಳಾಕರ್ಮದ ನರ್ಮದ ಸಖಿಯರ ಬಿನದದಿಂದವಲಸಿಕೆಗಳೆವಳ್ (ಪುಷ್ಪಪು. ೪-೧೭). 'ಆತೋದ್ಯ' ವರಾ.
[ ಸಂ. ]

**ತೋಪಡ₁**, ತೋಪರ, ತೋಬಡ (ನಾ). ೧. ಮರ ಅಥವಾ ಲೋಹ ವನ್ನು ಸಮಗೊಳಿಸಲು ಬಳಸುವ ಸಾಧನ ; ಉಜ್ಜುಗೊರಡು ; ಹತ್ತರಿ : ತೋಪಡ ಹೊಡೆಯಬೇಕಾದ ಲೋಹವನ್ನು ಒಂದು ಮೇಜಿನ ಮೇಲಿಟ್ಟು ಮೇಜೇ ಹಿಂದಕ್ಕೂ ಮುಂದಕ್ಕೂ ವಿದ್ಯುತ್ತಿನ ಬಲದಿಂದ ಓಡಾ ಡುವ ಹಾಗೆ ಮಾಡುತ್ತಾರೆ (ಶಿಲ್ಪನಾ. ೧೯೩). ೨. (ಆಲಂ) ಅನುತ್ತೀರ್ಣತೆ; ಸೋಲು : ಡ್ರಾಯಿಂಗ್ ಪರೀಕ್ಷೇಲಿ ನನಗೆ ತೋಪಡ ಆದರೆ ನಿಮಗೆ ತುಂಬಾ ಸಂತೋಷವೇನೋ (ಸ್ವಾಮಿಸ್ನೇ. ೩೦). ತೋಪರ : ೧. ಆವರು ತೋಪರ ಹಾಕಿ ಮರಗಳನ್ನು ನಯಮಾಡಿದರು (ಗಲಿಪ್ತ. ೯೯). ತೋಬಡ: ೧. ಬೈರಿಗೆಯ ಅಲಗು; ಕೋಬಡದ ಉಳಿಯಲಗು; ಪಟಕಾರು, ಮೊ.ಗಳ ಕೊನೆಗತ್ತರಿ. ಕಡಿವಾಣ (Bit. ಇಂಕನ್ನ).
[ ←ತೆಲು. ಕೋವಡ, ತ್ರೋವು ]

**ತೋಪಡ₂** 'ತೋಬರಿ' ನೋ.

**ತೋಪರ** 'ತೋಪಡ₁' ನೋ.

**ತೋಪಿ** 'ಟೋಪಿ' ನೋ.

**ತೋಪು₁**, ತೋಹು₁ (ನಾ). ಮರಗಳ ಗುಂಪು,–ಸಮೂಹ : ಇಂತು ಮನಂಗೊಳಿಪ ಮಾವಿನ ತೋಪಂ ಕಂಡು ಪೊಂಗಿ ಪೊಚ್ಚೆಯೇಱ್ ಮಲ್ಲ ನೆಟ್ಟಂದಾ ವನಮನಾಶ್ರಯಿಸಿಕೊಂಡಾನನಂತಕಾಲವಿರಲ್ (ಉದ್ಭಟ. ೬-೧೩ ಪ) ; ಗಂಧರ್ವಸುಭಟರಿಗೆ ಕುರುಪತಿಯ ಸುಭಟರಿಗೆ ತೊಡಕಿತು ಕೋಟಿ ತೋಪಿನಲಿ (ಕುಮ್ಕಾ.ಆ. ೧೮-೨೫) ; ತಾಪವನು ಹಿಂಗಿಸುವಶೋಕೆಯ ತೋಪಿನಲಿ ಸರಮೆ ತ್ರಿಜಟೆಯರ ಕಾಪಿನಿಂದಿರಿಸಿದನು ಕೊರವೆಯ ರಾಯನಂಗನೆಯ (ತೊರರಾ. ೩-೧೧-೪೪) ; ನರಸರಾಜನೂ ಶ್ರೀ ಪರಮೇಶ್ವರ ಪ್ರೀತಿಯಾಗಿ . . . ಬಾವಿಯನೂ ಆಗುಸಿ ಮಾವಿನ ತೋಪನು ಯಿಕ್ಕಿಸ್ಸನು (ಶಾಇಇ. IX-ii, ೪೭೬-೨೩ ; 1509) ; ಆ ಪತಿವ್ರತೆಯಪ್ಪ ಖಗಿಯೂ ತೋಪಿನಲಿ ಪತಿಯೊಡನೆ ಸಂಗಿಸಿ . . . ಗರ್ಭ ಧರಿಸಿ (ನಿಘಾಗ. ೧೩-೧೩-೩೪) ; ಇಂದ್ರನ ತೋಳ್ಗಳಂದೊಪ್ಪಿದವುಯೆಳ ನೀರ್ವೊತ್ತ ತೆಂಗಿನ ತೋಪುಗಳ ತೆಱದಿ (ಸಾಳ್ವಭಾ. ೩೩-೬೦) ; ಮಾವಿನ ಮರಗಳಂ ಹಾಕಿ ತೋಪು ಮಾಡಿ ಯಾವ ಪುರುಷನು ಸಲಹುವನೊ ಆ ಪುರುಷನು . . . ಸದ್ಗತಿಯನ್ನೆದಿ ಸಂತೋಷಪಡುವನು (ಶಾಗಂಧಿ. ೪೩೪-೧೫) ; ಖಗಗಳುಲಿವ ವಿವಿಧ ಸ್ವನದ ಮೇಳ ತೋಪ ತುಂಬಿದ (ಮಾಂದೀ. ೯-೧೭). ತೋಹು₁ : ವನೆ ನೆರೆಯೊಳಿವ ತೋಹುಗಳು ವಿವಿಧವೃಕ್ಷಗಳು ಸ್ಥಿರ ಜೀವನಕೆ ಹಸುರುಗುಡಿಯನೆತ್ತಿ (ಭಾರಂಗ. ೬೩).
[ ದೇ. ≡ ತಮಿ. ಮಲ. ತೋಪ್ಪು ; ತುಳು. ತೆಲು. ಕೋವು ]

**ತೋಪು₂** 'ತೋರ್ಪು' ನೋ.

**ತೋಪು₃**, ಟೋಪು₁, ತೋಫು (ನಾ). ೧. ಗುಂಡು ಇಟ್ಟು ಹೊಡೆ ಯುವ ಸಾಧನ ; ಫಿರಂಗಿ : ಕರಮೆಸೆವ ಕಾವಿ ಮಂಜಟಗೆ ತೋಪು ಗಳಿಂದೆ ಭರದಿ ಬಾಸಣಿಸಿವ ಬಲ್ಲಾಳದಟ್ಟಿಯೊಳಗುರುಮೋದದಿಂ ಬರ್ಪವರ್ ಕೆಲರ್ (ಅರಾಜ. ೪-೨೩) ; ತೋಪು ತುಬಾಕಿಗಳು ಇಲ್ಲದಾಗ ಕಾಳಗದಲ್ಲಿ ಆನೆಗಳನ್ನು ಉಪಯೋಗಿಸುತ್ತಿದ್ದರು (ಮುಂಬಯಿ. ೪-೨೩) ;

ತೋಪು ತಂಬಾಕಿ, ಕುರುಳಿ ಪಿಸ್ತೂಲಬಾಕ ಸಹಿತ ನಡುವಿನಾಗ (ಕನ್ನಜಾ. ೮೮). **ಟೋಪು$_1$**: ೧. ಸರ್ವ್ವೋಹದಿಂದೊಪ್ಪಿಸುತೆ ಗುರುವಾದಕಂ ಜನಪನಾಗಳ್ ಟೋಪುಗಳನುಡಾವಿಸಿದ ಬಳಿಕನುನಯಂ ಚ ರ ಗ ಣ ದ ತಿಂಥಿಣಿಗೆ (ಮಹಾವಿ. ೨೨-೮೨). **ತೋಪು**: ೧. ಕೆಲವು ಜಹಜಿನಲ್ಲಿ ಎಪ್ಪತ್ತೆರಡು ತೋಪು ಇತ್ತು (ರಾಜೇಂದ್ರ. ೧೦೫); ನಾಡ ಸಂರಕ್ಷಣೆಗೆ ತೋಪು ಇರದಿರಲು ನಾಡಿಗೊಂದಿರಬೇಕು ಬಯ್ಯುವಾ ಮುದುಕಿ (ನಿರಾಶ. ೧೭೯-೨). ೨. ಗೌರವಕ್ಕೋಸ್ಕರವಾಗಿ ಫಿರಂಗಿಯನ್ನು ಹೊಡೆಯುವುದು,- ಹಾರಿಸುವುದು; ಫಿರಂಗಿ ಮರ್ಯಾದೆ: ಖಾವಂದರಿಗೆ ಕ್ರಮವಾಗಿ- ತೋಪು ಮುಂತಾದ ಮರ್ಯಾದೆಗಳು ನಡೆದುವು (ಮಹಾವಂ. II, ೪೩).
[ ←ಹಿಂ. ತೋಪ್; ತುರ್ಕೀ, ಮರಾ. ತೋಫ್ ]

**ತೋಪುಖಾನಿ** 'ತೋಫಖಾನೆ' ನೋ.

**ತೋಪೊಳೆ** (ಕ್ರಿ). ಚೆನ್ನಾಗಿ ಹೊಳೆ,- ಮಿರುಗು (?) : ತಾರಾಪತಿಯು [ಯು] ಸುತೆಯು ತನ್ನಣುಗಂಗೆ ಶ್ರೀಫಲಪಯೋಧರಂಗಳನು ಪಾನಂಗೈಸಿ ತೈಲವಂ ಪೂಸಿಯೆರೆದು ತೋಪೊಳೆವ ಪೊಂದೊಟ್ಟಿಲೊಳಗಿಟ್ಟು . . . ಸಲಹುತಿರ್ದಳು (ಸವಪೂ. ೦೫-೪೭). [ <ತೋಱು + ಪೊಳೆ$_1$ ]

**ತೋಫಖಾನೆ,** ತೋಪುಖಾನಿ (ನಾ). ಮದ್ದುಗುಂಡುಗಳ ಸಂಗ್ರಹಾಲಯ,- ಗೋದಾಮು: ಜಪಾನಿಗಳಿಂದ ತೋಫಖಾನೆಯ ಗುಂಡುಗಳು ಹಾರಹತ್ತಿದ್ದುವು (ಪ್ರಬಸ. ೭೪). **ತೋಪುಖಾನಿ**: ತೋಪು ಖಾನಿ ಸನ್ನಾಹತಂತ್ರ ಪ್ರಯೋಗಮುಖದಿಂ ಫೌಜಂ ಮದೆಗೆಡಿಸಿ (ಕೆಳನೃ ೮-೧೦).
[ ←ಮರಾ. ತೋಫ್ ಖಾನಾ; ಹಿಂ. ತೋಪ್‌ಖಾನಾ; ಪಾರ. ತೋಪ್‌ಖಾನಹ್ ]

**ತೋಫು** 'ತೋಪ್ಪು$_3$' ನೋ.

**ತೋಬಡ** 'ತೋಪಡ$_1$' ನೋ.

**ತೋಬರ** 'ತೋಬರಿ' ನೋ.

**ತೋಬರಿ,** ತೋಪಡ$_2$, ತೋಬರ (ನಾ). ಕುದುರೆಯ ಬಾಯಿಗೆ ಕಟ್ಟುವ ಕಡಲೆಯ ಅಥವಾ ಹುರುಳಿಯ ಚೀಲ; ಮುಖ ಚೀಲ: ಡೋರರು . . . ಕೊಗಲಿನ ಬುದ್ದಲಿ, ಕುದುರೆಯ ತೋಬರಿ, ಲಗಾಮು, ಜೀನು ಮುಂತಾದ ತೊಗಲಿನ ಸಾಮಾನುಗಳನ್ನು ಮಾಡುವರು (ಕಭಾಗ. ೨೦೯); ತೋಬರಿಯಲ್ಲಿ ಕಡಲೆಯನ್ನು ಹಾಕಿ ಆ ತೋಬರಿಯನ್ನು ಕುದುರೆಗೆ ತೋರಿಸಿ . . . ಅದನ್ನು ಹಿಡಕೊಂಡದ್ದು ಅವನಿಗೆ ನೆನಪಾಯಿತು (ಮುಂಬಯಿ. ೪-೮೦). **ತೋಪಡ$_2$**: ಕೂಸಪ್ಪ... ಹುರುಳಿ ಇಸುಗೊಂಡ. ತೋಪಡದ ಚೀಲಕ್ಕೆ ತುಂಬಿ ಇಟ್ಟುಗೊಂಡ (ದಿನಾರಿ. ೩೭). **ತೋಬರ**: (೬).
[ ←ಪಾರ. ತೋಬರಾ, ತುಬರಾ; ಹಿಂ. ತೋಬಡಾ; ಮರಾ. ತೋಬ್ರಾ, ತೋಬರಾ ]

**ತೋಮ** (ನಾ). ಗುಂಪು; ಸಮೂಹ; ನೆರವಿ: "ಸ್ತೋಮ – ತೋಮ" (ಕಮುದ. ೨೭೨ ಪ್ರಯೋ); "ಬಂಬಲ್, ತುಱುಗಲ್ . . . ತೋಮಂ, ತಿಮ್ಮಲ್, ಗುಪ್ಪಿ, ಗೊಂದಣ (ಉಂದಲ್) – ಈ ೪೦ ಸಮೂಹಂ" (ಕಶಶಾ. ೫೭–೨೨೨). [ <ಸಂ. ಸ್ತೋಮ ]

**ತೋಮರ** (ನಾ). ೧. ತುದಿಯಲ್ಲಿ ಮೊನಚಾಗಿರುವ ಈಟಿಯಂತಹ ಒಂದು ಬಗೆಯ ಆಯುಧ: "ತೋಮರ ಪಿಂಡಿವಾಳ ಪಟ್ಟಿಶ . . . ಕೈದುಗಳ ಭೇದವುಕ್ಕುಂ" (ಮಂಗರಾ. ೮೮-೩೮); ಶಕ್ತಿ ತೋಮರ ಮುಸಲ . . . . ವಿವಿಧಾಯುಧಂಗಳೊಳಮತಿಪ್ರವೀಣನುಂ (ಪಂಪಭಾ. ೨-೩೪ ವ); ನಾಳಿಯ ಕೋಲ್ ಜವನಾಳಿವೆಂದಿನಂ ಕವಿದುವು ತೋಮರಂ ಜವನ ದಾಮರವಾದುವು (ಪಂಪರಾಮಾ. ೦೫-೭೦); ಶಶಿಕಾಂತದ ಶಿಲಾತಳದೊಳ್ ಪೊರಳುತಿರ್ಪ ಪರಮೆಗೆ ಅಶೋಕೆ ಸಶೋಕೆ ಮಾಮರಂ ತೋಮರಂ ಬಿಲ್ಲಂಗಳು ಬಳಿಯಿಂಗಳಂ (ನಂಬಿರ. ೧೭-೨೩); ಆ ಮಹಾಸಂಗ್ರಾಮ ಮುಖದಲಿ ತೋಮರದ ಕಾಣಿಕೆಗಳಲಿ ಸುಪ್ರೇಮವನು ಬೆಸಸುವುದು ದುರಿಯೋಧನನ ಮತವೆಂದ (ಕುವ್ಯಾಉ. ೧೧-೪); ಆ ಮರುತ್ತನ ಯಜ್ಞಕೃತಂದಾ ಮರುದ್ಗಣ ಮುನಿಗಣಂಗಳ ತೋಮರದ ತೋಟಿಯಲಿ ಕೆದಱಿತು ಕದನಕೇಳಿಯಲಿ (ಕೊರಕಾ. ೧-೮-೩೮); ಕುಂತ ತೋಮರ ಖಡ್ಗ ಸುರಗಿ ಭಲ್ಲೆಹಗಳ ಕಾಂತಿ ಮುಸುಕೆ ಚೌದೆಸೆಯ (ಕಂಸವಿ. ೦೫-೨೦); ಹೆರರ ಕೊಲ್ಲಲು ಕತ್ತಿ ಪರಶು ತೋಮರ ಬೇಕು (ಶಾಂಕಿಜ. ೪೦-೫). ೨. ತುದಿಯಲ್ಲಿ ಅರ್ಧಚಂದ್ರಾಕೃತಿಯಲ್ಲಿರುವ ಒಂದು ಬಗೆಯ ಬಾಣ: ಕಿರಣತೋಮರದಕ್ಷಿಣೋರುಸ್ಫುರಣತಿಮಿರ ಮೃಗೀಕದಂಬಕ ತರಣಿ ನೋಕಿದನುದಯಶೈಲಕೆ ರತುನಮಯ ರಥವ (ಕುವ್ಯಾಕ. ೮-೧೫); ಮೂಱಲಿಸಿ ಖಳನಿಟ್ಟನಿಷ್ಪತ್ತೈದು ತೋಮರಗಳಲಿ ಜೀವವಕಾಯ್ದುಕೊಳ್ಳೆನುತ (ನಿಭಾಗ. ೧೦-೭೯-೩೮). ೩. ಲೋಹದ ಗದೆ. P ಈ ಆಯುಧದ ಆಕಾರವಿಷಯದಲ್ಲಿ ಭಿನ್ನಾಭಿಪ್ರಾಯವಿದೆ ೪. [ಛಂದ] ಒಂದು ವಿಧವಾದ ರಗಳೆ: ವೃತ್ತಜಾತಿ ಸಮುಚ್ಚಯದಲ್ಲಿ ಅಸಿ, ಅಶನಿ, ತೋಮರ . . . ಕ್ಷುರಪ್ರ ಇತ್ಯಾದಿ ಆಯುಧಗಳ ಹೆಸರುಗಳು ಪಂಚಮಾತ್ರಾಗಣ ನಿರ್ದೇಶಕ್ಕಾಗಿ ಪ್ರಯೋಗವಾಗಿವೆ . . . ಆದ್ದರಿಂದ 'ತೋಮರ' ಎಂದರೆ ಪಂಚ ಮಾತ್ರಾಗಣವೆಂದು ಸ್ಪಷ್ಟ (ಛಂದೋವಿ. ಪಿ. ೨). 'ತೋಮರರಗಳೆ' ಪರಾ. [ ಸಂ. ]

**ತೋಮರರಗಳೆ** (ನಾ). [ಛಂದ] ರಗಳೆಯ ಭೇದಗಳಲ್ಲಿ ಒಂದು; ಲಲಿತ ಬರಗಳೆ ಪ್ರತಿಪಾದದಲ್ಲಿಯೂ ಐದು ಮಾತ್ರೆಯ ನಾಲ್ಕು ಗಣಗಳು ಇರುವ ರಗಳೆ: ತೋಮರರಗಳೆ-ಶ್ರೀ ಮದರುಹಚ್ಚರಣ ಸರಸಿರುಹಭೃಂಗನಂ ಭೂಮಿ ಕೀರ್ತ್ತಿಸೆ ನೆಗಳ್ದ ಗುಣಗಣೋತ್ತುಂಗನಂ (ಸೌಇಇ. IX-ii, ೦೦೭-೦೭; 1055); ತೋಮರರಗಳೆಯೆಂದರೆ ಪಂಚಕಲದ ಗಣಗಳಿಂದ ರಚಿತವಾದ ರಗಳೆಯೆಂದು ಅರ್ಥ . . . ಇಂದ್ರಕೀರ್ತಿಯನ್ನು ವರ್ಣಿಸುವ ಪದ್ಯಗಳು ಲಲಿತರಗಳೆಯಲ್ಲಿದ್ದು ಅಲ್ಲಿ ಅವುಗಳನ್ನು 'ತೋಮರರಗಳೆ' ಎಂದು ಹೆಸರಿಸಲಾಗಿದೆ (ಛಂದೋವಿ. ಪಿ. ೨). [ ತೋಮರ + ರಗಳೆ ]

**ತೋಮಾಲೆ** (ನಾ). ದೊಡ್ಡ ಹಾರ: ಆಜ್ಞಾಧಾರಕರಾಗಿರುವ ಮಠದ ಬ್ರಾಹ್ಮರುಗೆ ಮೊದಲು ತೀರ್ಥ ತೋಮಾಲೆ ಮೊದಲಾದ ಸಕಲ ಮರಿಯಾದೆಗಳನ್ನು ನಡಸುವದು (ಮೈಅರಿ. ೦೯೩೮, ೦೯-೧೧; 1811); ಪಂಡಿತ ಪೆರುಮಲೆಯವರು ಅನಂತರ ಮಗಳ ಕೈಗೆ ನವಮಲ್ಲಿಕಾ ತೋಮಾಲೆಯನ್ನು ಕೊಟ್ಟರು (ಶಾಂತಲಾ. ೧೦೯). [ <ತೋರ + ಮಾಲೆ ]

**ತೋಮೆ** 'ತೊಂಬೆ$_1$' ನೋ.

**ತೋಯ$_1$** 'ತೊಪ್ಪೆ' ನೋ.

**ತೋಯ$_2$** (ನಾ). ೧. ನೀರು; ಉದಕ; ಜಲ: "ಸಲಿಲಂ ಜೀವನಮಂಬು ತೋಯಮುಮುದಕಂ" (ವಸ್ತುಕೋ. ೨೨-೧); ಎನ್ನ ಮಾತಿಂಗೆಲೆ ಕೌಂತೇಯ ಮಱುಮಾತನಿತ್ತು ಮದೀಯ ಸರೋವರದ ತೋಯಮುಮಂ ಕುಡಿ (ಪಂಪಭಾ. ೮-೩೦); ಚತುಃಕೋಣಕಳಶಭರಿತತೋಯದಿನಭಿಷೇಕಂಗೆಯ್ದು (ಆಪು. ೪-೭೦ ವ); ಕಾಶಿಯ ನದೀತೋಯಂಗಳಂ ಮಂಗಳೋತ್ಸವದಿಂ ಭೂವರ ವೃಂದಮಂ ನಿಲಿಸಿ ಸಾಲ್ಗೊಂಬಂತುಟೋರೋರ್ವಱಿದವನಂದ್ಯೆದಿಸಿದಂ ಸುವರ್ಣಘಟದಿಂ (ರಾಜಶೇ. ೩-೩೦); ಶೀತಲಸುಗಂಧಮಯ . . . ವಿಮಲತೋಯಮಿದು (ಶ್ರೀರಾಮಾ. ೧೭೭-೪೨೨). ೨. [ಛಂದ] ಒಂದು ಅಕ್ಷರಗಣ; ಯಗಣ (ᑌ - -): ಗುರು ಮೂಱಾಗಿರೆ ಧಾತ್ರಿ ಮುಂತೆರಡು ಬಿನ್ನಂ ತೋಯಂ (ಛಂದೋಂಬು. ೧-೩೮). [ ಸಂ. ]

**ತೋಯಕುಂಭ** (ನಾ). ನೀರಿನ ಕೊಡ,- ಕಳಶ: ದೇವಮಹೀರುಹಪ್ರಜದೊಳಂ ದೇವಾಪಗಾತೋಯಕುಂಭದೊಳಂ ದೇವವರಂ ಸ್ವಪಂಗೆಯೆ (ಜಗವಿ. ೩-೧೭). [ ತೋಯ$_2$ + ಕುಂಭ ]

**ತೋಯಜ** (ಗುಂ). ೧. ನೀರಿನಲ್ಲಿ ಹುಟ್ಟಿದ. (ನಾ). ೨. ಕಮಲ ; ತಾವರೆ : ಸುಭಟರ ಚರಣತೋಯಜದ ಘಾತದಿಂ ಕೆಂಧೂಳಿ ಮಸಗೆ (ಧಾವಚಿಂ. ೫-೧೮) ; ತೋಯಜವೆಂಬ ಪುಷ್ಪದ ಪೆಸರವರೊಳು . . . ಇರಿಸು ಕಂಡ್ಯ ಎನ್ನನು (ಕನಳ. ೦೫೦-೨). [ ಸಂ. ]

**ತೋಯಜಗರ್ಭ** (ನಾ). ೧. ಕಮಲದ ಒಳಭಾಗ : ಎಲೆ ಮಧುವ್ರತ ನೀನದ ಸೋಂಕೆ ನಿನ್ನ ಕೇಳ್ ತೋಯಜಗರ್ಭಮೆಂದೆನಿಪ ಬಂಧನಮಂದಿರ ಕಿಂದು ಸೇರಿಪೆಂ (ಶಾಕುಂತ.೯೧-೧೫೧). ೨. ಕಮಲದಲ್ಲಿ ಜನ್ಮತಾಳಿದವನು; ಬ್ರಹ್ಮ : ತೋಯಜಗರ್ಭನಾದಿಮುನಿಮುಖ್ಯಮತಪ್ರಕಟೀಕೃತಾಖಿಳಾ ಮ್ನಾಯಮಂ . . . ಒಲ್ದು ದೀರ್ಘಾಯುಮನೀಗೆ (ಪಂಚತಂ. ೦-೯). [ ತೋಯಜ + ಗರ್ಭ ]

**ತೋಯಜನಾಭ** (ನಾ). ಹೊಕ್ಕುಳಲ್ಲಿ ತಾವರೆಯನ್ನುಳ್ಳವನು; ವಿಷ್ಣು: ತೋಯಜನಾಭನನಂತಸಹಾಯಂ ನಲಿದಿಂತು ವತ್ಸಕುಲಮಂ ಕಾದಂ (ಜಗವಿ. ೩-೭೮). [ ಸಂ. (ತೋಯಜ + ನಾಭಿ + -) ]

**ತೋಯಜಪ್ರಭವ** (ನಾ). = ತೋಯಜಗರ್ಭ೨ : ಅಂಬುಜಾಂಬಕ ತೋಯಜಪ್ರಭವರು ಸುಧಾಶನನಾಯಕಾದಿ ದಿಶಾಧಿಪರು . . . ಬಂದರೀಶ ನನೋಲೈಸಲೆಂದು (ಬಸಪು. ೧-೪೧). [ ತೋಯಜ + ಪ್ರಭವ ]

**ತೋಯಜಭವ** (ನಾ). = ತೋಯಜಗರ್ಭ ೨. [ ಸಂ. ]

**ತೋಯಜಮಿತ್ರ** (ನಾ). ತಾವರೆಯ ಸ್ನೇಹಿತ ; ಸೂರ್ಯ : ಮತ್ತಮಾ ಗ್ರೀಷ್ಮಕಾಲದೊಳ್ ತೋಯಜಮಿತ್ರನೇೞ್ಗೆವಡೆದೊಪ್ಪಿರೆ (ಉದ್ಭಟ. ೯-೮೭). [ ತೋಯಜ + ಮಿತ್ರ ]

**ತೋಯಜಷಂಡ** (ನಾ). ೧. ತಾವರೆಗಳ ಸಮೂಹ. ೨. ತಾವರೆಗಳ ಗುಂಪನ್ನುಳ್ಳುದು;ಸರೋವರ: ತೋಯಜಷಂಡಮನಿದನಾನಾಯತಿಯಿಂ ಕಾವೆನೆನ್ನ ಮಾತಿಂಗೆಲೆ ಕೌಂತೇಯ ಮಱುಮಾತನಿತ್ತು ಮದೀಯ ಸರೋವರದ ತೋಯಮಂ ಕುಡಿ (ಪಂಪಭಾ. ೮-೩೯). [ ತೋಯಜ + ಷಂಡ ]

**ತೋಯಜಾಕರ** (ನಾ). ಕಮಲಗಳಿರುವ ಸರೋವರ ; ಕಮಲಾಕರ : ತೋಯಜಾಕರದಂತೆ ಪದ್ಮಾಲಯಂ ಶಿವನ ಕಾಯದಂದದೆ ಸರ್ವಮಂಗಳಾಲಂಕೃತಂ ಕಾಯಜನ ಪಿತನಂತನಂತಮಣಿರಂಜಿತದೊಳರಮನೆ ವಿರಾಜಿಸಿದುದು (ಚಬಸು. ೫-೩೩). [ ತೋಯಜ + ಆಕರ$_2$ ]

**ತೋಯಜಾಕ್ಷ** (ನಾ). ಕಮಲದಂತೆ ಕಣ್ಣುಳ್ಳವನು : ವಿಷ್ಣು ; ಅಂತಪುರ ಮಾವಳ್ಗೆ ವನಮಾಲಿಕಾಲಂಕೃತಂ ತೋಯಜಾಕ್ಷವಕ್ಷಸ್ಥಲಂ . . . ಆ ಲಕ್ಷ್ಮೀದೇವಿ ಸಂತತಮುಮನೊಳ್ಸುಧಾದೃಷ್ಟಿಯಂತಿಹ ಕಟಾಕ್ಷವೃಷ್ಟಿಯ ಸುರಿಸಲಿ (ಕೀಪಚಾ. ೧-೯). [ ಸಂ. (ತೋಯಜ + ಅಕ್ಷಿ + -) ]

**ತೋಯಜಾನನೆ** (ನಾ). ಕಮಲದಂತೆ ಮುಖವುಳ್ಳವಳು; ಕಮಲಮುಖಿ: ಜೀಯ ನಿಮಗಂ ನಿನ್ನೆ ನಮಿಸಿದ ತೋಯಜಾನನೆ ಇಂದು ಮರಣಂಗೆಯ್ದಳ್ (ಬಸಪು. ೩೨-೪೨). [ ಸಂ. ತೋಯಜಾನನಾ (ತೋಯಜ+ಆನನ + -)]

**ತೋಯಜಾರಿ** (ನಾ). ಕಮಲಕ್ಕೆ ಶತ್ರುವಾದವನು ; ಚಂದ್ರ. [ ತೋಯಜ + ಅರಿ$_2$ ]

**ತೋಯದ** (ನಾ). ನೀರನ್ನು ನೀಡುವುದು ; ಮೋಡ ; ಮುಗಿಲು : ನಡೆದನಾ ದೈತ್ಯೇಶ್ವರಂ, ದಿವಂಗತ ಸುತನ ಸತಿಯ ಶೋಕಾಗ್ನಿಯಂ ತವಿಪ ಪೆರ್ಮಳೆಗಳಂ ಕರೆಯುವ ಮನೋನಿಶ್ಚಯದ ತೋಯದಂಗಳಂ ಪೊತ್ತುಯ್ವ ಕಾರ್ಗಾಳಿಯೋಲ್ (ಶ್ರೀರಾಮ. ೭೩೯-೧೫೧). [ ಸಂ. ]

**ತೋಯಧಿ** (ನಾ). ಕಡಲು; ಸಮುದ್ರ: "ರತ್ನಾಕರಃ . . . ತೋಯಧಿಃ . . . ಸಮುದ್ರಃ – ಈ ೧೨ ಸಮುದ್ರಂ" (ಹಲಾಯು. ೧೦೭-೩೦) ; ಆಯುಂ ಶ್ರೀಯುಂ . . . ನೃಪತಿ ನಿನಗೆ ನಿಜಸಂತತಿಯುಂ ನ್ಯಾಯದೆ ಪೆರ್ಚುವುದಕ್ಕೀ ತೋಯಧಿ ಧರ[ಣೀಧ]ರಾಧರ ಸ್ಥಿತಿವರೆಗಂ (ಕವಿರಾ. ೩-೨೦೭) ; ಶ್ರೀಯನರಾತಿಬಳಾಸ್ಯಕ್ರೋಯಧಿಯೊಳ್ ಪಡೆವ ವೀರನು ಉದರಿಗಳನಾತ್ಮೀಯಪದಸ್ಫುರಿತನಖಚ್ಛಾಯೆಗಳೊಳ್ ನಿಱಿಸಿ ನಿಂದ ಗಂಡಂ ಹರಿಗಂ (ಪಂಪಭಾ. ೩-೧); ಶ್ರೀಯಂ ನಿಜಪಾದದ್ವಯ ತೋಯಧಿಯೊಳ್ ತಾಳ್ದು (ಅಭಿಮು. ೦-೧). [ ಸಂ. ]

**ತೋಯನಿಧಾನ** (ನಾ). = ತೋಯಧಿ : ತೋಯನಿಧಾನಫೇನವಿಶದೋತ್ತಮವಸ್ತ್ರಮನುಟ್ಟು ಪುಷ್ಪಮಾಲಾಯುತೆಯಾಗಿ . . . ಪೊಱಮಟ್ಟಳ್ (ಪಂಚತಂ. ೭೪-೫). [ ತೋಯ$_2$ + ನಿಧಾನ ]

**ತೋಯನಿಧಿ** (ನಾ). = ತೋಯಧಿ : ಶ್ರೀಯ ಚಾಮರದ (ಸಾಟಿಗಳಂ)– ತಿಳಿಗೊಳಂಗಳಂ ತೋಯನಿಧಿಯ (ಪೆರ್ಗಱೆಯ)–ಪಿರಿಯ ಸಾಟಿಗಳಂ . . . ಪೋಲ್ವೆಯುಪ್ಪ ಮುಗಿಲಿಂದೆ ಮಾೞೆ . . . ಕಱೆಗುಂ (ಅಭಿಮು. ೮-೧೨). [ ತೋಯ$_2$ + ನಿಧಿ ]

**ತೋಯಪಾನ** (ನಾ). ನೀರನ್ನು ಕುಡಿಯುವಿಕೆ ; ಜಲಪಾನ : ಬಾಯಿ ಗೇಳಸುತಿರ್ದ ನಾವ್ ತತ್ತೋಯಪಾನಕೆ ತಿರುಗಿ ಕಂಡೆವು ರಾಯನಂಘ್ರಿ ಗಳಾಣೆಯೆಂದರು ಶಬರರನಿಲಜಗೆ (ಕುವ್ಯಾಗ. ೪-೫೨).
[ ತೋಯ$_2$ + ಪಾನ$_2$ ]

**ತೋಯಪಿಪ್ಪಲಿ** (ನಾ). ನೀರಂ ಹಿಪ್ಪಲಿ [ ತೋಯ$_2$ + ಪಿಪ್ಪಲಿ ]

**ತೋಯಭೃತ್ತು** (ನಾ). ನೀರನ್ನು ಧರಿಸಿರುವುದಂ ; ಮೋಡ : ಅಪೂರ್ವ ತೋಯಭೃದ್ವಿಸರದೆ ವಾಃಕಣಂಗಳುಗುತಂದವುವೆಂದೆ ಪೊಡರ್ಪುಗೆಯ್ದು ಪೂರಿಸುವಳಿಪಿಂದೆ ಪುಷ್ಕರಮನೆತ್ತಿದುದೆಂದು ನಭಕ್ಕದೊಂದಿಭಂ (ಚಂದ್ರಪು. ೯-೭೫). [ ಸಂ. ತೋಯಭೃತ್ ]

**ತೋಯರಾಶಿ** (ನಾ). ಜಲರಾಶಿ ; ಸಮುದ್ರ : ಮಂತ್ರಿವರ್ಗದುಜ್ಜ್ವಲ ನವರತ್ನಭೂಷಣಕಿರೀಟಹಟದ್ರುಚಿಯಿಂದದೇಂ ಪಳಂಚಲೆದುದೊ ರಾಜ ರಾಜಸಭೆ ಕುಂಭಜನೀಂಟಿದ ತೋಯರಾಶಿಯಂ (ಪಂಪರಾಮಾ. ೭-೭೪).
[ ತೋಯ$_2$ + ರಾಶಿ ]

**ತೋಯರುಹ** (ನಾ). = ತೋಯಜ ೨. 'ತೋಯರುಹನಾಭ' ಪದಾ.
[ ಸಂ. ]

**ತೋಯರುಹನಾಭ** (ನಾ). = ತೋಯಜನಾಭ : ತೋಯರುಹನಾಭ ನೈಂದ್ರಾಗ್ನೇಯಾಂತಕಕೌಣಪಾಸ್ತ್ರತತಿಯಿಂದಿಸೆ (ಜಗವಿ. ೦೨-೪೧).
[ ಸಂ. (ತೋಯರುಹ + ನಾಭಿ + – ) ]

**ತೋಯಾಕರ** (ನಾ). ನೀರಿಗೆ ಆವಾಸಸ್ಥಾನವಾದುದು; ಜಲಾಶಯಂ : ಸರೋವರ : ಪರಮಶ್ರೀಸಂತತಾವಾಸದೊಳಖಿಲಸುಖಸ್ವಚ್ಛಸಂಪನ್ನ ತೋಯಾಕರದೊಳ್ . . . ಸೌಂದರಕೇಲೀಹಂಸನಾದಂ (ಆದಿಪು. ೧೭-೭೫).
[ ತೋಯ$_2$ + ಆಕರ$_2$ ]

**ತೋಯಾಧೀಶ** (ನಾ). ನೀರಿಗೆ ಒಡೆಯನಾದವನಂ ; ಜಲಾಧಿಪತಿ ; ವರುಣ : ಪವಮಾನಂ ದಹನಂ ವಾಸವ ತೋಯಾಧೀಶರೆಂಬಿವರ್ ಸಲೆ ರಾತ್ರಿಂದಿವಗಳೊಳೊಂದೊಂ(ದರೆ ?)ದುಂ ಜಾವವನಾಳ್ವರ್ (ಶೋಳೋಪ. ೪-೭೮). [ ತೋಯ$_2$ + ಅಧೀಶ ]

**ತೋಯಾಶಯ** (ನಾ). ನೀರಿಗೆ ಆಶ್ರಯವಾದುದಂ ; ಜಲಾಶಯಂ ; ಕೆರೆ : "ಹ್ರದಃ, ತೋಯಾಶಯಃ – ಈ ೨ ಮಡು" (ಹಲಾಯು. ೧೧೦-೪೮); ಮಾರ್ಗಾನೇಕ ತೋಯಾಶಯಮನುರುರಜಂ ಪೀರೆ ದಾನಪ್ಲವಂ ಪೂರಿಸೆ ತೋಱಿತ್ತತ್ತಮಾದಂ ಹರಣಭರಣಚಾತುರ್ಯಮಂ ಚಾತುರಂಗಂ (ಚಂದ್ರಪು. ೧೦-೩೦). [ ತೋಯ$_2$ + ಆಶಯ ]

**ತೋಯಿ** 'ತೊವ್ವೆ' ನೋ.

**ತೋಯಿಲ** (ನಾ). ಹೊಲಸಂನೀರು : ನಾಯಡಗು ನರಕನೆಳಯಂ ಮಾಯೆಯ ಕಣಿ ಬಿಡದ ಜಿಗುಟು ಪಾಪದ ಪುಂಜಂ ತೋಯಿಲಕುಟಿ ಪೊಲಗೆಱೆಯೆಂದಾಯತಿಯಿಂ ಬಗೆವರುಱೆವರಾ ಸೂಳೆಯರಂ (ಪಶಾರ. ೨೯೯). 'ತೋಕುಳಿ' ಪದಾ. [ ? ]

**ತೋಯಿಸು, ತೊಯಿಸು, ತೊಯ್ಯಿಸು, ತೊಯ್ಸು** (ಕ್ರಿ). ನೆನಸು ; ಒದ್ದೆಮಾಡು ; ತೇವವಾಗಿಸು : ರಸವಿಶೇಷದೊಳತಿವಿಮಲಸಿತವಸನ ತೋಯಿಸಿ ಅಗ್ನಿಯೊಳಗಿಡೆ ಪಸರಿಸುವುದು ಪ್ರಕಾಶ ನಸುಗುಂದದಲೆ ಸರ್ವತ್ರ (ಜಗದಾ. ೩೩೪) ; ಒಂದೇ ಉಸುರಿನಲ್ಲಿ ಮಕ್ಕಳಂತೆ ಅಳುತ್ತಾ ಕಣ್ಣೀರಿನಿಂದ ನನ್ನ ಕಾಲು ತೋಯಿಸಿದ (ಶಕಂಗ. ೧೮) ; ಅವನನ್ನು (ಆತ್ಮನನ್ನು) ಶಸ್ತ್ರಗಳು ಕತ್ತರಿಸಲಾಗುವುದಿಲ್ಲ . . . ಜಲವು ತೋಯಿಸ ಲಾಗುವುದಿಲ್ಲ (ಅನಾಸ. ೭) ; ಸಾರಕವೆಂದು ಈ ತೌಡು ಉಪಯೋಗಿಸುವ ದಾದಲ್ಲಿ, ತೋಯಿಸಿ ಹಾಕಬೇಕು (ಗೋಗ್ರಾಸ. ೭೮). **ತೊಯಿಸು** : ಓಕುಳಿಯ ನೀರನುೞಿ ಸೂಸುವ ಕೋವಿದಜನವಂ ನೂತ್ನಕಲಾಕೋವಿದೆ ಯತೊರ್ಯಿಸಿದರವರ್ದ ಪರಿವಾಳಜಲದಿಂ (ಉದ್ಭಟ. ೮-೭೩) ; **ಜೊಲ್ಲು** ಆಹಾರವನ್ನು ತೊಯಿಸುತ್ತದೆ (ವಮುಂಬಯಿ. ೪-೮೩). **ತೊಯ್ಯಿಸು** : ಮೇಘಜಲ ತೊಯ್ಯಿಸಿರೆ ತಳಿರುಗಳ (ಧ್ವನ್ಯಾಲೋ. ೬೭). **ತೊಯ್ಸು** : ಹರಿದು ಬಂದು ನನ್ನ ಮೈ ತೊಯ್ಸಲೆಂದೇ ನೀನಲ್ಲಿರುವೆ! (ಕಲ್ಲೋಲ. ೧೪-೮). [ ತೋ + – ಇಸು₃ ]

**ತೋಯು** 'ತೋ' ನೋ.

**ತೋಯೆ** 'ತೊವ್ವೆ' ನೋ.

**ತೋಯೇಜ** (ನಾ). = ತೋಯಜ ೨. 'ತೋಯೇಜಾಸನ' ಪರಾ.

[ ಸಂ. ]

**ತೋಯೇಜಾಸನ** (ನಾ). ಕಮಲವನ್ನು ಪೀಠವಾಗಿ ಉಳ್ಳವನು ; ಬ್ರಹ್ಮ: ತೋಯೇಜಾಸನನಿಂದ್ರ ರುದ್ರ ಧನಧರ್ ಮುಂತಪ್ಪ ದೇವೇಶರುಂ ಶ್ರೀಯುಂ ಬೇರುವ ನಿನ್ನ ಪಾದರಜಮಂ ಶೀರ್ಷಾಗ್ರದೊಳ್ಪೊತ್ತು (ಮ್ರುಸೂಮು. ೨-೩೮). [ತೋಯೇಜ + ಆಸನ]

**ತೋಯೋದ್ದೇಶ** (ನಾ). = ತೋಯಾಶಯಂ : ಅಷ್ಪದಿಷ್ಪ್ನಾಗರಾಜಿಗೆ ಮೆಯ್ಗಗ್ಗರ್ ಕೊಳಲ್ಕಜಂ ಸಮೆದ ತೋಯೋದ್ದೇಶವೋ ಸಂದೆಯಂ- ಬಗೆಗಾದತ್ತೆನಿಸಿರ್ದುದೇಂ ಪಿರಿದೊ ವೈಶಂಪಾಯನಾಬ್ಜಾಕರಂ (ಗದಾಯು. ೬-೧೦). [ ತೋಯ₁ + ಉದ್ದೇಶ ]

**ತೋಯೋದ್ಭವ** (ನಾ). ನೀರಿನಲ್ಲಿ ಹುಟ್ಟಿದುದು ; ಮುತ್ತು, ರತ್ನ ಮೊದಲಾದುವು : ಬುಧಂ . . . ಶಶಿಗೇಹದೊಳ್ ನೆಲಸೆ ಬಂಧುದ್ವೇಷಿ ತೋಯೋದ್ಭವದ್ರವಿಣಂ (ಜಾತತಿ. ೧೭-೩೪). [ ತೋಯ₁ + ಉದ್ಭವ ]

**ತೋಯೌಕಸ** (ನಾ). ನೀರಿನಲ್ಲಿ ಬದುಕುವ ಪ್ರಾಣಿ ; ಜಲಚರ : ಭೇಕ ಶುಕ್ತಿಕೆ . . . ಕಮಠ ಕಂಬು ಪ್ರಮುಖ ತೋಯೌಕಸಾಹ್ವಯ ದಿಂದೆ ರಾಜಿಸುತಿರ್ಪುದಂಬುನಿಧಿ (ಕಂಕದಾ. ೦-೩೦). [ಸಂ. ತೋಯೌಕಸ್]

**ತೋರ, ಥೋರ** (ನಾ). ೧. ಗಾತ್ರವಾದಂದಂ; ದಪ್ಪವಾದಂದು ; ಸ್ಥೂಲವಾದುದು : ಕಾಯ್ದ ಕರ್ಬೊನ್ನ ನಿಡಿಯವುಂ ತೋರಮುಮಪ್ಪ ಕೀಲ್ಗಳಿಂದಂ ಮೆಯ್ಯೆಲ್ಲಮುಂ ನಿರಂತರಮುರ್ಚಿ ಪೋಗಿ ನೆಲನಂ ತಾಪಿನಂ ಕೀಲಿಱಿಯೆಪಟ್ಟ ಮೆಯ್ಯನೊಡೆಯನಾಗಿಯುಂ (ವಡ್ಡಾರಾ. ೩೦-೭) ; ಮಾನದ ತೋರಿಹ ಆವಿಂಗೆ ಕೊಳಗದ ತೋರಿಹ ಕೆಚ್ಚಲು (ಅಪಡಂ. ೧೩-೪೮) ; ತೆಂಗಿನ ಕಾಯು ತೋರದ ಮೊಲೆವೊತ್ತ ಲತಾಂಗಿಯ . . . ಚೆಂದುಟಿಯನಿದನೆಮೋಹತರಂಗಿಣಿವೇಳ್ಳೆ (ಮೋಹತ. ೧-೩೭ ; ತೋರ ವಾಗಿರುತಿಹುದು ಪರ್ವತ ಧಾರುಣಿಯನದು ಹರಹಿಕೊಂಡೇ ದೂರದೀದಲಿ ನೋಡಿದಡೆ ಅಣುವಾಗಿ ಕಾಣಿಪುದು (ಜ್ಞಾನಸಿಂ. ೬-೨೦). ೨. ಗಾತ್ರ ; ಆಕಾರ : ತೋರದಲಿ ಕುಲಗಿರಿಯು ಸತ್ವದ ಸಾರದಲಿ ವಜ್ರವನು ದನಿಯಲಿ ಕಾರ ಬಜಸಿಡಿಲಂದವಿದನುಗಿದೊಂದು ಮಾಡಿದನು (ಕುಮ್ಮಾಭೀ. ೩-೧೮) ; ಕಣಿಕವನು ನಿಂಬೆಯ ಹಣ್ಣ ತೋರದುಂಡೆಯ ಮಾಡಿ (ಸೂಪಶಾ. ೧-೨೩); ಪಿರಿದಪ್ಪ ಕುಂಬಳಕಾಯ ತೋರದ ಮುತ್ತಿನಿರ ವಾಂತು ಮೆಱೆವ ಕಾವ್ಯಗಳು ಇರಲು ನಾ ಪೇಳ್ವೆ ನೆಲ್ಲಿಯಕಾಯ ತೋರದ ವರಮುತ್ತಿನಂತೀ ಕೃತಿಯ (ನಾಗಕು. ಪೀಠಿಕಾಸಂಧಿ. ೩೯); ೩. ಹೆಚ್ಚಳ ; ಆಧಿಕ್ಯ : ಮುರಿದೆರೆತ್ತಿ ಮೆಯ್ದುರಿದು ತೋರಮನಾಳ್ದು ಪೊದಟ್ದು ನೀಳ್ದ ಪಂಕರುಹ ಪರಾಗಮುಂ ಜವದೆ ಮಂದರಮಾಗೆ ಸರೋವರಾಬ್ಧಿಯಂ ಸ್ಮರಸುರವಲ್ಲಭಂ ಪೊಸೆದು ಪುಟ್ಟಿಸುವಿಂದುಗಳಂದದಿಂ (ಲೀಲಾವ. ೧೩-೧೩೩); (ಗಂ). ೪. ದಪ್ಪವಾದ ; ಸ್ಥೂಲವಾದ ; ಗಾತ್ರವಾದ : ಹೊಜ್ಜಾರ ಸಮರದೊಳ್ಮುರಾರಿ ಮಾರನಾಗಿ . . . ರಾಣಿ ವಾಸಭಣ್ಡಾರಮಂ ಪೆಚಿದು ತೋರ ಪಳಯಿಗೆ ಭಾಗಿಸ್ತಿ ತೊಱೆಬಡಗರೆನಾಡುವಿಷಯು ಅಪ್ಪೊಗಾಲ್ಮಾಮಗ್ರಾಮ ಸರ್ವ್ವಬಾದುಪರಿಹಾರಮಪ್ಪಿಱ್ತಗೊಟ್ಟಂ (ಎಕ. III, ನಂಜನ ೧೩೩-೧೭; ೭೯೬ ?); ಓವನಂ ಮಿಡುಕಲೀಯದೆ ಕಾಲ್ವಿಡಿದಟ್ಟು ತೋರ ಕಣ್ಪನಿಗಳನಿಕ್ಕಿದಳ್ ತರಳಲೋಚನೆ ಸಂಕಲೆಯಿಕ್ಕಿದಂತೆವೋಲ್ (ಪಂಪಭಾ. ೪-೯೭); ಅನುಭವಿಸಿದ ಕೋಟಲೆಗಳನಿನಿಸಂದೆಣಿಸಲ್ಕೆ ಮೌಕ್ತಿಕಾ ಕ್ಷಾವಳಿಯಂ ವನಜದಳನಯನೆ ಸಮೆದಪಳೆನೆ ಸುರಿದುವು ತಱಿದೆ ತೋರ ಕಣ್ಪನಿದುಱುಗಲ್ (ಕಾದಂಊ. ೩೬೩). ೫. ದೊಡ್ಡದಾದ ; ಬೃಹತ್ತಾದ. 'ತೋರಗದ', 'ತೋರಗಲಂ' ಪರಾ. ೬. ಅತಿಶಯವಾದ : ಹೆಚ್ಚಾದ : ನೀರಧಿಯ ಪೀರುವವೊಲ್ಪತಪ್ಪ ಮಾರುತಿಯ ನಿಟ್ಟಸುತ ನಕ್ರ ಕೂರ್ಮಂಗಳೆಲ್ಲ ತೋರಭಯದಿಂದೊಂದನೊಂದೊರಸಿ ವಿತಳಮಂ ಸಾರುತಿರಲು (ಪಂಕಾರಾ. ೩-೧-೩೭). 'ತೋರತೋಟಿ' ಪರಾ. **ಥೋರ** : ೧. ನೂಲೆಳೆಯ ಗಾತ್ರದ ಮರದಲ್ಲಿ ಬೆಟ್ಟದ ಥೋರದ ಕಾಯಿ ಫಲವಾಯಿತು (ಷೋಳಶಮ. ೧೯೩-೭೩೩). ೫. ಥೋರ ಕುಲಗಿರಿನಿಚಯಕಂ ಕುಲಿಶ ಕವಿವವೋಲ್ (ತುರಂಗ. ೬೪-೩೪).

[ <ಪ್ರಾ. ಥೋರ./ಮರಾ. ಥೋರ./ತುಳು. ತೋರ, ಕೋರೋ : ತೆಲು. ಕೋರ./ಸಂ. ಸ್ಥೂಲ ]

**ತೋರಂಜಿ** 'ತುರಂಜಿ' ನೋ.

**ತೋರಂಬಟೆ** (ನಾ). ಒಂದು ಬಗೆಯ ದಪ್ಪವಾದ ಅವಂಟೆಕಾಯಿ : ಹರುಷದಿಂದಿಟ್ಟು ತೋರಂಬಟೆಕಾಯನು ಜಱೆವ ಮೌಕ್ತಿಕದ ಬಾವುಲಿಯ (ಜ್ಞಾನಪ. ೪-೭). [ ತೋರ + ಅಂಬಟೆ ]

**ತೋರಕಬರಿ** (ನಾ). ದಪ್ಪವಾಗಿರುವ ತುರುಬು ; ತೋರಮುಡಿ: ತೋರಕಬರಿಯ ಕುಡಿತೆಗಂಗಳ ... ಭೂರಿಭೂಷಣದಮರಿಯರು ಮೆಱೆದಿರ್ದರೊಂದೆಸೆಯ (ತೊರಕಾ. ೩-೩-೭೦). [ ತೋರ + ಕಬರಿ ]

**ತೋರಕಿಡಿ** 'ತೋರಗಿಡಿ' ನೋ.

**ತೋರಕಿವಿ** 'ತೋರಗಿವಿ' ನೋ.

**ತೋರಕುಚ, ಥೋರಕುಚ** (ನಾ). ದೊಡ್ಡಗಾತ್ರದ ಮೊಲೆ : ಬಿಗಿದಡರಿದ ತೋರಕುಚ ಸಣ್ಣ ನಡುವಿನ ಸೊಗಸಲಿ ಮೆಱೆವ ತೆಳ್ವಸಿಱ ... ಶಂಖಿನಿಯರು ವಿಗೆ ರಾಜಿಸಿದರು (ಕಂಸವಿ. ೩೧-೭೯). **ಥೋರಕುಚ** : ಥೋರಕುಚದ ಮೇಲೆ ಚಾರುಗಂಧವ ಪೂಸಿ (ಚಾದಿಕೀ. ೪೭-೧೩).

[ ತೋರ + ಕುಚ ]

**ತೋರಗಂಬ** 'ತೋರಗಂಭ' ನೋ.

**ತೋರಗಂಭ, ತೋರಗಂಬ** (ನಾ). (ಮಾಳಿಗೆ ಅಥವಾ ಚಪ್ಪರಕ್ಕೆ ಆಧಾರ ವಾಗಿ ನಿಲ್ಲಿಸುವ) ದಪ್ಪವಾದ ಕಂಬ: ಲೋಹದ ತೋರಗಂಭಂಗಳೊಳಗೆ ಮುರಿಗೇಶದಿನೆಸೆವ ಶಬರರ ತಲೆಗಳೋಳಿಯಂತೆ ರಕ್ತಚಾಮರಂ ಗಳನ್ನೊಳಕೆಯ್ದು ಕರ್ಬೊನ್ನ ಕನ್ನಡಿಯ ತೋರಣಂಗಳೊಳಂ (ಕಾದಂಊ. ೩೬೯). **ತೋರಗಂಬ** : ಸರಸೀಪರಿಸರದೊಳ್ ನಟ್ಟು ಮುಗಿಲಂ ಮುಟ್ಟು ವಂತೆ ಮುಂದಿರ್ದ ಕಲ್ಲ ತೋರಗಂಬಮಂ . . . ಕಿಟ್ಟು (ವರ್ಧಪು. ೩-೪೮ ವ) ; ಬೆಳೆದೆಳವಳ್ಳಿಯೊಳ್ ಪುದಿದು ತೋಱುವ ಮಾವಿನ ತೋರ ಗಂಬದಿಂ . . . ಸೊಗಯಿಪೋಲಗಸಾಲೆಯೊಳಿರ್ದರ್ (ಕಬ್ಬಿಕಾ. ೧೩೭).

[ ತೋರ + ಕಂಭ ]

**ತೋರಗಣು** (ನಾ). ದೊಡ್ಡ ಕಣ್ಣು : ಕಾರೊಡಲು ದಾಡೆ ಮಣಿಮಕುಟ ಫಣಿಕುಂಡಲು ತೋರಗಣು ಕಿಮ್ಮಾಸೆ . . . ಎಸೆವ ಬಾವುಲಿ ತೊಡರಿನ ವೀರಭದ್ರಂ (ಸಿದ್ಧರಾ. ೪-೬). [ ತೋರ + ಕಣು (<ಕಣ್) ]

**ತೋರಗದ** (ನಾ). ದೊಡ್ಡ ಬಾಗಿಲು: ತ್ರಿಭುವನದಗ್ರದಲ್ಲಿ ಮೂವತ್ತಾಱು ಲೋಕ ಅದರ ಮಧ್ಯದಲ್ಲಿ ಇಪ್ಪತ್ತೈದು ಮಹಾಮೇರುವೆ ಹದಿನಾಱು ವರ್ತನದ ಕೊಂಡಿ ಗುರು ಲಘುವೆಂಬ ತೋರಗದ (ಮೋಗಮಾ. ೨೩೩-೭೮೪). [ ತೋರ + ಕದ (<ಕದವು₁) ]

**ತೋರಗರುಳು** (ನಾ). ದೊಡ್ಡ ಕರುಳು,-ಅಂತ್ರ : ಸಾರು ನೀ ಸಾರೆಲವೊ ಭೀಮನ ತೋರಗರುಳಿನ ದಂಡೆಯನು ಕೈಯಾರೆ ಮಾರಿಗೆ ಮುಡಿಸುವೆನು (ಕುಮ್ವಾ.ಕ. ೩-೧೮). [ ತೋರ + ಕರುಳು (<ಕರುಳ್) ]

**ತೋರಗಲು** (ನಾ). ದೊಡ್ಡ ಶಿಲೆ,- ಬಂಡೆ : ಅಱೆ ಸಱೆ ತೋರಗಲು ಕವಣೆಗಲು ಕಣೆ ಭಂಡಿಯು ಗಾಲಿ ಕಿಲ್ಲೆ ಹೆಗ್ಗೊಱದುಱೆಯ[ನ್ನೆ] ಕಾಯ್ದು ಮಣಲಗ್ಗದ ಥೇಂಕಣೆ (ಸೌಇಇ. XX, ೧೨೬-೩ ; 1186). [ ತೋರ + ಕಲ್ಲು (<ಕಲ್₃) ]

**ತೋರಗಾಯ್** (ನಾ). ದಪ್ಪವಾದ ಕಾಯಿ; ದೊಡ್ಡ ಕಾಯಿ : ಭಾರದಿಂ ತೂಗಿ ನೆಲನಂ ತಾಗುವ ತೋರಗಾಯ್ಗಳಿಂ ಜನನಿಯಪ್ಪವಸಿಯಂ ಮುದ್ದಿಂ ಮುಂಡಾಡುವಂತಿರಿರ್ದ ಮಾತುಲುಂಗಸಂಘಾತಂಗಳುಂ (ಚಂದ್ರಪು. ೧-೧೦೫ ವ); ತೋರಗಾಯ್ಗಳ ಬಹುಭಾರಮಂ ತಳೆದು ಸಾರ್ವ ವಿಹಂಗಚಯಕ್ಕೆ ಬೇಸಱಂ ಬಳೆಯಿಪುದೆಂದು ಕಾಳತರುವಂ ನಗುವಂತೆ ಪೊಲಾದ ಬೀಡೆವಣ್ಗಳಿನೆಸೆದಿರ್ಪ ದಾಡಿಮತರುವ್ರಜಮಾ ಬನದೊಳ್ ವಿರಾಜಿಕುಂ (ಕುಸುಮಾ. ೧-೯೦) ; ಸಾರವಿಲ್ಲದ ಚಂದ್ರಕಳೆಯನು ಸೇವಿಪ ಭೂರಿ ನಿರ್ಜರರು ಗಾಂಪರಿಗೆ ತೋರಗಾಯ್ಗಳ ರಸದೋಱಲೆನಿಸಿ ನಾಳಿಕೇರ ಮಾಂಬರವ ಚುಂಬಿಪವು (ವರ್ಧಚ. ೧-೭೦). [ ತೋರ + ಕಾಯ್₄ ]

**ತೋರಗಿಡಿ, ತೋರಕಿಡಿ** (ನಾ). ದಪ್ಪವಾದ ಕಿಡಿ; ದೊಡ್ಡ ಕೆಂಡದ ಚೂರು: ಎಟ್ಟೊಡಂಬಂಬನಟ್ಟೆ ಪಳಂಚುತೆ ಸಿಡಿಲ್ದ ತೋರಗಿಡಿಯಿಂದೊಂದೊಂದಱೊಳ್ ಬೇವುದುಂ ತ್ರಿಪುರಂಬೊತ್ತಿಸಿದಂತೆ ಪೊತ್ತಿ ಪೊಗೆದತ್ತತ್ತಂ ವಿಯನ್ಮಂಡಳಂ (ಪಂಪಭಾ. ೧೧-೧೭) ; ಘಟೆಯೊಳ್ ಘಟೆ ಜೋಡಿಸಿ ದಂತ ಜಾಲದೊಳ್ ಭೀಕರನೆ ಪೊಣ್ಮೆ ತೋರಗಿ[ಹಾಚಂ. ಕಿ]ಡಿ ಸೂಸೆ ಕಱುತ್ತುಱೆ ತಾಗಿತಾಜಿಯೊಳ್ (ಗಿರಿಕ. ೭-೭೨) ; ತೋರಗಿಡಿಯನೆ ತೊಳಗಿದುವ ರುಣಾಂಶುರುಚಿರತಾರಾನಿಕರಂ (ಪಾರ್ಶ್ವಪು. ೧೬-೨೩). **ತೋರಕಿಡಿ** : ಪೊಣ್ಮಿದ ಮುನಿಸಿಂ ಭುಗಿಲನುರಿದೆಟ್ಟಿನಾ ದಿಟ್ಟಿಗಳೊರ್ಮೆಯೆ ತೋರ ಕಿಡಿಗಳಂ ಕೆದಱುವಿನಂ (ಕಬ್ಬಿಕಾ. ೧೫೦) ; ಹೊಸ ಮಸೆಯ ಧಾರೆಯ ತೋರಕಿಡಿಯಲಿ ಮುಸುಕಿತರಸನ ತೇರು (ಕುಮ್ವಾದ್ರೋ. ೫-೨೦). [ ತೋರ + ಕಿಡಿ ]

**ತೋರಗಿರಿ** (ನಾ). ದೊಡ್ಡ ಬೆಟ್ಟ ; ಮಹಾಪರ್ವತ : ತೋರಗಿರಿಗಳ ವೆರಸಿದಿಳೆ ತಾ ನೀರೊಳದ್ದುವದೆಂದು ಸಲೆ ಮದವಾರಣಂಗಳು ಧರಿಸಿ ಕೊಂಡಿಹವೆಂಬುದಿಕ್ಕಿನಲಿ (ಕುಮ್ವಾ.ಉ. ೭-೨೭). [ ತೋರ + ಗಿರಿ₁ ]

**ತೋರಗಿವಿ, ತೋರಕಿವಿ** (ನಾ). ದೊಡ್ಡ ಕಿವಿ ; ಅಗಲವಾದ ಕಿವಿ : ತೋರಗಿವಿ ಕೆಂಗಣ್ಣು ಬಿಡುವಾಯು ನಿಡುದಾಡೆ ನಿಡಿಯ ಕಾಳರಕ್ಕಸಿ (ಸಿದ್ಧರಾ. ೬-೧). **ತೋರಕಿವಿ**: ವಾರಿಧಿಯ ನೀರೊಳಗೆ . . . ವಾರಿಕರಿಗಳು ಧುಮುಕಿಯವುಗಳ ತೋರಕಿವಿಗಳಿಗೆಂಟಿ ಫೇನವು ಚಾರುಚಮರಗಳಂತೆ ಯಿರ್ಛಗಾಗಿ ತೋರುವದು (ರಘುವಂ. ೦೧೪-೧೧). [ ತೋರ + ಕಿವಿ₃ ]

**ತೋರಗುಂಡು** (ನಾ). = ತೋರಗಲು : ಒತ್ತಿ ಕಾಲಿಡಲೊಡನೆ ಗಿರಿ ತರೆಗುತ್ತುತಿರ್ದುದು . . . ನೆತ್ತಿಯಗ್ರದ ಕೋರಗುಂಡುರುಳುತ್ತಲಿರ್ದವು (ತೊರರಾ. ೪-೧೨-೨೪). [ ತೋರ + ಗುಂಡು ]

**ತೋರಗುರುಳ್** (ನಾ). ಅಧಿಕವಾದ ಕೂದಲು,- ಮುಂಗೂದಲು : ಪೆಱೆನೊಸಲಂ ಮುಟ್ಟೆ ನಿಮಿರ್ದ ತೋರಗುರುಳ ಕೊಂಗಲೆಳಪೆಱೆಯನಂಥ ಕಾರವಮಾವರಿಸಿದಂತೆ ತೋಱೆಯುಂ (ಪಂಪರಾಮಾ. ೩-೧೩೩ ವ); ಪಾಪವರ್ಧೀ. ವಿತತಿ ಮಾರ್ಪೊಳೆವೀಕ್ಷಣದಿಂ ನಿಜಾಸ್ಯ[ಮಂ] ತೋರಗುರುಳ್ಗಳಿಂ ಪಡೆವು ದೊಪ್ಪಮನಲ್ಲಿಗೆ ಮುನ್ನಿನಂದದಿಂ (ವರ್ಧಪು. ೧-೯೦). [ ತೋರ + ಕುರುಳ್₁ ]

**ತೋರಗೆಂಡ** (ನಾ). ದಪ್ಪವಾದ ಕೆಂಡ : ಒದಱೆ ಕಾಕಿಲ್ಲು ಬೆಟ್ಟುಗಳ ಕೆಯ್ಯುಗುರ್ವಿದ ನೀರ ತೋರಗೆಂಡದ ಸರಿಯಂ ಸಮಂತು ಸುರಿದು . . . ಬಾಧಿಸಿದತ್ತು ತದ್ಬಳಂ (ವರ್ಧಪು. ೧೫-೩೯). [ ತೋರ + ಕೆಂಡ ]

**ತೋರಗೊಂಡೆಯ** (ನಾ). ದೊಡ್ಡದಾದ ಕೊಂಡೆ,-ಕುಚ್ಚು : ಇಕ್ಕಿದ ಪಕ್ಕರಕ್ಕೆ ನಿಡುರಘುಲ್ಲಿ ತೂಡಂಕುವ ತೋರಗೊಂಡೆಯಂ ಸೆಕ್ಕಿದ ಖಂಡೆಯಂ ಬಿಗಿದ ಬಿಲ್ (ಚಕವಿ. ೨-೯೬). [ ತೋರ + ಗೊಂಡೆಯ ]

**ತೋರಗೊಂಬು** (ನಾ). ದೊಡ್ಡದಾದ ರೆಂಬೆ ; ದೊಡ್ಡ ಕೋಡು : ನನೆಯಂ ಪೇೞೆದ ತೋರಗೊಂಬು ನನೆಯಂ ಪೂಗೊಂಚಲಂ ಪೊತ್ತು ನೆಟ್ಟನೆ ಬಿಣ್ಪೇೞೆದ ಬಳ್ಳಿಗೊಂಬು (ಕಬ್ಬಿಕಾ. ೬೨). [ ತೋರ + ಕೊಂಬು₁ ]

**ತೋರಗೊನೆ** (ನಾ). ದಪ್ಪವಾಗಿರುವ ಗೊಂಚಲು; ಗಾತ್ರವಾದ ಗೊನೆ: ತೋರಗೊನೆವೇೞೆದ ಕಂಚಳವಾೞೆ ತೋರವಣ್ಪೇೞೆದ ಬಕ್ಕೆ (ಅನಂಪು. ೧-೭೮). [ ತೋರ + ಗೊನೆ₂ (<ಗೊಲೆ₂ ]

**ತೋರಡವು** (ನಾ). ತೋರಿಕೆಗಾಗಿ ಹಾಕುವ ಒತ್ತೆ; ನಂಬಿಕೆಗಾಗಿ ಇಡುವ ಒತ್ತೆ : "ತೋರಡವು-ಒತ್ತೆಹಾಕುವುದು" (ಜಾನಕೋ. ೭೮). [ ತೋರು (<ತೋಱು) + ಅಡವು₂ (<ಅಡರ್ಪು₂) ]

**ತೋರಣ** (ನಾ). ೧. ಹೆಬ್ಬಾಗಿಲು ; ಹೊರಬಾಗಿಲು : ತೋರಣಃ. ಬಹಿರ್ದ್ವಾರಂ – ಪುಷ್ಪಮಾಲಿಕೆ ತಳಿರು ತೋರಣ ಮಾವಿನ ಸೊಪ್ಪು ಮುಂತಾದವುಗಳನ್ನು ಕಟ್ಟುವದಕ್ಕೋಸ್ಕರ ಬಾಗಿಲ ಹೊರಗಡೆ ಕಾಣುವಂಥ ಕಂಭಗಳಿಂದ ಕಟ್ಟಲ್ಪಟ್ಟ ದ್ವಾರಬಂಧನದ ಚೌಕಟ್ಟು. ಮನೆಯ ಹೊರ ಬಾಗಿಲು, ತೋರಣಬಾಗಿಲು (ಸಿದ್ಧಾಂತಿ. ೯೨). 'ತೋರಣದ್ವಾರ' ಪರಾ. ೨. ಹಬ್ಬ, ಹರಿದಿನ ಇತ್ಯಾದಿ ವಿಶೇಷ ಸಂದರ್ಭಗಳಲ್ಲಿ ಅಲಂಕಾರ ಕ್ಕಾಗಿ ಬಾಗಿಲು, ಬೀದಿ ಮುಂತಾದೆಡೆಗಳಲ್ಲಿ ಕಟ್ಟುವ ತಳಿರು, ಹೂ, ಬಟ್ಟೆ ಮುಂತಾದುವುಗಳ ಮಾಲೆ,-ದಂಡೆ; ವಂದನಮಾಲೆ: "ದ್ವಾರದ ಮುಂದೆ ಸಂಧಿಸಿರೆ ಕಟ್ಟಿದ ವಂದನಮಾಲೆ ತೋರಣಂ" (ವಸ್ತುಕೋ. ೪೮-೧೬) ; "ವಂದನಮಾಲಾ, ತೋರಣಂ ಈ ೨ ತೋರಣಂ" (ಹಲಾಯು. ೫೧-೧೪೭) ; ಪೊಬಲೊಳಗೊಪ್ಪೆ ಕನ್ನಡಿಯ ಕಂಚಿನ ತೋರಣದೋಳಿಗಳ್ (ಪಂಪಭಾ. ೩-೭೪) ; ಊರುಯುಗಸ್ತಂಭೋದ್ಗತ ತೋರಣಮೆಂಬಂತೆ ಮಿಸುಗುವುಡಿನೂಲ್ (ಕಾದಂಪೂ. ೩೩೪) ; ಪೊನ್ನ ತೋರಣದಿಂ ದುಕೂಲದ ಸೂಸಕಂ ಗಳನೊಪ್ಪುವೆತ್ತುನ್ನತಧ್ವಜದೋಳಿಯಿಂ . . . ಪಿರಿದುನ್ನತಿಕ್ಕೆಯನಿರ್ದುದೀ ಜಿನಮಂದಿರಂ (ಧರ್ಮಾಮೃ. ೬-೪೮) ; ಹೆಬ್ಬಕ್ಕೆ ತಂದ ಹರಕೆಯ ಕುಱೆ ತೋರಣಕ್ಕೆ ತಂದ ತಳಿರ ಮೇಯಿತ್ತು (ಬಸವ. ೧೨೫); ಕಾರಿರುಳ ಪಟ್ಟಣಕೆ ಚಂದ್ರನ ತೋರಣವ ಬಿಗಿದಂತೆ (ಕುಮ್ವಾಉ. ೧೧-೨೦) ; ಬೆಂದ ಮನೆ ಬಾಗಲಿಗೆ ಮುಂದೆ ತೋರಣವೇಕೆ (ಸರ್ವಜ್ಞ. ೯೧೯). [ ಸಂ. ]

**ತೋರಣಂಗಟ್ಟಿಸು, ತೋರಣಗಟ್ಟಿಸಂ** (ಕ್ರಿ). (ಚಿಗುರು ಮುಂತಾದುವುಗಳ) ಮಾಲೆಯನ್ನು ಬಿಗಿಸಂ : ಮಣಿಭದ್ರಮಪ್ಪ ಹೇಮ ಮುಕ್ತಾಹಾರಂಗಳಿಂ ತೋರಣಂಗಟ್ಟಿಸಿಯರಸರ ಬರವಂ ಪಾರುತ್ತಿರೆ (ವರ್ಧ್ಮಾರಾ. ೨೬-೩) ; ಇನಿಯನನೀ ಪಾಸೊಳ್ ತಂದೆಳದಳಿರಿಂದೆ ತೋರಣಂ ಗಟ್ಟಿಸುವೆಂ (ಚಂದ್ರಪು. ೮-೯೦). **ತೋರಣಗಟ್ಟಿಸು** : ನೀರಜಭವನ ಮಾನಸಪುತ್ರ ನೀನಲ್ಲದಾರಾದೊಡೀ ಮಾತುಗಳ ಭಾರಾಂಕನಾಗಿಯನೊ

ದನೆ ಪೇಳ್ದೊಡೆ ಸೀಳಿ ತೋರಣಗಟ್ಟಿಪೆನೆಂದ (ಪಾಹಚ. ೧೨-೩೦).

[ ತೋರಣಂಗಟ್ಟು + -ಇಸು₃ ]

**ತೋರಣಂಗಟ್ಟು**, ತೋರಣಗಟ್ಟು (ಕ್ರಿ). (ಚಿಗುರು ಮುಂತಾದುವು ಗಳ) ಮಾಲೆಯನ್ನು ಕಟ್ಟು,-ಬಿಗಿ: ಆಗಳಾ ಬಸಂತರಾಜನ . . . ಬರವಿಂಗೆ ತೋರಣಂಗಟ್ಟದಂತೆ ಬಂದ ಮಾಮರಂಗಳನಡರ್ದ . . . ಮಾಧವೀಲತೆಗಳುಂ (ಶಂಪಥಾ. ೨-೧೨ ವ); ಪುರದ್ವಾರವುನವನಡಗಿಂ ಬುತ್ತಿಯಿಟ್ಟು . . . ಕರುಳಿನಿಂ ತೋರಣಂಗಟ್ಟಿ ಕೋಲಾಹಲನಾದಂ ಪೆರ್ಚಿ ಪೊಕ್ಕಂ ದನುಜನ ಪೊಟಲಂ ಸಾಗ್ರಜನ್ಮಂ ಮುಕುಂದಂ (ಜಗವಿ. ೬-೧೧). **ತೋರಣಗಟ್ಟು**: ರಾವುತ ತಲೆಯಂ ಸಂ x x x ತೋರಣಗಟ್ಟುತ್ತಂ ಚೆಲ್ಲಿಂ ಸುರಲೋಕವೆಯ್ದಿದಂ (ಸೌಇಇ. XX, ೧೬೮--೧೧ ; 1183).

[ ತೋರಣ + ಕಟ್ಟು₁ ]

**ತೋರಣಗಂಬ** 'ತೋರಣಗಂಭ' ನೋ.

**ತೋರಣಗಂಭ**, ತೋರಣಗಂಬ (ನಾ). (ತಳಿರು ಮುಂತಾದವುಗಳ) ಮಾಲೆಯನ್ನು ಕಟ್ಟುವ ಕಂಭ; ತೋರಣವನ್ನು ಕಟ್ಟುವ ಕಂಭ: ತೋರಣಗಂಭದಲ್ಲಿ ಒಬ್ಬ ಭೈರವ ಜೋಗಿ ಶೂಲದಲ್ಲಿರುವನು (ಬತ್ತೀಪು. ೧೨೩). **ತೋರಣಗಂಬ**: ಸೊಬಗಿಂಗೆತ್ತಿದ ತೋರಣಗಂಬಂಬೊಲಿರ್ದು ವಾಕೆಯು ತೊಡೆಗಳ್ (ಕಬ್ಬಿಕಾ. ೭೩). [ ತೋರಣ + ಕಂಭ ]

**ತೋರಣಗಟ್ಟಿಸು** 'ತೋರಣಂಗಟ್ಟಿಸು' ನೋ.

**ತೋರಣಗಟ್ಟು** 'ತೋರಣಂಗಟ್ಟು' ನೋ.

**ತೋರಣಗಲ್ಲು** (ನಾ). ತೋರಣವನ್ನು ಕಟ್ಟುವ ಕಲ್ಲಿನ ಕಂಬ: ಬಸ್ತಿಯಿಂದ ಪಡುವಲು ಪೂರ್ವದಲು ನಡವ ಉಭಯಮಾರ್ಗದ ಹಾದಿಗೆ ಯಿಕ್ಕಿದ ತೋರಣಗಲ್ಲಿನೊಳಗಣ ಪ್ರಮಾಣನರಿ . . . ಮೂಡಕಡೆಯಲು ಮೂಡಣ ತೋರಣಗಲ್ಲಿಂ ಪಡುವಲು (ಸೌಇಇ. IX-II, ೪೪೭-೨೬ ; 1466).

[ ತೋರಣ + ಕಲ್ಲು (<ಕಲ್₃) ]

**ತೋರಣಗ್ರಥನ** (ನಾ). ತೋರಣವನ್ನು ಕಟ್ಟುವುದು; ತೋರಣದ ರಚನೆ, ಬಂಧ: ತೋರಣಗ್ರಥನ ಮುಕ್ತಾಮಾಣಿಕಾಳಂಬನವ್ಯಸನ ವ್ಯಗ್ರಕರಂ ಕರಂ ಸೊಗಯಿಸಿತ್ತಂತಲ್ಲಿ ಕಾಂತಾಜನಂ (ಚಂದ್ರಪು. ೬-೩೩).

[ ತೋರಣ + ಗ್ರಥನ ]

**ತೋರಣದರ್ಪಣ** (ನಾ). ತೋರಣದಲ್ಲಿರುವ ಕನ್ನಡಿ: ತೋರಣ ದರ್ಪಣದೊಳ್ ಚಮರೀರುಹಮಂ ನೃಪತಿಗಿಕ್ಕುಮಬಲೆಯರ ನೆಟಲ್ ರಾ ರಾ ಜಿ ಸಿ ದು ವು ರಿಪುರಾಜರಾಜ್ಯಶ್ರೀಸಮೂಹಮಿದಿರ್ವಂದಿರವಂ (ಚಂದ್ರಪು. ೧೧-೧೬). [ ತೋರಣ + ದರ್ಪಣ ]

**ತೋರಣದ್ವಾರ** (ನಾ). ಹೆಬ್ಬಾಗಿಲು; ಮಹಾದ್ವಾರ: ಅಂತು ಸೊಗಯಿಸುವ ವನವೇದಿಕೆಯ ನಾನಾಮಣಿಮಯೂಖಮಾಲಾ ವಿರಾಜ ತೋತ್ತುಂಗ ತೋರಣದ್ವಾರದಿಂದಂ ನುಗುಳ್ದು ವನವೀಥಿವಿಡಿದು ಬಂದು (ಆದಿಪು. ೦೩-೧೧ ವ). [ ತೋರಣ + ದ್ವಾರ ]

**ತೋರಣವಿಡು** (ಕ್ರಿ). = ತೋರಣಂಗಟ್ಟು: ಆ ಸದ್ದಿಲ್ಲದ ಕತ್ತಲೆಯ ಮುಸುಕಿನಲ್ಲಿ, ಕಣ್ಣೀರ ಹಾರ ಕೋದು ತೋರಣವಿಟ್ಟ ಒಂದು ಗುಪ್ತ ಶೋಕಮಂದಿರವನ್ನು ನಿರ್ಮಿಸಿ ನಿಲ್ಲಿಸಿಕೊಂಡಳು (ಇಪ್ಪಳ. ೨೮೪).

[ ತೋರಣ + ಇಡು₁ ]

**ತೋರತಕ್ಕು** (ನಾ). ಹೆಚ್ಚಿನ ಯೋಗ್ಯತೆ; ಹಿರಿಯ ಯೋಗ್ಯತೆ: ಇಕ್ಕಿದ ಸೀಸಕಂ ಪಡಿದು . . . ಬೆನ್ನೊಳಮರ್ಚಿದ ಪೊನ್ನ ಪಲ್ಲಣಂ ಪಕ್ಕರ ಶೇಜವಾರು ಕಟಾರಿರ್ಕಡಿಯಾದುವು ಬಾಳ ಬಾಯೊಳಿಂತಕ್ಕುಮೆ ತೋರ ತಕ್ಕಿದೆನೆ ಗೋಟಯಿಲರ್ ಕೆಲರಲ್ಲಿ ಕಾದಿದರ್ (ಕಬ್ಬಿಕಾ. ೨೮೦).

[ ತೋರ + ತಕ್ಕು₂ ]

**ತೋರತೋಟ** 'ತೋರದೋಟ' ನೋ.

**ತೋರತ್ತಿ**, ತೊರತಿ, ತೊರತ್ತಿ (ನಾ). ದೊಡ್ಡ ಜಾತಿಯ ಉದುಂಬರ; ದೊಡ್ಡ ಅತ್ತಿಯ ಮರ: ತೋರತ್ತಿ (ಕಾಸ್ಸೆಲ). ಸುಂದರವಾದ ಉನ್ನತವೃಕ್ಷ. ಕಟ್ಟಿಗೆ ಇಮಾರತಿಗೆ ಬರುತ್ತದೆ. ಬೀಜದಿಂದ ದೀಪದ ಯೆಣ್ಣೆ ಹೊರಡುತ್ತದೆ (ಕಥಾಗ. ೪೧). **ತೊರತಿ**: ಸಣ್ಣ ಸೊಳ್ಳಿ, ತೊರತಿ, ಮರ ತುತ್ತಿ (ಮೃಜಿಗಿ. ೪೩-೮೮೦). **ತೊರತ್ತಿ**: ತೊರತ್ತಿ, ಸುರಟೆ . . . ಎಣ್ಣೆ ಮರ, ಹಾಲವೆ (ಮೃಜಿಗಿ. ೪೩-೮೮೩). [ ತೋರ + ಅತ್ತಿ₁ ]

**ತೋರದಿಟ್ಟಿ** (ನಾ). ದೊಡ್ಡ ಕಣ್ಣು; ಅಗಲವಾದ ಕಣ್ಣು; ಬೊಗಸೆ ಗಣ್ಣು: ತೋರದಿಟ್ಟಿಯ ತುದಿಯೊಳು ತೊರೆದುದಕವ ಕೂರುಗುರಿಂ ಮಿಡಿಮಿಡಿದು ವಾರಿಜಮುಖಿ ನುಡಿಯಲು (ಶ್ರೀಪಾಲ. ೨-೩೮).

[ ತೋರ + ದಿಟ್ಟಿ ]

**ತೋರದುಟ** (ನಾ). ದಪ್ಪವಾದ ತುಟಿ: ತೋರಕುಚದ ತೋರದುಟ ತೋರದುಱುಬಿನ ತೋರಿದ ಮಲ್ಲವಿರುಗಳ ಮಾರಕೇಳಿಗೆ ಮನದಣಿಯದ ಚಿತ್ರಿನಿನಾರಿಯುರೆಸದರರ್ತಿಯಾಲಿ (ಶಂಪವಿ. ೨೦-೮೦).

[ ತೋರ + ತುಟಿ₂ ]

**ತೋರದುತ್ತು** (ನಾ). ದೊಡ್ಡ ತಂತ್ತು: ಸಿತರಾಜಾನ್ನ ಸದ್ಘೃತ ತೊವ್ವೆ ಗೂಡಿ ನಿರ್ಮಿತವಾದ ತೋರದುತ್ತುಗಳ ಜತನದಪ್ಪದೆ ಕೈಕೊಂಡರು (ಪಾಹಚ. ೩-೩೩). [ ತೋರ + ತುತ್ತು₂ ]

**ತೋರದುರುಬು** 'ತೋರದಂಱುಂಬು' ನೋ.

**ತೋರದುಱುಂಬು**, ತೋರದುರುಬು, ತೋರದಂಱುಬು (ನಾ). ದೊಡ್ಡದಾದ ಕಬರಿ; ದೊಡ್ಡ ತುರುಬು: ತೋರದುಱುಂಬಿನೊಳ್ ತೆಱಂಬೊಳೆವಲರ್ಗೊಂಚಲೊಪ್ಪೆ (ಲೀಲಾವ. ೮-೨೮). **ತೋರದುರುಬು**: ಇಟ್ಟ ಕಸ್ತುರಿಬಟ್ಟು . . . ತೋರದುರುಬನು ಉಟ್ಟ ದೇವಾಂಗದ ನಿರಿಯ ಮೇಗಳವಟ್ಟ ಹೊನ್ನುಡಿದಾರದಿಂದ (ಸಾಂಗಕಾ. ೩-೮೩). **ತೋರದುಱುಬು**: ಕಾರಗತ್ತಲೆಯೊಳು ಥಳಥಳಿಸುತಲಿಹ ತಾರಗೆಗಳೂಯೆಂಬಂತೆ ತೋರ ದುಱುಬಿನೊಳು ಕಮ್ಮಲರ್ಗಳ ತಂದಾ ರಮಣಿಗೆ ಮುಡಿಸಿದರು (ಜೀವಂಧಾ. ೧೦-೯). ತೋರದುಱುಬು ದುಂಬಿಗುರುಳರನೇಱಿಲ ದೋಳಿವಣ್ನುಡಿ ವೆಱೆನೊಸಲ . . . ವಾರಾಂಗನೆಯರೊಪ್ಪಿದರು (ಶ್ರೀಪಾಲ. ೯-೧೧);

[ ತೋರ + ತುಱುಂಬು₂ ]

**ತೋರದುಱುಬು** 'ತೋರದುಱುಂಬು' ನೋ.

**ತೋರದೆರೆ** (ನಾ). ದೊಡ್ಡ ಅಲೆ,-ತರಂಗ: ಹಂಸತಳ್ಪತಳದೊಳ್ ಪಾಲ್ಗಡಲ ತೋರದೆರೆಯ ಮೇಲೆ ಲೀಲೆಯಿನವತರಿಸುವ ಸಿರಿಯನನುಕರಿ ಸಿರ್ದು ನಿಜಮನೋವಲ್ಲಭನೊಡನೆ ಸುಖಸುಪ್ತಿಯಂ ತಳೆದು (ನೇಮಿಪು. ೬-೬೩ ವ); ತೋರದೆರೆ ಮುಱಿಯೆ ಮೂಡುವ ವಾರಣಮಂ ಪೋಲ್ತುದು (ಅರ್ಧನೇ. ೩-೧೧೩). [ ತೋರ + ತೆರೆ₄ ]

**ತೋರದೊಡೆ** (ನಾ). ದಪ್ಪವಾದ ತೊಡೆ: ಆತನಯ ತೋರದೊಡೆಗಳವಾ ತನ ನಿಡುದೋಳ ನಡೆಯುಮವಾತನ ನಡೆ (ಶಾಕ್ಷ್ಮಾ.ವ. ೯೩); ನಿಜಸತಿಯ ತೋರದೊಡೆಗಳ ಮೇಲೆ ಲಲಿತಮಣಿಮಕುಟಮಂಡಿತಮಸ್ತಕವನಿಕುಹಿ ಮಗ್ಗುಲಿಕ್ಕಿದನಾಗಳು (ಜಚಳಾ. ೬-೩೦) ; ಕೆಂಡಗಣ್ಣು ಹೆಮ್ಮಾರಿಮೊಗಗಳ ಬಿಗಿದ ಹುಬ್ಬುಗಳ ಬಲ್ಗೋರೆದಾಡೆಗಳ ಸಲೆ ಕೊಬ್ಬಿದ ತೋರದೊಡೆಗಳ . . . ದಡಿಗರಕ್ಕಸರ್ ಕೋಟಾನುಕೋಟಿಗಳದೇನೆಂಬೆನು (ಜಬಪು. ೪೭-೦೪). [ ತೋರ + ತೊಡೆ₂ ]

**ತೋರದೊಣ್ಣೆ** (ನಾ). ದೊಡ್ಡ ಗುದಿಗೆ,-ದೊಣ್ಣೆ: ಕೂರಲಗುವಿಡಿದವನ ಕೊಡತಿವೀರರಾಗಿದ್ದವರು ಕಾದಲು ತೋರದೊಣ್ಣೆಯ ಹೊಯಿಲನಂ ಗೈಸುವವರದಾರುಂಟು (ಶಾಶಿರಾ. ೨೦-೩೩). [ ತೋರ + ದೊಣ್ಣೆ₁ ]

**ತೋರದೋಟ**, ತೋರತೋಟ (ನಾ). ಭಾರಿಯಾದ ಕಾಳಗ; ರಭಸದ ಯುದ್ಧ. 'ತೋರದೋಟಿಗ' ಪರಾ. **ತೋರತೋಟ**:

ಘೂಡುವವು ತಲೆ ಹಱಿದ ಗಱಿ ಹೊಱಬೀಡ ಬಿಡುವವು ಸುಭಟರಿಬ್ಬರ ರ್ಘುಾಡಣೆಯ ಖಂಡೆಯದ ತುಂಡದ ತೋರತೋಟಿಯಲಿ [ ಪಾಠಾಂ. ತಾಣಕೋಟಗಳ] (ತೊರರಾ. ೩-೧೧-೨೦).

[ ತೋರ + ತೋಟ$_1$ ]

**ತೋರದೋಟಿಗ** (ನಾ.) ಭಾರಿಯಾದ ಕಾಳಗ ಮಾಡುವವನಂ; ಮಹಾವೀರ : ಕಡು ಸಡಗರದ ಬಡಿವಾರದ ತೋರದೋಟಿಗ (ರಾಮಾಶ್ವ. ೧೪೪-೨೦). [ ತೋರದೋಟಿ + – ಗ$_8$]

**ತೋರಪಿಲ್ಲಿ** (ನಾ). ದೊಡ್ಡ ಪಿಲ್ಲಿ : ವೀರಮುದ್ರಿಕೆ ಕಾಲುಂಗುರ ಮೆಂಟಿಕೆ ತೋರಪಿಲ್ಲಿ ಕಿಱುಪಿಲ್ಲಿ ಭೂರಿರುಚಿಗಳಿಂದ ಮೆಱೆದವು (ಅಸಂಚ. ೭-೧೦೮).

[ ತೋರ + ಪಿಲ್ಲಿ$_1$ ]

**ತೋರಬಾಷ್ಪ** (ನಾ). ಅತಿಶಯವಾದ ಕಣ್ಣೀರು ; ಅಧಿಕವಾದ ಕಣ್ಣೀರು : ಪುದಿದ ಮನೋಗತಾರ್ಥಮನದಂ ನೆಱೆ ಜಹ್ನೆಗೆ ತಂದು ಪೇಟಲೀಯದೆ ಮೊಗಕಡ್ಡವಿರ್ಪ ಕಡುನಾಣ್ಚಿಕೆಯಂ ತೊಳೆವಂತೆ ತೋರಬಾಷ್ಪದ ಪನಿದಂದಲಂ ಸುರಿಯುತುಂ (ಕುಸುಮಾ. ೧೨-೧೪೪).

[ ತೋರ + ಬಾಷ್ಪ ]

**ತೋರಬೆರಳು** 'ತೋರುಬೆರಳು' ನೋ.

**ತೋರಮರ** (ನಾ). ದೊಡ್ಡ ಮರ ; ಹೆಮ್ಮರ: ಒತ್ತಿ ಕಾಲಿಡಲೊಡನೆ ಗಿರಿ ತಲೆಗುತ್ತುತಿರ್ದುದು ತೋರಮರಗಳು ಕಿತ್ತು ಹಾರುತಲಿರ್ದವಂಬರ ಮಣಿಯನಣೆದಣೆದು (ತೊರರಾ. ४-೧೨-೨೯). [ ತೋರ + ಮರ$_1$ ]

**ತೋರಮಲ್ಲಿ, ತೋರ್ಮಲ್ಲಿ** (ನಾ). ಒಂದು ಬಗೆಯ ಹರಳು,–ರತ್ನ ; ಗಂಧರ್ವಮಣಿ : "ಪ್ರಶಸ್ತಶಿಲೆಯಾಗಿ ಉಪಯೋಗಿಸುವ, ಬಲವಾದ ವಿದ್ಯುದ್ಗುಣಗಳನ್ನುಳ್ಳ, ಬೇರೆ ಬೇರೆ ಬಣ್ಣಗಳ ಖನಿಜ ವಸ್ತು : ತೋರ ಮಲ್ಲಿ" (Tourmalin (e). ಇಂಕನಿ). **ತೋರ್ಮಲ್ಲಿ** : ತೋರ್ಮಲ್ಲಿಗಳು ಒಳಗಡೆಯಲ್ಲಿ ಯುರೋಪದಿಂದ ಮುಂಬಯಿಗೆ ಮಾರಾಟಕ್ಕೆ ಬರುತ್ತವೆ. ಈ ಹರಳುಗಳು ಕಡಿಮೇ ಜಾತಿಯ ರತ್ನಗಳೆಂದು ಎಣಿಸಲ್ಪಡುತ್ತವೆ (ಮುಂಬಯಿ. ೬-೪೭).

[ ದೇ.॥ ತಮಿ. ತೋರಮಲ್ಲಿ, ತೋರಾಮಲ್ಲಿ ; ತೆಲು. ತೋರಮಲ್ಲಿ, ತೋರಮಲ್ಲೆ./ಮರಾ. ತೋರಮಲೀ, ತೋರಮಲ್ಲೀ./ಇಂ. Tourmaline. ಸಿಂಹಳೀ. ತೋರಮೊಲ್ಲಿ]

**ತೋರಮಲ್ಲಿಗೆ** (ನಾ). ದೊಡ್ಡ ಮಲ್ಲಿಗೆ : ಬಿಳಿಯ ತಾವರೆಯೆಳಗಾವಿನಸಿಯ ನೂಲೊಳ್ ಕೋದ ತೋರಮಲ್ಲಿಗೆಯ ಬಿರಿಮುಗುಳ ಸರಿಗೆಯುಮಂ (ಪಂಪಭಾ. ೫-೬ ವ); ಒದವಿದ ತೋರಮಲ್ಲಿಗೆಯ ಹಾರದ ಸೂಸಕದಿಂದೆ ಸಿಂಧುವಾರದ ಚಮರೀಜದಿಂದೆ ... ಚೆಲ್ವುವೆತ್ತಿದು ಕದಳೀದ್ರುಮಾಗ್ರಥಿತ ಸುಂದರ ವಂದನಮಾಲಿಕಾವೃತಂ (ಕಾದಂಉ. ೨೦೩) ; ಕೊಸಗಿನೆಸಳ ಕೇಸರಮಂ ತೊಡರ್ಚಿದ ತೋರಮಲ್ಲಿಗೆಯ ಮುಗುಳ್ಗಳಾರಂಗಳುಮಂ (ಜಗವಿ. ೬-೧೬ ವ). 'ತೋರಮೊಲ್ಲೆ' ಪಠಾ [ ತೋರ + ಮಲ್ಲಿಗೆ ]

**ತೋರಮಾಣಿಕ** (ನಾ). ದೊಡ್ಡ ಮಾಣಿಕ್ಯ,–ರತ್ನ: ತೋರಮಾಣಿಕವೆಂದು ಪಿಡಿದರೆ ಭೂರಿಕೆಂಡವಿದಾಯ್ತು (ನಳಚ. ೬-೧೫). [ ತೋರ + ಮಾಣಿಕ ]

**ತೋರಮುಡಿ** (ನಾ). = ತೋರದುಱುಂಬು : ತೋರಮುಡಿವಿಡಿದು ಕುಡಿಯಂ ನಾರಂ ಸದೆವಂತೆ ತದೆದು (ಯಶೋಚ. ೨-೫೦) ; ತೋರಮುಡಿ ಬಿಟ್ಟಪ್ಪುದಾರುಣಿಯೊಳಗ್ರ ಕಚಂ (ಸೂಕ್ತಿಸು. ೧೩-೯) ; ತೋರಮುಡಿಯ ಕೆಂಜೆಡೆಯ ರತ್ನದ ಕರ್ಣಪೂರದ ಫಣಿಕುಂಡಲಗಳ ಚಾರುಕುಂಕುಮಗಂಧ ಭಸಿತಲೇಪನದರ್ಧನಾರೀಶ ಜಯ (ಕ್ರಿಶುತಿ. ೨೩-೧); ಕಡುತೋರಮುಡಿ ಮುಗಿಲನಧರಮತಿಸಂಚಯಂ [ ಪಾಠಾಂ. ಮಧುವೃಷ್ಟಿಯಂ] ತನುಮಧ್ಯ ಮದು ಪುಸಿಯನು ಬಿಡದೆ ವಿಕ್ರಮಂ ಮಹಾಚಂಚಲಮ ರೂಪಾದ ಮಡದಿಯರ . . . ನಂಬುವಂ ಮೂಢಂ (ಚಿಬಪು. ೧೦-೫೭); ದೇವೇಂದ್ರ ಸಿಂಹಾಸನದಿಂದೆದ್ದು ತೋರಮುಡಿಯ ತಿಲೋತ್ತಮೆಯ ಕೈಯನ್ನು ಹಿಡಿದುಕೊಂಡು ಉದ್ಯಾನದಲ್ಲಿದ್ದ ನಮೇರುವೃಕ್ಷದಡಿಯನ್ನು ಸೇರಿದ (ಧೂಮಮ. ೬೧). [ ತೋರ + ಮುಡಿ$_3$ ]

**ತೋರಮುಡುಹು** (ನಾ). ದೊಡ್ಡ ಹೆಗಲು ; ಗಾತ್ರವಾದ ಹೆಗಲು : ಪರಿಮಳದ ಕಸ್ತೂರಿಯ ತಿಲಕದ ಹೊರೆದ ಗಂಧದ ತೋರಮುಡುಹಿನ ಕರದ ಖಂಡೆಯರದಟರ್ಕೈದಿದರಾನೆ ಕುದುರೆಯಲಿ (ಕುವ್ಯಾವಿ. ೯-೪೫) ; ತೋರಮುಡುಹು ನಿಡುಗಯ್ಯತಿದೀರ್ಘಶರೀರ ಪೇರುರ ಪೆರ್ಚಿ ಬೆಳೆದ ಚಾರುಬಾಹುಯುಗವೆಸೆಯೆ ಬಾದುರನಂದು ಸಾರಿದನಾ ಶಾರ್ಙ್ಗವನು (ಕುರಾಸಾಂ. ೧೮-೭೬). 'ತೋರಮುಯ್ಯಪ್ಪು' ಪಠಾ.

[ ತೋರ + ಮುಡುಹು$_4$ (<ಮುಡುಪು$_4$) ]

**ತೋರಮುತ್ತು** (ನಾ). ದಪ್ಪವಾದ ಮುತ್ತು ; ಗಾತ್ರವಾಗಿರುವ ಮೌಕ್ತಿಕ : ತೋರಮುತ್ತಿನ ಹಾರಂಗಳುರಸ್ಥಳಂಗಳೊಳ್ಪೊಳೆದಾಡೆಯುಂ (ಕಾದಂಪೂ. ೭೭) ; ನೊಸಲೆಡೆಯಲ್ಲಿ ನೀಳ್ದ ಕುರುಳೋಳಿಗಳುಯ್ಯಲನಾಡೆ ಡಾಳಮಂ ಪಸರಿಪ ತೋರಮುತ್ತಿನ ಸರಂ ಮೊಲೆಯೊಳ್ ತಲೆಯೊತ್ತೆ . . . ಪೊಸರನ್ನದಾರತಿಯನೆತ್ತಿದರಗ್ಗದ ಗಾಡಿಕಾರ್ತಿಯರ್ (ಕಬ್ಬಿಗಕಾ. ೩೪೩) ; ಕೊರಳೊಳಿಕ್ಕಿರ್ದಾ ತೋರಮುತ್ತುಗಳೆಲ್ಲ ತಿಳಿಗೊಳದೊಳು ತೋರ್ಪ ತಾರಾಳಿಯಂತೆ ತೋಱಿದುವು (ಭರತ. ೧-४೨) ; ಈಕೆಯ ಕೊರಳಿನ ಕಾಂತಿಯ ಹೊಳೆಯೊಳು ಮುಳುಗಿವೆ ತೋರಮುತ್ತುಗಳು (ಇಂಚಾಪ. ೮೫-೧೨). [ ತೋರ + ಮುತ್ತು$_6$ ]

**ತೋರಮುಯ್ಯು** (ನಾ). = ತೋರಮುಡುಹಂ : ತೋರಮುಯ್ಯು ಗಳೊಳೆಸೆವ ಕುಂಕುಮಂಗಳ ಬಂಬಲ ಸೋಂಕಿನೊಳ್ ರಜಂ ನೆಗೆದು ದೆಸೆಗಳ್ಪೊಂಬಣ್ಣಮಾಗೆಸೆಯೆಯುಂ (ಕಾದಂಪೂ. ೬೭).

[ ತೋರ + ಮುಯ್ಯು$_1$ ]

**ತೋರಮೂಗುತಿ** (ನಾ). ದೊಡ್ಡಗಾತ್ರದ ಮೂಗುತಿ; ದೊಡ್ಡ ಮೂಗು ಬೊಟ್ಟು : ತೋರಮೂಗುತಿ[ಪಾಠಾಂ. ಮುತ್ತಿನ]ಬೊಟ್ಟು ತುಟಿಯಿನ ಬಲೆವಣ ಸೇರಿ ಕಣ್ಗೆಸೆದುವವರ್ಗೆ (ಕುರಾಸಾಂ. ೩೬-೧೫೭).

[ ತೋರ + ಮೂಗುತಿ ]

**ತೋರಮೊಗ** (ನಾ). ಅಗಲವಾದ ಮುಖ ; ವಿಸ್ತಾರವಾದ ಮುಖ : ತೋರಮೊಗಂ ಸಮುನ್ನತಗಳಂ ಸಮಗೆಂಪಡರ್ದಕ್ಷಿ . . . ಕರ್ಕಶದೇಹ ಮತೀವಭೀಷಣಾಕಾರಮನಪ್ಪುಕೈಯೆ (ದಕಳು. ೯-೧೫).

[ ತೋರ + ಮೊಗ ]

**ತೋರಮೊಲೆ** (ನಾ). = ತೋರಕುಚ : ತೋರಮೊಲೆಗಳ ಪೊಗಂಗಳ್ ರಾರಾಜಿಸಿ ಕರ್ಪುವೆತ್ತು ಮೋಹನಧೂಮೋದ್ಗಾರಿಗಳಂ ಕಾಂಚನಭೃಂಗಾರಿ ಗಳಂ ಪೋಲ್ತುವು (ಪಂರಾಮಾ. ೩-೯೫); ಮೊರೆಯದ ತುಂಬಿಯುಂ ಕುರುಳ ಸಂದಣಿ ಸೋಲಿಸೆ ಜಕ್ಕವಕ್ಕಿಯಂ ಪರಿವಡೆದಿರ್ದ ತೋರಮೊಲೆ ಬಗ್ಗಿಸೆ (ಕಬ್ಬಿಗಕಾ. ೧೧೨); ಮುಡಿ ತೋರಮೊಲೆಯ ಭಾರಗಳಿಂದಲುಂಗುರವಿಡಿನಡು ಬಳುಕುವಂತಿಹರು (ಪೋಹತ. ೨-४೨) ; ನೀರೆಱೆವಬಲಾಜನದಾ ತೋರ ಮೊಲೆಗಳಿಗೆಱಗಿದ ಪಾಂಥರ ದಿಟ್ಟಿ ತೋಱಿದುವಾವಿಷತೆಯನು (ಕಂಪವಿ. ೨-೫४). [ ತೋರ + ಮೊಲೆ$_1$ ]

**ತೋರಮೊಲ್ಲೆ** (ನಾ). ದೊಡ್ಡ ಜಾತಿಯ ಮೊಲ್ಲೆ : ಭೃಂಗ ಕೈದುಡುಕದ ಸೌರಭ್ಯವಾಂತ ಪುಷ್ಪಂಗಳ ತೋರಮೊಲ್ಲೆಗಳ . . . ತಂದಿತ್ತು (ಪೋಹತ. ४-೫೦). [ ತೋರ + ಮೊಲ್ಲೆ ]

**ತೋರವಜ್ಜೆ** (ನಾ). ದೊಡ್ಡ ಹೆಜ್ಜೆ ; ಅಗಲವಾದ ಪಾದ: ಮನವೊಳಸಿ ಮೆಲ್ಲ ಸಲ್ಲಕೀಪಲ್ಲವಂಗಳಲ್ಲಲ್ಲಿಗುಡಿದುಡಿದು ಬೀಟುತ್ತಿರೆ ಪೋದ ಮದ ವಾರಣಂಗಳ ತೋರವಜ್ಜೆಗಳುಮಂ (ಕುಸುಮಾ. ೧४-೨೯ ವ).

[ ತೋರ + ಪಜ್ಜೆ ]

**ತೋರವಣ್** (ನಾ). ದೊಡ್ಡದಾಗಿರುವ ಹಣ್ಣು : ಅವ್ರುದ ತೋರವಣ್ಗಳೊಂದಱ ರಸದಾತುಗಾಣದೆ ದಱೊಂದು ಶುಕಂ ಮಧುಸಮ್ಮದೋತ್ಸುಕಂ (ಚಂದ್ರಪು. ೭-೪೭) ; ಕಾಯ್ವೇಱಿದ ತೆಂಗು ತೋರಗೊನೆವೇಱಿದ ಕಂಚಳವಾಟಿ ತೋರವಣ್ವೇಱಿದ ಬಕ್ಕೆ (ಅನಂಪು. ೧-೭೮).
[ ತೋರ + ಪಣ್₃ ]

**ತೋರವಣ್ಗೊನೆ** (ನಾ). ದೊಡ್ಡ ಹಣ್ಣುಳ್ಳ ಕೊಂಬೆ : ಎಳವಲಸು ನಿಜಸ್ಕಂಧಾವಳಂಬಿಯೆನಿಸಿರ್ದ ತೋರವಣ್ಗೊನೆಯಿಂ ಕಣ್ಗೊಳಿಸಿತ್ತು (ಚಂದ್ರಪು. ೭-೮೩). [ ತೋರವಣ್ + ಗೊನೆ₂ (<ಕೊನೆ₂) ]

**ತೋರವನಿ, ತೋರಹನಿ** (ನಾ). ದಪ್ಪವಾಗಿರುವ ಹನಿ,-ಬಿಂದು : ಸುರಿದಪುದು ಮುಗಿಲ ಮುತ್ತಿನ ಸರಿ ಗಗನದಿನೆನಿಸಿ ಪೊಳೆವುವೆಳವಿಸಿಲೊಳ್ ಬೆಳ್ಸರಿ ತೋರವನಿಯ ಪುದುವಿನೊಳರಲ್ದ ತಿಳಿಗೊಳನೆ ನಭದೊಳಿಟ್ಟಂತಿರ್ಕುಂ (ಆದಿಪು. ೧೧-೮); ಅಲ್ಲಲ್ಲಿಗೆ ಮುತ್ತಿನ ಪುದಿಯ ಸುಣ್ಣಲಲ್ಗಳಾಲವಾಲಂಗಳಂ ಕೂಡಿರ್ದಡೆವಿಡದೆ ಸುರಿವ ತೋರವನಿಗಳಂ (ಲೀಲಾಉ. ೨೦೭); ಕಾರ ತೋರವನಿ ಚಾದಗೆಗೆ ಭಾರವೆ ಶಿವನ ಕರುಣಮೆನಗಿದಿರ್ವಾರೆ ವಿಚಾರವೆ (ಗಿರಿಕ. ೧೦-೩೭ ವ). **ತೋರಹನಿ**: ಕಣ್ಣೀರ ಕೋಡಿ ಹರಿಯಿತು. ತಟ್ಟೆಯಲ್ಲಿ ಅನ್ನದಲ್ಲಿ ಬಿದ್ದವು ಆ ಕಣ್ಣೀರ ತೋರಹನಿಗಳು (ಸುವಸಂ. ೧೯).
[ ತೋರ + ಪನಿ₂ ]

**ತೋರವೆಟ್ಟು** (ನಾ). = ತೋರಗಿರಿ : ಎಸೆವಲಗೋರ್ಂಚಲಂ ತಳೆದ ಪುಲ್ಲಿಗೆ ಪೂವಿನ ಸಂತ ಕೋಂಬಿನಿಂ ಮಿಸುಗುವ ಮಾಮರಂ ಪೆಸರ ಮಾಳಿಗೆ ಮಾಡಿದ ತೋರವೆಟ್ಟುಗಳ್ (ಕಬ್ಬಿಕಾ. ೦೦೧). [ ತೋರ + ಬೆಟ್ಟು₂ ]

**ತೋರವೆಣ** (ನಾ). ದೊಡ್ಡ ಹೆಣ; ಗಾತ್ರವಾದ ಶವ: ತೋರವೆಣಂಗಳಂ ತಳೆದು ಭೂತಗಣಂ ಕುಣಿದಾಡುವಂತಿರಲ್ . . . ಸುತ್ತಲುಂ ವಾರಿಧಿ ಪೋರೆದಪ್ಪಿ ಕವಿವಂತು ಬಿಗುರ್ವಿಸಿದಂ ದಶಾನನಂ (ಪಂಆಮೂ. ೯-೧೮೯).
[ ತೋರ + ಪೆಣ ]

**ತೋರಶಿಖೆ** (ನಾ). ದಪ್ಪಗಾತ್ರದ ಜುಟ್ಟು (?) : ದುಗುಲದಿಂದ ಜೀಗಿ ತೋರಶಿಖೆಯನು ಧರಿಸಿ (ಚಿಕಸ. ೧೭). [ ತೋರ + ಶಿಖೆ ]

**ತೋರಹತ್ತ** (ನಾ). ೧. ದೊಡ್ಡ ಸೊಂಡಿಲು: ಆ ವಾರಣದ ತೋರಹತ್ತಮಾನುಪೂರ್ವಿ ಸ್ಥೂಳವಮುಪಾಭೀಳಮುಮತಿಪ್ರಲಂಬಮುಮಪ್ಪಾಗೆ (ಅನಂಪು. ೧೩-೩೦ ವ); ಸೆಲ್ಲಿಯ ಕಾಯ್ಗಳಂ ಬಡಿಗೆಕೊಂಡವ್ರೊಲೆತ್ತಿದ ತೋರಹತ್ತದಿಂ ಜಲ್ಲನೆ ತುಂಬಿಗಳ್ ಕೆದಱಿ ಬಂದುವು ಬಿಂಕದಿನಂಕದಾನೆಗಳ್ (ಕಬ್ಬಿಕಾ. ೨೦೩) ; ಹೇಱಿದ ಹೇರಂಬುಗಳನಿಕ್ಕಡಿ ಮಾಡಿ ತೋಱಿದ ತೋರಹತ್ತದಲಿ (ಕೋಹಕ. ೩೮-೪೭). ೨. (ಶಕ್ತಿಯುತವಾದ) ಕೈಗಳುಳ್ಳವನು ; ಶೂರ : "ತೋರಹತ್ತನೆನೆ ತಾಂ ರಣಧೀರಂ" (ಭಾರನಿ. ೩೪) ; ಭುಜಬಳದಳವಿಂ ಭೀಮನಿಂ ತೋರಹತ್ತಂ ಬಳನಿಂದಂ ತೋರಹತ್ತಂ (ಎಕ. V, ಅರಸೀ. ೯-೫ ; 1286) ; ಬೆಳೆದವೊ ಕೈಕಾಲು ನೀಲಾಚಲಕೆ ಹೇಳೆನೆ ಮುಗಿಲ ಮುಡುಕುವ ತಲೆಯ ಜೋಕೆಯ ತೋರಹತ್ತನ ಕಂಡು ಕುರುಸೇನೆ (ಕುವ್ಯಾದ್ರೌ. ೧೫-೫೧); ಬೈದು ಬೆರಸುವ ತೋರಹತ್ತರ ಕೈದುಗಳ ಹೊಳೆಹೊಳೆವ ಧಾರೆಯ ಮೈದಡಿಗೆ . . . ಪಾರುಶದ ಮುಖ್ಯರು ಸಂದಱಿದಿರಾಗಿ (ನಿಭಾಗ. ೮-೧೭-೩೭). ೩. ಶೌರ್ಯ ; ಸಾಹಸ: ನೀರೊಳು ಪೊಕ್ಕ ರಕ್ಕಸನ ಘೋರಾಕೃತಿವೆತ್ತು ಷಾನಾಗಿ ಮಡುಹಿದ ತೋರಹತ್ತವ ತೋಱಿಸ್ದೊಡನೆ (ಮೋಹತ. ೪೦-೧೯). ೪. ಮಲ್ಲಯುದ್ಧದಲ್ಲಿ ಒಂದು ವರಸೆ : ಮಿಕ್ಕುದು ವಜ್ರಪಾತಮುಮನೆಂಬಿನಮುಬ್ಬಸಮಾದ ತೋರಹತ್ತಕ್ಕೆ ತಗುಳ್ದು ಪತ್ತಿಸುವ ಮಾನಸಗೋಳಮಪ್ಪ ಡೊಕ್ಕರಕ್ಕಿಕ್ಕಿದ ವಜ್ರಲೇಪಮೆನೆ ಪತ್ತುವ ಲಗ್ಗೆಗೆ ಮಾರಿಯೊಳ್ ಮೊಗಂಬೊಕ್ಕವೊಲಾಗೆ ಬೆರ್ಚಿದನವಂ (ಚಂದ್ರಪು. ೫-೮೦) ; ಏರಾವತಂ ಮಲ್ಲವೇಷದೊಳಿದಿರಾದೊಡಂ ತೋರಹತ್ತದೊಳಂ ತಿವಿದು ತಿರಿಪುವ . . . ಮಲ್ಲರ ನೆರವಿಗಳೊಳು (ಗಿರಿಕ. ೩-೧೦೫ ವ) ; ಇರ್ವರ ಚಮತ್ಕಾರಕರ್ವರೇ ಸಾಟಿಯೆನಲು ವರಶಿರೋಪಲಯದಿಂ ಸಿಲ್ಕಿವರ್ ತೋರಹತ್ತದೆ ತವಕದಿಂ ಪಿಡಿವರು (ಚಬಪು. ೨೫-೩೪) ; ತಳಹತ್ತಂ ದಣುವಟ್ಟೆ ಖೊಪ್ಪರಮುರೋಬಾಧಂ ... ಭುಜಗಬಂಧಂ ತೋರಹತ್ತಂ ಶಿರೋವಳಯಂ ಬಾಹುತಳಂ ಚಮತ್ಕರಿಸೆ ನಾನಾ ಕೌಶಲಂದೋಱಿದರ್ (ಶಬಶಂ. ೪-೭೫). 'ತಳಹತ್ತ' ಪರಾ.
[ ತೋರ + ಹತ್ತ₂./ತೆಲು. ತೋರಹತ್ತ ]

**ತೋರಹನಿ** 'ತೋರವನಿ' ನೋ.

**ತೋರಹಾರ** (ನಾ). ದೊಡ್ಡದಾದ ಮಾಲೆ ; ದೊಡ್ಡ ಗಾತ್ರದ ಸರ : ಪಸರಿಸಿದ ತೋರಹಾರದ ಪೊಸವೆಳ್ದಿಂಗಳುಮನಮರ್ದ ಪೆರ್ದುಡುಗೆಗಳೊಳ್ ಮಿಸುಗುವ ಪೊಸ ಮಾಣಿಕದೆಳವಿಸಿಲುಮನೊಡಗಾಣಲಾದುದಾಸ್ಥಾಯಿಕೆಯೊಳ್ (ಆದಿಪು. ೯-೫) ; ಪ್ರಮದದೊಳೆನ್ನ ಕಂಧರದೊಳಿದಿರುಳಿಕ್ಕಿದ ತೋರಹಾರಮುಂ ಹಿಮಗೃಹ ಪ್ರವೃತ್ತಕಮಂ . . . ಆ ರಮಣಿಯದೊಂದು ಭಾವಗತಮಂ ನೆಱಸೂಚಿಸೆ (ಕಾದಂಉ. ೩೪೭); ಸುತ್ತದೆ ನೆಲೆಗೊಂಡಂ ಪರಿವೃತ್ತೋನ್ನತ ಚಂದ್ರನಗಜೆಯಾಸ್ಯದೊಳೆಂದು ನ್ಮತ್ತತೆಯೊಳ್ ತಾರಗೆಗಳ್ ಸುತ್ತಿದುವೆನೆ ತೋರಹಾರವಂ ರಾಜಿಸಿದರ್ (ಗಿರಿಕ. ೧೦-೩೭). [ ತೋರ + ಹಾರ₁ ]

**ತೋರಱಿಕೆ** (ನಾ). ಹೆಚ್ಚಿನ ಪ್ರಸಿದ್ಧಿ ; ಅತಿಶಯವಾದ ಕೀರ್ತಿ : ಅಗ್ಗದ ಬೀರರ್ ತೆಗೆದೋಡೆ ತೋರಱಿಕೆಯಾಳ್ಗಳ್ ಬಳ್ಕ ಬೆಂಬೀಱಿ (ಕಬ್ಬಿಕಾ. ೩೦೪). [ ತೋರ + ಅಱಿಕೆ ]

**ತೋರಾಟಿ** (ನಾ). ಒಂದು ಬಗೆಯ ಮರ : ತೋರಾಟಿ (ಕೌಂಟಲ) . . . ಇದರ ಎಣ್ಣೆ ಔಷಧಕ್ಕೂ ದೀಪಕ್ಕೂ ಬರುತ್ತದೆ (ಕಭಾಗ. ೪೧). 'ತೋರತ್ತಿ' ಪರಾ. [ ? ]

**ತೋರಾಯ** (ನಾ). ಬಹಳ ಸಾಮರ್ಥ್ಯ ; ಅತಿ ಪರಾಕ್ರಮ : ನಾರಾಯಣಂ ಮಹಾರೋಷದಿಂದೆಸುತಿರ್ಪ ತೋರಾಯದೆಸುಗೆಯಿಂ ತರಹರಿಸದಾಕ್ಷಣಂ ಪೂರಾಯ ಗಾಯದಿಂ ಬಲಮಳಿಯೆ ಕಂಡು ಸಂಹಾರಾವತಾರನಾಗಿ (ಚಬಪು. ೩೨-೮). [ ತೋರ + ಆಯ₃ ]

**ತೋರಿ** (ನಾ). (ಕರಾ). ಒಂದು ಬಗೆಯ ವಿಮಾನಂ. [ ? ]

**ತೋರಿಕೆ** 'ತೋಱಿಕೆ' ನೋ.

**ತೋರಿತು, ತೋರಿತ್ತು, ತೋರಿದಂ** (ನಾ). ೧. ದೊಡ್ಡದಾಗಿರುವುದಂ; ತೋರವಾದುದು: (?). **ತೋರಿತ್ತು** : ೧. ತುಕಾರಾಂತಕ್ಕೆ ವಿಕಲ್ಪದಿಂ ದ್ವಿತ್ವಮುಂಟು . . . ತೋರಿತ್ತು; ನೇರಿತ್ತು . . . ಬಲ್ಲಿತ್ತು ಎಂಬಂತೆ ನೋಡಿಕೊಳ್ವುದು (ಶಮದ. ೭೭ ಪ್ರಯೋ). ೨. ಅಗಲವಾದಂದಂ ; ವಿಶಾಲವಾಗಿರುವುದು : ಪೂಂಗೋಂಟೆಯಂ ತೋರಿತ್ತಾದಗಳೆಯ್ದೆ ಸುತ್ತಿ ಮೆಱೆಗುಂ (ಬಾಧಪು. ೪-೩೭). **ತೋರಿದು** : ೧. ಪಾದರಿ ಪೂತುವು ತೋರಿದುವಾದುವು ಮಲ್ಲಿಗೆಗಳೆಯ್ದೆ ಪಣ್ತುವು ಮಾವು (ಆದಿಪು. ೧೧-೮೭); ತೋರಿದುವಾದ ಮಲ್ಲಿಗೆಯ ಮೊಗ್ಗೆಗಳೊಳ್ ಮೊಗವೂಱಿ ಬಿರ್ದು ಭೋಭೋರ್ರೆನೆ ಪಾಯ್ದು ಬಂಡಿನೊಳ್ ಬೆಂಡೊಗೆದು . . . ಕಾಱಿ ಕಡಲಿಟ್ಟುವು ಮತ್ತಮಧುವ್ರತಾಳಿಗಳ್ (ಲೀಲಾವ. ೯-೧೧೭) ; ನಾರಿಯ . . . ತೋರಿದುವಾದ ನಿತಂಬಂ ತೊಡೆಯಡಿಗಳು ಕಡುಸೊಗಸಿದುವು (ಆಯುಕಾ. ೨-೭).

**ತೋರಿದಂ** = ತೋರವಾದವನು : ಒಳ್ಳಿದಂ, ತೆಳ್ಳಿದಂ, ಮೆಲ್ಲಿದಂ, ಬೆಟ್ಟಿದಂ, ತೋರಿದಂ (ಶಮದ. ೧೫೨ ಪ್ರಯೋ). [ <ತೋರ ]

**ತೋರಿತ್ತು** 'ತೋರಿತು' ನೋ.

**ತೋರಿದು** 'ತೋರಿತು' ನೋ.

**ತೋರಿಸು** 'ತೋಱಿಸು' ನೋ.

**ತೋರು** 'ತೋಱು' ನೋ.

**ತೋರುಗಣ್ಣು** (ನಾ). ಸನ್ನೆ ಮಾಡುವ ಕಣ್ಣು ; ಸೂಚಿಸುವ ಕಣ್ಣು : ಕುಳಿಂದಕನು ಚಂದ್ರಹಾಸನ ಕಡೆಗೆ ತೋರುಗಣ್ಣಾಗುತ್ತಾನೆ (ಚಂದ್ರಸ. ೭೭).
[ ತೋರು (<ತೋಱು) + ಕಣ್ಣು (<ಕಣ್) ]

**ತೋರುಗದ್ದಿಗೆ** (ನಾ). [ವೀಶೈ] ಶರಣರ ಹೆಸರಿನಲ್ಲಿ ನಿರ್ಮಿಸಿದ ನಾಮಮಾತ್ರ ಗದ್ದುಗೆ ; ತೋರಿಕೆಗಾಗಿ ಕಟ್ಟಿಸಿದ ಗದ್ದುಗೆ : ತೋರು ಗದ್ದಿಗೆ = ಶರಣರ ಹೆಸರಿನಲ್ಲಿ ನಿರ್ಮಿಸಿದ ನಾಮಮಾತ್ರ ಗದ್ದಿಗೆಗಳು (ನಿಜವಾದ ಗದ್ದಿಗೆಗಳಿಗೆ ವಿಭಿನ್ನವಾದುವು) (ವೀಶೈಪಾ. ೨೯೭).
[ ತೋರು (<ತೋಱು) + ಗದ್ದಿಗೆ (<ಗರ್ದುಗೆ) ]

**ತೋರುಗಪ್ಪುಕ** (ನಾ). (?) : "ತೋರುಗಪ್ಪುಕಮೆನಲ್ ಮೃಗಹಿಂಸೆಗೆ" (ಕಕರ. ೧೦). 'ಕಪ್ಪುಕ' ಪರಾ. [ ? ]

**ತೋರುಗಾಣಿಕೆ** (ನಾ). ತೋರಿಕೆ ; ನಟನೆ : ಎಲ್ಲ ಎಷ್ಟು ಸುಳ್ಳು-ಕೆಲವು ಸಾರಿ ತೋರುಗಾಣಿಕೆ ಬೇರೆ (ಪ್ರಕ್ಕ. ೫೨).
[ ತೋರು (<ತೋಱು) + ಕಾಣಿಕೆ (<ಕಾಣ್ಕೆ) ]

**ತೋರುಬೆರಳು, ತೋರಬೆರಳು** (ನಾ). ಹೆಬ್ಬೆರಳಿನ ಪಕ್ಕದ ಬೆರಳು ; ನಿರ್ದೇಶಿಸಲು ಬಳಸುವ ಬೆರಳು ; ತರ್ಜನಿ : ಎಡಗೈ ತೋರು ಬೆರಳನ್ನು ತುಟಿಯ ಮೇಲಿರಿಸಿ . . . ಬಾಲೆ ಅಣಕವಾಡಿದಳು (ಮುದ್ದುಹ. ೮೯) ; ಆದರೆ ಅದು ನಿಂತಿರುವುದು ಆ ಪರಮಪ್ರಕಾಶದೆಡೆ ತೋರು ಬೆರಳಾಗಿ ಮಾತ್ರ (ಸೌಂದಸ. ೯೪). **ತೋರಬೆರಳು** : ತನ್ನ ಕೊರಳಿಗೆ ಅಡ್ಡವಾಗಿ ತೋರಬೆರಳನ್ನೆಳೆದುಕೊಳ್ಳುತ್ತ (ವೀರಯೋ. ೫೪) ; ರಾಜನ ಬಲಗೈಯಿನ ತೋರಬೆರಳು (ಧೂರಾಚಿ. ೯೪).
[ ತೋರು (<ತೋಱು) + ಬೆರಳು (<ಬೆರಲ್) ]

**ತೋರುಮನೆ** (ನಾ). ಪ್ರದರ್ಶನಾಲಯ : ವಸ್ತುಸಂಗ್ರಹಾಲಯ : ಗೋಡೆ ಗೋಡೆಗಳಲ್ಲಿ ಕಣ್ಣಲೆವ ಕಡೆಗಳಲಿ, ಸುತ್ತಣೆಲ್ಲೆಡೆಗಳಲಿ ಮೆರೆದುವಾ ಕುಂಭಕರ್ಣನ ಬನದವೇಂಟೆಯು ಕವರ್ತೆಗಳ್, ತೋರು ಮನೆಯಲ್ಲಿ ! (ಶ್ರೀರಾಮಾ. ೪೫೫-೨೭೯). [ತೋರು (<ತೋಱು) + ಮನೆ]

**ತೋರುಮರ** (ನಾ). ದಾರಿ ತೋರಿಸುವ ಮರ; ಕೈಮರ: ಒಳದಾರಿಗಳ ಕತ್ತರಿ, ಚೌಕಗಳಲ್ಲಿ ತೋರುಮರಗಳಿಲ್ಲದಿದ್ದರೆ ಪ್ರಯಾಣ ಕಷ್ಟವಾಗುತ್ತದೆ (ರೂಢಿ) [ ತೋರು (<ತೋಱು) + ಮರ$_1$ ]

**ತೋರುವಳಿ** (ನಾ). ಹೊರಕ್ಕೆ ಕಾಣಿಸುವ ರೀತಿ ; ತೋರಿಕೆ : ತಿಕ್ಕುವ ವಕ್ಕೆ ಸುರಿಯಲು, ಚಿಮುಕಿಸಲು, ಬೊಕ್ಕಗೊಳಿಸಲೋ, ಕಾಂತಿ ಹೆಚ್ಚಿಸಲೋ, ಗಮನ ಸೆಳೆವಂತೆ ಮಾಡಲೋ ತೋರುವಳಿಯನ್ನು ಬದಲಾಯಿಸಲೋ . . . ಬಳಸುವ ಆದರೆ ಸಾಬೂನಲ್ಲದ ವಸ್ತುಗಳಿಗೆ ಅಂಗರಾಗವದಾರ್ಥಗಳೆಂದು ಹೆಸರು (ಕಪಿಕೋ. I, ೩೨).
[ ತೋರು (<ತೋಱು) + -ವಳಿ$_1$ ]

**ತೋರುವೊತ್ತೆ** 'ತೋರೊತ್ತೆ' ನೋ.

**ತೋರ್ಪೈಸು** (ಕ್ರಿ). ದೊಡ್ಡದಾಗು ; ವಿಸ್ತಾರವಾಗು : ಬಡತನದಿ ನವೆದವರು ಸುರುಚಿರ ಸುಭೋಜನವನುಣಲು ಹರೆ ಹೆಚ್ಚುವೊಲು ಬಡನಡುವು ತೋರ್ಪೈಸಲು (ನವಮೋ. ೧೫೮-೮). [ ತೋರ + -ಇಸು$_1$ ]

**ತೋರೊತ್ತೆ, ತೋರುವೊತ್ತೆ** (ನಾ). = ತೋರಡವು : ಅವನು ಮನೆಯನ್ನು ತೋರೊತ್ತೆ ಇಟ್ಟಿದ್ದಾನೆ (ರೂಢಿ). **ತೋರುವೊತ್ತೆ** : ಅವರು ಹೊಲವನ್ನು ತೋರುವೊತ್ತೆ ಹಾಕಿ ಸಾವಿರರೂಪಾಯಿ ತಂದಿದ್ದಾರೆ (ರೂಢಿ). [ ತೋರು (<ತೋಱು) + ಒತ್ತೆ$_1$ ]

**ತೋರ್ಕೆ** (ನಾ). ೧. ಕಾಣಿಸುವಿಕೆ ; ತೋರುವಿಕೆ : "ಉಱೆ ತೋರ್ಪು ತೋರ್ಕೆಯೊಂದುಂ" (ಕವಿಶಂ. ೨೦೫); ಯಕ್ಷರೂಪಿನಿಂ ತೋರ್ಕೆಗೊಳಗಾಗಿ (ರೇವಣ. ೬-೨೦) ; ಕೀಟಗಳ ಮೊಟ್ಟೆಗಳು ಅವನ್ನಿಟ್ಟ ಕೀಟಗಳಷ್ಟು ಗಾತ್ರ, ಆಕಾರ, ತೋರ್ಕೆಗಳಲ್ಲಿ ವ್ಯತ್ಯಾಸವಾಗಿಲ್ಲ (ಕೀಟಬಿ. ೯೭). ೨. ಪ್ರದರ್ಶನ ; ದೃಷ್ಟಾಂತ ಪಡಿಸುವಿಕೆ : ಇದು ನಿನ್ನರ್ಚಿಸುವಿಕ್ಷುಚಾಪವಿದು ನಿನ್ನೀ ಲೋಕಮಂ ಕೈಗೆ ಮಾಡಿದ ಪುಷ್ಪಾಸ್ತ್ರವಿದಲ್ತೆ ನಿನ್ನ ವಿಜಯಪ್ರಾರಂಭದೊಳ್ ತೋರ್ಕೆಗೆತ್ತಿದ ಚೈತ್ರಧ್ವಜಂ (ಆದಿಪು. ೧೧-೧೭) ; ಬಾಗದ ತೋರ್ಕೆಗಂ ನೆಗಟ್ಟ ಬೀರದಳರ್ಕೆಗದೊಳ್ಪನಟ್ಟಿದುದೋಗದವರ್ಕೆಗು ಸಿರಿಯ ಸಾರ್ಕೆಗಂ . . . ಸ್ತ್ರೀವಿತತಸಾಗರನಾಗರಮಾಗದಿರ್ಕೆಮೇ (ಶಾಂತಿಪು. ೧-೬೮). ೩. ಆಕಾರ ; ರೂಪು ; ಗಾತ್ರ : ಕುದುರೆಯ ಬಣ್ಣದಿಂ ರಥದ ತೋರ್ಕೆಯಿನೆತ್ತಿದ ಚಿತ್ರಕೇತುವೃಂದದ ಕುಱುಪಿಂದ . . . ಒರ್ವರೊರ್ವರನೆ ಮಚ್ಚರದಿಂ ಗಱಿಸನ್ನೆಗೆಯ್ವು (ಪಂಪಭಾ. ೧೦-೮೭) ; ಬೆಡಂಗಿನ ತೋರ್ಕೆಗೆ ನೋಡ ನಾಡ ಸೌಂದರಿಯರೊಳಾವಗಂ ಸೆಣಸುವಳ್ ಸಲೆ ಗಾಡಿಗಮುನ್ನತಿಕ್ಕೆಗಂ (ಧರ್ಮಾಮೃ. ೮-೧೭೭); ಘನಪೃಥುನಿರ್ದ ತಾಣಂ ಘನಮಾಗಲ್ವೇಳ್ಕುಮೆಂಬ ಬಗೆಯಿಂದೆಂಬಾತಿನಿಯಳ ತನೂದರಂ ತಾಂ ಘನಮಾಗಿಯ ಬಳೆದು ತೋರ್ಕೆಯಂ ತಳೆದಿರ್ಕುಂ (ಜಾರಪು. ೪-೩೭). ೪. ಹೋಲಿಕೆ ; ಸಾದೃಶ್ಯ : ವರಶಬ್ದಾಲಂಕಾರದ ವಿರಚನೆಗಳ್ವೀಚಿಸ್ತೊಡೊಂದ ತೋರ್ಕೆಗಳಿಂತುಂ ಪೊರೆದಿರಲು (ಕವಿರಾ. ೨-೪೮) ; ೫. ಆಡಂಬರ; ಡಂಬ; ನಟನೆ : ಕೆಳಗಣದೊಂದು ತಾಣದೊಳಗಿರ್ದಮಳ್ವಾಪರೆಯಂತೆ ತೋರ್ಕೆಯುರ್ಬಳಿಯದೆ ತಳ್ತ ಪೆರ್ಮಾಱೆಗಳೊಳ್ (ಕಾವ್ಯಸಾ. ೬೦೦) ; ತಳೆಗುಂ ತೋರ್ಕೆಯ ಬಿತ್ತರಂಬಡೆದು ಬತ್ತಿತೆಂಬಪೋಲಿರ್ದ ಪೆಬ್ರೊಳೆ (ಶಾಕುಂತ. ೧೧೧-೦೭೦) ; ದಶಾನನಂ ನಿನ್ನನೆಮ್ಮಂ ವಂಚಿಸಲ್ಕೆಂದೆ ತೋರ್ಕೆಯಂತಃಕಲಹಮಂ ರಚಿಸಿ . . . ನಿರಸನಂ ಗೆಯ್ದಿರ್ಪನೇಂ ಲಂಕೆಯಿಂ ? (ಶ್ರೀರಾಮಾ. ೭೦೩-೫೪). ೬. ಅರ್ಪಣೆ; ದಾನ. 'ತೋರ್ಕೆಗೊಡು' ಪರಾ. [ ತೋಱ್ (<ತೋಱು) + -ಕೆ ]

**ತೋರ್ಕೆಗಿಡು** (ಕ್ರಿ). ಕಾಣದಾಗು ; ಅಸ್ತವಾಗು : ರೂಪುಗೆಟ್ಟುದು ದೆಸೆ ತೋರ್ಕೆಗೆಟ್ಟುದಿನಮಂಡಲಂ (ಜಗಿವಿ. ೭-೮೦).
[ ತೋರ್ಕೆ + ಕಿಡು (< ಕಿಡು$_1$) ]

**ತೋರ್ಕೆಗುಡು** 'ತೋರ್ಕೆಗೊಡು' ನೋ.

**ತೋರ್ಕೆಗೊಡು, ತೋರ್ಕೆಗುಡು** (ಕ್ರಿ). ತೋರಿಸಿ ಕೊಡು ; ಒಪ್ಪಿಸಿ ಕೊಡು ; ಅರ್ಪಿಸು ; ದಾನವಾಗಿ ಕೊಡು: ಅರ್ಕಕೀರ್ತಿಗೆ ರಾಜ್ಯವಿರಲೆಂದು ಮುಕ್ತಿಗೆ ತೋರ್ಕೆಗೊಟ್ಟೆಯ್ದಲೊ ತವಕೆ (ಭರತ ೫೨-೧೧೪). **ತೋರ್ಕೆಗುಡು** : ನಿನಗೆನ್ನಂ ಬಡದುಣ್ಮದೀ ಬೆವಂಗ್ ಕೈನೀರಾಗಿರಲ್ತೋರ್ಕೆಗೊಟ್ಟನನ್ನೆಗಂ (ಕಾದಂಬ. ೫೯).
[ ತೋರ್ಕೆ + ಕೊಡು$_1$ ]

**ತೋರ್ಕೆಗೊಳ್** (ಕ್ರಿ). ಕಾಣು ; ರೂಪತಾಳು : ವಿಶ್ವರೂಪದೊಳಜಾಂಡದ ಮಂಡಲಿ ತೋರ್ಕೆಗೊಂಡುದು (ಚಕವಿ. ೩-೫೩).
[ ತೋರ್ಕೆ + ಕೊಳ್$_1$ ]

**ತೋರ್ಕೆವಡೆ** (ಕ್ರಿ). ೧. ಕಾಣು ; ಪ್ರಕಟವಾಗು ; ಸ್ಪಷ್ಟವಾಗು : "ವಿಗಿ ತೆಱಂಬೊಳೆದುದೆಂದೆನೆ ತೋರ್ಕೆವಡೆದ ಕಾಂತಿಗೆ ನಾಮಂ" (ಕಲ್ಯಕೃ. ೫೪) ; ಸೊಕ್ಕೊಗೆದಬ್ಬಿಯ ಮಧ್ಯದೊಳಿರ್ದ ಸಿಂಹಳನ ಮದಕಿದೌಷಧ ಮಣಿಕುಂ ತೋರ್ಕೆವಡೆದೆಸೆವ ಬಾಳು ಪೊಣರ್ಗೆ ಪೊಡೆಯಿಪುದು ಭೇರಿಯುಂ ಭರದಿಂದಂ (ರಾಜಶೇ. ೫-೧೨೮). ೨. ಪ್ರಸಿದ್ಧಿಯನ್ನು ಪಡೆ, -ಹೊಂದು : ಬೆಳ್ಳಕ್ಕರಿಗರ ಕಲ್ಪಿ ತೋರ್ಕೆವಡೆಯದು (ನೀತಿವಂ. I, ೨೧).
[ ತೋರ್ಕೆ + ಪಡೆ$_1$ ]

**ತೋರ್ಕೆವರ್** (ಕ್ರಿ). ಸ್ಪಷ್ಟವಾಗು; ಕಾಣುವಂತಾಗು : ಪದೆದಬ್ಬೆಱರ್ಕೆ ತೋರ್ಕೆ[ಪಾಠಾಂ. ತೋಳ್ಗೆ]ವಂದೂದವಿರೆ ನಾಣನೊಕ್ಕರ್ದ ವಿಚಿತ್ರವಿಕಾರ ರಸಾಂತರಂಗದೊಳ್ ಪುದಿದಿರೆ ಮಾಣದಾಡಿಸಿದನಾತನನಂಗಜನೆಂಬ ನಟ್ಟುವಂ (ಆದಿಪು. ೪-೧೫). [ ತೋರ್ಕೆ + ಬರ್$_1$ ]

**ತೋರ್ಕೆವೆಚು** (ಕ್ರಿ). = ತೋರ್ಕೆಗೊಳ್: ಶರ್ಕರೆಯನು ಒಡಿವಾಗಳಂಗ್ಯೆಯ ಸಂಪರ್ಕದಿ ಸಿಂಧೂರದಂತೆ ತೋರ್ಕೆವೆತ್ತುದು (ಭರತ. ೧೦-೩೭).
[ ತೋರ್ಕೆ + ವೆಚು$_1$ ]

**ತೋರ್ಕೊಳಿಸು** (ಕ್ರಿ). ತೋರಿಸಂ; ಕಾಣಿಸು; ಪ್ರಕಾಶಪಡಿಸು: ಭೋಗಿಗಂ ಜೋಗಿಗಂ ಕರುಣಿವನನುಭವವಿಂತಿವೆಂದೆನಗೆ ನಿಖಿಲಮುಮನೊಡನೆ ತೋರ್ಕೊಳಿಸುತ್ತೆ (ಸಂಸಪ. ೨೯-೯).
[ <ತೋಱು + ಕೊಳ್$_1$ + – ಇಸು$_3$ ]

**ತೋರ್ತಳದುಳಿ** 'ತೊಟ್ಟುಬಿದಂಬಿ' ನೋ.

**ತೋರ್ಪಡಿಸು** (ಕ್ರಿ). ೧. ತೋರಿಸು ; ವ್ಯಕ್ತಗೊಳಿಸು ; ಪ್ರಕಟಿಸು : ಯೋಗದೊಳಾತ್ಮತತ್ತ್ವವ ಕಡೆ ದಶವಿಧಭೋಗಕಂಗನೆ ಕಡೆಯೆಂದು ಯೋಗ ಶಾಸ್ತ್ರವ ಭೋಗಶಾಸ್ತ್ರವನೆರಡನು ತೂಗಿ ತೋರ್ಪಡಿಸಿ ಪಾಡಿದಳು (ಭರತ. ೧೧-೨೬). ೨. ತೋರು; ಪ್ರಕಟವಾಗಂ : ಸುಸ್ವೇರಭವದ್ವದನದಾ ವಿಂಚಂತಿದೆ ನಿರ್ವ್ಯಾಜದಿ ಮನಕದೇಂ ಸಂಶಯಂ ತೋರ್ಪಡಿಸಿತೆನೆ (ಶಬರು. ೧೯-೨೦).

**ತೋರ್ಪಡಿಸಿಕೊಳ್ಳು** = ೧. ವ್ಯಕ್ತವಾಗು ; ಪ್ರಕಟವಾಗು : ತಾನು ಎಂಬುದು ಎರಡು ಸ್ವರೂಪಗಳಲ್ಲಿ ತೋರ್ಪಡಿಸಿಕೊಳ್ಳಬಹುದು (ಇಸ್ಲಾಂಸಂ. ೨೪೨). ೨. ತೋರಿಸು ; ವ್ಯಕ್ತಪಡಿಸು : ಅವರು ತಮ್ಮ ಅಂತ್ಯಕಾಲ ಸಮೀಪಿಸಿದೆಯೆಂದು ನಿರ್ಧರಿಸಿದ್ದ ಹಾಗೆ ಕಂಡರೂ ನನಗೆ ಬುದ್ಧಿವಾದವನ್ನು ಹೇಳುವಾಗ ಅದನ್ನು ತೋರ್ಪಡಿಸಿಕೊಳ್ಳಲಿಲ್ಲ (ಹಂಗಾಳ್. ೧೩೩). [ ತೋರ್ಪಡು + – ಇಸು$_3$ ]

**ತೋರ್ಪಡು** (ಕ್ರಿ). ೧. ಸ್ಪಷ್ಟವಾಗಿ ಕಾಣು; ತೋರು; ಗೋಚರಿಸು: ಮರಾಳಾವಳಿ ನಗದ ಬಿಲದ್ವಾರದಿಂದೇಳ್ದುದಾಶಾವಳಯಂ ತೋರ್ಪಟ್ಟು ದಟ್ಟಂ ಪಳಚನಲರ್ದುದಟ್ಟಾರಿದಿಂಬಂ ಕಳಂಕಂ ಕಳೆದತ್ತೆಂಬಂತೆ ನೀಡುಂ ತೊಳಗಿತು ಶಿಲದತ್ತಾಪಗಾವಾರಿಪೂರಂ (ರಾಜಶೇ. ೬-೨); ಸೊಂಟದಲ್ಲಿ ಧೋತ್ರ ಅಥವಾ ಇತರ ಬಟ್ಟೆಯಿದ್ದಂತೆ ತೋರ್ಪಡಲಿಲ್ಲ (ಕಪಾಕುಂ. ೧೪). ೨. ಮೇಲಾಗು ; ಪ್ರಸಿದ್ಧವಾಗಂ ; ಶ್ರೇಷ್ಠವಾಗಂ : ಶರಣಾ ಹೊಕ್ಕುದು ಬಂದು ಮಕುಟದ ಗರುವರವನೀಪಾಲಕರು ಮೋಹರಕೆ ತೋರ್ಪಟ್ಟವರು ಭಾರಿಯ ಬಿರುದಿನತಿಬಲರು (ಕುಮ್ಮಾರ್ದ್ರೋ. ೧೬-೨೦).
[ ತೋಱು (<ತೋಱು) + ಪಡು$_1$ ]

**ತೋರ್ಪು**, ತೋಪ್ಪು, ತೋಪು, ತೋಹಪ್ಪು, ತೋಹೆ (ನಾ). ೧. ಕಾಣಿಸುವಿಕೆ ; ತೋರುವಿಕೆ ; ಪ್ರದರ್ಶನ : "ತೋರ್ಪನೆ ಕಾಣ್ಕೆ" (ರನ್ನಕಂ. ೮೨) ; "ತೋರ್ಪು ತೋರ್ಕೆಯೊಳಂ ವಿಗೆ ತೋರ್ಕುಂ" (ಶಬ್ದಾನು. ೭);ದೀನನೇತ್ರಂ ತುಷಲಘುತರಮಾತ್ರಂ ಕರಂ ಪೂರ್ದಿ ತೋರ್ಪಿಂ ಜನವುಂ ಬೇಳ್ಪಾಸೆಯಿಂ ಸಾವಿನ ಪರಿಯೆನಿಪೀ ದೈನ್ಯಮಂ ಬಿಟ್ಟು ನಿಮ್ಮಂ ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷಂ ರಕ್ಷಿಪ್ಪುದೆನ್ನಂ (ರಕ್ಷಾಶ. ೨೦); ತೋರ್ಪೆಂದು ತೋರ್ಕೆ (ತೋರ್ಪೆ) (ಶಮದ. ೧೧೩). ೨. ಆಕಾರ; ಸ್ವರೂಪ. 'ತೋರ್ಪುಗೆಡು' ಪರಾ. **ತೋಪ್ಪು**:. ೧. ವ್ಯಾಪಿಸಿಯ ನೀವ್ ಮಲ್ಲವಿದ್ಯೆಯ ತೋಪ ಮಚಿಪುದು ಭೀಮನಿದ್ದರ ಆ ಪುರ ದೊಳೊತೊತ್ತಿ ಹೊಗಳಿಸಿ ನಿಮ್ಮ ಬಿರುದುಗಳ (ಕುಮ್ಮಾವಿ. ೭೧೪. ೪-೧೪). ೩. (ಬೇಟೆಯಲ್ಲಿ ಒಡ್ಡುವ) ಆಕರ್ಷಣೆ ; ಆಮಿಷ ; ಆಕರ್ಷಕ ವಸ್ತು ಧರಣೀಪತಿ ಚಂಡಶಾಸನಂಬೆರಸು ವನಾಂತರದೊಳ್ ತೆರೆಯ ತೋಪಿನ ಸೋಹಿನ ನೀರ ಬೇಂಟೆಯುರ್ವರೆಗಳನೀಕ್ಷಿಸುತ್ತೆ ಬರೆ (ಅನಂಪು. ೧೧-೪೦) ; ಸೆಱೆಪಿನ ತೋಪಿನ ಪಳಹದ ಕೋಪಿನ ಪಾಳಿವದ ಗೋರಿವೇಂಟೆಗೆ ಮತ್ತಂ ಚಾಪ ಪ್ರವೀಣರುದ್ಧತಕೋವರ್ ನಡೆತಂದರಲ್ಲಿ ಮುಂದೆ ಪುಳಿಂದರ್ (ಸೂಕ್ತಿಸು. ೩-೧೦೪). **ತೋಪು** : 'ತೋವಿಕ್ಕು' ಪರಾ. **ತೋಹಪ್ಪು**: ೩. ತೋಹಿನಶಬರನಂತೆ ಲಾಗಿನ ವ್ಯಾಘ್ರದಂತೆ ಆಡುವ ವಿಧಾನದಂತೆ ಇಂತೀ ವೇಷ ಸಹಜ (ವಚನವಾ. ೩೪-೧೪೧) ; ಜಾಳವಣಿಗಳ ಬಲೆಯ ಠಕ್ಕಿನ ತೌಳಿಗಳ ತೋಹುಗಳ ನಗೆಗಳ ಮೇಲುವಮುದ್ದಿನ ಬೇಟೆಕಾತಿಯರ್ಬ್ಬೆದಿದರು ವನವ (ತೊರರಾ. ೧-೩-೩೯). ೪. ಬೇಟೆಯ ಸ್ಥಳ ; (ದೀವದ ನೆರವಿನಿಂದ)ಬೇಟೆಯಾಡಲು ವನ್ಯಮೃಗಗಳನ್ನು ಆಕರ್ಷಿಸುವ ತಾಣ: ನಿಂದು ಬೇಡರ ತೋಹು ಸೋಹುಗಳ ಸಂದಿಯೊಳು (ಕನ್ನರ. ಜೈ. ೧೨೭-೨೦) ; ಬೆಸ್ಕರ ಬಿಗಿ ತೋಹಿನೊಳು ನಿಲ್ಲು ತಿಱಿಯಂಬ ಬಿಡು (ಹರಿಕಾ. ೩-೨೪) ; ಪುಳಿಂದರು ಬಳಸಿ ಬೇಂಟೆಯನೆಯ್ದಿ ಬನದೊಳು ತೋಹಿನಲ್ಲಿರ್ದು (ಬಸಪು. ೧೪-೨) ; ಸಿಂಹಳದ್ವೀಪದಿಂದಮ್ಮ ತೋಹಿಂ ಗೊಂದು ಸಿಂಹಮಾಟೋಪದಿಂ ಬರಲ್ (ಭಾವಚಿಂ. ೩-೧೨); ಹೋಯೆನ್ನಸು ವಿಗ ತೂಣನ ತೋಹಿಗೆ ಸಿಲ್ಕದೆನುತ್ತುಂ ನಿಷ್ಪೆಯು ನೇಹದ ಸಚಹಸಿಗಂ ಶಂಕರನಕ್ಕಟ ಪೂಜೆಗೆ ಸಲ್ವಂ (ಉದ್ಭರೇ. ೩-೪೩); ಉದಕಮಂ ಕೊಳಬಂದ ಮೃಗಗಳ ಬೆದರದಂತೆಸೆಯಲ್ಕೆ ತೋಹಿನ ಹೊದರಿನೊಳು ಕಾದಿರ್ದ ಚಾಪಾಸ್ತ್ರಗಳ ಕೈಕೊಂಡು (ಅನಂರಾ. ೨-೩-೭). ೫. ಕಪಟ ; ಮೋಸ: ಯುಧಿಷ್ಠಿರಾನಾಳ್ವ ದೇಶದೊಳ್ಳಳವು ಕೋಲೆ ಪಾದರಂ ವುಸಿ ನುಸುಳು ವೈರವುಟ್ಟುಳಿ ತೋಹು ಬೆದಜು ಬೆಜ್ಜರ . . . ಅಲಸಿಕೆ ಕರ್ಕಶಂಗಳಿವು ಮೊಳೆದೋಱವು (ಜೈಮಿಭಾ. ೨-೩). ೬. ಗುರಿಯಿಡುವಿಕೆ ; ಸಂಧಾನ ಮಾಡುವುದು : ಬಳಿಕ ನೂಱು ನಿರಂತರಸ್ಥಾಪಳಿವಿಥಾತಿಗೆ ನೂಱು ಲೆಕ್ಕವ ಕಳೆದೆವಿನ್ನೂಱಾನೆ ಪಾರ್ಥನ ಕೋಲ ತೋಹಿನಲಿ (ಕುಮ್ಮಾಗ. ೧೦-೧೧) ; ಚೂರಿಸುವ ಮೊಗಸೂನಿಗೆಯ ಕೊಲ್ಲಾರಿಗಳ ಶರಬಂಡಿಗಳ ಹೊಂದೇರು ಕವಿದುವು ಕೋಲ ಕೋಲಾಹಲದ ತೋಹಿನಲಿ (ಕುಮ್ಮಾಕ. ೨-೪೪); ಬಿಲ್ಲ ತಿರುವಿನ ಕೋಲ ತೋಹಿನ ರಾಮನಿದ್ದನು ನೋಡುತಾಹವವ (ತೊರರಾ. ೪-೩-೧೩) ; ವತ್ತು ರಥಂಗಳಾ ವೆಸರ ಭೂಪನು ಭಾವಿಗೆ ತೋಹನಿಕ್ಕಿ ನೋಡುತ್ತಿರೆ (ಹಂಚಕ. ೭೦-೪೦). ೭. ನೇತೃತ್ವ : ಮುಂದಾಳುತನ ; ಮಾರ್ಗದರ್ಶನ : ಮನುಮುನಿಯತಿವ್ರತಿಗಳೆಲ್ಲರು ನಿಮ್ಮ ತೋಹಿನೊಳಗಿದ್ದರು (ಚನ್ನವ. ಕ. ೩೯೩-೮೩೪); ಘನ ರೌದ್ರಮಯ ದುಗ್ಗಡದ ರಕ್ಕಸಸೇನೆ ನಿಂದುದು ಖಳನ ತೋಹಿನಲಿ (ತೊರರಾ. ೭-೧೯-೧೭).**ತೋಹೆ**: ೩. ಕರೆಸಿದಡವರು ನಿಲ್ಲರು ತೋಹೆ[ಪಾಠಾಂ. ಗೋರಿ] ಯಲಿ ಬಳಸಂದ ಮೃಗದಂತೆ (ಕುಮ್ಮಾಸ. ೧೨-೬೪).

**ತೋಹಿನ ಬೇಟೆ** = ತೋಹುವೇಂಟೆ : ಪಾಂಡುರಾಜನಧಿಕತೇಜನುಂ . . . ಒಂದು ದಿವಸಂ ತೋಹಿನ ಬೇಂಟೆಯನಾಡಲಟ್ಟಿಯೆ ಪೋಗಿ (ಪಂಪಭಾ. ೧-೧೧೧ ವ). [ ತೋಱು (<ತೋಱು) + – ಪು$_3$ ]

**ತೋರ್ಪುಗೆಡು** (ಕ್ರಿ). ಗಾತ್ರ ಕಳೆದುಕೊಳ್ಳು ; ಕುಗ್ಗು : ತನ್ನ ಪಕ್ಷಂ ಸತ್ತೊಡಂ ಮಾತು ಸಾಯದೆ ತೋರ್ಪುಗೆಟ್ಟೊಡಂ ಕೂರ್ಪುಗಿಡದೆ ತೇಜಂ ತೊಲಗೆಯುಮಾಯು ತೊಲಗದೆ (ಶಾಂತಿಪು. ೪-೩೨ ವ).
[ ತೋರ್ಪು + ಕೆಡು$_1$ ]

**ತೋರ್ಮಲ್ಲಿ** 'ತೋರವಂಲ್ಲಿ' ನೋ.

**ತೋಲ್**$_1$, ತೊಗಲ್, ತೊಗಲಂ, ತೊವಲ್$_3$, ತೊವಲಂ, ತೋಲು$_1$, ತೋವಲ್ (ನಾ). ೧. ಚರ್ಮ; ಚಕ್ಕಳ; ತ್ವಕ್ಕು: "ತ್ವಚಮಜಿನಾಸೃಗ್ದರೆ ಕೃತ್ತಿ ಚರ್ಮಮೆನೆ ತೋಲ್ ತ್ವಗಾಹ್ವಯಂ" (ವಸ್ತುಕೋ. ೭೨-೨೮) ; ಸಿಡಿಲಂತೊರ್ಮೆಯೆ ಪೊಯ್ಯೆ ಪೊಯ್ದು ಭರದಿಂದೊಂದಾನೆ ತೋಲ್ ನೆತ್ತರಲ್ಲಡಗೊಂದೊಂದೞಿಯೊಳೊಂದುಮೊಂದದೆ ಗದಾನಿರ್ಘಾ ತದಿಂ ಮಾಯಮಾದೊಡೆ (ಪಂಪಭಾ. ೧೧-೧೧೩) ; ಕರಡಿಯ ತೋಲಂ ಕಜ್ಜಲ ಪರಾಗದಿಂ ಪೊರೆದು ಒರಿದು ಜೇನೆಯ್ಕೊಳ್ ತಂದಿರಿಸಿದಪೊಲ್ (ಶಾಂತಿಪು. ೮-೧೨೭) ; ಗಜಂ ಹತಮಾದುದಿಂದು . . . ಅದಱ ತೋಲೊಳ ಮೆಲ್ಪಿನೊಳಪ್ಪುದಿಲ್ಲ ತತ್ಪಾರ್ರಧನಂ (ಜಗವಿ. ೭-೭೧) ; ತೋಲಂ ಕರ್ಚುತೆ ನಲಿವ ಸೊಣಗಂ (ನೀತಿಸಂ. I, ೩೧೩). **ತೊಗಲ್** : ೧. "ಚರ್ಮ ತ್ವಚಂ

ಕೃತ್ತಿ ಅಜಿನವದಸ್ತ್ಗ್ರರಿಯೆನಲು ತೊಗಲಕ್ಕು" (ಮಂಗರಾ. ೦೧೬-೩); ತಪೋದಾನಶೀಲವ್ರತೋಪವಾಸಾದಿಗಳೆನಲ್ಕುಂ ತೊಗಲುಮಾಗಿರ್ಪರ್ (ಶಾಂತಿಪು. ೮-೦೨೮ ವ); ಕರ್ಪಿನಂತೆ ತೊಗಲನೊಳ್ಳುದು ಬೀಣೆಯಂತೆ ನರದೊಳ್ ಕೂಡಿದುದು (ಧರ್ಮಾಮೃ. ೪-೧೭೫). ತೊಗಲು : ೧. ಸುಗಿದ ತೊಗಲೇಅಡೆಗೆದಳ್ಳೆ ದಿಗ್ವಸನವೆತ್ತಿದ ಕತ್ತಿಯೊಡ್ಡಿದ ಕಪಾಲವೆರಸು . . . ಕಾಳರಕ್ಕಸಿ ಬರುತ (ಸಿದ್ಧರಾ. ೭-೧); ಅಂಗುಳಂಗಳ ಸಂದಿಗಳ ಕಳೆಯಿಂಗಿ ನೆತ್ತರು ಸತ್ತ ತೊಗಲ ನರಂಗಳತಿದುರ್ಗಂಧವಾಗಳು ನಾರ್ವ ಬಾತೊಡಲ (ಬಸವು. ೪೬-೩೮); ತೊಗಲು ಸಡಿಲಿದ ಗಲ್ಲ ಬತ್ತಿದ ಹೆಗಲು ನಡುಕಿದ ನೆರೆತ ವಿಸಾಸೆಯ . . . ಮುಪ್ಪಿನ ಮುಗುದನೀತನು (ಕುವ್ಯಾಭೀ. ೧-೩೩); ಉಡಲುಬಹುದೇ ತೊಗಲು ನನ್ನೀಯಡಗು ಬೋನಕ್ಕಹುದ (ಕೌಶಿರಾ. ೮-೩೨); ತೊಗಲಿನ ದೇಹಕೆ ಗೋಪಿಗಂಧ ತೇದುಕೊಂಡು (ಪುರಂದ. ೨-೬೪-೨); ತೊಗಲು ಸಡಲಿ ಮುಪ್ಪು, ಹಗಲು ಸಡಲಿ ಇರುಳು (ಗಾದೆ); ನಾಯಿ ಬಲ್ಲದು, ತೊಗಲು ಬಲ್ಲದು (ಗಾದೆ). ತೊವಲ್3 : ೧. "ಅಸ್ಯಗ್ದರೀ, ಅಜಿನಂ, ಚರ್ಮ,ಕೃತ್ತೀ, ತ್ವಕ್ – ಈ ೫ ತೊವಲ್" (ಹಲಾಯು. ೦೦೪-೮); ಪುಲಿಯ ತೊವಲ್ಗ [ಪಾಠಾಂ. ತೋಲ್ಗ] ಳುಮಂ ಚಮರಿಗಳುಮಂ ಕೊಂಡು ಬಂದು (ವಡ್ಡಾರಾ. ೦೬೩-೦೫); ಪಸಿಯ ತೊವಲ ತಿದಿಯೊಳ್ ಪುದಿದು ಪುಟಪಾಕಂ ಸುಡುವರುಂ (ಆದಿಪು. ೩-೮೩.ವ); ಕರಡಿಯ ತೊವಲಂ ಕಾಡಿಗೆಯೊಳರ್ದಿ ವಿಧಾತ್ರಂ ಲೋಕಮಂ ಬಾಸಣಿಸಿದ ನೆಂಬಂತಪ್ಪ ಕತ್ತಲೆಯೊಳ್ (ಧರ್ಮಾಮೃ. ೧೨-೨೦); ಜೋಲ್ದ ಪುರ್ವಿಂ ನೇಲ್ದ ತೋಳ ತೊವಲಿಂ ಇಟ್ಟ ವಿಭೂತಿಯಿಂ (ನೇಂಬಿರ. ೬-೨೪); ಎಲುವ ನಾಯಿಗೆ ಹೊಲೆಯುಗಂ ಮಾಂಸವನು ಮಚ್ಚಿಗಗೆ ಬಳಿಕ ತೊವಲೆಂಬಂತೆ ಮುಳಿಸಿಂ ಕಲಕಿ ಬಿಸುಡುವಂ (ಬಸವು. ೨೦-೪೪). 'ತೊವಲ್ದೊದೆಯ, ಪರಾ. ೨. ಮರ, ಗಿಡ ಮೊದಲಾದಂವುಗಳ ತಿಗುಡು : ತೊಗಟೆ : ತವಸಿಯ ತೊವಲೊಳಗೆ ಪುನರ್ನವಿಯುಮಂ . . . ಲೊಕ್ಕಿಯುಮಂ ಸವನಾಗಿ ಕೂಡಿಕೊಳ್ವುದು (ಅಶ್ವಶಾ. ೬-೩೨). ೩. ಕಿತ್ತಳೆ ಮುಂತಾದ ಹಣ್ಣಿನ ಕವಚ,_ಸಿಪ್ಪೆ. ತೊವಲು : ೧. ಬಲ್ಲಿದ ನರಹರಿಯ ತೊವಲು ಕರಿಗಜಾಸುರನ ತೊವಲು ಕರಿಪುಲಿದೊವಲ ನುಟ್ಟು ಹೊದ್ದ . . . ಕಟ್ಟುಗ್ರು(ನ?)ಲಾ (ಸರ್ವಪ. ೦೬೬-೬೮೬); ಪುದಿದ ತೊವಲ ಕಂಡ ವಿದುಳಿಲು ನರಗಳಿಂದೊದವಿದೊಡಲ ನೆನೆ ದೊಜಿಲುವುದು (ಗೀತಗೋ. ೩೬-೧); ತೊವಲು ಕೊಂಬುಗಳನ್ನು ಧರಿಸಿ ಯಜ್ಞದೀಕ್ಷೆಯನ್ನು ಹಿಡಿಯುವ ದುರ್ಮತಿಗಳೂ ಉಂಟೆ, ನಿನ್ನನ್ನು ಕಂಡ ಬಳಿಕ (ಬಿದುಕ. ೦೩೪). 'ಗಂಗೆದೊವಲ್' ಪರಾ. ತೋಲು1 : ೧. ಸುರಿವ ರಕ್ತದಿ ತೋಲು ತೋದುದು ಸಾರಥಿ ತಿರುಗಿಸಿದನು ಬೇಗಾ ರಥವ (ಅಭಿಕಾ. ೧೨); ಗೋಳುವೋರೆಯ ಜೋಲುತೋಲಿನ ಜೂಲು ಅರಿವೆಯ ತಿರುಕ (ಕಗದ್ಯ. ೭೪). ತೋವಲ್ : ೧. ಭಾಗದ ತೋವಲಕ್ಕೆ ಕಡುಕರ್ಪೆಸವೆಟ್ಟಿನ ಗಂಗೆದೋವಲಕ್ಕಾಗಳೆ ಕೊಂಡು ಪುಣ್ಯದಿನದೊಳ್ . . . ಸುತ್ತಿ ಕಟ್ಟಿ (ಲೋಕೋಪ. ೬-೪೧).

ತೊಗಲ ಚಲ್ಲಣ = ಚರ್ಮದ ಚಲ್ಲಣ,_ಉಡುಪು : ತೊಗಟೆ ಕುಪ್ಪಸ ತೊಟ್ಟು ತೊಗಲ ಚಲ್ಲಣ ಉಟ್ಟು (ಹರಿಶ್ಚಂ. ೨೮-೮೯). ತೊಗಲ ಚಿಗರಿ = ತೊಗಲ ಬಾವಲಿ : ತೊಗಲ ಚಿಗರಿಯನ್ನಂತೆತ್ತಿದನೆ? ಅವನೆ ಬಿಲ್ಲಾಳ್ಯ ರಲಿ ಗಡ ಪಿನಾಕಿ (ಹರಿಶ್ಚಂ. ೩-೨೫). ತೊಗಲ ಚೀಲ = ಶರೀರ ; ದೇಹ : ತೊಗಲ ಚೀಲದಲ್ಲಿ ಪರಶಿವನಿದ್ದಾನೆಂದು ಪೊಡವಿಯ ಮೃಡಭಕ್ತರೆಲ್ಲ ನುಡಿವುತಿಪ್ಪರು (ಷಟ್‌ಸ್ಥಲ. ೩೩-೦೬೯). ತೊಗಲ ತಿತ್ತಿ = (ದ್ರವ ಪದಾರ್ಥಗಳನ್ನು ತುಂಬುವ) ಚರ್ಮದ ಚೀಲ : ಮದ್ದಿನ ಸುರೆಯ ತೊಗಲ ತಿತ್ತಿಯಲ್ಲಿ ತುಂಬಿ ಒಪ್ಪದಲ್ಲಿ ನಿಲಿಸಲಿಕೆ ಅದು . . . ಅಪ್ಪಳಿಸಿ ಬೀಳೂದ ಕಂಡೆ (ಸರ್ವಪ. ೦೪೩-೭೦೩). ತೊಗಲ ಬೊಂಬೆ, ತೊವಲ ಬೊಂಬೆ = ಚರ್ಮದ ಗೊಂಬೆ : ಚಿತ್ರವಿಚಿತ್ರ ವಿನೋದದಾಟವನು ಜಂಗಮ ಮುಂತಾಗಿ ನೋಡದೆ ತಾ ನೋಡಿದನಾದಡೆ ತೊಗಲ ಬೊಂಬೆಯ ನೋಡಿದ ಸಮಾನ (ಚನ್ನವ. ೪. ೧೨೪-೨೮೧); ವಿಶ್ವಪತಿಯಾಡಿಸಿದೊಡಾಡಿದರಲ್ಲದಕಟ ಪರಿಕಿಪೊಡೀ ತೊವಲ ಬೊಂಬೆಗಳ್ ತಾಮೆಯಾಡಲ್ ಸ್ವತಂತ್ರವೇ (ಶಬ್ದಮ. ೬-೨೨). ತೊವಲ್ನಾರು = (ಜಿಂಕೆಯ) ಚರ್ಮ ಮತ್ತು ವಲ್ಕಲ ; "ತೊಗಲು ನಾರು" (ಶಂಪದೀ. ೨೩೪) ; ಆ ದುಶ್ಶಾಸನನಿಂದೆನಗಾದ ಪರಾಭವಮನೇನುಮಂ ಬಗೆಯದೊಡಿಂತಾದರಮ ತೊವಲ್ನಾರುಮನಾದರದೇ[ ೦ ] ನಿನ್ನ ಮನಕೆ ಚಿಂತೆಯುಮಿಲ್ಲ (ಪಂಪಭಾ. ೭-೪೯). ತೋಲ ಬಾವಲಿ, ತೊಗಲ ಬಾವಲಿ, ತೊಗಲ ಬಾವ್ಲಿ = ಒಂದಂ ಬಗೆಯ ಪಕ್ಷಿ ; ತೊಗಲು ಹಕ್ಕಿ ; ತೊಗಲಂ ಬಾವಲಿ : ಆ ದೇವಸ್ಥಾನದ ತುಂಬ ತೋಲ ಬಾವಲಿಗಳು ಸೇರಿಕೊಂಡಿವೆ (ರೂಢಿ); ಅಲ್ಲಿ ತೊಗಲ ಬಾವಲೀ ಚೀರತಾವ ಭರತಿ ಹಗಲಿನೊಳಗ (ಗಂಗಾತ. ೫೭-೧೩) ; ಇಂಥ ತೊಗಲ ಬಾವಲಿಗಳಿಗೆ ಸತ್ತ ಮೇಲೆ ಯಾವ ಪ್ರತ್ಯೇಕ ಸ್ಥಳದ ವ್ಯವಸ್ಥೆಯಾಗಬೇಕು (ರಕ್ತಾಕ್ಷಿ. ೦೦೦) ; ನವಿಲು ಮಂಗ ತೊಗಲ ಬಾವುಲಿ ಮುಂತಾದ ಪ್ರಾಣಿಗಳು ಮನೆ ಮಾಡಿಕೊಂಡು ಇರುತ್ತವೆ (ಮುಂಬಯಿ. ೨-೩೦).

[ ದೇ.॥ ತಮಿ. ತೋಲ್, ತೊಲಿ ; ಮಲ. ತೋಲ್, ತೊಲಿ, ತುಕಲ್ ; ತುಳು. ತುಗಲ್, ತೊಲಿಕೆ ; ಕೊಡ. ತೊಲಿ ; ತೆಲು. ತೋಲು ; ಕೊಲಾ., ನಾಯ್ಕಿ., ಪರ್ಜಿ. ಗದಬ. ಗೊಂಡಿ. ತೋಲ್ ; ಕುವಿ. ತೋಲು./ಸಂ. ತ್ವಕ್ ]

ತೋಲ್2 'ತೊವಲ್2' ನೋ.

ತೋಲ್3, ತೋಲಂ2 (ನಾ). ದಾರಿ ; ಮಾರ್ಗ: "ದಾರಿ ಕಡವಸಗಳೊಳ್ ತೋಲ್ [ ಪಾಠಾಂ. ತೊಗಲ್ ]" (ಕಬ್ಬಮಂ. ೦೦೭). ತೋಲು2 : ಒರ್ಮೆ ವೇಂಟೆಗೆ ವನಚರರ್ಪೋದ ತೋಲಿನೊಳಗೊರ್ವೊರ್ವ ನಡೆದು ನಿಜಪುರದ ಪಾಂಥದ ಹೊಲಬನೊರ್ಮೆಯುಂ ಕಾಣದೆ (ಸಮ್ಯಕ್ತ್ವ. ೧೧-೪೧).

[ ದೇ.॥ ತೆಲು. ತ್ರೋವ ]

ತೋಲ (ನಾ). ೧. ತೂಕ ; ಭಾರ: ಚಂದನದ ಕೊರಡುಗಳು ಕಿಂಪಾಗಿಯೂ ತೋಲವಾಗಿಯೂ ಸುಗಂಧವಾಗಿಯೂ ಇದ್ದ ಹಾಗೆ ಹೆಚ್ಚು ಬೆಲೆಗಾಣು ತ್ತವೆ (ಮುಂಬಯಿ. ೩-೬೮). ೨. (ಚಿನ್ನ, ಬೆಳ್ಳಿ ಮುಂತಾದ ಲೋಹಗಳ) ತೂಕದ ಪ್ರಮಾಣ ; ಒಂದಂ ರೂಪಾಯಿ ತೂಕ ; ತೊಲ : (ತ). ೩. ಸಮಸ್ಥಿತಿ ; ಸಮತೋಲನ: ವ್ಯಾಯ ಕೋಲ ತಪ್ಪಿತು (ಕುಡಿಕೋ. ೩೮) ; ಈ ತ್ರಾಸುಗಳಲ್ಲಿ ಕಡಿಮೆ ತೂಕದ ಕಲ್ಲು ಗಳಿಂದಲೂ ಭಾರವಾದ ಪಾತ್ರೆಗಳನ್ನು ಎತ್ತಿ ತೋಲದಲ್ಲಿರಿಸಲು ಬರುವುದು (ಬಾಲಪ್ರ. I, ೩೩೭). ೪. ಸಮಾನವಾದ ಆಕಾರ ; ಪ್ರಮಾಣ ಬದ್ಧತೆ : ನಿತ್ಯ ಬಳಸುವ ಕಲ್ಲು ಗಾರೆಗಳಿಂದ ಅದನ್ನು ನಿರ್ಮಿಸಿದ್ದರೂ ಆದರ ವಾಸ್ತುರಚನೆಯಲ್ಲಿ ಕಾಣುವ ವೈಖರಿ, ತೋಲ, ಇಕ್ಕಡೆಯ ಮೇಳ-ಬಲು ಚೆನ್ನಾಗಿವೆ (ಅಬೂಬ. ೦೦೪). [ ಸಂ. ]

ತೋಲಂಗಿ (ನಾ). ತೊಗಲಿನ ಅಂಗಿ : ಪುಲಿ ಚಿರತೆ ಮಿಗದ ತೋಲಂಗಿ ಸಿಂಗರಗೈದ ನವಿರಿಂಡಿದ ಮೆಯ್ಯು, ಬಣ್ಣದ ನಾರ್ಗ್ಗಳಿಂ ಸಮೆದ ವಸ್ತ್ರದಿಂ ಶೋಭಿಸುವ ಮಲ್ಲಗಟ್ಟೆಯ ... ಸಿಡಿಲಾಳ್ಗಳ್ (ಶ್ರೀರಾಮಾ. ೫೯೧-೦೭೫).

[ ತೋಲ್1 + ಅಂಗಿ2 ]

ತೋಲನ (ನಾ). ೧. ತೂಕ ಮಾಡುವುದು ; ತೂಗುವುದು ೨. ಆಯ ; ಸಮ ತೂಕ : ಆಸ್ಪತ್ರೆ ಮತ್ತು ಬಂಗ್ಲೆಗಳು ಅವಳ ಸ್ಮೃತಿಯಲ್ಲಿ ಬಂದು ಅವಳ ಚಿತ್ತತೋಲನವನ್ನು ತಪ್ಪಿಸುತ್ತಿದ್ದುವು (ವಂಶವೃ. ೩೭೮). ೩. ಹೋಲಿಕೆ ; ತಾಳೆ ; ಸಾದೃಶ್ಯ : ಸಂವಿಧಾನದ ವಿವಿಧ ಭಾಗಗಳ ತೋಲನವನ್ನು ಕುರಿತು ನಾಟಕದ ತಂತ್ರದ ಬಗೆಗೆ ಪ್ರಸ್ತಾಪಿಸುವಾಗ ಹೆಚ್ಚು ಹೇಳುತ್ತೇವೆ (ಸಾಹಿಪ್ರ. ೧೩೫); ಈಚೆಲು ಹುಳುವನ್ನು ಸುಟ್ಟು ಬಂದಿ

ಮಾಡುವ ಸಣ್ಣ ಮಣ್ಣಿನ ಹಣತೆಯ ದೀಪವನ್ನು, ಪಟ್ಟಣವನ್ನೇ ದಹಿಸಿ ನಾಶಮಾಡುವ ಉರಿಗೆ ತೋಲನಮಾಡಿದರೆ ಹೇಗೋ ಹಾಗೆ (ಚೋಕಿವಿ. ೯೨). ೪. [ನಾಟ್ಯ] ಇಪ್ಪತ್ತು ಬಗೆಯ ಹಸ್ತವಿನ್ಯಾಸಗಳಲ್ಲಿ ಒಂದು: ಧೂನನ, ಶ್ಲೇಷ, ವಿಶ್ಲೇಷ . . . ವಿಕೃಷ್ಟ, ತಾಡನ, ತೋಲಸ [ಪಾಠಾಂ. ತೋದನ, ದೋಡನ] ಛೇದ, ಭೇದ, ಸ್ಫೋಟನ, ಮೋಟನ, ವಿಸರ್ಜನ, ಆಹ್ವಾನ, ತರ್ಜನ ಈ ಇಪ್ಪತ್ತು ಕರಕರ್ಮ ಭೇದಂಗಳ್ (ಲಾಸ್ಯರ. ೪-೧೩ ವ). [ ಸಂ. ]

**ತೋಲನಯಂತ್ರ** (ನಾ). ತೂಕವನ್ನು ತೋರಿಸುವ ಯಂತ್ರ: "ತೋಲನಯಂತ್ರ, ಸಮತೋಲಕ" (Balance. ಪತ್ರಿನಿ. ೮).

[ ತೋಲನ + ಯಂತ್ರ ]

**ತೋಲಾಟ** (ನಾ). ಖಡ್ಗಯುದ್ಧ ಒಂದು ಪಟ್ಟು,- ವರಸೆ: ಮೊದಲು ನಿಲ್ಲುವ ಕಡೆಯಲ್ಲಿಯೇ ನಿಂತು ಎರಡು ಪಾದಗಳ ಮುಂದುಗಡೆಯಲ್ಲಿ ಹಿಂದುಗಡೆಯಲ್ಲಿ ದಾಟುವುದು ಅವದುಂಟು ಅದು ತೋಲಾಟಯೆಂದು ಸಮ್ಮತವು (ಖಡ್ಗಲ. ೫-೧೫). [ ? ]

**ತೋಲು$_1$** 'ತೋಲ್$_1$' ನೋ.

**ತೋಲು$_2$** 'ತೋಲ್$_2$' ನೋ.

**ತೋಲು$_3$** (ನಾ). ಸಮಸ್ಥಿತಿ ; ಸಮತೋಲನ : ಜೋಲಿ ಹೋದಾಗ ಆದಿರಿ ಕೋಲು ಹಿಡಿದಿರಿ ನಮ್ಮ ತೋಲು (ಹಾಯುಪಾ. ೪೧-೧೦).

[ < ಸಂ. ತೋಲ ]

**ತೋಲುಡೆ**, ತೊಗಲುಡೆ, ತೊವಲುಡೆ (ನಾ). ಚರ್ಮದ ಉಡುಗೆ : ಬಿಡದೆ ತೊಡಂಕೆ ತೋರ್ಪ ಜಡೆ ತೋಲುಡೆ ಪೂಸಿದ ಬೂದಿ (ಉಮಾಶ. ೩೯). **ತೊಗಲುಡೆ** : ತೊಗಲುಡೆಯ ತೆಗೆದಿಟ್ಟು . . . ಪೋದರಾಳುಗಳು (ಶಾಲೂರ. ೯೦-೧೭೫). **ತೊವಲುಡೆ**: ಒಡಿದ ಬಿಲ್ಲುಗಳಿಂದುಟ್ಟ ತೊವಲುಡೆ [ಪಾಠಾಂ. ತೊವಲುಡಿಗೆ]ಗಳಿಂ . . . ಬೇಡವಡ ಕೂಡೆ (ನಂಬಿರ. ೧೮-೩೧); ಮಿತ್ರನು ಧನಪತಿಯಾದರು ಶಂಕರ ತೊವಲುಡೆಯಾಂತನು ತಾನು (ಇಂಚಾಪ. ೧೭೩-೪). [ ತೋಲ್$_1$ + ಉಡೆ$_2$ ]

**ತೋಲುತಪ್ಪು** (ಕ್ರಿ). ತೂಕ ತಪ್ಪು ; ಸಮತೋಲನವನ್ನು ಕಳೆದುಕೊಳ್ಳು : ತೋಲುತಪ್ಪಿತೊ-ಚೀರು, ಎದೆಯೊಡೆವ ಅಳು, ಕಾದಿತ, ಮಿಡಿತ (ಸಪ್ತರ್ಧ. ೩-೩). [ ತೋಲು$_3$ + ತಪ್ಪು$_1$ ]

**ತೋಲೆ**, **ತೋಳೆ** (ನಾ). ೧. ಬಾವಲಿ ; ಕಣ್ಣಪಟ : ತೊಗಲ ಬಾವಲಿ, ತೋಲೇಹಕ್ಕಿ ; ಕಣ್‌ಕಪಟ (ನಮ್ಮನು. ೨೩೯). ೨. ಕಣ್ಣಿನ ಪೊರೆ : (ಕ). **ತೋಳೆ** : ೧. ಸ್ಪರ್ಶರಸ ಗಂಧ ರೂಪುಗಳೆಂಬೀ ನಾಲ್ಕುಮನಱಿವ . . . ತೊನಸಿ ತೋಳೆ ತೋಲೆ ಕೊಲಿಗ ಮಿಸಿರಿಕೆ ಪಚ್ಚೆ ಮಿಡುತೆ (ಜಸಾರ. ೪೯); ತೆ ೧ಳೆಯ ಹಿಂಡು ಕವಿದರೆ ಕರಿಗೆ ಕಳವಳವೇ (ಕಾಶಿರಾ. ೩೩-೨೧); ಎದ್ದ ತೋಳೆಯ ಹಿಂಡನಗಲಕೆ ಹದ್ದು ಬಡಿದಂದದಲಿ (ನಿಘಗ. ೪-೯-೧೭).

[ < ತೋಲ್$_1$ ]

**ತೋಲ್ಗಟ್ಟು** (ಕ್ರಿ). (ಮುಂಗೈಗೆ) ಚರ್ಮವನ್ನು ಕಟ್ಟು : ಹಾರಾದ್ಯಾಭರಣಂಗಳನೊಲ್ಲದೆ ತೋಲ್ಗಟ್ಟಿ (ಧರ್ಮಾಮೃ. ೭-೬೩).

[ ತೋಲ್$_1$ + ಕಟ್ಟು$_1$ ]

**ತೋಲ್ದಪ್ಪು** (ಕ್ರಿ). ದಾರಿ ತಪ್ಪು; ಮಾರ್ಗ ಬಿಡು: ತೋಲ್ದಪ್ಪಿ ಕೇಡುಗಳ ಬ ೪ ಏ ಡಿ ಯ ಲೆ ಳ ಸು ತಿ ಹ ಮಾಲಿಸುವ ಕವಲ್ಗಳಿವಾತುಗಳನುಗಿದಂ (ಶಾಲೂರ. ೧೨೭-೨೭೯). [ ತೋಲ್$_3$ + ತಪ್ಪು$_1$ ]

**ತೋಲ್ಪಂಜರ** (ನಾ). ತೊಗಲಿನ ಗೂಡು; ಚರ್ಮದ ಪಂಜರ: ಚಂಡಾಲರ ಕಯ್ಯೊಳ್ಕಿಟ್ಟ ತೋಲ್ಪಂಜರದ ಪಡಕೆಯೊಳ್ನಿಲ್ವ ದುರ್ವಾರದುಃಪೋತ್ಕರ ಮೆ[ಲ್ಲಂ ನೋಡ] ಲೆನ್ನಿಂದ್ರಿಯನಿವಹದ ದೋಷಂ ದಲ್ (ಕಾದಂಬ. ೭೩೪). [ ತೋಲ್$_1$ + ಪಂಜರ$_1$ ]

**ತೋಲ್ಬಾವಲ್**, ತೊಗಲುಬಾವಲಿ (ನಾ). (ದೊಡ್ಡ ರೆಕ್ಕೆಗಳುಳ್ಳ) ಮರ, ಗಿಡಗಳಿಗೆ ನೇತು ಬೀಳುವ ಒಂದು ಬಗೆಯ ಪಕ್ಷಿ : ಕಾವುದು ದೇವ ಯಾಚಕನನಂಜದಿರೇಕೆ ನೇಲ್ವ ತೋಲ್ವಾ[ಪಾಠಾಂ. ೪್ಬಾ]ವಲೊ ಮತ್ತವಾರಣದ ಸೊಂಡಲೊ (ಲೀಲಾವ. ೨-೧೦೮). **ತೊಗಲುಬಾವಲಿ** : ತೊಗಲುಬಾವಲಿ ಮರದ ಜೋಲು ತೊಗಟೆ (ಸಪ್ತರ್ಧ. ೮೭).

[ ತೋಲ್$_1$ + ಬಾವಲ್ (<ವಾವಲ್) ]

**ತೋಲ್ವಿಡಿ** 'ತೊವಲ್ವಿಡಿ' ನೋ.

**ತೋಲ್ವುಲ್ಲೆ** (ನಾ). (ಗುರಿಯಿಡಲು) ತೊಗಲಿನಿಂದ ಮಾಡಿದ ಹುಲ್ಲೆ; ಚರ್ಮದ ಜಿಂಕೆ: ನೆರೆದಿಸುತಿರೆ ತೋಲ್ವುಲ್ಲೆಯನಿರದದು ಬಿಟ್ಟೋಡೆ ಪುರಾಣಕೂಪದೊಳ್ (ಪಂಪಭಾ. ೨-೩೧). [ ತೋಲ್$_1$ + ಪುಲ್ಲೆ$_1$ ]

**ತೋವಲ್** 'ತೋಲ್$_1$' ನೋ.

**ತೋವಿಕ್ಕು** (ಕ್ರಿ). = ತೋಹಿಡು : ತೋವಿಕ್ಕಿ ಬಹ ಚಿತ್ರಕಾಯನುರುಗವಲಿಗಂ ಜೀವ ತಾಂ ತಲ್ಲಣಿಸಿ ಗೋವ್ರಜಂ ಬೆಚ್ಚುವೊಲು . . . ಗಜಬಜಂಗೊಳುತಿರ್ದುದು (ಜರಸು. ೩೫-೧೪).

[ ತೋವು (<ತೋರ್ಪು) + ಇಕ್ಕು$_1$ ]

**ತೋವು** 'ತೋರ್ಪು' ನೋ.

**ತೋವೆ**, 'ತೊವ್ವೆ' ನೋ.

**ತೋಶಿಕಾನೆ** 'ತೋಷೀಖಾನೆ' ನೋ.

**ತೋಷ** (ನಾ). ಆನಂದ ; ಹರ್ಷ ; ಸಂತೋಷ : "ಗಹಗಹಿಕೆಯನಲ್ ಓಷಂ[ಪಾಠಾಂ. ಸಂತಸ]" (ಭಾರನಿ. ೨೧) ; ತಂದರು ನೊಸಲಿಗೆ ಕೈಗಳ ಬಿನ್ನಹವೆಂದರನೂನತೋಷದಲಿ (ತ್ರಿಪುಸಾಂ. ೦೭೭) ; ಶೀಲಕೆ ಸಮನಾದ ತೊಡವಿಲ್ಲ ತೋಷಕೆ ಸಮನಾದ ಧನವು ಬೇರಿಲ್ಲ (ಇಂಚಾಪ. ೧೩೮-೭೭) : ರೋಷ ಹೆಚ್ಚಿ ತೋಷವಳಿದು ಮೋಸಹೋಯ್ತು ಜಗವಿದು ! (ಕರುಣಾ. ೮೧-೧೮) ; ಚಿಕ್ಕಶಿಶುವಾಗಿದ್ದ ಕಾಲವಿತ್ತೊಂದು . . . ಮಿಕ್ಕ ನೆನಹುಗಳು ಕೊಡವಾ ತೋಷವೆಂದುಂ (ಕವಿಪು. ೯-೯). [ ಸಂ. ]

**ತೋಷಖಾನೆ** 'ತೋಷೀಖಾನೆ' ನೋ.

**ತೋಷಣ** (ನಾ). ೧. ಆನಂದವನ್ನುಂಟುಮಾಡುವಿಕೆ ; ತೃಪ್ತಿಪಡಿಸುವಿಕೆ. ೨. ಆಮೋದ ; ಆಹ್ಲಾದ ; ತೃಪ್ತಿ ; ಸಂತಸ : ತ್ಯಾಗಗುಣಕ್ಕೆ ತಾಯ್ಮನೆ ಸಮಸ್ತನ್ರಿ[ನೃ]ಪಾಳನಿಯೋಗವರ್ತನಾಶ್ರೀಗೆ ನಿವಾಸಮಿಪ್ಪುರವಿಶಿಷ್ಟರ ತೋಷಣ ಪೋಷಣಂಗಳೊಳ್ಳಾಗರವೆಂದು ಬಣ್ಣಿಸುವುದೀ ಧರೆ ಪಣ್ಡಿತಪಾರಿಜಾತನಂ ನಾಗನಾ ಜನಾರ್ಧನನಾ (ಎಕ. XXI, ೧೩-೩೩ ; 1260) ; ಈ ಬಿನದಿಗೆ ಕುಹಕವೆ ತೋಷಣವೋ (ಗಹೀಶ. ೪-೯೪). [ ಸಂ. ]

**ತೋಷಿಖಾನೆ** 'ತೋಷೀಖಾನೆ' ನೋ.

**ತೋಷಿತ** (ಗು . ಸಂತೋಷಗೊಳಿಸಿದ ; ತೃಪ್ತಿಪಡಿಸಿದ : ನಿಜಾಂತರಾಳಾಶ್ರಿತಲೋಕಾನಂದನವಂ ತೋಷಿತವಾನಂದನವಂ ನಿರೀಕ್ಷಿಸಲ್ಕಡೆ ನೃಪತೀ (ರಾಜಶೇ. ೧೧-೫). [ ಸಂ. ]

**ತೋಷಿಸು** (ಕ್ರಿ). ಸಂತೋಷಪಡಿಸು ; ತೃಪ್ತಿಪಡಿಸು ; ಆಮೋದಗೊಳಿಸು : ಅಖಿಳವೀರರ್ಕಳಂ ಗೆಲ್ದನಿವನಾಂ ತೋಷಿಸುವೆನೆಂದನು (ಜೈಮಿಭಾ. ೨೭-೫೦) ; ನಿಜತನುವನರೆದು ತೋಷಿಸುವುದೊಲವು (ವಿಶೀಗೀ. ೩-೧೫). [ ತೋಷಣ + - ಇಸು$_3$ ]

**ತೋಷೀಖಾನೆ**, ತೋಶಿಕಾನೆ, ತೋಷಖಾನೆ, ತೋಷಿಖಾನೆ, ತೋಷೇಖಾನೆ (ನಾ . ಅರಮನೆಯಲ್ಲಿ ಆಭರಣ, ಪೋಷಾಕು, ಹಣ ಮೊದಲಾದುವುಗಳನ್ನಿಡುವ ಮನೆ ; ಖಜಾನೆ ; ಭಂಡಾರ : ತೋಷೀಖಾನೆ ತಯಾರಿ (ಎಕ. XIV, ಮೈಸೂರು. ೧೩೧ ; 1827) ; ಟಿಪ್ಪುಸುಲ್ತಾನರ ಕಾಲದಲ್ಲಿ ತೆ ೦ಷೀಖಾನೆಯ ಅಧಿಕಾರದಲ್ಲಿದ್ದ ಪೂರ್ಣಯ್ಯನವರನ್ನು ದಿವಾನ್‌ಪದವಿಗೆ ನಿಯಮಿಸಿದರು (ಮಹಾವಂ. II, ೩); ಪೂರ್ಣಯ್ಯನವರಂ

ಬಹು ಬುದ್ಧಿವಂತರಾಗಿ ಇದ್ದದ್ದರಿಂದ ತೋಷೀಖಾನೆಯ ಭಕ್ಷಿ ಆಸದಲ್ಲಿ ಖಾನನು ನವಾಬರಿಗೆ ಹೇಳಿ . . . ನೇಮಕ ಮಾಡಿಸಿದನು (ಚಾಮುಚಂ. ೨೧೯). **ತೋಶಿಕಾನೆ :** ಆ ದಂಡಿನ ಸಾಮಾನು, ಸರಂಜಾಮು, ತೋಶೀಕಾನೆ, ಫಿರಂಗಿ ಮುಂತಾಗಿ ಕೊಡಗಿನ ಸಂಸ್ಥಾನದವರು ತೆಗೆದುಕೊಂಡರು (ರಾಜೇಂದ್ರ. ೧೨). **ತೋಷಖಾನೆ :** ಶ್ರೀ ನರಸಿಂಹ ತೋಷಖಾನೆ ಗೆ ಸಲ್ಲ ಸೇರ್ವೆ ಜವರಾಯಿಗೌಡನ ಸೇವೆ (ಎಕ. XV, ಹೊಳೆನ. ೪೦ ; ?). **ತೋಷಿಖಾನೆ :** ನಾನು ಈಗಲೇ ತೋಷಿಖಾನೆಗೆ ಹೋಗಬೇಕಾದ ಕೆಲಸವಿದೆ (ಕೃಷ್ಣಭೂ. ೧೭); ಈ ಖಜಾನೆಯ ಐಶ್ವರ್ಯವನ್ನು ನೋಡುವುದು ಸಾಧ್ಯವಿಲ್ಲ ಎಂದು ಆ ತೋಷಿಖಾನೆಯ ಸುತ್ತಲೂ ಸೇನೆಯವರನ್ನು ನಿಲ್ಲಿಸಿ ಹೊರಟು ಹೋದರಂತೆ (ಮುಸುಗ. ೩೭). **ತೋಪೇಖಾನೆ :** ಕಛೇರಿಗಳು—೧. ದಿವಾನ್ ಕಛೇರಿ . . . ೭. ತೋಪೇಖಾ (ಮುಹಾವಂ. II, ೩೯).

[←ಪಾರ. ತೋಶ್ಖಾನ; ಹಿಂ. ತೋಶಾಖಾನಾ: ಮರಾ. ತೋಶ್ಖಾನಾ, ತೋಶೇಖಾನಾ]

**ತೋಷೇಖಾನೆ** 'ತೋಷೀಖಾನೆ' ನೋ.

**ತೋಸ** (ನಾ). = ತೋಷ. 'ತೋಸಂಗೊಳ್' ಪರಾ.

[ <ಸಂ. ತೋಷ ]

**ತೋಸಂಗೊಳ್** (ಕ್ರಿ). ಸಂತೋಷಹೊಂದು ; ಆನಂದಿಸು : ನೇಸರ್ಸಾಸಿರ ಕೈಗಳಿಂದೊಲವಿನಿಂ ತಟ್ಕ್ಯಸಲೆಂದೇಗಳುಂ ತೋಸಂಗೊಂಡು ಕೆಲಕ್ಕದೊರ್ಮೆ ಸೆಳೆವಂತೆ (ಮ್ಯಸೂಮ. ೦-೫). [ ತೋಸ + ಕೊಳ್$_1$ ]

**ತೋಸ್ತಾನಿ** 'ತೋಸ್ತಾನು' ನೋ.

**ತೋಸ್ತಾನು, ತೋಸ್ತಾನಿ** (ನಾ). ಸೈನಿಕನು ತೋಟಾಗಳನ್ನಿಡಲು ಬಳಸುವ ಚರ್ಮದ ಚೀಲ; ಸಿಪಾಯಿಯ ಮದ್ದುಗುಂಡಿನ ತೊಗಲುಚೀಲ : (೬). **ತೋಸ್ತಾನಿ :** ಸುಲ್ತಾನಿ ತೋಟ ತುಂಬಿದಂಥಾ ತೋಸ್ತಾನಿ ಒಂದು . . . ಕೊಟ್ಟು (ರಾಜೇಂದ್ರ. ೫೬).

[ ←ಮರಾ. ತೋಸ್ತಾನ್, ತೋಸ್ದಾನ್ ಪಾರ. ಹಿಂ. ತೋಶ್ದಾನ್ ; ]

**ತೋಹಡಿಕೆ** (ನಾ). ಓಕರಿಕೆ ; ವಾಂತಿ ; ವಮನ : "ತೋಹಡಿಕೆಯೆನಲೊಗಡಿಕೆ" (ಭಾರನಿ. ೫೩) : 'ಓಗಡಿಕೆ' ಪರಾ. [ ? + –ಇಕೆ ]

**ತೋಹಮತ್ತು, ತೋಹಮಾತು** (ನಾ). ಮಿಂಥ್ಯಾರೋಪ; ಸುಳ್ಳು ಆರೋಪ ; ಅಪವಾದ : ಸುಮ್ಮಗೆ ಅವರ ಮೇಲೆ ತೋಹಮತ್ತೂ ಹಾಕುವ ದುರಾತ್ಮರನ್ನು ದಬ್ಬಿಸಿಬಿಡೋದು ಉತ್ತಮ (ವಾಗ್ಯೆವಿ. ೧೯೬). **ತೋಹಮಾತು :** ನೀವು ಅವನ ಮೇಲೆ ನಿಷ್ಕಾರಣವಾಗಿ ತೋಹಮಾತು ಹಾಕುವದು ನಿಮ್ಮ ದುಷ್ಟಸ್ವಭಾವದ ದೃಷ್ಟಾಂತವೆಂತಲೇ ತಿಳಿಯಬೇಕು (ವಾಗ್ಯೆವಿ. ೨೧೭).

[ ←ಅರ. ಹಿಂ. ತೋಹಮತ್, ತುಹಮತ್ ; ಮರಾ. ತೋಹಮತ್ ]

**ತೋಹಮಾತು** 'ತೋಹಮತ್ತು' ನೋ.

**ತೋಹಿಡು** (ಕ್ರಿ). ಬೇಟೆಗಾಗಿ ಅಡಗಿಕೊಂಡು ಹೊಂಚು ಹಾಕು : ಸರಸಿಯ ತಡಿಯ ಮರಸನೇರ್ಯಾ ಮರದೊಳು ತೋಹಿಡಲಾ ಸರಿತದೊಳಿರ್ದುದು ಲಿಂಗಾಕಾರವನಾದ್ಯಂದ (ಸಿಂಗಿರಾ. ೨೮-೩೪).

[ ತೋಹು$_2$ (<ತೋರ್ಪು) + ಇಡು$_1$ ]

**ತೋಹು$_1$** 'ತೋಪು$_1$' ನೋ.

**ತೋಹು$_2$** 'ತೋರ್ಪು' ನೋ.

**ತೋಹುಕಾಱ** (ನಾ). ಮರಸು ಬೇಟೆಯಾಡಲು ಸಂಚಿನ ಸ್ಥಳದಲ್ಲಿರುವವನು : ಬಲು ನಾಯ ಬಾಯಿಂದ ಮುರುಚಿಕೊಂಡೋಡುವ ಮೊಲಂ ತೋಹುಕಾಱರಂ ಹರಿದೆಱಗಿ ಕೊಲುವ ಕೋಣಂ (ಸೋಮಜ. ೩-೭).

[ ತೋಹು$_2$ (< ತೋರ್ಪು) + –ಕಾಱ ]

**ತೋಹುಗ** (ನಾ). = ತೋಹುಕಾಱ : ತಡೆಯದೊಡ್ಡಾ ಪಂದಿ ಮಿಗಗಳ ನಿಡುವಲೆಯ ನೋಡ್ಯದೆ ತೋಹುಗರೆಡೆಗವಂ ಸೋವುಗರು ಜಡಿತರೆ ಮಿಂಥ್ಯಕನು ಕಡುಗಿ (ಸಾಳ್ವಭಾ. ೫-೨೫).

[ ತೋಹು$_2$ (<ತೋರ್ಪು) + –ಗ$_2$ ]

**ತೋಹುಗಾಣಿಸು** (ಕ್ರಿ). ಮರಸುಬೇಟೆಯಲ್ಲಿ ಕಾಯಿಸು, – ಸಂಚಿನ ಸ್ಥಳದಲ್ಲಿರಿಸು : ವಿರಹಿಮಿಗವನೆಸುವರೆ ಕಾವ ಶಬರ ತನ್ನುರ ತೋಹುಗಾಹಿ[ಣಿ]ಸುವಂತೆ ಸರಸಿಜಲೋಚನೆಯರು ಲೀಲೆಯಿಂದ ಗೋಪುರದೊಳಗನುದಿನವಿಹರು (ತರ್ಕಶಾ. ೧-೫೦).

[ ತೋಹು$_2$ (<ತೋರ್ಪು) + ಕಾಣಿಸು ]

**ತೋಹುಗೊಳ್** (ಕ್ರಿ). ಬೇಟೆಗಾಗಿ ಮರೆಯಾದ ಸ್ಥಳದಲ್ಲಿರು, ಸಂಚಿನ ತಾಣದಲ್ಲಿರು : ಬಲೆಯೊಡ್ಡಿ ತೋಹುಗೊಂಡರೆಗದಱ ಬೇಳ್ವರ ಸುತ್ತಿ ಸರಿವ ಬಿಗಿವ ಸಂಕಟ ಬೇಡ (ಹಚಶಾ. ೫-೨೦).

[ ತೋಹು$_2$ (<ತೋರ್ಪು) + ಕೊಳ್$_1$ ]

**ತೋಹುವಿಡಿ** (ಕ್ರಿ). ಬೇಟೆಗಾಗಿ ಹೊಂಚುಹಾಕು : ಕಾನನಸ್ಥಳದೊಳಗೊಲ್ದು ತೋಹುವಿಡಿದೊಡ್ಡಿದರೆಯ್ದೆ ಪುಳಿಂದನಾಯಕರ್ (ದಶಕು. ೨-೧೧೫); ಪಿರಿದೆನಿಪ ಗಜದ ಬೇಂಟೆಯನಾಡಲೆಂದು ಕಾನನದ ಮಧ್ಯದೊಳಗೊಂದು ಕರವೆಸವ ಕೆಱಿಯೊತ್ತಿನೊಳೆ ತೋಹುವಿಡಿದಿರಲ್ಕೆ (ಸಿದ್ಧೇಪು. ೭-೯). [ ತೋಹು$_2$ (<ತೋರ್ಪು) + ಪಿಡಿ$_1$ ]

**ತೋಹುವೇಂಟೆ** (ನಾ). ಒಂದಂ ಬಗೆಯ ಬೇಟೆ; ಮರಸುಬೇಟೆ : ನೆಗಳ್ತೆಯ ತೋಹುವೇಂಟೆ ಸಂಗಳಿಸಿದ ನೀರವೇಂಟೆ ಘನ ಸೋಹಿನ ವೇಂಟೆಯೆನಿಪ್ಪ ನಾಮಮಂ ತಳೆದೆಸೆವಂಟು ಬೇಂಟೆಗಳನಾಡಿದಂ (ತ್ರಿಪುವಿ. ೨೭-೯೨) ; ಅರಸಿ ಮಾರುತಾದೇವಿಗೊಗೆದು ಜನನಾಮದಿಂದಿರುತೊಮ್ಮೆ ತೋಹುವೇಂಟೆಗೆ ಹೋಗಿ ನದಿಯಡೆಗೆ ಬರಲು (ವೀಶೈಪು. ४-೭-೩೭).

[ ತೋಹು$_2$ (<ತೋರ್ಪು) + ಬೇಂಟೆ ]

**ತೋಹೆ** 'ತೋರ್ಪು' ನೋ.

**ತೋಳ್, ತೋಳು** (ನಾ). ೧. ಬಾಹು ; ರಟ್ಟೆ : ಈ ನರೇಂದ್ರಂ ಸಾಕ್ಷಾದಿಂದ್ರಂ ತಾನೆನೆ ಸಲೆ ನೆಗಟ್ದಿಂದ್ರೇಂದ್ರನ ತೋಳೆ ತೊಟ್ಟಿಲಾಗಿರೆ ಬೆಳೆದಂ (ಪಂಪಭಾ. ೧-४४) ; ತೊಳಗುವ ಮೊಳವೀಮುಖಸರೋರುಹಕಾಂತಿಗೆ ಸೋಲ್ತು ಚಂದ್ರಮಂಡಳದ ಕಳಂಕಮಂ ಕಳೆದಪಳ್ ನಗರೀಲಲಿತಾಂಗಿ ನಿಲ್ಕೆ ತೋಳ್ಗಳಿನೆನೆ ಕೂಡೆ ಕಣ್ಗೊಳಿಸಿ ತೋರ್ಪುವು . . . ಕೇತನಾಳಿಗಳ್ (ಕಾದಂಪೂ. ೩೦೩) ; ಎನಗಿರ್ವರುಮೆರಡುಂ ತೋಳೆನಗಿರ್ವರುಮೆರಡು ಕಣ್ಗಳೆನ್ನರೆ ಯುವರಾಜನುಮಂಗರಾಜನುಂ (ಗದಾಯು. ೩-೬೭) ; ದೋಷಮಾಳ್ಕೊಡೆ ತನ್ನ ತೋಳನಾದೊಡಂ ಕಡಿದುಬಿಡುವುದು (ಪಂಚತಂ. ೧೦೦-೫) ; ಬಲ್ಲಾಳನ ತೋಳ ಬಾಳ ನೆಳಲಾದುದು ಧರಿತ್ರಿಗೆ ವಜ್ರಪಂಜರಂ (ಎಕ. VII, ಶಿವಮೊ. ೮೮-೦೩ ; 1203) ; ಸಖನ ಮಂಚದಲಿ ಕುಳ್ಳಿರಿಸಿ ತಕ್ಕಿಸಿಕೊಂಡು ಮುಖ ಕೊರಳುರ ತೋಳ್ತೊಡೆಯ ನಖದಗ್ರದಿಂದಱದಿಱದು (ಕಂನವಿ. ೯-೦೨೩). ೨. ಮರದ ದೊಡ್ಡ ಕೊಂಬೆ, ಮುಖ್ಯ ಶಾಖೆ : ತೋಳ ನೀಳದ ಕಂದಳಿರಿಂದಂ ಸಂದಣಿಸಿರ್ದ ಮದಾಳಿಯಿಂದೋಳದಿಂ ಮಳಯಾನಿಳಲೀಲಾಂದೋಳದಿನೊಪ್ಪೆ (ಆದಿಪು. ೩-೩೦); ಬಂಣಟೆ ಮೂಡೆ ೨ ಮುಂಡಿನ ಮಾಡುವ ಬಳು ಮೂಡೆ ೧ ಚಿಕ್ಕ ಬಿಟ್ಟುವ ಕೊಡಂಗೆ ಮೂಡೆ ೧ ಅದಱ ಮೇಗಣ ತೋಳ ಆರವೆ ಕಂಬಿ ಸಹಿತವಾಗಿ (ಎಇ. XVII, ೧೭೨-೫೧ ; 1256). **ತೋಳು :** ೧. "ಭುಜದೊಳಗಕ್ಕು ತೋಳೆಂದು" (ಕಶಠ. ४೯) ; ಎರ್ದೆ ಪಡಪಡ ಪಾರ್ದಪುದೇಕೆ ಕೆಳದಿ ತೋಳುಗಳಂ ಪಿಡಿ ಮೃದುಹಸ್ತತಳದಿ (ಕಾದಂಪೂ. ४೮೨ ರಗಳೆ) ; ಶಿವನ ತೋಳ ತೊಡವಾನತರ ವಿಸಲ ಮನೋರಥವು ಸಿರಿ ಸರಸ್ವತಿವರಸಿಗಿರಿಜೆ ಬಿಜಯಂಗೈದಳು (ಸಿದ್ಧರಾ. ೧-೫೭) ; ಸಿಂಹದ ತೋಳ ತೆಕ್ಕೆಯ

ಕರಿಯು ಸಲಿವಂದದಲಿ . . . ಧರಣಿಪಾಲನ ತೆಗೆದು ಭೀಮನ ಬರಿಯ ನೆಚ್ಚನು ಜೋಡ ಜೋಕೆಯ ಜರುಹಿದನು (ಕುಮ್ಮಾಕ. ೧೪-೨) ; ತೋಳು ಇಲ್ಲದವನಿಗೆ ಭುಜಕೀರ್ತಿ ತಾನೇಕೆ (ಪುರಂದ. ೨-೬೪-೧೩) ; ರನ್ನದ ಬಿಡೆ ತೋಳ ತಾಳಿ ಮೋಹನದತ್ಕುನ್ನತ ಭುಜಕೀರ್ತಿಯಿಂದ . . . ರೂಪ ಸಂಪನ್ನೆ ಮೆಱೆದಳೊಲವಿನಲಿ (ಕಂಪವಿ. ೯-೭೪) ; ಕಾಲಿಲ್ಲದಲೆ ಹರಿಗು ತೋಳಿಲ್ಲದಲೆ ಹೊರುಗು ನಾಲಿಗಿಲ್ಲದಲೆ ಉಲಿವುದು (ಸರ್ವಜ್ಞ. ೨೦೨೯). ೨. ಭುಜಬಲ ; ಸಾಮರ್ಥ್ಯ : ತೋಳಿಂದ ತಿಳಿವಿಂದ ನುಡಿಯಿಂದ ಜಗದಿರವ ಮೇಲೆನಿಪವನೆ ರಸಿಕ (ಮಂಕುತಿ. ೨೬೩). ೪. ಆನೆಯ ಸೊಂಡಿಲು : ಮೋಱಿಯ ತೋಳಿನಲಿ ಮೋದಿದವು ಮಹಿಯಾನು ಸೊಕ್ಕಿ ದಾನೆಗಳು (ಕುಮ್ಮಾದ್ರೋ. ೧೨-೬) ; ಅಟ್ಟಿ ಹೊಯ್ದನು ಹೊಗುವ ತೇರಿನ ಥಟ್ಟ ತೂಳುವ ತೋಳನಾನೆಯ ಮೆಟ್ಟಿದನು (ತೊರವೆ. ೩-೭-೪೨). 'ತೋಳವಟ್ಟ' ಪರಾ. ೫. ಅಂಗಿಯ ಅಥವಾ ಕೋಟಿನ ಕೈ : ಮುರಿದ ಕೈಯಾದರೆ ಮುಚ್ಚಿಕೊ ಕೈಯನು ಅಂಗಿಯ ತೋಳಿನ ಒಳಗೆ (ಅಂಚಾಟ. ೨೬೯-೮೦). ೬. ಗಾಡಿಯ ತೊಟ್ಟಿಲಿನ ಎರಡೂ ಬದಿಗಿರುವ ಮರದ ದಿಂಡು : ಯಾವ ಗಾಡಿಗೆ ತೋಳು ಇಲ್ಲ. ಯಾವುದರ ಬುಟಿವು ಮುರಿದುಹೋಗಿದೆ (ಬೆಳಛಾ. ೧೭೬).

**ತೋಳ ತೀಟೆ** = ತೋಳಿನ ನವೆ ; ಯುದ್ಧ ಮಾಡುವ ತವಕ : ತೋಳ ತೀಟೆಯುನವನ ನೆತ್ತಿಯ ಮೇಲೆ ಕಳೆವೆನು (ಕುಮ್ಮಾಭೀ. ೧-೬೦). **ತೋಳ ತೀನ್**=ತೋಳ ತೀಟೆ : ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ ಬಾಳೊಳೆ ಬಾಳ್ ಪಳಂಚೆ ಮಾರ್ಕಡಿವಿದೆ ನೋಡಲಂಜಿ ದೆಸೆದೇವತೆಗಳ್ ಪೆಱಪಿಂಗೆ ತೋಳ ತೀನ್ ಕಿಡೆ ನಲಿದು (ಪಂಪಭಾ. ೧೧-೮೨). **ತೋಳ ತೋಟ**=ತೋಳಿನ (ಬಲದ) ಸ್ಪರ್ಧೆ,–ಹುರುಡು : ಕಾಳಗದಲವುರೇಂದ್ರ ಸೋತರೆ ಸೋಲವದು ನಿನಗೆಂಬೆ ನಿನ್ನಯ ತೋಳ ತೋಟಿಯ ತೋಱು (ತೊರವೆ. ೪-೫-೫). **ತೋಳನ್ನಾಡು** = (ಮಕ್ಕಳು) ಆಟಕ್ಕಾಗಿ ಕೈಯ್ಯನ್ನು ಅಲುಗಾಡಿಸು : ತೋಳು ತೋಳು ತೋಳು ರಂಗ ತೋಳನ್ನಾಡೈ (ಪುರಂದ. ೩-೧೪೯ ಪಲ್ಲವಿ). **ತೋಳ ಪಾವಡೆ** = ಅಧಿಕಾರ ಅಥವಾ ಬಿರುದಿನ ಸಂಕೇತವಾಗಿ ತೋಳಿಗೆ ಕಟ್ಟಿಕೊಳ್ಳುವ ಬಟ್ಟೆ : ಬಿರುದಿನ ತೋಳಪಾವಡೆಯ ದುರಗಲಿಗಳು ದುರ್ಗದಾಳ್ವೇರಿಯ ಮೇಲೆ ಪರಿಶೋಭಿಸಿದರುಬ್ಬನಲಿ (ಕಂಪವಿ. ೧೧-೧೪೪). **ತೋಳ ಬಂದಿ** = ೧. ತೋಳಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ ; ಕೇಯೂರ : "ಕೇಯೂರಂ, ಅಂಗದಂ–ಈ ೨ ತೋಳ ಬಂದಿ" (ಶಾಚಿರಾ. ೦೨೩) ; ಇಕ್ಕಿದ ರಪ್ನದೋಳೆ ಪೊಸ ಮುತ್ತಿನ ಮೂಗುತಿ ತೋಳ ಬಂದಿ . . . ಚೆಲ್ವನೊಳಕೊಂಡಿರೆ (ಕಸ್ತೂರಿ. ೩೪೦). ೨. ತೋಳುಗಳ ಬಂಧನ: ಆಲಿಂಗನ. ೧, ೨ : ಆತ ಕೊಟ್ಟ ವಸ್ತು ಒಡವೆ ನನಗೆ ಅವಗೆ ಗೊತ್ತು ತೋಳುಗಳಿಗೆ ತೋಳಬಂದಿ ಕಿನ್ನ ತುಂಬ ಮುತ್ತು (ನಾದಲೀ. ೫೯-೧೫). **ತೋಳಬಾಪುರಿ, ತೋಳ ಭಾಪುರಿ** = ತೋಳಬಂದಿ : ತೋಳ ಬಾಪುರಿ ಯುಟ್ಟು ಕವುಲ ಬಂಧವ ಕಟ್ಟಿ (ಜಿತರಾ. ೯-೩೨) ; ಚಾರುಭುಜಕೀರ್ತಿಯಿಂ ತೋಳ ಭಾಪುರಿಯು ಕರಕಂಕಣಂಗಳನು ಧರಿಸಿ (ನವವೋ. ೧೬-೧೦). **ತೋಳ ಮಣಿ** = ತೋಳುಬಂದಿ ; ಕೇಯೂರ ; ನಣೆತೋಳೊಳ್ ತೊಡದೊಂದು ತೋಳ ಮಣಿಪೋಲ್ (ಅದಿಪು. ೧೨-೪೦). **ತೋಳ ಮೊದಲ್** = ಕಂಕುಳ ; ಕಕ್ಷ : ಅಮರ್ದಂ ಮುಂದಿಡೆ ಮಂದಹಾಸಮಲರ್ಗಣ್ ಬೆಳ್ದಿಂಗಳಂ ಬೀಱೆ ತೋಳ ಮೊದಲ್ಗೆಯ್ದೆ ಪೊದಟ್ದ ಪೆರ್ಮೊಲೆಗೊಡಂಗಳ್ ಸೂಸೆ ಲಾವಣ್ಯತೋಯಮಂ (ಶಂಖರಾಮ. ೧-೧೦೩) ; ಲಾವಣ್ಯರಸಮಂ ಬೀಱ್ ಮುಪ್ಪುವೊಗ ಮುಗುಳ ಹೊಗರಂ ತೋಳ ಮೊದಲಪ್ಪುಗೆಯ್ಯೆ (ಪಶ್ಯಾ. ೩-೩೦).

[ ದೇ. ॥ ತಮಿ. ಮಲ. ತೋಳ್ ; ತುಳು. ತೋಳ್, ತೋಳು ]

**ತೋಳ್₁** (ನಾ). ಒಂದು ಬಗೆಯ ಕಾಡುಮೃಗ ; ಈಹಾಮೃಗ ; ವೃಕ : "ಅರಣ್ಯಶ್ವಾ, ಕೋಕಃ, ಈಹಾಮೃಗಃ, ವೃಕಃ–ಈ ೪ ತೋಳಂ" (ಹಲಾಯು. ೩೪-೬೫); "ಕೋಕವಿಹಾಹಾಮೃಗಂ ವೃಕವೆನಲು ತೋಳನಕ್ಕು" (ಮಂಗರಾ. ೪೮-೮); ನಿಲ್ ತೋಳಂ ಬರ್ಪುದು (ಶಬ್ದಾ. ೧-೬೩); ಮೊಲನುಂ ಪಂದಿಯುಂ ತೋಳನುಂ . . . ಮುಂಗುರಿಯುಂ ಮೊದಲಾಗೊಡೆಯ ಸ್ಥಲಚರಂಗಳುಂ (ವಡ್ಡಾರಾ. ೯೭-೪) ; ಆತಂಗೆ ಧೂರ್ತವಿನೋದದವು ವಿನೋದಮಪ್ಪುದಱಿಂ ದುರ್ಜನಪರಿವೃತನಾಗಿ ಬಂದಂಗಡಿಯಂ ಪುಗೆ ತೋಳನಂ ಕಂಡ ಕುಱಿವಿಂಡಿನಂತೆ ಪರದರ್ ಪರದುವೋಗೆ (ಧರ್ಮಾಮೃ. ೨-೩೨) ; ಮರ್ತ್ಯರ ಸಹಸವೆಮ್ಮೊಡನೆ ತೋಳನಳವಿಗೆ ಮಲೆತ ಕುಱಿಗಳ ಜಾಲದಂತಿಹುದೆಂದು ಮುಂದಕರಾಳವೃತ್ತಿಗಳು ನಗಲು (ಕುಮ್ಮಾಸ. ೫-೪೯); ಪುಲ್ಲೆಯುಂ ನೆಲದೊಳುಂ ಪಾಸಿ ತೋಳನ ತುಳಿದು (ಮಹಾವಿ. ೭-೨೬) ; ಹುಲಿ, ಕಿರುಬ, ತೋಳ ಮೊದಲಾದ ಕಾಡುಮೃಗಗಳು ಆ ಕಡೆ ಬಹಳ (ಕಳಹು. ೪) ; ತೋಳ ಗುಂಡಿಗೆ ಬಿದ್ದರೆ ಆಳಿಗೊಂದು ಕಲ್ಲು (ಗಾದೆ).

[ ದೇ.॥ ತಮಿ. ತೋಣ್ಣಾನ್; ತುಳು. ತೋಳ್, ತೋಳಿ; ತೆಲು. ತೋಡೇಲು, ತೋಡೇಲು ; ಬ್ರಾಹುಈ. ತೋಲ = ನರಿ ]

**ತೋಳ್₂** (ನಾ). ಗೆಳೆಯ ; ಮದುವೆಯಲ್ಲಿ ಗಂಡಿನ ಜೊತೆಯಲ್ಲಿ ಬರುವ ಸ್ನೇಹಿತ : ಅಳಿಯನಿಗಿಂತ ಅವನ ತೋಳನ ಅವಾಂತರ ಬಹಳ (ಗಾದೆ). [ ದೇ.॥ ತಮಿ. ಮಲ. ತೋಳ ]

**ತೋಳವಟ್ಟ** (ನಾ). ಆನೆಯು ಸೊಂಡಿಲಿನಿಂದ ಹೊಡೆಯುವ ಒಂದು ಕ್ರಮ : ಮಸಗಿದ ಮಿಟ್ಟುವೆ ಮದಗಜದೆಸಕವನೊಳಕೊಂಡುದೆನಿಸಿ . . . ಬಂದು ಪನ್ನೆರಡುಂ ಹಸ್ತಪ್ರಹಾರದೊಳಂ ಪದಿನೆಂಟು ಕೋಡೊಱೆ ನೊಳಂ ಏಟುಂ ತೆಱದ ತೋಳವಟ್ಟದ ಪೊಯ್ಲೊಳಂ . . . ಪಡೆಯುಂ ಪುಳಯಮನ್ನೆದಿಸುತ್ತುಂ ಬರ್ಪುದಂ ಕಂಡು (ಮಹಾನೇ. ೧೨-೧೪೨ ವ).

[ <ತೋಳ್ + ? ]

**ತೋಳಾಟ** (ನಾ). ಮಕ್ಕಳು ತಮ್ಮ ತೋಳನ್ನು ಆಡಿಸುವ ಒಂದು ಕ್ರಮ : ಆಕಾರಕ್ಕೆ . . . ತೋಳಾಟಂ ; ಬಾಳೊಪ್ಪಂ (ಶಮದ. ೬೯ ಪ್ರಹಾ); ಮೇಲೆ ಪರವಾದಿಗಳ ಬಾಯ್ಗಳಂ ಪೊಯ್ವಂತೆ ತೋಳಾಟವಾಡಿ (ಚಉಪು. ೫-೩೯). [ ತೋಳ್ + ಆಟ ]

**ತೋಳಾಡಿಸು** (ಕ್ರಿ). ತೋಳನ್ನು ಅಲುಗಾಡಿಸು : ಪರವೆನಾಚಿ ಸಂಕಿಲಿ ನಾಚಿಯರನಪ್ಪುವ ತೋಳ್ಗಳವೆಂಬಂತೆ ತೋಳಾಡಿಸುತ್ತುಂ (ನಂಚಿರ. ೨-೫).

[ ತೋಳ್ + ಆಡಿಸು ]

**ತೋಳಾರ್ಪು** (ನಾ). ತೋಳಿನ ಶಕ್ತಿ ; ಭುಜದ ಬಲ : ಅವರಿಗೆ ತಿಮ್ಮಣ್ಣನಾಯಕನ ತೋಳಾರ್ಪಿನ ನೆನಪಾಯಿತು (ಕವೀರ. ೦೨೧).

[ ತೋಳು (<ತೋಳ್) +ಆರ್ಪು₁ ]

**ತೋಳು** 'ತೋಳ್' ನೋ.

**ತೋಳುಕಯ್ಗೊಡು** 'ತೋಳ್ಗೈಗೊಡು' ನೋ.

**ತೋಳುಕೆಲಸ** (ನಾ). ತೋಳಿನ ಶಕ್ತಿಯಿಂದ ಮಾಡುವ ಕೆಲಸ : ಬುದ್ಧಿಯ ಕೆಲಸ ಶ್ರೇಷ್ಠ ; ತೋಳುಕೆಲಸ ಮಧ್ಯಮ ; ಕಾಲ್ಕೆಲಸ ಹೆಗಲ ಕೆಲಸಗಳು ಅಧಮ (ವಚಛಾ. ೩೩೭).

[ ತೋಳು (<ತೋಳ್) + ಕೆಲಸ ]

**ತೋಳುಕೈಗೊಡು** 'ತೋಳ್ಗೈಗೊಡು' ನೋ.

**ತೋಳುಗುತ್ತು** (ನಾ). ಬಾಹುವಿಗೆ ಹೊಂದಿಕೊಂಡಿರುವಿಕೆ : ಭಾರಿಯ ತೋಳುಗುತ್ತಿನ ಜಯುಲಕುವಿ ಜಂಗಳವ ಜಾಱಿದಡೆ ಭಾಳಲಿಪಿಗಳ ಲೆಕ್ಕವನು ಪ್ರತಿಕೂಲವಿಧಿ ಪಲ್ಲಟಿಸಿ ಬರೆದಡೆ ಹೇಳ ಫಲವೇನನುತ ತುಂಬಿದನರಸ ಕೆಂಬನಿಯ (ಕುಮ್ಮಾಗ. ೩-೨೫).

[ ತೋಳು (<ತೋಳ್) + ಗುತ್ತು₂ (<ಗುತ್ತ₁) ]

**ತೋಳುತೊಡಿಗೆ** (ನಾ). ತೋಳಿಗೆ ಧರಿಸುವ ಆಭರಣ; ವಂಕಿ: "ಕೇಯೂರಂ, ಅಂಗದಂ ೨ ಬಾಹುಪುರಿ ಹೆಸರು. ನಾಗಮುರಿಗೆ ತೋಳು ತೊಡಿಗೆ ಬಾಜುಬಂದೂ ವಂಕಿ" (ಸಿದ್ಧಾಂತಿ. ೧೭೪).
[ ತೋಳು (<ತೋಳ್) + ತೊಡಿಗೆ (<ತೊಡುಗೆ) ]

**ತೋಳಬಂದಿ** (ನಾ). = ತೋಳುತೊಡಿಗೆ : ತೋಳುಬಂಧನದಲ್ಲಿ ವಜ್ರದ ತೋಳುಬಂದಿಯು ಅಲಂಕೃತವಾಗಿದ್ದಿತು (ಶ್ರೀರಾಮ. ೨೩೨); ಶ್ಯಾಮ ರಾಯನಿಗೇ ಒತ್ತಿ, ಒಗೆದ, ಬೆಳ್ಳಿಯ ತೋಳುಬಂದಿಯನ್ನು ಬಿಡಿಸಿಕೊಂಡು ತಂದ (ದೀಪಹ. II, ೧೯೩). [ ತೋಳು (<ತೋಳ್) + ಬಂದಿ$_1$ ]

**ತೋಳುಮರ** (ನಾ). ೧. ಗಾಡಿಯ ಮೂಕಿಗೂ ತೊಟ್ಟಿಲಿಗೂ ಸಂಬಂಧ ವನ್ನು ಕಲ್ಪಿಸುವ ಮರದ ಸಾಧನ : ಅನುಕರ್ಷಃ, ದಾರ್ವಧಸ್ಥಂ - ಆ ನೊಗದ ಕೆಳಗಿರುವ ಕೋಲೀಕಹಲಿಗೆಗೂ ತೋಳುಮರಕ್ಕೂ . . . ಹೆಸರು (ಸಿದ್ಧಾಂತಿ. ೨೫೪). ೨. ದಾರಿಯನ್ನು ತೋರಿಸುವ ಕೈಯಾಕಾರದ ಮರದ ಸಾಧನ; ಕೈಮರ : ಆ ತೋಳುಮರದಿಂದ ಊರು ಮೂರು ಮೈಲಿಯಿದೆ (ಕೂತಿ). [ ತೋಳು (<ತೋಳ್) + ಮರ$_1$ ]

**ತೋಳುವಲ** 'ತೋಳ್ವಲ' ನೋ.

**ತೋಳುವಲೆ** 'ತೋಳ್ವಲೆ' ನೋ.

**ತೋಳುವಳೆ** 'ತೋಳ್ವಳೆ' ನೋ.

**ತೋಳುವೆರಗು** 'ತೋಳ್ವೆರಗು' ನೋ.

**ತೋಳೆ** 'ತೋಲೆ' ನೋ.

**ತೋಳೆಡೆಗೊಡು** (ಕ್ರಿ). (ತೋಳನ್ನು ದಿಂಬಾಗಿ ಮಾಡಿಕೊಂಡು) ನಿದ್ದೆ ಮಾಡು,- ಮಲಗು : ರಜನೀನಾರಿ ತೋಳೆಡೆಗೊಟ್ಟಳಂಬುಜಬಂಧು ಹೊಱವಂಟ (ಕುಮಾರವ್ಯಾ. ೦೮-೪೩). [ ತೋಳ್ + ಎಡೆಗೊಡು ]

**ತೋಳೆವಿಂಡು** (ನಾ). ಬಾವಲಿಗಳ ಸಮೂಹ,-ಗುಂಪು: ಬಿಲ್ಲಡೆ ಪೊಕ್ಕಸೆ ಬಾಣಸಂಕುಲಂ ಕವಿದುವು ತೋಳೆ[ಪಾಠಾಂ. ಳ]ವಿಂಡು ಕವಿವಂತೆಲೆಯಿಕ್ಕದ ಕಾನನಂಗಳಂ (ಪಂಪಭಾ. ೦೩-೯೩). [ ತೋಳೆ (<ತೋಲೆ) + ಪಿಂಡು$_2$ ]

**ತೋಳೇರಿಸು** (ಕ್ರಿ). ಅಂಗಿಯ ತೋಳನ್ನು ಮೇಲೆತ್ತು; ಜಗಳಕ್ಕೆ ಸಿದ್ಧ ವಾಗು : ನೀನು ಇನ್ನೊಂದು ಮಾತಾಡಿದರೆ ಆ ಮಾತಿನ ಕೊನೆಯುಸುರಿನ ಸಂಗಡ ಪ್ರಾಣವನ್ನು ಕಳೆದುಕೊಳ್ಳುವೆಯೆಂದು ತಿಳಿ ಎಂದು ತೋಳೇರಿಸಿದನು (ಜಯಂತ. ೨೯೫). [ ತೋಳು (<ತೋಳ್) + ಏರಿಸು (<ಏಱಿಸು) ]

**ತೋಳ್ಕಟ್ಟು** 'ತೋಳ್ಗಟ್ಟು' ನೋ.

**ತೋಳ್ಕೈಗೊಡು** 'ತೋಳ್ಗೈಗೊಡು' ನೋ.

**ತೋಳ್ಗಟ್ಟು, ತೋಳ್ಕಟ್ಟು** (ನಾ). ತೋಳುಬಂದಿ: ಎಡೆಯೆಡೆಗೆ ಸಜ್ಜುಕ ವೆನಿಸಿದ ಗೊಜ್ಜುಗೆಯರಲ ಮಿಶ್ರದಿನುಪಾಶ್ರಯಂಬಡೆದ ಹೇಮತಾಮರಸದ ಮೊಗ್ಗೆಯ ತೋಳ್ಗಟ್ಟುಗಳು ಮಂ (ಆಗವಿ. ೬-೧೬ ಬ). **ತೋಳ್ಕಟ್ಟು** : "ಕೇಯೂರಂ, ಅಂಗದಂ — ಈ ೨ ತೋಳ್ಕಟ್ಟು" (ಹಲಾಯು. ೯೧-೪೦೩).
[ ತೋಳ್ + ಕಟ್ಟು$_2$ ]

**ತೋಳ್ಗುಟ್ಟು** (ಕ್ರಿ). ತೋಳು ತಟ್ಟು; ಸಡ್ಡುಹೊಡೆ: ತೋಳ್ಗುಟ್ಟುತಾರ್ಪು ಸುಡ್ಡಾನದಿಂ ಪಟುಭಟಕೋಳಿಳ್ಗೊಂಡು ಕುದಿಯುತಿರ್ದರು (ಕೃಮಿಭಾ. ೧೨-೫). [ ತೋಳ್ + ಕುಟ್ಟು$_1$ ]

**ತೋಳ್ಗೈಗೊಡು, ತೋಳ್ಕಯ್ಗೊಡು, ತೋಳ್ಕೈಗೊಡು, ತೋಳ್ಕೈ ಗೊಡು** (ಕ್ರಿ). ಗಂಡನ ಚಿತೆಯೇರಿ ಸಹಗಮನ ಮಾಡು; ಮಹಾ ಸತಿಯಾಗು: ಅಷ್ಟಮಹಿಷಿಯರ್ ಕೃಷ್ಣನೊಡನೆ ... ತೋಳ್ಗೈಗೊಟ್ಟರು (ಜಗನ್ನಾ. ೧೧-೧೫೨). **ತೋಳ್ಕಯ್ಗೊಡು**: ಆ ಬೊಮ್ಮನಾಯ್ಕನ ಹೆಂಡತಿ × × ಬವನಾಯಕಿತ್ತಿ ತೋಳ್ಕಯ್ಗೊಟ್ಟು ಸಗ್ಗ ಪ್ರಾಪ್ತರಾದರು (ಎಕ. VII, ಶಿವಮೊ. ೬೦-೪೪ ;1287). **ತೋಳ್ಕೈಗೊಡು**: ಗಂಗಗೌಡನ ಸೊಸೆ ಮಗಸಿ ತಿಪುರಊಡದಲಿ ? ತೋಳ್ಕೈಗೊಟ್ಟಳು (ಮೈಆರಿ. ೧೯೩೭, ೬೦-೪; 16 ನೆಯ ಶತ). **ತೋಳ್ಕೈಗೊಡು**: ತರೆಗಿಂದು ಕೃಷ್ಣಂಗೆ ತರೆಗೊಳ್ಳಿಯರ್ ದೊಡವನಳಲಿ ಕಿಚ್ಚಂ ವಾಯ್ದರಚ್ಯುತನೊಳು ಕಲಿ ರುಕ್ಮಿಣಿಪ್ರತತಿ ಬಲನೊಳಾ ರೋಹಿಣಿಯುಮೊಲಿದು ತೋಳ್ಕೈಗೊಟ್ಟುದುಮಂ (ಕಾನುಕ. ೨-೧೧೫). [ ತೋಳ್ + ಕೈ$_2$ (<ಕಯ್$_2$) + ಕೊಡು$_1$ ]

**ತೋಳ್ತಿಂಡಿ** (ನಾ). ತೋಳಿನ ತೀಟೆ,-ನವೆ : ತಮ್ಮ ತೋಳ್ತಿಂಡಿಯನ್ನು ತೀರಿಸುವುದಕ್ಕೆ ಎಷ್ಟು ಹೆಚ್ಚು ಸಂದರ್ಭಗಳು ಒದಗುವುವೊ ಅಷ್ಟು ಅವರಿಗೆ ಆನಂದ (ಕಠಕ್ಕ. ೩೪). [ ತೋಳು (<ತೋಳ್) + ತಿಂಡಿ ]

**ತೋಳ್ದಲೆ** (ನಾ). ಹೆಗಲು : "ತೋಳ್ದಲೆಯೊಂದುಂ ಮುಯ್ಯೊಂದುಂ ಭುಜಾಗ್ರಂ" (ಕಶಸಾ. ೬೦-೬೨). [ ತೋಳ್ + ತಲೆ$_1$ ]

**ತೋಳ್ದೀಂಟೆ** (ನಾ). = ತೋಳ್ತಿಂಡಿ : ಸುಧನ್ವಂ . . . ಇಂದೆನ್ನ ತೋಳ್ದೀಂಟೆಯಂ ಕಳೆವೆನೆನುತೆ ಕೃಷ್ಣಾರ್ಜುನರ ಸರಿಸಕೈತರುತಿರ್ದನು (ಜೈಮಿಭಾ. ೧೪-೧). [ ತೋಳ್ + ತೀಂಟೆ$_1$ ]

**ತೋಳ್ದೀನ್** (ನಾ). = ತೋಳ್ತಿಂಡಿ: ತೋಳ್ದೀನಂ ಕಳೆದು ತಂದವೆಂ ಪಂದಲೆಯಂ (ಚಂದ್ರಪ್ರ. ೧೧-೯೦). [ ತೋಳ್ + ತೀನ್ ]

**ತೋಳ್ದುಱುಗಲ್** (ನಾ). ತೋಳುಗಳ ಸಮೂಹ,-ಗುಂಪು : ತ್ರಿದಶ ಗಣಾಧಿನಾಯಕನ ಪರ್ವಿದ ತೋಳ್ದುಱುಗಲ್ಗಳೊಳ್ ಪಳಂಚಿದ . . . ಏಂ ಪದುಳವಾದುದೊ ದಿವ್ಯವಧೂಕದಂಬಕಂ (ಆದಿಪು. ೬-೧೨೫); ಎನಗೆ ನಭಂ ದಿಕ್ತಟಮನ್ನೆನಿತಂತರಮೆಂದು ನಿಕ್ಕಿ ನೋಡುವ ಗಿರಿರಾಜನ ತೋಳ್ದುಱುಗಲಿನಲ್ ನೀಳ್ದನೇಕಶಾಖೆಗಳೆನೆಸದುದೊಂದು ಕದಂಬಂ (ಜಾವಿ. ೮-೨೪). [ ತೋಳ್ + ತುಱುಗಲ್ (<ತುಱುಂಗಲ್) ]

**ತೋಳ್ನಾಯಿ** (ನಾ). ಒಂದು ಬಗೆಯ ದೊಡ್ಡಗಾತ್ರದ ನಾಯಿ; ತೋಳ ದಂಥ ನಾಯಿ : ಉಡಕಮಂಡಲದಿಂದ ಹೊಸದಾಗಿ ತಂದಿದ್ದ ಅಲ್ಸೇಶನ್ ತೋಳ್ನಾಯಿ ಅವರನ್ನು ಅಡ್ಡಾಡಿಸಲು ಕರೆದೊಯ್ದಿದೆ (ಚಾಕೂಟ. ೨೪). 'ಸೀಳ್ನಾಯಿ' ಪರಾ. [ <ತೋಳ$_1$ + ನಾಯಿ (<ನಾಯ್) ]

**ತೋಳ್ನೆರ** (ನಾ). ತೋಳಿನ ನೆರವು,-ಆಸರೆ,-ಆಶ್ರಯ : ದಶರಥಂ ಪುಟ್ಟಿ, ಪಟಿ ಪೂರ್ದದ ಬಟಿಯಂಬಿಂ ಕಳೆಗುಂದದ ತೋಳ್ನೆರಂ ತನ್ನೊಳಾಗೆ . . . ತಿರೆಯಂ ಪೊರೆಯುತೆ (ರಾಮಾಶ್ವ. ೬-೧೧). [ ತೋಳ್ + ನೆರ$_2$ ]

**ತೋಳ್ಪೊಯ್** 'ತೋಳ್ವೊಯ್' ನೋ.

**ತೋಳ್ಪಲ** 'ತೋಳ್ವಲ' ನೋ.

**ತೋಳ್ಪಲ್ಲು** 'ತೋಳ್ವಲ್ಲು' ನೋ.

**ತೋಳ್ಪಲ್ಮೆ** 'ತೋಳ್ವಲ್ಮೆ' ನೋ.

**ತೋಳ್ಮಾಲೆ** (ನಾ). ತೋಳಿಗೆ ಕಟ್ಟುವ ಹಾರ; (ಹೂವಿನ) ತೋಳು ಬಂದಿ: ತೊಳಪ ಚೆಂಗಣಿಗಿಲೆಯ ತೋಳ್ಮಾಲೆಗಳನಿಕ್ಕಿ ಚೆಳಪ ಸಪುರಪ್ರಕರ ದುತ್ತರಿಗೆಯುಮನಿಕ್ಕಿ ಮಂಗಳವಿಳಾಸಮಂ ಮಾಡಿ (ಸಂಚಿರ. ೫-೩೩).
[ ತೋಳ್ + ಮಾಲೆ ]

**ತೋಳ್ಮುರಿ** (ನಾ). ತೋಳುಬಂದಿ: ಗೆಜ್ಜೆ ಪದಸರ ಕಂಠಿ ಪದಕ ತೋಳ್ಮುರಿ ಹಸ್ತವಲಯ (ಜನಮು. ೪-೨). [ ತೋಳ್ + ಮುರಿ$_3$ ]

**ತೋಳ್ಮೊದಲ್, ತೋಳ್ಮೊದಲು** (ನಾ). ೧. ಬಾಹುಮೂಲ; ಕಂಕುಳು: ಅಲರ್ವಿಲ್ಲನ ಬಾಳ್ಮೊದಲಾದ ತೋಳ್ಮೊದಲ್ ತುಳ್ಕುವ ನುಣ್ಪುನೀಕ್ಷಿಪಳಿವಂ ಬಗೆಯೊಳ್ ಮಿಗೆ ಕಾದು ಕಾಪಲಂ (ಚಂದ್ರಪ್ರ. ೬-೧೧೧). **ತೋಳ್ಮೊದಲು**: ೨. ಭುಜ: ತೋಳ್ಮೊದಲನಂಗಯ್ಗಳಿಂ ಚಪ್ಪರಿಸಿ ತೋರ ತೊಡೆಗಳನಪ್ಪಳಿಸಿ...ನಿಮಿರಿಸಿಂತನು (ಶ್ರೀಕಾಮಾ. ೪೫೭-೩೩೮). [ತೋಳ್+ಮೊದಲ್]

**ತೋಳ್ಮೊದಲು** 'ತೋಳ್ಮೊದಲ್' ನೋ.

**ತೋಳ್ವಂಕಿ** (ನಾ). ತೋಳುಬಂದಿ: ಜೂಳಿಯ...ತಾಳಿಹೂ ಬಿಂಬಚ್ಚೆ ದಂಡೆ ತೋಳೊಂಕಿ [ತೋಳ್ವಂಕಿ] ಕರ್ಣಿಕೆ ಸರಪಣಿ ಮೊದಲಾಗಿ ಬಾಲೆಗಾಭರಣ ಪೊಪ್ಪಿದುವು (ಭರತ. ೪೦-೬೫). [ ತೋಳ್ + ವಂಕಿ ]

**ತೋಳ್ವಚ್ಚ** (ನಾ). ತೋಳಿನ ಆಭರಣ; ಕೇಯೂರ; ಅಂಗದ: ಮುತ್ತಿನೆಕ್ಕಸರಂಗಳುಂ ... ಪಚ್ಚೆಯ ತೋಳ್ವಚ್ಚಂಗಳುಂ ಕೆಂಬರಲ ಕಡಗಂಗಳುಂ (ಚಿಕವಂ. ೬೦-೧೧೦). [ ತೋಳ್ + ಪಚ್ಚ₂ ]

**ತೋಳ್ವಲ, ತೋಳಂವಲ, ತೋಳ್ಪಲ, ತೋಟ್ವಲ** (ನಾ). ಬಾಹುಬಲ; ಭುಜದ ಶಕ್ತಿ; ತೋಳಿನ ಕಸುವು: ಕಲಿತನದುರ್ಕು ಜವ್ವನದ ಸೊರ್ಕು ನಿಜೇಶನ ನಚ್ಚು ವಿಕ್ಕ ತೋಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನೆನ ಗುಂಟೆ (ಪಂಪಭಾ. ೧೧-೨೩); ತನ್ನೊಂದೆ ತೋಳ್ವಲದಿಂ ಭೂತಳಮಂ ನಿವಿರ್ಚಿ (ಎಕ. VIII, ಸೊರಬ. ೧೮೪-೨೦; 1033 ?); ಬಿಸುಗಣ್ಗೊರವಂ ಕಾವನ ತೋಳ್ವಲಮನಱವೆನೆಂದೆಬ್ಬಿಂದು (ಕಬ್ಬಿಕಾ. ೨೯೦); ಬಲಕ್ಕೆ–ಅಳ್ವಲ (ಅಳ್ಪಲ), ತೋಳ್ವಲ (ತೋಳ್ಪಲ) (ಶಮದ. ೨೯೮ ಪ್ರಯೋ); ಶರಧಿಯನು ತೋಳ್ವಲದೊಳೀಸುವುಡುರವಣಿವ ಮರುಳಂತೆ (ಸಾಳ್ವಭಾ. ೧-೬೭). **ತೋಳುವಲ**: ತಂಸುವ ತೋಳುವಲವೆನೆ ಸಾಧಯಿಸಿತ್ತನೆ (ದೊಂಕಣಿ. ೧೯೨೯, ನವಲುಗುಂದ. ೨೦೭-೨೩; 1184); ತೋಳುವಲಕಿದಿರಿಲ್ಲ ಬನುಗು ನೃಪಾಲನೆಲವೋ ಕರ್ಣ ಫಡಫಡ ಮೇಳವಾದರೆ ಮೊಗೆವ ನರುಣಾಂಬುವನು ನಿನ್ನೊಡಲ (ಕುಮಾರವ್ಯಾ. ೦೩-೨೩). **ತೋಳ್ಪಲ**: ಸಂದ ತೋಳ್ಪಲದದಟಂ ಪರಾಭವಮನೇಕೆಯೊ ಸೈರಿಸುವಂ ಬಲಸ್ಥನೊಳ್ ಬಲಮನೆ ಪೂಣ್ಬುದುಂ ಪರಿಭವಕ್ಕೆ ಮೊದಲ್ (ಆದಿಪು ೦೨-೦೦೩). △**ತೋಟ್ವಲ**: ಅಸಹಾಯಶೂರನನಾಂತರನಿಱುದಟ್ಟಿಯಾಡಿಸಿದ ತೋಟ್ವಲದಿಂ (ಎಕ. VI, ತರೀಕೆ. ೪೩-೪೭; 1196). [ ತೋಳ್ + ಬಲ₂ ]

**ತೋಳ್ವಲಯ** (ನಾ). ತೋಳಿಗೆ ಧರಿಸುವ ಬಳೆ; ತೋಳ್ಬಳೆ: ಮುಯ್ಯಿನೊಳಮರ್ಚುವ ಮೃಣಾಳದ ತೋಳ್ವಲಯಂಗಳೊಳಂ ಬಾಟಿಯ ತಿರುಳಿಲೆಯ ಬಿಜ್ಜಣಿಗೆಗಳೊಳಮಸಟ ಪಸೆಗಳೊಳಂ ಎಂತುಮಾ ಸಂತಾಪಮಂ ಸಂತಯಿಸಲಾಱದ (ಕಾದಂಬ. ೬೭೩).

[ ತೋಳ್ + ವಲಯ ]

**ತೋಳ್ವಲೆ, ತೋಳುವಲೆ** (ನಾ). ೧. ಬಾಹುಬಂಧನ; ತೋಳಿನ ಸೆರೆ; ತೋಳಿನ ಹಿಡಿತ: ನಿನ್ನನುಜರಂ ಕಂಡಂತುಮೇನೆನ್ನ ತೋಳ್ವಲೆಯೊಳ್ ಸಿಲ್ಕಿದೆಯೆಂದು ಮೂದಲಿಪುದುಂ (ಪಂಪಭಾ. ೧೨-೧೪೬); ದಶಾಸ್ಯ ದೇವೋತ್ತಮ ಕಾಮಿನೀಜನದ ತೋಳ್ವಲೆಯೊಳ್ ತೊಡರಲ್ಕೆ ತಕ್ಕುದೇ (ಪಂರಾಮಾ. ೧೯-೨೦೦). **ತೋಳುವಲೆ**: ೧. ಭೀಮಸೇನನ ತೋಳುವಲೆಯಲಿ ಸಿಕ್ಕಿದನು ಭೂಪಾಲ (ಕುಮಾರವ್ಯಾ. ೦೩-೪೮). ೨. ಒಂದು ಬಗೆಯ ಬಲೆ: ತೊಡರ್ಚುವಲೆ ತೋಳುವಲೆ ಮರೆವಲೆ ಸಗಾಢವಲೆಗಳ ಹೊಱೆಗಳೊಳೀಯಿಂ ಪೊತ್ತು ನಡೆತಂದುದು ಪುಳಿಂದರೂಪದಲಿ ಭೂತಗಣಂಗಳು (ಸೌಂದಪು. ೦೮-೨೯). [ ತೋಳ್ + ಬಲೆ₁ ]

**ತೋಳ್ವಲ್ಪು, ತೋಳ್ಬಲ್ಪು** (ನಾ). =ತೋಳ್ವಲ: ಮೊದಲೊಳು ಹೊಯ್ಸಳ ರಾಜ್ಯಲಕ್ಷ್ಮಿಯೊದವಂ ತೋಳ್ವಲ್ಪಿನಿಂ ತಾಳ್ದಿ(ದಂ) (ಎಕ. VI, ತರೀಕೆ. ೬೦-೩೩; 1164 ?). **ತೋಳ್ಬಲ್ಪು**: ಮಾಱಾಂತಿಭಮಂ ಪಾಯ್ಮೆನೆಯ ಪೋಲ್ ಬೀಟ್ವನ್ನೆಗಂ ಪೊಯ್ದು ಕೊಲ್ಲದೆ ಬಲ್ಪಲ್ಕೆಗೆ ಗೇಣ ಬನ್ನಣಕೆ ತೋಳ್ಬಲ್ಪಿಂಗೆ ಮುಯ್ಯಾಂಪುದೇ (ಪಾರ್ಶ್ವಪು. ೬-೪೮); ದುರ್ಗವನ್ನು ಹೈದರ್‌ಅಲ್ಲಿಯು ಮುತ್ತಿದಾಗ ಈ ಸಂಹಿಣೆಯು ತನ್ನ ತೋಳ್ಬಲ್ಪಿನಿಂದ ಕೆಲವು ಕಾಲ ಹೈದರ್‌ಅಲ್ಲಿಯ ಸೇನಾಶರಧಿಯನ್ನು ತಡೆದು ಹಿಡಿದಳು (ಕವೀಕ. ೧೪೧). [ ತೋಳ್ + ಬಲ್ಪು ]

**ತೋಳ್ವಲ್ಮೆ, ತೋಳ್ಬಲ್ಮೆ** (ನಾ). ಬಾಹುಬಲ; ಭುಜಪರಾಕ್ರಮ: ಅಳ್ವಲ್ಮೆ; ತೋಳ್ವಲ್ಮೆ (ಶಮದ. ೬೬ ಪ್ರಯೋ). **ತೋಳ್ಬಲ್ಮೆ**: ನಿನ್ನ ಕೈಹಿಡಿತವೂ ತೋಳ್ಬಲ್ಮೆಯೂ ಕಡಿಮೆಯಾಗಿ ಹೋಯಿತೇ? ಗಾಂಡೀವ ತನ್ನ ಸತ್ತ್ವವನ್ನು ಕಳೆದುಕೊಂಡಿತೋ? (ವ್ಯಾಸಭಿ. ೪೦೨).

[ ತೋಳ್ + ಬಲ್ಮೆ ]

**ತೋಳ್ವಳೆ, ತೋಳುವಳೆ** (ನಾ). ತೋಳಂಬಂದಿ: ಪನಕುಸುಮಂಗಳಿಂ . . . ಮುಂಗುಳ್ಪರಿಗೆ ತೋಳ್ವಳೆ ಕಂಕಣವಾರವೆಂದು ಬೇಟ್ಪನಿತನ ಮಾಡಿ ತೊಟ್ಟು ಕರಮೊಪ್ಪಿದಳ್ (ಪಂಪಭಾ. ೨-೧೭); ಮಣಿಮೇಖಳೆ ಮಕರ ಕುಂಡಳಂ ತೋಳ್ವಳೆಯೆಂಬಿವನವರ್ಗೆ ಭೂಷಣಾಂಗಂ ಕುಡುಗುಂ (ಶಾಂತಿಪು. ೬-೧೧೦); ಶೀತಳಿಕೆಯ ಚಾಮರಂ ಪೊಸ ಮೃಣಾಳದ ತೋಳ್ವಳೆ ಮುಕ್ತಿನಾರಂ . . . ಕಣ್ಗೊಳೆ (ಕಾದಂಬ. ೪೫೫). **ತೋಳುವಳೆ**: ಕುಡುದಾಡೆ ತೋಳುವಳೆ ಪಾವುಕಯ್ಯ (ದೊಂಕಣಿ. ೧೯೩೩, ಹಾವೇರಿ. ೧೪೩-೦; ?). [ ತೋಳ್ + ಬಳೆ₂ ]

**ತೋಳ್ವಾಸ** (ನಾ). ೧. ಬಾಹುಬಂಧನ; ತೋಳಿನ ಪಾಶ; ಅಪ್ಪುಗೆ: ಮೆಯ್ಮಟಲಾಱುವನ್ನಮವನಂ ತೋಳ್ವಾಸದೊಳ್ ಕಟ್ಟಿ ತೂಗದೊಡಂ ಪೇಱಟ್ ಮೊಳೆವೊತ್ತೆನೇ ಅವನ ಪೇಷಮಟೊತ್ತೆನಬ್ಬಾನನೇ (ರೀಲಾವ. ೧೧-೭೮); ಅತ್ಯೇಶನಂ ಕಾಣುತನ್ಮಳ ಸಂಗಕ್ಕೊಳಗಾಗಿ ಬಂದನೆನುತಂ ಕಾಯ್ಕೇಱೆ ತೋಳ್ವಾಸದಿಂದೆಳೆದಾ ಕೋಮಳೆಯೋರ್ವಳೊತ್ತಿ ಬಿಗಿದಳ್ ಶೀತಾತುರಂ ಪೋಪಿನಂ (ರಾಜಶೇ. ೯-೩೨). ೨. ಒಂದು ಬಗೆಯ ತೋಳಿನ ಆಭರಣ; ಬಾಹುಪೂರ: ತರುಣೀರ್ವರ್ಗಗರ್ವವೊಪ್ಪುವ ಶೀರ್ಷಕಂಗಳಂ ಮೆಱೆವ ಭುಜಕೀರ್ತಿ ತೋಳ್ವಾಸ ನಡುಗಟ್ಟುಗಳನೆಸೆರೆಯ ಕರವಾಲಗಳ ಶರಶರಾಶ್ರಯಚಾಪಯುಗ್ಮಮಂ ಕರದೊಳಾಂತು (ಭರತ. ೩-೦೩).

[ ತೋಳ್ + ಪಾಸ₁ ]

**ತೋಳ್ವಿಡಿ** (ಕ್ರಿ). ತೋಳನ್ನು ಚಾಚು; ಕೈಚಾಚು: ಉಗ್ರಕಣ್ಣಿಂದ ಕಾಮನ ಸುಟ್ಟು ಮನಸಿಜವಿಗ್ರಹವನು ಮಾಡಿಕೊಟ್ಟ ನಿಗ್ರಹದಿಂದ ತೋಳ್ವಿಡಿದಡೆ ಶಾಪಾನುಗ್ರಹದಿಂದೆ ಭಂಗಿಸುವೆ (ಪ್ರಭುಲಿ. ೧೦-೨೮).

[ ತೋಳ್ + ಪಿಡಿ₁ ]

**ತೋಳ್ವಿಸುಗೆ** (ನಾ). ತೋಳಿನ ಬೆಸುಗೆ,–ಬಂಧನ: ವೀರಾಂಗನೆ ಕಡ್ಡ ತೋಳ್ವಿಸುಗೆಯೊಳ್ಕೇರ್ವಟ್ಟು ನಿಲ್ವನ್ನನೇ (ಪಂರಾಮಾ. ೦೨-೬೦).

[ ತೋಳ್ + ಬಿಸುಗೆ <ಬೆಸುಗೆ ]

**ತೋಳ್ವೀಸಲು** (ನಾ). ತೋಳನ್ನು ಬೀಸುವಿಕೆ: ಬೆರಳ್ಮಿಡಿತ ತಲೆದೂಗ ಕೊಡವೊಯ್ದು ಮುಡುಹಿನಾಟ ತೋಳ್ವೀಸಲು ಭ್ರೂಲೀಲೆ ನಯನಚೇಷ್ಟೆ ಇತ್ಯಾದಿಗಳ . . . ಸುಮ್ಮಾನ ಸಂತೋಷೋತ್ಸಾಹಗಳಲ್ಲಿರುವರು (ಬಟ್ಟಿಅ. ೬೦-೧೯). [ ತೋಳ್ + ಬೀಸಲು ]

**ತೋಳ್ವೆಱಗು, ತೋಳುವೆಱಗು** (ನಾ). ತೋಳಿನ ಹಿಂಭಾಗ: ಪ್ರಣಯ ಕಲಹಕೇಳಿಯಿಂ ವಿಜಯಶ್ರೀಯುಂ ಜನಿಸುವಂತೆ ತೋಳ್ವೆರ[ಱ]ಗ ನಪ್ಪುಕೆಯ್ದು (ಪಂರಾಮಾ. ೩-೯ ವ); ಶ್ರೀಗೆರ್ದೆವತ್ತುಗೆ ವರವಾಕ್ಶ್ರೀಗೆ ನಿಜಂ ಸುಮುಖವೃತ್ತಿ ತೋಳ್ವೆರ[ಱ]ಗು ಜಯಶ್ರೀಗೊಲವಿನೀಯ ನೆಗಟ್ದಂ ಭೂಗಧಿಪತಿ (ಚಂದ್ರಪು. ೨-೧); ಶ್ರೀಯಂ ಕೊರಿಸಿ ವಿಜಯ ಶ್ರೀಯಂ ತೋಳ್ವೆರ[ಱ]ಗಿನೊಳ್ ಮನಂಗೊಳಿಸಿ . . . ನೆಗಟ್ದಂ ವಿನೇಯಜನಮುಖತಿಲಕಂ (ಅನಂತಪು. ೮-೧); ಜಯಶ್ರೀ ಮನಂಗೊಳ್ವಿನಂ ತೋಳ್ವೆರ[ಱ]ಗಂ ಪಾರ್ದಿರ್ಪ ದರ್ಪೋನ್ನತಿ (ಧರ್ಮನಾ. ೨-೧೪೩). **ತೋಳುವೆಱಗು**: ವೀರಲಕ್ಷ್ಮಿ ತೋಳುವೆರಗಿನೊಳೊಪ್ಪೆ (ಎಕ. VI, ಚಿಕ್ಕಮ. ೧೭೦-೪೩; 1187). [ ತೋಳ್ + ಪೆಱಗು ]

**ತೋಳ್ಪೊಯ್, ತೋಳ್ಪೊಯ್** (ಕ್ರಿ). ಭುಜವನ್ನು ತಟ್ಟು,–ಆಸ್ಫಾಳಿಸು: ಉಭಯಸುಭಟರ್ಗಳಾರ್ಭಟಿಸಿ ತೋಳ್ಪೊಯ್ದು ಪಟುಭಟವಾಜಿ ವರ್ಗಮಂ ರಾವ್ತರಡ್ಡಾಡಿದರ್ (ಚಿಬಪು. ೨೪-೩); ರಾಮಾವತಾರದೊಳ್ದೇಹ ಮುಳ್ಳನಿತು ದಿನಮಾರ್ಜಿಸಿದ ಪುಣ್ಯಮಂ ರೂಹುಗಾಣಿಸಿಕೊಟ್ಟು ಶಕ್ತಿಯಂ ನೆಲೆಗೊಳಿಸಿ ಮುರಹರಂ ತೋಳ್ಪೊಯ್ದನು (ಜೈಮಿಭಾ. ೦೩-೪೩). **ತೋಳ್ಪೊಯ್**: ಹೊಂಕರಿಸಿ ತೋಳ್ಪೊಯ್ಯುತೆ . . . ಬಂದುದು ಪದಾತಿಬಲಂ (ಚಿಬಪು. ೪೭-೩೭). [ ತೋಳ್ + ಪೊಯ್₁ ]

**ತೋಳ್ವೊಯ್ಲು** (ನಾ). ಭುಜ ತಟ್ಟಿಕೊಳ್ಳುವಿಕೆ ; ಬಾಹಾಸ್ಫಾಲನ : ತೋಳ್ವೊಯ್ಲು ತಾಟವೆರಳ ಬೊಬ್ಬೆಗಳ ರಿಪುಗಳಂ ಸೀಳ್ವ ಸಡಗರದ . . . ಸಂಭ್ರಮಾವನಿರದೆ ಪಡೆಯರಡೀಕ್ಷಿಸುತ್ತಿರ್ದುವು (ಜಬಪು. ೩೬-೧೬).
[ ತೋಳ್ + ಪೊಯ್ಲು ]

**ತೋಳ್ಸಾರ್ಚು** (ಕ್ರಿ). = ತೋಳ್ವಿಡಿ : ನೀನು ಆವ ಧೈರ್ಯದಿಂದ ಮನವೇರಿಸಿ ತೋಳ್ಸಾರ್ಚಿದೆ ? (ಜಟ್ಟಿಅ. ೦೯-೦೦).
[ ತೋಳ್ + ಸಾರ್ಚು ]

**ತೋಳ್ಸುತ್ತು** (ನಾ). ಬಾಹು ಬಂಧನ ; ಅಪ್ಪುಗೆ : ಜನನಂ ಸೋಲಿಪ ಪೆಂಡಿರಾರ್ ಪರವಾನಂ ತೋಳ್ಸುತ್ತಿನೊಳ್ ಕಾವ ಕಾಮಿನಿಯಾರ್ (ಅನಂಪು. ೬-೩೪). [ ತೋಳ್ + ಸುತ್ತು$_{2}$ ]

**ತೋಳ್ಸೆರೆ** (ನಾ). = ತೋಳ್ಸುತ್ತು : ಅವನ ತೋಳ್ಸೆರೆಯಲ್ಲಿ ನಾನು ಮಲಗಿದಾಗ . . . ಒಂದು ಬಗೆಯ ಅಮಲು ಬಂದಿತ್ತು (ಮೂಕುದಾ. ೩೦೧). [ ತೋಳ್ + ಸೆರೆ$_{2}$ (<ಸೆಱೆ$_{2}$) ]

**ತೋಱಲ್** 'ತೋಱು' ನೋ.

**ತೋಱಿಕೆ, ತೋರಿಕೆ** (ನಾ). ೧. ಕಾಣಿಸುವಿಕೆ ; ತೋರುವಿಕೆ ; ಹೊರ ನೋಟ : ತೋಱುವೀ ತೋಱಿಕೆಯ ತುಷವನು ತೂಱಿದರೆ ಮೇಣ್ ವಿಶ್ವಮುಖದಲಿ ತೋಱ್ ತೋಱದೆ ಮೆಱೆವನೀ ಹರಿಯೆಂದನಾ ಭೀಷ್ಮ (ಕುವ್ಯಾಸ. ೯-೧೩) ; ತೋಱುವೀ ತೋಱಿಕೆಯೊಳಗೆ ಸಲೆ ವಿ ಱ ತೋಱುವ ನಿಜವನಱಿಯದ ಗಾಜುಗಳು ನೀವ್ ಪಶುಗಳೆಂದರೆ ಪೇದ ವೇಕೆಂದ (ಕುವ್ಯಾಕ. ೭-೨೩) ; ಭೇದಾಭೇದದಿಂದ ತೋಱುವ ತೋಱಿಕೆ ಗಳೇನೂ ಇಲ್ಲದಂದು ಅಖಂಡೇಶ್ವರಾ ನಿಮ್ಮ ನೀವಱಿಯದೆ ಅನಂತಕಾಲ ವಿರ್ದಿರಂದು (ಅಖಂಡೇ. ೧-೧). ೨. ಸಾದೃಶ್ಯ; ಹೋಲಿಕೆ: ತೋಱಿದವು ಗರ್ಭಗಳು ಶುಕ್ತಿಯ ತೋಱಿಕೆಯ ಮೌಕ್ತಿಕದವೊಲು (ತೊರಗಾ. ೧-೮-೩). ೩. ದೃಶ್ಯ ; ನೋಟ: ಕಂಪಿನ ತನಿರಸದ ತಾವರೆಯ ತೆಕ್ಕೆಯ ತೋಳ ತೋಱಿಕೆಯ ಜಿನುಗುದುಂಬಿಯ ಜಾಳಿಗೆಯ ತನಿವಿಾನುಗು ವೋಱಿಯ ಕಣ್ಣ ಕೆಂಪಿನ ಘನಭಯಂಕರರೂಪ ಭೀಮನ ಕಂಡನವನೀಶ (ಕುವ್ಯಾಅ. ೧೧-೪). ೪. ಅಂದ ; ಚೆಂದ : ಮೂಱುಂ ರೇಖೆಗಳಿಂದಂ ತೋಱಿಕೆಯಂ ಪಡೆದು ಸೊಗಸನೀವುತ್ತಿರ್ದಾ ನೀಱಿಯ ಕೊರಳತಿಶಯಿತಂ ಮಾಱುಂಗೊಂಡುದು ನೃಪಾಳಶಿಳಕನ ಮನಮಂ (ಬಾಧಪು. ೨-೪೩). **ತೋರಿಕೆ** : ೧. ಇಂದ್ರಿಯಗಳು ತೋರಿಕೆಯ ಪ್ರಪಂಚವನ್ನು ಅರಿಯಲು ಮಾತ್ರ ಸಹಾಯ ಮಾಡುತ್ತವೆ (ತತ್ವಶಾ. ೦೦). ೫. ಆಡಂಬರ ; ದಂಬ ; ನಟನೆ : ತೋರಿಕೆಯ ಪ್ರವೃತ್ತಿ ಅವರದು (ಮುಕೀ. ೮೩).
[ ತೋಱು + – ಇಕೆ ]

**ತೋಱಿಕೆವೆಱು** (ಕ್ರಿ). ಕಾಂತಿ ಹೊಂದು ; ಥಳಥಳಿಸು ; ಹೊಳೆ : ತೋಱಿಕೆವೆತ್ತ ಭೂರಿತರ ಬಾಡವಸಂಸ್ಥಿತಿಯಿಂದಮೊಪ್ಪಿ ಕೂರ್ವೇಱಿದ ತೀರದಂಬುಗಳನೆಯ್ದೆ ಳಕೊಂಡು . . . ಅಗುರ್ವನದಿತ್ತುದಾಕ್ಷಣಂ (ಬಾಧಪು. ೦೩-೪೧). [ ತೋಱಿಕೆ + ವೆಱು$_{1}$ ]

**ತೋಱಿಸು, ತೋರಿಸು** (ಕ್ರಿ). ೧. ಕಾಣಿಸು ; ದೃಷ್ಟಿಗೆ ಬೀಳುವಂತೆ ಮಾಡು : ತನುವನದೊರ್ವೆಯುಂ ಮಗುಟ್ದು ತೋಱಿಸಲಾಱನೆ (ಕಾದಂಉ. ೫೬೬) ; ಮಹಾನುಭಾವರ ತೋಱಿಸು ಕೂಡಲಸಂಗಮದೇವಾ (ಬಸವ. ೮೮೨) ; ಧುರದೊಳಹಿತಖಿಳೋತ್ತಮರ ದುರ್ಧರದ ಶಿರಖಂಡನವ ನೆಮ್ಮೆಯ ಸರಳ ಮೊನೆಯಲಿ ತೋಱಿಸುವೆವಿದ ನಂಬಿ ನೀವೆಂದ (ತೊರಗಾ. ೦-೮-೬೬) ; ಬೆಂಬಣ್ಣ ಮೊಂದಳಿರಸುಗೆ ಪುನ್ನಾಗ ದಾಳಿಂಬ ತ್ರಿವರ್ಣಪುಷ್ಪಗಳು ಮುಂಬಾಗದೆ ತೋಱಿಸುವ ವಸಂತನನಿದಿರ್ಗೊಂಬತೆ ಬನದಿ ರಂಜಿಸಿತು (ಮೋಹತ. ೪-೪೯). ೨. ಪ್ರಕಟಿಸು; ವ್ಯಕ್ತಪಡಿಸು ; ಪ್ರದರ್ಶಿಸು : ಶ್ರುತಸಾಗರದ್ವಿಜವರಂ . . . ಅನೇಕವಿಧಶಾಸ್ತ್ರಪ್ರೌಢಿಯಂ ನಾಡೆ ತೋಱಿಸುತಿರ್ದಂ (ಕುಸುಮಾ. ೭-೫೧) ; ಲಾಳಿಯ ಬಿಲುವಿದ್ಯಾ ಚಮತ್ಕೃತಿಯಳವು ಗರುಡಿಯೊಳಲ್ಲದೀ ರಿಪುಬಲಗೆ ತೋಱಿಸಬಹುದೆ (ಕುವ್ಯಾಭೀ. ೩-೫) ; ಜಯಸಿರಿಗೆ ನೀನೇ ಪತಿಯೆನಿಸಿ ತೋಱಿಸುವೆನೆಂದನು ಶಲ್ಯ ಕುರುಪತಿಗೆ (ಕುವ್ಯಾಕ. ೦-೨೬). ೩. ಕಾಣಿಸಿಕೊಳ್ಳು ; ವ್ಯಕ್ತವಾಗು : ನೊಸಲೊಳ್ ತೃತೀಯಲೋಚನಮೊಮಗುಂಟು ತೋಲಮಱಿಯಿಂದದು ತೋಱಿಪುದಿಲ್ಲ (ಕಾದಂಪೂ. ೫೬೮) ; ಸಮನಿಸಿ ತೋಱಿಸುಗುವಿವಿಂದ ಮಿಂದೆಯೆಂಬಿವು ತೃತೀಯೆಯೊಳ್ (ಶಮದ. ೧೦೭). ೪. ಜವಾಬ್ದಾರಿ ಹೊರಿಸು ; ಗುರಿಮಾಡು : ಎಮ್ಮ ತೋಱಿಸಬೇಡ ಸುಖದಲ್ಲಿ ನಿಮ್ಮ ಚಿತ್ತಕೆ ಬಹುದ ಮಾಡುವುದು (ಕುವ್ಯಾಕ. ೧-೨೬). **ತೋರಿಸು**: ೧. ತಮ್ಮ ಚಾತುರ್ಯವನು ದೊಡ್ಡವರಿಗೆ ತೋರಿಸಬೇಕೆಂದು ಹುಡುಗರು ಸದಾ ಅಭಿಲಾಷಿಸುವರು (ರಾವಿಜ. ೨೨).

**ತೋಱಿಸಿಕೊಡು, ತೋರಿಸಿಕೊಡು** = ದೃಷ್ಟಿಗೆ ಬೀಳುವಂತೆ ಮಾಡು; ತಿಳಿಸು ; ಅರಿಯುವಂತೆ ಮಾಡು : ಈ ವಿರೋಧಿಯ ಕಿಡಹು ಸೂರ್ಯನ ನಾವು ತೋಱಿಸಿಕೊಡುವೆವು (ಕುವ್ಯಾದ್ರೋ. ೧೪-೩೮) ; ಸಾವಿರ ಸಾವಿರ ಶಿಷ್ಯರಿಗರಿವನು ತೋರಿಸಿಕೊಟ್ಟರು ತಂದೆ (ಇಂಜಾಪ. ೯-೩೪) ; ರಾಮಕೃಷ್ಣ ಪರಮಹಂಸ – ವಿವೇಕಾನಂದರು, ತಮ್ಮ ಬಾಳಿನೆಲ್ಲಿ, ಕೃತಿಗಳಲ್ಲಿ ಭಗವದ್ಗೀತೆಯ ರಹಸ್ಯವನ್ನು ತೋರಿಸಿಕೊಟ್ಟಿದ್ದಾರೆ (ಧರ್ಮಸಾ. ೧೨೬). [ ತೋಱು + – ಇಸು$_{3}$ ]

**ತೋಱು, ತೋರು, ತೋಱಲ್** (ಕ್ರಿ). ೧. ಕಾಣು ; ದೃಷ್ಟಿಗೆ ಬೀಳು ; ಗೋಚರವಾಗು : "ತೋಱು_ದರ್ಶನೇ" (ಶಮುಧಾ) ; ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ಮಂಜುವೊಲ್ತೋಱಿ ಬೇಗಂ ಪಿರಿಗುಂ ಶ್ರೀರೂಪ ಲೀಲಾಧನವಿಭವಮಹಾರಾಶಿಗಳ್ನಿಲ್ಲವಾಗ್ಗಂ (ಎಕ. II,೮೮-೦; ಕು.700); ಮದನಾಟವಿಯಂತೆವೊಲೊಪ್ಪಿ ತೋಱಿದಳ್ (ಕಾವ್ಯಸಾ. ೬೦೨ ಶೂದ್ರಕ) ; ಸಮುದಾಯಾರ್ಥಮನಾರಯೆ ಸಮನಿಸುವರ್ಥಪ್ರತೀತಿ ತೋಱಿದೊಡೆಲ್ಲಂ ಕ್ರಮಮಕ್ಕುಂ (ಕವಿರಾ. ೧-೭೭) ; . ದುಗ್ಧಾರ್ಣವಫೇನಪಾಂಡುರತೆಯಂ ಕೆಯ್ಕೊಂಡು ಬೆಳ್ದಿಂಗಳಂತಿರೆ ತೋಱುತ್ತಿಸವುತ್ತರೀಯವಸನಂ (ಕಾದಂಪೂ. ೮) ; ಸುರಭಜಂ ಜ್ಯೋತಿರಂಗಂ ಬೆಳಗೆ ತಮದ ಮಾತಿಲ್ಲ ಚಂದ್ರಾರ್ಕರುಂ ಮೈಗರೆದಿರ್ಪರ್ ತೋಱವಾಱುಂ ಋತು (ಶಾಂತಿಮೂ. ೧-೬೦). ೨. ದೃಷ್ಟಿಗೆ ಬೀಳಿಸು ; ಕಾಣಪಡಿಸು ; ತೋರಿಸು ; ವ್ಯಕ್ತಪಡಿಸು : ತಮ್ಮ ದೇವತ್ವಮಂ ತೋಱಲ್ವೇಡಿ ಆಕಾಶಮೆಲ್ಲಂ ಚಿತ್ರಪಟಂಗೆದಱಿದಂತೆ ವಿಮಾನಂಗಳಿಂ ಸಂಛನ್ನವಾಗಿ ವ್ಯಾಪಿಸೆ (ಪದ್ಮಾಚ. ೧೪೦-೨೫) ; ಮೂಱಡಿ ಮಾಡಿದಂದು ನೆಲನೆಲ್ಲಮನಾ ಬಲಿಗಾದ ರೂಪಮಂ ತೋಱಿದಂ (ಹಂಪಭಾ. ೯-೬೦); ಕವರಲ್ಪಂದಂಗೆ ಬಯಕೆಯಂ ತೋಱಿದರೆಂಬಂತೆ (ಧರ್ಮಾಪು. ೨-೦೪೯) ; ಎನ್ನ ಮನದ ದುರಾಶೆಯ ಮಾಣಿಸಿ ನಿಮ್ಮತ್ತ ತೋಱು (ಮುಹಾದೇ. ಬ. ೧೫-೧೭) ; ಹಿತವಂ ತೋಱುವನಾತ್ಮಬಂಧು (ಸೋಮೇಶ. ೮) ; ಗುಣಹೀನನಲ್ಲಿ ಗುಣವನು ತೋಱುವದು ಗರುವರಿಗೆ ತೊಡಿಗೆಯಾದು (ಕುವ್ಯಾಅ. ೨೦-೧೩) ; ದಾರಿಯ ತೋಱೋ ಮುಕುಂದಾ (ಪುರಂದ. ೩-೦೨೩ ಪಲ್ಲವಿ) ; ಊರಿಂಗೆ ದಾರಿಯನು ಆರು ತೋಱಿದಡೇನು (ಸರ್ವಜ್ಞ. ೩೮). ೩. ಉಂಟಾಗು ; ಆಗು : ನಿಜಕರದೊಳಾಯುಧವಿಲ್ಲ ಘನ ಸಂಗರಕೆ ಬೇಸಱು ತೋಱಿತೇ (ಕುವ್ಯಾದ್ರೋ. ೩-೬೩). ೪. ತಿಳಿಸಿಕೊಡು ; ಅರಿವನ್ನುಂಟುಮಾಡು : ಲಿಂಗ ಜಂಗಮ ಪ್ರಸಾದದ ನಿಲವ ತೋಱಿ ಬದುಕಿಸಯ್ಯಾ (ಬಸವ. ೮೩೩). ೫. ಅಶುಭವನ್ನು ಸೂಚಿಸು ; ಅಪಶಕುನವಾಗು : ಅರಸಿಂಗೆ ತೋಱಿತೋ ದೇಶಕಳಿವಪ್ಪುದೋ ಹರನೆ ಬಲ್ಲಂ (ಕಣ್ಣರ. ದೇ. ೦೪೫-೧೩). ೬. ಹೊರಗೆಡಹು ; ಪ್ರಕಟಪಡಿಸು : ಚಂದ್ರಕಾಂತದ ಶಿಲೆಯಲ್ಲಿ ಜಲವಿಲ್ಲದನ್ನಕ್ಕ ಶೈತ್ಯವ ತೋಱುವ ಪರಿಯಂತೋ (ಬಸವ. ೮೦೪).

**ತೋರು :** ೧. ಇಲ್ಲಿ ಹುಡುಕಿದರೆ ಅಲ್ಲಿ ತೋರುವನು ಎಲ್ಲೆಡೆ ಸ್ವಚ್ಛಂದ (ಸಿಲಮು. ೩೯-೦೨) ; ಭೂಮಿಯ ಪೃಷ್ಠಭಾಗವು ಸಮನಾಗಿದ್ದಂತೆ ತೋರುತ್ತದೆ (ಮುಂಬಯಿ. ೪-೬೩). ೨. ತಾರತಮ್ಯಕ್ಕೆ ತಂದು ತೋರಮ್ಮಯ್ಯ (ಕವಿಪು. ೮-೧). ೬. ರತಿಯನ್ನು ಅವನು ಸುಡಲಿಲ್ಲ. ಅವಳಿಗೆ ಕಾರುಣ್ಯವನ್ನು ತೋರಿದನು (ಸಾಹಿಸ. ೧೪೩). **ತೋಱು :** ೧. ಈಗಳೆನ್ನ ಕಂಡ ಕನಸುಗಳೀ ಯುಗದ ಕಡೆಯೊಳ್ ಪ್ರಜೆಗಳ್ಗೆ ವಿವಿಧೋಪದ್ರವಸೂಚಕಂಗಳಾಗಿ ತೋರ್ಕುಂ (ಆದಿಪು. ೧೩-೨೧ ವ) ; ನವಕೂಟಾಗ್ರಂಗಳೊಳ್ ತೋರ್ಪ ಕಾಂಚನವರ್ಣಾಂಚಿತಪಂಚರತ್ನಮಯ ಶೋಭಾಭಾಸಿಗೆ . . . ಜೈನಗೃಹಾಳಿಗಂದೆಱಗಿದಂ ಸೌಜನ್ಯಕಂದಾಂಕುರಂ (ಶಾಂತಿಪು. ೨-೧೧೯) ; ಮದ್ದುಕಣಿಕೆಯಂ ತಿಂದಂಗೆ ಕಲ್ಲುಂ ಮಣ್ಣುಂ ಮರನುಂ ಪೊಂಬಣ್ಣವಾಗಿ ತೋರ್ಪಂತೆ (ಧರ್ಮಾಮೃ. ೧-೧೧೮) ; ಕೈವಾಡಮಂ ಬೀಸಿದಂತೆ ಬಟ್ಟಿತ್ತಾಗಿ ತೋರ್ಪುದು ಸೊನ್ನೆ (ಶಮದ. ೧೭ ವೃತ್ತಿ). ೨. ನರಪತಿಯ ಗುಣಾಗುಣದಂತರಮಱಿವುದನಾಳ ಸಿರಿಯ ಲೀಲೆಯೆ ತೋರ್ಕುಂ (ಶಾಂತಿಪು. ೧-೬೯) ; ಗುಣಮನೆ ತೋರ್ಪಂ ದೋಷದ ಗುಣಂಗಳನೆ ನೆಗಟ್ದು ತೋರ್ಪ ದುರ್ಜನನುಮದೇಂ ಗುಣಗಣನೆಗೆ ತೋರ್ಪಂ ಕೃತಿ ಗುಣದೋಷಪರೀಕ್ಷೆಗಾಱರಾರ್ಬರಿಪರೋ (ಗದಾಯು. ೧-೪೮) ; ಆಗ್ರಹಿಸಿ ತರ್ಕಶಾಸ್ತ್ರಸಮಗ್ರತೆಯಂ ತೋರ್ಪುದಲ್ಲಿ ನೀಂ (ಸುಕುಮಾ. ೨-೧೯) ; ಜಡರಂ ಕರಮಱಿದು ತಿಳಿವಲಂತೆನೆ ಖರಕರನಂ ಗೂಗೆಗೆಯ್ದು ತೋರ್ಪಂತಕ್ಕುಂ (ಧರ್ಮಾಮೃ. ೧-೪೩) ; ಇನ್ನೀ ಭಕ್ತನ ದೃಢಭಕ್ತ್ಯುನ್ನತಿಯಂ ಧರೆಗೆ ತೋರ್ಪೆನೆಂದಾ ಸೋಮೇಶಂ ನಿಲ್ಲದೆ . . . ನಡೆತಂದಂ (ಉದ್ಭಟ. ೧೧-೧೦೪).

**ತೋರಗೊಡು** = ವ್ಯಕ್ತಪಡಿಸು ; ಕಾಣಿಸು : ಅವನು ತನಗಾದ ದುಃಖವನ್ನು ತೋರಗೊಡಲಿಲ್ಲ (ರೂಢಿ). **ತೋಱಪಡು** = ಕಂಗೊಳಿಸು : ಪೇೞೊಂದು ಕೋಣೆಯುಂಟುಪ್ಪರಿಗೆಯೊಳಲ್ಲಿ ತೋಱಪಟ್ಟೊಂದು ಪಂಕ್ತಿಯೊಳು ನೀಱನು ನೀೞಿಯರಾರೋಗಿಸಿದರು (ಭರತ. ೧೧-೧೧೮). **ತೋಱಿಕೊಡು, ತೋಱಿಕುಡು** = ಕಾಣುವಂತೆ ಮಾಡು ; ತೋರಿಸಿಕೊಡು : ಮನ್ಮಥ ಮಹೀಭುಜನೋವದೆ ತೋಱಿಕೊಟ್ಟುದೊಂದಾನೆಯ ತನ್ನನಾನೆಗೊಳಿಗೊ[ಂ]ದಪುದೆಂದು ಲತಾಂಗಿ ಬೆರ್ಚಿದಳ್ (ಪಂಪಭಾ. ೪-೫೮) ; ಚೆನ್ನಮಲ್ಲಿಕಾರ್ಜುನನ ತಂದೆನಗೆ ತೋಱಿಕೊಟ್ಟ ಗುರುವೆ ನಮೋ ನಮೋ (ಮಹಾದೇ. ಬ. ೨೩-೪೨); ಪಾರ್ಥನ ತೋಱಿಕೊಡುವೆನು (ಕುಮಾ.ಕ. ೯-೨) ; ತೊಡೆಯಂ ಪೊಯ್ದಾರ್ವ ನೆವದೆ ನೆಱನೀತಂಗೀಯೆಡೆಯೆಂದು ತೋಱಿಕುಡೆ (ಗದಾಯು. ೮-೩೫). **ತೋಱಿ ನುಡಿ** = (ಕುಂದನ್ನು ನಿರ್ದೇಶಿಸಿ) ಸ್ಪಷ್ಟವಾಗಿ ಮಾತನಾಡು,- ಖಂಡಿತವಾಗಿ ನುಡಿ : ನಿನ್ನ ಪೊಡಿರುವಂ ಬರ್ದುಂಕಲಿಕ್ಕಪ್ಪುರಿಲ್ಲೆಂದು ತೋಱಿ ನುಡಿದೊಡೆ (ಶಬ್ದಾ.ಶಾ. ೧೭೮-೩) ; ತೋಱಿ ನುಡಿದರೆ ಭೀಷ್ಮದ್ರೋಣರು ಜಾಱಿಸಿದ ರಣವೆಮಗೆ ಸದರವೆ ದೂಱುವವರಾವಲ್ಲ (ಕುಮಾ.ಕ. ೧-೨೪); P ಇದು ಬೇರೆ ಬೇರೆ ಶಬ್ದಗಳೊಡನೆ ಸೇರಿ ಅನೇಕ ಅರ್ಥಗಳನ್ನು ಕೊಡುತ್ತದೆ. ಉದಾ: ಕೈದೋಱು, ಬೆನ್ನುತೋರು, ಮೈದೋಱು ಇತ್ಯಾದಿ.

[ ದೇ.॥ ತಮಿ. ತೋಱ್ಱು ; ಮಲ. ತೋನ್ನು ]

**ತೋಱುಂಗೈ** (ನಾ). ಮಾರ್ಗದರ್ಶನ ಮಾಡುವ ಕೈ; ನಿರ್ದೇಶಿಸುವ ಕೈ: ಪಟುವಂ ಶೂಲನಂ ತಿರುಗಿಸಿ ಬಱಲಿಸದಿರು ತೋಱು ದೇವ ತೋಱುಂಗೈಯಂ (ಪಸ್ತ.ವಂ. ೧೩-೧೧೨). [ ತೋಱು + ಕೈ$_2$ ( < ಕೆಯ್$_2$) ]

**ತೋಱುಂಬೊಣೆ** (ನಾ). (ವ್ಯವಹಾರ ಪತ್ರ ಮುಂತಾದಂವುಗಳಲ್ಲಿ ಬರೆದು) ಕಾಣಿಸುವ ಹೊಣೆ : ಬಕಾರಕ್ಕೆ – ಬತ್ತುಂಬಯಲ್ . . . ತೋಱುಂ ಬೊಣೆ[ಶಾಕಾಂ. ೪] ಹೇಱುಂಬಳೆ (ಶಮದ. ೧೭೦ ಪ್ರಯೋ).

[ ತೋಱು + ಪೊಣೆ$_2$ ]

**ತೋಱುವಲೆ** (ನಾ). ಒಂದು ಬಗೆಯ ಬಲೆ : ತೋಱುವಲೆ ಕೊಟ್ಟವಲೆ ಗೂಟವಲೆ ಕಣ್ಣವಲೆ . . . ಮಂದಱನವಲೆಯ ಹೊಱೆಗಳ ಬೇಡವಡೆ ನೆರೆದುದೇನೆಂಬೆನು (ಹರಿಶ್ಚಾ. ೫-೮). [ ತೋಱು + ಬಲೆ$_1$ ]

**ತೋಱುಹ** (ನಾ). ಕಾಣಿಸುವಿಕೆ ; ತೋರುವಿಕೆ: ಕುರುಡಂಗೆ ಕನ್ನಡಿಯಂ ತೋಱುಹವುಂ ಮೂರ್ಖನಂ ಬುದ್ಧಿವಂತನೋಲೈಸುಹವುಂ ಇವೞೋವಾದಿ (ಪಂಚತಂ. ೧೩೬-೧೦). [ ತೋಱು + – ಹ$_2$ ]

**ತೋಱೆತ್ತು** (ನಾ). ಬೇಟೆಯಲ್ಲಿ ಕ್ರೂರವಾದ ವನ್ಯಮೃಗಗಳನ್ನು ಆಕರ್ಷಿಸಲು, ಅವುಗಳಿಗೆ ಕಾಣುವಂತೆ ಕಟ್ಟುವ ಎತ್ತು ; ದೀಹದ ಎತ್ತು: ಕಾಂತಾರದೊಳು ಮೃಗವ ನೆಲೆಗೊಳಿಸಿ ಮೇಗಾಳಿಯಂ ದೂರದಿಂ ತೋಱೆತ್ತನೊಡ್ಡಿ ಕಿಗ್ಗಾಳಿಯಿಂ ಬಂಡಿಯಿಂದಿಳುಹಿ ಹುಲಿಯ ಹಾರಯಿಸಿ (ಹರಿಶ್ಚಾ. ೫-೩೦). [ ತೋಱು + ಎತ್ತು$_2$ ( < ಎಱ್ತು$_1$) ]

**ತೋಟಯ್ಯ** (ನಾ). ಒಬ್ಬಾತನ ಹೆಸರು: ತೋಟಯ್ಯನ ಮಗ ಮಜ್ಜಯ್ಯಂ ದುವ್ವಿನೀತನ ತಮ್ಮ ಬೂತುಗಂ (ಎಕ. XII, ಮಧುಗಿ. ೫೯-೯; ಸು. 950).

[ ತೋಟ್ ? + ಅಯ್ಯ$_1$ ]

**ತೋಟೂರ್** (ನಾ). ಒಂದು ಊರಿನ ಹೆಸರು : ಮಾರಶರ್ಮ್ಮಣಃ ಪುತ್ರಾಯ ತೋಟೂರ್ವಾಸ್ತವ್ಯಾಯ (ಎಕ. X, ಗೌರಿಬಿ. ೪೭-೪೫; 762).

[ ತೋಟ್ ? + ಊರ್ ]

△ **ತೋಳ್ಪಲ** 'ತೋಳ್ಪಲ' ನೋ.

**ತೌಂಕಲ್** 'ತವುಂಕಲ್' ನೋ.

**ತೌಂಟಿಗೆ** 'ತಿವದಿಗೆ' ನೋ.

**ತೌಂಬುರವೀಣೆ** (ನಾ). ಒಂದು ಬಗೆಯ ವೀಣೆ : ಗೌರೀವೀಣೆಯು ಗೌರವದಿಂದಂ ತೌಂಬುರವೀಣೆಯು ತುಂಬುರರಿಂ ಕಿನ್ನರವೀಣೆಯು ಕಿಂಪುರುಷರಿಂದಂ . . . ಒಪ್ಪಿದತ್ತಾ ಮಹಾಲಿಂಗದಾಸ್ಥಾನಂ (ಹಮ್ಮೀರ. ೮-೪೧ ವ). 'ತುಂಬುರವೀಣೆ' ಪಠಾ. [ ತೌಂಬುರ$_0$ + ವೀಣೆ ]

**ತೌಕಲ್** 'ತವುಂಕಲ್' ನೋ.

**ತೌಗೆ** 'ತವ್ವಗೆ' ನೋ.

**ತೌಟಿಗೆ** 'ತಿವದಿಗೆ' ನೋ.

**ತೌಡಂಗಿ** 'ಚವುಡಂಗಿ' ನೋ.

**ತೌಡಿ** 'ತವುಡಿ$_1$' ನೋ.

**ತೌಡು** 'ತವುಡು' ನೋ.

**ತೌಡುಕುಟ್ಟು** 'ತವಡುಕುಟ್ಟು' ನೋ.

**ತೌತರ್** 'ತವುತರ್' ನೋ.

**ತೌದಲೆ** 'ತವುದಲೆ' ನೋ.

**ತೌದಲೆಗಾಣಿಸು** 'ತವುದಲೆಗಾಣಿಸು' ನೋ.

**ತೌದೆ** (ನಾ). ಒಂದು ಬಗೆಯ ತೆರಿಗೆ: ಬಸದಿಯ ವಸದಲಿ ಪಲವ ಮನೆಗಳ ಮಾಡಿಸಿ ರಿಷಿಹಳ್ಳಿಯೆಂದು ಪೆಸರನಿಟ್ಟು ಮನೆದೆಱೆ ಮದುವೆದೆಱೆ ಊರುಟ್ಟಿಗೆ ತೌದೆ ಸುರಂದು ಕವತ್ತ್ರಸೇಸೆ . . . ಪೊಳಗಾಗಿ . . . ಆಚಂದ್ರಾರ್ಕ್ಕತಾರಂಬರಂ ಸಲ್ಗೆ (ಮ್ಯಆರಿ. ೧೯೩೨, ೧೭-೫೯ : 1069).

P [ ಇದು 'ತವುಡಿ' ಯಾಅಪಲಿಖಿತವಿರಬಹುದು ]

**ತೌಬಂದ** (ನಾ). ಉಡುವ ಸೀರೆ,-ವಸ್ತ್ರ : ಚಂದ್ರಕಿರಣವ ಪೋಲ್ವ ಚಲ್ವ ಜರತಾರಂಚಿನ ತೌಬಂದನುಟ್ಟು ಚೆಲ್ವಿಕೆಯಾ ನೋಡುತ್ತಿದ್ದಳು (ಕೃಶ್ಯಾ. ೧೭). [ ← ಪಾರ. ತಹ್‌ಬಂದ್, ತಹಮತ್ = ಲುಂಗಿ ]

**ತೌಮೊನೆ** (ನಾ). ನಾಶಕಾರಿಯಾದ ಮೊನೆ: ಎತ್ತಿದ ನಿನ್ನ ಕಯ್ಯ ನಿಶಿತಾಸಿಯ ತೌಮೊನೆ ಬೆನ್ನ ದಾರನೆತ್ತುತ್ತಿರೆ (ಎಕ. II, ೨೪೦-೨೨ ; ಸು. 1175). [ < ತವು$_2$ + ಮೊನೆ$_1$ ]

**ತೌಱು** 'ತಮಱ್' ನೋ.

**ತೌರುಮನೆ** 'ತವರ್ಮನೆ' ನೋ.

**ತೌರೂರು** 'ತವರೂರ್' ನೋ.

**ತೌರ್ಮನೆ** 'ತವರ್ಮನೆ' ನೋ.

**ತೌರ್ಯತ್ರಿಕ** (ನಾ). ವಾದ್ಯ, ನೃತ್ಯ, ಗೀತ ಈ ಮೂರರ ಮೇಳ: ತೌರ್ಯತ್ರಿಕಂ[ಪಾಠಾಂ. ತ್ರಯಂ]ಪೊಣ್ಮಲೆಳ್ದು ಸತತಂದು . . . ಭಕ್ತತತಿವೆರಸಂತವುರಕೆಯ್ದಿ ಶಿವಸುಖದೊಳೊಪ್ಪುತಿರ್ದಂ (ಪದ್ಮರಾ. ೧೧-೨೦೦): ತೆಕ್ಕನೆಯೆ ಮಾಧುರ್ಯಗಿರಿಶೃಂಗವೆನಿಪೊಂದು ಸುಂದರಂ ಕೇಳ್ದತ್ತು ತೌರ್ಯತ್ರಿಕಂ (ಶ್ರೀರಾಮಾ. ೪೮೮-೩೮). [ ಸಂ. ]

**ತೌಲನಿಕ** (ಗು). ೧. ಪರಸ್ಪರ ಹೋಲಿಸಿ ನೋಡುವ; ತುಲನೆ ಮಾಡುವ; ತುಲನಾತ್ಮಕ. 'ತೌಲನಿಕವಿಧಾನ' ಪರಾ. (ನಾ). ೨. ತುಲನೆ ಮಾಡಿದುದು; ತುಲನಾತ್ಮಕವಾದುದು: ಈ ಪರಿಷ್ಕರಣಗಳನ್ನು ಮೊದಲು ತೌಲನಿಕವಾಗಿ ಪರಿಶೋಧಿಸಿದ ಕೀರ್ತಿ ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳಿಗೆ ಸಲ್ಲಬೇಕು (ಕೂನ್ನಕು. ೩೫); ಇವೆರಡನ್ನು ತೌಲನಿಕವಾಗಿ ನೋಡುವವರು ಕನ್ನಡದ ಅಕ್ಷರಪಂಕ್ತಿ ಶಾಸ್ತ್ರೀಯವಲ್ಲವೆನ್ನುವುದುಂಟು (ಸಂಬೋಧ. ೩೫). [ ಸಂ. ]

**ತೌಲನಿಕವಿಧಾನ** (ನಾ). ತುಲನಾತ್ಮಕವಾದ ಅಭ್ಯಾಸ; ಹೋಲಿಕೆಯ ವಿಧಾನ: ವ್ಯಕ್ತಿ ಲೇಖಕರ ಅಭ್ಯಾಸದಲ್ಲಿ ಮಹತ್ವಪೂರ್ಣವೆನಿಸಿಕೊಂಡ ತೌಲನಿಕವಿಧಾನ, ಸಾಹಿತ್ಯದೊಡನೆ ನಾವು ಚಾರಿತ್ರಿಕವಾಗಿ ವ್ಯವಹರಿಸುವಾಗ ತುಂಬ ಉಪಯುಕ್ತವಾಗುತ್ತದೆ (ಸಾಹಿತ್ರ. ೪೦).

[ ತೌಲನಿಕ + ವಿಧಾನ ]

**ತೌಲಿ, ತೌಳಿ** (ನಾ). [ಜ್ಯೋತಿ] ಮೇಷ ಮೊದಲಾಗಿ ಏಳನೆಯ ರಾಶಿ; ತುಲಾರಾಶಿ. 'ತೌಲಿಗೇಹ' ಪರಾ. **ತೌಳಿ**: ಲಲನಾ ವೃಶ್ಚಿಕ ತೌಳಿ ಕುಂಭ ಹರಿಗಳ್ ಶೀರ್ಷೋದಯಂಗಳ್ (ಜಾತತಿ. ೦-೩೯); ಕನ್ನೆ ಮಿಥುನಂ ಮೀನಂ ಮೃಗಂ ಕರ್ಕ ತೌಳಿ ಗವೇಂದ್ರಂ ವರಲಗ್ನಮಾಗಿ ನಿಲೆ ಮಾಬ್ದ್ಯಾನಂದದಿಂ ಚೌಳಮಂ (ಲೋಕೋಪ. ೨-೩೨).

[ ಸಂ. ತೌಲಿನ್ ]

**ತೌಲಿಗೇಹ** (ನಾ). = ತೌಲಿ. 'ತೌಲಿಗೇಹೋದ್ಭವ' ಪರಾ.

[ ತೌಲಿ + ಗೇಹ ]

**ತೌಲಿಗೇಹೋದ್ಭವ** (ನಾ). ತುಲಾರಾಶಿಯಲ್ಲಿ ಹುಟ್ಟಿದವನು: ಸ್ವಬಂಧುನಿಕಾಯಕ್ಕುಪಕಾರಿ ತೆತ್ತಿಗನೆನಿಕ್ಕುಂ ತೌಲಿಗೇಹೋದ್ಭವಂ (ಜಾತತಿ. ೧೬-೬).

[ ತೌಲಿಗೇಹ + ಉದ್ಭವ ]

**ತೌವುಡಿ** 'ತವುಡಿ₁' ನೋ.

**ತೌಸಿತಾಣ** (ನಾ). (?) : ನಲಿಸೆಟ್ಟಿಗೆ ಮಾಣತಂಗಿಗೆ ಅವರ ಮಗ ಮಂಚಿಗೌಂಡ ನಿಲಿಸಿದ ತೌಸಿತಾಣಯ ಕಲ್ಲು (ಎಕ. III, ಶ್ರೀರಂಗ. ೩೬-೪ ; ?).

[ ? ]

**ತೌಳವ** (ಗು). ತುಳುದೇಶಕ್ಕೆ ಸಂಬಂಧಿಸಿದ,-ಸೇರಿದ: ಕಾಮರ್ಗಿಲ ಮುಂಬನಿಗಳೊಳು ವಹಿಲದಲಿ ಕೇರಳ ಜನಪದದ ತೌಳವದ ಕೊಂಕಣ ವಿಷಮವೀಥಿಯಲಿ . . . ಬಂದನು ಕಿರೀಟಿ (ಕುಮ್ವ್ಯಾಳ. ೧೯-೨೧); ಸರೋಂಬುಧಿತೀರವೆ ಶರಣಾಗಿ ಬಾಳ್ವ ಚಾರುರಥಾಂಗ ತೌಳವ ತನುರಕ್ಷಕ ಸೇರುವೆ ಸೊಗಸದೆ ನೋಡು (ಪರ್ಪಶ. ೧೧-೧೨೬); ಜಯಜಯ ತೌಳವ ಕಾಯೇ ಮಣಿವೆ ತಂದೆತಾಯಂದಿರ ಕಾಯೇ (ಗಿರಿವಿಂ. ೪೬-೧).

[ <ತುಳುವ₁ ]

**ತೌಳಿ** 'ತೌಲಿ' ನೋ.

**ತ್ಯಕ್ತ** (ಗು). ೧. ತೊರೆದ; ತ್ಯಜಿಸಿದ; ಬಿಟ್ಟ: ಕ್ರೂರಾತ್ಮಂ ತ್ಯಕ್ತವ್ರತನಾರ[ಕ್ತ]ಪಟಪ್ರಿಯನಜತ್ಕೃತಿಯ ತ್ರ್ಯಂಶಂ (ಜಾತತಿ. ೧೯-೩); ತ್ಯಕ್ತಾವಿಲದೋಷಂ ಸುವ್ಯಕ್ತಾಂಗಂ . . . ತೊಳಗುತಿರ್ದಂ (ಅನಂಪು. ೧೨-೮೦). (ನಾ). ೨. ತೊರೆದುದು; ತ್ಯಜಿಸಿದುದು; ಬಿಟ್ಟುದು: "ಅವಕೀರ್ಣಂ. ಅವಧ್ವಸ್ತಂ, ತ್ಯಕ್ತಂ, ಉತ್ಸೃಷ್ಟಂ, ಉಜ್ಝಿತಂ – ಈ ೫ ಬಿಡಲ್ಪಟ್ಟುದು" (ಹಲಾಯು. ೧೧೮-೨೯); "ತ್ಯಕ್ತಮವಕೀರ್ಣಮಪಧ್ವಸ್ತಮೆನಲು ಬಿಡುಹಂ" (ಶುಂಗರಾ. ೧೨೯-೧೧). [ ಸಂ. ]

**ತ್ಯಜ** (ನಾ). ೧. ತೊರೆಯುವಿಕೆ; ಬಿಡುವಿಕೆ: "ಚರಿತಂ ತ್ಯಜಮುಂ ನೋಡೆ ವಿಸರ್ಜಾಹ್ವಯ" (ನಾನಾರ. ೬೩). ೨. [ಗಣಿತ] ಕಳೆಯುವಿಕೆ; ವ್ಯವಕಲನ: ರಜತಂ, ರಜಿತಂ, ಉಮಿತಂ, ತ್ಯಜಂ . . . ಇಂತಿನಿತುಂ ಕಳೆವುದಕ್ಕೆ ಪೆಸರು (ವ್ಯವಹಾ. ೧೧-೨೧). [ ಸಂ. ]

**ತ್ಯಜಯಿಸು** 'ತ್ಯಜಿಸು' ನೋ.

**ತ್ಯಜಿಸು, ತ್ಯಜಯಿಸು** (ಕ್ರಿ). ೧. ಬಿಡು; ತೊರೆ; ವರ್ಜಿಸು: ಪ್ರಾಣಮಂ ತ್ಯಜಿಸಿದ ಶರಣನಂ ಕಾಣುತಂ (ಬಸಪು. ೩೬-೧೮); ಮಹಾಮುಖಿಹವ್ಯಕವ್ಯದ್ವಿಪರ ವರ್ತನೆಯ ತ್ಯಜಿಸಲೀಸ[ಪಾಠಾಂ. ಭಜಿಸಲೀಯ] ನಿದೀಗ ಗರುಡಧ್ವಜನ ಬಿರುದು (ಕೋರರಾ. ೧-೮-೧೪); ಗರ್ಭಾಣುವಟ್ಟ ಪಕ್ಕಗಳಲ್ಲಿ ಬೆಳೆದು ಭ್ರೂಣದ ಪೊರೆಯನ್ನು ಕ್ರಮೇಣ ತ್ಯಜಿಸುತ್ತದೆ (ಕೀಟಬ. ೦೦೪). ೨. [ಗಣಿತ] ಕಳೆ; ವ್ಯವಕಲನಮಾಡು: ತ್ಯಜಿಸು, ಕಳೆ ಇಂತಿನಿತುಂ ಕಳೆವುದಕ್ಕೆ ಪೆಸರು (ವ್ಯವಹಾ. ೧೧-೨೧). **ತ್ಯಜಯಿಸು**: ೧. ರಾದಭಾಗಂ ತ್ಯಜಯಿಸುವದು ತುಷ್ಣೀರುತಂ ಮೌನಮಕ್ಕುಂ (ನಾನಾರ. ೧೫೬).

[ ತ್ಯಜನ + – ಇಸು₃ ]

**ತ್ಯನನಹಳ್ಳಿ** (ನಾ). ಒಂದು ಹಳ್ಳಿಯ ಹೆಸರು; P ಈಗಿನ ಬೌರಿಂಗ್‌ಪೇಟೆ ತಾಲ್ಲೂಕಿನ ತ್ಯಾರನಹಳ್ಳಿ: ನಮ್ಮ ನಾಯಕತನದ ತ್ಯನನಹಳ್ಳಿಯ ಅತ್ತಿಕುಣ್ಟೆ ಪೂರ್ವ (ಮ್ಯಆರಿ. ೧೯೨೩ ; ೧೪-೬ ; ?).

[ ? + ಹಳ್ಳಿ (<ಪಳ್ಳಿ₁) ]

**ತ್ಯಾಗ** (ನಾ). ೧. ಬಿಡುವುದು; ತೊರೆಯುವುದು; ವರ್ಜನ: ಸತ್ಯಶೌಚಸಂಯಮ ತಪಸ್ತ್ಯಾಗಾಕಿಂಚನ್ಯ ಬ್ರಹ್ಮಚರ್ಯಾಪರ್ಯಾಪ್ತದಶಧರ್ಮಂಗಳುಮಂ ಕೈಕೊಂಡು (ಆದಿಪು. ೬-೩೦ ವ); ಭೋಗಿಗೆ ಲೋಭಿಗೆ ಯೋಗಂ ತ್ಯಾಗಂ ಹಿತಮಾಗದು (ಹಮ್ಮೀರ. ೨-೫). ೨. ದಾನ; ಕೊಡುಗೆ. 'ತ್ಯಾಗಜೀವನ', 'ತ್ಯಾಗಬುದ್ಧಿ' ಪರಾ. ೩. ಬಿಟ್ಟುಕೊಡುವುದು; ಔದಾರ್ಯ: ತ್ಯಾಗ ಬಲಿದಾನಗಳಿಂದ ಕೂಡಿದ ಧರ್ಮವೇ ನಿಜವಾದ ಧರ್ಮ (ಧರ್ಮಸಾ. ೭); ಗವುಡೀ ಹಾಡಿಗೆ ತವುಡೇ ತ್ಯಾಗ (ಗಾದ). ೪. [ಜೈನ] ಹದಿನಾರು ಭಾವನೆಗಳಲ್ಲಿ ಒಂದು: ತ್ಯಾಗತಪಸೀ ಸಮಾಧಿ ವೈಯಾವೃತ್ಯ . . . ಎಂಬ ಷೋಡಶ ಭಾವನೆಗಳೊಳು (ಚಾವುಂಪು. ೨೬೧).

**ತ್ಯಾಗಜಗಝಂಪ, ತ್ಯಾಗಜಗಝಂಪಿ** = ತ್ಯಾಗಗುಣದಿಂದ ಪ್ರಸಿದ್ಧನಾದವನು; ಒಂದು ಬಿರುದು: ತ್ಯಾಗಜಗಝಂಪನರ್ಧಾಂಗಿ . . . ಮೈಳಲ ಮಹಾದೇವಿಯರ್ (ಎಇ. XIII, ೨೬೦-೮ ; 1125); ಮಹಾಶಕ್ತಿಪ್ರಭಾವಂ ತ್ಯಾಗಜಗಝಂಪಿ ಝಂಪಳಾಚಾರ್ಯ (ಎಇ. XVII, ೦೧೮-೯ ; 1124). **ತ್ಯಾಗಮಾಡು** = ಬಿಡು; ತೊರೆ; ತ್ಯಜಿಸು: ಭಾಸನ ವಾಸವದತ್ತೆ, ಪದ್ಮಾವತಿ, ಬಾಣನ ಮಹಾಶ್ವೇತೆ ಇವರೆಲ್ಲ ಪತಿಗಾಗಿ ಸರ್ವಸ್ವವನ್ನೂ ತ್ಯಾಗಮಾಡುವ ದುರ್ಭರ ದೀಕ್ಷೆಯಲ್ಲಿ ... ನಿಸ್ಸೀಮರು (ಧರ್ಮಸಾ. ೭೮). **ತ್ಯಾಗವಿನೋದ** = ದಾನದಿಂದ ಸಂತೋಷವನ್ನು ಪಡೆಯುವವನು; ಒಂದು ಬಿರುದು: ಮಹಾಲಕ್ಷ್ಮೀದೇವೀಲಬ್ಧವರಪ್ರಸಾದಂ ತ್ಯಾಗವಿನೋದಂ (ಸೌಇಇ. XX, ೭೦-೧೩ ; 1109); ತ್ಯಾಗವಿನೋದಂ ಬಿರುದ ಮನ್ನೆಯ ಮದನಿವಾರಣಂ . . . ಅರಸುಗೆಯ್ಯುತ್ತುಮಿರೆ (ಕಇ. IV, ೧೦-೧೮ : 12ನೆಯ ಶತ). [ ಸಂ. ]

**ತ್ಯಾಗಜೀವನ** (ನಾ). ಇತರರಿಗಾಗಿ ತನ್ನದನ್ನು ಬಿಟ್ಟುಕೊಡುತ್ತಾ ಬಾಳುವಿಕೆ; ತ್ಯಾಗಪೂರ್ಣವಾದ ಬದುಕು; ಪರೋಪಕಾರದ

ಬಾಳು: ತ್ಯಾಗಜೀವನದಿಂದ ಆತ್ಮಸಂತೋಷವಾಗುತ್ತದೆಂದು ತಿಳಿದ ಅವನು . . . ಆಸ್ತಿಯ ಮೇಲಿನ ಸ್ವಾಮ್ಯವನ್ನು ತ್ಯಜಿಸಿ ರೈತರಿಗೆ ಅದನ್ನೆಲ್ಲ ಹಂಚುವುದೆಂದು ನಿರ್ಧರಿಸಿಕೊಂಡಿದ್ದನು (ಪುನರು. ೫೪).
[ ತ್ಯಾಗ + ಜೀವನ ]

**ತ್ಯಾಗಪತ್ರ** (ನಾ). ಯಾವುದಾದರೂ ಅಧಿಕಾರ, ಹೊಣೆಗಾರಿಕೆಗಳನ್ನು ತ್ಯಜಿಸಿರುವುದಾಗಿ ತಿಳಿಸಿ ಬರೆಯುವ ಪತ್ರ; ರಾಜೀನಾಮೆ ಪತ್ರ: ಇದರ ಪ್ರತಿಭಟನೆಗಾಗಿಯೇ೹ ೧೯೩೯ರಲ್ಲಿ ಕಾಂಗ್ರೆಸ್ ಪ್ರಾಂತಮಂತ್ರಿ ಮಂಡಲಗಳು ತ್ಯಾಗಪತ್ರ ಕೊಟ್ಟದ್ದು (ಎಡ್ಸಾ. ೧೯).
[ ತ್ಯಾಗ + ಪತ್ರ ]

**ತ್ಯಾಗಬುದ್ಧಿ** (ನಾ). = ತ್ಯಾಗಮನ: ಭರತಂ ಮಹಾತ್ಮನೆಸೆದನು ದಿವ್ಯ ತೇಜಸ್ವಿ, ತ್ಯಾಗಬುದ್ಧಿಯಲಿ (ಶ್ರೀರಾಮಾ. ೩೭-೭೯೪).
[ ತ್ಯಾಗ + ಬುದ್ಧಿ ]

**ತ್ಯಾಗಮನ** (ನಾ). ಎಲ್ಲವನ್ನು ತೊರೆಯುವ ಮನಸ್ಸು: ನಿರ್ಮಲಿನದಪ್ಪು ತತ್ವಮಾಗದು ತ್ಯಾಗಮನಮಿರದೆ (ನಗಣಾ. ೧೭-೨೩).
[ ತ್ಯಾಗ + ಮನ$_1$ ]

**ತ್ಯಾಗಮಯಿ** (ನಾ). ತ್ಯಾಗಗುಣದಿಂದ ಕೂಡಿದವಳು; ಉದಾರ ಸ್ವಭಾವದವಳು: ಅವನ ಕಣ್ಣು ಮುಂದೆ ತ್ಯಾಗಮಯಿಯಾದ ರಂಗಸಾನಿ ದೇವತೆಯಂತ ಸುಳಿದಂತಾಯಿತು (ರಂಗಿರೋ. ೩೭); ಇದರ ಪ್ರಧಾನ ಪಾತ್ರಗಳಾದ ರಾಜರ್ಷಿ ಜನಕ . . ತ್ಯಾಗಮಯಿ ಮೈತ್ರೇಯಿ ಮತ್ತು ಬ್ರಹ್ಮವಾದಿನಿ ಗಾರ್ಗಿ ಭಾರತೀಯರಿಗೆ ಚಿರಪರಿಚಿತರಾಗಿದ್ದಾರೆ (ಭಾರದ. ೩೮). [ ಸಂ. ತ್ಯಾಗಮಯೀ ]

**ತ್ಯಾಗಮಾನ** (ನಾ). [ಛಂದ] ಒಂದು ಬಗೆಯ ಪದ್ಯಜಾತಿ: ತ್ಯಾಗಮಾನ ಅಟತಾಳ (ಸಾರಂಗ. ೧೪); ಯಾಲಪದವು ಮತ್ತು ತ್ಯಾಗಮಾನಗಳು ಅಂಶಗಣಾನ್ವಯವಾದ ಉತ್ಸಾಹಲಯದಲ್ಲಿವೆ ಎಂಬುದನ್ನು ಗಮನಿಸಬೇಕು (ಛಂದೋವಿ. ೨೩೦ ಅಡಿಟಿ). [ ? ]

**ತ್ಯಾಗವೀರ** (ನಾ). ತ್ಯಾಗದಲ್ಲಿ ಬಹಳ ಉತ್ಸಾಹವುಳ್ಳವನು; ದಾನದಲ್ಲಿ ಆಸಕ್ತನಾದವನು: ಸಾಮಾನ್ಯಜನತೆಯ ಕ್ಷೇಮಸಾಧನೆಗಾಗಿ ತಮ್ಮ ಬಾಳನ್ನೇ ಮುಡಿಪಾಗಿಟ್ಟ ತ್ಯಾಗವೀರರೆಂದೂ ಆವಳಿಗೆ ಮನವರಿಕೆಯಾಯಿತು (ಪುನರು. ೪೯೦). [ ತ್ಯಾಗ + ವೀರ ]

**ತ್ಯಾಗಶೀಲ** (ನಾ). ೧. ತ್ಯಾಗಸ್ವಭಾವ: ಧರ್ಮವೀರರ ತ್ಯಾಗಶೀಲವೂ, ಸಂನ್ಯಾಸಿಗಳ ಆನಂದವೂ ವ್ರತಶೀಲರ ಸಂಯಮಶಕ್ತಿಯೂ ಆದ ಯೇಸು ಭಗವಾನ್, ನಮ್ಮನ್ನುದ್ಧರಿಸು (ಪುನರು. ೧೭೮). ೨. ಉದಾರಬುದ್ಧಿ ಯುಳ್ಳವನು: ಇಂದಿನ ಸಿರಿವಂತರಲ್ಲಿಯೂ ಅನೇಕ ಜನ ತ್ಯಾಗಶೀಲರಿದ್ದಾರೆ (ರೂಢಿ). [ ತ್ಯಾಗ + ಶೀಲ ]

**ತ್ಯಾಗಾಂಗ** (ನಾ). [ವೀಶೈ] ಜೀವನ ಮೂರು ಅಂಗಗಳಲ್ಲಿ ಒಂದು; ತನುಗುಣವನ್ನು ಅಳಿದ ಸ್ಥಿತಿ: ತನ್ನಲ್ಲಿ ತ್ಯಾಗಾಂಗ ಭೋಗಾಂಗ ಯೋಗಾಂಗ ಸರ್ವಸಮಾಧಾನ ಸುಚಿತ್ರವಿರ್ದು ಮತ್ತೆ ಇತ್ಯಾದಿಗಳಲ್ಲಿ ನೋಡಿಹೆನೆಂಬ ಭ್ರಾಂತು ಭ್ರಾಮರವೇತಕ್ಕೆ (ಪ್ರೋಲಿಮಾ. ೧೯೦-೭೦೩); ಮಹಾತ್ಯಾಗಾಂಗವೇ ಸ್ಥೂಲತನುವೆನಿಸಿ ವಿವಿಧ ಭೇದದೊಳಪ್ಪುದಂಗ ತ್ರಯಂ (ಲಿಶಿಚಂ. ೫೦-೩); ಸಂಸಾರಭ್ರಾಂತಿಯು ಸಹಜವಾಗಿಯೇ ತ್ಯಾಗ ವಾಗಿರುವುದರಿಂದ ಇನಿಯದು ತ್ಯಾಗಾಂಗವೆಂದು ಹೇಳಲ್ಪಡುವುದು (ಶಿವಾಸೂ. ೪೮-೭); ನ್ಯೂನಭಾವವನ್ನು ಹೊಂದಿದ ಅಂಗಸ್ಥಲವು (ಶುದ್ಧ ಜೀವನು) ಯೋಗಾಂಗ, ಭೋಗಾಂಗ, ತ್ಯಾಗಾಂಗವೆಂದು ಮೂರು ವಿಧ ವಾಯಿತು (ಭಾರದ. ೨೫೩). [ ತ್ಯಾಗ + ಅಂಗ$_2$ ]

**ತ್ಯಾಗಾಂಗಿ** (ನಾ). [ವೀಶೈ] ಸಂಸಾರಭ್ರಾಂತಿಯನ್ನು ಕಳೆದು ಕೊಂಡವನು; ತನುಗುಣವನ್ನು ಬಿಟ್ಟುಕೊಡುವ ಸ್ಥಿತಿಗೆ ಏರಿದವನು: ತ್ಯಾಗಾಂಗಿಯಾಗಿ ಶಿವದೀಕ್ಷೆ, ಶಿವಪೂಜೆ, ಶಿವಧ್ಯಾನದ ಮೂಲಕ ಸಂಸಾರ ಭ್ರಾಂತಿಯನ್ನು ತ್ಯಾಗ ಮಾಡುವವನು (ಭಾರದ. ೨೧೭).
[ ಸಂ. ತ್ಯಾಗಾಂಗಿನ್ ]

**ತ್ಯಾಗಿ** (ನಾ). ೧. (ಎಲ್ಲವನ್ನೂ) ಬಿಡುವವನು; ವರ್ಜಿಸುವವನು; ವಿರಾಗಿ: ತ್ಯಾಗಿಗೆ ಯೋಗಿಗೆ ಲೋಭಂ ಭೋಗಂ ಹಿತವಾಗದು (ಹಮ್ಮೀರ. ೨-೫); ತ್ಯಾಗೀ ಗುಣ ಭೋಗದಲ್ಲಿ ಕಾಣುವುದು (ಗಾದೆ). ೨. ಕೊಡು ವವನು; ದಾನವಮಾಡುವವನು; ಉದಾರಿ; ದಾನಶೀಲ: "ತ್ಯಾಗಿಯುಂ ತಾಂ ಚಾಗಿ" (ಕವಿಕಂ. ೨೬೦); ಕವಿ ವಾಗ್ಮಿ ದೀರ್ಘಾಯುವಿ ಕಂಠಂ ಧಾರ್ಮಿಕಂ ತ್ಯಾಗಿ . . . ಧನರ್ಗೀಹಜಂ (ಜಾತತಿ. ೧೭-೯); ಭೂವರರೊಳ್ ತ್ಯಾಗಿಗಳಿಲ್ಲವೇ (ಸೋಮೇಶ. ೩೮). [ ಸಂ. ತ್ಯಾಗಿನ್ ]

**ತ್ಯಾಜಕ** (ನಾ). ಕೊಡುವವನು; ದಾನಿ: ಭೋಜನದಿ ಪರಮಭೋಜನ ಪರಬ್ರಹ್ಮರಸ ಯಾಚಿಸಲ್ಕೀನಿರ್ಪುದದನುಂಡ ಬಳಿಕ? ತ್ಯಾಜಕ ತ್ಯಾಗ ಸಂತ್ಯಾಜ್ಯಭೇದಗಳರದ ರಾಜ ನೀಂ ಜಗಕೆಲ್ಲ (ಷಂಕಳಕ. ೭೫೨). [ ಸಂ. ]

**ತ್ಯಾಜ್ಯ** (ಗು). ೧. ಬಿಡಲು ಯೋಗ್ಯವಾದ; ವರ್ಜಿಸಲು ತಕ್ಕುದಾದ. ೨. ತ್ಯಜಿಸುವ. ೩. ಕೊಡಲು ಯೋಗ್ಯವಾದ; ದಾನವಮಾಡಲು ಅರ್ಹವಾದ. (ನಾ). ೪. ಬಿಡಲು ಯೋಗ್ಯವಾದುದು; ಬಿಡ ಬೇಕಾದುದು; ವರ್ಜ್ಯ: ಯೂಕಾಭೀತಿಯಿಂದಂಬರಂ ಪರಿಹರ್ತವ್ಯಮೆ ಮೇಣಜೀರ್ಣಭಯದಿಂ ಪ್ರಾಜ್ಯಾಜ್ಯಮೇಂ ತ್ಯಾಜ್ಯಮೇ (ಚಂದ್ರಪು. ೧-೬೫); ಗುಣವೂ ಗೌಣವಾದದ್ದಲ್ಲ, ಅದರಂತೆಯೇ ಕರ್ಮವೂ ತ್ಯಾಜ್ಯವಾದದ್ದಲ್ಲ (ಭಾರದ. ೧೦೭); ಶಿಕ್ಷಾಶಾಸ್ತ್ರದ ಬೆಂಬಲವು ಅದಕ್ಕಿಲ್ಲದೇ ಹೋದರೂ ಅದು ಸರ್ವಥಾ ತ್ಯಾಜ್ಯವೆಂದು ಹೇಳಲಾಗುವುದಿಲ್ಲ (ದ್ರಾವಿವಿ. ೮೭). [ ಸಂ. ]

**ತ್ಯಾಜ್ಯವಸ್ತು** (ನಾ). ವರ್ಜಿಸಲು ಯೋಗ್ಯವಾದ ಪದಾರ್ಥ; ಬೇಡ ವಾದ ವಸ್ತು: ಮನೆಯ ಎಲ್ಲಾ ತ್ಯಾಜ್ಯವಸ್ತುಗಳನ್ನೂ ನಿರ್ಮೂಲ ಮಾಡಿ ಸದಾ ಶುಚಿಯಾಗಿ ಇಟ್ಟುಕೊಳ್ಳಬೇಕು (ಗೃಹವಿ. ೧೯೯).
[ ತ್ಯಾಜ್ಯ + ವಸ್ತು ]

**ತ್ಯಾಪಿ** (ನಾ). ೧. ಗಾರೆ ಕೆಲಸದ ಒಂದು ಸಾಧನ; ಕರಣಿಗೆ: ನಮ್ಮ ನರ್ಸಿನ ಸಹಾಯದಿಂದ ಒಂದು ಅಳತೆ ಕಟ್ಟಿಗೆ, ಉಪ್ಪಾರರ ಗುಂಡು, ತ್ಯಾಪಿಗಳನ್ನು ಸಂಪಾದಿಸಿದೆವು (ಪುಾರಿಮು. ೨೦೩). ೨. ಲೇಪ; ಗಿಲಾಯಿ: ಮಣ್ಣಿನ ತ್ಯಾಪಿಯನ್ನು ಕೆದರಿಸಿ ಅದು ತಿಳಿಯಬಾರದೆಂದು ಸುಣ್ಣ ಬಳಿಸಿದ ರಂತೆ (ಹೂಅರ. ೧೨೪). [ ←ಹಿಂ. ಮರಾ. ಥಾಪೀ ]

**ತ್ಯಾಬೆ** (ನಾ). ಗೋಧಿ ಬೆಳೆಗೆ ಬರುವ ಒಂದು ಬಗೆಯ ರೋಗ: ತ್ಯಾಬೆ ಕುಂಕುಮ ಇಟ್ಟಂಗಿ ಮೊದಲಾದ ರೋಗಗಳು ಹಾಯದೆ ಧಾನ್ಯಗಳು ದಪ್ಪಾಗಿ ... ಮೂರು ತಿಂಗಳದೊಳಗೆ ಬರುವವು (ಕೃಷಿವ್ರ. ೫೩). [ ? ]

**ತ್ಯಾಮನ** (ನಾ). ಸುಂಕ; ತೆರಿಗೆ (?): ತೆಂಗೆ ತ್ಯಾಮನದಿಂದ ಲೋಕವ ಮುರಿವರನ್ನು (ಕಾಲಸಂ. ೨೨-೫). [ ? ]

**ತ್ಯಾರಣ** 'ತೇರಣ$_1$' ನೋ.

**ತ್ರಪಾಹೀನ** (ನಾ). [ಕಾಮಶಾ] ಲಜ್ಜಾಹೀನವಾದುದು: ಲತಾ ವೇಷ್ಟನ ವೃಕ್ಷಾಧಿರೋಹಣವೆಂಬ ಯರಡಾಲಿಂಗನಮುಂ ಸ್ತ್ರೀಯರಿಗೆ ತ್ರಪಾ[ಪಾಹೀ]ನಮೆಂಬ ಯರಡನೆಯ ಅವಸ್ಥೆ (ಕಾಮಶಾ. ೮೪).
[ ಸಂ. (ತ್ರಪಾ + ಹೀನ) ]

**ತ್ರಪು** (ನಾ). ೧. ಒಂದು ಬಗೆಯ ಲೋಹ; ಸೀಸ: "ತ್ರಪು ವಂಗಂ ಸೀಸಂ" (ವಸ್ತುಕೋ. ೨೯-೯); ಅತಿವಿಚಿತ್ರತ್ರಪುಮಯಪತ್ರ ಖಚಿತೋಚ್ಚಂಡ ತಾಳ ಚಾಪದಂಡಂ (ಅದಿಪು. ೧೩-೪೫ ವ); ಧರಿತ್ರಿಪುತ್ರನಿಂ ಹೇಮಮೈಂದವ ನಿಂದಂ ತ್ರಪು ಕಾಂಸ್ಯವರ್ಗಂ (ಜಾತತಿ. ೪-೧೫). ೨. ತವರ; ತಗರ: "ಮಧುರಂ ತ್ರಪುವೆನಲು ವಂಗಮೆನೆ ತವರವೆನಿಕ್ಕು" (ಮಂಗರಾ. ೩೦-೫).
[ ಸಂ. ]

**ತ್ರಪುಸ** (ನಾ). (ಸೌತೆ ಜಾತಿಗೆ ಸೇರಿದ) ಒಂದು ಬಗೆಯ ಬಳ್ಳಿ ಮತ್ತು ಅದರ ಕಾಯಿ : ತ್ರಪುಸ (ಸವತೀಜಾತಿ) . . . ಕೆಂಪುಕುಂಬಳ ಇವು ಕಫ ವಾತಕರ (ಅಷ್ಟಾಂಗ. ೧೬೭-೮೬). [ ಸಂ. ]

**ತ್ರಪುಸೆ** (ನಾ). ಸೌತೆಯ ಬಳ್ಳಿ : ಅಂಕುಡೊಂಕಿನ ಅಳ್ಳುಜಳ್ಳಿಯ ತರುವಿನ ಸುತ್ತ ಸುತ್ತುವುದಿದೊ ತ್ರಪುಸೆ (ಗಾಥಾಸ. ೬-೩೪). [ ಸಂ. ತ್ರಪುಸ ]

**ತ್ರಪೆ** (ನಾ). ಲಜ್ಜೆ ; ನಾಚಿಕೆ : "ಹ್ರೀ ತ್ರಪಾಹ್ವಯಂ ವ್ರೀಡೆ ಲಜ್ಜೆಯೆನೆ ಮಂದಾಕ್ಷಂ" (ವಸ್ತುಕೋ. ೧೧೪-೧೮) ; "ಹ್ರೀ, ಲಜ್ಜಾ, ಅಪತ್ರಪಾ, ವ್ರೀಡಾ, ತ್ರಪಾ, ಮಂದಾಕ್ಷಂ – ಈ ೬ ಲಜ್ಜೆ" (ಹಲಾಯು. ೯೩-೪೧೩). [ ಸಂ. ತ್ರಪಾ ]

**ತ್ರಪ್ಸ್ಯ** (ನಾ). ಮಜ್ಜಿಗೆ ; ತಕ್ರ. [ ಸಂ. ]

**ತ್ರಯ** (ನಾ). ಮೂರು ; ಮೂರರ ಗುಂಪು. 'ತಾಪತ್ರಯ' ಪರಾ. [ ಸಂ. ]

**ತ್ರಯಸ್ಥ** (ಗು). ೧. ತಟಸ್ಥವಾದ ; ಪಕ್ಷಾತೀತವಾದ : ಚರಿತ್ರ ಲೇಖಕರಿಗೆ ಇರಬೇಕಾದ ತ್ರಯಸ್ಥ ಭೂಮಿಕೆಯನ್ನವರು ಸಾಧಿಸಿದ್ದಾರೆ (ಸ್ಮೃತಿಚಿ. ೩). (ನಾ). ೨. ಮಧ್ಯಸ್ಥ ; ನ್ಯಾಯತೀರ್ಮಾನ ಮಾಡುವವನು : ತ್ರಯಸ್ಥರು ಈ ತಂಟೆಯನ್ನು ಬಗೆಹರಿಸಲು ಮಾಡಿದ ಪ್ರಯತ್ನ ಫಲಿಸಲಿಲ್ಲ (ಮನಿಲ. ೦೩೬). [ ಸಂ. ]

**ತ್ರಯಿ** (ನಾ). ೧. ಮೂರರ ಗುಂಪು ; ಮೂರರ ಸಮುದಾಯ. ೨. = ತ್ರಯಿಾ : "ಸಾಮರ್ಗ್ಯಜುಸ್ತ್ರಯಂ ತ್ರಯಿಯೆನಿಕುಂ" (ವಸ್ತುಕೋ. ೩-೧೨) ; ಸರ್ವಬೀಜ ಭೂತಾಧ್ವರ ಗರ್ಭಸ್ಫುರಿತೆಯಾದ ತ್ರಯಿಯುಂ ನೀನೇ (ವಿಷ್ಣುಪು. ೫-೧-೧೧೧). ೩. ಗಂಡ ಮತ್ತು ಮಕ್ಕಳುಗಳನ್ನುಳ್ಳ ಗೃಹಿಣಿ. [ ಸಂ. ತ್ರಯಿ ]

**ತ್ರಯಿರಾಶಿಕ** (ನಾ). = ತ್ರೈರಾಶಿ: ಇನ್ನು ಮುಂದೆ ರಾಜಾದಿತ್ಯದ ಗಣಿತದಲ್ಲಿ ತ್ರಯಿರಾಶಿಕ, ಚಿಸ್ತತ್ರಯಿರಾಶಿಕ (ವ್ಯವಹಾ. ೧೧ ಅನುಬಂಧ). [ <ಸಂ. ತ್ರೈರಾಶಿಕ ]

**ತ್ರಯಿಾ** (ನಾ). ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳೆಂಬ ಮೂರು ವೇದಗಳು: "ಮೂಱು ವೇದಂಗಳುಮಂ ತ್ರಯಿಾಯೆಂಬುದು" (ಹಲಾಯು. ೩-೮); ತತ್ತ್ವನಯಂ ತ್ರಯಿಾತ್ರಿಪಥಗಾ ಹಿಮವದ್ಗಿರಿ ಸಚ್ಚರಿತ್ರ ಸಂಪತ್ತಿಯ ಬಿತ್ತು. . . ದೇಚಿರಾಜವಿಪ್ರೋತ್ತಮನಾ ಮಹಾಪುರುಷನಂ ಪುರುಷೋತ್ತಮನೆನ್ನದಿರ್ಪರಾರ್ (ಶಾಸಸಂ. ೨೦೯ ; 1112) ; ವೇದವು ಋಗ್ವೇದ ಯಜುರ್ವೇದ ಸಾಮವೇದ ಎಂದು ಮೂರು ವಿಧ. ಮೂರಕ್ಕೂ ಸೇರಿ ತ್ರಯಿಾ ಎಂದು ಹೆಸರು (ಹಿಂದೂಧಾ. ೦೩೬). [ ಸಂ. ]

**ತ್ರಯಿಾಚೋರ** (ನಾ). ೧. ಮೂರು ವೇದಗಳನ್ನು ಕದ್ದವನು; ಹಯಗ್ರೀವನೆಂಬ ರಾಕ್ಷಸ : ಹಯವದನನಾಗಿ ನೀ ತ್ರಯಿಾಚೋರನನ್ನು ಕೊಂದು ಸ್ತ್ರೀಯರಿಗೆ ನ್ಯಾಯದಿಂದ ದಯಾ ಬೀರಿದೆಯಲ್ಲ (ಚಾದಿಕೀ. ೩೭-೫). ೨. ಸೋಮಕನೆಂಬ ರಾಕ್ಷಸ. ☞ ಈ ಬಗ್ಗೆ ಪುರಾಣಗಳ ಕಥೆಗಳಲ್ಲಿ ಭೇದವಿದೆ. [ ತ್ರಯಿಾ + ಚೋರ ]

**ತ್ರಯಿಾತನು** (ನಾ). ಮೂರು ವೇದಗಳನ್ನು ಶರೀರವಾಗಿ ಉಳ್ಳವನು ; ಸೂರ್ಯ ; ಆದಿತ್ಯ: "ಆದಿತ್ಯಃ, ಸವಿತಾ . . . ತ್ರಯಿಾತನುಃ – ಈ ೪೭ ಆದಿತ್ಯನ ಪೆಸರ್" (ಹಲಾಯು. ೬-೩೭) ; "ತ್ರಯಿಾತನು . . . ಸೂರ್ಯನಕ್ಕುಂ" (ಶಬಂಗರಾ. ೧೦-೨). [ ತ್ರಯಿಾ + ತನು ]

**ತ್ರಯಿಾಮಯ** (ನಾ). = ಮೂರು ವೇದಗಳ ಸ್ವರೂಪನಾಗಿರುವವನು ; ಸೂರ್ಯ : ತ್ರಯಿಾಮಯನುಂ ನಿತ್ಯೋದಯನುಮಪ್ಪ ಗಭಸ್ತಿ ಮಾಲಿಗರ್ಘ್ಯಮನೆತ್ತಿ (ಶಂಚತಂ. ೨೬೬-೫). [ಸಂ.]

**ತ್ರಯೋದಶ** (ಗು). ೧. ಹದಿಮೂರನೆಯ. (ನಾ). ೨. ಹದಿಮೂರು : ಬಳಿಯಂ ಸಂಜ್ವಳನಕಷಾಯಚತುಷ್ಕನೋಕಷಾಯನವಕನಾಮ ತ್ರಯೋದಶಪ್ರಕೃತಿಗಳನರೆದು (ಶಾಂತಿಪು. ೧೧-೧೧೧ ವ) ; ಪರಿಗೃಹೀತ ದಶವಿಧ ಶ್ರಮಣ ಧರ್ಮನುಂ . . . ತ್ರಯೋದಶವಿಧ ಕ್ರಿಯಾನಿರತನುಂ (ಜಾವುಂಪು. ೫-೨೫). [ ಸಂ. ]

**ತ್ರಯೋದಶಿ** (ನಾ). ಚಾಂದ್ರಮಾನ ತಿಂಗಳ ಎರಡೂ ಪಕ್ಷಗಳ ಹದಿಮೂರನೆಯ ದಿನ : "ತೇರಸಿಯೆ ತ್ರಯೋದಶಿ" (ಚಕುನಿ. ೬೪) ; ಅಮಾವಾಸ್ಯೆ ತ್ರಯೋದಶಿ . . . ನವಮಿಯೆಂಬವೇ ಸರಣಿಯಿಂ ಷಡ್ಜಾದಿ ಸ್ವರೋತ್ಪತ್ತಿ ತಿಥಿಗಳು (ವಿವೇಕ. ೨೬೧). [ ಸಂ. ತ್ರಯೋದಶೀ ]

**ತ್ರಯೋಭಾಗ** (ನಾ). ಮೂರನೆಯ ಒಂದು ಭಾಗ: ಚೆನಕಂಗೆ ತಾರಕಾರಿಗೆ ಎಸಗೆ ೧೯೨ಐದು ಧನಮುಳ್ಳುದಂ ತ್ರಯೋಭಾಗವಾಗಿರಲಿಂದು ಹಂಚಿ ಕೊಟ್ಟಲ್ಲದಾರೋಗಿಸಲ್ಕಾಗೀಯ (ಸಂಬಿರ. ೦೭-೯೩). ☞ ಸಂಸ್ಕೃತ ವ್ಯಾಕರಣದ ಪ್ರಕಾರ ಇದು ಅಬದ್ಧರೂಪ. [ <ಸಂ. ತ್ರಿಭಾಗ ]

**ತ್ರಸ** (ಗು). ೧. ಚಲಿಸುವ ; ಸರಿಯುವ ; ಚರಿಸುವ. (ನಾ). ೨. (ಎರಡು ಅಥವಾ ಎರಡಕ್ಕಿಂತ ಹೆಚ್ಚು ಇಂದ್ರಿಯಗಳನ್ನುಳ್ಳ) ಚಲಿಸುವ ಜೀವ ; ಜಂಗಮಪ್ರಾಣಿ : "ತ್ರಸಮಕ್ಕುಂ ಜೀವನಿಕಾಯಂ ಜಂಗಮಮಮಾವಿರ್ಭೂತ ಪ್ರಧಾನ ಚೈತನ್ಯಗುಣಂ" (ವಸ್ತುಕೋ. ೧೮-೨) ; ತ್ರಸವೆನೆ ಚರಿಸುವ ಜೀವಂ (ಕ್ರಿಕೋಕ. ೯). ೩. [ಜೈನ] ತ್ರಸನಾಮಕರ್ಮದ ಉದಯದಿಂದ ಉಂಟಾಗುವ ಎರಡು ಇಂದ್ರಿಯಗಳಿಂದ ಹಿಡಿದು, ಐದು ಇಂದ್ರಿಯಗಳನ್ನು ಪಡೆದಿರುವ ಜೀವ: ತ್ರಸ ಸ್ಥಾವರ ಯೋನಿಗಳೊಳು ಪಲಕಾಲಂ ತೊಟಲ್ದು (ಜಾವುಂಪು. ೩೪೬-೧೪) ; ಕೇವಲಗಮ್ಯಂ ತ್ರಸಮುಂ ಸ್ಥಾವರಮುಂ . . . ಇರ್ದುವು ಜೀವದ್ರವ್ಯಂಗಳಿಂ ಜಗತ್ತ್ರಯ ಮಧ್ಯಂ (ಅಜಿಪು. ೧೦-೩೭) ; ತ್ರಸಮೆನಿಕುಂ ದ್ವೀಂದ್ರಿಯದಿಂ ಪಸರ್ಗೊಳೆ ಪಂಚೇಂದ್ರಿಯಾಂಬರಂ ಕ್ರಮದಿಂದಂ (ಚಂದ್ರಪು. ೦೭-೧೨). ೪. ಹುಳು ; ಕ್ರಿಮಿ ; ಕೀಟ : "ತ್ರಸ ಲಾಕ್ಷಂ ಕ್ರಿಮಿಯೆಂದಾಕ್ಕು" (ನಾನಾರ. ೧೨೨) ; ಹಸಿದ ದಿಂಡುಕಂಗೆ ಭಕ್ತ್ಯಂಗೆ ಎಸಕದ ಧ್ಯಾನ ಉಂಟೇ ಅದು ತನ್ನ ಹಸಿವಡಗುವನ್ನಕ್ಕ ತ್ರಸಗಳು ಬಂದು ಸೇರುವನ್ನಕ್ಕ ಹುಸಿಧ್ಯಾನದಿಂದ ಜೀವದ ಅಸುಗಳ ಕೊಂಬವು (ವಚೀಳಿಮೂ. ೫೭-೨೩೮) : ತ್ರಸಮಂ ಕರಿಪತಿ ಪರಿರಕ್ಷಿಸುವುದದೇನರಿದೆ (ಪಾರ್ಶ್ವಪು. ೫-೫೯) ; ಧರಣಿಯೊಳು ದ್ವೀಪಾದ್ರಿಗಂಗಾಶರಧಿವೃಕ್ಷಮೃಗತ್ರಸಂಗಳ ವಿರಚಿಸಿದರೊಲವಿಂದ (ಶಂಕೆದಾ. ೪-೨೯). ೫. ಕಾಡು ; ಅರಣ್ಯ. [ ಸಂ. ]

**ತ್ರಸಕಾಯ** (ನಾ). ೧. [ಜೈನ] ಚಲಿಸುವ ಶರೀರ : ನಾರಕರ್ಗೆ ಮಿಥ್ಯಾದೃಷ್ಟ್ಯಾದಿಯಾಗಿ ನಾಲ್ಕು ಗುಣಸ್ಥಾನಮುಂ ... ಪಂಚೇಂದ್ರಿಯತ್ವಮುಂ ತ್ರಸಕಾಯಮುಮಂ . . . ನೀನವಶ್ಯಂ ಮಾಡೆ ಪಡುಗುಂ (ಹಸಾರ. ೧೭೪). ೨. ಚಲಿಸುವ ಶರೀರವುಳ್ಳ ಪ್ರಾಣಿ : ಅಲ್ಲಿಯುಂ ತ್ರಸನಾಮ ಕರ್ಮೋದಯವಶಂಗಳ್ ತ್ರಸಕಾಯಂಗಳ್ (ಆದಿಪು. ೧೦-೬೧ ವ). [ತ್ರಸ+ಕಾಯ]

**ತ್ರಸಕಾಯಿಕ** (ಗು). ೧. ತ್ರಸಜೀವಿಗಳ ದೇಹಕ್ಕೆ ಸಂಬಂಧಿಸಿದ. (ನಾ). ೨. = ತ್ರಸಜೀವ : ಕಾಯಾನುವಾದದಿಂ ತ್ರಸಕಾಯಿಕಂಗಳ್ಗೆ ಮೂಱುಮೊಳವು (ತಸೂವ್ಯ. ೧೧) ; ತ್ರಸಕಾಯಿಕಂಗಳ ಗಣನಂ ಪಂಚೇಂದ್ರಿಯ ಸಂಖ್ಯಾಸಮಾನಂ (ತತ್ತ್ವಸೂ. ೨೨). [ ತ್ರಸ + ಕಾಯಿಕ ]

**ತ್ರಸಘಾತ** (ನಾ). [ಜೈನ] ತ್ರಸಜೀವಿಗಳನ್ನು ಕೊಲ್ಲುವುದು,–ನಾಶ ಮಾಡುವುದು : ಅಲ್ಲಿ ತ್ರಸಘಾತಮೆಂಬುದು ತ್ರಸಂಗಳಂ ಕೊಂದೊಡಲ್ಲದೆ ಮಧುಮಾಂಸಮಿಲ್ಲಪ್ಪುದಱಿಂದಮಂ ಸದಾಕಾಲಂ ವರ್ಜಿಸುವುದು (ಹಸಾರ. ೩೧೭). [ ತ್ರಸ + ಘಾತ ]

**ತ್ರಸಜೀವ** (ನಾ). [ಜೈನ] ಸಂಚರಿಸುವ ಜೀವ ; ಜಂಗಮಪ್ರಾಣಿ : ಸ್ಪರ್ಶನರಸನಘ್ರಾಣಚಕ್ಷುಶ್ಶ್ರೋತ್ರೇಂದ್ರಿಯ ಸಮನ್ವಿತಂಗಳಪ್ಪ ಮನುಷ್ಯಾದಿ ಪಂಚೇಂದ್ರಿಯಂಗಳುಮೆಂದಿಂತು ತ್ರಸಜೀವಂಗಳ್ ಚತುರ್ವಿಧಮಕ್ಕುಂ (ಆದಿಪು. ೧೦-೬೩ ವ). [ ತ್ರಸ + ಜೀವ ]

**ದಂತಾಂಶು** (ನಾ). = ದಂತಕಾಂತಿ : ಕಾರುಣ್ಯದ ರಸದ ಪೊನಲ್ಪರ್ವು ತಿರ್ದತ್ತಿದೆಂಬೀ ತೆಱದಿಂ ದಂತಾಂಶುಜಾಳಂ ಪಸರಿಸೆ (ಕಾದಂಪೂ. ೨೩೭) ; ದಂತಾಂಶುಕೋದ್ಯನ್ಮಣಿಯಂ ದಂತಾಂಶು ತೀವೃತ್ತೆಸೆಯೆ (ರಾಜಶೇ. ೫-೧೭). [ ದಂತ$_1$ + ಅಂಶು ]

**ದಂತಾಂಶುಕ** (ನಾ). = ದಂತವಾಸ : ದಂತಾಂಶುಕೋದ್ಯನ್ಮಣಿಯಂ ದಂತಾಂಶು ತೀವೃತ್ತೆಸೆಯೆ (ರಾಜಶೇ. ೫-೧೭). [ ದಂತ$_1$ + ಅಂಶುಕ ]

**ದಂತಾಗ್ರ** (ನಾ). ಹಲ್ಲಿನ ಅಗ್ರ ; ತುದಿಹಲ್ಲು : ಶ್ರೀ ಬಾಳಾಮೇಲಿಪ್ಪ ಮೇಲೆ ಸರ್ಪ್ಪದ ಮಹಾದನ್ತಾಗ್ರದುಳ್ಸಲ್ವವೋಲ್ (ಎಕ. II, ೨೨-೧ ; ಸು. 700). [ ದಂತ$_1$ + ಅಗ್ರ ]

**ದಂತಾದಂತಿ** (ನಾ). ಹಲ್ಲಿನಿಂದ ಒಬ್ಬರಿಗೊಬ್ಬರು ಕಚ್ಚಾಡುವ ಜಗಳ : ಕೆಡಹಿ ಮೆಟ್ಟುತ್ತ ಕೇಶಾಕೇಶಿ ಬಳಿಕ ದಂತಾದಂತಿಯಿಂದೆನಿಪ್ಪಾ ಬೆಡಗಿನಿಂದೆಸೆವ ಮುಷ್ಟಾಮುಷ್ಟಿಯಿಂ ಪೋರೆ (ವೀಕ್ಷಪು. ೩-೮-೧೫) ; ನಖಾನಖಿ ಪ್ರಬಳ ದಂತಾದಂತಿಯಿಂ ಕಾದಿದರ್ (ಹಮ್ಮೀರ. ೨-೯೭). 'ಕೇಶಾಕೇಶಿ' ಪರಾ. [ ಸಂ. ]

**ದಂತಾಧಿಕ** (ನಾ). ಸಾಮಾನ್ಯವಾಗಿ ಇರಬೇಕಾದ ಹಲ್ಲಿಗಿಂತಲೂ ಹೆಚ್ಚಾದ ಹಲ್ಲಿರುವುದು : "ಕೆಳಗಾಱು ಮೇಲಾಱು ಹಲ್ಲಿರಲು ಜಯಮಕ್ಕು ಹೆಚ್ಚುಕುಂದಾಗೆ ದಂತಾಧಿಕಂ ದಂತಹೀನಂ" (ಮಂಗರಾ. ೮೨-೧೭). [ ದಂತ$_1$ + ಅಧಿಕ ]

**ದಂತಾಬಲ** (ನಾ). = ದಂತಾವಲ. [ ಸಂ. ]

**ದಂತಾಮಯ** (ನಾ). ಹಲ್ಲಿನ ರೋಗ. [ ದಂತ$_1$ + ಆಮಯ ]

**ದಂತಾರ್ಬುದ** (ನಾ). ಒಂದು ಬಗೆಯ ಹಲ್ಲುಬೇನೆ : ದಂತಾರ್ಬುದಕ್ಕೆ ಗುಳ್ಳ, ಬದನೆಯ ಬೇರು, ಕಕ್ಕೆತಿಗಡು ಇವಂ ಎಣ್ಣೆಯಲ್ಲಿ ಅರೆದು ಪೂಸಲು ದಂತಾರ್ಬುದ ಮಾಣ್ಗುಂ (ವಿಷ್ಣುವಿ. ೧೩೭). [ ದಂತ$_1$ + ಅರ್ಬುದ$_2$ ]

**ದಂತಾವರಣ** (ನಾ).=ದಂತವಾಸ : ಅರಯೆ ದಂತಾವರಣಂ ಪ್ರವಾಳರುಚಿರಚ್ಛಾಯಾರುಣಾಕ್ಷೇಪಿ . . . ಸುರೂಪಾಶ್ಚರ್ಯಮಾ ಕನ್ಯೆಯಾ (ಸುಕುಮಾ. ೫-೩೩). [ ದಂತ$_1$ + ಆವರಣ ]

**ದಂತಾವಲ, ದಂತಾವಳ** (ನಾ). ೧. ಆನೆ ; ಗಜ ; ದಂತಿ : ಲಲನೆಯರ ನಡೆ ಎನುತೆ ದಂತಾವಲ ಘಟೆಯು ಸಾರೆನುತೆ . . . ನೆಲದೊಡೆಯು ಜಯಸಿಂಹ ಕಟ್ಟಿಗೆವಿಡಿದು ನಡೆತಂದ (ಕಂಕಿದಾ. ೯-೨೦). **ದಂತಾವಳ:** ಸರದೊಳ್ ಲೀಲಾಸರಂ ಪುಟ್ಟಿದತ್ತನೆ ಮಜ್ಜಿತ್ತವಗಾಹವಿಮರ್ದಾ ಕೋಳದಿಂ ಕಾಯ್ದೊಂದು ದಂತಾವಳಂ (ಅರ್ಧನೇ. ೫-೧೧೨) ; ಶ್ರಾವಕರು ನೆಱೆದಾತನಂ ದಂತಾವಳಕೆ ನೂಕೆ (ಬಸವು. ೪೯-೩೮) ; ತಳವಱರ ಸುಂಕಿಗರ ದಂತಾವಳ ರಥಾಶ್ವಾರೋಹಕರ . . . ನಿವಾಸಂಗಳಲಿ ವಾಸವ ಮಾಡಿಸಿದನೊಲಿದನಿಲಬಾಂಧವನ (ಕೊರಿರಾ. ೫-೮-೫೪) ; ಹರಿ ದಂತಾವಳ ಕೋಳ ಸೈರಿಭ ಮಹಾಶಾರ್ದೂಳ ಸಂದೋಹದಾಸುರದಾ ಬೇಂಟೆಯನಾಡಿ (ಹಮ್ಮೀರ. ೭-೭೭). ೨. ಗಜಾಸುರ. 'ದಂತಾವಳಾರಿ' ಪರಾ. [ ಸಂ. ]

**ದಂತಾವಳ** 'ದಂತಾವಲ' ನೋ.

**ದಂತಾವಳಾರಿ** (ನಾ). ೧. ಆನೆಯ ಶತ್ರು ; ಸಿಂಹ. ೨. ಗಜಾಸುರನ ಶತ್ರು ; ಶಿವ : ಓವಿ ಮದದಂತಾವಳಂ ತಿರುವಾಕರೀಶನನೆಂಟದಿರೆ ದಂತಾವಳಾರಿಯ ಕಿಂಕರನನೇಗೆಯ್ವುದಾ ದಂತಿ (ಬಸವು. ೪೯-೩೮).
[ ದಂತಾವಳ (= ದಂತಾವಲ) + ಅರಿ$_6$ ]

**ದಂತಾಹತಿ** (ನಾ). ಆನೆಯ ದಂತದ ಪೆಟ್ಟು,- ಹೊಡೆತ : ಮಾದ್ಯದ್ರುದನೀಂದ್ರಪಸ್ಥಾಳ ದಂತಾಹತಿವಿದಳಿತ ಗೋಶೀರ್ಷಸಾರದ್ರವಾಮೋದದಿನತ್ತಂ ಗಂಧವಾಹಂ ಮಗಮಗಿಸೆ (ಆದಿಪು. ೦೩-೭೮). [ ದಂತ$_1$ + ಆಹತಿ ]

**ದಂತಿ** (ನಾ). ೧. ಆನೆ ; ಗಜ : "ದ್ವಿರದಂ ದಂತಿ ಮತಂಗಜಂ . . . ಸಿಂಧುರಮೆಂದಿಂತಿವು ಸಾಮಜಾಖ್ಯೆಯೊಳಭಿನ್ನಾರ್ಥಂಗಳಕ್ಕುಂ" (ವಸ್ತುಕೋ. ೮೭-೩೦) ; ಏಱಿದಂ ತ್ರಿಜಗದ್ಭೂಷಣ ದಂತಿಯಂ ರಿಪುಚಮೂವಿದ್ರಾವಣಂ ರಾವಣಂ (ಪಂರಾಮಾ. ೧೦-೨೦೯); ಬೇಂಟೆಗುಜ್ಜುಗಿಸಿ ವಿಪಿನಕೆ ನಡೆವೆನಲ್ಲಿ ಶರತತಿಯ ಕಱೆವೆಂ ದಂತಿಗಳ ತಲೆಯ ಮುತ್ತುಗಳುದುರೆ ಸೀಳ್ವೆಂ (ಭಾವಚಿಂ. ೬-೫) ; ಕಾಮರೂಪದ ಅರಸನು ವಿಂಧ್ಯಗಿರಿಗಳಂತಿದ್ದ ಹತ್ತು ದಂತಿಗಳನ್ನು ಕಳಿಸಿದ್ದನು (ಜಿಂತಲಾ. ೧೧೪). ೨. ಒಂದು ಬಗೆಯ ಗಿಡ ; ಜಾಪಾಳದ ಗಿಡ. ೩. ಕರಿಯ ಉಮ್ಮತ್ತಿ ಗಿಡ : "ಮುಕೂಲಕಃ, ನಿಕುಂಭಃ, ದಂತಿಕಾ, ಪ್ರತ್ಯಕ್ಶ್ರೇಣೀ, ಉದುಂಬರಪರ್ಣೀ – ಈ ೫ ದಂತಿಯ ಗಿಡು" (ನಾಚಿರಾ. ೧೧) : ಕ್ರಿಯೆಯಿಂ ನೆಲ್ಲಿಯುಮಂ ದಂತಿಯುಮಂ ರಜನಿಯುಮನರೆದು ಕುಡಿದೊಡೆ . . . ಭಗಂದರಂ ಪ್ರಶಮಿಸುಗುಂ (ಕಲ್ಯಾಕೋಪ. ೯-೧೫೯) ; ತಿಗಡೆ ಸೈಂಧವಂ ದಂತಿಯನುಷ್ಣಜಲಮಿಶ್ರಿತದಿಂ ಮಾಡೆ ಜಯುಂಗೆಯ್ಗುಂ ಸಮಸ್ತ ಶೂಲಾ(ಲ)ವ್ಯಥೆಯಂ (ಅಶ್ವಶಾ. ೧೧-೧೧) ; ಬೆಲ್ಲ, ದಂತಿ, ಚೆಂಗಣಗಿಲ ಕೋಷ್ಟ, ಸೀಸೆ, ರಕ್ತಚಂದನ ಇಷ್ಟನೂ ಎಕ್ಕದ ಹಾಲಿನಲ್ಲಿ ಅರೆದು ಕರ್ಣಿಕಗ್ರಂಥಿಯ ಲೇಪಿಸಲು ಗ್ರಂಥಿಶಮನವಹುದು (ವೈದ್ಯಸಾ. I, ೮೦). ☞ ಆಯುರ್ವೇದ ನಿಘಂಟುಕಾರರು ಒಂದು ಪದದ ಅರ್ಥವನ್ನು, ಆ ಪದದ ಪರ್ಯಾಯ ಶಬ್ದಗಳಿಗೆಲ್ಲಾ ಅನ್ವಯಿಸುತ್ತಾರೆ. ೪. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : ಅಷ್ಟ, ವಸು, ದಂತಿ . . . ದಿಗ್ದಂತಿ ಇಂತಿನಿತುಂ ಎಂಕೆ ಪೆಸರು (ವ್ಯವಹಾ. ೧೦-೩೦); ಶತಮುಪೇಂದು ದಿನಪತ್ಯತಯಾಗ್ರದೊಳಾವಗಂ ಜಿತಮನೋಭವಗಣಂ ಬರೆ ದಂತಿಯೊಳೊಪ್ಪಿ ಪದ್ಧತಿಯೊಳಲ್ಲಿ ಯತಿ ತಾಂ ನಿಲೆ ಮಂಗಳಂ (ಛಂದೋಂಬು. ೨-೧೫೯).
[ ಸಂ. ದಂತಿನ್ ]

**ದಂತಿಕಪೋಲ** (ನಾ). ಆನೆಯ ಕೆನ್ನೆ,- ಗಂಡಸ್ಥಲ : "ದಂತಿಕಪೋಲ ಭೇಕ ಬಲಿಜೀವನಭು ಕರಟಾಹ್ವಯಂ" (ನಾನಾರ. ೮೮). [ ದಂತಿ + ಕಪೋಲ ]

**ದಂತಿಗ** (ನಾ). ೧. ಆನೆಯ ಮೇಲೆ ಕುಳಿತು ಯುದ್ಧಮಾಡುವ ಸೈನಿಕ,-ಭಟ : ಮಂತ್ರೀಶಗೇಡಿ ಮನ್ಮಥಕುಮಾರಕ ತನ್ನ ತೊಂತಿದ ಖಳರನುತ್ತರಿಸಿ ಹಂತಿಯೊಳ್ ಕೆಡಹಲ್ಕೆ ಕುಂಭಾಂಡನ ಕೊಂದು ದಂತಿಗರಡ್ಡಯಿಸಿದರು (ಮೋಹತ. ೩೯-೩೭). ೨. ಒಬ್ಬಾತನ ಹೆಸರು : ಕಂಚೆಯನಾಳ್ವ ದಂಡಿಗನ ಮೇಗೆಟ್ಟು (ಎಇ. XXXIII, ೩೩೧-೭ ; 804) ; ಅವನಿಂ ಬಱಿಯಂ ಶ್ರೀದಯಿತಂ ದನ್ತಿಗನುದಿತೋದಿತಂ (ಎಕ. XI, ಚಿತ್ರದು. ೪೯-೩೭ ; 347). [ ದಂತಿ + –ಗ$_2$ ]

**ದಂತಿಗಮನೆ** (ನಾ). ಆನೆಯಂತೆ ನಡಗೆಯುಳ್ಳವಳು ; ಗಜಗಮನೆ : ದಂತಿಗಮನೆಯಳ ಮೈಗಂಧ ಪೊರಸೂಸಲು (ನವಮೋ. ೪-೪೨).
[ ಸಂ. ದಂತಿಗಮನಾ (ದಂತಿ + ಗಮನ + –) ]

**ದಂತಿಘಟೆ** (ನಾ). ಆನೆಯ ಹಿಂಡು,-ಸೈನ್ಯ ; ದಂತಿಘಟಿ ದಂತಿಘಟೆಯೊಳಾಂತು ಮೊಗಮಿಕ್ಕೆಯುಂ ಜೋದರ್ ಜೋದರೊಳೇಸಾಡೆಯುಂ (ಪಂರಾಮಾ. ೦೩-೭೭ ವ) ; ದಿಂಡುಗೆಡೆದವು ದಂತಿಘಟೆ ಶತಖಂಡವಾದವು ತುರಗದಳ (ಕುಮ್ಮಾವಿ. ೪-೪೯). 'ಕರಿಘಟೆ' ಪರಾ. [ ದಂತಿ + ಘಟೆ ]

**ದಂತಿಚರ್ಮ** (ನಾ). ಆನೆಯ ತೊಗಲು,- ಚರ್ಮ : ಹೊಳೆಹೊಳೆವ ಕೆಂಜಡೆಯನಹಿಪತಿಯಿಳುಕೆ ಬಿಗಿದನು ದಂತಿಚರ್ಮವ ನೆಲಕೆ ಮುಂಜೆಱಗೆಳೆಯಲುಟ್ಟನು ದೇಸಿವರಿ ಮೆಱೆಯೆ (ಕುಮ್ಮಾಕ. ೭-೧೧).
[ ದಂತಿ + ಚರ್ಮ ]

**ದಂತಿನಿ** (ನಾ). ಹೆಣ್ಣು ಆನೆ ; ಪಿಡಿ : ದಂತಿನಿ ಮೊಲೆಯೂಡೆ ನಿಂದು ನಿಜಪೋತಮಂ (ಶಾಂತಿಪು. ೨-೧೦೫) ; ದಂತಿನಿ ದಂತಿಯುಂ ವನದೊಳಬ್ಜಿನಿಯೊಳ್ ಕಳಹಂಸಿ ಹಂಸನಂ ಕಂತುಮನಾ ರತಿಪ್ರಮದೆ ನಂದನದೊಳ್ ನೆಱೆ ಕಾಣದಂತೆತಿಭ್ರಾಂತಿಯನಪ್ಪುಕೆಯ್ವ ತೆಱದಿಂ (ನೇಮಿಪು. ೪-೯೪).
[ ಸಂ. ದಂತಿನೀ ]

**ದಂತಿಪ** (ನಾ). ಆನೆಯನ್ನು ಕಾಪಾಡುವವನು ; ಮಾವಟಿಗ : ಪಾಡುತಿರ್ದ ತದ್ದಂತಿಪವನಿತಿನರ್ತಿತಗೀತವಾತನ ವಿಕಲಸ್ವಾಂತೆಗೆ ನೋಡುವ ಕೂಡುವ ಚಿಂತೆ ಕಡಲ್ವರಿದುದು (ಯಶೋಚ. ೭-೩೩). [ ಸಂ. ]

**ದಂತಿಪುರ** (ನಾ). ಕೌರವರ ರಾಜಧಾನಿ ; ಹಸ್ತಿನಾಪುರ : ನಿಜಸೇನೆ ಬರಲು ದಂತಿಪುರಕಲ್ಲಿಯು ಸವುಸ್ತವಸ್ತುಗಳ್ಕೆದುವಂತೆ ನೇಮಿಸಿ ಮಯೂರ ಧ್ವಜಂ ಸಹಿತ ನಡೆದಂ (ಕ್ರಮಿಥಾ. ೨೬-೭೭). [ ದಂತಿ + ಪುರ$_2$ ]

**ದಂತಿಮುಳ್ಳು** (ನಾ). ದಂತಿಗಿಡದ ಮುಳ್ಳು : ದಂತಿಮುಳ್ಳನು ಹೋಳಿಗೆ ೩ ಚುಚ್ಚುವದು ಕೆಂಪಿನ ಕಣಿಗಲು ಹೂ ೧೧ ಅರಿಶಿನ ಕೆಂಪು ಅಕ್ಷತೆ ಮನೇಬಾಗಿಲಲ್ಲಿ ಹೂಳುವದು (ಶಾತುಚಿಂ. ೨-೩).
[ ದಂತಿ + ಮುಳ್ಳು (< ಮುಳ್ಳ್ಕ) ]

**ದಂತಿರಾಜ** (ನಾ). ಶ್ರೇಷ್ಠವಾದ ಆನೆ ; ಗಜರಾಜ : ದಂತಿರಾಜನಂ ತೊಡರ್ಚಿ ಪಿಡಿದೊಯ್ಯನೊಯ್ಯನೆ ಪೊಱಮಟ್ಟು (ಅನಂತಪು. ೭-೯೯ ವ).
[ ದಂತಿ + ರಾಜ ]

**ದಂತಿವೃಂದ** (ನಾ). = ದಂತಿಘಟೆ: "ದಂತಿವೃಂದಂ ಘಟೆಯೆನಿಕ್ಕು" (ಮಂಗರಾ. ೪೬-೩). [ ದಂತಿ + ವೃಂದ ]

**ದಂತಿವ್ರಜ** (ನಾ). = ದಂತಿಘಟೆ : ದಂತಿವ್ರಜದಿಂದಂ ದ್ವಿಜಸಂತತಿಯಿಂ . . . ತುಂಬಿರ್ಪುದು ತನ್ನಹಿತಾಂತನ ಬಂಧುಗಳ ವೈರಿವರ್ಗದ ದುರ್ಗಂ (ಶಾಂತಪು. ೨-೧೮). [ ದಂತಿ + ವ್ರಜ ]

**ದಂತಿವ್ರಾತ** (ನಾ). = ದಂತಿಘಟೆ : ತುರಗನರರಥವಿಟ್ಟಣಿಸೆ ಸವಱದವು ದಂತಿವ್ರಾತವುಭಯದೊಳು (ಕುವ್ಯಾಭಿ. ೪-೭೮). [ ದಂತಿ + ವ್ರಾತ ]

**ದಂತಿಶಿಶು** (ನಾ). ಆನೆಯ ಮರಿ; ಕಲಭ : ಹಯಗ್ರೀವಂ ಆ ತ್ರಿಪೃಷ್ಠಂಗಿದಿರ್ಚಿ ವನನಾಗಾರಿಯನಾಂತ ದಂತಿಶಿಶುವೊಲ್ . . . ನೀಡಿಲ್ಲ ದಳ್ಕಾಡುಗುಂ (ಶಾಂತಿಪು. ೩-೨೭). [ ದಂತಿ + ಶಿಶು ]

**ದಂತಿಸಂತಾನ** (ನಾ). = ದಂತಿಘಟೆ : ದಂತಿಸಂತಾನಮಂ ಕಿಶೋರ ಕೇಸರಿಯುಳಱಸಲ್ ನೆಱೆವುದು (ನೇಮಿಪು. ೯-೨೭ ವ).
[ ದಂತಿ + ಸಂತಾನ ]

**ದಂತುರ** (ಗು). ೧. ಎತ್ತರವಾದ ಹಲ್ಲುಗಳುಳ್ಳ ; ಮೇಲಕ್ಕೆ ಉಬ್ಬಿದ ಹಲ್ಲುಗಳುಳ್ಳ. ೨. ಸಮತಳವಲ್ಲದ ; ಹಳ್ಳತಿಟ್ಟಾದ ; ವಿಷಮತಳವಾದ : ದಂತುರ ದಿಗಂತ ಚುಂಬಿತ ಉದಯಮೇಣಸ್ತರವಿದರ್ಶನಂ (ಶ್ರೀರಾಮಾ. ೪೦೩-೩೩). ೩. ಹರಡಿರುವ ; ವ್ಯಾಪ್ತವಾದ : ತುಪ್ಪಟತತಿಯಿಂ ದಂತುರವಾದನ್ನಂಗಮನಂತರಿಸದೆ ಕರದಿನೆಱವಿದಂ ಮನದಟಲಂ (ಶಾದಂಉ. ೭೩೦). [ ಸಂ. ]

**ದಂತುರಚಕ್ರ** (ನಾ). ಹಲ್ಲುಗಳನ್ನು ಹೊಂದಿರುವ ಚಕ್ರ : ದಂತುರಚಕ್ರ, ಅಂದರೆ ಹಲ್ಲುಗಳುಳ್ಳಂಥ ಚಕ್ರ . . . ಮುಳ್ಳುಗಳುಳ್ಳಂಥ ಚಕ್ರವೆಂತಲೂ ಅನ್ನಬಹುದು (ಮುಂಬಯಿ. ೩-೧೯೧ ಅಡಿ). [ ದಂತುರ + ಚಕ್ರ$_1$ ]

**ದಂತುರಿತ** (ಗು). ೧. ಹರಡಿರುವ ; ವ್ಯಾಪ್ತವಾದ : ಮಹಾ ಪ್ರವಾಹಿನೀ ಸಲಿಲ ಸಂಮಿಶ್ರ ಕರ್ಪೂರದಳ ಬಹುಳಕಾಂತಿ ದಂತುರಿತ ಚಂದ್ರಕಾಂತ ಕಲಶಂಗಳಿಂ (ಶಂರಾಮಾ. ೧೨-೨ ವ). ೨. ತುಂಬಿರುವ : ಮೌಕ್ತಿಕಮಂಡಪದ ನಡುವಣ ಮರಕತವರ್ಯಂಕದೊಳವಿರಳಾಶ್ರುಬಿಂದುಸಂದೋಹದಂತುರಿತಪಕ್ಷ್ಮವಾಲಾಲುಳಿತನೇತ್ರೆಯುಂ (ಚ ಂ ದ್ರ ಪು. ೩-೫೦ ವ). (ನಾ). ೩. ನೆಗ್ಗಿದುದು ; ಹಳ್ಳಬಿದ್ದಿರುವುದು : ವಿವಿಧಾಯುಧ ದಂತುರಿತಂಗಳೆನಿಸುವ ಸಂಗರಜಳನಿಧಿಯೊಳ್ ವರೂಥಕರಿನಿಕರಂಗಳ್ (ಶಂಪಭಾ. ೧೩-೩೩). [ ಸಂ. ]

**ದಂತೋಷ್ಠ್ಯ** (ನಾ). [ವ್ಯಾಕ] ಹಲ್ಲು ಮತ್ತು ತುಟಿಗಳ ಸಹಾಯದಿಂದ ಹುಟ್ಟುವ ವರ್ಣ,-ಸ್ವನ ; ವಕಾರ: ದಂತೋಷ್ಠ್ಯ-ವ (ಕ್ಕಸಿಡಿ. ೫).
[ ಸಂ. ]

**ದಂತ್ಯ** (ನಾ). [ವ್ಯಾಕ] ದಂತಪ್ರದೇಶದಿಂದ ಹುಟ್ಟುವ ಅಕ್ಷರ ; ಹಲ್ಲಿನ ಸಹಾಯದಿಂದ ಉಚ್ಚರಿಸಲ್ಪಡುವ ಅಕ್ಷರ : ತಥದಧನ ಮತ್ತು ಲ,ಸ ವರ್ಣಗಳು : ದಂತ್ಯ ತವರ್ಗ, ಲ, ಸ, (ಕ್ಕಸಿಡಿ. ೫) ; ಕರ್ನಾಟ ಎಂಬ ದಂತ್ಯವರ್ಣದ ರೂಪ ಸರಿಯೆ ? (ವ್ಯಾವಿವಿ. ೮೫). [ ಸಂ. ]

**ದಂತ್ಯಾವಳಿ** (ನಾ). = ದಂತಿಘಟೆ : ಆ ವಿಗಡಪರಿವಾರದಲಿ ರಥ ಸಾವಿರದ ಮೇಳೈಸಿದರು ದಂತ್ಯಾವಳಿಯ ಬೇ ಟೆ ಣಿ ಸಿ ನಿಲಿಸಿದರೈದುಸಾವಿರವ (ಕುಪ್ಯಾಕ. ೧೯-೩). [ ದಂತಿ + ಆವಳಿ$_1$ (= ಆವಲಿ) ]

**ದಂದಣ** 'ದಣದಣ' ನೋ.

**ದಂದರಹಾಳ** (ನಾ). ವ್ಯರ್ಥವಾಗಿ ಖರ್ಚುಮಾಡುವವನು ; ದುಂದುಗಾರ: "ಹಣವನ್ನು ಲಕ್ಷ್ಯವಿಲ್ಲದೆ ಖರ್ಚುಮಾಡುವವನು,-ಪೋಲುಮಾಡುವವನು; ದುಂದುಗಾರ, ದಂದರಹಾಳ" (Spendthrift. ಇಂಕಿನಿ).
[ <ದುಂದು + ಹಾಳು (<ಪಾಟ್) + - ಅ$_7$ ]

**ದಂದರಹಾಳಿ** (ನಾ). ವ್ಯರ್ಥವಾಗಿ ಖರ್ಚುಮಾಡುವವಳು ; ದುಂದುಗಾತಿ : ಅಕ್ಕಯನ್ನು ನಿಮ್ಮಪ್ಪನ ಮನೆಯಿಂದ ತಂದಿದ್ದೆಯೇನೆ ದಂದರಹಾಳಿ ? (ಮಾರುರಾ. ೧೦೦) ; ಬೀರಕ್ಕನು ದಂದರಹಾಳಿ, ವಿಪರೀತ ವೆಚ್ಚವನ್ನು ಮಾಡತಕ್ಕವಳು (ನೀತಿಚಿಂ. IX, ೨).
[ ದಂದರಹಾಳ + - ಇ$_2$ ]

**ದಂದವಡೆ** (ಕ್ರಿ). ಬೇರೆಯಾಗು ; ವಿಯೋಗವನ್ನು ಹೊಂದು (?) : ದಂದವಡೆದೊಡಗೂಡಲಿಲ್ಲದತಿಶಯಚಿಂತೆ ಸಂದಣಿಸಿದುದು ಚಿತ್ತದೊಳು (ಸೌಂದಪು. ೦೩-೩೩) : "ಮೋಹ ತಾಳು" (ಪ್ರಶಬ್ದ).
[ <ದ್ವಂದ್ವ + ಪಡೆ$_1$ ]

**ದಂದವೊಡೆ** (ಕ್ರಿ). ವ್ಯಸನ್ಯವನ್ನು ಪರಿಹರಿಸು ; ವಿರೋಧವನ್ನು ನೀಗು (?) : ದೂರ್ವಾಸ ಮುನಿ ನುಡಿದಂತೆ ಕೃಷ್ಣಂಗೆ ಸಂದೆಗಮಣಂ ದೋರದಾಟಿಯದನಿಂದ ಸಲೆ ಸಂದ ಮರಣಂ ಸಾರ್ದುದರಿನೀಶಪ್ರಸಾದಿಗಳ ಮಹಿಮೆಯನಾವನು ದಂದವೊಡೆವಂತೆ ಬಣ್ಣಿಪನದಾಶಿರ್ಕೆ ಮಸದಂದು ಮತ್ತಂ ಕೇಳಿರೆಲೆ ವಿಪ್ರರುತ್ಪರಿರ ಮುಂದಿನ್ನೆ ಪೇಳ್ವೆಂ ಸುಕೇಶಪುಂಗವನ ಕಥೆಯನದನಾಲಿಸುವುದು (ಅರಾಚ. ೬-೨೪).
[ ? ಇದು 'ಅಂದವಡೆ' ಎಂಬುದರ ಅಪಲಿಖಿತವಿರಬಹುದು ]

**ದಂದಶೂಕ** (ನಾ). ಹಾವು ; ಸರ್ಪ : "ವಿಷಧರಃ, ದಂದಶೂಕಃ . . . ಭುಜಂಗಮಃ — ಈ ೨೫ ಹಾವಿನ ಪೆಸರ್" (ಹಲಾಯು. ೦೦೩-೦೮) ; ಕುಪಿತಾನೇಕಪದಂದಶೂಕದವ . . . ಜರಾತಂಕಾದಿಭೇದಂಗಳವ್ಯಪಸರ್ಗಂಗ[ಳ]ಂ (ಆದಿಪು. ೧೩-೯); ದುರ್ಜನರಿಗಂಜುವುದು ಲೋಕವು ಸಜ್ಜನರ ಲೆಕ್ಕಿಸದು ತಾರ್ಕ್ಷ್ಯನ ಸೆಜ್ಜೆಯೊಳಗಿಹ ದಂದಶೂಕ ನನರ್ಚಿಸು ವರೊಲಿದು (ಕುವ್ಯಾಉ. ೪-೨೦). [ ಸಂ. ]

**ದಂದಶೂಕಪತಾಕ** (ನಾ). ಬಾವುಟದಲ್ಲಿ ಸರ್ಪದ ಗುರುತುಳ್ಳವನು ಉರಗಪತಾಕ ; ದುರ್ಯೋಧನ : ದಂದಶೂಕಪತಾಕನ ಸೆಱಗಿಲ್ಲದ ಮೆಯ್ಗುಲಿತನಕ್ಕೆ ಮೆಚ್ಚಿ (ಗದಾಯು. ೬-೩೦ ವ).
[ ಸಂ. ದಂದಶೂಕ + ಪತಾಕಾ + - ]

**ದಂದಶೂಕಪತಿ** (ನಾ). ಹಾವುಗಳ ಒಡೆಯ; ಸರ್ಪಶ್ರೇಷ್ಠ; ಆದಿಶೇಷ: ಭಾಳವಿಲೋಚನಂ ದಂದಶೂಕಪತಿಹಾರಮುದಾರಸ್ಮೇರಮುಖಂ . . . ನಿಜರೂಪಂ ತೋಱಿದಂ (ರಾಚರಿ. ೦೪-೮೬). [ ದಂದಶೂಕ + ಪತಿ$_1$ ]

**ದಂದಶೂಕಪ್ರಮಾಥಿ** (ನಾ). ಹಾವುಗಳನ್ನು ಮರ್ದಿಸುವವನು,-ಕೊಲ್ಲುವವನು ; ಗರುಡ : ಮುಂದೆ ನಿಂದಿರ್ದ ದಂದಶೂಕಪ್ರಮಾಥಿಯಂ ಯಥೋಚಿತ ಸ್ನಿಗ್ಧಮಧುರಾಳಾಪದಿಂ ಸಂಭಾಷಿಸಿ ದೇವಕೀನಂದನಂ ಸ್ಯಂದನಮಂ ಕಿಱಿದು ನಡೆಯಿಸೆ (ಜಗವಿ. ೮-೮೦ ವ).
[ಸಂ. ದಂದಶೂಕಪ್ರಮಾಥಿನ್]

**ದಂದಶೂಕಭಯ** (ನಾ). ಹಾವಿನ ದೆಸೆಯಿಂದ ಉಂಟಾಗುವ ಹೆದರಿಕೆ ; ಸರ್ಪಭೀತಿ : ಅವದ್ಯಮಾದ್ಯದ್ದಂದಶೂಕಭಯಜಾಗರೂಕರ ವನಿಪಾಶ್ರಮಂಗಳರಸುಗೆಯ್ಯುತ್ತುಮಿರೆ (ಶಾಂತಿಪು. ೭-೧೨೩ ವ).
[ ದಂದಶೂಕ + ಭಯಂ ]

**ದಂದಶೂಕವನಿತೆ** (ನಾ). ಹೆಣ್ಣುಹಾವು ; ಭುಜಂಗಿ : ದಂದಶೂಕವನಿತಾ ಜನಮಭಿಷ್ಟುತಿಗೆಯ್ದು ಬಿನ್ನವಿಸೆ (ಜಗವಿ. ೩-೧೦೩ ವ).
[ ದಂದಶೂಕ + ವನಿತ ]

**ದಂದಶೂಕವಿಭೂಷ** (ನಾ). ಹಾವುಗಳೇ ಒಡವೆಯಾಗಿರುವವನು ; ನಾಗಭೂಷಣ ; ಶಿವ : ಜಯಜಯ ದಂದಶೂಕವಿಭೂಷ (ತ್ರಿಪುತಿ. ೧೨-೬). [ ಸಂ. ]

**ದಂದಶೂಕೇಶ್ವರ** (ನಾ). ಸರ್ಪರಾಜ ; ಆದಿಶೇಷ : ಸಂಜೀವಕದ ರತ್ನಮಂ ದಂದಶೂಕೇಶ್ವರಂ ಕುಡುವನೆಂಬಾಸೆಯಿಂ ಪಂಬಲಿಸುತಿರು ತಿರ್ದರು (ಜೈಮಿಭಾ. ೨೯-೨೬). [ ದಂದಶೂಕ + ಈಶ್ವರ ]

**ದಂದಹಗೊಳಿಸು** (ಕ್ರಿ). ಸುಡು; ದಹಿಸು; ಸಂತಾಪವನ್ನುಂಟುಮಾಡು; ಹಿಂಸಿಸು : ಸಾಹಸಿಯಾಕೆಯರಸನು ಅವನ ಅಗ್ರಜನು ಬಲಯುತನು ಮೂಲೋಕ ದಂದಹಗೊಳಿಪನು (ಜಿನಧಾ. ೫೦-೨೮).
[ ದಂದಹ ? + ಕೊಳ್$_1$ + – ಇಸು$_3$ ]

**ದಂದಹ್ಯಮಾನ** (ಗು). ಹೆಚ್ಚಾಗಿ ಸುಡುವ ; ಅತಿಶಯವಾಗಿ ಸುಡುವ : ಧರೆಯಾಗಸವ ದಂದಹ್ಯಮಾನವ ಮೂಳ್ಳ ಉರಿವ ಬಾಣವ ಮಂತ್ರಿಸಿಡಲು (ಜ್ಞಾನಚಿ. ೫-೮೦).'ದಂದಹ್ಯಮಾನಗಾತ್ರೆ' ಪರಾ. [ ಸಂ. ]

**ದಂದಹ್ಯಮಾನಗಾತ್ರೆ** (ನಾ). ಬಹಳವಾಗಿ ಸುಡುತ್ತಿರುವ ಶರೀರವುಳ್ಳವಳು ; ಬಹಳ ಸಂತಾಪವನ್ನು ಅನುಭವಿಸುತ್ತಿರುವವಳು ; ತುಂಬ ವ್ಯಥಿತಳಾದವಳು: ಅಸಹ್ಯಪರಿಭವಾನಲ ದಂದಹ್ಯಮಾನಗಾತ್ರೆಯುಮಾಗಿ . . . ಪಾಂಚಾಲರಾಜತನೂಜೆ ಪವಮಾನತನೂಜನಲ್ಲಿಗೆವಂದಂ (ಗದಾಯು. ೦-೫೫ ವ). [ ಸಂ.ದಂದಹ್ಯಮಾನಗಾತ್ರಾ (ದಂದಹ್ಯಮಾನ+ಗಾತ್ರ+–)]

**ದಂದಹ್ಯಮಾನಮಾನಸ** (ನಾ). ಬಹಳ ಸಂತಾಪಪಡುತ್ತಿರುವ ಮನಸ್ಸುಳ್ಳವನು ; ಅತ್ಯಧಿಕವಾದ ಮನೋವ್ಯಥೆಯನ್ನು ಅನುಭವಿಸುತ್ತಿರುವವನು : ಕುಲಾಪವಾದ ಪರಾಭವದ ದಾವಾನಳದಿಂ ದ[ಂ]ದಹ್ಯಮಾನ ಮಾನಸನುಮುಸಹ್ಯಮಾನ ಚಿಂತಾಂತರಂಗನುಮಾಗಿ (ಸುಕುಮಾ. ೨-೦೦ ವ): ಸಲಿಲಸಂಘಾತದಿನಪಮೃತ್ಯು ಪುಟ್ಟೆ ಮಾನಸರಸಹ್ಯ ಶೋಕಾನಲ ದಂದಹ್ಯಮಾನಮಾನಸರಾಗೆ (ಪಂಚಾಮಾ. ೦-೮೦ ವ).
[ ದಂದಹ್ಯಮಾನ + ಮಾನಸ$_2$ ]

**ದಂದಳ** 'ದಣದಣ' ನೋ.

**ದಂದುಗ** (ನಾ). ೧. ತೊಡಕು ; ಗೊಂದಲ ; ಸಿಕ್ಕು : ಪುರಪುರಂಧ್ರಿಯರ ಸಂದಣಿಸಿ ಬಳಿದ ಮೊಲೆಯಡೆಯೊನಿಟಿದೆಂದುಮಿಲ್ಲದ ಮುತ್ತಿನಾರಮಿಂದೆ ಸಂದುದೆಂಬ ಸಂದೆಗದ ದಂದುಗಮನವರೊಡನಾಡಿಗಳ ಚಿತ್ತದೊಳ್ ಬಿತ್ತಿಯುಂ (ಚಂದ್ರಪು. ೮-೯೩ ವ): ಇಂದಿನವರಂದಿನವರ್ ಕೆಲರೆಂದು ಪಿರ್ಕುವೀ ದಂದುಗದಿಂದಮೇನೆಮಗನಿಂದ್ಯ ಕವೀಂದ್ರರೆ ವಂದ್ಯರಾವಗಂ (ಧರ್ಮನಾ. ೦-೧೨). ೨. ವ್ಯಥೆ; ದುಃಖ ; ಶ್ರಮ ; ಕ್ಲೇಶ : ಎಂದೋ ಸಂಸಾರದ ದಂದುಗ ಹಿಂಗುವುದು (ಬಸವ.೨೨); ತನ್ನ ಕೇಳೀವನಮಂ ಪರೇತವನಮೆಂದವನೀಶನಮಂ ಸಮಂತು ಸಂಭಾವಿಸಿದಂದು ಭಾವಿಸದನೊಂದನೆ ದಂದುಗದಿಂದಗಲ್ದುದಂ (ಚಂದ್ರಪು. ೯-೦೬) : ಕವಿತೆಯನು ಬಚಿದೆ ದಂದುಗಕ್ಕೊಳಗಾಗಿ ಪೇಳ್ದನೆಂದೆನ್ನ ನಗುವಂದಮಂ ಮಾಡದೆನಗೊಲಿದಿತ್ತನ ಮಲಮತಿಯಂ ದೇವಪುರದ ಲಕ್ಷ್ಮೀರಮಣನು (ಜೈಮಿಭಾ. ೦-೬). ೩. ಕಷ್ಟ; ತೊಂದರೆ: ಇಂದು ಸುಧಾಂಶು ರಾಜನತಿ ಶೀತಳಶೀಲನನೂನ ದಾನಿಯೋಳ್ಪಂದೊಡೆ ಪಂಕಜಕೆ ಚಕ್ರಯುಗಕ್ಕಸತೀಕುಲಕ್ಕೆ ಪೋ ದಂದುಗಮಾಯ್ತು (೧೧೯.೯-೦೦೪) : ಮನುಜರೆಲ್ಲರುಂ ಸಾವ ಹುಟ್ಟುವ ದಂದುಗಕ್ಕೊಲ್ಲು ಬಚಿದೆ ಕಡುತಿರ್ಪರೆದನುಸಿರಲಳವೆ (ಚಂಪು. ೩-೦೫) ; ಪಲವುಂ ಪಂಬಲೊಂದು ದಂದುಗಂ ಬೆಟ್ಟಿತಾಗೆ ಬೀಟ್ಕೊಂಡಂ (ರಾಮಾಶ್ವ. ೩೯-೦೩). ೪. ಗೋಜು ; ಗೊಡವೆ : ವಿಷಾಹಿಗಣಮನೇಕರೌದ್ರ ಮೃಗಜಾತಿಗಳಾಳಿಳರಸೆಂಬುದೊಂದು ದಂದುಗಂ . . . ಪೊಱಗೆಂದೊಡಿಂ ಸುಖಮನೇವೊಗಟ್ಟುವುದೊ ಭೋಗಭೂಮಿಯಾ (ಆದಿಪು. ೫-೫೦) ; ನಿಮ್ಮನಚಿದ ಶರಣಂಗೆ ಶಿವಪೂಜೆಯ ಮಾಡುವ ದಂದುಗವೇಕೋ (ಶೂನ್ಯಸಂ. ೦೪೫-೪) ; ಎಮಗೆ ತಪಸ್ವಿಗಳ್ಗೆ ನೃಪವಾರ್ತೆಯ ದಂದುಗವೇವುದೆಂದು ನಿರ್ಮಮತೆಯನಿರ್ಪೊಡೆ (ಶಬ್ದಾನು. ೯೬೮ ವ್ಯಾಖ್ಯಾ). ೫. ಕೆಟ್ಟ ಕೆಲಸ ; ದುಷ್ಕರ್ಮ ; ಪಾಪಕೃತ್ಯ : ಹಿಂದೆ ಮಾಡಿದ ಭವಭವಂಗಳ ದಂದುಗವು ಜೀವರನು ನಾನಾಘಂದದಲಿ ದೇಸಱಿಸಿ ಕಾಡುವದು (ಅಕ್ರೂರ. ೩-೫೦). ೬. ಹವ್ಯಾಸ ; ಚಟ : ಕಟ್ಟದ ದಂದುಗವಿಲ್ಲದೊನಟ್ಟ ಕಳಿವರೆ ನಾಡಿಂ (ಬಂಚಿಂ. ೦-೦೫); ವ್ಯಾಪಾರ, ನೌಕರಿ ಮೊದಲಾದ ದಂದುಗಗಳ ಒತ್ತಾಯಕ್ಕಾಗಿ ತಾಯಿಯು ತೊಟ್ಟಿಲಿನ ದಾರವನ್ನು ಆಳಿನ ಕೈಯಲ್ಲಿ ಕೊಡುವ ರೂಢಿಯು ಹೆಚ್ಚಾದರೆ (ಯಕ್ಷಪ್ರ. ೦೫೪). ೭. ಒಡನಾಟ ; ಸಹವಾಸ : ಸದ್ಬ್ರಾಹ್ಮಣನ ಕನ್ನೆಯನಂ ಅಂದವಾಗಿರಲಗ್ನಿಸಾಕ್ಷಿಕದಿಂದ ವರಿಸುವೆನೀಗ ನಿನ್ನಯ ದಂದುಗಕ್ಕೊಳಗಾಗೆನೆಂದನು (ತಿಮ್ಮಾ. ೫-೦೩) ; ಹಿಂದೊಬ್ಬ ಋಷಿಪುತ್ರನಂದು ದಾಸಿಯಂ ಕೂಡೆ ಸಂದೇಹವಿಲ್ಲದ ಹಲವು ಕಾಲ ದಂದುಗದೊಳ್ ಸಿಲುಕಿ ನಿಂದು (ಪುರಂದ. ೧-೦೭೨-೨) ; ಬಾಧನವ ಮಾಡಿದರು ಸಂವ ಜ್ಞಾನಿಯೆ ಲೇಸು ಹೊಂದಿ ಸಾಸಿರವ ಕೊಟ್ಟರೂ ಕರ್ಮಿಯ ದಂದುಗವೆ ಬೇಡ (ಸರ್ವಜ್ಞ. ೯೩೦). ೮. ಕೆಲಸ ; ಉದ್ಯೋಗ ; ಕಾರ್ಯ : ಅತ್ತಲಿತ್ತಲೆಡೆಯಾಡುವ ದಂದುಗದಾಗಳೇಂ ಪೊದಟ್ದಿಸೆದುದೊ ಚಾರುದೇವಗಣಿಕಾಮಣಿನೂಪುರ ಮಂಜುಸಿಂಜಿತಂ (ಆದಿಪು. ೭-೨೨): ನಿನ್ನನಿನ್ನಾನುಮಗಲ್ವೆನೇ ಕೆಳೆಯ ಬೆನ್ನನೆ ಬಂದವೆನಾಂತರಂ ಯಮಸ್ಥಾನಮನೆಯ್ದುಸುತ್ತಿದುವೆ ದಂದುಗಂ (ಪಂಪಭಾ. ೦೩-೩) : ಜನಪದಸೇವೆಯ ದಂದುಗದೊಳ್ ತೊಡರ್ದನೇಂ ಮಹಾತ್ಮನೊ ದಿವಿಜಂ (ಸುಕುಮಾ. ೦೦-೬): ಮಾಟ್ಟ ಸಂಹರಿಪ ದಂದುಗಮಂ ಪೊಱಗಿಕ್ಕಿತಂಬ ಮಯ್ಸಿರಿ ಸಹಜಾತಮಾಗೆ (ಧರ್ಮಪು. ೦-೪೯). ೯. ದುಷ್ಕರ್ಮಿ ; ಪಾತಕಿ ; ಪಾಪಿಷ್ಠ : ಬೆಂದ ಸಂಸಾರದಲಿ ತೊಳಲುವ ದಂದುಗರು ಹರಿಭಕ್ತಿಶೂನ್ಯರು ನಿಂದಕರು ಹೊಲಿವಡಲಿ ಬಣ್ಣಿವೆ ಹರಿಕಥಾಮೃತವ (ಕಾಶಿಕಾ. ೯-೨).

**ದಂದುಗಂಬಡಿಸು** (ಕ್ರಿ). ಕಷ್ಟಪಡಿಸು ; ನೋವನ್ನುಂಟುಮಾಡು : ಪೀಡಿಸು : ಮಂದಮತಿಯುಮನಱಿದು ದಂದುಗಂಬಡಿಸುವುದಿಂದು ಶೇಖರವರಾದ್ವೈತವಱಿಯಾ (ಸಾನಂದ. ೦-೦೯) ; ದಂದುಗಂಬಡಿಸಿದಡೆ ಭೂತದ ವೃಂದವನು ಕೊಲಿಸುವರು ಮಾಣದೆ ದಂದಶೂಕಾಖ್ಯದಲಿ (ನಿಭಾಗ. ೫-೧೦-೩೯). [ ದಂದುಗಂಬಡು + – ಇಸು$_3$ ]

**ದಂದುಗಂಬಡು**, ದಂದುಗಬಡು (ಕ್ರಿ). ಕಷ್ಟವನ್ನು ಅನುಭವಿಸು ; ಕೋಟಲೆಗೊಳ್ಳು : ಸಮ್ಯಗ್ಜ್ಞಾನದುದಯದ ನೆಲೆಯ ಕಾಣಿಸದೆ ದಂದುಗಂಬಡುತಿಹುದೊ . . . ಜಗವೆಂದ (ಚುವ್ವಾಳಿ. ೯-೦೬). **ದಂದುಗಬಡು** : ಕಾದಿ ದಂದುಗಬಡದ ಮುನ್ನವೇ ತನ್ನಳವಿಗೈದಿದಂಕದ ಭಟರ ತೇರ್ಗಳಂ ತೆಗೆದೆಳೆಗೆ ಮೋದಿದಂ (ಜೈಮಿಭಾ. ೭-೪೭). [ ದಂದುಗ + ಪಡು ]

**ದಂದುಗಂಬೊಱು** (ಕ್ರಿ). ತೊಡಕಿಗೆ ಸಿಕ್ಕಿಕೊಳ್ಳು : ಇಂದು ಗತಿಗೆಟ್ಟೆಮ್ಮುವಂ ಪೊಱೆವೆನೆಂಬೊಂದು ದಂದುಗಂಬೊತ್ತು ವಿಧವಾವಿತ್ರಮಂ ಕಳ್ದು ತಂದಿತ್ತಂ (ಪದ್ಮರಾ. ೦೩-೯). [ ದಂದುಗ + ಪೊಱು ]

**ದಂದುಗಗೊಳ್** (ಕ್ರಿ). ೧. ದುಃಖಿಸು ; ವ್ಯಥೆಯನ್ನು ಹೊಂದು : ದೇವದ್ರೋಹ ಪೋಗದಾಂ ಭಾರಮಲ್ಲದೆ ಧರೆಗೆ ಹಿತನಾಗೆನೆನುತುಮಾನಂದಿ ದಂದುಗಗೊಂಡನು (ನಂದಿಮಾ. ೯-೫೨). ೨. ತೊಂದರೆಯನ್ನು

ಹೊಂದಂ ; ಕಷ್ಟವನ್ನು ಪಡೆ : ತಾಗಿ ದಂದುಗಗೊಂಡನನುಸಾಲ್ವನಂಗ್ಯೆಸಿ ಬೀಗಿದಂ ಕರ್ಣಜಂ (ಕೃಮಿಭಾ. ೨೨-೪೦). [ ದಂದುಗ + ಕೊಳ್$_1$ ]

**ದಂದುಗಬಡು** 'ದಂದಂಗಂಬಡು' ನೋ.

**ದಂದೂರಿ** (ನಾ). ವ್ಯರ್ಥವಾಗಿ ಖರ್ಚುಮಾಡುವವಳು ; ದಂಂದುಗಾತಿ : ತೆಂದರೆ ತಾ ಹೋಗ ದಂದೂರಿ ಅತ್ತೆವ್ವಾ ಬಳಕೂತ ಬಳಕೂತ ದಂಡ ಗೊಡ ಹೊತ್ತ್ಯಾ . . . ಬಳಕು ಹೆಣ್ಣಿನ ಮ್ಯಾಗ ಬರುತಾಳ ಬರುತಾಳ ಮತ್ತ್ಯಾಬ್ಬಳ್ಯಾಂಗ (ಕಜಾಗೀ. ೨). 'ದಂದರಹಾಳಿ' ಪರಾ. [ ? ]

**ದಂಧತೆ** (ನಾ). ದಂರಾಸೆ ; ಲೋಭ (?) : ವಂದರೆಯು ವದನದೊಳ್ ನೆಲೆಗ್ಯೆದು ವಕ್ರತರ ಬಂಧುರದ ನುಡಿಗಳಿಂದಶ್ವಪತಿಯಾತ್ಮಜೆಗೆ ದಂಧತೆಯ ಬೋಧಿಸಿ ವಿಕಾರಮಂ ಪುಟ್ಟಿಸುತಲ್ (ವಂಶಾರಾ. ೨-೩-೨೯).

[ < ದಂಧನ ? ]

**ದಂಧನ, ದಂಧನೆ** (ನಾ). ೧. ಮೋಸ ; ವಂಚನೆ ; ಕುತಂತ್ರ : ಇಂದು ಮುಖಿಯು ನೀ ಬಡಿಸೆಂದು ಕೊಟ್ಟರೆ ದಂಧನಗಳ ಮಾಡಿ ದೈತ್ಯರ ವಂಚಿಸಿದ (ಪುರಂದ. ೧-೦೩೦-೦). **ದಂಧನೆ** : ೨. ಭ್ರಮೆ; ಭ್ರಾಂತಿ ; ಮೋಹ : ಮನೆಯೆಂಬೊದೆ ಸುಮ್ಮನೆ ಮಕ್ಕಳೆಂಬೊದೆ ದಂಧನೆ (ವಾದಿಕೀ. ೩೨-೧).

[ ದೇ. ; ತೆಲು. ದಂದನ ]

**ದಂಧನಂಗೆಯ್** (ಕ್ರಿ). ಮೋಸಮಾಡು ; ವಂಚಿಸು : ಬೆದಱಿಸಿ ನುಡಿದುಂ ದಂಧನಂಗೆಯ್ದುಂ ಕಾಲಮಂ ಕಳಿವೆವು (ಚಿಕವಂ. ೦೭೬-೪).

[ ದಂಧನ + ಕೆಯ್$_1$ ]

**ದಂಧನೆ** 'ದಂಧನ' ನೋ.

**ದಂಧೆ** 'ಧಂದೆ' ನೋ.

**ದಂಪತಿ** (ನಾ). ೧. ಗಂಡಹೆಂಡಿರು ; ಸತಿಪತಿಗಳು : "ಮಿಥುನಂ ದಂಪತಿಗಳೆನಲು ಜಂಪತಿಗಳೆನೆ ಗಂಡಹೆಂಡಿರ್ಗೆ ಪೆಸರೆನಿಕ್ಕುಂ" (ಮಂಗರಾ. ೮-೨೪) ; ಮನ್ಮಥಕ್ರೀಡೆಗೆ ನೋಡೆ ನಾಡೆ ಗುಱಿಯಪ್ಪುವು ದಂಪತಿ ಭೋಗಭೂಮಿಯೊಳ್ (ಆದಿಪು. ೩-೯೦) ; ಅಗಲದೆ ನಲಿಯುತಿರ್ದರಾ ದಂಪತಿಗಳ್ (ಜಗವಿ. ೨-೫೨) ; ಯಾರೊಬ್ಬರಿಗೂ ತಿಳಿಸದ ದಂಪತಿಗಳು ಮನೆಬಿಟ್ಟಿದ್ದರು (ಶಾಂತಲಾ. ೯೦). ೨. ಜೊತೆ ; ಜೋಡು. 'ದಂಪತಿವಕ್ಕಿ' ಪರಾ. ೩. = ದಂಪತಿಕ್ಷೇತ್ರ : ವನಜಾತಾಹಿತಸೂನು ದಂಪತಿ ನವಾಂಶಸ್ಥಾಯಿ . . . ಅಖಿಳಗ್ರಹ ವಿಲಗ್ನ ಕ್ಷೇತ್ರಮಂ ವೀಕ್ಷಿಸಲ್ ಜನಿಯಿಕ್ಕುಂ ಪುರುಷತ್ರಯಂ (ಜಾತತಿ. ೬-೦೪). [ ಸಂ. ದಂಪತೀ ]

**ದಂಪತಿಕ್ಷೇತ್ರ** (ನಾ). [ಜ್ಯೋತಿ] ಮಿಥುನರಾಶಿ : ಧನುಷ್ಯೇಜಂ ಕುಜಗೇಹದೊಳ್ ನಿಲೆ ಪರಸ್ತ್ರೀಲೋಲಂ . . . ದಂಪತಿಕ್ಷೇತ್ರದೊಳ್ ಧನವಂತಂ ಧರಣೀಶಕಾರ್ಯಭರಧುರ್ಯಂ ಸತ್ಕಳಾಕೋವಿದಂ (ಜಾತತಿ. ೧೭-೨೯).

[ ದಂಪತಿ + ಕ್ಷೇತ್ರ ]

**ದಂಪತಿಗೆಯ್** (ಕ್ರಿ). ಜೋಡಿಮಾಡು ; ಜೊತೆಗೂಡಿಸು ; ಗಂಡ ಹೆಂಡಿರಾಗುವಂತೆ ಮಾಡು : ಭುವನಜಂತುಗಳ ದಂಪತಿಗೆಯ್ವ ಕರ್ತರ್ ನಿನ್ನವರ ವಿವಾಹಕ್ಕೆ ಹೊಣೆಗರ್ (ಪೋಹಡ. ೪೦-೪೯). [ದಂಪತಿ+ಕೆಯ್$_1$]

**ದಂಪತಿಜನ** (ನಾ).=ದಂಪತಿ ೧ : ವೇಳವಿಸಿರ್ದ ದಂಪತಿಜನಂ ನಲಿದಾಡುವ ರಮ್ಯಹರ್ಮ್ಯದಿಂ . . . ಎಸೆದಿರ್ಪುದಾ ಪುರಂ (ಜಗವಿ. ೨-೩೪).

[ ದಂಪತಿ + ಜನ ]

**ದಂಪತಿಪೂಜೆ** (ನಾ). ಮದುವೆ, ಮುಂಜಿ ಮೊದಲಾದ ಶುಭಕಾರ್ಯಗಳಲ್ಲಿ ಹಿರಿಯರಾದ ಸತಿಪತಿಯರಿಗೆ ಮಾಡುವ ಪೂಜೆ : ದೊರೆಗಳವರು ಪ್ರತಿದಿನದ ನಿತ್ಯದಾನ, ಗೋದಾನ, ದಂಪತಿಪೂಜೆ, ಗೋಪೂಜೆ . . . ಮುಂತಾದ ಅನೇಕ ವ್ರತದಾನ ಧರ್ಮಗಳನ್ನು ಮಾಡಿ (ಮುಜಾವಂ. I, ೦೩೦) ; ಕನ್ಯಾದಾನಕ್ಕೆ ಮುಂಚೆ ನಂಟರಲ್ಲಿ ಮುಖ್ಯರಾದವರಿಗೆಲ್ಲಾ ದಂಪತಿಪೂಜೆ ಮಾಡಲಾಯಿತು (ಕೂಪಿ). [ ದಂಪತಿ + ಪೂಜೆ$_2$ ]

**ದಂಪತಿವಕ್ಕಿ** (ನಾ). ಗಂಡು, ಹೆಣ್ಣು ಯಾವಾಗಲೂ ಜೊತೆಯಲ್ಲೇ ಇರುವುವೆಂದು ಭಾವಿಸಲಾದ ಒಂದು ಬಗೆಯ ಹಕ್ಕಿ ; ಚಕ್ರವಾಕ ; ಎಣೆವಕ್ಕಿ : ಒಸರ್ವ ಮಕರಂದದ ತುಷಾರದ ಕೆಸಱೊಳದ್ದವು ಕೊಂಚೆಗಳು ಹಗಲೆಸೆವ ದಂಪತಿವಕ್ಕಿ ಸಾರಸ ರಾಜಹಂಸಗಳು (ಕುಮ್ಯಾಅ. ೩-೯).

[ ದಂಪತಿ + ಹಕ್ಕಿ$_1$ (<ಪಕ್ಕಿ$_1$) ]

**ದಂಪತ್ತಿ, ದಂಪತ್ತು** (ನಾ). = ದಂಪತಿ ೧ : ಧಳೆಯು ಪಾಲನ ಮಾತುಗಳನಾ ಕುರುಡ ದಂಪತ್ತಿಗಳು ಕೇಳಲು (ರಘುವಂ. ೯೯-೭೪). **ದಂಪತ್ತು** : ಕಥೆಯ ದೃಷ್ಟಿಯಿಂದ ಇಲ್ಲಿ ಪ್ರಧಾನತೆ ಬರುವುದು ಮೂರು ದಂಪತ್ತುಗಳಿಗೆ (ಸತುಜೀ. ೧೭ ಪೀಠಿಕೆ) ; ಒಂದು ಕಿಟಕಿಯ ಮಗ್ಗುಲಲ್ಲಿ ಒಂದು ದಂಪತ್ತು ಕೂತಿರುತ್ತದೆ (ವ್ಯಸಿ. ೧) ; ಒಂದು ದಂಪತ್ತು ಪಕ್ಕದ ಕೊಠಡಿಯಲ್ಲಿದೆ, ಅವರ ಮಗುವೊಂದು ನಕ್ಕು ಕಿರಿದು ಆಟವಾಡುತ್ತಿದೆ (ಕರಾರ. ೩೫).

[ <ಸಂ. ದಂಪತೀ ]

**ದಂಪತ್ತು** 'ದಂಪತ್ತಿ' ನೋ.

**ದಂಬ, ಜಂಬ$_1$, ಜಂಭ$_1$, ಡಂಬ$_1$, ಡಂಬು, ಡಂಭ, ಡಬ್ಬು$_4$, ಡೊಂಬ$_2$, ಡೊಂಬಿ$_2$, ಡೊಂಬ್ಯು$_2$, ದಂಬು** (ನಾ). ೧. ಮೋಸ ; ವಂಚನೆ ; ಅಸತ್ಯದ ನಡೆನುಡಿ; ಠಕ್ಕು : "ಶಾಂಬರಿ ದಂಬವಿಶಾಂರ್ಷ್ಯ ಕುಸೃತಿ ಮಾಯಿ" (ಮಂಗರಾ. ೧೩೩-೨೦). **ಜಂಬ$_1$** : ೨. ತೋರಿಕೆಯ ಆಚಾರ ವಿಚಾರ ; ಸೋಗು ; ಬೂಟಾಟಿಕೆ ; ಆಡಂಬರ : ಎಳೆಯ ಕರುವಿಗೆ ಮೊಳೆವ ಕೊಂಬುಗಳ ಕಡಿತ ಅಂತೆಮ್ಮ ದೊರೆಸಾಮಿಗೂ ಕಲಿತ ನುಡಿತ. ಇದರ ನವೆ ತೀರಿಸಲು ಸನ್ನರಿವೆ ಮೋಟುಕಂಬ ವಿತಕ್ಕೂ ಸಗ್ಗದಿಹ ಮೊದ್ದುಮನವೆನ್ನ ಜಂಬ (ಗಹೇತ. ೭೦-೨೪). ೩. ಹೆಮ್ಮೆ ; ಬಿಂಕ ; ಸೊಕ್ಕು : ತುಂಬಿ ಜಗ ಬೆಳಗಿದನು, ಜಂಬದಲಿ ದಿನಮಣಿಯು (ಕನ್ನಜಾ. ೨೦೦) : ಕಲಿತವನೆಂಬ ಜಂಬ ಅವನಿಗೆ (ಶಾಪೋಲಿ. ೦೮೪) ; ಜಂಬ ; ಬಡಾಯಿ ; ಹೆಮ್ಮೆ ; ಗರ್ವ ಅಥವಾ ಅಹಂಕಾರದ ಮಾತು ; ಆತ್ಮಸ್ತುತಿ (Boast. ಇಂಕನಿ). **ಜಂಭ$_1$** : ೩. ಬೆನ್ನೊಟ್ಟೋಡುವ ಗಾಳಿಗೆ ನೀನು ಜಂಭವಬಿಡು ಇದಂ ಕಂಡಿಹೆ ನಾನು (ಅರಳು. ೦೫೯-೦೯). **ಡಂಬ$_1$** : ೧. ಸತ್ಯನೆ ಮತ್ತೆ ಪುಟ್ಟುವಂ ಗಡ ಪುಸಿ ಕಾಣ ಡಂಬಮಿದು ಖೇಚರ ನೀನಿದನೆಂತು ನಂಬಿದೋ (ಆದಿಪು. ೨-೮) ; ಹಿಡಿಂಬೆ ಡಂಬವಿಲ್ಲದೆ ಭೀಮಸೇನನೊಳಪ್ಪೊಡಂಬಡಂ ನುಡಿಯೆ (ಪಂಪಭಾ. ೩-೦೮ ವ) ; ದುರ್ಜನಂ ನಂಬೆ ನುಡಿದು ಡಂಬವಂ ವಿಜೃಂಭಿಸಿ (ನೇಮಿಪು. ೦೪-೩ ವ). ೨. ಹಿರಿಯ ಮಠಗಳನಾಳ್ವ ಯತಿವರರು ಕೆಲರುಂಟು ಡಂಬದಲಿ ಮೆರೆವರುಂಟು (ಕವಿಕೂಇ. ೦೭-೬). ೪. ತೋರಿಕೆಯ ವೇಷದವನು ; ಬೂಟಾಟಿಕೆಯವನು ; ಆಡಂಬರದವನು : ನೋಡೆ ವೇದಾದೀಕ್ಷೆಯಾದುದಾ ಡಂಬರಿಗೆ ನೋಡೆ ಬಸವನ ಕರುಣವೊದಗಿತ್ತು ಮೂರ್ಖರಿಗೆ (ಬಸರ. ೯-೩೯) ; ಶಿವಭಕ್ತ[ಜಾತಾಂ. ಕ್ರಿ]ಡಂಬನೆಂದೆನಿಸಲಾಱೆಂ (ಶಿರುಶ. ದೇ. ೨೦-೦೬) ; ಬಱಿದೆ ಪೇಳದಿರದನು ಡಂಬಗೆ ಜಱಿವವಗೆ (ವಿಭಾಗ. ೦೦-೩೫-೨೦). **ಡಂಬು** : ೧. ಪ್ರಪಂಚಿನ ಡಂಬಿನಲ್ಲಿ ಎನ್ನದೊಂದು ರೂಹುಮಾಡಿ ನೀವಿರಿಸಿದಿರಿ (ಬಸವ. ೨೯) ; ಡಂಬು ಮಾತ್ಸರ್ಯಕ್ಕೆ ಇಂಬುಗೊಡದೆ ಇರಬಲ್ಲರೆ ಶರಣ (ಸಿದ್ಧೇವ. ೯೪-೨೦೬). ೨. ಇವರು ಮೂವರ ಡಂಬಿನ ಭಕ್ತಿಗೆ ಹೊಱಗಣ ಹೊಲೆಯನೇ ಸಾಕ್ಷಿ (ಸರ್ವವ. ೦೮೩-೦೩೭) ; ಮಬ್ಬುದೋಱುವ ಮದದ ಡಂಬಿನ ಹಬ್ಬುಗೆಯಲಿಹ ಗುರು ನಿರೂಪದಲುಬ್ಬಿಮಾಡುವ ಮಾಟ ನಿಷ್ಫಲವೆಂದಳಾ ವಿಮಳೆ (ಪ್ರಭುಲೀ. ೭-೭) ; ಸುಜನರರ್ಥವನಪಹರಿಸುತಕ್ಕಜದ ಡಂಬಿನ ಯಜ್ಞಗಳ ಮಾಡುತ್ತಲಿಹರು (ವಿಭಾಗ. ೧೧-೯-೧೧). **ಡಂಭ** : ೧. ಆಂ ಭರದಿಂದೆ ನಿನ್ನಯ ಭುಜಾಬಲದೆಟ್ಟುರಮಂ ಪರೀಕ್ಷಿಸಲ್ ಡಂಭದಿನೊಂದು ರೂಹುದಳೆದಿನ್ನೆವರಂ ಪೊಣರ್ದಿಕ್ಕುವಟ್ಟು ಕಂಡೆಂ ಭವದೀಯ ಸಾಹಸಮಂ (ಚಂದ್ರಪ್ರಪು ೩-೮೨). ೨. ಪರಮನಿಷ್ಠ ಮೌನಿಯಂತೆ ಧರೆಯ ಮೇಲೆ ಡಂಭ

ತೋಱಿ (ಪುರಂದ. ೧-೧೪೦-೮) : ಬಿಡು ಬ್ರಾಹ್ಮದೊಳು ಡಂಭವ ಮಾನಸ ದೊಳಗೆಡವಿಡದಿರು ಶಂಭುವ (ಕೃಕವ. ೩-೭ ಪಲ್ಲವಿ). ಡಬ್ಬು₄ : ೨. ಚಿತ್ರ ದುತ ಕಣ್ಣಿಗೆ ಡಬ್ಬಾಗಿ ಕಾಣುವಂತ ಕಾವ್ಯ ಚಿತ್ರಕಾವ್ಯ (ಧ್ವನ್ಯಾಲೋ. ೨೨೬) ; ಇದೆಲ್ಲಾ ಶ್ರೀಮಂತಿಕೆಯ ಡಬ್ಬು ಎಂದು ತಿಳಿದುಕೊ (ಬರದಾ. ೭೭). 'ಡಬ್ಬುಗಾಣ್', 'ಡಬ್ಬುಗಾತಿ' ಪರಾ. ಡೊಂಬ₂ : ೫. ಮೋಸಗಾರ ; ವಂಚಕ ; ಕಪಟಿ : ಟಕ್ಕನ ವಚನವಂ ನಂಬಿ ನೆರೆಯೂರ್ಗೆ ಪೋಪನುಂ ಡೊಂಬನ ಮಾತಂ ನಂಬಿ ಕೂಸುಗುಡುವನುಂ . . . ದುಃಖಕ್ಕಂ ದುರ್ಯಶಕ್ಕಂ ಭಾಜನನಕ್ಕುಂ (ಧರ್ಮಾಮೃ. ೧೦-೪೦) : ಚಂದ್ರ ಹಾಸದಿ ಡೊಂಬರಾವಣ ಹೊಡೆಯಲೀ ವಿಧಿಯಾಯ್ತು ತನಗೆಂದ (ಕಾಶಿರಾ. ೬-೩೮). ೬. ಯಕ್ಷಿಣೀವಿದ್ಯೆಯನ್ನು ಬಲ್ಲವನು ; ಐಂದ್ರಜಾಲಿಕ : ಪರಮಜಿನೋದಿತಮಲ್ಲದ ದರವ್ಪರವಿದ್ಯೆಗಳನಱಿವವಂ ತೋಱಿದೊಡಚ್ಚರಿ ಯೆನ್ನದಿವೆಲ್ಲಂ ಡೊಂಬರ ವಿದ್ಯೆಗಳೆಂದೆ ಬಗೆವನುತ್ತಮಾಜ್ಞೆನಂ (ಸಮಪ. ೦೨-೪೩) ; ಕಂದರ್ಪನೆಂಬ ಡೊಂಬನ ಚಂದವ ಪೊಂಬೊಂಬೆವಿಂಡು ನೆರೆ ದತ್ತಾಗಳ್ (ಹಮ್ಮೀರ. ೨-೭೦) ; ಕಳ್ಳರಿಗೆ ಸುಳ್ಳರಿಗೆ ಡೊಳ್ಳರಿಗೆ ಡೊಂಬರಿಗೆ ಸುಳ್ಳುಗೊರವರಿಗೆ ಕೊಡುವವರು ಧರ್ಮಕ್ಕೆ ಎಳ್ಳಷ್ಟು ಕೊಡರು (ಸರ್ವಜ್ಞ. ೩೭೩). 'ಡೊಂಬವಿದ್ದೆ' ಪರಾ. ೭. ಹಾವನ್ನು ಆಡಿಸುವವನು ; ಹಾವಾಡಿಗ : ಉರಗನಂ ಪಿಡಿದೊಂದು ಕರಡಿಗೆಯ ನಡುವಿರಿಸಿ ಪಿರಿ ದೊಂದು ಬಿಂಬದಿಂ ಡೊಂಬನಾಗಿ (ಜ್ಯಾನದಂ. ೪-೦೦೪). ಡೊಂಬಿ₂ : ೧. ಡೊಂಬಿಯಲ್ಲಿದು ನೋಡೆ ಬಯಲಾಡಂಬರವು ತಾನಲ್ಲ . . . ಎಂದು ರಾವಣ ಹಗೆಯ ಹೊಗಳಿದನು (ಕಾಶಿರಾ. ೧೭-೩೭) ; ಕಲಹವ ತೆಗೆದು ಡೊಂಬಿಯಲಿ ಬಾದುರನನು ಕೊಲಬೇಕು (ಕುರಾಸಾಂ. ೧೮-೦೦೩) ; ವಿಕೃತ ರೂಪಿನ ಡೊಂಬಿಯೇಕಿದು ಸಕಲಧರ್ಮ ವಿಚಾರವಂತರಿಗೆ (ನಳದ. ೮-೩೭). ಡೊಂಬು₂ : ೧. ಸೊಬಗಂ ಕೊಂಡಾಡುವೀ ಡೊಂಬುವೇಡ (ಮಲ್ಲಿಪು. ೩-೭) ; ಶರೀರಂ ಬಡವಾದಪುದೆನ್ನದೆ ಡೊಂಬಿಲ್ಲದೆ ಶುದ್ಧವೃತ್ತಿಯೊಳ್ ನೆಱೆ ನೆಗಟ್ದರ್ (ಧರ್ಮಾಮೃ. ೧೦-೧೦೭) : ಪಾರ್ಥ ನಿನಗೀ ಡೊಂಬಿದೇಕೈ ಹುಲುಬೃಹನ್ನಳೆತನದ ಬಹುರೂಪು (ಕುಮ್ಯಾವಿ. ೬-೪೭) ; ಹುಲುಮಾನಿಸರು ಡೊಂಬಿನ ಗಾವಿಲರು ನಿನಗತಿಥಿಪೂಜೆಯನೀವವರೆ (ಅಕ್ರೂರ. ೮-೩೮). ೨. ನಡೆನಡೆ ಡೊಂಬುವೇಡ ನಿನಗೇಕೆ ತಪಸ್ಸಿನ ಕುತ್ತಮೆಂದು ನೇರ್ವಡೆ ಜಡಿದಟ್ಟಿ (ಧರ್ಮಾಮೃ. ೮-೮೮) ; ಮುಳಿಸಿಂದಂ ಕಂಬದಿಂ ಮೂಡಿದನೆನಿಸಿದ ಡೊಂಬಿಂಗೆ ಹೇವಯ್ಸಿ ತಾಂ ಬಿಜ್ಜಲದೇವಿರಾಣಿಗಂ ಹೊಯ್ಸಳಕುಳತಿಳಕಂ ಸೋಯಿದೇವಂಗವುರ್ಬ್ಬೀವಳಯಂ ಬಪ್ಪಂತಿನಂ ಪುಟ್ಟಿದನ್ (ಎಕ. XV, ಬೇಲೂರು. ೩೪೨-೨೦ ; 1265) ; ಕೊಂಬೆನೇ ಧರ್ಮಜನ ಧರ್ಮದ ಡೊಂಬನು (ಕುಮ್ಯಾಸ. ೦೫-೩೩) ; ಮೇಗಡೆ ಮೆಱೆವವರು ನಾವಲ್ಲ ನುಡಿಯಾ ಬಯಲ ಡೊಂಬೇಕೆ (ಕುಮ್ಯಾಕ. ೩-೦೮) ; ಡೊಂಬಿನ ಮಲಿನ ಮಾನಸನೆತ್ತ ಫಣಿಪತಿ ಶಯನ ತಾನೆತ್ತ (ಅಕ್ರೂರ. ೩-೪೨) : ಡೊಂಬಿನ ಚತುರ್ಬಲಮಿದೇಕೆ ಭೂಪಾಲರಾಡಂಬರದ ಛತ್ರಚಮರಂಗಳೇತಕೆ (ಕೃಮಿಥಾ. ೧೭-೩೪) ; ಡಂಬಕದ ಮಾತೇಕೆ ಯಿಂಬರಿಯಬೇಕು ತಮ್ಮ ಡೊಂಬಿನ ಮಹಾಶೌರ್ಯ ಕೊಂಬುದೇ ಕತ್ತಲೆಗೆ (ಲಕ್ಷ್ಮಿಭಾ. ೨೩-೩೭). ೫. ಕೆಲರು ಕರ್ಮದಿನೆಂಬರಕ್ಕಟ ಕೆಲರು ಬೊಮ್ಮದಿನೆಂಬರಯ್ಯೋ ಕೆಲರು ಭೋಗಾದೇವ ಮೋಕ್ಷವದೆಂಬ ಡೊಂಬುಗಳು (ಸಾನಂದ. ೮-೬೨). ೮. ಶಕ್ತಿ ; ಮಹಿಮೆ ; ಸಾಮರ್ಥ್ಯ : ಕಾಲನ ಡೊಂಬಿದಾರಿಗೆ ಸಾಧ್ಯ ನಾವೇನೆಂಬುದಿದಕೆಂದಳಲಿದರು ಭೀಷ್ಮಾದಿ ಸಜ್ಜನರು (ಕುಮ್ಯಾಸ. ೧೭-೨೭). ೯. ಠೀವಿ ; ದರ್ಪ : ಅನುಜೆ ತಳುವಿದ ಳೆಂದು ರೋಷಸ್ತನಿತಗದ್ಗದಕಂಠನೊದೆದೆದ್ದನು ಮಹೀಮಂಡಲವ ನುಗ್ಗಾಂಬಕನ ಡೊಂಬಿನಲಿ (ಕುಮ್ಯಾಅ. ೯-೧೮). ದಂಬು: ೧. ಸೋಮಧರ ಶಾಪತ್ರಯದ ಬೇಗೆ ಪಿರಿದಲ್ಲಿ ಪುಸಿ ದಂ[ಪಾಠಾಂ. ಡಂ]ಬು ಹಿಂಸೆ ಮೂರ್ಖತೆ ಯುಂಟು ಧರೆಯೊಳಗೆ (ಬಸರ. ೧-೭೦).

ಜಂಬದ ಕೋಳಿ = ಒಣಹೆಮ್ಮೆಯ ಅಥವಾ ಆಡಂಬರದ ವ್ಯಕ್ತಿ : ಕಛೇರಿಯಲ್ಲಿ ಅವನ ಫೋಟೋ ಇಟ್ಟ ದಿನವಂತೂ ಜಂಬದ ಕೋಳಿಯ ಹಾಗೆ ಕಾಣಿದದ್ದೂ ಕುಣಿದದ್ದೇ (ಯೋಧಪು. ೩). [<ಸಂ. ದಂಭ]

ದಂಬಡಿ 'ದಮ್ಮಡಿ₂' ನೋ.

ದಂಬಿಸು, ಡಂಬಿಸು (ಕ್ರಿ). ೧. ಆಡಂಬರವನ್ನು ತೋರಿಸು; ವಿಜೃಂಭಿಸು; ಅಂಬುಜೋದ್ಭವ ಸೃಷ್ಟಿ ಜಗದೊಳು ತುಂಬಿಹವು ಕಾಲೆಣಿಕೆ ಕಟ್ಟಳೆ ದಂಬಿಸಿವೆ ಮೂರು ಲೋಕದೊಳು ನಾನಾಪ್ರಕಾರದಲಿ (ಕಕ್ಕೊ.೧೮. ೩-೦೦). ಡಂಬಿಸು : ೨. ಮೋಸಗೊಳಿಸು ; ವಂಚಿಸು : ಚಿತ್ರಕಥೆಗಳಂ ಪಟದೊಳ್ [ಬ] ರೆದು ತೋಱಿ ಪೇಟ್ದು ಲೋಗರಂ ಡಂಬಿಸಿ ಮಾಂಕೊಳ್ವ ಬತ್ತವಂ ಕಳ್ವನ್ (ವಡ್ಡಾರಾ. ೦೨-೮); ನಂಬಿಪರೆನ್ನರಷ್ಟರುಮಾನೇತೆಱದಿಂ ಸಲೆ ನಂಬೆ ಪಾಣ್ಬಯರ್ ಡಂಬಿಪ [ಪಾಠಾಂ. ನಂಬಿಪ]ರಿಂತನೇಕ ವಿಧದಿಂದೆ (ಪಂಚತಂ. ೭೮-೩) ; ಧನಮುಳ್ಳನಂ ಕರಂ ಡಂ [ಪಾಠಾಂ. ಡೊಂ] ಬಿಸಿ ತಿಂಬರಿಲ್ಲದೊಡೆ ಪೊರ್ದದ ನಂಟರಂ ಪಾಂಗಿದೇ ಕರಂ ನಂಬಿಸಲಾಪವೇ (ಜೀವಸಂ. ೭೯-೧೪). [ದಂಬ + – ಇಸು₂]

ದಂಬು 'ದಂಬ' ನೋ.

ದಂಬೆ 'ದಬ್ಬೆ₁' ನೋ.

ದಂಭ (ನಾ). ೧. ಮೋಸ; ಠಕ್ಕು; ವಂಚನೆ: ದಂಭದಧಿಕಾರಿಗಳ ಮಾತನು ನಂಬುತವರಾತಿರ್ಪ ನೃಪತಿಯ ರಾಜ್ಯಮಾಳಿಯುವುದೇ (ರಾಮಾಸಂ. ೩-೩-೭). ೨. ಆಡಂಬರ ; ಅಟಾಟೋಪ ; ಡೌಲು : ಷೋಡಶ ವಿಕಾರ–ರಾಗದ್ವೇಷ . . . ದಂಭ, ದರ್ಪ, ಅಹಂಕಾರ, ಇಚ್ಛೆ, ಭಕ್ತಿ, ಶ್ರದ್ಧೆ ಈ ಹದಿನಾರು (ಅಮೃತ. ೬-೨೭ ಅಡಿಟಿ) : ಜಂಭಾರಿಯುತ್ತ ಶರಚಾಪ ಗಳ ರಘುವರಗೆ ದಂಭದಿಂದೊಪ್ಪಿಸುತ ಕೃತಿಯಾದನಾ ಕುಂಭಸಂಭವಂ (ವಂಕಾರಾ. ೩-೩ ಸೂಚನೆ) ; ದಂಭವಿದ್ದವನಿಗೆ ಇಂಬು ಸಿಕ್ಕುವುದು (ಗಾದೆ). ೩. ಜಂಬ ; ಸೊಕ್ಕು ; ಹೆಮ್ಮೆ ; ಗರ್ವ : ಇತ್ತೀಚೆಗೆ ಅವನಲ್ಲಿ ತನ ಶೌರ್ಯದ ವಿಷಯವಾಗಿರುವ ಅಭಿಮಾನ ಬೆಳೆದು ದಂಭವಾಗಿ ರೂಪು ಗೊಳ್ಳುತ್ತಿತ್ತು (ನೂರಜ. ೪೯): ಒಂದು ವೇಳೆ ತಾನು ಹಿರಿಯರಸಿಯಾಗಿದ್ದು ಕೊಂಡು ಕಿರಿಯ ರಾಣಿಯ ಈ ಒಂದು ದಂಭವನ್ನು ದಮನಮಾಡಬಲ್ಲವಳೇ ಆದರೆ (ಸವತಿ. ೨೦೨). [ಸಂ.]

ದಂಭಕ (ನಾ). ಹೆಮ್ಮೆಯುಳ್ಳವನು ; ಜಂಭದವನು. [ಸಂ.]

ದಂಭತ್ವ (ನಾ). ಆಡಂಬರ : ಕುಂಭಪೊಂದಱೊಳು ಜಲವಂ ತುಂಬಿ . . . ದಂಭತ್ವದಿಂದಲಂಕರಿಸಲ್ (ವೀಕ್ಷಪು. ೪-೨೦-೩೩). [ಸಂ.]

ದಂಭವೈರಿ (ನಾ). ಮೋಸಕ್ಕೆ ವಿರೋಧಿಯಾದವನು : ಭಕ್ತಸುರತರು ಜಿತಾಕ್ಷಂ ಸಿದ್ಧಿದಂ ದಂಭವೈರಿ ಮಾದರಸರೊಪ್ಪಿದರ್ (ಶರ್ಭಾ. ೨-೧೩). [ದಂಭ + ವೈರಿ]

ದಂಭಾಚಾರ (ನಾ). ಬೂಟಾಟಿಕೆಯ ನಡವಳಿಕೆ; ಆಡಂಬರ ; ಸೋಗು; ಡಂಭಾಚಾರ : ಕಂಡುದನ್ನು ಕಂಡಂತೆ ಹೇಳುವ ಕೆಚ್ಚು, ದಂಭಾಚಾರ ವನ್ನು ಕಂಡರೆ ಸಾತ್ವಿಕವಾದ ರೊಚ್ಚು–ಇದು ಅವನ ವ್ಯಕ್ತಿತ್ವದ ಪಡಿಯಚ್ಚು (ಕರದ. ೪೭೨). [ದಂಭ + ಆಚಾರ]

ದಂಭೋಲಿ, ದಂಭೋಳಿ (ನಾ). ೧. ಇಂದ್ರನ ವಜ್ರಾಯುಧ ; ಪವಿ. ದಂಭೋಳಿ : ೧. "ಪವಿಃ . . . ದಂಭೋಳಿಃ . . . ಶಂಬಃ – ಈ ೧೨ ಇಂದ್ರನ ವಜ್ರಾಯುಧದ ಪೆಸರ್" (ಹಲಾಯು. ೦೦-೩೩); ಸಕಲಕಪಿಸಮಿತಿ ವೆರಸಹಿತಕುಲಾಚಲಚಕ್ರಚಾರ ದಂಭೋಳಿ ಜಗತ್ಪ್ರಕಟೋದ್ಯನ್ಮಹಿಮ ನೆನಿಸುವ ಕಕುದ್ಬಲಿಯೆನಿಪ ಪೆಸರ ಬಲಿದುಃಖನಿರ್ಪಂ (ಪಂಚತಂ. ೨೭೭-೩); ಅರಿಸಾಮಂತ ಕುಳಾಕುಳಾಚಳದಳದ್ದಂಭೋಳಿ ದಂಭೋಳಿ . . . ಎನಿಪಂ ಸಾವನ್ತ ನಾಗಾರ್ಜುನನಂ (ಎಕ. VI, ತರೀಕೆ. ೪೨-೩೮ ; 1206) : ದಂಭೋಳಿಯಂ ಸೆಳೆದುಕೊ ಜವದಿ ಬಲವೆರಸು (ಲಿಂಗಪು. ೧೨-೧೮).

೨. ಸಿಡಿಲು: ಲೋಕೈಕಭೀಕರಮಾಟಂದುದು ನೀಲಮೇಘ ನಿಕಟ ಪ್ರಸ್ಫಾರ ದಂಭೋಳಿವೋಲ್ (ಶಂಖಮೂ. ೧೯-೦೭೪); ಬ್ರಹ್ಮಕಂದುಕದಿ ಶಂಪಾತರಂಗ ವದರೊಳು ತುಂಬಿ ಪರಿಯುತಿದೆ ದಂಭೋಳಿ ನೀನಾಗು (ಮಂಕುಳ. ೦೬೩). [ ಸಂ. ]

**ದಂಭೋಳಿ** 'ದಂಭೋಲಿ' ನೋ.

**ದಂಭೋಳಿಹಸ್ತ** (ನಾ). ವಜ್ರಾಯುಧವನ್ನು ಕೈಯಲ್ಲಿ ಹೊಂದಿರುವವನು; ದೇವೇಂದ್ರ: ಜೃಂಭದ್ದಂಭೋಳಿಹಸ್ತಾಹತಚಕಿತಗತಕ್ಷ್ಮಾಧೃ ವಿಸ್ಫಾರವಿದ್ಯುತ್ಸಂಭಿನ್ನಂ . . . ಶುಂಭದ್ಗಂಭೀರಮಂ ರಂಜಿಸಿದುದಮಮ ದತ್ತೇಂದ್ರಭದ್ರುಂ ಸಮುದ್ರಂ (ರಾಜಶೇ. ೦-೯೦).

[ ದಂಭೋಳಿ ( = ದಂಭೋಲಿ) + ಹಸ್ತ ]

**ದಂರೋಟ್**, ದಂರೋಟು (ನಾ). ಒಂದು ಬಗೆಯ ಸಿಹಿ ಭಕ್ಷ್ಯ; ಬೂದುಗುಂಬಳಕಾಯಿ ಮೊದಲಾದವುಗಳಿಂದ ಮಾಡಿದ ಹಲ್ವ: ಏನು ಕೊಡಲಿ ಸಾರ್. ಜಾಮೂನ್. ಜಲೇಬಿ. ದಂರೋಟ್ (ಮುಹಾಂ. ೪೬). ದಂರೋಟು: ದಂರೋಟೆಂದರೆ ನನಗೆ ಬಹಳ ಇಷ್ಟ (ರೂಢಿ).

[ ? ]

**ದಂರೋಟು** 'ದಂರೋಟ್' ನೋ.

**ದಂಶ** (ನಾ). ೧. ಕಚ್ಚುವುದು; ಕಡಿತ: ಪಿರಿದಪ್ಪ ನಂಜುವುಗುಳ್ದುರ್ಬಿದವಂಗಸಿತಾಹಿದಂಶವಾದುದು (ಕಾದಂಪೂ. ೮೮೩): ಅಲ್ಪದಶನ ದಂಶ ಮಾತ್ರ ಖಂಡನೀಯ ಕರಂಗಳೆನಿಸಿದ ಮಂಡಕಂಗಳುಮಂ . . . ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೦೦-೩೯ ವ). ೨. ಕಾಡುನೊಣ; ವನಮಂಕ್ಷಿಕ: "ವಾನೇಯ ಮಕ್ಷಿಕಾಭಿಖ್ಯಾನಂ ದಂಶಂ" (ವಸ್ತುಕೋ. ೯೯-೩೯): ಬಿಸಿಲ್ಕೆಕಿಲ್ ಪಸಿವುಗ್ರದಂಶಮಶಕ ವ್ಯಾಬಾಧೆ . . . ಎಂಬೀ ಬಾಧೆಯೊಳ್ ಮೆಯ್ಯನೊಡ್ಡಿಸೆ (ಆದಿಪು. ೬-೩೪): ಆಮುಯ್ ದಂಶ ಮಸಕ ಶೀತೋಷ್ಣ ಕದಂಬಕ ಬಾಧಾರಹಿತನೆನಿಸಿ ಸುಕುಮಾರಂ ಸುರಕುಮಾರ [ರಂ] ಮಸುಳಿಸಿದಂ (ಸುಕುಮಾ. ೦೦-೦೦೩): ದಂಶ ಮಶಕ ಮಕ್ಷಿಕಾಭ್ರಮರ ಪತಂಗಾದಿ ಚತುರಿಂದ್ರಿಯಂಗಳ್ ಸ್ಪರ್ಶನ ರಸನ ಘ್ರಾಣ ಚಕ್ಷುರಿಂದ್ರಿಯ ಪಂಚೈತ್ರ್ಯ್ಯಪೇತಂಗಳಪ್ಪುವು(ತತ್ತ್ವಪ್ರ. ೯೪): ತರಕ್ಷು ದಂಶಶತ ಸಂವೃತ ಮಿರ್ದುದದೊಂದು ತಾಣದೊಳ್ (ರಾಜಶೇ. ೫-೯೨). ೩. ಹಲ್ಲಿನ ಗಾಯ. ೪. ಹಲ್ಲು; ದಂತ. [ ಸಂ. ]

**ದಂಶಕ** (ಗು). ೧. ಕಚ್ಚುವ; ಕಡಿಯುವ. (ನಾ). ೨. ಕಚ್ಚುವ ಪ್ರಾಣಿ; ಕಡಿಯುವ ಪ್ರಾಣಿ. ೩. ನೊಣ. ೪. ಹಲ್ಲಿನಿಂದ ಕಚ್ಚಿ ತಿನ್ನುವ ಉಪ್ಪಿನಕಾಯಿ ಮೊದಲಾದ ವ್ಯಂಜನ: ಸಂಪರಿಸು ಬಂಡಿಯ ನಡೆಸು ಭಕ್ಷ್ಯದ ಸೂಪದಂಶಕವ ತರಿಸು (ಕುಮಾವ್ಯಾ. ೦೦-೧೭). [ ಸಂ. ]

**ದಂಶನ** (ನಾ). ೧. ಹಲ್ಲಿನಿಂದ ಕಚ್ಚುವುದು; ಕಡಿತ. ೨. ಕವಚ; ಜೋಡು. ೩. ಆನೆಯ ಪಕ್ಕರಕ್ಕೆ; ಹಕ್ಕರಿಕೆ: "ದಂಶನಂ ಹಕ್ಕರಿಕೆ" (ಮಂಗರಾ. ೮೬-೩೦). [ ಸಂ. ]

**ದಂಶಿ** (ನಾ). = ದಂಶ ೨: ದಂಶೀ . . . ಚಿಕ್ಕಕಾಡುನೊಣ, ಕಾಡು ಸೊಳ್ಳೆ (ಸಿದ್ಧಾಂತಿ. ೧೪೦). [ ಸಂ. ದಂಶೀ ]

**ದಂಶಿತ** (ಗು). ೧. ಕಚ್ಚಿದ. ೨. ಅಂಗಿತೊಟ್ಟಿರುವ; ಕವಚವನ್ನು ತೊಟ್ಟ. [ ಸಂ. ]

**ದಂಷ್ಟ್ರ** (ನಾ). ಆನೆ, ಹುಲಿ, ಸಿಂಹ, ಹಂದಿ ಮೊದಲಾದಂವುಗಳ ಉದ್ದವಾದ, ಹೊರಹಾಯ್ದಿರುವ ಹಲ್ಲು; ಕೋರೆಹಲ್ಲು; ದಾಡೆ: ಪೊಳೆಯುತ್ತಿರ್ಪ ಮಹಾವರಾಹಾವದನೋದ್ಯದ್ದಂಷ್ಟ್ರಮಂ ನೆಮ್ಮಿನಿಂದಳೋ ಭೂಕಾಂತೆಯೆನಲ್ಕೆ (ಕಾದಂಪೂ. ೧೧೦೩). [ ಸಂ. ದಂಷ್ಟ್ರಾ ]

**ದಂಷ್ಟ್ರಕ** (ನಾ). = ದಂಷ್ಟ್ರ: ಆಕಾರಾಂ ಅಕಾರವಾದುದರ್ಕೆ-ಕಂಧರಾ, ಉಪತ್ಯಕಾ. ದಂಷ್ಟ್ರಕಾ, ವಾಲುಕಾ-ಎಂಬಿವು ಮೊದಲಾದುವು ಕಂಧರ, ಉಪತ್ಯಕ, ಕರುಣ-ಎಂದು ಅಕಾರಾಂತಮಂ ಪಡೆಯಲೊಡಂ ಲಿಂಗಮಾಗಿ ವಿಭಕ್ತಿ ಪತ್ತುಗುಂ (ಶಮದ. ೮೩ ಪ್ರಯೋ). [ <ಸಂ. ದಂಷ್ಟ್ರಿಕಾ ]

**ದಂಷ್ಟ್ರಾಂಕುರ** (ನಾ). ಹೊರಬರುತ್ತಿರುವ ಕೋರೆದಾಡೆ; ಮೊಳೆಯುತ್ತಿರುವ ಕೋರೆಹಲ್ಲು; ಮೊಳೆಹಲ್ಲು: ಬಲದೇವ ವಾಸುದೇವರ್ . . . ಪವಿತ್ರಕ್ಷತ್ರಧರ್ಮ ಕಂಠೀರವ ದಂಷ್ಟ್ರಾಂಕುರಯುಗ್ಮಮುಂ . . . ಗುಣಗಣ ಮಣಿಗಣಕೋಶಗೃಹದಂತೆಯುಮಾಗಿ ಮಾತಾಪಿತೃಗಳನು ರಾಗದೊಡನೊಡನೆ ಪ್ರಮೋದಪ್ರವರ್ಧಮಾಗೆ (ಶಾಂತಿಪು. ೦-೮೦ ವ); ರಾತ್ರಿಂಚರವಶಿಸಿತದಂಷ್ಟ್ರಾಂಕುರಂ . . . ಬಳೆದು ಬಳೆಸಿದಂತಾಯ್ತು ಬೆಳ್ದಿಂಗಳೆತ್ತಂ (ರಾಜಶೇ. ೦೩-೯೨). [ ಸಂ. ]

**ದಂಷ್ಟ್ರಾಕಿರಣ** (ನಾ). ಕೋರೆಹಲ್ಲುಗಳ ಕಾಂತಿ.-ಪ್ರಕಾಶ: ರಾಕ್ಷಸರಾಜಂ . . . ದಂಷ್ಟ್ರಾಕಿರಣಧವಳಿತಾಸ್ಥಾನನಿಂತುಂದನಾಗಳ್ (ಜಗಪಿ. ೨-೯೫).

[ ಸಂ. ]

**ದಂಷ್ಟ್ರಾಗ್ರ** (ನಾ). ಕೋರೆಹಲ್ಲಿನ ತುದಿ; ದಂತಾಗ್ರ: ಆದಿವರಾಹರೂಪ ದೊಳ್ ನೀನಂದೆತ್ತಿದ್ದೆ ಗೋಮಿನೀಧವ ದಂಷ್ಟ್ರಾಗ್ರದ ನೀಲಜಾಲಮಣಿಯೆಂಬಂತಾಗೆ ಭೂಗೋಳಮಂ (ಜಗಪಿ. ೧-೩೭); ದಾನವಹೃತ ಮೇದಿನಿಯಂ ದಂಷ್ಟ್ರಾಗ್ರದೊಳಿರಿಸಿ (ಮೋಂದಳಿ. ೪೨-೨). [ ಸಂ. ]

**ದಂಷ್ಟ್ರಾಯುಧ** (ನಾ). ೧. ಕೋರೆಹಲ್ಲೇ ಆಯುಧವಾಗಿ ಉಳ್ಳದು; ಕಾಡುಹಂದಿ. ೨. ಕಪಿ: (ಕಿ). [ ಸಂ. ]

**ದಂಷ್ಟ್ರಿ** (ನಾ). ೧. ದಾಡೆಗಳುಳ್ಳದು; ಕಾಡುಹಂದಿ. ೨. ಹಂದಿ: "ಕೋಳಃ, . . . ದಂಷ್ಟ್ರೀ, ಘೃಷ್ಟಿಃ, ಕಿರಿಃ-ಈ ೮ ಹಂದಿ" (ಹಲಾಯು. ೩೮-೭೪). ೩. ನೆಗ್ಗಿಲ ಮುಳ್ಳು: "ದಂಷ್ಟ್ರಿಯೆನೆ ನೆಗ್ಗಿಲಕ್ಕು" (ಮಂಗರಾ. ೩೭-೨೨). [ ಸಂ. ದಂಷ್ಟ್ರಿನ್ ]

**ದಂಷ್ಟೈ** (ನಾ). = ದಂಷ್ಟ್ರ: ಅಣಲ್ಗಳ ದಾಡೆಯ ಪಲ್ಲಿಂ ಗಣಿಸುಗೆ ತಾಂ ದಂಷ್ಟ್ರೆಯೆಂಬ ಪೆಸರೆ ನಿದಾನಂ (ಅಶ್ವಶಾ. ೯-೭). [ ಸಂ. ದಂಷ್ಟ್ರಾ ]

**ದಂಸ**[1] (ನಾ). = ದಂಶ: ವಿದ್ಯುಚ್ಚೋರ ಭಟಾರರ್ ಪ್ರತಿಮಾಯೋಗಂ ನಿಂದೊಡ ದೇವತೆ ಮುಳಿದು ಪೊಣಿಸುಗಳನಿವಿರಿಯವು ದಂಸಮಸಕಂಗಳಂ ವಿಗುರ್ವಿಸೆ (ವಡ್ಡಾರಾ. ೦೩೪-೦೮). [ <ಸಂ. ದಂಶ ]

**ದಂಸ**[2] (ನಾ). (?): ಘಳಿಸಿದ ದಂಸು ಸೇವರು (ಬೊಂಕಶಾ. ೦೯೩೩, ಹಾವೇರಿ. ೯೫-೪: ?). [ ? ]

**ದಕ** (ನಾ). ನೀರು; ಉದಕ. [ ಸಂ. ]

**ದಕನ್** 'ದಖನ್' ನೋ.

**ದಕುಪ್ಪಟ್ಟಿ** 'ಢಕಲಪಟ್ಟಿ' ನೋ.

**ದಕಾರ** (ನಾ). ದ ಎಂಬ ಅಕ್ಷರ: "ತಾವರೆ" ಎಂಬ ಪದದ ಆದಿಯ "ತ" ಕಾರಕ್ಕೆ ಪ್ರತಿಯಾಗಿ "ದ" ಕಾರವೂ ಬಂದಿದೆ (ಮಧ್ಯಮ. ೩೦). [ ಸಂ. ]

**ದಕಿದು** (ನಾ). ಮೃದಂಗವನ್ನು ಬಾರಿಸುವುದರಲ್ಲಿ ಒಂದು ವರಸೆ: ರಿಪುಷಣೆ ಸಹರಣೆ ತುಡುಕು ದಕಿದು ಪತ್ಮಿರಿ ಜತಿ ಜೋಕೆಯೆಂಬ ದೇಸಿಯ ಶಬ್ದಂಗಳೆಸೆಯೆ ಬಾಜಿಸುತ್ತಿರೆಯುಂ (ಶಾಂತೀಶ್ವ. ೦೬-೭೭ ವ). [ ? ]

**ದಕೋದರ** (ನಾ).=ಜಲೋದರ. [ ಸಂ. ]

**ದಕ್ಕಡ** 'ಢಕ್ಕಡ' ನೋ.

**ದಕ್ಕಡತನ** 'ಢಕ್ಕಡತನ' ನೋ.

**ದಕ್ಕಡತಿ** (ನಾ). ದಿಟ್ಟೆ; ಗಡುಸುಗಾತಿ; ಸಮರ್ಥೆ: ಕರ್ಕಶಿಯರತಿವಕ್ರ ಸೊಕ್ಕಿಯರನಾರತಂ ದಕ್ಕಡತಿಯರು ಕಾಮದಿಕ್ಕೆಯರ್ (ಷಠಿಲ. ೨-೭೦).

[ ದಕ್ಕಡ ( <ಢಕ್ಕಡ) + – ತಿ ( <-ಇತ್ತಿ) ]

**ದಕ್ಕಡಿಗ** 'ಢಕ್ಕಡಿಗ' ನೋ.

**ದಕ್ಕಡೆ** 'ಢಕ್ಕಡ' ನೋ.

**ದಕ್ಕಡೆಯ** 'ಢಕ್ಕಡೆಯಂ' ನೋ.

**ದಕ್ಕಡೆಯತನ** 'ಧಕ್ಕಡೆಯತನ' ನೋ.

**ದಕ್ಕಣ** (ನಾ). ದರ್ಶನೀಯವಾದುದು: ಚೈತ್ರರಥದುನ್ನತಿಯಂ ಸಮಕಟ್ಟಿ ಕೊಂಡು ಸಾಧಿಸುವತಿದಕ್ಕಣಂ ಸರಿಗೆವಾಳಮನಿಪ್ಪ ನೆಗರ್ತೆ ಕೂಡೆ ಮಾಡಿಸಿ ದನದೊಂದು ನಂದನಮಂ (ವರ್ಧಮಾ. ೬-೦೩). [ <ಪ್ರಾ. ದಖ್ಖಣ ]

**ದಕ್ಕಣಿಸು** (ಕ್ರಿ). ಜಬರಿಸು; ಗದರಿಸು: ಗುರುಭೀಷ್ಮರು ಮಕ್ಕಳಾಟಿಕೆ ಬೇಡ ನಡೆ . . . ಸಂತೈಸೆನುತ ದಕ್ಕಣಿಸಿ ವಿದುರ ಗೌತಮರು ಧೃತ ರಾಷ್ಟ್ರಗಂ ತಿಳುಪಲ್ಕೆ ನಡೆತಂದನು (ತುರಂಗ. ೨೫-೦೭).
[ ದಕ್ಕಣಂ ( <ಧಕ್ಕಡ) + – ಇಸು$_3$ ]

**ದಕ್ಕಲು, ಧಕ್ಕಲು** (ನಾ). ಮಾದಿಗರಲ್ಲಿ ಒಂದು ಒಳ ಪಂಗಡ : ಅವನು ಧಕ್ಕಲದವನು (ಎಸಿಪ್ಪು. XVII. ೬). **ಧಕ್ಕಲು** : ಈ ಊರಿಗೆ ಬಹಳ ಮಂದಿ ಧಕ್ಕಲುಗಳು ವಲಸೆ ಬಂದಿದ್ದಾರೆ (ರೂಢಿ). [ ? ]

**ದಕ್ಕಳ** 'ಧಕ್ಕಡ' ನೋ.

**ದಕ್ಕಾಯ್ಯಾಯ್ಯ** (ನಾ). ಒಬ್ಬಾತನ ಹೆಸರು: ದಕ್ಕಾಯ್ಯಾಯ್ಯಂ ಊರಂ ಆಳುತ್ತಂ ಇರೆ (ಎಕ. X, ಮುಳಬಾ. ೨೨೯-೩ ; ೯೦೯). [ ? + ಅಯ್ಯ$_1$ ]

**ದಕ್ಕಾಲಿ** (ನಾ). ಅಲುಗಾಡದ ಕಣ್ಣುಗುಡ್ಡೆ ; ನೋಡುವ ಸಾಮರ್ಥ್ಯ ವಿಲ್ಲದ ಕಣ್ಣುಗುಡ್ಡೆ : ಭರದಿಂ ಸುಜ್ಜನೆ ಸುಯ್ಯೆ ಸೂಗುಱಿಸೆ ಕಣ್ದಕ್ಕಾಲಿ ಗಳ್ ಬೀಟಿ (ಶೋಕಪ. ೯-೨೦೭); ಶಿವಲಿಂಗಮಂ ಮುಸುಕಿ ಬೆಳೆದುತ್ತ ಮಾಂಗವನು ಬಾವೆಂದು ದಿಟ್ಟಿಸಿ ನೋಡದವೆಯಿಕ್ಕದಿಹ ಕಣ್ಣ ದಕ್ಕಾಲಿ ಯೆಂದು . . . ಶಂಕೆಸಿ (ಸಿದ್ಧರಾ. ೨-೪) ; ಪೋಲಿಸೆ ತಮ್ಮ ಕಣ್ಣ[ಣ್ದ] ಕ್ಕಾಲಿಗಳಾಗಿರ್ದು ಬರ್ದವಲ್ಲದೆ ದಿಟಮಾಗಾಲಿಸಿ ಕಂಡೊಡೆ ನಾಣ್ಚದ ಮೇಲಿಯ ಗಱಿಯುವಳ ಜಡಿವ ಮುಡಿಯ ಬೆಡಂಗಂ (ಧರ್ಮನಾ. ೩-೯೪).
[ ದಕ್ಕು$_3$ + ಆಲಿ$_2$ ]

**ದಕ್ಕಾಲಿಬೀಳು** 'ದಕ್ಕಾಲಿವೀಟ್' ನೋ.

**ದಕ್ಕಾಲಿಬೀಟ್** 'ದಕ್ಕಾಲಿವೀಟ್' ನೋ.

**ದಕ್ಕಾಲಿವೀಟ್, ದಕ್ಕಾಲಿಬೀಳು, ದಕ್ಕಾಲಿಬೀಟ್** (ಕ್ರಿ). ಚಲಿಸದ ಕಣ್ಣುಗುಡ್ಡೆ ಉಂಟಾಗು: ಕಣ್ಮುಚ್ಚಿರೆ ದಕ್ಕಾಲಿವೀಟ್ ಬಾಬದು ತುರಗಂ (ಅಶ್ವಶಾ. ೭-೬೨). **ದಕ್ಕಾಲಿಬೀಳು** : ದಕ್ಕಾಲಿಬಿದ್ದ ಕಣ್ಣಿನಂತೆ ಜಂಗಮದ ಮೇಲೆ ಹರುಷವಿಲ್ಲದ ನೋಟ (ಬಸವ. ೫೭-೦೫೪). **ದಕ್ಕಾಲಿಬೀಟ್** : ಕಣ್ಗಳ್ ದಕ್ಕಾಲಿಬಿರ್ದು (ಬಂಹರಿ. ೧೪-೪೭ ವ).
[ ದಕ್ಕಾಲಿ + ಬೀಟ್$_1$ ]

**ದಕ್ಕಿಣ** (ನಾ). = ದಕ್ಷಿಣ : "ದಕ್ಕಿಣ – ದಕ್ಷಿಣ" (ಶಬ್ದಶೋ. ೧೮).
[ <ಸಂ. ದಕ್ಷಿಣ ]

**ದಕ್ಕಿಸು** (ಕ್ರಿ). ೧. ದಕ್ಕುವಂತೆ ಮಾಡು ; ತನ್ನ ಸ್ವಾಧೀನಕ್ಕೆ ಬರುವಂತೆ ಮಾಡಿಕೊಳ್ಳು ; ತನ್ನದಾಗಿಸಿಕೊಳ್ಳು : ಬಹುಧನವ ದಕ್ಕಿಸಿಯೆ ಹೂತಿ ಕೊಂಡಿಹರು (ತುರಂಗ. ೩೦-೨೭). ೨. ಜೀರ್ಣಿಸಿಕೊಳ್ಳು ; ಅರಗಿಸಿ ಕೊಳ್ಳು : ದಕ್ಕಿಸಲಾಱದೆಯಾ ಮುನಿಯಾ ಕೂಳ ಕಕ್ಕಲು . . . ಮನ ದೊಳು ಮಱುಗಿ (ನೇಮಿಶಂ. ೨೦-೩೪); ವಿಷಯ ವಿಷವನುಂಡು ದಕ್ಕಿಸಬಲ್ಲ ನಿರ್ವಿಷಸಿದ್ಧ ನೀನವನೀಶ (ಭರತ. ೨-೬೦).

ದಕ್ಕಿಸಿಕೊಳ್ಳು = ೧. ದೊರಕಿಸಿಕೊಳ್ಳು ; ಗಿಟ್ಟಿಸು : ಚಿಕ್ಕವನ ಹಿರಿಯನ್ನ ಮಾಡಿ ಪುಣ್ಯವ ದಕ್ಕಿಸಿಕೊಂಡೆ (ವಿದಾಕ್ಕ. ೧೫೫-೩); ಮೈಸೂರಿ ನವರು ಕೊಳ್ಳೆಯನ್ನು ದಕ್ಕಿಸಿಕೊಂಡು ಹಿಂತಿರುಗಿದರು (ಒಡಕ. ೩೦). ೨. ಜೀರ್ಣಿಸಿಕೊಳ್ಳು ; ಅರಗಿಸಿಕೊಳ್ಳು : ವಿಷವ ಪದಾರ್ಥವೆಂದು ಕೊಡಲು ಉಂಡು ದಕ್ಕಿಸಿಕೊಂಡರು (ಭುವನ. ೨೫) ; ಏಳಿ ಎಚ್ಚರಿ. ಬೆಂಕಿ ಹಚ್ಚರಿ ತಿಂದು ದಕ್ಕಿಸಿಕೊಳ್ಳಲಿ (ನೆಲಮು ೪೭-೦೨). [ ದಕ್ಕು$_1$ + – ಇಸು$_3$ ]

**ದಕ್ಕು$_1$** (ಕ್ರಿ). ೧. ದೊರಕು ; ಸಿಕ್ಕು ; ಪ್ರಾಪ್ತವಾಗು ; ಲಭಿಸು ; ಗಿಟ್ಟು : ವ್ಯಾಸರಂತಿಗಂ ದಕ್ಕದೆ . . . ಜಗದೊಳಗೆ (ಶಾಸಂಕ. ೯-೦೨೨); ಮನ ವಿಕ್ಕದನಮರಾವತಿಯು ಸೊಕ್ಕಿದ ಸೂಳೆಯರಿಗೆ ತನ್ನನವರಿಗೆ ದಕ್ಕಲೀಯವು ನಿಮ್ಮಾಣೆ (ಕುಂರಾಜಾಂ. ೩೭-೦೨೨) ; ದಕ್ಕಿದುದು ಕಿಟಿಯೆನುತೆ . . . ಪಿಡಿದನು (ಜಿಲಪು. ೫೩-೭೯) ; ಸುತ್ತೇಳು ಬೀದಿಯ ಸುತ್ತುವ ಹೆಣ್ಣಿಗೆ ದಕ್ಕೀತು ಪೋಕಿಯ ಗಂಡು (ಜಂಜಾಪ. ೧೯೪-೭೭) ; ಅರ್ಜುನನು ಪ್ರಾಣ ಸಹಿತನಾಗಿರಲು, ಪಾಂಡವರ ರಾಜ್ಯಧನಗಳು ತನಗೆ ದಕ್ಕುವದೆ ? (ಕೃಷ್ಣಾಉ. ೩೩). ೨. ತನ್ನಲ್ಲೇ ಉಳಿ ; ಸ್ವಾಧೀನಕ್ಕೆ ಬರು ; ಹಿಡಿತಕ್ಕೆ ಸಿಕ್ಕು ; ಸಾಧ್ಯವಾಗು : ಮಂದಭಾಗ್ಯಂಗಣುಗ ದಕ್ಕುವನಲ್ಲ ಎನಗೆಂದ (ಕುಪ್ಪಾಶ್ರೂ. ೮-೨೦) ; ನವಲಕ್ಕ ತೆಲುಗರ ಗಂಡನೆಂದೆಂಬೀ ಬವರದ ಬಲು ಬಿರುದಿನ್ನು ರವಿಶಶಿಯುಳ್ಳನ್ನವರ ದಕ್ಕಿತೆಮಗೆಂದು ತವೆ ನಲಿದನು ನರನಾಥ (ಕುಂರಾಜಾಂ. ೮-೯೩) ; ಸೋಮೆಯನದಾವ ತೆಜದಿಂ ಮದುವೆ ನಿಲ್ವೆನೆಂಬಾ ಮಾತು ದಕ್ಕಿತಲ್ಲಾ ಮೆಚ್ಚಬೇಡವೆ ನೀಮೆನ್ನ ಚದುರತನಕೆ (ಸಮ್ಯಕ್ತ್ವ. ೬-೨೯) ; ಚಿಮ್ಮಂಟುತುಗುರಿಂದಿರಿದಿಂ ಬಲ್ಮೊಡಲಿಯನಾಂತೊಡಂ ದಕ್ಕುಗುಮೇ (ಚಂದ್ರಪ್ಪು. ೭-೨೭) ; ಭೂದೇವಿಗೂ ದಕ್ಕೋ ಮನುಸ್ಕಾ ನೀ ಅಲ್ಲೋ, ಮಾಗನ, ನನಗೆ ಗೊತ್ತದ (ಕಮ್ಮಟ. ೧೮) ; ಅವನೆಂದೂ ಅವರಿಗೆ ದಕ್ಕುವುದಿಲ್ಲ (ಪುನರು. ೨೦೯) ; ಹೆತ್ತ ಮಕ್ಕಳು ಕೈಗೆ ದಕ್ಕದ ದುಃಖದಿಂದ ಇನ್ನರ್ಧ ಬಸವಳಿದು ಹೋಗಿದ್ದಳು (ನಡದಾ. II, ೯೫೫) ; ಶತ್ರುನಾಶವಾಗಿ ರಾಜ್ಯ ತನಗೇ ದಕ್ಕುವುದು ಎಂದು ದುರ್ಯೋಧನನು ಯೋಚಿಸಿದನು (ನೀತಿಚಿಂ. I, ೪). ೩. ಅರಗು ; ಜೀರ್ಣವಾಗು ; ಪಚನ ವಾಗು ; ಮೈಗೂಡು : ಎಲ್ಲ ಜಗವ ನುಂಗಿ ದಕ್ಕಿಸಿಕೊಂಡವಗೆ ಸಲ್ಲದು ರೋಗರುಜನವು (ಲಕ್ಷ್ಮೀಶೋ. ೩೪) ; ಉಂಡ ಅನ್ನ ದಕ್ಕದ ಲಕ್ಷಣವೆ ವಾತ ಪ್ರಕೋಪ (ಸಕಲ್ಪ. ೦೩೦) ; ಇನ್ನೊಂದು ಬಟ್ಟಲು ಬಂದಿತು; ಅದನ್ನೂ ಕುಡಿದು ಮುಗಿಸಿದಳು; ಅದೂ ದಕ್ಕಲಿಲ್ಲ (ಕಿರಗೂ. II, ೨೮). ೪. (ತಪ್ಪು ಮಾಡಿದರೂ) ಸರಿಯಾಗು; ವಿರುದ್ಧ ಪರಿಣಾಮವಾಗದಿರು: ದಕ್ಕೀತು ಎಂದು ತಕ್ಕದ್ದಲ್ಲದ್ದು ಮಾಡಬಾರದು (ಗಾದೆ). ೫. ಕುಸಿ (?): ಧನುವಂ ಕೊಂಡೊತ್ತಿ ತನ್ಮೌರ್ವಿಯನಟನಿಗೆ ಹಸ್ತಾಗ್ರದಿಂದೆತ್ತಿ ಕಂದರ್ಪನ್ನಪಾಲಂ ಕಾಯ್ಪಿನಿಂದೇಱುವ ಸರಭಸಕ್ಕುರ್ವಿ ತರ್ಗಿತ್ತು ನಾಗೇಂದ್ರನ ಭೋಗಂ ಬಳ್ಕಿ ಸುಯ್ಯಿಕ್ಕಿದುದು . . . ಪರಿಹತಕ್ಕುದ್ಧಘಾತಕ್ಕೆ ಬೆನ್ನೊಡ್ಡಿನ ಪೊಂಗಳ್ ದಕ್ಕಿ ಕೂರ್ಮಂ ಕುಸುರಿನೊಳರೆಮಬ್ಬಿರ್ದುದಬ್ಜೋದ್ಭ ವಾಂಡಂ (ಕುಸುಮಾ. ೧೦-೪೫). P ಈ ಪದ್ಯಕ್ಕೆ ಪಾಠಾಂತರವೊಂದಿದೆ. (ಶಾಂತೀಶ್ವ. ೩-೯೫ ನೋ).

ದಕ್ಕಹಿಡಿ = ದಕ್ಕುವಂತೆ ಹಿಡಿ ; ಗ್ರಹಣಮಾಡು ; ಸೆರೆಹಿಡಿ : ದಕ್ಕ ಹಿಡಿವರು ಪಶುಗಳ ಮನೆಯ ಕನ್ನವಿಕ್ಕುವರಿರದೆ ಪುರಗಳ ಹೊಕ್ಕಿಱುವರು (ಕುಂರಾಜಾಂ. ೧೦-೫). ದಕ್ಕಿ ಹೋಗು = ವಶವಾಗು; ಸೇರು: ಆದರಾ ಅಗ್ರ ಹಾರವು ಮೈಸೂರಿನಲ್ಲಿ ಕಟ್ಟಲ್ಪಟ್ಟು ಇನ್ನಾರಿಗೋ ದಕ್ಕಿ ಹೋಯಿತು (ಹುಟ್ಟಿಹ. ೪) ; ಅವರಿಗೆ ದೊರೆತ ಹಣವೆಲ್ಲ ದಕ್ಕಿ ಹೋಯಿತು (ರೂಢಿ). ದಕ್ಕು ಹಾಕಿಕೊಳ್ಳು = ಸ್ವಾಧೀನ ಮಾಡಿಕೊಳ್ಳು ; ವಶಪಡಿಸಿಕೊಳ್ಳು ; ತನ್ನದನ್ನಾಗಿ : ಆಭರಣಗಳಲ್ಲಿ ಬಹುಭಾಗ ಅಡವು ಇಟ್ಟುಕೊಂಡು ದಕ್ಕು ಹಾಕಿಕೊಂಡ ಅಂಶ ಮಗನಿಗೆ ತಿಳಿದಿತ್ತು (ವಂಶವೃ. ೧೯೫) : ಗುರು ರಾಜರಾಯರ ಹಣಕ್ಕೆ ಮೋಸವಾಗಿದೆ. ಕೆಲವರೆಲ್ಲಾ ದಕ್ಕುಹಾಕಿ ಕೊಂಡಿದಾರೆ (ಮುಕೀ. ೧೮೨).
[ ದೇ.೫ ತಮಿ. ಮಲ. ತಕ್ಕು; ತುಳು. ದಕ್ಕು; ತೆಲು. ದಕ್ಕು, ಡಕ್ಕು, ತಕ್ಕು ; ಕೊಲಾ. ನಾಯ್ಕಿ. ತಕ್ ; ಗೊಂಡಿ. ತಗ್ಗಾನಾ ]

**ದಕ್ಕು$_2$** 'ದರ್ಕು$_1$' ನೋ.

**ದಕ್ಕು$_3$** (ನಾ). ಸ್ವಾಧೀನ ; ವಶ : ಅವರವರಿಗೆ ದಕ್ಕಾಗಬೇಕೆಂದು ಪಂಚರ ನಿರ್ಣಯ (ಗ್ರಾಮಾಯ. ೯) : ಆಸ್ತಿಯೆಲ್ಲ ಯಾರಿಗೋ ದಕ್ಕಾಗಿ ಹೋಗ ಬಹುದಿತ್ತು (ಗ್ರಾಮಾಯ. ೩೫೩). [ <ದಕ್ಕು$_1$ ]

**ದಕ್ಕು₄** 'ದರ್ಕು₂' ನೋ.

**ದಕ್ಕುಂತಲೆ** (ನಾ). ದಕ್ಕುವ ತಲೆ; ಉಳಿಯುವ ತಲೆ: ಮೇಣಿಂ ವೈಗರ ವಕ್ಕಿನ ತಲೆ ದಕ್ಕುಂತಲೆಯೋ ? ಇರ್ಕೆ (ರಾಮಾಶ್ವ. ೯೨-೩೦) [ ದಕ್ಕು₁ (< ದರ್ಕುಂದರಲೆ₁) + ತಲೆ₁ ]

**ದಕ್ಕುಂದಲೆ₁** 'ದರ್ಕುಂದಲೆ'₁ ನೋ.

**ದಕ್ಕುಂದಲೆ₂** 'ದರ್ಕುಂದಲೆ'₂ ನೋ.

**ದಕ್ಕುಂದಲೆವರಿ** (ಕ್ರಿ). ಸೊಕ್ಕಿನಿಂದ ಮುನ್ನುಗ್ಗು; ಗರ್ವದಿಂದ ಹಾಯು: ಉರ್ಕಿಂ ಸೊಕ್ಕಿ ದಕ್ಕುಂದಲೆವರಿದುರಿದಪ್ಪರ್ಕರಂ ನಂದಿದಪ್ಪರ್ (ಅನಂಪು. ೦೪-೧೬). [ ದಕ್ಕುಂದಲೆ₁ (<ದರ್ಕುಂದಲೆ₁) + ಪರಿ₁ ]

**ದಕ್ಕುಂದಲೆವಾಯ್** 'ದರ್ಕುಂದಲೆವಾಯ್' ನೋ.

**ದಕ್ಕುಕೊಡು** (ಕ್ರಿ). ಅಧೀನಕ್ಕೆ ಕೊಡು; ಸ್ವಾಧೀನಮಾಡು: ಈ ಮೊಹರುಗಳನ್ನು ದಕ್ಕುಕೊಟ್ಟಿಲ್ಲ. ಕೈಗಡದಂತೆ ನೀವು ತಿಳುಕೊಳ್ಳಬೇಕು (ಮುಂಬಯಿ. ೩-೯೦). [ ದಕ್ಕು₃ + ಕೊಡು₁ ]

**ದಕ್ಕುಗೊಳ್** (ಕ್ರಿ). ವಶಪಡಿಸಿಕೊಳ್ಳು; ತನ್ನದನ್ನಾಗಿ ಮಾಡಿಕೊಳ್ಳು: ತನ್ನ ಪೆಣ್ಗಳಂ ಮರುಳ್ಗೊಳಿಸಿ ದಕ್ಕುಗೊಂಡ ಶ್ರೀಕೃಷ್ಣನಂ ದೂಱುವ ವೃದ್ಧಗೋಪಿಯರ ವಚನವ್ಯಾಜದಿಂ ವಿವರಿಸುವರ್ (ಗೀತಗೋ. ೩೩-೦ ವ): ಇರ್ಕೇಱುಯನೊಕ್ಕಲಿಕ್ಕಿ ದಕ್ಕುಗೊಳಲೊಡವಾ ತುರುಕ ಪಡೆವಳಂ . . . ಮುಂತಣ್ಗೆ ಸವೆದು (ಚಿಕದೇ. ೩೭-೯). [ ದಕ್ಕು₃ + ಕೊಳ್₁ ]

**ದಕ್ಕುಗೊಳಿಸು** (ಕ್ರಿ). ವಶಪಡಿಸಿಕೊಳ್ಳು; ಸ್ವಾಧೀನಮಾಡಿಕೊಳ್ಳು: ಏನು ನೇಮದೊಳಿರ್ದುದೊ ಪೊಂಗೊಳಲೇನೋಂತುದೊ ಕೆಳದಿ ತಾನೊಲಿ ದಿನಿಯನ ದಕ್ಕುಗೊಳಿಸುತಿದೆ (ಗೀತಗೋ. ೦೯-೩೭ ಪಲ್ಲವಿ). [ ದಕ್ಕುಗೊಳ್ + - ಇಸು₃ ]

**ದಕ್ಕುಪಾರಿ** (ನಾ). ದಕ್ಕಿದ ಸೂಳೆ; ವಶಳಾದ ಜಾರೆ: ಚಿಕ್ಕವ್ರಾಯದಿ ನಿನ್ನ ರೂಪಿಗೆ ಸಿಕ್ಕಿ ದಕ್ಕಿದ ನಾರಿಯಾ ತಕ್ಕಯೊಳಗಿಂದಗಲಿ ಹೋಹರ ದಕ್ಕುಪಾರಿಯ ನೀರೆಯಾ ಅಕ್ಕರಿಂದಲಿ ಕರೆದು ಮನ್ನಿಸೊ (ಋಡಿಕ್ಕಾ. ೪, ೦೨೩೩ ಗಂಗಾಧರನ ಅಷ್ಟಕ). [ ದಕ್ಕು₃ + ಪಾರಿ₂ (<ಪಾಱು₁) ]

**ದಕ್ಕುಬೀಳು** (ಕ್ರಿ). ವಶವಾಗು; ಅಧೀನವಾಗು: ಈಗ ಬಗೆಗಡಿನ ವೇಗಕ್ಕೆ ಸಂಚಳಿಸಿ ಸನ್ಯಾಸದ ಕಾಲಾಟಕ್ಕೆ ಸಿಲ್ಕಿ ದಿಕ್ಕುಗೇಡಿಗೆ ದಕ್ಕುಬಿದ್ದು . . . ನಾವು ಮುಳುಗಿಹೋಗಿ ಉಸಿರಳಿಯಬಾರದು (ಮಂತ್ರಕ. ೭೨-೨೦). [ ದಕ್ಕು₃ + ಬೀಳು₁ (<ಬೀೞ್₁) ]

**ದಕ್ಕೆ₁** 'ಡಕ್ಕೆ' ನೋ.

**ದಕ್ಕೆ₂** 'ಧಕ್ಕೆ₂' ನೋ.

**ದಕ್ಕೆಬಲಿ** 'ಡಕ್ಕೆಬಲಿ' ನೋ.

**ದಕ್ಷ** (ನಾ). ೧. ಚತುರನಾದವನು; ಜಾಣ; ಸಮರ್ಥ: "ಚತುರಃ . . . ದಕ್ಷಃ, ಕುಶಲಃ . . . ಪ್ರವೀಣಃ—ಈ ೧೧ ಬಲ್ಲವಂ" (ಹಲಾಯು. ೩೩-೦೬೦); "ಚತುರಂ ಪ್ರವೀಣಂ ಕುಶಲನಭಿಜ್ಞಂ ಸುಶಿಕ್ಷಿತನೆನಲ್ ದಕ್ಷನೆನೆ . . . ಬಲ್ಲವಗೆ ನಾಮಂ" (ಮಂಗರಾ. ೭೭-೩); ಶ್ರೀರಮಣೀ ರಮಣಂಗರಿನಾರೀವೈಧವ್ಯದಿವ್ಯದೀಕ್ಷಾದಕ್ಷಂಗಾರೆಣೆ (ಪಂಪಭಾ. ೭-೦); ಉನ್ನತನ ರೂಪಾಧಿಕನ ಸಂಪೂರ್ಣ ದಕ್ಷನನನ್ಯರೆನ್ನವರೆನ್ನದನ ಪರರಿಂಗಿ ತಾಕಾರಪ್ರಭೇದಕನ . . . ಪರಿಹಾರಕನ ಮಾಡುವುದು (ಶಂಪ್ರಾ.ಉ. ೩-೯೪); ದೇವರಾಜನು ಸ್ವತಃ ಶೂರನೂ ರಾಜ್ಯಕಾರ್ಯಭಾರದಲ್ಲಿ ದಕ್ಷನೂ ಚತುರನೂ ಇದ್ದನು (ಮುಂಬಯಿ. ೪-೮). ೨. ಬ್ರಹ್ಮನ ಮಗನಾದ ದಕ್ಷ: ದಕ್ಷ ಯಾಗವ ಮಾಡಿ (ಬಸವ. ೩೮೩); ಗಿಲಿಕೆ ಘಲಿಲೆಂದುಲಿಯೆ ದಕ್ಷನ ತಲೆಯ ಕೋಡಿನ ತೆಬಿದಿ ತಗರಿನ ಬಲಿದ ಕೊಂಬಂ ತನ್ನೆಡದ ಕೈಯಲಿ ಪಿಡಿದುಕೊಂಡು (ಬಸಪು. ೨೯-೪); ನೀರೇಜಾಸನಸೂನು ದಕ್ಷನುಱಿ ಸದ್ವಾಕ್ಷಾಯಣೀದೇವಿಯಂ . . . ಪಡೆದಂ (ಹಮ್ಮಿ.ರ. ೨-೬): ಮಾರಮಾರಣದಕ್ಷ ದಕ್ಷಮದಾಪಹಾಂಕ ವಿರಾಜತೇ ಧೀರ ಧೀರಶಿವಾಲ ಪಾಲನಶೀಲೆ ಪಾಲಿಪುದಂಬಿಕೇ (ರಾಜಶೇ. ೩-೦೦೪). ೩. ಮುನಿ; ತಪಸ್ವಿ. ೪. ಹನ್ನೆರಡು ಮಂದಿ ಪ್ರಾಚೀನ ಋಷಿಗಳಲ್ಲಿ ಒಬ್ಬ: ಪುಲಸ್ತ್ಯ ಪುಲಹ . . . ದಕ್ಷ ಕ್ರತು ಜಮದಗ್ನಿ ಕೌಶಿಕರೆಂಬೀ ದ್ವಾದಶಋಷಿಗಳೇ ಕ್ರಮದಿಂದವರವರಂ ಕೀರ್ತಿಸುವರು (ವಿವೇಕ. ೨೬೭). ೫. ಗಂಡುಕೋಳಿ; ಹುಂಜ: "ಮುನಿಯೊಳು ಕೋಟಿಯೊಳು ದಕ್ಷಮೆಂಬುದು" (ಮಂಗರಾ. ೦೯೨-೦೮). ೬. ಸಾಮರ್ಥ್ಯ; ಶಕ್ತಿ; ಅಣ್ಮು. ೭. ವೇಗ; ಶೀಘ್ರತೆ: "ದಕ್ಷ-ವೃದ್ಧೌ, ಶೀಘ್ರೇಚ, ಪೆರ್ಚುಗೆಯೊಳಂ ವೇಗದೊಳಂ" (ಶಾಶಕ್ಕ. ೦೦೭). ೮. ಕೊಲೆ; ಹತ್ಯೆ. ೯. ಬಲಗಡೆ: "ದಕ್ಷಂ = ಬಲಗಡೆ" (ಶಾಶಕ್ಕ. ೦೦೭). [ ಸಂ. ]

**ದಕ್ಷಕನ್ಯೆ** (ನಾ). ದಕ್ಷನ ಮಗಳು; ದಾಕ್ಷಾಯಣಿ; ಪಾರ್ವತಿ. [ ದಕ್ಷ + ಕನ್ಯೆ ]

**ದಕ್ಷತೆ** (ನಾ). ೧. ಚಾತುರ್ಯ; ಜಾಣತನ. ೨. ಸಾಮರ್ಥ್ಯ; ಶಕ್ತಿ; ಸತ್ವ; ಬಲ: ಪ್ರವಚನ ಪಂಪಠನಕ್ಷಮತೆ ವಾಣಿಯಂ ತೀರ್ಥಯಾನ ದಕ್ಷತೆ ಪದಮಂ ಕಿವಿಯಂ ಜಿನವರ ಚರಿತ ಶ್ರವಣಪಟುತೆ ಪಿಂಗದನ್ನ ಮಾರ್ಜಿಪೆನಜಿನಂ (ಚಂದ್ರಪು. ೪-೧೭). ೩. ಕಾರ್ಯಪಟುತ್ವ: ಪೂರ್ವಸಿದ್ಧತೆ ಉಪಾಧ್ಯಾಯರ ಶಕ್ತಿ, ದಕ್ಷತೆ, ಕೌಶಲ್ಯ ಇವನ್ನೆಲ್ಲ ಹೆಚ್ಚಿಸುತ್ತದೆ (ಶಿಕ್ಷಣ. ೨೬೩); ಹೀಗೆ ತೆಗೆದುಕೊಂಡ ಉಷ್ಣದಲ್ಲಿ ಎಷ್ಟು ಹೆಚ್ಚು ಭಾಗವನ್ನು ಅದು ಕೆಲಸವಾಗಿ ಮಾರ್ಪಡಿಸಿದರೆ ಅಷ್ಟು ದಕ್ಷತೆಯು (Efficiency) ಹೆಚ್ಚೆಂದು ನಾವು ಹೇಳಬಹುದು (ಭೌತವಿ. ೨೬೨). [ ಸಂ. ದಕ್ಷತಾ ]

**ದಕ್ಷಬಗುರಿ** (ನಾ). ವೇಗವಾಗಿ ಸುತ್ತುವ ಬುಗುರಿ (?): ವಕ್ಷರುಹಗಳೊ ಚಕ್ರವಾಕದ ಪಕ್ಷಿಗಳೊ ಪೊಸ ಪೊನ್ನ ಕಲಶಗಳಕ್ಷುಚಾಪನ ಕರದ ಚಂಡುಗಳ ಸಮನಾಡುತಿಹ ದಕ್ಷಬಗುರಿಗಳೆಂದವೋ ಮೂಲಕ್ಷಣೆಯು ಲತಿಕಾಂಗಫಲ ಲೋಕೇಕ್ಷನಂಗನೆ ಕುಚ್ಚಳಗಳರಿಯಂದಳೆಂದುಮುಖಿ (ಜಿನಮಾ. ೧೭-೪೮). 'ತಗಬುಗುರಿ ಪಠಾ. [ ದಕ್ಷ + ಬಗುರಿ₂ (<ಬೊಂಗರಿ) ]

**ದಕ್ಷಬ್ರಹ್ಮ** (ನಾ). = ದಕ್ಷ ೨: ದಕ್ಷಃ — ಸರಸ್ವತೀ ಬ್ರಹ್ಮನ ಮಗನಾದ ಸತೀದೇವಿಯ ತಂದೆಯಾದ ಶಿವನ ಮಾವನಾದ ದಕ್ಷಬ್ರಹ್ಮಂ (ಶಾಶಕ್ಕ. ೦೦೭). [ ಸಂ. ]

**ದಕ್ಷಮುಖ** (ನಾ). ದಕ್ಷಯಜ್ಞ: ನಾಡೆ ದಕ್ಷಮುಖಶ್ರೀ ಕೆಟ್ಟುದು (ವೀರವಿ. ೦೨-೭೦). [ ದಕ್ಷ + ಮುಖ ]

**ದಕ್ಷಮುಖಕ್ಷಯ** (ನಾ). ದಕ್ಷನ ಯಜ್ಞವನ್ನು ಹಾಳುಗೆಡಿಸಿದವನು; ಶಿವ: ಅಕ್ಷಯಂ ನಿಟಿಲಾಕ್ಷನಭವಂ ದಕ್ಷಮುಖಕ್ಷಯಕ್ಷಮನುಕ್ಷಗಂ ಪ್ರತ್ಯಕ್ಷವಾಗಿ ಸಮಕ್ಷದಲಿ ನಿಂದು (ಬಸಪು. ೨೭-೩೨). [ ದಕ್ಷಮುಖ + ಕ್ಷಯ ]

**ದಕ್ಷಯಾಗ** (ನಾ). = ದಕ್ಷಮುಖ: ದಕ್ಷಯಾಗವ ನಡೆಸಲೆಂದು ಅಜಮುಖ್ಯರಾದ ಸುರರೆಲ್ಲಾ ನೆರೆದು (ಲಕಪ. ೩೭೫). [ ದಕ್ಷ + ಯಾಗ ]

**ದಕ್ಷಸಾವರ್ಣಿಕ** (ನಾ). ಹದಿನಾಲ್ಕು ಮನುಗಳಲ್ಲಿ ಒಂಭತ್ತನೆಯವನು: ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸೂರ್ಯಸಾವರ್ಣಿಕ, ದಕ್ಷಸಾವರ್ಣಿಕ, ಬ್ರಹ್ಮಸಾವರ್ಣಿಕ, ಧರ್ಮಸಾವರ್ಣಿಕ, ರುದ್ರಸಾವರ್ಣಿಕ, ರೌಚ್ಯ, ಇಂದ್ರಸಾವರ್ಣಿಕರೆಂಬ ಹದಿನಾಲ್ಕು ಮನುಗಳೊಳಗೆ (ವಿವೇಕ. ೨೦೪). [ ಸಂ. ]

**ದಕ್ಷಸ್ಮೃತಿ** (ನಾ). ಹತ್ತೊಂಭತ್ತು ಧರ್ಮಶಾಸ್ತ್ರಗಳಲ್ಲಿ ಹದಿನಾರನೆಯದು: ಮನುಸ್ಮೃತಿ, ಅತ್ರಿಸ್ಮೃತಿ, ಹರಿತಸ್ಮೃತಿ, ವಿಷ್ಣುಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ, ಉಶನಸ್ಮೃತಿ, ಅಂಗೀರಸಸ್ಮೃತಿ, ಯಮಸ್ಮೃತಿ, ಆಪಸ್ತಂಬಸ್ಮೃತಿ, ಸಂವರ್ತಸ್ಮೃತಿ, ಕಾತ್ಯಾಯನಸ್ಮೃತಿ, ಬೃಹಸ್ಪತಿಸ್ಮೃತಿ, ಪರಾಶರಸ್ಮೃತಿ, ವ್ಯಾಸಸ್ಮೃತಿ, ಶಂಖಲಿಖಿತಸ್ಮೃತಿ, ದಕ್ಷಸ್ಮೃತಿ, ಗೌತಮ

ಸ್ಮೃತಿ, ಶಾತಾತಪಸ್ಮೃತಿ, ವಶಿಷ್ಠಸ್ಮೃತಿಗಳೆಂಬವೆ ಆಯಾಯ ನಾಮಧೇಯವುಳ್ಳವಱಿಂದುಕ್ತವಾದ ಹತ್ತೊಂಭತ್ತು ಧರ್ಮಶಾಸ್ತ್ರಗಳು (ವಿವೇಕ. ೪). ಈ ಧರ್ಮಶಾಸ್ತ್ರಗಳ ಸಂಖ್ಯೆಯನ್ನು ಹದಿನೆಂಟು ಎಂದು ಹೇಳಿದವರೂ ಉಂಟು. [ ಸಂ. ]

**ದಕ್ಷಾಧ್ವರ** (ನಾ). ದಕ್ಷನ ಯಜ್ಞ ; ದಕ್ಷಬ್ರಹ್ಮನ ಯಜ್ಞ. 'ದಕ್ಷಾಧ್ವರಧ್ವಂಸಿ' ಪರಾ. [ ದಕ್ಷ + ಅಧ್ವರ ]

**ದಕ್ಷಾಧ್ವರಧ್ವಂಸಕ** (ನಾ). ದಕ್ಷಬ್ರಹ್ಮನ ಯಜ್ಞವನ್ನು ನಾಶಪಡಿಸಿದವನು ; ಶಿವ : "ಈಶಾನಃ : . . . ಅಂಧಕರಿಪುಃ, ದಕ್ಷಾಧ್ವರಧ್ವಂಸಕಃ . . . ನೀಲಲೋಹಿತಃ– ಈ ಳಿ ಮಹಾದೇವರ ಪೆಸರ್" (ಹಲಾಯು. ೩–೧೧). [ ದಕ್ಷಾಧ್ವರ + ಧ್ವಂಸಕ ]

**ದಕ್ಷಾಧ್ವರಧ್ವಂಸಿ** (ನಾ). = ದಕ್ಷಾಧ್ವರಧ್ವಂಸಕ : ತೊಡವಂ ಶಕ್ರನ ನಾಮವುಮಂ . . . ಪರಾಭವಿಸುವೆಂ ದಕ್ಷಾಧ್ವರಧ್ವಂಸಿಯಂ (ಜಗವಿ. ೩–೨೦); ದೇವ ಶೈವಾಚಾರ್ಯನ ಸೋಮಾಸಿಮಾರನ ಮಹಾಯಾತ್ರೆಕ್ಕೆ ದಕ್ಷಾಧ್ವರಧ್ವಂಸಿ ಬಿಜಯಂಗೆಯ್ವುದೆಂದು ಬಿನ್ನಪಂ ಮಾಡೆ (ಸಂಬಿರ. ೧೬–೧೩೧) ; ದೇವ ನಿಮ್ಮಡಿ ಸಹಿತ ಕಂಡೆನು ದೇವದೇವನ ಚರಣವನು ಸಂಭಾವಿಸಿದ ನಿಮ್ಮಿಬ್ಬರನು ದಕ್ಷಾಧ್ವರಧ್ವಂಸಿ (ಶುವ್ಯಾಡ್ಯಪ್ರ. ೯–೮) ; ಪೂರ್ವದಲ್ಲಿ ದಕ್ಷಾಧ್ವರಧ್ವಂಸಿಯಾದ ಪರಮೇಶ್ವರನ ಹಣೆಗಣ್ಣಿನಲ್ಲಿ ಹುಟ್ಟಿದ ಕೋಪವೇ ಜ್ವರರೂಪವಾಗಿ ವರ್ತಿಸಿರ್ಪುದು (ಸಕವೈ. ೭೦).
[ ಸಂ. ದಕ್ಷಾಧ್ವರಧ್ವಂಸಿನ್ ]

**ದಕ್ಷಾಧ್ವರಹರ** (ನಾ). = ದಕ್ಷಾಧ್ವರಧ್ವಂಸಕಃ ಗಿರಿಶ ಶ್ರೀಕಂಠ ದಕ್ಷಾಧ್ವರಹರ ವೃಷಭಾರೂಢ . . . ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೯೮). [ಸಂ. ]

**ದಕ್ಷಾರಿ** (ನಾ). ದಕ್ಷನ ಶತ್ರು ; ವೀರಭದ್ರ : "ವೀರಂ ಭಯಂಕರಂ ದಕ್ಷಾರಿ ಶರಭನೆನೆ ವೀರಭದ್ರನೆನಿಕ್ಕು" (ಮಂಗರಾ. ೫–೧೫).
[ ದಕ್ಷ + ಅರಿ ]

**ದಕ್ಷಿಣ** (ಗು). ೧. ಬಲಗಡೆಯ ; ಬಲಭಾಗದ : ದಕ್ಷಿಣ ವಾಣಿಪಲ್ಲವಾಭಿನಯನಿವೇದಿತಾವಿನೇಯ ವಿಳಸಿತ ಚಕ್ರಾಯುಧಂ ನಿಂದಿರ್ದು (ಶಾಂತಿಪು. ೧೦–೧೬೮ ವ). ೨. ನೇರವಾದ ; ಋಜುವಾದ ; ಸರಿಯಾದ. ೩. ಚಾತುರ್ಯವುಳ್ಳ ; ಜಾಣ್ಮೆಯುಳ್ಳ. (ನಾ). ೪. ಬಲಭಾಗ ; ಬಲಗಡೆ ; ಬಲಪಕ್ಕ : "ಅಪಸವ್ಯಂ, ದಕ್ಷಿಣಂ – ಈ ೨ ಬಲಂ" (ಹಲಾಯು. ೧೨೪–೬೧) ; ನವಗ್ರಹಗಳಲ್ಲಿ ದೃಷ್ಟಿಯು ವಾಮ ದಕ್ಷಿಣ ಸಮ್ಮುಖಗಳೆಂಬ ಭೇದದಿಂದ ಮೂರು ಬಗೆಯೆಂದು ತಿಳಿಯತಕ್ಕದು (ಅರ್ಕಮೂ. ೩೯). 'ದಕ್ಷಿಣಬಾಹು' ಪರಾ. ೫. ತೆಂಕಣದಿಕ್ಕು; ತೆಂಕಲು: ವೃಷಭ ಕನ್ಯೆ ಮಕರ ಯಿಾ ೩ ರಾಶಿಯು ದಕ್ಷಿಣದಿಕ್ಕು (ಭಾಸ್ಕರ. ೭೮–೫). ೬. ಭಾರತದ ದಕ್ಷಿಣಕ್ಕಿರುವ ದೇಶ; ದಕ್ಷಿಣದೇಶ. 'ದಕ್ಷಿಣಮಾರ್ಗ' ಪರಾ. ೭. ನೇರವಾದವನು ; ಸರಿಯಾದವನು : "ಸರಳಃ, ದಕ್ಷಿಣಃ– ಈ ೨ ಸಮ್ಯಂ" (ಹಲಾಯು. ೭೩–೨೩೦). ೮. ಶೈವ ಪ್ರಭೇದಗಳಲ್ಲಿ ಒಂದು : ಮತ್ತಮಾ ಶೈವವೇ ವಾಮ ದಕ್ಷಿಣ ಮಿಶ್ರ ಸಿದ್ಧಾಂತವೆಂದು ನಾಲ್ಕುತೆಱನಾಗಿರ್ಪುದು (ವಿವೇಕ. ೭೩). ೯. [ಜ್ಯೋತಿ] ಲಗ್ನದಿಂದ ನಾಲ್ಕನೆಯ ಸ್ಥಾನ : "ದಕ್ಷಿಣ– ಚತುರ್ಥ" (ಜಾತಕತಿ. ೨–೯ ಟೀಕು). ೧೦. ದಕ್ಷಿಣದಿಕ್ಕಿನಲ್ಲಿಟ್ಟ ಯಾಗದ ಬೆಂಕಿ. 'ದಕ್ಷಿಣಾಗ್ನಿ' ಪರಾ. ೧೧. [ಜೈನ] ಜೈನ ಬ್ರಾಹ್ಮಣರ ಮನೆಗಳಲ್ಲಿ ಅರ್ಹಂತನ ಪೂಜೆಗಾಗಿ ಸ್ಥಾಪಿಸುವ ಮೂರು ಬಗೆಯ ಅಗ್ನಿಗಳಲ್ಲಿ ಒಂದು : ಆ ಕ್ಷಣದೊಳೆ ಅಗ್ನಿಕುಮಾರನ ಕಿರೀಟದೊಳುತ್ಪನ್ನವಾದ ಗಾರ್ಹಪತ್ಯ ಆಹವನೀಯ್ಯ ದಕ್ಷಿಣವೆಂಬ ಅಗ್ನಿತ್ರಯಮೂ ಕ್ರಮವಾಗಿ ಚತುರಶ್ರ ತ್ರಿಕೋಣವೃತ್ತಕುಂಡಗಳಲ್ಲಿ ಪ್ರವೇಶವಂ ಮಾಡಿತು (ಪುರುಚ. ೨೭೪). ೧೨. [ ಕಾವ್ಯಮಿಾ] ದಕ್ಷಿಣ, ಧೃಷ್ಟ, ಅನುಕೂಲ, ಶಠವೆಂಬ ನಾಲ್ಕು ಬಗೆಯ ಶೃಂಗಾರನಾಯಕರಲ್ಲಿ ಒಂದು ಬಗೆ ; ಅನೇಕ ನಾಯಿಕೆಯರಲ್ಲಿ ಸಮಾನ ಅನುರಾಗವನ್ನು ತೋರಿಸುವ ನಾಯಕ : ದೇವರಲಿ ಭಕ್ತರಿಗೆ ಗುರುಜನ ಸೇವೆಯಲಿ ಸತ್ಪುತ್ರರಿಗೆ ವರೆಯುವ್ವತದಿ ದಕ್ಷಿಣರಿಗೆಂತೆಸೆವುದುತ್ಕ್ರಮಂ ಬಿಡದೆ (ವಿವೇಕ. ೨–೩೩) ; ದಕ್ಷಿಣನೆಂದರೆ, ಅನೇಕ ನಾಯಿಕೆಯರುಂಡ್ಡು ಅವರೆಲ್ಲರಲ್ಲಿಯೂ ಒಂದೇ ರೀತಿಯಾದ ಪ್ರೇಮವನ್ನು ತೋರಿಸತಕ್ಕವನು (ಕೃಬಿಡ. ೨೦೯); ಶೃಂಗಾರನಾಯಕರಲ್ಲಿ ದಕ್ಷಿಣ, ಧೃಷ್ಟ, ಅನುಕೂಲ, ಶಠ ಎಂದು ನಾಲ್ಕು ವಿಧ (ಸಂನಾಟ. ೧೮).

**ದಕ್ಷಿಣ ಅಕ್ಷಾಂಶ** = ಸಮಭಾಜಕವೃತ್ತದ ದಕ್ಷಿಣಕ್ಕೆ ಗೋಳದ ಮೇಲ್ಮೈಯ ಮೇಲೆ ಅಡ್ಡಡ್ಡಲಾಗಿರುವಂತೆ ಭಾವಿಸಿರುವ ವೃತ್ತಾಕಾರದ ರೇಖೆ : ಸಮಭಾಜಕವೃತ್ತಕ್ಕೆ ಉತ್ತರದಲ್ಲಿರುವ ಅಕ್ಷಾಂಶಗಳಿಗೆ ಉತ್ತರಅಕ್ಷಾಂಶ, ದಕ್ಷಿಣದಲ್ಲಿರುವವುಗಳಿಗೆ ದಕ್ಷಿಣ ಅಕ್ಷಾಂಶ ಎಂದು ಹೆಸರು (ಭೂವಿವ. ೧೬).
[ ಸಂ. ]

**ದಕ್ಷಿಣಕರ** (ನಾ). ಬಲಗೈ ; ಬಲಹಸ್ತ : ಶಿಷ್ಯನ ಶಿರದ ಮೇಲೆಯು ತಮ್ಮ ದಕ್ಷಿಣ ಕರವ ಚಾಚುತಲಿ (ಗಗಚಾ. ೨–೩೦). [ ದಕ್ಷಿಣ + ಕರ್ತ ]

**ದಕ್ಷಿಣಖುರ** (ನಾ). ಬಲಗಾಲಿನ ಗೊರಸು : ನೆಲನಂ ಪೊಡವಂತಿರೆ ಬಾರಿಪುದದಿಗಡಿಗೆ ಹಯಂ ತನ್ನ ತೀಕ್ಷ್ಣದಕ್ಷಿಣಖುರವಂ (ಮಲ್ಲಿಪು. ೮–೧೩೦).
[ ದಕ್ಷಿಣ + ಖುರ ]

**ದಕ್ಷಿಣಘೂರ್ಜರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಮಹಾರಾಷ್ಟ್ರ ಘೂರ್ಜರಿ, ಸೌರಾಷ್ಟ್ರಘೂರ್ಜರಿ, ದ್ರಾವಿಡಘೂರ್ಜರಿ ದಕ್ಷಿಣಘೂರ್ಜರಿ[ಹಾಕಾಂ.ಗುಜ್ಜರಿ]ಯೆಂಬ ನಾಲ್ಕುಂ ಉಪಾಂಗ ಘೂರ್ಜರೀರಾಗಂಗಳು (ವಿವೇಕ. ೨೩೪). [ ದಕ್ಷಿಣ + ಘೂರ್ಜರಿ ]

**ದಕ್ಷಿಣಚರಣ** (ನಾ). ಬಲಗಾಲು; ಬಲಗಡೆಯ ಪಾದ : ದಿವ್ಯಚಾಪಮಂ ಪಿಡಿದು ಪ್ರಥಮಚಳಿತ ದಕ್ಷಿಣಚರಣನಾಗಿ ನಿಜನಿವಾಸದಿಂ ಪೊಱಮಟ್ಟು (ಶಬರಶಾ. ೪–೧೨ ವ) : ಆ ಶುಕಂ ರಾಜಾಭಿಮುಖನುಮುನ್ನಮಿತ ದಕ್ಷಿಣ ಚರಣನುಮತಿಸ್ಪಷ್ಟವರ್ಣಸಂಸ್ಕಾರಮಪ್ಪ ವಾಣಿಯಿಂ ಕೃತಜಯ ಶಬ್ದನುಮಾಗಿ (ಕಾದಂಪೂ. ೫೮). [ ದಕ್ಷಿಣ + ಚರಣ ]

**ದಕ್ಷಿಣತಟ** (ನಾ). ಬಲಭಾಗದ ತೀರ,–ದಂಡೆ : ಆ ಮೂವರು . . . ಸೇರೆ ಸರಯೂನದಿಯ ದಕ್ಷಿಣತಟವನಲ್ಲಿ, ಸವಿಗೊರಳ ನೇಹದಿಂ ನೀಡಿದನು ಕುಶಿಕತನಯಂ ರಾಮಚಂದ್ರಂಗೆ, ಮಂಗಳಸ್ನಾತಂಗೆ, ಮಂತ್ರಸದ್ವಿದ್ಯೆಯಂ (ಶ್ರೀರಾಮಾ. ೩೦–೮೯). [ ದಕ್ಷಿಣ + ತಟ ]

**ದಕ್ಷಿಣದೋರ್ದಂಡ** (ನಾ). ೧. ಬಲಭುಜ. ೨. (ಅಲಂ) ಹೆಚ್ಚು ಸಹಾಯಕನಾದವನು ; ಬಲಗೈಯಂತಿರುವವನು : ಮುದಿಯಪ್ಪ ನಾಯಕೇಂದ್ರನು ರಾಜ್ಯವಾಳುತ್ತಾಯಿರಲು ಆತಂಗೆ ದಕ್ಷಿಣದೋರ್ದಂಡವಾದ ವೀರಮಹೇಶ್ವರರಾರಾಧಕನಾದ ಶೀಲವಂತದಳವಾಯಿ . . . ಮಠ ಕೆರೆ ತೋಟಯ × × × ಮಾಡಿಸಿ (ಎಕ. XVI, ಚಿಕ್ಕನಾ. ೧–೦೦; 1623).
[ ದಕ್ಷಿಣ + ದೋರ್ದಂಡ ]

**ದಕ್ಷಿಣಧ್ರುವ** (ನಾ). [ ಭೂಗೋಳ ] ಅಕ್ಷರೇಖೆಗಳು ಕೂಡುವ ಬಿಂದು; ಅಕ್ಷರೇಖೆಗಳು ಒಂದೆಡೆ ಸೇರುವ ದಕ್ಷಿಣದ ತುದಿ ; ಭೂಮಿಯ ಅಕ್ಷದ ಕೆಳತುದಿ : ಭೂಮಿಯ ಅಕ್ಷವನ್ನು ಅಂದರೆ ದಕ್ಷಿಣೋತ್ತರ ಧ್ರುವರೇಖೆಯನ್ನು ವೃದ್ಧಿಸಿದರೆ ಉತ್ತರದಲ್ಲಿ ಈ ರೇಖೆಯು ಖಗೋಳವನ್ನು ಸಂಧಿಸುವ ಬಿಂದು ಖಗೋಳೀಯ ಉತ್ತರಧ್ರುವ, ದಕ್ಷಿಣದಲ್ಲಿ ಸಂಧಿಸುವ ಬಿಂದು ದಕ್ಷಿಣಧ್ರುವ (ನಕ್ಷತ್ರ. ೩೪) ; ಉತ್ತರಧ್ರುವದಿಂ ದಕ್ಷಿಣಧ್ರುವಕೂ ಚುಂಬಕ ಗಾಳಿಯು ಬೀಸುತಿದೆ (ನಾದಲೀ. ೫೦–೧) ; ದಕ್ಷಿಣದ ಕಡೆ ಇರುವ ಧ್ರುವವನ್ನು ದಕ್ಷಿಣಧ್ರುವವೆಂದೂ ಕರೆಯುತ್ತಾರೆ (ಭೌತವಿ. ೩೦೦). 'ಉತ್ತರಧ್ರುವ' ಪರಾ. [ ದಕ್ಷಿಣ + ಧ್ರುವ ]

**ದಕ್ಷಿಣನಯನ** (ನಾ). ಬಲಗಡೆಯ ಕಣ್ಣು; ಬಲಗಣ್ಣು: ತ್ರಿಪಥಗಾಮಿನಿಯೆನಿಪ ಜಾಹ್ನವಿ ನೃಪನ ಚರಣದಲುದಿಸಿದಳು ಗಡ ತಪನ ದಕ್ಷಿಣನಯನವೆಂಬರು ಕಾಂಬೆವಾ ಕುಜಾಹೆ (ಕಾಶಿಖ. ೩೭-೭); ಸತಿಯ ದಕ್ಷಿಣನಯನವೀ ಭೂಪತಿಯ ವಾಮಭುಜಾಕ್ಷಿಗಳು ದುರ್ಗತಿಯ ಸೂಚಿಸಿ ತೋಱುತಿರ್ದುವು ಧರ್ಮನಂದನನ (ಕುಮ್ಹ್ಯಾಸ. ೧೭-೩೪). [ದಕ್ಷಿಣ + ನಯನ]

**ದಕ್ಷಿಣನಾಯಕ** (ನಾ). [ಕಾವ್ಯಮೀ] ಶೃಂಗಾರನಾಯಕರಲ್ಲಿ ಒಂದು ಬಗೆ; ಅನೇಕ ನಾಯಿಕೆಯರಲ್ಲಿ ಸಮಾನ ಅನುರಾಗವನ್ನು ತೋರಿಸುವವನು: ನೋಟದಿನೊರ್ವಳಂ ನಗೆಯಿನೊರ್ವಳನೊಳ್ನುಡಿಯಿಂದವೊರ್ವಳಂ ಬೇಟದಿನೊರ್ವಳಂ ಪಿಡಿಯುತ . . . ತೃಪ್ತಿವಡಿಸಿರ್ದನವಂ ಗುಣರತ್ನಭೂಷಣಂ (ಇವಂ ದಕ್ಷಿಣನಾಯಕಂ) (ರಸರ. ೩-೧೩೪). [ದಕ್ಷಿಣ + ನಾಯಕ]

**ದಕ್ಷಿಣಪಕ್ಷ** (ನಾ). ಬಲಪಕ್ಕ; ಬಲಗಡೆ: ಅಂತಶ್ವಗ್ರೀವಂ ನಿರಾಯುಧನುಂ ನಿರ್ವಿದ್ಯನುಮಾಗಿ ಕೆಲನಂ ನೋಡಿ ತನ್ನ ದಕ್ಷಿಣಪಕ್ಷದೊಳಿರ್ದ ಚಕ್ರಮಂ ಕೊಂಡಿಡೆ (ಶಾಂತಿಪು. ೫-೬೨ ವ). [ದಕ್ಷಿಣ + ಪಕ್ಷ]

**ದಕ್ಷಿಣಪತಿ** (ನಾ). ತೆಂಕಲುದಿಕ್ಕಿನ ಒಡೆಯ; ಯಮ: ಗರ್ವಿಸುವ ದಕ್ಷಿಣಪತಿಯ ಮದವಂ ವಿಭಾಡಿಸುವ ಸರ್ವಮಂಗಳದನಾಗ ಬಾರಾ (ಬಸವಪು. ೩೪-೩೭). [ದಕ್ಷಿಣ + ಪತಿ₂]

**ದಕ್ಷಿಣಬಾಹು** (ನಾ). ಬಲಭುಜ; ಬಲತೋಳು: ಬಾಹುಬಲಿ ತನ್ನ ದಕ್ಷಿಣಬಾಹುವ ಕೆಲದಲ್ಲಿ ನಿಂದ ಚಕ್ರಮನಾಗಳ್ ಸಾಹಸರಸಿಕಂ ಕಂಡು (ಆದಿಪು. ೧೪-೧೨೦). [ದಕ್ಷಿಣ + ಬಾಹು₂]

**ದಕ್ಷಿಣಭುಜ** (ನಾ). = ದಕ್ಷಿಣಬಾಹು: ಎಂತಾನುಂ ನೆನೆದಂ ಬಹುಚಿಂತಂ ಚಕ್ರೇಶನೆಮ್ಮ ದಿಗ್ವಿಜಯಮುಮಾದಂತೆಡಱದೆಯ್ದೆ ನಡೆಮದೆ ಸಂತಮೆ ದಕ್ಷಿಣಭುಜಕ್ಕೆ ಭೂವಲ್ಲಭನಾ (ಆದಿಪು. ೧೪-೪೮); ದಕ್ಷಿಣಭುಜೋತ್ಖಡ್ಗನುದ್ದಾಮ ದಾರುಣ ಪ್ರತಾಪಶೋಷ ಪಾವಕ ಕಬಳಿತಾರಾತಿಬಳನೆಂಬೊಂ (ಸುಕುಮಾ. ೧-೭೯ ವ). [ದಕ್ಷಿಣ + ಭುಜ]

**ದಕ್ಷಿಣಮಾರ್ಗ** (ನಾ). ೧. ದಕ್ಷಿಣದೇಶದ ವಿಧಾನ,-ಪದ್ಧತಿ,-ಸಂಪ್ರದಾಯ; ಸಾತ್ವಿಕವಾದ ಕರ್ಮಮಾರ್ಗ: ದಕ್ಷಿಣಮಾರ್ಗವು ದೇವತೆಗಳ ಪೂಜೆ, ಜಪ ಇವುಗಳನ್ನು ಅಸಂಕೀರ್ಣವಾಗಿ ಆಚರಿಸುವುದಾಗಿದೆ (ಶಾಕಕ. ೨೨೪). ೨. [ಕಾವ್ಯಮೀ] ಕನ್ನಡದೇಶದ ದಕ್ಷಿಣಭಾಗದಲ್ಲಿ ಪ್ರಚಾರವಾಗಿದ್ದ ಶೈಲಿ; ವಿಶೇಷವಾಗಿ ಸ್ವಭಾವೋಕ್ತಿಯಿಂದ ಕೂಡಿದ ಶೈಲಿ; ಒಂದು ಬಗೆಯ ಭಾಷಾಪ್ರಯೋಗ ಕ್ರಮ: ಸತತಂ ದಕ್ಷಿಣಮಾರ್ಗೋದಿತೋಕ್ತಿ ಭೇದಕಗುಣಂ ಸ್ವಭಾವಾಖ್ಯಾನಂ . . . ಸಮ ಮಧುರ ನಿಬಿಡ ಕಾಂತ ಸುಕುಮಾರ ಸುಸಮಾಹಿತ ಪ್ರಸನ್ನೋದಾರ ಪ್ರಮಿತ ಗ್ರಾಮ್ಯೋಜಸ್ವಿ ಕ್ರಮದಿಂ ದಶಭೇದಮಲ್ಲಿ ದಕ್ಷಿಣಮಾರ್ಗಂ (ಕವಿರಾ. ೨-೫೩). 'ಉತ್ತರಮಾರ್ಗ' ಪರಾ. [ದಕ್ಷಿಣ + ಮಾರ್ಗ]

**ದಕ್ಷಿಣಮುಷ್ಟಿ** (ನಾ). ಬಲಗೈಯ ಹಿಡಿ,-ಮುಷ್ಟಿ: ತನ್ನ ಮುಂತೆಗೆದ ದಕ್ಷಿಣಮುಷ್ಟಿಯ [ಪಾಠಾಂ. ಮುಷ್ಟಿಯ ದಕ್ಷಿಣ] ಕರ್ಣಮೂಲದೊಳ್ ಸೊಗಯಿಸೆ ಪಾಳಿಯಂ ನೆಱಪದಾಳ್ದನ ಕಜ್ಜಮನೊಕ್ಕು ಸತ್ತರಂ ನಗುವ ಪೊಲಿರ್ದನಂಗಪತಿ (ಗದಾಯು. ೫-೧೧). [ದಕ್ಷಿಣ + ಮುಷ್ಟಿ₂]

**ದಕ್ಷಿಣಮೇರು** (ನಾ). ಮೇರುಪರ್ವತದ ದಕ್ಷಿಣಭಾಗ. 'ಉತ್ತರಮೇರು' ಪರಾ. [ದಕ್ಷಿಣ + ಮೇರು]

**ದಕ್ಷಿಣವರ್ತನ** (ನಾ). ಬಲಭಾಗಕ್ಕೆ ತಿರುಗುವಿಕೆ: ದಕ್ಷಿಣವರ್ತನದಿಂದ ಪಜ್ಜಳಿಸುತಿರ್ದುದು ವಹ್ನಿಸಮಸ್ತಂ (ಚಂದ್ರಪು. ೩-೯೪). 'ದಕ್ಷಿಣಾವರ್ತ' ಪರಾ. [ದಕ್ಷಿಣ + ವರ್ತನ]

**ದಕ್ಷಿಣಶೀತವಲಯ** (ನಾ). [ಭೂಗೋಳ] ದಕ್ಷಿಣಧ್ರುವದ ಬಳಿಯಿರುವ ಅತ್ಯಂತ ಶೀತಲವಾದ ಪ್ರದೇಶ: ದಕ್ಷಿಣಶೀತವಲಯ-ಇದು ದಕ್ಷಿಣಧ್ರುವಕ್ಕೂ ಮತ್ತು ಅದಕ್ಕೆ ಉತ್ತರದಲ್ಲಿ ಸುಮಾರು ಇಪ್ಪತ್ತುಮೂರುವರೆ ಅಕ್ಷಾಂಶಭಾಗಗಳ ದೂರದಲ್ಲಿರುವ ದಕ್ಷಿಣಧ್ರುವವೃತ್ತಕ್ಕೂ ಮಧ್ಯದಲ್ಲಿರುವ ದೇಶ (ಭೂಗೋಲ. ೯). [ದಕ್ಷಿಣ + ಶೀತವಲಯ]

**ದಕ್ಷಿಣಶ್ರೇಣಿ** (ನಾ). ದಕ್ಷಿಣಭಾಗದ (ರಾಜ್ಯಗಳ) ಪಂಕ್ತಿ,-ಸಾಲು: ಕೇಣಮನೊಕ್ಕು ತಕ್ಕನಱುದುಕ್ಕೆವಮಂ ಪೆಱಗಿಕ್ಕಿ ದಕ್ಷಿಣಶ್ರೇಣಿಯ ರಾಜ್ಯಲಕ್ಷ್ಮಿ ದಮಿತಾರಿಯ ಪೋಕೆರ್ಮೆಗಿರ್ದೊಡುತ್ತರಶ್ರೇಣಿಯ ರಾಜ್ಯಲಕ್ಷ್ಮಿ ಪುರುಡಾಕೆಯೊಳಾವಗಮಾಗೆ ಲಂಚಮಂ ಮಾಣದೆ ಕೊಟ್ಟಪೋಲ್ ಸೊಗಯಿಸಿರ್ದುವು ಕಪ್ಪದ ಪೊನ್ನರಾಶಿಗಳ್ (ಶಾಂತಿಪು. ೩-೧೩). 'ಉತ್ತರಶ್ರೇಣಿ' ಪರಾ. [ದಕ್ಷಿಣ + ಶ್ರೇಣಿ]

**ದಕ್ಷಿಣಸಮಶೀತೋಷ್ಣವಲಯ** (ನಾ). [ಭೂಗೋಳ] "ಮಕರಸಂಕ್ರಾಂತಿವೃತ್ತಕ್ಕೂ ದಕ್ಷಿಣ ಮೇರುವೃತ್ತಕ್ಕೂ ನಡುವೆ ಇರುವ ಭಾಗವು" (ಭೂವಿವ. ೧೯): ದಕ್ಷಿಣಸಮಶೀತೋಷ್ಣವಲಯವು ಮಕರಸಂಕ್ರಾಂತಿವೃತ್ತಕ್ಕೂ ದಕ್ಷಿಣಧ್ರುವವೃತ್ತಕ್ಕೂ ಮಧ್ಯದಲ್ಲಿರುವ ದೇಶವು (ಭೂಗೋಲ. ೧೦). [ದಕ್ಷಿಣ + ಸಮಶೀತೋಷ್ಣವಲಯ]

**ದಕ್ಷಿಣಸಾಗರ** (ನಾ). [ಭೂಗೋಳ] ಭೂಮಿಯ ದಕ್ಷಿಣ ಪ್ರದೇಶದಲ್ಲಿರುವ ಸಮುದ್ರ: (Antarctic Ocean. ಪಾರಿಪ. ೫). 'ಉತ್ತರಸಾಗರ' ಪರಾ. [ದಕ್ಷಿಣ + ಸಾಗರ₃]

**ದಕ್ಷಿಣಸ್ಥ** (ನಾ). ೧. ಬಲಗಡೆಯಲ್ಲಿರುವವನು. ೨. ರಥವನ್ನು ನಡೆಸುವವನು; ಸಾರಥಿ: "ದಕ್ಷಿಣಸ್ಥಂ ನಿಯಂತ್ರಿಯಾಕ್ಷತ್ತೃ ಸೂತನೆನೆ ಸಾರಥಿಗೆ ನಾಮಮಕ್ಕುಂ" (ಮಂಗರಾ. ೮೫-೨೫). [ಸಂ.]

**ದಕ್ಷಿಣಹಸ್ತ** (ನಾ). = ದಕ್ಷಿಣಕರ: ಅಂತಕಾರಾದಿ ಹಕರಾಂತ . . . ಸಂಯೋಗಾಕ್ಷರಗಳುಮಂ ಬ್ರಾಹ್ಮಿಗೆ ದಕ್ಷಿಣಹಸ್ತದೊಳುಪದೇಶಂಗೆಯ್ದು (ಆದಿಪು. ೮-೫೯ ವ); ಆ ಬಾಲಿಕೆ ಗದ್ಗದಕಂಠೆ ವಾಮಕರ ಪಲ್ಲವಾಂಗುಳಿನಖಾಕ್ಷಿಪ್ತಾಶ್ರುಸ್ರುವೆ ದಕ್ಷಿಣಹಸ್ತಾಚ್ಛಾದ್ಯಮಾನ ಸ್ತನಾಂಶುಕೆಯಾಗಿ ಬಿನ್ನವಿಕುಂ (ಶಾಂತಿಪು. ೬-೬೨ ವ). [ದಕ್ಷಿಣ + ಹಸ್ತ]

**ದಕ್ಷಿಣಾಂಘ್ರಿ** (ನಾ). ಬಲಗಾಲು; ದಕ್ಷಿಣ ಚರಣ: ಮೀನಾಬ್ಜ ಶಂಖಚಕ್ರವಿತಾನಾಂಕಿತ ದಕ್ಷಿಣಾಂಘ್ರಿ ತಲಪಲ್ಲವಮುತ್ತಾನಂ ರತ್ನಾಕರದವೊರೇನಮರ್ದುದೊ (ಶಾಂತಿಪು. ೩-೪೮). [ದಕ್ಷಿಣ + ಅಂಘ್ರಿ]

**ದಕ್ಷಿಣಾಂಸ** (ನಾ). ಬಲತೋಳು; ಬಲಭುಜ: ದಮಿತಾರಿ ಚಕ್ರಕ್ಕೆ ಕೆಯ್ಯಂ ನೀಡೆ ಅದು . . . ದಕ್ಷಿಣಾಂಸದ ಮೇಗಿರ್ದುದು ನೀಳಶೈಲತಟದೊಳ್ ತಿಗ್ಮಾಂಶುಬಿಂಬಮಿರ್ದಂದದಿಂ (ಶಾಂತಿಪು. ೪-೫೩). [ದಕ್ಷಿಣ + ಅಂಸ]

**ದಕ್ಷಿಣಾಕ್ಷಿ** (ನಾ). ಬಲಗಣ್ಣು; ದಕ್ಷಿಣ ನಯನ: ದಿನಪನುದಯಕ್ಕೆ ನಿಲೆ . . . ಪನ್ನೆರಡನೆಯಡೆಯೊಳ್ ದಕ್ಷಿಣಾಕ್ಷಿರಹಿತಂ ಪತಿತಂ (ಜಾತಕ. ೧೮-೪); ನಿಜ ದಕ್ಷಿಣಾಕ್ಷಿ ದಕ್ಷಿಣಭುಜಪರಿಪಸ್ಪಂದವೊಗೆಯೆ . . . ಪವನಜಮಾನ್ವಿತ ರಥದಿನೆಯ್ದಿದಂ ಗೋಕುಲಮಂ (ಜಗವಿ. ೫-೭೩). [ದಕ್ಷಿಣ + ಅಕ್ಷಿ]

**ದಕ್ಷಿಣಾಕ್ಷಿಸ್ಪಂದ** (ನಾ). ಬಲಗಣ್ಣು ಹಾರುವಿಕೆ,-ಅದಿರುವಿಕೆ; P ಗಂಡಸರಿಗೆ ಶುಭ, ಹೆಂಗಸರಿಗೆ ಅಶುಭವೆಂಬ ನಂಬಿಕೆ ಇದೆ: ಅರಿಮಕುಟರತ್ನಮಂ ನಿಜಚರಣಕ್ಕರ್ಘ್ಯಪ್ರದೀಪಮಾಗಿಪ್ಪುದನಾ ಭರತೇಶ್ವರಂಗೆ ಕಾಣ್ಬಂತಿರೆ ಸೂಚಿಸಿದತ್ತು ದಕ್ಷಿಣಾಕ್ಷಿಸ್ಪಂದಂ (ಆದಿಪು. ೧೧-೦೩); ಇಂದುವದನೆಗೆ ದಕ್ಷಿಣಾಕ್ಷಿಸ್ಪಂದವಾಯಿತು (ಕುಮ್ಹ್ಯಾಸ. ೧೩-೪೨). [ದಕ್ಷಿಣಾಕ್ಷಿ + ಸ್ಪಂದ]

**ದಕ್ಷಿಣಾಗತಿ** (ನಾ). ಸೂರ್ಯನು ಸಮಭಾಜಕ ವೃತ್ತದಿಂದ ತೆಂಕಲಿಗೆ ಸರಿದು ತನ್ನ ಭ್ರಮಣದಲ್ಲಿ ಮಾರ್ಗವನ್ನು ಬದಲಿಸಿಕೊಳ್ಳುವ ಕಾಲ: ದಕ್ಷಿಣಾಗತಿಃ ದಕ್ಷಿಣಾಯಣವೆಂಬುದೆ (ಸಿದ್ಧಾಂತಿ. ೩೭). [ಸಂ.]

**ದಕ್ಷಿಣಾಗ್ನಿ** (ನಾ). ೧. ಅಗ್ನಿತ್ರಯದಲ್ಲಿ ಒಂದು; ದಕ್ಷಿಣ ದಿಕ್ಕಿನಲ್ಲಿ ಇಟ್ಟಿರುವ ಯಾಗದ ಬೆಂಕಿ: "ದಕ್ಷಿಣಾಗ್ನಿಃ, ಗಾರ್ಹಪತ್ಯಃ, ಆಹವನೀಯಃ–ಈ ೩ನ್ನು ತ್ರಯೋಗ್ನಯಃ, ಪ್ರತ್ಯೇಕವಾಗಿ ತಮ್ಮ ತಮ್ಮ ಹೆಸರುಗಳಿಂದ ಪ್ರಸಿದ್ಧವಾದ ಮೂರು ಶ್ರೌತಾಗ್ನಿಗಳು" (ಸಿದ್ಧಾಂತಿ. ೨೦೧). ೨. = ದಕ್ಷಿಣ ೧೧: ತೀರ್ಥಕರಗಣಧರಾನಗಾರ ಕೇವಳಿಗಳ್ ಪರಿನಿರ್ವಾಣ ಕ್ಷೇತ್ರದೊಳ್ ಶರೀರಸಂಸ್ಕಾರಾದಿ ಗಾರ್ಹಪತ್ಯ ದಕ್ಷಿಣಾಗ್ನ್ಯಾಹವನೀಯ ಮೆಂಬ ಪೆಸರಂ ಪಡೆದು (ಆದಿಪು. ೧೩–೧೬ ವ). [ ದಕ್ಷಿಣ + ಅಗ್ನಿ ]

**ದಕ್ಷಿಣಾದಿ** (ನಾ). ೧. ದಕ್ಷಿಣದೇಶಕ್ಕೆ ಸಂಬಂಧಿಸಿದುದು. ೨. [ಸಂಗೀತ] ದಕ್ಷಿಣದಲ್ಲಿ ಪ್ರಚುರವಾಗಿರುವ ಸಂಗೀತ ಪದ್ಧತಿ; ಕರ್ನಾಟಕ ಸಂಗೀತ: ಯಕ್ಷಗಾನದ ರೂಢಿಯ ಹಲವು ರಾಗಗಳಿಗೂ, ದಕ್ಷಿಣಾದಿಯ ಅವೇ ರಾಗಗಳಿಗೂ ಸ್ವರಪ್ರಸ್ತಾರದಲ್ಲಿ ವ್ಯತ್ಯಾಸವಿಲ್ಲ (ಯಕ್ಷಲ. ೬೩). [ ದಕ್ಷಿಣ + ಆದಿ ]

**ದಕ್ಷಿಣಾನಿಲ** (ನಾ). ದಕ್ಷಿಣ ದಿಕ್ಕಿನ ಗಾಳಿ; ತೆಂಗಾಳಿ: ಪೂಗಣಿಯನಟ್ಟಿದ ದಕ್ಷಿಣಾನಿಲಂ ಮುಂತೆವಂದು ಸೊಗದ ಸುಗ್ಗಿವೆಸರೋಲಗಸಾಲೆಯ ಬಾಗಿಲ್ವಾಡದೊಳ್ ನಿಂದಿರ್ಪಾ ಬಸಂತನಂ ಕಂಡೆಱಗಿ (ರಾಮಾಶ್ವ. ೩೬–೧). [ ದಕ್ಷಿಣ + ಅನಿಲ ]

**ದಕ್ಷಿಣಾಪಥ** (ನಾ). ೧. ಭರತಖಂಡದ ದಕ್ಷಿಣಭಾಗ; ವಿಂಧ್ಯಪರ್ವತದಿಂದ ದಕ್ಷಿಣಕ್ಕಿರುವ ದೇಶ: ದಕ್ಷಿಣಾಪಥದಿನೊರ್ವಳ್ಕನ್ನೆ ಚಂಡಾಲಿ ದರ್ಶನತಾತ್ಪರ್ಯದೆ ರಾಜಕೀರಸಹಿತಂ ಬಂದಿರ್ದಪಳ್ಪಾಗಿಲೊಳ್ (ಕಾದಂಪೂ. ೨೪); ಸಂಸ್ಕೃತಿಯ ದೃಷ್ಟಿಯಿಂದ ಆರ್ಯಾವರ್ತ, ದಕ್ಷಿಣಾಪಥ ಎಂಬ ಪ್ರಭೇದ ಮಾಯವಾಯಿತು (ಹುಕ್ಕಾರ. ೧೦೮ ಪೀಠಿಕೆ). ೨. = ದಕ್ಷಿಣ ಮಾರ್ಗ: ವಿಲಸಿತ ಪಸ್ಯಸಂಪದಭರಾವಮಗುಣೋದಯೆ ತಾಳ್ದಿದಳ್ದರಾಲಲನ ವಿಶಾಲಲಕ್ಷ್ಮಿಯನನಾರತಮೆಂಬುದು ದಕ್ಷಿಣಾಪಥಂ (ಕವಿರಾ. ೨–೨೦೮). 'ಉತ್ತರಾಪಥ' ಪರಾ. [ ಸಂ. ]

**ದಕ್ಷಿಣಾಭಿಮುಖ** (ನಾ). ತೆಂಕಲು ದಿಕ್ಕಿಗೆ ಮುಖಮಾಡಿಕೊಂಡಿರುವವನು; ದಕ್ಷಿಣಕ್ಕೆ ಹೊರಟಿರುವವನು: ದಕ್ಷಿಣಾಭಿಮುಖನಾಗಿ ನಿತ್ಯ ಪ್ರಯಾಣಾಂಗಳಿಂ ಬಂದು (ಆದಿಪು. ೧೩–೭೭ ವ). [ ದಕ್ಷಿಣ + ಅಭಿಮುಖ ]

**ದಕ್ಷಿಣಾಮೂರ್ತಿ** (ನಾ). ೧. ಶಿವನ ಇಪ್ಪತ್ತೈದು ಲೀಲಾಮೂರ್ತಿಗಳಲ್ಲಿ ಒಂದು; ಜ್ಞಾನಮುದ್ರಾಂಗುಳಿಯಿಂ ಶಿಷ್ಯಪ್ರಬೋಧಪ್ರದನೆನೆಸಿದನವಂ ದಕ್ಷಿಣಾಮೂರ್ತಿದೇವಂ (ರಾಜಶೇ. ೩–೦೦೯); ಅನೇಕವಿಧವಾದ ಮೂರ್ತಿಗಳನ್ನು ಶಿವದೇವಾಲಯಗಳಲ್ಲಿ ಕಾಣಬಹುದು. 'ಅವುಗಳಲ್ಲಿ' ನ ದಕ್ಷಿಣಾಮೂರ್ತಿ ... ಇವುಗಳಲ್ಲಿ ಪ್ರಸಿದ್ಧ (ಭಾರದ. ೫೦೩). ೨. ಮಹಾಮಂತ್ರಗಳಲ್ಲಿ ಒಂದು: ಗಾಯತ್ರಿ ಮೃತ್ಯುಂಜಯ ದಕ್ಷಿಣಾಮೂರ್ತಿ ನೀಲಕಂಠ ಶರಭ ವೀರಭದ್ರ ವಿಘ್ನೇಶ್ವರ ವಿಶಾಖ ವಿದ್ಯೇಶ್ವರ ಬ್ರಹ್ಮ ವಿಷ್ಣು ಸೂರ್ಯ ಭೈರವ ಪಾರ್ವತಿ ಕಾಮಧೇನು ಕಲ್ಪವೃಕ್ಷ ಮಾಯಾ ಸಾವಿತ್ರೀ ಸರಸ್ವತೀ ಅಮೃತೇಶ್ವರೀ ಸಪ್ತಮಾತೃಕಾ ದುರ್ಗಾ ಕಾಳೀ ಬಗಳಾಬಾಲಾ ಲಲಿತಾ ಶೂಲಿನ್ಯಾದಿ ಮಹಾಮಂತ್ರಗಳಂ (ವಿವೇಕ. ೮೧). [ ಸಂ. ]

**ದಕ್ಷಿಣಾಯಣ** (ನಾ). = ದಕ್ಷಿಣಾಗತಿ: ಸೂರ್ಯನಲ್ಲಿ ರಶ್ಮಿರೂಪವಾಗಿ ದಕ್ಷಿಣಾಯಣದಲ್ಲಿ ೩೬೦೦೦ ಉತ್ತರಾಯಣದಲ್ಲಿ ೩೬೦೦೦ ರಶ್ಮಿಗಳು ಆಗುವವು (ಹಸಾರ. ೭–೨ ತಾತ್ಪರ್ಯ); ಸೂರ್ಯನು ... ದಕ್ಷಿಣದಲ್ಲಿರುವಾಗ ದಕ್ಷಿಣಾಯಣ, ಆಗ ನಮಗೆ ಚಳಿಗಾಲ (ಕಂಕಥ. ೨). 'ಉತ್ತರಾಯಣ' ಪರಾ. [ <ಸಂ. ದಕ್ಷಿಣಾಯನ ]

**ದಕ್ಷಿಣಾಯನ** (ನಾ). ೧. = ದಕ್ಷಿಣಾಗತಿ: ಅಂಬುದಸಮಯಂ ಮೊದಲಾಗಿಱ ಋತುಗಳ್ ಮೂಱು ದಕ್ಷಿಣಾಯನಕೆ ಸಂತತಂ ವರ್ತಿಸುಗುಂ (ಜಾತಕ. ೨೧–೪). ೨. = ದಕ್ಷಿಣಮಾರ್ಗ ೨: ತ್ರಿದಶಗಣೇಶಮೌಳಿಮಣಿಪೀಠನಿಷೇವಿಗಳೊಳ್ಳಿನೀಂದ್ರನಾ ಪದಯುಂಗಳಂಗಳೊಳ್ಳಿದದೆ ಬಾಗುವೆನೆಂಬುದು ದಕ್ಷಿಣಾಯನಂ (ಕವಿರಾ. ೨–೧೦೬). [ ಸಂ. ]

**ದಕ್ಷಿಣಾಯನಪುಣ್ಯಕಾಲ** (ನಾ). ಸೂರ್ಯನು ವಿಷುವದ್ರೇಖೆಯಿಂದ ದಕ್ಷಿಣಕ್ಕೆ ಸಂಚರಿಸಲು ಪ್ರಾರಂಭಮಾಡುವ ಕಾಲ; ೯ ಜುಲೈ ತಿಂಗಳ ಮಧ್ಯದಲ್ಲಿ ಬರುವ ಸಂಕ್ರಮಣ ಕಾಲ. ಸೂರ್ಯನು ಕರ್ಕಾಟಕ ರಾಶಿಯನ್ನು ಪ್ರವೇಶಿಸುವ ಈ ಕಾಲವು ಸ್ನಾನ, ಜಪ, ದಾನ, ತರ್ಪಣಗಳಿಗೆ ಪ್ರಶಸ್ತವೆಂದು ನಂಬಲಾಗಿದೆ: ಸೂರ್ಯನು ಮಿಥುನ ನಕ್ಷತ್ರದಲ್ಲಿರುತ್ತಾನೆಂದು . . . ಈ ಕಾಲವನ್ನು ದಕ್ಷಿಣಾಯನಪುಣ್ಯಕಾಲವೆಂದು ಕರೆಯುತ್ತಾರೆ (ನಕ್ಷತ್ರ. ೨೪). [ ದಕ್ಷಿಣಾಯನ + ಪುಣ್ಯಕಾಲ ]

**ದಕ್ಷಿಣಾರ್ಥ** (ನಾ). ೧. ದಕ್ಷಿಣೆಯ ಅಪೇಕ್ಷೆ; ದಾನವನ್ನು ಪಡೆಯುವ ಉದ್ದೇಶ: ನೆರೆವುತಿದೆ ನಾನಾ ದಿಗಂತದ ಧರಣಿಪರು ಕನ್ಯಾರ್ಥಿಗಳು ಭೂಸುರಸಮೂಹದ ಸಾಲು ನೆರೆದುದು ದಕ್ಷಿಣಾರ್ಥದಲಿ ಎರಡಱೊಳು ನಿಮಗೇನು ಕನ್ಯಾವರಣವೋ ವೇಣ್ ದಕ್ಷಿಣಾರ್ಥವೊ ಬರವು ನಿಮಗೆಂಟೇ ಯೆನುತ ದ್ವಿಜನಿವರ ಬೆಸಗೊಂಡ (ಕುಮಾವ್ಯಾ. ಆ. ೧೧–೦೪). ೨. ದಕ್ಷಿಣೆಯ ದ್ರವ್ಯ: ಎನಿತ ಕಿಂಚಿತ್ ಪ್ರಹಸಿತಾನನವನಜನಾಗುತ ದಕ್ಷಿಣಾರ್ಥಕ್ಕನು ಗೊಳಲು (ಬಸಪು. ೪೩–೭೩). [ ಸಂ. ]

**ದಕ್ಷಿಣಾರ್ಧ** (ನಾ). ದಕ್ಷಿಣಭಾಗದ ಅರ್ಧ; ಬಲಭಾಗದ ಅರ್ಧ: ಇದರ ಅರ್ಧ ದಕ್ಷಿಣಾರ್ಧದ ನಕ್ಷತ್ರಗಳು ದಿನದಲ್ಲಿ ೧೨ ಘಂಟೆಗಳಿಗಿಂತ ಕಡಿಮೆ ಕಾಲ ನಮ್ಮ ದಿಗಂತದ ಮೇಲಿದ್ದು ಹೆಚ್ಚು ಕಾಲ ಮುಳುಗಿರುತ್ತವೆ (ನಕ್ಷತ್ರ. ೩೩). [ ದಕ್ಷಿಣ + ಅರ್ಧ ]

**ದಕ್ಷಿಣಾರ್ಹ** (ಗು). ೧. ದಕ್ಷಿಣೆಯನ್ನು ಪಡೆಯಲು ಅರ್ಹತೆಯುಳ್ಳ. (ನಾ). ೨. ದಕ್ಷಿಣೆಗೆ ಯೋಗ್ಯನಾದವನು: "ದಕ್ಷಿಣೀಯಃ, ದಕ್ಷಿಣಾರ್ಹಃ, ದಾಕ್ಷಿಣ್ಯಃ – ೩ ದಕ್ಷಿಣೆಗೆ ಯೋಗ್ಯನಾದವನು" (ಸಿದ್ಧಾಂತಿ. ೨೭೯). [ ದಕ್ಷಿಣ + ಅರ್ಹ ]

**ದಕ್ಷಿಣಾವರ್ತ** (ಗು). ೧. ಬಲಭಾಗಕ್ಕೆ ತಿರುಗುವ: ಪ್ರದಕ್ಷಿಣಂ ಬಂದು ದಕ್ಷಿಣಾವರ್ತಶಿಖಾಸ್ಪದನಂ ಹೋಮಾನಳನಂ ಮಾಡುವಕ್ಕಳ್ ವಿಸುಪ ಲಾಜೆಯಿಂ ಪೂಜಿಸಿದರ್ (ಜಗವಿ. ೧೧–೦೩೩). (ನಾ). ೨. ಬಲಭಾಗಕ್ಕೆ ತಿರುಗುವುದು: ಕರ್ಮಭೂತಳೋಪಸರ್ಗ ವಿಧ್ವಂಸನ ನಿಮಿತ್ತಮಾಗಿ ನೀರಾಜನಂಗೆಯ್ವಂತೆ ತದ್ಧರಾನಳಂ ದಕ್ಷಿಣಾವರ್ತಮಾಗಿ ಪಜ್ವಳಿಸೆ (ಆದಿಪು. ೭–೩೭ ವ); ದಕ್ಷಿಣಾವರ್ತಮಾಗೆಸೆದುದು ಶಿಖಿ ಪಾಂಚಜನ್ಯದಂತೆ (ಮಲ್ಲಿಪು. ೦೨–೩). [ ದಕ್ಷಿಣ + ಆವರ್ತ ]

**ದಕ್ಷಿಣಾವರ್ತನ** (ನಾ). ದಕ್ಷಿಣಕ್ಕೆ ತಿರುಗುವುದು, – ಹೋಗುವುದು: "(ನಾವೆ) ದಕ್ಷಿಣಕ್ಕೆ ಪ್ರಯಾಣಮಾಡುವಲ್ಲಿ ಆದ ಅಕ್ಷಾಂಶವ್ಯತ್ಯಾಸ: ದಕ್ಷಿಣಾವರ್ತನ" (South.ng. ೩೦೪೨). [ ದಕ್ಷಿಣ + ಆವರ್ತನ ]

**ದಕ್ಷಿಣಾವರ್ತನಾಭಿ** (ನಾ). ಬಲಭಾಗಕ್ಕೆ ತಿರುಗಿರುವ ನಾಭಿ; ಬಲಸುಳಿ; ಹೊಕ್ಕುಳು: ಸರದೊಡನೆ ಗಂಭೀರವಾದ ದಕ್ಷಿಣಾವರ್ತನಾಭಿಯುಂ ಅಧರಪಲ್ಲವದೊಡನೆ ಅಶೋಕ ಪಲ್ಲವಾನುರಕ್ತಂಗಳಾದ ಪಾಣಿಪಾದತಳಂಗಳುಂ ಲಲಾಟ ಪಟ್ಟದೊಡನೆ ಲಲಿತೋನ್ನತಂಗಳಾದ ಪೊಱಲಡಿಗಳುಂ . . . ಆತ್ಮೀಯ ಯೌವನಪ್ರಾದುರ್ಭಾವಮಂ ಪ್ರಕಟಂಮಾಡೆ (ಆದಿಪು. ೬–೯ ವ). [ ದಕ್ಷಿಣಾವರ್ತ + ನಾಭಿ ]

**ದಕ್ಷಿಣಾವೃತ್ತ** [–ತ್ತಿ] (ನಾ). [ಸಂಗೀತ] ಗೀತ ಹಾಗೂ ವಾದ್ಯಗುಣಗಳು ಪ್ರಧಾನವಾಗಿರುವಿಕೆ: ಯತಿಯೊಳ್ ಗೋಪುಚ್ಛೆ ತನ್ನೊಳ್ ನೆಲಸಿ ನೆಗಟ್ದಿನಂ ಮಾರ್ಗದೊಳ್ ಚಿತ್ರಕೀಯಂ ಕೃತಕಲಾಡಂಬರಂ ರಂಜಿಸುವಿನಮೆಸೆಗುಂ ದಕ್ಷಿಣಾವೃತ್ತ[–ತ್ತಿ] ವೃತ ತ್ರಿಕಯಾಂತರ್ವರ್ತಿ ತಾನೆಂಬಿನಮನುಗತ ತತ್ತ್ವೌಘದೊಳ್ ತತ್ತ್ವದಿಂದನ್ವಿತಮುಂ ವಿಸ್ತಾರಮತ್ಕಪ್ರಕಟಿತಮನದಿಂ ಮೆಚ್ಚಿದಂ ದೇವರಾಜಂ (ಅಜಿಪು. ೩–೧೨). [ ಸಂ. ]

**ದಕ್ಷಿಣಾಶಾಪತಿ** (ನಾ). ದಕ್ಷಿಣ ದಿಕ್ಪಾಲಕ; ಯಮ: "ಶಮನಃ . . . ದಕ್ಷಿಣಾಶಾಪತಿಃ, ಶ್ರಾದ್ಧದೇವಃ,–ಈ ೧೬ ಜವನ ಪೆಸರ್" (ಹಲಾಯು. ೦೩–೭೨). [ ಸಂ. ]

**ದಕ್ಷಿಣಾಶೆ** (ನಾ). ತೆಂಕಲು; ದಕ್ಷಿಣದಿಕ್ಕು: ದಕ್ಷಿಣಾಶೆಯ ನಟುಸುಯ್ಯು ಗಾಳಿಯನೆ ಪೋಲ್ವುದು ಗಂಧವಹಂ ವಸಂತದೊಳ್ (ಶಾಂತಿಪು. ೭–೦೨೬); ಮೇರುವಿನ ದಕ್ಷಿಣಾಶೆಯೊಳು . . . ಲಕ್ಷ್ಮಿಯ ರಾಜಧಾನಿಯೆನಲೊಪ್ಪುವುದು ಚಾರುತರ ಲಾಳದೇಶಂ (ಹರಿಕಾ. ೦–೩೪). [ ದಕ್ಷಿಣ + ಆಶೆ ]

**ದಕ್ಷಿಣಾಸ್ಥ** (ನಾ). = ದಕ್ಷಿಣಸ್ಥ ೨: ನಿಯಂತಾ, ಪ್ರಾಜಿತಾ, ಕ್ಷತ್ತಾ, ದಕ್ಷಿಣಾಸ್ಥಃ . . . ಸೂತಃ—ಈ ೭ ಸಾರಥಿ" (ಹಲಾಯು. ೭೩–೨೯೫). [ ಸಂ. ]

**ದಕ್ಷಿಣೆ** (ನಾ). ೧. ಪಿತೃಕಾರ್ಯ, ದೇವತಾಪೂಜೆ, ಯಾಗ, ವ್ರತ ಮುಂತಾದ ಸಂದರ್ಭಗಳಲ್ಲಿ ಬ್ರಾಹ್ಮಣರು, ಗುರುಹಿರಿಯರು ಮುಂತಾದವರಿಗೆ ನೀಡುವ ಕಾಣಿಕೆ,–ಸಂಭಾವನೆ: ಅವ ಲಕ್ಷಣದ ಹಯಮುಮಂ ಋತ್ವಿಜರನಿಬರನಿಸು ದಕ್ಷಿಣೆಗಳದರಂದಮಂ ವಿಸ್ತರಿಸ ವೇಳ್ಪುದು (ಜೈಮಿಥಾ. ೨–೨೫); ತೃಪ್ತಿಯೆ ತಣಿದು ತೇಗಿದುದೆನಲ್ಕೆ ನಲಿದಂದು ಜನಂ ಭಾರಕಾ ಭೋಜನಕೆ ಮೇಣ್ ದಾನ ದಕ್ಷಿಣೆಗೆ (ಶ್ರೀರಾಮಾ. ೧೧–೨೮೪). 'ಗುರುದಕ್ಷಿಣೆ' ಪರಾ. ೨. ಹಣದ ದಾನ,–ಕೊಡುಗೆ: "ಯಾಗವ್ರಯಂ ದಾನಮುತ್ಸರ್ಗಮಪವರ್ಜನಂ ದಕ್ಷಿಣೆಯುದೆ ನಿಕ್ಕಂ" (ಮಂಗರಾ. ೭೭–೦೪); ಬಂದ ದಕ್ಷಿಣೆ ಮೃಷ್ಟಭೋಜನದಿಂದ ತುಷ್ಟರು ನಾವು (ಕುವ್ಯಾ.ಅ. ೦೫–೩); ಮಾಡಿದನು ಮನದಣಿಯ ದಕ್ಷಿಣೆಗೂಡಿ ಕನ್ಯಾಧೇನು ದಾನವನು (ತೊರರಾ. ೨–೨–೨೦); ಮುತ್ತೈದೆಯರಿಗೆ ಅರಿಶಿಣ ಕುಂಕುಮ ಫಲಪುಷ್ಪ ತಾಂಬೂಲಗಳನ್ನೂ ದಕ್ಷಿಣೆಯನ್ನೂ ಇತ್ತು ಸತ್ಕರಿಸಿದನು (ಶ್ರೀಶಾಯು. ೬) ಭಕ್ಷ್ಯವಿಲ್ಲದಿದ್ದರೂ ದಕ್ಷಿಣೆ ಸಿಕ್ಕಿದರೆ ಸಾಕು (ಗಾದೆ). [ ಸಂ. ದಕ್ಷಿಣಾ ]

**ದಕ್ಷಿಣೆಗೊಡು** (ಕ್ರಿ). ಪಿತೃಕಾರ್ಯ, ದೇವತಾಪೂಜೆ ಮುಂತಾದ ಸಂದರ್ಭಗಳಲ್ಲಿ ಗುರುಹಿರಿಯರೇ ಮೊದಲಾದವರಿಗೆ ದಾನವನ್ನು ಕೊಡು,–ದಕ್ಷಿಣೆ ನೀಡು: ಅಂತು ನಿಜಧವಳಚ್ಛತ್ರ ಚಾಮರ ಸಿಂಹಾಸನಾದಿ ರಾಜಚಿಹ್ನಂಗಳುಮಂ ಸರ್ವಸ್ವಮೆಲ್ಲಮಂ ದಕ್ಷಿಣೆಗೊಟ್ಟು (ಶಂಪಥಾ. ೬–೪೦ ವ). [ ದಕ್ಷಿಣೆ + ಕೊಡು$_1$ ]

**ದಕ್ಷಿಣೇಂದ್ರ** (ನಾ). ದಕ್ಷಿಣ ದಿಕ್ಕಿನ ಅಧಿಪತಿ: ಬ್ರಹ್ಮಲೋಕನಿಳಯರಪ್ಪ ಲೋಕಾಂತಿಕರುಂ ದಕ್ಷಿಣೇಂದ್ರರುಂ . . . ಭವವಲ್ಲೀದಳಫಲಮೂಲ ವಿಷಯಮುಮಂ ಪಱಿದು (ಶಾಂತಿಪು. ೧೨–೯೩ ವ). ⓟ ಜೈನರ ಪ್ರಕಾರ ದಕ್ಷಿಣೇಂದ್ರರು ಸೌಧರ್ಮ, ಸನತ್ಕುಮಾರ, ಬ್ರಹ್ಮ, ಶುಕ, ಆನತ ಮತ್ತು ಆರಣ್ಯರೆಂದು ಆರುಮಂದಿ. [ ದಕ್ಷಿಣ + ಇಂದ್ರ ]

**ದಖಿನ್, ದಕನ್** (ನಾ). ದಕ್ಷಿಣಭಾರತದ ಪ್ರದೇಶ; ನರ್ಮದಾ ಮತ್ತು ಕೃಷ್ಣಾ ನದಿಗಳ ನಡುವಿನ ಭೂಭಾಗ: ದಖ್ಖನ್ನಿನ ಭಾಗವು ವಾಸಯೋಗ್ಯವಾಗಿತ್ತು (ಭಾಇಪ್ರ. ೦೫); ದಖ್ಖನ್ನಿನ ಒಂದು ಭಾಗ (ಜೀನಪ್. ೧೦೪). **ದಕನ್**: ಈ ಕಾಲದಲ್ಲಿ ದಕನ್ ಬಾದಷಹರು ದಿಲ್ಲಿ ರಾಜನಿಗೆ ವಿರುದ್ಧರಾದರು (ಉರ್ದುಪಾ. ೬).

[ ←ಪಾರ. ದಕನ್; ಹಿಂ. ದಖಿನ್, ದಕನ್; ಪ.ಸಾ. ದಖ್ಖಿನ್./ ಪ್ರಾ. ದಕ್ಖಿಣ ]

**ದಖಿನಿ** (ಗು). ೧. ದಕ್ಷಿಣಕ್ಕಿರುವ; ದಕ್ಷಿಣದೇಶದ. (ನಾ). ೨. ದಖಿನ್ ಪ್ರದೇಶದ ಗುಲ್ಬರ್ಗ, ಬಿಜಾಪುರ ಪ್ರದೇಶಗಳಲ್ಲಿ ಪ್ರಚಲಿತವಾಗಿದ್ದ ಉರ್ದು ಭಾಷೆಗೆ ಮೊದಲಿನ ಒಂದು ಇಂಡೋ–ಆರ್ಯನ್ ಭಾಷೆ: (ಶಿ). [ ←ಹಿಂ. ದಕ್ಖಿನೀ; ಮರಾ. ದಖಿಣೀ ]

**ದಖಾಫಿ** 'ಧಕ್ಕಾಫಿ' ನೋ.

**ದಖೀಲಿ** (ನಾ). ಮೊಗಲ್‌ಸೈನ್ಯದ ಒಂದು ಪಂಗಡ: ದಖೀಲೀ ಇವಕ್ಕೆ ಸಂಬಳವೇನೋ ಸರ್ಕಾರದಿಂದ ಬರುತ್ತಿದ್ದರೂ ಇದು ಮನ್‌ಸಬ್‌ದಾರರ ಅಧೀನದಲ್ಲಿರುತ್ತಿತ್ತು (ಇಸ್ಲಾಂಸಂ. ೩೮).

[ ←ಅರ. ಹಿಂ. ದಖೀಲ್ = ಅಧಿಕಾರಿ ]

**ದಗ** 'ದಗಾ' ನೋ.

**ದಗಡಿ** 'ಧಗಡಿ$_1$' ನೋ.

**ದಗದ** (ನಾ). (ಉಕ) ಕೆಲಸ; ಕಾರ್ಯ: ಹರಿಯ ಹೊತ್ತಿಲೆದ್ದು, ಅತ್ತಿ ಮಾವಗ ಶರಣ ಮತ್ತೊಂದು ಶರಣ ಗುರುವೀಗೆ ನಾ ಮಾಡಿ ಹೊಕ್ಕೀನಿ ಮನಿಯ ದಗದಕ (ಜನಗೀ. ೭೬); ಅಪ್ಪ ರಾಚಣ್ಣನ ತೇರೆಳೆದು ಬರುವಾಗ ತೀರಲಿಲ್ಲವ್ವ ಮನೆ ದಗದ (ಕನ್ನಜಾ. ೧೦); ಬೆಳತನಕ ದುಡಿಯೋವಷ್ಟು ದಗದ ಆದ್ರೂ ಏತಿರಾ ಅದು? (ಕುಮಾಕಾ. ೦೩೫); ಅವರ ಕಡೀಗೆ ತುಸು ದಗದ ಇತ್ತು (ಜೀವಪ್ರ. ೮೨). [ ?./ಮರಾ. ದಗದಗ = ಪರಿಶ್ರಮ. ]

**ದಗದಗ** (ನಾ). ಒಂದು ಅನುಕರಣ ಶಬ್ದ. 'ದಗದಗನೆ' ಪರಾ.

**ದಗದಗನೆ** (ಅ). ದಗದಗ ಎಂಬ ಶಬ್ದದೊಡನೆ: ಬೆಂಕಿ ದಗದಗನೆ ಉರಿಯಿತು (ರೂಢಿ) [ ದಗದಗ + –ಅನೆ$_1$ ]

**ದಗದಗಿಸು** (ಕ್ರಿ). (ಬೆಂಕಿ) ದಗದಗ ಎಂದು ಉರಿ; ಪ್ರಜ್ವಲಿಸು: ಕರಿಗಿರಿಯೊಳು ದಗದಗಿಸಿ ಹರಿಯಾವಳಿಯುರುಗುಲ್ಮದೊಳು ಭುಗುಭುಗಿಸಿ ಬರುದಿನ ಮನ್ನೆಯ ಭಟರ ಪ್ರತಾಪಾಗ್ನಿ ಮೆಱೆದುದು ರಿಪುವನದೊಳಗೆ (ಕಂನವಿ. ೦೫–೫೫). [ ದಗದಗ + –ಇಸು$_3$ ]

**ದಗಮು, ಧಗಮು** (ನಾ). ಒಂದು ಬಗೆಯ (ಚರ್ಮದ) ವಾದ್ಯವಿಶೇಷ: ಕೊಂಬು ಬೊಂಬುಳಿ ಕಾಳೆ ಡೋಳು ದಗಮು ಚಿನ್ನ ಚೆಂಬಕವಱಿ ತಿತ್ತಿರಿಗಳ ಡೊಂಬಿಯ ಧ್ವನಿಯಿಂದ ಪೌಜುಗಳತ್ಯಾಡಂಬರದಿಂದೆಯ್ದಿದವು (ಕುಮಾರಾ. ೦೨–೨೫); ಡಕ್ಕೆ ದಗಮು ಕೊಂಬು ಕೊಳಲು ತಪ್ಪಟೆ ಮೃದಂಗದ ರವ ತುಂಬಿತು ಲೋಕವನಿರದೆ (ರಾಮವಿ. ೭–೦೨); ಪೊಡೆವ . . . ತಂಬಟ ಡೋಳು ದಗಮು ಗಿಡಿಬಿಡಿಗಳ ಬಲ್ದನಿ ಮುಪ್ಪೊಡವಿಯನದರಲು ನಡೆದುದಾ ಸೇನೆ(ಚಂಪ್ರಸಾಂ. ೨೦–೬೧); ಅನ್ನಿಗರೆನಗೊಡ್ಡಿ ನಿಂದರೆ ದಗಮಿನ ಸನ್ನೆಯೊಳ್ಬಾಯ ಕುಟ್ಟಿಸುವೆ (ಭರತೇ. ೪೯–೫೬); ಮೆಱೆವ ತುಡುಮು ಭೇರಿ ದಗಮು ಡಿಂಡಿಮ ಡೌಡೆ ಮೊಱೆವ ದೋಲುಂಗಳು ಡಕ್ಕೆಗಳು (ಜ್ಞಾನಸಿ. ೪೧–೫೩). **ಧಗಮು**: ಭೇರಿ ತಮ್ಮಟ ನಿಸ್ಸಾಳ ಧಗಮು ರುಂಜೆ ಭೋರೆಂಬ ಶಂಖದಾಡೆಗಳು (ಜ್ಞಾನಸಿ. ೧೦–೩). [ ? ]

**ದಗಲಬಾಜಿ** 'ದಗಲ್ಬಾಜಿ' ನೋ.

**ದಗಲಬಾಜಿತನ** 'ದಗಲ್ಬಾಜಿತನ' ನೋ.

**ದಗಲು, ತಗಲ್$_2$, ತಗಲು$_3$** (ನಾ). ೧. ಮೋಸ; ವಂಚನೆ; ದ್ರೋಹ; ವಿಶ್ವಾಸಘಾತ: "ಠಕ್ಕತನ; ತಗಲು; (ದಗಲುಬಾಜಿ), ಅಪ್ರಾಮಾಣಿಕತನ" (ಜಾನಕೋ. ೨). **ತಗಲ್$_2$**: ೧. "ಮೋಸ, ವಂಚನೆ" (ಪ್ರಭಾ). **ತಗಲು$_3$**: ೧. ಯಾವುದರಲ್ಲಿ ತಂಟೆಯಿಲ್ಲ ತಗಲು ಇಲ್ಲ; ಮೋಸವಿಲ್ಲ; ಮರೆಯಿಲ್ಲ (ಜನಜೀ. ೨೯). ೨. ಸುಳ್ಳು: "ತೊದಳು, ಸುಳ್ಳು . . . ಸಟೆ, ತಗಲು" (ಕಂನಪು. ೮೬). 'ತಗಲುಸಾಕ್ಷಿ' ಪರಾ.

**ತಗಲುಬಗಲು** = ಮೋಸ; ವಂಚನೆ: ತಗಲುಬಗಲಿನಿಂದ ದುಷ್ಟವಾಜಿಗಳಾಗ ಬಿಗಿಸಾಳ್ವನಂತೆ ಹೊಕ್ಕಿಱಿಯೆ (ಬಿಜ್ಜರಾ. ೦೨–೫೦). **ತಗಲುಬಿಗಲ್ಲನ**= ತಗಲುಬಗಲು: ಹೌದದು ಅಂಥವರು ಇರೋ ಪೊತ್ಗೇ ಮತ್ತೆ ಇಂಥ ತಗಲುಬಿಗಲ್ಲನ ನಡಿಯೋದು (ಕಂಟಿರ. ೦೨). **ತಗಲು ಮಾಡು** = ಮೋಸ ಮಾಡು; ವಂಚಿಸು: ಅದರಲ್ಲಿ ಒಂದು ಪೈ ಸಹ ತಗಲು ಮಾಡಿದ್ದಿಲ್ಲ (ಮುಂಬಯಿ. ೪–೫೦); ತೂಕದಲ್ಲಿ ಯಾರಾದರೂ ತಗಲುಮಾಡಿದರೆ ಆ ತೂಕಕ್ಕೆ ಸರಿಯಾಗಿ ಅವರ ದೇಹದ ಮಾಂಸವನ್ನು ತೆಗಿಸುತ್ತಿದ್ದನು (ಹಿಂಮುಂಸ. ೬೦). [ ←ಅರ. ಹಿಂ. ಮರಾ. ದಗಲ್./ಸಂ. ಜಗಲ ]

**ದಗಲೆ$_1$**, ತಗಲೆ (ನಾ). ಕವಚ ; ತನುತ್ರಾಣ : "ದಗಲೆ ಜವಳಿ ಜೋಡು" (ಶಬ್ದಮಂ. ೯೪) : ಶೀರ್ಷಕಂ . . . ವ್ಯೂಢಕಂಟಕ ಈ ೧೭ ದಗಲೆಯು ತೊಟ್ಟು ಸನ್ನದ್ಧನಾಗಿದ್ದವನು (ರಾಜಶೇ. ೧೩೪) : ಕೆಂಪು ದಗಲೆಯಿಂದ ಕೆಳಗಾಗಲರುಣನ ಗರಿಪಾದಕಂಸೆಯಾಗಲಿ ಇಂದ್ರನೀಲದ ದಾಳ ದಿಕ್ಕುಗಳನೆ ಬೆಳಗುತಲೆ (ವಾದಿಶೀ. ೧೫೦-೨) ; ಮುತ್ತಿನ ದಗಲೆ ವಜ್ರದ ಜೋಡು ಸಿರದಲಿ ಬಿತ್ತರವಹ ಸೀಸಕದ ಪುಸ್ತಂಗ ತೊಡರಾ ಗಾವಳಿಯಿಂದ ಭೂಪೋತ್ತಮ ನಡೆದನುಬ್ಬಿನಲಿ (ಕಂನವಿ. ೧೫-೧೨) ; ಸಿರದ ಮುಂಡಾಸವ ಸೀಳ್ದಿಕ್ಕಿ ದಗಲೆಯ ಪರಿಪಾಟ ಮಾಡಿದರಾಗ (ಕಂನವಿ. ೧೫-೪೭) ; ಪೊಸದಗಲೆಯಂ ಬಿಗಿದು ಅಳವಟ್ಟ ಪೊನ್ನ ಪಡಿದೇರನೇಱ ಮುಟ್ಟಿಯಿಸಿ ಕಱುತ್ತಿಱಿಗಿ (ರಾಮಾಶ್ವ. ೯೧-೨೯) ; ದಗಲೆ (ತಗಲೆ) :–ತೆಗಲೆ ಎಂಬುದು ಉರಸ್ಥಳಕ್ಕೆ ನಮ್ಮಿ ಕನ್ನಡನಾಡಿನಲ್ಲಿ ಮಾತ್ರ ರೂಢವಾದ ಹೆಸರಾದರೂ ಪಂಪಭಾರತದೊಳಗೆ ತೋರಿಬಾದುದರಿಂದ ಅದು ಅಚ್ಚಗನ್ನಡ ಎಂಬುದು ಈಗ ನಿರ್ಧಾರವಾಗಿದೆ. 'ದಗಲೆ' ಅಥವಾ 'ತಗಲೆ' ಎಂದರೆ ತೆಗಲೆಯ ಮೇಲೆ ಬಿಗಿದು ಕಟ್ಟುವ ಬಟ್ಟಲಿನಾಕಾರದ ಒಂದು ಪದಾರ್ಥ, ಇದನ್ನು 'ಉರಃಸ್ತ್ರ' ಎನ್ನಬಹುದು (ಪಾರ್ಶ್ವಸು. ೪೭). **ತಗಲೆ :** ದಗಲೆ (ತಗಲೆ):– ತೆಗಲೆ ಎಂಬುದು ಉರಸ್ಥಳಕ್ಕೆ ನಮ್ಮಿ ಕನ್ನಡನಾಡಿನಲ್ಲಿ ರೂಢವಾದ ಹೆಸರಾದರೂ . . . ಇದನ್ನು 'ಉರುಸ್ತ್ರ' ಎನ್ನಬಹುದು (ಪಾರ್ಶ್ವಸು. ೪೭).

**ದಗಲೆಜೋಡು** = ಯುದ್ಧಕಾಲದಲ್ಲಿ ಸೈನಿಕರು ಧರಿಸುವ ಕವಚ ; ತನುತ್ರಾಣ : ಜರಿಟೋಪಿ ದಗಲೆಜೋಡಿನ ರಾವುತರ ಮುಂದುರವಣಿಸುವ ನಿವನಾರೆ (ಕಂನವಿ. ೧೨-೫೮). [ <ಸಂ. ಜಗಲ ]

**ದಗಲೆ$_2$**, ಡಗಲಿ, ಡಗಲೆ, ದೊಗಲೆ, ದೊಗಳೆ (ಗು). ೧. ಸಡಿಲವಾದ ; ಅಳ್ಳಕವಾದ : ನನ್ನ ದೊರೆಯಾದ ಖಾಖಾನ್‌ಕಾಲಿಕಟ್ ದೊರೆಗೆ ಬಹುಮಾನವಾಗಿ ಕೆಲವು ಕುದುರೆಗಳನ್ನೂ, ದಗಲೆ ಅಂಗಿಗಳನ್ನೂ, ಜರತಾರಿ ಉಡುಪುಗಳನ್ನೂ . . . ಕಳುಹಿಸಿಕೊಟ್ಟಿದ್ದನು (ಪ್ರವಾಇ. II, ೦೪೯). (ನಾ). ೨. ಸಡಿಲವಾದ ಅಂಗಿ ಮೊದಲಾದುವು : ಬೂದುಬಣ್ಣದ ದಗಲೆ, ಕರಿ ಕೊವಲಿನ ಅಂಗಿ, ಜೊತೆಗೆ ಬೇಡಿ ಕೋಳಗಳ ಸೈನಿಕರ ತಂಡ ದಾರಿಯುದ್ದಕ್ಕೂ ಮುಕ್ಕಾಲು ಮೈಲಿ ದೂರದ ತನಕ ವ್ಯಾಪಿಸಿತ್ತು (ಪುನರು. ೫೫೭); ಮೈಯಿಂದ ಇಳಿಯುತ್ತಿದ್ದ ಬೆವರು ಅವನ ದಗಲೆಯನ್ನೂ ಸೊಂಟದ ಪಂಚೆಯನ್ನೂ ಒದ್ದೆಮುದ್ದೆಯನ್ನಾಗಿ ಮಾಡಿತ್ತು (ಮಲೆಮ. ೫೭೩). ೩. ಉಡುಪು ಕೊಳೆಯಾಗದಂತೆ ಮೇಲೆ ಕಟ್ಟಿಕೊಳ್ಳುವ ಉಡುಗೆ ; ಮೇಲಂಗಿ : ದಗಲೆಯನ್ನು ಎತ್ತಿಕೊಂಡು ಅದನ್ನು ಎದೆಯ ಮೇಲೆ ಪೊಂದಿಸಿ, ಕೊರಳಿಗೆ ಹಿಂಗಡೆಯಿಂದ ಕಟ್ಟುವಂತೆ ತಿಳಿಸಿದ (ಬಬ್ರುಮಾ. ೯೦) ; ಮಕ್ಕಳ ಮತ್ತು ಕೆಲಸಗಾರರ ಉಡುಪು ಕೊಳೆಯಾಗದಂತೆ ಮೇಲೆ ಹಾಕುವ ದಗಲೆ (Jumper, ಇಂಕನಿ). **ಡಗಲಿ :** ೩. ಕೆಂಪು ರುಮಾಲು ಡಗಲಿಗಳಿಂದಲಂಕೃತನಾದ ಉಸ್ಮಾನಸಾಹೇಬರು ಕರೆಯುತ್ತಾರೆಂದು ಹೇಳಲು, ಶೇಷಪ್ಪ ಮತ್ತೆ ತಿರುಗಬೇಕಾಯಿತು (ಗ್ರಾಮಾಯ. ೨೫೫) : ನಾನು ಅವರ ವಚನಕ್ಕೆ ಅನುಮತಿಸಿ, ಅವರು ಕೊಟ್ಟ ಒಂದು ಡಗಲಿಯನ್ನು ಮೈಯೊಳಗೆ ಹಾಕಿಕೊಂಡು ಅವರ ಸಂಗಡಲೆ ಬಿದ್ದೆನು (ಮಂಜುಳ. ೦೦೨) : ಅವರ ಮುರಿಗೀ ಮುಂಡಾಸ ಬಣ್ಣದ ಡಗಲಿ, ಕೈಯಾಗಿನ ಕಟಾರಿ . . . ಎಲ್ಲಾ ಗುಂಗ ಹಿಡಿಸಿ ಬಿಡತಾವ ! (ಚಂದಯ. ೧೦೨). **ಡಗಲೆ :** ೨. ಮೊಣಕಾಲುಗಳನ್ನು ಮುಚ್ಚುವಷ್ಟು ಉದ್ದನಾದ ಹಸುರು ರೇಸಿಮೆಯ ಡಗಲೆ ಅವನ ಸ್ಥೂಲವಾದ ಕಾಯವನ್ನು ಹೇಗೋ ಮುಚ್ಚಿತು (ಜಿರಂಗ. ೭೭). **ದೊಗಲೆ :** ೪. ಸಡಿಲು; ಅಳ್ಳಕ: ಯಾವುದೂ ಫಿಟ್ ಆಗಕೂಡದು, ಎಷ್ಟು ದೊಗಲೆ ಆದರೆ ಅಷ್ಟು ಚೆಂದ (ನನ್ನೂರು. ೦೯೦). **ದೊಗಳೆ :** ೪. ಗಂಡಸು ತುಂಬ ಉದ್ದವೂ ತೀರ ದೊಗಳೆಯೂ ಆದ ಜೈಲುಡುಪು ಧರಿಸಿದ್ದನು (ಪುನರು. ೩೩).

**ದಗಲೆ ಚಡ್ಡಿ, ದೊಗಳೆ ಚಡ್ಡಿ**=ಸಡಿಲವಾದ ಚಣ್ಣ,–ಚಲ್ಲಣ; ಅಳ್ಳಕವಾದ ನಿಕ್ಕರು: ರಾತ್ರಿಯಲ್ಲಾಗಲೀ, ಹಗಲಿನಲ್ಲಾಗಲಿ ದಗಲೆ ಚಡ್ಡಿಗಳನ್ನು ಹಾಕಿಕೊಂಡು ಮನೆಯಲ್ಲಿ ಓಡಾಡಬೇಡ (ಮಹಾಗ. ೦೦೨) ; ಬೆಳ್ಳಿಯ ನಡುಕಟ್ಟು–ನೀಲಿಯ ಮೇಲಂಗಿ–ದೊಗಳೆಚಡ್ಡಿ (hose) ತುಪ್ಪಟದ (fur) ಜೋಡು ಕಬ್ಬಿಣದ ತಲೆಮುಚ್ಚು (casque) ಒಂದು ಛುರಿಕೆಯು ನಡುವಿನಲ್ಲಿ ನೇತಾಡುತ್ತಿದೆ (ಅಯರ್ಲೆ. ೦). **ದಗಲೆ ಷರಾಯಿ, ದೊಗಲೆ ಷರಾಯಿ**= ಸಡಿಲವಾದ ಇಜಾರ,–ಪಾಯಿಜಾಮ : ಮೊಣಕಾಲಿನವರೆಗೆ ಬಂದು ಅಲ್ಲಿ ಗೊಂಡೆಯ ದಾರದಿಂದ ಕಟ್ಟಿದ್ದ ದಗಲೆ ಷರಾಯಿ ; ಅದರ ಎರಡು ಪಕ್ಕದಲ್ಲೂ ಗುಂಡಿಗಳು (ಯೋಧಪು. ೮೦); ಹಿಂದೆ ಬರುತ್ತಿರುವ ಮಾರ್ವಾಡಿಗಳನ್ನಾಗಲೀ, ದೊಗಲೆ ಷರಾಯಿಯವರನ್ನಾಗಲೀ ಕಂಡು ಕಂಬಿಕೀಳಲು ಏರ್ಪಾಟುಗಳನ್ನು ಮಾಡಿಕೊಳ್ಳಬಹುದು (ನಾಡಿಗೇ. ೪೫) ; ನಮ್ಮ ಜನರು ಅನ್ಯಾಯವಾಗಿ ದೊಗಲೆ ಷರಾಯಿ ವರ್ಗದವರಲ್ಲಿ ಸಾಲ ತೆಗೆದುಕೊಂಡು ನಾನಾ ವಿಧವಾದ ಕಷ್ಟ ನಷ್ಟ, ಅಪಮಾನಗಳಿಗೆ ಗುರಿಯಾಗುತ್ತಿದ್ದಾರಲ್ಲ (ಕಸಬು. ೭೦). **ದೊಗಳೆ ಷರಟು** = ಸಡಿಲವಾದ ಅಂಗಿ: ಸಾವಿರದ ಏಳನೂರ ಮೂರು ಸಂಖ್ಯೆಯ 'ಮಲ್ಲಿನ' ದೊಗಳೆ ಷರಟು (ಬಾಳಹೂ. ೩).

[ ←ಹಿಂ. ದಗಲ್, ದಗಲಾ ; ಮರಾ. ಡಗಳ, ಡಘಳ ]

**ದಗಲ್ಬಾಜಿ**, ದಗಲಬಾಜಿ (ನಾ). ೧. ಕಪಟ ; ಮೋಸ ; ವಂಚನೆ ; ದ್ರೋಹ: (೬). ೨. ಕಪಟಿ; ಮೋಸಗಾರ; ದಗಾಕೋರ: ಅವನೊಬ್ಬ ಭಾರಿ ದಗಲ್ಬಾಜಿ (೬೦೩). **ದಗಲಬಾಜಿ :** ೧. "ನನ್ನ ಹತ್ರ ದಗಲಬಾಜಿ ಮಾಡ್ತೀಯಾ ? " ಎಂದು ಗಂಗನನ್ನು ಬೈದನು (ಕಾನೂರು. ೧೯೮); "ನನ್ನ ಹತ್ತಿರ ದಗಲಬಾಜಿ ಮಾಡ್ತೀಯಾ ? " ಎಂದನು (ಮಲೆಮ. ೧೨೪).

[ ←ಮರಾ. ದಗಲ್‌ಬಾಜೀ ]

**ದಗಲ್ಬಾಜಿತನ**, ದಗಲಬಾಜಿತನ (ನಾ). ಮೋಸಮಾಡುವಿಕೆ ; ದಗಾ ಹಾಕುವಿಕೆ : ಆ ನಾಗಪ್ಪಯ್ಯನ ದಗಲ್‌ಬಾಜಿತನ ತಿಳಿದುದರಿಂದ, ಆ ನಾಗಪ್ಪಯ್ಯನನ್ನು ಹಿಡಿದು ತೂಗಹಾಕಬೇಕೆಂಬದಾಗಿ ಟೀಪುಸುಲ್ತಾನರು ಅಪ್ಪಣೆಕೊಟ್ಟಿದ್ದರಿಂದ (ರಾಜೇಂದ್ರ. ೦೭). **ದಗಲಬಾಜಿತನ :** ಸುಬ್ಬಕೃಷ್ಣನಿಗೆ ಮಧುಸೂದನನ ವಿಷಯದಲ್ಲಿ ವಿಶ್ವಾಸವಿತ್ತು. ಆದರೆ ಮುರಲಿಯ ದಗಲಬಾಜಿತನಕ್ಕೆ ಹೆದರುತ್ತಿದ್ದ (ರಾಗಿಹ. ೩೭). [ ದಗಲ್ಬಾಜಿ + – ತನ ]

**ದಗಳು** (ನಾ). ಒಂದು ಬಗೆಯ ಯುದ್ಧಸಾಧನ : ಚೇಳು ಬಾಣಗಳ ಱಾಟಳವುರಿಪೊಟ್ಟಣವೇಳುವ ಜಂತ್ರದ ದಗಳು ತೂಳುವ ಗುಂಡುಗಲ್ಗಳ ರಾಸಿ ಪಟ್ಟಣದಾಳುವೇರಿಯ ತುಂಬಿಹುವು (ಕಂನವಿ. ೬-೨೦).

[ ದೇ.॥ ತೆಲು. ವಗರು ]

**ದಗಾ**, ಡಗೆ$_2$, ತಗ, ದಗ, ದಗೆ$_2$, ದಹ್ಯ$_2$ (ನಾ). ಮೋಸ ; ಕಪಟ ; ವಂಚನೆ ; ದ್ರೋಹ : ಕುಡಿತಕ್ಕೆ ದುಡ್ಡಿಲ್ಲದೆ ಕಳ್ಳತನ, ಮೋಸ, ದಗಾ ಆರಂಭವಾಗಿವೆ (ನನ್ನೂರು. ೩೦೫). **ಡಗೆ$_2$ :** (೬). **ತಗ :** ನೂಱನಾದೊಡೆ ಕೊಂಬುದೇಱಾದೂಱನಬೇಡ ವಿಶಾಲ್ದದಡೆ ತಗವ ಕೊಡುವುದು ಸಾಲಿಗನು ಗೂಱ ತಿಂದಾನೆ (ಸರ್ವಜ್ಞ.ಬ.೮೯೭). **ದಗ:** ಇದು ಪಶ್ಚಾತ್ತಾಪವೊ, ಸ್ವಕ್ಷೇಮ ಚಿಂತನೆಯೊ . . . ದಗವೊ ಹೃದ್ಗತವಾದ ಅಭ್ಯಾಸ ಬಿದ್ದ ಮಂತ್ರ ಮನಸ್ಸನ್ನು ಸುಳಿಯಿತು (ಸಂಸ್ಕಾರ. ೮೨); "ಎಷ್ಟು ಬಾರಿ ದಗ, ಅಧರ್ಮ ನಡೆಸಿದ ಮೇಲೆ" ನೀನೆ ನನಗೊಟ್ಟ ದಗ. ನಾನ್ ನಿನಗ್ಮಾಕ್ದೆ–ನಾವು (ಶಕಾರ. ೨೩). **ದಗೆ$_2$ :** ದಗೆಯೆಂಬುವದು ಹಗೆಯೇ ಸರಿ (ಗಾದೆ). **ದಹ್ಯ$_2$:** ಅಮ್ರುತೂರ ಸಂದ್ಯ ಮಂಟಪದ ಸತ್ರಕೆ ಬಿಟ ಗ್ರಾಮಾಯಿದಕೆ ದಹ ಮಾಡಿದವ ಹುಳತು ಸಾವರು (ಎಕ. XVI, ಕುಣಿಗ. ೮೭-೯; 18 ನೆಯ ಶತ).

**ದಗಾ ಕೊಡು, ದಗೆ ಕೊಡು** = ಮೋಸಮಾಡು ; ವಂಚಿಸಂ : ನನ್ನ ಹಾಗೆ ಅದೆಷ್ಟು ದೊಡ್ಡಮನುಷ್ಯರಿಗೆ ದಗಾ ಕೊಟ್ಟಿದಾನೋ (ಸಾಹೇಬ್. ೨೮೨) : ಎತ್ತಿನ ಗಾಡಿಯವರು ಮೋಸ ಕೊಟ್ಟರು, ಲಾರಿಯವರು ದಗೆ

ಕೊಟ್ಟರು (ಚಾರುಚಾ. ೨೭೩). ದಗಾ ಮಾಡು=ಮೋಸಮಾಡು; ವಂಚಿಸು: ಆ ಚರಕಲ ರಾಜರು ಅರೆವಾಶಿ ಹಣಾ ಕೊಡದೆ ದಗಾವಾಡಿದ ವಿವರ ಸೋಮಶೇಖರನಾಯಕರಿಗೆ ಬರೆಸಿ ಕಳುಹಿದಲ್ಲಿ (ರಾಜೇಂದ್ರ. ೭); ನಂಜಾ! ಸಾವಿರರೂಪಾಯಿಗೆ ದಗಾ ಮಾಡಿದೆಯಾ (ಮಾಂಗಲ್ಯ. ೨೫). ದಗಾ ಹಾಕು, ದಗ ಹಾಕು = ದಗಾಕೊಡು: ನಾನೇನೂ ಅವರ ಸಾಲಕ್ಕೆ ದಗಾಹಾಕು ವುದಿಲ್ಲ (ಮುಳಬು. ೪೭೩); ಒಂದಲ್ಲ ಎರಡಲ್ಲ ಐವತ್ತುಸಾವಿರ ರೂಪಾಯಿ ಗಳನ್ನು ಕಾಗದ ಪತ್ರವಿಲ್ಲದೆ ಸಾಲ ಕೊಟ್ಟ ರಾಣಿಯನ್ನು ಹಿಡಿಸಿ ಅವಳಿಗೆ ದಗ ಹಾಕಬೇಕೆಂದು ಯೋಚಿಸಿದವನು ಅವನು (ಬಂಕಿಮ. ೨೯೨).

[ ←ಅರ. ಪಾರ. ಹಿಂ. ಮರಾ. ದಗಾ ]

**ದಗಾಕೋರ**, ದಗಾಖೋರ (ನಾ). ಮೋಸಗಾರ; ಕಪಟಿ; ವಂಚಕ: "ಏತಕ್ಕೂ ಹೇಸದವನು; ದಗಾಕೋರ; ಪಟಿಂಗ, ಠಕ್ಕ" (Scoundrel. ಇಂಕನಿ); ಎಲ್ಲರೂ ದಗಾಕೋರರೆ (ಕಂಗೂಲಿ. ೦೯೦). **ದಗಾಖೋರ**: ದಗಾಖೋರರ ಕೈಲಿ ಸಿಕ್ಕಿಬಿದ್ದ ನರೇಶನ ಮರಣ? (ಹಾಡುಹು. ೭೧): ಅವನು ದಗಾಖೋರನಾಗಿ ವಂಚನೆಯಿಂದ ಪರರ ಧನವನ್ನು ಕಸರಿ ಕೊಂಡಿರುವನೋ ಅಂತಹವನ ಮೇಲೆ ನಾವು ಡಕಾಯಿತಿ ನಡೆಯಿಸುತ್ತೇವೆ (ದೇವೀಚಾ. ೧೦೯); "ಅವನೆಂಥ ಸ್ವಾಮಿ...ದಗಾಖೋರ, ನಿಷ್ಪ್ರಯೋಜಕ" (ಶಾಯಿಳ. ೦೬೦). [ ದಗಾ + – ಕೋರ$_3$ ]

**ದಗಾಖೋರ** 'ದಗಾಕೋರ' ನೋ.

**ದಗಾಬಾಜಿ** (ನಾ).=ದಗಲ್ಬಾಜಿ ೧: ಅದೆಲ್ಲಾ ಬರೇ ಮೋಸ, ಸುಳ್ಳು, ದಗಾಬಾಜಿ, ಅದರಿಂದೇನೂ ಉಪಯೋಗವಿಲ್ಲ (ಸಾಹೇಬ. ೨೮೫).

[ ←ಪಾರ. ಹಿಂ. ಮರಾ. ದಗಾಬಾಜೀ ]

**ದಗುಂತಿ**, ಅದಗಂತಿ, ಡಗುಂತಿ (ನಾ). ೧. ಹೆಚ್ಚಳ; ಅತಿಶಯ; ಆಧಿಕ್ಯ: ಅಂತೆ ಮೂಱುಮವರಾವಾಸಂಗಳೊಳ್ ಪೇಟ್ಟೊಡುತ್ತಮಸಮಕ್ಕೃತ್ಯ ಫಲಂ ದಗುಂತಿ ಮಗಳೇ ನೀನಿಂತಿದಂ ನಂಬು (ಆದಿಪು. ೫-೭೩); ಕ್ಷಮೆ ಭೂರಿ ದಗುಂತಿ ಮೆಂಪು . . . ಚತುರಾನ್ವಿತಮೆಂಬ ನೆಗರ್ತ್ರೆಯಿಂದಿಳಾವಂತ ರೊಳಾರುಮೇಂ ದೊರೆಗೆ ವರ್ಪರೆ (ಶೋಕೋಪ. ೩೮೨೪. ೦-೦೦); ಪರಿ ರುಕ್ಮಿಣಿಯರ ರಾಗದ ಪರಮಪ್ರೇಮದ ದಗುಂತಿಯಂ ಬಣ್ಣಿಸುವಂ (ನೇಮಿಪು. ೭-೦೦೬): ಚದುರ ಚಾಗದ ದಗುಂತಿಯಂ ಮೆಱೆವ ವಿವಿಧ ವಿಟರೊಳಂ (ಪುಣ್ಯಪು. ೨-೭೭ ಪ); ಪಡೆದುದು ತನ್ನಿತಂಬಿನಿಯ ಕಾಯದ ಕಾಂತಿ ಸುಧಾಂಶುವಿಂದೆ ನೂರ್ಮಡಿಸುವ ಕಾಂತಿ ಸಂತತಿಯ ಸಾರಸ ಮುಚ್ಚಯದಿಂ ದಗುಂತಿಯಂ (ಪಾರ್ಶ್ವನೇ. ೮-೫೬). ೨. ಆಶ್ರಯ; ನೆಲೆ: ವಿನಯದ ಮೇರೆ ಧರ್ಮ್ಮದ ತವರ್ಮ್ಮನೆ ಸತ್ಯದ ಜನ್ಮಭೂಮಿ ಪಾಪಾಂತನದ ದಗುಂತಿ ಚಾಗದ ಮಹಾನಿಧಿ (ಎಇ. XIII. ೦೬೧-೨೬: 1055). **ಅದಗುಂತಿ**: ೧. ನೆಗಟ್ದ ಮಠಾಂಗನಾಜನದ ರೂಪುಗಳೆಲ್ಲಮದೀಕೆಯೊಂದು ದೇಸೆಗೆ ನಿವಿರ್ವೊಂದು ಪುರ್ವಿನ ನಯಕ್ಕಮರ್ಪೊಂದದಗುಂತಿಗೊಂದು ಭಂಗಿಗೆ ನೆಗಟ್ಟೊಂದು ಮೆಲ್ಪಿನ ತೊದಳ್ನುಡಿಗಪ್ಪೊಡಮೆಯ್ದೆ ವಾರವು (ಆದಿಪು. ೨-೭೫); ಸೋಂಕುವ ನಲ್ಲಳ ಸೋಂಕಲಂಪಿನುದ್ದಾನಿಯನೀಯೆ ಸಂತಸದ ದೊಂದದಗುಂತಿಯೆ ರೂಪುಗೊಂಡುದು (ಚಂದ್ರಪು. ೬-೬೯). ೨. ಅವರೊಡ ವುಟ್ಟಿದೊಳಜಿವಿನ ತವರೆನೆ ಧರ್ಮದದಗುಂತಿಯೆನೆ ನೆಗಟ್ಟಳ್ (ಎಕ. II, ೦೫೯-೬; ಸು. 950). **ಡಗುಂತಿ**: ೧. ಆ ಮಹಿಮಾವಿಲಾಸದ ಡಗು[ನ್ತಿ]ಯಾ ಪೆರ್ಗ್ಗಡೆ (ಎಇ. XIX, ೨೨೦-೨೧; 1037). P ಇದು 'ದಗುಂತಿ' ಎಂಬುದರ ಅಪಲಿಖಿತವಿರಬಹುದು. [ <ಅಗುಂತಿ ]

**ದಗೆ$_1$**, ಡಗೆ$_1$, ಢಗೆ, ಧಗೆ (ನಾ). ೧. ಕಾವು; ಝಳ; ತಾಪ: ಕುದಿವ ಕೊಱಂತೆ ಕುದಿದು ದಗೆಯೇಱಿದ ಕೋಡಗದಂತೆ ಬೆಱಗಾಗಿ (ಧರ್ಮಾಮೃ. ೩-೩೫): ಮೃಗನೇತ್ರೆಯರು ಪಥಿಕರ್ಗೆ ನಗುತ ನೀರೆಱೆವುತಿಹರು ವಿರಹಾಗ್ನಿಯಿಂ ದ[ಪಾಠಾಂ. ಡ]ಗೆ ಪೆಚ್ಚಲೆದೆಯೊಳವರಿಗೆ (ಕುಶಾಸಾಂ. ೨-೯೭); ವಿಪರೀತವಾಗಿ ಕಾಯುತ್ತ ದಗೆಯ ಸೀಮೆಯಾಗಿರುವ ಅರಬ್ಬೀದೇಶದಲ್ಲಿ (ಪ್ರಮುಹ. ೫೦). **ಡಗೆ$_1$**: ೧. ಬಿಸಿಲ ಡಗೆ ತಾಗಿ ವಸುಧೆಯವರೆಲ್ಲರು ಬಾಯ ಕಿಸುವುತ್ತಿದ್ದರು (ಮನುಗುಂ. ೨೫೯-೫೦): ಶೋಕದ ಡ[ಪಾಠಾಂ. ಬ]ಗೆಯೊಳುಬ್ಬಿದ ನಗೆಯಲಾ ಸ್ವೇದದಲಿ ರೋಮಾಂಚ ದುಗುಡದಲಿ ಪರಿತೋಷ . . . ಭೀಷ್ಮಾದಿಗಳೊಳಗೆ ಪಲ್ಲಟಿಸುತಿರ್ದುದು ಪಡಿಮುಹೂರ್ತದಲಿ (ಕುಪ್ಪಾಸ. ೧೫-೫); ಈ ಕಿಚ್ಚನೀಗೆ ಸಂಹರಿಸುವೆಂ ವರುಣಬಾಣದೊಳೆಂದು ಧನುವಿನಿಂ ಹರಿಸಿದಂ ಪಿರಿದು ಸಂಹರಿಸುವುರಿಯ ಡಗೆಯಾವರಿಸೆ . ನೀರ್ ನಿವಿಸಪದೊಳಗೆ (ಜಬಪು. ೪೦-೧೫); ಬೀಳ್ವೇಳ್ವ ಸುಳಿವ ಸುತ್ತುವ ಡಗೆಯುಂ ತರಹರಿವ ಸಾರ್ವ ಪಾರ್ವಬ್ಬರಿಪೆಸಕಂ ಮಿಱಿ ಕಾದಿದರ್ ಕಡುಗಲಿಗಳ್ (ಶಬಕಂ. ೪-೭೬); ಕಟ್ಟುಱದ ಡಗೆಯ ಪೇರೊಡಲ ಗೋರ ರೂಪಿನ ದಾನವಂ (ರಾಮಾಶ್ವ. ೧೦೨-೦). ೨. ಬಾಯಾರಿಕೆ; ಸೇದೆ: ಬಿಱುಬಿಸಿಲ ಸೆಕೆಯುಸುರ ಬಿಸಿ ಹೊಡೆದುದುರಿಹೊತ್ತಿ ಬಾಯ್ಬತ್ತಿ ಡಗೆಸುತ್ತಿ ಸಾವಡಸುತಿದೆ (ಹಡಕಾ. ೭-೯). **ಢಗೆ**: ೧. ವಿರಹದ ಢಗೆ ರಥಾಂಗದೊಳಿಳಿಯ ರವಿಯುದಯಾ ಚಳಕೆ ಬಂದ (ಕುಪ್ಪಾಕ. ೨-೧); ಝಳದ ಢಗೆ ಡಾವರಿಸೆ ಹೊಕ್ಕರು ಕೊಳನ (ತೊರರಾ. ೨-೪-೨೨); ಢಗೆಯಿಂ ನೀರ ಪೊಕ್ಕನೊ ಮಿತ್ರನೆಂಬಂ ತಾಗಲಸ್ತಮಯ (ಅಂಬಿಕಾ. ೨೩-೭೧). ೨. ಒಡಲ ಜಡಿದವು ರೋಮ ರೋಮದೊಳೆಡಸಿದಂಬುಗಳಂಗವೇದನೆ ತೊಡಕಿತುಬ್ಬರಿಸಿದುದು ಢಗೆ ಗೋಣಾರೆ ನೀರ್ದೆಗೆಯೆ ನುಡಿಯಲಾಱನು (ಕುಪ್ಪಾಭೀ. ೧೦-೨೪): ೩. (ಆಲಂ) ಕಳವಳ; ತಳಮಳ: ಮನದ ಢ[ಪಾಠಾಂ. ಡ]ಗೆ ಪನ್ನೀರ ಶೈತ್ಯದಿಂ ಪರಿವುದೇ (ಹಡಕಾ. ಪರಿ. ४-೬೩). ಮನದ ಢ[ಪಾಠಾಂ. ಡ]ಗೆ ಯಡಗಿದವು ಮತ್ಸ್ಯೇಶನ ಪುರಾಂತರದೊಳಗೆ ವೈ ಮಱಸನಪವಿತ ಭುಜಸತ್ವರಿದ್ದರು ಭೂಪ ಕೇಳೆಂದ (ಕುಪ್ಪಾವಿ. ೦-೩೨). **ಧಗೆ**: ೧. ಸುರ ತರುನಂದನಕ್ಕದಟ ನಂದನದಿಂ ಧಗೆ ಪೋಪುವಾ ಮಹೇಶ್ವರನ ಜಟಾಗ್ರ ದಿಂದಿಳಿದ ಗಂಗೆಯಾ (ಎಇ. XIII, ೪೪-೩೭; 1112); (P ಭಾಷಾಂತರದಲ್ಲಿ 'Danger' ಎಂದಿದೆ); ಹೊರಗೆ ಮುಗಿಲಿನಲ್ಲಿ ಮೋಡಕಟ್ಟಿ ಬಿಸಿಲಿಲ್ಲದಿದ್ದರೂ ಧಗೆ ಉಸಿರುಕಟ್ಟಿಸುತ್ತಿತ್ತು (ಚಂದಕೋ. ೧೨); ಹೊಗೆ ನುಂಗುವುದಿದೆ ಧಗೆಯ ಕಳೆವುದಿದ ಅಡಿಯಂ ಮುಡಿವರ ಬೆಳಗುವುದಿದೆ ಇದೆ (ಅರಳು. ೨೩೧-೭). ೩. ಒಳಗೆಯೊತ್ತುವ ಧಗೆಯ ಹೊಱಗಣ ತಳಿತ ಬಿಮ್ಮಿನ ನಗೆಯ ನೃಪಮಂಡಲದ ಮೌಳಿಯನೇನನೆಂಬೆನು (ಕುಪ್ಪಾಅ. ೦೪-೩೬); ವೆಗ್ಗಳಿಸಿ ಭೋಗಿಸಲು ಧಗೆಯಹುದಾಸಱಹುದು ಮತಿಗೆಡುವುದು ಪಗೆಯಹುದಾ ಸುಖ ತನಗೆ (ಭರತೇ. ೭-೨೮).

[ ←ಮರಾ. ಧಗ್./ತೆಲು. ದಗ ]

**ದಗೆ$_2$** 'ದಗಾ' ನೋ.

**ದಗ್ಗನೆ** (ಅ).=ಧಗದಗನೆ: ಬೆಂಕಿ ದಗ್ಗನೆ ಉರಿಯಿತು (ರೂಢಿ).

ದಗ್ಗನೆ ಹತ್ತಿಕೊಳ್ಳು = ದಗ್ಗನೆ ಉರಿ ಉಂಟಾಗು: ಬೆಂಕಿ ದಗ್ಗನೆ ಹತ್ತಿಕೊಂಡಿತು (ರೂಢಿ). [ ದಗ್$_0$ + – ಅನೆ$_1$ ]

**ದಗ್ಗಳಿ** 'ದೊಗ್ಗಳೆ' ನೋ.

**ದಗ್ಗುದುಳಿ** (ಕ್ರಿ). ಚೆನ್ನಾಗಿ ತುಳಿ; ನಂಗ್ನುನುರಿ ಮಾಡು: ಖಂಡ ತೋಗಲಲು ದಗ್ಗುದುಳಿದುರೆ ಕೆಲರು ಮಾಡಿದುದು ಕರಿಗಳಳಿವಿಯಲಿ ಯುಂಗ್ಗಡವನೇನೆಂಬೆ (ಅಂಬಿಕಾ. ೨೯-೧೫); ಎರಡೂ ಒಳಹೊಕ್ಕು ಮನಸ್ಸನು ದಗ್ಗುದುಳಿಯುವುದೂ ಉಂಟು (ದೇಕಸ್ಸ. ೯೦).

[ <ತಗ್ಗು$_1$ + ತುಳಿ$_1$ (<ತುಱು$_1$) ]

**ದಗ್ಧ** (ಗು). ೧. ಸುಟ್ಟ; ಬೆಂದ; ದಹಿಸಿದ: ವೈಮುರಿದಂ . . . ಸಂತವಿರಹ ಸಂತಾಪದಗ್ಧವಸುಧಾಧಿಪಂ! (ಶ್ರೀಕಾವ್ಯಾ. ೯೫-೪೭೩). ೨. ಬಾಡಿದ; ಬತ್ತಿದ; ಒಣಗಿದ. ೩. ಅಶುಭದ; ಅಪಶಕುನದ;

ಅವುಂಗಳದ. ೪. ದಂಷ್ಟ್ರ; ಕುತ್ಸಿತವಾದ. (ನಾ). ೫. ಸಂಶಯವಿಲ್ಲದಿರುವುದು; ನಿಶ್ಶಂಕೆ. ೬. ಸುಟ್ಟುದು; ದಹಿಸಿದುದು. [ ಸಂ. ]

**ದಗ್ಧಕ** (ನಾ). ಸುಟ್ಟಂತಹುದು ; ಹಪ್ಪಳ ಇತ್ಯಾದಿ : "ಹಪ್ಪಳಾದಿಗಳ್ ದಗ್ಧ[ ಪಾಠಾಂ. ಗ್ಧ]ಕ ಮಕ್ಕು" (ಮಂಗರಾ. ೬೪-೩). [ ಸಂ. ]

**ದಗ್ಧಕರ್ಪೂರ** (ನಾ). ಸುಟ್ಟ ಕರ್ಪೂರ ; ಉರಿದ ಕರ್ಪೂರ : ದಗ್ಧಕರ್ಪೂರದಂತೆಲ್ಲಾ ಜನಂಗಳೊಳ್ ಸ್ನಿಗ್ಧವೆನೆ ವಸರಿಸುವ ಕಾಮಾರಿಯುಗ್ನಿಕರರುಗ್ಧವಲಿಮಾಸ್ತ್ರ ತ್ರಿಯುಕ್ತನೆ (ವೀಶ್ವಶು. ೩-೦೪-೦).

[ ದಗ್ಧ + ಕರ್ಪೂರ ]

**ದಗ್ಧಪಟ** (ನಾ). ಸುಟ್ಟ ಅರಿವೆ, ಬಟ್ಟೆ : ನಿತ್ಯನೇಮವೆಂದು ಮಾಡುವ ಭಕ್ತಿವಿದಂಗೆ ಮಾಡಿಯೂ ಮಾಡದಿದ್ದಡೇನು ದಗ್ಧಪಟದಂತೆ (ಷೋಡಶಮಾ. ೧೪-೫೦) ; ಅನುಭಾವಿಯಾದಡೆ ಸುಟ್ಟ ಸರವೆಯಂತಿರಬೇಕು ಅನುಭಾವಿಯಾದಡೆ ದಗ್ಧಪಟದಂತಿರಬೇಕು (ಅಬಂಡೀ. ೧೪೩-೧೨) ; ದಗ್ಧಪಟವೆಂದಿನಂದದಿ ತೋಜಲಿಲಿಯಲಿ ವಿದಗ್ಧರಾರದನುಟ್ಟು ತಳ್ಳಿದರು ಹಿಮಮಂ (ಕವಿಚ. III, ೦೨೦ ನಿಜದೀಪಕಾರತ್ನ). [ ದಗ್ಧ + ಪಟ್ಟ ]

**ದಗ್ಧಪಟನ್ಯಾಯ** (ನಾ). ಸುಟ್ಟ ವಸ್ತ್ರದಂತೆ ಮೂಲರೂಪವಿದ್ದರೂ ಮೂಲಗುಣವಿಲ್ಲದ ಸ್ಥಿತಿಯನ್ನು ವಿವರಿಸುವ ಒಂದು ಬಗೆಯ ನ್ಯಾಯ : ಬಾಹ್ಯಕರಣಂಗಳು ಕರಣಮದಕ್ಕೆ ತಿಜಹುಗೊಡದೆ ಅಳವಟ್ಟು ಅವಗ್ರಹಿಸಿ ದಗ್ಧಪಟನ್ಯಾಯದ ಹಾಂಗೆ ತೋಜುಕೆಯಿದ್ದು ಅವಲ ಗುಣ ಧರ್ಮ ಕರ್ಮಂಗಳೇನೂಯಿಲ್ಲದೆ ಸದ್ಯೋನ್ಮುಕ್ತನಾಗಿ (ಶಿವಗೋ. ೨-೮೦).

[ ದಗ್ಧಪಟ + ನ್ಯಾಯ ]

**ದಗ್ಧವಾಣಿ** (ನಾ). ಚೆನ್ನಾಗಿ ಮಾತನಾಡುವುದಕ್ಕೆ ಬಾರದವನು ; ವಾಗ್ಮಿಯಲ್ಲದವನು : ಕವಿಯಂ ಕಂಡೊಡೆ ಶಾಸ್ತ್ರಹೀನನಿವನೆಂದಿಂತಾರ್ದು ಶಾಸ್ತ್ರಜ್ಞನಂ ಕವಿಯಲ್ಲೆಂದಣಮಾರ್ದು ಮಿಕ್ಕ ಬಹುಶಾಸ್ತ್ರಜ್ಞನಪ್ಪಾ ಮಹಾಕವಿಯಂ ಕಂಡೊಡೆದಗ್ಧವಾಣಿಯವನೆಂದಿಂತಾರ್ದು ಹಾಸ್ಯೋಕ್ತಿಯಿಂ ಕವಿಗಳ್ ವರ್ತಿಪರ್ (ಸೂಕ್ತಿಸು. ೦-೩೭). [ ದಗ್ಧ + ವಾಣಿ₁ ]

**ದಗ್ಧವಾರಿ** (ನಾ). ಸುಟ್ಟು ಆವಿಯಾಗಿ ಹೋದ ನೀರು(?) : ಉಂಡಬಿದವ್ವದು ಎಮ್ಮಯ ಕಾರವನೋವೆಮ್ಮ ಪುತ್ರಶೋಕಾನಲನಿಂ ನರಪಾಲ ಮತ್ತಮನಲಾಂತರಮೇವುದೊ ದಗ್ಧವಾರಿಯಂಬುದುಮುಂಟೆ (ಅಜಿತ. ೦೦-೩೪). [ ದಗ್ಧ + ವಾರಿ₂ ]

**ದಗ್ಧಹಸ್ತ** (ನಾ). ೧. [ಸಾಮುದ್ರಿ] ದುರದೃಷ್ಟಕರವಾದ ಕೈ; ಬರಿಗೈ. ೨. ಅದೃಷ್ಟವಿಲ್ಲದವನು ; ಬರಿಗೈಯವನು: ಯಾವಾತನ ಹಸ್ತದಲ್ಲಿ ರೇಖೆಗಳು ಕಪ್ಪಾಗಿಯಿರಲು ಆತನನ್ನು ದಗ್ಧಹಸ್ತನೆಂದು ಹೇಳುವರು (ಸಾಮುಂ. ೯೪-೮). [ ದಗ್ಧ + ಹಸ್ತ ]

**ದಗ್ಧಿಕೆ** (ನಾ). ಸೀದುಹೋದ ಅನ್ನ ; ಕರಿಕಾದ ಅನ್ನ ; "ಸುಟ್ಟ ಅನ್ನ ಹೊತ್ತು" (ಗಂಗಾಮು. ೦೬೩). [ ಸಂ. ದಗ್ಧಿಕಾ ]

**ದಗ್ಗಿ** 'ದೊಗ್ಗಳೆ' ನೋ.

**ದಚ್ಚಿ** (ನಾ). ೧. ಹಣಿಸೇಬೀಜದ ಬೇಳೆ ; ಹುಣಿಸೆಪಕ್ಕ. ೨. ಕವಡೆ. 'ದಚ್ಚಿಬಾರ' ಪರಾ. ೩. ದಚ್ಚಿಬಾರದ ಆಟದಲ್ಲಿ ಬೀಳುವ ನಾಲ್ಕರ ಗರ ; ಚೌಕ.

ದಚ್ಚಿ ಬಾಚು=ಕವಡೆಯಾಟದಲ್ಲಿ ನಾಲ್ಕರ ಗರ ಬಿದ್ದ ಕವಡೆಗಳನ್ನು ಬಾಚು : ಕೈಮೇಲೆ ಕವಡೆಯಾಡುವಾಗ ಪ್ರತಿಸಾರಿಯೂ ಕವುಲಿಯೇ ದಚ್ಚಿ ಬಾಚುತ್ತಿದ್ದಳು (ರೂಢಿ). ದಚ್ಚಿಯಾಟ = ಚೌಕಾಬಾರ: ದಚ್ಚಿಯಾಟ ಆಡೋಣ ಬಾ (ರೂಢಿ). [ ದೇ.೩ ತಮಿ. ತಚ್ಚಿ ; ತೆಲು. ದಚ್ಚಿ ]

**ದಚ್ಚಿಬಾರ** (ನಾ). (ಕವಡೆಯಿಂದಾಡುವ) ಚೌಕಾಬಾರ : ದಚ್ಚಿಬಾರ ಆಡೋಣ ಬಾ (ರೂಢಿ). [ ದಚ್ಚಿ + ಬಾರ್ನ್ಯ./ತಮಿ. ತಚ್ಚಿಪಾರಾ ]

**ದಟದಟ** (ನಾ). ಒಂದು ಅನುಕರಣ ಶಬ್ದ. 'ದಟದಟಿಸು' ಪರಾ.

**ದಟದಟಿಸು** (ಕ್ರಿ). ದಟದಟ ಎಂದು ಶಬ್ದಮಾಡು : ಮುಗಿಲಡವಿಯೊಳ್ಪ್ರಜ್ವಲೆಯುಗುಳ್ದ ದವಶಿಖಿಯಂತೆ ಬಗೆಗೊಳಿಸಿ ಬಳ್ಳಿಮಿಂಚಾವಹ್ನಿ ದಟದಟಿಸಿ ದಗದಗಿಪ ದವದಂತೆ ಸಿಡಿಲ ರವವೆಸೆಯೆ (ಶಾಂಂಡಭು. ೧೫-೩೯).

[ ದಟದಟ + -ಇಸು₂ ]

**ದಟಲ್** (ನಾ). ಒಂದು ಅನುಕರಣ ಶಬ್ದ : ಜೊಜ್ರೆಂಬ ಚುಮ್ಮೆಂಬ ಚಿಕ್ಕೆಂಬ ಧೊಕ್ಕೆಂಬ ಧಡಲೆಂಬ ದಟ[ಪಾಠಾಂ. ಡಟ, ಡಣ]ಲೆಂಬ . . . ಕೊರಸಿಗಳುರವಣೆಯ ದನಿಯುಡಸುತಂ ಪುಟ್ಟೆ (ಇಹರ. ದೇ. ೪೩-೦).

**ದಟ್ಟ₁** (ನಾ). ೧. ಒತ್ತಾದುದು; ಸಾಂದ್ರವಾದುದು : "ಘನ. ನಿರಂತರ, ಸಾಂದ್ರ-ದಟ್ಟವಾದುದು" (ನಾಚಿರಾ. ೬); "ಬಹುಳಂ ಘನಂ ಸಾಂದ್ರಮವಿರಳಂ ದಟ್ಟಮದು" (ಮಂಗರಾ. ೦೩೮-೪) ; ಆಶಾವಧೂ ದೌತ್ಯವರ್ತನದಿಂದಂ ಗಗನಸ್ಥಳೀಕುಲಟೆ ಕೊಂಡಳ್ ನೀಲ ಚೇಲಾವಗುಂಠನವಂ ತಾನೆನೆ ದಟ್ಟಮಾಗಿದೆ ತಮಂ ತಳ್ತತ್ತು ದಿಕ್ಪ್ರಾಂತಮಂ (ಅನಂಪು. ೭-೭೩) ; ದಟ್ಟದ ಸೀರೆ ಬಟ್ಟನ ಬಟ್ಟುಂಗುರಯಿಟ್ಟಾ ಕಿವಿಯ ಕಲ್ಲೋಲೆ (ಶ್ರೀಪಾಲ. ೪-೭೩): ಆ ವಾಯುಘೊಂದೊಂದು ತಳದೊಳಗಿಪ್ಪತ್ತುಸಾಸಿರಗಾವುದ ದಟ್ಟಾ ಗಾವುದಕಿಷ್ಟು ಕಡಿಮೆ ತುದಿಗವಲಿಲ್ಲಿ ಶೀವಿರುತಿಹುವಾಜುದ್ರವ್ಯ (ಭರತ. ೬೭-೭೦) ; ಗುರುವನ್ನು ಸುತ್ತಲೂ ಆವರಿಸಿಕೊಂಡಿರುವ ವಾಯುಮಂಡಲವು ಬಲು ದಟ್ಟ ಮತ್ತು ದಪ್ಪ (ಜ್ಯೋತಿರ್ವಿ. ೦೩೩). ೨. ಒತ್ತಾಗಿ ಹೆಣೆದ ಬಟ್ಟೆ : ಮಂದರಿಗೆಯನ್ನು ಹಾಸಿ ಅದರ ಮೇಲೆ ಸತ್ತಿ ದಟ್ಟವೊಂದನ್ನು ಹಾಕಿ ಮಲಗಿಕೊಂಡೆ (ಹಂಗಾಳ್. ೨೦೬) ; ಹಲವಾರು ಬಣ್ಣಬಣ್ಣದ ಬಟ್ಟೆಯ ಚೂರುಗಳನ್ನು ನೇರವಾಗಿ ಕತ್ತರಿಸಿ ಸೇರಿಸಿ ಹೊಲಿದ ದಟ್ಟಗಳನ್ನು ನೆಲದ ಮೇಲೆ ಎಲ್ಲೆಲ್ಲೂ ಹಾಸಿದಂತೆ ಕಾಣಿಸುವ ಹೊಲಗದ್ದೆಗಳು(ನಂಟರು. ೧೩೦).'ದಟ್ಟಿ₁' ಪರಾ. (ಗು). ೩. ದಪ್ಪವಾದ ; ಮಂದವಾದ; ಸಾಂದ್ರವಾದ : ಹೊಲಸುಮೈಯವಗೇಕೆ ಹೊಸ ಕಸ್ತೂರಿ ವಾಟ ತಲೆದೋಜುವವಗೇಕೆ ದಟ್ಟ ಪುನುಗು (ಪುರಂದ. ೦-೦೦೦-೦). 'ದಟ್ಟಗತ್ತಲೆ' ಪರಾ.

[ ದೇ. ೩ತಮಿ. ಮಲ. ತಟ ; ತುಳು. ದಟ, ದಟೊ ; ತೆಲು. ದಟ್ಟ ; ಕೋ. ಡಾಟ./ಮರಾ. ದಾಟ್ ]

**ದಟ್ಟ₂** (ನಾ). ಒಂದು ಬಗೆಯ ವಾದ್ಯ : ಈಶಾನ ಈಶ್ವರಮುಡಿಯಾರ್ಗ್ಗೆ ಕೊಟ್ಟ ಶಿವಳಿ ೧ ದಟ್ಟ ೩ ಖಣ್ಡಿಕೆ ೩ . . . , ಪಞ್ಚಮಹಾಶಬ್ದಮಂ ತ್ರಿಕಾಲಂ ಬಾಜಿಸುಂದಕ್ಕೆ (ಎಪಿಕ. ೧೧೪೩, ೨೮-೦೪ ; 1033). [ ? ]

**ದಟ್ಟ₃** (ನಾ). ಹೆಣ ; ಶವ(?) : ಹರ ಗಿರಿ ಬಲ ಪಾರ್ವತಿ ವಟ ತರು ಪುಳಿನಂ ದ್ವಿಫಳಿ ವಾಣಿ ತುಕ ನರಿ ದಟ್ಟಂ ನೊರೆ ಪುಣ್ಯ ಪಾವು ಶುಭ ಸುಖ ವರ ಸಿತ ಪದಿನೆಂಟು ನಾಮ ಶಿವಶಬ್ದಂಗಳ್ (ನಾನಾರ್ಥಂ. ೫). [?]

**ದಟ್ಟಂದರಿ** (ಕ್ರಿ). ಬಟ್ಟೆಯನ್ನು ಹರಿ,-ಕತ್ತರಿಸಂ : ಪುರ್ಚಿನಿಂ ಕುಣಿದಾಡಿ ದಟ್ಟಂದರಿವ ನಗುವ ಕವಡಿನಟಮುಟದ ವೇಸಂದಳೆಯುದಿರ್ಪೊಡಂ ನನ್ನಿ . . . ಪೊಡಕರಿಪ ದಾರಿಯನಿತ್ತನಿರುಕಿಸಾ ದುಃಖದಿಂ ಪರಿಪಕ್ವಮಾದ (ಸಂಸಪ. ೨೫-೦೪). [ ದಟ್ಟ₁ + ತರಿ₁ (< ತಱಿ₁) ]

**ದಟ್ಟಕೂದಲು** 'ದಟ್ಟಗೂದಲು' ನೋ.

**ದಟ್ಟಗತ್ತಲೆ** (ನಾ). ಸಾಂದ್ರವಾದ ಕತ್ತಲೆ; ಕಗ್ಗತ್ತಲೆ: ಪಾತಾಳದಡಿಯ ದಟ್ಟಗತ್ತಲೆಯನ್ನೆತ್ತಿ ಸತ್ಯಲೋಕದ ಪಾವಟಿಗೆಗೆ ಹೊದೆಯಿಸಿದಂತಿದೆ (ಮಂತ್ರಶ. ೯೦-೦೫). [ ದಟ್ಟ₁ + ಕತ್ತಲೆ₁ (<ಕಟ್ತಲೆ) ]

**ದಟ್ಟಗಾಡು** (ನಾ). ಒತ್ತಾದ ಕಾಡು,-ಅರಣ್ಯ : ಮಲೆಯ ಬೀಡಿನೆದೆಯ ಮೇಲೆ ದಟ್ಟಗಾಡು ಹಬ್ಬಿರೆ (ಅನಿಕೇ. ೪೨-೬). [ ದಟ್ಟ₁ + ಕಾಡು₃ ]

**ದಟ್ಟಗೂದಲು, ದಟ್ಟಕೂದಲು** (ನಾ). ಒತ್ತಾದ ಕೂದಲು : (ಕ). ದಟ್ಟಕೂದಲು : ಅವಳಿಗೆ ದಟ್ಟಕೂದಲಿದೆ (ರೂಢಿ).

[ ದಟ್ಟ₁ + ಕೂದಲು (<ಕೂಂದಲ್) ]

**ದಟ್ಟಗೆ$_1$** (ನಾ). ಸೀರೆಯ ಸೆರಗು (?) : ಎಲೆಯಕ್ಕ ನಿನ್ನ ಪುರದೊಳಗೆ ಪರಮೇಶ್ವರಂ ಗೆಲವಿನಿಂ ಶ್ರೀಗಂಧವಿಧುಲೇಖನೀಲವಮಂ ವಿಲಘದಿಂ ಕುಟು ಹಾಂತು ನೆಲಸಿದನಿದೇನೆಂದು ಗಿಳಿ ಕೇಳಲವಳು ನಾಣ್ಚಿ ಒಲವಿನಿಂ ದಟ್ಟ ಗೆಯ ಮುಟಿಸಿಕೊಂಡಳು (ಪ್ರಭುಪು. ೯-೧೪೨). [ ? ]

**ದಟ್ಟಗೆ$_2$** (ಅ). ಹೆಚ್ಚು ಒತ್ತಾಗಿ ; ತುಂಬ ನಿಬಿಡವಾಗಿ; ಸಾಂದ್ರವಾಗಿ: ಬೀಜಗಳನ್ನು ದಟ್ಟಗೆ ಬಿತ್ತಬಾರದು (ರೂಢಿ). [ ದಟ್ಟ$_1$ + – ಅಗೆ$_3$ ]

**ದಟ್ಟಡಿ, ತಟ್ಟಡಿ** (ನಾ). ಮಕ್ಕಳು ನಡೆಗಲಿಯುವಾಗ ಹತ್ತಿರ ಹತ್ತಿರ ವಾಗಿ ಇಡುವ ಹೆಜ್ಜೆ ; ಒತ್ತಾದ ಹೆಜ್ಜೆ ; ತಪ್ಪುಹೆಜ್ಜೆ : ತಳರ್ನಡೆ ಮು ದ್ದು ಮೊ ಗ ಂ . . . ದಟ್ಟಡಿಯೊಳ್ಪರಿದೋಡುವಂಗಣಂ ನೆಱೆ ತನಗೊಪ್ಪುವರ್ಭಕನನೊರ್ವನನಾಂ ಪಡೆವಂದಮಾವುದೋ (ಸುಕುಮಾ. ೯-೯೯) ; ಬ್ರಹ್ಮಾಂಡ ಪವಣಿಸಿದ ವಿಲಸಿತದ ವಿಭುವಿಂಗೆ ದಟ್ಟಡಿ ಬಳುಕು ನಡೆ ಮೆಲ್ನುಡಿಗಳೆಂಬಿವು ತಿಳಿವವರ ಮನಸಿಂಗೆ ಮಱೆ ತಾನಲ್ಲವೇಯೆಂದ (ತೊರವೆ. ೦-೮-೭೬) ; ಮೆಲ್ಲಮೆಲ್ಲನೆ ದಟ್ಟಡಿಯನಿಡಲ್ ಗೆಜ್ಜೆಗಳ್ ಘಲ ಘಲ್ಲನೆ . . . ಪಳಿಕಿನಿಂ ಸವೆದ ನೆಲಗಟ್ಟು ಜಾರ್ವುದು (ಚಿಂಪು. ೫-೪೦) ; ದಟ್ಟಡಿಯನಿಕ್ಕುವ ಬಾಲಕನಂಗದೊಂದು ಮಾರ್ಪೊಳಟರೆ ನೀಲಕುಟ್ಟಿಮ ದೊಳ್ (ರಾಜಶೇ. ೪-೭೨) ; ಶಿಷ್ಯಂಗೆ ತೊದಲುನುಡಿಯೇಕೆ ಕಳ್ಳಂಗೆ ದಟ್ಟಡಿಯದೇಕೆ (ಸರ್ವಜ್ಞ. ೦೦೯೬) ; ಹೆಜ್ಜೆಹೆಜ್ಜೆಗೆ ತಪ್ಪ ಮಾಡಿದರೇನಹುದು ದಟ್ಟಡಿಯನಿಡದೆ ನಡೆ ಕಲಿಯಬಹುದೇ ? (ಅರಳು. ೨೭೬-೪). **ತಟ್ಟಡಿ** : ಅಂಬೆಗಾಲಿಂದ ತೊದಲುಲಿದ ತಟ್ಟಡಿಯಿಟ್ಟು ಬೆಳಬೆಳದು (ಜಿನಮು. ೪೦-೪). [ ದಟ್ಟ$_1$ + ಅಡಿ$_1$ ]

**ದಟ್ಟಡಿಕಾಱ** (ನಾ). ದೃಢವಾದ ಹೆಜ್ಜೆಯನ್ನು ಹಾಕುವವನಂ ; ಗಂಭೀರ ವಾದ ನಡಗೆಯನ್ನುಳ್ಳವನು: ಹಲವು ಪಯಣದೊಳು ದಟ್ಟಡಿಕಾಱ ಗಂಗಾ ಕೂಟವದು ಮುಟ್ಟಮುಟ್ಟಲಾಯ್ತೆನೆ ಬರುತಿರ್ದ (ಭರತೇ. ೩೬-೨೪).

[ ದಟ್ಟಡಿ + – ಕಾಱ ]

**ದಟ್ಟಡಿಯಿಡಿಸು** (ಕ್ರಿ). ನಡೆಗಲಿಸು ; ತಪ್ಪುಹೆಜ್ಜೆಯನ್ನು ಹಾಕುವಂತೆ ಮಾಡು : ಪಟ್ಟಾಭಿಷೇಕಾನು ಕಟ್ಟಿದಾನೆಯ ನೋಡಿ ತೊಟ್ಟ ಭೂಷಣವು ಮಾವುತನಿಗೆ ಕೊಟ್ಟಾನು ದಳಕರ್ತ ಮೆಚ್ಚಿದನಾನೆಯ ದಟ್ಟಡಿಯಿಡಿಸಿ ನೋಡಿದರು (ಸೌಂದಕಾ. ೫-೬೦). [ ದಟ್ಟಡಿ + ಇಡಿಸು$_1$ ]

**ದಟ್ಟಡಿಯಿಡು** (ಕ್ರಿ). ನಡೆಯಲು ಪ್ರಾರಂಭಿಸಂ ; ತಪ್ಪುಹೆಜ್ಜೆಹಾಕು ; ನಿಧಾನವಾಗಿ ನಡೆ : ಎಡೆಯಾಡಿದವುದು ರನ್ನದ ಸೊಡರನೆ ಹರಿನೀಳ ರತ್ನಕುಟ್ಟಿಮದೊಳ್ದಟ್ಟಡಿಯಿಡುವ ತನೂಭವನಂ ನಡೆ ನೋಡಲ್ಪಡೆದ ತಾಯ ಜನ್ಮಮೆ ಸಫಳಂ (ಮಲ್ಲಿಪು. ೩-೧೦೮) ; ಚಲನದೊಳ್ ಭವನಾಂಗಣ ದೊಳ್ ಕಂದನೆಂದು ದಟ್ಟಡಿಯಿಡುವಂ (ಚಂದ್ರಪು. ೩-೪೮) ; ದಟ್ಟಡಿಯಿಟ್ಟು ಭಕ್ತಿ ತನ್ನಯ ಮನೆಮಂ ಬಂದಡರೆ ಭರಂ ಮಿಗೆ ಮುದದಿಂದಂ ಪುಷ್ಪಾಪಚಯಕೆ ಗಿರಿಸುತೆ ಬಂದಳ್ (ಗಿರಿಕ. ೫-೫೦) ; ದಟ್ಟಡಿಯಿಡುತಲೆ ಬೆಣ್ಣೆಯ ಮೆಲುವ ತೋಳನಾನ್ನಡ್ಯೆ (ಪುರಂದ. ೩-೦೮೯-೩) ; ಅಂಬೆಗಾಲಿಕ್ಕಿ ತೊಳಲುವವನಲ್ಲ ಕಾಲು ಬಲಿದು ದಟ್ಟಡಿಯಿಡುವವನಲ್ಲ ಬಾಲನೆಲ್ಲಿಗೆ ಹೋದನವ್ವ (ಮೋಹತ. ೯-೮೩). [ ದಟ್ಟಡಿ + ಇಡು$_1$ ]

**ದಟ್ಟಣೆ** (ನಾ). ನಿಬಿಡತೆ ; ಒತ್ತಾಗಿರುವುದಂ ; ಕಿಕ್ಕಿರಿದಿರುವಿಕೆ ; ಸಾಂದ್ರತೆ ; ನೆರವಿ : ಕೊಡರಿಂದಡೆ ತಾಂ ಕೈಗಟ್ಟಿ ಮೃಡನೊಡ ನಾದಡಂಜದೆ ಗೆಲಲು ಜಂಗಮದ ದಟ್ಟಣೆಗೆ ಸೈರಿಸುವ ಮನವಳವಟ್ಟಿರಲು (ಬಸವು. ೮-೫೬) ; ಕಿಚ್ಚಿನುರುಬೆಯ ದಟ್ಟಣೆಗೆ ಧಾರೆಗಳ ಬಿಡುತೆಣ್ಣೆಗಳ ಪಕ್ಕಲೆಯ ಥಟ್ಟುಗೆಡುವಾನೆಗಳಿಗಾನೆಯ ಕಟ್ಟುತ (ತೊರವೆ. ೫-೭-೧೩); ಜನ ವಸತಿಯ ದಟ್ಟಣೆಯಿಂದ ನಿರ್ಣಯಿಸಲ್ಪಡುವುದಾದರೆ ದ್ರಾವಿಡಜನಾಂಗದ ಗುರುತ್ವಾಕರ್ಷಣಾವು ಮೈಸೂರುರಾಜ್ಯದ ಸಮಿಾಪವರ್ತಿಯಾಗುವುದು (ತತ್ವಜ್ಞಾ. ೪೨೩). [ ದಟ್ಟಯಿಸು + – ಅಣೆ$_4$ ]

**ದಟ್ಟದರಿದ್ರ** (ನಾ). ಕಡುಬಡವ ; ನಿರ್ಗತಿಕ : ದಟ್ಟದರಿದ್ರನಂತೆ ಕಾಸಿಗೆ ಮನಮಿತ್ತನೆಂದಮಳಕೀರ್ತಿನಿತಂಬಿನಿ ದೂಱುತಿರ್ಪಳ್ (ವೀರವಿ. ೨-೫೪) ; ದಟ್ಟದರಿದ್ರರು ಮೊದಲಾಗಿ ಹತ್ತನು ಬಿಟ್ಟಹರುಂಟು ಬಾಹ್ಯದೊಳು (ಭರತೇ. ೭೦-೯೨) ; ಸತಿಪತಿಯರು ರೂಪಸಂಪನ್ನರಾದರೆ ದಟ್ಟದರಿದ್ರರು ಅರರೆ ! (ಅಂಜಾಪ. ೧೮೦-೯೩) ; ಹೊಟ್ಟೆಗೆ ಹಿಟ್ಟಿಲ್ಲದ, ಮೈಗೆ ಬಟ್ಟೆಯಿಲ್ಲದ, ದಟ್ಟದರಿದ್ರರಿಗೆ ಕುಲವಂತೆ ಕುಲ (ತುಂಗಭ. ೫೪) : ಇನ್ನೊಬ್ಬರ ಅನುಕೂಲತೆಗೆ ಒದಗದ ಲಕ್ಷಾಧೀಶನು ದಟ್ಟದರಿದ್ರನೆಂದೇ ನನ್ನ ಅಭಿಪ್ರಾಯ (ರಂಗರೂ. ೦೫೮). [ ದಟ್ಟ$_1$ + ದರಿದ್ರ ]

**ದಟ್ಟದಾರಿದ್ರ್ಯ** (ನಾ). ಕಡುಬಡತನ ; ನಿರ್ಗತಿಕತನ : ಶ್ರೀರಮ್ಯವಪ್ಪ ಭೋಗಂಗಳಳಿದಾ ದಟ್ಟದಾರಿದ್ರ್ಯವಾಗಲು (ವೀಶೈಪು. ೩-೦೬-೦೪).

[ ದಟ್ಟ$_1$ + ದಾರಿದ್ರ್ಯ ]

**ದಟ್ಟದಾರಿದ್ರ್ಯತ್ವ** (ನಾ). = ದಟ್ಟದಾರಿದ್ರ್ಯ : ಅಕಲಂಗೆ ಸಕಲರಾಜ್ಯಂ ತ್ರಿಕರಣಶುದ್ಧಂಗೆ ದಟ್ಟದಾರಿದ್ರ್ಯತ್ವಂ . . . ಮೆರೆವುದೀ ಕಲಿಯುಗದೊಳ್ (ನೀತಿಸಾ. ೧೫೨). [ ದಟ್ಟ$_1$ + ದಾರಿದ್ರ್ಯತ್ವ ]

**ದಟ್ಟದೊವಲ್** (ನಾ). ದಪ್ಪವಾದ ತೊಗಲು : ನಂಜುಂಡಂ ದಟ್ಟದೊ [ಪಾಠಾಂ. ದ]ವಲಂ ಪೊದೆದಗಜೆವೆರಸು ಬೆರೆವೊಡಲೊಳಿರ್ದಂ (ರಾಮಾಶ್ವ. ೦೦೫-೬). [ ದಟ್ಟ$_1$ + ತೊವಲ್$_2$ (<ತೋಲ್$_1$) ]

**ದಟ್ಟಪಳುವ** (ನಾ). = ದಟ್ಟಗಾಡು : ಸಾಗಿದಳು ಹಜ್ಜೆಹಜ್ಜೆಯನಿಟ್ಟು ದಟ್ಟಪಳುವದ ಪಸುರ್ ನೆಳಲೊಳ್ (ಶ್ರೀರಾಮಾ. ೧೨೬-೭೭).

[ ದಟ್ಟ$_1$ + ಪಳುವ (<ಪಱುವ) ]

**ದಟ್ಟಯಿಸು, ದಟ್ಟಯ್ಸು, ದಟ್ಟವಿಸು, ದಟ್ಟೈಸು$_1$, ದಟ್ಟೈಸು** (ಕ್ರಿ). ೧. ಒತ್ತಾಗು ; ಸಾಂದ್ರವಾಗು ; ದಟ್ಟವಾಗು : ಧಿಗಧಿಪರೆಣ್ದೆಸೆಗಾಂತಿರೆ ಭುಜದೊಲು ಗಗನದ ಮೇಲ್ಕಟ್ಟುಂ ದಟ್ಟಯಿ [ಪಾಠಾಂ. ದಟ್ಟೈ]ಸಲು ಮಿಗೆ ಭಕ್ತರ ಜಯರವ ಒಟ್ಟಯಿಸಲು (ತಿರುನಾ. ದೇ. ೨೨೦-೫) : ಭೀಮಸೇನನ ದಂಡಿಯನು ದಟ್ಟಯಿಸೆ ಸುಯಿ ದಳ್ಳುರಿಯ ಚೂಣಿಯಲಿ ಗಂಡುಗೆದಱಿದ ರೋಷಶಿಖಿ ಹುರಿಗೊಂಡುದಕ್ಷಿಗಳಲಿ (ಕುಮಾ್ಯಗ. ೮-೨೨) ; ಹೆಣೆದುಕೊಂಡವು ಗಗನ ದಿಗು ಧಾರಾಣೆಗಳನು ದಟ್ಟಯಿಸಿ ರಿಪುಮಾರ್ಗಣ ವಿತಾಳಿಸಿ ಮುಸುಕಿದುದು ರಘುನಂದನನ ರಥವ (ತೊರವೆ. ೬-೫೦-೫) ; ಹೊಳೆಹೊಳೆಯುವ ಅವರ ಮುಖಗಳನ್ನು ಕಂಡು ಚಕೋರಚಯ ದಟ್ಟಯಿಸಿ ಬಂದವು (ಧಾಮುತಿ. ೦೨೧). **ದಟ್ಟಯ್ಸು** : ೧. ಬಟ್ಟತಂ ಮಾಡಿ ಸುತ್ತುಗಳೆತ್ತಲ್ಕಸಿತಾತಪತ್ರಮೆನಲಕ್ಕುಂ ತಾನೆ ದೆಂಬಂತಿರೀ ಜಗದೊಳ್ ಕಣ್ಗೆ ವಿಚಿತ್ರಮಾಗೆ ನೆಱೆ ದಟ್ಟಯ್ಸಿ[ಪಾಠಾಂ. ದಟ್ಟಯಿಸಿ]ತ್ತನಿತ್ತಂ ತಮಂ (ಗಿರಿಕ. ೯-೭೬). **ದಟ್ಟವಿಸು**: ೧. ದಟ್ಟವಿಸಿ ದಟ್ಟಾನತಿವಿರದ ಥಟ್ಟು ಮಾರ್ಗವ ಕಾಣಲೀಸದು (ನಿಧಾಗ. ೫-೮-೪). **ದಟ್ಟೈಸು$_1$** : ೧. ನಟ್ಟಡವಿಯಲ್ಲಿ ಬೀಡಂ ಬಿಟ್ಟಿರಲಾ ಬಂಧುದತ್ತನಾತನ ಬೀಡಂ ನಟ್ಟಿರುಳು ಬಂದು ಬೇಡರ್ ದಟ್ಟೈಸಿ ಕೂಕಿಱಿದು ಸುತ್ತಿ ಮುತ್ತಿದ ರಾಗಳ್ (ಪುಣ್ಯಾಸ್ರ. ೮-೮) ; ತುರುಗಿ ದಟ್ಟೈಸಿದಾ ಕತ್ತಲೆಯ ಮೊತ್ತದೊಳು ಸ್ಮರನಂಗಜಾತ ಪ್ರೀತರ ಕೂಡಿ . . . ಮೆಲ್ಲಡಿಗಳಿಡುತೇ ಬರುತಿರಲು (ನವಮೋ. ೦೬-೨೦). **ದಟ್ಟೈಸು** : ೧. "ದಟ್ಟೈಸಿತೆಂದೊಡತಿಸಾಂದ್ರಾರ್ಥಂ" (ಧಾರವಿ. ೩೪) : ಚಿತ್ತಕ್ಕೆಗೆಗುಮತಿಭೀತಿಯೆನಲುರ್ವಿಗೆ ದಟ್ಟೈಸಿದುರ್ದಂಧ ಕಾರಾಕಾರಂ (ದಶಕು. ೨-೪೨) ; ಬಾಲಕನ ಘನತೇಜಮುರ್ವಿಯ ಮೇಲೆ ಪರ್ಬಲು ಸೂಚಿಮುಖಮಂ ಕೀಲಿಸುವೊಡರಿದೆನಿಸಿ ದಟ್ಟೈಸುವ ತಮಂಧ ದಲಿ (ಬಸವು. ೩-೩೦) ; ದಟ್ಟೈಸಿತು ಬನಬನದಲ್ಲಿ ಕೊಳ ಮಂಳಲೊಟ್ಟು ಗೋಮತಿಯ ತೀರದಲಿ (ಮೋಹತ. ೩೬-೭೨) : ಕಿನ್ನರರ್ ಸಿದ್ಧ ವಿದ್ಯಾ ಧರರ್ ಕಿಂಪುರುಷರು ದಟ್ಟೈಸಿದರ್ (ಚಲಪು. ೩೦-೪೦) ; ಕತ್ತಲೆಯ ಮೊತ್ತ ದಟ್ಟೈಸಲಾ ವಾರ್ತೆ ಕೇಳುತ್ತರ್ಕ ತನ್ನ ಚೂಣಿಯ ಭಟರ ಕಳು

ಹಳ್ಳೆ (ನವಮೋ. ೦೪-೨೬) ; ಬುವಿ ಬಾನಂತರವೆಲ್ಲವ ಕತ್ತಲು ತುಂಬಿರಲು . . . ತವಾಕಿವು ಸೇತುವೊ ಎನೆ ದಟ್ಟೈಸಿರೆ ತಾರೆಗಳು (ಗಹೇಶ. ೨೮-೪) ; ಕತ್ತಲಲಿ ಮಿಂಚು ಹೊಳೆದಂತಾಗಿ, ಬಟ್ಟೆಗೆಡುವುದು, ಕುರುಡು ದಟ್ಟೈಸಿ! (ಚಂದ್ರಸ. ೨೦-೧೯). ೨. ಹೆಚ್ಚಾಗು; ಅತಿಶಯವಾಗು: ನೆಟ್ಟನೆ ಪೃಥಿವೀಪತಿಗಳು ತನಯರ್ಗೆ ಪಟ್ಟವ ಕಟ್ಟಿ ಕಾಣಿಕೆಯ ಇಟ್ಟಅಗಿದರೇನು ಹೀನವೆ ಪರಿತೋಷ ದಟ್ಟೈಸುವುದು ಕಣ್ಮನಕೆ (ಮೋಹತ. ೩೬-೧೨).

[ ದಟ್ಟ$_1$ + - ಇಸು$_3$ ]

ದಟ್ಟಯ್ಸು 'ದಟ್ಟಯಿಸು' ನೋ.

ದಟ್ಟವಳ್ಳಿ (ನಾ). ಒತ್ತಾಗಿ ಬೆಳೆದಿರುವ ಬಳ್ಳಿ; ನಿಬಿಡವಾದ ಲತೆ : ಅತ್ವಕ್ಕೆ – ಬಟ್ಟಿತ್ತು ತೊಡೆ, ಬಟ್ಟದೊಡೆ, ಬೆಟ್ಟವೇಸಗೆ, ದಟ್ಟವಳ್ಳಿ – ಇವುವಾದಜಂತೆ (ಶಮದ. ೧೬೮ ಪ್ರಯೋ). [ ದಟ್ಟ$_1$ + ಬಳ್ಳಿ ]

ದಟ್ಟವಿಸು 'ದಟ್ಟಯಿಸು' ನೋ.

ದಟ್ಟಳ್ (ನಾ). ಪರಾಕ್ರಮಿ; ಶೂರ (?) : ಅಟ್ಟದಲೆಯ ಮಾತನ್ನಟ್ಟನೆ ದಟ್ಟಳ್ಸಿರಗಂಬೆರಗುವಂ ಬಗೆಯದೆ ಕಟ್ಟಳ್ಸತ್ತ್ರನೆಱೆಯುವ್ಮ (ಸೌಇಇ. IX-1, ೩೧-೦೦ ; ೨೬೬).

[ ☞ ಇದು 'ದಟ್ಟಾಳ್' ಎಂಬುದರ ಅಪಲಿಖಿತವಿರಬಹುದು.]

ದಟ್ಟಿ$_1$, ಧಟ್ಟಿ (ನಾ). ೧. ಸೊಂಟಕ್ಕೆ ಸುತ್ತುವ ವಸ್ತ್ರ ವಿಶೇಷ : ಮಡದಿಯಿಲ್ಲದೆ ಬೊಮ್ಮಚರಿಯವು ಉಡಿಗೆ ನಾರಿನ ದಟ್ಟಿಯಲ್ತೆ ತಮ್ಮಡಿಗೆ ಕೊಳಗವೇಕೆ (ಕಾಶಿರಾ. ೨೨-೪೨) ; ಉಡಿಯ ಪಟ್ಟೆಯ ದಟ್ಟಿ ಬೆನ್ನ ಜಲ್ಲಿಯಂ ವೀರರೆಡಬಲದೊಳಗೈತರಲು (ಚಂನವಿ. ೧೨-೩೪) ; ನಡುವಂ ಬಿಗಿದುಡೆ ದಟ್ಟಿಯನೊಡನರಿವನಿತಾಜನಕ್ಕೆ ದಗುಳ್ದಂ ಮುಡಿಗಳ್ (ಚಿಕವಿ. ೩-೨೨) ; ಪಾಂಚಾಲಿಯ ದೀನಾಲಾಪಗಳನ್ನು ಕೇಳಿ . . . ಭೀಮಸೇನನು . . . ವಿಜೃಂಭಿಸಿ ದಟ್ಟಿಯನ್ನು ಕಟ್ಟಿ (ಕೃಪಾವಿ. ೯೬) : ಕಟ್ಟಿದ ದಟ್ಟಿಯ ಬಲ್ಪಿನ, ತೊಟ್ಟ ಪೊಸಗುಪ್ಪಸದ ಚೆಲ್ವಿನ . . . ಕಿಱುಜವ್ವನದ ಬಿಂಕದ ನಡೆವೊಂದುಗಾಡಿಯ ಪುಷ್ಕಲಂ (ರಾಮೂಶ್ಯ. ೪೮-೦೬) ; ಸೊಂಟದಿಂದ ಕೆಳಕ್ಕೆ ನಾಲ್ಕು ಮೊಳದ್ದು ಒಂದು ದಟ್ಟಿ (ನಮ್ಮೂಕ. ೯) ; ಧರ್ಮಕ್ಕೆ ದಟ್ಟಿ ಕೊಟ್ಟರೆ ಹಿತ್ತಲಿಗೆ ಹೋಗಿ ಮೊಳ ಹಾಕಿ ನೋಡಿದ (ಗಾದೆ). ೨. ಬಟ್ಟೆ; ವಸ್ತ್ರ: ನೀಲಿಯ ದಟ್ಟಿಯನಿಳಿಗೆ ದಿಶಾಲಂಬನವಾಗೆ ಕವಿಚನಸುರಾರಿಯೆನಲ್ಕಾಲೋಕನಕ್ಕೆ ಭಯಮಂ ಸಾಲಿಡುತಂ ತಂದನಂಧಕಾರಕಾರಂ (ನಳಚಂ. ೧೮೩); ಕಾಗಿನ ಸುಚಲ್ಲಣದ ದಟ್ಟಿ ಹೇರಿಟ್ಟ ಹಿಲ್ಲರಿ (ರುಕ್ಮಾಂಗ. ೧೦-೦೮). ೩. ನಡುವಿನ ಸುತ್ತು ಕಟ್ಟಿಕೊಳ್ಳುವ ಪಟ್ಟಿ; ನಡುಕಟ್ಟು : ಕಾಶೆ ದಟ್ಟಿ ಚಲ್ಲಣಂಗಳಂ ಸಮಂತು ತೊಟ್ಟು ಬಲ್ಮೀಸೆಯಂ ಕರಾಬ್ಜದಿಂದೆ ತಿರ್ದುತ್ತೆ (ಹಾರಾಸ್ಯ. ೨-೦೦-೦೬). ೪. ಚಿಕ್ಕ ಸೀರೆ; ಕಿರಿಗೆ: ಪಟ್ಟವಾಳಿಯನುಟ್ಟು ಬನ್ನಿ ದಟ್ಟಿ ಚುಂಗ ಬಿಟ್ಟು ಬನ್ನಿ (ಪುರಂದ. ೧-೧೦೬-೭) : ಚಪ್ಪರ ಮಂಟಪದಾಗ ಹೊಕ್ಕಬಾಳೊತ್ತಾತು ಪುತ್ರಿಯ ಮಾರಿ ಬಳಲ್ಯಾವ ಬೀಗುತಿ ದಟ್ಟಿಯ ಉಡಿಸ ಮಗಳಿಗೆ (ಜೋಕಗೀ. ೫೯) : ಉಟ್ಟ ದಟ್ಟಿ ಎಷ್ಟು ಮಾಸಿದೆ (ಮುಂಬಯಿ. ೦-೦೩). ೫. ಅನೇಕ ಮಡಿಕೆಗಳಿರುವಂತೆ ಬಟ್ಟೆಯನ್ನು ಸೇರಿಸಿ ಹೊಲಿದ ಹೊದಿಕೆ; ಕವುದಿ; ಲೇಪು : ಭುಜಂಗಳ ತಣ್ಪನೊತ್ತು ಬಿಂಕಂಬಡೆದಿರ್ದ ಕೆಳ್ಗದಟನೊತ್ತು ವಿಟರ್ ನೆಱೆ ಕಾವುದಲ್ಲದಿ: ಕಂಬಳಿ ದಟ್ಟಿ ಬೂರವಡವೆಂಬವು ಕಾವುವೆ ಶೀತಕಾಲವಂ (ಸೂಕ್ತಿಸು. ೧೧-೨೬೦). ಧಟ್ಟಿ : ೨. ಮುಂಭಾಗದೊಳ್ ಮುತ್ತಿನ ಸರಂಗಳಂ ಚೌಕಳಿಯಾಗಿ ಪೆಣೆದು ಕಟ್ಟಿರುವ ಧಟ್ಟಿ (ಸೌಗಂಧಿ. ೩೦೫-೯). ೩. ಬೞುಮಂದೆ ಪೂಸಿದ ಗಂಧ ಕಾಸೆಯ ಧಟ್ಟಿ ಮೆಱೆಯ ಸಬಳಿಗರೆಯ್ತಂದು ತಱುಬಿದರಂದು . . . ವಿಱುಗೆ ಸಬಳ ಕಯ್ಯೊಳಗೆ (ಕುರಾಸಾಂ. ೦೦-೩೪).

[ ದೇ.॥ ತಮಿ. ತಟ್ಟು; ತುಳು. ದಟ್ಟ, ಜಟ್ಟಿ; ತೆಲು. ದಟ್ಟಿ-/ಸಂ. ಧಟೀ ]

ದಟ್ಟಿ$_2$ 'ದಡ್ಡಿ$_2$' ನೋ.

ದಟ್ಟಿ$_3$ (ನಾ). ಶೌರ್ಯ ; ಪರಾಕ್ರಮ : ಕನ್ನಡವಕ್ಕಿ ಪೂಣರ್ವಕ್ಕಿ ಮೊದಲಾದ ದಟ್ಟಿಯ ಕೂರಾಳ್ಗಳುಂ ತುತಮ್ಮ ಪಡೆವೆರಸು ಬಂದು ಕಾಣ್ಬುದುಂ (ಕಬ್ಬಿಕಾ. ೧೯೬). [ <ಸಂ. ಧೃಷ್ಟಿ ]

ದಟ್ಟಿಗಟ್ಟಿಸು (ಕ್ರಿ). ೧. ನಡುಂಕಟ್ಟನ್ನು ಬಿಗಿಸಂ. ೨. (ಆಲಂ) ಸಿದ್ಧವಾಗಿರುವಂತೆ ಮಾಡು : ಇಂತು ಮೊರೆಯಿಟ್ಟು ಪುರುಡಂ ಪುಟ್ಟಿಸಿ ದಟ್ಟಿಗಟ್ಟಿಪುದುಂ (ಚಿಕವಿ. ೨-೩೮ ವ); ಸರ್ವಶಕ್ತಿಯೊಳ್ ಪೊಣರಲ್ಕಾತನಂ ದಟ್ಟಿಗಟ್ಟಿಸಲೆಂದು ದೇವರ್ ತಮ್ಮೊಳೆಸಗಿದ ಪರಿಭವಮುಮವನೊಳ್ ನಡೆಯಿಪೌದಾಸೀನ್ಯಮುಮಂ ಬಿನ್ನವಿಸಿ (ಚಿಕಶಂ. ೨೧-೮): ನಿನ್ನ ವಾತ್ಸಲ್ಯಗುಣಂ ಮುಂದುವರಿದೆಮ್ಮಂ ದಟ್ಟಿಗಟ್ಟಿಸುತ್ತಿದೆ (ಚಿಕದಿ. ೨೬).

[ ದಟ್ಟಿಗಟ್ಟು + - ಇಸು$_3$ ]

ದಟ್ಟಿಗಟ್ಟು (ಕ್ರಿ). ೧. ನಡುಕಟ್ಟನ್ನು ಬಿಗಿ. ೨. (ಆಲಂ) ಸೊಂಟಕಟ್ಟು ; ಸಿದ್ಧವಾಗು; ತಯಾರಾಗು: ಜೀಯ ಪರಾಕಿದು ಬೇೞ್ಪೊಂದೋಯರದಿಂ ಬಂದು ವಂದಿಪೆರ್ ಕಿಱಿಯರಸರ್ ಸಾಯಸವಡುವರ್ ಸಂತತವಿನಾಯೆಸಕಮನೆಳಸಿ ದಟ್ಟಿಗಟ್ಟುವರನಿಬರ್ (ಚಿಕವಿ. ೫-೫೮).

[ ದಟ್ಟಿ$_1$ + ಕಟ್ಟು$_1$ ]

ದಟ್ಟಿಗೆ$_1$ (ನಾ). (?) : ಸುರರ ಮನ್ನಿಸಿ ಕಳುಹುತಂದನು ನಿರುತ ನಿಮ್ಮಯ ಬಾಧೆ ತನ್ನದು ಥರಥರದ ದಟ್ಟಿಗೆಯ ದೈತ್ಯರ ಹವಣು ತನಗೆಂದ (ಸಂಭಪ. ೭-೬೩). [ ? ]

ದಟ್ಟಿಗೆ$_2$ (ನಾ). ಉಪ್ಪರಿಗೆ; ಕರುಮಾಡ; ಮಂಹಡಿ (?) :

ದಟ್ಟಿಗೆಯುಮನೆ = ಉಪ್ಪರಿಗೆ ಮನೆ (?) : ಕನಕಮಯ ನಿರ್ಮಿತಗಳಿಂದಲಿಹ ದಟ್ಟಿಗೆಯುಮನೆಯ ಸುತ್ತಲ್ ಮೆರೆವ ಮದನಗೃಗಳ ಮೇಲೆ ನಿಸದದೊಳ್ ನವಿಲ ತಂಡಗಳಿರಲ್ (ರುಕ್ಮಾಂಗ. ೩-೯೨). [ ? ]

ದಟ್ಟಿಚಲ್ಲಣ (ನಾ). ನಡುಪಟ್ಟಿಯುಳ್ಳ ಚಲ್ಲಣ : ದಟ್ಟಿಚಲ್ಲಣವನುಟ್ಟು ಕಠಾರಿಯಂ ನಡುವಿನೊಳು ಕಟ್ಟಿ (ಭೃಕಸೂ. ೨೫೭) : ಮಲ್ಲಗಾಸಿಯ ದಟ್ಟಿ ಚಲ್ಲಣಗಳನುಟ್ಟು (ಸೌಂದಕಾ. ೧೨-೩೩) ; ಕಟ್ಟಿದ ದಟ್ಟಿಚಲ್ಲಣದ ಉಟ್ಟ ಮಲ್ಲಪಳಿಯ ಈ ವೇಷದಿಂದ . . . ಕಾಳ್ಗಿರುತ್ತ (ವಿಗಡ. ೩೦-೨೫) : ಕಂಠೀರವಒಡೆಯರು . . . ಅಲ್ಲಿ ಕೋಟೆ ಬಾಗಲಿಗೆ ಕಟ್ಟಿದ್ದ ದಟ್ಟಿಚಲ್ಲಣಗಳನ್ನು ತಮ್ಮ ಆಳಿನ ಕೈಕೋಲಿನಿಂದ ತೆಗೆಸಿ ಅನಂತರ ಕೋಟೆಯೊಳಕ್ಕೆ ಪ್ರವೇಶಮಾಡಿದರು (ಒಡೆಚ. ೩೫). ☞ ಇವು ಪ್ರತ್ಯೇಕವಾಗಿಯೂ ಬಳಕೆಯಾಗುತ್ತಿವೆ. [ ದಟ್ಟಿ$_1$ + ಚಲ್ಲಣ ]

ದಟ್ಟಿತು, ದಟ್ಟಿತ್ತು (ನಾ). ೧. ದಪ್ಪವಾದುದು; ಗಾತ್ರದಿಂದ ಕೂಡಿದುದು : ಕುಟ್ಟಿ ಕಣಕದೊಳು ಸರಿ ಬೆಣ್ಣೆಯನೞೊಳೊಂದು ಬಟ್ಟಿವಾಲನೆಯಿಕ್ಕಿ ವಿದಿದು ಬಟ್ಟಂ ಮಾಡಿ ದಟ್ಟಿತೆಂದೆನಿಸಿ ಲತೆಯಿೞಿದು ಹಂಚಿನೊಳಿಟ್ಟು ಸುಟ್ಟು ಪರಿಯಣಕೆ ತೆಗೆದು (ಸೂಪಶಾ. ೧-೦೦). (ಗ೦). ೨. ದಪ್ಪವಾದ; ದಟ್ಟವಾದ; ಗಾತ್ರವಾದ; ಮಂದವಾದ : ಬೆಟ್ಟಿತು. ಬೆಟ್ಟಿತ್ತು, ದಟ್ಟಿತು, ದಟ್ಟಿತ್ತು (ಶಮದ. ೬೬ ಪ್ರಯೋ). ೩. ವಿಸ್ತಾರವಾದ; ಅಗಲವಾದ: ನೂಱು ಗಾವುದದುದ್ದ ಮೊದಲ ದಟ್ಟಿತು . . . ನೋಡೆ ಪಗಡೆಯ ಕಾಯಂತೆ ತೋಱುತಿದ್ದುದು ವೃಷಭಾದ್ರಿ (ಭರತಚ. ೩೬-೮೦). ದಟ್ಟಿತ್ತು : ೧. "ವ್ಲಕ್ಷ, ವೃಕ್ಷ – ಕ್ಷರಣಸ್ನಿಗ್ಧಾರ್ಥೇ, ಒರಸುಹಣದೊಳಂ ದಟ್ಟಿತ್ತರೊಳಂ" (ಕಾಶಕ್ಕ. ೨೬೮). ೨. ಮೇಲಿನ 'ಶಮದ' ಪ್ರಯೋಗವನ್ನು ನೋಡಿ.

ದಟ್ಟಿತಾಗು, ದಟ್ಟಿತ್ತಾಗು : ಒತ್ತಾಗು = ಸಾಂದ್ರವಾಗು ; ನಿಬಿಡವಾಗು : ದಟ್ಟಿತಾಗಿಹ ತೋಳು ತೊಡೆ ಬಾಯ್ಬಟ್ಟ ಬೆಟ್ಟದ ತೆರದಿ ಬಂದನು ಕಿತ್ತು ಪೇರ್ಮರನ (ಜರಾಮೂ. ೩೦-೩೬) ; ಈ ವನಮತೀವ ಭೀಕರಮೆನಿಸಿದಪುದು ನಾನಾವಿಧದ ಮರಗಿಡುಗಳಿಂದೆ ದಟ್ಟಿತ್ತಾಗಿ ಕಾವಳಂಗೊಂಡು (ಶೀಷರಾ. ೪-೨). [ <ದಟ್ಟಿ$_1$ ]

**ದಟ್ಟಿತ್ತು** 'ದಟ್ಟಿತಂ' ನೋ.

**ದಟ್ಟಿಪಂಚೆ** (ನಾ). ಅಡ್ಡಲಾಗಿ ಸುತ್ತಿಕೊಳ್ಳುವ ಪಂಚೆ; ಮುಂಡು; ತಡವು : ಅವಳ ಜೊತೆಗೆ ಇದ್ದಾತ ಎತ್ತರವಾದ ಆಳು . . . ಒಂದು ದಟ್ಟಿಪಂಚೆಯುಟ್ಟು ಕೊಳೆಯಾದ ಒಂದು ಶರಟು ಧರಿಸಿದ್ದ (ಶುಜುಸಂ. ೩೪); ಕುಳ್ಳಗೆ ಇದಾನೆ. ಒಂದು ದಟ್ಟಿ-ಪಂಚೆ ಖಾದಿಯಾದು ಮೇಲಕ್ಕೊಂದು ಅರೆತೋಳಿನ ಷರಟು (ಅಂಹೂ. ೧೦೬). 'ಕಚ್ಚೆಪಂಚೆ' ಪರಾ. [ ದಟ್ಟಿ$_1$ + ಪಂಚೆ ]

**ದಟ್ಟಿಸೀರೆ** (ನಾ). ಸಣ್ಣಸೀರೆ; ಕಿರಿಗೆ : ದಟ್ಟಿಸೀರೆ, ಬೆಳ್ಳಿ ತೋಳಬಂದಿ, ಬೆಳ್ಳಿ ಕೈಕಡಗ, ಕೊರಳಲ್ಲಿ ಕೆಂಪುಹವಳದ ಸರ, ಕಿವಿಯಲ್ಲಿ ಬಂಗಾರದ ಬೆಂಡವಲಿ (ಹೊಸಂಸಾ. ೧೪೦). [ ದಟ್ಟಿ$_1$ + ಸೀರೆ$_2$ ]

**ದಟ್ಟಿಸು$_1$** 'ದಟ್ಟಯಿಸು' ನೋ.

**ದಟ್ಟಿಸು$_2$**, ಧಟ್ಟಿಸು, ಧಟ್ಟೈಸು (ಕ್ರಿ). ೧. ಗದರಿಸು ; ಬೆದರಿಸು : ನಿನ್ನ ನಿಟ್ಟಿಲುವ ಮುಳಿವೆನೆಂದುರವಣಿಸಿ ಜಱಿಯುತ್ತ ದಟ್ಟಿಸುತ ಬಂದು (ಹಕಾ. ೧೨-೩೬); ದಟ್ಟಡಿಯಿಡುತೆಯುತಹ ಹಸುಳೆಯನೊಲಿದಿಟ್ಟಿಯುದಬಿದಿಟ್ಟಿಯನು ತೊಟ್ಟನೆ ಮಾಱುಗೊಂಬಳು ಬಾಲ್ಕಮಟಿಯಲು ದಟ್ಟಿಸದಿಹಳೆ ಲೋಕವನು (ಅಂಚಹ. ೪-೫೬); ದಟ್ಟಿಸುತ್ತೆಲೆ ಬಸವ ಕೊಡುಕೊಡು ವೆಟ್ಟಗೆಯ ಪೊನ್ನಲ್ಲವಂ ಹಿಮ್ಮೆಟ್ಟದೀಗಳೆ (ಬಸಪು. ೧೦-೩) : ತನಯರುಗಳತಿ ದಟ್ಟಿಸುವರಂಗನೆಯರುಲ್ಲಂಘಿಸುವರಂ . . . ತಿಳಿಯ ದರಿದ್ರನಿಂದತಿ ಕಷ್ಟರಿಲ್ಲೆಂದ (ಜೀವಂಚ. ೭-೩) ; ಇರುಳಿನಲಿ ನಿದ್ರೆಸಿದಾ ಹೊಲೆಯ ನವನಾವವನೊ ಮಾಂಸವ ಕಳುವವನು ಹೇಳೆನುತ ಗರ್ಜಿಸಿ ದ[ಪಾಠಾಂ. ಧ]ಟ್ಟಿಸುತಲಿರಲು (ಶಿಮ್ಯಶಾಂ. ೫-೫೬) ; ರವಿನಂದನಂ ರಯದಿ ಪಾಶದಿಂ ಬಿಗಿದವನ ತವಕದಿ ಸೆಳೆಯ ಲಿಂಗದೊಳು ಪರಶಿವನುದಿಸಿ ಧವಳಾಂಗನಾಗಿ ದಟ್ಟಿಸುತಱಿನ ಮುಮ್ಮೊನೆಯ ಸಬಳದಟ್ಟುಗಿಯೊಳಿಱಿಯೆ (ಪ್ರಭುಪು. ೩-೧೦೦) : ನೋಡಿರ್ರಿ, ದೊರೆಸ್ವಾಮಿ ಹೆಂಡತಿ ನಳಿನಿ, ಏ ಪರಿ ಗಂಡನ ನಮ್ಮೆದಿರೆ ದಟ್ಟಿಸುತಲಿರುವಳು (ಗಹೀಶ. ೭೪-೨). ೨. ಹೀಗಳೆ ; ತಿರಸ್ಕರಿಸು ; ಮೂದಲಿಸು : ನೇವುರದ ದನಿ ದಟ್ಟಿಸಿತು ವೇದಾವಳಿಯ ನಿರ್ಘೋಷವನು ನಾನಾವಿಭೂಷಣಕಾಂತಿ ಕೆಣಕಿತು ಮುನಿಸಮಾಧಿಗಳ (ಕುವ್ಯಾಅ. ೦೮-೬) ; ಬೆಟ್ಟದ ಬಲ್ಮೆಯಿಂದಮ್ಮ ರಾಯಸವನು ದಟ್ಟಿಸಿ ಕಳೆದ ಕಂಪಿಲನ ಕಟ್ಟಿ ತರಿಸುವೆನು (ಕುರಾಸಾಂ. ೦೭-೮೪). ೩. ಪ್ರತಿಭಟಿಸು ; ವಿರೋಧಿಸು : ದಿಟ್ಟಿಸಿ ಹೋಗೆಂಬೆ ಹೋಗದಿದ್ದರೆ ಬೆನ್ನ ಮುಟ್ಟಿ ಹೋಗೆಂದು ನೂಂಕುವೆನು ದಟ್ಟಿಸಿದರೆ ಕಟ್ಟಿ ಕಳುಹುವೆ ಶಿಬಿಕೆಯೊಳಿಟ್ಟು ಚಿಕ್ಕಮ್ಮನ ಬಳಿಗೆ (ಭರಹ. ೪೯-೫೪). ೪. ಘಟ್ಟಿಸು; ಹೊಡೆ; ತಾಗು : ಪಟ್ಟಣದುರು ವೀಧಿಗಳೊಳಗಾ ನೃಪರಿಟ್ಟಣಿಸಿಯೆ ಬರುತಿರಲು ದಟ್ಟಿಸಿ ಪೊಡವ ನಾನಾವಾದ್ಯದ ರವ ಮುಟ್ಟಿ ದಿಗಂತರಾಳವನು (ಅಂಚಹ. ೧೧-೨೭೬); ಬಿಟ್ಟನು ನಿಜವೃಷಭಾಂಕನು ಬಲವೆರಸಿಟ್ಟಣಿಸಿಯೆ ತ್ರಿಪುರವನು ದಟ್ಟಿಸಿ ಪೊಡೆವ ನಾನಾವಾದ್ಯರವಗಳು ಮುಟ್ಟಿ ದಿಗಂತರಾಳವನು (ತ್ರಿಪುಸಾಂ. ೦೩-೦೮೦). **ಧಟ್ಟಿಸು** : ೧. ಸುರಪನಾನಂದರಸಪಱಿತು ಬೆಱಗಿನ ಮೊಗದೊಳಿರಲು ನಾರಂದ ಧಟ್ಟಿಸುತೆದ್ದು ಕೊಡು ವಸಿಷ್ಠಂಗೆ ಭಾಷೆಯನು ಕೌಶಿಕ ಎಂದನು (ಹಕಾ. ೨-೨೪) ; ಓರಪೋರೆಯೊಳಾಡಿ ಧರ್ಮದ ಧಾರಣೆಯ ಧಟ್ಟಿಸುವದಿದು ಗಂಭೀರರಿಗೆ ಗರುವಾಯಿಯೇ (ಕುವ್ಯಾಸ. ೦೪-೮೪) ; ನೀ ತಳೋದರಿ ಕಱಿಬುಗೆಡದೀ ಮಾತಿನಲಿ ತಾ ಬಿಡುವೆನೇ ನಿನ್ನಾತಗಳ ನುಡಿಸೆಂದು ಖಳ ಧಟ್ಟಿಸಿದನಂಗನೆಯ (ಕುವ್ಯಾಸ. ೦೫-೧೦) ; ನಿನ್ನಯ ಪುರುಷನಪಗತನಾದ ಬಳಿಕೀ ಪರಿಯ ಮೆಱೆದಿಹುದುಚಿತವೇ ಹೇಳೆಂದು ಧಟ್ಟಿಸಿದ (ಜೀವಂಚ. ೦೩-೩) ; ಮಾರೀಚನಾ ದಶಗಳನ ಧ[ಪಾಠಾಂ. ದ]ಟ್ಟಿಸಿ ಕೆಲವು ದಿನ ನೀನುಳಿವುಪಾಯವ ಮಾಡುವೆನು . . . ಕಾನೆಂದ (ತೊರರಾ. ೩-೮-೦೦). ೨. ಧಿಟ್ಟನಹೆ ಬಾಣಸಿಗ ಸವಿಯೊಳಗಟ್ಟಕೂಳನ ತಿಂದು ದೇಹದೊಳಟ್ಟಿಯಲಿ ಸಿರವಿರಲಹಂಕಾರದಲಿ ನೀನೆಂದು ಧಟ್ಟಿಸುತ ಜೀಮೂತಮಲ್ಲನು . . . ಹೊಕ್ಕನು ತೋಳ ತೆಕ್ಕೆಯ ಮಲ್ಲಗಾಳಗಕೆ (ಕುವ್ಯಾವಿ. ೭೮೩. ೪-೬೪). ೩. ಖರ್ಪರನೆಂಬ ಜೋಗಿ ಶಿವಸಿದ್ಧರಾಮನ ಸರ್ವಸಾಮರ್ಥ್ಯದ ಹೆಸರ ಧಟ್ಟಿಸುವೆ ವಾದಿಸುವೆ ಸೋಲಿಸುವೆನೆಂದೊಸೆದು ... ಐತಂದನು (ಸಿದ್ಧರಾ. ೭-೨೬). ೪. ತೋಳ ನೆಗಹಿನಲ್ಲಟ್ಟಿ ಹೊಯ್ದುದು ನೀಲನನು ನೀಲಾದ್ರಿಯನು ದಂಭೋಳಿ ಧ[ಪಾಠಾಂ. ದ]ಟ್ಟಿಸಿದಂತೆ ನೊಂದನು ಹೊಯ್ದುಲಿಭಪತಿಯ (ತೊರರಾ. ೬-೩೨-೫೬). ೫. ನಿಗ್ರಹಿಸು ; ಸೋಲಿಸು ; ಹಿಡಿತಕ್ಕೆ ತರು ; ಅಂಕೆಯಲ್ಲಿರಿಸು : ಪದಪಾಣಿ ಗುಹ್ಯ ಕರ್ಮೇಂದ್ರಿಯಂಗಳಲ್ಲಿ ಬೆದಱಿದಪ ಧಟ್ಟಿಸುವ ಅದಟು ಬೇಕವಱಲ್ಲಿ (ದೀಕ್ಷಾಬೋ. ೦೬-೦೯) : ಚೋಳ ಪಾಂಡ್ಯರ ದಳವ ಧಟ್ಟಿಸಿ ಕೊಂಡನನುಪಮಸಾರವಸ್ತುಗಳ (ಕುವ್ಯಾಸ. ೫-೨೦). **ಧಟ್ಟೈಸು**: ೨. ಪುಟ್ಟಿಸೆಂದೆನಬೇಡ ಪರಮಶಕ್ತಿಯಂ ತಂದುಕೊಟ್ಟನು ಕೃಷ್ಣ ಮನ್ಮಥಗೆ ಧಟ್ಟೈಸಿ ನೀ ಬಾಹುಬಲದಿಂದೆ ಕಾದಲಂ ಪೆಟ್ಟನಿಕ್ಕದೆ ಬಿಡನೆಂದ (ಮೋಹತ. ೦೨-೯).

ಧಟ್ಟಿಸುತ ಹೇಳು = ಒತ್ತಾಯ ಮಾಡು : ಬಿಟ್ಟು ಹೋಗುವ ಲಲನೆ ವಲ್ಲಭಗೆ ಬುದ್ಧಿಯಂ ಧಟ್ಟಿಸುತೆ ಹೇಳಿ ಮೇಲಟ್ಟದೊಳು ಗುಡುಹವದೆ ಬಟ್ಟಲೊಳು ಚಿಲಿಪಾಲ ಸಲಿಸೆಂದು ತಾ ತಳರ್ವಳಂತೆಯವಳಂತೆ ನೀನು ಅಟ್ಟುಳಿಯ ಮಾಡಿದವೆ (ಪ್ರಭುಪು. ೬-೨೩). [ ದಟ್ಟ$_3$ + –ಇಸು$_3$ ]

**ದಟ್ಟೆ** (ನಾ). ದಪ್ಪಬಿದಿರಿನ ಸೀಳು–ದಬ್ಬೆ : ವಿಪಿನಕ್ಕೆ ಹೊರಟ ಕೇತಯ್ಯ ಚಂದದಿಂ ಬಿದಿರನಂ ಸೋಸಿ ತರುವುದಕೆ ಹೋಗಿ ದಟ್ಟೆಯ ತರಿದು ಪೊಳವೆ ಸೀಳುತಿರೆ (ಶರಲೀ. ೦೭೨-೧೦). [ <ತಟ್ಟೆ$_1$ ]

**ದಟ್ಟೈಸು** 'ದಟ್ಟಯಿಸು' ನೋ.

**ದಡ$_1$** (ನಾ). ಒಂದು ಅನುಕರಣ ಶಬ್ದ. 'ದಡಗಂಟ್ಟು$_1$' ಪರಾ.

**ದಡದಡ** (ದ್ವಿರುಕ್ತಿ) = ೧. ರಭಸ ; ವೇಗ ; ಜೋರು : ದಡದಡ ಎಂದು ಓಡುತ್ತಾನೆ (ರೂಢಿ). ೨. ನಡುಕ ; ಕಂಪನ : ಗಡಬಡಿಸಿದುದು ಲಗ್ಗೆವಱಿ ಕೋಟೆಪಗೆಗಳಂ ಕೆಡೆಕೆಡೆಯೆನುತ್ತೆ ಕಹಳೆಗಳೊದದುರ್ವಳ್ಳಿ ರ್ದೆಯ ದ ಡ ದ ಡ ಂ ಗ ಳ್ ಮೊಣ್ಣುದವುರರ್ಗೆ (ಚಬಪು. ೪೯-೫೦). **ದಡಮಾಡು** = ಅವಸರಪಡಿಸು: ದಡಮಾಡಿದರು ಯಮನಾಳುಗಳು ಓಡಿ ಬಂದರು ಏಳೇಳೆನುತ ಎಳಲೆಳೆದರು ಪಾಪಿಯ ಬೀಳಲೆಳೆದರು (ಕುರಂದ. ೫-೦೨೬-೦).

**ದಡ$_2$** 'ದಡ್ಡ$_2$' ನೋ.

**ದಡ$_3$** 'ತಡ$_2$' ನೋ.

**ದಡ$_4$** 'ದಳ$_1$' ನೋ.

**ದಡಂಗೊಳ್** (ಕ್ರಿ). ದಡ ಸೇರು: ಮಕರಾಕರದಿಂ ಪೊಱಮಡುವ ಕರಿಮಕರದಂತೆ ಕಮಳಾಕರದಿಂ ಪೊಱಮಟ್ಟು ದಡಂಗೊಳ್ವಲ್ಲಿ (ಅರ್ಧನೇ. ೫-೧೧೩ ವ).

[ ದಡ$_3$ (<ತಡ$_2$) + ಕೊಳ್$_1$ ]

**ದಡಂದಡಿಸು** 'ದಡದಡಿಸು' ನೋ.

**ದಡಕ್** (ನಾ). ಒಂದು ಅನುಕರಣ ಶಬ್ದ: ಅಟ್ಟದಿಂದ ಪಾತ್ರೆಯು ದಡಕ್ ಎಂದು ಬಿದ್ದಿತು (ರೂಢಿ).

**ದಡಕಟ್ಟು** 'ದಡೆಕಟ್ಟು' ನೋ.

**ದಡಗಲಿ** (ನಾ). ದಪ್ಪನೆಯ ಹೆಂಗಸು : ಈಗ ಹೊಸದಾಗಿ ನಡೆಯುವುದನ್ನ ಕಲೀತೀರೋ ಈ ದಡಗಲಿ ಕೋಲು ಜಾರಿ ಬಿದ್ದಿದ್ರೇ ಒಂದು ಭಯಂಕರ ವಿಚಾರವೇ! (ಉಮೂಕ. ೬೮). 'ದಡಾಲಿ' ಪರಾ. [ ? ]

**ದಡಗುಟ್ಟು$_1$** (ಕ್ರಿ). ೧. ದಡದಡ ಶಬ್ದ ಮಾಡು: ಗಾಡಿ ದಡಗುಟ್ಟುತ್ತಾ ಬಂತು (ರೂಢಿ). ೨. ವೇಗದಿಂದ ಕೂಡಿರು : ಬೇಕಾದಷ್ಟು ಸಮಯ ಎದ್ದರೂ ಆಕೆ ದಡಗುಟ್ಟಿಕೊಂಡು ಕೆಲಸ ಮಾಡುತ್ತಾಳೆ (ರೂಢಿ).

[ ದಡ$_1$ + ಕುಟ್ಟು$_1$ ]

**ದಡಗುಟ್ಟು₂** (ಕ್ರಿ). ದಡ ಸೂಸಿ ಹರಿ; ತುಂಬಿ ಹರಿ : ಸಾಲದ್ದಕ್ಕೆ ಕೆಲಸದ ಆಯಾಸವೂ ಸೇರಿ ಬೆವರು ದಡಗುಟ್ಟಿಕೊಂಡು ಹರಿಯುತ್ತಿದೆ (ಶಾಟೇಮು. ೦೦೩). [ ದಡ₃ (<ತಡ₂) + ಕುಟ್ಟು₁ ]

**ದಡದಡನೆ** (ಅ). ೧. ದಡದಡ ಎಂಬ ಸದ್ದಿನೊಡನೆ : ಶ್ರೀ ಸೋಮನಾಥನು ನಡುವಿರುಳು ಭಕ್ತಂಗೊಲಿದು ದಡದಡನೆ [ಪಾಠಾಂ. ಧಡಧಡನೆ] ಕದವಂ ಹಾಕಿತೆಗೆಯಲು (ಬಸಪು. ೪೩-೯೭). ೨. ವೇಗವಾಗಿ : ಬೇಗನೆ ; ಶೀಘ್ರವಾಗಿ : ಅವನು ದಡದಡನೆ ಮೆಟ್ಟಿಲೇರಿದನು (ರೂಢಿ).
[ ದಡ₁ + – ಅನೆ₁ ]

**ದಡದಡಿಸು**, ದಡಂದಡಿಸಂ, ಧಡಧಡಿಸು₁ (ಕ್ರಿ). ೧. ನಡುಗು; ಅದುರು; ತತ್ತರಿಸು : ತೊಡೆ ದಡದಡಿಸೆ ನಡೆಗೆಟ್ಟು ಕಳಲುಲಿಗೆ ಬಟಾಸಲ್ಕ ಕಳಹಂಸಮಂಡಲಕ್ಕಯಶವಂ ಮಾಡಿಸಿಯುಂ (ಕಾದಂಉ. ೩೬) ; ಕಾತ್ರಂ ಬಡೆದರಂತೆ ಬೀಟ್ವರ್ ಬಡಗೊಂದೆಯಂತೆ ದಡದಡಿಸುವರ್ (ಧರ್ಮಾಮೃ. ೩-೮೧) : ಕಣ್ಗಳಂ ಮುಚ್ಚಿ ಸೆರಬಿಗಿದು ದಡದಡಿಸಿ ದೊಪ್ಪನೆ ಬಿದ್ದು (ಬಸರ. ೩-೩೮); ಕುಡಿದು ಕೊಬ್ಬಿದ ಬಸುಬು ದಡದಡಿಸಿ ತರಹರಿಸುವಡಿಯ . . . ಕಲಿವೀರ ಬಾಹುಕ ಬರುತ್ತಂ (ಹರಿಶ್ಚಂ. ೧೧-೧೭): ತನುವನೊಲೆದವು ದಡದಡಿಸಿ ಕಿವಿಗೊನೆಯ ಜೋಲಿಸಲಲ್ಲಿ ಮಡಿಗಾಲಿನಲಿ ಕುಸಿದವು (ಕುಮಾವ್ಯಾವಿ. ೮-೮೩) ; ಇಂತು ನಲ್ಕೆ ಮಿಗೆ ಬಿನದಿಪ ಕಾಮಿನಿಯರ್ಗೆ . . . ನೊಸಲೊಳ್ ಬೆಮರ್ ಪನಿಯ ತೆಳ್ಗದಂವು ಕೆಂವದರೆ ಎರ್ದೆ ದಡದಡಿಸೆ (ರಾಮಾಶ್ವ. ೦೨೩-೭). ೨. ಆತುರಪಡು ; ಸಂಭ್ರಮದಿಂದ ಕೂಡಿರು; ತ್ವರೆಮಾಡು : ತಾಳ್ದು ಪರಮಾನಂದವಂಕುರಂದೋಱುತಂ ದಡದಡಿಸುತೆದ್ದು ತಿರುನೀಲಕಂಠರ್ಬಂದು (ತಿರುಶಿ. ದೀ. ೩೫-೦) ; ದಡದಡಿಸಿ ಕೊಳನಿಂದ ಹೊಱಟಡಿಯಿಡುತ ಬಳಲಿದನನಿಲಸುತನವರೊಡನೆ ಮೆಯ್ಯಿಕ್ಕಿದನು (ಕುಮಾವ್ಯಾಅ. ೭೦೩. ೨೬-೨೯) ; ಕಡು ಮಱುಗುತೆ ವಿಪ್ರಜನವದ್ದು ತಣ್ಣೀರ ತೊಡೆದು ಕಣ್ಗಳಿಗಾಗ ಮೆಲ್ಲನೆ ಪಿಡಿದೆತ್ತಿ ನಿಂದಿರಿಸಲು ದಡದಡಿಸುತೆ ಕೆಡಿಸಿದ ಶುಭವಸ್ತುನಿಚಯವ (ತ್ರಿಪುಶಿ. ೯-೨೬). **ದಡಂದಡಿಸು** : ೧. ಅಡವಿಗಿಚ್ಚಟ್ಟದಳಹುಲ್ಲೆಯಂತೆರ್ದೆ ದಡಂದಡಿಸಿ ಪವ್ವನೆ ಪಾಱ ದೂವೆಯೊಳ್ ಪೊಕ್ಕುರಗಿಯಂತೆ ಬೆದಬೆದನೆ ಬೆಂದು (ಹಬಪು. ೦೯-೪೩).
**ಧಡಧಡಿಸು₁** : ೧. ಕರಹತಿಗೆ ಧಡಧಡಿಸಿ . . . ಧೈರ್ಯದಲಿ ಹೊಡಕರಿಸಿ ಹೊಱಬಿನೊಳೆದ್ದು ಹೊಯ್ದನು ಪಾರ್ಥನಂದನನ (ಕುಮಾವ್ಯಾದ್ರೋ. ೬-೩೯) ; ಧಡಧಡಿಸಿದವೊಳ್ಗುಡಿಗಳ್ ನಿಡುಸುಯ್ ಪೊಣ್ಮಿದುದು ಮೊಗದೆ ಬೆಮರ್ವನಿಯೊಗೆದತ್ತುಡುಗಿದುದಳವು ನಡುಂಗಿದು ದೊಡಲ್ವಿದರ್ಭಜಗೆ ವಿಪಿನಗಮನಶ್ರಮದಿಂ (ದಮಸ್ವ. ೨-೦೦). [ <ತಡತಡಿಸು ]

**ದಡಪಡಿಸು** 'ಧಡಪಡಿಸು' ನೋ.

**ದಡಪಶಾಹಿ** (ನಾ). ಅಧಿಕಾರದ ಬಲದಿಂದ ಜನರನ್ನು ಹತ್ತಿಕ್ಕುವುದು ; ಅನ್ಯಾಯದ ಆಳ್ವಿಕೆ ; ದಬ್ಬಾಳಿಕೆ : ಈ ಮೊದಲೇ ದಡಪಶಾಹಿಗೆ ಕಳೆಯೇರಿ ಸಾವಿರಾರು ಜನರು ತುರಂಗದಲ್ಲಿ ಬಿದ್ದಿದ್ದರು (ಕಾಂಗ್ರೆಸ. ೧೭).
[ ←ಮರಾ. ದಡಪ್‌ಶಾಹೀ ]

**ದಡಬಡ₁** (ನಾ). ಒಂದು ಅನುಕರಣ ಶಬ್ದ : ದಡಬಡ ಶಬ್ದಮಾಡುತ್ತ ಗಾಡಿ ಹೊರಟಿತು (ರೂಢಿ).

**ದಡಬಡ₂** 'ಧಡಪಡ' ನೋ.

**ದಡಬಡನೆ** (ಅ). ಆತುರದಿಂದ ಕೂಡಿ : ಉದ್ದನ ಮಂಜೂಡೆಯು ದಡಬಡನೆ ಉರುಳಿ ಹೋಗುವಂತೆ ಈ ಮರಳನ್ನೂ ದಾಟಿ ... ಮರೆಯಾಗಿರುವಳು (ಹುಟ್ಟಿಹ. ೦೨೯) ; ರಂಗಪ್ಪ ಪಕ್ಕದ ಮನೆಯಲ್ಲಿ ಗುಲ್ಲು ಕೇಳಿ ದಡಬಡನೆ ಎದ್ದು ಹೊರ ನೋಡಿದ (ಚಿಗುಲ. ೩೪) ; ಹುಡುಗರ ತಲೆತಲೆ ಟೊಪ್ಪಿಯ ಆಟವ ದಡಬಡನಾಡಿಸಿ, ಮನೆಮನೆ ಕೋಟವ ಅಡಿಮೇಲಾಗಿಸಿ (ಕಎಪು. ೨೮-೩). [ ದಡಬಡ₂ (<ಧಡಪಡ) + – ಅನೆ₁ ]

**ದಡಬಡಲು** (ನಾ). ಆತುರ ; ವೇಗ ; ಗಡಿಬಿಡಿ : ಯಾಡತರದ ಕಾಂತೆಯರೆಲ್ಲಾ ದಡಬಡಲಾಗಿ ಅಲಂಕಾರಗಳಂ ಮಾಡಿಕೊಳುತ್ತಿರುವ (ಸೌಗಂಧಿ ೨೦೨-೦೩). [ ದಡಬಡ₂ ( <ಧಡಪಡ) + – ಅಲು (< – ಅಲ್₃) ]

**ದಡಬಡಿ** (ನಾ). ದಪ್ಪ ; ಗಾತ್ರ : ದಡಬಡಿ ಇದ್ದರೆ ಠೊಣ್ಣನೆಂಬರು ತೆಳುವಿದ್ದರೆ ರೋಗಿಷ್ಟನೆಂಬರು (ಪುರಂದ. ೪-೭೦-೩). [ ? ]

**ದಡಬಡಿಸು₁** (ಕ್ರಿ). ದಡದಡ ಶಬ್ದವನ್ನು ಮಾಡು : ಸಣ್ಣ ಬಂಡಿಗಳು ದಡಬಡಿಸುತ್ತಿದ್ದವು (ಪುಸರು. ೧೮೨). [ ದಡಬಡ₁ + – ಇಸು₂ ]

**ದಡಬಡಿಸು₂** 'ಧಡಪಡಿಸು' ನೋ.

**ದಡಮಿ** 'ದುಡುಮಿ' ನೋ .

**ದಡಯ** 'ಧಡೆ₁' ನೋ.

**ದಡರ್** (ನಾ). ಒಂದು ಅನುಕರಣ ಶಬ್ದ : ತಡೆಯುದೇ ಕಳ್ಳೊಯ್ಯುದಂ ಕಂಡು ಬೆದಱ ಎದೆ ದ[ಪಾಠಾಂ. ಧ]ಡರೆಂದು ಒಡಿಯಲಿನ್ನೇವೆನಕಟಕಟ (ಸಮ್ಯಕ್ತ್ವ. ೦೦-೬೮). 'ದಡಾರ್' ಪರಾ.

**ದಡಲ್** (ನಾ). ಒಂದು ಅನುಕರಣ ಶಬ್ದ : ಬಾವಿಯಲ್ಲಿ ಕಲ್ಲು ದಡಲ್ ಎಂದು ಬಿದ್ದಿತು (ರೂಢಿ). 'ದಡಲನೆ' ಪರಾ.

**ದಡಲನೆ** (ಅ). ವೇಗವಾಗಿ ; ರಭಸವಾಗಿ : ಬಹುವ್ಯಾಗಗಳಂ ಕೊಂದು ಕೆಡಹಿ ಕೊಬ್ಬಿಱದು ಕಡುಲಹರಿಯಿಂ ದಡಲನೆಯ್ದುವ ಹುಲಿಗಳಾ ಪಂಕರುಹಮಿತ್ರನಪರವಾರಾಶಿಯಂ ಪುಗೆ ತದ್ವನಾಂತರದೊಳ್ ಸೊಗಯಿಸಿದುವು (ಸಮ್ಯಕ್ತ್ವ. ೦೦-೨೩). [ ದಡಲ್ + – ಅನೆ₁ ]

**ದಡಸಲು** (ನಾ). ಒಂದು ಬಗೆಯ ಮರ : ಬಾಳೆ . . . (ಪರೂಷಕ) ದಡಸಲಹಣ್ಣು, ಅವಾತ್ರ . . . ಇವುಗಳ ಫಲಗಳು ಪೌಷ್ಟಿಕ (ಅಷ್ಟಾಂಗ. ೦೪೩-೦೦೭-೦೨೦). 'ತಡಸಲ್ಲು' ಪರಾ. [ ? ]

**ದಡಸು** 'ದಳಸು' ನೋ.

**ದಡಸೂಸು** (ಕ್ರಿ). ದಡಮೀರಿ ಹರಿ : ಅಂಚನ್ನು ಮೀರು ; ತುಂಬಿ ಹೊರಬರು ; ತುಂಬಿ ಹರಿ : ತುಳುಕಿದ ಮಧುರಸ ದಡಸೂಸೆ ಪರಿವ ಪೆರ್ಬೊಳೆಯೆಸೆದುದನೀಕ್ಷಿಸಿದ (ಮೋಹತ. ೫-೨೩).
[ ದಡ₃ (<ತಡ₂) + ಸೂಸು₁ ]

**ದಡಾಣಿ** 'ದಡಾಲಿ' ನೋ.

**ದಡಾರ್** (ನಾ). ಒಂದು ಅನುಕರಣ ಶಬ್ದ : ಗಾಳಿಗೆ ಬಾಗಿಲು ದಡಾರ್ ಎಂದು ಮುಚ್ಚಿಕೊಂಡಿತು (ರೂಢಿ).

**ದಡಾರ** (ನಾ). ಮೈಮೇಲೆಲ್ಲಾ ಗುಳ್ಳೆಗಳಾಗಿ ಬಾಧೆಯನ್ನುಂಟು ಮಾಡುವ, ಸಾಮಾನ್ಯವಾಗಿ ಮಕ್ಕಳಿಗೆ ಬರುವ ಅಂಟುರೋಗ : ಮಕ್ಕಳಲ್ಲಿ 'ದಡಾರ' (Measles) ಕಾಣಿಸುವುದಕ್ಕೆ ಮುಂಚೆ ಕಣ್ಣು ಕೆಂಪಾಗಿ ನೀರು ಸುರಿಯುವುದುಂಟು (ನಿಮ್ಮಮ. ೦೩೯) : ಇದು ಮಕ್ಕಳ ಕಾಯಿಲೆ. ಮೈಮೇಲೆ ದಡಾರ ಬರೋದು, ಒಮ್ಮೆಯಲ್ಲ, ಒಮ್ಮೆ ನಮಗೆಲ್ಲರಿಗೂ ಬರುತ್ತೆ (ತಾಯಿ. ೦೩೬) ; ಮಕ್ಕಳಿಗೆ ದಡಾರವೆದ್ದಾಗ ತಾಯಂದಿರು . . . ಮಾರಿಗುಡಿಗೆ ಪ್ರಯಾಣಬೆಳೆಸುವುದನ್ನು ನಾವು ಇಂದೂ ನೋಡುತ್ತಿದ್ದೇವೆ (ಕೆಲಂಗೂ. ೧) ; ನಮ್ಮ ದೇಶದಲ್ಲಿ ದಡಾರ ಇಳಿದ ತಕ್ಷಣ ಬೇವಿನಸೊಪ್ಪು ಮತ್ತು ಅರಿಶಿನ ಅರೆದು ಹಚ್ಚಿ ಸ್ನಾನ ಮಾಡಿಸುವರು (ಗೃಹವಿ. ೦೫೦). 'ಗೋಣಿದಡಾರ' ಪರಾ. [ ? ]

**ದಡಾರನೆ** (ಅ). ದಡಾರ್ ಎಂಬ ಶಬ್ದದೊಂದಿಗೆ : ದಡಾರನೆ ಬಾಗಿಲು ಮುಚ್ಚಿತು (ರೂಢಿ). [ ದಡಾರ್ + – ಅನೆ₁ ]

**ದಡಾಲಿ**, ದಡಾಣಿ (ನಾ). ದಪ್ಪನೆಯ ಹೆಂಗಸು : (೩). ದಡಾಣಿ : (೩.) ದಡಾಲ್ದಿಮ್ಮಿ, ದಡರದಿಮ್ಮಿ=ಗಟವಾಣಿ; ಗಯ್ಯಾಳಿ: ದಡಾಲ್ದಿಮ್ಮಿಯ ಹಾಗೆ ಆಡಿದರೆ ಜನ ನಗುತ್ತಾರೆ (ರೂಢಿ). ದಡರದಿಮ್ಮಿಯ ಹಾಗೆ ಆಡಬೇಡ (ರೂಢಿ). [ ? ]

**ದಡಾಳಿ** (ನಾ). (?): ಬಿಂಕದ ಬಿರುದಂಕದ ವಿಡಾಯದ ದಡಾಳಿಯ ವೀರಾಳಾಪದ ವಿಪುಳಪ್ರತಾಪದ ಬನ್ನಣೆಯ ಬಿನ್ನಣದ ರನ್ನದೋರಣದ . . . ಮಿಂಚಿನ ಸಂಚುಮದಂತೆ ಮುಂಚುವ ಸರಳಿಸುಗೆಯು ಕೌತುಕದ ಕಡುಗಲಿ ಬಿಲ್ಲಾಳ್ಗಳ ಬೆಂಬಲವಾಗಿರ್ದಂ (ಹಮ್ಮಿ.ಕ. ೩-೩೩ ವ). [ ? ]

**ದಡಿ₁**, ದಡೆ₁ (ನಾ . ೧. ಬಿದಿರಿನ ಕೋಲು ; ಬಡಿಗೆ : "ವೈಣವಂ ಯಷ್ಟಿ ರಂಭಾದಂಡಮೆನಲು ದಡಿ" (ಮಂಗರಾ. ೧೩೧-೨೦) ; ತಲೆಯಂ ದಡಿಯಿಂ ಪೊಯ್ದುಂ (ಧರ್ಮಾಮೃ. ೬-೧೦೫) ; ಗುಡಿಯೊಳಗಿರ್ದು ಗುಡಿಯ ನೇಣ ಕೊಯಿದರೆ ಗುಡಿಯ ದಡಿ[ಪಾಠಾಂ. ದಂಡಿಗೆ]ಬಿದ್ದು ಹಲ್ಲು ಹೋಹುದು ನೋಡಾ (ಬಸವ. ೫೬೬) ; ದಡಿಯಂ ಪಿಡಿದಬ್ಬರಿಸುತ್ತುಮಿರ್ಪ . . . ತತ್ಪುರೀಜನದ ಪೊದಟ್ಟು ತಳ್ಳಣದ ಮಲ್ಲಣೆ ಬೀದಿಯೊಳಾದುದದ್ಭುತಂ (ವರ್ಧಮಾ. ೩-೫); ಗೂಢಗರ್ಭವನಿದ ನೋಡೆಲ್ಲೆನೆಂದವ ಕೂಡಿ ಬಡಿದು ದಡಿಯೊಳಗೆ ಜೋಡೆ ನೀನೆಸಗಿದುದಕೆ . . . ಸಮಮಾಡಿಸದಾನು ಬಿಡುವೆನೆ (ಅಂಜಶ. ೯-೩೩) ; ನಿನ್ನ ತಲೆಗೊಂಬೆವೆಂದು ದಡಿ ಗುಂಡು ಬಡಿಯಂ ಕೊಂಡು ನೆಲದಿನಾಕಾಶಂಬರಂ ಬೆಳೆದು ಘುಡುಘುಡಿಸಿ ಬಿದಜಿಸುತ್ತಿರಲು (ಸಮ್ಯಕ್ತ್ವ. ೮-೬೩). (ಗು). ೨. ದಪ್ಪವಾದ ; ಗಾತ್ರದಿಂದ ಕೂಡಿದ. 'ದಡಿಗೋಲು' ಪರಾ. ದಡೆ₁ : ೧. ಎಜದು ಸತ್ತರ್ ಅಂಕನ್ ದಡೆಯ ಬಡಿದು ಸುರಾಂಗನೆಯೊಳ್ನರದನಾತಗೆ ಕೊಟ್ಟ (ಎಕ. X, ಶ್ರೀನಿವಾ. ೬೪೨೪ : ಶು. 930) : ಕಾಬ ಕಣ್ಣಿದ್ದು ಕನ್ನಡಿಯ ನೋಡುವನಂತೆ ನಡೆವ ಕಾಲಿದ್ದು ದಡೆಯನೂಜಿ ನಡೆವವನಂತೆ (ಮೋಳಿಮಾ. ೧೬೭-೭೩೫).

ದಡಿಯ ಕೈಯವರು = ಕೋಲನ್ನು ಹಿಡಿದಿರುವವರು : ಬಡದ ನಾಯಕವಾಡಿ ಚೂಣಿಯ ಹಿಡಿದು ಕಾದಿತ್ತುಭಯರಾಯರು ದಡಿಯ ಕೈಯವರಿಂದ ಕವಿಸಿದರೆಂದು ಸಬಳಗರ (ಕುಮಾರ್ಶ್ರೀ. ೪-೩೮).

[ ದೇ.೫ ತಮಿ. ಮಲ. ತಟ ]

**ದಡಿ₂** 'ತಡಿ₂' ನೋ.

**ದಡಿ₃** 'ತಡಿ₃' ನೋ.

**ದಡಿಕಾಜ** (ನಾ). ಕೋಲನ್ನು ಹಿಡಿದಿರುವವನು ; ದಂಡಧಾರಿ ; ಕಟ್ಟಿಗೆ ಕಾರ ; ವೇತ್ರಧಾರಿ : ಇಬ್ಬರು ದಡಿಕಾಜರು ಬಾಗಿಲ ಕಾಯ್ದಿಪ್ಪರು (ಅವಹಂ. ೨೨೨-೧೦೦೦) ; ಗಡಬಡಿಸದಿರಿ ಗದಜಿಕೊಳ್ಳದಿರಿ ಮೂಲೋಕ ದೊಡೆಯನ ಸಮ್ಮುಖಮದಲ್ಲೆಂದು ದಡಿಕಾಜರುಗಳಡಿಗಡಿಗೆ ಪೇಳುತಿಹರು (ಚಕುಪು. ೦-೨-೧೦೦). [ ದಡಿ₁ + – ಕಾಜ ]

**ದಡಿಕೆ** (ನಾ). (ಕರಾ) ಬಾಸುಳು ; ಬಾಸುಂಡೆ : ಅವರು ರಾಕ್ಷಸರ ಹಾಗೆ ಈ ಮಗುವನ್ನು ಬಡಿಯುವಾಗ ಸುಮ್ಮನಿರಬೇಕೇ ? ನೋಡು. ಇದರ ಬೆನ್ನು ಹೇಗೆ ಕೆಂಪಾಗಿ ದಡಿಕೆ ಬಂದಿದೆ (ಮುಗಿಯು. ೯೫).

[ ←ತುಳು. ದಡಿಕೆ ]

**ದಡಿಗ**, ಧಡಿಗ (ನಾ). ೧. ದೊಣ್ಣೆಯನ್ನು ಹಿಡಿದವನು. ೨. ಶೂರ ; ಬಲಶಾಲಿ : ಸಡಿಲ್ದ ಪಾಲಿಗೆವಂದರಂ ಕರ್ಚಿ ಕೈಯಡ್ಡಾಯುಧವನೀಡಾಡಿ ದಡಿಯಂ ಕೊಂಡು ಪರಿವ ದಡಿಗರುಮಂ (ಶೀರಾಪ. ೫-೦೩೪ ವ) ; ಕಾಲಾಳ್ಗಳಿಂ ಪಿಡಿದೀಡಾಡಿಯುಮರ್ದಿಯುಂ ತಿರಿಪಿಯುಂ ತೇದುಂ ತೆಜಂಬೆಯ್ದುಮಾ ದಡಿಗಂ ದಾನವನಂದದಿಂ ಕಡಪಿದಂ ಸಂಗ್ರಾಮ ರಂಗಾಗ್ರದೊಳ್ (ಮಹಾನೇ. ೧೨-೨೦೪) ; ದಡಿಗ ಕಾಳೆಗಕೈದಲಾಕ್ಷಣ ಪೊಡವಿಸುತಿಗೆಡಗಣ್ಣ ಕಡಣೆದುದು (ಕಾಶಿರಾ. ೦೦-೩೨) ; ಪೊಡೆಯರಿದ್ದಾ ಮನೆಯ ಪೊಕ್ಕುದೆ ನೋಡೆನುತ ಕೋಪವನು ಪಿಡಿದಾ ದಡಿಗನಪ್ಪಳಿಸಿದರೆ ಘಾಯಕೆ ಹಿಂದೆ ತಿರುತಿರುಗಿ (ಕೃಷ್ಣಾಳ ೨೦-೦೯). ೩. ದಾಂಡಿಗ ; ದಡಿಯ : ದಡಿಗನ ಮಿಟ್ಟುವಂ ಮಿಡಿದೊಡಲ್ಲದೆ ಮಾಣೆನಮೋಘಮೆಂದು ಕೂರ್ಪುಡುಗಗೆ ಬಂದು ತಾಗೆ ಯಮಳರ್ ತಡೆಗೊಂಡೊಡೆ ತಾವುಮೆಮ್ಮೊಳಂ ತೊಡರ್ದರ್ಪರ್ (ಶಂಪಥಾ. ೧೨-೦೬೨); ಮಿಂಚುದಲೆ ಒಣಕರುಂ ನಿಡುಗಯ್ಯ ದಡಿಗರುಂ . . . ಕುಳ್ಳಿರಲು (ಪಾಗೀರ. ದೀ. ೨೫೪-೨೨) ; ಕಡುಗಾಯ್ದು ಲೋಹರಸಮಂ ಕುಡಿಯೆಂದವರೊಡದು ಬಾಯೊಳೆಜೆವರ್ಕಳ್ಳಿಂ ಕುಡಿದ ಕಡುಪಾಪಿಯುವನಂ . . . ದಂಡಿಸುತ್ತುಮಿರ್ಪರ್ದಡಿಗರ್ (ಶಾಸ್ತ್ರಟೀ. ೫೧-೫) ; ದಡಿಗಂ ರಕ್ಕಸನನ್ನಿದಿರ್ಗೆ ಮುಳಿಸಿಂದೆಬ್ಬಿಂದನಾ ಶೈಲದಿಂ (ದಶಕು. ೧೨-೩೪). ೪. ಒಬ್ಬಾತನ ಹೆಸರು: ಗಂಗಗಚ್ಚಿನ ಪಿರಿಯ ಮಗಂ ದಡಿಗಂ ವಯ್ಯೊನ್ನವಾಸಿಯಾದೊಡ ದಡಿಗೇಸ್ವರಮನ್ನಾ ದೇಗುಲಮಂ ಮಾಡಿಸಿದಂ (ಎಕ. IX. ಚೂಗಡಿ. ೭೫-೦೫ ; 960) ; ರಾಮ ಲಕ್ಷ್ಮಣರ್ಗ್ಗೆ ದಡಿಗ ಮಾಧವರೆಂದು ಪೆಸರನಿಟ್ಟು (ಎಕ. VII, ಶಿವಪು. ४-೨೫ ; 1133). (ಗು). ೫. ದೊಡ್ಡದಾದ; ಎತ್ತರವಾದ : [ಪ]ಷ್ಣ ಭಟ್ಟೋಪಾಧ್ಯಾದುರಿಂಗೆ ಕೊನಿಗಾರಗದ್ದೆಯೊ[ಳಗೆ] ದಡಿಗ ಮೂಡೆ ೩ (ಎಇ. XXVII, ೦೬೨-೪೭ ; 1256) ; ದಡಿಗ ರಕ್ಕಸಿಯರಂತಾ ನೀಜಿ ಯಾಳಿಯರೊಡನೇಳ್ತಂದು ಬೇಗದೊಳು ಜಡಿದು ಕೆಡಪಲೆಳ್ದು ಬಂದಾ ಕಾವಮುಕಿ ತೊಡಾ ಪಿಡಿದಳು ಮತ್ತವನ (ಕಂಠಾಸಾಂ. ೩೨-೧೦೩). 'ದಡಿಗವೆಣ' ಪರಾ. ೬. ಬಲಿಷ್ಠವಾದ ; ಶೌರ್ಯದಿಂದ ಕೂಡಿದ : ಕಿಡಿಗಣ್ಣ ದಡಿಗಜಟ್ಟಿಗರ ಗರ್ಜನೆಗಳಿಂ ನಿಡುಗರುಳ ಮಾಲೆಯಂ ತಳೆದ ಸುರಮುನಿಗಳಿಂ . . . ದುರ್ಗಾನಿಲಯಮುಮಂ ಮಹೋದ್ಯೋಗದಿ ವಸುಧಾಧಿಪಂ ಪೊಕ್ಕನತಿಮನೋರಾಗದಿಂ (ದಶಕು. ೫-೫ ೧೧೪) : ದಡಿಗ ಕಂಬಿಗಳನೇಳನೇಳಾಳೊಡನೆ ಕೊಂಡುರು ಕ್ರಮದಿ ತಿದ್ದಿದರೊಡನೆ (ಹಾಳ್ಯಥಾ. ೧೭-೭೪). **ಧಡಿಗ** : ೬. ಕೊಂತ ಭಲ್ಲೆಯ ಶೂಲ ಸಬಳದಲಿ ಇಡಂತ ಬಾಣದಲೆಸುತ ಕವಿದರೆ ಧಡಿಗ ದಾನವರೆರಡುಕಡೆಯಲಿ ಜಡಿದು ಹೆಮ್ಮರದಿಂದ ಹೊಡೆದೀಡಾಡಿದನು ಹನುಮ(ಕಾಶಿರಾ. ೧೧-೨೭).

[ ದಡಿ₁ + – ಗ₂ ]

**ದಡಿಗಯ್ಯ** 'ದಡಿಗೆಯ್ಯ' ನೋ.

**ದಡಿಗವಟಿ** (ನಾ). ೧. ಒಂದು ಊರಿನ ಹೆಸರು. ಈ ಈಗಿನ ಬೆಂಗಳೂರು ಜಿಲ್ಲೆಯ ನೆಲಮಂಗಲ ತಾಲ್ಲೂಕಿನ ದಡಿಗವಾಡಿ : ಶ್ರೀ ಸತ್ಯಯೂನಾಳ ದಡಿಗವಟಿಯ ಮಸಿಕಲ್ಲಗಾವುಣ್ಡನ ಮಗಂ ಮಟ್ಟಗಂ ಸಡೆಯಲ್ನಾಕನ ಕಾಳೆಗದೊಳ್ ಸತ್ತಂ (ಮುಅರಿ. ೦೯೩೬, ೪೨-೦ ; ೯೦೦). ೨. ಒಂದು ಪ್ರದೇಶದ ಹೆಸರು (?) : ದೇವರ್ಗ್ಗೆ ನಿವೇದ್ಯಕ್ಕಂ ನನ್ದಾದೀವಿಗೆಗನ್ದಡಿಗವಟಿಯಾದ ವಿಶ್ರುವ ಚೋಳಮಣ್ಡಲದ ಕುಕ್ಕನೂರ್ನಾಡ ನಾಬ್ಬಾವುಣ್ಡಂ ಗಂಗಗಾವುಣ್ಡನ ಮಗಂ ರಟ್ಟಕುಳಕಾಲ ಚೋಳಗಾವುಣ್ಡಂಗಂ . . . ಗಟ್ಟಿಯುಂ ಕೊಣ್ಡಂ (ಎಕ. IX, ನೆಲಮಂ. ೧-೮ : 1029). [ ? ]

**ದಡಿಗವೆಣ** (ನಾ). ದೊಡ್ಡಗಾತ್ರದ ಹೆಣ : ಉಡಿದಿರ್ದ ಕಯ್ದು ನೆತ್ತರ ಕಡಲೊಳಗಡಿಗಡಿಗೆ ತಳಮನುರ್ಚುತ್ತಿರೆ ಕಾಲಿಡಲೆಡೆವಡೆಯದೆ ಕುರುಪತಿ ದಡಿಗವೆಣಂಗಳನೆ ಮೆಟ್ಟಿ ನಡೆಯುತ್ತಿರ್ದಂ (ಗದಾಯು. ४-೦४)

[ದಡಿಗ + ಪೆಣ ]

**ದಡಿಗಸೆಟ್ಟಿ** (ನಾ). ಒಬ್ಬಾತನ ಹೆಸರು : ಶ್ರೀಮತ್ ಸ್ವಸ್ತ್ಯನೇಕ ಗುಣ ಗಣಾಲಂಕೃತರಪ್ಪ ದಡಿಗಸೆಟ್ಟಿಯರ ದೇವರದಾಸಯ್ಯನ ಅಬ್ಬೆಗಳ್ (ಎಕ. XV, ಹೊಳೆನ. ೬೭-೪ ; ಶು. 950). [ ದಡಿಗ + ಸೆಟ್ಟಿ ]

**ದಡಿಗಾಳು** (ನಾ). ದಪ್ಪವಾದ ಕಾಳು : ದಡಿಗಾಳುಗಳು ಬೇಗನೆ ಬೇಯುತ್ತವೆ (ರೂಢಿ). [ ದಡಿ₁ + ಕಾಳು₂ (<ಕಾಟಿ₃) ]

**ದಡಿಗಿರಿ** (ನಾ). ದೊಡ್ಡ ಬೆಟ್ಟ ; ಭಾರಿ ಪರ್ವತ : ಕಿಡಿಗಳನು ಕಂಗಳಲಿ ಕಾಜುತ ದಡಿಗಿರಿಗಳನು ದಾಡೆಯಿಂದವೆ ಕೆಡಹುತಾಗಳೆ ಹರಿದ ರಾಕ್ಷಸಗಾಗಿ ಹರಿ ಬಳಿಕ (ಸಂಭಪ. ೭-೫೬). [ ದಡಿ + ಗಿರಿ₁ ]

**ದಡಿಗೆಯ್ಯ**, ದಡಿಗಯ್ಯ, ದಡಿಗೈಯ (ನಾ). ಕೋಲನ್ನು ಹಿಡಿದಿರುವವನು ; ದಂಡಧರ ; ಯಮ : "ಜವನಸಟಂ ದಮ್ಮನು ದಡಿಗೆ[ಪಾಠಾಂ.

ಗ]ಯ್ಯ ... ನೇಸಱಣುಗನೆನಲಂತಕನೊಳೆಡೆವಿಡದ ನಾಮ" (ಕಬ್ಬಸುಂ. ೦೩).

**ದಡಿಗಯ್ಯ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

**ದಡಿಗೈಯ:** "ದಡಿಗೈಯನೆಂದೆನಲ್ ದಮ್ಮನೆಂದೆನಲಂತಕಂ" (ಕಕರ. ೫೦). [ ದಡಿ$_1$ + ಕೆಯ್$_3$ + – ಅ$_7$ ]

**ದಡಿಗೈಯ** 'ದಡಿಗೆಯ್ಯ' ನೋ.

**ದಡಿಗೊಳ್** (ಕ್ರಿ). ಕೋಲನ್ನು ಹಿಡಿ; ದಂಡ ಹಿಡಿ: ಪುರವರವನು ನೆಱೆ ಕವಿಸಿದ ವಜ್ರಬಿರ್ವರವನುದ್ಧತ ಗದೆಯಿಂದ ಭರದಿ ಪೊಡೆಯಲದು ದಡಿಗೊಂಡ[ ಡು ] ಮಣ್ಣ ಬಗ್ಗರೆಯನೊಡೆದ ತೆಱನಾಯ್ತು (ನೇಮಿಸಂ. ೨೫-೫೨). [ ದಡಿ$_1$ + ಕೊಳ್$_1$ ]

**ದಡಿಗೋಲು** (ನಾ). ದಪ್ಪವಾದ ಕೋಲು; ಲಾಠಿ: ಆಗುಳೇಗೆ ಎಂಬ ದಡಿಗೋಲಿನಲ್ಲಿ ಅಗಡದ ಎಮ್ಮೆಯ ಚರ್ಮವ ತೆಗೆದು ಉಭಯನಾಮವೆಂಬ ನಾರಿನಲ್ಲಿ ಶಿಕ್ಷಿಯನೊಪ್ಪವ ಮಾಡಿ (ಸವಚ. ೧೦೩-೫೫೪). [ ದಡಿ$_1$ + ಕೋಲು$_1$ (<ಕೋಲ್$_1$) ]

**ದಡಿತ** (ನಾ). (?): ಕಡಿಯನಾಗುವವೆತಡಕ್ಕೆ ಕೆತ್ತುವ ನಿಡುಗಿವಿಗಳುಂ ಕೆಱೆದ ಹಲ್ಲುಳು ದಡಿತ[ಪಾಠಾಂ. ದ]ಮಂಡೆಯ ಮೇಲೆ ವಿಡುಕುವ ಬಾಲವಾಯು ತದಿ (ಸಾಳ್ವಭಾ. ೫-೩೦). [ ? ]

**ದಡಿದೋಳ್** (ನಾ). ದಪ್ಪವಾದ ತೋಳು: ಪೇರೊಡಲುರ್ವಿನಿಂದೆ ದಡಿದೋಳ್ಗಳ ಕೊರ್ವಿನಿಳಾತಳಾಗ್ರದೊಳ್ ಬೀಱುತೆ ತಮ್ಮ ಮಂತ್ರಚಯಮಂ (ಹಾಲಾಸ್ಯ. ೨-೦೩-೨೦). [ ದಡಿ$_1$ + ತೋಳ್ ]

**ದಡಿದೋತ್ರ, ದಡಿಧೋತರ, ಧಡಿದೋತರ** (ನಾ). ಅಂಚುಳ್ಳ ಪಂಚೆ: ಮಣಿದೊಡವಿನ ಪೆಡಗೆ ಪಾಗು ದಡಿದೋತ್ರದ . . . ಮಟ್ಟಿಗರೆಸೆದರ್ (ಹಮ್ಮೀ.ರ. ೭-೦೯). **ದಡಿಧೋತರ:** ಶರೀಫರು . . . ತುದಿ ಕಾಲ್ಬೆರಳು ಗಳು ಮುಚ್ಚುವಂತೆ ನಿರಿಗೆ ಹೊಯ್ದು ದಡೀಧೋತರವನ್ನು ಉಡುತ್ತಿದ್ದರು (ಶರೀಫ. ೬೦ ಕವಿಕಾವ್ಯ ಪರಿಚಯ). **ಧಡಿದೋತರ:** ಗದಗನ್ನು ದಾಟುತ್ತಲೆ ಚುಂಗುಬಿಟ್ಟು ಧಡಿದೋತರ ಉಟ್ಟ ಜನರು . . . ಕಪ್ಪುಮುಖದಲ್ಲಿ ಮುಳುಗಿಹೋದ ಸಾದಿನ ಬೊಟ್ಟು ಇಟ್ಟುಕೊಂಡ ಬಾಲಕಿಯರು–ಇವರೇ ತುಂಬಿಬಿಟ್ಟರು (ಮುಂಗಾರು. ೨೭). [ ದಡಿ$_2$ (<ತಡಿ$_2$) + ದೋತ್ರ (<ಧೋತ್ರ) ]

**ದಡಿಧೋತರ** 'ದಡಿದೋತ್ರ' ನೋ.

**ದಡಿಯ$_1$, ಧಡಿಯ$_1$** (ನಾ). ೧. ಬಲಶಾಲಿ; ಶಕ್ತ; ಶೂರ: ಕೈದು ವಿಡಿಯನಾಂ ನಿನಗನಾಯುಧಂಗೆಂದು ಕೈಯ ಪಾವಂ ವಿನತಾತನಯಂ ಬಿಸುಡುವ ಪೋಲ್ ತೊಟ್ಟನೆ ಬಿಸುಟಂ ಪಿಡಿದ ಬಡಿಯನಂತಾ ದಡಿಯಂ (ಚಂದ್ರಪ್ರ. ೫-೭೭). ೨. ದಾಂಡಿಗ; ಟೊಣಪ: ಯಾವ ಕೆಲಸಕ್ಕೂ ಬಾರದ ದಡಿಯ ಅವನು (ರೂಢಿ). **ಧಡಿಯ$_1$:** ೨. ಅವತ್ತು ಅಂಗಡಿಗೆ ಹೋಗದೆ ಮುದಿ ತಾಯಿಯನ್ನೇ ಕಳುಹಿಸಿದ ಧಡಿಯ (ಹೊಸಕ್ಕ. ೦೨೭). 'ದಡಿಗ' ಪರಾ. [ ದೇ.॥ ತಮಿ. ಮಲ. ತಟಿಯ ]

**ದಡಿಯ$_2$** 'ಧಡ$_1$' ನೋ.

**ದಡಿವಲೆ** (ನಾ). ಒಂದು ಬಗೆಯ ಬಲೆ; ದಡಿಗಳನ್ನುಳ್ಳ ಬಲೆ: ಬರಿಯಂ ಬಿಡದ ಹೊಡವ ದಡಿವಲೆಗೆ ನೊಂದಡೆ ಮೆಳೆಯ ಹೊಕ್ಕು ನೇಣ ಕಡಿವುತಿರೆ (ಸೋಮಚ. ೬-೦೩); ಸರಳ ಸೊಂಪಿನ ಸೋಹಿನಲಿ ನಿಱುಗರುಳ ದಾವಣಿವಲೆಗಳಲಿ ಸಂಗರದ ಸುಭಟವ್ರಜದ ಮಧ್ಯದ ಗೂಡುವಲೆಗಳಲಿ ಉರುಗದೆಯ ದಡಿವಲೆಯಲಸಿ ಮುದ್ಗರದ ಸಿಡಿವಲೆಗಳಲಿ ಸಮರದೊಳಂ ಮೃಗವ್ರಾತವನು ಭೀಮಕಿರಾತ ಕೈಕೊಂಡ (ಕುಮಾರವ್ಯಾ.ಭಾ. ೦೨-೪೦): ಒಡ್ಡಿದರು ದಡಿವಲೆಯ ಸಿಡಿವಲೆ ಕಡ್ಡಿವಲೆ ಕುಣಿವಲೆಯನೆಗಳಕೆ (ತೊರವೆರಾ. ೩-೩-೦೨); ತನ್ನಾಳ್ದನಂ ಬೇಂಟೆಯೊಳ್ ಮೆಚ್ಚಿಸಿ ಬಸಂಗೆಯ್ವುವೆನೆಂದು ದಡಿವಲೆಗಳಂ ಬಡಿಕೋಲ್ಗಳಂ ಅಂಟುಗಳೆಗಳಂ ಕಾಲ್ಗಣ್ಣಿಗಳಂ ಗಿಡುಗ ಸಾಳುವ ಜಾಯಿಲಂಗಳಂ ದೀಹದ ಮಿಗವಕ್ಕಿಗಳಂ ತರಿಸಿರಿಸಿ (ಚೆಳವಂ. ೫-೦೭). 'ತಡಿವಲೆ' ಪರಾ. [ ದಡಿ$_1$ + ಬಲೆ$_1$ ]

**ದಡಿವಿಡಿ** (ಕ್ರಿ). ಕೋಲನ್ನು ಹಿಡಿ; ದಂಡವನ್ನು ಹಿಡಿ: ದಡಿವಿಡಿದು ಧಟ್ಟಿಸುತೆ ನಂದಿಮಾಕಾಳರತಿಬಳನಸಿತಗಳನ ಸಮ್ಮುಖದೊಳಿರ್ದರುನ್ನತಿ ವೆರಸಿ ಸಲುಗೆಯಿಂದೆ (ಸಿದ್ಧೇಪು. ೧-೪೩); ಅಧಿಕಾರದ ತರೆಸುತ್ತು, ಕಕ್ಕಸದ ಎದೆ, ಕಿಡಿಕಣ್ಣುಗಳಿಂದ ದಡಿವಿಡಿದು ಹುಲಿಗಳಂತೆಯೇ ಬಂದು ಮದುವೆಯ ಮನೆಯನ್ನು ನುಗ್ಗಿದರು (ಕಾರೂಕ. ೦೫ ಕಥಾಸಾರ). [ ದಡಿ$_1$ + ಪಿಡಿ$_1$ ]

**ದಡಿವೊಯಿಲ** (ನಾ). ದೊಣ್ಣೆಯಿಂದ ಹೊಡೆಯುವವನು: ಕಡವೆಗ ತ್ಯಾಸ್ವಾದಿಯೆಂಬ ನರಿವೊಲಗಳಿಗೆ ದಡಿವೊಯಿಲನೆಂಬ ಕರಡಿಯ ಗಂಡನೆಂಬ ಬಟ್ಟಡೆ ಕೋಳ ಜಜ್ಝಾರನೆಂಬ ನರಿದಿನಿಹಿಯಿಂದೆಂಬ ಕುನ್ನಿಗಳನಾಯ್ದು ಗಡಣದಿಂ ಬೇಡವಡೆಯೊಡೆಯರೆಲ್ಲರು ನೆರೆದು (ಹರಿಕಾ. ೫-೭); "ಕೋಲಿನ ಏಟು; ದೊಣ್ಣೆಯ ಪೆಟ್ಟು" (ಹಡಕಾ. ೬೦೬೩). [ ದಡಿ$_1$ + ಪೊಯಿಲ್ (<ಪೊಯ್ಯು) + – ಅ$_7$ ]

**ದಡಿಸೀರೆ** (ನಾ). ಅಂಚಿನ ಸೀರೆ: ದಡಿಸೀರೆ ದುಡಿಸೀರೆ ಪೊಸಸೀರೆಗಳನುಟ್ಟು ನಡು ಕನಕರುಚಿ ಪೋಲ್ವ ಕುಬುಸಗಳನುರೆ ತೊಟ್ಟು (ಸಿದ್ಧಳಾ. ೮-೦೨); ರಂಗೀಲಿ ಉಟ್ಟೇರಿ ರೇಸ್ಮಿ ದಡಿಸೀರೆ ವಾತ್ರ ಹುಂಗನೂಲಿನ ಪರವಿ ಮರತವ್ವ ನಾರಿ (ಶರೀಫ. ೨೦-೩). [ ದಡಿ$_2$ (<ತಡಿ$_2$) + ಸೀರೆ$_2$ ]

**ದಡುಂ** (ನಾ). ಒಂದು ಅನುಕರಣ ಶಬ್ದ: (ಶ).

**ದಡುಕಿಸು** (ಕ್ರಿ). (?): ಕಡಿಯಲು ಖಡ್ಗದ ತಲೆಯನು ಮಡದಿಯ ಶಿರ ತಾಗಿದಾಗ್ಯು ಛೇದಿಸದಿರಲಾ ಪೊಡವಿಪ ಚಿಂತಿಸಿ ಮನದೊಳ್ ದಡುಕಿಸಿ ತಾ ಪುನಹ ಕಡಿಯೆ ಸುರಗಣ ಮೆಚ್ಚಲ್ (ಹಮಚ. ೨೦೩). [ ? + – ಇಸು$_3$ ]

**ದಡೂತಿ** 'ಧಡೂತಿ' ನೋ.

**ದಡೆ$_1$** 'ದಡಿ$_1$' ನೋ.

**ದಡೆ$_2$, ದಡ$_2$** (ನಾ). ತೂಕಮಾಡುವಾಗ ತಕ್ಕಡಿಯಲ್ಲಿ ಒಂದು ಕಡೆ ಪಾತ್ರೆ ಮೊದಲಾದುವನ್ನು ಇಟ್ಟು, ಅದರ ತೂಕಕ್ಕೆ ಸರಿಯಾಗಿ ಮತ್ತೊಂದು ಕಡೆ ಇಡುವ ಬಟ್ಟು, ಕಲ್ಲು ಮುಂತಾದ ವಸ್ತು; ಪೇರು; ಕಾಣಿ. 'ದಡಕಟ್ಟು' ಪರಾ. ದಡ$_2$. 'ದಡಕಟ್ಟು' ಪರಾ. [ ದೇ.॥ ತಮಿ. ತಟ್ಟೆಯ; ತೆಲು. ದಡ ]

**ದಡೆ$_3$** 'ಧಡ$_1$' ನೋ.

**ದಡೆಕಟ್ಟು, ದಡಕಟ್ಟು** (ಕ್ರಿ). ತಕ್ಕಡಿಯಲ್ಲಿ ಪಾತ್ರೆ ಮೊದಲಾದುವುಗಳ ತೂಕವನ್ನು ಸರಿದೂಗಿಸುವಾಗ ಮತ್ತೊಂದು ಕಡೆಗೆ ಬಟ್ಟು, ಕಲ್ಲು ಮುಂತಾದ ಸಾಮಗ್ರಿಯನ್ನು ಹಾಕಿ ತೂಕವನ್ನು ಸಮತೋಲನ ಗೊಳಿಸು; ಪೇರುಕಟ್ಟು: ದಡೆಕಟ್ಟಿ ಬೆಣ್ಣೆ ತೂಗು (ರೂಢಿ). **ದಡಕಟ್ಟು:** ತೂಗುವ ಮುಂಚೆ ದಡಕಟ್ಟು (ರೂಢಿ). [ ದಡೆ$_2$ + ಕಟ್ಟು$_1$ ]

**ದಡೆಮಾರು** (ನಾ). (?): ಆ ಮೇಳಣ ದಡೆಮಾರಂಗಳಲ್ಲಿ ಮುಡಿ ೪ (ಇಆ. V, ೪೨-೩೭; 1587). [ ? ]

**ದಡೆಯ** 'ಧಡ$_1$' ನೋ.

**ದಡ್ಡ$_1$** (ನಾ). ಹೊಂದಿಕೆ; ಜೋಡಣೆ; ಸೇರಿಕೆ; ಒತ್ತಾಗಿರುವಿಕೆ: "ಗಾಢದೊಳೆ ದಡ್ಡಂ" (ಕರ್ಣಾನಿ. ೬೦). 'ದಡ್ಡಕ್ಕರ' ಪರಾ. [ ದೇ.॥ ತೆಲು. ಜಡ್ಡ ]

**ದಡ್ಡ$_2$, ಧಡ್ಡ** (ನಾ). ೧. ತಿಳಿಗೇಡಿ; ಮೂರ್ಖ; ಅಜ್ಞಾನಿ: ಅನುಸರಣೆಯಿಂದ ದಡ್ಡರೂ ದೊಡ್ಡವರಾಗಬಹುದೆ? (ಕಳವಿ. I, ೪೦); ನಾ ಬಲು ದಡ್ಡ (ನನ್ನತೊ. ೩೨); ದಡ್ಡನಿಗೆ ದೊಣ್ಣೆಪೆಟ್ಟು, ಜಾಣನಿಗೆ ಮಾತಿನ ಪೆಟ್ಟು (ಗಾದೆ). (ಗು). ೨. ತಿಳಿಗೇಡಿಯಾದ; ಮೂರ್ಖ

ತನದ ; ಬುದ್ಧಿಯಿಲ್ಲದ : ಅಡ್ಡಬಿದ್ದು ಶಿಷ್ಯನ ಮಾಡಿಕೊಂಬ ದಡ್ಡ ಪ್ರಾಣಿಗಳನೇನೆಂಬೆನಯ್ಯ (ವಚಸಂ. ೧೨೪-೧೦). ಧಡ್ಡ : ೧. ನಮಗ ಧಡ್ಡರು ಅಂತ ಬಯ್ಯೋದನ್ನ ಬಿಟ್ಟು,ನಮ್ಮ ಊರವರು ಅಂತ ತಿಳಿಸಿಕೊಡು (ಕಮ್ಮಟ. ೫೭); ಈಗೇನು ಹೊತ್ತಿಲ್ಲದ ಹೊತ್ತಿನ್ಯಾಗ ಬಿರಡಿ ಹಚ್ಚಿ ಕೊಡಕಾರೊ ಧಡ್ಡ ಪೋಡಿ (ಪ್ರನಿ. ೨೭).

ದಡ್ಡ ದಾಮೋದರ = ಹೆಡ್ಡನಾದವನು ಎಂಬರ್ಥದಲ್ಲಿ ಬಳಸುವ ಒಂದು ಮಾತು : ಅವನೊಬ್ಬ ದಡ್ಡ ದಾಮೋದರ (ರೂಢಿ).

[ ದೇ.॥ ತುಳು. ದಡ್ಡ ; ಕೊಡ. ದಡ್ಡೀ ]

ದಡ್ಡ೩ 'ದಡ್ಡಸ' ನೋ.

ದಡ್ಡಕ್ಕರ (ನಾ). ಹೊಂದಿಕೊಂಡಿರುವ ಅಕ್ಷರ; ಒತ್ತಕ್ಷರ; ದ್ವಿತ್ವಾಕ್ಷರ; ಸಂಯುಕ್ತಾಕ್ಷರ : "ದ್ವಿತ್ವಾಕ್ಷರವದು ದಡ್ಡಕ್ಕರಂ" (ಚಕುನಿ. ೨೪) ; ಬಿಂದು ವಿಸರ್ಗಂ ವ್ಯಂಜನವೊಂದಿದ ದಡ್ಡಕ್ಕರಂ ಪದಾಂತ್ಯಂ ದೀರ್ಘಂ ಬಂದೊಡಱ ವನಜಮುಖಿ ಗುರುವೆಂದುಂ (ಛಂದೋಂಬು. ೧-೩೩) : ಪಿರಿಯರ್ ಸಲಿಪರ್ ದಡ್ಡಕ್ಕರದ ಜಟಕ್ಕದೆ ರೇಫವೆರಸಿದ ದಡ್ಡಕ್ಕರಮಂ ಜಟನಾಗದನುಚ್ಚರಿಸಲ್ಕಾಗಿರ್ದ ತೆಱದಿನಂತದು ಶುದ್ಧಂ (ಶಮದ. ೨೪) : ಕಥೆಯನಾಲಿಸಿ ನವರಸಾಂಬುಧಿಯೊಳಾಳದೀ ಕಥೆಯ ನಿಂದಿಸುವರ್ ತಕಾರ ದಡ್ಡಕ್ಕರದ ಕಥೆಗಳಲ್ಲದೆ ಮನುಜರಲ್ಲವದಱಿಂ ಭಕ್ತರೀ ಕಥೆಯ ಕೇಳ್ವು ದೊಲಿದು (ಚಬಪು. ೧-೩೦). 'ಒತ್ತಕ್ಕರ' ಪರಾ. [ದಡ್ಡ೧ + ಅಕ್ಕರ೨]

ದಡ್ಡತನ (ನಾ). ತಿಳಿಗೇಡಿತನ; ಅಜ್ಞಾನ; ಮಂಕುತನ: ದಡ್ಡತನದಿ ಹೀಗೆ ಹೆಡ್ಡನಯಾಗಿರುವಂತ ಮಡ್ಡಿಯಾದರೆ ನಿನ್ನ ನೆನೆಯೆ (ಕಪೋತ. ೧೪-೫೦); ನಾವು ಮೌನದಿಂದಿದ್ದರೆ, ನಮ್ಮ ದಡ್ಡತನವು ಒಂದು ವೇಳೆ ಜನರಲ್ಲಿ ಪ್ರಕಟವಾಗದೆ ಇರಬಹುದು (ಮುಂಬಯಿ. ೪-೪೯) : ತನ್ನ ಮಾತೃಭಾಷೆಯಲ್ಲಿ ಉಪನ್ಯಾಸ ಮಾಡುವದಂತೂ ಶುದ್ಧ ದಡ್ಡತನ (ಹುಚ್ಚುಹು. ೧೦೦).

[ ದಡ್ಡ೨ + - ತನ ]

ದಡ್ಡಸ, ದಡ್ಡ೩ (ನಾ). ಒಂದು ಬಗೆಯ ಚರ್ಮವಾದ್ಯ ; ಡೊಂಬರವನ ಡೊಳ್ಳು ; ದೊಂಬರ ಹರೆ : "ದಡ್ಡಸ = ದೊಂಬವಜ಼" (ಶಮದ. ೫೮. ೨) ; "ದಡ್ಡಸವೆಂದು ಡೊಂಬವಜ಼" (ಕರ್ಣಾನಿ. ೦೪) ; ದಡ್ಡಸ ಮೆನಲ್ ಡೊಂಬರೂದುವ ವಾದ್ಯವು" (ಕಶಠ. ೫೦) ; ಪೆಸರ್ ನಿನಗೆ ಕೇಳ್ ಮೊಸರ್ ಪೆಱರ್ ನಿನ್ನ ಮೆಯ್ ಡೊಂಬ ದಡ್ಡಸಕ್ಕೆ[ಪಾಠಾಂ. ಮೆಯ್ಗೊಳ್ವ ದಡ್ಡಿಸಕ್ಕೆ] ಗುಱಿಯಪ್ಪುದೊಡ್ಡಿಱದು ಶಿಂಬರನ್ನಕ್ರಿಯಾವಸಾನವಿರಸಂ ಗಳಿಂದ್ರಿಯಸುಖಂಗಳಿಂತಾದ ಸಂತಸಂ ಗತವಿವೇಕ ಪೇಱ್ ನಿನಗಸಾರ ಸಂಸಾರದೊಳ್ (ಆದಿಪು. ೩-೬೦) : ನಿಮ್ಮ ದಡ್ಡಸದ ಕುಡುಹಿನಾಣತಿ ಯಂತೆಯೇ ಗಳಿಗೂಸಾಡಲುಂಳ್ಳ ಡೊಂಬರ ಪೋರಿಯು ನಾನು (ಮುಂತ್ರಕ. ೨೯-೭). ದಡ್ಡ೩ : "ದಡ್ಡ-ಡೊಂಬರ ಡೊಳ್ಳು" (ಗಂಗಾಪವ. ೦೬೩).

ದಡ್ಡಿ೧ (ನಾ). ದಡ್ಡಳಾದ ಹೆಂಗಸು ; ದಡ್ಡೆ : ಅವಳೋ ಶುದ್ಧ ದಡ್ಡಿ (ರೂಢಿ). [ ದಡ್ಡ೨ + - ಇ೨ ]

ದಡ್ಡಿ೨, ದಟ್ಟಿ೧ (ನಾ). ೧. ತೆರೆ ; ಪರದೆ ; "ಜವನಿಕೆ" (ಚತುನಿ. ೬. II, ೨೪) ; ಕೂಡೆ ಮುಸುಱುವ ಮಱಿದುಂಬಿಯ ಬಂಬಲಿಂ ಲತೆಗಳುಂ ಕರಿಯ ದಡ್ಡಿಯಂ ಕವಿದಂತೆಯುಂಮಾಗೆ (ಕಾದಂಬ. ೨೦೯); ಗುರುವ ಬಿಜಯಂಗೈಸಿ ಮನಕ ಪರಿತೋಷ ಪುಟ್ಟಲು ವಜ್ರಪಂಜರದ ದಡ್ಡಿಯಡ್ಡಂಬಡಯಲು (ಸಿದ್ಧರಾ. ೯-೩) ; ರಾಣಿಯು ವಾಸದಂದಳಕೆ ದಡ್ಡಿ ಮುಸುಂಕುವುದುಂಟು ತಮ್ಮ ನೇರಾಣಿಯು ಪೊಂಗಳಂದಳಕೆ ದಡ್ಡಿ ಮುಸುಂಕಿದನಿತ್ತ ಭೇದಮಾ ರಾಣಿಯು ವಾಸದೊಳ್ ತವಗೆನಿಪ್ಪ ವಿಳಾಸಿನಿಯರ್ . . . ನಡೆ ತಂದರದೊಂದು ಲೀಲೆಯಿಂ (ಪಾರ್ಶ್ವಪು. ೮-೯೩) ; ಕವಿದ ಚಿತ್ರಾವಳಿಯ ದಡ್ಡಿಯ ವಿವಿಧ ಭಟರುಗ್ಗಡಣೆಯಲ್ಲಿ ವರೆಯುವತಿ ಬಂದಳು (ಕುಮ್ಮಾಊ. ೭-೧೪) ; ಮಣಿಮಯದ ಮುಕ್ತಾಫಲದ ಕೇವಣದ ಕನಕದ ದಡ್ಡಿ ಬಿಗಿ ದಂದಣವನೇಱಿದರರಸಿಯರು (ತೊರರಾ. ೧-೬-೫) ; ಅಱುವರೇ ತಾವಾಸದ ದಡ್ಡಿಯ ಮಱೆಯ ಮೂರ್ಖರು (ಉತ್ತರಾ. ೦೦-೫೦) ; ಮುತ್ತಿನ ದಡ್ಡಿಯ ಪಲ್ಲಕ್ಕಿಯೇಱ ತವ್ಮೊತ್ತಿನೊಳ್ಪಹ ಕೆಳದಿಯರ ಮೊತ್ತದ ದೊರೆ ಕುವರಾರತಿಯರಾ ಬೀದಿಯೊಳರ್ತಿಯೊಳೆಡೆಯಾಡುತಿಹರು (ಕಂನವಿ. ೭-೦೯) ; ಮುಗಿಲೊಡ್ಡಿನ ದಡ್ಡಿಯಂತೆ ಜವನಾಳ್ಗಳ ಜಂಗುಳಿಯಂತೆ ನಡೆವ ಕಾರೊಡಲ ಪೇರಾನೆಗಳ (ಹಾಮೂಕ್ತ. ೯೪-೯). ೨. ಮನೆಯ ಮಾಳಿಗೆ,-ಮಾಡು : "ದಡ್ಡಿಯೆಂದು ಮಾಳಿಗೆ"(ಕಶಸಾ.೦೬-೩೦೫);"ದಡ್ಡಿಯ ಮಾಳಿಗೆಯೆನಿಪುದು" (ಚತುನಿ. ೩೪) ; ಸೆಗಳಿಗೆ ಪೆಂಡಿರ ಮೊಲೆ ಕಿಚ್ಚಗರುವ ಪೊಗೆ ಕುಂಕಮಾಂಕ ಮೋವರಂ ನೆಲವಾಳಿಗೆ ದಡ್ಡಿಯೆಂಬಿವರ್ತನಗಲ್ಲದು ಪೊಲೆಯಾಳ ತೆಱದೆ ಮುಟ್ಟದೆ ಶಿಶಿರಂ (ಪುಷ್ಪಪು. ೬-೩೩). ೩. ಮುಚ್ಚಳ' ; ಮುಸುಕು ; ಆಚ್ಛಾದನ : "ದಡ್ಡಿಯೆನಲ್ಕೆ ಪಿಧಾನನಾಮದೊಳ್" (ಕರ್ಣಾನಿ. ೦೪) ; ತೆಗೆಸುವೆವು ನಾಳೆನಲಿ ನಿಮ್ಮಯ ಮೊಗದ ದುಗುಡದ ದಡ್ಡಿಯನು ಮೈದೆಗೆಯದಿರಿ ಕಲಿಯಾಗಿಯೆಂದನು ನೃಪತಿ ಸುಭಟರಿಗೆ (ಕುಮ್ಮಾಕ. ೦-೨೨) : ಪಂದಲೆಯಿಂದಮೋ ಜಗಲಿ ನಿಗ್ಗವದಿಂದಮ ಕಂಬವಿಟ್ಟಿಗಾ ವಿಂದವೆಯಡ್ಡವಾಸು ಕಣೆಯಿಂದವೆ ಪಂಜರಗಟ್ಟು . . . ಪಲಗೆ ಯಿಂದಮ ದಡ್ಡಿಯುಮೆಡ್ಡವಾಗೆ ಚೆನ್ನೊಂದಿತು ಬೀರವಣ್ಣದುವೆಯೊಳ್ ಪಸೆಗಿಕ್ಕಿದ ಪಂದಲಂದದಿಂ (ಚಕವಿ. ೨-೬೩). ೪. "ಪಂಜರ" (ಚತುನಿ. ೬. I, ೦೦) : ನವನಾಳ ಬಿಂದುಗಳ ದಡ್ಡಿಯಂ ನಿಟ್ಟಸುತ (ಲಿಂಗಪು. ೨೨-೨೭).

ದಟ್ಟಿ೧ : ೧. ಸಿದ್ಧೇಂದ್ರನಂ ತಂದು ಬಿಜಯಗ್ಗೈಸಿ ಇತ್ತರದಿ ವಜ್ರಪಂಜರದ ದಟ್ಟಿಯ ಬಿಗಿದು ಸುತ್ತ ಪರಿಜನವ್ವದೆ ಹರಿದು ಬರುತ (ಸಿದ್ಧರಾ. ೯-೯) ; ಪಸೆ ಪಂದಲ್ ದಟ್ಟಿ ಜಾಗಂ ಜಗಲಿ ಬಿಗಿದ ಭೃಂಗಾರಿ ಮೇಲ್ಕಟ್ಟು ಚಿತ್ರಂ ಪೊಸಕುಂಭಂ ಶಂಕು ನೂರ್ಲೆರಡೆ ತಳಿರ್ಗಳಸಂ . . . ಸಮಸ್ತ ಸ್ತ್ರೀಜನಂ ಕನ್ನಡಿ ಜವಳಿಗಳುದ್ವಾಹದೊಳ್ ವರ್ಣನೀಯಂ (ಸೂಕ್ತಿಸು. ೭-೦). ೩. ಗುರುವಿಗೆ ಸೂರ್ಯನ ಸುತ್ತುಬರಲು, ೧೨ ವರುಷಗಳ ಕಾಲ ಹಿಡಿಯುವುದು. ಅದರ ಸುತ್ತಲು, ಮುಗಿಲುಗಳ ದಟ್ಟಿಯ ಮೇಲೆ ದಟ್ಟಿ ಗಳಿವೆ (ಖಾಂಶ್ರ. I, ೦೬೨). 'ತಟ್ಟಿ೧' ಪರಾ.

[ ದೇ.॥ ತಮಿ. ಮಲ. ತಟ್ಟಿ ; ತಟ್ಟು ; ತುಳು. ದಡೆ. ತಟ್ಟಿ ; ತೆಲು. ದಡಿ ; ಕುಯಿ. ತಟ ]

ದಡ್ಡಿ೩ 'ದಿಡ್ಡಿ' ನೋ.

ದಡ್ಡು, ಜಡ್ಡು೨, ಜೆಡ್ಡು (ನಾ). ಮೇಲಿಂದ ಮೇಲೆ ಏಟು ಬಿದ್ದು ಘರ್ಷಣೆಯಾಗಿ ಅಥವಾ ಒತ್ತಿ ಒತ್ತಿ, ಚರ್ಮವು ಒರಟಾಗಿ ಕಾಯಿ ಗಟ್ಟುವಿಕೆ,- ಒರಟಾಗುವುದು : ಚೆಂದಳರ ಮೆಲ್ವಾಸಿನೊಳ್ಮಲಂಗುತಿರ್ದ ನಿನ್ನೀ ಬೆನ್ನಲುವಿನೊಳಾವಗಂ ಬಿಗಿದಿರ್ದ ಪಲ್ಲಣದೊತ್ತಿನಿಂದೊಗೆದ ದಡ್ಡು ಗಳುಮಂ (ಕಾದಂಬ. ೭೩೦) : ಕಿಱಿದೆಡೆಯಯಶದ ಭವದಿಂ ಕರಟಾದ ಪೊಲಣೆಯ ಬುಗುಟು ನೆಗೆದೆಡೆ ಶಿರದೊಳ್ ತರದಿಂದೆ ದಡ್ಡು ನೆಗೆದಂತಿರೆ ಪಿರಿದಪಮಾನಮೆಯ್ದು ದಂ ದುಶ್ಚರಿತಂ (ಪಾರ್ಶ್ವಪು. ೪-೨೬) ; ತಿರುಪೊಯ್ಲಿಂ ದಾದ ದಡ್ಡುಬ್ಬರಿಸಿ ಮೆಱೆವ ಮುಂಗೆಯ್ಗಳಿಂ ವನ್ಯಮಾತಂಗರದಾ ಘಾತಕ್ಷತಂ ಕಣ್ಗೊಳಿಪಗಲ್ಲುರದಿಂ ಕಾಳಮಂ ಕಾನನಕ್ಕುಬ್ಬರವಾಗಲ್ . . . ತಾನಿರ್ದನಾ ಬೇಡರೊಳೊರ್ವಂ (ಶಾಂತೀಶ್ವ. ೩-೭೫) ; ಬಲೆ ಕಲ್ಲಿ ಕುಬ್ಬಿಗಳ ಪೊತ್ತ ಹೆಗಲಿನ ದಡ್ಡು[ಪಾಠಾಂ. ಸೊಗಡು, ದಂಡ]ಗಳ ಪಿಡಿದ ಬಲೆ ಕೋಲ ಕುಕ್ಕುರಂಗಳ ಕಯ್ಯೊಳಳವಟ್ಟ ಗಿಡುಗ ಲಗುಡಗಳೆಸೆಯಲಲ್ಲಿ ವನಚರರಿಂದೆ ವನಮೆಸೆದುದು (ಚಬಪು. ೫೩-೨೨) ; ನಮ್ಮ ಕಾಲಿಗೆ ಅಥವಾ ಇನ್ನಾವುದಾದರೂ ಭಾಗಕ್ಕೆ ಮೇಲೆ ಮೇಲೆ ಕೆಲಸ ಬಿದ್ದು ಅಲ್ಲಿ 'ದಡ್ಡು' ಆಗಿರುತ್ತದೆ (ಶರಿನ. ೨೭). ಜಡ್ಡು೨ : ಭಕ್ತರಂ ಬಿಡದಱಿ ಜಡ್ಡಾದವೀ [ಪಾಠಾಂ. ಕಾಯ್ದುಟ್ಟಿದುವು] ಪದಂ ಭಕ್ತರ್ಗೆಯ್ತಿತ್ತು ನಿಂದುದೆಮ್ಮಯ ಪದಂ (ಅನೀರ ದೇ. ೩೮-೨೫) : ದೊಡ್ಡವರ್ಗಂ=ಆನೆ ಕುದುರೆಗಳೊಳಾದ

ಕಿಟುದೊಡೆಯ ಜಡ್ಡು [ಹಾಕಾಂ. ಜಡ್ಡು, ದಡ್ಡು] (ಶಮದ ಹಿ. ೨).

**ಜೆಡ್ಡು** : 'ಜೆಡ್ಡುಗಟ್ಟು' ಪರಾ. [ದೇ.॥ ತುಳು. ದಡ್ಡ್, ಜಡ್ಡ್]

**ದಡ್ಡುಗಟ್ಟು**, ಜಡ್ಡುಕಟ್ಟು, ಜಡ್ಡುಗಟ್ಟು, ಜೆಡ್ಡುಗಟ್ಟು (ಕ್ರಿ). (ಚರ್ಮ) ಮೃದುತ್ವವನ್ನು ಕಳೆದುಕೊಳ್ಳು; ಒರಟಾಗು; ಜಡವಾಗು; ಕಾಯಿಗಟ್ಟು : ಕರಿಗೊಬಡನುಡ.ವಡರ್ದವೆನಿಪ ಸೆರೆಗಾಲ್ಗಳಿಂ ಬಿಡದೆ ಪೊಡೆವಡೆ ವಡ್ಡುಗಟ್ಟಿದ ನೊಸಲ್ಗಳಿಂ (ಕಾದಂಬ. ೨೬೦). **ಜಡ್ಡುಕಟ್ಟು** : ಭೀಮಸೇನನು ಊದಿ ಜಡ್ಡುಕಟ್ಟಿದ್ದ ಅವಳ ಕೈಗಳನ್ನು ತನ್ನ ಕೆನ್ನೆಗಳ ಮೇಲಿಟ್ಟುಕೊಂಡು, ಮಹಾವೀರನಾದರೂ ಗೊಳೋ ಎಂದು ಅತ್ತು ಬಿಟ್ಟನು (ವಡಭಾ. ೧೯೪); ರಂಪ, ರಗಳೆಗಳಲ್ಲಿ ತಪ್ಪಸ ಒಳಜೀವನ ಮೊದಲು ತನ್ನ ಸೂಕ್ಷ್ಮತೆಯನ್ನು ಕಳೆದುಕೊಂಡು ಒರಟಾಗುತ್ತದೆ, ಜಡ್ಡು ಕಟ್ಟುತ್ತದೆ (ಹೊಸಕ. ೨೩೬). **ಜಡ್ಡುಗಟ್ಟು** : ಕೆನ್ನೆಗೆ ಹೊಡಕೊಂಡು ಕೈ ಕೆನ್ನೆ ಎಲ್ಲಾ ಜಡ್ಡುಗಟ್ಟರಬೇಕು ಪಾಪ (ಮರಳಿ. ೫); ದುಡಿದುಡಿದು ಮೈ ಜಡ್ಡುಗಟ್ಟಿಕೊಂಡಿದ್ದ ರೈತರಂತೆ ಅವನು ಯಾವ ಕೆಲಸವನ್ನಾದರೂ ನಿರಾಯಾಸವಾಗಿ ಅತ್ಯಂತ ತ್ವರಿತವಾಗಿ ಮಾಡುತ್ತಿದ್ದನು (ಪುನರು. ೫೨೯). **ಜೆಡ್ಡುಗಟ್ಟು** : ಯಾತನು ಗಾಂಡೀವದ ಹೆದೆಯ ಪೆಟ್ಟುಗಳಿಂದ ಎರಡು ಪಾರ್ಶ್ವಗಳಲ್ಲಿಯೂ ಎತ್ತಿನ ಹೆಗಲೋಪಾದಿಯಲ್ಲಿ ಜೆಡ್ಡುಗಟ್ಟ . . . ಅಂಥಾ ಅರ್ಜುನನು (ಕೃಪಾವಿ. ೪). [ದಡ್ಡು + ಕಟ್ಟು$_1$]

**ದಡ್ಡುಗೈ** (ನಾ). ಜಡ್ಡುಗಟ್ಟರುವ ಕೈ: ಅಲ್ಲೊಂದು ವಿಲಕ್ಷಣ ರೀತಿಯುಂಟು. ಅದೇನೆಂದರೆ ದಡ್ಡುಗೈಯವರು ಮಾತ್ರ ಪಂಕ್ತಿಗೆ ಕೂತು ಊಟಮಾಡ ಬಹುದು (ಶವಷ. ೫೩). [ದಡ್ಡು + ಕೈ$_2$ (< ಕೆಯ್$_2$)]

**ದಡ್ಡುಬೀಳು** 'ದಡ್ಡುವೀಟ್' ನೋ.

**ದಡ್ಡುವೀಟ್**, ದಡ್ಡುಬೀಳು (ಕ್ರಿ). ಜಡ್ಡುಗಟ್ಟು; ಒರಟಾಗು; ಸೂಕ್ಷ್ಮತೆಯನ್ನು ಕಳೆದುಕೊಳ್ಳು: ಕಣೆಕಲ್ಲಂ ತಾಗಿದಂತಾಗೆ ಕೊಂಡಸಿಯಂಬೊಂದನ ದಡ್ಡುವಿರ್ದ ಹೃದಯಂ ಬಾಳಾಂದರಂಬೋಪಿನಂಬಿಸೆದೆಚ್ಚಂ ಕಡುದೇಸಿ ವೆಂಡಿರನದೇಂ ಕಾಮಂ ಥಲಗಾ ಹಿ ಯೊ ೧ (ಅರ್ಧನೇ. ೪-೦೪೬); ಕಸಕಿಲ್ಗೆಯ್ಮಯನೆಸಗುವ ಮಸಕದ ಕಡುದಡ್ಡುವಿಟ್ಟ ಪಡಿಗದ ಪಟನೀರ್ವಸೆ ಯಾಜದ ಪಾಟ್ಗೆಯಿಂದ ಸತಿಯುರಿದೆ ಪಿಡಿವರಯ್ಯೊ ಪೊಸಮಡಿಮೆಯ್ಯಂ (ಚಳವಿ. ೬-೦೨೦). **ದಡ್ಡುಬೀಳು** : ಕೆಲವು ತಾಸುಗಳ ದುರ್ಧರವಾದ ದುಃಖಾನುಭವದಿಂದ ದಡ್ಡುಬಿದ್ದು, ಅದು ಯಾತಕ್ಕೂ ಹಣಿಯದಂತಾಗಿದೆ (ಶದ್ಯಸ. ೫೦); ದಿನದ ಅವನ ಮಾತು ಕೇಳಿಕೇಳಿ ಅವರಿಗೆ ದಡ್ಡು ಬಿದ್ದಂತಾಗಿತ್ತು (ಸಮುಜೀ. ೧೩೨೮). [ದಡ್ಡು + ಬೀಟ್$_1$]

**ದಡ್ಡೆ$_1$** (ನಾ). ದಡ್ಡ ಹೆಂಗಸು: ಯಾಕಮ್ಮಾ ಹೀಗೆ ದಡ್ಡೆಯಾಗಿಬಿಟ್ಟೆ (ಶಶಾಕ್ಷಿ. ೦೦೨). [ದಡ್ಡ$_2$ + - ಎ$_2$]

**ದಡ್ಡೆ$_2$** (ನಾ). ಪ್ರಾಯದ ಹಂದಿ; ಬಲಿತ ಹಂದಿ (?): ತನ್ನ ಪ್ರಾಯದ ಮದದಿಂದ ಸಣ್ಣಮರಿಗಳೆನ್ನದೆ ಆಗ ತಾನೆ ಮರಿಹಾಕಿದ್ದವೆನ್ನದೆ ಗಬ್ಬದ ದಡ್ಡೆಗಳೆನ್ನದೆ (ಮಿಳಿಮ. ೦೦೩). [?]

**ದದ್ರುಂಚೆ** 'ದಂಡುಜುಂಬೆ' ನೋ.

**ದದ್ರಿಂಚ** (ನಾ). ಜಾರ; ನೀತಿಬಾಹಿರ; ವಿಷಯಲಂಪಟ: ಕ್ರೂರಫಣಿಪಂ ತಲ್ಪಮಧಮಮಾಂಸಾದನ ಮಹೋರಗಾರಿಯೆ ವಾಹನಂ ಸಂಚಲೆ ಸ್ವೈರ ಚಾರಿಣಿಯ ನಿಜರಾಣಿ ನಾಕ್ಕಗಟ್ಟು ದದ್ರಿಂಚನಾಗಿ ಗೋಪಿಯರ ನೆರದು (ಕೊಟ್ಯೂಬ. ೩-೩೨). 'ದಂಡುಜುಂಬೆ' ಪರಾ. [?]

**ದದ್ರುಂಬೆ** 'ದಂಡುಜುಂಬೆ' ನೋ.

**ದಧಕ್** (ನಾ). ಒಂದು ಅನುಕರಣ ಶಬ್ದ. 'ದಧಕ್ಕನೆ' ಪರಾ.

**ದಧಕ್ಕನೆ** (ಅ). ಇದ್ದಕ್ಕಿದ್ದಂತೆ; ಅನಿರೀಕ್ಷಿತವಾಗಿ: ಧಕ್ಕನಿನಾದದಿಂ ಥಾಳಥವಳಂದ್ರ ಧಕ್ಕೆ ತನ್ನೊಡನೆ ಮಾಡಾಂತ ಧಕ್ಕಾದಿಯಾದ ಮೂರ್ಧರ್ಕಳ ಖಳರ ದಧಕ್ಕನಳದ ಹರಿ ಜಯತು (ಕಕಶಾಂ. ೭೦-೫೬). [ದಧಕ್ + - ಅನೆ$_1$]

**ದಧೀರ್** (ನಾ). ಒಂದು ಅನುಕರಣ ಶಬ್ದ : ಅಲೆಯು ಬಂದು ದೋಣಿಯ ಪಾದಕ್ಕೆ ದಧೀರೆಂದು ಬಡಿದು. ಬಟ್ಟೆಯನ್ನು ಒದ್ದೆಮಾಡಿ ಹಿಂದಕ್ಕೆ ಹೋಯಿತು (ವೀಕಿಜಿಂ. XI, ೨೫).

**ದಣದಣ**, ದಂದಣ, ದಂದಳ, ದಾಂದಣ (ನಾ). ೧. ಒಂದು ಅನುಕರಣ ಶಬ್ದ : ಕಾನನವೆಲ್ಲ ದಣದಣವೆಂದು ಪ್ರತಿಧ್ವನಿಗೊಡಹತ್ತಿತು (ಮುಂಬಯಿ. ೫-೩೦೩). **ದಂದಣ** : ೧. ದಿಂದಿಮಿ ದಂದಣ ತೊದಿಗಿದಿಮಿಕುದಿಮ್ಮೆಂದು ನಾನಾ ವಿಧದಲ್ಲಿ ವೃಂದಾರಕವೃಂದ ಬಾಜಿಸುತಿಹ ಸುರದುಂದುಭಿರವವ ಹಾಡಿದರು (ಭರತ. ೦-೯೫). **ದಂದಳ** : ೨. ಗಲಾಟೆ; ಗೊಂದಲ : ತುಂಬಿದ ಮನೆಯ ಹೊಕ್ಕಡೆ ದಂದಳ[ಹಾಕಾಂ. ದ್ವಂದ್ವ]ವಾಯಿತ್ತು ಈ ಸಂದಳಿಗಾಬದೆ ತುಂಬಿದ ಮನೆಗೆ ಕಿಚ್ಚನಿಕ್ಕಿದಡೆ ನಿಶ್ಚಿಂತವಾಯಿತ್ತು (ಲಿಂಗವ. ೮೯-೯೯). **ದಾಂದಣ** : ೧. ಕಲ್ಪಾಂತವನದ ರವದಂತಿಂಬುವಡೆದ ತದ್ಗಂಭೀರಭೇರಿಯುರುದಾಂದಣರವಂ (ಕುವಶಾಕು. ೭-೯೪).

ದಂದಣ ದತ್ತಣ ಎನ್ನು = ಬೇಡಿಕೊಳ್ಳು; ದಮ್ಮಯ್ಯಾ ಎನ್ನು : ಕೂಡಲ ಸಂಗಮ ದೇವರ ಮುಂದೆ ದಂದಣ ದತ್ತಣ ಎನ್ನಿ (ಬಸವ. ೦೬೬). **ದಂದಣಾ ದಂದಣಾ ಎನ್ನು**=ದಂದಣ ದತ್ತಣ ಎನ್ನು: ಎನ್ನೊಡೆಯ ಸಂಗನ ಬಸವಣ್ಣ ಪಣ್ಣೆಯ ದಂದವನಿಕ್ಕಿಕೊಟ್ಟ ಆ ದಂದುಗದಲ್ಲಿದೇನೆ ಆ ಮಾತಿಂಗೆ ದಂದಣಾ ದಂದಣಾ ಎನ್ನದೆ . . . ಚೆನ್ನ ಹೇಳಿದ ಮಾತು ಕೇಳಿರಣ್ಣಾ (ಸವಳವ. ೦೮-೯೦).

**ದಣಪೆ** (ನಾ). ದನಕರುಂಗಳು ಒಳಗೆ ಬರದಂತೆ ಬೇಲಿಗೆ ಅಳವಡಿಸಿರುವ ಬಿದಿರು ಅಥವಾ ಬೊಂಬಿನ ಚೌಕಟ್ಟು : ಬೊಮ್ಮನನ್ನು ಶಪಿಸುತ್ತ ಮನೆಯ ದಣಪೆಯನ್ನು ಸಮೀಪಿಸುವಾಗ ಪೋನಪ್ಪನಾಯ್ಕರು ಭೆಟ್ಟಿ ಯಾದರು (ಮಾರುದಾ. ೧೦); ತುಂಗಕ್ಕ ದಣಪೆ ದಾಟಿ ತನ್ನ ಹಿತ್ತಲನ್ನು ಸೇರಿದ್ದನ್ನು ನೋಡಿದ ಚಂದ್ರಭಾಗಕ್ಕ . . . ಗಂಡನನ್ನು ಪ್ರತಿಭಟಿಸುತ್ತ ಕೇಳಿದಳು (ಮಾರುದಾ. ೩೯); ಅವರು ಗಂಗೊಳ್ಳಿಯವರ ದಣಪೆ ತಲುಪಿದ್ದರು. ತಿನ್ನಪ್ಪ ಮಾತು ಬೆಳೆಸುವ ಮನಸ್ಸಿಲ್ಲದವನಂತೆ ದಣಪೆ ಹೊಕ್ಕ (ಅದೋಲೀ. ೦೫೫). [< ತಡಮೆ]

**ದಣಬ** 'ದಳಿಂಬ' ನೋ.

**ದಣಪಿ** (ನಾ). (ಕರಾ) ಒಂದು ಬಗೆಯ ಮೀನು. [?]

**ದಣಾಯಕ** 'ದಣ್ಣಾಯಕ' ನೋ.

**ದಣಾಯಕಪಟ್ಟ** (ನಾ). ಸೇನಾಪತಿಯ ಪಟ್ಟ,-ಅಧಿಕಾರ : ಮನ್ನಣೆಯೊಳಂ ದಣಾಯಕಪಟ್ಟಮಂ ಕಟ್ಟಿಯುನ್ನತದ ಭದ್ರಗಜಮಸ್ತಕವನಡರಿಸುತ (ಪ್ರಭುಪು. ೭-೨೮). [ದಣಾಯಕ (<ದಣ್ಣಾಯಕ) + ಪಟ್ಟ$_3$]

**ದಣಾಯಕಸಾಮ್ಯ** (ನಾ). ದಂಡನಾಯಕನಿಗೆ ಕೊಡುವ ಸುಂಕ: ದಣಾಯಕಸಾಮ್ಯ ಸಹ ಗ ೨೪ (ಮೈಆರಿ. ೧೯೫೪, ೫೭-೦೫; 1430). [ದಣಾಯಕ (<ದಣ್ಣಾಯಕ) + ಸಾಮ್ಯ$_1$]

**ದಣಾವಟ**. 'ದಣುವಟ್ಟ' ನೋ.

**ದಣಿ$_1$** 'ತಣಿ$_1$' ನೋ.

**ದಣಿ$_2$** 'ದನಿ$_2$' ನೋ.

**ದಣಿಂಬ** 'ದಳಿಂಬ' ನೋ.

**ದಣಿಕೆ** (ನಾ). ಆಯಾಸ; ದಣಿವು : ನನಗಂತೂ ದಣಿಕೆ ಆಗಿ ನಿದ್ದೆ ಬಂದದ (ನಡದಾ. I, ೫೫೫). [ದಣಿ$_1$ (<ತಣಿ$_1$) + - ಕೆ]

**ದಣೆಬ** 'ದಳಿಂಬ' ನೋ.

**ದಣೆಬು** 'ದಳಿಂಬ' ನೋ.

**ದಣೆಬೆ** (ನಾ). ಒಂದು ಬಗೆಯ ಮೃಗ (?) : ಗಿಳಿಗಳನು ನವಿಲುಗಳ ವೃಶ್ಚಿಕಗಣಗಳನು ನಂದೀಶ ತಗರಿನ ದಣೆಬೆಗಳ ವರಹುಲ್ಲೆ ಮೊದಲಾಗಿರ್ದ ಮೃಗಗಣವ (ಕೋಗಿಯು. ೯-೩೪) [?]

**ದಣಿಯಿಸು** 'ತಣಿಯಿಸು' ನೋ.

**ದಣಿಯುಣ್** 'ತಣಿಯುಣ್' ನೋ.

**ದಣಿವಟ್ಟೆ** 'ದಣುವಟ್ಟ' ನೋ.

**ದಣಿವಾಗು** (ಕ್ರಿ). ಜಡ್ಡುಬೀಳು; ಆಯಿಲೆಯುಂಟಾಗು: ಅವನು ದಣಿವಾಗಿ ಬಿದ್ದಿದ್ದಾನೆ (ಲೂಥಿ). [ ದಣಿವು (<ತಣಿವು) + ಆಗು$_1$ ]

**ದಣಿವಾರಿಸು, ದಣುವಾರಿಸು** (ಕ್ರಿ). ದಣಿವನ್ನು ನಿವಾರಿಸು: ಆಯಾಸವನ್ನು ಪರಿಹರಿಸು: ಅವರು ಮರದ ನೆರಳಿನಲ್ಲಿ ಕುಳಿತು ದಣಿವಾರಿಸಿಕೊಂಡರು (ಲೂಥಿ). **ದಣುವಾರಿಸು:** ವಿಸ್ತಾರವಾದ ಸಮುದ್ರವು ದಿಗಂತದ ವರೆಗೆ ವ್ಯಾಪಿಸಿತ್ತು. ಇದನ್ನು ನೋಡುತ್ತಾ ದಣುವಾರಿಸಲಿಕ್ಕೆ ನಿಂತಾಗ ಸೂರ್ಯನು ಇನ್ನೂ ಮೂಡಿ ಬಂದಿದ್ದಿಲ್ಲ (ನಿಷ್ಕಾಮ. ೦೭೩). [ ದಣಿವು (<ತಣಿವು) + ಆರಿಸು$_2$ (<ಆಱಿಸು) ]

**ದಣಿವು** 'ತಣಿವು' ನೋ.

**ದಣಿವುದೋರು** (ಕ್ರಿ). ಆಯಾಸವನ್ನು ತೋರ್ಪಡಿಸು; ಬಳಲಿಕೆಯನ್ನು ತೋರಿಸು: ದಣಿವುದೋರಿದ ಆ ಮುಖದ ಮುಗುಳುನಗೆ, ಸ್ನೇಹ ತುಂಬಿದ ಜೀಕು (ನಲಮು. ೬೬-೦). [ ದಣಿವು (<ತಣಿವು) + ತೋರು (<ತೋಱು) ]

**ದಣಿವುಹತ್ತು** (ಕ್ರಿ). ಆಯಾಸಹೊಂದು; ಬಳಲು: ಯಾರ ಹತ್ತಿರವೂ ಹೆಚ್ಚಿನ ಮಾತಿಲ್ಲ – ಮಾತನಾಡಿದರೇ ದಣಿವುಹತ್ತುತ್ತಿದ್ದಂತೆ (ಮೂರುದಾ. ೨೭೩). [ ದಣಿವು (<ತಣಿವು) + ಹತ್ತು$_1$ (<ಪತ್ತು$_1$) ]

**ದಣಿವೈದಿಸು** (ಕ್ರಿ). ಬಳಲುವಂತೆ ಮಾಡು; ಆಯಾಸಪಡಿಸು: ಮೆಲ್ಲಗೆ ಬಸುಱಿೞಲಪ್ಪ ದಣಿವೈದಿ[ಪಾಠಾಂ. ತಣಿವೈದಿ,ತಣಿವೆಯಿದಿ]ಸದೆ ಮಱುಗಿ ಸಿಡಿಮಿಡಿಗೊಂಡು ಕಂಬನಿಗಳು ಒಗುವ ಕಣ್ಣಿಂ ನೋಡಿ (ಸೋಮಶ. ೧-೭೬). [ ದಣಿವು (<ತಣಿವು) + ಐದಿಸು (<ಎಯ್ದಿಸು) ]

**ದಣಿವೈದು** (ಕ್ರಿ). ಆಯಾಸಹೊಂದು; ಬಳಲು. 'ದಣಿವೈದಿಸು' ಪರಾ. [ ದಣಿವು (<ತಣಿವು) + ಐದು$_1$ (<ಎಯ್ದು) ]

**ದಣಿಸು** 'ತಣಿಯಿಸು' ನೋ.

**ದಣುಂಬ** 'ದಳಿಂಬ' ನೋ.

**ದಣುವಟ್ಟ, ದಣಾವಟ, ದಣಿವಟ್ಟೆ, ದಣುವಟ್ಟೆ, ದಣುವೊಟ್ಟೆ, ಧಣುವಟ್ಟ, ಧಣುವಟ್ಟ, ಧನುವಟ್ಟ** (ನಾ). ಒಂದು ಬಗೆಯ ಕುಸ್ತಿ ವರಸೆ; ಮಲ್ಲರ ಕಾಳಗದಲ್ಲಿ ಒಂದು ವರಸೆ: ಅಂ ಪಿಡಿದುದ ಕತ್ತರಂ ಕರವಳಂ ಸೆರವಟ್ಟಣ ಹತ್ತ ಡೊಕ್ಕರಂ ಚಡಿಕೆ ತುಳಾಡಿ ಪೊಟ್ಟಮುಡುಹಂ ಮುಹಡಂ ದಣುವಟ್ಟ ಪಟ್ಟಿಸಂ (ಅನಂಪು. ೨-೨೭); ತಳಹತ್ತಂ ದಣು[ಪಾಠಾಂ. ಧಣು, ಧನು]ವಟ್ಟ ಪೊಪ್ಪರಮುರೋಬಂಧಂ ಲತಾಬಂಧ ಮುಜ್ಜ್ವಳಶಾಖಾಚರಬಂಧಮಾಯತಿಕೆಬಂಧಂ ಡೊಕ್ಕರಂ ಪಟ್ಟಿಸಂ . . . ಬಾಹುತಳಂ ಚಮತ್ಕರಿಸೆ ನಾನಾ ಕೌಶಲಂದೋಱಿದರ್ (ಕಬಕಂ. ೪-೭೩). **ದಣಾವಟ :** ಎಸೆವ ಮುಹಗ್ಗಳಂ ಠಡಕಿ . . . ದಣಾವಟ. [ಪಾಠಾಂ. ವನ್ನಿಮುಟ್ಟ] ಚಟ್ಟುಸಿರಣವಟ್ಟ ಬಾಹುದಣೆ . . . ಸಸಿಕುವನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣವೊಪ್ಪೆ ಕಾದಿದರ್ (ಚಂದ್ರಪು. ೫-೭೮). **ದಣಿವಟ್ಟೆ:** ಒರಿದು ದಣಿವಟ್ಟೆ ಪಟ್ಟಿಸ ಕರವಳಯ ಭುಜಂಗ ಬಂಧತಳ ಕೊಪ್ಪರ ಡೊಕ್ಕರ ತೋರಹಸ್ತಮೆಂಬಿವನುರುತರದಿಂ ತೋ ಱ ಬಿಡದೆ ಕಾದುತ್ತಿರ್ದರ್ (ಕೃಷ್ಣವಿ. ೨೬-೦೯). **ದಣುವಟ್ಟೆ:** ಎಳೆದು ದಣುವಟ್ಟೆ[ಪಾಠಾಂ. ವೊಟ್ಟೆ] ಯಲಿ ಬೊಪ್ಪರದೊಳಗೆ ಜಾಳಿಸಿ ಚಿಮ್ಮಿ ಝಾಡಿತೆಯ ಸೆಳೆದು ಮುಡುಹಿನ ಲೌಕಿ ಬಿಗಿದರು ಪಟ್ಟಮುಡುಹಿನಲಿ (ಕುಮ್ವಾಸ. ೨-೯೮). **ದಣುವೊಟ್ಟೆ :** 'ದಣುವಟ್ಟೆ' ಉಲ್ಲೇಖಕ್ಕೆ ಕೊಟ್ಟಿರುವ ಪ್ರಯೋಗದ ಪಾಠಾಂತರವನ್ನು ನೋಡಿ. **ಧಣುವಟ್ಟ :** ಕರವಳಯ ತಳಹತ್ತ ಡೊಕ್ಕರ ಶಿರವ ಧಣು ಧಣುವಟ್ಟ ತಳಪೊಪ್ಪರ ದುವಂಗುಲ ಕಂದ ಡೊಕ್ಕರ ತೋರ ಹಸ್ತದಲಿ . . . ತೋಱಿದರು ಕೌಶಲವ (ಕುಮ್ವಾಅ. ೬-೩೯). **ಧಣುವಟ್ಟ:** 'ದಣುವಟ್ಟ' ಉಲ್ಲೇಖಕ್ಕೆ ಕೊಟ್ಟಿರುವ 'ಶಬಶಂ' ಪ್ರಯೋಗದ ಪಾಠಾಂತರವನ್ನು ನೋಡಿ. **ಧನುವಟ್ಟ:** 'ದಣುವಟ್ಟ' ಉಲ್ಲೇಖಕ್ಕೆ ಕೊಟ್ಟಿರುವ 'ಶಬಶಂ' ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ದಣುವಟ್ಟೆ** 'ದಣುವಟ್ಟ' ನೋ.

**ದಣುವಾರಿಸು** 'ದಣಿವಾರಿಸು' ನೋ.

**ದಣುವಿಕೆ** (ನಾ). ಆಯಾಸ; ಶ್ರಮ; ದಣಿವು: ವಸಧಿಯೊಳು ಸಪ್ಪದ್ದೀವದ ವ್ಯತ್ತಿಕೆ ಹಾಕಿ ದಣ್ಣುವಿಕ್ಕಲ್ಲದೆ ಪೂರ್ಣವಹುದೆ (ವಿದ್ಯಾಕ್ಕ. ೪೮-೧೬). [ ದಣುವು (<ತಣಿವು) + – ಇಕೆ ]

**ದಣುವು** 'ತಣಿವು' ನೋ.

**ದಣುವೊಟ್ಟೆ** 'ದಣುವಟ್ಟ' ನೋ.

**ದಣ್ಣ** 'ದರಣ$_1$' ನೋ.

**ದಣ್ಣಾಯ** (ನಾ). ಜುಲ್ಮಾನೆಯಿಂದ ಬಂದ ಹಣ,–ಆದಾಯ: ಭಂಡಿಯ ಬತ್ತದ ಸುಂಕ ಉಪ್ಪರ ನೆಲವಳಿ ಅನುಪು ಆಳು ಅರ[ಸ]ನಿಕೆ ಕಡಾಯಲು ದಂಣಾಯವಾರರು ಪಂಣ್ ೬ (ಸೌಇಇ. IX-11, ೪೩೮-೧೭ ; 1418). [ <ದಂಡಾಯ ]

**ದಣ್ಣಾಯಕ, ಡಣಾಯಕ, ಡಣ್ಣಾಯಕ, ದಣಾಯಕ, ದಣ್ಣಾಯ್ಕ** (ನಾ). ೧. ದಂಡಿನ ಒಡೆಯ; ಸೇನಾಪತಿ; ದಂಡನಾಯಕ; ಸರದಾರ: ದಾದಿ ಸೋಮೆಯ ದಂಣಾಯಕರ ಕುಮಾರ ಬಲಪ್ಪ ದಂಣಾಯಕರ ಪ್ರಧಾನ ಕಳುವ ಚಿಕವಿಠಪ್ಪನವರ ಅಕ್ಕ (ಎಕ. X (S), ಕೋಲಾರ. ೩೨-೫ ; 1342) ; ಆರಗದ ದೇವಪದಂಣಾಯಕವೊಡೆಯರ ಮಕ್ಕಳು (ಎಕ. VII, ಶಿವಮೊ. ೧೧-೯ ; ಸು. 1400) ; ಆ ನಾಡಿನ ಒಬ್ಬ ಪಡೆವಳನು ಮಿತಪರಿವಾರನಾಗಿ ದಣ್ಣಾಯಕನನ್ನು ಎದುರುಗೊಂಡನು (ಸವಡ. ೫೫). ೨. ಉನ್ನತ ಅಧಿಕಾರಿ; ಪ್ರಧಾನಾಧಿಕಾರಿ: ಬಲ್ಲಿದನೆ ಬಾಣಾಸುರನ ಬಾಗಿಲಂ ಕಾದೆ ಕಲ್ಯಾಣದೊಳು ಬಸವ ದಣ್ಣಾಯಕಂಗೊಲಿದೆ (ಹಂಗೂರ. ೯೫-೦೮) ; ಬಿಜ್ಜಳಂ ಕಂಡು ಕೇಳ್ದು ದಣ್ಣಾಯಕರ ಪದತಳಕ್ಕೆಱಗಿ (ಬಸರ. ೬-೮೬). **ಡಣಾಯಕ :** ೧. ಚಾಮರಾಜಂಗೆ ರಾಜ್ಯಾಭಿಷೇಕಂಗೆಯ್ದು, ತನ್ನ ಕುವರಂಗೆ ಪಡುವಣ ಡಣಾಯಕನ ಕೋಂಟೆಯಂ . . . ಇತ್ತು (ಚಿಕವಂ. ೫೩-೭) ; ಇವರೂ ಸಹ ನಿಮ್ಮಂತೆಯೇ ಪೂರ್ವಾಶ್ರಮದಲ್ಲಿ ಡಣಾಯಕರಾಗಿದ್ದು ಈಗ ದಾಸರಾಗಿದ್ದಾರೆ (ಹೀಮಕೊ. ೮೯) ; ಕೊತ್ತಳದ ಮೇಲೆ ಅರಮನೆಯ ಮನ್ನೆಯರು, ಪಸಾಯಿತರು, ಡಣಾಯಕರು . . . ನಿಂತಿದ್ದರು (ಕೂಲೀಣ. ೩). **ಡಣ್ಣಾಯಕ:** ೧. ಬಾಹತ್ತರ ನಿಯೋಗಾಧಿಪತಿ ಪರಮವಿಶ್ವಾಸಿ ಬಿಲವೊಳ ಡಣ್ಣಾಯಕರ ಬವಣೆಯಲು ಕೊಮಾರನ ಬೀಡಿನ ಕೊಟ್ಟಿಗೆಯ ಮಾರೆಯನಾಯಕನ ಮಗ . . . ಕಾದಿ ಹಲರಂ ಕೊಂದು (ಮೈಆರಿ. ೦೯೩೮, ೪೦-೬; 1223). **ದಣಾಯಕ:** ೧. "ದಣಾಯಕ (ದಣ್ಣಾಯಕ) = ದಂಡನಾಯಕ" (ತದ್ಭವಕೋ. ೧೮) ; ಮಂದಿಯನಂ ಹಿಂದಕ್ಕ ನೀಉ ಆತು ಬಂಡಿಯಿಂದು ಮಂಗಪ್ಪ ದಣಾಯಕರೂ ನಿರೂಪವ ಕೊಟ್ಟು (ಕಇ. I, ೩೫-೫; 1396 ?) ; ಗವುರಪ್ಪದಣಾಯಕರ ಕಾಲದಲೂ (ಸೌಇಇ. ೦೯೩೨, ಉಡುಪಿ. ೨೭೦-೭ ; 1494) ; ಆ ದಣಾಯಕನ ಬಳಿಯೊಳೋಲಗಿಸುತ್ತೆ ಕು ಳಿ ತು ಶಿವಸುಖದೊಳೊಪ್ಪಿರ್ದನಾನಂದದಿಂದೆ (ಸಿದ್ಧೇಪು. ೨೦-೭೭); ಆಯತಂ ಕರೆಯಿಸೆನೆ ತನ್ನ ದಣಾಯಕನ ಕಳುಹಿದನು ಶಂಕರದಾಸಿಯಿದ್ದೆಡೆಗೆ (ಶಂಕದಾ. ೦೦-೩೪) ; ಸಾಲೀಮಠಕ್ಕೆ ಯಾರೋ ದಣಾಯಕರು ಬಂದಿದಾರೆ, ದಣಾಯಕರು ! (ತುಂಗಭ. ೩). ೨. ಚೆನ್ನಬಸವಣ್ಣಂಗೆ ಕೈಮುಗಿದು ತತ್ತ್ವಸಂಪನ್ನ ಕೇಳಿದೆ ದಣಾಯಕಬಸವ ರಾಜನೈತಂದನೆನೆ (ಚಬಪು. ೬-೩). **ದಣ್ಣಾಯ್ಕ :** ೧. ಶ್ರೀಮನುಮಹಾ

ಪ್ರಧಾನಂ ಮೆದಗಿದೇವದಂಡನಾಯ್ಕ ಮಹಾಪ್ರಧಾನಂ ಮಾಚಯ ದಂಡನಾಯ್ಕರುಂ . . . ರಾಜ್ಯಂಗೆಯುತ್ತಮಿರಲು (ಎಕ. XI, ಚಿತ್ರದು. ೧-೩೦ ; 1210) ; ಬಸವೆಯ ದಂಡನಾಯ್ಕರ ನಿರೂಪದಿಂ (ಮೈಅರಿ. ೧೯೨೮, ೪-೫ ; 1369) ; ಶ್ರೀಮನ್ಮಹಾಪ್ರಧಾನಂ ಇರುಗಪ್ಪದಂಡನಾಯ್ಕಒಡೆಯರ ಹೆಸರ ತೂಬಿನ ಕಂಭ (ಎಕ. XVI, ಕುಣಿಗ. ೩೦-೨ ; 1394).

[ < ಸಂ. ದಂಡನಾಯಕ ]

ದಣ್ಣಾಯಕಿತ್ತಿ (ನಾ). ಸೇನಾಪತಿಯ ಹೆಂಡತಿ: ಮಾದಿಗಿದೇವದಂಣ್ನಾಯಕರ ಅರಸಿ ಮಾಯಿದೇವಿದಂಣ್ನಾಯಕಿತ್ತಿರ ಹೆಸರ (ಎಕ. XV, ಹೊಳೆನ. ೫೯-೫೮ ; 1316). [ ದಣ್ಣಾಯಕ + - ಇತ್ತಿ ]

ದಣ್ಣಾಯ್ಕ 'ದಣ್ಣಾಯಕ' ನೋ.

ದಣ್ಣಿಕ್ಕು (ಕ್ರಿ). ದಂಡನಮಸ್ಕಾರ ಹಾಕು ; ಅಡ್ಡಬೀಳು : ಶಿಂಗ್ನಾಚಾರಿಯು ಉದ್ದಕ್ಕೂ ದಣ್ಣಿಕ್ಕಿ ಕ್ಷಮಿಸಬೇಕು ಸ್ವಾಮಿ . . . ಎಂದನು (ಭೃಸರ್ವ. ೭). [ < ದಂಡ + ಇಕ್ಕು ]

ದಣ್ಣಿರು (?) (ನಾ). (?): ಮುವತ್ತುನಾಲ್ಕು ಮುಂಡಿ ಅಕ್ಕಿ ಗೇಣಿಯಕ್ಕುವ ಬಾಳು ಆ ಬಾಳಿನ ಚತುಸ್ಸೀಮೆಯ ವಿವರ ಮೂಡಲು ದಣ್ಣಿರ ಸಾಲಿಂದಂ ಪಡುವಲು ತೆಂಕಲೂ ದಣ್ಣಿರ ಸಾಲಿಂದಂ ಬಡಗಲು . . . ಗಡಿಯಿಂದಂ (ಸೌಇಇ. IX-II, ೪೭೪-೦೨ ; 1472). [ ? ]

ದತ್ತ (ಗು). ೧. ಕೊಟ್ಟ ; ನೀಡಿದ : ಚಕ್ರವರ್ತ್ತಿಯತಿರಾಜಗಣಾಗ್ರಣಿ ದತ್ತವಿತ್ತಭಾಜನ ಕವಿ . . . ಜಿನಚಂದ್ರಮುನೀಂದ್ರಂ (ಶಾಂತಿಪು. ೧-೨೭) ; ತಂದೆಗವನತನಾದಂ ಆಗಿ ದೌವಾರಿಕ ದತ್ತ ಕನಕವಿಷ್ಟರಮನಗಲೆ ನೂಂಕಿ (ಪುಷ್ಪಪು. ೪-೭೦ ವ) ; ದುಸ್ತರಜ್ಞಾನಪ್ರಪಂಚತಮಸ್ತತಿಪ್ರಹರಾರ್ಥ ದತ್ತಪ್ರಸ್ತುತಜ್ಞಾನಪ್ರತಾನ ಶ್ರೀಗುರುವೆ ಜಯತು (ಬಸಪು. ೭-೧೭). ೨. ದಾನಮಾಡಿದ. 'ದತ್ತಾಪಹಾರ' ಪರಾ. (ನಾ). ೩. ಉಪಾಯನ ; ಕೊಡುಗೆ ; ಕಾಣಿಕೆ ; ದಾನ : ದತ್ತಾ ಕೊಟ್ಟು ಮತ್ತೆ ಕೇಳಿದವ ಎತ್ತಿಗಿಂತ ಕಡೆ (ಗಾದೆ). ೪. ಸ್ವೀಕಾರಮಾಡಿಕೊಂಡ ಮಗ ; ದತ್ತುತೆಗೆದುಕೊಂಡ ಮಗ ; ಔರಸನಲ್ಲದ ಪುತ್ರ : ದತ್ತನು ಮಗನಲ್ಲ ಧಾವಳಿ ಮಡಿಯಲ್ಲ ಭಟ್ಟನು ಭಟನು ತಾನಲ್ಲ (ಜಂಜಾಪ. ೧೭೦-೪೨). ೫. ದತ್ತಾತ್ರೇಯ. ೬. ಕೆಲವು ಹೆಸರುಗಳ ಮುಂದೆ ಸೇರುವ ಒಂದು ಪದ. ಉದಾ. ಗುರುದತ್ತ, ಭಾನುದತ್ತ.

ದತ್ತ ವಸ್ತು = ಕೊಟ್ಟ ವಸ್ತು : ಲೇಖಕನ . . . ಕಾರ್ಯ ಪೂರ್ಣಗೊಳ್ಳುವುದಕ್ಕೆ ಮುಂನ್ನ ಮತ್ತೊಂದು ಅಂಶ ಬೇಕಾಗುತ್ತದೆ. ದತ್ತವಸ್ತುವನ್ನು ಕ್ರಮ, ಸಾಮರಸ್ಯ, ಸೌಂದರ್ಯ, ಪರಿಣಾಮಸಾಮರ್ಥ್ಯ ಇವುಗಳ ತತ್ತ್ವಗಳಿಗನುಗುಣವಾಗಿ ರೂಪಿಸಬೇಕಾಗುತ್ತದೆ (ಸಾಹಿಪ್ರ. ೯). ದತ್ತ ಹಾಕು = ದಾನವಾಗಿ ಬರೆದುಕೊಡು : ವಿಜಯನಗರದ ಸಾಮ್ರಾಜ್ಯ ಕಾಲದಲ್ಲಿ ಮಂತ್ರಿಗಳಾದ ಮಾಧವಾಚಾರ್ಯರು . . . 'ದತ್ತ' ಹಾಕಿ ಕೊಟ್ಟರು. ಇದು ಈಗಲೂ ವಸೂಲು ಬರುತ್ತಾ ಉಂಟು (ತುಳುನಾ. ೧೧೭). ದತ್ತಾರ್ಥಿಕಾಂಚನ=ಕೇಳಿದವರಿಗೆಲ್ಲಾ ಹಣವನ್ನು ನೀಡುವವನು: ಅರ್ಥಿಜನಕ್ಕೆ ಕಾಂಚನದಾನಮಾಡಿದವನು ; ಒಂದು ಬಿರುದು : ಕಾದಂಬಚಕ್ರಿ ಮಯೂರವರ್ಮ್ಮ . . . ಸಿಂಘಲಾಂಧನ ದತ್ತಾರ್ತ್ಥಿಕಾಂಚನ ಸಮರದಯಕಾರಣ ಪ್ರತಾಪಮಾರ್ತ್ತಂಡ ಮಾರ್ಕೊಳುವರ ಗಂಡ ನಾಮಾದಿ ಸಮಸ್ತಪ್ರಸಸ್ತಿಸಹಿತಂ (ಸೌಇಇ. XX, ೭೬-೦೨ ; 1118).

[ ಸಂ. ]

ದತ್ತಕ (ನಾ). ೧. ಸ್ವೀಕೃತ ಪುತ್ರ ; ತಾಯಿ ತಂದೆಗಳು ಮಕ್ಕಳಿಲ್ಲದವರಿಗೆ ದಾನಮಾಡಿ ಕೊಟ್ಟ ಮಗ ; ದತ್ತುಪುತ್ರ ; ಔರಸಪುತ್ರನಲ್ಲದ ಮಗ : ದತ್ತಕಮಗನನ್ನು ಮಾಡಿಕೊಂಡರೆ ಏನು ತಪ್ಪು ? (ವೃದ್ಧರಾ. ೯೦). ೨. ದತ್ತುಪುತ್ರಸ್ವೀಕಾರ : ಆ ಊರ ದೇಶಪಾಂಡೆಯವರ ಮನೆಯಲ್ಲಿ ಒಂದು ದತ್ತಕವಾಯಿತು (ಮೇದಿಪು. ೦) ; ವಶಿಷ್ಠಸ್ಮೃತಿ . . . ಗೃಹಸ್ಥಧರ್ಮ, ಪಾಪಿಷ್ಠಳಾದ ಪತ್ನಿಯ ತ್ಯಾಗ, ಅನಧ್ಯಯನ, ದತ್ತಕ, ಸಾಕ್ಷಿ, ರಾಜಧರ್ಮ ಮತ್ತು ಪ್ರಾಯಶ್ಚಿತ್ತ ವಿಚಾರಗಳಿವೆ (ಭಾರದ. ೬೩).

ದತ್ತಕ ಮಾಡಿಕೊಳ್ಳು = ದತ್ತುಮಗನನ್ನಾಗಿ ಸ್ವೀಕರಿಸು ; ಮಗ್ಗನನಾಗಿ ಸ್ವೀಕರಿಸು : "ತಾವು ಚಿಕ್ಕನಹಳ್ಳಿ ಚಾಮೇಅರಸಿನವರ ೩ ವರ್ಷ ವಯಸ್ಸಿನ ಪುತ್ರರನ್ನು ದತ್ತಕ ಮಾಡಿಕೊಂಡು ಆ ಬಾಲಕರಿಗೆ ಪಟ್ಟವನ್ನು ಕೊಡಬೇಕು (ಒಡಕ. ೬೦) ; ಮುಪ್ಪು ಒತ್ತಿಬರುವ ಹೊತ್ತಿನಲ್ಲಿ, ಸದ್ಗತಿಯ ಆಶೆಯಿಂದ ಪಂತಪ್ರಾಮಾ ದತ್ತಕ ಮಾಡಿಕೊಂಡಿದ್ದರು (ದೀಪಹ. II, ೧೫೭). ದತ್ತಕರಾದವರು = ಹೆಚ್ಚು ವಿಶ್ವಾಸವುಳ್ಳವರು ; ಮಾರುಹೋದವರು : ಪರಸಂಸ್ಕೃತಿಗೆ ದತ್ತಕರಾದವರು ಹೆಚ್ಚುತ್ತ ಬಂದಹಾಗೆಲ್ಲ ಜನಾಂಗವು . . . ನಾಶವನ್ನು ಪಡೆಯುವುದು (ನೀಗಟ್ಟು. ೫೩). ದತ್ತಕ ಹೋಗು = ಸ್ವೀಕೃತ ಮಗನಾಗು ; ದತ್ತುಮಗನಾಗಿ ಸ್ವೀಕರಿಸಲ್ಪಡು : ಆ ಮನೆತನಕ್ಕೆ ದತ್ತಕ ಹೋದೆ (ಅಶ್ವಮೇ. ೨೪). [ ಸಂ. ]

ದತ್ತಕನಿಷ್ಠಿಕ (ನಾ). (ಎಣಿಕೆಯಲ್ಲಿ) ಕಿರುಬೆರಳನ್ನು ಮಡಿಸಿ ಎಣಿಸಬೇಕಾದವನು ; ಮೊದಲನೆಯವನು : ಸುಕವಿಜನಗಣನೆಯೊಳ್ ದತ್ತಕನಿಷ್ಠಿಕನಾಗೆ ಕಾಳಿದಾಸಂ ಮೊದಲೆಂದು ಕರಂ ಬಣ್ಣಿಪರದರಿಂದೆ ಕಾಳಿದಾಸಂಗೆ ದಾಸರೆನಿಪರ್ ಕವಿಗಳ್ (ಜಗವಿ. ೦-೯) : ಈ ನೆಲದೊಳ್ ಸಂದ ಬೀರರ ಲೆಕ್ಕಕ್ಕೆ ದತ್ತಕನಿಷ್ಠಿಕನಾಗಿ ಅಲರ್ವೊಡೆಯನಡಿಮಲರ ಬಂಡುಣಿಯೆಂಬೊಂದು ಬಿರುದಂ ತಾಳ್ದಿ (ರಾಮಾಶ್ವ. ೯೭-೮).

[ ಸಂ. ದತ್ತಕನಿಷ್ಠಿಕ (ದತ್ತಾ + ಕನಿಷ್ಠಿಕಾ + -) ]

ದತ್ತಕಮಗಳು (ನಾ). ಸ್ವೀಕೃತಪುತ್ರಿ ; ದತ್ತುಪುತ್ರಿ : ರುಮಾದೇವಿಯು ಸಂಜೀವಿನೀ ಸ್ಟುಡಿಯೋದ 'ದತ್ತಕಮಗಳು' ಎಂಬಂತೆ ಇದ್ದಳು (ಹೇಮಂತ. ೩೨೩). [ ದತ್ತಕ + ಮಗಳು (< ಮಗಳ್) ]

ದತ್ತಗೇಡಿ (ನಾ). ಅದೃಷ್ಟವಿಲ್ಲದವನು ; ನತದೃಷ್ಟ ; ಕೊಟ್ಟುದನ್ನು ಹಾಳುಮಾಡಿಕೊಳ್ಳುವವನು ; ದುರ್ದೈವಿ : ದತ್ತಗೇಡಿಗೆ ಕೊಟ್ಟವರಿಲ್ಲಂತ ದೈವಾನರದು ಕಸಗೊಂಡವರಿಲ್ಲಂತ . . . ವತನದಾರ ಮನ್ಯಾಗ ಹುಟ್ಟಿ ಮಾಡೇದಾಗ ಬೆಳದಿವಿ (ಅಲ್ಪವಿ. ೧೦೬). [ ದತ್ತ + ಕೇಡಿ₁ ]

ದತ್ತನಂದನ (ನಾ). = ದತ್ತಕ ೧ : ತನಗೆ ತಾನೆ ದೊರಕೊಂಡವಂ ದತ್ತನಂದನನಿವಂ ತನಗೆಂದವಂ ಮುದದೆಳೆತ್ತಿಕೊಂಡು (ಕ್ಷಮಿಥಾ. ೨೮-೫೭).

[ ದತ್ತ + ನಂದನ ]

ದತ್ತಪುತ್ರ (ನಾ). = ದತ್ತಕ ೧ : ಅವಂ ನರಸಿಂಗವೊಡೆಯರ್ ಪೆತ್ತ ಮಗನಲ್ಲಂ ಕೊಂಡು ಸಾಕಿದ ದತ್ತಪುತ್ರಂ (ನಂಬಿರ. ೬-೩೯) ; ದತ್ತಪುತ್ರನಿಗೆ ಪಿತೃಭಕ್ತಿ ಹುಟ್ಟುವದೋ ? (ಗಾದೆ). [ ದತ್ತ + ಪುತ್ರ ]

ದತ್ತಮಂಡಲ (ನಾ). ಕಡಪ, ಕರ್ನೂಲು, ನೆಲ್ಲೂರು, ಬಳ್ಳಾರಿ ಮತ್ತು ಅನಂತಪುರ ಎಂಬ ಐದು ಜಿಲ್ಲೆಗಳಿಂದ ಕೂಡಿದ ಪ್ರದೇಶ : ಈ ಬೃಹದ್ಬಾಣರು ಈ ಕಾಲದಲ್ಲಿ ಪಲ್ಲವರ ಸಾಮಂತರಾಗಿ ದತ್ತಮಂಡಲ (Ceded Districts) ದ ಕೆಲಭಾಗ (ಶ್ರೀಶೈಲದ ಮಗ್ಗುಲಿನ ಭಾಗ) ಗಳನ್ನು ಆಳುತ್ತಿದ್ದರು (ಕರ್ಣಾಅ. ೪). [ ದತ್ತ? + ಮಂಡಲ ]

ದತ್ತಯ್ಯ (ನಾ). ೧. ದತ್ತಾತ್ರೇಯ. ೨. ಇನ್ನೊಬ್ಬರ ಕರುಣೆಯನ್ನು ಯಾಚಿಸುವಾಗ ಬಳಸುವ ಪದ : ಅಂಗಲಾಚಿ ಬೇಡಿಕೊಂಡು ದತ್ತಯ್ಯ ಅಂದರೂ ಅವಳು ತಾನು ಹಿಡಿದ ಹಠವನ್ನು ಸಾಧಿಸಿಯೇ ಬಿಟ್ಟಳು (ರೂಢಿ). [ ದತ್ತ + ಅಯ್ಯ₁ ]

ದತ್ತಸಂಖ್ಯೆ (ನಾ). ಕೊಟ್ಟಿರುವ ಅಂಕಿ ; ಕೊಟ್ಟ ಸಂಖ್ಯೆ : ದತ್ತಸಂಖ್ಯೆಗಳು ಅಪವರ್ತನವಾಗಿರುವ ಕನಿಷ್ಠಸಂಖ್ಯೆಗೆ ಅವುಗಳ ಲಘುತಮ ಸಾಮಾನ್ಯ ಅಪವರ್ತ್ಯ (ಲ.ಸಾ.ಅ.) ಎಂದು ಹೆಸರು (ಕವಿಕೋ. I, ೩). [ ದತ್ತ + ಸಂಖ್ಯೆ ]

**ದತ್ತಸ್ವಾತಂತ್ರ್ಯ** (ನಾ). [ದ್ವೈತ] ಭಗವಂತನಂ ಜೀವನಿಗೆ ಕೊಟ್ಟ ಆಂಶಿಕವಾದ ಸ್ವಾತಂತ್ರ್ಯ: ಪರಮಾತ್ಮನು ಜೀವನಿಗೆ ಕೊಟ್ಟ ಅಲ್ಪವಾದ ದತ್ತಸ್ವಾತಂತ್ರ್ಯದಿಂದ "ಜೀವೋಽಕರ್ತಾ" ಎಂದು . . . ಸೂಚಿಸುತ್ತಾ ತತ್ಸಂಬಂಧವಾದ ಕೆಲವು ತತ್ತ್ವವಿಚಾರಗಳನ್ನು ಹೇಳುತ್ತಾರೆ (ಹರಿದಾ. ೧೬-೦ ಅವತಾರಿಕೆ). [ದತ್ತ + ಸ್ವಾತಂತ್ರ್ಯ]

**ದತ್ತಸ್ವೀಕಾರ** (ನಾ). ದತ್ತು ತೆಗೆದುಕೊಳ್ಳುವಿಕೆ; ದತ್ತುಸ್ವೀಕಾರ: ಸ್ವೀಕಾರ; ದತ್ತಸ್ವೀಕಾರ (Adoption. ಇಂಕನಿ). [ದತ್ತ + ಸ್ವೀಕಾರ]

**ದತ್ತಹಸ್ತ** (ನಾ). ನೀಡಿದ ಕೈ; ಹಸ್ತಾವಧಾನದ ಗೌರವ: ಬಾಜಿಸೆ ಮಂಗಳಾನಕಮನಾ ದಿವಿಜೇಂದ್ರನ ದತ್ತಹಸ್ತದೊಳ್ . . . ಮುಕ್ತಿವಧೂ ವಿವಾಹಗೇಹಾಜಿರದಂತುಟಂ ಸಿವಿಗೆಯಂ ಭುವನತ್ರಯನಾಥನೇಱಿದಂ (ಮಲ್ಲಿಪು. ೦೪-೧೭೦). [ದತ್ತ + ಹಸ್ತ]

**ದತ್ತಾತ್ರೇಯ** (ನಾ). ಅತ್ರಿ ಮತ್ತು ಅನುಸೂಯೆಯರ ಮಗನಾದ, ವಿಷ್ಣುವಿನ ಅಂಶವುಳ್ಳ ಒಬ್ಬ ಮುನಿ: ಸುಮೇಘಪರ್ವತದಲ್ಲಿ ಅತ್ರಿ ... ದತ್ತಾತ್ರೇಯ . . . ಉಪಮನ್ಯು ಮೊದಲಾದ ಅಷ್ಟಾಶೀತಿ ಸಹಸ್ರ ಋಷಿಗಳಿಗನಂತಾಶ್ರಯಂಗಳುಂ (ವಿಚೀಕ. ೩೦೬). [ಸಂ.]

**ದತ್ತಾಧಿಕಾರ** (ನಾ). ಕೊಟ್ಟ ಅಧಿಕಾರ,-ಪದವಿ: ಸಂಸ್ಥೆಗಳಿಗೆ ಕೆಲವು ಗೊತ್ತಾದ ಎಲ್ಲೆಗಳೊಳಗಾಗಿ ಕಾರ್ಯಾಧಿಕಾರವನ್ನು ವಹಿಸಿಕೊಡುತ್ತದೆ. ಇಂಥ ಸಂಸ್ಥೆಗಳ ಅಧಿಕಾರವು ದತ್ತಾಧಿಕಾರ (ಡೆಲಿಗೇಟೆಡ್ ಪವರ್) (ರಾಜ್ಯಶಾ. ೩೪೮). [ದತ್ತ + ಅಧಿಕಾರ]

**ದತ್ತಾನಪಾಕರ್ಮ** (ನಾ). ದಾನಮಾಡಿರುವುದನ್ನು ಪೂರ್ತಿ ಕೊಡದಿರುವಿಕೆ ಅಥವಾ ದಾನಮಾಡಿದುದನ್ನು ಹಿಂದಕ್ಕೆ ತೆಗೆದುಕೊಳ್ಳುವುದು: ವ್ಯವಹಾರವು (೧) ಋಣಾದಾನ (Debt) . . . (೫) ದತ್ತಾನಪಾಕರ್ಮ (Noncompletion of gift by delivery). . . (೧೮) ದ್ಯೂತಸಮಾಹ್ವಯ (Gambling)-ಎಂದು ಹದಿನೆಂಟು ವಿಧವಾಗಿ ವಿಭಜಿಸಲ್ಪಟ್ಟಿತ್ತು (ಭಾರದ. ೫೬). [ಸಂ. ದತ್ತಾನಪಾಕರ್ಮನ್]

**ದತ್ತಾಪಹಾರ** (ನಾ). ದಾನವಾಗಿ ಕೊಟ್ಟ ವಸ್ತುವನ್ನು ಕಸಿದುಕೊಳ್ಳುವುದು; ದಾನ ಮಾಡಿದ ವಸ್ತುವನ್ನು ಅಪಹರಿಸುವುದು. [ದತ್ತ + ಅಪಹಾರ]

**ದತ್ತಾಪಹಾರಕ** (ನಾ). ದಾನ ಮಾಡಿದ ವಸ್ತುವನ್ನು ಕಸಿದುಕೊಳ್ಳುವವನು: ಪರಧನಬಾಧಕನ ದತ್ತಾಪಹಾರಕನ ಜ್ವಲನದನ ಶಿಶುಘಾತಕನ ಪರಿದೇಶಿತರ್ಮನ ಗತಿಗಳಲಿ ತಾನೀವೆನೆಂದೇ ಕೊಲ್ಲದಿರ್ದರೆ ಸೂತನಂದನನ (ಕುಮಾ.ಕ. ೦೪-೬). [ಸಂ.]

**ದತ್ತಾಪ್ರದಾನಿಕ** (ನಾ). = ದತ್ತಾನಪಾಕರ್ಮ: ವ್ಯವಹಾರಕಾಂಡದಲ್ಲಿ-ಸಾಧಾರಣವ್ಯವಹಾರಮಾತೃಕಾ . . . ದತ್ತಾಪ್ರದಾನಿಕ, ಕ್ರೀತಾನುಶಯ . . . ಸ್ತ್ರೀಸಂಗ್ರಹಣ ಪ್ರಕೀರ್ಣ ಎಂಬ ೨೫ ಪ್ರಕರಣಗಳಿವೆ (ಭಾರದ. ೬೨). [ಸಂ.]

**ದತ್ತಾವಧಾನ** (ನಾ). ಗಮನ ಕೊಡುವವನು; ಮನಸ್ಸಿಡುವವನು: ಎಂತು ಬೆಸಗೊಂಡೆ ಬೆಸಗೊಂಡಂತಿರೆ ದತ್ತಾವಧಾನನಾಗು ಜಯಶ್ರೀಕಾಂತೆಯುಮಂ ಪರಮಶ್ರೀಕಾಂತೆಯುಮಂ ನಿನಗೆ ಕುಡುವುದೀ ಸತ್ಕಥನಂ (ಧರ್ಮಾಚ. ೧-೭೦). [ದತ್ತ + ಅವಧಾನ]

**ದತ್ತಾಶಿಕ್ಷ** (ನಾ). [ಗಣಿತ] ಕೊಡುವಿಕೆ; ಕೊಡುವುದು: ಯುತಂ, ಯುಕ್ತಂ, ಮಿಶ್ರಂ, ಸಮ್ಮಿಶ್ರಂ, ಸಂಯೋಗಂ, ದತ್ತಾಶಿಕ್ಷಂ . . . ಇಂತಿನಿತುಂ ಕೂಡೂದಕ್ಕೆ ಹೆಸರು (ವ್ಯವಹಾ. ೦೦-೧೯) [?]

**ದತ್ತಾಳು** (ನಾ). ನಿಯೋಜಿತನಾದ ಆಳು,-ಯೋಧ (?): ಅಜಣ ಸಾಹಣಿಯ ದತ್ತಾಳುಗಳ ಬಳಿಯ (ಸೌತ್ಇಎ. ೦೯೩೨, ಉಡುಬಿ. ೨೬೨-೯; 1334). [?]

**ದತ್ತಿ** (ನಾ). ೧. ದಾನವಾಗಿ ಕೊಟ್ಟ ಭೂಮಿ: ಯಾ(?) ದತ್ತಿಯಾನ್ ಕಿಡಿಪೊನ್ . . . ಸನ್ನೊನಕ್ಕುಮ್ (ಇಆ. VIII, ೨೦೫-೩; 706); ಮಹಾರಾಜಾಧಿರಾಜಪರಮೇಶ್ವರಭಟಾರರಾ ಕೊಟ್ಟ ದತ್ತಿ (ಇಆ. X, ೦೬೫-೩; 733); ಪದಿನ್ಕುಳಂ ಪಾಟುಂ ಇದಂ ಪಡೆದೋರೀಶ್ವರದಾಸರ್ ಪರಮೇಶ್ವರ ದತ್ತಿ (ಎಕ. X (S), ಚಳ್ಳ. ೦೦೬-೭೫; 850); ರಾಮಾದ್ಯನೇಕ ರಾಜದತ್ತಿ [ಪಾಠಾಂ. ದತ್ತಂ] ಗಳಪ್ಪನೇಕ ಭೂದೇವಭೋಗಾಗ್ರಹಾರಂಗಳನಾಗ್ರಹದಿಂದಱಿದು . . . ನಿರವಶೇಷದಿಂ ಕಿಡಿಸಿಯುಂ (ಪಂಪಶಂ. ೨೮-೮); ಲಾ ಕು ಳಾ ಗ ಮ ಸಮಯಸಮುದ್ಧರಣರಪ್ಪ ಪದ್ಮರಾಸಿ ಪಂಡಿತರ್ಗ್ಗೆ ಕಾಲಂ ಕರ್ಚ್ಚಿ ಧಾರಾಪೂರ್ವಕಂ ಮಾಡಿ ಬಿಟ್ಟ ದತ್ತಿ (ಎಕ. XVI, ಚಿಕ್ಕನಾ. ೫೪-೮; 1292); ಸ್ವಯಂಬುವದೇವರ್ಗ್ಗೆ ದತ್ತಿದಗಾಗಂಡ ಹಡುವಕ್ಕ ಬಿ ತೊಗೆ (ಮೈಆರಿ. ೦೯೪೬, ೧೦-೦೩; ಸು. 15ನೆಯ ಶತ). ೨. ದಾನವಾಗಿ ಕೊಟ್ಟ ಹಣ; ಕೊಡುಗೆ: ಆರನೆಯ ಸಂಪುಟದ ಮುದ್ರಣಕ್ಕಾಗಿ ಬಂದ ೫,೦೦೦ ಪೌಂಡುಗಳ ದತ್ತಿಯೊಂದನ್ನುಳಿದು ಮಿಕ್ಕ ಬಂಡವಾಳವನ್ನೆಲ್ಲಾ ಒದಗಿಸಿ, ಈ ಮಹಾಗ್ರಂಥದ ಮುದ್ರಣವನ್ನೂ ಪ್ರಕಾಶನವನ್ನೂ ಕೈಕೊಂಡ ಸಾಹಸಿಗಳು ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ಸಿನವರು (ಸಮಾಲೋ. ೨೬೬). ೩. [ಜೈನ] ಆರ್ಯಕರ್ಮವಾದ ಇಜ್ಯೆ, ವಾರ್ತೆ, ದತ್ತಿ, ಸ್ವಾಧ್ಯಾಯ, ಸಂಯಮ, ತಪ ಎಂಬ ಷಟ್ಕರ್ಮಗಳಲ್ಲಿ ಒಂದು; ತಂದೆ ತನ್ನ ಸಂಪತ್ತನ್ನೆಲ್ಲ ಮಗನಿಗೆ ಒಪ್ಪಿಸುವುದು: ಇಜ್ಯೆಯುಂ ವಾರ್ತೆಯುಂ ದತ್ತಿಯುಂ . . ಎಂಬೀ ಆಚಾರ್ಯಷಟ್ಕರ್ಮಂಗಳುಂ ಶ್ರಾವಕಜನಕ್ಕೆ ಕುಲಧರ್ಮಂಗಳ್ (ಚಾವುಂಪು. ೨೨೮); ನಿಜಾತ್ಮಜಂಗೆ ಸಮಸ್ತ ಗೃಹಪರಿಚ್ಛೇದಮನೊಪ್ಪಿಸುವ ಸಕಳದತ್ತಿಯುಮನುಳ್ಳುದು ದತ್ತಿಯೆಂಬ ಮೂಱನೆ ಯಾರ್ಯಕರ್ಮಂ (ಸುಕುಮಾ. ೬-೨೫ ವ).

ದತ್ತಿ ಉಪನ್ಯಾಸ = ಯಾವುದಾದರೂ ವಿಷಯದಲ್ಲಿ ಆಸಕ್ತಿಯುಳ್ಳವರು ತಮ್ಮ ಅಥವಾ ತಮ್ಮ ಪ್ರಿಯರಾದವರ ಹೆಸರನ್ನು ಶಾಶ್ವತಗೊಳಿಸಲು ಹಣವನ್ನು ಕೊಡುಗೆಯಾಗಿ ಕೊಟ್ಟು ಅದರ ಬಡ್ಡಿಯ ಸಹಾಯದಿಂದ ಏರ್ಪಡಿಸುವ ಭಾಷಣ,-ಉಪನ್ಯಾಸ: ಕನ್ನಡ ಸಾಹಿತ್ಯಪರಿಷತ್ತಿನಲ್ಲಿ ಅನೇಕ ಉದಾರಿಗಳು ದತ್ತಿ ಉಪನ್ಯಾಸಗಳನ್ನು ಏರ್ಪಡಿಸಿದ್ದಾರೆ (ರೂಢಿ). [ಸಂ.]

**ದತ್ತಿಟಿ** (ನಾ). ಒಂದು ಊರಿನ ಹೆಸರು (?): ನೇಱಿಲೆಯಂ ಮಾಯೊತ್ತಿಂ ನಡಪ್ಪಳ್ಳಿ ಮೂಳಾಣಂ ನಡಲು ಎರ್ಪಳ್ಳಿ ದತ್ತಿಟಿ ಕಿಱಿಯ ಒರಲ್ಗೋಡು ಇವುಟಾ ಬತ್ತ ಇವ × ಅಕ್ಕಿ ಇಕಂಳಂ ತುಪ್ಪ ಇದು ಪ್ರವಾಹಂ (ಎಕ. VI, ಚಿಕ್ಕಮ. ೯೫-೦೬; 1025 ?). [?]

**ದತ್ತು** (ನಾ). =ದತ್ತಕ ೧: ಉತ್ತಮಗುಣಗಳುಳ್ಳವನನ್ನು ಸತ್ತ್ವಶಕ್ತಿಯುಳ್ಳವನನ್ನು ದತ್ತು ತೆಗೆದುಕೊಂಡು ರಾಜ್ಯವನ್ನು ಅವನ ಕೈಲಿಡುವುದು ಲೇಸು (ಶಾಂತಲಾ. ೨೦೦); ಶ್ಯಾಮಾಶಾಸ್ತ್ರಿಗಳು ಕಂಚಿಕಾಮಾಕ್ಷಮ್ಮನಿಗೆ ದತ್ತು (ಗಾನಕ. ೪೦). [<ಸಂ. ದತ್ತ]

**ದತ್ತುಗೊಳ್** (ಕ್ರಿ). ದತ್ತು ತೆಗೆದುಕೊಳ್ಳು: ಪೆತ್ತೊಡಮೇಂ ಬಸಿಟಿೞ್ ಬೆಲೆಯಿತ್ತೊಡಮೇಂ ದತ್ತುಗೊಂಡು ಪೊರೆದೊಡೆ ಪೇಱಾ ತುತ್ತುವ ಮಿಟ್ಟುಗಮೊತ್ತೆಯ ಪತ್ತುವ ಮುತ್ತಬ್ಬೆಗಳ್ಗ ಮೆತ್ತಣ ಮಱುಕಂ (ಚಿಕವಿ. ೬-೯೦). [ದತ್ತು + ಕೊಳ್$_1$]

**ದತ್ತುಪುತ್ರ** (ನಾ). = ದತ್ತಕ ೧: ದತ್ತು ತೆಗೆದುಕೊಂಡಾಕ್ಷಣಕ್ಕೆ ದತ್ತು ಪುತ್ರನು ಸಿಂಹಪೀಠವನ್ನೇರಬೇಕು ಎಂದೇನೂ ಇಲ್ಲ (ಸ ವ ಕಿ. XIV, ಪ್ರಸ್ತಾವನೆ). [ದತ್ತು + ಪುತ್ರ]

**ದತ್ತುಮಗ** (ನಾ).=ದತ್ತಕ ೧: ದತ್ತುಮಗನಾತನೈ ನಮ್ಮರಸು ಕಳಿಂದಂಗೆ (ಚಂದ್ರಸ. ೫೩-೧೪). [ದತ್ತು + ಮಗ]

**ದತ್ತೂರ**, ದತ್ತೂರಿ, ಧತ್ತೂರಿ (ನಾ). ಒಂದು ಬಗೆಯ ಮುಳ್ಳಿನ ಗಿಡ; ಮದ್ದುಗುಣಿಕೆ; ಉಮ್ಮತ್ತಿ: ಕಲ್ಪತರುವಿನ ನಾಮವ ಹಡೆದ ದತ್ತೂರದಂತೆ ಭಕ್ತರ ವಿರಕ್ತರೆಂದರೆ ಸತ್ಕರಿಪ್ಪರೆ (ಸೋಮೇಮೂ. ೮೯-೩೩೭); ದತ್ತೂ[ಶಾಕಾಂ. ತ್ತ್ರ]ರದ ಬಿತ್ತಿಸಲ್ಲಿ ಕಲ್ಪತರು ಹುಟ್ಟಿ ಕಲ್ಪತರುವಿನ ಅಗ್ರದಲ್ಲಿ ಇಟ್ಟಿಯ ಹಣ್ಣಾಯಿತ್ತು (ಅಕಾಮೂ. ೧೩೭-೧೯೪); ಸೂಚಿಸುವ ಪುಷ್ಪಾರ್ಚನೆಯದಿದ ನವಶಾಸ್ತ್ರ ಗೋಚರವನಾಲಿಸೈ ಚಂಪಕಂ ದತ್ತೂರ ಮೇಚಕೋತ್ಪಲ ಪತಾಶಂ ಪಾಟಲಿಯ ಪಂಚಪುಷ್ಪಂಗಳುತ್ತಮಮಿವು (ಚತುಪು. ೬-೪-೩೯); ಕರೀಉಮ್ಮತ್ತಿ, ದತ್ತೂರ (ಮೃಜಿ. ೨೯-೩೩೪). **ದತ್ತೂರಿ**: "ದತ್ತೂರ–ಧತ್ತೂರ–ಉನ್ಮತ್ತ (ದತ್ತೂರಿ, ದುತ್ತೂರ)" (ತದ್ಭಕೋ. ೧೯). **ಧತ್ತೂರಿ**: ಉಮ್ಮತ್ತಿಯನ್ನು ಧತ್ತೂರಿಯೆಂದೂ ಹೇಳುತ್ತಾರೆ (ರೂಢಿ).

**ದತ್ತೂರಿ ಹಚ್ಚು**= ಮೋಸ ಮಾಡು; ವಂಚಿಸು: "ದತ್ತೂರಿ–ಅಗಡು; ಕವಡು; ವಂಚನ (ದತ್ತೂರಿ ಹಚ್ಚು)" (ಜಾನಕೋ. ೩). **ದತ್ತೂರಿ ಹಿಡಿಸು**= ಮೋಸಮಾಡು; ವಂಚಿಸು:· ಒಸೇದ ಆಶಾಕ್ಕ ರೊಕ್ಕಾ ಕೊಟ್ಟೆ. ಪಾಂಚಸೇಕ್ಕ ಧತ್ತೂರಿ ಹಿಡಿಸಿದಂಧ್ರು (ದೀಪಹ. I, ೧೩೪). 'ದುತ್ತೂರ' ಪರಾ. [<ಸಂ. ಧತ್ತೂರ]

**ದತ್ತೂರರಸ** (ನಾ). ಉಮ್ಮತ್ತಿಯ ಹಾಲು,–ರಸ: ಪಂಪ–ದಿಸುವುದು ದತ್ತೂರರಸಮನಿಂಬಾಗಿ ಏರಿದು ನೆಲದೊಳ್ ಲವಣಂಬೆರಸೊರಸಿಕೊಂಡು ಪೂಸುಗೆ ಕರಗುಗುಮೇಬಿಸ್ವಾರೆಯನಿಪ್ಪ ಕುರೀವುಂ ಬೇಗಂ (ಶಮದ. ೧೮೯ ಪ್ರಯೋ). [ದತ್ತೂರ + ರಸ]

**ದತ್ತೂರಿ** 'ದತ್ತೂರ' ನೋ.

**ದತ್ತೆಯ್ಯ** (ನಾ). ಒಬ್ಬಾತನ ಹೆಸರು: ಬಹುಧಾನ್ಯ ಸಂವತ್ಸರಂ ಪ್ರವರ್ತಿಸೆ ಸೂರ್ಯಗ್ರಹಣದನ್ದು ದತ್ತೆಯ್ಯನುಂ ತಿಂಕಯ್ಯನುಂ ಪೆರ್ವ್ವುರ್ಟ್ಟುರ್ಗೆಯ್ಯ ತಾಗೆರತ್ತಿಯ ಮಹಾಜನಕ್ಕೆ ಪೊನ್ನಬ್ಬೆ ಪೊನ್ನ ಕೊಟ್ಟು (ಎಕ. VII, ಶಿಕಾರಿ. ೬೦-೪; 978). [? ಇದು 'ದತ್ತಯ್ಯ' ಇರಬಹುದು]

**ದತ್ತೆಲೆ** (ನಾ). ಒಂದು ಬಗೆಯ ಔಷಧಿ ಸಸ್ಯ: (ಮೃಜಿ. ೬೫-೧೩೦೫). [?]

**ದತ್ವ** (ನಾ).=ದಕಾರ: ಅಣ್ ಪತ್ರದ ದಿಗ್ವಾಚಕದೊಳ್ ದತ್ವಂ:–ಕೆಲದಂ, ಬಲದಂ (ಶಮದ. ಮ.೦೩೧ ವೃತ್ತಿ). [ಸಂ.]

**ದತ್ವವಿಧಿ** (ನಾ). ದಕಾರವು ಆಗಮವಾಗುವ ನಿಯಮಂ: ಪುರುಷಪರ ಮಾದೊಡತ್ವಂ ದೊರೆಕೊಳ್ಳುಗುಮದಣ್ಣುಗುಳ್ದ ದಿಗ್ವಾಚಕದೊಳ್ ಪರ ದಿಗ್ವಾಚಕದೊಳ್ ಸಂಚರಿಸುವುದಾ ತೆಱದ ದತ್ವವಿಧಿ ಶಾಬ್ದಿಕರಿಂ (ಶಮದ. ೦೦೦). [ದತ್ವ + ವಿಧಿ]

**ದದಾತಿ** (ನಾ). ಕೊರತೆ; ಅಭಾವ: ನನಗೆ ರೊಕ್ಕದ್ದ ಯಾನ ದದಾತಿ ಇಲ್ಲ ತಗಿ (ನಡರಾ. I, ೨೯೩); ಮುಂಬೈಪ್ರಾಂತದಲ್ಲಿ ನಮಗೆ ನವಕರಿಯ ದದಾತಿ ಇರಲಿಲ್ಲ (ದೀಪಹ. II, ೩೬೩); ಮನೆಯಲ್ಲಿ ಯಾವುದಕ್ಕೂ ದದಾತಿಯಿಲ್ಲ (ಗೀಜುಗೆ. ೫೦). [←ಮರಾ. ದದಾತೀ, ದದಾತ್]

**ದದಿವ್ರ್ಯಾಟಿಗೆ** (ನಾ). ಒಂದು ಪ್ರದೇಶದ ಹೆಸರು: ಶ್ರೀಮತ್ತ್ರೈಲೋಕ್ಯ ಮಲ್ಲನೊಟಂಬವಲ್ಲವಪೆರ್ಮ್ಮಾನಡಿದೇವ ದದಿವ್ರ್ಯಾಟಿಗೆ ಸಾಸಿರವುಂ ಬಲ್ಲಕುನ್ದೆ ಮೂನೂಱುಂ ಕೊನಡಿಯೂಱುಮುಂ ಸುಖಸಂಕತಾವಿನೋದದಿ ರಾಜ್ಯಂಗೆಯ್ಯುತ್ತಮಿರೆ (ಎಕ. VII, ಹೊನ್ನಾಳಿ. ೧೦೯-೦೨; 1054 ?). [?]

**ದದ್ದರ**$_1$ (ನಾ). ಬಾತುಕೊಳ್ಳುವಿಕೆ; ಊದಿಕೊಳ್ಳುವಿಕೆ. 'ದದ್ದರಿಸು$_1$', 'ದರ್ದರ$_2$' ಪರಾ. [<ದದ್ರು ?]

**ದದ್ದರ**$_2$ (ನಾ). ಭಯ; ಅಂಜಿಕೆ: ಬಿದ್ದು ಸಂಸಾರದಲಿ ಸಾಯದ ಬುದ್ಧಿಯನು ಬಲ್ಲೊಡೆ ಕೃತಾಂತನ ದದ್ದರಕೆ ಸಿಲುಕದಪೊಲಚ್ಯುತನಡಿಯ ಓಡಿರೆಂದ (ಪ್ರಹ್ಲಾದ. ೯-೬೨). [←ಮರಾ. ದಾದರಣೇ=ಗಾಬರಿಯಾಗು]

**ದದ್ದರಿಸು**$_1$ (ಕ್ರಿ). ಊದು; ಬಾತುಕೊಳ್ಳು: ಮುಖ ದದ್ದರಿಸಿಕೊಂಡು ಜ್ವರ ಬಂದಹಾಗಿದೆ (ರೂಢಿ). [ದದ್ದರ$_1$ + –ಇಸು$_3$]

**ದದ್ದರಿಸು**$_2$ (ಕ್ರಿ). ಹೆದರು; ಗಲಿಬಿಲಿಗೊಳ್ಳು: ಗದ್ದಲಕೆ ಕಲ್ಯಾಣ ಸದ್ದದ್ದು ಜಲ್ಲೆಂದು ಎದ್ದು ಓಡಾಡಿ ಜನಬಿದ್ದು ಹೌಹಾರಿ ದದ್ದರಿಸಿ ಲೋಕ ಗಜಬಿಜಗೆ (ಕನ್ನಕಾ ೨೩೪). [ದದ್ದರ$_2$ + –ಇಸು$_3$]

**ದದ್ದು**$_1$ 'ತರ್ದ್ರು$_2$' ನೋ.

**ದದ್ದು**$_2$, ದುದ್ದು$_2$ (ನಾ). ೧. (ಮಡಕೆ, ಬಳೆ ಮೊದಲಾದುವು) ಬಿರುಕು ಬಿಟ್ಟಿರುವುದು,–ಸೀಳಿರುವುದು: ದದ್ದಾಗಿರುವ ಬಳೆ, ಹಾಕಿಕೊಳ್ಳಬೇಡ (ರೂಢಿ). 'ದದ್ದುಮಡಕೆ' ಪರಾ. ೨. ಒಡೆದ ಹಾಲಿನ ಗಟ್ಟಿ ಭಾಗ: ಒಡೆವ ಸಮಯದೊಳು ಹಾಲೊಳಗೆ ಸುಣ್ಣದ ತಿಳಿಯ ಬಿಡಲು ಜಾಮ್ಮನೆ ತಿಳಿವುದು . . . ಆ ದದ್ದನು ಮಡಗಿ (ಸೂಪಶಾ. ೨-೫). **ದುದ್ದು**$_2$: ೨. ಒಡೆದ ಹಾಲಿನ ದುದ್ದು ನನೆಯಕ್ಕಿ ತೆಂಗಾಯನೊಡಗೂಡಿ . . . ಲಡ್ಡುಗೆಗಳಂ ಹಸನಾಗುವಂದದೊಳ್ ಕಟ್ಟಿ ಚತುರರ್ಗೀವುದು (ಸೂಪಶಾ. ೧-೫೫); ತುಪ್ಪದಿ ಹುರಿದ ಪಾಲ ದುದ್ದೆರಡುಳ್ಳ . . . ಮೆಂತೆಯದ ಚೂರ್ಣ ಹಪ್ಪಳಂ ಸಂಭಾರವಸ್ತುವಹವು (ಸೂಪಶಾ. ೪-೧). [?]

**ದದ್ದುಮಡಕೆ** (ನಾ). ಬಿರುಕು ಬಿಟ್ಟ ಮಡಕೆ: ದದ್ದುಮಡಕೆಯಲ್ಲಿ ನೀರು ಹಾಕಿದಂತೆ (ರೂಢಿ). [ದದ್ದು$_2$ + ಮಡಕೆ]

**ದದ್ದುರೋಗ** (ನಾ). ಮೈಮೇಲೆ ತದ್ದುಗಳೇಳುವ ಒಂದು ಬಗೆಯ ಚರ್ಮರೋಗ: ತಸ್ತ್ರಕ್ರಿಯೆಯು ಭಾಗದಲ್ಲಿ ದದ್ದುರೋಗದವರಿಗೂ ಕಡಿಮೆಯಿರಲಿಲ್ಲ (ಹುಚ್ಚಮು. ೨೭); (ಅನೇಕ ವೇಳೆ ಸೊಂಟದ ಸುತ್ತ ಹರಡಿಕೆ ಇಳ್ಳುವ) ಒಂದು ಬಗೆಯ ದದ್ದುರೋಗ (Shingles. ಇಂಕನಿ). [ದದ್ದು$_1$ (<ತರ್ದ್ರು$_2$) + ರೋಗ]

**ದದ್ದುಹಿಡಿ** (ಕ್ರಿ). ದದ್ದುರೋಗ ಅಂಟು: ದದ್ದುಹಿಡಿದು ನೋಟಕ್ಕೆ ಅಸಹ್ಯವಾಗಿದ್ದ ನಾಯಿಯೊಂದು . . . ಬೀದಿಯ ನಡುವೆ ನಿಂತು. ಸುತ್ತಲೂ ನೋಡಿತು (ಕಾನೂರು. ೪೯೩); ದದ್ದುಹಿಡಿದು ಬಡಕಲಾಗಿ ಬೂದಿಬುಕ್ಕಗಳಾಗಿದ್ದ ಅವನ ಮನೆಯ ನಾಯಿಗಳೂ . . . ಕೂಗ ತೊಡಗಿದ್ದುವು (ಮಲೆಮ. ೧೪). [ದದ್ದು$_1$ (<ತರ್ದ್ರು$_2$) + ಹಿಡಿ$_1$ (<ಪಿಡಿ$_1$)]

**ದದ್ಧ್ಯನ್ನ** (ನಾ). ಮೊಸರಿನಲ್ಲಿ ಕಲಸಿದ ಅನ್ನ; ಮೊಸರನ್ನ: ಕೋಲಾಲದಲಿ ಶ್ರೀಸೋಮೇಶ್ವರದೇವರಿಗೆ ದದ್ಧ್ಯಾನ್ನ ಅವಸರ ನಯಿವೇದ್ಯಮಾಡಿ (ಎಕ. X (8), ಕೋಲಾರ. ೨೭೭-೭; 1540). [<ಸಂ. ದಧ್ಯನ್ನ]

**ದದ್ರು** (ನಾ). ೧. ಪಿತ್ತದಿಂದ ಚರ್ಮದ ಮೇಲೆ ಏಳುವ ಗಂದೆ; ತದ್ದು: "ದದ್ರುವೆನೆ ತರ್ದನಿಕ್ಕಂ" (ಮಂಗರಾ. ೧೦೩.೦). ೨. ಹುಳುಕಡ್ಡಿ, ಗಜಕರ್ಣ ಮುಂತಾದ ಚರ್ಮರೋಗ: ಗರಿಕೆ, ಅಳಲೆಯ ಕಾಯಿ, ಸೈಂಧವ, ತಗಚೆ, ಅಟ್ಟಿಗೆ ಇವನ್ನು ಅಂಬಿಲದಲ್ಲಾಗಲೀ ಮಜ್ಜಿಗೆಯೊಳಗಾಗಲೀ ಅರೆದು ಮೂರು ಬಾರಿ ಪೂಸಿದರೆ ಬಹಳವಾಗಿ ಬಲಿತಿದ್ದ ದದ್ರು ತಿಮಿರಂಗಳೆಲ್ಲವಂ ಕೆಡಿಸುವದು (ವಿಪ್ರವಿ. ೧೫೯); ಏಲಕ್ಕಿ, ಚಿತ್ರಮೂಲ . . . ತೈಲವನಟ್ಟು ಪೂಸಿದರೆ ರಕ್ತಮಂಡಲ, ಕುಷ್ಠ, ದದ್ರು, ತೊನ್ನು ಮುಂತಾದ ದುಷ್ಟವ್ರಣಗಳು, ಕರಕು ಇವೆಲ್ಲವನ್ನೂ ಕೆಡಿಸುಗುಂ (ವಿಪ್ರವಿ. ೧೫೯) ೩. ಒಂದು ಬಗೆಯ ಕುಷ್ಠರೋಗ. [ಸಂ.]

**ದದ್ರುಘ್ನ** (ನಾ). ಒಂದು ಬಗೆಯ ಗಿಡ; ಅಗಸೆ; ತಗಚೆ; ಚಗಚೆ: "ಏಡಗಜಃ, ಪ್ರಪುನಾಟಃ, ದದ್ರುಘ್ನಃ, ಚಕ್ರಮರ್ದನಃ – ಈ ೪ ತಗ(ಚೆ)ಟೆ" (ಹಲಾಯು. ೧೦೦-೪೬೫). [ಸಂ.]

**ದದ್ರುಣ** (ನಾ). ದದ್ರುರೋಗವುಳ್ಳವನಂ: "ತರ್ದುಳ್ಳವನಂ ದದ್ರುಣನೆಂಬುದು" (ಹಲಾಯು. ೯೯-೪೫೩). [ಸಂ.]

**ದಧಿ** (ನಾ). ಹಾಲಿಗೆ ಹೆಪ್ಪು ಹಾಕುವುದರಿಂದ ಉಂಟಾಗುವ ಪದಾರ್ಥ; ಮೊಸರು: "ದಧಿಯನೆ ಮೊಸರದು" (ಮಂಗರಾ. ೫೪-೫); ಕರಮ ಮುನಿ ದುಗ್ಧ ದಧ್ಯಾದಿ ರಸಂಗಳನೆಯೆ ತೊಱೆದು . . . ನಾಲ್ಕನೆಯ ರಸಪರಿತ್ಯಾಗಮೆಂಬ ತಪಮಂ ತಳೆದು (ಚಂದ್ರಪ್ರ. ೧೧-೧೧); ದೂರ್ವೆ ದಧಿಗಳನು ತರಿಸಿದನು ಸಿದ್ಧಾರ್ಥ (ಶಾಂತಿ. ೩-೩೦); ಹೊನ್ನ ಹರಿವಾಣದಲಿ ಬಡಿಸಿದರೆಣ್ಣೂರಿಗೆ ಬೀಸುರಿಗೆ ಮಂಡಿಗೆ ಬೆಣ್ಣೆ ಕಾಸಿದ ತುಪ್ಪ ದಧಿ ಮಧು ಕ್ಷೀರ ಸಕ್ಕರೆಯ (ಸುದಾಮ. ೪-೧೪). [ ಸಂ. ]

**ದಧಿತ್ತೈಲ** (ನಾ). ಮೊಸರು ಬೆರಸಿದ ಒಂದು ಬಗೆಯ ಔಷಧಿತ್ತೈಲ: ದಧಿತ್ತೈಲ-ಅತಿಬಜೆ, ಜಾಯಿಕಾಯಿ . . . ಅಚ್ಚೆಳ್ಳೆಣ್ಣೆ ಒಂದು ಪಡಿ, ಹಸುವಿನ ಮೊಸರು ಒಂದು ಪಡಿ ಎಲ್ಲಾ ಬೆರೆಯುವಂತೆ ಸೇರಿಸಿ . . . ಹೊತ್ತಿಗೆ ಗ ೧ ತೂಕ ತೈಲವನ್ನು ಸೇವಿಸಿದರೆ ಗ್ರಹಿಣಿರೋಗ ವಾಣಾವುದು (ಸಕಲವೈ. ೫೦. ೪೯೦). [ ದಧಿ + ತೈಲ$_1$ ]

**ದಧಿತ್ಥ** (ನಾ). ಒಂದು ಬಗೆಯ ಮರ; ಬೇಲ; ಕಪಿತ್ಥ; ಬೆಳುವಲ: "ಕಪಿತ್ಥಃ, ದಧಿತ್ಥಃ . . . ದಂತಶಠಃ – ೭ ಬ್ಯಾಲದ ಮರಕ್ಕೆ ಪೆಸರುಗಳು" (ಸಿದ್ಧಾಂತಿ. ೧೦೬). [ ಸಂ. ]

**ದಧಿಪುಷ್ಪಿ** (ನಾ). ಒಂದು ಬಗೆಯ ಔಷಧಿ ಸಸ್ಯ: "ಖಟ್ವಾಪರ್ಯಾಯವಾಚಿ–ದಧಿಪುಷ್ಪಿ" (ಓಷಧಿ. ೪೪). [ ಸಂ. ದಧಿಪುಷ್ಪೀ ]

**ದಧಿಫಲ**, ದಧಿಫಳ (ನಾ). = ದಧಿತ್ಥ: "ಕಪಿತ್ಥಃ, ದಧಿತ್ಥಃ. . . . ದಧಿಫಲಃ, ಪುಷ್ಪಫಲಃ, ದಂತಶಠಃ – ೭ ಬ್ಯಾಲದ ಮರಕ್ಕೆ ಪೆಸರುಗಳು" (ಸಿದ್ಧಾಂತಿ. ೧೦೬). **ದಧಿಫಳ**: ಪಾದರಿ ಮಾದಳಂ ದಧಿಫಳಂ ಚಾಂಪೇಯಮುಂ ಕುಂಭಬಿಲ್ವಂ ದಾಳಿಂಬಮರಂ . . . ಇರ್ದ ವನಾಂತರಾಳದೊಳ್ ಪದ್ಮಾಕರಮಿರ್ಪುದು (ಹಮ್ಮಿರ. ೪-೧೭). [ ಸಂ. ]

**ದಧಿಫಳ** 'ದಧಿಫಲ' ನೋ.

**ದಧಿಮಂಡ** (ನಾ). ೧. ಮೊಸರಿನಲ್ಲಿರುವ ನೀರಾದ ಭಾಗ. ೨. ಮಜ್ಜಿಗೆ; ತಕ್ರ: "ದಧಿಮಂಡಃ, ಮಸ್ತು – ಈ ೨ ಮಜ್ಜಿಗೆ" (ಹಲಾಯು. ೫೩-೧೬೬). ೩. ಮೊಸರಿನ ಕೆನೆ. [ ಸಂ. ]

**ದಧಿಮಂಥ** (ನಾ). ೧. ಮೊಸರನ್ನು ಕಡೆಯುವುದು. ೨. ಮಜ್ಜಿಗೆ; ತಕ್ರ: "ದಧಿಮಂಥಂ ಮಸ್ತುವೆಂಬುದಕ್ಕುಂ ಪೊಯ್ಯಿರ್" (ವಸ್ತುಕೋ. ೯೨-೩); "ದಧಿಮಂಥಮೆನಲು ಕೈಯಳಿಯುಕ್ಕು" (ಮಂಗರಾ. ೬೫-೬). [ ದಧಿ + ಮಂಥ ]

**ದಧಿಮುಖ** (ನಾ). ೧. ಒಂದು ಸರ್ಪದ ಹೆಸರು. ೨. ಸುಗ್ರೀವನ ಸೇನಾಪತಿಗಳಲ್ಲಿ ಒಬ್ಬನ ಹೆಸರು: ಕೋಲು ಹತ್ತಬಲಿಸಲು ದಧಿಮುಖ ರಕ್ತಮುಖನಾದ (ತೊರೆರಾ. ೨೮-೪೪). ೩. [ಜೈನ] ಒಂದು ಪರ್ವತದ ಹೆಸರು. ☞ ನಂದೀಶ್ವರ ದ್ವೀಪದ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಅಂಜನಗಿರಿಗಳೂ ಒಂದೊಂದು ಅಂಜನಗಿರಿಯ ನಾಲ್ಕು ಪಾರ್ಶ್ವಗಳಲ್ಲಿಯೂ ನಾಲ್ಕು ಸರೋವರಗಳೂ ಇರುವುವು. ಪ್ರತಿಯೊಂದು ಸರೋವರದ ಮಧ್ಯದಲ್ಲಿಯೂ ಮೊಸರಿನಂತೆ ಬೆಳ್ಳಗಿರುವ, ಸಹಸ್ರ ಯೋಜನ ಎತ್ತರವಾಗಿರುವ ಒಂದೊಂದು ದಧಿಮುಖ ಪರ್ವತವಿರುತ್ತದೆ. ಹೀಗೆ ದಧಿಮುಖಪರ್ವತಗಳು ಒಟ್ಟು ಹದಿನಾರು ಎಂದು ಜೈನಪುರಾಣಗಳು ಹೇಳುತ್ತವೆ: ನಂದೀಶ್ವರವರದ್ವೀಪಮದಱ ನಾಲ್ಕುಂ ದೆಶೆಯೊಳ್ ನಾಲ್ಕಂಜನಪರ್ವತಂಗಳುಮವಱ ನಾಲ್ಕುಂ ದೆಶೆಯೊಳ್ ಸಮಚತುರಸ್ರಂಗಳಪ್ಪ ದಿವ್ಯಸರೋವರಂಗಳ್ಪದಿನಾಱಪ್ಪುವವಱ ನಡುವೆ ದಧಿಮುಖಶಿಖರಿಗಳುಂ (ಸುಕುಮಾ. ೧೧-೫೦ ವ). [ ಸಂ. ]

**ದಧಿವಡೆ** (ನಾ). ಒಂದು ಬಗೆಯ ತಿನಿಸು; ಮೊಸರುವಡೆ; ತೈರೊಡೆ: ಒಡೆಯುಂಬೊಡೆ ದಧಿವಡೆಯು ತಿಂಥಿಣಿ ಒಡೆಯು ಎಡೆಗೆ ಒಡನೆ ಬಡಿಸಿದ (ಪುರಂದ. ೧-೭೬-೩). [ ದಧಿ + ವಡೆ ]

**ದಧಿವಿಘಾತ** (ನಾ). ಕಡೆಗೋಲು; ಮಂತು: "ವೈಶಾಖಮೆನೆ ಮಂಥಮೆನೆ ದಧಿವಿಘಾತಮೆನೆ ಮಂಥಿ ಮಂಥಾನಮೆನೆ ಕಡೆಗೋಲದು" (ಮಂಗರಾ. ೫೪-೬). [ ದಧಿ + ವಿಘಾತ ]

**ದಧಿಸಕ್ತು** (ನಾ). ಮೊಸರಿನಲ್ಲಿ ಕಲಸಿದ ಹುರಿಹಿಟ್ಟು; ಕರಂಭ: "ಕರಂಭಃ, ದಧಿಸಕ್ತುಃ–ಈ ೨ ಮೊಸರೊಳ್ ಕಲಿಸಿದ ಸತ್ತುಗಂ" (ಹಲಾಯು. ೫೩-೧೭೬); "ದಧಿಸಕ್ತು ಕರಂಭಾಖ್ಯಂ" (ವಸ್ತುಕೋ. ೯೨-೩). [ ದಧಿ + ಸಕ್ತು ]

**ದಧಿಸಾರ** (ನಾ). ಬೆಣ್ಣೆ ನವನೀತ: "ದಧಿಸಾರಂ, ನವನೀತಂ – ಈ ೨ ಬೆಣ್ಣೆ" (ಹಲಾಯು. ೪೬-೧೧೯). [ ದಧಿ + ಸಾರ$_3$ ]

**ದಧಿಸ್ಯಷ್ಟ** (ನಾ). ಮೊಸರಿನಿಂದ ಸಿದ್ಧಪಡಿಸಿದ ಅಥವಾ ಮೊಸರು ಕಲಸಿದ ಖಾದ್ಯ: "ದಧಿಸ್ಯಷ್ಟಂ ದಾಧಿಕ ನಾಮಧೇಯಕಂ" (ವಸ್ತುಕೋ. ೯೨-೩). [ ದಧಿ + ಸ್ಯಷ್ಟ ]

**ದಧೀಚಿ** (ನಾ). ಒಬ್ಬ ಋಷಿಯ ಹೆಸರು. ☞ ವೃತ್ರಾಸುರನ ವಧೆಗಾಗಿ ದೇವತೆಗಳಿಗೆ ತನ್ನ ಬೆನ್ನಿನ ಮೂಳೆಯನ್ನು ನೀಡಿದ ಮುನಿ: ಹರನಿಳಯದೊಳು ಹುಗುವ ನಂದೀಶ್ವರನೊ ಉಪಮನ್ಯುವೊ ದಧೀಚಿಯೊ ವರಮುನಿಪ ದೂರ್ವಾಸನೋ ಭೃಗುವೋ (ಬಸವಪು. ೪೬-೪೦); ಕಪಿಲಂ ಮಂಡೀಚಿ ಜೈಮಿನಿ ಗೌತಮಂ ದಧೀಚಿ ಪುಲಸ್ತ್ಯನಾಂಗಿರಂ . . . ಸುಮಾಂಡವ್ಯರೆಂದು ತಪಗೆಯ್ವ ಮುಖ್ಯಋಷಿಯರನಿಕ್ಕು (ಮಂಗರಾ. ೭೬-೧೧). [ ಸಂ. ]

**ದಧ್ಯನ್ನ** (ನಾ). ಮೊಸರಿನಲ್ಲಿ ಕಲಸಿದ ಅನ್ನ; ಮೊಸರನ್ನ: ಹರಿದ್ರಾನ್ನ ಪರಮಾನ್ನ ಕೃಸರಾನ್ನ ದಧ್ಯನ್ನ ಗುಡಾನ್ನ ಶುದ್ಧಾನ್ನ ಶಾಲ್ಯನ್ನಮೆಂಬ ಅಷ್ಟವಿಧಾನ್ನಂಗಳಂ (ವಿವೇಕ. ೦೦೫); ವಜ್ರದ ತಟ್ಟೆಯೊಳ್ ದಧ್ಯನ್ನಮಂ . . . ಬಡಿಸಿ (ಸೌಗಂಧಿ. ೩೬-೧೪). [ ದಧಿ + ಅನ್ನ$_3$ ]

**ದಧ್ಯೋದನ** (ನಾ). = ದಧ್ಯನ್ನ; ಕೊಳಚೆನೀರಿನ ಬಳಕೆಯಲಿ ಕತ್ತಲೆಯ ದಧ್ಯೋದನದಲಾಯುಷವಿಳಿದುಹೋಗದೆ ದಿನದಿನದೊಳವನೀಶ ಕೇಳೆಂದ (ಕುಮಾರವ್ಯಾಸ. ೩-೫೩). [ ದಧಿ + ಓದನ ]

**ದನ**, ದನವು (ನಾ). ೧. ಹಸು, ಎಮ್ಮೆ, ಎತ್ತು ಮೊದಲಾದ ಪ್ರಾಣಿ: ಸೆಳೆವುದಱೊಳ್ದನದೊಳುಂ ಸಾಲಿ (ಶಬ್ದಮ. ೧೦೪); ದಾರಿಯಲ್ಲಿ ಯಾವುದಾದರೂ ಪೋಲಿಯ ದನ ಸಿಕ್ಕಬಹುದೆಂದು ನೋಡುತ್ತಾ ಬಂದರು (ಕಳಹು. ೫೦); ದನದ ಮುಂದೆ ಹೋಗಬೇಡ, ಕುದುರೆ ಹಿಂದೆ ಹೋಗಬೇಡ (ಗಾದೆ). ೨. ಮಂದೆ; ಕಾಲ್ನಡೆ: ಸಿರಿ ತನಗೆ ಕಾಂತೆ ಗಡ ಲೋಗರ ದನಮಂ ಕಾಯಲೇಕೆ ಸಕಳಜಗತ್ತಂ ಪರಿಪಾಲಿಸುವಾತಂ ಗಡ ನರನಾಳಾಗಿರ್ಪುದೇಕೆ ಚೋದ್ಯಮಿವೆಲ್ಲಂ (ಧರ್ಮಾಶ. ೨-೭೪). 'ದನಗಾಹಿ' ಪರಾ. ೩. ಧನ; ಸಂಪತ್ತು: ಧನ – ದಸ, ಧಾರಾ – ದಾರೆ (ಶಮದ. ೨೫೫ ಪ್ರಯೋ); ಧನ–ದನ; ಧರ್ಮ–ದಮ್ಮ (ಶಬ್ದಾನು. ೦೪೩ ಪ್ರಯೋ). **ದನವು**: ೧. ತಲೆ ಹುಳಿತ ದನವಿನಂತೆ ಗಳುವಿನಾಶಿಗಾಗಿ ಇವರಿಗೆ ಲಿಂಗದ ಅನುವಿನ ಆಶೆ ಯಾಕೆ (ವಚನ. ೧೦೫-೪೧೯); ತಗರ ಕೋಡು ಬಿಳಿಯ ಸಾಸವೆ ಹಾವಿನ ಹೆರೆ ದನವಿನ ಹಲ್ಲು ಇವಂ ಕೂಸಿಂಗೆ ಧೂಪವಿಕ್ಕುವುದು (ಬಾಲಚಿ. ೦೨೫-೧೯); ದನವಿನ ವರ್ಣ ಹಾಲಲ್ಲಿ ತಿಳಿದೀತೆ? (ಗಾದೆ).

ದನ ಓಣಿ = ದನಗಳ ಓಡಾಟದಿಂದಾದ ಕಾಲುದಾರಿ; ದನಗಳು ಮೇಯಲು ಹೋಗುವ ದಾರಿ: ದೇವಮ್ಮ ಕಾಡಿನ ಕಡೆಗೆ ಏರುವ ದನ ಓಣಿಯ ಬಳಿ ನಿಂತು (ಮಲೆಮ. ೫೩೦); ದೇವಯ್ಯನಿಗೆ ಕಾಣಿಸಿತು, ಕಂಬಳಿಕೊಪ್ಪೆ ಹಾಕಿಕೊಂಡಿದ್ದ ಇಬ್ಬರು, ಬಸಿರಿಮರದ ಪಕ್ಕದ ದನ ಓಣಿಯ ಕೆಸರುಹಾದಿಯಲ್ಲಿ ಮನೆಯ ಕಡೆ ಗುಡ್ಡದಿಂದ ಇಳಿದು ಬರುತ್ತಿದ್ದುದು (ಮಲೆಮ. ೭೪೦) ದನದ ಮೈಲಿ = ಹಸುವಿನ ಕೆಚ್ಚಲಿನ ಮೇಲೆ ಏಳುವ

ಸಿಡುಬು; ದನದ ಸಿಡಂಬು: ನನಗೆ ದನದ ವೈಲಿ (Cow-Pox) ಆಗಿದೆ; ದನದ ವೈಲಿ ಆದವರಿಗೆ ಸಿಡುಬು ತಗಲದು (ಮಾನಸಾ. ೩).

[ <ಸಂ. ಧನ ]

**ದನಂಗಾಹಿತನ** (ನಾ). ದನಕಾಯುವ ಕೆಲಸ; ಗೋಪಾಲವೃತ್ತಿ: . ಓಂಗಿದುದಿಲ್ಲಿನ್ನುಂ ಮನದಿಂ ಗೋವರ ಗಡಣದೊಳ್ ದನಂಗಾಹಿತನಂ ನೀಂಗಳದೆತ್ತಣಿಂವಿರ್ ಬರ್ಮಂಗಂ ಬಗೆದಱಿವುದರಿದನಂಗಾಹಿತನಂ (ಕಾವ್ಯಾವ. ೫೫೩). P ಇದಂ ಶಬ್ದಾಲಂಕಾರಕ್ಕಾಗಿ ಮಾಡಿಕೊಂಡ ರೂಪವಿರಬಹುದಂ. [ <ದನಗಾಹಿ + – ತನ ]

**ದನಕರು** 'ದನಕಱು' ನೋ.

**ದನಕಱು, ದನಕರು** (ನಾ). ಹಸು, ಎಮ್ಮೆ, ಕರು ಮೊದಲಾದುವು: ಮದುವೆ ಮುಂಜಿ ದನಕಱುಯೆಂಮೆ (ಬೊಂಕಶಾ. ೦೯೩೬, ಹಾನಗಲ್. ೮೦-೯; ?). **ದನಕರು**: ದನಕರುಗಳಂ ಕಾಯ್ದು ಹೊಣೆಯ ಹೊತ್ತಿದ ಹುಲಿಯೆ ಇನಿತು ಕಣ್ತಪ್ಪಿದರೆ ಎತ್ತು ದನವಿಲ್ಲ (ಕಾಲಜ್ಞಾ. ೫೨-೮೦); ನಮ್ಮ ದನಕರುಗಳನ್ನು ಮೇವಿಗೆ ಬಿಟ್ಟಿದ್ದೆವು (ಅರ್ಧಕ. ೧೦).

[ ದನ + ಕಱು$_2$ ]

**ದನಗ$_1$** (ನಾ). ಗೌಳಿಗ; ಗೋಪಾಲಕ: ಮೂಡಗೇರಿಯಲ್ಲಿ ದನಗರ ಮನೆಯ ಸ್ಥಳದೊಳ್ ಹದಿನಾಲ್ಕುಗೆಯ್ಯಡ್ಡವನೆ (ಎಇ. XIII, ೩೦-೫೩; 1204). [ ದನ + –ಗ$_2$ ]

**ದನಗ$_2$** (ನಾ). ೧. "ಬೀಜ ಹೊಡೆಯದ, ಆದರೂ ಬೀಜವಿಲ್ಲದ, ನಪುಂಸಕ ಟಗರು" (ವನ್ಯಾರು. ಕೋಶ): ಒಳ್ಳೆ ದನಗ ಬೆಳೆದ ಹಾಗೆ ಬೆಳೆದಿದ್ದಾನೆ (ರೂಢಿ). ೨. ಬಲಿತುದು; ಕೊಬ್ಬಿದುದು. 'ದನಗುರಿ' ಪರಾ. [ ? ]

**ದನಗಜ್ಜಿ** (ನಾ). ದಪ್ಪವಾದ ಕಜ್ಜಿ. [ ದನ + ಕಜ್ಜಿ ]

**ದನಗಬ್ಬು** (ನಾ). ಒಂದು ಬಗೆಯ ಕಬ್ಬು: ದನಗಬ್ಬಿನಿಂದ ಹಾಲು ಹೆಚ್ಚು ಬರುವುದಿಲ್ಲ (ರೂಢಿ). 'ಗೋಮಾರಿಕಬ್ಬು' ಪರಾ.

[ ದನ + ಕಬ್ಬು$_2$ (<ಕರ್ಬು$_1$) ]

**ದನಗಳ್ಳ** (ನಾ). ದನಗಳನ್ನು ಕದಿಯುವವನು: ದನಗಳ್ಳ (Cattle-lifter. ಇಂಕನಿ); ದಾರಿಗಳ್ಳ; ದನಗಳ್ಳ (Cateran. ಇಂಕನಿ). [ ದನ + ಕಳ್ಳ$_1$ ]

**ದನಗಾಯ್** (ಕ್ರಿ). ಗೋವುಗಳನ್ನು ಕಾಯಂ; ದನ ಮೇಯಿಸು: ಅಂಕದರ್ಜುನ ಹೇಡಿ ಶಂಕರನು ತಿರಿದುಂಡ ಪಂಕಜನಾಭ ದನಗಾಯ್ದನುಳಿದವರ ಬಿಂಕವೇನೆಂದ (ಸರ್ವಜ್ಞ. ೮೫೪). [ ದನ + ಕಾಯ್$_1$ (<ಕಾ$_1$) ]

**ದನಗಾಯಿ** 'ದನಗಾಹಿ' ನೋ.

**ದನಗಾರ** (ನಾ). ದನಗಳನ್ನು ಸಾಕುವ ವೃತ್ತಿಯವನಂ; ಗೋವಳ: ನಿಮ್ಮ ಕುಲಗುರು ಕೃಪಾಚಾರ್ಯರು ಸಭೆಯಲ್ಲಿ ಇರುವಾಗ ಈ ದನಗಾರನಿಗೋ ಅಗ್ರಪೂಜೆ ಮಾಡುವುದು? (ವ್ಯಾಸಪಿ. ೦೦೮); ಹಟ್ಟಿಕಾರರಲ್ಲಿ ಕುರುಬರು ತುರುಕಾರರು ಎಂದು ಬಗೆಗಳಾದರೂ ಇವರೆಲ್ಲರೂ ದನಗಾರರು (ಕರ್ಣಾಪೂ. ೧೩); ಈ ಕನ್ನಡ ದನಗಾರನೇ ಮರಾಠಿಯಲ್ಲಿ ಧನಗರನಾದನು (ಕರ್ಣಾಪೂ. ೦೪). [ ದನ + –ಕಾರ$_1$ (< –ಕಾಱ) ]

**ದನಗಾರಿಕೆ** (ನಾ). ದನಗಳನ್ನು ಸಾಕುವುದಂ; ಹೈನುಗಾರಿಕೆ; ಪಶುಪಾಲನೆ: ಹಿಂದಿನ ಬೇಟೆಗಾರಿಕೆ ದನಗಾರಿಕೆಗಳು ಬಿಟ್ಟುಹೋದುವು ಎಂದಲ್ಲ (ಸಾಹಿಸಂ. ೧೩೦). [ ದನಗಾರ + – ಇಕೆ ]

**ದನಗಾವಲು** (ನಾ). ಹುಲ್ಲುಗಾವಲು; ಗೋಮಾಳ (?): ೩ ಲೌ ೦ಳ ಸತ್ರದ ಬಗ್ಗೆ ೮ ಲೌ ೪೧೦ ವಾಲಗದವಂಗೆ ೬ ಲೌ ೦ ದನಗಾವಲು ಬಗ್ಗೆ (ಎಕ. VIII, ತೀರ್ಥಹ. ೦೩೭. ಪುಟ. ೬೧೦; 1702).

[ ದನ + ಕಾವಲು (<ಕಾವಲ್$_1$) ]

**ದನಗಾವಿ** 'ದನಗಾಹಿ' ನೋ.

**ದನಗಾಹಿ, ದನಗಾಯಿ, ದನಗಾವಿ** (ನಾ). ದನಗಳನ್ನು ಕಾಯುವವನು; ಗೋವಳ; ಗೋಪಾಲ: ಗೋವಳಿಗರ ಪಳ್ಳಿಯೊಳ್ ನೆಲಸಿದಾ ದನಗಾಹಿಯೆನಿಪ್ಪ ಕೃಷ್ಣನೇಂ ತಳಿಗೆಯೊಳಿಟ್ಟು ಸಂಹರಿಸನೇ ಕಲಹಂಬರಮುಂಟೆ ತನ್ನ ದೋರ್ಬಳದ ಪೊಡರ್ಪೆನುತ್ತ ಶಿಶುಪಾಲನನೇಳಿಸುವಂ ವೃಕಧ್ವಜಂ (ಜಗವಿ. ೧೪-೮೪): ದನಗಾಹಿಗಳ ಸದ್ದು ಆಗಾಗ ಕೇಳಿಸುತ್ತಿರುವುದು (ಕಮ್ಮಟ. ೦); ದನಗಾಹಿ ಬಾಲಕರು ಹಾಡುತ್ತಿದ್ದಾರೆ (ಬಿಟ್ಟಿಹೊ. ೪೦). **ದನಗಾಯಿ**: ಭೂಮಿಯ ಹೊತ್ತ ಹಾವಿನ ಹೆಡೆವಣಿಯ ಕಿತ್ತು ತನ್ನಿಯೆನ್ನದೆ ದನಗಾಯಿಯ ಮತ್ತವಾಗಿದಿರನಿಕ್ಕುವರೆ (ನೇಮಿಸಂ. ೦೬-೬೩); ಮನೆಗೆ ಮರಳಿ ಹೊರಟ ದನಗಾಯಿಗಳು ಮಾತ್ರ ಎದುರಾಗುತ್ತಿದ್ದರು (ಗಾಳಿಗು. ೧೬). **ದನಗಾವಿ**: ಪೋರಾಟ ಮಾಡಿದ್ಯಲ್ಲವೊ ನೀನು ಎನ್ನ ಕೂಡೆ ಸೇರಿ ಗೋಕುಲದಿ ದನಗಾವಿಯಾಗೂ (ಶ್ರೀಕೃಪಾ. ೩೧). [ ದನ + ಕಾಹಿ ]

**ದನಗಾಹಿಗ** (ನಾ). =ದನಗಾಹಿ: ದನಗಾಹಿಗರ ಕೊಳಲಿನ ಸವಿನಾದ ಎಲ್ಲವೂ ಸೊಗಸೆನಿಸಿದ್ದಿತು (ಗಿರಿಬಾ. ೨೩). [ ದನಗಾಹು + – ಇಗ ]

**ದನಗಾಹು** (ನಾ). ದನಗಳನ್ನು ಕಾಪಾಡುವುದಂ, –ರಕ್ಷಣೆ. 'ದನಗಾಹಿಗ' ಪರಾ. [ ದನ + ಕಾಹು$_1$ (<ಕಾಪು) ]

**ದನಗುರಿ** (ನಾ). ಬಲಿತ ಕುರಿ; ಕೊಬ್ಬಿದ ಕುರಿ: ಮಂದೆಯಲ್ಲಿ ದನಗುರಿಗಳು ಹೆಚ್ಚಾಗಿವೆ (ರೂಢಿ). [ <ದನಗ + ಕುರಿ$_3$ (< ಕುಱಿ$_3$) ]

**ದನಗೊಡಿಗೆ** (ನಾ). ಗೋಗ್ರಹಣದಲ್ಲಿ ಹೋರಾಡಿ ಸತ್ತವನಿಗೆ ಕೊಟ್ಟ ಕೊಡಿಗೆ ಹೊಲ: ಬೊಮ್ಮಯ್ಯ ಮಗ ಕಾಮಗೆ ಕೊಟ್ಟ ನೆತ್ತರುಗೊಡಿಗೆಯ ಕ್ರಮವೆಂತೆಂದರೆ ನಿಮ್ಮ ಬೊಮ್ಮಿಲು ನಮ್ಮ ಸೇವೆಗೆ ಸತ್ತ[ದ]ಕೆ ನಾಲು × × ನಡ ಕೋಣೆಗೆ ದನಗೊಡಿಗೆ ಹೊಲವಾಗಿ ಕೊಟ್ಟೆಉ (ಎಕ. VIII ಸಾಗರ. ೨೬-೭; 1698 ?). [ ದನ + ಕೊಡಿಗೆ(<ಕೊಡಂಗೆಯ್$_2$) ]

**ದನಗೊಬ್ಬರ** (ನಾ). ಸಗಣಿಗೊಬ್ಬರ: ರೈತರು ಈಗ ದನಗೊಬ್ಬರಕ್ಕಿಂತ ರಾಸಾಯನಿಕ ಗೊಬ್ಬರವನ್ನೇ ಹೆಚ್ಚಾಗಿ ಬಳಸುತ್ತಾರೆ (ರೂಢಿ).

[ ದನ + ಗೊಬ್ಬರ$_1$ ]

**ದನಗೊರಸುನೀರು** (ನಾ). ದನದ ಗೊರಸಿನಿಂದಾದ ತಗ್ಗಿನಲ್ಲಿ ನಿಲ್ಲುವಷ್ಟು ನೀರಂ; ಗೋಷ್ಪದಜಲ; ಸ್ವಲ್ಪ ನೀರಂ: ಕಡಲೆನಗೆ ದನಗೊರಸುನೀರೆಂದು ತಿಳಿ, ನಗೆಯೊ (ಶ್ರೀರಾಮಾ. ೫೧೯-೫೧೬).

[ ದನ + ಗೊರಸು$_1$ + ನೀರು$_1$ (< ನೀರ್$_1$) ]

**ದನಗೋಳು** (ನಾ). ದನಕರುಗಳಿಗೆ ತೊಂದರೆಯಾಗುವುದಂ; ದನಗಳಿಗೆ ಕಷ್ಟವಾಗುವುದಂ: ಮುಂಗಾರುಮಳೆ ಕಾಡೆಲ್ಲ ಕಂಗಾಲಾಗುವಂತೆ ದನಗೋಳಾಗಿ ಸುರಿಯತೊಡಗಿತು (ಮುಕಮು. ೪); ದನಗೋಳು ಮಳೆ ಹುಯ್ತು (ರೂಢಿ). 'ಕಾಡುಗೋಳು' ಪರಾ.

[ ದನ + ಗೋಳು$_2$ (< ಗೋಟ್$_3$) ]

**ದನಬದುಕು** (ನಾ). (ಆಲಂ) ಪಶುವಿನಂತಹ ಜೀವನ: ಕೀಳುಮಟ್ಟದ ಜೀವನ: ಹೆಣವಾದವು ಹೆಂಡದಲ್ಲಿ ಉರುವಲು ಬಾಳ್ಕೊಂಡದಲ್ಲಿ ದನಬದುಕಿದು ತೆಂಡದಲ್ಲಿ (ಮುಕ್ತಕಂ. ೬೨-೮).

[ ದನ + ಬದುಕು$_2$ (< ಬರ್ದುಕು$_2$) ]

**ದನಬಳ** (ನಾ). ಒಂದು ಬಗೆಯ ತೆರಿಗೆ: ಶ್ರೀಮಹಾಲಕ್ಷ್ಮೀದೇವಿಯ ಪ್ರತಿಷ್ಠೆಯ ಮಾಡಿಸಿ ಆ ದೇವಿಯ ನಿವೇದ್ಯಕ್ಕೆಂದು ... ೬ ಕಯ್ಯ ನೀಳದ ಅಂಗಡಿ ೧ ಆದಕ್ಕೆ ತಳಸಾರಿಗೆ ದನಬಳ ಕೊಟ ಹ [ ೧ ] . . . ಸರ್ವನಮಸ್ಯವಾಗಿ ಬಿಟ್ಟರು (ಸಾಇಇ. XV, ೨೩೨-೦೦; 1208); ಹುಲುಂಗೂರ ಹೊನ್ನಿವರ್ತ್ತರು ಗಾವುಂಡು ಸಮಸ್ತ ಪ್ರಜೆ ನಖರ ಮುಮ್ಮುಂ(ಮು)ರಿದಂಡಂಗಳಿಗೆ ಆ ಸ್ಥ(ಸ್ಥ)ಳದ ದನಬಳವನು ಸರ್ವ್ವನಮಸ್ಯವಾಗಿ ಬಿಟ್ಟರು (ಎಇ. XVI, ೩೩೬-೩೩; 1255).

[ P ಇದು ದನದ ಮೇಲೆ ಹಾಕುವ ತೆರಿಗೆ ಇರಬಹುದೆ? ]

**ದನವು** 'ದನ' ನೋ.

**ದನಾಗ್ರ** (ನಾ). ಒಂದು ಬಗೆಯ ಗ್ರಂದಿಗೆವಸ್ತು (?) : ಚೂರ್ಣಗಳು– ಶುಂಠಿ,ದಾಳಿಂಬದ ಕಾಯಿ, ಆಲಲಿಕಾಯ ಬೀಜ, ದನಾಗ್ರ ಗ ೧ ತೂಕ ಸಹ ಚೂರ್ಣವಂ ಮಾಡಿ ಬೆಲ್ಲದಿಂ ಕಲಸಿ ನಿಂದೆಯ ಕಾಯಪ್ಪನು ಮೆಲ್ಲಲು ರಕ್ತಗ್ರಹಣಿ ನಿಲುವುದು (ಸಕಶ್ರ. ೩೫೦). [ ? ]

**ದನಿ$_1$, ಧನಿ$_1$** (ನಾ). ೧. ಸದ್ದು; ಸಪ್ಪಳ; ಮೊಳಗು; ಶಬ್ದ: "ಸಪ್ಪಳಬ್ಬರ ದನಿ ಸರಂ ಗಾವರಂ ಗಾವಳಿಯುಮುಲಿಯು ಧ್ವಾನಮಕ್ಕುಂ" (ಶಬ್ದಮಂ. ೩೦) ; ಕೂಷ್ಮಾಂಡರಸದೊಳಂ ಬೆಲ್ಲದೊಳಂ ಹಾರಕ್ಕನ(ಯ) ಸೊರ್ಕ ಟಿಗುಂ ವಾರಣವುದಮುಡುಗುವಂತೆ ಸಿಂಗದ ದನಿಯಿಂ (ಲೋಕೋಪ. ೧೧-೪೨); ರುಂಜೆಯ ದನಿ ದಿಕ್ಪಾಲರನಂಜಿಸೆ ತಳ್ತೊಗೆವ ಕೋಡ ಕಾಳೆಯ ದನಿ ದಿಕ್ಕುಂಜರವಂ ಬೆದಱಿಸೆ (ಶಂಕರಾಭಾ. ೪-೫೬); ಸಾರಮಸಾರಮಿ ದೆಂದು ವಿಚಾರಿಸಿ ಕೈಕೊಂಡು ಕಿಡಿಸಲಾರ್ಪುದೆ ಚಿಃ ನಿಷ್ಕಾರಣಮದಱಿಂ ದನ್ನರ್ ಬಾರಿಸೆ ಮೊಣ್ಣುಂದು ಮಾವ ಕಂಚಿನ ದನಿಯೇ (ಧರ್ಮಾಮೃ. ೩-೨೮೦); ಅಲರ್ಗಳ ಸರಿ ಪೂಂಗಳ ಮಟಿಯಲರ್ಗಳ ಶೀಟಂ ಸುರಾನಕದ ದನಿ ದಿವಿಜಾವಳಿಯ ಪೊಗಟಿಸ್ತಿಗಳೆಂಬೀ ಲಲಿತಾಶ್ಚರ್ಯಂಗಳಾದವೊದ ವಿದುವಯ್ದುಂ (ವರ್ಧಪು. ೧೫-೨೩); ತುಡುಕಿದವು ತಂಬಟದ ದನಿ ಜಗದಡಕಲನು (ಕುಮಾವ್ಯಾ. ೦-೪೭). ೨. ಇಂಪಾದ ಸ್ವರ; ಇಂಚರ: ಇದು ಲೀಲಾಂದೋಳದಿಂದೋಳದ ದನಿ ನೆಱಿಗೊಳ್ವನ್ನೆಗಂ ಪಾಡ ಲೆಂದೇಱಿದಳಂ ತೂಗುತ್ತುಮಿರ್ದನ್ನಯ ಪರಿಜಾ (ಆದಿಪು. ೪-೯); ಪುಗಲೆನ್ನದೆ ದಲ್ ಪುಗಿಮೆಂದು ಮೆಲ್ಪುಗೂಂದದ ದನಿಯಿಂ ಶಶಿಶರಸುಗೆ ಯೊಳ್ ನೆಲಸಿರ್ದ ಪಿಕಾಳಿ ಮೆಲ್ಲನೊಳ್ನುದು (ಪಂಪಭಾ. ೧೪-೦೨); ಅಲಿಗಳವು ನಸುಮುಚ್ಚೆ ಪಕ್ಷಯುಗಮೆಳಲೆ ರಸಂದೆಗೆವ ದನಿ ನಿಮಿರೆ ನಾಲಗೆ ಚಿಗುರುತ್ತಿರೆ ಸವಿದುದೊಂದು ಗಿಳಿ ತನಿವಣ್ಣಂ (ಗಿರಿಶ. ೨-೩೯); ಪಾರಿವಗಳ ದನಿ ಕೊರ್ಳವರ್ಕ್ಕಿಯ ಲಲ್ಲೆ ಕೀರವಜಾಗಳ ಬೈದಾಟ (ಕಂಸವಿ. ೧೧-೪೩). ೩. ಕಂಠ; ಶಾರೀರ : ಆಕ್ರಂದನದಿಂ ಗಂಟಲೊಡೆದು ದನಿ ಕಿಡೆ (ಕಾದಂಪೂ. ೯೪೯) ; ಕ್ರಮೇಣ ದನಿಯನ್ನು ದೊಡ್ಡದು ಮಾಡಿದನು (ಕಳಹು. ೩). ೪. [ಕಾವ್ಯಮಿ] ವ್ಯಂಗ್ಯಾರ್ಥ; ಧ್ವನಿ: ಪದಮ ಪದಮರ್ಥಮರ್ಥಂ ಪುದಿದ ರಸಂ ತೃಪ್ತಿಕರರಸಂ ಭಾವಂ ಪೊಣ್ಮದ ಸದ್ಭಾವಂ ದನಿಯಿಂಪೊದವಿದ ದನಿಯೆನಿಸೆ ಪೇಟ್ವವಂ ಕವಿತಿಲಕಂ (ಪುಷ್ಪಪು. ೦-೬೨). **ಧನಿ$_1$** : ೧. ಹತ್ತಿರ ಬರುತ್ತಿರುವ ಸ್ತ್ರೀಯ ಕಾಲಿನ ಧನಿ ಅವನ ಮನಸ್ಸನ್ನು ಎಳೆಯಿತು (ಮಲೆನಾ. ೭೬). ೨. ಆಳುವ ಕಂದನ ಕಿರಿಕಿರಿಧನಿಯೂ ಅದನ್ನು ಸಂತೈಸಿ ಹಾಡುವ ತಾಯಿಯ ಧನಿಯೂ (ನಿರಾಕ. ೪೯). [ < ಸಂ. ಧ್ವನಿ ]

**ದನಿ$_2$, ದಣಿ$_2$, ಧಣಿ** (ನಾ). ಒಡೆಯ; ಯಜಮಾನ: ಅಯನದೀವಿಗೆಗೂ ದೇವರಿಗೆ ವಾಲೆಗೂ ಕೂಡಿ ಹಂನೆರಡು ಹೊ(೦)ನ್ನನ್ನೂ ದನಿಯರ ಕಯ್ಯಲು ತಂದುಕೊಡುವರು ಯೀ ಧರ್ಮ್ಮವನೂ ಯೀಶ್ವರದನಿಯರ ಮಕ್ಕಳು ದಿವಾಕರದನಿಯರು ಆದಿಯಾಗಿ ನಡೆಸಿ ಪಾಲಿಸಿ ಬಹರು (ಸೌಇಇ. IX-ii, ೪೦೭-೧೮ ; 1804) ; ಕಟಿಯ ಹಬ್ಬದಲು ಉಭಯ ಜಂಗಮರಿಗೆ ಆರೋಗಣಿಯ ಧರ್ಮಕೆ ಕೊಂಡ ಬಾಳು ಕೊಟ ಬಾಳತಿಯ ಬಗೆಯಲು ದನಿಯರು ಮೂಲವಾಗಿ ಕೊಂಡ ಬಾಳು . . . ಬಾರಕೂರ ಪರಿವರ್ತ್ತನಕೆ ಸಲುವ ಗದ್ಯಾಣ ನೂಱು ಹೊಂನಂ ದನಿಯರ ಕೈಯಲು ಕೊಟ್ಟರು . . . ವರುಷವ್ರತಿಯೂ ದಿವಾಕರದನಿಯರು ನಡಸಿ ಯಾ ಧ(೦)ರ್ಮ್ಮ ವನೂ ಪಾಲಿಸಿ ಬಹರು (ಸೌಇಇ. IX-ii, ೪೦೫-೧೧; 1372); ದನಿಯರೇ ಬಹುದೂರದಲ್ಲಿ ಕುದುರೆಯ ಖುರಸಪ್ಪಳವು ಕೇಳಬರುತ್ತದೆ ; ಬೇಗನೆ ಓಡಿರಿ (ಮಂಡಾಳಿ. ೩೦). **ದಣಿ$_2$** : "ದಣಿ (ಧಣಿ, ದನಿ) – ಧನಿನ್" (ತದ್ಭಕೋ. ೧೮); ದಣಿಯ ಮನ ನೋಡಿದನೋ ವೇಂಕಟನ ಮನದಣಿಯ ನೋಡಿದ ಶಿಖಾಮಣಿ ತಿರುಮಲನ (ಪುರಂದ. ೨-೦೨೭ ಪಲ್ಲವಿ) ; ದಣಿಯ ಅಪ್ಪಣೆಗೆ ತನ್ನ ಅಭಿಲಾಷೆಯೂ ನೆರೆಯಿತು (ಕಾವ್ಯಸ. ೯೬); ವಿಕಾರಿಯಂತೆ ವಿಕಟನರ್ತನ ಮಾಡಿದ್ದೇಕೆ . . . ಅದೂನೂ ಸಾಕಿದ ದಣಿಯ ಎದುರಿಗೆ! (ತುಂಗಭ. ೨೪); ದಣೀ ತನಕ ದೂರು, ಹೊಲೀ ತನಕ ಓಟ (ಹುಟ್ಟಿಹ. ೦೧೪); ದಣಿ ಹೇಳಾಟ, ಬಡಗಿ ಮಾಡಾಟ (ಗಾದೆ). **ಧಣಿ** : ಧಣಿ ಅನ್ನಾ ಉಂಡು ಬೆಳೆದ ದೇಹ (ಗ್ರಾಮಾಯ. ೬೦೦) ; ನಾವು ಧಣಿಗಳು, ನೀವು ಸೇವಕರು (ರಂಗಳ. ೫೮) ; ಧಣಿ ದಾನ ಕೊಡುವವನು ಅಂದಾನ (ಅರಳು. ೪೬೦-೭).
[ < ಸಂ. ಧನಿನ್./ತುಳು. ದನಿ, ದಣಿ./ಮರಾ. ಧನೀ, ಧಣೀ ]

**ದನಿಕೂರು** (ಕ್ರಿ). ಗಂಟಲು ಕಟ್ಟು: ಹಾಡು ಹೇಳಲು ಆಗುತ್ತಿಲ್ಲ. ದನಿಕೂತಿದೆ (ರೂಢಿ). [ ದನಿ$_1$ + ಕೂರು$_2$ (<ಕೂರ್$_2$) ]

**ದನಿಗುಟ್ಟು** (ಕ್ರಿ). ಧ್ವನಿಮಾಡು; ಕೂಗು; ಕಿರಿಚು : ಹಟ್ಟಿಯೊಳಗಂದರದು ಹೊತ್ತುಂ ಮುಟ್ಟ ಪೂಜಿಪ ದೇವರಿಗೆ ಮನವಿಟ್ಟು ತಾವಂತಿಜಗೆಱಿಗಿ ನಿಲಿನಿಲಿಕಿ ನೋಡುವವು . . . ದನಿಗುಟ್ಟುವವು ತಪ್ಪಿಲ್ಲವೆಮ್ಮಂ ದಿಟ್ಟಿಸೈ ಎಂಬವೊಲು ಕೀತಯ್ಯಗಳಿದಿರೊಳಿಹವು (ಬಸಪು. ೬೦-೨೯).
[ ದನಿ$_1$ + ಕುಟ್ಟು$_1$ ]

**ದನಿಗುಡು** 'ದನಿಗೊಡು' ನೋ.

**ದನಿಗೂಡಿಸು** (ಕ್ರಿ). ೧. ಬೇರೆಯವರ ಧ್ವನಿಯೊಂದಿಗೆ ತನ್ನ ಧ್ವನಿ ಯನ್ನೂ ಸೇರಿಸು: ಹಾಡಿನಲ್ಲಿ ನೀನೂ ದನಿಗೂಡಿಸು (ರೂಢಿ). ೨. ಇನ್ನೊಬ್ಬರ ಅಭಿಪ್ರಾಯವನ್ನು ಅನುಮೋದಿಸು: ಉಳಿದೆರಡು ಉಕ್ತಿಗಳು ನಿಜವಾದ ವಿಮರ್ಶಕ ವಿವೇಕದಿಂದ ಹೊರಟವೆ. ಅವಕ್ಕೆ ನಾವೂ ದನಿಗೂಡಿಸುತ್ತೇವೆ (ತವನಿ. ೧೯೯). [ ದನಿ$_1$ + ಕೂಡಿಸು ]

**ದನಿಗೂಡು** (ಕ್ರಿ). ಸ್ವರವನ್ನು ಹೊಮ್ಮಿಸು ; ದನಿದೋರು : ಹೃದಯವು ಉಕ್ಕಿಬಂದಾಗ ಕೊರಲು ದನಿಗೂಡುವುದೆಂದು ಸರೋಜನಿದೇವಿಯು ಒಂದೆಡೆಗೆ ಹೇಳಿರುವಳು (ಪ್ರಬಂಧ. ೭೭). [ ದನಿ$_1$ + ಕೂಡು$_1$ ]

**ದನಿಗೆಡು** (ಕ್ರಿ). ಧ್ವನಿ ಒಡೆ ; ಧ್ವನಿಯು ಕರ್ಕಶವಾಗು: ಜಿಡ್ಡುಪದಾರ್ಥ ತಿಂದು ದನಿಗೆಟ್ಟಿದೆ (ರೂಢಿ). [ ದನಿ$_1$ + ಕೆಡು$_1$ ]

**ದನಿಗೆಯ್, ದನಿಗೈ** (ಕ್ರಿ). ಸದ್ದುಮಾಡು ; ಧ್ವನಿಮಾಡು ; ಕೂಗು : ಗೋಂಕಱುಕಪ್ಪೆ ಪಸುಂಬಂ ತತ್ತ್ರಮದಿಂದಮೆ ದೀಪ್ತದಿಗ್ಭಾಗದೊಳ್ ದನಿಗೆಯ್ಕೆ ಮನಸ್ಸಿದ್ಧಿಯನಾಗಳೆ ಉಂಟುಮಾಡುಗುಂ (ಲೋಕೋಪ. ೧೨-೦೭) ; ದನಿಗೆಯ್ಯದು ಮಿಸುಕದಿದೇಕೆನುತುಂ ಮೃಗಧೂರ್ತಸಮಿತಿ ಸಾರ್ತರೆ ಪಂಚಾನನವಿರ್ದುದು ಪಂಚತ್ವಮನಸಾಕುಳಂ ಪೊರ್ದಿದಂತೆ ನಿಶ್ಚಂಪತೆಯಿಂ (ವರ್ಧಪು. ೧೨-೩೩) ; ದನಿಗೆಯ್ವ ಕೂಟ ಕೋಗಿಲೆಗಳೊಪ್ಪಿ ದುವು (ವೋಹತ. ೫-೨೫) . **ದನಿಗೈ** : ಉಱಿ ದನಿಗೈವ ಕೊಂಬಳವಟ್ಟು ಮೆಱಿವಾ ಕಾಳೆ ಸನ್ನೆಗಳೆಸೆದುದವರೊಡನೆ (ಸಾಳ್ವಭಾ. ೫-೧೫).
[ ದನಿ$_1$ + ಕೆಯ್$_1$ ]

**ದನಿಗೇಳ್, ದನಿಗೇಳು** (ಕ್ರಿ). ಧ್ವನಿಯನ್ನು ಕೇಳು; ಸ್ವರವನ್ನು ಆಲಿಸು: ಮನವಾಳ್ವೆ ಮೆಯ್ಯಲಸಿಕೆ ಮಕ್ಕಳ ಮುಂದ್ದುಬಿನದಂಗಳನು ಬಿಟ್ಟಿದ್ದು ದ ನಿ ಗೇ ಳ ದ ಮು ನ್ನ ತಾನಿದಿರ್ಗೊಂಡವನನುವಱಿತನುಸರಿಸುವುದು (ಹರಿಬ. ೩-೦೩). **ದನಿಗೇಳು** : ನಾಲಗೆಯ ತೆರ ಬಾಡ ಸವಿ ತಿಳಿಯದಂ . . . ಮುಱಿದು ಕೊಲ್ಲದಿದು ಕೈಯಂತೆ ; ದನಿಗೇಳದು (ಶಿಎಪು. ೪೩-೭).
[ ದನಿ$_1$ + ಕೇಳ್ ]

**ದನಿಗೇಳು** 'ದನಿಗೇಳ್' ನೋ.

**ದನಿಗೈ** 'ದನಿಗೆಯ್' ನೋ.

**ದನಿಗೊಡು, ದನಿಗುಡು** (ಕ್ರಿ). ೧. ಧ್ವನಿಮಾಡು ; ಕೂಗು ; ಮೊಳಗು : ದಟ್ಟಿಸುಗು ತೊಪ್ಪನೆ ಕೆಡೆಗು ದ[ಪಾಠಾಂ. ಧ]ನಿಗೊಟ್ಟು ಕರೆದು ಕರಂ ಮುಗಿದು ಹೊಡವಟ್ಟು ಗಿಣ್ಣಲನಂತು ನೂಕುಗು (ಬಸಪು. ೦೪-೦೮) ;

ತಪ್ಪೆವೆಮ್ಮಯ ವ್ರತಕೆನುತೊಱಲುತಿಪ್ಪವೊಲು ದನಿಗೊಟ್ಟು ಕರೆವುತಿಪ್ಪ ವಂಬೆಯೆನುತ್ತ ತಲೆಗಳನೆತ್ತಿ ನೋಡುವವು (ಬಸಪು. ೬೦-೨೮) ; ತೊಲಗಿ ಬಾ ಬಿದ್ದವರ ತುಳಿಯದಿರೆನುತ ದನಿಗೊಡಲು (ಕಾಶಿರಾ. ೨೯-೨೫). ೨. ಪ್ರತಿಧ್ವನಿ ಮಾಡು : ಮರಗಿರದ ಮೃಗಗಿಗದ ಮಾತೇನರಸ ಭೀಮನ ದನಿಗೆ ಬೆಚ್ಚದೆ ಗಿರಿಗುಹೆಗಳೇ ಮಲೆತು ನಿಂದವು ದನಿಗೆ ದನಿಗೊಡುತ (ಕುಮ್ಮಾಅ. ೧೦-೦೧). **ದನಿಗುಡು:** ೧. ದನಿಗುಡೆ ಬದ್ದವಣಂ ಮೇದಿನಿಸುರರುಚ್ಚರಿಪ ಮಂತ್ರದುಲಿ ಪಸರಿಸೆ (ಉದ್ಭಟ. ೮-೫೬) ; ಮುಂಡಿ ಜಗುಟಿ ನೇವುರಂ ದನಿಗುಡೆ ಬಡನಡು ಬಳ್ಕೆ . . . ಬಂದಳೊರ್ವಳ್ ನಡೆ ನೋಡಿದಳಾಗಳಂತೆ ನಾಣಟಿವಿನೆಗಂ (ಕಬ್ಬಿಕಾ. ೩೩೫)

[ ದನಿ$_1$ + ಕೊಡು$_1$ ]

**ದನಿದೋರು** ‘ದನಿದೋಱು’ ನೋ.

**ದನಿದೋಱಿಸು** (ಕ್ರಿ). ೧. (ಹೆದೆ ಮುಂತಾದುವನ್ನು) ಧ್ವನಿಯಾಗುವಂತೆ ಮಾಡು,-ಸದ್ದುಮಾಡಿಸು : ಧನುವ ನೇವರಿಸಿದನು ಕೊಪ್ಪಿನ ಕೊನೆಯನಾರ್ಮೈದುಭಯದಲಿ ಸಿಂಜನಿಯು ದ[ಪಾಠಾಂ. ಧ]ನಿದೋಱಿಸಿದ ಸಬುಜಭವಾಂಡಘಟ ಬಿಱಿಯೆ (ತೊರರಾ. ೩-೬-೭). ೨. ಮೊಳಗು; ಮೊರೆ ; ಘೂರ್ಣಿಸು : ಕೇಶವ ಸರ್ವೋತ್ತಮಯೆಂದು ತತ್ತ್ವವಿಲಾಸದಿ ನುಡಿದಾಮ್ನಾಯಘೋಷಣೆಯೆಂಬಂತೆ ಲವಣಾಬ್ಧಿ ಪರಮಸಂತೋಷದೆ ದನಿದೋಱಿಸಿತು (ಮೋಹತ. ೨೯-೨೪). [ ದನಿ$_1$ + ತೋಱಿಸು ]

**ದನಿದೋಱು, ದನಿದೋರು** (ಕ್ರಿ). ಸದ್ದುಮಾಡು ; ಶಬ್ದಮಾಡು : ಬಿಂದುವಿನೊಳಗಡಗಿಪ್ಪ ನಾದ ದನಿದೋಱದಂತೆ ಪಿಂಡ ಬ್ರಹ್ಮಾಂಡಂಗಳ ಕೂಡಿಪ್ಪ ಸೌರಾಷ್ಟ್ರಸೋಮೇಶ್ವರಲಿಂಗವನಾರು ಭೇದಿಸಬಾರದಯ್ಯ (ಆದಯ. ೨-೬); ಅನ್ಯಭೃತಂ ದನಿದೋಱದನ್ನವೋರಂತೆ ವಸಂತದೇಟ್ಟುರವು ದೋಱುವವೋಲ್ ನನೆದೋಱಿವತ್ತು ವಾಸಂತಿ (ಜಗವಿ. ೧೪-೨೦) : ಕನರ್ಗೊನರಿ ಕರ್ದುಂಕಿ ದನಿದೋಱುವ ಕೋಗಿಲೆ ಮೇಳದಾಳ್ಗಳೆಂದೆನ (ಶಬ್ಬಿಕಾ. ೬೧) ; ಸುಳಿವ ಕಟ್ಟಿಗೆಕಾಱರಾಸ್ಥಾನದೊಳು ಕೋಗಿಲೆಯಂತೆ ದನಿದೋಱುತಿಹರು (ಭರತ. ೧-೬೦). **ದನಿದೋರು :** ಭೀಮನ ಕೊಳ್ಳವ ನೇರಿ ರಾಮ ಹೊರಟನು ಆಗ ಸ್ವಾಮಿ ಮೆಲ್ಲನೆ ದನಿದೋರೊ ಎನುತ (ಸಿದ್ಧಪು. ೫-೬೧). [ ದನಿ$_1$ + ತೋಱು ]

**ದನಿಮಾಡಿಸು** (ಕ್ರಿ). ನುಡಿಸು; ಬಾರಿಸು : ಹಾಡಿಸಬೇಡ ನಾನಾವಾದ್ಯವ ದನಿಮಾಡಿಸಬೇಡೋರ್ವರೊಡನೆ ಆಡಿಸಬೇಡ ಸ್ವಸ್ತದಿ ನಿದ್ದೆಗೆಯ್ಯುವೆಂದಾಡಿದಳಾ ಚಿತ್ರಲೇಖೆ (ಮೋಹತ. ೨೭-೫೬) ; ವಾರಿಜದಳನೇತ್ರ ಬಲಗೂಡಿ ಪ್ರಸ್ಥಾನಭೇರಿಯ ದನಿಮಾಡಿಸಿದ (ಮೋಹತ. ೩೭-೨೭).

[ ದನಿಮಾಡು + - ಇಸು$_3$ ]

**ದನಿಮಾಡು** (ಕ್ರಿ). ೧. ಶಬ್ದಮಾಡು; ಜೇವೊಡೆ; ಟಂಕಾರಮಾಡು : ಸಾರಥಿಯ ಬೋಳೈಸಿ ಚಾಪದ ನಾರಿಯನು ದನಿಮಾಡಿ (ಕುಮ್ಮಾಕ. ೪-೨೦). ೨. ಗಟ್ಟಿಯಾಗಿ ಕೂಗು: ಓನಾವು ಓದು ಚಿಲ್ಲಾಳ ಬಾಯೆಂದು ಬೆಂಗಳ ಕರೆದಾಳ ದನಿಮಾಡಿ (ಜೋಕಗೀ. ೧೮೦) ; ಬಾಲಸಿದ್ಧ ದನಿಮಾಡಿ ತಾಯಿಗೆ ಕರೆದನು (ಸಿದ್ಧಪು. ೩-೮೭). [ ದನಿ$_1$ + ಮಾಡು$_1$ ]

**ದನಿಮಾಟು** (ನಾ). ದನಿಯಂ ಮಿಡಿತ ; ಧ್ವನಿ : ಕ್ರಿಮಿ-ಕೀಟ ತುಂಬಿ ಈಟೀಟು ತುಂಬಿ ದನಿಮಾಟು ತುಂಬಿ ತುಂಬಿ ಇದ್ದದ್ದು ತುಂಬಿ ಇಲ್ಲದ್ದು ತುಂಬಿ ಅಹುದಲ್ಲದೆಲ್ಲ ತುಂಬಿ (ಗಂಗಾತ. ೧೦೮-೧೩). [ದನಿ$_1$+ಮಾಟು$_2$]

**ದನಿಯಿಡು** (ಕ್ರಿ). ೧. ಧ್ವನಿಯನ್ನು ತೆಗೆ,-ಎತ್ತು : ದನಿಯಿಡುತುಂ . . . ಕೀರಮಿರುತಿರ್ದುದು ತತ್ಸಹಕಾರಶಾಖೆಯೊಳ್ (ಕುಸುಮಾ. ೧೩-೧೩). ೨. ಧ್ವನಿಯನ್ನು ಸೇರಿಸು ; ದನಿಮಾಡಿಸು ; ಸ್ಪಂದಿಸು : ಯಮುನೆಯ ಮರುಕದೊಂದಿಗೆ ನನ್ನ ಹೃದಯವೂ ದನಿಯಿಟ್ಟಿತು (ಅಲಹೂ. ೧೧೪). [ ದನಿ$_1$ + ಇಡು$_1$ ]

**ದನಿಯೆತ್ತು** (ಕ್ರಿ). ಸ್ವರವನ್ನು ಹೊಮ್ಮಿಸು ; ಧ್ವನಿಮಾಡು : ನಡೆ ಕೆಲಕಂಚಿ ಬಿನ್ನವಿಸು ಬೇಗದೆ ಕೋಗಿಲೆ ಪಾಡಿನೋಜೆಯಂ ಗಡಣಿಸು ತುಂಬಿ ಸೋಗೆ ದನಿಯೆತ್ತದಿರೆಯ್ಯನೆ ಬಾದು ಕುಳ್ಳಿರೀಯೆಡೆಗೆ ಬಸಂತಯೆಂದು ಗಿಳಿಗಳ್ ಕಡುಪಿಂ ನಡೆತಂದು ಸುತ್ತಲುಂ ಪಡಿಯಱರಾಗಿ ಚಪ್ಪರಿಪುವೋಲಗದೊಳ್ ಸಲೆ ಕರ್ವುವಿಲ್ಲನಾ (ಕಬ್ಬಿಕಾ. ೦೨೭).

[ ದನಿ$_1$ + ಎತ್ತು$_1$ ]

**ದನಿಷ್ಠೆ** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಇಪ್ಪತ್ತು ಮೂರನೆಯದು : “ಧನಿಷ್ಠಾ, ಶ್ರವಿಷ್ಠಾ–ಈ ೨ ದನಿಷ್ಠೆ” (ಹಲಾಯು. ೧೦-೫೧). [ <ಸಂ. ಧನಿಷ್ಠಾ ]

**ದನಿಸಂತೆ** (ನಾ). ಅನೇಕ ಶಬ್ದಗಳ ಕೂಟ ; ಗಲಾಟೆ ; ಗದ್ದಲ : ವರ್ಧಿಸಿತೊ ನೂಪುರರವಂವೆರಸಿ ಸ್ತ್ರೀಜನಾಕ್ರಂದನಂ, ಪುಷ್ಯಪ್ರಭಾತದೊಳ್ ಕ್ರೌಂಚಪಕ್ಷಿಯ ಪಂಕ್ತಿ ನೆರೆದು ಮುಗಿಲೆತ್ತರದಿ ದನಿಸಂತೆಗೈವಂತವೋಲ್ (ಶ್ರೀರಾಮಾ. ೯೦-೩೬೦). [ ದನಿ$_1$ + ಸಂತೆ$_1$ ]

**ದನಿಸರ** (ನಾ). [ಸಂಗೀತ] ಸ್ವರ : ಒಂದು ಹರಿವ ಹಾವು ಒಂದು ದನಿಸರಕ್ಕೆ ನಿಂದ ಹಾವು ಒಂದು ಉರಿವ ಹಾವು ಮೂವಱ ನಡುವೆ ನಿಂದು ಆಡುವ ಕೋಡಗದಿರವು ಎಂತೆಂದಡೆ (ಅಱಿಮಾ. ೧೪೭-೧೬೨). [ ದನಿ$_1$ + ಸರ$_3$ ]

**ದನು** (ನಾ). ದಕ್ಷನ ಮಗಳು ; ಕಶ್ಯಪನ ಹೆಂಡತಿ ; ದಾನವರ ತಾಯಿ : “ದಾನವರ ತಾಯ್ ದನುವೆನಿಕು” (ಮಂಗರಾ. ೭-೨೪). [ ಸಂ. ]

**ದನುಕಂಪ** (ನಾ). (?) : ಒಂದನೆ ಕೇಳ್ ಪೇಟಿಸ್ಸಿಂ ಪನ್ನೊಂದನೆ ಯುಗಕಾದಿಯಪ್ಪ ಪಿಂಗಳದೊಳ್ ಕಾರ್ಗೆಂದು ಮಟಿಯಿಲ್ಲ ಕಳ್ಳರ್ ಕುಂದರ್ ದನುಕಂಪವೆಂಬ ಮತ್ತಂ ಬಕರ್ಗಂ (ಜಟ್ಟಿಮು. ೭-೨೪).

[ ℙ ಇದು ‘ತನುಕಂಪ’ ವಿರಬಹುದೆ ? ]

**ದನುಕುಲ** (ನಾ). ದನುವಿನ ಸಂತತಿ ; ರಾಕ್ಷಸಕುಲ : ಮನುಕುಲವೆಲ್ಲ ದನುಕುಲದಂತೆ ಒಬ್ಬರನ್ನೊಬ್ಬರು ತುಳಿಯುತ್ತಾರೆ (ಬಾಳಬ. ೩).

[ ದನು + ಕುಲ ]

**ದನುಜ** (ನಾ). ದನುವಿನಲ್ಲಿ ಹುಟ್ಟಿದವನು ; ದಾನವ ; ರಾಕ್ಷಸ ; ℙ ದಿತಿ ಮತ್ತು ದನು ಇವರಿಬ್ಬರೂ ಬೇರೆ ಬೇರೆಯ ವ್ಯಕ್ತಿಗಳಾದರೂ ರಾಕ್ಷಸರ ತಾಯಿಯೆಂದು ಪರಿಗಣಿಸಲ್ಪಡುತ್ತಾರೆ : “ದನುಜರ್ ದೈತೇಯರ್ ದಿತಿತನೂಭವರ್ ಪೂರ್ವದೇವರಸುರರ್ . . . ಶುಕ್ರಶಿಷ್ಯರ್” (ವಸ್ತುಕೋ. ೬-೩೨) ; “ಆ ದನುಜರಂ ಪುಣ್ಯಜನವೆಂಬುದು” (ಮಂಗರಾ. ೦೨೪-೨) ; ದನುಜರ ಕಯ್ಯೊಳಿರ್ದ ಮಾರ್ದನಾವಗಮಿಾಟಿಕ್ಕೊಳೆಂದು ದೈತ್ಯಮರ್ದನನೆನಿಸಿರ್ದವಂ ಕಪಟದಿಂದೆ ವಿಲಾಸಿನಿಯಾದ ವೇಷಮಂ ನೆನೆಯಿಸಿದಪ್ಪುದೀ ಪಸಿಯ ಬಣ್ಣವಿವಳ್ಗೆನೆ . . . ಆದವೊಳ್ಪುದಳ್ (ಕಾದಂಪೂ. ೩೮). [ ಸಂ. ]

**ದನುಜಕುಲ** (ನಾ). ರಾಕ್ಷಸರ ವಂಶ : ದನುಜಕುಲಶಿವ ಕೊಡಲಿಗಾವಾದನು ಮಹಾದೇವ (ಕಾಶಿರಾ. ೨೨-೩೪). [ ದನುಜ + ಕುಲ ]

**ದನುಜಗುರು** (ನಾ). ರಾಕ್ಷಸರ ಗುರು ; ಶುಕ್ರಾಚಾರ್ಯ : ಬಹುವಕ್ತ್ರಂ ಪದ್ಮಗರ್ಭಂ ದನುಜಗುರು ಗುರುದ್ವೇಷಿ ಜೀವಂ ಸುರಾಧೀಶಹಿತಾತ್ಮಂ ಸುಪ್ರಬುದ್ಧೋದ್ಧವನೆನಿಪವನಂ ತಾನಕಾರ್ಯ್ಯಪ್ರಯುಕ್ತಂ (ಎಕ. VIII, ಸೊರಬ. ೧೪೦-೫೬ ; 1199). [ ದನುಜ + ಗುರು$_2$ ]

**ದನುಜಘರಟ್ಟ** (ನಾ). ೧. ರಾಕ್ಷಸರಿಗೆ ಬೀಸುವ ಕಲ್ಲಿನಂತಿರುವವನು ; ದನುಜರನ್ನು ನಾಶಮಾಡುವವನು. ೨. ವಿಷ್ಣು : ರಾಯದನುಜಘರಟ್ಟ ಪಾಂಡವರಾಯ ಜಂಗಮಜೀವ ನಿರ್ಜಿತಮಾಯ ನಿಜವನು ತೋಱಿ ಪಾರ್ಥನನೊಲಿದು ಬೋಧಿಸಿದ (ಕುಮ್ಮಾಭೀ. ೩ ಸೂಚನೆ). ೩. ರಾಮ : ಅತ್ತ ದನುಜಘರಟ್ಟ ದೂರದಿ ಕಂಡು ನಸುನಗುತಿರ್ದ ವನದೊಳಗೆ (ಕಾಶಿರಾ. ೧೮-೫೩). [ ದನುಜ + ಘರಟ್ಟ ]

**ದನುಜಪುಂಗವ** (ನಾ). ರಾಕ್ಷಸರಲ್ಲಿ ಶ್ರೇಷ್ಠನಾದವನು; ದೈತ್ಯಶ್ರೇಷ್ಠ: ಶೂಲಾಗ್ರದೊಳಗಿರ್ದ ಕರಿದನುಜಪುಂಗವಂ ಭಾಲಾಕ್ಷನಂ ಕೀರ್ತಿಸುತ್ತೆ ಬಿನ್ನವಿಸಿದಂ (ವೀಶ್ವಪು. ೩-೧೮-೩೭). [ ದನುಜ + ಪುಂಗವ ]

**ದನುಜಮಥನ** (ನಾ). ರಾಕ್ಷಸರನ್ನು ನಾಶಮಾಡುವವನು; ಕೃಷ್ಣ: ರಥದಿಂದಮಿಳಿದು ತನಗಿದಿರಾಗಿ ಬಹ ದನುಜಮಥನನಂ ಕಾಣುತ (ಕೃಮಿಥಾ. ೧೪-೨೮). [ ದನುಜ + ಮಥನ ]

**ದನುಜವಿರೋಧಿ** (ನಾ). ರಾಕ್ಷಸರ ವೈರಿ; ಕೃಷ್ಣ: ದನುಜವಿರೋಧಿ ಮಾಡಿದೊಡಮಾಗದ ಸಂಧಿಯೊಳೇನೊ (ಗದಾಯು. ೧-೫೬). [ ದನುಜ + ವಿರೋಧಿ ]

**ದನುಜಹರ** (ನಾ). ರಾಕ್ಷಸರನ್ನು ನಾಶಮಾಡುವವನು; ಕೃಷ್ಣ: ಎನಗಾ ದನುಜಹರಂ ಜನಕಂ (ಜಗವಿ. ೧-೩೪); ಭುಜಾಸ್ಫಾಲನವಿಬಂಧನ ಚಿತ್ರ ಗತಿಗಳಲಿ ತನತನಗೆ ಗೋವಳರು ಮಲ್ಲರನನುಕರಿಸಿ ಕಿವಿದಾಡುವರು ಬಲ ದನುಜಹರರೊಡನಾಡಿಗಳು ತಾವಾಗಿ ವಿಪಿನದಲಿ (ನಿಭಾಗ. ೧೦-೧೮-೧೧). [ ಸಂ. ]

**ದನುಜಾಂತಕ** (ನಾ). = ದನುಜಹರ: ದನುಜಾಂತಕನೆಂಬೀ ನಿನ್ನ ನಚ್ಚು ಪೋದಂತವೆಲವೊ ಮುನ್ನೆನ್ನಸ್ಮಂ ದನುಜಂ ಪುಟ್ಟದೆ ಸಂದುದು ನಿನಗೀ ಪೆಸರನ್ನ ಮುಂದೆಯುಂ ಸಂದಪುದೇ (ಹಂಪರಾ. ೬-೫೪). [ ದನುಜ + ಅಂತಕ ]

**ದನುಜಾಧೀಶ್ವರ** (ನಾ). ರಾಕ್ಷಸರ ರಾಜ; ರಾವಣ: ದನುಜಾಧೀಶ್ವರನ ಪುರಾತನ ಪುಣ್ಯದ ಫಲದಿನಾಯುಧಾಗರದೊಳೀಂ ಜನಿಯಿಸಿದುದೊ . . . ಚಕ್ರಂ (ಹಂರಾಮಾ. ೧೦-೮೫). [ ದನುಜ + ಅಧೀಶ್ವರ ]

**ದನುಜಾರಾತಿ** (ನಾ). ೧. ರಾಕ್ಷಸರ ವೈರಿ; ವಿಷ್ಣು: "ದನುಜಾರಾತಿ ಮುಕುಂದನಬ್ಧಿಶಯನಂ . . . ಅಬ್ಜೋದರಂ" (ವಸ್ತುಕೋ. ೪-೩೦). ೨. ಕೃಷ್ಣ: ದನುಜಾರಾತಿ ಸ್ಯಮಂತರತ್ನವ ನೃಪಂಗೀಯಲ್ಕೆ ದೂಱು ಪೋದುದೇ ಜನರಂ ಮೆಚ್ಚಿಸಲಾಗದ್ಯೆ (ಸೋಬಾಸೀಕ. ೮೬). ೩. ದೇವತೆ: ನಿಜನೇತ್ರಂ ಲೋಕನೇತ್ರಂ ನಿಜಭರಣಮಿಳಾಚಕ್ರಭಾರಾವಹಂ ಮೇಣ್ ನಿಜವಾಹಂ ಧರ್ಮಗೇಹಂ ನಿಜಧನು ದನುಜಾರಾತಿಜಾತಾಧಿವಾಸಂ . . . ಕುಡುಗೆಮಗತುಳಶ್ರೇಯಮಂ ಶೈಲಜೇಶಂ (ರಾಜಶೇ. ೧-೨). [ ದನುಜ + ಅರಾತಿ ]

**ದನುಜಾರಿ** (ನಾ). = ದನುಜಾರಾತಿ: ಆ ದನುಜಾರಿಯನಾತ್ಮಗರ್ಭ ದೊಳ್ ಧರಿಯಿಸಿ ನಿಂದಳೀ ಪಿರಿಯಳಿಂ ಪಿರಿಯರ್ ಪೆಱರಿಲ್ಲ ಲೋಕ ದೊಳ್ (ಜಗವಿ. ೨-೯೬); ಅಂಜನಾದ್ರಿಯ ಮೇಲೆ ಸಿಡಿಲೆಱಗಿದಂತಾಗೆ ದನುಜಾರಿ ವೈಮಾಱಿದನು (ಕೃಮಿಥಾ. ೭-೫೫). [ ದನುಜ + ಅರಿ ]

**ದನುಜಾರಿಪ್ರಿಯೆ** (ನಾ). ವಿಷ್ಣುವಿನ ಹೆಂಡತಿ; ಲಕ್ಷ್ಮಿ: "ಶ್ರೀರಾಮ ಗೋವಿನಿ ವಾರಿರುಹಾವಸಥೆ ಪದ್ಮೆ ರಮೆ ಕಮಲೆ . . . ಸಿರಿ ದನುಜಾರಿ ಪ್ರಿಯೆಯೆಂದಿವಿಂದಿರಾನಾಮಂಗಳ್" (ವಸ್ತುಕೋ. ೫-೨೭). [ ದನುಜಾರಿ + ಪ್ರಿಯೆ ]

**ದನುಜಾರಿರಿಪು** (ನಾ). ಕೃಷ್ಣನ ಶತ್ರು; ಜರಾಸಂಧ: ದನುಜಾರಿರಿಪು ಜರಾಸಂಧನೆಂಬ ಸುತನತಿರಥಂ ಬೃಹದ್ರಥನಾಮಾವನಿಪಂಗೆ ಚಂಡಕೌಶಿಕ ಮುನೀಂದ್ರನಿಂದಾದಂ (ಕಾದಂಪೂ. ೩೪೪). [ ದನುಜಾರಿ + ರಿಪು ]

**ದನುಜೆ** (ನಾ). ರಕ್ಕಸಿ; ರಾಕ್ಷಸಿ; ದೈತ್ಯೆ: ದನುಜೆಯಲ್ಲಾಂ ಮನುಜೆ ಯಾನಾರ್ಥವಿಷಯದಾಪೇಕ್ಷೆಯಿಂ ಕೊಂಡೊಯ್ದು ಕೊಂದೆನೀ ಶಿಶುವ (ಹಹಶಾ. ೧೩-೬); ಮತ್ತಿದುವೆ ಹೊಮ್ಮಿಗವಧೆಗೆ ಕೋ ಮತ್ತಿದುವೆ ದನುಜೆಯ ಮೂಗ ಕೊಯ್ದಾ ಸುಭಟತನಕಿದುವೆ ಇದು ಸುಬಾಹುವ ಹರಣಕೊಂಡುದಕೆ . . . ಕೊಳ್ಳೆನುತಸುರ ರಾವಣನೆಚ್ಚು ಮೂದಲಿಸಿ (ಕೌಶಿರಾ. ೩೫-೩೦). [ ಸಂ. ದನುಜಾ ]

**ದನುಜೇಂದ್ರ** (ನಾ). ರಾಕ್ಷಸರ ರಾಜ; ರಾಕ್ಷಸರ ದೊರೆ: ದನುಜೇಂದ್ರನ ಸೇನೆಯ ವಜ್ರನ ದೋರ್ದಂಡಂಗಳಂ ಕುಠಾರಾಯುಧದಿಂ . . . ತಱಿದಂ (ಹಂರಾಮಾ. ೧೩-೧೦೪); ದನುಜೇಂದ್ರನ ಮಡಿವೆರ್ಗ ಮನೆನಗೀಯದೊಡೆ . . . ಅಗಸವೊಯ್ಲು ಸವಿಯಂ ತೋರ್ಪೆಂ (ಜಗವಿ. ೬-೭). [ ದನುಜ + ಇಂದ್ರ ]

**ದನುಜೇಂದ್ರನಿಕೇತ** (ನಾ). ರಾಕ್ಷಸರ ವಾಸಸ್ಥಾನ: ಪಾತಾಳಲೋಕ: "ಪಾತಾಳಂ ದನುಜೇಂದ್ರನಿಕೇತಮದೋಭುವನಮುರಗಲೋಕಂ" (ವಸ್ತುಕೋ. ೧೯-೫). [ ದನುಜೇಂದ್ರ + ನಿಕೇತ ]

**ದನುಜೇಜ್ಯ** (ನಾ). = ದನುಜಗುರು: ದನುಜೇಜ್ಯಂ ಧರ್ಮ ಕರ್ಮ ತ್ರಿತನು ಧನ ಚತುಷ್ಪಂಚ ರಂಧ್ರಾಯದೊಳ್ . . . ಲೇಸೆನಿಕ್ಕುಂ (ಜಾತತಿ. ೧೦-೧೩); ಅನಿಮಿಷಮಂತ್ರಿಯೊಳೊಂದಿದ ಶನಿಯಿಂದು ಮಡಕೆ ಮಾಟ್ಟನೆಡಲುಂ ಬಲ್ಲಂ ದನುಜೇಜ್ಯನಿಂ ಗಂಡಾಧಿಕನೆನಿಕುಮದೀ ಯೋಗ ಸಂಭವಂ ಬುಧಮಿತ್ರಾ (ಜಾತತಿ. ೧೫-೫). [ ಸಂ. ]

**ದನುಜೋದೀರಿತ** (ನಾ). [ಜೈನ] ರಾಕ್ಷಸರಿಂದ ಉಂಟಾದುದು: ಶಾರೀರ ಮಾನಸ ಕ್ಷೇತ್ರಜ ಪರಸ್ಪರೋದೀರಿತ ದನುಜೋದೀರಿತಂಗಳೆಂ ಬಯ್ದುಂ ತೆಱದ ದುಃಖಂಗಳೊಳದ್ದು (ಅದಿಪು. ೫-೮೮ ವ). P ಶರೀರ ದಿಂದ, ಮನಸ್ಸಿನಿಂದ, ಕ್ಷೇತ್ರದಿಂದ, ಪರಸ್ಪರರಿಂದ ಮತ್ತು ರಾಕ್ಷಸ ರಿಂದ ಉಂಟಾದುವೆಂದು ಹೇಳಲಾಗುವ ಐದು ಬಗೆಯ ದುಃಖಗಳು. [ ದನುಜ + ಉದೀರಿತ ]

**ದನುನಂದನ** (ನಾ). = ದನುಜ: ದನುನಂದನನಿನನಂದನನಿನನಂದನನಿನ ನಂದನನ ಸಂದನನಂ ದಿನನಂದನನೆಂದನುದಿನ ದನನಿನನಾನನ್ನನಾದೆನಾಂದಂ ನಿನ್ನ (ಮದತಿ. ೬-೧೧). [ ದನು + ನಂದನ ]

**ದನುಪ್ರಭವ** (ನಾ). = ದನುಜ: ದನುಪ್ರಭವದಾರಣತ್ವರೆಯ ನಿಸ್ಸುಮಂ ಮುಂಚೀಯನಾಥ ಭಯವಾರಣಪ್ರವಣಹಸ್ತಮುದ್ಯೋಗಿಕುಂ (ವಸ್ತುಕೋ. ೩೫). [ ದನು + ಪ್ರಭವ ]

**ದನುಸುತ** (ನಾ). = ದನುಜ: ದನುಸುತಂ ಕಿಟಿ ತನ್ನನಾ ಮುಳಿಸಿಂ ವೃಡಾದ್ರಿಯ ಸಿಂಹವಾಹಿನಿಯ ರೂಪಿನೊಳಾಹವಕ್ಕೆ ಸಹಾಯಮಾಯ್ತು ರಘೂದ್ವಹಂಗೆ (ಹಂರಾಮಾ. ೧೪-೫); ದನುಸುತನೊರ್ವನುರ್ವರೆಯನಾ ರಸೆಗುಯ್ದೊಡಮಂಗೆ ಭಂಗಮಂ ಜನಿಯಿಸಿ ತನ್ನ ಮುನ್ನಿನ ಮುಕುಂದನ ಶೌರ್ಯಮನಾತ್ಮವಿಕ್ರಮಂ ನೆನೆಯಿಸೆ (ಎಕ. XI, ದಾವಣ. ೩೫-೮; ಸು. 1160). [ ದನು + ಸುತ ]

**ದಪ್** (ನಾ). ಒಂದು ಅನುಕರಣ ಶಬ್ದ: ಅವನು ದಪ್ ಎಂದು ಬಿದ್ದ (ರೂಢಿ); ಅವಳು ದಪ್ಪೆಂದು ಹೊಡೆದಳು (ರೂಢಿ).

**ದಪ$_1$** (ನಾ). ಒಂದು ಅನುಕರಣ ಶಬ್ದ.

ದಪದಪ (ದ್ವಿರುಕ್ತಿ): ಅವನು ಕಳ್ಳನಿಗೆ ದಪದಪ ಎಂದು ನಾಲ್ಕೇಟು ಹೊಡೆದ (ರೂಢಿ). 'ದಪದಪನೆ' ಪರಾ.

**ದಪ$_2$** 'ದಫಾ' ನೋ.

**ದಪಗೊಳ್ಳು** (ಕ್ರಿ). ಯಾಸಗೊಳ್ಳು; ಸುಸ್ತಾಗು: ಹೀಗೆಯೆ ದಪಗೊಂಡು ಬಿದ್ದಾಗ ಒಂದು ಮೂಲೆಯಲ್ಲಿ ಬೆಳಕು ತೋರಿತು (ಮೇದಿಮ. ೭೦). [ ದಪ.? + ಕೊಳ್ಳು$_1$ (<ಕೊಳ್$_1$) ]

**ದಪದಪನೆ** (ಅ). ದಪದಪ ಎಂಬ ಶಬ್ದದೊಡನೆ: ಗಾಡಿ ಇದ್ದಕ್ಕಿದ್ದಂತೆ ನಿಂತಾಗ ಅದರಲ್ಲಿದ್ದ ವಸ್ತುಗಳೆಲ್ಲಾ ದಪದಪನೆ ಬಿದ್ದುಹೋದುವು (ರೂಢಿ). [ <ದಪ$_1$ + - ಅನೆ$_1$ ]

**ದಪಾ** 'ದಫಾ' ನೋ.

**ದಪ್ತರ** 'ದಫ್ತರು' ನೋ.

**ದಪ್ತರಖಾನೆ** 'ದಫ್ತರಖಾನೆ' ನೋ.

**ದಪ್ತರದಾರ** 'ದಫ್ತರದಾರ' ನೋ.

**ದಪ್ತರು** 'ದಫ್ತರು' ನೋ.

**ದಪ್ಪ₁, ದಿಪ್ಪ** (ನಾ). ೧. ತೋರ; ಗಾತ್ರ; ಗಡುತರ; ಮಂದ: "ತೋರಂ ದಪ್ಪಂ" (ಶಾಶಕ್ಕ. ೧೭೮); ಬೆರಲ ದಪ್ಪದೊಳು ಬಟುಹಾಗಿ ಕಳಿಲೆಯನ್ನುತ್ತರಿಸಿಕೊಂಡದಜ[ವೊಗರನು]ಹೋಹ ತೆಜದಿನುಕ್ಕರಿಸಿ ನೀರಂ ಹಿಂಡಿ (ಸೂಪಶಾ. ೬-೩); ಥಳಿಸುವ ನಿಡುಗಣ್ಗಳು ದಪ್ಪಾದ ಗಂಭೀರ ನಾಭಿಯಂ . . . ಬಟ್ಟನುಣ್ದೊಡೆ ಜಂಘೆಗೊಪ್ಪುತ್ತಿರುವ ಮೆಲ್ಲಡಿಗಳಿಂದ ಮಖವೀರ್ಯನಾತ್ಮಜಂ ಶೋಭಿಸಿದನು (ಶರಶು. ೪-೨). (ಗು). ೨. ಒರಟಾದ; ನಯವಿಲ್ಲದ. 'ದಪ್ಪಕಾಗದ' ಪರಾ. ೩. ದೊಡ್ಡದಾದ; ಗಾತ್ರವಾದ. 'ದಪ್ಪಕ್ಕಿ' ಪರಾ. ದಿಪ್ಪ: (ನಾ). ೪. ಸಮೂಹ; ದಟ್ಟಣೆ; ಸಂದಣಿ: ಉಪ್ಪರಿಗೆಗಳಗ್ರಂಗಳೊಳೊಪ್ಪಂಬಡೆದಿರ್ದ ಪೊನ್ನ ಕಳಸಸಮೂಹಂ ತಪ್ಪನೆ ಪುರವಂ ನೋಡಲ್ ದಿಪ್ಪದೆ ಬಂದಿರ್ದ ಸೂರ್ಯಕುಲವೆನೆ ತೋರ್ಕುಂ (ಹಾಲಾಸ್ಯ. ೧-೪-೭೦). ೫. ಮಂದವಾದುದು; ದಟ್ಟವಾದುದು: ಗೋಮಯಪಂಕವಂ ವಿಳಸಿತೋನ್ನತ ಭಸ್ಮ ಕಾರಣಮೆಂದು ತನ್ನ ಮೊಗಂಗಳೊಳ್ ದಿಪ್ಪವಾಗೆ ಪೂಸಿಕೊಂಡು (ಹಾಲಾಸ್ಯ. ೪-೧೩-೫೦). ೬. ಕಡುವಾದುದು; ಗಟ್ಟಿಯಾದುದು: ದಿಪ್ಪಾದ ಬಣ್ಣವನ್ನು ಕೂಡ್ರಿಸಬೇಕಾದರೆ ಯೆರಡು ಮೂರು ಸಾರಿ ಬಣ್ಣದೊಳಗೆ ಯದ್ದಬೇಕಾಗುತ್ತದೆ (ಶಛಾಗಿ. ೦೩೩).

ದಪ್ಪವಾಗು=ಸ್ಥೂಲವಾಗು; ತೋರವಾಗು: ಅವಳು ಬರುಬರುತ್ತಾ ತುಂಬ ದಪ್ಪವಾಗುತ್ತಿದ್ದಾಳೆ (ರೂಢಿ).

[ದೇ.॥ ತುಳು. ದಪ್ಪ, ದಪ್ಪೊ; ತೆಲು. ದಪ್ಪ]

**ದಪ್ಪ₂** (ನಾ). ೧. ಸೊಕ್ಕು; ಗರ್ವ; ಅಹಂಕಾರ: ದ್ವಿತ್ವಾಗ್ರ ರೇಫ ಲೋಪಕ್ಕೆ-ಅರ್ಘ – ಅಗ್ಘ . . . ದರ್ಪ–ದಪ್ಪ (ಶಮದ ೨೬೧ ಪ್ರಯೋ); ತಪ್ಪಿ ನುಡಿದೊಡೆ ಗರುಡದೇವನ ದಪ್ಪ[ಪಾಠಾಂ. ದರ್ಪ]ವನು ಹರಿ ಸೆಳೆದು ಬಿಸುಟನು (ಕುಭ್ಯಾಉ. ೯-೦೦). ೨. ಕೆಚ್ಚು; ಶೌರ್ಯ; ಪರಾಕ್ರಮ: "ದಪ್ಪ ಪೆಟ್ಟಿದಟಾರ್ಪು ಸಾಸ ಪೆರ್ಚುಬ್ಬಟೆಯದವ್ವುದಬ್ಬರವುನ್ನತಿಕೆಯು ಪನ್ನತಿಕೆಯನೆ ತಪ್ಪದಣ್ಮನೆ ಪರಾಕ್ರಮ ವಾಚಿ" (ಶಬ್ದಮಂ. ೩೫); "ಪನ್ನತಿಕೆ ಪೆಟ್ಟು ತಕ್ಕುಮೆಯನ್ನುಂ ತಾಂ ಸಾಸ ದಪ್ಪವುದಟಾರ್ಪಣ್ಮೆಂದೆನ್ನಲ್ ಪರಾಕ್ರಮಾಖ್ಯಂ" (ಕವಿಕಂ. ೧೨೫); ಕಡಲೊಳ್ ನೇಸಱನದ್ದಲುಂ . . . ಪೆಡೆಯಂ ತೊಟ್ಟನೆ ಮೆಟ್ಟಿ ಬಾಸುಗಿಯುನಾದಂ ಸೀಟಲುಂ ಪೊತ್ತು ಬಾನೆಡೆಯಂ ಬೇಗದಿನೆತ್ತಲುಂ ಬಗೆದನಾಗಳ್ ದಪ್ಪದಿಂ ದಪ್ಪಗಂ (ಕಲ್ಯಾಕಾ. ೦೫೨); ದಪ್ಪ[ಪಾಠಾಂ. ದರ್ಪ]ವುಳ್ಳಂಗೀಸು ಮಂಗಳವೊಪ್ಪದೇನ್ಸ ಜಗದೊಳಾ ಪಂಗಪ್ಪುದೀ ಬಲವೀ ನಿಗರ್ವಿತೆಯೆಂದನಾ ಮತ್ಸ್ಯ (ಕುಭ್ಯಾವಿ. ೯-೨೮); ತಪ್ಪದೆ ಲಗ್ಗೆಗೇಱಿದ ಖಳರನು ಕೊಲ್ಲ ದಪ್ಪವನೇನೆಂಬೆನು (ಕಂನವಿ. ೦೪-೫೩). [ <ಸಂ. ದರ್ಪ ]

**ದಪ್ಪಕ, ದಪ್ಪಗ** (ನಾ). ಕಾಮ; ಮನ್ಮಥ: "ಕುಡುವಿಲ್ಲ ಪೂವುನುಂಬಂ . . . ಜೊನ್ನೊಡಲನಳಿಯಂ ದಪ್ಪಕಂ ಮಯಣನೆಂಬಿವಿಂತೊಡನೆ ಮನ್ಮಥ ನಾಮವು" (ಶಬ್ದಮಂ. ೮); "ದಪ್ಪಕ–ದರ್ಪಕ = ಮನ್ಮಥ"(ಶಬ್ದಕೋ. ೦೮)· ದಪ್ಪಕ ರತಿಯ ವಸಂತಕೇಳಿಯ ಚಿತ್ರುವಿಪ್ಪದ ನೋಡಿ ಸಂತಸದಿ ಚಪ್ಪರ ಮಂಚದ ಮೇಲೆ ಕುಂಕುಮದಲರ್ಸುಪ್ಪತ್ತಿಗೆಯಲಿ ಮಂಡಿಸಿದ (ಮೋಹತ. ೨೨-೧೨). ದಪ್ಪಗ: ಪೊತ್ತು ಬಾನೆಡೆಯಂ ಬೇಗದಿನೆತ್ತಲುಂ ಬಗೆದನಾಗಳ್ ದಪ್ಪದಿಂ ದಪ್ಪಗಂ (ಕಲ್ಯಾಕಾ. ೦೫೨); ದಪ್ಪಗನರ್ಧಾಂಗಿಯ ರೂಪಿಗಿವ್ಮಡಿ ಸುಪ್ರೌಢಾನ್ವಿತ ಕೇಳು (ಮೋಹತ. ೨೨-೩೦); ತನ್ನ ನಲ್ಲೆಗೆಲೆಯನೊಂದು ಸಪರ್ಯೆಯಿಂ ಸಂತುಷ್ಟನಾಗಿ ದಪ್ಪಗಂ ಪಡೆವೆರಸುಬಾದ ಕಡವಗಲನಿರುಳಂ ಪುಸಿಗಾಳೆಗದುದ್ಘಗರೊಂದಣೆಕೆಯಿಂ ಕಟೆದು (ರಾಮಾಶ್ವ. ೫೭-೦೯).

[ <ಸಂ. ದರ್ಪಕ ]

**ದಪ್ಪಕವಗೆಯ, ದಪ್ಪಗವಗೆಯ** (ನಾ). ಮನ್ಮಥನ ಹಗೆ; ಶಿವ: "ಗನಹ ಮಾದೇವ ಕಣ್ಣಡಿಯ ಕಟಿಗೊರಲ ಪಿಱಿತಿನಿಯಣ್ಣ ದಪ್ಪಕವಗೆಯ . . . ಅಮರ್ದುವೆಣ್ಣನಿಯಸೆಂದೆಂಬಿವೀಶ್ವರನ ನಾಮಂ" (ಶಬ್ದಮಂ. ೪); "ಪಿಂಗಗ್ಗೆಯಂ ಕಣ್ಣಡಿಗಂ . . . ಬಾಣ್ನವಿರಂ ದಪ್ಪಕವಗೆಯಂ ಮಾದೇವ ಸಬ್ಬ ಗಂದರಗಿಪಿಯಂ" (ಕವಿಕಂ. ೧೬). ದಪ್ಪಗವಗೆಯ: ಪಣೆಗಣ್ಣಂ ತಾನೊಡ್ಡಿ ನಿಲ್ಲುದುಮಣುವಂ ಸಿಡಿವಿಡಿಗೊಂಡಸವಸದಿಂ ದಪ್ಪಗವಗೆಯನಂ ಕೈಯ ಪರ್ವರನೊಳ್ . . , ಮಾಲೆದು ತಾಗಿದಂ (ರಾಮಾಶ್ವ. ೦೫೧-೨೪). [ ದಪ್ಪಕ + ಪಗೆ₂ + – ಅ₇ ]

**ದಪ್ಪಕಾಗದ** (ನಾ). ತೆಳುವಲ್ಲದ ಕಾಗದ; ಒರಟು ಕಾಗದ: ಪುಸ್ತಕಗಳಿಗೆ ರಟ್ಟುಹಾಕಲು ದಪ್ಪಕಾಗದ ಬೇಕು (ರೂಢಿ). 'ತೆಳಂಕಾಗದ' ಪರಾ.

[ ದಪ್ಪ₁ + ಕಾಗದ ]

**ದಪ್ಪಕ್ಕಿ** (ನಾ). ಅಕ್ಕಿಯಲ್ಲಿ ಒಂದು ಬಗೆ; ಸಣ್ಣದಲ್ಲದ ಅಕ್ಕಿ: ರೊಟ್ಟಿಗೆ ದಪ್ಪಕ್ಕಿ ಚೆನ್ನ (ರೂಢಿ). 'ಸಣ್ಣಕ್ಕಿ' ಪರಾ. [ ದಪ್ಪ₁ + ಅಕ್ಕಿ₁ ]

**ದಪ್ಪಗ** 'ದಪ್ಪಕ' ನೋ.

**ದಪ್ಪಗಟ್ಟು** (ಕ್ರಿ). ಮಂದವಾಗು; ಗಟ್ಟಿಯಾಗು: ಮಿಶ್ರಣವು ದಪ್ಪಗಟ್ಟಲು ಪ್ರಾರಂಭವಾದಾಗ ಅದಕ್ಕೆ ಸಕ್ಕರೆ, ಸುಲ್ತಾನದ್ರಾಕ್ಷಿ ಮತ್ತು ಬೆಣ್ಣೆಯನ್ನು ಸೇರಿಸಿ . . . ಮತ್ತೆ ಕಾಯಿಸಬೇಕು (ಅಡುಶಾ. ೯೭).

[ ದಪ್ಪ₁ + ಕಟ್ಟು₁ ]

**ದಪ್ಪಗವಗೆಯ** 'ದಪ್ಪಕವಗೆಯ' ನೋ.

**ದಪ್ಪನೂಲು** (ನಾ). ದಪ್ಪವಾದ ದಾರ; ಒರಟುನೂಲು: ಮನೆಯಲ್ಲಿ ಉಡಲು ದಪ್ಪನೂಲಿನ ಸೀರೆ ಸಾಕು (ರೂಢಿ).

[ ದಪ್ಪ₁ + ನೂಲು₂ (<ನೂಲ್₂) ]

**ದಪ್ಪನೆ₁** (ಅ). ದಪ್ ಎಂಬ ಶಬ್ದದೊಡನೆ: ಅವನು ದಪ್ಪನೆ ಬಿದ್ದುಬಿಟ್ಟ (ರೂಢಿ). [ ದಪ್ + – ಅನೆ₁ ]

**ದಪ್ಪನೆ₂, ದಪ್ಪನ್ನ, ದಪ್ಪಾನೆ** (ಗು). ೧. ದಪ್ಪವಾದ; ತೋರವಾದ: ದಪ್ಪನೆ ಜಡೆಯ ಹುಡುಗಿ ಬರುತ್ತಿದ್ದಾಳೆ (ರೂಢಿ). ೨. ಒರಟಾದ: ಕಿಟಕಿಗಳಿಗೆ ತೆರೆಹಾಕಲು ದಪ್ಪನೆ ಬಟ್ಟೆ ಉಪಯೋಗಿಸಿದರೆ ಮೇಲು (ರೂಢಿ). ದಪ್ಪನ್ನ: ೧. ದಪ್ಪನ್ನ ಎಲುವು (ಮುಂಬಯು. ೪-೮೨). ೨. "ಸ್ಥೂಲಶಾಟಕ–ದಪ್ಪನ್ನ ಅರಿವೆ" (ಗಂಗಾಕು. ೩೪೦). ದಪ್ಪಾನೆ: ೩. ಗಾತ್ರವಾದ; ದಟ್ಟವಾದ: ಆಗಳಿಂದ ೩ ತಾಸುಗಳ ತನಕ ಊರಲ್ಲೆಲ್ಲಾ ದಪ್ಪಾನೆ ಕತ್ತಲೆ ಕವಿಯಿತು (ಗೊಲ್ಲೊಥಾ. VIII ಮುನ್ನುಡಿ).

[ ದಪ್ಪ₁ + – ಅನೆ₂ (< – ಅನೆಯ₂) ]

**ದಪ್ಪನ್ನ** 'ದಪ್ಪನೆ₂' ನೋ.

**ದಪ್ಪಬಟ್ಟೆ** (ನಾ). ತೆಳುವಲ್ಲದ ಬಟ್ಟೆ; ಒರಟುಬಟ್ಟೆ: ಈಗಿನ ಕಾಲದಲ್ಲಿ ದಪ್ಪಬಟ್ಟೆಗೆ ಹೆಚ್ಚು ಬೇಡಿಕೆಯಿಲ್ಲ (ರೂಢಿ). [ ದಪ್ಪ₁ + ಬಟ್ಟೆ₂ ]

**ದಪ್ಪಮೆಣಸಿನಕಾಯಿ** (ನಾ). ಒಂದು ಬಗೆಯ ಮೆಣಸಿನಕಾಯಿ; ಹೊಟ್ಟೆಮೆಣಸಿನಕಾಯಿ; ದೊಣ್ಣೆಮೆಣಸಿನಕಾಯಿ: ಹಗುರವಾಗಿರುವ ದಪ್ಪಮೆಣಸಿನಕಾಯಿ ಹಣ್ಣು ಅಷ್ಟು ಖಾರವಿಲ್ಲದಿರುವುದರಿಂದ ತರಕಾರಿಯಂತೆ ಉಪಯೋಗಿಸಲ್ಪಡುತ್ತದೆ (ತರಚಿ. ೩೨).

[ ದಪ್ಪ₁ + ಮೆಣಸಿನಕಾಯಿ ]

**ದಪ್ಪರಿ** (ನಾ). ಒಂದು ಅನುಕರಣ ಶಬ್ದ: ದಪ್ಪರಿ ದುಚ್ಚುಂ ಪೊಟ್ಟೆನೆ ದೊಪ್ಪಧೊಗಪ್ಪನೆ ದಿಧಿಲ್ಲುಧಿಲ್ಲನೆ ಗದೆಗಳ್ ಸೊಪ್ಪುಸೊಪಡಪ್ಪಿನಂ ಸೂಱ್ಪಪ್ಪದೆ ಕಡುಕಯ್ದು ಪೊಯ್ದರೊರ್ವರನೊರ್ವರ್ (ಗದಾಯು. ೮-೦೦).

**ದಪ್ಪವಳಿ** (ಕ್ರಿ). ಹೆಮ್ಮೆಗುಂದು: ಅಪ್ಪಾಜಿ ಹಾ ನಮ್ಮನೀಡಾಡಿ ಜಗದಗ್ರ ಕುಪ್ಪರಿಸಿದೆಯ ಹಾಯೆಂದು ದಪ್ಪವಳಿದು ಬಿದೆಬೆಂದರು ಶಿಶು ಬಿಸಿ ತುಪ್ಪವ ಕುಡಿದ ರೀತಿಯೊಳು (ಭರತೇ. ೭೮-೮೦). [ ದಪ್ಪ₂ + ಅಳಿ₁ (<ಅಟಿ₁) ]

**ದರಗಾಹ** 'ದರಗಾ' ನೋ.

**ದರಗು$_1$** 'ತಱಗು' ನೋ.

**ದರಗು$_2$** 'ತರಕು' ನೋ.

**ದರಗುನಾಲಗೆ** (ನಾ). ಒರಟಾದ ನಾಲಗೆ; ನಯವಾಗಿರದ ಜಿಹ್ವೆ: ಕರು ಪುಳಕಿತವಾಗಿ ಅವರ ಕಿವಿಗಳನ್ನು ಕೆನ್ನೆಗಳನ್ನು ತನ್ನ ಹಿತವಾದ ದರಗು ನಾಲಗೆಯಿಂದ ನೆಕ್ಕಲು ಪ್ರಾರಂಭಿಸಿತು (ಸಂಸ್ಕಾರ. ೯೭). [ದರಗು$_2$ (<ತರಕು) + ನಾಲಗೆ]

**ದರಚಾಗಾ** (ನಾ). ಮೊಕ್ಕಾಂ (?): ತಾರೀಖು ೯ನೇ ಜೂನ್ ಸನ್ ೧೯೨೬ನೇ ಇಸವಿ ದರಚಾಗಾ ಬೆಂಗಳೂರು (ಗುರುದ. ೧೦). [?]

**ದರಜವಾಬು** (ನಾ). ಲಿಖಿತ ಜವಾಬು; ಬರೆದು ಕಳಿಸಿದ ಉತ್ತರ: ಬರದು ಕಳುಹಿದಲ್ಲಿ, ಅದಕ್ಕೆ ದರಜವಾಬಾಗಿ . . . ಬರದು ಕಳುಹಿದ ಕಾಗದದಲ್ಲಿ (ರಾಜೇಂದ್ರ. ೬೦); ಇದಕ್ಕೆ ಬದಲು ದರಜವಾಬು ಜ್ಯೇಷ್ಠ ಶು. ೩ರಲ್ಲು ಮಹಾರಾಜರವರು ಬರದ ಕಾಗದದ ವಿವರ (ರಾಜೇಂದ್ರ. ೧೮೯). [←ಪಾರ. ದರ್ಜವಾಬ್]

**ದರಜು** 'ದರದು' ನೋ.

**ದರಣ$_1$**, ದಣ್ಣ (ನಾ). ಒಂದು ವರಹದ ಕಾಲು ಭಾಗ: ಅವರ ದಯಮಾಡಿ ವರಹಕೆ ದರಣ ಪ್ರಕಾರ ಕೊಡುಯಂತ ದಯಪಾಲಿಸಿ (ಎಕ. VIII, ಸಾಗರ. ೪೭-೪೪; 1646?) ದಣ್ಣ: ದಿನಕ್ಕೊಂದು ದಣ್ಣದ (ಒಂದು ರೂಪಾಯಿ) ಹುದ್ದೆಗಳು ಯಾವಾಗಲೂ ತೆರವಾಗಿರುತ್ತಿದ್ದವು (ಕಳುಮ. ೧೭೩). [<ಸಂ. ಧರಣ = ಹದಿನಾರು ಮಾಷಗಳ ತೂಕ]

**ದರಣ$_2$** (ನಾ). ಸೀಳುವಿಕೆ; ಒಡೆಯುವಿಕೆ; ಹರಿಯುವಿಕೆ. [ಸಂ.]

**ದರದಟ್ಟ** (ನಾ). ೧. ಹೊಟ್ಟೆಗಿಲ್ಲದ ಗತಿಕ ಸ್ಥಿತಿ; ಕಡುದರಿದ್ರಾವಸ್ಥೆ: ಅಂದಿಗೆ ಆ ಬಟ್ಟೆ, ಇಂದಿಗೆ ಈ ಬಟ್ಟೆ, ಮುಂದಕ್ಕೆ ದರದಟ್ಟೆ ಇನ್ನೆಂದು ಹೊಟ್ಟೆ ತುಂಬ ಹಿಟ್ಟು ಹಾಕಿದ್ದೀಯೆ? (ಮುಸುಗ. ೧೧೩). ೨. ನಿರ್ಗತಿಕ; ದರಿದ್ರ: ಅವನೊಬ್ಬ ದರದಟ್ಟ, ಅವನಿಗೆ ಹೆಣ್ಣು ಕೊಡೋದೆ? (ರೂಢಿ). [?]

**ದರದರ$_1$** 'ದಱದಱ' ನೋ.

**ದರದರ$_2$** (ಅ). ೧. ಒಂದೇ ಸಮನೆ; ಏಕ ಪ್ರಕಾರವಾಗಿ: ಕಣ್ಣುಗಳಿಂದ ದರದರ ಧಾರೆ ಸುರಿಯುತ್ತದೆ (ಆವೀಅ. ೭). ೨. ಬೇಗಬೇಗನೆ; ಸರಸರನೆ; ಶೀಘ್ರವಾಗಿ: ಪೆಟ್ಟಿಗೆಗಳನ್ನು ದರದರ ಎಳೆದು ಸೆಕೆಂಡ್‌ಕ್ಲಾಸ್ ಗಾಡಿಯೊಂದರಲ್ಲಿ ದಬ್ಬಿದರು (ಸ್ವಾಮಿಸ್ಮೃ. ೨೧೩). [<ದಱದಱ]

**ದರದರನೆ** 'ದಱದಱನೆ' ನೋ.

**ದರದಳಿತ** (ಗು). ಸ್ವಲ್ಪ ಅರಳಿದ; ನಸು ತೆರೆದ; ತುಸು ಬಿರಿದ; ಕೊಂಚ ವಿಕಸಿತವಾದ: ದರದಳಿತಕಮಲಕುಟ್ಮಳಪರಿಮಳವೆನಿಸಿರ್ದ ಸಹಜಮುಖಸೌರಭಮಂ (ಕಾದಂಪೂ. ೪೨೦); ಸುರವನಿತಾಜನಪತಿಪದಮಂ ದರದಳಿತ ಲತಾಂತಮಾಲೆಯಿಂದರ್ಚಿಸಿದಂ (ಮಲ್ಲಿಪು. ೧೨-೧೭೦); ದರದಳಿತಾಂಬುಜಾನನದೊಳೊಪ್ಪುವ ಕತ್ತುರಿಬೊಟ್ಟಿನಂತೆ ಸಾರ್ದಿರಲಿಳಿತೊಟ್ಟ ಮುತ್ತುಗಳ ವೆಂಬಿನಮೊಪ್ಪಿರೆ ಸೀಕರಾಳಿ . . . ಪೊಚ್ಚ ಪೊಸವಣ್ಣಲೆ ಸಿಂಗರವಾಂತು ತೋಱಿದಳ್ (ರಾಜಶೇ. ೨-೬). [ದರ$_2$ + ದಳಿತ (= ದಲಿತ)]

**ದರದಿನ** (ನಾ). ಪ್ರತಿದಿವಸ: ನಮ್ಮ ಲುಕಸಾನಿಯಾಗುವದು ಮುಂತಾದ ಪ್ರಕಾರದ ಟಪಕೆಗಳು ದರದಿನ ಪತ್ರದಲ್ಲಿ ಬರಿಯುತ್ತಾರೆ(ಮುಂಬವ್ಯಾ. ೨೨೦). [ದರ$_4$ + ದಿನ]

**ದರದು**, ದರಜು, ದರ್ದು$_2$ (ನಾ). ೧. ಅವಸರ; ಗರಜು; ಅಗತ್ಯ; ಅವಶ್ಯಕತೆ: ಏನ ಮಾಡತೀರಿ ತೂಗೊಂಡು ಮಾಡಿಕೊಂಡ ಗಂಡಗ ಸಿಕ್ಕಂಗ ಅನ್ನವರಿಗೆ ನಮ್ಮಂಥವರ ದರದ ಎಲ್ಲಿದ, ಅನ್ನಬೇಕ? (ಕಾಗೆಕ. ೧೧೭); ಪಂಚಭೂತಗಳು ವರದರಾಗಿರಬಹುದು. ಆದರೆ ನಮಗೆ ವರವನ್ನು ಕೇಳುವ ದರದು ಬೇಕಲ್ಲ (ಶಿಲ್ಪಿನಾ. ೪); ದೇವರಾಣೆಗೂ ನಿಮ್ಮ ಚಂಡಾಲಮಿತ್ರನೇ ಅಲ್ಲವೇ ಈ ಕೆಲಸ ಮಾಡಿರೋನು? ಇನ್ನು ಯಾಗೆ ಹೀಗೆ ಮಾಡಬೇಕೂಂತ ದರದು? (ಉಮಾಶಿ. ೧೨೭); ನನಗೇನು ಅಂಥ ದರದು (ಚಂರಕೋ. ೧೯೩). ೨. ಗಮನ; ಎಚ್ಚರಿಕೆ; ಯೋಚನೆ: "ದರದು – ಕಾಳಜಿ" (ಜಾನಕೋ. ೪). ದರಜು: ೨. ಅಪನವರ ಮಾತೆಂದರೆ, ಕಾಕಾಅವರಿಗೆ ಬ್ರಹ್ಮವಾಕ್ಯ. ಆದರೆ ಶ್ಯಾಮರಾಯನಿಗೆ ಅದರ ದರಜಿರಲಿಲ್ಲ(ದೀಪಹ. II, ೧೧೦). ದರ್ದು$_2$: ೧. ನಂಗೇನು ಗೊತ್ತು ಅದರ ದರ್ದ? (ಮಲೆಮ. ೩೦೩). [←ಪಾರ. ಹಿಂ. ದರ್ದ್; ಮರಾ. ದರದ್, ದರ್ದ್]

**ದರದುರ** 'ಧರಧುರ' ನೋ.

**ದರದುಹುಂಡಿ** (ನಾ). ಅಗತ್ಯವನ್ನು ಪೂರೈಸಲು ಕೊಟ್ಟ ಹುಂಡಿ: ಒಬ್ಬನ ದರದು ನಿಮಿತ್ತವಾಗಿ ಅವನಿಗೆ ಹಣ ದೊರಕಿಸಲು ಕೊಟ್ಟ ಹುಂಡಿ; ದರದುಹುಂಡಿ (Accommodation Bill. ಇಂಕಪ). [ದರದು + ಹುಂಡಿ]

**ದರನಿಮೀಲಿತ** (ಗು). ನಸುಮುಗಿದ; ಸ್ವಲ್ಪಮುಚ್ಚಿದ: ಸಮರತಸೌಖ್ಯದೊಳ್ ಸತಿ ದಿಗಂಬರವೇಷಮನಾಂತು ಮುಕ್ತಕೇಶಮದೆಸೆಯಲ್ಕೆ ಕಣ್ ದರನಿಮಾಲಿತಮಾಗೆ . . . ಯೋಗಿನಿಯಂತಿರೂಪ್ಪಿದಳ್ (ಕಾವ್ಯಸಾ. ೬೬೩). [ದರ$_2$ + ನಿಮೀಲಿತ]

**ದರನಿಮೀಲಿತಲೋಚನ** (ನಾ). ಸ್ವಲ್ಪ ಮುಚ್ಚಿದ ಕಣ್ಣು; ನಸು ಮುಗಿದ ಕಣ್ಣು: ತನ್ನ ಕಣ್ಣಸರದೆಱಿದು ದರನಿಮೀಲಿತಲೋಚನ ಕಮಲಾ ಕರಮಿರ್ಪಂತೆಯಿರ್ದ ಶಂತನುತನೂಜನ ಕರ್ಣಾಭ್ಯರ್ಣಮಂ ಪೊರ್ದಿ (ಗದಾಯು. ೫-೪೦ ವ). [ದರನಿಮೀಲಿತ + ಲೋಚನ]

**ದರನಿಮೀಲಿತಾಂಬಕ** (ನಾ). ನಸು ಮುಚ್ಚಿದ ಕಣ್ಣುಗಳುಳ್ಳುದು: ಪರಮಯೋಗಿಯಿರ್ಪಂದದಿಂದಕಂಪಿತಶರೀರನಿರ್ದುದು ಜಲಾಶಯೋಪಾಂತದೊಳ್ ಬಕಂ ದರನಿಮೀಲಿತಾಂಬಕನಶೇಷ ದೋಷಾಶಯಂ (ಶಂರಾಮಾ. ೭-೯೦). [ಸಂ. (ದರನಿಮೀಲಿತ + ಅಂಬಕ + –)]

**ದರಪಣ** (ನಾ). ಕನ್ನಡಿ; ಮುಕುರ: ಕರದ ಕಂಕಣಕೊಡ್ಡಲೇಕೆ ದರಪಣವ (ಕೃಷ್ಣಾಕ. ೧೧-೦೨). [<ಸಂ. ದರ್ಪಣ]

**ದರಬಾರ** 'ದರ್ಬಾರು' ನೋ.

**ದರಬಾರಿ** 'ದರ್ಬಾರಿ' ನೋ.

**ದರಬಾರು** 'ದರ್ಬಾರು' ನೋ.

**ದರಬಾರುಖರ್ಚು** (ನಾ). ಸಾರ್ವಜನಿಕ ಕಾರ್ಯಕರ್ತರಿಗೆ ಲಂಚವಾಗಿ ಕೊಟ್ಟ ಹಣ: (*). [ದರಬಾರು (<ದರ್ಬಾರು) + ಖರ್ಚು (<ಕರ್ಚು$_4$)]

**ದರಬೇಸಿ** 'ದರವೇಶಿ' ನೋ.

**ದರಮಹಾ** 'ದರಮಾಹೆ' ನೋ.

**ದರಮಾಹೆ**, ದರಮಹಾ (ನಾ). ೧. ಮಾಸಿಕ ವೇತನ; ತಿಂಗಳ ಸಂಬಳ: ನಮ್ಮ ಭಾಷೆಯಲ್ಲಿ ತೀರ ಹೊಂದಿಕೊಂಡು ಹೋದ . . . ಶಬ್ದಗಳೆಂದರೆ– ಕಚೇರಿ (ಕಚ್ಚರಿ)...ದರಮಾಹೆ; ಬೇರೀಜ್ . . . ಶಿಕ್ಕಾ ಇತ್ಯಾದಿ (ಭಾಷಾಶಾ. ೧೬೭). ದರಮಹಾ: ೨. ಪ್ರತಿತಿಂಗಳಿನದಂ; ಪ್ರತಿ ಮಾಸಿಕದ್ದು: (*). [←ಪಾರ. ದರಮಾಹ್; ಹಿಂ. ದರಮಾಹಾ]

**ದರಲೆ**, ದರಳೆ (ನಾ). (ಕರಾ) ತರಗೆಲೆ: ಮರದ ಹಸಿ ಅಡರುಗಳಿಂದ ಒಂದು ಗುಡಿಸುವ ಹಿಡಿ ಮಾಡಿ, ತರಗೆಲೆ ಗುಡಿಸಿದಳು. 'ಕೂತಲ್ಲೇ ಮೂರು ಬೀಳು ಹಡಗೆದರಲೆಯಾಯಿತು'ಎಂದು ಹಿಗ್ಗಿದಳು(ಮರಮ. ೨೭). ದರಳೆ: ಸರಸರ ಎಂದು ಸದ್ದು ಹುಟ್ಟಿಸುವ ದರಳೆಯ ಮೇಲೆ ಮೆಲ್ಲನೆ ಹೆಜ್ಜೆ ಯಿಡುತ್ತಾ . . . ಮನೆಗೆ ಹೋದ (ದೇವಹಂ. ೧೧). 'ತರಗೆಲೆ' ಪರಾ. [<ತಱಗೆಲೆ]

**ದರಲೆಹಕ್ಕಿ** (ನಾ). ಒಂದು ಬಗೆಯ ಪಕ್ಷಿ : ದರಲೆಹಕ್ಕಿ, ಗಿಳಿ, ಕೋಗಿಲೆ, ಡೇಗೆ, ಮತ್ತೊಂದು ಎಂದು ಸಾವಿರ ಜಾತಿಗಳಿವೆ (ಸ್ವಪ್ನಹೊ. ೧೨).
[ ದರಲೆ ? + ಹಕ್ಕಿ₁ (<ಪಕ್ಕಿ₁) ]

**ದರವಂದ** 'ದಾರವಂದ' ನೋ.

**ದರವಡೆ** 'ದರೋಡೆ' ನೋ.

**ದರವಡೆಖೋರ** 'ದರೋಡೆಖೋರ' ನೋ.

**ದರವಡೆಗಾರ** 'ದರೋಡೆಕಾರ' ನೋ.

**ದರವಾನ**, ದರ್ವಾನ (ನಾ). ಬಾಗಿಲನ್ನು ಕಾಯುವ ಆಳು; ದ್ವಾರಪಾಲಕ : ಪಕ್ಕದಲ್ಲಿ ಹಿತ್ತಾಳೆಕಟ್ಟಿನ ಲಾಠಿಯನ್ನು ಹಿಡಿದು ದರವಾನನು ಹೋಗುತ್ತಿದ್ದನು (ನಿಬಂಧ. II, ೩೨) ; ಹೆಬ್ಬಾಗಿಲಿನ ಸಮೀಪದಲ್ಲಿ ಬೆಳ್ಳಿಯ ಬಿಲ್ಲೆ ಸೊಂಟಕ್ಕೆ ಸುತ್ತಿಕೊಂಡು ಒಬ್ಬ (ಸಿಪಾಯಿ) ದರವಾನನು ನಿಂತಿದ್ದನು (ವಿಧಿಪ್ರ. ೩೪) ; ದರವಾನನೊಬ್ಬ – ನಮ್ಮ ಹಿಂದಕ್ಕೆ ಬಂದ (ಅಬೂಬ. ೯). **ದರ್ವಾನ** : ಥಿಯೇಟರಿನ ದರ್ವಾನನಿಗೂ ಸಮವಸ್ತ್ರ (ರೂಢಿ).
[ ←ಪಾರ. ಹಿಂ. ದರ್ಬಾನ್, ದರಬಾನ್ ]

**ದರವಾರು** (ನಾ). ಪೇಟೆಯ ಧಾರಣೆಯ ವಿವರಣೆ: (ಸ್ಯಾಂಡರ್).
[ ದರ₃ + ವಾರು₃ (<ವಾರಿ₃) ]

**ದರವಿಕಸಿತ** (ಗು).=ದರದಳಿತ: ದರವಿಕಸಿತಮುಂ ರಜದೊಳ್ ಪೊರೆದಾತ್ಮಜಮುಖಸರೋಜಮಂ ಮೋಹರಸಂ ತೆರೆಮಸಗೆ ನೋಟ್ಪ ಜನನಿಯ ಕರಿಯಾಲಿಗಳೆಂಬ ತುಂಬಿಗಳ್ ಧನ್ಯಂಗಳ್ (ಮಲ್ಲಿಪು. ೩-೧೨೦).
[ ದರ₂ + ವಿಕಸಿತ ]

**ದರವಿಚಳದಪಾಂಗ** (ನಾ). ತುಸು ಚಂಚಲವಾಗುವ ಕಡೆಗಣ್ಣು: ಸ್ಮರವಿಶಿಖನಿಷಂಗಂ ಸಾಶ್ರುಪಾತಾಂತರಂಗಂ ದರವಿಚಳದಪಾಂಗಂ ವ್ಲಾನಮಾಯ್ತಾ ರಥಾಂಗಂ (ಚಂದ್ರಪು. ೮-೫).
[ ಸಂ. (ದರ + ವಿಚಳತ್ + ಅಪಾಂಗ) ]

**ದರವೀಸ** (ನಾ). ಸ್ವಲ್ಪವಾದುದು; ಅತಿಕಡಿಮೆ; ಕಿಂಚಿತ್ತು (?) : ಕಿಟುಸುಂಕಗರಡಮಂ ಬಣ್ಣಿಗೆಯಂ ದರವೀಸಮನಳಿಪಿಕೊಣ್ಡವ (ಬಿ.೦ಳಿಶಾ. ೧೯೩೪, ಇಂಡಿ. ೩೫-೫೬ ; ?). 'ತರವೀಸ' ಪರಾ. [ ? ]

**ದರವುರ** (ನಾ). ಸಾಮಾನ್ಯವಾದುದು; ತುಚ್ಛವಾದುದು; ಕ್ಷುಲ್ಲಕವಾದುದು : ದರವುರಮುಮಂಟಸುಂಟಿಯುಮುಮರೆಪೊರಕನಾಮುನಿಸಿತಚಿತಚಿಂ ನುಡಿದು ಸಭಾಂತರದೊಳ್ ರಂಜಿಪುದೆ ರಸಾಂತರಂಗಳಂ ಮುಟ್ಟೆ ನುಡಿದು ರಂಜಿಸವೇಡಾ (ಅಜಿಪು .೧-೫೪) ; ದರವುರಮಲ್ಲದೆ ರುಜೆ ತುಚ್ಛವೈದ್ಯರಿಂ ತೀರ್ದಪುದೆ (ವರ್ಧಪು. ೧೨-೧೧) ; ಹರನೊಳ್ ತವನಿಧಿಯಂ ತಾಂ ದರವುರವಿಲ್ಲನಿಸಿ ಪಡೆದು ದೇಗುಲವಂ ಪುರಹರನ ಕೈಲಾಸದಂತಿರೆ ವಿರಚಿಸಿದ ಶಂಭುಭಕ್ತಿಧಾಮಂ ರಾಮಂ (ಎಷಿ. V, ೨೫೨-೯೯; ಸು. 1200). **ದರವುರಮಾಗು** = ಕ್ಷೀಣವಾಗು; ಕಡಿಮೆಯಾಗು: ದರವುರ [ ಪಾಠಾಂ. ದುರದರ ]ಮಾಗಿ ಪೋಕು ಮಟೆ ಪರ್ವೆಳಸಲ್ಲಿಯುಮಾಗದು ... ಸಲೆ ದುಷ್ಷಮಕಾಲದೇಟ್ಗಿಯೊಳ್ (ಧರ್ಮಾಮೃ. ೧೪-೧೫೬). [ ? ]

**ದರವುರಂಗಾಣ್** (ಕ್ರಿ). ಸ್ವಲ್ಪವಾದರೂ ನೋಡು; ಕಿಂಚಿತ್ತಾದರೂ ಕಾಣು: ಮನಮೊಲ್ದಾತನ ಗಾಡಿಯಂ ದರವುರಂಗಂಡಾಕೆಗಳ್ ಪೂವಿನಂಬಿನ ಕೋಳ್ಗಂ . . . ತಣ್ಪನಿಯೊಳ್ಮೋಡಿಸುತಿರ್ಪ ಬಿಜ್ಜಣಿಗೆಗಂ ಪಕ್ಕಾಗದೇಂ ಪೋಪರೇ (ಆದಿಪು. ೧-೭೫). [ ದರವುರ + ಕಾಣ್ ]

**ದರವುರಗಲಿ** (ನಾ). ಸಾಮಾನ್ಯ ಶೂರ (?): ಆಗಳಾ ಕಳಕಳಕ್ಕಾ ಪೊಟಲ ನೆರೆದ ದರವುರಗಲಿಗಳುಂ ಮೆಯ್ಗಲಿಗಳುಂ ಭೀಮಸೇನನ ಭೀಮಾಕಾರಮುಮಂ ಉಲ್ಬಣಮಾಗೆ ಮುಳಿದು ತಾಟಿಯೆ ಸತ್ತ ಪೆಣಂಗಳುಮಂ ಕಂಡು ಭಯಂಗೊಂಡು ತಮ್ಮೊಳಿಂತೆಂದರ್ (ನೇಮಿಪು. ೧೦-೧೦೦ ವ).
[ ದರವುರ + ಕಲಿ₂ ]

**ದರವುರವಿದ್ದೆ** (ನಾ). ಕ್ಷುಲ್ಲಕ ವಿದ್ಯೆ; ಅಗ್ಗದ ಜ್ಞಾನ :ಪರಮಜಿನೋದಿತಮಲ್ಲದ ದರವುರವಿದ್ದೆಗಳನಱಿವವಂ ತೋಱಿದೊಡಚ್ಚರಿಯೆನ್ನನಿವಲ್ಲಂ ಡೊಂಬರ ವಿದ್ದೆಗಳಿಂದೆ ಬಗೆವನುತ್ತಮಜ್ಯನಂ (ಸಮಪ. ೧೨-೯೧).
[ ದರವುರ + ವಿದ್ದೆ (<ಬಿಜ್ಜೆ₂) ]

**ದರವುರಿಗ** (ನಾ). ಅಲ್ಪನಾದವನು; ನಾಡಾಡಿ (?) : ಅಂತು ಮಟೆ ಗಾಲದ ನಾಲ್ಕು ತಿಂಗಳುಂ ದರವುರಿಗರಂತರವರಿಸದೆ ಮರವೊದಲೋಳಿರ್ದು (ಧರ್ಮಾಮೃ. ೧೧-೨೦೪). [ ದರವುರ + –ಇಗ ]

**ದರವೇಶಿ**, ದರಬೇಸಿ, ದರವೇಸಿ, ದರ್ವೇಸಿ (ನಾ). ೧. ಮುಸಲ್ಮಾನ ಸಾಧು; ಫಕೀರ: ಇಂತು ಜಸವಡೆದಿರಲ್ಕೊರ್ವ ದರವೇಶಿ ವಿಮಾನಂ ತಂದು (ಗುರುಚಾ. ೧೧-೧೨) ; ಇಲ್ಲಿ ಇಂಡಿಯಾದೇಶದ ದರವೇಶಿಗಳು . . . ನೆಲಸಿದ್ದಾರೆ (ಪ್ರವಾಸ. II, ೧೮೩). ೨. ದರಿದ್ರನಾದವನು; ಬಡವ : ಇವನಾರೊ ಸಂನ್ಯಾಸಿ, ಅತ್ತೊಬ್ಬ ಬಿಕನಾಸಿ ಇಲ್ಲೊಬ್ಬ ದರವೇಶಿ ನರಳುತಿಹನು (ಗಂಗಾತ. ೬೧-೨). **ದರಬೇಸಿ** : ೧. ನೀವು ದರಬೇಸಿಗಳಂತೆ ಸಮಾಜದಿಂದ ದೂರವಾಗಿರಬಾರದು (ಅಕ್ಕರ. ೧೩೧). **ದರವೇಸಿ** : ೧. ಜೋಗಿ ಜಂಗಮ ದರವೇಸಿಗಳಿಗೆ . . . ಹೆಡಗೆ ಹೆಡಗೆಯೊಳನ್ನವ ನೀವ ರಾಗದ ಭವನವೊಪ್ಪಿದುವು (ಕಂನವಿ. ೨೦-೪೭). ೨. ಕೆಡ್ಡಾ ಶಾಮ್ಯೆಂಗಾರ್ಯರ ಕಾಲವನ್ನು ಮನಸ್ಸಿನಲ್ಲಿಯೇ ಮೆಚ್ಚುತ್ತಿದ್ದ ನಾನು ಈ ದರವೇಸಿಯು ಹೊಗಳಿದರೆ ಅದಕ್ಕೆ ಸಮ್ಮತಿಯ ರುಜು ಹಾಕಿಬಿಡುವಂತಿರಲಿಲ್ಲ (ಶ್ರೀಕಥ. ೬೯) ; ಒಳ್ಳೆಯ ಅಡಕೆಗೆ ಎಲ್ಲಿತ್ತು ತರಗೆಲೆ; ನೆಲ್ಲಿಕಾಯಂತ ಬಟವಾನ – ಹುಡುಗಿಗೆ ಎಲ್ಲಿದ್ಯೋ ಜೋಗಿ ದರವೇಸಿ (ಹಳ್ಳಿಹಾ. ೬೧). **ದರ್ವೇಸಿ** : ೧. ಈ ಕನಸಿನಲ್ಲಿ ಅಬ್ದುಲಾಯೆಂಬ ಹೆಸರಾದ ದರ್ವೇಸಿಯು ಬರಲು, ಬಾಬರನು ಅವನಿಗೆ ಆತಿಥ್ಯ ಮಾಡಿ ಅವನನ್ನು ಕುಳ್ಳಿರಿಸಿಕೊಂಡನು (ಮೊಘಾರ. ೬). (ಗು). ೩. ದರಿದ್ರ; ಕ್ಷುಲ್ಲಕ : ಈಗ ಅಲ್ಲಿ ಚರ್ಮ ಮಾರುತ್ತಾಳಂತೆ. ದರ್ವೇಸಿ ಹೆಂಗ್ಸು (ಹೊಸಕ್ಕ. ೫೯); "ಇಂಥಾ ದರ್ವೇಸಿ ಮನುಷ್ಯನನ್ನು ನಾ ಜನ್ಮದಲ್ಲಿ ನೋಡಲಿಲ್ಲ" ಎಂದರು (ಮೂರುದಾ. ೬೪).
[ ←ಪಾರ. ದರವೇಶ್, ದರ್ವೇಶ್; ಹಿಂ. ದರವೇಶ್, ದರ್ವೇಸ್; ಮರಾ. ದರವೇಶ್. ದರವೇಶೀ ]

**ದರವೇಸಿ** 'ದರವೇಶಿ' ನೋ.

**ದರಶನ**, ದರಿಶನ (ನಾ). ಹವಳದ ಮಣಿ, ಬಿಳೀಮಣಿ ಮುಂತಾದ ಮಣಿಗಳ ಸರ : ದರಶನಕಟ್ಟುವುದು – ಜೋಗಿಸ್ತ್ರೀರ ಹಾಗೆ ಬಿಳೀಮಣಿ, ಹವಳದ ಮಣಿಸರ ಹಾಕಿಕೊಳ್ಳುವುದು (ಚಿತ್ರಪಾ. ೨ ಅನುಬಂಧ). **ದರಿಶನ** : ದರಿಶನ–ಚಿಪ್ಪುಗಳಿಂದ ಕೂಡಿದ ಕೊರಳಿನ ಸರ (ಸ್ಯಾಂಡರ್). [ ? ]

**ದರಸಾರೆ** (ನಾ). ಪ್ರತಿಸಲ; ಪ್ರತಿಯೊಂದು ಬಾರಿ: ಹೋಗು ಮುಂದೆ ದರಸಾರೆ ನನಗ ಹೇಳಿ ಹೋಗುತ್ತಿದ್ದ (ಮುಗಿಮ. ೧೩೯).
[ ದರ₄ + ಸಾರೆ₂ (<ಸಾರಿ₁) ]

**ದರಸಿ** (ನಾ). ಔಷಧಿಗಾಗಿ ಬಳಸುವ ಗಿಡಮೂಲಿಕೆಗಳಲ್ಲಿ ಒಂದು; ಒಂದು ಬಗೆಯ ಕಹಿಯಾದ ಮೂಲಿಕೆ : "ಯವತಿಕ್ತಾ – ದರಸಿ, ಕಾಡುವಿಟ್ಟ" (ಔಷಧಿ. ೧೩೦) ; ದರಸಿಗೆ ಸೆಳ್ಳನಾರಮರ್ದುವಳ್ಳಿಗೆ ಬಾಟೆ(ಗೆ)ಯ ಸೊಪ್ಪು ಕಳ್ಳಿಗಾವರೆ ಲಶು ನದ್ದಯುಕ್ಕವರೆ . . . ಪಥ್ಯ ಲವಣಕ್ಕೆ ತೊಳಂಚಿ ವಿಷಾಪಹಾರಕಂ (ಲೋಕೋಪ. ೮-೨೭); ನೀಂ ಬೇಮಾಡೊಡೆ ನಿನ್ನ ಕುಟುಂಬನಿಯುಂ ಕಯ್ಯೆಸೂರೆಯು ಕುಡಿಯೇಂ ಮಿಡಿಯೇನೆಂಬಂತೆ ದರಸಿಯಾದಳಿದೇಂ ಬಳ್ಳಬಳಿದ ಬಂಧುತನಮಿನಿ ದಾಯ್ತೋ (ಸುಕುಮಾ ೪-೨೮) ; ಕಾರುಂಪತಿ ನಿಮ್ಮಜ್ಜರ ನುಡಿ ದರಸಿಯ ಕಯ್ಪಿಯ ಪೊಲಕ್ಕೆ ಹಿತಕರಂ (ನೇಮಿಪು. ೧೦-೧೧). [ ದೇ.? ತುಳು. ದರಸಿಗೆ ]

**ದರಸ್ಮಿತ** (ನಾ). ನಸುನಗೆ; ಕಿರುನಗೆ; ಮುಗುಳುನಗೆ; ಮಂದಹಾಸ : ಅನಿಮಿತ್ತದರಸ್ಮಿತದಿಂದನಕ್ಷರಾಳಾಪದಿಂದಸಂಕೇತವಿಳೋಕನದಿಂದ ಕಾರಣಾ

ನಂದನದಿಂದುತ್ಪ್ರಾನಶಯನದಿಂ ಹರಿಯಿಸೆದಂ (ಜಗವಿ. ೩-೩೯) ; ಬರುತಿರೆ ಮುಂದೆ ಪಟ್ಟಣದೆರಳ್ದೆಸೆಯೊಪ್ಪುವ ರಾಜವೀಧಿಯೊಳ್ ನೆರೆದ ಶಶಾಂಕ ವಕ್ತ್ರೆಯರ ಕಣ್ಗಳ ಕಾಂತಿ . . . ದರಸ್ಮಿತಕಾಂತಿಯೆಂಬ ವಿಸ್ತರಿತ ಸುಖಾಬ್ಧಿಯಂ ಸುಖದೊಳೀಸುತೆ ಬಂದನಗೇಂದ್ರವಲ್ಲಭಂ (ಗಿರಿಕ. ೩-೧೧೪). ೨. ನಸುನಗೆಯಿಂದ ಕೂಡಿದವನು ; ಮಂದಹಾಸದಿಂದ ಕೂಡಿದವನು : ದೇಶಾಧೀಶ ತನೂಭವರ್ ಸಿಡಿವುದಂ ಸಾಕೇತಸಿಂಹಾಸನಾಧೀಶಂ ಕಂಡು ದರಸ್ಮಿತಂ ದಶರಥಂ ಭ್ರೂವಲ್ಲರೀಪಲ್ಲವಾದೇಶಂ ನೋಡೆ (ಪುರಾಮಾ. ೩-೮೩). [ ದರ್$_2$ + ಸ್ಮಿತ ]

**ದರಸ್ಮೇರ** (ನಾ). = ದರಸ್ಮಿತ ೧ : ವದನೇಂದುದ್ಯುತಿ ಪೂರ್ಣ್ಯೆ . . . ಸಾರ್ತಂದಳಿಂದೀವರಾಕ್ಷಿ ದರಸ್ಮೇರಮರೀಚಿ ಸೂಸೆ ಸುಧೆಯಂ ತನ್ಮಂದಿರ ಪ್ರಾಂತಮಂ (ರಾಜಶೇ. ೮-೮೩). [ ದರ್$_2$ + ಸ್ಮೇರ ]

**ದರಹಮೇಷ** (ಅ). ಯಾವಾಗಲೂ ; ಎಲ್ಲಾ ಕಾಲದಲ್ಲಿಯೂ : ಹಿಂದೂಸ್ಥಾನದಲ್ಲಿಂದ ಸಾವಿರಾರು ತಿಕಾಣದಿಂದ ದರಹಮೇಷ ಈ ಮಾಲವು ಬರುತ್ತದೆ (ಮುಂಬಪ್ರಾ. ೩೩). [ ದರ್$_4$ + ಹಮೇಷ ]

**ದರಹಸ** (ನಾ). = ದರಸ್ಮಿತ ೧ : ಕರುಣಾಮೃತರಸದೋಕುಳಿಯಿಂದೆ ಮೆರೆಯೆ ದರಹಸವುಭೆ ಪದೆಪಿಂ ಪಿರಿದೊಲ್ದು ನಿಂದು ಮುಂಗಡೆ ಸಿರಿಸತಿ ನಿನ್ನಿಷ್ಟಮಾವುದದನೊರೆಯೆಂದಳ್ (ಚಂದ್ರಪ್ರಭ. ೧೬-೧೭೭). [ ದರ್$_2$ + ಹಸ$_4$ ]

**ದರಹಸನ** (ನಾ). = ದರಸ್ಮಿತ ೧ : ಅಲಿಕಾಭಿಲಾಷಿತ್ವಾತಿಸಂಧಾನಪರತ್ವ ಪ್ರವೃದ್ಧರಾಗ ಪರಾಂಗನಾ ದರಹಸನಾದಿಗಳ್ ಸ್ತ್ರೀವೇದನೀಯದ ಆಸ್ರವಂಗಳ್ (ತತ್ತ್ವಪ್ರ. ೨೬೩). [ ದರ್$_2$ + ಹಸನ$_2$ ]

**ದರಹಸಿತ** (ಗು). ೧. ನಸು ನಗೆಯ ; ಕಿರುನಗೆಯ ; ಮಂದಹಾಸದ : ಅಂಬಿಕೆಯ ಸೊಬಗಾಯ್ತೆಯಪ್ಪಾಕೆ ದರಹಸಿತವದನಾರವಿಂದೆಯಾಗಿ ಬರವಂ ಕೈಕೊಂಡಳ್ (ಪಂಪಭಾ. ೦-೮೫ ವ) ; ಮರುನ್ನಂದನಂ ದರಹಸಿತವದನಾರವಿಂದನಾಗಿ (ಗದಾಯು. ೦-೫೮ ವ) ; ನಸು ಬಿರಿದ ಪರಿಪಕ್ವದಾಡಿಮವಸರದೊಳಗರವಟ್ಟಗೆಯ ದರಹಸಿತ ಪಂಕಜಗಳಿತ ಮಕರಂದದ ತಟಾಕದಲ್ಲಿ . . . ಛತ್ರವನೆಸಗಿಯುವವನವೆಸೆದುದ್ಯೆ ಧಾರ್ಮಿಕನವೊಲು (ಕುಮಾರಾ. ೬-೩೪). (ನಾ). ೨. ಮೆಲ್ನಗೆ ; ಮಂದಹಾಸ : ಪರುಷಾಲಾಪಮುಮತಿನಿಷ್ಠುರವೀಕ್ಷಣಮುಖವಿಕಾರಮುಂ ಮಱಸಿರೆಯುಂ ತರಳಾಪಾಂಗ ಮುಮಾಕೆಯ ದರಹಸಿತಮುಮಱಿಯ ಪೇಟ್ಗುದೆ(ಮೆ)ಱಕಮನೆರ್ದೆಯೊಳ್ (ಕವಿರಾ. ೩-೧೧೯) ; ಉದ್ಯತ್ಪರಿಮಳಮುಖಸರಸಿಜದೊಳ್ ದರಹಸಿತಂ ನೆಗಟ್ದಿನಂ ತೊದಳ್ನುಡಿ ನುಡಿದಂ (ಆದಿಪು. ೮-೩) ; ಶ್ರೀಮತ್ಸುಧರ್ಮ ಮುನಿಪಸ್ವಾಮಿ ... ದರಹಸಿತದಿನಂದಾ ಮುನಿಗೆಂದಂ (ಸುಕುಮಾ. ೪-೦). [ ದರ್$_2$ + ಹಸಿತ ]

**ದರಹಸಿತಮುಖ** (ನಾ). ಮುಗುಳ್ನಗೆಯಿಂದ ಕೂಡಿದ ಮುಖ ; ಹಸನ್ಮುಖ : ದರಹಸಿತಮುಖವಲರಿ ನೋಡುತ್ತಿರೆ ತದಾಸ್ಥಾನದೊಳ್ ನಲಿನಲಿದುರುತರ ಪ್ರಿಯಪರವಶದಿ ತನ್ನಂ ಮಱೆದು ಮಱೆದು (ಬಸವು. ೬-೨೬) ; ಶಿರವ ಸಿರಿಹಸ್ತದಲ್ಲಿ ಮೆಲ್ಲನೆ ಬರಸೆಳೆದು ಬಿಗಿಯಪ್ಪಿ ನುಡಿದನು ದರಹಸಿತಮುಖದಿಂದ [ಪಾಠಾಂ. ವದನದಲಿ, ಮುಖನಾಗಿ] ನಿಜಶರಣಂಗೆ ವಿನಯದಲಿ (ತೊರೆರಾ. ೬-೫೩-೧೦). [ ದರಹಸಿತ + ಮುಖ ]

**ದರಹಸಿತಮುಖಿ** (ನಾ). ಮಂದಹಾಸದ ಮುಖವುಳ್ಳವನು; ಹಸನ್ಮುಖಿ : ದಾಶರಥಿ ತಾನಿನಿತು ನಾಣಂ ತಮ್ಮನಂ ನೋಡಿ ದರಹಸಿತಮುಖಿಯಾಗಿ ಸುಯ್ದು ಧ್ಯಾನಸ್ಥನಾದಂ (ಶ್ರೀರಾಮಾ. ೨೮೭-೭೨). [ ಸಂ. ದರಹಸಿತಮುಖಿನ್ ]

**ದರಹಾಸ** (ನಾ). = ದರಹಸಿತ ೨ : ದರಹಾಸಾಮೃತವಾರಿ ಮಜ್ಜನಜಲಂ ದೇಹಪ್ರಭಾಜಾಲಮಂಬರಶೋಭಾವಹಂ (ಅಜಿಪು. ೨-೪೨) ; ಓಲಗಕ್ಕೆ ವರ್ಪಲಘುನಿತಂಬೆಯರ್ ಸುರಪುರಂಧ್ರಿಯರೆತ್ತಣನೆಂದು ನಿಟ್ಟಿಪಾಕಲತೆಯನೊಂದೆ ಕಂಡು ದಿವಿಜಂ ತಳಿವಂ ದರಹಾಸಲಕ್ಷ್ಮಿಯಂ (ಚಂದ್ರಪು. ೪-೭೪) ; ಇಚ್ಚೆ ಯಾವುದು ಬೇಡು ನೀನೆನೆ ಅಚ್ಚುಕದ ದರಹಾಸಲಕ್ಷ್ಮಿ ಮುಖಾಬ್ಜದೊಳು ಮೊಳೆಯೆ ಮೆಚ್ಚಿ ಬಿನ್ನೈಸಿದನೆವಗೆ (ಬಸಪು. ೨-೨೩). [ ದರ್$_2$ + ಹಾಸ$_2$ ]

**ದರಹುಣಿಸೆ** (ನಾ). ಒಂದು ಬಗೆಯ ಹುಣಿಸೆ (?) : ಹೊಲದ ಬರಬಿನ ಮೇಲೆ ದರಹುಣಿಸೆಯ ಸರಿತದಲು ಆ ಮರದ ಮೇಲೆ ಅದಕ್ಕೆ ಮೂಡಲು . . . ಸಲುವ ಸೀಮೆಯಷ್ಟನೂ ನೀವು ಕಟುವ ಕೆಱೆಯ ಕೆಳಯಂಕ ಸೀಮೆಯನೂ ಮಾಡಿಕೊಟು (ಎಕ. X, ಮುಳಬಾ. ೭-೭ ; 1416). [ ದರ್$_6$ + ಹುಣಿಸೆ (<ಪುಳಿಸೆ) ]

**ದರಳೆ** ' ರಲೆ' ನೋ.

**ದರಾಂಬ** (ನಾ). ಒಂದು ಬಗೆಯ ಮರ : ಅರಸಿನಗುರ್ಜ (ದರಾಂಬ). - ಮಧ್ಯಮ ಆಕಾರದ್ದು . . . ಇದರ ಅಂಟನಿಂದ ಹುಟ್ಟುವ ರೇವಾಚಿನ್ನಿಯೆಂಬ ಹಳದೀ ಬಣ್ಣದ ವ್ಯಾಪಾರವು ಬಹಳ ನಡಿಯುತ್ತದೆ (ಕಭಾಗ. ೬೫). [ ? ]

**ದರಿ** (ನಾ). ೧. ಆಳವಾದ ಕಮ್ಮರಿ; ಕಂದರ; ಕೊಳ್ಳ: "ದರೀ, ಕಂದರಃ-ಈ ೨ ದರಿಯ ಪೆಸರು" (ನಾಚಿರಾ. ೧೧೪); "ಕಂದರಮೆನಲು ದರಿಯಕ್ಕು" (ಮಂಗರಾ. ೩೦-೨); ಕುಮಾರನಿಂದಾರೂಢಮಪ್ಪ ದುಷ್ಟಾಶ್ವಂ ಕುಮಾರನಂ ಕೊಂಡು ಮನೋವೇಗದಿಂ ಗಿರಿವನದರಿನದೀಪ್ರದೇಶಂಗಳೊಳ್ . . . ಪರಿಯುತ್ತಿರ್ದುದು (ವಡ್ಡಾರಾ. ೫೭-೭) ; ಅತ್ತ ಪುಲಿಯಿತ್ತ ದರಿಯೆಂದತ್ತಿತ್ತಡಿಯಿಡದೆ ಲಕ್ಷ್ಮಿ ತಳವೆಳಗಾದಳ್ (ಗದಾಯು. ೯-೧೭) ; ಗಿರಿದರಿಗಳ ವನದೊಳ್ ಬೇಡರ ಬಸಿಱೊಳ್ ಬಂದು ಪಾಪಮಂ ಸಾಲ್ವನಿತಂ ನೆರಪಿ ಕಡೆಗಾಲದೊಳ್ ವನಚರರ್ಕಳಂದೊಡನೆ ಸತ್ತು ಪುಲ್ಲೆಗಳಾದರ್ (ಪಂಪರಾಮಾ. ೦೫-೪೦) ; ದರಿಗಳೊಳು ದರ್ವೀಕರಾವಳಿಯಾರವಣಿಸಿದರೆ ಬಲ್ಲುದೇ ಕುಲಗಿರಿ (ಕುಮಾರವ್ಯಾ. ೦೭-೪೦) ; ಸರುಗಳಿಂ ದರಿಗಳಿಂ ಹಳ್ಳದಿಂ ಕೊಳ್ಳದಿಂ . . . ಗಜರ್ವ ಮರುಳ್ಗಳಿಂ ಶಾಕಿನಿಯರಿಂ ಡಾಕಿನಿಯರಿಂದಮಾ ಪಥ ಬೆದಱಿಸುವುದು (ಚಬಪು. ೫೬-೨೩) ; ದರಿಯಿರದೆ ಗಿರಿಯಿಲ್ಲ, ನೆರಳಿರದ ಬೆಳಕಿಲ್ಲ ಮರಣವಿಲ್ಲದೆ ಜನನಜೀವನಗಳಿಲ್ಲ (ಮಂಕುತ. ೨೯೩); ಇಂದ್ರಧನು ತಾ ಕುಸುಮಿಸಿದವೊಲು ರಂಗುಗೊಳುತಿವೆ ದರಿಗಳು (ಚಿಂತನ. ೪೮-೮). ೨. ಡೊಗರು ; ಬಿರುಕು ; ಕುಳಿ. 'ದರಿಗೆಡಹು' ಪರಾ. ೩. ಗವಿ ; ಗಂಹೆ : "ಕಂದರಂ, ಕಂದರಾ, ದರೀ-ಈ ೩ ದರಿ" (ಹಲಾಯು. ೨೮-೧೩) ; ವಿದಳಿತಮೃಂದಶಶಾಂಕಕಂಬುಧವಳಂ ಗಂಧೇಭದಾನಾಂಬು ಪೂರ್ಣದರೀಸುಂದರ ಕಂದರಂ (ಪಂಪಭಾ. ೭-೭೨) ; ಮೇದಿನಿಯನೆತ್ತಿದಾದಿವರಾಹನಂತೆ ದರಿಗಳಂ ಕೋಡೊಳ್ ಕುತ್ತಿಯೆತ್ತಿ ಬಿದಿರ್ದೀಡಾಡುತ್ತಿರ್ದು (ಪಂಚತಂ. ೪೭-೧) ; ಶೂಕರಾದ್ರಿಯ ನಿಖರದಲ್ಲಿ ದರಿಯ ಬಾಗಿಲ ಮುಂದೆ ತಪವಂ ಧರಿಸಿ ಮಂತ್ರದ ಜಪವ ಮಾಡುವ ವರಮತರುಣಿಯ . . . ಕಂಡು ಬೆಱಗಾಗಿ (ಜ್ಞಾನಸಿಂ. ೨-೨). [ ಸಂ. ]

**ದರಿಕಂದ** (ನಾ). ಔಷಧಿಗಾಗಿ ಬಳಸುವ ಒಂದು ವಿಧವಾದ ಸಸ್ಯ : "ಕಂದಾರಃ - ಮಲೆಸೌತೆ, ದರಿಕಂದ, ರಕ್ತಪಿಂಡಾಲು" (ಓಷಧಿ. ೨೦). [ ? ]

**ದರಿಗೆಡಹು** (ಕ್ರಿ). ೧. ಕೊಳ್ಳದಲ್ಲಿ ನೂಕು : ನರಕದಲಿ ದರಿಗೆಡಹಿ ಬಾಯೊಳಗೆಱೆವರರಗನು ಕರಗಿಯೆದೆಯನು ಕೀಹುಗಾರೊಳು ಮೆಟ್ಟಿನಿಂದು (ನಿಭಾಗ. ೩-೧೧-೬೫). ೨. ಕುಳಿಯಾಗುವಂತೆ ಮಾಡಂ ; ಗುಳಿಬೀಳಿಸು : ಮುಷ್ಟಿಯ ಕೋಲಿಂ ಭಂಗಾರಿಗಳನಿಱಿದೊಡೆಪುತ್ತುಂ ಜಗಲಿಯಂ ದರಿಗೆಡಹುತುಂ ಮಂಗಳವೆಲ್ಲವನಮಂಗಳವಂ ಮಾಡುತ್ತಿರಲ್ (ನಂಬಿರ. ೬-೬೩). [ ದರಿ + ಕೆಡಹು (<ಕೆಡಪು) ]

**ದರಿಗೊಳ್** (ಕ್ರಿ). ೧. ಬಿರುಕುಹೊಂದು ; ಕೊರಕಲು ಬೀಳು : ಪಳಿಕಿನ ಶಿಲಾಪಟ್ಟಂ ಪ್ರಸ್ಥಾನದೊಳ್ ವಿಜಯದ್ವಿಪಾವಳಿಯ ದರಿಗೊಂಡುದ್ದೇಶಂ ಚಕ್ರವರ್ತಿಯ ವಾಮದಗ್ಗಳದ ಸಿರಿಯಂ ಪೋಲ್ವನ್ನಂ ತದ್ದ್ವಿಪಾಳಿ ದಿಗಂತದೊಳ್ ತಳೆದುದು ಜಯಸ್ತಂಭಶ್ರೀಯಂ ತ್ರಿಕೂಟವಮಹೀಧರಂ (ಶಾಂತಿಪು. ೧೧-೧೧೮). ೨. (ಆಲಂ) ದಂಡೆಯನ್ನು ಅನುಸರಿಸು ; ದಡ ಸೇರು : ದರಿಗೊಂಡೀಡಿಚಿದಾಡುತುಂ ಕೊಣಕುತುಂ (ಆಗವಿ. ೪-೨೫).

[ ದರಿ + ಕೊಳ್₁ ]

**ದರಿತ** (ಗು). ೧. ಹರಿದ ; ಸೀಳಿದ ; ವಿಭಾಗವಾದ. ೨. ಭಯಗೊಂಡಿರುವ ; ಹೆದರಿರುವ. (ನಾ). ೩. ಪುಕ್ಕಲ ; ಹೇಡಿ ; ಹೆದರಿದವನು : "ದರಿತಃ, ಚಕಿತಃ, ಭೀತಃ . . . ಶಂಕಿತಃ – ಈ ೬ ಪ(ಹ)ಂದೆ" (ಹಲಾಯು. ೫೮-೧೯೯) ; "ಭೀರು ಭೀತಂ ಹಂದೆ ದರಿತನಾ ಕಾತರಂ ತ್ರಸ್ತನಾ ಚಕಿತನೆನೆ ಹೇಡಿಗಭಿಧಾನಮಕ್ಕುಂ" (ಮಂಗರಾ. ೬೯-೧೨).  [ ಸಂ. ]

**ದರಿದ್ರ** (ಗು). ೧. ಹಾಳಾದ ; ಹೀನವಾದ. 'ದರಿದ್ರಕೆಲಸ' ಪರಾ. (ನಾ). ೨. ಬಡವ; ಬಡತನದಲ್ಲಿರುವವನು; ಹಣದ ಕೊರತೆಯುಳ್ಳವನು ; ಧನಹೀನ : "ಕ್ಷುದ್ರಃ, ದರಿದ್ರಃ, ಅಕಿಂಚನಃ, ದುರ್ವಿಧಃ, ದುಸ್ಥಃ,ದುರ್ಗತಃ – ಈ ೬ ಬಡವಂ" (ಹಲಾಯು. ೫೬-೧೯೩) ; "ದುಸ್ಥರ ನಕಿಂಚನಂ ದುರ್ವಿಧಂ ದುರ್ಗತಂ ದರಿದ್ರಂ ಬಡವನೆಂದೆನಿಕ್ಕುಂ" (ಮಂಗರಾ. ೬೮-೯) ; ಅರಿ ನೀಚರ್ಕ್ಷದೊಳೊಂದು ನಿಂದೊಡೆ ದರಿದ್ರಂ (ಜಾತಕ. ೧೫-೯) ; ಇಂತಹ ಎಷ್ಟು ಜನ ಶ್ರೀಮಂತರು, ನನ್ನಂತಹ ದರಿದ್ರರ ಹೊಂಗನಸನ್ನು ಹೊಡೆದು ಪುಡಿ ಪುಡಿ ಮಾಡಿಲ್ಲ ? (ನಡಾ. II, ೪೧೭). ೩. ಬಡತನ ; ಹೀನಸ್ಥಿತಿ ; ದಾರಿದ್ರ್ಯ : ಕನಕದ ಕೊನರಂ ತಾಳಿಸಿ ತಿನೆ . . . ತನುಗೇಣಿದ ವಿಷಮವಾಗಳ್ ಕನಕದ ದೆಸೆಯಿಂ ದರಿದ್ರ ಮಟ್ಟವಂತಟ್ಟಿಗುಂ (ಚಮದ. ೧೨-೩೫) ; ದೈವದ ದಯೆ ಇದ್ದವಗೆ ದರಿದ್ರವಿಲ್ಲ (ಗಾದೆ). ೪. ಅದೃಷ್ಟಹೀನ : ತೆಗೆಯಬಹುದೆ ಕಡವರವು ದರಿದ್ರಂಗೆ (ಬಸವ. ೨೬೭). ೫. ಬರ; ಕೊರತೆ: ಅಲ್ಲೇನು ಕೆಲಸಕ್ಕೆ ದರಿದ್ರ (ಮುನಿವಾ. ೧೬೭) ; ಸಮುದ್ರದ ನಂಟು ಉಪ್ಪಿಗೆ ದರಿದ್ರ (ಗಾದೆ).

**ದರಿದ್ರ ನಾರಾಯಣ** = ದರಿದ್ರರೂಪದ ನಾರಾಯಣ ; ℙ ದರಿದ್ರ ಸೇವೆಯು ದೇವರ ಸೇವೆಯಂತೆ ಪವಿತ್ರವೆಂಬ ಭಾವನೆಯಿಂದ ಪ್ರಯೋಗವಾಗುವ ಪದ: ಬೋಲಶವಿಕರು ರಾಜ್ಯದ ಸರ್ವಾಧಿಕಾರವನ್ನು ನಿರ್ಗತಿಕಕಾರ್ಮಿಕಶ್ರೇಣಿಯವರಿಗೆ ವಿನ್ಯಾಸಲಾಗಿಡಬೇಕೆಂದು ಹೇಳುವ ಮಾತು ಭಾಗವತರ ದರಿದ್ರನಾರಾಯಣ ಸಾಯುಜ್ಯವನ್ನು ಹೋಲುತ್ತದೆ (ಭಾರದ. ೩೬೫).  [ ಸಂ. ]

**ದರಿದ್ರತನ** (ನಾ). ಬಡತನ; ದಾರಿದ್ರ್ಯ : ಎಷ್ಟು ಕೊಟ್ಟರೂ ಅವನ ದರಿದ್ರತನ ಹರಿಯಲಿಲ್ಲ (ರೂಢಿ).  [ ದರಿದ್ರ + – ತನ ]

**ದರಿದ್ರತೆ** (ನಾ). = ದರಿದ್ರತನ : ಒಂದಿದ ತಗುಳ್ದು ತಳ್ತು ಪತ್ತಿದ ರುಜೆ ಪೆರ್ಚಿರ್ದ ಸಾರ್ಚಿದ ದರಿದ್ರತೆ ಬಟ್ಟೆಯೊಳಾದ ಸೇದೆ ಪಿಂಗಿದವುದು (ಎಕ. VIII, ನಗರ. ೫೮-೬೦ ; 1062) ; ನಿಮ್ಮಾರಮುಪ್ಪ ದರಿದ್ರತೆ ಪೊರ್ದಿರೆ ಕೊಟ್ಟಂ ಸಿರಿಗಮುಂದು ತಾಂ ಗೆಂಟಾದರ್ (ಧರ್ಮಾಮೃ. ೮-೦೫೯); ಸಿರಿಗೆ ದರಿದ್ರತೆ ಬಾಳ್ಕೆಗೆ ಮರಣಂ ಜರೆ ಯೌವನಕ್ಕಮುಭಘಾತಮೆನುತ್ತಿರೆ ಕಂಡು (ಚಂದ್ರಪ್ರ. ೨-೬೭) ; ಇನಿತು ಲಿಂಗಸದರ್ಥನಾಗಿಯು ಘನ ದರಿದ್ರತೆ ಯಾದುದಯ್ಯೋ ಮನೆಯೊಳಗೆ ನೋಡಲು ತವುಡು ನೊಣವಿಂಗೆಣಗಲಿಲ್ಲ (ಬಸವು. ೨೩-೬).  [ ಸಂ. ದರಿದ್ರತಾ ]

**ದರಿದ್ರತ್ವ** (ನಾ). = ದರಿದ್ರತನ.  [ಸಂ.]

**ದರಿದ್ರಲಕ್ಷ್ಮಿ** (ನಾ). ಬಡತನಕ್ಕೆ ಅಧಿದೇವತೆಯಾದ ಲಕ್ಷ್ಮಿ : ಜ್ಯೇಷ್ಠಾದೇವಿ : "ಅಲಕ್ಷ್ಮೀಃ = ಪಾಲ್ಗಡಲ ಕಡೆತದಲ್ಲಿ ಚಂದ್ರನತ್ತಣಿಂ ಕಡೆಸಾರಿ ಹುಟ್ಟಿದ ... ಅಧರ್ಮನ ಹೆಂಡತಿಯಾದ, ಚೋಕುಮಾರನ ತಾಯಿಯಾದ, ಜೇಷ್ಠಾದೇವಿಯೆಂಬ ಹೆಸರುಳ್ಳ, ದರಿದ್ರಲಕ್ಷ್ಮಿ" (ಶಾಶಕ. ೨೭೩).

[ ದರಿದ್ರ + ಲಕ್ಷ್ಮಿ ]

**ದರಿಧೂಳ** (ನಾ). "ಗುಡ್ಡದ ಓರೆಯಲ್ಲಿರುವ ಒಂದು ದೇವತೆ" (ಗರತಿ. ಕೋಶ) : ಗುಡ್ಡ ದಾರ್ಯಾಗ ಗುಲಗಂಜಿ ಬನದಾಗ ಒಬ್ಬನ ಹ್ಯಾಂಗಿದ್ದಿ ದರಿಧೂಳಿ ನಿನ ಮುಂದ ಅಬ್ಬರಿಸಿ ಗಂಗೆ ಹರಿದಾಳ (ಗರತಿ. ೪೦).

[ ℙ ಇದು 'ಧೂಳಿವಾಕಾಳ' ಎಂಬುದರ ಸಂಕ್ಷಿಪ್ತ ರೂಪವಿರಬಹುದು ]

**ದರಿಮುಷ್ಟಿ** (ನಾ). ಒಂದು ಬಗೆಯ ಗಿಡಮೂಲಿಕೆ : "ಖಟ್ವಾಂಗೀ- ದರಿಮುಷ್ಟಿ" (ಒಷಧಿ. ೪೨).  [ ? ]

**ದರಿಯಾ** (ನಾ). ೧. ಕಡಲು ; ಸಮುದ್ರ. 'ದರಿಯಾಮಾರ್ಗ' ಪರಾ. ೨. ಹೊಳೆ ; ನದಿ.

**ದರಿಯಾ ತೆಂಗಿನಕಾಯಿ** = ಒಂದು ಬಗೆಯ ದೊಡ್ಡ ತೆಂಗಿನ ಕಾಯಿ; ℙ ಇದರ ಕರಟವನ್ನು ಸಂನ್ಯಾಸಿಗಳು ಪಾತ್ರೆಯಂತೆ ಉಪಯೋಗಿಸುತ್ತಾರೆ: ಸೂರ್ತಿಚವಾಳಾಮುಣದ ಮೇಲೆ ಕಿಮ್ಮತ್ತು ಇರ್ತಕ್ಕ ಜಿನಸುಗಳು ೧. ಅಕ್ಕಲ ಖಾರ, ಹಲಿಕ . . . ೧೧೦. ದರಿಯಾ ತೆಂಗಿನಕಾಯಿ (ಮುಂಬವ್ಯಾ. ೧೨೪). **ದರಿಯಾದೌಲತ್** = ನದಿಯ ಬಳಿಯ ಕಟ್ಟಡ ; ℙ ಶ್ರೀರಂಗಪಟ್ಟಣದಲ್ಲಿ ಕಾವೇರೀನದಿಯ ದಡದಲ್ಲಿರುವ ಟಿಪ್ಪು ಸುಲ್ತಾನನ ಅರಮನೆಯ ಹೆಸರು.

[ ←ಪಾರ. ದರಿಯಾ, ದರ್ಯಾ ; ಹಿಂ. ದರಿಯಾ ]

**ದರಿಯಾಪ್ತು** 'ದರ್ಯಾಪ್ತು' ನೋ.

**ದರಿಯಾಫ್ತು** 'ದರ್ಯಾಪ್ತು' ನೋ.

**ದರಿಯಾಮಾರ್ಗ** (ನಾ). ಕಡಲ ಮಾರ್ಗ : ಗೋವೆಯಿಂದಾ ಇಲ್ಲಿಗೆ ಬರುವ ದರಿಯಾಮಾರ್ಗದಲ್ಲಿ ಆಗಲಿ ಕೆರೆಮಾರ್ಗದಲ್ಲಿ ಆಗಲಿ (ರಾಜೇಂದ್ರ. ೧೧೭).

[ ದರಿಯಾ + ಮಾರ್ಗ ]

**ದರಿವು** 'ದರು₂' ನೋ.

**ದರಿಶನ** 'ದರಶನ' ನೋ.

**ದರಿಸನ** 'ದರುಶನ' ನೋ.

**ದರಿಸಿನ** 'ದರುಶನ' ನೋ.

**ದರಿಸು** (ಕ್ರಿ). ಕುಸಿದುಬೀಳು ; ಕೊರಕಲಾಗು : ರಘು ಜಲಕ್ರೀಡೆ ಯಾಡಿದ ಸರೋವರತಟಂ ಪರೆ ದರಿಸಿ, ಪರ್ಬಿದುದು ಸಾಂದ್ರಂ ಜಲ ಪಿಶಾಚಿ, ಪಾಚಿ (ಶ್ರೀರಾಮಾ. ೫೫೦-೬).  [ ದರಿ + – ಇಸು₁ ]

**ದರು₁** (ನಾ). ೧. [ಸಂಗೀತ] ಒಂದು ಬಗೆಯ ಹಾಡು ; ಶೃಂಗಾರರಸ ಪ್ರಧಾನವಾದ ಗೀತೆ : ದರು ಪರಿ ಏಕೃತಿ ವಿಣ್ಣಾಣವೆಂಬ ಚತುರ್ವಿಧ ದಂಡರೀತಿಯಲ್ಲಿ . . . ಪಾಡಿ ಮೋಹಿಸುವ ಗಾಯಕರಿಂ (ವಿವೇಕ. ೨೫೬); ದರು – ಸಾಹಿತ್ಯ, ಧ್ರುವ ಅಥವಾ ಪ್ರಧಾನವಾಗಿದ್ದು, ಸಂಗೀತ ಗೌಣ ವಾಗಿರುವ ಶೃಂಗಾರರಸಪ್ರಧಾನರಚನೆ (ಸಂಗೀತಂ. ೬೪). ೨. [ನಾಟ್ಯ] ಒಂದು ಬಗೆಯ ಶೃಂಗಾರ ನೃತ್ಯ : 'ದರು' ಎಂಬ ಒಂದು ನೃತ್ಯಜತಿಯನ್ನು ಮಾಡಿ ಒಂದೊಂದು ಪಾತ್ರವೂ ರಂಗಸ್ಥಳಕ್ಕೆ ಪ್ರವೇಶಿಸಬೇಕು (ಅಥಾನ್ನ. ೬೫).  [ <ಸಂ. ಧ್ರುವ ]

**ದರು₂**, ದರಿವು, ದರುವು₁ (ನಾ). ಕಂದರ ; ಕೊಳ್ಳ ; ಕಣಿವೆ: ನಡೆನಡೆದು ನಸು ಬಳಲುತ್ತಿಡಬಲನಂ ನೋಡಿ ಕೂಡೆಯಾಘ್ರಾಣಿಸುತುಂ ಗಿಡುವಿನ ಸರುವಿನ ದರು.ವಿನ[ಪಾಠಾಂ. ದಡುವಿನ, ದೆಸುವಿನ] ಮಡುವಿನ ಬಳಿಗೊಂಡು ಶುನಕನಟ್ಟಿತು ಮೊಲನಂ (ಗಿರಿಕ. ೧-೮೭); ಕರೆದು ಕರೆದಲವತ್ತು ಹಂಬಲಿಸುತ ಬೆಟ್ಟದೊಳು ಘಟ್ಟದೊಳು ಸರುವಿನೊಳು ದರು[ಪಾಠಾಂ. ಮರು]ವಿನೊಳು ಕೆಟ್ಟ ಸಂದಿಯೊಳು ಗೊಂದಿಯೊಳಡಿಸಿ ಬಳಲಿ (ಸಿದ್ಧರಾ. ೨-೫೪). **ದರಿವು**: ಶ್ವೇತಪರ್ವತದ ಪಾದತಟದ ಸರಿವು ದರಿವಿನ ಹಾಲೊಜತೆ

ಸುರಿತಪ್ಪಂತೆ ಹಾಲ ಹಳ್ಳವೋಲಗದ ನಡುವೆ ಮಡುಗಟ್ಟಿ ಪರಿದು ಪೊಜಿಸೂಸೆ (ಬಸರ. ೦೦-೭೦). **ದರುವು$_1$** : ಮಿಕ್ಕ ಸರುವಿಂಗೆ ದರುವಿಂಗೆ ಹಳ್ಳಕ್ಕೆ ಕೊಳ್ಳಕ್ಕೆ ಗಿಡುವಿಂಗೆ ಮಡುವಿಂಗೆ . . . ನಾನಾ ಧ್ವನಿಗೆ ನಾನಾ ಭಯಂಕರಕೆಕ್ಕವನೆಯಾನೆಂದು ಬೊಬ್ಬಿಟ್ಟು ಪೇಳ್ವಂತೆ ಘೀಳಿಡುತ್ತಿರ್ದುದಡವಿ (ಹಕಹಾ. ೫-೨೦) ; ಭೋರೆಂದು ದರುವಿನಲ್ಲಿ ಬೀಳುವ (ಚಿತ್ರಸ್ಕ. ೧೫ ಮುನ್ನುಡಿ). [ < ಸಂ. ದರಿ. ]

**ದರು$_3$** (ನಾ). ಕಸುವು ; ಶಕ್ತಿ ; "ತ್ರಾಣ, ಸಾಮರ್ಥ್ಯ" (ಜಾನಕೋ. ೪) : ಆ ಕೆಲಸ ಮಾಡಲು ಅವನಿಗೆ ದರುವಿಲ್ಲ (ರೂಢಿ). [ ? ]

**ದರುಮ** 'ಧಮ್ಮ$_1$' ನೋ.

**ದರುವಕ್ಕಿ** (ನಾ). ಒಂದು ಬಗೆಯ ಹಕ್ಕಿ (?): ಚಕೋರನಂತೆ ದಿನವನೆಣಿಸುತ್ತಿರ್ದಳವ್ವೆ ದರುವಕ್ಕಿ ಕಂಡ ಕನಸಿನಂತಿರ್ದಳವ್ವೆ ಮೋಡಂಬೊಕ್ಕ ಚಂದ್ರಮನಂತಿದ್ದಳವ್ವೆ ಎಂಟನೆಯ ಅವಸ್ಥೆಯವಳು ಅಚಿತದಿಯಲ್ಲಿದ್ದವನ ಈಚೆಯ ತಡಿಗೆ ಕರೆದುಕೊಂಬಂತೆ ಇಂದು ನಮ್ಮ ಮಹಾಲಿಂಗ ಗಜೇಶ್ವರನು ಕಂಗಳ ಕಾಮು ಕಂಗಾಹಿ ಕಂಡವ್ವಾ (ಸರ್ವವ. ೬೮-೩೬೧) ; ನಿಂದು ನೋಡಿದರು ಶಕುನವ ದರುವಕ್ಕಿ ಸಂಧಿಸಿ ಕೆಟಾಕು ಕೊಡುತಿರ್ದ (ಗುಂಡುಸು. ೨-೧೪೪). [ ದರು ? + ಪಕ್ಕಿ$_1$ ]

**ದರುವು$_1$** 'ದರು$_2$' ನೊ.

**ದರುವು$_2$** (ನಾ). ವ್ಯಾಪಿಸಿದುದು ; ತುಂಬಿದುದು. 'ದರುವು ಹಿಡಿ' ಪರಾ. [ ? ]

**ದರುವುಹಿಡಿ** (ಕ್ರಿ). (ಕಿವಿಯ) ತುಂಬ ವ್ಯಾಪಿಸು ; ಗಡಚಿಕ್ಕು : ಹರುಷ ವಿಸ್ಮಯಗಳಿಂದ ಕೂಗು–ಬೋಕಾಟೆಗಳನ್ನು ಊರು ದರುವು ಹಿಡಿಯುವಂತೆ ಹಾಕುವವರೇ (ಕರಿಹಾ. ೩೩) ; ದನಗಳು, ನಾಯಿ, ಬೆಕ್ಕುಗಳು– ಯಾವ ಪ್ರಾಣಿಗಳಿಂದ ಆ ಹಳ್ಳಿ ತುಂಬಿರುತ್ತಿತ್ತೋ, ಅವುಗಳ ಕೂಗಿನಿಂದ ಹಳ್ಳಿಗೆ ಹಳ್ಳಿಯೇ 'ದರುವು' ಹಿಡಿಯಬೇಕಾಗಿತ್ತೊ, ಆ ಯಾವ ಪ್ರಾಣಿಗಳೊಂದೂ ಆಕೆಗೆ ಕಂಡು ಬರಲಿಲ್ಲ (ಬರಹಾ. ೦೨೪).

[ ದರುವು$_2$ + ಹಿಡಿ$_1$ (< ಪಿಡಿ$_1$) ]

**ದರುಶನ, ದರಿಸನ, ದರಿಸಿನ, ದರುಸನ** (ನಾ). ೧. ಕಾಣುವುದು ; ನೋಡುವುದು ; ನೋಟ ; ಕಾಣ್ಕೆ : ನಿಮ್ಮಂ ನೆನೆವುದೆ ಶಿವಚಿಂತೆ ನೋಡುವುದೆ ದರುಶನಂ ಮುಟ್ಟಿದಂದೆ ಸ್ಪರ್ಶನಂ (ಬಸರ. ೬-೧೧೧) ; ಜಯಜಯೆಯೆಂದುದು ನಿಖಿಳಜಗವಕ್ಷಯನ ದರುಶನಕಂದು ಸುತಿಕೋಟಿಯ ಗಡಾವಣೆ ಗಾಸಿಯಾಮದು ಹರನ ಗಲ್ಲಣೆಗೆ (ಕುಮ್ಮಾ.ಅ. ೬-೭೭) ; ಅಲ್ಲಿಯ ಮಹಾಜನಂಗಳು . . . ಶುಭವಾದ್ಯವೆರಸಿ ನಡೆದಿದಿರ್ವಂದು ಕನಕ ಯಜ್ಞೋಪವೀತವ ಪವಿತ್ರದ ಫಲಗಳ ದರುಶನವ ನೀಡಿ ಶ್ರುತಿ ಮಂತ್ರಾಕ್ಷತೆಯನಿತ್ತು (ಸೌಂದಪು. ೫-೨) ; ನಿಮ್ಮ ದರುಶನದಿ ಬವಣೆ ಹಿಂಗಿ ಕೃತಾರ್ಥನಾದೆನು (ನಳಚ. ೮-೬೩) ; ಸಾರದಲೆ ಸದ್ಧರ್ಮದಿಚ್ಛೆಯೆ ಚಾರುದರುಶನ (ಶಶುಭಾ. ೫-೨೦) ; ನಾ ಧನ್ಯ ನಾ ಧನ್ಯ ನಾ ಧನ್ಯನೆಂದು! ಉಪಾರವಿಯ ದರುಶನಕೆ ಇಲ್ಲಿಗೈತಂದು ! (ಅನಿಕೇ. ೯-೧೨). ೨. ಕಾಣಿಕೆ ; ನಜರು : ಸೆಟ್ಟಿ ತನ್ನ ತಂದ ದರುಶನಮನರಸಂಗೆ[ಪಾಠಾಂ. ಕಾಣಿಕೆಯಂ] ಕೊಟ್ಟು (ಜೀವಸಂ. ೨೨೬-೧೮). ೩. [ಯೋಗ] ಯೋಗಾಭ್ಯಾಸದಲ್ಲಿ ಬರುವ ಆರು ಅಂತರಾಯಗಳಲ್ಲಿ ಒಂದು ; P ಪ್ರತಿಭಾ. ಶ್ರವಣ, ವಾರ್ತಾ, ದರುಶನ, ಆಸ್ವಾದನ, ವೇದನೆಗಳೆಂಬಿವು ಆರು ಅಂತರಾಯಗಳು ಅಥವಾ ವಿಘ್ನಗಳು : "ದರುಶನಗಳ್ . . . ತಲೆಯ ಮೇಲಿನಿಂದ ಹೊರಡುತ್ತಿರುವ ಬೆಳಕಿನಲ್ಲಿ ಸಿದ್ಧರನ್ನು ಕಾಣುವುದು" (ಅಮೃತ. ೬-೮೯ ಅಡಿಟಿ) ; ಮತಿಯುತನೆ ಪ್ರತಿಭಾಶ್ರವಣ ವೇಣಿಶಿಶಯದ ವಾರ್ತಾದರುಶನಗಳತುಳವಪ್ಪಾಸ್ವಾದನವು ವೇದನೆಯುಮೆಂಬಾಜು . . . ಬ್ರಹ್ಮಾಭ್ಯಾಸಕಾಲದಲಂತರಾಯಗಳು (ಅಮೃತ. ೬-೮೯). ೪. [ಜೈನ] ಸಮ್ಯಕ್‌ದರ್ಶನ : ದರುಶನಮಿಲ್ಲದ ಪೆಂಡಿರ ವರಭೋಗಂ ನರಕಗತಿಯ ಪೆರ್ಬಟ್ಟೆ (ಧರ್ಮಾಮೃ. ೧೨-೭೦). **ದರಿಸನ** : ೫. ( ನ್ಯಾ ದಾರ್ಶನಿಕರ ತತ್ತ್ವಗಳನ್ನು ತಿಳಿಸುವ) ತತ್ತ್ವಶಾಸ್ತ್ರ : ನಿರುತದಿಂ ತನ್ನ ಪವನ ಸಭೆಗೆ ವಾದಕ್ಕೆಂದು ಗುರುಪಂಡಿತೇಶನಂ ಕರೆಯಿಸಿ ಸಮಸ್ತಮತದರಿಸನಂಗಳೊಳು ವಾದುಗೆಯ್ಮಲ್ಲಮಂ ಖಂಡಿಸಿದನತಿಪೆರ್ಮೆಯಿಂ (ಪಾಸೋಪು. ೭-೮೯). **ದರಿಸಿನ** : ೨. ತವಗೆ ನಡೆವ ದರಿಸಿನವಮಾಚಂದ್ರಾರ್ಕತಾರಂ ನಡೆವನ್ನು ಮಾಡಿಕೊಟ್ಟರು (ಸೌಇಇ. XI-11, ೧೪೧-೨೦ ; 1096). **ದರುಸನ** : ೧. ದರ್ಶನ – ದರುಸನ, ಪದ್ಮ – ಪದುಮ (ಶಮುದ. ೨೫೪ ಪ್ರಯೋ). ೨. ವಿಮಳತರಯೂಥಿಕಾಕುಸುಮದಂದಂಗೆಯು ತಂದು ಸಖಿಯರು ದರುಸನವನಿತ್ತರುಚಿತವಾದಲರ್ದೊಡವನಿತ್ತು ಸೌಂದರನಾಥಗೆ (ಸೌಂದಪು. ೧೦-೨೪). ೫. ದರುಸನಂಗಳಿಗೆಲ್ಲ ಭಿಕ್ಷಾಟನಚರಿತ್ರ ಗುರುಮಾತವದಾಗಿರಲು ಉಳಿದ ಚರಿತ್ರಗಳಿದಕೆ ಸರಿಯಿಲ್ಲವಾಗಿ ಪೇಳಿದ (ಭಿಕ್ಷಾ.ಚ. ೧-೫). [ < ಸಂ. ದರ್ಶನ ]

**ದರುಶನಗಾಣಿಕೆ** (ನಾ). ರಾಜರು, ಸಾಧು, ಸಜ್ಜನರು, ಗುರುಹಿರಿಯರು ಮೊದಲಾದವರನ್ನು ನೋಡಲು ಹೋಗುವಾಗ ತೆಗೆದುಕೊಂಡು ಹೋಗುವ ನಜರು ಅಥವಾ ಕಾಣಿಕೆ ; ದರ್ಶನಕಾಣಿಕೆ : ಪರಮಹೀಶಳೆದಖಿಳಜನದುಬ್ಬರದ ದರುಶನಗಾಣಿಕೆಯನನುಕರಿಸುತನುಪಮ ವಿಷಯವೀಥಿಯ ನೋಡುತೈತಂದ (ತೊರರಾ. ೦-೬-೭).

[ ದರುಶನ + ಕಾಣಿಕೆ (< ಕಾಣ್ಕೆ) ]

**ದರುಶನತಪ್ಪುಕ** (ನಾ). ನೋಟದಿಂದ ಅಪರಾಧ ಮಾಡುವವನು : ದರುಶನತಪ್ಪುಕ ಪ್ರಥಮಪಾತಕ ಸ್ಪರ್ಶನತಪ್ಪುಕ ದ್ವಿತೀಯಪಾತಕ . . . ಮಾಂಸಾಹಾರಿ ಪಂಚಮಹಾಪಾತಕ ಈ ಐವರೊಡನೆ ನೀ ನುಡಿಯಲಿಲ್ಲ ರಾಮನಾಥಾ (ದೇದಾವ. ೧೯-೨೪). 'ಸ್ಪರ್ಶನತಪ್ಪುಕ' ಪರಾ. [ ದರುಶನ + ತಪ್ಪುಕ ]

**ದರುಶನಾರ್ಥಿ** (ನಾ). ನೋಡುವ ಅಪೇಕ್ಷೆಯುಳ್ಳ ವ್ಯಕ್ತಿ ; ನೋಡಲಿಚ್ಛಿಸುವವನು : ಅರಸ ಬಿನ್ನಹ ಮಾವದೇವರು ದರುಶನಾರ್ಥಿಗಳೆನಲು ಮನದಲಿ ಕುರುನೃಪತಿ ಚಿಂತಿಸುತ ಬರಹೇಳೆಂದು ನೇಮಿಸಿದ (ಕುಮ್ಮಾ.ಕ. ೧೨-೯). [ < ಸಂ. ದರ್ಶನಾರ್ಥಿನ್ ]

**ದರುಶೆ** (ನಾ). ಸೂರ್ಯ, ಚಂದ್ರರು ಒಂದೆಡೆ ಸೇರುವ ಕಾಲ ; ಅಮಾವಾಸ್ಯೆ : ದರುಶೆಯೊಳರ್ಕನಂ ಬೆರಸಿದಿಂದುವ ಕೋಮಲಲೇಖೆಯಂತೆ ... ತತ್ಕಮಲಾಕ್ಷಿಯೊಪ್ಪಿದಳ್ (ಉದ್ಭಟ. ೫-೫೬).

[< ಸಂ. ದರ್ಶ]

**ದರುಸನ** 'ದರುಶನ' ನೋ.

**ದರೆ$_1$** (ನಾ). ೧. (ದಡದಲ್ಲಿ ಕಟ್ಟುವ) ದಂಡೆ ; ದಿಂಡು ; ತೆವರು : ರಘು ಜಲಕ್ರೀಡೆಯಾಡಿದ ಸರೋವರತಟಂ ದರೆ ದರಿಸಿ, ಪರ್ಬಿದುದು ಸಾಂದ್ರಂ ಜಲಪಿಶಾಚಿ, ಪಾಚಿ (ಶ್ರೀರಾಮಾ. ೪೫೦-೬) ; ತೋಟದ ಒಂದು ಬದಿಯಲ್ಲಿ ದರೆಯಾಗಬೇಕಿತ್ತು (ಚದ್ರ್ಯಸ. ೨೨೦) ; 'ಇಕೊ' ಎಂದು ಅವ್ಯಕ್ತದಿಂದ ಬಂದದ್ದನ್ನ ಕೃತಜ್ಞತೆಯಿಂದ ಸ್ವೀಕರಿಸುವುದು. ದರೆ ಹತ್ತುವ ವರದಾಟ ಬೇಡ (ಸಂಸ್ಕಾರ. ೮೮) ; ತನಗೆ ಎದುರಾಗಿ ಕಡಿದಾಗಿ ಎದ್ದಿದ್ದ ದರೆಯನ್ನು ಕಂಡು, ಹತ್ತಲು ಎರಡು ಮೂರು ಸಾರಿ ನೆಗೆದು ಜಾರಿಬಿದ್ದು ಸೋತು, ಹಿಂದಕ್ಕೆ ಹಾರಲು ಪ್ರಯತ್ನಿಸುತ್ತಿದ್ದಾಗ ಮಂಜ . . . ಬಡಿಗೆಯನ್ನೆತ್ತಿ ಹಂದಿಯ ಸೊಂಟಕ್ಕೆ ಇಕ್ಕಿಡಿಸಿ ಬಿಟ್ಟನು (ಮಲೆಮ. ೦೨೦) ; ಆಚೆ ಹೊಳೆಯಿದೆ. ಮೂರು ಬದಿಯಲ್ಲಿ ದರೆ ಇದೆ. ಉರಿ ಮೇಲಕ್ಕೇಳಲು ಗಿಡಗಳು ಬಿಡುವುದೇ ಇಲ್ಲ (ಜಾಂಗಿ. ೪೩) ; ಜಡ ಎತ್ತಿಗೆ ದರೇ ಮೇಲಣ ಹುಲ್ಲೇ (ಗಾದೆ). ೨. ನೊರಜುಗಲ್ಲು ಮತ್ತು ಮರಳು ಭೂಮಿ ; ಗಣಿಗೂರ ಸನ್ನಿಗಾಲಾನಾಡ ದರೆ ಪೋಗಿ ತೇನನ್ನಾಡಕೊಳ್ಳಾಲಿಯುಳ್

ಕಡಿತ್ತು (ಎಳ್. XVI. ಗುಲ್ಬ. ೭೫-೫೦ ; 733) ; ಸಂಕರನಾಯಕನ ಹಿತ್ತಲ ದರೆ ಪಡುವಲು ಬಸ್ತಿಯ ದೇವಸ್ವಯಿದಕೆ ಹಂನೆರಡು ಮೂಡೆ ಬಿಟ ಧರ್ಮ (ಕೆಇ. I, ೫೦-೯೩ ; 432 ?) ; ಕಾಡರಂಬ ನೀರಾರಂಜಕೆ ಸಲುವ ಕೆಟೆ ಕುಂಟೆ ಕೊಣಾನು ಅಬೆ ಅಚುಕಟು ದರೆ ನೆರಳೆ ಸಕಳಾ ಬತ್ತ್ರಯು (ಎಳ್. X (8). ಕೋಲಾರ. ೩೦೪-೦೫ ; 17 ನೆಯ ಶತ) ; ಇವು ನೆಲದಲ್ಲಿ ಜಾತಿಗಳು:-ರೇಗಡೆ, ಎರೆ . . . ದರೆ (ಕಲ್ಲುನೆಲ) (ನಮ್ಮನು. ೨೪೩). ೩. (ಕರಾ) ಬೇಲಿಗೆ ಬದಲಾಗಿ ಕಟ್ಟಿದ ಮಣ್ಣಿನ ಗೋಡೆ,- ಆವರಣ. [ ←ತುಳು. ದರೆ ]

**ದರೆ₃** (ನಾ). ನೆಲ ; ಭೂಮಿ ; ಧರೆ ; ಪೃಥ್ವಿ : "ಎಳೆ, ಪೊಡವಿ, ಕಿರೆ, ದರೆ, ರನ್ನವಸಿಜಿಲ್, ಬೂವಿ, ಬುವಿ-ಈ ೭ ಭೂಮಿ" (ಕಕಸಾ. ೧೦-೨೦೦); ದರೆಯಂ ಪೊತ್ತಾನೆಯು ಕೈಗೊರೆಯೆನೆ ಕಡುವೆಟ್ಟಿತಾದ ನಾಲ್ಕುಂ ತೋಳುಂ ಕರವೆಸೆದಿರೆ ಕುಳ್ಳಿರ್ದಂ ಸಿರಿಯರಸಂ ಕಾರವುಗಿಲ ರೂಪೆಂಬ ನೆಗಂ (ಕಬ್ಬಿಗಾ. ೧೬೫). [ <ಸಂ. ಧರಾ ]

**ದರೆಗುಂಬ** (ನಾ). ಒಡೆದ ಮಡಕೆ ; ಬಿರುಕು ಬಿಟ್ಟ ಗಡಿಗೆ ; ತೂತು ಮಡಕೆ : ಅಟೆಯೊಳಗಡಿಮೇಲಾಗಿ ಬಾಳೆಯ ಬಿತ್ತಿ ದರೆಗುಂಬದಿಂ ನೀರ ತಂದು ಎಟೆವುತಿರಲು ಕಂಡು ಬಲರಾಮನಿಂತೆಂದ (ನೇಮಿಸಂ. ೩೪-೧೯೭).

[ <ದರಿ + ಕುಂಬ₂ ]

**ದರೆಹೊಲ** (ನಾ). ಸಣ್ಣ ಸಣ್ಣ ಕಲ್ಲು ತುಂಬಿದ ಹೊಲ : ಒಂದು ದಿನ ಇವನು ಮಂಡಹಳ್ಳಿಗೆ ಹೋಗುವ ದಾರಿ ಪಕ್ಕದ ದರೆಹೊಲದಲ್ಲಿ ಸೀಳುಕ್ಕಿ ಪೊಡೀತಾ ಇದ್ದ (ನಮ್ಮೂರು. ೨೯೭). [ ದರೆ₁ + ಹೊಲ (<ಪೊಲ) ]

**ದರೋಗ** (ನಾ). ೧. (ಅಬ್ಕಾರಿ, ಪಶು, ಕಾಡು, ಉದ್ಯಾನವನ ಇತ್ಯಾದಿ ಇಲಾಖೆಗಳ) ಸರ್ಕಾರದ ಅಧಿಕಾರಿ,- ಮೇಲ್ವಿಚಾರಕ : ನಮ್ಮ ಜಾತಕದ ಯೋಗಗಳನ್ನು ತಿಳಿದು ಕೆಲಸಮಾಡಿದರೆ ಸುಂಕದ ದರೋಗ ಸಾಬರ ಕಾಟ ನಿವಾರಣೆಯಾಗುತ್ತೆ (ಮಾಕುರಾ. ೦೫೫): ಎಲ್ಲವನ್ನು ತೆಗೆಯಿಸಿಕೊಂಡು ಬಾ ಎಂದು ದರೋಗರ ಅಪ್ಪಣೆಯಾಯಿತು (ಕುಣಸಂಗ. ೦೨೩). ೨. ಕಾವಲುಗಾರ ; ಪಹರೆಯವನು : ಪೋಲೀಸು ದರೋಗನು ತಮ್ಮನ್ನು ಎಳೆದೊಯ್ಯುವ ಮೊದಲು ತಾಯಿಯನ್ನು ಕುರಿತು—" ಅಮ್ಮ ಇದೇನು ? " ಎಂದು ಕೇಳಿದನು (ಹಸಿವು. ೭) ; ಸಂಸ್ಥಾನದಲ್ಲಿ ಒಂದು ಉನ್ನತಹುದ್ದೆಯಲ್ಲಿದ್ದ ಬಕ್ಷೀಷ್‌ಆಲೀ ಎಂಬುವನನ್ನು ಬಂದೀಖಾನೆಯ (ಜೈಲ್) ದರೋಗನನ್ನಾಗಿ ನೇಮಿಸಲಾಯಿತು (ಕೃಷ್ಣರಾಜ. ೦೫೬).

[ ←ಪಾರ. ದಾರೂಘ್, ದಾರೋಗಹ್ ; ಹೋ. ಮರಾ. ದರೋಗಾ, ದಾರೋಗಾ ]

**ದರೋಡೆ,** ದರವಡೆ (ನಾ) ೧. ಭಯಗೊಳಿಸಿ ಬಲಾತ್ಕಾರವಾಗಿ ಕಸಿಯುವುದು,- ಅಪಹರಿಸುವುದು ; ಕೊಳ್ಳೆ ಹೊಡೆಯುವುದು; ಲೂಟಿ ; ಸಂಲಿಗೆ : ಓ ವರ್ತಮಾನದ ಸುದ್ದಿ ಎಲ್ಲೊ ಗಲಾಟೆ, ಖೂನು, ದರೋಡೆ, ಚಕ್ರಬಂಧದ ಒಗಟ, ರಾಶಿಭವಿಷ್ಯ, ಲೂಟಿ, ಲಾಟರಿ (ಅರಳು. ೪೨೫-೨೦) ; ವಿಶ್ವನಾಥವಂತರ ಕೊಲೆ ಮತ್ತು ಅವರ ಮನೆಯಲ್ಲಾದ ದರೋಡೆ ಇವುಗಳ ಸಮಾಚಾರವೇನಾದರೂ ನಿನಗೆ ಗೊತ್ತಿದೆಯೇ? (ವಿಧಿಪ್ಪ. ೮೯೧) ; ದಸ್ಯುಗಳು ಗುಂಪುಕಟ್ಟಿಕೊಂಡು ಬಂದು ನಡೆಸುವ ದರೋಡೆಗಳನ್ನು ಯುದ್ಧವೆನ್ನಲಾದೀತೆ? (ಶ್ರೀರಾಮಾಯ. ೧೬೪೯) ; ಸಭೆಯಲ್ಲಿ ನಡೆಸಿದ ಈ ದರೋಡೆ ನಿನಗೆ ಮುನಿಜನಗಳಿಂದ ಮರ್ಯಾದೆ ತರುವಂತಿಲ್ಲ (ವಚಭಾ. ೦೧೫). ೨. ಲೂಟಿ ಹೊಡೆಯುವ ಜನರ ಗುಂಪು : ದರೋಡೆಯು ಬಂದಿದ್ದರೆ ಇಷ್ಟು ಅಂಜುವ ಕಾರಣವಿದ್ದಿಲ್ಲ (ಮುಂದಾಕ. ೦೨೬). **ದರವಡೆ?** ೧. ಹೊಟ್ಟೆಗೆ ದೊರೆಯದಿದ್ದ ಬಳಿಕ ಜನರು ಬರಗಾಲದಲ್ಲಿ ಕಳವು ದರವಡೆಗಳಿಗೆ ಪ್ರವೃತ್ತರಾಗುತ್ತಾರೆ (ಮೋಕ್ಷೇಪ. ೩).

**ದರೋಡೆ ಮಾಡು** = ಕೊಳ್ಳೆಹೊಡೆ ; ಲೂಟಿಮಾಡು ; ದೋಚು : ನಾನೀಗ ದರೋಡೆಮಾಡಿ ತರುವ ದ್ರವ್ಯದಿಂದ ಅನುಭವಿಸುವ ಸುಖ ಸಂತೋಷಗಳಿಗೆಲ್ಲಾ ನೀವು ಭಾಗಿಗಳಲ್ಲವೆ? (ಸುರಾ. ೩೯).

[ ←ಮರಾ. ದರೋಡಾ ]

**ದರೋಡೆಕಾತಿ** (ನಾ). ದರೋಡೆ ಮಾಡುವವಳು; ಲೂಟಿ ಹೊಡೆಯುವವಳು: ಮಕ್ಕಳು ಅಳುಕಳುಕಿ ನಿಂತು ಬೆದರುಗಣ್ಣಾಗಿ ದರೋಡೆಕಾತಿಯು ಕಡೆಗೆ ದುರುಗುಟ್ಟಿಕೊಂಡು ನೋಡುತ್ತಿದ್ದರು (ಕೃಸರು. ೬).

[ ದರೋಡೆ + - ಕಾತಿ₂ ]

**ದರೋಡೆಕಾರ,** ದರವಡೆಗಾರ (ನಾ). ಲೂಟಿ ಹೊಡೆಯುವವನು ; ದರೋಡೆಮಾಡುವವನು: ಒಂದು ದಿನ ಅವರು ಆಶ್ರಮಕ್ಕೆ ಹೊರಗೆ ಒಂದು ಮರದ ಕೆಳಗೆ ಮೌನದಲ್ಲಿ ಮುಳುಗಿದ್ದಾಗ ಕೆಲವರು ದರೋಡೆಕಾರರು ಆ ಕಡೆ ಬಂದರು (ಜ್ಞಾನಶಿ. ೩೬): ಕೈರೋಕ್ಕೆ ಹೋಗುವ ದಾರಿಯಲ್ಲಿ ಅನೇಕ ಸಲ ದರೋಡೆಕಾರರು ಈ ಸಾಮಾನುಗಳನ್ನು ಕಸಿದುಕೊಳ್ಳುತ್ತಾರೆ (ಪ್ರಬಂಧ. II. ೨೨೦). **ದರವಡೆಗಾರ:** ಮೊದಲೇ ದರವಡೆಗಾರರ ಹಾವಳಿಯಿಂದ ಹೈರಾಣಾಗಿದ್ದ ಹಂಸೆಯು ದೇಹ ಈಗಿನ ಮಾನಸಿಕ ಅಸ್ವಸ್ಥತೆಯಿಂದ ಮಾತ್ರವಲ್ಲ ಹೈರಾಣಾಗಲು, ಅವಳು ಹಾಸಿಗೆಯಿಂದ ಎದ್ದಿರಲಿಲ್ಲ (ಹಂಸಾ. ೬೫).

[ ದರೋಡೆ + - ಕಾರ₁ (< - ಕಾಱ) ]

**ದರೋಡೆಖೋರ,** ದರವಡೆಖೋರ (ನಾ). = ದರೋಡೆಕಾರ : ಶಿವನಿಗೆ ತಿಳಿಯಿತು ಇವರು ಕಳ್ಳತನಕ್ಕಾಗಿ ಹೋಗುತ್ತಿದ್ದಾರೆಂದು ! ದರೋಡೆಖೋರರು !! (ದೇವಸಾ. ೦೫). **ದರವಡೆಖೋರ:** ಪ್ರತಿಯೊಬ್ಬ ದರವಡೆಖೋರನೂ, ಪ್ರತಿಯೊಬ್ಬ ಮೋಸಗಾರನೂ ನಮ್ಮ ಕಡುವೈರಿಯಾಗಿರುವನು (ಅಂದಿಕ. ೨೫); ನಾವು ಕಳ್ಳರಲ್ಲ . . . ನಾವು ದರವಡೆಖೋರರು (ಅಶ್ವಮೇ. ೦೬): ಮಹಾ ಚಾಣಾಕ್ಷನಾದ ಒಬ್ಬ ದರವಡೆಖೋರನು ನನ್ನನ್ನು ಹುಚ್ಚನನ್ನಾಗಿ ಮಾಡಿ ಕೂರಿಸಿರುವನು (ಕಳ್ಳಕಾ. ೩) ; ಸಭೆಯಲ್ಲಿ ದರವಡೆಖೋರರ ಚಂದದ ಆಚರಣೆ ನಡೆದದ್ದರಿಂದ, ತಪಸ್ವಿಗಳು ಬಂದರೂ ನಿನಗೆ ಉತ್ಸಾಹವಿಲ್ಲದಾಗಿದೆ (ಮಹಾಭಾರ. ೨೨).

[ ದರೋಡೆ + - ಖೋರ ( - ಕೋರ₂ ) ]

**ದರೋದರ** (ನಾ). ೧. ಪಗಡೆಯಾಟ ; ದಾಳದಾಟ. ೨. ಜೂಜು ಕೋರ ; ಜೂದಾಳಿ. ೩. ಪಣ ; ಪಂಥ ; ಜೂಜು. ೪. ಪಗಡೆ : ದಾಳೆ. [ ಸಂ. ]

**ದರೋಬಸ್ತು** (ಗು). ಎಲ್ಲಾ ; ಸಮಗ್ರ ; ಸಮಸ್ತ ; ಸಂಪೂರ್ಣ : ಪೂರ್ತಿಯಾದ ; ಒಟ್ಟಾದ : ಬೆಳ್ಳಾರೆ ಮಾಗಣೆ ಒಂದಕ್ಕೆ ದರೋಬಸ್ತು ಗ್ರಾಮ ಮೂವತ್ತೇಳು (ರಾಜೇಂದ್ರ. ೨೫೦) ; ಅವರಿಗೆ ಸ್ವಲ್ಪವಾದರೂ ಆಟಕಾವು ಮಾಡದೆ ದರೋಬಸ್ತು ಮಹಸೂಲು ಬಿಟ್ಟುಬಿಡುವುದು (ಮುಹಾಪಂ. II, ೬೬).

**ದರೋಬಸ್ತರು** = ಎಲ್ಲರು ; ಸಮಸ್ತರುಂ : ದಿಗರ ತಾಲ್ಲೂಕಿಗೆ ಹೋಗಿರುವ ರೈತರು ಯಾವ ಯಾವ ತಾಲ್ಲೂಕಿನಲ್ಲಿದ್ಧಾರೆಯೊ ದರೋಬಸ್ತರ ಪತ್ತೇ ಹತ್ತಿಸಿ ಸದರಹೂ ರೈತರಿಗೆ ನಂಬಿಕೆಯಿಂದ ಕರೆತರಿಸಿ . . . ಜರಾಯಿಂತು ಕೆಲಸದಲ್ಲಿಡಬೇಕು (ಮುಹಾಪಂ. II, ೬೨). **ದರೋಬಸ್ತಾಗು** = ಸಂಪೂರ್ಣ ಸಜ್ಜಾಗು : ಏನೋ, ಗುತ್ತೀ ಮುಗಿಲ ಕಡೆ ನೋಡ್ತಾ ನಿಂತೆ ? ದೂರಾ ? ಒಳ್ಳೆ ದರೋಬಸ್ತಾಗಿದ್ದೀಯಲ್ಲಾ ! (ಮಲೆಮ. ೦).

[ ←ಪಾರ. ಮರಾ. ದರೋಬಸ್ತ್ ]

**ದರೋಬಸ್ತುಫೌಜು** (ನಾ). ಒಟ್ಟು ಸೈನ್ಯ ; ಸಮಗ್ರದಳ ; ಸಂಪೂರ್ಣ ಸೇನೆ : ದರೋಬಸ್ತುಫೌಜು ಹೊರಟು ಹೊಸಕೆರೆ ಬಳಿ ನಿಂತಿತು (ಚಿತ್ರಪಾ. ೬೩). [ ದರೋಬಸ್ತು + ಫೌಜು (<ಪೌಜು) ]

**ದರ್ಖಾಸ್ತು** 'ದರಖಾಸ್ತು' ನೋ.

**ದರ್ಕ$_1$, ದಕ್ಕು$_2$** (ಕ್ರಿ). ೧. ಅಧಿಕವಾಗು; ಹೆಚ್ಚಾಗು. 'ದರ್ಕಸೋರಂ' ಪರಾ. ೨. ಸೊಕ್ಕಿಗೇಳು; ಅಹಂಕಾರಪಡು; ಗರ್ವಿಸು. ೩. ಉತ್ಸಾಹಗೊಳ್ಳು; ಸಂಭ್ರಮಗೊಳ್ಳು. 'ದರ್ಕಂದಲೆ$_1$' ಪರಾ. ದಕ್ಕು$_2$: ೨. 'ದಕ್ಕುಂದಲೆ$_1$' ಪರಾ. [ ←ತಮಿ. ತರುಕ್ಕು ]

**ದರ್ಕ$_2$, ದಕ್ಕು$_4$** (ನಾ). ೧. ಚೂಪಾದ ಮರದ ಕೋಲು; ದಸಿ: ಸಭೆಯೊಳೀಶಾನೇಂದ್ರನಮ್ಮ ಸಮ್ಯಗ್ದರ್ಶನಮಂ ಪೊಗಟ್ದುದರ್ಕೆ ದರ್ಕಂ ನುಂಗಿದಂತುದ್ಗ್ರೀವನಾಗಿ ಮತ್ಸರಪ್ರೇರಿತನೆನ್ನಂ ಸೋಲಿಸಲ್ ಬಂದು ತಾನೆ ಸೋಲ್ತು ಪೋದಂ (ಶಾಂತಿಪು. ೮-೧೩೧ ವ); ದರ್ಕ[ಪಾಠಾಂ. ದಕ್ಕು] ವೆರಸಿದ ಕುಟಿಯುಳ್ಳಿಯುಂ [ಉ]ವಿವೆರಸಿದ ಕಿಚ್ಚಿನಲ್ಲಿಯುಂ ಕುಕೂಲಮೆಂಬುದು (ಹರಿವಂಶ. ೧೩೮-೪೦). ೨. ಚೂಪಾದ ತುದಿಯುಳ್ಳ ಲೋಹದ ಸಾಧನ; ಶೂಲ: ಅವರುಮಾತನಂ ಶ್ಮಶಾನಕ್ಕೆಟಿದುಕೊಂಡು ಪೋಗಿ ದರ್ಕಂ ಬಸಿದು ಸೂಲದೊಳಿಕ್ಕುವಾಗಳ್ (ವಡ್ಡಾರಾ. ೦೧೭-೨೩). ೩. ಮುಳ್ಳು; ಕೂಳೆ: ಮೂವತ್ತೆರಡುಕೋಟಿ ಕಸವರಮುಮಂ ಕೊಳದ ಪುಲ್ಲ ದರ್ಕಂ ತೊಟಿವಂತನಿತುಮಂ ತೊಟಿದು (ವಡ್ಡಾರಾ. ೪೬-೦೦). ದಕ್ಕು$_4$: ೧. "ಆರೋಗ್ಯ ದಸಿ ವಶಗಳೊಳ್ ದಕ್ಕು" (ಶಬ್ದಮಂ. ೭೯); ಕಲಹಂಸೆಗಳ್ ಬಲ್ಲಿತಪ್ಪುದೊಂದು ದಕ್ಕಂ ತಂದದಟಿರಡು ಕಡೆಯುಮಂ ತಾವಡಸಿ ಕರ್ಚಿ ನಡುವೆಯುಮೆಯುಂ ಕರ್ಚಿಸಿಕೊಂಡನೇಕ ಗ್ರಾಮ ನಗರ . . . ದ್ರೋಣಾಮುಖಂಗಳಂ ಜನಪದಂಗಳಂ ಕಳಿದು ಬರುತ್ತುಂ (ಪಂಚತಂ. ೧೩೭-೧೩); ದಕ್ಕಿನೊಳ್ ಮಾಡಿದ ಮನೆ ಸೊಕ್ಕಿದಾನೆ ಸೋಂಕೆ ಕೆಡೆದು ಬೀಟ್ವಂತೆ ದೆಸೆಯುಪ್ಪ ದೇವನಂ ಪಿಡಿದ ಮಾನಿಸನುಂ . . . ಬೀಟ್ಗುಂ (ಧರ್ಮಾಮೃ. ೦೧-೪೪); ಲಿಂಗವ ಪೂಜಿಸಿದ ಬಳಿಕ ಜಂಗಮಕ್ಕಂಜಲೇಬೇಕು ದಕ್ಕ ನುಂಗಿದಂತೆ ಬೆರತುಕೊಂಡಿರಬೇಡ (ಬಸವ. ೦೮೯); ಅತ್ಯುತ್ಕೃಷ್ಟ ದಕ್ಕುಳ್ಳ ಕುಟಿಯುಮಿವೆರಸು ಕಿಚ್ಚಿನೊಳು ಸಲೆ ಕುಕೂಲಮದೆಂಬುದು (ಮಂಗರಾ. ೦೪೨-೦೮). ೨. ಬೊಂತೆಯಂತೆ ದಕ್ಕಿನೊಳಿರ್ದ ಪಂದಲೆಗಳಿಂ ಬಂದೀಕಾಱನಂತೆ ತೆಜಪುವಾರ್ದು ಓಡಿವ ಶಾಕಿನಿಯರಿಂ (ಕಾವ್ಯಸಾ. ೩೨೯ ಶೂದ್ರಕ); ತನಗಲ್ಲದುದ ನಾಸಿಕ ವಾಸಿಸಿದಲ್ಲಿ ಅಲ್ಲಿಯೇ ದಸಿಯ ದಕ್ಕನೇಟಿಸುವೆನು (ಸರ್ವಜ್ಞವ. ೧೧೧-೩೪೯). ೩. ತಿಲಕದ ತೊಕ್ಕಪ ಮಾರ್ಗಂಗಳ ದಕ್ಕಂ ಸುಟ್ಟು ಮೂತ್ರದಿಂದರೆದು ನವೋಜ್ವಲಚೂರ್ಣವಿಮಿಶ್ರಿತದಿಂ ವಿಲೇಪನಂಗೆಯ್ದು ಕಳೆಗೆ ದುಷ್ಟ ವ್ರಣಮಂ (ಅಶ್ವಶಾ. ೦೨-೪).

**ದರ್ಕಂದಲೆ$_1$, ದಕ್ಕುಂದಲೆ$_1$** (ನಾ). ೧. ಸೊಕ್ಕಿಗೇರುವಿಕೆ; ಉನ್ಮತ್ತತೆ; ಉದ್ಧತಿಕೆ. ೨. ಉತ್ಸಾಹಗೊಳ್ಳುವಿಕೆ; ಸಂಭ್ರಮ. 'ದರ್ಕಂದಲೆವಾಯ್' ಪರಾ. ದಕ್ಕುಂದಲೆ$_1$: 'ದಕ್ಕುಂದಲೆವರಿ', 'ದಕ್ಕುಂದಲೆವಾಯ್' ಪರಾ. [ ದರ್ಕ$_1$ + –ದಲೆ ]

**ದರ್ಕಂದಲೆ$_2$, ದಕ್ಕುಂದಲೆ$_2$** (ನಾ). ಶೂಲಕ್ಕೆ ಹಾಕಿದ ತಲೆ: ಉದಂತಕ್ಕೆ ತಕ್ಕುಂದಟಿ, ದರ್ಕಂ[ಪಾಠಾಂ. ಕ್ಕುಂ] ದಲೆ, ತಾಟಿಂಬಟಿ (ಕಮದ. ೦೭೨ ಪ್ರಯೋ). ದಕ್ಕುಂದಲೆ$_2$: ಅಲ್ಲಿ ಗುಡಿಗಟ್ಟಿದ ಸೀರೆಯಂತೆ ದಕ್ಕುಂದಲೆಗೆ ವಂದರುಂ ಮೆಚ್ಚುಕೆಯ್ವರಂತೆ ತೂಗುವ ತೂಗುಂದಲೆಗಳುಂ (ಲಂಹರಿ. ೨-೧೧ ವ). [ ದರ್ಕ$_2$ + ತಲೆ$_1$ ]

**ದರ್ಕಂದಲೆವಾಯ್, ದಕ್ಕುಂದಲೆವಾಯ್** (ಕ್ರಿ). ೧. ಸೊಕ್ಕಿನಿಂದಿರು; ಬೀಗು; ಸೆಟೆ; ಸೆಡೆ: ಉರ್ಕಿ ದರ್ಕಂದಲೆವಾಯ್ದು ಪಂಚಶರನಂ ಮುಂಚದ ಕಾಲೊಳ್ ಕಂದು ಕಟ್ಟ ನಿನ್ನ ಪಗೆಯು ಬಗೆದಂತೆ ತೀರ್ಚಿ ತೋಱುವೆಂ (ಲೀಲಾವ. ೧೦-೮೩ ವ). ೨. ಉತ್ಸಾಹಗೊಳ್ಳು; ಉಬ್ಬು: ಪೊರ್ಕುಳಿಯಾಡಿದುವಲರೊಳ್ . . . ತನಿಗಂಪಿಂದಟ್ಟುಮೆವಟ್ಟುವ ಕುಡಿಯೊಳ್ ದರ್ಕಂದಲೆವಾಯ್ದುವಲ್ಲಿ ಮದಮಧುಪಂಗಳ್ (ಮಲ್ಲಿಪು. ೦೪-೦೪೪). ದಕ್ಕುಂದಲೆವಾಯ್: ೧ ಉದ್ಧತಿಯಿಂದಮಾವಂದಿರುರ್ಕಿ ದಕ್ಕುಂದಲೆವಾಯ್ವರ್ (ಸುಕುಮಾ. ೨-೮); ಅಂತುರ್ಕಿ ಸೊರ್ಕಿಂ ದಕ್ಕುಂದಲೆವಾಯ್ದು ದೂರ್ತಿಂ ಕಣ್ಗಾಣದೆ ಸೂಳೆಗೇರಿಯಂ ಪೊಕ್ಕು (ಧರ್ಮಾಮೃ. ೨-೪೩); ಉರ್ಕಿ ದಕ್ಕುಂದಲೆವಾಯಲ್ಕಳ್ಕಿ ವೀರಾರಿಗಳುಱದದುಟರ್ (ಮುಂಬರಾ. XI. ೨೪೮-೦೪; 1121). ೨. ತನಿವಣ್ಣ ರಸದಿಂ ಸೊರ್ಕಿತನಿ ದಕ್ಕುಂದಲೆವಾಯ್ದು ಬಗ್ಗಿಸುವ ಪಿಕಂಗಳ . . . ವೀಕ್ಷಿಸುತ್ತುಂ (ಸುಕುಮಾ. ೩-೨೧ ವ); ಕುಸುಮಾಸವಮಂ ಸವಿದುರ್ಕಿ ಸೊರ್ಕಿ ದಕ್ಕುಂದಲೆವಾಯ್ವಾಗಳ್ . . . ಉನ್ಮದಾಳಿಗಳ್ (ಧರ್ಮನಾ. ೨-೮೩). [ ದರ್ಕಂದಲೆ$_1$ + ವಾಯ್$_1$ ]

**ದರ್ಕಸೋರ್** (ಕ್ರಿ). ಅಧಿಕವಾಗಿ ಸೋರು (?): ಸರಳಿಂಗಂ ವಿಗೆ ಕುಂದಿ ತೋಱೆ ಕಿವಿಗಳ್ ತಣ್ಪೇಱೆ ಕಣ್ದರ್ಕಸೋರೆ ಕರಂ ಮೆಯ್ ನವಿರುದ್ದಮಾಗಿ ನಿಲೆ ಮಾಂ (ಕುಂ) ದಾಯ್ತು (ರೋಗಶೋಧ. ೯-೨೧೨). "ಥಣ್ಣನೆ(ನಾಗಿ)ಯಿರುಹ" (ರೋಗಶೋಧ. ಟೀಕೆ). [ ದರ್ಕ$_1$ + ಸೋರ್$_1$ ]

**ದರ್ಖಾಸ್ತ್** 'ದರಖಾಸ್ತು' ನೋ.

**ದರ್ಖಾಸ್ತು** 'ದರಖಾಸ್ತು' ನೋ.

**ದರ್ಗಾ** 'ದರಗಾ' ನೋ.

**ದರ್ಜಿ** (ನಾ). ಬಟ್ಟೆ ಹೊಲಿಯುವವನು; ಸಿಂಪಿಗ; ಚಿಪ್ಪಿಗ: ಒಮ್ಮೆಗೆ ಓಲಗದೊಳು ಕುಳಿತಿರಲು ಬಂದರೆಡೆಗೆ ಇಬ್ಬರು ದರ್ಜಿಗಳು (ಗಹೀತ. ೬೦-೪); ಆ ಕೋಟಿಗೂ ಒಂದು ಕಮಾಲು ಮಾಡಿಸಿದ್ದೆ, ದರ್ಜಿಗೆ ಹೇಳಿ (ಹಂಗೂಲಿ. ೧೦೨); ನಮ್ಮ ದೇಹಗಳು ನಮ್ಮ ಅಧೀನವೆ? – ದರ್ಜಿಯವನಿಗೆ ಮಾರಿಕೊಂಡವು (ಸಾಹಿಜೀ. ೩೩).
[ ←ಪಾರ. ದರ್ಜೀ; ಹಿಂ. ಮರಾ. ದರಜೀ, ದರ್ಜೀ ]

**ದರ್ಜಿಗಿತ್ತಿ** (ನಾ). ಬಟ್ಟೆ ಹೊಲಿಯುವವಳು; ಸಿಂಪಿಗಿತ್ತಿ: ದರ್ಜಿಗಿತ್ತಿಗಳು ನನ್ನ ಅಳತೆ ತೆಗೆದುಕೊಂಡರು (ಗಂಪ್ರ. ೭೩). [ ದರ್ಜಿ + –ಗಿತ್ತಿ ]

**ದರ್ಜೆ** (ನಾ). ೧. ವರ್ಗ; ಮಟ್ಟ; ಶ್ರೇಣಿ: ಆಕಳಿನ ಹಾಲು; ಇದರಲ್ಲಿರುವ ಸಸಾರಜನಕಗಳು ಅತ್ಯಂತ ಉತ್ತಮ ದರ್ಜೆಯವು (ಆಹುಸಾ. ೮೦); ಅವರ ಕಲಾಕೌಶಲ್ಯ ಎಷ್ಟು ಉಚ್ಚದರ್ಜೆಯದಾಗಿತ್ತು ಎಂಬುದಕ್ಕೆ ಪ್ರತ್ಯಕ್ಷ ನಿದರ್ಶನ ಈ ರತ್ನಗೋಲ (ರತ್ನಗೋ. ೨೪); ಅದಕ್ಕೆಲ್ಲಾ ಕಾರಣವೇನೆಂದರೆ, ಅವನ ಎರಡನೆಯ ದರ್ಜೆಯ ಗುಮಾಸ್ತೆ ನೌಕರಿ! (ಕಂಲಹು. ೧೨೩). ೨. ಅಂತಸ್ತು; ಯೋಗ್ಯತೆ; ಅರ್ಹತೆ; ಪದವಿ; ಗೌರವ: ಈ ತಾವು, ಶ್ಯಾಮರಾಯನ ದರ್ಜೆಗೆ ಹಲಕಾ ಎನಿಸತೊಡಗಿತು (ದೀಪಹ. II. ೧೪೬); ಅವರವರ ದರ್ಜೆಗೆ ತಕ್ಕಂತಹದು (ಉಡುಗೊ. ೭೮); ನಿಮ್ಮನ್ನು ಮೀರಿ ನಿಮಗಿಂತಲೂ ಕಡಿಮೆ ದರ್ಜೆಯವರು ಆ ಪದವಿಯನ್ನು ಹೊಂದುವರು (ಮಹಾತ್ಯಾ. ೭೮); ನಮ್ಮ ದರ್ಜೆಗೆ ಮೀರಿದವನಲ್ಲ ಎಂಬ ಭಾವ ನಮ್ಮಲ್ಲಿ ಆಗಾಗ ಹುಟ್ಟುವುದು (ಅಮೂವಿ. ೧೦೩). ೩. ತರಗತಿ; ಇಯತ್ತೆ: ಅವನು ೪ನೇ ದರ್ಜೆಯಲ್ಲಿ ಓದುತ್ತಿದ್ದಾನೆ (ರೂಢಿ).
[ ←ಅರ. ದರ್ಜಾ, ದರಜಾ; ಹಿಂ. ದರಜಾ; ಮರಾ. ದರ್ಜಾ ]

**ದರ್ದು$_1$** 'ತರ್ದು$_2$' ನೋ.

**ದರ್ದು$_2$** 'ದರದಂ' ನೋ.

**ದರ್ದುರ$_1$** (ನಾ). ಕಪ್ಪೆ; ಮಂಡೂಕ: "ಭೇಕಂ ಶಾಲೂರಂ ಮಂಡೂಕಂ ವರ್ಷಾಭು ದರ್ದುರಂ" (ಅಮರಕೋ. ೨೩-೮); "ಭೇಕಂ . . . ದರ್ದುರಂ ಪೇಟ್ ಮಂಡೂಕಮಾ ಶಘರಿ ಶಾಲೂರಮನೆ ಕಪ್ಪೆಯಕ್ಕು" (ಮಂಗರಾ. ೦೨೦-೮); ದರ್ದುರಂ ಚೂಡಾಮಣಿಯಾಯ್ತು ನೆಕ್ರಂ ಚರ್ಮರತ್ನಮಾಯ್ತು (ಚಾವುಂಪು. ೭೮); ಸರ್ಪಂ . . . ಕೆಲವು ದಿವಸಂ ತಲೆಯಿಕ್ಕಿ ಪಟ್ಟಿರ್ದುದನೊಂದು ದರ್ದುರಂ ಕಂಡು (ಪಂಚತಂ. ೨೭೯-೯); ಹರಡೆ ಹಂಗಂ ರಾಸಭಂ ದರ್ದುರಂ ಗೌಳಿ ದರುಶನ ಸ್ವರವನಾ ವಾಮಭಾಗದೊಳೀಯೆ ಯರಲೆ ಕಾಕಂ ಹಸುಬನಾ ನಕುಲವಿವು ಬಲದೊಳಂ ತೋಱೆ ದನಿಮಾಡಲು ಪರಿಪಕ್ವಫಲವು (ಜೀರಮು. ೦೦-೩). [ ಸಂ. ]

**ದರ್ದುರ₂**, ದರ್ದುಟಿ (ನಾ). ಬಾವು ; ಊತ ; ದದ್ದರಿಸಿಕೊಂಡುದು : ಪುರಾಕೃತಸುಕೃತ ಫಲಂಗಳವಂ ನೆನೆದನವರತವುಬ್ಬು ಬಾತ ಕಣ್ಗಳ್ ಚಿಂತಾನಿದ್ರೆಯಿಂ ದರ್ದುರವವಾದ ರೋಗಮುಂ (ಕಾಂತಿಪು. ೪-೭೯ ವ). △**ದರ್ದುಟಿ** : ಬಿಸುಸುಯ್ಯು ಬೆಂಕೆಯಲೆಪಿಂ ಪಳ್ವಿರ್ದ ಬೆಳ್ವಾವು ದರ್ದುಟಿವೋಲ್[ಪಾಠಾಂ. ಮುರ್ಮುರಿನೇರ] ಮಾಣ್ದುದೆ ತಾಂ ಗಡ (ಲೀಲಾವ. ೨-೬೫). 'ದದ್ದರ್ರ₁' ಪರಾ. [ ? ]

**ದರ್ದುರಕ** (ನಾ). [ಕಾಮಶಾ] ರತಿಬಂಧಗಳಲ್ಲಿ ಒಂದು: ಅಸಿಯಳಂಗತನೆ ಮಲಂಗಿ ಸಸಿನೆ ತೊಡೆಯನಿಟ್ಟು ಮಡಿಯ ಪಸರವವಾಗೆ ಪದವನೆರಡನೂರು ಯುಗದೊಳು ಮಿಸುಕದಂತಿರಲುಜ್ ಪುಳಕಮೊಪರಲಪ್ಪಿ ಗಾಢದಿಂದವೂಸದು ರವಿಪಳಿಂದೆ ದರ್ದುರಕವೆನಿಪ್ಪುದು (ಅನವ. ೧೧-೮). [ ಸಂ. ]

**ದರ್ದುರಿ** (ನಾ). ಒಂದು ಬಗೆಯ ಮರ; ವಿಂಟ್ಲ ಮರ: "ದರ್ದುರಿಯೆನಲು ಮಿಟಲಿಯಕ್ಕು" (ಮಂಗರಾ. ೩೫-೧೪). [ ? ]

△**ದರ್ದುಟಿ** 'ದರ್ದುರ₂' ನೋ.

**ದರ್ದ್ರು** (ನಾ). ಹುಳುಕಡ್ಡಿ. [ ಸಂ. ]

**ದರ್ಪ** (ನಾ). ೧. ಹೆಮ್ಮೆ ; ಗರ್ವ ; ಸೊಕ್ಕು ; ಅಹಂಕಾರ; ಮದ : "ದರ್ಪಃ, ಮದಃ . . . ಅಹಂಕಾರಃ – ಈ ೬ ಗರ್ವಂ" (ಹಲಾಯು. ೦೧೯-೩೭) ; "ದರ್ಪಮೆನಿಸಿರ್ಪುದಂ ದಪ್ಪವೆನಲಕ್ಕು" (ಕವಿಕೃ. ೯೩) : ನಿಜಾಧೀಶ್ವರರಾಜ್ಞೆಯಿಂ ಪ್ರತ್ಯಂತವಾಸಿಗಳಾಗಿ ಮಲೆದ ರಿಪುನೃಪರ ಸಮಿತಿಯ ದರ್ಪ್ಪಮುಂ ಪೊಡಪ್ಪುರ್ಮನಡಂಗಿಸಿ ತದೀಯ ಸರ್ವ್ವಸ್ವಮಂ ನಿಜೇಶಂಗೆ ತಂದುಕೊಟ್ಟು (ನಾಂದೇಡ್. ೩-೨೨ ವ : 1047) ; ಹರುಷ ದರ್ಪ ಕ್ರೋಧ ಲಜ್ಜಾತುರತೆ ಮಾನ ವಿಮಾನವಿವರಲಿ ನಿರುತ ಸಮನೆಂದೆನಿಸಿ ಕೃತ್ಯಾಕೃತ್ಯಕೌಶಲವ ವಿರಚಿಸುವ ... ಕಾರ್ಯವೆಸಗುವವನೆ ಪಂಡಿತನು (ಕುವ್ಯಾಉ. ೩-೪೪). ೨. ಠೀವಿ ; ಜಬರ್ ; ಜೋರು ; ವೆಂಕಪ್ಪಯ್ಯ ಮೊದಲಿನಿಂದಲೂ ದರ್ಪದ ಗಂಡನಾಗಿದ್ದ ವ್ಯಕ್ತಿ (ವಿದ್ಯಾಕಿ. ೩): ಲಂಚ ಕಡಮೆಯಾಗಬೇಕಾದರೆ ಆಡಳಿತದಲ್ಲಿ ಬಿಗಿ ಮತ್ತು ದರ್ಪ ಹೆಚ್ಚಾಗ ಬೇಕು (ಪಂಜಕಾಂ. ೦೬೫). ೩. ಕೆಚ್ಚು ; ಧೈರ್ಯ ; "ಅದಟು" (ಕಕುಬಿ. ಕಿ. I, ೯೯). [ ಸಂ. ]

**ದರ್ಪಂಗಿಡು** 'ದರ್ಪಂಗೆಡು' ನೋ.

**ದರ್ಪಂಗೆಡು**, ದರ್ಪಂಗಿಡು (ಕ್ರಿ). ಸೊಕ್ಕು ಅಡಗು ; ಹಮ್ಮು ಕಡಮೆಯಾಗು : ಪಂಚಾಕ್ಷರಿಯು ಪ್ರಣವವ ತಪ್ಪದೆ ತ್ರಿಸಂಧ್ಯೆಯಲ್ಲಿ ನೆನೆಹುಗೊಳ್ಳಿ ಇದರಿಂದ ರುಜೆ ದರ್ಪಂಗೆಡುಗು (ಸವಚಿವ. ೦೯-೯೨) ; ಬಾಳೆ ಬಾಯ್ದಾರೆಯ ಸೋಂಕೆಂದು ಕದಳೀದಳ ಸ್ಪರ್ಶನಕ್ಕೆ ದರ್ಪಂಗೆಟ್ಟೊ[ಪಾಠಾಂ. ಗಿಟ್ಟೊ]ಪ್ಪಂ ಗುಂದುತ್ತುಂ (ಗಿರಿಕ. ೪-೧೧೮ ವ). **ದರ್ಪಂಗಿಡು** : ಮೇಲಿನ 'ಗಿರಿಕ' ಪ್ರಯೋಗದ ಪಾಠಾಂತರವನ್ನು ನೋಡಿ. [ ದರ್ಪ + ಕೆಡು₁ ]

**ದರ್ಪಕ₁** (ನಾ). ಕಾಮ ; ಮನ್ಮಥ : "ಪ್ರದ್ಯುಮ್ನಃ . . . ದರ್ಪಕಃ ಶೂರ್ಪಕಾರಾತಿಃ, ... ಮನೋಭವಃ ಈ ೨೮ ಕಾಮ(ದೇವ)ನ ಪೆಸರ್" (ಹಲಾಯು. ೭-೩೪) ; ಧೈರ್ಯಂಗೆಟ್ಟು ಮೇಲ್ವಾಯ್ವ ಚೇಷ್ಟೆಗೆ ಪೌಲಸ್ತ್ಯನು ಮೊತ್ತುಗೊಟ್ಟನೆನಲಾರು ದರ್ಪಕಂ ದಂಡಿಸಂ (ಕಂರಾಮಾ. ೯-೦೪೮) : ಓರೊಂದೆ ಪೂವಿನ ಬಾಣಂಗಳುಮೆಯ್ದು ಹೀನನಧಿಕಂಗಾಕ್ಷೇಪಮಂ ಮಾಪ್ಪುರ್ದಾವ ನಯಂ ದರ್ಪ್ಪಕ ಮೇಘಚಂದ್ರಮುನಿಯೊಳ್ಮಾಣ್ ನಿನ್ನ ದೋರ್ದ್ದರ್ಪ್ಪಮಂ (ಎಕ. II, ೦೨೭-೦೨೦ : 1115) ; ಸಕಳ ನಿಕೇತನಂಗಳೊಳೆ ದರ್ಪಕನುನ್ನತಿ ದರ್ಪಕಾಜ್ಞೆ ದರ್ಪಕನ ಕಥಾಳಿ . . . ದರ್ಪಕನಾಣೆ ಸುತ್ತಲುಂ (ಗಿರಿಕ. ೪-೦೨೦) : ಇದು ಕುಸುಮಾಸ್ತ್ರನಸ್ತ್ರಮಿದು ದರ್ಪಕನಾರ್ಪು ಮನೋಜನೋಜೆ ನೋಡಿದು ನನೆವಿಲ್ಲ ಬಲ್ಲಹನ ಚಿಲ್ಲಿದು . . . ಮಾರವೀರನಗ್ಗದಸದಳಂ ಕೃತಿಧ್ವಜವಿದುದೆಂದನಿಸಿರ್ದುದು ರೂಪು ನೀಜಿಯಾ (ರಾಜಶೇ. ೭-೩೩). [ ಸಂ. ]

**ದರ್ಪಕ₂** (ನಾ). ತರಕಲಾದುದು (?) : ದರ್ಪಕವಲ್ಲದ ಜಿಹ್ವಂ ನೇರ್ಪಟ್ಟಿಸಿದಾಗಿ ನುಣ್ಪುವೆತ್ತೆಳ್ಳನಿತುಂ ಕರ್ಕಿಲ್ಲದೆ ನಿಡಿದಪ್ಪುದದಾರ್ಪತೆರವು ವಶನರಾಜಿಯುಂ ರಾಜಪ್ಪುದು (ಅಶ್ವಶಾ. ೧-೨೨). [ ? ]

**ದರ್ಪಕದರ್ಪಭಂಜನ** (ನಾ). ೧. ಮನ್ಮಥನ ಗರ್ವಭಂಗ ಮಾಡಿದವನು; ಶಿವ. ೨. ಮನ್ಮಥನ ಸೊಕ್ಕನ್ನು ಅಳಿಸಿದವನು; ಜಿನ : ಅನಂತಬೋಧನಿಧಿ ನಿತ್ಯಸುಖೋನ್ಮುಖನೀ ಕುಮಾರಕಂ ಪರಿಣಯನೋತ್ಸವಕ್ಕೆ ಬಗೆ ದರ್ಪನೆ ದರ್ಪಕದರ್ಪಭಂಜನಂ (ಮಲ್ಲಿಪು. ೦೩-೮೪).

[ ದರ್ಪಕ₁ + ದರ್ಪ + ಭಂಜನ ]

**ದರ್ಪಕಧ್ವಂಸಿ** (ನಾ). ಕಾಮನನ್ನು ನಾಶಮಾಡಿದವನು ; ಶಿವ : ಇಂತು ಸಕಲದೇವವಲ್ಲಭನಪ್ಪ, ಸರ್ವಾಭರಣನಂ ದರ್ಪಕಧ್ವಂಸಿಯಂ . . . ಅರ್ಚಿಸುತ್ತಮಿಪ್ಪ ಸಮಯದೊಳು (ಬಸವ. ೪-೧) ; ಕಂದರ್ಪಜನಕಾದಿಗಳ್ ಮೊರೆಟೆಯಿಡಲ್ ಕೇಳ್ದು ತದ್ದರ್ಪಕಧ್ವಂಸಿ ತವ ವಧೆಗೆ ಬರುತಿರಲುಸಿರ ಬಂದೆವಿದು ಹದನೆಂದನು (ಚಲಪು. ೪೭-೧೭). [ ಸಂ. ದರ್ಪಕಧ್ವಂಸಿನ್ ]

**ದರ್ಪಕಪ್ರತಾಪ** (ನಾ). ಕಾಮನ ಪರಾಕ್ರಮ ; ಮನ್ಮಥನ ಶಕ್ತಿ : ವಿಚಾರಿ ಪೊಡಿಂತಿದು ದರ್ಪಕಪ್ರತಾಪದ ಪರಿಜೊಂದು ಸಂದನೆಯೊ ಪೇಳೆನೆ ಬಂದುದು ಭಾಮಿನೀಜನಂ (ರಾಜಶೇ. ೦೦-೦೨). [ ದರ್ಪಕ₁ + ಪ್ರತಾಪ ]

**ದರ್ಪಕವಿರೋಧಿ** (ನಾ). ಮನ್ಮಥನ ಶತ್ರು ; ಶಿವ : ಬಾಣಾಸುರಂ ಸಂಗ್ರಾಮಕಾಮನಾಗಿ ತನ್ನುಪವನದೊಳ್ ಸನ್ನಿಹಿತನಾಗಿರ್ಪ ದರ್ಪಕ ವಿರೋಧಿಯನಾರಾಧಿಸಿ (ಜಗವಿ. ೦೭-೮೮ ವ). [ ದರ್ಪಕ₁ + ವಿರೋಧಿ ]

**ದರ್ಪಕಹರ** (ನಾ). = ದರ್ಪಕಧ್ವಂಸಿ : ದರ್ಪಕಹರನಿಂದ ತನು ದಗ್ಧನಾದ ಕಂದರ್ಪ ನಿನ್ನಯ ಬಸಿಱೊಳಗೆ ಬರ್ಪನು ನಾ ಕೊಟ್ಟ ವರದೊಳು ತುಸು ಮಾತ್ರ ತಪ್ಪದು ಕೇಳಾಯತಾಕ್ಷಿ (ಮೋಹತ. ೪-೨೩). [ ಸಂ. ]

**ದರ್ಪಕಾಹಿತ** (ನಾ). ಮನ್ಮಥನ ವಿರೋಧಿ ; ಶಿವ : ದರ್ಪಕಾಹಿತಮೂರ್ತಿ ಮುನಿಮುಖದರ್ಪಣನು ಶಿಷ್ಯನನು ಕರೆದು ಸಮರ್ಪಿಸಿದನರಸಂಗೆ ವೇದವ್ಯಾಸಮುನಿರಾಯ (ಕುವ್ಯಾಆ. ೨-೭). [ ದರ್ಪಕ₁ + ಅಹಿತ ]

**ದರ್ಪಣ** (ನಾ). ಕನ್ನಡಿ; ಮುಕುರ : "ಆದರ್ಶಃ, ದರ್ಪಣಃ, ಮುಕುರಃ – ಈ ೩ ಕನ್ನಡಿ" (ಹಲಾಯು. ೯೦-೪೦೦) ; "ಆದರ್ಶನಂ ದರ್ಪಣಂ ಮುಕುರ ಮೆಂದೆನಲ್ ಕನ್ನಡಿಗೆ ನಾಮಮಕ್ಕುಂ" (ಮಂಗರಾ. ೬೧-೦೪): ಕೇರಳ ವಿಟೀ ಕಟೀಸೂತ್ರಾರುಣಮಣಿ ಮಲಯಯುವತಿದರ್ಪಣನಾಂಧ್ರೀ ನೀರಂಧ್ರ ಬಂಧುರಸ್ತನಹಾರನುದಾರಂ ಸರಸ್ವತೀಮಣಿಹಾರಂ (ಆದಿಪು. ೦-೩೨) : ಕಂದನ ಕೈಯ ದರ್ಪಣದ ಪ್ರತಿಬಿಂಬ ನುಂಗಿತ್ತು ದಿವಾರಾತ್ರಿ ಉದಯದ ಬೆಳಗನು ಕತ್ತಲೆ ನುಂಗಿತ್ತು (ಅಪಹಂ. ೪-೦೩) ; ತುಪ್ಪೇಱಿದ ದರ್ಪಣದೊಳ್ ಪಜ್ಜಳಿಸಲಾರ್ಪುದೇ ಪ್ರತಿಬಿಂಬಂ (ಯುಶೋಚ. ೦-೩೯) :

[ ಸಂ. ]

**ದರ್ಪಣನ್ಯಾಯ** (ನಾ). ಒಂದು ಬಗೆಯ ನ್ಯಾಯ ; P ಕನ್ನಡಿಯಲ್ಲಿ ಪ್ರತಿಬಿಂಬಿಸುವ ಮುಖವೇ ಮೊದಲಾದವುಗಳ ಪ್ರತಿಬಿಂಬವು ಬಿಂಬಕ್ಕಿಂತ ಬೇರೆಯಾದುದಲ್ಲ. ಹಾಗೆಯೇ ಒಂದು ವಸ್ತುವಿನಂತೆ ಮತ್ತೊಂದು ವಸ್ತುವು ಇದೆ ಎಂದು ತಿಳಿಸುವ ನ್ಯಾಯ. ಇದನ್ನೇ ಬಿಂಬ ಪ್ರತಿಬಿಂಬನ್ಯಾಯವೆಂದೂ ಹೇಳುತ್ತಾರೆ : ವರ ಸಮಾನೀಕರೊಳ್ ದರ್ಪಣನ್ಯಾಯದಿಂ ಪರಿಶೋಭಿಸುತ್ತಿಹಂ (ವಂಶಾರಾ. ೨-೧-೩೦)

[ ದರ್ಪಣ + ನ್ಯಾಯ ]

**ದರ್ಪಣಮಂಟಪ** (ನಾ). ಕನ್ನಡಿಯಿಂದ ರಚಿತವಾದ ಮಂಟಪ, - ಚಪ್ಪರ ; ಕನ್ನಡಿ ಜೋಡಿಸಿದ ಮಂಟಪ : ಮತ್ತಮಾ ವನಂಗಳಲ್ಲಿ ಚಿತ್ರಶಾಲೆ . . . ದರ್ಪಣಮಂಟಪ, ಪಟಮಂಟಪ, ಪುಷ್ಪಮಂಟಪ, ಚಿತ್ರಮಂಟಪ, ರತ್ನಮಂಟಪ, ತರುವಾಟಿಗಳ ತಣ್ಣೆಲ್ಲಗಳೊಳಗೆಯುಂ (ವಿವೇಕ. ೩೨೮). [ ದರ್ಪಣ + ಮಂಟಪ ]

**ದರ್ಪಣಲಿಪಿ** (ನಾ). ಒಂದು ಬಗೆಯ ಲಿಪಿ ; ಗೂಢಲಿಪಿ ; ಕನ್ನಡಿಯಲ್ಲಿ ನೋಡಿ ಓದಬಹುದಾದ ಲಿಪಿ (?) : ಲೇಖಲಿಪಿ, ದರ್ಪಣಲಿಪಿ, ರಗಣಲಿಪಿ . . . ಅಗಣಿತ ಲಿಪಿಗಳ ನೋಡಲಚ್ಚಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳಗೊಳುತಿರ್ದರು ವಿದ್ವಾಂಸರುಗಳೆಲ್ಲ (ಭಾಸ್ಕರ. ೬೭-೬). [ ದರ್ಪಣ + ಲಿಪಿ ]

**ದರ್ಪಣಾವಲೋಕನ** (ನಾ). ಕನ್ನಡಿಯಲ್ಲಿ ನೋಡಿಕೊಳ್ಳುವಿಕೆ : ಸಕಲ ವಾದ ಭೂಷಣಭೂಷಿತನಾಗಿ ದರ್ಪಣಾವಲೋಕನವಂ ಮಾಡಿ, ಅಗ್ನಿ ಕಾಣಿಸಿದ್ದನ್ನು ತಿಳಿದು ನೋಡಿ ಭೋಜನ ಮಾಡಬೇಕೆಂದು ಬಲ್ಲವರ ಮತವು (ಸಕವ್ಯ. ೪೯). [ ದರ್ಪಣ + ಅವಲೋಕನ ]

**ದರ್ಪಪೂರಿತ** (ಗು). ದರ್ಪದಿಂದ ಕೂಡಿದ ; ಠೀವಿಯಿಂದ ಕೂಡಿದ : "ಬರುತ್ತೀಯೋ ಇಲ್ಲೋ ?" ಎಂದು ಫೌಜುದಾರರು ಕೇಳಿದರು – ದರ್ಪ ಪೂರಿತ ಸ್ವರದಲ್ಲಿ (ನಾಪೋಲಿ. ೨೪೬). [ ದರ್ಪ + ಪೂರಿತ ]

**ದರ್ಪಮುಖಿ** (ನಾ). ಸೊಕ್ಕೇರಿದವನು : "ಮದಮುಖರೆನೆ ದರ್ಪ ಮುಖರು" (ಭಾರತಿ. ೨೪). [ ದರ್ಪ + ಮುಖ ]

**ದರ್ಪರಹಿತ** (ಗು). ೧. ಅಹಂಕಾರವಿಲ್ಲದ ; ಸರಳ ಸ್ವಭಾವದ. (ನಾ). ೨. ಅಹಂಕಾರವಿಲ್ಲದವನು ; ನಿರಹಂಕಾರಿ ; ಸರಳ ಸ್ವಭಾವದವನು: ಸಿರಿಯೊಡೆಯನಾಗಿಯುಂ ದರ್ಪರಹಿತನೋದೊಡೆಯನಾಗಿಯುಂ ವಿಗಳಿತ ಮತ್ಸರಂ . . . ಎಂ ಬಿರಿಯನೂ ಖಗೇಂದ್ರಾಧೀಶಂ (ಶಾಂತಿಪು. ೩-೮೬). [ ದರ್ಪ + ರಹಿತ$_1$ ]

**ದರ್ಪವಡೆ** (ಕ್ರಿ). ಅಹಂಕಾರವನ್ನು ಹೊಂದು ; ಗರ್ವ ಪಡೆ : ದರ್ಪಕ ನೆರ್ದೆಯಲ್ಲಿ ಕಿವಿದು ರಕ್ಕಸ ಬಹು ದರ್ಪವಡೆದು ನಿಂದಿರ್ದ (ಪ್ರೋಹಿತ. ೦೨-೬೬). [ ದರ್ಪ + ಪಡೆ$_1$ ]

**ದರ್ಪಿತ** (ಗು). ೧. ದರ್ಪದ ; ಸೊಕ್ಕಿನ ; ಗರ್ವದ : ಕ್ಷಿತಿತಳದೊಳ್ ನೆಗಟ್ದಿರ್ದ ಪ್ರತಿಮಲ್ಲನನಿಕ್ಕಿ ಮುಯ್ಯ್ಯನಣಮಾನದೆ ದರ್ಪಿತ ದುರಿತ ಮಲ್ಲನುಮನುಡಿವ ತಕ್ಕಿನಿಂ ಸಭೆಗೆ ನಡೆದಂ (ಆದಿಪು. ೦೪-೦೩೪) ; ಸೂರ್ವಕ ಪ್ರಹರಪ್ರಹಾರಿಗೆ ದರ್ಪಿತತ್ರಿಪುರೇಂದ್ರನಾಗ್ನಿಗಹರ್ಪತಿಪ್ರಣುತ ಪ್ರ ಭಾ ಮಯ ದಿವ್ಯದೇಹಂಗೆ . . . ಅರ್ಪಿಸುವೆನು (ಬಸಪು. ೫೦-೪೦). (ನಾ). ೨ = ದರ್ಪಿಷ್ಠ : ಆದರೆ ಅವನ ಅನುಭವಕ್ಕೆ ಇನ್ನೂ ಗೋಚರವಾಗದ ಅನೇಕ ವಿಷಯಗಳು ಈ ಪ್ರಪಂಚದಲ್ಲಿರುವುದರಿಂದ ಇಂತಹ ಭವಿಷ್ಯವನ್ನು ನುಡಿಯುವವನು ದರ್ಪಿತನೆಂದು ಹೇಳಬೇಕೇ ಹೊರತು ಅಜ್ಞನೆಂದಲ್ಲ (ಭಾಕವಿ. ೨೭೬). [ಸಂ.]

**ದರ್ಪಿಷ್ಠ** (ನಾ). ದರ್ಪದಿಂದ ಕೂಡಿರುವವನು; ಅಹಂಕಾರಿ : ನೆರೆದಿರ್ದ ನೃಪವರರುಮಂ ಮೂದಲಿಸಿ ಮಾತಂ ಬೂತುಮನಟ್ಟುವುದುಂ ದರ್ಪಿಷ್ಠ ನಪ್ಪ ತ್ರಿಪೃಷ್ಠಕುಮಾರಕಂ (ಶಾಂತಿಪು. ೫-೪೭ ವ) ; ರತ್ನಸಿಂಹಾಸನದ ಮೇಲೆ ದರ್ಪಿಷ್ಠ ದರ್ಪಕಕರಿಮೃಗೇಶನಗಜಾತಿವರಸೋಲಗಂಗೊಟ್ಟನು (ಸಿದ್ಧರಾ. ೧-೦೫). [ ಸಂ. ]

**ದರ್ಪಿಸು** (ಕ್ರಿ). ದರ್ಪಹೊಂದಂ ; ಗರ್ವಪಡು ; ಹೆಮ್ಮೆತೋರು: (೩). [ ದರ್ಪ + –ಇಸು$_1$ ]

**ದರ್ಬಾರ್‌ಚಾವಡಿ** (ನಾ). ದರ್ಬಾರು ನಡೆಸುವ ಆಸ್ಥಾನ ಮಂದಿರ ; ಓಲಗಶಾಲೆ : ಮಹಾಸ್ವಾಮಿಗಳ ದರ್ಬಾರ್‌ಚಾವಡಿಯಲ್ಲಿ ಕಾಲುಮಾಡಿ ಯನ್ನಾಗಿ ಉಪಯೋಗಿಸಲು ಯೋಗ್ಯವಾಗಿದೆ (ಗಲಿಪ್ರ. ೨೩). [ ದರ್ಬಾರ್‌೦ (<ದರ್ಬಾರು) + ಚಾವಡಿ ]

**ದರ್ಬಾರ್‌ಭಕ್ಷಿ** (ನಾ). (ಆಸ್ಥಾನದ) ಹಣಕಾಸಿನ ವ್ಯವಹಾರ ನೋಡಿ ಕೊಳ್ಳುವ ಅಧಿಕಾರಿ : ಕೂಡಲೆ ಮಹಾರಾಜರು . . . ದರ್ಬಾರ್‌ಭಕ್ಷಿ ಯವರಿಗೆ ಆದೇಶಿ ಅಪ್ಪಣೆಮಾಡಿದರು (ಸಂಗೀತ. ೪೯). [ ದರ್ಬಾರ್$_0$ (<ದರ್ಬಾರು) + ಭಕ್ಷಿ (<ಬಕ್ಷಿ) ]

**ದರ್ಬಾರಿ, ದರಬಾರಿ** (ಗು). ೧. ದರ್ಬಾರಿಗೆ ಉಚಿತವಾದ; ಆಸ್ಥಾನಕ್ಕೆ ಯೋಗ್ಯವಾದ : ಪ್ರತಿಷ್ಠಿತರನ್ನೆಲ್ಲ ದರ್ಬಾರೀವಿನಯದಿಂದ ಸ್ವಾಗತಿಸಿದ (ಗ್ರಾಮಾಯ. ೮). (ನಾ). ೨. ಆಸ್ಥಾನಕ್ಕೆ ಸಂಬಂಧಿಸಿದವನು ; ಸಭಾಸದ ; ಆಸ್ಥಾನಿಕ : "ಆಸ್ಥಾನದ ದೊಡ್ಡ ಮನುಷ್ಯ; ಆಸ್ಥಾನಿಕ; ದರ್ಬಾರಿ" (Courtier. ೩೦೫೨). **ದರಬಾರಿ :** ೨. ನಗರದಲ್ಲಿ ಅವರಿಗೆ ಯಥೇಷ್ಟ ದರಬಾರಿಗಳು ದೊರೆತರು (ಸ್ಮೃತಿಚಿ. ೪೦೩). [ ←ಪಾರ. ಹಿಂ. ದರ್ಬಾರೀ; ದರಬಾರೀ, ಮರಾ. ದರಬಾರೀ ]

**ದರ್ಬಾರು, ದರಬಾರ, ದರಬಾರು** (ನಾ). ೧. ಆಸ್ಥಾನ; ಒಡ್ಡೋಲಗ; ರಾಜಸಭೆ : ಮಹಾರಾಜರವರ ದರ್ಬಾರಿನಲ್ಲಿ . . . ಸರದಾರರನ್ನು ಮೊಕರರ್ರುಮಾಡಿದರು (ಮಹಾಪಂ. II, ೩) ; ಅರಸನು ದರ್ಬಾರನ್ನು ಮುಗಿಸಿ ಹೊರಟನು (ಶಂಬಾಪ್ರ. ೬೦) ; ಸಭೆಯು ಒಬ್ಬ ಮಹಾರಾಜನ ಅಥವಾ ಮಠಾಧಿಪತಿಯ ದೊಡ್ಡ ದರ್ಬಾರಿನಂತೆ ಕಾಣುತ್ತಿತ್ತು (ಹುಬ್ಬಿಹ. ೨೨). ೨. ಆಡಂಬರ ; ವೈಭವ ; ದೌಲು : ಆತನ ದರ್ಬಾರಿಗೆ ಕೊನೆಯೇ ಇಲ್ಲ (ತತ್ವಪ್ರಾ. ೫೬೩) ; "ಆದರೆ ನೆನಪಿರಲಿ, ನನ್ನ ದರ್ಬಾರೆಲ್ಲ ಒಂದೆ ಒಂದು ಗಂಟೆಯದು" ಎಂದು ಮಾಸ್ಲೆನಿಕೋವ್ ನುಡಿದನು (ಪುನರು. ೨೨೩). ೩. ದರ್ಪದಿಂದ ಕೂಡಿದ ಅಧಿಕಾರ : "ನೀನು ಈಗಿನಿಂದ ಏಟು ಹಾಕುತ್ತಿದ್ದೀ, ದರ್ಬಾರು ನಡೆಸಲಿಕ್ಕೆ" ರಾಯರು ಹೆಂಡತಿಯ ಮಾತಿಗೆ ನಕ್ಕು ಹೇಳಿದರು (ಮುಕ್ತಿ. ೮). ೪. [ಸಂಗೀತ] ಒಂದು ರಾಗದ ಹೆಸರು: ದರ್ಬಾರು:– ೨೨ನೇ ಮೇಳಕರ್ತ ಖರಹರಪ್ರಿಯ:ದಲ್ಲಿ ಜನ್ಯ. ಗಂಭೀರ ರಾಗ, ಉಪಾಂಗರಾಗ . . . ವೀರರಸ ಪ್ರಧಾನ ರಾಗ. ಎಲ್ಲಾ ವೇಳೆ ಯಲ್ಲೂ ಹಾಡಬಹುದು (ಸಂಗೀಶಂ. ೦೬೨). **ದರಬಾರ$_1$ :** ೧. : ಮಹಾರಾಜರ ದರಬಾರದ ಹಳೆಯ ಕಾಗದ ಪತ್ರಗಳನ್ನು ನೋಡುವ ಇಚ್ಛೆ ಅವರಿಗಿದ್ದಿತು (ರತ್ನಗೋ. ೭೦) : ದರಬಾರದಿಂದ ಗಣೇಶ ನಾರಾಯಣನು ತನ್ನ ಮನೆಯ ಕಡೆಗೆ ಹೊರಟನು (ಮುಂದಾಕಿ. ೨೨). **ದರಬಾರು :** ೧. ಶ್ರೀರಂಗಪಟ್ಟಣದಲ್ಲಿ ದವಲತ್ತು ಮಾಡಿದ ನವಾಬ ಹೈದರಲ್ಲಿ ಖಾನ ಬಹದರವರ ದರಬಾರಿನ ವರ್ತಮಾನದ ವಿವರ (ಹೈದರ.೨೯): ಅದನ್ನು ಬಾದಷಹ ಕೇಳಿ ದೊಡ್ಡ ದರಬಾರು ಮಾಡಿ . . , ಬುದ್ಧಿಯನ್ನು ಅರಿಯಬೇಕು (ಕಥಾಮಂ.IV, ೫೭) ; ಶ್ರೀರಂಗಪಟ್ಟಣದ ಮಹಾಮಂಡ ಲೇಶ್ವರರ ದರಬಾರಿನಲ್ಲಿ ಮೈಸೂರಿನ ರಾಜಒಡೆಯರಿಗೆ ಮನ್ನಣೆಯಿದ್ದಿತು (ಶ್ರೀರಾಯ. ೫).

**ದರ್ಬಾರು ನಡೆಸು, ದರಬಾರ ನಡೆಸು** = ೧. ಒಡ್ಡೋಲಗ ನಡೆಸಂ: ಮೈಸೂರು ಮಹಾರಾಜರು ದಸರೆ ಹಬ್ಬದಲ್ಲಿ ದರ್ಬಾರು ನಡೆಸುತ್ತಿದ್ದರು (ರೂಢಿ). ಭಾರತೀಯರ ಹೃದಯ ದೈವ ಸಮ್ರಾಜ ದರಬಾರ ನಡೆಸಿದನೆಲ್ಲಿ ನೋಡಿದುವೆ ದಿಲ್ಲಿ (ಕಪುಷ್ಪ. ೫೫). ೨. ಮಜಾ ಮಾಡು: ನಡೆಯುವಾಗ ಅವನು ದರ್ಬಾರು ನಡೆಸಿಬಿಟ್ಟ (ರೂಢಿ). ೩. ಅಧಿಕಾರ ನಡೆಸಂ : ಎಲ್ಲರ ಮೇಲೂ ದರ್ಬಾರು ನಡೆಸಿದರೆ ಸುಮ್ಮನಿರುತ್ತಾರೆಯೇ ? (ರೂಢಿ). [ ←ಪಾರ. ಹಿಂ. ದರ್ಬಾರ್; ದರಬಾರ್, ಮರಾ. ದರಬಾರ್ ]

**ದರ್ಬು** (ನಾ). (?) : ಒಬ್ಬ ಪುರುಷನು ಹಲವು ಸ್ತ್ರೀಯರ ದರ್ಬಿನಲ್ಲಿ ಭೋಗಿಸುವನದು ತಾನಿಬ್ಬರೊಳು ಕದಂಬರತಿಯ್ಕೆ (ಅಕ್ರೂ॥ಚ. ೦೦-೨೭). [ P ಇದು 'ತರ್ಬು' ಎಂಬುದರ ಅಪಲಿಖಿತವಿರಬಹುದು ]

**ದರ್ಭೆ, ದಬ್ಬೆ** (ನಾ). ಕುಶ; ದರ್ಭೆ : ಕೊರಲ ಪೊಸಜನ್ನಿವರಮೊಕ್ಕಿರೆ . . . ದರ್ಭೆ ಕರಮುಕಿಶಯದಿಂ ಬೆರಳೊಳ್ ರಂಜಿಸೆ ಕಾಶಾಂಬರಮೆಸೆದಿರೆ ಬಂದು ನಿಂದು ಭೂಸುರನೊರ್ವಂ ವೇದರುಕ್ಕಂ ವೇಬ್ಬಕ್ಷತೆಯನೀವುದುಂ (ಧರ್ಮಾಮೃ. ೦-೯೫). 'ದರ್ಭೆಹುಲ್ಲು' ಪರಾ. ದಬ್ಬೆ : "ಧರ್ಭಾ – ದಬ್ಬೆ" (ಕಾಶಕ್ಕ. ೨೦೯). "ದಬ್ಬೆ–ದರ್ಭಾ = ಕುಶ" (ತದ್ಭಕೋ. ೦೮) : [ <ಸಂ. ದರ್ಭ ]

**ದರ್ಭೆಹುಲ್ಲು** (ನಾ). ಒಂದು ಬಗೆಯ ಹುಲ್ಲು; ಕುಶ: ನಾಳೆ ಗ್ರಹಣ, ಸ್ವಲ್ಪ ದರ್ಭೆಹುಲ್ಲು ತಾ (ಒಂ). [ ದರ್ಭೆ + ಹುಲ್ಲು (<ಪುಲ್) ]

**ದರ್ಭ** (ನಾ). ಹೋಮ, ಹವನಾದಿಗಳಿಗೆ ಬಳಸುವ, ಸೂಜಿಯಂತೆ ಮೊನೆಯುಳ್ಳ ಹುಲ್ಲು; ದರ್ಭೆಯ ಹುಲ್ಲು; ಕುಶ; ದರ್ಭೆ: "ಬರ್ಹಿಃ ದರ್ಭಃ, ಕುಥಃ, ಕುಶಃ – ಈ ೪ ಕುಶೆ" (ಹಲಾಯು. ೩೨-೩೭). [ ಸಂ. ]

**ದರ್ಭಪರಿಸ್ತರಣ** (ನಾ). ದರ್ಭೆಯನ್ನು ಹರಡಿರುವುದು; ಹಾಸಿದ ದರ್ಭೆ: ದರ್ಭವಿಷ್ಟರೇ – ದರ್ಭಪರಿಸ್ತರಣದ ಮೇಲೆ, ಶಾಯಯೇತ್ – ಮಲಗಿಸುವುದು (ಪ್ರತಿಷ್ಠಾ. ೬-೦). [ ದರ್ಭ + ಪರಿಸ್ತರಣ ]

**ದರ್ಭಶಯನ** (ನಾ). ೧. ದರ್ಭೆಯ ಹುಲ್ಲಿನಿಂದ ಮಾಡಿದ ಹಾಸಿಗೆ; ದರ್ಭೆಹುಲ್ಲಿನ ಹಾಸಿಗೆ: ಚಲಾತಾವರ್ತರ್ ಪೂಜಾಪುರಸ್ಸರಂ ದರ್ಭ ಶಯನತಳಗತರ್ . . . ಬಂದು (ಆದಿಪು. ೦೩-೫೮ ವ); ಲಕ್ಷ್ಮಣನೊಡನೆ ದರ್ಭಶಯನದಲ್ಲಿ ಮಲಗಿದನು (ಪಕಥಾ. ೪೦೦). ೨. ದಕ್ಷಿಣ ಭಾರತದಲ್ಲಿ, ರಾಮೇಶ್ವರದ ಹತ್ತಿರದಲ್ಲಿರುವ, ರಾಮನು ದರ್ಭಶಯನದಲ್ಲಿ ಮಲಗಿದ್ದನೆಂದು ಹೇಳಲಾದ ಒಂದು ಸ್ಥಳದ ಹೆಸರು; ಒಂದು ತೀರ್ಥಕ್ಷೇತ್ರ. [ ದರ್ಭ + ಶಯನ ]

**ದರ್ಭಶಯ್ಯೆ** (ನಾ). = ದರ್ಭಶಯನ ೧: ಅರ್ಚಿಸುವ ತುರಂಗದಂತಿರಥ ಸಂಕುಳಮೇಱುವ ದರ್ಭಶಯ್ಯೆ ಪೂಜಿಸುವ ಜಿನೇಂದ್ರಬಿಂಬಮೆಸೆವುಗ್ರ ರಣಾನಕರೌದ್ರಘೋಷಮೇರ್ವೆಸಕಮನುಂಟುಮಾಡಿದುದು ಪಂದೆಗಂ (ಆದಿಪು. ೦೯-೯೦). [ ದರ್ಭ + ಶಯ್ಯೆ ]

**ದರ್ಭಾಂಕುರ** (ನಾ). ದರ್ಭೆಹುಲ್ಲಿನ ತುದಿ: ಒಂದು ದಿವಸಂ ಕೋಣೆಯೆಂಬ ಕೋಟೆಯ ತಡಿಯೊಳ್ ತನ್ನ ಕಾಲಂ ದರ್ಭಾಂ[ಶಾಕಾಂ. ವನ್ಯಾಂ]ಕುರಂ ನೆತ್ತರ್ವರೆ ಕೊಂಡೊಡೆ ಮುಳಿದದನಗುಟ್ಟು ಸುಡುವೊನಂ ಸುಬಂಧು ಕಂಡು (ವಡ್ಡಾರಾ. ೦೮೪-೦). [ ದರ್ಭ + ಅಂಕುರ ]

**ದರ್ಭಾಧಿಕಾರ** (ನಾ). ದರ್ಭೆಯನ್ನು ಧರಿಸುವ ಹಕ್ಕು; ದರ್ಭೆಯನ್ನು ಹಿಡಿದು ಕರ್ಮಾಚರಣೆ ಮಾಡುವ ಅಧಿಕಾರ: ಚಾತುರ್ವರ್ಣ್ಯದೊಳಂ ದ್ವಿಜಜಾತಿಗೆ ದರ್ಭಾಧಿಕಾರಮಲ್ಲದೆ ವಂಶೋದ್ಭೂತನೃಪೋಚಿತ ಮರಿಯಂ ಘಾತಿಪ ಶಸ್ತ್ರಾಸ್ತ್ರಮವರ್ಗೆ ಜಾತಿವಿರುದ್ಧಂ (ಗದಾಯು. ೩-೦೭). [ ದರ್ಭ + ಅಧಿಕಾರ ]

**ದರ್ಭಾಸನ** (ನಾ). ದರ್ಭೆಯಿಂದ ಮಾಡಿದ ಪೀಠ; ಕುಶಾಸನ: ಕಾಪಾಲಿಕನು ಕಪಾಲಕುಂಡಲೆಯನ್ನು ನವಕುಮಾರನನ್ನೂ ದರ್ಭಾಸನದ ಮೇಲೆ ಕುಳ್ಳಿರಿಸಿ, ತಾನು ತಾಂತ್ರಿಕ ಸಂಬಂಧವಾದ ಪೂಜೆಗೆ ತೊಡಗಿದನು (ಕಪಾಕುಂ. ೦೨೯). [ ದರ್ಭ + ಆಸನ ]

**ದರ್ಭಾಸ್ತರ** (ನಾ). ದರ್ಭೆಯ ಹಾಸು; ಹಾಸಿದ ದರ್ಭೆ: ಬದರಿಯ ಫಲಂಬೆರಸಿದಿಂಗುಳದ ಹಿಂಡಿಯಂ ದರ್ಭಾಸ್ತರದೊಳಿಟ್ಟು ಪಿಂಡವಿತ್ತನ್ (ಶ್ರೀರಾಮಾ. ೦೬೭-೪೨೭). [ ದರ್ಭ + ಆಸ್ತರ ]

**ದರ್ಭಾಸ್ತರಣ** (ನಾ). = ದರ್ಭಾಸ್ತರ: ನಿಜವಿಜಯತುರಗರಥಂಗಳ ನರ್ಚಿಸಿ ಪೊಡವಟ್ಟು ದರ್ಭಾಸ್ತರಣದೊಳಾಯಿರುಳಂ ಕಳೆದಾಗಳ್ (ಪಂಪಭಾ. ೦೨-೫೩ ವ); ತರುಣಿ ನೀ ಹೆಸರಿಸಿದವಿವು ದುರ್ಮರಣಸಾಧನವವುಲ ದರ್ಭಾಸ್ತರಣವಿದು ಪಾವನವಲಾ ಪ್ರಾಯೋಪವೇಶದಲಿ (ಕುಮ್ಯಾಳ. ೫೦-೦೯). [ ದರ್ಭ + ಆಸ್ತರಣ ]

**ದರ್ಭೆ** (ನಾ). = ದರ್ಭ: "ಬರ್ಹಿಃ ಕುಶಂ ಕುಥಮೆನಲು ದರ್ಭೆಯದು" (ಮಂಗರಾ. ೩೪-೯); ನಿಮ್ಮ ಕೈಯಲ್ಲಿ ಕಟ್ಟಿದ ದರ್ಭೆಯ ಹುಲ್ಲು ಕೂಡಲ ಸಂಗನನಱಿಯದೆ ಮೊಱೆಯಿಡುವಂತೆ (ಬಸವ. ೪. ೫೮೯); ಬೆರಳಲಿ ಮುರಿದ ದರ್ಭೆಗಳ ಉಟ್ಟ ಬಾಸರ ಬಳಲುಗಚ್ಚೆಯನಟ್ಟಹಾಸದ ಜನದ ನಗೆಗಳ ನಟ್ಟವಿಗನೋಸರಿಸಿ ಸಭೆಯಲಿ ಮೆಲ್ಲನೈತಂದ (ಕುಮ್ಯಾಳ. ೦೫-೦೫). [ ಸಂ. ದರ್ಭ ]

**ದರ್ಭೋದಕ** (ನಾ). ದರ್ಭೆಯಿಂದ ಸಿಂಪಡಿಸುವ ಅಥವಾ ತಳಿಯುವ ನೀರು: ಮಂತ್ರಪೂತವಾದ ಈ ದರ್ಭೋದಕದಿಂದ ನಿನ್ನ ಶರೀರದ ಬಾಧೆಯೆಲ್ಲಾ ಪರಿಹಾರವಾಗುವುದು (ಶಾಕುಂತ. ೪೩). [ ದರ್ಭ + ಉದಕ$_2$ ]

**ದರ್ಮ** 'ಧರ್ಮ$_1$' ನೋ.

**ದರ್ಮಗಾಳೆ** 'ದರ್ಮ್ಮಗಹಳೆ' ನೋ.

**ದರ್ಮಗೆಯ್** (ಕ್ರಿ). ಧರ್ಮಮಾಡು; ದಾನಮಾಡು; ಉದಾರವಾಗಿ ಕೊಡು: ಸಕಳ ಸಮುಮೊನ್ನು ದರ್ಮಗೆಯ್ದು ಸನ್ನಸದ × × × ನಿಜ ಸ್ಥಿತಿ (ಎಕ. III, ಮ್ಯಸೂರು. ೪೦-೪; ಸು. 980 ?). [ ದರ್ಮ (< ಧರ್ಮ$_1$) + ಕೆಯ್$_1$ ]

**ದರ್ಮಶಾಸನ** 'ದರ್ಮ್ಮಶಾಸನ' ನೋ.

**ದರ್ಯಾಪು** 'ದರ್ಯಾಫ್ತು' ನೋ.

**ದರ್ಯಾಪ್ತಿ** 'ದರ್ಯಾಫ್ತು' ನೋ.

**ದರ್ಯಾಫ್ತಿ** 'ದರ್ಯಾಫ್ತು' ನೋ.

**ದರ್ಯಾಫ್ತು**, ದರಿಯಾಪು, ದರಿಯಾಫ್ತಿ, ದರ್ಯಾಪು, ದರ್ಯಾಪ್ತಿ, ದರ್ಯಾಫ್ತಿ (ನಾ). ವಿಚಾರಣೆ; ತನಿಖೆ; ತಪಾಸಣೆ: ಉಸುರೋರ್ವ ಮುನಿಷಿಯಂ ಕರದುಕೊಂಡುದ್ದೂರಿಗೈದಿಯಾ ಖೂನಿ ದರ್ಯಾಫ್ತನ್ನು ಮಾಡಿಯಾ ಜನರೆಲ್ಲರಂ ಅದ್ದಕದಿ ಕರದುಕೊಂಡೈದುವಂತೆಯು (ಅರ್ಜಾವಿ. ೩೦-೩೮). **ದರಿಯಾಫ್ತು**: ನಾಳೆ ಈ ನ್ಯಾಯ ದರಿಯಾಫ್ತು ಆಗುವಾಗ್ಗೆ ಜಬರದಸ್ತಿ ನಡೆದುದು ನಮ್ಮ ಕಡೆಯಿಂದಲೋ? ಅವರ ಕಡೆಯಿಂದಲೋ? ಎಂಬುದನ್ನು ತಿಳಿಯದ (ರಾಜೇಂದ್ರ. ೯೩). **ದರಿಯಾಫ್ತಿ**: ಯಾವತ್ತು ಗೌಡ ಶ್ಯಾನುಭಾಗ ಶೆಟ್ಟಿ ವರ್ತಕ ವಗ್ಯೆರೆ ಜನರಿಂದ ಯಥಾವತ್ತಾಗಿ ದರಿಯಾಫ್ತಿ ಮಾಡಿ ರುಜು ಮುಚ್ಚಳಿಕೆಯು ಬರಸಿಕೊಂಡು ಮಾಜಿ ಆಮಿಲಗೆ . . . ಮಹಜರು ಬರೆದು ಕೊಡಬೇಕು (ಮಹಾವಂ. II, ೩೯). **ದರ್ಯಾಪು**: ಚೆಂನ್ನಾಗಿ ದರ್ಯಾಪುಮಾಡಿ ಸಾಬಕ್ಕು ಮಾಮೂಲು ಪ್ರಕಾರಕ್ಕೆ ನಡೆದು ಕೊಳುವ ಹಾಗೆ ನಿಮ್ಮ ನಿಮ್ಮ ತಾಲ್ಲೂಕದಲ್ಲಿ ಯಿರುವಂತ್ತಾ ವಡಿಗೆ ಜೋರ ತಾಕಿಯಿತು ಮಾಡುವದು (ಮ್ಯಅರಿ. ೦೯೩೦, ೪೩-೩೨; 1812). **ದರ್ಯಾಪ್ತಿ**: ಮುಸಲ್ಮಾನರಲ್ಲಿ ಬಂದ ವ್ಯಾಜ್ಯಗಳ ದರ್ಯಾಪ್ತಿಗೂ ಹುಜೂರಲ್ಲಿ ಸದರ್ ಕೋರ್ಟು ಎಂಬದಾಗಿ ಒಂದು ನ್ಯಾಯಸ್ಥಾನ ಏರ್ಪಟ್ಟಿತ್ತು (ಮಹಾವಂ. II, ೨೮); ಇವರುಗಳ ದರ್ಯಾಪ್ತಿಯಿಂದೆ ಕಳವು ನಡೆದ ಮಾರನೆಯ ದಿನವೇ ಲಿಂಗ ಸಾಲಿಗ್ರಾಮಕ್ಕೆ ಬಂದು . . . ಕಾಲ ಕಳೆಯುತ್ತಿದ್ದನೆಂದು ತಿಳಿದು ಬಂತು (ಕಲಶ. ೦೦೩); ಆ ದಿವಸ ಗ್ರಾಮಾಧಿಪತಿಗಳು ಸಣ್ಣ ಮೊಕದ್ದಮೆಗಳನ್ನು ದರ್ಯಾಪ್ತಿ ಮಾಡತಕ್ಕದ್ದಲ್ಲವು (ಗ್ರಾಮಾಕ. ೩೬). **ದರ್ಯಾಫ್ತಿ**: ತನ್ನ ಸಮಕ್ಷಮದಲ್ಲಿ ಆರಂಭಿಸಲ್ಪಟ್ಟ ಮೊಕದ್ದಮೆಯ ದರ್ಯಾಫ್ತಿ ಪೂರೈಸುವವರೆಗೂ ಅಂಥಾ ಮನುಷ್ಯನು ಸದರಿ ವಿಚಾರಣೆಯಲ್ಲಿ ಹಾಜರಿರಲು ಬದ್ಧನಾಗಿರತಕ್ಕದ್ದು (ಗ್ರಾಮಾಕ. ೧೪). [ ←ಪಾರ. ಹಿಂ. ದರ್ಯಾಫ್ತ್; ದರಿಯಾಫ್ತ್; ಮರಾ. ದರ್ಯಾಪ್ತ್, ದರ್ಯಾಪ್ತೀ, ದರ್ಯಾಫ್ತ್, ದರ್ಯಾಫ್ತೀ. ]

**ದರ್ವಾನ** 'ದರವಾನ' ನೋ.

**ದರ್ವಿ** (ನಾ). ೧. ಸೌಟು; ಸಟ್ಟುಗ: "ದರ್ವೀ, ಕರ್ದೂಃ, ಖಜಿಕಾ, ದಾರುಹಸ್ತಃ – ಈ ೪ ಸಟ್ಟುಗಂ" (ಹಲಾಯು. ೩೨-೦೫೭); "ಖಜಿಕೆ ದರ್ವೀ ದಾರುಹಸ್ತಂ ದ್ರುತಂ ಹುಟ್ಟಿನಿಕ್ಕು" (ಮಂಗರಾ. ೬೦-೦೮); ದರ್ವಿಯಂ ಸಂಪಾದಿಸಿರಲು ಕೈಯನ್ನು ಸುಟ್ಟುಕೊಳ್ಳುವುದೇಕೆ (ಮುದ್ರಾಮಂ. ೦೫೩). ೨. ಯಜ್ಞ, ಯಾಗಾದಿಗಳಲ್ಲಿ ತುಪ್ಪವನ್ನು ಹಾಕಲು ಉಪಯೋಗಿಸುವ ಸೌಟನ್ನು ಹೋಲುವ ಮುತ್ತುಗ ಮೊದಲಾದ ಮರದ ಸಾಧನ: ದಿಕ್ಪಾಲಕರನು, ಮಹೇಂದ್ರನನ್ನೂ ಆಹ್ವಾನಿಸಿ . . . ಪರಿಸ್ತರಣಗಳ

ಮೇಲೆ ದರ್ವಿ, ಸಮಿತ್ತು, ಆಜ್ಯಪಾತ್ರ, ಅರ್ಘ್ಯಪಾತ್ರ ಇವುಗಳನಿಟ್ಟು (ಶಾಂತಲಾ. ೧೦೭). ೪. ಹಾವಿನ ಹೆಡೆ. 'ದರ್ವೀಕರ' ಪರಾ. ೪. (ಆಲಂ) ಒಂದು ಸಾಧನದಂತೆ ಕೆಲಸಕ್ಕೆ ಉಪಯೋಗಿಸಿಕೊಳ್ಳುವ ವ್ಯಕ್ತಿ; ಕಾರ್ಯಸಾಧನೆಯಲ್ಲಿ ಸಹಾಯಕ: ತಮ್ಮ ಕೆಲಸಕ್ಕೆ ದರ್ವಿಯಾಗಿ ಉಪಯೋಗಿಸಲು ಇವನೇ ಪರಮಮಿತ್ರನೆಂದು ಭಾವಿಸಿಕೊಂಡಿದ್ದರು (ಅದೃಷ್ಟ. ೧೬೧); ಪೆದ್ದನಾದ ಕಿಟ್ಟಿಜೋಯಿಸನೇ ಸರಿಯಾದ ದರ್ವಿಯಾಗಿದ್ದಾನೆಂದು ಯೋಚಿಸಿದರು (ಮೂಮುರಾ. ೧೫೦). [ಸಂ.]

**ದರ್ವೀಕರ** (ನಾ). ೧. ಸಟ್ಟುಗ ಹಿಡಿದವನು; ಸೌಟು ಹಿಡಿದವನು; ಅಡಿಗೆಯವನು: ಸೊಕವಿರ್ಕಕ್ಕಟ ದರ್ಪಪಾಣಿ ಯವಾಜಾ ದರ್ವೀಕರಂ ವಾಯುಪುತ್ರಕನಂ ಜರ್ಜರಹಸ್ತನಿಂಪ್ರತನಯಂ ... ಶಸ್ತ್ರವಿಡಂಬವೇವುದ ವರ್ಗಂ (ಗದಾಯು. ೩-೩೪). ೨. ಹಾವು; ಸರ್ಪ: "ವಿಷಧರಃ, ದಂದಶೂಕಃ . . . ದರ್ವೀಕರಃ, ದೃಕ್‌ಶ್ರುತಿಃ, ಭುಜಂಗಮಃ – ಈ ೨೫ ಹಾವಿನ ಪೆಸರ್" (ಹಲಾಯು. ೧೧೫-೧೮): ನಿಷ್ಠುರಗರಳರಸಾರ್ದ್ರಸ್ಫುರಜ್ಜಿಹ್ವ ದರ್ವೀಕರದುರ್ದರ್ಶಂ . . . ಮನಕ್ಕದ್ಭುತರಸದೊದವಂ ತಂದುದಂ ದೊಂದಗೇಂದ್ರಂ (ಚಂದ್ರಪ್ರ. ೫-೬೬). ಎಲೆಯರ್ಜುನಿಕ ನೀನಿನ್ನು ಬಿಡು ದರ್ವೀಕರವನೆನಲು (ಕಿಮ್ಮಾಇ. ೧-೮). ೧, ೨: ಏಂ ನಿನ್ನ ಪ್ರಾಣಂಗಳ್ಗೆ ದರ್ವೀಕರನಾಗಿನೆ! (ರಾಮಾಶ್ವ. ೦೪೪-೨೮). ೩. ನಾಗರಹಾವು; ಫಣಿ: ದರ್ವೀಕರ ಮಂಡಲ ರಾಜಿಗಳೆಂಬ ಮೂರು ತೆರನಾದ ಸರ್ಪವಿಷಗಳಲ್ಲಿ ಸಳಿಯ ಸಟ್ಟಗದ ಬೇರ ನೀರಲ್ಲಿ ಅರದು ಕುಡಿಯಲು ವಿಷಹರ (ವಿಷಚಿ. ೧೦-೪). [ಸಂ.]

**ದರ್ವೀಕರಾಂತಕ** (ನಾ). ಸರ್ಪಕ್ಕೆ ಮೃತ್ಯುವಿನಂತಿರುವವನು; ಗರುಡ: ಕಲಾನಿಧಿ ಸಕಲಲಕ್ಷ್ಮ ದರ್ವೀಕರಾಂತಕಗಮನ ವಿಮಲತರಮ[ದ್ರ]ಕ್ಷಣಪದ್ಮರಾಗ (ಬಸವೇಶ್ವ. ೭-೧೦೦೧). [ದರ್ವೀಕರ + ಅಂತಕ]

**ದರ್ವೇಸಿ** 'ದರವೇಶಿ' ನೋ.

**ದರ್ಶ** (ನಾ). ೧. ನೋಟ; ತೋರಿಕೆ; ದೃಶ್ಯ. ೨. ಅಮಾವಾಸ್ಯೆ: "ಸ್ಪಷ್ಟಂ ಸೂರ್ಯೇಂದು ಸಮಾಪ್ತಿಪ್ರವಮಾವಾಸೆಯೆಂಬುದಕ್ಕುಂ ದರ್ಶಂ" (ವಸ್ತುಕೋ. ೦೬-೮); ದರ್ಶದ ನಿಶೆಯೊಳ್ ಧವಳಾಂಶುವಾಗಿ ತಾರಾಧವನಂ ನೀನರಸಿ ಪೊರೆವುದೇಂ ಚಪಲತೆಯೋ (ನಿಪೇಚ. ೨೩-೮).
[ಸಂ.]

**ದರ್ಶಕ** (ಗು). ೧. ನೋಡುವ; ಕಾಣುವ. ೨. ಪರೀಕ್ಷಿಸುವ; ಪರಿಶೋಧಿಸುವ. (ನಾ). ೩. ನೋಟಕ; ಪ್ರೇಕ್ಷಕ. ೪. ತೋರಿಸುವವನು; ಪ್ರದರ್ಶಕ: ೫. ವಿವರಿಸುವಿಕೆ; ಸ್ಪಷ್ಟಪಡಿಸುವಿಕೆ. ೬. ಕಾವಲುಗಾರ; ದ್ವಾರಪಾಲಕ; ಪಹರೆಯವನು. ೭. ಪಂಡಿತ; ವಿದ್ವಾಂಸ: ಕವಿ ದರ್ಶಕರಿಂದೆಸೆದತ್ತು ಭೂತಳಂ (ವರ್ಧಪು. ೧-೧೮).
[ಸಂ.]

**ದರ್ಶನ** (ನಾ). ೧. ನೋಡುವಿಕೆ; ಕಾಣುವಿಕೆ; ಅವಲೋಕನ; ನೋಟ: "ನಿಭಾಳನಂ, ನಿಶಮನಂ . . . ದರ್ಶನಂ, ದೃಷ್ಟಿಃ, ದ್ಯೋತನಂ – ಈ ೮ ನೋಟಂ" (ಹಲಾಯು. ೯೩-೪೦೨); ದರ್ಶನವಪುಸಮಿತಿಗೆ ಸದ್ದರ್ಶನದಿಂದಪ್ಪುದಕ್ಕೆ ನಿಮಗಕ್ಕೆ ಪುನರ್ದರ್ಶನವೆಂದಾರಾಧಿತದರ್ಶನರಾಚಾರಣರ್ ನಭಕ್ಕೊಗೆದಾಗಳ್ (ಆದಿಪು. ೫-೭೪): "ಎದೆಯರಿಸುವುದು" (ಆದಿಪು. ಕೋಶ); ಕೂಡಲಸಂಗನ ದರ್ಶನ ಸ್ಪರ್ಶನದಿಂದ ಮನವೊಲಿದು ನೆರೆವ ಭರವನೇನ ಹೇಳುವೆನಯ್ಯಾ (ಬಸವ. ೯೯೩): ದರ್ಶನವೆಂದರೆ ನೋಡುವಿಕೆ ಎಂದು ಅರ್ಥ (ಭಾರಧ. ೧೨೦); ದರ್ಶನ ಎಂಬ ಪದದ ಲೌಕಿಕವಾದ ಅರ್ಥ ನೋಡುವಿಕೆ ಅಥವಾ ತಿಳಿಯುವಿಕೆ (ಭಾತತ್ತ್ವ. ೧೬೫). ೨. ಕಾಣುವುದು; ಭೇಟಿಯಾಗುವುದು; ಸಂದರ್ಶನ: ಒರ್ವಳ್ ಕನ್ನೆ ಚಂಡಾಲೆ ದರ್ಶನತಾತ್ಪರ್ಯದೆ ರಾಜಕೀರಸಹಿತಂ ಬಂದಿರ್ದಪಳ್ ಬಾಗಿಲೊಳ್ (ಕಾದಂಪೂ. ೨೪): ಶ್ರೀಪೃಥುಳೈಶ್ವರ್ಯನಗಶಲೇಪನ ದರ್ಶನದೊಳಾದ ಪರಮಾನಂದ ಶ್ರೀಪದದೊಳ್ ರಂಜಿಸಿದನಿಳಾಪೂಜ್ಯಂ ಪ್ರಭುಗುಣಾಬ್ಧಿ ಪವನಕಳಹಂಸಂ (ಪುಷ್ಪಪು. ೦೨-೧); ಹಿರಿಯರ ದರ್ಶನ ಮಾಡುವುದೆ ಸ್ನಾನ (ಪುರಂದ. ೦-೨೫-೩). ೩. ಕಾಣಿಸಿಕೊಳ್ಳುವುದು; ಪ್ರತ್ಯಕ್ಷವಾಗುವುದು. 'ದರ್ಶನಕೊಡು' ಪರಾ. ೪. ತೋರಿಸುವಿಕೆ; ಪ್ರದರ್ಶನ. ೫. ಹಿರಿಯರನ್ನು ಕಾಣುವಾಗ ಅವರಿಗೆ ಅರ್ಪಿಸುವ ಕಾಣಿಕೆ; ನಜರು: ಕರಿತುಂಭದ ಮುತ್ತುಂ ಕತ್ತುರಿಮಿಗಮುಂ ಸಿಂಹಶಾಬಮುಂ ದರ್ಶನಮಿತ್ತುರವಣಿಸಿ ಬಂದನಾ ಧೀವರನಾಯಕನಿಭಕೇತುಭೂನಾಯಕನಂ (ಅರ್ಜನೇ. ೪-೩). ೬. ಕಾಣ್ಕೆ; ಕಣಸು; ವಿಶೇಷವಾದ ಅಂತರಂಗದ ಅರಿವು: ಇಂತಹ ಶಕ್ತಿಯನ್ನು ಪಡೆದಾಗಲೇ – "ಸತ್ಯವೇ ಸೌಂದರ್ಯ, ಸೌಂದರ್ಯವೇ ಸತ್ಯ" ಎನ್ನುವ ದರ್ಶನ ದೊರೆತೀತು (ಸೌಂದಸ. ೯೦); ತನಗಾದ ದರ್ಶನದಿಂದ ಅವನು ಭಯಚಕಿತನಾದನು (ಪುಸರು. ೦೬೩). ೭. ಅಲೌಕಿಕ ಶಕ್ತಿಗಳ ಆವೇಶ; ದೇವರು, ದೆವ್ವ ಮೊದಲಾದುವು ಮೈಮೇಲೆ ಬರುವುದು. 'ದರ್ಶನಬರು' ಪರಾ. ೮. [ತತ್ತ್ವಶಾ] ತತ್ತ್ವಕ್ಕೆ ಸಂಬಂಧಿಸಿದ ವಿಷಯ, – ಗ್ರಂಥ, – ಮೀಮಾಂಸೆ ಮುಂತಾದುವು; ಆಧ್ಯಾತ್ಮಿಕ ಸಿದ್ಧಾಂತ; ತತ್ತ್ವಶಾಸ್ತ್ರ: ಜೀವಾತ್ಮನ ಸ್ವರೂಪವೆಂಥದು? ಜೀವಾತ್ಮನ ಗುರಿ ಏನು? ಎಂಬ ಪ್ರಶ್ನೆಗಳು ಎಲ್ಲಾ ಧರ್ಮಗಳಲ್ಲಿಯೂ ಬರುತ್ತವೆ. ಇವುಗಳನ್ನು ವಿಮರ್ಶಿಸಿ ಒಂದು ತೀರ್ಮಾನಕ್ಕೆ ಬರುವ ವಾಙ್ಮಯಕ್ಕೆ ದರ್ಶನಗಳೆಂದು ಹೆಸರು (ಭಾರದ. ೨೦೭); ಈ ತತ್ತ್ವವಿಚಾರವನ್ನು ತತ್ತ್ವದರ್ಶಿಗಳಾದ ಆರು ಋಷಿಗಳು ಆರು ವಿಧವಾಗಿ ಲೋಕಕ್ಕೆ ತೋರಿಸಿಕೊಟ್ಟು ಉಪಕಾರಮಾಡಿರುತ್ತಾರೆ. ಇವರ ಗ್ರಂಥಗಳಿಗೆ ದರ್ಶನಗಳೆಂದು ಹೆಸರು (ಭಾರದ. ೨೩೯). 'ಷಡ್ದರ್ಶನ' ಪರಾ. ೯. [ಜೈನ] ಸಮ್ಯಗ್ದರ್ಶನ. 'ದರ್ಶನವಿನಯ', 'ದರ್ಶನವಿಶುದ್ಧ' ಪರಾ. [ಸಂ.]

**ದರ್ಶನಕಾಣಿಕೆ** (ನಾ). (ದೇವರು, ಅರಸರು ಹಾಗೂ ಅಧಿಕಾರಿಗಳ) ದರ್ಶನ ಅಥವಾ ಭೇಟಿಮಾಡಿದಾಗ ನೀಡುವ ಕಾಣಿಕೆ; ನಜರು: ಅನೇಕ ಖಿಲ್ಲತ್ತುಗಳನ್ನು ವಿಜಯನಗರದ ಸಾಮ್ರಾಟ ಶ್ರೀಕೃಷ್ಣದೇವರಾಯನಿಗೆ ದರ್ಶನಕಾಣಿಕೆಯಾಗಿ ಕೊಡಲು ಹೊತ್ತು ತರುತ್ತಿದ್ದರು (ಹೇಮುಕೂ. ೦೪). [ದರ್ಶನ + ಕಾಣಿಕೆ (<ಕಾಣ್ಕೆ)]

**ದರ್ಶನಕಾರ** (ನಾ). ದಾರ್ಶನಿಕ; ತತ್ತ್ವಜ್ಞಾನಿ: ಈ ಅಹಂಕಾರವೆಂಬ ವ್ಯಕ್ತಿಯನ್ನು ಒಪ್ಪದ ಕಾರಣ ಪಾಶ್ಚಾತ್ಯ ದರ್ಶನಕಾರರು ಎಷ್ಟೋ ತೊಡರುಗಳಿಗೆ ಗುರಿಯಾಗಿರುತ್ತಾರೆ (ಜೀವಾತ್ಮ. ೯೫). [ಸಂ.]

**ದರ್ಶನಕೊಡು** (ಕ್ರಿ). ಕಾಣಿಸಿಕೊಳ್ಳು; ಪ್ರತ್ಯಕ್ಷವಾಗು; ಮೈದೋರು: ಭಗವಂತನಾದ ಶ್ರೀಕೃಷ್ಣನೇ ಬಂದು ದರ್ಶನಕೊಟ್ಟನಲ್ಲಾ ಎಂದು ಎಲ್ಲರೂ ಸಂತೋಷಪಟ್ಟರು (ಸೀತಿಚಂ. I, ೨). [ದರ್ಶನ + ಕೊಡು₁]

**ದರ್ಶನತಂತ್ರ** (ನಾ). ತಾಂತ್ರಿಕ ಸಿದ್ಧಿಮಂತ್ರಗಳಲ್ಲಿ ಒಂದು: ಶಾಬರತಂತ್ರ ಶಾಕಿನೀತಂತ್ರ . . . ದರ್ಶನತಂತ್ರ ಖನನತಂತ್ರ ಬಂಧನತಂತ್ರ ವಚನತಂತ್ರಾದಿ ತಾಂತ್ರಿಕ ಸಿದ್ಧಿಮಂತ್ರಂಗಳಂ ದ್ರಾವಿಡ ವೈಕೃತ ಪ್ರಾಕೃತ ಶವಥಾದಿ ಕ್ಷುದ್ರಮಂತ್ರಂಗಳಂ ಬೇಟ್ ಬೇಟ್ ಉಪದೇಶ ಅನುಷ್ಠಾನ ಪರೀಕ್ಷೆಗಳಂ ವಿವೇಕಿಸಿ ತಿಳಿದಿರಲಕ್ಕುಂ (ವಿಪೇಕ. ೮೦).
[ದರ್ಶನ + ತಂತ್ರ]

**ದರ್ಶನಧ್ವನಿ** (ನಾ). (ಕಾವ್ಯದಲ್ಲಿ ಹೊರಡುವ) ತಾತ್ವಿಕವಾದ ವಿಶೇಷಾರ್ಥ; ವ್ಯಂಗ್ಯಾರ್ಥದಲ್ಲಿ ಒಂದು ಬಗೆ: ದರ್ಶನಧ್ವನಿರಸಾಮೃತಪಾನದಾನಂದದಿಂ (ಶ್ರೀರಾಮಾ ೮೭೬-೨೦೯); ಅತ್ಯಂತ ಸುಮಧುರ ಸುಂದರ ಭವ್ಯವಾದ ಐದು ಸೂತ್ರಗಳನ್ನು ಭಕ್ತಿ, ಪ್ರಾರ್ಥನಾ ಮತ್ತು ಕೃಪಾದೇವಿಯರ ವಾಣಿಯಲ್ಲಿ ಹಂಚಿ ಅಳವಡಿಸಿದೆ. ಬಹುಶಃ

**ದಶರಥ** (ನಾ). ೧. ಹತ್ತು ದಿಕ್ಕುಗಳಲ್ಲಿಯೂ ರಥಗಳನ್ನು ನಡೆಸಬಲ್ಲವನು. ೨. ಒಬ್ಬ ರಾಜನ ಹೆಸರು ; ರಾಮನ ತಂದೆ : ಮನೋಜವದಿಂ ಪರಿದುದು ಪೂರ್ಣಮನೋರಥಂ ರಥಂ ದಶರಥನಾ (ಶಂರಾಮಾ. ೩-೫೮) : ರಾಯ ದಶರಥನೃಪತಿಗಖಿಳೋಪಾಯಕುಶಲ ಸುಮಂತ್ರಕನು . . . ಋಷ್ಯಶೃಂಗ ಕಥೆಯ ವರ್ಣಿಸಿದ (ತೊರರಾ. ೦-೫ ಸೂಚನೆ). [ ದಶ + ರಥ ]

**ದಶರಥನಂದನ** (ನಾ). ದಶರಥ ಮಹಾರಾಜನ ಮಗ ; ರಾಮ : ಹನುಮನನಟ್ಟಿದ ದಶರಥನಂದನ (ಶುರಾಜಾಂ. ೦೯-೫೦). [ ದಶರಥ + ನಂದನ ]

**ದಶರಥಾತ್ಮಜ** (ನಾ).=ದಶರಥನಂದನ : ಲಲನೆಯೊಳು ಜಮದಗ್ನಿತನಯನೊಳು . . . ದಶರಥಾತ್ಮಜನೊಳತಿ ಶಕ್ತಿನೊಳು ಬಳುದಿನೊಳು ರಾಮವೆನಿಸಿಕ್ಕು (ಮುಂಗಲಾ. ೦೪೭-೫೦). [ದಶರಥ + ಆತ್ಮಜ]

**ದಶರಥಿ** (ನಾ). ಒಂದು ಬಗೆಯ ಅಲಂಕಾರ ವಸ್ತ್ರ ; ಗೌರವಕ್ಕೋಸ್ಕರವಾಗಿ ಕೊಡುವ ವಸ್ತ್ರ : ಕಾಲ ಕುಪ್ಪಸದ ಕಟಾಯಿಯ ಕಟ್ಟಿದ ಮೇಲು ಕನ್ನದ ದಶರಥಿಯ ಬಾಲಗುಲಾಮರು ಮೆಚ್ಚಿದರು ಸುರುತಾಳನೋಲಗದೊಳಗೆಡೆವಿಡದೆ (ಕುಂಠಕಾಂ. ೦೪-೫೭) : ದಿಳ್ಳಿಯ ಸುಲ್ತಾನನ ಆಸ್ಥಾನದಲ್ಲಿದ್ದ ಪಾನರು ಕಡಿದಾಬೆ, ಜವದಾಡೆ, ದಶರಥಿ, ದುಗುಲದ ಪೈಠಣೆ, ಸುಕ್ಕುಗುಪ್ಪಸ, ಎಳಕಾಯಿಗಳಿಂದ ಅಲಂಕೃತರಾಗಿದ್ದರೆಂದು ತಿಳಿದು ಬರುತ್ತದೆ (ಕುಮಾಕಾಂ. ೩೩೦). [ ←ಅರ. ತಷರೀಫಾತ್ ]

**ದಶರೂಪ** (ನಾ). = ದಶರೂಪಕ. 'ದಶರೂಪಲಕ್ಷಣ' ಪರಾ. [ ದಶ + ರೂಪ ]

**ದಶರೂಪಕ** (ನಾ). [ಕಾವ್ಯವಿ] ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥಿ, ಅಂಕ, ಈಹಾಮೃಗ ಎಂಬ ಹತ್ತು ಬಗೆಯ ರೂಪಕಗಳು: ಸ್ವಸಂವೇದ್ಯವಾದ ಪರಮಾನಂದ ರೂಪವಾದ ರಸದ ಸವಿಯೇ ದಶರೂಪಕಗಳ ಫಲ (ದಶರೂ. ೪). [ ದಶ + ರೂಪಕ ]

**ದಶರೂಪಲಕ್ಷಣ** (ನಾ). ಹತ್ತು ಬಗೆಯ ರೂಪಕಗಳ ಲಕ್ಷಣ: ನಾಟಕವುಮಂ ಪ್ರಕರಣವುಮಂ ಚಾರಣವುಮಂ ಭಾಣವುಮಂ ಸಮವಕಾರಣಮಂ ಡಿಮವುಮಂ ಈಹಾಮೃಗವುಮಂ ವ್ಯಾಯೋಗಮುಮಂ ಪ್ರಹಸನವುಮಂ ವೀಥಿಯುಮೆಂಬ ದಶರೂಪಕಲಕ್ಷಣಮುಮಂ ಪಾತ್ರಸಂಕ್ರಮಣದೊಳ್ ನೆಱೆಯೆ ತೋಱಿ (ಅಜಿಪು. ೫-೩೦ ವ): P ಇಲ್ಲಿ 'ಅಂಕ'ದ ಬದಲು 'ಚಾರಣ' ಉಪಯೋಗವಾಗಿದೆ. [ ದಶರೂಪ + ಲಕ್ಷಣ ]

**ದಶಲಕ್ಷ** (ನಾ). ೧. ಹತ್ತು ಲಕ್ಷ : "ಪ್ರಯುತಂ ದಶಲಕ್ಷಂ" (ವಸ್ತುಕೋ. ೦೦೩-೩೩). ೨. ಸಂಖ್ಯೆಯಲ್ಲಿ ಬಲಗಡೆಯಿಂದ ಏಳನೆಯ ಸ್ಥಾನ : ಸಪ್ತಮಂ ದಶಲಕ್ಷಂ ತು ಅಷ್ಟಮಂ ಕೋಟಿರುಚ್ಯತೆ (ವ್ಯವಹಾ. ೮-೫). 'ಶತಲಕ್ಷ' ಪರಾ. [ ದಶ + ಲಕ್ಷ ]

**ದಶಲಕ್ಷಣ** (ನಾ). [ಜೈನ] ಮಾಘಚೈತ್ರ ಮತ್ತು ಭಾದ್ರಪದ ತಿಂಗಳ ಶುದ್ಧ ಪಂಚಮಿಯಿಂದ ಚತುರ್ದಶಿವರೆಗಿನ ಪರ್ವದಿನಗಳು ; P ಇವುಗಳಲ್ಲಿ ಉತ್ತಮ, ಮಧ್ಯಮ, ಜಘನ್ಯವೆಂದು ಮೂರು ಬಗೆಗಳಿವೆ. ಈ ವ್ರತವನ್ನು ಹತ್ತು ವರ್ಷಗಳವರೆಗೆ ಮಾಡುವರು. ಈ ಅವಧಿಯಲ್ಲಿ ಜೈನಗೃಹಸ್ಥರು ಪೂಜೆ, ಪಠನ, ಉಪವಾಸ ವ್ರತಾಚರಣೆ, ದಶಲಕ್ಷಣಧರ್ಮಅಧ್ಯಯನ, ದಶಾಧ್ಯಾಯ ಸೂತ್ರಗಳ ಪಠನ ಇತ್ಯಾದಿಗಳಲ್ಲಿ ಸಮಯವನ್ನು ಕಳೆಯುವರು : ಜೈನ ದರ್ಶನವು ಆಧ್ಯಾತ್ಮಿಕ ಸಾಧನೆಗೆ ಸಹಾಯವಾಗುವಂತೆ ಅಷ್ಟಾಹ್ನಿಕ, ದಶಲಕ್ಷಣ ಮೊದಲಾದ ಪರ್ವದಿನಗಳನ್ನು ಕಲ್ಪಿಸಿ ಕೊಟ್ಟಿದೆ (ಜೈನಶ. ೫೬೪). [ ದಶ + ಲಕ್ಷಣ ]

**ದಶವಂದ** 'ದಶವಂಧ' ನೋ.

**ದಶವಂಧ, ದಶವಂದ, ದಶವನ್ನ, ದಸವಂದ, ಧಸವಂಧ** (ನಾ). ೧. = ದಶಬಂಧ ೧ : ಪ್ರಭುಗಳ್ಗೆ ಅಳದು ಭೂಮಿಗೆ ನೂಱಕ್ಕೆ ಹತ್ತ ರೋಪಾದಿಯ ದಶವಂಧವನಿಕ್ಕಿ . . . ಪರಮೇಶ್ವರ ದತ್ತಿಯಾಗಿ ಪಡೆದು (ಎಕ. XVI, ೪೮-೫೨ : 1147). ೨. = ದಶಬಂಧ ೨ : ಆತನ ಕಯೊಳಂ ಧಾರಾಪೂರ್ವಕಮಾಗೆ ಪಡೆದು ತಮ್ಮ ದಶವನ್ನದ ಗುಡ್ಡೆ ಮಾನ್ಯದಲ್ಲಿಟ್ಟ ದಯಿಕಾಲ ಮತ್ತರು ಮೂನೂಱಿರ್ಪ್ಪತ್ತಂಕದೊಳಂ (ಕಇಶಿ. ೯-೩-೩೦೦ : 1062). **ದಶವಂದ:** ೧. ಮಾಣಿಯಾಯುಧ ಬೆರಸು ಮಣ್ಣವವೇಜಲ್ಲಲ್ಲದಿನ್ನೀ ದೆಣ್ಣದೊಳಂ ಕವರ್ತ್ತೆಯೊಳವಪುತ್ರಿಕದ್ರವ್ಯದ ದಶವನ್ನದೊಳಂ ಪುಟ್ಟಿದ ದ್ರವ್ಯಮುಮಂ ಕಳೆ ಮದ್ದಳೆಯ ಪಣಮುಂ ದೇಯಿಂಗೆಱೆಗೆ (ಎಕ. XX, ೩೪-೪೦ ; 1012) ; ಬಹಿತ್ರದ ನಾರಣಪೆರ್ಗ್ಗಡೆ ನಂದಾದೀವಿಗೆಗವುಷ್ಟ ವಿಥಾರ್ಚನೆಗವೊಂದು ಗಾಣವುಮುವಂ ಹೇಱಿನ ಸುಂಕದ ದಶವಂದ ಮುಮಂ ಬಿಟ್ಟಂ (ಎಕ. IV, ನಾಗಮಂ. ೭೦-೫೮: 1178). 'ಪತ್ತೊಂದಿ' ಪರಾ. **ದಶವನ್ನ :** ೧. ಕೋಗಳನಾಡೊಳ್... ದೇಗುಲಕಂ ಜಿನಾಲಯಕವಾರವೆಗಂ ಕೆಱೆ ಭಾವಿ ಸತ್ರಕಂ ರಾಗದೆ ತನ್ನ ವನ್ನಯದ ಸುಂಕದೊಳಂ ದಶವನ್ನವಿಟ್ಟ ನಿನ್ನಾಗರಮುಳ್ಳಿನಂ ನೆಗರ್ಟ್ಟ(ಟ್ಟ) ಬಮ್ಮರಸಂ ಗುಣರತ್ನದಾಗರಂ (ಕಇ. XXX, ೦೦೭ ; 1108). **ದಸವಂದ :** ೧. ಆ ಊರಿಂಗೆ ಹಿರಿಯ ಕೋಲ ಮತ್ತರಂ ೫೦೦೦ ಗೌಡಿಂಗೆ ಮತ್ತರಂ ೧೨ ನೂರಕ್ಕೆ ಹತ್ತು ದಸವಂದ ಮೂಲಸ್ಥಾನದೇವರಿಂಗೆ ಮತ್ತರು ೨೦೦ (ಕೊರ್‍ಪ್ರಾ. ೩೭-೨೨ : 1003) : ತಮಗೆ ನಡೆವ ಕಿಱುಕುಳ ಸುಂಕದೊಳಗೆ ಬಿಲ್ಕಡೆಯ ಎಲೆಯ ಪೇಱಿಂಗೆ ದಸವನ್ನಮುಮಂ . . . ಬಿಟ್ಟ (ಎಕ. VII, ಶಿಕಾರಿ. ೦೩-೦೭ ; 1098) ; ಆ ಸ್ಥಳದಲು ಪುಟ್ಟಿದ ಪೊನ್ನಲು ಸುಂಕವೆಗ್ಗಡೆಗಳು ದಸವಂದವಂ ಬಿಟ್ಟರು (ಸೌಇಇ. IX-1, ೨೩೯-೨೦ ; 1142) ; ಕಾಡೆಱೆಯಂಗೆ ಪಡೆದುದಱೊಳು ದಸವಂದವನೀವೆನೆಂದು ಪರಸಿಯುಂ (ಹಸಾರ ೪೩.೮). ೨. ಪಸರಿಸೆ ಸಮ್ಮತಿ ತನ್ನಯ ದಸವನ್ನದ ನೇಸಣಂಗಳೊಳ್ ಕೆಲವರ್ಕ್ಕಸದೃಶ ನಿತ್ತಿತ್ತುದನೀ ವಸುಧೆಗೆ ನೆಗೞ್ಬನ್ನು ಶಾಸನಂ ಬರೆಯಿಸಿದೊಂ (ಎಕ. IV ೩೪-೨೪: 945): ಈ ಭೂಮಿಯ ತೆಂಕಣ ಕಡೆಯಿಂನ್ನೇಸಱಲು ದಸವಂದಕೆ ಮತ್ತರ್ ಹತ್ತೊ[೦]ಭತ್ತು (ಸೌಇಇ. XX, ೦೪೯-೬೫ ; 1166) : ಆ ಕೆಱೆಯ ಕೆಳನ ಗದೆಯ ವೇಲೆ ನಿಮ್ಮ ದಸವಂದದ ಗದೆ ಸಹವಾಗಿ ವಿರಾಡಿಸಿ (ಎಕ. X, ಮುಳಬಾ. ೦೭೨-೦೪ ; 1496) ; ಗಾವುಣ್ಣವೊಲದ ದಸವಂದದ ಭೂಮಿಯಲ್ಲಿ (ಬೊಂಕಬಾ. ೦೪೩೩, ಲಕ್ಷೇಶ್ವರ. ೨೭-೦೭ ; ?). **ಧಸವಂಧ :** ೨. ಪಱಕಾಱ ಬಾ × × ಗಂಗೆ ಧಸವಂಧವಂ ಬಿಟ್ಟರ್ (ಎಕ. XVI, ೩೩೦-೩೪ ; 1077). [ <ಸಂ. ದಶಬಂಧ ]

**ದಶವಕ್ತ್ರ** (ನಾ). ಹತ್ತು ಮುಖಗಳನ್ನುಳ್ಳವನು ; ರಾವಣ. [ ದಶ + ವಕ್ತ್ರ ]

**ದಶವದನ** (ನಾ). = ದಶವಕ್ತ್ರ : ದಶವದನೋನ್ಮೂಲನ ಭಯವಶದಿಂ ಕೈಲಾಸಲಕ್ಷ್ಮಿ ಬಂದಳೋ (ಕಾದಂಪೂ. ೬.೩೩) ; ಸೀತೆಯಂ ಕಂಡು ಬನವುಂ ಕಿಳ್ತು ತಾಗಿದ ನಿಶಾಟರಂ ಸದೆದು ಲಂಕೆಯನುರಿಪಿ ದಶವದನನಂ ಭಂಗಿಸಿ (ಜೈಮಿಭಾ. ೦೬-೩೪). [ ದಶ + ವದನ ]

**ದಶವನ್ನ** 'ದಶವಂಧ' ನೋ.

**ದಶವರೂಥ** (ನಾ).=ದಶರಥ ೨. 'ದಶವರೂಥಜ' ಪರಾ. [ ದಶ + ವರೂಥ ]

**ದಶವರೂಥಜ** (ನಾ). ದಶರಥನಂದನ : ಬಿಲ್ವಿದ್ದೆಯ ಕಲಿತನು ದಶವರೂಥಜನ ಕೈಚಳಕವೆಂಬಂತೆ (ಶೋಚತ. ೦೭-೮೦). [ ಸಂ. ]

**ದಶವಾಯು** (ನಾ). = ದಶಮಾರುತ : ದಶವಾಯುಗಳ ಸ್ಥಾನಂಗಳಾವುವೆಂದಡೆ ಗುಹ್ಯದಲ್ಲಿ ಅಪಾನವಾಯು ನಾಭಿಯಲ್ಲಿ ಸಮಾನವಾಯು . . . ಜಿಹ್ವೆಯಲ್ಲಿ ಧನಂಜಯವಾಯು (ಚನ್ನವ. ೪. ೧೦೦-೦೬೯) ; ವಾಯು

ಒಂದಲ್ಲದೆ ದಶವಾಯುವಿಲ್ಲವೆಂದೆ (ಪ್ರೋಗಿಮಾ. ೦-೦) : ದಶವಿಧೇಂದ್ರಿಯಗಳು ನಾನಲ್ಲ ದಶವಾಯುಗಳು ನಾನಲ್ಲ (ಮುಹಾದೇ. ಶ. ೦೯೩-೩೧೦) : ತನ್ನ ರೂಪು ದಶವಾಯುಗಳ ಕೂಡಿ ದೆಸೆವರಿದು ಮುಂ ಮಲಗಳೆಸಕದಿಂ ತನುದುರ್ಗಮಂ ಬಲಿದುದು (ಮುಸೋವಿ. ೦-೦೯) : ದಶವಿಧೇಂದ್ರಿಯದ ದುರ್ಗುಣತತಿಯ ಸಂಹರಿಸಿ ದಶವಾಯುಗಳ ಚೇಷ್ಟೆಯಂ ಪೊರ್ದಲೀಯದಾ ದಶವಿಧದ ಪಾದೋದಕ ಪ್ರಸಾದ ಕ್ರಮಂಗಳನಱುಪಿ ಶಿಷ್ಯಾಳಿಗೆ (ವೀಶೈಷ. ೩-೦೦-೨). [ ದಶ + ವಾಯು ]

**ದಶವಿ,** ದಸವೆ, ದಸಿಮೆ (ನಾ). = ದಶವಿ಼ : "ದಶವಿಯನೆ ದಶವಿ" (ಶಶರ. ೫೦). ದಸವೆ: ದಶವಿ, ದಸವೆ ; ಏಕಾದಶಿ, ಏಯಾರಸೆ (ಶಬ್ದಾಮ. ೦೬೦ ಪ್ರಯೋ). ದಸಿಮೆ: ದೋದಸೆ, ಏಕಾದಸೆ, ದಸಿಮೆ . . . ಇಷ್ಟೆಲ್ಲ ಹೊರಕಾಗಿದ್ದುವು (ಮುಂಗಾಪು. ೮೭). [ <ಸಂ. ದಶಮಿ ]

**ದಶವಿಧ** (ನಾ). ಹತ್ತು ತೆರ,–ಬಗೆ : ತನ್ನಣುಗಂಗೆ . . . ದಶವಿಧದ ಧೂಪವಂ ಸುಟ್ಟುಮೆಳಗ್ರಹ ಸೋಂಕದಂತೆ ಸಕಲೋಪಚಾರಂಗಳಿಂ ಸಲಹುತಿರ್ದಳು (ಸಸಮೋ. ೦೫-೫೭). [ ದಶ + ವಿಧ ]

**ದಶವಿಧಧರ್ಮ** (ನಾ). = ದಶಕುಲಧರ್ಮ : ಉತ್ತಮಕ್ಷಮಾದಿ ದಶವಿಧ ಧರ್ಮಮುಮಂ . . . ಶಬ್ದ ಸ್ಪರ್ಶನಾದಿ ಪಂಚೇಂದ್ರಿಯವಿಷಯ ವಿಚ್ಛಿತ್ತಿಯುಂ ತನ್ನೊಳುಂ ಸಚ್ಛನ್ನಮಾಗಿ (ಪುಷ್ಪಪು. ೦೯-೦೬ ವ). [ ದಶವಿಧ + ಧರ್ಮ ]

**ದಶವಿಧನಾದ** (ನಾ). (ತಪಸ್ಸನ್ನಾಚರಿಸಂವಾಗ ಕೇಳಿ ಬರುವ) ಭ್ರಮರ, ಶಂಖ, ಮೃದಂಗ, ತಾಳ, ಘಂಟೆ, ವೀಣೆ, ಭೇರಿ, ದುಂದುಭಿ, ಸಮುದ್ರಘರ್ಜನೆ ಮತ್ತು ಮೇಘಘರ್ಜನೆಗಳೆಂಬ ಹತ್ತು ಬಗೆಯ ನಾದಗಳು: ದಶವಿಧನಾದಮಂ ಪದೆದುಕೇಳ್ವ ಸಮುಜ್ಜ್ವಳದಿಂದುತೇಜಮಂ ಸ್ವಶುಭಾಚಿದಕ್ಷಿಯಿಂ ಬಿಡದೆ ನೋಳ್ಪ . . . ವಿಳಾಸಮುಳುಂಬಮಾತನೋಳ್ (ಶಬಶಂ. ೨-೯೬) ; ಆ ವೀಣೆಯು ದಶವಿಧನಾದಗಳನ್ನೂ ನುಡಿಯುತ್ತದೆ. ಸಂಗೀತವಿದುಷಿಯಂತೆ ಬೇಕಾದ ರಾಗವನ್ನು ಹಾಡುತ್ತದೆ (ಮುಹಾರ. ೦೯೭). [ ದಶವಿಧ + ನಾದ ]

**ದಶವಿಧಪಾದೋದಕ** (ನಾ). [ವೀಶೈ] ಪಾದೋದಕ, ಲಿಂಗೋದಕ, ಮಜ್ಜನೋದಕ, ಸ್ಪರ್ಶನೋದಕ, ಅವಧಾನೋದಕ, ಆಪ್ಯಾಯನೋದಕ, ಹಸ್ತೋದಕ, ಪರಿಣಾಮೋದಕ, ನಿರ್ನಾಮೋದಕ, ಮತ್ತು ಸತ್ಯೋದಕಗಳೆಂಬ ಹತ್ತು ಬಗೆಯ ಪಾದೋದಕ,–ಪಾದತೀರ್ಥ : ಪ್ರಥಮದಲ್ಲಿ ಸ್ಪರ್ಶನವೆಂಬ ಸ್ಪರ್ಶನ ಗುಣದಿಂದೆ ಪಾದೋದಕ ದ್ವಿತೀಯದಲ್ಲಿ ಅಂಗಗುಣವಳಿಯಿತ್ತಾಗಿ ಲಿಂಗಮುಖದಿಂದ ಬಂದುದು ಲಿಂಗೋದಕ . . . ನವಮದಲ್ಲಿ ನಾಮ ಸೀಮೆಯಿಲ್ಲವಾಗಿ ನಿರ್ನಾಮೋದಕ ದಶಮದಲ್ಲಿ ಹುಸಿಯಿಲ್ಲ ನಿತ್ಯೋದಕ ಇಂತು ದಶವಿಧಪಾದೋದಕ [ಪಾಠಾಂ. ಉದಕ] (ಚನ್ನಬ. ಶ. ೬೪೭-೦೯೧೦). [ ದಶವಿಧ + ಪಾದೋದಕ ]

**ದಶವಿಧಶ್ರವಣಧರ್ಮ** (ನಾ). = ದಶಕುಲಧರ್ಮ : ನವವಿಧಬ್ರಹ್ಮಚರ್ಯೋರ್ಜಿತನುಂ ಪರಿಗೃಹೀತ ದಶವಿಧಶ್ರವಣಧರ್ಮನುಂ (ಶಾಂತಿಪು. ೫-೨೩). [ ದಶವಿಧ + ಶ್ರವಣ + ಧರ್ಮ ]

**ದಶವಿಧಸತ್ಯ** (ನಾ). [ಜೈನ] ಹತ್ತು ಬಗೆಯ ಸತ್ಯ ; "ಸತ್ಯವು ಜನಪದ, ಸಮ್ಮತಿ, ಸ್ಥಾಪನಾ, ನಾಮ, ರೂಪ, ಪ್ರತೀತ್ಯ, ವ್ಯವಹಾರ, ಸಂಭಾವನಾ, ಭಾವ, ಉಪಮಾಗಳೆಂದಂ ಹತ್ತು ವಿಧವಾಗಿದೆ" (ಕ್ರಿಸಟ. ೨೯೭) ; ನಾಮಸತ್ಯರೂಪಸತ್ಯಾದಿ ದಶವಿಧ ಸತ್ಯಮುಂ (ಪುಷ್ಪಪು. ೦೯-೦೭ ವ). [ ದಶವಿಧ + ಸತ್ಯ ]

**ದಶವಿಧಾತಿಶಯ** (ನಾ). [ಜೈನ] ೧. ತೀರ್ಥಂಕರನ ಜನ್ಮಕಾಲದಲ್ಲಿ ಆಗುವ ಹತ್ತು ಅತಿಶಯ ; ಮಲಮೂತ್ರರಹಿತ ಶರೀರ, ಬೆವರು ಇಲ್ಲದಿರುವುದು, ಬಿಳಿಯ ನೆತ್ತರು, ವಜ್ರವೃಷಭ ನಾರಾಚ ಸಂಹನನ, ಸಮಚತುರಸ್ರ ಸಂಸ್ಥಾನ, ಅದ್ಭುತರೂಪ, ಅತಿಸುಗಂಧ, ಸಾವಿರದೆಂಟು ಲಕ್ಷಣ, ಅಸಮಾನ ಬಲ ಮತ್ತು ಪ್ರಿಯವಚನ. ೨. ಕೇವಲ ಜ್ಞಾನದಿಂದ ಉಂಟಾಗುವ ಹತ್ತು ಅತಿಶಯಗಳು ; ಕಣ್ಣು ಮಿಟುಕಿಸದಿರುವುದು, ಉಗುರುಂ ಮತ್ತು ಕೂದಲು ಬೆಳೆಯದಿರುವುದು, ಊಟ ಮಾಡದೆ ಇರುವುದು, ಮುಪ್ಪು ಬಾರದಿರುವುದು, ನೆರಳು ಬೀಳದಿರುವುದು, ನಾಲ್ಕು ಕಡೆ ನೋಡಿ ನಾಲ್ಕು ಕಡೆ ಮಾತನಾಡುವ ಶಕ್ತಿ, ಸುತ್ತಮುತ್ತ ನೂರು ಯೋಜನಗಳವರೆಗೆ ಸುಭಿಕ್ಷ, ಉಪಸರ್ಗ ಮತ್ತು ದುಃಖ ಆಗದಿರುವುದು, ಆಕಾಶಗಮನ ಮತ್ತು ಸಮಸ್ತ ವಿದ್ಯೆಗಳಲ್ಲಿ ನೈಪುಣ್ಯ. [ ದಶವಿಧ + ಅತಿಶಯ ]

**ದಶವಿಧಾವಸ್ಥೆ** (ನಾ). = ದಶಾವಸ್ಥೆ : ಕವಿಮುಖ್ಯರಱಿಗೆ ಲೋಕ ವ್ಯವಹಾರ ಪ್ರಚುರ ದಶವಿಧಾವಸ್ಥೆಗಳಂ (ಶೃಂಗಾರ. ೮-೬೮). [ ದಶವಿಧ + ಅವಸ್ಥೆ ]

**ದಶವಿಧೇಂದ್ರಿಯ** (ನಾ). ಶ್ರೋತ್ರ, ತ್ವಕ್ಕು, ಚಕ್ಷುಸ್ಸು, ಜಿಹ್ವೆ, ನಾಸಿಕಗಳೆಂಬ ಐದು ಜ್ಞಾನೇಂದ್ರಿಯಗಳು ಮತ್ತು ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಐದು ಕರ್ಮೇಂದ್ರಿಯಗಳು : ಆದಿಸಂಬಂಧವಪ್ಪ ಭೂತಂಗಳು ನಾನಲ್ಲ ದಶವಿಧೇಂದ್ರಿಯಂಗಳು ನಾನಲ್ಲ ದಶವಾಯುಗಳು ನಾನಲ್ಲ (ಮುಹಾದೇ. ಶ. ೦೯೩-೩೧೦) : ದಶವಿಧೇಂದ್ರಿಯದ ದುರ್ಗುಣತತಿಯ ಸಂಹರಿಸಿ . . . ದಶವಿಧದ ಪಾದೋದಕ ಪ್ರಸಾದಕ್ರಮಂಗಳನಱುಪಿ ಶಿಷ್ಯಾಳಿಗೆ (ವೀಶೈಷ. ೩-೦೦-೨). [ ದಶವಿಧ + ಇಂದ್ರಿಯ ]

**ದಶವೈಕಾಲಿಕ** (ನಾ). [ಜೈನ] ಹದಿನಾಲ್ಕು ಅಂಗಬಾಹ್ಯಆಗಮಂಗಳಲ್ಲಿ ಏಳನೆಯದು ; ಇದರಲ್ಲಿ ಕಾಲ, ವಿಕಾಲಗಳ ನಿರೂಪಣೆ ಇದೆ : ಅಂಗಬಾಹ್ಯಂ ಸಾಮಾಯಿಕಮುಂ ಚತುರ್ವಿಂಶತಿಸ್ತವನಮುಂ ಮಂದನೆಯುಂ . . . ದಶವೈಕಾಲಿಕೆಯುಂ . . . ಮಹಾಪುಂಡರೀಕಮುಂ ಅಶೀತಿಕೆಯುಂ ಎಂದು ಪದಿನಾಲ್ಕು ತೆಱ (ತತ್ತ್ವಸೂ. ೬೫) ; ದಶವೈಕಾಲಿಕೆಯೆಂಬುದು ನಿಯಮದಿಂ ದ್ರವ್ಯಕ್ಷೇತ್ರಕಾಲಭಾವಾಶ್ರಯದಿಂ ಪಂಚಾಚಾರ ವಿಧಿಯುಂ ಉದಾಹರಿಸುಗುಂ (ತತ್ತ್ವಸೂ. ೬೫). [ ದಶ + ವೈಕಾಲಿಕ ]

**ದಶವ್ಯಾಕರಣ** (ನಾ). ಐಂದ್ರ, ಚಾಂದ್ರ, ಕಾಶಕೃತ್ಸ್ನ, ಕೌಮಾರ, ಶಾಕಟಾಯನ, ಸಾರಸ್ವತ, ಶಾಕಲ, ಆಪಿಶಲ, ಕಾತಂತ್ರ, ಮತ್ತು ಪಾಣಿನೀಯ ಎಂಬ ಹತ್ತು ವ್ಯಾಕರಣಗಳು: ಸಂಖ್ಯಾವಾಚಿ ಸಮಾಸಕ್ಕೆ– ಏಕಾಂಗ, ದ್ವಿಮುಖ . . . ನವನಿಧಿ, ದಶವ್ಯಾಕರಣ (ಶಮದ. ೬೨ ಪ್ರಯೋ). [ ದಶ + ವ್ಯಾಕರಣ ]

**ದಶಶತ** (ನಾ). ೧. ಹತ್ತು ನೂರು ; ಸಾವಿರ ; ಸಹಸ್ರ : "ಸಹಸ್ರಂ ದಶಶತಂ" (ವಸ್ತುಕೋ. ೦೦೩-೩೩) : ಸಲೆ ದಿನಂಪ್ರತಿಯಿಂದ ಗಂಗಾಮಳ ಸಲಿಲಮಂ ತಂದು ನಿರ್ಮಳಕಳಶದಶಶತದಿಂ ಶಿವಂಗಭಿಷೇಕಮಂ ಮಾಡಿ (ಬಸಪು. ೯೩-೦೯) ; ವಿಗತಸುಜ್ಞಾನಿಯ ಪರಿಪೋಷಿತಾಶಾಧೀನನಂ ದುಃಕೃತಯುತನನಪರಾಧ ದಶ[ ಪಾಠಾಂ. ಶತ ]ಶತನ ಎನ್ನನೇನಂ ಮಾಡಿಕೊಂಬೆನೊ (ಬಸಪು. ೬೦-೫೭). ೨. ಹತ್ತು ಅಧಿಕವಾದ ಒಂದು ನೂರು ; ಒಂದುನೂರ ಹತ್ತು. ೩. ಅಸಂಖ್ಯ ; ಅಮಿತ. 'ದಶಶತಕರ', 'ದಶಶತಕಿರಣ' ಪರಾ. [ ದಶ + ಶತ ]

**ದಶಶತಕರ** (ನಾ). ೧. ಸಹಸ್ರ ಕಿರಣಗಳು : ತನ್ನ ದಶಶತಕರದಿ ಗಗನ ಮೆಂದೆಂಬ ಜೇಗಟೆಯಿಂದ ಧರೆಗೆ ಡಂಗುರವೊಯ್ಯುಲೆಂದೆಂದು ನಿಂದಿರ್ದನೋ ಎಂಬಂತೆ ರವಿಯುದಯಗಿರಿಗೆ ಬಂದಂ (ಸಿದ್ಧರಾ. ೨-೮). ೨. ಅಸಂಖ್ಯ ಕಿರಣಗಳನ್ನುಳ್ಳವನು ; ಸೂರ್ಯ : ಆ ಬದ್ದೆಗಂಗೆ ವೈರಿ ತಮೋಬಳ ದಶಶತಕರಂ ವಿರಾಜಿತವಿಜಯಶ್ರೀ ಬಾಹುಯುದ್ಧಮಲ್ಲಂ (ಪಂಪಭಾ. ೦-೩೦) : [ ದಶಶತ + ಕರ ]

**ದಶಶತಕಿರಣ** (ನಾ). = ದಶಶತಕರ ೨: ನಿನ್ನ ದೊರೆಯನೆ ಮಗನಕ್ಕಂ ದಾಹ್ವಾನಂಗೆಯ್ಯಲೊಡಂ ದಲ್ ಧರೆಗಿೞಿದನಂಧು ದಶಶತಕಿರಣಂ (ಶಂಪುರಾ. ೧-೯೦). [ ದಶಶತ + ಕಿರಣ$_1$ ]

**ದಶಶತದಳ** (ನಾ). ಸಾವಿರ ಎಸಳುಗಳನ್ನುಳ್ಳದು; ಸಹಸ್ರದಳ ಕಮಲ; ತಾವರೆ: ಶತಮಖಾಮರ ನತಚರಣದಶಶತದಳಂ . . . ಸಸ್ಮಿತವದನ ದಶಶತದಳಂ ಪ್ರತ್ಯಕ್ಷಮಾಗಿರ್ದುದು (ಬಸವು. ೧೬-೨೭). [ ದಶಶತ + ದಳ$_2$ (= ದಲ) ]

**ದಶಶತದ್ಯುತಿ** (ನಾ).=ದಶಶತಕರ ೧: ಶತದಳಾಸದನತುಳ ತೇಜೋಜಿತ ದಶಶತದ್ಯುತಿ ವಿತತಿ ಸಸ್ಮಿತವದನ ದಶಶತದಳಂ ಪ್ರತ್ಯಕ್ಷಮಾಗಿರ್ದುದು (ಬಸವು. ೧೬-೨೭). [ ದಶಶತ + ದ್ಯುತಿ ]

**ದಶಶತನೇತ್ರ** (ನಾ). ಸಾವಿರ ಕಣ್ಣುಗಳನ್ನುಳ್ಳವನು; ಸಹಸ್ರಾಕ್ಷ; ದೇವೇಂದ್ರ: "ಸುತ್ರಾಮಾಖ್ಯಂ ದಶಶತನೇತ್ರಂ ಕುಲಿಶಾಯುಧಂ . . . ಪಾಕಶಾಸನ ಜಂಭದ್ವಿಷ್ಟಂ" (ವಸ್ತು ಕೋ. ೬-೩೪). [ದಶಶತ + ನೇತ್ರ]

**ದಶಶತಪತ್ರ** (ನಾ).=ದಶಶತದಳ: ಪತ್ರವಾಹನನೇತ್ರ ದಶಶತಪತ್ರ ಸಂಚಯ ಮಿತ್ರಮಂಡಲ ಪತ್ರವಾಹನಪುತ್ರ . . . ಗುರುಸಿದ್ಧೇಶ ಮಾಂ ತ್ರಾಹಿ (ಬಸವು. ೦೦-೫೭). [ ದಶಶತ + ಪತ್ರ ]

**ದಶಶಿರ** (ನಾ). ೧. ಹತ್ತು ತಲೆಗಳು: ತ್ರೇತೆಯುಲಿ ರಘುರಾಮನಾಮದಿ ಸೀತೆಯಂ ಹೋಗಾಡಿ ದಶಶಿರದಾತನಿಂ ಬ್ರಹ್ಮತಿಗೆ ಸಿಕ್ಕಿ ತೊಳಲ್ದ ಜಿಸುತಿರನೇ (ಬಸವು. ೩೪-೩೯). ೨. ಹತ್ತು ತಲೆಗಳುಳ್ಳವನು; ರಾವಣ: ಇವನೆ ರಾವಣನೆಂಬ ರಕ್ಕಸನಿವನೆ ದಶಶಿರನೆಂಬ ವೀರನು (ತೊರೆರಾ. ೨೦-೨೪): ದಶರಥಾತ್ಮಜ ನೀನು ಲಂಕೆಯೊಳಸುರ ವೀರರು ಕುಂಭಕರ್ಣನು ದಶಶಿರನು ಮೊದಲಾದ ದುರ್ಜನರೆಲ್ಲರನು ಮಡುಹಿ (ರಾಮಚ. ೨೦-೪): ದಶಶಿರಂ ತಪದಿಂದಲೆದ್ದೀಶವರದಯುಗಕೆ ಸಸಿನದಿಂ ನಮಿಸಲು (ಹಲಸು. ೮-೦): ದಿಗ್ಗಜದಶಂಗಳದಟರ್ದುದಾತಂಗೆ ಮೇಣ್ ದಶಶಿರಂ ತಾನೆಂಬರಯ್ (ಶ್ರೀರಾಮಾ. ೩೦-೩೩). [ ದಶ + ಶಿರ$_1$ ]

**ದಶಸಾರ** (ನಾ). ೧. [ವೈದ್ಯ] ರೋಗನಿವಾರಕವಾದ ಹತ್ತು ಬಗೆಯ ಸತ್ತ್ವಪೂರ್ಣ ಔಷಧ ದ್ರವ್ಯ: ದಶಸಾರಪ್ರಯೋಗ–ಯಷ್ಟಿಮಧುಕ, ನೆಲ್ಲಿಕಾಯಿ, ದ್ರಾಕ್ಷಿಹಣ್ಣು, ಏಲಕ್ಕಿ, ಶ್ರೀಗಂಧ, ಇಪ್ಪೆಹೂವು, ಖರ್ಜೂರ, ಕೊತ್ತಂಬರಿ, ದಾಳಿಂಬದ ಹಣ್ಣು ಇವನ್ನೆಲ್ಲಾ ಸಮಭಾಗ ಚೂರ್ಣಂಗೈದು ಇಷ್ಟರ ಸಮ ಸಕ್ಕರೆವೆರಸಿ ಉದಯದಲ್ಲಿ ಸೇವಿಸಲು ಸಕಲ ಪಿತ್ತವಿಕಾರಂ ಮಾಣ್ಗುಂ (ಸಕವೈ. ೦೪೩). 'ದಶಸಾರಚೂರ್ಣ' ಪರಾ. ೨. [ವೀಶೈ] (?): ನವಸಾರ ಅಷ್ಟಸಾರ ದಶಸಾರ ಪಂಚಸಾರ ಚತುಸ್ಸಾರಯೇಕಸಾರ ಯಿಂತಿವನತಿಗಳೆದ ಮಹಾಮಹಿಮನ ನಿಲವು ಲಿಂಗದಲ್ಲಿ ಸಂಪೂರ್ಣ (ಷಡಗೋ. ೦೭೩-೧೨). [ ದಶ + ಸಾರ$_2$ ]

**ದಶಸಾರಚೂರ್ಣ** (ನಾ). [ವೈದ್ಯ] ದಶಸಾರವೆಂಬ ಔಷಧದ್ರವ್ಯಗಳಿಂದ ಮಾಡಿದ ಚೂರ್ಣ: ದಶಸಾರಚೂರ್ಣ–ಯಷ್ಟಿಮಧುಕ, ನೆಲ್ಲಿಚೆಟ್ಟು, ಶಿಲಾಧಾತು, ಕಿರುನೆಲ್ಲಿ, ಏಲಕ್ಕಿ, ಶ್ರೀಗಂಧ, ಇಪ್ಪೆಹೂವು, ಖರ್ಜೂರ, ದಾಳಿಂಬದ ಓಟೆ ಇವಂ ಸಮಭಾಗ ಚೂರ್ಣಮಂ ಮಾಡಿ, ಎಳನೀರು . . . ಯಾವುದರಲ್ಲಾದರೂ ಕಲಸಿಕೊಡಲು ಪೈತ್ಯದಿಂದಾದ ಸಕಲ ವ್ಯಾಧಿಯು ಪರಿಹರ (ಸಕವೈ. ೦೪೩). [ ದಶಸಾರ + ಚೂರ್ಣ$_2$ ]

**ದಶಸಾಹಸ್ರ** (ನಾ). ೧. ಹತ್ತು ಸಾವಿರ. ೨. [ಗಣಿತ] ಸಂಖ್ಯೆಯಲ್ಲಿ ಬಲಗಡೆಯಿಂದ ಐದನೆಯ ಸ್ಥಾನ: ಪಂಚಮಂ ದಶಸಾಹಸ್ರಂ ಷಷ್ಠಮಂ ಲಕ್ಷಮೇವ ಚ (ವ್ಯವಹಾ. ೮-೩). [ ದಶ + ಸಾಹಸ್ರ ]

**ದಶಸಿದ್ಧಿ** (ನಾ). ರಾಜಸಯೋಗದ ಅನೂರ್ಮಿಮತ್ತ್ವ, ದೂರಶ್ರವಣತ್ವ, ದೂರದರ್ಶಿತ್ವ, ಕಾಮರೂಪತ್ವ, ಪರಕಾಯಪ್ರವೇಶಿತ್ವ, ಸ್ವಚ್ಛಂದಮೃತ್ಯುತ್ವ, ದೇವತೆಗಳ ಮತ್ತು ದೇವಕನ್ನೆಯರ ಸಹಕ್ರೀಡೆಯನ್ನು ನೋಡುವಿಕೆ, ಯಥಾ ಸಂಕಲ್ಪಸಿದ್ಧಿ, ಅಪ್ರತಿಹತವಾದ ಆಜ್ಞಾಶಕ್ತಿಗಳೆಂಬ ಹತ್ತು ಬಗೆಯ ಸಿದ್ಧಿಗಳು: ಶುದ್ಧ ಬ್ರಹ್ಮದ ಸನ್ನಿಧಿಯಲಿರ್ಪ ಇದ್ದಿಹವು ಮಹ ಅಷ್ಟಸಿದ್ಧಿಯು ಸಿದ್ಧ ಕೇಳ್ತಾಸ್ತಿಕವಿವು ರಾಜಸದ ದಶಸಿದ್ಧಿಯಿದ್ದಿಹವು ನಾ ಹೇಳ್ವೆ ಸಗುಣನಾಗಿದ್ದ ಯೋಗದ ಮನೆಯೊಳಗೆ ಯಿವುಯಿದ್ದಿಹವು (ಜ್ಞಾನಸಿಂ. ೨೦-೬೨). [ ದಶ + ಸಿದ್ಧಿ ]

**ದಶಾಂಗ** (ಗು). ೧. ಹತ್ತು ಅಂಗಗಳನ್ನುಳ್ಳ. (ನಾ). ೨. ಹತ್ತು ಅಂಗಗಳು ಅಥವಾ ಅಂಶಗಳು: ಪುರ ನಿಧಿ ಶಯ್ಯಾಸನ ರಾಜ್ಯರತ್ನ ವಾಹನ ವರೂಥಿನೀ ನಾಟ್ಯಸಭಾಪರಿಕರ ಸಹಿತಂ ಭರತೇಶ್ವರಂಗೆ ಸಮ ಸಂದುದೀ ದಶಾಂಗಂ ಭೋಗಂ (ಆದಿಪು. ೧೩-೩). ೩. ಧೂಪಹಾಕಲು ಬಳಸುವ ಹತ್ತುಬಗೆಯ ಸುಗಂಧದ್ರವ್ಯಗಳು: "ದಶಾಂಗಗಳು – ಧೂಪ; ೨. ರಾಳ; ೩. ಚಂದನ; ೪. ಕರ್ಪೂರ; ೫. ಗೌಲ; ೬. ನಖ; ೭. ತುಂಗ; ೮. ಗುಗ್ಗುಲ; ೯. ಘೃತ; ೧೦. ಗಂಧ" (ನಾನಾಶ. ೩೦೫): ಎಸೆವ ಕಾಳಾಗರು ದಶಾಂಗಮಂ ಬೀಸಿ ರಂಜಿಸುವ ರತುನಾರತಿಯನೆತ್ತಿ (ಹಕಾ. ಹರಿ. ೩೦೭-೬೭): ಗರ್ಭಗುಡಿಯಿಂದ ಹೂ, ಹಣ್ಣು, ನೈವೇದ್ಯ, ದಶಾಂಗ, ಗುಗ್ಗುಳ, ಸಾಂಬ್ರಾಣಿಗಳ ವಾಸನೆ ಬರುತ್ತಿದೆ (ಶಂಪುರಾತ್ರ. ೫೦): ಹಾಲುಮಡ್ಡಿ ಕರ್ಪೂರ ಶಿಲಾರಸ ದೇವದಾರ ಲೋಲ ನಾಗರಮೋತಿ ಚಂದನ ಕರ್ಚೂರ ರಾಳ ಗುಗ್ಗುಳದ ದಶಾಂಗ (ಸಿದ್ಧಪು. ೦೯-೩). ೪. [ಜೈನ] ಭೋಗಭೂಮಿಯ ಹತ್ತು ಕಲ್ಪವೃಕ್ಷಗಳು: ಮದ್ಯವಿಭೂಷಣ ಮಾಲ್ಯ ತೋದ್ಯ ಸ್ರಗ್ಗೃಹ ಭಾಜನಾಶನ ದೀಪಪ್ರೋದ್ಯಜ್ಜ್ಯೋತಿಸ್ಸ್ಥಿತಿಯೊಳಮು ದ್ಯೋತಿಸೆ ತುದಿಯೊಳಂಗಮಿಂತು ದಶಾಂಗಂ (ಆದಿಪು. ೩-೪೦). 'ದಶಾಂಗ ಕಲ್ಪಕುಜ' ಪರಾ. [ ದಶ + ಅಂಗ$_1$ ]

**ದಶಾಂಗಕಲ್ಪಕುಜ** (ನಾ). [ಜೈನ] ಭೋಗಭೂಮಿಯ ನಿವಾಸಿಗಳಿಗೆ ಮದ್ಯಾಂಗ, ಭೂಷಣಾಂಗ, ವಸ್ತ್ರಾಂಗ, ತೂರ್ಯಾಂಗ, ಮಾಲ್ಯಾಂಗ, ಗೃಹಾಂಗ, ಭಾಜನಾಂಗ, ಭೋಜನಾಂಗ, ಜ್ಯೋತಿರಂಗ ಮತ್ತು ದೀಪಾಂಗಗಳೆಂಬ ಹತ್ತು ಬಗೆಯ ಭೋಗವಸ್ತುಗಳನ್ನು ಕೊಡುವ ಕಲ್ಪವೃಕ್ಷ: ಇದು ಶಾಲ್ಮಲಿಪಾದಪಮಿಂತಿದು ಜಂಬೂವೃಕ್ಷಮಿದುವೆ ಕುರುಭೂಮಿಗಳೊಪ್ಪಿದುವರ್ಧಚಂದ್ರನಾಕಾರದಿನುಚಿತ ದಶಾಂಗಕಲ್ಪಕುಜ ನಿಳಯಂಗಳ್ (ಆದಿಪು. ೨-೨೬). [ ದಶಾಂಗ + ಕಲ್ಪಕುಜ ]

**ದಶಾಂಗಕಲ್ಪತರು** (ನಾ). = ದಶಾಂಗಕಲ್ಪಕುಜ: ಕುಸುಮ ಸ್ರಗ್ವಸನಾನ್ನಪಾನ ವಿವಿಧಾತೋದ್ಯಪ್ರಕಾಶ . . . ವಿಭೂಷಾನೀಕಮಂ ಕೊಟ್ಟು ಸಂತಸಮಂ ಮಾಡೆ ದಶಾಂಗಕಲ್ಪತರುಗಳ್ ಸ್ವರ್ಗಕ್ಕೆ ಸಂಸಾರಸಾರ ಸುಖಕ್ಕಗ್ಗಳಮೆನ್ನದಾ ಪ್ರಥಮಕಾಲ ಶ್ರೀಯನೇವಣ್ಣಿಪೆಂ (ಪಂಪರಾಮಾ. ೮-೬೭). [ ದಶಾಂಗ + ಕಲ್ಪತರು ]

**ದಶಾಂಗಭೋಗ** (ನಾ). [ಜೈನ] ಚಕ್ರವರ್ತಿಗಳಿಗೆ ಲಭಿಸುವ ಹತ್ತು ಬಗೆಯ ಭೋಗಗಳು; "ದಿವ್ಯನಗರ, ಚತುರ್ದಶರತ್ನಗಳು, ನವನಿಧಿ, ಸೈನ್ಯ, ಭೋಜನ, ಭಾಜನ, ಶಯ್ಯಾ, ಆಸನ, ವಾಹನ, ನಾಟ್ಯ ಇವು ದಶಾಂಗಭೋಗಗಳು" (ಆದಿಪು. ಕೋಶ); ಈ ಪುರುಷರತ್ನಾಕರಂ ದಶಾಂಗಭೋಗದೊಳ್ ಕೂಡಿದಂ (ಆದಿಪು. ೬-೨೪ ವ); ಪದ್ಮಂ . . . ದಶಾಂಗಭೋಗಮನನುಭವಿಸಿ (ಶಾಪುಂಪು. ೨೫೦-೯); ಏಕಚ್ಛತ್ರೀಕೃತ ಭಾರತವರ್ಷನುಂ . . . ನವನಿಧಿಸನಾಥ ಶ್ರೀನಿವಾಸನುಂ ದಶಾಂಗಭೋಗಸಂಗತನುಮಾಗಿ (ಚಂದ್ರಪು. ೭-೩೩ ವ).

[ ದಶಾಂಗ + ಭೋಗ ]

**ದಶಾಂಶ** (ನಾ). ೧. ಹತ್ತು ಅಂಶಗಳು ಅಥವಾ ಭಾಗಗಳು: (*). ೨. ಹತ್ತನೆಯ ಒಂದು ಭಾಗ: (*). ೩. [ಗಣಿತ] ಹತ್ತು ಹತ್ತಾಗಿ ಎಣಿಸುವ ಪದ್ಧತಿ; ದಶಮಾನಪದ್ಧತಿ: ದಶಮಾನಪದ್ಧತಿ; ದಶಮಾಂಶ, ದಶಾಂಶ (Decimal. ಶಬ್ದಾ. ೨೯). [ ದಶ + ಅಂಶ ]

**ದಶಾನನ** (ನಾ). ೧. ಹತ್ತು ಮುಖಗಳು. 'ದಶಾನನತೆ' ಪರಾ. ೨. ಹತ್ತು ಮುಖಗಳನ್ನುಳ್ಳವನು; ರಾವಣ: ಜಲನಿಧಿಯಂ ಪಾಯ್ದೊರ್ವನೆ ನಿಲಿಕಿ ದಶಾನನನ ಪೊಟಲನಾ ಲಂಕೆಯನಾಕುಲಮಿಲ್ಲ ದಿಟಿಂದ(ದು) ನಿಂದಂ (ಕವಿರಾ. ೩-೧೯೦); ಸಿಂಹಪೀಠದಿನಿರದೆಟ್ಟಿನಸ್ತ್ರವಿತತ ಪುಣ್ಯದಶಾನನನಾ ದಶಾನನಂ (ಪಂರಾಮಾ. ೯-೭೩); ರಾಘವಂ ಮಾಡಿದು ಪಹಸಿಯಂ ದಶಾನನಂಗೆ ದಾಯುವಂ ಪೇಳ್ದವನ ವಂಶವುಂ ಸವಟಿಸಿದ ಮಾಯಕಾರ್ತಿಯವೊಲ್ (ಕೃಮಿಥಾ. ೯-೨೨). [ ದಶ + ಆನನ ]

**ದಶಾನನತೆ** (ನಾ). ಹತ್ತು ಮುಖಗಳನ್ನು ಹೊಂದಿರುವಿಕೆ: ಪದನಖದೊಳ್ ದಶಾನನತೆ ನಮ್ರನೃಪಾಳಿ ಮುಪಾಂಕದಿಂ ಜಯಾಸ್ಪದ ಭೂಜದಲ್ಲಿ ಷಣ್ಮುಖತೆ . . . ಚತುರ್ವ್ವದನತೆ ವಕ್ತ್ರದೊಳ್ ಚತುರವಾಣಿಯಿನೊಪ್ಪಿರಲೆನ್ನು ನೋರ್ಪ್ಪಡಭ್ಯುದಯಮನೆಯ್ದಿದತ್ತು ಪಲವುಂ ಮುಖದಿಂ ತವೆ ಕೀರ್ತಿಗಂಗನೊಳ್ (ಎಕ. VII, ಶಿವಮೊ. ೯-೮೪ ; 1122).

[ ಸಂ. ದಶಾನನತಾ ]

**ದಶಾನೀಕಿನಿ** (ನಾ). ಹತ್ತು ಅನೀಕಿನಿ ; ಒಂದು ಅಕ್ಷೌಹಿಣಿ : ಈ ಅನೀಕಿನಿ ಎಂಬ ಬಲದ ಲೆಕ್ಕವನಿಕ್ಕಿ ದಶಾನೀ[ಕಿನಿ] ಮತ್ತೊಮ್ಮೆ ೧೦ಱಿಂದ ಗುಣಸಲು ಬಂದ ಲಬ್ಧ] ಆನೆ ೨೧೮[೭೦] ರಥ ೨೧೮೭೦ ಕುದಿರೆ ೬೫೬೧೦ ಕಾಲಾಳು ೧೦೯೩೫೦. ಇದು ೧ ಅಕ್ಷೌಹಿಣಿ ಬಲದ ಮಿತವೆನಿಸುವುದು (ವ್ಯವಹಾ. ಆಸು. ೧-೦೦) 'ಅನೀಕಿನಿ' ಪರಾ.

[ ದಶ + ಅನೀಕಿನಿ ]

**ದಶಾವಂತ** (ವಾ). ಭಾಗ್ಯವಂತ ; ಸುದೈವಿ. [ ಸಂ. ದಶಾವತ್ ]

**ದಶಾವತಾರ** (ನಾ). ೧. (ವಿಷ್ಣುವಿನ) ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ ಎಂಬ ಹತ್ತು ಅವತಾರಗಳು: ಜನಿಮೋಪಾದ್ಯವತಾರಂ ತನಗಾಯ್ತು ದಶಾವತಾರಂ (ಗದಾಯು. ೩-೪೪) : ವಿಷ್ಣು ಬಲ್ಲಿದನೆಂಬೆನೆ ದಶಾವತಾರದಲ್ಲಿ ಭಂಗವಟ್ಟುದಕ್ಕೆ ಕಡೆಯಿಲ್ಲ (ಬಸವ. ೩೫೦) : ಜಗತೀಮಣ್ಡನ ಪುಣ್ಡರೀಕ ನಯನಂ ಲಕ್ಷ್ಮೀಯುತಂ ಭೂರಿ ಸತ್ವಗುಣಾಧಾರನಿಳಾಧರಂ ವಿಬುಧಲೋಕಾಹ್ಲಾದನಂ ಪಾಪ ದೈತ್ಯಗಣಧ್ವಂಸಿ ದಶಾವತಾರವಿದಿತಂ ನಿತ್ಯಂ ವಿನತ್ಯನ್ವಿತಂ ಜಗದೊಳ್ ಕೇಶವದೇವನೊಲ್ದು ಕಳೆವಂ ಸ್ವಾತ್ಮಾನತಕ್ಲೇಶವಂ (ಎಕ. VI, ಕಡೂರು. ೬೬-೨೬ ; 1172). ೨. ಹತ್ತು ಅವತಾರಗಳನ್ನು ತಾಳಿದವನು; ವಿಷ್ಣು.

**ದಶಾವತಾರದ ಆಟ** = ೧. (ಹೆಚ್ಚಾಗಿ) ವಿಷ್ಣುವಿನ ಹತ್ತು ಅವತಾರದ ಕಥೆಗಳನ್ನೇ ವಸ್ತುವಾಗಿ ಉಳ್ಳ ಆಟ; ಬಯಲಾಟ: (೬). ೨. = ದಶಾವತಾರಗಂಜೀಫು. **ದಶಾವತಾರ ಮೇಳ** = ೧. ಬಯಲಾಟವನ್ನಾಡುವವರ ಗುಂಪು, -ಮೇಳ. ೨. = ದಶಾವತಾರದ ಆಟ ೧. : ಅವರು ಆಡುವ ಕಥಾನಕಗಳು ಹೆಚ್ಚಾಗಿ ವಿಷ್ಣುವಿನ ದಶಾವತಾರಗಳಿಗೆ ಸಂಬಂಧಿಸಿದುದರಿಂದ, ಅವನ್ನು 'ದಶಾವತಾರಮೇಳ'ಗಳೆಂದೂ ಕರೆಯುವ ವಾಡಿಕೆಯುಂಟು (ಯಕ್ಷಲ. ೧೯). [ಸಂ.]

**ದಶಾವತಾರ ಗಂಜೀಫು** (ನಾ). (ವಿಷ್ಣುವಿನ) ಹತ್ತು ಅವತಾರಗಳ ಚಿತ್ರಗಳನ್ನುಳ್ಳ ಇಸ್ಪೀಟಾಟದ ರೀತಿಯ ಎಲೆಗಳಿಂದಾಡುವ ಆಟ.

[ ದಶಾವತಾರ + ಗಂಜೀಫು ]

**ದಶಾವಸ್ಥೆ** (ನಾ). ೧. ದೃಕ್‌ಸಂಗ, ಮನಸ್ಸಂಗ, ಸಂಕಲ್ಪ, ಜಾಗರ, ಕೃಶತೆ, ಅರತಿ, ಹ್ರೀತ್ಯಾಗ, ಉನ್ಮಾದ, ಮೂರ್ಛೆ ಮತ್ತು ಅಂತ ಗಳೆಂಬ ವಿರಹದ ಹತ್ತು ಅವಸ್ಥೆಗಳು : ಅಳುಪಿ ನೋಡಿದಡೊಂದು ಚಿಂತಿಸಿದಡೆರಡು ಸುಯ್ ಮೊಳೆಯೆ ಮೂಱು ಜ್ವರಂ ತೋಱಿದಡೆ ನಾಲ್ಕು ಮೆಯ್ಯುಳುಹಲಯ್ದೂಟಮಂ ಬಿಡಲಾಱು ವಿಕಳವೆಡೆಗೊಳಲೇಳು ಕಡುಮೋನವಂ ತಳೆಯಲೆಂಟತಿ ಮೂರ್ಛೆ ಮೂಡಲೊಂಬತ್ತು ತನು ವಳಿಯೆ ಹತ್ತಿವು ದಶಾವಸ್ಥೆ (ಹರಿಕಾ. ೪-೪೩) : ಎಱಗಿ ನೋಡುವುದೊಂದಱಲಿ ಎರಡಱಲಿ ಚಿಂತನೆ . . . ಮೋಹ್ ಹತ್ತಱಲಿ ಮರಣ ಇವು ದಶಾವಸ್ಥೆಗಳೆನಲು ಹೇಳುವವು ವಿರಹಿಜನರ್ಗೆ (ಬಸಪು. ೩೫-೩೩) : ನಿಟ್ಟಿಸಿ ನೋಡಿದ ಪೆಣ್ಗೆ ದಶಾವಸ್ಥೆ ಹುಟ್ಟುವುದಬಲೆ ಚಿತ್ರ್ಯಸು (ಕಂನವಿ. ೯-೪೯).

[ ಸಂ. ದಶಾವಸ್ಥಾ (ದಶನ್ + ಅವಸ್ಥಾ) ]

**ದಶಾವಸ್ಥೆಗೊಳ್** (ಕ್ರಿ). ವಿರಹದ ಹತ್ತು ಅವಸ್ಥೆಗಳಿಗೆ ಪಕ್ಕಾಗು ; ವಿರಹತಾಪವನ್ನು ಅನುಭವಿಸು : ಸಖಿಯೋ ಬೆಳುದಿಂಗಳು ಬಿಸಿಲಾದವೇ . . . ದಶಾವಸ್ಥೆಗೊಂಡೆನು ಮಹಾಲಿಂಗ ಗಜೇಶ್ವರನುಳಿದಡೆ (ಸವಚವ. ೭೩-೩೯೯). [ ದಶಾವಸ್ಥೆ + ಕೊಳ್$_1$ ]

**ದಶಾಸ್ಯ** (ನಾ). = ದಶಾನನ ೨: ಸಹಸ್ರಜಿಹ್ವೆಯೊಳಮುಜಾಂಡವಂ ಪುದಿದು ಬರ್ಪ ದಶಾಸ್ಯನ ವಹ್ನಿಬಾಣಮಂ . . . ತವಿಸಿದಂ ಹರಿ ವಾರುಣ ದಿವ್ಯಬಾಣದಿಂ (ಪಂರಾಮಾ. ೦೪-೦೬೦) : ನರಕನಾತಂ ಲೋಕಸಂಹಾರ ಮೂರ್ತಿ ದಶಾಸ್ಯಾದಿಗಳಿಂ ಬಲಾಧಿಕಂ (ಜಗವಿ. ೧-೬೯).

[ ದಶ + ಆಸ್ಯ ]

**ದಶಾಸ್ಯಾಂತಕ** (ನಾ). ರಾವಣನನ್ನು ಸಂಹಾರಮಾಡಿದವನು ; ರಾಮ : ಚಿರಂತನಕಾರ್ಯಂಗಳೊಳಂ ಹನೂಮಂತನಂತಪ್ಪನಂ ದಶಾಸ್ಯಾಂತಕಂ ದೂತನಾಗಿ ಕಳಿಪಿದಂ (ಪಂಚತಂ. ೨೩೮-೭). [ ದಶಾಸ್ಯ + ಅಂತಕ ]

**ದಶಾಹೀನ** (ನಾ). ೧. ನಿರ್ಭಾಗ್ಯ; ನತದೃಷ್ಟ. ೨. ಬತ್ತಿ ಇಲ್ಲದುದು. ೧, ೨: ದಿನದೀಪದಂತೆ ದಶಾಹೀನನು (ಗಾದೆ). [ ಸಂ. ]

**ದಶೆ** (ನಾ). ೧. ಅವಸ್ಥೆ ; ಸ್ಥಿತಿ ; ಇರುವಿಕೆ : ಸತ್ಯದುತ್ತರೋತ್ತರ ದಶೆ ಸತ್ಯದಾಯತಮಪ್ಪಮೃತೇಶ್ವರ ದಂಡನಾಯಕಂ (ಎಕ. VI, ತರೀಕೆ. ೪೫-೬೨ ; 1196) : ಈ ಚಂದ್ರನೀ ಶುಕ್ಲಪಕ್ಷಮಾ ಶುಕ್ಲಪಕ್ಷಕೆ ಸೇರ್ವ ಮುನ್ನಮೆ ದಶಾನನನ ದಶೆ ಸೇರ್ವುದಾ ದಕ್ಷಿಣದ ದಿಶೆಗೆ (ಶ್ರೀರಾಮಾ. ೬.೨೮-೨೮೦) : ಸೃಷ್ಟಿಕಥೆ ಕಟ್ಟುಕಥೆ ; ವಿಲಯಕಥೆ ಬರಿಯಕಥೆ ಹುಟ್ಟು ಸಾವುಗಳೊಂದೆ ಪುರುಳನೆರಡು ದಶೆ (ಮಂಕುತ. ೦೩೯). ೨. ಬಾಲ್ಯ, ಕೌಮಾರ್ಯ, ಯೌವನ ಮತ್ತು ವಾರ್ಧಕ್ಯಗಳೆಂಬ ಜೀವಿತದ ನಾಲ್ಕು ಅವಸ್ಥೆಗಳು. ೩. ಜೀವನದ ಅವಸ್ಥೆ ; ಒಳ್ಳೆಯ ಅಥವಾ ಕೆಟ್ಟ ಸ್ಥಿತಿ. ೪. ಸುದೈವ; ಭಾಗ್ಯ. ೫. (ಒಳ್ಳೆಯ ಮತ್ತು ಕೆಟ್ಟ) ಕರ್ಮಗಳ ಫಲ; ಕರ್ಮಪರಿಪಾಕ : "ಕರ್ಮದ ಪರಿಪಾಕದಲ್ಲಿಯೂ ದಶಾ ಎಂಬುದು" (ಹಲಾಯು. ೦೬೩-೦೩). ೬. (ಜನ್ಮನಕ್ಷತ್ರವನ್ನು ಅನುಸರಿಸಿ) ನವಗ್ರಹಗಳು ತಮ್ಮ ಚಲನೆಯಿಂದ ಮನುಷ್ಯನ ಜೀವನದ ಮೇಲೆ ಕಾಲ ಕಾಲಕ್ಕೆ ಬೀರುವ ಶುಭಾಶುಭ ಪ್ರಭಾವ,-ಪರಿಣಾಮ ; ಗ್ರಹಗತಿ. ೭. ಮನಸ್ಸಿನ ಸ್ಥಿತಿ. ೮. ಬಟ್ಟೆಯ ಅಂಚು ; ಕರೆ : "ವರ್ತಿಃ, ವಸ್ತಿಃ, ದಶಾ, ಸಿಚಃ – ಈ ೪ ಸೀರೆಯ ಕಱಿ" (ಹಲಾಯು. ೯೦-೩೯೭). ೯. ದೀಪದ ಬತ್ತಿ. ೧೦. ಹೊಸಬಟ್ಟೆ. ೧೧. ಕರ್ತವ್ಯ ; ಧರ್ಮ. ೧೨. ಪೂರ್ವಕಾಲ ; ಆದಿಕಾಲ. ೧೩. ಬಿಲ್ಲಿನ ಹೆದೆ; ಮೌರ್ವಿ. ೧೪. ಬಾಣ. ೧೫. ಮೊಲ. [ ಸಂ. ದಶಾ ]

**ದಶೆಮುಖಿ** (?) (ನಾ). (?) : ಅವರು ಬಿಜಯಂಗೈವ ಸಮಯದಲವನ ತಳಿಗೆನಗಂದರಿರುವ ನವಸತಿಯಲಿ ಸಮಾಹಿತ ದಶೆಮುಖಿಯಲ್ಲಿರುತಿರಲೂ (ಅರಾಮಾ. ೩-೦೦-೮). [ ? ]

**ದಷ್ಟ** (ಗು). ೧. (ಹಾವು ಮೊದಲಾದುವುಗಳು) ಕಚ್ಚಿದ ; ಕಡಿದ : ಉರಗನೌಡಿದೊಡದಱ ವಕ್ತ್ರದೊಳಿರದೆ ಮೇಣಾ ದಷ್ಟದೇಹದೊಳಿರದೆ ರುಧಿರವು ಪೋಪವೊಲು ದುಷ್ಟಾಧಿಕಾರಿಗಳ ಒರಸೊರಸಿನಿಂ ಜನಪದದ ಧನ ಹರಿವುದರಸಂಗಲಸಿದಾ ಪ್ರಜೆಗಿರದುಭಯ ಪಿಂಗುವುದನಱ (ಕುಮಾ.ಊ. ೩-೦೩). (ನಾ). ೨. (ಹಾವು ಮೊದಲಾದುವುಗಳು) ಕಡಿದವನು : ಗುಂಡಿಗೆಯ ನೀರನಭಿಮಂತ್ರಿಸಿ ತಳಿಯಲೊಡಂ ಕುಮಾರಂ

ದಷ್ಟನಿಷ್ಟನಂ ಕಂಡಂತೆ ಭೋಂಕನೆರ್ದು ಕುಳ್ಳಿರ್ದನಂ ಕಂಡು (ಪಂಚತಂ. ೦೦೩-೦೯) ; ಗೋಚೊಬಿಗಿರೆ ಮೂಗಿನೊಳ್ ಸುಡಿಯೆ ಬಾಯ್ ಪೆಡೆ ದಷ್ಟನ ಸಾವು ನಿಶ್ಚಯಂ (ಕರ್ಣಾಕರ್ಣಾ. ೦೦-೯). ೩. (ಹಾವು ಮೊದಲಾದುವುಗಳಿಂ) ಕಚ್ಚುವಿಕೆ ಮತ್ತು ಕಚ್ಚಿದ ಜಾಗ: "ಸರ್ಪ ಕಚ್ಚಿದುದು ದಷ್ಟಮೆನಿಕ್ಕು" (ಶಬ್ದಮಣಿ. ೦೦೩-೮): "ಪಂದು ಹಲ್ಲು ನಟ್ಟ ಘಾಯ ದಷ್ಟವೆನಿಸಿಕೊಂಬುದು" (ವಿಷವೈ. ೮-೩). ೪. ತಿನ್ನುವುದು; ಊಟಮಾಡುವುದು: ಕಷ್ಟದಿಂ ಫಲವೇನು ಪೋದವರಿಗೀ ವಸ್ತುವಿಷ್ಟಮವ್ಯದೆ ನರಕ ಸಗ್ಗಮೆರಡರೊಳಲ್ಲಿ ದಷ್ಟವಾಗಿಹುದ ಕಂಡಿರ್ದ ರಾತ್ ಲೋಕದೊಳು ಚಿತ್ರಚಾಂಚಲ್ಯಮಲ್ತೆ (ವೆಂಕಾರಾ. ೩-೩೩-೪೩). [ಸಂ.]

ದಷ್ಟತೆ (ನಾ). (ಹಾವು ಮೊದಲಾದುವುಗಳು) ಕಚ್ಚಿರುವ ಸ್ಥಿತಿ: ರತಿ ಮೂರ್ಛಿತೆ ಪೋಲ್ವ ದೇಹದಿಂ ಸೊಗಯಿಸಿದಳ್ ಭುಜಂಗ ಪರಿದಷ್ಟತೆಯುಂ ತವೆ ಸೂಚಿಪಂದದಿಂ (ರಾಜಶೇ. ೦೦-೦೭೯). [ಸಂ. ದಷ್ಟತಾ]

ದಷ್ಟದಂತ (ನಾ). [ನಾಟ್ಯ] ಹಲ್ಲುಗಳಿಂದ ತುಟಿಯನ್ನು ಕಚ್ಚಿ ಭಾವಗಳನ್ನು ಸೂಚಿಸುವ ಒಂದು ಭಂಗಿ,-ಅಭಿನಯ; ● "ಅವುಡನ್ನು ಹಲ್ಲುಗಳಿಂದ ಕಚ್ಚುವುದು. ಕೋಪದಲ್ಲಿ ಇದನ್ನು ವಿನಿಯೋಗಿಸಬೇಕು" (ಅಭಿನಯದರ್ಪಣ. ೩೮೦ ಗದ್ಯಾನುವಾದ): ಅವುಡೊಂದಲೊಡನೆ ದಷ್ಟಂ (ಅಭಿನಯದರ್ಪಣ. ೩-೯೦). [ದಷ್ಟ + ದಂತ$_1$]

ದಷ್ಟಪುಷ್ಟ (ಗು). ೧. ಯಥೇಚ್ಛವಾಗಿ ತಿಂದು, ಚೆನ್ನಾಗಿ ಬೆಳೆದ; ಗಟ್ಟಿಮುಟ್ಟಾದ: ಸಾಕಷ್ಟು ದಷ್ಟಪುಷ್ಟವಾಗಿದ್ದ ದೇಹದ ಉಲ್ಲಸದ ಮುಖಮುದ್ರೆಯ ಯುವಕ ಮಲ್ಲಾಪುರ (ನಾಕೋಲೀ. ೩೩); ಐಶ್ವರ್ಯದ ಕಡಲಿನಲ್ಲಿ ಮಿಂದು ದಷ್ಟಪುಷ್ಟವಾಗಿ ಬೆಳೆದಿತ್ತು ಆಕೆಯ ಶರೀರ (ಕೂಸಭೀ. ೩೯). (ನಾ). ೨. ಗಟ್ಟಿಮುಟ್ಟಾದವನು; ಸಶಕ್ತ; ದೃಢಕಾಯ: ಅವರು ದಷ್ಟಪುಷ್ಟರಿದ್ದರು (ನಾಡಿಗೇ. ೨೦೩).
[←ಮರಾ. ಧಷ್ಟಪುಷ್ಟ./ಸಂ. ಧೃಷ್ಟಪುಷ್ಟ]

ದಷ್ಟೆ (ನಾ). (ಹಾವಿನಿಂದ) ಕಚ್ಚಿಸಿಕೊಂಡವಳು; ಕಡಿಸಿಕೊಂಡವಳು: ದಷ್ಟೆಯುಂ ಕಾದಿರ್ದನೆಂದನೊರ್ವಂ . . . ವಂಚಿಸಿ ಕುಚಿದಂಥನೆಂದ ನೊರ್ವಂ (ಸುಕುಮಾ. ೭-೦೩). [ಸಂ. ದಷ್ಟಾ]

ದಸ್‌ಬೊಕ್ಸ (ನಾ). (ಸೈನ್ಯಕ್ಕೆ ಸಂಬಂಧಪಟ್ಟ) ಹಣವಿಟ್ಟುಕೊಳ್ಳುವ ಅಧಿಕಾರ (?): ಶ್ರೀ ಚಾಮರಾಜೇಂದ್ರುವಡೆಯರವರ ಪಾದಸೇವಕನಾದ ಬಸಪ್ಪನವರ ಮಗ ದಸ್‌ಬೊಕ್ಸದ ನಂಜಪ್ಪನು ಈಶ್ವರಪ್ರೀತ್ಯರ್ಥವಾಗಿ ರಚಿಸಲ್ ಪಟ್ಟ ಕಟ್ಟೆ (ಮೈಆರಿ. ೦೯೩೭, ೩೩-೬ ; 1882).
[● ಇದು 'ದಸ್ತ್‌ಬೊಕ್ಷಿಸ' ಎಂಬುದರ ಅಪಲಿಖಿತವಿರಬಹುದು]

ದಸ$_1$ (ನಾ). ಒಂದು ಅನುಕರಣ ಶಬ್ದ. 'ದಸಗುಡು' ಪರಾ.

ದಸ$_2$, ದಹ$_1$, ದ್ಯಾ, ದಾಹ$_1$ (ನಾ). ೧. ಹತ್ತು. 'ದಸಸಿರ' ಪರಾ. ದಹ$_1$: ೧. 'ದಹಕೋಟಿ' 'ದಹಲಕ್ಷ' ಪರಾ. ೨. [ಗಣಿತ] ಒಂದು ಸಂಖ್ಯೆಯಲ್ಲಿ ದಶಮಸ್ಥಾನದಲ್ಲಿರುವ ಅಂಕಿ: ಏಕಂ ದಹಂ ಶತಂ ಸಹಸ್ರಂ ದಶಸಹಸ್ರಂ . . . ಇಂತು ಚಿಪ್ಪೀಸ ತಾಣವರೆ ಸಂಖ್ಯೆಯಕ್ಕುಂ (ಶಬ್ದಮಣಿ. ೧೦೩-೦೨). ದ್ಯಾ: ೧. 'ದಾಸಾವೀರ' ಪರಾ. ದಾಹ$_1$: ೧. ಉಗ್ಗಡಣೆ,-ಎಕ್ಕಂ, ದಾಹಂ, ಶತಂ, ಸಾವಿರ, ದಾಸಾವಿರ (ಪ್ರವಹಾ. ೮-೨೩); ಯಕ್ಕಂ, ದಾಹಂ, ಶತಂ, ಸಾವಿರ, ದಾಸಾವಿರ, ಲಕ್ಷ, ದಹಲಕ್ಷ . . . ಇವು ೩೨ ವುಭಡಣೆ ಹೆಸರುಗಳ್ (ಭಾಸ್ಕರ. ೦೦-೬).
[<ಪ್ರಾ. ದಸ. ದಹ./ಸಂ. ದಶನ್]

ದಸಕ್$_1$ (ನಾ). ಒಂದು ಅನುಕರಣ ಶಬ್ದ: ಮುಂದಿನ ಪರಿಣಾಮವನ್ನು ಮನಸ್ಸಿನಲ್ಲಿ ತಂದರೆ ಎದೆಯು ದಸಕ್ಕೆನ್ನುವದು (ಕುಲಶೇ. ೦೦೯); ಅವಳ ಎದೆ ದಸಕ್ಕೆಂದಿತು (ಒಡ್ಡಿಲು. ೮೩).

ದಸಕ (ನಾ).=ದಶಕ ೩: ಬಲ್ಲಗವುಡನ ಪುಂಬಳಿಯು ಗದ್ದೆ ಗಣ್ಣಾಮಡವೆಯ ಪಿಳ್ಳೆಯಪ್ಪನ ದಸಕದಿಂ ಪಡು[ವ]ಗದ್ದೆ ಕಂಬ ೫೦ ಆಲದ ಕೆಯ ಕಂಬ ೪೦೦ (ಎಕ. VI, ಕಡೂರು. ೩೯-೦೦ ; ?). [?]

ದಸಕತು 'ದಸಕತ್ತು' ನೋ.

ದಸಕತುಮೊಹರ 'ದಸಕತ್ತುಮೊಹರು' ನೋ.

ದಸಕತ್ತು, ದಸಕತು, ದಸ್ಕತಂ, ದಸ್ಕತ್ತು, ದಸ್ತಕತ್ತು (ನಾ). ೧. ಸಹಿ; ರುಜು; ಅಂಕಿತ: ದೇವಾಲಯಕ್ಕೆ ಸಹ ನಮ್ಮ ರುಜು ಮೊಹರು ಖಾಸ ದಸಕತ್ತಿನಿಂದ ಪ್ರತ್ಯೇಕವಾಗಿ ದಾನಶಾಸನಂಗಳಂ ಬರೆಸಿಕೊಟ್ಟು (ಎಕ. III, ಮೈಸೂರು. ೦-೦೦ : 1822) ; ಪ್ರತ್ಯೇಕ ಪ್ರತ್ಯೇಕವಾಗಿ ದಾನಶಾಸನವನ್ನು ಬರೆಯಿಸಿ ಅವರವರ ದಸಕತ್ತು ಮಾಡಿಸಿಕೊಟ್ಟು (ಚಾಮವಂ. I, ೩೦೮) : ಶಬ್ದ ಮಾತ್ರದಿಂದಲೇ ದೊರೆಗಳೆಂದೆನ್ನಿಸಿ ನಿರೂಪದ ದಸಕತ್ತುಗಳನ್ನು ಮಾತ್ರ ಮಾಡಿಸುತ್ತಾ . . . ಸಕಲ ಕಾರ್ಯಗಳನ್ನೂ ತಾವೇ ನಡೆಯಿಸುತ್ತಿದ್ದರು (ಚಾಮವಂ. II, ೦೫೭). ೨. ಕೈಬರೆಹ; ಹಸ್ತಾಕ್ಷರ: (+). ದಸಕತು: ೧. 'ದಸಕತುಮೊಹರ' ಪರಾ. ದಸ್ಕತು: ೧. ಪಾಳೆಯಗಾರರಿಗೆ ರಾಜಿ ತೀರ್ಮಾನದ ಅರ್ಜಿಗೆ ಸಾಕ್ಷಿ-ದಸ್ಕತು ಹಾಕಿದಾಗ ಅವನೂ ಸು ಮಾ ರು ಮೂವತ್ತುವರ್ಷಕ್ಕಿಂದರೂ ಹಿರಿದವನಾಗಿರಬಹುದು (ಪಾತೀಸು. ೩); ಅರ್ಜಿಯ ಕೆಳಗಡೆ ದಸ್ಕತುಹಾಕಿ ಸಾಕ್ಷಿ ಹೇಳಬೇಕಾದ ಕರ್ತವ್ಯ ನನ್ನದು (ಕಾವೇರಿ. ೬೯). ದಸ್ಕತ್ತು: ೧. ಆ ಕಾಗದಕ್ಕೆ ದಸ್ಕತ್ತು ಮಾ ಡಿ ಕೊ ಡಿ ಎಂತ ಕೋಟೆಅರಸುಗಳು ತಮ್ಮ ಕೈಲಿ ಕೊಟ್ಟಾರು (ರಾಜೇಂದ್ರ. ೦೯); ದಸ್ಕತ್ತು ಹಾಕಿ ರಾಮರಾಯ ನೋಟೀಸು ಪಡಕೊಂಡ (ಕುರುಕ್ಷಾ. ೮). ದಸ್ತಕತ್ತು: ೧. ಆ ನೌಕರರುಗಳ ದಸ್ತಕತ್ತುಗಳನು (ಕೈಬರಹ ಅಥವಾ ಹೆಬ್ಬೆಟ್ಟಿನ ಗುರುತುಗಳನ್ನು) ತೆಗೆದುಕೊಳ್ಳಬೇಕು (ಗ್ರಾಮಕಿ. ೬).
[← ಪಾರ. ಹಿಂ. ದಸಖತ್, ದಸ್ತಖತ್: ಮರಾ. ದಸಕತ್, ದಸ್ಕತ್, ದಸ್ಖತ್]

ದಸಕತ್ತುಮೊಹರು, ದ ಸ ಕ ತು ಮೊ ಹ ರ, ದಸ್ಕತುಮೊಹರ (ನಾ). ಅಂಕಿತವನ್ನೊಳಗೊಂಡ ಮುದ್ರೆ; ರುಜುವಿನಿಂದ ಕೂಡಿದ ಮುದ್ರೆ: ಖಾವಂದರು ಕರಾರುನಾಮೆ ಬರಸಿ ದಸಕತ್ತುಮೊಹರ ಮಾಡಿಸಿ ಕೊಟ್ಟದ್ದರಿಂದಾ ಹೈದರಲ್ಲಿಖಾನರು ಒಪ್ಪಿಕೊಂಡರು (ಹೈದರ. ೬೩); ತಸದೀಕಿಗೆ ದಸಕತ್ತುಮೊಹರು ಮಾ ಡಿ ಸಿ ರು ವ ಪ್ರಕಾರ (ಎಕ. III, ತಿರುಮ. ೩೭-೩೦; 1855); ಅಪ್ಪಣೆಯಾದಂತೆ ನಿರೂಪ ಬರೆದು ಆ ನಕಲನ್ನು ಬರೆದುಕೊಂಡು ನಿರೂಪಕ್ಕೆ ದೊರೆಗಳ ದಸಕತ್ತುಮೊಹರು ಮಾಡಿಸಿ (ಚಾಮವಂ. ೦೩೯). ದಸಕತುಮೊಹರ: ಕೃಷ್ಣಾಯಿಂಬದಾಗಿ ದಸಕತುಮೊಹರಾ ಶ್ರೀಚಾಮರಾಜವಡೇರ ತನುಜ ಕೃಷ್ಣರಾಜವಡೆಯರುಯಿಂಬದಾಗಿ ಬಾಳ ಬಂದು ಅಕ್ಷರದಲು ಶಾಯ ಮೊಹರಾ ಮಾಡಿಯದೆ (ಎಕ. VI, ಕೊಪ್ಪ. ೪೮-೫೭ ; 1811). ದಸ್ಕತುಮೊಹರ: ಆ ರಾಜರು ಅಣೆ ಭಾಷೆ ಹಾಕಿ ಕರಾರುನಾಮಾ ದಸ್ಕತುಮೊಹರದಿಂದ ಬರಹದಲ್ಲಿ . . . ಬರೆಸಿ ಕಳುಹಿಸಿದರಿಂದ (ರಾಜೇಂದ್ರ. ೬). [ದಸಕತ್ತು + ಮೊಹರು]

ದಸಕು (ನಾ). (ಜೋಳ, ರಾಗಿ, ಗೋಧಿ ಮೊದಲಾದ) ಕಾಳುಗಳ ಮೇಲಿನ ತೆಳುವಾದ ಪದರ; ಹೊಟ್ಟು; ತೌಡು: ರಾಗಿಯಲ್ಲಿ ದಸಕು ಹೆಚ್ಚಾಗಿದೆ (ಕೂ೩). [?]

ದಸಗುಡು (ಕ್ರಿ). ಉಬ್ಬಸಪಡು; ಏದುಸಿರು ಬಿಡು; "ತೇಕು" (ಜಾನಪದಕೋ.೯). [ದಸ$_1$ + ಕುಡು$_1$ (<ಕೊಡು$_1$)]

ದಸಧರ್ಮ (ನಾ). = ದಶಧರ್ಮ ೨: ಶ್ರೀಮತು ರುದ್ರಶಕ್ತಿಪಂಡಿತರ ಶಿಷ್ಯರು ದಸಧರ್ಮ್ಮನಿರ್ಮ್ಮಿತರಪ್ಪ ಶ್ರೀಸೋಮೇಶ್ವರಪಂಡಿತರ ಶಿಷ್ಯರು (ಎಕ. XI-II, ೦೯೪-೦೩ ; 1123). [<ಸಂ. ದಶಧರ್ಮ]

**ದಸಬುಸನೆ** (ಅ). ಅವಸರವಸರವಾಗಿ ; ಗಡಿಬಿಡಿಯಲ್ಲಿ : ಅಮ್ಮ . . . ದಸಬುಸನೆ ಅಪ್ಪನ ರೂಮಿಗೆ ಓಡಿದಳು (ಸ್ವಾಮಿಸ್ಮೀ. ೦೩೯).
[ ದಸಬುಸ್ + – ಅನೆ ]

**ದಸಮಾಹೆ** (ನಾ). ಒಂದು ವರ್ಷದ ಕೆಲಸಕ್ಕಾಗಿ ಕೊಡುವ ಹತ್ತು ತಿಂಗಳ ಸಂಬಳ : (+). [ ದಸ + ಮಾಹೆ ]

**ದಸರ** 'ದಸರಾ' ನೋ.

**ದಸರಾ**, ದಸರ, ದಸರೆ (ನಾ). ೧. ಆಶ್ವೀನ ಶುಕ್ಲಪಕ್ಷ ಪಾಡ್ಯದಿಂದ ದಶಮಿಯವರೆಗಿನ ಹತ್ತು ದಿನಗಳ ಹಬ್ಬ,–ಉತ್ಸವ : ದಸರಾ ರಜ ಬಂದಾಗ ನಿಮ್ಮ ಊರಿಗೆ ಬರುತ್ತೀನೆ (ಜಾಪ). ದಸರ: ೧. ಕಣ್ಣು ಮೂಗಲಿ ನನ್ನ ಹೆಣ್ಣುಮಗಳು ಚೆಲುವೆ ಬಣ್ಣಾಕೆ ನನ್ನ ಸೊಸೆ ಚೆಲುವೆ ದಸರಕ್ಕೆ ಬನ್ನೀ ಮುಡಿವಾಗ ಮಗ ಚೆಲುವ (ಹಮಹ. ೧೭–೦೪) ; ಸ್ವಂತಕ್ಕೆ ಹೊಸ ಮನೆಯೊಂದನು ಕಟ್ಟಿದೆ ಒಂಬತ್ತು ವರುಷದ ಹಿಂದೆ ಮನೆಯೊಕ್ಕಲಿಗೆ ಬಂದರೂರವರೆಲ್ಲರಿಂದ ಅದೆ ಕಡೆ ದಸರವು ಎಂದೆ (ಇಂಜಾಶ. ೫೦–೪೦). ದಸರೆ: ೧. ದಸರೆಯ ಹಬ್ಬದಲ್ಲಿ ನಾವು ಪರಸ್ಪರ ಬನ್ನಿಯ ಎಸಳುಗಳನ್ನು ಕೊಡುತ್ತಾ, ಬಂಗಾರವನ್ನು ತೆಗೆದುಕೊಂಡು ಬಂಗಾರದಂತೆ ಇರೋಣ ಎನ್ನುವ ವಾಡಿಕೆಯಿದೆ (ರಂಗಶಿಪೀ. ೧೧೩); ದಸರೆಯ ಬಿಡುವಿನಲ್ಲಿ ಹೀಗೆಯೇ ಅಡ್ಡಾಡುತ್ತಿರುತ್ತೇನೆ (ದಂಕು. ೩೪). ೨. ಆಶ್ವೀನಮಾಸ ಶುಕ್ಲಪಕ್ಷದ ದಶಮಿ ; ನವರಾತ್ರಿಉತ್ಸವದ ಕೊನೆಯ ದಿವಸ ; ವಿಜಯದಶಮಿ: "ದಸರೆ–ದಶಹರಾ = ಒಂದು ಹಬ್ಬ" (ಕನ್ನಕೋ. ೦೯).
[ ←ಮರಾ. ದಸರಾ./ಸಂ. ದಶಹರಾ ]

**ದಸರಿ**, ದಸರೆ, ದಸುರಿ (ನಾ). ಒಂದು ಬಗೆಯ ವಸ್ತ್ರ ; ರೇಷ್ಮೆವಸ್ತ್ರ : ದಸರಿ ಗಬ್ಬುಳನೀಲಿಗಂಧ ಸಂಧ್ಯಾರಾಗ ಕುಸುಮಿಯಾವಂಚೆ ದೋರಿಯ ವಾಗವಟ್ಟೆ ಪುಲ್ಲಿ ಸುವರ್ಣ ಪಳಿ ಮದವಿ ಮಂಜಿಷ್ಠೆ ದೇವಾಂಗವೆಂದು ಪಟಭೇದಮಕ್ಕುಂ" (ಮಂಗರಾ. ೧೦೦–೫೮); ದಸ[ಪಾಠಾಂ. ಶ]ರಿಯ ಸೀರೆಗಳಿಂ ಸ್ನೇಹಸುಧಾಜಲ ಭೋಜನಂಗಳಿಂ ಪಾರ್ವಂ ಗೃಧ್ರಸಮಾಸ್ಯಂ ಕಂಬಳ ಚರ್ಮ ಸಮೇತಂ ಘಟಗೃಹಾದಿಮದ್ರೀಕ್ಷ್ಯಾಣಂ (ಜಾತತಿ. ೦೯–೬೦) ; ಧಗ ಧಗಿಪ ಕೆಂಡಂಗಳಂ ಬಗಬಗಿದು ದಸರಿಯ ಪೊತ್ತಿಯಲಿ ಬಿಗಿಬಿಗಿದು ಕರಯುಗಳಂಗಳಿಂ ತೆಗೆದೊಪ್ಪಿ ಛಲಪೊಪ್ಪಿ ನೆಗಳನೇ ಶಿವಪಂಡಿತಂ (ಬಸಪು. ೫೫–೨೫) ; ಹಸುರ್ಗೂಳ ಹರಿವಾಣಗಳೊಳು ತುಂಬಿ ರಂಜಿಸುವ ರತ್ನಾ ರತಿವೆಳಗಿ ದಸರಿ ಪಟ್ಟಾವಳಿ ಚಿತ್ರವಸ್ತ್ರವ ನಿವಳಿಸಿದರಚ್ಯುತನಂಘ್ರಿಗಳಲಿ (ಮೋಹತ. ೪೩–೨೭)–; ಪಳಿ ಪಟ್ಟೆ ಪುಲ್ಲಿ ಚೀನಾಂಬರ ದಸರಿ ಗಬ್ಬುಳಗಂದಿ ಮೇಘವಣ್ಣಿಗೆಯಾ ತಲೆಯ ಮೇಲೆಲ್ಲರ್ಗೆ ಕಟಿದರು ವಸ್ತ್ರದ ಮಳೆ ತಾನೆ ಕಟಿದುದೆಂಬಂತೆ (ಭರತ. ೭೩–೧೦೩) ; ಸದ್ಭಕ್ತತತಿ ಕೆಂಡಮಂ ದಸರಿವಸ್ತ್ರದಿ ಕಟ್ಟಿ (ಸಿದ್ಧೇಪು. ೦೪–೧೩); ಎಮ್ಮ ಹೇಳಿದರೂ ಕೇಳೊಲ್ಲೊಕ್ಕಲಗಿತ್ತಿ ಹಾಸೆ ವಜ್ರರದ ದಸರೀಯ (ಜಗೀತ. ೨೭). ದಸರೆ : ದೇವರ ಚೈತ್ರುವವಿತ್ರಕೆಂದು ಕುಕ್ಕನೂರ ಮೂವತ್ತರೊಳಗೆಲ್ಲಿಯಾದೊಡಂ ಗುಡಿಯ ಬೀಡಿಗಂ ಅಡಕೆ ಮೆಣಸು ದಸರೆಯ ಮಳಿವೆ . . . ಕತ್ರಿಯಲು ಕೋಣನಲು ಏನ ಹೇರಿ ಬಂದಡಂ . . . ಹತ್ತಕೊಂಡು ದಶವಂದವಾಗಿ . . . ಧಾರಾಪೂರ್ವಕಂ ಬಿಟ್ಟೀ × × × (ಶಾಸಹ. ೪೪–೪ ; 12ನೆಯ ಶತ). ದಸುರಿ: ಪಸುಬೆಯಂಗಡಿ ಗಂಧಿಗರ ಪ್ರಸರದ ಮುಂದೆ ದಸುರಿ ಪಟ್ಟೆಯ ಮಳಿಗೆಗಳು ಹಸುರ ತಾಪತ್ತಿ ಸಕಲಾತಿಯ ಮಾಟುವ ರಸಿಕರೊಪ್ಪಿದರಂಗಡಿಯೊಳು (ಬಸಪು. ೦–೪೪).
[ <ಪ್ರಾ. ಟಸರ./ಸಂ. ತ್ರಸರ./ಇಂ. Tusser ]

**ದಸರಿದೊಡಕು** (ನಾ). ರೇಷಿಮೆಯ ದಾರದಲ್ಲಿ ಕಟ್ಟಿದ, ಬಿಚ್ಚಲು ಕಷ್ಟವಾದ ಗಂಟು ; "ರೇಶಿಮೆಯ ತೊಡಕಂ ; ಬಿಚ್ಚಬಾರದ ಗಂಟು" (ಶೂನ್ಯಸಂ. ಕೋಶ) : ಅಂತರಂಗದೊಳಗೆ ಅದೆ ಎಂದರೇನು ಹೇಳಾ ಮನಮುಟ್ಟಿ ಕಾಣಬಾರದು ಬಹಿರಂಗದಲ್ಲಿ ಅದೆ ಎಂದರೆ ಪೂಜಿಸುವನ್ನಕ್ಕರ ಕಾಣಬಾರದು ಸಾಕಾರವಲ್ಲದ ನಿರಾಕಾರಲಿಂಗವು ವ್ಯಾಕುಲವುಳ್ಳನ್ನಕ್ಕರ ಸಾಧ್ಯವಾಗದು ಎನ್ನ ಮನದೊಳಗೆ ಘನವನನುಗೊಳಿಸಿ ತೋಱುವರಿಲ್ಲದ ಕಾರಣ ಎನ್ನ ಅಜಗಣ್ಣನಿಕ್ಕಿದ ದಸ[ಪಾಠಾಂ. ಶ]ರಿದೊಡಕಿಂಗೆ ಬೆಱಗಾದೆನು (ಶೂನ್ಯಸಂ. ೩೨–೨೦); ಅಲ್ಲಿಗಲ್ಲಿಗೆ ಮಂಡಲಂಗೊಂಡು ಕಂಡರಂ ದಸರಿದೊಡಕಾದ ತೊಡಳ್ನುಡಿಯಿಂದು ಕರೆದು ಬಯ್ಯುತ್ತುಂ (ಚಾಥಪು. ೦೦–೦೫೯ ವ); ಎಲ್ಲಿ ಸಂಜನಿಸಿದುವು ನಿಮ್ಮೊಡಲಲ್ಲಿ ಪೇಳಿದ ದಸರಿದೊಡಕಿನ ಸೂಲ್ಗಿನಂಗವನನುತೆ ಕೇಳಿದಳಾಕೆಯಲ್ಲಮನ (ಪ್ರಭುಲೀ. ೧೨–೨೨).
[ ದಸರಿ + ತೊಡಕು (<ತೊಡಂಕು) ]

**ದಸರಿಬಳ್ಳಿ** (ನಾ). ನೀರಿನ ಮೇಲೆ ಹಬ್ಬುವ ಒಂದು ಬಗೆಯ ಬಳ್ಳಿ : ಧಗಡಿಬಳ್ಳಿ, ದಸರಿಬಳ್ಳಿ, ಆಡಂಬುಬಳ್ಳಿ, ಯಡಾನಿಬಳ್ಳಿ (ಕೃಶಿಗ. ೨೩–೪೨೪). [ ದಸರಿ + ಬಳ್ಳಿ ]

**ದಸರೆ** 'ದಸರಿ' ನೋ.

**ದಸರೆ** 'ದಸರಾ' ನೋ.

**ದಸವಂದ** 'ದಶವಂಧ' ನೋ.

**ದಸವರ್ಮ** (ನಾ). ಒಬ್ಬಾತನ ಹೆಸರು : ಕಯ್ಯೋಗೆವಡೆಯ ಬೆಳ್ವಳ್ಳಿರ ದಸವರ್ಮ್ಮಗಾಯಿಗ ತಾಗರತಿಯ ಮಹಾಜನಕ್ಕೆ ಸುವರ್ಣ್ಣದಾನಮಂ ಕೊಟ್ಟು (ಎಕ. VIII. ಸೊರಬ. ೫೭೦–೧೦ ; 951) ; ಆತನ ತಮ್ಮಂ ಭುವನಯ್ಯಮಲ್ಲನೆನಿಸಿದ ದಸವರ್ಮ್ಮದೇವ (ಸೌಇಇ. XX. ೦೯–೨೩ ; 1015). [ ಸಂ. ದಶವರ್ಮನ್ ]

**ದಸವೆ** 'ದಶವಿ' ನೋ.

**ದಸಸಿರ** (ನಾ). ೧. ಹತ್ತು ತಲೆಗಳು : (+). ೨. ಹತ್ತು ತಲೆಗಳನ್ನುಳ್ಳವನು : ಎರಡು ಪದಂಗಳಪಭ್ರಂಶಕ್ಕೆ – ಅಚ್ಚಸ್ಪಟಿಕ–ಅಚ್ಚಪಳಕು . . . ದಶಶಿರ–ದಸಸಿರ (ಶಮದ. ೫೯೯ ಪ್ರಯೋ). [ ದಸ + ಸಿರ ]

**ದಸಳ** (ನಾ). ಉದುರಾಗಿರುವುದು (?) : ನುಗ್ಗೆ ಚಕ್ಕೋತ ಬಸಲೆಯಿಂ ಲವಣವೆರದೂ ದಸಳವಾಗಿರಲು ತೆಂಗಾಯ ತಿರುಳಂ ನೀಡಿ (ಶಿಂಗಪು. ೮–೩೬).
[ ? ]

**ದಸಿ** (ನಾ). ೧. (ಮರ, ಲೋಹ ಮೊದಲಾದವುಗಳ) ಚೂಪಾದ ಗೂಟ ; ಶೂಲ: "ಆರೋಗ್ಯ ದಸಿ ವಶಗಳೊಳ್ ದಕ್ಕು" (ಕಬ್ಬಮಂ. ೭೯); ಇಕ್ಷುಯಂತ್ರಂಗಳಿಂ ಪಿಟ್ಟುವುದುಂ ಬಸಿದ ದಸಿಯೊಳ್ ತೆಗೆವುದಂ ಕಬ್ಬುನದ ದಬ್ಬಣಂಗಳಂ . . . ಬೆರಲ್ಗಳೊಳಡಂಗೆ ಬೆಟ್ಟುವುದುಂ (ಸುಕುಮಾ. ೧೧–೪೭ ವ) ; ದೆಸೆದೆಸೆಗೆ ಸೀಳ್ದೀಡಾಡಿಯುಂ ಬಾಯೊಳಗೆ ದಸಿಯುಂ ಪೆಟ್ಟಿಯುಂ (ಧರ್ಮಾಮೃ. ೩–೭೩) ; ತನಗಲ್ಲದಾದುದ ನಾಶಿಕ ವಾಸಿಸಿದಲ್ಲಿ ಅಲ್ಲಿಯೇ ದಸಿಯ ದಕ್ಕನೇಱಿಸುವೆನು (ವಚನ. I, ೦೨೭) ; ಎನಿತದಗನೂಡೆಯುಂ ಬಾಯಾಡಿ ನಲಿಯದೆ ತಿಂಬಡಗಂ ತೋಡಿಕೊಂಡು ಕಾಡುವ ಕೂಸಂ ದಸಿಯೊಳಸೆಯಿಱಿದು ಬಿಸಿಯಡಗಂ ಬಾಯ್ಯೊಳ್ಗಿಡುತಿನ್ನುತಿನ್ನೆಂದವುಡಂ ತಿಂಬ ತಾಯಿರಕ್ಕಸಿಯರುಮಂ (ಅರ್ಧನೇ. ೫–೪೦ ವ): ಎಸೆವ ಕೋಟೆಯ ತೆನೆಗಳಲಿ ಕಟ್ಟಿಸಿ ಪತಾಕೆಗಳಂ ಬಸಿದ್ದಬಲುದಸಿಗಳಂ ಮೂಲಗಿಸಿ ಮಂರಂಗಳನಿರಿಸಿಯೆಡೆಗೆಡೆಗೆ (ಬಸಪು. ೧೭–೧೧); ಮುಂಗಿಲ ಮುಟ್ಟುವ ಕೋಟೆಯ ತೆನೆಯೆಡೆಯೆಡೆ ಹೊಗರೆದ್ದ ದಸಿಮೊನೆ ಶೂಲ ಝಗಝಗಿಸುವ ಹೇರಿಟ್ಟ ಮರುಳುಗ್ಗಿಗಳುಗುಳುತಿರ್ದುವು ಕೆಂಗಿಡಿಗಳ (ಕಂಸವಿ. ೧೧–೦೩೦) ; ಲಕ್ಷ್ಮಣನಸಿ ದಸಿಯಾಯ್ತು ಗಡ ! (ರಾಮಾಶ್ವ. ೧೭೦–೫) ; ಅಂಗಳದ ಸುತ್ತ ಚೂಪುಮೊನೆಯ ದಸಿಗಳ ಎತ್ತರದ ಬೇಲಿಯಿತ್ತು (ಪುನರು. ೫೦೧) ; ಮುಳ್ಳು ತೆಗೆದು ದಸಿ ಹೆಟ್ಟಿದ ಹಾಗೆ (ಗಾದೆ). ೨. ಮುಳ್ಳು ; ಕಂಟಕ : ಕಡುಮುಂದದಿಂ ಧೂಪದ ಕಾಮಡಿಯಂ ಪೊತ್ತಿರದೆ ಚೆಟ್ಟರಂ ಬರೆ ದಸಿ ಮೆಲ್ಲಡಿಯಂ ಕಟ್ಟುಗಿಯಲ್ಕೆಡೆಯುಮುಗಿ ಬಬಲ್ದಬಲ್ದನೋಹಿಲದೇವಂ (ಉದ್ಭಟ. ೧೧–೧೧೩) ; ನಿಲ್ಲದಾತನು ನಡೆಯೆ ಮೇಗಾಲಲ್ಲಿ ದಸಿ ಮೊನೆ

ದೋಜಲು (ಬಸವು. ೪೩-೮೭) ; ಗಿರಿಯಿಂದ ಧೂಪವನು ತರುವ ನಡುಪಥದಲ್ಲಿ ಚರಣದೊಳಗೊಂದು ದಸಿ ಮುರಿದು ಮುಖವೊನೆದೋಱೆ ನರ ಬಿಗಿದು ನಡೆಗೆಡಲು (ಪ್ರಾಭಲಾ. ೧೭-೩೦); ನೂಕುವೆ ಕಕ್ಕುದಱ ಕೇತಕಿಸಳ ದಸಿಯಲಿ (ನಿಜಸಾಂ. ೩-೯೦) ; ಕಾಲೊಳು ಮೂಡಿದ ದಸಿ ಮುಳ್ಳುಗಳು ತಾಕಿ ಸೀಳಿದ ವ್ಯೆಗಾಯದಿಂದ . . . ಜನಜಾಲವ್ಯೆದಿತು ದೆಸೆದೆಸೆಗೆ (ಕಂಠವಿ. ೧೧-೩೦). ೩. ಒಂದು ಬಗೆಯ ಬಾಣ : ಹಿಳಿಕು ಕವಲಂಬು ಬೋಳಿವಿದಿರೆಲೆ ಮಿಟ್ಟೆಯಾ ಮೊಳೆತೊಡಕು . . . ತಳುಕ ಚೌದಾರೆ ದಸಿ ಬಿಸುಗದಿರು ಸವಿವಾಯುನೆಂಬ ನಾನಾಸರಳನು ಸೆಳೆದು ನೀಡಡಿಯಿಟ್ಟು (ಕೋದಂಡ ೩-೨೭). ೪. ಅಡಕೆ ಮತ್ತು ತೆಂಗಿನ ಗೊನೆ ಬಿಡುವ ಮುನ್ನ ಕಾಣಿಸಿಕೊಳ್ಳುವ ಚೂಪಾದ ಮೊಳಕೆ,–ಮೋತೆ: ಅಡಕೆತೋಟಕೆ ಗಿಳ್ಳೆ ಮಂಚದ ಬೀಗ ನಾನುಂಟು ಅಡಕೆ ದಸಿಯಾಗಿ ಎಲೆ ನಲ್ಲೆ ನೀನುಂಟು ಬಾಳೆ ಸುಳಿಯಾಗಿ(ಹಳ್ಳಿಯ. ೫೪);ತೆಂಗಿನ ಮರ ದಸಿ ನೂಕಿದೆ (ರೂಢಿ). ೫. ಮರದ ಕಂಬ: ಒಂದು ದಸಿ ನೆಡಿಸಿ ಇಲ್ಲಿ ಇವನ್ನ ಶೂಲಕ್ಕೆ ಏರಿಸು (ಚಿಕರಾ. ೩೫೧).

[ ದೇ. ೫ ತುಳು. ದಸಿ ]

**ದಸಿಕ** (ನಾ). ಶೂಲಕ್ಕೇರಿಸುವವನು : ಪೊಲೆಯರುಂ ಡೊಂಬರಾಗಿಯುಂ ದಸಿಕರಾಗಿಯುಂ . . . ಇಂದ್ರಾದಿ ದೇವರ್ಕಳ್ಗೆ ಕಿಂಕರರಾಗಿ ಬೆಸಕೆಯ್ವುತ್ತು ಮನೋದುಃಖರೂಪ ಅಸಾತಾವೇದನೀಯಮನನುಭವಿಸುವರು (ಚಾರ. ೪೭೨-೪) ; ಇಕ ಪ್ರತ್ಯಯಕ್ಕೆ–ಕರಿಕಂ, ಅಸಿಕಂ, ದಸಿಕಂ, ಬಾರಿಕಂ (ಶಮದ. ೨೦೩ ಪ್ರಯೋ). [ ದಸಿ + – ಇಕ ]

**ದಸಿಕು, ದಸಿಗೆ** (ನಾ). "ದಸಿ; ತಿವಿಗೋಲು" (ಶಂಪನಿ) : ದಸಿಕೊಂದಕ್ಕಂ ಬೇಡಂಗಿಸಲ್ಕೆ ದೊರೆ ದ್ಯ ಗ ಮ ನೀ ಜಗಂಗಳನಲ್ಕಾಡಿಸುವ ಮದೀಯೋಗ್ರಾಸ್ತ್ರಂ ಪೆಸರ್ಗೊಳಲೇಂ ತನಗೆ ದೊರೆಯ ಖಳನಳವಱಿಯಂ (ಶಂಪಥಾ. ೮-೧೯). **ದಸಿಗೆ** : ಹೊಗೆ ಹಾಕಿ, ದಸಿಗೇಲಿ ಇರ್ದು, ತೆಗೆದ್ಬು, ದಿಂಡೆ ಬರ್ಕ! (ಮಲೆಮ. ೭೭). [ <ದಸಿ ]

**ದಸಿಕೋಲ್** 'ದಸಿಗೋಲ್' ನೋ.

**ದಸಿಗಾಲ್** (ನಾ). (?): ನೆಕ್ಕ ಕದಂಪು ಕ ೦ ಪ ಪ ಧ ರ ೦ ಮಿಗೆ ಕಂಪ ದರ್ದಕ್ಷಿ ಬಿಟ್ಟ ಬಾಯ್ . . . ಅರ್ವಿಪ ಪುರ್ವು ಕೆ ೦ ಗ ದಿ ರ್ ವಿಕ್ಕು ಮರಲ್ದ ದಾಡೆ ದಸಿಗಾಲ್ ಮುಸಿಮೆಯ್ ಬಿಱುಸಾದ ಕೆಯ್ ಮರುಳ್ಗಳ್ಕದ ನಿಟ್ಟೊಡಲ್ ಮುಸೆದ ಕತ್ತಿಗೆ ಕಣ್ಬೊಲನಾದುವೆತ್ತಲುಂ (ವರ್ಧಪು. ೧೫-೩೮) [ ? ]

**ದಸಿಗೆ** 'ದಸಿಕು' ನೋ.

**ದಸಿಗೋಲ್, ದಸಿಕೋಲ್** (ನಾ). ಚೂಪಾದ ತುದಿಯುಳ್ಳ ತಿವಿಯುವ ಕೋಲು ; ಚುಚ್ಚುವ ಕೋಲು: ದಸಿಕೋಲ್, ದಸಿಗೋಲ್ (ಶಬ್ದಾನು. ೩೩೪ ಪ್ರಯೋ). **ದಸಿಕೋಲ್** : ಮೇಲಿನ ಪ್ರಯೋಗವನ್ನು ನೋಡಿ.

[ ದಸಿ + ಕೋಲ್$_1$ ]

**ದಸಿಪು** 'ದಶವಿ' ನೋ.

**ದಸಿವೆಟ್ಟು** (ಕ್ರಿ). ಗೂಟವನ್ನು ಬಡಿ : ಮುಳ್ಳಂ ತೆಗೆದು ದಸಿವೆಟ್ಟಿದಂ [ಪಾಠಾಂ. ದಸಿಯ ಬಿಟ್ಟಂ]ತಾಯ್ತು (ಕಲ್ಲರ. ೨೩೧-೧೨).

[ ದಸಿ + ಬೆಟ್ಟು$_1$ ]

**ದಸುರಿ** 'ದಸರಿ' ನೋ.

**ದಸೆ, ಜಸೆ, ದೆಶೆ$_1$, ದೆಸೆ$_1$** (ನಾ). ೧. ಗತಿ; ಅವಸ್ಥೆ ; ಸ್ಥಿತಿ: ರಾಮಲಕ್ಷ್ಮಣರ ಮಹಾಪ್ರಭಾವಮನದಂ ನೆಱೆ ಬಣ್ಣಿಸ ಕೇಳ್ದು ಪೇಚರಾಗ್ರಣಿ ಕಿಱದಾಯ್ತು, ಸಮ್ಮ ದಸೆ ಕೇವಲರಲ್ಲರವರ್ ದಿಟಕ್ಕೆ ಕಾರಣಪುರುಷರ್ ತ್ರಿಖಂಡ ಭರತೋರ್ವಿಗೆ ವಲ್ಲಭರಾಗದಿರ್ಪರೇ (ಶಂರಾಮಾ. ೬-೮) ; ಗಿರಿಶ–ಗಿರಿಸ, ದಶಾ–ದಸೆ (ಶಮದ. ೨೫೩ ಪ್ರಯೋ). ೨. ಅದೃಷ್ಟ; ಸೌಭಾಗ್ಯ; ಸಂದೈವ: ದಸೆ ಬರುವಾಗ್ಗೆ ಹಸೇ ಮೇಲೆ ರತ್ನ ಬಿತ್ತು (ಗಾದೆ). **ಜಸೆ** : ೧. ಜವ್ವನದ ಜಸೆ[ಪಾಠಾಂ. ದೆಸೆ]ಗದೇಂ ಬಂದನೋ ಪಾರಿಜಾತಾಂಕುರ ವಿಂದ್ರೋದ್ಯಾನದೊಳ್ ಬಳ್ಳಳಮೆ ಬಳೆದು ಕೈವಂದವೋಲ್ ತೀರ್ಥನಾಥಂ (ಅನಂಪು. ೬-೨೦). **ದೆಶೆ$_1$** : ೧. ಹಿಂದೆ ಬಡತನದಲ್ಲಿದ್ದರೂ, ಕೆಲಸವಾದ ಈಗೆರಡು ವರ್ಷಗಳಿಂದ ಗುಂಡಪ್ಪನ ಸಂಸಾರ ಸ್ವಲ್ಪ ಅನುಕೂಲ ದೆಶೆಗೆ ಬಂದಿತ್ತು (ಕೂನಕಥೆ. ೧೭). ೨. ಅವನಿಗೀಗ ಒಳ್ಳೆಯ ದೆಶೆ; ಮುಟ್ಟಿದ್ದೆಲ್ಲ ಚಿನ್ನವಾಗುತ್ತಿದೆ (ರೂಢಿ). **ದೆಸೆ$_1$** : ೧. ಅನುವದಿಸಿದವುದು ನುಡಿ ನುಡಿದ ನಿತುಮನನೆ ತೊರಳ ತೊದಳ ದೆಸೆಯಿಲ್ಲೆನೆ ಮಾತಿನ ಪಸುಗೆ ಪಸುಗೆವಡೆ ದತ್ತನೆ ನುಡಿದಂ ಮಧುರಮೃದುಗಭೀರಧ್ವನಿಯಿಂ (ಆದಿಪು. ೨-೧೦) ; ಏವದ ಮುಳಿಸಿನ ಕಾರಣಮಾವುದೊ ನೀಂ ನನ್ನ ತಾಯ ತಂದೆಯ ದೆಸೆಯಂ ಭಾವಿಸದ ಕರ್ಣ ನುಡಿವಂತಾವುದು ಸಮಕಟ್ಟುನಿನಗಮರಿಕೇಸರಿಗಂ (ಶಂಪಥಾ. ೨-೮೨) ; ಉಸಿರ ಗಡ ಸೀಮೆ ಬಾಟ್ಕೆಯ ದೆಸೆಯೊಳ್ ಗಾಳಿಯ ಗಡದುವ್ವುಮದಱೆಸಕಂ ಭಾವಿಸುವೊಡೆ ಚಲತೆ ಗಡಿನ್ನೇಪೆಸರ್ಗೊಂಡಪುದಣ್ಣಾ ನರರ ಚಿರಜೀವಿತೆಯಂ (ಚಂದ್ರಪು. ೨-೩೨). ೨. ಮಾರಮಥನನ ನೆರೆಯ ಹೊಕ್ಕರು ಬಿಡುವೆನೇ ನಿನ್ನ ಚೋರವಿದ್ಯದಲೋಡು ನೋಡುವೆ ತೀರಿತೆಲವೋ ನಿನ್ನ ದೆಸೆಯೆಂದಾರಿ ಬಾಣವ ಸೆಳೆದೊಡಸುರನ ಮರಣ ಸೂಚಿಸಿತು (ಕಾಶಿಕಾ. ೩೭.೭೦).

**ದಸೆ ಕೂಡು** = ಅದೃಷ್ಟವುಂಟಾಗು : ದಸೆ ಕೂಡಿ ಬಂದರೆ ಹಿಡಿದ ಕೆಲಸವೆಲ್ಲಾ ಜಯವಾಗುತ್ತದೆ (ರೂಢಿ). [ <ಪ್ರಾ. ದಸಾ./ಸಂ. ದಶಾ ]

**ದಸ್ಕತು** 'ದಸಕತ್ತು' ನೋ.

**ದಸ್ಕತುಮೊಹರ** 'ದಸಕತ್ತುಮೊಹರು' ನೋ.

**ದಸ್ಕತ್ತು** 'ದಸಕತ್ತು' ನೋ.

**ದಸ್ತಐವಜ** 'ದಸ್ತಾವೇಜು' ನೋ.

**ದಸ್ತಕತ್ತು** 'ದಸಕತ್ತು' ನೋ.

**ದಸ್ತಕು** (ನಾ). ೧. ರಹದಾರಿಯ ಪರವಾನಿಗೆ : (ಸ್ಯಾಂಡರ್). ೨. ಹಾಜರಿ ಆಜ್ಞೆ : ಕರೆ ಆಜ್ಞೆ : (ಸ್ಯಾಂಡರ್).

[ ←ಪಾರ. ಹಿಂ. ಮರಾ. ದಸ್ತಕ್ ]

**ದಸ್ತಗಿರಿ** (ನಾ). ಸೆರೆ ಹಿಡಿಯುವುದು; ಬಂಧನ; ಕೈದು: ನ್ಯಾಯಾಧೀಶರು ಕೋಪಗೊಂಡು ಬಸಪ್ಪನ ದಸ್ತಗಿರಿಗಾಗಿ ವಾರಂಟನ್ನು ಹೊರಡಿಸಿದರು (ಶಂಚಿಸಂ. ೨೦೪) ; ಅವನು ದಸ್ತಗಿರಿಯಾದಾಗ ಅವನ ಬಳಿ . . . ಒಟ್ಟು ಸಾವಿರದೆಂಟುನೂರು ರೂಪಾಯಿಗಳಿದ್ದುವು (ವೀರಯೋ. ೨೦) ; ನ್ಯಾಯಾಧೀಶರು ಯಾವ ತಪ್ಪು ಮಾಡಿದರೂ ಅವರನ್ನು ವೈಸರಾಯ್ ಅಪ್ಪಣೆ ಇಲ್ಲದೆ ದಸ್ತಗಿರಿ ಮಾಡಕೂಡದು (ಪ್ರಬಂಧ. II, ೪೮೩) ; ದಸ್ತಗಿರಿಯಾಗಲು ಮನಸ್ಸನ್ನು ಸ್ಥಿರಮಾಡಿಕೊಂಡಿರುವಿಯಾ ? (ದೇವೀಕಾ. ೧೩೦).

[ ←ಪಾರ. ದಸ್ತಗೀರೀ ; ಮರಾ. ದಸ್ತಗೀರ್ ]

**ದಸ್ತರ್‌ಹಾನು** (ನಾ). (ಮುಸಲ್ಮಾನರು) ಊಟದ ತಟ್ಟೆಗಳನ್ನಿಡಲು ಹಾಸುವ ಬಟ್ಟೆ : 'ಹತ್ತುಜನ ಒಂದು ದಸ್ತರ್‌ಹಾನಿನ ಮೇಲೆ (ಊಟದ ಚಾಪೆ) ಕುಳಿತು ಊಟ ಮಾಡುತ್ತಾರೆ (ಭಾರದ. ೪೧೫).

[ ←ಹಿಂ. ದಸ್ತರ್‌ಖಾನ್; ಪಾರ. ದಸ್ತರ್‌ಖ್ವಾನ್ ]

**ದಸ್ತಾವೇಜು, ದಸ್ತಐವಜ, ದಸ್ತೇವಾಜು, ದಸ್ತೈವಜು, ದಸ್ತೈವೇಜು** (ನಾ). ೧. ಪ್ರಮಾಣಭೂತವಾದ ಕಾಗದ ಪತ್ರ ; ಒಪ್ಪಿ ಸಹಿ ಮಾಡಿರುವ ಪತ್ರ ; ದಾಖಲೆ ; ಕರಾರುಪತ್ರ : ಪ್ರಮುಖ ಭಕ್ತಾದಿಗಳನ್ನು ಕರೆಯಿಸಿ ವಿಲ್ ದಸ್ತಾವೇಜು ಬರೆಯಿಸಿ ರಿಜಿಸ್ಟರ್ ಮಾಡಿಸಿದರು (ಗುರುದ. ೧೪) ; ಕೋರ್ಟಿನಿಂದ ಸಾದರಾಗುವ ಸಮನುಗಳ, ಡಿಕ್ರಿಗಳ, ದಸ್ತಾವೇಜುಗಳ ನಕಲುಗಳ ಮೇಲೆ ಒತ್ತುವುದಕ್ಕಾಗಿ ಉಪಯೋಗಿಸಬೇಕು (ಗ್ರಾಮಾಕ. ೧೯) ; ಹೊಲ ಮಾರೋಕೆ ನನಗೆ ಅಧಿಕಾರ ಕೊಟ್ಟಿದೀಂತ ಒಂದು ದಸ್ತಾವೇಜಾದರೂ ಆಗಬೇಕು (ಬನಶಂ. ೭೩) ; ಐದುಸಾವಿರಕ್ಕೆ

ಒಳ್ಳೆಯ ಆಸ್ತಿಯೊಂದು ಕೈಸೇರಿದ ಹಾಗೆಯೇ ಎಂದು ಅಡವು ದಸ್ತಾವೇಜು ಮಾಡಿಸಿಕೊಂಡ ವಾಸುದೇವಯ್ಯ ಸಂತೋಷಪಟ್ಟಿದ್ದರು (ತ್ಯಾಗದು. ೬೦). ೨. ರಸೀದಿ ; ಸಲ್ಲಿಕೆಚೀಟಿ ; ಪಾವತಿ : (೬). **ದಸ್ತಐವಜ :** ೧. ಅಧಿಕಾರಿಗಳು ಸಹಿ ಮಾಡಿದ ಚೆಕ್ಕುಗಳನ್ನು ಇತರ ದಸ್ತಐವಜಗಳನ್ನು ಮಾನ್ಯ ಮಾಡಬೇಕಾದ ಬಗ್ಗೆ ಅಧಿಕಾರವನ್ನು ಕೊಟ್ಟಿದೆ (ಬ್ಯಾಂಕಶ್ಯ. ೫೨). **ದಸ್ತೇವಾಜು :** ೧. ಬ್ಯಾಂಕುಗಳ ಪಾಸ್‌ಬುಕ್ಕು ಎಲ್ಲ ದಸ್ತೇವಾಜು ಟ್ರಂಕಿನಲ್ಲಿ ಹಾಕು (ಅರಸೋ. ೫೦). **ದಸ್ತೈವಜು:** ೧. ನಿಮ್ಮ ಖಾವಂದರು ಈ ಮೇರೆ ದಸ್ತೈವಜು ಬರೆದು ಕಳುಹಿಸಿದಂತೆ (ರಾಜೇಂದ್ರ. ೬೫) ; ಪಂಚಾಯತರು . . . ವಿಚಾರಣೆಮಾಡಿ ದಸ್ತೈವಜು ಮುಂತಾದ ದಾಖಲೆಯೇನಾದರೂ ಇದ್ದರೆ ತರಿಸಿ ನೋಡಿ ಶೀವರ್ಮಾನ ಹೇಳುತ್ತಿದ್ದರು (ಮಹಾವಂ. II, ೨೫) ; ಎಲ್ಲರ ವಯಸ್ಸಿನ ದಸ್ತೈವಜು ನನ್ನಲ್ಲಿಲ್ಲ (ದೇವದಾ. ೩೩). **ದಸ್ತೈವೇಜು :** ೧. ಸ್ವಪ್ನದ ದಸ್ತೈವೇಜೆಂದು ತಿಳಿದು ನಿಜವಾದ ದಸ್ತೈವೇಜೆಂದು ಉಪಯೋಗಿಸಿದರೂ . . . ಶಿಕ್ಷೆಗೆ ಗುರಿಯಾಗು ವರು (ಗ್ರಾಮಶಿ. ೬೫).

[ ←ಪಾರ. ಹಿಂ. ದಸ್ತಾವೇಜ್ ; ಮರಾ. ದಸ್ತಾಯವಜ್, ದಸ್ತಾವೇಜ್, ದಸ್ತೈವಜ್ ]

**ದಸ್ತು, ದಸ್ತೆ, (ನಾ).** ೧. ಇಸ್ಪೀಟು ಆಟದಲ್ಲಿ ಆಟಗಾರರಿಗೆ ಹಂಚಿದ ನಾಲ್ಕು ಎಲೆಗಳಂ,–ಒಂದಂ ಕೈ : (೬). ೨. ಇಪ್ಪತ್ತನಾಲ್ಕು, ಬರೆ ಯಂಬವ ಹಾಳೆಗಳ ಕಟ್ಟು : ೨೪ ಕಾಗದಗಳು ಅಂದರೆ ೧ ದಸ್ತು ಅಥವಾ ಕೊಯರ (ಮುಂಬಲ್ಯಾ. ೧೩೯). **ದಸ್ತೆ :** ೩. ಸೈನ್ಯದ ತಂಕಡಿ ; ದಳ : ಮಹಾಮರಜಾಖಾನನ ದಸ್ತೆಯವರು ನೂರುಲ್ ಅಪರಖಾನನ ದಸ್ತೆ ಯವರು (ರಾಜೇಂದ್ರ. ೨೪೫) ; ಸ್ವಲ್ಪ ದೂರದಲ್ಲಿ ಕುದುರೆಗಳ ಖುರಪುಟ ಧ್ವನಿಯು ಕೇಳಬಂತು. ಅದು ಆಂಗ್ಲೇಯರ ದಸ್ತೆಯದಾಗಿದ್ದಿತು (ಧೂಂಡಿ. ೪೬೫). [ ←ಪಾರ. ದಸ್ತಾ, ದಸ್ತ್ ; ಹಿಂ. ಮರಾ. ದಸ್ತಾ ]

**ದಸ್ತೂರ** 'ದಸ್ತೂರಿ' ನೋ.

**ದಸ್ತೂರಿ, ದಸ್ತೂರ, ದಸ್ತೂರು, ದಸ್ತೂರಂ (ನಾ).** ೧. ಪದ್ಧತಿ ; ವಾಡಿಕೆ; ರೀತಿ; ಕ್ರಮಂ: ಜವಾಮರ್ದಿಯಿಂದಲೂ ನಮ್ಮ ಸತ್ಯದಿಂದಲೂ ವಾಜಬಿ ವಿಚಾರದಿಂದಲೂ ನಮ್ಮ ಸರಕಾರದ ದಸ್ತೂರಿಯಿಂದ ಆ ಶೀಮೆಯ ಕದೀಂ ಖಾವಂದರ ಹವಾಲೆ ಮಾಡಿ ಇದ್ದೇವೆ (ರಾಜೇಂದ್ರ. ೧೦೪). ೨. (ಸೇವಕರಂ ತಮ್ಮ ಯಜಮಾನರಿಗಾಗಿ ವಸ್ತುಗಳನ್ನು ಕೊಂಡಂ ಕೊಂಡಾಗ ವ್ಯಾಪಾರಿಗಳು) ವಾಡಿಕೆಯಾಗಿ ಕೊಡುವ ಮಾಮೂಲು. (ಮೃಗಜ. IV, ೭೭೭). **ದಸ್ತೂರ :** ೩. ಬರವಣಿಗೆ ; ಕೈಬರಹ : ನಮ್ಮ ಮಾಸ್ತರ ವೆಂಕಣ್ಣನ ಕಡಿಂದ ಎರಡು ಅರ್ಜಿ ಬರಿಸಿ ಕಳಸಿಶೀನಿ, ಒಟ್ಟಿಗೆಲ್ಲಾ ದಸ್ತೂರ ಅವರ ಬರೀತಾರ (ಗ್ರಾಮಾಯ. ೩೩೭). **ದಸ್ತೂರು :** (೬). **ದಸ್ತೂರು :** ೧. ಆಚಾರ ವಿಚಾರ ವಿಚಾರಣೆ ಮಾಡುವಲ್ಲು ಯುವರ್‍ರು ಪಡವ ತೆಗೆದುಕೊಂಡಿದ್ದವರ ವಿಚಾರಣೆ ಮಾಡಿ ಬರಮಾಡಿಕೊಳ್ಳುವಲ್ಲು ನೀಲು ಅಡಿಸಡಿಗಳ ಮಾಡದಂತೆ ಸಾಬಕ್ಕೊ ದಸ್ತೂರು ಪ್ರಕಾರಕ್ಕೆ ಸರ[ಪ] ರಾಸು ನಡ್ಸಿಕೊಂಡು ಬರ್‍ರುವದು (ಮೈಅರ್. ೦೯೩೦,೪೩-೨೭ ; 1812).

[ ←ಪಾರ. ಹಿಂ. ದಸ್ತೂರೀ, ದಸ್ತೂರ್; ಮರಾ. ದಸ್ತೂರ್, ದಸ್ತೂರೀ ]

**ದಸ್ತೆ** 'ದಸ್ತು' ನೋ.

**ದಸ್ತೇವಾಜು** 'ದಸ್ತಾವೇಜು' ನೋ.

**ದಸ್ತೈವಜು** 'ದಸ್ತಾವೇಜು' ನೋ.

**ದಸ್ತೈವೇಜು** 'ದಸ್ತಾವೇಜು' ನೋ.

**ದಸ್ತೂರು** 'ದಸ್ತೂರಿ' ನೋ.

**ದಸ್ಯು (ನಾ).** ೧. ರಾಕ್ಷಸರಲ್ಲಿ ಒಂದಂ ವರ್ಗ : ಉತ್ತರಾಶಯಕಿಹುದು ದೇವರು ಚಿತ್ರವಿಸು ಧ್ರುವಮಕೂಲ್ಯವೆನಿಪ್ಪ ಉತ್ತಮದ ಸುಕ್ಷೇತ್ರವಲ್ಲಿಹು ದಖಿಳ ದಸ್ಯುಗಳ (ಕಾಶೀಖ. ೦೫-೭೭). ೨. ಅನಾರ್ಯ ಜನಾಂಗದವನಂ; ಅನಾರ್ಯ ; ಮ್ಲೇಚ್ಛ : ಮುಂದೆ ದಸ್ಯುಗಳೇಳುವನು ಕ್ಷಣದಿಂದ ಕಾಶ್ಮೀರಕರ ಸಾಧಿಸಿ ಬಂದು ದಶಮಂಡಲದ ಲೋಹಿತರನು ವಿಭಾಡಿಸಿದ (ಕುಮ್ಯಾಸ. ೩-೨೭) ; ಅಲ್ಲಿದ್ದ ಜನರೆಲ್ಲರನ್ನೂ ಒಟ್ಟಿಗೆ ದಸ್ಯುಗಳೆಂಬುದಾಗಿ ಆರ್ಯರು ಕರೆದರು (ಭಾಷಾಶ್ಯ. ೨೪). ೩. ಕಳ್ಳ; ಚೋರ: ಐಕಾಗಾರಿಕಃ, ತಸ್ಕರಃ, ದಸ್ಯುಃ . . . ಪಾರಿಪಂಥಿಕಃ, ಸ್ತೇನಃ–ಈ ೧೧ ಕಳ್ಳಂ" (ಹಲಾಯು. ೫೬-೦೮೩);ಮುನಿಯಿಂದ ಲಕ್ಷ್ಮಣ ರಾಮರಂಯುತಿರೆ ಮುಂದಿರ್ದ ಮಾರ್ಗದ ಮಹಾರಣ್ಯಗಹನಮಂ . . . ದಸ್ಯು ಕೈರಾತ ರುಧಿರಾಶನಪ್ರಿಯತೆಯಂ (ಶ್ರೀರಾಮಾ. ೦೭೮-೭೦) ; ಆಳುಗಳು ಆ ವನದಲ್ಲಿದ್ದ ದಸ್ಯುಗಳ ವಶಕ್ಕೆ ಈ ಬ್ರಾಹ್ಮಣನನ್ನು ಒಪ್ಪಿಸಲಾಗಿ ಆ ಕಳ್ಳರು . . . ಇವನನ್ನು ನಾವು ಮುಟ್ಟುವವರಲ್ಲ ಎಂದು ಹೇಳಿದರು (ನೀತಿಕ. XII, ೦೫). ೪. ಹಗೆ; ವೈರಿ; ಶತ್ರು: "ವಿರೋಧಿ ದಸ್ಯು ವಿಪಕ್ಷಂ . . . ವಿದ್ವಿಷಂ ವಿದ್ವಿಷ್ಟಂ" (ವಸ್ತುಕೋ. ೯೯-೧೦). ೫. ಭ್ರಷ್ಟ; ನೀಚ ; ದಂಷ್ಟ. [ ಸಂ. ]

**ದಸ್ಯುದಾರಿ (ನಾ).** ನೇರವಲ್ಲದ ದಾರಿ,–ಮಾರ್ಗ : ಅದೇನೋ ಅಪ್ಪಟ ದಸ್ಯುದಾರಿಯು ಆಗಿತ್ತು (ಮಳೆಯು. ೭೭೨). [ ದಸ್ಯು + ದಾರಿ ]

**ದಸ್ಯುಶಿಶು (ನಾ).** ಅನಾರ್ಯರ ಮಗಂ : ನಡೆದು ನೋಡಲ್ಕೆ ಕಾಣಿಸಿ ತೊಂದು ದಸ್ಯುಶಿಶು (ಶ್ರೀರಾಮಾ. ೨೨-೫೭೮). [ ದಸ್ಯು + ಶಿಶು ]

**ದಸ್ರ (ನಾ).** ೧. ಅಶ್ವಿನೀ ದೇವತೆಗಳಲ್ಲಿ ಒಬ್ಬ ; ದೇವತೆಗಳ ವೈದ್ಯ : "ನಾಸತ್ಯಾ. ಅಶ್ವಿನೌ, ದಸ್ರೌ, ದೇವಚಿಕಿತ್ಸಕೌ – ಈ ೪ ದೇವರ ವೈದ್ಯರ್" (ಹಲಾಯು.೦೫-೮೪); "ದಸ್ರರಶ್ವಿನಿಯರಾ ದಿವಿವೈದ್ಯರು"(ಮುಂಗರಾ. ೭-೨೩). ೨. ಅಶ್ವಿನೀ ನಕ್ಷತ್ರಗಳಂ ; ☞ ಅಶ್ವಿನೀ ದೇವತೆಗಳು ಅವಳಿ ಜವಳಿ ದೇವತೆಗಳಂ. ಇವರಲ್ಲಿ ಒಬ್ಬನಿಗೆ 'ದಸ್ರ' ಎಂದೂ ಮತ್ತೊಬ್ಬನಿಗೆ 'ನಾಸತ್ಯ' ನೆಂದೂ ಬೇರೆಬೇರೆ ಹೆಸರಿದೆ. ಆದರೂ 'ಅಶ್ವಿನೀ' ಎಂಬುದನ್ನು ಇಬ್ಬರಿಗೂ ಅನ್ವಯಿಸುವಂತೆ, 'ದಸ್ರ' ಶಬ್ದವನ್ನು ಇಬ್ಬರಿಗೂ ಅನ್ವಯಿಸಿ ಹೇಳುತ್ತಾರೆ.

ದಸ್ರಾತ್ಮಜರ್ = ಅಶ್ವಿನೀ ದೇವತೆಗಳ ಮಕ್ಕಳಂ ; ನಕುಲ–ಸಹ ದೇವರಂ : ಸೊಕಮಿರ್ಕಕ್ಕಟ ದರ್ಭಪಾಣಿ ಯಮಜಂ ದರ್ಪೀಕರಂ ವಾಯುಪುತ್ರಕನಂ ಜರ್ಜರಹಸ್ತನಿಂದ್ರತನಯಂ ದಸ್ರಾತ್ಮಜರ್ ದಂಡ ಮುಷ್ಟಿಕರರ್ ಶಸ್ತ್ರವಿಡಂಬಮೇವುದವರ್ಗಂ (ಗದಾಯು. ೩-೩೪). [ ಸಂ. ]

**ದಸ್ಸಾಲಾ (ನಾ).** ಹತ್ತು ವರ್ಷಗಳ ಅವಧಿ ; ದಶಕ : ಪೂರ್ಣಯ್ಯನವರ ಕಾರ್ಕರ್ದಿಯಲ್ಲಿ ದಸ್ಸಾಲಾ ಸರಾಸರಿ ವರ್ಷವೊಂದಕ್ಕೆ ೭೬ಕ್ಕಿ ಲಕ್ಷ ರೂಪಾಯಿ ಎಲ್ಲಾ ಬಾಬುಗಳಿಂದಲೂ ಒಟ್ಟು ಹುಟ್ಟುವಳಿಯಾದಂತೆ ತಿಳಿದು ಬಂದಿದೆ (ಮಹಾವಂ. II, ೩೨) ; ಖಾವಂದರವರ ದೌಲತ್ತಿನ ಕಾಲ ಮೊದಲನೆಯ ದಸ್ಸಾಲಾದಲ್ಲಿ ಜಮಾನಿನ ವರಮಾನ ವರ್ಷಕ್ಕೆ ಸರಾಸರಿ ೭೫ಕ್ಕಿ ಲಕ್ಷ [ ←ಪಾರ. ದಹಸಾಲ್ ]

**ದಸ್ಸಿವ (ನಾ).** ಹತ್ತನೆಯ ಒಂದು ಅಂಶ,–ಭಾಗ (?) : ಬಿಜಯಿತ ಗಾವುಣ್ಣನ ಮಗಂ ಅಮ್ಮಡಿಗಾವುಣ್ಣಂ ನೊಳಂಬೆಯ ಗ್ರಾಮ್ಯರ್ಮಣ್ಣನ ಭಾಗದ ದಸ್ಸಿವ ಭಾಗಂಗೊಣ್ಡು ಕೆಱೆಯ ಕಟ್ಟಿಸಿದಂ (ಮೈಅರ್. ೦೯೩೦, ೪೩-೭ ;೬೬೪). 'ದಸಕ' ಪಠಾ. [ ? ]

**ದಹ₁** 'ದಸ್ಕ' ನೋ.

**ದಹ₂** 'ದಗಾ' ನೋ.

**ದಹಕಿ (ನಾ).** (?) : ರಾಣಿ ಸಾಹೇಬರು ಕೊಟ್ಟ ಕವಲಿನ ಮೇರೆಗೆ ನಮಗೆ ಅವರಿಗೆ ಬರುವದರಲ್ಲಿ ದಹಕಿ ಬರುವಂತೆಯೂ . . . ದೈವಕ್ಕೆ ಪ್ರತಿಯಾಗಿ ದಯೆ ಮಾಡಿಸಬೇಕು (ಚಾಮವಂ. ೨೨೦). [ ? ]

**ದಹಕೋಟಿ, ದಾಕೋಟಿ (ನಾ).** ಹತ್ತುಕೋಟಿ ; ದಶಕೋಟಿ : ದಶ ಸಹಸ್ರಂ ಲಕ್ಷಮಾ ದಹಲಕ್ಷಕೋಟಿ ದಹಕೋಟಿ ಶತಕೋಟಿಯು

ಬ್ಬುದ ನ್ಯರ್ಬುದಂ . . . ಇಂತು ಚವ್ವೀಸ ತಾಣವರ ಸಂಖ್ಯೆಯಕ್ಕುಂ (ಮಂಗರಾ. ೧೦೩-೧೨) ; ಲಕ್ಷ ದಹಲಕ್ಷಾ ಕೋಟಿ ದಹಕೋಟಿ ಶತಕೋಟಿ ಅರ್ಬುದಾ . . . ಇವು ೩೨ ವೃಘಡಣೆ ಹೆಸರುಗಳೂ (ಭಾಸ್ಕರ. ೧೦-೬). ದಾಕೋಟಿ : ಉಗ್ಗಡಣೆ–ಎಕ್ಕಂ, ದಾಹಂ, ಶತಂ, ಸಾವಿರ, ದಾಸಾವಿರ, ಲಕ್ಷ, ದಾಲಕ್ಷ, ಕೋಟಿ, ದಾಕೋಟಿ, ಶತಕೋಟಿ . . . ಪರಿಮಿತ, ಮಹಾಪರಿಮಿತ. ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೮-೨೩).
[ ದಹ$_1$ (<ದಸ$_2$) + ಕೋಟಿ$_1$ ]

ದಹನ (ನಾ). ೧. ಸುಡಂವಿಕೆ ; ಉರಿಸುವಿಕೆ : "ಭರ್ಜನಂ ದಹನಮೆನಲು ಸುಡುಹಂ" (ಮಂಗರಾ. ೧೪-೯) ; ಸುವರ್ಣಪಾಷಾಣಮೆಂತು ಪಿಂಡೀಬದ್ಧ ದಹನ ತಾಪನ ತಾಡನ ಕ್ರಿಯೆಗಳಿಂ ಶುದ್ಧಲೋಹಮಕ್ಕುಮಂತೆ ಭವ್ಯನುಂ ಮನುಷ್ಯಭವಕ್ಕೆ ವಂದಲ್ಲಿ ಯುಕ್ತ್ಯಾಚಾರರಪ್ಪಾಚಾರ್ಯರಂ ಪೊರ್ದಿ . . . ಶ್ರಾವಕನಪ್ಪುದು (ಜೀವಸಂ. ೯-೬). ೨. ದಿಕ್ಪಾಲಕರಲ್ಲಿ ಒಬ್ಬ ; ಅಗ್ನಿ : "ಕೃಶಾನುವಗ್ನಿ ದಹನಂ ಹವ್ಯಾಶನಂ ವಹ್ನಿ ವಾಯುಸಖಂ . . . ಧೂಮಧ್ವಜಂ ಪಾವಕಂ" (ವಸ್ತುಕೋ.೬-೪೯); ಆ ನಾಗರ ಖಂಡಂಗಳುಮಂ ನಾಗರಖಂಡಮುಮನೆಲ್ದುರ್ ಕೊಂಡಂ ದಹನಂ (ಪಂಶಥಾ. ೩-೮೯) ; ಸುರಪತಿ ದಹನಂ ಧರ್ಮಂ ನಿರುತಿ . . . ಎಂಬ ದಿಕ್ಪಾಳರುಮಂ ದಶದಿಶೆಯೊಳಿರಿಸಿ (ಚಂದ್ರಪು. ೧೨-೧೦೩). ೩. ಶವವನ್ನು ಸುಡುವುದಂ ; ಅಂತ್ಯಸಂಸ್ಕಾರ: ಪೊರಮಟ್ಟಳರಮನೆಯನಾ ಮುದುಕಿ, ಮಸಣದೊಳ್ ದಹನದುಃಖದೊಳಿರ್ದರಾರುಂ ತಿಳಿಯದಂತೆ (ಶ್ರೀಅಾಮಾ. ೦೨೦-೨೬೯). ೪. ಒಂದಂ ನರಕ : ದಹನ, ಅಸ್ರಹ್ರದ, ತೀಕ್ಷ್ಣಾಯಸ್ತಂಭ, ಶಕುನಿಪೊಯಹ್ರದ, ಮಹಾವರ್ತಕವೆಂಬೈದು ಮಂತ್ರಿನರಕಂಗಳೊಡಗೂಡಿ (ವಿವೇಕ. ೦೯೨). [ ಸಂ. ]

ದಹನಂಗೊಳಿಸು (ಕ್ರಿ). ಸುಡಂ ; ಉರಿಸಂ : ನಳಿನಾಸ್ತ್ರನಮಳತರಕಳೇವರವ . . . ದಹನಂಗೊಳಿಸಿ ಭಸ್ಮೀಕೃತಂ ಗೆಯ್ಯಲು (ನವಮೋ. ೬-೩೧).
[ ದಹನ + ಕೊಳ್$_1$ + – ಇಸು$_2$ ]

ದಹನಕರ್ಮ (ನಾ). ಸುಡಂವ ಕೆಲಸ; ದಹಿಸುವ ಕಾರ್ಯ: ಅರಿವುರತ್ರಯ ದಹನಕರ್ಮಸ್ಫುರಣವಸ್ಮತ್ಕಾರ್ಯವದು ಗೋಚರಿಸಿತಲ್ಲಿಂ ಮೇಲಣಂಚಿ ತಾನುಚಿತ ಕೃತ್ಯವನು ಕರುಣಿ ನೀನೆ ಬಲ್ಲೆ (ಕುಮ್ಮಾಕ. ೬-೪೪).
[ ದಹನ + ಕರ್ಮ ]

ದಹನಕುಂಡ (ನಾ). ಅಗ್ನಿಕುಂಡ: "ದಹನಕುಂಡಃ ದಾಹಕ" (Incinerator. ೩೦೪೩). [ ದಹನ + ಕುಂಡ$_1$ ]

ದಹನಕ್ರಿಯೆ (ನಾ). (ಶವವನ್ನು) ಸುಡಂವ ಕ್ರಿಯೆ: ಜಲದಾನಕ್ರಿಯೆಯಂ ದೃಗ್ಜಲದಿಂ ಕೋಪಾಗ್ನಿಯಿಂದೆ ದಹನಕ್ರಿಯೆಯಂ ಕೆಳೆಯಂಗೆ ಮಾಡಿದಯ್ (ಗದಾಯು. ೩-೩೨) ; ದಹನಕ್ರಿಯೆ ಮುಗಿಸಿಕೊಂಡು ಬರುವಾಗ ಹೊತ್ತು ಮೀರಿತ್ತು (ಒಂಧಿ). [ ದಹನ + ಕ್ರಿಯೆ ]

ದಹನಜಿಹ್ವಾಂತಕ (ನಾ). ದಕ್ಷನ ಯಜ್ಞಾಗ್ನಿಜ್ವಾಲೆಯನ್ನು ನಾಶ ಮಾಡಿದವನಂ ಶಿವ ; (?) : ಗಹನ ದಹನದೊಳಹಿತರಿಕ್ಕಲು ದಹನ ವಾಜಿತು ದಹಿಸಲಮ್ಮದೆ ದಹನಜಿಹ್ವಾಂತಕಶರಣನಂ ದಹನವೇಗುವುದು (ಬಸಪು. ೪೯-೪೦). [ P ಇದು 'ದಹನಜಿಹ್ವಾಂಬಕ' ಎಂದಿರಬಹುದೇ ? ]

ದಹನತಂತ್ರ (ನಾ). ತಾಂತ್ರಿಕ ಸಿದ್ಧಿ ಮಂತ್ರಗಳಲ್ಲಿ ಒಂದಂ ; ತಂತ್ರಶಾಸ್ತ್ರದಲ್ಲಿ ಸಿದ್ಧಿಯನ್ನುಂಟುಮಾಡುವ ಮಂತ್ರಗಳಲ್ಲಿ ಒಂದಂ : ಶಾಬರ ತಂತ್ರ, ಶಾಕಿನೀತಂತ್ರ, ಡಾಕಿನೀತಂತ್ರ ... ದಹನತಂತ್ರ, ದರ್ಶನತಂತ್ರ, ಖನನತಂತ್ರ, ಬಂಧನತಂತ್ರ, ವಚನತಂತ್ರಾದಿ ತಾಂತ್ರಿಕ ಸಿದ್ಧಿಮಂತ್ರಂಗಳಂ (ವಿವೇಕ. ೮೦). [ ದಹನ + ತಂತ್ರ ]

ದಹನಧರ್ಮ (ನಾ). ಸುಡಂವ ಸ್ವಭಾವದವನಂ ; ಅಗ್ನಿ. 'ದಹನಧರ್ಮಾಂಬಕ' ಪರಾ. [ ದಹನ + ಧರ್ಮ ]

ದಹನಧರ್ಮಾಂಬಕ (ನಾ). ಸುಡಂವ ಕಣ್ಣು ; ಅಗ್ನಿನೇತ್ರ : ಘವರ್ಮಾಂಶು ಕಶತ ಕೋಟಿ ಸುಪ್ರಕಾಶನು ದಹನಧರ್ಮಾಂಬಕವ ತೆರೆವ ಸಮಯ ತವಸಿಗೆ ಹಿಂಸೆಕರ್ಮ ತರವಲ್ಲೆಂದು . . . ಬಿಡಿಸದಾದಿ ಯಕ್ಷಟಾ (ನವಮೋ. ೬-೨೬). [ ದಹನಧರ್ಮ + ಅಂಬಕ ]

ದಹನಲೋಚನ (ನಾ). ಅಗ್ನಿಯೇ ಕಣ್ಣಾಗಿ ಉಳ್ಳವನಂ ; ಶಿವ : ಅಹುದೆ ಇದಕೇನಾಯ್ತುವಂಗಾ ದಹನಲೋಚನನಡ್ಡಮೇ ಅಗ್ರಹಿಸಿಕೊಂಡಡೆ ಕೊಳಲಿ ಎನ್ನಧಿಕಾರವಂ ರುದ್ರ (ಬಸಪು. ४೧-೨೬).
[ ದಹನ + ಲೋಚನ ]

ದಹನಸಂಸ್ಕಾರ (ನಾ). ಸತ್ತವರನ್ನು ಬೆಂಕಿಯಿಂದ ಸುಡಂವ ಕರ್ಮ.
[ ದಹನ + ಸಂಸ್ಕಾರ ]

ದಹನಾಕ್ರಾಂತ (ಗುಂ). ೧. ಉರಿ ತಗುಲಿದ ; ಬೆಂಕಿಯಿಂದ ಆವರಿಸಿದ. (ನಾ). ೨. ಉರಿ ತಗುಲಿದುದಂ; ಬೆಂಕಿಯಿಂದ ಆವರಿಸಿದುದಂ : ಅಹಹಾ ! ನೋಡ ರಹಸ್ಯದೊಳ್ ಬಳಕಿವೆತ್ತೀ ಚಿತ್ರದಭ್ಯಾಸದಿಂ ದಹನಾಕ್ರಾಂತಮೆನಿಪ್ಪ ಮಂದಿರದವೋಲ್ ಕಾಣ್ಬಂ ಜನಾಕೀರ್ಣಮಂ (ಶಾಕುಂತ. ೬೪-೧೦೦). [ ದಹನ + ಆಕ್ರಾಂತ ]

ದಹನಾರ್ಚಿ (ನಾ). ಅಗ್ನಿಯ ಜ್ವಾಲೆ; ಉರಿಯಂ ನಾಲಗೆ : ಆಕಾಶ ಸ್ಫಟಿಕಾಂತರಿತ ದಹನಾರ್ಚಿಯಂತಾನುಮಚ್ಛಸಲಿಲವ್ಯವಹಿತಪದ್ಮರಾಗ ಮಣಿಯಂತಾನುಂ ತನ್ನ ಬೆಳಗೆ ಬೆಳಗಾಗೆ ಶುದ್ಧ ಗರ್ಭಾವಾಸದೊಳ್ ಜಿನಾರ್ಭಕಂ ಬಳೆಯೆ (ಶಾಂತಿಪು. ೯-೨೦); ಪತಿಯೊಡನೆನ್ನ ತಂಗೆ ದಹನಾರ್ಚಿಯೊಳೊಂದೆ ಮುಹೂರ್ತದೊಳ್ ದಿವೋದಿತತನುವಾದಳೀಂ ಪಿರಿಯೆನಪ್ಪ ದೞಿಂ ಪಿರಿದಪ್ಪ ದಾರುಣವ್ರತ ದಹನಾರ್ಚಿಯಿಂದನುದಿನಂ ತನುವಂ ತನುಮಾಡುತಿರ್ಪೆಂ (ಆಜಿಪು. ೦-೪೯). [ ದಹನ + ಅರ್ಚಿ ]

ದಹನಾಶೆ (ನಾ). ಆಗ್ನೇಯ ದಿಕ್ಕು : ಅಹಿಮಕರಂ ಪೊಡೆಯಿಸುವಂ ದಹನಾಶೆಗೆ ರಥಮನರುಣನಿಂ ದಿನಮುಖದೊಳ್ (ಲೀಲಾವ. ೯-೬).
[ ಸಂ. ದಹನಾಶಾ ]

ದಹನೋಪಲ, ದಹನೋಪಳ (ನಾ). ಸೂರ್ಯಕಾಂತಶಿಲೆ ; ಸ್ಫಟಿಕ ಶಿಲೆ. ದಹನೋಪಳ : "ಸ್ಫಟಿಕಃ, ಸೂರ್ಯಕಾಂತಃ,...ದಹನೋಪಳ ಈ ೪ ಸ್ಫಟಿಕಂ" (ಹಲಾಯು. ೨೯-೨೨). [ ದಹನ + ಉಪಲ ]

ದಹನೋಪಳ 'ದಹನೋಪಲ' ನೋ.

ದಹರ (ಗುಂ). ೧. ಸೂಕ್ಷ್ಮವಾದ. 'ದಹರಾಕಾಶ' ಪರಾ. (ನಾ). ೨. [ಯೋಗ] ಹೃದಯದಲ್ಲಿರುವ ಸೂಕ್ಷ್ಮವಾದ ಆಕಾಶ ; ಹೃದಯಾಕಾಶ : ಕೇಳು ದಹರದ ಕಮಲದಿಳೆಯಾದ್ಯಷ್ಟವಾತ್ಯಕೆಯಾ ಶೀಲವಿಡಿದು ಹೆಕಾರ ಮೊದಲಾ ಮೇಲಿಹ ಸಕಾರಾಂತರೂಪಂದಾಳಿ ತೋರೂದಪ್ಪದಳಗಳ ಕೀಲು ತಿಳಿಯೆಂದ (ಗಗತಾ. ३೦-६६). [ ಸಂ. ]

ದಹರಾಕಾಶ (ನಾ). ಸೂಕ್ಷ್ಮವಾದ ಹೃದಯಾಕಾಶ : ಹೃದಯದಂಗುಷ್ಠಮಾತ್ರದ ದಹರಾಕಾಶ ಪದಮಧ್ಯದೆಡೆಯಲ್ಲಿ ಚಲಿಸದೆ (ಶರಬೋ. ೩-೧೦-೩) ; ಅರಿಯಾ ದಹರಾಕಾಶಲಕ್ಷಣ ನೆರಳ ಕೈಲದಿ ನೋಡಿ ಮೇಲಿನಲಿರುವ ಮತ್ಸ್ಯವನೆಚ್ಚನರ್ಜುನ ಅದರ ತೆರನಂತೆ ತಿರುಹಿ ದೃಷ್ಟಿಯು ತನ್ನರೇ ತಾ ನಿಲಿಸಿ ಅರ್ಧಾಕ್ಷಿಂದ ತಾನೆಯು ಗುರಿಯು ಲಕ್ಷಿಸಿಯಿಹುದ ದಹರಾಕಾಶ ಲಕ್ಷ್ಮಂದ (ಜ್ಞಾನಸಿಂ. ೨೦-೩); ದಹರಾಕಾಶದಲ್ಲಿ ಬೆಳಗುತ್ತಿರುವ ಜ್ಯೋತಿರ್ಲಿಂಗದ ಸಾಕ್ಷಾತ್ಕಾರವಾಗುವುದು (ಛಾಶರ. ೨೫೦).
[ ದಹರ + ಆಕಾಶ ]

ದಹರೋಪಾಸನೆ (ನಾ). ದಹರಾಕಾಶದಲ್ಲಿರುವ ಸೂಕ್ಷ್ಮ ವಸ್ತುವಿನ ಅಂದರೆ ಪರಮಾತ್ಮನ ಉಪಾಸನೆ : ಛಾಂದೋಗ್ಯೋಪನಿಷತ್ತು . . . ಇದರಲ್ಲಿ . . . ದಹರೋಪಾಸನೆ, ಇಂದ್ರ ವಿರೋಚನರ ಉಪಾಖ್ಯಾನ ಮೊದಲಾದ ವಿಷಯಗಳಿವೆ (ಛಾಶರ. ೩೮). [ ದಹರ + ಉಪಾಸನೆ ]

**ದಹಲಕ್ಷ, ದಾಲಕ್ಷ** (ನಾ). ಹತ್ತು ಲಕ್ಷ : "ಏಕಂ ದಹಂ ಶತಂ ಸಹಸ್ರಂ ದಶಸಹಸ್ರಂ ಲಕ್ಷಮಾ ದಹಲಕ್ಷ ಕೋಟಿ ದಹಕೋಟಿ ಶತಕೋಟಿಯರ್ಬುದನ್ಯರ್ಬುದಂ ... ಇಂತು ಚಬ್ಬೀಸ ತಾಣವರ ಸಂಖ್ಯೆಯಕ್ಕುಂ" (ಮಂಗರಾ. ೧೦೫-೧೩) ; ದಾಸಾವಿರ ಲಕ್ಷ ದಹಲಕ್ಷಾ ಕೋಟಿ ದಹಕೋಟಿ . . . ಇವು ೩೨ ವುಘಡಣೆ ಹಸರುಗಳೂ (ಭಾಸ್ಕರ. ೧೦-೬) ; ಇದನ್ನು ಇಪ್ಪತ್ತು ದಹಲಕ್ಷ ಅರ್ಹತರು ಕಡೆದರೆಂದು ಹೇಳುತ್ತಾರೆ (ಪ್ರವಾಇ. I, ೨೫೨). **ದಾಲಕ್ಷ** : ಎಕ್ಕಂ, ದಾಹಂ ... ಲಕ್ಷ, ದಾಲಕ್ಷ . . . ಪರಿಮಿತ, ಮಹಾಪರಿಮಿತ ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೮-೨೫).

[ ದಹ$_1$ (<ದಸ$_2$) + ಲಕ್ಷ ]

**ದಹಳೆ** (ನಾ). ಒಂದು ದೇಶದ ಹೆಸರು ; "ಚೇದಿರಾಜ್ಯ" (ಶಾಶಮಂ ೨೮೦ ಟಿಪ್ಪಣಿ) : ಪೊಗೆಯುತ್ತಿರ್ದರ್ಪ್ಪುದಿನ್ನುಂ ದಹಳೆ ಹಿಮವನಗಾರಣ್ಯಮಂ ಲಾಳನಿನ್ನುಂ ಪುಗಲೆನ್ದಿರ್ದರ್ಪ್ಪನಿನ್ನುಂ ನೆಲಸದೆ ತಿವುಳಂ ಲಂಕೆಯಿಂ ತೆಂಕಲೋಡಲ್ ಜಗೆಯುತ್ತಿರ್ದರ್ಪ್ಪನ್ . . . ಎಂ ಬಲ್ಲಿದನೊ ಚಕಿತವಿದ್ವಿಷ್ಟನೆಂಬೀ ನೊಳಂಬಂ (ಪ್ರಾಅಶಿ. ೦೪೫೪, ೬೫-೬೩ ; 1024 ?) ; (ಎಕ. VII, ಶಿಕಾರಿ. ೨೪೭-೯ ; 1080 ನೋ.) 'ಡಹಾಳ' ಪರಾ. [ ? ]

**ದಹಿಕ** (ಗು). ದೇಹಸಂಬಂಧವಾದ; ದೈಹಿಕ : ದಹಿಕ ದೈಶಿಕ ಕಾಲಿಕತ್ರಯ ಗಹನ ಕರ್ಮಗಳುಂಟು ಇದರೊಳು ವಿಹಿತ ಕರ್ಮಗಳರಿತು ನಿಷ್ಕಾಮಕನು ನೀನಾಗಿ (ಹಸಾರ. ೯-೪).

[ P ಇಲ್ಲಿ 'ದೈಹಿಕ' ಎಂಬುದನ್ನು ಛಂದಸ್ಸಿಗಾಗಿ 'ದಹಿಕ' ಎಂದು ಮಾಡಿಕೊಂಡಿರಬಹುದು ]

**ದಹಿಸು** (ಕ್ರಿ). ೧. ಸುಡು ; ಉರಿಸು : ನಿನ್ನಂ . . . ದಹಿಸಲಿಲ್ಲೇತರ್ಕೆ ತಾನಗ್ನಿ ಪೇಟೆಲೆ ಪಾಪಾತ್ಮನೆ (ಕಾದಂಸಂ. ೫೭೪); ಕಡೆಗಾಲದೊಳು ಜಗವ ಮೊಗೆದು ದಹಿಸುವ ನಡುಗಣ್ಣ ಬೆಂಕಿಯಿಂದೊಗೆದು ನೆಗೆದೆದ್ದು ಘುಡುಘುಡಿಸಿ ವೀರೇಶ್ವರಂ ನೆರೆದ ದೇವರ ಹಿಂಡನಂಡಲೆದು ಮೊದಲಿಗರನು ಹುಡಿಗುಟ್ಟೆ (ಹರಿಹ. ೧೧-೪೪) ; ಅಹುದು ಸಂಜಯ ಶೋಕಶಿಖಿ ನೆಟ್ಟೆ ದಹಿಸಿತೆನ್ನನು ಬೆಂದ ವಸ್ತುಗೆ ದಹನವುಂಟೇ ಎಂಬ ನಾಣ್ಣುಡಿ ನಮ್ಮೊಳಾದುದಲಾ (ಕುವ್ಯಾಶ. ೦-೬) ; ತನುಗಾತ್ರಿ ನಿನ್ನ ತಪವಂ ಮನಸಿಜನಾವಗಮುಮೆನ್ನನಾದೊಡೆ ದಹಿಪಂ (ಶಾಕುಂತ. ೩೮-೬೮). ೨. ಉರಿದುಹೋಗು ; ಸುಟ್ಟುಹೋಗು: ನನ್ನ ಶತ್ರುಗಳು ಅಸೂಯಾಗ್ನಿಯಿಂದ ದಹಿಸಿಹೋಗುವರು (ಹಂಗಾಳ್ಳ. ೬-೦೫). [ ದಹನ + – ಇಸು$_2$ ]

**ದಹ್ಯ** (ಗು). ಸುಡಬಹುದಾದ; ಉರಿಸಬಹುದಾದ : ಅಸಂಶಯ ದಹ್ಯ ದಗ್ಧವೆಕ್ಕು (ನಾನಾರ- ೧೬೪). [ ಸಂ. ]

**ದಳ್** (ನಾ). ಒಂದು ಅನುಕರಣ ಶಬ್ದ. 'ದಳ್ಳಿಸು', 'ದಳ್ಳುರಿ$_1$', 'ದಳ್ಳನ್' ಪರಾ.

**ದಳ$_1$, ದಡ್ಡ** (ನಾ). ೧. ದಟ್ಟವಾದುದು ; ಸಾಂದ್ರವಾದುದು : ಘುಳುಘುಳಿಸುತೆಳ್ವ ಬೊಬ್ಬುಳಿಗಳಿಂ . . . ದಳದ ಪವಳದ ನಿಮಿರ್ದ ಕುಡಿಗಳಿಂ ತಡಿಗಳಿಂದಾ ಕಡಲ್ಕಣ್ಗೆಸೆದುದು (ಕೃಮಿಥಾ. ೬-೩). **ದಡ್ಡ** : ೨. ದೃಢತೆ : ನೀನು . . . ನಾಲ್ಕು ದಿನ ಹಟ್ಟಿಗೆ ಗಂಜಿ ಬಿದ್ದರೆ ದಡವಾಗುತ್ತಿದ್ದಿ (ರಾಜಾದೇ. ೬೩).

**ದಳಮಾಗು, ದಳವಾಗು** = ದಟ್ಟೈಸು ; ಸಾಂದ್ರವಾಗು : ಮದನ ಧನುರ್ಧರಂಗೆ ದೊಣೆಯಾದ ತಳಿರ್ ಸರಲಾದ ಪೂ ಬಸಂತದ ಮೊದಲಂಗ ಜಂಗೆ ದಳವಾದಲೆ ಮುದ್ಗರವಾದ ಕೆಯ್ ಬಸಂತದ ನಡು . . . ಅಗೆ ಸುಗ್ಗಿಯ ಮನೋಜನ ಕೆಯ್ಪಿಡಿಯಲ್ತೆ ಮಾಮರಂ (ಶಾಂತಿಪು. ೯-೬೫) ; ಕೆಂದಳದೊಂದು ಕೆಂಪು ಕಿಸುಸಂಜೆಯನಂಜಿಸೆ ಕರ್ಪುವೆತ್ತ ಕೇಸಂ ದಳವಾದ ಕಟ್ಟಿಲೆಯನೇಳಿಸೆ (ಕಬ್ಬಿಗಾ. ೧೪೦). [ ?./ತಮಿ. ತಳ ; ತೆಲು. ದಳ ]

**ದಳ$_2$** 'ದಲ' ನೋ.

**ದಳಂ** (ನಾ). ಒಂದು ಅನುಕರಣ ಶಬ್ದ : ಶ್ರೀ ಸೋಮನಾಥನ ಕುಮಾರನಾದಯ್ಯನೆಸಮಾಸುರದ ಮಹಿಮೆ ಮನದೊಳ್ನಾಂಟಿ ಬೇರ್ವರಿದು ಕೇಸ[ಸು]ರಿಯಮೊಲು ದಳಂ[ಪಾಠಾಂ. ಳಂ]ದಳ್ಳಿ[ಪಾಠಾಂ. ದಳೆಂದಳೆ] ಱಿದು ಹೃದಯಮಂ ಸುಡೆ ಬೆಂದು ಕಂದಿ ನೊಂದು (ಸೋಮಚ. ೫-೧).

**ದಳಂಗಟ್ಟು** (ಕ್ರಿ). (?) : ಮಸಗಿದ ಕಡಲ ತೆರೆಗಳಂತೆ ತರತರದಿಂ ದಳಂಗಟ್ಟಿ ತೋರ್ಪ ತುರಗದಟಮಂ ಮುಂದಿಟ್ಟುಕೊಂಡು (ವರ್ಧಮಾ. ೪-೪೨ ವ); "ಸಾಲಾಗಿ ನಿಲ್ಲು" (?) (ವರ್ಧಮಾ. ಕೋಶ) :

[ ದಳ$_2$ (= ದಲ) + ಕಟ್ಟು$_1$ ]

**ದಳಂಗೊಳಿಸು** (ಕ್ರಿ). ಹೆಚ್ಚುಮಾಡು ; ಅಧಿಕಗೊಳಿಸು : ಸೌರಭಮಂ ದಳಂಗೊಳಿಸೆ ಬಣ್ಣದೆ ನುಣ್ಣನೆ ರಾತ್ರಿ ಮಾಣಿಕಾಕಾರೆ ತೊಡರ್ಚೆ ನಾರುಗಿದ ತಿಂಗಳ ತಣ್ಣದಿರಂ ನಮೇರು ಮಂದಾರದರಲ್ಗಳಂ ತನಗೆ ನೀಡಿದಳೆಂದೊಲವಿಂದೆ ನೋಡಿದಳ್ . . . ವಾರಿಜ ವಕ್ತ್ರೆ ಕೈರವ ವಿಮೋಚನೆ ಮಾಲೆಯಂ (ಅನಂಪು. ೪-೧೦೪). [ ದಳ$_1$ + ಕೊಳ್$_1$ + –ಇಸು$_2$ ]

**ದಳಂಬಡೆ** (ಕ್ರಿ). ೧. ದಪ್ಪವಾಗು ; ಸಾಂದ್ರವಾಗು : (+). ೨. ಹೆಚ್ಚು ; ವೃದ್ಧಿಯಾಗು : ಕಳ್ತೊಳಮುಮರ್ದನೊಳಂ ಪುಟ್ಟಿದ ಪೆಂಡಿರಂತೆ ಸೊಗಯಿಸುವ ಪಲರುಮೊಳ್ಕೆಂಡಿರೊಂದೆಡೆಯೊಳಿರ್ದು ಕಾಮದೇವನೆಂಬ ಬಳಮರ್ದಕಾಱನ ಮಾಡಿದ ಮರ್ದನಂತೆ ಬಳೆದು ದಳಂಬಡೆದು ಮೋಹನೂಱುಮತ್ತು ಜಾತಿಯ ಕಳ್ಗಳಂ ಮುಂದಿಟ್ಟು ಮಧುಮಂತ್ರದಿಂ ಮಧುದೇವತೆಗಳನರ್ಚಿಸಿ (ಪಂಪಭಾ. ೪-೮೭ ವ); "ದಳಂಬಡೆದು,–ವೃದ್ಧಿಯಾಗಿ" (ಪಂಪಭಾ. ೧೬೭): "ಗರಿಗಟ್ಟಿಕೊಳ್ಳು, ಬಲವಾಗು,ಸಾರವುಳ್ಳುದಾಗು" (ಪ್ರಕಣ್ಣ) ; ಬಳವದವಾರ ವೇದರುತಿ ಗೇಯರವಂ ಪಟಹಸ್ವನಂ ಪುರೀ ಕಳಕಳದಿಂದಳಂ ಬಡೆದು . . . ದಿಗಿಭವ್ರಜ ಬೃಂಹಿತ ಘೂರ್ಣನಾದದಿಂ ಜಳಧಿಯನಾಂತು ಘೂರ್ಣಿಪನಮಾ ಗೃಹಮಂ ಪುಗುತಂದನಚ್ಯುತಂ (ಅಗಪಿ. ೧೧-೦೫೦). 'ದಳವೇಱು$_1$' ಪರಾ. [ ದಳ$_1$ + ಪಡೆ$_1$ ]

**ದಳಗೆ** 'ದಳಿಗೆ$_1$' ನೋ.

**ದಳತೆರೆ** 'ದಳದೆರೆ' ನೋ.

**ದಳತ್ಕೈರವ** 'ದಲತ್ಕೈರವ' ನೋ.

**ದಳತ್ಕೋಕನದ** (ನಾ). ಅರಳುತ್ತಿರುವ ತಾವರೆ ; ವಿಕಸಿಸುವ ಕಮಲ. 'ದಳತ್ಕೋಕನದ ಜಠರ' ಪರಾ.

[ ಸಂ. ದಲತ್ಕೋಕನದ ]

**ದಳತ್ಕೋಕನದಜಠರ** (ನಾ). ಕಮಲವನ್ನು ನಾಭಿಯಲ್ಲಿ ಉಳ್ಳವನು; ಕಮಲನಾಭ ; ವಿಷ್ಣು : ದಳತ್ಕೋಕನದಜಠರನಂ ನಿವ್ಯಾಜಕುಳಮಿಂತೆಂದು ಧರ್ಮತನಯಂ ನುಡಿದಂ (ಪಂಪಭಾ. ೯-೦೪).

[ ಸಂ. ದಲತ್ಕೋಕನದಜಠರ ]

**ದಳತ್ಪದ್ಮ** (ನಾ). ಅರಳುತ್ತಿರುವ ಕಮಲ,–ತಾವರೆ : ವಿಧುವಿಂದಂ ವಿಬುಧೋತ್ಕರ ಪ್ರಿಯಕರಂ . . . ದಳತ್ಪದದಿಂದಧಿಕ ಶ್ರೀನಿಳಯಂ ಸುಪುತ್ರನೊಗೆತರ್ಕಂ ನಿಮ್ಮೊಳುರ್ವೀಶ್ವರಾ (ಪುಷ್ಪಪು. ೬-೧೨೨).

[ ಸಂ. ದಲತ್ಪದ್ಮ ]

**ದಳದಳ** (ನಾ). ಒಂದು ಅನುಕರಣ ಶಬ್ದ : ಆ ಹುಡುಗಿ ದುಃಖದಿಂದ ದಳದಳ ಕಣ್ಣೀರು ಸುರಿಸುತ್ತಾ ಬಂದಳು (ಆಪ್ರ). 'ದಳದಳನೆ', 'ದಳದಳಿಸು' ಪರಾ.

**ದಳದಳನೆ** (ಅ). ದಳದಳ ಎಂದು ; ಸರಸರನೆ ; ವೇಗವಾಗಿ : ಆ ಆಯ್ದಕ್ಕಿಯ ಮಾರಿತಂದೆಗಳು ಸಂತೋಷಚಿತ್ತರಾಗಿ ದಳದಳನೆ ಬಸವೇಶ್ವರನ ಅಂಗಳಕ್ಕೆ ಬಂದು (ಶೂನ್ಯಸಂ. ೨೬೨) ; ದಳದಳನಿಳಿತಹ ಸುಧೆಯನು ವಿದ್ಯುದ್ವಳಗವ ತೇಜಃಪುಂಜವ . . . ಮರೆಯದಿರೆಂದನು ವೇಶಿಕನು (ಯೋಗಾಂಎ. ೪-೨೨); ಕಂಗಳಿಂದೋಡುತಿರೆ ದಳದಳನೆ ಹರ್ಷಾಶ್ರು

ವಾರಿಪೂರ (ರೀಪಊ. ೭-೧೬) ; ಸರ್ವಾಂಗದೊಳ್ಪುಳಕದಗೆಯೊಗೆಯೆ ದಳದಳನೆ ಹರುಷಾಂಬುಧಾರಾಪ್ರವಾಹ ಕಂಗಳಿಂದಿಳಿವನ್ನಂ (ಮದೇಪು. ೧-೬) ; ಕಣ್ಣೀರು ದ ಳ ದ ಳ ನೆ ಇಳಿಯಹತ್ತಿದವು (ಹಂದುಲಿ. ೩೧). 'ದಡಬಡನೆ', 'ಧಳಧಳನೆ' ಪರಾ. [ ದಳದಳ + – ಅನೆ$_1$ ]

**ದಳದಳಿತ** (ಗು). ದಳಬಿರಿದ ; ಅರಳಿದ ; ವಿಕಸಿತವಾದ : ವಳ್ಳಿಯ ಕತ್ತಲೆವಾಂಬನ ದಳದಳಿತ ಸಂಜೆಮಲ್ಲಿಗಳ ಪೂವೆಂಬಿನ ಬೆಳದಿಂಗಳಿಂದೆನೆ ಕಣ್ಬಯಲ ಚಲುವನೀವುದರಸಿಯಕೆಟಿಯೊಳು (ಮ್ಯಅರಿ. ೧೯೩೮, ೯-೩೦ ; 1184). [ ಸಂ. ದಲದಲಿತ ]

**ದಳದಳಿಸು, ದಳ್ದಳಿಸು** (ಕ್ರಿ). ೧. ದಳ ದಳನೆ ಸುರಿ ; ಧಾರಾಕಾರವಾಗಿ ಹರಿ : ಎನ್ನ ತನಯುನನುಯ್ದಂ ರಾಕ್ಷಸನೆಂದಟ್ಟಳ್ ಧವಳೇಕ್ಷಣೆ ದಳದಳಿಸಿ ಸುರಿಯೆ ಬಾಷ್ಪಜಲಂಗಳ್ (ಹಂರಾಮಾ. ೪-೨೩). ೨. ಹೆಚ್ಚಾಗಿ ಹೊಳೆ; ತಳತಳಿಸಂ; ನಳನಳಿಸು: ತಳ್ತ ಮಾಧವೀಲತೆಯ ಜೊಂಪದಿನೊಳಗೆ ದಳದಳಿಸಿ ಪೊಳೆವೆಳದಳಿರ ಗೊಂದಣದಿನೊಂದಿ ಸಂದಣಿಸಿ ಸೌಂದರವಾದ ಮಾಕಂದ ಭೂರುಹಸಂದೋಹದೊಳಗೆ ಸುತ್ತಿ ಪತ್ತಿದ ತಳ್ತಶೋಕಾನೋಕಹಾನೀಕ ದೋಲಗಶಾಲೆಯಂ . . . ಪೊಕ್ಕು (ನೇಮಿಪು. ೧೩-೨೦ ವ) ; ಎಳದಳಿರ ತುಱುಗಲೊಳ್ ನೆಱೆ ದಳದಳಿಪೆಳವಾವಿನಳ್ಳಿಗೊಂಬಂ ತಳ್ಪೊಯ್ದು (ಶಾಪ್ಯಾವ. ೨೪೨). **ದಳ್ದಳಿಸು** : ೨. ಬೆಳ್ದಿಂಗಳ ಪೂರೆವೂರೆಯೊಳ್ ದಳ್ದಳಿ [ ಪಾಠಾಂ. ಗಳ್ದಳಿ, ಗಟ್ಟಿಟ್]ಸದೆ ಮಿನುಕುತಿರ್ಪ ತಾರಾಳಿಯವೊಲ್ (ಅನಂಪು. ೫-೭೩). [ ದಳದಳ + – ಇಸು$_3$ ]

**ದಳದುಳ$_1$** (ನಾ). ಒಂದು ಅನುಕರಣ ಶಬ್ದ. 'ದಳದುಳನೆ' ಪರಾ.

**ದಳದುಳ$_2$** 'ದಟದುಟ' ನೋ.

**ದಳದುಳಕಾಱ, ದಳದುಳಿಗಾಱ, ದಳವುಳಕಾಱ, ದಳವುಳಿಕಾಱ** (ನಾ). ಸೂರೆಗೊಳ್ಳುವವನಂ ; ಕೊಳ್ಳೆ ಹೊಡೆಯುವವನಂ ; ಲೂಟಿ ಮಾಡುವವನಂ ; ದಾಳಿಕಾರ ; ಸೂರೆಗಾರ. 'ರಾಯಂದಳದುಳ ಕಾಱ' ಪರಾ. **ದಳದುಳಿಗಾಱ** : ದಳದುಳಿಗಾಱನೆನಿಪ ದಂತವಕ್ರನು (ಕರ್ಣವ್ಯ. ೫-೫). **ದಳವುಳಕಾಱ** : ಸದ್ಭಕ್ತಿ ಸೂಱೆಗಾಱಂ ಮುಕ್ತಿ ದಳವುಳಕಾಱನೆನಿಪ ಬಸವರಾಜಂ ಭಕ್ತರಂ ಕಂಡು (ಬಸರ. ೮-೪) ; ದಕ್ಷನ ಹೋಮ ದಳವುಳಕಾಱ ಹರ ನಿಸ್ಸೀಮದಲಿ ಪುರ ಮೂಱ ಗೆಲಿದನು ಸಲಹಿದನು ಸುರರ (ಕುವ್ಯಾಕ. ೨ ಸೂಚನೆ) ; ಮುಂದೆ ಮುಂದರಿರಾಯ ದಳವುಳಕಾಱ ಲಕ್ಷ್ಮಣನಿರ್ದನು (ತೊರರಾ. ೬-೨೧-೨೦) ; ದ್ರಾವಿಡ ಧರಣೀಶತಿಮಿರಮಾರ್ತಂಡನೆಱೆಯಾಂಧ್ರಮನ್ನೆಯದಳವುಳಕಾಱ ನೆಂದಿರದೆ ಪಾಡಿದರಂಗನೆಯರು (ಕಂನವಿ. ೮-೭೬). **ದಳವುಳಿಕಾಱ** : ಇದೆಲ್ಲಿಯ ಲಾವಣ್ಯದ ಲಾವುಲಿಗಂ ಜವ್ವನದ ಸೂಱೆಕಾಱಂ ಮನದ ಮಲ್ಲಳಿಕಾಱಂ ಚಿತ್ತದ ದಳವು[ಪಾಠಾಂ. ದು]ಳಿಕಾಱಂ ಬಂದಂ ಏಗುವೆನೇಗುವೆಂ (ನಂದಿರ. ೧೨-೬೦). [ ದಳದುಳ$_2$ (<ದಟದುಟ) + – ಕಾಱ ]

**ದಳದುಳನೆ** (ಅ). ಸರಸರನೆ ; ವೇಗವಾಗಿ ; ಲಗುಬಗೆಯಿಂದ : ದಳದುಳನಾಗಳೆ ಕೂಡೆಂಟು ಮಂದಿ ಕೋಮಲೆಯರು ರಾಯನ ಮುಂದೆ ಜಲಕನ್ನಿಕಾನಾಟ್ಯಕೆಂದು ನಿಂದರು ಮಱು ಚೆಲುವನದೇನ ಬಣ್ಣಿಪೆನು (ಭರಅ. ೧೩-೯೩). [ ದಳದುಳ$_1$ + – ಅನೆ$_1$ ]

**ದಳದುಳವಾಯ್** 'ದಟದಂಟವಾಯ್' ನೋ.

**ದಳದುಳಿ** 'ದಟದಂಟ' ನೋ.

**ದಳದುಳಿಗ, ದಳವುಳಿಗ** (ನಾ). = ದಳದುಳಕಾಱ : ಎಲೆಲೆ ನರನೋ ಸುಭಟಜೀವನದಳದು[ಪಾಠಾಂ. ವು]ಳಿಗನೋ (ಕುವ್ಯಾವಿ. ೭-೩೪); ಜನನಿಯ ಜಠರವ ಪೇಷ್ಕಿಸಿ ದಳದುಳಿಗನವೊಲು ಗಡಬಡಿಸಿ (ಯೋಗಾಂವಿ. ೦-೪೪) ; ಕ್ಷಳ ಱಟ ಕುಳಗಳ ತಿಳಿವಿನಿಸಿಲ್ಲದೆ ಪಳಿಯಾದೊಂದೆರಡಾಯ್ಯುಳಿ ಮಾತಿನ ಅಳಿಗಬ್ಬಿಗ ದಳದುಳಿಗರ್ ತಿಳಿಯಲಸಾಧ್ಯಮದೀ ಕಾವ್ಯಂ (ಪ್ರಭುಪು.೧-೪೯).

**ದಳವುಳಿಗ** : ೧. ಕಣ್ಗೆ ಮಂಗಳವಾದ ಕೈವಲ್ಯ ದಳವು[ಪಾಠಾಂ. ದು]ಳಿಗನ ಆ ಸತಿಯರೊಲಿದು ಬಲಗೊಂಡೆಱಗಿ (ಸಿದ್ಧರಾ. ೧-೫೭); ಒಳಗಾದಳೆನಗೆ ಬಾಲಕಿ ಕಾಮಭೂಪನ ದಳವುಳಿಗನ ದೆಸೆಯಿಂದ (ಅಂಜಅ. ೧೪-೨೨೭).

[ ದಳದುಳ$_2$ (<ದಟದುಟ) + – ಇಗ ]

**ದಳದುಳಿಗಾಱ** 'ದಳದಂಳಕಾಱ' ನೋ.

**ದಳದುಳಿಸು, ದಳವುಳಿಸು** (ಕ್ರಿ). ಆಕ್ರಮಿಸು; ದಾಳಿಮಾಡಂ; ಕೋಲಾಹಲಮಾಡಂ ; ಕ್ಷೋಭೆಗೊಳಿಸಂ ; ರಭಸದಿಂದ ಮುನ್ನುಗ್ಗು : ತೆಂಕಮುಖವಾಗಿ ಧಾಳಿಕಾಱರು ದಳದುಳಿಸಿ [ಪಾಠಾಂ. ದಳದುಳದ] ಭೂಪಾಲಭೂಮಿಯ ಹೊಕ್ಕು ಗಂಗಾಕೂಲದಲಿ ಸಂಗಮದ ಸಾಗರಕಾಗಿ ಮಹಿಲದಲಿ (ತೊರರಾ. ೪-೦೦-೧) ; ಮಗುಳೆದ್ದು ಬಂದಾವಾಸದಲಿ ದಳದು [ಪಾಠಾಂ. ವು]ಳಿಸಿ ಶಕ್ರನ ಮುಱಿದು ಸುಮನಸರ ದೇಶದಿಂದಱೆಯಟ್ಟ (ಅಕ್ರೂಚ. ೦-೮); ತಳುವದೆ ಬೆಟ್ಟದ ಚಾಮೇಂದ್ರ ಬಲಸಹ ದಳದುಳಿಸಿದನು ಹಂಚೆಯಾಕೆ (ಕಂನವಿ. ೩-೬೩). **ದಳವುಳಿಸು** : ಸರ್ವ ಸೈನಿಕವರಸಿ ನಿಂದಿರಲೊರ್ವನೇ ದಳವುಳಿಸಿ ದ್ರುಪದನ ನಿರ್ವಹಿಸಿ ತಾ ಹಿಡಿದು ಕಟ್ಟಿದ ನಿಮಿಷ ಮಾತ್ರದಲಿ (ಸಂಭಅ. ೦೮-೯೮) ; ನಿಲುಕಿ ಹೊಳೆದವು ನೇಣ ಸಡಿಲಿಸಿ ಕುಲಗಿರಿಯ ಹೆಡತಲೆಯಂನಡರಿದವು . . . ದಳವುಳಿಸಿದವು . . . ಮನೋವೇಗಾಯ್ದ ವಾಜಿಯ ಥಟ್ಟ ನೂಕಿದರು (ಕುವ್ಯಾಭೀ. ೪-೫೨) ; ಮದಮುಖರಲ್ಲೆ ರಕ್ಕಸರು ತೋಱಿದ ಮಹೋತ್ಪಾತವನು ಬಗೆಯದೆ ಕದನಕೋಳಾಹಳ್ಳರು ದಳವುಳಿಸಿದರು ಧಾಳಿಯಲಿ (ತೊರರಾ. ೩-೫-೯).

[ ದಳದುಳ$_2$ (<ದಟದುಟ) + – ಇಸು$_3$ ]

**ದಳದೆರೆ, ದಳತೆರೆ** (ಕ್ರಿ). ಎಸಳಂಗಳನ್ನು ಬಿಚ್ಚು ; ಅರಳಂ ; ವಿಕಾಸವಾಗಂ : ಕಮಲಿನಿಯು ತಾನು ದರಹಸಿತವದನದಿಂದಿನಿಯನರುಣತೆ ಯಾಂತು ದಳದೆರೆದು ಬಿರಿದರಳ್ದು ಮೊರೆಯುತಿಹಳು (ವಿಸೀಗೀ. ೨೯-೧೬). **ದಳತೆರೆ** : ಹಿಂದೆ ಎಂದೂ ತಾನು ಅನುಭವಿಸದಿದ್ದ ವಿಶೇಷವಾದೊಂದು ಭಾವನೆ ಮನಸ್ಸಿನ ಸರೋವರದಲ್ಲಿ ದಳತೆರೆಯುತ್ತಿತ್ತು (ಅನಾಥ. ೪೮).

[ ದಳ$_2$ (=ದಲ) + ತೆರೆ$_1$ (<ತೆಱೆ$^3_1$) ]

**ದಳನ** 'ದಲನ' ನೋ.

**ದಳನಾಯಕ** (ನಾ). ದಳಪತಿ ; ಸೇನಾಪತಿ : ಬಳಿಕ ಹೊಂಕರಿಸುತಂಗಜನು ತೊಲಗಿ ದೂರದೊಳಿದ್ದ ಗುಣವಸಂತಕನೆಂಬ ದಳನಾಯಕನ ನೋಡಿ ನುಡಿದ (ಭರಅ. ೪೮-೯೫). [ ದಳ$_2$ ( = ದಲ) + ನಾಯಕ ]

**ದಳಪ** (ನಾ). = ದಳನಾಯಕ: ನೀಡಿರಿದು ಕೆಡಹಿದರ್ ದಳಪನಾ ಕ್ಷೋಭೆಯಿಂ ಬೆದರಿ ದಳಪಾರುತಿರಲು (ಜಿನಮು. ೮-೧೪). [ ಸಂ. ದಲಪ ]

**ದಳಪತಿ** 'ದಲಪತಿ' ನೋ.

**ದಳಪತಿತನ** (ನಾ). ಸೇನಾಪತಿತ್ವ ; ದಳದ ಮುಖಂಡತ್ವ : ಕಂಠೀರವ ನರಸೇಂದ್ರನಂದು . . . ಮುಂದಣ ದಳಪತಿತನವ ಲಿಂಗೇಂದ್ರನಿಗಂದು ಕೊಡುವೊಡುಜ್ಜುಗಿಸಿದ (ಕಂನವಿ. ೦೯-೯೫).

[ ದಳಪತಿ ( = ದಲಪತಿ) + – ತನ ]

**ದಳಬಳ** (ನಾ). ಒಂದಂ ಬಗೆಯಂ ಔಷಧಿ ಮೂಲಿಕೆ ; ಕಚೋರ : ದಳಬಳ (ಕಚೋರ)ದ ಹಸಿಗಡ್ಡೆಯ ರಸ ಒಂದು ಚಮಚೆಗೆ ಅಷ್ಟೇ ನೀರುಳ್ಳಿ ರಸ ಕೂಡಿಸಿ ಕೊಡುವುದು (ಮನೆಮ. ೦೪). [ ? ]

**ದಳಬೆಸ** (ನಾ). ದಳಗಳನ್ನು ಬಿಡಿಸುವ ಕಾರ್ಯ ; ಕಂಸುರಿಗೆಲಸ (?): ಕರುಮಾಡಂ ರಮ್ಯಹರ್ಮ್ಯಚಳದಳವಿಗಳುಂಬಂ ಹಿಮಾದ್ರೀಂದ್ರ ಸಾನೂತ್ಕರಕಾಂತಂ ಬಳ್ಳಿಮಾಡಂಗಳ ಬಳಗಮದೇನೆಂಬ ಪೆಂಪುರ್ವದೇನೆಂಬಿರವಿಂದೊಳ್ಪಿಂಬದೇನೆಂಬ ದಳಬೆಸನದೇನೆಂಬ ವಿಕ್ರೊಳ್ಪದೇನೆಂಬ ರಸಂಬೆತ್ತೊಳ್ಪದೇನೆಂಬವಿತತಗುಣಮದೇನೆಂಬ ಚಿತ್ರಪ್ರಪಂಚಂ (ಶಾಂತಿಪು. ೯-೧೪೮). [ ದಳ$_2$ (= ದಲ) + ಬೆಸ$_1$ ]

**ದಳಭವನ** (ನಾ). ಎಲೆವನೆ ; ಪರ್ಣಕುಟಿ : ಲವನೆ ಕೇಳಾ ದಿನವನಾ ದಳಭವನದಲಿ ನೂಕಿದರು (ತೊರಾ. ೨-೬-೨೭). [ ಸಂ. ದಲಭವನ ]

**ದಳಮಳ** (ನಾ). ತಂಬಿ ತರಳುಕುವುದಂ ; ಡವುಡವಿಸುವುದಂ : ವರ್ಷಾಕಾಲದಲ್ಲಿ ವನಜ್ಯೋತ್ಸ್ನೀ ಎಂಬ ಲತೆಯು ತನ್ನ ಪತ್ರರಾಶಿಯ ಬಾಹುಳ್ಯದಿಂದ ಹೇಗೆ ದಳಮಳಮಾಡುವುದೋ ಅವಳ ಶರೀರವೂ ಹಾಗೆ ಪೂರ್ಣತೆಯಿಂದ ದಳಮಳವಾಗುತ್ತಿದ್ದಿತಂ (ಶಕುಂ. ೪೩). 'ಡಳಮಳ' ಪರಾ. [ ←ಮರಾ. ದಳಮಳ್ ]

**ದಳಮೇಟು** 'ದಳವೇಟು$_{1}$' ನೋ.

**ದಳವಡಿಗ** (ನಾ). ಸೈನ್ಯದಲ್ಲಿ ವ್ಯವಹರಿಸುವವನಂ ; ಸೈನಿಕ; ಯೋಧ: ಮಣಿಮಯ ಹಜಾರದೊಳು ಬಿತ್ತರದ ದಳವಡಿಗರೊಡನೆ ಸೇನಾನಿಯಾರೆ ರಾಯ ರಾವುತರೊಗ್ಗಿನಲಿ (ಸವಮೋ. ೨೭-೩೭). [ದಳವಡೆ + – ಇಗ]

**ದಳವಡೆ** (ನಾ). ಸೈನ್ಯದ ತುಕಡಿ ; ಪಡೆ : ಗುರಿಕಾರ ನಾಯಕರು ದಳವಡೆಯ ಜಟ್ಟಿಗಳು ಕರಣಿಕರು ಕಣಜ ಬೋ ರಕ್ಕಸರಾಯಭಾರಿಗಳು . . . ಮುಂತಾದಯುಸಮಸದ್ಬುಧಜನರು ಮುಖ್ಯವಿನಿಯೋಗ ದೊಡ್ಡೋಲಗದ ಮಧ್ಯದಲೀ ಶಶಿವಾಳಿಯಂದದಿ ಸಮಸ್ತ ಪ್ರಭುವರನೆನಿಸಿ (ಸವಮೋ. ೩-೨೫). P ಇದಂ ಒಂದೇ ಅರ್ಥದ ಎರಡಂ ಶಬ್ದಗಳಂ ಸೇರಿ ಆಗಿರುವ ರೂಪ. [ ದಳ್$_{2}$ ( = ದಲ) + ಪಡೆ$_{3}$ ]

**ದಳವಯ** 'ದಳವಾಯ್' ನೋ.

**ದಳವರಿ** (ಕ್ರಿ). ದಾಂಗುಡಿಯಿಡು ; ಹಬ್ಬು ; ವ್ಯಾಪಿಸಂ : ಗಳಬಳಿವ ಗದ್ಗದಂ ದಳವರಿವ ಮೋಹಲತೆ ತುಳುಕಿ ತುಂತುರುಗೆದರ್ವ ಘರ್ಮಂ (ಕೈಕವ. ೧-೬-೪). [ ದಳ್$_{2}$ ( = ದಲ ) + ಪರಿ$_{2}$ ]

**ದಳವಾಡ** (ನಾ). ೧. ಸೇನಾಸಮೂಹ; ಪಡೆಯ ಸಾಲು ; ಸೈನ್ಯ : ಸಂಭ್ರಮದೆ ದಳವಾಡವೋಲೈಸೆ (ರೇವಂ. ೦೦೫-೩) ; ದಳವಾಡಸಹಿತ ದೈಚಪ್ಪ ದುರ್ಗವ ಹೊಕ್ಕು ತಳುವದದಟ ಬಲಿಕೆಯನು ಬಳಸಿ ಬಳಸಿ ನೋಡಿ (ಕುರಾಸಾಂ. ೩೭-೫೦) ; ಶಿರಂವಡಿಯ ರಾಜ್ಯಕೆ ಮನ್ನರನೂ ದಳವಾಡವನೂ ಕಳುಹಿಸಲಾಗಿ (ಸೌಇಇ. IX-ii, ೫೫೦-೧ ; 1532) : ವಿಭೀಷಣ ಬಂದಿನ್ನು ಪೊಳಮೋಸಗೊಟ್ಟ ಕಾರಣದಿ ಕಳಿದುಳಿದವನ ಮರ್ದಿಸಿಯಲ್ಲದೆ ನಿನ್ನ ದಳವಾಡವೇನು ನೀನೇನಂ (ಮೋಹತ. ೪೦-೨೫) ; ಹೊಳೆವ ತ್ರಿಶೂಲಮುವ್ಮೊನೆಯಿಂದೆ ಕಂಗಿಡಿಗಳನುಗುಳ್ದುರಿಯ ನಿಷ್ಠುರದಿ ದಳವಾಡ ದಹನವ ಮಾಡುತ್ತ ಹರಿಯುರಸ್ಥಲದಲ್ಲಿ ಬಂದು ಮೋಹಿಸಿತು (ಮೋಹತ. ೪೦-೭೬) : ಅಗ ಕೌರವರಾಯ ಸರ್ವ ದಳದಾಡದಿಂದ ಮುತ್ತಯ್ಯನಿಂಗೆ ಸರಿಬಲವಾಗಿ ಬರಲು ಬಳಿಕತ್ತ ಕಳುಪಿದ ನರನ ಬೆಂಬಲಕೆ ಪಾಂಚಾಲಮತ್ಸ್ಯನಂ (ತುರಂಗ. ೪೭-೨೧). ೨. ಸೇನೆಯಂ ನೆಲೆ ; ಶಿಬಿರ ; ಪಾಳೆಯಂ : ಬಳಿಕಾ ಯುಧಿಷ್ಠಿರಂ ಭೀತಿಯನ್ನಪಹರಿಸಿ ತನ್ನ ದಳವಾಡ ದಿಂದಾ ತತುಕ್ಷಣ ಪೊರಡಲೊದರಿಂದವು ಭೇರಿ ನಿಸ್ಸಾಳಂಗಳುರವಣಿಯೊಳು (ತುರಂಗ. ೪೯-೧) ; ಮೆರೆವ ಮಣಿಕನಕಂಗಳನ್ನಿತ್ತು ಕುರುನೃಪನ ಸುಭಟರಂ ಕಳುಪಿಸಿದನು ಭರದೊಳೈತಂದವರು ಪೋದ ವೃತ್ತಾಂತ ಮನ್ನರುಪಿದರು ಕೌರವಂಗನಿಲಜನ ಮತವ ವಿಸ್ತರಿಸಿದರು ಕದನಕಂ ಬರಲಾಗ ಕೌರವರು ಸರ್ವ ದಳವಾಡದಿಂದ (ತುರಂಗ. ೬೪-೧೯).

[ ದಳ್$_{2}$ ( = ದಲ) + ವಾಡ$_{3}$ ]

**ದಳವಾಯ್, ದಳವಯ, ದಳವಾಯಿ, ದಟವಾಯ್, ದಟವಾಯಿ** (ನಾ). ೧. ದಳನಾಯಕ ; ಸೇನಾಪತಿ : ಸುಲಿತಿಂದು ರಾಜ್ಯವನಿತಂ ನೀಮೇಕೆ ತಾವೇತಕೆಂದುಳಿದರ್ಗೀಯಂದೆ ತಾನೆ ಕಾಲಯುಮನಂತತ್ಕ್ಷಗ್ರಮಂ ಕಾಳ್ದಿದಾ ದಳವಾಯೇ ಬಳಿವಾರಿಯ್ಯ (ಸೋಮೇಶ. ೬೪) ; ಆರಿಯರ ದಳವಾಯ ಕೂಚರಸನು ಎತ್ತಿ ಬಂದು ಎಣಿಕಲನುಯಿಟಿದು ಸೆಟಿ ಸೂಟಿಗೊಣ್ಡು ಹೋಹಲ್ಲಿ (ಎಕ. XII, ಪಾವಗ. ೪೮-೧ : 1286?) ; ನೀವು ಕಟಕಾಚಾರ್ಯಪುತ್ರರು ನೀವಿರಲು ಕೃಪನಿರಲು ದಳವಾಯ್ ನಾವಹವೆ (ಕುವ್ಯಾಶ. ೧-೨೦); ಚತುರಂಗಬಲಸಹಿತವಾಗಿ ಬಲಾಹಕನೆಂಬ ದಳವಾಯನು ಕಳುಹಿಸಿ (ವಡಣ. ೮-೨೦) ; ಅವನ ದಳವಾಯ್ ದಧಕಿಸ್ ಎದೆಗೀಟಿ ನೆಟ್ಟು ಪಡಗಿಂದ ನೆಗೆದಾಲಿ ಮುಳುಗಿದನ್ (ಪಾರಸಿ. ೦೩-೩೦೬). **ದಳವಯ:** ೧. ಕರಿಮುಖಂ ದಳವಯಂ ಜ್ಯೋತಿಷಂ ರವಿ ಯಜ್ಞಪುರುಷ ಬಾಣಸಿಗ ಯಮಂ ತಳವಾಟ (ಅಶಿಚಂ. ೫-೧೩); P ಇದಂ ಛಂದಸ್ಸಿಗಾಗಿ ಮಾಡಿ ಕೊಂಡ ರೂಪ. **ದಳವಾಯಿ:** ೧. ಬಲುಬಲಸಹಿತಲೆಮ್ಮಯ ದಳವಾಯಿ ಹಿಂದುಳಿದನಿಲ್ಲಿಲ್ಲ ಮುಖಿಗಳಿನೆ (ಸೊಬಸೋ. ೬-೨೦); ಬಾಗಿಲ ದಳವಾಯಿ ಮಂಗಳರಾಜ ತುಹಾ ಅರಸುಗಳು . . . ಕುಕ್ಕಸಮುದ್ರದ ಕೆಱೆಯ ಕಟ್ಟಿಸಿದರು (ಎಕ. VI, ಕಡೂರು. ೦೬೦-೬; 1542); ದಳವಾಯಿ ಚೆಂನ್ನಮ ನಾಯಕರ ಮಕ್ಕಳು ದಳವಾಯಿ ಕೃಷ್ಣಪ ನಾಯ[ಕ]ರೂ (ಸೌಇಇ. IX-i, ೬೦೫-೫ ; 1543) ; ಪೊಡವಿಪ ದಳವಾಯಿ ನಂಜರಾಜೇಂದ್ರ ತನ್ನೊಡೆಯನ ಕಾರ್ಯದೇಳಿಗೆಯ ಗಡಣವ ಚರಿತೆಯಾಗೊಲಿದು ಪೇಳಿಸಿದನು (ಕಂನವಿ. ೧-೨೮) : ನಿಮ್ಮ ಮಗನಿಗೆ ದಳವಾಯಿಯಾಗುವ ಯೋಗವಿದೆ (ಕಂಗಾಳ್ಯ. ೪) ; ಎಳೆಗರು ಎತ್ತಲ್ಲ ದಳವಾಯಿ ದೊರೆಯಲ್ಲ ಮನೆಗೆ ಬಂದಳಿಯ ಮಗನಲ್ಲ (ಹಳ್ಳಿಡಾ. ೬೫). ೨. (ಹಿಂದಿನ ಮೈಸೂರು ಸಂಸ್ಥಾನದಲ್ಲಿ) ಪ್ರಧಾನಿ ; ಮಹಾಮಾತ್ಯ : △ **ದಟವಾಯ್** : ೧. ಏಟುಮ್ ಬಾಗಿಲೊಳೇಟ್ ದಟವಾಯ್ಗಳ್ ಏಟ್ ದಟವಾಯ್ಗಳನಿದಿರಿಸಿ ನಿಂದರ್ (ಅಂತಿಗೊ ೭-೧೨೭). △ **ದಟವಾಯಿ** : ೧. ದಟವಾಯಿ ರಾಮರಾಜಂ ಬಟಿಕಟಿಜಸದೊಡನೆ ಪೆರಸಿಯಾಳ್ದನ ಸಿರಿಗಂದಟುಪಿಯುಳಿ ಯನೆನಿಸಿಯುಮೊಡನಟಿದಂ (ಚಿಕವಿ. ೨-೧೬).

[<ಸಂ. ದಲಪತಿ./ತಮಿ. ತಳಿವಾಯ್; ತುಳು. ತೆಲು. ದಳವಾಯಿ./ ಮರಾ. ದಳವಈ, ದಳವಾಯೀ, ದಳವೈ; P ಸಂ. 'ಪತಿ' ಎಂಬುದು ಪ್ರಾ. 'ವಇ' ಎಂದಾಗಿದ್ದು ದಲಪತಿ > ದಲಪಇ > ದಳವಯಿ > ದಳವಾಯಿ > ದಳವಾಯ್ ಎಂದು ಆಗಿರಬೇಕು ]

**ದಳವಾಯಿ** 'ದಳವಾಯ್' ನೋ.

**ದಳವಾಯಿತನ** 'ದಳವಾಯ್ತನ' ನೋ.

**ದಳವಾಯಿವರ್ಯ** (ನಾ). ದಳವಾಯಿಶ್ರೇಷ್ಠ : ದಳವಾಯಿವರ್ಯ, ಮುಂದಣ ಶ್ರೀಮನ್ಮಹಾರಾಜ ಮಹಾಸ್ವಾಮಿಯವರೆಂದು ನಿಷ್ಕೃಷ್ಟ ರಾಗಿರುವ ಈಗಳಿನ ಕಿರಿಯರಸ ಪಟ್ಟದ ಶ್ರೀರಾಜಒಡೆಯರವರ ಸನ್ನಿಧಾನವು ಒಡ್ಡೋಲಗಕ್ಕೆ ಬಿಜಯಮಾಡಿದೊಡನೆಯೇ ಆಸ್ಥಾನಿಕರೆಲ್ಲ . . . ನಮಸ್ಕರಿಸಿ ಗೌರವಿಸಿಕೊಳ್ಳಬೇಡವೆ ? (ಚಿಟ್ಟಅ. ೩೪-೦೦).

[ ದಳವಾಯಿ (<ದಳವಾಯ್) + ವರ್ಯ ]

**ದಳವಾಯ್ತನ, ದಳವಾಯಿತನ** (ನಾ). ೧. ಸೇನಾಪತಿಯಂ ಹುದ್ದೆ ; ಪ್ರಧಾನಿಯ ಹುದ್ದೆ,–ಅಧಿಕಾರ. ೨. ದಳವಾಯಿಯಂ ಕೆಲಸ : ಈ ಅಸಮಾಧಾನದಿಂದ ನಿನ್ನ ದಳವಾಯ್ತನದ ಜೀವನದ ಮೂಲಶಕ್ತಿಯೇ ಬೇರಳಿದು–ಪ್ರಳಯವಾಗಿ ಹೋಗುತ್ತಿದೆಯಹುದು! (ಚಿಟ್ಟಅ. ೩೪-೨೩). **ದಳವಾಯಿತನ :** ೧. ಖಂಡೇರಾಯನಿಗೆ ದಿವಾನಪದವಿಯೂ ಹೈದರನಿಗೆ ದಳವಾಯಿತನವೂ ಗೊತ್ತಾದವು (ಒಡಕ. ೬೬) ; ಪೂರ್ವಿಕರು ಒಬ್ಬರೂ ದಳವಾಯಿತನವಂ ನೇಮಕ ಮಾಡಲಿಲ್ಲ (ಮಹಾವಂ. I, ೪೬). ೨. ದಳ ವಾಯಿತನವು ವಿಪತ್ಕರವು (ಸುಗುಗಂ. ೧೧-೨೦).

[ ದಳವಾಯ್ + – ತನ ]

**ದಳವಿಡು** (ಕ್ರಿ). ಚಿಗುರು ; ಅಂಕುರಿಸಂ ; ಮೊಳೆ : ಹೊಳೆವ ಹೊಂಜಳೆ ಮೆಯ್ಯ ಸೊಬಗಿಯ ಕಳಶಕುಚವರೆದೋಟಿ ಹೃದಯದಿ ದಳವಿಡುವ ಮೋಹದೊಳೆ ಯುವನೆವೆಹಳಚದೀಕ್ಷಿಸಿ ಹಿಗ್ಗುವಂತೆ (ಕೈಕವ. ೩-೫-೩).

[ ದಳ್$_{2}$ (= ದಲ) + ಇಡು$_{1}$ ]

**ದಳವುಳ** 'ದಟದಂಟ' ನೋ.

**ದಳವುಳಕಾಱ** 'ದಳದಂಳಕಾಱ' ನೋ.

**ದಳವುಳಿ** 'ದಟದಂಟ' ನೋ.

**ದಳವುಳಿಕಾಱ** 'ದಳದಂಳಕಾಱ' ನೋ.

**ದಳವುಳಿಗ** 'ದಳದಂಳಿಗ' ನೋ.

**ದಳವುಳಿಗೊಳ್** (ಕ್ರಿ). ಕಸಿ ; ದೋಚು ; ಸುಲಿಗೆಮಾಡು : ಅರೆಬರ ಧೃತಿಯಂ ನೆಱೆ ಕವರುತ ಮತ್ತರೆಬರ ಪೆಂಪಂ ದಳವುಳಿಗೊಳುತುಂ ಸ್ಮರ ಚಕ್ರೇಶನ ಸಲ್ಗೆಯ ಮದಮತ್ತಾಪ್ರಿಯತೆಯೆಯ್ದಿದಳು (ಜಯುಕಾ. ೫-೫೦). [ ದಳವುಳಿ (<ದಟದುಟ) + ಕೊಳ್$_1$ ]

**ದಳವುಳಿಸು** 'ದಳದುಳಿಸಂ' ನೋ.

**ದಳವೆತ್ತು** (ಕ್ರಿ). ದಂಡೆತ್ತು ; ದಂಡಂಸಹಿತವಾಗಿ ದಾಳಿಮಾಡಂ : ಅಲಂಬುಸ ಶ್ರುತಾಯುಗಳೂ ಸನ್ನದ್ಧರಾಗಿ . . . ಪಾಂಡವ ಬಲಗಳ ಮೇಲೆ ದಳವೆತ್ತಿ ಬಂದರು (ಕೃಪಾಂ. ೦೫೫). [ ದಳ$_2$ ( = ದಲ) + ಎತ್ತು$_1$ ]

**ದಳವೇರು** 'ದಳವೇಱು$_2$' ನೋ.

**ದಳವೇಱಿಸು** (ಕ್ರಿ). ಹೆಚ್ಚಿಸು ; ವೃದ್ಧಿಗೊಳಿಸು : ನನಗಣೆಯನರ್ಚಿಪಂತೆ ಚಂದ್ರಕಳೆಯಂ ದಳವೇಱಿಪಂತೆ ಪುಣ್ಯವಂ ಪುಟವಿಡುವಂತೆ . . . ಹರನ ಮನೋರಥಮಂ ಮದವೇಱಿಪಂತೆ ಪಾರ್ವತಿಗೆ ಸುವಾಸಿನಿಯರ್ ಸಿಂಗರವಂ ಮಾಡಿ (ಗಿರಿಳ. ೧೦-೪೫ ವ) ; ಇನಿಯರ ಕಂತುರಾಗರಸಮಂ ದಳವೇಱಿಸುವಂತೆ . . . ಕೆಂದಳಿರ ಪೊಂಪುಳಿ ಪಪ್ಪುಕಮಾಯ್ತಶೋಕೆಯೊಳ್ (ಅನಂಪು. ೬-೬೭). [ ದಳವೇಱು$_1$ + – ಇಸು$_3$ ]

**ದಳವೇಱು$_1$, ದಳವೇಂಱು** (ಕ್ರಿ). ೧. ದಟ್ಟವಾಗು ; ನಿಬಿಡವಾಗು ; ಸಾಂದ್ರವಾಗು : ಅಳಿಯ ಕಪ್ಪನು ನೀಲಮೇಘದಾಸತವನು . . . ಎಳೆದು ಕೊಂಡೊಡಗೂಡಿ ತುಳಿದು ಪಿಳಿದಬುಜಜಂ ಬೆಳಗು ಮುಳಿಂಗಲು ಬಳಿದನೋ ಬಯಲನೆಂದೆನಿಸಿ ದಳವೇಱಿತೊತ್ತರಿಸಿ ಮೋಡಗತ್ತಲೆ ಗಾಳಿ ಹನಿ ಮಿಂಚು ಮೊಳಗು ಸಹಿತ (ಸಿದ್ಧರಾ. ೬-೩೭) : ಪೊರೆ ಪೊರೆಯಾಗಿ ದಳವೇಱೆ ಬಹುಳತರ ಧವಳತೆಯನಾಂತ ಮುಗಿಲ ಮೊತ್ತಮೊತ್ತಲುಂ ಬಿತ್ತರಂಬಡೆಯೆ (ಚಾಧಪು. ೪-೩೭ ವ). ೨. ಹೆಚ್ಚಾಗು ; ವೃದ್ಧಿಹೊಂದು; ಏಳಿಗೆಯಾಗು : ಉತ್ಸವಕರಮೆನೆ ಬೆಳಪ ಶರತ್ಸಮಯದೊಳಿಂದುಕಾಂತಿ ದಳವೇಱುವಪೋಲ್ ವತ್ಸಳರೆನಿಸುವ ಬುಧರಿನಮತ್ಸರರಿಂ ಕೃತಿ ಕೃತಾರ್ಥಮಕ್ಕುಮಮೋಘಂ (ಜಗವಿ. ೧-೧೧) ; ದಳವೇಱಿದುತ್ಸವದ ಹೆಚ್ಚುಗೆಯ ಬೀಜವಂ ಬೆಳೆಸುವ್ಯಸಲ್ಕೆಯಿಂತಾದನಿನ್ನಾವಾಗಳೆಳಸಿ ಮೊಲೆಯುಂಬನೋ (ಸೋಮಚ. ೧-೭೫); ಹೊಸಪೊಲುಮೆ ದಳವೇಱೆ ಸಲೆ ಪಸರಿಸಿ ಮಹದ್ಗುರುವಿನ ಚರಣ ಸಾರಸಯುಗವನಾನಂದಜಲದಿಂ ತೊಳೆದು (ಬಸಪು. ೪-೫೯) : ಬೇಗುದಿಯ ದುಮ್ಮಾನ ದಳವೇಱಿದುದು ಹೇಱಿತು ಭೀತಿ ಭೂಪತಿಗೆ (ಕುಮ್ಮಾಗ. ೦-೬೨). **ದಳಮೇಱು** : ೨. ನೆಱೆಯ ನೆಗರ್ತೆ ವೆತ್ತುದು ನಿಯೋಗಮಗುಂದಲೆಯಾಯ್ತು ತೇಜಮಬ್ಬೆಱಿದುದು ವಿಕ್ರಚಿಚ್ಚತಿಕೆ . . . ದಳಮೇಱಿದುದಕ್ಕರಂ ಪಗಣ್ಣೆಱಿದುದು ಪೌರುಷಂ ಸಫಳಮಾದುದು ಮಾನ್ಯತೆ ಮಾದಿರಾಜನೊಳ್ (ಸೌಇಇ. XI-11, ೦೪೭-೩೭ ; 1099). [ ದಳ$_1$ + ಏಱು$_1$ (<ಏಱ್$_1$) ]

**ದಳವೇಱು$_2$, ದಳವೇರಂ** (ಕ್ರಿ). ೧. ಅರಳು; ವಿಕಾಸಗೊಳ್ಳು; ವಿಕಸಿಸಂ : ವನಜಂಗಳ್ ದಳವೇಱೆ ಚೂತಲತೆಗಳ್ ನೀರೇಱೆ . . . ಬಂದುದು ವಸಂತಂ (ಧರ್ಮಾಮೃ. ೦೩-೧೦) ; ಅಳಿಯೆಱಗೆದನಿಲನಲುಗದ ರವಿಕರಂ ಪುಗದ ಸುಳಿಗೊಂಡು ದಳವೇಱಿ ಹಸುರಳಿದು ಬೆಳುಪುಳಿದ ಸುರುಚಿರ ಮೆನಿಪ್ಪ ಮಿಾಸಲ ಮೊಗ್ಗೆಯಂ ಕೊಂಡು (ಬಸರ. ೩-೨೦). ೨. ಕಾಂತಿ ಹೊಂದಂ: ಮುಗುಳ ಮಾಲೆ ಸುಯ್ಯನಱುಗಂಪಿನೋಳ್ಮರ್ಡಿ ಗಮ್ಮನಾಗೆ ಸೆಳ್ಳುಗುರ್ವೆಳಗಿಂದರಲ್ಗಳ ದಳಂ ದಳವೇಱೆ ಮದಾಳಿ ಮೆಲ್ಲಮೆಲ್ಲಗೆ ಸುತಿಗೂಡೆ ಕಂಕಣದ ನುಣ್ಬರದೊಳ್ . . . ಅಲರ್ಗಟ್ಟುವುದಂಗನಾಜನಂ (ವರ್ಧಪು. ೧-೩೪) ; ಬಾಗುತೆ ಬಲಿಯುತೆ ಪೊಳೆದಿನಿದಾಗುತೆ ದಳವೇಱು ತಿಡಿದಿಡಿದು ಹಿಗ್ಗುತೆ ಪಣ್ಣಾ [ಪಾಠಾಂ. ದಳಮೇಱೆ ಹಿಗ್ಗುತ್ತವೆ ಹೂದಾ ] ಗುತೆ ಕಾಯ್ಗಳ್ ಪೊಱಮಡೆ ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ (ಗಿರಿಳ. ೨-೫೦). ೩. ಉಬ್ಬು ; ಹಿಗ್ಗು ; ಸಂತಸಗೊಳ್ಳು ; ಉತ್ಸಾಹಗೊಳ್ಳು : ಮಾಂಗೊನರಂ ನಸುಗರ್ಚಿ ಸೊರ್ಕಿನಿಂ ತನು ದಳವೇಱೆ ಕಂಠವಿವರಂ ತೊವರೇಱೆ ಪಟುತ್ವವೇಱೆ ಕಾಮನ ನನೆಯಂಬುಗಳ್ ವಿರದಿಂವ್ಯಂದದ ಮೆಲ್ನುಡಿಯಂ ಪುಗಲ್ . . . ಪುಗಲ್ಪುಗಲೆಂದುದು ಕೋಕಿಲವ್ರಜಂ (ಜಗವಿ. ೧೪-೩೮) ; ಪುಟಮೆದ್ದು ಹೊಂಗುತಂ ದಳವೇಱಿ ಹಿಗ್ಗುತಂ ನಟ್ಟಿರ್ಪ ನೋಟದಿಂದೋಚೆಯಂ ಮಾಱುತಂ (ಲಸರ. ೩-೧೦೩) ; ತಲೆದಡವಿ ತರ್ಕವಿಸಿ . . . ಅಂಜದಿರೆಂದೆನ್ನೊಳು ನುಡಿಯೆ ಹಬ್ಬಿ ಹಸರಿಸಿ ದಳವೇಱುವೆನಾಂ (ಶಂಕಶಂ. ೭೧); ಇನಿಯಳ ಗರ್ಭದಂದವಂ ನೋಡಲ್ಬಿತ್ತಂ ದಳವೇಱುತ್ತಿರೆ ಬಂದಂದೊಳಪೊಕ್ಕಂ ತದೀಯ ಮಣಿಮಯ ಗೃಹವಂ (ಧಾಜಚೇ. ೪-೪೪). **ದಳವೇರು** : ೨. ನನ್ನ ವಿದುಳು ದಳವೇರಿ ದಳ್ಳಿಸಿತು ಸ್ವರ್ಣದೀಪ್ತಿ ಇಳಿಯ ಮನದ ಕರಿನೆರೆಯ ಹುಳುಗಳೆಲ್ಲ ಹೊತ್ತೇರಿ ನಿದ್ದೆ ತಿಳಿಯ (ಅರಳು. ೧೯೧-೦). ೪. ಚಿಗುರು; ಎಲೆಬಿಡಂ ; ಪಲ್ಲವಿಸಂ : ಬಿದುರು ಸಹ ಹೂ ಬಿಡುವುದುಂಟು. ಆದರೆ ಯಾವಾಗ ಅದು ದಳವೇರಿ ಹೂ ಬಿಟ್ಟೀತು ಇದರ ನಿಯಮವಿಲ್ಲ (ಇಪ್ಪಳ. ೨೮೦). [ ದಳ$_2$ ( = ದಲ) + ಏಱು$_1$ (<ಏಱ್$_1$) ]

**ದಳಸಂಘಾತ** (ನಾ). ಪಡೆಯ ಒಡ್ಡು ; ಸೇನಾಜಾಲ : ಈತನೊಡ್ಡಿನ ಸಾರೆ ಸಂಗರಕಾತುಕೊಂಡದೆ ಕೃಪನ ದಳಸಂಘಾತವೊಂದಕ್ಷೋಹಿಣಿ ಸುಭಟರ ಸಾಲ ಮಧ್ಯದಲಿ (ಕುವ್ಯಾಭೀ. ೩-೦೨). [ದಳ$_2$ ( = ದಲ) + ಸಂಘಾತ ]

**ದಳಸರ**(ನಾ). ೧. ದಟ್ಟಣೆ; ಸಾಂದ್ರತೆ; ಹುಲುಸು: ಪೈರು ದಳಸರವಾಗಿ ಬೆಳೆಯಿತು (ರೂಢಿ). ೨. ಗಟ್ಟಿಮುಟ್ಟಾಗಿರುವಿಕೆ ; ದೇಹದಾರ್ಢ್ಯ : (ಸ್ಥಾಂಡರ್). ೩. ದರ್ಪ : ಅರಸನು ದಳಸರದಿಂದ ಆಳಿದನು (ರೂಢಿ). [ ದಳ$_1$ + – ಸರ$_7$./ತುಳು. ತೆಲು. ದಳಸರಿ ]

**ದಳಸು, ದಡಸು** (ನಾ). ೧. ಮಂದವಾದುದು ; ಗಟ್ಟಿಯಾದುದು; ೨. ದಟ್ಟವಾದದು ; ಒತ್ತಾದುದು : "ದಡಸಂ, ಸಾಂದ್ರ, ಒತ್ತು" (ಪ್ರಭಬ್ಬ). ರಾಗಿ ದಳಸಾಗಿ ಬೆಳೆದಿದೆ (ರೂಢಿ). ೩. ಗಟ್ಟಿಮುಟ್ಟಾಗಿರುವಿಕೆ; ದೃಢತೆ : (ಸ್ಥಾಂಡರ್). **ದಡಸು** : ೧. ಚಿನ್ನವು ವ್ಯವಹಾರದಲ್ಲಿ ಎಲ್ಲಕ್ಕೂ ಹೆಚ್ಚು ದಡಸಾದ ಪದಾರ್ಥವಿರುತ್ತದೆ (ಮುಂಬಯಿ. ೫-೩೪) ; ಇದು ವರ್ಣವೂ ಗಂಧವೂ ಇಲ್ಲದ್ದಾಗಿ ಎಣ್ಣೆಯಂತೆ ಸ್ವಲ್ಪ ದಡಸಾಗಿರುವುದು (ಮುಂಬಯಿ. ೬-೩೫). [ ದಳ$_1$ + – ಸು$_2$ ]

**ದಳಾದುಳಿ** 'ದಟದುಟ' ನೋ.

**ದಳಿ$_1$** 'ತಳಿ$_3$' ನೋ.

**ದಳಿ$_2$** (ನಾ). ೧. ಎಲೆ ; ಪತ್ರ : "ದಳಿ = ಪತ್ರಂ" (ಶಮದ. ಶಿರಿ. ೨). ೨. (ಕರಾ) ತಡಿಕೆ ; ಮರದ ಸಲಕೆಗಳಿಂದ ಎಡೆ ಬಿಟ್ಟು ಮಾಡಿದ ಗೋಡೆ; ತಟ್ಟಿಗೋಡೆ: ಇದರ ಆಚಿನ ಚಾವಡಿ, ಅಡುಗೆಯ ಮನೆಗಳು, ನೀಲವಾದ ಲಾಯಗಳು. ಅವಕ್ಕೆ ಎದುರಿನ ದಳಿಯಿಂದ ಒಳಗಡೆ ಬೆಳಕು ಬರುತ್ತದೆ (ನಂಬಿನಾ. ೪). 'ತಟಿ$_3$', 'ದಳಿಕೋಣೆ' ಪರಾ. [ ದೇ.೫ ತಮಿ. ತಟ್ಟಿ; ಮಲ. ತಟ; ತುಳು. ದಳಿ./ಸಂ. ದಲ ]

**ದಳಿಂಬ, ದಣಬ, ದಣೆಂಬ, ದಣೆಬ, ದಣೆಬು, ದಣುಬ, ದಳಿವ** (ನಾ). ೧. ಶುಭ್ರವಾದ ಬಟ್ಟೆ ; ದುಕೂಲ ; ಮಡಿ : ವಿವಾಹಮಂಟಪದ ನಡುವಣ ಮಣಿಮಯ ವೇದಿಕೆಯ ಹಾಟಕಪೀಠದ ಮೇಲೆ ಹಾಸಿದ ದುಗುಲದ ದಳಿಂಬದೊಳಿರಿಸಿದಾಗಳ್. (ಆದಿಪು. ೪-೪೭ ವ); ತೀರ್ಥಜಲಂಗಳಂ

ವಿಂದು ದಳಿಂಬವನುಟ್ಟು ಮುತ್ತಿನ ತೊಡಿಗೆಗಳಂ ತೊಟ್ಟು ದರ್ಭಶಯನದೊಳಿರ್ದು (ಶಂಪಥಾ. ೧-೧೧೪ ವ) ; ವಧೂಕಾಂತರಿರ್ವರುವಂ ವಿವಾಹವೇದಿಕಾಮಧ್ಯದೊಳ್ ದ ಳಿ ಂ ಬ ದಿ ಂ ಪಚ್ಚವಡಿಸಿದ ಪಳಿಕಿನ ಪಟ್ಟವಣೆಯೊಳಿರಿಸಿ (ಚಂದ್ರಪ್ರ. ೬-೭೦ ವ) ; ವರದಂ ಕೊಟಂ ಕಲಸಿ ಪಲವುಂ ಬಾಡ್ಗುವೆರಸಿ ಕೊಟನೊಂದು ದಳಿಂಬದ ಕಪ್ಪಟದೊಳ್ ಕಟ್ಟಿ ಕೊಟ್ಟಡೆ (ಜಂಹರಿ. ೧೪-೩೦ ವ) ; ಪಾಸಿದ ದಳಿಂಬಮುಂಗುರ್ಗಳ ಕೇಸಡಿಗಳ ಚರಣಭೂಷಣಗಳ ರುಚಿಯಿಂ ಬಾಸಣಿಸಿ ಚಿತ್ರಪಟಮಂ ಪಾಸಿದವೊಲಿರೆ (ಅನಂಪು. ೬-೫೪) ; ತಿಲಿನಗೆಯ ಮಣಿವಾರಿಯೊಳ್ ವಿಂದಳಂಟ್ಟಳು ಮುಡಿ ಮುಳುಗೆ ಬಿಳಿ ದಳಿಂಬವುಂ ಮಡಿಗೆ ನೂರ್ಮಡಿ ಮೆರೆಯೆ ಕಡುನೋಂಪಿ (ಶ್ರೀರಾಮಾ. ೮೬೧-೫೯೩). ೨. ಹಾಸಿಗೆ ; ಶಯ್ಯೆ : ಗಂಧರ್ವಕನ್ಯಾಕರಗ್ರಹಣಪೂರ್ವಕಂ ಬಂದಾಕೆವೆರಸು ದಳಿಂಬದೊಳ್ಪೊಳ್ದಿರ್ದು (ಕಾದಂಬ. ೩೨೦) ; ಅವನಿಪಾಲಕನಲರ್ಗಳ ತಲೆಗಿಂಬಿನೀಂದಮಲರ ಮಲಂಗಿಂದಲರ ದಳಿಂಬದಿನಿಂಬಾದಲರ್ವಾಸಿನ ಮೇಲೆ ಲೀಲೆಯಿಂ ಪಳ್ಪಿರ್ದಂ (ಪಾರ್ಶ್ವಪು. ೯-೩೦). ದಣಬ : ೧. ಬಂದ ಸುಕುಮಾರಕರುವೆರಸವ ವಿ ಂ ದು ದಣಬವನುಟ್ಟು (ಪಕುಥಾ. ೬-೬). ದಣಂಬ : ೧. ತೊಳಗುವ ದಣಂಬಂಗಳಂ ಮೇಲೆ ವಿಂಗೆ ಹಾಸಿ ಅಳಿಗಳಟಸುವ ಸುಪ್ರಸವಕುಲಮುಮಂ ಹಾಸಿ (ವಾಹೂರ. ಹ. ೩೨೩-೧೨) ; ಮೊಳೆವ ಪುಳಕಂಗಳಾಭರಣವಂ ತೊಟ್ಟು ಸಂತಸದಣಂಬವನುಟ್ಟು (ಸಿದ್ಧರಾ. ೩-೪೦). ೩. ಮಡಿ ಯಾ ದ ಸೀರೆ ; ಶುಭ್ರವಾದ ಸೀರೆ : ಚಾತುರ್ಥಿಕಾಸ್ನಾನವಂ ಮಾಡುತಂ ದಣಂಬವನುಟ್ಟಳು (ಚೀರಮು. ೩-೮) ; ಪರಿಮಳೋದಕದಿಂ ಜಳಕಂಬೆ ಏಕ್ಕು ದಣಂಬಮನುಟ್ಟು . . . ಸಡಗರದಿನೇಳ್ತಂದು ಶಿವಾಲಯಮಂ ಪೊಕ್ಕು (ವೃಷವಿ. ೯-೭೦ ವ). ದಣಿಬ : ೧. ಧೋತ್ರದ ದಣಿಬವನು ನಿಱಿವಿಡಿದು ಮಹಳದ ಮನೆಯ ಚೌಕದಲಿ ಮಣೆಗೆ ಮಂಡಿಸಿ ಕಳ್ಳಿತುಂಬೌತಣದ ವಿದ್ಯವ ಬಲ್ಲಿರಲ್ಲದೆ ರಣವಿಚಾರದ ವಿದ್ಯೆ ನಿಮಗೇಕೆ (ಕುವ್ಯಾವಿ. ೭-೦೨) ; ಸುಲಿದು ಪಲ್ಗಳ ವಿಂದು ದಣಿಬದ ಸೀರೆಯನೊಲಿದುಟ್ಟು . . . ಅರ್ಚಿಸಿದಳು (ಕುರಾಸಾಂ. ೨೩-೧) ; ಉರೆ ಸಚೇಲಸ್ನಾನವಂ ಮಾಡಿ ದಣಿಬವನು ಧರಿಸಿ (ಮಹಾಂಶೀ. ೧೩-೧೫). ೨. ಪಾಸಿದ ವಣಿಬದೊಳಿಲ್ಲರು ಪಲ್ಯಂಕಾಸನದೊಳ ಗೊಲ್ದು ಕುಳಿತು ... ಭಾಸುರ ಸ್ತುತಿಯ ಮಾಡಿದರು (ಭರಚ. ೦೪-೮೩) ; ದುಗುಲ ಪಾಸಿದ ದಣಿಬದ ಮೇಲೆ ಮುದದಿಂ ಸುಗುಣದಂಪತಿಗಳೀರ್ವರನು ಅಗಣಿತಹರುಷದಿ ನಡುಸಿದರು (ಅನಂಚ. ೭-೧೧೪). ೩. ಕೊಡಗೂಸುವಾಗಳೆ ದಂತಧಾವನಗೆಯ್ದು ಮಿಂದೊಲವಾಂತು ದಣಿಬವನುಟ್ಟು ಭೂಷಿತವನಿಟ್ಟು ಭಾಳದಲಿ (ಬಸವು. ೧೪-೩). ದಣಿಬು : ೧. ಉಟ್ಟ ದಣಿಬು ಸುಲಿ ಪಲ್ಪಿಟ್ಟ ನಿಡುಜಡೆ ಇಟ್ಟ ವಿಭೂತಿಯ ಬೊಟ್ಟು ಕಟ್ಟಿದ ಬಹುರಕ್ಷೆ ಹೊಸ ಮೊಂಜುರಿಗೆಯ ಕಟ್ಟಾಳು ಕಣ್ಗೆ ರಾಜಿಸಿದ (ಶ್ರೀಪಾಂಂ. ೮-೩೮). ದಣುಬ : ೧. ಆ ರಾಜಭವನದೊಳೊದಱುವ ಪರಿಚಾರಕಿಯರ್ ಕೆದಱುವ ಪೂವಲಿಗಳ್ . . . ಪಾಸುವ ದಣುಬಂಗಳಪ್ಪುಸುವ ನೀರಾಜನಂಗಳ್ (ನಾಗಕು. ೩-೬೦ ವ). ದಳಿವ : ೧. ತೊಟ್ಟಿಕ್ಕವಡಂ ಮರವಿಲ್ ಕಟ್ಟಿದ ವಣೆಕಟ್ಟು ಬೇಂಟೆವಱ ದೊರೆಯೊಳೊಡಂಬಟ್ಟಸಿಯ ಸುರಗಿ ದಳಿವದ ತೊಟ್ಟಂಗಿಗೆ ತ ನ್ನೊ ಳ ಮ ರೆ ಬೇಂಟೆಯನೊರ್ವಂ ಬಂದು (ಶಂಪಥಾ. ೩-೩೬) ; "ಮೇಲುಹೊದಿಕೆ" (ಶಂಪದೀ. ೦೯೩).

[ ?₂/ತುಳು. ದಳಿಯ = ಮೈಲಿಗೆ ಕಳೆಯುವುದು, ಮಡಿಮಾಡುವುದು ; ತೆಲು. ದಡಿವ, ದಡಿಬ, ದಡಿಮ. ದಲಿವು = ಉತ್ತರೀಯ, ದುಪ್ಪಟಿ./ಪ್ರಾ. ತಲಿಮ./ಸಂ. ತಲಿಮ ]

**ದಳಿಕೋಣೆ** (ನಾ). ಒಂದು ಪಾರ್ಶ್ವದಲ್ಲಿ ಗೋಡೆಯ ಬದಲು ಮರದ ಕಟಕಟೆ ಅಥವಾ ಕಟಾಂಜನವಿರುವ ಕೋಣೆ : (ಕಿಸಂಗ್ಯಾ. ೮೧).

[ ದಳಿ₂ + ಕೋಣೆ₂ (<ಕೋಣ್) ]

**ದಳಿಗವಟಿಗೆ** (ನಾ). ಒಂದು ನಾಡಿನ ಹೆಸರು : ಸ್ವಸ್ತಿಶ್ರೀ ಕನ್ನರ ಬಲ್ಲಹ ದಳಿಗವಟಿಗೆಯನಾಳೆ ಮರಗಲ್ಲಗಾಮುಣ್ಡನ ಮಗ ದವೋದೆಱ ಮಣ್ಣು ಲೋರವಿಾಕೆಗಾಳೊಳ್ಕಾದಿ ಪುಳಗಣ್ಗೊಳು ಸತ್ತು ಸಗ್ಗಿಯಾದಂ (ಎಇ. X (8), ಮುಳಪ. ೧೮೭-೩ ; ಸು. ೩೭೦). 'ದಡಿಗವಟಿ' 'ದಟಿಗವಾಡಿ' ಪರಾ. [ ? ]

**ದಳಿಗೆ₁, ದಳಗೆ** (ನಾ). ೧. ಹೊಲಿಗೆ : ಅಂಗಿಗೆ ಒಂದು ದಳಿಗೆ ಹಾಕಿಸಿಕೊಂಡು ಬಾ (ಬೂಬ). ದಳಗೆ : ೨. ಜೋಡಿಸಿ ಹೊಲಿದುದು ; ಹೊಲಿಗೆಯ ರೇಖೆ : (ಕ). [ < ದಳ್₁ ]

**ದಳಿಗೆ₂** (ನಾ). ಒಂದು ಬಗೆಯ ಪಾತ್ರೆ : ಧೂಪ – ಒಂದಲಗನಸೊಪ್ಪು, ಗಾಂಧಾರಿಸೊಪ್ಪು . . . ಅಡಿನ ಹಿಕ್ಕೆ ಇವುಗಳನ್ನೆಲ್ಲಾ ದಳಿಗೆಯಲ್ಲಿ ಹಾಕಿ . . . ಕುದಿ ಬರುವ ಹಾಗೆ ಕಾಯಿಸಿ ಆ ಹೊಗೆಯಿಂದುಬ್ಬೆಯ ಕಾಯಿಸಲು ವಾತಜ್ವರಂ ತೀರ್ಗುಂ (ಸಕವ್ರ. ೬೯). 'ಅಳಗೆ₁', 'ಅಳಿಗೆ' ಪರಾ.

**ದಳಿತ** 'ದಲಿತ' ನೋ.

**ದಳಿತಜನ** 'ದಲಿತಜನ' ನೋ.

**ದಳಿತಮರ್ಯಾದ** (ನಾ). ಮರ್ಯಾದೆ ಇಲ್ಲದವನು; ನೀತಿಯಿಲ್ಲದವನು; ಮಾನಗೇಡಿ: ಖಳನ ಧೂರ್ತನ ನಾಸ್ತಿಕನ ಚಂಚಳನ ಪರನಿಕ್ಷೇಪಹಾರಿಯ ದಳಿತಮರ್ಯಾದನ ಕೃತಘ್ನನ ಭರ್ತೃನಿಂದಕನ . . . ವಿಕಳವೃತ್ತನ ಲೋಕಾವಳಿಗಳಾಗಲಿ ಕೊಲ್ಲದಿದ್ದರೆ ನಾಳೆ ಸೈಂಧವನ (ಕುವ್ಯಾದ್ರೋ. ೮-೩೮).

[ ಸಂ. ದಲಿತಮರ್ಯಾದ (ದಲಿತ + ಮರ್ಯಾದಾ + –) ]

**ದಳಿತಮಾರ** (ನಾ). ಕಾಮನನ್ನು ನಾಶಮಾಡಿದವನು ; ಮನ್ಮಥನನ್ನು ಗೆದ್ದವನು : ಜಯ ಜಿನೇಂದ್ರ ನತಸುರೇಂದ್ರ ದುರಿತದೂರ ದಳಿತಮಾರ (ಅಜಿಪು. ೭-೦೫ ರಗಳೆ). [ ಸಂ. ದಲಿತಮಾರ ]

**ದಳಿತಾಂಬುಜ** 'ದಲಿತಾಂಬುಜ' ನೋ.

**ದಳಿತಾಂಬುಜನೇತ್ರೆ** 'ದಲಿತಾಂಬುಜನೇತ್ರೆ' ನೋ.

**ದಳಿತಾಬ್ಜ** (ನಾ). ೧. ಅರಳಿದ ತಾವರೆ,-ಕಮಲ : ದಳಿತಾಬ್ಜಪ್ರಸರಂ ಸರಂ ಕುಸುಮಮಮಾಲಾರಾಮಮಾರಾಮಂ (ಜಗವಿ. ೨-೨). ೨. ಅರಳಿದ ಕಮಲಗಳನ್ನುಳ್ಳುದು ; ಬಿರಿದ ತಾವರೆಯಿಂದ ಕೂಡಿದುದು. ೧,೨: ಕೊಳಗಳ್ ದಳಿತಾಬ್ಜಂಗಳ್ ದಳಿತಾಬ್ಜಂಗಳ್ ಸಮೃದ್ಧಮಧುಗಳ್ . . . ಬನದೊಳ್ (ಕಾವ್ಯಾವ. ೬.೨೩). [ ದಳಿತ (= ದಲಿತ) + ಅಬ್ಜ ]

**ದಳಿತೇಂದೀವರ** (ನಾ). ಅರಳಿದ ಕನ್ನೈದಿಲೆ : ಒಂದಿನಿತು ಧೈರ್ಯಮಂ ದಳಿತೇಂದೀವರನಯನೆ ತಾಳ್ದು (ಚಂದ್ರಪ್ರ. ೮-೯).

[ ದಳಿತ (= ದಲಿತ) + ಇಂದೀವರ ]

**ದಳಿತೇಕ್ಷಣೆ** (ನಾ). ತೆರೆದ ಕಣ್ಣವಳು ; ಬಿಡುಗಣ್ಣವಳು : ಬಿಮತರ್ಪದು ತನುಶಶಿಮಣಿಶಲಾಕೆ ದಳಿತೇಕ್ಷಣೆಯಾ (ಲೀಲಾವ. ೭-೯೦).

[ ಸಂ. ದಲಿತೇಕ್ಷಣಾ (ದಲಿತ + ಈಕ್ಷಣ + – ) ]

**ದಳಿಯಿಸು** 'ದಳಿಸು₂' ನೋ.

**ದಳಿವ** 'ದಳಿಂಬ' ನೋ.

**ದಳಿವಿಡಿ** (ಕ್ರಿ). "ಕೂಡಿಸು, ತೆತ್ತಿಸು,ಹತ್ತಿಸು, ಕಟ್ಟಿಸು" (ಅದಿಪು. ಕೋಶ) : ಹಾರಾದ್ಯಾಭರಣಂಗಳಿನಾ ರೂಪಾಶ್ಚರ್ಯವಾಗೆ ಮಾಣಿಕಚಟ್ಟಂ ನೀರಂಜಿಸಿ ದಳಿವಿಡಿದ ಮಹಾರತ್ನದ ದೊರೆಗೆವಂದುದಾ ಸ್ತ್ರೀರತ್ನಂ (ಆದಿಪು. ೪-೪೨). [ ದಳಿ₀ (<ದಳಿ₁) + ಪಿಡಿ₁ ]

**ದಳಿಸು₁** (ಕ್ರಿ). ಅರಳು ; ದಳ ಬಿಡು : ಇಂದು ಕೆಂದಾವರೆಯ ದಳ ದಳಿಸಿ ದಾರಿಯಲಿ ಗಂಧದೌತಣ ಹೋಗಿ ಬರುವ ಜನಕೆ (ನಡಬಂ. ೨೦-೦).

[ ದಳ₃ (= ದಲ) + – ಇಸು₃ ]

**ದಳಿಸು₂, ದಳಿಯಿಸು** (ಕ್ರಿ). ೧. ನಾಶಮಾಡು; ಹಾಳುಮಾಡು : ಎನ್ನಂ ದಹಿಸಿ ದ ಳಿ ಸು ವ ದವಾಗ್ನಿಗೆಯುನ್ನತಿಕೆಯು ಸತ್ತ್ವಮನಿರದೊದವಿಪ

. . . ಗಾಳಿ ಎಸ್ನೊಳೆ ಪುಗೆ ಕೀಡೆನಗಿರದವ್ವುದು (ಜಯಕಾ. ೧೫-೨೭).

**ದಳಯಿಸು** : ೨. ಸೀಳಲ್ ; ಬಗಿ: ಅಸುಹೃತ್ಕರಿಯಂ ಹಲಿ ದಳಯಿಸು ವಂದುಚ್ಚಳಿಸಿ ಪುದಿದ ನೆತ್ತರ ಕೆಂಪಾಗಸದೊಳ್ ತೋಱುವುದಿನ್ನುಂ ಕಿಸು ಸಂಜೆಯ ನೆವದೆ ದಿವದ ರಾತ್ರಿಯ ಪುಗಿಲೊಳ್ (ಜಗವಿ. ೮-೪೪).

[ ದಳನ ( = ದಲನ) + – ಇಸು$_3$ ]

**ದಳೆ$_1$** (ಕ್ರಿ). ೧. (ಮರದಲ್ಲಿ ಎಲೆ, ಹೂವು, ಹಣ್ಣು ಮೊದಲಾದುವು) ಒತ್ತಾಗಿ ಬೆಳೆ; ದಟ್ಟವಾಗಿ ಬೆಳೆ; ವಿಪುಲವಾಗು: ಮುಗಿಲ್ಗಳತಿ . . . ಪೆರ್ವುಗಳೆಯನು ಸೂಸದು ದಳೆದ ಪೂ ತಳಿರ್ಗಳಿಂಪಿನ ಸೊಂಪು ಮಾಸದು ತರುಗಳಲ್ಲಿ ಪಣ್ಣಾಯ್ಗಳಂ ಬೀಯಲೀಸದು ಸಮಸ್ತ ಋತುಸಮಯಂ ಗಳಚಲೇಂದ್ರತನುಜೆ ತಪಮಿರೆ ಬನದೊಳು (ಪ್ರಮಿಥಾ. ೦೬-೦೭). ೨. ಹೊಲಿಗೆ ಹಾಕು ; ಹೊಲಿ : ಸಕಲ ಶರೀರದಂಗಿಯು ಪೊಲಿದುವಾಯುಃ ಕರ್ಮದೆಳೆಗಳನು ಸೇರಿಸಿಯೆ ದಳೆದಂಬರವನು ವಿಸ್ತಾರದಾಕಾಶವನು ಮಿಗೆ ಗೂಡಾರವಂ ಪೊಲಿದೆತ್ತಿದಂ ಕನಕಾದ್ರಿಕಂಬದೊಳು (ಕಂಕದಾ. ೪-೬೨). ೩. (ವ್ಯೆ ಮೇಲೆ ಸಿಡುಬು ಮುಂತಾದುವು) ಸಂರಿ : 'ತಳೆ$_1$' ಪರಾ. [ ದೇ.॥ ತಮಿ. ತಳ್ಳೆ, ತಟ್ಟೆ; ತುಲ.ತಟ್ ]

**ದಳೆ$_2$** 'ತಳೆ$_3$' ನೋ.

**ದಳೆ$_3$** (ನಾ). ೧. ಎರಡು ಬಟ್ಟೆಗಳ ಅಂಚುಗಳನ್ನು ಜೋಡಿಸಿ ಹೊಲಿದ ರೇಖೆ ; ಕೂಡು ಹೊಲಿಗೆಯ ರೇಖೆ : (ಕ). ೨. ಗದ್ದೆಯ ಹಾಳೆ ; ಕಾಲುವೆ ದಂಡೆಯ ಗದ್ದೆ ಖ ೧ಕ್ಕೆ ದಳೆವೈನ ಮೊದಲ ದಳೆ ೧ಕ್ಕೆ ಸೀಳು ೩ಕ್ಕೆ ಖಣ್ಗೆ ಸೀಳು ೩ಕ್ಕೆ ಖ ಣ್ಗೆ ಮೂರನೆ ದಳೆ ಸೀಳು ೨ಕ್ಕೆ ಖಣ್ಗೆ ನಾಲ್ಕನೆ ದಳೆ ಸೀಳು ೨ಕ್ಕೆ ಖ ೧೦ ಅಂತೂ ಸೀಳು ೧೦ಕ್ಕೆ ದಳೆ ಳಕಖ ೧೦ (ಎಕ. XVI, ಚಿಕ್ಕನಾ. ೫೬-೦೬ ; 1639).

[ ದೇ.॥ ತಮಿ. ತಳ್ಳೆ ]

**ದಳೆಕಟ್ಟು** (ಕ್ರಿ). (ಹಾಲು ಕರೆಯುವಾಗ) ಹಸು ಮೊದಲಾದುವುಗಳ ಕಾಲಿಗೆ ಹಗ್ಗವನ್ನು ಕಟ್ಟು : (ಶ್ಯಾಂಡರ್).

[ ದಳೆ$_3$ (< ತಳೆ$_3$) + ಕಟ್ಟು$_{I1}$ ]

**ದಳೆಯಿಕ್ಕಿಸು** (ಕ್ರಿ). ದನದ ಕಾಲುಗಳಿಗೆ ಹಗ್ಗವನ್ನು ಕಟ್ಟಿಸು : ಕಱಿವ ಕಟ್ಟುವ ಲಾಲಿಸುವ ಮೈದುಱಿಸಿ ದಳೆಯಿಕ್ಕಿಸುವ ಕಱುಗಳ ಕರೆಕರೆದು ಮುಂಡಾಡಿ ತಟ್ಟುವ . . . ಲೀಲೆಯಲಿ ಹರಿಯಿರೆ ಕಂದನಕ್ರೂರ (ಅಕ್ರೂಚ. ೨-೩೨). [ ದಳೆಯಿಕ್ಕು (<ತಳೆಯಿಕ್ಕು) + – ಇಸು$_3$ ]

**ದಳೆಯಿಕ್ಕು** 'ತಳೆಯಿಕ್ಕು' ನೋ.

**ದಳೆಹಾಕು** (ಕ್ರಿ). = ದಳೆಕಟ್ಟು : ಈ ಹಸುವಿಗೆ ದಳೆಹಾಕದಿದ್ದರೆ ಹಾಲು ಕರೆಯಲು ಆಗುವುದಿಲ್ಲ. (ದೂ೨).

[ ದಳೆ$_3$ (<ತಳೆ$_3$) + ಹಾಕು (< ಪಾಯ್ಕು$_1$) ]

**ದಳ್ಡಳಿ** 'ದಟ್ಟಡಿ' ನೋ.

**ದಳ್ಡಳಿಸು** 'ದಳದಳಿಸು' ನೋ.

**ದಳ್ಳಾಳ** 'ದಲ್ಲಾಳ' ನೋ.

**ದಳ್ಳಾಳತನ, ದಳ್ಳಾಳ್ತನ** (ನಾ). ೧. ಮಧ್ಯಸ್ಥನಾಗಿರುವಿಕೆ : ನಮ್ಮೂರಿನಲ್ಲಿ ಮೂರು ಅಂತಸ್ತಿನ ಜನರಿದ್ದರೆಂದು ಧಾರಾಳವಾಗಿ ಹೇಳಬಹುದು. ಒಂದು ಯಜಮಾನಿಕೆ, ಎರಡನೇದು ಆಳುತನ, ಮೂರನೇದು ಇವರಿಬ್ಬರ ದಳ್ಳಾಳತನ (ಹುಟ್ಟಿಹ. ೬೬). ದಳ್ಳಾಳ್ತನ : ೨. ದಲ್ಲಾಳಿಯ ವೃತ್ತಿ ; ಇನ್ನೊಬ್ಬರ ಮಾಲಿಗೆ ಗಿರಾಕಿಯನ್ನು ಹೊಂದಿಸಿಕೊಡುವ ಕೆಲಸ : ನಗರದೊಳಗಿನ ವ್ಯಾಪಾರ ಮಾತ್ರವಲ್ಲ, ಹೊರನಾಡುಗಳ ವ್ಯಾಪಾರೀ ದಳ್ಳಾಳ್ತನವೂ ಅವರಿಗಿತ್ತು (ಕಾಲುಬೂ. ೬೩).

[ ದಳ್ಳಾಳ (< ದಲ್ಲಾಳ) + – ತನ ]

**ದಳ್ಳಾಳಿ** 'ದಲ್ಲಾಳಿ' ನೋ.

**ದಳ್ಳಾಳಿತನ** 'ದಲ್ಲಾಳಿತನ$_1$' ನೋ.

**ದಳ್ಳಾಳ್ತನ** 'ದಳ್ಳಾಳತನ' ನೋ.

**ದಳ್ಳಿಸು** (ಕ್ರಿ). ೧. ಉರಿಯೇಳು ; ಭಂಗಿಲಿಡು ; ಪ್ರಜ್ವಲಿಸು ; ಧಗಧಗಿಸು : ನಿಶಾಚರಬಲಮಜಿಮಜಿಗಾದ ಕಾಡನಳುರ್ವ ಬೇಗೆಯ ದಳ್ಳುರಿಯಂತೆ ದಳ್ಳಿಸಿ ಕೊಳ್ಳೆಂದರಾತಿಬಲಮನಳುರೆ . . . ಬಂದು ತಾಗಿದಾಗಳ್ (ಪಂಪಭಾ. ೧೨-೭ ವ) ; ಅದ್ಭುತನಟನಟಿಲಾಲೋಲಕೀಲಾಕ್ಷಿಪೋಲ್ ದಳ್ಳಿಸೆ ಕೋಪಾರಕ್ತನೇತ್ರಂ (ಗದಾಯು. ೬-೩೦) ; ಶಿಶಿರೈಕ ನಿಧಾನಮಪ್ಪ ಚಂದನದೊಳೆ ಪುಟ್ಟಿ ಕಿಚ್ಚು ಸುಡದಿರ್ಪುದೆ [ ತತ್ಸದೃಶಮೈಕಕಾರಣಂ ವನನಿಧಿಯಾದೊಡೇ] ನುರಿಯದಿರ್ಪುದೆ ದಳ್ಳಿಸಿ ಬಾಡಬಾನಲಂ (ಕಾದಂಪೂ. ೫೫೦); ದಳ್ಳಿಸೆ ವಹ್ನಿಜ್ವಾಲೆ ದೀರ್ಘಾನನಕುಹರಸಹಸ್ರಂಗಳಿಂ . . . ಫಣಸಹಸ್ರಂಗಳಂ ಬಿರ್ಚಿ ಕಣ್ಗಳ್ಪಿಸಿ ವಕ್ರಾವರ್ತಚಾಪಂ ಪಡೆದುದು ಭಯಮಂ ಕಾಳಕಾಳಾಹಿರೂಪಂ (ಪಂರಾಮಾ. ೫-೭೪) ; ಘೃತಾಹುತಿವಡೆದನಲನಂತೆ ಮಿಗೆ ದಳ್ಳಿಸಿದಂ (ಶಮದ. ೨೫೦ ಪ್ರಯೋ) ; ಒಡನೊಡನೆ ಕೈಮಾಡಿದನು ಕೈಗಡಿಯನಂಬಿನ ಧಾರೆ ದಳ್ಳಿಸಿ ಕಿಡಿಗೆದಱಿದವು ನೃಪನ ರಥಸಾರಥಿ ಹಯಾಳಿಯಲಿ (ಕುಮ್ಮಾಕ. ೨-೩೭) ; ಉಕ್ಕಿಱುವ ಕೋಪಾಗ್ನಿ ದಳ್ಳಿಸಿ ದಿಕ್ಕುಗಳನಳ್ಳಿಱಿಯೆ ಲಕ್ಷ್ಮಣನೆಕ್ಕತುಳದಲಿ ಬಂದನು (ತೊರರಾ. ೨-೩-೦೦) ; ಕಡಲೊಡಲ ವಡಬಂ ಬಿಡದೆ ತೀಡುವ ಬಿಱುಗಾಳಿಯ ತೀಟದಿಂ ದಳ್ಳಿಸಲೊಡಮೊಡಗೊಂಡ ಬೆಟ್ಟುಗಳ್ ಕರಂ ಸೀಕರಿವೋಗೆ ಪುಟ್ಟಿತಕ್ಕುಂ (ರಾಮಾಶ್ವ. ೨-೨೯). ೨. ಸುಡು ; ದಹಿಸು : ವಿಷವನಹಿರಾಜನನಿತಱೊಳುಂಗುಳೆಯಾ ವಿಷಜ್ವಾಲೆಯಾ ಋಷೀಶ್ವರನ ದಳ್ಳಿಸಲಾಗಳು (ಪಾಸೋಕು. ೧೦-೨೦೬). ೩. ಕವಿ ; ಆವರಿಸು ; ಮುತ್ತು ; ವ್ಯಾಪಿಸು : "ಅಳುರ್ಕೆಯೆಂದುಂ ದಳ್ಳಿಸಿತೆಂದುಂ ಆವರಿಸಿದುದು". (ಕಕಶಾ ೬೬-೪೭೭); "ದಳ್ಳಿಸಿತೆಂದಳುರ್ಕೆಯೆಂದಾವರಿಸಿದುದಕೆ ಪೆಸರಾಮುಮಕ್ಕು" (ಕಲ್ಲಿಕ್ಕ. ೫೨); ಇಂಚರಮಂ ವಿಪಂಚಿ ಮೆಱೆದತ್ತಿಲ್ಲೀಕೆ ತನ್ನಂಗಿ ನಿನ್ನ ಸಭಾಸದ್ಮದೊಳೀಕೆ ದಳ್ಳಿಸಿದುದಿಲ್ಲುತ್ತಾನ ವಂಶಸ್ಥನಂ (ಮಲ್ಲಿಪು. ೪-೯) ೪. ಹೆಚ್ಚು ; ಉಕ್ಕೇರು : ಉಕ್ಕು : ದಳ್ಳಿಸಿ ಕುಕಿಲುತ್ತಂಬುಧಿಯಲ್ಲೋಲಂ ನೆಗೞ್ ನಲಿದು ನರ್ತಿಸಿ ನಡೆದತ್ತಳ್ಳಾಡೆ ನೆಲಂ ಬಲಮದು ಕೊಳ್ಳೆಂದು ಗುಹಾರವಂ ಪೊದಟ್ದೆಸೆವಿನೆಗಂ (ಅಜಿತಪು. ೧೩-೫೩) ; ಕೊಳ್ಳೆನೆ ಕೊಲ್ಳಿವೀಸೆ ಪಡೆಯಂದೆರಡುಂ ದಿಗಧೀಶರೋಡಿದರ್ . . . ಎತ್ತಲುಂ ದಳ್ಳಿಸಿದತ್ತೊ ವೀರರಸವಾರಿಧಿ ವಾತಮಹಾಪ್ರಘಾತದಿಂ ನಿಲ್ಲದೆನಿಪ್ಪನಂ ರವಳಿ ಘೋಷಿಸಿ ಭೈರವಮಾದುದಾ ರಣಂ (ನೇಮಿಪು. ೧೦-೦೨೩) ; ತಿರ್ದುವಂ ಪ್ರಸರದ್ದಂತಿಯ ದಂತದೊಳ್ ಹರಿಯ ದಂಷ್ಟ್ರಾಲೇಖೆಯಂ ಕಿಟ್ಟು ತೆತ್ತಿಸುವಂ ಲೀಲೆಯೊಳರ್ಧಚಂದ್ರಶರಮಂ ಮಾಟ್ಪುಟ್ಟಿಯಿಂದಣ್ಣು ದ[ಪಾಠಾಂ. ವ]ಳ್ಳಿಸೆ ಸಿಂಹೀಶಕನೇತ್ರದತ್ತ ಪತಿ ಶೋಕಾವ್ಯಂದಕಂ ವಿಂಧ್ಯಕಂ (ಅರ್ಧನೇ. ೩-೫೩). ೫. ಹೊಳೆ ; ಥಳಥಳಿಸು: ದಿವಿಜೇಂದ್ರಭವನವೆಂಬೀ ನಿವಾಸದಿಂದತ್ತ ಮತ್ತೆ ಮೇಲಿರ್ದಪುದೆಂದವಗೆಯಿಪವೊಲ್ಲಿಯ ವಾತವಿಧೂತವಿನೂತಕೇತುಗಳ್ ದಳ್ಳಿಸುಗುಂ (ಸುಕುಮಾ. ೧೦-೪೯); ದಾಂಗುಡಿವಿಟ್ಟು ದಳ್ಳಿಸುವ ಕೆಂದಳಲೆದಿಂದೊಸೆದೆತ್ತಿ ಲಕ್ಷ್ಮಿ ಕಾಮುಂಗೆ ಮಗಂಗೆ ಶೈಶವಾರೀಕ್ಷಣಕೇಳಿಗೆ ನೇತ್ರಸೂತ್ರದಿಂ ದಿಂಗಡಲೆಂಬ ಸಜ್ಜವನಿಯೊಳ್ತರದೊಟ್ಟಿಲ ಮೇಲೆ ಕೆಂಬರಲ್ದಿಂಗಣಗಟ್ಟಿ ದಂತುವದಯಕ್ಕೆಲಶಿಖಂಡದೋಳಿಂದುಮಂಡಲಂ (ಮಲ್ಲಿಪು. ೬-೨೯). ೬. ಮಿಂಚು ; ಮಿಂಚುಱು ; ಮಿಂಬರಂ: ಅಳಿನೀಲೀಕಂಚುಕಂ ದಳ್ಳಿಸೆ ಮೊಳೆಯಲೆಪಿಂ ಕಯ್ಯಸೋಂಕಿಂದೆ ಕೆಂಪಂ ತಳೆದೊಪ್ಪಂಬೆತ್ತ ಪೊಂಬೆತ್ತದ ಸಳಿಗೆ ತಳಿಪರ್ಮಾಡಿದಂತಾಗೆ . . . ಎಸೆದು ಬಂದಳ್ ಪ್ರತೀಹಾರಿಯೊರ್ಬಳ್ (ಲೀಲಾವ. ೪-೭೩); "ನೂಕಲ್ಪಡಂ" (ಶಬ್ದಮ). ೭. ಅದಿರು ; ಅಳ್ಳಾಡು ; ಅಲುಗು: ಸಿಡಿಲು ಹೊಡೆದಡೆ ಸಿಗುಱುದೋಱದ ಕಡುಹಿನಗ್ಗದ ಶೈಲ ನುಗ್ಗಿಯದಡಿಗೆ ದ[ಪಾಠಾಂ. ಧ]ಳ್ಳಿಸುವುದೆ (ತೊರರಾ. ೬-೨೭-೨೦).

೮. (ಆಲಂ) (ಕೋಪ, ಗರ್ವ, ಅಹಂಕಾರ ಮೊದಲಾದುವುಗಳಿಂದ) ಕೆರಳಂ ; ಉರಿ ; "ಗರ್ವದಿಂದ ಮೆರೆ" (ಪಂಪಭಾ) : ಆ ದುಶ್ಶಾಸನನಂ ಪೊರಳ್ಚಿ ರಣದೊಳ್ ಕೊಂದೀ ಮಾರುತ್ಪುತ್ರನಿಂತಾದಂ ದಳ್ಳಿಸೆ ನೋಡಿ ನೋಡಿ ಪುದುವಾಳ್ದಂತಕ್ಕುಂ (ಪಂಪಭಾ. ೧೩-೮೮) ; ಬಸಿವ ರಕುತವ ಬಳಿದು ಖಾತಿಯ ಮಸಕದಲಿ ಕೈವಾಱಿದು ಮಿಗೆ ದಳ್ಳಿಸುತ ಹೊಗರಿಡು ತೌಡುಗಚ್ಚುತ ಹುಬ್ಬುಗಳ ಬಲಿದು . . . ಪುನರಪಿ ಕಱಿದನಂಬುಗಳ (ಕುವ್ಯಾಭೀ. ೯-೩೯). ೯. (ಆಲಂ) ಸಡಗರಿಸಂ ; ಸಂಭ್ರಮಿಸು ; ಅತಿ ಆನಂದಪಡು : ಗಿಳಿಗಳೊಳೆ ಗಳಪಿ ಮೊಱೆವಳಿಕುಳದೊಡನಾಳ್ಕಿಸಿ ಪುರುಳಿಯೊಡನೆಳಸಿ ನವಿಲ್ಗಳ ಬಳಗದೊಡನೆ ನರ್ತಿಸಿ ವಿಳಾಸಿನೀನಿವಹ ಮಾಗಳೇಂ ದಳ್ಳಿಸಿತೋ (ಆದಿಪು. ೧೧-೮೨). [ ದಳ್ + – ಇಸು$_3$ ]

**ದಳ್ಳಿಱು** (ಕ್ರಿ). ೧. ತಿವಿ ; ಇರಿ ; ಚುಚ್ಚು : ಮುಗಿಲಂ ಮರಗಳ ತುದಿಗೋಡುಗಳೊಳೆ ದಳ್ಳಿಱಿದೊಡುದಿರ್ದ ಕೆದಱಿದ ಕಱುದಾರೆಗಳನಿಪ್ಪುವು ಕಾನನದೊಳೂಗುವಿಗೆ ಪರದಿರ್ದ ಪಿರಿಯ ನೆಲ್ಲಿಯ ಕಾಯ್ಗಳ್ (ಲೀಲಾವ. ೬-೩೪). ೨. ಕಾಂತಿ ಹೊಂದು ; ಶೋಭೆಯನ್ನು ಪಡೆ ; ಹೊಳೆ : ಏಱಿ ವಿಮಾನಮಂ ಕೃತಕಗಾಯಿಕೆಯರ್ ಧವಳಾಭ್ರಕೂಟದೊಳ್ ತೋಱುವ ಮಿಂಚಿನಂತೆ ಮುಗಿಲೊಡ್ಡೊಡೆದಿಬ್ಬಗಿಯಾಗಿ ನಿರ್ಭರಂ ಪಾಱಿ ಪತಾಕೆಗಳ್ ಮಗುಳ್ದು ಮಿಳ್ಳಿಸಿ ದಳ್ಳಿಱಿದಾಡೆ ಯಾನವೇಂ ಕೇಱಿದುದೋ ನಭಃಪ್ರಸೃತಿಗಿಟ್ಟೆಡೆಯಾದುದೆಂಬಿನಂ (ಶಾಂತಿಪು. ೨-೮೨) : ಒಳ್ಪಾನೆಗೋಡಲಱಿಯದ ಬೆಳ್ವಾಳಪೊಲಗಿದು ಕಂಡು ಲಾವಣ್ಯರಸಂ ತಳ್ಳಂಕಂಗುಟ್ಟೆ ಮಿಳ್ಳಿಸಿ ದಳ್ಳಿಱಿದಾಡುವ ಜಿನೇಂದ್ರಶಿಶುವಂ ತಳೆದಿಂ (ಶಾಂತಿಪು. ೧೦-೮). 'ಅಳ್ಳಿಱು' ಪರಾ. [ ದಳ್ + ಇಱು$_1$ ]

**ದಳ್ಳುಬಾಱು** 'ತಳ್ಳುವಾಱು$_1$' ನೋ.

**ದಳ್ಳುರಿ$_1$** (ಕ್ರಿ). ೧. ತೀವ್ರವಾಗಿ ಉರಿ ; ಭುಗಿಲಿಡು ; ಪ್ರಜ್ವಲಿಸು : ೨. (ಆಲಂ) ಕೊಬ್ಬಿನಿಂದ ಉರಿ ; ಗರ್ವದಿಂದ ಮೆರೆದಾಡು. ೧, ೨ : ಮೋಹದಿಂ ನೀಂ ಮಾಡಿದ ಪಲ್ಲವ ಪೊಲ್ಲಮೆಗಳಂ ಸೈರಿಸಿರ್ದೊಡಂ ನೀಂ ಕೊರ್ವಿ ಗಾಳಿಯೊಳ್ಕೂಡಿದ ಕಿರ್ಚಿನಂತೆ ದಳ್ಳುರಿದು ಪೊಟಲೊಳಗೆ ಮುನ್ನಿನೆಡಗೇಗಳುಂ ಪಿರಿದಬ[ಬ್ಬ]ರಮಂ ಮಾಡಿದೆ (ಧರ್ಮಾಮೃ. ೨-೯೯). [ ದಳ್ + ಉರಿ$_1$ ]

**ದಳ್ಳುರಿ$_2$** (ನಾ). ೧. ಭುಗಿಲಿಡುವ ಕಿಚ್ಚು ; ದೊಡ್ಡ ಉರಿ ; ಪ್ರಜ್ವಲಿಸುವ ಜ್ವಾಲೆ: "ದಳ್ಳುರಿಯುಂ ಪೇರುರಿಯುಂ ಘನಜ್ವಲಿತದೊಳು" (ಶಬ್ದಮಂ. ೦೨) ; ಮುಳಿಸಿನ ದಳ್ಳುರಿಗಳನುಗುಳುತ್ತುಂ ಚಕ್ರರತ್ನಮಂ ಬಗೆದು ಬೆಸಸಿದಂ ಭರತೇಶಂ (ಆದಿಪು. ೧೪-೧೧೫) ; ವಿದಾತಿರೂಪಮಲ್ಲದ ವಿನತಾಸುತಂ ಮಿಳಿರ್ವ್ವ ದಳ್ಳುರಿಯಲ್ಲದ ವಹ್ನಿ ಕಾಳನಲ್ಲದ ಜವನಬ್ಧಿ ಮಧ್ಯಗತನಲ್ಲದ ಬಾಡಬಂ (ಕಇ. V. ೫೨-೧೮ ; 1087) ; ಸೋಂಕಿದ ಗಾಳಿ ದಳ್ಳುರಿವೊಲಾದುದು ಪೊಕ್ಕ ಸರೋವರಾಂಬು ಕಾಯ್ಪುಂ ಕುದಿದತ್ತು . . . ನಿಜಾಂಗತಾಪದಿಂ ಪಂಕರುಹಾಕ್ಷಿ ಕಾಮಶಿಖಿ ಪೆಣ್ಮರಿಜಂ ತಳೆದಂತೆ ತೋಱಿದಳ್ (ಕಾವ್ಯಸಾ. ೬೦೩) ; ಬಗೆದು ಧಂಧಗಧಗಧಗಂ ಘುಳುಘುಳಿಂ ದುಬ್ಬಿ ನೆಗೆದು ದಳ್ಳುರಿ ಬಳ್ಳಿವರಿದು ಕತ್ತಲಿಸಿ . . . ದಾವಾಗ್ನಿ ಮುತ್ತಿತ್ತು ನಾಲ್ದೆಸೆಯನಂ (ಹರಿಶ್ಚ. ೧೦-೬); ಅರಗಿನರಸನ ಬಾಗಿಲಲಿ ದಳ್ಳುರಿಗೆ ತಡವೇ (ಕುವ್ಯಾದ್ರೋ. ೫-೪೧) ; ಆ ದಳ್ಳುರಿಯ ಕೆಂಬೊಗೆಯು ಎತ್ತಲೂ ಚಿಮ್ಮಿ ಕಾಡ ದಾರಿಗರನ್ನು ಭೀತಿಗೊಳಿಸಿದೆ (ನೂರಜು. ೦). ೨. ಬಿಸಿ ; ಝಳ ; ತಾಪ ; ಶಾಖ: ಸಕಲದಿಗಂತರಂಗಳೊಳ್ ದಳ್ಳುರಿಯನುಗುಟ್ಟಿ ತೀವ್ರರಶ್ಮಿಜಾಲಮಂ ಪಸರಿಸುತ್ತುಂ ನಿದಾಘಸಮಯ ಸಹಸ್ರಭಾನುಮಂಡಲಂ ಮಧ್ಯಾಹ್ನವರ್ತಿಯಾಗೆ (ಕಾದಂಬ. ೪೫೬) ; ನಾಸಿಕದುಸಿರ ದಳ್ಳುರಿ ಮೂಕುತಿ ಗಂಧಗ್ರಾಸ ಸಂತಾಗಿ ಮೆಯ್ಯೊಳಗೆ ಪೂಸಿದ ಸಿರಿಗಂದ ಕರಿಕಾದುದು (ಮೋಹತ. ೨೮-೧೬) ;

ದಳ್ಳುರಿಗರೋತ್ತಮ = ವಿಷಜ್ವಾಲೆಯುಳ್ಳ ಮಹಾಸರ್ಪ : ರಜ್ಜುವದೆತ್ತ ದಳ್ಳುರಿಗರೋತ್ತಮನೆತ್ತ ವಜ್ರವೆತ್ತಾಲಿಕಲ್ಲೆತ್ತ ಮಜ್ಜೀವಿತೇಶ್ವರನೆತ್ತ ನೀನೆತ್ತ ಕೇಳ್ ದುರ್ಜೀವಿ ತರಳೆಂದಳೊಲಿದು (ಮೋಹತ. ೬-೨೪); "ದಳ್ಳುರಿಯಂತೆ ಉರಿಯುತ್ತಿರುವ ವಿಷಜ್ವಾಲೆಯಿಂದ ಮಹಿಮೆ ಹೊಂದಿದ ಕೃಷ್ಣಸರ್ಪ (?)" (ಮೋಹತ. ಅಡಿಟಿ). ದಳ್ಳುರಿಗೆಂಡ = ನಿಗಿನಿಗಿಕೆಂಡ ; ತಳಲುಗೆಂಡ : ಸಿರಿಖಂಡದನುಲೇಪ ತನುವಿಗತಿಶಯತಾಪ . . . ಧರಪಿದಸುಗೆಯ ತಳಿರ ತಂಡ ದಳ್ಳುರಿಗೆಂಡ (ಸೌಂದರಪು. ೮-೬೬). ದಳ್ಳುರಿ ಜ್ವಾಲೆ = ಧಗಧಗಿಸುವ ಉರಿಯ ನಾಲಗೆ : ಕಾಳುಕಿಚ್ಚಿದ್ದಡವಿಯನು ಕುಡಿನಾಲಗೆಯೊಳಳವಡಿಸಿ ದಳ್ಳುರಿ ಜ್ವಾಲೆ ತಗ್ಗಿದವೊಲು . . . ಸುರಪಾಲತನಯನ ತನಯನಸ್ತ್ರವಿಸಿದನು ರಣದೊಳಗೆ (ಕುವ್ಯಾದ್ರೋ. ೬-೬೦). [ ದಳ್ + ಉರಿ$_2$ ]

**ದಳ್ಳುರಿತಿರುಳು** 'ದಳ್ಳುರಿದಿರುಳು' ನೋ.

**ದಳ್ಳುರಿದಿರುಳು, ದಳ್ಳುರಿತಿರುಳು** (ನಾ). ಉರಿಯುತ್ತಿರುವ ಬೆಂಕಿಯ ತಿರುಳು ; ಗಟ್ಟಿಕೆಂಡ : ಮುಳಿದು ಮಿಸೆಯ ಮುರಿದು ಹುಬ್ಬನು ಬಲಿದು ದಳ್ಳುರಿದಿರುಳನಕ್ಷಿಗಳೊಳಗೆ ಪಸರಿಸಿ ಘುಡುಘುಡಿಸಿ ರೋಮಾಳಿ ಸ್ಫುನಿಮಿರೆ . . . ಭಾರ್ಗವದತ್ತಬಾಣಕೆ ನೀಡಿದನು ಕರವ (ಕುವ್ಯಾದ್ರೋ. ೧೩-೫೧). **ದಳ್ಳುರಿತಿರುಳು** : ನೆರೆದುದಸುರರು ಕಾಲಕೂಟದ ಕರುವಿನೆರಕವೊ ಸಿಡಿಲ ದಳ್ಳುರಿತಿರುಳ ದಡ್ಡಿಯೊ ವಿಲಯಭೈರವನುಬ್ಬಟೆಯ ಪಡೆಯೊ . . . ಗಾಢಾಯ ತೇಜದ ದುರುಳ ದಾನವ ಭಟರು ಬಂದುದು ಕೋಟಿ ಸಂಖ್ಯೆಯಲಿ (ಕುವ್ಯಾಆ. ೧೨-೨೯). [ ದಳ್ಳುರಿ$_2$ + ತಿರುಳು (<ತಿರುಳ್) ]

**ದಳ್ಳುರಿದುಱುಗಲು** (ನಾ). ಉರಿಯುತ್ತಿರುವ ಜ್ವಾಲೆಯ ಸಮೂಹ,– ಗುಂಪು ; ಜ್ವಾಲಾಸಮೂಹ : ಹೊಗೆಯನೊದೆದೊಳಬಿದ್ದು ಕಿಡಿಗಳ ನುಗಿದು ದಳ್ಳುರಿದುಱುಗಲನು ತನಿಬಗಿದು ಭೀಮನ ರಥದ ಸುತ್ತಲು ಸೂಸಿ ತೆರೆವುಸಗೆ . . . ಉರವಣಿಸಿತವುಳಾಸ್ತ್ರ (ಕುವ್ಯಾದ್ರೋ. ೧೯-೪೬); ಬಿಱುನಗೆಯಲಿಂದ್ರಾರಿ ದಳ್ಳುರಿದುಱುಗಲಿನ ಕೊಳ್ಳಿಗಳಲಿದ್ದೆಸೆಗೊಱಗದಂತಿರೆ ಕಟ್ಟಿದರು ಕಂಭದಲಿ ಹಳವಿಗೆಯ (ತೊರರಾ. ೫-೬-೦೦).

[ ದಳ್ಳುರಿ$_2$ + ತುಱುಗಲು (<ತುಱುಂಗಲ್) ]

**ದಳ್ಳುರಿಧಾರೆ** (ನಾ). ದಳ್ಳುರಿಯಂತೆ ಹೊಳೆಯುವ ಅಲಗಂ : ಸಾರಥಿಯ ಕೊಂದಲ್ಲದರ್ಜುನ ತೀರುವವನಲ್ಲೆನುತ ದಳ್ಳುರಿಧಾರೆಯಂಬೈದಱಿ ದೇವನನೆಸಲು (ಕುವ್ಯಾದ್ರೋ. ೩-೫೪). [ ದಳ್ಳುರಿ$_2$ + ಧಾರೆ ]

**ದಳ್ಳೆನ್** (ಕ್ರಿ). 'ದಳ್' ಎಂದು ಶಬ್ದ ಮಾಡು: ಇವೆ ಕೋಪಾನಲಧೂಮರೇಖೆಯೆನೆ ಪುರ್ವುರ್ವೆಟ್ಟು ಜರ್ವಲ್ ತಗುಳ್ದವು . . . ಕೋಪಾನಲತಾಪದಿಂ ರಣರಸಂ ದಳ್ಳೆಂದು ಕಾಯ್ದುಕ್ಕುವಂತೆವೊಲಾಗಳ್ ಬೆಮರ್ಗಳ್ ಕಪೋಲತಲದೊಳ್ ತಳ್ಳೊಯ್ಯುದ್ಧವಾ ದೈತ್ಯನಾ (ಪಂಪರಾಮಾ. ೯-೪೮) ; ನಿಶಾಚರನ ಕೋಪೋಗ್ರಾನಳಂ ಪೊತ್ತುತುಂ ಪೊಗೆಯುತ್ತುಂ ಕಿಡಿಗುಟ್ಟುತುಂ ಮಸೆಯುತುಂ ದಳ್ಳೆಂಬ ಭೋರೆಂಬ ಭುಗ್‌ಭುಗಿಲೆಂಬೇಟ್ಗಿಯ ನಾಂತು ಕೇಸುರಿಗಳಂ ಸೂಸಿತ್ತಗುರ್ವಪ್ಪಿನಂ (ಜಗವಿ. ೧೫-೪೦) ; ಜವದಿಂ ಬಂದುದು ದಳ್ಳೆನುತ್ತುರಿವ ಮೆಯ್ಯುಂ ಧೂಮದುರ್ಬೆಂಬ ಜರ್ಬುವ ಪುರ್ಬುಂ . . . ರೌದ್ರಜ್ವರಂ ತಪ್ತಹೇಮವಿಭೂಷಂ ತ್ರಿಶಿರತ್ರಿಪಾದ ವರುಣಾಕ್ಷಂ ರೂಕ್ಷರಕ್ಷಾಯುಧಂ (ಜಗವಿ. ೦೮-೦೩). [ ದಳ್ + ಎನ್$_1$ ]

**ದಱದಱ, ದರದರ$_1$** (ನಾ). ಒಂದು ಅನುಕರಣ ಪದ : ದಱದಱ ಮೆಂದೆಱಿದು ಪುಯ್ಯಲಿಡೆಯಿಡೆ ಕೊಲ್ಗುಂ (ಅಜಿಪು. ೧೦-೨೮) ; ಧುಳು ಧುಳುಂ ದೊಪ್ಪೆಂಬ ಗುಱುಗುಱು ಧಳಧಳಂ ಜೋಱೆಂಬ ದಱದಱ ದೊಳದೊಳೆಂಬೀ ಧ್ವನಿಗಳವನಿಗೆ ಭಯವನೀವುತಿರೆ (ಸಾನಂಚ. ೮-೧೩). **ದರದರ$_1$** : ಕುರ್ಚಿಯನ್ನು ಕೈಗೆ ಎತ್ತಿಕೊಳ್ಳದೆ ದರದರ ಎಂದು ಎಳೆದು ನೆಲವನ್ನು ಗಾರು ಮಾಡಬೇಡ (ಬೂಧಿ). 'ದರದರನೆ' ಪರಾ.

**ದಱದಱನೆ**, ದರದರನೆ (ಅ). (ಎಳೆದುಕೊಂಡು ಹೋಗುವಾಗ) ದರದರ ಎಂದಂ: ತಲೆನವಿರಂ ಪಿಡಿದು ದಱದಱನೆಟಿದುಕೊಂಡು ಬಂದಂ (ವಡ್ಡಾರಾ. ೧೧೭-೨೫); ದಱದಱನೆಟಿಯೆಟಿ ಪಿಡಿಪಿಡಿ ತಱಿತಱಿ . . . ಕೊಱಿಕೊಱಿಯೆಂದೊದಱಿ ಗಜಱಿ ಗರ್ಜಿಸಿ ಮೂಳೆವರ್ (ಅಜಿಪು. ೧೧-೯); ಕಿಡಿಪೇಂ ಕರ್ಮಮನೊಳ್ಪಂ ಪಡೆವೆನೆನುತ್ತಿರಲಾತ್ಮನಾತ್ಮನ ಕಾಲಂ ಪಿಡಿದು ದಱದಱನೆ ಕರ್ಮಕ್ಕೀಪಿಂದೆಟಿದೊಯ್ವುದು ನೋಂಕಗುಂ ಸಂಸೃತಿಯೊಳ್ (ಸಮಷ. ೧೩-೫೨). **ದರದರನೆ**: ಹಿಂದೆ ಮುಂದೆ ನೋಡದೆ ದರದರನೆ ಎಳೆದೊಯ್ದರು (ಜಾಪ). [ದಱದಱ + –ಅನೆ₁]

**ದಟ** (ನಾ). ೧. ಬಲ; ಸೈನ್ಯ; ಪಡೆ: "ಪಡೆ, ಅಣಿ, ದಟಂ, ಒಡ್ಡು ಬಲಂ–ಈ ೫ ಸೇನೆ" (ಕಕಸಾ. ೧೪-೨೮೧); ಕೆದಱಿ ಚತುರ್ಬಲಂ ಬೆದಱಿ ತಳ್ತ ದಟಂ ಕೆಡೆದಟ್ಟಿ ತಟ್ಟಿ ಮಾಣದೆ ಪೆಱಗಿಟ್ಟು ಬಾಯ್ವಿಡೆ ಘಟಾಳಿ ಪಮಣದೆ ಪೆಣೆದಂ ಹರಂ ದಿಗಿಭದೊಳ್ ದಿಗಿಭಂ ಪೆಣೆವಂತೆ ಪಾರ್ಥನೊಳ್ (ಹಂಪಭಾ. ೮-೨೧); ನಾಲ್ಕುಂ ದಟಂ ನೋಂಕೆ ನುಗ್ಗುವೆಂ (ಕಬ್ಬಿಕಾ. ೧೫೪); ಊರವರ್ ಪುರದಿಂದಂ ಪೊಱಮಟ್ಟು ಪೊಕ್ಕು ದಟಮಂ ನೆಗ್ಗುತ್ತ ನುಗ್ಗುತ್ತಿಯೊತ್ತರದೊಳ್ ಮುತ್ತಿದಿರಾಗೆ . . . ಶಿವಂ ಬಟ್ಟಾಡಿ ಬಿಟೆಪ್ಪೋಡಿದಂ (ಚಿಕವಿ. ೫-೨೨). ೨. ಕಂದಂರೆಗಳ ಪಡೆ; ತುರಗಬಲ: "ದಟಂ = ತುರಂಗಬಲಂ, ಸಾಮಾನ್ಯ ಬಲಂ" (ಕಮುದ. ಶಿ. ೧). ೩. ಸೈನ್ಯದ ತುಕಡಿ; ಸೈನ್ಯವಿಭಾಗ: "ತುರಂಗಬಲದೊಳಮಲ್ಪಬಲದೊಳಂ ದಟವೆಸರ್" (ಸಂಜೀವ. ೧೪).

**ದಟವೋಡೆಗಂಡ** = ಸೈನ್ಯವು ಓಡಿದಾಗಲೂ ಏಕಾಂಗಶೂರನಾಗಿ ಹೋರಾಡುವವನು; ಏಕಾಂಗಶೂರ; ಒಂದು ಬಿರುದು: ಮಹಾಸಾಮನ್ತಂ ದಟವೋಡೆಗಣ್ಡನ್ದ್ರಮ್ಮಂಡಳಾಣ್ಮನುಚ್ಚನಿಭುಜಙ್ಗಂ ಶ್ರೀಮತ್ಪ್ರಸೂದ್ರಕಯ್ಯ (ಎಕ. XI, ಹೊಳಲ್ಕೆ. ೨೩-೭; ೯೯೬).

[P ಇದು ದ್ರಾವಿಡ ಶಬ್ದವೆಂದು ಕೆಲವರ ಅಭಿಪ್ರಾಯ]

**ದಟಂಬಟನೆ** (ಅ). ಒಂದು ಅನುಕರಣಾವ್ಯಯ: ಸೀರ್ವನಿ ಸಿಡಿಯೆ ತೆರೆ ಮಸಗೆ ಕೊಳಂ ತಳಮಳಮಾಗೆ ಮೀಂಗಳ್ ಮೆಯ್ಗರೆಯೆ ದಟಂಬಟನೆ ಕೈಕಾಲ್ಗಳೊಳೀಸುವ ಕಾವನ ಪಟ್ಟದಾನೆಗಳಿಂಬೋಲಾಡಿದರ್ ಬಾಲೆಯರ್ (ರಾಮಾಶ್ವ. ೧೨೩-೨೪). [ದಟಂಬಟ್ಟು + –ಅನೆ₁]

**ದಟದುಟ**, ದಳದಂಳ್ಳ, ದಳದುಳಿ, ದಳವುಳ, ದಳವುಳಿ, ದಳಾದುಳಿ, ದಟವುಟ (ನಾ). ೧. ಬಲವಾದ ಸುಲಿಗೆ; ತುಂಬಾ ಸೂರೆ; ಅಧಿಕವಾದ ಕೊಳ್ಳೆ; ಹೆಚ್ಚಾದ ಲೂಟಿ: "ದಟದುಟಂ (ದಟವುಟಂ) = ಬಲ್ಸೂಱೆ" (ಕಮುದ. ಶಿ. ೦); "ಬಲ್ಸೂಱೆಯೊಳಂ ದಟದುಟವೆಂದೆನೆ" (ಕರ್ಣಾನಿ. ೮೨); ದಟದುಟಮಾದುದಾಗಳಸಿಯೋಱಿಸಿದೆ[ಯೋ]ಱಿದು ಬಾದಿ ಬಂದಿ ದಂಡುಟಮೆಲೆ ದಂಡುಳಂ ಪಿಡಿದರಂಗನೆಯಂ ಪಿಡಿದೊಯ್ದರೆಂದು ತಲ್ಲಟಿಸಿ (ಅನಂಪು. ೧೧-೭೩); ಗರಗರಿಕೆಯು ದಟದಂಟದ ಬಿಂಕದ ಬೀರರುಗ್ಗಡಣೆ ಪಿರಿದಾಗೆ . . . ಪಡೆ ನಡೆಯುತುಮಿರ್ದುದು (ರಾಮಾಶ್ವ. ೫೦-೮). **ದಳದುಳ₂**: ೧. ಭಕ್ತಿದಳದುಳದಿಂದ ಬಂದಿಕಾಱರಾಗಿ ಬಂದು ಹೊಕ್ಕಡೆ ಬದನೆಯ ಕಾಯಿಗಳು ಬಾಣಲಿಂಗವಾಗವೆ ನಮ್ಮ ಬಸವಣ್ಣನ ದೃಷ್ಟಿ ತಾಗಲು (ಚನ್ನಬ. ಕ. ೮೯-೧೯೧); ಹುಸಿ ಕಳವು ದುಷ್ಕೃತಿ . . . ದಳದುಳ ನುಸುಳು ಹಿಂಸೆ ವಿವಾದ . . . ದೋಷಪ್ರಸರವಿಲ್ಲಾ ನೃಪನ ಕಾಲದೊಳ್ (ಜೀಮಂಕ. ೨-೫೨); ಬೆಳುಗವತೆಯು ನ್ಯಾಯವಾಱಿದಿ ಕಳವು ದಳದು[ಪಾಠಾಂ. ವು]ಳ ಬಾದಿ ಡಾವರ ಕೊಲೆ ಹುಸಿಗಳಿಲ್ಲಿವರ ರಾಜ್ಯದೊಳು (ಕುವ್ಯಾಭ. ೧೮-೦೭); ಮರ್ಕಟರ ದಳದುಳದ ದೂಱಿನ ದಕ್ಕಡೆಯತನ ಬಿದ್ದುದೈ ಕರ್ಣಕ್ಕೆ (ತೊರರಾ. ೪-೧೦-೧೭). ೨. ದಾಳಿ; ಮುತ್ತಿಗೆ; ಆಕ್ರಮಣ: ರಾಯಕುವರನ ಮದುವೆಗಬ್ಬದಳಾಯತಾಕ್ಷಿಯರನು ವಿಚಾರಿಸಿ ಹಾಯಿದನು ದಳದುಳದೊಳೊಂದು ವಿವಾಹಮಂಟಪಕೆ (ಕುವ್ಯಾಭ. ೨-೬೨); ಗಿಳಿಯ ಹಿಂಡುಗಳೆತ್ತ ಗಿಡಿಗನ ದಳದುಳವು ತಾನೆತ್ತ ಭೀಮನ ಸುಳಿವು ಗಡ ಕಾಲೂಱುವವೆ ಕರಿಘಟೆಗಳೊಗ್ಗಿನಲಿ (ಕುವ್ಯಾದ್ರೋ. ೨-೮೧). ೩. ಲೂಟಿ ಮಾಡುವ ಸೈನ್ಯ,–ದಳ: ಚರಣಗತಿಯಲಿ ಬಪ್ಪರಾ ಸರೋಜಾನನೆಯರೊಂಬತ್ತುಕೋಟಿ ಬರಲು ಅರಲಬಾಣ ಹೊಲಬುಗೆಡುವ ಕಾನನವೊ ಹಿಮಕರನ ಮನೆಗೊಲಿದು ದಾಳಿಯನಿಡುವ ದಳದುಳವೊ ಮರತಪೋಧನರ ನಿಷ್ಕಾಮನಿಧಿಯಂ ಕಳುವ ಚೋರರೆನಲೆಯ್ತಂದರು (ಹದಳಾ. ೩-೨೪). ೪. ಉತ್ಸಾಹ; ಸಡಗರ; ಸಂಭ್ರಮ: ಕವಿತೆ ಕಲ್ಪನಶಕ್ತಿ ವಿರಚಿಸುವಿಂದ್ರಜಾಲಗಳಲ್ಲವೆಯ್ ಕವಿಯ ಪಿಂತಣ ಜನ್ಮಕೋಟಿಯೊಡರ್ಚಿಯಾಳ್ಗೊಂಡನುಭವಂ ವಿವಿಧಕೃತಿ ಸಾಕ್ಷಿತೆ ತಪಂ ಸತ್ಯಾನುಸನ್ಧಾನಂಗಳಾನವನ ನೆನೆಪಿಂ ದಳದುಳದೆ ಸೌನ್ದರ್ಯಮನುವದಿಪುದಪ್ಪಗಂ (ಸ್ರಸಪ. ೧೮-೪೭). **ದಳದುಳಿ**: ೧. 'ದಳದುಳಿಗಾಱ' ಪರಾ. **ದಳವುಳ**: ೧. ಕಳವಿಂದೆ ಬಲ್ಪಿಂದೆ ದಳವುಳದಿನರ್ಥದಿಂ ಚೆಲುವೆಂಬ ತೊವಲ ಮಱಿಗಱುವಿನಿಂದೆ ಪಲತೆಱದಿನಕಟ ಪರಲಲನೆಯರನೊಯ್ಯಲಾ ಪೊಲೆಮನದೆ ಕಿಡಿಸುವುದನೀಕ್ಷಿಸುವುದು (ಸಾನಂದ. ೫-೧೮); ಹುಸಿ ನುಸುಳುಡೊಳ್ಳಾಸ ಹಿಂಸಾವ್ಯಸನವಾಱಿಡಿ ಬಂದಿ ದಳವು[ಪಾಠಾಂ. ದು]ಳವಸುರಭಯ ದುರ್ಭಿಕ್ಷ ಎಂಬಿವರೆಸಕ ಹೊದ್ದದಯೋಧಿಪನ ಧರಣೀತಳಾಗ್ರದಲಿ (ತೊರರಾ. ೧-೩-೨೭). ೩. ಕಾಮನ ಕಾರಾಗಾರದೊಳಿರ್ಪಂತೆ ಕೇಳೀವನದೊಳಿರ್ಪ ಬಾಲಕಿಗೆ ಚಂದ್ರನ ದಾಳಿ ಅಳಿಗಳ ದಳವು[ಪಾಠಾಂ. ದು]ಳಂ ಬಸಂತನ ಬಂದಿ . . . ಶಿಶಿರೋಪಚಾರದ ದಂಡಣೆಯಖಂಡಿತಮಾಗೆ (೧೦೪. ೪-೧೧೮ ಪ); ತಳಿತ ಝಲ್ಲರಿಗಳಿಗೆ ಗಗನದ ಮಳಯಮೈದದು . . . ದಿಗುವಳಯಮಿಟ್ಟೆಡೆಯಾಗೆ ರಥಹಯ ದಳವುಳಕೆ ಕುರುಸೇನೆ ನಡೆದುದು ದೊರೆಯ ನೇಮದಲಿ (ಕುವ್ಯಾದ್ರೋ. ೧-೪೫). **ದಳವುಳಿ**. 'ದಳವುಳಿಗ', 'ದಳವುಳಿಗೊಳ್' ಪರಾ. **ದಳಾದುಳಿ**: ೧. ಬಡವರೆಂದು ಮಱಿ ಮುಗ್ಗುಲಲ್ಲಿ ಕೊಂಬುದು ತುಡುಗುಣಿ ಪ್ರಸಾದ ನಚ್ಚುಮಚ್ಚಿನಲ್ಲಿ ಎಳೆದು ಸೆಳೆದುಕೊಂಬುದು ದಳಾ[ಪಾಠಾಂ. ಳ]ದುಳಿಪ್ರಸಾದ (ಚನ್ನಬ. ಕ. ೨೭೦-೫೭೭). **ದಟವುಟ**: ೧. "ದಟವುಟಂ ಬಲ್ಸೂಱೆ" (ಸಂಜೀವ. ೩); ದಟವುಟವಾಱಿಡಿ . . . ಲಂಚಂ ಕಳವು ಪಿಸುಣ್ ಪಸವು ಬಱಂ ಪಟಿವಟಿ ಪಲಸೊಲಸು ಕುತ್ತುಮಿಲ್ಲಾ ನಾಡೊಳ್ (ಶಬ್ದಾನು. ೧೯೦ ವ್ಯಾಖ್ಯಾ). ೫. "ಅಬ್ಬರ; ಗಲಾಟೆ" (ಪ್ರಭಾ): ಕಿವಿಪಂ ಪಳಂಚಲೆವ ಮುಂಚದ ಶಕುನಿಯಂಚೆಯ ಗಿಳಿಯ ಪುರುಳಿಯ ಪಾರಿವದ ಕೊರಲುಲಿಯ ದಟವುಟವನಾಲಿಸಿ (ಚಂದ್ರಪು.೮-೭೭ ವ); ಜವನ ದೂಱುಗಾಱರ ಜಂಗುಟಿ ನೇಣ ಶೂಲದ ಕರಗಸದ ಇಟ್ಟಿಯ ಕವೆಗೋಲ ಇರ್ಕುಟಿಯ . . . ಪರುಟವಣೆಯ ಸಡಗರದ ದಟವುಟದಿಂ ಬಂದು ಮುತ್ತಿ ಮುತ್ತಿ ಅಱಗುಲಿ ಜೀವಾತ್ಮನಂ ಸೆಱಿವಿಡಿದತ್ತು (ರಾಮಾಶ್ವ. ೭೯-೨೨); "ದಾಂಧಲೆ" (ರಾಮಾಶ್ವ. ಕೋಶ); "ಅಬ್ಬರ; ಹಾವಳಿ" (ಪ್ರಭಾ).

**ದಳದುಳಮಾಗು**, ದಳದುಳವಾಗು = ೧. ಸೂರೆಹೋಗು; ಲೂಟಿಯಾಗು: ಮೊಳೆತುವೊಂದೊಂದು ನಕ್ಷತ್ರ ಕ್ಷತ್ರತ್ವದೊಂದಳವು ದಳದುಳಮಾಯ್ತು ಕಾಮಿಜನಕಂಗಜಂ ಗೆಲಿದನೀ ಜಗವ ಗಮನೋದ್ಯುಕ್ತನಾಗಿ ನೇಸಱ್ ಬೀಳಲೇವೇಳ್ವೆನು (ಚಿಲಪು. ೯-೫); ಕಾಳಲದೇವಿಯ ಕುಮಾರ ಪಾಣ್ಡ್ಯದೇವ ಮಹಾದೇವನವರು ದಳದುಳವಾಗಿ ಆ ಮರಕಾಲನ ಕೊಂದು ವಸ್ತು ವಾಹನವನು ಕೊಣ್ಡುದಕ್ಕೆ (ಎಕ. VI, ಚಿಕ್ಕಮ. ೩೭-೭; 1292); ದಳವು ದಳವುಳವಾಯ್ತು . . . ತನಿಸೊಕ್ಕಿ ದೆಸೆವಟದುಳಿದು ಸೌಭದ್ರೇಯ ಭೃಂಗನ ಬಿಲುದನಿಯು ಭರವಂಜಿಸಿತು ಜಯಯುವತಿ ವಿರಹಿಗಳ (ಕುವ್ಯಾದ್ರೋ. ೭-೩೧). **ದಳದುಳ ಮಾಡು** = ಲೂಟಿ ಮಾಡು: ಚರಲಿಂಗ ವಿಂತು ದಳದುಳ ಮಾಡೆ ಮುನ್ನಿರ್ದ ಸರಳ ಪೆಟ್ಟಿದರನಂ ಪೆರ್ಚಿ ತುಳ್ಕಾಡುತಿರೆ ಕರಮೆ ವರ್ಧಿಸುತಿರಲ್ಪ್ರೋಕುಲಂ (ಅರಾಚ. ೦೩-೪೫).

**ದಟದುಟವಾಯ್**, ದಳದುಳವಾಯ್ (ಕ್ರಿ). ದಾಳಿಮಾಡಿ ಸೂರೆಗೊಳ್ಳು,-ಕೊಳ್ಳಿಹೊಡೆ,-ಲೂಟಿಮಾಡು : ದಟದುಟವಾಯ್ವವೋಲ್ ಸಕಲಸೈನ್ಯಯುತಂ ಧಳಿ ಚಂಡವರ್ಮನಾಗಳೆ ಮುಳಿದಂಗಭೂಪತಿಯ ಸತ್ವಮನೊರ್ವೆಯೆ ಸೂ ಱೆ ಗೊ ೦ ಡು (ದಕಳು. ೮ ೩೨೨) ; ನಿಶ್ಶಂಕಮಾಗಿರ್ಪ ತೆಲುಂಗಪಾಳೆಯಮಂ ದಟದುಟವಾಯ್ದು (ಚಿಕವಿ. ೨-೪೯). **ದಳದುಳವಾಯ್** : ತಾನು ಆರ ಮೆ ೯ ಲೆ ಯಾ ದ ರೂ ದಳದುಳವಾಯ್ದಾಗ ಕೈಸಾರ್ವ ದೇಶಕೋಶ ಧನಕನಕ ವಸ್ತ್ರಭೂಷಣ ಧಾನ್ಯಾದಿಗಳಲ್ಲಿ (ಬಿರುಗಂ. ೩೬-೧೫). [ದಟದುಟ + ವಾಯ್$_1$]

**ದಟಮುಖ** (ನಾ). ಸೈನ್ಯದ ಮುಂಭಾಗ ; ಚೂಣಿ.

ದಟಮುಖಧವಳ = ಸೇನೆಯ ಅಗ್ರಭಾಗದಲ್ಲಿ ಶೋಭಿಸುವವನು ; ಒಂದು ಬಿರುದಂ : ಗುಣಕ್ಕೆ ಸಲ್ಲ ಗಣೇಶಂ, ದಟಮುಖಧವಳಂ, ದಟಮುಖಾದಿತ್ಯಂ, ರಾಯಕೋಳಾಹಳಂ ಈ ತೆಱದ ಬಿರುದಿನೊಳ್ ಎತ್ತಾನುಂ ಸಲ್ವುದು (ಶಮದ. ೧೭೪ ಪ್ರಯೋ). **ದಟಮುಖಾದಿತ್ಯ** = ಸೈನ್ಯದ ಅಗ್ರಭಾಗದಲ್ಲಿ ಸೂರ್ಯನಂತೆ ಪ್ರತಾಪಶಾಲಿಯಾದವನು ; ಒಂದು ಬಿರುದಂ : ಗುಣಕ್ಕೆ . . . ದಟಮುಖಾದಿತ್ಯಂ, ರಾಯಕೋಳಾಹಳಂ (ಶಮದ. ೧೭೪ ಪ್ರಯೋ). [ದಟ + ಮುಖ]

**ದಟವಡು** (ಕ್ರಿ). ಪಡೆಯಾಗು ; ದಳವಾಗು ; ಗುಂಪಾಗು : ಕಟ್ಟುಱದೋಳಿಟ್ಟಣಿಸಿ ಮುಟ್ಟಿ ನಡೆದಾರ್ಪಿಂ . . . ನೆಟ್ಟನಿನಿಸಂ ಪಿಮ್ಮೆಟ್ಟ ದಟವಟ್ಟಡರಯಟ್ಟಿಳಿವರಂ ಕೈಗೊಟ್ಟು ಪುಯಿಲಿಟ್ಟರೆನೆ ದಿಟ್ಟತನಮಂತೋ (ಚಿಕವಿ. ೨-೪೩). [ದಟ + ಪಡು$_1$]

△ **ದಟವಾಯ್**' ದಳವಾಯ್' ನೋ.

△ **ದಟವಾಯಿ** 'ದಳವಾಯ್' ನೋ.

**ದಟವುಟ** 'ದಟದುಟ' ನೋ.

**ದಟಿಗವಾಡಿ** (ನಾ). ಒಂದು ಸ್ಥಳದ ಹೆಸರು : ಅಯ್ಯಪದೇವನ ಮಗಂ ಗನ್ನರಸಂ ದಟಿಗವಾಡಿಯ ಕುಱುಕ್ಷೆನ್ನಟ್ಟಿಯನಾಳುತ್ತಿರೆ (ಎಕ. IX, ಹೊಸಕೋ. ೧೦೧-೪; 997); ದಟಿಗವಾಡಿಯಾನ ವಿಕ್ರಮಚೋಟವಣ್ಣಾಲದ ಮಣ್ಣಿನಾಡ ಕೇಸೂರ ಬಣ್ಣಕರ ಬಲಿಪಟ (ಮೈಆರಿ. ೧೯೦೫, ೧೯-೬ ; 1050). 'ದಳಿಗವಟಿಗ' ಪಠಾ. [ದಟಿಗ$_1$ + ಪಾಡಿ$_2$]

**ದಟಿ** (ನಾ). ಒಂದು ವೃತ್ತಿಯ ಹೆಸರು (?) :

ದಟಿಯರು=(?): ಪೆರ್ವ್ವಯಲ ಕವ್ವಿಚ್ಚರು ದಟಿಯರು ಕುರ[ಬ]ರು ಗಣಿಗರು ಪೆಮ್ಮದವರು ಅನಂದರು ಎನೆತ್ತರು ಸಾಕ್ಷಿ (ಇಆ. XIV, ೨೩೩-೩೯ ; ಸಂ. ೯ನೆಯ ಶತ). [?]

**ದಟ್ಟಟಿ**, ದಳ್ಳಳಿ (ನಾ). ಸಂಕೋಲೆ ; ಕೋಳ ; ಸರಪಣಿ : "ದಟ್ಟಟಿ= ಸಂಕಲೆ" (ಶಮದ. ಪಠಿ. ೧) ; "ದಟ್ಟಟಾಯೆಂದು ಸಂಕಲೆಯೊಳಾಯ್ತು" (ಕರ್ಣಾನಿ. ೭೩). **ದಳ್ಳಳಿ** : ಮುಳಿಸಿಂದಂ ಭೂತವೃಂದಂ ಕೊಳುಗುಳದೆಡೆಯೊಳ್ ಸಿಲ್ಕಿದಸ್ವಪ್ನರಂ ದಳ್ಳಳಿಯಂ ಕಯ್ಯಾಳ್ಗೆ ಮತ್ತಾ ಜಠರಗಳಕೆ ತಂದಂತವಂ ಮೇಳಿಸುತ್ತಂ . . . ಕಟ್ಟುತ್ತುಂ ಬಳಿಕ್ಕಂತವರ್ಗಳನೆಳತಂದೊಪ್ಪಿಸುತ್ತಿರ್ದುದೇಗಂ (ಪೀರವಿ. ೧೨-೬೯). [?]

**ದಾ**$_1$ (ನಾ). ಒಂದು ಅನುಕರಣ ಶಬ್ದ : ದಾಯೆನೆ ನೋಡುವ ಕರೆದಯ್ಯಾಯೆನಲಾಲ್ಪವ ... ಮಯ್ಯುರಿದಾಯಿರವಿಂದತ್ತಲೆಸೆದಮುಕಿಯುಕಿಶಯಮಂ (ಮಹಾನೇ. ೬-೭); ಸೆಱಗಿನೊಳಗಡಗಿ ನೋಡುತಲಿದಾ[ಪಾಠಾಂ. ಬಾ]ಎನುತ ಚೈಮುಂಡಾಡಿ ಮುಂದಲೆವಿಡಿದು ಕುಣಿಕುಣಿದಾಡಿ (ಪ್ರಭುಲೀ. ೩-೨೯) ; ಬೇಡುವರ್ ಕೆಯ್ಗಳೊಳ್ ಮೆ ಯ್ಗ ಳೊ ಳ್ ಬಾಯ್ಗಳೊಳಗಾಡಿಸುವ ದಾಯೆಂದುದಾಯೆಂದು ಬಾಯೆಂದು ಪಾ ಡು ವ ರ್ . . . ಕುವರನಂ (ಚಬಪು. ೫-೨೬) ; ಪಡಿನೆಳಲಂ ಮಣಿಕುಟ್ಟಿಮದೆಡೆಯೊಳ್ ನಡೆ ನೋಡಿ ನೋಡಿ ದಾಯೆನುತಂ (ರಾಜಶೇ. ೩-೫೨).

**ದಾ**$_2$ 'ದಸ್ಕ' ನೋ.

**ದಾ**$_3$ (ನಾ). [ಗಣಿತ] ಆರು ಎಂಬ ಸಂಖ್ಯೆಯ ಸಂಕೇತ : "ದಾ, ಖರ . . . ವದನ ? ಇಂತಿನಿತಂ ಓಕ್ಕ ಪೆಸರು" (ವ್ಯವಹಾ. ೧೦-೨೩). [?]

**ದಾಂಗುಡಿ** 'ದಾಂಟುಂಗುಡಿ' ನೋ.

**ದಾಂಗುಡಿಬಿಡು** 'ದಾಂಗುಡಿವಿಡು' ನೋ.

**ದಾಂಗುಡಿಯಿಡು** (ಕ್ರಿ). ೧. ಕುಡಿ ಚಾಚು ; ಕುಡಿ ಹಬ್ಬು : ಬಿಸರುಹನೇತ್ರೆಯೊಳ್ನಡು ಪೊದಟ್ದುದು ದಾಂಗುಡಿಯಿಟ್ಟು ಬಾಸೆ ನೀಳ್ದಿಸೆದುದು ಪಿಂಗಿ ಪೋದುದು ವಳಿತ್ರಿತಯಂ (ಪಂಚತಂ. ೧೮೪-೦೦) ; ಅಂಗಣದೊಳಗಾಡುವ ಭೂಮಿಪವರನಂಗನೆಯರ ದಿಟ್ಟಿವೆಳಗು ದಾಂಗುಡಿಯಿಡಲಿಕ್ಕಿದ ಹೊಸ ಮುತ್ತಿನ ರಂಗವಲ್ಲಿಯ ತೆಱನಹುದು (ಶ್ರೀಪಾಲ. ೨-೪). ೨. ಹಬ್ಬು ; ವೃದ್ಧಿಯಾಗು ; ವ್ಯಾಪಿಸು ; ಮುಂದುವರಿ : ದಾಂಗುಡಿಯಿಟ್ಟುದಿಂಗಡಲ ಬೆಳ್ಪು ಕರಂ ಮೊಳೆವೂದುದಿಂದುಕಾಂತಂಗಳ ಬೆಳ್ಪು ಮೂಡಿದುದು ನೆಯ್ದಿಲ ಬೆಳ್ಪು (ಲೀಲಾವ. ೨-೨೦) ; ಹೆಂಗಳು ಮತ್ತೆಂಟುದೆಸೆಗೆ ದಾಂಗುಡಿಯಿಟ್ಟು ಸಾಲ್ವಿಡಿದಾಗ ಶೃಂಗಾರಗಂಗೆ ಪರಿವವೊಲಾಡಿದರು (ಭರತ. ೦೩-೯೮) ; ಆನಂದವಾರಾಶಿ ದಾಂಗುಡಿ [ಪಾಠಾಂ. ತಾಂಕುಡಿ, ತಾಂಗುಡಿ]ಯಿಟ್ಟುದು ಸಲೆ ಸೌಖ್ಯಮೇ ರೂಪನಾಂತು ನಡೆತಂದುದು (ಚಬಪು. ೨೦-೬) ; ವಿಜಯಾಂಶುವೃದ್ಧಿ ದಾಂಗುಡಿಯಿಡೆ ಧರ್ಮರಾಜ್ಯಮೆನಿಸುತ್ತಖಿಲಾವನಿಭಾಗಮಂ ಜಸಂಬಡೆದಿರೆ ಕೃಷ್ಣರಾಯನೆನಿಪೊಳ್ಪೆಸರೀಯರಸಿಂಗೆ ಸಂಗತಂ (ಚಿಕವಿ. ೨-೦೦) ; ಅಮರರ್ವರಿಸಿ ಬಳೆವುದು ಶಂಕರ ಲಲಿತಾಲಾಸ್ಯಂ . . . ಹರಿವಾಣೀವಾದನಕನುಕೂಲಂ ದಾಂಗುಡಿಯಿಡುವೊಲು ಮಾಯಾಜಾಲಂ (ಗಜೇಶ. ೦೯-೪೯೦).

[ದಾಂಗುಡಿ (<ದಾಂಟುಂಗುಡಿ) + ಇಡು$_1$]

**ದಾಂಗುಡಿವಡೆ** (ಕ್ರಿ). ಕುಡಿಯಿಡು ; ಬೆಳೆ : ಕಡುಚೆಲ್ವುವಡೆದು ಬಳಸಿಯುಂ ಪೆಂಡೆಯುಡುಗದೆ ಕಾಂತೆಯರ್ ನಯುಂಬಿಡದಿರೆ ದಾಂಗುಡಿವಡೆವ ಕಲ್ಪಲತೆಗಳ ನಡುವಣ ಕಲ್ಪಾವನೀಜಮಿರ್ಪಂತಿರ್ದಂ (ಸುಕುಮಾ. ೧೦-೧೦೦).

[ದಾಂಗುಡಿ (<ದಾಂಟುಂಗುಡಿ) + ಪಡೆ$_1$]

**ದಾಂಗುಡಿವರಿ** (ಕ್ರಿ). ಕುಡಿ ಹಬ್ಬು ; ಮುಂದೆ ಚಾಚು : ಮರದಿಂದ ಮರಕ್ಕೆ ದಾಂಗುಡಿವರಿವೆಳಲತೆಯಂತೆ ನೀತಿಮಾಂಧಾತನೊಳಾವರಿಸಿರ್ದ ರಾಜವಿದ್ಯಾಧರನಲ್ಲಿಗೆ ರಾಜ್ಯಲಕ್ಷ್ಮಿ ನಿಲುಕಿದಳಾಗಳ್ (ಕಾದಂಪೂ .೫೮೧).

[ದಾಂಗುಡಿ (<ದಾಂಟುಂಗುಡಿ) + ಪರಿ$_1$]

**ದಾಂಗುಡಿವಿಡಿಸು** (ಕ್ರಿ). ವೃದ್ಧಿಯಾಗುವಂತೆ ಮಾಡು ; ಬೆಳೆಸು : ಆ ಎಲ್ಲ ಝರಿಗಳಿಂದ ತಮ್ಮ ಭಕ್ತಜೀವನದ ಬಳ್ಳಿಗೆ ನೀರುಣಿಸಿ ದಾಂಗುಡಿವಿಡಿಸಿದರು (ತವನಿ. ೧೬೧). [ದಾಂಗುಡಿವಿಡು + -ಇಸು$_3$]

**ದಾಂಗುಡಿವಿಡು**, ದಾಂಗುಡಿಬಿಡು (ಕ್ರಿ). ಹಬ್ಬು ; ವ್ಯಾಪಿಸು ; ಮುಂದುವರಿ : ವಿಕಟಾಕ್ಷರಂಗಳೊಳ್ತೊಡರದೆ ಸಕ್ಕದಂಗಳ ಪದಂ ಪವಣಾಗಿರೆ ಪೆಲ್ಬುವೆತ್ತು ದಾಂಗುಡಿವಿಡುವಂತೆ ನೀಟ್ಟು ನಿಲೆ ಪೇಟ್ದುದು ನೀತಿನಿರಂತರಕ್ರಮಂ (ಕವಿರಾ. ೦-೧೪೪) ; ಅಂತು ತನ್ನ ತಾಂಡವಾರಂಭದೊಳಳವಿಗಿಟಿದರಾಗದಿಂ ನಿರ್ಮಿಸಿದ ಭುಜಶಾಖಾಸಹಸ್ರಂಗಳೊಳ್ ದಾಂಗುಡಿವಿಟ್ಟನಂಗಜಂಗಮಲತೆಗಳನನುಕರಿಸಿ ದೇವಗಣಿಕೆಯರಾಜಿಡುವಾಗಳ್ (ಆದಿಪು. ೭-೦೨೨ ವ) ; ಚಾಗದ ಕೀರ್ತಿವಲ್ಲಿ ದಾಂಗುಡಿವಿಡೆ (ಗದಾಯು. ೦೦-೫); ತಳಿವುದು ಮಾಂಸವಾರಿಯಂ ಸ ಸಿ ಗ ಳೊ ದ ವಿ ದಾಂಗುಡಿವಿಡುಗುಂ(ಲೋಕೋಪ. ೬-೭). **ದಾಂಗುಡಿಬಿಡು** : ಹೊಕ್ಕುಳ ಬಳ್ಳಿ ಹರಿದಂದಿನಿಂದಲೂ ನಡೆದಿದೆ ಸಂಯೋಗಕ್ಕಾಗಿ ನಿರಂತರ ತಪ: ದಾಂಗುಡಿಬಿಟ್ಟಿದೆ ವಾತ್ಸಲ್ಯದ ಬಯಕೆಯಾಗಿ (ಮೂರುದಾ. ೨೦೬) ; ಹೊಸಹರುಷಗಳ ಬಳ್ಳಿಗಳು ಕೊನರಿಕುಡಿಯೊಡೆದು ದಾಂಗುಡಿಬಿಡುವಂತಿಲ್ಲ (ಜಾಹುಶ. ೯೯).

[ದಾಂಗುಡಿ (<ದಾಂಟುಂಗುಡಿ) + ಬಿಡು$_1$]

**ದಾಂಟಿಸು$_1$**, ದಾಟಿಸು (ಕ್ರಿ). ೧. ಈ ಕಡೆಯಿಂದ ಆ ಕಡೆಗೆ ಹಾಯಿಸು; ಹಾರಿಸು; ನೆಗೆಸು: ತುರಗವನು ಮಡದಿಂದೊತ್ತಿ ದಾಂಟಿಸಿದನಾ ಮಹಾ ದ್ವಾರವನು (ಕೀಜಿಮ. ೯-೪) ೨. ಆಚೆಗೆ ಒಯ್ಯು; ಕಡೆಹಾಯಿಸು; ತಟಿಹಾಯಿಸು; ಪಾರುಗಾಣಿಸು: ಸಂಸರಣಮಹಾಸಮುದ್ರಮನತೀವ ಸರೌದ್ರಮನೆಯ್ದೆ ದಾಂಟಿಸಿಂ ಕರುಣದಿನೆಮ್ಮಂ (ನೇಮಿಪು. ೧೪-೧೦೦); ಅದು ಸಂಸಾರಾಬ್ಧಿಯಂ ದಾಂಟಿಸುವುದದು ದುರಾಚಾರ ದುರ್ಬುದ್ಧಿಯಂ ಕೀಳ್ವುದು . . . ಲಿಂಗಾರೂಢನಂ ಮಾಡುವುದು ಶರಣಸಾಂಗತ್ಯವು (ರಜ್ಞಾಶ. ೫೭); ಸ್ವಕುಲದಖಿಲರಂ ಘೋರಭವವಾರ್ಧಿಯಿಂ ದಾಂಟಿಸುವನೆಂದು ಬೋಧಾಮನಸುಶಾಹಿಯುಂಲಿಗುಂ (ಶದ್ಮರಾ. ೧೧-೧೨೫); ಪೆಸರುವಡೆದ ಮಧುರಸವಾಹಿನಿಯ ದಾಂಟಿಸಲು ಚಂದನದೋಣಿಗಡರ್ದು (ಪೋಹಕ. ೫-೩೭). ೩. ದಮನ ಮಾಡು; ನಿಗ್ರಹಿಸು: "ದಾಂತಃ, ದಮಿತಃ – ದಾಂಟಿಸಲ್ಪಟ್ಟುದು" (ಸಾಚಿಂ. ೬) ೪. ಮೀರಿಸು: ನಿಜ ಗಳನಿಕ್ಕಿ ದಾಂಟಿಸದೆ ದುಂಡಿಸುವಾಕೆಯನೊತ್ತಿಗೊಳ್ಳದಂತೆಚಿಯದೆ ತೀವೆ ಗುಳ್ಳ ಬಳಿನೀರ್ಗಳನಗ್ಗದ ಪೆಣ್ಗೆ ಮಯ್ಯನೆಯ್ದಿಚಿಯದೆ (ಲೀಲಾವ. ೩-೯೩). ೫. ಮೀರು; ಅತಿಕ್ರಮಿಸು: ವ್ಯತ್ಯಯ ಜವನ ಮಾರಿಯ ದಾಂಟಿಸುವ ವೇದಾಂತಿಗಳ ವಾಟ ಶಿವನ ಪೊಸ ಕರವಾಳು . . . ಶಂಕರ ನೊಲುಮೆಯುಳ್ಳಾಳು (ಬಸವು. ೬-೧೧). **ದಾಟಿಸು**: ೨. ನಾನು ಅವಳಿಗೆ ಊಟದ ಮನೆಯ ಹೊಸಲು ದಾಟಿಸಿ ಅಡಿಗೆಯ ಮನೆಯೊಳಕ್ಕೆ ಕರೆದು ಕೊಂಡು ಹೋದೆ (ಅಂಗಾಳ್ವ. ೧೩); ಎಲ್ಲೆ ಅಗ್ನಿಯೆ . . . ನೀನೇ ಅನ್ನ ಸಾಧಕನು, ಪಾಪದಿಂದ ದಾಟಿಸತಕ್ಕವನು (ಋಕ್ಸಾರ. ೨೫). ೬. ಸಾಗಿಸು; ಕಳುಹಿಸು; ರವಾನಿಸು; ಹೋಗುವಂತೆ ಮಾಡು: ಸುಗ್ರೀವ ಹಾಯೆನುತೊದಱೆ ರಣದಲಿ ಜೀವವನು ದಾಟಿಸಿ [ಪಾಠಾಂ. ದಾಳಿಸಿ, ದಾಟಿಸಿ]ದನಾ ಧ್ವನಿಗೇಳಿಸಿತು ಕಿವಿಗೆ (ತೊರರಾ. ೪-೨-೨೫); ಸೂಟಿಯ ಬಾಣಗಳಿಂದಿಟ್ಟು ಜೀವವ ದಾಟಿಸಿದರು ಯಮಪುರಿಗೆ (ಕಂನವಿ. ೧೮-೭೭); ಕನ್ಯಾದಾನವೆನ್ನುವುದು ಒಂದು ಕೈಯಿಂದ ಇನ್ನೊಂದು ಕೈಗೆ ದನಕರುಗಳನ್ನು ದಾಟಿಸಿದ ಹಾಗೆ (ವಕಥಾ. ೭೦); ದ್ರುಪದನು ರಾಜಾಧಿ ರಾಜನಾದ ತನಗೆ ಬಡಹಾರವರ ಗೆಳೆತನವಿಲ್ಲೆಯದೆಂದು ಅವನನ್ನು ಹೊರಗಣಿಂದ ಹೊರಕ್ಕೇ ದಾಟಿಸಿಬಿಟ್ಟನು (ನೀಗಟ್ಟು. ೦೧೪).

**ದಾಟಿಸಿಕೊಳ್** = ರಕ್ಷಿಸು; ಆಶ್ರಯ ಕೊಡು; ಕಾಪಾಡು: ದೃತ್ಯ ವಧೂಟಿಯ ಕರೆದು ತನ್ನೊಡನೆ ಸೂಟಿಯೊಳ್ ಸಾವಂತ ಕೆಯ್ಯ ಖಡ್ಗವ ನಿಕ್ಕಿ ದಾಟಿಸಿಕೊಂಡಳೆಲ್ಲರನು (ಪೋಹಕ. ೫೫-೫೦).

[ ದಾಂಟು$_1$ + – ಇಸು$_3$ ]

**ದಾಂಟಿಸು$_2$** 'ತಾಂಟಿಸು' ನೋ.

**ದಾಂಟು$_1$**, ದಾಟು$_1$ (ಕ್ರಿ). ೧. ಹಾರು; ನೆಗೆ; ಜಿಗಿ; ಲಂಘಿಸು: "ದಾಂಟು–ಲಂಘನೇ" (ಶಮಧಾ); "ಲಂಘಿಸುವುದಕ್ಕೆ ದಾಂಟೆಂದು" (ಕಕರ ೧೨೫); ಸುಹೃಚ್ಛ್ರೋತಾಂಧನಂ ಮಗುಟ್ದು ಮರ್ತ್ಯಮಾರ್ಗದೊಳ್ ಪರಿ ಯುತ್ತವೊರ್ವ ವೈಮಾನಿಕನಂ ಭರದಿಂ ದಾಂಟುವುದುಂ (ಕಾದಂಸಂ. ೭೦೪). ೨. ಹಾಯ್ದು ಹೋಗು; ಮುಂದೆ ಸಾಗು; ತಟಹಾಯು; ಆಚೆಗೆ ಹೋಗು: ವಿಷಯಾಧಿಪತಿಗಳಪ್ಪರಸುಗಳಿಲ್ಲಂ ನೆರೆದಿರ್ದಲ್ಲಿಯಾರುಮಂ ವೆಚ್ಚದೆ ದಾಂಟಿ ಪೋಗಿ ಕುಬೇರಕಾಂತಂಗೆ ಮಾಲೆಯಂ ಸೂಡಿದಳ್ (ವಡ್ಡಾರಾ. ೪೧-೪); ಭೀಮನಂ ಪೊಣರ್ದು ನೆಲಕ್ಕಿಕ್ಕಿ ಬೆನ್ನಂ ಮೆಟ್ಟಿ ದಾಂಟುವ ಮದಗಜದಂತೆ ಕೊಲಲೊಲ್ಲದೆ ದಾಂಟಿದಾಗಳ್ (ಪಂಪಭಾ. ೧೩-೪೧ ವ); ರುಧಿರಸ್ರೋತಂಗಳಂ ದಾಂಟಿದಾಂಟಿಭದೋರ್ನೀಲಲತಾ ಪ್ರತಾನವಿಪಿನವ್ರಾತಂಗಳೊಳ್ಸಿಲ್ಕಿಸಿಲ್ಕಿ (ಗದಾಯು. ೯-೪೭); ಗರಳ ಪುರದ ನದಿಯನು ದಾಂಟ ಬಲ ಸಹ ನೆಱೆಯರ್ಧರಾತ್ರಿಯೊಳಾಗ . . . ಅರಿತಂತ್ರವ ತಱಿದೊಟ್ಟಿದನು (ಕಂನವಿ. ೩-೫೫). ೩. ಬಿಟ್ಟು ಹೋಗು; ತೊರೆದು ಹೋಗು: ಉತ್ತರಗುಡದೆ ಜಲವೀಂಟಿದನು ದಾಂಟಿದುದಸು ಕಳೇಬರವ (ಕುಮ್ಯಾಭ. ೨೩-೨೧). ೪. ಮೀರು; ಪಾಲಿಸದೆ ಇರು; ಅತಿ ಕ್ರಮಿಸು: ಸಪ್ತಸಮುದ್ರಂ ಕರೆಗಣ್ಮಿ ತನ್ನವಧಿಯಂ ದಾಂಟಿತ್ತು . . . ಎಂಬೊಂದು ಸಂದೇಹಮಂ ಪೊಸತಂ ಭೂಭುವನಕ್ಕೆ ಮಾಡಿದ ದು ತತ್ಪನ್ನಾಹಭೇರೀರವಂ (ಪಂಪಭಾ. ೯-೯೪); ಯತಿಯೆಂಬುದು ಗಣನಿಯತಂ ಪ್ರತೀತಮುಸಿರ್ದಾಣಮಂತದಂ ದಾಂಟಲ್ಕಾ ಯತಿ ಕೆಡುಗುಂ ದಾಂಟಿ ದೊಡಾ ಯತಿ ಕೆಡೆ ಕವಿತಾಭಿಧಾನಮೇನೆಸೆದಪುದೆ (ಛಂದೋಂಬು. ೧-೪೫); ರವಿ ಮಾಱಿಟ್ಟಳೆದಂ ವಿಯತ್ತಳಮನಾಶಾಸೀಮೆಯುಂ ದಾಂಟುವನ್ನೆವರಂ ತನ್ನ ಕರಂಗಳಿಂದೆನೆ ಪೆಱಂಗೇಂ ಮೊಗ್ಗೆ (ಪಂಪಾಶವ. ೧-೩೯); ನಿಱೆಯನಿಕ್ಕಿ ದಾಂಟಿದರೆ ಅಂತೆನ್ನ ನಂಬಾ (ಬಸವ. ೫೦೦); ಉಟ್ಟ ನಿಱೆ ದಾಂಟಿದೊಡೆ ಕಚ್ಚುವುದೆ ದೈವವಂ ಮುಟ್ಟದೊಡೆ ಬೆರಳು ಹತ್ತುವುದೆ (ಸೋಮೇಶ. ೨-೪೦); ನಿಱೆಯ ದಾಂಟಲು ಕಚ್ಚುವುದೆ ಬಳಿನೀರ್ಗುಡಿಯಲೀಯುದರ ಉರಿವುದೆ (ಜೀವಂಧ. ೧೭-೫೭); ಅಣ್ಣನಾಜ್ಞೆಯ ಚಿತ್ರದಲಿ ನೀವ್ ದಾಂಟ ದಿಹುದಾರಣ್ಯವಾಸದಲಿ (ಕುಮ್ಯಾಭ. ೭೦೩. ४-೫೯); ಉಟ್ಟ ಸೀರೆಯ ದಾಂಟು ಮುಟ್ಟನ್ನು ದೈವವ (ಅಮುಸಾಂ. ೩-೭೩); ಬಳಿನೀರ ಕುಡಿದು ನಿಱೆಯ ದಾಂಟ ಪುತ್ಥೂದಿ ಬಳಸಂದಿನಿಯರ ಚಿತ್ರವನು ತಿಳಿಸಿ ಕಾಲ್ವಿಡಿ ದೊಡಗೂಡುವ ಗಳಸಾಳಿ ಬೆಲೆವೆಣ್ಣಳು (ಕುರಾಸಾಂ. ೨೮-೮೮). **ದಾಟು$_1$**: ೨. ಹಳುವ ದಾಟಲಿ ದ್ರುಪದನಂದನೆಯಳಲಶಿಖಿಗಿಂಧನವಲೇ ಕುರುಕುಲದ ಕರಡದ ಬಣಬೆ ಕಾದುರುಹುವುದು ಕೇಳೆಂದ (ಕುಮ್ಯಾಭ. ೨-೩೨); ದಾನವ ಕೈಯ ತೋಱಿಸಬೇಕು ಅದಱಿಂದ ನದಿಯ ದಾಟುತಿಪ್ಪ (ಪುರಂದ ೧-೧೮೧-೨೧); ಸೆಱೆ ತುಱು ಸಹಿತ ಸೋಸಲೆಯ ಕಡುವ ದಾಟಿ ಪಿರಿದು ಮಾರ್ಬಲಗೂಡಿ ಬಂದು (ಕಂನವಿ. ೩-೫೭); ನೀನು ಇನ್ನು ಸಂಸಾರವೆಂಬ ಮಹಾಸಾಗರದೊಳಗಿಂದ ದಾಟಿಹೋಗತಕ್ಕವನು (ಮುಂಬಯಿ. ४-೫೯); ಹೊಳೆ ದಾಟಿದ ಮೇಲೆ ಅಂಬಿಗರ ಮಿಂಡ (ಗಾದೆ). ೮. ಗತಿಸು; ಸಾಯು; ತೀರಿಹೋಗು; ಮುಗಿ; ಕೊನೆಗೊಳ್ಳು: ಅವನು ದಾಟಕೊಂಡನು (ಮುಂಬಯಿ. ೫-೦೯೯).

[ ದೇ. ೫ ತಮಿ. ತಾಣ್ಡು; ಮಲ. ತಾಣ್ಟು, ಕಾಟ್ಟು; ತುಳು. ದಾಂಟು; ತೆಲು. ದಾಟು ]

**ದಾಂಟು$_2$** 'ತಾಂಟು' ನೋ.

**ದಾಂಟು$_3$**, ದಾಟು$_3$ (ನಾ). ೧. ನೆಗೆತ; ಜಗಿತ. 'ಮಾಱಿಂದಾಂಟು' ಪರಾ. ೨. ಹಾದುಹೋಗುವಿಕೆ; ಹಾಯುವಿಕೆ: (೬). ೩. ಹಬ್ಬುವಿಕೆ; ಚಾಚುವಿಕೆ. 'ದಾಂಟುಂಗುಡಿ' ಪರಾ. ೪. (?): ಇಱಿಯ ಮುಸುಕಿಟ್ಟು ಬಾಗಿಲ ಬಱಿಯಱಿ ಪರಿತಂದು ದಾ(ದ)ಂಟನೂರಿ(ಱ) ಸಿರೊ(ರೆ)ಳುಂ ಬಿಡದೆ ನಡುಗುತ್ತುಮೊಯ್ಯನೆ ಮಱಿಯಂ ಬೆಸಗೊಂಡೊಡಮಕ್ಕುಮಿದುವೊಂದು ಮತಂ (ಅಟ್ಟಮ. ೧-೫೯). **ದಾಟು$_2$**: ೨. ಕರವಾಳೋನ್ನುಖ ಚಣ್ಡವಜ್ರಹತಿಯಂ ಬಿಳ್ದನ್ಯಮತ್ತೇಭ ಭೂವರ ದಿಂದುಣ್ಮುವ ರಕ್ತವಾಹಿನಿಯಂ ಮಂ ಕಣ್ಣಾಯ್ದು ಭೂತಬ್ರಜಂ ತ್ವರಿತಂ ಮುಂಣ್ಣದ ತಪ್ಪದಿಂ ಶಿರದಲಾಂ ಬದ್ದದಿಂ ದಾಟು ಭೀಕರವಾಗಿರ್ದ್ದುದು ಬಿಟ್ಟದೇವನಿಱಿದತ್ಯುಗ್ರಾಜಿರಂಗಾಂಗಣಂ (ಎಶಿ. XVI (೬), ಚಿಕ್ಕಾ. ೯೮-೪೪; 1169). ೫. ದಾಟುವಂತಹ ಸ್ಥಳ,–ಎಡೆ: ಕೋಟಿಯಿದ್ದುದು . . . ಘೋಟಕದ ಮದಕರಿಯ ಕಂಡಿಯ ದಾಟುಗಳ[ಪಾಠಾಂ. ದ] ಹುಲಿ ಮುಖದ ವಂಕದ ಕೊಟದುರುವಿಲಾಸದ ವಿವಿಧರಚನೆಯಲಿ (ತೊರರಾ. ೫-೨-೪). ೬. ಸಂಗ್ರಹ; ಅಡಕಗೊಳಿಸುವಿಕೆ. 'ದಾಟಂಕಥೆ' ಪರಾ. ೭. ದೃಷ್ಟಿದೋಷ, ಕಾಲುಂಧೂಳು ಮುಂತಾದಂವುಗಳ ಪರಿಹಾರ ಕ್ಕಾಗಿ ನಿವಾಳಿಸಿ ಎಸೆದ ಪದಾರ್ಥಗಳನ್ನು ದಾಟುವುದರಿಂದ ಉಂಟಾಗುವ ಅನಾರೋಗ್ಯ. 'ಕಾಲುರಂಜು', 'ದಾಟುತೆಗೆ' ಪರಾ.

ದಾಟಾಗು = ನಿವಾಳಿಸಿ ಎಸೆದ ಪದಾರ್ಥಗಳನ್ನು ದಾಟಿ ಅನಾರೋಗ್ಯವುಂಟಾಗು; ಕಾಲುರಂಜು ಆಗು : ದಾಟು ತೆಗೆಯುವುದು : ದಾಟಾಗಿದ್ದರೆ, ಅಂದರೆ ಏನಾದರೂ ದೋಷದ ಕಾರಣ ತೊಡೆ ಅಥವಾ ಕಾಲು ಊದಿಕೊಂಡಿದ್ದರೆ . . . ಮಾಡುವ ಶಾಂತಿ (ನನ್ನೂರು. ೯೦೪೪).

[ <ದಾಂಟು₁ ]

**ದಾಂಟುಂಗುಡಿ,** ದಾಗಂಡಿ (ನಾ). ಉದ್ದವಾದ ಕುಡಿ ; ಚಾಚಿಕೊಂಡಿರುವ ಕುಡಿ : "ದಾಂಗುಡಿಯೆಂದು ದಾಂಟುಂಗುಡಿಯೆಂಬರ್" (ಕಶಸಾ. ೨೬-೫೭೪) ; "ದಾಂಗುಡಿಯೆನ್ನಲ್ ನೆಟ್ಟನೆ ದಾಂಟುಂಗುಡಿ" (ಕವಿಕಂ. ೨೨೮) ; ಕಟಂಜನವನ್ನು ದಾಂಟುಂಗುಡಿಯನ್ನೆಂಬಂತೆ ಕಳೆದುಹೋಗಿ, ತಿರುಗಿ ನಿಂತು, ನಿಟ್ಟುಸಿರ್ಗೊಂಡು, ಹೊರಡಲನುವಾಗುತ್ತಿರುವನಂ (ಚಿಟ್ಕಅ. ೧೧೨-೦೪). **ದಾಂಗುಡಿ :** "ದಾಂಗುಡಿಯೆಂದು ದಾಂಟುಂಗುಡಿಯೆಂಬರ್" (ಕಶಸಾ. ೨೬-೫೭೪); "ದಾಂಗುಡಿಯೆನ್ನಲ್ ನೆಟ್ಟನೆ ದಾಂಟುಂಗುಡಿ" (ಕವಿಕಂ. ೨೨೮) ; ಸೋರ್ವ ಸೋನೆಯೊಳೆ ದಾಂಗುಡಿಯಿಂದೆಸೆದಿರ್ಪ್ಪುವು (ಎಇ. XIII, ೩೩೧-೩೯ ; ೯೭೮) ; ತಳ್ತು ಕಟ್ಟಿದ ಗುಡಿ ರಂಗವಲ್ಲಿಗಳೆ ದಾಂಗುಡಿಯಂತಿರೆ ಸೂಸೆ ಸೇಸೆಯಂ ಸುದತಿಯರ್ (ಹಂಪಥಾ. ೫-೧೦೫) ; ಪಸರಿಸೆ ಸುತ್ತಲುಂ ಗುಡಿಯ ದಾಂಗುಡಿ ಮುತ್ತಿನ ರಂಗವಲ್ಲಿ ನಾಲ್ದೆಸೆಯೊಳಮರ್ಕೆವೆತ್ತ ಪಟಹಧ್ವನಿ (ಸುಕುಮಾ. ೧೦-೨೬) : ಗಜಾಕೆಯ ತೊಳಚಿಯ ದಾಂಗುಡಿಯಂ ಚಿವುಂಟ (ರಾಮಾಶ್ವ. ೪೩-೧೬).

[ ದಾಂಟು₁ + ಕುಡಿ₂; P 'ದಾವುಕುಡಿ'ಯಿಂದಲೂ ಇದಕ್ಕೆ ನಿಷ್ಪತ್ತಿ ಹೇಳಬಹುದು ]

**ದಾಂಟುಗಳೆ** (ನಾ). ಹಳ್ಳವನ್ನು ದಾಟಲು ಹಾಕಿರುವ ಬಿದಿರಿನ ಕೋಲು, ಗಳು, ಬೊಂಬು ಇತ್ಯಾದಿ : ಕಾಡುಮೇಡುಗಳುಳಿದು ಪಾಡಿಗಳ ಬಳಿ ಏಡಿದು ಕೋಡುಗಳ ದಾಂಟುಗಳೆಗಳ ತೂಗಿ ನಡೆದು (ಕಾಲೂರ. ೦೫೦-೩೩೦).

[ ದಾಂಟು₁ + ಗಳೆ (<ಗಟಿ³) ]

**ದಾಂಟುಗೊಡು** (ಕ್ರಿ). ದಾಟಲು ಅವಕಾಶ ಕೊಡು : ಏಱುಗೊಂಡಕ್ಕಲನ ದಾಂಟುಗೊಟ್ಟು ಪಾವಿನ ಪೊಸವಗೆಯೊಂದು ಮುಸಕದಿ ಕಿಡಿಕಿಡಿವೋಗಿ ಕುಡಿವರಿವ ವಿಾಸೆಯಂ ತಿರ್ದುತ (ರಾಮಾಶ್ವ. ೮೫-೧೮).

[ ದಾಂಟು₃ + ಕೊಡು₁ ]

**ದಾಂಟುದಾಣ** (ನಾ). ದಾಟುವ ಸ್ಥಳ ; ಹಾಯ್ಗಡ : ದಾಂಟುದಾಣದಾಬಿರುವೊನಲ್ ಕಾಲ್ಗಡ್ಡಮಾಗಿ ಕಣ್ಗೆಡ್ಡವಾದುದೊ ಮುಂದೆ ಕಾಳಿಂದಿಯಾ (ಶ್ರೀರಾವಾ. ೦೩೮-೩೬೮). [ ದಾಂಟು₁ + ತಾಣ ]

**ದಾಂಟುಮರ** 'ದಾಂಟುವರ' ನೋ.

**ದಾಂಟುವರ,** ದಾಂಟುಮರ, ದಾಟುಮರ (ನಾ). ೧. = ದಾಂಟುಗಳೆ : ತೆವತ್ತ ಕಾಲ್ಗಳಿಂ ದಾಂಟುವರವಳಿದಂ (ಕಾಲೂರ. ೦೩೬-೫೯೬). **ದಾಂಟುಮರ :** ೧. ಹಿಂದೆ ಪೋಗುವುದೇಕೆ ದಾರಿಯಿದನುಂ ಬಟ್ಟೆನೆಂದಿರ್ದ ದಾಂಟುವವರದೆಡೆಗೆ ನಡೆತಂದಂ (ಕಾಲೂರ. ೦೩೬-೫೯೫). **ದಾಟುಮರ :** ೨. ನೆಲಬಾವಿಯ ಮೇಲೆ ಅಡ್ಡವಾಗಿ ಹಾಸುವ ಗಳ : ದಾಟುಮರ ಮುರಿದು ಬಾವಿಯಲ್ಲಿ ಬಿದ್ದನು (ಜೂಡಿ). [ ದಾಂಟು₁ + ಮರ₁ ]

**ದಾಂಡಗಾಯಿ** (ನಾ). ಪುಂಡುಗಾರಿಕೆ ; ಪುಂಡಾಟ : ಅಂತೆಯೇ ಪಡದವ್ವ ಕೊಟ್ಟ ಅರ್ಜಿ ನಾನಾನ ಪ ಕರಣದ ಬಗ್ಗೆ ಇರದೆ ದಾದಾ ತನ್ನ ಮೇಲೆ ಏರಿ ಬಂದು ದಾಂಡಗಾಯಿ ಮಾಡಿದ ಬಗ್ಗೆ ಇರಬೇಕು ಎಂದು ಅವರಿಗನಿಸಿತ್ತು (ಗ್ರಾಮಾಯಿ. ೧೧೩). 'ಕಾಟಕಾಯಿ' ಪರಾ.

[ ←ಮರಾ. ದಾಂಡಗಾಈ ]

**ದಾಂಡಪಟಿ** 'ದಾಂಡಪಟ್ಟೆ' ನೋ.

**ದಾಂಡಪಟ್ಟೆ,** ದಾಂಡಪಟಿ (ನಾ). ಒಂದು ಕೈಯ್ಯಲ್ಲಿ ಉದ್ದವಾದ ಕತ್ತಿಯನ್ನೂ ಮತ್ತೊಂದು ಕೆಯಲ್ಲಿ ಕೋಲನ್ನೂ ಹಿಡಿದು ಮಾಡುವ ಕಸರತ್ತು : ಕುಸ್ತಿಯಲ್ಲಿ ಅರ್ಜುನದಾಸನ ಕೈ ಮೇಲಾದರೆ, ದಾಂಡಪಟಿಯಲ್ಲಿ ರಾಜವರ್ಧನನ ಪರಿಶ್ರಮ ಹೆಚ್ಚು (ಪಠಮೀ. ೨). **ದಾಂಡಪಟೆ :** ಚಿಕ್ಕಂದಿನಿಂದ ಗರಡೀ ಸಾಧಕ, ದಾಂಡಪಟೆ, ಕುಸ್ತಿ ಮುಂತಾದ ಶೌರ್ಯದ ಅಭ್ಯಾಸಗಳನ್ನು ಇವರು ಮಾಡುತ್ತಾರೆ (ಕಭಾಗ. ೦೦೪).

[ ←ಮರಾ. ದಾಂಡ್‌ಪಟ್ಟಾ ]

**ದಾಂಡಾಜಿನಿಕ** (ನಾ). ಮೋಸಗಾರ ; ವಂಚಕ; ಮಾಯಾವಿ: "ದಾಂಡಾಜ[ಜಿ]ನಿಕಃ, ಕುಹಕಃ, ಕಾಪಟಿಕಃ, ಜಾಲಿಕಃ, ಕೌಸೃತಿಕಃ, ಧೂರ್ತಃ, ವ್ಯಂಸಕಃ, ಮಾಯಾವೀ, ಪಾಯಿಕಃ, ಮಾಯಿ–ಈ ೧೦ ಮಾಯಾವಿ" (ಹಲಾಯು. ೫೮-೧೯೪). [ ಸಂ. ]

**ದಾಂಡಿ** (ನಾ). ಸಮುದ್ರತೀರದಲ್ಲಿ ಗುರುತಿಗಾಗಿ ನೆಟ್ಟ ಕಲ್ಲು : (ಕಿಸಂಗ್ಟಾ. ೧೩೫). [ ದೇ.॥ ತುಳು. ದಾಂಡಿ ]

**ದಾಂಡಿಗ,** ಧಾಂಡಿಗ (ನಾ). ೧. ಗಟ್ಟಿಗ ; ಕಟ್ಟುಮಸ್ತಾದ ಆಳು ; ಶಕ್ತಿವಂತ ; ಕಸುವುಳ್ಳವನು ; "ಬಲವುಳ್ಳ ದೊಡ್ಡ ಆಳು ; ಬಲವಂತ ; ಶಕ್ತಿವಾನ" (ಜಾನಕೋ. ೪): ಮನೆಯಲ್ಲಿ ಕರೆಯುವ ಎರಡು ಎಮ್ಮೆಗಳು, ಎರಡು ಹಸುಗಳು, ದುಡಿಯಲು ಇಬ್ಬರು ದಾಂಡಿಗರಾದ ಆಳುಗಳು (ಚಿವಿ. ೦೩೨). ೨. ಒರಟು ವ್ಯಕ್ತಿ ; ಅಸಂಸ್ಕೃತ ; ಹುಂಬ : ಕರೆಯದೇ ಮಾಡದೇ ನಾವಿಬ್ಬರು ದಾಂಡಿಗರು ಹೋದರೆ ಕತ್ತು ಹಿಡಿದು ತಳ್ಳಿಯಾರು (ಮರುಸಂ. ೩೮). **ಧಾಂಡಿಗ :** ೧. ಧಾಂಡಿಗರಾದ ಯುವಕರೂ ಹೆದರುವ ಹುಲಿಗಳನ್ನು ನೀನು ಕೊಲ್ಲಲಾರೆಯಾ ? (ಈಕಥ. ೧೫) ; ನಾನು ಬಹಳ ಚೆನ್ನಾಗಿ ಬೆಳೆದು ಧಾಂಡಿಗನಾಗಿದ್ದೆ (ಗರುಡಾ. ೮೩); ಶಿಲ್ಲೊಬ್ಬ ಧಾಂಡಿಗನು ಬಂದವರನ್ನೆಲ್ಲ ಭುಜದ ಮೇಲೆ ಕೂರಿಸಿಕೊಂಡು ನದಿಯನ್ನು ದಾಟಿಸುವನು (ದೇಜಾಂಕ. ೭೫). 'ದಡಿಗ್ಗ' ಪರಾ. [ ←ಮರಾ. ದಾಂಡಗಾ ]

**ದಾಂಡಿಗತನ** (ನಾ). ಒರಟುತನ : ಅವನ ದಾಂಡಿಗತನದಿಂದ ಎಲ್ಲರಿಗೂ ಬೇಸರವಾಯಿತು (ಜೂಡಿ). [ ದಾಂಡಿಗ + – ತನ ]

**ದಾಂಡು** (ನಾ). ೧. ಚಿಣ್ಣಿಕೋಲಾಟದಲ್ಲಿ ಚಿಣ್ಣಿಯನ್ನು ಹೊಡೆಯಲು ಬಳಸುವ ಕೋಲು. 'ಚಿಣ್ಣಿದಾಂಡು' ಪರಾ. ೨. ಕ್ರಿಕೆಟ್ ಮೊದಲಾದ ಆಟಗಳಲ್ಲಿ ಚೆಂಡನ್ನು ಹೊಡೆಯುವ ಸಾಧನ; ಬ್ಯಾಟು : ಹ್ಯತ್ತಿಂಡ ಚೆಂಡು, ಬೆನ್ನಲುಬು ದಾಂಡು (ನಡಬಂ. ೧೦೨-೨೦) ; ಕ್ರಿಕೆಟ್ ಆಟದ ದಾಂಡು ; ಚಪ್ಪಟೆ ದಾಂಡು, ಬ್ಯಾಟು (Bat. ಇಂಕನಿ).

[ ←ಮರಾ. ದಾಂಡ್, ದಾಂಡಾ ]

**ದಾಂಡೆ** (ನಾ). (ಕರಾ) ಒಂದು ಬಗೆಯ ವಿಮಾನ. [ ? ]

**ದಾಂತ₁** (ನಾ). ದಕಾರದಲ್ಲಿ ಕೊನೆಗೊಳ್ಳುವ ಶಬ್ದ ; ಕೊನೆಯಲ್ಲಿ ದಕಾರವಿರುವಂತಹುದು : "ದಾಂತಕ್ಕೆ–ಅಟ್ಟು (ಅಟ್ಟು)–ಜಲಮಗ್ನೇ (ಮುಳುಗ )" (ಕಮಿಪಾ). [ ದ₁ + ಅಂತ ]

**ದಾಂತ₂** (ಗು). ೧. ನಿಗ್ರಹಗೊಂಡ ; ದಮನವಾದ. ೨. ಪಳಗಿಸಿದ ; ಸಾಧುಗೊಳಿಸಿದ. (ನಾ). ೩. ಇಂದ್ರಿಯನಿಗ್ರಹ : ದಾಂತರಹಿತನ ನಶುಚಿಯಂ ವಿಭ್ರಾಂತವಂ . . . ಸಲಹು (ಬಸಪು. ೨೨-೫೦). ೪. ಇಂದ್ರಿಯ ನಿಗ್ರಹವನ್ನು ಉಳ್ಳವನು : "ದಾಂತಃ, ದಮಿತಃ–ಇಂದ್ರಿಯನಿಗ್ರಹವುಳ್ಳವನಿಗೂ, ನಿಗ್ರಹಿಸಲ್ಪಟ್ಟ ಇಂದ್ರಿಯಕ್ಕು ಪೆಸರು" (ಸಿದ್ಧಾಂತಿ. ೩೪೯). ೫. ತಪಶ್ಚರ್ಯೆಯ ಮೂಲಕ ಇಂದ್ರಿಯಗಳನ್ನು ನಿಗ್ರಹಿಸಿದವನು; ತಪಸ್ಸಿನ ಕ್ಲೇಶವನ್ನು ಸಹಿಸಿಕೊಳ್ಳುವವನು : "ತಪದ ಬಾಧೆಯಂ ಸೈರಿಸುವಾತನಂ ದಾಂತನೆಂಬುದು" (ಹಲಾಯು. ೬೬-೨೪೫) ; "ಸಂದ ತಪಬಾಧೆಯಂ ಸೈರಿಸುವವಂ ದಾಂತನಕ್ಕು" (ಮುಂಗರ. ೭೪-೪); ಸಮಜೇವಿಯಾಗಿ ದಾಂತನಾದವನಿಗೆ . . . ಉಪಶಾಂತನಾದಂಥವನಿಗೆ ಕ್ರೋಧವೆಲ್ಲಿಯದು ? (ಬುದ್ಧಕ. ೬೫) : ದಾಂತನಲ್ಲದವನು ಲೋಕನಿಷ್ಠ ; ಬ್ರಹ್ಮನಿಷ್ಠನಲ್ಲ (ಧಾತತ್ತ್ವ. ೫೦೬). [ ಸಂ. ]

**ದಾಂತತೆ** (ನಾ). ಇಂದ್ರಿಯನಿಗ್ರಹ; ಸಂಯಮ: ದಾಂತತೆ ಎಂದರೆ ಮನಸ್ಸು ಮತ್ತು ಇಂದ್ರಿಯಗಳ ಸ್ವಾಭಾವಿಕವಾದ ಪ್ರವೃತ್ತಿಗೆ ತಾನು ಅಧೀನವಾಗದೆ, ತನ್ನ ಇಚ್ಛೆಯಂತೆ ಅವುಗಳನ್ನು ನಿಯಮಿಸುವುದು (ಭಾತತ್ತ್ವ. ಉಪೋದ್ಘಾತ. XIV). [ ಸಂ. ದಾಂತತಾ ]

**ದಾಂತಿ** (ನಾ). ೧. ಇಂದ್ರಿಯನಿಗ್ರಹ; ಸಂಯಮ: ದಾಂತಿಯೇ ಸುಖಭೋಗ ಮಾಯಾಶ್ರಾಂತಿಯೇ ಮಹಾತ್ಮೆಯಿವು ಋಷಿಸಂತತಿಗೆ ವರ್ತನವರೇ ವೈದಿಕವಿಧಾನದಲಿ (ಕುಮ್ಮಾಅ. ೫-೧೯); ನಿಮಗೆ ಐವತ್ತು ತುಂಬಿತು. ಈಗ ಮಡಿ ಮಂತ್ರ ಶಾಂತಿ ದಾಂತಿಗೆ ತಕ್ಕ ಕಾಲ (ದೀಹಮ. ೬೦-೫). ೨. ತಪಸ್ಸಿನ ಕಷ್ಟಗಳನ್ನು ಸಹಿಸಿಕೊಳ್ಳುವಿಕೆ. [ ಸಂ. ]

**ದಾಂದಣ** 'ದಣದಣ' ನೋ.

**ದಾಂದಲೆ** 'ಧಾಂದಲೆ' ನೋ.

**ದಾಂಧಣ** (ನಾ). ಒಂದು ಅನುಕರಣ ಶಬ್ದ: ನಟಿಸು ರಾಜನ ರಾಜಗೃಹದ ಮೇಲಾಕಾಶಘಟನೆಯೊಳದ್ಭುತವಾಗಿ ಝುಟಿ ದಾಂಧಣ [ಪಾಠಾಂ. ದಾಂದಳ] ದಿಂದಿಮಿಕು ದಿಮ್ಮೆನೆ ಸುರಪಟಹನಿನಾದ ಕೇಳುತದೆ (ಭರತ. ೩-೧೧೦).

**ದಾಂಧಣರ್** (ನಾ). ಒಂದು ಅನುಕರಣ ಶಬ್ದ: ದಾಂಧಣರೆನುತ ಭೇರಿ ನವಪೂತ್ತು ಕಹಳಾದಿ ದುಂದುಭಿಧ್ವಾನ ದಶದಿಕ್ಕುಗಳನಾವರಿಸ (ಕೃಷ್ಣವಿ. ೨-೩೦).

**ದಾಂಧಲೆ** 'ಧಾಂದಲೆ' ನೋ.

**ದಾಂಧಳನೆ** (ಅ). ಒಂದು ಅನುಕರಣಾವ್ಯಯ: ಮೇರುವಿನ ಮೇಲೆ ಶಂಖಧ್ವನಿಸಹಿತ ಭೇರಿ ದಾಂಧಳನುಲಿವುದು (ಕೃಕವ. ೪-೯-೪).

[ ದಾಂಧಳ$_0$ + – ಅನೆ$_1$ ]

**ದಾಂಪತ್ಯ** (ನಾ). ದಂಪತಿಗಳಾಗಿರುವಿಕೆ; ಗುಂಡಹೆಂಡಿರಾಗಿರುವಿಕೆ; ದಂಪತಿಗಳ ಜೀವನ; ಇರವಿನೊಳರಿವಿನ ಮರುಳೀ ನಲವು . . . ನಿಮ್ಮಾ ದಾಂಪತ್ಯದೊಳಿದ ಕಾಂಬೆ ಅಸ್ತು ಅಸ್ತು ಸ್ವಸ್ತಿ ಸ್ವಸ್ತಿ ಎಂಬೆ (ಗಣೇಶ. ೫-೧೦೯); ಕೇವಲ ಬೌದ್ಧಿಕ ಮೈತ್ರಿಯೇ ಸಾಕಾದಲ್ಲಿ, ಬೇರೆ ಲಿಂಗಗಳು ಜೊತೆಗೂಡಿ ದಾಂಪತ್ಯವನ್ನು ಹೂಡುವುದೇ ಬೇಡ (ದೂರಸ. ೨೯); ದಾಂಪತ್ಯದ ನೊಗ ಕತ್ತಿನಿಂದ ಕಳಚಿ ಬಿತ್ತು (ಯೋಧಪು. ೯೪). [ ಸಂ. ]

**ದಾಂಪತ್ಯಜೀವನ** (ನಾ). ಗಂಡಹೆಂಡಿರ ಜೀವನ; ಸಂಸಾರ: ಒಮ್ಮೊಮ್ಮೆ ಈ ಪ್ರಣಯವು ದಾಂಪತ್ಯಜೀವನಕ್ಕಿಂತಲೂ ಬಾಧುರವಾದುದು (ಕನ್ನಡಾ. ೧೧೫). [ ದಾಂಪತ್ಯ + ಜೀವನ ]

**ದಾಂಪತ್ಯಧರ್ಮ** (ನಾ). ದಾಂಪತ್ಯ ಜೀವನದ ನಡೆವಳಿ,–ಆಚಾರ: ಗೃಹ ಪವಿತ್ರವಾಗಿರಲೆಂದು, ದಾಂಪತ್ಯಧರ್ಮದಲ್ಲಿ ಆನುಮಾನಿಕ ಕಾಲ್ಪನಿಕ ಕಲಂಕ ಕೂಡ ಲೇಶಮಾತ್ರವೂ ಸ್ಪರ್ಶಿಸದೆ ಇರಲೆಂದು, ಸಾಧ್ವಿಯರಾದ ಸ್ತ್ರೀಯರ ಈ ವಿತಿಮೀರಿದ ಜಾಗರೂಕತೆಯಲ್ಲಿ . . . ಒಂದು ಬಗೆಯ ಮಾಧುರ್ಯ ಉಂಟು (ಇಪ್ಪಳ. ೨೬೦). [ ದಾಂಪತ್ಯ + ಧರ್ಮ ]

**ದಾಂಪತ್ಯಪ್ರೇಮ** (ನಾ). ದಂಪತಿಗಳಲ್ಲಿರುವ ಪರಸ್ಪರವಾದ ಅನುರಾಗ,–ಪ್ರೀತಿ: ಶುದ್ಧ ದಾಂಪತ್ಯಪ್ರೇಮವೇನೆಂಬುದನ್ನು ನೀನು ಅರಿಯಲಾರದೆ ಹೋದೆ (ಹೊಸಕ್ಷಿ. ೧೦). [ ದಾಂಪತ್ಯ + ಪ್ರೇಮ ]

**ದಾಂಪತ್ಯಯೋಗ** (ನಾ). ದಾಂಪತ್ಯದ ಸಂಬಂಧ: ಇಲ್ಲವೋ ಪೆಕರ್ಡಿಯ ಪೆರ್ಮೆಯವರೊಡನೆ, ಪಂಬಲಿಸಲೇವುದಯ್ ದಾಂಪತ್ಯಯೋಗಮನ್? (ಬದ್ಧಪ್ರ. ೪೬-೦೦೨೯). [ ದಾಂಪತ್ಯ + ಯೋಗ ]

**ದಾಂಪತ್ಯವಿಚ್ಛೇದನ** (ನಾ). ದಂಪತಿಗಳು ಬೇರ್ಪಡುವಿಕೆ; ಗಂಡ–ಹೆಂಡಿರು ತಮ್ಮ ಪರಸ್ಪರ ಸಂಬಂಧವನ್ನು ರದ್ದುಪಡಿಸಿ ಬೇರೆ ಬೇರೆಯಾಗುವಿಕೆ; ಸೋಡಚೀಟಿ; ಘಟಸ್ಫೋಟ; ಪಾರೀಖತ್ತು (ಉಕ): ದಾಂಪತ್ಯ ವಿಚ್ಛೇದನಕ್ಕೆ ಅವಕಾಶವಿರುವ ವಿಚಾರ ಮುಂತಾದುವುಗಳ ಸಂಬಂಧವಾಗಿ ಹೊಸ ಕಾನೂನು ರಚನೆಯಾಗಿರುವುದರಿಂದ ಮಹಿಳೆಯರ ಸ್ಥಿತಿಯು ಉತ್ತಮವಾಗುವ ಸೂಚನೆಗಳು ತೋರುತ್ತಿವೆ (ಭಾರದ. ೩೯೨).

[ ದಾಂಪತ್ಯ + ವಿಚ್ಛೇದನ ]

**ದಾಂಪತ್ಯಸಂಬಂಧ** (ನಾ). ದಂಪತಿಗಳ ಸಾಂಸಾರಿಕ ಸಂಬಂಧ: ನಿಮ್ಮ ದಾಂಪತ್ಯಸಂಬಂಧವನ್ನು ವಿಚ್ಛೇದಮಾಡುವುದು ಮಹಾಪಾತಕವೆಂತಲೂ ತಿಳಿದಿದ್ದೇನೆ (ಕಪಾಳುಂ. ೧೨೧). [ ದಾಂಪತ್ಯ + ಸಂಬಂಧ ]

**ದಾಂಬರು** 'ಡಾಮರ್$_2$' ನೋ.

**ದಾಂಭಿಕ** (ಗು). ೧. ಕಪಟದ; ವೇಷಧಾರಿಯಾದ. ೨. ಆಡಂಬರದ; ಜಂಬದ. (ನಾ). ೩. ವೇಷಧಾರಿ; ಕಪಟಿ; ಸೋಗಿನವನು: ದುರ್ವಿನೀತ ಬ್ರಾಹ್ಮಣ ವಿಳು ಭಿಕ್ಷಾಜೀವಿ! ...ದಾಂಭಿಕ! (ಬಾಡಅ. ೮೩); ದುರ್ಗುಣಘರಟ್ಟ ಘಟ್ಟವಾಳಯ್ಯ ದಾಂಭಿಕರಿಗೆ, ನಾಮಧಾರಿಗಳಿಗೆ . . . ಸಿಂಹಸ್ವಪ್ನವಾಗಿ ಉಳಿದಿದ್ದಾನೆ (ಶರಶ. ೩೬೫). [ ಸಂ. ]

**ದಾಕ** 'ಡಾಗು$_1$' ನೋ.

**ದಾಕಲು** 'ದಾಖಲೆ' ನೋ.

**ದಾಕಿಡು** (ಕ್ರಿ). ದೂರದೂರಕ್ಕೆ ಹೆಜ್ಜೆಹಾಕು; ದಾಟುಹೆಜ್ಜೆ ಹಾಕು: ಸಾಕಿಂದು ತಪಸಿಗೆಯ್ದುವರೊಡನೆಮಗಾಸೆಯೇಕೆಂದು ನಾವು ಜಾಱುವೆವು ದಾಕಿಟ್ಟು ಹತ್ತೆಂಟು ಹೆಜ್ಜೆಯ ತಾವೆಯ್ದಿ ತಾಕಿ ಕೈವಿಡಿದೊಯ್ದರೆಮ್ಮ (ಭರಚ. ೬೦-೪೩). [ ದಾಕು$_2$ + ಇಡು$_1$ ]

**ದಾಕು$_1$** 'ಡಾಗು$_1$' ನೋ.

**ದಾಕು$_2$** (ನಾ). ದೊಡ್ಡ ಹೆಜ್ಜೆ; ದಾಟು ಹೆಜ್ಜೆ: ಮೂಲೋಕವ ಚೋಟಿಕ್ಕುವಂತೆ ದಾಕೊಂದಱೊಳು ಕೋಟಿವಾರ್ಧಿಯ ಪಾಯ್ದು ನಿರಾಕು ಲೋನ್ನತಿಯಿದುರ್ದೊಳಗೆ (ಭರಚ. ೭೪-೧೭). 'ದಾಪು' ಪರಾ. [ ? ]

**ದಾಕುದಾರ** 'ಡಾಕ್ಟರು' ನೋ.

**ದಾಕುಹಾಕು** (ಕ್ರಿ). ಮೈಲಿ ಚುಚ್ಚು; ದೇವಿಹಾಕು; ಸಿಡುಬುಹಾಕು: ಮಗುವು ಹುಟ್ಟಿದ ನಾಲ್ಕು ತಿಂಗಳಿನಿಂದ ಹಿಡಿದು ಒಂದು ವರುಷದೊಳಗೆ ಕಡ್ಡಾಯವಾಗಿ, ಮೈಲಿಗೆ, ಕಾಲರಾ . . . ಇತ್ಯಾದಿ ೧೮ ಬೇನೆಗಳಿಗಾಗಿ ದಾಕುಹಾಕುವ ಯೋಚನೆಯು ನಡೆದಿದೆ (ದೇವದೂ. ೨೫೨); ಜನ್ನರನು ದನದ ಮೈಲಿಯ ಬೊಕ್ಕೆಗಳ ಕೀವನ್ನು ತೆಗೆದು ಶಸ್ತ್ರದಿಂದ ಛಿಪ್ಪನ ಚರ್ಮದ ಮೇಲೆ ಗಾಯಮಾಡಿ ರಕ್ತದಲ್ಲಿ ಸೇರಿಸಿದನು. ಇದೇ ಮೊತ್ತ ಮೊದಲು ದಾಕುಹಾಕಿದ ಉದಾಹರಣೆಯು (ಮಾನಸ. ೪).

[ ದಾಕು$_1$ (<ಡಾಗು$_1$) + ಹಾಕು (<ಪಾಯ್ಕು$_1$) ]

**ದಾಕೋಟ** 'ದಹಕೋಟೆ' ನೋ.

**ದಾಕ್ಟಾರ** 'ಡಾಕ್ಟರಂ' ನೋ.

**ದಾಕ್ಷ** (ಗು). ದಕ್ಷನಿಗೆ ಸಂಬಂಧಪಟ್ಟ. [ ಸಂ. ]

**ದಾಕ್ಷಾಯಣಿ** (ನಾ). ೧. ದಕ್ಷನ ಮಗಳು; ಸತೀದೇವಿ; ಪಾರ್ವತಿ; ಗೌರಿ: "ರುದ್ರಾಣೀ, ಶರ್ವಾಣೀ . . . ದಾಕ್ಷಾಯಣೀ, ಶಿವಾ . . . ಮೇನಕಾತ್ಮಜಾ – ಈ ೨೧ ಗೌರೀದೇವಿಯ ಪೆಸರ್" (ಹಲಾಯು. ೪-೧೫); ದಕ್ಷನುದರದಲಿ ಸಂಭವಿಸಿದಳು ದಾಕ್ಷಾಯಣೀನಾಮದಿಂ (ಲಶಿಚಂ. ೧೩-೨); ನೀರೇಜಾಸನಸೂನು ದಕ್ಷನುಱ ಸದ್ದಾಕ್ಷಾಯಣೀದೇವಿಯಂ ... ಪಡೆದಂ (ಹಮ್ಮಿರ. ೨-೬). ೨. ಇಪ್ಪತ್ತೇಳು ನಕ್ಷತ್ರಗಳಲ್ಲಿ ಯಾವುದಾದರೂ ಒಂದು; P ದಕ್ಷಬ್ರಹ್ಮನಿಗೆ ವೀರಿಣಿ ಎಂಬುವಳಲ್ಲಿ ಹುಟ್ಟಿದ ಅಶ್ವಿನೀ ಮೊದಲಾದ ಇಪ್ಪತ್ತೇಳು ಜನ ನಕ್ಷತ್ರಕನ್ಯೆಯರು. ಇವರೆಲ್ಲಾ ಚಂದ್ರನ ಪತ್ನಿಯರು: "ಅಶ್ವಿನೀ ಮುಂತಾದ ೨೭ ನಕ್ಷತ್ರಗಳೂ ದಾಕ್ಷಾಯಣ್ಯಃ. ದಾಕ್ಷಾಯಣಿಯರೆನಿಸಲ್ಪಡುತ್ತವೆ" (ಸಿದ್ಧಾಂತಿ. ೩೦).

[ ಸಂ. ದಾಕ್ಷಾಯಣೀ ]

**ದಾಕ್ಷಾಯಣೀರಮಣ** (ನಾ). ೧. ಶಿವ. ೨. ಚಂದ್ರ: "ಇಂದುಃ, ಚಂದ್ರಃ . . . ವಿಧುಃ, ದಾಕ್ಷಾಯಣೀರಮಣಃ—ಈ ೨೧ ಚಂದ್ರನ ಪೆಸರ್" (ಹಲಾಯು. ೮-೪೨). [ ಸಂ. ]

**ದಾಕ್ಷಾಯ್ಯ** (ನಾ). ರಣಹದ್ದು ; ದೊಡ್ಡಹದ್ದು ; ಗೃಧ್ರ. [ ಸಂ. ]

**ದಾಕ್ಷಿಣಾತ್ಯ** (ಗು). ೧. ದಕ್ಷಿಣಕ್ಕೆ ಸಂಬಂಧಿಸಿದ : ಇದು ದಾಕ್ಷಿಣಾತ್ಯ ಕವಿಮಾರ್ಗಮುದಾರಮುದೀಚ್ಯಮಧುರವಿಶೇಷಣಯುತಮಪ್ಪುದು (ಕವಿರಾ. ೨-೭೯). (ನಾ). ೨. ದಕ್ಷಿಣ ಭಾರತದಲ್ಲಿ ವಾಸಿಸುವ ಜನ: ವಿಂಧ್ಯ-ಪರ್ವತದ ದಕ್ಷಿಣದಲ್ಲಿರುವ ಪ್ರದೇಶವನ್ನು ದಕ್ಷಿಣಭಾರತವೆಂದು ಪರಿಗಣಿಸಬಹುದು. ಇಲ್ಲಿ ವಾಸಮಾಡುವ ಜನರು ದಾಕ್ಷಿಣಾತ್ಯರು (ಭಾರದ. ೩೯೫) ; ಆರ್ಯಸಂಸ್ಕೃತಿಯ ನಿಜವಾದ ರಕ್ಷಕರು ದಾಕ್ಷಿಣಾತ್ಯರು (ಹುಕ್ಕಾರ. ೧೧೦ ಟೀಕೆ). ೩. [ಸಂಗೀತ] ಒಂದು ರಾಗದ ಹೆಸರು : ಕೌಶಿಕಿ, ವೇಳಾವಳಿ . . . ದಾಕ್ಷಿಣಾತ್ಯ [ಪಾಠಾಂ. ದಕ್ಷಿಣಾದಿತ್ಯ] . . . ಶಯ ಸೋದರಿಯೆಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗದಿಂದ ಪುಟ್ಟಿದವು (ವಿವೇಕ. ೨೩೩). [ ಸಂ. ]

**ದಾಕ್ಷಿಣಾತ್ಯಕ** (ನಾ). [ಕಾವ್ಯವಿ] ದಕ್ಷಿಣಮಾರ್ಗ: ಮನದೊಳಗಾಗಳುಂ ನಿಜಿಸದಾ ಮುಳಿಸಂ ಗತರಾಗಮೋಹನೊಯ್ಯನೆ ಮುನಿನಾಥನೆಂಬ ವಚನಾಂತರಮಿಂತಿದು ದಾಕ್ಷಿಣಾತ್ಯಕಂ (ಕವಿರಾ. ೨-೧೧೭). [ ಸಂ. ]

**ದಾಕ್ಷಿಣಾತ್ಯಪಾಠ** (ನಾ). ದಕ್ಷಿಣ ಭಾರತದಲ್ಲಿ ದೊರೆಯುವ ಪಾಠ : ಮಹಾಭಾರತಕ್ಕೆ ದಾಕ್ಷಿಣಾತ್ಯಪಾಠ, ಔತ್ತರೇಯಪಾಠವೆಂದು ಎರಡು ಪಾಠಗಳಿವೆ (ಭಾರದ. ೯೩). 'ಔತ್ತರೇಯಪಾಠ' ಪರಾ. [ ದಾಕ್ಷಿಣಾತ್ಯ + ಪಾಠ ]

**ದಾಕ್ಷಿಣಾತ್ಯಸಂಗೀತ** (ನಾ). ದಕ್ಷಿಣ ಭಾರತದಲ್ಲಿ ಪ್ರಚುರವಾದ ಸಂಗೀತ; ಕರ್ಣಾಟಕ ಸಂಗೀತ : ಈಚೆಗೆ ದಾಕ್ಷಿಣಾತ್ಯಸಂಗೀತದಲ್ಲಿ ಹೆಚ್ಚಿನ ಪ್ರೋತ್ಸಾಹಗಳು ಅಂಕುರಿಸಿರುವಂತೆ ಕಾಣುತ್ತದೆ (ಸಂಗೀದಂ. ೧೮೩). [ ದಾಕ್ಷಿಣಾತ್ಯ + ಸಂಗೀತ ]

**ದಾಕ್ಷಿಣಾತ್ಯೆ** (ನಾ). ೧. ದಕ್ಷಿಣದೇಶದಲ್ಲಿ ವಾಸಿಸುವವಳು ಅಥವಾ ಹುಟ್ಟಿದವಳು. ೨. [ಸಂಗೀತ] ದಕ್ಷಿಣ ಭಾರತದಲ್ಲಿ ಪ್ರಚುರವಾದ ವೃತ್ತಿ,-ಪದ್ಧತಿ: ಮನಾವತಿಯುಂ ದಾಕ್ಷಿಣಾತ್ಯೆಯುಂ ಪಾಂಚಾಲಿಯುಂ ಮಾದ್ರ ಮಾಗಧಿಯುಮೆಂಬ ನಾಲ್ಕುಂ ವೃತ್ತಿಯುಮಂ (ಅಜಿಪು. ೫-೩೦ ವ). [ ಸಂ. ದಾಕ್ಷಿಣಾತ್ಯಾ ]

**ದಾಕ್ಷಿಣ್ಯ** (ಗು). ೧. ದಕ್ಷಿಣೆಗೆ ಸಂಬಂಧಿಸಿದ; ಉಪಾಯನಕ್ಕೆ ಸೇರಿದ. (ನಾ). ೨. ದಕ್ಷಿಣೆಗೆ ಯೋಗ್ಯನಾದವನು: "ದಕ್ಷಿಣೇಯಃ, ದಕ್ಷಿಣಾರ್ಹಃ, ದಾಕ್ಷಿಣ್ಯಃ -೩ ದಕ್ಷಿಣೆಗೆ ಯೋಗ್ಯನಾದವನು, ಧಾರಾಳವಾಗಿ ಕೊಡತಕ್ಕವನು" (ಸಿದ್ಧಾಂತಿ. ೨೭೯). ೩. ಸಂಕೋಚ; ಭಿಡೆ: "ಬಿಡೆಯಮೆನಲ್ ದಾಕ್ಷಿಣ್ಯಂ" (ಚತುನಿ. ೨೧೨). ೪. ದಯೆ ; ಅನುಕಂಪ ; ಕರುಣೆ ; ಮರುಕ: ಅರಸುಗಳ್ ತಮಗೆನಿತುಂ ಸಮಚಿತ್ತಮಿಲ್ಲದಿರ್ದೊಡಂ ಸಮ್ಮುಖಕ್ಕೆ ಬಂದ ಪ್ರಾಣಿಮಾತ್ರಕ್ಕೆ ಪರಾಙ್ಮುಖರಾಗಲಾಗದು ದಾಕ್ಷಿಣ್ಯಂ ಬೇಟಿಕ್ಕುಮೆಂಬ ನೀತಿಯುಂಟು (ಪಂಚತಂ. ೩೩-೧೧) ; ಮನೆಯಲ್ಲಿ ಇಟ್ಟುಕೊಂಡು ತೋರಿಸಿದ ಈ ಹೆಚ್ಚಿನ ದಾಕ್ಷಿಣ್ಯಕ್ಕೆ ಪ್ರತಿಯಾಗಿ ಅವನಿಂದ ಹೆಚ್ಚಿನ ಕೆಲಸವನ್ನು ಆದಾಯ ಮಾಡಿದರೆ ಸರಿ (ಇಷ್ಟಕ. ೩೦೩). ೫. ಜಾಣತನ. ೬. ಸಾಮರ್ಥ್ಯ. ೭. ಇನ್ನೊಬ್ಬರ ಮನಸ್ಸನ್ನು ಅನುಸರಿಸಿ ನಡೆಯುವಿಕೆ ; ಇನ್ನೊಬ್ಬರಿಗೆ ನೋವಾಗದಂತೆ ನಡೆಯುವಿಕೆ; ಸೌಜನ್ಯ : ಒದವಿದ ದಾಕ್ಷಿಣ್ಯಕ್ಕಂ ವಿದಗ್ಧವೃತ್ತಿಗಂ . . . ಮೊದಲೆನಿಸಿದ ಸಕಲಗುಣಾಸ್ಪದರಂ ಜಗದೊಳಗೆ ಪಡೆವುದಸದಳಮಲ್ತೆ (ಕಾದಂಪೂ. ೪೦) ; ಕಾಮದಿಂ ಕೋಪದಿಂ ಕೂರ್ಪರ ದಾಕ್ಷಿಣ್ಯಂಗಳಿಂ . . . ದೇವ ನಿಮ್ಮಂ ಸ್ಮರಿಯಿಪ್ಪಂತಿತ್ತು (ರಕ್ಷಾಶ. ೭೦) ; ದಾಕ್ಷಿಣ್ಯಕ್ಕೆ ಬಸುರಾಗಿ ಹೆರೋಕೆ ತಾವಿಲ್ಲ (ಗಾದೆ). 'ಮುಖದಾಕ್ಷಿಣ್ಯ' ಪರಾ. ೮. ದಕ್ಷಿಣದೇಶಕ್ಕೆ ಸೇರಿದವನ . [ ಸಂ. ]

**ದಾಕ್ಷಿಣ್ಯಪರ** (ನಾ). ಸೌಜನ್ಯ ಸ್ವಭಾವದವನು ; ಇನ್ನೊಬ್ಬರ ಭಿಡೆ ಮುರವತ್ತಿಗೆ ಒಳಗಾಗುವವನು: ನ್ಯಾಯನಿಷ್ಠುರಿ ದಾಕ್ಷಿಣ್ಯಪರನು ನಾನಲ್ಲ ಲೋಕವಿರೋಧಿ ಶರಣನಾರಿಗಂಜುವನಲ್ಲ (ಬಸವ. ೭೫೩). [ ಸಂ. ]

**ದಾಕ್ಷಿಣ್ಯವಂತ** (ನಾ). ನಮ್ರತೆಯಿಂದ ಕೂಡಿದವನು : ಆತ ತುಂಬಾ ದಾಕ್ಷಿಣ್ಯವಂತ (ರೂಢಿ). [ ದಾಕ್ಷಿಣ್ಯ + – ವಂತ ]

**ದಾಕ್ಷಿಣ್ಯವರ್ತಿ** (ನಾ). ೧. ನಮ್ರತೆಯಿಂದ ವ್ಯವಹರಿಸುವವನು. ೨. ದಕ್ಷಿಣದೇಶದಲ್ಲಿ ವಾಸಿಸುವವನು ; ದಕ್ಷಿಣದೇಶದವನು. ೧, ೨ : ವಿದ್ಯಾಧರನರ್ಗಭೋಜನರೆನಿಸರೆಲ್ಲರುಂ ದಾಕ್ಷಿಣ್ಯವರ್ತಿಗಳ್ಕೆಳೆಯೆ ಲಂಕಾನಿವಾಸಿಗಳೆನಿಸರು (ತ್ರಿಮಿಥಾ. ೨-೧೧). [ ಸಂ. ದಾಕ್ಷಿಣ್ಯವರ್ತಿನ್ ]

**ದಾಖಲ್** 'ದಾಖಲೆ' ನೋ.

**ದಾಖಲ** 'ದಾಖಲೆ' ನೋ.

**ದಾಖಲಾತಿ, ದಾಖಲಾತು, ದಾಖಲಾತೆ** (ನಾ). ೧. ಕಾಗದಪತ್ರ ; ದಫ್ತರು : ಪಿತೂರಿ ನಡೆಸಿದ್ದಾರೆಂದು ದಾಖಲಾತಿಗಳಿವೆ (ದಾಂಕ್. ೧೪೭); ಅವನು ಮಂಶಲಾಂಥನ ದಾಖಲಾತಿ ಇಲಾಖೆಯಲ್ಲಿದ್ದಾನೆ (ಪುನರು. ೩.೫೯). ೨. ರುಜುವಾತು. ೩. ಪ್ರವೇಶ ; ಸೇರಿಸುವಿಕೆ : ಶಾಲೆಗೆ ಮಕ್ಕಳನ್ನು ದಾಖಲಾತಿ ಮಾಡಿಸುವರು (ರೂಢಿ). **ದಾಖಲಾತು:** (೩). **ದಾಖಲಾತೆ:** ೧. ಪಾರ್ಲಿಮೆಂಟಿನ ದಾಖಲಾತೆಗಳಲ್ಲಿ ನಾನು ಓದಿದ್ದೇನೆ (ಥೀಮ್ಸ್‌ಗಂ. ೬೦). [ ದಾಖಲ್ (<ದಾಖಲೆ) + – ಆತಿ ]

**ದಾಖಲಾತು** 'ದಾಖಲಾತಿ' ನೋ.

**ದಾಖಲಾತೆ** 'ದಾಖಲಾತಿ' ನೋ.

**ದಾಖಲು** 'ದಾಖಲೆ' ನೋ.

**ದಾಖಲೆ, ದಾಕಲು, ದಾಖಲ್, ದಾಖಲ, ದಾಖಲು** (ನಾ). ೧. ಲೆಕ್ಕಕ್ಕೆ ಸೇರಿದುದು ; ಲೆಕ್ಕಕ್ಕೆ ಸಂದಾಯವಾದುದು : (೬). ೨. ಆಧಾರಪೂರ್ವಕವಾದ ಪ್ರಮಾಣಬದ್ಧವಾದ ಕಾಗದ ಪತ್ರಗಳಲ್ಲಿ ಸೇರಿಸಿದ ಒಕ್ಕಣಿಕೆ,-ನಮೂದು : ಅಗತ್ಯವಾದ ನೂತನ ಅಂಕಿ ಅಂಶಗಳನ್ನೂ ಹೊಸ ದಾಖಲೆಗಳನ್ನೂ ಅಳವಡಿಸಲು ಅವಕಾಶವಿರಬೇಕು (ಶಿಕ್ಷದ. ೩೭೫). ೩. (ಒಂದು ಸಂಗತಿಯನ್ನು ಸ್ಥಾಪಿಸುವುದಕ್ಕೆ ಪೂರಕವಾದ) ಲಿಖಿತ ; ರುಜುವಾತು ; ಪ್ರಮಾಣಬದ್ಧವಾದ ಕಾಗದ,-ಪತ್ರ ; ಸರ್ಕಾರಿ ದಫ್ತರದಲ್ಲಿ ನಮೂದಾದ ಕಾಗದ : ದೇವರಿಗೆ ನಿತ್ಯ ನೈಮಿತ್ತಿಕ ಪೂಜಾ ನಡಯೂ ಬಗ್ಗೆ ತಸದೀಕು ದಾಖಲೆಯು ಮಾಡಿಸಿ (ಎಕ. III, ತಿರುಮ. ೫೭-೩೧ ; 1855) ; ಗ್ರಾಮದ ಸರ್ವೆ ನಂಬರು ಒಂದು ಒಬ್ಬನ ಹೆಸರಿಗೆ ಪಟ್ಟೆಯಿರುತ್ತಾ ದಾಖಲೆಯಿಲ್ಲದೆ ಒಳ ಅನುಭವದಾರರು ಅನೇಕ ಮಂದಿ ಇರುತ್ತಾರೆ (ಭೂಮಿಅ. ೩೭) ; ಆ ಪಾದ್ರಿಯ ಪ್ರದೇಶದಲ್ಲಿ ಅದಕ್ಕೂ ಮೊದಲಿನ ಯಾವ ಕಾಲದ ದಾಖಲೆಗಳನ್ನೂ ಇಡಲಾಗಲಿಲ್ಲ (ಬಂಜನ್. ೧೦) ; ತೊರೆಯರು ಈಚೆಗೆ ಆ ಮಾರ್ಗವಾಗಿ ಹೋದ ದಾಖಲೆ ಇಲ್ಲ (ಕಲಸಿ. ೨೦೫) ; ತನ್ನ ತಂದೆಯ ಆಸ್ತಿಯನ್ನು ವಿಲೇವಾರಿ ಮಾಡುವ ಹಕ್ಕಿದೆಯೆನ್ನುವುದಕ್ಕೆ ದಾಖಲೆಯೇನೂ ಸಿಕ್ಕಿಲ್ಲವಂತೆ (ಹೋಧಪು. ೩೭). ೪. ಸೇರುವಿಕೆ ; ಹಾಜರಾಗುವಿಕೆ : ಇಲ್ಲಿಗೆ ದಾಖಲೆಯಾದ ದಿನ ಹೇಗಿದ್ದನೋ ಹಾಗೇ ಇದ್ದ (ವೀರಹೋ. ೪). **ದಾಕಲು :** ೩. ವಿಷಯವನ್ನು ಸ್ಪಷ್ಟಪಡಿಸುವಂತಹ ದಾಕಲುಗಳೂ ಸಿಕ್ಕಿದವು (ರೂಢಿ). **ದಾಖಲ್ :** ೪. ಮೂರು ಗಂಟೆಗೆ ದಾಖಲ್ ಆದನು ತಂಗಿವೂರಿನ ಒಳಗೆ (ಕರ್ಣಾಸಂ. ೮೪). **ದಾಖಲ :** ೩. ಮದ್ದಗಿರಿ ಸರಕಾರ

**ದಾಯಗಲ್ಲು** (ನಾ). ಒಂದು ಊರಿನ ಹೆಸರಂ ಮತ್ತಂ ಅಲ್ಲಿ ತಯಾರಾಗುವ ಸೀರೆ : ಗುಜ್ಜರಿ ಸಿಂಗಳ ಗುಲುಗಂಜಿ ಮಡಿಯು ಗಂಗಪುರವು ದಾಯಗಲ್ಲು ಕರಾಳೆಯುತ್ತುಂಗ ವಿಳಾಸ ವಿಭ್ರಾಂತು (ಅನುಶಾಂ. ೪-೧೨). [ ? ]

**ದಾಯಗಾಜಿ** (ನಾ). ಅವಕಾಶವನ್ನು ಉಪಯೋಗಿಸಿಕೊಳ್ಳುವವನು ; ಸಮಯಸಾಧಕ; ಸ್ವಾರ್ಥಿ : ದಾಯಗಾಜಿನ ಶೀಲ ತ್ರಿವಿಧ ಥಾಳಕನ ಭಕ್ತಿ ಶಬರನ ದಯ ಚೋರನ ಲಲ್ಲೆ ಕಳ್ಳಿಯ ಬಲ್ಲತನ ಇವೆಲ್ಲವು ಕಲಿಯ ಮಣಿಯಂತೆ ಅಲ್ಲಿಗಲ್ಲಿಗೆ ದಾಯ (ಬಸವೇಶ್ವ. ೪೨೭-೮). [ ದಾಯ$_1$ + – ಗಾಜಿ ]

**ದಾಯಗಾಜಿಕೆ** (ನಾ). ಸ್ವಂತಕ್ಕೆ ಮಾಡಿಕೊಳ್ಳುವ ಸಂಪಾದನೆ,–ಗಳಿಕೆ: ಭಕ್ತರು ಕಾಯಕವೆಂದು ದಾಯಗಾಜಿಕೆಯಲ್ಲಿ ತಂದು ದಾಸೋಹವ ಮಾಡಬಹುದೆ (ಕೊನ್ನಸಂ. ೨೬೩-೧೩). [ ದಾಯಗಾಜಿ + – ಇಕೆ ]

**ದಾಯಗೆಡಿಸು** ‘ದಾಯಂಗಿಡಿಸು’ ನೋ.

**ದಾಯಗೆಡು$_1$** (ಕ್ರಿ). ಸಮತೆಯನ್ನು ಕಳೆದುಕೊಳ್ಳು ; ತೂಕತಪ್ಪು : ಈ ಅಂತರ್ಭೇದದಿಂದ ರಾಜಕಾರ್ಯವು ದಾಯಗೆಟ್ಟಿತು (ಆರ್ಯಕೀ. ೧೦೪). [ ದಾಯ$_1$ + ಕೆಡು$_1$ ]

**ದಾಯಗೆಡು$_2$** (ಕ್ರಿ). ಪಾಲನ್ನು ಕಳೆದುಕೊಳ್ಳು : ದಾಯಾದ್ಯವಿಷಯದಿ ಹಿಂದೆ ಕೆಲಂಬರು ದಾಯಗೆಟ್ಟವರುಂಟು ಜೀಯ (ನಾಗಳು. ೧೧-೧೦). [ ದಾಯ$_2$ + ಕೆಡು$_1$ ]

**ದಾಯಗೊಡು** (ಕ್ರಿ). ದಾನಕೊಡಂ; ಕಾಣಿಕೆ ನೀಡಂ; ದತ್ತಿಬಿಡು : ಅವನ್ಗೆ ವಂಶೋತ್ಪತ್ತಿಯಾಗೆ ದಾಯಗೊಟ್ಟುದುಮದೆಗೂಬುಂಬಿಟ್ಟಾದೆಯು (ಎಕ. X, ಶ್ರೀನಿವಾ. ೬-೧೦ ; ಸು. 780). [ ದಾಯ$_2$ + ಕೊಡು$_1$ ]

**ದಾಯಗೊಳ್** (ಕ್ರಿ). ವಿಚಾರಮಾಡು ; ಆಲೋಚಿಸಂ ; ಪರಿಶೀಲಿಸು : ಪ್ರಾಯದೋಱತು ಮದುವೆಯ ಮಾಡಬೇಕೆಂದು ದಾಯಗೊಂಡಿರ್ದವು (ಭರತ. ೭೦-೨೮). [ ದಾಯ$_1$ + ಕೊಳ್$_1$ ]

**ದಾಯದೋಱು** (ಕ್ರಿ). ಮಾರ್ಗವನ್ನು ತೋರಿಸಂ ; ದಾರಿಯನ್ನು ಕಾಣಿಸು : ತಾಯಿಲ್ಲ ತಂದೆಯಿಲ್ಲಂತ್ಯವಿಲ್ಲಾದಿಯಿಲ್ಲಾಯಾಸವಿನಿತಿಲ್ಲದಭವ ದಾಯದೋಱನಗೆ (ಭರತ. ೪೬-೧). [ ದಾಯ$_1$ + ತೋಱು ]

**ದಾಯದ್ರಮ್ಮ** (ನಾ). ಒಂದಂ ಬಗೆಯ ತೆರಿಗೆ (?) : ಪೊಳಲ ಮನ್ನೆಯ ದಾನಿಕೆಯುಳ್ಳ [ ದೀಪ ]ವಂಂ ದಾಯದ್ರಮ್ಮದ ಕಿಱುದೆಱೆಗಳುಮಂ ಸರ್ವಬಾಧಾಪರಿಹಾರಮಾಗೆ ಬಿಟ್ಟು ನಡೆಯಿಸಿದ (ಸೌಇಇ. XX, ೪೬-೩೭; 1074). [ ದಾಯ$_2$ + ದ್ರವ್ಯ ]

**ದಾಯನಿರ್ಣಯ** (ನಾ). ಆಸ್ತಿ ವಿಭಾಗದ ತೀರ್ಮಾನ : ವಿವದಿಗಳಾ ದಾಯನಿರ್ಣಯಕೆ ಯೋಜಿಸುವಂತೆ, ನೀಂ ಜಗದ ಶ್ರೇಯಸ್ಸಿಗುದ್ಯುಗಿಸು (ಕುಂಕುಳ. ೮೧೪). [ ದಾಯ$_2$ + ನಿರ್ಣಯ ]

**ದಾಯಬೀೞು** (ಕ್ರಿ). ೧. ಗರ ಬೀಳು. ೨. ಅವಕಾಶ ಉಂಟಾಗು ; ಸಮಯ ಉಂಟಾಗು : ದಾಯಬಿದ್ದಾಗ ಹಾಯಬೇಕಂ (ಗಾದೆ). [ ದಾಯ$_1$ + ಬೀೞು$_2$ (<ಬೀೞ್$_1$) ]

**ದಾಯಭಾಗ** (ನಾ). ಆಸ್ತಿಯಂ ಭಾಗ ; ಸಂಪತ್ತಿನ ಭಾಗ: ದಾಯಭಾಗದ ವಿಷಯದಲ್ಲಿ ಅನೇಕ ವಿವಾದಗಳು ನಡೆದು ಕಡೆಗೆ . . . ರಾಜ್ಯವನ್ನು ಹೊಂದುವ ಸಂದರ್ಭ ಬಂದಿತು (ಭಾಕತ್ರ. ೯೯); ಈ ಸಿದ್ಧಾಂತದ ಮೇಲೆಯೇ ಸರ್ವರಲ್ಲಿಯೂ ಧರ್ಮ, ಚಾರಿತ್ರ್ಯ, ದಾಯಭಾಗ ಮುಂತಾದುವುಗಳು ವ್ಯವಸ್ಥಿತವಾಗಿರುವುದು (ಆರ್ಯಧ. ೧೩೨). [ ದಾಯ$_2$ + ಭಾಗ ]

**ದಾಯರೆ** (ಗು). ೧. ಪ್ರಾಂತೀಯಂ. ೨. ಕರಾವಳಿಯಲ್ಲಿ ವಾಸಿಸುವ : ಕೆಲವು ದಾಯರೆ ಮುಸಲ್ಮಾನ್ ಜಮೀನ್‌ದಾರುಗಳೂ, ವರ್ತಕರೂ ಇದ್ದರು (ಕೆಂಲಿ. ೨೦೪). [ ←ಪಾರ. ದಯಾರ್, ದಾಯರಾ=ವೃತ್ತ; ಹಿಂ. ದಯಾರ್, ದಿಯಾರಾ ]

**ದಾಯವಾದಿ** (ನಾ). ಆಸ್ತಿಯಂ ಭಾಗಕ್ಕಾಗಿ ವಾದ ಮಾಡುವವನಂ ; ದಾಯಾದಿ ; ನಂಬಬಹುದೇ ದಾಯವಾದಿಗಳೆಂಬ ಪಾಪಿಗಳೇನ ಮಾಡರು ತಿಂಬವನೆ ಕೊಲುವಲ್ಲಿ ಕರುಣೆಗಳುಂಟೆ ಭಾವಿಸಲು (ಕಾಶಿರಾ. ೧೮-೩೯) ; ದಾಯವಾದಿಗಳರಿದಡಂ ಯಲವೂ ಸಂಜಯ ವಿಡಾಯಿಗೆಡುವುದು ರಾಜ್ಯಕಾರ್ಯಗಳ್ (ತುರಂಗ. ೭೩-೩೦). [ ಸಂ. ದಾಯವಾದಿನ್ ]

**ದಾಯವಾದ್ಯ** (ನಾ). = ದಾಯವಾದಿ : ಸುಡು ತನ್ನ ಪ್ರಾಣವಂ ದಾಯವಾದ್ಯರ ಕೈಯ ಬಿಡಿಸಿಕೊಂಡಾ ಜೀವವಿದ್ದೇನು ಫಲ (ತುರಂಗ. ೩೪-೧೪). [ <ಸಂ. ದಾಯಾದ್ಯ ]

**ದಾಯವಿಭಾಗ** (ನಾ). ೧. ಪಿತ್ರಾರ್ಜಿತವಾದ ಆಸ್ತಿಯಲ್ಲಿಯಂ ಭಾಗ ಅಥವಾ ಪಾಲಂ : ವ್ಯವಹಾರ – ಅಷ್ಟಾದಶ ವಿಭಾಗಗಳು, ಸಭಾ . . . ನಿಯೋಗ, ದಾಯವಿಭಾಗ, ಅನಧ್ಯಯನ, ವರ್ಣಸಂಕರನಿಂದಾ, ಆಪದ್ಧರ್ಮಗಳು (ಭಾರದ. ೬೨). ೨. ಬರಬೇಕಾದ ಸ್ವತ್ತಿನ ಪಾಲು ; ಹಂಚಿಕೆ : ಯಜ್ಞದ ದಾಯವಿಭಾಗದಲ್ಲಿ ಪ್ರವಿವಾತ್ಯೂಸ್ ಸ್ಯೂಸನ್ನು ವಂಚಿಸಿದ (ಬದ್ಯತ್ರ. V, ೬೬೨೪). [ ದಾಯ$_2$ + ವಿಭಾಗ ]

**ದಾಯಾದ** (ನಾ). ೧. ಪಿತ್ರಾರ್ಜಿತವಾದ ಆಸ್ತಿಯಲ್ಲಿ ಭಾಗವನ್ನು ಪಡೆಯುವವನಂ ; ಪಾಲುಗಾರ ; ಜ್ಞಾತಿ : ಎಮ್ಮ ದಾಯಾದನಂ ಕೋಪದಿನೆನ್ನೊಳ್ ಕಾದಲೆಂದುಬ್ಬರಿಸಿದ ಸಮರಾಟೋಪದಿಂ ನಿಂದೊಡಂ ಮೂಣ್ಪುದು (ಅದಿಪು. ೧೪-೮೫) ; ಒಡವುಟ್ಟಿದ ಕೌಸ್ತುಭಮಿರ್ಪೆಡೆಗಂ ದಾಯಾದನಪ್ಪನೆನ್ನಗವೆಂದಂದುಡುಪತಿ ಕಳೆ ನೆಲಸಿತ್ತನೆ ಪೊಡೆಯಲರನ ಕೊರಲ ಪುಲಿಯುಗುರ್ ಕರವೆಸೆಗುಂ (ಜಗವಿ. ೩-೪೪) ; ಧುರದೊಳ್ ತನ್ನಯ ವೀರರೊಳ್ ಪ್ರಜೆಗಳೊಳ್ ದಾಯಾದರೊಳ್ . . . ಸ್ತ್ರೀಯರೊಳ್ ದೊರೆಗಳ್ಗೆಳ್ಪಱು ಬೇಕೆಲ್ಲೆ (ಸೋಮೇಶ. ೫೬) ; ದಾಯಾದರಿಲ್ಲ ದೂರ್ಮಲಿತ ಪರಮಂಡಲದ ನಾಯಕರ ಸುಳಿವಿಲ್ಲ ನಿನ್ನಾಳ್ಕೆಗೆಲ್ಲಿಯುಮಪಾಯಮವನಿಯೊಳಿಲ್ಲ (ಕೃಮಿಥಾ. ೨-೫೪). ೨. ಆಸ್ತಿಯ ಉತ್ತರಾಧಿಕಾರಿ ; ಹಕ್ಕುದಾರ. ೩. ಮಗ ; ಪುತ್ರ. ೪. ಸತ್ತ ಬಂಧುಗಳಿಗೆ ಪಿಂಡಾದಿಗಳನ್ನು ನೀಡುವ ಕರ್ಮಗಳನ್ನು ಆಚರಿಸುವಲ್ಲಿ ಭಾಗಿಯಾಗ ತಕ್ಕ ಬಂಧುವರ್ಗದವನಂ.

ದಾಯಾದಮಲ್ಲ= ದಾಯಾದಿಗಳಿಗೆ ಭಯಂಕರನಾದವನಂ,– ಜಟ್ಟಿಯಂತಿರುವವನು ; ಒಂದು ಬಿರುದು : ಶ್ರೀಯುಂ ಕುರುಭೂಭೃದ್ಬಲತೋಯಧಿಯೊಳ್ ಕಡೆದು ಪಡೆದು ಭುಜಮಂದರದಿಂ ದಾಯಾದಮಲ್ಲನೆನಿಸಿದಹೇಯಂ ಭುಜಬಲವಿಭಾಸಿ ಸಾಹಸಭೀಮಂ (ಗದಾಯು. ೨-೧). [ ಸಂ. ]

**ದಾಯಾದವಿಷಯ** (ನಾ). ಪಿತ್ರಾರ್ಜಿತವಾದ ಆಸ್ತಿಯಂ ವಿಷಯ ಸೋದರರ ಮನ ಕದಡಿದವು ದಾಯಾದವಿಷಯದಲಿ (ಕುಮ್ಯಾಉ. ೨-೨೬). [ ದಾಯಾದ + ವಿಷಯ ]

**ದಾಯಾದಿ$_1$** (ನಾ). ೧. ಆಸ್ತಿಯಲ್ಲಿ ಪಾಲನ್ನು ಪಡೆಯುವವನಂ ; ಅಣ್ಣ ಅಥವಾ ತಮ್ಮ. ೨. ಅಣ್ಣ ತಮ್ಮಂದಿರ ಮಕ್ಕಳಂ ; ಚಿಕ್ಕಪ್ಪ ದೊಡ್ಡಪ್ಪನ ಮಕ್ಕಳು. ೩. ಒಂದೇ ಕುಟುಂಬಕ್ಕೆ ಸೇರಿದ ಪೀಳಿಗೆಯವರು; ವಂಶಜ: ಜ್ಞಾತಿ: ಇವರಿಗೆ ಕೌರವರೆಂಬ ದಾಯಾದಿಗಳಿದ್ದರು (ನೀತಿಚಿಂ. I, ೯); ದೇಶಪದ್ಧತಿಯಂತೆ ರಾಜ್ಯವು ಹಿರಿಯನಾಗಿದ್ದ ದಾಯಾದಿಯಾರಿಸ್ತೇಯನ ಕೈಸೇರಿತು (ಮಹಿಸ. ೮೬) ; ಹುಟ್ಟುತ್ತಾ ಅಣ್ಣ–ತಮ್ಮ, ಬೆಳೆದಮೇಲೆ ದಾಯಾದಿ (ಗಾದೆ) ; ಸವತಿ ಸಣ್ಣವಳಲ್ಲ, ದಾಯಾದಿ ಚಿಕ್ಕವನಲ್ಲ (ಗಾದೆ). [ <ಸಂ. ದಾಯಾದ್ಯ ]

**ದಾಯಾದಿ$_2$** (ನಾ). ೧. ಆಸ್ತಿಯ ಹಕ್ಕು ಉಳ್ಳವಳಂ. ೨. ಮಗಳು. [ ಸಂ. ದಾಯಾದೀ ]

**ದಾಯಾದಿತನ** (ನಾ). = ದಾಯಿಗತನ ೧ : ಈ ವಿಷಯದಲ್ಲಿ ನೀವು ದಾಯಾದಿತನವನ್ನು ತೋರತಕ್ಕದ್ದಲ್ಲ (ಭಾಮುಚಿ. ೭೫).
[ ದಾಯಾದಿ₁ + – ತನ ]

**ದಾಯಾದ್ಯ** (ನಾ). ೧. ಅಣ್ಣ ತಮ್ಮಂದಿರಿಗೆ ಬರಬೇಕಾದ ಪಿತ್ರಾರ್ಜಿತವಾದ ಆಸ್ತಿ; ಆಸ್ತಿಯಲ್ಲಿ ಬರಬೇಕಾದ ಪಾಲು,–ಭಾಗ : ನಮಗೆ ಬರಬೇಕಾದ ದಾಯಾದ್ಯವೇನಂಟೋ, ಅದ ಹಂಚಿಕೊಡುವುದಿಂದು (ಭಾಸನಾ. ೪೧). ೨. ಚಿಕ್ಕಪ್ಪನ ಅಥವಾ ದೊಡ್ಡಪ್ಪನ ಮಗ; ಪಾಲುಗಾರಿಕೆಯುಳ್ಳವನು; ದಾಯಂವಾದಿ: ಮಕ್ಕಳಿಲ್ಲದಿರ್ದ್ದಡೆ ಮಗಳು ಮಗಳ ಮಕ್ಕಳು ದಾಯಾದ್ಯರ ವಿಲ್ಲದೆ ನಿಸ್ಸನ್ತತಿಯಾದವ [ರೆ]ಲ್ಲವನರಸುಆ[ಣೆಕೆ] . . . ಕುಡ:ವುದು (ಕಇಳ. ೨೬–೩೯–೪೧ ; 1110); ಉದಯದಲೆದ್ದು ಪತ್ರ ಪುಷ್ಪಗಳಿಗೆ ಹೋಗುವ ಅಣ್ಣಗಳು ನೀವು ಕೇಳಿರೊ ನೀವು ಗಿಡದ ವೈರಿಗಳೋ ಗಿಡದ ದಾಯಾದ್ಯರೋ (ವಚಸಂ. ೧೯೦–೩೦ ಅಂಬಿಪ) ; ಹೆಜಾವೆ ನಾ ಮುನ್ನೆಂದು ಗರ್ಭವ ಧರಿಸಿದೆನು . . . ವರುಷವೆರಡಾಯ್ತಿದಱ ಭಾರವ ಧರಿಸಿದೆನು ದಾಯಾದ್ಯರೊಳಗವತರಿಸಿದನು ಮಗನೆನುತ ಮುಖದಿರುಹಿದಳು ಗಾಂಧಾರಿ (ಕುವ್ಯಾಆ. ೯–೪೪) ; ಹೆಂಡತಿಯು ತನ್ನ ದಾಯಾದ್ಯರ ಮನೆಯಲ್ಲಿ ಕಷ್ಟದಿಂದ ಜೀವನ ಸಾಗಿಸುತ್ತಿದ್ದಳು (ನಿಚ್ಛಾಷು. ೯). ೩. ಬಲತಾಯಿಯ ಮಗ ; ಮಲ ಅಣ್ಣ ಅಥವಾ ಮಲ ತಮ್ಮ : "ಉಪಮಾತೆಯೆನೆ ಬಲದಾಯೆ ನಿಕ್ಕುಮಾಕೆಗೆ ಪುಟ್ಟಿದಾತ ದಾಯಾದ್ಯನು" (ಮುಂಗರಾ. ೯೨–೦೨). [ಸಂ.]

**ದಾಯಾಧಿಕಾರ** (ನಾ). ಪಿತ್ರಾರ್ಜಿತವಾದ ಆಸ್ತಿಗೆ ಸಂಬಂಧಪಟ್ಟ ಅಧಿಕಾರ ; ಆನುವಂಶಿಕ ಹಕ್ಕು : ಅವಳ ಗಂಡನಿಗೆ ಪ್ರಿಯವೆಂದು ತೋರಬಹುದಾದ ದಾಯಾಧಿಕಾರದ ಬಗೆಗೆ ತನ್ನ ನಿರ್ಧಾರವನ್ನು ಸೂಚಿಸಿದಾಗ, ಅವಳ ಮುಖದಲ್ಲಿ ಮಿಂಚಿದ ಕಾಂತಿಯನ್ನು ಸ್ಪಷ್ಟವಾಗಿ ಗಮನಿಸಿದನು (ಪುಸರು. ೪೬೪). [ ದಾಯ₃ + ಅಧಿಕಾರ ]

**ದಾಯಾರ್ಧ** (ನಾ). ಆಸ್ತಿಯಲ್ಲಿ ಅರ್ಧ ಭಾಗ : ಗೃಹಯುಗ್ಮಂ ನೆಲಸಿರ್ದೊಡೊಂಡೆ ಗೃಹದೊಳ್ ದಾಯಾರ್ಧಮಂ . . . ಆಳ್ಗುಂ (ಜಾತತಿ. ೯–೯). [ ದಾಯ₃ + ಅರ್ಧ ]

**ದಾಯಿ** 'ದಾದಿ' ನೋ.

**ದಾಯಿಗ** (ನಾ). ೧.=ದಾಯಾದಿ₁ ೨ : "ದಾಯಾದರೊಳ್ ದಾಯಿಗಂ" (ಶಬ್ದಾಸ. ೫) ; ಅವರ ದಾಯಿಗಂ ಶಾಸ್ತ್ರಂಗಳಿಂ ಬಲ್ಲೊಂಗಂ ಮಂತ್ರಿಪದವಿಯುಂ ಕೊಟ್ಟುದಂ ಕೇಳ್ದು (ವಡ್ಡಾರಾ. ೨–೨೫) ; ಕಾಡೊಳ್ ಬೇಡರಂತೆ ತೊಟಲ್ದ ದಾಯಿಗರ ಕಂದಿ ಕುಂದಿದ ಮೊಗಂಗಳಂ ನೋಡುವುದುಂ (ಪಂಪಭಾ. ೭–೩೨ ವ); ಬಲ್ಮೊಗದಿಂದಿರ್ದು ಪದಾರ್ತ್ಥಮಂ ಬಿಸುಟು ತಮುಳ್ಳಾರ್ತ್ಥಮಂ ಬಯ್ತು ಬಂದಿಗೆ ಕಳ್ಳಂಗರಸಿಂಗೆ ದಾಯಿಗರಿಗಂ ಕಟ್ಟೋಪವತಂ ಮಾಟ್ಟ ಲೋಭಿಗಳೇಂ ಪೋಲ್ತರೆ . . . ರಾಮನಂ (ಕಇಳ. ೭೫–೧೩–೨೬ ; 1088) ; ಕಾಂಚನಮಪ್ಪೊಡೆ ದಾಯಿಗರಿಂದನುನಯದಿಂ ತಕ್ಕರಿಂದಮಟಿವುದು ಬೇಗಂ (ಧರ್ಮಾಮೃ. ೭–೧೪೫) ; ಜನಪನಾ ದಾಯಿಗನ ಮಱುಜೂಜಿನಲಿ ಗೆಲಿದನು (ತೊರರಾ. ೩–೨–೬೫) ; ಕಾದವರುಂಟು ದಾಯಿಗರ್ ಪಗೆಗಳಗ್ರಜಾನುಜರ್ . . . ಕಂಡೆನಿಲ್ಲ ಕೇಳ್ದೆನಿಲ್ಲೀ ತಱಿನ ದೊರೆವತ್ತ ಸಣಸಂ (ರಾಮಾಶ್ವ. ೧೬೨–೨). ೨. ಮಗ : "ಪುತ್ರನಲ್ಲಿ ದಾಯಿಗನೆಂಬುದು" (ಮುಂಗರಾ. ೧೪೨–೧೮) ೩. ಮಲತಮ್ಮ ಅಥವಾ ಮಲಅಣ್ಣ : (+). ೪. (ಆಲಂ) ಪುಣ್ಯದಲ್ಲಿ ಪಾಲುಗಾರ; ಪುಣ್ಯಸಾಧಕ ; ಪುಣ್ಯಶಾಲಿ : ಬೀಯ ಮಾಡಿಯೆ ಲಿಂಗದಲಿ ನಿಜಕಾಯ ನಿಲುವೊಡೆ ನಿತ್ಕರಪ್ಪೊಡೆ ದಾಯಿಗರು ಲಾಲಿಸುವುದೀ ಪ್ರಭುಲಿಂಗ ಲೀಲೆಯನು (ಪ್ರಭುಲೀ. ೦–೦೦).

**ದಾಯಿಗದಲ್ಲಳ** = (ಶತ್ರುಗಳಾದ) ದಾಯಾದಿಗಳಿಗೆ ಭಯವನ್ನುಂಟುಮಾಡುವವನು : ಒಂದು ಬಿರುದು : ಸಕಳಗುಣಗಣೋತ್ತುಂಗ ಮಾವನ ಸಿಂಗ ಜಿತವೈರಿಸಂಕುಳ ದಾಯಿಗದಲ್ಲಳಂ ಶ್ರೀಮತ್ ಕಲಿಯಮ್ಮರಸಂ (ಎಇ. XIX, ೧೮೦–೨೦ ; 1046). **ದಾಯಿಗಮುರಾರಿ** = ಒಂದು ಬಿರುದು : ಗೋತ್ರಪವಿತ್ರಂ ಪರಾಂಗನಾಪುತ್ರಂ ದಾಯಿಗಮುರಾರಿ ವಿನಯೋಪಕಾರಿ (ಎಕ. XII, ತಿಪಟೂ. ೧೦೪–೦೮ ; 1130). [ ದಾಯ₃ + – ಇಗ ]

**ದಾಯಿಗತನ** (ನಾ). ೧. ದಾಯಾದಿಯಾಗಿರುವಿಕೆ : (+). ೨. ದಾಯಾದಿಯ ಸ್ವಭಾವ ; ವೈರ ; ದ್ವೇಷ : ಕಡಂಗಿ ಮಿಗೆ ತಳ್ತಿಱಿಯಲ್ಕೆಂದಾನುರ ಬಂದಿರ್ದರಿದೇಂ ದಾಯಿಗತನಮನೆಮಗವರ್ ತೋಱಿದಪರ್ (ಪಂಪಭಾ. ೧೦–೩) ; ನೀಮೆಲ್ಲಂ ದಾಯಿಗತನಮನಿಲ್ಲಿ ತೋಱಲ್ವೇಡದು (ಗದಾಯು. ೭–೬೨); ಪೂರ್ಣ್ದನ್ನೊಳಂ ದಾಯಿಗತನಮನಿವಂ ತೋರ್ಕೆ (ಪಂರಾಮಾ. ೦೨–೭೩). [ ದಾಯಿಗ + – ತನ ]

**ದಾಯಿತ** (ನಾ). ಆತ್ಮೀಯ ; ಪ್ರೀತಿಪಾತ್ರನಾದವನು ; ಇಷ್ಟಮಿತ್ರ (?) : ದಾಯಿತರಿಂ ಪೆಸರ್ವೆತ್ತ ಪಸಾಯಿತರಿಂ ಸುಭಟ ಚೇಟಕ ಪ್ರಕಟ ಮಹಾನಾಯಕರಿಂ ನಿರುಪಮಂ ಶೋಭಾಯತಮಾಯ್ತೋಲಗಂ (ಕುಸುಮಾ. ೩–೮೮). 'ದಾಯಿದ' ಪಠಾ. [ ? ]

**ದಾಯಿತ್ವ** (ನಾ). ೧. ಕೊಡಬೇಕಾದುದು. ೨. ಸಾಲ–ಸೋಲ ಮುಂತಾದ ಹಣಕಾಸಿನ ಜವಾಬ್ದಾರಿ,–ಬಾಧ್ಯತೆ : ಭಾರತ ಡೊಮಿನಿಯನ್ನಿನ ಎಲ್ಲ ಅಧಿಕಾರಗಳೂ, ದಾಯಿತ್ವಗಳೂ, ಆಭಾರಗಳೂ . . . ಕ್ರಮವಾಗಿ ಭಾರತ ಸರ್ಕಾರದ ಮತ್ತು ಆಯಾ ರಾಜ್ಯಪಾಲಪ್ರಾಂತಕ್ಕೆ ಸಂವಾದಿಯಾದ ರಾಜ್ಯದ ಅಧಿಕಾರಗಳೂ, ದಾಯಿತ್ವಗಳೂ, ಆಭಾರಗಳೂ ಆಗಿರತಕ್ಕದ್ದು (ಭಾರಾಸ. ೦೬೯). ೩. ಕೊಡುವಿಕೆ ; ನೀಡುವಿಕೆ : ಆ ಸಂಪತ್ತನ್ನು ದೇಶದೇಶಾಂತರಗಳ ಎಲ್ಲರಿಗೂ ದಾನಮಾಡಬೇಕೆಂಬ ಒಮ್ಮೊನೆಯ ದಾಯಿತ್ವಜ್ಞಾನವನ್ನು ಅವರು ಪಡೆದಿದ್ದುದು (ಸಿಬಂಧ. I, ೩೩೭). [ ಸಂ. ]

**ದಾಯಿದ** (ನಾ). = ದಾಯಿಂತ (?) : ಚಕ್ರವರ್ತಿ ಸ್ವಕೀಯ ರಸನೆಗತೀವ ಸ್ವಾದುವಾದ ವಸ್ತುಗಳಂ ಕುಮಾರಾವರೋಧವಧೂವಿಳಾಸಿವರ್ಗಕಂ ದಾಯಿದ ಪಸಾಯತರ್ಗಂ ಕಳಿಪುತ್ತುಂ (ಶಾಂತೀಶ್ವ. ೧೫–೭೧ ವ).
[ <ದಾಯಾದ್ಯ ? ]

**ದಾಯಿದೊಡ** (?). (ನಾ). ಒಂದು ಬಗೆಯ ತೆರಿಗೆ (?) : ಶ್ರೀಮನು ಮಹಾ ಮಂಡಳೇಸ್ವರಂ ಬೋ(ಂ)ಮಿದೇವರಸಗ್ಗೆ ಉರಗುರಕೆ ಕೊಟ್ಟು ದಾಯಿದೊಡ (?) ಸರ್ವ್ವ ನಮಸ್ಯಂ ಮಾಡಿ ಏರಿಂಗಲ್ಲದ ದಕ್ಷಿಣ ದಿಶಾ ಭಾ[ಗ]ದಲ್ಲಿ ತಾ ಪ್ರತಿಷ್ಠೆ ಮಾಡಿದ ಹಯಿಮೇಶ್ವರದೇ[ವ]ರಿಗೆ ಬಿಟ್ಟ ಕೆಯಿ ಮತ್ತರು ೬ (ಸಾಇಇ. XX, ೧೬೯–೨೦ ; 1208). [ ? ]

**ದಾರ₁** (ನಾ). ನೂಲು ; ಎಳೆ ; ಸೂತ್ರ : ಮುನ್ನಮೆಂಬ ಬಟಿಕೆಂಬ ಜನೋಕ್ತಿಯೊಳಾಯ್ತು ಸೂಚಿಶಕ್ತಿಗೆ ನೃಪರಾನೆ ದಾರದವೊಲಾದುವು ರಾಜಕುಮಾರರಾನೆಗಳ್ (ಗದಾಯು. ೧–೧೬) : ಸೂಜಿಯ ಬಟಿಯ ದಾರದಂತೆ (ಧರ್ಮಾಮೃ. ೦೪–೧೦೪) ; ಬಿಡುಮುತ್ತು ಘನೋಪಳದೊಂದು ರೂಪದಿಂ ಸುರಿಯಲನಂತರಂ ಬಟಿಯ ದಾರವೆಟಲ್ದಪುದೆಂಬ ಚೆಲ್ವನಾವರಿಸಿದುವು . . . ವಾರಿಧಾರೆಗಳ್ (ಅಗವಿ. ೪–೩೦) ; ದಾರ ಉರಗನ ಪಡೆವಣಿಯ ಗೊಂಡೆಯದ ಕಿಗ್ಗಟ್ಟಸೆಯ ಪಶುಪತಿಯ (ಕುವ್ಯಾಕ. ೭–೧೨); ಒಟ್ಟು ಬಟ್ಟೆಮಾಡುವ ಕೆಲಸವನ್ನು ತೆಗೆದುಕೊಂಡರೆ ದಾರದ ಎಳೆ ತೆಗೆಯುವುದೇ ಒಂದು ಭಾಗ (ಹಪತ್ರ. ೮) ; ಎಲ್ಲಾ ನಾರುಗಳಿಂದ ಎಳೆಗಳನ್ನು ತೆಗೆದು ದಾರಗಳನ್ನಾಗಿ ಹೊಸೆದು, ದಾರಗಳಿಂದ ಬಟ್ಟೆಯನ್ನು ತಯಾರಿಸಲಾಗುತ್ತದೆ (ಗೃಹವಿ. ೬೨).
[ ?./ತಮಿ. ತಾರ್, ತಾರ ; ತುಳು. ತೆಲು.ದಾರ. /
ಪ್ರಾ. ದಾರ = ಕಟೀಸೂತ್ರ. / ಸಂ. ದೋರ ]

**ದಾರ್$_2$**, ದರ್$_1$, ದೋರ್$_3$ (ನಾ). ಬಾಗಿಲು; ದ್ವಾರ: ದರ ದಾರ ಬಾರ ಮಕ್ಕಂ ಪರದಾ ದ್ವಾರಕ್ಕೆ ಪೂರ್ವದೊಳ್ ತದ್ಭವಮಾಗಿರೆ (ಶಮದ. ೨೯೬). ದರ್$_1$ : ಮೇಲಿನ 'ಶವಂದ' ಪ್ರಯೋಗವನ್ನು ನೋಡಿ. ದೋರ್$_3$ ] ಬಂದು. ಕಾಷ್ಠಾಂಗಾರಿ ದೋರದಿ ಹೊಂದಿಸಿಹ ಹೊಂಗಂಟೆಯನು ಸಾನಂದದಲಿ ದನಿಗೆಯ್ಯ (ಜೀವಂಧ. ೩-೧೪). [ <ಪ್ರಾ. ದಾರ. / ಸಂ. ದ್ವಾರ:

**ದಾರ್$_3$** (ನಾ). ೧. ಬಿರುಕು; ಸೀಳು; ತೂತು; ರಂಧ್ರ. ೨. ಉತ್ತ ಭೂಮಿ. ೩. ಹೆಂಡತಿ; ಪತ್ನಿ; ಭಾರ್ಯೆ: "ದಾರಾಃ, ಕ್ಷೇತ್ರಂ, ಕಳತ್ರಂ . . . ಗೃಹಿಣೀ, ಗೃಹಾಃ – ಈ ೧೩ ಹೆಂಡತಿ" (ಹಲಾಯು. ೬೧-೩೪೦); "ದಾರಂ ಕಳತ್ರಂ . . . ಪತ್ನಿ ಮಹಿಳೆಯೆನೆ ಹೆಂಡತಿಗೆ ನಾಮಮಕ್ಕುಂ" (ಮಂಗರಾ. ೯೦-೬); ಪ್ರಭುಗಳ ಆಯುರ್ದಾಯ ದಾರಾಪುತ್ರಾದಿ ಕ್ಷೇತ್ರಗಳನ್ನು ಅವರು ಸೂಕ್ಷ್ಮವಾಗಿ ಗುಣಿಸಿ ನೋಡಿರಲಿಲ್ಲ (ಜಂಂಶರಾ. ೯೩). 'ದಾರಪರಿಗ್ರಹ' ಪರಾ. [ ಸಂ. ]

**-ದಾರ್$_4$** (ಪ್ರ). ಹೊಂದಿರುವವನು; ಪಡೆದಿರುವವನು ಎಂಬ ಅರ್ಥದಲ್ಲಿ ಸೇರುವ ಒಂದು ತದ್ಧಿತಪ್ರತ್ಯಯ. 'ಅಬ್ದಾರ', 'ಅಮಲ್ದಾರ', 'ಆಡಳಿತದಾರ' ಪರಾ. [ ←ಪಾರ. ಹಿಂ. ಮರಾ. ದಾರ್ ]

**ದಾರಂದ** 'ದಾರವಂದ' ನೋ.

**ದಾರಕ** (ನಾ). ೧. ಬಾಲಕ; ಗಂಡುಮಗು; ಕುಮಾರ; ಹುಡುಗ; ಮಗ: ಸುಂದರ ದಾರ ದಾರಕೋದಾರ ವಿಮೋಹದೊಳ್ ಕೊಡರ್ದು ದಾರುಣದುಃಖಮನೆಯ್ದದಿರ್ಕುಮೇ (ಆಚಿಪು. ೨-೩೩); ಕಳಿಕನೆಂಬ ಧೂಮಕೇತುವೆಂಗೆ ದಾರಕನಾದಂ ಕಡೆಯೊಳ್ (ಶಂಭುಮಾ. ೬-೩೭); ದಾರಕನಂ ಘನತೇಜಸ್ಸಾರನನಾವೆಂದು ನಲ್ಮೆಯಿಂದೆತ್ತುವೆನೋ (ಪುಷ್ಪಪು. ೩-೯೩); ನೀರೆಯುಮುರ್ಮುತ್ತಿ ನಕ್ಷತೆಯ ದಾರಕನ ಮೇಲೆ ತಳಿದು ಹರಸಿದ ರಾಪಾರವರ್ಷ ಬದುಕೆಂದು (ಜ್ಞಾನಚ. ೩-೧೩೫); ಆಲಯದಿ ದಾರಕರ ಸಂಬಂಧ ಬಹುಳಂ (ವಂಶಾರಾ. ೨-೧೦-೩೦). ೨. ತರುಣ; ಯುವಕ: "ದಾರಕಃ, ತರುಣಃ, ಯುವಾ – ಈ ೩ ಜವ್ವನಿಗಂ" (ಹಲಾಯು. ೮೩-೩೯೯). [ ಸಂ. ]

**ದಾರಕಮಲ್ಲ** (ನಾ). ಬಾಲಕರಲ್ಲಿ ಗಟ್ಟಿಗ; ಬಲಿಷ್ಠನಾದ ಹುಡುಗ: ದಾರಕಮಲ್ಲನೆಲ್ಲಿದನಮಾನುಷಪೇಳನದೆಲ್ಲಿದಂ ವ್ರಜಾಂಭೋರುಹಮಿತ್ರನೆಲ್ಲಿ ದನನಂತಸಹಾಯನದೆಲ್ಲಿದಂ . . . ಎಲ್ಲಿದನಬ್ಜಲೋಚನಂ (ಜಗಪಿ. ೩-೯೦). [ ದಾರಕ + ಮಲ್ಲ ]

**ದಾರಗಟ್ಟು** (ನಾ). ದಾರದಿಂದ ಕಟ್ಟಿರುವಂತಹುದು: ದಡದಡನೆ ಹೋಗಿ, ನಂಜರಾಜಯ್ಯನ ಹಸ್ತಗಳಿಂದ ಆ ಘುಟಿಕೆಯನ್ನೆಳೆದೀಯಿಸಿಕೊಂಡು, ತನ್ನ ಕರವಾಳಿಂದ ಮುದ್ರೆಯನ್ನು ದಾರಗಟ್ಟನ್ನು ಗವಸಣಿಕೆಯನ್ನು ಅರಿದು ಬಿಸಟ್ಟು (ಮುಂಶ್ರಕ. ೦೬-೩). [ ದಾರ್$_1$ + ಕಟ್ಟು$_2$ ]

**ದಾರಗೊಂಡೆ** (ನಾ). ನೂಲಿನಿಂದ ಮಾಡಿದ ಕುಚ್ಚು: (೬). [ ದಾರ್$_1$ + ಗೊಂಡೆ (<ಕೊಂಡೆ$_1$) ]

**ದಾರಣ** (ನಾ). ೧. ಒಡೆಯುವಿಕೆ; ಹರಿಯುವಿಕೆ; ವಿಭಜಿಸುವಿಕೆ. ೨. ತೆರೆಯುವಿಕೆ; ಹೊರಗೆಡಹುವಿಕೆ. 'ಅವದಾರಣ' ಪರಾ. [ಸಂ.]

**ದಾರಣೆ** 'ಧಾರಣೆ$_1$' ನೋ.

**ದಾರಣೆವಾಸಿ** 'ಧಾರಣೆವಾಸಿ' ನೋ.

**ದಾರದ** (ನಾ). ಒಂದು ವಿಧವಾದ ವಿಷ; ಪಾದರಸ; ಇಂಗಲೀಕ; P ಕಾಕೋಲ, ಕಾಲಕೂಟ, ಹಲಾಹಲ, ಸೌರಾಷ್ಟ್ರಿಕ, ಶೌಕ್ಲಿಕೇಯ, ಬ್ರಹ್ಮಪುತ್ರ, ಪ್ರದೀಪನ, ದಾರದ ಮತ್ತು ವತ್ಸನಾಭ ಎಂಬುವು ವಿಷಭೇದಗಳು: "ಬ್ರಹ್ಮಪುತ್ರಃ, ಶೌ(ಕ್ಲಿ)ಲ್ಕಿಕೇಯಃ, ದಾರದಃ . . . ತೀಕ್ಷ್ಣಃ, ವಿಷಂ – ಈ ೯ ವಿಷಂ" (ಹಲಾಯು. ೦೦೬-೨೪); "ದಾರದ – ನಂಜು, ವಿಷ" (ಗಂಗಾಮು. ೦೬೩). [ ಸಂ. ]

**ದಾರಪರಿಗ್ರಹ** (ನಾ). ಮದುವೆಯಾಗುವುದು: ನವಕುಮಾರನು ವೈಗರಾದಿಂದ ಪುನಃ ದಾರಪರಿಗ್ರಹ ಮಾಡಲಿಲ್ಲ (ಕಪಾಕುಂ. ೩೪); ದಾರಪರಿಗ್ರಹಕ್ಕೆ ವಿಮುಖರಾದರೂ ತಮ್ಮನ ಮದುವೆಗಾಗಿ ಪ್ರಯಾಸಪಟ್ಟರು (ರೀಶ್ಮತಿ. ೩೬). [ ದಾರ್$_3$ + ಪರಿಗ್ರಹ ]

**ದಾರವ** (ಗು). ಮರದ; ಮರದಿಂದ ಮಾಡಿದ. [ ಸಂ. ]

**ದಾರವಂದ**, ದರವಂದ, ದಾರಂದ (ನಾ). ೧. ಬಾಗಿಲ ಚೌಕಟ್ಟು; ಬಾಗಿಲುವಾಡ: ಅಗಲಕ್ಕಿಮ್ಮಡಿ ನೀಳಮಾಗೆ ತರುಗಳ್ ಟೇಜಿಲ್ಲದೊಡಾಗೆ ಮಾಡುಗೆ ನೇರ್ಪಟ್ಟಿರೆ ದಾರವಂದಮನದರ್ಕಾದೋಷೆಯಂ ಮಾಟಕ್ಕೆ ಮಾ ಜಿ ಗ ಜಾ ರೂ ಢ ಮ ನ ನ್ನ ಮಂ ನಿಜಗೃಹದ್ವಾರಾಂತರೋದ್ದೇಶಮಂ ಪುಗುವಾಗಲ್ (ರೂಕಶೋಪ. ೩-೩೨); ಒಂಬತ್ತು ದಾಗಿಲಿಗೆ ಕದವನಿಕ್ಕಿ ಒಂದು ಬಾಗಿಲ ಅಗುಳಿ ದಾರವಂದವನಿಕ್ಕಿ ಬಲಿಯಲು ತಿರುಗುವುದಕ್ಕೆ ತಾವು ಕಾಣದೆ (ಲಿಂಗವ. ೪. ೭೩-೭೩); ಮಣಿದಾರವಂದವಮಂ ಒಡಿದಣಮಿಪ್ಪಿಸುತ್ತುಮೆಲ್ಲರ ಸುಮ್ಮನೆ ಯಮ್ಮಗುಣೆಯನ್ನುಂ ದಾರನೆನು ತ್ರಿಣಿಸುತ್ತೆಸದಿರ್ದಳ್ (ಉದ್ಭಟ. ೦೦-೩೩); ಸುಪುತ್ರು ಮಾಕಯ್ಯನು ಮಾಡಿಸಿದ ದೇವರ ಪೀಠ ಜಾಳಾಂಧರ ದಾರವಂದ (ಎಕ. XII, ಚಿಕ್ಕನಾ. ೩೩-೬; 1212 ?) ವಿಳಸಿತ ಮಹಾಮರಕತದ ದಾರವಂದವುಮಂ ತೊಳಪ ವೈಡೂರ್ಯಗಳುಂ ನಾಡೆ ಕಂಗೊಳಿಸೆ ಮೆಚಿದುದು (ಸಿದ್ಧೇಪು. ೦-೩೦). ೨. ಸಾಗವಂದಿಗೆ: ಗೋಮೇಧಿಕದ ದಾರವಂದದಿಂ, ಪವಳದ ಭ್ರಿತಿಯಿಂ, ಮರಕತದೊಂದು ಕಳಸದಿಂ ತಾರಗೆವಟ್ಟ ಮುಟ್ಟಿ ನಿಗುರ್ದ ಸ್ಫಟಿಕನಾಗರಂಬೋಲ್ . . . ಕಣ್ಗೆಡ್ಡಮಾಗಿ ರಂಜಿಕುಂ (ರಾಮಾಶ್ವ. ೫೪-೨೨); ಚಪ್ಪಲನ್ನು ಸೂರಿಗೆ ಸಿಕ್ಕಿಸಿ ಅಥವಾ ಬಾಗಿಲ ದಾರವಂದದ ಮೇಲೆ ಇರಿಸಬಾರದು (ಬಿನ್ನಮಾ. ೪೪). **ದರವಂದ**: ೧. ಕೊರುವರಿ ಯಿಬತ್ತು ಕಂಭ(೦)ಕ್ಕೆ ಎರಡು ದರವಂದಕ್ಕಂ ಕೊಟ್ಟ ಗದ್ಯಾಣ ಮೂವತ್ತು (ಸೌಇಇ. XV, ೩೩೩-೬; 1070). **ದಾರಂದ**: ೧. ಬಾಗಿಲಿನ ದಾರಂದಗಳು ಗಡುಚು, ಅದರಲ್ಲಿ ಶಂಖ, ಚಕ್ರ, ಗದಾಪದ್ಮಗಳೂ, ಗಿಳಿ, ನವಿಲು, ಇತ್ಯಾದಿ ಬಡಗಿಯ ಕಲಾಕೌಶಲ್ಯಗಳೂ ಇವೆ (ಕೃಹಿಶಾ. ೦೯); ಬಾಗಿಲಿನ ದಾರಂದಕ್ಕೊರಗಿ ಕೆಲಸದಾಳು ಸೋನ್ನಾ ನಿಂತಿದ್ದ (ವಾತ್ಸಲ್ಯ. ೦೩); ಕೋಣೆಯ ಬಾಗಿಲಿನ ದಾರಂದಕ್ಕೊರಗಿ ಸುಮಿತ್ರ ನಿಂತಿದ್ದಳು (ಅನುರ. ೩೩); ಮನೆ ಬಾಗಿಲಿನ ದಾರಂದ ಹೊಸೆಗೆ ಬಡಿದರೂ ಉಂಟು (ಮರಮ. ೦೦೪). [ <ಸಂ. ದ್ವಾರಬಂಧ ]

**ದಾರವಟ್ಟ**, ದ್ವಾರವಟ್ಟ (ನಾ). ೧. ಹೆಬ್ಬಾಗಿಲು; ಗೋಪುರ; ಪುರದ್ವಾರ: "ಗೋಪುರಮಾ ಪುರದ್ವಾರಮೆನೆ ದಾರವಟ್ಟ [ಪಾಠಾಂ. ದಾರವಟ] ಮಕ್ಕು" (ಮಂಗರಾ. ೩೭-೪); ಪ್ರಣವ ಪಂಚಾಕ್ಷರಿಯಗುಳಿ ದಾರವಟ್ಟ [ಪಾಠಾಂ. ಗುಡಿಯ ದ್ವಾರವಾಟ, ದ್ವಾರವಟ್ಟ] ವೊಪ್ಪುತ್ತಿರೆ (ಕನ್ನವ. ೪. ೦೪೯-೩೪೦); ಮರದ ಕೊಂಬಿನೊಳ್ ಬರೆದು ಕಟ್ಟಿದ ಕಪ್ಪಡಮುಮಿರ್ದಪ್ಪುದೆಂದು ಪಿತೃವನಪಾಳಕಂ ಕ ಪಾ ಳ ಕು ಂ ಡ ಳ ಂ ದಾರವಟ್ಟಕ್ಕೆ ಬಂದು (ಆರ್ದನೀ. ೩-೪೦ ವ); ವಕ್ತ್ರಲೋಪಕ್ಕೆ ಈಶ್ವರ – ಈಸರ . . . ದ್ವಾರವಟ್ಟ – ದಾರವಟ್ಟ (ಶಮದ. ೨೮೦ ಪ್ರಯೋ); ವರುಣಸೂನು ಜಯಂತ ನಳಕೂಬರರು ಸಮಯವನೊಮ್ಮೆ ಕಾಣದೆ ಮರುಷಪೋಲ್ದೆಸುವರು ಸೌಧದ ದಾ ರ ವ ಟ್ಟ ದ ಲಿ (ಕುಮ್ಮಾಅ. ೮-೯); ಕಳೆದು ಹೊಕ್ಕರು ಹೊಳೆವ ವಜ್ರೋಪಲ ಕವಾಟದ ದಾರವಟ್ಟಂಗಳನು (ವಿಭಾಗ. ೩-೩-೭). ೨. ಹೊಸ್ತಿಲು: (೬). ೩. ಕೈಸಾಲೆ; ಮೊಗಸಾಲೆ: "ಪ್ರಘಾಣಃ, ಪ್ರಘಣಃ, ಅಳಿಂದಃ–ಈ ೩ ಹನ್ನೆರಡು ಕಂಬದ ಕಡೆಯ ದಾರವಟ್ಟದ ಪೆಸಳು" (ನಾಚಿರಾ. ೦೦೪); ಮೂಳಿಬು ತಟ್ಟೆಯ ನಡುವೆ ಒಂದು ಕಂಭದ ವೆಟ್ಟು ಎಂಬತ್ತುನಾಲ್ಕು ಲಕ್ಷ ದಾರವಟ್ಟದ ಕಟ್ಟ ಅದರ ಮೇಲೆ ನಿಂದಾಡುತ್ತಿರಲಾಗಿ ನಡುವಣ ಕಂಭ ಮುರಿದು ಬೀಳುತ್ತಿರಲಾಗಿ

(ಮೋಹನಮಾ. ೨೩೭-೪೦೫). ದ್ವಾರವಟ್ಟ: ಮೇಲಿನ ಚನ್ನವ. ಕ.೧೪೯-೩೪೦ ಪ್ರಯೋಗದ ಪಾಠಾಂತರವನ್ನು ನೋಡಿ ; ಕನಕಮಯ ಚಿತ್ರಗೆಲಸದ ದ್ವಾರವಟ್ಟಮಂ ವಿನುಗುತಿಹ ರತ್ನ ಕೀಲಿತ ಕಳಶದುಪ್ಪರಿಗೆ ಮನೆ ಮನೋಹರ ವಿಶಾಲಂಬಡೆದು ರಾಜಿಸಲು (ಗುರುಚಾ. ೮-೯೩) ; ಶಶಿವದನೆ ಯೋರ್ವಳೊಡಲಿತ್ತು ಚೊನ್ನಕೆ ದ್ವಾರವಟ್ಟದೊಳು ನಿಂದಿರ್ದಳು (ರಾಘಾಶ. ೭-೯೫) ; ದ್ವಾರವಟ್ಟದ ಮುಂದೆ ನಿಂತ ವರಪ್ರಭು ಸಿದ್ಧರಾಮರ ಬರವ ಕಂಡು (ಸಿದ್ಧಪು. ೨೮-೯೪) ; ಆ ಪುರದ ದ್ವಾರವಟ್ಟದ ಮುಂದೆ ಶಾಸನ ದೊಳು ಕಲ್ಯಾಣದ ಮಹಾತ್ಮೆಯನು . . . ಬರೆದಿಡಲು (ಕೊಡ್ನಸಂ. ೯೩-೦೭). [ <ಸಂ. ದ್ವಾರವಟ್ಟ./ಮರಾ. ದಾರವಟಾ ]

**ದಾರವಟ್ಟಿಗ** (ನಾ). ಬಾಗಿಲನ್ನು ಕಾಯುವವನು ; ದ್ವಾರಪಾಲಕ: ಪಂಡಿತ ವಟ್ಟ್ಯಸಿ ಪುಗುವುದುಂ ದಾರವಟ್ಟಿಗಂ ದಟ್ಟಿಸಿ ಕೊರಳಂ ಪಿಡಿದು ನೂಂಕೆ (ಪುಣ್ಯಾಸ್ರ. ೫-೨೮ ವ). [ ದಾರವಟ್ಟ + -ಗ₃ ]

**ದಾರವಟ್ಟಲು** 'ದಾರೆವಟ್ಟಲ್' ನೋ.

**ದಾರವಾಡ** (ನಾ). ಬಾಗಿಲು ; ದ್ವಾರ : ಎಲುವಿನ ತೊಲೆಗಳು . . . ಹುಳುವಿನ ಡೋಣಿಗಳು ಜಂತಿನ ಬಣಬೆಗಳು ಇಂತಪ್ಪ ಗೃಹಕ್ಕೆ ಎಂಟು ರವಕ್ಕಿಗಳು ಬಾಯಿ ಎಂಬುದೇ ಒಂದು ದೊಡ್ಡ ದಾರವಾಡವು (ವಚನಾ. I, ೨೫೦-೨೮). [ ←ಪಾರ. ದರ್‌ವಾಜಹ್ ; ಹಿಂ. ಮರಾ. ದರ್‌ವಾಜಾ ]

**ದಾರಸಂಗ್ರಹ** (ನಾ).=ದಾರಪರಿಗ್ರಹ : ಅಂತಾಗಿ ದಾರಸಂಗ್ರಹ ಪರ್ಣ ಶಾಲೆಗಳನಿಂತೊಲ್ಲದಚಿರಕಾಲದೊಳಿವ ಕಾಯಮಿದಕಂತಿರ್ದೋಡೇನೆಂದು ತಲೆಗೆ ತಱಗೆಲೆವಿಡಿದುತಾಂ ಪೊತ್ತುಗಳೆವನು (ಕೃಮಿಟಾ. ೬೨-೩೦). [ ದಾರ₃ + ಸಂಗ್ರಹ ]

**ದಾರಾರ್ಢ್ಯ** (ನಾ). ಗಡುಸಂತನ; ಗಟ್ಟಿತನ: ತನ್ನ ಅಣ್ಣನಿಗಿರುವ ದಾರಾರ್ಢ್ಯ ದಲ್ಲಿ ಅರ್ಧ ಪಾಲಷ್ಟೂ ಇವನಿಗೆ ಇಲ್ಲ (ರೂಢಿ). [ <ಸಂ. ದಾರ್ಢ್ಯ ]

**ದಾರಿ** (ನಾ). ೧. ಹಾದಿ ; ಬಟ್ಟೆ ; ಮಾರ್ಗ: ನರಕದ ದಾರಿ ಮಹಾನಿಷ್ಠುರ ದುಃಖದ ಬಿತ್ತು ಪುಣ್ಯದ ಕ್ಷಯಮಳಿಂಗಿರಲೆಡೆ ಕೊರೆಯ ಕವರ್ಮನೆ (ಧರ್ಮಾಮೃ. ೧೨-೨೩೩ ಅಡಿಟಿ); ಆನೆಯೂ ಆ ದಾರಿಯಲ್ಲಿ ಹೋಯಿತ್ತೆಂದಡೆ ಆಡೂ ಆ ದಾರಿಯಲ್ಲಿ ಹೋಯಿತ್ತೆನ್ನಬಹುದೆ (ಬಸವ. ೩೨೮) ; ಹೋಗದ ಊರಿನ ಬಾರದ ದಾರಿಯ ಕಂಡು ಸುಖಿಯಾದೆನಯ್ಯ (ಅದವ. ೯೦-೦೦೬); ದ್ವಾರಿ ವ್ಯಕ್ತ್ಯವ ನುಂಗಿ ನಗುತ್ತಿದ್ದಿತ್ತು (ಅದಹಂ. ೨೭-೧೦೦೦) ; ದಾರಿ ಯೋಳಿಡುಕುಱೊಳೋಣಿಯೊಳಾರವೆಗಳ ತಳದೊಳಂಗಡಿಗಳೊಳ್ . . . ಬೇರೋಜಿತು ಜಾರರನುಭವಂ ಕಳ್ತಲೆಯೊಳ್ (ಗಿರಿಶ. ೪-೮೩) ; ಆ ಬ್ರಹ್ಮ ಪುರಿಯ ಪಡುವಲು ದಾರಿಯಿಂ (ಎಇ. XIX, ೨೫-೩೩ ; ೧೫೩೬); ಸಾರತರ ಸುಕೃತವನು ಸಂಚಿಸಿ ಧೀರರೈದುವ ಸತ್ಯಲೋಕದ ದಾರಿಯಿಂಬಂದದಲಿ ಗಂಗೆಯು ಧಾರೆ ವೆಂಚಿದಿಹುದು (ಕುಮಾರ್ಯ. ೭-೩೩) ; ದಾರಿ ಯಾವುದಯ್ಯ ವೈಕುಂಠಕ್ಕೆ ಹಾದಿ ತೋಱಿಸಯ್ಯ (ಪುರಂದ. ೨-೧೪೭ ಪಲ್ಲವಿ) ; ಊರಿಂಗೆ ದಾರಿಯನು ಯಾರು ತೋಱಿದರೇನು (ಸರ್ವಜ್ಞ. ೩೮); ಕನ್ನಡವೇ ತಾಯಿ ಕನ್ನಡವೇ ತಂದೆ ಕನ್ನಡವೇ ದಾರಿ ಮುಂದೆ (ಇಂಚರಾಪ. ೮೦-೮೭) ; ಬಂದ ದಾರಿಗೆ ಸುಂಕವಿಲ್ಲ (ಗಾದೆ). ೨. ರೀತಿ; ಕ್ರಮ; ಉಪಾಯ: ಹಾಗಾದರೆ ಈ ಪಾಶದಿಂದ ಮುಕ್ತವಾಗುವ ದಾರಿಯಿಲ್ಲವೇ ? (ಧರ್ಮೇಸಾ. ೧೩.೨). ೩. ನಡತೆ ; ನೀತಿ; ಶೀಲ; ಆಚಾರ : ಕೆಟ್ಟ ಸಹವಾಸದಿಂದ ಅವನು ದಾರಿಯನ್ನು ತಪ್ಪಿದ (ರೂಢಿ); ಆ ಹುಡುಗನ ದಾರಿಯೇ ಸರಿಯಿಲ್ಲ (ರೂಢಿ). 'ದಾರಿದಪ್ಪು', 'ದಾರಿಬಿಡು' ಪರಾ. ೪. (ಆಲಂ) ಬರುವಿಕೆಯ ಅಥವಾ ಆಗಮನದ ಸಮಯ. 'ದಾರಿಕಾಯು' ಪರಾ. ೫. (?) : ಕ್ಷೀರಾಬ್ಧಿಯ ನೀರಲ್ಲದೆ ಧೀರನ ಮಜ್ಜನಕೆ ಪೆಱವು ನೀರ್ ತಗವೆಂದಾ ವಾರಾಶಿವರಂ ಸುರಜನ ದಾರಿ ಮನೋಹಾರಿ ನೀಳ್ದುವೆರಡುಂ ಕೆಲದೊಳ್ (ಆದಿಪು. ೭-೮೨).

ದಾರಿ ಗುಂಟ, ದಾರಿಯ ಗುಂಟ = ಹಾದಿಯುದ್ದಕ್ಕೂ : ದಾರಿಗುಂಟ ನಡೆಯುವುದು ನಿನ್ನ ಕೆಲಸವಲ್ಲವೇ ? (ಜನಪ. ೨೮) ; ದಾರಿಯ ಗುಂಟ ದೀಪವಾಗದೇಕು (ಅಷ್ಟಾ. ೭). ದಾರಿಗೆ ತರು = ಒಳ್ಳೆಯ ನಡತೆಯನ್ನು ಕಲಿಸಂ ; ಪಳಗಿಸು : ಕೆಡುತ್ತಿರುವವನನ್ನು ದಾರಿಗೆ ತರಬೇಕಾಗಿದೆ (ರೂಢಿ). ದಾರಿಗೆ ಬರು = ಸರಿಯಾದ ರೀತಿಯನ್ನು ಅನುಸರಿಸಂ : ಆ ಮೂರ್ಖ ದಾರಿಗೆ ಬರಲಿಲ್ಲ (ವಚಧಾ. ೫೭.೨). ದಾರಿಗೆ ಹಚ್ಚು = ವ್ಯವಸ್ಥೆಯನ್ನುಂಟು ಮಾಡು ; ಏರ್ಪಾಟುಮಾಡಂ : ನಾನವನಿಗೆ ನೀರು ಕುಡಿಯುವ ಪಾತ್ರೆ, ಒಂದಿಷ್ಟು ಫರಾಳ, ಹಾಸಿಗೆ, ಹೊದಿಕೆ ಕೊಟ್ಟು ದಾರಿಗೆ ಹಚ್ಚಿದೆ (ಸ್ಮೃತಿಚಿ. ೨೭೪). ದಾರಿ ತಪ್ಪಿಸು = ಮಾರ್ಗ ತಪ್ಪುವಂತೆ ಮಾಡಂ ; ಕೆಟ್ಟ ದಾರಿ ಹಿಡಿಯುವಂತೆ ಮಾಡು: ಅವನಿಗೆ ದಾರಿ ತಪ್ಪಿಸುವಂತಹ ಸ್ನೇಹಿತರೇ ಹೆಚ್ಚು ಮಂದಿ (ರೂಢಿ). ದಾರಿಯ ತೆಗೆ = ಹಾದಿಯನ್ನು ಮಾಡಿಕೊಳ್ಳು ; ಮಾರ್ಗವನ್ನು ತಿಳಿ : ಬಗಿದು ಹೊಕ್ಕರು ವಿುಳೆಗಳನು ಮಿಂಚುಗಳ ಕಂಬೆಳಗಿನಲಿ ದಾರಿಯ ತೆಗೆತೆಗೆದು ಸಾರಿದರು (ಕುಮಾರ್ಯ. ೯-೨೪). ದಾರಿಯ ದೀಪ = ಹಾದಿಯ ಬೆಳಕು ; ಮಾರ್ಗದರ್ಶನವನ್ನುಂಟುಮಾಡುವ ಪ್ರಭೆ: ಅವರು ದಾರಿಯ ದೀಪವಾದರು ಬಾಳಿಗೆ (ಇಂಚರಾಪ. ೩-೫).

[ ದೇ.॥ ತಮಿ. ಆತರ್, ತಾರಿ, ತಾರೈ; ತುಳು. ತೆಲು. ದಾರಿ ]

**ದಾರಿಕ** (ನಾ). ಹಾದಿಯಲ್ಲಿ ಹೋಗುವವನು; "ದಾರಿಗ, ದಾರಿಹೋಕ" (ಜಾನಪದೋ. ೪). [ ದಾರಿ + -ಕ₃ ]

**ದಾರಿಕಟ್ಟು** (ಕ್ರಿ). ಹಾದಿಗೆ ಅಡ್ಡ ಬರುಂ; ಅಡ್ಡಗಟ್ಟು ; ರಸ್ತೆಯಲ್ಲಿ ಬಂದಂ ತರುಬು : ಹಠಾತ್ತಾಗಿ ಕಳ್ಳರು ಬಂದು ದಾರಿಕಟ್ಟಿ ಮೇಲೆ ಬಿದ್ದು . . . ಕೂಡಿದ್ದ ಸುಂದರಾಂಗಿಯನ್ನು ಹೊರಕ್ಕೆ ಎಳೆದರು (ಭಾರತೀ. ೨).

[ ದಾರಿ + ಕಟ್ಟು₁ ]

**ದಾರಿಕಾಯು** (ಕ್ರಿ). (ಆಲಂ) (ಯಾವುದಾದರೂ ವಸ್ತು ಅಥವಾ ಯಾರಾದರೊಬ್ಬರ ಬರವನ್ನು) ಎದುರುನೋಡಂ,-ನಿರೀಕ್ಷಿಸಂ ; ಹಾದಿನೋಡಂ : ಎತ್ತಿನ ಬಂಡಿಯಿಳಿದು, ಬಸ್ಸಿನ ದಾರಿಕಾಯ್ದು, ಕಾರಿನಲ್ಲಿ ತೂರಿ, ಹಡಗ ಬಿಟ್ಟು ವಿಮಾನದಲಿ ಹಾರಿ ಗೋಲಗಳ ಮೇಲೆ ದಾಳಿಮಾಡಿದ್ದೇವೆ (ನಿಂಮುಮು. ೩೦-೨೪); ಅವರೆಲ್ಲ ಗಪ್‌ಚಿಪ್ ಉಪಹಾರ ಮಾಡಿ ಬೇಗರ ದಾರಿ ಕಾಯುತ್ತಾ ಕುಳಿತರು (ಸ್ಮೃತಿಚಿ. ೨೫).

[ ದಾರಿ + ಕಾಯು₁ (<ಕಾ₁) ]

**ದಾರಿಕಾರ** 'ದಾರಿಕಾಱ' ನೋ.

**ದಾರಿಕಾಱ, ದಾರಿಕಾರ, ದಾರಿಗಾರ** (ನಾ). ಹಾದಿಯಲ್ಲಿ ಹೋಗುವವನಂ ; ಪಯಣಿಗ ; ಪಥಿಕ : ಊರಿಗೆಯ್ದದ ಮಾರಿ ಬೀರಸೆಟ್ಟಿಯ ಹೊಯ್ದು ದಾರಿಕಾಱರ ಗಾದೆಯಂತೆ (ಭರತ. ೯೮-೯೪). ದಾರಿಕಾರ: ದಾರಿಕಾರರ ಹಾಗೆ, ನೀರಡಿಸಿ ಬೇಸಿಗೆಯ ನಡುಹಗಲಿನಲ್ಲಿ ನಡೆದು (ಸಹೀಗೀ. ೭೦-೩) ; ನೀರಡಿಸಿ ಬಂದವನಾ ಜಗದ ದಾರಿಕಾರ (ನಲಮು. ೯೩-೦೭) ; ಮರೆಯದಿರು ರಾಜಕುವರ ಪಥದಿ ನೀನೊಬ್ಬನೇ ದಾರಿಕಾರ (ಸ್ವರರ್ಚಿ. ೨೯); ಸಂದರ್ಭ ಸಿಕ್ಕಿದಾಗಲೆಲ್ಲ ದಾರಿಕಾರರನ್ನು ಹಿಡಿದು ಕೊಳ್ಳೆ ಹೊಡೆಯುತ್ತ ಜೀವನ ಸಾಗಿಸಿದ್ದರು. (ಅಕ್ರಮು. ೩೦). ದಾರಿಗಾರ : (ಕ).

[ ದಾರಿ + -ಕಾಱ ]

**ದಾರಿಕೆ** (ನಾ). ೧. ಕನ್ಯೆ; ಹೆಣ್ಣುಮಗಳಂ; ಹುಡುಗಿ: ನೀರ ಬೊಬ್ಬುಳಿಕೆ ಕಾಮನ ಬಿಲ್ಲು ಸಂಜೆಯೊಳ್ತೋಱುವ ಕೆಂಪು ಪುಲ್ಲನಿಯು ದಾರಿಸಂಗಡ ದಾರಿಕೆಯರ ಚಿತ್ತದವೊಲು ಅರಯ್ಯಲೆಲ್ಲವಧ್ರುವವು (ಶಾಂತೀಶ. ೮-೮೯). ೨. ಸೂಳೆ ; ವೇಶ್ಯೆ ; ವಾರಾಂಗನೆ : ಘನತರಭೋಗಮಂ ಗತಿಯ ವಕ್ರತೆಯಂ ಕೆಱವಾಗೆ ಸಾರ್ದು ಮೆಲ್ಲನೆ ಪುಗುವಂದವಂ ನೆಱೆಯೆ ಭಾವಿಸಿ ಬಂದ ಭುಜಂಗನಂ ಭುಜಂಗನೆ ದಿಟಮೆಂದು ದಾರಿಕೆ ಮಯೂರಿಕೆ ಯಂದದಿನೇಂ ಕನಲ್ದಳೋ (ಚಂದ್ರಪು. ೮-೩೮). [ ಸಂ. ದಾರಿಕಾ ]

**ದಾರಿಕೆಳೆ** (ನಾ). ೧. ದಾರಿಯಂ ಸ್ನೇಹ; ಹಾದಿಯಂ ಗೆಳೆತನ. ೨. (ಆಲಂ) ತಾತ್ಕಾಲಿಕ ಸ್ನೇಹ ; ನಶ್ವರವಾದ ಸಂಬಂಧ : ಯಾರೆ ಮೋಹವನು ಸಂಸಾರದಿಂ ಭಯವೇನು ದಾರಿಕೆಳೆಯದು ನಿನಗೆ ? (ಮುಂಕುಕ. ೬೧೪). [ ದಾರಿ + ಕೆಳೆ$_2$ ]

**ದಾರಿಗ** (ನಾ). = ದಾರಿಕಾಱ : ತೀರಲು ತೃಷೆ ನೀರು ತೀರಲು ಸಂತಾಪ ತೀರಲವರ ನೋಳ್ಪಾಸೆ ತೀರದೆ ನಿಂದಿರುತಿರೆ ಭೂರಿದಾರಿಗರಾ ವಾರಿಮಂಡಪಗಳೊಳು (ಅಂಜಕ. ೨-೧೦೬); ನೀರಡಿಸಿ ಕಾಲ್ಗಳಱತವವಾರೆಯ ಜಳವಿಲ್ಲ ಕೆಲವು ಕಿಱಿತೂಱಿಗಳೊಳಂ ನೀರೊಳ್ಪೆಗೊಳ ಕಾದುದು ದಾರಿಗರುಂ ಬಿಡದಂತುಱ್ ಬೀಳ್ವರ್ ನೆಳಲೊಳ್ (ಹಮ್ಮಾಕ. ೪-೬೬) ; ಮಿಗೆ ಕುವರಗೆ ಶಶಿಪ್ರಭೆಯ ಚೆಲ್ವಿಕೆಯ ದಾರಿಗ ಪೇಳ್ದನೆಂದನಾ ಮುನಿಪ (ಕುಪ್ರಸಾಂ. ೭); ದಾರಿಗರೂರುಗನರ್ಾಡುಗರಿಹ ಪರಿವಾರ ವಿದ್ವಾಂಸರು ನೃಪರು ನೀರುಗಣೊಳು ಹಗಲಿರುಳು ಗೋಳಿಟ್ಟರು (ಭರತ. ೬೮-೧೦೩) ; ರಸದಾಳಿಗರ್ವಗಳ ಸೋ ಗೆಗಳ ಪಸುರುವೊಗರಾಗಸಕೆ ಪರ್ವುತಿಹುದಾ ನಾಡೊಳೆಲ್ಲಿಯುಂ ದಾರಿಗರ ಕಣ್ಗೆ ಕೌತುಕವಾಗಲು (ಜೈಮಿಕಾ. ೩-೫). [ ದಾರಿ + – ಗ$_8$ ]

**ದಾರಿಗಳ್ಳ** (ನಾ). ಮಾರ್ಗದಲ್ಲಿ ದರೋಡೆ ಮಾಡುವ ಕಳ್ಳ; ಹಾದಿಗಳ್ಳ: ದಾರಿಗಳ್ಳರ ಕೈಗೆ ಸಿಕ್ಕಿ ಅವರು ಹಣವನ್ನೆಲ್ಲಾ ಕಳೆದುಕೊಂಡಿದ್ದರು (ರೂಢಿ). [ ದಾರಿ + ಕಳ್ಳ$_1$ ]

**ದಾರಿಗಾಣ್** (ಕ್ರಿ). ೧. ದಾರಿಯನ್ನು ತಿಳಿ. ೨. ಉಪಾಯವನ್ನು ತಿಳಿ : ಅಕ್ಕ ಮಾತ್ರ ವಿಹ್ವಲಳಾಗಿ ದಾರಿಗಾಣದೆ ಒಳಗೆ ಓಡಿಬಂದು (ಕಮನೆ. ೨೦೦). [ ದಾರಿ + ಕಾಣ್ ]

**ದಾರಿಗಾಣಿಸು** (ಕ್ರಿ). ಮಾರ್ಗ ತೋರಿಸು; ದಾರಿತೋಱಂ : ಎದೆಗೊಂಡು ದಾರಿಗಾಣಿಸುವ ಈ ವಾಗ್ಜ್ಯೋತಿ (ನಾಡೋಜ. ೩೭). [ ದಾರಿ + ಕಾಣಿಸು ]

**ದಾರಿಗಾರ** 'ದಾರಿಕಾಱ' ನೋ.

**ದಾರಿಗುಟಗ** (ನಾ). ಹಾದಿಯನ್ನು ಸವೆಸುವವನು ; ದಾರಿಹೋಕ ; ಪಯಣಿಗ । ದಾರಿಗುಟಗಂ ಪಾರಿಪಂಥಿಕಃ (ಕಬ್ಬಾಸು. ೩೪೮ ವ್ಯಾಖ್ಯಾ). [ ದಾರಿ + – ಕುಟಗ$_1$ ]

**ದಾರಿಗೆಡು** (ಕ್ರಿ). ಮಾರ್ಗತಪ್ಪು ; ದಾರಿ ತಿಳಿಯದಾಗು : ಬಿರುದರ್ ಕರಿಗಿಕ್ಕಿದ ಕಳ್ಳನಂತೆ ಜರಿಯ ಬೀರರ್ ದಾರಿಗೆಟ್ಟರಂತೆ ಬೆದಱ (ಧರ್ಮಾಮೃ. ೨-೬೪). [ ದಾರಿ + ಕೆಡು$_1$ ]

**ದಾರಿಗೊಳ್**, **ದಾರಿಗೊಳ್ಳು** (ಕ್ರಿ). ಹಾದಿಹಿಡಿ ; ಮಾರ್ಗಹಿಡಿ : ದಾರಿಗೊಂಡು ಹೋಹವರಲ್ಲ ನೀವು ಕೇಳಿರೇ (ಅವಚಂ. ೧೦೩-೪೬೪) ; ವೀರ ಕೋಪಾಟೋಪದಿಂ ಮದವಾರಣಂ ಬರೆ ಕಾಣುತಂ ಬಾಹೂರ ಬೊಮ್ಮಯ್ಯಂ ಬಗೆಯದಂಜದೆ ತೊಲಗದಿಂತು ದಾರಿಗೊಂಡೆಯ್ತರಲ ದುಗ್ರಾಕಾರದಿಂ ಮೇಲ್ವರಿಯೆ (ಬಸಪು. ೨೨-೩೦). **ದಾರಿಗೊಳ್ಳು** : ಶಾಪವ ನಿತ್ತು ದೂರ್ವಾಸ ತನ್ನ ದಾರಿಗೊಂಡು ತಾನು ಹೋದಲ್ಲಿ (ಸಕಪ್ರ. ೮). [ ದಾರಿ + ಕೊಳ್$_1$ ]

**ದಾರಿಗೊಳ್ಳು** 'ದಾರಿಗೊಳ್' ನೋ.

**ದಾರಿಡು** (ಕ್ರಿ). ಸುರಿ ; ಹರಿ ; ಪ್ರವಹಿಸು ; ಧಾರಾಕಾರವಾಗಿ ಹರಿ : ಚೂತಫಲದಾಸಾರ ದಾಡಿಮಕದರೆ ತದ್ರಸ ಕದಳಿಗಳ ಮೇಲೆ ದಾರಿಡಲು (ಜೀಪಂಚ. ೨-೮) ; ಶೈಲದೆಡಬಲದೊಱತೆಯೆನೆ ಸುಕಪೋಲದಲಿ ದಾರಿಡುವ ಮದಜಲ ಧಾರೆಗಳ . . . ನೋಡಿದರು (ಕುವ್ಯಾಉ. ೧೦-೧೯). [ ದಾರೆ$_2$ + ಇಡು$_1$ ]

**ದಾರಿತ** (ಗು). ಒಡೆದ ; ಭೇದಿಸಿದ ; ಸೀಳಿದ ; ಕತ್ತರಿಸಿದ ; ಹರಿದ : ದುಃಖಕ್ರಕಚದಾರಿತ ದಾರುದಾರುಣಕರುಣಾಕೃಷ್ಟಬಾಷ್ಪಜಲಲುಳಿತ ಲೋಚನಂ ಬಂದು ನೆಗಪೆ (ಲೀಲಾವ. ೧೪-೬೯ ವ). [ ಸಂ. ]

**ದಾರಿತಪ್ಪು** 'ದಾರಿದಪ್ಪು' ನೋ.

**ದಾರಿತುಳಿ** (ಕ್ರಿ). ಹಾದಿಯಲ್ಲಿ ನಡೆದು ಸಾಗು,-ಮುಂದೆ ಹೋಗು ; ನಡೆ: ಬಿಸಿಲಿನಲ್ಲಿ ದಾರಿತುಳಿಯುವಾಗ ಅನೇಕ ವಿಧವಾದ ಆಲೋಚನೆಗಳು, ನೆನಪುಗಳು ಅವಳ ಮನಸ್ಸಿನಲ್ಲಿ ಸುಳಿಯುತ್ತಿದ್ದುವು (ದೂರಸ. ೯೮). [ ದಾರಿ + ತುಳಿ$_1$ (<ತುಳ್$_1$) ]

**ದಾರಿತೆಗೆ** 'ದಾರಿದೆಗೆ' ನೋ.

**ದಾರಿತೋರ್** 'ದಾರಿದೋಱು' ನೋ.

**ದಾರಿತೋರಿಕೆ** (ನಾ). ಮಾರ್ಗದರ್ಶನ : ನಾಗವರ್ಮನು ಕಾಣದ, ೮೦೦ ವರ್ಷಗಳ ಹೊಸ ಹಾಡುಕಟ್ಟುಗಳ ದಾರಿತೋರಿಕೆಯ ಮೇಲೂ, ಇಂಗ್ಲಿಷ್ ಛಂದಸ್ಸಿನ ಸ್ವಾತಂತ್ರ್ಯ ವೈವಿಧ್ಯ ಸೌಂದರ್ಯಗಳ ಪ್ರೇರಣೆಯ ಮೇಲೂ . . . ಸರಳರಗಳೆಯನ್ನೂ ಪ್ರಯೋಗಿಸುತ್ತಾ ಇದ್ದಾರೆ (ಕೃಚಿಧಿ. ೧೧೮). [ ದಾರಿತೋರು (<ದಾರಿದೋಱು) + – ಇಕೆ ]

**ದಾರಿತೋರು** 'ದಾರಿದೋಱು' ನೋ.

**ದಾರಿತೋಱು** 'ದಾರಿದೋಱು' ನೋ.

**ದಾರಿದಪ್ಪು**, **ದಾರಿತಪ್ಪು** (ಕ್ರಿ). ೧. ಮಾರ್ಗವನ್ನು ಕಳೆದುಕೊಳ್ಳು ; ಹಾದಿತಪ್ಪು : ದಾರಿದ[ಜಾಕಾಂ. ತ]ಪ್ಪಿದೆವಱಿಸಿ ಧಾಜದ್ವಾರವನು ಹೇಳೌ ಸ್ವಯಂಪ್ರಭೆ ಧಾರುಣೀಶನ ಹಗೆಯ ನಗರಕೆ ಹೋಗಬೇಕು (ತೊರಭಾ. ೪-೧೦-೨೫); ದಾರಿದಪ್ಪಿದವಂಗೆ ವಿಭ್ರಮೆ ತೋರಿದಂತೆ (ಚಕಗೀ. ೨೪-೦೨). ೨. ಧರ್ಮಮಾರ್ಗವನ್ನು ಬಿಡು; ಅನ್ಯಾಯಕ್ಕೆ ಬೀಳು ; ಕೆಟ್ಟ ದಾರಿ ಹಿಡಿ : ದಾರಿದಪ್ಪಿದ ಮನುಷ್ಯನನ್ನು ಬಹಳ ಚಾತುರ್ಯದಿಂದ ದಾರಿಗೆ ತಂದುಕೊಂಡಳು (ರೂಢಿ). **ದಾರಿತಪ್ಪು** : ೧. ನನ್ನ ಭಾಗ್ಯ ದೇವತೆಯು ದಾರಿತಪ್ಪಿ ಬಂದಳೋ ಹೇಗೊ (ಜಿದೇವ. ೦೬೯) ; ಬೋಳನು ದಾರಿತಪ್ಪಿ ನಡೆದಿದ್ದನು (ಕಾಬೂಕ. ಕಥಾಸಾರ ೧೦). [ ದಾರಿ + ತಪ್ಪು$_1$ ]

**ದಾರಿದೀಪ** (ನಾ). ೧. ಬೀದಿಗಳಲ್ಲಿ ಸಾಲಾಗಿ ಹಾಕಿರುವ (ವಿದ್ಯುಚ್ಛಕ್ತಿಯ) ದೀಪ : ಆ ಸಣ್ಣ ಹಳ್ಳಿಯಲ್ಲಿ ಇತ್ತೀಚೆಗೆ ದಾರಿ ದೀಪಗಳನ್ನು ಹಾಕಿದ್ದಾರೆ (ರೂಢಿ). ೨. (ಆಲಂ) ಬದುಕಿನ ಮಾರ್ಗದರ್ಶನ ಮಾಡುವ ಬೆಳಕು,-ದಾರಿಯನ್ನು ತೋರಿಸುವ ಬೆಳಕು: ಈ ವಿಚಾರ ಓಸಿಯನಸ್‌ಗೆ ದಾರಿದೀಪವಾಗಿ ಕಂಡಿತು (ಬದ್ಧಪ್ರ, XVI ೩೬೮೪) ; 'ಗೀತಾಂಜಲಿ' ಯಂಥ ಅಮೂಲ್ಯ ಗ್ರಂಥಗಳು ನಮ್ಮ ದಾರಿದೀಪವಾಗಬೇಕು (ಧರ್ಮಸಾ. ೯೩). [ ದಾರಿ + ದೀಪ$_8$ ]

**ದಾರಿದೆಗೆ**, **ದಾರಿತೆಗೆ** (ಕ್ರಿ). ೧. ದಾರಿಹಿಡಿ ; ಹೊರಡು : ಆ ಗಜದಿಂ ಪಲರುಂ ಸೀಱಸಿ ವಿಜಯೋದ್ಯೋಗಕ್ಕೆ ದಾರಿದೆಗೆದನಲಂಪಿಂ (ಚಕು. ೭-೦೦೪) ; ಆ ಪರ್ವತಾಗ್ರದ ಚಾರಣರು ಚದುರೆಯರು ಸಿದ್ಧರು ಮುಗ್ಧೆಯರು ಕಪಿಯ ಭೈರವಾಡಂಬರಕೆ ಬೆದಱದು ದಾರಿದೆಗೆದರು ಸುರಪುರಕೆ (ತೊರಭಾ. ೪-೧೨-೨೧). **ದಾರಿತೆಗೆ** : ೨. ಹಾದಿಯನ್ನು ಕಂಡುಹಿಡಿ ; ಮಾರ್ಗವನ್ನು ಕಲ್ಪಿಸು : ಕಾದಿರಮಿಯಾ ಗಿರಿಧರನ ಕಿವಿಯಲ್ಲಿ ಮೆಲ್ಲನೆ ಹೇಳಿದ : ಮಹಾರಾಜ, ಮನೋಹರಗೆ ಏನಾರ ದಾರೀ ತೆಗೀರಿ (ತ್ರೀಮೂತ್ರ. ೦೩). [ ದಾರಿ + ತೆಗೆ$_1$ ]

**ದಾರಿದೋಂಟ** (ನಾ). ಮಾರ್ಗದಲ್ಲಿರುವ ತೋಟ : ತರತರದ ಬಳ್ಳಿಗಿಡುಮರಗಳಿಂದಿಡಿದ ದಾರಿದೋಂಟಂಗಳಂ ಸೋವುತ್ತ ಕಣ್ ಕಿವಿಗಳೆಚ್ಚರಿಕೆಯಿಂ . . . ಪ್ರವೇಶಿಸಿದನಯ್ ತಿಖರತ್ರಯವ್ಯಾಪಿಯಾ ದಶಗ್ರೀವಪುರದ ಪಾಪದ ಸಾಂದ್ರಕೇಂದ್ರಮಂ (ಶ್ರೀರಾಮಾ. ೪೪೬-೩೦). [ ದಾರಿ + ತೋಂಟ ]

**ದಾರಿದೋಱು**, **ದಾರಿತೋರ್**, **ದಾರಿತೋರು**, **ದಾರಿತೋಱು** (ಕ್ರಿ). ಹಾದಿತೋರು ; ಮಾರ್ಗ ಕಾಣಿಸು; ಉಪಾಯ ತಿಳಿಸು; ಗತಿ

ಭೃಂಗಿಯು ವೀರಭದ್ರಾದಿ ಪ್ರಮಥರೋಲೈಪ ಸಮಯದೊಳು (ಬಸತ್ರ. ೧-೩೨). ೨. ಕೃಷ್ಣನ ಸಾರಥಿ: ನಾಗಾರಿಕೇತನಂ ದಾರುಕಾನ್ವಿತಂ ವರೂಥಸ್ಥನಾಗಿ ಕುಶಸ್ಥಳಕ್ಕೆ ತಳರ್ದಂ (ಜಗವಿ. ೯-೩೩ ವ); ಘನ ಬಳಾಹಕ ಸೈನ್ಯ ಸುಗ್ರೀವನನು ನಿರ್ಮಳ ಮೇಘಪುಷ್ಪನನನುವಿನಲಿ ಹೂಡಿದನು ದಾರುಕ ಹೇಮಮಯ ರಥವ (ಕುಮ್ಮಾ.ಉ. ೭-೭); ಪಾಥೋರುಹಾಕ್ಷನಂ ದಾರುಕಂನಿಟ್ಟಿಸಿ ವರೂಥಮಂ ತಿರುಗಿಸಿದನು (ಕೃಮಿಥಾ. ೭-೩೭). ೩. ದೇವದಾರು ಮರ. ೪. ಮರ; ಕಟ್ಟಿಗೆ; ಕಾಷ್ಠ. 'ದಾರುಕಾಸನ' ಪರಾ. ೫. [ವೀಶೈ] ಪಂಚಾಚಾರ್ಯರಲ್ಲಿ ಒಬ್ಬ; ಪಂಚಪೀಠಗಳಲ್ಲಿ ಒಂದಾದ ಉಜ್ಜಯಿನಿ ಪೀಠದ ಸ್ಥಾಪಕ. 'ದಾರುಕಪೀಠ' ಪರಾ. [ ಸಂ. ]

**ದಾರುಕಪೀಠ** (ನಾ). [ವೀಶೈ] ಪಂಚಪೀಠಗಳಲ್ಲಿ ಒಂದು; ಉಜ್ಜಯಿನಿಯ ಪೀಠ: ಉಜ್ಜಯಿನಿಯಲ್ಲಿ ದಾರುಕಪೀಠವಿದೆ; ಬಾಳೆ ಹೊನ್ನೂರಿನಲ್ಲಿ ರೇಣುಕಪೀಠವಿದೆ (ಸೂಲ). [ ದಾರುಕ + ಪೀಠ ]

**ದಾರುಕರ್ಮ** (ನಾ). ಮರದ ಕೆಲಸ; ಬಡಗಿಯ ಉದ್ಯೋಗ: ದಾರುಕರ್ಮ ವಾಸ್ತುವಿದ್ಯಾಪೂರ್ವಯಂತ್ರ ಪ್ರಯೋಗ ವಿ[ಷಾ]ಪಹರಣ ಸರಭೇದ ರತಿತಂತ್ರೇಂದ್ರ ಜಾಲ ವಿವಿಧ ವಿದ್ಯೆಗಳೊಳಂ . . . ಜಾಣ (?) [ನು]ಮಾಗಿ (ಶಂಪಠಾ. ೨-೩೪ ವ). [ ದಾರು₂ + ಕರ್ಮ ]

**ದಾರುಕಾಸನ** (ನಾ). ಮರದ ಪೀಠ; ಮರದ ಮಣೆ: ದಾರುಕಾಸನ ಭಾಗ್ಯಹಾನಿಯು (ಗಗಕಾ. ೪-೨೨). [ ದಾರುಕ + ಆಸನ ]

**ದಾರುಕುಲ** (ನಾ). ಮರಗಳ ಸಮೂಹ: ಫಲವೀವ ವೃಕ್ಷಮಂ ಜಿಟ್ಟು ನೀರಸ ದಾರುಕುಲಕಾಲವಾಲಮಂ ತಿರ್ದಿಸಿ (ಆರಾಚ. ೦೨-೨೭). [ ದಾರು₂ + ಕುಲ ]

**ದಾರುಜೀವನ** (ನಾ). (ಆಲಂ) ನೀರಸವಾದ ಜೀವನ; ಸ್ವಾರಸ್ಯವಿಲ್ಲದ ಬಾಳು: ತಾವು ಅನ್ಯೋನ್ಯವಾಗಿರದೆ, ಮಾತುಕಥೆ ಕೂಡ ಇಲ್ಲದೆ, ಮಸಣ ಮೌನದಿಂದ ದಾರುಜೀವನವನ್ನು ಜೀವಿಸುವುದು ಸಾವಿಗಿಂತ ಕಡೆ! (ಬಂಕಿಮ. ೨೧೨). [ ದಾರು₂ + ಜೀವನ ]

**ದಾರುಣ** (ಗು). ೧. ಕ್ರೂರವಾದ; ಭಯಂಕರವಾದ; ಉಗ್ರವಾದ; ಕಠಿಣವಾದ: ಮುನಿಜನಕೃತವಿಘ್ನಂಗಳಂ ದಾರುಣ ದೈತ್ಯರ್ ಮಾಡೆ (ಶಂಪಠಾ. ೪-೧೧); ಕನಕ ಶಾಂತಿ ತಪೋಧನನುಮಂ ಧ್ಯಾನಾನಲಸಂಧುಕ್ಷ ಮಾಣದಾರುಣದುರಿತಾರಣ್ಯನಾಗಿ ಯೋಗದೊಳಿರೆ (ಶಾಂತಿಪು. ೯-೧೯ ವ); ವೀರರಸಂ ಬವರಿಸುಗುಮುದಾರೋತ್ಸಾಹ ಪ್ರವೃತ್ತಿ ಕಾರಣ ಕಾರ್ಯಂ ದಾರುಣ ರೋಷಾವೇಶ ವಿಕಾರಭವಂ ರೌದ್ರಮೆಂಬ ರಸಮದು ನೆಗಟ್ಟಂ (ಕಾವ್ಯಾವ. ೮೧೭). (ನಾ). ೨. ಭಯಂಕರವಾದುದು; ಕ್ರೂರವಾದುದು; ಕಠಿಣವಾದುದು: ಕಾನನಂ ಕಣ್ಗೆ ದೂರಕೆ ನುಣ್ಪು ದೋರ್ದಡಂ ಬಾಳ್ಕೆಗತಿ ದಾರುಣಂ (ಶ್ರೀರಾಮಾ. ೮೮-೨೮೭). ೩. ಕ್ರೂರಿ; ಹಿಂಸಿಸುವವನು; ನಿಷ್ಕರುಣಿ; ನಿರ್ದಯಿ: ರವಿ ಚಾಪಕ್ಷೇತ್ರದೊಳ್ ನಿಂದೊಡೆ ಧನಪತಿ ಸತ್ಪೂಜಿತಂ ದಾರುಣಂ ವೈದ್ಯವಿದಂ ತಕ್ಷೋಪಜೀವ್ಯಂ (ಜಾತಕ. ೦೭-೧೭); ಓಹೋ ಹೋ ಹಾ ಮಾಣ ದಾರುಣ ಮಾಣೆಂದೂ ಜಲುತ್ತೆ ಬೀಟೆ ತವೆ ಪೀರ್ದಂ ಪೂತನಾಜೀವಮಂ (ಜಗವಿ. ೩-೨೪); ನಾನೆ ದಾರುಣನೆಂದಿದೇತಕೆ ಬೀಗುವೆ ಸುಮ್ಮನೆ ಓ ಹಾಲಾಹಲವೆ (ಇಂಚಾಪ. ೨೨೦-೯೩). ೪. ಕ್ರೂರತನ; ಉಗ್ರತೆ; ನೋವು: ದಾರುಣದ ಕರ್ಮ ನಿಯತಿಯಸಿನಿತು ಶಿಥಿಲಿಪುದು ಕಾರುಣ್ಯದಿಂ ದೈವ (ಮಂಕುಕ. ೩೦೯). ೫. ಒಂದು ನರಕದ ಹೆಸರು: ಬಳಿಕ ಕುಂಭೀಪಾಕ ಸುಪಾಕ ಪ್ರಮುಖ ದಾರುಣ ಅಂಗಾರಕಮೆಂಬ್ಬಿದು ಮಂತ್ರಿ ನರಕಂಗಳಂ ಸೇರಿ ತರಳತಾರ ವೆಂಬರಸುನರಕವಿಹುದು (ವಿವೇಕ. ೦೮೦). [ ಸಂ. ]

**ದಾರುಣತೆ** (ನಾ). ಉಗ್ರತೆ; ಕ್ರೌರ್ಯ; ಭಯಂಕರತೆ: ದೈವದ ದಾರುಣತೆಯುಮಂ ಶೋಕೋದ್ರೇಕಮುಮಂ ದುಃಖದ ದುಸ್ಸಹತೆಯುಮಂ ಪದಾರ್ಥದನಿತ್ಯತೆಯುಮಂ ಭಾವಿಸಿ ನೋಡಿ (ಕಾದಂಪೂ. ೯೩೨). [ ಸಂ. ದಾರುಣತಾ ]

**ದಾರುಣಮುಖ** (ನಾ). ಕ್ರೂರವಾದ ಮುಖವುಳ್ಳವನು; ಅತ್ಯಂತ ಕಟುವಾಗಿ ಮಾತನಾಡುವವನು: ವಿದ್ವತ್ಸಭಾಮಧ್ಯದೊಳ್ ಕಾಳೋಗ್ರೋರಗನಂತೆ ದಾರುಣಮುಖರ್ ದುಷ್ಟರ್ ಖಳರ್ ದುರ್ಮುಖರ್ ದೋಷಾನ್ವೇಷಣರಪ್ಪವರ್ ಪಟಿದೊಡೇವಂ ಮಾಟ್ಟುರೇಗೆಯ್ಯರೋ (ಸುಕುಮಾ. ೧-೪೭). [ ದಾರುಣ + ಮುಖ ]

**ದಾರುಣವಡೆ** (ಕ್ರಿ). ಉಗ್ರತೆಯನ್ನು ಹೊಂದು; ಕ್ರೂರವಾಗು: ಸೊಗಯಿಪ ಸತಿಯತಿಕಾರ್ಶ್ಯಂದಳೆದೊಪ್ಪಿದಳು ದಾರುಣವಡೆದ ನಿದಾಘ ಸಮಯ ಕಾಸಾರದ ಭಂಗಿಯುಮಂ ಸಿತಪಕ್ಷಂ ತೀರಿದ ನಿರ್ಮಲಶಶಿಬಿಂಬದ ಭಂಗಿಯುಮಂ ನೆನೆಯಿಸುತ (ಜಯುಕಾ. ೪-೩೨). [ ದಾರುಣ + ಪಡೆ₁ ]

**ದಾರುದಾರುಣ** (ನಾ). ಮರದ ಹಾಗೆ ಒರಟಾದುದು: ದಾರುದಾರುಣನಂ ದಾನವಾರಿವಾರಿತಲೋಕನಂ ಬಾರಬಾರಣಮಂ ನೋಡಾ ಸಾರಸಾರಾಂಬುದಾಭಮಂ (ಕವಿರಾ. ೨-೧೩೦); ಮಕರಂದನರಸನವಸ್ಥೆಯಂ ಕಂಡು ದುಃಖ ಶ್ರಿತಚಿದಾರಿತ ದಾರುದಾರುಣ ಕರುಣಾಕ್ರೆಪ್ಪ ಬಾಷ್ಪಜಲಲುಳಿತಲೋಚನಂ ಬಂದು ನೆಗೆವ (ಲೀಲಾವ. ೧೪-೬೯ ವ). [ ದಾರು₂ + ದಾರುಣ ]

**ದಾರುಪಾಶವಿಧಿ** (ನಾ). ಹಗ್ಗದಿಂದ ಮರಕ್ಕೆ ಕಟ್ಟುವ ಕ್ರಮ (?): ಅಪರಾಜಿತ ಮಹಿಪಸಮದ ದ್ವಿಪಂಗಳಂ ಪಿಡಿಯಲವನಿನಾಥನ ಸೇನಾಧಿಪನ ತಲೆವಿಲ್ಲ ದಲ್ ದಾರುಪಾಶವಿಧಿಯಾಯ್ತು, ಬಂದು ಕಾಣ್ಬನ್ನೆವರಂ (ಶಾಂತಿಪು. ೦೦-೧೯). [ ದಾರು₂ + ಪಾಶ + ವಿಧಿ ]

**ದಾರುಪಂದಿ** (ನಾ). ಒಂದು ಬಗೆಯ ಹಂದಿ; ಕಾಡುಹಂದಿ: ಉಡುವು ಹೆಬ್ಬಾವು ಮುಂಗುರಿ ದಾರುಪಂದಿಯು ಕಡವೆ ಕೆನ್ನಾಯಿ ಕೊಂಡಗುರಿಯ್ಯ (ಮಾದೇಸಾಂ. ೦-೩೮). [ ದಾರು₂ + ಪಂದಿ ]

**ದಾರುಹರಿದ್ರೆ** (ನಾ). ಮರದರಿಸಿನ; ಅಂಬೆಹಳದಿ: "ಪೀತದ್ರುಃ, ಕಾಲೇಯಕಃ . . . ದಾರುಹರಿದ್ರಾ, ಪರ್ಜನೀ–೭ ಮರದರಿಸಿನ, ಕಸ್ತೂರಿ ಅರಿಸಿನವೆಂದು ಕೆಲವರನ್ನುವರು" (ಸಿದ್ಧಾಂಶಿ. ೦೩೩). [ ಸಂ. ದಾರುಹರಿದ್ರಾ ]

**ದಾರುಹಸ್ತ** (ನಾ). ಮರದ ಸೌಟು; ಹುಟ್ಟು; ಸಟ್ಟುಗ; ಮರದ ಚಮಚೆ: "ದರ್ವೀ, ತರ್ದೂಃ, ಖಜಿಕಾ, ದಾರುಹಸ್ತಃ–ಈ ೪ ಸಟ್ಟುಗಂ" (ಹಲಾಯು. ೩೨-೦೩೭); "ಖಜಿಕೆ ದರ್ವೀ ದಾರುಹಸ್ತಂ ದ್ರುತಂ ಹುಟ್ಟೆನಿಕ್ಕು" (ಮಂಗರಾ. ೬೧-೦೮). [ ದಾರು₂ + ಹಸ್ತ ]

**ದಾರುಹಸ್ತಕ** (ನಾ). = ದಾರುಹಸ್ತ: "ತಂಡೂಃ, ದಾರುಹಸ್ತಕಃ – ೨ ಕೈಬಟ್ಟ ಪೆಸರುಗಳು. ಮರದ ಸೊಟಕ; ಮರದ ಸೌಟು" (ಸಿದ್ಧಾಂಶಿ. ೨೮೪). [ ದಾರು₂ + ಹಸ್ತಕ ]

**ದಾರೆ₁** (ನಾ). ೧. (ನೀರು) ಧಾರೆಯಾಗಿ ಹರಿಯುವಿಕೆ; ಧಾರಾಕಾರವಾಗಿ ಬೀಳುವಿಕೆ: ಧಕಾರಕ್ಕೆ ದಕಾರಂ – ಧಾರಾ – ದಾರೆ; ಧೂಪ – ದೂಪ (ಶಮದ. ೨೩೩ ಪ್ರಯೋ); ಜೀರದಲಿ ನೆಟಿ ತುಂಬಿದಂತಿರೆ ಪೂರವಿಸಿ ಬುದಿಲೆನಿಸಿ ಭಸಿತದ ದಾ[ಹಾಂ. ಧಾ] ರೆ ಪೊಜಿಮಡೆ ಜೀರ್ಕೊಳವೆಯಲಿ ಚಿಮ್ಮಿದಂತಾಯ್ತು (ಬಸಪು. ೪೪-೧೩). 'ಅಳಂದಾರೆ' ಪರಾ. ೨. ಪ್ರಧಾನವಾದ ಗೆರೆ; ಪ್ರಮುಖ ಗೆರೆ; ಮುಖ್ಯವಾದ ಗೀಟು; ಅಂಚು: ಮೇಲಣ ವಟ್ಟಕ್ಕೆ ಎಂಟು ದಾರೆಯ ಪಣಂ ಮುಜಿದು ಗರಿಗೆಪಟ್ಟ ವರ್ತುಳಾಕಾರದಿಂ ಶುದ್ಧವ ಮಾಡಿ (ಸವರ್ಣವ. ೧೨೦-೬೦೭). ೩. ಕತ್ತಿಯ ಅಲಗು,–ಅಂಚು: ಕಂತು ಹೊಡೆದೊಡೆ ಮುನೀಶ್ವರ ಕಠಿನಮನಕಾಂತಂ ದಾರೆಗಳು ಮುಜಿದಲಗುಗಳಯುಕ್ಕುಗಳ ಬಳಗವೊ . . . ಎನಿಸಿ

(ಹಚಕಾ. ೩-೩೭). ೪. [ಅಶ್ವಶಾ] ಕುದುರೆಯ ನಡಗೆಯ ಐದು ರೀತಿಗಳಲ್ಲಿ ಒಂದು: ತುರಗವನೇರಿ ದಾರೆಗಳಿಂದ [ ತೋರಿಪ ? ] ಪರಿಪರಿ ವಿಡಾಯದಿಂದ ತಿರುಗಿಸುವನಂ (ಗೋಜಶಿ. ೩-೩೦)· 'ದಾರೆಗತಿ' ಪರಾ. [ <ಸಂ. ಧಾರಾ ]

**ದಾರೆ** (ನಾ). ಹೆಂಡತಿ ; ಪತ್ನಿ : ದಶರಥನೃಪಂ, ತನ್ನವೊಲೆ ನಾರುಮಡಿಯುಟ್ಟು ನೋಂಪಿಗೆ ನಿಂದ ದಾರೆಯರ್ವೆರಸಿ ತನುಜಾತಕಾಮೇಷ್ಟಿಯಂ ಕೈಕೊಂಡು (ಶ್ರೀರಾಮಾ. ೦೦-೨೯೯). [ ಸಂ. ದಾರ ]

**ದಾರೆ** (ನಾ). ಒಂದು ಬಗೆಯ ಸಸ್ಯ : "ಉಪಹಾರಿ – ದಾರೆ, ಹೀರೆ" (ಓಷಧಿ. ೧೭). 'ದಾಹೀರೆ' ಪರಾ. [ ? ]

**ದಾರೆಕಟ್ಟು** (ನಾ). ೧. ವಾಮಾಚಾರದ ವ್ಯವಹಾರಗಳಲ್ಲಿ ಒಂದು ; ಕತ್ತಿಯ ಬಾಯಿ ಚಲಿಸದಂತೆ ನಿಲ್ಲಿಸುವ ಒಂದು ತಂತ್ರದ ಸಾಧನೆ : ಖಡ್ಗಸ್ತಂಭನ. ೨. ಹಾಗೆ ನಿಲ್ಲಿಸುವ ಕ್ರಿಯೆ: ಆತನು ಮಂತ್ರ, ತಂತ್ರ . . . ದಾರೆಕಟ್ಟು, ಮೊನೆಕಟ್ಟೆಂಬ ಕುವಿದ್ಯದಿಂ ಗೆಲುವೆನೆಂದು ಬಂದವನ . . . ನಿವಾರಿಸಿ (ಕೃಕಥಾ. ೩೭೭). [ ದಾರೆ$_{1}$ + ಕಟ್ಟು$_{2}$ ]

**ದಾರೆಗಡಗ** (ನಾ). (ವಿವಾಹ ಸಮಯದಲ್ಲಿ) ಹೆಣ್ಣಿಗೆ ಧಾರೆಯೆರೆಯುವ ಮುನ್ನ ತೊಡಿಸುವ ಕಡಗ: ದಾರೆಗಡಗ ವೇವುರ ಪೊಸರನ್ನದ ಚಾರುತರದ ಸೂಡಗವನು ನಾರಿಯ ಕರಯುಗದೊಳಂದು ಸತಿಯರು ಸೇರಿಸಿದರು ನಲವಿನಲಿ (ಅಂಜಕ. ೬-೩೩) ; ಗಿಳಿದಾರಿ ತೋಳಬಂದಿ ದಾರೆಗಡಗಂ . . . ತೊಂಡಿಲ್ಗಲಿಂದಲಂಕೃತೆಯಾದ . . . ಕನ್ನಿಕೆಯಂ . . . ಪಸೆಯ ಜಗಲಿಗೆ ಬಿಜಯಂಗೆಯ್ಸುತರ್ಪಿನಮಾಗಳ್ (ಹಾಲಾಸ್ಯ. ೪-೪-೩೪ ಊ). [ ದಾರೆ$_{1}$ + ಕಡಗ$_{1}$ ]

**ದಾರೆಗತಿ** (ನಾ). [ಅಶ್ವಶಾ] ಕುದುರೆಯ ನಡಗೆಯ ಐದು ರೀತಿಗಳಲ್ಲಿ ಒಂದು: ದಾರೆಗತಿ ಲಯ ಪೊಯ್ದು ಕಾಯಕ್ಷಂ ತಿತಿಕ್ಷೆ ಕಿತನೆರಿ ತುರ(ಗ?) ಸಮಾನಂ ಭಾರಿಕೊಸಿ ಮುಷ್ಟಿಭಾಗಂ ವ್ಯೂಹಂ ನಿವರ್ತನೆ ಪದಂ ಯತಿ ಗಾತ್ರವೆ ವಿಮಾರ್ಗಂ (ಮದಚಿ. ೧-೫೦). [ ದಾರೆ$_{1}$ + ಗತಿ ]

**ದಾರೆಗಿಂಡಿ** (ನಾ). ೧. ನೀರು, ಹಾಲು ಮೊದಲಾದ ದ್ರವಪದಾರ್ಥಗಳನ್ನು ಹೊರಸೂಸಲು ಸೊಂಡಿಲಂತಹ ಆಕಾರವಿರುವ ಗಿಂಡಿ ; ಸೊಂಡಿವಿಂಡಿ (ಉಕ). ೨. ನೀರು ಕುಡಿಯುವ ಪಾತ್ರೆ. [ ದಾರೆ$_{1}$ + ಗಿಂಡಿ ]

**ದಾರೆಬಟ್ಟಲು** 'ದಾರೆವಟ್ಟಲ್' ನೋ.

**ದಾರೆವಟ್ಟಲ್**, ದಾರೆವಟ್ಟಲು, ದಾರೆಬಟ್ಟಲು, ದಾರೆವಟ್ಟಲು (ನಾ). ಜರಡಿ ; ಜಾಳನಿ ; ಒಂದರಿ ; "ಚಾಲನಿ, ತಿತವು" (ಜಾಹಿರಾ. ೪). **ದಾರವಟ್ಟಲು:** ದಾ[ಪಾಠಾಂ. ಧಾ]ರವಟ್ಟಲ ತೆಬಿದಿ ನಿನ್ನ ಕುಮಾರಿ ಕಸವನೆ ಹಿಡಿಯ ನೀನವಿಚಾರಿಯಾದ್ಯೆ ರಾಜಪುತ್ರ ಸಮಾಜವನು ಬಿಸುಟು (ಸಾಳ್ವಭಾ. ೦೬-೩೩). **ದಾರೆಬಟ್ಟಲು:** ರಸವನ್ನು ತ್ಯಜಿಸಿ ಕಸವನ್ನು ಹಿಡಿಯುವ ದಾರೆಬಟ್ಟಲಂತಹ ಜನರಿಗೆ, ದುರಾಸೆಯುಳ್ಳವರಿಗೆ . . . ಎಂದಿಗೂ ಸೊಗಸುವುದಿಲ್ಲವೆಂದೂ ಚಂದ್ರಕವಿಯ ಸ್ಪಷ್ಟವಾದ ಅಭಿಪ್ರಾಯ (ಕಂಕಕ. XLV ವಿಮರ್ಶೆ). **ದಾರೆವಟ್ಟಲು:** ಮೋಕ್ಷದ ಬಗೆಗಾಣ್ಬವರ್ಗೆ ಸೊಗಯಿಪ್ಪುದಿದಲ್ಲದೆ ದಾರೆ[ಪಾಠಾಂ. ದಾರ]ವಟ್ಟಲಂದದಿ ರಸಮಂ ಬಿಡುತ್ತೆ ಕಸಮಂ ಪಿಡಿದಿರ್ಪ ದುರಾಸೆಯರ್ಗೆ . . . ಸೊಗಯಿಪ್ಪುದೆ (ಕಂಕಕ. ೭). [ ದಾರೆ$_{1}$ + ಬಟ್ಟಲ್ ]

**ದಾರೆವಟ್ಟಲು** 'ದಾರೆವಟ್ಟಲ್' ನೋ.

**ದಾರೆಹುಳಿ, ಧಾರೆಹುಳಿ** (ನಾ). (ಕರಾ) ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಕಮರಿಕೆ : ಕಮರಕ್‌ಮರ, ಕಮರಾಕ್ಷಿ, ದಾರೆಹುಳಿ (ಮೃಶಿಗಿ. ೦೦-೧೪೪). **ಧಾರೆಹುಳಿ :** ಧಾರೆಹುಳಿ ಉಪ್ಪಿನಕಾಯಿ (ರೂಢಿ). [ ←ತುಳು. ದಾರೆಪುಳಿ ]

**ದಾರೇಷಣ** (ನಾ). ಹೆಂಡತಿಯನ್ನು ಬಯಸುವಿಕೆ ; ಸಂಸಾರಿಯಾಗುವ ಅಪೇಕ್ಷೆ : ಪ್ರಕೃತಿಯು-ಮೂರು ಪರಿಚ್ಛೇದ ಸ್ವರೂಪಳು, ಸತ್ವ ಪರಿಚ್ಛೇದ, ರಜಃ ಪರಿಚ್ಛೇದ, ತಮಃ ಪರಿಚ್ಛೇದವೆಂದು ಈ ಮೂರರಲ್ಲಿ ವಿಶ್ವ, ತೈಜಸ, ಪ್ರಾಜ್ಞ, ಎಂಬ ಮೂರು ರೂಪಗಳಿಂದ ಶ್ರೀ ಪರಮಾತ್ಮನು ವಾಸ ಮಾಡುವನು. ದಾರೇಷಣ, ಪುತ್ರೇಷಣ, ವಿತ್ತೇಷಣವೆಂಬ ಈಷಣತ್ರಯದಲ್ಲಿ ಆತ್ಮ, ಅಂತರಾತ್ಮ, ಪರಮಾತ್ಮನೆಂಬ ರೂಪತ್ರಯಗಳಿಂದ ವಾಸಮಾಡುವನು (ಹರಿಕ ೨೪-೦೦ ಟೀಕು). [ <ಸಂ. ದಾರೈಷಣ ]

**ದಾರೊಕ್ಕಲು** (ನಾ). ಸಂಬಳದಾಳಂಗಳನ್ನು ಇಟ್ಟು ವ್ಯವಸಾಯ ಮಾಡಿಸುವ ಒಕ್ಕಲು ; ದೊಡ್ಡ ಒಕ್ಕಲು. 'ಕೂಡೊಕ್ಕಲು' ಪರಾ. [ ದಾರು$_{0}$ + ಒಕ್ಕಲು(<ಒಕ್ಕಲ್) ]

**ದಾರ್ಢ್ಯ** (ನಾ). ೧. ಗಟ್ಟಿಯಾಗಿರುವಿಕೆ ; ಬಿಗಿಯಾಗಿರುವಿಕೆ ; ಗಡುಸು. ೨. ಧೈರ್ಯ; ಬಲ ; ಶಕ್ತಿ : ತನುವೋಳ್ ದಾರ್ಢ್ಯಂ ಸವಿಂತೊಪ್ಪುವಾ ಸುಖ ಪೂರ್ವಾರ್ಜಿತ ಪುಣ್ಯವೈ (ಸೋಮೇಶ. ೩೭). ೩. ಸ್ಥಿರವಾದುದು ; ದೃಢವಾದುದು. 'ಧರ್ಮದಾರ್ಢ್ಯ' ಪರಾ. [ ಸಂ. ]

**ದಾರ್ವ** (ಗು). ಮರದ ; ಮರದಿಂದ ಮಾಡಿದ. [ ಸಂ. ]

**ದಾರ್ವಾಘಾಟ** (ನಾ). ಮರಕುಟುಕ ಪಕ್ಷಿ : "ಶತಪತ್ರಕಃ, ದಾರ್ವಾಘಾಟಃ – ೨ ಮರಕುಟುಕನ ಹಕ್ಕಿ" (ಸಿದ್ಧಾಂತಿ. ೧೫೪). [ ಸಂ. ]

**ದಾರ್ವಿ** (ನಾ). ಮರದರಿಸಿನ ; ದಾರುಹರಿದ್ರ : "ಸದಾಯಗತ-ದಾರ್ವಿ" (ಓಷಧಿ. ೦೭೪). [ ಸಂ. ದಾರ್ವೀ ]

**ದಾರ್ವಿಕೆ** (ನಾ). ೧. ಮರದರಿಸಿನದಿಂದ ಮಾಡಿದ ಕಾಡಿಗೆ ಅಥವಾ ಕಣ್ಮಪ್ಪು ; ರಸಾಂಜನ : "ದಾರ್ವಿಕಾ. ಕ್ವಾಥೋದ್ಭವಂ, ತುತ್ಥಂ, ರಸಾಂಜನಂ, ರಸಗರ್ಭಂ, ತಾರ್ಕ್ಷ್ಯಶೈಲಂ – ೬ ರಸಾಂಜನದ ಹೆಸರುಗಳು" (ಸಿದ್ಧಾಂತಿ. ೦೩೯). ೨. ಒಂದು ಬಗೆಯ ಸಸ್ಯ ; ಎತ್ತುನಾಲಿಗೆ ಗಿಡ ; ಗೋಜಿಹ್ವೆ : "ಗೋಜಿಹ್ವಾ, ದಾರ್ವಿಕಾ – ೨ ಎತ್ತುನಾಲಗೆ ಗಿಡದ ಹೆಸರುಗಳು" (ಸಿದ್ಧಾಂತಿ. ೦೩೯). [ ಸಂ. ದಾರ್ವಿಕಾ ]

**ದಾರ್ಶನಿಕ** (ಗು). ೧. ತತ್ವಜ್ಞಾನಕ್ಕೆ ಸಂಬಂಧಿಸಿದ : ಈಸ್ಕಿಲಸ್ಸಿನ ಕೃತಿಗಳಲ್ಲಿ ಈ ಪ್ರಶ್ನೆ . . . ದಾರ್ಶನಿಕತರ್ಕವಾಗಿ ಎತ್ತಿ ಕಾಣದಿದ್ದರೂ ಅದನ್ನು ಗುರುತಿಸಲಾಗದಷ್ಟು ಅಸ್ಪಷ್ಟವಾಗಿಯೂ ಇಲ್ಲ (ಬಪ್ರಪ್ರ. LXVI ಪೀಠಿಕೆ). (ನಾ). ೨. ದರ್ಶನಗಳನ್ನು ತಿಳಿದವನು ; ತತ್ವಜ್ಞಾನಿ ; ವೇದಾಂತಿ: ದಾರ್ಶನಿಕನು ನೀರನ್ನು ಶೋಧಿಸಿ ಕುಡಿಯುವವನು (ಭಾರದ. ೦೮೩) ; ಆದ್ದರಿಂದಲೇ ಆತ್ಮಶಕ್ತಿ, ಆತ್ಮವಿಶ್ವಾಸ . . . ಇತ್ಯಾದಿಗಳಿಗೆ ಕೆಲವು ದಾರ್ಶನಿಕರು ಮಹತ್ವದ ಸ್ಥಾನವನ್ನು ಕೊಟ್ಟಿರುವುದು (ಶಿಕ್ಷದ. ೪೩೯) ; "ನಮ್ಮ ಇರವಿನ ಅರಿವು ನಮಗೆ ಪ್ರತಿಕ್ಷಣದಲ್ಲಿಯೂ ಆಗುತ್ತಿರುತ್ತದೆ . . . ಅದರ ಅಸ್ತಿತ್ವದಲ್ಲಿ ನಮಗೆ ಸಂದೇಹವೇ ಇಲ್ಲ" ವೆಂದು ಹಲವು ದಾರ್ಶನಿಕರು ಹೇಳುತ್ತಿರುತ್ತಾರೆ (ಜೀವಾತ್ಮ. ೯೭); ಆಧುನಿಕ ಮಹಾವಿಜ್ಞಾನಿಗಳನ್ನು ದಾರ್ಶನಿಕರ ಸಾಲಿಗೇ ಸೇರಿಸಬೇಕೆಂದೆನ್ನಿಸುತ್ತದೆ (ಹುಳ್ಳಾರ. ೬ ಪೀಠಿಕೆ). ೩. [ಜೈನ] ನೈಷ್ಠಿಕ ಶ್ರಾವಕರಲ್ಲಿಯ ಹನ್ನೊಂದು ತರಗತಿಗಳಲ್ಲಿ ಮೊದಲನೆಯ ತರಗತಿಯವನು : ಇಂತು ದಾರ್ಶನಿಕಂ ವ್ರತಿಕಂ ಸಾಮಯಿಕಂ ಪ್ರೋಷಧೋಪವಾಸಂ ಸಚ್ಚಿತ್ತವಿರತಂ ರಾತ್ರಿಭುಕ್ತಂ ಬ್ರಹ್ಮಚಾರಿ ಆರಂಭನಿವೃತ್ತಂ ಪರಿಗ್ರಹವಿರತಂ ಅನುಮತಿವಿರತಂ ಉದ್ದಿಷ್ಟವಿರತಂ ಎಂದು ಶ್ರಾವಕಸ್ಥಾನಂ ಪನ್ನೊಂದಕ್ಕುಂ (ಧರ್ಮಾಮೃ. ೫-೦೪೭) ; ದಾರ್ಶನಿಕ – ಇವನು ನೈಷ್ಠಿಕ ಶ್ರಾವಕರಲ್ಲಿ ಮೊದಲನೆಯ ತರಗತಿಯವನು (ಕೃನಪ. ೪೭೭). [ ಸಂ. ]

**ದಾರ್ಶನಿಕವಾಣಿ** (ನಾ). ತತ್ವಜ್ಞಾನಿಗಳ ಮಾತು ; ದಾರ್ಶನಿಕರ ನುಡಿ : ಈ ದಾರ್ಶನಿಕವಾಣಿಗಾದರೂ ಅದರ ದಾರ್ಶನಿಕಶಕ್ತಿ ಹಾಗು ದಾರ್ಶನಿಕ ಅಭಿವ್ಯಕ್ತಿಗಳಿಗನುಗುಣವಾಗಿ ಬೇರೆ ಬೇರೆ ಶ್ರೇಣಿಗಳಿರುತ್ತದೆ (ಪ್ರಬಂಧ. ೧೨೫). [ ದಾರ್ಶನಿಕ + ವಾಣಿ$_{1}$ ]

**ದಾಷ್ಟಾರ್ಂತಿಕ** (ಗು). ೧. ದೃಷ್ಟಾಂತದೊಡನೆ ಕೂಡಿದ ; ದೃಷ್ಟಾಂತದಿಂದ ವಿವರಿಸಲ್ಪಟ್ಟ. (ನಾ). ೨. ದೃಷ್ಟಾಂತದಿಂದ ಸ್ಥಿರಪಡಿಸಿದುದು: ಜ್ಞಾನದ ಕರ್ಮವು ಇಲ್ಲದಿದ್ದರೂ 'ಅದು ಯೋಚಿಸಿ ನೋಡೀತು' (ತದ್ವ್ಯಷ್ಟಿಕ) ಎಂದು ಕರ್ತೃತ್ವವನ್ನು ಹೇಳಬಹುದಾಗಿದೆ. ಆದ್ದರಿಂದ ದೃಷ್ಟಾಂತ ದಾಷ್ಟಾರ್ಂತಿಕಗಳಿಗೆ ಹೋಲಿಕೆ ಇಲ್ಲದೆ ಇಲ್ಲ (ಬ್ರಹ್ಮಭಾ. ೮೪).
[ ಸಂ. ]

**ದಾಲ** (ನಾ). ೧. ಒಂದು ವಿಧವಾದ ಕಾಡುಜೇನು. ೨. ಮಕರಂದ ; ಪುಷ್ಪಪರಾಗ. [ ಸಂ. ]

**ದಾಲಕ್ಷ** 'ದಹಲಕ್ಷ' ನೋ.

**ದಾಲಚಿನಿ** 'ದಾಲಚಿನ್ನಿ' ನೋ.

**ದಾಲಚಿನ್ನಿ, ದಾಲಚಿನಿ, ದಾಲಚಿನ್ನೆ, ದಾಲ್ಚಿನ್ನಿ, ದಾಲ್ಚಿನ್ನೆ** (ನಾ). ಸಾಂಬಾರಿಗೆ ಬಳಸುವ ಮಸಾಲೆಯ ಸಾಮಾನುಗಳಲ್ಲಿ ಒಂದು ; ಮಸಾಲೆಚಕ್ಕೆ ; ಲವಂಗ ಪಟ್ಟೆ : ಸಿಂಹಲ ದ್ವೀಪದಲ್ಲಿ ದಾಲಚಿನ್ನಿ, ಮೆಣಸು ಮುಂತಾದ ಮಸಾಲೀ ಸರಕುಗಳು . . . ಬಹಳ ಆಗುತ್ತವೆ (ಮುಂಬಯಿ. ೯-೨೦೦) ; ಸೀಮೆಸುಣ್ಣದ ಪುಡಿ ೨ ತೊಲ . . . ದಾಲಚಿನ್ನಿ ೧ ತೊಲ-ಇವುಗಳನ್ನೆಲ್ಲಾ ಚೆನ್ನಾಗಿ ಪುಡಿಮಾಡಿ . . . ವರಡಾವೃತ್ತಿ ಕುಡಿಸುವುದು (ಗ್ರಾಮೂಳ. ೧೨೪). ದಾಲಚಿನಿ : ಲೋಭಾನ, ಕಾಚು . . . ದಾಲಚಿನಿಯ ಎಣ್ಣೆ, ಗುಲಾಬನೀರು ಮುಂತಾದವುಗಳು (ಮುಂಬಯ್ಯ. ೯೯). ದಾಲಚಿನ್ನೆ: ದಾಲಚಿನ್ನೆ ಅಡವಿಯಲ್ಲಿ ಸಾಧಾರಣ. ಬಹಳ ಎತ್ತರವಾಗುವುದಿಲ್ಲ. ಕಾಯಿಗಳಿಂದ ಎಣ್ಣೆ ಹೊರಡುತ್ತದೆ. ಅದು ಔಷಧಕ್ಕೆ ಬರುತ್ತದೆ (ಕಭಾಗ. ೬೦). ದಾಲ್ಚಿನ್ನಿ : ಜಾಯಿಕಾಯಿ, ಏಲಕ್ಕಿ . . . ದಾಲ್ಚಿನ್ನಿ, ಲವಂಗಪತ್ರೆ . . . ಚೂರ್ಣಿಸಿ ಜೇನುತುಪ್ಪದಲ್ಲಿ ಕಲಿಸಿ ತೆಗೆದುಕೊಳ್ಳಲು ಬಹುಮೂತ್ರ ಕಲ್ಲುಕಟ್ಟು ಸಹ ಮಾಣುವುವು (ಸಕಪ್ತ. ೫೦೦ ೫೮) ; ಕ್ರಿ.ಪೂ. ೧೫ನೆಯ ಶತಮಾನದ ಈಜಿಪ್ಟ್ ಶಿಲಾಶಾಸನಗಳಲ್ಲಿ ಕಂಡುಬರುವ ಲವಂಗಪಟ್ಟೆ ಅಥವಾ ದಾಲ್ಚಿನ್ನಿ ಮಲಬಾರಿನಲ್ಲಿ ಉತ್ಪನ್ನವಾಗುವ ವಸ್ತುವನ್ನೇ ಪ್ರಾಯಶಃ ಸೂಚಿಸುತ್ತದೆ (ಜಭಾಕ. ೩.೨). ದಾಲ್ಚಿನ್ನೆ: ಸಿಂಹಳ ದ್ವೀಪದಲ್ಲಿ ದಾಲ್ಚಿನ್ನೆಯ ಗಿಡಗಳು ಬಹಳ (ಮುಂಬಯಿ. ೩-೬೩).
[ ←ಪಾರ. ಹಿಂ. ದಾರ್ಚೀನೀ ; ಮರಾ.ದಾರುಚೀನೀ, ದಾಲ್‌ಚೀನೀ ]

**ದಾಲಚಿನ್ನೆ** 'ದಾಲಚಿನ್ನಿ' ನೋ.

**ದಾಲಿಮ** (ನಾ). = ದಾಳಿಂಬ. [ ಸಂ. ]

**ದಾಲುಮರ** (ನಾ). ಒಂದು ಬಗೆಯ ಮರ : ಹೆಸವ . . . ಕವಲು, ಗಂಡಗರಿಗೆ, ದಾಲುಮರ, ಅರುಸಿನಬೂರುಗ (ಪಟ್ಟುಸು. ೨೩೭).
[ ದಾಲು? + ಮರ$_1$ ]

**ದಾಲ್ಚಿನ್ನಿ** 'ದಾಲಚಿನ್ನಿ' ನೋ.

**ದಾಲ್ಚಿನ್ನೆ** 'ದಾಲಚಿನ್ನಿ' ನೋ.

**ದಾವ$_1$** 'ದಾವುದು' ಪರಾ.

**ದಾವ$_2$** (ನಾ). ೧. ಕಾಡು ; ಅಡವಿ ; ಕಾನನ : "ಅಡವಿಯಲ್ಲಿಯುಂ, ದವ, ದಾವ ಎಂಬುದು" (ಹಲಾಯು. ೦೩೩-೧೩) ; ಭವದಾವದಲ್ಲಿ ತೊಳಲುವ ಜೀವರಿಗೆ ಸದಾ ಶಿವಪಥವ ತೋರ್ಪ ಗುರುವರ್ಯ ಬಿನ್ನವಿಸುವಧರಿಪುದೀಗ (ಅನುಸಾ. ೨-೧-೨). ೨. ಕಾಡುಗಿಚ್ಚು ; ಕಾಳ್ಗಿಚ್ಚು ; ಕಾಡುಬೇಗೆ : "ವನವಹ್ನಿ, ದವ, ದಾವ-ಈ ಮೂರು ಕಾಟ್ಕಿಚ್ಚು" (ಹಲಾಯು ೧೩-೭೦) ; "ನಿಮಿರ್ದ ಕಾಂತಾರದಲ್ಲಿಯ ಕಿಚ್ಚು ದಾವಂ [ದವಂ]" (ಮಂಗರಾ. ೧೯-೯) ; ಶಾಶ್ವತನವತರಿಸಿರ್ದಂ ಗದಾಶಂಖಚಕ್ರಾಂಕಿತಹಸ್ತಂ ವಾಸುದೇವಂ ದನುಜವಿಪಿನದಾವಂ, ಸಮಸ್ತಪ್ರಭಾವಂ (ಜಗವಿ. ೨-೧೦೦). ೩. ಕಿಚ್ಚು ; ಬೆಂಕಿ ; ಶಾಖ. [ ಸಂ. ]

**ದಾವಂತ** 'ಧಾವಂತ' ನೋ.

**ದಾವಂತಬಡಿಸು** (ಕ್ರಿ). ಗಾಸಿಪಡಿಸು ; ಬಳಲಿಸು ; ಆಯಾಸವನ್ನುಂಟುಮಾಡು : ದಾವಂತಬಡಿಸಿ ದೇಹವನು ಪಸಿದಿರಲೇಕೆ ಶ್ರೀವರನನಂತನಾಮದೊಳು (ತಿರುಕ. ೭-೩೧).
[ ದಾವಂತಬಡು (<ಧಾವಂತಪಡು) + - ಇಸು$_3$ ]

**ದಾವಂತಬಡು** 'ಧಾವಂತಪಡು' ನೋ.

**ದಾವಡಸು** (ಕ್ರಿ). ಬಾಯಾರು ; ನೀರಡಿಕೆಯುಂಟಾಗು : ಮೃಗವನ್ನು ಕಾಣದಿರಲು ಬಳಲಿ ಬಸವಳಿದು ದೂವಡಿಸಿ [ದಾವಡಸಿ] ನೀರಂ ಕಾಣದಳಲಿಯರಸುತ್ತಿರಲು (ಕುರಂಗ. ೩೪-೪೭).
[ ದಾವು$_1$ <ದಾಹ) + ಅಡಸು ]

**ದಾವಣ$_1$** (ನಾ). ಚಪ್ಪರ ; ಹಂದರ : ಪಾದರಿಯ ನೆಲವಾಡಂಗಳೊಳಂ ದವನದ ದಾವಣಂಗಳೊಳಂ ಮಲ್ಲಿಗೆಯ ಮನೆಗಳೊಳಂ ಕಪ್ಪುರದ ಸೊದೆಯೊಳಂ ಸೊಂಪುವಡೆದ ಕಂಪಿನ ಪೊಲಲೆಂಬ ಬೀಡು ಬಗೆಗೊಳಿಸುತಿರ್ಪುದು (ಕಲ್ಯಾಕ. ೦೦೮) ; ದುರ್ಗಶಿಕ್ಷೇಶಕರಮಪ್ಪ ಮದ್ಯಂ ದೇವತೆಗೆಂದುಂ ಮಂತ್ರಸಿದ್ಧ್ಯರ್ಥಮಾಗಿಯುಂ ಮನೆ ಕೊಟ್ಟಿಗೆ ದಾವಣ ರಾಶಿ ತೋಂಟಂ ಮೊದಲಾದುವನರ್ಚಿಸಲೆಂದುಂ ಮನವಚನಕಾಯದಿಂ ಮಾಡಲಾಗದು ಮಾಡಿಸಲಾಗದು ಮಾಡುವನ್ನಗೋಡಂಬಡಲಾಗದು (ಜಸಾರ. ೨೯೮). 'ತಾವಣ' ಪರಾ.
[ ದೇ.? ತಮಿ. ತಾವಳ ; ತೆಲು. ತಾವಲ = ನಿವಾಸ, ವಾಸಸ್ಥಾನ ]

**ದಾವಣ$_2$** (ನಾ). ಒಬ್ಬಾತನ ಹೆಸರು : ಸಿರದ ದವಟಿಯರ ಮಗ ದಾವಣಗವುಡದ ಮಂಹಾ ಜನಕ್ಕೆ ಕೊಟ್ಟದು ಶಾಲೆ (ಎಕ. VII, ಶಿಕಾರಿ. ೪೫ (b)-೩೩ ; ಸು. 890 ?). [ <ದೇವಣ್ಣ ]

**ದಾವಣ$_3$** 'ದಾಹಣ' ನೋ.

**ದಾವಣಪೇರುಂದವ್ವ** (ನಾ). ಒಬ್ಬಾಕೆಯ ಹೆಸರು : ಇ ಧಮ್ಮದಿ ದಾವಣಪೇರುನ್ದವ್ವಬ್ಗೆ ಕೊಟ್ಟೊದಂ ಐಗುಳ ಕಟನಿ ಪರಿಹಾರ (ಎಕ. X, ಶ್ರೀನಿವಾ. ೬-೧೩ ; ಸು. 760). [ ದಾವಣ$_2$ + ಪೇರುಂದವ್ವ$_8$ ]

**ದಾವಣಿ$_1$, ಡಾಣ್ಣಿ, ಡಾವಣ, ಡಾವಣಿ, ಡಾವಣೆ, ಧಾವಣಿ, ದವಣಿ, ದವಣಿ, ದಾವಿಳಿ, ದಾವುಣಿ** (ನಾ). ೧. (ದನಕರುಗಳನ್ನು ಸಾಲಾಗಿ ಕಟ್ಟುವ) ಹಗ್ಗ ; ಹುರಿ ; ಪಾಶ : "ದಾವಿಳಿಯೆನಲು ದಾವಣಿ" (ಮಂಗರಾ. ೦೦೯-೩) ; ದಾವಣಿ[ಪಾಠಾಂ. ೫]ಯೊಳ್ಕಟ್ಟಿರ್ದಾ ಜೀವಧನವಮದೊಂದೆ ಮಗ್ಗುಲಿಂದಿರದೊಡವಿನ್ನೇವೇಟ್ಟುದಧಿಕಮೆನಿಸುವ ಜೀವಧನಮನೆಂದು ಸೇಸೆದಳಿಪವರ್ಮೂರ್ಧರ್ (ಸಮಾಪ ೩೮೨-೩೮ ಅನುಬಂಧ. ೦) ; ಆವ ಕುಲದಲಿ ಪುಟ್ಟಲಿ ಪರವೆಣ್ಣಾಳ ಧಾವಿಸನಾವನವನಿಗೆ ದೇವರು ಸರಿಯಲ್ಲ ನರಪಶುಗಳ ಬಲು ದಾವಣಿಯವನೆ (ಕುರಾಸಾಂ. ೦-೯೪) ; ಕಾವು ಗೋಚರವಾಗದಿರೆ ಕೋಪ ವೆಗ್ಗಳಿಸಿ ತೀವಿ ಭದುರೋಪಮಿತ ಶಬ್ದವೇಧಿಯ ತೆಗೆದು ದಾವಣಿಯನಿಟ್ಟು [ಪಾಠಾಂ. ರಾವವನ್ನರಿದು] ಕೊಂದಪೆನೆನಲು ಧಾವವನ್ನರಿದು ಯಕ್ಷಿಣಿಯು ಜವದಿ ಮಯಿಂಬರಿದು (ಕಂಕಾರಾ. ೧-೧೨-೪೨) ; ಕೊರಳ ದಾವಣಿಗೆ ಕುಣಿಕೆ ಬೇಕು ಕವಲೆತ್ತಿಗೂಸು ಕಣಿಕೆ (ಅರಳು. ೫೯೨-೭) ; ಪುಂಡಿ ನಾರಿನ ಹಗ್ಗ ಹೊಸೆಯುವುದು, ಎತ್ತು ದನ ಕಟ್ಟುವ ದಾವಣಿ ತಿರುಪುವುದು (ಕುಲಾಪು. ೭೦). ೨. ಕಟ್ಟು ; ಬಂಧನ : ಹೊಟ್ಟೆಯ ಪಾಡಿಗೆ ದುಡಿಯುವ ದಾವಣಿಯಲಿ ಸಿಕ್ಕಿ ಚಲಿಸುತ್ತಿವೆ ದಿಟ ನಿನಗಾ ಸಂಕುಲ ಪಂಕ್ತಿಯ ಬಕಪಕ್ಷಿ (ಅನಿಕೇ. ೪೬-೧೦) ; ನಾವಾದರೂ ಅರಸರ ದಾವಣಿಯಲ್ಲಿ ಸೇರತಕ್ಕವರೆ (ಮುಭಾರ. ೩೦). ೩. ಸಾಲು ; ಪಂಕ್ತಿ : ಆಟಾಟಿಗೆ ಬಲ್ಲಾಳನ ದಾಟಿಯಂ ದಾವಣಿಯ ತುರಗ ದಟ ಖುರಹತಿಯಿಂ ಪೇಟೆ ಪೆಸರಿಲ್ಲದಂತಿರೆ ಪಾಟಾದುವು ವೈರಿದುರ್ಗಮೆನಿತೊಳವನಿತುಂ (ಯಶೋಚ. ೧-೦೪) ; ಧರಣೀದೇವರನಂ ಸತ್ಕರಿಸಿ ತಿಲಧೂರತ್ನರಾಶ್ಯದಲ್ಲಿ ಧಾ[ ದಾ[

ವಣಿ[ಪಾಠಾಂ. ಳಿ]ಯ ಸುರಭಿಗಳನವಿಳ ವಂಹಾವಿಭವಸಹಿತಹಿದು ಧಾರೆಯನಾವರಾಂಬಂಧಿಯಿತ್ತನು (ವಿಭಾಗ. ೧೦-೭೮-೨). ೪. ಗುಂಪು; ನೆರವಿ; ಸಮೂಹ: ಭೈರವನ ತಿತ್ತಿಗರ ದಾವಣಿಯೊಳಣ್ಣನ ಮತ್ತವಾರಣ ಭೀಮಸೇನನನಿತ್ತ ನೋಡೈ ಮಗನೆ ಕುರುಕುಲಕೇಜಕಾಜನನು (ಕುಮಾ.ಭೀ. ೨-೦೩); ದೇವ ನೀ ಭಹನೆಂದು ಬಂದರು ದಾವಣಿಯ ಹವಣಿಸಿದು ಬಳಿಕ ಮಹಾವಿಳಾಸದೊಳೊಪ್ಪವಿಟ್ಟರು ತಮ್ಮ ನಗರಿಗಳ (ಕುಮಾ.ವಿ. ೦೦-೯೭). ೫. ದನಗಳನ್ನು ಕಟ್ಟುವ ಸ್ಥಳ; ಕೊಟ್ಟಿಗೆ: ಇನ್ನು ಛತ್ರಕ್ಕೆ ಹೋಗಿ ಊಟ ತೀರಿಸಿಕೊಂಡು ನಮ್ಮ ದಾವಣಿಯ ಹತ್ತಿರ ಹಿಂತಿರುಗಿ ಬಂದು . . . ಕುಳಿತುಕೊಂಡವು (ಹಂಗಾಳ್. ೩೩೩). ಡಾಣಿ$_1$ : (ಕ). ಡಾವಣ: ೧. ಆನೆಯುಳ್ ಡಾವಣವೊಡ್ಡವೂನ್ (ಎಪಿ. IX. ೦೯-೦೦; ೩೦೦). ಡಾವಣಿ: ೨. ಕಣಗಳೋ ಕಲ್ಪಾಂತ ವಹ್ನಿಯ ಡೋಣಿಗಳೋ ಹಾಳಾಹಳದ ಡಾವಣಿಗಳೋ ನಾವಱಯೆವು (ಕುಮಾ.ಳ. ೨೦-೯); ಹ್ಯಾವರಿಕೆ ಸಂಸಾರ ಡಾವಣಿಯ ನಡುವೆ ಕೊರಳಾವಲಿಗೆ ಸಿಗಬಿದ್ದು ವಿಡಂಬಿತಿಪ್ಪ ಜೀವಾಧವನು ನಿನ್ನ ಮೆಚ್ಚಿಸಲಾಪನೆ (ವಿಶ್ವೇಸ. ೩೦-೦). ಡಾವಣೆ: ೧. ವಾರುವಗಳ ಡಾವಣೆ ನೇಣ್ಗಳ ಬಲು ಬೀರುಗುಣಿಕೆಗಳ ಘಟಿದು ಕೇರಿ ಕೇರಿಯೊಳು ತಮ್ಮಿಚ್ಚೆಯೊಳಗೆ ಸಲೆ ತಾಱುವಱಾಗಿಯೋಡಿದುವು (ಕಜವಿ. ೦೩-೯೦). ಧಾವಣೆ: ೩. 'ಧಾವಣಿಗಿರಿ' ಪರಾ. ದವಣೆ: ೫. ಇನ್ನು ಈ ಮನೆಯೊಳಗೆ ಮಲಗಿಕೊಂಡರೆ ದನದ ದವಣೆಯೊಳಗೆ ಮಲಗಿದ ಹಾಗೆ (ಪ್ರಹಾಚ. ೨೦). ದವನಿ: ೫. ತಾರಕ್ಕ ಕಟ್ಟೆಯ ಮೇಲಿಂದ ಒಮ್ಮೆಲೇ ಕೆಳಗುರುಳಿ ಬಿದ್ದಳು ದನಗಳನ್ನು ಕಟ್ಟುವ ದವನಿಯಲ್ಲಿ (ನಿಸರ್ಗ. ೩೪೪). ದಾಮಿಳಿ: ೧."ದಾಮಿಳಿ ಯೆನಲು ದಾವಣ" (ಮಂಗರಾ. ೦೦೯-೩). ದಾವ್ಣಿ: ೧. ಏರಿದನು ಕೈಯೊಡನೆ ಖಳನೇಳ್ನೂರು ಘಂಟೆಯ ರಥವ ಮದಕರಿ ಮೂರು ಸಾವಿರ ಸೇರಿದವು ದಾವ್ಣಿಯ ನೊಗಗಳಲಿ . . . ಹದಿನಾರು ಸಾವಿರ ಬಂಡಿಯಲಿ ನೂಕಿದುವು (ಅಪಹಾ. ೦೯-೩೦). [ <ಸಂ. ದಾಮನೀ ]

ದಾವಣಿ$_2$, ಧಾವಳಿ (ನಾ). ಲಂಗವುಟ್ಟ ಹೆಣ್ಣುಮಕ್ಕಳು ಧರಿಸುವ ಮೇಲುಹೊದಿಕೆ: ವೈಷ್ಣವಭಕ್ತರು ಅವಳ ದಾವಣಿಯ ಸೆರಗು ಮಾತ್ರ ಪರಮಾತ್ಮನ ಮೇಲಿರುವುದನ್ನು ಕಂಡರು (ಭಕ್ತಮಾ. ೯೨). ಧಾವಳಿ: ಪಟೇಲರ ಮಗ ನನ್ನನ್ನು ದುರುಗುಟ್ಟಿ ನೋಡಿ ನಾನು ಹೊದ್ದಿದ್ದ ಧಾವಳಿ ಯನ್ನು ಕಿತ್ತೆಸೆದ (ಗೋಕುರ. ೩೩); ಕಾಲಿನ ಕಿರಿಗೆಜ್ಜೆಗಳಿಂದ ಹಿಡಿದು ತಲೆಯ ಮೇಲೆ ಹೊದೆದಿದ್ದ ಧಾವಳಿಯವರೆಗೆ ಎಲ್ಲವೂ ಸ್ಥಳೀಯ ಉಡುಗೆಯೇ ಆಗಿದ್ದಿತು (ಘೂಡಾಚ. ೯೦).

[ ←ಪಾರ. ದಾಮನೀ ; ಹಿಂ. ದಾಮನ್ = ಸೆರಗು, ಅಂಚು ]

ದಾವಣಿ$_3$ 'ದಾಹಣಿ' ನೋ

ದಾವಣಿಗಟ್ಟು$_1$, ಡಾವಣಿಕಟ್ಟು (ಕ್ರಿ). ೧. ಸಾಲಾಗು; ಸಾಲುಗಟ್ಟು: ದಾವಣಿಗಟ್ಟಿದ ಮಧುಕರಜೀವಧನಕ್ಕೆ ಕೃಪಂತೆ ಮೇಪಂ ಸಖಿ ಲೀಲಾವತಿಯ ಪಂತಿಗುರುಳೊಳ್ ಪೂವಿನ ಕೇಸರದ ರಜಮನೊರ್ವಳ್ ತಳೆದಳ್ (ಲೀಲಾವ. ೦೨-೬೦). ೨. ಸಾಲಾಗಿ ಕಟ್ಟು; ಮಾಲೆಗಟ್ಟು: ಮಱಿಮಿಂಗಳ ದಾವಣಿಗಟ್ಟಿದವೋಲ್ ಬೆಳ್ದಿಂಗಳ ಹಕ್ಕಿಯ ಹಸುಳೆಗಳ ಲಾವಣಿಗೆಯ ಮುಸುಕಿದವೋಲ್ . . . ಕುವರನ ಲಾವಣ್ಯಾಂಗ ಮನಿಡರ್ದುವು ಪುರಸತಿಯರ ಕಣ್ಗಳ ಬೆಳಗು (ಜಯುಳಾ. ೧೦-೩೩). ಡಾವಣಿಕಟ್ಟು: (ಕ). [ ದಾವಣಿ$_1$ + ಕಟ್ಟು$_1$ ]

ದಾವಣಿಗಟ್ಟು$_2$ (ನಾ). (ಹೂವನ್ನು) ಸಾಲಾಗಿ ಕಟ್ಟಿರುವಂತಹುದು; ಮಾಲೆ: ನನೆಯಂ ದಾವಣಿಗಟ್ಟಂ ಕಟ್ಟುತ್ತಿನಿಯರ್ಗೊಪ್ಪಿಸಿ ಕೊಡುವ ಪೊಲಿತ್ತರ್ವನಿತೆಯರಾ ಪೂವಿನ ಪೇಟೆಯೊಳ್ಪಸಿಗವಂ ವಿಟರ್ಗೆ (ಜಯುಳಾ. ೦-೩೮). [ ದಾವಣಿ$_1$ + ಕಟ್ಟು$_2$ ]

ದಾವಣಿಗುಱಿ (ನಾ). ಹಗ್ಗದಿಂದ ಸಾಲಾಗಿ ಕಟ್ಟಿದ ಕುರಿ: ನಿನ್ನಸಿ ಮುಖದಿಂ ದಾವಣಿಗುಱಿಯಂ ತಱಿದೊಡೆ ದೇವಿ ಶುಭೇತರವಿನಾಶವಂ ದಯೆಗೆಯ್ಗುಂ (ಯಶೋಚ. ೩-೦೩). [ ದಾವಣಿ$_1$ + ಕುಱಿ$_1$ ]

ದಾವಣಿಗೂಂಟ (ನಾ). ಹಗ್ಗ ಬಿಗಿಯಲು ಹೊಡೆಯುವ ಗೂಟ: ದಾವಣಿಗೂಂಟವಂ ಪೊಡೆವ ಕಾಟ್ಯರುಳಂ ಪರಿದಾಯ್ದು ಪೇರ್ಗಳಂ ಕಾವಱಿದೊಟ್ಟಲೊಟ್ಟುವ . . . ಆಡುವ ದೋಲಿಗರಿಂದೆಸೆದಂ ವಣಿಗ್ವರಂ (ದಕಳು. ೪-೭೮). [ ದಾವಣಿ$_1$ + ಗೂಂಟ ]

ದಾವಣಿಗೆ (ನಾ). = ದಾಹಣಿ: ದಾವಣಿಗೆಯೊಳ್ ಕುಟ್ಟಿ (ಲಕ್ಷ್ಮಭಾ. ೭-೬-೬). [ ದಾವಣಿ$_3$ (<ದಾಹಣಿ) + – ಗೆ ]

ದಾವಣಿಗೆಡಹು (ಕ್ರಿ). ಸಾಲಿನಲ್ಲಿ ಉರುಳಿಸು: ಮಗಧನ ಹೆಣನ ದಾವಣಿ [ಣ]ಗೆಡಹಿದನು ಸಮರಾಂಗಭೂಮಿಯಲಿ (ಕುಮಾ.ದ್ರೋ. ೭೦೪ ಹು. ೨೪೦).

[ ದಾವಣಿ$_1$ + ಕೆಡಹು (<ಕೆಡಪು) ]

ದಾವಣಿಗೊಳ್ (ಕ್ರಿ). ಗುಂಪುಗೂಡು; ಒಟ್ಟಾಗು: ದಾವಣಿ [ಪಾಠಾಂ. ಗಾವಳಿ]ಗೊಂಡಱಿದ ಭೃಂಗಾವಳಿಯಂ ಸೋವರ್ (ಲೀಲಾವ. ೦೩-೭೬).

[ ದಾವಣಿ$_1$ + ಕೊಳ್$_1$ ]

ದಾವಣಿಸುಳಿ (ನಾ). ಕೊರಳಿನ ಹತ್ತಿರ (ಹಗ್ಗ ಕಟ್ಟುವ ಬಳಿ) ಇರುವ ಸುಳಿ: ದನಾ ಪರೀಕ್ಷೆ ಮಾಡೋವಾಗ ಹೀನಸುಳಿ, ಪಾತಾಳಸುಳಿ, ದಾವಣಿ ಸುಳಿ . . . ಕೋಲಬಗ್ರಿ, ಕೊವ್ವಲ್ಲು, ಇವೆಲ್ಲಾನೂ ಚಂದಾಗಿ ನೋಡಿ ಒಳ್ಳೆ ಸುಳಿ ಇರೋದ ತಕ್ಕಾಲಾ (ಹುಬ್ಬಿಸ. ೧೩೯).

[ ದಾವಣಿ$_1$ + ಸುಳಿ$_2$ (<ಸುೞ್) ]

ದಾವಣೆ 'ದಾಹಣಿ' ನೋ.

ದಾವತಿ 'ಧಾವತಿ' ನೋ.

ದಾವತಿಗೊಳ್ 'ಧಾವತಿಗೊಳ್' ನೋ.

ದಾವತಿಪಡಿಸು (ಕ್ರಿ). ಸಂಕಟವನ್ನುಂಟುಮಾಡು; ಆಯಾಸಗೊಳಿಸು:

[ ದಾವತಿಪಡು (<ಧಾವತಿಬಡು) + – ಇಸು$_3$ ]

ದಾವತಿಪಡು 'ಧಾವತಿಬಡು' ನೋ.

ದಾವತಿಬಡು 'ಧಾವತಿಬಡು' ನೋ.

ದಾವತಿವೆಱು (ಕ್ರಿ). ಬಳಲಿಕೆಯನ್ನು ಹೊಂದು; ಶ್ರಮಪಡು: ದಾವತಿವೆತ್ತುವಂದ ಘುಟುಘುಟಿರ್ಣನೃಪಂ ಪುರದೊಳ್ ನಿರಂತರಂ ಕೀವಿದ ವಾರ್ತೆಯಂ ಪಲಬರಿಂ ತಿಳಿವಂತಿರೆ ಕೇಳ್ದು (ನಳಚಂ. ೭೪೪).

[ ದಾವತಿ (<ಧಾವತಿ) + ಪೆಱು$_1$ ]

ದಾವತಿಹಿಡಿ (ಕ್ರಿ). ಕೆಲಸವನ್ನು ಪ್ರಾರಂಭಿಸು; ಕಾರ್ಯೋನ್ಮುಖ ನಾಗು: ಮಾಳೂನನ್ನು ನೋಡಿ ಮುಂಗೈ ತಗುಲಿಸಿ ಕೆಳದನಿಯಲ್ಲಿ ಕೇಳಿದನು "ದಾವತಿ ಹಿಡಿಯಲಾ ?" (ಪವನ. ೦೩).

[ ದಾವತಿ (<ಧಾವತಿ) + ಹಿಡಿ$_1$ (<ಪಿಡಿ$_1$) ]

ದಾವದಗ್ಧ (ಗು). ಕಾಳ್ಗಿಚ್ಚಿನಿಂದ ಸುಟ್ಟ: ಎನೆ ದಾವದಗ್ಧಗಿರಿ ನೂತನ ಜಳದಜಳಂಗಳಿಂದಮಾಱುವವೋಲ್ ಭೋಂಕನೆ ಭರತನನಾಱಿಸಿದಂ ಮುನಿವಿನುತ ಗಣಾಧಿನಾಥವಚನಾಮೃತದಿಂ (ಆದಿಪು. ೦೬-೬೦).

[ ದಾವ$_2$ + ದಗ್ಧ ]

ದಾವದಹನ (ನಾ). ಕಾಡಿನ ಕಿಚ್ಚು; ಕಾಳ್ಗಿಚ್ಚು: ಮದನದಾವದಹನಂ ತಳ್ತಿರ್ದಪುದಿಲ್ಲ ನಿನ್ನಂ (ಕಾದಂಪೂ. ೪೯೯). [ ದಾವ$_2$ + ದಹನ ]

ದಾವಧೂಮ (ನಾ). ಕಾಡುಕಿಚ್ಚಿನ ಹೊಗೆ: ಅವು(ವ)ಗೆಯ ಕಿಚ್ಚನಂತೆ ದಾವಧೂಮ [ಪಾಠಾಂ. ಧಾಮಧೂಮ] ವಾದಂತೆ ಆವ ಓಡ ಸುಟ್ಟನೆಂದ ಱಿಯನಪ್ಪಾ (ಸವಚ. ೭೩-೪೦೩). [ ದಾವ$_2$ + ಧೂಮ ]

ದಾವಪಾವಕ (ನಾ). = ದಾವದಹನ: ದಾವಪಾವಕಂ ಬಳಸೆ ಸುರುಳ್ದ ಬಾಳ ಸಹಕಾರಮಹೀರುಹಂ (ಆದಿಪು. ೨-೩೯); ದಾವಪಾವಕಜಾಲೆಯಂ

ಕಂಡ ವನಶಿಖಂಡಿಯಂತೆಯುಂ ಗರುಡನಂಚುಂಮಂ ಕಂಡ ಕಂಚುಕೀಂದ್ರನಂತೆಯುಂ ಭಯಂಗೊಂಡು (ಪುಷ್ಪಪು. ೦೩-೨೬ ಪ).

[ ದಾವ₂ + ಪಾವಕ ]

**ದಾವಯ್ಯ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಶ್ರೀ ದಾವಯ್ಯನ ಕಿಱಿಯ ನಾರಾಯಣಂ ರಾಜಾಶ್ರಯ ವಿಣ್ಣಗರ ದೇವರ್ಗ್ಗೆ ತನ್ನ ಪಡುವಣ ಕೋಂಟ್ಟ ಕಟನಿಯಲ್ (ಎಕ. XIV, ಮಳವ. ೧೨೫-೦ ; ಸು. 1014).

[ <ದೇವಯ್ಯ ]

**ದಾವರ** 'ಡಾವರ' ನೋ.

**ದಾವರಂಗ** (ನಾ). ಒಂದು ಸ್ಥಳದ ಹೆಸರು: ದಾವರಙ್ಗದ ದೊದಿವನ್ನಿಗಲಿಯು ಕಿಲ್ಲೂರು ಕಬೂರುವೊಳನಿಕೆ (ಎಕ. XII, ತಿಪಟೂ. ೧೦-೩; ಸು. ೯೭೦ ?). [ ? ]

**ದಾವರಿಸು** 'ಡಾವರಿಸು' ನೋ.

**ದಾವಶಿಖಿ** (ನಾ). = ದಾ ವ ದ ಹ ನ : ಉಗ್ರಾರಿವಂಶಲತಾವಲ್ಲರಿಗಳ್ಗೆ ದಾವಶಿಖಿಪೊಲ್ಕೆಯ್ದೋಱ (ಪಂಪಭಾ. ೩-೩೩) ; ರತ್ನಶಿಲಾಗ್ರಹವುಂ ಸಿಡಿಲಂತಿರೆ ಧವಲಹಾರವುಂ ದಾವಶಿಖಿವೊಲಲುರ್ದುದು ದ ಹ ನ ಂ (ಪಂಪಾಮ. ೧೦-೦೯೦). [ ದಾವ₂ + ಶಿಖಿ ]

**ದಾವಾ, ದಾವೆ₁** (ನಾ). (ವ್ಯವಹಾರಕ್ಕೆ ಸಂಬಂಧಿಸಿದ) ವ್ಯಾಜ್ಯ ; ಮೊಕದ್ದಮೆ ; ಕಟ್ಲೆ : ವಾದಿಯು ದಾಖಲ್ಮಾಡಿದ ದಾವಾಕ್ಕೆ ಪ್ರತಿವಾದಿಯ ಉತ್ತರವೂ ಅದಕ್ಕೆ ವಾದಿಯ ಜವಾಬೂ . . . ಕೋರ್ಟಿಗೆ ದಾಖಲಾಗುತ್ತಿದ್ದುವು (ಮಹಾಪಂ. II, ೪೮). **ದಾವೆ₁** : ಕೋರ್ಟಿನಲ್ಲಿ ದಾವೆಗಳನ್ನು ಹಾಕಿದರೆ ಆ ದಾವೆಗಳ ತೀರ್ಮಾನ ಪ್ರತಿವಾದಿಗೆ ಬರೆದು ಕೊಟ್ಟ ಪತ್ರದ ಆಧಾರದ ಮೇಲೆ ಆಗುತ್ತದೆ (ಪ್ರಪಾಠ. I. ೩೭೭); ಆಸ್ತಿ, ಸಂಪಿದೆಗಳು, ಅಧಿಕಾರಗಳು, ದಾಯಿತ್ವಗಳು, ಆಧಾರಗಳು ಮತ್ತು ದಾವೆಗಳು (ಭಾಧಾನ. ೦೭೯) : ರೆಗ್ಯುಲೇಷನಿನ ೭ನೆಯ ಪ್ರಕರಣದ ಮೇರೆ ದಾವೆಗಳನ್ನು ವಿಚಾರಿಸುವ ಬಗ್ಗೆ . . . ಹೆಸರುಗಳು ಸೇರಿರತಕ್ಕದ್ದು (ಗ್ರಾಮಾಕ. ೧೦).

ದಾವಾ ಅರ್ಜಿ = ಕೋರ್ಟಿನಲ್ಲಿ ತಗಾದೆ ಹೂಡಲು ಕೊಡುವ ಅರಿಕೆ: ವಾದಿಯು ತನ್ನ ದಾವಾ ಅರ್ಜಿಯಲ್ಲಿ ಅಂಥಾ ಮನುಷ್ಯನನ್ನು ನೇಮಿಸಿದ್ದರೆ . . . ಆತನಿಗೆ ತಿಳಿಸತಕ್ಕದ್ದು (ಗ್ರಾಮಾಕ. ೦೭). ದಾವಾದಾಖಲೆ = ತಗಾದೆಯ ಅರಿಕೆಯನ್ನು ದಾಖಲು ಮಾಡಿಸುವುದು : ಲಿಖಿತ ಮೂಲಕವಾಗಿ ದಾವಾದಾಖಲೆಯನ್ನು ಪಡೆದು ಅದಕ್ಕೆ ಉತ್ತರ ಪ್ರತ್ಯುತ್ತರಗಳನ್ನು ಬರೆಸುವ ಪದ್ಧತಿಯಿರಲಿಲ್ಲ (ಮಹಾಪಂ.II, ೨೮). ದಾವಾ ಮಾಡು, ದಾವೆ ಮಾಡು = ನ್ಯಾಯಾಲಯದಲ್ಲಿ ವ್ಯಾಜ್ಯ ಹೂಡು : ಸೆಟ್ಟಿ ದಾವಾ ಮಾಡವನೆ (ಮೂಂಗಲ್ಪ. ೦೯) ; ವಕೀಲರ ಮನೆಗೆ ಹೋಗಿ ಕೋರ್ಟಿನಲ್ಲಿ ದಾವೇ ಮಾಡಬೇಕೇ (ಪೋಹಿಸೀ. ೧೨೪). ದಾವಾ ಸೊತ್ತು = ತಗಾದೆಯಲ್ಲಿರುವ ಭೂಮಿ ; ವ್ಯಾಜ್ಯದಆಸ್ತಿ : (ಕ). ದಾವಾ ಹಾಕು, ದಾವೆ ಹಾಕು = ಕೋರ್ಟಿನಲ್ಲಿ ವ್ಯಾಜ್ಯ ಹೂಡು ; ಮೊಕದ್ದಮೆ ನಡೆಸು : ನಿಮ್ಮ ತಂದೆಯವರ ಮೇಲೆ ದಾವಾ ಹಾಕಿ ಬಿಟ್ಟೇನು(ಹನ್ನೊಂದ. ೫೦); ಕಂಪನಿಯ ಡೈರೆಕ್ಟರುಗಳಲ್ಲಿ ಯಾರ ಮೇಲಾದರೂ ದಾವಾ ಹಾಕಿ ಸಾಲದ ಪೂರ್ತಿ ಹಣವನ್ನು ಅವರಿಂದ ವಸೂಲುಮಾಡಿಕೊಳ್ಳಬಹುದು (ಹೊಪ್ರ. ೦೨೯ ಅಡಿಟಿ); ಕೋರ್ಟಿಗೆ ಹೋಗಿ ಕಳಸಯ್ಯನ ಮೇಲೆ ದಾವಾ ಹಾಕಿದ (ಗಂಗಾಳ. ೩೩). ದಾವೆ ಹೂಡು = ದಾವಾ ಹಾಕು : ನನಗೆ ನಾಳೆ ದಾವೆ ಹೂಡಬೇಕಾಗಿ ಬರುತ್ತದೆ (ಪ್ರಕಾಶ. ೦೯೭) [ ←ಅರ. ಹಿಂ. ಮರಾ. ದಾವಾ ]

**ದಾವಾಗ್ನಿ** (ನಾ). ೧. = ದಾವದಹನ : ತೀವ್ರ ದಾವಾಗ್ನಿವೊಲುಂದವು ದುರ್ಬಿಣೀತಳಂ (ಸುಕುಮಾ. ೯-೦೩) ; ದಾವಾಗ್ನಿಯನೆಟ್ಟಿಱಪ ಮಹಾವಾಯುವಿನಂತೆ ತಮ್ಮ ಮನದಳಿಪಂ ನಾನಾ ವಿಧ ದುರಾಗಮೋಕ್ತಿಗಳಾವಗಮೆಬ್ಬಿರಿಸೆ (ವರ್ಧಪು. ೧೦-೪೨) ; ಅಡವಿವಿಡಿದೋಡುತಿಹ ಗಜಂ ದಾವಾಗ್ನಿ ತನುವೊತ್ತು ಬೀದಿವರಿವಂತಿರ್ದುದು (ಹಹಶಾ. ೫-೩೬) ; ಇದಿದ ಧೂಳಿಯ ಧೂಮರಾಶಿಯ ಪಡೆ ವಿರಾಟನ ಮಗನ ಕಂಗಳಿಗೊಡನೊಡನೆ ದಾವಾಗ್ನಿಯಂತಿರೆ ತೋಱಿತಿದಿರಿನಲಿ (ಕುಮ್ಹಾವಿ. ೬-೩) ; ಅವಳ ಮನಸ್ಸಿನಲ್ಲಿ ಯಾವುದೊ ದಾವಾಗ್ನಿ ಎದ್ದಿದೆ (ಪಾಂಕಲ. ೨೬೬). ೨. ಪಂಚಾಗ್ನಿಗಳಲ್ಲಿ ಒಂದು : ಗ್ರೀಷ್ಮಾದಿ ರೂಪಕಾಲಾಗ್ನಿ ಆತಪರೂಪ ಸೂರ್ಯಾಗ್ನಿ ಪುಷ್ಕಾಭಿವ್ಯಕ್ತರೂಪ ಸೂರ್ಯಕಾಂತಾಗ್ನಿ ವೇಣ್ವಭಿವ್ಯಕ್ತ ದಾವಾಗ್ನಿ ದೇಹಾಂತರ್ಗತ ಉದರಾಗ್ನಿಗಳೆಂಬ ಪಂಚಾಗ್ನಿಗಳು (ವಿವೇಕ. ೦೯೪).

[ ದಾವ₂ + ಅಗ್ನಿ ]

**ದಾವಾದಾರ, ದಾವೇದಾರ** (ನಾ). ವ್ಯಾಜ್ಯ ಹೂಡಿದವನು : ಕೋರ್ಟಿನ ಕೊನೆಯ ತೀರ್ಮಾನದ ಮೇರೆಗೆ ದಾವಾದಾರನೇ ಜಾಮೀನು ತೆರಬೇಕಾಯಿತು (ಬೂಧಿ). **ದಾವೇದಾರ** : (ಕ). [ ದಾವಾ + –ದಾರ₄ ]

**ದಾವಾನಲ, ದಾವಾನಳ** (ನಾ). = ದಾವದಹನ : "ಬನಬೆಂಕಿಯ ದಾವಾನಲಂ" (ಕವಿಕಂ. ೫೮) ; ಮಹಾಸ್ಮರವಿಪಿನದಾವಾನಲ ಕೃಪಾವನಧಿ ಬಲಿದುರುಶೃಂಗಿಯಾದಂದವೊ (ಜಕೋಕು. ೨-೬). **ದಾವಾನಳ** : ಆತ್ಮಜರಿನಾದ ಕುಲಾಪವಾದ ಪರಾಭವದ ದಾವಾನಳದಿಂ . . . ಚಿಂತಾಂತರಂಗನುಮಾಗಿ (ಸುಕುಮಾ. ೨-೦೦ ಪ) ; ಲಲಿತ ಚಂದ್ರಿಕೆಗೇಕೆ ದಾವಾನಳನ ಹಾಡಾಹಾಡಿ (ಕುಮ್ಹಾದ್ರೋ. ೯-೪೮) ; ಲಲಿತನಿರ್ಮಲಚಂದ್ರಕಾಂತದ ಶಿಲೆಯ ಹತ್ತಿರೆ ಲತೆಯ ದಾವಾನಳನು ಕೊಳಲಾ ಜ್ವಾಲೆಯಾ ಶಿಲೆಯೊಳಗೆ ತೋರ್ಪಂತೆ (ಪ್ರಭುಲಿ. ೭-೨೫). [ ದಾವ₂ + ಅನಲ ]

**ದಾವಾನಲಚೂರ್ಣ** (ನಾ). ಒಂದು ವಿಧವಾದ ಚೂರ್ಣ : ದಾವಾನಲ ಚೂರ್ಣ–ಹಿಂಗು, ವಾಯುವಿಳಂಗ, ಪಂಚಲವಣ, ಕರ್ಕಾಟಕ ಶೃಂಗಿ, ತಾರೇಕಾಯಿ, ನೆಲ್ಲೀಚಟ್ಟು, ತ್ರಿಕಟುಕ, ಚವ್ಯ, ಚಿತ್ರಮೂಲ, ವೋಡಿ, ಕೊನ್ನಾರಿಗೆಡ್ಡೆ, ಕಟುಕರೋಹಿಣಿ, ಕರೀಜೀರಿಗೆ, ಬಿಳೀಜೀರಿಗೆ, ಕೊಡಸಿಗೆ ಬೀಜ, ಚಂಗಲ್ವಕೋಷ್ಟ, ಹೆಗ್ಗುಳ್ಳ, ನೆಲಗುಳ್ಳ, ತಿಗಡೆ, ಗಜಹಿಪ್ಪಲಿ, ಸಿಹಿಹಾಲೆಬೇರು, ವಿಷಮುದ್ದಿ, ಈಶ್ವರೀಬೇರು, ಗಂಟುಭಾರಂಗಿ, ಯವಕ್ಷಾರ, ಸರ್ಜಕ್ಷಾರ, ಬಿಳಿಗಾರ, ಅರಿಸಿನ, ಮರದರಿಸಿನ ಇವನ್ನು ಸಮಾಂಶ ಚೂರ್ಣಮಾಡಿ ಬೆಲ್ಲ ಅಥವಾ ಜೇನು ತುಪ್ಪದೊಡನೆ ತೆಗೆದುಕೊಳ್ಳಲು ಕಾಸ ಶ್ವಾಸ, ಅಜೀರ್ಣ, ವಾತತಿಮಿರ, ತ್ರಿದೋಷಶೂಲೆ, ಸಹ ಪರಿಹಾರವಾಗುವುವು (ಸಕವ್ಯ. ಪರಿ. ೪೭೬).

[ ದಾವಾನಲ? + ಚೂರ್ಣ₂ ]

**ದಾವಾನಳ** 'ದಾವಾನಲ' ನೋ.

**ದಾವಾರಿ** (?). (?) : ವೃಷಗ ವೃಶ್ಚಿಕಗಮನ ದಾವಾರಿ ಕಂಸವಮ ತೊಲೆಯದಿರ್ವ (ಜಕೋಕು. ೨). [ ? ]

**ದಾವು₁** 'ಡಾಹ' ನೋ.

**ದಾವು₂** (ನಾ). ಹಗ್ಗ ; ಹುರಿ; ರಜ್ಜು : "ತಳ್ಳೆಂದುಂ ದಾವೆಂದುಂ ಅಗ್ಗರಣೆಯೆಂದುಂ ರಜ್ಜು" (ಕಶಸಾ. ೩೦-೩೯೦) ; ದಾವಿನ್ನಡುವಂ ತೊಡರ್ಚಿ ದೃಢವಾಗಲುಲೂಖಲದಲ್ಲಿ ಕಟ್ಟಿ ಪೋಗಿನ್ನು . . . ನೋಟಸ್ಸೆನೆಂಬುದುಂ (ಜಗಿಪಿ. ೩-೩೭) ; ದಾವುಂ–ದಾವು (ಶಮದ. ೨೭೮ ಪ್ರಯೋ) ; ಮುನ್ನೇಂ ಕಟ್ಟದೆ ಮಾಣ್ದಾರೇ ಕಡೆವ ದಾವಿಂದೆನ್ನಂ (ಅಪ್ರತಿ. ೯೮-೨೩) ; ಎನ್ನೀ ಅಟ್ ಮೆಯ್ಯಂ ಬಾವಿ ದಾವುಗಳ್ಗೊಪ್ಪಿಸಿ ಎನ್ನನಿಯಂನಂ ಮುಗುಟ್ಟುಂ ಕಾಣಲಕ್ಕುಮೆಂದೊಡೇವೆನ್ನೆ (ರಾಮಾಶ್ವ. ೪೨-೦). [ <ಸಂ. ದಾಮನ್ ]

**ದಾವುಣಿ** 'ದಾವಣ್ಣಿ' ನೋ.

**ದಾವುದು** (ಸ). ರೂಪಗಳು (ಪುಂ. ಸ್ತ್ರೀ ಬಹುಂವ) ದಾರು₁, (ವಿಶೇ) ದಾವ₁. ಪ್ರಶ್ನಾರ್ಥಕ ಸರ್ವನಾಮ : ದಾವುದು ದಾರಿ ಆ ಊರಿಗೆ (ಬೂಧಿ).

**ದಾರು$_1$** = ಅದು ಯಾರಂ; "ಯಾರು" (ಜಾನಕೋ. ೮): ದಾರಿಗೆ ದಾರು ಮತ್ತಿಲ್ಲ ದೃಢ ಸೇರಿತು ಮನವಘ ಮನೆ ಮನೆಯೊಳಗೆಲ್ಲ (ಪುರಂದ. ೧-೬೨-೩): ಅಂತರಂಗದ ಒಳಗೆ ಭ್ರಾಂತಿ ಬಿಡಿಸುವ ಎಮ್ಮ ಅಂತು ದಾರಿಗು ತಿಳಿಯದಂಥ ಎಮ್ಮ (ಪುರಂದ. ೨-೫೫-೩): ದಾರೊಡೆಯನೊ ದಾರ್ವತ್ರನೊ ನೀರೆ ಇವಳ ಸೊಬಗಿದೇನೊ (ರಣ್ನಾ.ಕ. ೩೦): ಈ ಮತ್ತೊಬ್ಬ ನಾಲ್ಕನೇ ಸ್ತ್ರೀಯು ದಾರಪ್ಪಾ? (ಉಧಾಹ. ೦೯); ಸೋರುತಿಹುದು ಮನೆಯ ಮಾಳಿಗಿ ದಾರು ಗಟ್ಟಿ ಮಾಳ್ಪರಿಲ್ಲ ಕಾಳಕತ್ತಲೆಯೊಳಗೆ ನಾನು ಮೇಲಕೇರಿ ಮೆಟ್ಟ ಲಾರೆ (ಕಡೀಖ. ೦೯-೦): ಎಲ್ಲೈ ಭಗವತಿಯರಿರಾ! ನೀವು ದಾರು? (ಮುಂಬಯಿ. ೪-೩೯೯). **ದಾವ$_1$**= ಅದು ಯಾವ; "ಯಾವ" (ಜಾನಕೋ. ೪); ನಿನ್ನ ಶೀಲ ಸೌಂದರ್ಯವನು ಧರೆಯೊಳಗೆ ವರ್ಣಿಸುವ ಕವಿಯು ದಾವಾ (ಹಾದೀಶ. ೪-೦): ಈಗ ಆ ರಾಜನು ದಾವ ಕಾರ್ಯದಲ್ಲಿ ಆಸಕ್ತನಾಗಿದ್ದಾನೆ (ಉಧಾಹ. ೪೩). 'ಆವುದು', 'ಯಾವುದು' ಪರಾ.

[ <ಅದು$_1$ + ಆವುದು ]

**ದಾವೆ$_1$** 'ದಾವಾ' ನೋ.

**ದಾವೆ$_2$** (ನಾ). ೧. ಹಗ್ಗ (?): ನಿನ್ನಯು ನಣ್ಣ ದಲೆಂದು ತಂದ ಹುಟ್ಟಿ ಗೆಯಂಬುದೇಟ್ಕೊಳಂಗಬಿದು ಸೇದೆಯ ಜಾವಿಯೊ ಬಂದ ದಾವೆ[ಪಾಠಾ. ತಾವಿ]ಯೋ (ಲೀಲಾವ. ೨-೧೦೦). ೨. (?): "ದಾವೆ[ಪಾಠಾಂ. ರಾವೆ]ಯೆನೆ ಸಾವೆಯಕ್ಕುಂ" (ಮಂಗರಾ. ೩೬-೧೮). [ ? ]

**ದಾವೆದಾರ** 'ದಾವಾದಾರ' ನೋ.

**ದಾಶ** (ನಾ). ೧. ಬೆಸ್ತರವನು; ಮೀನಂಗಾರ: ಆ ಮೀನನೊರ್ವಂ ಜಾಲಗಾಬಿಂ ಜಾಲದೊಳ್ ಪಿಡಿದಲ್ಲಿಗರಸಪ್ಪ ದಾಶನಲ್ಲಿಗುಯ್ವ್ದು ತೋಱಿ ದೊಡೆ (ಶಂಶಭಾ. ೧-೩೮ ವ). ೨. ಆಳು; ದಾಸ; ಸೇವಕ: ಮಹಾ ಬಲಶಾಲಿಯಾದ ಜರಾಸಂಧನು, ಕೃಷ್ಣನು ದಾಶನೆಂದು ಅವನೊಡನೆ ಯುದ್ಧಕ್ಕೆ ಹೋಗಲಿಲ್ಲ (ವಚಭಾ. ೮೩). 'ದಾಶಾರ್ಹ' ಪರಾ. [ ಸಂ. ]

**ದಾಶಮಿಕ** (ಗು). ಹತ್ತನೆಯಂ; ಹತ್ತು ಹತ್ತಾಗಿ ಎಣಿಸಿದ; ಹತ್ತು ಹತ್ತು ಹಿಡಿದಂ ಹೋಗುವ: "ದಾಶಮಿಕ, ದಶಮಲವ" (Decimal. ಪಾರಿನಿ. ೨೩). [ ಸಂ. ]

**ದಾಶಮಿಕಪದ್ಧತಿ** (ನಾ). [ಗಣಿತ] ಹತ್ತು ಹತ್ತರಂತೆ ಏರುತ್ತಾ ಅಥವಾ ಇಳಿಯುತ್ತಾ ಹೋಗುವ ಎಣಿಕೆಯ ಕ್ರಮ: ಈತನ ಸಲಹೆಗಳ ಪ್ರಕಾರವೇ, ದಾಶಮಿಕಪದ್ಧತಿಯು ಜಾರಿಗೆ ಬಂದಿತು (ಗಚಿಹ. ೦೫೮).

[ ದಾಶಮಿಕ + ಪದ್ಧತಿ ]

**ದಾಶರಥಿ** (ನಾ). ದಶರಥನ ಮಗ; ಶ್ರೀರಾಮಂ: ರತ್ನ ಪ್ರದೀಪಮುಯು ಮಾಯ್ತು ತಮಮೆಲ್ಲಮುಂ ರಘುಜಪ್ರತಾಪಮುಯುಮಾಯ್ತು ಮಾಜಗ ಮೆಲ್ಲಮುಂ ದಾಶರಥಿ ರಾಜ್ಯಮಂ ಪಾಲಿಸೆ (ಕೃಮಿಖಾ. ೦೮-೦೨). [ ಸಂ. ]

**ದಾಶಾರ್ಹ** (ನಾ). ೧. ದಶಾರ್ಹನ ವಂಶದವನು; ಯದುವಂಶದವನು. ೨. ಕೃಷ್ಣ. [ ಸಂ. ]

**ದಾಶಾಳ** 'ದಾಸವಣ' ನೋ.

**ದಾಶಿವಾಳ** 'ದಾಸವಣ' ನೋ.

**ದಾಷ್ಟಿಕ$_1$** 'ದಾಷ್ಟ್ರೀಕ' ನೋ.

**ದಾಷ್ಟಿಕ$_2$** (ನಾ). ಹಾವು ಕಚ್ಚಿದವನು: ಇಲ್ಲಿಯ ಇರುಳೀ ದಾಷ್ಟಿಕಂಗೆ ಜಾವಮಿರಿಮಂದು ವೇಟ್ಟು ಪೋದಂ (ವಡ್ಡಾರಾ. ೦೪-೩೫). [ ಸಂ. ]

**ದಾಷ್ಟಿಕತನ** (ನಾ). ಎದೆಗಾರಿಕೆ; ದಿಟ್ಟತನ; ಕೆಚ್ಚು: ದಾಷ್ಟಿಕತನಗಟ್ಟು ದರಹಾಸಮುಖಿ ಪರಿವೇಷ್ಟಿಸಿದಮಳ ಸೌಂದರದಿ ಚೇಷ್ಟಿಪ ವೇಶ್ಯಾ ಭುಜಂಗರ ಮಧುಪಾನಗೋಷ್ಠಿಯ ಸೊಬಗನೀಕ್ಷಿಸಿದ (ಮೋಹತ. ೦೯-೪೩); ಆವಳು ಹಳ್ಳಿಯ ಹೆಣ್ಣಾದುದರಿಂದ ಅಷ್ಟೊಂದು ದಾಷ್ಟಿಕತನವುಳ್ಳವ ಳಾಗಿರಲಿಲ್ಲ (ಮೂಂರಾನ. ೦೫). [ ದಾಷ್ಟಿಕ$_1$ (<ದಾಷ್ಟ್ರೀಕ) + -ತನ ]

**ದಾಷ್ಟೀಕ, ದಾಷ್ಟಿಕ$_1$** (ನಾ). ೧. ಎದೆಗಾರಿಕೆ; ಧೈರ್ಯ; ದಕ್ಷತೆ: ಜಾಣತನ ದಾಷ್ಟೀಕ ದೇಹತ್ರಾಣ ನಡೆನುಡಿಗಳಲಿ ಸಕಲ ಪ್ರಾಣಿಗಳಲಕ್ಕಧಿಕ ನಾಗಿರುತಿರ್ದು (ನಿಧಾಗ. ೦೦-೦೩-೮): ಮನದೊಳು ಕಳವಳಗೊಳುತ ಕೇಳದಡೆಯೇನು ದಾಷ್ಟೀಕವೆಂದು ತೋರುವುದೊ. (ಸೌಗಂಧಿ. ೨೫೯-೦೫). ೨. ದಕ್ಷನೂ ಪ್ರಭಾವಶಾಲಿಯೂ ಆದವನಂ: (೩). ೩. ಒರಟ; ನಿರ್ಲಜ್ಜ. **ದಾಷ್ಟಿಕ$_1$**: ೧. ಆದರಲ್ಲಿ ಅಭಿರುಚಿಯಿಲ್ಲದಿದ್ದರೂ ಇದೆಯೆಂದು ಸಾಧಿಸುವ ದಾಷ್ಟಿಕ ಅವರಲ್ಲಿತ್ತು (ನಾಡಿಗೀ. ೧); ಕಲಾವಿದರಲ್ಲಿ ದಾಷ್ಟಿಕ ವಿಲ್ಲದಿರುವುದರಿಂದಲೋ ಅವರಿಗೆ ತಕ್ಕ ಪ್ರೋತ್ಸಾಹವಿಲ್ಲದಿರುವುದ ರಿಂದಲೋ ಈ ಪದ್ಧತಿಗಳು ಅಷ್ಟು ಪ್ರಖ್ಯಾತವಾಗಿಲ್ಲ (ಭಾರದ. ೫೬೨).

**ದಾಷ್ಟಿಕವಾಗು** = ದೃಢತೆ ಹೊಂದಂ; ಗಟ್ಟಿಯಾಗಿರಂ: ಹುಡುಗನಿಗೆ ವಿದ್ಯೆಯ ಹಂಬಲವಿದೆ. ದಾಷ್ಟೀಕವಾಗಿದ್ದಾನೆ (ಹತ್ತು.ಸು. ೦೦೨).

[ <ಸಂ. ಧಾರ್ಷ್ಟ್ಯಕ ]

**ದಾಸ** (ನಾ). ೧. ಆಳು; ತೊತ್ತು; ಊಳಿಗದವನಂ; ಸೇವಕ: "ದಾಸಃ, ದಾಸೇರಕಃ—ಈ ೨ ಕೂ (ಟ್ರಿ)ತ್ರಿನ ಮಗಂ" (ಹಲಾಯು. ೬೦-೨೦೦): ಕಾಳಿದಾಸಂಗೆ ದಾಸರೆನಿಪರ್ ಕವಿಗಳ್ (ಜಗವಿ. ೦-೯); ಈಶ ನಿಮ್ಮ ದಾಸರ ದಾಸಿಯ ದಾಸ[ಪಾಠಾಂ. ಸಿ] ನಾನಯ್ಯ (ಬಸವ. ೩೯೧): ದಾಸನ ಮಾಡಿಕೋ ಎನ್ನ ಸ್ವಾಮಿ ಸಾಸಿರ ನಾಮದ ವೆಂಕಟರಮಣ (ಪುರಂದ. ೧-೯ ಪಲ್ಲವಿ); ದಾಸನಾಗಿಹ ಕೂಸು ಮೊರೆಯಿಡಲಾ ಸಮಯಕೈತಂದು (ಗಗತಾ. ೦೯-೨೬). ೨. ವೈಷ್ಣವ ಪಂಥದ ಭಕ್ತ; ಹರಿದಾಸ; ದಾಸಯ್ಯ; ದಾಸಕೂಟಕ್ಕೆ ಸೇರಿದ ವ್ಯಕ್ತಿ: ಅಷ್ಟವಿಧಾರ್ಚನೆ ಮಠಪತಿ ದಾಸ ವೈಷ್ಣವ ರಾಹಾರದಾನಕಂ ಬಿಟ್ಟ ದತ್ತಿ (ಎಕ. XIV, ನಾಗಮಂ ೦೯೦-೬೭: ಸು. 1224); ದಾಸರ ನಿಂದಿಸಬೇಡ ಮನುಜ ಹರಿದಾಸರ ನಿಂದಿಸಬೇಡ (ಪುರಂದ. ೧-೧೦ ಪಲ್ಲವಿ); ದಾಸನೆಂತಾಗುವೆನು ಧರೆಯೊಳಗೆ ನಾನು ವಾಸುದೇವನಲ್ಲಿ ಲೇಶಭಕುತಿಯು ಕಾಣೆ (ಪುರಂದ. ೪-೦೬೩ ಪಲ್ಲವಿ): ದಾಸರು ಬಂದಾರ ಮದುವಿಗೆ (ಜೋಳಗೀ. ೨೫): ಹರಿದಾಸರಲ್ಲಿ ದಾಸರು, ವ್ಯಾಸರು ಎಂದು ಎರಡು ವಿಧ (ಭಾರದ. ೩೦೦). ೩. ಒಂದು ಜಾತಿ; P ಸಾಮಾನ್ಯವಾಗಿ ಇವರು ಒಂದು ಕಡೆ ನಿಲ್ಲದೆ ಊರಿಂದೂರಿಗೆ ಸಂಚಾರಮಾಡುತ್ತಾ ಕೀರ್ತನೆ, ಭಜನೆ ಮುಂತಾದುವುಗಳಿಂದ ಹೊಟ್ಟೆ ಹೊರೆದಂ ಕೊಳ್ಳುವರು: ದಾಸರು . . . ಇವರಲ್ಲಿ ತಿರುಮಲದಾಸರೆಂತಲೂ ಗಂಡುದಾಸರೆಂತಲೂ ಯೆರಡು ಪೊಳಭೇದಗಳಿವೆ (೪ ಭಾ ಗೆ. ೨೦೭). ೪. ಮೀನಂಗಾರ; ಬೆಸ್ತ: ನುತ ದಾಸಾನ್ವಯ ನಾಯಕಸುತ ನಾನೆನಗಿದಿರ ದಾರುಮಿಲ್ಲಂ ಜಗದೊಳ್ (ಜಾಲಾಸ್ಕ. ೪-೯-೩೨).

**ದಾಸಮಕ್ಕಳು** = ಆಳುಮಕ್ಕಳಂ; ತೊತ್ತಿನ ಮಕ್ಕಳು; ಭಕ್ತರಂ: ಶ್ರೀ ಭೇರುಂಡೇಶ್ವರ ದೇವರ್ಗೆ . . . ಸಮಸ್ತಪ್ರಜೆ ದಾಸಮಕ್ಕಳು ತಂಮ . . . ಕೊಟ್ಟ (ಎಕ. VII (8), ಶಿಕಾರಿ. ೩೫೪; ಸು. 1250). **ದಾಸರ ಆಟ, ದಾಸರಾಟ** = ದಾಸರು ಆಡುವ ನಾಟಕ; ಬಯಲಾಟದ ಒಂದು ಪ್ರಕಾರ: ದಾಸರ ಆಟ ಆಟವಲ್ಲ ದೋಸೆಯ ಊಟ ಊಟವಲ್ಲ (ಗಾದೆ); ಆವನು 'ದಾಸರಾಟ' ನೋಡುವುದಕ್ಕೆಂದು ಪಕ್ಕದ ಹಳ್ಳಿಗೆ ಹೋಗಿದ್ದನು (ರೂಢಿ). **ದಾಸರ ಪದ** = ದಾಸರುಗಳ ಹಾಡು; ಹರಿದಾಸರ ಕೀರ್ತನೆ: 'ದಾಸರ ಪದದಲ್ಲಿ ತಳ್ಳಿಲ್ಲ, ತಂಗಡೀ ಹೂವಿನಲ್ಲಿ ವಾಸನೆಯಿಲ್ಲ' ವೆಂದು ಹರಿದಾಸರನ್ನು ನಿಂದಿಸುವವರ ವಾಗ್ಗ್ರಂಥನವಾಗುತ್ತದೆ (ಕಥವಿ. II, ೦೨೫). **ದಾಸರ ಸಾನಿ** = ವೇಶ್ಯಾವೃತ್ತಿಯಂ ವ ಳಂ: "ದೇವದಾಸಿ. ಕಸಬಿ" (ಜಾನಕೋ. ೪). **ದಾಸಾನುದಾಸ** = ಅಡಿಯಾಳಂ; ಸೇವಕರ ಸೇವಕ: ಅವಳನ್ನು ಕ್ಷಣಮಾತ್ರವೂ ಎದುರಿಸಲಾರದೆ ಮಿತಿಮೀರಿ ಮೋಹಗೊಂಡು ದಾಸಾನುದಾಸನಾಗಿ ಅವಳಿಗೆ ಶರಣು ಬಿದ್ದೆ (ಯೋಧಪು. ೯೯). [ ಸಂ. ]

**ದಾಸಕಟ್ಟು** 'ದಾಸರಿಕಟ್ಟು' ನೋ.

**ದಿಂಡುಮಗುಟ್** (ಕ್ರಿ). (ದೇಹ) ಹಿಮ್ಮೆಟ್ಟಿ ಬೀಳು; ಉರುಳಿ ಬೀಳು; ದಿಂಡುಗೆಡೆ : ಮದಹಸ್ತಿಮಸ್ತಕಂಗಳನೋಸರಿಸಿ ರಥಮಂ ಪರಿಯಿಸುವ ರಥಚೋದಕರುಂ ರಥಚೋದಕರ ಬಿಟ್ಟ ಬಾಯ್ ಬಿಟ್ಟಂಶಿರೆ ತಮ್ಮ ಕರುಳ್ಗಳೊಳ್ ತವೆ ತೊಡರ್ದು ಕೀಬಿಂ ಕರ್ಚಿ ದಿಂಡುಮಗುಟ್ಬು ಕೆಡೆವ ಜಾತ್ಯಶ್ವಂಗಳುಂ (ಹಂಪಭಾ. ೧೦-೧೧೭ ವ). [ ದಿಂಡು + ಮಗುಟ್ ]

**ದಿಂಡುರುಳ್**, ದಿಂಡುರುಳು (ಕ್ರಿ). ೧. ಮರದ ಕಾಂಡದಂತೆ ನೆಲದ ಮೇಲೆ ಉರುಳು : ಗಂಡೇಳ್ವ ಭೂತಮುತ್ಪ್ರೇತಜಾತಂಗಳಿಂ ದಿಂಡುರುಳ್ವ ಪೊರಳ್ವ ನೆರಳ್ವ ಪರಾಕ್ರಮಿಗಳಿಂ . . . ತದ್ರಣಾಂಕಣಮೆಸೆದುದು (ಜಲಪು. ೧೬-೨೦). **ದಿಂಡುರುಳು** : ೧. ಅಜಿಯಲಣಂ ಬಂದುದಿಲ್ಲೆತ್ತಲುಂ ದಿಂಡುರುಳುತ್ತಿರ್ಪನ್ಯಸೈನ್ಯಂಗಳ ತಲೆಗಳ ಕಾಣಲ್ಕೆ ಬಂದತ್ತದೆತ್ತಂ (ಚಂದ್ರಪು. ೫-೧೦೯) ; ಸಾಲ್ವನಳವಳಿದನು ದಿಂಡುರುಳಿತಾತನ ಚತುರ್ಬಲಂ (ಕೃಮಿಥಾ. ೭-೬೨) ; ಖಂಡೆಯಗಳ ಪೆಟ್ಟಿನೊಳಗೆ ಗುರಾಣಿಗಳ್ತುಂಡಿಸಿ ತಲೆ ಸೀಳಾಗಿ ಖಂಡಿಸಿ ಸಿಂಗಾಡಿ ದೋಣಿಯಂಬು ಪುಡಿಯೆದ್ದು ದಿಂಡುರುಳಿತು ಪಾನರಾಜಿ (ಕಂಸವಿ. ೧೪-೭೪) ; ಚಂಡ ಖಗಪ್ಯಗರವಕೆ ಬೆದಱುತ ದಿಂಡುರುಳಿ ಪೊರಳುತ್ತಲಿರ್ದರು ನಾರಿಯರು ಬನದಿ (ಕೃಕಹಾ. ೩-೮೩). ೨. ಮೈಯನ್ನು ಉರುಳಿಸುತ್ತಾ ದೇವರಿಗೆ ಪ್ರದಕ್ಷಿಣೆ ಹಾಕು ; ಉರುಳುಸೇವೆ ಮಾಡು : ಸ್ವಾಮಿಗೆ ದಿಂಡುರುಳುವ ಸೇವೆಯನ್ನು ಮಾಡುವವರೆಷ್ಟೋ ಮಂದಿ (ಜೂ೦).

**ದಿಂಡುರುಳು ಸೇವೆ** = ಶರೀರವನ್ನು ಉರುಳಿಸುತ್ತಾ ದೇವರಿಗೆ ಪ್ರದಕ್ಷಿಣೆ ಹಾಕುವ ಸೇವೆ ; ಉರುಳುಸೇವೆ : ಅವರು ದೇವರಿಗೆ ದಿಂಡುರುಳು ಸೇವೆಯನ್ನು ಒಪ್ಪಿಸುವ ಹರಕೆ ಹೊತ್ತಿದ್ದಾರೆ (ಜೂ೦).

[ ದಿಂಡು + ಉರುಳ್$_1$ ]

**ದಿಂಡುರುಳಿಕೆ** (ನಾ). ದೇಹವನ್ನು ಉರುಳಿಸಿ ಪ್ರದಕ್ಷಿಣೆ ಹಾಕುವಿಕೆ : ಒಲ್ಲೆನೆಂದೇಕೆನ್ನುವನು ? ದಿಂಡುರುಳಿಕೆ ಹಾಕುತ್ತಾನೆ ದಿಂಡುರುಳಿಕೆ (ಹುಚ್ಚಾಟ. ೬೨). [ ದಿಂಡುರುಳು (< ದಿಂಡುರುಳ್) + – ಇಕೆ ]

**ದಿಂಡುರುಳಿಚು** 'ದಿಂಡುರುಳ್ಚು' ನೋ.

**ದಿಂಡುರುಳು** 'ದಿಂಡುರುಳ್' ನೋ.

**ದಿಂಡುರುಳ್ಚಿಸು** (ಕ್ರಿ). ಮರದ ಕೊರಡು ಉರುಳುವಂತೆ ಉರುಳಿಸು : ಗಜರಾಜಿಯಂ ದಿಂಡುರುಳ್ಚಿಸಿ ತೇರ್ಗಳಂ ಛತ್ರ ಚಾಮರಾಳಿಗಳ್ಪೆರಸಿ ನಿಟ್ಟೊರಸಿ . . . ಸವಱಿದುದು ಸುಭಟರಂ ಮತ್ತಗಜವ್ರ (ಜಲಪು. ೨೮-೨೪). [ ದಿಂಡುರುಳ್ಚು + – ಇಸು$_3$ ]

**ದಿಂಡುರುಳ್ಚು**, ದಿಂಡುರುಳಿಚು (ಕ್ರಿ). ೧. ಮರದ ಕೊರಡು ಉರುಳುವಂತೆ ಉರುಳಿಸು: ಮಿಕ್ಕ ಪಿಶಾಚ ಪೊಕ್ಕಱಿದಟ್ಟೆಯಂ ಮುಟ್ಟ ಮುಱಿದು ಮುಂಡಮಂ ದಿಂಡುರುಳ್ಚಿ ರುಂಡಮಂ ಸೆಂಡಾಡಿ (ರಾಮಾಶ್ವ. ೧೪೪-೧೦). ೨. (ಆಲಂ) ಸೋಲಿಸು ; ಹತೋಟಿಗೆ ತರು : ದಿಂಡುರುಳ್ಚಿದಮಾಳ್ದ ಗಿದಿರಾದರಂ ಸುಕೋದಂಡರೂಪಿಂ ಸ್ವಾಮಿಹಿತಕೆನ್ನು ತಮ್ಮೊಳುದ್ದಂಡತೆಯ ಬಿರುದೆತ್ತಿತನೆ ಸೋಗೆವಸುರ ಕಬ್ಬಿನ ಕೊರ್ಬು ಕಣ್ಗೆಸೆದುದು (ಜಲಪು. ೧೧-೧೦); ಮೂಜಗವನ್ನೆದೆ ಕುಸುಮಾಸ್ತ್ರದಿಂ ದಿಂಡುರುಳ್ಚುವ ಶಂಬರಾರಿಗಿದಿರಾರೆನಲು (ಕೃಮಿಥಾ. ೨೨-೨೦). **ದಿಂಡುರುಳಿಚು** : ೨. ಕವಿದರು ಕದಳಿಯನು ಮದಕರಿಯು ತೊತ್ತಳದುಳಿದವೊಲು ದಿಂಡುರುಳಿಚಿದರಗಣಿತೋಟಿಯನು ಶತಮನ್ಯುವಂದದಲಿ (ಕುಮ್ಯಾಭೀ. ೪-೬೩). [ ದಿಂಡು + ಉರುಳ್ಚು ]

**ದಿಂಡುರ್ಚಿ** (ನಾ). ದಿಟ್ಟೆ ; ಉದ್ಧತೆ (?) : ಕೂಡೆ ಕುಣಿಯುತ್ತುಂ ಬಂದು ಸಲ್ಲನ್ನಮಾಹರಚೇಳಕ್ರಿಯೆ ಭೂಪನಂ ಸುಲಿದುಕೊಂಡರ್ ಪಾಯ್ದು ದಿಂಡು[ಪಾಠಾಂ. ದು]ರ್ಚಿಯರ್ (ಅನಂಪು. ೫-೬). 'ದಂಡುಬಾಂಬೆ' ಪರಾ. [ ? ]

**ದಿಂಡುಪಾಯ್** (ಕ್ರಿ). ಪರಾಕ್ರಮದಿಂದ ಮೇಲೆ ನಂಗು ; ರಭಸದಿಂದ ಮೇಲೆ ಬೀಳು : ಅಲಗನೊಯ್ಯನೆ ಕಿತ್ತಡೆ ಕಂಡು ದಿಂಡುಪಾಯ್ದೆತ್ತಿದ ಹಂದಿಯಂ ಮುಳಿದು ಕುತ್ತಿದನೊತ್ತಿದನಾ ವನೇಚರಂ (ಸೂಕ್ತಿಸು. ೩-೦೩೨); ವೈರಿಕ್ಷಿತಿಪನ ಭಟರಂ ದಿಂಡುಪಾಯ್ದುಬ್ಬು ಬೇಗಂ (ದಶಕು. ೭-೭೦) ; ಮುಂಗಾಲ್ಗಳಂ ನೆಗಪಿ ನಿಲ್ಕ . . . ದುಂಡಿಪ ದಿಂಡುಪಾ[ಪಾಠಾಂ. ಪಾ]ಯ್ಕ ಬವರಿವರಿವ ಚಮ್ಮಟಗೆಗೆ ಚಳಿಯದ ಕಡಿಯಾಣಮಂ ಕೈಕೊಳದ ಬಗೆಯಂ ಬಗೆದಂತ ಕಂಡು (ರಾಜಶೇ. ೬-೧೧ ವ) ; ಪಿರ್ಬರಿಯೊಳೆ ಸುತ್ತಿ ಪಾಯತಿಕೆಯಿಂ ಮಿಗೆ ನರ್ತಿಪ ದಿಂಡುಪಾಯಲುಪ್ಪರಿಪ . . . ವಾಹಳಿತನಂ ಬಗೆಗೊಂಡುದು ಮಂತ್ರಿಪುತ್ರನಾ (ರಾಜಶೇ. ೦೩-೮೨).

[ ದಿಂಡು + ಪಾಯ್$_1$ ]

**ದಿಂಡುವಿಡಿ** (ಕ್ರಿ). ಗುಂಪುಗೂಡು : "ಎಕ್ಕೆಕ್ಕನೆ ದಿಂಡುವಿಡಿದು ಬಪ್ಪುದು ದಕ್ಕುಂ" (ರನ್ನಕಂ. ೩). [ ದಿಂಡು + ಪಿಡಿ$_1$ ]

**ದಿಂಡೆ$_1$** 'ತಿಟ್ಟು$_3$' ನೋ.

**ದಿಂಡೆ$_2$** (ನಾ). ದುಷ್ಟ ಸ್ವಭಾವದವಳು ; ಉದ್ಧತೆ ದಿಂಡೇರಿಗುಂಟು ಜಗಭಂಡರಿಗುಂಟು ಅಂಡಲೆವರಿಗಿಲ್ಲವೀ ಕಾಲ (ಪುರಂದ. ೧-೦೨೦-೦) ; ಮತ್ತೊಪ್ಪವ[ವೆ]ರ ದಿಂಡೆಯರತಿಹಾಸ್ಯದಿಂದಲಿ ಮುತ್ತೈದೆ ಮುಂಡೆಯಾದಳು ಕೇಳು ರಾಯ(ಮೋಳಿಪು. ೪-೨೨); ಗಂಡನೊಲುಮೆಗು ಸುತರಹಡೆಯಲು ಬಂದು ಭೂತಾಹುತಿಗೆ ವೇಸದ ದಿಂಡೆಯರ ಚರ್ಯವನು ತಿಳಿಯದ ರಾರು(ಜಿರಾಮಾ. ೩೪೮-೪೪) ; ನಿಮಗೆಲ್ಲ...ಕುತ್ತಿಗೆ ಅಪ್ಪಚಿ ಹಿಡಿಯಬೇಕಿತ್ತು . . . ಅವನು ಹೇಳೋದೂ ಹೀಗೆ. ನೀನೂ ಸೊಕ್ಕಿದ ದಿಂಡೆ, ಹೀಗೆಯೇ ಹೇಳುವಿಯಲ್ಲ ! (ಜೀವಮು. ೬೫) : ಎನ್ನನು ಗುದ್ದಿ ನಡೆದಳಾ ದಿಂಡೆ ಕಡು ಮುಳಿದು ಮುನಿದು (ಶರಾಸ. ೪೯-೮) ; ಗಂಡನ ಮನೆಯವರು ನುಡಿದರೆ ಮರುನುಡಿಯಬಾರದು ದಿಂಡೆ ಎಂದೆನಿಸಿಕೊಳ್ಳಲೇಬಾರದು (ನಂಬಿನಾ. ೦೧).

[ ದಿಂಡ$_4$ + – ಎ$_2$ ]

**ದಿಂಡೆ$_3$** (ನಾ). ೧. ದುಷ್ಟ ; ಉದ್ಧತ : ಈ ಹುಡುಗನು ಬಾಲ್ಯದಿಂದಲೂ . . . ಓದುಬರಹದಲ್ಲಿ ಇಷ್ಟವಿಲ್ಲದೆ ದಿಂಡೆಯಾಗಿ ತಿರುಗುತ್ತಿದ್ದನು (ನೀತಿಚಿಂ. II, ೦೦); ಅದಕ್ಕೇನು ಧಾಡಿ ? ದಿಂಡೆ ದುಣ್ಣ ದಾಂಡಿಗ ನಾಯಿ! (ಮುಳಿಮು. ೭೨೫) ; ದುಷ್ಟರಾಗಿದ್ದ ಕೆಲವು ಪಾಳಯಗಾರರು . . . ಹೆಂಗಸರಿಗೆ ಅನೇಕ ಅವಮಾನಗಳನ್ನು ಮಾಡುತ್ತಾ ದಿಂಡೆಯಾಗಿದ್ದ ಕಾರಣ ಪಾಳಯಗಾರ ಎಂಬ ಶಬ್ದವು ದುಷ್ಟನಾದ ಪ್ರಮುಖ ಎಂಬುದಾಗಿ ಪ್ರಯೋಗಿಸುವಷ್ಟು ನೀಚವಾದ ರೂಢಿಯನ್ನು ಸಹಾ ಒಳಗೊಂಡಿದೆ (ಪಾಳಗಾ. ೩). ೨. ದಡಿಯ ; ದಾಂಡಿಗ. 'ದಿಂಡೆಗ' ಪರಾ.

**ದಿಂಡೆಯ ಮತ** = ೧. ದುಷ್ಟನ ಮತ ; ಉದ್ಧತನ ಅಭಿಪ್ರಾಯ. ೨.ಲೌಕಿಕವಾದ; ಚಾರ್ವಾಕಮತ : ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿಯಾದೆವೆಂಬ ದಿಂಡೆಯ ಮತದ [ಪಾಠಾಂ. ಮಾತಿನ] ಹಿರಿಯರುಗಳೆಲ್ಲ ಕೇಳಿರೋ (ಮೋಳಿಮಾ. ೬೨-೨೫೫). [ ದೇ.ತುಳು. ದಿಂಡೆ ]

**ದಿಂಡೆ$_4$** (ನಾ). (?) : ಒಂದು ಶಿಲೆಯೊಡೆದು ಮೂಜಾದ ಭೇದವ ನೋಡಾ ಒಂದು ಶಿಲೆ ಶೂಲ ಕಪಾಲ ದಿಂಡೆ ಡಮರುಗ ರುಂಡಮಾಲೆ ಐದು ತಲೆ ತಲೆಯೊಳಗೊಬ್ಬಳು ತೊಡೆಯೊಳಗೊಬ್ಬಳು ಇಂತೀ ಕಡುಗಲಿಯ ದೇವನೆಂದೆಂಬರು ನೋಡಾ (ಮೋಳಿಮಾ. ೧೧೫-೪೫೨) ; ಬೇಡುವ ಭಂಡನ ಕೊಡದೆ ಹೋರುವ ಲಂಡನ ಉಭಯದ ದ್ರವ್ಯವ ತಂದು ಅಲ್ಲಿ ಉಂಡು ಸುಖಿಯಾದೆಹೆನೆಂಬ ಉಭಯಭಂಡನ ದಿಂಡೆ ಕೆಡೆಯದು (ಸರ್ವಪ. ೭೮-೪೩೧). [ ? ]

**ದಿಂಡೆಗ** (ನಾ). ದಡಿಯ ; ದಾಂಡಿಗ : ಗಂಡನಾ ಕೈ ಬಾಯ ಮಂತ್ರಿಸಿ ದಿಂಡೆಗರು ಕಟ್ಟಿದರು ಬಳಿಕೀ ಗಂಡನೇ ಗಂಡನೊಯೆನುತ ಮತ್ತೊಂದ ನೆಣೆಸಿದಳು (ಶಾಳ್ವಭಾ. ೫-೫೨). [ ದಿಂಡೆ$_3$ + – ಗ$_2$ ]

**ದಿಂಡೆಗಾರ** 'ದಿಂಡೆಗಾಱ' ನೋ.

**ದಿಂಡೆಗಾಱ,** ದಿಂಡೆಗಾರ (ನಾ). ದಂಷ್ಟ ; ಉದ್ಧತ : ಕಂಡ ಕಲ್ಲುಂಗಳಿಗೆ ಕೈಮುಗಿದು ಸಾಕಾದೆ ದಿಂಡೆಗಾಱರ ಮನೆಗೆ ಬಲು ತಿರುಗಿದೆ ಶುಂಡಾಲ ನಂತೆನ್ನ ಮತಿ ಮಂದವಾಯಿತ್ತೈ (ಪುರಂದ. ೧-೩೪-೧). **ದಿಂಡೆಗಾರ :** ತುಂಟ, ಪೋರ . . . ದಿಂಡೆಯ, ದಿಂಡೆಗಾರ . . . ಕೂಳ, ಗೂಳಿ (ಕಂನುಹು. ೮೫). [ ದಿಂಡ್ಡೆ + – ಕಾಱ ]

**ದಿಂಡೆತನ** (ನಾ). "ತುಂಟಾಟ ; ಪೋಕರಿತನ" (ಕೃಭಣ್ಣ).
[ ದಿಂಡ್ಡೆ + – ತನ ]

**ದಿಂಡೆಬಸವಿ** (ನಾ). ದಂಷ್ಟೆ ; ಗಯ್ಯಾಳಿ : ಮನೇಲ್ಲಿರೋ ದಿಂಡೆಬಸವೀನೆ ಮನೇ ಅಡಕೇನಲ್ಲ ಕದ್ದು ಸಾಬರಿಗೆ ಕೊಟ್ಟು ಕೊಬ್ರಿ ಬೆಲ್ಲ ತಿಂತಾ ಕೂತ್ರೇ ಆ ಅರಿಯದ ಹುಡುಗನಿಗೆ ಯಾಕೆ ಸುಮ್ಮನೆ ಹೊಡೀತೀಯಾ ? (ಮಿಕಮ. ೪೪೪). [ ದಿಂಡ್ಡೆ + ಬಸವಿ ]

**ದಿಂಡೆಯ,** ದಿಂಡಿಯ (ನಾ). ೧. ದಂಷ್ಟ ; ದಂಗುಳ ; ಉದ್ಧತ : ಮಂಡಲವದಿಲ್ಲವಾ ಮಂಡಲೇಶ್ವರರಿಲ್ಲ . . . ಕೊಂಡೆಯರುವಿಲ್ಲ ದಿಂಡೆಯರುವಿಲ್ಲ (ಸಾನಂಶ. ೩-೨೩) ; ಕೊಂಡೆಯನ ದಿಂಡೆಯನ ಲಂಡನಂ ಬಂಡನಂ ವಿಷಯಿಯಂ . . . ತಾಮಸದೇಹಿಯಂ (ಸಿದ್ಧೇಶು ೭-೪೮) ; ಆ ದುರುಳರು ಖುಲ್ಲ ದಿಂಡೆಯರಿಂದೆಖನನವಂ ಮಾಡಿಸಿದೊಡಲ್ಲಿ ವೃಷಭೇಶ್ವರಂ ಪ್ರತ್ಯಕ್ಷಮಾಗೆ (ರಾಘಶ. ೧೯-೭೪) ; ದಿಂಡೆಯನಿವಂ ನಮ್ಮ ಶಿಷ್ಯರ ತಂಡದೊಳಗಿರಬೇಡವೆನುತಂ ಪೊಱಡಿಸಿದನವನ (ಶಂಕರಾ. ೧೩-೭೭): ಭಂಡಗಳ ನುಡಿಯುವ ದಿಂಡೆಯಂನ ಹಿಡಿತಂದು ಖಂಡಿಸಿರಿ (ಸರ್ವಜ್ಞ. ೧೨೩೦). ೨. ಸ್ಥೂಲದೇಹಿ ; ದಡಿಯ ; ದಡಿಗ : ಆ ಗುಹಾಸುರ ದಿಂಡೆಯನ ಕೆಡೆಯಿಱಿದು ಶೂಲಿಯ ಮಂಡನವ ಕೈಕೊಂಡು ಕೊಂದನು ಕೋಟಿಕಾಸ್ಯಜನ (ಸಂಭಶ. ೨೬-೦೨೯). ೩. **ಶೂರ ; ಪರಾಕ್ರಮಿ :** ಮಂಡಳಿಕ ರುದ್ದಂಡನಾಯಕರು ಸಾಮಂತ ದಿಂಡೆಯರು ಅಧಿಕಾರಿ ಸಜ್ಜನರು ರಾಯರುಂ (ಸಿದ್ಧರಾ. ೮-೭೧) ; ದಿಂಡೆಯಂ ಪಲವಂಗದಿಂ ದೆನ್ನಸುವ ಕೊಂಡಲ್ಲದಿರನೆಂದು ನಿರ್ಧರಿಸಿ ವಿಜಯಕೋದಂಡವಂ ದನಿ ಮಾಡುತಿದಿರಾಗಿ ನುಡಿಸಿದಂ ಮಧುರವಚನಂಗಳಿಂದೆ (ಜಬಪು. ೪೯-೩೯) ; ಅರುವತ್ತು ಸಾವಿರ ಮಹಾದಿಂಡೆಯರು ಜನಿಸಲಿ ವಿದರ್ಭೆಗಂ (ತುರಂಗ. ೩೦-೩೩). ೪. **ಸೇವಕ ;** ಆಳು; ಊಳಿಗದವನು: ನಿನ್ನ ಚಮ್ಮಾವುಗೆಯ ಹೊತ್ತು ಬರುವ ಬೋವರ ಲೆಂಕನಯ್ಯ ನಿನ್ನ ಪಡುಗವ ಹಿಡಿವ ದಿಂಡೆಯಯ್ಯ (ಘನವ. ೮-೩); P ಇದು 'ದಿಂಡೆಯನಯ್ಯ' ಎಂಬುದರ ಅಪಲಿಖಿತ ವಿರಬಹುದು. **ದಿಂಡಿಯ :** ೩. ಸಂದ ಜಗಳ ಕಾಳಗದಂತೆ ಕಯಿ ಮುಟ ಕೊಂಡಾಡುವರು ದಿಂಡಿಯರು (ತರ್ಕಳಾ. ೧-೯೭).
[ ದಿಂಡ್ಡೆ + –ಅ ]

**ದಿಂಡೆಯತನ** (ನಾ). ೧. ಗರ್ವ ; ಸೊಕ್ಕು ; ಉದ್ಧಟತನ : ಹಾಗಲ್ಲದ ದಿಂಡೆಯತನದಿಂದ ಹೋರಿ ಮಂಕ್ಕಳಿಗೆ ಸಂದೇಹತನವ ಕಟ್ಟಬಹುದೆ (ಏರೀಶ್ಕ. ೭೦) ; ದಿಂಡೆಯತನದೊಳಾಡಿ ಹೋಗಿ ನಾಣ್ಚದೆ ಸಿರಿಯ ಗಂಡ ಗರ್ವವನುಡುಗು ನಮ್ಮೊಳಿಂದೆನೆ (ವೀಕ್ಕೃಕು. ೬-೦-೨೩) ; ಭೂತಹಿತರೆನಿಸಿ ಬಂದಿವರ ದಿಂಡೆಯತನಂಗಳಂ ನೋಡಲನುಚಿತವೆಂದು ಮುನ್ನಿರ್ದ ನಿಜ ರೂಪಿನಿಂ ಮಂಡಿಸಿ ದಯಾಲೋಕನದಿ ನೋಡೆ (ಗುರುಜಾ. ೬-೫) ; ದಿಂಡೆಯತನಂ ಮಿಕ್ಕು ನಮ್ಮವರ್ಗಂ ತೊಲಗದಂಡಲೆದು ಕೊರಚಾಡುವರ್ಗಡಾ ತಮ್ಮ ಗುರು ಪಂಡಿತನೆನುತ್ತೆ ಬರಿದುಬ್ಬರಿಸಿ ಪೇಳುವರ್ನಿರ್ಬುದ್ಧಿ ಶೂದ್ರರೊಡನೆ (ಕೊಟ್ಟೂಬ. ೩-೯). ೨. ಶೌರ್ಯ ; ಪರಾಕ್ರಮ ; ದಿಟ್ಟತನ : ನಸೆಮಾಡಿ ಹಾದರಕೆ ಹೊಕ್ಕು ಜಾರತ್ವದೊಂದೆಸಕದಿಂ ಬಾಳ್ದು ದಿಂಡೆಯತನದೆ ಕೆಲವು ರಕ್ಕಸರನುಱ ಕೊಂದು (ಜಬಪು. ೫೨-೩೦).
[ ದಿಂಡೆಯ + – ತನ ]

**ದಿಂಡೆವೆಣ್** (ನಾ). ೧. ಉದ್ಧತಳಾದ ಹೆಣ್ಣು. ೨. (ಅಲಂ) ಏರುಂಜವ್ವನೆ : ದುಂಡುಮಲ್ಲಿಗೆ ಮುಡಿದು ಕೊಳಲನೂದಿ ಪಾಡುತ ದಿಂಡೆವೆಂಗಳ [ಪಾಠಾಂ. ಹಿಂಡುವೆಣ್ಗಳ] ಮುದ್ದುಮುಖದ ಸೊಬಗ ನೋಡುತ ಭಂಡು ಮಾಡಿ ಬಾಲೆಯರೊಡನೆ ಸರಸವಾಡುತ (ಪುರಂದ. ೨-೮೨-೧). [ ದಿಂಡ್ಡೆ + ಪೆಣ್ ]

**ದಿಂಡೋಡಿಗ** (ನಾ). ಬಿದ್ದು ಓಡುವವನು ; ಹೇಡಿ (?) : ಬೋಡದಲೆ ಬರಿಗೈಯ ಮಲಿನವ ಗೂಡಿಸಿದ ನಿಜವಸನವೀ ದಿಂಡೋಡಿಗನೆ ನೀನಾರು ಯಾ ಚೆಲ್ವಿಕೆಯನೇನಿಂತು ಮಾಡಿಕೊಂಡೈ (ಜನಥಾ. ೩೭-೫೯).
[ ದಿಂಡು + ಓಡಿಗ ]

**ದಿಂಪ** (ನಾ). (ಕರಾ) ಎತದಲ್ಲಿ ನೀರನ್ನು ಮೇಲಕ್ಕೆತ್ತುವಾಗ ನೆಲಕ್ಕೆ ತಾಗುವ ಭಾಗ: ದಿಂಪದ ಕೆಳಗೆ ನಿಲ್ಲಬೇಡ ತಮ್ಮ, ದಿಂಪದ ಕಲ್ಲು ಹರಿದು ಬಿದ್ದೀತು (ಊ೨). [ ? ]

**ದಿಂಬ**₁ 'ದಿಬ್ಬ₁' ನೋ.

**ದಿಂಬ**₂ (ನಾ). ಒಂದು ಜಾತಿ,–ಪಂಗಡ (?) : ದಿಂಬರ ಸೋಮಂಕ ಗಲುಂಡನ ಮಕ್ಕಳು ರಾಮಗಲುಂಡ ಮಂಚೆಗಲುಂಡ . . . ಯಿಂತೀ ಅನಿಬರು (ಎಕ. III, ಮಳವ. ೬೦-೮ : 1153 ?). [ ? ]

**ದಿಂಬು**₁ 'ದಿಬ್ಬ₁' ನೋ.

**ದಿಂಬು**₂ (ನಾ). ೧. (ಬೆನ್ನು, ತಲೆಗಳಿಗೆ) ಆಸರೆಯಾಗಿ ಇಟ್ಟುಕೊಳ್ಳುವ ಒರಗು,–ಮೆತ್ತೆ : ಒರಗಿ ದಿಂದಿನ ಮೇಲೆ ದಕ್ಷಿಣಕರವ ಮೊಣಕಾಲಿ ನೊಳು ನಿಡಿದಾಗಿರಿಸಿ (ಜನಥಾ. ೨೭-೩೫); ಅಲ್ಲಿ ಬಹು ಬೆಲೆಯ ರತ್ನಗಂಬಳಿಗಳಾಗಲಿ ರೇಷ್ಮೆ ದಿಂಬುಗಳಾಗಲಿ ಇರಲಿಲ್ಲ (ನಗಹೊ. ೧೦೭) ; ಅದರ ಇಕ್ಕಡೆಗಳಲ್ಲೂ ದಿಂಬುಗಳು ಇಡಲ್ಪಟ್ಟಿದ್ದವು (ಬಾಜಳ. ೫೯); ಅಂಗಡಿಯಲ್ಲಿ ದಿಂಬಿಗೊರಗಿ ಕುಳಿತಿದ್ದ ನಿರ್ಮಲಸೆಟ್ಟಿಗೆ ಅದರ ಅರಿವಿದ್ದ ಹಾಗಿರಲಿಲ್ಲ (೧೧ಪ. ೧೧). ೨. (ಅಲಂ) ಆಧಾರ ; ಆಸರೆ : ಹೀಗೆ ನಂಬಿಗೆಯನ್ನೆ ದಿಂಬು ಮಾಡಿಕೊಂಡು ವ್ಯವಹಾರವು ಬದ್ದುಕೊಂಡಿದ್ದರೆ ಆ ಮಾತು ಬೇರೆ (ಪ್ರಭ್ಧರಾ. ೭ ಮುನ್ನುಡಿ). 'ತಲೆದಿಂಬು' ಪರಾ. [ <ಇಂಬು₁ ]

**ದಿಕಾಮಲಿ** 'ಡಿಕಮಲಿ' ನೋ.

**ದಿಕ್ಕ** (ನಾ). ಹೊಲೆಯರಲ್ಲಿ ಒಂದು ಒಳಪಂಗಡ : ಭೈರ, ದಿಕ್ಕ – ಎಂದು ಹಲವಾರು ಒಳಪಂಗಡಗಳ ಹೊಲೆಯರು ಬೆಂಗೂರಲ್ಲಿ ಇದ್ದಾರೆ (ದಂಬನಾ. ೧೯) : ದಟ್ಟ ದಿಕ್ಕಾ! ಮಾರಿ ಮುಂಡಾಳ! ಹುಟ್ಟು ಹೊಲೆಯ! ಪೋಲಾ ! ಚಂಡ ಚಂಡಾಳ (ಕಎಕು. ೫೭). [ ದೇ.೫ ತುಳು. ದಿಕ್ಕ ]

**ದಿಕ್ಕಟ** (ನಾ). [ ಸಂಗೀತ ] ತಾಳವನ್ನು ಸೂಚಿಸುವ ಒಂದು ಅನುಕರಣ ಶಬ್ದ : ಝಂ ಝಂ ಖಿಜ್ಜುಟ ನಟ ಖಿಜ್ಜುನುತಂ ತದ್ರುಂ ದಿಕ್ಕಟ ದಿಕ್ಕಟ ಮೆನುತಂ (ತಿರುನಾ. ದೇ. ೨೨೨-೧೧).

**ದಿಕ್ಕನೆ** (ಅ). ಒಂದು ಅನುಕರಣಾವ್ಯಯ ; ಇದ್ದಕ್ಕಿದ್ದಂತೆ ; ಕೂಡಲೆ: ಆ ನಾಯಕಿಯಿರ್ದವರೆ ಕಾಣುತ ದಿಕ್ಕನೆ ದಿಟ್ಟದೆಱದೆನೆನುತಂ ಹುಸಿದ ಕದೊರ್ವಳ್ ಬೆದುರೆ (ಜಯುಕಾ. ೧೯-೭೧) ; ಅಕ್ಕ ನಾಗಲೆಯರು ಚಿಕ್ಕ ದಣಾಯಕರು ದಿಕ್ಕನೆ ಬಂದು (ಕೋಟಶ. ೨-೪೩). [ ದಿಕ್₀ + – ಅನೆ₁ ]

**ದಿಕ್ಕರಿ** (ನಾ). ೧. ಎಂಟು ದಿಕ್ಕುಗಳಲ್ಲಿಯೂ ಭೂಮಿಯನ್ನು ಹೊತ್ತಿರುವುದೆಂದು ನಂಬಲಾದ ಐರಾವತವೇ ಮೊದಲಾದ ಎಂಟು ಆನೆಗಳಲ್ಲಿ ಒಂದು ; ದಿಗ್ಗಜ : ದಿಕ್ಕರಿವೋಲ್ ಕೃಷ್ಣಂ ಮಂಱದಿಕ್ಕ ನೆಲಕ್ಕಾರ್ದುರ್ ಬಿರ್ದುರ್ ಕಂಸಂ ಮಣ್ಣಂ ಮುಕ್ಕಿದಪನೆಂದು ಪೇಟ್ದ ಪಳಕ್ಕುಮಂ (ಅರ್ಧನೇ. ೭-೫೯) : ದಿಕ್ಕರಿ ಕರ್ಣಕೋಟರದೊಳಿಳ್ಕೆ . . . ಮಿಕ್ಕ ಜಗತ್ಪ್ರದೇಶಮಂ ಮುಕ್ಕಳಿಸಿತ್ತು (ಚಂದ್ರಪು. ೧೦-೨): ಬಂಧಿಸಿ ಧರೆಯ ದಿಕ್ಪಾಲಕರ ದಿಕ್ಕರಿಯ ಸುತ್ತುಮುತ್ತಿನಲಿರಿಸಿ (ಗಗಶಾ. ೫-೨೨). ೨. [ ಗಣಿತ ] ಎಂಟು ಎಂಬ ಸಂಖ್ಯೆಯ ಸಂಕೇತ. [ ಸಂ. ದಿಕ್ಕರಿನ್ ]

**ದಿಕ್ಕರಿಕರ** (ನಾ). ದಿಕ್ಕಿನ ಆನೆಯ ಅಥವಾ ದಿಗ್ಗಜದ ಸೊಂಡಿಲು : ಅಂತು ದಿಕ್ಕರಿಕರಾನುಕಾರಿಗಳಪ್ಪ ನಿಜಭುಜಸ್ತಂಭಂಗಳಿಂ ಕುರುಕುಲ ಮಹೀಶನ ಕದಳೀಸ್ತಂಭಂಗಳನನುಕರಿಸುವ ತೊಡೆಗಳನುಡಿದು . . . ಕುರುಕುಲಾಂತಕಂ ಮಾಮಸಕಂ ಮಸಗಿ (ಗದಾಯು. ೮-೭೭ ವ) ; ಆಗಳತಿ ಭಕ್ತಿಯಿಂದೆಜಗುವಂತೆಜಗುವಿಭಪತಿಯ ಮೇಗಣ್ಗೆ ದಿಕ್ಕರಿಕರಾನುಕಾರಿ ನಿಜಭುಜಾದಂಡಂಗಳಿಂ ನೀಡಿ ಶಚೀದೇವಿಯಿಂ ತೆಗೆದು . . . ಎತ್ತಿ ಕೊಂಡು (ಪುಷ್ಪಪು. ೧೦-೧೯ ವ). [ ದಿಕ್ಕರಿ + ಕರ್ತ ]

**ದಿಕ್ಕರಿನಿಚಯ** (ನಾ). ಐರಾವತವೇ ಮೊದಲಾದ ಎಂಟು ಆನೆಗಳು ; ದಿಗ್ಗಜಗಳ ಗುಂಪು,–ಸಮೂಹ : ದಿಕ್ಕರಿನಿಚಯಂ ಬೆರ್ಚಲ್ . . . ದಿವಿಜರ ಕಿವಿಯಂ ಜಕ್ಕುಲಿಸಿ ನೆಗೆದು ಭುವನಮನೊಕ್ಕಲಿಸಿದುದಾ ಗಭೀರ ಭೇರೀನಾದಂ (ನೇಮಿಪು. ೧೦-೮೪) [ ದಿಕ್ಕರಿ + ನಿಚಯ ]

**ದಿಕ್ಕಾಪಾಲು** 'ದಿಕ್ಕು' ಪರಾ.

**ದಿಕ್ಕಾಮಲ್ಲಿ** 'ಡಿಕಮಲಿ' ನೋ.

**ದಿಕ್ಕಾಲಬದ್ಧ** (ಗು). ದೇಶಕಾಲಗಳಿಗೆ ಪರಿಮಿತವಾದ,–ಬದ್ಧವಾದ : ಈ ಶಬ್ದಸೃಷ್ಟಿಯ ಹೊರಮೈಯು ದಿಕ್ಕಾಲಬದ್ಧಸ್ವರೂಪದ್ದೆನಿಸಿದರೂ, ಅದರ ಅಂತಸ್ಥ ಅರ್ಥವು ದಿಕ್ಕಾಲಗಳ ಪರಿಮಿತಿಯನ್ನು ಮೀರಿ ನಿಲ್ಲಬಲ್ಲು ದಾಗಿದೆ (ಕಣಾಲ. ೯) ; ಸಂಸ್ಕೃತಿಯ ಏರಿಳಿತಗಳ ಸಮೀಕ್ಷೆಯಲ್ಲಿ, ದಿಕ್ಕಾಲ ಬದ್ಧ ಪರಿಸ್ಥಿತಿಯಲ್ಲಿ ಕಾಣಸಿಕೊಂಡ ಯಾವ ನಡವಳಿ ನುಡಿವಳಿಯೂ ತಿರಸ್ಕಾರಾರ್ಹವಲ್ಲ (ಕಣಾಲ. ೨೦೩). [ ಸಂ. ]

**ದಿಕ್ಕಾಲಾತೀತ** (ಗು). ೧. ದೇಶ ಕಾಲಗಳ ಪರಿಮಿತಿಯನ್ನು ಮೀರಿದ : ಚಿತ್ತೈಕಾಗ್ರದ ಸಾಧನದಿಂದ ದಿಕ್ಕಾಲಾತೀತ ಅಖಂಡಿತ ಸನಾತನ ಸತ್ಯದಲ್ಲಿ ವಿಲೀನವಾಗುವ ದಾರಿ (ಕಣಾಲ. ೩೪). (ನಾ). ೨. ದೇವರು; ಪರಮಾತ್ಮ. [ ಸಂ. ]

**ದಿಕ್ಕು** (ನಾ). ೧. ದಿಸೆ; ದೆಶೆ: "ದೆಸೆಗೋಂಟೆನಲ್ ದಿಕ್ಕಕ್ಕು" (ಶಬ್ದಸ್ಮೃ. ೦೭); "ಗೋಂಟು ದೆಸೆ ದಿಕ್ಕೆಂಬುದಕ್ಕು ದಿಶಾನಾಮದೊಳ್ ಸಂತತಂ" (ಶಬ್ದಮಂ. ೦೪) ; ದಿಕ್ಕನಿತುಂ ತೋಱುದುವು (ಆದಿಪು. ೮೯ ಅ) : ದಿಕ್ಕಿನೊಳಂ ವಿಯತ್ತಲದೊಳಂ ಗಿಡಿದಂತಿರೆ ನಿಂದ ದೇವಲೋಕಕ್ಕತಿವಿಸ್ಮಯಂ ನೆಗಟ್ಟೆ (ಅನಂಪು. ೩-೨೬) : ಇಂಬಿನ ರವವೆಂಟುದಿಕ್ಕಿನ ಹೊರಿಗೆಯ ಮುಂಬರಿ ದೊಡನೆ ಪರಿದುದು (ಕಂಪವಿ. ೦೦-೨೪). ೨. ಗತಿ ; ಆಶ್ರಯ ; ನೆಲೆ ; ಆಧಾರ : ಅವ ಪರಿಯಲಿ ನಿನ್ನನಲ್ಲದೆ ಭಾವದೊಳು ಮತ್ತೊಂದನಱ ಯೆನು ದೇವ ದಿಕ್ಕಾರುಂಟೆನಗೆ (ಬಸವಪು. ೦೩-೫); ಗತಸೂನುವಿವನೆಂದೆನ್ನ ಹೊಗಿಸರು ಸ್ವರ್ಗವನು ಸುರರು ಏನು ಮಾಡುವನೇನು ದಿಕ್ಕೆನಗೇನು ಹದನೆಂದಳಲಿ (ತೊರರಾ. ೦-೪-೯) ; ಇನ್ನು ಮುಂದೆ ಮಾವಯ್ಯನೇ ನಿನಗೆ ದಿಕ್ಕು (ಹೊಸಕ್ಕ. ೨೭). ೩. ದೇಶ ; ಸೀಮೆ ; ನಾಡು: ದಿಕ್ಕುಗಳೆಲ್ಲಮಂ ನೆಱೆಯ ಸಾಧಿಸಿ ಕಪ್ಪಮನೆಯ್ದೆ ಕೊಂಬೆನು (ವಾಧಪು. ೨-೦೭). ೪. ದಾರಿ ; ಮಾರ್ಗ : ಅವನಿಗೆ ಗಾಬರಿಯಿಂದ ದಿಕ್ಕೇ ಕಾಣದಾಗಿದೆ (ಜೂಡಿ). ೫. [ಜೈನ] ಪೃಥ್ವಿ, ಜಲ, ತೇಜಸ್ಸು, ವಾಯು, ಮನಸ್ಸು ಮತ್ತು ದಿಕ್ಕುಗಳೆಂಬ ಆರು ದ್ರವ್ಯಗಳಲ್ಲಿ ಒಂದು : ಪೃಥ್ವಿ ಜಲ ತೇಜಸ್ಸು ವಾಯು ಮನಸ್ಸು ಎಂಬ ಐದು ದ್ರವ್ಯಗಳು ಪುದ್ಗಲ ದಲ್ಲಿ ಸೇರಿದುವು, ದಿಕ್ಕು ಎಂಬುದು ಸೂರ್ಯನ ಉದಯಾಸ್ತಗಳಿಂದ ಆಕಾಶದಲ್ಲೇ ಸೇರಿತು (ಹಿಂದುಸ. ೮೦). ೬. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : "ಅಷ್ಟ, ವಸು, ದಂತಿ, ದುರಿತ, ಕರ್ಮ, ದಿಸೆ, ದಿಕ್ಕು . . . ದಿಗ್ದಂತಿ ಇಂತಿನಿತುಂ ಲೆಕ್ಕ ಪೆಸರು" (ವ್ಯವಹಾ. ೦೦-೩೦).

**ದಿಕ್ಕು ದಿಕ್ಕು** = (ದ್ವಿರುಕ್ತಿ) : ವಾರುವಗಳಿಗೆ ಹೊಯ್ದವು ಗುಡಿಗಳು ಮದವಾರಣಗಳಿಗೆ ಗುಡಿಗಳು ಓರಣದಿಂದೆತ್ತಿದವು ದಿಕ್ಕುದಿಕ್ಕಿನೊಳು (ಕುರಾಸಾಂ. ೦೯-೫೦). **ದಿಕ್ಕ ಮುರಿ**=ದಿಕ್ಕಾಪಾಲಾಗು: ಶತ್ರುಗಳು ದುರ್ಗ ದವರ ಏಟನ್ನು ತಡೆಯಲಾರದೆ ದಿಕ್ಕ ಮುರಿದು ಓಡಿದರು (ಚಿತ್ರದು. ೫೩). **ದಿಕ್ಕಾಗು** = ನೆರವಾಗು ; ಆಶ್ರಯವಾಗು : ಅಕ್ಕರವ ತೊಡೆದಿಹುದು ಮುಂಕಣ್ಣಗಳವಲ್ಲ ರಕ್ಕಸನು ಸೀತೆ ಒಯ್ಯಾಗ ಆರಾರು ದಿಕ್ಕಾಗಲಿಲ್ಲ (ಸರ್ವಜ್ಞ. ೮೫೩) ; ತೀರ್ಥಹಳ್ಳಿಯೊಳೋದುವಂದವರೆಲ್ಲರು ನೆರವಿತ್ತರೆನಗೆ ದಿಕ್ಕಾಗಿ (ಇಂಚಾಪ. ೧೫-೬೫). **ದಿಕ್ಕಾಪಾಲಾಗು** = ದಿಕ್ಕು ದಿಕ್ಕಿಗೆ ಚೆದರು; ಚೆಲ್ಲಾಪಿಲ್ಲಿಯಾಗು : ಬಿರುಗಾಳಿಗೆ ಸಿಕ್ಕ ಹಡಗುಗಳು ದಿಕ್ಕಾಪಾಲಾದುವು (ಪ್ರವಾಇ. II, ೨೨೭) ; ಖಂಡೇರಾಯನ ಸೈನ್ಯವೆಲ್ಲವೂ ಈ ರೀತಿಯಲ್ಲಿ ದಿಕ್ಕಾಪಾಲಾಯಿತು (ಒಡಕ. ೯೪) ; ಕಳ್ಳರೆಲ್ಲರೂ ದಿಕ್ಕಾಪಾಲಾಗಿ ಪಲಾಯನ ಮಾಡಿದರು (ಛಾರವೀ. ೩). **ದಿಕ್ಕಾಪಾಲು** = ದಿಕ್ಕು ದಿಕ್ಕಿಗೆ ಚೆದರುವಿಕೆ ; ಚೆಲ್ಲಾಪಿಲ್ಲಿ : ಅಂಗಳದಿ ಬೆಳೆಸಿದ್ದ . . . ಕರಿತುಳಸಿ ಬಿಳಿನಿತ್ಯಪುಷ್ಪ ಎಲ್ಲ ದಿಕ್ಕಾಪಾಲು (ನವ್ಯಕ. ೬-೦). **ದಿಕ್ಕಾಮುಕ್ಕು** = ದಿಕ್ಕಾಪಾಲು : ಕಕ್ಕಾಬಿಕ್ಕಿ ಜಗಳದ ಸೊಕ್ಕು ಜಗಳವು ದಿಕ್ಕಾಮುಕ್ಕು (ಡಂಡೋಲಾ. ೦೯). **ದಿಕ್ಕು ತೋಚು** = ದಾರಿಕಾಣು ; ಉಪಾಯಗಾಣು : ಊಟ ಮಾಡುತ್ತಿದ್ದ ರಾಜನು ದಿಕ್ಕುತೋಚದೆ ಹೆಂಡತಿಯ ಸಹಾಯದಿಂದ ಕಿಟಕಿಯ ಮೂಲಕ ತಪ್ಪಿಸಿಕೊಂಡು ಹೋದನು (ಬಂಕಿಮ. ೦೯೩). **ದಿಕ್ಕುದಿವಾಣ, ದಿಕ್ಕು ದಿವಾನಿ, ದಿಕ್ಕುದಿವಾಳಿ** = ೧. (ಪ್ರಯಾಣದ) ಗುರಿ : ಆಯಾಸದಿಂದ ಕಾಲುಗಳನ್ನು ಎಳೆಯುತ್ತ ನಡೆಯುತ್ತಿದ್ದ ಪ್ರಾಣೇಶಾಚಾರ್ಯರಿಗೆ ಬಹಳ ಹೊತ್ತು ತನ್ನ ದಿಕ್ಕುದಿವಾಣ ಲಕ್ಷ್ಯಕ್ಕೇ ಬರಲಿಲ್ಲ (ಸಂಸ್ಕಾರ. ೯೩). ೨. ಆಶ್ರಯ; ನೆಲೆ : ದಿಕ್ಕುದಿವಾಳಿಯಿಲ್ಲದ ಗೊಂದಲದಲ್ಲಿ ಸ್ವಾಮಿನಾಥ ಬದುಕಿದ್ದೇ ಹೆಚ್ಚು (ಸ್ವಾಮಿನಸ್ವೀ. ೦೨೦) : ದಿಕ್ಕುದಿವಾಳಿಯಿಲ್ಲದ ಭಿಕಾರಿ ಗಳನ್ನು ಹಿಡಿದು ಗುಲಾಮರನ್ನಾಗಿ ಮಾಡುತ್ತಾನೆ (ಪ್ರವಾಇ. II, ೪೦೪): ೩. ದಾರಿ ; ಮಾರ್ಗ : ಕಾಶಿಯ ದಿಕ್ಕುದಿವಾನಿ ತಿಳಿದು ಪ್ರಯಾಣ ಬೆಳೆಸಿದರು (ಕರುಳ. ೪೪). **ದಿಕ್ಕು ದೆಸೆ** = ೧. ಆಸರೆ; ನೆಲೆ; ಆಧಾರ. ಮಿಕ್ಕಾದವರ ಹೆಣ್ಣು ಹೊನ್ನು ಮಣ್ಣನವರೆಂದು ದಿಕ್ಕು ದೆಸೆ ಎಂದು ಅಂಗೀಕರಿಸಿದಡೆ ಭಕ್ತರು ಸತ್ತರಿಗೆ ಮುನ್ನವೆ ಹೊಱಗೆ (ಬಲೀಕ್ಕ. ೫೦) ; ಬ್ರಹ್ಮೋಕ್ತ ಸಕಲಪ್ರಾಣಿಗಳಿಗೆಯ್ದೆ ನೀನೆಯಲ್ಲಾ ದಿಕ್ಕುದೆಸೆಯುಂ ಭಾವದೊಳು ಕರುಣಾರಸಂ ಮಿಗೆ ದೇವ ನೀನೆ ಮಗಭಯಮಂ ಕೊಟ್ಟೋವಿ ಸಲಹೆನುತ (ಬಸವಪು. ೨೮-೭೭). ೨. ಪೂರ್ವಾಪರ ವಿಷಯ : ನಮ್ಮ ಪ್ರಯಾಣ ಹೊರಟರುವುದು ಕಾಶಿಗೆ. ನೀವು ಜೊತೆಗೆ ಬಂದದ್ದು ಸಂತೋಷ. ಆದರೆ ನಿಮ್ಮ ದಿಕ್ಕು ದೆಸೆ ತಿಳಿಯಲಿಲ್ಲ ? (ಹೊಸಕ್ಕ. ೩೩).

[< ಸಂ. ದಿಶ್ ]

**ದಿಕ್ಕುಂಡ** (ನಾ). ದಿಕ್ಕುಗಳ ಸಮೂಹ : ಹಾರ ನೀಹಾರಾರುಚಿ ಬ್ಯಾ ಭಾಸಿತೀ[ರ್ತಿ]ದ್ಯುತಿಧವಳಿತ ದಿಕ್ಕುಂಡ ಚೌವೇದಿಭಟ್ಟ (ಕಇಳ. ೭೮-೦೩-೧೧ ; ಸು. 1088). [ ಸಂ. ]

**ದಿಕ್ಕುಂಜರ** (ನಾ).=ದಿಗ್ಗಜ : ಲಕ್ಷ್ಮೀಗಸುವಂಗೆ ಸಲ್ವನವಿತಂ ದಂಡೇಶ ದಿಕ್ಕುಂಜರಂ (ಎಕ. VI, ಕಡೀಕ. ೪೫-೬೮ ; 1196) ; ಬಿಜ್ಜಳರಾಯನಿಂದೆ ಪಡೆದಂ ದಂಡೇಶ ದಿಕ್ಕುಂಜರಂ (ಬಸರ. ೬-೦) ; ಉದಿತ ಮದೋದ್ರೇಕನಲ್ಲದ ರಾಜದಿಕ್ಕುಂಜರನುಂ . . . ದಶಾನನಾಸ್ತಂಗತಪ್ರಾಭವನಲ್ಲದ ಪುಣ್ಯ ಜನೇಶ್ವರನುಮೆನಿಸಿ (ಪುಷ್ಪಪು. ೩-೨೦ ವ). [ ಸಂ. ]

**ದಿಕ್ಕುಂಭಿ** (ನಾ).=ದಿಗ್ಗಜ : ಕುಳಭೂಭೃತ್ಕೂಟದೊಳ್ ಮಾಣಿಕದೆಳವಿಸಿ ಲಿಂಕಂತೆ ದಿಕ್ಕುಂಭಿಕುಂಭಸ್ಥಳದೊಳ್ಸಿಂದೂರಮೊಂತಂತೆ . . . ಪರ್ವಿತ್ತು ರಾಗಾಮಿಳಮುಷ್ಪಂತುರ್ವಿಯೆಲ್ಲಂ ದಶರಥನಸುಧಾಧೀಶತೇಜಃಪ್ರಕಾಶಂ (ಪಂರಾಮಾ. ೩-೦೩). [ ಸಂ. ದಿಕ್ಕುಂಭಿನ್ ]

**ದಿಕ್ಕುಗೆಡು, ದಿಕ್ಕೆಡು** (ಕ್ರಿ). ೧. ಗತಿಗೆಡು; ಆಶ್ರಯ ತಪ್ಪು; ಕಂಗೆಡು: ದಿಕ್ಕುಗೆಟ್ಟನನಾಥಬಂಧುವೆ ರಕ್ಷಿಸೆನುತಿರಲು (ಕಾಶಿರಾ. ೩೭-೦೭) ; ಮೊದಲೇ ತಾಯಿಯನ್ನು ಕಳೆದುಕೊಂಡು ನಾನು ದಿಕ್ಕುಗೆಟ್ಟಿದ್ದೆ

(ಬದುಜ. ೩೨) ; ದಿಕ್ಕುಗೆಟ್ಟು ಬಡಜನ, ರೆವಿನ್ಯೂಇನ್ಸ್‌ಪೆಕ್ಟರು ಕೃಷ್ಣಮೂರ್ತಿ ಹಾಗೂ ಗುರುರಾಜರಾಯರ ಬಳಿ ಹೋಗಿ ಗೋಳನ್ನು ಹೇಳಿಕೊಳ್ಳುತ್ತಿದ್ದರು (ಮರಳಿ. ೧೨). ೨. ರೀತಿತಪ್ಪು ; ಕ್ರಮತಪ್ಪು ; ಮಾರ್ಗತಪ್ಪು: ದಿನದಿನ ಯಾವುದೋ ಗುರಿ ತಪ್ಪಿ ಸಾಗುತ ದಿಕ್ಕುಗೆಟ್ಟಿದೆ ಈ ಮನ (ವಿಜಯ. ೩೪-೬). ದಿಕ್ಕೆಡು : ೧. ಕಾಡು ಬಿದ್ದು ದಿಕ್ಕೆಟ್ಟು ಓಡಿ ಹೋದರು (ದೇವೀಕಾ. ೩೨) ; ದಿಕ್ಕೆಟ್ಟು ಹೊರಟಿತ್ತು ಗೋಡೆಯಲ್ಲಿ ತಿಗಣೆಯಾ ಗುಂಪು (ಚಂದ್ರಮಾ. ೨೪-೭) : ಅತಿ ಸ್ವಲ್ಪಕಾಲದಲ್ಲಿಯೇ ಖಂಡೇರಾಯನ ದಿಕ್ಕೆಟ್ಟ ಸೈನ್ಯವು ಚದರಿ . . . ಶರಣಾಗತರಾಗಿಯೂ ಆದರು (ಒಡಳ. ೯೩) : ದಾರಿ ಕಾಣದ ಪಥಿಕನಂತೆ ದಿಕ್ಕೆಟ್ಟು ಕುಳಿತುಬಿಟ್ಟಿದ್ದಳು (ತೀವೋದ. ೧೫). [ ದಿಕ್ಕು + ಕೆಡು₁ ]

ದಿಕ್ಕುಗೇಡಿ, ದಿಕ್ಕೇಡಿ, ದಿಗ್ಗೇಡಿ (ನಾ). ಮಾರ್ಗ ಅಥವಾ ಬಗೆಯನ್ನು ಕಂಡುಕೊಳ್ಳಲಾರದ ವ್ಯಕ್ತಿ ; ಕಂಗೆಟ್ಟ ವ್ಯಕ್ತಿ : ಹತ್ತಾರು ವರುಷದ ಹಿಂದಿನ ನೆನಹೊಂದು ಚಿತ್ತದೊಳೊತ್ತುವುದೆಂದು ದಿಕ್ಕುಗೇಡಿಯು ಹಾಗೆ ಏನೊಂದು ತೋಚದೆ ಬವಳಿಗೊಂಡಳು ನಲ್ಲೆ ಬರಿದೆ (ಇಂಚರಾ. ೩೩-೪೭). ದಿಕ್ಕೇಡಿ : ಯಾವುದಕ್ಕೂ ಗತಿಯಿಲ್ಲದ . . . ದಿಕ್ಕಿಲ್ಲದ 'ದಿಕ್ಕೇಡಿ' ನೀನು (ಬರಹಾ. ೧೩೩). ದಿಗ್ಗೇಡಿ : ಸ್ಮಶಾನದಲ್ಲಿ ಅಂಡಲೆಯುತ್ತ ದಿಗ್ಗೇಡಿಯಾದ ಭಾರತಮಾತೆಯ ಸೇವೆಗಾಗಿ ನ ರ ಹ ರಿ ಯು ಮುನ್ನಡೆದಿದ್ದ (ಸಮುಜೀ. ೭೭೭). [ ದಿಕ್ಕು + ಕೇಡಿ₁ ]

ದಿಕ್ಕುಗೇಡು (ನಾ). ಮಾರ್ಗ ತಪ್ಪುವಿಕೆ ; ಕ್ರಮ ತಪ್ಪುವಿಕೆ : ಈಗ ಬಗೆಗಡಿನ ವೇಗಕ್ಕೆ ಸಂಚಳಿಸಿ, ಸನ್ಯಾಸದ ಕಾಲಾಟಕ್ಕೆ ಸಿಲ್ಕಿ, ದಿಕ್ಕುಗೇಡಿಗೆ ದಕ್ಕುಬಿದ್ದು, ಸುವ್ಯಕ್ತವೂ ಆವಶ್ಯಕವೂ ತಪ್ಪದುದೂ ಸುಲಭವೂ ಎಂದು ಭಾಸವಾಗುವ ತೀರ್ಕಣೆಯನ್ನು ಬಾಯ್ದುಡುಕಿ, ಆ ಪೊಣವುಲ್ಲೊಡನೆ . . . ಸೂಚಿಸುವುದೂ ಈ ಮಹಾಸಭೆಗೆ ಅವಿನಯದ ಪುನರುಕ್ತವಹುದು (ಮುಂತ್ರಸ. ೭೨-೨೦). [ ದಿಕ್ಕು + ಕೇಡು ]

ದಿಕ್ಕುತಪ್ಪಿಸು (ಕ್ರಿ). ದಿಗ್ಭ್ರಮೆಗೊಳಿಸು ; ದಾರಿ ಕಾಣದಂತೆ ಮಾಡು ; ತಪ್ಪುದಾರಿಗೆ ಒಯ್ಯು : ನದಿಯ ಉಯಿಲು ಅಂಗರನನ್ನು ದಿಕ್ಕು ತಪ್ಪಿಸುತ್ತಿತ್ತು (ಹೊಸಕ್ಕ. ೬೩). [ ದಿಕ್ಕುತಪ್ಪು + -ಇಸು₁ ]

ದಿಕ್ಕುತಪ್ಪು (ಕ್ರಿ). ದಿಗ್ಭ್ರಮೆಯಾಗು ; ದಾರಿ ತೋರದಂತಾಗು. 'ದಿಕ್ಕುತಪ್ಪಿಸು' ಪರಾ. [ ದಿಕ್ಕು + ತಪ್ಪು₁ ]

ದಿಕ್ಕುಮಾರ (ನಾ). = ದಿಕ್ಪಾಲಕ : ವಜ್ರಬಾಹುಕುಮಾರು ವಾರಣವ್ರನೇಜಿಂದಂ ದಿಗ್ವಾರಣಮಂ ದಿಕ್ಕುಮಾರರೇಜುವ ತೆಱದಿಂ (ಶಂರಾಮಾ. ೨-೯) [ ಸಂ. ]

ದಿಕ್ಕುವಾಯ್ (ಕ್ರಿ). ದಿಕ್ಕುದಿಕ್ಕಿಗೆ ಓಡು ; ದಿಕ್ಕಾಪಾಲಾಗು ; ಚದರು: ವಿಷ್ಣು ತರಹರಿಸದೋಡಿದನಜಂ ಮಾಯಿವಾದನಾ ಸುರಪಮುಖ್ಯರು ದಿಕ್ಕುವಾಯ್ದರೆನಲಬುಪುವನ ಚರಣಾಂಬುಜಕ್ಕೆ ಶರಣು (ಅಶಿಚಂ. ೧೭-೦೮). [ ದಿಕ್ಕು + ಪಾಯ್₁ ]

ದಿಕ್ಕುಸೂಚಿ (ನಾ). ದಿಕ್ಕನ್ನು ತೋರಿಸುವ ಸಾಧನ ; ಮಾರ್ಗವನ್ನು ಕಾಣಿಸುವ ಉಪಕರಣ : ಅವನು ನಿರೀಕ್ಷಿಸಿದ್ದ ಕಡೆಯೇ ವಿದ್ರೋಹದ ಕಿಡಿ ಹಾರಿತ್ತು. ಅದು ಅವನ ಪಾಲಿಗೆ ಒಂದು ದಿಕ್ಕುಸೂಚಿಯಾಗಿತ್ತು (ರಾಷ್ಟ್ರೋದ. ೧೫೫). [ <ದಿಕ್ಸೂಚಿ ]

ದಿಕ್ಕೆಡು 'ದಿಕ್ಕುಗೆಡು' ನೋ.

ದಿಕ್ಕೇಡಿ 'ದಿಕ್ಕುಗೇಡಿ' ನೋ.

ದಿಕ್ಚಕ್ರ (ನಾ). ೧. ದಿಕ್ಕುಗಳ ಪರಿಧಿ,- ವಲಯ. ೨. ಭೂಮಂಡಲ ; ಜಗತ್ತು : ನಭವಂ ಸಂಚೆಮುಗಿಲ್ ಪಗಲ್ಪ ತೆಱದಿಂ ತಳ್ಪೊಯ್ಯು ಭೂ ಷಾ ಮ ಣಿ ಪ್ರ ಭೆ ದಿಕ್ಚಕ್ರಮನಟ್ಟಿಜೊನ್ನಮಳಸತ್ತೆಂಬನ್ನೆಗಂ ತುಂಬೆ (ಚಂದ್ರಪು. ೭-೭೯). [ ಸಂ. ]

ದಿಕ್ತಟ (ನಾ). ದಿಕ್ಕಿನ ತುದಿ ; ದಿಗಂತ ; ದಿಕ್ಪ್ರದೇಶ : ವಿರಾಜಿತ ಕೀರ್ತಿಶ್ರೀಯುಂ ದಿಕ್ತಟದೊಳ್ ತಳೆದು (ಸುಕುಮಾ. ೬-೧); ಆ ಶಿಶುವಿನಟ್ಟಿ ತಕ್ಕನೆ ಶೀವಿತ್ತನಿತುಂ ದಿಕ್ತಟಮಂ ಭೋರನೆ ಶಂಕಾಕುಳಿತಮಪ್ಪಿನಂ ಭುವನಜನಂ (ಆಡಿಪು. ೩-೦೨) ; ಸ್ಫಟಿಕಲಿಂಗಸ್ಫುಟಮರೀಚಿಗೆ ಚಟುಲ ಭಾಸ್ಕರ ಕರಪಟಲವನು ಘಟಿಸದಡಗಲು ದಿಕ್ತಟಂಗಳೊಳಾವರಿಸಲೊಡನೆ (ಬಸಪು. ೫೦-೩೦) ; ದಿಕ್ತಟದ ದೂರದೊಳಯೋಧ್ಯಾಪುರದ ಮೇಘಚುಂಬಿತ ಸೌಧಗೋಪುರಂಗಳ ಪಂಕ್ತಿ ಪ್ರಾಭಾತಸುಂದರಾರುಣಹೇಮಕಾಂತಿಯೊಳ್ ಮಿರುಮಿರುಗಿ ಕರೆದು ಕಾಣ್ಬನ್ನೆಗಂ (ಶ್ರೀರಾಮಾ. ೧೦೫-೦೪೦). [ ಸಂ. ]

ದಿಕ್ಪತಿ (ನಾ). ದಿಕ್ಕಿನ ಒಡೆಯ,-ಪ್ರಭು ; ದಿಕ್ಪಾಲ : ದೆಸೆದೆಸೆಗೋಡಿ ದನ್ನಕರಿ ದಿಕ್ಕರಿಯಾದುದರಾತಿಭೂಭುಜಪ್ರಸರಮೆ ದಿಕ್ಪ ತಿ ಪ್ರ ಸ ರ ಮಾದುದು ವೈರಿಬಲಂ (ಗದಾಯು. ೧-೫೩) ; ಶತಮುಖ ಹುತವಹ ಯಮ ನೈರುತಿ ವರುಣ ಮರುತ್ಕುಬೇರ ಶೂಲಧರರ್ ದಿಕ್ಪತಿಗಳವರೆಣ್ಬರುಂ (ವಸ್ತುಕೋ. ೯-೪೮). [ ಸಂ. ]

ದಿಕ್ಪತ್ರ (ನಾ). ದಿಕ್ಕುಗಳ ಭಾಗ,-ಪ್ರದೇಶ : ಅಲ್ಲಿ ಮೊದಲ ದೇವತೆ ಜಯಾದೇವಿಯೆಂಬುದು ಮತ್ತೊರ್ವಳು ವಿಜಯಾದೇವಿಯೆಂಬುದು . . . ಈ ನಾಲ್ವರುಂ ದಿಕ್ಪತ್ರಂಗಳ ದೇವತೆಗಳು (ಪ್ರತಿಷ್ಠಾ. ೯-೧). [ ಸಂ. ]

ದಿಕ್ಪರಿವೃಢ (ನಾ). ೧. ದಿಕ್ಕುಗಳ ಮೇಲಿನ ಒಡೆತನ,-ಪ್ರಭುತ್ವ : ಸುರಕುಜಮಂ ಪಳಂಚಲೆವ[ದಾ]ವ ಗುಣಂ ಸಲೆ ಸಂದ ವಜ್ರಪಂಜರಮನ ನಾರತಂ ಪಳಿವೃತಿರ್ಪುದು ... ತನ್ನ ಗಂಭೀರಗುಣಂ ಸಮನ್ನು ದಿಕ್ಪರಿವೃಢ ದೇಳ್ಗೆಯುಂ ನಗುವುದುಪ್ಪುಗುಣ [ಕ]ಲಿ ಕನ್ನಭೂಪನ (ಸೌಇಇ. XX, ೫೦-೦೪; ೧). ೨. ದಿಕ್ಕುಗಳ ಒಡೆಯ-ಪ್ರಭು: ಕರಸಿದನು ನಿಜನಗರಿಗಾ ನಿರ್ಜರ ನಿಕರವಾ ಸತಿಯರಾ ದಿಕ್ಪರಿವೃಢರು ಕೊಂಡಾಡಿತೆನ್ನನು (ಕುವ್ಯಾಅ. ೧೧-೨೯). [ ಸಂ. ]

ದಿಕ್ಪಾರ (ನಾ). ದಿಕ್ಕುಗಳ ಎಲ್ಲೆ,-ಸೀಮೆ : ಶಿವಿರಾಭ್ಯುತ್ಥಿತ ಕಾಹಳಾ ಘನರವಂ ಮುಟ್ಟಿತ್ತು ದಿಕ್ಪಾರಮಂ (ಚಂದ್ರಪು. ೧೦-೦೪). [ ಸಂ. ]

ದಿಕ್ಪಾಲ (ನಾ). ದಿಕ್ಕಿನ ಒಡೆಯ,-ಪ್ರಭು : ಗಾಳಿ ದೈವವಿದೆಂಬಡಂ ದಿಕ್ಪಾಲನಾಗಿಂತೊಂದು ದಿಕ್ಕಿನ ಮೂಲೆಯಲಿ ತಾನಿಹನೆ (ಬಸಪು. ೫೪-೦೨)। ಕಂಡು ಬಲ್ಲಾ ಎನಲು ಪವನಜ ತೊಂಡ ರಾವಣ ನುಡಿದನೆಲವೊ ಕಂಡ; ನಾ ಬಲ್ಲಂತೆ ನೀ ಮುನ್ನಾವ ದಿಕ್ಪಾಲ (ಛಾಶಿರಾ. ೨೨-೦೨). [ ಸಂ. ]

ದಿಕ್ಪಾಲಕ (ನಾ).=ದಿಕ್ಪಾಲ: ದೇವ ದಿಕ್ಪಾಲಕರು ವಸುಗಳು . . . ಕಮಲಜ ರಾಮರಾದರು ಪೂಜಿಸಲಿಬೇಕೀ ಮಹಾಗಣಪತಿಯನು (ಗಗಶಾ. ೩-೦೦). [ ಸಂ. ]

ದಿಕ್ಪಾಲಕನಗರ (ನಾ). ದಿಕ್ಪಾಲನ ಪಟ್ಟಣ,-ರಾಜಧಾನಿ; ❡ "ದಿಕ್ಪಾಲಕ ನಗರಗಳು: (I) ಅಮರಾವತಿ, ತೇಜೋವತಿ, ಸಂಯಮಿನಿ, ನಯನವತಿ, ಅಂಭೋವತಿ, ಭೋಗವತಿ, ಅಲಕಾವತಿ, ರೌಪ್ಯವತಿ (ಯಪೂರ. ೪೮೫). (II) ಅಮರಾವತಿ, ತೇಜೋವತಿ, ಸಂಯಮ, ರಕ್ಷೋವತಿ, ಶುದ್ಧಿ ಮಂತಿ, ಗಂಧವತಿ, ಮಹೋದಯ, ಯಶೋವತಿ (ವಿಚಂ. ೪-೩೪೨, ೩೪೪). (III) ಅಮರಾವತಿ, ತೇಜೋವತಿ, ಸಂಯಮಿನಿ, ಕೃಷ್ಣಾಂಗನೆ, ಶ್ರದ್ಧಾವತಿ, ಗಂಧವತಿ, ಮಹೋದಯೆ, ಯಶೋವತಿ (ಭಾಗ. ಅ. ೧೭ ಸ್ಕಂದ ೫ ಶ್ರೀಮದ್ಭಾಗವತವು ೧೪-೮೬)" (ಶ್ರೀತತ್ತ್ವ. ೦೯೯). [ ದಿಕ್ಪಾಲಕ + ನಗರ ]

ದಿಕ್ಪಾಲತನ (ನಾ). ದಿಕ್ಕಿನ ಆಧಿಪತ್ಯ,-ಒಡೆತನ: ಕಾಲ ನಡುಗಿದನಿತಜಲಿ ದಿಕ್ಪಾಲತನವನು ಬಿಸುಟು ನಿರುತಿಯ ಮೇಲೆ ಮೇಲಲ್ಲಿಂದ ನಡೆದಾಕರಿಸಿದನು ಧನದ (ತೊರರಾ. ೦-೮-೩೫). [ ದಿಕ್ಪಾಲ + -ತನ ]

ದಿಕ್ಪುರ (ನಾ).=ದಿಕ್ಪಾಲಕನಗರ : ದಿಕ್ಪುರಗಳಾ ವಿಗಡಜಂಝಾಮಾರುತ ನೊಡನೆ ಪಾರ್ದು ಗಗನಾಂಗಣದಿ ಸುಳಿಗೊಂಡಿರೆ (ನಮಮೋ. ೬-೭). [ಸಂ.]

**ದಿಕ್ಪ್ರದರ್ಶನ** (ನಾ). ಸ್ಥೂಲ ಪರಿಚಯ,–ನಿರ್ದೇಶನ; ಸ್ಥೂಲ ನಿರ್ದೇಶ: ದಿಕ್ಪ್ರದರ್ಶನ (Adumbration. ಇಂಕನಿ) ; ಇಲ್ಲಿ ಅದರ ದಿಕ್ಪ್ರದರ್ಶನವನ್ನು ಮಾತ್ರ ಮಾಡುತ್ತೇವೆ (ಧ್ವನ್ಯಾಲೋ. ೬೬). [ ಸಂ. ]

**ದಿಕ್ಪ್ರಸರ** (ನಾ). ದಿಕ್ಕುಗಳ ಸಮೂಹ,–ಗುಂಪು : ಲಸದಗುರು ಸುರಭಿ ಸಾರಪ್ರಸರಂ ನವಧೂಪಧೂಮಮುಮರಾದ್ರಿಯನಾಗಸವಂಸಮರೇಂದ್ರರಂ ದಿಕ್ಪ್ರಸರಮನೇಂ ಪುದಿದು ನಿಲೆ ಪುದುಂಗೊಳಿಸಿದುದೋ (ಶಾಂತಿಪು. ೧೦–೩೩) ; ಈ ವಿಖ್ಯಾತಿ ಸಮಸ್ತ ದಿಕ್ಪ್ರಸರಗರ್ಭಂ ನೋಟ್ಪೊಡೆಂಬನ್ನೆಗಂ ತ್ರೈವಿದ್ಯಶ್ರುತಕೀರ್ತಿದೇವನೆಸೆದಂ (ಚಂದ್ರಪ್ರ. ೦–೩೪). [ ಸಂ. ]

**ದಿಕ್ಶಿರ** (ನಾ). ದಿಕ್ಕಿನ ಶಿರ,–ಅಗ್ರಭಾಗ : ಬಹುವಾದ್ಯಕರವ ದಿಕ್ಶಿರವೊಡೆಯೆ ಸೂಳೈಸೆ ಮೇಳೈಸಿದನು ಮೋಹರವ (ಕುಮಾ.ಅ. ೨೨–೩). [ ಸಂ. ]

**ದಿಕ್ಶುಂಡಾಲ** (ನಾ). = ದಿಗ್ಗಜ : ನಡುಗಿದುದು ಬ್ರಹ್ಮಾಂಡ ಪೊಡವಿ ಜಡಿಯಲು . . . ಮಂಡಿದವಡಿಗಳನು ದಿಕ್ಶುಂಡಾಲಗಳುಮಿರದೆ ಕಡಲೇಳು ಕೂಡಿದವು (ನವಮೋ. ೦೨–೬೨). [ ಸಂ. ]

**ದಿಕ್ಸಂಧಿ** (ನಾ). ದಿಕ್ಕುಗಳ ಜೋಡಣೆ ; ದಿಕ್ಕುಗಳ ಸೇರುವೆ,–ಕೂಟ : ದಂಧಣಂ ಧಳಧಳಧಳಂಧಳಧ್ವನಿಗೆ ದಿಕ್ಸಂಧಿಗಳ್ ಸಡಿಲಲ್ . . . ಜಗದೊಳಗಂಧಕಾಸುರನ ಭೇರೀರವಂ ಪೊಣ್ಮುದುದನೇನಂಬೆನದ್ಭುತವನು (ಚಬಪು. ೪೭–೩೦). [ ಸಂ. ]

**ದಿಕ್ಸೂಚನೆ** (ನಾ). = ದಿಕ್ಪ್ರದರ್ಶನ : ನಾವು ಮೇಲೆ ತೋರಿಸಿರುವುದು ಕೇವಲ ಅವುಗಳ ದಿಕ್ಸೂಚನೆ (ಧ್ವನ್ಯಾಲೋ. ೦೭). [ಸಂ. ದಿಕ್ಸೂಚನಾ ]

**ದಿಕ್ಸೂಚಿ** (ನಾ). ೧. (ನಾವಿಕರು) ಮಾರ್ಗ ಅಥವಾ ದಿಕ್ಕನ್ನು ತಿಳಿಯಲು ಉಪಯೋಗಿಸುವ ಉಪಕರಣ; ಉತ್ತರಮುಖಿ; ಕಾಂತಧ್ರುವ ಸೂಚಿ : ನಾವಿಕರಿಗೆ ದಿಕ್ಕನ್ನು ತಿಳಿಯಲು ಅತ್ಯಂತ ಉಪಯೋಗಕರವಾಗಿ ದಿಕ್ಸೂಚಿ ಅಥವಾ ಉತ್ತರಮುಖಿ (Compass) ಎಂಬ ಹೆಸರಿನಿಂದ ಈ ಉಪಕರಣವು ಬಹಳ ದಿನಗಳಿಂದಲೂ ಬಳಕೆಯಲ್ಲಿದೆ (ಭೌತವಿ. ೩೦೦) ; ಈ ಸ್ವಪ್ನಜೀವಿಗಳು ದಿಕ್ಸೂಚಿಯನ್ನು ಸಹ ಬಯಸದೆ ತೇಜಸ್ಸಾಗರದಲ್ಲಿ ಯಾತ್ರೆ ಹೊರಡುತ್ತಾರೆ (ಹೋಧಪು. ೪೨). ೨. ಮಾರ್ಗವನ್ನು ಕಾಣಿಸುವ ಸಾಧನ; ಮಾರ್ಗದರ್ಶಿ : ಅದರ ಶಬ್ದಾರ್ಥವೇ ಅದರ ಅಂತರಾರ್ಥವನ್ನು ತಿಳಿಸುವ ದಿಕ್ಸೂಚಿಯಾಗಿದೆ (ತತ್ವಪ್ರಾ. ೬೨); ಅಲೆ ಅಲೆಯಾಗಿ ಹೊಮ್ಮಿಬರುವ ರಚನಗಳನ್ನು ಸರಿಯಾದ ದಾರಿಯಲ್ಲಿ ಕೊಂಡೊಯ್ಯಲು ದಿಕ್ಸೂಚಿಯಂತಿದೆ ತಂಬೂರಿ ಮತ್ತು ಅದರ ಶ್ರುತಿ (ಭಾರದ. ೩೩೬). [ ಸಂ. ದಿಕ್ಸೂಚಿನ್ ]

**ದಿಕ್ಸ್ವಸ್ತಿಕ** (ನಾ). ೧. [ನಾಟ್ಯ] ನೂರೆಂಟು ಬಗೆಯ ಕರಣಗಳಲ್ಲಿ ಒಂದು ; "ಎಡಗಡೆ, ಬಲಗಡೆ, ಮುಂದೆ, ಹಿಂದೆ ಈ ನಾಲ್ಕು ಕಡೆ ಗಳಲ್ಲೂ ಕೈಗಳ ಜೊತೆಯಲ್ಲಿ ಕಾಲುಗಳನ್ನೂ ಚಲಿಸುತ್ತ, ಕೈ ಮತ್ತು ಕಾಲುಗಳನ್ನು ಪುನಃ ಪುನಃ ಸ್ವಸ್ತಿಕದಂತೆ ನಿಲ್ಲಿಸುವುದು" (ಶಾಸ್ತ್ರರಂ. ೩೯೯ ಗದ್ಯಾನುವಾದ); P "ತಲಪುಷ್ಪಪುಟ, ಲೀನ, ವಿವರ್ತಿತ, ವಲಿತೋರು, ಮಂಡಲಸ್ವಸ್ತಿಕ, ವಕ್ಷಸ್ವಸ್ತಿಕ, ಆಕ್ಷಿಪ್ತರೇಚಿತ, ಅರ್ಧಸ್ವಸ್ತಿಕ, ದಿಕ್ಸ್ವಸ್ತಿಕ, ಪೃಷ್ಠಸ್ವಸ್ತಿಕ, ಸ್ವಸ್ತಿಕ, ಅಂಚಿತ, ಅಪವಿದ್ಧ, ಸಮನಖ, ಮತ್ತು, ಸ್ವಸ್ತಿಕರೇಚಿತ, ನಿಕುಟ್ಟಕ, [ಅರ್ಧ ನಿಕುಟ್ಟಕ], ಕಟೀಛಿನ್ನ, ಕಟಿಸಮ, ಭುಜಂಗತ್ರಾಸಿತ, [ಅ]ಲಾತ, [ವಿ]ಕ್ಷಿಪ್ತಾಕ್ಷಿಪ್ತ, [ನಿ]ಕುಂಚಿತ, ಘೂರ್ಣಿತ, ಊರ್ಧ್ವಜಾನು, ಅರ್ಧರೇಚಿತ, ಮತ್ತಲ್ಲಿ, ಅರ್ಧಮತ್ತಲ್ಲಿ, ರೇಚಕನಿಕುಟ್ಟ, ಲಲಿತ, ವಲಿತ, ದಂಡಪಕ್ಷ, ಪಾದಾಪವಿದ್ಧ, ನೂಪುರ, ಭ್ರಮರ, ಛಿನ್ನ, ಭುಜಂಗತ್ರಸ್ತರೇಚಿತ, ಭುಜಂಗಾಂಚಿತಕ, ದಂಡರೇಚಿತ, ಚತುರ, ಕಟಿಭ್ರಾಂತ, ವ್ಯಂಶಿತ, ಕ್ರಾಂತ, ವೈಶಾಖರೇಚಿತ, ವೃಶ್ಚಿಕ, ವೃಶ್ಚಿಕನಿಕುಟ್ಟಕ, ವೃಶ್ಚಿಕರೇಚಿತ, ಲತಾವೃಶ್ಚಿಕ, ಆಕ್ಷಿಪ್ತ, ಅರ್ಗಲ, ತಲವಿಲಾಸಿತ, ಲಲಾಟತಿಲಕ, ಪಾರ್ಶ್ವನಿಕುಟ್ಟಕ, ಚಕ್ರಮಂಡಲ, ಉರೋಮಂಡಲ, ಆವರ್ತ, ಕುಂಚಿತ, ಡೋಲಪಾದ, ವಿವೃತ್ತ, ವಿನಿವೃತ್ತ, ಪಾರ್ಶ್ವಕ್ರಾಂತ, ನಿಶುಂಭಿತ, ವಿದ್ಯುದ್ಭ್ರಾಂತ, ಅತಿ ಕ್ರಾಂತ, ವಿಕ್ಷಿಪ್ತ, ವಿವರ್ತ, ಗಜಕ್ರೀಡಿತ, ಗಂಡಸೂಚೀ, ಗರುಡ ಪ್ಲುತ, ತಲಸಂಸ್ಫೋಟಿತ, ಪಾರ್ಶ್ವಜಾನು, ಗೃಧ್ರಾವಲೀನಕ, ಸೂಚೀ, ಅರ್ಧಸೂಚೀ, ಸೂಚೀವಿದ್ಧ, ಹರಿಣಪ್ಲುತ, ಹರಿವೃತ್ತ, ದಂಡಪಾದ, ಮಯೂರಲಲಿತ, ಪ್ರೇಂಖೋಲಿತ, ಸನ್ನತ, ಸರ್ಪಿತ, ಕರಿಹಸ್ತ, ಪ್ರಸರ್ಪಿತ, ಅಪಕ್ರಾಂತ, ನಿತಂಬ, ಸ್ಖಲಿತ, ಸಿಂಹಕ್ರೀಡಿತ, ಸಿಂಹಾಕರ್ಷಿತ, ಅವಹಿತ್ಥ, ನಿವೇಶ, ಏಲಾಕ್ರೀಡಿತ, ಜನಿತ, ಉಪ ಸೃತ, ತಲಸಂಘಟ್ಟಿತ, ಉದ್ವೃತ್ತ, ವಿಷ್ಣುಕ್ರಾಂತ, ಲೋಳಿತ, ಮದಸ್ಖಲಿತ, ಸಂಭ್ರಾಂತ, ವಿಷ್ಕಂಭ, ಉದ್ಘಟ್ಟಿತ, ಶಕಟಾಸ್ಯ, ಊರೂದ್ವೃತ್ತ, ವೃಷಭಕ್ರೀಡಿತ, ನಾಗಾಪಸರ್ಪಿತ, ಗಂಗಾವತರಣ —ಈ ನೂಱೆಂಟು ಕರಣಂಗಳ್" (ಶಾಸ್ತ್ರರಂ. ೪–೪೨ ವ) : ಎಡಬಲದ ಮುಂತು ಪಿಂತುಗಳೆಡೆಯೊಳ್ ಕೈ ಬೆರಲ್ಗಳೊಡನೆ ಕಾಲ್ಗಳ್ ಚಲಿಸುತ್ತಡಿ ಗಡಿಗೆ ಸ್ವಸ್ತಿಕಮಾದಡೆ ದಿಕ್ಸ್ವಸ್ತಿಕಮೆನಿಪ್ಪ ಕರಣಮದಕ್ಕುಂ (ಶಾಸ್ತ್ರರಂ. ೪–೩೦). ೨. [ಜೈನ] ಒಂದು ಸಭಾಭವನದ ಹೆಸರು: ವೈಜಯಂತಿಯೆಂಬ ದಿವ್ಯಪ್ರಾಸಾದಮುಂ ದಿಕ್ಸ್ವಸ್ತಿಕಮೆಂಬ ಸಭಾಭೂಮಿಯುಂ (ಆದಿಪು. ೦೫–೩ ವ); ಸರ್ವತೋಭದ್ರನಾಮಗೋಪುರಂಗಳಿಂದಂ ವೈಜಯಂತಿಯೆಂಬ ಪ್ರಾಸಾದದಿಂದಂ ದಿಕ್ಸ್ವಸ್ತಿಕಮೆಂಬ ಸಭಾಭವನದಿಂ ನಂದ್ಯಾವರ್ತಪ್ರಕಾಶ ಮೆಂಬ ಶಿಬಿರನಿವೇಶಂಗಳಿಂದಂ (ಶಾಂತಿಪು. ೧೧–೮೧ ವ) ; ಮಣಿಮಯಾ ಕೃತ್ರಿಮ ಚೈತ್ಯಗೃಹರುಚಿರಮೆನಿಪ . . . ದಿಕ್ಸ್ವಸ್ತಿಕದ ನಂದೆಯುಂ ನಂದನದ ನಂದೋತ್ತರೆಯುಂ (ಚಂದ್ರಪ್ರ. ೧೦–೦೨೨ ವ). [ ಸಂ. ]

**ದಿಖಾವು, ಡಿಕಾವು** (ನಾ). ಆಡಂಬರ ; ಡೌಲು ; ಜರ್ಬು : ಆ ಜನಗಳ ಜುಬ್ಬ, ಚಳನ, ಪೇಠಗಳ ವಿಜೃಂಭಣೆಯಿಂದ ವಾಸ್ತವಕ್ಕೆ ಮೀರಿದ ದಿಖಾವು ಇತ್ತು (ಕಲಿಸಿ. ೧೯೦). **ಡಿಕಾವು** : ಅಷ್ಟರಲ್ಲಿ ಡಿಕಾವಾಗಿ ಉಡುವು ಧರಿಸಿದ ಸಹಾಯಾಧಿಕಾರಿ . . . ಬಂದನು (ಪುನರು. ೨೨೯).

[ ←ಹಿಂ. ಮರಾ. ದಿಖಾಊ ]

**ದಿಗಂತ** (ನಾ). ಭೂಮಿಯೂ ಆಕಾಶವೂ ಸೇರಿರುವ ಹಾಗೆ ಕಾಣುವ ದಿಕ್ಕಿನ ಕೊನೆಯ ಭಾಗ,–ತುದಿ; ಕ್ಷಿತಿಜ ; ದಿಶಾಂತ : ಬಾಳುಡಿ ವಾಱ ದೀಟ ಪಗಲುಳ್ಳದವೋಲ್ ರುಧಿರಂ ದಿಗಂತಮಂ ಮೇಳಿಸಿ ಕೂರ್ವಿ ಕಲ್ಪದವಸಾನದ ಸಂಜೆಮುಗಿಲ್ಗಳಿಂದಮಂ ಪಾಳಿಸ (ಪಂಪಾಮಾ. ೦೩–೬೩) ; ಸರಸಭಕ್ತಸಮೇತ ಸುವ್ರತಚರಿತಲೋಲ ವಿಧೂತಕಾಲ ಸ್ಥಿರ ದಿಗಂತಯುತಕೋವಿಶಾಲಪ್ರಹತಭವಮಾಲ (ಬಸವ. ೩೮–೬೭) ; ವನಘನ ರಾಶಿಯಾಶಾದಿಗಂತದೊಳ್ ವರ್ಷದಾಶೀರ್ವಾದಮುದ್ರೆಯಿಂದೇರ್ದುದೆನೆ ಬಂದನೋಲಗಕೆ ವಿಶ್ವಾಮಿತ್ರಮುನಿವರಂ (ಶ್ರೀರಾಮಾ. ೨೮–೮).

ದಿಗ್ದಿಗಂತ = ದಿಕ್ಕು ಮತ್ತು ದಿಗಂತ: ಮೊಗವೆತ್ತಿ ಪಂಚವಟ ಕುಟಜ ರಾಜಿಯ ನೆತ್ತಿಯಂ ನೋಡಿ ಕೊರಳೆತ್ತಿ ಕೂಗಿದನ್, ದಿಗ್ದಿಗಂತೋದ್ಭವಂ ಮರುದನಿ ಮೊಳಗುವಂತೆ (ಶ್ರೀರಾಮಾ. ೨೩೩–೬೨೨) ; ಉಪನಿಷತ್ತುಗಳು . . . ದಿಗ್ದಿಗಂತಗಳನ್ನು ಪಾವನಗೊಳಿಸುವ ಭಕ್ತಿರಸದ ಅಮರವಾಹಿನಿ (ಭಾರದ. ೩೪) ; ದಿಗ್‌ದಿಗಂತದಲಿ ಹಣಿಸಿ ಬಾ ಚರಾಚರಗಳಿಗೆ ಉಣಿಸಿ ಬಾ ಇಳಿದು ಬಾ ತಾಯಿ ಇಳಿದು ಬಾ (ಗಂಗಾಅ. ೬೬–೮).

[ ಸಂ. ]

**ದಿಗಂತಗ** (ನಾ). [ಛಂದ] ಅತ್ಯುಕ್ತಿಯೆಂಬ ಛಂದಸ್ಸಿನಲ್ಲಿ ಹುಟ್ಟಿದ ಒಂದು ವೃತ್ತ : ಪ್ರತಿಸಾಲಿನಲ್ಲಿಯೂ ಒಂದು ಲಘು ಮತ್ತು ಒಂದು ಗುರು ಬರುವ ನಾಲ್ಕುಸಾಲಿನ ವೃತ್ತ: ಅಗೋಪಗಂ ದಿಗಂತಗಂ (ಛಂದೋಂಬು. ೨–೩೪). [ ಸಂ. ]

**ದಿಗಂತರ** (ನಾ). ೧. ದಿಕ್ಕುಗಳ ಮಧ್ಯಭಾಗ : ಆಕಾಶ ; ಗಗನ : ಛತ್ರ ಚಾಮರ ಪತಾಕಾಕೀರ್ಣಗಗನಮಂಡಳಮುಂ ಪಟಹಕಹಳಾದಿಧ್ವನಿಬಧಿರಿತ ದಿಗಂತರನುಮಾಗಿ ರಾವಣಂ ಕಾದಲ್ ಪೊಱಮಡುವುದುಂ (ಜಾಪುಂಪು. ೩೦೩) ; ಸಕಳದಿಗನ್ತರಪ್ರವರ್ತಿತಕೀರ್ತ್ತಿ (ಸೌಇಇ. XX, ೪೬-೧೯ ; 1072). ೨. ದಿಕ್ಕು; ದೆಸೆ : ನೀನೇ ಹೋಹುದೈ ನಿನಗಾವುದಭಿಮತವಾ ದಿಗಂತರಕೆ (ಕುವ್ಯಾಸ. ೧೩-೭೫). [ ಸಂ. ]

**ದಿಗಂತರರಕ್ಷಿತ** (ನಾ). [ಜೈನ] ಲೋಕಾಂತಿಕ ದೇವರುಗಳಲ್ಲಿ ಒಂದು ಒಳಭೇದದ ಹೆಸರು : ಗರ್ದತೋಯತುಷಿತಾಂತರದೊಳ್ ನಿರ್ಮಾಣ ರಜೋದಿಗಂತರರಕ್ಷಿತರುಂ ತುಷಿತಾವ್ಯಾಬಾಧಾಮಧ್ಯದೊಳ್ ಆತ್ಮರಕ್ಷಿತ ಸರ್ವರಕ್ಷಿತರುಂ . . . ಅರಿಷ್ಟಸಾರಸ್ವತಮಧ್ಯದೊಳ್ ಅಶ್ವವಿಶ್ವರುಂ ಇರ್ವರ್ (ತತ್ತ್ವಪ್ರ. ೩೩೩) ; ನಿರ್ಮಾಣರಜಸ್ಸಿಗ್ದಶರ್ ಇರ್ಪತ್ತಮೂಱು ಸಾಸಿರದ ಇರ್ಪತ್ತಮೂವರ್ ದಿಗಂತರರಕ್ಷಿತಾಮರರಿರ್ಪತ್ತೈದುಸಾಸಿರದ ಇರ್ಪತ್ತೈದು (ತತ್ತ್ವಪ್ರ. ೩೩೩). [ ಸಂ. ]

**ದಿಗಂತರಾಳ** (ನಾ). ದಿಕ್ಕುಗಳ ಮಧ್ಯಭಾಗ,–ಒಳಭಾಗ ; ಆಕಾಶ: ಮತ್ತಮಧುಕರನಿಕರಝುಂಕಾರಪರೀತದಿಗಂತರಾಳದೊಳ್ (ಶಾಂತಿಪು. ೧೦-೭೭ ಪ) ; ದಟ್ಟಿಸಿ ಪೊಡೆವ ನಾನಾವಾದ್ಯರವಗಳು ಮುಟ್ಟಿ ದಿಗಂತರಾಳವನು (ತ್ರಿಪುಸಾಂ. ೧೭-೧೮೦). [ ಸಂ. ದಿಗಂತರಾಲ ]

**ದಿಗಂತರೋಪಗತ** (ಗು). ದಿಗಂತರವನ್ನು ಮುಟ್ಟಿದ ; ದಿಕ್ಕಿನ ಕೊನೆಗೆ ಹೋದ : ನಿರೀಕ್ಷಿಸಿ ನಿಕೃಷ್ಟದುಷ್ಪಗಣರಂ ಗತಪುಜ್ಞ[ರ]ಂ ನಿರಂತರ ದಿಗಂತರೋಪಗತ ದುರ್ಯಶಃಪ್ರಾಪ್ತರಂ (ಸುಕುಮಾ. ೨-೧೮).

[ ದಿಗಂತರ + ಉಪಗತ ]

**ದಿಗಂತವ್ಯಾಪ್ತ** (ಗು). ದಿಕ್ಕು ದಿಕ್ಕಿಗೂ ವ್ಯಾಪಿಸಿದ,–ಹರಡಿದ : ಮೊರೆದು ಹೊಯ್ಯುವ ಮಳೆಯಿಂದ ಕೂಡಿದ ಪ್ರಚಂಡಮಾರುತವು ಎದ್ದು ದಿಗಂತವ್ಯಾಪ್ತವಾಗಿದ್ದಿತು (ಕಪಾಕುಂ. ೩). [ ದಿಗಂತ + ವ್ಯಾಪ್ತ ]

**ದಿಗಂಬರ** (ನಾ). ೧. ಬೆತ್ತಲೆಯಾಗಿರುವುದು ; ನಗ್ನತೆ ; ದಿಗಂಬರತ್ವ : ಮಂಗಳವೇ ಮಜ್ಜನವೆನಗೆ . . . ದಿಗಂಬರವೇ ದಿವ್ಯಾಂಬರವೆನಗೆ (ಮಹಾದೇ. ಬ. ೩೬-೭೪) ; ಜಡೆ ಬೋಳು ಲೋಚು ದಿಗಂಬರವನ್ನು ಅಳವಡಿಸಿಕೊಂಡು ನಟಿಸುವ ಅಣ್ಣಗಳಿರಾ ನಿಮ್ಮ ಜಡೆ ಯಾವುದು ಬೋಳಾವುದು ಲೋಚವಾವುದು ದಿಗಂಬರವಾವುದು (ಆಜಾಂಡೇ. ೧೩೭-೧೦೦೮). ೨. ಆಕಾಶವೇ ಬಟ್ಟೆಯಾಗುಳ್ಳವನು; ಬೆತ್ತಲೆಯಾಗಿರುವವನು ; ನಗ್ನ : ಸತಿಯುನುಳಿದತಿದಿಗಂಬರನಾಗಿ ಮುಕ್ತಕೇಶಿತನಾಗಿ ನರಕಪಾಲದೊಳು ಸುರೆಯೆಱೆದು ಕುಡಿಯುತ ತೆಂಕಮುಖವಾಗಿ ಹೋಹೆಂ (ಹಹಳಾ. ೨-೨೨); ನಳ . . . ರಾಣಿಯು ಕೂಡಿಕೊಳುತ್ತ ಕಾನನವ ಪೊಕ್ಕು ದಿಗಂಬರನಾಗಿ ಭಿಕ್ಷವಂ ಬೇಡನೆ (ಕಚಿಕೆಂ. ೭೩) ; ಆಗ ಈತನು ದಿಗಂಬರನಾಗಿದ್ದನು (ಭಾರದ. ೦೬೮). ೩. ಭೈರವ ; ಶಿವ ; ಮಹೇಶ್ವರ : "ಘೋರರಮೂರ್ತಿಯು ಖಡ್ಗಹಸ್ತಂ ದಿಗಂಬರಂ ಭೈರವನ ಪೆಸರಕ್ಕು" (ಮಂಗರಾ. ೫-೦೫) ; ದಿಗಂಬರನ ಶರಣಗುರ್ಗಡುಗೆಗೊಟ್ಟು ಸಿಂಗರದತ್ತ ಮನಂ ಸೆಳೆದಾಭರಣಂಗಳ ಪೆಟ್ಟಿಗೆಯುಂ ತರಿಸಿ (ಬಸವ. ೮-೦೬). ೪. ಅಂಧಕಾರ ; ತಮಸ್ಸು. ೫. ಆಗಸ ; ಗಗನ ; ಆಕಾಶ : ತೊಳತೊಳಗೆ ದಿಗಂಬರವಂ ಬೆಳಗುವ ರುಚಿಯಿರ್ದುಮೇನೊ ಸಕಲಜನಾಂತಸ್ಥಳಮಂ ತಮ್ಮಾ ದಯದೊಳಳಿಱಿಸಿದರೆ [ತಮ್ಮುದಯದೊಳ್ ಬೆಳಗಿದರೇ] ರವಿಗಳೆ ಮಗೆ ಕವಿಗಳೆ ಮಂದ್ಯರ್ (ಧರ್ಮನಾ. ೧-೩೫). ೬. [ಜೈನ] ತಪೋದೀಕ್ಷೆಯನ್ನು ಪಡೆದ ಜೈನಸಂನ್ಯಾಸಿ ; ಸವಣ : "ಸಾಧು ನಿರ್ಗ್ರಂಥರಾ ನಗ್ನಾಟರು ಜೈನರ್ ದಿಗಂಬರರ್ ಜೀವಕರ್" (ಮಂಗರಾ. ೭೭-೧) ; ಪೋಗಿ ದಿಗಂಬರನಂ ಪರವಶಾಗವಂಕೋವಿದನನಮಿತಗುಣವಾರಿಧಿಯಂ ರಾಗದ್ವೇಷಂಗಳ್ಗನಗಾಗದನಂ ಕಂಡು ನಿಲ್ವುದುಂ ತನ್ನನಿಪಂ (ಸುಕುಮಾ. ೩-೦೭); ವೈದಿಕಗ್ರಂಥಗಳಿಂದ ದಿಗಂಬರರು ಶ್ರಮಣರು . . . ಇರುತ್ತಿದ್ದರೆಂದು ತಿಳಿದು ಬರುವುದರಿಂದ ಈ ಸಂಪ್ರದಾಯವು ಅನಾದಿ ಕಾಲದ್ದು ಎಂದು ತಿಳಿಯ ಬಹುದು (ಹಿಂದಸಾ. ೭೨). 'ದಿಗಂಬರದೀಕ್ಷೆ' ಪರಾ. ೭. ಜೈನರ ಒಂದು ಪಂಥ : ಈ ಸಂಪ್ರದಾಯದಲ್ಲಿ ದಿಗಂಬರ, ಶ್ವೇತಾಂಬರ ಎಂಬ ಪ್ರಭೇದವಿದ್ದರೂ . . . ಈ ಗ್ರಂಥಗಳು ಸರ್ವಸಮ್ಮತಗಳಾಗಿರುವುವು (ಹಿಂದಸಾ. ೭೪) : ಜೈನರ ಪ್ರತಿಮೆಗಳು ಕೆಲವು ಶ್ವೇತಾಂಬರಪಂಕ್ತಿಗೆ ಸೇರಿದವು, ಮತ್ತೆ ಕೆಲವು ದಿಗಂಬರಪಂಕ್ತಿಗೆ ಸೇರಿದವು (ಭಾರದ. ೫೦೩); ಶ್ವೇತಾಂಬರ ದಿಗಂಬರರೆಂದು ಎರಡು ಪಂಗಡಗಳಾಗಿ ಒಡೆದದ್ದು . . . ಭದ್ರಬಾಹುವಿನ ಕಾಲದಲ್ಲಿ (ಕಶಾಅ. ೬೯). [ ಸಂ. ]

**ದಿಗಂಬರತ್ವ** (ನಾ). ಬೆತ್ತಲೆಯಾಗಿರುವಿಕೆ ; ನಗ್ನತೆ : ಮಹಾತ್ಮರುಗಳು ಮಾತ್ರ ಈಗ ದಿಗಂಬರತ್ವವನ್ನು ಸ್ವೀಕರಿಸಿ ಅದರ ಪವಿತ್ರತೆಯನ್ನು ಸಾರಿದ್ದಾರೆ (ಭಾರದ. ೦೮೫). [ ಸಂ. ]

**ದಿಗಂಬರದೀಕ್ಷೆ** (ನಾ). [ಜೈನ] ಸಂನ್ಯಾಸದೀಕ್ಷೆ : ವಿಶಾಖಭೂತಿಯೊಡನೆ ವಿಶ್ವನಂದಿಯುಂ ದಿಗಂಬರದೀಕ್ಷೆಯಂ ಕೆಯ್ಕೊಂಡಂ (ಶಾಂತಿಪು. ೭-೫೮ ಪ).

[ ದಿಗಂಬರ + ದೀಕ್ಷೆ ]

**ದಿಗಂಬರಮುದ್ರೆ** (ನಾ). [ಜೈನ] ಬೆತ್ತಲೆಯಾಗಿರುವಿಕೆ ; ಬಟ್ಟೆಯನ್ನು ಧರಿಸದಿರುವಿಕೆ; ನಗ್ನತೆ: ಜೈನದೀಕ್ಷೆಯ ಕೊನೆಯ ಹಂತವಾದ ದಿಗಂಬರ ಮುದ್ರೆಯ ವಿಷಯದಲ್ಲಿ ಜನರು ಅರಿವಿಲ್ಲದೆ ಲಘುವಾಗಿ ಮಾತನಾಡುವುದುಂಟು (ಭಾರದ. ೧೮೫). [ ದಿಗಂಬರ + ಮುದ್ರೆ ]

**ದಿಗಂಬರರೂಪ** (ನಾ). ನಗ್ನರೂಪ ; ಬೆತ್ತಲೆಯ ಸ್ಥಿತಿ : ಆದಿತೀರ್ಥಕರ್ತಾರನ ದಿಗಂಬರರೂಪಮಂ ಕಾಣಲೊಡಂ ಶ್ರೀಮತಿಯಾದ ಭವದೊಳ್ ವಜ್ರಜಂಘನುಂ ತಾನುಮಿರ್ದ ಸರ್ವಸರೋವರದೊಳ್ ಚಾರಣಯುಗಳಕ್ಕೆ ವಿಧಿಪೂರ್ವಕಂ ಮಹಾದಾನಮನಿತ್ತು (ಆದಿಪು. ೯-೦೫೦ ಪ).

[ ದಿಗಂಬರ + ರೂಪ ]

**ದಿಗಂಬರಲೀಲೆ** (ನಾ). ೧. ಆಕಾಶದ ಶೋಭೆ. ೨. [ಜೈನ] ಬೆತ್ತಲೆಯಾಗಿರುವ ಸಂನ್ಯಾಸದ ಶೋಭೆ. ೧, ೨ : ತವೆ ತಮ ದೊಡ್ಡು ರಾಜಿಸಲೊಡರ್ಚೆ ದಿಗಂಬರಲೀಲೆ ಪುಟ್ಟಿ ಭೂಭುವನಜನಕ್ಕೆ ದರ್ಶನವಿಶುದ್ಧತೆ . . . ಜಿನಂ ಸಿವಿಗೆಯನೇಱುವಂತುದಯಶ್ಯೆಲಮನೇಱಿದ ನಂಬುಜಪ್ರಿಯಂ (ಪುಷ್ಪಪು. ೧೩-೬೦). [ ದಿಗಂಬರ + ಲೀಲೆ ]

**ದಿಗಂಬರವಿಳಾಸ** (ನಾ). [ಜೈನ] ಬೆತ್ತಲೆಯಾಗಿರುವ ಸಂನ್ಯಾಸದ ಶೋಭೆ: ದಿಗಂಬರವಿಳಾಸಮಂ ಬಯಸುತೆ ತೀರ್ವಿನಂ ತಾಳ್ದಿದಂ ಯುಗಂಧರ ಮಹಾಮುನೀಂದ್ರ ಪದಪಂಕಜೋಪಾಂತದೊಳ್ (ಆದಿಪು. ೩-೫೭).

[ ದಿಗಂಬರ + ವಿಳಾಸ ( = ವಿಲಾಸ) ]

**ದಿಗಂಬರವೇಷ** (ನಾ). = ದಿಗಂಬರತ್ವ : ಸಮರತಸೌಖ್ಯದೊಳ್ ಸತಿ ದಿಗಂಬರವೇಷಮನಾಂತು . . . ತನ್ನನೋರವಣಿನ ಹೃನ್ನಿಧಾನಮನು ಪಾರ್ಜವ ಯೋಗಿನಿಯಂತಿರೊಪ್ಪಿದಳ್ (ಕಾವ್ಯಸಾ. ೬೭೫).[ದಿಗಂಬರ+ವೇಷ]

**ದಿಗಂಬರಿ**₁ (ನಾ). ನಗ್ನರೂಪದಲ್ಲಿರುವ ಸಂನ್ಯಾಸಿ : ಉಡು ಏಕಾಂತ ನಿವಾಸಿಯ ತೋಳ ದಿಗಂಬರಿಯ ಎತ್ತು ಬ್ರಹ್ಮಚಾರಿಯ ಬಾವುಲು ತಲೆಕೆಳಗಾಗಿದ್ದೊಡೆ ತಪಸ್ವಿಯ (ಸಮಾವ. ೨೦-೬೭). [ < ಸಂ. ದಿಗಂಬರ ]

**ದಿಗಂಬರಿ**₂ (ನಾ). ನಗ್ನಳಾಗಿರುವವಳು ; ಬೆತ್ತಲೆಯಾಗಿರುವವಳು : ಕನಕಪುಥಳಿಗೆ ಶಶಿಗಲ್ಲೊಪ್ಪವಿಟ್ಟು ತತ್ಕೊಳದ ಪರಿವೇಷದೊಳು ನಿಲಿಸಿದೊಲು ಹಟ್ಟಿಗೆಯ ರಂಗದೆಳೆವೆಳಗಿನಲಿ ದಿಗಂಬರಿಯರಂತೆ ಪರಿಶೋಭಿಸುತಿರೆ (ನವಪೂರ್. ೦೦-೫೭). [ ಸಂ. ದಿಗಂಬರೀ ]

**ದಿಗಂಬರೆ** (ನಾ). ಬೆತ್ತಲೆಯಾದವಳು ; ನಗ್ನೆ : ತನಿವೇಟದಲಿ ತಾಮಸಿ ದಿಗಂ[ಪಾಠಾಂ. ನಿಶಾಂ, ನಿರಂ]ಬರೆಯಾಗಿ ನಲಿದಪ್ಪಿದಳು ನಿಜಪತಿಯ (ಕೊರರಾ. ೫-೩-೪). [ <ಸಂ. ದಿಗಂಬರೀ ]

**ದಿಗಡುದಿಮ್ಮಿ** (ನಾ). ಸೊಕ್ಕಿದವಳು ; ಕೊಬ್ಬಿದವಳು ; ಸ್ವೇಚ್ಛಾವೃತ್ತಿಯವಳು : ಆ ದಿಗಡುದಿಮ್ಮಿ ಸುನಂದಾ . . . ಅವಳ ದೆಸೆಯಿಂದ ಕೆಟ್ಟು ಹೋಗಿ ಬಿಟ್ಟದ್ದನಾತ (ಚಾಂಚಿ. ೫೨).

[ ದಿಗಡ್ಡು (←P ಹಿಂ. ಮರಾ. ಧೀಂಗಡ್) + ದಿಮ್ಮಿ$_{0}$ ]

**ದಿಗಣ, ಜಿಗಣ, ದಿಗಿಣ** (ನಾ). ಮದ್ದಳೆಯ ಶಬ್ದಕ್ಕೆ ಸರಿಯಾಗಿ ಕುಣಿಯುವ ಕುಣಿತ. **ಜಿಗಣ:** ತಾಳಮದ್ದಳೆ ಜಗಣಕ್ಕೆ ಸರಿಯಾಗಿ ಕುಣಿತಹಾಕಿ . . . ನಲಿಯುವುದು ಒಂದು ಭಾಗ (ಹುಟ್ಟಿಹ. ೮೨). **ದಿಗಿಣ:** 'ನನ್ನ ವೇಷ ಚಂದ . . . ನನ್ನ ದಿಗಿಣ ಬಲ' ಎಂದು ಬರಿದೆ ಅವರವರೇ ಅದನ್ನು ಕೊಚ್ಚಿಕೊಂಡರೆ ಸಾಕೇನು ? (ಸ್ವಕೃಹೊ. ೦೩೭).

ದಿಗಣ ಹಾಕು = ಮದ್ದಳೆಯ ತಾಳಕ್ಕೆ ಸರಿಯಾಗಿ ಕುಣಿ : ಇವೆಲ್ಲ ಒಂದು ಕುಣಿತವೋ ? ಬರಿದೆ ಕುಣಿದರೆ ಸರಿಯೆ; ಇವಕ್ಕೆ ಗತ್ತು ಬೇಕೇ ? ಇದ್ದೆಲ್ಲ ಬರಿದೆ ದಿಗಣ ಹಾಕುವುದು (ಹಹಸ. ೩೭). [ ? ]

**ದಿಗದಿಗನೆ** (ಅ). ಒಂದು ಅನುಕರಣಾವ್ಯಯ ; ಬೇಗಬೇಗನೆ ; ರಭಸದೊಡನೆ : ದಿಗಿದಿಗಿ[ದಿಗದಿಗ]ನೊಡನಿದಿರಾಗಿ ಬಹಳು ನಸುನಗುತ ರಾಯನನಪ್ಪುವಂತೆ ಭುಗಿಲನೆ ತಿರುಗುವಳರಸನೊಳ್ನುನಿದಡ್ಡ ಮೊಗವಿಕ್ಕಿ ಹೋಹಳೆಂಬಂತೆ (ಭರತ. ೦೨-೭೫); ದಿಗಿದಿಗಿ[ದಿಗದಿಗ]ನೆಯ್ದುಂದು ಕದೆಯ ಬಾಗಿಲ ಸಾರ್ದು (ಭರತ. ೪೬-೪೦). [ ದಿಗದಿಗ$_{0}$ + -ಅನೆ$_{1}$ ]

**ದಿಗಧಿಪ** (ನಾ). ದಿಕ್ಕಿನ ಒಡೆಯ,- ದಿಕ್ಪಾಲಕ : ಸ್ವಂಬೇರವನೆಂಟುಮನೊತ್ತೆಂಬದೆ ದಿಗಧಿಪರೊಳೀಟ್ಟುಕೊಂಡು . . . ಖಳಂ ಶಿಕ್ಷಿಸಿದಂ (ಜಗವಿ. ೧೧-೮೦) ; ದಿಗಧಿಪರಂ ತರಳ್ಚುವವೊ ನಾಗನಿವಾಸದ ಶೇಷನಂ ಬರಲ್ ತೆಗೆವವೊ ... ಬಗಮಿಗೆ ಪೇಟಿಮೆಂಬ ಕಡುವಂ ತಳೆದಿರ್ದವಿಳಾಧಿನಾಯಕಾ (ದಶಕು. ೪-೦೭). [ ಸಂ. ]

**ದಿಗಧೀಶ** (ನಾ). = ದಿಗಧಿಪ : ಮಹಿಳಾಸಹಿತಂ ವಾಹನಸಹಿತಂ ಸಂಗೀತಸಹಿತಮತಿಶುದ್ಧಮನಸ್ಕಹಿತಂ ನಿಜವಿವಿಧಾಯುಧಸಹಿತಂ ನಿಬಿಡಟ್ಟು ನೆರೆಯೊಳಿರೆ ದಿಗಧೀಶರ್ (ಶಾಂತಿಪು. ೦೦-೬೨) ; ದಿಗಧೀಶರ್ ಜಗದೀಶರೊಳ್ ಪೊಲಗಿಡಲ್ ದಿಗ್ದಂತಿಗಳ್ ಸ್ವಸ್ನದಂತಿಗಳೊಳ್ ಪಲ್ಲಟವಾಗಲ್ (ಜಗವಿ. ೦೫-೮೦); ಆಯೆಡವಂಕ ಬಲವಂಕದಿ ಕೇಶವಾಂಬುಜಪುತ್ರರಿಂದ್ರಾಗ್ನಿಯಮ ನಿರುತಿ ಪಾಶಧರರನಿಲವಿತ್ತಪನೀಶನೆಂಬ ದಿಗಧೀಶರಿರ್ದರು (ಸಿದ್ಧರಾ. ೧-೧೮). [ ಸಂ. ]

**ದಿಗಧೀಶಕಾಂತೆ** (ನಾ). ದಿಕ್ಕಿನ ಒಡೆಯನಾದವನ ಸತಿ,- ಕಾಂತೆ ; P ಶಚೀದೇವಿ, ಸ್ವಾಹಾ ಮತ್ತು ಸ್ವಧಾ, ಶ್ಯಾಮಲಾದೇವಿ, ದೀರ್ಘಾದೇವಿ, ಋದ್ಧಿ ಮತ್ತು ವಾರುಣಿ, ಅಂಜನಾ, ಋದ್ಧಿ, ಶಿವೆ- ಇವರು ಕ್ರಮವಾಗಿ ಅಷ್ಟದಿಕ್ಪಾಲಕರ ಪತ್ನಿಯರು : ದಿಗಧೀಶಕಾಂತೆಯರ್ ಮಿಂದೊಗೆದಾಗಳ್ಗಂದು ಕೇಶಸಂಸ್ಕಾರಕ್ಕಾವಗಮಂತೆ ಧೂಪವರ್ತಿಯ ಪೊಗೆದತ್ತನಿಸಿ ದೆಸೆದೆಸೆಯೊಳೆಸೆದತ್ತು ತಮಂ (ಪಾರ್ಶ್ವಪು. ೦೦-೦೩). [ ದಿಗಧೀಶ + ಕಾಂತೆ ]

**ದಿಗಧೀಶಪದವಿ** (ನಾ). ದಿಕ್ಪಾಲಕನ ಅಧಿಕಾರ : ಧನಕ್ಕೊಡೆಯಂ ಕುಬೇರನಾಗಿ ಮೆಱೆದಿರ್ಪುದೆಂದು ದಿಗಧೀಶಪದವಿಯಿತ್ತು . . . ಭಕ್ತರಂ ಪೊರೆಯುತಿರ್ದಂ (ಅದ್ಭುತ. ೦೯-೯). [ ದಿಗಧೀಶ + ಪದವಿ ]

**ದಿಗರ್** 'ದಿಗರು' ನೋ.

**ದಿಗರ್‌ಜವಾಬು** 'ದಿಗರುಜವಾಬು' ನೋ.

**ದಿಗರ** 'ದಿಗರು' ನೋ.

**ದಿಗರು, ಡಿಗರು, ದಿಗರ್, ದಿಗರ, ದಿಗುರು** (ನಾ). ೧. ಪ್ರತಿಯಾಗಿ ಹೇಳುವುದು ; "ಎದಂರುವಾದಿಸುವುದಂ; ವಾದ" (ಜಾನಕೋ. ೫). 'ದಿಗರುಜವಾಬು' ಪರಾ. **ಡಿಗರು:** ೨. "ಸೊಕ್ಕು ; ಗರ್ವ" (ಜಾನಕೋ. ೬೩). **ದಿಗರ್:** (ಗು). ೩. ಅನ್ಯ; ಬೇರೆಯಾದ: (೬). **ದಿಗರ:** ೩. ದಿಗರ ತಾಲ್ಲೂಕಿಗೆ ಹೋಗಿರುವ ರೈತರು . . . ಜಿರಾಯಿತು ಕೆಲಸದಲ್ಲಿಡಬೇಕು (ಮುಹಾಮಂ. II, ೬೨). **ದಿಗುರು:** ೧. 'ದಿಗುರುತ್ತರ' ಪರಾ. [ ← ಫಾರ. ಮರಾ. ದಿಗರ್ ; ಹಿಂ. ದಿಗರ್, ದಿಗಾರ್ ]

**ದಿಗರುಜವಾಬು, ದಿಗರ್‌ಜವಾಬು** (ನಾ). ಎದುರುತ್ತರ ; "ವಿರುದ್ಧ ಮಾತಾಡುವುದು" (ಜಾನಕೋ. ೫). **ದಿಗರ್‌ಜವಾಬು :** ವಿಪ್ರಲಂಭಃ, ವಿಸಂವಾದಃ - ೨ ವಿಪರೀತವಾಗಿ ನುಡಿಯುವದು ಅಂದರೆ ಕ್ರಮತಪ್ಪಿ ಮಾತಾಡುವದು, ಅಥವಾ ದಿಗರ್‌ಜವಾಬು ಕೊಡುವದು (ಸಿದ್ಧಾಂತಿ. ೬೯).

[ ದಿಗರು + ಜವಾಬು ]

**ದಿಗವಲೋಕನ** (ನಾ). ಎಲ್ಲಾ ದಿಕ್ಕುಗಳನ್ನು ನೋಡುವುದು. 'ದಿಗವಲೋಕನಗೃಹ' ಪರಾ. [ ಸಂ. ]

**ದಿಗವಲೋಕನಗೃಹ** (ನಾ). ಎಲ್ಲಾ ದಿಕ್ಕುಗಳನ್ನೂ ನೋಡಲಾಗುವಂತೆ ಕಟ್ಟಿದ (ಎತ್ತರವಾದ) ಮನೆ : ಗಿರಿಕೂಟವೆಂಬ ದಿಗವಲೋಕನಗೃಹಮುಂ ವರ್ಧಮಾನಮೆಂಬೀಕ್ಷಣಪ್ರಿಯ ಪ್ರೇಕ್ಷಾಗೃಹಮುಂ (ಆದಿಪು. ೦೫-೩ ವ) ; ದಿಕ್‌ಸ್ವಸ್ತಿಕವೆಂಬ ಸುಧಾಭೂಮಿಯುಂ ಸುವಿಧಿಯೆಂಬ ಚಕ್ರಮುಮುಮಾಯಷ್ಟಿಯುಂ ಗಿರಿಕೂಟಮುಮೆಂಬ ದಿಗವಲೋಕನಗೃಹಮುಂ (ಅಜಿಪು. ೦೦-೦ ವ). [ ದಿಗವಲೋಕನ + ಗೃಹ ]

**ದಿಗಟ** (ನಾ). ಒಂದು ಮನೆತನದ ಹೆಸರು; ಸ್ವಸ್ತಿಶ್ರೀದಿಗಟರ ಬೆಸುಗಿ ಕೊಟ್ಟದು ಗೋಸಹಸ್ರ ನಾಲ್ಕುಕೇರಿಗೆ ನೆಱೆಯ ಗೋಸ[ಹ]ಸ್ರಂ (ಎಕ. VII, ಶಿಕಾರಿ. ೭೫-೩೦ ; ಸು. ೬೬೦ ?). [ ? ]

**ದಿಗಾರ** (ನಾ). [ಅಶ್ವಶಾ] ಕುದುರೆಗೆ ಬರುವ ಒಂದು ಬಗೆಯ ಬೇನೆ,- ಶೂಲೆ : ನಾಲ್ಕನೆಯ ಜಾವದ ಶೂಲೆಗೆ ದಿಗಾರವೆಂಬುದು (ಅಶ್ವಟೀ. ೦೦೨-೦೦). [ ? ]

**ದಿಗಾಳಿ** (ನಾ). ದಿಕ್ಕುಗಳ ಗುಂಪು,- ಸಾಲು : ವಾಜಿ ಸಿಂಧುರ ರಥವೃಂದ ಮಾರ್ಭಟಿಸಿ . . . ಪೋರ್ದುದು ಭೂಮಿ ದಿಗಾಳಿ ಕಂಪಿಸೆ (ಹಮ್ಮೀರ. ೩-೪೦). [ ಸಂ. ದಿಗಾಲಿ ]

**ದಿಗಿಣ** 'ದಿಗಣ' ನೋ.

**ದಿಗಿಭ** (ನಾ).= ದಿಗ್ಗಜ ೧ : ದಿಗಿಭ ನಿಭಂಗಳಪ್ಪ ಸಮದದ್ವಿರದಂಗಳ ಯುದ್ಧಕೇಳಿಯುಂ ಬಗೆಗೊಳೆ ನೋಡಲುಂ ನೆಗಟ್ದ ಮಲ್ಲರುಮಂ ಪಿಡಿದೊತ್ತಿ (ಆದಿಪು. ೬-೪೮) ; ಜ್ಯಾರಾವಕ್ಕಗಿದಳ್ಕಿ ಬಳ್ಕಿ ದಿಗಿಭಂ ಕೋದಂಡದೊಳ್ಗೂಡಿ ಕೊಂಡಾರುತ್ತುಂ ನಿಶಿತಾಸ್ತ್ರದಿಂದಿಸೆ (ಪಂಪಭಾ. ೦೫-೧೨೦) ; ಜಲಧಿ ಮೇರೆಯನೊದೆದು ಹಾಯಲಿ ನೆಲನನಿಳುಹಲಿ ದಿಗಿಭವಿನಮಂಡಲಕೆ ಕಾಳಿಕೆಯಡಲಿ ನಡೆದಾಡಲಿ ಕುಲಾದ್ರಿಗಳು (ಕುಮಾವ್ಯಾ. ೭-೨೩). [ ಸಂ. ]

**ದಿಗಿಭೇಂದ್ರ** (ನಾ). ದಿಗ್ಗಜಗಳಲ್ಲಿ ಶ್ರೇಷ್ಠವಾದುದು ; ಐರಾವತ : ನೆಗಟ್ದಮರನಗೇಂದ್ರಮನಾ ದಿಗಿಭೇಂದ್ರಂ ಪೊರ್ದಿದಲ್ಲಿ ಸುರತರುವಿರ್ದಂ ನೆಗಟ್ವನೆಗಂ ಕನಕಾದ್ರಿಗೆ ಖಗಾದ್ರಿ ಸಂತಸದೆ ಬಿರ್ದುವಂದಂತಿರ್ಕುಂ (ಅಜಿಪು. ೪-೨೭). [ದಿಗಿಭ + ಇಂದ್ರ ]

**ದಿಗಿಲ್, ದಿಗಿಲು** (ನಾ). ೧. ಒಂದು ಅನುಕರಣ ಶಬ್ದ. 'ದಿಗಿಲನೆ' ಪರಾ. ೨. ಹೆದರಿಕೆ ; ಭಯ ; "ಜಜ್ಜರಿತ ಧೈರ್ಯ" (ಕಟುನಿ. ೬. I, ೬೪). **ದಿಗಿಲು :** ೨. ಪುಟ್ಟ ದಿಗಿಲುರದಲ್ಲಿ ನಯನಗಳಿಟ್ಟು ನೋಡಂಗಾಂಗ ಭಸಿತದಿ ಕಟ್ಟಿದುರುಲಿಂಗವನು ಕಂಡಳು (ಬಿಜ್ಜಪು. ೯೪-೦೭) ; ಹಿರಿತನಕೂ ಕಿರಿತನವೇ ಮಿಗಿಲು ಇದರೊಳಿಲ್ಲ ಬಿಚಿತ್ರದ ದಿಗಿಲು (ಗಣೇಶ. ೨-೨೮) ; ಇನ್ನು ಅವನಿಗೆ ಯಾರ ದಿಗಿಲೂ ಇಲ್ಲ (ಆರ್ಯಕ. ೧೪).

೩. ದಿಗ್ಭ್ರಮೆ ; ದಂಗು ; ಕಕ್ಕಾವಿಕ್ಕಿ. 'ದಿಗಿಲುಗೊಳು' ಪರಾ.

ದಿಗಿಲುಭುಗಿಲಾಗು = ಗಾಬರಿಯಾಗು ; ತಳಮಳವಾಗು : ಗೌರಿಗೆ ಎದೆಯಲ್ಲೆಲ್ಲಾ ದಿಗಿಲುಭುಗಿಲಾಯಿತು (ನಡಿರಾ. II, ೯೯೨).

[ ದೇ.೫ ತಮಿ. ತಿಕಿಲ್, ತಿಕಿರ್ ; ತುಳು. ದಿಗಿಲ್ ; ತೆಲು. ದಿಗುಲು ]

**ದಿಗಿಲನೆ** (ಅ). ದಿಗಿಲ್ ಎಂದು : ಪಗಲು ಕಡೆಗಾಣೆ ತಮಮೆಂಬ ಗಿಡುಗಂ ಗಳ್ಕಿ ಖಗದ ಮಾಲೆಗಳು ಬಿಗುತರ್ಲೋಡಿ ಮನೆ ಮನೆಯ ಗೂಡುಗಳ ಪೊಕ್ಕೆದೆ ದಿಗಿಲನುರಿಯಲಂತ್ಕದ ಗುಣವ ಸಾರುತಸ್ಪೃಶ್ಯಮಾಗಿ ಮೊಗವೆಯ್ದೆ ಹೊತ್ತಿ ಹೊಗೆವಂತುರಿಯುತಿರ್ಪ ದೀಪಗಳ ಸಂತೈಸಲ್ಕೆತಂದಂದದಿಂ ಪೂರ್ವ ನಗರದಗ್ರದೊಳಗುದಯವಾದನಾ ತರಣಿ (ಭಾವಜೀ. ೬-೧೪). 'ಧಿಗಿಲನೆ' ಪಠಾ. [ದಿಗಿಲ್ + – ಅನೆ$_1$]

**ದಿಗಿಲಾನ್** (ಕ್ರಿ). ಭಯವನ್ನು ಹೊಂದು ; ಹೆದರು : ದಿಗಿಲಾಂತು ಪತ್ರೋಪಹಾರವ ತಂದಿತ್ತರವಗೆ (ಪ್ರೋಹಚ. ೦೯-೬೩); ವಿಗಡವಾಗಿದ ನಿನ್ನ ಪಯಣಕ್ಕೆಯನ್ನದೆ ದಿಗಿಲಾಂತುದೀ ಗಳಿಗೆಯೊಳು ಅಗಲಿದೊಡೆಂತು ಜೀವಿಪೆನು (ಪ್ರೋಹಚ. ೨೮-೩೯). [ದಿಗಿಲ್ + ಆನ್$_1$]

**ದಿಗಿಲಿಸು** (ಕ್ರಿ). ೧. ಶೋಭಿಸುವಂತೆ ಮಾಡು ; ವಿಜೃಂಭಿಸುವಂತೆ ಮಾಡು; ಮೆರೆಸು (?) : ಬಂದನೊಲವಿಂ ಗೌರವ ಕುಂಕುಮ ಗಂಧದನು ಲೇಪನದ ಕೊರಳೊಳಗೊಂದಿದೊಚ್ಚರಗವಡೆಗಳ ಕಂಬಳಿಯ ಕುಪ್ಪಸದ ಚಂದದಿಂ ಪೀಲಿಯ ಚವುರ ಛತ್ರಂ ದಿಗಿಲಿಸುತ ತುರಗಗಮನದಿ ಮುಂದೆ ನುಡಿಸುವ ಥಕ್ಕೆಗಳ ಕೊಂಬುಗಳ ರವ ಮೊಳಗೆ (ಶಂಕರಾ. ೧೩-೩೩) ; "ಅಲ್ಲಾಡಿಸು" (ಶಂಕರಾ. ಕೋಶ). ೨. (?) : ಸಚ್ಚಿದಾನಂದೈಕ ಭಕ್ತರು ನಿಚ್ಚಳದಿ ಹರಶರಣರ್ಕ್ಕೆತಂದುಚ್ಚವದಿ ಗಣಪರ್ವಗಳ ಮಾಡಿದರು ತಮ ತಮಗೆ ಅಚ್ಚರಿಯವಹ ಸಂಭ್ರಮಂಗಳ ಸುಚ್ಚರಿತ ದಿಗಿಲಿಸುತೆ ಲಿಂಗದಿ ಬೆಚ್ಚುತಾನಂದಾರ್ಣವದೊಳೋಲಾಡುತೊಪ್ಪಿದರು (ಶಂಕರಾ. ೫-೨೮) : "ದಂಗಾಗುವಂತೆ ವರ್ಣಿಸು" (ಶಂಕರಾ. ಕೋಶ). [ದಿಗಿಲ್$_0$ + – ಇಸು$_3$]

**ದಿಗಿಲು** 'ದಿಗಿಲ್' ನೋ.

**ದಿಗಿಲುಗನಸು** (ನಾ). ಗಾಬರಿಗೊಳಿಸುವ ಕನಸು : ಹಗಲುಗನಸುಗಳು ದಿಗಿಲುಗನಸುಗಳು ಏರಲು ಜಾತ್ರೆಗಾಗಿ ಹೃದಯ ಹೃದಯಗಳ ಕೂಡಲಾಗು ವುದು ದೇವಯಾತ್ರೆಗಾಗಿ (ಸೂರ್ಯಪಾ. ೩೪-೧೧). [ದಿಗಿಲು (<ದಿಗಿಲ್) + ಕನಸು]

**ದಿಗಿಲುಗೊಳ್**, ದಿಗಿಲುಗೊಳು, ದಿಗಿಲುಗೊಳ್ಳು (ಕ್ರಿ). ೧. ಹೆದರು ; ಅಂಜು ; ಭಯಪಡು. 'ದಿಗಿಲುಗೊಳಿಸು' ಪಠಾ. **ದಿಗಿಲುಗೊಳು** : ೨. ದಿಗ್ಭ್ರಮೆಗೊಳ್ಳು; ದಿಕ್ಕು ತೋಚದಂತಾಗು. ದುಗುಡದಿಂ ಬಳಲು ವನು! ಹೇರನಿಳಿಸಿದೆಯಾ? ದಿಗಿಲುಗೊಳುವನು! ನೀನು ದಾರಿ ತಿಳಿಸಿದೆಯಾ? (ಕಪಾ. ೩೬-೧). **ದಿಗಿಲುಗೊಳ್ಳು** : ೧. ಮುಗಿಲ ಚರಿತೆಯ ಕೇಳಿರಿ! ಮೊಗವ ಕಂದಿಸಿ ನುಡಿಯ ನಂದಿಸಿ ದಿಗಿಲುಗೊಳ್ಳಲು ಬೇಡಿರಿ (ಕಪಾ. ೩೦-೧೪) ; ನಾನು ದಿಗಿಲುಗೊಂಡು ತಕ್ಷಣ ಎದ್ದು ಕಥೇರಿಗೆ ಬಂದೆ (ನಾಪೋರೀ. ೩೮). ೨. ಗಿರಿಯ ದಿಗಿಲುಗೊಂಡು ಕಂಬದಂತ ನಿಂತುಕೊಂಡಿದ್ದ (ಮಾಬ್ಬುಹ. ೯೦) ; ಆದಿನಾಥ ದಿಗಿಲುಗೊಂಡು ಪ್ರಶ್ನಿಸಿದ (ಅಕ್ಕಬು. ೧೨). [ದಿಗಿಲು (<ದಿಗಿಲ್) + ಕೊಳ್$_1$]

**ದಿಗಿಲುಗೊಳಿಸು** (ಕ್ರಿ). ಹೆದರಿಕೊಳ್ಳುವಂತೆ ಮಾಡು ; ಭಯಪಡು ವಂತೆ ಮಾಡು : (+). [ದಿಗಿಲುಗೊಳ್ + – ಇಸು$_3$]

**ದಿಗಿಲುಗೊಳು** 'ದಿಗಿಲುಗೊಳ್' ನೋ.

**ದಿಗಿಲುಗೊಳ್ಳು** 'ದಿಗಿಲುಗೊಳ್' ನೋ.

**ದಿಗಿಲುಬಡಿ** (ಕ್ರಿ). ಹೆದರಿಕೆಯಾಗು ; ಭಯವುಂಟಾಗು : ರಂಗಣ್ಣನಿಗೆ 'ಇದು ಏನೋ ಪೇಚೇ ಬಂತು' ಎಂದು ದಿಗಿಲುಬಡಿದರೂ ತೋರಗೊಡ ಲಿಲ್ಲ (ಅಪನಾ. ೧೩). [ದಿಗಿಲು (<ದಿಗಿಲ್) + ಬಡಿ$_1$]

**ದಿಗಿಲುಬೀಳು** (ಕ್ರಿ). ಗಾಬರಿಯುಂಟಾಗು ; ಅಂಜಿಕೆಯಾಗು ; ಭಯ ವಾಗು : ಅದು ಕೋಣವೋ ಬ್ರಹ್ಮರಾಕ್ಷಸವೋ ಎಂದು ಅವನಿಗೆ ದಿಗಿಲು ಬಿತ್ತು (ಕಂಬಹು. ೫೦). [ದಿಗಿಲು (<ದಿಗಿಲ್) + ಬೀಳ್$_1$ (<ಬೀಳ್$_1$)]

**ದಿಗಿಲುಹಾರು** (ಕ್ರಿ). ದಿಗ್ಭ್ರಮೆಯಾಗು ; ಗಾಬರಿಬೀಳು : ಐದು ನಿಮಿಷ ಕ್ಕೊಂದು ರೈಲು ಬರುವ ಗದ್ದಲ ನೋಡಿಯೇ. ನನಗೆ ದಿಗಿಲುಹಾರಿದೆ (ಅಳನಿ. ೧೦೯). [ದಿಗಿಲು (<ದಿಗಿಲ್) + ಹಾರು$_3$ (<ಪಾಱು$_1$)]

**ದಿಗಿಲೆನ್** (ಕ್ರಿ). ಹೌಹಾರು ; ಭಯಪಡು : ಸ್ಮರಜಸಾಧ್ವಸದಿ ದಿ[ಪಾಠಾಂ. ೯]ಗಿಲೆಂದು ಗೂಡುವಾಯ್ಗುದು ನೃಪಕನ್ನಿಗಾಗಳೆರ್ದೆ ನೋಡಲೊಡಂ ಮನುವಂಶಮೇರುವಂ (ಪರ್ವಪು. ೬-೧೩) ; ದಿಗಿಲೆಂದಿತ್ತು ವಿಯೋಗಿ ವೃಂದ ಹೃದಯಂ ಮಾಸಂತಿಕಾಮಾಸದೊಳ್ (ಗಿರಿಕ. ೬-೩೮) ; ಬಸವಯ್ಯ ಹೊಗಳುತಿರಲ್ ಹದನಱಿದೆದೆ ದಿ[ಪಾಠಾಂ. ಧಿ]ಗಿಲೆನುತ್ತಾ ಕಿನ್ನರಯ್ಯನು ಮುಗಿದ ಕೈಗಳುಮೆರಸಿ ಪರಿತಂದ (ಬಸಪು. ೨೯-೩೨) ; ಕಾಂತರಾಲಿಂಗನ ದೊಳು ಪೊಂಚಿರ್ದ ಕಾಮಿನಿಯರೆದೆ ದಿ[ಪಾಠಾಂ. ಧಿ]ಗಿಲೆನಲ್ (ಹ್ರಮಿಧ. ೨೬-೨೪). [ದಿಗಿಲ್ + ಎನ್$_1$]

**ದಿಗಿಲೇಳು** (ಕ್ರಿ). ದಿಗಿಲ್ ಎಂದು ಏಳು ; ರಭಸದಿಂದ ಏಳು : ದಿಗಿಲದ್ದ ಗಾಳಿಗಳ ಬಿಗಿದಿಟ್ಟು ಹಗಲ ಹಗಲಿನ ಮೇಲೆಯೊಂದು ಕಾಲನ್ನಿಟ್ಟು ಮುಗಿಲಿ ನೊಳು ಮಾಗಿಯಂತಾಗಿ ಮೇಲಕೆ ಸಾಗಿ ನಿಂತೆಯೊ ವಿರಾಟನಾಗಿ (ಗಿರಿ. ೯-೦೩). [ದಿಗಿಲ್ + ಏಳು$_1$ (<ಏಱ್$_1$)]

**ದಿಗೀಶ** (ನಾ). = ದಿಕ್ಪತಿ : ಶ್ರೀಶಭೂಪಾಧೀಶರುಂ ದೇವೇಶ ಮುಖ್ಯ ದಿಗೀಶರುಂ . . . ಯೋಗಾಚಾರ್ಯರುಂ ನೆರೆದೋಲಯಿಸುತಿರಲು (ಬಸಪು. ೨೪-೪೪). [ಸಂ.]

**ದಿಗೀಶ್ವರ** (ನಾ). = ದಿಕ್ಪತಿ : ಸರವತ್ತಿ ಪಾಡುವೈದೆಯರ ಗಾನಂ ದಿಗೀಶ್ವರರ ಕಿವಿಗಾನಂದಮಂ ಕಱೆಯೆ (ಹಲಪು. ೬-೫೪). [ಸಂ.]

**ದಿಗುಜಾತ** (ನಾ). ದಿಕ್ಕುಗಳ ಗುಂಪು,–ಸಮೂಹ : ಭೂತಳವನಂಬರವನಾ ದಿಗುಜಾತವನು ಬೆಳಗುತ್ತ ಸುಜನವ್ರಾತವೀಕ್ಷಿಸಲೈದಿತೀ ಪುನರ್ಭವದ ಸಂಸ್ಥಿತಿಯು (ಏಥಾಗ. ೬-೧೧-೨೭). [<ಸಂ. ದಿಗ್ಜಾತ]

**ದಿಗುಜಾಲ** (ನಾ). = ದಿಗುಜಾತ : ಸೂಳು ಮಿಗಲಲ್ಲಿಂದವರು ನಿಸ್ಸಾಳ ಕೋಟಿಗಳುದಯದಲಿ ದಿಗುಜಾಲ ಜರಿಯಲು . . . ನಡೆದುದು ಸೇನೆ ರವಿನಂದನನ ನೇಮದಲಿ (ಕುಮ್ಯಾಕ. ೨-೨). [<ಸಂ. ದಿಗ್ಜಾಲ]

**ದಿಗುಡು** 'ತಿಗುಡು$_1$' ನೋ.

**ದಿಗುತಟ** (ನಾ). = ದಿಕ್ತಟ : "ದಿಗುತಟ – ದಿಕ್ತಟ – ದಿಗಂತ" (ಶಬ್ದಕೋ. ೦೯) ; ಪೂರ್ಣಶಶಿಮಂಡಲದವೊಲು ತನುಕಾಂತಿ ಶಿವಿದುದು ನಿಖಿಳ ದಿಗು ತಟವ (ಕುಮ್ಯಾಕ. ೮-೦೯) ; ಹತ್ತು ದಿಗುತಟ ತುಂಬೆ ರಾಯರ ಮೊತ್ತ ಗಟ್ಟಿದ ಸೇನೆ ಸಹಿತವೆಯಿತ್ತಿ ಬಂದುದು ಜನಕಭೂಪನ ರಾಜಮಂದಿರಕೆ (ಕಾಶಿರಾ. ೬-೮). [<ಸಂ. ದಿಕ್ತಟ]

**ದಿಗುದಂತಿ** (ನಾ). = ದಿಗ್ಗಜ ೧ : ಅಗುರ್ವುರ್ವವೆತ್ತು ಪೋಲ್ವುದು ದಿಗು ದಂತಿಯುಂ ವಿಜಯಕಾರಣವಣ್ಣನ ಗಂಧವಾರಣ (ಎಕ. VII, ಹನ್ನಗಿ. ೩೯-೩೨ ; 1149) ; ಕೀರ್ತಿಯುಪ್ಪದಿಗುದಂತಿಪರೀತ ಮಹೀತಳಾಗ್ರದೊಳು (ಎಕ. XV, ಅರಸೀ. ೨೦೭-೯೭ ; 1232) ; ಪ್ರಳಯಜಲನಿಧಿಯಂತೆ ದಳ ಬರಲಿಳೆ ಕುಸಿಯೆ ಕಮಠಂಗೆ ಮೇಲುಸುರುಲಿಯೆ ದಿಗುದಂತಿಗಳು ಮೊಣ ಕಾಲೂರಿ ಮನಗುಂದೆ (ಕುಮ್ಯಾಅ. ೧೦-೪೦). [<ಸಂ. ದಿಗ್ದಂತಿನ್]

**ದಿಗುನಿಚಯ** (ನಾ). ದಿಕ್ಕುಗಳ ಗುಂಪು,–ಸಮೂಹ : ತನುರುಚಿ ವಿಶದ ದಿಂದಾವರಿಸಿ ದಿಗುನಿ [ಪಾಠಾಂ. ಪ್ರ]ಚಯದೊಳು ಥಳಥಳಿಸಿ ಬೆಳಗಿದುದೇನ ಬಣ್ಣಿಸುವೆ (ಬಸಪು. ೮-೧೦). [<ಸಂ. ದಿಙ್ನಿಚಯ]

**ದಿಗುಪಾಲ** (ನಾ). ದಿಕ್ಕಿನ ಒಡೆಯ,–ಪ್ರಭು ; ದಿಕ್ಪಾಲ : ಧ್ಯಾನದಲಿ ಕೈಮುಗಿದು ಶಂಕರ ನೀನೆ ಗತಿಯೆಂದೆನುತಲಾ ಶಶಿ ಭಾನು ದಿಗುಪಾಲರಿಗೆ ನಮಿಸುತ ಕೇಳಿ ನೀವೆಂದ (ಕುಮ್ಯಾಅ. ೩-೨೮). [<ಸಂ. ದಿಕ್ಪಾಲ]

**ದಿಗುಪಾಲಕ** (ನಾ). = ದಿಗುಪಾಲ : ದಿಗುಪಾಲಕರು ನಿಜಮಂದಿರಕೆ ಸರಿದರು (ಕುಮ್ಯಾಅ. ೦೩-೦೩). [<ಸಂ. ದಿಕ್ಪಾಲಕ]

**ದಿಗುಬಂಧನ** (ನಾ). ೧.=ದಿಗ್ಬಂಧನ ೧. ೨. (ಪ್ರಾಣಿಗಳಿಗೆ ಓಡಿ ಹೋಗಲುಂ ಅವಕಾಶವಿಲ್ಲದಂತೆ) ಎಲ್ಲ ಕಡೆಗಳಿಂದಲೂ ಅಡ್ಡಿ ಮಾಡುವಿಕೆ,-ನಿರ್ಬಂಧಪಡಿಸುವಿಕೆ: ಎಡೆಗೊಡದು ಬೇಂಟೆ ದಿಗುಬಂಧನಂ ಮಾಡು ಕಾಡೊಡೆಯನಂ ನೋನು ಸೊಕ್ಕಿನ ಧೂಪವಮಂ ಬೀಸು (ಹಪಳ. ೩-೫೯). [ <ಸಂ. ದಿಗ್ಬಂಧನ ]

**ದಿಗುಬಲಿ** (ನಾ). = ದಿಗ್ಬಲಿ ೨: ತಿಳಿಯದೊಡದಲಂ ಕಡಿತಡಿದು ದಿಗುಬಲಿಯನೀಯಲಿ ನೋಡುವಂ (ಬಸವು. ೪೫-೨೮); ಅವರ ತನುವನು ಯುದ್ಧರಂಗದಲಿ ದಿಗು ಬ ಲಿ ಯ ಕೊಡಿಸುವೆನು (ಕುಮಾ.ಅ. ೮-೭); ನಿಃಶಂಕರಹ ಮೂವರನು ದಿಗುಬಲಿಯ ಕೊಡುವೆನೆಂದೆನುತ (ಕಾಶಿರಾ. ೩೯-೭೨); ಅವನಂ ಸೀಳ್ದು ದಿಗುಬಲಿಯನೀಯಬೇಕಲ್ಲದೆ ಬಾಳ್ವುದೇ ಕೆನುತಿಂದ್ರನಂ ವೃತ್ರಜಂಭರಾರ್ದೆಚ್ಚರಂದು (ಜಲಪು. ೪೯-೦೫). [ <ಸಂ. ದಿಗ್ಬಲಿ ]

**ದಿಗುಬಲಿಗೊಡು** (ಕ್ರಿ). ೧. ದಿಕ್ಕುಗಳಿಗೆ ಬಲಿಯನ್ನು ಕೊಡು. ೨. (ಅಲಂ) ಚೂರುಚೂರಾಗುವಂತೆ ಕಡಿದು ಎಸೆ,-ಬಿಸುಡು: ಅಡವಿಯಲಿ ಹಿಂದೆಮ್ಮ ತಂದೆಯು ಕೆಡಹಿದಾತನ ಸಿಕ್ಕಿದೆಯಲಾ ಕಡಿದು ದಿಗುಬಲಿಗೊಡುವೆ ಬಿಡೆ ಬಿಡೆ ಹೋಹೆಯನ್ನೆತ್ತ . . . ಎನುತಸುರ ರಾಮನನೆಚ್ಚ ಮೂದಲಿಸಿ (ಕಾಶಿರಾ. ೩೩-೩೮); ನೆಱೆ ನಿಮ್ಮ ನೆನೆಯ ಲೊಲ್ಲದ ಕುಟಿಲಮನವಮಂ ಸುಡುವೆನಡುವೆ ದಿಗುಬಲಿಗೊಡುವಂ (ಶಂಕಳಂ. ೦೭). [ ದಿಗುಬಲಿ + ಕೊಡು$_1$ ]

**ದಿಗುಬಲಿಯಿಕ್ಕು** (ಕ್ರಿ).=ದಿಗುಬಲಿಗೊಡು ೨: ಹೊಕ್ಕು ಹಗೆಗಳ ಹೊಯ್ದು, ದಿಗುಬಲಿಯಿಕ್ಕಿ ನನ್ನಯ ಹರುಷಜಲಧಿಯನುಕ್ಕಿಸಲು ಬೇಕು (ಕುಮಾ.ಭೀ. ೦-೨೨). [ ದಿಗುಬಲಿ + ಇಕ್ಕು ]

**ದಿಗುಭಾಗ** (ನಾ). ದಿಕ್ಕಿನ ಭಾಗ; ದೆಸೆ: ಮೇರುಪರ್ವತದ ದಕ್ಷಿಣ ದಿಗುಭಾಗದ ಭರತಕ್ಷೇತ್ರದೊಳು (ಇಅ. XII, ೯೭-೦೪; 1187); ಆಗಳಾವುದು ನೆಲನು ನಭ ದಿಗುಭಾಗವೆಲ್ಲಿಯದೆನಲು ಕಣೆಗಳು ತೂಗಿ ತುಱುಗಿದವರಿಭಟನ ಕರಿಘಟೆಯ ಮೈಗಳಲಿ (ಕುಮಾ.ಕ. ೨-೦೯). [ <ಸಂ. ದಿಗ್ಭಾಗ ]

**ದಿಗುಭ್ರಮೆ** (ನಾ). ದಿಕ್ಕುತೋಚದಿರುವಿಕೆ; ಗಾಬರಿ: ರಣಮಹೀಸಂತ ಮಸಶಾಂತೇಕ್ಷಣರು ದಿಗುಭ್ರಮೆಯಲಿ ಸ್ವಕೀಯ ಕ್ಷಣನವನು ರಚಿಸಿದರು (ಕುಮಾ.ದ್ರೋ. ೦೫-೩೦). [ <ದಿಗ್ಭ್ರಮೆ ]

**ದಿಗುಮಂಡಲ** (ನಾ). = ದಿಙ್ಮಂಡಲ: ಉದ್ದಂಡ ಪದಹತಿಗಿಳೆ ಚಲಿಸಿ ದಿಗುಮಂಡಲಂ ಕಿವುಡಾಗೆ ಬಹುವಾದ್ಯಧ್ವನಿಗಳಿಂದ (ಬಸವು. ೩-೦೪); ಇಳಿದುದೀ ಕಣನೊಳಗೆ ದಿಗುಮಂಡಲದ ಸಂಧ್ಯಾರಾಗವೆನೆ ಪರಿದಳಿತ ಚತುರಂಗದಲಿ ಮಸಗಿದುದರುಣಜಲರಾಶಿ (ಕುಮಾ.ದ್ರೋ. ೦೫-೨೭). [ <ಸಂ. ದಿಙ್ಮಂಡಲ ]

**ದಿಗುಮತಿ** (ನಾ). ೧. (ಹಡಗಿನಲ್ಲಿ ಬಂದ) ಸರಕನ್ನು ಇಳಿಸುವಿಕೆ. ೨. ಆಮದು ಮಾಡಿಕೊಳ್ಳುವಿಕೆ: ಇತರ ದೇಶಗಳಿಂದ ಬರುವ ಸರಕುಗಳು (ದಿಗುಮತಿ)-ಹತ್ತಿಯಿಂದ ತಯಾರಾಗುವ ಬಟ್ಟೆಗಳೂ . . . ಉಪ್ಪು ಎಣ್ಣೆ (ಖೂಗೋಳ. ೩೯). 'ಎಗುಮತಿ', 'ಎಗುಮತಿ ದಿಗುಮಂತಿ' ಪರಾ. [ ←ತೆಲು. ದಿಗುಮತಿ ]

**ದಿಗುಮುಖ** (ನಾ).=ದಿಙ್ಮುಖ. 'ದಿಗುಮುಖಂಗಿಡಿಸು' ಪರಾ. [ <ಸಂ. ದಿಙ್ಮುಖ ]

**ದಿಗುಮುಖಂಗಿಡಿಸು** (ಕ್ರಿ). ದಿಕ್ಕುಗಳನ್ನೆಲ್ಲ ಮುಚ್ಚು; ದಿಕ್ಕುಕಾಣದಂತೆ ಮಾಡಂ: ಬಂದ ಮಳೆಯೊಳು ಕವಿದ ಕತ್ತಲೆ ಕರಂ ಹೆಚ್ಚಿ ಸಂದಣಿಸಿ ದಿಗುಮುಖಂಗಿಡಿಸಿ ಜಗಮಂ ಮುಚ್ಚೆ (ಶಿಶಿರ. ದೇ. ೫೨-೨). [ ದಿಗುಮುಖ + ಕೆಡಿಸು (<ಕೆಡಿಸು) ]

**ದಿಗುರು** 'ದಿಗರು' ನೋ.

**ದಿಗುರುತ್ತರ** (ನಾ). ಎದುರುತ್ತರ; ಒರಟು ಉತ್ತರ; ಸೊಕ್ಕಿನಿಂದ ಕೂಡಿದ ಉತ್ತರ: ಅದಕ್ಕವನು ದಿಗುರುತ್ತರವ ಕೊಟ್ಟುದರಿಂದ ಹುಮಾ ಯೂನನು ಗುಜರಾಥವನ್ನೊಳನುಗ್ಗಲಿಕ್ಕೆ ಹೊರಟನು (ಪೋಚಾದ. ೩೭). [ ದಿಗುರು (<ದಿಗರು) + ಉತ್ತರ ]

**ದಿಗುವಳಯ, ದಿಗ್ವಳಯ**(ನಾ). = ದಿಗ್ವಲಯ: ಕಲಿಗಳುಬ್ಬಿನ ರೋಷ ತಾಮಸ ತುಳುಕಿತನೆ ದಿಗುವಳಯದಲಿ ಕುಡಿವೆಳಗ ಕುಡಿಕುಡಿದದರುತಿರ್ದುದು ತಿಮಿರಲಕ್ಷಿ ಜಗವ (ಕುಮಾ.ದ್ರೋ. ೦೫-೨೭); ಇಳಿದರಂದಾ ದುರ್ಗವ ದಿಗುವಳಯ ಬೆ ಸ ಲಾ ದ ಂ ತೆ (ತೊರರಾ. ೬-೦೭-೦೦). ದಿಗ್ವಳಯ: ಪದ್ಮಾವತೀಲಬ್ಧ ವರಪ್ರಸಾದಂ ಯಶಸ್ಸುಧಾಧವಳಿತ ದಿಗ್ವಳಯನುಂ ... ಶ್ರೀಮನ್ಮಹಾಮಣ್ಡಳೇಶ್ವರಂ ಪೂ ಂ ಡ ೂ [ ರ ] ಪ ಲ್ಲ ವ ರ ಸ ರ್ (ಕಇಳ. ೪೦-೩೮-೦೨; 1087). [ <ಸಂ. ದಿಗ್ವಲಯ ]

**ದಿಗುವಿಜಯ** (ನಾ).=ದಿಗ್ವಿಜಯ ೧: ಭುಜಪರಾಕ್ರಮಚಕ್ರಿಯನು ದಿಗು ವಿಜಯವಿಕ್ರಮಚಕ್ರಿಯನು ನೃಪ ಸೃಜಿಸಿದನು ನಿಜಮಹಿಮೆಯುಲಿ ದಶರಥ ಮಹೀಪತಿಯು (ತೊರರಾ. ೦-೩-೦೬). [ <ಸಂ. ದಿಗ್ವಿಜಯ ]

**ದಿಗ್ಗಜ** (ನಾ). ೧. ಎಂಟು ದಿಕ್ಕುಗಳಲ್ಲಿಯೂ ಭೂಮಿಯನ್ನು ಹೊತ್ತಿರುವ ಐರಾವತವೇ ಮೊದಲಾದ ಎಂಟು ಆನೆಗಳಲ್ಲಿ ಒಂದು; P ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ ಮತ್ತು ಸುಪ್ರತೀಕ ಇವು ಅಷ್ಟ ದಿಗ್ಗಜಗಳು: "ಐರಾವತಂ . . . ಸುಪ್ರತೀಕಮೆನೆ ಪರಿವಿಡಿಯ ದಿಗ್ಗಜಂ" (ಮಂಗರಾ. ೦೭-೦೮); ಅಹಿಪತಿ ಪೆಡೆಯಂ ಬಿರ್ಚಿದಂ ದಿಗ್ಗಜಂ ಭೋರೆನ ದಾನಾಸಾರಮಂ ಸೂಸಿದುವು ಕಮಠನುಂ ತೂಗಿದಂ ಹರ್ಷದಿಂದಂ (ಜಗವಿ. ೩-೪); ನೊಕೆದನು ಭಗದತ್ತನನಿಬರ ಮೇಲೆ ದಿಗ್ಗಜವ (ಕುಮಾ.ದ್ರೋ. ೩-೪೦); ದಿಗ್ಗಜಗಳು ಭೂಮಿಯನ್ನು ಅಷ್ಟದಿಕ್ಕುಗಳಲ್ಲಿಯೂ ಹೊತ್ತು ಕೊಂಡಿರುವುವು (ಜ್ಯೋತಿವಿ. ೧೧). ೨. (ಅಲಂ) ಪಾಂಡಿತ್ಯ, ಬಹು ಶ್ರುತತ್ವ, ಪರಾಕ್ರಮ ಮೊದಲಾದಂವುಗಳಲ್ಲಿ ಖ್ಯಾ ತಿ ಯ ನ್ನು ಹೊಂದಿದ ವ್ಯಕ್ತಿ; ಉದ್ದಾಮ ವ್ಯಕ್ತಿ: ಅವರು ಕನ್ನಡದ ದಿಗ್ಗಜಗಳಲ್ಲಿ ಒಬ್ಬರು (ರೂಢಿ). ೩. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ: ಅಷ್ಟ, ವಸು, ಗಜ, ದಿಗ್ಗಜ . . . ದಿಗ್ದಂತಿ ಇಂತಿನಿತುಂ ರಕ್ಕೆ ಹೆಸರು (ವ್ಯವಹಾ. ೧೦-೧). [ ಸಂ. ]

**ದಿಗ್ಗಜರಾಜಿ** (ನಾ). ದಿಗ್ಗಜಗಳ ಗುಂಪು,-ಸಮೂಹ; ಐರಾವತವೇ ಮೊದಲಾದ ಎಂಟು ಆನೆಗಳು: ತಿದಿವೋಲ್ ದಿಗ್ಗಜರಾಜಿ ಗೋಣ್ಮಿಸಿದು ವಕ್ತ್ರಶ್ವಾಸಮಂ ಬೀಱುತಿರ್ದುದು . . . ಖಳನೃಪಾಲಾಕ್ಷೌಹಿಣೀಭಾರದಿಂ (ಜಗವಿ. ೦-೩೦). [ ದಿಗ್ಗಜ + ರಾಜಿ$_1$ ]

**ದಿಗ್ಗನೆ** (ಅ). ತಕ್ಷಣ; ಕೂಡಲೆ: ಒರ್ವಳೆ ದಿಗ್ಗನೆಯಿಂದ ಬಂದಳೀ ತರುಣ ಬನಕ್ಕೆ (ಅನಂಪು. ೭-೦೩); ಇವರನ್ನು ಕಂಡು ದಿಗ್ಗನೆದ್ದನು (ಮಾನಿಮಾ. ೧೫೦); ನಮ್ಮ ಪೂರ್ವದ ಪರಾಕ್ರಮಿಗಳು ದಿಗ್ಗನೇಳುವರು (ಅಬ್ಬಿಹೊ. ೯೦). [ ದಿಗ್$_0$ + - ಅನೆ$_1$ ]

**ದಿಗ್ಗವಿಗೆ** (ನಾ). ಒಂದು ಊರಿನ ಹೆಸರು: ಆ [ಹೊ]ಲಂ ನಾಗವಾವಿಯ ದಿಗ್ಗವಿಗೆಯ ಅಬಿಲೂರ ಎಡೆವಾ ಅನದ [ಕೆ]ಳಗೆ ಭ ಟ್ಟಾ ದ ರ್ಶ ನ ವ್ಯಾಖ್ಯಾತೃಗೆ ಮತ್ತರು ೩೫ ನ್ಯಾಸವ್ಯಾಖ್ಯಾತೃಗೆ ಮತ್ತರು ೩೦ ಪ್ರಭಾಕರ ವ್ಯಾಖ್ಯಾತೃಗೆ ಮತ್ತರು ೪೫ (ಕಇಳ. ೬-೨-೨೦೩; 1058). [ ? ]

**ದಿಗ್ಗೇಡಿ** 'ದಿಕ್ಕುಗೇಡಿ' ನೋ.

**ದಿಗ್ವೃತ** (ಗು). ದಿಕ್ಕುಗಳನ್ನು ಮುಚ್ಚಿದ,-ತಾಗಿದ: ವಿಲಸದ್ಧವಳ ಸ ಮ್ಯ ಗ್ಬ ನ ತ ರ ವಿಯದ್ದರಾಖಿಳ ದಿಗ್ವಿ[ಗ್ವೃ]ತಯಶೋರಾಶಿ ಭಕ್ತ ಸಮುದ್ಧರಣ ಬಸವ (ಬಸವು. ೩೮-೦). [ ಸಂ. ]

**ದಿಗ್ಘಿಗೆ** (ನಾ). ಕೆರೆ ; ಕೊಳ ; ಸರೋವರ: ಎಸೆದಿರ್ಪ್ಪುವೊ ಸೇವ್ಯಮಾಗಿ ನಾನಾವಿಧಮಪ್ಪ ಚಿತ್ರವಳಿವಂಟಗೆ ದಿಗ್ಘಿಗೆ ಸಾಲ್ಕ ನನ್ದನಂ ಬಾವಿ ತಟಾಕಮಗ್ಗಿಟ[ಗೆ]ಯಾರವೆ [ವಿಷ್ಣು]ಗೃಹಂ ಶಿವಾಲಯಂ (ಕಇ. V, ೧೨-೪೦ ; 1080). [ <ಪ್ರಾ. ದಿಗ್ಘಿಆ./ಸಂ. ದೀರ್ಘಿಕಾ ]

**ದಿಗ್ಜಯ** (ನಾ). = ದಿಗ್ವಿಜಯ ೧. 'ದಿಗ್ಜಯಂಗೆಯ್' ಪರಾ. [ ಸಂ. ]

**ದಿಗ್ಜಯಂಗೆಯ್** (ಕ್ರಿ). ದಿಗ್ವಿಜಯವನ್ನು ಮಾಡು: ವನಿತಾಸಂಕುಳ ಮಿಂಬುಕೆಯ್ಕ ನಿಜತೇಜಂ ದಿಗ್ಜಯಂಗೆಯ್ಕೆ . . . ಕೃಷ್ಣನ ಕಾರುಣ್ಯ ಮನವ್ಮಕೆಯ್ದುರಸುಗೆಯ್ದುಂ ಲೀಲೆಯಿಂದಾಹುಕಂ (ಜಗವಿ. ೬-೨).
[ ದಿಗ್ಜಯ + ಕೆಯ್$_1$ ]

**ದಿಗ್ಜಯೋದ್ಯಮ** (ನಾ). ದಿಕ್ಕುಗಳನ್ನು ಗೆಲ್ಲುವ ಕಾರ್ಯ; ದಿಗ್ವಿಜಯದ ಪ್ರಯತ್ನ: ಆತನ ದಿಗ್ಜಯೋದ್ಯಮನಾಂ ವಿಗೆ ವೇಟದೊಡೇನೊ (ಪುಷ್ಪಪು. ೩-೧೯). [ ದಿಗ್ಜಯ + ಉದ್ಯಮ ]

**ದಿಗ್ದಂತಿ** (ನಾ). ೧. = ದಿಗ್ಗಜ ೧: ವನನಾಗಾರಿಯನಾಂತ ದಂತಿಶಿಶುವೋಲ್ ದಿಗ್ದಂತಿಯೊಳ್ ಪೋರ್ದ ಹೀನನವೋಲ್ (ಶಾಂತಿಪು. ೫-೨೬) ; ಆ ಗಂಭೀರ ದಿಗ್ದಂತಿ, ತೊರೆದು ಗಾಂಭೀರ್ಯವಂ, ತರಳಚಂಚಲಚಿತ್ತದಿಂ ಬೀದಿ ವರಿವುದಯ್ ದೆಸೆದೆಸೆಗೆ (ಶ್ರೀರಾಮಾ. ೯೫-೪೬೨). ೨. = ದಿಗ್ಗಜ ೨: ಕನ್ನಡ ನಾಡಿನ ಇಬ್ಬರು ಹಿರಿಯ ದಿಗ್ದಂತಿಗಳಿಂದ ನನಗಾಗಿರುವ ಮಹೋಪಕಾರವನ್ನು ಕೃತಜ್ಞತೆಯಿಂದ ಕರ ಜೋಡಿಸಿ ಸ್ಮರಿಸುತ್ತೇನೆ (ಸವತಿ. XV ಪ್ರಸ್ತಾವನೆ). ೩. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ: ವ್ಯೋಮದ್ವಯಂ ಮುಂತೆ ದಿನೇಶ ಪಾವಕರ್ ತಾಮೊಂದಿ ದಿಗ್ದಂತಿಯೊಳಾಗೆ ವಿಶ್ರಮಂ (ಛಂದೋಂಬು. ೨-೦೨೯).
[ ಸಂ. ದಿಗ್ದಂತಿನ್ ]

**ದಿಗ್ದಂತಿಯೂಥ** (ನಾ). ದಿಗ್ಗಜಗಳ ಗುಂಪು,-ಸಮೂಹ: ದಿಗ್ದಂತಿ ಯೂಥಕ್ಕೆ ಚಿಬ್ಬುಮನುದ್ಯಾನವನಕ್ಕೆ ಪೂದುಬುಗಲಂ ... ಮೆಯ್ವೆರ್ಚಿಸಲ್! ಸಾಲ್ದು ತಳ್ತವದೋರ್ಘಿರ್ದುದುದೀರ್ಣಕೀರ್ಣಪವನಾಂಭಃಶೀಕರು ಶ್ರೀಕರಂ (ಪುಷ್ಪಪು. ೧೦-೩೩). [ದಿಗ್ದಂತಿ + ಯೂಥ ]

**ದಿಗ್ದರ್ಶಕ** (ಗು). ೧. ದಾರಿತೋರಿಸುವ ; ಮಾರ್ಗದರ್ಶನ ಮಾಡುವ. (ನಾ). ೨. ನಾಟ್ಯ, ನಾಟಕ,ಚಲನಚಿತ್ರ ಮೊದಲಾದುವುಗಳನ್ನು ನಿರ್ದೇಶಿಸುವವನು ; ಸೂಚನೆಗಳನ್ನು ಕೊಡುವವನು : ದಿಗ್ದರ್ಶಕ ಹಾಗೂ ಕಲಾವಂತರು ಒಬ್ಬರಿಗೊಬ್ಬರು ಪೂರಕವಾಗಿರುವರು (ಪ್ರಬಂಧ. ೩೯). 'ನಾಟ್ಯದಿಗ್ದರ್ಶಕ' ಪರಾ. [ ಸಂ. ]

**ದಿಗ್ದರ್ಶನ** (ನಾ). ೧. ದಿಕ್ಕುಗಳನ್ನು ತೋರಿಸುವುದು. ೨. ನಾಟ್ಯ, ನಾಟಕ, ಚಲನಚಿತ್ರ ಮೊದಲಾದುವನ್ನು ನಿರ್ದೇಶಿಸುವುದು. ೩. ಸ್ಥೂಲವಾದ ನಿರೂಪಣೆ,-ವಿವರ : ಅದರ ದಿಗ್ದರ್ಶನವು ಮಾತ್ರ ನಮಗೆ ದೊರೆತಿದೆ (ಹರಿಸಿ. ೯೩); ಆ ಉತ್ತರದ ದಿಗ್ದರ್ಶನವನ್ನು ಮಾತ್ರ ಮಾಡುವೆವು (ಚಚರ. ೪೯). ೪. ಉತ್ತರಮುಖಿ ; ದಿಕ್ಸೂಚಿ.
[ ಸಂ. ]

**ದಿಗ್ದಾಹ** (ನಾ). ದಿಕ್ಕುಗಳಲ್ಲಿ ಅಸ್ವಾಭಾವಿಕವಾಗಿ ಬೆಂಕಿ ಕಾಣಿಸಿಕೊಳ್ಳುವ ಉತ್ಪಾತ; ಅಪಶಕುನಗಳಲ್ಲಿ ಒಂದು; ಈ ರೀತಿ ಕಾಣಿಸಿಕೊಳ್ಳುವ ಬೆಂಕಿಯು ರಾಜಭಯ, ದೇಶನಾಶ ಮುಂತಾದುವನ್ನು ಸೂಚಿಸುತ್ತದೆ ಎಂಬ ನಂಬಿಕೆಯಿದೆ: ರಜಮುಂ ದಿಗ್ಧೂಮಮುಂ ಸಂದಣಿಸೆ ಪರುಷವಾತಾಹತಿ ಪ್ರೋಚ್ಚಳತ್ಸಾಮಜ ಸೇನಾಕುಂಭಸಿಂಧೂರಮುಂ ಮೊದವಿದ ದಿಗ್ದಾಹಮುಂ ಕೂಡೆ (ಆದಿಪು. ೧೪-೮೯). [ ಸಂ. ]

**ದಿಗ್ದೇಶ** (ನಾ). ದಿಕ್ಕುಗಳ ಪ್ರದೇಶ,-ಭಾಗ : ಪಕ್ಷಿರಾಜನ ತೀಕ್ಷ್ಣದಕ್ಷಿಯೋಲ್ ನೋಡಿದನು ಕಣ್ಣಟ್ಟಿ ದಿಗ್ದೇಶವಂ (ಶ್ರೀರಾಮಾ. ೧೫೭-೧೪೮).
[ ಸಂ. ]

**ದಿಗ್ದೇವತೆ** (ನಾ). ದಿಕ್ಕಿನ ದೇವತೆ: ದೆಸೆದೆಸೆಯೆನಿತಕ್ಕಂ ದರಹಸಿತಾನನ ವಳಯದಂತೆ ಸೊಗಯಿಪ ಪದ್ಮಾದಿ ಸರೋವರಂಗಳೊಳ್ ಪಳಯಿಸಿದರಿವರ್ ದೇವ ಪೆಸರೆ ದಿಗ್ದೇವತೆಯರ್ (ಅನಂಪು. ೪-೬೯).
[ ಸಂ. ದಿಗ್ದೇವತಾ ]

**ದಿಗ್ಧ** (ಗು). ೧. ಲೇಪನ ಮಾಡಿದ ; ಬಳಿದ ; ಲೇಪಿಸಿದ: "ಉಪಲಿಪ್ತಂ ದಿಗ್ಧಂ" (ವಸ್ತುಕೋ. ೦೦೫-೪೧) ; ಪರಮಶಿವಭಕ್ತನಾ ವಿಷ್ಣುವೆಂತೆನಲ್ ಭಸ್ಮ ದಿಗ್ಧಾಂಗಂ ತ್ರಿಪುಂಡ್ರಾಂಕಿತೋಕ್ತಸ್ಥಲಂ (ಪದ್ಮಚ. ೦೧-೩೬೦); ವ್ಯಾಧ ವಿಷದಿಗ್ಧಬಾಣಕ್ಕುರುಳಿ ಬೀಳಲ್ಕೆ ವೆಣ್ಣಾನೆ ತಾಂ ಗಂಡಾನೆ ಸೊಂಡಿಲಿಂದದನಪ್ಪಿ (ಶ್ರೀರಾಮಾ. ೬೭-೩೬೩). ೨. ಬೆಳೆದಿರುವ ; ವೃದ್ಧಿ ಹೊಂದಿರುವ. (ನಾ). ೩. ವಿಷವನ್ನು ಬಳಿದ ಬಾಣ: "ದಿಗ್ಧಃ, ಲಿಪ್ತಃ - ೨ ವಿಷಾಕ್ತೆ, ನಂಜು ಪೂಸಿದ ಕೋಲು, ವಿಷ ಬಳಿಯಲ್ಪಟ್ಟ ಸರಳು, ವಿಷಬಾಣ" (ಸಿದ್ಧಾಂತಿ. ೨೬೩). ೪. ಎಣ್ಣೆ ; ತೈಲ. ೫. ಬೆಂಕಿ ; ಅಗ್ನಿ. [ ಸಂ. ]

**ದಿಗ್ಧವ** (ನಾ). = ದಿಕ್ಪಾಲ : ಇವನಿಂದಂ ಕಣ್ಣೆನೇಳಂ ಕಡಲ ಕಡೆಯನೇಳಂ ಕುಭೃತ್ಕೂಟವಂ ದಿಗ್ಧವದಂತಿಬ್ರಾತವಂ (ಎಕ. VII, ಶಿವಮೊ. ೬೪-೯ ; 1112 ?). [ ಸಂ. ]

**ದಿಗ್ಧಿಕೆ** (ನಾ). ಒಂದು ಬಗೆಯ ಸಸ್ಯ; ನೆಲಗುಳ್ಳ: "ದಿಗ್ಧಿಕಾ – ನೆಲಗುಳ್ಳ" (ಚಿಕಧಿ. ೭೩). [ ? ]

**ದಿಗ್ಧೂಮ** (ನಾ). ದಿಕ್ಕುಗಳಲ್ಲಿ ಅಸ್ವಾಭಾವಿಕವಾಗಿ ಕಾಣಿಸಿಕೊಳ್ಳುವ ಹೊಗೆ: ರಜಮುಂ ದಿಗ್ಧೂಮಮುಂ ಸಂದಣಿಸೆ ಪರುಷವಾತಾಹತಿ ಪ್ರೋಚ್ಚಳತ್ಸಾಮಜ ಸೇನಾಕುಂಭಸಿಂದೂರಮುಂ ಮೊದವಿದ ದಿಗ್ದಾಹಮುಂ ಕೂಡೆ . . . ದೆಸೆ ಬರ್ದಂತೆ ಬಂದೊಡ್ಡಿ ನಿಂದಂ (ಆದಿಪು. ೧೪-೮೯). 'ದಿಗ್ದಾಹ' ಪರಾ. [ ಸಂ. ]

**ದಿಗ್ಬಂಧ** (ನಾ). ೧. ತಡೆಯುವಿಕೆ ; ನಿರ್ಬಂಧ ; ನಿಗ್ರಹ. ೨. ಜಪ ಹೋಮಾದಿ ಕರ್ಮಗಳಲ್ಲಿ ಮಾಡಬೇಕಾದ ಒಂದು ಆಂಗಿಕ ಕ್ರಿಯೆ: ಕಾಯ ದಿಗ್ಬಂಧ ಪ್ರಣಾಮ ವಿಧೇಯವರ್ಜನೆ ಯೋಗಸಿದ್ಧಿ ನಿಕಾಯ ನಾಲ್ಕರ ಇಂದ್ರಿಯ ಸ್ಥಿತಿಗತಿಯನಾರೈದು ಆಯುವನು ವಿವರಿಸುತ (ಶಂಖ್ಯಾಕಾ. ೪-೩೫). [ ಸಂ. ]

**ದಿಗ್ಬಂಧನ** (ನಾ). ೧. ಕೇಡನ್ನು ತಡೆಯುವುದಕ್ಕಾಗಿ ಮಂತ್ರಶಕ್ತಿಯಿಂದ ಮಾಡುವ ದಿಕ್ಕುಗಳ ಬಂಧನ: ಮಂತ್ರಸಿದ್ಧಿಸೂಚಕವಾದ ಮಾತೃಕಾ ಚಕ್ರ, ಸರ್ವತೋಭದ್ರ, ಕೂರ್ಮಚಕ್ರ, ದಿಗ್ಬಂಧನ, ರಕ್ಷಾಯಂತ್ರಾದಿಗಳ ಕ್ರಮವನರಿತು (ವಿವೇಕ. ೮೦) ; ಅಸುರ ಮಾಯಾಮಂತ್ರಮಂ ಜಪಿಸಿ ಫಣೆಯೊಳಂ ಭಸಿತಮನು ಧರಿಸಿ ದಿಗ್ಬಂಧನಗಳಗೈದು (ಸಪಮೋ. ೨೬-೦೩). ೨. ಅಂಗಾಂಗಗಳ ಚಲನವಿರದಂತೆ ಮಂತ್ರಶಕ್ತಿಯಿಂದ ಬಂಧಿಸುವಿಕೆ. ೩. (ಎಲ್ಲಾ ಕಡೆಯಿಂದಲೂ ಉಂಟಾದ) ನಿರ್ಬಂಧ,-ಇಕ್ಕಟ್ಟು : ಸನ್ನಿವೇಶದ ದಿಗ್ಬಂಧನದಿಂದ, ಅಂದು ನನ್ನ ಕೈಕಾಲು ಕಟ್ಟಿದ್ದವು (ನಿಕಾ. ೧೧೮). [ ಸಂ. ]

**ದಿಗ್ಬಲಿ** (ನಾ). ೧. ದಿಕ್ಕುಗಳಿಗೆ ಕೊಡುವ ಬಲಿ ; ಮನೆಯ ಸುತ್ತ ದಿಕ್ಕುಗಳಿಗೆ ಅನ್ನವನ್ನು ಎಸೆದು ಮಾಡುವ ಬಲಿ ; ಬಲಿಕೊಟ್ಟ ಪ್ರಾಣಿಯ ಮಾಂಸದ ತುಂಡುಗಳನ್ನು ಹಾಗೂ ರಕ್ತವನ್ನು ಅಥವಾ ಕೆಂಪುಬಣ್ಣದ ಅನ್ನವನ್ನು ದೇವಾಲಯ ಹಾಗೂ ಹಳ್ಳಿಯ ಸುತ್ತಲೂ ದಿಕ್ಕುಗಳಿಗೆ ಬಲಿಯೆಂದು ಚೆಲ್ಲುವಿಕೆ : ಗೃಹಪ್ರವೇಶದ ಸಂದರ್ಭದಲ್ಲಿ ಮನೆಯ ಯಜಮಾನರು ಗೃಹಶಾಂತಿಗಾಗಿ ದಿಗ್ಬಲಿಯನ್ನು ಕೊಟ್ಟರು (ಊಧಿ). ೨. (ಆಲಂ) ಕೊಂದು ಬಿಸುಡುವಿಕೆ : ತನ್ನವರಂಗಕ್ಷೋಣಿ ರಕ್ಕಸರ ತಲೆಗಳನರಿದು ದಿಗ್ಬಲಿಯ ಕೊಟ್ಟನಂತುಗ್ರದಿಂದ (ವೀಶೈಪು. ೨-೧೧-೯). [ ಸಂ. [

**ದಿಗ್ಬಲಿಗೆದರು** (ಕ್ರಿ). ದಿಕ್ಕುದಿಕ್ಕಿಗೆ ಎಸೆ ; ದಿಕ್ಕಾಪಾಲಾಗಿ ಬಿಸುಡು : ಆ ಭಿಕಾರಿ ರಾಯನನ್ನೂ ಅವನ ಜನರನ್ನೂ ತುಂಡುತುಂಡಾಗಿ ಕತ್ತರಿಸಿ, ದಿಗ್ಬಲಿಗೆದರಿ, ಅಳ್ಳಾಡಿಸಿ ಧ್ವಂಸ ಮಾಡಿಬಿಡುವವನು (ಮಂತ್ರಶ. ೪೭-೧೩).
[ ದಿಗ್ಬಲಿ + ಕೆದರು (<ಕೆದಱ್$_1$) ]

**ದಿಗ್ಭರಿತ** (ಗು). ದಿಗಂತವನ್ನು ತುಂಬಿದ,-ವ್ಯಾಪಿಸಿದ : ಕುಮಾರಸ್ವಾಮಿ ಗಂದು ಬಿತ್ತರಿಸಿದಂ ವೇದಾಂತಶಾಸ್ತ್ರಮಂ ದಕ್ಷಿಣಾಮೂರ್ತಿ ದಿಗ್ಭರಿತಕೀರ್ತಿ (ವೀಶೈಪು. ೩-೨೦-೧೮). [ ಸಂ. ]

**ದಿಗ್ಭವ** (ನಾ). ದಿಕ್ಕಿನಿಂದ ಹುಟ್ಟಿದುದಂ ; ವೈಹಾಯಸ, ಭೌಮ, ದಿಗ್ಭವ, ಸೈನ್ಯಜ, ಗೃಹೋದ್ಭೂತಗಳೆಂಬ ಐದು ರೀತಿಯ ಉತ್ಪಾತಗಳಲ್ಲಿ ಒಂದು : ವೈಹಾಯಸ ಭೌಮ ದಿಗ್ಭವ ಸೈನ್ಯಜ ಗೃಹೋದ್ಭೂತಂಗಳಯ್ದು ತೆಱದುತ್ಪಾತಂಗಳೊಡನೊಡನೆ ನೆಗೆದುವಾಗಳ್ (ಶಾಂತಿಪು. ೬-೨೦೬.೩). 'ದಿಗ್ದಾಹ' ಪಾಠ. [ ಸಂ. ]

**ದಿಗ್ಭ್ರಮೆ** (ನಾ). ದಾರಿ ಅಥವಾ ಮಾರ್ಗ ತಪ್ಪಿಹೋದ ಸ್ಥಿತಿ; ಉಪಾಯ ತೋರದ ಸ್ಥಿತಿ; ವಿಸ್ಮಯ ; ಗಾಬರಿ : ಇನಮಂಡಲಕೆ ದಿಗ್ಭ್ರಮೆಯಾಯ್ತು ನಭದಲಿ ಸುಳಿವ ಸುರರ ವಿಮಾನತತಿ ಚೆಲ್ಲಿದವು ದೆಸೆದೆಸೆಗೆ(ಕುವ್ಯಾಅ. ೨೦-೨೯); ಯಾವ ದಿಕ್ಕಿನಲ್ಲಿಯೂ ಏನೇನೂ ಕಾಣುತ್ತಿರಲಿಲ್ಲ ನಾವಿಕರಿಗೆ ದಿಗ್ಭ್ರಮೆಯುಂಟಾಗಿದೆಯೆಂದು ಗೊತ್ತಾಯಿತಂ (ಕಪಾಕಾಂ.೩).
[ ಸಂ. ದಿಗ್ಭ್ರಮ ]

**ದಿಗ್ಭ್ರಮೆಗೊಳಿಸು** (ಕ್ರಿ). ಬೆರಗುಗೊಳಿಸು ; ವಿಸ್ಮಯವನ್ನುಂಟು ಮಾಡು: ಕುಂಚವನ್ನಾಡಿಸುವುದರಲ್ಲಿ ಅಜಂತಾ ಕಲಾಕಾರರ . . . . ನಿರ್ಮಾಣತಂತ್ರ ವಿಶ್ವದ ಎಲ್ಲಾ ಕಲಾವಿಮರ್ಶಕರನ್ನು ದಿಗ್ಭ್ರಮೆಗೊಳಿಸಿದೆ (ಭಾರದ. ೩೨೩). [ ದಿಗ್ಭ್ರಮೆ + ಕೊಳ್$_1$ + – ಇಸು$_3$ ]

**ದಿಗ್ಭ್ರಮೆಹಿಡಿಸು** (ಕ್ರಿ). ಗಾಬರಿಗೊಳಿಸು ; ವಿಸ್ಮಯತರು : ಭಿನ್ನ ಭಿನ್ನ ಪ್ರಭಾವಗಳ ಅಲೆಗಳು ಸಾಮಾನ್ಯರಿಗೆ ದಿಗ್ಭ್ರಮೆಹಿಡಿಸುವಂತೆ ಹೊಯ್ದಾಡುತ್ತಿವೆ (ಶಿಕ್ಷದ. ೬೯).
[ ದಿಗ್ಭ್ರಮೆ + ಹಿಡಿಸು (<ಪಿಡಿಯಿಸು) ]

**ದಿಗ್ಭ್ರಾಂತ** (ಗು). ೧. ದಿಕ್ಕು ತೋಚದಂತಹ; ಗಾಬರಿಗೊಂಡ. (ನಾ). ೨. ಗಾಬರಿಗೊಂಡವನು; ದಿಗ್ಭ್ರಮೆಗೊಳಗಾದವನು : ಅಲ್ಲಮಪ್ರಭು ಒಂದು ಕ್ಷಣ ಆಗಿಹೋದ ಅಪಘಾತಕ್ಕೆ ಮರುಗಿ ದಿಗ್ಭ್ರಾಂತನಾಗಿ ಶೋಕಿಸುತ್ತಾನೆ (ಹೊಸ್ಮಳು. ೧೪೯) ; ವೈತರಣೀ ನದಿಯ ಪರಿಸರ. ಅದನ್ನು ನೋಡಿ ಮುನಿ ದಿಗ್ಭ್ರಾಂತನಾಗುತ್ತಾನೆ (ನಡದಾ. I, ೩೪೦). [ ಸಂ. ]

**ದಿಗ್ಭ್ರಾಂತಿ** (ನಾ). = ದಿಗ್ಭ್ರಮೆ. [ ಸಂ. ]

**ದಿಗ್ಭ್ರಾಮಿತ** (ನಾ). ಗದಾಯುದ್ಧದ ವರಸೆಗಳಲ್ಲಿ ಒಂದು : ವಿಳಂಬಿತ ಮಹಾಕುಂಚಿತಮಾಸ್ಫೋಟಿತಮಾಕ್ಷಿಪ್ತಮುದ್ಭ್ರಾಮಿತಂ ದಿಗ್ಭ್ರಾಮಿತಂ . . . . ಎಂಬೆಂಟುಂ ತೆಱದ ಪ್ರಹರಣಂಗಳೊಳಂ ಅತಿಪರಿಚಿತರಾಗಿ ವೈಶಾಖಸ್ಥಾನದೊಳ್ ನಿಂದು (ಗದಾಯು. ೮-೧ ವ). 'ಉದ್ಭ್ರಾಮಿತ' ಪಾಠ.
[ ಸಂ. ]

**ದಿಗ್ರದನಿ** (ನಾ). = ದಿಗ್ಗಜ ೧ : ಮದಧಾರಾವೃಷ್ಟಿ (ಪಂಕಂ) ಮಸಗಿಸೆ ಕೆಲನಂ ಘೋಷಘಂಟಾರವಂ ದಿಗ್ರದನಿಶ್ರೋತ್ರಕ್ಕೆ ಸಂಪಾದಿಸೆ ಬಧಿರತೆಯುಂ. . . ಬಂದುದಾದನ್ಯಚಕ್ರಕ್ಕಿದು ಕಲ್ಪಾಂತಾಭ್ರಮೆಂಬಂತಿದಿತರಿಪು ಮನೋದೈನ್ಯಮುಗ್ರೇಭಸೈನ್ಯಂ (ಪುಷ್ಪಪು. ೩-೯). [ ಸಂ. ದಿಗ್ರದನಿನ್ ]

**ದಿಗ್ರಮಣ** (ನಾ). ದಿಕ್ಕಿನ ಒಡೆಯ,-ಪ್ರಭು ; ದಿಕ್ಪತಿ : ವಿಗ್ರಹಸಮಯ ನಿಗ್ರಹ ಹಿತಾನುಗ್ರಹಗರಳಭಗ್ರಸನನುತದಿಗ್ರಮಣ ಶೈವಾಗ್ರಗಣ್ಯವೃದಗ್ರ ಬಲಶೌರ್ಯ . . . ಭಕ್ತಿಸಮಗ್ರ ಬಸವೇಶ (ಬಸಪು. ೩೪-೮೬); ದಿಗ್ರಮಣ ನುತಪಾದಶತಪತ್ರ ಫಣಿಯಗ್ರಸೂತ್ರ ಧಾವಳ್ಯಗಾತ್ರಾ . . . ವಾಗ್ರಚನೆಯಿಂದ ಕೃತಿಯ ನಡಸುಗೆ ಪೊಲಿದು (ನವಮೋ. ೩-೧). [ ಸಂ. ]

**ದಿಗ್ರಾಜಿ** (ನಾ). ಎಲ್ಲ ದಿಕ್ಕು : ಬನಮಂ ಕೆಂದಳಿರಿಂದೆ ಬಾಸಣಿಸುತಂ ದಿಗ್ರಾಜಿಯಂ ಬಂದ ಮಾವಿನ ಕಂಪಿಂದಮೆ ಪೂಸುತಂ (ಕಾದಂಉ. ೬೮೧).
[ ಸಂ. ]

**ದಿಗ್ವರ** (ನಾ). = ದಿಗ್ರಮಣ : ಉರ್ಕಳಿದರ್ ದಿಗ್ವರರಂಜಿದರ್ ದಿವಿಜರುರ್ವೀಧ್ರವ್ರಜಂ ಸೀಳ್ದುದು (ರಾಜಶೇ. ೩-೩೬) ; ಪೂಮಳೆಯು ಸುರಿಯೆ ದೇವಾಸುರಹರಿಯಜಮನುಮುನಿಗರುಡಗಾಂಧರ್ವದಿಗ್ವರರು (ಭೃರಸೂ. ೧೩೩). [ ಸಂ. ]

**ದಿಗ್ವಲಯ, ದಿಗ್ವಳಯ** (ನಾ). ದಿಕ್ಕುಗಳ ಆವರಣ,-ಪ್ರದೇಶ : ಧುರಧೀರ ನುಗ್ಗೆಹಳ್ಳಿಯ ರಾಯ ಭೂವರನ ಪರಮಪ್ರಧಾನ ಸುಕಲಾಪ್ರವೀಣಂ ಕೀರ್ತಿಭರಿತ ದಿಗ್ವಲ [ ಪಾಠಾಂ. ಳ ] ಯಂ (ಕಬ್ಬಿ ಕೈ. ೦೦೦).
**ದಿಗ್ವಳಯ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[ ಸಂ. ]

**ದಿಗ್ವಳಯ** 'ದಿಗ್ವಲಯ' ನೋ.

**ದಿಗ್ವಳೆಯ** 'ದಿಗುವಳಯ' ನೋ.

**ದಿಗ್ವಾಚಕ** (ನಾ). [ವ್ಯಾಕ] ದಿಕ್ಕನ್ನು ತಿಳಿಸುವ ಶಬ್ದ : ಉಕಾರಾಂತ ದಿಗ್ವಾಚಕಂಗಳ್ಗೆತ್ವಮಕ್ಕುಂ (ಶಮದ. ೧೧೯ ವೃತ್ತಿ) ; ಪೂರ್ವಪದವಾಗಿ ಬರುವ ಪಿಂದು, ಮುಂದು, ಪೆಱಗು, ಒಳಗು ಮೊದಲಾದ ದಿಗ್ವಾಚಕಗಳಿಗೆ ಸಾಮಾನ್ಯವಾಗಿ ಅಂತ್ಯಾಕ್ಷರವು ಲೋಪವಾಗಿ ಅವುಗಳ ಪ್ರಕೃತಿರೂಪ ಬರುತ್ತದೆ (ಕೈಪಿಡಿ. ೨೬). [ ಸಂ. ]

**ದಿಗ್ವಾಚಿ** (ನಾ).=ದಿಗ್ವಾಚಕ : ಅಲ್ಲಿಯೊಳೆಂಬಿವು ವಿಕ್ಕಡೆಗೆಲ್ಲಂ ದಿಗ್ವಾಚಿಯಪ್ಪುದಂತಕ್ಕಲ್ಮತ್ತಲ್ಲಿಯುದಂತಕ್ಕೆತ್ವಂ ಬಲ್ಲರ ಮತದಿಂ ವಿಕಲ್ಪವಿಧಿ ಸಪ್ತಮಿಯೊಳ್ (ಶಮದ. ೧೧೯). [ ಸಂ. ದಿಗ್ವಾಚಿನ್ ]

**ದಿಗ್ವಾರಣ**(ನಾ).=ದಿಗ್ಗಜ ೧: ರಣಪಟಹರವಂ ದಿಗ್ವಾರಣ ಕರ್ಣಾಭ್ಯರ್ಣಮಂ ಪಳಂಚಲೆಯೆ (ಪಂಪಾಭಾ. ೧೦-೩೦) ; ದಿಗ್ವಾರಣದ ಮಱಿಯುಂಬುದೇ ಬಂದೂರುವಂದಿಯ ಮೊಲೆಯನು (ಬಸಪು. ೧೦-೧೦). [ ಸಂ. ]

**ದಿಗ್ವಾಸ$_1$** (ನಾ). ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು: ಹದಿನೆಂಟು ಗುಳ ಮೊದಲಾಗಿ ಒಂದಂಗುಳ ಪರ್ಯಂತವಾದ ಪರಿಮಾಣಕ್ರಮವಿಡಿದು ಜಾತಿವಾಸ, ಸುಜಾತಿವಾಸ, ಸುಕುಮಾರಿಕಾವಾಸ, ಪಕ್ಷಾವಾಸ, ಭುವನಾವಾಸ, ಶ್ವೇತವಾಸ, ಆದಿತ್ಯವಾಸ, ರುದ್ರವಾಸ, ಹರಿವಾಸ, ದಿಗ್ವಾಸ, ನಿಧಿವಾಸ, ಋಷಿವಾಸ, ಕುಮಾರವಾಸ, ಅಘೋರವಾಸ, ಬ್ರಹ್ಮವಾಸ, ತ್ರಿಪುರವಾಸ, ಶಿವಶಕ್ತಿವಾಸ, ಭುವನಾಧಿಪವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣಮಱಿತು (ವಿವೇಳ. ೨೪೬). P ಕೊಳಲಿನ ಧ್ವನಿಪ್ರಭೇದವೆಂದು ಭರತಕೋಶದಲ್ಲಿ ಹೇಳಿದೆ. [ <ಸಂ. ದಿಗ್ವಾಂಶ ]

**ದಿಗ್ವಾಸ$_2$** (ನಾ). ೧. ದಿಕ್ಕನ್ನು ಬಟ್ಟೆಯಾಗಿ ಉಳ್ಳವನು ; ನಗ್ನ. ೨. ದಿಗಂಬರ ; ಶಿವ. ೩. ದಿಗಂಬರನಾದ ಜೈನ ಭಿಕ್ಷು,-ಜೈನ ಸಂನ್ಯಾಸಿ : "ನಗ್ನಾಟಃ, ದಿಗ್ವಾಸಾಃ, ಕ್ಷಪಣಃ, ಶ್ರಮಣಃ . . . ಸಾಧುಃ-ಈ ೧೦ ಸವಣರ ಪೆಸರ್" (ಹಲಾಯು. ೩೭-೧೪೯). [ ಸಂ. ದಿಗ್ವಾಸಸ್ ]

**ದಿಗ್ವಿಜಯ** (ನಾ). ೧. ಎಲ್ಲ ದಿಕ್ಕುಗಳಲ್ಲಿರುವ ರಾಜ್ಯಗಳನ್ನು ಗೆಲ್ಲುವುದು : ಆದಿವಂಶಾವತಾರಸಂಭವಂ ರಂಗಪ್ರವೇಶಂ . . . ಇಂದ್ರಪ್ರಸ್ಥಪ್ರವೇಶಂ ಅರ್ಜುನದಿಗ್ವಿಜಯಂ . . . ಅರ್ಜುನಾಭಿಷೇಕಂ ಪೆಱವು ಮುಪಾಖ್ಯಾನ ಕಥೆಗಳೊಳಮೊಂದುಂ ಕುಂದಲೀಯದೆ ಪೇೞ್ದಂ (ಪಂಪಭಾ. ೧೪-೩೨ ವ) ; ವಸಂತದೊಳ್ ಮಾವು ಬಂದುದು ಶರದೊಳ್ ದಿಗ್ವಿಜಯ ಮುಚಿತಂ (ಶಮದ. ೧೩೩ ಪ್ರಯೋ) ; ಹಸನಾಯ್ತು ದಿಗ್ವಿಜಯದೊಳ್ ಗೊರವನೆಂದು ಪಾಲಿಸಿದೆಮವನೇ ಜಗತ್ಕರ್ತೃ ಗಡಮೆನುತಾಗ . . . ಒಡನೊಡನೆ ಗರ್ಜಿಸಿದನು (ಹಬಪು. ೪೭-೦೯) ; ನಿನ್ನಾಳ್ಕೆಗೆಲ್ಲಿಯುಮಪಾಯ ಮವನಿಯೊಳಿಲ್ಲವಿನ್ನು ದಿಗ್ವಿಜಯವಿಲ್ಲವಸರದ ಬೇಂಟೆಯಿಲ್ಲ (ಕ್ರಮಿಭಾ.

(ಕುವ್ಯಾವಿ. ೩-೧೪). ೨. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ: ಕರಿ ದಿನಪ ರಾಜ ರಾವಣಕರ ವರಿಸಂಖ್ಯಾಕ್ಷರಂ ಪೊದಟ್ಟಿಸೆಯೆ ಗಣಾಂತರಿತಂ ಪದಚತುರೂರ್ಧ್ವಗಂ (ಛಂದೋಂಬು. ೩-೨೧೩). ೩. [ಛಂದ] ಅಕ್ಷರಗಣಗಳಲ್ಲಿ ಒಂದು ; ಜಗಣ(ᑌ-ᑌ): ಕೋಕನದವೈರಿ ದಿನಪಂಗಾ ಕಡೆಗೆ ವಾಯು ಬರೆ ಕೇಳಾ ಕಮಲಲೋಚನೆ ಪೆಸರ್ವಾಕಿಗನಿನಾದುದಯಂ (ಛಂದೋಂಬು. ೨-೧೦೦). [ಸಂ.]

**ದಿನಪಕುಲ** (ನಾ). ಸೂರ್ಯನ ವಂಶ,-ಕುಲ: ದಿನಪಕುಲತಿಲಕನೇಕಾಂತ ದೊಳ್ನಗರಶೋಧನೆಯ ಚಾರರೊಳೊರ್ವನಂ ಕರೆಸಿ ಕೇಳ್ದನಿಂತು (ಕೃಮಿಥಾ. ೧೮-೪೧). [ದಿನಪ + ಕುಲ]

**ದಿನಪತಿ** (ನಾ). ಸೂರ್ಯ; ದಿನಕರ ; ದಿನಪ : "ಪ್ರಭುವುಂ ದಿನಪತಿಯುಂ ವಿನರ್" (ಪಶುಕೋ. ೧೧೮-೪) ; ದಿನಪತಿಯುಂ ದಿನಮುಂ ಬಿಡದನು ಬಂಧದಿನಗಲದಂತೆವೊಲ್ . . . ಪದಪಿಂದಮೊರ್ವರೊರ್ವರ ನಗಲರ್ (ಕಾರಂಪೂ. ೪೪೦) ; ದಿನಪತಿ ಇಳಿದನಪರಾಂಬುಧಿಗೆ (ಕುವ್ಯಾಉ. ೦೦-೨೪). [ದಿನ + ಪತಿ$_2$]

**ದಿನಪತಿವಾರ** (ನಾ). ಭಾನುವಾರ ; ಆದಿತ್ಯವಾರ : ಸಿತಪಕ್ಷದ ಪಂಚಮಿ ದಿನಪತಿವಾರಂ . . . ನೆಗಟ್ಟುದೀ ಪಾತ್ಯೃತಿ (ಆದಿಪು. ೧೬-೭೬). [ದಿನಪತಿ + ವಾರ$_3$]

**ದಿನಪತ್ರಿಕೆ** (ನಾ). ದಿನವೂ ಬರುವ ಪತ್ರಿಕೆ ; ದೈನಂದಿನ ವೃತ್ತಪತ್ರಿಕೆ : ದಿನಪತ್ರಿಕೆಯಲ್ಲಿ ದುಡಿಯುವವನಾದುದರಿಂದ ಸಾಮಾನ್ಯ ರಾಜಕೀಯ ವಿಚಾರಗಳು ತಿಳಿದೇ ತಿಳಿಯುತ್ತವೆ (ಒಂಟಿದ. ೨೩೩) ; ದಿನಪತ್ರಿಕೆಯವರು ಬಂದು ಇವನ ಆತ್ಮಕಥೇನ ಕೇಳಿದರು (ವೀರಯೋ. ೨೦). [ದಿನ + ಪತ್ರಿಕೆ]

**ದಿನಪಾಂಶು** (ನಾ). ಸೂರ್ಯಕಿರಣ : ಭುಗುಭುಗನುರ್ಚಿಪಾಯ್ದು ಸಲೆ ದೇಹರಸಂ ಬಿಡುತೋಡಿತೆಲ್ಲಿಯುಂ ಮೊಗರಸಮೋಡಿತಿಲ್ಲ ದಿನ ಪಾಂಶುಗ[ಳ]ಟ್ಟೆ ಶರೀರಯಷ್ಟಿ ತೊಟ್ಟಗೆ ಕಡುಗಂದಿ ಕಂದಿ ಬಡವಾದುದು (ಸುಕುಮಾ. ೧೨-೪೦). [ದಿನಪ + ಅಂಶು]

**ದಿನಬಳಕೆ** (ನಾ). ೧. ಪ್ರತಿನಿತ್ಯದ ಬಳಕೆ,-ಉಪಯೋಗ ; ದಿನನಿತ್ಯದ ಪ್ರಯೋಜನ : ಈ ಸೀರೆ ದಿನಬಳಕೆಗೆ ಬರುವುದಿಲ್ಲ (ರೂಢಿ). ೨. ಪ್ರತಿ ದಿನವೂ ಬಳಸುವಂತಹುದು ; ದಿನನಿತ್ಯದ ಉಪಯೋಗದಲ್ಲಿರು ವಂತಹುದು : ಶರೀಫರು ಜನಪದ ಕವಿ ; ಜನರ ದಿನಬಳಕೆಯ ಮಾತು ಗಳಲ್ಲಿ ಪದ ಕಟ್ಟಿ ಹಾಡಿದ ಕವಿ (ಶರೀಫ. I ಮೊದಲಮಾತು); ಅವನ ಬಾಯಲ್ಲಿ ಸಾವು ದಿನಬಳಕೆಯ ಮಾತಾಗಿದೆ (ಹೊಸಕ. ೧೯೭) ; ಹೃದಯಸ್ಪರ್ಶಿ ಯಾಗುವ ಆವರಣವನ್ನು ಕಲ್ಪಿಸುವ ಶಕ್ತಿ ದಿನಬಳಕೆಯ ಗದ್ಯಕ್ಕೆ ಸಾಲದು (ಜಗದಾ. ೬೨). ೩. (ಅಲಂ) ತೀರ ಪರಿಚಿತವಾದುದು : ದಿನಬಳಕೆಯ ಮನೆಯಂಗಳದಲ್ಲೂ ಕವಿ ಚೆಲುವನ್ನು ಕಂಡು ನಲವನ್ನು ಪಡೆಯುತ್ತಾನೆ (ಸೌಂದಸ. ೨೪) ; ದಿನಬಳಕೆಯಲಿ ನಿನ್ನ ಚೆಲುವು ಮಾಸದು, ಬಲ್ಲೆ; ವರುಷವೆಲ್ಲ ವಸಂತ ನೀನೆರಿಯದೊಲವು (ಶಿರಾಲ. ೮೩-೬). [ದಿನ+ಬಳಕೆ]

**ದಿನಬಾಳ್ವೆ** 'ದಿನಬಾಟ್ವೆ' ನೋ.

**ದಿನಬಾಟ್ವೆ, ದಿನಬಾಳ್ವೆ** (ನಾ). ಒಂದು ದಿನದ ಬಾಳ್ವೆ,-ಜೀವಮಾನ ; ಕ್ಷಣಿಕವಾದ ಬದುಕು : ಇನ್ ನಿನ್ನ ದಿನಬಾಟ್ವೆ ಪುಟಗಳ್ಗೆ ಕಳ್ದುಗುಡು ಪೋಗು ದೇವಮಾನ್ಯಂಗಳನ್ (ಬದ್ಧಕ್ರ. ೬-೦೦೨). ದಿನಬಾಳ್ವೆ: ಮಾನುಷ್ಯರೆಲ್ಲ ಅವನ ಕಣ್ಣಿಗೆ ದಿನಬಾಳ್ವೆಯಃ ಹುಳುಗಳು (ಬದ್ಧಕ್ರ. XLVI ಮುನ್ನುಡಿ). [ದಿನ + ಬಾಟ್ವೆ]

**ದಿನಭತ್ಯ** (ನಾ). ಒಂದು ದಿನದ ಕೆಲಸಕ್ಕೆ(ಆಯಾ ದಿನವೇ)ಕೊಡಲಾಗುವ ಭತ್ಯ,-ಪ್ರತಿಫಲ ; ದಿನಗೂಲಿ : ಆ ಸಾಲ ತೀರುವ.ುಗಿ ದಿನಭತ್ಯ ದಿಂದಲೇ ಹಣ ಮುರಿದು ಕೊಡುತ್ತಿದ್ದನೆಂತಲೂ ಸಾರ್ಜೆಂಟ್ ನೆಕ್ಲು ದೋವನಿಗೆ ವಿವರಿಸಿದನು (ಪುನರು. ೫೧೬). [ದಿನ + ಭತ್ಯ]

**ದಿನಮಣಿ** (ನಾ). ಸೂರ್ಯ : "ಆದಿತ್ಯಃ, ಸವಿತಾ . . . ದಿನಮಣಿಃ, ಭಾಸ್ವಾನ್ . . . ತ್ರಯೀತನುಃ-ಈ ೪೭ ಆದಿತ್ಯನ ಪೆಸರ್" (ಹಲಾಯು. ೭-೩೫) ; ಧರ್ಮಾತ್ಮಜಂ . . . ಏಂ ತೇಜದಿಂ ರಾಜಿಸಿರ್ದನೊ ಚಿತ್ರಂ ನರಲೋಕದೊಳ್ ದಿನಮಣಿ ದ್ವೈರಾಜ್ಯಮಾಯ್ತೆಂಬಿನಂ (ಜಗವಿ. ೧೭-೦೩); ಆ ದಿನಮಣಿಯು ಮಗನುದ್ದಂಡ ಕರ್ಣನ ಕಂಡಳಾ ಕುಂತಿ (ಕುವ್ಯಾಉ. ೧೦ ಸೂಚನೆ) ; ದಿನಮಣಿಗೆ ಮುನ್ನಿನ ಮಣಿಹವಾಯಿತು ತ್ರಿಣಯನಿಲಯ ದಲಡಗಿ ಹಗಲನು ಕಳೆದ ಹನುಮಂತ (ತೊರಿರಾ. ೧೦-೧೭). [ದಿನ + ಮಣಿ$_3$]

**ದಿನಮಧ್ಯ** (ನಾ). ದಿನದ ಮಧ್ಯದ ಅವಧಿ,-ಕಾಲ ; ಮಧ್ಯಾಹ್ನ : ಆ ಬಳಿಕ ದಿನಮಧ್ಯದ ಊಟವನ್ನು (Lunch) ಮುಗಿಸಿಕೊಂಡು . . . ರಾಕ್‌ಫೆಲರ್ ಪ್ರತಿಷ್ಠಾನದ ಮಹಾಸೌಧಕ್ಕೆ (Rockfeller Centre) ಹೋಗಿ ಶ್ರೀ ೧-ಅವರನ್ನು ಕಂಡೆ (ನಂಟರು. ೦೦೯). [ದಿನ + ಮಧ್ಯ$_1$]

**ದಿನಮಾನ** (ನಾ). ೧. ಒಂದು ದಿನದ ಅವಧಿ,-ಕಾಲ ; ಒಂದು ದಿನದ ಪ್ರಮಾಣ ; ಇಪ್ಪತ್ನಾಲ್ಕು ಗಂಟೆಗಳ ಸಮಯ : ದಿವಸ್ಪತಿಯು ದಿನ ಮಾನದಿಂಬೆಳದಲಿ ಪಶ್ಚಿಮದ ಸತಿಯಲ್ಲಿಗೈದಿ ಮಲಗಿದನೊ...ಎಂಬ ತೆರದಿ ರವಿಯಸ್ತಮಿಸಲು (ನವಮೋ. ೦೭-೭). ೨. ಕಾಲ ; ಸಮಯ ; ಅವಧಿ : ಎಚ್ಚರ ಮುಂದಣ ದಿನಮಾನ ಕೆಟ್ಟೀತು ಹುಟ್ಟ್ಯಲೊ ಡಂಗುರವಾ (ಎಬಳಾ. ೦೦೯-೨) ; ಇಂಥ ಅತ್ಯುಷ್ಣ ದಿನಮಾನದ ಮಧ್ಯಾಹ್ನದಲ್ಲಿ ಸಹ ಜಯಪಾಲನು ಮನೆಯಲ್ಲಿರಲಿಲ್ಲ (ಜಯಂತ. ೧೫೭) ; ನೋಡ್‌ನೋಡ್ತ ದಿನಮಾನಾ ಆಡಾಡ್ತ ಆಯುಷ್ಯ ನಡದದ ನಡದದ (ಗರಿ. ೧೦೦-೧). ೩. ಪ್ರತಿನಿತ್ಯ ; ಪ್ರತಿದಿನ : ತಿರುಮಲದೇವರಿಗೆ ನಂದಾದೀವಿಗೂ ದಿನಮಾನಾ ವೆಚಕು ಬಸವರಸವೊಡೆಯರು ಧಾರಾಪೂರ್ವ[ಕ]ಕವಾಗಿ ಧಾರೆಯನೆಱದು ಕೊಟದು (ಸೌಇಇ. IX-.11, ೪೭೬-೦೨ ; 1506) [ದಿನ + ಮಾನ]

**ದಿನಮಾಳಿಕೆ** (ನಾ). ದಿನಗಳ ಸರಣಿ,-ಸಾಲು : ಆ ದೇವಿ . . . ಮಟಿ ಗಾಲದ ದಿನಮಾಳಿಕೆಯಂತೆ ವಿದೂರಿತರಜೋವೃಜೆಯುಂ ಪ್ರಭಾಕರ ಪ್ರಭೆಯಂತೆ ಪ್ರತಿಧ್ವಸ್ತ ತಮಃಪ್ರಕರೆಯುಮೆನಿಪಳ್ (ಬಾಧಪು. ೨-೫೯ ವ). [ದಿನ + ಮಾಳಿಕೆ (= ಮಾಲಿಕೆ)]

**ದಿನಮುಖ** (ನಾ). ಹಗಲಿನ ಪ್ರಾರಂಭದ ಕಾಲ ; ಮುಂಜಾವ ; ಪ್ರಾತಃಕಾಲ; ಹೊತ್ತಾರೆ: ದಿನಮುಖದೊಳ್ ಸಂಚರಿಸುವ ವನಕರಿಗಳ ಕರ್ಣತಾಳಗಂಭೀರತರಧ್ವನಿಗಳಿಸಿ ರಾಗದಿಂ ಸೋಗೆನವಿಲ್ಗಳ ಪಿಂಡು ನಲಿದು ನರ್ತಿಸಿತಾಗಳ್ (ಕಾಂದಪೂ. ೧೪೯) ; ಪರೆದುದು ಸಂಧ್ಯಾರುಚಿ ಮೊಯ್ಗರೆದುದು ತಾರಾಳಿ . . . ನೆರೆದುದು ಚಕ್ರಾಹ್ವಯದ್ವಯಂ ದಿನಮುಖದೊಳ್ (ಚಂದ್ರಪು. ೮-೧೦೦); ಇಂದ್ರದಿಙ್ಮಂಡಲದಿ, ಪೂರ್ವವಧು ಇನಿತು ಕಣ್ದೆರೆದಂತೆ, ದಿನಮುಖದ ಕೆಂಗಾಂತಿ ಕುಡಿಮರಿದುದು (ಚಿತ್ರಾಂಗ. ೬-೧೯೩). [ದಿನ + ಮುಖ]

**ದಿನರಾಜ** (ನಾ). ಸೂರ್ಯ : ತೇಜದಿಂ ದಿನರಾಜ ಕಾರಕರಾಜ ಕುಜ ಬುಧ ಜೀವ ದಾನವರಾಜಮಂತ್ರಿವಿಕರ್ತನೋದ್ಭವ ರಾಹುಕೇತುಗ ಒಡೆಯೊಳು . . . ರಾಜೇಶಾನರೋಲೈಸೆ (ಬಸಪು. ೧೦-೩೦). [ದಿನ + ರಾಜ]

**ದಿನವರ್ತನೆ** (ನಾ). ಅರ್ಚಕರಂ ಹಾಗೂ ಜೋಯಿಸರಿಗೆ ಬರುವ ದಿನದ ಭತ್ಯ ಅಥವಾ ದಕ್ಷಿಣೆ : (ಕ). [ದಿನ + ವರ್ತನೆ]

**ದಿನವಹಿ$_1$** (ನಾ). ದಿನಚರಿಯ ಪಟ್ಟಿ ಅಥವಾ ಪುಸ್ತಕ : ಡೈರಿ : ಆ ದಿವಸದ ತೀರ್ಪಿಕೆಯನ್ನು ದಿನವಹಿಗೆ ಬರಿಸಿ ಕೋರ್ಟು ಬರಖಾಸ್ತೆಂದು ಹುಕುಂ ಮಾಡಿದನು (ಕಥಾಮಂ. IV, ೮೫). [ದಿನ + ವಹಿ]

**ದಿನವಹಿ$_2$** 'ದಿನ' ಪರಾ.

**ದಿನವ್ರತ** (ನಾ). [ಜೈನ] ಕೆಲವು ದಿನಗಳವರೆಗೆ ಮಾಡುವ ವ್ರತ (?) : ಮುನಿಪಾಸಕಡಿಯಿಟ್ಟು ಮುನಿಗಳಿಗೆಲ್ಲ ವಂದನೆಗೆಯ್ದು ನಬಲೆಯರ್ವೆರಸಿ ದಿನವ್ರತ ದಿಗ್ವ್ರತ ಮಿತಪರಿಗ್ರಹವ ಮತ್ತನಶನವ್ರತವ ಕೈಕೊಂಡು (ಧರಪ. ೧೬-೬೧) ; ಆ ಜಿನಮುನಿಗಳ ಸಮಕ್ಷದಲ್ಲಿ ಆ ವನಜಮುಖಿಯರು ದಿನವ್ರತ, ದಿಗ್ವ್ರತ, ಮಿತಪರಿಗ್ರಹವ್ರತ, ಅನಶನವ್ರತ ಇವುಗಳನ್ನು ಕೈಕೊಂಡರು (ಮಾಮಲ್ಲಿ. ೦೨೬). [ ದಿನ + ವ್ರತ ]

**ದಿನಸಾವ್ಮ** (ನಾ). ತಡ; ಸಾವಕಾಶ; ದಿನಗಳನ್ನು ತಳ್ಳುವುದು : ಅಪಸ್ಮಾರ ಬೆಸಗು ಮಹೋದರ ಕಾಯಿಲೆ ಇವಕ್ಕೆ ಆದಿಯಲ್ಲಿ ದಿನಸಾವ್ಮ ವಿಲ್ಲದೆ ಶೀಘ್ರದಲ್ಲಿಯೇ ಪ್ರತೀಕಾರ ಮಾಡುವುದು. ದಿನಸಾವ್ಮ ಮಾಡಿದರೆ ಅಸಾಧ್ಯವಹವು (ವೈದ್ಯಶಾ. I, ೩೬). [ ದಿನ + ಸಾವ್ಮ ]

**ದಿನಸಿ** 'ಜಿನಸು' ನೋ.

**ದಿನಸು** 'ಜಿನಸು' ನೋ.

**ದಿನಸ್ವಾಮಿ** (ನಾ). ಸೂರ್ಯ : ಮೂಡುತ್ತಿದ್ದ ದಿನಸ್ವಾಮಿಗೆ ಕೈಮುಗಿಯುತ್ತಾ ನಕ್ಕು ಹೇಳಿದನು ಗುತ್ತಿ (ಮೇಘ. ೨೬೧). [ ದಿನ + ಸ್ವಾಮಿ ]

**ದಿನಹರಣ** (ನಾ). ತಡಮಾಡುವುದು ; ದಿನ ಕಳೆಯುವುದು : ಆ ರಾಜರು ಇಂದು ನಾಳೆ ಕೊಡುತ್ತೇವೆಯೆಂತ ದಿನಹರಣ ಮಾಡಿದರಿಂದ (ರಾಜೇಂದ್ರ. ೧೧). [ ದಿನ + ಹರಣ₂ ]

**ದಿನಾಂಕ** (ನಾ). ದಿನದ ಸಂಖ್ಯೆ ; ತಾರೀಖು ; ತೇದಿ : ದಿನಾಂಕ ನನಗೆ ಚೆನ್ನಾಗಿ ನೆನಪಿದೆ (ಹೊಸಕ್ಕ. ೬) ; ಜಗದೀಶಚಂದ್ರಬೋಸರು ೧೮೫೮ರ ನವೆಂಬರ್ ೩೦ನೇ ದಿನಾಂಕ ಪೂರ್ವಬಂಗಾಳದ ಡಾಕ್ಕಾಜಿಲ್ಲೆಯ ಫರೀದ್‌ಪುರದಲ್ಲಿ ಜನಿಸಿದರು (ಹಕ್ಕಿ. ೯೩). [ ದಿನ + ಅಂಕ₂ ]

**ದಿನಾಂತ** (ನಾ). ಹಗಲಿನ ಕಡೆಯ ಭಾಗ; ಸಂಜೆ: "ದಿನಾಂತಃ, ಸಾಯಂ- ೨ ಸಾಯಂಕಾಲದ ಹೆಸರು" (ಸಿದ್ಧಾಂತಿ. ೩೪) ; ದಿನಾಂತಂಬರೆಗಂ ತಡೆದು ಬಟ್ಟೆಕಿಲ್ಲಿಯುಂ ನಿಲ್ಲದೆ . . . ಬಂದು (ಶಂಕರಂ. ೮೯-೧೧) ; ದಿನಾಂತದೊಳ ಗಣ್ಯಪುಣ್ಯಲಾವಣ್ಯಸಂಪನ್ನೆಯಪ್ಪ ಕನ್ನೆಯಂ ತನಗಾಟಿಸಿ ಬಂದೊಡವೊಲ್ಲದೆ ಮೊಳೆಗೊಂಡು ಕಟ್ಟಿಪಿದ ಧನದೇವನ ಸಮಾನಮಾನವನುಮಿಲ್ಲ (ಸುಕುಮಾ. ೬-೨೬ ವ). [ ದಿನ + ಅಂತ₂ ]

**ದಿನಾಚರಣೆ** (ನಾ). ದಿನವನ್ನು ಆಚರಿಸುವುದು : ನಾವು ಹೊಸವರ್ಷದ ದಿನಾಚರಣೆಯಲ್ಲಿ ನಮ್ಮ ಸಾಯಿಯ ಉಪಾಯಗಳನ್ನು ತೋರಿಸಲು ಅವಕಾಶ ಕೊಡುತ್ತೀರಾ ? ಎಂದು ಕೇಳಿದ (ಚಾಕಮ. ೧೯೯) ; P ಯಾವುದಾದರೊಂದು ಘಟನೆಯ ಅಥವಾ ವ್ಯಕ್ತಿಯ ಸ್ಮರಣೆಗಾಗಿ ನಿರ್ದಿಷ್ಟ ದಿನಾಂಕವಂದು ನಡೆಸುವ ಆಚರಣೆ. ಉದಾ : ಮಕ್ಕಳ ದಿನಾಚರಣೆ, ಸ್ವಾತಂತ್ರ್ಯ ದಿನಾಚರಣೆ ಇತ್ಯಾದಿ. [ ದಿನ + ಆಚರಣೆ ]

**ದಿನಾದಿ** (ನಾ). ದಿನದ ಮೊದಲು ; ಪ್ರಾತಃಕಾಲ. [ ದಿನ + ಆದಿ₂ ]

**ದಿನಾಧಿನಾಯಕ** (ನಾ). = ದಿನಪ ೧ : ನಲ್ಲರಗಲ್ಕೆಯಿಲ್ಲದೆಡೆಯಪ್ಪಮಯುಕ್ಕಿ ದಿನಾಧಿನಾಯಕಂ ಸಲ್ಲದ ತಾಣಮಂಗಜಶರಾಹತಿ ಪೊರ್ದದ ದೇಶ ಮುಳ್ಳೊಡಂತಲ್ಲಿಯ ಪಾಟ್ಕಿ ಮಜ್ಜನಮಂ (ಚಂದ್ರಪ್ರ. ೮-೬). [ ದಿನ + ಅಧಿನಾಯಕ ]

**ದಿನಾಧಿಪ** (ನಾ). = ದಿನಪ ೧ : ಸತತಂ ಬುಧಾವಸಥನಾಗಿ ದಿನಾಧಿಪನಂತೆ ಶೀಪ್ರನಲ್ಲದೆ . . . ಸಂದನಿಳಾತಳಾಗ್ರದೊಳ್ (ಸುಕುಮಾ. ೯-೮೩) ; ಕಟ್ಟಲೆ ಪಿರಿದಾದೊಡಮೇಂ ವಾರ್ತೆಯೆ ದಿನಾಧಿಪಂಗೆ (ಶಂರಾಮಾ. ೧೧-೨೩೩). [ ದಿನ + ಅಧಿಪ ]

**ದಿನಾಧಿಪಕ್ಷೇತ್ರ** (ನಾ). [ಜ್ಯೋತಿ] ಸೂರ್ಯನ ರಾಶಿ ; ಸಿಂಹರಾಶಿ : ಹಿಮಾಂಶುಗೃಹದೊಳ್ ಸುರೇಜ್ಯನಿರೆ . . . ದಿನಾಧಿಪಕ್ಷೇತ್ರದೊಳ್ ಚಮೂಪತಿ ಕುಳೀರ ಸಂಸ್ಥ ಫಲಭಾಗಿಯುಂತಾ ನರಂ (ಜಾತಕ. ೧೬-೨೮). [ ದಿನಾಧಿಪ + ಕ್ಷೇತ್ರ ]

**ದಿನಾಧಿಪತಿ** (ನಾ). = ದಿನಪ ೧ : ದಿನಾಧಿಪತಿಯೇಱೆ ನಿಂದ ರಥಮಂ ನಭೋವೀಥಿಯೊಳ್ ಘನಾಘನ ಕದಂಬಕಂ ಬಳಸುವಂದದಿಂ (ಚಂದ್ರಪ್ರ. ೬-೨೯). [ ದಿನ + ಅಧಿಪತಿ ]

**ದಿನಾಧೀಶ** (ನಾ). = ದಿನಪ ೧. 'ತರುಣದಿನಾಧೀಶ' ಪರಾ. [ ದಿನ + ಅಧೀಶ ]

**ದಿನಾರು** 'ದೀನಾರ' ನೋ.

**ದಿನಾವಸಾನ** (ನಾ). = ದಿನಾಂತ. [ದಿನ + ಅವಸಾನ ]

**ದಿನಿಸು** 'ಜಿನಸು' ನೋ.

**ದಿನೇಂದ್ರ** (ನಾ). = ದಿನಪ ೧. 'ದಿನೇಂದ್ರಕಾಂತ' ಪರಾ. [ ದಿನ + ಇಂದ್ರ ]

**ದಿನೇಂದ್ರಕಾಂತ** (ನಾ). = ದಿನಕರೋಪಲ : ದಿನೇಂದ್ರಕಾಂತಾನಂತಮಣಿಗಣಖಚಿತಲಾಲಿತ್ಯಸಾಂದ್ರರಮ್ಯಸ್ಥಾನಮಂಟಪ ಚಂದ್ರಕಾಂತದ ಕಟ್ಟಮದೊಳಗಜೇಂದ್ರನಿರ್ದನು ರತ್ನಮಯ ಸಿಂಹಾಸನದ ಮೇಲೆ (ಬಸವು. ೦-೪೦). [ ದಿನೇಂದ್ರ + ಕಾಂತ₂ ]

**ದಿನೇಶ** (ನಾ). ೧. ಸೂರ್ಯ ; ಆದಿತ್ಯ : ಬಾಳ ದಿನೇಶಬಿಂಬದ ಸೆಟಿಲ್ ಜಲದೊಳ್ ನೆಲಸಿತ್ತೊ (ಶಂಪಭಾ. ೧-೯೬) ; ದಿನೇಶನೊಳಂಬಿನೊಳು ಪಕ್ಷಿಯೊಳು ಗೃಹದೊಳುಮಮರರೊಳು ಖಗಮನಿಕ್ಕುಂ (ಮಂಗರಾ. ೧೪೯-೪೬) ; ಸೀಸಕವೆ ರವಿಕಾಂತವಾಗಿ ದಿನೇಶನನು ಕಣಕಿದಪೊಲಿಂದವನೀಶನೀತನ ನಂಬಿ ಕೆಟ್ಟನು (ಕುಮಾ.ಭ. ೯-೧೪). ೨. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ : ಶರ್ಮಂ ವಿಶ್ರಮಣಂ ದಿನೇಶರೆಡೆಯೊಳ್ ನಿಲ್ಕುಂ (ಛಂದೋಂಬು. ೨-೦೬೪). ೩. [ಛಂದ] ಒಂದು ಅಕ್ಷರಗಣ ; ಜಗಣ (U–U) : ವ್ಯೋಮಮಧ್ಯಮಂ ಮುಂತೆ ದಿನೇಶ ಪಾವಕರ್ ತಾವೊಂದಿ ದಿಗ್ದಂತಿಯೊಳಾಗೆ ವಿಶ್ರಮಂ (ಛಂದೋಂಬು. ೨-೦೨೯). [ ದಿನ + ಈಶ ]

**ದಿನೇಶಗೃಹ** (ನಾ). [ಜ್ಯೋತಿ] ಸೂರ್ಯನ ರಾಶಿ ; ಸಿಂಹರಾಶಿ : ಇರೆ ಧಾತ್ರೀತನಯಂ ದಿನೇಶಗೃಹದೊಳ್ . . . ಕ್ಲೇಶಸಹಿಷ್ಣು ನಿಷ್ಠನೆನಿಸಂ (ಜಾತಕ. ೧೬-೨೦). [ ದಿನೇಶ + ಗೃಹ ]

**ದಿನೇಶತನಯ** (ನಾ). ೧. ಸೂರ್ಯನ ಮಗ. ೨. ಕರ್ಣ : ನುಡಿ ನಿನಗಂ ದಿನೇಶತನಯಂಗಮದೆನ್ನಯ ಪಕ್ಷದೊಳ್ದೊಡಂ ಮಿಡುಕದೆ ಕೇಳ್ವನಲ್ಲಿ ಸಮನಿರ್ವರುಂ (ಶಂಪಭಾ. ೧೩-೨೮). ೩. ಶನಿ. ೪. ಸುಗ್ರೀವ. ೫. ಯಮ. [ ದಿನೇಶ + ತನಯ ]

**ದಿನೇಶವಂಶ** (ನಾ). ಸೂರ್ಯನ ಕುಲ, ವಂಶ ; ದಿನಪಕುಲ : ಸಲೆ ನಿಲೆ ದಿನೇಶವಂಶದ ಲಕ್ಷ್ಮಿ ನೆಲಸಿರ್ಪ ಜಲಜದೆಸಳ್ಗಳೊ (ಹರಿಕಾ. ೦-೩೪). [ ದಿನೇಶ + ವಂಶ ]

**ದಿನೇಶಹಯ** (ನಾ). ೧. ಸೂರ್ಯನ (ಏಳು) ಕುದುರೆ : P ಗಾಯತ್ರೀ, ಬೃಹತೀ, ಉಷ್ಣಿಕ್, ಜಗತೀ, ತ್ರಿಷ್ಟುಪ್, ಅನುಷ್ಟುಪ್, ಪಂಕ್ತಿ ಇವು ಛಂದೋರೂಪವಾದ ಸೂರ್ಯನ ರಥದ ಏಳು ಕುದುರೆಗಳು. ೨. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : ಸುರಪುರೇಂದು ದಿವಸಾಧಿಪಾಗ್ನಿಗಳ್ ಬರೆ ದಿನೇಶಹಯದೊಳ್ ವಿರಾಮಮಾಗಿರೆ . . . ನಿರುಪಮಂ (ಛಂದೋಂಬು. ೨-೦೩೧). [ ದಿನೇಶ + ಹಯ ]

**ದಿನೇಶೋದಯ** (ನಾ). ಸೂರ್ಯನ ಉದಯ ; ಹೊತ್ತು ಹುಟ್ಟುವುದು : ಪಂಚವಟಿಯೊಳ್ ದಿನೇಶೋದಯದ ಶಾದ್ವಲದ ಪಸುರ್ಗರುಕೆಯೊಳ್ ತೃಣಸುಂದರಿಯ ಮೂಗುತಿಯ ಮುತ್ತು ಪನಿಯಂತೆ ಮಿರುಮಿರುಗಿ ಮೆರೆವ ಹಿಮಬಿಂದುವುಂ (ಶ್ರೀರಾಮಾ. ೫-೦೦೩). [ ದಿನೇಶ + ಉದಯ ]

**ದಿನ್ನ** (ನಾ). ಭಾರ ; ಒಜ್ಜೆ : ದಡಕೋಲ್ ಕೆಳಗುಂ ಮೇಲುಂ ದಿನ್ನದಿಂ ಹಗುರಿಂದೆಯುಂ ಸರಿಯುಂ ಸರಿಯಪ್ಪಂತೆ ಮೆಯ್ಯುಮುಣ್ಪೆಂದಪ್ಪುದು (ಸೌನಂದ. ೦೯-೫). [ < ತಿಣ್ಣ ]

**ದಿನ್ನೆ** 'ದಿಣ್ಣೆ' ನೋ.

**ದಿಪುತ** 'ದೀಪುತ' ನೋ.

**ದಿಪ್ಪ** 'ದಪ್ಪ₁' ನೋ.

**ದಿಬ್ಬ₁, ದಿಂಬ₁, ದಿಂಬ್ಬು, ದಿಬ್ಬು, ದಿಬ್ಬೆ₁** (ನಾ). ಎತ್ತರವಾದ ಪ್ರದೇಶ; ತಿಟ್ಟು; ದಿಣ್ಣೆ; ತೆವರು; ಬೋರೆ: ಹುಲ್ಲು ಹೂವು ಆದರೇನು, ಹೆಬ್ಬದುಬ್ಬನಲ್ಲಿವೆ; ದಿಬ್ಬಗಳನು ತಬ್ಬಲೆಂದು ಎಲ್ಲ ನೆಲಕು ಹಬ್ಬಿವೆ (ಸಖೀಗೀ. ೭೭-೩) ; ದಿಬ್ಬಗಳ ಮೇಲೆಯೂ ಗುಡ್ಡಗಳ ಮೇಲೆಯೂ ಮೇದುಲಿಕ್ಕೆ ಹೋಗುತ್ತವೆ (ಮುಂಬಯಿ. ೩-೦೧); ಅತ್ತ ಕಾಣುತ್ತಿರುವುದೇ ಮಹಾನವಮಿಯ ದಿಬ್ಬ (ಹೇಮಕೂ. ೨೦) ; ಊರ ಮುಂದಿನ ಸೀಮೆಯ ಬನ್ನಿಯ ದಿಬ್ಬಕ್ಕೆ ಎಲ್ಲರೂ ಸಾಗಿ ಬರುವರು (ಕನ್ನಡಾ. ೧೬೧) ; ದಿಬ್ಬಗಳ ಮೇಲೆ ಬಗೆಬಗೆಯ ಮರಗಿಡಗಳು . . . ಬೆಳೆದು ಆಕಾಶವನ್ನು ಚುಂಬಿಸುತ್ತಾ ನಿಂತಿದ್ದವು (ಮಗಮೂ. ೩೪). **ದಿಂಬ₁** : ೧. ಈ ಕಲ್ಲಿಗೆ ತೆಂಕಲು ಗುರುವನವುರದ ಯೆಲ್ಲೆ ಕಲ್ಲಿನ ಬಳಿಯ ದಿಂಬದಲ್ಲಿ ನೆಟ್ಟ ಕಲ್ಲು ೧ (ಎಕ. XIV, ಮೈಸೂರು., ೧೦೭-೩೩ ; 1664) ; ತೆಂಕ ನಡದು ಭೂತಾಳೆ ದಿಂಬದ ತಿಟ್ಟು ತೋರಣಕ್ಕೆ . . . ಪಡುವ ಮುಖವಾಗಿ ತಿದ್ದಿದ ಕಲ್ಲು ೧ (ಎಕ. III, ತಿರುಮ. ೬೩-೭೩೩ ; 1748). ೨. ಏರಿ; ದಡ; ತೀರ: ದೇಗುಲದ ಕೆರೆಯ ಕೆಳಗೆ ಕಚ್ಚವಿಯಂಗೆ ದಿಂಬದೊಳ ಬಟ್ಟ ಗಟ್ಟಿ ಗಳೆಯ ಮತ್ತರ್ ೩ (ಎಕ. VII, ಶಿಕಾರಿ. ೧೦-೦೩ ; 1032) ; ಪರಿವಾ ಸರಸ್ವತಿಯ ದಿಂಬದೋಳ್ ಪರ್ಣಶಾಲೆಯ ರಚಿಸಿಕೊಂಡು ತಪಸಂ ಮಾಡುತಿರುತಿರ್ದಳು (ತುರಂಗ. ೮೪-೭). **ದಿಂಬ್ಬು₁** : ೧. ಬಡಗಣ ದಿಂಬಿನ ನೀರ್ವ್ವರಿ ಚಿಕ್ಕ ಬಣಜಿಗನ ಕೆಱೆಯ ಬಡಗಣ ಕೋಡಿ (ಎಕ. VII, ಶಿವಮೊ. ४-೭೭ ; 1122). **ದಿಬ್ಬು** : ೧. ಯಾವ ರಾಸುಗಳಾಗಲಿ . . . ಬಚ್ಚಲು ಮೊಹಂಗಳ ಮೇಲೂ ಕಟ್ಟೆ ದಿಬ್ಬುಗಳ ಮೇಲೂ ಅಥವಾ ಪಕ್ಕಗಳಲ್ಲಿಯೂ . . . ಮೇಯುತ್ತಿರುವ ಕಾಲದಲ್ಲಿ ಹಿಡಿದು . . . ತೊಂಡುವಾಡೆ ದೊಡ್ಡಿಗೆ ದಾಖಲ್ಮಾಡಬೇಕು (ಗ್ರಾಮಾಕ. ೧೦೭) **ದಿಬ್ಬೆ₁** : ೧. ಹಳ್ಳಿಗೆ ಹೋದ ಬಟ್ಟೆಯ ದಿಬ್ಬೆಯ ಸಾರಣ ಹುಲು ಮಾಡಿಯ ಗಡಿ (ಎಕ. II, ೩೯೭-೪೩ ; 1179 ?).

[ ದೇ.॥ ತಮಿ. ತಿಪ್ಪೈ; ತೆಲು. ದಿಬ್ಬ; ಪರ್ಜಿ. ಡಿಬ್ಬ; ಕುಇ. ಡಿಪ; ಕುವಿ. ದಬ್ಬೆ ]

**ದಿಬ್ಬ₂** 'ದಿಬ್ಯ' ನೋ.

**ದಿಬ್ಬಣ** 'ಬಿರ್ದಿನ' ನೋ.

**ದಿಬ್ಬಣಂಬೋಗು** (ಕ್ರಿ). (ವಂದುಮಕ್ಕಳೊಡನೆ) ಮೆರವಣಿಗೆ ಹೊರಡು: ಮದುವಣಿಗನಿಲ್ಲದೆ ದಿಬ್ಬಣಂಬೋಪೆನೆಂಬಂತೆ ಬಟ್ಟೆಯ ಱಯದ ಪೊಲಂಬಿಗನಪ್ಪೆನೆಂಬಂತೆ (ಧರ್ಮಾಮೃ. ४-೩೦).

[ ದಿಬ್ಬಣ (<ಬಿರ್ದಿನ) + ಪೋಗು₁ ]

**ದಿಬ್ಬಣಿಗ, ನಿಬ್ಬಣಿಗ** (ನಾ). ಮದುವೆಯ ಮೆರವಣಿಗೆಯಲ್ಲಿ ಹೊರಡುವವನು; ಬೀಗರ ಗುಂಪಿನವನು: ನೊರೆಯ ಪಾಲ್ಸಕ್ಕರೆಯ ದಿಬ್ಬಣಿಗರಿಗೆ ಮೊಗೆದೀಂಟಲೆಱೆದರು (ಶಾಶಿಚ. ೨-೭೯) ; ನೆರೆದ ನರೇಂದ್ರರೆಲ್ಲರು ದಿಬ್ಬಣಿಗರಾಗೆ ಧರೆಯಲ್ಲ ಕೊಂಡಾಡುವಂತೆ ವರಸುತೆ ರೋಹಣಿಯನು ವಸುದೇವ ಭೂವರಗೆ ಮದುವೆ ಮಾಡಿದನು (ನೇಮಿಜಿಂ. ೧೨-೧೦೪); ವರನಲಾ ಸಾಕ್ಷಾತ್ ವಿಶ್ವಂಭರನು ವಧುವೆ ಲಕ್ಷುಮಿ ದಿಬ್ಬಣಿಗರು ಏಂಚ ಭವೇಂದ್ರ ಮುಖ್ಯಾಮರರು ಭೂವರರು (ನಿಘಾಗ. ೧೦-೭೦-೪೬); ಸುರರು ದಿಬ್ಬಣಿಗರಿಂದ್ರನು ಸೇವಕ ಶಚಿ ವಿರಚಿಸುವಳು ಮಂಗಲವ (ಜಂಪ್ರಸಾಂ. ೨೩-೦೦೩); ಯಾರು ಹೊರಡದಿದ್ದರೂ ದಿಬ್ಬಣಿಗರು ಹೊರಡಬೇಡವೆ? (ಮರಚಿ. ೩); ದಿಬ್ಬಣಿಗರು ಬಾಯಾರಿ ಮೇಲುಸಿರು ಬಿಟ್ಟರೂ . . . ಧಾರೆಯ ಸಮಯವನ್ನು ಬದಲಿಸುವಂತಿಲ್ಲ (ಹಾಚಿಕ. ೧೬). **ನಿಬ್ಬಣಿಗ** : ಗುರುವೆ ತೆತ್ತಿಗನಾದ ಲಿಂಗವೆ ಮದವಳಿಗನಾದ ನಾನು ಮದವಳಿಗೆಯಾದೆನು ವಸುಧೆಯ ಭಕ್ತರೆಲ್ಲರು ನಿಬ್ಬಣಿಗರಾದರು (ಮಹಾದೇ. ಬ, ೧೧೪-೨೩೮) ; ಸ್ವಯಂಬರಕ್ಕೆ ನೆರೆದರಸು ಮಕ್ಕಳೆಲ್ಲಂ ನಿಬ್ಬಣಿಗರಾಗೆ ರೋಹಿಣಿಯೊಳ್ ಮದುವೆ ನಿಂದು (ಅರ್ಥನೇ. ೬-೪೭ ಪ) ; ಮುದದಿಂ ಕೂರ್ತೊಡವಂದ ನಿಬ್ಬಣಿಗರಂ ಸಂಗೀತ ಸಾಹಿತ್ಯ ಕೋವಿದರು . . . ವೇದಪಿಂ ಪಂಕ್ತಿಗಳಾಗಿ ಕುಳ್ಳಿರಿಸಿದರ್ ವಾಕ್ಯೋಚಿತ ಚಾರಂಗಳಿಂ (ನಳಚಂ. ४३೫) ; ಆ ರಥವನೊಡನೇಱೆ ಕಂಸನುದಾರವಾತಿ ತಂಗಿಯನು ಕಳುಹುತ ಭೂರಿ ವಿಭವದಲಂದು ನಡೆದನು ನಿಬ್ಬಣಿಗರೊಡನೆ (ನಿಘಾಗ. ೧೦-೨-४) ; ಅಂತರಂತರವಱಿದು ಬಂದ ನಿಬ್ಬಣಿಗರ್ಗನಂತವಾಗಿರ್ದ ಪಡಿಬೀಡಾರವಂ ತೋಱಿ (ಚಬವು. ३೭-೬).

[ ದಿಬ್ಬಣ (<ಬಿರ್ದಿನ) + -ಇಗ ]

**ದಿಬ್ಬು** 'ದಿಬ್ಬ₁' ನೋ.

**ದಿಬ್ಬೆ₁** 'ದಿಬ್ಬ₁' ನೋ.

**ದಿಬ್ಬೆ₂** 'ದಿಬ್ಯ' ನೋ.

**ದಿಬ್ಯ, ದಿಬ್ಬ₂, ದಿಬ್ಬೆ₂**, (ಗು). ೧. ಮನೋಹರವಾದ; ಶ್ರೇಷ್ಠವಾದ; ಉತ್ತಮವಾದ: ಶ್ರೀಗೋಕರ್ಣ್ನ (ಕರ್ಣ) ದೇವರ ದಿಬ್ಯ ಶ್ರೀಪಾದಪದ್ಮಾರಾಧಕರುಂ ಪರಬಳಸಾಧಕರುಂ (ಎಕ. XXVII, ೧೬೦-೧೬; 1226). (ನಾ). ೨. ಮನೋಹರವಾದುದು; ಶ್ರೇಷ್ಠವಾದುದು: ಅದು ದಿಬ್ಯಮದು ಸೇವ್ಯಮದು ಸೌಖ್ಯಮದು ಸುಖಾಧಾರಸಂಸಾರಸಾರಂ (ಸುಕುಮಾ. ೧೨-೫೦). ೩. ಸಾಕ್ಷಿ, ಪುರಾವೆ, ಆಧಾರಗಳಿಲ್ಲದೆ, ಮಾನುಷ ಪ್ರಮಾಣಗಳಿಂದ ಅಪರಾಧಗಳನ್ನು ನಿರ್ಣಯಿಸಲು ಸಾಧ್ಯವಾಗದಿದ್ದಾಗ ಪ್ರಯೋಗಿಸುತ್ತಿದ್ದ ದಿವ್ಯ ಪರೀಕ್ಷೆ; ಆರೋಪಿತನು ಬೆಂಕಿ ಮುಂತಾದ ಪ್ರಮಾಣ ವಸ್ತುಗಳನ್ನು ಮುಟ್ಟಿ ಸತ್ಯವನ್ನು ಸಿದ್ಧಪಡಿಸಬೇಕಾದ ಉಗ್ರಪರೀಕ್ಷೆ. P ಆರೋಪಿತನಿಗೆ ಪ್ರಮಾಣವಸ್ತುವಿನಿಂದ ಹಾನಿಯಾದರೆ ಅಪರಾಧಿಯೆಂದೂ, ಹಾನಿಯಾಗದಿದ್ದರೆ ನಿರಪರಾಧಿಯೆಂದೂ ತೀರ್ಮಾನವಾಗುತ್ತಿದ್ದಿತು. ಇವು ಸಪ್ತದಿವ್ಯಗಳು, ನವದಿವ್ಯಗಳು ಮತ್ತು ದಶದಿವ್ಯಗಳು ಎಂದು ಬೇರೆಬೇರೆ ಅಭಿಪ್ರಾಯಗಳಿವೆ. ಧಟ (ತಕ್ಕಡಿ), ಅಗ್ನಿ, ಜಲ, ವಿಷ, ಕೋಶ (ಬೊಗಸೆ), ತಂಡುಲ (ಅಕ್ಕಿ), ತಪ್ತಮಾಷಕ (ಕಾಯಿಸಿದ ಚಿನ್ನದ ನಾಣ್ಯ), ಫಾಲ (ಲೋಹದ ಪಟ್ಟಿ) ಮತ್ತು ಧರ್ಮಜ (ಧರ್ಮದಿಂದ ಉಂಟಾದುದು)–ಇವು ಪ್ರಮಾಣಭೂತವಾದ ಒಂಬತ್ತು ಬಗೆಯ ದಿವ್ಯಗಳು. ೧. ಧಟ (ತಕ್ಕಡಿ) : ಶಾಸ್ತ್ರೋಕ್ತವಾದ ರೀತಿಯಿಂದ ತಕ್ಕಡಿಯೊಂದನ್ನು ನಿರ್ಮಿಸಿ ಪೂಜೆಮಾಡಿ, ತಕ್ಕಡಿಯ ಒಂದು ಕಡೆ ಆರೋಪಿಯನ್ನು ಕುಳ್ಳಿರಿಸಿ, ಮತ್ತೊಂದು ಕಡೆ ಇಟ್ಟಿಗೆಗಳನ್ನಿಟ್ಟು ಸಮತೂಕ ಮಾಡಿಕೊಳ್ಳಬೇಕು. ಅನಂತರ ಅವನನ್ನು ಕೆಳಗಿಳಿಸಿ ಮತ್ತೊಮ್ಮೆ ತಕ್ಕಡಿಯನ್ನು ಪೂಜಿಸಿ, ಪ್ರಾರ್ಥಿಸಿ ಅವನನ್ನು ಕುಳ್ಳಿರಿಸಬೇಕು. ಆಗ ಆರೋಪಿಯು ಕುಳಿತಿರುವ ತಟ್ಟೆಯು ಮೇಲಕ್ಕೆ ಹೋದರೆ ಅವನು ನಿರ್ದೋಷಿಯೆಂದೂ, ಕೆಳಕ್ಕೆ ಬಂದರೆ ದೋಷಿಯೆಂದೂ ನಿರ್ಣಯಿಸುವುದು. ೨. ಅಗ್ನಿ : ಆರೋಪಿಯ ಬೊಗಸೆಯಲ್ಲಿ ಏಳು ಅರಳಿಯ ಎಲೆಗಳನ್ನಿಟ್ಟು, ಅವುಗಳನ್ನು ಏಳು ದಾರಗಳಿಂದ ಅಂಗೈ ಪೂರ್ತಿ ಸುತ್ತಿದ ಬಳಿಕ ಅಗ್ನಿಯನ್ನು ಪ್ರಾರ್ಥಿಸಿ ಕೆಂಪಗೆ ಕಾದ ಕಬ್ಬಿಣದ ಗುಂಡನ್ನು ಅವನ ಬೊಗಸೆಯಲ್ಲಿಡಬೇಕು. ಅವನು ಅಲ್ಲಿ ಬರೆದಿರುವ ಏಳು ಮಂಡಲಗಳನ್ನು ನಿಧಾನವಾಗಿ ದಾಟಿಕೊಂಡು ಹೋಗಿ ಕಬ್ಬಿಣದ ಗುಂಡನ್ನು ಕೆಳಗಿಟ್ಟಾಗ ಅವನ ಕೈ ಸುಡದೆ ಇದ್ದರೆ ನಿರ್ದೋಷಿಯೆಂದೂ ಸುಟ್ಟರೆ ದೋಷಿಯೆಂದೂ ನಿರ್ಣಯಿಸುವುದು. ೩. ಜಲ: ಆರೋಪಿಯು, ನೀರಿನಲ್ಲಿ ನಿಂತಿರುವ ಒಬ್ಬ ಕಟ್ಟುಮಸ್ತಾದ ಮನುಷ್ಯನ ಕಾಲನ್ನು ನೀರಿನಲ್ಲಿ

ಮುಳುಗಿ ಹಿಡಿದುಕೊಂಡಿರಬೇಕು. ಕೂಡಲೆ ದಡದಲ್ಲಿರುವ ಬಿಲ್ಲುಗಾರನು ದಡದಲ್ಲಿಯೇ ದೂರದಲ್ಲಿ ನಿಂತಿರುವ ಮತ್ತೊಬ್ಬ ವ್ಯಕ್ತಿಯ ಕಡೆಗೆ ಬಾಣವನ್ನು ಬಿಟ್ಟ ಮೇಲೆ ಆ ಮತ್ತೊಬ್ಬ ವ್ಯಕ್ತಿಯು ತನ್ನ ಬಳಿಗೆ ಬಂದ ಬಾಣವನ್ನು ತೆಗೆದುಕೊಂಡು ಆರೋಪಿಯು ನೀರಿನಲ್ಲಿ ಇರುವ ಬಳಿಗೆ ವೇಗವಾಗಿ ಬಂದಾಗ, ಆರೋಪಿಯು ಇನ್ನೂ ನೀರಿನಲ್ಲಿ ಮುಳುಗಿಯೇ ಇದ್ದರೆ, ಆತ ನಿರ್ದೋಷಿಯೆಂದೂ ಇಲ್ಲದಿದ್ದರೆ ದೋಷಿಯೆಂದೂ ನಿರ್ಣಯಿಸುವುದು. ೪. ವಿಷ: ಸಂಬಂಧಪಟ್ಟ ಪೂರ್ವ ವಿಧಿಗಳನ್ನು ಮಾಡಿದ ನಂತರ ಆರೋಪಿಯು ದೇವರನ್ನು ಪ್ರಾರ್ಥಿಸಿ ವಿಷವನ್ನು ಪಾನಮಾಡಬೇಕು. ಯಾವ ತೊಂದರೆಯೂ ಆಗದೆ ವಿಷವು ಜೀರ್ಣವಾದರೆ ಅವನು ನಿರ್ದೋಷಿಯೆಂದೂ ಇಲ್ಲದಿದ್ದರೆ ದೋಷಿಯೆಂದೂ ನಿರ್ಣಯಿಸುವುದು. ೫. ಕೋಶ (ಬೊಗಸೆ): ಸೂರ್ಯನೇ ಮೊದಲಾದ ಉಗ್ರದೇವತೆಗಳ ಪ್ರತಿಮೆಗಳನ್ನು ಪೂಜಿಸಿ, ಅಭಿಷೇಕ ಮಾಡಿದ ನೀರಿನಲ್ಲಿ ಮೂರು ಬೊಗಸೆಯನ್ನು ಆರೋಪಿಗೆ ಕುಡಿಯಿಸಬೇಕು. ಅವನಿಗೆ ಹದಿನಾಲ್ಕು ದಿನಗಳೊಳಗೆ ಯಾವ ವಿಪತ್ತೂ ಒದಗದಿದ್ದರೆ ಅವನು ನಿರ್ದೋಷಿಯೆಂದೂ, ಒದಗಿದರೆ ದೋಷಿಯೆಂದೂ ನಿರ್ಣಯಿಸುವುದು. ೬. ತಂಡುಲ (ಅಕ್ಕಿ): ಒಂದು ಮಣ್ಣಿನ ಪಾತ್ರೆಯಲ್ಲಿ ಬೆಳ್ಳಗಿರುವ ಅಕ್ಕಿಕಾಳುಗಳನ್ನು ಹಾಕಿ ದೇವರ ಅಭಿಷೇಕದ ನೀರಿನಲ್ಲಿ ಒಂದು ರಾತ್ರಿ ನೆನೆಯಿಸಿ, ಮರುದಿನ ಬೆಳಗ್ಗೆ ಆರೋಪಿಯು ಸೂರ್ಯನ ಎದುರಿಗೆ ನಿಂತು ಆ ಅಕ್ಕಿಯನ್ನು ಅಗಿದು, ಒಂದು ಭೂರ್ಜಪತ್ರ ಅಥವಾ ಅರಳಿಯ ಎಲೆಯ ಮೇಲೆ ಉಗಿಯುವಂತೆ ಮಾಡಬೇಕು. ದವಡೆಗೆ ಘಾಸಿಯಾಗಿದ್ದು ಅಕ್ಕಿ ಕಾಳುಗಳು ರಕ್ತಸಿಕ್ತವಾಗಿದ್ದರೆ ಮತ್ತು ಕೈಕಾಲುಗಳು ನಡುಗುತ್ತಿದ್ದರೆ ಅವನು ದೋಷಿಯೆಂದೂ ಇಲ್ಲದಿದ್ದರೆ ನಿರ್ದೋಷಿಯೆಂದೂ ನಿರ್ಣಯಿಸುವುದು. ೭. ತಪ್ತಮಾಷ (ಕಾಯಿಸಿದ ಚಿನ್ನದ ನಾಣ್ಯ): ಕಬ್ಬಿಣ, ತಾಮ್ರ ಮೊದಲಾದ ಲೋಹದ ಅಥವಾ ಮಣ್ಣಿನ, ನಾಲ್ಕು ಅಂಗುಲ ಎತ್ತರದ ಒಂದು ಪಾತ್ರೆಯಲ್ಲಿ ಎಣ್ಣೆ ಅಥವಾ ತುಪ್ಪವನ್ನು ಕುದಿಯುವಂತೆ ಕಾಯಿಸಿ, ಅದರೊಳಗೆ ಒಂದು ಮಾಷ (ಚಿನ್ನದ ನಾಣ್ಯ)ವನ್ನು ಹಾಕಬೇಕು. ಆರೋಪಿಯು ಅದನ್ನು ತನ್ನ ಕೈಗಳಿಂದ ಹೊರಗೆ ತೆಗೆದಾಗ ಅವನ ಕೈಗೆ ಯಾವ ಬಾಧೆಯೂ ಉಂಟಾಗದಿದ್ದರೆ ಅವನು ನಿರ್ದೋಷಿಯೆಂದೂ ಉಂಟಾದರೆ ದೋಷಿಯೆಂದೂ ನಿರ್ಣಯಿಸುವುದು. ೮. ಫಾಲ (ಲೋಹದ ಪಟ್ಟಿ) : ಹಿಂದಿನಂತೆ ಕುದಿಯುವ ಎಣ್ಣೆ ಅಥವಾ ತುಪ್ಪದ ಪಾತ್ರೆಗೆ, ಎಂಟು ಅಂಗುಲ ಉದ್ದ ಹಾಗೂ ನಾಲ್ಕು ಅಂಗುಲ ಅಗಲದ ಕಬ್ಬಿಣದ ಪಟ್ಟಿಯನ್ನು ಹಾಕಬೇಕು. ಆರೋಪಿಯು ತನ್ನ ಕೈಗಳಿಂದ ಅದನ್ನು ಹೊರಗೆ ತೆಗೆದಾಗ ಕೈಗೆ ಏನೂ ಬಾಧೆಯಾಗದಿದ್ದರೆ ನಿರ್ದೋಷಿಯೆಂದೂ, ಆದರೆ ದೋಷಿಯೆಂದೂ ನಿರ್ಣಯಿಸುವುದು. ಕೆಲವು ಸ್ಮೃತಿಗಳಲ್ಲಿ ನಾಲಿಗೆಯಿಂದ ನೆಕ್ಕಬೇಕೆಂದು ಹೇಳಿದೆ. ೯. ಧರ್ಮಜ (ಧರ್ಮದಿಂದ ಉಂಟಾದುದು): ಎರಡು ಪಟ್ಟಿಕೆಗಳನ್ನು ತೆಗೆದುಕೊಂಡು, ಒಂದರಲ್ಲಿ 'ದೋಷಿ' ಎಂದೂ ಮತ್ತೊಂದರಲ್ಲಿ 'ನಿರ್ದೋಷಿ' ಎಂದೂ ಬರೆದು ಎರಡನ್ನೂ ಒಂದು ಕುಂಭದಲ್ಲಿ ಹಾಕಿ ಕುಂಭವನ್ನು ಪೂಜಿಸಿ ಆರೋಪಿಯು ಕೈಯಿಂದ ಒಂದು ಪಟ್ಟಿಕೆಯನ್ನು ಎತ್ತಿಸಬೇಕು. ಅದರಲ್ಲಿ 'ದೋಷಿ' ಎಂದಿದ್ದರೆ ದೋಷಿಯೆಂದೂ, 'ನಿರ್ದೋಷಿ' ಎಂದಿದ್ದರೆ ನಿರ್ದೋಷಿಯೆಂದೂ ನಿರ್ಣಯಿಸುವುದು. ಇವೆಲ್ಲವೂ ಯಾಜ್ಞವಲ್ಕ್ಯಸ್ಮೃತಿಯ ವ್ಯವಹಾರ ಕಾಂಡದ ದಿವ್ಯಪ್ರಕರಣದಲ್ಲಿ ನಿರೂಪಿತವಾಗಿವೆ. ಇವಲ್ಲದೆ ಈಚೆಗೆ ಕೆಲವರು 'ತುಲಸಿ'ಯನ್ನೂ ಇವುಗಳ ಜೊತೆಗೆ ಸೇರಿಸಿ ದಶದಿವ್ಯಗಳು ಎಂದು ಹೇಳುತ್ತಾರೆ. ೪. ಆಣೆ; ಪ್ರಮಾಣ: ಏನ ಬೇಡಿದುದನೀವನಾಗಿ ನಂಬಿಗೆಯುಳ್ಳ ಶಿವಭಕ್ತಂಗೆ ಇದೇ ದಿಬ್ಯ (ಬಸವ. ೨೪೬) ; ಇನ್ನೂ ತಪ್ಪಿದೆನಾದರೆ ನಿಮ್ಮ ಪಾದವೇ ದಿಬ್ಯ (ಬಸವ. ೩೨೨). ದಿಬ್ಯ₂: ೧. ಕಿವಿಗಿನಿದಪ್ಪ ದಿಬ್ಬ ಸವಿಗಬ್ಬಮಂನೋದಿಸುತಿರ್ಪವರ್ ಕಣ್ಗಳಿಂ ಕರಿಸೆ ರಸಂಗಳಂ ನಟಿಪ ನಾಟಕಮಂ ನೆರೆ ನೋಡುತಿರ್ಪವರ್ . . . ವಿವಿಧ ವಿನೋದದಿಂ ಕಳೆಗುವಂತ್ರುತಿಮಾಂ ಸೊಗದಿಂದೆ ಕಾಲಮಂ (ಚಳವಿ. ೫-೧೫೮). ೪. ದಿವ್ಯದ ಪರೀಕ್ಷೆಗೆ ಉಪಯೋಗಿಸುವ ಕಾಯಿಸಿದ ಕಬ್ಬಿಣ, ಎಣ್ಣೆ ಇತ್ಯಾದಿ ಪ್ರಮಾಣ ವಸ್ತು : ದಿಬ್ಬವ ಕೈದುಡುಕಿದೊಡೆ ಕೈ ಬೇವುದಲ್ಲದೆ ಮೈ ಬೇಯದು ಒಲಿದವರನಗಲಿದರೆ ಸರ್ವಾಂಗವು ಬೇವುದವ್ವಾ (ಗಂಥಾ. ೧೦-೬). ದಿಬ್ಬೆ₃ : ೩. ಕುಲಗಿರಿ ಕಾಯ್ದ ಕರ್ಬುನದ ಚಿಟ್ಟುವೊಲಿರ್ದುವು ಧಾತ್ರಿ ಕಾದ ಕಾವಲಿಯವೊಲಿರ್ದುದಂಬುನಿಧಿ ದಿಬ್ಬಿಗೆ ಕಾಸಿದ ತೈಲದಂದದಿಂ ತಲೆದಳೆದುಕ್ಕುತಿರ್ದುವು (ಸೂಕ್ತಿಸು. ೧೦-೧೧೧). ೪. ಗಂಡ ಪೆಂಡಿರು ತಾವು ನಿರ್ದೋಷರೆಂದೆಡೆಗೊಂಡು ದಿಬ್ಬಿಗೆ ಕೈಯನಿಕ್ಕಿ ಕೆಂಡವ ಪಿಡಿದು ತಂದೀವಂತೆ ಕೊಟ್ಟಳು ಗಂಡಗೊರ್ವಳು ಮಾಣಿಕವನು (ಭರತ. ೫-೪೮).

ದಿಬ್ಯದ ತೊಲೆ = ದಿವ್ಯದ ಪರೀಕ್ಷೆಯಲ್ಲಿ ಪ್ರಮಾಣವಸ್ತುವಾಗಿ ಬಳಸುವ ತಕ್ಕಡಿ : "ಧಟ – ದಿಬ್ಯದ ತೊಲೆ" (ನಾಚಿಂ. ೬).

[ <ಸಂ. ದಿವ್ಯ ]

ದಿಬ್ಯಂಬಿಡಿ (ಕ್ರಿ). (ಕಾಯಿಸಿದ ಕಬ್ಬಿಣ, ಅಗ್ನಿ ಮುಂತಾದ ಪ್ರಮಾಣ ವಸ್ತುಗಳನ್ನು ಮುಟ್ಟಿ) ಪ್ರಮಾಣ ಮಾಡು; ದಿವ್ಯವನ್ನು ಹಿಡಿ : ತನ್ಮೃಗಶಾಬಾಕ್ಷಿಯ ಕಂಪು ತಟ್ಟ ಮಧುಪಂಬೋಲ್ ಸೋಲುತ್ತು ಕಂಡೊಲ್ದು ನಲ್ಮೆಗೆ ದಿಬ್ಯಂಬಿಡಿವಂತವೋಲ್ ಪಿಡಿದು (ಶಂಕಥಾ. ೦-೬೦).

[ ದಿಬ್ಯ + ಪಿಡಿ₁ ]

ದಿಬ್ಯಗತಿ (ನಾ). ಶ್ರೇಷ್ಠವಾದ ಗತಿ,-ಪದವಿ ; ಉತ್ತಮವಾದ ಸ್ಥಾನ 'ದಿಬ್ಯಗತಿವೆಱು' ಪರಾ. [ <ಸಂ. ದಿವ್ಯಗತಿ ]

ದಿಬ್ಯಗತಿವೆಱು (ಕ್ರಿ). ಶ್ರೇಷ್ಠವಾದ ಪದವಿಯನ್ನು ಹೊಂದು ; ಸ್ವರ್ಗವನ್ನು ಪಡೆ: ವಿಸ್ತರ ದೇವಾನಕವೃಣ್ಣಿ ದಿಬ್ಯಗತಿವೆತ್ತಂ ಧಾತ್ರಿ ಭಾಪ್ಪೆಂಬಿನಂ(ಸಾಇಇ. XX. ೨೪೮-೨೯ ; 1228). [ ದಿಬ್ಯಗತಿ + ಪೆಱು₁ ]

ದಿಬ್ಯದೇಹ (ನಾ). ಶ್ರೇಷ್ಠವಾದ ಶರೀರ; ಉತ್ತಮವಾದ ಮೈ : ಮುನ್ನೆ ಕುಂಕುಮಪಂಕಿತಮಪ್ಪ ದಿಬ್ಯದೇಹದೊಳ್ ಚಿಮುರ ಬಿಂದುಗಳಂ ಕಂಡು ನೆತ್ತರೆಂದು ಬಗೆದು ಮೂರ್ಛೆಗೆ ಸಲ್ವಾಕೆಯ ಈಗಳ್ ಮಗನಂ ಪೋಟ್ದು ತಿಂದಪ್ಪಯ್ (ವಡ್ಡಾರಾ. ೪೮-೨೨). [ <ಸಂ. ದಿವ್ಯದೇಹ ]

ದಿಬ್ಯಸಭೆ (ನಾ). ಶ್ರೇಷ್ಠವಾದ ಸಭೆ; ಉತ್ತಮವಾದ ಗೋಷ್ಠಿ : ಮುನ್ನೆ ನೀನ್ . . . ಪೊಡಮಾಸದಗ್ಗಳದ ಸೂಳೆಯರ್ಕಳಿಂದು ಪರಿವಾರದಿಂದಮಿಂತಪ್ಪ ದಿಬ್ಯಸಭೆಯಿಂದಂ ಪರಿವೇಷ್ಟಿತನಾಗಿ ಆಟಪಾಟ ವಿನೋದಂಗಳಿಂದಿರ್ಪಾತನಯ್ (ವಡ್ಡಾರಾ. ೧೩೯-೨೪). [ <ಸಂ. ದಿವ್ಯಸಭಾ ]

ದಿಬ್ಯಾಹಾರ (ನಾ). ಶ್ರೇಷ್ಠವಾದ ಆಹಾರ ; ಉತ್ತಮವಾದ ಆಹಾರ : ಮತ್ತಮಮೃತೋಪಮಮಪ್ಪ ದಿಬ್ಯಾಹಾರಮನುಣ್ಬಾತನಯ್ ಈಗಳ್ ಕಷ್ಟಗಳುಂ . . . ಮೊದಲಾಗೊಡೆಯ ಜೀವರಾಶಿಗಳಂ ಕೊಂದು ತಿನ್ಪೆಯಾದಯ್ (ವಡ್ಡಾರಾ. ೦೪೦-೩). [ <ಸಂ. ದಿವ್ಯಾಹಾರ ]

ದಿಮಡಿ 'ದಮ್ಮಡಿ₁' ನೋ.

ದಿಮಾಕು, ಧಿಮಾಕು (ನಾ). ೧. ಜಂಬ; ಸೊಕ್ಕು; ಗರ್ವ; ಅಹಂಕಾರ ಇವರ ದಿಮಾಕನ್ನು ಮುರಿಯದಿದ್ದರೆ ನಾನು ಸರಸಿಯೇ ಅಲ್ಲ (ಕಾಗೆಳ. ೬೩) ; ದಿಮಾಕಿನ ಮಾತನಾಡುತ್ತಾ ಕುಳಿತಿದ್ದ (ತುಂಡುತೋ. ೧೪೮) ; ರೇವಕ್ಕನ ದಿಮಾಕು ಇವರ ಮುಂದೆ ಮಾತ್ರ ಹೆಡೆಯೆತ್ತುತ್ತಿರಲಿಲ್ಲ (ಚಿಳುಮು. ೩೦) ; ಬಹಳ ಹೆಚ್ಚಾಯಿತು ಈ ದಿಮಾಕು (ಈಹಸೂ. ೧೪); ಅವಳಿಗೆ ಯಾವಾಗಲೂ

ದಿಮಾಕು ! ನಾನೆ ಯಾವಾಗಲೂ ಸೋಲಬೇಕೇನು? (ಮಠಮು. ೫೪೭).
**ಧಿಮಾಕು :** ೧. ಗಂಡ ಬಿಟ್ಟೋಗಿದ್ರೂನೂ ಎಂಥ ಧಿಮಾಕು ! (ಬನಶಂ. ೨೪೨); ರೊಕ್ಕದ ಧಿಮಾಕಿನ್ಯಾಗ ನಿಮ್ಮ ಮಗಾ ಇನ್ನೊಮ್ಮೆ ಹಿಂಗ ಮಾಡಿದರ ಬಿಕ್ಕಿ ನೀರ ಬೇಡಲಾಕಿಲ್ಲ ತಿಳೀತ ? (ನಡಲಾ. I, ೨೯೦). ೨. ಡೌಲು.; ಠೀವಿ ; ಬೆಡಗು ; ವೈಯಾರ : ಬೀದಿಹೋಕರ ಕಡೆಗೆ ಕಣ್ಣು ಹಾರಿಸುತ್ತ ಧಿಮಾಕಿನಿಂದ ತಮ್ಮ ಆಸನಗಳಲ್ಲೊರಗಿ ಕುಳಿತಿದ್ದ . . . ಬಂಡಿಗಾಡಿದರು–ಇವರೆಲ್ಲ ಚೆನ್ನಾಗಿ ತಿಂದುಂಡವರಂತೆ ಕಾಣುತ್ತಿದ್ದರು (ಭುವನ. ೩೦೯) ; ಬಿಂದಿಗೆಯನ್ನು ಸೊಂಟದ ಮೇಲೆ ಇರಿಸಿಕೊಂಡು ಊರ ಮುಂದಿನ ಭಾವಿಗೆ ಧಿಮಾಕಿನಿಂದ ಹೊರಟಳು (ಮಗನಮಂ. ೧೦೭).
[ ←ಅರ. ದಿಮಾಗ್, ದಿಮಾಘ್; ಹಿಂ. ದಿಮಾಕ್, ದಿಮಾಗ್; ಮರಾ. ದಿಮಾಖ್ ]

**ದಿಮಿ** (ನಾ). ಒಂದು ಅನುಕರಣ ಶಬ್ದ: ಛಿಳಿಛಿಮಿದ್ದಿಮಿ ಘುಳ್ಳು ನಳ್ಳುಂ ಘಣಿಲು ಘಣ್ ಘಣ್ ಘಣ್ ಧಂ ಧಗಂ ಘುಳುಘುಳು ಛಟಲ್ ಛಟಲೆಂಬ ಕಟಪಟ ನಿಟಲು ನಿಟಿಲೆಂಬ . . . ಧ್ವನಿಗಳವನಿಗೆ ಭಯವನೀವುತಿರೆ (ಸಾನಂಚ. ೮–೧೩). 'ದಿಮಿಗುಡು' ವರಾ.

ದಿಂದಿಮಿ, ದಿಮಿದಿಮಿ (ದ್ವಿರುಕ್ತಿ) = ೧. ನೃತ್ಯ, ಸಂಗೀತಗಳ ತಾಳವನ್ನು ಸೂಚಿಸುವ ಒಂದು ಅನುಕರಣ ಶಬ್ದ : ದಿಂದಿಮಿ ದಣ್ಣ ತೊದಿಗಿದಿಮಿಕು ದಿಮ್ಮೆಂದು ನಾನಾ ವಿಧದಲ್ಲಿ . . . ಸುರದುಂದುಭಿ ರವವ ಹಾಡಿದರು (ಭರಚ. ೧–೯೩). ೨. ಗಲಾಟೆ ; ಗದ್ದಲ : ಒಳಗೆ ನಿಂತು ಪಟಗುಟ್ಟ ಬೀಸತ್ತ ಸುಬ್ಬಕ್ಕ ಹೊರಕಟ್ಟೆಗೆ ಬಂದು ಕುಳಿತು ಊರಿನಲ್ಲಿನ ದಿಮಿದಿಮಿಯನ್ನು ನೋಡುತ್ತ ಮೂಗಿಗೆ ಬೆರಳಿಟ್ಟರು (ದಾಳೂಟಿ. ೧೦೭).

**ದಿಮಿಕಿಟ**(ನಾ).ಕುಣಿತದತಾಳವನ್ನು ಸೂಚಿಸುವ ಅನುಕರಣ ಶಬ್ದ : (ಶ).

**ದಿಮಿಗುಡು** (ಕ್ರಿ). ದಿಮಿ ಎಂದು ಸದ್ದುಮಾಡು : ಆಕಾಶದಲ್ಲಿ ದುಂದುಭಿಯ ನಾದವು ದಿಮಿಗುಟ್ಟಹತ್ತಿತು (ತುಳಸೀ. ೩೪).
[ ದಿಮಿ + ಕುಡು$_1$ (<ಕೊಡು$_1$) ]

**ದಿಮಿದಿಮಿಸು** (ಕ್ರಿ). = ದಿಮಿಗುಡು : ವರ್ಗವು ದಿಮಿದಿಮಿಸುವಂತೆ ಬಲವಂತನು ಕೂಗಿದನು (ರಕ್ತಾರೃ. ೦೫೭). [ <ದಿಮಿ + –ಇಸು$_3$ ]

**ದಿಮಿಸಾಲೆ** 'ದಂಮ್ಮಿಸಾಲು' ನೋ.

**ದಿಮ್ಗುಡು** (ಕ್ರಿ). ದಿಮ್ ಎಂದು ಶಬ್ದವಾಗು : ಜಗ್ಗಲಿಗೆ ಮೊದಲಾದ ದಿಮ್ಗುಡುವ ವಾದ್ಯಗಳನ್ನು . . . ಹಿಡಿದು ಜನರು ಗುಂಪಿಟ್ಟು ಹಾಡಿ ಕುಣಿಯುವರು (ಕನ್ನಜಾ. ೩೧). [ ದಿಂ + ಕುಡು$_1$ (<ಕೊಡು$_1$) ]

**ದಿಮ್ಮ** (ನಾ). ಒಂದು ಬಗೆಯ ವಾದ್ಯ : ಮದ್ದಲಿ, ದಿಮ್ಮ, ದಪ್ಪು, ದುಂದುಭಿ, ತಾಳ, ಚೈಯಾಕ (ಚೆಲ್ಲಂಕ), ಡೊಳ್ಳು, ಜಗ್ಗಲಿಗೆ ಮೊದಲಾದವುಗಳ ಸಂಜೋಡಣೆ ಮಾಡಿ . . . ಕುಣಿಯುತ್ತಾರೆ (ಕನ್ನಜಾ. ೨೯) ; ಕಣೆ, ದಿಮ್ಮ ಮೊದಲಾದ ವಾದ್ಯಗಳನ್ನುನುಡಿಸುತ್ತ ಮಳೆಯ ಭವಿಷ್ಯವನ್ನು ಜನಪದದಲ್ಲಿ ಸಾರುವುದನ್ನು ನೋಡಿ ಮನಗಾಣಬಹುದು (ಕನ್ನಜಾ. ೧೬೦).

**ದಿಮ್ಮಗೆ** (ಅ). ೧. ಗಟ್ಟಿಯಾಗಿ ; ಬಲವಾಗಿ ; ದೃಢವಾಗಿ : ರೊಟ್ಟಿ ದಿಮ್ಮಗಿದೆ (ಜೂ) ; ಪಾತ್ರೆಯನ್ನು ದಿಮ್ಮಗೆ ಹಿಡಿದುಕೊ (ಜೂ). ೨. "ಜೋರಾಗಿ ; ರಭಸದಿಂದ" (ಪ್ರಕಣ್ಣ). [ <ದಿಮ್ಮಿತು + – ಅಗೆ$_3$ ]

**ದಿಮ್ಮಡಿ** 'ದಮ್ಮಡಿ$_1$' ನೋ.

**ದಿಮ್ಮದಿರುಗ, ದಿಮ್ಮುದಿರುಗ** (ನಾ). ಸುಮ್ಮನೆ ತಿರುಗುವವನು,–ಸುತ್ತಾಡುವವನು : ಅವನೊಬ್ಬ ದಿಮ್ಮದಿರುಗ, ಯಾವ ಕಾರ್ಯಕ್ಕೂ ಬಾರದವನು (ಜೂ). **ದಿಮ್ಮುದಿರುಗ :** ಹಡೆದವರ ತಲೆಗೆ ಮರಳು ಚೆಲ್ಲಿದ್ಮಂತೆ ಪಂಡದೇರ ಕೂಡ್ಯಾಡಿ ಕಲಿತ್ಕೆಲ್ಲೊ ಬೆಡಗ ದಿಮ್ಮುದಿ [ಪಾಠಾಂ. ದೆ] ರುಗ ಸೊಕ್ಕಿ ಮೊರುಗ ಬಿಡು ಎನ್ನ ಸೆಬಗ (ಕಜಳ. ೫೫–೩).
[ ದಿಮ್ಮದಿರುಗು + – ಅ$_7$ ]

**ದಿಮ್ಮದಿರುಗು, ದಿಮ್ಮುದಿರಂಗು$_1$** (ಕ್ರಿ). ೧. ಸುಮ್ಮನೆ ತಿರುಗಂ,–ಸುತ್ತು. ೨ (ಆಲಂ) ವೃಥಾ ಶ್ರಮಿಸು: ಸುಮ್ಮನೆ ಘನಮುಕ್ತಿ ಸುಖವನು ಬಯಸುತ ದಿಮ್ಮದಿರುಗಿ ಸಾಯದಿರು ಮಂದ ಮನುಜಾ (ಶ್ರೀಕಪ. ೩–೬೩ ಪಲ್ಲವಿ). **ದಿಮ್ಮುದಿರುಗು$_1$** ೧. 'ದಿಮ್ಮದಿರುಗ' ವರಾ.
[ <ದಿಮ್ಮನೆ + ತಿರುಗು$_1$ ]

**ದಿಮ್ಮನೆ** (ಅ). ೧. ಇದ್ದಕ್ಕಿದ್ದಂತೆ ; ಥಟ್ಟನೆ : ದಿ [ಪಾಠಾಂ. ಧಿ] ಮ್ಮನೆ ನಿಂದು ಭುಗಿಲೆಂದನು ಕಿರೀಟಿ (ಕುಮ್ವಾಸ. ೩–೮) ; ದಿಮ್ಮನೆಯೆದ್ದು ಪೋಗುವಳ ತೆಕ್ಕೆಯಿಂ ಪಿಡಿದಟ್ಟಿ (ನವನೂ. ೯–೩೪) ; ಶ್ರೀ ರಾಮಚಂದ್ರಮಂ ದಿಮ್ಮನೆಟ್ಟು ದಿಗ್ಭ್ರಮೆಯಿಂ ಕಣ್ಗೆಟ್ಟು ಚಿಂತಾಪರವಶತೆಯಿಂ ನಡೆಗಂಬಂ ಬರ್ಪುದೆನೆ ಬಂದು (ರಾಮಾಶ್ವ. ೧೯–೧೯) ; ದಿಮ್ಮನೆದ್ದಳು ಬೆಳ್ಳಿ ತಾಯಿ ಕೈ ಪಿಡಿಯೆ (ಕಾಬೂರ. ೧೬೭–೩೬೯). ೨. ರಭಸದಿಂದ; ಜೋರಾಗಿ : ಎತ್ತಿ ಹಾಯ್ದುಂದ ಹೆಣನುಮಂಬರದತ್ತಲಿದ್ದು ನೆಲಕ್ಕೆ ದಿಮ್ಮನೆ ಕೆಡೆಯ ಸಭೆ [ಪಾಠಾಂ. ಲಿರ್ದುದು ಕೆಡೆಯಲಾಗಳೆ ಸಭೆ ನಡುಗಿ] ಬೆದಟಿ (ಬಸಪು. ೨೨–೪೩); ದಿಮ್ಮನೆ ಶಿರಂ ನೆಲಕೆ ಬೀಳೆ (ಗುರುಜಾ. ೮–೬೩). ೩. ಸುಮ್ಮನೆ ; ಮೌನವಾಗಿ : ತಡವಾಡಿ ಬಂದನೆಂದತ್ತಳು ಬೈದಳು ಸುಯ್ದಳು ಸಿಟ್ಟುಮಾಡಿದಳು ದಿಮ್ಮನೆ ಕುಳಿತಳು ಹುಬ್ಬನು ಮುರಿದಳು ಮಂತ್ರಿದ್ದು ಅಬ್ಬರಿಸಿದಳು (ಅಂಬಾಶ. ೦೬೮–೨೭). 'ಧಿಮ್ಮನೆ' ವರಾ. [ ದಿಂ + – ಅನೆ$_1$ ]

**ದಿಮ್ಮಿ$_1$** (ನಾ). ೧. ದಿಣ್ಣೆ; ತಿಟ್ಟು; ಎತ್ತರವಾದ ಪ್ರದೇಶ : (ಶ). ೨. ಮರದ ದಿಂಡು,–ತೊಲೆ : ಆನೆ ದೊಡ್ಡ ಮರದ ದಿಮ್ಮಿಯನ್ನು ಸೊಂಡಿಲಲ್ಲಿ ಹಿಡಿದು . . . ಹೋಯಿತು (ಪ್ರವಾಕ. II, ೧೫೯) ; ದೊಡ್ಡ ದೊಡ್ಡ ಮರದ ದಿಮ್ಮಿಗಳನ್ನು ಸಾಗಿಸಿಕೊಂಡು ಹೋಗಿ ಮಹಾರಾಜರಿಗೆ ಒಪ್ಪಿಸಿದರು (ಬ್ರಸರ್ವ. ೧೪) ; ದಿಮ್ಮಿಗಳನ್ನ ಸೈಜುಮಾರು ಗರಗಸದಿಂದ ನಾವು ಮೊದಲು ಕುಯ್ದು ಹಾಕಬೇಕು (ಚುಂಗೂರಿ. ೦೦೩). ೩. ಕೆಸರು ; ಬದಿ ; "ಉಬ್ಬಲ" (ಜಾನಕೋ. ೩). ೪. ಕವಚ ; ಅಂಗಿ : "ತನುತ್ರಂ . . . ಉರಚ್ಛದಃ, ಕಟಕಃ, ಜಾಗರಃ, ಕವಚಃ ೭ ಎದೆಗೆ ರಕ್ಷಕವಾದ ತೊಗಲ ದಿಮ್ಮಿಗೂ ಪಾದರಕ್ಷೆಗೂ ಪೆಸರುಗಳು" (ಸಿದ್ಧಾಂತಿ. ೨೨೦).
[ ದೇ.೩ ತೆಲು. ದಿಮ್ಮ; ಪರ್ಜಿ. ದೆಮ್ಮ ]

**ದಿಮ್ಮಿ$_2$** 'ದಂಮ್ಮಿ' ನೋ.

**ದಿಮ್ಮಿಡಿ** 'ದಿಮ್ಮುಹಿಡಿ' ನೋ.

**ದಿಮ್ಮಿಡು** (ಕ್ರಿ). ದಿಮ್ ಎಂದು ಶಬ್ದವುಂಟಾಗುವಂತೆ ಮಾಡು : ದಿಮ್ಮಿಡುವ ಘಣಾಘಣಾ ಎಂಬ ಗಂಟೆಯ ರವಕ್ಕೆ ಬೆರ್ಪುಗೊಳುತ (ರಾಸಪ. ೬. ೫೩–೪). [ ದಿಂ + ಇಡು$_1$ ]

**ದಿಮ್ಮಿತು, ದಿಮ್ಮಿತ್ತು** (ನಾ). ೧. ಗಟ್ಟಿಯಾದುದು ; ದಪ್ಪನಾದುದು ; ಭಾರವಾದುದು : ವಿಮ್ಮ ಕಂಥೆಗೆ ಕೌಪಕಣೆಯೆನಲಮ್ಮನಾದಡೆಯವರಲ ಪಾಡಿನ ದಿಮ್ಮಿತಪ್ಪಾ ಕಂಥೆಯಂ ಕೌಪೀನಮಂ ಕೊಟ್ಟು (ಬಸಪು. ೨೭–೪೪). ೨. ಹೊರೆ ; ಭಾರ : ತಂಬಿರ್ದ ಬಂಡಿಗೆ ಮೇಖಿಂ ದಿಮ್ಮಿತೇ (ಹದಕಾ. ೮–೨೬). ೩. ಹಿರಿದಾದುದು ; ಘನವಾದುದು ; ಶ್ರೇಷ್ಠವಾದುದು ; ದೊಡ್ಡದು : "ದಿಮ್ಮಿತೆನಲ್ಕೆ ದೊಡ್ಡಿತುಂ" (ಶಬ್ದಾನಿ. ೧೭) ; ತಂತುಹಾರುವವನಲ್ಲ ಸಾಕ್ಷಾತ ಬೊಮ್ಮ ನಪ್ಪನು ಆಗಿ ಬುಧರೊಳು ದಿಮ್ಮಿತಪ್ಪಖಿಳಾಗಮಜ್ಞನು (ಬಸಪು. ೫೫–೩೩) ; ಅವನ ಮೈಸೋಂಕಿಲ್ಲವುಂ ದಿಮ್ಮಿತಪ್ಪುಡನಾಟವವನಿರವೆ ಯೋಗದಾತಂ ಮಾತನಾಡಿರ್ದುದೆ ಮಲಂ ಧ್ಯಾನಂ (ಶಬ್ರಾ. ೧೩–೪೦) ; ಇನಿತೊಂದು ಪೆರ್ಮೆಯ ಕ್ಷೇತ್ರದೊಂದು ಮೈಮೆ ದಿಮ್ಮಿತು (ರಾಮಾಶ್ವ. ೮೨–೨೭). ೪. ಕಷ್ಟಕರವಾದುದು; ಕಠಿಣವಾದುದು: ಗರ್ವವ ನೆಮ್ಮಿದರೆ ತದ್ಗರ್ವದಿಂದುಬಿ ದಿಮ್ಮಿತಹುದಾ ಕಾರ್ಯ (ಕುಮ್ವಾಉ. ೪–೮೭).
**ದಿಮ್ಮಿತ್ತು :** ೨. ಬಳ್ಳಿಗೆ ಕಾಯಿ ದಿಮ್ಮಿತ್ತೇ (ಬಸಮ. ೬೦).

ದಿಮ್ಮಿದ = ೧. ದೊಡ್ಡತನದ ; ದೊಡ್ಡಸ್ತಿಕೆಯ : ಕಾಕ ನುಡಿಯದೆ ಸುಮ್ಮನಿರಿ ನೀವೇಕೆ ದಿಮ್ಮಿದ ವಾಕ್ಯ ವಸ್ತುವಿವೇಕ ನಿಮಗೆಲ್ಲಿಯದು ನೀವು ಸುಮಾರ್ಗಬಾಹಿರರು (ಶಂಕೆದಾ. ೧೫-೧೦). ೨. ಹಿರಿಯನಾದವನು; ಪ್ರೌಢ ; ಶ್ರೇಷ್ಠ : "ಸೈದರೆಂದುಂ, ದಿಮ್ಮಿದರೆಂದುಂ, ಗಹನರೆಂದುಂ, ನೇಟಿದರೆಂದುಂ–ಈ ೪ ಪಿರಿಯರ್ಗೆ ಪೆಸರ್" (ಶಶಸಾ. ೧೭-೩೬೨) ; ಪಾಡೆ ಚಿರಂಟಿಯರ್ವರಸೆ ದಿಮ್ಮಿದರ್ . . . ಸತಿಗೂಡಿ ತದುದ್ಭಟ ರಾಜಕುಂಜರಂ ಕೂಡೆ ವಿವಾಹವಂಟವಳಿ ಮೆಲ್ಲನೆ ಬಂದನ ನೂನರಾಗದಿಂ (ಉದ್ಭಟ. ೮-೭೦) ; ದಿಮ್ಮಿದರಕ್ಕರಕ್ಕಳಿವರೊಳ್ ನಂದಿ ಯೊಳ್ ಕಡುಜಾಣರ್ (ಕಬ್ಬಿಗಾ. ೧೧) ; ಎಲೆ ದೇವ ಚಟ್ಟದಂತಪ್ಪ ದಿಮ್ಮಿ ದನನಾಗಿ ಸಲುಗೆಯೊಗಿರ್ದವಳನೆನ್ನನೊಸ್ತ್ರಿದೆ ಯೆಡದ ಕಲಿಕೆ (ವೀಶೈಪು. ೩-೨೦-೧) ; ದಿ [ಪಾಠಾಂ. ನಿ]ಮ್ಮಿದರ್ ಗುಜುಗುಜಿಸದಿರಿಮತುಳರುದ್ರಗಣಮು ಮ್ಮುಸಗಬೇಡೆಂದು . . . ಧರಾಧರಿಗಳಂ ಮಾಡುತಿರ್ದರತಿಭಕ್ತಿಯಿಂದೆ (ಡಬಪು. ೨-೨೬) ; ಗಿರಿಶಭಕ್ತಿಯ ಶಿಶುವಂ ದಿಮ್ಮಿದರಲ್ತಿನೆ ಕಡುಪಿಂದಾಂ ಮಡಿಪಿದೆ ನೆನ್ನವೊಲ್ ಕೃತಘ್ನರುಮೊಳರೇ (ರಾಜಶೇ. ೦೪-೨೪). ೩. ಗಟ್ಟಿಗ ; ಪರಾಕ್ರಮಿ; ಬಲಶಾಲಿ: ನಿಮ್ಮ ರಾಯನ ಪೊರೆಯ ಪರಿವಾರದೊಳ್ಳೆವೆ ದಿಮ್ಮಿದರೊ ಮತ್ತೆ ಕಲರೊಳರೊ (ಜೈಮಿಭಾ. ೪-೨೨). ೪. ತಿಳಿದವನು ; ಬಲ್ಲಿದ : ರತ್ನಪರೀಕ್ಷೆಯ ಮಾಡುವ ಅಣ್ಣಾಗಳೆಲ್ಲ ದಿಮ್ಮಿದರಯ್ಯಾ (ಸಿದ್ಧವ. ೬೧-೩೩೮) ; ದಿಮ್ಮಿದರಮ್ಮ ಮ್ಮನೆ ಹೊರೆಯಣುಗಿಂದೆಮ್ಮಯ್ಯಾ ದಮ್ಮಯ್ಯಾ ನಿಮ್ಮಯ ಸೊಮ್ಮಯ್ಯಾರಯ್ಯಮೆನಲ್ಕೆ (ಉದ್ಭಟಾ. ೭-೪೭) ; ಕ್ಷತ್ರಿಯರ್ಗೆ ದಿಮ್ಮಿದರೊಳ್ ಪೊಣರ್ಕೆ ಸಲ್ಲದೆಂದುಂ ಮೇಣ್ ಅದರೊಳುಂ ಇಕ್ಷ್ವಾಕು ಕುಲದವರ್ಗೆಮಗೆ ದೋಸಂ ತಟ್ಟುವುದೆಂದು ಪೇಟ್ದೆ (ಅದ್ಭುತ. ೩೨-೨೨) ; ದಿಮ್ಮಿದರಕ್ಕರ್ ಶರೀರದೆಡರ್ಗಳ್ಗೆಂದುಂ (ಸೀತಿಮಾಂ. ೦-೩೯) ; ದಿಮ್ಮಿದರಪ್ಪ ಕಬ್ಬಿಗರಿಂ ಕನ್ನಡನುಡಿಯೊಳ್ಪರಿವರ್ತನಂಗೆಯಿಸಿ ತನ್ನ ಪೆಸರಿಂದೊಂದು ಕರ್ಣಾಟಕನಾಟಕಸಭೆಯಂ ಕಲ್ಪಿಸಿದಂ (ಮುದ್ರಾಕ. ೭-೩೮). ೫. ಹೊರೆ ಯಾದವನು ; ಭಾರವಾದವನು (?) : ಅನಾಥೆಯನು ಕರುಣಿಸಿ ನೋಡದ ಅಟ ಕಂಡೆ ತುದೆ ಕಣ್ಣಂಗೆ ದಿಮ್ಮಿದನೆಯನೆ ಬೆಟಗಾಗಿದೇ ನೆನಲು ತಾನೆಯಾಯಿಡ್ದಾಗ ಮತ್ತಣಿಯದಂದದರಲಿನ್ನ ಬೆಸಗೊಂಡವಂ ನೋಡಿದರಯ್ಯ ಎನುತೊಱಲ್ದತ್ತರು (ಸಿದ್ಧರಾ ೯-೩೦).

ದಿಮ್ಮಿತ್ತು 'ದಿಮ್ಮಿತಂ' ನೋ.

ದಿಮ್ಮಿಸಾಲು 'ದುಮ್ಮಿಸಾಲು' ನೋ.

ದಿಮ್ಮು (ನಾ). ೧. ತಲೆ ತಿರುಗುವಿಕೆ ; ತಲೆಸುತ್ತು ; ಬವಳಿ. 'ದಿಮ್ಮು ಹಿಡಿ', 'ದಿಮ್ಮೇರು' ಪರಾ. ೨. ತಿಳಿಗೇಡಿತನ ; ಹುಚ್ಚು ; ಮರುಳುತನ: ಆಡುವ ಆಟ ತಪ್ಪಿ ಅದು ಆಟದವನ ಮನಸಿಗೆ ಕಿಂಕರದೋಱಿದ ಮತ್ತೆ ಕೊಡಬೇಕೆಂಬ ಮತ್ತೆ ಆ ಲಾಗು ಬಂದಿತ್ತೆಂಬ ದಿಮ್ಮುಮನುಜರು ಗಳಿಗೆ ಹೇಳುವದುಂಟೆ (ಮೋಕ್ಷಮಾ. ೮೮-೩೩೦). ೩. ಒಣ ಅಭಿಮಾನ ; ಹೆಮ್ಮೆ ; ಜಂಭ : ಸೊಕ್ಕಿನವನಲ್ಲದಿದ್ದರೂ ತನ್ನ ದಿಮ್ಮಿನಲ್ಲಿರುವನು (ನಿರಾಥ. ೭೮) : ನಾವು ನಿರಕ್ಷರಸ್ಥರಾದರೂ ಪಂಡಿತರೆನಿಸಿಕೊಳ್ಳಬೇಕೆಂಬ ದಿಮ್ಮು (ಕಯೂತ್ರ. ೩೬) ; ತಲೆಯ ದಿಮ್ಮು ಇಳಿಸೀಕು ಸುಮ್ಮನೇ ನೀ ಸೆಟೆದರೆ ತಾಗಿ (ಸೂರ್ಯಾಚಾ. ೩೮-೦೩).

[ ದೇ.೫ ತೆಲು. ದಿಮ್ಮು, ದಿಮ್ಮ ]

ದಿಮ್ಮುದಿರುಗ 'ದಿಮ್ಮದಿರುಗ' ನೋ.

ದಿಮ್ಮುದಿರುಗು$_1$ 'ದಿಮ್ಮದಿರುಗು' ನೋ.

ದಿಮ್ಮುದಿರುಗು$_2$ (ನಾ). ಸುಮ್ಮನೆ ಸುತ್ತುವಿಕೆ, – ತಿರುಗುವಿಕೆ : ಸೂಕ್ಷ್ಮ ವಾಯು ಗರ್ಜಿಸಿ ಕೋಟಿ ಸಿಡಿಲಂತೆ ಪೊಡೆಯೆ ದಿಗ್ಭ್ರಾಂತಿಯಿಂ ದಿಮ್ಮು ದಿರುಗೊಡೆಯುತೆ . . . ನೆಲಕ್ಕದೋಮುಖಮುರುಳಿ ಚೇತರಿಸುವಂ (ಕೈಶವ. ೨-೪-೩). [ <ದಿಮ್ಮದಿರುಗು ]

ದಿಮ್ಮುದೆಗೆ (ಕ್ರಿ). ಅಹಂಕಾರ ಪಡು ; ಹೆಮ್ಮೆಪಡು (?) : ನಮಿಸಿ ದಿಮ್ಮುದೆಗೆಯದಿರ್ಪ ಕ್ರಮವಜಿದವಾತ್ಮರಲ್ಲಿ ನಮಿಸಿಯಕ್ಕನುರುನವಿರಾಗ ದಿರವ ಪೊಗಳುತ (ಮದೀಪು. ೨೨-೪೭). [ ದಿಮ್ಮು + ತೆಗೆ$_1$ ]

ದಿಮ್ಮುಹತ್ತು (ಕ್ರಿ). ಬವಳಿ ಹತ್ತು ; ದಿಮ್ಮೇರು : (*).

[ ದಿಮ್ಮು + ಹತ್ತು$_1$ (<ಪತ್ತು$_1$) ]

ದಿಮ್ಮುಹಿಡಿ, ದಿಮ್ಮಿಡಿ (ಕ್ರಿ). ೧. = ದಿಮ್ಮುಹತ್ತು : ಘುಮ್ಮಿಡುವ ಬಿಲುದನಿಗೆ ಲೋಕವು ದಿಮ್ಮುಹಿಡಿವಂದದಲಿ ಜರಿದುದು (ಕೊಗಲು. ೧೦-೧೯) ; ತಲೆ ದಿಮ್ಮುಹಿಡಿದಿದೆ (ಒಕ್ಕಲ. ೧೭೧). ದಿಮ್ಮಿಡಿ : ಮೂಗಿ ನೊಳಂ ಬಾಯೊಳಂ ನೆತ್ತರು ಸುರಿಯುತ ತಲೆ ದಿಮ್ಮಿಡಿದು ನಡುಗಿ (ಕಗವಿ. ೯೪-೧ ; ವಿಷ್ಣುಪು). [ ದಿಮ್ಮು + ಹಿಡಿ$_1$ (<ಪಿಡಿ$_1$) ]

ದಿಮ್ಮೆನ್ನು (ಕ್ರಿ). ತಲೆಸುತ್ತು ಬರು ; ಬವಳಿ ಬರು : ತೀವ್ರಸಂತಾಪ ದಿಂದ ತಲೆ ದಿಮ್ಮೆನ್ನತೊಡಗಿತ್ತು (ಗಂಮಾಯ. ೯೨).

[ ದಿಮ್ಮು + ಎನ್ನು (<ಎನ್$_1$) ]

ದಿಮ್ಮೇರು (ಕ್ರಿ). ತಲೆಸುತ್ತಿ ಬರು ; ಬವಳಿ ಹತ್ತು ; ದಿಮ್ಮುಹತ್ತು : (*). [ ದಿಮ್ಮು + ಏರು$_1$ (<ಏಱ್$_1$) ]

ದಿಮ್ಮೇಳು (ಕ್ರಿ). = ದಿಮ್ಮುಹತ್ತು : ಒಮ್ಮನವೆರಸಿ ತಪೋನ್ಮತಿವಡೆದಿರ್ದ ನಿರ್ಮಲಾತ್ಮಕ ಶಿವನೊಡಲ ದಿಮ್ಮೇಳೆ ಹೊಯ್ವನೆಂದೆನುತ ಮಂದಾನಿಲ ಕಮ್ಮಲರ್ಗೋಲಗೆ ನಡಿದ (ಮೋಹತ. ೭-೨೩).

[ ದಿಮ್ಮು + ಏಳು$_1$ (<ಏೞ್$_1$) ]

ದಿರಸು, ದಿರಿಸಂ, ದಿರುಸು, ದುರಸು (ನಾ). ಉಡುಪು ; ಉಡಿಗೆ : ದರ್ಬಾರಿಗಾಗಿ ಬಹು ಬೆಲೆಬಾಳುವ ದಿರಸನ್ನು ಹೊಲಿಸಿದ್ದನು (ಚಿತ್ರಕೊ. ೩೩) ; ದಿರಸು ಹೇಗೇ ಅಂತೀರಿ ? (ಸುಪಸಂ. ೫೨) ; ಅರಸನ ಮಕವಲ್ಲಿನ ದಿರಸೆಲ್ಲ ಹರಿಹರಿದು ಮಗುವಿನ ಅಂಗೀಕಲಾವೀ ಮಾಡಿಬಿಟ್ಟರು (ಕರ್ಣಾಸಂ. ೧೧೦) ; ನಾಯಕನು ದಿರಸು ಒಟ್ಟಿಸಿಕೊಂಡು ಬಂದ (ಮುಳ್ಳಿ. ೫೯) ; ಅವರೆಲ್ಲರಿಗೂ ಅಂಗರೇಕು ದಿರಸುಗಳೂ . . . ಈಟ ಭಲ್ಲೆಗಳು ಸರಪರಾಜು ಮಾಡಲ್ಪಟ್ಟದ್ದವು (ಶ್ರೀರಾಯ. ೧೧೭). ದಿರಿಸು : ಇವನ ದಿರಿಸು – ಡೌಲು – ಪೋಷುಗಳಿಗೆ ಸಂಪೂರ್ಣ ಮರುಳಾದವನೆಂದರೆ ಬಲರಾಮ (ಮಾಮನಿ. ೧೪). ದಿರುಸು : ಆ ದೀವಗಳನ್ನು ಹೊತ್ತವರೂ ಸಿಪಾಯಿಗಳಂತೆ ಕದನದ ದಿರುಸನ್ನೇ ಹಾಕಿಕೊಂಡು ಕೈದುಗಳನ್ನು ಹಿಡಿದಿದ್ದಾರೆ (ಘಾಟೀಜು. ೩೭). ದುರಸು (ಉಕ) : ಹೊಟ್ಟೆಗೆ ಗತಿಯಿಲ್ಲ ಕಿಸೆಯಲ್ಲಿ ಕಾಸಿಲ್ಲ ದುರಸು ನೋಡಿದರೆ ಕೋಟಿ ಸಾವುಕಾರನದು (ಗಾದೆ).

[ ←ಇಂ. Dress ]

ದಿರಿಸು 'ದಿರಸಂ' ನೋ.

ದಿರುಸು 'ದಿರಸಂ' ನೋ.

ದಿರ್ಬಲ್ಲು (ನಾ). ಒಂದು ಊರಿನ ಹೆಸರು : ಕೋಟಗಾಮುಣ್ಡನುಂ ಮಾದಿಗಾಮುಣ್ಡನ ಸಹಿತ ದಿರ್ಬಲ್ಲು ಮಾದರ[ ನುಂ ] (ಸಾಇಇ. XI-1, ೭-೨೨ ; 887). [ ? ]

ದಿರ್ರನೆ (ಅ). ಸರಕ್ಕನೆ ; ಬೇಗನೆ ; ಶೀಘ್ರವಾಗಿ : ಶೀಘ್ರದಲೆಡಬಲಕೆ ದಿರ್ರನೆ ತಿರುಗಿ ಮದವೂದುಗ ಬಳಲಿಸಿ ಸಿಂಗದಂದದಿ ಬೆಂಗೆ ಲಂಘಿಸಿದ (ಸಾಳ್ವಭಾ. ೧೬-೧೪). [ ದಿರ್$_4$ + – ಅನೆ$_1$ ]

ದಿಲ್ (ನಾ). ಹೃದಯ ; ಮನಸ್ಸು : ಈ ಮಾತು ಕೇಳಿ ನಮ್ಮ ದಿಲ್ ಬಹಾಳ ಖುಷಿ ಆಗಿದಾವ್ (ಮೋಹಿನೀ. ೬೦).

[ ←ಪಾರ. ಹಿಂ. ಮರಾ. ದಿಲ್ ]

ದಿಲ್‌ಗಾರ (ನಾ). ಸ್ಥಿರಹೃದಯವುಳ್ಳವನು ; ಎದೆಗಾರ ; ಧೈರ್ಯಶಾಲಿ : ನಮ್ಮ ಜನ ಎಂಥಾ ದಿಲ್‌ಗಾರರು ಅನ್ನೋದು ಈ ಬಿಳೀಜನದ ಮನಸ್ಸಿಗೆ ಬರಬೇಕಂ (ಮುಳ್ಳಿ. ೫೩). [ ದಿಲ್ + –ಗಾರ (< – ಕಾಱ) ]

**ದಿಲ್‌ಗೀರು** (ನಾ). ವಿಷಾದ ; ಖೇದ ; ಖಿನ್ನತೆ : ಈಗ ಅವರು ತಮ್ಮ ಹುಕುಂ ಪ್ರಕಾರ ಹೊರಟು ರವಾನೆ ಆಗುತ್ತಾ ಇದ್ದಾರೆ. ಆದ್ದರಿಂದ ನಮ್ಮನಸಿಗೆ ಬಹಳ ದಿಲ್‌ಗೀರು ಆಗುತ್ತಾ ಇದೆ (ರಾಜೇಂದ್ರ. ೧೦೮). [ ←ಫಾರ. ಹಿಂ. ಮರಾ. ದಿಲ್‌ಗೀರ್ = ವಿಷಾದವುಳ್ಳ ]

**ದಿಲ್‌ದಾರ್**, ದಿಲ್‌ದಾರ (ಗು). ೧. ಉದಾರನಾದ ; ಔದಾರ್ಯವುಳ್ಳ : ರಾವಜೀಕಾಕಾ ಮಾತ್ರ ದಿಲ್‌ದಾರ್ ಮನುಷ್ಯರು (ದೀಪಹ. I, ೩೩). **ದಿಲ್‌ದಾರ** : (ನಾ). ೨. ಸಹೃದಯಂ; ರಸಿಕ. 'ದಿಲ್‌ದಾರತನ' ಪರಾ. [ ←ಫಾರ. ಹಿಂ. ಮರಾ. ದಿಲ್‌ದಾರ್ ]

**ದಿಲ್‌ದಾರ** 'ದಿಲ್‌ದಾರ್' ನೋ.

**ದಿಲ್‌ದಾರತನ** (ನಾ). ಸಹೃದಯತೆ ; ರಸಿಕತೆ : ಸೂರ್ಯನಿಗು ಏನೊ ದಿಲ್‌ದಾರತನ; ಅವನ ಮೋರೆ ಕಿವಿದರು ಮೋಡ ನಕ್ಕು ನಡೆದ (ಹಂಡಮ. ೪೮-೨೨). [ ದಿಲ್‌ದಾರ (<ದಿಲ್‌ದಾರ್) + –ತನ ]

**ದಿಲ್‌ಭರವಸಾ** (ನಾ). ಮನಸ್ಸಿಗೆ ಧೈರ್ಯ ತುಂಬುವ ಮಾತು ; ಉತ್ತೇಜನ ; ಆಶ್ವಾಸನೆ : ಕೌಲಿಗೆ ಬಂದಂಥವರಿಗೆ ಕೌಲುಸಂಬಗೆ ಕೊಟ್ಟು, ದಿಲ್‌ಭರವಸಾ ಹೇಳಿ, ಬಂದುಬಸ್ತು ಮಾಡಿಕೊಂಡು, ಈಶ್ವರೈಯನು ಇರುತ್ತಿದ್ದಲ್ಲಿ . . . ಪಟ್ಟಣದಲ್ಲಿ ಫಿರಂಗಿ ಆವಾಜು ಬಂದಾಯಿತು (ರಾಜೇಂದ್ರ. ೯೭).

[ ←ಮರಾ. ದಿಲ್‌ಭರವಸಾ, ದಿಲ್‌ಭರೋಸಾ ]

**ದಿಲ್‌ರುಬಾ**, ದಿಲ್‌ರೂಬಾ, ದಿಲ್ರುಬಾ (ನಾ). ಒಂದು ಬಗೆಯ ತಂತ್ರೀವಾದ್ಯ : ಆ ಖಾನನಿಗೆ 'ದಿಲ್‌ರುಬಾ' ಕೇಳುವ ಹುಚ್ಚು ಬಹಳ (ರಾಜಯೋ. ೬೭) ; ಇಂಡಿಯಾದಲ್ಲಿ ಮುಖ್ಯವಾದುವು . . . ತಬಲ, ದಿಲ್‌ರುಬಾ ಮೊದಲಾದುವು (ಇಸ್ಲಾಂಸಂ. ೧೩೬). **ದಿಲ್‌ರೂಬಾ** : ದಿಲ್‌ರೂಬಾ ಉತ್ತರೀಯ ಸಂಗೀತದಲ್ಲಿ ಹೆಚ್ಚು ಉಪಯೋಗವಾಗಿರುವ ವಾದ್ಯ (ಸಂಗೀಶಂ. ೧೧೮). **ದಿಲ್ರುಬಾ** : ಅನಂತರದ ಸ್ಥಾನವು ಸಾರಂಗ, ದಿಲ್ರುಬಾ, ಇಸ್ರಾಜ್ ಮೊದಲಾದುವುಗಳಿಗೆ ಸೇರುವುದು (ಕಾಲಶ್ರ. II. ೧೧೧೭).

[ ←ಫಾರ. ಹಿಂ. ಮರಾ. ದಿಲ್‌ರುಬಾ = ಪ್ರಿಯಕರ, ಪ್ರೇಮಿ ]

**ದಿಲ್‌ರೂಬಾ** 'ದಿಲ್‌ರುಬಾ' ನೋ.

**ದಿಲಾಸು** (ನಾ). ಸಾಂತ್ವನ ; ಆಶ್ವಾಸನೆ : ನಿಯೋಗಿಗಳಂ ಕಳಂಭಿರಲ ವರ್ಗಳಂ ಮನ್ನಿಸಿ ದಿಲಾಸನಿತ್ತು ರಾಯಸವಂ ಬರಸಿ (ಕಳನ್ನ. ೦೦-೬೬) ; ಅವುದೊಂದು ಕಜ್ಜಕಮಾವಿರ್ಪೆವೆಂದು ಧೈರ್ಯಂ ಪೇಳ್ದು ದಿಲಾಸನಿತ್ತು ಚಿತಾಧರಣಾಂಬರಾದಿಗಳಿಂ ಪಿರಿದು ಸನ್ಮಾನಿಸಿ . . . ಬೀಳ್ಕೊಟ್ಟನು (ಕಳನ್ನ. ೧೧-೩೩). [ ←ಹಿಂ. ಮರಾ. ದಿಲಾಸಾ ]

**ದಿಲಿಪ್ಪ** (ನಾ). ಒಬ್ಬಾತನ ಹೆಸರು : ದಿಲಿಪ್ಪನು ನರಸಿಙ್ಗನು ಸತ್ತು ಸಗ್ಗಕೆ ಪೋದರ್ (ಎಕ. XII, ಶಿರಾ. ೫೫-೩ ; ಸು. ೭೨೦)

[ <ಸಂ. ದಿಲೀಪ ]

**ದಿಲ್ರುಬಾ** 'ದಿಲ್‌ರುಬಾ' ನೋ.

**ದಿವ** (ನಾ). ೧. ದೇವಲೋಕ ; ಸ್ವರ್ಗ : "ನಾಕಂ ತ್ರಿವಿಷ್ಟಪಂ ದಿವವೆಂದಿಂತಿದು ತಾನಮರ್ತ್ಯಭವನಂ" (ವಸ್ತುಕೋ. ೬-೩೦) ; ಹರಿ ತನ್ನ ದಕ್ಷಿಣೇಂದ್ರರ್ವೆರಸು ಶಚೀದೇವಿವೆರಸು ಲೋಕೇಶ ಜನಂಬೆರಸು ದಿವದಿಂದ ಮಿಲ್ಲಿಗೆವರಲೊಡವಮಾ ಭವದೊಳಂತೆ ಮುಕ್ತಿಗೆ ಸಲ್ವರ್ (ಆದಿಪು. ೩-೪೯) ; ತೆಱೆದವನೆ ದಿವದ ಪಡಿಗಳ್ ತೆಱೆದುವದೇನರಿದೆ ಜೈನಪದಸೇವನೆಯಿಂ (ಸುಕುಮಾ. ೯-೧೯) ; ಅರಸಂ ದಿವಕ್ಕೆ ಸಂದಂ ಕಡೆಯೊಳ್ (ಪಂಪಭಾ. ೧೧-೧೨೦). ೨. ಆಕಾಶ ; ಗಗನ : ದಿವಕ್ಕವಯವದಿಂದದರೆ ನೋಡಿದಂ ಯುವರಾಜಂ (ಆದಿಪು. ೧೬-೪೨) ; ಕೋಂಟೆಯ ಚೆಲ್ವು ಪೊಗಟಲರಿದೆನಿಸಿರೆ ನೆಗೆದುದು ವಿಳಿರ್ವ ಪತಾಕಾವಳಿ ದಿವಮನೆಯ್ದೆ (ಪಂಪರಾ. ೪-೯ ವ) ; ದಿವಮಂ ಜಕ್ಕುಲಿವ ವರೂಥ ವೈಜಯಂತಿಗಳ ಪೊಯ್ಲೊಳ್ (ಜಗಾ. ೧೮-೪೬) ; ರಾತ್ರಿಯಂ ಬೆಳಗಲಿರ್ದ ಪೂರ್ಣೇಂದುವಿನಂತೆ ದಿವಮಂ ಧವಳಿಸಲಿರ್ದ ಸಹಸ್ರಕರನಂತೆ ಇರ್ದಪಂ (ನಂಬಿರ. ೪-೧೮). ೩. ಹಗಲು ; ದಿನ : "ವಾಸರವಮಹರ್ದ್ಯುದಿನಂ ದಿವಂ ಘಸ್ರಮಾ ದಿವಸಮೆನೆ ಹಗಲ ಪೆಸರೆನಿಸ್ಕುಂ" (ಮಂಗರಾ. ೨೦-೬) ; ಇದು ದಿವವೋ ರಾತ್ರಿಯೊ ಪೇಳೆನಿದು ದುಃಖವೊ ರುಜೆಯೊ ಕಳವಳವೊ ಪೇಟ್ (ಕಾದಂಪೂ. ೬೪೭). ೪. [ಛಂದ] ಒಂದು ಅಕ್ಷರಗಣ ; ನಗಣ (ບບບ) : ಶ್ವಸನೇಂದುಜ್ವಲನಂ ದಿವಂ ಧರೆ ಜಲಂ ದೈತ್ಯಾದಿ ಕಾಮಾಂತಕ ಪ್ರಸರೋದ್ಯದ್ಗಣದಿಂ ತ್ರಯೋದಶಯತಿಪ್ರಸ್ತಾರಮಾಗಿರ್ದೊರ್ಡೆ . . . ಮತ್ತೇಭವಿಕ್ರೀಡಿತಂ (ಛಂದೋಂಬು. ೨-೦೭೩).

ದಿವನೇಱು = ಸ್ವರ್ಗಸ್ಥನಾಗು ; ದಿವಂಗತನಾಗು : ಬೂವಯ್ಯನ ಮಗಂ ಬಿದಿಯಾಯ್ತು ತುಱುಂಯನಿಕ್ಕಿಸಿ ಕಾದಿ ಸತ್ತು ದಿವನೇಱಿದ (ಎಕ. II, ೩೯೪-೦೨ ; ೩೩೩ ?). ದಿವವೈದ್ಯರು = ಅಶ್ವಿನೀದೇವತೆಗಳು ; ಸ್ವರ್ಗದಲ್ಲಿಯ ವೈದ್ಯರು : "ದಸ್ರರಶ್ವಿಯರಾ ದಿವವೈದ್ಯರು" (ಮಂಗರಾ. ೭-೨೩). [ ಸಂ. ]

**ದಿವಂಗತ** (ಗು). ಸ್ವರ್ಗಕ್ಕೆ ಸಂದ ; ಸ್ವರ್ಗಸ್ಥನಾದ ; ಮೃತನಾದ : ಹಳಗನ್ನಡ ಸಾಹಿತ್ಯದೊಳಗಿನ ದುರಂತವಿನ್ಯಾಸದ ವಿಲಾಸವನ್ನು ಎತ್ತಿ ತೋರಿಸಿದ ಶ್ರೇಯಸ್ಸು ದಿವಂಗತ ಶ್ರೀಮಾನ್ ಶ್ರೀಕಂಠಯ್ಯನವರಿಗೆ ಸಲ್ಲುವುದು (ಸಾಹಿಸ. ೧೨೭) ; ದಿವಂಗತ ಲಾಲಾಲಜಪತರಾಯರು ಇಂಥ ಶಿಕ್ಷಣ ನಮ್ಮ ಜನಾಂಗದ ಪುರೋಭಿವೃದ್ಧಿಗೆ ನೆರವಾಗುವುದಿಲ್ಲವೆಂದು ಸಾರಿ . . . ಎಚ್ಚರಿಸಿದರು (ಶಿಕ್ಷದ. ೩೮೧). [ ಸಂ. ]

**ದಿವಕುಜ** (ನಾ). ದೇವಲೋಕದ ವೃಕ್ಷ ; ಕಲ್ಪವೃಕ್ಷ : ಬಿಟ್ಟು ಇವ ಕನಕಾದಿ ದಶವಿಧ ಒಟ್ಟನೊಳು ಜೀವನಿಗೆ ಹಿತವೆಂಬುಟ್ಟ ತೊರೆದಾಹಾರ ಧಾನದಿ ಪಡೆವ ದಿವಕುಜವ (ಬಿಜ್ಜಪು. ೮೮-೩೪). [ ದಿವ + ಕುಜ ]

**ದಿವಟಿ** 'ದೀವಟಿಗೆ' ನೋ.

**ದಿವರಾಜ** (ನಾ). ಸ್ವರ್ಗಕ್ಕೆ ಒಡೆಯನಾದವನು,– ರಾಜನಾದವನು ; ಇಂದ್ರ : ದಿವರಾಜಸನ್ನಿಭ ಯುವರಾಜನೆಯ್ತಂದನವಧಾನ ಸ್ವಾಮಿ ಪರಾಕು (ಭರತ. ೩೮-೩೦). [ ದಿವ + ರಾಜ ]

**ದಿವರಾತ್ರಿ** (ನಾ). ಹಗಲು ಮತ್ತು ರಾತ್ರಿ : ದ್ವಯವಿಡಿದುದಕ್ಕೆ ಎರಡಿಲ್ಲದೆ ವಿಷಾಳಿಲ್ಲವಾಗಿ ಜಗವನಱಿವುದಕ್ಕೆ ದಿವರಾತ್ರಿಯಲ್ಲದ ವಿಷಾಟ್ ತೋಱಲಿಲ್ಲವಾಗಿ (ಮೋಳಿಮಾ. ೧-೧) ; ತನ್ನ ತಾನಱಿದ ಎಚ್ಚಱಿಕೆಯಲ್ಲಿ ಅಹುದು ಅಲ್ಲವೆಂಬುದ ಕುಱುಹದೋಱ್ ದಿವರಾತ್ರಿಯಲ್ಲಿ ಉಭಯಕ್ಕೂ ದೃಕ್ಕು ಸರಿಗಾಬುದಾಗಿ ಲಕ್ಷವ ಬಿಟ್ಟು ನಿರ್ಲಕ್ಷವ ಕಂಡು ನಿಶ್ಚಯವಾಯಿತ್ತೆಂಬುದಕ್ಕೆ ಸೂಚನೆ (ಮೋಳಿಮಾ. ೧೪೯-೭೧೧) ; ತವರೂರ ಮಱೆಯಿಸಿ ನಿದ್ರೆಯ ತೊಱೆಯಿಸಿ . . . ನಮ್ಮ ದಿವರಾತ್ರಿಯೆನ್ನದೆ ಸುಖದೊಳೋಲಾಡಿಸುವವಗಡ (ಭರತ. ೬-೩೯). [ ದಿವ + ರಾತ್ರಿ ]

**ದಿವರಾತ್ರೆ** (ನಾ). = ದಿವರಾತ್ರಿ : ದಿವರಾತ್ರೆಯೊಳಂ ಶಿವಶಿವಶಿವಯೆಂಬೀ ನೆನಹನೆನಗೆ ಕೊಟ್ಟರೆ ತಾರಾ ರವಿ ಶಶಿ ನಭವುಳ್ಳನಕಂ ನಿಮಗೆಱಗುವೆನಾಂ (ಶಂಕಶಂ. ೨೭). [ ದಿವ + ರಾತ್ರೆ ]

**ದಿವಶೀಅಮಾವಾಸ್ಯೆ**, ದೀವಸಿ ಅಮಾವಾಸ್ಯೆ (ನಾ). (ಉಕ) ಆಷಾಢ ಬಹುಳ ಅಮಾವಾಸ್ಯೆ ; ನಾಗರ ಅಮಾವಾಸ್ಯೆ ; ಭೀಮನ ಅಮಾವಾಸ್ಯೆ : ನಿನ್ನ ಮನೆಯಲ್ಲಿ ಹಳೆಯದಾದ, ಅಳತೆಗೆ ಬಾರದ ಬಟ್ಟೆ ಗಳಿದ್ದರೆ ಕೊಡು ನೋಡೋಣ ! ಇಂದು ದಿವಶೀ ಅಮಾವಾಸ್ಯೆ (ಸ್ವ್ಯತಿಚಿ. ೪೯೨). **ದೀವಸಿ ಅಮಾವಾಸ್ಯೆ** : ಆಷಾಢ ಬಹುಳ ೩೦ನೆಯ ತಿಥಿಯನ್ನು ದೀವಸಿ (ಅಮಾವಾಸ್ಯೆ) ಎನ್ನುತ್ತಾರೆ (ಭಾಹಬ್ಬ. ೯೮) ; ಶ್ರಾವಣ ಶುಕ್ಲ ಐದನೆಯ ದಿನವಾದ ನಾಗಪಂಚಮಿಯ ಕೊನೆಯಲ್ಲಿ ಬರುವ ಅಮಾವಾಸ್ಯೆಯನ್ನು ನಾಗರಅಮಾವಾಸ್ಯೆಯೆನ್ನುತ್ತಾರೆ. ಮದುವೆ

ಯಾದ ಹೆಣ್ಣುಮಕ್ಕಳು ದಿವಶೀ ಎಂಬ ದೇವತೆಯನ್ನು ಅಂದು ಪೂಜಿಸುವುದರಿಂದ ಇದಕ್ಕೆ ದಿವಶೀ ಅಮಾವಾಸ್ಯೆಯೆಂಬ ಹೆಸರೂ ಬಳಕೆಯಲ್ಲಿದೆ. [ದಿವಶೀ (P ←ಮರಾ. ದಿವಶೀ) + ಅಮಾವಾಸ್ಯೆ]

**ದಿವಸ** (ನಾ). ೧. ಬೆಳಗಿನಿಂದ ಸಾಯಂಕಾಲದವರೆಗಿನ ಅವಧಿ ; ಹಗಲು : "ದಿವಸಃ, ದಿವಾ, ದಿನಂ . . . ಘಸ್ರಃ – ಈ ೭ ಹಗಲ್" (ಹಲಾಯು. ೧೮-೨೦೬) ;"ವಾಸರಮಹ ದ್ಯು ದಿನಂ ದಿವಂ ಘಸ್ರಮಾ ದಿವಸ ವೆನೆ ಹಗಲ ಪೆಸರೆನಿಕ್ಕುಂ" (ಮಂಗರಾ. ೨೦-೬). ೨. ಹಗಲು ಮತ್ತು ರಾತ್ರಿ ಕೂಡಿದ ಒಂದು ದಿನ ; ಇಪ್ಪತ್ನಾಲ್ಕು ಗಂಟೆಗಳ ಅವಧಿ : ಪ್ರಶಸ್ತ ದಿವಸವಾರನಕ್ಷತ್ರಮುಹೂರ್ತದೊಳ್ ಮುಂಜಿಬಂಧನಕ್ರಿಯೆಯುಂ ಮಾಡಿದ ಬಳಿಕ್ಕೆ (ವದ್ದಾರಾ. ೬೩-೨೦) ; ದಿವಸಂಗಳ್ ವಿಧುಬಿಂಬಚುಂಬಿತ ನಭೋಭಾಗಂಗಳಾದಂದು (ಆದಿಪು. ೧೨-೨೨) ; ಆ ಕೀರ್ತಿಧರ ನರೇಂದ್ರ ನೊಂದು ದಿವಸಂ . . . ಒಡ್ಡೋಲಗದೊಳಿರ್ಪುದುಂ (ಶಂಖಾಮಾ. ೨-೨೯ ವ) ; ಒಂದು ತಿಂಗಳು ಬಿಟ್ಟು ಹಚ್ಚಿಗೆ ದಿವಸ ರಕಮು ನಿಂತರೆ (ಮುಂಬಪ್ಪಾ. ೨೨ ಪ್ರಸ್ತಾವನೆ) ; ದಿವಸಕ್ಕೆ ತಕ್ಕ ದವಸವಾಗುವುದು (ಗಾದೆ). ೩. ತಿಥಿ : ಅಲ್ಲಿಂ ಬಳಿಯುಂ ತಲೆಯುಂ ಕಿರಿಯಿಸಿ ದಿವಸಮನೆಲಸದೆ ಬೆಸಗೊಳ್ವನಂತು ಗಾವಿಲನಕ್ಕುಂ (ಕವಿರಾ. ೩-೧೯೩).

ದಿವಸಂಬರಂ = ದಿನಗಳವರೆಗೂ : ಜನಭವನದೊಳೆಂಟು ದಿವಸಂಬರಂ ಮಹಾಮಹಮೆಂಬ ಜಿನಮಹಿಮೆಯುಂ ಮಹಾವಿಭೂತಿಯಿಂ ಮಹಾಬಳಂ ಮಾಡಿ (ಆದಿಪು. ೨-೪೬ ವ). ದಿವಸ ಕೇಳು=ಶುಭ ಅಥವಾ ಅಶುಭದಿವಸ ವನ್ನು ವಿಚಾರಿಸು : ದಿವಸ ಕೇಳಿ ಲಗ್ನವನ್ನು ಇಡಿಸಬೇಕು (ರೂಢಿ).

[ಸಂ.]

**ದಿವಸಕರ** (ನಾ). ೧. ಸೂರ್ಯ : ದಿನಕರ : ದಿವಸಕರಂ ಉದಯಗಿರಿ ಶಿಖರವಿಶೇಷವಿಭೂಷಣಂ ತಮೋರಿಪುಬಳಮಂ ಪ್ರವಿಲೀನಂ ಮಾಡಿದಂ (ಕವಿರಾ. ೩-೩೭) ; ದಿವಸಕರಾದರ್ಶನ ಬದ್ಧವಿವರ ನವವನಜದೊಳೆಡೆವಡೆ ಯದ ವರಕ್ಕೆರವಮಿತ್ರಕಿರಣದಂತವಳ ವಚನಂ (ಶಾಂತಿಪು. ೫-೧೯೫). ೨. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ : ವನಧಾತ್ರೀ ಚಕ್ರಂ . . . ಪದದ ಕಡೆಯೊಳ್ ಚೆಲ್ವನಾಳ್ದಿಯ್ದೆ ನಿಲ್ಕುಂ ವಿಶ್ರಾಮಂ ದಿವಸಕರನೊಳ್ (ಛಂದೋಂಬು. ೨-೧೬೨). [ಸಂ.]

**ದಿವಸಕರೋದಯ** (ನಾ). ಸೂರ್ಯೋದಯ: ದಿವಸಕರೋದಯಂ ತಡೆದ ಪೂರ್ವದಿಶಾರಮೆ ಮರ್ಪು ಕೊರ್ಪಿ ತೋಱುವ ತೆಱದಿಂದೆ ಮುನ್ನೆ ತನು ಕಾಂತಿ ಕಬಲ್ಲುದು (ಪುಷ್ಪಪು. ೩-೧೦೦). [ದಿವಸಕರ + ಉದಯ]

**ದಿವಸಪತಿ** (ನಾ). ಹಗಲಿನ ಒಡೆಯ,-ಪ್ರಭು; ಸೂರ್ಯ: ಪಾವಕ ದಿವಸಪತಿ ಹಿಮಕರರೆ ಕಣ್ಣುಗಳು (ಪ್ರಭುಲಿಂ. ೨-೧೧). [ದಿವಸ + ಪತಿ]

**ದಿವಸಮುಖ** (ನಾ). ಪ್ರಾತಃಕಾಲ ; ಹಗಲಿನ ಪ್ರಾರಂಭಕಾಲ ; ದಿನ ಮುಖ : "ಪ್ರತ್ಯೂಷಂ ದಿವಸಮುಖಂ ಪ್ರಾತಃಕಾಲ್ಯವುಷಃಸಮಯಂ ಪ್ರಭಾತಮದು ಗೋಸರ್ಗಂ" (ವಸ್ತುಕೋ. ೧೫-೪). [ದಿವಸ + ಮುಖ]

**ದಿವಸವಲ್ಲಭ** (ನಾ). = ದಿವಸಪತಿ : ರಿಪುಸುಭಟನಂ ಮೂಱು ಬಾಣ ದೊಳೆಚ್ಚು ದಿವಸವಲ್ಲಭನ ಮಂಡಲದಲ್ಲಿಗೈದಿಸಿ ಪಚಾರಿಸಿ ಜಱಿದು ಕೂಡೆ ಬೊಬ್ಬಿಱಿದನು (ಕೃಮಿಭಾ. ೨೩-೨೦). [ದಿವಸ + ವಲ್ಲಭ]

**ದಿವಸವಿರಾಮ** (ನಾ). ಹಗಲಿನ ಕೊನೆ ; ಸಾಯಂಕಾಲ ; ಸಂಜೆ : ದೋಷಾಭಿಸಂಧಿ ದಿವಸವಿರಾಮದೊಳ್ ಅವ್ಯವಸ್ಥೆ ಜಡಾಶ್ರಯದೊಳ್ . . . ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಅಗವಿ. ೨-೧ ವ).

[ದಿವಸ + ವಿರಾಮ]

**ದಿವಸವ್ಯಾಪಾರ** (ನಾ). ದಿನದ ವ್ಯವಹಾರ,-ಕೆಲಸ,-ನಡವಳಿಕೆ : ದಿವಸ ವ್ಯಾಪಾರಮಂ ತೀರ್ಚಿಮಂತು ತದಧಿಕೃತ ಜನಂಗಳುಮನಲಸಿಕೆಯಾಗ ದಂತು . . . ಕಳಿಪಿ (ಚಂದ್ರಪು. ೫-೧೨೨ ವ). [ದಿವಸ + ವ್ಯಾಪಾರ]

**ದಿವಸಾಂತ** (ನಾ). ಹಗಲಿನ ಕೊನೆ; ಸಾಯಂಕಾಲ: "ದಿವಸಾಂತಮಪ್ಪುರುಳು ಸಾಯಂಕಾಲಮೆನಿಕು" (ಮಂಗರಾ. ೨೦-೭). [ದಿವಸ + ಅಂತ್ಯ]

**ದಿವಸಾಂಧ** (ನಾ). ೧. ಹಗಲು ಹೊತ್ತಿನಲ್ಲಿ ಕುರುಡಾದುದು. ೨. ಗೂಬೆ: ಸಮಸ್ತ ವಾಯಸನಿಕಾಯಮುಮಂ ನೆರಪಿಕೊಂಡು ದಿವಸಾಂಧನಪ್ಪರಿ ಮರ್ದನನಂ ನಮ್ಮ ತಂದೆಯಪ್ಪರವಿಂದಮಿತ್ರನಂ ಬಲದಿಂ ಕಾದಿ ಕೊಂದವಪ್ಪೊಡೆ ಸುಖದಿಂ ಬಾಳ್ಕೆವು (ಪಂಚತಂ. ೨೦೬-೧೩).

[ದಿವಸ + ಅಂಧ]

**ದಿವಸಾಧಿಪ** (ನಾ). ೧. ಸೂರ್ಯ. ೨. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ : ಪವಮಾನ ಚತುಷ್ಕಯುತಂ ಯತಿಯುಂ ದಿವ ಸಾಧಿಪರೊಳ್ ನಿಲೆ ಪ ಸ್ಸು ಕ ವಿ ಪ್ರ ವ ರ ಸ್ತು ತ ಮ ಪ್ಪ ದು ತೋಟಕಂ (ಛಂದೋಂಬು. ೨-೧೨೬). [ದಿವಸ + ಅಧಿಪ]

**ದಿವಸಾವಸಾನ** (ನಾ). ಹಗಲಿನ ಕೊನೆ; ಸಾಯಂಕಾಲ : [ಸುಯೋಧನಂ] ...ತದ್ದಿವಸಾವಸಾನ ಸಮಯದೊಳ್ ಪ್ರಾಣವಿಸರ್ಜನೋನ್ಮುಖನಾದಂ (ಗದಾಯು. ೯-೪೪ ವ) ; ದಿವಸಾವಸಾನದೊಳ್ ಪೆರ್ಚುವಂತೆ ತಮದೊಡ್ಡು ಪೆರ್ಚಿದತ್ತು . . . ಉತ್ಕಟಕೋಪಂ (ವರ್ಧಪು. ೩-೧೭).

[ದಿವಸ + ಅವಸಾನ]

**ದಿವಸಾಷ್ಟಕ** (ನಾ). ಎಂಟು ದಿನಗಳು: ರಸವೃತ್ತಿಯ ನೃತ್ತಮಂ ಪ್ರವರ್ತಿಸಿ ಮಗುಟ್ದು ಪ್ರಕಾರದಿನನುಷ್ಠಿಸಿದಂ ದಿವಸಾಷ್ಟಕಂಬರಂ (ಚಂದ್ರಪು. ೪-೬೯).

[ದಿವಸ + ಅಷ್ಟಕ]

**ದಿವಸೇಂದ್ರ** (ನಾ). ಹಗಲಿನ ಒಡೆಯ,-ಪ್ರಭು ; ಸೂರ್ಯ ; ಆದಿತ್ಯ : "ರವಿ ಮಾರ್ತಂಡಂ . . . ದಿವಸೇಂದ್ರಂ ಬ್ರಧ್ನನಂಶು . . . ತರಣಿ ಸಪ್ತಾಶ್ವನಾದಿತ್ಯನಕ್ಕುಂ" (ವಸ್ತುಕೋ. ೧೧-೬೪); ದಿವಸೇಂದ್ರನಂತೆ ಸತತಂ ಭುವನವ್ಯಾಪ್ತಪ್ರತಾಪನಂಭೋನಿಧಿಯಂತವಿಕಳಗಾಂಭೀರ್ಯಯುತಂ (ವರ್ಧಪು. ೧-೭೮) ; ದಿವಸೇಂದ್ರನ ಕಿರಣದಂತೆ ಪರಮಾತ್ಮನ ಪರಿಣಾಮ ದಂತೆ ಲೋಕದಾಲೋಕದಂತೆ . . . ನಳನಳಿಸಿ ಬಳೆಯುತಿರ್ದಳ್ (ಗಿರಿಜಾ. ೩-೬೯ ವ). [ದಿವಸ + ಇಂದ್ರ]

**ದಿವಸೇಂದ್ರಾತ್ಮಜ** (ನಾ). ೧. ಸೂರ್ಯನ ಮಗ. ೨. ಶನಿ: ಚಾಂದ್ರಿಯೊ ಳೊಡಗೂಡಿದ ದಿವಸೇಂದ್ರಾತ್ಮಜನಿಂ ಮಹೇಂದ್ರಜಾಲಜ್ಞಂ (ಜಾತತಿ. ೧೩-೪). ೩. ಯಮ. ೪. ಸುಗ್ರೀವ. ೫. ಕರ್ಣ.

[ದಿವಸೇಂದ್ರ + ಆತ್ಮಜ]

**ದಿವಸೇಂದ್ರಾನ್ವಾಯ** (ನಾ). ಸೂರ್ಯನ ವಂಶ; ರವಿವಂಶ: ದಿವಸೇಂದ್ರಾ ನ್ವಾಯ ಸೋಮಾನ್ವಯ ಯದುಕುಲ ರಾಜಾಧಿರಾಜನ್ಯಕಂ ... ನೆರೆದುದ ಶೇಷಂ ಪ್ರಪೂಜಾಭಿಲಾಷಂ (ಅಗವಿ. ೧೭-೧೫).

[ದಿವಸೇಂದ್ರ + ಅನ್ವಾಯ]

**ದಿವಸೇಂದ್ರಾಲಯ** (ನಾ). [ಜ್ಯೋತಿ] ಸೂರ್ಯನ ಮನೆ; ಸಿಂಹರಾಶಿ: ದಿವಸೇಂದ್ರಾಲಯದೊಳ್ ಬುಧಂ ನೆಲಸೆ . . . ಜ್ಞಾನಹೀನಂ ಪರಾಭವ ಯುಕ್ತಂ (ಜಾತತಿ. ೧೭-೨೪). [ದಿವಸೇಂದ್ರ + ಆಲಯ]

**ದಿವಸೇಶ** (ನಾ). ಹಗಲಿನ ಒಡೆಯ ; ಸೂರ್ಯ : ದಿವಸೇಶ ರಾತ್ರೀಶಾಧಿಕ ಗ್ರಹ ತಾರಕಾವಳಿಯಧೀಶ ಸಕಲ ಮುನೀಶರುಂ . . . ನೆರೆದೋಲಯಿಸು ತಿರಲು (ಬಸವಪು. ೨೪-೪೮). [ದಿವಸ + ಈಶ]

**ದಿವಸ್ಪತಿ** (ನಾ). ೧. ಸ್ವರ್ಗದ ಒಡೆಯ; ಇಂದ್ರ: "ಪುರುಹೂತಂ ಮಘವಂ ದಿವಸ್ಪತಿ . . . ವಾಸವಂ" (ವಸ್ತುಕೋ. ೬-೩೩). ೨. ಹಗಲಿನ ಒಡೆಯ; ಸೂರ್ಯ : ದಿವಸ್ಪತಿಗೆ ಪ್ರತಾಪಮಂ ಸುರಪತಿಗೆ ಭೋಗಮಂ ರತಿಪತಿಗೆ ಮೂಱುಲೋಕವಾವರಿಸುವ ರೂಪಂ ಸಂತತ್ತಿಗೆ ಗಂಭೀರತೆಯನು ಸ್ವಾಹಾ ಪತಿಗೆ ತೇಜಮಂ ಕೊಟ್ಟ ಗುರುಮೂರ್ತಿ . . . ಎಮಗಿಷ್ಟಸಿದ್ಧಿಯಂ ಮಾಳ್ಕೆ (ಹಕಶಾ. ೧-೧) [ಸಂ.]

**ದಿವಾಂಧ** (ನಾ). ೧. = ದಿವಸಾಂಧ ೧ : ನಾವೆಲ್ಲರುಂ ರಾತ್ರ್ಯಂಧರುಮ ವರೆಲ್ಲರುಂ ದಿವಾಂಧರುಮಪ್ಪುದಱಿಂ ಸಂಧಾನಮೆಂತುಮಾಗಲಱಿಯದು (ಪಂಚತಂ. ೨೨೦-೨೦). ೨. = ದಿವಸಾಂಧ ೨ : ಪರವುಟ್ಟನಿಂಗದಿರ್ವಕ್ಕಿ ಬಾನಾಡಿ ಹಿಂಗುರು ದಿವಾಂಧಂ (ಕುಸುಮಾಪು. ೯-೧೯೮). [ ದಿವ + ಅಂಧ ]

**ದಿವಾಂಧಕಿ** (ನಾ). ಸುಂಡಿಲಿ. [ ಸಂ. ದಿವಾಂಧಕೀ ]

**ದಿವಾಂಧತೆ** (ನಾ). ಹಗಲು ಹೊತ್ತು ಕಣ್ಣು ಕಾಣದಿರುವುದು : (Day blindness. ಶಾರಿನಿ. ೫೬). [ ಸಂ. ದಿವಾಂಧತಾ ]

**ದಿವಾಕರ** (ನಾ). ೧. = ದಿವಸಕರ ೧ : ದಿವಾಕರರ್ ವ್ಯಾಕೃತಿನಾವಿ ಗಳ್ವೋಲ್ ದಿವಕ್ಕೆ ಪನ್ನಿರ್ವರೆ ಮುಖ್ಯರಾದರ್ (ಶಾಬ್ದಾವ. ೧೪); (ಕಮಡ. ೯ ಪ್ರಯೋ ನೋ); ಉದಯ ಗಿರೀಂದ್ರ ಮಧ್ಯದೊಳನೂನ ಸಹಸ್ರ ಕರಂಗಳಿಂದಧವಭ್ಯುದಯಮನುಂಟುಮಾಡಲೊಗೆದಿರ್ದ ದಿವಾಕರನಂತೆ ... ನಂಬಿಯಣ್ಣನೊಪ್ಪಿದಂ (ನಂಬಿರ. ೪-೨); ಮುನಿಸಮುದಾಯ ಸಮೇತಂ ವಿನೇಯಜನವನಜವನದಿವಾಕರನಂತಾ ಮುನಿಪನುಪದಾಸಮಂ ಪರ್ವ ನಿಮಿತ್ತಂ ತಳೆದು (ಯಶೋಧ. ೧-೭೬). ೨. = ದಿವಸಕರ ೨ : ದಿವಾಕರಾ ಕಾಶ ದಿನೇಶ ಪಾವಕರ್ ಸುವಿಶ್ರಮಂ ಬಂದಿರೆ ಸಪ್ತಸಂಖ್ಯೆಯೊಳ್ ಸವಿಸ್ತರಂ ನಿಲ್ಪಿರೆ ಸಂದುದಿಂತುದಾತ್ರವಂಶ ವಂಶಸ್ಥಮೆನಿಪ್ಪನಾಮದಿಂ (ಛಂದೋಂಬು. ೨-೧೨೮). [ ಸಂ. ]

**ದಿವಾಕರಣಂದಿ** (ನಾ). ಒಬ್ಬಾತನ ಹೆಸರು ; P ಜೈನರ ಒಬ್ಬ ಪ್ರಸಿದ್ಧ ಮುನಿಯ ಹೆಸರು : ಉಭಯಸಿದ್ಧಾನ್ತಚೂಡಾಮಣಿಗಳುಂ ತ್ರೈವಿದ್ಯ ದೇವರುಮೆನಿಸಿದ ಶ್ರೀದಿವಾಕರಣನ್ದಿಸಿದ್ಧಾನ್ತರತ್ನಾಕರ ದೇವರ ಶಿಷ್ಯರ್ (ಎಶಿ. VIII, ನಗರ. ೫೭-೯೦ ; ಸು. 1077). [ ದಿವಾಕರ + <ನಂದಿ ]

**ದಿವಾಕರತನಯ** (ನಾ). ೧. ಸೂರ್ಯನ ಮಗ. ೨. ಕರ್ಣ : ಎಲೆ ದಿವಾಕರತನಯ ನಿನ್ನಯ ಕುಲವನಱಿಯೆಯಲಾ (ಕುಮಾವ್ಯಾ. ಉ. ೧೧-೫). ೩. ಶನಿ. ೪. ಯಮ. ೫. ಸುಗ್ರೀವ. [ ದಿವಾಕರ + ತನಯ ]

**ದಿವಾಕೀರ್ತಿ** (ನಾ). ೧. ನಾಯಿಂದ ; ಕ್ಷೌರಿಕ ; P ರಾತ್ರಿ ಕ್ಷೌರವು ನಿಷಿದ್ಧವಾದುದರಿಂದ ಹಗಲು ಹೊತ್ತಿನಲ್ಲಿ ಮಾತ್ರ ಕರೆಯಲ್ಪಡು ವವನು : "ಕ್ಷುರವರ್ಮದೀ, ದಿವಾಕೀರ್ತಿ:, ಚಂಡಿಲಃ, ನಾಪಿತಃ – ಈ ೪ ನಾವಿದಂ" (ಹಲಾಯು. ೯೭-೯೩೫). ೨. ಹೊಲೆಯ ; ಚಂಡಾಲ : "ದಿವಾಕೀರ್ತಿ ಪೊಲೆಯನುಂ ನಾಪಿತನುಂ" (ಪಮ್ಮಶಬ್ದ. ೧೨೮-೬೦). ಬಡಗಿಯು ಅಕ್ಕಸಾಲಿಯು ಧ್ವಜಕಾರನು ಕಾಣಕರ ಸೂನು ಇವರೆಲ್ಲಾ ದಿವಾಕೀರ್ತಿ ಸಮರು (ಶುಕಸ. ೨೩). ೩. ಚಮ್ಮಾರ : "ಪೊಲೆಯಂ ಕ್ಷೌರಿಕ ಚರ್ಮಕೃತ್ತ್ರಯ ದಿವಾಕೀರ್ತ್ಯಾಹ್ವಯಂ" (ನಾನಾರ. ೧೫೩). ೪. ಗೂಬೆ ; ಉಲೂಕ. [ ಸಂ. ]

**ದಿವಾಕೀರ್ತಿಕ** (ನಾ). = ದಿವಾಕೀರ್ತಿ ೧ : ಕುಂಭಕಾರ ಸ್ವರ್ಣಕಾರ ವರ್ಧಕಿ ಕಾರುಕ ವಸ್ತ್ರಶೋಧಕ ದಿವಾಕೀರ್ತಿಕ ಮುಂತಾದ ನಾನಾ ಕೈವಾಡ ಕರಣ ಚಮತ್ಕಾರವಿಶಾರದರಾದ ನಾನಾವಿಧ ಜಾತಿಜನರ್ಗಾಸ್ಪದ ನಿವೇಶನಂಗಳಂ ಕಲ್ಪಿಸಿ (ಕಳನ್ನ. ೭-೨). [ ಸಂ. ]

**ದಿವಾಚರ** (ನಾ). ೧. ಹಗಲಿನಲ್ಲಿ ಮಾತ್ರ ಸಂಚರಿಸುವ ವ್ಯಕ್ತಿ : ರಾತ್ರಿಂಚರರು ಕಿರಿಚುತ್ತ ಅಲೆಯುವುದಕ್ಕೆ ಹೊರಟರು. ದಿವಾಚರರು ನಿದ್ರಾವಶರಾದರು (ವಚಭಾ. ೩೦೪). ೨. ಚಂಡಾಲ ; ಹೊಲೆಯ. [ ಸಂ. ]

**ದಿವಾಣ, ದಿವಾನ್, ದಿವಾನ್ನ, ದಿವಾನಂ, ದೀವಾಣ** (ನಾ). ೧. ರಾಜ ಸಭಾಗೃಹ ; ಸಭಾಸ್ಥಾನ ; ದರ್ಬಾರು ; ಚಾವಡಿ : ದಿವಾಣದೊಳ್ ಮಂತ್ರಿಯಿರೆ . . . ಕಂಡು (ಲಕಿಚಂ. ೩೨-೬೨) ; ರಾಮನಾಥ ದಂಡಾಧಿಪ ಗೂಡಿ ದಿವಾಣಕೆ ಬಂದು (ಕುರಾಸಾಂ. ೧೧-೧೨) ; ಬಾಣಾಸುರ ಬೊಂಬಾಳ್ವೆಗೆ ವೆರಸಿ ದಿವಾಣವ ಪುಗಲೊಡರ್ಚಿದನು (ಮೋಹತ. ೨೦-೩೯) ; ತನ್ನೊಡಲಕಾಣ ಲೀಯದೆ ಹೊಕ್ಕಳು ಕೃಷ್ಣರಾಯ ದಿವಾಣ ದ್ವಾರಂಗಳನುಳಿದು (ಮೋಹತ. ೨೯-೩೭) ; ದಿವಾಣದ ಯಕ್ಕಟಿಗರೆಱೆಯ ಹನುಮನಂ ಕರೆದು (ಪ್ರಭುಪು. ೭-೬೮) ; ಸಮಸ್ತ ವಾಣಿಜರಯಂಗಡಿಸಾಲು ಪ್ರಜೆಯು ಪರಿವಾರವಾಳಿಯ ವಿಕ್ಕಿ ಕಾಯ್ದುರಂಬುಜದಳವಿಶಾಲನೇತ್ರನ ದಿವಾಣಮನುಯತಿಜಾಗ್ರದಿಂ ವೀರಭಟರು (ನವಕೋ. ೨೯-೭೭). ೨. ಆಡಳಿತಾಧಿಕಾರಿ ; ಕಾರಭಾರಿ : ಈಗಿನ ಶ್ರೀಗಳು ಮಠದ ದಿವಾಣರಿಂದ್ದಾಗ ನನ್ನ ಮಗಳು ಬಂದು ಶ್ಲೋಕ ಅಂದು ತೋರಿಸಿದಳು (ಅಕ್ಕಮ್ಮ. ೭). ೩. ಮುಖ್ಯಮಂತ್ರಿ ; ವಜೀರ : ಪೂರ್ಣಯ್ಯನವರು ಮೈಸೂರಿನ ಮೊದಲನೆಯ ದಿವಾಣರು (ರೂಢಿ). ೪. ತಾಲೂಕಿನ ಕಂದಾಯದ ಕೆಲಸ ನೋಡಿಕೊಳ್ಳುವ ಅಧಿಕಾರಿ. ೫. ಸರ್ಕಾರ. ೬. ಸರ್ಕಾರದ ಬೊಕ್ಕಸ ; ರಾಜ್ಯಾಧಿಕಾರಕ್ಕೆ ಸೇರಿದುದು : "ದಿವಾಣ – ಸರ್ಕಾರ (ರೆವಿನ್ಯೂ) ಬೊಕ್ಕಸ" (ಚಿ ಕ್ರ ಪಾ. ಅನುಬಂಧ. ೩) ; ಆತನ ಮನೆ ವಿಟ್ಲಪುರದಲ್ಲಿ ಯಿದ ಕಾರಣ ದಿವಾಣದ ರಸ್ತಿನ ಹಣವನು ಯೆಲಿಕೆಂಬಾವಿಯವರ ಮನೆಯೊಳಗೆ ಯಿಡಲಾಗಿ (ಎಶಿ. XI, ಮೊಳಕಾ. ೨೫-೪೦ ; 1665). ೭. ಒಂದು ಬಗೆಯ ಆಸನ ; ಸೋಫಾ : ಅವರು ತುಂಬಾ ಬಳಲಿದ್ದ ಕಾರಣ ಮನೆಗೆ ಹಿಂತಿರುಗಿದವರೇ ದಿವಾಣದಲ್ಲಿ ಒರಗಿದರು (ರೂಢಿ). **ದಿವಾನ್** : ೩. ಸೂಪ್ರಿನ್‌ಟೆಂಡ್ಯಾಂಟ್ ಕೇವಟನ್ ಲೇಹಾರಡಿ ಸಾಹೆಬರವರ ದಿವ್ವದಲ್ಲು ದಿವಾನ್ ಪೂಂನಯ ಯಿಾ ಬೊಪು ಕ ವಿಮಾನಾಕ್ಷ್ಯಯ ಸಹ ಸೂಕ್ತನವಾಗಿ ವಿರಚಿಸಿ ಪೊಪ್ಪಿಸ್ತ ಬೆಳಪೀಠ (ಎಶಿ. I (R). ೨೪-೩ ; 1839). 'ದಿವಾನ್ ಕಚೇರಿ' ಪರಾ **ದಿವಾನ** : ೨. ಇಂಗ್ಲೀಷರು ಆಗ ಬಂಗಾಳದ ದಿವಾನರಾಗಿದ್ದರು (ಬಂಕಿಮ. ೨೭೨). ೩. ಒಂದು ಸಲ ಮೈಸೂರು ದಿವಾನರು ಬಂದು ಇಲ್ಲಿಯ ಸೊಬಗನ್ನು ನೋಡಿ (ಹುಟ್ಟಿಹ. ೭೦). **ದಿವಾನು** : ೮. ರಾಜ್ಯಸಭೆ : ದಿವಾನನ್ನು ಎಂದರೆ ರಾಜ್ಯಸಭೆಯನ್ನು ಕೂಡಿಸಬೇಕೆಂದು . . . ಅವಿಸಾರ ಅಪ್ಪಣೆ ಮಾಡಿದನು (ನಗಿಹೊ. ೧೫೦) ; **ದೀವಾಣ** : ೧. ದೀವಾಣವು ದೀವದ ಮೃಗ ವಾಸವು ಪಾವನತರದ ಹಜಾರ ಜಾವಗಳನು ಸೂಚಿಪ ಘಳಿಯಾರದ ಭಾವ ವನದನೇನೆಂಬೆ (ಅಂಜನ. ೧೨-೩೮). ದೀವಾಣದೊಳು ಕುಳ್ಳಿರ್ದ ಕುಮಾರರು ದೇವರಾಜನ ವಿಭವದೊಳು ಸಾವಧಾನದೊಳಾಳ ನೋಡುತಿರಲು ಬಂದರಾ ವಹಿಲದೊಳಚರಭರು (ಅಂಜನ. ೬-೭೭). [ ←ಮರಾ. ದಿವಾಣ್, ದಿವಾನ್ ; ಅರ. ಫಾರ. ದೀವಾನ್ ; ಹಿಂ. ದಿವಾನ್, ದೀವಾನ್ ]

**ದಿವಾಣಖಾನೆ, ದಿವಾನ್‌ಖಾನೆ, ದಿವಾನಖಾನ, ದಿವಾನಖಾನೆ** (ನಾ). ಭೇಟಿಯಾಗಲು ಬಂದವರನ್ನು ಸ್ವಾಗತಿಸಿ ಕುಳ್ಳಿರಿಸುವ ಸ್ಥಳ ; ಮನೆಯ ಮುಂಭಾಗದ ಹಜಾರ, – ಕೊಠಡಿ : ದಿವಾಣಖಾನೆಗೆ ಹೋಗಿ ಎಲ್ಲರ ಊಟದ ವ್ಯವಸ್ಥೆಗೆ ಹುಕುಂ ಬಿಟ್ಟನು (ಹೂಬಿಸಿ. ೪೨) ; ಇದು ಜಗನ್ನಾಥಸ್ವಾಮಿಯ ದಿವಾಣಖಾನೆ, ಅದು ಅನ್ನಪೂರ್ಣಾದೇವಿಯ ಭಂಡಾರ (ಬಲಿದಾ. ೮೩). **ದಿವಾನ್‌ಖಾನೆ** : ೧. ನಾವು ಸುಸಜ್ಜಿತವಾದ ದಿವಾನ್ ಖಾನೆಯಲ್ಲಿ ನಾಲ್ಕೂವರೆ ಘಂಟೆ ಆಗುವುದನ್ನೂ ವಿಶ್ವೇಶ್ವರಯ್ಯ ನವರು ಬರುವುದನ್ನೂ ನಿರೀಕ್ಷಿಸುತ್ತಾ ಕುಳಿತೆವು (ನಂಟರು. ೮೯). ೨. ರಾಜ ಸಭಾ ಗೃಹ ; ಓಲಗಶಾಲೆ : ದ್ವಾರಪಾಲಕನು ಮಹಾರಾಜರವರ ದಿವಾನ್ ಖಾನೆಯೊಳಗೆ ವೃಷ್ಟಪಿಯನ್ನು ಕರೆದೊಯ್ದನು (ಶ್ರೀಕಾಯ. ೬೩). **ದಿವಾನಖಾನ** : ೨. ಗುತ್ತಿಗೆಯ ಕ್ರಮವೆಂತೆಂದರೆ ನಂಮ ದಿವಾನಖಾನ × ಹ × ಯರ (ಎಶಿ. III (R), ಗುಂಡ್ಲುಪೇ. ೪೭-೮ ; 1549). **ದಿವಾನಖಾನೆ** : ೧. ರಾಯರ ಮನೆಯ ದಿವಾನಖಾನೆಯನ್ನು ನೋಡಬಾರದೆ ! (ಅಲಿಮ. ೨೫) ; ಆ ದಿವಾನಖಾನೆಯಲ್ಲೊಂದು ಸೋಫವೂ, ಅದರ ಮುಂದೊಂದು ಮೇಜೂ ಇದ್ದುವು (ಪುನರು. ೨೨೭).

[ ←ಮರಾ. ದಿವಾಣ್‌ಖಾನ ; ಫಾರ. ಹಿಂ. ದೀವಾನ್‌ಖಾನಾ ]

**ದಿವಾಣಗಿರಿ**, ದಿವಾನಗಿರಿ (ನಾ). ಮಂತ್ರಿಪದವಿ ; ಮಂತ್ರಿಯ ಕೆಲಸ,- ಅಧಿಕಾರ : (+). ದಿವಾನಗಿರಿ : ಸಂಸ್ಥಾನಗಳಲ್ಲಿ ಮಠದ ಶಿಷ್ಯರು ದಿವಾನಗಿರಿ ಮೊದಲಾದ ಮಹಾಪದವಿಗಳನ್ನು ವಹಿಸಿದ್ದ ಕಾಲ (ಕಭವಿ. II, ೨೦೩) ; ಏಕಾಂಬರ ಮುದಲಿಯಾರರು ಈ ಪ್ರಾಂತ್ಯವನ್ನು ಆಳುತ್ತಿದ್ದ ನವಾಬರಲ್ಲಿ, ದಿವಾನಗಿರಿ ನಡೆಸಿ ತುಂಬಾ ಆಸ್ತಿ ಮಾಡಿದರು (ಪ್ರಕಾಶ. ೧). [ ←ಮರಾ. ದಿವಾಣ್‌ಗಿರೀ ]

**ದಿವಾಣಚಾವಡಿ** (ನಾ). = ದಿವಾಣ ೧ : ಕಂಸುಕ ಹಜಾರ ದಿ[ಪಾಠಾಂ. ದೆ]ವಾಣ ಚಾವಡಿ ಪೊಸಕಸುಂಗಲ್ಲ ಹರ್ಮ್ಯತತಿಗಳಿಂ . . . ರಾಜಿಸಿದುದಂದಾ ರಾಜನಿಳಯ (ರಾಮವಿ. ೩-೧೨೭) ; ಕುಸುಮ ಹಜಾರ ದಿವಾಣಚಾವಡಿ ಹೊನ್ನ ಕುಸುರಿವೆಸಥ ಮಾಡಗಳ ವಿಸರವೆಸೆಯುಲರಮನೆ ಕಣ್ಗೆ ರಾರಾಜಿಸುತಿಹುದೇನ ಬಣ್ಣಿಪೆನು (ಕುಂತಸಾಂ. ೫-೩). [ ದಿವಾಣ + ಚಾವಡಿ ]

**ದಿವಾಣಹಜಾರ** (ನಾ). = ದಿವಾಣ ೧ : ಮುಗಿಲ ಮುಟ್ಟುವ ದಿವಾಣ ಹಜಾರವು ಸೊಗಸಿನ ಚಿತ್ರ ಚವಡಿಯೂ (ಜಿನಕ. ೭-೭೦). [ ದಿವಾಣ + ಹಜಾರ$_1$ ]

**ದಿವಾಣಿ**, ದಿವಾನಿ (ಗು). ೧. ಆಸ್ತಿಪಾಸ್ತಿಗಳಿಗೆ ಸಂಬಂಧಪಟ್ಟ; ಸಿವಿಲ್ ಬಾಬತ್ತಿಗೆ ಸೇರಿದ ; ದಂಡ್ಯಾಪರಾಧವಲ್ಲದ ; ತಕ್ಸೀರಿಲ್ಲದ : ಇವನು ಮಹತ್ವದ ದಿವಾಣೀ, ಫೌಜದಾರೀ ವ್ಯಾಜ್ಯಗಳನ್ನು ತೀರಿಸುವನು (ಕಾಠವ. ೬೬). ದಿವಾನಿ (ನಾ). ೨. ಕಂದಾಯವನ್ನು ವಸೂಲುಮಾಡುವ ಹಕ್ಕು : ಬಂಗಾಳದ ಕೆಳಗಿನ ರಾಜ್ಯಗಳ ಕಂದಾಯವನ್ನು ವಸೂಲು ಮಾಡುವ ಹಕ್ಕು (ದಿವಾನಿ) ೧೭೬೫ ರಲ್ಲಿ ಇಂಗ್ಲಿಷರ ವಶವಾಯಿತು (ಭೂಗೋಳ. ೪೨). ೩. ಸಚಿವ; ಮಂತ್ರಿ : ವಜೀರ ಪಟಾಣದಿರ್ವಾನಿಯರೆಡ ಬಲದೊಳಗೆ ಜೇನವುಟ್ಟಂತೆ ಮುಸುಕಿ ಬಲ ಬರುತಿದೆ ನೀವೆಚ್ಚರೆನುತ ಬಿನ್ನೈಸೆ (ಸೌಂದಕಾ. ೫-೭). [ ←ಮರಾ. ದಿವಾಣೀ; ಫಾರ. ಹಿಂ. ದಿವಾನೀ ]

**ದಿವಾಣಿಆದಾಲತ್** (ನಾ).=ದಿವಾಣಿಕೋರ್ಟು: ಬೇರೆಯವರಿಗೆ ನೇಕಾರನು ತನ್ನ ಬಟ್ಟೆಗಳನ್ನು ಮಾರಿದರೆ ದಿವಾಣಿ ಆದಾಲತ್ (ನ್ಯಾಯ ಕಚೇರಿ) ದಲ್ಲಿ ಅವನ ಮೇಲೆ ವ್ಯಾಜ್ಯ ಹೂಡುತ್ತಿದ್ದರು (ಜಾನಿಕಾ. ೪೪). [ ದಿವಾಣಿ + ಅದಾಲತ್$_1$ (<ಅದಾಲತು) ]

**ದಿವಾಣಿಕಜೆ** (ನಾ). ದಿವಾಣಿ ವ್ಯಾಜ್ಯ ; ಆಸ್ತಿಪಾಸ್ತಿಗೆ ಸಂಬಂಧಪಟ್ಟ ವ್ಯಾಜ್ಯ : ದಿವಾಣೀಕಜ್ಜೆಗಳನ್ನು ಮುಸಲ್ಮಾನ ಅಥವಾ ಹಿಂದೂಶಾಸ್ತ್ರಗಳ ಆಧಾರದಿಂದ ಅವರವರ ಜಾತಿಯ ಪ್ರಕಾರ, ತೀರ್ಪುಮಾಡುವಂತೆ ಏರ್ಪಡಿಸಿದ್ದನು (ಹಿಂದುಇ. ೧೭೬). [ ದಿವಾಣಿ + ಕಜ್ಜೆ ]

**ದಿವಾಣಿಕೋರ್ಟು** (ನಾ). ಆಸ್ತಿಪಾಸ್ತಿಗೆ ಸಂಬಂಧಿಸಿದ ವ್ಯಾಜ್ಯಗಳನ್ನು ನಿರ್ಣಯಿಸುವ ನ್ಯಾಯಾಲಯ ; ಸಿವಿಲ್‌ಕೋರ್ಟು : ದಿವಾಣಿ ಕೋರ್ಟಿನ ಬೆಲೀಫರು ಜಪ್ತಿಯ ವಾರಂಟನ್ನೂ ತುರಂಗ ವಾರಂಟನ್ನೂ ಕೈಯಲ್ಲಿ ಹಿಡಕೊಂಡು ಎಡತಾಕುತ್ತಾರೆ (ಮೋಹಿನೀ. ೫). [ ದಿವಾಣಿ +ಕೋರ್ಟು ]

**ದಿವಾಣಿಬಾಬು** (ನಾ). ಆಸ್ತಿಪಾಸ್ತಿಗೆ ಸಂಬಂಧಿಸಿದ ವಿಷಯ : ಕೊಂಡು ಕೊಳ್ಳುವ ವ್ಯವಹಾರ, ಕರಾರುಪತ್ರ, ದಾನಕೊಡುವುದು, ಏಕ್ಸಾರ್ಜಿತ ಸೊತ್ತಿನ ಬಾಧ್ಯಸ್ಥಿಕೆ ಮುಂತಾದ "ದಿವಾಣಿ" ಬಾಬುಗಳ ಬಗ್ಗೆ ಕಾಯದೆಗಳಾಗಿದ್ದವು (ಹಿಂದುಇ. ೬೩). [ ದಿವಾಣಿ + ಬಾಬು$_1$ ]

**ದಿವಾನ್** 'ದಿವಾಣ' ನೋ.

**ದಿವಾನ್‌ಕಚೇರಿ**, ದಿವಾನ್ ಕಛೇರಿ (ನಾ). ಸಿವಿಲ್ ಬಾಬತ್ತಿನ ವಿಷಯಗಳನ್ನು ನಿರ್ಣಯಿಸುವ ಕಚೇರಿ: ೧೮೧೩ ಇಸವಿ ದಾಖಲೆಪತ್ರದ ಕಂಡಣಿ ಹಿರಣ್ಣಪ್ಪ ದಿರ್ವಾನಕಚೇರಿ ಹಜೂರು (ಮೈಅರಿ. ೧೯೩೯, ೯೪-೪; 1813). ದಿವಾನ್‌ಕಛೇರಿ : ಕಛೇರಿಗಳು-೧ ದಿರ್ವಾನ ಕಛೇರಿ . . . ೧೮ ಜಿಲ್ಲೋ ಕಛೇರಿ (ಮಹಾಪಂ. II, ೩೮). [ ದಿವಾನ್ (<ದಿವಾಣ) + ಕಚೇರಿ ]

**ದಿವಾನ್‌ಕಛೇರಿ** 'ದಿವಾನ್‌ಕಚೇರಿ' ನೋ.

**ದಿವಾನ್‌ಖಾನೆ** 'ದಿವಾಣಖಾನೆ' ನೋ.

**ದಿವಾನ** 'ದಿವಾಣ' ನೋ.

**ದಿವಾನಖಾನ** 'ದಿವಾಣಖಾನೆ' ನೋ.

**ದಿವಾನಖಾನೆ** 'ದಿವಾಣಖಾನೆ' ನೋ.

**ದಿವಾನಗಿರಿ** 'ದಿವಾಣಗಿರಿ' ನೋ.

**ದಿವಾನಾ** (ಗು). ಮೂರ್ಖನಾದ ; ಪೆದ್ದ ; ಹುಚ್ಚಾದ : (+). [ ←ಫಾರ. ಹಿಂ. ದೀವಾನಾ; ಮರಾ. ದಿವಾಣಾ, ದಿವಾನಾ ]

**ದಿವಾನಾಡಿ** (ನಾ). ಶರೀರದ ಎಡಭಾಗದಲ್ಲಿರುವ ನಾಡಿ: ಈ ಸ್ತ್ರೀಪುರುಷ ನಾಡಿಗಳಿಗೆ ದಿವಾನಾಡಿಗಳೆಂತಲೂ, ರಾತ್ರಿನಾಡಿಗಳೆಂತಲೂ ವ್ಯವಹಾರ ಉಂಟು (ಜಸಾರ. ೪-೬ ತಾತ್ಪರ್ಯ). 'ಪುರುಷನಾಡಿ' ಪರಾ. [ ಸಂ. ]

**ದಿವಾನಿ** 'ದಿವಾಣಿ' ನೋ.

**ದಿವಾನು** 'ದಿವಾಣ' ನೋ.

**ದಿವಾಬಲಿ** (ನಾ). ಹಗಲಿನಲ್ಲಿ ಬಲಿಷ್ಠವಾದುದಂ: ಲಲನಾ ವೃಶ್ಚಿಕ ತೌಳಿ ಕುಂಭ ಹರಿಗಳ್ ಶೀರ್ಷೋದಯಂಗಳ್ ದಿವಾಬಲಿಗಳ್ (ಜಾತತಿ. ೧-೩೯). [ ಸಂ. ದಿವಾಬಲಿನ್ ]

**ದಿವಾಮಧ್ಯ** (ನಾ). ದಿನದ ಮಧ್ಯದ ಅವಧಿ; ಮಧ್ಯಾಹ್ನ. [ ಸಂ. ]

**ದಿವಾಮೈಥುನ** (ನಾ). ಹಗಲಿನಲ್ಲಿ ನಡೆಸುವ ಸಂಭೋಗ : ದಿವಾಮೈಥುನ ದಿವಾನಿದ್ರೆಗಳಂ ಮಾಡಲಾಗದು (ವಿವೇಕ. ೦೫೦); ವಿವಾಹವಾದ ಸ್ತ್ರೀಯಲ್ಲೂ ದಿವಾಮೈಥುನವನ್ನು ಈ ನೆಲೆಯ ಗೃಹಸ್ಥನು ಬಿಡುತ್ತಾನೆ (ಭಾರದ. ೧೮೪). [ ಸಂ. ]

**ದಿವಾಮೈಥುನವಿರತ** (ನಾ). [ಜೈನ] ಹಗಲಿನಲ್ಲಿ ನಡೆಸುವ ಸಂಭೋಗ ಅಥವಾ ಅದರ ಬಯಕೆಯನ್ನು ನಿಷೇಧಿಸುವ ವ್ರತವನ್ನು ಕೈಗೊಂಡವನು : ದರ್ಶನಿಕಃ ದರ್ಶನೀಕನೆಂದು ಅರ್ಥ ಅನಂತರದಲ್ಲಿ ವ್ರತಿಕಃ ವ್ರತಿಕನೆಂದು . . . ದಿವಾಮೈಥುನವಿರತಃ ದಿವಮೈಥುನವಿರತವೆಂಬೀ ಸಚ್ಚಿತ್ರದಲ್ಲಿಯೆಯಿಹುದು (ಸಾಗಾರ. ೨೯-೨). [ ದಿವಾಮೈಥುನ + ವಿರತ ]

**ದಿವಾಮೈಥುನ ವಿರತಿ** (ನಾ). [ ಜೈನ ] ಹಗಲಿನಲ್ಲಿ ಸಂಭೋಗವನ್ನು ಅಥವಾ ಅದರ ಬಯಕೆಯನ್ನು ನಿಷೇಧಿಸುವ ವ್ರತ : ದಿವಾಮೈಥುನವಿರತಿ:-ಇಲ್ಲಿ ಮೈಥುನ ಶಬ್ದಕ್ಕೆ ವಿಶಾಲವಾದ ಅರ್ಥವಿದೆ. ಮೈಥುನವೆಂದರೆ ಕೇವಲ ಕಾಯಿಕ ಭೋಗವೆಂದಿಷ್ಟೇ ಅಲ್ಲ . . . ಮನ ವಚನಗಳು ಶುದ್ಧವಾಗಿರುವ ಉದ್ದೇಶದಿಂದ ದಿವಾಮೈಥುನವಿರತಿಯನ್ನು ಜೈನಶಾಸ್ತ್ರಗಳು ಒತ್ತಿ ಹೇಳುತ್ತಿವೆ (ಜೈನಪ. ೪೭೨). [ ದಿವಾಮೈಥುನ + ವಿರತಿ ]

**ದಿವಾರಾತ್ರ** (ನಾ). = ದಿವಾರಾತ್ರಿ. [ ಸಂ. ]

**ದಿವಾರಾತ್ರಿ** (ನಾ). ೧. ಹಗಲು ಮತ್ತು ರಾತ್ರಿ: ದಿವಾರಾತ್ರಿಯುಳ್ಳನ್ನಬರೆ ಎನ್ನ ಮನ ಜಿಹ್ವೆ ನೇತ್ರಂಗಳಿಗೆ ಬಂಧನಂಗಳೆಂಬಿವು ಮುಂದುಗೆಡುವವಯ್ಯ (ಭನವ. ೩-೧) ; ಅಂದು ಮೊದಲಾಗಿ ಮಾಲಿನಿ ದಿವಾರಾತ್ರಿಯೊಳ್ಳುಂಡದೆ ಕೃತಾಂತನಂ ನ್ನಾನಾವಿಧಾನಗಳಿಂದೆ ಪೂಜಿಸುತಿರ್ದಳು (ಜೈಮಿಭಾ. ೨೬-೧೭). ೨. ಹಗಲು ಅಥವಾ ರಾತ್ರಿ : (+). 'ದಿವರಾತ್ರಿ' ಪರಾ. [ <ಸಂ. ದಿವಾರಾತ್ರ ]

**ದಿವಾವಸಾನ** (ನಾ). = ದಿವಸಾಂತ. [ ದಿವ + ಅವಸಾನ ]

**ದಿವಾಸ್ವಾಪ** (ನಾ). ಹಗಲಿನಲ್ಲಿ ಮಾಡುವ ನಿದ್ದೆ ; ಹಗಲುನಿದ್ದೆ : ಶ್ರೀ ಪದ್ಮದೊಳೊದವೆ ಮನಸ್ವಾಪಂ ಪುಟ್ಟಿದುದೊ ತಮಗೆ ರುಜೆಯಾಯ್ತೊ ದಿವಾಸ್ವಾಪ[ಪಾಠಾಂ. ದಿವಸ್ವಾಪ]ದಿನೆನೆ ನಯವಿಬುದವೊಲೊಪ್ಪಿದುವು ಮಧುಪ್ರವೇಶದೊಳ್ ಕುಮುದಂಗಳ್ (ಲೀಲಾವ. ೯-೮೭). [ ಸಂ. ]

**ದಿವಾಳಿ₁**, ದೀವಳಿ (ನಾ). = ದೀಪಾವಳಿ: "ದಿವಾಳಿ (ದಿವಳಿ)–ದೀಪಾವಳೀ" (ತದ್ಭಕೋ. ೧೯); ನಿವಾಳಿಗೆ ತಂದ ಬಟ್ಟೆ ಕಚ್ಚಿಗೆ ಆದರೆ ದಿವಾಳಿಗೆ ಏನು ಮಾಡ್ಯಾನು? (ಗಾದೆ). ದೀವಳಿ: ದೀವಳಿಯ ಚತುರ್ದಶಿಗಳೊಳಾವಗಮಲು ಗಗನವೆಲ್ಲಮಂ ಮಾಡಿಸಿಕೊಂಡಾ ವಾಸರದೊಳು ಕಟ್ಟಿರದೊಡೇವೇಟ್ಟುದೆ ಭೂತರಕ್ಷೆಯೆಂಬವರ್ಮೂಥರ್ (ಸಮುಪ. ೩೭೮–೧೩ ಅನುಬಂಧ).

[ <ಸಂ. ದೀಪಾವಲೀ ]

**ದಿವಾಳಿ₂** (ನಾ). ೧. ಎಲ್ಲವನ್ನೂ ಕಳೆದುಕೊಂಡು ದಾರಿದ್ರ್ಯಕ್ಕೆ ಗುರಿಯಾದವನ; ಪಾಪರು; ನಿರ್ಗತಿಕ; ನಾದಾರಿ (ಉಕ): ಧನವಿದ್ದರೂ ಕೊರಗುವ ಸ್ಥಿತಿಗೂ ದಿವಾಳಿಯ ಕೊರಗುವ ಸ್ಥಿತಿಗೂ ವ್ಯತ್ಯಾಸವುಂಟೇ (ಜೀವಾತ್ಯ. ೨೭೩). ೨. ಅತಿಯಾದ ಖರ್ಚು; ದಂದುಗಾರಿಕೆ: ಅಂದು ಸೀತಾರಾಮನಿಗೆ ದಲ್ಲಾಳಿಗಳಿಂದ ವಿಶೇಷ ಹಣವು ಸಿಕ್ಕಿದ್ದಿತು. ಅದರ ದಿವಾಳಿಯಲ್ಲಿ ಮದಿರಾಪಾನ ಅಧಿಕವಾಯಿತು (ಜಯಂತ. ೩೭೩).

ದಿವಾಳಿ ಎಬ್ಬಿಸು = ಏನೂ ಉಳಿಯದಂತೆ ಮಾಡು: ಮನೆಯನ್ನು ಗುಡಿಸಿಬಿಡಲು ನನಗೆ ಯಾವಾಗ ಅವಕಾಶವಾದೀತು ಎಂಬುದೇ ಟಳಕರ ಚಿಂತೆ. ನಾನು ಹೊರಬಿದ್ದೆನೋ, ಅವರು ದಿವಾಳಿ ಎಬ್ಬಿಸಿದರೇ. ಆಮೇಲೆ ನನ್ನ ಶಂಖವಾದ್ಯ! (ಸ್ಮೃತಿಚಿ. ೩೦೯). ದಿವಾಳಿ ಏಳು = ಎಲ್ಲವನ್ನೂ ಕಳೆದುಕೊಂಡು ದಾರಿದ್ರ್ಯಕ್ಕೆ ಗುರಿಯಾಗು; ಪಾಪರಾಗು: ಆತ ಯಾವುದೋ ವ್ಯವಹಾರದಲ್ಲಿ ಸಿಲುಕಿಕೊಂಡು ದಿವಾಳಿ ಏಳುವ ಸ್ಥಿತಿಗೆ ಬಂದ (ರೂಢಿ). ದಿವಾಳಿ ತೆಗೆ = ೧. ಪೂರ್ಣ ದಾರಿದ್ರ್ಯಕ್ಕೊಳಗಾಗು; ನಿರ್ಗತಿಕವಾಗು: ಕನ್ನಡ ಕಂಪನಿ ದಿವಾಳಿ ತೆಗೆಯುವ ಸ್ಥಿತಿಗೆ ಬಂದು (ನಾಪೂಲೀ. ೧೬೧). ೨. = ದಿವಾಳಿ ಎಬ್ಬಿಸು: ಇದರ ವ್ಯವಹಾರವನ್ನೆಲ್ಲ ಸೆಕ್ರೆಟರಿಯು ಕೈಗೊಪ್ಪಿಸಿಬಿಟ್ಟರೆ ಎಲ್ಲ ದಿವಾಳಿ ತೆಗೆದು ಬಿಟ್ಟಾರು (ಬದುಕ. ೧೯೦). ದಿವಾಳಿದಾಸ = ನಿರ್ಗತಿಕ; ದರಿದ್ರ: ಅವನೇನೋ ದಿವಾಳಿದಾಸ ನಿರಬಹುದು (ವಿಧಿವ್ಯ. ೩೦). ದಿವಾಳಿಯಾಗು = ದಿವಾಳಿ ತೆಗೆ ೧: ಇಂದು ಶ್ರೀಮಂತರಾಗಿದ್ದವರು ನಾಳೆ ದಿವಾಳಿಯಾಗುವುದೂ ಇದೆ (ವಿಧಿವ್ಯ. ೯೧); ಇಂದೋ ನಾಳೆಯೋ ದಿವಾಳಿಯಾಗುವ ಕಾರ್ಖಾನೆ ಅದು (ಸಾವಿಸ. ೩); ದಿವಾಳಿಹನುಮ = "ದುಂದುಗಾರ" (ಜಾನಕೋ. ೫).

[ ←ಮರಾ. ದಿವಾಳೂ, ದಿವಾಳೀ; ಹಿಂ. ದಿವಾಲಾ ]

**ದಿವಾಳಿಖೋರ** (ನಾ). ೧. ದರಿದ್ರ; ನಿರ್ಗತಿಕ; ಪಾಪರಾದವನು; ನಿಮ್ಮಲ್ಲಿ ದಯೆಯುನ್ನು ಕಂಡು ನಾನು ಯಾವ ಗಾಳಿಗೋಪುರವನ್ನೂ ಕಟ್ಟಲಾರೆ ಅಥವಾ ನಿಮ್ಮನ್ನು ದಯಾಶೂನ್ಯ ದಿವಾಳಿಖೋರರನ್ನಾಗಿಯೂ ಮಾಡಲಾರೆ (ಜಯಂತ. ೪೬೮). ೨. ದುಂದುವೆಚ್ಚ ಮಾಡುವವನು; ದುಂದುಗಾರ: (ಕಿ). [ ←ಮರಾ. ದಿವಾಳಖೋರ್ ]

**ದಿವಾಳಿತನ** (ನಾ). ಸಾಲ ತೀರಿಸಲಾಗದಿರುವುದು; ಪಾಪರಾಗುವುದು: ದಿವಾಳಿತನ ಮತ್ತು ಶೋಧಾಕ್ಷಮತೆ (ಧಾರಾನ. ೨೯೪).

[ ದಿವಾಳಿ₂ + –ತನ ]

**ದಿವಿ** (ನಾ). ೧. ಸ್ವರ್ಗ; ದೇವಲೋಕ: ಕೊಟ್ಟಿಗೆ ಮನೆಯಲ್ಲಿ ಅಟ್ಟವು ದಿವಿಯಲ್ಲ ಘಟ್ಟವು ಮೇರು ತಾನಲ್ಲ (ಕಂಬಾಶ. ೧೧೧–೪೨); ಓ ದಿವ್ಯ ಚೇತನಗಳೆ . . . ಬುವಿಗೆ ದಿವಿಯು ತನ್ನಿ! (ಅನಿಕೇ. ೨೧–೭). ೨. ಗಗನ; ಆಕಾಶ: ಇಂದುರುಚಿ ಬಲಿದುದೂ ಹರಸ್ಮೇರಂ ದಿವಿಯೊಳಾಕಾರವಾಯ್ತೊ ಹಿಮಂದಳೆದುದೋ ಕರಿಣಿಮಂ ಸುಧೆ ಬೆಳೆದಚಲವಾಯ್ತೊ . . . ಎನೆ ರಜತಾದ್ರಿ ರಂಜಿಪುದು (ಬಸವು. ೧–೩೮); ಭರತನು ವೇಣಾ ಮುಂದಲೆವಿಡಿದು ನೆಲಕಪ್ಪಳಿಸಿ ಚಿಮ್ಮಿದ ದಿವಿಗೆ ಮಂದರೆಯಾ (ಅನಂರಾ. ೨–೩–೨೫). ೩. ದಿನ; ಹಗಲು. ೪. [ಗಣಿತ] ಸೊನ್ನೆ ಎಂಬುದರ ಸಂಕೇತ: ಗಗನಾಂಬರ ದಿವಿಯು ಶೂನ್ಯಂ (ಭಾಸ್ಕರ. ೭೪–೭). [ <ಸಂ. ದಿವ ]

**ದಿವಿಜ** (ಗು). ೧. ಸ್ವರ್ಗದಲ್ಲಿ ಹುಟ್ಟಿದ,– ಜನಿಸಿದ; ದೇವಲೋಕಕ್ಕೆ ಸಂಬಂಧಿಸಿದ; ಶ್ರೇಷ್ಠವಾದ. 'ದಿವಿಜಕಂಜ' ವರಾ. (ನಾ). ೨. ಸ್ವರ್ಗದಲ್ಲಿ ಹುಟ್ಟಿದವನು; ದೇವತೆ: ದಿವಿಜನೋ ಫಣನಾಯಕನೋ ಮನೋಭವನಿವಂ ಕರಮೊಪ್ಪಿದಂ (ಕವಿರಾ. ೧–೧೪೦); ಪೆಂಪಿನ ಜಿತಶತ್ರುವುಂ ವಿಜಯಸೇನೆಯುಮಿರ್ವರೆ ಪುಣ್ಯಭಾಜನರ್ ಎಂದು ದಿವಿಜರೆಲ್ಲಂ ಪೊಗಟ್ (ಅಜಿಪು. ४–೧೯ ವ); ವನಜಜ ಬನ್ನಂ . . . ಪದಾವನತಿ. ಯಿನೇಟ್ ಮಹೇಂದ್ರ ದಿವಿಜರ್ ಪುಗೆ ಬಾರಿಸವೇಡನುತ್ತೆ . . . ಸುಪ್ತಿಯೊಳ್ ಕನವರಿಸುತ್ತುಮಿರ್ಪ ಹರಿ ಗೋಟಿಗೆ ವಿಸ್ಮಯಮಂ ಸೆಗಟ್ಟಿದಂ (ಜಗವಿ. ೩–೫೮). ೩. [ಛಂದ] ಒಂದು ಅಕ್ಷರಗಣ; ನಗಣ (UUU): ದಿವಿಜ ದಿನಾಧಿಪ ಭಾನು ಶೀತಕರಾಗ್ನಿಯೆಂದಿವು ನೆರೆದಿಂಬೆನೆ ಬಂದೂಡಾ ಯತಿ ಹತ್ತಉತ್ತರವತರಿಸಿರ್ದೊಡಮಂಬುಜಾಯತಲೋಚನೇ ನವನಲಿನಂ (ಛಂದೋಂಬು. ೨–೧೩೭). [ ಸಂ. ]

ದಿವಿಜಗ್ಗಟವಲ್ಲಹ = ಒಂದು ಬಿರುದು: ಒಗಬಳ್ಳಿಯುಳಿಬಿದು ವಿಟ್ಟೋಂ ಗುಣಶೀಲರಾಣಿದ ಸೀ ×× ಪೊಟ್ಟರಾವ ಕೊಪಳಾಟ ಮಹೇಸ್ವರ ದಿವಿಜಗ್ಗಟವಲ್ಲಹ ಪೆಂಮಾಳ್ವಟ್ (ಎಕ. XVI, ತುಮಕೂ. ೯೧–೦೮; ಸು. 775). [ ಸಂ. ]

**ದಿವಿಜಕಲ್ಪಲತೆ** (ನಾ). [ಛಂದ] ಒಂದು ಅರ್ಧಸಮವೃತ್ತದ ಹೆಸರು: ಪಾವಕಾಮರಗಣಾನಲಂ ಲಗಂ ದಿವಿಜಚಂದ್ರಕುಮುದಾರಿ ಪಾವಕಂ ಭಾವಿಸುತ್ತುಮಿರೆ ಕೋಮಲಾಂಗಿಯೇ ದಿವಿಜ [ಪಾಠಾಂ. ಕೋಮಲೋಕ್ತಿ ಸಂಭವಿಸೆ] ಕಲ್ಪಲತೆಯಪ್ಪು ನಾಮದಿಂ (ಛಂದೋಂಬು. ೩–೨೦೮). [ ದಿವಿಜ + ಕಲ್ಪಲತೆ ]

**ದಿವಿಜಕಾಂತೆ** (ನಾ). ದೇವತಾಸ್ತ್ರೀ; ಅಪ್ಸರೆ: ಅವಯವಶೋಭೆಯಿಂ ದಿವಿಜಕಾಂತೆಯರಂ ಮಿಗುವೀ ವಿಲಾಸಿನೀನಿವಹದ ವಕ್ತ್ರದೊಳ್ಸರಸಿಜಂ . . . ನೇತ್ರದೊಳ್ ಕುವಳಯಮಲ್ತೆ ಮಚ್ಚರಿಸುತಿರ್ಪುವು (ಮಲ್ಲಿಪು. ೬–೯೨)

[ ದಿವಿಜ + ಕಾಂತೆ ]

**ದಿವಿಜಕುಜ** (ನಾ). (ಕೇಳಿದುದನ್ನು ನೀಡುವುದೆಂದು ನಂಬಲಾದ) ದೇವಲೋಕದ ವೃಕ್ಷ; ಕಲ್ಪವೃಕ್ಷ: ದಿವಿಜಕುಜಂಗಳಾರವೆಗಳಾದುವು ಸಿದ್ಧರಸಂ ತಟಾಕಮಾದುವು (ಶಂರಾಮಾ. ೩–೧೧೯); ದಿವಿಜಕುಜಂಗಳ್ ಪುಟ್ಟಿದುವು (ವರ್ಧಪು. ೬–೨೦); ದಿವಿಜಕುಜದೆಳ್ಗೆ ಕೀಳ್ಪಡೆ ಸುವಸ್ತ್ರಮಣಿಭೂಷಣಾಂಗಳಂ ಪದೆದಿತ್ತಂ (ರಾಜಶೇ. ೧೨–೯೯). [ ದಿವಿಜ + ಕುಜ ]

**ದಿವಿಜಕುಜಾತ** (ನಾ). = ದಿವಿಜಕುಜ: ಸಕಳಳಕ್ಷ್ಮೈಶ್ವರ್ಯದಿಂ ಲೋಕಮಂ ರಕ್ಷಿಸುತ್ತಿರ್ಕ್ಕ ಪೂರ್ಣ್ಣಚೇತೋರಥಯುತಂ ಕಮಳಾಕಲ್ಪವಲ್ಲೀವಿಳಾಸಾವಸಥಂ ಶ್ರೀವಿಷ್ಣುದಂಡಾಧಿಪ ದಿವಿಜಕುಜಾತಂ (ಎಕ. V, ಬೇಲೂರು. ೧೭–೨೭; 1136). [ ದಿವಿಜ + ಕುಜಾತ ]

**ದಿವಿಜಕ್ಷ್ಮಾಜ** (ನಾ). = ದಿವಿಜಕುಜ: ಪತಾಕಾನ್ವಿತಂಗಳ್ದಿವಿಜಕ್ಷ್ಮಾಜಪ್ರಸೂನಪ್ರಸರ ಸರಮುತಂಗಳ್ಸಹಾಪುಷ್ಪಕಂಗಳ್ (ರಾಜಶೇ. ೧೪–೧೧೬).

[ ದಿವಿಜ + ಕ್ಷ್ಮಾಜ ]

**ದಿವಿಜಖೇಟಕ** (ನಾ). = ದಿವಿಜಪುರ: ಸವವಯಸ ದಿವಿಜಖೇಟಕ ನವಪೇಟಕನೀಕರಮಗಲದಿರಲಬ್ಧಿಯ ಮೇರುವ ಕೆಲದ ಗಿರಿಕದಂಬಕದವಳ್ಳಿಯಂ ಪೋಲ್ವುದಾ ಕುಮಾರನ ಕೆಲದೊಳ್ (ಶಾಂತಿಪು. ೧೧–೮೧).

[ ದಿವಿಜ + ಖೇಟಕ ]

**ದಿವಿಜಗಜ** (ನಾ). ದೇವಲೋಕದ ಆನೆ; ಐರಾವತ: "ಐರಾವಣಮಭ್ರಮಾತಂಗಮೈರಾವತಮಭ್ರಮೂಪ್ರಿಯಂ ದಿವಿಜಗಜಂ" (ವಸ್ತುಕೋ. ೭–೩೭); ದಿವಿಜಗಜಂ ಸೆಟ್ಟರದಿಂದವೆಟ್ಟುದು (ಜಗವಿ. ೧೬–೧೩೮); ದಿವಿಜಗಜಾಗ್ರದೊಳಿರ್ದುಂ ಭುವನಾಗ್ರದೊಳಿರ್ದನೆನಿಸಿದಂ (ಚಂದ್ರಪು. ೧೨–೧೭೫).

[ ದಿವಿಜ + ಗಜ ]

ಕೊಳ್ಗಂ ಸುತ್ತಲುಂ ತೋಱದೊಡೆ ಜನಪಗಂ ನಾಡೆಯುಂ ಭೀತಿಯೆತ್ತಂ ಪಿರಿದಕ್ಕುಂ ಶಾಂತದೊಳ್ ತೋರ್ಪೊಡೆ ನೃಪತಿಜಯಂ ದೀಪ್ತದೊಳ್ ಭೂಪನಾಶಂ (ಲೋಕೋಪ. ೪-೪೦). 'ದೀಪ್ತದಿಕ್ಕು' (ಲೋಕೋಪ. ೮೬೫).

[ ಸಂ. ]

**ದೀಪ್ತತಪ** (ನಾ). [ಜೈನ] ಶರೀರದಲ್ಲಿ ಕಾಂತಿ ಹೆಚ್ಚುವಿಕೆ ; ತಪಸ್ಸಿನಿಂದ ಯೋಗಿಗಳಿಗೆ ಉಂಟಾಗುವ ಋದ್ಧಿಗಳಲ್ಲಿ ಒಂದು ; P ಇದರಿಂದ ಯೋಗಿಗೆ ಮನಸ್ಸು, ವಾಕ್ಕು, ಕಾಯಂಗಳು ಬಲಗೊಂಡು, ಸೂರ್ಯನಿಗೆ ಸಮಾನವಾದ ಪ್ರಕಾಶ, ಅಂದರೆ ಶರೀರಕಾಂತಿಯುಂಟಾಗುತ್ತದೆ: ಪೊಂಪುಟವೋಯ್ತು ದೀಪ್ತತಪಮೆಂಬಿನಮರ್ಕಕರಂಗಳತ್ತಮಿತ್ತಂ ಪುದಿದುಷ್ಣರಶ್ಮಿ ಪುರುಷಾಕೃತಿಯಂತಿರೆ . . . ತಂ[ದುದಂ]ದು ಬರ್ದೊಂ ಪರೆದಿರ್ದವೋಲ್ ಮುನಿಗೆ ಕಲ್ಮೆರೆ ಬಲ್ಮೆಲೆಯಂ ನಿದಾಘದೊಳ್ (ಶಾಂತಿಪು. ೯-೦೦೮) ; ಶರೀರದ ಕಾಂತಿ ಪೆರ್ಚುವುದುಂ ದೀಪ್ತತಪಮೆಂಬುದುಂ (ಶ್ರಾವಕಾ. ೯೪-೩೨).

[ ದೀಪ್ತ + ತಪ್ತ ]

**ದೀಪ್ತಶಿಖರ** (ನಾ). ಉರಿಯುವ ಶಿಖರ : ಅಪರಜಲಧಿಯೊಳುರಿವ ವಡಬನ ದೀಪ್ತಶಿಖರದೊಳಟಿಗುವಂತೆ ಪತಂಗಮಂಡಲಮಿಳಿದುದಂಬರವ (ಶುವ್ಯಾದ್ರೂ. ೩-೬೦). [ ದೀಪ್ತ + ಶಿಖರ ]

**ದೀಪ್ತಶಿಖೆ** (ನಾ). ಉರಿಯುವ ದೀಪದ ಕುಡಿ,-ಶಿಖೆ : ಮನುಷ್ಯತ್ವದ ಗಭೀರತಮ ಆಕಾಂಕ್ಷೆಯ ದೀಪ್ತಶಿಖೆಯ ಸಮ್ಮುಖದಲ್ಲಿ ಯಾವನನ್ನು ಅವನು ಅಂದು ಕಾಣುತ್ತಿರುವನೋ ಆತನು ನರೋತ್ತಮನು (ನಿಬಂಧ. I, ೪). [ ದೀಪ್ತ + ಶಿಖೆ ]

**ದೀಪ್ತಾಗಮ** (ನಾ).=ದೀಪ್ತ ೬ : ಮತ್ತಮಾ ಸಿದ್ಧಾಂತಭೇದಂಗಳಾವಾವವೆಂದೊಡೆ ಕಾಮಿಕಾಗಮ . . . ದೀಪ್ತಾಗಮ ಸೂಕ್ಷ್ಮಾಗಮ ವಾತೂಲಾಗಮವೆಂಬವಿಪ್ಪತ್ತೆಂಟು ದಿವ್ಯಾಗಮಂಗಳಕ್ಕು (ವಿವೇಕ. ೬೮). 'ಕಾಮಿಕಾಗಮ' ಪರಾ. [ ದೀಪ್ತ + ಆಗಮ ]

**ದೀಪ್ತಿ** (ನಾ). ೧. ಪ್ರಕಾಶ ; ಬೆಳಕು ; ಹೊಳಪು ; ಕಾಂತಿ : "ವರ್ಚಃ . . . ದೀಪ್ತಿಃ . . . ಪ್ರಭಾ, ರಶ್ಮಿಃ – ಈ ೧೧ ದೀಪ್ತಿ" (ಹಲಾಯು. ೧೨-೬೩) ; ವಿನಮ್ರುಕ್ಷಿತಿಚಕ್ರಂ ದೀಪದೀಪ್ತಿಪ್ರತಿಹತದಿನಕೃಚ್ಚಕ್ರ ತೀವ್ರಾಂಶುಚಕ್ರಂ . . . ಇರ್ದತ್ತೊಳಪುಗದೆ ಪುರೋಪಾಂತದೊಳ್ ಚಕ್ರರತ್ನಂ (ಆದಿಪು. ೦೪-೩) ; ನುಡಿದರೆ ಮುತ್ತಿನ ಹಾರದಂತಿರಬೇಕು ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು (ಬಸವ. ೮೦೨) ; ದೀಪಕ್ಕೆ ದೀಪ್ತಿಗೆ ಭೇದವುಂಟೇ ಅಯ್ಯಾ (ಮಹಾದೇ. ಬ. ೬೩-೧೪೧) ; ದೀಪ್ತಿಯುನುಳಿದುವು ಭಗಣಂ ಸುಪ್ತಜನಂ ನಿದ್ರೆದಿಳಿದುದಿದೆ ಕೋಕಂ ತನ್ನಾಪ್ತನನಱಸುತ್ತಿರುಳ ಸಮಾಪ್ತಿ ಕರಂ ಹತ್ತೆ ಸಾರ್ದುದು (ಗಿರಿಜಾ. ೪-೧೬೦). ೨. ದೀವಿಗೆ; ದೀಪ: "ಆ ದೀವಿಗೆ ಜ್ಯೋತಿ ದೀಪ್ತಿ ಗೃಹಭಾನುವಕ್ಕು" (ಮಂಗರಾ. ೬೦-೦೮) ; ಜೀವಂ ತೊಲಗಿದೊಡಲಿಂಗೆ ತೈಲವಿಂಗಿದ ದೀಪ್ತಿಗುದಕವಱತ ಘನತಟಾಕಕ್ಕೆ . . . ನೆಟ್ಟನೆ ಜೋಡಿಯಾದುದಾ ಪುರಜನಂ ಪರಿಜನಂ ಜನಪತಿ ಹರಿಶ್ಚಂದ್ರನೆಲ್ಲವಂ ಮುನಿಗಿತ್ತರಣ್ಯಕ್ಕೆ ನಡೆವಾಗಲು (ಹರಿಶ್ಚ. ೯-೨೪). ೩. ಕಿರಣ ; ಕದಿರು ; ರಶ್ಮಿ: "ಕರಮುಸ್ರಮಂಶು...ದೀಪ್ತಿ ಘೃಷ್ಟಿ...ಪ್ರದ್ಯೋತಮಾ ರಶ್ಮಿ" (ಮಂಗರಾ. ೦೦-೩) : ದಿನಕರನುದಯಿಸಲೊಡಮೇಂ ದಿನದೀಪ್ತಿಗಳೊಡನೆ ಬಾದು ನೆಲೆಸುವವೊಲ್ ಪ್ರಾಕ್ತನ ಜನ್ಮವಿದ್ಯೆಗಳ್ ಬಂದನಿತುಂ ನೆಲಸಿದವು ಸಕಲ ವಿದ್ಯಾನಿಧಿಯೊಳ್ (ಅಜಿಪು. ೩-೬೮). ೪. (ಸೆಳೆದಂ ಬಿಟ್ಟ ಬಾಣದ) ವೇಗ,-ತೀವ್ರತೆ : "ದೀಪ್ತಿಃ, ವೇಗಃ, ತೀವ್ರತಾ – ಈ ೩ ಅಂಬಿನ ವೇಗಂ" (ಹಲಾಯು. ೬೬-೩೦೬) : "ಅಂಬುಗಳ ವೇಗಮದು ದೀಪ್ತಿಯೆನಿಕುಂ" (ಮಂಗರಾ. ೮೬-೩೩) : ಪ್ರಾಪ್ತರ ಕಳುಹಲೆದ್ದನು ತಾಯ ಮನೆಗತಿ ದೀಪ್ತಿಯೊಳಾ[ಪಾಠಾಂ. ದೀಪ್ತದೊಳಾ] ನಮಿರಾಜ (ಧರಜ. ೩೬-೪೨). ೫. ಆಕಾಶದಿಂದ ಕೆಳಗೆ ಬೀಳುವ ತೇಜಃಪುಂಜ ವಸ್ತು ; ಉಲ್ಕೆ : (ಕ). ೬. [ಕಾವ್ಯಮೀ] ಸಹೃದಯನ ಮನಸ್ಸಿನಲ್ಲಿ ಉಂಟಾಗುವ ಭಾವವಿಸ್ತಾರ,-ವ್ಯಾಪಕತೆ,-ಭಾವತೀವ್ರತೆ,-ಭಾವೋದ್ರೇಕ: ಕಾವ್ಯದಲ್ಲಿರುವ 'ರೌದ್ರ' ಮೊದಲಾದ ರಸಗಳು ದೀಪ್ತಿಯನ್ನು ಹೆಚ್ಚಾಗಿ ಉಂಟು ಮಾಡುತ್ತವೆ (ಧ್ವನ್ಯಾಲೋ. ೬೧): ಸಹೃದಯನ ಮನಸ್ಸಿನ ವಿಕಾಸ, ವಿಸ್ತಾರ, ಉಜ್ವಲತೆಗಳು ದೀಪ್ತಿಯೆನಿಸುತ್ತವೆ (ಧ್ವನ್ಯಾಲೋ. ೬೧ ಅಡಿಟಿ).

[ ಸಂ. ]

**ದೀಪ್ತಿಕೆ** (ನಾ). ದೀವಿಗೆ; ದೀಪ : ಗೃಹಸಮುಚಿತದೊಳ್ ತೊಳಗಿ ಬೆಳಗಿದುವು ದೀಪ್ತಿಕೆಗಳ್ (ಸೂಕ್ತಿಸು. ೮-೦೯೩). [ ಸಂ. ದೀಪ್ತಿಕಾ ]

**ದೀಪ್ತಿದಾನಂಗೆಯ್** (ಕ್ರಿ). ಬೆಳಕನ್ನು ನೀಡು,-ಕೊಡು: ದೀಪವಿನ್ನೊಂದು ದೀಪಕೆ ದೀಪ್ತಿದಾನಂಗೆಯ್ವುದೆನೆ (ಶ್ರೀರಾಮಾ. ೩೮೯-೦೪೯).

[ ದೀಪ್ತಿ + ದಾನ + ಕೆಯ್$_1$ ]

**ದೀಪ್ತಿನ್ಯಾಯ** (ನಾ). ಒಂದು ಬಗೆಯ ನ್ಯಾಯ ; P ನಾಟಕದಲ್ಲಿ ಶೃಂಗಾರಾದಿ ರಸಗಳನ್ನು ಉದ್ದೀಪನ (ಪರಿಪೋಷ)ಗೊಳಿಸುವ ವಸಂತಋತು, ಚಂದ್ರೋದಯ ಮೊದಲಾದ ಉದ್ದೀಪನ ವಿಭಾವಗಳಂತೆ ಒಂದು ವಿಷಯವನ್ನು ಉದ್ದೀಪಿಸುವ ನ್ಯಾಯ : ಆಯಿತೆಮ್ಮವತಾರವೀ ರಾಮಾಯಣದ ನಾಟಕಕೆ ದೀಪ್ತಿನ್ಯಾಯದವೊಲ್ (ತೊರರಾ. ೦-೦೬-೧೬). [ ದೀಪ್ತಿ + ನ್ಯಾಯ ]

**ದೀಪ್ತಿಮಂತ** (ಗು). ಕಾಂತಿಯಿಂದೊಡಗೂಡಿದ; ಪ್ರಜ್ವಲಿಸುವ : ಅವನ ದೀಪ್ತಿಮಂತವಾದ ಮಿಂಚಿನಂಥ ಆತ್ಮವನ್ನು ನನ್ನಲ್ಲಿ ಹಿಡಿದಿಡುವುದು ಶಕ್ಯವೇ (ಮುಕ್ತಿ. ೯). [ ಸಂ. ದೀಪ್ತಿಮತ್ ]

**ದೀಪ್ತೌಷಧಿ** (ನಾ). ತೀಕ್ಷ್ಣವಾದ ಔಷಧಿ ; ಹೆಚ್ಚು ಪರಿಣಾಮನ್ನುಂಟುಮಾಡುವ ಔಷಧಿ : ಆ ಪ್ರಸ್ತಾವದೊಳ್ ಫಲಪಾಕವಿರಾಮಂಗಳಪ್ಪ ಗರ್ಭಷಷ್ಠಿವ್ರೀಹಿಯವಗೋಧೂಮಾದಿ ಮಹೌಷಧಿಗಳುಂ ತಿಲಾತಸೀ ಕುಸುಂಭಾದಿ ದೀಪ್ತೌ[ಪಾಠಾಂ. ಪ್ರೌ]ಷಧಿಗಳುಂ ಯಾವನಾಳ ಕಂಗು ಕೋದ್ರವಾದಿ ಸರ್ವೌಷಧಿಗಳುಂ (ಆದಿಪು. ೮-೬೧ ವ). [ ದೀಪ್ತ + ಔಷಧಿ ]

**ದೀಪ್ಯ** (ನಾ). ೧. ನೀರುಹಿಪ್ಪಲಿ. ೨. ಓಮ : ವಾದಕ್ಕಿ. ೩. ಜೀರಿಗೆ.

[ ಸಂ. ]

**ದೀಪ್ರ** (ಗು). ೧. ಹೊಳೆಯುವ ; ಪ್ರಕಾಶಿಸುವ : ಧೂಪ ಧೂಮಾಮೋದಿತಾಭ್ಯಂತರದೊಳಲಘುತರ ವಿಳಸದರುಣಮಣಿ ದೀಪ್ರ ದೀಪಾಂಕುರದೊಳಮರನರವಿಮಾನಾಪಹಾಸವಾಸಗೃಹದೊಳ್ . . . ಆತ್ಮೀಯ ಪ್ರಾಣೇಶ್ವರಿ ಸಹಿತಂ ಸುಖಸುಪ್ತನಾಗಿ (ವರ್ಧಮಾ. ೫-೨ ವ). ೨. ತೀವ್ರವಾದ ; ಉಜ್ವಲವಾದ : ಹರಿ ಹರ ಹಿರಣ್ಯಗರ್ಭರನುರವಣೆಯಿಂ ಗೆಲ್ದ ಕಾಮನಂ ದೀಪ್ರತಪೋಭರದಿಂದುರಿಪಿದರೆನೆ ಬಿತ್ತರಿಸದರಾರ್ ವೀರಣಂದಿ ಸೈದ್ಧಾಂತಿಕರಂ (ಶಂಂರಾಮಾ. ೧-೨೬) : ದೀಪ್ರಸುವರ್ಣವಪ್ರವಿಪುಳಪ್ರಭೆಗಳ್ ಬಳೆದುಂಟುಮಾಡೆ ಸೂರ್ಯಪ್ರಭೆಯುಕ್ಕಿದುಕ್ಕನಿರುಳುಂ ಪಗಲುಂ . . . ಶುಭ್ರಸೌಧ ಪ್ರಭೆಗಳ್ ಶಶಿಪ್ರಭೆಯ ಮಾಡಿದ ಮಾಟಮನುಂಟುಮಾಡೆ (ಅರ್ಧನೇ. ೨-೬೯). (ನಾ). ೩. ಪ್ರಕಾಶಮಾನವಾದಂದು ; ಕಾಂತಿಯುತವಾದಂದು : ಪರಿಖಾತ್ರಿತಯಕ್ಕೆ ಚತುಶ್ಶರಾಸನಾಂತರದ ಸುರಶರಾಸನಭಾಭಾಸುರಮೊಪ್ಪೆ ತೋಱುಗುಂ ಪಂಚರತ್ನಪಾಂಶೂಚ್ಚದೀಪ್ತಿದೀಪ್ರಂ ವಪ್ರಂ (ಆದಿಪು. ೬-೦೦೩). ೪. ಬೆಂಕಿ ; ಅಗ್ನಿ. [ ಸಂ. ]

**ದೀರ್ಕ** (ನಾ). ಒಂದು ಬಗೆಯ ಹಣ್ಣು : ಹಲಸಿನಹಣ್ಣೋ ದೀರ್ಕನ ಹಣ್ಣೋ ಮಾವಿನಹಣ್ಣೋ ಕಲ್ಲುಸಂಪಿಗೆಹಣ್ಣೋ ಕುಯ್ಯುವುದು, ಉರುಳು ಒಡ್ಡಿ ಹುಂಡುಕೋಳಿ . . . ಹಿಡಿಯುವುದು, ಮೊದಲಾದ . . . ಸಾಹಸಗಳಲ್ಲಿ ತಿಮ್ಮಪ್ಪ ಅಣ್ಣನೊಡನೆ ಭಾಗಿಯಾಗಿ ಸಂತೋಷಪಟ್ಟಿದ್ದನು (ಮಲೆಪು. ೫೬೩). [ ? ]

**ದೀರ್ಘ** (ಗು). ೧. ಉದ್ದವಾದ ; ನೀಳವಾದ. 'ದೀರ್ಘಕೇಶ' ಪರಾ. (ನಾ). ೨. ನೀಳವಾದುದು ; ಉದ್ದವಾದುದು ; ಲಂಬವಾದುದು : "ಸಮುದಗ್ರಮುನ್ನತಂ ತುಂಗಮುಚ್ಛ್ರಿತಂ ಪ್ರಾಂಶು ದೀರ್ಘಮುಚ್ಚಂ" (ಮಮ್ಮಕೋ. ೧೧೪-೩೭) : "ದೀರ್ಘಮಾಯತಂ ನೀಳಕ್ಕೆ ಪೆಸರೆನಿಕ್ಕುಂ" (ಕುಂಗರಾ. ೧೪೩-೨೪). ೩. [ವ್ಯಾಕ] ಉಚ್ಚಾರಣೆಗೆ ಎರಡು ಹ್ರಸ್ವಾಕ್ಷರಗಳಷ್ಟು ಕಾಲವನ್ನು ತೆಗೆದುಕೊಳ್ಳುವ ಸ್ವರ ಮತ್ತು ಅಂಥ ಸ್ವರ ಸಹಿತವಾದ ವ್ಯಂಜನ : ಗಜ ದೀರ್ಘಂ ಬಿಂದು ವೃಷಭ ವಂ{ವ್ಯಂ} ಜನ ಶರಭಂ (ಛಂದೋಬು. ೦-೪೭ ಅಧಿಲ) ; ಸ್ವರ ಸಂಜ್ಞೆಕಂಗಳಮದೊಂದಿರೆ ಮುಂದೆ ವಿಕಲ್ಪದಿಂ ದ್ವಿತೀಯೆಗೆ ದೀರ್ಘಂ ದೊರೆಕೊಳ್ಗುಮೆಲ್ಲಿಯುಮಂ ಪುರಾತನೋಕ್ತಿಗಳಂತದಲ್ಲಿ ಯಥೇಷ್ಟಂ (ಕಾವ್ಯಾವ. ೧೩೪) : . ಕ್ರಮದಿಂ ಹ್ರಸ್ವಕ್ಕಂ ಹ್ರಸ್ವಮೊದವೆ ದೀರ್ಘಕ್ಕೆ ದೀರ್ಘವೊದವೆ ತಗುಳ್ಗುಂ ಸಮಸಂದಾ ಯುಗಳಂಗಳೊಳ್ . . . ಸವರ್ಣವಿಧಾನಂ (ಶಮದ. ೭) ; ವಿದಿತ ಸಮಾನಂಗಳ ಪೂರ್ವದಕ್ಕರಂ ಹ್ರಸ್ವಮದಱ ಪರದಕ್ಕರಮಂತದು ದೀರ್ಘಂ (ಶಮದ. ೯): ಸ್ವರಗಳಲ್ಲಿ ಹ್ರಸ್ವವೆಂದೂ, ದೀರ್ಘವೆಂದೂ ಎರಡು ವಿಧ (ಕಣ್ವಾ.ದ. ೧). ೪. [ಛಂದ] ಉಚ್ಚಾರಣೆಯಲ್ಲಿ ಎರಡು ಮಾತ್ರೆಗಳ ಕಾಲವನ್ನು ತೆಗೆದುಕೊಳ್ಳುವ ಅಕ್ಷರ ; ಗುರು (-) : ಉಚ್ಚಾರಣೆಯಲ್ಲಿ ಎರಡು ಮಾತ್ರಾಕಾಲ ತಗಲುವಂಥದು ದೀರ್ಘ (ಸಂಕೋಛ. ೦೦೩). ೫. [ಸಂಗೀತ] ಇಪ್ಪತ್ತೆರಡು ವಿಧವಾದ ಶ್ರುತಿಗಮಕಗಳಲ್ಲಿ ಒಂದು: ಸ್ಫುರಿತ ಪ್ರಮಿತ ದೀರ್ಘ ಲಲಿತ . . . ಕೋಮಲಮೆಂಬ ಇಪ್ಪತ್ತೆರಡೇ ಶ್ರುತಿಗಮಕಗಳೆಂತಲುಂ (ವಿವೇಶ. ೨೪೮). 'ಶ್ರುತಿ' ಪರಾ. ೬. [ಸಂಗೀತ] (?) : ಆ ರಾಗಂಗಳಂ ಪಾಡುವಲ್ಲಿ ಗ್ರಾಮವರ್ಜ್ಯಂಗಳಂ ತೋಱಿದು ಜನ್ಯಜನಕಂಗಳಂ ಬಳ್ಳಿಗೊಳಿಸಿ . . . ಮಂದ್ರ ಮಧ್ಯ ವೇಗ ಕುಂಚನ ಉಚ್ಚರಾನನ ಸ್ತಂಭನ ದೀರ್ಘಭೇದಗಳಿಂ ರವವಿಕಲ್ಪಗಳಂ ತೋಱಿ (ವಿವೇಶ. ೨೩೨).

**ದೀರ್ಘವಾಗು** = ದೊಡ್ಡದಾಗು ; ಉದ್ದವಾಗು : ಸೂರ್ಯೋದಯದಿಂದ ಸೂರ್ಯಾಸ್ತಮದವರೆಗೆ ಕಾಲಮಾನ ಕೆಲವು ತಿಂಗಳು ಕಡಮೆ ಕೆಲವು ತಿಂಗಳು ದೀರ್ಘವಾಗಿ ಇರುವುದಕ್ಕೆ ಈ ಓರೆಯೇ ಕಾರಣ (ಆಕಾಶ. ೧೭) ; ಆವರ ಉಪನ್ಯಾಸವು ದೀರ್ಘವಾಗಿತ್ತು, ಆದರೆ ಸ್ವಾರಸ್ಯವಾಗಿರಲಿಲ್ಲ (ರೂಢಿ). [ ಸಂ. ]

**ದೀರ್ಘಕಂಠ** (ನಾ). ೧. ಉದ್ದವಾದ ಕುತ್ತಿಗೆಯುಳ್ಳುದು. ೨. ಬಕ. ೩. ಜಿರಾಫೆ ಎಂಬ ಹೆಸರಿನ ನಕ್ಷತ್ರರಾಶಿ : ಧ್ರುವನಕ್ಷತ್ರಕ್ಕೂ ವಿಜಯ ಸಾರಥಿಗೂ ಮಧ್ಯೆ ಇರುವ ಕ್ಷೀಣಕಾಂತಿ ನಕ್ಷತ್ರಗಳ ರಾಶಿಯು ಕಮೆಲೊಪಾರ್ಡಲಿಸ್ ಅಂದರೆ ಜಿರಾಫೆ. ಇದನ್ನು ನಾವು ದೀರ್ಘಕಂಠನೆಂದು ಗುರುತಿಸಿದ್ದೇವೆ (ನಕ್ಷತ್ರ. ೩೦). [ ದೀರ್ಘ + ಕಂಠ ]

**ದೀರ್ಘಕರ** (ನಾ). ೧. ಉದ್ದವಾದ ತೋಳು; ಆಜಾನುಬಾಹುವಾದ ಕೈ. ೨. ನೀಳವಾದ ಸೊಂಡಿಲು. ೧, ೨ : ನಿಜಾಭ್ಯುದಯನಿವೇದದೀರ್ಘಕರವೊಪ್ಪೆ ಜಗತ್ಪ್ರಿಯನಾದ ದೇವನಂಕದ ಗಣನಾಯಕಂ (ಗದಾಯು. ೧-೧೧). [ ದೀರ್ಘ + ಕರ$_3$ ]

**ದೀರ್ಘಕಾಲ** (ನಾ). ಬಹಳ ಕಾಲ ; ಹೆಚ್ಚು ಕಾಲ : ಪುರೂಥಮೆಂಬುದು ದೀರ್ಘಕಾಲಪ್ರವೃತ್ತಮುಮನಾದ್ಯನಿಧನಮುಪ್ಪ ಧರ್ಮಂ (ಚಾವುಂಪು. ೭): ಲೋಕವ್ಯಾಪಾರವೆಲ್ಲ ತನ್ನ ಪಾಲಿಗೆ ಸ್ತಬ್ಧವಾಯಿತೇನೋ ಎಂಬಂತೆ ದೀರ್ಘಕಾಲ ಅವ್ವಿ ಮಲಗಿದ್ದಳು (ಬನಶಂ. ೧೯೮).

[ ದೀರ್ಘ + ಕಾಲ ]

**ದೀರ್ಘಕಾಲಿಕ** (ಗು). ಹೆಚ್ಚು ಕಾಲದವರೆಗೆ ಇರುವ ; ಬಹಳ ಕಾಲದ: ದೀರ್ಘಕಾಲಿಕ ಯೋಜನೆಗೆ ಹೆಚ್ಚು ಹಣವನ್ನು ನಿರೀಕ್ಷಿಸಬಹುದು (ರೂಢಿ). [ ಸಂ. ]

**ದೀರ್ಘಕೇಶ** (ನಾ). ೧. ಉದ್ದವಾದ ಕೂದಲು : ಗೂಢಸರು ದೀರ್ಘಕೇಶವನ್ನು ಹಿಂದೆ ಗಂಟುಹಾಕಿ ಪಟ್ಟವನ್ನು ಸುತ್ತಿಕೊಳ್ಳುತ್ತಿದ್ದರು (ಭಾರದ. ೦೩). ೨. ಉದ್ದವಾದ ಕೂದಲನ್ನುಳ್ಳುದು : ಸ್ನಿಗ್ಧಕೃಷ್ಣಬಹುಲದೀರ್ಘಕೇಶನುಂ . . . ಸಪ್ತದ್ವ್ಯಾಪ್ತಿ ತನೂಮುಪ್ಪ ವಿಜಯ ಪರ್ವತಗಜೇಂದ್ರಂ ಬಂದು ಮುಂದೆ ನಿಲ್ವುದುಂ (ಆದಿಪು. ೦೨-೫೬ ವ).

[ ದೀರ್ಘ + ಕೇಶ ]

**ದೀರ್ಘಕೇಶಿ** (ನಾ). ಉದ್ದವಾದ ಕೂದಲುಳ್ಳವನು : ಹಿಪ್ಪಿಗಳು ದೀರ್ಘಕೇಶಿಗಳು (ರೂಢಿ). [ ಸಂ. ದೀರ್ಘಕೇಶಿನ್ ]

**ದೀರ್ಘಕೋಶಿ** (ನಾ). = ದೀರ್ಘಕೋಶಿಕೆ. [ ಸಂ. ದೀರ್ಘಕೋಶೀ ]

**ದೀರ್ಘಕೋಶಿಕೆ** (ನಾ). ಒಂದು ಬಗೆಯ ದೊಡ್ಡ ಜಿಗಣೆ: "ದುರ್ನಾಮಾ, ದೀರ್ಘಕೋಶಿಕಾ—೨ ಆನೆಗಳ ರಕ್ತವನ್ನು ಹೀರಲುಳ್ಳ ದೊಡ್ಡ ಜಿಗಣೆ ಪೆಸರು. ಅಂದರೆ ಹೆಜ್ಜಿಗಣೆ" (ನಿಘ್ಯಾಂತಿ. ೮೪). [ ಸಂ. ದೀರ್ಘಕೋಶಿಕಾ ]

**ದೀರ್ಘಗೊಳಿಸು** (ಕ್ರಿ). ೧. ಉದ್ದವಾಗುವಂತೆ ಮಾಡು; ವಿಸ್ತರಿಸು; ಬೆಳಸು : ಈ ವಿಷಯದಲ್ಲಿ ಕಾಲವನ್ನು ದೀರ್ಘಗೊಳಿಸುವುದು ತರವಲ್ಲ (ರೂಢಿ). ೨. [ಛಂದ] ಅಕ್ಷರವನ್ನು ಎರಡುಮಾತ್ರೆಗಳ ಕಾಲಕ್ಕೆ ಅಳವಡಿಸು,—ಗುರುವನ್ನಾಗಿ ಮಾಡು : ಎರಡನೆಯ ಸಾಲಿನಲ್ಲಿ "ಸಿಡಿಲು" ಎಂಬುದಕ್ಕೂ ಇದೇ ನಾಲ್ಕುಮಾತ್ರೆಯ ಕಾಲ; ಇಲ್ಲಿಯ ಮೂರು ಲಘುಗಳಲ್ಲಿ ಯಾವುದನ್ನು ಅರ್ಥ ಕೆಡದಂತೆ ದೀರ್ಘಗೊಳಿಸುವುದು ? (ಸಮೀಕ್ಷೆ. ೨೧೭). [ ದೀರ್ಘ + ಕೊಳ್$_1$ + -ಇಸು$_3$ ]

**ದೀರ್ಘಜೀವಿ** (ನಾ). ಬಹಳ ಕಾಲ ಜೀವಿಸುವಂತಹುದು ; ಚಿರಂಜೀವಿ: ತುರಗದ ಕಿವಿಯಂ ಪಾಲಿಸಿ ಸುರಗೋಪಚ್ಛಾಯೆಯಿಂದಮರುಣಜಲಂ ಪಾಯ್ತುರುತಿರೆ ದೀರ್ಘಜೀವಿ ನೆತ್ತರ್ ಸುರಿಯದ ಕಿವಿಯಿಂದಮಲ್ಲ ಜೀವಿತನಕ್ಕುಂ (ಅಶ್ವಶಾ. ೩-೨೩). [ ದೀರ್ಘ + ಜೀವಿ$_1$ ]

**ದೀರ್ಘತಮವೃತ್ತ** (ನಾ). [ರೇಖಾಗ] ಒಂದು ಶಂಕುವನ್ನು ಅದರ ಆಧಾರಕ್ಷೇತ್ರಕ್ಕೂ ಮೈಗೂ ಇರುವ ಕೋನಕ್ಕಿಂತ ಹೆಚ್ಚಾದ ಕೋನದಲ್ಲಿ ಒಂದು ಸಮಕ್ಷೇತ್ರದಿಂದ ಕತ್ತರಿಸಿದರೆ ಉಂಟಾಗುವ ವಕ್ರರೇಖೆ : ಬೈಸಿಕಲ್ ಲಾಂದ್ರದಿಂದ ನೆಲದ ಮೇಲೆ ಬಿದ್ದಿರುವ ಬೆಳಕಿನ ಪರಿಧಿಯು ದೀರ್ಘತಮವೃತ್ತಕ್ಕೆ ಉದಾಹರಣೆ (ಭೌತವಿ. ೩೫).

[ ದೀರ್ಘತಮ$_3$ + ವೃತ್ತ ]

**ದೀರ್ಘತರವೃತ್ತ** (ನಾ). [ರೇಖಾಗ] ಶಂಕುವಿನ (ಓರೆಯ) ಪಕ್ಕಕ್ಕೆ ಸಮಾನಾಂತರವುಳ್ಳ ಯಾವುದಾದರೊಂದು ಸಮತಲಕ್ಷೇತ್ರದಿಂದ ಆ ಶಂಕುವನ್ನು ಕತ್ತರಿಸಿದರೆ ಆಗುವ ಸಮತಲ ವಕ್ರರೇಖೆ : ಪರವಲಯ : ಒಂದು ಕಲ್ಲನ್ನು ಓರೆಯಾಗಿ ಮೇಲಕ್ಕೆಸೆದರೆ ಅದರ ಪಥವು ದೀರ್ಘತರವೃತ್ತವಾಗಿರುವುದು (ಭೌತವಿ. ೩೫). [ ದೀರ್ಘತರ$_3$ + ವೃತ್ತ ]

**ದೀರ್ಘತುಂಡಿ** (ನಾ). ೧. ಉದ್ದವಾದ ಮೂತಿಯುಳ್ಳುದು; ನೀಳವಾದ ಮುಖವುಳ್ಳುದು. ೨. ಸೊಂಡಿಲಿ. [ ಸಂ. ದೀರ್ಘತುಂಡೀ ]

**ದೀರ್ಘತೆ** (ನಾ). ಉದ್ದವಾಗಿರುವಿಕೆ ; ನೀಳವಾಗಿರುವಿಕೆ.

[ ಸಂ. ದೀರ್ಘತಾ ]

**ದೀರ್ಘತ್ರಿಭುಜ** (ನಾ). [ರೇಖಾಗ] ಸಮದ್ವಿಭುಜ ತ್ರಿಭುಜ: ಇದ್ದೆಸೆಯ ಭುಜವು ಸಮವಿರೆ ಮಧ್ಯಮ ತಾನಳಿದು ಉಳಿದ ಭುಜವೊಂದನು ಮಾನ್ಯದೆಣಿಸಿ ಗುಣಿಸಲುಂ ಕಂಬವು ನಿರ್ಧರದಿಂ ದೀರ್ಘತ್ರಿಭುಜಗಳ್ಕುಂ ನಿರುತಂ (ಕ್ಷೇತ್ರಗ. ೦೨-೧೧). [ ದೀರ್ಘ + ತ್ರಿಭುಜ ]

**ದೀರ್ಘದಂಡಪ್ರಣಾಮ** (ನಾ). (ಕೋಲಿನಂತೆ) ಉದ್ದವಾಗಿ ಭೂಮಿಯ ಮೇಲೆ ಮಲಗಿ ಮಾಡುವ ನಮಸ್ಕಾರ ; ಸಾಷ್ಟಾಂಗ ನಮಸ್ಕಾರ : ಶೀನಪ್ಪನಾಯಕ ದೀರ್ಘದಂಡಪ್ರಣಾಮಗಳನ್ನು ಮಹಾಪ್ರಭುಗಳಿಗೆ ಅರ್ಪಿಸಿ . . . ಹೊರಬಿದ್ದ (ಹೇಮುಕೊ. ೧೭). [ ದೀರ್ಘ + ದಂಡಪ್ರಣಾಮ ]

**ದೀರ್ಘದರ್ಶಿ** (ನಾ). ೧. ಮುಂದಾಲೋಚನೆಯುಳ್ಳವನು. ೨. ಭೂತ ಮತ್ತು ಭವಿಷ್ಯತ್ತನ್ನು ಕುರಿತು ಯೋಚಿಸುವವನು; ಹಿಂದು ಮುಂದಂ ಕುರಿತು ಆಲೋಚಿಸುವವನು: ರಾಜರ್ಷಿಯಾ ದೀರ್ಘದರ್ಶಿಯಾ ಸಮದರ್ಶಿ ತಾಂ ಸಮಬುದ್ಧಿಯಿಂ ದರ್ಪದಿಂ ಪಾಲಿಸಿರ್ದನು ರಾಜ್ಯಮಂ (ಶ್ರೀರಾಮಾ. ೬-೦೭೯). ೩. ವಿವೇಕಿ; ಬುದ್ಧಿವಂತ. [ ಸಂ. ದೀರ್ಘದರ್ಶಿನ್ ]

**ದೀರ್ಘದರ್ಶಿನಿ** (ನಾ). ಮುಂಬರುವುದನ್ನು ಕುರಿತು ಆಲೋಚಿಸುವವಳು; ಮುಂದಾಲೋಚನೆಯುಳ್ಳವಳು: ಮೂರ್ಛೆವೋದತ್ತಿಗೆಯ ನೋಡಿ ಸೌಮಿತ್ರಿ "ಅಗ್ರಜನೆ, ದೀರ್ಘದರ್ಶಿನಿ ದಿಟಂ ಆ ಕೈಕೆ!" ಎಂದಾರ್ಭಟಿಸಿ ಬಾಣಮಂ ಪೂಡಿ ರಯುವನೆಚ್ಚನ್ ರಾಕ್ಷಸಾಕೃತಿಗೆ (ಶ್ರೀರಾಮಾ. ೦೮೦-೦೯೭). [ ಸಂ. ದೀರ್ಘದರ್ಶಿನೀ ]

**ದೀರ್ಘದೃಷ್ಟಿ** (ನಾ). ೧. ಮುಂದಾಲೋಚನೆ; ದೂರದೃಷ್ಟಿ. ೨. ವಿವೇಕ; ಮುಂಜಾಗ್ರತೆ. ೩. ಮುಂದೆ ನಡೆಯುವುದನ್ನು ತಿಳಿಯುವ ಶಕ್ತಿಯುಳ್ಳವನು; ದೂರದೃಷ್ಟಿಯುಳ್ಳವನು: "ಮುಂದರಿವವನಂ ದೀರ್ಘದೃಷ್ಟಿಯೆಂಬುದು" (ಹಲಾಯು. ೬೩-೨೨೦); "ದೀರ್ಘದೃಷ್ಟಿಯೆನೆ ಮುಂದರಿವವಂ" (ಮಂಗರಾ. ೬೦-೦೯); ಪ್ರಜೆಗಳು . . . ಬಿರುಗಣ್ಣಳ ದೀರ್ಘದೃಷ್ಟಿಯಿಂದೀಕ್ಷಿಸುತ್ತ (ಸುಗುಗಂ. ೮೩-೩). 'ದೀರ್ಘದರ್ಶಿ' ಪರಾ. [ ದೀರ್ಘ + ದೃಷ್ಟಿ ]

**ದೀರ್ಘದೇಹಿ** (ನಾ). ೧. ದೊಡ್ಡ ಶರೀರವುಳ್ಳವನು; ಗಾತ್ರವಾಗಿರುವವನು; ಮಹಾಕಾಯ: ರಕ್ಕಸರನಿಬರೆಲ್ಲರುಂ ದೀರ್ಘದೇಹಿಗಳ್ಕೆಕ್ಕಸದ ಕೋಪಿಗಳ್ (ಕೃಮಿಥಾ. ೦೬-೨೨). ೨. ಹೆಗ್ಗಣ: "ದೀರ್ಘದೇಹೀ, ಮೂಷಿಕಾ-೨ ಹೆಗ್ಗಣಗಳ ಹೆಸರು" (ಸಿದ್ಧಾಂತಿ. ೦೩೭). [ ಸಂ. ದೀರ್ಘದೇಹಿನ್ ]

**ದೀರ್ಘದ್ವೇಷ** (ನಾ). ಬಹಳ ಕಾಲದಿಂದಿರುವ ವೈರ; ಬದ್ಧವೈರ: ದೀರ್ಘದ್ವೇಷವಂ ಮಾಡಲಾಗದು (ವಿವೇಕ. ೦೩೦); ದೀರ್ಘದ್ವೇಷವು ನಮ್ಮ ಹಳ್ಳಿಯವರಿಗೆ ಸ್ವಲ್ಪವೂ ಬೇಕಾಗಿರಲಿಲ್ಲ (ಹುಟ್ಟಿಹ. ೮೦). [ ದೀರ್ಘ + ದ್ವೇಷ ]

**ದೀರ್ಘದ್ವೇಷಿ** (ನಾ). ಬಹಳ ಕಾಲದಿಂದ ವೈರವುಳ್ಳವನು; ಬದ್ಧವೈರಿ. [ ಸಂ. ದೀರ್ಘದ್ವೇಷಿನ್ ]

**ದೀರ್ಘಧನು** (ನಾ). ಉದ್ದವಾದ ಬಿಲ್ಲು: ವೀರರುಂ ಕಿಬ್ಬಿಯ ನಡು ಕೊಬ್ಬಿದ ಪೆಗಲು ಪಿಡಿದ ಕೂರಂಬು ದೀರ್ಘಧನುವೆರಸಿ ನೆರೆದುದಂ ಕಾನನಾರಿಗಳೆನಿಪ್ಪ ಶಬರಾಧಿಪರು (ಹಚಕಾ. ೫-೨). [ ದೀರ್ಘ + ಧನು ]

**ದೀರ್ಘನಾಡಿ** (ನಾ). ಶರೀರದ ಒಂದು ನಾಡಿಯ ಹೆಸರು: ಮಯೂರ ನಾಡಿ ... ದೀರ್ಘನಾಡಿ ... ಸಂತೋಷ ನಾಡಿ ಇಂತೀ ನಾಡಿಗಳೊಳಗಾದ ಶರೀರದಲ್ಲಿ ತೋರುವ ನಾಡಿ ಜೀರ್ಣವರ್ಣದಂತೆ (ಶರಕ. ೪೮೦). [ ದೀರ್ಘ + ನಾಡಿ$_1$ ]

**ದೀರ್ಘನಿದ್ರಿತ** (ನಾ). ಮರಣ ಹೊಂದಿದವನು; ಸತ್ತವನು: ಕೆಲವು ಕಾಲದಿನಾತನ ತಂದೆ ಮಹಾದ್ರುಮಂ ದೀರ್ಘನಿದ್ರಿತನಪ್ಪುದುಂ ಕಚದ್ರುಮಂ ರಾಜಪದವಿಯೊಳ್ ನಿಂದು (ಶಂಕಶಂ. ೨೬-೨೨). [ ಸಂ. ]

**ದೀರ್ಘನಿದ್ರೆ** (ನಾ). ಸಾವು; ಮರಣ: "ನಿಧನಂ, ನಾಶಃ, ಮೃತ್ಯುಃ . . . ದೀರ್ಘನಿದ್ರಾ-ಈ ೧೨ ಸಾವು" (ಹಲಾಯು. ೦೦೩-೬); "ಮೃತ್ಯು ಮರಣಂ ದೀರ್ಘನಿದ್ರೆ . . . ಎನೆ ಸಾವಕ್ಕು" (ಮಂಗರಾ. ೦೧೭-೩); ಈಗಳ್ ನಿನಗಿಂತೀ ದೀರ್ಘನಿದ್ರೆಯುಂ ಮಾಡಿದನೇ (ಗದಾಯು. ೫-೨೦); ಮಟಿದೊಬಿಗಿದಂತಲ್ಲಿ ದೀರ್ಘನಿದ್ರೆಯೊಳಿರಲು ಹೊಟಿಗೆ ಶಶಿಧರನತ್ತ ಹಸಿದೆನೆಂದೆನುತಿರಲು (ಅಶೆ. ದೀ. ೫೯-೦೭); ಯಮಧರ್ಮರಾಜನು ಅವನಿಗೆ ದೀರ್ಘನಿದ್ರೆ ತಂದಿದ್ದಾನೆ (ವಕಳಾ ೩೪೪). [ದೀರ್ಘ + ನಿದ್ರೆ]

**ದೀರ್ಘಪೃಷ್ಠ** (ನಾ). ಹಾವು: "ಆಶೀವಿಷಃ, ದೀರ್ಘಪೃಷ್ಠಃ-ಈ ೨ ನಿಮಿರ್ದ ಪಾ(ಹಾ)ವು" (ಹಲಾಯು. ೦೦೩-೦೯). [ ದೀರ್ಘ + ಪೃಷ್ಠ ]

**ದೀರ್ಘಪ್ರಜ್ಞ** (ನಾ). ಆಳವಾಗಿ ಆಲೋಚನೆ ಮಾಡುವವನು; ಮುಂದಾಲೋಚನೆ ಮಾಡುವವನು: ಅಡಕತಲ್ಲಿಯ ಧನ ಪಯೋಧಿಯ ಕಡೆಯ ಕೋಟೆಯ ಮುಟಿಯಲವನೆದೆಯೊಡೆದು ದೀರ್ಘಪ್ರಜ್ಞನಿತ್ತನು ಬೇಹ ವಸ್ತುಗಳ (ಕುಪ್ಪಾಸ. ೪-೪). [ ದೀರ್ಘ + ಪ್ರಜ್ಞ ]

**ದೀರ್ಘಪ್ರಣಾಮ** (ನಾ).=ದೀರ್ಘದಂಡಪ್ರಣಾಮ: ಸೇಟ ಗಿರಿದಾಸರಂ ದೀರ್ಘಪ್ರಣಾಮ ಹಾಕಿದರು (ಕಂಬಯ. ೯೩). [ ದೀರ್ಘ + ಪ್ರಣಾಮ ]

**ದೀರ್ಘರೋಗ** (ನಾ). ಬಹಳ ಕಾಲದ ರೋಗ; ಹಳೆಯ ಖಾಯಿಲೆ: ನಾಲಗೆಯು ಅತಿದೀರ್ಘವಾಗಿಯಾದರೂ ಅತಿಗಿಡ್ಡನಾಗಿಯಾದರೂ ಇದ್ದರೆ ದೀರ್ಘರೋಗದಿಂದ ಮರಣವೆಂದರುವುದು (ಸಕಲ್ಪ. ೦೪). [ ದೀರ್ಘ + ರೋಗ ]

**ದೀರ್ಘರೋಷಿ** (ನಾ). ಬಹಳ ಕಾಲ ಕ್ರೋಧವನ್ನಿಟ್ಟುಕೊಂಡಿರುವವನು: ಜ್ಞಾತಿ ಬಹಿಷ್ಕೃತಂ ವ್ಯಸನಿ ದೈವಪರಂ ಶಿಶು ದೀರ್ಘರೋಷಿ ಸತ್ಯೇತರನಸ್ಥಿರಂ . . . ಎನಿಪ ನರಪನೊಳೆಂದುಂ ವಿಜಗೀಷುಗಳಪ್ಪ ಮಹೀಭುಜರೆಂದುಂ ಸಂಧಿ ಮಾಡರ್ (ಶಂಕಶಂ. ೨೨೦-೬). [ ಸಂ. ದೀರ್ಘರೋಷಿನ್ ]

**ದೀರ್ಘಲಲಿತ** (ನಾ). [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲಿ ಒಂದು: ಸಂತ ಪ್ರಮಿತ ದೀರ್ಘ ಲಲಿತ . . . ದೀರ್ಘ ಲ [ಪಾಠಾಂ. ಲಾ]ಲಿತ . . . ಕೋಮಲವೆಂಬ ಇಪ್ಪತ್ತೆರಡೇ ಶ್ರುತಿಗಮಕಗಳೆಂತಲುಂ (ವಿವೇಕ. ೨೪೮). 'ಶ್ರುತಿ' ಪರಾ. [ ದೀರ್ಘ + ಲಲಿತ ]

**ದೀರ್ಘವರ್ತುಲ** (ನಾ). ಅಂಡಾಕಾರವಾದ ವೃತ್ತ; ದೀರ್ಘವಾದ ಗೋಳ: ಅವರ ಎಲೆಗಳು ದೀರ್ಘವರ್ತುಲಾಕಾರ (ಮುಂಬಯ. ೪-೫೪). [ ದೀರ್ಘ + ವರ್ತುಲ ]

**ದೀರ್ಘವೃಂತ** (ನಾ). ಉದ್ದವಾದ ಕಾಂಡವನ್ನುಳ್ಳದು; ಹೆಮ್ಮರ: "ಮಂಡೂಕಪರ್ಣಃ . . . ದೀರ್ಘವೃಂತಃ, ಕುಟನ್ನಟಃ, ಶೋಣಕಃ, ಅರಲುಃ-೧೨ ಹೆಮ್ಮರದ ಹೆಸರುಗಳು" (ಸಿದ್ಧಾಂತಿ. ೦೨೫). [ ದೀರ್ಘ + ವೃಂತ ]

**ದೀರ್ಘವೃತ್ತ** (ನಾ). ಅಂಡಾಕಾರದ ಸಂತ್ತು,-ಗೋಳ: ಭೂಮಿಯು ಸೂರ್ಯನ ಸುತ್ತು ತಿರುಗುವ ಹಾದಿಯು, ಸರಿವೃತ್ತಾಕಾರವಾಗಿರದೆ, ದೀರ್ಘವೃತ್ತವಾಗಿದೆ (ಖಾಲಿಕ್ಕ. I, ೩೦೦); ದೀರ್ಘವೃತ್ತ (Ellipse) ವು ಭಾರತೀಯರಿಗೆ ವೇದಗಳ ಕಾಲದಲ್ಲಿಯೇ ತಿಳಿದಿತ್ತು (ತತ್ವಶಾ. ೪೬೧). [ ದೀರ್ಘ + ವೃತ್ತ$_1$ ]

**ದೀರ್ಘವ್ಯಾಧಿ** (ನಾ).=ದೀರ್ಘರೋಗ: (Chronic Complaint. ಇಂಕಿನಿ). [ ದೀರ್ಘ + ವ್ಯಾಧಿ ]

**ದೀರ್ಘಶಯನ** (ನಾ). = ದೀರ್ಘನಿದ್ರೆ. 'ದೀರ್ಘಶಯನಂಗೆಯ್' ಪರಾ. [ ದೀರ್ಘ + ಶಯನ ]

**ದೀರ್ಘಶಯನಂಗೆಯ್** (ಕ್ರಿ). ಸಾವನ್ನು ಹೊಂದು; ಮರಣವನ್ನು ಹೊಂದು: ಏಗಳಿಂದೊರ್ಗುಡಿಸಿ ಸಾರಥಿ ಬಿಳಲ್ಕೆ ಕೆನ್ನೀರ್ಗಾರಿ ದೀರ್ಘಶಯನಂಗೆಯ್ಯೆ ಕುದುರೆಗಳ್ನೀರ್ಗೊಳಲ ಪೋರ್ಗಳಾ ನೃಪನಂಗದೊಳ್ಪಾಣೆಸಿದುವು ಜಾಳಂಪ್ರದಂತೆ (ಕೃಮಿಥಾ. ೪-೩೫). [ ದೀರ್ಘಶಯನ + ಕೆಯ್$_1$ ]

**ದೀರ್ಘಶ್ಮಶ್ರು** (ನಾ). ನೀಳವಾದ ಗಡ್ಡ,-ದಾಡಿ: ಗಂಡಸರು ದೀರ್ಘಕೇಶವನ್ನು ಹಿಂದೆ ಗಂಟುಹಾಕಿ ಜಟ್ಟವನ್ನು ಸುತ್ತಿಕೊಳ್ಳುತ್ತಿದ್ದರು ಮತ್ತು ದೀರ್ಘಶ್ಮಶ್ರು ಬೆಳಸಿ ಮಿಸೆಯನ್ನು ಮಾತ್ರ ತೆಗಿಸುತ್ತಿದ್ದರು (ಭಾರತ. ೦೩). [ ದೀರ್ಘ + ಶ್ಮಶ್ರು ]

**ದೀರ್ಘಶ್ರುತಿ** (ನಾ). ನಿಡಿದಾದ ನಾದ ; ಬಹುದೂರದವರೆಗೆ ಕೇಳಿಸುವಂತಹ ನಾದ : ನಾತಿದೂರದೊಳೊಂದು ಪೊಣ್ಮಿದುದು, ಸೀಳ್ದವೋಲ್ ವನ್ಯನಿಶ್ಶಬ್ದಮಂ ದೀರ್ಘಶ್ರುತಿಯ ಸೀಳ್ (ಶ್ರೀರಾಮಾ. ೨೯೦-೦೬೯). [ ದೀರ್ಘ + ಶ್ರುತಿ ]

**ದೀರ್ಘಶ್ವಾಸ** (ನಾ). ನಿಟ್ಟುಸಿರು : ಅಲಘುತರವರಿವೇದನಾವಿಹ್ವಲಿತಕಂಠಗತಾತ್ಮನೂರ್ಧ್ವಸ್ಖಲಿತ ದೀರ್ಘಶ್ವಾಸನಿದ್ದನು ಕೌರವರ ರಾಯ (ಕುಮಾ.ಭಾ. ೦೦-೩). [ ದೀರ್ಘ + ಶ್ವಾಸ ]

**ದೀರ್ಘಸತ್ರ** (ನಾ). ೧. ಬಹು ಸಮಯದವರೆಗೆ ನಡೆಯುವ ಯಾಗ ; ಸೋಮಯಜ್ಞ : ಋಷಿಗಳು ಮತ್ತು ರಾಜರ್ಷಿಗಳು ಮಾಡುತ್ತಿದ್ದ ದೀರ್ಘಸತ್ರಯಾಗಗಳಲ್ಲಿ ಸೂತರು ಈ ಪುರಾಣಗಳನ್ನು ಹೇಳುತ್ತಿದ್ದರು (ಭಾರತ. ೧೩೮). ೨. ಬಹುಕಾಲ ಯಾಗ ಮಾಡುವವನು. [ ದೀರ್ಘ + ಸತ್ರ ]

**ದೀರ್ಘಸುಮಂಗಲಿ** (ನಾ). ಬಹುಕಾಲ ಐದೆಯಾಗಿರುವವಳು ; ಬಹುಕಾಲ ಗಂಡನನ್ನು ಹೊಂದಿರುವವಳು : ಮಂತ್ರೈದೆ : ಬ್ರಾಹ್ಮಣರಿಗೂ ಮುಂದುಕರಿಗೂ ಅತ್ತೆಮಾವಂದಿರಿಗೂ ನಮಸ್ಕರಿಸಿ, ಅವರಿಂದ 'ದೀರ್ಘಸುಮಂಗಲಿಯಾಗು' ಎಂದು ಆಶೀರ್ವಾದ ಪಡೆದಳು (ಕಥಾ. ೧೬೯). [ ಸಂ. ದೀರ್ಘಸುಮಂಗಲೀ ]

**ದೀರ್ಘಸೂತ್ರ** (ನಾ). ೧. ತಡಮಾಡುವವನು ; ಸಾವಕಾಶವಾಗಿ ಕೆಲಸ ಮಾಡುವವನು ; ಜಡ ; ಆಲಸಿ : "ಆಳಸಂ ಮಂದಂ ಜಡಂ ಮಂಥರನೆನಿ[ ಪನವನುಂ ] ಶೀತಲಂ ದೀರ್ಘಸೂತ್ರಂ" (ವಸ್ತುಕೋ. ೦೦೦-೧೧). ೨. ಉದ್ದವಾದ ಎಳೆಗಳುಳ್ಳುದು. ೧, ೨ : ಎಳೆಯುಳ ನಳಿತೋಳಂ ದಂದಳಿಪೆನೆನುತ್ತೆಳಸಿ ತಳೆಯದಳಲಿಂ ಜಲದೊಳ್ಮುಳುಗಿತು ಮೃಣಾಳಮಿಷ್ಟ ಮನಿಳೆಯೊಳ್ಳಿ ದೀರ್ಘಸೂತ್ರನೇಂ ಪಡೆದಪನೇ (ಜಾತಕ. ೭-೯೦). [ ದೀರ್ಘ + ಸೂತ್ರ ]

**ದೀರ್ಘಸೂತ್ರಿ** (ನಾ). ಸಾವಕಾಶವಾಗಿ ಕೆಲಸ ಮಾಡುವವನು; ವಿಳಂಬಿ : "ದೀರ್ಘಸೂತ್ರೀ, ಜಡಕ್ರಿಯಃ—ಈ ೨ ತಡೆದು ಗೆಯ್ವವಂ" (ಹಲಾಯು. ೭೩-೨೨೮) : ದೀರ್ಘಸೂತ್ರಿಗಳವರ ಸಂಗದಿಂ ಕಿಡುವುದೆ ದಿಟಂ ಕವ್ಯ ಕಷ್ಟಂ (ಶ್ರೀರಾಮಾ. ೩೦೨-೨೦). [ ಸಂ. ದೀರ್ಘಸೂತ್ರಿನ್ ]

**ದೀರ್ಘಸ್ವರ** (ನಾ). [ವ್ಯಾಕ] ಉಚ್ಚಾರಣೆಗೆ ಎರಡು ಹ್ರಸ್ವಾಕ್ಷರಗಳಷ್ಟು ಕಾಲವನ್ನು ತೆಗೆದುಕೊಳ್ಳುವ ಸ್ವರ : ಉಚ್ಚಾರಣೆಗೆ ಹೆಚ್ಚು ಕಾಲ ಬೇಕಾಗುವ ಆ, ಈ, ಊ, ಋೂ, ಏ, ಓ ಎಂಬುವಕ್ಕೆ ದೀರ್ಘಸ್ವರಗಳೆಂದೂ ಹೆಸರು (ಶಬ್ದಶು. ೦೩). [ ದೀರ್ಘ + ಸ್ವರ ]

**ದೀರ್ಘಾಕಾರ** (ನಾ). ೧. ಎತ್ತರವಾದ ಆಕಾರ. ೨. ಎತ್ತರವಾದ ಆಕಾರವುಳ್ಳವನು : ಕಘಾತ್ಮಂ ದೀರ್ಘಾಕಾರಂ ಸುಬುದ್ಧಿ ಮೇದಸ್ವಾರಂ ನಸುಕೆಂಚತಲೆಯುವಕ್ಕುಂ ಜೀವಂ (ಜಾತಕ. ೨-೨೩). [ ದೀರ್ಘ + ಆಕಾರ ]

**ದೀರ್ಘಾಕ್ಷರ** (ನಾ). = ದೀರ್ಘ ೩ : ಉಭಯಮಾತ್ರಂ = ಎರಡು ಮಾತ್ರೆಯನುಳ್ಳುದು, ದೀರ್ಘಂ = ದೀರ್ಘಾಕ್ಷರಂ (ಅವ್ವುದು) (ಕಮುದ. ೦೦ ಟೀಕೆ). [ ದೀರ್ಘ + ಅಕ್ಷರ ]

**ದೀರ್ಘಾದೇಶ** (ನಾ). [ವ್ಯಾಕ] ಒಂದು ಸ್ವರಕ್ಕೆ ಪ್ರತಿಯಾಗಿ ಮತ್ತೊಂದು ದೀರ್ಘಸ್ವರವು ಬರುವುದು : ತುದಿಯೊಳ್ ದೀರ್ಘಾದೇಶಂ ಪೊದಟ್ಟು ಷಷ್ಠೀವಿಭಕ್ತಿಗರೆಬರ ಮತದಿಂ ಪುದಿದಿರ್ಕುಂ (ಶಬ್ದಮ. ೦೩೬). [ ದೀರ್ಘ + ಆದೇಶ ]

**ದೀರ್ಘಾಯಿತ** (ನಾ). [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲಿ ಒಂದು : ಸ್ಫುರಿತ . . . ದೀರ್ಘಾಯಿತ [ಪಾಠಾಂ. ದೀರ್ಘಿತ] . . . ಕೋಮಲವೆಂಬ ಇಪ್ಪತ್ತೆರಡೇ ಶ್ರುತಿಗಮಕಗಳೆಂತಲುಂ (ವಿವೇಕ. ೨೪೮). 'ಶ್ರುತಿ' ವರಾ. [ ಸಂ. ]

**ದೀರ್ಘಾಯು** (ನಾ). ೧. ಹೆಚ್ಚು ಕಾಲ ಬದುಕಿರುವಿಕೆ ; ಬಹಳ ಕಾಲದ ಬಾಳಂ: ಮಾಡುಗೆ . . . ಈಶನಿಷ್ಟಸುಖಮಂ ದುರ್ಗಂಗೆ ದೀರ್ಘಾಯುಮಂ (ಪಂಚತಂ. ೦-೮) ; ಕುಡುಗೆ ಕಂದರ್ಪಂಗೆ ದೀರ್ಘಾಯುಮಂ (ಲೀಲಾವ. ೩-೭೦) : ಎಮಗೀ ಯುಗಕೆ ನೀವಲ್ಲದೆ ದೀರ್ಘಾಯುಮಂ ಕೊಡುವವನ ದಾವಂ ಮೇಮನಾರಾಧ್ಯ (ಬಸವು. ೪೭-೯೦) ; ಏಗೆ ದೀರ್ಘಾಯುವಿರೆ ಮುನಿದು ಕಲಿ ಜವರಾಯಂ ಕೊಲಲಾಜಂ (ಹಮ್ಮಿರ. ೮-೨೮). ೨. ಹೆಚ್ಚು ಕಾಲ ಬದುಕಿರುವವನು : ದೊರೆಕೊಂಡಂದಧಿಯೋಗಂ ನರಪತಿ ದೀರ್ಘಾಯು ವಿಭವಸಂಯುತನಭಯಂ ನಿರುಜಂ ಸುಖಾನ್ವಿತಂ ಜಿತವಿರೋಧಿ ಕಾನೆನಿಸಿ ವರ್ತಿಕುಂ (ಜಾತಕ. ೦೪-೧೧); ಭಾವಿಸಿ ಪರಸಿದಡೆ ದೀರ್ಘಾಯುವಾಗಿರೆ ಕರುಣಿಸಬೇಕು (ಬಸವು. ೪೭-೧೭). [ ಸಂ. ]

**ದೀರ್ಘಾಯುಷಿ** (ನಾ) .=ದೀರ್ಘಾಯು ೨ : ಹಿರಿಯರು ದೀರ್ಘಾಯುಷಿಯಾಗು ಎಂದು ಆಶೀರ್ವದಿಸಿದರು (ರೂಢಿ). [ ಸಂ. ದೀರ್ಘಾಯುಷೀನ್ ]

**ದೀರ್ಘಾಯುಷ್ಯ** (ನಾ).=ದೀರ್ಘಾಯು ೧ : ವಜ್ರ ವೃಷಭ ನಾರಾಚಾಸ್ಥಿ ಸಂಧಿಬಂಧಮುಂ ... ಲಕ್ಷಸಮಾಸವ್ಯಿತಾನಪವರ್ತಿತ ದೀರ್ಘಾಯುಷ್ಯಮುಂ ತನಗನುಸಂಗತಮಾಗೆ (ಶಾಂತಿಪು. ೦೦-೯೪ ವ) ; ಪ್ರಾತಃಕಾಲದಲ್ಲಿ ಏಳದೆ ಬಹಳ ಹೊತ್ತಿನ ತನಕ ಮಲಗಿ ನಿದ್ದೆ ಮಾಡುವವರು ದೀರ್ಘಾಯುಷ್ಯವನ್ನೂ ಘನತೆಯನ್ನೂ ಪಡೆಯಲಾರರು (ಮುಂಬಯಿ. ೪-೧೯೧). [ ದೀರ್ಘ + ಆಯುಷ್ಯ ]

**ದೀರ್ಘಾಯುಸ್ಸು** (ನಾ). ೧.=ದೀರ್ಘಾಯು ೧ : ದೀರ್ಘಾಯುಸ್ಸಿಗಾಗಿ ಪ್ರಾರ್ಥನೆಯಿದ್ದರೂ ಐಹಿಕವಾದ ಪಾರ್ಥಿವಜೀವನವೆ ಶಾಶ್ವತವೆಂದು ಅವರು ಅರಿಯಲಿಲ್ಲ (ಹುಚ್ಚಾರ. ೮೦ ಟೀಕೆ). ೨. ಕಾಗೆ. ೩. ಮಾರ್ಕಂಡೇಯ. [ ಸಂ. ದೀರ್ಘಾಯುಸ್ ]

**ದೀರ್ಘಾಲೋಚನೆ** (ನಾ). ಆಳವಾದ ಯೋಚನೆ,-ಚಿಂತನೆ : "ಏನೇ ಮಂಗ್ಲೀ . . . ಭಾಳ ದೀರ್ಘಾಲೋಚನೆ ಮಾಡ್ತಾ ಇರೋ ಹಾಗಿದೆ !" ಎಂದು ನಗೆಯಾಡಿದನು (ಸರ್ವಮಂ. ೩೦೯) : ಹೂವಯ್ಯ . . . ತಾನು ಸೀತೆಮನೆಯಲ್ಲಿ ಕೇಳಿದ ಒಂದು ವಿಚಾರವನ್ನು ಕುರಿತು ದೀರ್ಘಾಲೋಚನೆ ಮಾಡತೊಡಗಿದ್ದನು (ಕಾನೂರು. ೫೫೯). [ದೀರ್ಘ + ಆಲೋಚನೆ ]

**ದೀರ್ಘಾವಧಿ** (ನಾ). ಬಹಳ ಕಾಲ,-ಅವಧಿ : ಈ ಕೆಲಸಕ್ಕೆ ದೀರ್ಘಾವಧಿ ಬೇಕು (ರೂಢಿ).

**ದೀರ್ಘಾವಧಿ ಬೆಳೆ**=ಬೆಳೆಯುವುದಕ್ಕೆ ಹೆಚ್ಚು ಕಾಲ ತೆಗೆದುಕೊಳ್ಳುವ ಬೆಳೆ : ಈಗ ಬಳಕೆಗೆ ಬಂದಿರುವ ಹೊಸ ಬೇಸಾಯ ಪದ್ಧತಿಯಿಂದ ದೀರ್ಘಾವಧಿ ಬೆಳೆಗಿಂತ ಅಲ್ಪಾವಧಿ ಬೆಳೆಗೆ ಪ್ರೋತ್ಸಾಹ ಹೆಚ್ಚಿದೆ (ರೂಢಿ). **ದೀರ್ಘಾವಧಿ ಯೋಜನೆ** = ಹೆಚ್ಚು ಕಾಲ ತೆಗೆದುಕೊಳ್ಳುವ ಯೋಜನೆ : ಪಂಚವಾರ್ಷಿಕಯೋಜನೆಯ ಜೊತೆಗೆ ದೀರ್ಘಾವಧಿಯೋಜನೆಗಳು ಅಗತ್ಯವೆಂಬುದನ್ನು ನಾವು ಮನಗಂಡಿದ್ದೇವೆ (ರೂಢಿ). **ದೀರ್ಘಾವಧಿ ಸಾಲ** = ಹೆಚ್ಚು ಕಾಲದವರೆಗೆ ಕಂತುಗಳನ್ನು ವಿಸ್ತರಿಸಿದ ಸಾಲ ; ವಾಯಿದೆ ಹೆಚ್ಚು ಇರುವ ಸಾಲ : ಬ್ಯಾಂಕುಗಳು ರೈತರಿಗೆ ಅಲ್ಪಾವಧಿ ಮತ್ತು ದೀರ್ಘಾವಧಿ ಸಾಲಗಳನ್ನು ಒದಗಿಸುತ್ತವೆ (ರೂಢಿ). [ ದೀರ್ಘ + ಅವಧಿ ]

**ದೀರ್ಘಿಕೆ** (ನಾ). ೧. ಉದ್ದವಾದ ಕೊಳ : ಕುಂದದೆ ಪೆರ್ಚುವ ತೋಯದಿಂದಮಾ ನಗರದ ಬಾವಿವೊಕ್ಕರಣೆ ದೀರ್ಘಿಕೆ . . . ಪಳ್ಳಮೊಳಮೆಂಬ ಜಲಾಶಯಮಿಂತು ಸುತ್ತಲುಂ (ಪುಷ್ಪದಂ. ೨-೩೪) ; ಬಗರನೆ ದೀರ್ಘಿಕೆ ಹೊಕ್ಕರಣೆಯ ಬಾವಿ . . . ಪೂಗೊಳನಿಲ್ಲದ ನಗರವಿಲ್ಲಾ ನಾಡೊಳಗೆ (ರಾಜುವಿ. ೨-೨೭). ೨. ಸರಸ್ಸು ; ಕಲ್ಯಾಣಿ ; ಪುಷ್ಕರಿಣಿ : "ವಾಪಿ ದೀರ್ಘಿಕೆ ಪರಿಖಾತಂ ದೇವಖಾತಮಕ್ಕುಮುಖಾತಂ" (ವಸ್ತುಕೋ. ೨೪-೦೫); ಶತಸಹಸ್ರಮುಖಾವಹ ಜಾನುದಘ್ನ ದೀರ್ಘಿಕಾಂಭಃಕುಲ್ಯಾಪ್ರವಾಹಂ

ಗಳಂ ಜಲದುರ್ಗಂಗಳಿಂದೆ ನೋಂಕಿ ಕದಡಿಯುಂ (ಆದಿಪು. ೮-೧೧ ವ) : ಏನಂ ಪೇಟ್ಟುದೊ ಸಿರಿಯುದ್ದಾನಿಯನೆಣ್ಣೆಯೊಳ್ ತೀವಿ ದೀರ್ಘಿಕೆಗಳವಂತಾ ನೃಪತಿ ನಿಚ್ಚಲಯುಜ್ಜೂಜಾನೆಯನವಗಾಹಮಿಂಸುವಂ ಬೋದನದೊಳ್ (ಶಂಪಕಾ. ೧-೧೭) ; ಕೈರವ ಪುಂಡರೀಕ ಪುಂಡಷಂಡದಿನೆಸೆದಿರ್ದ ದೀರ್ಘಿಕೆಗಳಿಂದ ಮನೋಹರವಾಗಿ ಕುಕ್ಕನೂರುದಿತಯಶೋವಿಧಾನದಿನಳಂಕೃತವಾದುದು ಭೂಮಿಭಾಗದೊಳು (ಶಾಸಂ. ೮೨; 1138). ೩. ನದಿ : ಪಾವನ ಮಲಪ್ರಹರಿಯೆಂಬ ದೀರ್ಘಿಕೆ ಪರಿದಳಲ್ಲಿ ಜೀವಿಗಳಿಗೊಲಿದು (ಗುರುಚಾ. ೧-೦೩). [ ಸಂ. ದೀರ್ಘಿಕಾ ]

**ದೀರ್ಘೀಕರಣ** (ನಾ). ೧. ವಿಸ್ತರಿಸುವುದು ; ಲಂಬಗೊಳಿಸುವುದು : “ಉದ್ದವಾಗುವುದು ; ಉದ್ದ ಮಾಡುವುದು ; ದೀರ್ಘೀಕರಣ ; ಲಂಬನ” (Elongation. ಇಂಕನಿ). ೨. [ವ್ಯಾಕ] ದೀರ್ಘಸ್ವರ ಪ್ರಯೋಗ ; ಸ್ವರವನ್ನು ಎಳೆದು ಉಚ್ಚರಿಸುವುದು : ‘ದೇಗುಲಮಾನ್, ಏಟದಾಂ’, ತವ್ವಾದ’ ಈ ತರದ ದೀರ್ಘೀಕರಣವು ಎಲ್ಲಿಯೂ ಇಲ್ಲ (ಕಶಾಚ. ೬೬).
[ ಸಂ. ]

**ದೀರ್ಘೋಕ್ತಿ** (ನಾ). [ವ್ಯಾಕ] ದೀರ್ಘಸ್ವರದ ಪ್ರಯೋಗ: ಸಂಬೋಧನೆ ದೀರ್ಘೋಕ್ತಿಯೊಳಿಂಬಾಗಿರೆ ಬರ್ಕುಂ (ಶಬಿಶಾ. ೨-೨೩).
[ ದೀರ್ಘ + ಉಕ್ತಿ ]

**ದೀರ್ಘೋಚ್ಚರಿತ** (ನಾ). [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲಿ ಒಂದು : ಸ್ಫುರಿತ . . . ದೀರ್ಘೋಚ್ಚರಿತ . . . ಕೋಮಲಮೆಂಬ ಇಪ್ಪತ್ತೆರಡೇ ಶ್ರುತಿಗಮಕಗಳೆಂತಲುಂ (ವಿವೇಕ. ೨೪೮). ‘ಶ್ರುತಿ’ ಪರಾ.
[ ದೀರ್ಘ + ಉಚ್ಚರಿತ ]

**ದೀರ್ಘೋದ್ಯೋಗ** (ನಾ). ೧. ಬಹುಕಾಲದವರೆಗೆ ಮಾಡುವ ಕೆಲಸ ; ಸಂತತವಾಗಿ ಮಾಡುವ ಕಾರ್ಯ. ೨. ಸಂತತವಾಗಿ ಮಾಡುವ ಪ್ರಯತ್ನ : ನಿತ್ಯಜೀವನದಲ್ಲಿ ಯಶಸ್ಸು ದೊರೆಯುವುದು ತಾಳ್ಮೆ, ದೀರ್ಘೋದ್ಯೋಗಗಳಿಂದಲೇ ಹೊರತು ಜಾದುವಿನ ಕಳ್ಳದಾರಿಯಿಂದಲ್ಲ (ಕಥಕ. ೧೦೨). [ ದೀರ್ಘ + ಉದ್ಯೋಗ ]

**ದೀರ್ಣ** (ಗು). ೧. ಒಡೆದ ; ಸೀಳಿದ. ೨. ಹೆದರಿದ ; ಭಯಗೊಂಡ. ೩. ತೆರೆದ ; ಬಿರಿದ. ‘ದೀರ್ಣಾನನ’ ಪರಾ. [ ಸಂ. ]

**ದೀರ್ಣಾನನ** (ನಾ). ತೆರೆದ ಬಾಯಿ : ರಸನಾಶಂಪಾಶತಂ ಸಂಚಳಿಸೆ ವುದಿಯೆ ಫೂತ್ಕಾರವಾ ಶಾಂತವುಂ ದಳ್ಳಿಸೆ ವಹ್ನಿಜ್ವಾಲೆ ದೀರ್ಣಾ [ಪಾಠಾಂ. ನಾಗಾ] ನನ ಕುಹರಸಹಸ್ರಂಗಳಿಂ ಕಣ್ಗಳಿಂದೆಡ್ಡೆಸೆಗಂಗಾರಂಗಳೆತ್ತಂ ಕೆದಱೆ ಫಣಸಹಸ್ರಂಗಳಂ ಬಿರ್ಚಿ ಕಣ್ಗವಿಸಿ ವಿಡ್ರುವರ್ತಚಾಪಂ ಪಡೆದುದು ಭಯಮಂ ಕಾಳಕಾಳಾಹಿರೂಪಂ (ಶಂರಾಮಾ. ೩-೭೪).
[ ದೀರ್ಣ + ಆನನ ]

**ದೀವ, ದೀಹ** (ನಾ). ೧. ಬೇಟೆಯಲ್ಲಿ ಕ್ರೂರಮೃಗಗಳನ್ನು ಆಕರ್ಷಿಸುವುದಕ್ಕಾಗಿ ಬಳಸುವ ಪ್ರಾಣಿ; ಬೇಟೆಗೆ ಉಪಯೋಗಿಸಲು ಪಳಗಿಸಿದ ಪ್ರಾಣಿ : ಅಮೃತಮತಿ ಗಡ ಯಶೋಧರನ ಮನಃಪ್ರಿಯೆಯಾಕೆ ದೀವವಾಗೆ ಪುಳಿಂದಂ ಸುಮನೋಬಾಣಂ ತದ್ಗೂರಮಣನನೊಲಿವಂತೆ ಗೋರಿಗೊಳಿಸುತ್ತಿರ್ಕುಂ(ಯಶೋಚ. ೨-೯). ೨. ಸಾಕಿದ ಪ್ರಾಣಿ. ದೀಹ: ೨. ವೃಕ ಶಾರ್ದೂಲ ಕೇಸರಿ ಕದಲಿ ಕಳಭ ಕ್ರೋಢ ಖಿಳ ಲೂಲಾಯ ಸಾರಂಗ ಮದದ ರಹಿಯಲಿ ಮಾನಿಸರು ಸೋಂಕಿದೊಡೆ ಸೆಡೆಯವು ಹೊಲನ ಹೊದೆಜಾಕ್ಕಿದವು ದೀಹದ ಹಿಂದಿನಂತಿರೆ (ಕುವ್ಯಾ.ಆ. ೧೩-೧೭). ೩. ಆಕರ್ಷಣೆಯ ಸಾಧನ ; ಮೋಹವನ್ನುಂಟುಮಾಡುವ ಸಾಧನ: ಎನ್ನ ಪಸರಿಸಿದ ಚಿತ್ರಪಟವೆಂಬ ದೀಹಕ್ಕೆ ಪೇಚರ ಭೂಚರಯುವಮೃಗಂಗಳೆಳಸಿ ಬಂದು (ಆದಿಪು. ೩-೮೬ ವ) ; ಜಾಲಗಾಜನ ಕೈಯ ದೀಹ [ಪಾಠಾಂ. ವ]ದಂತೆ ಬಾಲೆಯರ ಮನದ ಸೋಲುವೆಯಂತೆ ಇಂತಿವರನಳವಾದಿ

ಸಿಕ್ಕಿಸುವ ಪೋಲಿಗಾಱಿಗಿಲ್ಲಿಯದೋ ಸತ್ಯ (ಮೋಹಿಮಾ. ೬೩-೨೬೮)-; ಚರಿಸುವ ವಿವರ ಕರಣವೆಂಬ ಖಗವೆಂಡಿಗಿರದೊಡ್ಡದ ದೀಹವೆನಲು ಮೆಟೆದುದು ಸೂಳೆಗೇರಿಯ ಸಾಲು (ಕಂಸವಿ. ೭-೯೨).

ದೀವದ ಖಗಮೃಗ = ಸಾಕಿದ ಪಕ್ಷಿ ಮತ್ತು ಪ್ರಾಣಿ : ಉಡುಪಾನನೆ ಗಿಂತಯ್ದಿದ ನೋವವಳಿದವ ದವಕೆ ಕೈಪಿಡಿ ಕೌಳುಡ ತೊಡವುಡಿಗೆ ಚವುರ ಸೀಗುರಿ ಬಿಜ್ಜಣ ಮುಡಿವೂ ಕರಗಂಬೊತ್ತ ಮಡದಿಯರ್ಗಂ ದೀವದ ಖಗ ಮೃಗಕಂ ಬಿಡದಡಿಸಿತು ತರುಮೂಲವನೊಂದಿದ ಕಡುನೋವಾ ಶಾಪಾ ಸಂ ತ ತಿ ಗಿ ರ ದೆ ಯ್ದು ವ ಮಾರ್ಕೆಯೊಳು (ಜಯಶಾ. ೨-೪೦). ದೀವದ ನವಿಲ್, ದೀಹದ ನವಿಲ್ = ೧. ಹೆಣ್ಣುನವಿಲನ್ನು ಹಿಡಿಯಲು, ಉಪಯೋಗಿಸುವ ನವಿಲು. ೨. ಸಾಕಿದ ನವಿಲು; ಮಯೂರ: ಕಾಮ ಕಾಳೋರಗಲೇಖೆಯಂತೆ ನಿಮಿರ್ದ ನೀಲಮಣಿಸ್ತಂಭದುನ್ಮುಖ ಮಯೂಖರೇಖೆಯುಂ ಕರ್ದು೦ಕುವ ದೀವದ ನವಿಲ್ಗಳುಂ . . . ಅತಿ ರಮಣೀಯವಾಗೆ (ಶಂರಾಮಾ. ೩-೭೩ ವ) : ಹರಿನೀಲಮಣಿಯ ಸೂಸಕದ ನೆಬಲ್ಗಳಸಿತಾಹಿಗಳಿಂದೊಸೆದಿಳೆಸುವ ದೀಹದ ನವಿಲ್ಗಳೊಪ್ಪುಗುಮವ ಜಾರೊಳ್ (ಚಗವಿ. ೯-೦೨೮). ದೀವದ ಪುಲ್ಲೆ, ದೀವದ ಹುಲ್ಲೆ, ದೀಹದ ಪುಲ್ಲೆ, ದೀಹದ ಹುಲ್ಲೆ = ಬೇಟೆಯಲ್ಲಿ ಮೃಗಗಳನ್ನು ಆಕರ್ಷಿಸುವುದಕ್ಕಾಗಿ ಬಳಸುವ ಜಿಂಕೆ,-ಚಿಗರೆ : ಆ ವನಿತೆಯರ್ ಮನೋಜನ ದೀವದ ಪುಲ್ಲೆಗಳಮನಂಗರಾಜನವರಾಜ್ಞೀವಾಸಕ್ಕಂ ದೊರೆ (ಶಾಂತಿಪು. ೩-೧೯) : ಮನೋಜನ ದೀವದ ಪುಲ್ಲೆಗಳೆನಿಸಿದುವು ನೆರದ ಪೆಂಡಿರ ತಂಡಂ (ಸುಕುಮಾ. ೧೧-೩೧) ; ಒಲವಿಂದೆಯ್ದೆ ಪರಿವ ದೀವ [ಪಾಠಾಂ. ಹ]ದ ಹುಲ್ಲೆಗಳನಾ ಲಲನೆ ನೋಡಿದಳು (ಕುರಾಸಾಂ. ೭-೫೭) ; ಕರತಳದೊಳ್ ತೀವಿದ ಮರಕತಮುದ್ರಿಕೆಯ ಪಸುರ್ವೆಳಗುಗಳಿನಾ ಪಸುರ್ವುಲ್ಲೆಗೆತ್ತು ಮುಸುಂಡಿನೊಳಾರಯ್ದು ದೀಹ[ಪಾಠಾಂ. ವ]ದ ಪುಲ್ಲೆಯ ಕೊಣಸುಗಳ್ಗೆ ಪುಲ್ಲೆಸಟುಂ ಸೆಟೆದು ನೀಡುತುಂ (ಲೀಲಾವ. ೪-೦೬ ವ); ನಗಿಸುವ ಕೋಡಗಂ ನೆರೆದು ನೋಡುವ ದೀಹದ ಹುಲ್ಲೆ ಸೋಗೆಯಂ ನೆಗಪಿ ತುಡುಂಕಿ ಮೆಟ್ಟುವ ನವಿಲ್ (ಸೂಕ್ತಿಸು. ೧೧-೭೪). ದೀವದ ಬೇಂಟೆ = ಪಕ್ಷಿ, ಪ್ರಾಣಿಗಳನ್ನು ಆಕರ್ಷಣೆಯಾಗಿ ಒಡ್ಡಿ, ಅವುಗಳ ಆಸೆಯಿಂದ ಬರುವ ಇತರ ಪ್ರಾಣಿಗಳನ್ನು ಬೇಟೆಯಾಡುವಿಕೆ ; ಬೇಟೆಯಲ್ಲಿ ಒಂದು ವಿಧ : ದೀವದ ಬೇಂಟೆಯುಂ ಬಿನ್ನಪಂಗೆಯ್ಯೊಡೆ ಕಟ್ಟವು[ ಮು ]ಟ್ಟಂ ಕಾಪುಂ ಮೇಪುಂ . . . ಆನೆ ಬಲ್ಲೆಂ (ಶಂಪಕಾ. ೩-೮೩ ವ). ದೀವದ ಮೃಗ = ಬೇಟೆಯಲ್ಲಿ ಕ್ರೂರಮೃಗಗಳನ್ನು ಆಕರ್ಷಿಸುವುದಕ್ಕಾಗಿ ಬಳಸುವ ಪ್ರಾಣಿ : ಹಾಸದ ಕುನ್ನಿ ದೀವದ ಮೃಗಂ ಬಲೆ ಪೆರ್ವಡಿ . . . ಎಂಬೀ ಸಮಕಟ್ಟು ಪಾಪದೆಟೆವೆಟ್ಟು ಜಳಸ್ಥಳವಾರದಿಂ ಕ್ರಿಯೋಲ್ಲಾಸ ಮನುಂಟುಮಾಡಿ ಪೊಱಮಟ್ಟುದು ಬೇಂಟೆಗೆ ಲುಬ್ಧಕವ್ರಜಂ (ಪುಷ್ಪ.ಪು. ೩-೯೯). ದೀವದ ರಾಜಹಂಸ=ಸಾಕಿದ ಅರಸಂಚೆ : ಲೀಲಾಲಸಗಮನಮಂ ಗಜಗಮನೆಯರ್ಗುಪದೇಶಂಗೆಯ್ದು ದೀವದ ರಾಜಹಂಸೆಗಳುಮಂ . . . ಕೊಟ್ಟು ಪಂಡಿತೆಯುಮನೊಡಪೋಪಂತು ಮಾಡಿ (ಆದಿಪು. ೪-೩೪ ವ). ದೀವದ ರಾಯ = ಬೇಟೆಯಾಡುವ ಸಾಧನವಾಗಿ ಬಳಸುವ ಪ್ರಾಣಿಗಳಂತೆ ಸೆರೆಯಲ್ಲಿಟ್ಟ ರಾಜ ; ಇತರ ರಾಜರನ್ನು ಶರಣಾಗತರಾಗಿ ಮಾಡಲು ಸೆಳೆಯಾಗಿ ಮಾಡಿಕೊಂಡ ರಾಜ: ಕದಪಂ ಪೊಯ್ಯುನ್ನದ ಕೈಗೋಳಿಸಿ ತಿವುಳನಂ ಗಣ್ಡುದೊತ್ತಾಳ್ದನೊತ್ತಂಬದೆ ಪೂಗಿಟ್ಟೇಱದಂ ಮಾಳವನನಿರದೆ ಸಟ್ಟಿಂಬಿನಂ ಮೆಟ್ಟಿ ಸಿಟ್ಟಿಕ್ಕಿದನಂಗಾಧೀಶನಂ ರಾಯರನೆ ಬದಿಪೊಲಂಗೊಣ್ಣು ತನ್ನಿತ್ರಿಯಿಂ ದೀವದ ರಾಯುಮರ್ಮ್ಮಾಡಿ ಕಾರಾಗೃಹ ದೊಳಿರಿಸಿದಂ (ಮೈಆರಿ. ೧೯೨೯, ೬೩-೧೯ ; 1091). ದೀವದ ಹರಿಣ = ದೀವದ ಪುಲ್ಲೆ: ಪಚ್ಚೆಯ ಜಗಲಿಯ ಚೆಲ್ವಿಂಗೆ ಕಣ್ಗೆಱವಿಯಾದಂತೆ ತೆಱಂಬೊಳೆವ ದೀವದ ಹರಿಣಗಳ ಲೋಚನಪ್ರತಿಬಿಂಬಗಳುಂ . . . ಅತಿ

ರಮಣೀಯಮಪ್ಪಾಗೆ (ಶಂಕಾಮಾ. ೩-೭೫ ಪ). ದೀವದ ಹುಲಿ, ದೀಹದ ಪುಲಿ, ದೀಹದ ಹುಲಿ = ಬೇಟೆಯಲ್ಲಿ ಇತರ ಮೃಗಗಳನ್ನು ಆಕರ್ಷಿಸಲು, ಸೆಳೆಯಾಗಿ ಒಡ್ಡಲು ಉಪಯೋಗಿಸುವ ಹುಲಿ: ಗಿಡುಗ ದೀವ[ಪಾಠಾಂ. ಹ]ದ ಹುಲಿ ಸಾಳುವ ಕರಿ ಕೋಣ ಹಿಡಿಯೆರಲೆಯ ಮೊತ್ತವನು ತಡೆಯದೆ ಕೊಂಡೆಯ್ವುಂದರು ಬೇಟೆಯ ಕಡುಗಲಿಗಳು (ಕುರಾಶಾಂ. ೨೭-೪೪): ಸಾಹಸದ ಬೇಟೆಯಾಡಲ್ ತೋಹಿನೊಳಂ ನಿಂದು ಬೇಡರಾಡಂಬರದಿಂ ದೀಹದ ಪುಲಿಗಳನಿಂಸುತೆ ಸೋಹಿದರ್ (ಹಮ್ಮಿರ. ೪-೪೨); ಲಂಘಿಸಿ ನೆಲನನೊದೆದು ಪುಟನೆಗೆದು ಗರ್ಜಿಸುತ ಬರೆ ಹೆದಱಿ ಕಂಗೆಟ್ಟು ಡೆಂಡಣಿಸಿ ಸರಳಿಸುವ ಹರಿಣಂಗಳಂ ಮೋದಿ ಮುಱಿದಟ್ಟಿ ಕೆಡಹಿದವು ದೀಹದ ಹುಲಿಗಳು (ಹಡಕಾ. ೫-೩೧). ದೀಹದ ಸಾಳುವ = ಪಕ್ಷಿಗಳ ಬೇಟೆಗೆ ಪಳಗಿಸಿ ಉಪಯೋಗಿಸುವ ಪಕ್ಷಿ; ಡೇಗೆ: ಚೋಳಿಗಳ ಪಿಟ್ಟೆಗಳ ದೀಹದ ಸಾಳುವನ ಗಳಿಯಂಟುಗಳ ಶಬರಾಳಿ ಬಂದುದು ಪರ್ಣಶಾಲೆಗೆ (ತೊರರಾ. ೩-೩-೩).

[ <ಪ್ರಾ. ದೀವಿಅ./ಸಂ. ದೀಪಕ./ತೆಲು. ದೀವು. ದೀಮು ]

ದೀವ$_2$ 'ದೀಪ$_1$' ನೋ.

ದೀವ$_3$, ದೀವಿ$_2$ (ನಾ). ದೀವಿಗೆ; ಸೊಡರು; ದೀಪ: "ದೀವ-ದೀಪ = ಸೊಡರು" (ಕಬ್ಬಕೋ. ೦೯); ದೀವಶಬ್ದೋ ದೀಪವಚನಃ (ಶಬ್ದಾನು. ೪೪೧ ವ್ಯಾ.). ದೀವಿ$_2$: 'ದೀವಿಜಾಲ' ಪರಾ.

[ <ಪ್ರಾ. ದೀವ./ಸಂ. ದೀಪ ]

ದೀವ$_4$ (ನಾ). ೧. ಮೀನು ಹಿಡಿಯುವವನು; ಬೆಸ್ತ: "ಧೀವಃ, ಧೀವರಃ = ದೀವಂ" (ಕಾಕಳ. ೫೨); ಸನ್ಯಾಸಿಯೊಬ್ಬಂ ದೀವನರಸಿಯಂ ಹೋಗು ತಿರ್ದೂಮ್ಮೆ ಬಂದ ಗಾವಳಿಗೆ ಹೆದಱಿ ಅಂಜಣಿಗೆಯೊಳಗಡಗಲಾ ದೀವ ನಱಿಯದೆ ಸುರಿದ ಸುರೆಯಿಂದ ಸತ್ತಮಂ ಭಾವಿಸಲು ಲಿಂಗವಾದ ವಿಭಾಂಡೇಶನಂ ಕಂಡನಂದವನೀಶನು (ಹಡಕಾ. ೧೦-೪೩); ಮೀನನ್ನು ಹಿಡಿದು ಜೀವಿಸುತ್ತಿದ್ದವರು ದೀವರು (ಕಣಾಅ. ೪೪೨): ದೀವರ ಹೆಂಗಸರ ಕಳ್ಳನೋಟ, ಯಾರಾರೋ ಹಬ್ಬಿಸಿದ್ದ ಸುದ್ದಿ . . . ಇವೆಲ್ಲ ಅವಳ ಸಾವಿಗೆ ಕಾರಣವಾಗುತ್ತವೆ (ಅಬೋಲಿ. 11 ಮುನ್ನುಡಿ). ೨. ಬೇಡ; ಶಬರ: ಕಣುವೆ ಕಾವ ದೀವರಿಗೆ ಅರಮನೆಯವರ ಮುಖಾಂತ್ರ ವಿಂಗಡದಲೂ ಸಲುವದು (ಎಕ. VIII, ತೀರ್ಥಹ. ೯೪-೨೩; 1632).

[ <ಸಂ. ಧೀವನ್ ]

ದೀವ$_5$ (ನಾ). (?): ಆವುದು ಬಾಗಿದುದುಮಧಿಕ ಬಸನಂ ಕೇವಲಮಾಗೆ ನೆಗೆವುದು ಚಿತಾವಯವಂ ದೀ[ಪಾಠಾಂ. ದಿ]ವದಿಂ ನಿಂದು ಸಿತಗನಂ ನುಡಿದುವು ಭಾವಿಸೆ ಬಗೆಗೊಳದಾರ ಕೊರ್ಣದಿಯಂ (ಕವಿರಾ. ೨-೧೫೦). [?]

ದೀವಗಾಱ (ನಾ). ಪ್ರಾಣಿಗಳನ್ನು ಆಕರ್ಷಣೆಯಾಗಿ ಒಡ್ಡಿ ಅವುಗಳ ಆಸೆಯಿಂದ ಬರುವ ಇತರ ಪ್ರಾಣಿಗಳನ್ನು ವಂಚಿಸಿ ಬಲೆಗೆ ಕೆಡಹು ವವನು; ದೀವದ ಮೃಗಗಳ ಸಹಾಯದಿಂದ ಬೇಟೆಯಾಡುವವನು: ಮನೋಜನೆಂಬ ದೀವಗಾಱನ ಪುಲ್ಲೆಗಳಂತೆ ತಂತಮ್ಮ ಮನೆಯ ಮುಂದಣ ಪಚ್ಚೆಯ ಜಗಲಿಗಳೊಳಂ . . . ತಂಡತಂಡದ ನೆರೆದಿರ್ದ ಪೆಂಡವಾಸ ದೊಳ್ವೆಂಡಿರಂ ಕಂಡು (ಪಂಪಭಾ. ೪-೮೪ ವ). [ ದೀವ$_1$ + -ಕಾಱ ]

ದೀವಟ 'ದೀವಟಿಗೆ' ನೋ.

ದೀವಟಿಕಳ್ಳ 'ದೀವಟಿಗೆಕಳ್ಳ' ನೋ.

ದೀವಟಿಗ, ದೀವಟ್ಟಿಗ (ನಾ). ದೀಪವನ್ನು ಹಿಡಿಯುವವನು; ಪಂಜು ಹಿಡಿಯುವ ವೃತ್ತಿಯವನು: ಕರ್ಗತ್ತಲೆಯೊಳಿದೆಯಾಡುತಡಹದಂತೆ ತನಗೆ ತಾಂ ದೀವಟಿಗನಾದನೊ . . . ಎಂದೆನಿಸಿ ಮೆಱೆದನಚಳಿತ ಸಿದ್ಧನು (ಸಿದ್ಧರಾ. ೭-೩೯): ಅಟಿಗ ಪ್ರತ್ಯಯಕ್ಕೆ-ಕೊಲ್ಲಟಿಗಂ, ದೀವಟಿಗಂ, ಮಾವಟಿಗಂ (ಶಮದ. ೨೦೪ ಪ್ರಯೋ): ರವಿಶಶಿಗಳೊಪ್ಪುವ ದೀವಟಿಗರು (ತೊರರಾ. ೧-೮-೭೩): ದೀವಟಿಗರು ಕೊಟ್ಟಿಗೆಯರು ವರತುರಗಾವಳಿಗಳ ನೆಱೆ ಬಿಡುವ ಕೋವಿದನಿವಹ ಗಜಾರೋಹಕರ ಗೃಹ ತೀವಿಹುವಾ ಪಟ್ಟಣದೆ (ಕಂನವಿ. ೬-೫೭); ಇಬ್ಬರು ದೀವಟಿಗರು . . . ಅವರವರ ಮನೆ ಮುಟ್ಟ ಹೋಗಿ ತಲಪಿಸಿದರು (ಸವತಿ. ೪೨). ದೀವಟ್ಟಿಗ: ತೆಗಸು ಚೂಣಿಯ ಬಲವ ದೀವಟ್ಟಿಗರ ಕರೆಕರೆ ತೈಲಪೂರ್ಣದ ತೊಗಲ ಕುನಿಕಿಲ ಬಂಡಿ ಕವಿಯಲಿ ಕೋಟಿ ಸಂಖ್ಯೆಯಲಿ (ಕುವ್ಯಾದ್ರೋ. ೧೫-೩೨); P ಇದಂ ಛಂದಸ್ಸಿಗಾಗಿ ಮಾಡಿಕೊಂಡ ರೂಪ.

[ ದೀವ$_3$ + -ಅಟಿಗ; P ಇದನ್ನು ದೀವಟಿಗೆ + -ಅ$_7$ ಎಂದೂ ಬಿಡಿಸಬಹುದು. ]

ದೀವಟಿಗೆ, ದಿವಟಿ, ದೀವಟಿ (ನಾ). ಪಂಜು; ಹಿಲಾಲು: "ಪಂಜುಃ = ದೀವಟಿಗೆ" (ಕಾಕಳ. ೬೫): ಕಾಂತಿಯಿಂದಂಗಡಿಗಳೊಳ್ ಸರ್ವಜನತಾ ಗೃಹಾಂತದೊಳ್ ದೊರೆದೊರೆಗಳೋಲಗದೊಳೊಪ್ಪಿದುವನಂತದೀಪಂ ದೊಡ್ಡದೀವಟಿಗೆಗಳ್ ನಭದ ನಕ್ಷತ್ರಜಾಲದಂತೆ (ಜಲಪು. ೪೮-೩೨): ದೆಸೆದೆಸೆಗಳ ಬೆಳಗುತ ದೀವಟಿಗೆಗಳೆಸೆದುವು (ಕಂನವಿ. ೮-೨೨): ದೀವಟಿಗೆ ಗಳನ್ನು ಹಿಡಿದುಕೊಂಡು ಪೋಗಿ ನೆಲಮಾಳಿಗೆಗಳನ್ನೆಲ್ಲಾ ಹುಡುಕಿದರು (ಶ್ರೀರಾಯ. ೧೩೦); ದಾಸಿಯರು ಕೈಯ ದೀವಟಿಗೆಗಳಿಗೆ ಗುಗ್ಗುಳವನ್ನೆರಚಿ ಉರಿ ಮಾಡಿದರು (ಸವತಿ. ೪): ದೀವಟಿಗೆ ಮುಂದೆ ದೀಪವೇ (ಗಾದೆ). ದಿವಟಿ: ಕರದ ದಿವಟಿ ಹಿಲಾಲುಗಳ ಭಾಸುರ ಜಗಂಜ್ಯೋತಿಗಳ ಕಾಂತಿಸ್ಫುರಿತ ಸೂರ್ಯಜ್ಯೋತಿಗಳ ಸಾಲುಗಳು ಬೆಳಬೆಳಗೇ (ಅನಂರಾ. ೧-೨೪-೩೫). ದೀವಟಿ: 'ದೀವಟಿಕಳ್ಳ' ಪರಾ; P ದಿವಟಿ, ದೀವಟಿ ಎರಡೂ ಶಬ್ದಗಳು 'ದೀವಟಿಗೆ' ಎಂಬುದರ ಸವಕಳಿ ರೂಪವಿರ ಬಹುದೆ ?

ದೀವಟಿಗೆಯವ = ದೀವಟಿಗ: ಚಾವಡಿಯ ಕಾವಲ್ಗಾರರು ನೀರುಗಂಟಿ ದೀವಟಿಗೆಯವ . . . ಕಂದಾಚಾರದವರು ಕಳ್ಳಬಂಟರು ಅವರು ಇವರು- ಎಲ್ಲಾ ಗರ್ಜುವೆ, ಸೇನಾಯಮುಂದ್ರೆ, ಕಡತದ ಕಾಣಿಕೆ . . . ಅದು, ಇದು- ಎನ್ನುತ ಎಲ್ಲವನ್ನೂ ಸಲ್ಲಿಸಿಕೊಳ್ಳುತ್ತಾರೆ (ಚಟ್ಟಅ. ೧೫೫-೨೦): ಆಟದ ವನಿಗೆ ದೀವಟಿಗೆಯವನ ಮೇಲೇ ಕಣ್ಣು (ಗಾದೆ).

[ ?./ಸಂ. ದೀಪವರ್ತಿಕಾ./ಮರಾ. ದಿವಟೀ./ ತೆಲು. ದೀವಟ, ದೀವಟೀ, ದಿವ್ವಟ ]

ದೀವಟಿಗೆಕಳ್ಳ, ದೀವಟಿಕಳ್ಳ (ನಾ). ಬೆಂಕಿ ಹೊತ್ತಿಸಿ ಅದರ ದೆಸೆ ಯಿಂದಾದ ಅವಸ್ಥೆಯಲ್ಲಿ ಕಳ್ಳತನ ಮಾಡುವವನು; ಪಂಜು ಹಿಡಿದು ಸೂರೆ ಮಾಡುವ ಕಳ್ಳ; ಪಂಜುಗಳ್ಳ: ಹಿಂದೆ ದೀವಟಿಗೆ ಕಳ್ಳರ ಹಾವಳಿ ಬಹಳವಾಗಿತ್ತು (ಜಾಂ). ದೀವಟಿಕಳ್ಳ: (ಕ).

[ ದೀವಟಿಗೆ + ಕಳ್ಳ$_1$ ]

ದೀವಟಿಗೆಮಾನ್ಯ (ನಾ). ದೀವಟಿಗರಿಗೆ ಕೊಟ್ಟ ಉಂಬಳಿ,-ವೃತ್ತಿ; ದೀಪ ಹಿಡಿಯುವವರಿಗೆ ಉಪಯೋಗಕ್ಕಾಗಿ ಕೊಟ್ಟ ಭೂಮಿ: (ಕ).

[ ದೀವಟಿಗೆ + ಮಾನ್ಯ ]

ದೀವಟಿಗೆವೆಣ್ (ನಾ). ದೀಪವನ್ನು ಹಿಡಿಯುವವಳು; ದೀಪವನ್ನು ಹಿಡಿಯುವ ಸೇವಕಿ: ಕಾಳಾಂಜಿ ಕುಂಚ ಹಡಪ ಪಾಪುಗೆ ರತ್ನದಾಲವಟ್ಟವು ಚೊಂಬಾಳ ಸಾಲ ದೀವಟಿಗೆವೆಣ್ಗಳು ಭೂಪನಿದಿರಿನೊಳ್ ಮೇಳದೊಳೆಸೆ ದರರ್ತಿಯಲಿ (ಕಂನವಿ. ೮-೫೧). [ ದೀವಟಿಗೆ + ಪೆಣ್ ]

ದೀವಟಿಗೆ ಸಲಾಂ, ದೀವಟಿಗೆ ಸಲಾಮು (ನಾ). ಪ್ರತಿದಿನ ಸಾಯಂ ಕಾಲ, ರಾಜ, ಗುರು ಮತ್ತು ಇತರ ಶ್ರೇಷ್ಠಪುರುಷರುಗಳ ಅಥವಾ ದೇವತಾವಿಗ್ರಹಗಳ ಮುಂದೆ ಉರಿಯುತ್ತಿರುವ ಪಂಜು ಗಳನ್ನಾಡಿಸಿ ಗೌರವ ಸೂಚಿಸುವ ಒಂದು ಆಚರಣೆ: ಪಟ್ಟದಾನೆ ಕುದುರೆಗಳು ನದೀತೀರಕ್ಕೆ ಪೋಗಿ ಅಲ್ಲಿ ಆಗತಕ್ಕ ಪೂಜೆ ದೀವಟಿಗೆ ಸಲಾಂ

ಮೊದಲಾದುದನ್ನು ನೆರವೇರಿಸಿಕೊಂಡು ಬರುತ್ತಲಿರುವ ಸಮಯದಲ್ಲಿ ದೊರೆಗಳವರಿಗೆ ದೀವಟಿಗೆಸಲಾಂ ಆದ ನಂತರ (ಮಹಾರಾ. I, ೩೭); ಆ ಕಂಬಕ್ಕೆ ಈಗಲೂ ಮಹಾಪೂಜೆ ವೇಳೆ, ದೀವಟಿಗೇಸಲಾಂ ಮಾಡಿ ಮಹಾಪೂಜೆಗೆ ಆಮಂತ್ರಣ ಕೊಡುವ ಪದ್ಧತಿ ಇದೆ (ತುಳುನಾ. ೦೧೯). **ದೀವಟಿಗೆಸಲಾಮು** : (ಕ). [ ದೀವಟಿಗೆ + ಸಲಾಂ ]

**ದೀವಟಿಗೆಸಲಾಮು** 'ದೀವಟಿಗೆಸಲಾಂ' ನೋ.

**ದೀವಟಿಗೆಸೇವೆ** (ನಾ). ಪಂಜುಗಳಿಂದ ನೀವಳಿಸಿ ಸಲ್ಲಿಸುವ ಸೇವೆ : ನೋಡ ಬನ್ನಿರೊ ಜನರು ಶ್ರೀಕೃಷ್ಣನ ಜೋಡು ದೀವಟಿಗೆ ಸೇವೆ (ಹರಿಂದ. ೨-೪೨ ಪಲ್ಲವಿ) ; ದೀವಟಿಗೆಸೇವೆಯಾದ ನಂತರ ದೇವರ ಮೆರವಣಿಗೆ ಹೊರಡುತ್ತದೆ (ರೂಢಿ). [ ದೀವಟಿಗೆ + ಸೇವೆ$_1$ ]

**ದೀವಟ್ಟಿಗ** 'ದೀವಟಿಗ' ನೋ.

**ದೀವಬ್ಬರಸಿ** (ನಾ). ಒಬ್ಬಾಕೆಯ ಹೆಸರು : ಶ್ರೀವಧು ಧರ ಪೋಟಲ್ಗೋರಾವ ನೃಪಪ್ಪಗ್ರಮಹಿಷಿ ಭುವನಾಂಬಿಕೆ ವಾಗ್ದೇವಿಯರ ದೊರೆಯರೆನಿಸಿದ ದೀವಬ್ಬರಸಿಯರ ದೊರೆಗೆಟ್ಟರ್ ಪೆಱರೊಳರೆ (ಎಕ. X, ಮುಳಬಾ. ೩೮-೩: ಹು. ೬೯೦). [ ದೀವಬ್ಬೆ + ಅರಸಿ ]

**ದೀವಬ್ಬೆ** (ನಾ). ಒಬ್ಬಾಕೆಯ ಹೆಸರುಂ: ಸ್ವಸ್ತಿ ಶ್ರೀಮದ್ ಸಕರರ ಸೂಳೆಯಬ್ಬೆಯ ಮಗಳ್ದೀವಬ್ಬೆ ಮಾಡಿಸಿದ ತೂಮ್ಬು (ಎಕ. IX (೮), ಚನ್ನಪ. ೨೦೭-೨ : ೯೯೯). [ ದೀವ$_0$ + ಅಬ್ಬೆ$_1$ ]

**ದೀವರಿಗೆ** (ನಾ). ಒಂದುಂ ಬಗೆಯಂ ಸಸ್ಯ : ದೇವಗರಿಗೆ . . . ದೀವರಿಗೆ, ಕಾಡುಜೀರಕ (ಮೃಜಿಗಿ. ೩೮-೭೩೯). [ ? ]

**ದೀವಸ**, **ಧೀವಸ** (ನಾ). ೧. ಬುದ್ಧಿಗೆ ಸಂಬಂಧಿಸಿದುದು; ಆಲೋಚನೆ; ಅಭಿಪ್ರಾಯ. ೨. ಧೈರ್ಯ ; ಕೆಚ್ಚು : ಇರುಳೀದೀ ದಿವಸವ ದೀವಸಂ ಮಾಳ್ಪ ತರಣಿ ತರಣಿಗಂಬರವನು ಏರಚಿಸಿದಬ್ಬುರುಹನ ಪರಿಕಿಸದಿಂತು ಪರಶಿವನೇಕೆ ಪೆತ್ತನೊಯೆಂದ (ಸೂಲಸೂ. ೨೩-೫೭) : ಇನಿಸುಂ ಚೊಕ್ಕಳಿಕೆಯ ದೀವಸಮೋಸರಿಸದೆ ತಕ್ಕಳಿಯದೆ ತದ್ದೀರೋದಾತ್ತಂ ಮೇರುವಿನಂತಿರ್ದಂ (ಜಯಸೀ. ೦೭-೧೫). **ಧೀವಸ** : ೨. "ಧೀವಸಮಂ ದೆನಲುಸಿರ್ದಂ ಧೈರ್ಯಾರ್ಥಮಂ" (ಶಕುನಿ. ೧೧೭). ೩. ನಿಷ್ಠೆ; ದಾರ್ಢ್ಯ: ದೇಶಿಯನಾಡಿದಳು ಪರವೆನಾಚಿ ವಲ್ಮೀಕನಾಥನ ಮುಂಬಿನೊಳು ರಸಿಕರೆದೆಯನಲ್ಲಾಡಿಸುತ ಯತಿಜನದ ಧೀವಸವನೀಡಾಡುತ (ಸೌಂದಪು. ೮-೧೧). ೪. ಉದ್ಧಟತನ; ಧಾರ್ಷ್ಟ್ಯ: ಕೊಡಲು ಹುಸಿದಡವಿಗಟ್ಟಿ ಬೈಚಿಟ್ಟು ನೆಂಬುದನಿಂತು ಎಸೆವ ವೇದಂಗಳೊಳು ಕೇಳಿ ಪೊಗಳುವಡದು ನಿನ್ನ ಧೀವಸವೆಂದನು (ಹಿಚಿಕಾ. ೨-೦೮). [ <ಸಂ. ಧೀವಶ ]

**ದೀವಸಂಗೆಡು** (ಕ್ರಿ). ಧೈರ್ಯಗೆಡು : ಬಗೆದನಂದು ಪೂರ್ವಾಚಲದೊಳು ಆವರಿಸಿ ಜಗವ ದಶದಿಶೆಯ ಮುದ್ರಿಸಿದ ತಮ ದೀವಸಂಗೆಟ್ಟೋಡೆ ಮುಂಚೂಣಿಯೊಳ್ಪದ್ಮಿನೀವಲ್ಲಭಂ (ಕೂಟ್ಟೂಲ. ೩-೩).

[ ದೀವಸ + ಕೆಡು$_1$ ]

**ದೀವಸಿ**, **ಧೀವಸಿ** (ನಾ). ದಿಟ್ಟ ; ಸಾಹಸಿ ; ಶೂರ : ದೊರೆಗಳೊಡನೀ ಘಟ್ಟಿಗೊಬ್ಬನೆ ನಿಲುವೆನೆಂದನದಾವ ಸತ್ವನಿಧಿ . . . ಈ ಪರಿ ಮುಟ್ಟಿ ದೀವಸಿಯಾವನೆಂದುದು ನಿಖಿಳ ಪರಿವಾರ (ಕುಮ್ಯಾಗ. ೩-೪೪). **ಧೀವಸಿ** : ಬಿರುದಭಟರೌಕಿದರು ರಾಯನ ಧುರದ, ಧೀವಸಿಗಳು ನಿಹಾರದಲುರ ವಣಿಸಿದರು ಶಲ್ಯನಂಬಿನ ಮಳೆಯ ಮನ್ನಿಸದೆ (ಕುಮ್ಯಾಶ. ೨-೪೨).

[ <ಸಂ. ಧೀವಶಿನ್ ]

**ದೀವಸಿಅಮಾವಾಸ್ಯೆ** 'ದಿವಶೀಅಮಾವಾಸ್ಯೆ' ನೋ.

**ದೀವಸಿಕೆ** (ನಾ). ಧೈರ್ಯ ; ಸಾಹಸ : ಬಿಸಿಲು ಮಳೆ ಚಳಿಗಳಿಗೆ ಸಲಿಸ್ಯೆರಿಸುವ ದೇಹವೆ ನಿನ್ನದಿದು ದೀವಸಿಕೆಗಾವಂಜುವೆವು [ಪಾಠಾಂ. ಧೀವಸತನಕ್ಕಾವಂಜುವೆವು] (ಕೂರರಾ. ೨-೩-೩೫). [ ದೀವಸ + – ಇಕೆ ]

**ದೀವಸಿಗ**, **ಧೀವಸಿಗ** (ನಾ).=ದೀವಸಿ : ದೇವ ದನುಜ ನರೋರಗರ ಸು ಭ ಟಾ ವ ಳಿ ಯೊ ಳಿ ವ ನಂ ತೆ ಧೈರ್ಯದ ದೀವಸಿಗರುಂಟೀ ವಿಚಾರಿಸಲೆಂದನಸುರೇಂದ್ರ (ತೊರಶಾ.೬-೫೦-೫೭):"ಜಾಗರೂಕನಾದವನು, ಎಚ್ಚರಿಕೆಯುಳ್ಳವನು, ಸಾಹಸಿ" (ಪ್ರಥಮ್ಮ); ಆವ ದೀವಸಿಗನ ಆಟಪಾಟ ಕೂಟಗಳಲ್ಲಿ ಕಲಿತು, ಆ ನಿಶ್ಚಿಂತಸ್ಥಿತಿಯ ಉತ್ಸವದ ಆನನ್ದದ ಅನ್ನಸ್ವತ್ವದಿಂದ ಜೀವಿಸಿದ್ದವೋ, ಆ ಕಂಠೀರವನು . . . ತಪ್ಪಿಸಿಕೊಂಡು . . . ಬದುಕಿಕೊಂಡನು (ವಿಗಧ. ೩೪-೧೨). **ಧೀವಸಿಗ** : ಹಾವಾಡಿಗನನು ಗೆಲುವೆನೆನುತಲಿ ಧೀವಸಿಗ ತಿರುಗಿದನು ಪುನರಪಿ ತಾಯ ಮಂದಿರಕೆ (ಪ್ರಹ್ಲಾಚ. ೪-೬). [ ದೀವಸ + – ಇಗ ]

**ದೀವಳಿ** 'ದಿವಾಳಿ$_1$' ನೋ.

**ದೀವಳಿಗೆ** 'ದೀಪಾಳಿಗೆ' ನೋ.

**ದೀವಾಣ** 'ದಿವಾಣ' ನೋ.

**ದೀವಾಳಿಗೆ** 'ದೀಪಾಳಿಗೆ' ನೋ.

**ದೀವಾಳೀಚರಧವಳ** (ನಾ). ಒಂದುಂ ಬಿರುದು (?) : ಸೋಮೇಶ್ವರದಾಸಿಯಾಶ್ರಿತಜನಕಲ್ಪವೃಕ್ಷಂ ದೀ ವಾ ಳೀ ಚ ರ ಧ ವ ಳಂ (ಎಕ. XII, ೨೬೯-೧೦ : 1040). [ ? ]

**ದೀವಿ$_1$** 'ದೀಪ$_1$' ನೋ.

**ದೀವಿ$_2$** 'ದೀವ$_3$' ನೋ.

**ದೀವಿ$_3$** (ನಾ). (?) : "ವಂಕಿಯನೆ ದೀವಿ[ಪಾಠಾಂ. ದಿವ] ಮೇದರಕತ್ತಿಯಕ್ಕು" (ಕುಂಗರಾ. ೦೦೩-೮). [ ? ]

**ದೀವಿಕರೆ** (ನಾ). ದ್ವೀಪದ ತಡಿ,–ತೀರ : ದೀವಿಕರೆಯರಗಳಿನ್ ಮೊಳಗೆ ಮಾರುಲಿಗಳ್ ಬೆದರಿ, ಎದೆಗುಂದಿ, ಪೆಚ್ಚಾದರೆಮ್ಮವರು ಕೇಳ್ದೊಡನೆ ! (ಪಾರಸಿ. ೦೫-೩೫೪). [ ದೀವಿ$_1$ (<ದೀಪ$_1$) + ಕರೆ$_4$ ]

**ದೀವಿಗೆ** (ನಾ). ಸೊಡರು; ದೀಪ : "ಆ ದೀವಿಗೆ ಜ್ಯೋತಿ ದೀಪ್ತಿ ಗೃಹ ಭಾನುವಕ್ಕು" (ಮುಂಗರಾ. ೬೦-೦೮); ದೀವಿಗೆಗಳ್ ಜಲಕ್ಕನೆಕ್ಕೆಕ್ಕೆಯಿನಿಟ್ಟಳಂ ಬೆ ಳ ಗು ತಿ ರ್ದು ವೆರಟ್ಟಿ ಸಯೊಡ್ಡಣಂಗಳೊಳ್ (ಪಂಪಭಾ. ೦೨-೫): ದೀವಿಗೆಗಳಂ ಪಿಡಿದು ದೀಪಧಾರಿಣಿಯರ್ವಂದು (ಕಾದಂಬ. ೩೨೨); ಕೊಸಗಿನ ಪೂವಿನೊಪ್ಪ ಸುರಹೊನ್ನೆಯ ಪುಷ್ಪದ ಚೆಲ್ವು . . . ರಂಜಿಸ ವನದೇವಿಯರ್ ನಲಿದು ಮನ್ಮಥರಾಜನ ಬರ್ಪುದಕ್ಕೆ ರಾಗಿಸಿ ಮನವೊಲ್ದು ಪೊತ್ತಿಸಿದ ದೀವಿಗೆಯಂದದಿನೊಪ್ಪಿ ತೋಱುಗುಂ (ಧರ್ಮಾಮೃ. ೦೩-೦೩) : ಸುಖಿಕ್ಕಿ ತುಂಬಿದ ದೀವಿಗೆ ಮನೆಯೆಲ್ಲವ ಸುಟ್ಟಂತೆ ಆನು ಮಾಡಿದ ಭಕ್ತಿ ಎನಗಿಂತಾಯಿತ್ತು (ಬಸವ. ೮೫೦) ; ಪಲವುಂ ದೀವಿಗೆಗಳ್ . . . ಒಪ್ಪೆ ತಿರ್ದುವಾ ಮನೆಮನೆಯೊಳ್ (ಗಿರಿಶ. ೪-೮೦) : ಎರಡು ಬಲದಲಿ ಹಿಡಿದ ದೀವಿಗೆ ನಂದಿದವು (ಕುಮ್ಯಾದ್ರೋ. ೦೭-೭).

**ದೀವಿಗೆಯೆಣ್ಣೆ** = ದೀಪ ಉರಿಸಲು ಬಳಸುವ ಹರಳೆಣ್ಣೆ, ಎಳ್ಳೆಣ್ಣೆ, ಹೊಂಗೆಯೆಣ್ಣೆ ಮುಂತಾದುವು : (ಕ). [ < ಸಂ. ದೀಪಿಕಾ ]

**ದೀವಿಗೆಗಂಬ** (ನಾ).=ದೀಪಕಂಭ ೧ : ಏಗೆ ರಮ್ಯವಡೆದ ಹೊಂಬರಿಯಣ ತಳಿಗೆ ತಂಬಿಗೆ ಗಿಂಡಿ ಗಿಣ್ಣಲುಗಳನು ನಗೆಮೊಗದರ್ಪಣ ಹಂಸೆ ಪುತ್ಥಳಿಯ ದೀವಿಗೆಗಂಬಗಳನಿತ್ತನೊಲಿದು (ಮೋಹತ. ೧೫-೧೮).

[ ದೀವಿಗೆ + ಕಂಬ$_1$ (< ಕಂಭ) ]

**ದೀವಿಗೆವಿಡಿ** (ಕ್ರಿ). ದೀಪವನ್ನು ಹಿಡಿ: ಉಸಿರನಾರೈದು ನಿರ್ಜೀವವೆಂದೆಂದು ಶಂಕಿಸಿ ನೋಡಲಮ್ಮದೊಯ್ಯನೆ ದೂರದಿಂದ ದೀವಿಗೆವಿಡಿದು ದಿಟ್ಟಿಸಿದರು (ಸಿದ್ಧರಾ. ೨-೪). [ ದೀವಿಗೆ + ಪಿಡಿ$_1$ ]

**ದೀವಿಜಾಲ** (ನಾ). ದೀಪಗಳ ಸಾಲು,–ಶ್ರೇಣಿ,–ಸಮೂಹ : ತಳತಳಿಪ ದೀವಿಜಾಲಮಂ ಸಂದಳಿಸಿರೆ (ದೊಂಕಿಶಾ. ೧೯೪೫, ಬಂಕಾಪುರ. ೨೬-೪ ; 1076). [ ದೀವಿ$_2$ (<ದೀವ$_3$) + ಜಾಲ$_1$ ]

**ದೀವಿನಾಡು** (ನಾ). ದ್ವೀಪದ ಪ್ರದೇಶ: ಕೇಳಿ ಬಲ್ಲೆವು ಲಂಕೆಯಂ ತೆಂಕಣದ ಕಡಲ ನಡುವಣ ದೀವಿನಾಡಂ (ಶ್ರೀರಾಮಾ. ೨೯೭-೨೯೯). [ ದೀವಿ$_1$ (<ದೀವ$_1$) + ನಾಡು ]

**ದೀವಿಸು** (ಕ್ರಿ). ಆಶೀರ್ವದಿಸಂ; ಆಶೀರ್ವಾದ ಮಾಡಂ; ಹರಸು: "ಎಲ್ಲೆ ಭಕ್ತರೇ ನಿಮಗೂ ಮಹಿಳೇಶ್ವರಿಗೂ ಶಿವಾನುಗ್ರಹಮುಂಟಾಗಲಿ" ಎಂದು ದೀವಿಸಿದರು (ಪುಣ್ಯಪಿ. ೧೬೭). [ ← ತೆಲು. ದೀವಿಂಚು ]

**ದೀವಿಹಲಸು** (ನಾ). ಒಂದು ಬಗೆಯ ಹಲಸು; ಸೀಮೆಹಲಸು; ದ್ವೀಪದ ಹಲಸು: ಸೀಮೆಹಲಸು, ದೀವಿಹಲಸು, ರೊಟ್ಟೀಹಲಸು (ಪ್ರುಕಿಗಿ. ೯-೧೬೦); ಆಲೂಗಡ್ಡೆ . . . ಬಾಳೆಕಾಯಿ, ದೀವಿಹಲಸು, ಹಲಸಿನ ಕಾಯಿಯ ಸೊಳೆ ಇತ್ಯಾದಿಗಳನ್ನೂ ಈ ರೀತಿ ಕರಿಯಬಹುದು (ಅಡುಶಾ. ೯೦). [ ದೀವಿ$_1$ (<ದೀವ$_1$) + ಹಲಸು (<ಪನಸು) ]

**ದೀಹ** 'ದೀವ$_1$' ನೋ.

**ದೀಹಳಿಗೆ** 'ದೀಪಾಳಿಗೆ' ನೋ.

**ದೀಹಾರ** (ನಾ). ದೀಹದ ಮೃಗಗಳನ್ನು ಇಡುವ ಜಾಗ,-ಸ್ಥಳ: ಇದು ದೀಹಾರದ ಗೇಹದಂತೆ ಹರಿಣೀರವ್ಯಂ ಗೃಹಗ್ರಾಮದಂತುದಿತಕ್ರೋಢ ವಿಭಾಸಿ ಕೋಶಗೃಹದಂತಪ್ಪಾಪದಾಧಿಷ್ಠಿತಂ ಕದನೋರ್ವೀತಳದಂತೆ ದಾರುಣಚಮೂರಾವಸ್ಥಿತಕ್ಷೋಭಿತಂ ಮದವತ್ಕುಂಜರಗಾತ್ರದಂತೆ ವಿಳಸದ್ಭೂಪ್ರಭಾವಿಭ್ರಮಂ (ಪುಷ್ಪಪು. ೫-೩೯): "ದೇಹಾರ (ದೇವಾರ ಎಂದಿರಬಹುದು)" (ಪುಷ್ಪಪು. ಅನುಬಿ). [ ದೀಹ (<ದೀವ$_1$)+<ಆಗಾರ ]

**ದು, ದೂ** (ನಾ). ಎರಡು ಎಂಬ ಸಂಖ್ಯೆ: ಏಕದ್ವಿತ್ರಿ ಚತುಃ ಶಬ್ದಾಕೃತಿಗಕ್ಕುದುತಿಔಗಳಾದೇಶಂಗಳ್ (ಶಮದ. ೨೯೦). 'ದಂಗುಣ', 'ದಂಗ್ಗಾಣೆ' ಪರಾ. ದೂ: "ದು (ದೂ)-ದ್ವಿ=ಎರಡು" (ಕರ್ನಕೋ. ೨೦). 'ದೂಜಾವ' ಪರಾ. [ <ಸಂ. ದ್ವಿ ]

**ದುಂ** (ನಾ). ಒಂದು ಅನುಕರಣ ಶಬ್ದ: ದುಡುಹಂಬ ದುಮ್ಮೆಂಬ . . . ಖಣಿಲೆಂಬ ಕಟಲೆಂಬ ದನಿ (ವೀಶೈಪು. ೨-೧೦-೮); 'ದುಂ' 'ದ್ದಂ' ಎಂಬ ಸಪ್ಪಳ ಮಾಡುವ ವಾದ್ಯಗಳನ್ನು ಬಾರಿಸಿ ಹಾಡುವ ವಾಡಿಕೆಯು ಮೊದಲಿನಿಂದಲೂ ಬಂದಿದೆ (ಕನ್ನಜಾ. ೯೩).

**ದುಂಕಿ** (ನಾ). (ಕರಾ) ಗಾಣವನ್ನು ಎಳೆಯುವಾಗ ಗಾಣದ ಮರಕ್ಕೆ ಸಮತೋಲನ ಬರುವಂತೆ ಮಾಡಲು ಗಾಣದ ಮರದ ಮೇಲೆ ಇಡುವ ಭಾರ: ಹೊಡಲಿಕ್ಕೆ ಬರದ ಎತ್ತು ಗಾಣಕ್ಕೆ ಕಟ್ಟಿದರೆ ದುಂಕಿ ಎಳೆದೀತೇ (ರೂಢಿ). [ ? ]

**ದುಂಡಂಕಿ** 'ದುಂಡಂಕೆ' ನೋ.

**ದುಂಡಂಕೆ, ದುಂಡಂಕಿ** (ನಾ). ಪೂರ್ಣ ಅಂಕಿ; ಬಟುವು ಸಂಖ್ಯೆ: ಕೃಪಣತನ ಇಲ್ಲಿಯೂ ಬಿಡಲಿಲ್ಲವೊ? ದುಂಡಂಕೆ ಹೇಳಬೇಕು (ಗಾಳಿಪ ೨೩). ದುಂಡಂಕಿ: ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದಾಗಲೆಲ್ಲ ಸಾಮಾನ್ಯವಾಗಿ ದುಂಡಂಕಿ ಹಾಕುತ್ತಾರೆ (ರೂಢಿ). [ ದುಂಡು$_1$ + ಅಂಕೆ$_2$ ]

**ದುಂಡಂಚು** (ನಾ). ಸೀರೆ, ಪಂಚೆ ಮೊದಲಾದವುಗಳ ದಪ್ಪವಾದ ಅಂಚು,-ಗುಂಡಂಚು,-ದಂಡಾಕಾರವಾಗಿರುವ ಅಂಚು.

ದುಂಡಂಚಿನ ಪಂಚೆ = ಗುಂಡಂಚಿನ ದೋತರ: ದುಂಡಂಚಿನ ಪಂಚೆ ಉಟ್ಟುಕೊಂಡು ಜರೀಶಲ್ಯ ಹೊದ್ದುಕೊಂಡು ರಾಯರು ಹೊರಟರು(ರೂಢಿ). ದುಂಡಂಚಿನ ಸೀರೆ =ದಪ್ಪದಾದ ಅಂಚಿನ ಸೀರೆ; ಗುಂಡಂಚಿನ ಸೀರೆ: ದುಂಡಂಚಿನ ಸೀರೆ ತುಂಬಾ ಬಾಳಿಕೆ ಬರುತ್ತದೆ (ರೂಢಿ).

[ ದುಂಡು$_1$ + ಅಂಚು$_2$ ]

**ದುಂಡಕ್ಕಿ** (ನಾ). ೧. ಗುಂಡಗಿರುವ ಅಕ್ಕಿ: ಹಂಡಕ್ಕಿ ದುಂಡಕ್ಕಿ ದುಂಡು ರಾಜಣದಕ್ಕಿ . . . ನೆಲ್ಲಕ್ಕಿ ಬಂದವೆ ನಮ್ಮ ಅರಮನೆಗೆ (ನಾಪದ. ೧೧೩). ೨. ನಂಬಾ ಗದ ಅಕ್ಕಿ. [ ದುಂಡು$_1$ + ಅಕ್ಕಿ$_1$ ]

**ದುಂಡಗೆ$_1$** (ನಾ). ಒಬ್ಬಾತನ ಹೆಸರಂ (?): ಪುತ್ತೂರುಡೆ ಶಿವವಾರವನ್ನುಂ ದುಣ್ಣಗೆಗ್ಗಂ ನಲ್ಲತ್ತೂರೊಡೆ ಒಗ್ಗಮನೆ ಬಳೆಗವಂ ಅಯ್ಯೂಡ್ಡಮ್ಮು ಮೆದ ಕಟನಿಯು ಎಬ್ಬಾಮ್ಮು ಬಾಳೆಕೊಟ್ಟಪ್ಪುಟ್ಟು ಬ್ರಹ್ಮದೇಯಂ ಕೊಟ್ಟೋದು (ಎಕ. X, ಕೋಲಾರ. ೨೩೦-೩: ಸು. ೩೦೦ ?). [ ? ]

**ದುಂಡಗೆ$_2$** (ಅ). ೧. ಗುಂಡಾಗಿ; ವರ್ತುಲಾಕಾರವಾಗಿ: ಪೃಥ್ವಿ . . . ಗೋಲವದೆ ಅಂದರೆ ಕಿತ್ತಳೇ ಹಣ್ಣಿನಂತೆ ದುಂಡಗದೆ (ಮುಂಬಯಿ. ೪-೨೪); ದಪ್ಪಗೆ, ದುಂಡಗೆ, ಏನನೊ ಒಂದನು ಉರುಳಿಸಿಕೊಂಡವ ತಂದ. ದಪ್ಪಗೆ, ನುಣ್ಣಗೆ, ದುಂಡಗೆ ಇರುವುದು, ಅಜ್ಜ ಇದೇನೆಂದು ಕೇಳಲು ಬಂದ (ಇಂಗೀತ. ೩೨-೧೧). ೨. ತುಂಬಿಕೊಂಡಿರುವಂತೆ; ದಪ್ಪವಾಗಿ: ದುಂಡಗೆ ಇರುವ ತೆನೆಗಳ ಭಾರದಿಂದ ಜೋಳದ ದಂಟುಗಳು ತಲೆಯನ್ನು ಬೊಗ್ಗಿಸಿವೆ (ಮುಂಜು. ೨). ೩. ಬೋಳಾಗಿ. 'ದುರುದುಂಡಗೆ' ಪರಾ.

ದುಂಡಗಿಡು=ಗಂಟುಮಾಡು; ದೊಡ್ಡ ಮೊತ್ತವಾಗಿಸು: ಹೊಟ್ಟೆನೆತ್ತಿ ಕಟ್ಟಿ ನಾವು ದುಡ್ಡನ್ನು ದುಂಡಗಿಡುತ್ತೇವೆ (ಜಮಿನ್ನಾ. ೧೯). ದುಂಡಗೆ ಮಾಡು = ಕೂಡಿಡು; ಪೇರಿಸಿಡು: ಆಟವು ಮುಗಿಯುತ್ತ ಬಂದಿತು, ರೂಪಾಯಿಗಳನ್ನು ದುಂಡಗೆ ಮಾಡಹತ್ತಿದರು (ಕೂಕಳ. ೨೩).

[ ದುಂಡು$_1$ + -ಅಗೆ$_3$ ]

**ದುಂಡನೆ** (ಗು). ದುಂಡಗಿರುವ; ದಪ್ಪನಾದ: ಪಕ್ಕದ ಕುರ್ಚಿಯು ಪೀಠದಿ ಸುಖದಾಸನವಂ ಕೊಂಡಿಹ ಮಾಟದಿ ದುಂಡನೆ ಕಾಲ್ಗಳ ಮೇಲಿತ್ತಿಟ್ಟು ಹೊಟ್ಟೆಯ ಮೇಗಡೆ ಸೊಂಡಿಲನಿಟ್ಟು (ಗಣೇಶ.೨-೩೩). [ದುಂಡು$_1$+-ಅನೆ$_1$]

**ದುಂಡರಳ್ಗಡಲೆ** (ನಾ). ದಂಡಗೆ ಹುರಿದು ಉಪ್ಪು ಕಾರ ಬೆರಸಿದ ಕಡಲೆ; ಉಪ್ಪುಗಡಲೆ (?): ಸಂಡಿಗೆ ಸಂಭಾರಗಡಲೆ . . . ದುಂಡರಳ್ಗಡಲೆ ಭಕ್ಷ್ಯಗಳ ಬದ್ದಿಸಿಕೊಳುತುಂಡರು ನೆಟ್ ಸೊಕ್ಕುವನಕ (ಕೋಹಕ. ೦೮-೮೭). [ ದುಂಡು$_1$ + ಅರಲ್$_3$ + ಕಡಲೆ ]

**ದುಂಡರಿಸು** (ಕ್ರಿ). (ಉಕ) ಹೊಟ್ಟೆ ತೊಳಸು; ಹೊಟ್ಟೆಯಲ್ಲಿ ಮರಳಿದಂತಾಗು: ಅವಳಿಗೆ ಹೊಟ್ಟೆದುಂಡರಿಸಿತು, ಕಾರಿಬಿಟ್ಟಳು (ರೂಢಿ).

[ <ದುಂಡು$_1$ + -ಇಸು$_2$ ]

**ದುಂಡಾಪು** (ನಾ). ದುಂಡಾಗಿರುವ ಒಂದು ಬಗೆಯ ಅಪುಹುಲ್ಲು: "ತೃಣಚ್ಚಿದಃ - ದುಂಡಾಪಿನ ಹುಲ್ಲು" (ಓಷಧಿ. ೭೨); "ದೀರ್ಘನಾಳಂ- ದುಂಡಾಪು" (ಓಷಧಿ. ೭೭); "ಪೇಲವ-ಮುಸ್ತೆ, ದುಂಡಾಪು" (ಓಷಧಿ. ೧೦೩).

[ ದುಂಡು$_1$ + ಅಪು$_1$ ]

**ದುಂಡಾಮ** (ನಾ). ಒಂದು ಬಗೆಯ ಸಸ್ಯ: "ಅನಾಹ್ವಯಃ-ದುಂಡಾಮ" (ಓಷಧಿ. ೬). [ ದುಂಡು$_1$ + ಅಮ$_2$ ]

**ದುಂಡಾವರ್ತಿ** (ನಾ). ೧. ಪುಂಡತನ; ಪುಂಡಾಟಿಕೆ: ಅಂಥಾ ದುಂಡಾವರ್ತಿಯವರೇನು ನಮ್ಮವರು (ಮಾಮನೆ. ೧೬೩); ಅಡ್ಡಿ ಬಂದರೆ ದುಂಡಾವರ್ತಿಯ ಹೆಸರಿನಲ್ಲಿ ಪೋಲೀಸಿನವರ ಸಹಾಯ ಪಡೆಯಬಹುದು (ಗಂಗಾಳ. ೩೪). ೨. ಪುಂಡಾಟಿಕೆ ಮಾಡುವವನು; ಪುಂಡ: ತವುಸಾಪನದಿಂದ ಮುಂದೆ ಪ್ರಯಾಣ ಮಾಡಿ ಜಾಲಂಧರನಾಡಿಗೆ ಬಂದೆವು. ಇಲ್ಲಿಯ ಜನ ದುಂಡಾವರ್ತಿಗಳು (ಪ್ರವಾಕ. I, ೨೦೭). [ ದುಂಡು$_2$ + <ವೃತ್ತಿ? ]

**ದುಂಡಿ$_1$** (ನಾ). ೧. ಹೆಂಗಸು; ಸ್ತ್ರೀ: ಗಂಡಗೆ ತಕ್ಕಂಥ ದುಂಡೀರು ಬರುತಾರೆ ಗಂಡನ ಮಡದೀ ನಡಿ ಮುಂದೆ (ನಾಪದ. ೨೭). ೨. ಮೈತುಂಬಿಕೊಂಡಿರುವವಳು; ಚೆಲುವೆ: ದುಂಡಿ ನಿನ್ನಯ ಕೈಯ ತೋಋ ನೀನುಂಡೂಟ ಕಂಡೆ ಕನಸ ಹೇಳುವೆನು (ನೇಮಿಸಂ. ೨೦-೩೩): ದುಡುದುಡನೆಯ್ದಂದು ದುಂಡಿಯರಾ ಚೆಲ್ವರೊಡೆಯನ ಚೆಲ್ವ ನೋಡಿದರು (ಭರತ. ೨೦-೭೪); ದುಂಡೀ ನಿನ ಗಂಡ ಪ್ರಚಂಡ ಉದ್ದಂಡ ದನುಜರ ಗಂಟಲಗಾಣ (ಶ್ರೀಕೃಷಾ. ೭೭); ಕೈ ತಾರೆ ದುಂಡೀ ಕೈ ನೋಡಿ ಕಣಿಯಾನು ಹೇಳ್ತೀನಿ (ಹುಟ್ಟುಹ. ೪೩). [ ←ತೆಲು. ದುಂಡಿ ]

**ದುಂಡಿ$_2$** (ನಾ). ಗುಂಡಗಿರುವ ಕಲ್ಲು ; ಕಲ್ಲುಗುಂಡು : ದುಂಡಿಯ ಹೊಚ್ಚಸಲಿ ಗುಂಡಿಯು ಕೂಡಲಿ ಹೆಂಟೆ ಕಲ್ಲಿನೊಳಿಟ್ಟು ಕೊಲಲಿ ಖಂಡವ ಕೊಯ್ಕು ಸಾಲವ ತಿದ್ದದಿರುಯೆಂದು ವೊಂಡ ಹೇಳಿದ ವುಗನೊಡನೆ (ಅಮುಸಾಂ. ೩-೧೩೦) : ನೆಲದ ಹೊಟ್ಟೆ ಬದುಕ ನೋಡು ಗಟ್ಟಿಗಲ್ಲು ಹಿಟ್ಟು ಮಟ್ಟಿ ಪದರು ಗುಂಡು ದುಂಡಿ ಬಂಡೆ (ಮೂರ್ತಿಕಾ. ೧೩-೩) ; ತಣ್ಣೀರಿನ ವುಣ್ಣುಹರವಿಯಲ್ಲ, ಕಾದ ಕಬ್ಬುನದ ಕೆಂಡದ ದುಂಡಿ ! ಕೆಂಗೆಂಡದ ಹೆದ್ದುಂಡಿ ! (ತುಂಗಳ. ೧೦೯) ; ಪೂಜಾರಿಯು ತನ್ನ ಎರಡೂ ಕೈಗಳಿಂದ ಆ ದುಂಡಿಯನ್ನು ಎತ್ತುವನು (ಗಂಗಾಸಾ. ೧೪); ಭಿಲ್ಲರು . . . ಶತ್ರುಗಳ ಮೇಲೆ ಒಗೆಯುವುದಕ್ಕೆ ದೊಡ್ಡ ದೊಡ್ಡ ದುಂಡಿಗಳು ಇಟ್ಟುಕೊಂಡು . . . ಸಿದ್ಧರಾಗಿದ್ದರು (ಸತ್ಯಸಾ. ೮೦). [ <ದುಂಡು$_1$ ]

**ದುಂಡಿ$_3$** 'ದಿಂಡ$_1$' ನೋ.

**ದುಂಡಿಗ** 'ದಿಂಡ$_1$' ನೋ.

**ದುಂಡಿಗು** (ನಾ). ೧. ಬೇಲಿಗೆ ಹಾಕಲು ಉಪಯೋಗಿಸುವ ಮೊನೆಯಾದ ಎಲೆಗಳನ್ನುಳ್ಳ ಒಂದು ಬಗೆಯ ಸಸ್ಯ: (ಕ). [ ? ]

**ದುಂಡಿಗೆ** (ನಾ). (?): ಅರಸರ ದಂಣ್ಣಗೆವೆರಸಿಟ್ಟ ಪೊನ್ನ ಕಿಯ್ದುಂಡಿಯಪ್ಪಂ ಗೊಟ್ಟಿಸಿವೊನ್ನು ತನ್ನು ಭಗವನ್ತರ ಕಯ್ಗಳಾನತಿ ಕೊಟ್ಟು (ಎಕ III, ನಂಜನ. ೭೮-೧೩ : ಸು. ೯೦೦). [ ? ]

**ದುಂಡಿಜೆ** (ನಾ). ಚದುರಂಗ ಅಥವಾ ಪಗಡೆಯಾಟದ ಕಾಯಿ : "ದುಂಡಿಜೆಯುಮಂ ಬಿಸುಗೆ ಸಾರಿಯೆಂದಕ್ಕು" (ಕಬ್ಬಿಗ. ೮೦) : "ದುಂಡಿಜೆಯು ಬಿಸುಗೆಯುನೆ ಸಾರಿ" (ಶಬ್ದಮಂ. ೪೦). [ ? ]

**ದುಂಡಿಸು** (ಕ್ರಿ). ೧. ಗುಂಡಾಗುವಂತೆ ಮಾಡು; ಸುತ್ತು: ಕಡುವೇಗದಿಂದ ಲಂಘಿಸುತ ಬಾಲವನು ಕಾನೊಡನೆ ದುಂಡಿಸುತ ಬಾಯ್ದೆರೆದು (ಜ್ಞಾನಸ. ೧೨-೩೭). ೨. ವರ್ತುಲಾಕಾರವಾಗಿ ಚಲಿಸು; ಸುತ್ತುಹಾಕು; ತಿರುಗು: ಹಿಂದೆ ಮೆಟ್ಟುವ ಕಲಕೆ ಚಿಮ್ಮುವ ದುಂಡಿಸಿ ನೆಗೆವ . . . ಸುಕಳಾಶ್ವಮುಂ ಬೇಗದಿಂ ಬೆಂಗವಾಯ್ತು (ಗಿರಿಕ. ೨-೧೦೩ ವ) : ಲೀಲೆ ಕಾಲಾದಂತೆ ತಿರುಗಿ ಬಂದಾಡುತುಂ ದುಂಡಿಸಿ ಪುಟಂ ನೆಗೆದು ಪರ್ಚಿ ಪೊರೆಯೇಱುತುಂ . . . ಇಂತು ಮಧ್ಯಾಹ್ನಪರ್ಯಂತವರ್ಚಿಸಿ (ಸಾಮರ. ಹ. ೨೫೦-೧೮): "ಪ್ರದಕ್ಷಿಣೆ ಹಾಕು" (ಸಾಮರ. ಹ. ಕೋಶ) : ಹೊಳೆವ ದುಂಡಿಸುಪೊತ್ತುವೆತ್ತುವ ವಾಲೆವ . . . ಕಡವುಗಳ ಬಿಡದಳಲಿಸುವ ಸೂಕಳಕೆಯುಂ ಕೈಕೊಂಡುದಾ ತುರಗಂ (ಕುಮುರಾ. ೩-೭೦): ಮಿಡಿವ ಕಡೆಗಣಿಸಿ ವಾರ್ವ ದುಂಡಿಪ ದಿಂಡು ವಾಯ್ದು ... ಕೈಕೊಳದ ಬಗೆಯುಂ ಬಗೆದಂತೆ ಕಂಡು (ರಾಜಶೇ. ೭-೧೦ ವ). ೩. ಚಲಿಸು; ಹೊರಳು; ಚಂಚಲವಾಗು : ತೊಂಡು ಮಿಕ್ಕುದು ಮುಖರಸಂ ಜವ್ವನಂ ವಾಸಗೆ ದುಂಡಿಸಲ್ತೊಡಗಿದವು ಕಂಗಳೆರಡುಂ ದೆಸೆಗೆ ... ನವಯವ್ವನಂ ಪೇಱುತಿರೆ (ನಂಬಿಯ.ಶ.೨೧೭-೭೦). ೪. ವಕ್ರವಾಗಿ ಚಲಿಸು: ಅಂಕುಡೊಂಕಾಗಿ ಚಲಿಸು ; ನುಣುಚಿಕೊಳ್ಳು : ಕಂಡುದು ಮೃಗಮಲ್ಲಿ ಭಯಗೊಂಡುದು ಪೆಪ್ಪಳಿಸುತದಿರುತೋಡಲ್ಕೆ ಕರಂ ದುಂಡಿಸುತಿರ್ದಪುದಂ ದುರುಚಂಡಾಸ್ತ್ರದಿನಚಲ ಶಬರನಿಸೆ ಕಾನನದೊಳ್ (ಗಿರಿಕ. ೦-೯೦). ೫. ಮೈ ತುಂಬಿಕೊಂಡಿರು; ದಷ್ಟಪುಷ್ಟವಾಗಿರು: ನಿಱಿಗಳನಿಕ್ಕಿ ದಾಂಟಸದೆ ದುಂಡಿಸುವಾಕೆಯನೊತ್ತೆಗೊಳ್ಳದಂತೆಱಿಜುದೆ . . . ಮತ್ತೆ ಪೇಸಿ ಪೆಱರಪ್ಪದವೋಲ್ ಸ್ಮರಭೈರವಂಗೆ ಪೆಣ್ಣುಱಿಗಳನಿಕ್ಕದೊಂದೆರಡನೇಂ ವಿಟವೃತ್ತಿಗೆ ಮಾಯ್ವನಾಂಪುದೇ (ಲೀಲಾವ. ೨-೯೩) ; ದುಂಡಿಸಿ ಬಿಂಕದಿಂ ಬಿಗಿದ ಪೆರ್ಮೊಲೆಗಳ್ (ಕಾವ್ಯಸಾ. ೩೮೩) : ಕಿರುಜವ್ವನದ ಕನ್ನೆವೆಣ್ಣು ದುಂಡಿಸಿದ ನುಣ್ಪಿನ ಮೆಯ್ದೊಬಗು (ಮುಂತ್ರಶ. ೮೮-೧೦). ೬. ಒಟ್ಟಾಗು ; ದಟ್ಟಯಿಸು ; ಗುಂಪಾಗು : ಗುಂಡು ಹಾರಕಾವ ಬಂಡೇವು ತೂರಕಾವ ಮುಂಡಬಾಗಿ ಜನತಂಡ ನಿಂತ ದೊರೆಸದರ ಮೆಟ್ಟಲು ದುಂಡಿಸಿ ಕೀರಿಟ್ಟು ನುಡಿ ಕಾಳಿ ಹೆಬ್ಬಾಗಿಲಕ (ಶೋಕಗೀ. ೩೦೦). [ ದುಂಡು$_1$ + –ಇಸು$_3$ ]

**ದುಂಡು$_1$** (ನಾ). ೧. ಚೆಂಡಿನಂತೆ ಗುಂಡಾಗಿರುವುದು,–ಬಟುವಾದುದು; ವೃತ್ತಾಕಾರವಾಗಿರುವುದು : ದುಂಡು ಉಕ್ಕಿನ ದಪ್ಪ . . . ೨॥ ಇಂಚಿನ ತನಕ ಇರುತ್ತದೆ (ಮುಂಬವ್ಯಾ. ೧೧೭). ೨. ವರ್ತುಲ; ಮಂಡಲ; ವೃತ್ತ: ಆ ವರ್ತುಲದ ಸುತ್ತ ಇನ್ನೊಂದು ದೊಡ್ಡ ದುಂಡು ಸುತ್ತಿ, ಈಗ ಮೊದಲಿನದು ಚಿಕ್ಕದಾಯಿತಲ್ಲ ಎಂದನಂತೆ ! (ಪ್ರಹಾರ. ೯). ೩. ಒಂದು ಬಗೆಯ ಟೊಳ್ಳಾದ ಕೈಬಳೆ ; ಕಡಗ : (ಕ). ೪. ಸ್ಥೂಲವಾದುದು ; ತುಂಬಿಕೊಂಡಿರುವುದು; ದಷ್ಟಪುಷ್ಟವಾದುದು : ಆನೆಯು ಮೆಯ್ಯುಟ್ಟು ದುಂಡು (ಮುಂಬಯಿ. ೪-೨೨).

**ದುಂಡಾಗು** = ದಷ್ಟಪುಷ್ಟವಾಗು ; ದಪ್ಪವಾಗು : ಕೆಲವು ಮಕ್ಕಳಿಗೆ ಏನು ತಿನ್ನಿಸಿದರೂ ಅವು ದುಂಡಾಗುವುದಿಲ್ಲ (ರೂಢಿ). **ದುಂಡಾಡು** = ಹಾಲಿನಿಂದ ತುಂಬಿಕೊಳ್ಳು ; ಕಾಳಾಗು : ಭತ್ತ ದುಂಡಾಡುತ್ತಿವೆ (ರೂಢಿ). **ದುಂಡು ತಗಡು** = ವರ್ತುಲಾಕಾರದ ಲೋಹದ ಹಾಳೆ : ಆ ದೀಪದ ಬೆಳಕಿನ ದಾರಿಯಲ್ಲಿ, ಸುಮಾರು ಮೂವತ್ತು ರಂಧ್ರಗಳಿಂದೊಡಗೂಡಿದ ಒಂದು ದುಂಡು ತಗಡನ್ನಿಟ್ಟಿರುತ್ತಾರೆ (ವಿಜ್ಞಾವಿ. ೯೮).

[ ದೇ.॥ ತುಳು. ದುಂಡು, ದೊಂಡಿ ]

**ದುಂಡು$_2$** (ನಾ). ಧೂರ್ತ: ಮಿಂಡ ದುಂಡು [ಪಾಠಾಂ. ಡಿ] ಗಳರ್ಥಿಕಾಱರು ಗಂಡಿಗರು ಗರ್ವಿತರು . . . ಖಂಡೆಯದ ಕಲಿಕೆಗಳ ತರಳರ ತಂಡ ಕೂಡಿತು (ತೊರವೆರಾ. ೫-೫-೦೪). [ ←ತೆಲು. ದುಂಡಗ = ಧೂರ್ತಕೃತ್ಯ ]

**ದುಂಡುಕಡಗ** (ನಾ). = ದುಂಡು$_1$ ೩ : (ಕ). [ ದುಂಡು$_1$ + ಕಡಗ ]

**ದುಂಡುಕರ** (ನಾ). ಒಂದು ಬಗೆಯ ಮರ ; ಅಳಂಗಿ : (ಕ). [ ? ]

**ದುಂಡುಕಳ್ಳಿ** 'ದುಂಡುಗಳ್ಳಿ' ನೋ.

**ದುಂಡುಕೆ** (ನಾ). ಒಂದು ಬಗೆಯ ಸಸ್ಯ : "ಝುಡೂಕ – ದುಂಡುಕೆ" (ಓಷಧಿ. ೭೪). [ ? ]

**ದುಂಡುಗಳ್ಳಿ, ದುಂಡುಕಳ್ಳಿ** (ನಾ). ಒಂದು ಬಗೆಯ ಕಳ್ಳಿ: (ಕ). **ದುಂಡು ಕಳ್ಳಿ**: (ಪಂಡಿತ. ೮೮). [ ದುಂಡು$_1$ + ಕಳ್ಳಿ$_2$ ]

**ದುಂಡುಗಾಮುಂಡ** (ನಾ). ಒಬ್ಬಾತನ ಹೆಸರು : ಶ್ರೀವುರದಾ ದುಣ್ಡು ಗಾಮುಣ್ಡರಾ ತೋಣ್ಬದಾ ಪಡುವಾಯೊನ್ದು ತೋಣ್ಬ (ಎಕ. IV, ನಾಗಮಂ. ೮೫-೭೭ : 776). [ ದುಂಡು$_1$ + ಗಾಮುಂಡ ]

**ದುಂಡುತಗಸಿ** (ನಾ). ಒಂದು ಬಗೆಯ ಅಗಸೆ : ಸೊಪ್ಪುಗಳು : ಅಗಸೆ ... ಬಿಳೀಸಾಸಿವೆ, ಕಾರೇ, ದುಂಡುತಗಸಿ, ಸಕೋಟೆ (ನಮ್ಮನು. ೨೩೭).

[ ದುಂಡು$_1$ + ತಗಸಿ (< ತಗಚೆ) ]

**ದುಂಡುದಂಡೆ** (ನಾ). ದುಂಡಾದ ಮಾಲೆ; ಗುಂಡಾಗಿ ಕಟ್ಟಿರುವ ಹಾರ : ಸಂಪಗೆಯ ದುಂಡುದಂಡೆಗಳುಂ ಮಲ್ಲಿಗೆಯ ದಂಡೆಯುಂ ಕೆಳೆಗೊಳಿಪಂತಿಂಪಡರೆ ತೋಳ್ಗೆ ಮೌಕ್ತಿಕದಿಂ ಪುದಿದುರು ಬಾಹುಪೂರಮಂ ಪದೆದಿತ್ತಳ್ (ರಾಜಶೇ. ೮-೨೩). [ ದುಂಡು$_1$ + ದಂಡೆ$_1$ ]

**ದುಂಡುದೋಳು** (ನಾ). ತುಂಬಿದ ತೋಳು; ಶಕ್ತಿಯುತವಾದ ಬಾಹು : ಚೆಂಡಾಡಿದಂತೆ ಕುಂಭವನೆತ್ತಿ ಗಜಗಳ ಸುಂಡಿಲ ನಗುವ ಚೆಲ್ವಿಕೆಯ ದುಂಡುದೋಳೆತ್ತಿ ಸ್ವಾಮಿಯ ಮೇಲೆ ಸುರಿವನಖಂಡಿತದಮೃತಧಾರೆಗಳಾ (ಭರತ. ೧೭-೯೮) : ಇಳೆಯ ಸೋಂಕುವ ದುಂಡುದೋಳು ಬೆಳಗುತ ಪಾತಾಳದ ಫಣಿಪನ ಫಣಾವಳಿಯ ರತ್ನವ ಪಳಚಿದುವು (ಕಂನಬಿ. ೨೦-೨೬).

[ ದುಂಡು$_1$ + ತೋಳು (<ತೋಳ್) ]

**ದುಂಡುಬಳೆ** (ನಾ). = ದುಂಡು$_1$ ೩ : (ಕ). [ ದುಂಡು$_1$ + ಬಳೆ$_3$ ]

**ದುಂಡುಭ** (ನಾ). ನೀರು ಹಾವು : ಒಳ್ಳೆ : "ದುಂಡುಭಂ ರಾಜಳನೆಸಲೊಳ್ಳೆಗಕ್ಕು ನಾಮಂ" (ಮಂಗರಾ. ೧೧೮-೩). [ ಸಂ. ]

**ದುಂಡುಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ; ಗುಂಡುಮಲ್ಲಿಗೆ : ಮಾಧವಿ : "ದುಂಡುಮಲ್ಲಿಗೆಯುಂ ಪಂಚನಿಯುಕ್ಕುಂ" (ಮಂಗರಾ.

೩೮-೨೪) : "ವೃತ್ತಮಲ್ಲಿಕಾ–ದುಂಡುಮಲ್ಲಿಗೆ" (ಒಷಧಿ. ೧೩೮) : ಒಡೆಯಿಂ ದುಂಡುಮಲ್ಲಿಗೆಯ ಪದಕವನಿತ್ತು ಮರುಗದೊಡ್ಡಣಿಗಳಿಂ ಗಜಚರ್ಮಮಂ ತೊಡಿಸಿ (ಪುಷ್ಪರ. ೧೦-೮) : ಎಳೆವರೆಯದ ಪುರುಷನನೆಳೆವೊಗಳು ನಲಿದಪ್ಪಿ ದೊಂದು ವಿಲಾಸ ಎಳೆಮಾವನಪ್ಪಿದ ದುಂಡುಮಲ್ಲಿಗೆಗಳಂತಿಳೆಗೊಪ್ಪುತಿಹುದು (ಭರತ. ೭-೭) ; ಕಸ್ತೂರಿ ಸೇವಂತಿಗೆ ದುಂಡುಮಲ್ಲಿಗೆ ಮೊತ್ತದ ಜಾಜಿ ಸಂಪಗೆಯ ಇತ್ತರದಲಿ ಮಾಲೆಗಟ್ಟಿ ಮಾಱುವ ಹೆಂಗಳಿರ್ತಿಯನೇನ ಬಣ್ಣಿಸುವೆ (ಕಂಚಿವಿ. ೬-೮೩) ; ಮಾಧವೀಪುಷ್ಪವನ್ನು (ದುಂಡುಮಲ್ಲಿಗೆ) ಧರಿಸುವುದರಿಂದ ವಾತ ಶ್ಲೇಷ್ಮಗಳು ನಾಶವಾಗುವುವು (ಸಕವೈ. ೪೪).

**ದುಂಡುಮಲ್ಲಿಗೆಗೋಲು** = ಗುಂಡುಮಲ್ಲಿಗೆ ಹೂವಿನ ಬಾಣ ; (ಮನ್ಮಥನ) ಹೂಬಾಣ : ಮುಂಡಳಿಸಿರ್ದ ಮಾನಿನಿರನ್ನೆಯರ ನೋಡಿ ಕಂಡ ನಿಷ್ಕಾಮಾತುರರು ದುಂಡುಮಲ್ಲಿಗೆಗೋಲು ತಾಗಲು ತಪಗೆಟ್ಟು ಬೆಂಡಾದರತಿವಿರಹದಲಿ (ಮೋಹತ. ೪೧-೨೨). [ ದುಂಡು$_{1}$ + ಮಲ್ಲಿಗೆ ]

**ದುಂಡುಮುಖ** (ನಾ). ಗುಂಡಗಿರುವ ಮುಖ : ಬಟ್ಟತಲೆ, ದುಂಡು ಮುಖ, ಕಿವಿಯವರೆಗೂ ಕಣ್ಣು, ಇವು ಬಗಿ ಶಾಸ್ತ್ರಕ್ಕೆ ಹತ್ತು ಕೂದಲು (ದೀಕಮು. ೪೧-೨೨). [ ದುಂಡು$_{1}$ + ಮುಖ ]

**ದುಂಡುಮುಡಿ** (ನಾ). ಗುಂಡಾಗಿ ಕಟ್ಟಿದ ತುರುಬು,–ಗಂಟು : ಹೊಸ ಹೊಂಗೇದಗೆಯೆಸಳ್ಗಳ್ ನವಕಸ್ತೂತತಿ ದುಂಡುಮುಡಿಯ ಪೀಲಿಯ ಪಳಯಿಗೆಯನೆ ತೊಂಡೆದುಟಿಯ ತರುಣೀರತ್ನದ ನುಣ್ಮುಂಡೆ ಮನೋಭವನೇಱುವ ಪೂದೇರಂದದಿನೊಪ್ಪಿದುದು (ಆಯುಕಾ. ೫-೬).

[ ದುಂಡು$_{1}$ + ಮುಡಿ$_{3}$ ]

**ದುಂಡುಮುತ್ತು** (ನಾ). ಗುಂಡಾಗಿರುವ ಮುತ್ತು, –ಮೌಕ್ತಿಕ : ತಂಡತಂಡದಿ ಹೊಱವಳಯದಿ ಡಿಂಡೀರಪಾಂಡುರ ಶಂಖಪ್ರವಾಳ ದುಂಡುಮುತ್ತುಗಳಿಂದೆ ಮೇರೆಯಬ್ಧಿಯ ಕೊರಲ್ದುಂಡೆಯುಂತಿರ್ದುದೇನೆಂಬೆ (ಮೋಹತ. ೨-೬) ; ದುಂಡುಮುತ್ತಿನ ರತ್ನ ಕೆತ್ತಿಸಿದ ಹೊನ್ನ ತೊಂಡಲ ಸೂಡಿದು ಮುದದಿ ಖಂಡೇಂದುಮುಖಿಕೆ ಕಸ್ತೂರಿಯಿಟ್ಟು (ಮೋಹತ. ೧೩-೭೫). [ ದುಂಡು$_{1}$ + ಮುತ್ತು$_{5}$ ]

**ದುಂಡುಮೇಜು** (ನಾ). ವರ್ತುಲಾಕೃತಿಯ ಮೇಲ್ಮೈಯುಳ್ಳ ಮೇಜು; ವರ್ತುಲಾಕಾರದ ಮೇಜು: ಕಾಫೀಭವನದ ಸುಂದರವಾದ ಕೈದೋಟದಲ್ಲಿ ಒಂದು ದುಂಡುಮೇಜಿನ ಸುತ್ತಲೂ ನಾವು ಕುಳಿತಿದ್ದೆವು (ಚಂದುಟ. ೪೧).

**ದುಂಡುಮೇಜಿನ ಪರಿಷತ್ತು, ದುಂಡುಮೇಜು ಪರಿಷತ್ತು**="ಎಲ್ಲ ಸದಸ್ಯರಿಗೂ ಸಮಾನ ಗೌರವವಿರುವ ಸಮ್ಮೇಳನ; ಮಂಡಲ ಗೋಷ್ಠಿ ; ದುಂಡುಮೇಜಿನ ಪರಿಷತ್ತು" (Round table conference. ಇಂಕನಿ) : ಬಳಿಯ ಹೊಂಡದ ದುಂಡುಮೇಜು ಪರಿಷತ್ತಿನಲಿ ಕಪ್ಪೆಗಳು ಚಪ್ಪಾಳೆ ತಟ್ಟಿ, ಜಗಿದಾಡುತಿವೆ ತಮ್ಮ ಪಕ್ಷವೆ ಕೊನೆಗೆ ಗೆದ್ದ ಹಾಗೆ! (ದೀಪಧಾ. ೧೦-೧೬). **ದುಂಡುಮೇಜಿನ ಸಭೆ** = ದುಂಡುಮೇಜಿನ ಪರಿಷತ್ತು : ೧೯೩೧ರಲ್ಲಿ ಇಂಗ್ಲೆಂಡಿನಲ್ಲಿ ನಡೆದ ದುಂಡುಮೇಜಿನ ಸಭೆಯಲ್ಲಿ ಗಾಂಧೀಜಿ ಪಾಲ್ಗೊಂಡಿದ್ದರು (ರೂಢಿ). [ ದುಂಡು$_{1}$ + ಮೇಜು ]

**ದುಂಡುಮೊಗ** (ನಾ). = ದುಂಡುಮುಖ : ದುಂಡುಮೊಗ ತಿದ್ದಿ ಬೆಳೆದಿತ್ತು (ರಕ್ತಾಕ್ಷಿ. ೩೩೦). [ ದುಂಡು$_{1}$ + ಮೊಗ ]

**ದುಂಡುರುಪೆ**, ದುಂದುರುಪೆ (ನಾ). ಒಂದು ಬಗೆಯ ಸಸ್ಯ : "ಅಶ್ವತ್ಥ ಫಲಾ – ದುಂಡುರುಪೆ" (ಒಷಧಿ. ೭) : "ಡೋಲಾಫಲ, ಹಿಪ್ಪೆ, ಎಸಗ, ದುಂಡುರುಪೆ, ಹೆಮ್ಮರ" (ಒಷಧಿ. ೬೪). **ದುಂದುರುಪೆ** : "ದೋಲಾಫಲಃ– ಎಲವ, ದುಂದುರುಪೆ" (ಒಧಿ. ೮೦) ; "ಟುಂಡುಕ ದುಂದುರುಪೆ" (ಅಕಾನಿ. ೦೧-೭) : ಅಡವಿ ಹಾಗಲದ ಗೆಡ್ಡೆ ದುಂದುರುಪೆ ಗೆಡ್ಡೆ [ಪಾಠಾಂ. ದುಮ್ಮಲಪಿ ಗಡ್ಡೆ] . . . ಅರೆದು ಕೊಟ್ಟು ಬಿಸಿನೀರಂ ಕುಡಿಯಿಸೆ ಚೆನ್ನಾಗಿ ವಿರೇಚನ ಮಾಕ್ಕು (ಸಕವೈ. ೨೯೯). [ ? ]

**ದುಂಡುಸಂಪಿಗೆ** (ನಾ). ಒಂದು ಬಗೆಯ ಗುಂಡಾದ ಸಂಪಿಗೆ : ಪುಷ್ಪವೃಕ್ಷಗಳಲ್ಲಿ ದೊಡ್ಡ ವೃಕ್ಷಗಳಾಗ ತಕ್ಕ ಸುಂದರ ಪುಷ್ಪಗಿಡಗಳು ಸಂಪಿಗೆ ವನ ಸಂಪಿಗೆ . . . ದುಂಡುಸಂಪಿಗೆ ಇವು ಗಳೆಲ್ಲ ಬೀಜಗಳಾಗಿವೆ (ಕೃಷಿಶಾ. ೨೦೦). [ ದುಂಡು$_{1}$ + ಸಂಪಿಗೆ (< ಸಂಪಗೆ) ]

**ದುಂಡುಸಮುದ್ರ** (ನಾ). ಒಂದು ಸ್ಥಳದ ಹೆಸರು ; ಉತ್ತರ ಪೂರ್ವ್ವಸ್ಯಾನ್ದಿಶಿ ಕಳವೈತ್ತಿಗಟ್ಟು ಇಮಾನ್ಯಾನ್ಯಾನಿ ಕ್ಷೇತ್ರಾನ್ತರಾಣಿ ವತ್ತಾನಿ ದುಣ್ಡುಸಮುದ್ರದಾ ವಯಲುಳ್ಳಿಱುದಾಱಾಮೆಗೆ ಪದಿಕ್ಕಣ್ಡುಗಂ ಮಣ್ಣುಂ ಪಟಿಯಾ ಎರೆನಲ್ಲೂರಾ ಉಪ್ಪಾರ್ಟು ಒಕ್ಕಣ್ಡುಗ (ಎಕ. IV, ನಾಗಮಂ. ೮೫-೭೫ ; 776). [ ದುಂಡು$_{1}$ + ಸಮುದ್ರ$_{1}$ ]

**ದುಂಡುಳಿ** (ನಾ). ಗುಂಡಗಿರುವ ಉಳಿ,–ಚಾಣ.

[ ದುಂಡು$_{1}$ + ಉಳಿ$_{5}$ ]

**ದುಂಡುಱುಂಬೆ** 'ದಂಡುಱುಂಬೆ' ನೋ.

**ದುಂಡುಱುವೆ** (ನಾ). ಅತಿಶಯವಾದ ತಾಪ : ಬೆಂಡಾದಳಂಗಜಾತನ ನೋಡಲಪನಸ್ತ ಕೊಂಡವು ಕುಚದ ಮಧ್ಯದಲಿ ದುಂಡುರು[ಱು]ವೆ [ಪಾಠಾಂ. ದಿಂಡುರುಮೆ]ಯ ಮಾಡುತಿರಲುಚ್ಚರಿಸಿದಳು ಕೆಂಡಗಣ್ಣನ ಮಂತ್ರಮಯವ (ಮೋಹತ. ೨೯-೪೯).

[ ದುಂಡು$_{1}$ + ಉಱುವೆ (<ಉಱುಬೆ) ]

**ದುಂದಕಾರ** (ನಾ). ಕಗ್ಗತ್ತಲೆ; ಅಂಧಕಾರ : ಗಾಳಿ ಉಕ್ಕಿ ಒದರಿತಾಗ, ಗಿಡದ ಸಾಲು ಅದುರಿತಾಗ, ಅತ್ತ ಇತ್ತ ಅಂಧಕಾರ, ನೋಡಿದತ್ತ ದುಂದಕಾರ (ನನಲ್ಲ. ೮೩-೧೩).

[ ←ಮರಾ. ಧುಂದಕಾರ್ ; ಹಿಂ. ಧುಂಧುಕಾರ್ ]

**ದುಂದಾಗು$_{1}$** 'ದುಂದು$_{1}$' ಪರಾ.

**ದುಂದಾಗು$_{2}$** 'ದುಂದು$_{3}$' ಪರಾ.

**ದುಂದು$_{1}$** (ನಾ). ೧. ಮಿತಿಯಿಲ್ಲದೆ ಖರ್ಚು ಮಾಡುವುದು ; ಅಗತ್ಯವಲ್ಲದ ಹೆಚ್ಚು ವೆಚ್ಚ ; ಪೋಲು ಮಾಡುವಿಕೆ : ವ್ಯರ್ಥವೇದೆನಿಪುದಲ ಸೃಷ್ಟಿಯುಲಿ ಬಹುಭಾಗ ? ಅರ್ಥವೇಂ ಕ್ರಿಮಿಕೀಟಕೋಟಿ ರಚನೆಯಲಿ ? ಕರ್ತನಾಲೋಚಿಸದ ದುಂದಿನವನೆಂಬ ನುಡಿಯರ್ಥದೃಷ್ಟಿಯು ವಿವರ (ಮಂಕುತ. ೬೬) ; ಇನ್ನೂ ನಿಮಗೆ ದುಂದುಖರ್ಚಿನ ಚಟ ಬಿಟ್ಟಿಲ್ಲ (ಮಹಾಗ. ೩೫೪). ೨. ದಂದುಗಾರ : ಬಂಗಾರದ ತಗಡಿನಲಿ ಬರೆದಿಡಬೇಕಾದ ಪದ್ಯ. ಕಲ್ಲಿನಲ್ಲಿ ಕಟೆದಿಟ್ಟರು ನಮ್ಮ ದುಂದು ಕಲೋಪಾಸಕರು (ಸಾಹಿವಿ. ೩೯). ೩. ಆಡಂಬರ ; ಪ್ರದರ್ಶನ ; ವೈಭವ ; ಡಂಬ : ದುಂದಿಗಾಗಿ ನೂರಾರು ರೂಪಾಯಿ ಪೋಲುಮಾಡುವ ಜನ ನಮ್ಮ ಬಳಗದ ಬಗ್ಗೆ ಮೂಗುಮುರಿದರು (ಜೀವನ. ೨ ಅರಿಕೆ).

**ದುಂದಾಗು$_{1}$** = ವೈಭವದಿಂದ ಕೂಡಿರು : ಏನು ದುಂದಾತು ನಿನ್ನಿನ ಮೇಜವಾನಿ (ಎಚ್ಚೆತ್ತ. ೨೬). **ದುಂದಾಟ** = ದುಂದಂ$_{1}$ : (ಕ). **ದುಂದು ಮಾಡು** = ೧. ವೃಥಾ ಖರ್ಚುಮಾಡು ; ಪೋಲು ಮಾಡು ; ಹಾಳು ಮಾಡು : ಮೂಱು ದಿನದೊಳಗೆ ದುಂದು ಮಾಡಿದ ಕಾರಣದೊಳಿಂದು ಘನಪುಣ್ಯವಾಯ್ತನ್ನದಾನದಿಂದೆನ್ನ ಮನಕೆ ಬರ್ಪಂತೆ ದೃಷ್ಟಂದೋಱ ಕೊಡಿಯಂದನು (ವೀಕೃಹು. ೪-೧-೩೬); ಸಿಕ್ಕಾಪಟ್ಟೆ ಮದ್ದು ದುಂದುಮಾಡುವುದು ಸೈನಿಕರ ಪ್ರತಿನಿತ್ಯದ ಹವ್ಯಾಸವಾಗಿತ್ತು (ಪುನಟು. ೬೨) : ಅವರ ಆಸ್ತಿಯ ಅರ್ಧಪಾಲನ್ನೆಲ್ಲ ನೀನು ದುಂದು ಮಾಡಿ ಕಳೆದೆ. ಉಳಿದ ಅರ್ಧ ಜೂಗಾರಿ ಆಡಿದೆ . . . ಜನರು ನಗುವಂತಾಯಿತು (ಮುಂಗಾಮು. ೪). ೨. ವೈಭವದಿಂದ ಕೂಡು ; ಆಡಂಬರವನ್ನು ಹೊಂದು : ಹತ್ತು ಪಲ್ಲವರಿಗೆ ಕತ್ತಿಯ ಕೊಡುವೆಸ ಹತ್ತಿ ಮಂಟಪ ಬಗಿರೆಂದ ಮಲಸಜ್ಜ ದುಂದುಮಾಡಿ ಮಣ್ಣಾ ಕೊಡಿರೆಂದ (ಲೋಕಗೀ. ೨೧೦).

[ ದೇ.? ತುಳು. ದುಂದು ]

**ದುಂದು₁** (ನಾ). ೧. ಒಂದು ಬಗೆಯ ಚರ್ಮವಾದ್ಯ. ೨. ಕೃಷ್ಣನ ತಂದೆ; ವಸುದೇವ. [ ಸಂ. ]

**ದುಂದು₂** (ನಾ). ಮಾದಕ ವಸ್ತುವಿನಿಂದ ಉಂಟಾಗುವ ಅಮಲು,–ಮತ್ತು: ಬಯ್ದಾಡುತ ಸುಮ್ಮ ಸುಮ್ಮ ಬಿದ್ದಿ ಹನಗೊ ಅಣ್ಣಾ, ತಮ್ಮ ಕುಡಿದು ದುಂದು ಕಂಡವಮ್ಮ (ಅರಳು. ೧೩೦-೧೭).

**ದುಂದಾಗು₂** = ಅಮಲೇರು; ಮತ್ತು ಬರು,–ಉಂಟಾಗು: ನೀವು ಕುಡಿದು ದುಂದಾಗಿದ್ದರೂ ನನಗೆ ಸಿಟ್ಟು ಬರುತ್ತಿದ್ದಿಲ್ಲ! (ದೇವದಾ. ೯೩); ಇವರು ಹೀಗೆ ದುಂದಾಗಿ ಬಿದ್ದಿರುವುದನ್ನು ನೋಡಿದರೆ (ಕುರಿಹಿಂ. ೧೦೭). [ ← ಮರಾ. ಧುಂದ್ ]

**ದುಂದುಗಾರ** (ನಾ). ಮಿತಿಯಿಲ್ಲದೆ ಖರ್ಚುಮಾಡುವವನು; ಹಣ ಪೋಲು ಮಾಡುವವನು: ದುಂದುಗಾರರು ಈ ಹೊತ್ತು ದೊರೆತ ಸಂಪತ್ತಿಯನ್ನು ಈ ಹೊತ್ತೇ ಆದಷ್ಟು ಪ್ರಕಾರದಿಂದ ಭೋಗಿಸಲಿಕ್ಕೆ ಹವಣಿಸುತ್ತಾರೆ (ಮುಂಬಯಿ. ೩-೨೪೮); ದುಂದುಗಾರ ಚಂದಿರನು ಇನಿಕಿದನು ಬೆಳಕೆ ಸಾಲದಾಗಿ ರಸಿಕ ನೀತಿಯಲಿ ಬೆರೆಸಿ ಬಳಸುವನು ತಮವ ಸಾಲವಾಗಿ (ಅರಳು. ೪೦೪-೩); ನೀನು ಬಹಳ ದುಂದುಗಾರನಾಗಿ ತೋರುತ್ತಿ (ಕಥಾಮಂ. IV, ೪): ದುಂದುಗಾರರಿಗೆ ಎಷ್ಟು ಸಂಪಾದನೆಯಾದರೂ ಬಡತನ ತಪ್ಪುವುದಿಲ್ಲ (ನೀತಿಚಿಂ. IX, ೩೨). [ ದುಂದು₁ + – ಗಾರ(< – ಕಾಱ) ]

**ದುಂದುಗಾರತನ** (ನಾ). ಮಿತಿಯಿಲ್ಲದೆ ಖರ್ಚುಮಾಡುವಿಕೆ: (ಕ). [ ದುಂದುಗಾರ + – ತನ ]

**ದುಂದುಗಾರಿಕೆ** (ನಾ). ೧. = ದುಂದುಗಾರತನ: ತವಕ್ಕ ದುಂದುಗಾರಿಕೆಯ ಬಗ್ಗೆ ಅವರಿಗೆ ಸಂತೋಷ (ನನ್ನ ಜೊ. ೬೧): ನಾನೂ ಮೊದಲಿನಿಂದ ದುಂದುಗಾರಿಕೆಯಲ್ಲಿ ಬೆಳೆದವಳು (ಕುಂಕುಮ. ೮): ಹೀಗೆ ದುಂದುಗಾರಿಕೆ ಕಲಿತರೆ ಈಗ ಪರವಾಗಿಲ್ಲವಾದರೂ ಮುಂದೆ ಕಷ್ಟವೆನಿಸೀತು (ಬಾಡಿಬ. ೭೬). ೨. ಯಥೇಚ್ಛವಾಗಿರುವಿಕೆ; ಹುಲುಸಾಗಿರುವಿಕೆ; ಎರಚಾಟ; ಸುಗ್ಗಿ: ರಸ್ತೆಯ ಎರಡು ಕಡೆಗಳಲ್ಲೂ ಹುಚ್ಚುಹುಚ್ಚಾಗಿ ಹಸುರಿನ ದುಂದುಗಾರಿಕೆಯನು ನೋಡುತ್ತಾ ಅವನು ಪ್ರಯಾಣ ಮಾಡುತ್ತಿದ್ದ (ದೂರದ. ೦೫೭). [ ದುಂದುಗಾರ + – ಇಕೆ ]

**ದುಂದುಗಾರ್ತಿ** (ನಾ). ಮಿತಿಯಿಲ್ಲದೆ ಖರ್ಚುಮಾಡುವವಳು; ವ್ಯರ್ಥವಾಗಿ ಪೋಲು ಮಾಡುವವಳು: ನಾನೆಂದೂ ದುಂದುಗಾರ್ತಿಯಲ್ಲ (ಕುಂಕುಮ. ೯೩). [ ದುಂದುಗಾರ + – ತಿ₁ (< – ಇತ್ತಿ) ]

**ದುಂದುಗೆಡಿಸು** (ಕ್ರಿ). ಅಪವ್ಯಯ ಮಾಡಿ ಕಳೆದುಕೊಳ್ಳು; ಪೋಲು ಮಾಡು: ಮನೆ ಮಾರು ಮಾಡಿ ನಮ್ಮದಿಯಾಗಿ ಬಾಳದಿಂತಲೆಮನೇತಕೆ ಬೆಸದರೊಡನೆ, ಹರಯವನೇಕೆ ಮರಳಿನೊಂಟಿಯೊಲಿಂತು ದುಂದುಗೆಡಿಸುವನು (ಗೊರೂ ಛಾ. ೨-೪೧). [ ದುಂದು₁ + ಕೆಡಿಸು₁ ]

**ದುಂದುತನ** (ನಾ). = ದುಂದುಗಾರತನ: ಅವನ ದುಂದುತನವೇ ಅವನಿಗೆ ಮುಳುವಾಯಿತು (ರೂಢಿ). [ ದುಂದು₁ + – ತನ ]

**ದುಂದುಬಾಳು** (ನಾ). ದುಂದುಗಾರತನದ ಬದುಕು; ವ್ಯರ್ಥವಾಗಿ ಖರ್ಚುಮಾಡುವ ಜೀವನ: ಇತರ ಸಹೋದ್ಯೋಗಿಗಳಂತೆ ಅವನೂ ದುಂದುಬಾಳನ್ನು ಬದುಕಲು ಸಿದ್ಧನಾದನು (ಪುನರು. ೬೨). [ ದುಂದು₁ + ಬಾಳು₂ (< ಬಾಟ್₂) ]

**ದುಂದುಬೀಳು** (ಕ್ರಿ). ಹೆಚ್ಚಾಗು; ಮಿತಿಮೀರು: ಗಂಗಿ ಗೌರಿ ಜಗಳ ದುಂದುಬಿದ್ದಾ ಮಂದ ಅಂಗಳದ ಕಲ್ಲ ಶಿವ ಮೆಟ್ಟ ಕೇಳ್ಯಾನ ಗಂಗಿ ನಿನ ಬಾಯಿ ಬಲುಬಾಯಿ (ಕನ್ನಜಾ. ೧೧೬). [ ದುಂದು₁ + ಬೀಳು₁ (< ಬೀೞ್₁) ]

**ದುಂದುಭಿ₁** (ನಾ). = ದುಂದುಮೆ ೨: 'ದುಂದುಭಿಗಳು' ಕನ್ನಡಿಗರಿಗೇನು ಅಪರಿಚಿತವಲ್ಲ. ಶಿವಶರಣರು ತಮ್ಮ ಕಾಲಜ್ಞಾನದ ಹಾಡುಗಳನ್ನು ಹೋಳಿಯ ದುಂದುಭಿಯಲ್ಲಿ ಹಾಡಿದ್ದಾರೆ . . . 'ದುಂದುಭಿ' ಹಾಗು 'ದುಂದುಮಿ' ಇವು ಎರಡೂ ಬಾಜನಗಟ್ಟಗಳಿದ್ದರೂ, ಹಾಡುವ ತಾಳ, ಲಯ, ಗತಿ, ರಾಗ ಮೊದಲಾದವುಗಳು, ಬೇರೆಬೇರೆ ಇವೆ (ಕನ್ನಜಾ. ೯೩). [ < ದುಂದುಮೆ ]

**ದುಂದುಭಿ₂** (ನಾ). ೧. ಒಂದು ಬಗೆಯ ಚರ್ಮವಾದ್ಯ; ದೊಡ್ಡ ಭೇರಿ; ನಗಾರಿ: "ಪಿರಿದಪ್ಪ ಭೇರಿ ದುಂದುಭಿ" (ವಡ್ಡಕೊ. ೭೯-೨೬); "ರವ ಮಿಕ್ಕ ಹಱೆ ದುಂದುಭಿಯನಿಕ್ಕು" (ಮಂಗರಾ. ೬-೨೦): ದುಂದುಭಿಗಭೀರನಿನದಂ . . . ಜಿನಚರಣಕಮಲಭೃಂಗಂ ಪಂಪಂ (ಆದಿಪು. ೦-೩೩); ದುಂದುಭಿಗಭೀರರವ ಸುರದುಂದುಭಿಗಳ್ಗನತಳದೊಳೆಸೆದವು (ಅಜಿಪು. ೮-೦೩); ಮೊಱೆಯೆ ದುಂದುಭಿ ಶಂಖ ಕಹಳಾ ಪರಮ್ಮದಂಗಾದಿಗಳು . . . ದೇವ ಹೊಱವಂಟ (ಕುಮ್ಮಾಉ. ೬-೫); ದುಂದುಭಿಗಳು ಧಂಧಣ ರೆನುತಿರೆ . . . ಬಟ್ಟನು ವಾಳೆಯವ (ಕುರಾಸಾಂ. ೦೭-೩೦); ರಕ್ತಕಲಿತ ದುಂದುಭಿ [ಪಾಠಾಂ. ಮಿ]ಯಂತೆ ಸ್ವನಸ್ನಿಗ್ಧಹರ್ಯಕ್ಷತನುಜಶ್ಮಶ್ರುಪ್ರವರ ಮೆನಿಪ ಶುಭಲಕ್ಷಣಂ ದಿವ್ಯಭೂಷಾಯುಕ್ತ ಲೋಹಿತಾನನದ ಸೊಬಗು (ಪಂಚಾರಾ. ೦-೮-೩೩). ೨. ಅರುವತ್ತು ಸಂವತ್ಸರಗಳಲ್ಲಿ ಐವತ್ತಾರನೆಯದು: ದುಂದುಭಿಸಂವತ್ಸರೋದ್ಭವಂ . . . ಸಾರದುಂದುಭಿ ಪತಿ ಚರಣಕಮಲಭೃಂಗಂ ಪಂಪಂ (ಆದಿಪು. ೦-೩೩); ಮತ್ತಮಾ ವರುಷವೇ ಪ್ರಭವ ವಿಭವ . . . ದುಂದುಭಿ ರುಧಿರೋದ್ಗಾರಿ ರಕ್ತಾಕ್ಷಿ ಕ್ರೋಧನ ಅಕ್ಷಯವೆಂದಱುವತ್ತು ತೆಱನಾಗಿಹುದು (ಮಿವೇಕ. ೩೨೦). ೩. ಪಗಡೆಯಾಟದಲ್ಲಿ ಬೀಳುವ ಇಪ್ಪತ್ತಿಗದ ಗರ. ೪. ವಾಲಿಯಿಂದ ಹತನಾದ ಒಬ್ಬ ರಾಕ್ಷಸನ ಹೆಸರು: ನೀಂ ಪೇಳ್ದುದಿದೆ ಕಡಾ ನಿನ್ನಗ್ರಜಂ ಕೊಂದು ಬಿಸುಟ ದುಂದುಭಿ? (ತ್ರೀರಾಮಾ. ೨೯೮-೩೩೪); ಕಿಷ್ಕಿಂಧಕಾಂಡ ಬ್ರಹ್ಮಾಂಡ, ದುಂದುಭಿ ಹೆಣದ ಸುತ್ತಲೂ ಮರ್ಕಟೋತ್ತಮರ ಎದೆ ದುಂದುನೃತ್ಯ (ಪಂಚಮ. ೨೨-೬). [ ಸಂ. ]

**ದುಂದುಭಿಧ್ವನಿ** (ನಾ). ಭೇರಿಯ ಶಬ್ದ,–ಸ್ವರ: ಗಂಭೀರಾಯುತ ದುಂದುಭಿಧ್ವನಿ ರಥ ಜ್ಯಾ ದೀರ್ಘರಾವಂಗಳುಂ . . . ದಿಗಂತಂ ತಾಗೆ (ಹವಿಸ್ವಾ. ೩-೧೨). [ ದುಂದುಭಿ₂ + ಧ್ವನಿ ]

**ದುಂದುಭಿನಾದ** (ನಾ). = ದುಂದುಭಿಧ್ವನಿ: ದುಂದುಭಿನಾದಮಾಪಿಸೆ ದಿಕ್ತಟಮಂ (ಶಂರಾಮಾ. ೧೬-೬೯). [ ದುಂದುಭಿ₂ + ನಾದ₁ ]

**ದುಂದುಭಿನಿನಾದ** (ನಾ). = ದುಂದುಭಿಧ್ವನಿ: ದುಂದುಭಿನಿನಾದಮುಖರಂ ಮಂದಾರನಮೇರುಮಿಚಕಕುಸುಮಾಸಾರಂ ಸಂದಿಸೆ ಕೇವಲಿಪೂಜೆಗೆ ಬಂದತ್ತು ಚತುರ್ನಿಕಾಯಂ ದೇವನಿಕಾಯಂ (ಶಂರಾಮಾ. ೮-೩೦); ದುಂದುಭಿನಿನಾದ ವಾದಂತೆ ಪಂಪನ ವಾಗ್ಝರಿ ದುಮ್ಮಿಕ್ಕಿತು! (ದಾನಚಿಂ.೦೩). [ ದುಂದುಭಿ₂ + ನಿನಾದ ]

**ದುಂದುಭಿನಿಸ್ವನ** (ನಾ). = ದುಂದುಭಿಧ್ವನಿ: ದುಂದುಭಿನಿಸ್ವನಂ ನೆಗಳೆ . . . ತನ್ನ ನಂದನನಂಗಂದನುರಾಗದಿಂ ಪರಸಿ ಕಟ್ಟಿದನೊಲ್ದಧಿರಾಜ ಪಟ್ಟಮಂ (ತ್ರಿಪುಪಿ. ೦೯-೩೦). [ ದುಂದುಭಿ₂ + ನಿಸ್ವನ ]

**ದುಂದುಭಿಪದ** (ನಾ). ಹರೆಯೊಂದಿಗೆ ಹಾಡುವ ಹಾಡು; ಹೋಳೀಪದ: ಚಾಲುಕ್ಯರ ಪೂರ್ವದಲ್ಲಿಯೇ ನಮ್ಮಲ್ಲಿ ವರ್ಣಕಸಾಹಿತ್ಯವಿತ್ತು . . . ಶೃಂಗಾರಿಕ ದುಂದುಭಿಪದಗಳು, ಹೆಣ್ಣುಮಕ್ಕಳು ಹೇಳುವ ತ್ರಿಪದಿಯೊಳಗಿನ ಒನಕೆವಾಡುಗಳು (ಸಾಹಿವಿ. ೮೩); ದುಂದುಭಿಪದಗಳ ಚೆಂದಾಗಿ ಕೇಳಿರಿ (ಕನ್ನಜಾ. ೯೪). [ ದುಂದುಭಿ₂ + ಪದ₂ ]

**ದುಂದುಭಿರವ** (ನಾ). = ದುಂದುಭಿಧ್ವನಿ: ಮಿಮೋಹಮ್ಮಗಮಂ ಮಿಥ್ಯಾ ಕಂದರದೊಳ್ ಬೆದಱಿಸುವ ದುಂದುಭಿರವದಂತಿರೊಗೆಯ ಗಂಭೀರರವಂ (ಯಶೋಚ. ೪-೨೨); ಧಂಧಂಧಮೆಂಬುವಾ ಭೇರಿ ದುಂದುಭಿರವಕೆ ನಡುಗೆ ಗಿರಿವನಗುಹಾಕಿಷ್ಕಿಂಧೆ (ತೀರಾಮಾ ೨೯೬-೩೨೦). [ದುಂದುಭಿ₂ + ರವ]

**ದುಂದುಮಿ** 'ದುಂದುಮಿ' ನೋ.

**ದುಂದುಮಿಪದ** (ನಾ). =ದುಂದುಭಿಪದ: "ದುಂದುಮಿಪದ=ಹೋಳಿಯ ಅಶ್ಲೀಲ ಹಾಡು"(ಜಾನಕೋ. ೬). [ದುಂದುಮಿ (<ದುಂದುಮೆ)+ಪದ್ಯ]

**ದುಂದುಮಿಸು** 'ದುಮುದುಮಿಸು' ನೋ.

**ದುಂದುಮೆ**, ದುಂದುಮಿ, ದುಂದುವೆ (ನಾ). ೧. ಹರೆ; ಡಂಗುರ: ಸುರದುಂದುಮೆಯೆಸೆಯುತ್ತಿರೆ ಸುರಕನ್ನೆಯರೊಲ್ದು ಚಾಮರಂಗಳನಿಕ್ಕಲ್ ಕರಮೆಸೆವ ಸುರವಿಮಾನದೊಳಿರಲುಯ್ದರ್ ಕೇತಮಲ್ಲನಾಯಕನಸುವಂ (ಎಕ. V, ಚನ್ನರಾ. ೨೦೫-೦೪: ಸು. 1200). 'ದುಂದುಮೆಗೇಳ್' ಪರಾ. ೨. ಹರೆಯ ಧ್ವನಿಯೊಡನೆ ಹಾಡುವ ಹಾಡು; ಒಂದು ಬಗೆಯ ಜಾನಪದಗೀತೆ: ಈ ದೀರ್ಘವಾದ ದುಂದುಮೆ ಬಹುಮಟ್ಟಿಗೆ ಕಾವ್ಯದ ಸರಣಿಯನ್ನೂ ಸ್ವಾರಸ್ಯವನ್ನೂ ಪಡೆದಿದ್ದು ತನ್ನ ಗುರಿಯನ್ನು ಸಾಧಿಸಿದೆ ಎನ್ನಬಹುದು (ಕುಮಾರಾಂ. ೨೫೬). **ದುಂದುಮಿ**: ೨. 'ದುಂದುಮಿ'ಯು ಹೋಳಿಯ ಪದದ ಒಂದು ಉತ್ಕೃಷ್ಟವಾದ ಕುಸುಕು (ಕನ್ನಜಾ. ೯೩). **ದುಂದುವೆ**: ೧. ಅಸಿಯು ಗಸಣೆಯುಂ ದೂವೆಯ ಬೆವಸಮುಂ ದುಂದುವೆಯು ದಂದುಗಂ ಮಾಡಿ (ಎಕ. XI, ಮೊಳಕಾ. ೨೦-೪೦; 1278 ?).

**ದುಂದುಮೆಗಾಲ** (ನಾ). ವೈಭವದ ಕಾಲ; ಉಚ್ಛ್ರಾಯ (?): ತನ್ನೊಡನಿಂದ್ರನಾಳ್ವೆಯೀದಂ ದಿವಿಜಾಂಗರಕ್ಷಕರಿ ರಿ ಮಾಸರಮಾರದನೆಯ್ದೆ ಬಣ್ಣಿಪರ್ ದುಂದುಮೆಗಾಲವಂ ಘನರಥಾವನಿಪಾಲನ ರಾಜ್ಯಕಾಲಮಂ (ಶಾಂತಿಪು. ೯-೫೯): ಗುರು ಕನ್ನೆಗೆ ಬಂದಿರೆ . . . ಧರ್ಮಕ್ಕೆಬಿಗಿರ್ವರ್ ಮನುಜರೆಯ್ದೆ ದುಂದುಮೆಗಾಲಂ (ಜಟ್ಟಿಮು. ೧೨ ೧೪೪).

[ ದುಂದುಮೆ$_{0}$ + ಕಾಲ ]

**ದುಂದುಮೆಗೇಳ್** (ಕ್ರಿ). ದುಂದುಮೆಯೆಂಬ ಹಾಡಿನಲ್ಲಿ ಹಾಡಿರುವುದನ್ನು ಕೇಳು: ಧರೆಯೊಳಗಿಂತೀ ನಗರದ ಪರದರ್ ಸಂಪನ್ನರೆಂದು ದುಂದುಮೆಗೇಳ್ದಂ (ಸುಕುಮಾ. ೧೦-೧೧೬) [ ದುಂದುಮೆ + ಕೇಳ್ ]

**ದುಂದುರುಪೆ** 'ದುಂಡುರುಪೆ' ನೋ.

**ದುಂದುಲು** 'ದಿಂಡ$_1$' ನೋ.

**ದುಂದುವೆ** 'ದುಂದುಮೆ' ನೋ.

**ದುಂದುವೆಚ್ಚ** (ನಾ). ಅತಿಯಾಗಿ ಮಾಡುವ ಖರ್ಚು: ಅಷ್ಟೊಂದು ದುಂದುವೆಚ್ಚಕ್ಕೆ ದುಡ್ಡು ಎಲ್ಲಿಂದ ಬರುತ್ತಿತ್ತೋ ಹೇಳುವಂತಿರಲಿಲ್ಲ (ಪುನರು. ೬೨); ಶ್ರೀಮಂತರು ದುಂದುವೆಚ್ಚ ಮಾಡುವುದರಲ್ಲಿ ಸ್ಪರ್ಧೆ ನಡೆಸುತ್ತಾರೆ (ಸ್ವರಾಜ. I, ೨೦೬). [ ದುಂದು$_1$ + ವೆಚ್ಚ ]

**ದುಂದುವೈಭವ** (ನಾ). ಮಿತಿಮೀರಿದ ಖರ್ಚಿನಿಂದ ಕೂಡಿದ ವೈಭವ, ಶ್ರೀಮಂತಿಕೆ: ಸುಲಭವಾಗಿ ಸಂಪಾದಿಸಿದ ಬಿಟ್ಟಿಹಣದ ಮಾಲೀಕತ್ವವನ್ನು ಸೂಚಿಸುವ ದುಂದುವೈಭವ ಆ ವಾತಾವರಣದಲ್ಲಿ ತುಂಬಿ ತುಳುಕುತ್ತಿತ್ತು (ಪುನರು. ೨೦೦). [ ದುಂದು$_1$ + ವೈಭವ ]

**ದುಂದುಚು** (ನಾ). ತಲೆಯಲ್ಲಿ ಹುಣ್ಣಾಗಿ ಹುಳುಗಳು ಸೇರಿಕೊಳ್ಳುವ ಒಂದು ಬಗೆಯ ರೋಗ: ಕೋಷ್ಠಮನೆ ಪುರಿದರದು ಶಿಕ್ಷೆಕಮನೆಟಿ ದಟಿಪುರಸಿದಂದು ದುಂದುಚು ಕಿಡುಗುಂ(ಲೋಕೋಪ. ೯-೫೬): "ಮಂಡೆಯ ಒಳಗಣ ಪುಟು" (ಲೋಕೋಪ. ಟೀಕ); ಅರಗಾಮಳಕಫಳಂ . . . ಯಕ್ಕೆ ಇವಂ ಕೊಂಡರದಿಂದಾಗಿರೆ ಪೂಸುಗೆ ಶಿರೋವ್ರಣಂ ತರ್ದು ದುಂದುಚೆಂಬಿ [ಪಾಠಾಂ. ತುಚಿಯೆಂಬಿ]ವು ಕಿಡುಗುಂ (ಲೋಕೋಪ. ೯-೫೮). [ ? ]

**ದುಂದುಚುಂಬಿ** 'ದಂಡುಚುಂಬೆ' ನೋ.

**ದುಂಪ** (ನಾ). ಮರ, ಗಿಡ ಮುಂತಾದವುಗಳ ಅಡಿಭಾಗ; ಬೇರು: (೬).

[ ದೇ.॥ ತೆಲು. ದುಂಪ ]

**ದುಂಪದೂಳಿ**, ದುಂಪಾದೂಳಿ (ನಾ). ೧. ದೂಳಿಪಟ; ನಾಶ: ಪೊರಸರಗಂಡನು ಪರಬಲ ದುಂಪದೂಳಿ . . . ಮೊದಲಾದ ಬಿರುದಿನಾನೆಗಳ್ಳಿದಿದವು (ಕಂನಪ್ರಿ. ೩-೯೨). **ದುಂಪಾದೂಳಿ**: ೨. ಮನಸ್ಸಿಗೆ ಬಂದಂತೆ ವ್ಯಯಮಾಡುವುದು; ದುಂದುವೆಚ್ಚ: ನಿಮ್ಮಪ್ಪನ ಮನೆಯಿಂದ ಬರುವಾಗ ಒಂದು ಗಾಡಿ ರಂಗವಲ್ಲಿಯನ್ನು ಹೇರಿಸಿಕೊಂಡು ಬಂದವಳಿಗಿಂತಲೂ ಹೆಚ್ಚಾಗಿ ದುಂಪಾದೂಳಿ ಮಾಡುತೀಯೆ (ಮಾಮರಾ. ೮೧).

[ ←ತೆಲು. ದುಮಾದೂಳಿ = ಅಧಿಕವಾದ ಧೂಳು ]

**ದುಂಪರಾಸ್ಮೆ**, ದುಮ್ಮರಾಸ್ಮೆ (ನಾ). ಒಂದು ಬಗೆಯ ಸಸ್ಯ: "ಏಲಾಪರ್ಣೀ, ಸುವಹಾ, ರಾಸ್ನಾ, ಯುಕ್ತರಸಾ–ಳ ಸಣ್ಣ ದುಂಪರಾಸ್ಮೆ, ರಾಸ್ಮೆ" (ಸಿದ್ಧಾಂತಿ. ೧೨೬). ದುಂಪರಾಸ್ಮೆ, ನೀರಿಲಿಬೇರು . . . ಕಷಾಯವಿಟ್ಟು ಕೊಡಲು ವಿಷಮಶೀತಜ್ವರ ಗುಣಮಕ್ಕುಂ (ಸಕವ್ಯ. ೧೦೬). **ದುಮ್ಮರಾಸ್ಮೆ**: ಶುಂಠಿ, ದುಮ್ಮರಾಸ್ಮೆ, ಹಾಲೆಬೇರು . . . ಕಷಾಯವಿಕ್ಕಿ ಕೊಡಲು ವಿಷಮಶೀತಜ್ವರ ಗುಣಮಕ್ಕುಂ (ಸಕವ್ಯ. ೦೦೬).

[ ದುಂಪ + ರಾಸ್ಮೆ./ತಮಿ. ತುಮ್ಬರಾಪ್ಪಕ; ತೆಲು. ದುಂಪರಾಸ್ಪ ]

**ದುಂಪಾದೂಳಿ** 'ದುಂಪದೂಳಿ' ನೋ.

**ದುಂಪು**, ದುಂಬು, ದುಂಬೈ, ದುಂಪು$_1$, ದುಮ್ಮು$_2$ (ನಾ). ಮಣ್ಣು; ಮರಳು; ಧೂಳು: ಕಡುಫಲದಿ ರಾಕ್ಷಸರು ಕಟಿಗಳ ತಡೆಗಡಿದು ಡೆಂಕಣೆ ಮಕರದಿಬ್ಬಿಗಳಿಡುವ ಕೈಗುಂಡು ಕವಣೆಯ ಲಗ್ಗೆ ದುಂಪುಗಳ . . . ಬಡಿವ ಕೊಡತಿಗಳೊಡನೆ ಘಾತಿಸಿ ಕೆಡಹುತಿರ್ದರು ನಾಲ್ಕು ದೆಸೆಯೊಳು ವೀರ ಬೊಬ್ಬೆಯಲಿ (ಅನಂತಾ. ೫-೮-೪೯). ೨. (ಅಲಂ). ಮಣ್ಣೆರಚುವುದು; ಮಸಿ ಬಳಿಯುವುದು: ಗುಂಪು ಸಂಸವತಿಯರು ಗುಪಿತದಲಿ ನಗಂತಿಹರು ದುಂಪು ವಳಿತಲ್ಲ ಅನ್ಯಾಯವಿದು ಸಲ್ಲಾ (ಶ್ರೀಕೃಪಾ. ೪೦). **ದುಂಬು**: ೧. "ಧೂಸು; ಧೂಳು" (ಜಾನಕೋ. ೬). **ದುಂಬೈ**: ೧. ಮೇಲಿದ್ದ ಧೂಳು ದುಂಬೆಗಳನ್ನೆಲ್ಲ ಪೊರಕೆಯಿಂದ ಬಡಿದು ಹೋಗಲಾಡಿಸಿದರು (ಮೂಲಾನ. ೧೦೦). **ದುಪ್ಪು$_1$**: ೩. (ಕರಾ). ಮಣ್ಣಿನ ಚಿಕ್ಕ ಹಂಡಿ. **ದುಮ್ಮು$_2$**: ೧. 'ದುಮ್ಮೆಸಗು' ಪರಾ.

[ ದೇ.॥ ತಮಿ. ತುಮ್ಬು; ತೆಲು. ದುಮು, ದುಮ್ಮು ]

**ದುಂಬಾಬಾಟು** (?). (?): ಭಕ್ತಜನಾಭಿವೃದ್ಧಿ ರಾಯಭಾಟ ಶೃಂಗಾರ ಹಾರಮಂ ನೀತಿಗಾರ ದುಂಬಾಬಾಟು ನವನೀತಿರಾಯ . . . ಬುಕಣ್ಣನವರು (ಎಕ. III, ಮಳವ. ೪೩-೫; 1394).

**ದುಂಬಾಲ** 'ದುಂಬಾಲು' ನೋ.

**ದುಂಬಾಲಗೊಳ್** (ಕ್ರಿ). =ದುಂಬಾಲು ಬೀಳು: ಕೊರಳ ಲಿಂಗ ಹರಿಯಲು ಛಲದಿಂದ ಲಿಂಗವ ಕೇಳದೆ ಮಲೆತು ಪೋಗಲು ಲಿಂಗ ದುಂಬಾಲಗೊಂಡಿತು (ಬಿಜ್ಜರಾ. ೦೦-೦೬೬); ಪೋಗಲೀಸದೆ ಬಿಡೆನೆಂದು ದುಂಬಾಲಗೊಂಡು ಅಕಳಂಕ ಮಂತ್ರಿ ತಾ ಬಸವನ (ಬಿಜ್ಜರಾ. ೧೨-೮೦).

[ ದುಂಬಾಲ (<ದುಂಬಾಲು) + ಕೊಳ್$_1$ ]

**ದುಂಬಾಲಬೀಳು** 'ದುಂಬಾಲುಬೀಳು' ನೋ.

**ದುಂಬಾಲು**, ದುಂಬಾಲ (ನಾ). ೧. ಹಿಂಭಾಗ; ಹಿಂಬದಿ. ೨. (ಅಲಂ) ಅಂಗಲಾಚಿ ಬೇಡಿಕೊಳ್ಳುವಿಕೆ; ಒತ್ತಾಯಪಡಿಸುವಿಕೆ: "ನನ; ಇಪ್ಪತ್ತೈದನೆಯ ಮಗನಿಗೆ ಚಿಕ್ಕಕತೆಗಳ ಸ್ಪರ್ಧೆಯಲ್ಲಿ ಹದಿನೇಳನೇ ಬಹುಮಾನ ದೊರೆತಿದೆ. ಆ ಕತೆಯನ್ನಿಷ್ಟು ಓದಿಹೋಗಿ, ಮೂವತ್ತೇ ಪುಟಗಳ ಚಿಕ್ಕ ಕತೆ" ಎಂದಿನ್ನೊಬ್ಬರ ದುಂಬಾಲು (ಹುಚ್ಚುಹು. ೨೮). 'ದುಂಬಾಲುಬೀಳು' ಪರಾ. **ದುಂಬಾಲ**: ೨. "ಬೆನ್ನು ಹತ್ತುವುದು; ಒಂದೇ ಸವನೆ ಗಂಟು ಬೀಳುವುದು" (ಜಾನಕೋ. ೬). 'ದುಂಬಾಲ ಬೀಳು' ಪರಾ.

[ ←ಪಾರ. ದುಂಬಾಲಾ; ಮರಾ. ದುಂಬಾಲಾ, ದುಮಾಲಾ ]

**ದುಂಬಾಲುಬೀಳು**, ದುಂಬಾಲಬೀಳು (ಕ್ರಿ). ಅಂಗಲಾಚಿ ಬೇಡಿಕೊಳ್ಳು, ಒತ್ತಾಯಪಡಿಸು: ದುಂಬಾಲುಬಿರ್ದೆಜಗಿ ತಚಾಬಿದಂತುರುಬಿರ್ದರು (ಪರಕು. ೩೯-೩೦); ಅತ್ತೆಯು ಈಗಾಗಲೇ ಸಾಮಾನಿನ ವ್ಯವಸ್ಥೆಗೆ

ದುಂಬಾಲು ಬಿದ್ದಿದ್ದಾಳೆ (ಅಕೋಳ. ೬೯) ; ಹೋಗುವ ಮುಂಚೆ ಮದುವೆಯಾಗೆಂದು ದುಂಬಾಲು ಬಿದ್ದಳು (ಹೊಸಚ್ಚ. ೨೩೪). **ದುಂಬಾಲಬೀಳು :** ತನ್ನ ತಾನೆ ದುಂಬಾಲಬಿದ್ದ ಕವಿನೆರಳ ದೂಗು ನೂಗು (ಅರಳು. ೩೩೩-೧೧); ಹೀಗೇಕೆ ದುಂಬಾಲಬಿದ್ದಿರುವಿ ಅಕ್ಕಾಜಿ ? (ಹೇಮಂತ. ೬೦); ಪಾಠ ಹೇಳಿದ ಸಂಬಳವನ್ನು ೧-೨ ತಿಂಗಳು ಕೊಡದಿದ್ದರೂ ಕಿಟ್ಟಿಯೇನು ದುಂಬಾಲ ಬೀಳುತ್ತಿರಲಿಲ್ಲ (ದಾಸಹು. ೬೬) ; ಅವನು ಸಾಹೇಬರಿಗೆ ದುಂಬಾಲ ಬಿದ್ದನು (ಸ್ಕೂಲಮಿ. ೬೩). [ ದುಂಬಾಲು + ಬೀಳು$_1$ (<ಬೀಳ್$_1$) ]

**ದುಂಬಿ** 'ತುಂಬಿ$_1$' ನೋ.

**ದುಂಬಿಗುರುಳು** 'ತುಂಬಿಗುರುಳ್' ನೋ.

**ದುಂಬಿವಣ್ಣ** (ನಾ). ದುಂಬಿಯ ಬಣ್ಣ ; ಕಪ್ಪುಬಣ್ಣ : ಮುಗುಳು ನಗೆಯನ್ನು ಸೂಸುತ್ತಿದ್ದ ದುಂಬಿವಣ್ಣದ ಅವಳ ಕಣ್ಣುಗಳನ್ನು ನೋಡಿದಾಗ ಅವನ ಹೃದಯದಲ್ಲಿ ಸಂತೋಷೋನ್ಮಾದ ಉಕ್ಕುತ್ತಿತ್ತು (ಪುನರು. ೬೬). [ ದುಂಬಿ (<ತುಂಬಿ$_1$) + ಬಣ್ಣ$_1$ ]

**ದುಂಬಿಹುಳು** (ನಾ). (ದುಂಬಿಯ ಜಾತಿಗೆ ಸೇರಿದ) ಒಂದು ಬಗೆಯ ಪಪ್ಪ ಕೀಟ; ಗುಂಗಿಹುಳು: ತೆಂಗು–ಇದು ಧ್ರುವವೃಕ್ಷ ಎನಿಸಿಕೊಳ್ಳುತ್ತದೆ . . . ಇದಕ್ಕೆ ಮುಖ್ಯವಾದ ಶತ್ರು ದುಂಬಿಹುಳು (ವೃಪವು. ೫೫). [ ದುಂಬಿ (<ತುಂಬಿ$_1$) + ಹುಳು$_2$ (<ಪುೞು$_1$) ]

**ದುಂಬು** 'ದುಂಪು' ನೋ..

**ದುಂಬೆ$_1$** 'ತುಂಬಿ$_1$' ನೋ.

**ದುಂಬೆ$_2$** 'ದುಂಪು' ನೋ.

**ದುಃಕಲಹ** (ನಾ). ಕೆಟ್ಟ ಕಲಹ,–ಜಗಳ. [ ಸಂ. ]

**ದುಃಕವಿ** (ನಾ). ಕೆಟ್ಟ ಕವಿ : ಸತ್ಕವಿ ರುಚಿಕಾಲೋದ್ಭವಂ ನರನುತಿಯವನೆ ದುಃಕವಿ (ವೀಶೈಪು. ೬-೨-೧೯). [ ಸಂ. ]

**ದುಃಕಳೇವರ** (ನಾ . ಕೆಟ್ಟ ಶರೀರ : ಕಡುಗಪ್ಪುಮೆನಿಪ್ಪ ದುಃಕಳೇವರಮಿದ ನೊಳ್ಪತೇಂಬರಜುವಿಲ್ಲದವರ್ (ಸಮಪ. ೬-೩೪). [ ಸಂ. ದುಃಕಲೇವರ ]

**ದುಃಖ** (ನಾ). ೧. ಕಳವಳ ; ನೋವು ; ಬಾಧೆ ; ವೇದನೆ : "ಆಬಾಧಾ, ವೇದನಾ, ದುಃಖಂ, ಆರ್ತಿಃ, ಪೀಡಾ, ವ್ಯಥಾ–ಈ ೬ ದುಃಖಂ" (ಹಲಾಯು. ೧೦೩-೪) ; "ಅವಬಾಧೆ ವೇದನೆ ವ್ಯಥೆ ಪೀಡೆಯಾರ್ತಿಯೆಂಬಿವು ದುಃಖಮೆನಿಸಿಕ್ಕು" (ಮಂಗರಾ. ೧೦೬-೨); ಶಾರೀರ ಮಾನಸ ಕ್ಷೇತ್ರಜ ಪರಸ್ಪರೋದೀರಿತ ದನುಜೋದೀರಿತಂಗಳೆಂಬಯ್ದುಂ ತೆಱದ ದುಃಖಂಗಳೊಳ್ (ಆದಿಪು. ೩-೮೮ ವ); ವೀರಸುತಜನನಿಗೀ ಗಾಂಧಾರಿಗೆ ದುಃಖಶತಜನನಿವೆಸರಾಯ್ತಾಗಳ್ ಕೌರವಪತಿ ದುಃಖಮಹಾಭಾರಮನಾಂತಾಯಸಕ್ಕೆ ಗುಱಿಯಾದುದಱಿಂ (ಗದಾಯು. ೪-೫) ; ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ ಕೂಡಲಸಂಗಮದೇವ (ಬಸವ. ೧೨೪). ಈ ಜಗದೊಳ್ ವಿಚಿತ್ರವಿಪತ್ತಿಗಾರ ಬಗೆಯುಂ ದುಃಖಕ್ಕೆ ಪಕ್ಕಾಗದೇ (ಪುಣ್ಯಪು. ೬-೪೦): ರೊಕ್ಕ ಎರಡಕ್ಕು ದುಃಖ ಕಾಣಕ್ಕ (ಪುರಂದ. ೨-೪೮ ಪಲ್ಲವಿ) ; ದುಃಖದ ಮೇಲೆ ಸುಖ, ಸುಖದ ಮೇಲೆ ದುಃಖ (ಗಾದೆ). ೨. ಕಷ್ಟ : ತೊಂದರೆ ; ಕ್ಲೇಶ : "ದುಃಖದೊಳು ತನ್ನಿಂದ ವಿಪಾರಿರ್ದರೊಳತ್ಕಯಮೆನಿಕ್ಕು" (ಮಂಗರಾ. ೧೪೨-೨೦) ; ಈ ದುಃಖಂ ತನಗೇಕೆ ಪೇೞ್ (ಧರ್ಮಾಮೃ. ೪-೮೨) ; ಏನು ಬಂತೋ ದುಃಖ, ಏನು ಬಂತೋ ರೋಷ, ಕ್ರೂರಮನಸನು ಮಾಡಿ ಬೀರಿದಳು ಬದುಕ! (ಇಂಗೀತ. ೬೩-೨೪).

ದುಃಖಕೊಡು = ತೊಂದರೆ ಕೊಡು ; ಕ್ಲೇಶವನ್ನುಂಟು ಮಾಡು : ಅನ್ಯರಿಗೆ ದುಃಖಕೊಡುವುದು ತರವಲ್ಲ (ರೂಢಿ). **ದುಃಖದ ಕೂಳು** = ಸತ್ತವರ ಮನೆಯಲ್ಲಿ ಅವರ ಬಂಧುಗಳು ಹತ್ತು ದಿನದವರೆಗೆ ತಂದಿಡುವ ಆಹಾರ : ಸತ್ತವರ ಮನೆಗೆ ಅಕ್ಕಪಕ್ಕದ ಮನೆಯ ನೆಂಟರಿಷ್ಟರೂ ದುಃಖದ ಕೂಳೆಂದು ಅಟ್ಟ ಅಡಿಗೆಯನ್ನು ಹತ್ತುದಿನಗಳವರೆಗೂ ತಂದಿಡುತ್ತಿದ್ದರಂತೆ (ಹುಟ್ಟಹ. ೬೮). **ದುಃಖಮಾಡು** = ೧. ವೇದನೆಯನ್ನುಂಟುಮಾಡು ; ಬಾಧೆ ಪಡಿಸು. ೨. ದುಃಖಿಸು; ಶೋಕಿಸು. [ ಸಂ. ]

**ದುಃಖಂಗೆಯ್** (ಕ್ರಿ).=ದುಃಖಂಬಡು: ಗಾಂಧಾರಿ ತನ್ನ ಮತ್ತಿನ ಮಕ್ಕಳಂ ನೆನೆದು ದುಃಖಂ ಮಱುಕಳಿಸಿ ದುಃಖಂಗೆಯ್ಯೆ (ಗದಾಯು. ೪-೩ ವ). [ ದುಃಖ + ಕೆಯ್$_1$ ]

**ದುಃಖಂಬಡು, ದುಃಖಪಡಂ, ದುಃಖಬಡಂ** (ಕ್ರಿ). ಬಾಧೆಯನ್ನು ಅನುಭವಿಸು ; ವ್ಯಥೆಪಡು : ಪಾಪಮಂ ಪೊರ್ದಿ ನಾರಕಬಾಧೆಗೊಳಗಾಗಿ ಪಲಕಾಲಂ ದುಃಖಂಬಡುವರ್ (ಧರ್ಮಾಮೃ. ೪-೩೮). **ದುಃಖಪಡು :** ಕನಸಿನ ಪೊನ್ನ ಕಾಣದ ದುಃಖಪಡುವರೆ (ಕುವ್ಯಾದ್ರೌ. ೬-೨೮) : ಯುದ್ಧದಲ್ಲಿ ಹಗೆಗಳ ಬಾಣದಿಂದ ಲಕ್ಷ್ಮಣನು ಮೂರ್ಛೆಹೋದದಕ್ಕೆ ಅಣ್ಣನಾದ ರಾಮನು ದುಃಖಪಟ್ಟದ್ದೂ ಸರಿಯಷ್ಟೆ (ನೀತಿಚಿಂ. VIII, ೧೬); ಹೆತ್ತ ತಂದೆ ತಾಯಿಗಳನ್ನು ಕಳೆದುಕೊಂಡಂತೆ ದುಃಖಪಟ್ಟರು ಜನರು (ಶಾಂತಲಾ. ೨೦). **ದುಃಖಬಡು :** ಜನನಮರಣಂಗಳಿಂದೆ ದುಃಖಬಡುತಿರ್ಪುವು ನೋಡಾ ಸಕಲ ಪ್ರಾಣಿಗಳು (ಅಖಂಡೇ. ೧೬೧-೨೩). [ ದುಃಖ + ಪಡು$_1$ ]

**ದುಃಖಕರ** (ಗು). ೧. ನೋವನ್ನುಂಟು ಮಾಡುವ ; ತೊಂದರೆ ತರುವಂತಹ.(ನಾ). ೨. ಯಾತನೆಯನ್ನುಂಟುಮಾಡುವುದು; ವ್ಯಥೆಯನ್ನು ಉಂಟುಮಾಡುವುದು: ಪಂಚಕೋಶದ ಮೇಳದಿಂ ಜಡದೃಶ್ಯ ದುಃಖಕರಾಳಿಯಿಂದಲಶುದ್ಧತರದಿಂದಿರದ ನಿತ್ಯದೊಳು ಜಾಳಿಸಿದ ದೇಹ (ಸದ್ಗುರು. ೪-೮) ; ಇದು ತುಂಬಾ ದುಃಖಕರವಾದದ್ದು (ಪಶಥಾ. ೧೨೧). [ ಸಂ. ]

**ದುಃಖಕಾತರೆ** (ನಾ). ವೇದನೆಯಿಂದ ಕಳವಳಗೊಂಡವಳು: ಅಕ್ಕ ಅವನಿಂದು ಮಹಾರೌದ್ರ ಸಂಕಟಕೆ ಸಿಲುಕುವನು ಎಂದರಿತು ದುಃಖಕಾತರೆಯಾಗಿ ನಿನ್ನ ಬೇಡಲು ಓಡಿ ಬಂದೆ (ಚಂದ್ರಸ. ೨). [ ದುಃಖ + ಕಾತರೆ ]

**ದುಃಖಗೊಳ್** (ಕ್ರಿ). = ದುಃಖಂಬಡು : ದುಃಖಗೊಳದಿರು ತಾವವುಡು ಗುಡುಗು ಅಳಲವೇಡೇಳು (ಬಸಪು. ೪೫-೩೩). [ ದುಃಖ + ಕೊಳ್$_1$ ]

**ದುಃಖಗ್ರಸ್ತೆ** (ನಾ). = ದುಃಖಿತೆ : ನೀವೆಲ್ಲಾ ನೆನೆದುಕೊಳ್ಳುವಷ್ಟು ದುಃಖಗ್ರಸ್ತೆ ನಾನಲ್ಲವೇ ಅಲ್ಲ (ಶತಿ. ೪೯). [ ಸಂ. ದುಃಖಗ್ರಸ್ತಾ ]

**ದುಃಖಜೀವನ** (ನಾ). ವ್ಯಥೆಯಿಂದ ಕೂಡಿರುವ ಬಾಳು ; ಕಷ್ಟದ ಬದುಕು : (ಕ). [ ದುಃಖ + ಜೀವನ ]

**ದುಃಖಜೀವಿ** (ನಾ). ಸಂಕಟದ ಬದುಕನ್ನು ಸಾಗಿಸುವವನು ; ವ್ಯಥೆಯಿಂದಕೂಡಿ ಬದುಕುವವನು: ಆ ದುಃಖಜೀವಿಯಂ ಕಂಡಾ ದೊರೆಯ ಮುಮುಕ್ಷುಗಂ ನಿರೀಕ್ಷಿಸಲೊಡನಂದಾದುದು ಬಾಷ್ಪಪ್ರಸರಂ (ಸುಕುಮಾ. ೪-೬೨). [ ದುಃಖ + ಜೀವಿ$_1$ ]

**ದುಃಖತ್ರಯ** (ನಾ). ಆಧ್ಯಾತ್ಮಿಕ, ಆಧಿದೈವಿಕ ಮತ್ತು ಆಧಿಭೌತಿಕಗಳೆಂಬ ಮೂರು ಬಗೆಯ ಕ್ಲೇಶಗಳು : ತನಯ ಕೀಳಾಲಸ್ಯ ರೋಗಗಳನುಗತದ ದುಃಖತ್ರಯಂಗಳು . . . ದರುಶನ ಭ್ರಾಂತಿಯಶ್ರದ್ಧೆಗಳು ವಿಘ್ನಗಳು (ಅಮೃತ. ೬-೮೮). 'ತಾಪತ್ರಯ' ಪರಾ. [ ದುಃಖ + ತ್ರಯ ]

**ದುಃಖದ** (ನಾ). ಕ್ಲೇಶವನ್ನುಂಟುಮಾಡುವಂತಹುದಂ : ಸಂಸಾರಂ ತೀವ್ರತರ ದುಃಖದಂ ನಾಳೀವ್ರಣ ಸದೃಶಂ ಶರೀರಿಗದ ಕಿಡೆ ನೆಗೞಂ (ಶಾಂತಿಪು. ೬-೬) : ಪಲ್ಲವ ಸವಿಪಲ್ಲವ ಪೇಟಯ್ಯೋ ದುರ್ವೋಹವೊಂದೆ ದುಃಖದಮಲ್ತೆ (ಉಷಾರ. ೨೫೦). [ ಸಂ. ]

**ದುಃಖನಿವಾರಣೆ** (ನಾ). ವ್ಯಥೆಯನ್ನು ಇಲ್ಲದಂತೆ ಮಾಡುವಿಕೆ,–ಪರಿಹರಿಸುವಿಕೆ : ಅವರ ದುಃಖನಿವಾರಣೆಯಾಗುವಂತೆ ಏನಾದರೊಂದು ಪರಿಹಾರವನ್ನು ಸೂಚಿಸಬೇಕು (ರೂಢಿ). [ ದುಃಖ + ನಿವಾರಣೆ ]

**ದುಃಖಪಡಿಸು** (ಕ್ರಿ). ವ್ಯಥೆ ಪಡುವಂತೆ ಮಾಡು ; ಸಂಕಟವನ್ನುಂಟು ಮಾಡು: ಆಕೆಯನ್ನು ದುಃಖಪಡಿಸುವುದು ತರವಲ್ಲ (ರೂಢಿ).
[ ದುಃಖಪಡು (<ದುಃಖಂಬಡು) + – ಇಸು₁ ]

**ದುಃಖಪಡು** 'ದುಃಖಂಬಡು' ನೋ.

**ದುಃಖಬಡು** 'ದುಃಖಂಬಡು' ನೋ.

**ದುಃಖಭಾಜನ** (ನಾ). ವ್ಯಥೆಗೆ ಪಾತ್ರನಾದವನು; ಸಂಕಟವನ್ನು ಹೊಂದಿದವನು: ಮತ್ತೀನುಂ ಮಾಣದ ದುಷ್ಪವಾಜಿ ತರೆ ಬುದೀ ಬಾವಿಯೊಳ್ ಬಿಟ್ಟು ಬಂದಾನಿಂತೆರ್ವನೆ ದುಃಖಭಾಜನನೆನಿಪ್ಪಂತಾಯ್ತುದೇಂ ಕರ್ಮವೋ (ಜೀವಸಂ, ೫೮-೧೩). [ ದುಃಖ + ಭಾಜನ ]

**ದುಃಖಭಾಜನೆ** (ನಾ). ಸಂಕಟವನ್ನು ಹೊಂದಿದವಳು ; ದುಃಖಕ್ಕೆ ಗುರಿಯಾದವಳು: ಆರ್ಯಪುತ್ರನ, ದುಃಖಭಾಜನೆಯಾದ ನನ್ನನ್ನು ಅಮೇಲೆ ಹೇಗೆ ಸ್ಮರಿಸಿದೆ ? (ಶಾಕುಂತ. ೧೦೦-೮). [ ಸಂ. ದುಃಖಭಾಜನಾ ]

**ದುಃಖಭೋಗ** (ನಾ). ಕಷ್ಟವನ್ನು ಅನುಭವಿಸುವುದು ; ಸಂಕಟದ ಅನುಭವ: ಅವಳಿಗೂ ದುಃಖಭೋಗವೆಂಬ ಶಿಕ್ಷಣವಾಗಬೇಕಾಗಿತ್ತೆಂದು ತೋರುತ್ತದೆ (ಬಂಕಿಮ. ೬೦). [ ದುಃಖ + ಭೋಗ ]

**ದುಃಖಮಿಶ್ರ** (ನಾ). ಸಂಕಟದಿಂದ ಕೂಡಿರುವುದು: ಸುಖಾನುಭವ ಮತ್ತು ದುಃಖಾನುಭವ ಇವೆರಡೂ ಸೇರಿ ಇಪ್ಪತ್ತೊಂದು. ಇವುಗಳೆಲ್ಲಾ ದುಃಖಮೂಲವಾಗಿಯೂ ದು ಃ ಖ ಮಿ ಶ್ರ ವಾ ಗಿ ಯೂ ದುಃಖ ಸಾಧನವಾಗಿಯೂ ಇರುವುದರಿಂದ ವಿವೇಕಿಗಳಿಗೆ ದುಃಖಮಯ (ಹಿಂದಸಾ. ೦೦೬).
[ ದುಃಖ + ಮಿಶ್ರ ]

**ದುಃಖಮೂಲ** (ನಾ). ಸಂಕಟಕ್ಕೆ ಕಾರಣವಾದುದು: ಇವುಗಳೆಲ್ಲಾ ದುಃಖಮೂಲವಾಗಿಯೂ ದು ಃ ಖ ಮಿ ಶ್ರ ವಾ ಗಿ ಯೂ ದುಃಖಸಾಧನವಾಗಿಯೂ ಇರುವುದರಿಂದ ವಿವೇಕಿಗಳಿಗೆ ದುಃಖಮಯ (ಹಿಂದಸಾ. ೦೦೬).
[ ದುಃಖ + ಮೂಲ ]

**ದುಃಖರಾಗ** (ನಾ). ಶೋಕಪೂರ್ಣವಾದ ರಾಗ ; ಕರುಣೆಯನ್ನು ಉದ್ದೀಪಿಸುವ ರಾಗ: ಮೃದುವಾಗಿ ದುಃಖರಾಗವನೆತ್ತಿ ನುಡಿಸಿದನು, ಮೃದುವಾಗಿ ಹಾಡಿದನು ಕರುಣಕಥೆಯ (ಇಂಗೀತ. ೪೪-೨೧).
[ ದುಃಖ + ರಾಗ ]

**ದುಃಖವಾದ** (ನಾ). ಜೀವನವು ದುಃಖಮಯವೆಂಬ ಸಿದ್ಧಾಂತ: ಭರತಖಂಡದಲ್ಲಿ ಬೌದ್ಧದರ್ಶನವೊಂದರಲ್ಲಿಯೇ 'ದುಃಖವಾದ'ದ ವಿಶಿಷ್ಟ ಪ್ರತಿಪಾದನೆ ಕಂಡುಬರುತ್ತದೆ (ಶ್ರೀಪ್ರಕ್ರ. ೩೯). [ ದುಃಖ + ವಾದ ]

**ದುಃಖವಿಹ್ವಳ** (ನಾ). ವೇದನೆಯಿಂದ ಕಳವಳಿಸುತ್ತಿರುವವನು ; ಸಂಕಟದಿಂದ ಪರಿತಪಿಸುತ್ತಿರುವವನು: ಅಲ್ಲಿಯೆ ನಿಂದು ದುಃಖವಿಹ್ವಳನೆದೆದೋಱಿ ನೂಂಕಿ ಕುಡುತುಂ ಕರುಣಂ ಪಿರಿದಾಗಿ ಪಿಂಬಗಲ್ ಕಳೆವಿನವಿರ್ದನಾ ಪರಮಯೋಗಿ (ಸುಕುಮಾ. ೪-೬೩).
[ ದುಃಖ + ವಿಹ್ವಳ (= ವಿಹ್ವಲ) ]

**ದುಃಖವೆರಸು** (ಕ್ರಿ). ಸಂಕಟಪಡು ; ಯಾತನೆಪಡು : ನಲ್ಲನನಱಸುತಲಿ . . . ಚಂದ್ರಮುಖಿ ಬಂದಳು ದುಃಖವೆರಸಿ (ಮೋಹತ. ೨೭-೫೦).
[ ದುಃಖ + ಬೆರಸು₁ ]

**ದುಃಖಶತ** (ನಾ). ಅನೇಕ ಕಷ್ಟ: ತನಯಶತವಮಾದುದಲ್ತೆನಗನಿವಾಂತ ದುಃಖಶತವೆ ತಾನಾದುದು (ಪಂಪಭಾ. ೧೪-೮) : ವೀರಶತಜನನಿಗೀಗಾಂಧಾರಿಗೆ ದುಃಖಶತ[ಪಾಠಾಂ. ಶತದುಃಖ]ಜನನಿವೆಸರಾಯ್ತಾಗಳ್ (ಗದಾಯು. ೪-೫). [ ದುಃಖ + ಶತ ]

**ದುಃಖಶಮನ** (ನಾ). ೧. ನೋವನ್ನು ಉಪಶಮನಗೊಳಿಸುವುದು. ೨. ಯಾತನೆ ಕೊನೆಗಾಣುವುದು,-ಮುಗಿಯುವುದು: (ಕ).
[ ದುಃಖ + ಶಮನ ]

**ದುಃಖಸಮುದಯ** (ನಾ). ವ್ಯಥೆಯ ಉತ್ಪತ್ತಿ; ದುಃಖ ತಲೆದೋರುವಿಕೆ : ಇದು ದುಃಖಸಮುದಯ ಎಂಬ ಆರ್ಯಸತ್ಯ. ಕಾಮತೃಷ್ಣೆ, ಭವತೃಷ್ಣೆ, ವಿಭವತೃಷ್ಣೆ ಎಂಬ ಮೂರು ಬಗೆಯ ತೃಷ್ಣೆಗಳಿಂದ ದುಃಖ ತಲೆಯೆತ್ತುತ್ತದೆ (ಭಾರತ. ೧೯೭). [ ದುಃಖ + ಸಮುದಯ ]

**ದುಃಖಸಾಧನ** (ನಾ). ವ್ಯಥೆಗೆ ಕಾರಣ ; ಯಾತನೆಗೆ ಕಾರಣವಾದುದು : ಇವುಗಳೆಲ್ಲಾ ದುಃಖ ಮೂಲವಾಗಿಯೂ ದುಃಖಮಿಶ್ರವಾಗಿಯೂ ದುಃಖ ಸಾಧನವಾಗಿಯೂ ಇರುವುದರಿಂದ ವಿವೇಕಿಗಳಿಗೆ ದುಃಖಮಯ (ಹಿಂದಸಾ. ೦೦೬). [ ದುಃಖ + ಸಾಧನ ]

**ದುಃಖಹೇತು** (ನಾ) ಸಂಕಟಕ್ಕೆ ಕಾರಣವಾದುದು ; ಯಾತನೆಗೆ ನಿಮಿತ್ತವಾದುದು : ಅವುದು ಸುಖವೆಂದೆಳಸುವನಾ ವಸ್ತುವೆ ದುಃಖಹೇತು (ಮಲ್ಲಿಪು. ೯-೬೩) ; ಅಜ್ಞಾನವೇ ದುಃಖಹೇತುವಾದ ಸಂಸಾರದ ಬೀಜ (ಭಾರದ. ೦೨೨). [ ದುಃಖ + ಹೇತು₁ ]

**ದುಃಖಾಂಜಲಿ** (ನಾ). (ಅಲಂ) (ಶೋಕದಿಂದ ಸುರಿಸುವ) ಕಣ್ಣೀರಿನ ತರ್ಪಣ : ರಾಜವಂಶೀಯರ ಈ ಅನಿರೀಕ್ಷಿತ ಮರಣಕ್ಕೆ ದುಃಖಾಂಜಲಿಯನ್ನು ಅರ್ಪಿಸಿ . . . ತಬ್ಬಲಿಗಳಂತೆ ಗೋಳಾಡಿ ಹೋದರು (ಶಾಂತಲಾ. ೦೮೦). [ ದುಃಖ + ಅಂಜಲಿ ]

**ದುಃಖಾಂತ** (ಗು). ೧. ವೇದನೆಯಲ್ಲಿ ಕೊನೆಗೊಳ್ಳುವ ; ವ್ಯಥೆಯಿಂದ ಮುಗಿಯುವ. 'ದುಃಖಾಂತನಾಟಕ' ಪರಾ. (ನಾ). ೨. ವೇದನೆಯ ಕೊನೆಗೊಳ್ಳುವಿಕೆ; ಸಂಕಟದ ಮುಗಿವು: ದುಃಖಾಂತವೇ ಪರಮಪುರುಷಾರ್ಥ, ದುಃಖಾಂತ ಎಂದರೆ ಪಾರಮೈಶ್ವರ್ಯಪ್ರಾಪ್ತಿ (ಭಾತತ್ತ್ವ. ೬೨೩). ೩. ಶೋಕಪೂರ್ಣವಾದ ಮುಕ್ತಾಯ; ದುರಂತದಿಂದ ಕೊನೆಗೊಳ್ಳುವಿಕೆ : ಈ ದುಃಖಾಂತದ ಸಂಬಂಧವಾಗಿ ಗ್ರಂಥಕರ್ತನು ಒಂದು ಆಶಂಕೆಯನ್ನು ಎತ್ತಿ[ಮೊದಲ ಮುದ್ರಣದಲ್ಲಿ] ಹೀಗೆ ಸಮಾಧಾನ ಹೇಳಿದ್ದಾನೆ (ಬಂಕಿಮ. ೦೬೭). ೪. ದುಃಖದಲ್ಲಿ ಮುಗಿಯುವ ಕಥಾನಕ; ಟ್ರಾಜಿಡಿ ; ದುರಂತಕಥೆ : ಇಂದು ರು ದ್ರ ನಾ ಟ ಕ ವೆಂ ದ ರೆ ಅದು ದುರಂತವೋ, ದುಃಖಾಂತವೋ ಆಗಿರಲೇಬೇಕೆಂದು ನಮ್ಮ ಅಭಿಪ್ರಾಯವಾಗಿದೆ (ಅಂಕಿಶಾ. ೦೬೪). [ ದುಃಖ + ಅಂತ₂ ]

**ದುಃಖಾಂತನಾಟಕ** (ನಾ). ವೇದನೆಯಲ್ಲಿ ಕೊನೆಗೊಳ್ಳುವ ನಾಟಕ: ದುಃಖಾಂತನಾಟಕಗಳು ನಮ್ಮ ಸಾಹಿತ್ಯದಲ್ಲಿ ಹೆಚ್ಚಾಗಿಲ್ಲ (ರೂಢಿ).
[ ದುಃಖಾಂತ + ನಾಟಕ ]

**ದುಃಖಾಕುಲ, ದುಃಖಾಕುಳ** (ನಾ). ವ್ಯಥೆಯಿಂದ ಕೂಡಿದವನು ; ಸಂಕಟದಿಂದ ಕೊರಗುವವನು: ಇತ್ತಲಿರ್ವರುಂ ದುಃಖಾಕುಲರ್ ವೈಕುಂಠನೊಳಿಇಂತೀ ಪರಿಯುಂ ನಿರ್ಧರಿಪುದೆಂದು ಗಳ್ಕನೆ ವೈಕುಂಠಕೆಯ್ತರಲ್ (ಅದ್ಭುತ. ೦೩-೯) ; ಆದರೆ ಅದು ಸಹ ಅಸಾಧ್ಯವೆಂದು ತೋರಿದಾಗ, ಅವನು ದುಃಖಾಕುಲನಾದನು (ಪುನರು. ೨೯೦). ದುಃಖಾಕುಳ : ಅದು ವಾಯುವೇಗದಿಂ ಬಂದರಸನ ಚರಣದೊಳು ಬಿದ್ದು ದುಃಖಾಕುಳನಾಗುತ್ತೆ (ನಂಬಿರ. ೬-೦೫೦). [ ದುಃಖ + ಆಕುಲ ]

**ದುಃಖಾಕುಳ** 'ದುಃಖಾಕುಲ' ನೋ.

**ದುಃಖಾಧಿಕೆ** (ನಾ). ಅಧಿಕವಾದ ಸಂಕಟ ; ಬಹಳ ಕಷ್ಟ : ದುರ್ಗಂಧ ದುರ್ವರ್ಣ . . . ಪಾಪಕ್ಕೆ ಪಕ್ಕಾಗಿ ದುಃಖಾಧಿಕೆಯಿಂ ಸಂಸಾರಕೂಪಾರದೊಳನವರತಂ ನೀಡುಮೋಲಾಡುತಿರ್ದಳ್ (ಸುಕುಮಾ. ೫-೨೦).
[ P ಇದು 'ದುಃಖಾಸಿಕೆ'ಯೆಂಬುದರ ಅಪಲಿಖಿತವಿರಬಹುದು ]

**ದುಃಖಾನ್ವಿತ** (ಗು). ೧. ಯಾತನೆಯಿಂದ ಕೂಡಿದ ; ನೋವಿನಿಂದ ಕೂಡಿದ. (ನಾ). ೨. ಯಾತನೆಯಿಂದ ಕೂಡಿದವನು; ನೋವಿನಿಂದ ಕೂಡಿದವನು; ದುಃಖಿ : ಅರಿನೀಚರ್ಕಳದೊಳೊಂದಿ ನಿಂದೊಡೆ ದರಿದ್ರಂ ಬಂದು ಕೂಡಿರೆ ದುಃಖಾನ್ವಿತಂ (ಜಾತಕಿ. ೦೫-೯). [ ದುಃಖ + ಅನ್ವಿತ ]

**ದುಃಖಾರ್ತ** (ನಾ). ಶೋಕದಿಂದ ಕೂಡಿದವನು ; ವೇದನೆಯನ್ನನು ಭವಿಸುತ್ತಿರುವವನು : ಇರೆ ಧಾತ್ರೀತನಯಂ . . . ಕುಂಭೋದಯ ದೊಳ್ ತೊಟಲ್ಪನಧನಂ ದುಃಖಾರ್ತನುಗ್ರಂ ಶಠಂ (ಜಾತಕ. ೧೭-೨೦) ; ಪ್ರಾಣಿಗಳ್ದುಃಖಾರ್ತರಾಗಿ ಬಂದು ಬೇಡಿದೊಡೆ ತನಗುಳ್ಳ ವಸ್ತುವಂ ಕುಡದೆ ಕೆಡನೋಡುವವನಧಿಕನೆ (ಕೃಮಿಥಾ. ೫೪. ೨೧). [ ದುಃಖ + ಆರ್ತ ]

**ದುಃಖಾರ್ತೆ** (ನಾ). = ದುಃಖಿತೆ : ಆ ನಾರಿ ದುಃಖಾರ್ತೆಯಾಗಲಂತಃಪುರದ ವಿನಾನಾಕ್ಷಿಯರ್ಕರ್ಳಡೆ ರೋದಿಸಲ್ಬರ್ಚಿತು ವಿಷಾದರವಮರಮನೆಯೊಳು (ಕೃಮಿಥಾ. ೫೩-೩೦). [ ದುಃಖ + ಆರ್ತೆ ]

**ದುಃಖಿ** (ಗು). ೧. ವ್ಯಥೆಯಿಂದ ಕೂಡಿದ ; ಸಂಕಟಪಡುವ. (ನಾ). ೨. ಬಾಧೆಯನ್ನು ಅನುಭವಿಸುವವನು ; ನೊಂದವನು : ಕ್ಷಿತಿಜ ನೊಳೊಂದಿದ ಗುರುವಿಂ ನೇತಾರಂ ಮಿತ್ರಪುತ್ರನಿಂ ದುಃಖಿ . . . ಭೃಗು ಸುತನಿಂ ಪರದಾರಶೀಲನೆನಿಕುಂ ಮನುಜಂ (ಜಾತಕ. ೦೩-೩) ; ಜೀವನುಂ ವ್ಯಕ್ತದುಃಖಿ ಅವ್ಯಕ್ತಂ ದೇವನಾ ಜೀವನುಮಶುದ್ಧನು ದೇವನತಿ ಶುದ್ಧನು (ಬಸವ. ೫೦-೨೯) : ಇಳೆಯೊಳೆನ್ನಂದದಲಿ ಬೇಚಿನ್ನೊಳರೆ ದುಃಖಿಗಳು (ಕೊರವ. ೬-೪೩-೮) ; ದೇವ ಮಾಡುವುದಿರಲಿ, ನಾವು ಮಾಡುವ ಹಿಂಸೆ, ಅದೆ ನರಕಹಿಂಸೆ! ದುಃಖಿಗಳ, ಪಾಪಿಗಳ ನಾವು ಧಿಕ್ಕರಿಸುವೆವು (ಇಂಗೀತ. ೬೩-೦೮) ; ದುಃಖಿಗೆ ನೆರಂ ದುಃಖಿ (ಶ್ರೀರಾಮಾ. ೫೬೬-೩೬೮). [ ಸಂ. ದುಃಖಿನ್ ]

**ದುಃಖಿತ** (ಗು). ೧. ಕೊರಗುವ ; ಸಂಕಟಪಡುವ ; ನೊಂದ. (ನಾ). ೨. = ದುಃಖಿ ೨ : ತಾವು ಪರದುಃಖ ದುಃಖಿತರೆಂದು ತಿಳಿದೇ ತಮ್ಮಲ್ಲಿಗೆ ಬಂದಿರುವೆನು (ಚನ್ನಬೇ. ೬೬). [ ಸಂ. ]

**ದುಃಖಿತೆ** (ನಾ). ವ್ಯಥೆಯನ್ನು ಹೊಂದಿರುವವಳು ; ಸಂಕಟದಲ್ಲಿರುವಾಕೆ : ನವಿರ್ಗಳ್ ಕವಲಂ ಕಡುಗೆಂಪುಂ ಪಲವುಮಪ್ಪ ಮುಸುಡುಮುಖವುಮಾಗೆ ದುಃಖಿತೆಯಕ್ಕುಂ (ಲೋಕೋಪ. ೧೧-೫೯). [ ಸಂ. ದುಃಖಿತಾ ]

**ದುಃಖಿನಿ** (ನಾ). = ದುಃಖಿತೆ : ನಾನು ಅತ್ಯಂತ ದುಃಖಿನಿ (ಚನ್ನಬೇ. ೩೬). [ ಸಂ. ದುಃಖಿನೀ ]

**ದುಃಖಿಸು** (ಕ್ರಿ). ವ್ಯಥೆಪಡು ; ಸಂಕಟಗೊಳ್ಳು ; ಯಾತನೆ ಹೊಂದು : ಎಯ್ದದ ದುರ್ಗತಿಗಳನಿರದೆಯ್ದಿ ಕರಂ ಸೇದೆವಟ್ಟು ದುಃಖಿಸಿ (ಸಮಯ. ೩-೫೦) ; ದೆಸೆದೆಸೆಗೆ ಹೇಸಿಕೆಯು ನಾತವಧಿಕ ಭಯಂಕರವು ಪಸರಿಸಲು . . . ಅಕಟಕಟಾ ಎನುತ ದುಃಖಿಸುತ ಮೂಗುಗಳಂ ಹಿಡಿದುಕೊಳು ತುಗುಳುತಗಲ್ದಿರಲು (ಬಸವ. ೪೬-೫೯) ; ತ್ರಿವಿಧ ತಾಪದಲಾನು ಬಳಲಿಯೆ ತೊಳಲಿ ದುಃಖಿಪೆ (ಗಗತಾ ೨-೨೬). [ ದುಃಖ + -ಇಸು ]

**ದುಃಖೋತ್ತರಣ** (ನಾ). ಯಾತನೆಯಿಂದ ಪಾರುಗಾಣಿಸುವವನು ; ದುಃಖನಿವಾರಣೆ ಮಾಡುವವನು : ದೀನಾರ್ತಿದುಃಖೋತ್ತರಣ ನೀ ದೀನಾರ್ತದುಃಖಿತೆಯಾನು ಜಗವರಿಯೆ (ಕುಮಾ.ಸ. ೦೪-೧೨೩). [ ದುಃಖ + ಉತ್ತರಣ ]

**ದುಃಖೋಪಚಯ** (ನಾ). ಅತಿಶಯವಾದ ಸಂಕಟ : ಈ ವೈಭವಫಲವ ಪುತ್ರರಿಗೆ ಬಹು ದುಃಖೋಪಚಯವೆಂದು ಅವನಿಪತಿ ವೈರಾಗ್ಯದಲಿ ರಾಜ್ಯವನು ಬಿಸುಟು . . . ಹೊಱವಂಟ (ಕುಮಾ.ಸ. ೨-೩೬). [ ದುಃಖ + ಉಪಚಯ ]

**ದುಃಖೋಪಶಮನ** (ನಾ). = ದುಃಖಶಮನ ೧ : ಶೋಕಾಕ್ರಾಂತರಾದರಂ ನಾರಾಯಣಂ ಸಂತೈಸಿ ಕೊಂದರ್ ಕೊಲೆ ಸಾವರೆಂಬುದು ಜಗದ್ವ್ಯಾಪಾರ ಮಿಶ್ವರನಿಚ್ಛೆಯಿಂದೆ ನೆಗಟ್ಟುವೆಂದು ದುಃಖೋಪಶಮನಂ ಮಾಡಿದೊಡೆ (ಪಂಪಭಾ. ೧೪-೦೦ ವ) : ಜ್ಞಾನವೇ ದುಃಖೋಪಶಮನಕ್ಕೂ ಬಂಧ ನಿವಾರಣಕ್ಕೂ ಕಾರಣ (ಧಾರದ. ೦೨೨). [ ದುಃಖ + ಉಪಶಮನ ]

**ದುಃಖೋಪಾತ್ತ** (ನಾ). ಯಾತನೆಯನ್ನು ಉಂಟುಮಾಡುವುದು ; ಸಂಕಟವನ್ನು ತರುವಂತಹುದು : ಸುಖವಿದು ದುಃಖೋಪಾತ್ತಮಿದೆಂದಱಿವುಗುಮಾ ಪರಮಕವಿಪ್ರಧಾನರಾ ಕಾವ್ಯಂಗಳ್ (ಕವಿರಾ. ೦-೦೮). [ ದುಃಖ + ಉಪಾತ್ತ ]

**ದುಃಚಿಹ್ನೆ** (ನಾ). ಕೆಟ್ಟ ಶಕುನ ; ದುಷ್ಟ ಲಕ್ಷಣ. [ ಸಂ. ]

**ದುಃಪಕ್ವ** (ಗು). ಸರಿಯಾಗಿ ಅಡುಗೆಯಾಗದೆ ಇರುವ,-ಬೇಯದಿರುವ. 'ದುಃಪಕ್ವಾನ್ನ' ಪರಾ. [ ಸಂ. ]

**ದುಃಪಕ್ವಾನ್ನ** (ನಾ). ೧. ಸರಿಯಾಗಿ ಬೇಯದೆ ಇರುವ ಅನ್ನ. ೨. [ಜೈನ] ಐದು ಭೋಗೋಪಭೋಗ ಅತಿಚಾರಗಳಲ್ಲಿ ಒಂದು ; ಬೇಯದ ಅಥವಾ ಸೀದ ಆಹಾರ ತಿನ್ನುವುದು : ಕ್ರಮದಿಂ ಸಚಿತ್ತ ಸಂಬಂಧವಂತೆ ಸಮ್ಮಿಶ್ರಮಭಿಷವಂ ದುಃಪಕ್ವಾನ್ನಂಗಳತಿಕ್ರಮಮಾ ಭೋಗೋಪಭೋಗಪರಿಮಿತ ಗತಿಯೊಳ್ (ಸುಕುಮಾ. ೬-೨೯). [ ದುಃಪಕ್ವ + ಅನ್ನ ]

**ದುಃಪ್ರಣಿಧಾನ** (ನಾ). ಕೆಟ್ಟ ಆಚರಣೆ ; ದುರ್ವರ್ತನೆ : ವ್ಯಂತರಾದಿಗಳುಂ ಮುನ್ನಮತ್ಯುಗ್ರ ತಪೋಧನರ್ಗೆ ಅಗ್ರಪೂಜೆಯಂ ಮಾಳ್ಪರೆಂಬುದು ಪುಸಿಯಲ್ಲದೊಡೆ ಈಗಳೆಮ್ಮಂದಿಗರ್ಗೆ ಏಕೆ ಮಾಡರೆಂಬ ದುಃಪ್ರಣಿಧಾನವಿರಹಿತಚಿತ್ತನೆನಿಪ ಮುನಿಪತಿಗೆ ಸತ್ಕಾರ ಪುರಸ್ಕಾರ ಪರೀಷಹ ಜಯಮಕ್ಕುಂ (ತತ್ತ್ವಾರ್ಥ. ೩೩೬). [ ಸಂ. ]

**ದುಃಪ್ರತೀತಿ** (ನಾ). ≡ ದುಷ್ಪ್ರತೀತಿ ೨ : ಎರಡುಂ ಪದಂಗಳ ನಡುವೆ ಬೇಱೊಂದು ದುಃಪ್ರತೀತಿ [ಪಾಠಾಂ. ದುಷ್ಪ್ರತೀತಿ] ಪುಟ್ಟುವೊಡೆ ಸಂಧಿಯುಂ ಮಾಡಲಾಗದು (ಶಮದ. ೬೨ ವೃತ್ತಿ). [ ಸಂ. ]

**ದುಃಪ್ರಾಪಂಚಿಕ** (ಗು). ಕೆಟ್ಟ ಇಹಲೋಕಕ್ಕೆ ಸಂಬಂಧಿಸಿದ : ಮಂಗಳೋದಯಲಿಂಗ ಕರತಳಸಂಗತಸ್ಥಿತಿಯಂ ತಿಳಿಹಿಯಾ ಸಂಗ ದುಃಪ್ರಾಪಂಚಿಕಾಶಾ ಬಂಧಮಂ ಪಱಿದು (ಬಸವ. ೪೯-೩೬). [ ಸಂ. ]

**ದುಃಶೀಲ** (ಗು). ≡ ದುಶ್ಶೀಲ ೧ : ಸಾಲವಂ ಕೊಳ್ಳನು ಕೊಡನು ದುಃಶೀಲ [ಪಾಠಾಂ. ದುಶ್ಶೀಲ] ಭವಿಗಳ ಕೈಯಲೆನುತಂ (ಬಸವ. ೬೦-೦೬). [ ಸಂ. ]

**ದುಃಶ್ರಾವ್ಯ** (ಗು). ≡ ದುಶ್ಶ್ರಾವ್ಯ : ದುಃಶ್ರಾವ್ಯ [ಪಾಠಾಂ. ನಿಸ್ಸಾರ] . . . ಕಾಲಹೀನವೆಂಬ ಹದಿನೈದು ಸ್ವರದೂಷಣಂಗಳಂ ತೊಱೆದು (ವಿವೇಕ. ೨೩೬). [ ಸಂ. ]

**ದುಃಶ್ರುತಿ** (ನಾ). ಕೆಟ್ಟವಿಷಯಂಗಳನ್ನು ಕೇಳುವುದು,-ತಿಳಿಯುವುದು: ದುಃಶ್ರುತಿ—ಮನಸ್ಸು ಕಲುಷಿತವಾಗುವಂತಹ ಗ್ರಂಥಗಳನ್ನು ಓದುವುದನ್ನೂ ಓದಿಸುವುದನ್ನೂ ಮಾಡಬಾರದು (ಕೃಸತ. ೪೬೯). 'ದುಶ್ಶ್ರುತಿ' ಪರಾ. [ ಸಂ. ]

**ದುಃಸಂಗ** (ನಾ). ≡ ದುಸ್ಸಂಗ. [ ಸಂ. ]

**ದುಃಸಂತತಿ** (ನಾ). ≡ ದುಸ್ಸಂತತಿ. [ ಸಂ. ]

**ದುಃಸಂಧಿ** (ನಾ). ≡ ದುಸ್ಸಂಧಿ. [ ಸಂ. ]

**ದುಃಸಹ** (ನಾ). ≡ ದುಸ್ಸಹ ೨ : ಶಿವಪೂರನ ಆಯುಷ್ಯವು ದುಃಸಹವಾದ ವಿಪತ್ತುಗಳಲ್ಲಿಯೇ ಕಳೆದು ಹೋಯಿತು (ಕರ್ಣಾಟ. ೦೬೬). [ ಸಂ. ]

**ದುಃಸಾಧ್ಯ** (ನಾ). ≡ ದುಸ್ಸಾಧ್ಯ : ದುಃಸಾಧ್ಯ ಸಂಭಾವ್ಯವೆಂಬ ಸೊಲ್ಲಿನ ಗುಲ್ಲು ಗುಡುಗಾಡುತಿದೆ (ಉದ್ಯಾಕಿ. ೫೬-೦). [ ಸಂ. ]

**ದುಃಸ್ಥಿತಿ** (ನಾ). ≡ ದುಸ್ಥಿತಿ : ಬಸವ ಶರಣನೆ ದುಃಸ್ಥಿತಿ [ಪಾಠಾಂ. ದುಸ್ಥಿತಿ] ಗಳತ್ತತ್ತಲೋಡುವುವು (ಬಸವ. ೦-೨೬) ; ಸತ್ಪುರುಷಾಗ್ರಣಿಯೊಬ್ಬನು ಉತ್ತಮಸ್ಥಿತಿಯಿಂದ ದುಃಸ್ಥಿತಿಗೆ ಗುರಿಯಾಗುವ ದೃಶ್ಯವು ರೌದ್ರವಾಗಲಾರದು (ಅರಿಕಾ. ೦೬೦) ; ಹೃದಯತಾಪದಿ ದೀನವದನನಾಗಿ, ದುಃಸ್ಥಿತಿಯ ನಾಂತಾ ನೃಪೇಂದ್ರನಂ ಕಾಣುತಾ ಕೇಕಯಕುಲೀನೆಯಾಕುಲೆಯಾದಳೆದೆಗರೆಗಿ (ಶ್ರೀರಾಮಾ. ೬೦-೪೬೦). [ ಸಂ. ]

**ದುಃಸ್ಥಿತಿಪ್ರೇರಕ** (ನಾ). ದುರವಸ್ಥೆಗೆ ಪ್ರೇರಿಸುವವನು; ಚಾಡಿಕೋರ : "ದುಃಸ್ಥಿತಿ [ಪಾಠಾಂ. ದುಸ್ಥಿತಿ] ಪ್ರೇರಕಂ ಚಹಡಂ" (ಮಂಗರಾ. ೬೨-೨೪). [ ದುಃಸ್ಥಿತಿ + ಪ್ರೇರಕ ]

**ದುಃಸ್ಪರ್ಶ** (ನಾ). ≡ದುಸ್ಪರ್ಶ ೨: "ದುಃಸ್ಪರ್ಶ [ಪಾಠಾಂ. ದುಸ್ಪರ್ಶ] ವೆನೆ ತುಱುಚೆಯುಕ್ಕುಂ" (ಮಂಗರಾ. ೭೭-೭೭). [ ಸಂ. ]

**ದುಃಸ್ಪರ್ಶೆ** (ನಾ). ≡ದುಸ್ಪರ್ಶೆ. [ ಸಂ. ದುಃಸ್ಪರ್ಶಾ ]

**ದುಃಸ್ಮೃತಿ** (ನಾ). ಕೆಟ್ಟ ನೆನಪು: ಮುಳ್ಳಸಗಿದಾ ದುಃಸ್ಮೃತಿಯು ನಿಧಿಗೆ ಬೆಂದಿರುಹಿ ... ರಾಜ್ಯಭಾರವ್ರತದಿ ನಿಂದನಯ್ ಭರತನನಿಶಂ ಶ್ರೀರಾಮ ಸಂಕ್ಷೇಮ ಚಿಂತನಾಪ್ರಾರ್ಥನೆಗೆ ತೆತ್ತು ತನ್ನಾತ್ಮವಂ (ಶ್ರೀ ರಾ ಮಾ ೧೬೫-೬೩೭). [ ಸಂ. ]

**ದುಃಸ್ವಪ್ನ** (ನಾ). ≡ ದುಸ್ವಪ್ನ : ಕ್ರೂರ ದುಃಸ್ವಪ್ನ ಜೇಡನ ಪೀಡನೆಗೆ ಸಿಲ್ಕಿ ನಡುನಡುಗುತೊದ್ದಾಡಿದತ್ತು ಮಂಥರೆಯೊಡಲ್. ಬಲೆಗೆ ಬಿಳ್ದೊಂದು ಪುಳುವಂತೆ (ಶ್ರೀರಾಮಾ. ೫೯-೧೭೬). [ ಸಂ. ]

**ದುಃಸ್ವಪ್ನದರ್ಶನ** (ನಾ). ಕೆಟ್ಟ ಕನಸನ್ನು ಕಾಣುವುದು,-ನೋಡುವುದು: ಬಂದಯೋಧ್ಯಾನಗರಮಂ ಪೊಕ್ಕು ದುಃಸ್ವಪ್ನ[ಪಾಠಾಂ. ದುಸ್ಸ್ವಪ್ನ]ದರ್ಶನ ಕರ್ಷಣಾರ್ಥವಾಗಿ . . . ಶಾಂತಿಕ್ರಿಯೆಗಳಂ ನೆಗಟ್ದು (ಆದಿಪು. ೧೫-೯೮ ವ). [ ದುಃಸ್ವಪ್ನ + ದರ್ಶನ ]

**ದುಃಸ್ವಪ್ನಶಾಂತಿ** (ನಾ). ಕೆಟ್ಟ ಕನಸನ್ನು ಕಂಡಿದ್ದಕ್ಕಾಗಿ ನಡೆಸುವ ಶಾಂತಿ: ಮರುದಿನ ಬೆಳಗ್ಗೆ ತನ್ನ ತಾಯ ಬಳಿಗೆ ಹೋಗಿ ರಾಣಿಯ ದುರ್ವರ್ತನೆಯನ್ನು ಒಂದು ಕನಸಿನ ನೆವದಿಂದ ಸೂಚಿಸಲು, ಅವಳು ಅದರ ತಾತ್ಪರ್ಯವನ್ನು ಅರಿತುಕೊಳ್ಳದೆ, ದುಃಸ್ವಪ್ನಶಾಂತಿಗಾಗಿ ಮಾರಿಗೆ ಬಲಿ ಕೊಡಬೇಕೆಂದು ಹಠ ಹಿಡಿಯುವಳು (ಕಾವ್ಯಸ. ೬೪). [ ದುಃಸ್ವಪ್ನ + ಶಾಂತಿ ]

**ದುಃಸ್ವರ** (ನಾ). ≡ದುಸ್ವರ ೨: ಸುಭಗ ದುರ್ಭಗ ಸುಸ್ವರ ದುಃಸ್ವರ ಆದೇಯ . . . ತೀರ್ಥಕರನಾಮಮೆಂದಿಂತಲ್ಲಿ ಗತಿನಾಮಂಕರ್ಮಂ ಚತುರ್ವಿಧಮಕ್ಕುಂ (ಗೊಮ್ಮಸಾ. ೪-೬) : ಸ್ಥಾವರ ಸೂಕ್ಷ್ಮ . . . ದುಃಸ್ವರ ಅನಾದೇಯ ಅಯಶಸ್ಕೀರ್ತಿ ನಾಮಕರ್ಮವೆಂದಿಂತು ನಾಮಕರ್ಮದುತ್ತರಪ್ರಕೃತಿಗಳು ತೊಂಭತ್ತಮೂರುಂ ನೂರ ಮೂರುಂ ಮೇಣಪ್ಪುವು (ಗೊಮ್ಮಸಾ. ೭-೨); ಮನೋಜ್ಞ ಸ್ವರನಿರ್ವರ್ತನಂ ಭವತಿ ದುಃಸ್ವರನಾಮ (ಗೊಮ್ಮಸಾ. ೬-೬). [ ಸಂ. ]

**ದುಕಾನ** 'ದುಂಕಾನು' ನೋ.

**ದುಕಾನು, ದುಂಕಾನ** (ನಾ). ಅಂಗಡಿ ; ವ್ಯಾಪಾರಸ್ಥಳ : ಅಲ್ಲಿ . . . ದುಕಾನು ನಡೆಯುತ್ತದೆ (ಮುಂಬಮ್ಯಾ. ೨೦): ಓಗಿತ್ತು ಮರಿ, ಬೈಸಿಕಲ್ಲು ಏರಿ ಗ್ಯಾರೇಜೂ, ಸರಾಯಿ ದುಕಾನು ಎಲ್ಲಾನೂ ಸುತ್ತಿಕೊಂಡು ಬಂತು (ಬಂಗಲ. ೧೫೬). **ದುಕಾನ** : ಚಹಾ – ಕಾಫಿ ಫರಾಳ ದುಕಾನದ ಪತ್ರ್ರಗಳ ಕೆಳಗೆ ನಿಂತು ಹನಿಗಳಿಂದ ಪಾರಾದರೂ ಒಳಗಿನ ಹೊಗೆ ಅವರ ಕಣ್ಣೊಳಗಿಂದ ನೀರು ತರಿಸಿತು (ಮುಗಿಮು. ೭) ; ದುಕಾನಗಳು ಹೊಸದಾಗಿ ಮಾಡಿದ್ದರಿಂದ ಅಲ್ಲಿಯ ಅಡತಿ ಖರ್ಚು ತೆಗೆದುಕೊಳ್ಳುವ ಸಂಬಂಧವಾಗಿ . . . ಈ ಪುಸ್ತಕದ ಕಡೆಯಲ್ಲಿ ಬೇರೆಯಾಗಿ ದಾಖಲ ಮಾಡಿರುತ್ತೇವೆ (ಮುಂಬಮ್ಯಾ. ೫ ಪ್ರಸ್ತಾವನೆ). [ ←ಪಾರ. ಹಿಂ. ಮರಾ. ದುಕಾನ್ ]

**ದುಕಾನುದಾರ** (ನಾ). ಅಂಗಡಿಯವ ; ಅಂಗಡಿಕಾರ : (*). [ ದುಂಕಾನು + – ದಾರ$_4$ ]

**ದುಕಾರು** (ನಾ). ಎರಡು ಮಳೆ ; ಹಿಂಗಾರು ಹಾಗು ಮುಂಗಾರು : "ದುಕಾರು = ಹಿಂಗಾರು ಮುಂಗಾರು ಮಳೆ" (ಜಾನಕೋ. ೬). [ ದು + ಕಾರು$_2$ (<ಕಾರ್$_3$) ]

**ದುಕೂಲ** (ನಾ). ೧. ರೇಷ್ಮೆ ಬಟ್ಟೆ ; ಪಟ್ಟೆವಸ್ತ್ರ : "ದುಕೂಲಂ ಕ್ಷೌಮಂ ಈ ೨ ದು (ಗು)ಕೂಲಂ" (ಹಲಾಯು. ೯೦-೪೯೫) : ತನ್ನಹೀವಿಲಾಸಿನಿಯ ಮೇಲ್ಗೊಂಡ ದುಕೂಲಮುಮನರ್ಹತ್ಪರಮೇಶ್ವರನ ವಿಶದಯಶಃಪುಂಜಮನನುಕರಿಸಿ . . . ದಕ್ಷಿಣೋತ್ತರ ಶ್ರೇಣಿಗಳ್ಗೆ ರಾಜಧಾನಿಗಳಾಗಿರ್ದ . . . ಪೊಲಲ್ಗಳನೊಳಕೊಂಡು (ಆದಿಪು. ೧-೬೨ ವ) ; ದುಕೂಲದೊಂದು ಮಡಿವಾಸಿವ ಮಾಟ್ಕೆವೊಲಾಯ್ತು (ಪಂಪಭಾ. ೫-೧೬) ; ತತ್ಸಿತಂ ಬಳೆದು ಬಾಗದ ಬೀರದ ಪೆರ್ಮೆಯಿಂ ದಿಶಾಭಿತ್ತಿಯನೆಂಟನೆಯ್ದೆ ತೆರೆಸುತ್ತಿದನಾತ್ತಯಶೋದುಕೂಲದಿಂ (ಪಂಪರಾಮಾ. ೨-೫೬) : ದುಕೂಲವರಾನುಲೇಪನವ ಪರಿಹರಿಸಬೇಡೊಲವಿನಲಿ ಪತಿಕರಿಸು (ಕುಮ್ಯಾಗ. ೫-೩೯). ೨. (ಉತ್ತಮವಾದ) ವಸ್ತ್ರ,-ಉಡುಪು:ತಾವರೆಯ ನೂಲ ದುಕೂಲಮನುಟ್ಟು ಪರಾಗದ ತಿಲಕಮನಿಕ್ಕಿ (ನಂಬಿರ. ೧೧-೬೨) ; ಮಸುಳಿಸಿದ್ದ ದುಕೂಲ ರದನದೊಳೆಸವ ಹಾವಸೆ ... ಉದಯಾಸ್ತಮಯಕಾಲದಲಿ ಎಸೆವ ನಿದ್ರಾಂಗನೆಯೊಳೊಂದಿರೆ ಬಿಸಜಲೋಚನನಾದೊಡೆಯು ವರ್ಜಿಸುವಳವರನು ಭಾಗ್ಯಸಿರಿ (ಕುಮ್ಯಾಉ. ೩-೫೬) : ಅವಳು ಉಟ್ಟ ದುಕೂಲ ಸಹ ಜಾರಿ ಮೈಯ ಅಂಗಗಳು ಕಾಣಿಸುತ್ತಿದ್ದರೂ ಅವಳಿಗದರ ಪರಿವೆಯಿಲ್ಲ (ಕುಸುಸಂ. ೨೨೬). [ ಸಂ. ]

**ದುಕೂಲಚೇಲ** (ನಾ). ರೇಷ್ಮೆಯಂ ವಸ್ತ್ರ,-ಬಟ್ಟೆ : ಇದು ಮೇಲ್ಗೊಂಡ ದುಕೂಲಚೇಲಮೆನೆ ತದ್ವ್ಯೂಢಾಧ್ಯಮಾಂತೂಪ್ಪುತಿರ್ಪುದು ನೀಳಾಚಳಚೂಳಿಕಾವರಸರಃಸಂಜಾತೆಯಂ (ಪುಷ್ಪಪು. ೨-೬). [ ದುಕೂಲ + ಚೇಲ$_1$ ]

**ದುಕೂಲವಸನ** (ನಾ). ರೇಷ್ಮೆಯಂ ವಸ್ತ್ರ,- ಬಟ್ಟೆ : ದುಕೂಲವಸನಂ ಫೇನೋದ್ಗಮಂ ಮಲ್ಲಿಕಾ ಸ್ಮಿತದಾಮಂ ತೆರೆಮಾಲೆಯಾಗಿ ವಿಮಳಕ್ಷೀರಾರ್ಣವಶ್ರೀಯನಾ ಶತಪತ್ರಾನನೆ ಪೋಲ್ತು ಬೆಳ್ಪಸದನಂಗೊಂಡೇಂ ಮನಂಗೊಂಡಳೋ (ಪುಷ್ಪಪು. ೯-೯೭). [ ದುಕೂಲ + ವಸನ ]

**ದುಕೂಲವಸ್ತ್ರ** (ನಾ). ರೇಷ್ಮೆಯ ಬಟ್ಟೆ: ದುಕೂಲವಸ್ತ್ರದ ಗುಣ – ಇದು ಸಣ್ಣ ಕೆಲಸದ ವಸ್ತ್ರವಾಗಿಯೂ, ಮಹಾಲಕ್ಷ್ಮಿಗೆ ಪ್ರೀತಿಕರವಾಗಿಯೂ . . . ಸ್ತ್ರೀಯರುಗಳಿಗೆ ವಶ್ಯಕರವಾಗಿಯೂ ಇರುವುದು. ಇದು ದುಕೂಲ ವಸ್ತ್ರದ ಗುಣ (ಸಕಪ್ರ. ೩೭). [ ದುಕೂಲ + ವಸ್ತ್ರ ]

**ದುಕೂಲವಿತಾನ** (ನಾ). ರೇಷ್ಮೆಬಟ್ಟೆಯಂ ಮೇಲ್ಕಟ್ಟು ; ಪಟ್ಟೆವಸ್ತ್ರದ ಮೇಲ್ಚಪ್ಪರ: ಅದು ಪೊಸ ಪೊನ್ನ ಘಂಟೆಯ ದುಕೂಲವಿತಾನದ ಮೌಕ್ತಿಕಪ್ರಲಂಬದ . . . ರಮ್ಯಜಾಳಮಾರ್ಗದ ವಿಳಸತ್ಕವಾಟದವಿಚಿತ್ರವಿಭೂತಿಗೆ ಜನ್ಮಮಂದಿರಂ (ಪುಷ್ಪಪು. ೨-೯೩). [ ದುಕೂಲ + ವಿತಾನ ]

**ದುಕೂಲಾಂಬರ** (ನಾ). ರೇಷ್ಮೆಯಂ ಬಟ್ಟೆ; ಪಟ್ಟೆ ವಸ್ತ್ರ: ಪೊಸ ಮುತ್ತಿನ ತಂಡಿಗೆ ಪೊದಟ್ದಿಸೆಯ ದುಕೂಲಾಂಬರಂ ನಿಜಾಂಗದೊಳಂ ಸಂದೆಸೆದಿರೆ (ಪಂಪಭಾ. ೨-೬೮) : ಮಳರಹಿತ ದುಕೂಲಾಂಬರವಿಳಸಿತೆ ನಿಡಿಯಳ್ ಸಗೌರರುಚಿ ಘಟಮಂ ಚಕ್ಕಳಮಂ ಪಿಡಿದಿರ್ಪಳ್ (ಜಾತತಿ. ೦೯-೦೮). [ ದುಕೂಲ + ಅಂಬರ ]

**ದುಕೂಲಾಂಬರೆ** (ನಾ). ರೇಷ್ಮೆಯ ವಸ್ತ್ರವನ್ನು ಧರಿಸಿದವಳು : ಕೇವಲ ಧವಳಾಭರಣೆಯಂ ದುಕೂಲಾಂಬರೆಯಂ ಕೆಲದೊಳ್ ನಿಲೆಯುಂ ಜ್ಯೋತ್ಸ್ನಾವಿಲಾಸದೊಳ್ ಬಗೆದನಿಲ್ಲ ನಲ್ಲಳನಿನಿಸಂ (ಳವಿರಾ. ೩-೯೩). [ ಸಂ. ದುಕೂಲಾಂಬರಾ (ದುಕೂಲ + ಅಂಬರ + –) ]

**ದುಕ್ಕ** (ನಾ). ವ್ಯಥೆ; ಯಾತನೆ: "ದುಕ್ಕ (ದುಗುಡ) – ದುಃಖ" (ತದ್ಯಕೋ. ೨೦) ; ತನುವನಿಳಿಗೀಡಾಗಿ ಮತ್ತೆಳ್ದು ಬಿಳ್ದು ಹೊರಳುತ್ತೆ ದುಕ್ಕದ ಕಡಲೊಳೀಸಾಡುವಂತಿರ್ದಳು (ಧಾವಜಂ. ೮-೨೬) ; ಮಕ್ಕಳ ಪಡೆಯದ ಮಡದಿಯ ಸಂಸಾರ ದುಕ್ಕದ ಮಡುವಿನಂತಿರ್ದ ಹೊಕ್ಕಳು ಗುಣ್ಪುಗೆಟ್ಟುದು ಪೊಡಲೊಳು ಶಿಶು ತೆಕ್ಕನೆ ತೀವಿ ಜೀವಿಸಲು (ಮೋಹತ. ೦೬-೬); ಮಕ್ಕಳಿಲ್ಲವು ಎಂದು ಅಕ್ಕಮಲ್ಲಮ್ಮನು ದುಕ್ಕವ ಬಸವರಸಗಱುಪಲು ಕಾಶಿಯ ಮುಕ್ಕಣ್ಣನೊಲಿದ (ತರ್ವಜ್ಞ. ೫) : ಮಕ್ಕಳಿದ್ದರೇನಕ್ಕ ದುಕ್ಕ ಕಳದಾವೇನ ? (ಕನ್ನಜಾ. ೮೦) ; ರೊಕ್ಕಕ್ಕೆ ಕಡಿಮೆಯಾದರೆ ದುಕ್ಕಕ್ಕೂ ಕಡಿಮೆಯೇ (ಗಾದೆ). [ <ಪ್ರಾ. ದುಕ್ಕ./ಸಂ. ದುಃಖ ]

**ದುಕ್ಕಂಡ** (ನಾ). ಎರಡು ಹೋಳುಗಳನ್ನು ಕೂಡಿಸಿದುದು ; ಜೋಡಿ: ಆಯ್ತಂ ಬಟುವಟಿಯಿತ್ತ ನಲ್ದೊಡವುಗಳೊಳ್ . . . ದುಕ್ಕಂಡದ ಒಂದುಗಂಕಣಂ ಮಾಳವಿಗಾ ಚಕ್ಕಸರಂ ನಿನ್ನರಸಿಗೆ (ರಾಮಾಶ್ವ. ೩೮-೧೭). [ <ಪ್ರಾ. ದುಃಖಂಡ./ಸಂ. ದ್ವಿಖಂಡ]

**ದುಕ್ಕಡಿ** 'ದುಕಂಡಿ' ನೋ.

**ದುಕ್ಕಡಿಸು** (ಕ್ರಿ). ಸಂಕಟವನ್ನು ನೆನಸಿಕೊಂಡು ದುಃಖಿಪಡು; ಬಿಕ್ಕಳಿಸು: ರತ್ನ . . . ಕೈಗಳ ಮಧ್ಯೆ ತಲೆಯನ್ನಿಟ್ಟು ಅಳಲಾರಂಭಿಸಿದಳು. ದುಕ್ಕಡಿಸಿ ಕೊಂಡು ಅತ್ತಳು (ಅವಶಂ. ೧೬೬). [ ದುಕ್ಕ + ಅಡಿಸು$_0$ (<ಅಡಸು) ]

**ದುಕ್ಕಪಡು** (ಕ್ರಿ). ವ್ಯಥೆಪಡು; ದುಃಖಿಸು: ನಿನ್ನಾಳ್ದನೆನ್ನಯ ತವಗೆಡಿಸಿದ ಕಾರಣದಿಂದೆ ಕಿಡಿ ಸುರಿವಕ್ಷಿಯಿಂದುಜಾಹಿದೆ ನೀ ದುಕ್ಕಪಡಬೇಡವೆಂದು ಪೇಳಿದನು (ಪ್ರೋಹಚ. ೮-೨೯). [ ದುಕ್ಕ + ಪಡು$_1$ ]

**ದುಕ್ಕವೆರಸು** (ಕ್ರಿ). ದುಃಖದಿಂದ ಕೂಡು ; ದುಃಖಿಸು ; ವ್ಯಥೆಪಡು : ಅಕ್ಕರು ಬಲೆಗೆ ಸಿಕ್ಕಿದ ಸತಿಗೋಸುಗ ದುಕ್ಕವೆರಸಿ ಮುಖಬಾಡಿ ವಿಕ್ಕ ವಾತಿನ್ನೇಕೆ ಹರಣದ ಹಂಗಿಲ್ಲ ದುಕ್ಕವೆರಸಿ ಕಪೋತಕನು (ಕಪೋತ. ೦೫-೫೬). [ ದುಃಕ್ಕ + ಬೆರಸು$_1$ ]

**ದುಕ್ಕಿ** (ನಾ).=ದುಃಖಿ ೨ : "ದುಃಖೀ-ದುಕ್ಕಿ" (ಶಾಕಶ್ಬ.-೨೮೯); ನೀಚೋಕ್ತಿಯಂ ದನಿಯನು ಕೇಳಿ ತಲೆಗುತ್ತಿ ಲೋಚನ ತಪ್ಪವಾರಿಯನು ಭೂಚಕ್ರದೊಳು ಹರಿಸುವ ದುಃಕ್ಕಿಯ ಕಂಡು (ಪ್ರೋಹಚ. ೧೦-೧೭). [ <ಸಂ. ದುಃಖಿನ್ ]

**ದುಕ್ಕಿತ** (ನಾ) ನೊಂದವನು ; ದುಃಖಿತ : ರಾಮು ಸಿಕ್ಕದೆ ಪೋಪನೆನುತ ಮಾತಾಪಿತರತಿ ದುಕ್ಕಿತರಾಗಿರುತಿರಲು (ಅಬ್ಬಲೂ.೨-೭೪).[<ಸಂ.ದುಃಖಿತ]

**ದುಕ್ಕಿತೆ** (ನಾ).=ದುಃಖಿತೆ : ಏಕಾಂತರಾಮನ ಚಿತ್ರದೊಳಗೆ ನಿಂದು . . . ಮುಕ್ಕಣ್ಣ ಮೂರ್ಛೆಯ ಮಾಡಿಸುತಿರಲಾಗ ದುಕ್ಕಿತೆಯಾದೂ ಪದ್ಮಮ್ಮ (ಅಬ್ಬಲೂ. ೨-೫೯). [ < ಸಂ. ದುಃಖಿತಾ ]

**ದುಕ್ಕಿಸು** (ಕ್ರಿ).=ದುಃಖಿಸು : "ಖಿದ್ಯತೇ = ದುಕ್ಕಿಸಿದವಂ" (ಶಾಕಶ್ಬ. ೨೦೦); ತಕ್ಷವಿಲೋಮ ಸೌಖ್ಯವ ಕಂಡು ಯತಿಗಳು ಭಿಕ್ಷವ ತೊಲಗಿದು ದುಕ್ಕಿಪರು (ಪ್ರೋಹಚ. ೧೮-೫೦); ಮನದಲ್ಲಿ ತಾಂ ದುಕ್ಕಿಸುತರರೆ ಅಕ್ಕಟ ಕಣ್ಣಾ ನೀರ್ಮೂರ್ ಕ್ಕುಳಿಸುತಲೆನ್ನ ದಿಕ್ಕಿಲ್ಲದವಳಂತೆ ದಿಟ್ಟಿಸಿದುದನು ನಾನೆಂತು ಮರೆಯುವೆನು (ಶಾಕುಂತ. ೬೫ ಅಡಿ).

ದುಕ್ಕದುಕ್ಕಿಸು(ದ್ವಿರುಕ್ತಿ): ಜಾನಕಿ ದುಕ್ಕದುಕ್ಕಿಸಿ ಅತ್ತಳು (ಮುತ್ತ್ರ.ದ ೪೮). [ ದುಕ್ಕ + — ಇಸು$_3$ ]

**ದುಕ್ಕುಡಿ, ದಂಕ್ಕಡಿ** (ನಾ). ೧. ಕಡಿವಾಣ: ತುರಗಕೆ ದುಕ್ಕಡಿಯನಿಕ್ಕಿದರು ತಿರುಹಿದರೆರಡು ವಾಘೆಯಲಿ (ಶುಪ್ಪಾಳ. ೧೮-೬). ೨. ಲಗಾಮು (?) : ಬರಿಗಡಗ ಕೀಳ್ಕಂಬಿ ದುಕ್ಕುಡಿ [ಪಾಠಾಂ. ದುಕ್ಕಡಿ, ದಿಕ್ಕಡಿ] . . . ತುರಗ ವದನದಲೊಪ್ಪಿರಲು (ಶುಪ್ಪಾಳೀ. ೪-೪೮). **ದುಕ್ಕಡಿ** : ೨. ದುಕ್ಕಡಿ ಕಬ್ಬಿಗಳಿಕ್ಕಿ ಕಡಿವಾಣ ಸಿಕ್ಕಿಸಿ ಮುರುತವ ಸೆಳೆದೂ (ದೇವಾಂಪು. ೫-೨೬೩). [ ? ]

**ದುಕ್ಕುಳಿಸು** (ಕ್ರಿ). ಬಿಕ್ಕಳಿಸು : ದುಕ್ಕುಳಿಸುತಳುತವುವರಜೆ ಚಕ್ಕನೆ ದಾಯಾದ್ಯರಸಗಿದಂದವನುಳಿಯದೆ ಕಕ್ಕಸವೆನಿಸಲ್ ಪೇಳಲ್ ದಕ್ಕಡಿಗರಿ ದಕ್ಕದಾರೆ ತಾವೆನುತಮವಂ (ಹಾಲಾಸ್ಯ. ೬೬-೩೦). [< ದುಕ್ಕಡಿಸು ?]

**ದುಪಾಪತು** (ನಾ). ಹಿಂಸಾಕೃತ್ಯ ; ಅತ್ಯಾಚಾರ ; ಹಿಂಸೆ ; ಕೋಟಲೆ : ಸನ್ ೧೮೮೭೨ರ ಅಖೇರವರೆಗೆ ಮುಗಿಯುವ ಒಂಬತ್ತು ವರ್ಷಗಳಲ್ಲಿ ೨೧೭ ಖೂನಗಳು . . . ೨೨೧ ಭಾರೀ ದುಪಾಪತುಗಳು, ೭೨೭ ದರೋಡೆ. ಕಳವು ... ಆದವು(ಕಥಾಗ. ೩೪೨). [ ←ಮರಾ. ದುಪಾವತ್ ]

**ದುಗ, ದಂಗೆ, ದೂಗ** (ನಾ). ೧. ಎರಡರ ಜೊತೆ; ಯುಗ್ಮ: ಪ್ರತ್ಯಯಾಂ ತಕ್ಕೆ – ದ್ವಿಕ – ದುಗ ; ತ್ರಿಕ – ತಿಗ (ಶಮದ. ೨೯೦ ಪ್ರಯೋ); ಸಂಭುದೇವನ ಮನೆಗಂ ಪಡುವಣ ನಟ್ಟ ಕಲುನಿಡುವಾಗಿಲ ಇಪ್ಪತ್ತೊಂದಜು ದುಗವೊಂಬತ್ತುಕ್ಕೆ ಮನೆಯನೂ (ಎಕ. III, ತಿರುಮು. ೨೭-೩೦; 1290). ೨. ಲೆತ್ತದ ಆಟದಲ್ಲಿ ಎರಡರ ಗರ : ಬಿಡು ತಿಗದುಗ ಪಂಚಿಯನೊಡ್ಡದಸಿದ ಚಾರಿಯನೆ ಪೊಯ್ದು ಗುಣಸಾರ್ಸೆದುಗ್ಗದದಿಂ ತ್ರಿಗುಣವುದೆನಿಪ್ಪ ನುಡಿ ನೆಗಟಲ್ ಲೆತ್ತವಾಡಿದರ್ ದಂಪತಿಗಳ್ (ಉದ್ಭಟ.೦೦-೧೫) ; ದುಗನ ಹಾಯಿಕು ತನಗೆ ಹಾಯ್ಕಿತ್ತಿಗನವೆಂಬಬ್ಬರದ...ಧಾಳಾಧೂಳಿ ಮಸಗಿತು (ಶುಪ್ಪಾಸ.೦೫-೫೦)೨ ದುಗನು ಪಂಚಕ ದಾರ . . . ಬೇಡಿದಡಲ್ಲಿ ಬೀಳ್ವುದು ವಿಗಡ ಪುಷ್ಕರ ನೃಪನ ಗೆಲಿದನು ಹಲಗೆಯೊಂದರಲಿ(ನಳಚ. ೪-೨೯) : ದುಗ ನಿನ್ನದು ಬಾರ ನನ್ನದು (ಸೌಂದಕಾ. ೪-೫೪); ಆದರವರಿಗೆ ಬೀಳಬೇಕಾದ್ದುದು ಒಂದು ದುಗ (ಜೀವಯಾ. ೦೫). 'ಇರ್ದಂಗೆ' ಪರಾ. ದುಗೆ : ೨. 'ಇದ್ದುಗೆ' ಪರಾ. ದೂಗ : ೨. ದುಗಂ, ದೂಗಂ ; ತಿಗಂ, ತೀಗಂ (ಶಬ್ದಾಸು.೩೭೮ ಪ್ರಯೋ).

ದುಗದ ಗದ್ಯಾಣ = ಎರಡು ಗದ್ಯಾಣ (?) : ಆ ಪೆರುಮಾಳೆ ದೇವ ದನ್ನಾಯಕರ ಕೈಯಲು ಮೊದಲು [ದು] ಗದ ಗದ್ಯಾಣ ಎರಡ ಕೊಣ್ಡಾರಾಗಿ . . . ಬಾಲಶೀಕ್ಷೆ ಉಪಾಧ್ಯರ ಜೀವಿತಕ್ಕೆ ಪರಂಪರ್ಯ ತಂಮ ತಂಮ ಮಕ್ಕಳು ಮಕ್ಕಳು ತಪ್ಪದೆ ಎಂದೆಂದಿಂಗಂ ಕೊಡುತ್ತ ಬಹರು (ಎಕ. III; ತಿರುಮು.೨೭-೪೦ ; 1290). ದುಗ ಬೀಳು = (ಪಗಡೆಯಾಟದಲ್ಲಿ) ಎರಡರ ಗರ ಬೀಳು : ಎಂಟು ಭಾರಿಗಾಂ ದುಗ ಬಿದ್ದು ತಾರಿಹೇಂ . . . ಜೂಜ, ಗಾರಿಕೆಯಲಿ (ಹರಕು. ೪-೫೦) : ಮರುಗಿನ್ನು ಫಲವೇನು ದುಗ ಬಿರ್ದ ಬಳಿಕೆಂದು ಹಲುಬಿದಂ ಜಮದಗ್ನಿಯು (ಹರಕು. ೨೫-೫).

[ <ಪ್ರಾ. ದುಗ./ಸಂ. ದ್ವಿಕ ]

**ದುಗದೆ** 'ದಂಗ್ಡೆ' ನೋ.

**ದುಗರ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಅಯನಯ ನಾಡಾಳ ದುಗರಂ ಇಯೂರಾಳ (ಎಕ. VIII. ಸೊರಬ. ೩೮೦-೧ ; ಸು. 1015). [ ? ]

**ದುಗಮಾತು** (ನಾ). ಚಮತ್ಕಾರದ ಮಾತು ; ಶ್ಲೇಷಾರ್ಥದ ನುಡಿ ; ಹದಿರುನುಡಿ : ಬಗಿಮಾತು ಮೆಲ್ಮಾತು ನಗೆಮಾತು ನಲ್ಮಾತು ದುಗಮಾತು ದುರುಸುಮಾತುಗಳ ಸೊಗಸುಮಾತರಮಾತು ಸೊಗಮಾತುಗಳಿಂದ ಸೊಗಸ ಕಿವಿಗೆ ಸೂಸುವುದು (ಚಿಕವಿ. ೬-೫೭ ಸಾಂಗತ್ಯ). [ ದುಗ + ಮಾತು$_1$ ]

**ದುಗಾರಗ** (?). (?) : ಸೆಲಬಿಳ್ಳಿ ಬಿಳ್ಳಿ ಲಳ್ಳಿ ದ×ಸಿಗರ ಸಹ್ವ ದುಗಾರಗ ಗುಟ³×ಗ್ಬಾ (ಎಕ. XVI, ಶಿರಾ. ೦೨೩-೪೦ ; 788). [ ? ]

**ದುಗಿಚೇರಕ್ಕ** (ನಾ). ಒಬ್ಬಾತನ ಹೆಸರು : ಸೇನೆಯುಂ ತಿಲಮನಿಹಾಯೆ ದುಗಿಚೇರಕ್ಕನಟ್ಟ್ ಸತ್ತನ್ (ಎಕ. X, ಚಿಂತಾಮ. ೧೨೪-೪ ; ಸು. 890). [ ದುಗಿಚೇರ$_0$ + ಅಕ್ಕ$_{21}$ ]

**ದುಗಿದುಗಿ** ' ದುಗುದುಗಿ ' ನೋ.

**ದುಗುಡ** (ನಾ). ೧. ದುಃಖ ; ಉಮ್ಮಳ : "ಉಮ್ಮಳಮೆಂಬೊಡ ದುಗುಡ" (ಛಾರನಿ. ೦೧-೫೮) ; ದುಗುಡವಾಯ್ತು ರಥಾಂಗಮಿಥುನಕೆ ನೆಗೆವಳಿಕುಳದ ಮೊರಹು ನಿಂದಿತು (ಬಸಪು.೦೧-೪೭); ಮುನಿಗಳಜನ್ಯವನಂದನನ ದುಃಭರದ ದುಗುಡದ ದಂದುಗವನಪಹರಿಸಿ ಬಿಜಯಂಗೈದರಾಶ್ರಮಕೆ (ತೊರಕಾ. ೧-೪-೦೫); ಕೊಡನ ಕುವರನಿಂತು ಪೇಳ್ವುದುಂ ರಾಮಂಗೆ ದುಗುಡಮಿರ್ಮಡಿಯಾದುದು (ರಾಮಾಶ್ವ. ೦೫-೦೮) ; ನಡೆವೆನೇ ಎನ್ನಡೆದ ದಾರಿಯೆಲ್ಲದಜಿನ್ ಬರ್ ದುಗುಡ ದಾರಿಯನ್ (ಅಂತಿಗೊ. ೫೩-೦೦೩೪) ; ನಗುವಾತ್ಮ ಪರಿಮಳವ ಪಸರಿಸುವ ಕುಸುಮ ದುಗುಡವಾತ್ಮವ ಕಡೆದು ಸತ್ತ್ವವೆತ್ತುವ ಮಂತು ಬಗೆದೆರಡನುಂ ಭುಜಿಸು (ಮಂಕುಕ. ೪೩೪); ಒಂದೆಡೆಗೆ ದುಗುಡದ ಹೊರೆ. ಇನ್ನೊಂದೆಡೆಗೆ ಯೋಚನೆಯು ಕಸಿವಿಸಿ (ನಿರೀಕ್ಷೆ. ೦೫೯) ೨. ಚಿಂತೆ ; ಯೋಚನೆ : "ದುಗುಡಮೆನಲ್ ಚಿಂತೆಯುು" (ಛಾರನಿ. ೦೮); ನಿರ್ಣಯವನಜಿಯದ ಮನವೇ ದುಗುಡವನಾಹಾರಂಗೊಂಡೆಯಲ್ಲ (ಅವಶಂ.. ೪೫-೦೦) : ನಿದ್ದೆಗೆಯ್ ತಂದೆ ಇನ್ನಾವ ದುಗುಡಂ ಬೇಡ

(ಕಬ್ಬರ. ದೇ. ೧೩೨-೭) ; ಕುಮುದಿನಿ ತಲೆವಾಗಿ ದುಗುಡವಂ ತಳೆದಿರ್ದಳ್ (ದಶಕು. ೪-೧೩೫); ಬಾಲನಿವನೆನ್ನದಿರು ದುಗುಡವ ತಾಳಲಾಗದು ಬೊಪ್ಪ (ಕುಮಾರವ್ಯಾ. ೪-೪) ; ಲಲನೆಗೀತಕೆ ದುಗುಡವಾರುಮ್ಮಳಿಕೆಯನು ಮಾಡಿದರು (ಪ್ರಭುಲಿ. ೫-೬೭) ; ಆದರೆ ನನ್ನ ಮನಸ್ಸಿನ ದುಗುಡವೇನೂ ಶಾಂತವಾದಂತಾಗುವುದಿಲ್ಲ (ಶ್ರೀಹಾಯು. ೨೬೨). ೩. ಆತಂಕ ; ಭಯ ; ಭೀತಿ : ಮದನಂಗೆ ಚಿಂತೆ ಮಾಯೆಗೆ ದುಗುಡ . . . ಅಜ್ಞಾನಕ್ಕೆ ತಲ್ಲಣಂ ತಲೆದೋರಲು (ಸಿದ್ಧರಾ. ೧-೪೭) ; ಹಡಪ ಬಾಹಿಯು ಚಮರಧಾರಿಗರ ದೊರೆಗಳುಳಿದರು ಬೆದರಿ ರಥದಲಿ ಕಂಗಳಲಿ ಮಾರುಮದಿನಿಳೆಗುಪ್ಪರಿಸಿದರು ಹರಹಿನಲಿ ಹಾಯ್ದರು ಹೊತ್ತ ದುಗುಡದಲಿ (ಕುಮಾರವ್ಯಾ. ೧೦-೧೪). ೪. ಆಯಾಸ; ಬಳಲಿಕೆ: ಭೂಪತಿಯು ದುಗುಡವನು ತೊಳೆದರು ರಾಗರಸ ಲಹರಿಯಿಂದನಾವಿಕಸತಿಯರು (ಹರಿಕಾ. ೭-೬); ಮಳೆಯಿರಲಿ, ಚಳಿಯಿರಲಿ, ಗಾಳಿಯಿರಲಿ. ಮೈಯಲ್ಲಿ ದುಗುಡವಿರಲಿ–ಏನಾದರೂ ಈ ಕಾರ್ಯಕ್ರಮಕ್ಕೆ ವಿಘ್ನ ಬಾರದು (ಗಂಗಾಸಾ. ೦) ; ನಳಿನಿಯ ದುಗುಡ ಕಾಳ ಕುಡಿದ ಬಳಿಕವೂ ಕಡಿಮೆಯಾಗಿರಲಿಲ್ಲ (ನರದಾ. II, ೯೪೯).

ದುಗುಡಮೋರೆ³ಗ=ಅಪ್ರಸನ್ನತೆಯಿಂದ ಕೂಡಿದ ಮುಖವುಳ್ಳವನು; ದುಂಮುರ್ಖಿ : ಸುಗುಣವಿದ್ಯವ ಕಲ್ತ ಸುಮುಖಿಗೆ ತೋರಲು ಹಗಲು ಕನ್ನಡಿಯ ನೋಳ್ಪಂತೆ ದುಗುಡಮೋರೆಗರಿಗೆ ತೋರಲು ರಾತ್ರಿಯೊಳಗೆ ಮುಕುರವ ನೋಡಿದಂತೆ (ಭರತ. ೧೨-೯೯).

[<ಪ್ರಾ. ದುಗ್ಗಡ= ಕಷ್ಟಸಾಧ್ಯವಾದ./ಸಂ. ದುರ್ಘಟ]

**ದುಗುಡಭಾರ** (ನಾ). ವ್ಯಥೆಯ ಹೊರೆ ; ಕಳವಳದ ಭಾರ : ಭೀಷ್ಮನ ಬೀಳುಕೊಂಡುತ್ಸವದ ಹರುಷದಲೊಮ್ಮೆ ಗಂಗಾಭವಗೆ ತಪ್ಪಿದ ದುಗುಡಭಾರದಲೊಮ್ಮೆ ಚಿಂತಿಸುತ . . . ಶಿಬಿರವನು ಹೊಕ್ಕರು (ಕುಮಾರವ್ಯಾಭೀ. ೧೦-೪೩) ; ಅಗಿವ ಚಿಂತೆಯೊಳರಸ ಕದನದ ದುಗುಡಭಾರದಲಿರಲು ... ನಸುನಗುತೆದ್ದನಭಿಮನ್ಯು (ಕುಮಾರವ್ಯಾದ್ರೋ. ೯-೩೪) ; ಏತಕೀ ಬದುಕೆಂಬ ತೆರನಲಿ ರೀತಿ ತಪ್ಪಿ ದಶಾಸ್ಯನಿದ್ದನು ದುಗುಡಭಾರದಲಿ (ತೊರವೆರಾ.೧೯-೨).

[ ದುಗುಡ + ಭಾರ ]

**ದುಗುಡಶೃಂಗಾರ** (ನಾ). ದುಃಖಸೂಚಕವಾದ ಉಡಿಗೆ ತೊಡಿಗೆ,–ವೇಷಭೂಷಣ : ಹಾರವ ಹರಿದಿಕ್ಕುತ ಕಸ್ತೂರಿಬೊಟ್ಟುರದ ಗಂಧವನು ನೀರಿನಿಂದ ತೊಳೆದು ಮೈಲಿಗೆಯುಟ್ಟು ದುಗುಡಶೃಂಗಾರವನನುಕರಿಸಿದಳು (ನಿಜಶಾಂ.೩-೧೪೫). [ ದುಗುಡ + ಶೃಂಗಾರ ]

**ದುಗುಡಸಿಂಗರ** (ನಾ). = ದುಗುಡಶೃಂಗಾರ : ತೆಗೆದರು ವಸ್ತ್ರಭೂಷಣವ . . . ಮೃಗನಾಭಿಯ ನಾದಿ ಪೂಸಿದು ಪಣೆಯಲಿ ದುಗುಡಸಿಂಗರ ಮೆರೆವಂತೆ (ಕೋಹರ. ೨೮-೫) ; ಅಗಣಿತ ಬಲವಿಲ್ಲ ವಾದ್ಯರಂಜನೆಯಿಲ್ಲ ಸೊಗಸಿನಲಂಕಾರವಿಲ್ಲ ದುಗುಡಸಿಂಗರದಿಂದ ಬಂದರಯೋಧ್ಯಾನಗರಿಯ ಹೊಕ್ಕರಾ ನೃಪರು (ಭರತ. ೭೯-೦೨) ; ಕನಕರಾಜನು ಕಾಂತಿರಾಜ ಮುಂತಾದ ಮೈದುನರೆಲ್ಲ ದುಗುಡಸಿಂಗರದಿ ವನಿತೆಯರಂದರಮನೆಯೊಳಪೊಗಲು ಭಾವನ ಸಭೆಗೆಯ್ದಿದರ್ತಾವು (ಭರತ. ೭೯-೩೭).

[ ದುಗುಡ + ಸಿಂಗರ ]

**ದುಗುಡಿಸು** (ಕ್ರಿ). ದುಃಖಿಸು ; ಚಿಂತಿಸು : "ಬಾಂಧಯತಿ – ದುಗುಡಿಸಿದಪುದು" (ಕಾಶಕ್ಕ. ೨೭೫). [ ದುಗುಡ + – ಇಸು₃ ]

**ದುಗುಣ** (ಗು). ೧. ಎರಡರಷ್ಟಾದ ; ಇಮ್ಮಡಿಯಾದ. (ನಾ). ೨. ಎರಡು ಪಟ್ಟು ; ಇಮ್ಮಡಿ ; ದುಪ್ಪಟ್ಟು : ಅರುಂಧತಿಗೆ ತೊಣೆ . . . ಸೀತೆಗೆ ದುಗುಣಂ ವಿಚಾರಿಸಲ್ಕನಕಬ್ಬೆ (ಎಕ. VIII, ಸಾಗರ. ೦೦೩-೩೫ ; 1059) : ಪೂರ್ವಪದಂ ತದ್ಭವವಾದುದರ್ಕೆ – ಗ್ರಾಮರಸ–ಗಾವರಸ . . . ದ್ವಿಗುಣ–ದುಗುಣ (ಶಮದ. ೨೫೧ ಪ್ರಯೋ) : ಪಂಕಜಮಿತ್ರನುಂ ಧನುಗೆ ಬರ್ಪಮವಾಸೆಯೊಳ್(ಳ್)ಾ ನಿಮಿತ್ತದಿಂ ಕುಂಕುಮಶಂಖ ವಿದ್ರುಮ ಸುಮೌಕ್ತಿಕವಂ ಒಡಿದಾಬುತಿಂಗಳೊಳ್ ಭೋಂಕನೆ ಮಾರಿ ಕೊಳ್ಗೆ ದು(ದ್ವಿ)ಗುಣರ್ದ್ಧಿ[ಪಾಠಾಂ. ದ್ವಿಗುಣವೃದ್ಧಿ]ಯಾನೀಗುಂ (ಅಬ್ಬಿಮ. ೬-೨೫) ; ಹೊಗಳಲನುಪಮ ಸೈನ್ಯವಿಂತೀ ದುಗುಣ [ಪಾಠಾಂ. ದ್ವಿಗುಣ]ವಂಧಾಸುರನ ಸೇನೆಗೆ ತ್ರಿಗುಣವಿದು ರಾವಣನ ಮೋಹರಕೆ (ಕುಮಾವಾ. ೬-೬೧). ೩. ಎರಡು ಬಾರಿ ; ಎರಡು ಸಲ : ಅಂತಿದಿರುಂ ಬರ್ಪುದುಂ ಪಾಸುಂ ಪೊಕ್ಕುಂ ದುಗುಣಮುಂ ತಿಗುಣಮುಂ ಅರ್ಧಮುಂ ತಿಗಟಮುಂ ಪರಿದು (ಗದಾಯು. ೬-೨೮ ವ); ತೇನ ತೇನಂ ತಿವಿದು ದಾನೊಲೀಡಾಡುವ ದುಗುಣ ತಿಗುಣಂ ತಿರಿದು ದೆಸೆವಲಿಗೆಯ್ದು . . . ಮದಗಜಂಗಳರಿಪತ್ತಿದಟ್ಟಗೆಯೊಟ್ಟಲಂತಿರ್ದುವು (ಅನಂಪು. ೧೪-೬೫). ೪. ಲೆತ್ತದಾಟದಲ್ಲಿ ಎರಡರ ಗರ ; ದುಗ : ಕೊಂದೆನೆಂದೋ ಎನ್ನ ಸಾರಿಯನಿಂದು ದುಗುಣವನಿಕ್ಕಿ ಗೆಲಿದಪೆನೆಂದೊ ನಿಃಕಾರಣದ ಹಾಸ್ಯವದಾವುದು . . . ಎನಲೊಲವಿಂದ ನೆತ್ತವನುಡುಗಿ ಭೂಪತಿ ಮತ್ತೆ ನಗುತೆಂದ (ಬಸವಪು. ೪೩-೦೫) ; ದುಗುಣಕಿಕ್ಕಿದನರಸನಾಟಿಗೆ ತೆಗೆದನವ ಮೂರಿಂದು ನಾಲ್ಕಕ್ಕುಗಿದನವನಿವನೈದ ಕಳೆದನು ಬಹಳವನು ಶಕುನಿ (ಕುಮಾರವ್ಯಾಸ. ೦೪-೪).

[ ದು + ಗುಣ ]

**ದುಗುಣೆ** (ನಾ). ಎರಡು ಪಟ್ಟು ; ಇಮ್ಮಡಿ.

ದುಗುಣೇದಕ್ಷಿಣೆ = ಎರಡುಪಟ್ಟು ಸಂಭಾವನೆ; ಇಮ್ಮಡಿ ದಕ್ಷಿಣೆ : ಯಾಕೆ ಭಟ್ಟರೇ ! ದುಗುಣೇ ದಕ್ಷಿಣೆ ದೊರೆಯಿತೇ ? (ಸಾಹಿವಿ. ೫೩).

[ <ಪ್ರಾ. ದುಗುಣಿಅ./ಸಂ. ದ್ವಿಗುಣಿತ ]

**ದುಗುಣೆಜುಲ್ಮಾನೆ** (ನಾ). ಎರಡರಷ್ಟು ದಂಡ; ಎರಡು ಪಟ್ಟು ಜುಲ್ಮಾನೆ: "ದ್ವಿಪಾದ್ಯಃ. ದ್ವಿಗುಣೋ ದಂಡಃ – ಎರಡರಷ್ಟು ದಂಡ ತೆಗೆದುಕೊಳ್ಳುವುದಕ್ಕೆ ಹೆಸರು. ದುಗುಣೆ ಜುಲ್ಮಾನೆ" (ಸಿದ್ಧಾಂತಿ. ೨೦೯).

[ ದುಗುಣೆ + ಜುಲ್ಮಾನೆ (<ಜುರ್ಮಾನೆ) ]

**ದುಗುಣಿಸು** (ಕ್ರಿ). ೧. ಎರಡುಂ ಪಟ್ಟು ಮಾಡು. ೨. (ಆಲಂ) ಚೆನ್ನಾಗಿ ಎಣಿಕೆಮಾಡು,–ಪರಿಶೀಲಿಸು : ಬಲ್ಲ ಜ್ಞಾನಿಗಳು ಮನದಲ್ಲಿ ದುಗುಣಿಸಿ ನೋಡಿ . . . ಎಲ್ಲಿ ನೋಡಲು ವಿಶ್ವಮೂರ್ತಿ ತಾ ಪೊಳೆವ (ತೀರ್ಥಸು. ೩೮-೫). [ ದುಗುಣ + – ಇಸು₃ ]

**ದುಗುದುಗಿ, ದುಗಿದುಗಿ** (ನಾ). ೧. ಸಂಕಟ ; ತಳಮಳ : ಗದುಗಿನ ದುಗುದುಗಿಯು ಕಲ್ಪನೆ ಎಳ್ಳಷ್ಟೂ ಇಲ್ಲದ ಇವರು ಏನು ಆರಾಮವಾಗಿ ಇದ್ದಾರಲ್ಲ (ಕೃನಿ. ೩೨೮). ೨. ಹೆದರಿಕೆ ; ಭೀತಿ : ಎಲ್ಲಿ ಸಿಟ್ಟಿಗೆ ಬರ್ತಾನೊ, ರಂಬಾಟ ಸುರುವು ಆಗ್ತದೊ ಅಂತ ದುಗುದುಗಿ ! (ಪುರುಷ. ೩೯). 'ಡುಗಡುಗಿ' ಪಠಾ. ದುಗಿದುಗಿ : ೧. ಈ ೪೦ ವರ್ಷಗಳಲ್ಲಿಯ ಮೊದಲಿನ ೭ ವರ್ಷಗಳು ಮಾತ್ರ ದುಗಿದುಗಿಯಲ್ಲಿ ಕಳೆದು ಹೋದುವು (ಇಂಗ್ಲಂಡ. ೨೫೪).

[ ←ಹಿಂ. ದುಗದುಗೀ ; ಮರಾ. ದುಗದುಗೀ, ಧುಗಧುಗೀ ]

**ದುಗುಧವಾರ್ಧಿ** (ನಾ). = ದುಗ್ಧವಾರಿಧಿ : ದೇವಾಸುರರು ಮಥಿಸಲು ದುಗುಧವಾರ್ಧಿಯೊಳಾಳುವಾ ಬಲುನಗವನಾಂತನನಂತಮಹಿಮನತಿ ಕೂರ್ಮರೂಪದಲಿ (ನಿಭಾಗ. ೨-೩-೨). [ < ಸಂ. ದುಗ್ಧವಾರ್ಧಿ ]

**ದುಗುಪಯಣ** (ನಾ). ಪಯಣದ ಮೇಲೆ ಪಯಣ : ಒಲ್ಲಿ ಕಾಲೋಳೆ ಚೆಲ್ಲೀದ ನೆಗ್ರೋಳೇ ಎಲ್ಲಿಗ್ಹೊರಟವ್ರಾ ದುಗುಪಯಣಾ – ಬಂಡ್ಹೊಳೆ ರಾಜಾಬೀದೀಲಿ ಏಭೋಗಾ (ಹುಟ್ಟಿಹ. ೫೭). [ ದುಗು + ಪಯಣ₁ ]

**ದುಗುಬಿನ್ನಾಣತ್ತಿ** (ನಾ). (?) : ಕಂಬಳಿಂಗುಳ ತೆರನೂ ದುಗುಬಿಂನಾಣತ್ತಿ ಆ ತೆರಿಂಗೆ (ಸೌಇಎ. ೦೯೩೨, ಉಡುಪಿ. ೩೧೮-೧೮ ; 1293). [ ? ]

**ದುಗುಲ₁, ದುಗುಳ** (ನಾ). ೧. ರೇಷ್ಮೆಬಟ್ಟೆ ; ಪಟ್ಟೆವಸ್ತ್ರ : "ದುಕೂಲಮ ದುಗುಲಂ" (ಚತುನಿ. ೦೩) ; ಕರೆವೆರಸಿದ ಪೊಸದುಗುಲದ ತೆರಳ್ಕೆವೆತ್ತುಡೆ . . . ಕಟ್ಟಿದ ಪೊಂಜುರಿಗೆಯೊಳಂ ಜನಮನೇಂ ಮನಂಗೊಳಿಸಿದುದೋ

(ಆದಿಪು. ೪-೩೭): ಪಚ್ಚೆಯ ಹಾರದ ತೋರಣಂಗಳಂ ದುಗುಲದ ಗುಡಿಗಳಂ ಕಟ್ಟಿ[ಸಿ] (ಪಂಪಭಾ. ೩-೪೦ ವ): ಬಟ್ಟೆಕ್ಕೆ ಮಚ್ಚುಗೊಟ್ಟಂ ಕೊಟ್ಟೊಳ್ದುಡುಗೆಗಳನುಟ್ಟು ದುಗುಲವನೆಡೆಯಱಿದಾ ಮುನಿನಿವೇದಕಂಗೆ ನೃಪೇಂದ್ರಂ (ಶಾಂತಿಪು. ೧-೯೩); ದುಗುಲದ ಗುಡಿಗಳ ಬೆಂಬಿಡಿದು ಗಾಳಿ ತಣ್ಪಿಡಿದು ಕೀಡೆ (ಪಂಚತಮ. ೧೨-೩೮); ದುಗುಲದ ಪಲ್ಲವದುಡೆನೂಲ ಗಂಟೆಗಳ ಪುದಿವನಾಂತು ಬಾಲ್ಯಶ್ರೀಕೇಳಿಗೃಹಾಗ್ರತೋರಣದ ಶಾಖೆಗಳೆನಿಸಿದುವ ಮಳಕೋಮಳೋರುಗಳವಳಾ (ವರ್ಧಪು. ೯-೨೧); ಹೆಚ್ಚು ನೀರಿಱಿದಿಟ್ಟು ತೊಟ್ಟಲೊಳೊಚ್ಚೆಬಿಗ ದುಗುಲದಲಿ ಹೊಕ್ಕುಳ ಮುಚ್ಚಿ (ಪ್ರಭುಲೀ. ೩-೨೬); ಪಟ್ಟು ಪಟ್ಟಾವಳಿ ದುಗುಲದ ಮೇಲ್ಕಟ್ಟು ... ಕಟ್ಟಾಣಿ ಮುತ್ತಿನ ಕುಚ್ಚುಗಳಿಂದ ದಿಟ್ಟಗೆಸೆಯಿತು ಚಪ್ಪರವು (ಜೀವಂಸಾಂ. ೯-೩೫) ೨. ಪಟ್ಟೆಯ ಉಡಿಗೆ; ರೇಷ್ಮೆಯ ಉಡುಪು: ಸುಲಿಪಲ್ ಮಿಂಚಿನ ಗೊಂಚಲುಟ್ಟ ದುಗುಲಂ ಗಂಗಾನದೀ ಫೇನಂ ... ಎಂಬೊಂದು ಪಂಬಲ ಬಂಬಲ್ಗೆ[ಡೆ]ಯಾಗೆ ಬೆಳ್ಪಸದನಂ ಕಣ್ಗೊಪ್ಪಿತು (ಪಂಪಭಾ. ೦-೧೩೭); ಸೊಗಯಿಪ ದುಗುಲದ ಸೆಱಗಂ ಮೊಗಕ್ಕೆ ತೆಗೆದಾಗಳಿರದೆ ಗೋಟ್ಟಿಟ್ಟಳ್ (ಕಾದಂಪೂ. ೯೫೦): ಅಂತು ಬಂದು ಮೊಗಸಾಲೆಯೊಳ್ ಮೆಯ್ಯಿಕ್ಕಿ ಮೊಗಸುತ್ತಿನ ದುಗುಲದ ಬಿನ್ನಪದ ಸೆಱಗನಧರಪಲ್ಲವಕ್ಕೆ ತೆಗೆದು (ಪಂಚತಮ. ೨-೨ ವ); ಮೆಱೆವ ಚಿತ್ರಿಗ ನಾನಾ ಬಗೆ ದುಗುಲವ ವಿರಚಿಸುತಿಹ ಸೇಲಿಗರ ... ಚಿಪ್ಪಿಗಗೇರಿಯಿಹವು (ಶಂಸವಿ. ೬-೫೫). ೩. ವಸ್ತ್ರ; ಬಟ್ಟೆ: "ಹುಟ್ಟಿಗೆ, ದುಗುಲಂ, ಪಟ್ಟಣಿಗೆ, ಉಳ್ತುಡಿಗೆ–ಳ ವಸನಕ್ಕೆ ಪೆಸರ್" (ಕಬಸಾ. ೬೩-೩೯೨); ಕರ್ಪೂರ ಪಲ್ಲವರಸದಿನಧಿವಾಸಿಸಿದ ತಾವರೆಯ ನೂಲ ದುಗುಲಂಗಳುಂ ... ತಳಿರಲೆಗಳೊಳಂ ಪೊಸಪೂಗಳಸಟ್ಟಳೊಳಂ ಸಮೆದ ಬಿಜ್ಜಣಿಗೆಗಳುಮಂ ಪೆಱವುಂ ಪಲತೆಱದ ಶಿಶಿರೋಪಚಾರಂಗಳಂ ಮಾಟ್ಟು ಪರಿಜನಂ (ಕಾದಂಪೂ. ೨೦೬). **ದುಗುಳ**: ೧. ದೂಪಿಸಿದ ಬೀದಿದುಗುಳನುಟ್ಟನುಲೇಪನಂಗಳ ಹೂಸಿ . . . ಇದಿರಾಯ್ತು ನೃಪಕಟಕ (ಶಂಪ್ಹಾಗ. ೧-೨೬).

[ <ಪ್ರಾ. ದುಗುಲ್ಲ/ಸಂ. ದುಗೂಲ ]

**ದುಗುಲ₂** (ನಾ). ವರಹದ ಅಥವಾ ಪಗೋಡದ ಹದಿನಾರನೆಯ ಒಂದು ಭಾಗ: (ಕಿಸಂಗ್ಗಾ. ೦೬೭). [ ? ]

**ದುಗುಲನಿವಾಳಿ** (ನಾ). ಉಟ್ಟ ಸೀರೆಯ ಸೆರಗಿನಿಂದ ಇಳಿತೆಗೆಯುವುದು. –ನಿವಾಳಿಸುವುದು: ಮೊಗವೆಲ್ಲ ನಗೆ ತನುವೆಲ್ಲ ಪುಳಕ ಕಣ್ಣೊಳೊಗುವ ಬಾಷ್ಪಗಳಿಂದ ಸಾರಿ ದುಗುಲನಿವಾಳಿಯಟ್ಟತ್ತ್ರಿಯ ಪಜ್ಜೆಗೆ ಬಗೆ ಮೆಚ್ಚಿ ನೊಸಲಿಟ್ಟರವರು (ಭರತ. ೪೬-೬೯). [ ದುಗುಲ₁ + ನಿವಾಳಿ₁ ]

**ದುಗುಲವಾಸು** (ನಾ). ೧. ರೇಷ್ಮೆಯ ತಲ್ಪ.–ಹಾಸಿಗೆ. ೨. ರೇಷ್ಮೆ ಬಟ್ಟೆಯನ್ನು ಹೊದಿಸಿದ ಹಸೆಮಣೆ.–ಪೀಠ: ನವರತ್ನಖಚಿತ ಮಂಟಪದೊಳು ರಾಜಿಸುವವಿರಳ ದುಗುಲವಾಸಿನಲಿ ತವಕದೆ ಕೈದುಗೆಳಂ ಬಿಟ್ಟು ದುರ್ಗಾಸ್ತವವ ಜಪಿಸಿದನೇವೇಳ್ವೆ (ಶಂಸವಿ. ೨೨-೨೫).

[ ದುಗುಲ₁ + ಪಾಸು₂ ]

**ದುಗುಳ** 'ದುಗುಲ₁' ನೋ.

**ದುಗೂಲ** (ನಾ). ೧. ರೇಷ್ಮೆ ವಸ್ತ್ರ: ಮಿಂಚುವತ್ತ ಸುಲಿಪಲ್ಗಳವಟ್ಟ ದುಗೂಲವೊಪ್ಪೆ ಬೆಳ್ಪಸದನವಂತದೇನೆಸೆದುದೋ ಪರಿಪೂರ್ಣ ಸುಧಾಂಶುವಕ್ತ್ರೆಯಾ (ಸುಕುಮಾ. ೯-೧೦೪). ೨. ನುಣುಪಾದ ವಸ್ತ್ರ. ೩. ಉತ್ತಮವಾದ ಬಟ್ಟೆ; ನಯವಾದ ವಸ್ತ್ರ. [ ಸಂ. ]

**ದುಗೆ** 'ದುಗ' ನೋ.

**ದುಗ್ಗ₁** (ನಾ). ಕೋಟೆ; ದುರ್ಗ: ದುರ್ಗ – ದುಗ್ಗ (ಶಬ್ದಾಸು. ೦೫೩ ಪ್ರಯೋ): ಭಾಗಿಸಿಯುಗ್ಗಡದ ಘನವರ್ಗಮೂಲವನಱಿದೊಡೀ ಭವದಾಹಗ್ಗ ಹಱಿದೇಱುವನೆ ಮುಕ್ತಿಯ ದುಗ್ಗವನು (ಪ್ರಹ್ಲಾಕ. ೬-೦೯).

[ <ಪ್ರಾ. ದುಗ್ಗ/ಸಂ. ದುರ್ಗ ]

**ದುಗ್ಗ₂** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀಮತು ಕೊಜ್ಜುಗಣಿ ಮಾಧವಶ್ಚೈವ ... ದುಗ್ಗಶ್ಚ ಶಿವಮಾರಸ್ತಥೈವಚ ಕೊಂಗುಣಿ ಪೃಥುವೀ ರಾಜ್ಯಂಕೆಯ (ಮೈಅರಿ. ೦೯೩೦, ೩೬-೩; ಸು. 800). [ <ಸಂ. ದುರ್ಗ ]

**ದುಗ್ಗಣಿಸು** ( ಕ್ರಿ). ಎರಡು ಪಟ್ಟಾಗಂವಂತೆ ಮಾಡಂ; ಇಮ್ಮಡಿಸು: ಏನಾದರೂ ಇತ್ಯರ್ಥಕ್ಕೆ ಬರಬೇಕೆಂದು ಯತ್ನ ದುಗ್ಗಣಿಸುತ್ತಾರೆ (ಕಲಸಿ. ೦೦೯). [ <ದ್ವಿಗುಣಿಸು ]

**ದುಗ್ಗತಿಗವುಂಡಿ** (ನಾ). ಒಬ್ಬಾಕೆಯ ಹೆಸರು: ದುಗ್ಗತಿಗವುಣ್ಡಿಯ ಮಗಂ ನಾಗತಿ ಸಾಲತ್ತಿಯ [ತು]ಱುಗೊಳ ಸತ್ತಂ (ಶಾಇಇ. XX, ೧೪-೩; 878).

[ ದುಗ್ಗತಿ? + ಗವುಂಡಿ (<ಗಾವುಂಡಿ) ]

**ದುಗ್ಗಪ** (ನಾ). ಒಬ್ಬಾತನ ಹೆಸರು: ಸ್ವಸ್ತಿ ಅಯ್ಯಪದೇವ ಪ್ರಿಥುವೀರಾ × × × ನೊಳಲ್ಪತ್ತ ಮಾಡಿಸಿದಂ ದುಗ್ಗಪ (ಎಕ. IX, ಹೊಸಕೋ. ೦೪-೪; ಸು. 900 ?). [ ದುಗ್ಗ₂ + ಅಪ (<ಅಪ್ಪ₁) ]

**ದುಗ್ಗಬ್ಬೆ** (ನಾ). ಒಬ್ಬಾಕೆಯ ಹೆಸರು: ಶ್ರೀ ಸಂಗಮಜ್ಜದ ಮೆಮ್ಮಗಳ್ ಮೇಲ ಕೆರಿ ಒಡೆಯ ದುಗ್ಗಬ್ಬೆ ತುಮುಬ್ಬ ಮಾಡಿಸಿದಾಳ್ (ಎಕ. X (8), ಮುಳಬಾ. ೩೦೮-೦; ೯ ನೆಯ ಶತ). [ ದುಗ್ಗ₂ + ಅಬ್ಬೆ₁ ]

**ದುಗ್ಗಮಯ್ಯ** (ನಾ). ಒಬ್ಬಾತನ ಹೆಸರು: ದುಗ್ಗಮಯ್ಯನ ಮಗ ಪೋಚಯ್ಯ ಬೆಸಗೆಯ್ದ (ಎಕ. IV, ಹುಣಸೂ. ೬೪-೦೨; 976).

[ ದುಗ್ಗ₂ + <ಅಮ್ಮ₁ + ಅಯ್ಯ₁ ]

**ದುಗ್ಗಮಾರ** (ನಾ). ಒಬ್ಬಾತನ ಹೆಸರು: ಭಿಪೊಮ್ಮ ಕೂರಾಳಿಗದ ಆಳರೊಳ ಕೋಣವಿರು ಗಜ್ಜ ದುರದುಲ್ ದುಗ್ಗಮಾರರ ಪಡೆ ಒಟ್ಟ ಎಱಿದು ಬಿಟ್ಟ (ಎಕ. IX, ದೇವನ. ೬೭-೪; ಸು. 780); ಸ್ವಸ್ತಿಶ್ರೀಮನ್ ವಿಣ್ಣಾಗೋವರಸರ್ × × ದುಗ್ಗಮಾರರ್ ಸೇನೆ ಮಗ × × × ನಾಲ್ವದಿನ್ಸರ್ ಕಸಪು × × × ಪೊನ್ನೊಱಿ ಬಿಟ್ಟದು (ಎಕ. X, ಚಿಂತಾಮ. ೧೨೬(b)-೨; ಸು. 800); ಆ ಮುನಿಯನಾಡು ಮೂವತ್ತುಂ ದುಗ್ಗಮಾರಂ × × × ನಾಳುತ್ತಿರೆ (ಎಕ. X, ಮುಳಬಾ. ೨೪೮-೩; ಸು. 860 ?). [ ದುಗ್ಗ₂ + ಮಾರ ]

**ದುಗ್ಗಮಾರ ಎಱೆಯಪ್ಪ, ದುಗ್ಗಮಾರೆಱೆಅಪ್ಪ** (ನಾ). ಒಬ್ಬಾತನ ಹೆಸರು. P ಗಂಗ ಶ್ರೀ ಪುರಂಪನ ಮಗನ ಹೆಸರು: ದುಗ್ಗಮಾರ ಎಱೆಯಪ್ಪೊನ್ನೊಮಳಾಲನಾಡುಮೂನೂಱುಂ ಗಙ್ಗಱು ಸಾಸಿರಮುಂ ಮಾಳುತ್ತಿರೆ (ಎಕ. X, ಮುಳಬಾ. ೨೫೫-೪; ಸು. 750); **ದುಗ್ಗಮಾರೆಱೆ ಅಪ್ಪ**: ದುಗ್ಗಮಾರೆಱೆಅಪ್ಪೋ ಕುವಳಾಲನಾಡು ಮೂನೂಱುಂಗಂಗಱು ಸಾಸಿರಮುಮಾಳೆ (ಎಕ. X, ಮುಳಬಾ. ೮೦-೫೪; 767); ಶ್ರೀ ಪೆರ್ಮ್ಮಾನಡಿಗಳ್ ನವರಾಜ್ಯಂಗೆಯ್ಯೆ ದುಗ್ಗಮಾರೆಱೆ ಅಪ್ಪೊಮ್ಮಿಗೆ ಎಟ್ಟರೆ ಮುನಿದು (ಎಕ. XI, ಚಳ್ಳಕೆ. ೮-೦; ಸು. 810 ?).

[ ದುಗ್ಗಮಾರ + ಎಱೆಯಪ್ಪ₂ ]

**ದುಗ್ಗಮಾರೆಱೆಅಪ್ಪ** 'ದುಗ್ಗಮಾರಎಱೆಯಪ್ಪ' ನೋ.

**ದುಗ್ಗಯ್ಯ** (ನಾ). ಒಬ್ಬಾತನ ಹೆಸರು: ಕೊತ್ತಮಜ್ಜಲದ ದುಗ್ಗಯ್ಯ ಬರದ . . . ಆದಿಯಮ್ಮ ಕಲ್ಲ ನಿಱಿಸಿದ (ಎಕ. V, ಚನ್ನರಾ. ೨೬೨-೨೬; 971); ಪಡುವಣ ಸಿನ್ದ ಪಸಲಂ ಎಡಕೊಳಗೇರಿಯ ದುಗ್ಗಯ್ಯಂ ನಾರಾಯಣಸ್ವಾಮಿಗೆ ಬಿಟ್ಟಂ (ಎಕ. III (R), ನಂಜನ. ೨೪೯-೧೦; ಸು. 10 ನೆಯ ಶತ). [ ದುಗ್ಗ₂ + ಅಯ್ಯ₁ ]

**ದುಗ್ಗಶರ್ಮ** (ನಾ). ಒಬ್ಬಾತನ ಹೆಸರು: ಭಾರದ್ವಾಜ ಗೋತ್ರ ದುಗ್ಗಶರ್ಮ್ಮಣ ಏಕ್ಕಂಶ (ಇಇ. VII, ೧೮೮-೪೦; 666). [ ದುಗ್ಗ₂ + ಶರ್ಮ ]

**ದುಗ್ಗಾಣಿ** (ನಾ). ೧. ಎರಡು ಕಾಣಿ; ಕಡಮೆ ಬೆಲೆಯ ಒಂದು ತಾಮ್ರದ ನಾಣ್ಯ: ಸುಟ್ಟ ಬಾಳೆಯ ಕಾಯನರೆದ ಸಂಪಳಿಗೆ ಸರಿಗಟ್ಟಿ . . . ಕಲಸಿ ದುಗ್ಗಾಣಿಯಂದದಿ ಮಾಡಿ ತುಪ್ಪದೊಳಗೆ ಅಟ್ಟುಕೊಂಡು

(ಸೂಕ್ತಿಸು. ೪-೭೭) ; ಕೇಣಿಯನಿತ್ತು ತನ್ನೊಡಲನೊಪ್ಪಿಸಿ ನಾಡ ವಿಟರ್ಗೆ ವೊಂದ ದುಗ್ಗಾಣಿಗೆ ಲಕ್ಕಜೀವದಭಿಮಾನವನಂಗಡಿಯಲ್ಲಿ ಕಳ್ಳ ಕಿಳ್ಳಾಣಿಯ ಮುದ್ರೆಯಂತಿಹ ಪರಕ್ಕುರ ಸಲ್ಲದ ವೇಸಿಗರ್ಥವಂ ಪ್ರಾಣಮನಿಕ್ಕಿಯಕ್ಕಟ ವೃಥಾ ಕೆಡುವಂ ಕೆಡುಕಂ (ನೀತಿಸಾ. ೭೯೪) ; ಹೊರಗೆ ನೋಡಿದರೆ ದುಗ್ಗಾಣಿಗೆ ಸಲ್ಲನೆಂದು ಪರರಿಂದೆನಿಸಿಕೊಂಡು ನಗಬೇಕು ಪ್ರೀತಿಯಿಂದ (ಜಗದಾ. ೧೩೦) ; ಮನವೊಲಿದು ಕೊಟ್ಟ ದುಗ್ಗಾಣಿಯೇ ಸ್ವತ್ತಂ (ಕವಪು. ೧೬-೧೪). ೨. ಹಣ ; ದುಡ್ಡು : ದುಗ್ಗಾಣಿ ಬಲು ಕೆಟ್ಟದಣ್ಣ (ಪುರಂದ. ೪-೧೦೨-೩). ೩. ಕಡಮೆ ಬೆಲೆಯದು : ನೀನು ದುಗ್ಗಾಣಿ ಕಿಮ್ಮತ್ತಿನ ವಳು ! ನೀನು ಹೀಗೆ, ನೀನು ಹಾಗೆ ಎಂಬುದಾಗಿ ಒಬ್ಬರನ್ನೊಬ್ಬರು ಉದ್ಧಾರವಾಡಹತ್ತಿದರು (ಕುಂಬಳ. ೪) ; ನಮ್ಮಂಥ ದುಡ್ಡು ದುಗ್ಗಾಣಿಯ ಜನರೆದುರಿಗೆ ಹಾಡುವಳೇ (ಕನ್ನಾಟ. ೬೮) ; ದುಗ್ಗಾಣಿಯ ಮುಂಡೇ ಹತ್ತಿರ ದುಡ್ಡಿನ ದೋಸೆಗೆ ಹೋದ (ಗಾದೆ). [ ದು + ಕಾಣಿ$_1$ ]

ದುಗ್ಗಿ$_1$ (ನಾ). ದೋಣಿ ; ನಾವೆ : "ಜೋಗಂ ಪರೀತಂ ನಿವಾಂಜರಂ ದುಗ್ಗಿಯೋಡಂ ದೋಣಿಯಂದೆನಲ್ ನಾವೆಯುಕ್ಕುಂ" (ಮಂಗರಾ. ೧೨೦-೪) ; ಎಡೆಯಾಡುತಿಹ ದೋಣಿ ದುಗ್ಗಿ ಕಪ್ಪಲು ದೊಡ್ಡ ಹಡಗುಗಳಿರವ ನೋಡಿದನು (ಭರತ. ೨೩-೯೬).

ದುಗ್ಗಿ$_2$ 'ದುರ್ಗಿ$_1$' ನೋ.

ದುಗ್ಗಿ$_3$ (ನಾ). (?) : ಚಿಪ್ಪಿನ ಕಟ್ಟದಲು ಅರಹಟದ ಬಂವಿಸೆಟ್ಟಿಯಂ ಬಸಗಲು ಗದ್ದೆ ಕಂಮವಟಿನೂಟು ದುಗ್ಗಿ ಮೇಗೆಯ್ಯ ಮೂಟು ಮತ್ತರು ... ೨ ಮನೆ ಬಡ ವಾಗಿಲು ಮುಸ್ಸನ್ನದೇವರ್ಗೆ (ಸೌಇಇ. IX-1, ೩೯೦-೩೯ ; 11 ನೆಯ ಶತ). [ ? ]

ದುಗ್ಗು$_1$ (ನಾ). ಒಂದು ಬಗೆಯ ಸಸ್ಯ : ಹಿಡಿಹಿಡಿಕೆ ದುಗ್ಗು, ದುಗ್ಗುಗಣಿಕೆ . . . ಪುಡಿ ಮಾಡಿ ಇಂಗು, ಸೈಂಧವ . . . ಸಹ ಎಜೆದು. ಬಿಸಿನೀರ ಕೊಳ್ಳೆ ಅಂಡಜದ ಕಾಟ ಮಾಣ್ಗುಂ (ವಿಷವೈ. ೧೯೬). [ ? ]

ದುಗ್ಗು$_2$ (ನಾ). ಕತ್ತರಿಸಿದ ಮೇವು : "ದುಗ್ಗು = ಕೊರೆದ ಮೇವು" (ಜಾನಕೋ. ೬). [ ? ]

ದುಗ್ಗುನಿ (ನಾ). ಒಂದು ಸ್ಥಳದ ಹೆಸರು : ದುಗ್ಗುನ್ನ ವಿಸ್ವಕರ್ಮ್ಮಾರ್ಯ್ಯ . . . ದತ್ತವುಂ ಕೊಟ್ಟರ್ (ಮೈಆರಿ. ೧೯೩೩, ೩೮-೦೨ ; 791 ?). [ ? ]

ದುಗ್ಗೆ 'ದುರ್ಗಿ$_1$' ನೋ.

ದುಗ್ಧ (ಗು). ೧. (ಹಾಲನ್ನು) ಕರೆದ ; ಹಿಂಡಿದ. (ನಾ). ೨. ಹಾಲು ; ಕ್ಷೀರ : "ಕ್ಷೀರಂ ದುಗ್ಧಂ ಪಾಲ್" (ಪತುಕೋ. ೯೨-೧) ; ಅದು ಕಾರಣದಿಂ ಆಧಾರ ದೋಷದಿಂ ದುಗ್ಧಕ್ಕೆ ರಸವಿಪರ್ಯಯಮಪ್ಪವೊಲ್ (ತತ್ತ್ವಪ್ರ. ೭೨) ; ಕರವೆ ಮುನಿ ದುಗ್ಧದಧ್ಯಾದಿ ರಸಂಗಳನೆಯ್ದೆ ತೋಡಿದು (ಚಂದ್ರಪು. ೧೧-೧೧) ; ಪುಳಿ ಮುಟ್ಟಿದ ದುಗ್ಧದಂತೆ ನೀರ್ ಮುಟ್ಟಿದ ಜೇನೆಯ್ಯಂತೆ (ಯಶೋಚ. ೨-೫೯) ; ಏಕೆ ಸಂತಸವುನೊಡರ್ಚೆಯನ್ನ ಮನದಂಬೆಗೆ ಪೇಟ್ ದರಹಾಸದುಗ್ಧದಿಂ (ಪುಷ್ಪಪು. ೩-೬೯) ; ಕುಡಿ ಮೊದಲೊಳೀ ದುಗ್ಧಮಂ ತರುವಾಯ ತಿನಲೀವೆನೀ ಹೊಚ್ಚಹೊಸ ಹಣ್ಗಳಂ (ಶ್ರೀರಾಮಾ. ೦೫೬-೦೦೭). ೩. ಕೆಲವು ಮರಗಳಲ್ಲಿ ಒಸರುವ ರಸ,–ದ್ರವ. 'ದುಗ್ಧತರು' ಪರಾ. [ ಸಂ. ]

ದುಗ್ಧಕಂಠ (ನಾ). (ಹಾಲು ಕುಡಿಯುವ) ಹಸುಳೆ ; ಮಗು ; ಬಾಲಕ : ಕಿಮ್ಮನೆ ಭಯರಸಮಂ ತಾಳ್ದುವೈ ಲಕ್ಷ್ಮಣಂ ಸಂಗರದೊಳ್ ಪೌಲಸ್ತ್ಯನಂ ಗೆಲ್ದಪನೆ ರಣರಸೋತ್ಕಂಠನಂ ದುಗ್ಧಕಂಠಂ (ಪಂಪರಾಮಾ. ೧೨-೬೩).

[ ದುಗ್ಧ + ಕಂಠ ]

ದುಗ್ಧಜಳಭೇದನ (ನಾ). ೧. ಹಾಲು ಯಾವುದು ಮತ್ತು ನೀರು ಯಾವುದು ಎಂದು ಬೇರ್ಪಡಿಸಿ ಅರಿಯುವುದು : ಕವಿರಾಜಹಂಸನಟಿ ವಂತೆಪೊರೇನಟಿಯಲ್ಕೆ ಯೋಗ್ಯನೇ ಚತುರಕವಿಪ್ರತಾನರಚಿತಾದ್ಯಕೃತಿ ಪ್ರಕರೈಕ ಪಾತ್ರಸಂಸ್ಥಿತಗುಣದೋಷ ದುಗ್ಧಜಳಭೇದನವಂ ಕವಿನಾಮ ಧಾರಕಂ (ಚಂದ್ರಪು. ೧-೩೮). ೨. (ಅಲಂ) ಉತ್ತಮ ಮತ್ತು ಅಧಮ ವಾದುದನ್ನು ಬೇರ್ಪಡಿಸಿ ಅರಿಯುವುದು.

[ ದುಗ್ಧ + ಜಳ$_2$ (= ಜಲ$_2$) + ಭೇದನ ]

ದುಗ್ಧತಪಃಫಲೆ (ನಾ). ತಪಸ್ಸಿನ ಸಂಪೂರ್ಣ ಫಲವನ್ನು ಪಡೆದವಳು : ದಗ್ಧಕಾಮೆ ಓ ದುಗ್ಧತಪಃಫಲೆ ಶುದ್ಧೆ ನಿರ್ಮುಕ್ತೆ (ಅಹಲ್ಯ. ೦೦೦).

[ ಸಂ. ದುಗ್ಧತಪಃಫಲಾ ]

ದುಗ್ಧತರು (ನಾ). ಆಲ, ಅತ್ತಿ, ಅಶ್ವತ್ಥ, ಗೋಣಿ ಮತ್ತು ಇಪ್ಪೆಯೆಂಬ ಹಾಲ್ಮರಗಳು : "ಔದುಂಬರಂ ದುಗ್ಧತರುವೆನಲತ್ತಿ" (ಮಂಗರಾ. ೩೫-೦೩).

[ ದುಗ್ಧ + ತರು$_2$ ]

ದುಗ್ಧದ್ರುಮ (ನಾ). = ದುಗ್ಧತರು : ಅರವಿಂದಪ್ರಿಯನಿಂದೆ ಕೆಚ್ಚು ಶಶಿಯಿಂ ಸ್ನಿಗ್ಧಂ ಸದುಗ್ಧದ್ರುಮಂ ಧರಣೀನಂದನನಿಂ ಸಕಂಟಕ ಕಟುತ್ವಂ ಸೌಮ್ಯನಿಂ ನಿಷ್ಫಲಂ ಗುರುವಿಂದಂ ಸಫಲಂ ಭೃಗುಪ್ರಭವನಿಂ ಪುಷ್ಪಾನ್ವಿತಂ ಸೌರಿಯಿಂ ಪರಃಷಂ ತತ್ತರುವಿಂಗೆ ಪೂರ್ವಗದಿತ ಸ್ಥಾನಸ್ಥರಾದಂದವರ್ (ಜಾತಕ. ೩-೧೧). [ ದುಗ್ಧ + ದ್ರುಮ ]

ದುಗ್ಧಧಾರೆ (ನಾ). ಹಾಲನ್ನು ಸುರಿಯುವುದು ; ಹಾಲಿನ ಪ್ರವಾಹ : ಆ ದುಗ್ಧಧಾರೆ ಕರವಿಂಬುದುದು ಜಿನಮಸ್ತಕಾಗ್ರದೊಳ್ (ಆದಿಪು. ೭-೮೬) ; ಮೇಣ್ ತಕ್ಕಾಂತೆ ಲಂಬಂಗುಡಲ್ ಪಡೆಪಿಂದಟ್ಟಿದ ಹಾರೆಯಪ್ಪಿ ಸುಭಗಂಗೀ ಸ್ವಾಮಿಗೆಂಬಂತಿರೊಪ್ಪಿದುದಿಂದ್ರಚ್ಯುತ ದುಗ್ಧಧಾರೆ ಸವನ ಪ್ರಾರಂಭಸಂರಂಭದೊಳ್ (ಪುಷ್ಪಪು. ೧೧-೩). [ ದುಗ್ಧ + ಧಾರೆ ]

ದುಗ್ಧಪಥ (ನಾ). (ಅಸಂಖ್ಯಾತ ನಕ್ಷತ್ರಗಳು ಬಹು ಒತ್ತಾಗಿರುವುದ ರಿಂದ) ಆಕಾಶದಲ್ಲಿ ಹಾಲು ಚೆಲ್ಲಿದಂತೆ ಸಂತ್ತುವರಿದು ಕಾಣುವ ತೇಜಃಪುಂಜ ; ಕ್ಷೀರಪಥ : ಇವುಗಳಲ್ಲಿ ಕೆಲವು ಬಿಡುತಾರೆಗಳು, ಇನ್ನು ಕೆಲವು ಅವಳಿ (Twin) ಸೂರ್ಯರು, ಕೆಲವು ಹೊಗೆಯ ರಾಶಿಯಂತೆ ಕಾಣುವ ದುಗ್ಧಪಥ(Milky Way)ಗಳು (ಬಾಲಶ್ರ. I, ೨೪೨).

[ ದುಗ್ಧ + ಪಥ ]

ದುಗ್ಧಪಾನ (ನಾ). ಹಾಲನ್ನು ಕುಡಿಯುವುದು : ಕಳದ ತರಣಿಯ ಕಿರಣದಲಿ ನಿರ್ಮಲಿನ ಜಲದಲಿ ದುಗ್ಧಪಾನಂಗಳಲಿ . . . ಆಯುಷ್ಯಾಭಿ ವೃದ್ಧಿಯ ಬೆಳವಿಗೆಗಳಹವು (ಕುಮಾ‌ರ್ಯಾಣ. ೩-೩೫). [ ದುಗ್ಧ + ಪಾನ$_1$ ]

ದುಗ್ಧಪಾಷಾಣ (ನಾ). ಬಿಳಿಯ ಬಣ್ಣದ ಕಲ್ಲು ; ಹಾಲುಗಲ್ಲು ; ಅಮೃತ ಶಿಲೆ : "ಗೋಮೇಧಸನ್ನಿಭಃ – ದುಗ್ಧಪಾಷಾಣ" (ಓಷಧಿ. ೫೦) ; "ವಜ್ರಾಭಃ–ದುಗ್ಧಪಾಷಾಣ" (ಓಷಧಿ. ೦೪೬). [ ಸಂ. ].

ದುಗ್ಧಫೇನ (ನಾ). ೧. ಹಾಲಿನ ನೊರೆ. ೨. ಹಾಲಿನ ಕೆನೆ. ೩. ಒಂದು ಬಗೆಯ ಸಸ್ಯ : "ಗೋಜಾಪರ್ಣೀ – ದುಗ್ಧಫೇನ" (ಓಷಧಿ. ೫೦).

[ ಸಂ. ]

ದುಗ್ಧಫೇನಿ (ನಾ). = ದುಗ್ಧಫೇನ ೩ : "ಲೂತಾರೀ–ದುಗ್ಧಫೇನಿ" (ಓಷಧಿ. ೧೯೩) ; "ವ್ರಣಕೇತುಃ–ದುಗ್ಧಫೇನಿ" (ಓಷಧಿ. ೨೪೯).

[ ಸಂ. ದುಗ್ಧಫೇನೀ ]

ದುಗ್ಧಲವ (ನಾ). ಹಾಲಿನ ಹನಿ, – ತೊಟ್ಟು : ಉರದೊಳ್ ಹಾರಂಗಳ ನೊಳ್ಪುರುಳ್ಗಳೊಳ್ ಚಿನ್ನಪೂಗಳಂ ಪೋಲ್ತು ಮನೋಹರಮಾದುದವರ ಕರಾಂತೆಯರುರದೊಳ್ ಕುರುಳೊಳ್ ತಗುಳ್ದ ದುಗ್ಧಲವಂಗಳ್ (ಆದಿಪು. ೭-೯೨). [ ದುಗ್ಧ + ಲವ ]

ದುಗ್ಧವಾರಿಧಿ (ನಾ). ಹಾಲಿನ ಕಡಲು ; ಕ್ಷೀರಸಮುದ್ರ ; ಜಳಶಯನ ನವತರಿಸುವುದಂ ತಿಳಿದಲ್ಲಿಂ ಮುನ್ನ ದುಗ್ಧವಾರಿಧಿತಳಚ್ಛಳದಿಂದವ ತರಿಸಿತ್ತು ನಿಳಯದೊಳೆನೆ ಧವಳತಲ್ಪಮೆಸೆದುದನಲ್ಪಂ (ಜಗವಿ. ೨-೭೪).

[ ದುಗ್ಧ + ವಾರಿಧಿ ]

**ದುಗ್ಧವಾರ್ಧಿ** (ನಾ). = ದುಗ್ಧವಾರಿಧಿ : ಅದಂ ಸುತ್ತಿ ದುಗ್ಧವಾರ್ಧಿಗಣೆಯಾದಗಟ್ಟುಳ್ ಸೊಗಯಿಸಿರ್ಕುಮಬ್ಜಾಂಬುವಿಂ (ಶಾಂತಿಪು. ೯-೦೪೩) ; ಸುತ್ತಿ ತಳ್ತ ಸುದತೀಜನೇಕ್ಷಣೋದಾತ್ತಕಾಂತಿ ನವದುಗ್ಧವಾರ್ಧಿಯಂತೆತ್ತಮುರ್ವೆ . . . ಬರ್ಪಳೊಪ್ಪಿದಳ್ (ರಾಜಶೇ. ೮-೫೬). [ ದುಗ್ಧ + ವಾರ್ಧಿ ]

**ದುಗ್ಧಸಾಗರ** (ನಾ). = ದುಗ್ಧವಾರಿಧಿ : ಪರಮ ಜಿನಾಭಿಷೇಕವಿಧಿ ಶೀರದುಕೂಪಜಲಂಗಳಿಂ . . . ಸರಿಜ್ಜಲದಿನಿಲ್ಲಿಗೆವೇಟ್ಟುದಗಾಧ ದುಗ್ಧಸಾಗರ ಜಲಮೆಂದು ನಾಕಪತಿ ಪೇಟೆ (ಆಪು. ೮-೪೩) ; ಹರಿಯ ಕಾರುಣ್ಯ ಸಂಜೀವನಂ ಪಾಂಡವರ್ಗಿರಲದೇಗೆಯ್ವುದಾವಿತ್ತ ವಣಿ ದುಗ್ಧಸಾಗರಕಜ ಕ್ಷೀರವುಂ ಬೆರಸಿದುಪಕಾರವಹುದು (ಜೈಮಿಭಾ. ೨೪-೩೮).

[ ದುಗ್ಧ + ಸಾಗರ₃ ]

**ದುಗ್ಧಸಿಂಧು** (ನಾ). = ದುಗ್ಧವಾರಿಧಿ : ನಿನ್ನಣುಗಗಂದನಂ ಕೈಬಿಡದಿರಯ್ಯೋ ಕೃಪಾದುಗ್ಧಸಿಂಧುವೇಯೆಂದೊಱಲುತೆ (ಪದ್ಮಣ. ೬-೩೨) ; ಬರಿ ಮುಗ್ಧ ಹಾಸ, ಕಣ್ದೆರೆಯೆ ದುಗ್ಧಸಿಂಧು ! ಸಂಜೆಗಿರಣ ನೆಯ್ದಿರುವ ಕಾವಿ ಆ ಮೇಘಲಿಂಗಕೆಂದು (ಕಲಮು. ೩೪-೧೯). [ ದುಗ್ಧ + ಸಿಂಧು ]

**ದುಗ್ಧಾಂಬುಧಿ** (ನಾ). = ದುಗ್ಧವಾರಿಧಿ : ಆತನ ತಪ್ಪಂ ಸಂದ ವಿಭುತ್ವಮಯ್ಯನಿದಂ ದುಗ್ಧಾಂಬುಧಿಯನೆಯ್ದೆ ಪರಿಯಿಸಿ ನೆಗಟ್ದಂ (ಶಾಂತಿಪು. ೧೨-೬೨); ತೀರ್ದುದು ದುಗ್ಧಾಂಬುಧಿ ಮೇರು ಪೀಠಮೆನೆ ಏಂದು ಚೆಣ್ಣಂ (ಅನಂಪು. ೩-೯೯) ; ದುಗ್ಧಾಂಬುಧಿಯೊಳ್ ಜನಿಸುವ ಮುಗ್ಧೇಂದು ಕಳಾವಿಳಾಸದಂತೆ . . . ಮೆಚ್ಚಿದಳೆಸೆವ ನಿದ್ರಾಭರದಿಂ (ದಶಕು. ೮-೨೯೦); ಆನಂದದುಗ್ಧಾಂಬುಧಿಯೊಳಿ ಮುಳುಗುತ್ತೇಳ್ದವೊಲ್ ಕಂಪಮುಾ ಜುಮ್ಮನೆ ರೋಮಾಂಚಂಗಳುಂ ಸಂಜನಿಸೆ (ರಾಜಶೇ. ೩-೧೦೩).

[ ದುಗ್ಧ + ಅಂಬುಧಿ ]

**ದುಗ್ಧಾಂಬುರಾಶಿ** (ನಾ). = ದುಗ್ಧವಾರಿಧಿ : ಸುರಜಲದಂಗಳ್ ದುಗ್ಧಾಂಬುರಾಶಿಯೊಳ್ ಪೀಟು ಬಂದ ನೀರ್ಗಳನೆತ್ತಂ ಸುರಿದುವು ಜಿನಾರ್ಭಕಾಚಲಶಿರದೊಳ್ ಜಲದಂಗಳಂತು ನಗದೊಳ್ ಸುರಿಗುಂ (ಆದಿಪು. ೬-೮೯).

[ ದುಗ್ಧ + ಅಂಬುರಾಶಿ ]

**ದುಗ್ಧಾಂಭೋರಾಶಿ** (ನಾ). = ದುಗ್ಧವಾರಿಧಿ : ಭಾಸುರಕೈಲಾಸನಗಕ್ಕೆ ಸಂದ ದುಗ್ಧಾಂಭೋರಾಶಿ ಶುಂಭತ್‌ಸುಧಾಕರಬಿಂಬಕ್ಕೆಣೆಯಾದ ಸುಂದರತೆಯಿಂದಂ (ಸುಕುಮಾ. ೧೨-೬೮). [ ದುಗ್ಧ + ಅಂಭೋರಾಶಿ ]

**ದುಗ್ಧಾಬ್ಧಿ** (ನಾ). = ದುಗ್ಧವಾರಿಧಿ : ಪಸರಿಸಿ ದುಗ್ಧಾಬ್ಧಿಜಳ ಪ್ರಸರಮನೊಡವೇಟು ಬಂದು ಕಱವುವು ಮೇಘಪ್ರಸರಂಗಳಲ್ಲಿಯೆನೆ ರಸ ಮೊಸರ್ವುವು ಪುಂಡ್ರೇಕ್ಷುವಾಟಕೋಟಿಗಳದಱೊಳ್ (ಆದಿಪು. ೦-೫೯) ; ದುಗ್ಧಾಬ್ಧಿಯೊಳ್ ನೂತ್ನ ರತ್ನಾಂಕುರವಾ ಗೋತ್ರಾದ್ರಿಯೊಳ್ ಸಿಂಗದ ಸಿಸು ಬಳೆವೊಂದಂದದಿಂ . . . ಬಳೆದಂ ಭಾರತೀಧಾಳನೇತ್ರಂ (ಚಂದ್ರಪು. ೩-೦೦೩) ; ಜಲಧಿಯೊಳು ದುಗ್ಧಾಬ್ಧಿ ತೀರ್ಥಾವಳಿಗಳೊಳು ಸುರನದಿ (ಕುವ್ಯಾಉ. ೪-೧೨೦) ; ಭುವನ ಸಂಭ್ರಮದೊಡನೆ ತಾಯದ್ದೆಗೆ ಪಾಲಾರ್ಣಬರಲೊಂದಿರುಳ್, ಕನಸಿನೊಳ್, ದುಗ್ಧಾಬ್ಧಿಯುಂ ಕಂಡು ನಲಿದಳ್ ದೇವಿ ಕೌಸಲ್ಯೆ (ಶ್ರೀರಾಮಾ. ೦೫-೪೦೬). [ ದುಗ್ಧ + ಅಬ್ಧಿ ]

**ದುಗ್ಧಾಭಿಷೇಕ** (ನಾ). ಹಾಲಿನ ಅಭಿಷೇಕ ; ಹಾಲನ್ನು ತಲೆಯ ಮೇಲೆ ಎರೆಯುವುದು : ಬರಿಸಿದಂ ನೆನದು ಸುರಧೇನುವಂ ವಾಲ್ಮೀಕಿ . . . ದುಗ್ಧಾಭಿಷೇಕಮಂ ಮಾಡಿಸಿದನಾ ರಾಘವೇಶ್ವರಂಗೆ (ಜೈಮಿಭಾ. ೨೦-೫೨).

[ ದುಗ್ಧ + ಅಭಿಷೇಕ ]

**ದುಗ್ಧಾರ್ಣವ** (ನಾ). = ದುಗ್ಧವಾರಿಧಿ: ದುಗ್ಧಾರ್ಣವ ಫೇನಪಾಂಡುರತೆಯಂ ಕಯ್ಕೊಂಡು ಬೆಳ್ದಿಂಗಳಂತಿರೆ ತೋಱಿತ್ತೆಸೆವುತ್ತರೀಯವಸನಂ ರಾಜೇಂದ್ರಚಂದ್ರಾಂಕನಾ (ಕಾದಂಪೂ. ೨೮) ; ಮಿಸುಗುವ ತಾರಕಾದ್ರಿರುಚಿಯಿಂ ದುಗ್ಧಾರ್ಣವ ಫೇನರೋಚಿಯಿಂ ... ಮಿಗಿಲಾಗಿ ಪರ್ವಿ ರಂಜಿಸುವುದು ಕೀರ್ತಿ ಧಾತ್ರಿಯೊಳಗುಜ್ವಳದಿಂ ದಯಾಸಿಂಹಭೂಪನಾ (ಎಕ. ೪, ಮಂಜರಾ. ೧೮-೩೧ ; 1095) ; ಲವಣಾರ್ಣವಮಂ ದುಗ್ಧಾರ್ಣವದೊಳ್ದೆರೆ ಮಾಲೆ ಮುಸುಕಿದಂತಿರೆ (ಜಗವಿ. ೪-೬೦). [ ದುಗ್ಧ + ಅರ್ಣವ ]

**ದುಗ್ಧಿ** (ನಾ). ಒಂದು ಬಗೆಯ ಸಸ್ಯ; ಹಾಲುತೊಟ್ಟಿನ ಗಿಡ: "ಜೀವ್ಯಾ-ಹಾಲೆ, ಗೋರಕ್ಷ, ದುಗ್ಧಿ, ಅಣಲೆ" (ಓಷಧಿ. ೬೨). [ ಸಂ. ದುಗ್ಧೀ ]

**ದುಗ್ಧಿಕ** (ನಾ). ಒಂದು ಬಗೆಯ ಸಸ್ಯ ; ಹಾಲುತೊಟ್ಟಿನ ಗಿಡ : ಕಡಹಾಲೆ ಬಳ್ಳಿ, ದುಗ್ಧಿಕ (ವೈಶಿಗಿ. ೫೨-೦೦೩೦); ಮಾಧೀಫಲ, ದುಗ್ಧಿಕ, ಮೇಕೆಕೊಂಬು ಬಳ್ಳಿ (ವೈಶಿಗಿ. ೩೯-೦೧೬೮). [ ಸಂ. ದುಗ್ಧಿಕಾ ]

**ದುಗ್ಧಿಕೆ** (ನಾ). ೧. ಒಂದು ಬಗೆಯ ಸಸ್ಯ ; ಹಾಲುತೊಟ್ಟಿನ ಗಿಡ : "ಕ್ಷೀರಿಕಾ, ದುಗ್ಧಿಕಾ ಈ ೨ ಅಕ್ಕಿ ಹೊಡೆ" (ನಾಚಿರಾ. ೦೦೯-೭). ೨. ಒಂದು ಬಗೆಯ ಬಳ್ಳಿ; ಸೋರೆಬಳ್ಳಿ : "ತುಂಬೀ, ಅಲಾಬೂ, ದುಗ್ಧಿಕಾ-ಈ ೩ ಸೋರೆ" (ಹಲಾಯು. ೩೫-೫೬); "ಆ ತುಂಬಿ ದುಗ್ಧಿಕೆಯಲಾಬುವೆನೆ ಸೋರೆಯೆನಿಕುಂ" (ಮಂಗರಾ. ೪೪-೯೬) ೩. ಸಾವೆ, ರಾಗಿ, ಜೋಳ ಮೊದಲಾದ ಧಾನ್ಯಗಳ ಇನ್ನೂ ಬಲಿಯದ ಕಾಳು; ಹಾಲುಗಾಳು ; ಬೆಳಸೆ : "ಬೆಳುವಸೆ ದುಗ್ಧಿಕಾಖ್ಯಮಕ್ಕುಂ" (ಮಂಗರಾ. ೧೦೨-೬).

[ ಸಂ. ದುಗ್ಧಿಕಾ ]

**ದುಗ್ಧೆ, ದುಗದೆ** (ನಾ). ೧. ಅನುಮಾನ ; ಶಂಕೆ ; ಸಂಶಯ : ಮನದಕ್ಕರದಿಂದು ಮಾರ್ಕಂಡೇಯ ದಶರಥನ ತನಯರ ಮಹಾನಾಟಕವ ವಿವರಿಸಿದನೆಮತನುಜ ಭೀಮಾರ್ಜುನ ಯಮಳರ ದ್ರುಪದಾತ್ಮಜೆಯ ದುಗ್ಧೆಯಡಗುವ ತೆರದೊಳು (ಲಕ್ಷ್ಮೀಭಾ. ೩-೩೦-೫). ೨. ಹಿಂಜರಿಯುವಿಕೆ ; ಹಿಂದೆಗೆಯುವುದು. ೩. ದ್ವೇಷ ; ಹಗೆತನ. **ದುಗದೆ :** ೪. ಅಸೂಯೆ. ಹೊಟ್ಟೆಕಿಚ್ಚು : (ಕ). 'ದುಬ್ಧಿ' ಪರಾ.

[ ←ಮರಾ. ದುಗ್ಧಾ ]

**ದುಗ್ಧೋದಧಿ** (ನಾ). = ದುಗ್ಧವಾರಿಧಿ: ಅನವದ್ಯ ಜಿನಾಗಮವಿದ್ಯನಿದ್ಧ ದುಗ್ಧೋದಧಿ ಧೌತಕೀರ್ತಿವಿಶದಂ ಭರತಾವನಿರಾಜಪೂಜಿತಂ (ಶಾಂತಿಪು. ೧-೨೯) : ಆ ದಿಗಂತಮಲ್ಲಮಂ ದುಗ್ಧೋದಧಿಧವಳದೀರ್ಘಂಗಳಪ್ಪ ಪಾಂಗಾವಲೋಕನದಿಂ ಕೇಂಕಾಡಿಸುತ್ತುಂ (ಕಾದಂಅ. ೨೦೦) ; ಪೂಲೋಕದರ್ಪಣವಾಗಿ ದುಗ್ಧೋದಧಿಯೊಳೆಸೆವುದು ಶ್ರೀಗಧೀಶನ ನಗರ (ಕುವ್ಯಾಅ. ೭-೫೨). [ ದುಗ್ಧ + ಉದಧಿ ]

**ದುಗ್ಧೋದಧಿತಲ್ಪ** (ನಾ). ಹಾಲಿನ ಸಮುದ್ರವನ್ನೇ ಹಾಸಿಗೆಯಾಗಿ ಹೊಂದಿರುವವನು ; ವಿಷ್ಣು : ಲಕ್ಷ್ಮಿ ನಿಜವಲ್ಲಭೆ ಜಾಹ್ನವಿ ತನ್ನ ಪಾದಪದ್ಮೋದಕ . . . ಎಂದೆನಿಪ್ಪ ದುಗ್ಧೋದಧಿತಲ್ಪನಂ ನರನ ಭಿಷ್ಟುತಿಗೆಯ್ವುದು ಧಾರ್ಷ್ಟ್ಯಮಲ್ಲವೇ (ಜಗವಿ. ೧-೨೦).

[ ದುಗ್ಧೋದಧಿ + ತಲ್ಪ ]

**ದುಗ್ಧೊನೆಲ್ಮಲ್ಲಿ** (ನಾ). ಒಂದು ಸ್ಥಳದ ಹೆಸರು (?) : ಇಗ್ಗಇಲ್ಲೂರು ದುಗ್ಧೊನೆಲ್ಮಗಲ್ಲಿಗಟಬ್ಬವಾಗಿಲು . ಸಱಮು ಎಟ್ಟಣ್ಡೆ ಪರವೂರು ಕೂಡಲೆ ಇನಿತುಮಂ ಪೊಲಮೇರೆ ಸಹಿತಮಿತ್ತನ್ (ಎಕ. IX, ಬೆಂಗಳೂ. ೮೩-೯ ; ಸು. 890). [ ? ]

**ದುಚೌಕ** (ನಾ). ನೆತ್ತದಾಟದಲ್ಲಿ ನಾಲ್ಕರ ಎರಡು ಗರ: ಪದಮಂ ಮೋಕ್ಷ ಚತುಷ್ಟಯಮಂ ಬಯಸದೆ ದುಚೌಕವನಾಡುವ ತನಿಸೊಕದೊದವಂ ಮುದಮನೆರಳ್ಕಯ್ಯಂದಿತ್ತಿದ್ದುಗಮಾಡುವನು (ಉದ್ಭಟ. ೨೫-೧೩).

[ ದು + ಚೌಕ₂ ]

**ದುಜಾವ, ದೂಜಾವ** (ನಾ). ಎರಡು ಜಾವ, -ಯಾಮ : "ದುಜಾವ (ದೂಜಾವ)-ದ್ವಿಯಾಮ" (ಕರ್ಣಕೋ. ೨೦) ; ದೂಜಾವಂ, ದುಜಾವಂ, ದ್ವಿಯಾಮಂ (ಶಬ್ದಾನು. ೩೬೬ ಪ್ರಯೋ). **ದೂಜಾವ :** ಮೇಲಿನ 'ಶಬ್ದಾನು' ಪ್ರಯೋಗವನ್ನು ನೋಡಿ. [ ದು + ಜಾವ₁ ]

**ದುಟದುಟನೆ** (ಅ). ದಂಟದುಟ ಎಂಬ ಶಬ್ದದೊಡನೆ: ಘಾತಿಯಿಂ ದುಟದುಟನೆ ಉರುಳೆ ತಲೆಯಂ ಹೊಡೆದ ಕೊಡಲಿಯಿಂ (ಇಕ್ಷು. ದೀ. ೧೦೪-೦೭); ತಲೆ ದುಟದುಟನೆ ಉ[ಪಾಠಾಂ. ತೊಟ್ಟನುಡಿದು]ರುಳೆ ಪೊಯ್ದನಾ ತಂದೆಯಂ (ಜಂಬೀರ. ದೀ. ೩೫೦-೦೪). [ ದುಟದುಟ$_0$ + – ಅನೆ$_1$ ]

**ದುಟ್ಟ** (ಗು). ೧. ಕೆಟ್ಟ; ದುಷ್ಟ: ಸಾಮಂತರ ಗಣ್ಡಂ . . . ಜಗದಾಳು ದುಟ್ಟಸಾವಂತರ ನಿಟಿಲ್ವ ಮುಚಿಾವಂ (ಎಕ. XI, ದಾವಣ. ೧೦೫-೭; 1148 ?): ದುಟ್ಟ ದೈತ್ಯರು ಬಂದು ಕವಿದರು ರಣರಂಗದಿಟ್ಟ ಕುಮಾರನ ಮೇಲೆ (ಪೋಹಕ. ೩೪-೨೨); ದುಟ್ಟ ರಕ್ಕಸಂ ರಾವಣಂ . . . ವರ್ಣ ಶಾಲೆಯಿಂ ಸೀತೆಯಂ ಕಳ್ದು ಲಂಕೆಯತ್ತಲ್ ಕೊಂಡುಯ್ದಂ (ಅದ್ಭುತ. ೩೪-೦೪). (ನಾ). ೨. ನೀಚ; ಕೆಟ್ಟವನು: "ದುಟ್ಟನೆಂದು ದುಷ್ಟಂ" (ಶಶಪಾ. ೨೭-೫೬); "ದುಟ್ಟಂ ತಾಂ ದುಷ್ಟನಕ್ಕುಂ" (ಕವಿಶಂ. ೨೨೮); ದುಟ್ಟನೀ ತೆಜದಿಂದೆ ಎಕ್ಕಲನಾಗಿರಲು ಕಂಡು (ಸಾನಂದ. ೪-೨೦); ಆ ಷಕಾರಕ್ಕೆ ಟತ್ವಂ—ಅಂಗುಷ್ಠ-ಉಂಗುಟ್ಟ, ಉಂಗುಟ . . . ದುಷ್ಟ-ದುಟ್ಟ (ಶಮದ. ೨೮೩ ವೃತ್ತಿ); ಕಟ್ಟುಗ್ರವೆಂಬುದತಿತವದ ತೆರಳುವ ರೊಳಂ ಗಟ್ಟಸೆಂಬುದು ರಜಕರೊಳು ಧೌತವಸನವಂ ಕಟ್ಟೆಂಬುದುಂ ಧಾನ್ಯರಸದೊಳಲ್ಲದೆ ಬೇರೆ ದುಟ್ಟರಿರ್ಪ ನಾಡೊಳು (ಪ್ರಭುಪು. ೩-೧೧).

**ದುಟ್ಟರ ಗಂಡ** = ದುಷ್ಟರನ್ನು ಸದೆಬಡಿಯುವವನು; ಒಂದು ಬಿರುದು: ದುಟ್ಟರ ಗಣ್ಡಂ ನನ್ನಿಯ ಗಂಗ ಜಯದುತ್ತರಂಗಂ . . . ಗಂಗವೆರ್ಮ್ಮಾಡಿದೇವರ್ಗ್ಗಜ್ಜ ವಾಡಿ ತೊಂಭತ್ತಸಾಸಿರಮಂ ಬಾಯ್ಕೇಳಿಸಿ (ಎಕ. VII, ಶಿವಮೊ. ೧೧-೨೦; 1086 ?); ದುಟ್ಟರ ಗಣ್ಡ ಭುಜಬಳ ಗಂಗವೆರ್ಮ್ಮಾಡಿ ದೇವರು . . . ರಾಜ್ಯಂಗೆಯ್ಯುತ್ತುಮಿರೆ (ಎಕ. VII, ಶಿವಮೊ. ೫೧-೧೧; 1108 ?); ಸೌಚ ಗಾಂಗೇಯ ಮಂಡಲಿಂಗಾವ ದುಟ್ಟರ ಗಂಡನಾಳಿಂಮುನ್ನಿಜವನಯ್ಯನ ಸಿಂಗನಾಮಾಡಿ ಸಮಸ್ತ ಪ್ರಸಸ್ತಿ ಸಹಿತಂ (ಸೌಇಇ. IX-1, ೨೩೦-೯; 1134). [ <ಸಂ. ದುಷ್ಟ ]

**ದುಟ್ಟಗುದುರೆ** (ನಾ). ಅಗಡು ಕುದುರೆ; ಪಳಗದ ಕುದುರೆ; ಕೆಟ್ಟ ಕುದುರೆ: ಅದು ಮಗುವಿನ ಮರಣಕ್ಕೆ ಕಾರಣವಾಗುವಂತಹ ದುಟ್ಟ ಗುದುರೆಯಲ್ಲ (ಸವತಿ. ೨೦೯). [ ದುಟ್ಟ + ಕುದುರೆ ]

**ದುಟ್ಟಗೊರವ** (ನಾ). ದುಷ್ಟನಾದ ಯತಿ: ಈಗಳ್ ಸಿವನೆಂಬ ದುಟ್ಟ ಗೊರವಂ . . . ನಿಮ್ಮಡಿಗಳುಮಂ ಮಱದು ಲೆಕ್ಕಿಸದೆ ಮೇಲೆ ಬಿಟ್ಟ ಪಾವುಂ ನೇವಾಳವಾಗೆ ಮ್ಮೆಯ್ಯುಱಯದಿರ್ಪಂ (ಕಬ್ಬಿಗಕಾ. ೦೯೫). [ ದುಟ್ಟ + ಗೊರವ ]

**ದುಟ್ಟತನ** (ನಾ). ಕೆಟ್ಟತನ; ನೀಚತನ: ಮನಸಿನ ದುಟ್ಟ[ಪಾಠಾಂ. ದುಷ್ಟ] ತನವನು ಬಿಡಿಸುತ . . . ಬ್ರಹ್ಮದ ಬಟ್ಟೆಯನು ಹಿಡಿದವರೆ ನೆಱ ತತ್ತ್ವಾಧಿಕಾರಿಗಳು (ಅಮೃತ. ೧-೨೨): ಅಂತಹ ದುಟ್ಟತನ ಅವರಲ್ಲಿ ಕಾಣದು ಒಡೆಯ (ಸವತಿ. ೧೬೩). [ ದುಟ್ಟ + – ತನ ]

**ದುಟ್ಟತಳಕ್ಕ** (?) (ನಾ). (?): ಕಟ್ಟಾಯದ ಕಣೆ . . . ನನ್ನಿಯ ತವರೊರ್ ನಟ್ಟನೆನಿಸಿದ ಜಸಂ ನೀರ್ವಟ್ಟರ ನಿಟ್ಟಾಯುವಕ್ಕೆ ದುಟ್ಟತಳಕ್ಕಂ [ಪಾಠಾಂ. ತಳಕ್ಕುಂ, ತುಳುಕ್ಕುಂ] (ಕಾವ್ಯಾವ. ೨೨೯). [ ? ]

**ದುಟ್ಟಬಿದಿ** (ನಾ). ಕೆಟ್ಟ ದೈವ; ದುಷ್ಟ ವಿಧಿ: ಎಲೆ ದುಟ್ಟಬಿದಿ, ನಿಸದವಿಂ ಜಲಜೋದರನಾಣೆ ವೆಣ್ಗಳಂ ಸೃಷ್ಟಿಸದಿರ್ (ಸುಗುಣಂ. ೬೮-೦೭). 'ದುಟ್ಟವಿಧಿ' ಪಠಾ. [ ದುಟ್ಟ + ಬಿದಿ ]

**ದುಟ್ಟಮದ್ದು** (ನಾ). (ಇತರರಿಗೆ ಕೆಡುಕನ್ನುಂಟುಮಾಡಲು) ಆಹಾರದಲ್ಲಿ ಸೇರಿಸಿ ಹಾಕುವ ವಿಷ; ಇಕ್ಕುಮದ್ದು; ಕೆಯ್ಮುಸಕ: ನಾವು ಹೇಳುತ್ತಿದ್ದೇವೆ, ಕುವರನನ್ನು ಯಾರೋ ದುಟ್ಟಮದ್ದಿಗೆ ಈಡುಮಾಡಿರುವ ರೆಂದು (ಸವತಿ. ೨೩೭). [ ದುಟ್ಟ + ಮದ್ದು$_1$ (<ಮರ್ದು) ]

**ದುಟ್ಟಮಾಯೆ** (ನಾ). (ಈ ಲೋಕ ಸತ್ಯವೆಂಬ) ಕೆಡುಕನ್ನುಂಟು ಮಾಡುವ ಭ್ರಾಂತಿ,–ಮಾಯೆ,–ಮಿಥ್ಯೆ: ದುಟ್ಟಮಾಯೆಯ ಸಿಟ್ಟ ಗುಟ್ಟನವೊಟ್ಟಲು ನೆಱ ಸುಟ್ಟು . . . ವಿರಾಜಿಪ ದಿಟ್ಟ ಬಸವಯ್ಯಾ (ಪ್ರಭುಪು. ೧-೨೦). [ ದುಟ್ಟ + ಮಾಯೆ ]

**ದುಟ್ಟವಿಧಿ** (ನಾ).=ದುಟ್ಟಬಿದಿ: ದುಟ್ಟವಿಧಿ, ನಮ್ಮ ಮುಂದ ನಿನಗೆ ಬೇಡ ವೇಕೆ! ಹೆರರ ನಲಿವಿಗೆ ನಲಿವ ಸಿರಿ ಬಾರದೇಕೆ? (ನಡಪಾ. I, ೪೬೦). [ ದುಟ್ಟ + ವಿಧಿ ]

**ದುಟ್ಟೆ** (ನಾ). ನೀಚ ಸ್ತ್ರೀ; ಕೆಟ್ಟವಳು; ದುಷ್ಟೆ: ದುಟ್ಟೆಯರಾದ ಪಾಣ್ಬೆಯರ ಗೊಂದಣ ಸಂದಣಿಸಿರ್ದುದು (ವೀರವಿ. ೬-೩೦). [ <ಸಂ. ದುಷ್ಟಾ ]

**ದುಡ** (ನಾ). ಮಣ್ಣಿನ ಪಾತ್ರೆ; ಗುಡಾಣ: ನಿಮ್ಮಲ್ಲಿರೋ ಕಾಳುಕಡ್ಡಿ, ಹುರುಳಿ, ಹುಚ್ಚೆಳ್ಳು, ಏನಾರಾ ನಿಮ್ಮ ದುಡದಲ್ಲಿರೋದ ಕೊಟ್ಟು ಕಳ್ಸಿ (ಹುಟ್ಟಿಹ. ೦೩೭). [ ←ಮರಾ. ದುಡ ]

**ದುಡಕಿ** (ನಾ). ಎತ್ತು, ಕುದುರೆ ಮೊದಲಾದವುಗಳ ವೇಗವಾದ ನಡಿಗೆ,– ಚುರುಕಾದ ಓಟ: ರೇಚಿತ – ಕುದುರೆ ದುಡಕಿಯು ನಡಿಗೆ (ಗಂಗಾಮ. ೨೭೪). [ ←ಮರಾ. ದುಡಕೀ ]

**ದುಡದುಡನೆ** 'ದುಡುದುಡನೆ' ನೋ.

**ದುಡನ** (ನಾ). ಮಾಂಸ (?): ಶ್ರೀಮಾದಿಗ ಹೋಚನ ಶ್ರೀಕರನ ಕೊಡಗಿಯ ಗದ್ದೆಕೊಳಗಕ್ಕೆ ಅಳಿಹಿದವನು ಹೊಣಬು ಅಕ್ಕಿಯನು ನಾಯ ದುಡನವನು ತಿಂದವರು (ಮ್ಯಆರಿ. ೧೯೩೨, ೫೦-೮;18 ನಯ ಕಕ). [ ? ]

**ದುಡಿ$_1$** (ಕ್ರಿ). ೧. ಕಷ್ಟಪಟ್ಟು ಕೆಲಸಮಾಡು; ಶ್ರಮಿಸು; ಹೆಣಗು: ಹಾಸಿ ದುಡಿದರೆ ತನಗುಂಟು ತನ್ನ ಪ್ರಮಥರಿಗುಂಟು (ಬಸವ. ೩೨೪); ಅತಿಲಜ್ಜೆ ಗೆಟ್ಟನ್ಯರಾಳಾಗಿ ದುಡಿದು ದಾವತಿಗೊಂಡು ಧನವನಾರ್ಜಿಸಿ ಹರಿಶ್ಚಂದ್ರ ಭೂಪತಿ . . . ಸುತನ ಕರೆಯೆಂದಡೇನೆಂಬೆ (ಹರಿಕಾ. ೧೨-೨೯); ಬಿಡುವಮ್ ಈ ಬಾಳ್ ಅದೇಕೆಂಬ ಚರ್ಚೆಯ; ನಾವು ದುಡಿವಮ್ ಅದು ಪೆಂಪುಗೊಳೆ (ಮಂಕುತಿ. ೮೦೯); ದುಡಿಯೋ ಎತ್ತು ಮಡಿದು ಬಿತ್ತು (ಗಾದೆ). ೨. (ದುಡಿತದಿಂದ) ಸಂಪಾದಿಸು; ಗಳಿಸು: ವ್ಯಾಪಾರಸಾಬರಿಗೆ ಹಣವೂ ವಿಶೇಷವಾಗಿ ದುಡಿದು ಕೊಟು ಯಿವರಲ್ಲಿ ಪ್ರಮುಖರಾಗಿ (ಕೃದರ. ೧೦೯); ಅಮ್ಮನೆನಗೆ ಕೊಟ್ಟುದಲ್ಲ, ಗಂಡನಿದಂ ಕೊಂಡನಲ್ಲ, ಅಕಟ ನಾನೆ ದುಡಿದೆನಲ್ಲ ಮೆಯ್ಯ ಮುರಿತದಿಂ ? (ಗೀವಿಂ. ೭೬-೪೦); ಇಷ್ಟು ದಿನಗಳೂ ದುಡಿದು ನಿನ್ನನ್ನು ಸಾಕಿ ಸಲಹಲು ನಾನು ಬೇಕಾಗಿದ್ದಿತು. ಈಗ ಸುಖ ಅನುಭವಿಸಲು ಅವಳು (ಸುಂದರಿ. ೮೫).

**ದುಡಿದುಡಿ** (ದ್ವಿರುಕ್ತಿ): ನುಡಿದು ಬೇಸತ್ತಾಗ ದುಡಿದುಡಿದು ಸತ್ತಾಗ ಜನಕ ಹಿಗ್ಗಿನ ಹಾಡು ನೀಡಿಹಂವ (ಸಖೀಗೀ. ೪೭-೦). [ ದೇ. ■ ತುಳು. ದುಡಿ ]

**ದುಡಿ$_2$** 'ತುಡಿ' ನೋ.

**ದುಡಿ$_3$** (ನಾ). ಒಂದು ಬಗೆಯ ಚರ್ಮವಾದ್ಯ: ಕರಿಯನೂ ಒಳಗಿದ್ದ ತನ್ನ 'ದುಡಿ'ಯನ್ನು ಹೊರಗೆ ತಂದಿದ್ದ (ರಕ್ತಕೂ. ೩೪); ಹಿಡಿದ ದುಡಿ, ಎತ್ತಿದ ಕೈ, ತುಂಬಿದ ಆವೇಶ! ಎಲ್ಲವೂ ಇದ್ದಕ್ಕಿದ್ದಂತೆಯೇ ಇವೆ. ಆದರೆ 'ಚೋಮ'ನಿಲ್ಲ! (ಚೋಮದುಡಿ. ೧೧೧); ದಕ್ಷಿಣಕನ್ನಡಜಿಲ್ಲೆಯ ಕೊರಗರು ದುಡಿಯ ನಾದಕ್ಕೆ ಕುಣಿಯುವ ನೃತ್ಯಗಳು ವಿಶಿಷ್ಟವಾಗಿವೆ (ಅಭಾನ್ಯ. ೧೧೧); ದುಡಿ ಎಂಬ ಚರ್ಮವಾದ್ಯವನ್ನು ಬಡಿಯುತ್ತ, ಹಾಡುತ್ತ, ಕುಣಿಯುವುದು ಕೊಡಗರ ವಾಡಿಕೆ (ಜಾನಗೀ. ೯೯). [ ದೇ. ■ ತಮಿ. ತುಟು; ಮಲ. ತುಡಿ; ತುಳು. ದುಡಿ ]

**ದುಡಿಕೆ** (ನಾ). ೧. ದುಡಿಯುವಿಕೆ; ಪರಿಶ್ರಮ. ೨. ಸಂಪಾದನೆ; ಗಳಿಕೆ: "ದುಡಿಕೆ = ಕೂಲಿ; ಕೆಲಸ; ಪಗಾರ" (ಜಾನಕೋ. ೬). [ ದುಡಿ$_1$ + – ಕೆ ]

**ದುಡಿಗೆ** (ನಾ). ಒಂದು ಬಗೆಯ ಸಸ್ಯ : ದುಡಿಗೆಯ ಕಾಯಿ ಎರದ ಹಣ್ಣು ಕುರಟಿಗೆ ಹಣ್ಣು . . . ಎಲ್ಲಾ ಕಂದಮೂಲ ಕದಿರ ಶಾಕ ಪುಷ್ಪ ಫಲಾದಿ ಗಳಂ (ಶಾಸ್ತ್ರಟೀ. ೫೫-೪). [ ? ]

**ದುಡಿತ₁** (ನಾ). ೧. ದುಡಿಯುವಿಕೆ ; ಕೆಲಸ ; ಕಾರ್ಯ : ಈ ದುಡಿತದ ಪರಿಣಾಮದಿಂದಲೋ ಎಂಬಂತೆ ಅವರ ಮೂರನೆಯ ಹೆರಿಗೆ ತೊಂದರೆಯಿಂದಲೇ ಆಯಿತು (ಹಲ್ಮಿಡಿ. ೩೯) ; ಆ ಸಂಶೋಧನಾ ಮಂದಿರವು . . . ಭಾರತೀಯ ವಿಜ್ಞಾನ ಸಂಶೋಧನೆಗಳ ದುಡಿತದ ಹೆಗ್ಗುರುತಾಗಿಯೂ ಇತ್ತು (ಸಸ್ಯಶ. ೧೩೦) ; ದುಡಿತದಲ್ಲಿ ವಾಸುದೇವ ಭಟ್ಟರಿಗೆ ಸಹಾಯಕಿಯಾಗಿದ್ದಳು (ಭ್ರಾಂತಿಕು. ೧) ; ದುಡಿತವು ದುಡ್ಡಿನ ತಾಯಿ (ಗಾದೆ). ೨. ಸಂಪಾದನೆ ; ಗಳಿಕೆ ; ಉತ್ಪನ್ನ : ದುಡಿತ ಹೋಯಿತು ವಾಗೆಯ ಮಳೆಹೋಲ್ (ಕಆಪು. ೧೯-೩೩) ; ಹಿರಿಯರಿಂದ ಬಂದ ಸಂಪತ್ತಿಗೆ . . . ತಂತಮ್ಮ ದುಡಿತವನ್ನೂ ಕೂಡಿಸಿ ಅದನ್ನು ಓರಂತೆ ಹಿಗ್ಗಿಸುತ ಬರಬೇಕು (ಮೂರುಲು. ೭ ಎರಡು ಮಾತು) ; ಯಾರ ಹಂಗೂ ಇಲ್ಲದೆ ತನ್ನ ದುಡಿತದಿಂದ ಹಾಯಾಗಿ ಬಾಳುತ್ತಿದ್ದಳು (ಮುಕ್ತಿಮು. ೭). [ ದುಡಿ₁ + – ತ₂ ]

**ದುಡಿತ₂** 'ತಂಡಿತ' ನೋ.

**ದುಡಿತಗಾರ** (ನಾ). ದಂಡಿಯುವವನು; ಶ್ರಮದ ಕೆಲಸ ಮಾಡುವವನು (ಪ್ರಾಚೀನ ಸ್ಪಾರ್ಟಾ ರಾಜ್ಯದಲ್ಲಿ ಸ್ವತಂತ್ರಪ್ರಜೆಗೂ ಗುಲಾಮನಿಗೂ ಮಧ್ಯದರ್ಜೆಯಲ್ಲಿದ್ದ) ಒಂದು ತರಗತಿಯ ಸ್ವತಂತ್ರನಲ್ಲದ ಉಳುಮೆಯ ಜೀತಗಾರ ; ಸ್ವತಂತ್ರನಲ್ಲದ ದುಡಿತಗಾರ (Helot. ಇಂಕೆನಿ).

[ ದುಡಿತ + – ಗಾರ (< – ಕಾಱ) ]

**ದುಡಿಮೆ** (ನಾ). ೧. ದುಡಿತ ; ಕಾಯಕ : "ತಂತಃ–ದುಡಿಮೆ" (ಶಾಕಶ್ಮ. ೮) ; ದುಡಿಮೆಯ ಉತ್ಸಾಹ ಮತ್ತೆ ಮನುಷ್ಯನಲ್ಲಿ ಮೂಡುವುದು (ಪಾಶ್ಚಾತ್ಯ. ೨೮) ; ದೇವರು ಒಂದು ಹೊತ್ತಿನ ಅನ್ನಕ್ಕೆ ದುಡಿಮೆ ಕೊಟ್ಟರೂ ನನಗೆ ತೃಪ್ತಿ (ಶರ್ಮಸ. ೨೫೯) : ವಿದ್ಯಾರ್ಥಿಗಳ ವ್ಯಕ್ತಿತ್ವವು ವೃದ್ಧಿಯಾಗುವುದಕ್ಕೆ ದುಡಿಮೆಯೇ ಅತ್ಯಾವಶ್ಯಕ (ಕೃಷಿಶಿ. ೫೮). ೨. ಗಳಿಸುವುದು ; ಸಂಪಾದಿಸುವುದು. ೩. ಗಳಿಕೆ; ಸಂಪಾದನೆ: ನಾನು ಭಿಕಾರಿ, ದುಡಿಮೆಯಿಲ್ಲದ ಭಿಕಾರಿ . . . ಗಂಗಾಧರ ಕಿರುಚುತ್ತಲೆ ಇದ್ದ (ಮುಂಗಾಮು. ೩೦)

[ ದುಡಿ₁ + – ಮೆ₁ ]

**ದುಡಿಮೆಗಾರ** (ನಾ). ದಂಡಿತಗಾರ ; ದಂಡಿಯುವವನು : ನಾನೂ ದುಡಿಮೆಗಾರನಾಗಬೇಕು (ಬೆಳುವು. ೮).

[ ದುಡಿಮೆ + – ಗಾರ (< – ಕಾಱ) ]

**ದುಡಿಮೆಟ್ಟು** (ಕ್ರಿ). ದಂಡಿಯನ್ನು ಬಾರಿಸು : ಅವನಿಗೆ ಸಾವೂ ಒಂದೇ, ಹುಟ್ಟೂ ಒಂದೇ ; ಹಗಲೂ ಒಂದೇ, ರಾತ್ರಿಯೂ ಒಂದೇ. ದುಡಿಯುವುದು ; ದುಡಿಮೆಟ್ಟುವುದು (ಕೋಟುದು. ೭). [ ದುಡಿ₃ + ಮೆಟ್ಟು₁ ]

**ದುಡಿಸೀರೆ** (ನಾ). ಒಂದು ಬಗೆಯ ಸೀರೆ : ದಡಿಸೀರೆ ದುಡಿಸೀರೆ ಹೊಸ ಸೀರೆಗಳನುಟ್ಟು (ಸಿದ್ಧಕಾ. ೯-೧೨). [ ದುಡಿ ? + ಸೀರೆ₂ ]

**ದುಡಿಸು** (ಕ್ರಿ). ಕೆಲಸ ಮಾಡಿಸು ; ದಂಡಿಯುವಂತೆ ಮಾಡು : ಬಹು ಸಂಖ್ಯೆಯ ಜನರು ಬಡವರಾಗಿ, ಅತ್ಯಂತ ಬಡವರಾಗಿ ಇರಬೇಕಾಗುತ್ತದೆ. ಮತ್ತೂ ಅಲ್ಪಸಂಖ್ಯೆಯ ಜನರು ಅವರಿಂದ ದುಡಿಸಿ ಹಣವಂತರಾಗುವ ಅವಸರವಿರುತ್ತದೆ (ಪ್ರಕಾಶ. ೭೨).

ದುಡಿಸಿಕೊಳ್ಳು = ೧. ತನಗಾಗಿ ಇನ್ನೊಬ್ಬರಿಂದ ಕೆಲಸ ಮಾಡಿಸಿ ಕೊಳ್ಳು. ೨. (ಪದಗಳನ್ನು) ಹೆಚ್ಚು ಅರ್ಥವತ್ತಾಗುವಂತೆ ಬಳಸು : ಅರ್ಧಸತ್ಯಗಳನ್ನು, ವಿಕೃತದೃಷ್ಟಿಕೋಣಗಳನ್ನು, ನಿರುತ್ತರವಾದಿತ್ವವನ್ನೂ 'ಪೋಕ್ರ'ತನವನ್ನು ಅವರು ಚೆನ್ನಾಗಿ ದುಡಿಸಿಕೊಂಡಿದ್ದಾರೆ (ಗಾಳಿಪ. XI, ಮುನ್ನುಡಿ). [ ದುಡಿ₁ + – ಇಸು₃ ]

**ದುಡುಂ** (ನಾ). ಒಂದು ಅನುಕರಣ ಶಬ್ದ: ಹುಡುಗ ದುಡುಮ್ಮೆಂದು ನೀರೊಳಗೆ ಧುಮುಕಿದ (ರೂಾ).

ದುಡುಂ ಪ್ರವೇಶ=ಮುಂದಾಲೋಚನೆಯಿಲ್ಲದೆ ಕೆಲಸದಲ್ಲಿ ಪ್ರವೇಶ ಮಾಡುವುದು ; ವಿಚಾರಮಾಡದೆ ಕೆಲಸವನ್ನು ಕೈಗೊಳ್ಳುವುದು ; ದುಡುಕುತನ : (ಕ).

**ದುಡುಂಬಿಲ್** 'ದುಡುಮ್ಮಿಲ್' ನೋ.

**ದುಡುಕ** (ನಾ). ವಿಚಾರ ಮಾಡದೆ ಮುನ್ನುಗ್ಗುವವನು ; ದುಡುಕುವ ಸ್ವಭಾವದವನು: ಭೀಮನೆಂಬವ ದುಡುಕನೀ ಸುತ್ರಾಮಸುತ ಸೈರಣೆಯ ಮನದವನು (ಕುಮ್ಯಾವ. ೭೩೩. ೪-೬೦). [ ದುಡುಕು₂ + – ಅ₇ ]

**ದುಡುಕಿ** (ನಾ). ೧. ದುಡುಕು ಸ್ವಭಾವದ ವ್ಯಕ್ತಿ : ಶೂರನೂ, ರಾಮ ಭಕ್ತನೂ ಸ್ವಲ್ಪ ದುಡುಕಿಯೂ ಆದ ಲಕ್ಷ್ಮಣನ ಪಾತ್ರವು . . . ಸರ್ವರ ಹೃದಯಕ್ಕೂ ಪ್ರಿಯವಾಗಿದೆ (ಧಾರದ. ೯೦). ೨. ಉದ್ಧಟ ವ್ಯಕ್ತಿ.

[ ದುಡುಕು₂ + – ಇ₃ ]

**ದುಡುಕು₁** (ಕ್ರಿ). ೧. ಮುಂದಾಲೋಚನೆಯಿಲ್ಲದೆ ಕೆಲಸಮಾಡು ; ಆತುರದಿಂದ ವರ್ತಿಸು ; ವಿಚಾರಮಾಡದೆ ಮುನ್ನುಗ್ಗು : ಮುಕ್ತಿಯ ವಂಚಿಸೆ ಮುಕ್ತಿಯ ಹುಡುಕಿದೆ ತತ್ತ್ವವಿಚಾರದ ಗಲಭೆಗೆ ದುಡುಕಿದೆ (ಪಾಂಚಜ. ೫೯-೧೪); ಚಿರಂತನದ ಪಥಿಕ ನಾನು ಹೊರಟೆ ತಿರೆಯ ಹುಡುಕುತ ನೆರಳಿನಂತೆ ಹುರುಳಿನಲ್ಲಿ ಕರಗಿದರೂ ದುಡುಕುತ (ಅರಳು. ೪೪-೨೦) ; ಜೀವನದಲ್ಲಿ ಅವರು ಎಲ್ಲೂ ದುಡುಕಿರಲಿಲ್ಲ (ಮಹಾಕ್ಷಾ. ೨೦); ದುಡುಕಿದರೆ ಆಕೆಯು ಆತ್ಮಹತ್ಯವನ್ನಾದರೂ ಮಾಡಿಕೊಳ್ಳಬಹುದು (ರಾವಿಜ. ೪೦). ೨. "ಹುಂಬತನ ಮಾಡು" (ಜಾನಕೋ. ೭). ೩. ಉದ್ಧಟತನದಿಂದ ವರ್ತಿಸು ; ದುಷ್ಟತನದಿಂದ ವರ್ತಿಸು : (ಕ). 'ತಂಡುಂಕು₁' ಪರಾ.

[ ದೇ. ೩ ತುಳು. ತೆಲು. ದುಡುಕು ]

**ದುಡುಕು₂** (ನಾ). ೧. ಆಲೋಚನೆ ಮಾಡದೆ ಮುನ್ನುಗ್ಗುವುದು : ಈ ಪರಿಯೊಳ್ ದುಡುಕಿನಿಂ ಪೋದೊಡೆ ಅವಶ್ಯಮಾಗಿ ಪಶ್ಚಾತ್ತಾಪಮಪ್ಪುದು (ಮಿತ್ರಗೋ. ೮೫) ; ತುಂಗಳಮಾಸ್ತರರ ದುಡುಕಿಗೆ ನಾವೊಂದು ಪಾಠ ಕಲಿಸಿದಂತಾಗುವುದು (ರಂಗತೋ. ೨೫) ; ತಿಮ್ಮಾವಧಾನಿ, ಇದೇನೀ ದುಡುಕು ? (ತುಂಗಭ. ೧೮) ; ಮಡಕೆ ಮಾರುವವನಿಗೆ ದುಡುಕಿನ ಗವುಜಿ ಯಾಕೆ? (ಗಾದೆ). ೨. ಆತುರ ; ಅವಸರ : ಬಾಲಗೆ ದೊರಕಿತು ಪುಣ್ಯೋದಯದಿ ಸಾಲಿಗ್ರಾಮಶಿಲೆಯು ಕೈಯ ದುಡುಕಿಲಿ ತೆಕ್ಕೊಂಡನು ಹರುಷದಿ ಲಕ್ಷ್ಮೀನಾರಾಯಣ ಮೂರುತಿಯ (ಚಂದ್ರಹಾ. ೧-೩೩) ; ಖಡಕೀಲೆ ಉಡಿಯಕ್ಕಿ ಹಾಕಿದರಮ್ಮಾ ಒಳ್ಳೆ ದುಡುಕಿಲೆ ಮುಂದಕೆ ನೂಕಿದರಮ್ಮಾ (ಕರೀಪ. ೨೦-೫) : ದುಡುಕು ಇದ್ದವಗೆ ಬಡಿತ ತಪ್ಪದು (ಗಾದೆ). ೩. ಉದ್ಧಟತನ : ಗುಡ್ಡ ಬೆರಳೊಳಿತ್ತಿ ದೊಡ್ಡಿಗೋವ್ಗಳ ಕಾಯ್ದು . . . ದುಡುಕು ಮಾಡಿ ಹಾಲುಮಡಕೆಗಳ ಒಡೆದು ಹಡಗನೇಱ ಬಂದು ಉಡುಪಿಲಿ ಇದ್ದನೆ (ಪುರಂದ. ೨-೩೨-೪).

ದುಡುಕಿನಾಳ್= ದುಡುಕುವ ಸ್ವಭಾವದವನು; ವಿಚಾರ ಮಾಡದೆ ಕೆಲಸಕ್ಕೆ ಕೈಹಾಕುವವನು : ಈಗಡಿನ ಕೇಡುಗಳ ಕುಱುತಾರಯಲ್, ದುಡುಕಿನಾಳ್, ನೀನ್, ತಕ್ಕ ಕಾಲದಲೆ ತಟ್ಟಿ ನಡೆದುಕೊಳ್ (ಬದ್ರಶ್ರ. ೫೩-೧೦೫೫). [ <ದುಡುಕು₁ ]

**ದುಡುಕುತನ** (ನಾ). ಆಲೋಚನೆ ಮಾಡದೆ ಮುನ್ನುಗ್ಗುವುದು : ನಿನ್ನ ಪವಿತ್ರಪ್ರಾಣವನ್ನು ಅಗ್ನಿದೇವನಿಗೆ ದುಡುಕುತನದಿಂದ ಆರ್ಪಿಸದಿರು (ಹಿಂಕಿರು. ೭೩).

ದುಂದುಡುಕುತನ (ದ್ವಿರುಕ್ತಿ) : ಲಕ್ಷ್ಮಿ ಅಂತಹವಳಲ್ಲ. ಆಕೆಗೆ ದುಂದುಡುಕುತನವು ಇಲ್ಲ. ಆಕೆಯ ಸ್ವಭಾವವತಿಶಾಂತವು(ಲಕ್ಷ್ಮೀಪ್ರ. ೪೮).

[ ದುಡುಕು₂ + – ತನ ]

**ದುಡುಕುದೋರು** (ಕ್ರಿ). ಅವಸರ ಪಡು ; ಆತುರಪಡು : ನಡತೆ ನುಡಿತೆಗಳಿಂದ ಓರಿದಹ ದುಡುಕುದೋರಲು ಪುತ್ರಮೋಹವು ಪಡೆದರಿಗೆ ಪರ್ಯಾಯುವೆಸವುದೆ (ಗಗಕಾ. ೧೦-೭).
[ ದುಡುಕು$_2$ + ತೋರು (<ತೋಱು) ]

**ದುಡುಕುಪ್ರವೃತ್ತಿ** (ನಾ). ದುಡುಕಿನಿಂದ ನಡೆದುಕೊಳ್ಳುವಿಕೆ ; ದುಡುಕು ಪ್ರವೃತ್ತಿ ಅವರಲ್ಲಿ ಇರಲಿಲ್ಲ (ಮುಹಾಕಾ. ೧೩).
[ ದುಡುಕು$_2$ + ಪ್ರವೃತ್ತಿ ]

**ದುಡುಕುಬುದ್ಧಿ** (ನಾ). ತಕ್ಕಷ್ಟು ಆಲೋಚನೆ ಮಾಡದೆ ಮುನ್ನುಗ್ಗುವ ಸ್ವಭಾವ : (ಊ). [ ದುಡುಕು$_2$ + ಬುದ್ಧಿ ]

**ದುಡುಕುಹೆಮ್ಮೆ** (ನಾ). ದುಡುಕುತನದಿಂದ ಉಂಟಾದ ಗರ್ವ: ದೊರೆಗಳ ದೊರ ಚಕ್ರಿಯೆನಿಸಿ ದನ್ನುವೃಷನು ಮೆರೆದನು : ಈಗಳದನು ದುಡುಕು ಹೆಮ್ಮೆದೂಳ್ಕೊದೆದುದೊ ಅರಿಯನು (ಹಾರಸಿ. ೯-೧೪೭).
[ ದುಡುಕು$_2$ + ಹೆಮ್ಮೆ (<ಪೇರ್ಮೆ) ]

**ದುಡುಕೆಸಗು** (ಕ್ರಿ). ಆಲೋಚಿಸದೆ ಕಾರ್ಯಮಾಡು ; ಅವಸರಪಡು : ಬೆರೆವೆಣ್ಗಳ ಪೆರ್ಗಡೆ ನೀಂ ಕಲೆಯಱಿತುರವಣಿಸಿ ಬರುದು ಬೊಜಗರ ಬಿಂಕಂ ತೊಲಗೆ ದುಡುಕೆಸಗಿ ಕೆಕ್ಕಲಗೆಲೆವಂದಪನಿಂದು ಸವಿಯಲಂ ದೇಟ್ರೀದಂ (ಚಿಕವಿ. ೬-೨೬೬). [ ದುಡುಕು$_2$ + ಎಸಗು$_1$ ]

**ದುಡುಗುಟ್ಟು** (ಕ್ರಿ). ಬಡಿದುಕೊಳ್ಳು ; ನಡುಗು ; ಸ್ಪಂದಿಸು : ಒಡನೆ ಕೈಮುಗಿದು ಪೆಣ್ಣುಗಳೆಲ್ಲ ಪೋದರು ದುಡುಗುಟ್ಟುವೆದೆಯ ಬಲ್ಪಿಡಿದು (ಭರತ. ೪೮-೦೦೪). 'ದಡಗುಟ್ಟು$_1$' ಪರಾ.
[ <ದುಡುದುಡು + ಕುಟ್ಟು$_1$ ]

**ದುಡುದುಡನೆ,** ದುಡದುಡನೆ (ಅ). ದುಡುದುಡು ಎಂಬ ಶಬ್ದದೊಡನೆ: ದುಡುದುಡನೋಡಿ ಬರುತಿರ್ಪ ಬೇಡನಾಕಾರವಂ ನೋಡಿದಂ ರೂಢೀಶನು (ಹಕಶಾ. ೬-೦೮) ; ದುಡುದುಡನೆಯ್ಯೆಂದು [ಪಾಠಾಂ. ದಡದಡನೆಯ್ಯೆಂದು] ದುಂಡಿಯರಾ ಚೆಲ್ವರೊಡೆಯನ ಚೆಲ್ವ ನೋಡಿದರು (ಭರತ. ೨೧-೭೪).
**ದುಡದುಡನೆ** : ಮಡದಿಯು ತಾನೆತ್ತಿಕೊಂಡು ದುಡದುಡನಡಿಯಿಟ್ಟು ಶಕುನಿ ಮಂಚದ ಮೇಲೆ ಮಡಗಿಕೊಂಡನು ರಾಜಮೋಹಿ (ಭರತ. ೭೨-೦೫೦). 'ದಡದಡನೆ' ಪರಾ. [ ದುಡುದುಡು + – ಅನೆ$_1$ ]

**ದುಡುದುಡಿಕೆ** (ನಾ). ಬಳಲಿಕೆ ; ಆಯಾಸ : ತಾಯ್ ನೊಂದು ಬಳಲುತ್ತ ತಾಯ ದೇಹಕ್ಕಲ್ಲಿ ದುಡುದುಡಿ[ಪಾಠಾಂ. ಡು]ಕೆಯಾಗುತಿರೆ ದಾಯಿಳಿವುತೆ ನ್ನಸುಗೆ ಸಂದೇಹವಾಗುತಿರೆ ಇಂತು ನಾನಾ ವಿಧದ ಕಂಟಕಮುವಂ ಕಳೆದು (ಬಿಂಡೋರ. ಹ. ೫೦೧-೧೭). [ ? ]

**ದುಡುದುಡು** (ನಾ). ಒಂದು ಅನುಕರಣ ಶಬ್ದ : ಓಡಿಹಿಡಿಹಿಡಿಯೆಂದು ಪುರಂದರವಿಠಲನ ದುಡುದುಡು ದುಡುದುಡನೇ ಓಡುತ . . . ಮೆಲ್ಲನೆ ಓಡಿಯಲು ಬಿಡಿ ಬಿಡಿ ಬಿಡಿ ದಮ್ಮಯ್ಯ ಎನ್ನುತ (ಪುರಂದ. ೨-೬೨-೩) ; ಬಸ್ಸಿನ ಬುಡದಿಂದೆದ್ದು ಬಂದು ಸಿದ್ದಣ್ಣ ದುಡುದುಡು ಹೊರಟ (ಬಂಗಲ. ೧೦೪).

**ದುಡುಮ,** ದುಂಬ (ನಾ). ೧. ದಷ್ಟಪುಷ್ಟವಾಗಿರುವವನು ; ದಾಂಡಿಗ : ಈ ದುಡುಮ ಕೆಲಸಮಾಡುವುದರಲ್ಲಿ ತುಂಬಾ ಮೈಗಳ್ಳ (ರೂಢಿ). ದುಬ್ಬ: ೧ : (ಊ). ೨. ಮಂಕ ; ಮೂಢ : ಆ ದುಬ್ಬನಿಗಿಲ್ಲಿ ಕಂಡೀತು ಬಿಡ್ರೋ (ಬೆಳುಮ. ೮). 'ದುಮ್ಮ' ಪರಾ.
[ ದುಡುಮು$_2$ (<ದುಮ್ಮು$_1$) + – ಅ$_2$ ]

**ದುಡುಮಿ,** ದಡಮಿ, ದುಬ್ಬಿ$_1$ (ನಾ). ೧. ದಷ್ಟಪುಷ್ಟವಾಗಿರುವವಳು ; ದಢೂತಿ ಹೆಂಗಸು : ದುಡುಮಿಯಾದ ಅವಳ ನಡಿಗೆಯೂ ನಿಧಾನ (ರೂಢಿ). ೨. (?) : ಒಡೆಯ ಕೈಲಾಸಪುರಕ ಕೈವಲ್ಯವಾದಂತ ದುಡುಮಿ ಕಲ್ಯಾಣಿ ಬಾರ ಒರಳಕ್ಕಿ ಪಾಡುನು (ಲೋಕಗೀ. ೨೧). **ದಡಮಿ:** ೧. ಏಳು ವರ್ಷದ ಅವಳ ಮಗಳು . . . ಕೆಂಗೂದಲ ದಡಮಿಯು ಸೆರಗು ಹಿಡಿದುಕೊಂಡು ನಿಂತಿದ್ದಳು (ಪುನರು. ೧೪೩). **ದುಬ್ಬಿ$_1$** : (ಊ). [ ದುಡುಮ + – ಇ$_2$ ]

**ದುಡುಮು$_1$** (ಕ್ರಿ). ಸಶಬ್ದವಾಗಿ ಬೀಳು ; ರಭಸದಿಂದ ಧುಮುಕು : ಮೇಲಕೆ ಪುಟನೆಗೆವ ದುಡುಮ್ಮಿಗಾವೊಲೊಯ್ವ ಅಗುಳ್ದ ತೇಲುವ ನೀರಾಟ ವೆಸೆದರಾ ಬಗಸೆಗಂಗಳ ಭಾವೆಯರು (ಶ್ರೀಪಾಲ. ೩-೫೩) ; ಬೀಳು ವೇಳುವ ಕೈದುಗಳನೀಡಾಡುವ ತೇಲುವ ಸುಳಿಯೊಳು ಸುಳಿವ ಆಳುವ ದುಡುಮುವ ಯಾಸುವ ಭಟರ ಹೇರಾಳದಿ ನದಿ ಹೂಳಿದುದು (ನಾಗಳು. ೧೫-೭೦). 'ದುಡುಮ್ಮಿಱು' ಪರಾ. [ <ದುಡುಂ ]

**ದುಡುಮು$_2$** 'ದುಮ್ಮು$_1$' ನೋ.

**ದುಡುಮ್ಮನೆ** (ಅ). ೧. ದುಡುಂ ಎಂಬ ಶಬ್ದದೊಡನೆ : ಅವಳು ದುಡುಮ್ಮನೆ ನೀರಿಗೆ ಬಿದ್ದುಬಿಟ್ಟಳು (ರೂಢಿ). ೨. ಇದ್ದಕ್ಕಿದ್ದಂತೆ ; ಕೂಡಲೆ ; ತಕ್ಷಣ : ಎದುರಾಳಿಗಳನ್ನು ವಿರೋಧಿಸಿ ದುಡುಮ್ಮನೆ ಪರಾಜಯಗೊಳಿಸುವ ಒಂದು ನೂತನ ಚಾಕಚಕ್ಯವಿದ್ದೆ ಅವರಲ್ಲಿ (ರಾಜವ.೮೧).
[ ದುಡುಂ + – ಅನೆ$_1$ ]

**ದುಡುಮ್ಮಿಱು,** ದುಡುಂಬಿಱು (ಕ್ರಿ). (ನೀರಿನಲ್ಲಿ) ಧುಮುಕಿ ಅಥವಾ ಕೈಯಿಂದ ಹೊಡೆದು ಶಬ್ದಮಾಡು : ಒಳಪೊಕ್ಕು ದುಡುಮ್ಮಿಱಿದಾಡ ಲೀಸಲಗ್ಗಲಿಸಿದಲಂಪಿನಿಂ ಬಗೆದುದಂದು ಜನಂ ಘನಚಂದ್ರಿಕಾಂಬುವಂ (ಅಜಿಪು. ೬-೪೫) ; ಹಂಸೆಗಳ ಕ್ರೇಂಕಾರವೇ ಕಹಳೆಗಳ್ಕೆಯ್ವೆರ್ವ ನೀರೊಳ್ದುಡುಮ್ಮಿಱುವ ಮಾನ್ಗಳ ರವಂ ತಂಬಟಂ (ಚೀರಸು. ೭-೨೦) ; ನಲಿದು ದುಡುಮ್ಮಿಱಿವುತ ತೇಂಕಾಡುತ ನಲಿದಾಡುತ (ಚಂಪ್ರಸಾಂ. ೦೭-೨೦೫).
**ದುಡುಂಬಿಱು** : ಅಲ್ಲಿಯೋಲಾಡಿಸಲವನಾನಂದದಿಂದೀಸಿ ದುಡುಂಬಿಱಿದು ಕುಡಿದು ನೋಡಿ (ಪುಣ್ಯಾಸ್ರ. ೯-೫೭ ಱ). [ ದುಡುಂ + ಇಱು$^1$ ]

**ದುಡುಮ್ಮು** (ನಾ). ಒಂದು ಅನುಕರಣ ಶಬ್ದ : ದೊಗಹು ಧೊಕ್ಕು ದುಡುಮ್ಮು . . . ಗರಿಗರಿಲೆಂಬ ನಿಷ್ಠುರರವಂ ಮಿಗೆ ತಳ್ತಿಱಿದತ್ತು ಯುದ್ಧದೊಳ್ (ಗಿರಿಕ. ೬-೬೮).

**ದುಡುಹು** (ನಾ). ಒಂದು ಅನುಕರಣ ಶಬ್ದ : ದು[ಪಾಠಾಂ. ಧು]ಡುಹೆಂಬ ಧುಮ್ಮೆಂಬ ಘೋರೆಂಬ ಭೋರೆಂಬ ಕೂರಸಿಗಳುರವಣೆಯು ದನಿಯಡಸುತಂ ಪುಟ್ಟೆ (ಅಹರ. ದೀ. ೪೨-೨) ; ಹೊಡದನಾ ಕೊಡಲಿಯಿಂ ತಲೆ ಮುಂಡ ಮರಡಲ್ಲಿ ದುಡುಹು ದುಮ್ಮೆಂದು ಬಿದ್ದವು (ವೀಕ್ಕೃಪು. ೩-೧೨-೩೮).

**ದುಡ್ಡಸ್ತ** (ನಾ). ಹಣವುಳ್ಳವನು ; ಐಶ್ವರ್ಯವಂತ : ಅವನೊಬ್ಬ ಭಾರಿ ದುಡ್ಡಸ್ತ (ರೂಢಿ). [ ದುಡ್ಡು$_1$ + – ಸ್ತ ]

**ದುಡ್ಡಸ್ಥ** (ನಾ). = ದುಡ್ಡಸ್ತ: ದುಡ್ಡಸ್ಥರಿಗೇ ಈಗಿನ ಕಾಲದಲ್ಲಿ ಮರ್ಯಾದೆ (ರೂಢಿ). [ ದುಡ್ಡು$_1$ + – ಸ್ಥ ]

**ದುಡ್ಡು$_1$** (ನಾ). ೧. ಒಂದು ತಾಮ್ರದ ನಾಣ್ಯ: ಇಪ್ಪತ್ತು ದುಡ್ಡಿಗೆ ಸೇರು ತೀರ್ಥವ ಒಪ್ಪದಲಿ ಕ್ರಯಮಾಡಿ ಕೊಡಿಸುವ (ಪುರಂದ. ೦-೧೧೯-೨) ; ಹಿಂದೆ ರಘುರಾಮಂಗೆ ಕಾಡ ಕಪಿಗಳು ಕೂಡಿಯೆಂದು ದುಡ್ಡಾದರಂ ಸಂಬಳವು ಮಿಲ್ಲದೇ ಬಂದು ಸೇರಿದ ತೆರದಿ (ಅರ್ಜಾವಿ. ೨೬-೦೮). ೨. ಮೂರು ಕಾಸು ; ಕಾಲಾಣೆ ; ಒಂದು ಬಿಲ್ಲೆ(ಉಕ) : ಮಧುಮತಿಯ ಕಿಸೆಯಲ್ಲೊಂದು ದುಡ್ಡು ಇತ್ತು (ಹೊಸಿ. ೩) : ಪಂಡಿತರಿಗೆ ನಾಲ್ಕು ದುಡ್ಡು ಕೊಡಲಿಕ್ಕೆ ಇಷ್ಟೇಕೆ ಜೀನತನ?(ಅಕೋಳ. ೪). ೩. ನಾಲ್ಕು ಕಾಸು: ಎಲೇ ಎಡ್ಡ ಪ್ರಾಣಿಗಳಿರಾ ಅಡ್ಡದಾಸೆಗೆ ದುಡ್ಡಿನ ಲಾಭವ ಕಳೆವರೇ (ಅಬಂಡೀ. ೬೩-೦೭) ; ನಾಲ್ಕು ಕಾಸು ಒಂದು ದುಡ್ಡು, ಮೂರು ದುಡ್ಡು ಒಂದ ಆಣೆ, ಹದಿನಾರಾಣೆ ಒಂದು ರೂಪಾಯಿ– ಇದು ಹಿಂದಿನ ಕೋಷ್ಟಕ (ರೂಢಿ). ೪. ಹಣ ; ರೊಕ್ಕ : ದುಡ್ಡು ಕೂಡಿಟ್ಟು ಬಳಿದು ಹೋಗುವಾಗ ಬಳಲಿ, ಬಳಲಿ ಅಳಮಾರಿಗೆ ಬಂದೆ (ಪುರಂದ. ೨-೫೨-೧) ; ಅಳತೆ ತೂಗುವಿಕೆಯಲ್ಲಿ ನೀ ಸತ್ಯವಂತನುಮೆನಿಸಿಕೊಂಡೊಳ್ಳಿಮಾತಿಂದ ಮಾರು ದುಡ್ಡಿಗದಂತೆ

(ಅಪಾರವಿ. ೩೦-೩೩) ; ಬ್ಯಾಂಕಿಗಳಿಗೆ ಎರಡಾಣೆ ದುಡ್ಡೆಣಿಸಿ ಹೊರಟರು (ಮುಂಗಾರು. ೧) ; ಬ್ಯಾಂಕಿನಲ್ಲಿ ದುಡ್ಡಿಟ್ಟವರೆಲ್ಲರೂ ದುಡ್ಡಿದ್ದವರೇ (ಹುಟ್ಟುಹು. ೬೧) : ದುಡ್ಡಿದ್ದವನೇ ದೊಡ್ಡಪ್ಪ (ಗಾದೆ). ೫. ಒಂದು ದುಡ್ಡಿನ ತೂಕ : ಅನ್ನಶುದ್ಧಿಗೆ ತುಪ್ಪ ದಿ ೧ಕ್ಕೆ ದುಡ್ಡು ತೂಕದಲ್ಲು ಸೇ ೧ಸಿಕ್ಕೆ ಕ್ರಿಯ (ಎಕ. VI, ಶೃಂಗೇರಿ. ೧೧-ಪುಟ ೩೭೨ ; 1652).

ದುಡ್ಡಿನ ಚೀಲ = ಹಣದ ಚೀಲ ; ಥೈಲಿ ; ಹಮ್ಮಿಣಿ : ತಿಂಗಳ ಕೊನೆಯಾದ್ದರಿಂದ ದುಡ್ಡಿನ ಚೀಲ ಖಾಲಿಯಾಗಿಬಿಟ್ಟಿದೆ (ರೂಢಿ). ದುಡ್ಡಿನ ಡಬ್ಬಿ = ಹಣವಿಡುವ ಡಬ್ಬಿ: ಅಜ್ಜಿಯ ದುಡ್ಡಿನ ಡಬ್ಬಿಯಲ್ಲಿ ಬರೀ ಚಿಲ್ಲರೆ ಕಾಸೇ ತುಂಬಿದೆ (ರೂಢಿ). ದುಡ್ಡುಕಾಸು = ಹಣ; ಧನ : ದುಡ್ಡು ಕಾಸನು ಕೂಡಿಹಾಕಲು ಹೋಗಿ ಹಡಗ ಸೇರಿಕೊಂಡ (ಇಂಗೀತ. ೩೨-೭). ದುಡ್ಡುತಿನ್ನು = ಇನ್ನೊಬ್ಬರ ಹಣವನ್ನು ನೀತಿಗೆ ವಿರುದ್ಧವಾಗಿ ಬಳಸಿಕೊಳ್ಳು,-ದುರುಪಯೋಗ ಪಡಿಸಿಕೊಳ್ಳು,- ಅಪಹರಿಸು : ಹುಲ್ಲು ತರುವಾಗ ಆಳುವಮನುಷ್ಯ ದುಡ್ಡುತಿನ್ನುತ್ತಿದ್ದ. ಹೀಗಾಗಿ ಆ ಕೆಲಸ ನನಗೆ ಒಪ್ಪಿಸಲಾಯಿತು (ಸ್ಮೃತಿಶಿ. ೯೦). ದುಡ್ಡುದುಗ್ಗಾಣಿ = ದುಡ್ಡುಕಾಸು : ಅವನು ಬಹಳ ಕಷ್ಟಪಟ್ಟು ಒಂದಿಷ್ಟು ದುಡ್ಡುದುಗ್ಗಾಣಿ ಸೇರಿಸಿಟ್ಟಿದ್ದಾನೆ (ರೂಢಿ). ದುಡ್ಡು ನುಂಗು = ದುಡ್ಡುತಿನ್ನು : ಬೇರೊಬ್ಬರ ದುಡ್ಡು ನುಂಗುವಂತಹ ಹೀನಕಾರ್ಯ ಮಾತ್ರೊಂದಿಲ್ಲ (ರೂಢಿ). ದುಡ್ಡು ಹೊಡೆ = ದುಡ್ಡುತಿನ್ನು: ಈ ವ್ಯವಹಾರದಲ್ಲಿ ದಳ್ಳಾಳಿ ಸಾಕಷ್ಟು ದುಡ್ಡು ಹೊಡೆದಿದ್ದಾನೆ (ರೂಢಿ).

[ ದೇ.॥ ತಮಿ. ಮಲ. ತುಟ್ಟು; ತುಳು. ತೆಲು. ದುಡ್ಡು; ಕೊಡ. ದುಡ್ಡಿ ]

**ದುಡ್ಡು₂** 'ದೊಡ್ಡು' ನೋ.

**ದುಧುಂ** (ನಾ). ಒಂದು ಅನುಕರಣ ಶಬ್ದ. 'ದಂಧುಮ್ಮಿಳಿ' ಪರಾ.

**ದುಧುಂದಾಳಿ** (ನಾ). ಇದ್ದಕ್ಕಿದ್ದಂತೆ ಮಾಡುವ ಆಕ್ರಮಣ,-ಮುತ್ತಿಗೆ: ಶ್ರೀಮನ್ನ ನಂಜರಾಜಯ್ಯನ ದುಧುಂದಾಳಿಯ ಕೊಳ್ಳಿಯಲ್ಲಿ ನಿರ್ಮೂಲವಾಗಿ ಹೋಗುವರು (ಮಂತ್ರಶ. ೪೭-೬). [ ದುಧುಂ+ದಾಳಿ(<ದಾಟಿ)]

**ದುಧುಂಬಿಳಿ** 'ದುಂಧುಮ್ಮಿಳಿ' ನೋ.

**ದುಧುಮಿಳಿ** 'ದಂಧುಮ್ಮಿಳಿ' ನೋ.

**ದುಧುಮ್ಮನೆ** (ಅ). ದುಂಧುಂ ಎಂಬ ಶಬ್ದದೊಡನೆ: ಅನುಕರಣಕ್ಕೆ-ಖಣಿಲ್ಲನೆ . . . ದುಧುಮ್ಮನೆ[ಪಾಠಾಂ. ದುಧುಮ್ಮೆನೆ, ಧಟಮ್ಮನೆ] (ಶಮದ. ೧೯ ಪ್ರಯೋ) ; ಅನುಕರಣಾವ್ಯಯಗಳು – ಗಟಗಟ . . . ಖಟಿಲನೆ, ದುಧುಮ್ಮನೆ, ಇತ್ಯಾದಿ (ಕೃಪಿಡಿ. ೩೨). [ ದುಧುಂ + – ೯ ನೆ₁ ]

**ದುಧುಮ್ಮಿಳಿ, ದಂಧುಂಬಿಳಿ, ದುಧುಮಿಳಿ** (ಕ್ರಿ) = ದುಡುಮ್ಮಿಳಿ : ಅಂತು ತನ್ನೊರೆಗಳ್ಪರಸು ದುಧುಮ್ಮಿಳಿದೋಲಾಡುವಲ್ಲಿ (ಶಾಂತಿಪು.೮-೨೮ವ). ದುಧುಂಬಿಳಿ: ವಿಕಲ್ಪಬಿಂದುಗೆ-ಕದಂಪು, ಕದಪು . . . ದುಧುಂಬಿಳಿದಂ. ದುಧುಮಿಳಿದಂ (ಶಮದ. ೩೬ ಪ್ರಯೋ). ದುಧುಮಿಳಿ : ಮೇಲಿನ ಶವಂದ. ಪ್ರಯೋಗವನ್ನು ನೋಡಿ. [ದುಧುಂ + ಇಳಿ₁ ]

**ದುಣಕಲು** (ನಾ). (ಉಕ). ಕೊಟ್ಟಿಗೆಯಲ್ಲಿ ದನಗಳಿಗೆ ಹುಲ್ಲು ಹಾಕುವ ಜಾಗ : ಗೋಂತಂ. [ ? ]

**ದುಣ್ಣ** (ನಾ). ೧. ದಪ್ಪವಾಗಿರುವುದು ; ದಪ್ಪಪುಷ್ಟವಾಗಿರುವುದು. ೨. ದಪ್ಪವಾಗಿರುವವನು : "ಮಾವತಿ = ದಪ್ಪವಾದವಂ ; ಮಾವಃ = ದುಣ್ಣಂ" (ಕಾಶಕ್ಕ. ೩೨). (ಗು). ೩. ಸ್ಥೂಲವಾದ ; ದಪ್ಪವಾದ : ಅದಕ್ಕೇನು ಧಾಡಿ ? ದಿಂಡೆ ದುಣ್ಣ ದಾಂಡಿಗ ನಾಯಿ (ಮಕಮ. ೬೨೫).

[ ದೇ.॥ ತುಳು. ದುಣ್ಣ, ದುನ್ನ ]

**ದುಣ್ಣರ** (ನಾ). ೧. ಕೆಟ್ಟವನು. ೨. ಯಮ : ದುಣ್ಣರನು ಬಂದೆನ್ನ ಸುಣ್ಣ ಗುದಿಯೊಳಗದ್ದಿ ಬಿಣ್ಣತ್ತುಮಪೆಟ್ಟಗಳ ಪೊಣಿಸಿದವನು (ಪ್ರಭುಪು. ೩-೧೦೦).

[ <ಸಂ. ದುರ್ನರ ]

**ದುತಯ, ದೂತಯ** (ನಾ). ಎರಡರ ಜೊತೆ,—ಜೋಡಿ : ದೂತಯಂ, ದುತಯಂ, ದ್ವಿತಯಂ (ಶಬ್ದಾನು. ೩೭೭ ಪ್ರಯೋ). ದೂತಯ : ಮೇಲಿನ ಪ್ರಯೋಗವನ್ನು ನೋಡಿ. [ <ಸಂ. ದ್ವಿತಯ ]

**ದುತಾರ್** (ನಾ). ಎರಡು ತಂತಿಗಳುಳ್ಳ ಒಂದು ಬಗೆಯ ವಾದ್ಯ: ಆ ತಂಬೂರಿಯ ಝುಂಕಾರಕ್ಕೆ ಅನುವಾದಿಯಾಗಿ ಒಂದು ದುತಾರ್ ಬಾಜಿಸುತ್ತಿತ್ತು (ನಗಹೂ. ೬೩). [ ←ಹಿಂ. ದುತಾರಾ ]

**ದುತೀಯ, ದೂತೀಯ**(ನಾ). ಎರಡನೆಯದು; ದ್ವಿತೀಯ: ದೂತೀಯಂ, ದುತೀಯಂ, ದ್ವಿತೀಯಂ (ಶಬ್ದಾನು. ೩೭೭ ಪ್ರಯೋ). ದೂತೀಯ : ಮೇಲಿನ ಪ್ರಯೋಗವನ್ನು ನೋಡಿ. [ <ಸಂ. ದ್ವಿತೀಯ ]

**ದುತೂಂಬುರ್** (ನಾ). ಒಂದು ಊರಿನ ಹೆಸರು : ಅಸ್ಯ ಗ್ರಾಮಸ್ಯ ಪೂರ್ವ್ವದಿಕ್ಷೇಮಾನಿ ದುತೂಂಬುರ್ಪ್ಪಳ್ಳಂ ದಕ್ಷಿಣತಃ ಪರದಗೆಜ್ಜಪಳ್ಳಂ ಪಶ್ಚಿಮತಮ್ಮಮುನ್ನೆಗುಂಡಿಪಳ್ಳಂ (ಮ್ಯಾಆರಿ. ೧೯೪೪, ೧೫-೪೦ ; ಸು. 726).

[ ? ]

**ದುತ್ತಂಡಿಕೆ** (ನಾ). ದೌರ್ಜನ್ಯ : ದುತ್ತಂಡಿಕೆಯೊಳು ತನಗಿದಿರಾದ ಮನ್ನೆಯರ ತೊತ್ತಳಂದುಳಿದು ನಿರ್ವಂಶಮಂ ಮಾಡುವೆನೆನುತ್ತ ಕೋಪಾರೂಢನಾಗಿ (ಸಮ್ಯಕ್ತ್ವ. ೨-೯). 'ಉದ್ದಂಡಿಕೆ' ಪರಾ.

[ ದುತ್ತಂಡ₁ (P ←ಪ್ರಾ. ದುತ್ತುಂಡ) + – ಇಕೆ ]

**ದುತ್ತಾರಿ** (ನಾ). ೧. ಕಸೂತಿ ಕೆಲಸ ಮಾಡಿದ ಮಸ್ಲಿನ್ ಬಟ್ಟೆ : (ಶ). ೨. ತೆಳ್ಳನೆಯ ಹತ್ತಿಬಟ್ಟೆಯಿಂದ ಮಾಡಿದ ಒಂದು ಬಗೆಯ ಉಡುಪು : ಕುಪ್ಪಸ ಚಲ್ಲಣಾವೊಪ್ಪುವ ಪೈಠಣಿ ಸುಪ್ಪುತ್ತಿಗೆ ದುತ್ತಾರಿ[ಪಾಠಾಂ. ಗಾಸಿ]ಗಳನು . . . ಹೊಲಿವುತ ಚಿಪ್ಪಿಗರಿರ್ದರೊಂದೆಸೆಯ (ಅಬ್ಬಂಉ. ೩-೯೦). [ ದೇ.॥ ತಮಿ. ತುತ್ತಾರಿ ]

**ದುತ್ತೂರ** 'ದುತ್ತೂರ' ನೋ.

**ದುತ್ತೂರ, ದುತ್ತುರ, ಧುತ್ತೂರ** (ನಾ). ಮದ್ದುಗುಣಿಕೆ ; ಉಮ್ಮತ್ತಿ : "ದುತ್ತೂರಂ ಕಾಂಚನಮುನ್ಮತ್ತಂ" (ವಸ್ತುಕೋ. ೩೯-೩೭) ; ದುತ್ತೂರರಸಂ ಲವಣಮೆಂಬಿವಂ ನೆಲದಾಟಿಳ್ ಬೆರಸಿ ಪೂಸುಗೆ (ಗೋಕೋಶ. ೯-೦೦೦); ದು[ಪಾಠಾಂ. ದ]ತ್ತೂರ ಬಿತ್ತಿನಲ್ಲಿ ಕಲ್ಪತರು ಹುಟ್ಟಿ ಕಲ್ಪತರುವಿನ ಅಗ್ರದಲ್ಲಿ ಇಟ್ಟಿಯ ಹಣ್ಣಾಯಿತ್ತು (ಅಕ್ಕಮಹಾ. ೧೫೬-೩೯೯) ; ದುತ್ತೂರದ ಹೂವಿನಂತೆಸವ ಹೆಗ್ಗಾಳೆಯು ಮೊಗವಿನಂತೆಯಾವಗಂ ಸರ್ವಮುಮನೊಳಕೊಂಡು ಶುಭ್ರವರ್ಣವಿರಳ ತನ್ನ ತಾನೇ ವಿವೇಕಿಸಿ ನೋಡಿ (ವೀಶೈಪು. ೮-೨೦-೧೩). ದುತ್ತುರ: ದುತ್ತುರವ ಸವಿದುದೋ ತಲೆ ಪಿತ್ತಂ ಹಿಡಿದುದೋ ಮನಕ್ಕೆ ಹಲವು ದೆಸೆಯುಂ ಸುತ್ತುತಿದೆ (ಕಂಕಕಂ. ೦೦). ಧುತ್ತೂರ : ಕನಕಾಭಿಧಾನ ಸಾಮ್ಯದೆ ಜನಿಯಿಪುದುನ್ಮತ್ತವೃತ್ತಿಯಂ ಧುತ್ತೂರಂ ಕನಕಮೆತಾಂ ತತ್ಕ್ಷಣದೊಳ್ ಜನಿಯಿಪುದಚ್ಚರಿಯೆ ಜನದ ಮನದೊಳ್ ಮದಮಂ (ಚಂದ್ರಪು. ೧೦-೧೨೧). 'ದತ್ತೂರ' ಪರಾ.

[ <ಸಂ. ಧುಸ್ತೂರ, ಧುಸ್ತುರ ]

**ದುದುಗೆಟೆ** (ನಾ). ಒಂದು ಊರಿನ ಹೆಸರು : ನೊಟಮ್ಮನೊಳ್ ಕಾದಿ ರಾಚೆಯಗಜ್ಜ ಸತ್ತೊಡೆ ಪೆರ್ಮ್ಮಡಿಯು ಎಟಿಯಪ್ಪನು ಬಿಟ್ಟು ಇಗ್ಗಲಿನುಂ ದುದುಗೆಟೆಯುಮಂ ಕಲ್ನಾಡುವದದ ಸ್ಥಿತಿ ಯಾವುದನ್ನೊಡೆ (ಎಕ. III, ನಂಜನ. ೧೩೯-೩ ; ಸು. 10 ನೆಯ ಶತ). [ ? + ಕೆಟೆ³ ]

**ದುದ್ದಿಕೆ** (ನಾ). ಒಂದು ಬಗೆಯ ಸಸ್ಯ : ಉಪ್ಪಿನ ರಸಗಾಯಿ ದುದ್ದಿಕೆ ಸೋರೆಯ ಕಾಯಿ . . . ಮೊದಲಾಗಿ ಆಗಮದೊಳು ನಿಷಿದ್ಧಮಪ್ಪಲ್ಲಾ ಕಂದಮೂಲ ಕರೀರ ಶಾಖಾಶಾಕಪುಷ್ಪಫಲಾದಿಗಳಂ ಕೊಳ್ಳದುದು (ಪಚಾರ. ೩೧೭) ; ಬೆಣ್ಣೆ ಕಳವಿಗೆ ಕಾಯಿ ಕರಜಗೆಯು ಹಣ್ಣು ದುದ್ದಿಕೆಯ ಕಾಯಿಗಳು (ದ್ವಾದಶಾ. ೦೩೫-೨೫೯). 'ದುಗ್ಧಿಕ' ಪರಾ.

[ < ದುಗ್ಧಿಕೆ ]

**ದುದ್ದು$_1$, ದಂದ್ದೆ** (ನಾ). ಸೌತೇಕಾಯಿ, ಕುಂಬಳಕಾಯಿ ಮೊದಲಾದವುಗಳ ಒಳಗಿರುವ (ಬೀಜವುಳ್ಳ) ಮೆದುವಾದ ಭಾಗ,- ತಿರುಳು : ಕುಂಬಳಕಾಯ . . . ಬೀಜವಂ ಮತ್ತದಱ ದುದ್ದುವಂ ಚೆನ್ನಾಗಿ ತೆಗೆದು ಹಾಕಿ . . . ಕರಿಬೇವುವಂ ಹಾಕಿ ಮುಗುಳ್ಚದನಾಗು ವಂತಡುವುದು (ಸೂಶಾ. ೫-೧೮) ; ಬೂದಿಗುಂಬಳದಕಾಯ ನಡುವೆ ಕತ್ತರಿಸಿ ಒಳಗಣ ಬಿತ್ತು, ದುದ್ದುಗಳ ತೆಗೆದು ಹಾಕಿ ಬೆಲ್ಲವ ಪುಡಿಮಾಡಿ . . . . . . ಕೊಡಲು ಹುಚ್ಚುಪಿತ್ತ, ಹುಚ್ಚು ದಾಹ ಸದ್ಯಃ ಶಮನವಹುದು (ವೈದ್ಯಸಾ. I. ೬೬) ; ಕುಂಬಳದ ಹಣ್ಣಿನ ತೊಕ್ಕು ಒಳಗಣ ದುದ್ದು ಬಿತ್ತುಗಳ ಸಹ ತೆಗೆದು . . . ಹುರಿದು ಚೂರ್ಣವ ಮಾಡಿ(ಸಕವೈ. ೨೨೫). **ದುದ್ದೆ :** ನಿಂಬೆಹಣ್ಣಿನ ಬೀಜ ದುದ್ದೆ ಸಹ ತೆಗೆದು ಶುಂಠಿ, ಹಿಪ್ಪಲಿ ಸಹ ಇವನ್ನೆಲ್ಲ ಅರೆದು . . . ತೆಗೆದುಕೊಳ್ಳಲು ವಿರೇಕವಹುದು (ಸಕವೈ. ೩೦೩). [ ದೇ.॥ ತಮಿ. ತುತಿಯ, ತುತ್ತುರು = ತಾವರೆಯ ಬೀಜಕೋಶ; ತೆಲು. ದುದ್ದು = ತಾವರೆಯ ಬೀಜಕೋಶ ]

**ದುದ್ದು$_2$** 'ದದ್ದು$_2$' ನೋ.

**ದುದ್ದೆ** 'ದುದ್ದು$_1$' ನೋ.

**ದುದ್ದೀಗ್ರಾಮ** (ನಾ). ಒಂದು ಹಳ್ಳಿಯ ಹೆಸರು. P ಈಗಿನ ಕೊಲ್ಹಾಪುರದ ಬಳಿಯ ದೂದಗಾವ : ಪೂರ್ವತಃ ದುದ್ದೀಗ್ರಾಮೋನಾಮ ಗ್ರಾಮಃ (ಇಅ. XVI, ೨೪-೬೫ : 1009). [ ದುದ್ದೀ$_0$ + ಗ್ರಾಮ ]

**ದುದ್ರುಮ** (ನಾ). ಹಸಿರು ಈರುಳ್ಳಿ ; "ಉಳ್ಳೀಗಡ್ಡೆ" (ಗಂಗಾಮ. ೧೬೮). [ ಸಂ. ]

**ದುಧಿರ** (ಗು). ಭಯಂಕರವಾದ ; ಘೋರವಾದ : ಮದನನು ಕಾಲನಂ ತ್ರಿಪುರವಂ ತಿಂದುಗಿದು ದುಧಿರ ಭಕ್ಷಕನ ಶುಕ್ರಾಕ್ಷಿಯಸ್ತ್ರಾಚಲದ ತುದಿಯೊಳ್ (ಬಕೋಶು. ೪-೪೬). [ < ಸಂ. ದುಧ್ರ ]

**ದುನಿಯಾ** (ನಾ). ಜಗತ್ತು ; ಪ್ರಪಂಚ ; ಲೋಕ : ತಮ್ಮ ಕೀರ್ತಿ ಈ ದುನಿಯಾ ಮೇಲೆ ಬಹಳ ದೊಡ್ಡದಾಗುವ ಹಾಗೆ . . . ಸಾಹೇಬರವರಿಗೆ ತಿಳಿಯ ಹೇಳಿ ಇದ್ದೇವೆ (ರಾಜೇಂದ್ರ. ೦೮೫). [ ←ಅರ. ಪಾರ. ಹಿಂ. ಮರಾ. ದುನಿಯಾ ]

**ದುಪ್** (ನಾ). ಒಂದು ಅನುಕರಣ ಶಬ್ದ. 'ದುಪ್ಪನೆ' ಪರಾ.

**ದುಪಟ** 'ದುಪ್ಪಟಿ' ನೋ.

**ದುಪಟಿ** 'ದುಪ್ಪಟಿ' ನೋ.

**ದುಪಿಕಿ** (ನಾ). ವರ್ಷದಲ್ಲಿ ಸಿಗುವ ಎರಡು ಬೆಳೆ : ಇದು ಫಲವತ್ತಾದ ದುಪಿಕಿಭೂಮಿ (ರೂಢಿ). [ ←ಮರಾ. ದುಪಿಕೀ ]

**ದುಪುದುಪು** (ನಾ). ಒಂದು ಅನುಕರಣ ಶಬ್ದ : ಅಡಕಿದ್ದ ಮೂಟೆಗಳೆಲ್ಲ ದುಪುದುಪು ಎಂದು ಕೆಳಕ್ಕೆ ಬಿದ್ದುವು (ರೂಢಿ).

**ದುಪ್ಪಟ** 'ದುಪ್ಪಟಿ' ನೋ.

**ದುಪ್ಪಟಿ, ದುಪಟ, ದುಪಟಿ, ದುಪ್ಪಟ, ದುಪ್ಪಟೆ, ದುಪ್ಪಟ್ಟ, ದುಬಟಿ, ದುವಟ, ದುವ್ವಟ, ದುವ್ವಟ್ಟ, ದೂಪಟ, ದೂವಟ, ದೂವಟಿ, ದೂವಾಟ** (ನಾ). ೧. ಹೊದೆಯಲು ಅಥವಾ ಹಾಸಲು ಉಪಯೋಗಿಸುವ ಸಾಮಾನ್ಯವಾಗಿ ಎರಡು ಪದರಗಳನ್ನುಳ್ಳ ಬಟ್ಟೆ, - ವಸ್ತ್ರ ; ಚಾದರ ; ಹಚ್ಚಡ : "ದ್ವಿಪಟೀ = ದುಪ್ಪಟೀ" (ಕಾಶಕ್ಕ. ೨೬೯) : ಒಮ್ಮೆ ಒಬ್ಬ ಗೃಹಸ್ಥರು ಮಹಮ್ಮದನಿಗೆ ಒಂದು ದುಪ್ಪಟಿಯನ್ನು ತಂದು ಕೊಟ್ಟಳಂತೆ (ಪೈಗಂಬ. ೫೮) ; ನಾನು ಹೊದ್ದಿದ್ದ ಹಚ್ಚಡ ದುಪ್ಪಟ ಆಯಿತು (ಕಥಾಮಂ. IV, ೮೩) ; ಮಾಡೋನು ಕಂಬಳಿಯವನು ದೂರೋದು ದುಪ್ಪಟಯವನನ್ನು (ಗಾದೆ). ೨. ಹೊದೆದುಕೊಳ್ಳುವವಸ್ತ್ರ; ಉತ್ತರೀಯ ; ವಲ್ಲಿ : "ವಲ್ಲೀ = ಬಳ್ಳಿಯುಂ, ದುಪ್ಪಟಿಯುಂ"(ಕಾಶಕ್ಕ. ೦೦೩) ; ದುಪ್ಪಟಿಗಳನ್ನೆಲ್ಲ ಸುತರ್ಗೆ ತರಿಸಿಕೊಟ್ಟನು (ಭರತ. ೪೬-೦೩೩) ; ನಳರಾಜನು . . . ನವರತ್ನಾಭರಣವಂ ತೊಟ್ಟು ಅಪರಂಜಿಸರಿಗೆ ದುಪ್ಪಟಿಯಂ ಹೊದ್ದು (ಯುನಳ. ೬೨) ; ತಾನು ಹೊದ್ದಿದ್ದ ದುಪ್ಪಟಿಯನ್ನು ತೆಗೆದು ತಲೆಗೆ ಸುತ್ತಿಕೊಂಡುದಾಯಿತು (ನವನೀ. ೨೧). ೩. ಉಡುವ ಬಟ್ಟೆ, - ವಸ್ತ್ರ : ಅಸುಗೆದಳಿರ ದುಪ್ಪಟಿಯಂ ಪಾಡಱುದುಟ್ಟು ಪುಳಿಂದ ಪುರಂಧ್ರಿಯರೊಪ್ಪವಡೆದರಲ್ಲಿ (ಜಯುಕಾ. ೧೫-೩೮). **ದುಪಟ :** ೨. ಜೋಡಿಯ ಮೇಲೆ ಕಿಮ್ಮತ್ತು ಆಗತಕ್ಕ ಕಪಡಾ ಜೀನಸಗಳು. ೧. ಧೋತ್ರ ಜೋಡು . . . . ೨. ದುಪಟ ಮುಂತಾದವುಗಳು (ಮುಂಬಪ್ಪಾ. ೧೪೦) : ಮೊದಲು ಮೂರು ವರುಷ ವರುಷಕ್ಕೆ ಹತ್ತು ರೂಪಾಯಿ, ಊಟ, ಬಟ್ಟೆ – ಅಂದರೆ ಒಂದು ದುಪಟ, ಒಂದು ದಟ್ಟಿ (ಬೆಸ್ತಳ. ೩೬). **ದುಪಟಿ :** ೧. ಹಗಲಿನ ಸಭೆಯೇನೋ ಚದರಿದೆ ; ಆದರೂ ಅಲ್ಲಿ ಅದರ ಬಿಳಿಯ ದುಪಟಿ ಹಾಸಿದೆ (ನಿಬಂಧ. II, ೨೦೬). ೨. ಚಂದ್ರಕಾಂತಿಯ ದುಪಟಯನ್ನು ಚಂದದಿಂದಲಿ ಪೊದ್ದನು (ಗೋಹಾಯ. ೬-೨೯). **ದುಪ್ಪಟ :** ೧. "ಹಚ್ಚಡಂ ದುಪ್ಪಟಾಖ್ಯಂ" (ಮುಂಗರಾ. ೧೦೧-೨೮). ೨. ಲಾಲಿತ ಚೆಬಾವುಗೆ ಮೆಟ್ಟ ಮೃದುವೆತ್ತ ಸಾಲಿಯ ದುಪ್ಪಟವಾಳ್ದು ಸೋಲಿಸಿ ತೊಲಗಿ ಪೋದವನ ನಿಟ್ಟಿಸುವ ಸಲ್ಲೀಲೆಯಿಂದದ್ದಳಾ ಕುವರಿ (ಮೋಹತ. ೨೮-೬) : ಕಟ್ಟಾಣಿ ಮುತ್ತು ತೆತ್ತಿಸಿದುಡಿಗೆಯೊಳಳವಟ್ಟು ಮೆಱೆದ ದುಪ್ಪಟದ ಸೃಷ್ಟಿಗೆ ನರರೂಪ ನರಸಿಂಹನ ಪೋಲ್ದಪ್ಪ ಮೆಱೆದ ನರಸೇಂದ್ರ (ಕಂನವಿ. ೨೪-೬೩) : ಚೀಣಾ ಚಕ್ರವರ್ತಿಯವರು ಕೊಟ್ಟ ಅಪೂರ್ವವಾದ ರೇಷ್ಮೆ ದುಪ್ಪಟ ಅದನ್ನು ಕೊಡುತ್ತೇನೆ (ಆರ್ಯಕ. ೫). **ದುಪ್ಪಟೆ :** ೧. ಮಲಗಿದ್ದ ರಾಗಪ್ಪ, ತಾನು ಹೊದೆದಿದ್ದ ದುಪ್ಪಟೆಯನ್ನು ಎಳೆದುಕೊಂಡೇ ಓಡಿ ಬಂದ (ವಂಶವೃ. ೪೧೫). **ದುಪ್ಪಟ್ಟ :** ೧. ಸಂದೂಕದ ಬೀಗದ ಕೈ, ಹಾಸಿಗೆಯ ಮೇಲಣ ದುಪ್ಪಟ್ಟ, ವೀಳೆಯದ ಸುಣ್ಣ, ಗ್ಲಾಸಿನ ನೀರು (ಬಂಕಿಮ. ೯೯). ೨. ರಾಮರಾಯನು ಎದ್ದು ಅಂಗರೇಕೆ ರುಮಾಲುಗಳನ್ನು ಧರಿಸಿಕೊಂಡು, ದುಪ್ಪಟ್ಟಾವನ್ನು ಹೊದ್ದುಕೊಂಡು . . . ಹೊರಟನು (ಶ್ರೀರಾಯ. ೦೬೮). **ದುಬಟಿ :** ೧. ಮಗು ದುಬಟಿಯನ್ನು ಹೊದ್ದುಕೊಂಡು ಮಲಗಿತ್ತು (ರೂಢಿ). ೨. ಚಿನ್ನದ ದುಬಟಿಯನ್ನು ಹೊದ್ದು ತೆರೆಯಿಂದ ಹೊರಟು (ಸಾಹರಿ. ೪-೨೦). **ದುವಟ :** ೨. ಪಟಪಲ್ಲವ ಛತ್ರ ಚಮರ ಝಲ್ಲರಿಗಳ್ದುವಟ[ಪಾಠಾಂ. ಗಳ್ದುವ್ವಟ್ಟ] ಜಗಜಗಿಪ ಜೋಡುಗಳು ಛಟಛಟಧ್ವನಿಯಿಂದೆ ಬಿಸಿಯ ಕೆಂಗಿಡಿಗಳು ಪುಟನೆಗೆದುವು ನಭಸ್ಥಳಕೆ (ಮೋಹತ. ೪೦-೩೮); ಸೂಧನವಿಲಾಸನಂ ಪುಷ್ಪದಿಂ ರಚಿತಂ ತಾ ದುವಟಮಂ ಪೊದಿಸುತ (ಲಿಂಗಪು. ೨೮-೨೬). **ದುವ್ವಟ :** ೧. ಹಾಸುಮಂಚದ ಮೇಲೆ ಲೇಸಪ್ಪ ದುವ್ವಟವ [ಪಾಠಾಂ. ದುಪ್ಪಟವ] ಹಾಸಿ ಕರಚರಣಗಳನೊತ್ತಿ ನಿಮಿಷಕ್ಕೆ ಮೋಸ ಮಾಡುವರು ಯತಿಗಳ (ಗುರುಬೋ. ೧-೯೫) ; ಮಾಸಲಿಂ ತೊಳೆಯೆ ಮಡಿಯಾದ ದುವ್ವಟದಂತೆ . . . ನೆಲ ಹೇಸುವಂದದ ನಡೆಯ ನುಳಿದು ಸಚ್ಚರಿತವಂ ತಳೆದು ಮಯನೊಪ್ಪಿರ್ದನು (ಹಮ್ಮಿಕಾ. ೧೦-೨೦). ೨. ಬಿಳಿಯ ಪಟ್ಟೆಯನುಟ್ಟು ದುವ್ವಟದ ಹಚ್ಚಡವನಳವಡಿಸಿ ಸಾಲಂಗಿಯಂ ತೊಟ್ಟು . . . ಸೌಂದರಂ ವನಕೆ ಪೊಱಮಟ್ಟನು (ಸೌಂದಪು. ೦೦-೧೧) ; ಆನಂದರಸ ದೇವಗಿರಿ ಕೆಂದಿ ಬಿಳಿದಿನದೇನವಣ್ಣವೆ ದುವ್ವಟ [ಪಾಠಾಂ. ಪಾಟ]ಗಳ (ಅಮುಸಾಂ. ೯-೧೬). ೩. ಉರ ತುಂಬಿ ಮೆಱೆವ ಕಂಚುಕ ಕಾಲ ಕುಪ್ಪಸ ಮಿಱುವ ದುವ್ವಟದ[ಪಾಠಾಂ. ದುವ್ವಪದ] ನಿಱಿಗಳ . . . . ಚೆಲ್ವ ತುರುಕನಾರಿಯರೊಪ್ಪಿದರು (ಕಂನವಿ. ೨೧-೮೩). **ದುವ್ವಟ್ಟ :** ೨. ನಾರಿಯಂಗಗಂಧರಸಮನಾಂತ ದುವ್ವಟ್ಟ[ಪಾಠಾಂ. ಟ]ಮದಲ್ಲದೆ ತಾಳದ . . . ನಲ್ಲನೊಪ್ಪಿದಂ (ಹೂದಹಂ. ೩-೧೦೩). **ದೂಪಟ :** ೪. ರೇಷ್ಮೆಯ ಬಟ್ಟೆ ; ಪಟ್ಟೆವಸ್ತ್ರ : ಪದೆದು ದೂಪಟದ ಅವಕೆಗಳ ನಲವಿನಿಂ ತೊಟ್ಟು (ಅರಾಹ. ೬-೨). **ದೂವಟ :** ೨. ಹೊದೆದ ದೂವಟವ ನಿವಾಳಿಯಿಟ್ಟೊಡನೊಂದ ಹೊದವುತ ನೃಪ ತನ ತಾಯ ಇದಿರಲ್ಲಿ

ಸಾಷ್ಟಾಂಗವೆಱಗಲು (ಭರತೇ. ೯೭-೪೫); ಚಾರುತರ ಪಂಚಾಮೃತಂಗಳಿಂ ದಭಿಷೇಕಗೈದು ದೂವಟವ ಪೊದಿಸಿ (ಸಿದ್ಧೇಶ್ವ. ೯-೬೦); ರಂಭೆ ಶ್ವೇತಂಗೆ ನಿಜರಮಣೀಯವಹಾಗಿ ಪನ್ನೀರೊಳಂ ಮಜ್ಜನಂಬೊಗಿಸಿ ದೂವಟವ ಪೊದಿಸಿ (ಪ್ರಭುಖ. ೩-೯೧). ೪. ಎಳೆವೆಣ್ಣಾಡಲ್ ನಿಱಿಯ ಓಡಿದ ದೂವಟವೊ ಪೇಳಸಲು ಬೆಳ್ಳುಗಿಲೆಸೆದವು (ಚೀರಮ. ೯-೩); ಶುಭ್ರ ದೂವಟವ ಸ್ಮರಬಾಣಗಱಿಯಂತೆ ನಿಱಿವಿಡಿದುಡುಸಿದರ್ ದರಹಾಸಮುಖಿಗೆ (ಬೋಕಕ. ೨೩-೦೩); ನಡುವ ಬಳಸಿ ಬಂದ ದೂವಟದೊಲ್ಲಿ ತನ್ನೆಡದ ತೋಳೊಳು ಸುತ್ತಿ ನಿಮಿರೆ . . . ನಡೆತಂದನಾ ಮೋಡಿಕಾಱ (ಭರತೇ. ೩೯-೦೪); ನಲ್ಲಳಂಗಗಂಧಂ ಬಗೆಗೊಂಡ ದೂವಟಮನಲ್ಲದೆ ತಾಳದ . . . ಕಾಂತ ನೊಪ್ಪಿದಂ (ರಾಜಶೇ. ೧೧-೩೦). ದೂವಟಿ: ೪. ದೂವಟಯುಡ ಸುತ್ತಿ ಚಾವಡಿಯೊಳಹೊಕ್ಕು ಭೂವರನೆಡೆಗೆಯ್ದುವಾಗ (ಭರತೇ. ೫೭-೦೩). ದೂವಾಟ: ೨. ವೀರೇಶ ನೀಂ ಸೌಂದರ್ಯ ದೂವಾಟಮಂ ತೊಳೆದು ಪೊದಿಸು (ಪ್ರಭುಖ. ೬-೬೦).

[ ದೇ.೫ ತಮಿ. ತುಪ್ಪಟ್ಟಿ, ತುಪ್ಪಟ್ಟಾ; ಮಲ. ತುಪ್ಪಟ್ಟಿ, ತುಪ್ಪಟ್ಟಾವು; ತುಳು. ದುಪ್ಪಟ, ದುಪ್ಪಟಿ; ತೆಲು. ದುಪ್ಪಟಿ, ದುಪಟ, ದುಪ್ಪಟ./ ಮರಾ. ದುಪಟಾ, ದುಪಟ್ಟಾ; ಹಿಂ. ದುಪಟಾ, ದುಪಟೀ, ದುಪಟ್ಟಾ, ದುಪಟ್ಟೀ ]

ದುಪ್ಪಟಿ 'ದುಪ್ಪಟ' ನೋ.

ದುಪ್ಪಟ್ಟ 'ದಂಪ್ಪಟ' ನೋ.

ದುಪ್ಪಟ್ಟು (ನಾ). ಎರಡರಷ್ಟು; ಇಮ್ಮಡಿ: ಮಧ್ಯಾಹ್ನ ಕೆಲಸಕ್ಕೆ ಹೋದಾಗ ಕತ್ತೆಗಳು ಮುಂಜಾವಿನಕಿಂತ ದುಪ್ಪಟ್ಟಾಗಿದ್ದವು (ಮಕರಿಮ. ೧೭೦); ಯಾವ ಅಂಚೆಚೀಟಿಯೂ ಇಲ್ಲದ ಪತ್ರಗಳ ಮೇಲೆ ಇಲಾಖೆ ಯವರು ದುಪ್ಪಟ್ಟು ದಂಡ ವಸೂಲಿ ಮಾಡುತ್ತಾರೆ (ಕವಿಕೋ. I, ೬೫); ಇಂದಿಗೆ ಹಣ ಉಳಿಸಿಕೊಂಡು ನಾಳೆಗೆ ದುಪ್ಪಟ್ಟು ಕಳೆಯುವುದು ಎಂಥ ವ್ಯವಹಾರಜ್ಞಾನ? (ಸುಕಿವ. ೪೦): ಈ ಅಂಗಡಿಯ ಮೇಲೆ ನಾ ಸುರಿಸಿದ ಬೆವರಿನ ಅರ್ಧದಷ್ಟನ್ನು ನನ್ನ ಮಗ್ಗದ ಮೇಲೆ ಸುರಿಸಿದ್ದರೆ ಇದರ ದುಪ್ಪಟ್ಟು ಗಳಿಸುತ್ತಿದ್ದೆ (ಮುತುರುದಾ. ೬೦); ದುಪ್ಪಟ್ಟಿದ್ದ ರಕಮು ಅರ್ಧ ಕ್ಕಿಳಿಸುವದೂ ಬಡ್ಡೀದರ ಕಡಿಮೆ ಮಾಡುವುದೂ ಇವೆಲ್ಲ . . . ಉಳಿತಾಯುವೇ ಎಂದನು (ದಾಸಕಮ. ೫೮). [ ದು + ಪಟ್ಟು$_2$ ]

ದುಪ್ಪಡಿ (ನಾ). (?): ನಿಯತ ದ್ವಿತ್ವಕ್ಕೆ-ಪವ್ಪುಕಂ . . . ಟಿಪ್ಪರಂ, ದುಪ್ಪಡಿ (ಶಮದ. ೩೬ ಪ್ರಯೋ). [ ? ]

ದುಪ್ಪನೆ (ಅ). 'ದುಪ್' ಎಂಬ ಶಬ್ದದೊಡನೆ: (ಕ).

[ ದುಪ್ + - ಅನೆ$_1$ ]

ದುಪ್ಪಳ, ದುಬ್ಬಳಿ, ದೊಬ್ಬಳಿ (ನಾ). ೧. ಮನೆಯಂ ಒಂದು ಭಾಗ: ಪಾದರಿಯ ಪಟ್ಟಸಾಲೆಯೊಳಂ ಬಂದ ಮಾವಿನ ಬಳ್ಳಿವಾಡದೊಳಂ ತಳತ ಪಚ್ಚಕರ್ಪೂರದಾಳೆಯ ಸುಳಿಗಳಿಂದೊಪ್ಪುವ ದುಪ್ಪಳಗಳಿಂದಂ . . . ಗುಜ್ಜುಮಾವಿನ ಸಜ್ಜೆವನೆಗಳಂ ಚೆಲ್ವಾಗಿರೆ (ನಾಗಕು. ೩೦-೫೫ ವ). ದುಬ್ಬಳಿ: ೨. ಮೇಲಿನ ಮಂಹಡಿ,-ಉಪ್ಪರಿಗೆ; "ಸಿರಿಯಿ ಕರುವಾಡ ವೈಭವದಿಂದ ಕೂಡಿದ ಉಪ್ಪರಿಗೆ" (ಪ್ರಶಬ್ದ.); ಕನಕಮಯಮಾಟಾ ಕೂಟಂಗಳಿಂದೇಳಂತಾದಿಯಾದಿ ದ್ವಾದಶ ಷೋಡಶ ನೆಲೆಯ ದುಬ್ಬಳಿ ಗಳಿಜ್ಜಾ [ಚ್ಛಾ] ಲಿನಲಿ ವಿಭ್ರಾಜಮಾನದ ಜನಭವನಂಗಳೆಸೆದಿರ್ದುವು (ಅದಿಪ. ೫-೬). ದೊಬ್ಬಳಿ: ೨. "ದೊಬ್ಬಳಿ [ಪಾಠಾಂ. ದುಬ್ಬಳಿ] ಸಿರಿಯ ಕರುವಾಡ" (ಕರ್ನಾಕ. ೧೨). [ ? ]

ದುಪ್ಪಿ, ದುಪ್ಪೆ (ನಾ). ೧. ಒಂದು ಬಗೆಯ ಜಿಂಕೆ: ಎಕ್ಕಲನ ಪೊಕ್ಕರಿಂದು ದುಪ್ಪಿ ಸಾರಂಗಕುಂ ಕುಕ್ಕುರಗಳಂ ಬಿಡುತೆ (ಶರಕು. ೨೦-೩೩). ದುಪ್ಪೆ: ೨. ಕವಲೊಡೆದಿರುವ ಕೊಂಬುಗಳನ್ನುಳ್ಳ, ಚುಕ್ಕೆಗಳುಳ್ಳ ಜಿಂಕೆ; ಸಾರಂಗ: ಕರುಳ್ಗಳ ವಗೆಯುತ ನಾಯ್ಗಳ ಬಿಗಿಯುತ ದುಪ್ಪೆಯು ಜಗಿಯುತ ಶಬರರು ವಗರಿಸಿ ಕಾಡಿನ ಮೃಗಗಳನೆಲ್ಲವನು (ಹಮದ. ೧೮). 'ಚುಕ್ಕೆದುಪ್ಪಿ' ಪರಾ.

[ ದೇ.೫ ತೆಲು. ದುಪ್ಪಿ; ಕೊಲಾ. ಡುಪ್ಪಿ; ಗೊಂಡಿ. ಡುಪ್ಪಲ್ ]

ದುಪ್ಪು$_1$ 'ದುಂಪು' ನೋ.

ದುಪ್ಪು$_2$ (ನಾ). (?): ಒಟ್ಟೀಸಿದೇನು ನಿನಗೆ ದುಪ್ಪೀನ ಶೀಕ್ಷಕೆ ಎನುತಾಲಿ ಯಿಂದುಮುತಿಗೆ ಜನಪಾನು ಪೇಳುತಾಗ (ಹಮದ. ೧೯೯). [ ? ]

ದುಪ್ಪೆ 'ದುಪ್ಪಿ' ನೋ.

ದುಪ್ಪೆಗೆಣಸು (ನಾ). ಒಂದು ಬಗೆಯ ಗಡ್ಡೆ,-ಗೆಣಸಂ: ದುಪ್ಪೆಗೆಣಸು, ಹೆಬ್ಬು (ಮೃಷಿಗಿ. ೩೦-೫೯೩). [ ದುಪ್ಪೆ? + ಗೆಣಸು (<ಗೆಣಸು) ]

ದುಪ್ರತಿ (ನಾ). ಮೊದಲಿನ ಪ್ರತಿಯಂತೆಯೇ ಸಿದ್ಧಪಡಿಸಿದ ಇನ್ನೊಂದು ಪ್ರತಿ; ನಕಲು; ಪ್ರತಿರೂಪ: (ಒಂದು ಪತ್ರದ ಅಥವಾ ದಸ್ತೈವಜಿನ) ದುಪ್ರತಿ. ನಕಲು (ಅಸಲಿನಂತೆಯೇ ಕಾನೂನಿನ ಅಂಗೀಕಾರವುಳ್ಳದ್ದು) (Duplicate, ಇಂಕನಿ). [ ದು + ಪ್ರತಿ ]

ದುಫಸಲ್ (ನಾ). ಒಂದು ಜಮೀನಿನಲ್ಲಿ ವರ್ಷಕ್ಕೆ ಎರಡು ಬೆಳೆ ತೆಗೆಯುವುದು: (ಕೃಶಗ. II, ೫೯೭). [ ದು + ಫಸಲ್ ]

ದುಬಟ 'ದುಪ್ಪಟ' ನೋ.

ದುಬದುಬ (ನಾ). ಒಂದು ಅನುಕರಣ ಶಬ್ದ: (ಕ).

ದುಬಾರಿ (ಗು). ೧. ಎರಡರಷ್ಟು; ಇಮ್ಮಡಿ; ಎರಡು ಪಟ್ಟು. 'ದುಬಾರಿ ಕೆಲಸ' ಪರಾ. ೨. ಅತಿಯಾದ; ಹೆಚ್ಚಾದ; ಅಧಿಕವಾದ: ದುಬಾರಿ ಬಡ್ಡಿ ಹಾಕುವುದರಲ್ಲಿಯೂ ನಿಸ್ಸೀಮರು (ಪ್ರವಾಇ. II, ೩೩೨); ಅತ್ತ ಕಡೆ ಬರುತ್ತಿದ್ದ ದುಬಾರಿ ಬಡ್ಡಿಗಾರರನ್ನು ಕಂಡ ಕೂಡಲೇ ಜನ ಓಡಿ ಹೋದ ದ್ದರ ಕಾರಣವನ್ನು ತಿಳಿದುಕೊಂಡನು (ನಗೆಹೂ. ೯೯). 'ದಂಬಾರಿ ಬೆಲೆ' ಪರಾ. (ನಾ). ೩. ಹೆಚ್ಚು ಬೆಲೆಯುಳ್ಳದು: ತಂಟೆ: ಅರ್ಜಿ ಹಾಕಿಕೊಂಡರೆ ಎಲ್ಲವೂ ಸರಿಹೋಗುತ್ತದಂತೆ. ಆದರೆ ಅದು ದುಬಾರಿಯ ಕೆಲಸವಂತೆ (ಪುನರು. ೧೯೪): ಅನುಭವಶಾಲೆಯ ಶುಲ್ಕ ದುಬಾರಿಯದಲ್ಲಿ ರಿಯಾಯಿತಿಯಿಲ್ಲ (ಇಂಜಾಪ. ೧೦೮-೩೯). ೪. (ಆಲಂ) ಅಪಾಯಕಾರಿಯಾದ ವ್ಯಕ್ತಿ (?): ದುರಾತ್ಮಚಾರಿಯಂ ದುಬಾರಿಯಂ ದೃಷ್ಟಪಾಂಡ್ಯರಾಜನುತ್ಕನಿಷ್ಠಕರ್ವರ್ಗದಲ್ಲಿ ತಾಂ ಸ್ಪಷ್ಟವಾಗಲಿಟ್ಟು ಕಾಯ್ದು ನಷ್ಟದಿಂದ ಪೆರ್ಚದೇ (ಹಾಲಾಸ್ಯ. ೩-೩-೯೧).

[ ←ಪಾರ. ದುಬಾರಾ, ದೋಬಾರಾ; ಮರಾ. ದುಬಾರ್, ದುಬಾರಾ, ದುಬಾರೀ; ಹಿಂ. ದುಬಾರಾ, ದೋಬಾರಾ./ತುಳು. ದುಬಾರಿ ]

ದುಬಾರಿಕೆಲಸ (ನಾ). ೧. ಎರಡು ಪಟ್ಟು ಕೆಲಸ; ಎರಡರಷ್ಟು ಕಾರ್ಯ: ಹೊಲಕ್ಕೆ ಮಡಿಕೆಯ ಹೊಡಿಯುವುದೇತಕ್ಕೆ ದುಬಾರಿಕೆಲಸವೆಂದು ವ್ಯಗಳ್ಳತನದಿಂದ . . . ಅಷ್ಟಕ್ಕೆ ಸಂತುಷ್ಟರಾಗುತ್ತಾರೆ (ಕೃಷಿಪ್ರ. ೫೦). ೨. ಬಹಳ ಖರ್ಚು ಉಂಟಾಗುವ ಕೆಲಸ: ಈಗಿನ ಕಾಲದಲ್ಲಿ ಮನೆ ಕಟ್ಟಿಸುವುದು ಬಹಳ ದುಬಾರಿಕೆಲಸ (ಕಥ). ೩. (ಆಲಂ) ಅಪಾಯ ಕಾರಿಯಾದ ಕೆಲಸ; ಹೆಚ್ಚು ತೊಂದರೆಯುಳ್ಳ ಕೆಲಸ: ನೀವೇನೂ ಶಾಶ್ವತವಾಗಿ ಮುಖಂಡರಾಗಿ ಉಳಿಯುವುದಕ್ಕಾಗುವುದಿಲ್ಲ. ಆದ್ದರಿಂದ ದುಬಾರಿ ಕೆಲಸಕ್ಕೆ ಕೈಹಾಕಬೇಡಿ (ಶಂಕರಂ. ೧೭೪). [ ದುಬಾರಿ + ಕೆಲಸ ]

ದುಬಾರಿಖರ್ಚು (ನಾ). ಬಹಳ ಹೆಚ್ಚಾದ ವ್ಯಯ,-ವೆಚ್ಚ: ಬೆಲೆ ಏರಿಕೆಯ ಈ ಕಾಲದಲ್ಲಿ ದುಬಾರಿಖರ್ಚನ್ನು ಮಾಡಬಾರದು (ಕಥ).

[ ದುಬಾರಿ + ಖರ್ಚು (<ಕರ್ಚು$_4$) ]

ದುಬಾರಿಬೆಲೆ (ನಾ). ಹೆಚ್ಚಾದ ಕಿಮ್ಮತ್ತು; ಬಹಳವಾದ ಕ್ರಯ: ಇಂದಿನ ರೇಷನ್ ಮತ್ತು ಸಾಮಾನು ದುಬಾರಿಬೆಲೆ ಕಾಲದಲ್ಲೂ . . . ದೋಸೆಗಳನ್ನು ಆರುಕಾಸಿಗೊಂದರಂತೆ ಮಾರುವ ಏರ್ಪಾಡು ಮಾಡಿದ್ದೇನೆ

(ನಾಡಿಗೇ. ೨೪೬) : ಆರುತಿಂಗಳು ಹೇಗೋ ಕಾಲ ಹಾಕಿ, ಇನ್ನಾರುತಿಂಗಳು ದುಬಾರಿಬೆಲೆ ಕೊಟ್ಟು ಸಾಮಾನುಗಳನ್ನು ಕೊಂಡು ಸಂಸಾರ ಸಾಗಿಸಬೇಕು (ನನ್ನೂರು. ೩೧೭). [ ದುಬಾರಿ + ಬೆಲೆ ]

**ದುಬಾರಿವೆಚ್ಚ** (ನಾ). = ದುಬಾರಿ ಖರ್ಚು: ದುಬಾರಿವೆಚ್ಚದ ಯಜ್ಞಯಾಗಾದಿಗಳ ನೆರವಿಲ್ಲದೆಯೇ ವ್ಯಕ್ತಿಯು . . . ಪರತತ್ತ್ವವನ್ನು ಕುರಿತು ಧ್ಯಾನಮಾಡಿ ಸಾಮೀಪ್ಯವನ್ನು ಸಾಧಿಸಬಹುದು (ತತ್ತ್ವಶಾ. ೦೩೪).
[ ದುಬಾರಿ + ವೆಚ್ಚ ]

**ದುಬಾರಿಸು** (ಕ್ರಿ). (?): ಸುಬಾಹುನಯನಾಂತರಂ ಹನುಮಿನುತ್ತ ಸನ್ನಾಸಿಕಂ ದು[ಪಾಠಾಂ. ದೂ]ಬಾರಿಸದ ಸತ್ಯುಚಾಂತರಮಿವ್ಯೆದು ದೀರ್ಘಂ ಮಲಾ (ಹಾಲಾಸ್ಯ. ೧-೧೨-೩೭). [ ? + –ಇಸು$_{3}$ ]

**ದುಬಾಷಿ** 'ದುಭಾಷಿ' ನೋ.

**ದುಬಾಸಿ** 'ದುಭಾಷಿ' ನೋ.

**ದುಬುದುಬು** (ನಾ). ಒಂದು ಅನುಕರಣ ಶಬ್ದ: ಇದ್ದಕ್ಕಿದ್ದಂತೆ ದುಬುದುಬು ಎಂದು ಮಳೆ ಬೀಳಲು ಆರಂಭವಾಯಿತು (ಚೂಫಿ).

**ದುಬ್ಧಿ** (ನಾ). ೧. ಸಂಶಯ ; ಹೊಯ್ದಾಟ : ದುಬ್ಧಿಮೂಲಗಳಡಗಿದಧ್ಯಾತ್ಮ ಸ್ವಾರಸ್ಯಲಬ್ಧಮಂ ತಿಳಿದಿರ್ಪ ಯೋಗಾಢ್ಯರಿಂಗೆಯುಪಲಬ್ಧಿಯಿಂದುಣಬಡಿಸಿ ಸೌಖ್ಯದಿಂದನಿಬರಂ ಪೊಂಗಿಸಿದನಿಂಗಡಲೊಲು (ಶರಚ. ೧೬-೦೦). 'ದುಗ್ದಿ' ಪರಾ. ೨. ನಿರಾಶೆ ; ಚಿಂತೆ ; ದುಃಖ. 'ದುಬ್ಧಿಗೊಳ್ಳು' ಪರಾ. ೩. ಹೊಟ್ಟೆಕಿಚ್ಚು ; ಅಸೂಯೆ. 'ದುಬ್ಧಿಪಡು' ಪರಾ. [ ←ಹಿಂ. ದುಬಧಾ, ದುಬಿಧಾ, ದುಬಿಧಿ./ಸಂ. ದ್ವಿವಿಧ ]

**ದುಬ್ಧಿಗೊಳ್ಳು** (ಕ್ರಿ). ಹತಾಶನಾಗು ; ವ್ಯಥೆಪಡು ; ಬೇಗುದಿಗೊಳ್ಳು: ತನ್ನ ಸಂದಿಗ್ಧಪರಿಸ್ಥಿತಿಗಾಗಿ ತೀರ ದುಬ್ಧಿಗೊಂಡಂತೆ 'ಅಲ್ಲಾ' ಎಂದು ನಿಟ್ಟುಸಿರಿಡುತ್ತಾ . . . ಕೈ ಚಾಚಿದ (ಸನ್ಮರ. ೪೯).
[ ದುಬ್ಧಿ + ಕೊಳ್ಳು$_{1}$ (<ಕೊಳ್$_{1}$) ]

**ದುಬ್ಧಿಪಡು** (ಕ್ರಿ). ಹೊಟ್ಟೆಕಿಚ್ಚು ಪಡು ; ಕರುಬು : ಮತ್ಸರಿಸು: ಕಮಲಮ್ಮ ಅವರ ಜೀವನ ನೋಡಿ ಗಂಭೀರಮುಖ ಮಾಡಿಕೊಂಡು ನಿಲ್ಲುತ್ತಿದ್ದಳು . . . ಲಕ್ಷ್ಮೀದೇವಿ ಮಾತ್ರ ಒಳಗೇ ದುಬ್ಧಿಪಡುತ್ತಿದ್ದಳು (ತಾಯಿಳ. ೩೭). [ದುಬ್ಧಿ + ಪಡು$_{1}$ ]

**ದುಬ್ಬ** 'ದುಂಡುಮ' ನೋ.

**ದುಬ್ಬಗಾಣಿಸು** (ಕ್ರಿ). ಪ್ರಕಟಪಡಿಸು ; ವ್ಯಕ್ತಗೊಳಿಸು : ಒಬ್ಬಳ ಮೇಲೆ ತನಗೆ ಸೋಲವಿದ್ದರು ದುಬ್ಬಗಾಣಿಸನದ ನುಡಿದು ಒಬ್ಬ ಪುರುಷನೊಬ್ಬ ಸತಿಯೊಳಿಪ್ಪಂತಿಹನುಬ್ಬಸವಿಲ್ಲದಲ್ಲರೊಳು (ಶರಚ. ೩-೯೭).
[ <ತುಬ್ಬು$_{3}$ + ಕಾಣಿಸು ]

**ದುಬ್ಬಿ$_{1}$** 'ದುಂಡುಮಿ' ನೋ.

**ದುಬ್ಬಿ$_{2}$** (ನಾ). ದೊಡ್ಡಪಾತ್ರೆ ; ಕೊಪ್ಪರಿಗೆ : ಸರ್ವನಾಶಕನೆಂಬನೊಬ್ಬನು ದುಬ್ಬಿಯಲಿ ಜನಿಸಿದನು ಕೌರವನು (ಸಂಧಪ. ೧೩-೬೮).
[ ದುಬ್ಬು (<ದುಮ್ಮು$_{1}$) + –ಇ$_{3}$ ]

**ದುಬ್ಬು** 'ದುಮ್ಮು$_{1}$' ನೋ.

**ದುಬ್ಬುಳಿ** 'ದುಪ್ಪಳ' ನೋ.

**ದುಬ್ಬುಳುಕ** (ನಾ). (?) : ಸರಕಾರಕ್ಕೆ ರುಜು ಇಲ್ಲದೆ ರೈತನಾಗಬಾರದು ಅದೇತೆಂದೊಡೆ ಇಷ್ಟುಳ್ಳಾತನೇ ಪಾಟ್ಯಾ ರೈತ ಇಲ್ಲದಾತ ದುಬ್ಬುಳುಕ ಎಂದನಯ್ಯಾ ನಿಮ್ಮ ಶರಣ (ವಚಸಂ. ೬೦-೬೧). [ ? ]

**ದುಬ್ಬೆಸನ** (ನಾ). ಕೆಟ್ಟಚಾಳಿ ; ದುಷ್ಟವ್ಯಸನ: ಹುಸಿವ ತನಲ್ವ ಬಯ್ವ . . . ಬೇಸಟಿಗೊಳೊಂದಿದೆವೆಂಬ ಕೂಡೆ ದುಬ್ಬೆಸನದೊಳಿಕ್ಕಿ ದೇವರನವಂತವೆ ತಿಂಬ ತಪಸ್ವಿಯಲ್ಲಿ ಹೋಲಿಸುವುದೆ . . . ಹರಿಸಕ್ತಿದೇವನನ್ (ಶಕ. IV, ೦-೯೦ : 1204). [ <ಸಂ. ದುರ್ವ್ಯಸನ ]

**ದುಭಾಷಿ**, ದುಬಾಷಿ, ದುಬಾಸಿ (ನಾ). ೧. ಭಾಷಾಂತರ ಮಾಡಿ ಹೇಳುವ ವ್ಯಕ್ತಿ.– ತಿಳಿಸುವ ವ್ಯಕ್ತಿ : ಅವರಿಗೆ ದುಭಾಷಿಯು ಕೆಲಸ ಮಾಡುವ ಮೊದಲನೆಯ ಪ್ರಸಂಗ ಇಲ್ಲಿಯೇ ಬಂದಿತು (ಕೆಶಪೀ. ೨೦೬). **ದುಬಾಷಿ**: ೧. ನೆಕ್ಲದೋವ್ ದುಬಾಷಿಯಾದನು (ಪುನರು. ೫೬೮) : ಅಂಥಾ ಭಾರೀ ದುಬಾಷಿಗಳು ಯಾರಾದರೂ ಸಿಕ್ಕಿದರೆ . . . ನಾನೂರು ವರಹ ಸಂಬಳವನ್ನು ಕೊಟ್ಟು ಅವರನ್ನು ಇರಿಸಿಕೊಳ್ಳೋಣವು (ಮುಸುಗ. ೪೫) ; ಸಂದರ್ಭದಲ್ಲಿ ನೀವು ನಮ್ಮ ದುಬಾಷಿಗಳಾಗಿದ್ದರೆ ಚೆನ್ನಾಗಿರುತ್ತಿತ್ತು (ಕೃಷ್ಣಶೂ. ೨೦೪). **ದುಬಾಸಿ**: ೧. "ದುಬಾಸಿ–ದ್ವಿಭಾಷಿ" (ಕಿಟ್ಟೆಕೋ. ೬೦); "ಅರ್ಥ ವಿವರಣೆ ಮಾಡುವವನು ; ವ್ಯಾಖ್ಯಾಕಾರ. ಬೇರೆ ಬೇರೆ ಭಾಷೆಗಳನ್ನಾಡುವವರ ಮಾತನ್ನು ಒಬ್ಬರಿಂದೊಬ್ಬರಿಗೆ ಬಾಯಿಮಾತಿನಲ್ಲಿ ಭಾಷಾಂತರ ಮಾಡಿ ಹೇಳುವವನು ; ದುಬಾಸಿ" (Interpreter. ಇಂಕನಿ). ೨. ಎರಡು ಭಾಷೆಗಳನ್ನು ಬಲ್ಲ ವ್ಯಕ್ತಿ : ಯಿಲಿ ಕಾವಳು ದುಬಾಸಿಮಗನ ವಂಶಸ್ಥರದೂ (ಎಕ. XIV, ಶ್ರೀರಂಗ. ೧೪೭-೨೦ : 1863).
[ ←ಹಿಂ. ಮರಾ. ದುಭಾಷೀ./ಸಂ. ದ್ವಿಭಾಷಿನ್ ]

**ದುಮಗುಟ್ಟು** 'ದುಮಂಗುಟ್ಟು' ನೋ.

**ದುಮಜಿ**, ಧುಮ್ಮಚಿ (ನಾ). ಕುದುರೆಯ ಜೀನಿನ ಹಗ್ಗ,–ಬಾರು : ೧ ಸಿಂಹದ ತಲೆ ೧೮ ದುಮಜಿ ಗುಬ್ಬಿ ೨ ಯಿದರ ಕೆಳಗಣ ಪಟ್ಟಿ (ಎಕ. XIV, ನಂಜನ. ೨೯೩–ಪುಟ ೦೪೩ : 1847). **ಧುಮ್ಮಚಿ**: ಅವನ ಘೋಟಕಂಗಳ್ಗಂದುಂ ಧುಮ್ಮುಚಿಯನಿಕ್ಕುಗಿಕ ಪರಿಯಮ್ಮಾಡಿಸಿ ತದ್ವಕೀಲಿಯಂ ಮಾಣಿಸಿದಂ (ಕಳನ್ನ. ೯-೩೩).
[ ← ಪಾರ. ದುಮ್ಚಿ; ಹಿಂ. ಮರಾ. ದುಮಚೀ ]

**ದುಮದುಮಿಸು** 'ದುಮುದುಮಿಸು' ನೋ.

**ದುಮಾನ$_{1}$** 'ದುಮ್ಮಾನ' ನೋ.

**ದುಮಾನ$_{2}$** (ನಾ). ಒಂದು ಬಗೆಯ ಡೇರೆ: ಹಲವು ಬಣ್ಣದ ಮುಗಿಲಾಗಸದಿಂದೇತಕಿಳಿದುವೀ ಧರೆಗೆಂದೆನಿಸಿ ತೊಳತುವು ದೂಸು ದುಮಾನ ಗುಡಾರಮಾ ಬಲದೊಳು ತಿಂಥಿಣಿಯಾಗಿ (ನಾಗಕು. ೦೩-೦೦೮) ; ಮಹಾಶೂರರಂ ಕಡಿದವರಾನೆ ಕುದುರೆ ಬೊಕ್ಕಸ ದೂಸು ದುಮಾನ ಬಿರುದು ಮುಂತಾದವಂ ಕೊಂಡು (ಸಕಪ್ರ. ೩ ಪ್ರಸ್ತಾವನೆ). 'ದುಮ್ಮಳ$_{2}$' ಪರಾ. [ ? ]

**ದುಮಾಲಿ** (ನಾ). ೧. ಸರ್ಕಾರ ಮತ್ತು ಖಾಸಗಿ ವ್ಯಕ್ತಿ ಈ ಇಬ್ಬರ ಆಳ್ವಿಕೆಗೆ ಒಳಪಟ್ಟ ಗ್ರಾಮ ಅಥವಾ ಜಮೀನು : ದುಮಾಲೀ ಭೂಮಿಗಳ ಪರಭಾರೆ ಜಮಾಖರ್ಚು ಬಿಟ್ಟು ಆ ವರ್ಷದ ಪೊಟ್ಟು ಆದಾಯ ೩೫೮೬೦೫ ರೂಪಾಯಿ (ಕಥಾಗ. ೩೯೦). ೨. ಖಾಸಗೀ ಒಡೆತನಕ್ಕೆ ಸೇರಿದಂದಂ ಇನಾಂಗ್ರಾಮ : ಅರದಲ್ಲಿ ೧೨೦೪ ಗ್ರಾಮಗಳಿದ್ದವು ; ಅವುಗಳಲ್ಲಿ ಸರಕಾರೀ ೧೧೦೩, ದುಮಾಲಿ ೨೦೧ (ಕಥಾಗ. ೩೭೯).
[ ← ಮರಾ. ದುಮಾಲಾ ; ಪಾರ. ದುಬಾಲ್ ]

**ದುಮಿಕ್ಕು** 'ದುಮ್ಮಿಕ್ಕು' ನೋ.

**ದುಮು** (ನಾ). (ಕೋಪ, ಅಸಂತುಷ್ಟಿಯನ್ನು ಸೂಚಿಸುವ) ಒಂದು ಅನುಕರಣ ಶಬ್ದ. 'ದುಮುಗುಟ್ಟು' ಪರಾ.

**ದುಮುದುಮು** (ದ್ವಿರುಕ್ತಿ) : "ದುಮುದುಮು = ಉರಿಯುವುದು, ರೇಗುವುದು" (ಜಾನಕೋ. ೬) : ಹಗಲೆಲ್ಲ ದುಮುದುಮು ಉರೀತಿರತಾನ (ರಂಗರೊ. ೩೩).

**ದುಮುಕ**, ದೂಮುಕ (ನಾ). ಎರಡು ಮುಖಗಳಿಂದ ಕೂಡಿದುದು : ದೂಮುಕಂ, ದುಮುಕಂ, ದ್ವಿಮುಖಂ (ಶಬ್ದಾನು. ೩೭೭ ಪ್ರಯೋ). **ದೂಮುಕ**: ಮೇಲಿನ ಪ್ರಯೋಗವನ್ನು ನೋಡಿ. [ <ಸಂ.ದ್ವಿಮುಖ]

**ದುಮುಕದುಂಡಿ** (ನಾ). (?) : ಕಸಮಾರಿಗೇಕೆ ದುಮುಕದುಂಡಿ ? (ಗಾದೆ)
[ ? ]

**ದುಮುಕು** 'ದುಮ್ಮಿಕ್ಕು' ನೋ.

**ದುಮುಗುಟ್ಟು, ದುಮಗುಟ್ಟು** (ಕ್ರಿ). ೧. ಊದಿಕೊಳ್ಳು ; ದದ್ದರಿಸು ; ಉಬ್ಬು : ಜ್ವರದಿಂದ ಅವಳ ಮುಖ ದುಮುಗುಟ್ಟುತ್ತಿದೆ (ಕೂಡಿ). ೨. ಸಿಡುಗುಟ್ಟು; ಅಸಂತುಷ್ಟಿ ತೋರು; ಮುಖಗಂಟಿಕ್ಕು; ಸಿಂಡರಿಸು: ಬೆಳಗಿನಿಂದ ಹುಬ್ಬುಗಂಟಿಕ್ಕಿ ದುಮುಗುಟ್ಟುತ್ತಲೆ ಇದ್ದಳು (ಚತಡಾ. II· ೯೪೨) ; ಬೆಳಗಿನ ಮೋಡಗಳು, ಕೋಪ ಬಂದ ಮನುಷ್ಯ ಮಾತನಾಡಲಾಗದೆ ಹೋದರೆ ಹೇಗೆ ದುಮುಗುಟ್ಟುತ್ತ ದುಪ್ ಎಂದುಕೊಂಡಿರುತ್ತಾನೋ ಹಾಗಿದ್ದುವು (ನಿಬಂಧ. II, ೧೮೩) : ಯಾವಾಗಲೂ ದುಮುಗುಟ್ಟುತ್ತ ಇರುವುದೇಕೆ ? (ಸ್ವಾಮಿಸ್ನೇ. ೫೭). **ದುಮಗುಟ್ಟು** : ೨. "ದುಮಗುಟ್ಟು = ಸಿಟ್ಟಾಗು ; ಉರಿ" (ಜಾನಕೋ. ೬). [ ದುಮು + ಕುಟ್ಟು$_1$ ]

**ದುಮುದುಮನೆ** (ಅ). ದುಮುದುಮು ಎಂಬ ಶಬ್ದದೊಡನೆ : ಅಲ್ಲಿಯ ವರೆಗೆ ಅವನ ಹೃದಯದಲ್ಲಿ ಹೊರಗಂಡಿ ಕಾಣದೆ ಮಡುಗೊಂಡಿದ್ದ ಪ್ರೇಮ ಪ್ರವಾಹ ದ್ವಾರ ತೆರೆದಂತಾಗಿ ದುಮುದುಮನೆ ಹರಿಯಲಾರಂಭಿಸಿತು (ಪುವರು. ೪೯೮). [ <ದುಮು + –ಅನೆ$_1$ ]

**ದುಮುದುಮಿಸು, ದುಂದುಮಿಸು, ದುಮದುಮಿಸು** (ಕ್ರಿ). ೧.=ದುಮುಗುಟ್ಟು ೨ : ಕೋಪವೇ ದುಮುದುಮಿಸುತ್ತಿರುವ ಮೊಗದವರು . . . ನೆರೆದರು (ಬಿದುಕೆ. ೧೩೮). ೨. ಆವರಿಸು ; ಇಡುಗು ; ತುಂಬು : ಜಯ ಘೋಷವು ರಾಜಾಂಗಣದಲ್ಲಿ ನೆರೆದ ಸಂದಣಿಯಿಂದೆದ್ದು ಮೂರು ಬಾರಿ ಬಾಂದಳವನ್ನು ದುಮುದುಮಿಸಿತು (ವೀರಬಂ. ೭೩) ; ಗದ್ದಲದಿಂದ ದುಮುದುಮಿಸಿದ ಪಡಸಾಲೆ ಬರಿದಾಯಿತು (ಗಂಡೂಯ. ೮೭). **ದುಂದುಮಿಸು** : ೨. ಇಷ್ಟಾಗುವಲ್ಲಿ ಮೇಲಿನ ಧರ್ಮಶಾಲೆಯ ಪರಿಸರದಿಂದೆದ್ದ ಗುಲ್ಲು ಬಾಂದಳವನ್ನು ದುಂದುಮಿಸಿತು (ವೀರಬಂ. ೫೦). **ದುಮದುಮಿಸು** : ೩. ಪ್ರತಿಧ್ವನಿಸು ; ಅನುರಣನವಾಗು : ನನ್ನ ಕಿವಿಯಲ್ಲಿ ಹಾಗೆ ದುಮದುಮಿಸುವಂತಿದೆ ಆ ಭಜನೆ (ಸ್ಮೃತಿಚಿ. ೪೫೭). [ <ದುಮು + –ಇಸು$_1$ ]

**ದುಮ್ಮಜಲು** (ನಾ). ಎರಡಂತಸ್ತಿನ ಕಟ್ಟಡ : ಹೂಂ. ದುಮ್ಮಜಲಾಗೇದ. ತೆಳಗ ಮೋಟಾರಖಾನಿ, ಮ್ಯಾಲೆ ಸರ್ವಿಸ ಕಂಪನಿಯ ಆಫೀಸು (ದಾಸಹು. ೯).

[ ದು + ಮಜಲು./ಮರಾ. ದುಮಜಲಾ, ದುಮಜಲೀ ]

**ದುಮ್ಮತಿ** 'ದುರುಮತಿ' ನೋ.

**ದುಮ್ಮನ** 'ದುಮ್ಮಾನ' ನೋ.

**ದುಮ್ಮರಾಸ್ಮೆ** 'ದುಪರಾಸ್ಮೆ' ನೋ.

**ದುಮ್ಮಸ** (ನಾ). ಒಂದು ಬಗೆಯ ಸಿಹಿಯ ತಿನಿಸು : ಆಕಳ ಹಾಲಾಗ ದುಮ್ಮಸ ಮಾಡ ಪರಡಿ ಸವತೀ ಬೀಜ ಪಾಯಸ ಮಾಡ (ಜುಲ್ಲಿಗೆ. ೮೩).

[ ? ]

**ದುಮ್ಮಸಾಲೆ** 'ದುಮ್ಮಿಸಾಲು' ನೋ.

**ದುಮ್ಮಳ$_1$** (ನಾ). ಕಳವಳ ; ಚಿಂತೆ ; ದುಗುಡ: ಕರ್ಮವ ಮಾಡುವಲ್ಲಿ ಆ ಕರ್ಮದ ಮರ್ಮವನರಿಯದೇಕು ಆ ಮರ್ಮದ ಮರ್ಮವನರಿವಲ್ಲಿ ಉಮ್ಮಳ ದುಮ್ಮಳವೆಂಬ ಸುಖಸುಮ್ಮಾನವೆಂಬ ಉಭಯವಡಗಿದಲ್ಲಿ ಪ್ರಾಣ ಲಿಂಗ ಸಂಬಂಧ (ಮೋಳಿಮಾ. ೭೫-೧೯) : ಒಡನೆ ದುಮ್ಮಳ ತವಿಸುವಂತೆ . . . ಲಲನೆ ಪರವೆಗೆ ಸೌಂದರಾಧಿಪನ ತಂದಿತ್ತು ಸಲಹೈಯ್ಯ (ಸಾಂದಪು. ೮-೬೯). [ <ಉಮ್ಮಳ ]

**ದುಮ್ಮಳ$_2$** (ನಾ). ಒಂದು ಬಗೆಯ ಡೇರೆ : ಗುಡಿ ದುಪ್ಪಳ ಚಂಪೆಯ ಗುಡಾರಂ ಗಡಣಿಸೆ ತರತರದಿ ಬಿಡೆ ಕೆಲಕೆಲವೆಡೆಯೊಳು ಚೀನ ಮಹಾ ಚೀನದ ದೇವಾಂಗದ ತಾವಿಗಳಾ (ಕುಮುರಾ. ೦೬-೨೫) ; ಗುಡಿ ಗುಡಾರಂ ಚೆಲ್ವಂಗಡಿ ಚೌಂಗೆ ಚಂಪೆ ತಿವ್ರಂ ದುಮ್ಮಳವಿಮಳೊಂದಡಸಿದ ಪಸುರಿಂ ಕಪ್ಪಿಂ ಕಡುಗೆಂಪಿಂ ಮೆಱೆದುದವನ ಪೊಱವೀಡು ಕರಂ (ದಾಧಪು. ೦೦-೧೯). 'ದುಮಾನ$_2$' ಪರಾ. [ ? ]

**ದುಮ್ಮಾನ, ದುಮಾನ$_1$, ದುಮ್ಮನ** (ನಾ). ೧. ಮನಸ್ಸಿನ ಉಮ್ಮಳ ; ಚಿತ್ತಕ್ಷೋಭೆ: ಏನುವಂ ಕಾಣದೋರಂತೆ ಮಱವಟ್ಟು ದುಮ್ಮಾನವೊಡಲಂ ತೀವಿ ತುಳುಕಾಡುತಿರಲು ರಿಪುಭೂನಾಥಶರಧಿಪಡಬಾನಲಂ ಮಱೆದು ಚಿಂತಾಚಿತ್ರನಿರುತಿರ್ದನು (ಹಕಕಾ. ೬-೫೮) : ದುಮ್ಮಾನಂ ತೀರ್ದೊಡೆನಗೆ ರಿಪುಜಯೋಪಾಯಮಾವುದು (ರಕಕು. ೨-೬೫ ವ) : ಕೆತ್ತ ದುಮ್ಮಾನದಲಿ ದ್ರೌಪದಿಯಖತ್ತಮೆಯಲಾ ದೃಢಪತಿವ್ರತೆಗೆತ್ತಣದು ಪರಿಭವವಿದೆಂದಸುರಾರಿ ಚಿಂತಿಸಿದ (ಕುವ್ಯಾಸ. ಓರಿಇ. ೧೫-೧೩೪) : ಆಗ ಬಿಜ್ಜಳಂ ದುಮ್ಮಾನದಿಂ ಕುಳ್ಳಿರೆನಲು (ಚಬಪು. ೭-೨೫) ; ಕಾತರಿಸಿ ಕಳೆಗುಂದಿ ದುಮ್ಮಾನದಿ ಪೊಕ್ಕ ನಂತಃಪುರಕೆ ಪುತ್ರವೃಗುವಹಿವನಂತೆ (ಜೈಮಿಭಾ. ೦೮-೪೭) : ಆದರೆ ದುಮ್ಮಾನಕ್ಕೆ ಒಳಗಾಗಿದ್ದ ವ್ಯಕ್ತಿಯು ಹುಡುಗಾಟಕೆಯ ಇಲ್ಲವೆ ಬಡಿವಾರದ ಮೇಳಕ್ಕೆ ಅರ್ಹತೆ ಪಡೆದಿರಲಿಲ್ಲ (ಹೇಮಂತ. ೭೮). ೨. ದುಃಖ ; ದುಗುಡ ; ಅಳಲು ; ಚಿಂತೆ : "ಬೇವಸಂ, ದುಮ್ಮಾನಂ, ಉಮ್ಮಳಂ – ಈ ೩ ಚಿಂತೆ" (ಕಕಸಾ. ೧೨-೨೨೭); ಕತ್ತಲೆಯಲ್ಲಿ ಗತಿಯ ಕಾಣದೆ ದುಮ್ಮಾನ ನೆಲೆಗೊಂಡಿತ್ತು ಸುಮ್ಮಾನ ಹೋಯಿತ್ತು (ಅಪಜಂ. ೪೦-೪೭೧) ; ಕಂದ ನುಡಿ ದುಮ್ಮಾನ ಬೇಡೆನ್ನಾಣೆನುತ ಸಂತೈಸಿದನು ಮಗನ (ಕುವ್ಯಾಸ. ೦೬-೧೬) ; ಕಳೆಗುಂದಿದ ವದನ ದುಮ್ಮಾನವಾರಿಂದಾಯ್ತು (ತೊರರಾ. ೬-೨೬-೬೪) ; ಮನಮನಗಳಿಗೆ ದುಮ್ಮಾನವಡಸಿತು (ಸವತಿ. ೨೦೧) ; 'ಈ ಪ್ರಾಸಾದದಲ್ಲಿ ನನಗೆ ಪುಣ್ಯಭಾಗದ ಲಭ್ಯವಿಲ್ಲ' ಎಂದು ದುಮ್ಮಾನ ಹೊಂದಿ ಒಂದು ಕಡೆ ಅಳುತ್ತಾ ನಿಂತಳು (ಹತ್ತುಬು. ೫೩). ೩. ಕಷ್ಟ ; ಹಿಂಸೆ ; ತೊಂದರೆ ; ಕೇಡು ಕಂ : ಭೂನಾಥ ಬೆಟ್ಟದ ಚಾಮೇಂದ್ರ ಬಹು ದುಮ್ಮಾನವಿತ್ತನು ರಿಪುಗಳಿಗೆ (ಕಂಹವಿ. ೩-೮೧); ಒಡಲಿನಬ್ಬರವೇನು? ಆತುಮದ ನಾಣ್ಬೇನು? ಪೊಡವಿಗಿದೆ ದುಮ್ಮಾನ (ಜುಂಕುಳ. ೧೯೦); ಬಿಲದೊಡತಿ ನಾನಿಂತು ಅಳಿಯೆ, ಬಲು ದುಮ್ಮಾನ ಕುಲಕೆ ಬಹುದನುಮಾನ ಬೇಡ, ತಿಳಿಯಮ್ಮಾ! (ಕಪತು. ೩೩-೩). ೪. ಅವಮಾನ; ಅಪಮಾನ : ಅಖಿಳ ಧರಣೀಪಾಲಕರ ದುಮ್ಮಾನವನು ಪಾಂಚಾಲದೇಶವ ಕಳೆದು ಹೊಕ್ಕರು ತಮ್ಮ ನಗರಿಗಳ (ಕುವ್ಯಾಆ. ೦೩-೧) ; ಮುದಿ ತುಂಬುರಂಗೆ ಸಮ್ಮಾನವಪ್ಪೆಡೆಯೊಳೆನಗೆ ದುಮ್ಮಾನವಾದುದು ಗಡ! (ಅದ್ಭುತ. ೨೦-೯): ನೆಲಗಟ್ಟನ್ನು ನೀರೆಂದು ಭ್ರಮಿಸಿ ತಾನು ಉಟ್ಟಿದ್ದ ಬಟ್ಟೆಯನ್ನು ಮುದುರಿಕೊಂಡನು. ಅದು ನೀರಲ್ಲವೆಂದು ತಿಳಿದಾಗ ದುಮ್ಮಾನದಿಂದ ಮುಖ ತೋರಿಸದೆ ಮುಂದೆ ಹೋದನು (ಪಡಧಾ. ೮೭). ೫. ಅಸಮಾಧಾನ ; ಅಸಂತುಷ್ಟಿ : ಒಮ್ಮೆ ನಿನ್ನೊಳಗೆ ಪತಿಯ ಬಗೆ ದುಮ್ಮಾನವಾಗೆ ... ಸುಮ್ಮನಿಹುದು ಗುಣವಮ್ಮ (ಶಾಕುಂತ. ೫೭ ಅದಿಪರ್ವ). **ದುಮಾನ$_1$** : ೨. ಸುಮಾನ ಹೋಗಿ ದುಮಾನವಾಯಿತು ಮತ್ತೆ ಜನಪತಿಗೆ (ಪ್ರಭುಲೀ. ೦೦-೨೨). **ದುಮ್ಮನ** : ೨. "ದುಮ್ಮನ – ದುರ್ಮನಸ್ = ವ್ಯಥೆ" (ಕರ್ನಾಕೋ. ೨೦) ; ಕಿಱಿದನುರಾಗಮಂ ಕಿಱಿದು ದುಮ್ಮನಮಂ ... ಸೆಱೆವಿಡಿದೆನ್ನ ವಲ್ಲಭೆಯ ಮುದ್ದುಮೊಗಂ ವ್ಯಭಿಚಾರ ವಿಶ್ರಮಂ ಮೆಱೆದವುದೋ ದಿನಾಗಮದ ರಾತ್ರಿವಿರಾಮದ ಪದ್ಮದಂದದಿಂ (ಅರ್ಜನೀ. ೧-೦೧೧) ; ವಿಜಯವಿಠ್ಠಲ ಮಹಮೂರುತಿ ಘಮ್ಮನದಿಂದಲಿ ಬಂದು ದುಮ್ಮನವ ಕಳೆವ (ವಿಸಾಸು. ೩೩-೨).

[ <ಪ್ರಾ. ದುಮ್ಮಣ./ಸಂ. ದುರ್ಮನಸ್ ]

**ದುಮ್ಮಾನಗೊಳು** (ಕ್ರಿ). ಚಿಂತಿಸು ; ಬೇಗುದಿಗೊಳ್ಳು : ತನ್ನ ಮನದಲ್ಲಿ ದಕ್ಷ ದುಮ್ಮಾನಗೊಳುತ ಮಿಗೆಯನ್ನಪಾನಾದಿ ಭೋಗಗಳ ಕೊಳ್ಳದೆ ಮಗಳ ಮನ್ನಿಸುತ್ತಿತ್ತುದಕೆ ಫಲವಲಾ (ದಕುಪು. ೩-೮-೧೮).

[ ದುಮ್ಮಾನ + ಕೊಳು (<ಕೊಳ್$_1$) ]

**ದುಮ್ಮಾನತತಿ** (ನಾ). ದುಗುಡದ ಸಮೂಹ : ಒಡನೆ ಸುರರಿಗೆ ಹತ್ತಿತ್ತೆ ದುಮ್ಮಾನತತಿ ನರನಾಥ ಕೇಳೆಂದ (ಅಂಲಿಕಾ. ೭-೪೯).

[ ದುಮ್ಮಾನ + ತತಿ$_2$ ]

**ದುಮ್ಮಾನವಮನ** (ನಾ). ಚಿಂತೆಯಿಂದ ಕೂಡಿದ ಮನಸ್ಸುಳ್ಳವನಂ; ಯೋಚನೆಯಿಂದ ತುಂಬಿದವನು : ದೇವಿಯರಿರವು ತನ್ನಯ ಕಂಗಳಿಗೆ ಗೋಚರಿಸುವುದು ದುರ್ಲಭವೆನುತ ದುಮ್ಮಾನವಮನನಾದ (ತೊರಠಾ. ೫-೩-೫). [ ದುಮ್ಮಾನ + ಮನ$_1$ ]

**ದುಮ್ಮಾನವಡು** (ಕ್ರಿ). ವ್ಯಥೆಪಡಂ; ದುಃಖಹೊಂದಂ: ಬೊಮ್ಮನೇ ಸಂಸ್ಕೃತಿಯು ಕಟ್ಟಿಕೊಂಡುತ್ತಹಿಸೆ . . . ಜನ್ಮ ಸಾಕೆನುವುದೇಂ ? ದುಮ್ಮಾನವಡುವುದೇಂ (ಮುಂಕುಳ. ೨೬೨). [ ದುಮ್ಮಾನ + ಪಡು$_1$ ]

**ದುಮ್ಮಾನಿಸು** (ಕ್ರಿ). ಕಳವಳದಿಂದ ಕೂಡಿರು : ದೂರದಲಿ ದುಮ್ಮಾನಿಸಿದ ವದನಾರವಿಂದವ ಕಂಡು . . . ಶೌರಿಗಾಯ್ತುವಮಾನವಿದೆಲೇ ಮಾರಿ ಗುತ್ತವವೆನುತ ಬಂದನು ಮಾರುತನ ಮಗನು (ಕುಮ್ಮಾಉ. ೧೧-೨). [ ದುಮ್ಮಾನ + -ಇಸು$_1$ ]

**ದುಮ್ಮಿ, ದಿಮ್ಮಿ$_2$** (ನಾ). ೧. ಒಂದು ಬಗೆಯ ಚರ್ಮವಾದ್ಯ. ೨.=ದಂಮ್ಮಿಸಾಲು : ನೀರಾಜನಪದಂಗಳಂ ದುಮ್ಮಿಯ ಪದಂಗಳಂ ಪಾಡುತೊಸೆದು (ಅರಾಜ. ೧-೨೫); ದುಮ್ಮಿಸಾಲು ಕಾಮನಿಂಗೆ ದುಮ್ಮಿ ತಜ್ಜನಕನಿಂಗೆ ನೆಮ್ಮಿ ಭಜಿಸಿ ನಿಜವನರಿತು ಕಾ ಮ ಹ ರ ನ ನು (ಕವಿಪ. III, ೮೦ ; ಕಾಮವಿಜಂಬನ). **ದಿಮ್ಮಿ$_2$ :** ೧. ಕ ಲಾ ವಿ ದ ರು ದಿಮ್ಮಿಯನ್ನು ಕೈಯಲ್ಲಿ ಹಿಡಿದು ಕುಣಿತಕ್ಕೆ ಸಿದ್ಧರಾಗುತ್ತಿದ್ದಾರೆ (ರೂಢಿ). 'ದಂದುಮೆ' ಪರಾ. [ <ದುಂ./ತುಳು. ದಿಮ್ಮ ]

**ದುಮ್ಮಿಕ್ಕು, ದುಮಿಕ್ಕು, ದುಮುಕು, ಧುಮುಕಂ, ಧಂಮ್ಮಿಕ್ಕು** (ಕ್ರಿ). ೧. ಕೆಳಗೆ ಹಾರು,-ನೆಗೆ ; ಎರಗು : ಕೂಪವನೀಕ್ಷಣಂಗೆಯ್ದಲ್ಲಿ ಸಿಸುವಂ ಕಂಡು ವಾತ್ಸಲ್ಯದಿಂ ನೆಲೆಗೊಡದ ವಿಷಮಯಮಪ್ಪ ಭಾವಿಯಂ ದು[ಪಾಠಾಂ. ಧು]ಮ್ಮಿಕ್ಕೆ (ಜೀವಸಂ. ೫೦. ೦-೨೩೬); ಕೆ ಜೆ ಗ ಳ ಲ್ಲಿ ದು[ಪಾಠಾಂ. ಧು]ಮ್ಮಿಕ್ಕಿ ಮುಳುಗುತ ಸಜಿಗಳಂ ಶಾವದರುತಂ ಪಿರಿದೊಬಿಲುತಳುತಂ . . . ಅಖಿಳ ಜೈನರು ಹೊರಳುತಿರಲು (ಬಸವು. ೫೨-೧೫); ಹಕ್ಕಿ ಗ ಳ ರ ಸ ಜೀಮೂತವಾಹನಗೆ ದುಮ್ಮಿಕ್ಕಿದೊಲೆಜಿಗಿ ರಕ್ಕಸನ ಸಿಕ್ಕಿಸಿ ತಲೆಮುಚಿವಂತೊದ್ದು ನೆಲದೊಳಗಿಕ್ಕಿದ (ಮೋಹತ. ೧೨-೯೪); ಇಳೆಯ ಮೇಗಣ್ಗೆ ದುಮ್ಮಿಕ್ಕಿ . . . ದಕ್ಷನಂ ತುಡುಕಿ ಕಡುಮಿಂ ಕೆಡಪಿ ಗೋಣ್ಗೊಟಿದ ವೀರಭದ್ರಂ (ನಂದಿಮಾ. ೦-೮); ತಲೆಗೆದರಿ . . . ತಿಲಪಿಷ್ಟಮಂ ಮೆಲುತ ತೈಲವಾನದಿ ತಾವ ನಿಲದೆಂದು ದು[ಪಾಠಾಂ. ಧು]ಮ್ಮಿಕ್ಕಿದಂ ಗೋಮಯಹ್ರದಕ್ಕೆಂದು ಕಂದಿದಾನನದಿ ಪಿತನು (ವಂಕಾರಾ. ೨-೨೪-೬೨). ೨. **ಹೊರಸೂಸು ; ಹೊರಹೊಮ್ಮು ; ಪ್ರಕಟಪಡು :** ಕಂಡಳವಳೀ ರಾಜಚಂದ್ರಮನ ದೂರದಲಿ ದು[ಪಾಠಾಂ. ಧು]ಮ್ಮಿಕ್ಕಿದುದು ದೃಢವೈರ ದರುಶನವಮಾತ್ರದಲಿ (ತೊರಠಾ. ೩-೯-೬); ದುಂದುಭಿನಿನಾದವಾದಂತೆ ಪಂತನ ವಾಗ್ಸರಿ ದುಮ್ಮಿಕ್ಕಿತು (ದಾನಚಿಂ. ೦೩). **ದುಮಿಕ್ಕು :** ೧. ಮುಗಿಲನೆತ್ತಿ ದು[ಪಾಠಾಂ. ಧು]ಮಿಕ್ಕಿ ವೆರ್ಗದಹುಗಳನೊಡಬಡಿ (ಬಸವು. ೫೬-೩೬). **ದುಮುಕು :** ೧. "ಎಸೆವುದುಂ ದುಮುಕೆನಲ್ ಲಂಘನಕೆ" (ಶಶರ. ೧೨೫); ಧರ್ಮಸ್ರಾವಕೇಂದ್ರನು ಮುಂದೆ ಬಸದಿಯನೇಜಿ ದು[ಪಾಠಾಂ. ಧು]ಮುಕಿದನು (ಬಸವು. ೫೨-೦೬); ಪ್ರಾಣಸ್ಪಂದನವು ನಿಂತುಬಿಟ್ಟರೂ ಸಾವು ದುಮುಕ ಸಲ್ಲ ಉಸಿರು ಹಿಂಗಿಯೂ . . . ಆತ ಬದುಕಬಲ್ಲ (ಅರಳು. ೨೦೯-೦೫); ದುಮುಕಿದರೆ ದುಃಖ ಹೋದೀತೆ ? (ಗಾದೆ). ೩. ಧಾವಿಸು ; ನುಗ್ಗು ; ಮುನ್ನುಗ್ಗು : ಅವುಗಳನ್ನು ನೋಡಿ ಮನಸ್ಸು ಚಕಿತವಾಗಿ ಸಂಶೋಧನೆಗೆ ದುಮುಕುವುದು (ಕನ್ನಜಾ. ೦೩೦). ೪. ದಂಡುಕು ; ವಿಚಾರವಿಲ್ಲದೆ ಪ್ರವೇಶಿಸು: ಯಾವ ಕೆಲಸವೇ ಆಗಲಿ, ಹಿರಿಯರ ಸಲಹೆಯನ್ನು ಕೇಳದೆ ಒಂದೇ ಸಲ ದುಮುಕಬಾರದು (ರೂಢಿ). **ಧುಮುಕು :** ೧. ಮಡುವ ಧುಮುಕಿ ಕಾಳಿಂಗನ ಹಿಡಿದು ಹೆಡೆಯ ಮೇಲೆ ಕುಣಿದಾಡುತ್ತಿರೆ (ಪುರಂದ. ೦-೯೬-೪); ಅವನು ಪಾಳಿಯಿಂದ ಧುಮುಕಿ ಹುಡುಗಿಯರ ಹಿಂದೆ ಓಡಿದನು (ಮುಳಪಾ. ೧೯೯). ೩. ಹಜ್ಜೆಯಿಟ್ಟಲ್ಲೆಲ್ಲ ಜೋಲಿ ಹಿಡಿದಿದೆ ಮಣ್ಣು ಧುಮುಕುತಿದೆ ನೀರು (ನಲಮು. ೩೦-೩); ಅದು ತಕ್ಷಣವೇ ಬೊಗಳುವುದನ್ನು ನಿಲ್ಲಿಸಿ ತಿಂಡಿಗಾಗಿ ಧುಮುಕುತ್ತಿತ್ತು (ಚಾರಿಮ. ೧೯೮). ೪. ಹಲವು ಮಕ್ಕಳು ಪ್ರಶ್ನೆಯನ್ನೂ ಸಮಸ್ಯೆಯನ್ನೂ ಅರ್ಥ ಮಾಡಿ ಕೊಳ್ಳದೆ ಯೇ ಇತ್ಯರ್ಥಪಡಿಸಲು ಧುಮುಕುವರು (ಶಿಕ್ಷರ. ೫೪೫). **ಧುಮ್ಮಿಕ್ಕು :** ೧. ಜೀವವಂ ತ್ಯಜಿಸುವೆನೆನುತ್ತಂ ಬಾವಿಯೊಳು ಧುಮ್ಮಿಕ್ಕಿ ಬಿದ್ದಂತಾತನಂ ಹಿಡಿದು (ಬಸವು. ೦೩-೯); ರಥದಿಂ ಪೊಡವಿಯೊಳು ಧು[ಪಾಠಾಂ. ದು]ಮ್ಮಿಕ್ಕಿದನು (ಕುಮ್ಮಾಭೀ. ೬-೩೫); ಧುಮ್ಮಿಕ್ಕಿದನು ಧರೆಗೆ (ತೊರಠಾ. ೩-೨-೨೨); ಕಲ್ಲಬೆಗಳ ಮೇಲೆ ಧುಮ್ಮಿಕ್ಕಿ ನೃತ್ಯವನಾಡುವಂತೆ (ಮೋಹತ. ೧೯-೬೪); ಪುಗುವೆನಂಗುಷ್ಠಮಾತ್ರದಿ ಕೇಳು ಘೋರತರ ಮೊಗವನೆಂದೆನುತ ಧುಮ್ಮಿಕ್ಕಿ ವದನವ ಪೊಕ್ಕು (ವಂಕರಾ. ೫-೦-೫೦); ದಿನವನಿತೆ ಧುಮ್ಮಿಕ್ಕೆ ಪಶ್ಚಿಮ ಸಮುದ್ರಕ್ಕೆ, ಚಿಮ್ಮಿದುದು ರತ್ನಾಳಿ ತಳದಿಂ ನಭೋಗಣಕೆ (ಶ್ರೀಚಾಮಾ. ೨೬೦-೮೭೬); ಆವ ಸಾಗರಕೆಲ್ಲಿ ಹೋಗಿ ಸೇರುವುದೊ ! ಆವ ಕಡೆ ಧುಮ್ಮಿಕ್ಕುತೆಲ್ಲಿ ಸುಳಿಯುವುದೊ ! (ವಿಚೀಗೀ. ೯-೦೬). ೪. ಏಕಾಏಕಿ ಧುಮ್ಮಿಕ್ಕಬಾರದು. ಸಾವಧಾನವಾಗಿ ಮೆಲ್ಲಮೆಲ್ಲನೆ ಕಾರ್ಯವನ್ನೆಸಗಬೇಕು (ಕುರುಕಾ. ೧೨೯). [ ದೇ.೩ ತುಳು. ದುಮುಕು; ತೆಲು. ದುಮುಕು, ದುಮುಕ್ಕು ]

**ದುಮ್ಮಿಸಲೆ** 'ದುಮ್ಮಿಸಾಲಂ' ನೋ.

**ದುಮ್ಮಿಸಾಲು, ದಿಮಿಸಾಲೆ, ದಿಮ್ಮಿಸಾಲು, ದಂಮ್ಮಸಾಲೆ, ದಂಮ್ಮಿಸಲೆ, ದುಮ್ಮಿಸಾಲೆ** (ನಾ). ವಾದ್ಯದ ಸಂಗತಿಯೊಡನೆ ಹಾಡುವ ಒಂದುಂ ಬಗೆಯಂ ಹಾಡು : ದುಮ್ಮಿಸಾಲು ಕಾಮನಿಂಗೆ ದುಮ್ಮಿ ತಜ್ಜನಕನಿಂಗೆ ನೆಮ್ಮಿ ಭಜಿಸಿ ನಿಜವನರಿತು ಕಾಮಹರನನು (ಕವಿಪ. III, ೮೦; ಕಾಮ ವಿಜಂಬನ). **ದಿಮಿಸಾಲೆ :** ಇಲ್ಲಿನ ಮೂಲನಿವಾಸಿಗಳ ಒಂದು ಬಳಗದವರು ಮನೆಮನೆಗೆ ಬರುತ್ತಾರೆ. ಅವರು ಸ್ವಂತ ಬೇಸಾಯಗಾರರಲ್ಲ. ಅವರಲ್ಲಿ ಒಬ್ಬಾತ . . . 'ದಿಮಿಸಾಲೆ' ಎಂಬ ಪಲ್ಲವಿಯುಳ್ಳ ಒಂದು ಹಾಡನ್ನು ಹಾಡುತ್ತಾನೆ. ಸಾಲೆ, ಶ್ಯಾಲಿ ಅಕ್ಕಿಯ ಹೆಸರಾದುದರಿಂದ ಪೂರ್ವದ ಕೃಷಿಯ ಸಂಸ್ಕಾರಕ್ಕೆ ಸಂಬಂಧಿಸಿದುದು ಎಂದು ಊಹಿಸಬಹುದು (ಜಾನಗೀ. ೮೪); ಕುಂದಾಪುರದ ಕಡೆ ಹಾಡುವ ದಿಮಿಸಾಲೆ ಹಾಡಿನ ಕೊನೆಗೆ 'ಕಾಮನ ಭೀಮನಾ ಹೋಳಿಯ ಹಬ್ಬ' ಎಂಬ ಸೊಲ್ಲು ಬರುತ್ತದೆ (ಜಾನಗೀ. ೮೫). **ದಿಮ್ಮಿಸಾಲು :** ದಿಮ್ಮಿಸಾಲೆನ್ನಿ ಚಿಕ್ಕ ತಮ್ಮಗಳಿರಾ (ವಾದಿಕೀ. ೬೦ ಪಲ್ಲವಿ). **ದುಮ್ಮಸಾಲೆ :** ನಲಿದು ಮುಡುವಿಕ್ಕಿ ಗುಮ್ಮಡಿಗೆಲವಂ ವೆರ್ಗರಡಿಯಂತೆ ಕುಪ್ಪಿಕ್ಕಿ ಕರಂ ಕೆಲವಂ ಕಣ್ಣಪ್ಪಂ ಮುಂದಲೆ ದುಱುಱಿಂ ದುಮ್ಮಸಾಲೆಯೆನುತಂ ಕೆಲವಂ ಪಿರಿದುಂ ಕೊಂಬು ಕೊಳಲ್ ವಶೌವರಿಗಳ ನುಣ್ದಾರವುನಾಸ್ಯದೊಳ್ ತೋಱುತ್ತ (ಕ್ರಿಷ್ಣಪಿ. ೨೬-೦೫೬). **ದುಂಮ್ಮಿಸಲೆ :** ಮುಂದೆ ತುಱುಱುಂ ಕಟ್ಟಿ ದುಮ್ಮಿ [ಪಾಠಾಂ. ದುಂದಿ] ಸಲೆಯಾಡುತಂ ಧಂದಧಂದದ ಬೇಡರಾಟವುಂ ತೋಱುತಂ (ಕಣ್ಣ.ರ. ದೇ. ೦೩೯-೯). **ದುಮ್ಮಿಸಾಲೆ:** "ದುಂದಂವಿಂ ; ಹೋಳಿಯಂ ಹಾಡು ; ಕಾಲಜ್ಞಾನ ಪಲ್ಲವಿ" (ಜಾನಕೋ. ೬). P 'ದಿಮ್ಮಸಾಲೆ' ಎಂದು ಕೊನೆಯಾಗುವ ಹಾಡಂಗಳನ್ನು ಹಾಡುವವನಿಗೂ ಈ ಹೆಸರು ಉಪಯೋಗವಾಗುತ್ತದೆ. ಶ್ರೀರಂಗಪಟ್ಟಣದ ಕಡೆಯಲ್ಲಿ 'ಬಿಸಿಲು ಮಾರಮ್ಮ'ನ ಗಂಡ ಎಂಬ ಅರ್ಥದಲ್ಲಿ ಇದನ್ನು ಬಳಸುತ್ತಾರೆ. [ ದುಮ್ಮಿ + ಸಾಲು$_2$ (<ಸಾಲ್$_2$) ]

**ದುಮ್ಮಿಸಾಲೆ** 'ದುಮ್ಮಿಸಾಲು' ನೋ.

**ದುಮ್ಮಿಸು** (ಕ್ರಿ). ಬಿಗಿದುಕೊಂಡಿರು; ಸಿಂಡರಿಸು; ಅಸಮಾಧಾನವನ್ನು ಸೂಚಿಸು : ಮಾತಾಡದೆ ಮುಖ ದುಮ್ಮಿಸಿಕೊಂಡಿದ್ದರೆ ಯಾಕೆ ಮಹಾತಾಡ್ರೀವಿ ಹೇಳಿ (ಸಿಂದಿನಿ. ೨೬). [ ದುಮ್ಮು$_1$ + -ಇಸು$_1$ ]

**ದುಮ್ಮು₁**, ಡುಬ್ಬ, ಡುಬ್ಬು, ಡುಮ್ಮಿ, ಡುಮ್ಮು, ದಾಡುವಂ₂, ದುಬ್ಬು (ನಾ). ೧. ದಪ್ಪನಾಗಿರುವುದು ; ಬೊಜ್ಜುಬೊಜ್ಜಾಗಿ ಬೆಳೆದುದು : ಹೊಟ್ಟೆಗೆ ಹಾಕುತ್ತಿದ್ದುದು ಗಂಜಿ ನೀರಾದರೂ ಆ ಮರಿ ದುಮ್ಮುದುಮ್ಮಾಗಿ ಬೆಳೆಯಿತು (ಮಲೆಮ. ೭). ೨. ಹೊಟ್ಟೆ: ದುಮ್ಮಿನಿಂದ ಹಮ್ಮು ಕಳೆಕೊಂಡ (ಗಾದೆ). **ಡುಬ್ಬ**: ೩. ಮೇಲಕ್ಕೆ ಉಬ್ಬಿಕೊಂಡಿರುವುದಂ ; ಉಬ್ಬಿದುದು : ಅಂಗಿಯು ಮೇಲೆ ಎದ್ದು ನಿಂತಿದ್ದ ಡುಬ್ಬದ ಮೇಲೆ ಕೈ ಆಡಿದ (ಬಳಜೀ. ೯೯). ೪. ಒಂಟೆ, ಗೂಳಿ ಮೊದಲಾದಂವುಗಳ ಬೆನ್ನಿನ ಮೇಲಿರುವ ಉಬ್ಬು, ಮೇಲಕ್ಕೆದ್ದಿರುವ ದಂಡನೆಯ ಭಾಗ : ವಿರಜೆಯ ಒಂಟೆಯ ಡುಬ್ಬದಂತಹ ಮಹಾ ವೀಥಿಯಲ್ಲಿ ಟ್ರಕ್ಕು ಏರಿ ಇಳಿದಾಗ ಜೋಕಾಲಿಯ ಜೀಕು ಕೊಡುತ್ತಿತ್ತು (ದೀಪಹ. II, ೩೯೪) ; ಯಾವ ಡುಬ್ಬ (ಹಿಣಲು) ವೃಷಭದ ಕಾಂತಿಯನ್ನು ವೃದ್ಧಿಗೊಳಿಸುವುದೊ ಆ ಡುಬ್ಬವು ಆಕಳಿಗಿಲ್ಲ (ಕಮಳ. ೭೩). ೫. ಬೆನ್ನು; ಶರೀರದ ಹಿಂಬದಿ : ನೀನು ನನ್ನ ಡುಬ್ಬವನ್ನು ಹಿಡಿದುಕೊಂಡು ಬಾ, ನಾನು ನಿನ್ನನ್ನು ಆಚೀ ದಂಡೆಗೆ ಸುರಕ್ಷಿತವಾಗಿ ಒಯ್ಯುವೆನು (ಅಂಬಿಕ. ೧೦೯) ; ಗುರುಗಳು ಹೊರಗೆ ಹೋಗುವುದೊಂದೇ ತಡ . . . ಇಳಿಜಾರು ಮೇಜು, ವಿದ್ಯಾರ್ಥಿಗಳ ಡುಬ್ಬ ಮುಂತಾದುವುಗಳ ಮೇಲೆ ಸಪ್ಪಳ ಹೊರಡುತ್ತಿತ್ತು (ಕಕ್ಕಳ್ಳ. ೦೨೬). **ಡುಬ್ಬು**: (೬). **ಡುಮ್ಮಿ**: (ಗು). ೬. ದಪ್ಪವಾದ ; ಉಬ್ಬಿದ: ಏನು ಮಾಟ ಶಿವ ಡುಮ್ಮಿ ಡುಮ್ಮಿ ಹೊಟ್ಟೆ (ಜಲಾನ. ೬೦-೬). **ಡುಮ್ಮು**: ೧. ನೋಡುವುದಕ್ಕೆ ಡುಮ್ಮು ಡುಮ್ಮಾಗಿದ್ದರೂ ಶಕ್ತಿ ಮಾತ್ರ ಸ್ವಲ್ಪವೂ ಇಲ್ಲ (ರೂಢಿ). **ದುಡುಮ್ಮು**: ೧. 'ದುಡುಮು' ಪರಾ. **ದುಬ್ಬು**: ೧. 'ದುಬ್ಬ' ಪರಾ.

**ದುಮ್ಮು₂** 'ದಂಪು' ನೋ.

**ದುಮ್ಮೆಸಗು** (ಕ್ರಿ). ದೂಳೆಬ್ಬಿಸು ; ನಾಶಮಾಡು : ಮಕುಟವ ಚಿಮ್ಮಿದವು ಮುಮ್ಮಳಿದ ಕವಚವ ನೆಮ್ಮಿದವು ದುಮ್ಮೆಸಗಿ ಮಹಿಷಾಸುರನ ಶರಜಾಲ (ಅಂಬಿಕಾ. ೨೩-೨೬). [ ದುಮ್ಮು₂ (<ದುಂಪು) + ಎಸಗು₁ ]

**ದುಮ್ಮೇಳು** (ಕ್ರಿ). ರಭಸದಿಂದ ಏಳು; ಒಮ್ಮೆಲೆ ಮುನ್ನುಗ್ಗು : ಇಕ್ಕಿರ್ದ ಚೀಲಗಳ್ದುಮ್ಮೆದ್ದು ಫಲಗಳಂ ಮುಕ್ಕಲದ ನಾರಿಗುಸರಲ್ಲೇಕು ಭೂಪ ನಿನ್ನಕ್ಕಳಿಗೆ ಬಹಳ ಬಲವಿದ್ದೇನು ದೈವಬಲವಿಲ್ಲ (ತುರಂಗ. ೫೪-೩೮) ; ಧಾಳಿಯಿಟ್ಟುದು ಸೇನೆ ಕರಿಘಟೆ ತುರಂಗಚಯ ಹೋಳಿದವು ಕಡುಹಿನೋಳ್ದು ಮ್ಮೆದ್ದು ನೂಕೆ (ತುರಂಗ. ೬೩-೨೦). [ ದುಂ + ಏಳು₁ (<ಏಳ್₁) ]

**ದುಯಂ** 'ದುಯ್ಯಂ' ನೋ.

**ದುಯಂತರಾಘಂಟೆ** (ನಾ). ಎರಡನೆಯ ಮೆಟ್ಟಿಲಿನ ಘಂಟೆ: ರಥದ ಅಲಂಕಾರಕ್ಕೆ . . . ಆವಲುತರಾಘಂಟೆಗಳೂ x x x ೫೨ ದುಯಂತರಾ ಘಂಟೆಗಳೂ x x x ೧೩೪ ಸಿಯಂತರಾಘಂಟೆಗಳೂ (ಎಕ. XIV, ಸಂಜನ. ೨೯೩--ಪುಟ. ೦೯೨ ; 1847).

[ ದುಯಂ (<ದುಯ್ಯಂ) + <ತರ₃ + ಘಂಟೆ ]

**ದುಯನೃತ್ಯ** (ನಾ). [ನಾಟ್ಯ] ದ್ರುತಗತಿಯ ಒಂದು ಬಗೆಯ ನೃತ್ಯ : ಮೇಘಕುಮಾರರಾಜನ ಆಸ್ಥಾನದಲ್ಲಿ ದುಯನೃತ್ಯ, ವಿಲಂಬಿತನೃತ್ಯ, ಅರ್ಘಟನೃತ್ಯ, ವಿಭವನೃತ್ಯ ಮುಂತಾದ ನಾಟ್ಯಗಳು ಅಭಿನಯಿಸಲ್ಪಡು ತ್ತಿದ್ದುವೆಂದು ಉಕ್ತವಾಗಿದೆ (ಧಾರದ. ೩೩೦).

[ ದುಯ₀ (P ← ಪ್ರಾ. ದುಅ) + ನೃತ್ಯ ]

**ದುಯ್ಯಂ**, ದುಯಂ, ದೂಯಂ (ಗು). ೧. ಎರಡನೆಯ ಗಣನೆಯ,– ದರ್ಜೆಯ : ಅವ್ವಲು ದುಯ್ಯಂ ಶೀಯ್ಯಂ ಭೂಮಿಗೆ ಕೃಷ್ಣರಾಜ ಖಂಡಗ ಭೂಮಿಗೆ ಯಿಷ್ಟು ಖಂಡಗ ದವಸಾ ಯೆಂಬದಾಗಿ ಡವಲು ಕಟ್ಟಿ (ಮಹಾವಂ. II, ೭೦) ; ಜೂನಿಯರ್ (Junior)ಎಂದರೆ ದುಯ್ಯಂ ಕವಿಯಾಪನರೆಂದೂ ಹೀಗೆ ಇಬ್ಬರು ಕವಿಯಾಪನರನ್ನು . . . ನೇಮಿಸಿದರು (ಮಹಾವಂ. II, ೯೮). **ದುಯಂ**: ೧. 'ದುಯಂಪ್ರತಿ' ಪರಾ. ೨. ಕೈ ಕೆಳಗಿನ ; ಅಧೀನ : ಆ ಕಾಲದಲ್ಲಿ ರಾಯಚೂರಿನಲ್ಲಿ ದುಯಂ ತಾಲ್ಲೂಕು ದಾರ(Assistant Commissioner)ನಾಗಿದ್ದ ಮುಸಲ್ಮಾನ ಅಧಿಕಾರಿ ೩. ಯೊಬ್ಬನು . . . ದರ್ಶನಕ್ಕೆ ಬಂದನು (ಕಥಾ. II, ೩೮೦). (ನಾ). (ಅಂತಸ್ತು ಅಥವಾ ಯೋಗ್ಯತೆಯಲ್ಲಿ) ಎರಡನೆಯ ದರ್ಜೆ (೬). ; **ದೂಯಂ**: ೪. ಎರಡನೆಯದು: ಅವ್ವಲ್, ದೂಯಂ, ಸೀಯಂ, ಚಾರಂ ನಾಲ್ಕನು ಹೇಳುವರಂತೆಲೋ ಸೀಯಂ ನಂಬರು ದೂಯಂ ಮಾಡುವ ಸಬೂಬ್ ಜವಾಬ್ ನೋಡೆಲೋ (ನಾಹದ. ೦೪೦).

[ ←ಪಾರ. ದುಯುವ್ ; ಮರಾ. ದುಯ್ಯಮ್, ದುಯಮ್ ]

**ದುಯ್ಯಂಖಿಸ್ತು** (ನಾ). ಎರಡನೆಯ ಕಂತು : ಬದಸ್ತೂರು ದುಯ್ಯಂಖಿಸ್ತು ಮಾರ್ಗಶಿರ ಲಾಗಾಯ್ತು . . . ಐವಜು ಕಾರ್ತಿಕ ವಾರದ ಭತ್ತ ಕಾಡಾರಂಭ ಮಹಾಸೂಲು ಆಗುತ್ತಾ ಇದೆ (ಮಹಾವಂ. II, ೬೭).

[ ದುಯ್ಯಂ + ಖಿಸ್ತು (<ಕಿಸ್ತು) ]

**ದುಯ್ಯಂಪ್ರತಿ** (ನಾ). ಎರಡನೆಯ ಪ್ರತಿ ; ನಕಲು : ಆ ಬಗ್ಗೆ ಇನ್‌ಸ್ಪೆಕ್ಟರು ಹಿಂದೆ ಕಳಿಸಿದ್ದ ದಾಖಲೆಗಳು ಕಛೇರಿಯಲ್ಲಿ ದೊರೆಯದ್ದರಿಂದ ದುಯ್ಯಂ ಪ್ರತಿಗಳನ್ನು ಮಾಡಿ ಕಳಿಸಬೇಕೆಂದೂ ಆಜ್ಞೆಮಾಡಿದ್ದರು (ರಂಗಳ. ೧೬೩).

[ ದುಯ್ಯಂ + ಪ್ರತಿ ]

**ದುಯ್ಯಂಬಾರ್‌ಕಛೇರಿ** (ನಾ). ಅಠಾರಾ ಕಛೇರಿಯ ಹದಿನೆಂಟು ಇಲಾಖೆಗಳಲ್ಲಿ ಒಂದು : ತಾಲ್ಲೂಕುಗಳೂ ಮತ್ತು ಈ ಗಡಿಗಳ ಒಟ್ಟು ವಿಚಾರಣೆ ಮಾಡುವುದಕ್ಕೋಸ್ಕರ . . . ೬. ಫೌಜುದಾರಿ (ತುಕಡಿ)ಗಳೂ ಸ್ಥಾಪಿತವಾದುವು. ಅದರ ವಿವರ :—ಕಛೇರಿಗಳು—೧. ದಿವಾನ್ ಕಛೇರಿ . . . ೧೪. ದುಯ್ಯಂಬಾರ್ ಕಛೇರಿ, ೧೫. ಜನಶಿ ಕಛೇರಿ (ಮಹಾವಂ. II, ೩೯) 'ಅಠಾರಾಕಛೇರಿ' ಪರಾ.

[ ದುಯ್ಯಂಬಾರ್? + ಕಛೇರಿ (<ಕಚೇರಿ) ]

**ದುರ್**-(ಉಪ). ಕೆಟ್ಟದ್ದನ್ನು ಸೂಚಿಸುವ ಸಂಸ್ಕೃತದ ಒಂದು ಉಪಸರ್ಗ; P ಸಂಸ್ಕೃತ ಶಬ್ದದ ಸಾದೃಶ್ಯದ ಮೇಲೆ ರೂಪಿತವಾದ ಕನ್ನಡ ಶಬ್ದಗಳಿಗೆ ಈ ಉಪಸರ್ಗವನ್ನು ಬಳಸಲಾಗುತ್ತದೆ. 'ದುರ್ನಡತೆ', 'ದುರ್ನಡೆ' ಪರಾ. [ <ಸಂ. ದುಸ್ ]

**ದುರ**, ದುಱ, ಧುರ₁ (ನಾ). ಯುದ್ಧ; ಕಾಳಗ : ದುರದುಳ್ ದುಗ್ಗಮಾರರ ಪಡೆ ಒಟ್ಟೆ ಎಱಿದು ಬಿಟ್ಟ (ಎಕ. IX, ದೇವನ. ೬೩-೫೪ ; 780) ; ದುರ ದೊಳ್ ಕಾಯ್ದು ಕಡಂಗಿ ಪೊಂಗಿ ಮಲೆದೋರಂತಿಜ್ಜಿನೆಯ್ತಂದ (ಎಕ. XVIII, ೦೬೩-೩ ; 985) ; ಅವದಿರ ದುರದ ಸಿಂಹಧ್ವಾನದಬ್ಬರ ಮೆರೆಯ ಲೀಕ್ಷಿಸಿ ನುಡಿದನಸುರಾರಾತಿಯಿದಿರಿನಲಿ (ಕೋಗಿಯ. ೧೦-೨೬). △ **ದುಱ**: ಅನೇಕಬಲಸಮೇತನಾಗಿ ಯಿದಿರಾಗಿ ನಡದು ಕಾದಿದಲ್ಲಿ[ದಳದ ತ]ನಗೆ ಅಟ್ಟಗಳು ಭಟ್ಟಗಳಾಗ ಖಂಡ ತುಂಡಗಳಂ ಮಾಡಿ ವೀರಮಂ ದುಱದಲ್ಲಿ ತಂನ ದಳವಿನಿ x x ರಿದ (ಕಥ. I, ೬೩-೦೩ ; 1481). **ಧುರ₁**: "ಸಮಿತಿ ಸಂಗ್ರಾಮಂ ರಣಂ . . . ಧುರಂ ವಿಗ್ರಹಂ . . . ಸಂಖ್ಯಮೆಂದೆನಲು ಕಾಳೆಗಕೆ ನಾಮಮಕ್ಕುಂ" (ಮಂಗರಾ. ೭೩-೨೮); ಧುರದೊಳ್ ನಿಮ್ಮಡಿಯುಂ ಗೆಲಲಱಿಯರು ಮಾ ಪಾಂಡುಸುತರ್ಗಂ (ಪಂಪಭಾ. ೧೨-೩೩) ; ಧುರ ದೊಳ್ಗೋನುಗ ಭೂಪನಿಂನ ನಿಸಿತಾಸ್ತ್ರಾಘಾತದಿಂ ಸತ್ತ ಭೂಪರ ಪೆಂಡಿರ್ ಬಿಸುಸುಯ್ಯೆ (ಎಕ. VIII, ಸಾಗರ. ೦೦೯-೫೪ ; 1042) ; ಧುರದೊಳ್ ಮಯನಾತನುಮಂ ವಿರಥಂ ಮಾಡ್ಪುದುಂ (ಪಂರಾಮಾ. ೦೯-೧೩೮) ; ನೀನೇ ಧುರವ ಜಯಿಸಿದನೆನ್ನು-(ಕುವ್ಯಾವಿ. ೯-೩). [ <ಸಂ. ಉದರ./ತೆಲು. ದುರ; P ಸಂ. ಧುರ್ ಎಂಬುದರಿಂದಲೂ ಇದರ ನಿಷ್ಪತ್ತಿಯನ್ನು ಹೇಳಬಹುದು]

**ದುರಂಗಿ** (ಗು). ೧. ಎರಡು ಬಣ್ಣಗಳನ್ನು ಉಳ್ಳ : ಕಂಬಿ ಕಂಬಿಯೊಳು ಬಂದಿಳುಹಿದ್ದ ಕೋಟೆ ಕಾಕಂಬಿಯ ರಸವನೆಱೆದನು ಬಿಂಬಕೆ ಹೋಲುವ

ದುರಂಗಿಯ ವೈರಣೆಯಿಂಬುಗೊಂಡಂತಿದ್ದುದಾಗ (ಭರತೇ. ೧೭-೮೮) ; ಮೆಱೆವ ದುರಂಗಿ ಪಟ್ಟೆಯ ಗದ್ದುಗೆಯೊಳು ರಸಿಕ ಕುಳಿತ ಭಾವವಿಹುದು (ಜ್ಞಾನಸ. ೧೮-೧೪೩). ೨. ಎರಡು ಪಕ್ಕಗಳಲ್ಲೂ ಬೇರೆ ಬೇರೆ ಬಣ್ಣವನ್ನು ಹೊಂದಿದ. [ ←ಪಾರ. ಹಿಂ. ಮರಾ. ದುರಂಗೀ ]

**ದುರಂಜಿ** (ನಾ). ೧. ಒಂದು ಬಗೆಯ ಹಣ್ಣು ; ಸೀತಾಫಲ : ಸೀತಾಫಲ, ಅಮೃತಫಲ, ದುರಂಜೀಹಣ್ಣು (ಮೃಶಿಗ. ೭-೧೨೩). ೨. ಮುಳ್ಳು ರಾಮಫಲ : (ಕ). 'ತುರಂಜಿ' ಪರಾ. [ ? ]

**ದುರಂತ** (ಗು). ೧. ಕೊನೆಯಿಲ್ಲದ ; ಎಂದಿಗೂ ಮುಗಿಯದ : ಘೋರ ದುರ್ಗತಿಯಂ ಪೊಕ್ಕು ದುರಂತದುಃಖಮನನುಭವಿಸುವೆ (ಆದಿಪು. ೩-೫೬) ; ಮೋಕ್ಷದ ಬಟ್ಟೆಗಟ್ಟಿ ಬಿಡದಾಜಡಿಗೊಳ್ವ ದುರಂತದುಷ್ಕರ್ಮಕ್ಷುಭಿತೋಗ್ರತಸ್ಕರರ ದುಷ್ಟರ . . . ಕ್ಷತಿ ಮಾಡಲಾರ್ಪ ತಪದೊಳ್ಪಿನ ತೆಳ್ಪಿನ ಸಾಧುವರ್ಗಮಿಾಗಕ್ಷಯಸೌಖ್ಯಮಂ (ಜೀವಸಂ. ೧-೫) ; ಬಹು ದುಸ್ಸಹ ಕಠಿಣತರ ಕ್ರೂರ ಭಯಂಕರ ದುರಂತ . . . ತೀವ್ರವೇದನಾ ರೂಪಂಗಳಾಗಿ ಶಿವದ್ರೋಹಿಗಳಿಗೆ ನಿಷ್ಕಾರುಣ್ಯದಿಂ ಮಾಳ್ಪ ಶಿಕ್ಷಾಲೇಶಮೊಂದನಿಸಿ (ವಿವೇಕ. ೧೯೪). ೨. ದುಃಖದಲ್ಲಿ ಕೊನೆಗೊಳ್ಳುವ ; ದುಃಖಾಂತವಾದ : ಪದ್ಮಾವತಿಯ ದುರಂತವಿವಾಹಕ್ಕೆ ಕೇಶವನ ಮೋಹವೂ ಅದೇ ವೇಳೆಗೆ ಸ್ವಾಮಿಗಳ ಆಗಮನವೂ ಕಾರಣವಾಗುತ್ತದೆ (ಸಮುಜೀ. ೩೩ ಪೀಠಿಕೆ). 'ದುರಂತನಾಟಕ' ಪರಾ. (ನಾ). ೩. ಕೊನೆಯಿಲ್ಲದುದು : ಭೀಮನ ನರನಕುಲಸಹದೇವ ಸಾತ್ಯಕಿ ಧರಣಿಪನ ದ್ರೌಪದಿಯ ಚಿಂತೆ ದುರಂತವಾಯ್ತೆಂದ (ಕುಮಾಕ. ೨೭-೨೭). ೪. ದುಃಖಪೂರ್ಣವಾದ ಮುಕ್ತಾಯ; ದುಃಖದಲ್ಲಿ ಕೊನೆಗೊಳ್ಳುವಿಕೆ ; ದುಃಖಾಂತ : ಆತ್ಮಯಾತ್ರೆಯ ಮಹಾಜ್ಯೋತಿರ್ಮಹದ್ದರ್ಶನಂ ಲಭಿಸಿದಾತಂಗದೇಂ ಗುರುತರಾನಂದಕರ ಗುಹ್ಯಮಾಗುವುದೇನೊ ದೇಹಯಾತ್ರೆಯ ದುರಂತಂ ? (ಶ್ರೀರಾಮಾ. ೦೧೯-೩೦೪). ೫. ದುರ್ಘಟನೆ ; ಅಪಘಾತ : ಒಗ್ಗಟ್ಟನಿಂದ . . . ಸಮಾಜದಲ್ಲಿ ಅಂದಂದು ಒದಗುತ್ತಿರುವ ದುರಂತಗಳೂ ನಿಂತಾವು (ಶಿಕ್ಷದ. ೨೭) ; ಅವರ ಆರ್ಥಿಕ ಪರಿಸ್ಥಿತಿಯ ದುರಂತವನ್ನು ಯಾರು ವಿಚಾರಿಸಬೇಕು ? (ಹಳ್ಳಿಬ. ೧೪೯) ; ಈ ಕಾವ್ಯದಲ್ಲಿ ಕಿತ್ತೂರ ದುರಂತವೂ ಬರುವುದಿಲ್ಲ (ಕನ್ನಜಾ. ೯೪). [ ಸಂ. ]

**ದುರಂತಃಕರಣ** (ನಾ). ಕೆಟ್ಟ ಮನಸ್ಸಿನವನು : ದುರುಳರೆನ್ನವದಿರು ದುರಂತಃಕರಣರಾವ್ (ಕುಮಾಕ. ೧೫-೪೯). [ ಸಂ. ]

**ದುರಂತಕತೆ** (ನಾ). ದುಃಖದಲ್ಲಿ ಮುಗಿಯುವ ಕತೆ ; ದುರಂತದಲ್ಲಿ ಕೊನೆಗೊಳ್ಳುವ ಕತೆ : ಜೀವಕಳೆ ಧರಿಸಿ ತಂತಾನೆ ಹೆಣೆದು ನಿಲ್ಲುತ್ತದೆ- ಆ ಇಡಿಯ ದುರಂತಕತೆ ನನ್ನ ಕಣ್ಣ ಮುಂದೆ (ಅಕೋಲೀ. ೧೩).

[ ದುರಂತ + ಕತೆ ]

**ದುರಂತಕಥೆ** (ನಾ). = ದುರಂತಕತೆ : ಮೂಲತಃ ಉರ್ವಶೀ-ಪುರೂರವರ ಪ್ರಣಯಕಥೆ ದುರಂತಕಥೆ (ಕಾವ್ಯಸ. ೧೯). [ ದುರಂತ + ಕಥೆ ]

**ದುರಂತಘಟನೆ** (ನಾ). ದಾರುಣವಾದ ಸಂಗತಿ ; ಸಂಕಟಕರವಾದ ಘಟನೆ ; ದುಃಖಪ್ರಸಂಗ : ಅಂಥ ರುದ್ರಪ್ರಸಂಗದಲ್ಲಿಯೇ ಇನ್ನೊಂದು ದುರಂತಘಟನೆಯೂ ಸಂಭವಿಸುತ್ತದೆ (ಧರ್ಮಸಾ. ೧೪೦).

[ ದುರಂತ + ಘಟನೆ ]

**ದುರಂತಚಿಂತೆ** (ನಾ). ಕೊನೆಯಿಲ್ಲದ ಚಿಂತೆ : ಸಾಕು ಮಗನೆ ದುರಂತ ಚಿಂತೆಯಿದೇಕೆ . . . ಪಾಲಿಸು ಸಕಲಭೂತಳವ (ಕುಮಾಅ. ೨೧-೩೩) ; ಕೆಟ್ಟಕೇಡದನೇನ ಹೇಳುವೆನಾ ಜಯದ್ರಥನ ಬೆಟ್ಟದಿಂದುರುಳುವೆನೊ ಹಾಸಱೆಗಟ್ಟಿ ಹೊಗುವೆನೊ ಮಾಡುವೆನೆನುತ ಅಡಿಯಿಟ್ಟನಂತಃಕಲುಷಚಿತ್ತ ದುರಂತಚಿಂತೆಯಲಿ (ಕುಮಾಅ. ೨೨-೪೨).

[ ದುರಂತ + ಚಿಂತೆ ]

**ದುರಂತಚಿತ್ರ** (ನಾ). ೧. ದುರಂತಪೂರ್ಣವಾದ ಘಟನೆಯ ದೃಶ್ಯ : ಪಂಡಿತ ಜವಹರಲಾಲರು ಪಂಜಾಬಿಗೆ ಹೋಗಿದ್ದವರು ಬಂದು ನಮ್ಮ ಪಾರ್ಟಿ ಮೀಟಿಂಗ್‌ನಲ್ಲಿ ಅಲ್ಲಿನ ದುರಂತಚಿತ್ರವನ್ನು ವಿವರಿಸಿದರು (ದಿಲ್ಲಿಕ. ೫೦). ೨. ದುಃಖಪೂರ್ಣವಾದ ಘಟನೆಯ ಚಿತ್ರಣ,- ನಿರೂಪಣೆ. [ ದುರಂತ + ಚಿತ್ರ ]

**ದುರಂತನಾಟಕ** (ನಾ). ದುಃಖದಲ್ಲಿ ಮುಕ್ತಾಯವಾಗುವ ನಾಟಕ ; ಶೋಕದಲ್ಲಿ ಕೊನೆಗೊಳ್ಳುವ ನಾಟಕ; ರುದ್ರನಾಟಕ : ಪಾಶ್ಚಾತ್ಯರಿಗೆ ದುರಂತನಾಟಕವು ಕೇವಲ ಕಲೆಯ ಬೆಡಗಲ್ಲ. ಅದು ಆತ್ಮಸಂಸ್ಕಾರದ ಸಾಧನ, ಜೀವನ ಸಾರದ ಸಾಕ್ಷಾತ್ಕಾರ (ಕಾವ್ಯಸ. ೦).

[ ದುರಂತ + ನಾಟಕ ]

**ದುರಂತಪರಾಕ್ರಮ** (ನಾ). ಕೊನೆಗಾಣಿಸಲು ಅಸಾಧ್ಯವಾದ ಶೌರ್ಯವುಳ್ಳವನು ; ಸೋಲಿಸಲು ಅಸಾಧ್ಯವಾದ ಪರಾಕ್ರಮವುಳ್ಳವನು ; ಮಹಾಶಕ್ತಿಶಾಲಿ : ಸೈನ್ಯ ಮಹೋದಧಿಯ ಮಧ್ಯದಲಿ ಮೆಱೆವವನಾ ದುರಂತಪರಾಕ್ರಮನು ಗಂಗಾಕುಮಾರಕನು (ಕುಮಾಭೀ. ೩-೭).

[ ದುರಂತ + ಪರಾಕ್ರಮ ]

**ದುರಂತರ** (ನಾ). ಕಡಿಮೆಯಾದ ಅಂತರವುಳ್ಳುದು ; ನಡುವೆ ಕಡಿಮೆ ಜಾಗವುಳ್ಳುದು; ದಟ್ಟವಾದುದು : ಅರಸನ ವರೂಥಮಂ ತುರಗಂಗಳ್ ತುರಗಳಿಂ ದುರಂತರಮಪ್ಪರಣ್ಯಮಾರ್ಗದೊಳ್ ತಮ್ಮಿಚ್ಛೆಯಿಂ ಕೊಂಡೋಡಿ ಪೋಗೆ (ದಶಕು. ೨-೩೭ ವ). [ ಸಂ. ]

**ದುರಂತಸಾಹಿತ್ಯ** (ನಾ). ದುಃಖಾಂತದ ವಸ್ತುವನ್ನುಳ್ಳ ವಾಙ್ಮಯ : ದುರಂತಸಾಹಿತ್ಯವು . . . ಕನ್ನಡದಲ್ಲಿ ಹನ್ನೊಂದನೆಯ ಶತಮಾನದ ಪೂರ್ವದಲ್ಲಿಯೇ ಅಸ್ತಿತ್ವದಲ್ಲಿದ್ದಿತೆನ್ನುವುದು ತುಂಬಾ ಅಭಿಮಾನದ ಸಂಗತಿ (ಸಾಹಿಸ. ೧೦೭). [ ದುರಂತ + ಸಾಹಿತ್ಯ ]

**ದುರಂತೋದ್ವೇಗ** (ನಾ). ಕೊನೆಯಿಲ್ಲದ ತಳಮಳ,- ಆತಂಕ : ತಚ್ಚಿತ್ತದ್ವಂದ್ವದ ಮನಕೆ ಸಮಾಕಾರಸಂಪದ್ವರಾಲಾಭದುರಂತೋದ್ವೇಗಮಂ ನೀಡಿದನತಿತರ ನಿರ್ಬಂಧದಿಂ ಪದ್ಮಸದ್ಮಂ (ಚಂದ್ರಪು. ೫-೯೭).

[ ದುರಂತ + ಉದ್ವೇಗ ]

**ದುರಕ್ಷರ** (ನಾ). (ಅಲಂ) ಕೆಟ್ಟ ಹಣೆಯ ಬರಹ: ಸರಸಿರುಹಸಂಭವಕೃತ ದುರ[ಪಾಠಾಂ. ರಾ] ಕ್ಷರವಿನಿಮಿತ ನಿರಾಸಕಮಹಾನಿರುಪಮಿತ ಮಹಿಮಾಧ್ಯನಂ ಪ್ರಾರ್ಥನನಮೌಢ್ಯನನು . . . ಕೊಂಡಾಡಿ (ಬಸಪು. ೪೭-೭೧).

[ ಸಂ. ]

**ದುರಗಲಿ, ಧುರಗಲಿ** (ನಾ). ಕಾಳಗದಲ್ಲಿ ಶೂರನಾದವನು ; ರಣಧೀರ: ದುರಗಲಿ ಕಂಸನುದ್ಧತಸಾಹಸವ ಕೇಳಿ ಹರಿವ ಹುಮ್ಮರಿವ ಕಿಚ್ಚುಗಳ ಭರದಿಂದಡಗುವುವು (ನೇಮಿಷಂ. ೧೪-೮) ; ದುರಗಲಿಯೆಯೆನ್ನ ಪ್ರೀತಿಯ ಸಲಿಸು ನೀನೆಂದು ವಿರಹದಿಂದೂರ್ವಶಿಯು ನುಡಿಯೆ (ಪ್ರಭುಪು. ೫-೮೭) ; ದುರಗಲಿ ಕಂಠೀರವ ನರಸೇಂದ್ರಭೂವರನೊಳ್ಪಡನು ಸೊಬಗಿಂದ (ಕಂಸವಿ. ೮-೪೭). **ಧುರಗಲಿ** : ಎತ್ತಾನುಮಿ[ದುರ್ಮಿಱೆವಂ]ದೋಡಿಱುವ ಧುರಗಲಿಗಳುಮಂ . . . ನೋಡಿ [ವಿಸ್ಮಯಂಬಟ್ಟು] (ಗದಾಯು. ೯-೩೪ ವ) ; ಧುರಗಲಿ ಚೋಳನ ಪಟ್ಟದ ಕರಿವರನಾ ನೀಲಗಿರಿಯ ನಿರ್ಝರಜಲದಂತಿರೆ ಗಂಡಯುಗಳದಿಂದಂ ಪರಿವ ಮದಾಂಬುಗಳಿನೆಸೆದುದದನೇಪೊಗಳ್ವೆಂ (ತ್ರಿಪುವಿ. ೨೨-೧೭); ಗರ್ಜನಕ್ಕಿಳಿ ನಡುಗೆ ಮಹಾಹವಮನೆಸಗಿದರ್ ಧುರಗಲಿ[ಪಾಠಾಂ. ದುರಗಲಿ, ಧುರಕಲಿ]ಗಳ್ (ಶಬಶಂ. ೪-೭೭). [ ದುರ + ಕಲಿ₂ ]

**ದುರಗಲಿತನ** (ನಾ). ಯುದ್ಧದಲ್ಲಿ ತೋರುವ ಪರಾಕ್ರಮ,-ಶೌರ್ಯ : ಆತನ ದಳಪತಿ ಮನ್ನೆಯರುಗಳ ದುರಗಲಿತನವ ಪೇಳಿದನು (ಕಂಸವಿ. ೧೧-೭೨); ಆತನ ಸೈನಿಕರು ದುರಗಲಿತನದಿಂದ ಹೋರಾಡಿ . . . ತುರುಕರ ಸೈನ್ಯವನ್ನು ತರಿದು ತೂರಿದರು (ಕವೀರ ೧೧೪). [ ದುರಗಲಿ + -ತನ ]

**ದುರಗುಟ್ಟು** 'ದುರುಗುಟ್ಟು' ನೋ.

**ದುರಗೆ** (ನಾ). ಒಂದು ಬಗೆಯ ಸಸ್ಯ : (ಪ್ರಾಶಿಗಿ. ೭೭-೧೫೮೪). [ ? ]

**ದುರಘ** (ನಾ). ಮಹಾ ಪಾಪ,-ಪಾತಕ; ದುಷ್ಕರ್ಮ: ಜಾನಕಿ ಮೂರ್ಛಿತೆಯಾಗೆ ದಶಾನನನನುಕಂಪೆ ಪುಟ್ಟಿ ಕರುಣಿಸಿ ತನ್ನಂ ತಾನೆ ಮಱಿದುಱಿದು ಕರ್ಮಾಧೀನ ಸಮುತ್ಪನ್ನದುರಘದುಷ್ಪರಿಣತಿಯಂ (ಹಂಪಾರಾಮಾ. ೧೪-೧೧೦) ; ದುರಘವಿಷವೃಕ್ಷಮೂಲೋತ್ಕರಮಂ ಕೀೞ್ವಂತೆ ಕಿೞ್ತಂ . . . ಕುಟಿಳಕುಂತಳಕುಳಮಂ (ನೇಮಿಪು. ೦೩-೩೭). [ ಸಂ. ]

**ದುರತ್ಯಯ** (ಗು). ೧. ಅಧೀನಮಾಡಿಕೊಳ್ಳಲು ಕಷ್ಟವಾದ ; ಅಜೇಯವಾದ (ನಾ). ೨. ಅಧೀನಮಾಡಿಕೊಳ್ಳಲು ಕಷ್ಟವಾದುದು; ಅಜೇಯವಾದುದು : ಗೋಪಿಯರೀಕ್ಷಿಸೆ ಕೃಷ್ಣನಾದರ್ಪ ತಳೆಶಟ್ಟ ದುರತ್ಯಯನಸುರವೃಷಂಗಭಿಮುಖತೆಯಿನೆಯ್ದಿದಂ (ಜಗವಿ. ೫-೩೭) ; ಈ ಪಥವು ಕ್ಷುರಧಾರೆಯಂತೆ ನಿಶಿತವೆಂದೂ ದುರತ್ಯಯ ಎಂದರೆ ಅಡಿಯಿಡುವದು ತುಂಬ ಕಷ್ಟಕರವೆಂದೂ ವರ್ಣಿಸಲ್ಪಟ್ಟಿದೆ (ಮಹಾಯೋ. ೭೯).

[ ಸಂ. ]

**ದುರದುರ₁** 'ದುರು' ಪರಾ.

**ದುರದುರ₂** (ನಾ). ಮುಜುಗರ: ಈ ಬಂಧುಗಳಿಬ್ಬರೂ ಇಂದಿನ ಕಾಲದ ಹುಡುಗರು. ಯಾವ ಮಾತುಗಳೂ ಅವರ ಬಾಯಲ್ಲಿ ಬರುವಾಗ ದುರದುರ ಎಲ್ಲ, ಬಾಧೆ ಸಂಕೋಚ ಇಲ್ಲ (ಇಪ್ಪಳ. ೨೮೩).

[ ←ಹಿಂ. ದುರಾದುರೀ ]

**ದುರದುರನೆ** 'ದುರುದುರನೆ' ನೋ.

**ದುರದೃಷ್ಟ** (ನಾ). ಕೆಟ್ಟ ಅದೃಷ್ಟ ; ದುರ್ದೈವ ; ದೌರ್ಭಾಗ್ಯ : ನನ್ನ ಹುಟ್ಟನ್ನು ಹಿಡಿದಂಟಿದ ದುರದೃಷ್ಟಕ್ಕೆ ನೊಂದೆನಲ್ಲದೆ ನಿಮಗಲ್ಲ (ವೀರಲಂ. ೯೪); ಬರುವಾಗ ದುರದೃಷ್ಟ ಬೇಗನೆ ಬರುವುದು ಧಾವಿಸಿ ಕುದುರೆಯನೇರಿ ಬೀಳ್ಕೊಂಡು ಹೋಹಾಗ ಮೆಲ್ಲನೆ ಹೋಹುದು ಹೋಹಂದು ಅದು ಪಾದಚಾರಿ (ಇಂಜಾಶ. ೧೭೨-೪೭). [ ಸಂ. ]

**ದುರದೃಷ್ಟಶಾಲಿ** (ನಾ). ಹೀನ ಅದೃಷ್ಟವುಳ್ಳವನು ; ಭಾಗ್ಯಹೀನ : ಕೆಲವರು ಮಾತ್ರ ತನ್ನಂತಹ ದುರದೃಷ್ಟಶಾಲಿಗಳು (ಬಿಳಿಜೀ. ೧೭೪).

[ ಸಂ. ದುರದೃಷ್ಟಶಾಲಿನ್ ]

**ದುರಧ್ವ** (ನಾ). ೧. ಕೆಟ್ಟದಾರಿ:"ವ್ಯಧ್ವಃ, ದುರಧ್ವಃ, ವಿಪಥಃ, ಕದಧ್ವಾನ್, ಕಾಪಥಃ ಇ ಕೆಟ್ಟದಾರೀ; ಸೀಳ್ವಹಾದಿ" (ಸಿದ್ಧಾಂತಿ. ೮೭). ೨. ಅಸಭ್ಯವಾದ ಮಾರ್ಗ ; ಗಾಂಭೀರ್ಯವಿಲ್ಲದ ರೀತಿ. [ ಸಂ. ]

**ದುರನ್ನ** (ನಾ). ದೋಷಪೂರ್ಣವಾದ ಆಹಾರ: ಸಲೆ ನಿಜವೃತ್ತಿಯನುಳಿದು ದುರನ್ನವ ನಲಿದುಂಡು ಹೊಟ್ಟೆಯ ಹೊರೆಯುತಲಿ (ಪುರಂದ. ೫-೦೪೨-೨); ದುರನ್ನವೆಂದರೆ ಅನ್ನದ ಅಥವಾ ಪದಾರ್ಥದ ದೋಷದಿಂದಲೇ ತಿನ್ನಬಾರದಾದುದು. ಗಿಣ್ಣುಹಾಲು, ಫಲಕ್ಕೆ ಬಂದ ಹಸುವಿನ, ಎಮ್ಮೆಯ ಹಾಲು . . . ಇತ್ಯಾದಿಗಳು (ಆಯುರ್ಧ. ೨೦೮). [ ಸಂ. ]

**ದುರಪದ, ಧ್ರುಪದ**(ನಾ). ನರ್ತನಕ್ಕೆ ಹೊಂದಿಕೊಳ್ಳುವ ಒಂದು ಬಗೆಯ ಹಾಡು : ಅಡಿಗಡಿಗೆ ದುರಪದವನೊಯ್ಯನೆ ನುಡಿಸು ಲಿಂಗಾದೇವಿ ಕೊಳಲಂ ನುಡಿಸು ಚಂಗಳೆ ತಾಳಧರಿ ನೀನಾಗು ಭೋಗಾಯಿ (ಬಸಪು. ೦೨-೪೨). **ಧ್ರುಪದ** : ಆದರ ನೀಳವಾದ ಜೋಲುಬಾಲ ಧ್ರುಪದಗಾನದ ಆಲಾಪದಂತೆ ... ವಿಲಾಸಮಾಡುವುದು (ಗಾಳಿಪ. ೮). 'ದ್ರುಪದ' ಪರಾ.

[ <ಸಂ. ಧ್ರುವಪದ./ತೆಲು. ದುರುಪದ = ತ್ವರಿತಗತಿಯಿಂದ ಮಾಡುವ ಪಾದವಿನ್ಯಾಸ ]

**ದುರಭರ** (ಗು). ಸಹಿಸಲು ಕಷ್ಟವಾದ ; ತಾಳಲಾಗದ ; ಅತಿಶಯವಾದ : ದುರ[ಪಾಠಾಂ. ರು]ಭರದ ಜವ್ವನದಲ್ಲಿ ತೋರಣದೆ(ದ)ಲೆಯಂತೆ ಮಹಾಲಿಂಗ ಗಜೇಶ್ವರನ ನೆರೆವ ಭರದಿಂದ ಆಳಿಕವೃದ್ಧಿಯಾಗಿದ್ದಳಲ್ಲಾ (ಸರ್ವವ. ೬೮-೩೭೦) ; ಭೂತ ಶರೀರದೊಳು ಬಿದ್ದು ಬೆಂಬೀಳುವನಲ್ಲ ದುರಭರದ[ಪಾಠಾಂ. ದುರಾಭವದ, ದುರುಬರದ, ಧುರಾಭರದ] ಕಾಮಕತ್ತಲೆಯ ಕಳದೋದ ಕಲಿ ಓರಿದಪ್ಪ ಮಾಯೆಯ ಗೆಲಿದ ನಿರೋಧವಿಲ್ಲದೆ (ಶಿವಗೀ. ೨೭-೦೦೮). [ <ಸಂ. ದುರ್ಭರ ]

**ದುರಭಿಪ್ರಾಯ** (ನಾ). ೧. ಕೆಟ್ಟ ಉದ್ದೇಶ; ದುಷ್ಟ ಆಶಯ,-ಭಾವನೆ: ಆದರಿಂದ ಮಹಾಪ್ರಭುಗಳ ಬಗ್ಗೆ ಯಾವ ಬಗೆಯ ದುರಭಿಪ್ರಾಯವೂ ಮೂಡಲಾರದು (ನಗಹೊ. ೨೩೮). ೨. ದುಷ್ಟಬುದ್ಧಿಯುಳ್ಳವನು ; ಕೆಟ್ಟವ್ಯಕ್ತಿ : ದುರಭಿಪ್ರಾಯನೆ ನೀಚರಾನ್ವಯದ ಶುದ್ಧಾಚಾರವಂ ಬಿಟ್ಟು . . . ಪರದಾರಪ್ರಿಯನಾದ ಪಾತಕನೆ (ಹಂಪಾರಾಮಾ. ೧೪-೯೮).

[ ಸಂ. ]

**ದುರಭಿಮತ** (ನಾ). ೧. = ದುರಭಿಪ್ರಾಯಂ. ೨. ಕೆಟ್ಟ ಅಭಿಪ್ರಾಯಮುಳ್ಳವನು ; ನೀಚ ಮನಸ್ಸುಳ್ಳವನು : ದುರಭಿಮತದುಷ್ಪೂರ್ವರೆನ್ನ ಕುಮಾರರಭಿಧಾನ (ಕುವ್ಯಾಸ. ೦೫-೪೯). [ ಸಂ. ]

**ದುರಭಿಮಾನ** (ನಾ). ಕೆಟ್ಟ ಅಹಂಕಾರ ; ಒಣಹೆಮ್ಮೆ : ದುರಭಿಮಾನಮಂ ಕೈಕೊಂಡಿರಲ್ ಪಸಿದು ಸಾವಾದಪುದು (ಹಂಹತಂ. ೨೭೯-೧); ಗನ್ನಗತಕಂಗಳ ನೆಲೆಗಳಾ ದುರಭಿಮಾನೋನ್ನತಂಗಳು ಪಾರಸತಿಗಳ ಮನಸುಗಳು (ಬಸಪು. ೪೦-೭೭) ; ಎಷ್ಟೋ ಜನರು ದುರಭಿಮಾನದಿಂದ . . . ಎರಡನೆಯವರ ಅಪರಾಧಗಳನ್ನು ಕ್ಷಮಿಸುವುದಿಲ್ಲ (ಮುಂಬಯಿ. ೪-೮೫). [ ಸಂ. ]

**ದುರಭಿಮಾನಿ** (ನಾ). ಒಣಹೆಮ್ಮೆಯಿಂದ ಕೂಡಿದವನು: "ವಿದಗ್ಧಂಮನ್ಯನವಂ ದುರಭಿಮಾನಿ ಮತ್ತಂ ಕ್ಷೀಬಂ" (ವಸ್ತುಕೋ. ೧೦೦-೧೪).

[ ಸಂ. ದುರಭಿಮಾನಿನ್ ]

**ದುರಭಿಸಂಧಿ** (ನಾ). ಕೆಟ್ಟ ಅಭಿಪ್ರಾಯ,-ಉದ್ದೇಶ ; ದುರುದ್ದೇಶ : ಕ್ರೋಧಮೂರ್ಛಿತನಾಗುತಾರೋಪಣಂಗೆಯ್ವ ನೀಂ ಭೃತ್ಯವತ್ಸಲ ಭರತನಿಗೆ ದುರಭಿಸಂಧಿಯಂ (ಶ್ರೀರಾಮಾ. ೧೫೯-೦೪೭); ಯುಧಿಷ್ಠಿರನು ದುರ್ಯೋಧನನ ದುರಭಿಸಂಧಿಯನ್ನು ತಿಳಿದಿದ್ದರೂ ... ಆ ಮನೆಯಲ್ಲಿ ಇದ್ದು ಜೋಕೆಯಿಂದಿದ್ದನು (ಭೀಷ್ಮಪ. ೬೪) : ತನ್ನನ್ನೆ ರಾಜನಾಗಿರೆಂದು ಬೇಡಿಕೊಳ್ಳುತ್ತಿರುವಂಥ ಜನರ, ದುರಭಿಸಂಧಿ ಅರ್ಥವಾಗುತ್ತದೆ (ಸುವರ್ಣ. ೧೮೮) ; ಅವನ ಹೃದಯದ ನಿಗೂಢ ದುರಭಿಸಂಧಿ, ಅಷ್ಟು ಶೀಘ್ರವಾಗಿ ಕೈಗೂಡುತ್ತದೆ ಎಂದು ಅವನು ಭಾವಿಸಿರಲಿಲ್ಲ (ಮಳಿಮ. ೭೯೫) [ ಸಂ.]

**ದುರಭಿಹಿತ** (ನಾ). ಇಷ್ಟವಾಗದ ಹೇಳಿಕೆ ; ಹಿತವನ್ನುಂಟುಮಾಡದ ನಂಡಿ : ದೂತನ ದುರಭಿಹಿತಂಗಳಂ ಭೂಪಾಲನೇಳಲಂಗೇಳ್ದು ಮಂದಸ್ಮಿತಮುಖಸರೋಜಂ ಯುವರಾಜನಂ ನಿರೀಕ್ಷಿಪುದುಂ (ಚಂದ್ರಪು. ೯-೦೦೭ ವ).

[ ಸಂ. ]

**ದುರಭ್ಯಾಸ** (ನಾ). ಕೆಟ್ಟ ಚಟ, - ಅಭ್ಯಾಸ : ಶ್ವೇತವರ್ಣೀಯರು ನಮ್ಮ ಮೇಲೆ ಅಪಪ್ರಚಾರ ಮಾಡುವ ದುರಭ್ಯಾಸ ಇಟ್ಟುಕೊಂಡಿದ್ದಾರೆ (ನಾಡಿಗೇ. ೦೭೩) ; ತರಕಾರಿ ಇಂತಹುದೆ ಎಂದು ಹೇಳುವುದು ಕಷ್ಟವಾಗುವ ಮಟ್ಟಿಗೆ ಬಣ್ಣ. ವಾಸನೆಗಳನ್ನು ರೂಪಾಂತರ ಮಾಡುತ್ತಿರುವ ದುರಭ್ಯಾಸ ಹೋಗಬೇಕು (ತರಚಿ. ೬೦). [ ಸಂ. ]

**ದುರಭ್ಯಾಸಿ** (ನಾ). ಕೆಟ್ಟಚಟವುಳ್ಳವನು ; ದುಷ್ಟಚಾಳಿಯುಳ್ಳವನು : ವಿದ್ಯಾರ್ಥಿಗಳೆಲ್ಲ . . . ಸಿಗರೇಟು ಸೇದುವ ದುರಭ್ಯಾಸಿಗಳಾಗಿದ್ದಾರೆ (ರಂಗರೊ. ೦೨೫). [ ಸಂ. ದುರಭ್ಯಾಸಿನ್ ]

**ದುರವಗಾಹ** (ಗು). ೧. ಅಳೆಯಲು ಅಸಾಧ್ಯವಾದ ; ಆಳವನ್ನು ಅಳೆಯಲಾಗದ. (ನಾ). ೨. ತಿಳಿಯಲು ಕಷ್ಟವಾದುದು ; ಕಷ್ಟಗ್ರಾಹ್ಯವಾದುದು: ಇಷ್ಟ ಬಂದಂತೆ ಪದಕಲ್ಪನೆಗಳನ್ನು ಮಾಡಿಕೊಳ್ಳುತ್ತಾ ಬರಲು ಅವು ಇತರ ಮಾಂಡಲಿಕರಿಗೆ ದುರವಗಾಹಗಳಾದಂತೆ (ಕಸಾಪ. I, ೫೯-೧೯೦೯). [ ಸಂ. ]

**ದುಸ್ಸಹ** (ಗು). ೧. ಸಹಿಸಲು ಕಷ್ಟವಾದ; ತಾಳಲಾರದ; ಸೈರಿಸಲಾಗದ: ತನ್ನ ಪಿರಿಯ ಮಗನಂ ಕರೆದು ತನ್ನ ದುಸ್ಸಹಾವಸ್ಥಾಂತರವಮನಱಿಪಿ (ಆದಿಪು. ೨-೧೯ ವ); ಅತಿ ದುಸ್ಸಹವಾರ್ತಾವಿಷಲತೆಯಂ ನಾಂಟಿಸಲಿದಲ್ತೆ ಕಂಸಶೋತ್ರಕ್ಷಿತಿಖನನಪವಿಶರಾಕಾತಿಯೆನೆ ವಶನಾಂತು ನಿವಿರೆ ಮುನಿ ಯಿಂತೆಂದಂ (ಜಗವಿ. ೨-೪೩); ಇತ್ತ ಹೆತ್ತ ತಾಯಿ ದುಸ್ಸಹ ಸಮಾಚಾರ ವನ್ನು ಕೇಳಿ ಪ್ರಾಣಬಿಟ್ಟರು (ಶಾಂತಲಾ. ೧೭೦). (ನಾ). ೨. ಸಹಿಸ ಲಾಗದುದಂ; ತಾಳಲಾಗದುದಂ: ಆ ಕಾಮುಬಾಣಾಗ್ನಿಯಿಂ ಸರ್ವ ಮುಖಕ್ಕೀಡಾಗ್ನಿಯೇಂ ದುಸ್ಸಹಮೆ (ಜಗವಿ. ೩-೯೩); ದುಸ್ಸಹವು ನಿಮ್ಮಭ್ಯುದಯವಹಿತರಿಗೆ (ಕುಮಾ.ಸ. ೧೧-೦೮); ತೆರಳಲ್ಲಿಪ್ಪರ್ ದೇಶಾಂತರ ಕಬಲಾಜನದ ಚಿಂತೆ ದುಸ್ಸಹಮಲ್ತೇ (ಶಾಕುಂತ. ೪೮-೪); ಅವಮಾನವನ್ನು ಸಹಿಸಲು ಯುವಕರಿಗೆ ದುಸ್ಸಹ (ಶಿಕ್ಷದ. ೧೦೩). ೩. ಸಹಿಸಿಕೊಳ್ಳಲು ಆಗದವನು: ದುರ್ಲಭನಾರು ದುಸ್ಸಹನಾರು ದುರ್ಮತಿ ಯಾರು ಧರ್ಮಜ ತಿಳಿಯಹೇಳೆಂದ (ಕುಮಾ.ಅ. ೦೩-೫೭): ಮಹಾದುಸ್ಸಹನ ದುಶ್ಶೀಲನ ದುರಾಚಾರನ . . . ಕೈವಿಡಿದೆತ್ತಬೇಕೆಲೆ ದೇವ (ಕೊಶರಾ. ೯-೪-೫೭); ದುಸ್ಸಹರಜೇಯರಪ್ರತಿಸಮರಧರ್ಸಾಹಸಿಗಳರ್ವರುಂ ಗಗನಗಮನದ ವೀರರು (ಜೈಮಿಭಾ. ೨೨-೫೦). [ ಸಂ. ]

**ದುಸ್ಸಹವಾಸ** (ನಾ). ಕೆಟ್ಟ ಸಹವಾಸ ; ದುಸ್ಸಂಗ : ದುಸ್ಸಹವಾಸವು ದುರ್ಗತಿಯನ್ನು ಕೊಡುವದಾಗುವದು (ಅಳಿಗಿಚು. ೬೯). [ ಸಂ. ]

**ದುಸ್ಸಹಸ** (ನಾ). ಅಸಾಮಾನ್ಯವಾದ ಸಾಹಸ ; ಅತ್ಯಂತ ಸಾಹಸ : ಹುದುಗಿದಗ್ಗದ ಸತ್ವ ದುಸ್ಸಹಸದ ನಿರೂಢಿಯ ಸೋಸಮಯ [ಪಾಠಾಂ. ದುತ್ಸಾಹದ ನಿರೂಢಶ್ವಾಸದಲಿ]ಗದುಗದಿತ ಕಂಠದ . . . ಗುರುವಾಯಿಳಿದ ಭೀಮನ ಕಂಡನಾ ಭೂಪ (ಕುಮಾ.ಅ. ೦೩-೫೮). [<ಸಂ. ದುಸ್ಸಾಹಸ]

**ದುಸ್ಸಾಧ್ಯ** (ನಾ). ಕಾರ್ಯಗೊಳಿಸಲು ಅಸಾಧ್ಯವಾದುದಂ,-ಕಷ್ಟಸಾಧ್ಯ ವಾದುದು : ವಿದ್ಯಾವಂತರು . . . ಉತ್ತಮವುಟ್ಟದ ಜೀವನ ನಡೆಸ ಬೇಕೆಂದು ಹಾರೈಸುವುದು ಸಹಜವಾದ್ದು. ಆದರೆ ಅನೇಕರಿಗೆ ಅದು ದುಸ್ಸಾಧ್ಯವೆನಿಸಬಹುದು (ಶಿಕ್ಷದ. ೬೬೮). [ ಸಂ. ]

**ದುಸ್ಸಾಹಸಿಕ** (ನಾ). ಗಂಡಾಂತರವನ್ನು ಎದುರಿಸುವ ಅತಿಯಾದ ಸಾಹಸ : ತನ್ನ ಪ್ರಾಧಾನ್ಯವನ್ನು ರಕ್ಷಿಸಿಕೊಳ್ಳುವುದಕ್ಕೋಸ್ಕರ ದುಸ್ಸಾ ಹಸಿಕವಾದೊಂದು ಸಂಕಲ್ಪವನ್ನು ಮಾಡಿದಳು (ಕಪಾಕುಂ. ೬೩). [ ಸಂ. ]

**ದುಸ್ಸ್ಥಲ**, ದುಸ್ಸ್ಥಳ (ನಾ). ೧. ಕೆಟ್ಟ ಸ್ಥಳ ; ಅನುಕೂಲವಲ್ಲದ ಜಾಗ. **ದುಸ್ಸ್ಥಳ** : ೨. ಇಕ್ಕಟ್ಟಾದ ಮಾರ್ಗ,-ಸ್ಥಳ : ದುಸ್ಸ್ಥಳಮುದಯಾಚಳ ಧಾತುಸ್ಥಳಿಯಂ ಬೇಗಮುಡರ್ವ ದಿನನಾಥರಥಪ್ರಸ್ಥಾನಪಾಂಸುವೆನಿಸಿ ದಿಶಾಸ್ಥಗಿತಂ ರಂಜಿಸಿತ್ತು ಸಂಧ್ಯಾರಾಗಂ (ಮಲ್ಲಿಪು. ೭-೧೦೩). [ ಸಂ. ]

**ದುಸ್ಸ್ಥಳ** 'ದುಸ್ಸ್ಥಲ' ನೋ.

**ದುಸ್ಸ್ವಪ್ನ** (ನಾ). = ದುಸ್ವಪ್ನ : ದುಸ್ಸ್ವಪ್ನಕೆ ಬೆಚ್ಚುತಲೆಚ್ಚತ್ತಂತೆ ನಾವೆ ದ್ದೆವು ನಲ್ಲಿಳಿವಿಗೆ (ಅಹಲ್ಯ. ೧೦೩-೧೧). [ ಸಂ. ]

**ದುಸ್ಸ್ವಭಾವ** (ನಾ). ಕೆಟ್ಟ ಸ್ವಭಾವ; ದುಷ್ಟ ಗುಣ. [ ಸಂ. ]

**ದುಸ್ಸ್ವರ** (ನಾ). = ದುಸ್ವರ ೧ : ಕಾಗೆ ಬಂದು ವಾಯ್ಯುಂ ದುಸ್ಸ್ವರದಿಂ ಕರೆವುದುಂ (ಪಂಚತಂ. ೨೨೪-೧೧). [ ಸಂ. ]

**ದುಸ್ಸ್ವರೆ** (ನಾ). ಕೆಟ್ಟ ಧ್ವನಿಯುಳ್ಳವಳಂ : ದುರ್ಗಂಧೆ ದುಸ್ಸ್ವರೆ ಪುಟ್ಟುಂ ಗುರುಡಿ ಪೊಲತಿಯಾಗಿ ಪುಟ್ಟಿ (ವಡ್ಡಾರಾ. ೯-೩). [ ಸಂ. ದುಸ್ಸ್ವರಾ ]

**ದುಹತ್ತ**, ದೂಹತ್ತ (ನಾ). ಎರಡು ಕೈ : "ದುಹತ್ತ (ದೂಹತ್ತ) – ದ್ವಿಹಸ್ತ = ಹಸ್ತಯುಗ್ಮ" (ಶಬ್ದಕೋ. ೨೦) ; ದುಗೆ – ದ್ವಿಗುಣ – ದುಗುಣ . . . ದ್ವಿಹಸ್ತ – ದುಹತ್ತ, ದೂಹತ್ತ (ಶಮದ. ೨೯೦ ಪ್ರಯೋ). **ದೂಹತ್ತ** : ಮೇಲಿನ ಪ್ರಯೋಗಗಳನ್ನು ನೋಡಿ. [ ದು + ಹತ್ತ ]

**ದುಹಾರ** (ನಾ). (?) : ಕಂಗಳೋರೆಯು ಥಾಳಿಸುವ ಹಾಸಂಗಿಗಳ ಬಿಗುಹಿನ ದುಹಾರದ ಭಂಗಿಗಳ ಬಲುವಿಟರ ಕರಣದ ಸಾರಿಗಳ ಸೆರೆಯು ಮುಂಗುಡಿಯ ನಿಜನಾರಿಯರ ಕವಿವಂಗವಣೆಗಳ ಜೂಜುಗಾತಿಯರಂಗನೆಯ ದಂಡಿಗೆಯು ಬಳಿವಿಡಿದರು ವಿದಗ್ಧೆಯರು (ಕುಮಾ.ಅ. ೧೩-೪೨) : ಕೆಲಬಲನ ಭಿತ್ತಿಯ ಕಂಬ ಕಂಬದ ನಡುವೆ ಭಿತ್ತಿಗಳು ಹೊಳಹನೇ ಕಂಡೆನು ವಿವೇಕದ ಕಳಿವು ಚಿತ್ತದ ಸೆಜೆ ದುಹಾರದೊಳಿ [ಪಾಠಾಂ. ಳು] ಳಿದವಕ್ಷಿಗಳಿಂತು ಸೋತೆನು (ಕುಮಾ.ಸ. ೧೨-೩೩) ; ದುಗನ ಹಾಯಿಕು ತನಗೆ ಹಾಯ್ಕಿತ್ತಿಗನವೆಂಬಬ್ಬರದ ಹಾಸಂಗಿಗಳ ಬೊಬ್ಬೆಯ ಸಾರಿಗಳ ಮಣಿಖಟಿಲನಿಸ್ವನದ ಉಗಿವ ಸೆರೆಗಳ ಬಳಿ ದುಹಾರದ ಬಿಗುಹುಗಳ ಬೀದಿಗಳ ತಳಿಸಾರಿಗಳ ಧಾಳಾಧೂಳಿ ಮಸಗಿತು (ಕುಮಾ.ಸ. ೦೩-೫೦) ; ನಿಮ್ಮಣ್ಣನಾಡಿ ದುಹಾರದಲಿ ಸೆಜೆ ಯೋದನಾತನ ಹರಿಬವೇ ನಿಮಗೆ (ಕುಮಾ.ಶ. ೨೦-೦೩). [ ? ]

**ದುಹಿ** (ನಾ). ದ್ವೇಷ ; ವಿರೋಧ : ದುಹೀ ಮಾಡುವವ ಅಹೀ ಹಾಗೆ (ಗಾದೆ) : ದುಹೀ ಮಾಡುವವ ಅಹಿಗಿಂತ ಕಡೆ (ಗಾದೆ). [ ←ಮರಾ. ದುಹೀ, ದುಈ ]

**ದುಹಿತಾರ** 'ದುಹಿತೆ' ನೋ.

**ದುಹಿತೃ** (ನಾ). ೧. ಮಗಳಂ; ಪುತ್ರಿ : "ಜೇಷ್ ದುಹಿತೃ ನಂದನೆ ಪುತ್ರಿ ತನೂಜೆ ಸೂತಿ ಕಾನೆನಿಕುಂ" (ವಸ್ತುಕೋ. ೫೪-೧೭) ; ಅಹಹ ನರ್ತಕಿಯಲು ಗಂಧರ್ವನಾಯಕನ ದುಹಿತೃವಲ್ಲಾ ನಿನ್ನ ಮಾತೆ (ಜೈಮಿಭಾ. ೧೭-೫೫) , ಅಂತರಿಕ್ಷದಲ್ಲಿ ಆದಿತ್ಯನು ತನ್ನ ದುಹಿತೃವಾದ (ಪುತ್ರಿ) ಪೃಥ್ವಿಯ ಗರ್ಭ ರೂಪವಾದ ಉದಕವನ್ನು ಧರಿಸಿದ್ದಾನೆ (ಪುರ್ಮ್ಯಾರ. ೨೬೬). ೨. ಹಾಲು ಕರೆಯುವವಳಂ ; ಗೌಳಿಗಿತ್ತಿ : (ಶ). [ ಸಂ. ]

**ದುಹಿತೆ**, ದುಹಿತಾರ (ನಾ). ಮಗಳು ; ಪುತ್ರಿ : "ದುಹಿತೆ – ದುಹಿತೃ = ಮಗಳಂ" (ಶಬ್ದಕೋ. ೨೦) : ಆದಿಶಿವಭಕ್ತಂಗೆ ಮದುವೆಯನಾದರದಿ ನಾ ಮಾಳ್ಪೆನಲ್ಲದೆ ಈ ದುಹಿತೆಯಂ ಭವಿಗೆ ಕೊಡೆನು (ಬಸಪು. ೩-೮೭) : ದುಹಿತೆಯಳ ಹರಿರಾಯನರಮನೆಗೆ ವಿಜಯದಿಂ ಕಳುಹಲ್ಕೆ ತರಳೆ ಬಂದಂ (ಗುರುಜಾ. ೩-೧೧). **ದುಹಿತಾರ** : ಆರಾದೇಶಕ್ಕೆ–ಸವಿತಾರ, ಕರ್ತಾರ . . . ದುಹಿತಾರ (ಶಮದ. ೮೫ ಪ್ರಯೋ). [ <ಸಂ. ದುಹಿತೃ ]

**ದುಹಿಸು** (ಕ್ರಿ). (ಹಾಲಿನಂತೆ) ಕರೆ ; ಸುರಿಸು ; ನೀಡು : ಸ್ತನದೆ ಸರ ಸಾಮೃತವ ಕರೆಯುವ ಜನರ ಕಾಮನೆಯನ್ನು ದುಹಿಸುವ ಮುನಿಯ ಹೋಮದ ಧೇನುವನಂ ತನ್ನೆದುರಿನಲಿ ಕಂಡ (ರಘುವಂ. ೨-೩೧). [ ದುಹ್ (P < ಸಂ. ದುಹ್) + – ಇಸು ]

**ದುಹೇರ**, ದುಂಹೇರಿ (ಗು). ೧. ಇಮ್ಮಡಿ ; ದ್ವಿಗುಣಿತ (ಶ). **ದುಹೇರಿ**: ೨. ಪ್ರತಿ ; ಸಮಾನವಾದ ಗುಣವುಳ್ಳ : ಸ್ವಾತಂತ್ರ್ಯಚಳುವಳಿಯ ಕಾಲ ದಲ್ಲಿ ದುಹೇರಿ ಕಾರುಭಾರು ನಡೆಯುತ್ತಿತ್ತು (ರೂಢಿ). [ ←ಮರಾ. ದುಹೇರಾ, ದುಹೇರೀ, ದುಹಿರೀ ]

**ದುಹೇರಿ** 'ದುಂಹೇರ' ನೋ.

**ದುಳಿರವಟ** (ನಾ). ಒಂದು ಬಗೆಯ ತೆರಿಗೆ : ಯಾ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ . . . ಕುಳವಡೆ ಸಾರಡೆ ದುಳಿರವಟ ಕಟಳಿವಟ ಏರಿ ಏಾನ ಬೆಲೆ ಸಂತೆ ಉಂಟಾದ ಹಲ ಉಪಾಧಿಗಳೂ ಸಹ ಸೇರ್ರಿ ಕೊಟ್ಟವಾಗಿ (ಶಾಶಾಇ. IX-11, ೪೬೩-೮ ; 1470). [ ? ]

△ **ದುಜಿ** 'ದುಂಜಿ₁' ನೋ.

**ದುಜಿದುಜಿಸು** 'ದುಂಜಿದುಂಜಿಸು' ನೋ.

**ದುಜಿ**, ಜಾಜಿ (ಕ್ರಿ). ಹೊರಚಲ್ಲು; ಹೊರಸೂಸು : ಇಜಿದ ನೆಲಂಗಳಿಂ ತವರ ನೆತ್ತರನಕ್ಕಿಸಲಾಜ್ದೀಗಳುಂ ದುಜಿತೊರೆಯುತ್ತವಿರ್ದವುವು ತೀಂಬ ಕಟಂಗಳನೆಂಟುವಾನೆಗಳುಂ ತಲೆತಲೆನಪ್ಪಿನಂ ಜಯದ ಲಚ್ಚಣಗಂಬ ದೊಳುದ್ದಿಂಗೊಳುವುವು (ಎಕ. V, ಬೇಲೂರು. ೦೭೦-೦೫ ; ಸು. 1160).

**ಹುಱಿ**: ಮುರಾರಿ ಮು[ಂ] ಖರನಂ ಸೞ್ಬನೆ ಸೀೞ್ವಾಬಿದ ಮುನಿಸಿಂದೊಗೆ ದಾಱಿ ಪರಪೆ ಧಾತು ನಿರ್ಝರದಂತಶ್ರು[ಜ]ಳವೊಱೆತು ಜುಱಿಯುತ್ತು ಮಿರ್ಪ ಧಾತ್ರಿಯುಪ್ಪುದುಂ (ಅರ್ಜನೇ. ೮-೨೨ ವ) ; ತಱಿದ ಕುಱಿಗಳ ಹಂದಿ ಯಡಗಿನ ಜುಱಿತ ರಕುತದ ಪೊಲನ ಖಂಡದ . . . ಹಬಿದೆಱಕೆಗಳ ಕಂಡಬಲೆ ಹೊಗಳಿದಳಡಬಳದ ವಂನೆಯ (ಕುಮ್ಮಾವ್ಯಾ. ೩-೩೭). 'ತೊರೆ$_2$', 'ಸುರಿ$_1$' ಪರಾ.

**ದುಱಿದುಂಬಿ** 'ದುಱುದುಂಬಿ' ನೋ.

**ದುಱು–** (ಉಪ). ಕೆಟ್ಟದ್ದನ್ನು ಸೂಚಿಸುವ ಒಂದು ಉಪಸರ್ಗ. 'ದುಱುದುಂಡಿ', 'ದುಱುದುಂಬಿ' ಪರಾ. [ <ದುರ್– ]

**ದುಱುದುಂಡಿ**, ದುರುದುಂಡಿ, ದುರ್ದುಂಡಿ (ನಾ). ೧. ಕೆಟ್ಟ ವ್ಯಕ್ತಿ; ಕೆಡುಕು ಮಾಡುವವಳು ; ದುಷ್ಟೆ : ಪಂಚವೃಥ್ವಿಯ ಮಧ್ಯದಲ್ಲಿ ಒಂದು ಉಡುವರದ ಗಿಡ ಹುಟ್ಟಿತ್ತು ಆ ಗಿಡುವನೊಡದು ಒಬ್ಬ ದುಱುದುಂಡಿ ಹುಟ್ಟಿದಳು (ಕಶೀಲಶಾಂ. ೨೨-೮) ; ತನುಮಧ್ಯದಲ್ಲಿ ಅಜ್ಞಾನಸ್ವರೂಪಿಣಿಯಾದ ಮಾಯೆಯೆಂಬ ದುರ್ವಿಕಾರಿ ಹುಟ್ಟಿ ಆ ತನುಮಧ್ಯದಲ್ಲಿ ಇರುತ್ತಿಹಳೆಂಬುದೀಗ . . . ದುಱುದುಂಡಿ ಹುಟ್ಟಿದಳು ಎಂಬ ಶಬ್ದಕ್ಕರ್ಥ (ಕೋಲಶಾಂ. ೨೨-೮ ಟೀಕು). **ದುರುದುಂಡಿ** : ೧. ಅನಿತರೊಳು ದುರುದುಂಡಿಯ್ಕತಂದು ಪೊಡೆಗ್ಗೆದಾ ಮಹಾಕಾಳಿಯಂ (ಪಂಕಾರಾ. ೬-೪೮-೪೮). **ದುರ್ದುಂಡಿ** : ೨. ಬಜಾರಿ; ಗಂಡುಬೀರಿ : ಈ ದುರ್ದುಂಡಿಯನ್ನು ಮದುವೆಯಾಗಲಾರೆ (ಸೀತಾರ. ೧೦) ; ಒಮ್ಮೊಮ್ಮೆ ಆಕೆಯನ್ನು ದುರ್ದುಂಡಿ ಎಂತಲೂ ಕರೆಯುತ್ತಿದ್ದರು (ಸನ್ನೂರು. ೮). [ ದುಱು + ದುಂಡಿ$_1$ ]

**ದುಱುದುಂಬ** (ನಾ). ಕೆಟ್ಟವನು; ನೀಚ : ದುಱುದುಂಬ ಪೊಡವಿಯವರರ ಬಸಿಱೊಳೊಗೆದು ಸುಗತಿಯ ಸೊಂಪುವಡೆಯದತ್ಯಂತ ಪಾತಕಿಯಾದ (ಕೊಟ್ಟೂಬ. ೪-೦೩೨). [ <ದುಱುದುಂಬಿ ]

**ದುಱುದುಂಬಿ**, ದುರುದುಂಬಿ$_1$, ದುಱಿದುಂಬಿ (ನಾ). ೧. ಕೆಟ್ಟ ಗುಣವುಳ್ಳ ವ್ಯಕ್ತಿ ; ನೀಚ ವ್ಯಕ್ತಿ : ನಾಡ ದುಱುದುಂಬಿಯರೆಂದುದನೆಂದ ಮಂದಿರೊಳ್ ನೆಱೆದೊಡಗೂಡಿ ಕಳ್ಗುಡಿವ ಡಂಬಗಿದೊತ್ತಿರನಾರಂ ಬಾರಿಪರ್ (ಪಶಾಕ. ೪೬೬) ; ಪರಿಣತರ ನುಡಿಗಳನು ಕಿವಿಯೋಕರಿಸಿದವು ದುಱುದುಂಬಿಗಳ ಬಾಹಿರರ ನುಡಿಗಳನಡಿಗಡಿಗೆ ಕುಡಿದು ತೇಗಿದವು (ಕುಮ್ಮಾಸ. ೧೦-೩) : ಪಿರಿಯ ಪಟ್ಟಣದ ರಾಜ್ಯವಾಳುವ ದುಷ್ಟ ದುಱುದುಂಬಿ ನಂಜುಂಡರಾಜ . . . ಮಲೆತಿರ್ದನಾಗ (ಕಂಸವಿ. ೦೮-೨೦) ; ಮುಂಬಗಲ ನೆಳಲವೋಲ್ ದುಱುದುಂಬಿಗಳೊಳ್ ಮಾಳ್ಪ ಮೈತ್ರಿ ಕುಂದುಗುಂ (ನೀತಿಸುಂ. I, ೨೨೯). ೨. ತುಂಟತನವುಳ್ಳುದಂ : ನಿನ್ನಯ ಸುಱಿಗುರುಳಲ್ಲವಿವೆನ್ನಯ ಮಱಿಯೆಂದು ಬಂದು ತಲೆವಿಡಿದವೊಲಾ ಚೆನ್ನೆಯ ತಲೆವಿಡಿದಿರ್ದುದು ಶಾಂ ನಱುಂಗಂಪಿಗೆ ತುಂಬಿ ದುಱುದುಂಬಿ ಕರಂ (ಚಂದ್ರಚೂ. ೬-೦೦೨). ೩. ತುಂಟ : ಮಱಿಯೊಳು ಬಂದು ಮಕ್ಕಳ ಗರ್ದುಗವ ಹಾಲುಪಱಿಯೆಂದು ಬಾಚಿ ಹಿಡಿಯಲು ಹೆಱನೂಂಕಿ ಬಳಿಕ ಕೈಯಿಂದ ಸುಲಿವನಾವ ದುಱುದುಂಬಿಯಾ ಬಾಲವಿಷ್ಣು (ನೇಮಿಸಂ. ೧೩-೧೦೮). (ಗು). ೪. ಕೆಟ್ಟಗುಣವುಳ್ಳ ; ಭಂಡತನದ : ಕೆಲಬರ್ದುಱುದುಂಬಿ ಮುಂಡೆಯರ್ಮನೆಯೊಳಗುಳ್ಳುದಂ ತವಿಸಿ ಗಂಡರನೇಂ ಕುಱಿಮಾಡಿ ತಂದಪರ್ (ಸಮ್ಮಪ. ೯-೧೦೩) ; ಸಂದುಗೊಂದಿನೊಳಡಂಗಿರ್ದು ಬಱಿವೋಕರ ಕೊಲ್ವ ಕಳ್ವ ದುಱುದುಂಬಿ ಕೊಲೆಗಂಗೆ (ರಾಜಶ್ಯ. ೭೪-೨). **ದುರುದುಂಬಿ$_1$**: ೧. ಶಿಶುಪಾಲನು ಮಹಾ ದುರುದುಂಬಿ (ರಾಜಸೂ. ೧೦). ೪. ಈ ದುರುದುಂಬಿ ತುಂಬಿಯು ಪೂಜ್ಯಳಾದ ಈಕೆಯ ಮುಖಕ್ಕೆ ಎರಗುವುದು (ಶಾಕುಂತ. ೯೦-೦೭). **ದುಱಿದುಂಬಿ** : ೫. ದುರಭಿಮಾನದ; ಹೆಮ್ಮೆಯ : ಕೆಱಪಿಲ್ಲದಿರೆ ಮುನ್ನಿನೊಂದು ದುಱಿದುಂಬಿ ಲಿಪಿಯನುಜ್ಜೈಸಿ ಬರೆಸಿದೆನು (ಭರತ. ೫೪-೪೩). [ ದುಱು + ತುಂಬು$_2$ + – ಇ$_3$ ]

**ದುಱುದುಂಬಿಗ**, ದುರುದುಂಬಿಗ (ನಾ). ದುಷ್ಟ ; ನೀಚ : ಕೆಟ್ಟವನು ; ಪುಂಡ : ನೋಟಕರು ನಿರ್ಭಯರು ಕೊನಬಿಗಳಾಟವಿಕ ದುಱುದುಂಬಿಗರು [ಪಾಠಾಂ. ಗಳು] . . . ಖಳರು ಕೂಡಿತು ಕೋಟಿಸಂಖ್ಯೆಯಲಿ (ತೊರರಾ. ೫-೫-೧೫) ; ಡಂಬಕನು ದೌಳಿಯ ವೃಥಾ ದುಱುದುಂಬಿಗಂ . . . ಎಂದಿರದೆ ಬಂದೆ ನಂದಿ ನೆಱೆ ಪಕ್ಕಾದಿರಕ್ಕಟ ದುಃಖದುರಿಗೆಂದ (ಸುದೇಶು. ೩-೨೬). **ದುರುದುಂಬಿಗ** : ಪೆರರ ಪಡಿಮಾತನಾಡುವ ದುರುದುಂಬಿಗನೆಕ್ಕಸಿಕ್ಕನಂ (ನೀತಿಸಾ. ೮೫೬). [ ದುಱುದುಂಬಿ + – ಗ$_2$ ]

**ದುಱುದುಂಬಿತನ**, ದುರುದುಂಬಿತನ (ನಾ). ೧. ಕೆಟ್ಟ ನಡವಳಿಕೆ ; ದುಷ್ಟತನ ; ನೀಚತನ : ತಾನಿಲ್ಲದುದ ನೆವವನಿಕ್ಕಿ ದುಱುದುಂಬಿತನದಿ ನಿವನಂ ಕೊಲಿಸಿ (ಸಮ್ಮಕಾ. ೨-೯೫) : ರಾಮನ ಕೊಱಚಾಟದಿಂ ಕೊಲಿಸುವುದು ದುಱುದುಂಬಿತನವಲ್ಲವಿದು ರಾಜಕಾರ್ಯದ ಹೊಱಿಗೆಯಲ್ಲೆಂದು ಪೇಳಿದನು (ಕುರಶಾಂ. ೩೫-೩೦) ; ಆತನೊಳ್ ನೆಲೆಗೊಂಡ ದೈವದೊಲವುಮಂ, ಪಾರ್ವರ ಪರಕೆಗಳುಮನಱಿಯದೆ ದುಱುದುಂಬಿತನದಿಂ ಕೆಣಕುಜಗಳಂ ತೆಗೆವುದುಂ (ಚಾಚಂ. ೦೩-೭). ೨. ತುಂಟತನ : ಮಿಸುಪ ಕರವೀರದ ಕಡುಗೆಂಪಿರ್ದಿದ ದಿರಿಮುಗುಳ್ಗಳಿಂ ಮಾತಸುಂಕಿ ಮುತ್ತಿ ಮುಸುಂರಲೆಂದು ಮುಂಕೊಂಡು ಝೇಂಕರಿಸುತ್ತ ದುಱುದುಂಬಿತನದಿಂ ಬಂದು ಮಱಿದುಂಬಿಗೆ ಚಂಪಕಕೋರಕ ಭ್ರಾಂತಿಗೊಟ್ಟು ತೊಟ್ಟನೆ ಮುಗುಳ್ಚಿಯುಂ (ರಾಜಶೇ. ೦೨-೩೯ ವ). ೩. ಅವಿವೇಕ ; ದುಡುಕುತನ : ದುರುಳ ನೀ ದುಱುದುಂಬಿತನದಲಿ ನಿನ್ನ ಹೊಗಳಿದೊಡೆ ಗರುವ ಮಾನ್ಯರು ಮೆಚ್ಚುವರೆ (ಕುಮ್ಮಾವಿ. ೬-೦೮) : ದುಱುದುಂಬಿತನದಿ ಧುರಮಂ ಮಾಳ್ಪೆನೆಂದೂರ ಪೊಱಮಟ್ಟು ತನ್ನ ಸೇನೆಯನು ಪರಬಲಕೆ ಕುಯ್ಯುಗಱಿ ಮಾಡಿ ನಾಡು ಬೀಡಂ ಕೆಡಿಸಿಕೊಂಡನಲ್ಲಾ ನಮ್ಮ ನೃಪತಿ (ಸಮ್ಮಕಾ. ೮-೫೪) : ಇಱಿದು ಮೆಱೆದು ಪೊಕ್ಕು ಪೊಱಮಡಬಲ್ಲ ಅಱಿಕೆಯಧಟರಿರ್ದಂತೆ ದುಱುದುಂಬಿತನದೊಳಿಂತಿದನೆಣಿಸುವರೇ ಕಿಱುವರೆಯದೊಳೆಲೆ ಮಗನೇ (ಸೀಮಿಸಂ. ೨೮-೩೦). **ದುರುದುಂಬಿತನ** : ೧. ಬಂದೆ ದುರುದುಂಬಿತನದ ಮಾನಿನಿಯಳ್ ಕುಲನಾಶಿನಿ (ರುಕ್ಮಾಂಗ. ೬-೫೭) : ಅವರು ಮಕ್ಕಳ ದುರುದುಂಬಿತನಕ್ಕೆ ಎಡೆಕೊಟ್ಟು ಕುಟುಂಬವಿನಾಶಕ್ಕೆ ಕಾರಣರಾಗುತ್ತಾರೆ (ಕಸಾಪ. ೨೫೭); ದುರುದುಂಬಿತನ, ಕಾಮತೃಷ್ಣೆ, ಹಿಡಿಹೊನ್ನಾಶೆ ಈ ಗೋಡೆಗಳಾಚೆ ಮಾನವ ದೃಷ್ಟಿಯು ಇನ್ನೂ ಹರಿದಿಲ್ಲ (ರೂಪಾಪು. ೧೮) : ಜೈಲುಗಳಲ್ಲಿ ತಾಂಡವವಾಡುತ್ತಿದ್ದ ಘೋರದುಷ್ಕರ್ಮವನ್ನೂ ದುಷ್ಕರ್ಮಪ್ರವರ್ತಕರ ದುರುದುಂಬಿತನವನ್ನೂ ಅವನು ಕಣ್ಣಾರೆ ಕಂಡಿದ್ದನು (ಕುಸರು. ೫೯೧). ೪. ಮದ; ಸೊಕ್ಕು ; ಅಹಂಕಾರ : ರಾಮನನ್ನು ಬಗ್ಗು ಬಡಿಯುತ್ತೇನೆಂಬ ದುರುದುಂಬಿತನದಿಂದ ರುದ್ರ ಕರ್ನಾಟಕ ರಾಜ್ಯದ ಮೇಲೆ ಧಾಳಿ ನಡೆಸಿದನು (ಸಂಚುಂಡ. ೪೪) : ಆದರೆ, ನಾನೀಗ ದುರುದುಂಬಿತನದ ಗಂಗನನ್ನು ಹದಗೊಳಿಸಲಾಗಿ ಅವನ ರಾಜ್ಯದೊಳಗೇ ನುಗ್ಗುತ್ತೇನೆ (ವೀರಬಂ. ೬೫).
[ ದುಱುದುಂಬಿ + – ತನ ]

**ದುಱುದುಂಬಿನಿ** (ನಾ). ದುಷ್ಟೆ ; ಕೆಟ್ಟವಳು : ಕೇಡಿಯೊ ಕುಂಟಣಿಯೊ ಕುಬ್ಜೆಯೊ ನಾಡೆ ದುರ್ಗಂಧಿನಿಯೊ ದುಱುದುಂಬಿನಿಯೊ ದುರ್ಜನೆಯೊ (ಸುದೇಶು. ೬-೨೧). [ < ದುಱುದುಂಬಿ ]

**ದುಱುದುಱನೆ** (ಅ). ವೇಗವಾಗಿ ; ದುರುದುರು ಎಂಬ ಶಬ್ದದೊಡನೆ: ಇಱಿದೆಚ್ಚು ಕಡಿವಲ್ಲಿ ಹೊಡವಲ್ಲಿ ಸೀಳ್ವಲ್ಲಿ ದುಱುದುಱನೆ ನೆತ್ತರುಗೆ (ವೀಕೃಪು. ೨-೧೧-೮). 'ದುರುದುರನೆ' ಪರಾ.
[ ದುಱುದುಱು + – ಅನೆ$_1$ ]

**ದುಱುದುಱಿಸು**, ಜುಱುಜುಱಿಸು, ದುರುದುರಿಸು$_1$, ದುಱದುಱಿಸು (ಕ್ರಿ). (ನೊರೆ ಸಹಿತವಾಗಿ) ಧಾರೆಯಾಗಿ ಸುರಿ ; ಒಂದೇ ಸಮನೆ ಸ್ರವಿಸು ; ಬಳಬಳನೆ ಸುರಿ : ಕೋಣನ ಮುಱಿದಲೆಯ ಮಿಸಲಿನ

ರಕುತದ ದುಙುದುಙಿಪ ದಂಡೆಯುಲಿ ಕಲಸಿದ ಕೂಳ ಮುದ್ದೆಗಳ (ಶಾಬ್ಯಾ.ಶ. ೮-೮) ; ದುಙುದುಙಿಪ ನೆತ್ತರ ನಿಹಾರದ ವ್ಯೆಯ ಸಡಲಿದ ಕೈಯ ಬಲುಸರಳ ಅರಸಸನು ಕಂಡಳಲಿದರು (ಶಾಬ್ಯಾ.ಶ. ೧೧-೩೩): ದ ಙುದುಙಿಪ ತಲೆ ವಿದುಳ ಹಙುಗರುಳ ನೆಣವಸೆಯ ಮೂಳೆಯ ಮುಙುಕುಗಳ ಕಡಿಖಂಡಮಯವಾಯ್ತ್ತು ಖಳಚತುರಂಗ (ಶಬ್ಯಾದ್ಕ್ಯೇ.೧೮ ೩೩): ಮುಙಿದ ಮೂಳೆಗಳಿಂ ಸುಭಟರ ದುಙುದುಙಿಸುವ ಗಾಯಗಳಿಂದಾ ರಣ ಕೆಙಿದುದು ಭೀಕರವಡೆದು (ಕುರಾಶಾಂ. ೧೨-೮೦). ಜುಙುಜುಙಿಸು: ಆ ಕುಮಾರ ಶರಾಘಾತದಲಿ ಜುಙುಜುಙಿವ ಕರುಳಗಳ ಖಂಡದ ಹಙಿದೊಗಲ ತೊಡೆ ತೋಳ್ಗಳಲಿ ಹದ್ದೊಙಿಗಳೀದವು (ನಿಘಾಗ. ೧೧-೮೬-೮) ; ಜುಙುಜುಙಿಪ ಕೀವು ನೆತ್ತರ್ಗೆಙಗುತ ಝುಮ್ಮೆಂದು ವೊರೆವ ನೊಳವಿಗೆ (ವೃಷವಿ. ೩೯-೧೨೪). ದುರುದುರಿಸು : ಗುರುಗುರಿಸುವ ಜೀವದೊಡಲೊಳು ದುರುದುರಿಸುತಿಹ ರಕುತಮಯುದಿಂ ಮರದುದೈ ರಣಭೂಮಿ (ವೀವೀಕು. ೩-೧೪); ದುಙದುಙಿಸು : ದುಙದುಙಿವ ರಕುತದ ಕಾಲುವೆಯೊಳುಙಿ ತೇಲಿದುವು ಹಯರಾವ್ರರಟ್ಟೆಗಳು (ಮ್ರಧಾಶ. ೪-೪೯): ದುಙದುಙಿಪ ನೆತ್ತರಿನ ಕೋಡಿಯಿರದೊತ್ತರಿಸಿ ಸುತ್ತುವರಿಯ . . . . ಚೆಂಬತ್ತಿರ್ದರ್ ದಾನವರನೆತ್ತಿದಾಯುಧಗಳಿಂದೆ (ಜಲಹು. ೪೪-೫೦).

[ ದುಙ ದುಙು + – ಇಸ್ತು ]

**ದುಙುದುಙು** (ನಾ). (ದ್ರವಪದಾರ್ಥಗಳು ಸುರಿಯುವುದನ್ನು ಸೂಚಿಸುವ) ಒಂದು ಅನುಕರಣ ಶಬ್ದ : ದುಙುದುಙ್ಙೆಂದು ನೆತ್ತರುಙಿ ಶಾಕಿನಿಗಳ್ಳಿ ಬಾಯ್ಗಳನೊಡ್ಡಿ ಬಿಸಿನೆತ್ತರ ಜುಙ್ಙೆಂದು ಓರಿಯಾನಂದಿಸುತ ನಲಿದು ಭಙಭಙಿಂದು ತೇಗಿದವು (ಜೀರವು. ೪-೦೩); ದುಙುದುಙೆಂದು ನೆತ್ತರುಗೆ ಕುಕಿಲಿರಿದು ಭೂತಂಗಳಯ್ದೆ ಬಾಯೊಡ್ಡಿ ನಲಿದು . . . ಘುಙಿಂದು ತೇಗಿ ಪರಿಸಿದವು ಶಿವದೂತರಂ (ವೀಕೃಕು. ೨-೬-೪೮).

**ದುಙುದುಙುದಿನ್** 'ತುಙುತುಙುತಿನ್' ನೋ.

**△ದುಙುಸು** 'ದುರಂಸು$_1$' ನೋ.

**ದೂ** 'ದು' ನೋ.

**ದೂಂಟಕ್ಕು, ದೂಟಕ್ಕು** (ಕ್ರಿ). ೧. ಮೇಲಕ್ಕೆ ನೆಗೆ ; ಜಿಗಿ : ಭರದಿಂ ಬಂದೆನ್ನ ಮೇಗಾಲ್ಗಳನವಳಡಿಯಿಂ ಮೆಟ್ಟಿ ದೂಂಟಿಕ್ಕಿ . . . ತಾವೂ ಧರಮಂ ತತ್ಕಾಂತೆ ಪೆಂಪಿಂ ಮುಗುಟ್ದು ಮುಗುಟ್ದವಳ್ ಚುಂಬನಗೆಯ್ವಳಾಗಳ್ (ದಕಳು. ೧೧-೯೬) ; ಮರಳಿ ಕುಂಟುತ್ತ ದೂಂಟಿಕ್ಕಿ ನಡೆಯುತ್ತೊಮ್ಮೆ ಕರದೊಳಗೆ ಲೇಖ್ಯಮಂ ಪಿಡಿದೆತ್ತಿಕೊಂಡು (ಅರಾಕ. ೬-೧೭). **ದೂಟಕ್ಕು** : ೧. ಉರದೊಳ್ ಪೆರ್ವೊಲೆ ನಿಂದು ವಿಳ್ಸಿಸೆ ಭುಜಾಮೂಲಂಗಳ ಸ್ತನದೊಳ್ ಬೆರಸಲ್ ಪೆರ್ದೊಡೆ ನೀಳ್ದು ಕೂಡೆ ನಿಮಿರಲ್ ದೂಟಕ್ಕಿ ತಾಂ ನೀಳ್ಕಿ ಸೌಂದರಿಯೊರ್ವಳ್ ಕಡುನೀಡಿ ಮೇಲೆ ನಳತೋಳಂ ಚಂಚಳಂಬೆತ್ತ ನುಣ್ಚರಳಿಂ ಪೂದಿಙಿವುತ್ತಿರ್ದಳೊಲವಿಂ ದೊಂದುಚ್ಚಶಾಖಾಗ್ರದೊಳ್ (ಕಾರಕು. ೧೪-೮೩). ೨. ತಳ್ಳು ; ದೂಡು; ಸರಿಸು: ತರಳತನದಲಿ ತಾನು ಮಾಡಿದ ದುರುಳತೆಯ ದೂಟಿಕ್ಕಿ ನಿಮ್ಮಯ ಹಿರಿಯತನವಸು ಮೆಙಿವುದು (ಕುರರಾ. ೬-೨೪-೬೭) ; ನಿಮ್ಮ ನಂದನಂ ದುರುಳತನದಿಂ ನಿಮ್ಮ ದೂಟಿಕ್ಕಿ ಹಿರಿಯರಂ ಕುರುಡನಂ ನಂಬ ಕುರುಡುಅಲಡವಿಯಂ ಪೊಕ್ಕುವೊಲಾದ (ಕುರಣಗ. ೭೦-೭) ; ಗುರು ಭೀಷ್ಮ ವಿದುರಾದಿಗಳ್ನುಡಿಯ ದೂಟಕ್ಕಿ ದುರುಳರ ಕುಯುಕ್ತಿಗಂ ಮೈಗೊಟ್ಟು ಕಟ್ಟು ಪೂರದೆಗೆದು ಪೋಪಾಗಳೀಗಾರುಂಟು (ಕುರಂಗ. ೭೩-೩೪) ; ನಮ್ಮ ಪಾಂಡವರಂಬ ಪ್ರೀತಿಯ ಸೊಮ್ಮ ನಾವು ಸುರಿದರೆ ಕೌರವ ಕರ್ಮಿಗಳುಚಿತವ ನೆನವನೆಂದೇ ಹೊರಗೆ ದೂಟಿಕ್ಕಿ ನಮ್ಮ ಪ್ರೀತಿಗೆ ಮುನಿದರಿಯದ ಹೆಮ್ಮೆಯಿಂದವರೊಡನೆ ವೆರವಿಗಧರ್ಮವಿಡಿದೈತಂದ ಕೌರವನಲ್ಲಿ ತೋರೆಂದ (ಕೃಬ್ಯಾ.ಶ. ೨೯-೪೦). [ ದೂಂಟು$_1$ + ಇಕ್ಕು ]

**ದೂಂಟಿಸು, ದೂಟಿಸು, ದೂಡಿಸು** (ಕ್ರಿ). ೧. ಹಾರುವಂತೆ ಮಾಡು ; ಜಿಗಿಸು ; ಚಿಮ್ಮಿಸು : ಎಂಟು ಶಿರವನೀವನೆಂಟೊಡಲಾತಂಗೆಂದಂಟ ಮಾನಸದಿ ಮಂತ್ರವನೂ ದೂಂಟಿಸುತವೆ ತನ್ನ ಕಂಠವರಿಯಲು ಶ್ರೀ ಕಂಠ ಹೋ ಪುರೆ ಸಾಕು ನಿಲ್ಲು ಎನುತ (ಭೈರವೇ. ೧-೨೬೮). **ದೂಟಿಸು** : ೧. ಉಚ್ಚದಿರು ದೋರ್ವಳತಟಾಕದ ಮುಚ್ಚುದೂಂಬನು ನವ್ಮ ಮುಂದೆನು ತೆಚ್ಚು ಗಗನಕೆ ದೂಟಿಸಿದ[ಪಾಠಾಂ. ದನು] ದೂಷಣನ ಮಸ್ತಕವ (ತೊರಾ. ೩-೬-೧೮). ೨. ನಾಶಪಡಿಸು ; ಇಲ್ಲವಾಗಿಸು: ಭಕ್ತಜನ ಹೃದಯಾಂಧಕಾರವಂ ದೂಟಿಸಲು ಬಲದ ಕೈಯೊಳಗೆ ಚಕ್ರಾದಿತ್ಯನಂ ಧರಿಸಿ ರಾಜಿಸುತಿಹೆ (ಅರ್ಜಾವಿ. ೦-೮೩) ; ತಾಟಕಿಯಾಟವಂ ಕಣೆಯೊಂದರಿಂದ ದೂಟಿಸಿದನು ರಾಮ (ಸಂರಾಂ. ೧೭). **ದೂಡಿಸು** : ೩. ಮುಂದಕ್ಕೆ ಬರು ; ಚಾಚು: ದೂಡಿವ ಬೆಳಗಾಯಿ ಬೊಗರಿವೊಲೆಯ ಚೆಲ್ವ ಗಾಡಿಕಾತಿಯರ್ಕೈದಿದರು (ಕಂಶವಿ. ೯-೮೦) ; ಓಡಿತು ತವದೊಡ್ಡು ಪಾಡಿದೊ ಕೋಗಿಲೆ ದೂಡಿಸಿ ಅಂಬುಜವರಳ್ದೊ (ಪೂಲ್ಲುಕ. ೭).

**ದೂಡಿಸಿಕೊಳ್ಳು** = ನೂಕಿಸಿಕೊಳ್ಳು ; ಹೊರಗೆ ಹಾಕಿಸಿಕೊಳ್ಳು : ದೂಡಿಸಿಕೊಂಡ ಮನುಷ್ಯ ಹೇಡಿಗಿಂತ ಕಡೆ (ಗಾದೆ) ; ದೂಡಿಸಿಕೊಂಡವನಿಗೆ ನಾಡಿನ ಗೊಡವೆ ಯಾಕೆ ? (ಗಾದೆ). [ ದೂಂಟು$_1$ + – ಇಸು ]

**ದೂಂಟು$_1$, ದೂಟು$_1$, ದೂಡು** (ಕ್ರಿ). ೧. ಒಂದೇ ಕಾಲಿನಿಂದ ನಡೆ ; ಒಂಟಿಕಾಲಿನಲ್ಲಿ ನಡೆ ; ಕುಂಟುನಡೆ ; ಕುಂಟು : "ದೂಂಟು – ಏಕಪಾದಗತೌ" (ಶಮದ) ; ನಿತ್ಯಬಂದುಗೆ–ಬೆಡಂಗು, ಕಡಂಗು . . . ದಾಂಟು, ದೂಂಟು (ಶಮದ. ೬೭ ಪ್ರಯೋ) ; ದಾಂಟು, ದೂಂಟು (ಶಬ್ಯಾನು. ೮೦ ಪ್ರಯೋ) ೨. ಹಾರಾಡು ; ಗಾಳಿಯಲ್ಲಿ ತೇಲಾಡು, – ಸುತ್ತಾಡು : ನವಸಹಕಾರನೊಳ್ ನೆರೆದ ಮಲ್ಲಿಗೆ ಸಲ್ಲಳ ತಾರಹಾರದಂತೆವೊಲಿರೆ ಮೊಲ್ಲೆ ಮೊಗ್ಗರಿಸೆ ಕಂಪನಲಂಪಿನೋಲೀಂಟ ದೂಂಟಾಡುವ ಮಙಿದುಂಬಿ ಮಾಲೆ ತಳರೊಳ್ ತಡವಾಯ್ದರ್ದೆ ಝುಂಕೃತಂ ತುಳುಂಕುವ ನೆವದಿಂದೆ ಜೇವೊಡೆದು ನೋಡಿದನಂಗಜನಿಕ್ಷುಚಾಪಮಂ (ಅನಂಪು. ೭-೯). **ದೂಟು$_1$** : ೩. ಹಾರು ; ಚಿಮ್ಮು : ದೂಟ ಬಿದ್ದವು ಸೀಸಕವು ಶತಕೋಟ ಘಾಯದ ಘಟನೆಯೊಳು ಶತಕೋಟ ಘಾಯಕೆ ಸಿಡಿದ ಹೇಮಾಚಳದ ತುದಿಯಂತೆ (ಕೃಬ್ಯಾಗ. ೭-೧೨). ೪. ಹಾರಿಸು ; ಚಿಮ್ಮಿಸು : ದೂಟಿ ಮಸ್ತಕವಧು ಕಟ್ಟುದು ಕೂಟದಲಿ (ತೊರರಾ. ೩-೬-೧೯). ೫. ನೂಕು; ದಬ್ಬು; ತಳ್ಳು. ೬. ನಿವಾರಿಸು ; ದೂರವಮಾಡು : ಪದಧೂಳಿಯುಲಿ ದೂಟದನಹಲ್ಯಾ ಸತಿಯ ದುಷ್ಕೃತವ (ತೊರರಾ. ೦-೨-೨೦) ; ದೂಡಿದಳು ಲಜ್ಜೆಯನು ಮೂರ್ಛೆಯ ಧಾಟಿಯುಲಿ ಧೃತಿಗೆಟ್ಟಳು . . . ತರಳಾಕ್ಷಿ (ನಿಘಾಗ. ೧೦-೩೮-೨೪). ೭. ಅಲುಗಾಡು; ಕಂಪಿಸು; ತೂಗಾಡು; ಏರುಪೇರಾಗು: ಕೋಟಸಂಖ್ಯೆಯ ಬಲದ ಮಿಕ್ಕಿನ ಕೋಟಸಂಖ್ಯೆಯ ಯೂಥಪರು ಧರೆ ದೂಟಲಂಬುಧಿ ಮೀಟಲು . . . ತೋಙಿಸಿದರೀ ಪರಿಪಾಟಿಯುಲಿ . . . ಗಣನೆಯಿಲ್ಲದ ರಾಮಸೈನಿಕವ (ತೊರರಾ. ೪-೬-೨೩). **ದೂಡು** : ೫. ತೊಟ್ಟಗೆ ವಿಭು ಸಾಯೆ ಪೊಯ್ದು ಕವಿಯಂ ಓಂದಿ ದೂಡಲೊಡರ್ಚಿ ಬಂದನೇ (ಸುಕುಮಾ. ೨-೬೩) ; ದಶಕಂಠ . . . ದೂಡಿಬಿಟ್ಟನು ತಮ್ಮ ವಿಭೀಷಣನ (ಕೌಶಿರಾ. ೧೪ ಪಲ್ಲವಿ) ; ಚೇದಿಭೂಪತಿ ದಂತವಕ್ತ್ರರು ವಿಪ್ರ ಶಾಪದಲಿ ಆದರೀ ಪರಿ ವಿಷ್ಣುಪದದಿಂ ದೂಡಿದುದು ನಿಜಕರ್ಮಗತಿ (ನಿಘಾಗ. ೭-೦-೨೩); ಈ ಸಣ್ಣ ಮಗುವ ದೂಡುವರಲ್ಲೆ ಯುದ್ಧಕ್ಕೆ (ಅಭಿಕಾ. ೮) ; ಬಳಿಕಿತ್ತ ಮಲ್ಲಮ್ಮನಂ ದೂಡಿ ತಾವುಣ್ಣಲೆಳಸುತೊಳಪೊಕ್ಕು ನೋಡಲ್ ಬೋನ ಕಜ್ಜಾಯ ಉಳಿಯದೆಲ್ಲವಡಂಗಿ ಪೋಗಿತ್ತು (ಮಲ್ಲಕ. ೭-೨) ; ಬೆಳಕು ಕತ್ತಲೆಯ ಎರಡು ಗೋಲಗಳು ಒಂದನೊಂದು ದೂಡೆ (ಅರಳು. ೨೨೮-೨೦) ; ಎರಡು ಗಂಟೆ ಕಾಲ ನಿದ್ದೆ ಮಾಡದೆ ಅತ್ತಿತ್ತ ಹೊರಳಿ ಸಮಯ ದೂಡಿದರು (ಕಾವೇರಿ. ೧೭೦) ; ಕಂಡವರ ಮಕ್ಕಳನ್ನು ಬಾವೀಲಿ

ದೂಡಿ, ಆಳಾ ನೋಡಿದ ಹಾಗೆ (ಗಾದೆ). ೬. ಸಖಿ, ಮುನ್ನಿನ ಸಖ್ಯವು ಸಾರ್ಥಕವೆ ಸುಖಕಾಲದಿ ಸಖಿಯರ ದೂಡುವರೆ (ವಿಜೀಗೀ. ೭೮-೪). ೮. (ಹಳ್ಳಿ, ಜಾತಿ ಮುಂತಾದುವುಗಳಿಂದ) ಹೊರಗೆ ಹಾಕು,-ಬಹಿಷ್ಕರಿಸು : "ದೂಡು–ಹೊರಗೆ ಹಾಕು" (ಜಾನಕೋ. ೭).

[ ದೇ.॥ ತಮಿ. ತೂಣ್ಣು ; ತುಳು. ದೂಡು ; ಕೊತ. ದುಡ್, ದುಡಿ ; ತೆಲು. ದೂಂಟು ]

**ದೂಂಟು$_2$**, ದೂಟು$_2$ (ನಾ). ಹೆಜ್ಜೆ ; ಅಡಿ (?): ಎಡೆಯೊಳ್ ದೂಂಟಿಂದೆ ದೂಂಟಿಂಗೆ ಪೆರ್ವಟೆಯಂ ಪೊಯ್ದು ಕಿಲಕ್ಕೆ ನಾಣ್ಚಿ ತಲೆಗುತ್ತಿ ಪಾರ್ಕೆಯೋಂ ಜೋಡೆಯೋ (ಪಂಪಭಾ. ೪-೮೨). **ದೂಟು$_2$** : ದೂಟಿಂದೆ ದೂಟಿಂಗೆ ಮರವಟ್ಟುವಾ ಮುದುಕಿ ತೊಟ್ಟ ನೋಂಪಿಯ ಬಲ್ಮೆಯೂರೆಗೋಲಂ ನೆವಿಮ್ಮ ಸಂಚಲಿಸಿದಳೊ ರಾಮನಂ ಕರೆದೊರಲಿ, ಕರೆದು ಕೂಗಿ (ಶ್ರೀರಾಮಾ. ೧೨೨-೨೯೪); ☞ ಇದಂ 'ದಾಂಟಿಂದೆ ದಾಂಟಿಂಗೆ' ಎಂಬುದರ ಅಪಲಿಖಿತವಿರಬಹುದೆ ? [ <ದೂಂಟು$_1$ ]

**ದೂಂಡು** (ನಾ). ಮನಸ್ಸಿನ ಅನಿರ್ಧಾರ (?): ಮನಮೊಸೆದಿತ್ತು ದೂಣ್ಡರದೆ ಭೂಮಿಯನಿತ್ತು (ದೊಂಕಶಾ. ೧೯೪೫, ಬಂಕಾಪುರ. ೧೧-೩೩; ?).

[ <ದೂಂಟು$_1$ ? ]

**ದೂಕೀಲ** (ನಾ). ಒಂದು ಬಗೆಯ ಆಭರಣ (?) : ಮಣಿಹಾರ ಕಾಂಚಿ ಯನಿಟ್ಟುಯಿಟ್ಟು ದೂಕೀಲ ನೀವಾರಿಗಳನಿಟ್ಟನಾಗಮನೆಲೆಯನರಿದು ಕೈಗೋಣ್ಗಳಿತ್ತಿ ಸಾರಿದರು (ಜಿನಮು. ೩-೫). [ ? ]

**ದೂಕು**, ದೂಗು (ಕ್ರಿ). ದೂಡು ; ದಬ್ಬು ; ತಳ್ಳು : ಸಾವಿತ್ರಿ ಎರಡು ತಿಂಗಳ ಕಾಲ ಕುಮುದಮ್ಮ ರಂಗಮ್ಮ ಇವರನ್ನು ಆಶ್ರಯಿಸಿ ಬಾಳು ದೂಕಬೇಕಾಯಿತು (ಶಾಯಿಳ. ೧೫೦). **ದೂಗು** : ತನ್ನ ತಾನೆ ದುಂಬಾಲ ಬಿದ್ದ ಕವಿನೆರಳ ದೂಗು ನೂಗು (ಅರಳು. ೩೫೫-೧೦). 'ನೂಂಕು$_1$' ಪರಾ.

[ ದೇ. ॥ ತೆಲು. ದೂಂಕು = ಹಾರು, ನೆಗೆ ]

**ದೂಗ** 'ದುಗ' ನೋ.

**ದೂಗರುವ** (ನಾ). ಇಮ್ಮಡಿ ಪರಾಕ್ರಮವುಳ್ಳವನು (?) : ಪಂಪರಿಯ ಶಸ್ತ್ರಾಸ್ತ್ರ ಕೌಶಲಗಳ ದೂಗರುವ ತೋರಿದಂ (ತುರಂಗ. ೧೦-೩೮).

[ ದೂ (<ದು) + ಗರುವ$_1$ ]

**ದೂಗಿಸು** (ಕ್ರಿ). ದಬ್ಬು ; ತಳ್ಳು ; ನಂಗ್ಗಿಸು : ಮಧ್ಯಮರು ಪ್ರಧಾರಿತನದ ಯಜ್ಞದಲ್ಲಿ ಯಾರನ್ನೋ ದೂಗಿಸಿ ಕಪಟಸಾಕ್ಷಿತ್ವದ ತಾಟಸ್ಥ್ಯದಿಂದ ಅವರು ವ್ಯವಹರಿಸಿಕೊಳ್ಳುವುದು . . . ವಾಡಿಕೆಯದೇ ಆಗಿದೆ (ಪಂಚಪಂ. ೬ ಮುನ್ನುಡಿ). 'ನೂಂಕಿಸು' ಪರಾ. [ ದೂಗು (<ದೂಕು) + –ಇಸು$_3$ ]

**ದೂಗು** 'ದೂಕು' ನೋ.

**ದೂಜಾವ** 'ದುಜಾವ' ನೋ.

**ದೂಟಾಡು** (ಕ್ರಿ). ಅಲುಗಾಡು ; ಅಲ್ಲಾಡು. 'ದೂಟಾಡಿಸು' ಪರಾ.

[ ದೂಟು$_1$ (<ದೂಂಟು$_1$) + ಆಡು$_1$ ]

**ದೂಟಾಡಿಸು** (ಕ್ರಿ). ೧. "ಹಾರಾಡಿಸು ; ಚಿಮ್ಮಾಡು" (ಶಬ್ದ$_2$). ೨. ಅಲುಗಾಡಿಸು ; ಅಲ್ಲಾಡಿಸು ; ತೂಗಾಡಿಸು : ಮೇರುಶೈಲವಂ ದೂಟಾಡಿಸಿತು ರಾಶಿ ತಾರಾಗ್ರಹಂಗಳಂ ತಾಟಾಡಿಸಿತು ಹನುಮನಬ್ಬರಣೆ (ಕೃಮಿಭಾ. ೦೩-೪೩) ; ಮರುತನೆಡೆಯಾಟವೇಂ ಗಿರಿವರನ ದೂಟಾಡಿಸಲು ಬಲ್ಲುದೆ (ದಿಲೀಪ. ೨-೩೩) ; ಬಾಡ ದೂಟಾಡಿಸಿ, ತಲೆ ತಾಟಾಡಿಸಿ, ಗುಡಿಸಿಲ ಮಾಡನು ಹುಲುಹುಲುಮಾಡಿಸಿ ಬಂತೈ! ಬಂತೈ (ಕಜಾಪು. ೨೮-೫).

[ ದೂಟಾಡು + – ಇಸು$_3$ ]

**ದೂಟಕ್ಕು** 'ದೂಂಟಕ್ಕು' ನೋ.

**ದೂಟಸು** 'ದೂಂಟಸು' ನೋ.

**ದೂಟು$_1$** 'ದೂಂಟು$_1$' ನೋ.

**ದೂಟು$_2$** 'ದೂಂಟು$_2$' ನೋ.

**ದೂಡಿಸು** 'ದೂಂಟಿಸು' ನೋ.

**ದೂಡು** 'ದೂಂಟು$_1$' ನೋ.

**ದೂಡುಗಾಡಿ** (ನಾ). ತಳ್ಳುಬಂಡಿ; ತಳ್ಳುಗಾಡಿ: "ಮಕ್ಕಳನ್ನು ಕುಳ್ಳಿರಿಸಿ ದೂಡಂತ್ತಾ ಒಯ್ಯುವ ಗಾಡಿ" (ಕಸಾಪ್ರಕೋ. ೪೯೪).

[ ದೂಡು (<ದೂಂಟು$_1$) + ಗಾಡಿ$_3$ ]

**ದೂತ** (ನಾ). ೧. ಸುದ್ದಿ ಅಥವಾ ಸಂದೇಶವನ್ನು ಒಯ್ಯುವವನು ; ಓಲೆಕಾರ : "ಲೇಖವಾಹಂ ದೂತಂ" (ವಸ್ತುಕೋ. ೬೦-೫೮); "ದೂತನೆನೆ ಪೋಗಿ ಪೇಟುವನೆನಿಕ್ಕುಂ" (ಮಂಗರಾ. ೭೩-೨೪): ದೂತಂ ದಕ್ಷನ ವಾರ್ತೆಯಂ ನುಡಿದು ಮೇಗಂ ನೋಟ್ಪುಡಿಲ್ಲಿಂಗೆ ತದ್ದೂತಂ ನಿಶ್ಚಯ ಕಾರ್ಯವಂ ನುಡಿಯುತುಂ ತನ್ನಂಗಮಂ ಮುಟ್ಟದಂತಾ ತಾಣಂ ಫಣಿ ದಷ್ಟಮೆಂಗೆ (ಲೋಕೋಪ. ೧೦_೬) ; ಉಳಿದ ಚತುರಾಂಬುಧಿವೃತಾ ಭೂತಳದ ಭೂಪಾಲರಿಗೆ ದೂತರ ಕಳುಹಿದನು (ತೊರರಾ. ೧-೭-೧೦). ೨. ರಾಯಭಾರಿ ; ನಿಯೋಗಿ: ಇನಿತೊಂದು ನುಡಿದ ಬಲ್ಮೆಯ ನಿನಗಿಲ್ಲ ದೊಡೇಕೆ ನಿನ್ನನಾಳ್ದಂ ನಿನ್ನಂ ಮನವೊಲ್ದು ನಚ್ಚಿಯಟ್ಟದನನಾತಂ ದೂತನಿಂತು ನುಡಿಯಲ್ವೇಟ್ಕುಂ (ಆದಿಪು. ೧೪-೬೫) ; ಎಟ್ಟೊಡೆಗಂ ದೂತನಪ್ಪನ ಬೆಟ್ಟನ ನುಡಿಗೇಳ್ದು ಮುಳಿಯಲಾಗದು (ಪಂಪಭಾ. ೯-೫೮) ; ದೂತನನಟ್ಟುವುದೆಂತುಂ ನೀತಿಯೆ (ಪಂಪರಾಮಾ. ೧೧-೨೪) ; ದೂತಂಗೋಲಗದೊಳ್ ಪೆರ್ಮಾತಂ ಮಂಗನಿಂದೆ ನುಡಿಯಿಪೆಡೆಯುಲ್ಲಿದು (ಚಂದ್ರಪ್ರ. ೮೦-೧೦೧); ದೂತಂ ಸಂಗರಮಂ ನಿರೂಪಿಸೆ (ಪಾರ್ಶ್ವಪು. ೨-೯೦); ಎರಡಕ್ಕಂ ಸಲ್ವಂತಿರೆ ನರನಾಥಂಗುಸಿರ್ಗೆ ಸಂಧಿವಿಗ್ರಹಿನುಡಿಯಂ ಸರಿಯಪ್ಪುದನೆರಡಕ್ಕಂ ಪರಿಣತವಂತಿ ದೂತನಿಂತು ಸುಡಿಯಲೆವೇಟ್ಕುಂ (ಸೂಕ್ತಿಸು. ೩೬-೮೩); ಬಂದ ದೂತನ ಕೊಲುವನರಸೇ . . . ಕಾನೊಂದು ಹುಲುಗಟಿ ವೀರನಸು ಬೇಹಿಂಗೆ ಕಳುಹುವರೇ (ಕಾಶಿರಾ. ೧೧-೫೩). ೩. ಸಂಧಾನ ಕೂಡಿಸುವವನು ; ಮಧ್ಯಸ್ಥ. ೪. ಸೇವಕ ; ಆಳು : ಮನೋಜ ವಸಂತರಾ ಖಳನ ಬೆಸನ ಮಾಡುವ ದೂತರೀ ರವಿ ಶಶಿಗಳೊಪ್ಪುವ ದೀವಟಿಗರು (ತೊರರಾ. ೧-೮-೬೩) ; ನಿನ್ನ ಬಳಿ ಒಬ್ಬ ಸಿಪಾಯಿ ದೂತ ಇರುವನಲ್ಲವೇ ? (ಮಾಳವಿ. ೬೪). [ ಸಂ. ]

**ದೂತಕಾರ್ಯ** (ನಾ). ರಾಯಭಾರಿಯ ಕೆಲಸ : ಮುರಾಂತಕನಂತಪ್ಪವಂ ಯುಧಿಷ್ಠಿರಂ ದೂತಕಾರ್ಯಕ್ಕಟ್ಟಿದಂ (ಪಂಚತಂ. ೨೩೮-೮).

[ ದೂತ + ಕಾರ್ಯ ]

**ದೂತಿ** (ನಾ). ಸೇವಕಿ : ಇತ್ತ ಪುತ್ರೋದಯದ ಶುಭವಾರ್ತೆಯಾ ಬಂದೋರ್ವ ದೂತಿಯು ಶ್ರೀಕೃಷ್ಣರಾಯಂಗೆ ಪೊಂದಿಸುತ ನಿಂದು ಸೂಚಿಸೆ (ನವಕೋ. ೧೦-೨೨) ; ಶ್ರೀವೃಷಾದೇವಿಯುರುಯಿದನರಿದು ತಳತ ಭೂಜದ ನೆಳಲೊಳಂ ನಿಂತು ದೂತಿಯುರಂ ಕಳುಹೆ (ನವಕೋ. ೨೪-೩೯).

[ <ಸಂ. ದೂತಿಕಾ ]

**ದೂತಟ್ಟು** 'ದೂದಟ್ಟು' ನೋ.

**ದೂತತನ** (ನಾ). = ದೂತತ್ವ : (+). [ ದೂತ + – ತನ ]

**ದೂತತ್ವ** (ನಾ). ರಾಯಭಾರ ಮಾಡುವಿಕೆ ; ದೂತ್ಯ : ಸಾಂಗವಾದುದು ನರಪತಿಯ ದೂತತ್ವವಿನ್ನೀಶ್ವರನು ಪಾಡಲ್ಲೆನಗೆನುತ ಹಿಗ್ಗಿದನು ಹರುಷದಲಿ (ತೊರರಾ. ೫-೩-೨೬); ಮೆಲ್ಲಗೆ ಕಿವಿಯಲ್ಲಿ 'ನಿನ್ನ ತಂಗಿಯುನಿಲ್ಲಿ ಬರುವಂತೆ ಹೇಳು' ಎಂದನು. ದೂತತ್ವವು ಸಿದ್ಧಿಸಿತು (ಮಾಳವಿ. ೨೬೮).

[ ಸಂ. ]

**ದೂತಮುಖ್ಯ** (ನಾ). ರಾಯಭಾರಿಗಳಲ್ಲಿ ಶ್ರೇಷ್ಠನಾದವನು,–ಪ್ರಮುಖ ನಾದವನು : ಚತುರವಚನರಚನಾಪ್ರಪಂಚಕಂಚುಕಿತ ರೋಮಾಂಚಚುಂಚು ಸಭಾಜನಶರೀರನುಮಪ್ಪ ದೂತಮುಖ್ಯನನಟ್ಟಿ (ಶಾಂತಿಪು. ೨-೫೦ ವ) ;

ನೀತಿನಿರತನುಮಾಕಾರವಂತನುಂ ವಚನಚತುರನುಮಪ್ಪುದ್ಧವನೆಂಬ ದೂತ ಮುಖ್ಯನನಟ್ಟಿದೊಡೆ (ಚಂದ್ರಪು. ೬-೧೮ ವ); ದೃಷ್ಟಂ ವರವಕ್ರೋಕ್ತಿ ವಿಶಿಷ್ಟಂ ನಿಶ್ಶಂಕನನ್ನಿತಂ ನಯನಿಪುಣಂ ಸ್ಪಷ್ಟ ಪರಚಿತ್ರವೃತ್ತಿಸ್ವಾರ್ಥ ನೆನಿಪ್ಪ ದೂತಮುಖ್ಯನನಾಗಳ್ ಕರೆದು (ಪಾರ್ಶ್ವಪು. ೨-೫೦).

[ ದೂತ + ಮುಖ್ಯ ]

**ದೂತಯ** 'ದಾತಯಂ' ನೋ.

**ದೂತಲಕ್ಷಣ** (ನಾ). ರಾಯಭಾರಿಯು ಹೊಂದಿರಬೇಕಾದ ಲಕ್ಷಣ,- ವಿಶಿಷ್ಟ ಗುಣ : (ಕ). 'ದೂತಾಂಗ' ಪರಾ. [ ದೂತ + ಲಕ್ಷಣ ]

**ದೂತವಚನ** (ನಾ). ರಾಯಭಾರಿಯ ಮಾತು; ದೂತನ ನುಡಿ: ಬಾಹುಬಲಿ ಕುಮಾರಂ ದೂತವಚನಾಕರ್ಣನೋದೀರ್ಣ ಕ್ರೋಧೋದ್ಗಚ್ಛದಚ್ಛೇದ ಜಳ ಸ್ವೇದಧಾರಾಸಾರಭೀಕರಾಲೋಹಿತ ಕಪೋಲತಳಮುಂ ... ಭೀಷಣಾರುಣ ಗಂಡಸ್ಥಳಮುಮಪ್ಪ ಗಂಧಸಿಂಧುರೇಂದ್ರಮನನುಕರಿಸಿ (ಆದಿಪು.೧೪-೬೩ ವ).

[ ದೂತ + ವಚನ ]

**ದೂತಸಂಪ್ರೇಷಣ** (ನಾ). ವಾರ್ತಾವಾಹಕನನ್ನು ಕಳುಹಿಸುವುದು ; ದೂತನನ್ನು ಕಳುಹಿಸುವುದು : ಆಕೆ ನಿನಗನುರಕ್ತೆ ವಿರಕ್ತೆಯೆಂಬುದಂ ದೂತಸಂಪ್ರೇಷಣದಿನರಿದನುರಕ್ತೆ ಯಪ್ಪೊಡೇಕಾನು ಮೊಂದು ಪಾಯದಿಂ ತಪ್ಪದು ವಿರಕ್ತೆಯಪ್ಪೊಡಾಕೆಯಂ ಬಲ್ಲಾಳ್ತನದಿಂ ತಪ್ಪದುಮೆನೆ (ಪಾಪುಂಪು. ೩೧೨). [ ಸಂ. ]

**ದೂತಾಂಗ** (ನಾ). [ಕಾವ್ಯವಿ.] ದೂತಲಕ್ಷಣವನ್ನು ತಿಳಿಸುವ ಭಾಗ; ರಾಯಭಾರಿಯು ಹೊಂದಿರಬೇಕಾದ ಲಕ್ಷಣಗಳ ವಿವರಣೆ ; ಅಷ್ಟಾ ದಶ ವರ್ಣನೆಗಳಲ್ಲಿ ಒಂದು : ಸ್ಮೃತಿನಾದೇಯಸ್ವರೂಪಂ ಪರನೃಪ ವಸುಧಾಂತಾಕುಳಜ್ಞಂ ಸದೃಷ್ಟಾಂತರವಾಕ್ಯಂ ಸಾವಂಭೇದಾದ್ಯತಿಶಯ ವಿದಸ್ಗ್ರಾಮ್ಯಮೇಷಂ ಸಭಾಭ್ಯಂತರ ನಿಶ್ಶಂಕಂ ಪರಾಶೇಂಗಿತವಿದನೆನಿಪಂ ದೂತನೆಂದಿಂತು ಧಾತ್ರೀಶ್ವರ ಕಾರ್ಯೋದ್ಯೋಗಿಗಳ್ ಚಿತ್ರಂಪ ಕವಿಗಳಿಂ ಖ್ಯಾತ ದೂತಾಂಗವಕ್ಕುಂ (ಸೂಕ್ತಿ ಸು. ೧೬-೧): ೨ ರಾಯಭಾರಿಗಳ ಕಾರ್ಯಗಳನ್ನು ಕುರಿತ ವಿವರಣೆ ; ರಾಯಭಾರಿಯಲ್ಲಿರಬೇಕಾದ ಸ್ಥಿರತೆ, ಔದಾರ್ಯ, ಶತ್ರುರಾಜ್ಯದ ಒಳಗಿನ ತೊಂದರೆಗಳನ್ನು ತಿಳಿಯುವಿಕೆ ದೃಷ್ಟಾಂತಸಹಿತವಾಗಿ ಭಾಷಣ ಮಾಡುವ ಚಾತುರ್ಯ, ಚತುರೋಪಾಯಗಳ ಆಳವಾದ ಜ್ಞಾನ, ನಾಗರಿಕ ವಾದ ವೇಷಭೂಷಣ, ಮಹಾಸಭೆಗಳ ನಡುವೆ ನಿಶ್ಚಂಚಲವಾದ ಅಭಿಪ್ರಾಯವನ್ನು ಹೊಂದಿರುವಿಕೆ, ಇತರ ರಾಜರ ಅಂತರಂಗದ ಉದ್ದೇಶಗ್ರಹಣಶಕ್ತಿ, ಸಹಜಪ್ರಜ್ಞೆ, ಅನೇಕ ಭಾಷೆಗಳ ಜ್ಞಾನ, ದಕ್ಷತೆ, ನೋಟದಿಂದಲೇ ಇತರರನ್ನು ಗೆಲ್ಲಬಲ್ಲ ಶಕ್ತಿ, ಕೋಪ ರಾಹಿತ್ಯ ಮುಂತಾದುವೆಲ್ಲ ಇದ್ದರೆ ಅಂತಹವನನ್ನು ನಿಜವಾದ ದೂತನೆಂದು ಕರೆಯುತ್ತಾರೆ, ಕಾವ್ಯಗಳಲ್ಲಿ ಬರಬೇಕಾದ ಹದಿನೆಂಟು ವರ್ಣನೆಗಳಲ್ಲಿ ಇವುಗಳನ್ನು ಕುರಿತ ವರ್ಣನೆಯೂ ಒಂದು. ಅದನ್ನು ದೂತಾಂಗವೆಂದು ಕರೆಯುತ್ತಾರೆ. [ ದೂತ + ಅಂಗ ]

**ದೂತಾವಾಸ** (ನಾ). ರಾಯಭಾರಿಯ ವಾಸಸ್ಥಾನ ; ನಿಯೋಗಿಯ ಮನೆ : ಮಾಸ್ಕೋದಲ್ಲಿರುವ ಅಮೆರಿಕ ದೂತಾವಾಸದ ಮುಂಗಡೆ ಪ್ರದರ್ಶನ (ಪ್ರಜಾ. ೧೧-೨-೬೫ ; ೫-೬). [ ದೂತ + ಆವಾಸ ]

**ದೂತಿ** (ನಾ). ೧. ಸೇವಕಿ ; ಗೌಡಿತಿ. ೨. [ಕಾವ್ಯವಿ.] ಶೃಂಗಾರ ಸನ್ನಿ ವೇಶಗಳ ನಿರೂಪಣೆಯಲ್ಲಿ ಕವಿಗಳು ಹೇಳುವ ನಾಲ್ಕು ಬಗೆಯ ಪರಿಚಾರಿಕೆಯರಲ್ಲಿ ಒಂದು ಬಗೆ ; (ಅಂತರಂಗದ ವಿಷಯಗಳನ್ನು ಹೇಳಬಹುದಾದ) ಸಖಿ ಗೆಳತಿ: "ಸಂಚಾರಿಯೆನೆ ದೂತಿಯಕ್ಕುಂ" (ಮಂಗರಾ. ೯೦-೫) ; ನವಪಲ್ಲವಗಳಂತೆ ಸರಾಗಂಗಳಾದ ದೂತೀವಚನಂಗಳ್ ಕಾಂತಾಜನಕ್ಕೆ ಕರ್ಣಪೂರಂಗಳಾಗೆಯುಂ (ಕಾದಂಪೂ. ೫೦೩) ; ದೂತೀ ಪ್ರೇಷಣಕೃತ ಸಂಕೇತಾದಿಗಳೊಂದುಮಿಲ್ಲ (ಲೀಲಾವ. ೧೦-೩೮) ; ಬಳಿಕ ಅಭಿಸಾರಿಕೆ ಚತುರಿಕೆ ಸಹಸಂಚಾರಿಕೆ ದೂತಿಯೆಂರೆಂಬ ಚತುರ್ವಿಧ ಸಖಿಯರಿಂ (ವಿವೇಕ. ೨೨೯) ; ಯಾವುವು ಕಳೆದರು ಬರಲಿಲ್ಲವಾತನು ದೂತಿಯ ಹೋಗೋಣ ಏಳು (ಇಂಜಾಪ. ೧೬೭-೨೨). ೩. ಸಮಾಚಾರವನ್ನು ತಲುಪಿಸುವ ಹೆಂಗಸು : "ದೂತೀ, ಸಂಚಾರಿಕಾ – ಈ ೨ ದೂದವಿ" (ಹಲಾಯು. ೮೧-೩೨೭). ೪. ತಲೆಹಿಡುಕಿ ; ಕುಂಟಣಿ: ನೆರೆಯ ಮಂದುಕಿ ಕನ್ನೆದೊತ್ತು . . . ಕುಂಟಣಿಯೆಂಬ ಪೆಣ್ಗಳರಸಿ ಕೇಳು ದೂತಿಯರ್ಕಳಪ್ಪುದೇ ದಿಟಂ (ಜನನ. ೧೭-೨). [ ಸಂ. ದೂತೀ ]

**ದೂತಿಕೆ** (ನಾ). ದೂತಿ; ದೂದವಿ: "ದೂತೀ, ಸಂಚಾರಿಕಾ–೨ ದೂತಿಕೆಯ ಹೆಸರುಗಳು" (ಸಿದ್ಧಾಂತಿ. ೧೭೨). [ ಸಂ. ದೂತಿಕಾ ]

**ದೂತೀಜಲ್ಪ** (ನಾ). ದೂತಿಯ ನುಡಿ : ಕಿವಿವುಗೆ ನುಡಿದೊಡಂಗೊಂಡು ಪೋಪುದುಂ ದಕ್ಷಿಣನವಳ ದೂತೀಜಲ್ಪಂ [ಪಾಠಾಂ. ದೂತಿಕಾಕಲ್ಪಂ] ವಿಸ್ಮಯಾರ್ಥಮಾದುದೆಂದುಮಲ್ಲಿಂ ತಳರ್ದು ರಾಜಭವನಾಭಿಮುಖನಾಗಿ (ಚಂದ್ರಪು. ೮-೯೦ ವ). [ ಸಂ. ]

**ದೂತೀಯ** 'ದಂತೀಯ' ನೋ.

**ದೂತು** 'ದೂದು' ನೋ.

**ದೂತ್ಕೃತ** (ನಾ). [ಕಾಮಶಾ] ರತಿಕ್ರೀಡೆಯ ಒಂದು ಧ್ವನಿ : ಸೀತ್ಕೃತಂ ಹೂಂಕೃತಂ . . . ದೂ[ಪಾಠಾಂ. ಹೂ]ತ್ಕೃತಂ ಶ್ವಸಿತಮುರುರಾತ್ಕೃತಂ ಎನಿಪೀ ಚಮತ್ಕೃತಿಯನರಿದು ರಮಿಸುವನೆ ಚದುರಂ (ಜನನ. ೮-೫೦).

[ ಸಂ. ]

**ದೂತ್ಯ** (ನಾ). ೧. ರಾಯಭಾರಿಯ ಉದ್ಯೋಗ,- ಸ್ಥಾನ; ನಿಯೋಗಿಯ ಅಧಿಕಾರ. ೨. ದೂತನ ಕೆಲಸ ; ರಾಯಭಾರ : "ದೂತ್ಯಂ,(ದೌತ್ಯಂ) ತದ್ಭಾವಕರ್ಮಣೋಃ, ದೂತಭಾವಕ್ಕೂ ದೂತಕೃತ್ಯಕ್ಕೂ ಹೆಸರು. ದೂತನಾಗುವಿಕೆ, ದೂತನು ಮಾಡತಕ್ಕ ಕೆಲಸ, ಇವುಗಳು"(ಸಿದ್ಧಾಂತಿ. ೨೩೯). ೩. ಸುದ್ದಿ ; ವರ್ತಮಾನ; ಸಮಾಚಾರ. 'ದೌತ್ಯ' ಪರಾ. [ ಸಂ. ]

**ದೂದ** (ನಾ). ಸುದ್ದಿಯನ್ನು ಒಯ್ಯುವವನು ; ವಾರ್ತಾವಾಹಕ ; ದೂತ : ಇನಿಯನಟ್ಟಿದ ದೂದರ ಸೀಯನಪ್ಪ ಮಾತಿನ ರಸದೊಳ್ ಕೊನರ್ವುದು ತಳಿರ್ವುದು . . . ನಲ್ಲೆಯೆಂಬ ನಂದನವನಮೋಪರೊಳ್ (ಪಂಪಭಾ. ೪-೧೦೨) ; ತೆಂಗಾಳಿಯೆಂಬ ದೂದನಂ ಕರೆದು . . . ನಮ್ಮ ಪೆಣ್ಣಿಯಂ ತಡೆಯದೆ ಬಿಡಿಸಿಕೊಂಡು ಬಾಯೆಂದೊಡೆ (ಶಬ್ದಮ. ೧೩೦).

[ <ಸಂ. ದೂತ ]

**ದೂದಗ, ದೂದವ** (ನಾ). ದೂತ ; ಕುಂಟಣಿಗ : ಬೋಳೈಸಿ ತೆತ್ತು ಕಾವನ ಕೇಳಿಯೊಳನುವೆತ್ತು ಪೊರೆವ ಪುರುಳಿಗನಂ ತಾಂ ಮೇಳೈಸುವ ದೂದ[ಪಾಠಾಂ. ದು]ಗನಿಂ ಸೂಳೆಗಮುಪರಚ್ಛೆಯರ್ಗಮಪ್ಪುದು ವಚ್ಚಂ (ಚಕವಿ. ೬-೧೦೭). **ದೂದವ** : "ಸೂಲ್ಗರೆವನೆನಲ್ಕೆ ದೂದವಂ [ಪಾಠಾಂ. ದೂದಂ]" (ಕಚುನಿ. ಕ. I, ೪೫); ಓತು ಮಾತಡಕಲೊಂದಿದ ದೂದವರಿಲ್ಲ ನೆಟ್ಟನಪ್ಪುದರಿನದಿಂತರಣ್ಮುರುದಿತಂ ವಲವೆ ನ್ನೊಲವಿಂದು ವಕ್ಕೆಯಾ (ಪಂಪಭಾ. ೪-೭೯); ತಪ್ಪದು ಮಾ[ತು] ದೂದವರ ಕೆಯ್ಯೊಳೆ ಕಾಲ್ಪಿಡಿದಟ್ಟ ಕಣ್ಣ ನೀರ್ ತಪ್ಪುವೆ (ಪಂಪಭಾ. ೪-೯೯). [ <ಸಂ. ದೂತಕ ]

**ದೂದಟ್ಟು, ದೂತಟ್ಟು** (ಕ್ರಿ). ೧. ಸಮಾಚಾರವನ್ನು ಕಳುಹಿಸು ; ಸುದ್ದಿಯನ್ನು ತಿಳಿಸು : ಸುವಸ್ತುವಾಹನವ ಸಡಗರದಿ ತೆಗೆಕೊಂಡು . . . ಮೋಘಕೂಟದ ಕಡೆವೊಳಲ ಹೊಕ್ಕಿರ್ದು ದೂದಟ್ಟಿದನು ಪುರವರ್ಗೆ (ಸಾಳ್ವಭಾ. ೩೭-೫೦). ೨. ರಾಯಭಾರವನ್ನು ಮಾಡಲು ಕಳುಹಿಸು : ಆ ನಾರದನನೆ ದಿವಿಜಾರಾಜಂಗೆ ದೂದಟ್ಟಿ (ಜಗಪು. ೧೪-೩೨ ವ) ; ಬಹು ಶಾಖದಶೋಕಾನೋಕಹಮೆಸೆದುದು ಮುನಿಯ ಪೆಣಗೆ ನೆಲೆಯಾಗೆ ಮನಸ್ಯ್ನೃಹೆಯಿಂದಪ್ಪಮಹಾಪ್ರಾತಿಹಾರ್ಯತರನೆರೆಯಲೆಂದು ದೂದಟ್ಟಿದ

ವೊಲ್ (ಆಪಂಪು. ೨-೪೭); ಪೃದುವಾಟ್ಟರೊಳ್ ಪಗೆಯಂ ದೂದಟ್ಟಿಯುಂ, ತಾಂ ಓಡಿದಿರ್ವರೊಳ್ ಕಾವನಂ ಕಾವಲ್ಕಾಡಿಯುಂ ನೋಟಮಾಟಂಗಳ್ಗೆ ತೋಱದನಲ್ತೆ ! (ರಾಮಾಶ್ವ. ೪೩-೮). ೩. ಕಂಂಟಣಿಯ ಕೆಲಸಕ್ಕೆ ಕಳುಹಿಸು : ವೋಹಧನವಂ ಮುಂದಿಟ್ಟು ದಲ್ ತೃಷ್ಣೆ ಲಂಪಟೆ ಬೆನ್ನಿಂ ಬಿಡದೊಲ್ಲೆವೊಲ್ಲೆಮೆನೆಯುಂ ದೂದಟ್ಟಿ ದುರ್ಬುದ್ಧಿಯಂ. (ಶಾಂತಿಪು. ೭-೭೭) : ನೃಪಂ ಬೆಂಬಿಟ್ಟಿಂ ದೂದಟ್ಟಿಯುಂ ಜಾರಂ (ಕಮಿಕ. ೨೩೮ ಪ್ರಯೋ) : ವೇದಾಗಮವನೊರೆದ ವಾಮದೇವನನೆ ಬೆಲೆವೆಣ್ಣಡೆಗೆ ದೂದಟ್ಟಿ ತನ್ನ ಭಕ್ತಿಯ ಬಲ್ಮೆಯ ಭೂಮಿಯೊಳ್ಪ್ರಕಟಿಸಿದ ಕಡುನೀಱಂ (ಸೌಂದಪು. ೨-೩೩); ನಂಬಿ ದೂದಟ್ಟಿ ಕಾಳ್ಗೆಲಸಂಗೈಸಿದನಯ್ಯೊ ದೇಸಿಗನಿವಂ ತಾಯುಳಿಯ್ದಿಂತಪ್ಪನೇ (ವೃಷವಿ. ೪-೧೦೭). ದೂತಟ್ಟು : ೨. ವಾಱುಜೂಜಂ ಕಡುವೇಟ್ಟುದಾಂ ರವಣಮಂ ಬೇಟ್ಟಂತುಟಂ ತಂದೆ ನೆಂದಱಿಪಲ್ಕೊರ್ವ ಕಠೋರವಾಕ್ಯಮುಖನಂ ದೂತಟ್ಟೆ (ಜಗಕಂ. ೭೩೪).

[ ದೂದು + ಅಟ್ಟು₃ ]

**ದೂದಪೇಡಾ** (ನಾ). ಹಾಲಿನಿಂದ ತಯಾರಿಸಿದ ಒಂದು ಬಗೆಯ ಸಿಹಿತಿಂಡಿ: ಪರೀಕ್ಷೆಯಲ್ಲಿ ಮೊದಲನೇ ದರ್ಜೆಯಲ್ಲಿ ತೇರ್ಗಡೆಯಾದುದರಿಂದ ಅವಳು ತನ್ನ ಗೆಳತಿಯರಿಗೆಲ್ಲಾ ದೂದಪೇಡಾ ಹಂಚಿದಳು (ಜನ).

[ ←ಮರಾ. ದೂಧ್‌ಪೇಢಾ ]

**ದೂದಫೇಣಿ** (ನಾ). ಹಾಲಿನಲ್ಲಿ ಬೇಯಿಸಿ ತಯಾರಿಸಿದ ಒಂದು ಬಗೆಯ ಸಿಹಿತಿಂಡಿ,–ಫೇಣಿ : (ಸ್ಥಾಂಡರ್). [ ←ಹಿಂ. ದೂಧ್‌ಫೇನೀ ]

**ದೂದವ** 'ದೂದಗ' ನೋ.

**ದೂದವಿ** (ನಾ). ೧. ದೂತಿ; ಸಮಾಚಾರವನ್ನು ತಿಳಿಸುವವಳು,–ತಲುಪಿಸುವವಳು: ಪಿಂದಾಂ ಬಂದಪೆನೆಂಬಿದಂ ನರರ್ಗೆ ನೀಂ ಪೇೞ್ದು ಮಹೋರ್ವೀಕಾಂತಕಂ ನಿಂದ್ಯಾಂಗಂ ಜರೆಯೆಂಬ ದೂದವಿಯುಮಂ ಮುಂದಟ್ಟಿ (ಶಾಂತಪು. ೫-೩೫). ೨. ತಲೆಹಿಡಂಕಿ ; ಕಂಂಟಣಿ : "ಸಂಚಾರಿಕೆ ತಾಂ ದೂದವಿಯಭಿಸಾರಿಕೆ ಸಂಕೇತನಕ್ಕೆ ಪೋಪವಳಕ್ಕುಂ" (ಚಸ್ತುಕೋ. ೫೩-೭); ಒರ್ವಳ್ ತನ್ನ ನಲ್ಲನಲ್ಲಿಗೆ ದೂದುವೋಗಿ ಬಂದ ದೂದವಿಗೇಗೆಯ್ದು ತೆಱನುಮನಱಿಯದೆ ಪದೆದು ಪಡೆಮಾತಂ ಬೆಸಗೊ[ಳ್ವುದಂ] ಕಂಡು (ಶಂಶಧಾ. ೪-೧೦೦ ವ): ಬರ ಪಾರದೆ ದೂದವಿಯಾರ ಹಂಸದೆ . . . ಮನವೊಲ್ದಾಗಳ್ನೆರೆಯಲ್ಕೊರೆಕೊಳ್ಳ ರತಮ ಸಂಕಲ್ಪರತಂ (ಕಾದಂಬ. ೩೦೮) ; ಅನ್ನೆಗಂ ನೆರೆಮಂನೆಯ ನಾವಿದನ ಪೆಂಡತಿಯಪ್ಪ ದೂದವಿ ಪಾದರಿಗನಂ ಸಂಕೇತಸ್ಥಾನದೊಳಿರಿಸಿ ಪರಿತಂದು (ಶಂಚತಂ. ೭೫-೨) ; ಆವರ ದೂದವಿಯರ ಲಲ್ಲೆವೆರಸಿದ ಮೆಲ್ನುಡಿಯ ಕರ್ಣಪೂರಮಾಗೆಯುಂ (ಮಲ್ಲಿಪು. ೩-೪೨ ವ) ; ಅವನ ಕಾದಲಳ ದೂದವಿ ಬಂದು ಪೊಡೆಮಟ್ಟು ಪೊರ್ದಿ ಕಳ್ಳಿರ್ದು (ಚಂದ್ರಪು. ೮-೮೨ ವ) ; ಮುದುಗರಡಿಯ ಮಱು-ದೊವಲಂದದೆ ಕರಿಯಂ . . . ಎಂದೊಡೆ ದೂದವಿಗವಳೆಂದಳ್ (ಚುಚೋಪ. ೨-೪೦); ಪಾರದೆ ಬರ್ಪ ದೂದವಿಯರಂ ತವಕಂ ತವೆ ಮಿಕ್ಕು ನೀವಿಯೊಳ್ ಚಾರುಕಳಾಪವಂ ನಿಲಿಸುತುಂ ದೆಸೆಯಂ ನಡೆ ನೋಡುತುಂ . . . ಜಾರೆಯರೆಯ್ದಿತಿರ್ದರುಪಕಾಂತರನೆಂದು ಮಹಾಂಧಕಾರದೊಳ್ (ಕುಸುಮಾ. ೪-೩೫) ; ಉನ್ನತಪ್ರೌಢನಂಗನೆಗೆ ವಿತ್ತಂಗುಡದೆ ಚೆನ್ನನುಡಿ ಗೂಟಂಗಳಿಂದೆ ಕಾಲಂ ಕಳೆವುದನ್ನೋಡಿ ಕಾಯ್ದು ದೂದವಿ . . . ಇಂತೆಂದಳು (ಭಾಪಚಂ. ೬-೨೪) : ಬಯಸಿದ ನರರೊಳವರ ತಂದು ನೆರೆಯಿಸುವರು ದೂದವಿಯರು (ಕುರಾಸಾಂ. ೨೯-೦೦೦).

[ ದೂದವ (<ದೂದಗ) + – ಇ₂ ]

**ದೂದವಿಗೆಲಸ** (ನಾ). ದೂತಿಯ ಕಾರ್ಯ; ಕಂಂಟಣಿಯ ಕೆಲಸ: ಶಿವಶಂಭುಶಂಕರನ ದೂದವಿಗೆಲಸಕೆ ತೆರಳಿಚಿದ ದುಷ್ಕರ್ಮಿ (ಸೌಂದಪು. ೧೭-೨೪). [ ದೂದವಿ + ಕೆಲಸ ]

**ದೂದಿ₁** (ನಾ). ೧. (ಶಂದ್ದಿಮಾಡಿದ) ಹತ್ತಿ ; ಅರಳೆ : "ದೂದಿ–ತೂಲೀ =ಹತ್ತಿ" (ಶಬ್ದಕೋ. ೨೦). ೨. (ಬೆಂಕಿಯನ್ನು ಹೊತ್ತಿಸಲು ಉಪಯೋಗಿಸುವ) ಬೂರಗದ ಹತ್ತಿ ಮತ್ತು ಅದರ ಮರ "ದೂದಿ= ತೀವ್ರವಾಗಿ ಬೆಂಕಿ ಹತ್ತುವದೊಂದು ಪದಾರ್ಥ" (ಗಂಗಾಮು. ೩೫೬) ; "ದೂದಿ–ಕಿಡಿ ಹಿಡಿಯುವ ಹಿಂದರ ; ಅರಳೆ" (ಜಾನಕೋ. ೭) ; ಕೆಂಡ ದೊಡಿಗೆಗೆಳಸುವ ದೂದಿಯೊಟ್ಟಲಂತೆ (ವೀಶೈಪು. ೩-೨-೧೦).

[ ದೇ.? ತೆಲು. ದೂದಿ ]

**ದೂದಿ₂** (ನಾ). ಸಮಾಚಾರವನ್ನು ತಿಳಿಸುವವಳು ; ದೂದವಿ ; ದೂತಿ : ತಕಾರಕ್ಕೆ ದಕಾರಂ–ಕೈತವ–ಕೈದವ . . . ದೂತಿ–ದೂದಿ (ಕಮಿಕ ೨೫೫. ಪ್ರಯೋ) ; ದೂತಿ, ದೂದಿ ; ಕೈತವ, ಕೈದವ (ಶಬ್ದಾನು. ೦೮೩ ಪ್ರಯೋ).

[ <ಸಂ. ದೂತೀ ]

**ದೂದಿಬೋಯ** (ನಾ). ಒಬ್ಬಾತನ ಹೆಸರು: ದೂದಿಬೋಯಸ್ಯ ಕೌಣ್ಡಲ್ಯ ಗೋತ್ರ ಗಬೋತಶರ್ಮ್ಮಣ ಏಕಂಶಃ (ಇಆ. VII, ೧೮೪-೩೭ ; ೬೬೩).

[ ದೂದಿ? + ಬೋಯ ]

**ದೂದು,** ದೂತಂ (ನಾ). ೧. ಸಮಾಚಾರ ; ಸುದ್ದಿ. 'ದೂದಂವೋಗು' ನೋ. ೨. ರಾಯಭಾರ ; ನಿಯೋಗ : "ದೂದು . . . ದೌತ್ಯ" (ಶಬ್ದಕೋ. ೨೦). 'ದೂದೈದು' ನೋ. ದೂತು: ೨. ಏನೇನು ವಿಸ್ಮಯದ ವಾಂಗ್ಮೈದೆ ನಿಷ್ಠುರವ ನೀನಾಡ ಸಲ್ಲದಾದಿಯಲಿ ನಿಮ್ಮಯ್ಯಗೆ ನಿಧಾನದಿಂ ದೂತಿತ್ತ ಬಂದೆಯೆನಲೊಪ್ಪಿ ಹಿತವಾಕ್ಯವೆ ವಿವಾಹವೆನುತ (ಲಕ್ಷ್ಮಧಾ. ೧-೨೦-೪೪). [ ದೂದ + – ಉ₄ ]

**ದೂದುಗಾರ** 'ದೂದುಗಾಱ' ನೋ.

**ದೂದುಗಾಱ,** ದೂದುಗಾರ (ನಾ). ಸುದ್ದಿಯನ್ನು ಒಯ್ಯುವವನು ; ದೂತ : ಆ ನುಡಿಗೊಪ್ಪಿ ದೂದುಗಾಱನಲ್ಲಿಂ ತಳರ್ದು ... ಮೆಲ್ಲಮೆಲ್ಲನೆ ತಮಸಿಯ ಪೊರೆಗೈತಂದಂ (ರಾಮಾಶ್ವ. ೫೬-೨೭). ದೂದುಗಾರ : ರಾಯಸಮಂ ಬರೆದೊರ್ವ ಪಟುಭಟನ ಕರದೊಳಿಟ್ಟು ಕಳಿಪಲೊಡಮಾ ದೂದಂಗಾರಂ . . . ಬಂದಾಸ್ಥಾನಮಂ ಪೊಕ್ಕು (ಚಂದ್ರಛು. ೫-೦೦).

[ ದೂದು + – ಕಾಱ ]

**ದೂದುನಡೆ** (ಕ್ರಿ). ರಾಯಭಾರಕ್ಕಾಗಿ ಹೋಗು; ದೂತಕಾರ್ಯಕ್ಕೆಂದು ಹೋಗು : ಅಂದು ಪಾಂಡವರ ಪಾಳೆಯದಿಂ ಕುರುನಗರಿಗೆ ದೂದುನಡೆದ ಬಟಲ್ಕೆಗಳೆಯಲೆಂದು ಒಯ್ಯನೊತ್ತುವ ಸಿರಿಪೊಡವಿಯರ ಮೆಲ್ಗೆಲ ಸೋಂಕಿಗೆ ನವಿರುಣ್ಮುವ ಕಿಱುದೊಡೆಗಳಂ (ಚಳಪಂ. ೩೪-೮).

[ ದೂದು + ನಡೆ₁ ]

**ದೂದುಪೋಗು** 'ಧೂದುವೋಗು' ನೋ.

**ದೂದುವೋಗು,** ಧೂದುಪೋಗು (ಕ್ರಿ). ವರ್ತಮಾನ ಕೊಡಲು ಹೋಗು; ಸಂದ್ದಿ ತಿಳಿಸಲು ಹೋಗು : ತನ್ನ ನಲ್ಲನಲ್ಲಿಗೆ ದೂದುವೋಗಿ ಬಂದ ದೂದವಿಗೇಗೆಯ್ದು ತೆಱನುಮನಱಿಯದೆ ಪದೆದು ಪಡೆಮಾತಂ ಬೆಸಗೊ[ಳ್ವುದಂ] ಕಂಡು (ಶಂಶಧಾ. ೪-೧೦೦ ವ). ದೂದುಪೋಗು : ಬೇಟದ ಸೂಡಿಂ ಬಾಡಿ ಬಸಂಗೆಟ್ಟುದನಿಂದು ನಿಂದು ಕಾಂತೆಗಱಿಪಿ ಬಱಿಯಟ್ಟುವೆವನಿತೊಂದು ಪೊಟ್ಟು ಸೈತಿರ್ಪುದೆಂದು ಸಂತಯಿಸಿ ದೂದುಪೋಪವನೆ ಮುಯ್ಯೇರಡಿಗೆಳೋಡೆ (ರಾಮಾಶ್ವ. ೨೨-೧೩).

[ ದೂದು + ಪೋಗು₁ ]

**ದೂದೈದು** (ಕ್ರಿ). ರಾಯಭಾರ ಮಾಡಲು ಹೋಗು,–ಪ್ರಯಾಣ ಮಾಡು : ಅಂತಪ್ಪುದುಮಾಗಳರ್ಕಿನ ಸೊರ್ಕಾಳ್ತನದಿಂ ನೀಳ್ದಂಗದು ಗದನಂದಿನ ರಾವಣನೆಡೆಗೆಂತಂತು ಕಡುಸಡಗರದಿಂ ದೂದೈದಿಪಂದು ಸಮುಚಿತಾಸನದೊಳ್ ಕುಳ್ಳಿರ್ಪುದುಂ (ರಾಮಾಶ್ವ. ೦೪೨-೬).

[ ದೂದು + ಐದು₁ (<ಎಯ್ದು) ]

**ದೂನ** (ಗು.) ೧. ಸಂತಾಪ ಹೊಂದಿದ; ನೋವಾದ; ಪೀಡೆಗೊಳಗಾದ: ಆ ಲೇಖವಾಹಕರ್ . . . ಆ ವೃತ್ತಾಂತಮಂ ತ್ವರಿತಗತಿ ಬಿನ್ನವಿಸಿದವ್ವನೆನಃತ್ರಂ ವಿಷಣ್ಣದೂನವದನರಾಗಿರ್ಪುದುಂ (ಕಾದಂಶ. ೬೩೯). ೨. ಬಳಲಿದ; ಆಯಾಸಗೊಂಡ. 'ದೂನಿಸು' ಪರಾ. ೩. ಸುಟ್ಟ; ಕಾಯಿಸಿದ; ತಪ್ತ. [ ಸಂ. ]

**ದೂನಿಕೆ** (ನಾ). ಒಂದು ಬಗೆಯ ಆಭರಣ (?): ಪಟ್ಟಸರವು ದೂನಿಕೆಗಳ ಚಿನ್ನದ ದಾರಿ ಕಟ್ಟಾಣಿ ಪೊನ್ನ ದಾರಿಗಳ (ದೇವಾಂಪು. ೫-೧೦೬). [ ? ]

**ದೂನಿಸು** (ಕ್ರಿ). ೧. ದುಃಖಿಸು; ಶೋಕಪಡು; ಸಂತಾಪ ಹೊಂದು: ದೂನಿಸಿ ಜಾನಿಸಿ ನಿಟ್ಟಿಸುತಿರ್ದಂ ತಾನದು ಕಾರಣದಿಂ ನಸುನಗೆ ಮಿಗೆ ಯೊಗೆದುದೆನಗೆಯೆನಲು (ಉದ್ಭರಾ. ೩-೬೨); ಸುತರು ಸುಮ್ಮಾನ ದೊಳಿಯ್ಯುರುತಿರಲು ದೂನಿಸುತಿದ್ದಿರಿ ನೀವೆಮಗಿದಜ ಸಂಧಾನಗಾಣ ಸದಾಡಿರೆಂದ (ಭರತ. ೪೩-೪೫); ದೂನಿಸುತಿರೆ ನಿಮ್ಮ ಸಗೆಸೆಟೇಕಾಗಿ ಹಾಸ್ಯಾನುವಾದದಿ ನಗಿಸಿದನೌ ಅನುದರದಿ ಶೋಕವಿಲ್ಲದೆ ತಾಳ್ದೆನೌ ಏನಹುದಿನ್ನಳಲಿದರೆ (ಭರತ. ೭೧-೧೦೧). ೨. ಬಳಲು; ಆಯಾಸ ಹೊಂದು: ಬೆಚ್ಚುತ್ತ ಬೆದಱುತ್ತ ದೂನಿಸುತ . . . ಓಡಿದನು (ಸೌಂದಪು. ೧೬-೪೩). [ ದೂನ + – ಇಸು₁ ]

**ದೂಪ** (ನಾ). ೧. ಸುಟ್ಟಾಗ ಸುವಾಸನೆಯನ್ನು ಬೀರುವ (ಹಾಲುಮಡ್ಡಿ, ಸಾಂಬ್ರಾಣಿ ಮುಂತಾದ) ಪರಿಮಳಪದಾರ್ಥ: (ಹ). ೨. ಸಾಂಬ್ರಾಣಿ ಮೊದಲಾದ ಸುವಾಸನೆಯ ಪದಾರ್ಥಗಳಿಂದ ಹೊರಡುವ ಹೊಗೆ: ಧಕಾರಕ್ಕೆ ದಕಾರಂ_ಔಷಧ_ಔಸದ . . . ಧೂಪ_ದೂಪ (ಕಮದ. ೨೫೫ ಪ್ರಯೋ). ೩. ಒಂದು ಬಗೆಯ ಮರ; ಧೂಪದ ಮರ: ಕೆಲವು ಕಡೆಗಳಲ್ಲಿ ತೇಗ, ನಂದಿ, ಹೆಬ್ಬಲಸು, ಬಲಿಗೆ, ದೂಪ, ಜಂಭೆ . . . ಮುಂತಾದ ಗಗನಚುಂಬಿತ ವೃಕ್ಷಗಳಿದ್ದರೆ ಕೆಲವು ಕಡೆಗಳಲ್ಲಿ ಗರಗಿ, ಬಿದಿರು . . . ಮುಂತಾದ ಗಿಡ ಬಳ್ಳಿ ಪೊದೆಗಳಿದ್ದವು (ಕಂಜಪಂ. ೨).

**ದೂಪದ ಕಡ್ಡಿ**=ಧೂಪಕ್ಕಾಗಿ ಸುಗಂಧವಸ್ತುಗಳಿಂದ ತಯಾರಿಸಿದ ಕಡ್ಡಿ; ಊದುಕಡ್ಡಿ: (ಹ). **ದೂಪ ಹಾಕು**= ೧. ಸುಗಂಧದ್ರವ್ಯಗಳಿಂದ ಹೊಗೆ ಹಾಕು; ಧೂಪ ಹಾಕು: ದೂಪ ಹಾಕಿದರೆ ಪಾಪ ಹೋದೀತೆ ? (ಗಾದೆ). ೨. (ಆಲಂ) ಕೆರಳಿಸು; ಉದ್ರೇಕವನ್ನುಂಟು ಮಾಡು: ಅಣ್ಣ ತಮ್ಮಂದಿರಲ್ಲಿ ಜಗಳ ತರಲು ಮಾವನು ಕಿರಿಯವನಿಗೆ ಆಗಿಂದಾಗ ದೂಪ ಹಾಕುತ್ತಲಿದ್ದಾನೆ (ಬೂತಿ). [ <ಸಂ. ಧೂಪ ]

**ದೂಪಟ** 'ದುಪ್ಪಟ' ನೋ.

**ದೂಪಾರತಿ**(ನಾ). ೧. ಧೂಪದಿಂದ ಮಾಡುವ ಆರತಿ: ಅರ್ಚಕರು ದೇವರಿಗೆ ದೂಪಾರತಿಯನ್ನು ಮಾಡುತ್ತಿದ್ದಾರೆ (ಬೂತಿ). ೨. ಸುಗಂಧ ವಸ್ತುಗಳಿಂದ ಆರತಿ ಎತ್ತುವುದಕ್ಕೆ ಉಪಯೋಗಿಸುವ ಸಾಧನ; ಧೂಪಾರತಿಯನ್ನು ಮಾಡುವ ಪಾತ್ರೆ,_ಉಪಕರಣ: ಸ್ವಸ್ತಿಶ್ರೀ ನಗರೇಶ್ವರದೇವರಿಗೆ . . . ಸೊಣ್ಣಪ್ಪನು ಕೊಟ್ಟ ಉಪಕರಣ ಹರಿಯಾಣ ಅಡ್ಡಣಿಗೆ ಗಂಟಿನವಾರತಿ ದೂಪಾರತಿ ಬಟ್ಟಲು ಶಂಕು (ಎಕ. IX, ಚೆಂಗಲೂ. ೯೦-೧೧; ಸು. 1400); ದೂಪಾರತಿಯು ಘಂಟೆಯುಮನುಯ್ಯೆನೂರನಾ ಪದ್ಮವದನೆಯರು ತಂದಿಡರು [ ಲು ] ವಲವಿನಿಂ ತಾ ಪಿಡಿದು (ಪಪುಮೂ. ೨೧-೨೬). 'ಧೂಪಾರತಿ' ಪರಾ. [ ದೂಪ + ಆರತಿ₁ ]

**ದೂಪಿಸು₁, ಧೂಪಿಸು₁** (ಕ್ರಿ). ೧. ಬಾಯಾರು; ನೀರಡಿಸು: ಯಾಯಾತಿ ಬೇಂಟೆಯ ನೆವದಿ ಸೇನಸಹಿತಾರಣ್ಯದೊಳ್ ಬಳಲಿ ದೂಪಿಸಿ ಕೊಳದಿ ನೀರನೀಂಟಿ (ಲಕ್ಷ್ಮಭಾ. ೦೫-೮); ವಿಪಿನದೊಳು ಮೃಗಹರಣಕೇಳಿಗಂ ನಡೆತಂದು ಸಂಚರಿಸಿ ದೂಪಿಸಿದರು (ತುರಂಗ. ೦೬-೦೯). ೨. ಸಂತಾಪ ಹೊಂದು; ಸಂಕಟಪಡು: ಹಸಿವು ತೃಷೆ ಬಳಲಿಕೆಗಳಲಿ ದೂ[ಪಾಠಾಂ. ಧೂ]ಪಿಸುತ ಬಂದಳು ಮಾಯೆ ತಾನಲ್ಲವೆಂನನಜಸುತಲಿ (ಪ್ರಭುಲೀ. ೬-೪೪); ಶರತಾಪದಿಂ ದೂಪಿಸುತ ಕೇಳದಲ್ (ಜಿನಮು. ೪೧-೧೪). ೩. ಮೂರ್ಛೆ ಹೊಂದು: ಶೋಕಪ್ರಳಾಪದಿಂ ನರನಳಲುತಿರಲತ್ತ ಕರ್ಣಸುತನಟ್ಟೆ ಬಂದಪ್ಪಳಿಸಲು ದೂ[ಪಾಠಾಂ. ಧೂ]ಪಿಸಿ ಧರೆಗೆ ಬಿದ್ದು (ಜೈಮಿಭಾ. ೨೩-೩೦).

**ಧೂಪಿಸು₁**: ೧. ನಡೆದು ಪಡೆ ಧೂಪಿಸಿತು ಬಂಜರ ಕಡೆಯ ನೀರನು ಕಾಣದನವರದು (ಕೌರಿಡಾ. ೯-೩೪); ಶರಹತಿಯಲುಲಿ ನೋಂದು ಧೂಪಿಸಿ ತರಹರಿಸುವಶ್ವಾಳಿ (ಕುಮ್ಮಾಳ. ೨೩-೨೯); ಮನುಮಥನ ಶರಹತಿಗೆ ಧೂಪಿಸುತ ಮೈಮರೆದರು (ನಿಘಗ. ೧೦-೮೦-೩೯).

[ ←ತೆಲು. ದೂಪಿಂಚು ]

**ದೂಪಿಸು₂** (ಕ್ರಿ). (ಸುಗಂಧ ದ್ರವ್ಯಗಳಿಂದ ಹೊಗೆ ಹಾಕಿ) ಪರಿಮಳಿಸುವಂತೆ ಮಾಡು,_ಸುವಾಸನೆ ಬೀರುವಂತೆ ಮಾಡು: ದೂಪಿಸಿದ ಬಳಿದುಗುಳನುಟ್ಟನುಲೇಪನಂಗಳ ಹೂಸಿ . . . ಇದಿರಾಯ್ತು ನೃಪಕಟಕ (ಕುಮ್ಮಾಗ. ೦-೨೬). [ ದೂಪ + – ಇಸು₃ ]

**ದೂಪೆ** 'ದೂವೆ₁' ನೋ.

**ದೂಬರದಿಂಡಿ** (ನಾ). ದುಂದುವೆಚ್ಚ ಮಾಡುವವಳು; "ದುಂದುಗಾರತಿ" (ಜಾನಕೋ. ೬). [ ದೇ. ತ ತಮಿ. ತೂಪ್ಪರತಣ್ಣಿ; ತೆಲು. ದೂಬಬದಿಂಡಿ ]

**ದೂಮರ** 'ತೂಪರು' ನೋ.

**ದೂಮುಕ** 'ದಂಪಾಂಕ' ನೋ.

**ದೂಮುಧಾಮು** (ನಾ). ಹಾಳುಮಾಡುವಿಕೆ; ಪೋಲುಮಾಡುವಿಕೆ: (ಸ್ಕಾಂಡರ್). 'ಧಾಮಧೂಮು' ಪರಾ.

[ ←ಮರಾ. ಹಿಂ. ಧೂಮಧಾಮ್ ]

**ದೂಯಂ** 'ದುಯ್ಯಂ' ನೋ.

**ದೂರ್** 'ದೂಱು₁' ನೋ.

**ದೂರ** (ಗು). ೧. ಸಮೀಪವಲ್ಲದ; ಹತ್ತಿರವಲ್ಲದ. ೨. ದೀರ್ಘವಾದ; ನಿಡಿದಾದ: ಅಂತು ದೂರಾಯುಸ್ಸಾಗರಪಾರಗನಾಗಲೊಡಂ (ಚಂದ್ರಪು. ೯-೩೬ ಪ). (ನಾ). ೩. (ಕಾಲ, ಸ್ಥಳ ಮುಂತಾದುವುಗಳಲ್ಲಿ) ಹತ್ತಿರವಲ್ಲದುದಂ; ಸಮೀಪವಲ್ಲದುದು: "ಗೆಂಟು ವಿಪ್ರಕೃಷ್ಟಂ ದೂರಂ" (ವಸ್ತುಕೋ. ೦೦೯-೬೮); ತಂದೆ ಕಟಾದಬಲ ಬೇಗೆಯೊಳಂ ದೂರದೆ ಬಿರ್ದದೊಂದು ಕಡುಸೇದೆಯೊಳಂ ಬಂದೆನ್ನಂ ಪರವಶತೆಯೊಳೊಂದಿಸಿ ದತ್ತಾಗಳಾ ಪಿಪಾಸೋದ್ರೇಕಂ (ಕಾದಂಪೂ. ೦೮೯); ಅಯ್ಯ ದೂರದಲ್ಲಿರ್ದಹೆಯೆಂದು ಬಾಯಾಱಿ ಬಳಲುತ್ತಿರ್ದೆನಯ್ಯ ನಾನು (ಮಹಾದೇ. ಬ. ೫೮-೮೧); ದೂರದೊಳೆ ನೋಡಿ ಕಂಡು ಪುರೂರವನಿದಪೂರ್ವಮೃಗಮೆನುತ್ತಿಸಲಂಬಂ ನಾರಿಯೊಳಿಟ್ಟಂ (ವರ್ಧಪು. ೧೦-೩೦); ದೂರದಿಂ ಪರ್ವತಂ ರಮ್ಯಂ (ಎಕ. VI, ತರೀಕ. ೪೫-೬೪; 1196); ತೇರನೆಚ್ಚನು ಕುದುರೆಕಾಲರ ದೂರದಲಿ ಖಂಡಿಸಿದನು (ಕುಮ್ಮಾಳ. ೨೦-೨೨); ಇರುಳು ಕತ್ತಲೆಯ ಗವಿ; ಮನೆ ದೂರ; ಕನಿಕರಿಸಿ, ಕೈಹಿಡಿದು ನಡೆಸೆನ್ನನು (ಇಂಗೀತ. ೯೬-೩); ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ (ಗಾದೆ). ೪. ಸೇರದುದು; ಹೊರತಾದುದು; ಎರವಾದುದಂ: ತನ್ನ ತಾನಱಿದೆನೆಂಬಹಂಕಾರವುಳ್ಳರೆ ನಿಮ್ಮ ವರಿಗೆ ದೂರ (ಬಸವ. ೬೩೯); ಈ ಗುಣ ಸಂಗನಬಸವಣ್ಣಂಗೆ ದೂರ (ಸರ್ವಪ. ೦೩೦-೬೦೯). ೫. ಎರಡು ಸ್ಥಳಗಳ ನಡುವಿನ ಅಂತರ: ಮಕ್ಕಳ ಮೇಲೆ ಗಮನವಿದ್ದುದರಿಂದ ಕುಂತಿಗೆ ದೂರವೇ ಕಾಣಲಿಲ್ಲ (ಪಥಾ. ೦೫).

**ದೂರದೂರ** (ದ್ವಿರುಕ್ತಿ): ದೂರದೂರೋಪವಿಷ್ಟಮೂಕಮುಖಬಬ್ಬಾವಾಮನಕಿರಾತವರ್ಷಧರಕಂಚುಕಿಪ್ರಪಂಚಿಯುಮಾಗಿರ್ಪಿನೆಗಂ (ಚಂದ್ರಪು. ೩-೫೦ ವ); ನಿಮ್ಮ ನಿರ್ಮಳರೂಪಮಂ ಕಂಡವರುಗಳ ಬಹು ಪಾಪಸಂಕುಳವೆಲ್ಲದುಹೋಗವೆ ದೂರದೂರದಲಿ (ಬಸಪು. ೪೬-೩೩); ದೂರ

ದೂರದಿಂದ ಜನರು ಬರುತ್ತಾರೆ (ಮುಂಬಯಿ. ೪-೧೪೨). **ದೂರಣ** = ೧. ಸಮೀಪವಲ್ಲದ ; ದೂರದ : ದೂರಣ ದೇಶದಿಂ ಬಂದವನೀಶಕುಮಾರರು ನೆರೆದು ನೋಡುತಿದೆ ಮಾರನ ಮದದಾನೆ ನೋಡೇಳು (ಶಂರಾಸಾಂ. ೨೦-೪೦); ನೋಡೆಂದು ಸಖಿಜನರು ಕರವೆತ್ತಿ ದೂರಣಂ ತೋರೆ ವೀಕ್ಷಿಸಲು (ಪದಮೋ. ೭-೯). ೨. ಬಹುಕಾಲದಿಂದ ನಡೆದು ಬಂದ ; ಬಹಳ ದೀರ್ಘವಾದ : ಚಿರಕಾಲದಿಂ ದೂರಣ ಸ್ನೇಹವೆಮಗೆಂದು ತರಣಿ ತಾವರೆಯೆಡೆಗೆಯ್ದಿ ಹರುಷದೊಳೊಪ್ಪಿತೆಂದೆನೆ ಚಕ್ರವರನಾ ಕರಕಮಲ ದೊಳೊಪ್ಪಿದುದು (ಶ್ರೀಪಾಲ. ೦೨-೯೩): ☞ ಇದು ಅತ್ತಣ, ಇತ್ತಣ, ಪಡುವಣ, ನಡುವಣ ಎಂಬ ಕನ್ನಡ ಶಬ್ದಗಳ ಸಾದೃಶ್ಯದ ಮೇಲೆ ಮಾಡಿಕೊಂಡ ರೂಪವಿರಬಹುದು. **ದೂರದ ನಂಟ, ದೂರದ ನೆಂಟ** = ಹತ್ತಿರದ ಬಂಧುವಲ್ಲದವನು ; ದೂರದ ನೆಂಟಸ್ತಿಕೆಯುಳ್ಳವನು : ದೂರದ ನಂಟರಂ ಕಂಡರಂತೆ ಸಂಶಯವಾಗದೆ (ಧರ್ಮಾಮೃ. ೯-೦೯೩) ; ನಾವು ನಿನ್ನ ಮನೆಯಲ್ಲಿ ಯಾರೂ ದೂರದ ನೆಂಟ . . . ಅಂತ ತಗ್ಗಿ ನಡೆಯೋದು ನನ್ನಿಂದಾಗೋದಿಲ್ಲವಲ್ಲ ! (ಸಣ್ಣಕ. IX, ೬೬). **ದೂರದ ಬಳಗ**. = ಹತ್ತಿರವಲ್ಲದ ಸಂಬಂಧ,-ನೆಂಟಸ್ತಿಕೆ : ಅಲ್ಲಿರೋದು ದೂರದ ಬಳಗ ಅವರು ಹೋಗು ಅಂದಾಗ ಹೊರಟುಬರ್ತೀನಿ (ಬನಶಂ. ೦೯೦). **ದೂರದ ಸಂಬಂಧ** = ದೂರದ ಬಳಗ: ಓಬಯ್ಯ ಯಾವುದೋ ಭೂಗತವಾಗಿದ್ದ ದೂರದ ಸಂಬಂಧವೊಂದನ್ನು ಸಂಶೋಧನೆಯಿಂದ ಕಂಡುಹಿಡಿದು ಅವಳನ್ನು 'ತಂಗಿ' ಎಂದು ಕರೆಯತೊಡಗಿದ್ದನು (ಕಾನೂರು. ೧೩೦). **ದೂರಪಡಿಸು** = ಪರಿಹರಿಸಂ; ಇಲ್ಲವಾಗಿಸಂ : ಇದನ್ನೆಲ್ಲಾ ದೂರಪಡಿಸುವುದರಲ್ಲಿ ಕಾವೇರಿ ಸಾಯುವುದು ಮೇಲು (ಕಾವೇರಿ. ೨೦೩). **ದೂರಪಾರ, ದೂರಬಾರ** = ಹತ್ತಿರವಲ್ಲದುದು ; ದೂರ : ನಾವು ನೋಡಿಕೊಂಡು ಬರುವ ದೂರಪಾರ ಏನಿಲ್ಲ (ಸ್ವಕೃಷ್ಣ. ೨೮) ; ಮಗಳನ್ನು ದೂರಬಾರ ಕೊಟ್ಟರೆ ಹೋಗಿಬರುವುದು ಕಷ್ಟವಾಗುತ್ತೆ (ರೂಢಿ). **ದೂರಮಾಗು, ದೂರವಾಗು, ದೂರಾಗು** = ೧. ಹತ್ತಿರದಲ್ಲಿರದಿರು ; ಹೆಚ್ಚು ಅಂತರ ಹೊಂದು ; ತೊಲಗು: ಸಾಮಂತಸಂದೋಹಮಾವಸರಭೀತಿಯಿಂ ತೊಲಗಿ ಪೋಗೆಯುಂ ನಿಜನಿಯತಪ್ರದೇಶದಿಂ ಪ್ರತೀಹಾರರತಿದೂರಮಾಗೆಯುಂ (ಮಲ್ಲಿಪು. ೪-೭೪ ವ); ತನುಮುಟ್ಟಿ ಮನಮುಟ್ಟದೆ ದೂರವಾದರಯ್ಯಾ ಬೆಲೆವೆಣ್ಣನಂತೆ (ವಚಸಂ. ೩೧೭-೯೦) ; ಸದ್ಭಕ್ತಂಗೆ ಜನನ ಮರಣಂಗಳು ದೂರವಾಗಿರ್ಪುವಯ್ಯಾ (ಅಬಂಡೀ. ೧೭೧-೨೩) ; ಸಾತ್ವಿಕಸದುಭಕುತಿಯನರಿಯದವರ ಸಂಗದಿಂದ ಕೈಲಾಸಕ್ಕೆ ದೂರಾಗಿಪ್ಪರು (ಸವಪಾವ. ೨-೬) ; ಈ ಕರ್ನಾಟಕ ಭಾಗವು ಸಹ್ಯಾದ್ರಿಯಿಂದ ಪೂರ್ವಕ್ಕೆ ಹೆಚ್ಚುಹೆಚ್ಚು ದೂರಾಗುತ್ತ ಹೋಗುತ್ತದೆ (ಕಭಾಗ. ೪). ೨. ಅಗಲು ; ಎರವಾಗು; ಸಂಬಂಧವನ್ನು ಕಳೆದುಕೊಳ್ಳು : ಎಲ್ಲ ತೆಱದಿಂ ನಿಮಗೆ ದೂರವಪ್ಪಂ ದೇವ (ಬಸಿರ. ೧-೭೪) ; ಇಂದಿರೇಶನ ಅರ್ಚಿಸದಱಿಂದ ಬಹು ನೊಂದು ದೂರಾದೆ ಸದ್ಗತಿಯಿಂದ (ಪುರಂದ. ೧-೦೭೭-೬). ೩. ನಿವಾರಣೆಯಾಗು : ನಾನು ಪತ್ರಿಕೆಯನ್ನು ಉತ್ತಮವಾಗಿ ನಡೆಸಿಕೊಂಡು ಹೋದರೆ ಆರ್ಥಿಕ ಕೊರತೆ ತಾನೇ ದೂರಾಗುವದು (ಅಪನಾ. ೨೬). **ದೂರವಿರಿಸು** = ಹತ್ತಿರ ಬರದಂತೆ ಮಾಡು ; ಅಂತರವಿರುವಂತೆ ಮಾಡು : ಸಾಲವೆಂಬುದು ಭಯಂಕರಪಿಶಾಚಿ. ಅದನ್ನು ಆದಷ್ಟು ದೂರವಿರಿಸಬೇಕು (ಅರುಸಾ. ೦೨೪). **ದೂರ ಸರಿ** = ಹತ್ತಿರದಲ್ಲಿರದಿರಂ ; ಅಂತರವನ್ನು ಹೆಚ್ಚಿಸಂ : ಬುದ್ಧಿಯ ಸೆಣಸಾಟ ಮೇಲುಗೈ ಆಗಿ ವಾಸ್ತವಿಕ ನಿಲುವಿನಿಂದ ದೂರ ಸರಿಯುವರು (ದ್ರಾವಿಪಿ. ೬೮). **ದೂರ ಸಾರು** = ದೂರಸರಿ : ಕೈಕಟ್ಟಿ ಲಕ್ಷಿಸದೆ ದೂರ ಸಾರಿದೆಯಾ ? ಕೈಕೊಟ್ಟು ಬರಹೇಳಿ ಸಾಸಮಾಡಿದೆಯಾ ? (ಕಎಪು. ೩೭-೬). **ದೂರಾದ್ವಾರ** = ಸಮೀಪವಲ್ಲದುದು; ಹೆಚ್ಚು ಅಂತರವಿರುವುದು : ದೂರಾದ್ವಾರದ ನೆಲನಾವುದುಯಿದು (ಬಧ್ವಕೃ. ೩೦-೭೪೮). [ ಸಂ. ]

**ದೂರಂಬೋಗು, ದೂರವೋಗು, ದೂರಹೋಗು** (ಕ್ರಿ). ಸಮೀಪದಲ್ಲಿರದಿರು ; ತೊಲಗು : "ಕಟಿದಂ = ಸತ್ತಂ ; ದೂರಂಬೋದಂ ; ಕಯ್ಯಾಟಿದಂ" (ಕಮದ. ಪರಿ. ೦). **ದೂರಪೋಗು** : "ತೊಱಲ್ - ದೂರ ಪೋದುದು" (ಕಪನಿ.ಕ. I, ೭೭). **ದೂರಹೋಗು**: ದೂರಹೋದವರಿಂದು ಬರುವರೆ, ಎಂದು ಬರುವ ನಿರೀಕ್ಷೆಯು ? (ನೆಲಮು. ೦೧-೮) ; ಅವಳು ದೂರಹೋದುದು ಒಳ್ಳೆಯದಾಯಿತು (ಹೂಹಣ್ಣು. ೦೯೩). [ ದೂರ + ಪೋಗು₁ ]

**ದೂರಂಮಾಡು, ದೂರಮಾಡು** (ಕ್ರಿ). ೧. ದೂರಹೋಗುವಂತೆ ಮಾಡು ; ಹತ್ತಿರವಿರದಂತೆ ಮಾಡು ; ತ್ಯಜಿಸು : ಪೂರ್ವಾರ್ಜಿತ ಪ್ರಾಪ್ತಿಯಿಂ ದಾರಿದ್ರ್ಯಂ ಧನಮೆಂಬೆರಳ್ಗಮನಿಕುಂ ಮತ್ತೇಕೆ ಧೀರತ್ವಮಂ ದೂರಂಮಾಡಿ ಮನಂ ಸದಾ ಕುದಿವುದೋ (ರತ್ನಾಕ. ೪೭). **ದೂರಮಾಡು**: ೨. ಇಲ್ಲದಂತೆ ಮಾಡು ; ನಿವಾರಿಸು ; ಕಳೆ : ಪರಿಹರಿಸಂ : ನನ್ನ ಕಷ್ಟವನ್ನು ದೂರಮಾಡುವುದಕ್ಕಾಗಿ (ಮುಂಬಯಿ. ೪-೦೦೭) ; ಆದ ತಪ್ಪುತಿಳಿವಳಿಕೆಯನ್ನು ದೂರಮಾಡಿ ಸರಿಯಾದ ವಿಚಾರಸರಣಿಯೊಂದಕ್ಕೆ ಎರಡೂ ಪಕ್ಷಗಳು ಬರಬಹುದು (ಅಪನಾ. ೧೩೨). [ ದೂರ + ಮಾಡು₁ ]

**ದೂರಗ** (ಗು). ೧. ಸಮೀಪವಲ್ಲದ ; ಹತ್ತಿರವಲ್ಲದ. (ನಾ). ೨. ದೂರ ಹೋಗುವಂಥದು. [ ಸಂ. ]

**ದೂರಗತ** (ಗು). ದೂರ ಹೊರಟುಹೋದ : ಕೃಷ್ಣವರ್ಣದ ಅವಳ ಮಾಲುಗಣ್ಣುಗಳು ಕ್ಷಣ ಮಾತ್ರ ಅವನ ಮುಖದಲ್ಲಿ ನಾಟಿದ್ದು, ಅನಂತರ ದೂರಗತವಾದುವು (ಪುನರು. ೩೨೨). [ ಸಂ. ]

**ದೂರಗತೆ** (ನಾ). ಸಮೀಪವರ್ತಿಯಲ್ಲದವಳು ; ಹತ್ತಿರವಿಲ್ಲದವಳು: ಇನ್ನು ಮೇಲೆ ನಿನಗೆ ನಾನು ದೂರಗತೆಯಾಗುವೆನಲ್ಲವೆ ? (ಶಾಕುಂತ. ೩೪-೦೯). [ ಸಂ. ದೂರಗತಾ ]

**ದೂರಗಾಮಿ** (ನಾ). ೧. ದೂರ ಹೋಗುವವನು : ಊರಿನಿಂದ ದೂರಗಾಮಿಯಾಗುವ ನನಗೆ ಈ ವ್ಯವಹಾರವೆಲ್ಲ ಏಕೆ? (ರೂಢಿ). ೨. ದೂರ ಹೋಗುವುದು,-ಚಲಿಸುವುದು : ಮನುಷ್ಯನ ಕಣ್ಣು ಕಿವಿಯೂ ಸಮಾನವಾದ ದೂರಗಾಮಿಯಾಗಿದ್ದರೆ ಮನುಷ್ಯನ ದುಃಖಪ್ರವಾಹವು ಹೆಚ್ಚುತ್ತಿದ್ದಿತೋ, ಕಡಿಮೆಯಾಗುತ್ತಿದ್ದಿತೋ ಆದನ್ನಾರು ಹೇಳಬಲ್ಲರು ? (ಶಾಕುಂ. ೦೨೨). ೩. ಬಾಣ ; ಶರ. [ ಸಂ. ದೂರಗಾಮಿನ್ ]

**ದೂರಗೆಯ್ಯು** 'ದೂರಗೈ' ನೋ.

**ದೂರಗೈ, ದೂರಗೆಯ್ಯು** (ಕ್ರಿ). ೧. ಬಿಡಂ ; ತ್ಯಜಿಸಂ : ಕೆಟ್ಟ ಅಭ್ಯಾಸಗಳನ್ನು ದೂರಗೈಯದಿದ್ದರೆ ಬಾಳು ಸಂತೋಷವಾಗಿರುವುದಿಲ್ಲ (ರೂಢಿ). ೨. ಪರಿಹರಿಸಂ; ಕಳೆ; ನಿವಾರಿಸು: ಸಜ್ಜನಸಂಗವು ತೋರಿ ಸುಗತಿಯನು ದೂರಗೈವುದು ಕುಮತಿಯನು (ಇಂದಿರಾಪ. ೭೪-೬೦). **ದೂರಗೆಯ್ಯು** : ೧. ಸಣ್ಣಪುಟ್ಟ ಮಾತಿಗೆ ಸ್ನೇಹಿತರನ್ನು ದೂರಗೆಯ್ಯುವುದು ಸರಿಯಲ್ಲ (ರೂಢಿ). [ ದೂರ + ಗೈ (<ಕೆಯ್₁) ]

**ದೂರಘ್ರಾಣ** (ನಾ). [ಜೈನ] ಹದಿನೆಂಟು ಬಗೆಯ ಬುದ್ಧಿಋದ್ಧಿಗಳಲ್ಲಿ ಒಂದು : ಅವುದೊಂದು ದೂರದಿಂ ಬಂದ ಗಂಧಮನಿಂತುಟೆಂದಱಿವುದು ದೂರಘ್ರಾಣಮೆಂಬುದು (ಚಸಾರ. ೩೮೬). [ ದೂರ + ಘ್ರಾಣ ]

**ದೂರತೋಪಾಸ್ತ** (ನಾ). ದುಸ್ತರವಾದುದು ; ಅಸಾಧ್ಯವಾದುದಂ : ನೀವು ಕನ್ನಡನಾಡಿನ ಸಾರ್ವಭೌಮನನ್ನು ಪರಾಭವಗೊಳಿಸಿದ ಹೊರತು, ಆ ದೇಶಗಳು ನಿಮ್ಮ ಮಾಂಡಲಿಕತ್ವವನ್ನು ವಹಿಸುವುದು ದೂರತೋಪಾಸ್ತವಿರುವದು (ಕಾಕಸಂ. ೧೪) : ಇನ್ನು ಉಪಾಯಾಂತರಗಳಿಂದ ಹಿಡಿಯುವದಂತೂ ದೂರತೋಪಾಸ್ತವೇ ಸರಿ (ಕಳ್ಳಕಾ. ೪೭) ; ☞ 'ದೂರತಃ+ಅಪಾಸ್ತ' ಎಂದು ಬಿಡಿಸಬಹುದಾದ ಸಂಸ್ಕೃತಶಬ್ದಕ್ಕೆ 'ದೂರದಿಂದಲೇ ತಳ್ಳಲಾದುದಂ' ಎಂಬ ಅರ್ಥವಿದೆ. [ ? ]

**ದೂರದರ್ಶಕ** (ಗು). ೧. ದೂರದಲ್ಲಿರುವುದನ್ನು ತೋರಿಸುವ,-ಕಾಣುವಂತೆ ಮಾಡುವ. 'ದೂರದರ್ಶಕಯಂತ್ರ' ಪರಾ. (ನಾ). ೨. ದೂರದ ವಸ್ತುಗಳು ಹತ್ತಿರದಲ್ಲಿದ್ದಂತೆಯೂ, ಹೆಚ್ಚು ಗಾತ್ರದಲ್ಲಿಯೂ ಕಾಣುವಂತೆ ಮಾಡುವ ಸಲಕರಣೆ,-ಯಂತ್ರ; ದುರ್ಬೀನು : ದೂರದರ್ಶಕ ; ದುರ್ಬೀನು (Telescope, ಶಶ್ಬ್ರಿ. ೮೨) : ದೂರದರ್ಶಕವನ್ನು ಅಂತರಿಕ್ಷಕ್ಕೆ ತಿರುಗಿಸಿದುದರಿಂದ ಅದುವರೆಗೂ ಕೇವಲ ಕಲ್ಪನಾವಿಲಾಸದಿಂದ ಸೃಷ್ಟಿಸಲ್ಪಟ್ಟಿದ್ದ ಹಲವಾರು . . . ಕಟ್ಟುಕಥೆಗಳೂ ಆಧಾರರಹಿತವಾದುವು (ಶುಕ್ರಾ. ೧೮ ಪೀಠಿಕೆ) ; ದೂರದರ್ಶಕದ (Telescope) ಮೂಲಕ ಶನಿಗ್ರಹದ ಬಳೆಗಳನ್ನು ಕೆಲವು ಪಂಡಿತರಿಗೆ ತೋರಿಸಿದಾಗ ಅವರಲ್ಲೊಬ್ಬರು, "ಹೀಗೆ ಬಳೆಗಳು ಕಾಣುವುದು ದೃಷ್ಟಿದೋಷವೋ, ಈ ದೂರದರ್ಶಕದ ಗಾಜಿನ ದೋಷವೋ?" ಎಂದು ಕೇಳಿದರು (ಭೌತವಿ. ೨೦). [ ದೂರ + ದರ್ಶಕ ]

**ದೂರದರ್ಶಕಯಂತ್ರ** (ನಾ). = ದೂರದರ್ಶಕ ೨ : ದೂರದರ್ಶಕಯಂತ್ರ ದಕ್ಷಿಯೊಳ್ ಕಣ್ಣಟ್ಟು. ಗಗನವಿಜ್ಞಾನಿ ತಾಂ ರಾತ್ರಿಯಾಕಾಶದಲಿ ಕಾಣ್ಕೊಂದು ತಾರಾಗರ್ಭದಂತೆ (ಶ್ರೀರಾಪಟಾ. ೧೧-೨೭೩); ಗೆಲಿಲಿಯೊ ತನ್ನ ಪ್ರಖ್ಯಾತವಾದ ದೂರದರ್ಶಕಯಂತ್ರ ಅಥವಾ ದುರ್ಬೀನನ್ನು (Telescope) ತಯಾರಿಸಿದನು (ಗತಿಡ. ೦೦೨) ; ಆಕಾಶವನ್ನು ನೋಡುವುದಕ್ಕೆ ಒಂದು ಸರಳವಾದ ದೂರದರ್ಶಕ (Telescope) ಯಂತ್ರವನ್ನು ತಯಾರಿಸಿದ (ಆಕಾಶ. ೫). [ ದೂರದರ್ಶಕ + ಯಂತ್ರ ]

**ದೂರದರ್ಶನ** (ನಾ). ೧. ದೂರದಿಂದ ನೋಡುವಿಕೆ ; ದೂರದಿಂದ ಕಾಣುವುದು. ೨. ತಡೆಗಳಿಂದ ಅಥವಾ ಹೆಚ್ಚು ಅಂತರದಿಂದ ಮರೆಯಾಗಿರುವ ವಸ್ತುಗಳನ್ನು ಅಥವಾ ದೇಶಾಂತರಗಳಲ್ಲಿ ನಡೆಯುವ ಸಂಗತಿಗಳನ್ನು ನಿಸ್ತಂತು ತರಂಗಗಳ ಅಥವಾ ಇತರ ವೈಜ್ಞಾನಿಕ ಸಾಧನೆಗಳ ಸಹಾಯದಿಂದ ನೋಡುವುದು ; ಟೆಲಿವಿಷನ್ನು ದೂರ(ವಸ್ತು)ದರ್ಶನ; ಪರೋಕ್ಷವೀಕ್ಷಣ (Television. ೩೦೪೧). ೩. ಮುಂದಾಲೋಚನೆ ; ದೀರ್ಘದೃಷ್ಟಿ. ೪. ಪಂಡಿತ ; ವಿದ್ವಾಂಸ. ೫. ಹದ್ದು. ೬. [ಜೈನ] ಹದಿನೆಂಟು ಬಗೆಯ ಬುದ್ಧಿಋದ್ಧಿಗಳಲ್ಲಿ ಒಂದು : ಅಯ್ದುವರ್ಣಂಗಳೊಳಾವುದೊಂದು ದೂರದಿಂ ಬಂದ ವರ್ಣಮನಿಂತುಟೆಂದಱಿವುದು ದೂರದರ್ಶನಮೆಂಬುದು (ಹಚಾರ. ೩೮೭). 'ಬುದ್ಧಿಋದ್ಧಿ' ಪರಾ. [ ದೂರ + ದರ್ಶನ ]

**ದೂರದರ್ಶಿ** (ಗು). ೧. ದೂರದೃಷ್ಟಿಯುಳ್ಳ ; ಮುಂದಾಲೋಚನೆಯನ್ನು ಮಾಡುವ; ವಿವೇಕವುಳ್ಳ. (ನಾ). ೨. ದೂರದರ್ಶಕಯಂತ್ರ: ದೂರದರ್ಶಿಯು (Telescope) ಹಾಲೆಂಡಿನಲ್ಲಿ ೧೬೦೮ರಲ್ಲಿ ತಯಾರಾಯಿತು (ಶಿಲ್ಪನಾ. ೦೫೨) ; ನಮ್ಮ ದೃಷ್ಟಿಯ ಶಕ್ತಿಯನ್ನು ದೂರದರ್ಶಿಗಳು ಇನ್ನೂ ಹೆಚ್ಚಿಸಿವೆ (ಪಾಲಿಜ್ಞ. I, ೫). ೩. ದೂರಾಲೋಚನೆಯುಳ್ಳವನು ; ವಿವೇಕಿ ; ಪಂಡಿತ : "ದೂರದರ್ಶಿ, ದೀರ್ಘದರ್ಶೀ – ಈ ೨ ದೂರವಾದ ಹಿಂದುಮುಂದು ಯೋಚನೆಯುಳ್ಳವನ ಹೆಸರು" (ಸಿದ್ಧಾಂತಿ. ೨೦೩). [ ಸಂ. ದೂರದರ್ಶಿನ್ ]

**ದೂರದರ್ಶಿತ್ವ** (ನಾ). ದೂರದೃಷ್ಟಿ ; ಮುಂದಾಲೋಚನೆ ; ವಿವೇಕ : ಬಹುಶ್ರುತನ ಮಂತ್ರನಿಶ್ಚಯಮುಮಂ ದೂರದರ್ಶಿತ್ವಮುಮಂ ಪ್ರತಿಭಾಗುಣಮುಮಂ . . . ಸಚಿವಸಮೂಹಂ ಮೆಚ್ಚಿ (ಶಾಂತಿಪು. ೨-೭೦ ವ) ; ಸರ್. ಎಂ. ವಿಶ್ವೇಶ್ವರಯ್ಯನವರ ದೂರದರ್ಶಿತ್ವದಿಂದಲೂ . . . ದೇಶವು ಹೊಸರೂಪವನ್ನೇ ತಾಳಿತು (ಪ್ರಬಂಧಾ. ೨೦). [ ಸಂ. ]

**ದೂರದರ್ಶಿನಿ** (ನಾ). ೧. ಮುಂದಾಲೋಚನೆ ಮಾಡುವವಳು ; ವಿವೇಕಿ : ಆಗ ದೂರದರ್ಶಿನಿಯಾದ ನಿದಾನಬುದ್ಧಿಯ ಹಿರಿಯ ಹೆಂಗುಸು ಎಂದರೆ ಏನುತೆಯೇ (ದೂರಕ. ೦೫೫). ೨. ದೂರದರ್ಶಕಯಂತ್ರ : ದೂರದರ್ಶಿನಿಯ ನೋಟಕ್ಕೆ ಎಲ್ಲ ಜ್ಯೋತಿರ್ಮೇಘಗಳೂ ಬಹು ಸುಂದರ (ನಕ್ಷತ್ರ. ೫) ; ದೂರದರ್ಶಿನಿಯಿಂದ ನೋಡುವವನು ಅನಂತದ ಅಂಚನು (ಶಿಲಾಲಿ. ೩೭-೧೩). [ ಸಂ. ದೂರದರ್ಶಿನೀ ]

**ದೂರದೃಷ್ಟಿ** (ನಾ). ೧. ದೂರದ ನೋಟ. ೨. = ದೂರದರ್ಶಿತ್ವ : ಸಾವಕಾಶಗಳನ್ನು ಕೊಂಡುಕೊಳ್ಳುವಾಗ ನೀವು ಕೊಡುವ ಬೆಲೆಗೆ ಸರಿಯಾದ ಪ್ರತಿಫಲ ಸಿಗಬೇಕೆಂದರೆ ಕೊಂಡುಕೊಳ್ಳುವವನಲ್ಲಿ ದೂರದೃಷ್ಟಿಯಿರಬೇಕು (ಅದುಶಾ. ೦೩೪). ೩. ಅರುವತ್ತು ನಾಲ್ಕು ವಿದ್ಯೆಗಳಲ್ಲಿ ಒಂದು ; ಮುಂದಾಗುವುದನ್ನು ತಿಳಿಯುವುದು : ಅಕ್ಷರ ಲೆಕ್ಕ . . . ದೂರದೃಷ್ಟಿ ದೂರಶ್ರವಣ . . . ಮಂತ್ರ ತಂತ್ರಸಿದ್ಧಿ ಇವೆಲ್ಲವ ಕಲಿತಡೇನೋ (ವಚಸಂ. ೦೩-೪೨); P ಪರಂಪರಾಗತವಾದ ಅರುವತ್ತು ನಾಲ್ಕು ವಿದ್ಯೆಗಳಲ್ಲಿ ಇದರ ಉಲ್ಲೇಖವಿಲ್ಲ. ೪. ದೃಷ್ಟಿಯ ದೋಷಗಳಲ್ಲಿ ಒಂದು; ದೂರದ ವಸ್ತುಗಳು ಮಾತ್ರ ಸ್ಫುಟವಾಗಿ ಕಾಣುವ ಕಣ್ಣಿನ ಕುಂದು: ದೂರದೃಷ್ಟಿಯುಳ್ಳ ಕಣ್ಣು ಅದೇ ದೂರದ ವಸ್ತುಗಳನ್ನು ಸ್ಪಷ್ಟವಾಗಿ ನೋಡಬೇಕಾಗಿದ್ದರೆ ಹೆಚ್ಚು ತ್ರಾಸಪಡಬೇಕು (ನಿಮ್ಮದೃ. ೬೪). 'ಚಾಳೀಸಂ' ಪರಾ. [ ದೂರ + ದೃಷ್ಟಿ ]

**ದೂರದೆಸೆ** (ನಾ). (ಒಂದು ಪ್ರದೇಶದಿಂದ) ಅಂತರ ಅಧಿಕವಾಗಿರುವ ಪ್ರದೇಶ,-ಸ್ಥಳ : ಕಡದುಬಗೆ ತಿಳಿಯಾಗಿ, ದೂರದೆಸೆ ಬಳಿಯಾಗಿ, . . . ನುಡಿದಳವಳಂದು (ಹೊಂಗಳು. ೦೨-೨೨). [ ದೂರ + ದೆಸೆ ]

**ದೂರದೇಶ** (ನಾ). ಬಹಳ ಅಂತರವಿರುವ ನಾಡು,-ಸೀಮೆ : ದೂರದೇಶದೊಳಿರ್ದರ್ ಬರಿದೇ (ಧರ್ಮಾಮೃ. ೦೩-೪೦). [ ದೂರ + ದೇಶ ]

**ದೂರನಿರ್ದೇಶನ** (ನಾ). ಅಧಿಕವಾದ ಅಂತರದಲ್ಲಿದ್ದೂ ಯಂತ್ರಗಳ ಕಾರ್ಯವನ್ನು ಮಾರ್ಗದರ್ಶನ ಮಾಡಬಲ್ಲ ಶಕ್ತಿ,-ತಿಳಿವು : ಬಿಲ್ಲುಬಾಣಗಳಿಂದ ಯುದ್ಧ ಮಾಡುತ್ತಿದ್ದ ಕಾಲಕ್ಕೂ ಅಣುಬಾಂಬುಗಳನ್ನು ದೂರನಿರ್ದೇಶನದಿಂದ ಹಾರಿಸುವ ಈಗಿನ ಕಾಲಕ್ಕೂ ಇರುವ ವ್ಯತ್ಯಾಸವೇ ಅನ್ನಿ (ಮನೋಸಂ. ೦೩೪). [ ದೂರ + ನಿರ್ದೇಶನ ]

**ದೂರಪಥ** (ನಾ). ಬಹಳ ಅಂತರವುಳ್ಳ ಮಾರ್ಗದ ಸ್ಥಳ ; ಹತ್ತಿರವಲ್ಲದ ಜಾಗ : ದೂರಪಥಕ್ಕೆ ಪೋಪೆನೆನುತುಂ ಪ್ರಿಯಳಲ್ಲಿಗೆ ಬಂದು ಕೇಳಲ್ (ಮಲ್ಲಿಕಾ. ೦೫-೨೦೩). [ ದೂರ + ಪಥ ]

**ದೂರಪಾತಂ** (ಅ). ದೂರದಿಂದ ಗುರಿಯಿಟ್ಟು : ಒರ್ವನನೆ ಲಕ್ಷ್ಯಂಮಾಡಿ ಶರಾಸಾರದಿಂ ದೂರಪಾತಮಿಸುವುದುಂ (ಶಾಂತಿಪು. ೪-೮ ವ). [ ಸಂ. ]

**ದೂರಪೋಗು** 'ದೂರಂಬೋಗು' ನೋ.

**ದೂರಪ್ರತಿ** (ನಾ). (ಕಾಲ ಕಳೆದ ಕಾರಣದಿಂದ ಅಥವಾ ಅನೇಕ ಸಲ ಪ್ರತಿಮಾಡಿದ ಪರಿಣಾಮವಾಗಿ) ಬಹಳ ವ್ಯತ್ಯಾಸಹೊಂದಿದ ನಕಲು,-ಪ್ರತಿ : ಹಸ್ತಪ್ರತಿಸಂಗ್ರಹಗಳಲ್ಲಿ ನಮಗೆ ಇಂದು ಕಾಣಸಿಗುತ್ತಿರುವ ಪ್ರತಿಗಳು, ಸ್ವಹಸ್ತಪ್ರತಿಗಳಿಂದ ಇಲ್ಲವೆ ಅವುಗಳ ಸದ್ಯಪ್ರತಿ (Immediate Copy) ಅಥವಾ ದೂರಪ್ರತಿ(Distant Copy)ಗಳಿಂದ ಎಂಥ ಪರಿಸ್ಥಿತಿಯಲ್ಲಿ ನಕಲುಗೊಂಡವು ಎಂಬುದನ್ನು ನಾವು ಕೇವಲ ಊಹಿಸಬೇಕಷ್ಟೆ ! (ಭಾರತ. ೨೮). [ ದೂರ + ಪ್ರತಿ ]

**ದೂರಪ್ರಾಚ್ಯ** (ಗು). ೧. ತೀರ ಪೂರ್ವದಲ್ಲಿರುವ : ದೂರಪ್ರಾಚ್ಯ ದೇಶಗಳಿಗೆ ಹೋಗಿ ಇದೇ ತರಹದ ಸಂಶೋಧನೆ ಮಾಡಿ ಆ ವಿವರಗಳನ್ನೂ ತಮ್ಮ ಪುಸ್ತಕಕ್ಕೆ ಸೇರಿಸುವುದಾಗಿ ಹೇಳಿದರು (ಮಾರ್ಗದ. ೦೫೫). (ನಾ). ೨. ಜಪಾನ್ ಮೊದಲಾದ ತೀರ ಪೂರ್ವದ ದೇಶ. [ದೂರ+ಪ್ರಾಚ್ಯ]

**ದೂರಪ್ರಿಯ** (ನಾ). ದಕ್ಕದ ಪ್ರಿಯ ; ದೊರಕದ ನಲ್ಲ : ನೀರೇಜನಿಯೆನಿತಲರ್ದೊಂ ಸಾರದೆ ಪೋದಂ ದಿನೇಶನಂತೆಸಗಂ ನೀಂ ದೂರಪ್ರಿಯನಾದೈ ಸಂಸಾರಂ ವ್ಯರ್ಥೆಯಾದುದೆಂದು ಬೆಚ್ಚನೆ ಸುಯ್ದಳ್ (ಅರ್ಜನೇ. ೩-೨೭). [ ದೂರ + ಪ್ರಿಯ ]

**ದೂರಫಲ** (ನಾ). ೧. ಬಹಳ ಕಾಲದ ಬಳಿಕ ಆಗುವ ಪರಿಣಾಮ; ತುಂಬ ತಡವಾಗಿ ಬಂದೊದಗುವ ಫಲ: ಇವು ದೂರಫಲಂಗಳ್ ಸ್ವಪ್ನವಿಶೇಷಂಗಳ್ (ಅದಿಪು. ೧೩-೪೪). ೨. ಹೆಚ್ಚು ಅಂತರವಿರುವ ಸಂತತಿ, – ಸಂತಾನ: ತಮ್ಮನು ಅಣ್ಣನಿಂದ ಹದಿನೈದು ವರ್ಷಗಳಷ್ಟು ಅಂತರದಲ್ಲಿ ಹುಟ್ಟಿದ ದೂರಫಲವಾಗಿದ್ದನು (ರೂಢಿ). [ದೂರ+ಫಲ$_1$]

**ದೂರಭವ್ಯ** (ನಾ). [ಜೈನ] ಸಮ್ಯಕ್ತ್ವಕ್ಕೆ ಇನ್ನೂ ದೂರವಾಗಿರುವವನು: ಸಿದ್ಧಿಯನ್ನು ಸಾಧಿಸದಿರುವವನು: ಆತನತ್ಯುನ್ನತಬೋಧನೀಂ ಬೆಸಸಭವ್ಯನೋ ಭವ್ಯನೋ ದೂರಭವ್ಯನೋ (ಆದಿಪು. ೨-೩೪); ಎಮ್ಮರಸಂಗಾನಿನಿತು ಧರ್ಮಶ್ರವಣಂಗೆಯ್ದೊಡಂ ಭೋಗಂಗಳ್ಗೆ ವಿಮುಖನಾಗಂ ಆತನಭವ್ಯನೊ ಭವ್ಯನೊ ದೂರಭವ್ಯನೊ ನಿಮ್ಮಡಿಗಳೆ ತಿಳಿಯೆ ಬೆಸಸಿಂ (ಶಾಂತಿಪು. ೦೩); ವಾಯುಭೂತಿಚರನಪ್ಪಾ ಜೀವನೀಗಳಭವ್ಯನೋ ಭವ್ಯನೊ ಮತ್ತಂ ದೂರಭವ್ಯನೋ ಬೆಸಸಿಮಿದಂ (ಸುಕುಮಾ. ೩-೨೨); ಕಣ್ಬೇನೆ ಮಾಣ್ದಂದು ಕಾಣ್ಬಕ್ಷಿರೋಗಿಯಂತೆ ದೂರಭವ್ಯಂ ಕರ್ಮೋಪಶಮಮಾದಾಗಳಱಿಗಂ (ಶಸಾರ. II, ೭೩೨). 'ಭವ್ಯ' ಪರಾ.

[ ದೂರ + ಭವ್ಯ ]

**ದೂರಮಾಡಿಸು** (ಕ್ರಿ). ದೂರವಾಗುವಂತೆ ಮಾಡು; ನಿವಾರಿಸು; ಪರಿಹರಿಸು: ನೆರೆಯುವರ ಕಷ್ಟಗಳನ್ನು ದೂರಮಾಡಿಸಿದನು (ಮುಂಬಯಿ. ೩-೩೦೭). [ ದೂರಮಾಡು (<ದೂರಂಮಾಡು) + – ಇಸು$_3$ ]

**ದೂರಮಾಡು** 'ದೂರಂಮಾಡು' ನೋ.

**ದೂರಮಾಪಕ** (ನಾ). ಒಂದು ಪ್ರದೇಶ ಅಥವಾ ವಸ್ತುವಿನೊಂದಿಗೆ ಇರುವ ಅಂತರವನ್ನು ಅಳೆಯುವ ಯಂತ್ರಸಾಧನ: ದೂರದಲ್ಲಿರುವ ಯಂತ್ರಸಲಕರಣೆಯ ಅಳತೆ ಸಂಖ್ಯೆಗಳನ್ನು ವಿದ್ಯುತ್ಪ್ರವಾಹದ ಸಹಾಯದಿಂದ ದಾಖಲಿಡುವ ಸಲಕರಣೆ; (ವೋಲ್ಟಜಣಿ, ಫಿರಂಗಿ ಅಭ್ಯಾಸ, ವೊ.ಗಳಲ್ಲಿ) ದೂರಗಳನ್ನು ಗೊತ್ತುಮಾಡಲು ಉಪಯೋಗಿಸುವ ಸಲಕರಣೆ; ದೂರಮಾಪಕ (Telemeter. ಇಂಕನಿ). [ ದೂರ + ಮಾಪಕ ]

**ದೂರಮುದ್ರಕ** (ನಾ). ಯಾಂತ್ರಿಕ ನಿರ್ದೇಶನದಿಂದ ಹತ್ತಿರವಿರದ ಪ್ರದೇಶಕ್ಕೆ ಕಳುಹಿಸಿದ ವರ್ತಮಾನ, ಸೂಚನೆ, ನಿರೂಪಣೆ ಮುಂತಾದುವನ್ನು ಮುದ್ರಿಸುವ ಸಾಧನ: "ದೂರಮುದ್ರಕ; ಟೆಲಿಪ್ರಿಂಟರ್" (Tele-Printer. ಪಕ್ರಿನಿ. ೮೨). [ ದೂರ + ಮುದ್ರಕ ]

**ದೂರಮುದ್ರಣ** (ನಾ). = ದೂರಮುದ್ರಕ: (Tele-Type. ಪಕ್ರಿನಿ. ೮೨).

[ ದೂರ + ಮುದ್ರಣ ]

**ದೂರಲೇಖ** (ನಾ). ವಿದ್ಯುಚ್ಛಕ್ತಿಯ ಸಹಾಯದಿಂದ ವರ್ತಮಾನಗಳನ್ನು ಸಂಕೇತಗಳ ಮೂಲಕ ಹತ್ತಿರದಲ್ಲಿರುವವರಿಗೆ ತಿಳಿಸುವ ಯಾಂತ್ರಿಕ ಸಾಧನ: ಸಮಾಚಾರ ಕಳುಹಿಸಲು ಉಪಯೋಗಿಸುವ ದೂರಲೇಖದ (ಟೆಲಿಗ್ರಾಫ್)ಭಾಗ (Communicator. ಇಂಕನಿ).

[ ದೂರ + ಲೇಖ ]

**ದೂರವಂದೆ** (ನಾ). ತುಂಬ ಪುಕ್ಕಲ; ತೀರ ಅಂಜುಕುಳಿಯಾದ ವ್ಯಕ್ತಿ; ಮಹಾಭೀತ: ಶ್ರುತವಿಲ್ಲದ ಲಿಂಗಿಯಂತೆ ಮೂರ್ಖನಾಗದೆ ದೂರವಂದೆಯಂತೆ ತಲ್ಲಣಿಸದೆ . . . [ ಧರ್ಮದೊಳ್ ] ನಿಶ್ಶಂಕನುಮಪ್ಪುದು (ಧರ್ಮಾಮೃ. ೮-೯೭). [ ದೂರ + ವಂದೆ ]

**ದೂರವಾಣಿ** (ನಾ). ವಿದ್ಯುಚ್ಛಕ್ತಿಯ ಮೂಲಕ ಧ್ವನಿಯನ್ನು, ಮುಖ್ಯವಾಗಿ ಮಾತುಗಳನ್ನು ಸಾಗಿಸುವ ಸಲಕರಣೆ; ಟೆಲಿಫೋನು: ಮೊದಲು ದೂರವಾಣಿಯ ಮುಂದೆ ಕುಳಿತು ವಿಮಾನಕ್ಷೇತ್ರದ ಅಧಿಕಾರಿಯನ್ನು ವಿಚಾರಿಸಿದೆ (ನಂಟರು. ೧೦೩); ಟಪಾಲು ಮತ್ತು ತಂತಿ, ದೂರವಾಣಿ ನಿಸ್ತಂತುವಾರ್ತೆ ಮತ್ತು ಪ್ರಸಾರಣ ಮತ್ತು ಇತರ ಅದೇ ರೂಪದ ಸಮಾಚಾರ ಸಾಧನ (ಭಾರಾನ. ೨೪೦). [ ದೂರ + ವಾಣಿ$_1$ ]

**ದೂರವಾರ್ತಾವ್ಯವಸ್ಥೆ** (ನಾ). ದೂರದೂರದ ಪ್ರದೇಶಗಳಿಗೆ (ದೂರಲೇಖ, ದೂರವಾಣಿ ಮುಂತಾದುವುಗಳ ಮೂಲಕ) ಸಮಾಚಾರಗಳನ್ನು ತಲುಪಿಸಲು ಮಾಡಿರುವ ವ್ಯವಸ್ಥೆ: ಇಂತಹ ಸಂಕ್ಷೋಭಗಳಿಂದ ಟೆಲಿಗ್ರಾಫ್, ಟೆಲಿಫೋನ್, ರೇಡಿಯೋ ಮುಂತಾದ ದೂರವಾರ್ತಾವ್ಯವಸ್ಥೆಗಳಿಗೆಲ್ಲಾ ಅಡಚಣೆಯುಂಟಾಗುವುದು (ಭೌತವಿ. ೩೨೨).

[ ಸಂ. ದೂರವಾರ್ತಾವ್ಯವಸ್ಥಾ ]

**ದೂರವೀಕ್ಷಣ** (ನಾ). ೧. ದೂರದಲ್ಲಿರುವ ವಸ್ತುಗಳನ್ನು ನೋಡುವುದು. 'ದೂರವೀಕ್ಷಣಯಂತ್ರ' ಪರಾ. ೨. ಕಣ್ಣಿಗೆ ಕಾಣದ ವಿಷಯಗಳನ್ನು ಪ್ರತ್ಯಕ್ಷವಾಗಿ ಕಂಡಂತೆ ಮನಸ್ಸಿನಲ್ಲಿ ಗ್ರಹಿಸುವುದು; ಅತೀಂದ್ರಿಯ ದೃಷ್ಟಿ: ಅವಧಿಜ್ಞಾನ ಆಧುನಿಕ ಮನಶ್ಶಾಸ್ತ್ರದಲ್ಲಿ ದೂರವೀಕ್ಷಣ (Clairvoyance) ವೆಂದು ಕರೆದಿರುವ ಶಕ್ತಿಯನ್ನು ಹೋಲುತ್ತದೆ. ದೂರದಲ್ಲಿ ನಡೆದಿರುವ ಅಥವಾ ಗತಕಾಲದಲ್ಲಿ ನಡೆದಿರುವ ಸಂದರ್ಭಗಳನ್ನು ಕುಳಿತ ಕಡೆಯಿಂದಲೇ, ಕಣ್ಣಿನ ಸಹಾಯವಿಲ್ಲದೆಯೇ ಒಂದು ದೃಶ್ಯದಂತೆ ನೋಡುವುದು-ದೂರವೀಕ್ಷಣಶಕ್ತಿಯಿಂದ ಸಾಧ್ಯ (ಶಕ್ತಿಸ್ಕಾ. ೧೧೯).

[ ದೂರ + ವೀಕ್ಷಣ ]

**ದೂರವೀಕ್ಷಣಯಂತ್ರ** (ನಾ). ದೂರದರ್ಶಕಯಂತ್ರ: ಇದು ದೂರವೀಕ್ಷಣಯಂತ್ರ (Telescope) ಇರಬಹುದೇ ಎಂಬ ಸಂಶಯ ಬರುತ್ತದೆ (ಮೃವಾಸ್ತು. ೧೦೯). [ ದೂರವೀಕ್ಷಣ + ಯಂತ್ರ ]

**ದೂರವುಳಿ** (ಕ್ರಿ). ಹತ್ತಿರದಲ್ಲಿರದಿರು; ದೂರವಿರು: ಸಂಬಂಧಿಕರು ಅವರ ನಡವಳಿಕೆಯನ್ನು ನೋಡಿ ದೂರವುಳಿದರು (ರೂಢಿ).

[ ದೂರ + ಉಳಿ$_1$ (<ಉಳ್$_1$) ]

**ದೂರಶ್ರವಣ** (ನಾ). ೧. ಅರುವತ್ತುನಾಲ್ಕು ವಿದ್ಯೆಗಳಲ್ಲಿ ಒಂದು; ಹೆಚ್ಚು ಅಂತರದಲ್ಲಿಯ ಧ್ವನಿಯನ್ನು ಕೇಳುವುದು: ಅಕ್ಷರ ಲೆಕ್ಕ . . . ದೂರದೃಷ್ಟಿ ದೂರಶ್ರವಣ . . . ಮಂತ್ರ ತಂತ್ರಸಿದ್ಧಿ ಇವೆಲ್ಲವ ಕಲಿತಡೇನೋ (ವಚಸಂ. ೦೩-೪೨). P ಪರಂಪರಾಗತವಾದ ಅರುವತ್ತುನಾಲ್ಕು ವಿದ್ಯೆಗಳಲ್ಲಿ ಇದರ ಉಲ್ಲೇಖವಿಲ್ಲ. ೨. = ದೂರಶ್ರವಣತ್ವ: ರಾಜಸದ ದಶಸಿದ್ಧಿಯಿದ್ದಿಹವು . . . ಕೇಳನೂರ್ಮಿಯು ಒಂದು ಮತ್ತೆಯು ಕೇಳು ದೂರಶ್ರವಣ ಎರಡದು (ಜ್ಞಾಸುಂ. ೨೦-೩೩). ೩. [ಜೈನ] ಹದಿನೆಂಟು ಬಗೆಯ ಬುದ್ಧಿ ಋದ್ಧಿಗಳಲ್ಲಿ ಒಂದು: ದೂರದಿಂ ಬಂದ ಶಬ್ದಮನಿಂತುಟೆಂದಱಿವುದು ದೂರಶ್ರವಣಮೆಂಬುದು (ಶಸಾರ. ೩೮೭). 'ಬುದ್ಧಿ ಋದ್ಧಿ' ಪರಾ. [ ದೂರ + ಶ್ರವಣ$_1$ ]

**ದೂರಶ್ರವಣತ್ವ** (ನಾ). [ಯೋಗ] ರಾಜಸಯೋಗದ ಹತ್ತು ಬಗೆಯ ಸಿದ್ಧಿಗಳಲ್ಲಿ ಒಂದು; ಇರುವ ಕಡೆಯಿಂದಲೇ ದೂರದ ಧ್ವನಿಯನ್ನು ಕೇಳಬಲ್ಲ ಶಕ್ತಿ: ಅನೂರ್ಮಿಮತ್ತ್ವ, ದೂರಶ್ರವಣತ್ವ, ದೂರದರ್ಶಿತ್ವ, ಕಾಮರೂಪತ್ವ, ಪರಕಾಯಪ್ರವೇಶಿತ್ವ, ಸ್ವಚ್ಛಂದಮೃತ್ಯುತ್ವ, ದೇವತೆಗಳ ಮತ್ತು ದೇವಕನ್ಯೆಯರ ಸಹಕ್ರೀಡೆಯನ್ನು ನೋಡುವಿಕೆ, ಯಥಾಸಂಕಲ್ಪ ಸಿದ್ಧಿ, ಅಪ್ರತಿಹತವಾದ ಆಜ್ಞಾಶಕ್ತಿ (ಶ್ರೀವತ್ಸ. ೪೮೯). 'ದಶಸಿದ್ಧಿ' ಪರಾ. [ ಸಂ. ]

**ದೂರಸಂಪರ್ಕ** (ನಾ). ದೂರದಲ್ಲಿರುವವರೊಡನೆ ಸಂಭಾಷಿಸಲು ಸಹಾಯ ಮಾಡುವ ಸಾಧನ: (Tele-Communication. ಪಕ್ರಿನಿ. ೮೦).

[ ದೂರ + ಸಂಪರ್ಕ ]

**ದೂರಸ್ಥ** (ನಾ). ೧. ಹತ್ತಿರಕ್ಕೆ ಬರದವನು; ದೂರವೇ ಉಳಿಯುವವನು. ೨. (ಆಲಂ) ಎರವಾದವನು; ದೂರವಾದವನು: ಇವರಲ್ಲಿ ನಾವು ಯಾರಾದರೂ ಕಾಣಿಕೆ ತೆಗೆದುಕೊಂಡರೆ ನಮ್ಮ ಸ್ರೀಸೈಲದ ಸೂರ್ಯಸಿಂಹಾಸನಕೆ ದೂರಸ್ತರು (ಎಕ. VI, ಚಿಕ್ಕಮ. ೧೧೦-೨೩: 1702).

[ <ಸಂ. ದೂರಸ್ಥ ]

**ದೂರಸ್ಥ** (ಗು). ೧. ಹೆಚ್ಚು ಅಂತರದಲ್ಲಿರುವ ; ಹತ್ತಿರವಲ್ಲದ. (ನಾ). ೨. ಹೆಚ್ಚು ಅಂತರದಲ್ಲಿರುವುದು ; ಸಮೀಪವಲ್ಲದುದು : ಜನತತ್ತ್ವಂ ಸ್ಮರತತ್ತ್ವಮೆಂಬವೆರಡುಂ ದೂರಸ್ಥಂ (ಶಾಂತಿಪು. ೦-೦೬). ೩. (ಯಾವುದಾದರೊಂದು ಸ್ಥಿತಿಯನ್ನು) ಮೀರಿದವನು,–ಅತೀತನಾದವನು : ಅಷ್ಟವಿಧಾರ್ಚನೆಯ ಮಾಡಿ ಒಲಿಸುವೆನೆ ಅಯ್ಯ ನೀನು ಬಹಿರಂಗ ವ್ಯವಹಾರ ದೂರಸ್ಥನು (ಮಹಾದೇ. ಬ. ೧೩-೧೦). [ ಸಂ. ]

**ದೂರಸ್ಪರ್ಶನ** (ನಾ). [ಜೈನ] ಹದಿನೆಂಟು ಬಗೆಯ ಬುದ್ಧಿಋದ್ಧಿಗಳಲ್ಲಿ ಒಂದು; ದೂರದಿಂದಲೇ ಸ್ಪರ್ಶಜ್ಞಾನವನ್ನು ಪಡೆಯುವುದು : ಎಂಟು ಸ್ಪರ್ಶಂಗಳೊಳಾವುದೊಂದು ದೂರದಿಂ ಬಂದ ಸ್ಪರ್ಶನ ಮನಿಂತುಟೆಂದಱಿವುದು ದೂರಸ್ಪರ್ಶನಮೆಂಬುದು (ಜಸಾರ. ೩೮೬). 'ಬುದ್ಧಿಋದ್ಧಿ' ಪರಾ. [ ದೂರ + ಸ್ಪರ್ಶನ ]

**ದೂರಹೋಗು** 'ದೂರಂಬೋಗು' ನೋ.

**ದೂರಾನ್ವಯ** (ನಾ). ೧. ಹತ್ತಿರವಲ್ಲದ ಸಂಬಂಧ : ವೈಜ್ಞಾನಿಕ ಪ್ರಭಾವದ ದೂರಾನ್ವಯ ಅಲ್ಲಿದೆ ಎಂದು ಒಪ್ಪಿಕೊಳ್ಳಬಹುದು (ಸುವರ್ಣ. ೨೦೮). ೨. [ವ್ಯಾಕ] ಕಾವ್ಯದಲ್ಲಿ ಶಬ್ದಗಳು ಹತ್ತಿರವಿರದೆ ಇರುವುದರಿಂದ ಅರ್ಥವನ್ನು ಸ್ಪಷ್ಟಗೊಳಿಸಲಾಗದಿರುವಿಕೆ; ದೂರದ ಶಬ್ದವನ್ನು ಅನ್ವಯಕ್ಕಾಗಿ ಹತ್ತಿರಕ್ಕೆ ತರುವುದು ; ಇದು ಒಂದು ದೋಷ. ನೇಯಂದ ದೋಷ ಎಂದೂ ಕರೆಯುತ್ತಾರೆ.

[ ದೂರ + ಅನ್ವಯ ]

**ದೂರಾನ್ವಿತ** (ನಾ). ಹತ್ತಿರದ ಸಂಬಂಧವಿಲ್ಲದುದು ; ಹೊಂದಿಕೆಯಾಗದುದು : ವಿರುದ್ಧರಸದ ವಿಭಾವಾದಿಗಳನ್ನು ವರ್ಣಿಸುವುದು ದೂರಾನ್ವಿತವಾದ ವಸ್ತುವಾವುದೋ ಒಂದನ್ನು ಬೆಳೆಸುವುದು . . . ಇವೆಲ್ಲವೂ ರಸದ ವಿರೋಧಕ್ಕೆ ಕಾರಣಗಳಾಗುತ್ತವೆ (ಧ್ವನ್ಯಾಲೋ. ೦೬೩).

[ ದೂರ + ಅನ್ವಿತ ]

**ದೂರಾರಿಷ್ಟ** (ನಾ). ಮುಂದೆ ಉಂಟಾಗುವ ಅಶುಭ,–ಕೇಡು : ಅಂತು ಭರತೇಶ್ವರಂ . . . ಒಂದುದಿವಸಂ ತ್ರಿಯಾಮಾವಿರಾಮದೊಳ್ ಆಶ್ಚರ್ಯಭೂತಂಗಳುಂ ದೂರಾರಿ[ಷ್ಟಾಕಾಂ. ನಿ]ಷ್ಟಫಲಸೂಚಕಂಗಳುಮಪ್ಪ ಸ್ವಪ್ನಂಗಳಂ ಕಂಡು (ಆದಿಪು. ೧೩-೨೦ ವ). [ ದೂರ + ಅರಿಷ್ಟ ]

**ದೂರಾರ್ಥ** (ನಾ). ೧. ಹತ್ತಿರವಿರದ ವಸ್ತು,–ಪದಾರ್ಥ : (+). ೨. [ಕಾವ್ಯಮೀ] ಪದಗಳಿಂದ ಸಹಜವಾಗಿ ಹೊರಡದ ಅರ್ಥ; ಊಹಿಸಲು ಕಷ್ಟವಾಗುವ ಅರ್ಥ. [ ದೂರ + ಅರ್ಥ ]

**ದೂರಾಲೋಚನೆ** (ನಾ). ಮುಂದಿನದನ್ನು ಯೋಚಿಸಬಲ್ಲ ಶಕ್ತಿ,–ವಿವೇಕ ; ಮುಂದಾಲೋಚನೆ : ಈ ಪ್ರಕಾರವಾಗಿ ದೂರಾಲೋಚನೆಯಿಂದ, ಪರಿಣಾಮ ಪರಿಜ್ಞಾನವನ್ನು ಅರಿತು . . . ಸದಾ ವಾಕ್ಕಿಗೆ ಸಂಸ್ಕಾರವನ್ನು ಮಾಡಿಕೊಳ್ಳುತ್ತಿರಬೇಕು (ಆಯುರ್ಧ. ೩೩).

[ ದೂರ + ಆಲೋಚನೆ ]

**ದೂರಾಸ್ವಾದ** (ನಾ). [ಜೈನ] ಹದಿನೆಂಟು ಬಗೆಯ ಬುದ್ಧಿಋದ್ಧಿಗಳಲ್ಲಿ ಒಂದು : ಪಂಚರಸಂಗಳೊಳಾವುದೊಂದು ದೂರದಿಂ ಬಂದ ರಸಮನಿಂತುಟೆಂದಱಿವುದು ದೂರಾಸ್ವಾದಮೆಂಬುದು (ಜಸಾರ. ೩೮೬). 'ಬುದ್ಧಿಋದ್ಧಿ' ಪರಾ. [ ದೂರ + ಆಸ್ವಾದ ]

**ದೂರಾಸ್ವಾದನ** (ನಾ). = ದೂರಾಸ್ವಾದ : ಪಂಚರಸಂಗಳೊಳೊಂದೊಂದು ರಸಂ ದೂರದಿಂ ಬಂದುದು ಇಂತುಂಟೆಂದಱಿವುದು ದೂರಾಸ್ವಾದನಮೆಂದಱಿವುದು (ಜ್ಞಾವಚಾ. ೯೩-೩). 'ಬುದ್ಧಿಋದ್ಧಿ' ಪರಾ. [ ದೂರ + ಆಸ್ವಾದನ ]

**ದೂರಾಳಿ** (ನಾ). ನಿಂದಿಸುವ ಸ್ವಭಾವದ ವ್ಯಕ್ತಿ ; ಹೀಯಾಳಿಸುವುದೇ ಸ್ವಭಾವವಾದ ವ್ಯಕ್ತಿ : ಕನ್ನಡದ ದೂರಾಳಿಗಳನ್ನು ಎರಡು ಪಂಗಡ ಮಾಡಬಹುದು (ಕನ್ನಸು. I, ೦೩೦). [ದೂರು₁ (<ದೂಱು₁)+–ಆಳಿ₁]

**ದೂರಿ₁** (ನಾ). ಬಂಡಿಯ ಎರಡು ಚಕ್ರಗಳನ್ನೂ ಕೂಡಿಸುವ ಸಾಧನ; ಅಚ್ಚುಮರ : ರಥಕ್ಕೆ ಸೇರಿಸತಕ್ಕ ದೂರಿ ಮೊದಲಾದ ಸಾಮಗ್ರಿಗಳನ್ನೂ (ಶ್ರಾವಾಜಿ. ೨೪೪) ; ಗಾಡಿಯ ಎರಡು ಚಕ್ರಗಳನ್ನೂ ಮಧ್ಯದ ದೂರಿಯೊಂದಿಗೆ ಹೊತ್ತುಕೊಂಡು ಹೋಗಿ . . . ನದಿಯ ತೀರದ ಮರಳಿನಲ್ಲಿ ಹೂಳಿದವರುಂಟು (ಚಿತ್ರಕ. ೩೬).

[ ←ಹಿಂ. ಮರಾ. ಧುರೀ, ಧುರಾ./ಪ್ರಾ. ಧುರೀ./ಸಂ. ಧುರ್ ]

**ದೂರಿ₂** (ನಾ). ಎಳೆಯ ಮಕ್ಕಳನ್ನು ಆಡಿಸುವಾಗ ಉಪಯೋಗಿಸುವ ಒಂದು ಪದ : ದೂರಿ ದೂರಿ ದುಗ್ಗಲಮ್ಮ (ಕೂಶಿ). [ ? ]

**ದೂರಿತ** (ನಾ). ದೂರ ಉಳಿಯುವವನು : ದೂರದೊಳಿರ್ಪರ್ಯೊಳೆಕನಲ್ ದೂರಿತರಲ್ತೆ ಪುಷ್ಪವತಿಯಾದಳ ಕಂಡರೆ ನೀತಿಮಾರ್ಗದರ್ (ಮಲ್ಲಿಕಾ. ೪-೭೮೮). [ ಸಂ. ]

**ದೂರಿಸು₁** 'ದೂಱಿಸು' ನೋ.

**ದೂರಿಸು₂**, ದೂರ್ಯಿಸು (ಕ್ರಿ). ನಿವಾರಿಸು ; ಪರಿಹರಿಸು : ದೂರಿಸದೆ ನೆನೆದು ಕೂಳಂ ನೀರುಮನಜ್ಞಾನದಿಂದಮಿರುಳುಂ ಪಗಲುಂ ಸಾರತರ ಪರಮಸೌಖ್ಯಸುಧಾರಸಭರಿತಾತ್ಮತತ್ತ್ವಮಂ ನೆನೆ ಮನದೊಳ್ (ಜಸಾರ. ೪೪-೨೭೦) ; (ಜಸಾರ. ೩೭೦ ನೋ) ; ತಾಂ ವರಸತಿಯು ಸಂಭೋಗದೊಳಮಲಾತ್ಮಸಂವರಪೂರ್ವಕಮಾಗಿ ಪುಂವೇದನೀಯ ಕರ್ಮವನು ದೂರಿಸಿದನದೇಂ ವೀತರಾಗನೊ ಭೋಗಿ (ಭರತ. ೧೧-೦೨೩) ; ಅರಮೇಲೆಸುಗೆ ದೇವರಿಗೆ ಹಂಗಳ ಮೇಲೊ ದೂರಿಸುವಾಳ್ಗಳ ಮೇಲೊ (ಭರತ. ೩೦-೨೩). ದೂರ್ಯಿಸು : ನನ್ನಯ ಚಿಂತೆಯನ್ನು ದೂರ್ಯಿಸಲಿಚ್ಛಿಸಿ ಕಾಂತೆ ಪ್ರಾಣಗಳಲ್ಲಿ ಸ್ಥಿರವಾಗಿರಿಸಿ ಪ್ರೇಮದಲಿ ಅಂತವನ್ನೈದಿದರು ನನ್ನಯ ಸ್ವಾಂತರಂಗಕೆ ಸುಖವು ತೋರದು (ರಘುವಂ. ೪೪-೬೦).

[ ದೂರ + –ಇಸು ]

**ದೂರೀಕರಿಸು** (ಕ್ರಿ). ತ್ಯಜಿಸು ; ಬಿಟ್ಟುಬಿಡು : ಅರಿವನೊತ್ತಿಗನೇಕೆಂದು ನೀನೆನ್ನ ದೂರೀಕರಿಸಬೇಡಮ್ಮ (ಕುರಾಸಾಂ. ೧-೨೪) ; ದೇವರನ್ನು ದೂರೀಕರಿಸಿ ವಿಜ್ಞಾನಿಯವರನ್ನು ದೇವರೆಂದು ತಿಳಿದುಕೊಂಡಂತೆ ಕಾಣುವದು (ಅಮಗಾಂ. ೪) ; ಜಾತಿ ಅಥವಾ ವರ್ಗಭೇದ ಭಾವನೆಗಳನ್ನು ದೂರೀಕರಿಸಿ ಬಡವರೂ ಶ್ರೀಮಂತರೂ, ಹಿರಿಯರೂ ಕಿರಿಯರೂ ಒಂದಾಗಿ ಸೇರುತ್ತಾರೆ (ಭಾರತಾ. ೪೭) ; ಅವನನ್ನು ದೂರೀಕರಿಸಲು ಆಗ ಅವರಿಗೆ ಇನ್ನೊಂದು ಕಾರಣವೂ ಉದ್ಭವವಾಯಿತು (ನಿಸುತ. ೪೮) ; ಹೊಸಗನ್ನಡಕ್ಕೆ ಸೇರುವುದಿಲ್ಲವೆಂದು ದೂರೀಕರಿಸಬೇಕಾದ ಯಾವ ಪ್ರಯೋಗವೂ ಈ ಪದ್ಯಪಂಕ್ತಿಗಳಲ್ಲಿಲ್ಲ (ಸಮಾಲೋ. ೦೫). [ ದೂರೀಕರಣ + –ಇಸು ]

**ದೂರೀಕೃತ** (ಗು). ೧. ನಿವಾರಿಸಿದ ; ದೂರಗೊಳಿಸಿದ : ಕ್ಷಾರಪತಿವಕ್ತ್ರೀರ್ತಿವಿಹಾರಾ . . . ಪ್ರಭಯಾನಿಜತನುಪೂರಾ ಪೂರಾಶ್ರಿತಹೃತ್ಕ್ಲೇಶವಿದೂರಾ ದೂರೀಕೃತಬಲವಿಸ್ತಾರಾ (ಕವಿರಾ. ೩-೨೩೩) ; ಅತಿವಿಶದ ಮಣಿಪ್ರದೀಪಿಕೋದ್ಯೋತದೂರೀಕೃತತಮಸ್ತಮದೊಳನೇಕರತ್ನರಚಿತ ಪ್ರತಿಪಾದುಕವಿನ್ಯಸ್ತಕಾಂಚನಮಂಚೋಪಶೋಭಿತದೊಳ್ . . . ಆ ದಂಪತಿಗಳ್ . . . ನಿದ್ರಾರಸವಶಗತರಾದರ್ (ಆದಿಪು. ೫-೨೨ ವ) ; ದೂರೀಕೃತಾರಿಷಡ್ವರ್ಗನುಂ . . . ನಮಿತಾಕೃತಸಾಮಂತವರ್ಗನುಮಾಗಿ (ಚಂದ್ರಪ್ರಪು. ೪-೨೮ ವ) ; ದೂರೀಕೃತಾಘಂ ಮಹಿತಜೀವನ್ಮುಕ್ತಮಾನಸನು (ಬಸವಪು. ೨೯-೨). ೨. ಬೇರ್ಪಡಿಸಿದ ; ಪ್ರತ್ಯೇಕಪಡಿಸಿದ. [ ಸಂ. ]

**ದೂರೀಭೂತ** (ನಾ). ಪ್ರತ್ಯೇಕವಾದುದು ; ಬೇರೆಯಾದುದು : ವ್ಯಂಗ್ಯಾರ್ಥವು ವಾಚ್ಯಾರ್ಥದೊಡನೆ ಕೂಡಿಯೇ ಅನುಭವಕ್ಕೆ ಬರುತ್ತದೆ. ಆದುದರಿಂದಲೇ . . . ವ್ಯಂಗ್ಯಪರಾಮರ್ಶಕಾಲದಲ್ಲಿ ವಾಚ್ಯಬುದ್ಧಿಯು ದೂರೀಭೂತವಾಗುವುದಿಲ್ಲ (ಧ್ವನ್ಯಾಲೋ. ೨೩). [ ಸಂ. ]

**ದೂರು₁** 'ದೂಱು₁' ನೋ.

**ದೂರು₂** 'ತೂರು₂' ನೋ.

**ದೂರು₃** 'ದೂಱು₁' ನೋ.

**ದೂರು₄** (ನಾ). ಹತ್ತಿರವಲ್ಲದುದು ; ದೂರ : ದೂರಿಂದ ಕಾಣಿಸುವ ಗ್ರಾಮಗಳು ಸುಟ್ಟಂತೆ ತೋರುತ್ತವೆ (ಕಥಾಗ. ೬) ; ಅಗ್ಗಿ ದೂರಿನಿಂದ ವ್ಯಂಜನ, ರುಳಿ, ಗೆಜ್ಜೆ ಸಪ್ಪಳವಾಯಿತು (ವಿಜಯು. ೧೪೯) ; ಮೂದರ ಚಿನ್ನಪ್ಪ ದೂರಿನಲ್ಲಿ ಕೂಗಿಕೊಂಡನು (ಹಳ್ಳಿಬ. ೪). [ <ಸಂ. ದೂರ ]

**ದೂರುಗ** 'ದೂಱುಗ' ನೋ.

**ದೂರೈಸು** 'ದೂರಿಸು₂' ನೋ.

**ದೂರೋತ್ಸಾರಿತ** (ಗು). ಬಹು ಅಂತರದಲ್ಲಿ ಬಿಟ್ಟ ; ದೂರದಲ್ಲಿ ನಿಲ್ಲಿಸಿದ : ಓರ್ವಂ ರಾಜಕುಮಾರಂ ದೂರೋತ್ಸಾರಿತವಾಹನಂ ಸಸಂಭ್ರಮೋಪಗತಪರಿಚಾರಕಸ್ಕಂಧವಿನ್ಯಸ್ತವಾಮಹಸ್ತನಾಗಿ (ಆದಿಪು. ೩-೯೦ ವ) ; ಸಪ್ತಾನೀಕಸಮೇತರಾಗಿ ಗಗನತಳಮನಲಂಕರಿಸಿ ಬಂದು ದೂರೋತ್ಸಾರಿತವಾಹನರಾಗಿ ಸೂರ್ಯಮಿತ್ರಜನೇಂದ್ರನಂ ತ್ರಿಃಪ್ರದಕ್ಷಿಣಂಗೆಯ್ದು (ಸುಕುಮಾ. ೮-೬೬ ವ) ; ದೂರೋತ್ಸಾರಿತ ವಿಚಿತ್ರಾತಪತ್ರ ವಿವಿಧ ವಾಹನಂ ಬಸದಿಯಂ ಬಲಗೊಂಡು . . . ಬಂದು (ಶಂಖಾಮಾ. ೬-೬೯ ವ). [ ದೂರ + ಉತ್ಸಾರಿತ ]

**ದೂರ್ತ** (ಗು). ೧. ಮೋಸದ ; ವಂಚನೆಯ. (ನಾ). ೨. ಮೋಸಗಾರ; ವಂಚಕ : ದೂರ್ತರ್ ಮಾರ್ತಾಂಡನಂ ಕಂಡ ಮಂಜಿನಂತೆ ಪರಿಯೆ (ಧರ್ಮಾಮೃ. ೨-೬೯). 'ದೂರ್ತವಡೆ' ಪರಾ. ೩. ಕಾಮುಕ ; "ವಿಟ" (ನಾಚಿರಾ. ೬). [ <ಸಂ. ಧೂರ್ತ ]

**ದೂರ್ತವಡೆ** (ನಾ). ಮೋಸಗಾರರ ಗುಂಪು; ವಂಚಕರ ಸಮೂಹ : ಸರ್ವಸ್ವಾಪಹರಣಂ ಮಾಡಿ ತನ್ನೊಡನಿರ್ದ ಕಸವಿಂಗಂ ಕಳುಚಿಂಗಂ ಡಸಿಕಿಂಗಂ ದೂರ್ತವಡೆಗಮಂತಿಚಪಳರ್ಗಂ . . . ಕುಡುವನುರ್ಕಿ ಕುಮಾರಂ (ಧರ್ಮಾಮೃ. ೨-೬೦). [ ದೂರ್ತ + ಪಡೆ₁ ]

**ದೂರ್ತು** (ನಾ). ೧. ಮೋಸ ಮಾಡಿಯೂ ನಾಚಿಕೆ ಪಡದಿರುವುದು,– ಸಂಕೋಚಪಡದಿರುವುದು. ೨. ವಂಚಕತನ ; ದುಷ್ಟತೆ ; ಮೋಸಗಾರಿಕೆ : ದೂರುಂ ದೂರ್ತುಂ [ಪಾಠಾಂ. ಕುರ್ತುಂ] ದುಷ್ಟುಂ ನೂಱುಂಟು (ಮುದ್ರಾ. ೧೦-೩); ಉಣ್ಬರ ಬಾಯೊಳ್ ತಿಣ್ಣನೆ ಕಿರ್ಚಂ ಪುಡಿಯುಂ ಮಣ್ಣುಂ ಪೊಯ್ದಂತು ಮಾಡಿದ್ದ ದೂರ್ತಿಂದಂ (ಧರ್ಮಾಮೃ. ೯-೦೩೬) ; ಕೊರೆಗೆಯ್ದುವ ದೂರ್ತುಗಳಂ ಪಲವನವರ್ ಚಲದೆ ಮಾಡಿ ನೆಲನಂ ಬಿಸುಟೀ ಕುಲಪತಿಗೆ ಮಲೆದು (ನೇಮಿಪು. ೦೦-೪೬) ; ದ್ವಿಗುಣಮಾಗದೆ ಮಾಣ್ಕುದೆ ನಿನ್ನ ಧೂ[ದೂ]ರ್ತು (ದಶಕು. ೧೦-೧೦೪). ೩. ವಿಟವೃತ್ತಿ ; ಕಾಮುಕತೆ ; ಲಂಪಟತೆ : ಅವಳೆಂದಳಿಂತಿನಿತು ಧೂ[ದೂ]ರ್ತಿನೊಳಿಂತಿರುತೇನೊ ನಾಣ್ಚೆಯೊ ಎನೆ (ನೇಮಿಪು. ೩-೦೪೮). [ ದೂರ್ತ + –ಉ₄ ]

**ದೂರ್ತೆ** (ನಾ). ವಂಚಕಿ ; ಕಪಟಿ ; ಮೋಸಗಾರ್ತಿ : (೬). [ ದೂರ್ತ + –ಎ₃ ]

**ದೂರ್ವ** (ನಾ). ಗರಿಕೆ : ಅನುರೂಪಂ ಸ್ಫಟಿಕಾಬ್ಜದೊಳ್ ದಧಿ ಸುವರ್ಣ ಕ್ರೌಂಚದೊಳ್ ರೋಚನಂ ಘನಹಾರೀತಕಹುಸಿಯೊಳ್ ಹರಿತ ದೂರ್ವಂ . . . ಮಾಣಿಕ್ಯಭಾಜನದೊಳ್ ಕುಂಕುಮಮಂಕಮೇಂ ಮೆಱೆದುವೋ ಮಾಂಗಲ್ಯಸಾಕಲ್ಯಮಂ (ಶಂಖಾಮಾ. ೩-೦೨೩). [ ಸಂ. ದೂರ್ವಾ ]

**ದೂರ್ವಾಂಕುರ** (ನಾ). ಗರಿಕೆಯ ಚಿಗುರು; ಎಳೆಗರಿಕೆ: ಆ ದೂರ್ವಾಂಕುರ ವರ್ಣದೊಳಾದವೊಡಂಬಟ್ಟು ಕನಕಕವಚಂ . . . ಕ[ಣ್ಣಾದ]ಮ ಬರೆ ಬಂದು ಮುಂದೆ ನಿಂದಂ ಹರಿಗಂ (ಪಂಪಭಾ. ೨-೬೪) : ಉಜ್ಜ್ವಲದಂತಂ ಪರಿವೃತ್ತ ಮೌಕ್ತಿಕಸಮಂ . . . ತನೂರೋಮರಾಜಿ ವಿಲಸದ್ದೂರ್ವಾಂಕುರಾಭಂ ಮನಂಗೊಳೆ ಚಂಚನ್ನಿಜಪಂಚವರ್ಣ ಪಡೆಗುಂ ಚಿತ್ರಾಂಗನಾಶಂಕೆಯಂ (ಅಜಿಪು. ೨-೪೪); ರುಚಿರಮರಕತಶ್ಯಾಮ ದೂರ್ವಾಂಕುರಗ್ರಾಸದೊಳಂ ಅತಿಸ್ವಚ್ಛಸ್ವಾದು ಸಲಿಲಪಾನದೊಳಂ ಮೆಲ್ಲಮೆಲ್ಲನೆ ಮೆಲ್ಲ್ಕಿಡಿ (ಶಂಕರಾಂ. ೨೪-೧೨) ; ವೆ.ಱೆವ ದೂರ್ವಾಂಕುರದ ಮಾಲೆಯಿಂದರಿದಾದ ಮೌಕ್ತಿಕದ ಮಾಲೆ ... ಸ್ತಂಭದಿಂದೆಸೆವುದು (ಚಕುಪು. ೬-೧-೩೬). [ ಸಂ. ]

**ದೂರ್ವಾಂಚಿತ** (ನಾ). ಗರಿಕೆಯಿಂದ ತುಂಬಿ ಅಲಂಕಾರ ಮಾಡಿದುದು : ಪಂಚರತ್ನ ಸಮಸ್ತೌಷಧಿ ಗರ್ಭಮಕ್ಷತಯುತಂ ದೂರ್ವಾಂಚಿತಂ ಸರ್ವ ಧಾನ್ಯಸಮುತ್ತಂಭಿತಪೂರ್ಣಕುಂಭಮೆಸೆದತ್ತು ವೇದಿಕಾಮಧ್ಯದೊಳ್ (ಶಂಖಾಪ್ರಾ. ೩-೧೨೪). [ ಸಂ. ]

**ದೂರ್ವಾಕಿಸಲಯ** (ನಾ). = ದೂರ್ವಾಂಕುರ: ಅಷ್ಟರಲ್ಲಿ ನಾನೂ ಶಕುಂತಳೆ ಗೋಸ್ಕರ ಗೋರೋಚನ, ತೀರ್ಥಮೃತ್ತಿಕೆ, ದೂರ್ವಾಕಿಸಲಯಗಳ ಮಂಗಳಾನುಲೇಪಗಳನ್ನು ಮಾಡುವೆನು (ಶಾಕುಂತ. ೪೯-೨೧). [ ಸಂ. ]

**ದೂರ್ವಾಪ್ರವಾಲ** (ನಾ). = ದೂರ್ವಾಂಕುರ : ಅಪೂರ್ವ ದೂರ್ವಾಪ್ರವಾಲಾಲಂಕೃತ ಕರ್ಣಪೂರನುಂ . . . ಪುಣ್ಯಾಶೀರ್ವಚನ ನಿರ್ಘೋಷ ದತ್ತಕರ್ಣನುಂ ಆಗಿರ್ದು (ಆದಿಪು. ೧೧-೦೦ ವ). [ ಸಂ. ]

**ದೂರ್ವಾಸಕ್ತಿ** (ನಾ). ಗರಿಕೆಯಲ್ಲಿ ಆಸಕ್ತಿ ; ಹುಲ್ಲನ್ನು ತಿನ್ನುವ ಆಸೆ : ಘನ ದೂರ್ವಾಸಕ್ತಿಯಂ ಗಾರುಡಮಣಿರುಚಿಯೊಳ್ ದಾವವಿಭ್ರಾಂತಿಯಂ ಕಾಂಚನಭಿತ್ತಿವ್ರಾತದೊಳ್ . . . ಮಾನೇಚರಸ್ತ್ರೀಭ್ರಮಮನತುಳ ನೀಳಾಶ್ಮಪಾಂಚಾಳಿಕಾದರ್ಶನದೊಳ್ ತಾಳುತ್ತುಮೆತ್ತಂ ಸುಟ್ಟುದು ಮಹೀಭೃದ್ಗೇಹದೇಣೀಸಮೂಹಂ (ಚಂದ್ರಪು. ೦-೧೪೬). [ ಸಂ. ]

**ದೂರ್ವಿಜ ?** (ನಾ). ಬ್ರಹ್ಮ (?) : ಮೂವರನ್ನ ಸುತರಾಗಿಯನೆ ಶಶಿಧರಂ ಯುಜ್ಞಕರ ದೂರ್ವಿಜಂ ದೂರ್ವಾಸವೆಸರಾದವೊಲಂ ಬಸವತ್ಯಣಿಕೆ ಮೆಸರಿಟ್ಟವನ ಚರಣಾಂಬುಜಕ್ಕೆ ಶರಣು (ಲಕಿಕಂ. ೩೩-೩೩). [ ? ]

**ದೂರ್ವೆ** (ನಾ). ಒಂದು ಬಗೆಯ ಹುಲ್ಲು; ಗರಿಕೆ: "ಹರಿತಾಲೀ, ದೂರ್ವಾ– ಇವೆರಡುಂ ಕಱುಕೆ" (ಹಲಾಯು. ೩೨-೩೪) : "ದೂರ್ವೆ ಹರಿತಾಳಿಯೆನೆ ಕಱುಕೆಯೆನಿಸಿಕ್ಕು" (ಮಂಗರಾ. ೩೩-೬) ; ಎಳಸೆ ಪುರ್ವು ದೂರ್ವೆಯನು ರೋರುಹಮುಜ್ಜ್ವಲಕುಂಭಶೋಭೆಯಂ ಪಾಳಿಸೆ (ಚಂದ್ರಪು. ೦೦-೩) ; ಆ ಕ್ಷಣ ದೂರ್ವೆ ದಧಿಗಳನು ತರಿಸಿದನು (ಶಾಶಿರಾ. ೩-೩೦) ; ದೂರ್ವೆಯ ದಳವ ಮೇಯ ಬಂದ ಮೊಲನ ಉರ್ವಿಯಂ ಕರಡಿ ತೊಡರಿಕೊಂಡಿಪ್ಪುದಯ್ಯ (ಸಿದ್ಧೇಶ. ೦೯೩-೫೯೪) : ದೂರ್ವೆಯಿಂ ಕಡೆಗಾದ ವಸ್ತುಗಳುರ್ವಿಯೊಳಗಿಲ್ಲೆಂಬರೆಲ್ಲರು . . . ದೂರ್ವೆಯಿಂ ಕಡೆ ಬೇಡಿ ಬಾಳುವ ಮನುಜನು (ಕಂಕದಾ. ೬-೨೦). [ ಸಂ. ದೂರ್ವಾ ]

**ದೂಲ, ಧೂಲ** (ನಾ). ಉದ್ದವೂ ದಪ್ಪವೂ ಆದ ಮರದ ತೊಲೆ,– ಮರಮುಟ್ಟು : ನೀಲಮಯ ಬೋದಿಗೆ ಪಚ್ಚೆಯ ಚಿಲ್ವ ದೂಲಗಳ್ . . . ಮೃಗನಾಭಿಯ ಸುತ್ತುಭಿತ್ತಿ ಬಾವನ್ನದಿನರ್ಥಿಯಿಂದೆ ಮೆಱೆಗುಂ ಧರಣೀಶನ ಮಂತ್ರಣಾಗೃಹಂ (ಮಲ್ಲಕಾ. ೩-೩) ; ನಾರಾಯಣಶಾಸ್ತ್ರಿಗಳು ಮನೆಯ ಒಂದಂಕಣವನ್ನು ಕೀಳಿಸಿ ಹೊಸದಾಗಿ ಕಟ್ಟಬೇಕೆಂದು ಒಂದಷ್ಟು ತೊಲೆ ದೂಲ ತರಿಸಿಹಾಕಿಕೊಂಡಿದ್ದರು (ನಾಲ್ಕು.ಳ. ೯) ; ಆನೆಗಳ ಎಳೆತಕ್ಕೆ ಶಕಟದ ಮರದ ದೂಲಗಳು ಕಿತ್ತುಬಂದುವು (ಶಾಂತಲಾ. ೨೪೬) ; ಅಲ್ಲಿ ಹಿಂದಿನ ದಿನದಂತೆ ದೊಡ್ಡ ದೊಡ್ಡ ದೂಲದಂತಿದ್ದ ಕಟ್ಟಿಗೆಯ ರಾಶಿಯಲ್ಲಿ ಬೆಂಕಿಯು ಉರಿಯುತ್ತಿತ್ತು (ಕಪಾಳುಂ. ೨೩) ; ಅಂತರಿಕ್ಷಕ್ಕೆ ದೂಲವಿಲ್ಲ (ಭಾಶತ್ತ್ವ. ೨೩). ಧೂಲ: ನಾರಾಚ ಸಲಾಕಿ ಕೊಂಡಿ ಸಹ ೧ ಮರದ ರಥದ ಗಾಲಿಚಕ್ರಗಳು ಧೂಲ ೨ ಸಹ . . . ಯಿ ಸಾಮಾನು ಲೆಕ್ಕ ಬರ ಬರದಿರುವ ತಾಂಬ್ರದ ತಗಡು (ಎಕ. XIV, ನಂಜನ. ೨೯೪, ಪುಟ ೦೪೪ ; 1862). 'ತೊಲೆ₂' ಪರಾ. [ ?./ತಮಿ. ತೂಲ ; ತೆಲು. ದೂಲ ]

**ದೂವಟ** 'ದುಪ್ಪಟಿ' ನೋ.

**ದೂವಟಿ** 'ದುಪ್ಪಟ' ನೋ.

**ದೂವಟ್ಟಿಗೆ** 'ದುವಟ್ಟಿಗೆ' ನೋ.

**ದೂವಡಿಗೆ** 'ದುವಟ್ಟಿಗೆ' ನೋ.

**ದೂವಾಟ** 'ದುಷ್ಪಟಿ' ನೋ.

**ದೂವಾರಿ** (ನಾ). ಹೊರುವವನು : ಹೊಂದುಂಡಿಗೆಯ ದೂವಾರಿಗಳು ವೆಂಠಣಿಸಿದರು (ಕುಮಾರವ್ಯಾ. ೮-೩೫). [ <ಸಂ. ಧೌರೇಯ ]

**ದೂವಾಳಿ** 'ದುವ್ವಾಳಿ' ನೋ.

**ದೂವಾಳಿಸು** 'ದುವ್ವಾಳಿಸು' ನೋ.

**ದೂವೆ$_1$**, ದುವ್ವೆ, ದೂಪೆ, ದೂಹೆ (ನಾ). ೧. ಹೊಗೆ ; ಧೂಮ : ಬಟ್ಟೆಯ ದೂಳಿದೂವೆ ಮೊದಲಾದುದು (ಕಾದಂಪೂ. ೧೯೬) : ಧೂಮ- ದೂವೆ (ಶಬ್ದಾನು. ೧೬೦ ಪ್ರಯೋ) . ತಳಿಗಳಿ ದಳ್ಳುರಿಯಲರಿಂ ಬೆಳೆದಲರ್ವಗಿ ದೂವೆ [ಪಾಠಾಂ. ದೂವೆ, ಧೂಮ]. ಮಂತ್ರಘೋಷಂ ಪಿಕಸಂಕುಳರವಮನೆ ಚೂತಂ ಕಣ್ಗೊಳಿಪುದು ಹೋಮಾಗ್ನಿಯಂತೆ ಕಾಮಾಧ್ವರಿಯಾ (ಕಲಾಂ. ೨-೪೮). ೨. ಆವಗೆ : ದೂವೆಯೊಳ್ ಪೊಕ್ಕ ಪಾವಿನಂತೆ ಬೆದಬೆದ ಬೆಂದು (ಲೀಲಾವ. ೧೦-೭೦ ವ); ಪೊಗೆಯಡಂಗೆಗವಿದ ದೂವೆಯಂತಿರೆ ಬರುಂಟದೊಡೆ ಬಿಸಿಯನುಗುಳ್ದ ಕಪ್ಪುರದ ನಾಣ್ನಳಲ ಜಗಲಿಯುಂ (ವರ್ಧಪು. ೩-೬೬ ವ) ; ದೂವೆ [ಪಾಠಾಂ. ದಾವಿ]ಯೊಳ್ ಪೊಕ್ಕುರಗಿಯಂತೆ ಬೆದಬೆದನೆ ಬೆಂದು (ಹಲಪು. ೧೯-೪೩). ೩. ಹೆಣವನ್ನು ಸುಡುವ ಜಾಗ ; ಚಿತೆ : ಪಂದಲೆಯೋಲದೋರಣದ ಸೀಯುದರಂ ಪೊಸದೂವೆ ದೂಪ ತೂಗುಂದಲೆ ಬಾಳ್ವಿಣಂ ಪೊಡರೆ ಬಳ್ಕುವ ಸಮ್ಮನ ಸೂಲಂ (ಕಾವ್ಯಾವ. ೫೬) ; ಪರೇತವನದೊಳಗೆ ಪೊಸದೂವೆಯು ಕೆಲದೊಳ್ ಕಳೆದೊಟ್ಟಿದ ತೊಡವುಗಳುಮಂ ಮರದ ಕೊಂಬಿನೊಳ್ ಬರೆದು ಕಟ್ಟಿದ ಕಪ್ಪಡಮುಮಿರ್ದಪ್ಪುದೆಂದು ಪಿತೃವನಪಾಳಕಂ . . . ಬಿನ್ನಪಿಸಿ (ಅರ್ಧನೇ. ೫-೪೦ ವ) : ಭೂನುತಕುಮಾರನಂ ದಹಿಸಿ ದೂವೆಯ ಕೆಲದೊಳೀ ನರಕಿ ವನಿತೆಯನನಾಮಿಕನ ಕಯ್ಯೊಳನುಮಾನವಿಲ್ಲದೆ ಕೊಲಿಸು (ಹಡಕಾ. ೦೩-೯); ತ್ವರಿತದೆ ಪುಟ್ಟಿ ಬಿರ್ರನುತಮಾ ಕ್ಷಣದಿಂ ಮೊಗೆದೆತ್ತಿ ದೂವೆಯಂತಿರೆ ಕಡುಗಾಯ್ದು ಭೂರಜಮಂ . . . ಅಂಬರಮನೆ ಚುಂಬಿಸುತ್ತಿರದೆ ಸುಟ್ಟುರೆಗಳ್ ನೆಗೆದತ್ತುಮೆತ್ತಲುಂ (ಕುಸುಮಾ. ೮-೧೨೨) : ಅಸಿಯ ಗಸಣಿಯುಂ ದೂವೆಯ ಬೇವಸಮುಂ . . . ಕನಸಿನೊಳಂ ಇಲ್ಲನಿಸಿ (ಎಕ. XI, ಹೊಳಕಾ. ೨೦-೪೧; 1878 ?). **ದುವ್ವೆ** : ೪. ಬೆಂಕಿ; ಅಗ್ನಿ; ಕೆಂಡ: ಕುಂದೆ ನದೀಜಲಂ ಪರಿಯೆ ನಾಲ್ದೆಸೆಯೊಳ್ ಮೃಗತೃಷ್ಣೆ . . . ದುವ್ವೆ ಪೊಲಗೆ ಧೂಳಿ ಕಾಮಂ ದಯೆಗೆಟ್ಟು ಕಾಮುಕರವರ್ದಿಸಿ ನೋಡಲುದಗ್ರ ತೇಜದಿಂ ಬಂದುದು ಚೈತ್ರಮಾಸಂ (ನಳಚಂ. ೫೬). **ದೂಪೆ** : ೩. ಉರಿಯುತ್ತಿಲ ದೂಪೆಯ ಸತ್ತರ ಕರುಳ್ಗಳನವರ ತಲೆಯ ತೋರಣದಿಂದಂ ಕರವ ಸುರದಿಪ್ಪಾಲ[ದ]ಮರದಿಂ ಭರದಿಂದ ಮಾಳ್ಪ ಬ[ಳ್ಳಿ]ನ ಸರದಿಂ . . . ಅಗುರ್ವಾಗಿರೆ (ಬಂಹರಿ. ೨-೧೧). ೫. ಸಮಾಧಿ: ಇನ್ನೊಮ್ಮೆ ಮೂರರೊಳ್ ದೂಪೆಯಿಂದಳಲಾಯ್ತು ಹನ್ನೊಂದರೊಳ್ ನೆರವಿಯಿಂ ಬಳಗವೆರಡು ಚೆನ್ನೆಯುಂ ಪೆಸರೆತ್ತಿ ತಣಿದುಂಡು ಮರೆಯಾಯ್ತು (ಕಾಲೂಕ. ೦೮೫-೪೨೦): **ದೂಹೆ** : ೩. 'ದೂಹೆಗಾಡು' ಪರಾ.

**ದೂವೆ ಮಾಡು** = ಸಮಾಧಿಮಾಡು : ನೆನ್ನೆ ಸತ್ತವನನ್ನು ಈಗ ದೂವೆ ಮಾಡಿ ಬಂದರು (ರೂಢಿ). [ <ಸಂ. ಧೂಮ./ತುಳು. ದೂವೆ]

**ದೂವೆ$_2$**, ದುರುವೆ (ನಾ). ಹುಲ್ಲು ; ಗರಿಕೆ : ಹಟ್ಟಿಗೆ = ದೂವೆಯೊಳ್ ತ್ರಿದಲಂ ಪೂಟ್ಟ್ರ ಕ್ರಿಯೆ (ಶಮುದ. ಪರಿ. ೧) ; ಕೆಸಟ್ಟೋಳಾಗದ ಬಸಿಟ್ಟೊಳ್ ಪುಟ್ಟಿದಾಣಿಮುತ್ತುಗಳಿಂ ಬಿಗಿದು ದೂವೆಯು ಕಂಪುಟಿಂ ಪುದಿದು . . . ತಾವರೆಯ ಕೋಶದಂತಿರೆಸೆವ ಜೋಳದ ಪಾಟ್ಟಿಯುಂ (ರಾಮಾಶ್ವ. ೦೦೦-೨೫). 'ದೂವೆದೊಟ್ಟು' ಪರಾ. **ದುರುವೆ** : ಮೊಸರು ಅಕ್ಷತೆ ಕಲಸಿಯೆಸಳು ದುರುವೆ ಮುಡಿಸಿ (ಕಹಾಗೀ. ೦೨೫): [ <ಸಂ. ದೂರ್ವಾ ]

**ದೂವೆಕಿಚ್ಚು** 'ದೂವೆಗಿಚ್ಚು' ನೋ.

**ದೂವೆಗಿಚ್ಚು**, ದೂವೆಕಿಚ್ಚು, ದೂವೆಗಿರ್ಚು (ನಾ). ೧. ಬಹಳ ಶಾಖವನ್ನು ಹೊಮ್ಮಿಸುವ ಬೆಂಕಿ ; ನಿಗಿನಿಗಿಯಾದ ಬೆಂಕಿ : ಕೆಂಡದ ಮಟ್ಟಿ ಕೊಂಡಪ್ಪುದದಾಂಡದನಿಳೆ ದೂವೆಗಿಚ್ಚನುಗುಟ್ದಪ್ಪುದು (ಪುಷ್ಪಪು. ೮-೬೫). **ದೂವೆಕಿಚ್ಚು** : ೨. ಆವಗೆಯ ಬೆಂಕಿ : ಪುಲ್ಲ ಕಿಚ್ಚಿನಂತೆ ಪುಂವೇದಂ ದೂವೆಕಿಚ್ಚಿನಂತೆ ಸ್ತ್ರೀವೇದಂ ಇಟ್ಟಿಗೆಯ ಕಿಚ್ಚಿನಂತೆ [ನ]ಪುಂಸಕವೇದಂ (ಶಾಸ್ತ್ರಲೀ. ೦೧೯-೫). △ **ದೂವೆಗಿರ್ಚು** : ೨. ಅಂತೂರ್ವರನೊರ್ವರ್ ಕರಗಸದಿಂ ಸೀಳ್ದ ದೂವೆಗಿರ್ಚ[ಪಾಠಾಂ. ಗಿಚ್ಚು]ನೊಳ್ ಪೂಟ್ಟ ತತ್ತಳಿದಳುವ ಪಲ ತೆಱದ ದಂಡನೆಗಳುಂ (ವರ್ಧಪು. ೧೧-೪೬ ವ).

[ ದೂವೆ$_1$ + ಕಿಚ್ಚು ]

△ **ದೂವೆಗಿರ್ಚು** 'ದೂವೆಗಿಚ್ಚು' ನೋ.

**ದೂವೆದೊಟ್ಟು** (ನಾ). (ಅಲಂ) ಕೀಳಾದ ದಾಸಿ; ಹುಲುದಾಸಿ: ಸಿರಿವೆಣ್ಣಂ ದೂವೆದೊಟ್ಟಿಂಗಣೆಯನೆ ಬಗೆದಂ ಮತ್ತಮಾ ವಿಶ್ವವಿಶ್ವಂಭರೆಯಂ ಪಿಣ್ಡಪಿಂಡಮಾತ್ರಾಕೃತಿಯನೆ ಬಗೆದಂ (ಚಂದ್ರಪು. ೧೦-೦೨೮).

[ ದೂವೆ$_2$ + ತೊಟ್ಟು ]

**ದೂವೆಯಿಡು** (ಕ್ರಿ). ಹೊಗೆಯಾಡು ; ಹೊಗೆಯೇಳು : ಮುಟ್ಟದೊಡೆ ದೂವೆಯಿಡುವುದು . . . ಮುಟ್ಟಿದೊಡೆ ಹೊತ್ತಿ ಹೊಗೆವುದು ಕಟ್ಟುಗ್ರಂ ವಿರಹತಾಪಮಂಗಜಕೋಪಂ (ನಳಚಂ. ೦೬೬) [ ದೂವೆ$_1$ + ಇಡು$_1$ ]

**ದೂವ್ವಾಡ** (ನಾ). ಖಡ್ಗಯುದ್ಧದ ಒಂದು ವರಸೆ: ನುತಚೌಪಟಂ . . . ಪಂಚಾಯಿತಮೆನಿಪ್ಪಯಿದು ನಿಟಿಗಗಾಯತ ಮುಂಡಿ ದೂವ್ವಾಡ [ಪಾಠಾಂ. ದುವಾಡ, ದೂವಾಡ]ವೆಕ್ಕಸರ . . . ಚಟಿಯೆಂಬ ಚತುರ ಠಾಣದ ತರಹರದೊಳು ಹಲಗೆಯ ಮುಗ್ಗುಲೊಳು ಖಡ್ಗವಂ ಜಡಿದರು (ಸೋಮಚ. ೫-೦೪). [ ? ]

**ದೂಷಕ** (ಗುಂ). ೧. ಬಯ್ಯುವ ; ನಿಂದಿಸುವ ; ತೆಗಳುವ: ದೀಪಿಸಲು ಶಿವಭಕ್ತಿಸತ್ಪಥ ಪಾಪಸಂಕುಳಹಳಿಯ ದೂಷಕ ತಾಪಸರು ತಾವ್ಯೆಸಟಿಂ ಸಾಷ್ಟಾಂಗದಿಂ ನಮಿಸಿ (ಬಸಪು. ೪೪-೩೪). ೨. ಕೆಟ್ಟದ್ದನ್ನು ಮಾಡುವ ; ಕೆಡುಕನ್ನುಂಟುಮಾಡುವ ; ದುಷ್ಟತನದ. ೩. ಹಾಳುಮಾಡುವ ; ಅಪಮಾನಗೊಳಿಸುವ ; ಭ್ರಷ್ಟಗೊಳಿಸುವ. (ನಾ). ೪. ನಿಂದಿಸುವವನು ; ದೋಷಾರೋಪಣೆ ಮಾಡುವವನು ; ತೆಗಳುವವನು ; ನಿಂದಕ : ಜಂಗಮಪ್ರಸಾದ ದೂಷಕರ ಭಂಜಿಸುತ ಯಮನಧಿಕನಾರಕ ಪುಂಜದಲಿ ಕೆಡಹುವನು(ಬಸಪು. ೫೬-೨೨); ದೂಷಕಸಂಕುಳಶರನಿಧಿಶೋಷಣ ಕಳಶಿತ್ತಿಯಾಂಡಭಕ್ತರಿಂಗತಿಸಂತೋಷದಿ ಗಣಪದವಿತ್ತಹಿಭೂಷ ಶಿವಂ (ತ್ರಿಪುವಿ. ೪೬-೧೨). ೫. ದುಷ್ಟ ; ನೀಚ : ದೂಷಕನವನೊಬ್ಬ ದೇಶವ ಕೊಟ್ಟರೆ ಆಸೆಮಾಡಿಯವನ ಹೊರೆಯಲಿರಬೇಡ (ಬಸವ. ೦೩೬); ದಾಸೋಹವನಜಿಯದ ದೂಷಕನು ನಾನಯ್ಯ (ಉರಿವ. ೩೪-೪೨). ೬. ಹಾಳುಮಾಡುವವನು; ನಾಶಮಾಡುವವನು : ಪಾತಕನು ಪತಿತನು . . . ದೂಷಕನು ದುರ್ಜನನಪ್ರಯೋಜಕನು ನೀತಿಹೀನನು (ಕುಮಾರವ್ಯಾ. ೪-೪೧).

[ ಸಂ. ]

**ದೂಷಣ** (ನಾ). ೧. ನಿಂದೆ ; ತೆಗಳಿಕೆ ; ಖಂಡಿಸುವುದು : ಪಟ್-ವಸ್ತ್ರವಿಶೇಷಂ; ದೂಷಣಂ; ನಾಯ ಸೋವುವುದು; ಲೋಹದ ಘಟ್ಟ (ಶಮುದ. ಪರಿ. ೧). ೨. ಅವಮಾನ ; ಅವಮರ್ಯಾದೆ : ನಿಮ್ಮ ಮಗ ಕುಲಭೂಷಣನಲಾ ಧರ್ಮಸುತನಾತನಲಿ ಹುರುಡಿಸುವ ರೋಷವುಂಟೇ ತನಗೆ ನಿಮಗಿದು ದೂಷಣವೆ ತಾನಲ್ಲ(ಕುಮಾರವ್ಯಾ. ೨೦-೩೬) ; ಅನುಜನಂಗನೆಗಳುಪಿ ವೈರವ ಕೊನರಿಸಿದೆಯಾತನಲಿ ತಾನಿದು ನಿನಗೆ ದೂಷಣವಲ್ಲವೆ (ತೊರರಾ. ೪-೪-೦೦) ; ಶಿವಶಿವಾ ದೂಷಣಕೆ ಬೆದಱಿ ಮಾಡಿದಿರಿ ಕೈತವ ಚಾರವಿದ್ಯೆಗಳ (ಕೃಮಿಥಾ. ೨-೭೧). ೩. ಕೆಡಿಸುವುದು; ದುರುಪಯೋಗ

ಪಡಿಸುವುದು: ಅದು ಸಾಧನ ದೂಷಣ ಪ್ರಯೋಗಾನ್ಯಥಾನುಪಪತ್ತಿಯಿಂ ಬಹಿರರ್ಥಸಿದ್ಧಿಯಕ್ಕುಂ (ಅದಿಪು. ೨-೧೦ ವ). ೪. ನಿಂದಕ; ಖಂಡಿಸುವವನು: ಶಿವಗುಣದೂಷಣಾಹಿತಕರ ಜಂಗಮತೋಷಣಾಚಾರ . . . ಬಸವಕುಮಾರ ಮಾಂ ತ್ರಾಹಿ (ಬಸಪು. ೨೦-೩೮). ೫. ದೋಷ; ತಪ್ಪು: ವರಯುತಿಗೆ ಭಂಗಮಂ ತಾರದೆ ನಿಜಾನ್ವಯಕ್ರಿಯೆಗಳ್ಗೆ ದೂಷಣಂ ಬಾರದೆ . . . ಕಾವ್ಯಪ್ರಬಂಧಮಂ ಶಾರದೆಯ ಕರುಣದಿಂ ಪೇಳ್ವೆ (ಪ್ರಮಿಥಾ. ೦-೬): ಇದು ಭೂಷಣವೋ ದೂಷಣವೋ ಈ ಬನದಿಗೆ ಕುಹಕವೆ ತೋಷಣವೋ (ಗಜೇಶ. ೪-೯೩). ೬. ಪಾತಕ; ಪಾಪ. ೭. ರಾಮನಿಂದ ಹತನಾದ ಒಬ್ಬ ರಾಕ್ಷಸನ ಹೆಸರು: ಎಚ್ಚು ಗಗನಕೆ ದೂಟಿಸಿದ ದೂಷಣನ ಮಸ್ತಕವ (ತೊರರಾ. ೩-೭-೧೮). [ ಸಂ. ]

**ದೂಷಣಿಕ** (ಗು). ಹೀಯಾಳಿಸುವ; ನಿಂದಿಸುವ: ದೋಷರಾ ಕಥೆಯಲ್ಲ ದೂಷಣಿಕಕಥೆಯಲ್ಲ ಭಾಸುರೋಜ್ವಲ ಜಗದೀಶನ ಕೃತಿಯು (ಅದಿಪ. ೨-೫).

[ ಸಂ. ]

**ದೂಷಣೆ** (ನಾ). ೧. ನಿಂದಿಸುವುದು; ತೆಗಳಿಕೆ: ಪರರ ದೂಷಣೆಯಿಂದ ಇಂಥಾ ಅವಸ್ಥೆಯು ನಿನಗೆ ಬಂದ ಹಾಗೆ ಕಾಣುತಿದೆ (ನೀತಿಚಿಂ. VI, ೧೯): ದೋಷ ಮಾಡಿದವನಿಗೆ ದೂಷಣೆ ತಪ್ಪದು (ಗಾದೆ). ೨. ಅಪವಾದ; ದೋಷಾರೋಪಣೆ: ನಮ್ಮ ಲುಕಸಾನಿ ಮಾಡಿದಿರಿ ಅಂತ ನಮಗೆ ದೂಷಣೆ ಕೊಡುತ್ತಾರೆ (ಮುಂಬಪ್ರಾ. ೩೦ ಪ್ರಸ್ತಾವನೆ). [ ಸಂ. ದೂಷಣ ]

**ದೂಷಿ** 'ದೂಸಿ' ನೋ.

**ದೂಷಿಕೆ** (ನಾ). ಕಣ್ಣನೊಳಗಿರುವ ಕೊಳೆ; ಪಿಸುರು; ಗೀಜು.

[ ಸಂ. ದೂಷಿಕಾ ]

**ದೂಷಿತ** (ಗು). ೧. ನಿಂದೆಗೊಳಗಾದ. ೨. ಹಾಳಾದ; ಭಗ್ನವಾದ. ೩. ಕೆಟ್ಟುಹೋದ; ಭ್ರಷ್ಟವಾದ. (ನಾ). ೪. ದೋಷವುಳ್ಳುದು; ದೋಷಯುಕ್ತವಾದುದು: ಕಪೋಲಕ್ಕೆ ಉಪಮಾನ ಕೊಡುವುದಾದರೆ . . . ಅದಕ್ಕಿಂತ ಎಷ್ಟೋ ಹೀನವಾದ, ಕಲಂಕದಿಂದ ದೂಷಿತವಾದ ಚಂದ್ರಬಿಂಬವನ್ನು ಹೇಳಿದರೆ ಸರಿಯೆ? (ಧ್ವನ್ಯಾಲೋ. ೧೧೯ ಅಡಿಟಿ). ೫. ಪಾಪ; ಪಾತಕ: "ಕಿಲ್ಬಿಷಂ. . . . ದೂಷಿತಮಘಮೆನಲ್ . . . ಪಾಪಮಕ್ಕುಂ" (ಮಂಗರಾ. ೧೧೬-೨). [ ಸಂ. ]

**ದೂಷಿತಾನ್ನ** (ನಾ). ಬೇರೊಂದು ವಸ್ತುವಿನ ಸಂಪರ್ಕದಿಂದ ಕೆಟ್ಟುಹೋದ ಆಹಾರ; ಮಲಿನವಾದ ಆಹಾರ: ದೂಷಿತಾನ್ನವೆಂದರೆ ಶುದ್ಧವಾದ ಆಹಾರಕ್ಕೆ ಶುದ್ಧವಾದ ಮತ್ತೊಂದು ವಸ್ತುಸಂಪರ್ಕವಾಗಲೀ ಅಶುದ್ಧವಾದುದರ ಸಂಪರ್ಕವಾಗಲೀ ಆಗುವುದು. ಹಾಲಿಗೆ ಹುಳಿ, ಪಾಯಸಕ್ಕೆ ಉಪ್ಪು ಬೆರೆದರೆ, ಹುಳಿ ಉಪ್ಪು ಎರಡೂ ತಿನ್ನುವ ಪದಾರ್ಥವೇ ಆದರೂ ಹಾಲೂ ಪಾಯಸವೂ ದೂಷಿತವಾಗುವುವು (ಆರ್ಯಧ. ೨೧೮).

[ ದೂಷಿತ + ಅನ್ನ₃ ]

**ದೂಷಿತೆ** (ನಾ). ೧. ದೂರು ಹೊತ್ತವಳು; ಅಪವಾದವನ್ನು ಹೊಂದಿದವಳು: ಅಪವಾದಂ ಪೊರ್ದಿದಿಂ ಬಳಿಯಂ ದೂಷಿತೆಯಾದೀ ಮಡದಿಯುಂ ಬಟ್ಟಲ್ಲದೆ ಮಾಣೆಂ (ರಾಮಾಶ್ವ. ೨೫-೧೧). ೨. ಪಾಪ ಮಾಡಿದವಳು; ಪಾಪಿಷ್ಠೆ. 'ದೋಷದೂಷಿತೆ' ಪರಾ. [ ಸಂ. ದೂಷಿತಾ ]

**ದೂಷಿಸು** (ಕ್ರಿ). ೧. ನಿಂದಿಸು; ತೆಗಳು: ಮಹಾಪುರುಷರು ನಿರ್ವಹಿಸುವ ಮೂಲೋತ್ತರ ಗುಣಂಗಳಂ ತದ್ಬಲಹೀನರುಮಲ್ಪಸತ್ವರುಂ ನಿರ್ವಹಿಸಲಾರದೆ ಗುರುಕುಳಮಂ ದೂಷಿಸುವರು (ಚಾವುಂಪು. ೫೩); ಹಾರಂ ಕಣ್ಬನಿಯಿಂದಾದತ್ತುಟಿದ ಭೂಷೆಯಂ ದೂಷಿಪವೊಲ್ (ಚಂದ್ರಪು. ೫-೧೨೮); ದೂಷಿಸಿದಡಾ ವೀರಭದ್ರನು ಪೂಷನೆಂಬನ ಹಲ್ಲನುದುರ್ಚಿನೆ (ಬಸಪು. ೫೪-೫೨): ಈ ತೆಱದಿಂ ದುರ್ಜನರಂ ದೂಷಿಸಿ ನೀತಿನಿಪುಣರೆನಿಸುವ ಸಜ್ಜನರಂ ಪ್ರೀತಿ ಮಿಗಿಲು ತುತಿಯಿಸಿ (ಜಯನೃ. ೧-೨೩). ೨. ವಂಚಿಸು;

ಅನ್ಯಾಯಂ ಮಾಡು: ಭರತ ಬಂದವ ಬಂದ ಹದನೇನಱಿಯಬಾರದು ಜೀಯ . . . ಧರೆಯ ದೂಷಿಸಿ ಕೊಂಡುದಲ್ಲದೆ ಧುರಕೆ ಬಹುದಿದು ಗುಣವೆಯೆಂದುಬ್ಬರದ ರೋಷಾವೇಶದಲಿ ಸೌಮಿತ್ರಿ ಗರ್ಜಿಸಿದ (ತೊರರಾ. ೨-೭-೨೦). [ ದೂಷಣ + -ಇಸು₃ ]

**ದೂಷ್ಯ** (ಗು). ೧. ಕೆಡುವ; ಕೆಟ್ಟುಹೋಗಬಹುದಾದ. ೨. ದೂಷಣೆಗೆ ಅರ್ಹವಾದ; ಖಂಡನೆಗೆ ಯೋಗ್ಯವಾದ; ನಿಂದ್ಯ: ಸಮುಚಿತಕೃತಿದೋಷದೂಷ್ಯಮಾರ್ಗಕ್ರಮಪರಿಭಾವಿತಚಿತ್ತವೃತ್ತಿಯಪ್ಪೊಂಗಮಳಿನ ಕವಿತಾಗುಣೋದಯಶ್ರೀ ಸಮನಿಸುಗುಂ ಸತತಾಭಿಯೋಗದಿಂದಂ (ಕಾವ್ಯಾವ. ೪೯೬). ೩. ಕೆಟ್ಟ; ದುಷ್ಟತನದ. (ನಾ). ೪. ನಿಂದೆ; ತೆಗಳಿಕೆ: ಜನರ ಪರಿಪರಿ ದೂಷ್ಯ ಭೂಷ್ಯವ ನೆನೆವನೇ ತಮ್ಮಡಿಯ ಸಂಭಾವನದ ಬಲುಹಿರಲಾವ ಭಯಮೇಕೆಂದು ಕೈಮುಗಿದ (ಗಗಕಾ. ೦೭-೬೪). ೫. ನಿಂದ್ಯವಾದುದು; ತೆಗಳಿಕೆಗೆ ತಕ್ಕುದು: ನಿರುಪಮಗಂಧರ್ವಗತಿಸ್ವರಾದಿಕಳಾಗುಣಂ ಚತುಃಷಷ್ಟಿವಿಧಂ ದೊರೆಕೊಳ್ಪುದುದೆಲ್ಲಿ ಕಳಾವಿರುದ್ಧದೋಷಂ ವಿಶಿಷ್ಟಜನತಾದೂಷ್ಯಂ (ಕವಿರಾ. ೦-೧೦೬); ಧುರದೊಳ್ಪೆಱಮೆಱಿಯಾಡುವ ತೆಱದಿಂದುಱದಿಱಿದನೆಂಬ ನಿಯಮಂ ದೂಷ್ಯಂ (ಶಮದ. ೧೯ ಪ್ರಯೋ): ಲೌಕಿಕಕ್ಕಿದು ದೂಷ್ಯವೆಂದವರುಗಳನೊಡಬಡಿಸಿ (ತೊರರಾ. ೦-೩-೬). ೬. ಬಟ್ಟೆ; ವಸ್ತ್ರ. ೭. ಹತ್ತಿ. ೮. ಗುಡಾರ; ಡೇರೆ: "ದೂಷ್ಯಂ, ಸ್ಥೂಳಂ . . . ಕೇಳಿಕಾ–ಈ ೫ ಗುಡಿ" (ಹಲಾಯು. ೭೯-೨೯೭); "ಚಿತ್ರಕುಟಿ . . . ದೂಷ್ಯಮೆನೆ ಗುಡಿಯಕ್ಕು" (ಮಂಗರಾ. ೩೫-೨೭). ೫, ೮: ನಡೆದು ಬಱಿಯಂ ಕ್ರೋಶದ್ವಿತಯ ಮಾತ್ರದೊಳ್ ಪ್ರಸಿದ್ಧದೂಷ್ಯಮಾಗಿಯುಮಂ ದೂಷ್ಯಮುಮಂ . . . ವಿಶಾಲಪರಿಧಿಯಾಗಿಯುಂ ಅವಿಶಾಲಪರಿಧಿಯೆನಿಸಿ ಗೃಹಮಹತ್ತರಂ ಮುನ್ನಮೆ ಸಮೆದುದಂ ಪ್ರಸ್ಥಾನಶಿಬಿರಮಂ ಪೊಕ್ಕು (ಚಂದ್ರಪು. ೧೦-೦೭ ವ). [ ಸಂ. ]

**ದೂಸ₁** (ನಾ). ಕಾಡುಬತ್ತ; ನೀವಾರ: "ದೂಸಂ ತೃಣಧಾನ್ಯ(ಮಂ) ಮಟವೀಸಂಭವಮದೆ ಗವೇಧುಕಂ ನೀವಾರಂ" (ವಸ್ತುಕೋ. ೯೫-೦೯).

[ ←ತೆಲು. ದೂಸ ]

**ದೂಸ₂, ದೂಸು** (ನಾ). ೧. ಬಟ್ಟೆ; ಅರಿವೆ: "ದೂಸ (ಸು) – ದೂಷ್ಯ = ವಸ್ತ್ರಭೇದ" (ಕಿಟ್ಟೆಕೋ. ೨೦). 'ದೂಸಿಗ' ಪರಾ. ೨. ಗುಡಾರ; ಡೇರೆ ಪುದಿಯೆ ಕವಿಲ್ತ ಕೇಸರದ ದೂಸಮಶೋಕೆಯ ಪೀಣೆಯಂ ಪ್ರಿಯಾಳದ ಗಂಡಿ . . . ಒಪ್ಪಿ ತೋಱಿದುವು ಮನೋಜರಾಜಶಿಬಿರಂಗಳೆವೆಂಬಿನೆಗಂ ವನಾಳಿಗಳ್ (ಚಂದ್ರಪು. ೭-೩೨); ದೇಶಾಧಿಪರ ಬೆಳ್ಗೊಡೆಗಳು ನಕ್ಷತ್ರ ರಾಶಿಯಂತೆಸೆಯೆ ಮಧ್ಯದಲಿ ಕೇಶವರಾಯನ ದೂಸ ರೋಹಿಣಿಯ ಪ್ರಾಣೇಶನೆಂಬಂತೆ ರಂಜಿಸಿತು (ಮೋಹತ. ೨೬-೩೮): ಹಳದಿ ಬಿಳಿಯ ಮುಂತಾದ ಪಟ್ಟೆಗಳಿಂದ ಚಲುವೆತ್ತ ಧೂಸವನು ಬಿಗಿಸಿ (ಜಿನಕಾ. ೬-೫೮). ದೂಸು: ೨. ಕಟ್ಟಕಡೆಗಳೊಳು ಜಯವಿಜಯರ ದೂಸು ಕಟ್ಟಾಯತ ದೊಳೆತ್ತಿದುವು (ನಾಗಕು. ೦೫-೦೦೫); ಧೊರೆ ಮುದರ ತನ್ನ ದೂಸ ತೊರೆಯೊತ್ತಿಲಿ ಹುಯಿಸೆ ದೊರೆದೊರೆಗಳ ದೂಸು ಇರದೆ ಸುತ್ತಲು ಹೊಯಿದವಾಗ ಪಡುವ ದಿಕ್ಕಲಿ ದಳವಾಯಿಯಕಂಪನ ಕಡು ದೊಡ್ಡ ದೂಸು ತಾನೆತ್ತಬಿಡದಾ ದೂಸ ಬಳಸಿ ಗುರಿಕಾಱರ ಗಡಣ ಗಾಮ್ಮತಿಗಳೆದ್ದಾವು (ಜ್ಞಾವಚ. ೧೨-೯೭); ಬಿಟ್ಟ ಬೀಡಿನ ನಡುವೆ ಗಗನವ ಮುಟ್ಟಲೆಸೆದಿಹ ದೂಸಿನೊಳು ಪಲವಿಟ್ಟು ಕುಳಿತಿಹನು (ಜಿನಧಾ. ೪೭-೨೧); ದೂಸಿಗತಿಸಂತೋಷದಲಿ ಪ್ರಾಣೇಶನನು ಕರವಿಡಿದು ಗುಣಮಾರಾಶಿ ನಡೆತಂದಮಲತರ ಸಿಂಹಾಸನದ ಮೇಲೆ . . . ಕುಳಿತಳು (ಜಿನಧಾ. ೪೯-೨೦): ಇಂತು ಮರಾಟರೊಳ್ ಪ್ರಸಿದ್ಧರಾಗಿರ್ದ . . . ಮಹಾಶೂರರಂ ಕಡಿದವರಾನೆ ಕುದುರೆ ಬೊಕ್ಕಸ ದೂಸು ದುಮಾನ ಬಿರುದು ಮುಂತಾದವಂ ಕೊಂಡು (ಸಕಪ್ಯ. ೩ ಪ್ರಸ್ತಾವನೆ). [ <ಪ್ರಾ. ದೂಸ./ಸಂ. ದೂಷ್ಯ ]

**ದೂಸಕ** (ನಾ). ೧. ನಿಂದಿಸುವವನು ; ತೆಗಳುವವನು ; ದೂಷಕ : ದೂಸಕರ ದೂಱುಗೇಳ್ದುಂ ಸಾಸಿಗನೆನ್ನಳವನಱಿದುಮಱಿಯದೆ ಪಿರಿದುಂ ದೋಸಿಗನಾದೊಡೆ ಕೊಲ್ಗುಂ ಪೇಸುವನಲ್ಲಂ ಸಮುದ್ರವಿಜಯನಜೇಯಂ (ಅರ್ಧನೇ. ೫-೧೩) ; ಇನ್ನುಣಲಿ ತಾವು ಮಾಡಿತನೆಂದು ಭರವಸದೊಳಾ ದೂಸಕರು ತಮ್ಮ ನಿಳಯಕ್ಕೆ ತಿರುಗಿದರು (ಸೌಂದಪು. ೧೨-೭೦) ; ದೋಷಿ ಯಲ್ಲದನೆನ್ನನು ದೋಷಿಯೆಂಬಾ ದೂಸಕರಾ ದೂಱುಗೇಳಿ . . . ಸೆಱೆವನೆ ಯೊಳಿಕ್ಕಿದಿರಿ (ನೇಮಿಸಂ. ೮-೧೧೪) ; ಬಟ್ಟು ರಸವನುಱೆ ಕಸವ ಪಿಡಿವ ಧಾರೆವಟ್ಟಲ ಪೋಲ್ತು ದೂಸಕರು ಮಿಟ್ಟನೆ ಮಿಡುಕದಾಲಿಸಿದೊಡೀ ಕೃತಿ ಝುಮ್ಮೆದಟ್ಟದೆ ಕಲ್ಲೆರ್ದೆಗವರ (ನಾಗಕು. ೧-೭೧). ೨. ತೆಗಳಿಕೆ ; ನಿಂದೆ: ಒಡೆಯನೆ ಬಂದ ಸೌಜನ್ಯವ ಮೆಱೆವುದು ಬಡುವುದು ಪಾಸಿ ದೂಸಕವ (ವರ್ಧಕ. ೬-೬೩). [ <ಸಂ. ದೂಷಕ ]

**ದೂಸಗ** (ನಾ). = ದೋಸಿಗ : "ವಸ್ತ್ರಕ್ರೀತನೊಳು ದೂಸಗನುಮಕ್ಕು" (ಕಕರ. ೫೧) ; ಬಿಳಿದುಪ್ಪಟ ರಾವಣಮೆಚ್ಚು ಗಜಾವಳಿ ಮಂಡೋದರಿ ಮೆಚ್ಚಿನ ಸೀರೆಯ ಮಾಳಿಗೆಗಳಂ ಬಳ್ಳಳನೆ ಬಳಸಿದುದು ದೂಸಗರಾಸುರ ದಿಂದೋಸರಿಸೆ (ಕುಮುರಾ. ೧೪-೩೮). [ ದೂಸ$_2$ + – ಗ$_2$ ]

**ದೂಸಣ, ದೂಸಣೆ** (ನಾ). ನಿಂದೆ ; ತೆಗಳಿಕೆ ; ದೂಷಣೆ : ದೂಷಣ, ದೂಸಣ; ಅನಿಮಿಷ, ಅನಿಮಿಸ (ಶಬ್ದಾನು. ೧೩೮ ಪ್ರಯೋ). **ದೂಸಣೆ :** ಷಕಾರಕ್ಕೆ–ಅಮಿಷ–ಅಮಿಸ . . . ದೂಷಣ–ದೂಸಣೆ (ಶಮದ. ೨೫೩ ಪ್ರಯೋ). [ <ಸಂ. ದೂಷಣ ]

**ದೂಸಣೆ** 'ದೂಸಣ' ನೋ.

**ದೂಸರ್** 'ದೂಸಱು' ನೋ.

**ದೂಸರ** (ನಾ). ೧. ಬೂದಂಬಣ್ಣ ; ಕೆಂದಂಬಣ್ಣ ; ಮಾಸಲಂಬಣ್ಣ ; ನಸುಬಿಳಿದು : "ದೂಸರ–ಧೂಸರ = ಬೂದುಬಣ್ಣ" (ಶದ್ಮಕೋ. ೨೦) ; ನವಸುರಭಿಕುಸುಮ ಪಾದಪಪ್ರಸೂನಮಂಜರೀರಜಃಪ್ರಸರದೂಸರೋಪ ಕಂಠದೋಳ್ (ವರ್ಧಮಾ. ೫-೬೨ ವ) ; ಧಕಾರಕ್ಕೆ ದಕಾರಂ–ಔಷಧ–ಔಸದ . . . ಧೂಸರ–ದೂಸರ (ಶಮದ. ೨೫೫ ಪ್ರಯೋ). ೨. ಮಲಿನತೆ ; ಕೊಳಕು ; ಮಾಲಿನ್ಯ : ಕುಂದಣದ ಪುತ್ಥಳಿಯು ದೂಸರ ಕೆಡಲೆಂದು ಪುಳಿ ದೊಳಿಮಂದದಿಂದವೆ ಕೋಮಲೆಯರು ಜಳಕವ ಮಾಡಿಸಲೆಸಗಿದರು (ಶ್ರೀಪಾಲ. ೨-೪೯) ; ಜಗದೊಳಗೆ ದೂಸರವು ಪರಿಕಿಸಿ ನಗೆನಗೆಯೊಳಿಮಗ್ಗೆದಿ ಕುಂದಿತು ಜಗಳದಲಿ ಭುಜಶೌರ್ಯ ಪ್ರಾಣಕ್ಕೊದಗಿತುಪಹತಿಯು (ಅಂಬಿಕಾ. ೪೪-೧೦).

**ದೂಸರಮಂಗೆಯ್** = ಮಲಿನಗೊಳಿಸು : ಪೂಸರಲನ ಜಸಮಂ ದೂಸರಮಂಗೆಯ್ದನ . . . ನುತಿಸಿದನವನಭವನ (ಉದ್ಭಟೇ. ೭-೧೯).

**ದೂಸರಮಾಗು** = ಬೂದಂಬಣ್ಣದಿಂದ ಕೂಡು : ಆಗಳ್ ದೂಸರ ಮಾದುದು ಗಗನಂ (ಲೀಲಾವ. ೬-೦೦೭) : ತುಂಬಿಗಳಚ್ಚವೂಗಳಿಂ ದೂಸರ ಮಾದ ಚೊಲ್ಲೆಯದ ಕಂಪಿನೊಳೋಕುಳಿಯಾಡೆ ಸಿಂಗರಂ ದೇಸೆಯೊಳೊಂದಿ ತೋಱೆ ತಳರ್ದಂ ನನೆಯಂಬನದೊಂದು ಚೆಲ್ವಿನಿಂ (ಕಬ್ಬಿಗ. ೯೦) ; ಆ ಪೊಳ್ತಿಗೆ ವಾಸರ ದೂಸರಮಾಯ್ತು (ಉದ್ಭಟೇ. ೩-೭೩).

[ <ಸಂ. ಧೂಸರ ]

**ದೂಸರಂದಾಳ್** (ಕ್ರಿ). ಮಂಕಾಗು ; ಬಣ್ಣಗೆಡು: ಪುದಿದು ಕಂದಿನೊಳೊಂದಿ ಚೆಂದಂಗೆಡುತ್ತೆ ಮುಗಿವುದು ಮಾಸಿ ದೂಸರಂದಾಳ್ದು ಮುನ್ನಾಡೆ ನಾಣ್ಚದೆ ಕೊಱತೆವಡೆದಮುರ್ದಗಯ್ಯನಂ ಪೊಂದಾವರೆಯನಮಳಮಣಿಮುಕುರಮಂ ಪದಪಿನಿಂದೇಳಿಪ್ಪ ಟಾಳಿಪ್ಪ ಜಾಳಿಪೊಂದದಟನಿಂದೇಳಿಸಿತು ಸುದತಿಯಾ ಮಿಱುಮಿನುಪ ವದನ (ಉದ್ಭಟೇ. ೨-೫೫). [ ದೂಸರ + ತಾಳ್$_1$ ]

**ದೂಸರಿಗ** (ನಾ). ಕಾರಣನಾದವನು ; ನಿಮಿತ್ತನಾದವನು : "ಹಯನ್, ಹಯಾನಃ . . . ಹೇತ್ರಾ ಈ ೬ ದೂಸರಿಗಂ" (ಕಾಕಶ. ೨೦೭).

[ದೂಸರ್ (<ದೂಸಱು) + – ಇಗ ]

**ದೂಸರು** 'ದೂಸಱು' ನೋ.

**ದೂಸಱು, ದೂಸರ್, ದೂಸರಂ** (ನಾ). ೧. ಕಾರಣ; ನಿಮಿತ್ತ ; ನೆಪ; ನೆವ : "ದೂಸಱಿಂದು ತನ್ನ ದೆಸೆ" (ಕಕಶಾ. ೨೮-೬೦೨) ; ಧೂಳೀಧೂಸರ ವ ರ ರ ತ್ನಾ ಳಿ ಗ ಳ ೦ ಕಂಡ ದೂಸಱಿಂದಂ ಧರಣೀಪಾಳಕಮುನಿಪರ್ ಪಂಚಮಕಾಳದೊಳಣಮಾಗರತ್ತೆ ಋದ್ಧಿಪ್ರಾಪ್ತರ್ (ಆದಿಪು. ೦೫-೩೮) ; ಎನ್ನಯ ದೂಸಱಿನೆನ್ನ ಕರ್ಮದಿಂ ಪಗೆವರಿನಕ್ಕಟಾ ನಿಮಗಮಿಾಯಿರ ವಾದುದೆ ಕುಂಭಸಂಭವಾ (ಪಂಪಭಾ. ೧೩-೫೭) ; ಲೋಕಾನುಗ್ರಹಂಗೆಯ್ವ ದೂಸಱಿನಾಂ ಬಂದುದಯಂಗೆಯಾತ್ತವಿರಲ್ (ಕಾದಂಅ. ೬೧೦) ; ಪೊಡೆವಡೆ ಪರಸದೆ . . . ಮುಂದೆ ನಿಂದರಂ ಕಾಣದೆ ತಕ್ಕಡೆಯೊಳ್ ಕಡೆಗಣಿಸುವ ನೃಪವಿಡಂಬಮಿವು ಲಕ್ಷ್ಮಿ ನಿನ್ನ ದೂಸಱಿನಲ್ತೇ (ಗದಾಯು. ೯-೮) ; ಜಾನಕಿಯ ದೂಸಱಿಂ ಲಂಕಾನಾಥಂ ದಾಶರಥಿಯ ಕೈಯೊಳ್ ಮಡಿಗುಂ (ಪಂರಾಮಾ. ೩-೨೩) ; ಭಕ್ತನಂ ಭವಿಯೆಂದ ದೂಸಱಿಂದಪ್ಪುದಿದು (ಮದೀರ. ೦-೧೨೭) : ಎನಗೆ ನಿಮ್ಮಯ ದೂಸಱಿಂದಾಯ್ತನಿತು ಸಭೆಯಲಿ ಮಾನಹಾನಿ (ಕುವ್ಯಾಅ. ೧೧-೬) ; ನಂದಿಸು ನಂದಿಸು ನಿನ್ನಯ ಕರುಣದ ನಂದನನಾಸಱ ಬೇಸಱ ದೂಸಱನೀಸರ ಮೇಲುಱದೆ (ಉದ್ಭಟೇ. ೩-೨೮) ; ೨. ಅಪವಾದ; ನಿಂದೆ; ತೆಗಳಿಕೆ: ಹುಲುಮನುಜ ರಜಕನಾಡಿದ ದೂಸಱಂ ನೆನೆದು ಕುಲಪತ್ನಿಯಂ ಬಿಡುವ ಹದನಾವುದಱಟ (ಕೈಮಿಥಾ. ೧೮-೫೩). ೩. ದಿಕ್ಕು ; ದೆಸೆ : "ದೆಸೆಯೆಂದೆನ್ನಲ್ ದೂಸಱದು" (ಕವಿಕಂ. ೨೩೩) ; ಆ ಸಮಯದಿ ಮೂಡ ಪಡುವಣ ಖಂಡದ ದೂಸಱಿಂದಿಬ್ಬರೆಯ್ತಂದು ಆ ಸೀಮೆ ವಶವಾದುವೆಂದು ತಂದೋಲೆಯ ಭೂಸುದತೀಶಗಿಕ್ಕಿದರು (ಭರತ. ೩೭-೬೪). ೪. ಸ್ಥಿತಿ ; ಇರುವಿಕೆ : ದೂಸಱದೆತ್ತಣನಾಯ್ತು (ರಾಮಾಶ್ವ. ೨೦-೦೩). **ದೂಸರ್ :** ೧. "ಕಾರಣಂ = ದೂಸರ್" (ಕಾಕಶ. ೨೪೦) ; ಚೆನ್ನಲ್ತದೆಂದು ಕೆಲರ್ಬೈದಿದರ್ ಬದ್ದಿನರ್ ಬನ್ನನೆಯ ದೂಸರ್ಗಳೊಂದೊಂದ ನುಡಿದು (ಕಾಬೂರ. ೧೮೦-೪೦೬). **ದೂಸರು :** ೧. ತರುಣೀ ನಿನ್ನಯ ದೂಸರಿನುರುವುವ ಮದನಾಗ್ನಿಕೀಲದಿಂ ಸೀದುರೆ ಸೀಕರಿವೋದ ವರುಣನೆನ್ನಂ ಕರುಣದೆ ನೀಂ ವರಿಸಿ ತಂಪಿಸೆಂದೊರೆಯೆಂದಂ (ದಮಸ್ವ. ೩-೦೬೭) ; ಬೀಳೇಳುಗಳಿಗನುವೊ ಗೆಯ್ಮೆಯೋ ದೂಸರೇಂ (ಕಾಬೂರ. ೫೮-೯೪). [ ದೇ.; ತೆಲು. ದೂಸರಿ ]

**ದೂಸಿ, ದೂಷಿ** (ನಾ). [ನಾಟ್ಯ] ನರ್ತನದ ಒಂದು ಭಂಗಿ: ದೂಸಿಯುಂ ವಿಷಮದೂಷಿಯುಮೆನಿಸುವಡಹುಗಳನು . . . ತುಳಿಲೆನಿಪ್ಪವು ಲೇಸು ವಡೆಯೆ ತಾಂಡವಮನಾಡುತಿರ್ದಳು (ಲೀವತಿ. ೩-೪೮). **ದೂಷಿ:** ಲಾಗನು ಲಾಗು ಬೀಸುಗಾಲು ದೂಷಿ ವಿಷಮದೂಷಿ . . . ಮೊದಲಾದವಗಡ ದಡವುಗಳನಳವಡಿಸಿ (ವಿರೂಪಾ. ೮೭ ವ). [ <ಸಂ. ಧೂಸೀ ]

**ದೂಸಿಗ** (ನಾ). ಬಟ್ಟೆಯ ವ್ಯಾಪಾರಿ; ಜವಳಿ ವ್ಯಾಪಾರಿ: "ದೂಸಿಗನೆನಲ್ ಸೀರೆವರದಂಗೆ ನಾಮಂ" (ಕಬ್ಬಿಕ. ೩೪) ; ಬಚ್ಚರ ದೂಸಿಗರ ನಿಯೋಗಿಗಳ ಅಗ್ಗಯಿಲೆಯರಪ್ಪ ಸೂಳೆಯರ ಸಾಮಂತರ ಕಸವರಂಗಳೆಲ್ಲಮಂ ಕಳ್ದು (ವಡ್ಡಾರಾ. ೦೨೩-೯) ; ದೇವಕಾರ್ಯ್ಯಮಂ ದೂಸಿಗ ಕೇತಿಸೆಟ್ಟಿ ಬಿಂನ್ನವಿಸೆ (ಕಇ. I, ೦೭-೨೭ ; 1056) ; ದೂಸಿಗರಂಗಡಿಯಂ ಪೊಕ್ಕು . . . ವಸ್ತ್ರ ನಿಕರಮನೋಸರಿಸದೆ ಸೂಱೆಗೊಂಡು (ಧರ್ಮಾಮೃ. ೨-೩೩) ; ಒಪ್ಪಿದರಲ್ಲಿ ದೂಸಿಗರ್ದೇಸಿವೆತ್ತು (ಪದ್ಮರಾ. ೮-೭೭) ; ಚಿನ್ನವರದರ್ ದೂಸಿಗರ್ ಮುತ್ತುಮಾಣಿಕದ ಪರದರ್ ವಣಿಗ್ವರರ್ . . . ಜೂ ಜು ಗಾ ಱ ರ್ ಮುಖ್ಯರೊದಗಿ ಬರುತಿರ್ದರೇಂ ವಣ್ಣಿಸುವೆನು (ಜಲಪು. ೪೭-೪೦).

**ದೂಸಿಗವರದ** = ಬಟ್ಟೆಯ ವ್ಯಾಪಾರಿ; ಜವಳಿವರ್ತಕ: ಮಿಸುನಿ ಗಟ್ಟಿನ ಬಣ್ಣಸೀರೆಯ ದೂಸಿಗವರದರ ಮಱೆಗೆಯಿಂ . . . ಕಮ್ಮಾಱರ ಮುಂಗುಡಿಯಿಂ ಪುರಂ ಕಣ್ಗೆಂಬಾದುದು (ರಾಮಾಶ್ವ. ೦೦೩-೦೫).

[ ದೂಸ$_3$ + – ಇಗ ]

**ದೂಸಿಗವಸರ** (ನಾ). ಜವಳಿ ವ್ಯಾಪಾರಿಗಳ ಅಂಗಡಿ ; ಜವಳಿ ಅಂಗಡಿ; ಬಟ್ಟೆ ಅಂಗಡಿ : "ದೂಸಿಗವಸರವೆನಿಪ್ಪುದೇ ಸೀರೆಯ ಪಸರವು" (ಚಕುವಿ. ೬೨) ; ತೊಳಗಿದುವು . . . ಪಟ್ಟಾವಳಿಯ ದುಕೂಲದ ಚೀನದ ತಳಿರ್ವಟ್ಟೆಯ ಪಟೆಯವಟೆಯ ದೂಸಿಗವಸರಂ (ಲೀಲಾವ. ೭-೧೯) ; ದಿವ್ಯಾಂಬರಂಗಳಿಂದೆಸೆವುವಲ್ಲಿ ದೂಸಿಗವಸರಂ (ಜಗವಿ. ೯-೧೧೧); ಪವಣಿಸಿ ಷಡ್ವರ್ಗಂಗಳನವನುದ್ಧರಿಸಿದ ವಿರಂಚಿಗಟ್ಟರಿಯಂ ಬೀಱುವ ಬಹುವರ್ಣಂಗಳ ವಸ್ತ್ರ ವಿತಾನವೆನಿಪ್ಪುದೊಪ್ಪಿ ದೂಸಿಗವಸರಂ (ಕುಸುಮಾ. ೨-೧೧೭): ಶೀವಿರ್ವಶ್ವಾವಳಿಯ ಗಜಾವಳಿಯ ನರಾವಳಿಗಳ ವಿಕ್ರಯದಿಂದಂ ಭಾವಿಸೆ ದೂಸಿಗವಸರಂ ಮೂವರ್ ರಾಯರನೆ ಮಾಱುವಂತೆಸೆದಿರ್ಕುಂ (ಗಿರೀ. ೨-೯೪). [ ದೂಸಿಗ + ಪಸರ ]

**ದೂಸಿಗವ್ಯವಹಾರಿ** (ನಾ). ಬಟ್ಟೆಯ ವ್ಯಾಪಾರಿ : ಎರಡು ಸ್ಥಳದ ದೂಸಿಗ ವ್ಯವಹಾರಿಗಳಲುಂ ನಾನಾದೇಶಿ ದೂಸಿಗವ್ಯವಹಾರಿಗಳಲುಂ ಪೊಂಗೆ ಕಾಣಿ ಎರಡು (ಎಕ. VII, ಶಿಕಾರಿ. ೧೧೮-೫೯ ; 1150).
[ ದೂಸಿಗ + ವ್ಯವಹಾರಿ ]

**ದೂಸಿಸು** (ಕ್ರಿ). ದೋಷವನ್ನುಂಟುಮಾಡು ; ಕೆಡುಕನ್ನುಂಟುಮಾಡು : ಒಂದೆ ಬೆರಳನಿತನಿತೆ ನೀಳ್ದೊಂದಳವಿಗಳೂರ್ಧ್ವರೇಖೆ ತೋರ್ಪೊಡಂ ಮಱಗಂತೊಂದು ವಂಸದೊಳೆ ಮುಖರೋಗಂ ದೂಸಿಸೆ ಮರಣಮಕ್ಕುಂ (ಅಶ್ವಶಾ. ೩-೪). [ <ದೂಷಿಸು ]

**ದೂಸು** 'ದೂಸ್$_1$' ನೋ.

**ದೂಸೆಯಕ್ಕಿ** (ನಾ). ಅರ್ಧ ಕುಟ್ಟಿದ ಕೊಟ್ಟಣದ ಅಕ್ಕಿ ; ಹೊಟ್ಟಿರುವ ಅಕ್ಕಿ : ಉಂಭಷಡ್ಭಾಗ ಪ್ರದಾನೇನ = ಭತ್ತವುಂ ಮಿದಿವಲ್ಲಿ ಓಡಿಯಕ್ಕಿಯ [ಪಾಠಾಂ. ಸಿಡಿಯಕ್ಕಿಯ]ನಾಯ್ದುಕೊಳ್ಳಲ್ಲಿನಿತು ಭಿಕ್ಷೆಯಾಟನೆಯ ಭಾಗವುಂ ಅಥವಾ ದೂಸೆಯಕ್ಕಿಯಾಟನೆಯ ಭಾಗವುಂ (ಪ್ರದಾನೇನ) ಕುಡುವುದಱಿಂದಂ (ನೀತಿಶಾ. ೬--೨೬). [ ದೂಸೆ$_0$ + ಅಕ್ಕಿ$_1$ ]

**ದೂಹತಿ** 'ದೂಹತ್ತಿ' ನೋ.

**ದೂಹತ್ತ** 'ದುಹತ್ತ' ನೋ.

**ದೂಹತ್ತಿ, ದೂಹತಿ** (ನಾ). ಒಂದು ಬಗೆಯ ಉದ್ದವಾದ ಕತ್ತಿ : ರಾಹುತರು ನಿಲ್ಲದೆ ದೂಹತ್ತಿಯ ಕೊಂಡಾಡುತ್ತಲ್ಲರುಮೊಯ್ದು ಮುಳಿದು ಮೂವಳಿಸಲ್ಲಲ್ಲಿಸದೆ ನಸುನಗುತಂ ನೋಡಿದನಂದು ಲಕ್ಷ್ಮಣಂ ಬಲವ (ಕುಮುರಾ. ೮-೫೩) ; ಇಳಿದು ಗಜವನು ಕೈದುಗಳ ನೆಲಕಿಳುಹಿ ಜೋಧರು ವಾರುವದಿನಿಳಿಗಿಳಿದು ರಾವ್ತರು ಹಾಯ್ಕದರು ದೂಹತ್ತಿ ಲೌಡಿಗಳ (ಕುವ್ಯಾಅ. ೧೯-೫೩) ; ಕೆತ್ತಿಸಿದವಂಬುರವಣಿಸಿ ದೂಹತ್ತಿ ಹೊಳೆದವು ಸಮರದಲಿ (ಕುವ್ಯಾಗ. ೨-೧೭) ; ಬರೆಬರೆ ದೂರದಲಿ ದೂಹತ್ತಿಯಲಿ ಕಡಿವಡೆದ ಸೀತೆಯ ಕಂಡನಜಸೂನು (ತೊರರಾ. ೬-೪೦-೪೨). **ದೂಹತಿ** : ೧. ಅವನ ಮಂತ್ರಿಗಳು ಮತವಿದಲ್ಲೆಂದಡ್ಡವಿಸಿ ದೂಹತಿಯ ಹಸ್ತವ ಹಿಡಿದು ರಣನಿಷ್ಕೃತಿಗೆ ರಂಜಕವಾವುದಿನಿತಱೊಳೆಂದರವರಂದು (ತೊರರಾ. ೬-೪೫-೬೨). ೨. "ಎರಡು ಅಲಗುಳ್ಳ ಖಡ್ಗ" (ಶಬ್ದ.).
[ <ಸಂ. ದ್ವಿಹಸ್ತೀ ]

**ದೂಹಸ್ತಿ** (ನಾ). = ದೂಹತ್ತಿ : ಪದದಾದಿಯ ದೀರ್ಘಕ್ಕೆ – ಆಮರ – ಆವರೆ . . . ದ್ವಿಹಸ್ತಿ – ದೂಹಸ್ತಿ ; ನವಮಿ – ನಾಮಿ (ಶಮದ. ೨೬೭ ಪ್ರಯೋ). [ ? ಇದು 'ದೂಹತ್ತಿ' ಎಂಬುದರ ಅಪಲಿಖಿತವಿರಬಹುದು ]

**ದೂಹೆ** 'ದೂವೆ$_1$' ನೋ.

**ದೂಹೆಗಾಡು** (ನಾ). ಶ್ಮಶಾನ ; ಸುಡಂಗಾಡು : ಕನ್ನವಿಕ್ಕಿದವರನು . . . ಕಡಿಯೆಂದು ಕಳುಹಿದರೆ ಚೆನ್ನಾಗಿ ಮೆಱೆಸುತ್ತ ತಂದವರ ದೂಹೆಗಾಡಿನೊಳು ತಲೆಗಳ ಹೊಡೆಯಲು (ಸಿಂಗಿರಾ. ೨೩-೧೧).
[ ದೂಹೆ (<ದೂವೆ$_1$) + ಕಾಡು$_3$ ]

**ದೂಳ್** 'ದೂಳಿ' ನೋ.

**ದೂಳ** (ನಾ . ಒಂದು ಬಗೆಯ ಮರ : ದೂಳ, ದೇವದಾರು, (ಪಬ್ಬ).– ಕಾನಡಾಜಿಲ್ಲೆಯ ಅತ್ಯುನ್ನತವೃಕ್ಷಗಳಲ್ಲಿ ಪೊಂದು ... ಕಟ್ಟಿಗೆ ಯಾವತ್ತು ಕೆಲಸಕ್ಕೆ ಬರುವುದು (ಕಥಾಗ. ೪೨). [ ? ]

**ದೂಳಕ್ಕರ** (ನಾ). ಬರೆಯುವುದನ್ನು ಕಲಿಯುವಾಗ ಮರಳಿನ ಮೇಲೆ ಬರೆಯುವ ಅಕ್ಷರ: ದೂಳಕ್ಕರ ಗಜತುರಗದೇಱಾಟವು ಬಾಲಕೇಳಿಗಳಾದಿಯಾಗಿ ಮೇಳದೊಳಿಹ ಪ್ರಾಣಸಖ ಪ್ರಹಸಿತನೊಳು ಪೇಱದ ತನ್ನ ದುಸ್ಥಿತಿಯಂ (ಅಂಜಕ. ೫-೪೭); ಕನಕದಾಸನ ಪಡನೆ ಹರಿ ಮಾನ್ನ ಪೇಳಿಸಿದ ನಾನು ದೂಳಕ್ಕರಮನರಿಯೆನೆನ್ನಿಂದ ಪೇಳಿಸುವ ಹರಿಹರರ ಮಹಿಮೆಯನು ಯಾರ್ಬಲ್ಲರಭವಾ (ನವಮೋ. ೦-೯). [ದೂಳು (<ದೂಳಿ) + ಅಕ್ಕರ$_3$]

**ದೂಳಕ್ಷರ** (ನಾ). = ದೂಳಕ್ಕರ : (ಕ). [ ದೂಳು (<ದೂಳಿ) +ಅಕ್ಷರ ]

**ದೂಳಾಟ, ಧೂಳಾಟ** (ನಾ). ಮಣ್ಣಿನಲ್ಲಿ ಆಡುವ ಆಟ ; ಧೂಳಿನಲ್ಲಿ ಆಡುವುದು ; ಮಣ್ಣಾಟ : ಕೊಳನ ಹೊಂದರೆಯೊತ್ತಿ ಮಿಂದೇಳಲೆಯ ವಾಳಿಯ ಕರ್ಪುರದ ದೂ[ಪಾಠಾಂ. ದೂ]ಳಾಟಗಳನಾಡಿ . . . ನಂದನದೊಳಗೆ ಸುಳಿದಾಡುವುದು ಬಾಲಕನಂದದೊಂದೆಲರು (ಸಾಳ್ವಭಾ. ೨-೫) : ಓರಗೆಮಕ್ಕಳೊಡನೆ ದೂಳಾಟ ಮೊದಲಾದ ಲೀಲೆಗಳ ಪರಿವಿಡಿಯಿಂದೆಸೆವ ಕುಮಾರರ್ಗೆ ಮುನಿಪತಿ ಚೌಲಕರ್ಮಂಗಳಂ ಮಾಡಿಸಿ (ಕೃಮಿಥಾ. ೧೯-೫೦). **ಧೂಳಾಟ** : ಭೀಷ್ಮನ ತೋಳ ತೊಟ್ಟಿಲಿನೊಳಗೆ ಬೆಳೆದವು ಸಲಹಿದನು ಧೂಳಾಟ ಮೊದಲಾಗಿ (ಕುವ್ಯಾಭೀ. ೭-೨೮); ಸೊಕ್ಕಿದ ರದನಿಗಳ ಧೂಳಾಟ ವೊಪ್ಪಿದವವರ ಯುದ್ಧದಲಿ (ಸಾಳ್ವಭಾ. ೨೨-೬೦) ; ತೊದಲುನುಡಿಗಳಂಬೆಗಾಲು ದಟ್ಟಡಿ ಮುಂದವೊದವಿದ ಧೂಳಾಟದಿಂದ ಪದುಳದೆ ಬಾಲಲೀಲೆಯ ತೋಱ ಸಕಲರ್ಗೆ ಚದುರಕುಮಾರರೊಪ್ಪಿದರು (ಕಂನವಿ. ೪-೮೦) ; ಇಬ್ಬರೂ ಬಾಲ್ಯದಲ್ಲಿ ಒಟ್ಟಿಗೆ ಧೂಳಾಟವಾಡಿದ ಜೊತೆಗಾರರು (ಕಾಪ್ಯಸ. ೬೫). [ ದೂಳು (<ಧೂಳಿ) + ಆಟ ]

**ದೂಳಿ, ದೂಳ್, ದೂಳು, ಧೂಳ್, ಧೂಳು** (ನಾ). ೧. ಮಣ್ಣಿನ ಹುಡಿ ; ಪಾಂಸು ; ರಜ : "ದೂಳಿ – ರಜಸ್, ಪಾಂಸು" (ನಾಚಿರಾ. ೬) : ಬಟ್ಟೆಯ ದೂಳಿ ದೂವೆ ಮೊದಲಾದುದು (ಕಾದಂಪೂ. ೧೯೭) ; ದೂಳಿಯ ಪಚ್ಚೆಯಂತೆ . . . ಬೂದಿಯ ಬೊಟ್ಟಿನಂತೆ ಮಾಗೆಯ ಪೊತ್ತಿನಂತೆ ತೋಱ ಪಾಱುವಾಯುಷ್ಯಮಂ (ಧರ್ಮಾಮೃ. ೯-೨೩ ಅಡಿಟಿ) ; ದೂಳಿಯೊಳಿಬಲ್ಯ ಮೇಲಾದಿನ ದುಗುಲದ ಸೆಱಂಗಿನೊಳಂ (ವರ್ಧಕು. ೯-೬೦ ವ) ; ಒತ್ತರಿಸಿ ಫಲುಗುಣನ ಸೂನುವಂ ಭಾನುವಂ ಮುಸಿ,ದುದು ಚಾತುರಂಗಾಳಿಯುಂ ದೂ[ಪಾಠಾಂ. ಧೂ]ಳಿಯುಂ . . . ಘೋರತರ ಸಂಗರದೊಳು (ಕೃಮಿಥಾ. ೨೨-೩೬) ; ದೂಳಿಯಿಂದ ಮಾಳಿಗೆ ಆದೀತೇ ? (ಗಾದೆ). ೨. ಪುಡಿ ; ಚೂರ್ಣ ; ಹಿಟ್ಟು : ಮನೋಭಾಸುರಮಪ್ಪ ಕಪ್ಪುರದ ದೂ[ಪಾಠಾಂ. ಧೂ]ಳಿಯನಲ್ಲದೆ ದೂ[ಪಾಠಾಂ. ಧೂ]ಳಿಯುಂ ನಿಜಾವಾಸದೊಳೆಂತುಟೆಂದಱಯನಿಂತುಟು ಪುಣ್ಯಮಗಣ್ಯಮೀತನಾ (ಸುಕುಮಾ. ೦೦-೧೧೭). ೩. ಹೂವಿನಲ್ಲಿರುವ ಪುಡಿ; ಪರಾಗ : ಸೊಂದಿಗೋಡಗಂಗಳ ಕಾಲಾಟದಿನಲ್ಲೊಕ್ಕಲರಿನುದಿರ್ದ ದೂಳಿಗಳನಮರ್ಚಿಯುಂ (ಕಲ್ಯಾಕಾ. ೫೩ ವ): ತಿಳಿಗೊಳಂಗಳೊಳಲರ್ದ ಪೊಚ್ಚ ಪೊಂದಾವರೆಗಳ ದೂ[ಪಾಠಾಂ. ಧೂ]ಳಿ ತನಿಗಂಪನುಂಡು ಮಿಂಡೆದ್ದ ಭೃಂಗಾಳಿಗಳ ಬಳಗಂ ಪರಿಯಲು (ಕೃಮಿಥಾ. ೩-೮). **ದೂಳ್** : ೧. ಮಸಗಿದುರಿ ಪೊಗೆ ಸಿಡಿಲ್ಮಿಂಚು ಕತ್ತಲೆ ಗಾಳಿ ಮುಗಿಲೊಡ್ಡು ದೂಳ್ಗಳಿಂದೆ ದೆಸೆಗೆಡಿಸುತ . . . ಮಸಗಿದು (ಕೃಮಿಥಾ. ೦೬-೫೭) ; ಲಕ್ಷ್ಮಣಂ . . . ಎಂದುಮಗಲ ದಣ್ಣನ ಕಡೆಗೆ ದೂಳ್ಯಾಯದೊಳ್ಪತ್ತಿ ಪೊರಳ್ವ ಸೀತೆಯ ಕಡೆಗೆ ತೂಗುಯ್ಯಲೆವೊಲಾದನು (ಕೃಮಿಥಾ. ೧೯-೨೯) ; ದೊರೆಗಳ ದೊರೆ ಚಕ್ರಿಯೆನಿಸಿ ದರ್ಯವುಮನು ಮೆರೆದನು : ಈಗಳದನು ದುಡುಂಕುಹೆವ್ಕೆ

ದೂಳ್ಗೊದೆದುದೊ ಅರಿಯೆನು (ಪಾಠಸಿ. ೯-೧೮೭). **ದೂಳು:** ೧. ಶರ್ಕರೆಯ ಬುದ್ಧಿಯಲಿ ದೂಳನು ತಿಂಬಬುಧರಂತೆ ದುಃಖದಳವನು ಪಡೆಯದೇ ಸುಖಸೌಖ್ಯವಿಲ್ಲದೆ ಬಳಲುವುದು ಶಾವತ್ಕಧಿಕಬುದ್ಧಿಯಲಿ (ನಿಶಾಗ. ೦೧-೫-೪); ಗಾಳಿಯಿಂದ ದೂಳು ಹಾರಿದರೆ ಕೋಳೀ ಹೊಟ್ಟೆ ತುಂಬೀತೆ? (ಗಾದೆ) ; ದೂಳಲ್ಲಿ ಬಿದ್ದವ ಮೂಳನಿಂದ ಕಡೆ (ಗಾದೆ). ೨. "ಪರಾಗ, ಸುಮನೋರಜ = ಹೂವಿನ ದೂಳು" (ನಾಜಿಶಾ. ೬) ; "ಪರಾಗಃ, ಸುಮನೋರಜಃ -ವಿ ಹೂವ್ವಿನೊಳಗಿರುವ ದೂ[ಪಾಠಾಂ. ಧೂ]ಳು, ಪೂದೂಳಿ, ಅಲರ ಪುಡಿ" (ಸಿದ್ಧಾಂತಿ. ೦೦೦). **ಧೂಳ್ :** ೧. ಅಜುನೀರ್ವಳ್ವಂ ನೆಟ್ಟಲ್ಗಂದಿದ ತರುನಿಚಯಂ ಧೂಳದರ್ದುರ್ಬಿ ನಿಚ್ಚಂ ಪಱಗೆಟ್ಟಪ್ಪಾಸ ...ಸರ್ವೋರ್ವಿಯೊಳ್ ಕೂಡೆ ನೋಡಲ್ ಬಱನಾಗಲ್ (ಚಕಶು. ೩-೦೨). **ಧೂಳು :** ೧. ಸೃಷ್ಟಿಯಲಿ ಅಣುವಿನಣುವಿನ ಮ್ಯಯ ಧೂಳಿನಲೊಂದು ಕಣ ನೀನು (ಕಗದ್ಯ. ೦೧೦) ; ಎರಡೂ ಕೈಗಳನ್ನು ಬಡಿದು ಧೂಳನ್ನು ಜಾಡಿಸಿ (ಕಮ್ಮಟ. ೨). ೨. "ಹುಡಿ = ಧೂಳು" (ಶಾಕಶ್. ೩೭).

**ದೂಳ ಅದರಿಸು** = (ಉಕ) ತರಾಟೆಗೆ ತೆಗೆದುಕೊಳ್ಳು : ನಾನು ಚೆನ್ನಾಗಿ ದೂಳ ಅದರಿಸಿದೆ. ಕೊನೆಗೆ ನನ್ನ ಸೂಚನೆ ಮಾನ್ಯವಾಯಿತು (ಶ್ರೀಮಾಕ್ಕ. ೨೩೭). **ಧೂಳಸಂಜೆ** = ಸಾಯಂಕಾಲದ ಮಬ್ಬುಗತ್ತಲೆ : ಭೂತ ಪಿಶಾಚಿಗಳು . . . ಅಡ್ಡಾಡುವ ಕಾಲವೆಂದರೆ ಧೂಳ ಸಂಜೆ ಅಥವಾ ದೊಡ್ಡ ನಸುಕು (ಕನ್ನಜಾ. ೨೦). **ಧೂಳಾಗು** = ೧. ಹೊಲಸಾಗು ; ಕೊಳೆಯಾಗು : ಮಣ್ಣಿನಲ್ಲಿ ಕೆಲಸಮಾಡಿ ಆತನ ಬಟ್ಟೆಯಲ್ಲಾ ಧೂಳಾಗಿದೆ (ರೂಢಿ). ೨. ಮಣ್ಣುಪಾಲಾಗು ; ನಾಶವಾಗು ; ಹಾಳಾಗು : ದ್ರೋಹಿಗಳು ಧೂಳಾಯ್ತು ಬಳಿಕನೋಳೀ ಹದನು ಬಂದಿದೆ ಜಗತ್ರಯ ರೂಹುಗೆಡುತಿದೆ (ಕುವ್ಯಾಳ. ೭-೪೫). **ದೂಳು ಧುಮುಸ** = ಮಣ್ಣು, ಕಸ ಇತ್ಯಾದಿ : ಇದು ಧೂಳುಧುಮುಸವನ್ನದೆ ಅಂಗಳ ನಡುವೆ ಮಣ್ಣಲ್ಲಿ ಕುಳಿತು ಕುಟ್ಟುವುದು (ಕನ್ನಜಾ. ೩೭). [ <ಸಂ. ಧೂಲಿ ]

**ದೂಳಿಕಡವ** 'ದೂಳಿಗಡವ' ನೋ.

**ದೂಳಿಗಡವ, ದೂಳಿಕಡವ, ಧೂಳಿಕಡವ, ಧೂಳಿಗಡವ** (ನಾ). ಒಂದು ಬಗೆಯ ಸಸ್ಯ : "ರೇಣುಕದಂಬಕಃ - ದೂಳಿಗಡವ" (ಓಷಧಿ. ೦೪೦). **ದೂಳಿಕಡವ :** "ಮಕರಂದವಾಸಃ - ದೂಳೀಕಡವ, ಕರ್ಕಟಕ, ಹಿಪ್ಪಲಿ, ಉತ್ತರಣೆ" (ಓಷಧಿ. ೧೨೩). **ಧೂಳಿಕಡವ :** "ಬಲಭದ್ರಸಂಜ್ಞಕಃ - ಧೂಳಿಕಡವ" (ಓಷಧಿ. ೦೦೭). **ಧೂಳಿಗಡವ :** "ಕ್ರಮುಕಪ್ರಸೂನಃ - ಧೂಳಿಗಡವ" (ಓಷಧಿ. ೨೮). [ ದೂಳಿ + ಕಡವ$_1$ (<ಕಡಂಬ) ]

**ದೂಳಿಗತ್ತಲೆ** (ನಾ). ಧೂಳಿನಿಂದ ಉಂಟಾದ ಮಬ್ಬು, - ಕತ್ತಲೆ : ಆಗಳಾಗಸಕ್ಕೆ ನೆಗೆದು ಪರ್ವಿದ ದೂಳಿಗತ್ತಲೆಯೊಳ್ . . . ಕಾದಿ (ಕರ್ಮಕಾ. ೨೬೭). [ ದೂಳಿ + ಕತ್ತಲೆ ]

**ದೂಳಿಗೋಂಟೆ, ದೂಳಿಗೋಟೆ, ದೂಳ್ಗೋಂಟೆ, ಧೂಳ್ಗೋಂಟೆ** (ನಾ). ೧. ನಾಶಕ್ಕೆ ಒಳಗಾದ ಕೋಟೆ, - ದುರ್ಗ : ಚಲಂ ನೆಲೆಗಿಡೆ, ಬಲಂ ಬಯಲ್ವೋಗೆ, ಕೊಂಚೆಗೋಂಟೆ ದೂಳಿಗೋಂಟೆಯುಪ್ಪುದುಂ (ರಾಮಾಶ್ವ. ೯೭-೨೦). **ದೂಳಿಗೋಟೆ :** ೨. ವಶಪಡಿಸಿಕೊಂಡ ಕೋಟೆ ; ಅಧೀನಕ್ಕೊಳಗಾದ ದುರ್ಗ : ಇಕ್ಕೇರಿಯ ಭೂಪ . . . ಪೊಕ್ಕು ಮಲೆಯ ನಾಕ್ಷಣ ದೂಳಿಗೋಟೆಯ ಗಕ್ಕನೆ ಕೊಂಡರೇವೇಳ್ವೆ (ಕೆಂನವಿ. ೧೧-೫). **ದೂಳ್ಗೋಂಟೆ. ಧೂಳ್ಗೋಂಟೆ :**

**ದೂಳಿಗೋಂಟೆಯ ಕೊಳ್, ದೂಳಿಗೋಟೆಯ ಕೊಳ್, ದೂಳಿಗೋಟೆಯಂ ಕೊಳ್, ದೂಳ್ಗೋಂಟೆಯಂ ಕೊಳ್, ಧೂಳ್ಗೋಟೆಯಂ ಕೊಳ್** = ಕೋಟೆಯನ್ನು ನಿರ್ನಾಮ ಮಾಡು ; ದುರ್ಗವನ್ನು ಧೂಳು ಧೂಳಾಗುವಂತೆ ಮಾಡು : ಇಕ್ಕಿ ನಿಚ್ಚಣಿಗೆಯಂ ದೂಳಿಗೋಂಟೆಯ ಕೊಳ್ಳಬೇಕೆಂಬ ಪಡಿಯಚರ ಕಲಕಲಂ ಕರವೊಪ್ಪಿತು (ಸಮ್ಯಕಾ. ೮-೩೦) : ಸುಯೋಧನಾದಿಗಳೂರನುರವಣಿಸಿ ದೂ[ಪಾಠಾಂ. ಧೂ]ಳಿಗೋಟೆಯ ಕೊಂಡಿವರು ರಾಜಾಲಯಕೆ ಬರೆ (ಕುವ್ಯಾಅ. ೭-೬೪) ; ಉರವಣಿಸಿ ದೂ[ಪಾಠಾಂ. ಧೂ]ಳಿಗೋಟೆಯಾ ಕೊಂಡ ರಘುವೀರನಂದು (ಕೃಮಿಥಾ. ೦೮-೭) ; ತ್ರಿಪುರಮಂ ಪರಿದ್ಯೆದಿ ಮುತ್ತಿ ದೂಳ್ಗೋಂಟೆಯಂ ಕೊಂಬುದೆನೆ ಹರುಷದಿಂ ತಂತಮ್ಮ ಚಾತುರ್ಬಲಂವೆರಸಿ ನಡೆದರತಿಸಂಭ್ರಮದೊಳು (ಜಬಪು. ೪೨-೨೩) ; ಧೂಳ್ಗೋಂಟೆಯಂ ಕೊಂಡು ನೆಲಸರಿತಮಂ ಮಾಡುತಿರಲು (ಜಬಪು. ೪೮-೮). 'ಧೂಳೀಗೋಂಟೆ' ಪಠಾ.

[ ದೂಳಿ + ಕೋಂಟೆ ]

**ದೂಳಿಗೋಟೆ** 'ದೂಳಿಗೋಂಟೆ' ನೋ.

**ದೂಳಿಚಿತ್ರ** (ನಾ). ಬಣ್ಣಬಣ್ಣದ ಪುಡಿಗಳಿಂದ ರಚಿಸಿದ ಚಿತ್ರ, - ರಂಗವಲ್ಲಿ : ಮಳಯಜದ ಮೊಲೆಯ ಕುಂಕುಮದಳಕದ ಕತ್ತುರಿಯ ಬಣ್ಣವಣ್ಣಿಗೆ ಕೊಳದೊಳ್ತಳೆರ್ದಿರೆ ಜಳರುಹಮುಖಿಯರ್ ಜಳಕೇಳಿಯ ನೆವದಿ ದೂಳಿಚಿತ್ರಂ ಬರೆದರ್ (ಯಕೋಚ. ೪-೮). 'ಧೂಳೀಚಿತ್ರ' ಪಠಾ.

[ ದೂಳಿ + ಚಿತ್ರ ]

**ದೂಳಿಡು** (ಕ್ರಿ). ದೂಳನ್ನು ಎಬ್ಬಿಸು, - ಹರಡಿಸು, - ಎರಚು : ಜಡಿವ ಕಲ್ಗಂಡು ದೂಳಿಡುವ ಬಿಱುಗಾಳಿ ಕಂಗೆಡಿಪ ಕತ್ತಲೆ (ಕೃಮಿಥಾ. ೪-೨೩) ; ಊರ್ಧ್ವಮುಖಮಾಗಿ ಸೂಸುವ ರಜದ ಸೋನೆಯೆನೆ ದೂಳಿಡೆ . . . ಗುಹೆ ದೋಣಿ ಮೊರಡಿ ಪಳ್ಳ ಕೊಳ್ಳ ಜನ ಸರಿ ಜಲುಗು ಗಹನ ಗಹ್ವರದ ವೀಧ್ಯಾದ್ರಿಯಂ ಫಲಗುಣನ ಸೇನೆ ತುಳಿದಸಿಯರೆದುದು (ಕೃಮಿಥಾ. ೧೦-೮) ; ಪಡಲಿಡು, ಪೊಡಮಡು . . . ದೂಳಿಡು, ಮೂಳಿಡು (ಕಬ್ಬಾಸು. ೪೮೮ ಪ್ರಯೋ). [ ದೂಳು (<ದೂಳಿ) + ಇಡು$_1$ ]

**ದೂಳಿತ** (ನಾ). ಭಸ್ಮ ; ವಿಭೂತಿ : ಆ ಮಹಾತ್ಮರು . . . ತಿಮ್ಮಣ್ಣ ನಾಯಕನಿಗೆ ದೇಸೆಗಟ್ಟಿನ ದೂಳಿತ, ಸಿದ್ದಮೂಲಿಕೆ, ಕೈಲಂಬು ಇವುಗಳನ್ನು ಕೊಟ್ಟು . . . ಹೊರಟುಹೋದರಂತೆ (ಚಿತ್ರಪಾ. ೭).

[ <ಸಂ. ಧೂಲಿತ ]

**ದೂಳಿದರ್ಶನ** (ನಾ). ಮೊದಲಸಲದ ನೋಟ, - ದರ್ಶನ : ದೊಡ್ಡ ದರಬಾರು ಮಾಡಿ ದೂಳಿದರ್ಶನದಲ್ಲೇ ಅಂದರೆ ಮೊದಲನೇ ಸರ್ತಿ ಕಾಣುವುದರಲ್ಲೇ ಮಂತ್ರಿಬುದ್ಧಿಯನ್ನರಿಯಬೇಕು (ಕಥಾಮಂ. IV, ೩೨): P ಪ್ರಯಾಣದಲ್ಲಿ ಮೈಮೇಲೆ ಬಿದ್ದ ಧೂಳಿಂಸಹಿತವಾಗಿ ಎಂದರೆ ಬಂದ ಕೂಡಲೆ ಮಾಡುವ ದೇವರ ಅಥವಾ ಹಿರಿಯರ ದರ್ಶನ.

[ ದೂಳಿ + ದರ್ಶನ ]

**ದೂಳಿಸು** (ಕ್ರಿ). ೧. ಹುಡಿ ಹರಡು, - ವ್ಯಾಪಿಸು : ಚಾರುತರಮುಖವರಡರಮಳಾಗಾರಮಂಟಪವಳಯದಲಿ ಕರ್ಪೂರ ದೂ[ಪಾಠಾಂ. ಧೂ]ಳಿಸಿತು (ಕೂರರಾ. ೧-೭-೧೩). ೨. ಲೇಪಿಸು ; ಪೂಸು : ಪಳಿಮಂಜಳಿಣ್ಣೆಯಂ ದೊಡ್ಡಂಗ ದೂಳಿಸಿದರೆಳೆವೆಣ್ಣೊಸಗೆಯಿಂ (ಕಾಲೂಕ. ೦೪೭-೩೨೦). [ ದೂಳಿ + - ಇಸು$_3$ ]

**ದೂಳಿಸೆಜ್ಜರ** (ನಾ). ಧೂಳಾಟವಾಡುವ ಜಾಗ ; ಕ್ರೀಡಾಸ್ಥಾನ : ಪದೆಪಿಂ ಮೇಳಿಸೆ ದೂ[ಪಾಠಾಂ. ಧೂ]ಳಿಸೆಜ್ಜರವಿದೆಂದಾಶಾಗಜಂ ಭೀತಿಯೊಂದಿದು ನೂಱಿಂಱೊಂದೆನಿಸಿರ್ದ ಕೇತುವೆರಸೀಗಳ್ ರಾಹು ಮೇಲೆತ್ತಿ ಬಂದುದೆನುತ್ತುಂ ರವಿಮಂಡಳಂ ನಡುಗೆ . . . ಪರ್ಬಿತ್ತುರ್ಬಿ ಸೇನಾರಜಂ (ಮಲ್ಲಿಪು. ೮-೦೪೩); ಆ ಸಮಯದೊಳ್ ದೂಳಿಸೆಜ್ಜರಕ್ಕುಱುಗಿಸಿ ಕಾಡಾನೆಗಳ ಕೋಡ ಮೊನೆಯನೀಡಿಱುವ ಗಿರಿಯ ದರಿಯ ಗೈರಿಕಪರಾಗವುಂ ಸಂಧ್ಯಾರಾಗ ವಿಚಾದಿನಾಗಸಕ್ಕೆ ಪಸರಿಸಿಯುಂ (ಚಂದ್ರಪು. ೮-೪ ವ) ; ಕಪ್ಪುರದೊಪ್ಪುವ ಜಗಲಿ ದೂ[ಪಾಠಾಂ. ಧೂ]ಳಿಸೆಜ್ಜರಮೆನಿಸೆ (ಪಾರ್ಶ್ವಪು. ೯-೩೦ ವ). 'ಧೂಳಿಸೆಜ್ಜರ' ಪಠಾ. [ ದೂಳಿ + ಸೆಜ್ಜರ (<ಸೆಜ್ಜಾರ) ]

**ದೂಳು** 'ದೂಳಿ' ನೋ.

**ದೂಳುಗೆದಱು** (ಕ್ರಿ). ೧. ಪುಡಿಪುಡಿಯಾಗಿ ಬೀಳು ; ಧೂಳಾಗಿ ಹೋಗು: ಸೊಗಸಿನ ಗೋಪುರಂಗಳು ಕಾಱುಗುರದಾಗಿನಲಿ ಸಿಡಿಲೊಡೆದದ್ರಿಯಂದದಲಿ ದೂಳು[ಪಾಠಾಂ. ದೂಳಿ, ಧೂಳಿ]ಗೆದಱಿದವು (ತೊರರಾ. ೬-೧೦-೨೬). ೨. ಧೂಳು ತುಂಬಿರು : ಆಲಿ ಮರಳದ ಮುಸುಡ ಮುಸುಕಿನ ದೂಳುಗೆದಱಿದ ತಲೆಯ ತೇರಿನ ಮೇಲೆ ತಂದಿಳುಹಿದನು (ತೊರರಾ. ೬-೪೩-೧೦). [ ದೂಳು (<ದೂಳಿ) + ಕೆದಱು$_1$ (<ಕೆದಱ್$_1$) ]

**ದೂಳುಪಾವಡ** (ನಾ). [ವೀಶೈ] ಸಜ್ಜೆಯಲ್ಲಿ ಈಶ್ವರಲಿಂಗದ ಮೇಲೆ ಧೂಳು ಬೀಳದಂತೆ ಮುಚ್ಚುವ ಬಟ್ಟೆ, – ವಸ್ತ್ರ : ದೂಳುಪಾವಡ ಕಂಠಪಾವಡ ಸರ್ವಾಂಗಪಾವಡ ಇಂತೀ ತ್ರಿವಿಧಶೀಲ ನಡೆಸುವಲ್ಲಿ ದೂಳುಪಾವಡವಾದಲ್ಲಿ ಆತ ನೀರನು ಹಾಯಬಹುದು (ಬಲೀಶ್ಕ. ೩೪) : ಕಂಠಪಾವಡ ಧೂಳ[ ದೂಳು ] ಪಾವಡ ಸರ್ವಾಂಗಪಾವಡ ಉಂಟೆಂಬ ಮಹಾಪಾತಕರಿಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ (ಜನ್ನವ. ಕ. ೨೨೪-೪೯೬). **ಧೂಳ ಪಾವಡದವರು** = ಲಿಂಗಾಯತ ಜಾತಿಯಲ್ಲಿ ಒಂದು ಪಂಗಡ : ಲಿಂಗಾಯತರಲ್ಲಿ ಒಟ್ಟಿಗೆ ೩೧ ಒಳಭೇದಗಳು. ಧೂಳಪಾವಡದವರು, ಶೀಲವಂತರು . . . ಇವರೇ ಮೇಲಾದ ಲಿಂಗಾಯತರು (ಕರಾಗಿ. ೯೦).
[ ದೂಳು (<ದೂಳಿ) + ಪಾವಡ$_1$ ]

**ದೂಳುವಡೆ** (ಕ್ರಿ). ಪುಡಿಯಾಗು ; ಧೂಳಾಗು : "ಗುಂಡಿತ, ರೂಷಿತ = ದೂಳುವಡೆದುದು" (ನಾಚಿರಾ. ೬). [ ದೂಳು (<ದೂಳಿ) + ಪಡೆ$_1$ ]

**ದೂಳೆಯ** (ನಾ). ಕೈಗೆ ತೊಡುವ ಮುತ್ತಿನ ಆಭರಣ : ಹೇಮಶೃಂಖಳೆ ಮಣಿಮಾಳೆ ದೂಳೆ[ಪಾಠಾಂ. ವೆ]ಯದ ಕಂಕಣಮಿಟ್ಟು . . . ಕೀರ್ತಿಪತಾಕೆ ತನ್ನೊಳೊಳ್ಪಳವಡೆ ಬಂದನಂದು ಗಜಭಟ್ಟನಿಪ್ಪಂ (ಲೀಲಾವ. ೯-೫೩).
[ ? ಇದು 'ಜೂಳೆಯ' ಎಂಬುದರ ಅಪಲಿಖಿತವಿರಬಹುದೆ ? ]

**ದೂಳ್ಗೋಂಟೆ** 'ದೂಳಿಗೋಂಟೆ' ನೋ.

**ದೂಳ್ವಡಿಸು** (ಕ್ರಿ). ಧೂಳಾಗುವಂತೆ ಮಾಡು ; ಧೂಳು ಏಳುವಂತೆ ಮಾಡು; ಪುಡಿಪುಡಿ ಮಾಡು: ನಡದತ್ತಾ ರಾಜರಾಜೇಂದ್ರನ ಬಲಮದು . . . ವಲ್ಗದಶ್ವೋತ್ಕರಖುರಹತಿಯಿಂ ಬೆಟ್ಟುವೆಟ್ಟಿಲ್ಲಮಂ ದೂಳ್ವಡಿಸುತ್ತುಂ (ಶಾಂತೀಶ್ವ. ೦೫-೧೦೭). [ ದೂಳ್ (<ದೂಳಿ) + ಪಡಿಸು ]

**ದೂಱ್** 'ದೂಱು$_1$' ನೋ.

**ದೂಱಿಡು** (ಕ್ರಿ). ೧. ಅಪವಾದ ಹೊರಿಸು ; ತಪ್ಪು ಹೊರಿಸು : ಪಱಿವನ್ನಾಯುವ ನೋಡದನ್ಯರೊಳೆ ದೂಱಿಟ್ಟಲ್ಲರಂ ಬಾಧಿಪಾ ತಳವಾಱಂ ಬೆಳವಾಱನೈ (ಸೋಮೇಶ. ೬೬). ೨. ವರದಿ ಮಾಡು ; ಹೇಳು : ದೊರೆಯಲ್ಲಿಗೈದಿದನೊಬ್ಬ ದೂಱಿಡಲು (ಕೌಶಿರಾ. ೩೨-೨೬).
[ ದೂಱು$_2$ + ಇಡು$_1$ ]

**ದೂಱಿಸು**, ದೂರಿಸು$_1$ (ಕ್ರಿ). ೧. ನಿಂದಿಸು ; ತೆಗಳು ; ಟೀಕಿಸು : ಸರಸತಿಯುಂ ಮನೋಮುದದೆ ತಾಳ್ದಿದನೆನ್ನನವಜ್ಞೆಗೆಯ್ದನಾನಿರನವಳೆಕ್ಕೆಯಿಂ ಸವತಿಯೊಳ್ಪುದುವಾಳ್ದುದು ಕಷ್ಟಮೆಂದು ನಿಷ್ಠುರವಚನಂಗಳಂ ನುಡಿದು ದಿಕ್ಕರಿಯಿಂ ಪರಿದೇಱಿ ಕೀರ್ತಿ ತಾಂ ಪುರುಡಿಸಿ ದೂಱಿಪಳ್ ವರತಪೋನಿಧಿಯಂ ನಯಸೇನಸೂರಿಯಂ (ಎಕ. XVI, ೬೦-೩೦ ; 1081) ; (ಪಾಠಮಂ.೦೯೩ ನೋ); ದೂಱಿಸದಿರಬೇಕು ದೂಱಿಗಳುಕಬೇಕು (ಕುರಾಹಾಂ. ೨೪-೨೦). ೨. ಚಿಂತಿಸು ; ಕಳವಳಪಡು ; ವ್ಯಥೆಪಡು ; ದುಃಖಿಸು : "ದೂಱಿಪುದೆಂದು ಚಿಂತಿಪುದು" (ಕಕಶಾ. ೦೨-೨೨೮) ; ಆಕೆಯ ದೂಱಿಸಿ ಸುಯ್ದು ಸುಯ್ಯೊಳಚ್ಚಳಿಸಿದುದಾ ಸರೋಜದಳನೇತ್ರೆಯ ನಲ್ಮೆಯೊಳತ್ತ ಕಣ್ಣ ನೀರ್ಗಳ ಪೊನಲಿಂದೆ ಕರ್ಚಿ ಕಳೆದುತಿರೆ ಪೋದುದು ಕೋಪಮೋಪನಾ (ಅದಿಪು. ೦೨-೦೩) ; ನಿಮ್ಮನೆ ನೆನೆದು ದೂಱಿಪಂ ರಘುವೀರಂ (ಪಂಪರಾಮಾ. ೧೦-೬೪) ; ನೀರದವಿಟಂಗೆ ವಿದ್ಯುನ್ನಾರಿಯು ವಿರಹಂ ಪೊಣರ್ಚೆ ಬಡವಾಗಿ ಕರಂ ದೂಱಿಸಿ ಬೆಳರ್ತ ತೆಱದಿಂ ಶಾರದಜಳಧರದ ತುಱುಗಲೊಗೆದುವು ನಭದೊಳ್ (ಲೀಲಾವ. ೫-೨೪) ; ಕಱುವಂ ದೂಱಿಸಿ ಮೆಲ್ಲನೊಕ್ಕು ತುಱುವಂ ತಾಯ್ಗಾಡಿನೊಳ್ಬಿಟ್ಟು ಮುಂದುಱುವಾಯ್ತುರ್ವೆಳಗಂದಿಗಳ್ (ಲೀಲಾವ. ೫-೯೭) ; ಮನದೊಳ್ ಪಿರಿದುಂ ದೂಱಿಸಲದೇಕೆ ಬಿದಿ ಕೈವಾರಿಸಿದೊಡೆ ಶೀರದಿರ್ಪುದಾವುದುಮುಂಟೇ (ಚಂದ್ರಶೆ. ೬-೬೭); ಮರುಳು ಮಗನೇನಾದನೋ ಎನುತ್ತ ಬಳಿವಳಿದು ದೂಱಿಸುತ್ತಿರಿರಾಗಿ ಬರುತ ಮಕ್ಕಳ ನಡುವೆ ಬಪ್ಪ ಸಿದ್ಧೇಶ್ವರನನತಿದೂರದೊಳು ಕಂಡು (ಸಿದ್ಧರಾ. ೨-೦೮) ; ಬಸಂತಂ ತಳರ್ವನೆಯೊಳ್ ನಲ್ಲನಂ ನೆನೆದು ದೂಱಿಸುತಿರ್ಪಚ್ಚ ಗಾರ್ತಿಗಾ ತೆಱನೆಲ್ಲಮಂ ಬಿನ್ನಪಂಗೆಯ್ದು (ಕಬ್ಬಿಗಕಾ. ೩೨೧);ದೂರದೆಯೊಳಿರ್ದ ಕಾಮಿನಿಯುನಾಸೆವಡುತ್ತಿತಾಪದೇಳ್ಗೆಯಿಂ ದೂಱಿಸಿ ಸುಯ್ಯಲೇಕೆ ವಿರಹವ್ಯಥೆಯಿಂದಂ (ನಳಚಂ. ೬೨) ; ಮೊದಲೆಳೆಯರ್ಕಳಿಲ್ಲದುಱಿ ದೂಱಿಸಿ ಮದ್ಗುರುವಿತ್ತ ಮಂತ್ರದಿಂ ಪದಟನೋಲೀತನಂ ಪಡದು . . . ಯೌವನೋದಯವಿಳಾಸಮನೀಕ್ಷಿಪ ಕಾಲಕಂತು ಬಂದುದೆ ವ್ಯಾತಿಯಿಂದು ಚಿಂತಿಸದಿರ್ (ರಾಜಶೇ. ೦೪-೩೯). ೩. ಚಿಂತೆಗೆ ಒಳಗುಮಾಡು ; ವ್ಯಥೆಗೆ ಒಳಪಡಿಸು: ಸ್ವೈರದಿನಾಂ ಪೋಗುತ್ತಿರೆ ತಾರಾಪಥದೊಳ್ ಪಳಂಚಿದುದು ಕಿವಿಯಂ ಹಾಹಾರವಮುಱಿಯಿಣ್ಣುಱುಪೋಲ್ ದೂಱಿಸೆ ಬಗೆಬಗೆಯೊಳೊಗೆಯೆ ಕಾರುಣ್ಯರಸಂ (ಪಂಪರಾಮಾ. ೧೦-೫೭); ತನ್ನ ತಾನೇ ದೂಱಿಸಿ ದೂಡಾನೇನ ಮಾಡುವೆನೆಂದನಲ್ಲಮನು (ಪ್ರಭುಲೀ. ೭-೫೦). **ದೂರಿಸು$_1$** : ೧. ಮನಮಂ ದುರ್ವ್ಯಸನಕ್ಕೆ ತಂದು . . . ಲೋಕದಪವಾದಕ್ಕಾವಗಂ ಬನ್ದು ದುರ್ಮ್ಮನದಿಂ ದೂರಿಸುತಿರ್ಪ್ಪ ಶಾಪಸ ನಿಕೃಷ್ಟಜ್ಞಾನಶಕ್ತಿ ಬ್ರತೀಂದ್ರನನೇಮ್ವೋಲ್ವರೆ (ಎಕ. XI-II, ೦೩೨-೩೩ ; 1103).
[ ದೂಱು$_2$ + – ಇಸು$_3$ ]

**ದೂಱು$_1$**, ದೂರ್, ದೂರು$_1$ (ಕ್ರಿ). ೧. ನಿಂದಿಸು ; ತೆಗಳು ; ಬಯ್ಯು; ಟೀಕಿಸು : ಇತ್ತ ಸರ್ವದಯಿತೆ ಗರ್ಭಮಂ ತಾಳೆ ಸಾಗರದತ್ತಂ ಕಂಡು ದುಶ್ಚರಿತೆಯೆಂದು ದೂಱಿ (ಚಾವುಂಪು. ೮೦); ಪೆಱರವಗುಣಮಂ ಕಂಡೊಡೆ ಯುಱಿಯುಟ್ಟ ತಗುಳ್ದು ದೂಱವೇಡ (ಧರ್ಮಾಮೃ. ೫-೧೦೨) ; ಲಿಂಗವಾರೋಗಣೆಯ ಮಾಡಿದನೆಂಬರು ತಾವುಂಡು ನಿಮ್ಮ ದೂಱುವರು (ಅವಚಂ. ೩೭-೧೬೨) ; ಕಸವಮಂತ್ರಿಗಳು . . . ದೂಱಿದರು ಬಸವಣದಂಡನಾಯಕನ (ಬಸಪು. ೧೧-೪) ; ದೂಱುವವರಾವಲ್ಲವೆಂದನು ಭಾನುಸುತ ನಗುತ (ಕುಭಾ.ಕ. ೦-೨೪); ಸರಸರಿಸಿ ಬಳಿಕಾ ಮುನೀಂದ್ರರು ಸರಸಿಜಾಕ್ಷನ ಸಂದರುಶನಕೆ ಬರಲು ಬಳಿಯಲಿ ಬಂದು ದೂಱಿದರವರು ಮುನಿವರರ (ತೊರರಾ. ೧-೯-೧೪) ; ಸಾರಿ ದೂಱಿ ಹೇಳುತೇನೆ ಕೆಟ್ಟ ಕಂಡ್ಕೆ ಬಡ್ಡಿ ಮನವೆ (ಕನಕ. ೩೨ ಪಲ್ಲವಿ). ೨. ಚಾಡಿಹೇಳು : "ದೂಱು–ಪೈಶುನ್ಯೇ (ದೂಱು ಹೇಳು)" (ಕಮುಧಾ) ; ಮಂದರೋದ್ಧರ ಧರಣಿಪಾಲಕನೆಂದು ನಿಂದಿಹ ತಾಗಿ ಭರಣಿಯಿಂದು ಕದ್ದರೆ ಕಮಲಸಂಭವ ದೂಱುವನು ಹರಿಗೆ (ಸುಭಪ. ೭-೨೮): ಮೆಲ್ಲಮೆಲ್ಲನೆ ಬೆಮರುಣ್ಮ ಜಾಣ್ಮೆಯೊಳವಂ ಮಱಸುತ್ತಿರೆ ದೂಱದತ್ತು ಕಂಪನಕೃತಕಂಕಣಸ್ವನಮುಮಾಸ್ಯವಿಕಾಸಮುಮಾತ್ಮರಾಗಮಂ (ರಾಜಶೇ. ೮-೬೪). ೩. ಅಪವಾದ ಹೊರಿಸು; ಅನ್ಯಾಯವಾದ ಆರೋಪಣೆಯನ್ನು ಮಾಡು : ನೆರೆಯಳ್ ತಾನೀಯಳಿಮ್ಮಂ ಸವತಿತನಕೆ ಶೀತಾಂಶುವಂ ರೋಹಿಣೀಸೌಂದರಿಯಿಂದೆಟ್ಟಿಂದು ದೂಱಲ್ಕೆಱಗಿದಮಳತಾರಾಳಿಯೋ (ಕುಸುಮಾ. ೦೩-೬೬) ; ದನುಜನೊಯ್ದಾಸತಿಯ ರಾಘವ ಮನದ ಮೋಹದಿ ಕೂಡಿಕೊಂಡನುಯೆನುತ ಲೋಕವು ದೂಱುಗೆಂದಾನಿನಿತು ಕಾಡಿದೆನು (ಕೌಶಿರಾ. ೪೩-೫೨). ೪. ಮೊರೆಹೊಗು ; ತೋಡಿಕೊಂಡು ಸಹಾಯವನ್ನು ಕೋರು : ಎನಗಾದದೊಂದು ಪರಿಭವಮನಾರ್ಗೆ ದೂಱಿದಪೆನಾರ್ಗೆ ಪೇಟ್ದಪೆಂ (ಕಾದಂಬ. ೨೯೮) ; ಕೂರ್ಪವರಿಂ ಪೇಟ್ವುದು ಬುದ್ಧಿಯುನೆಂದು ದೂಱುತಿರ್ಪರ್ ಪೆಂಡಿರ್ (ಸಮುಜ. ೫-೯೮). ೫. ಸುದ್ದಿಮುಟ್ಟಿಸು ; ಹೇಳು ; ನಿವೇದಿಸು ;

ಅರಿಕೆಮಾಡು: ಬಂದನಾ ಗುರು ಮತ್ತೆ ಗಂಗೆಯ ಮಿಂದು ಬಳಿಕಲ್ಲೊಬ್ಬ ಸೂತಜಗೆಂದನೆಲವೋ ನೀನು ಹಸ್ತಿನಪುರಕೆ ದೂಱುವುದು ಇಂದು ಭಾರದ್ವಾಜನನು ತಾನೊಂದು ನೆಗಳ್ದೆ ತಂದು ನುಂಗಿತದೆಂದು (ಕಂಭಕ. ೧೮-೨೩); ಗಂಡಗೆ ದೂಱಬೇಕೆನುತಡಱಿದಳು ಸೋಪಾನಪಂಕ್ತಿಗಳ (ಕೃ. ರ ರಾ. ೩-೮-೨೬). ೬. ಅಪಶಕುನ ನುಡಿ: ದೂಱಿತು ಬಲದ ಭಾಗದೆ ಪಲ್ಲಿ ಮುಂಗಟ್ಟಿ ಪಾಱಿತು ವಾಸುಗಿವಕ್ಕಿ (ಮೋಹತ. ೬-೨೩). ದೂರ್: ೧. ಲಿಂಗ ಚಂದಯ್ಯರೆಲ್ಲ ವಾಚಯ್ಯರಲ್ಲಿ ದೂರ್ದರು ಶರಣು ಶರಣಾರ್ಥಿ (ಮುಡಿಳ. ೦೩). ೨. ಗುರುವಿನೆಡೆಗೈದಿ ನೀಂ ದೂರ್ದುದೇಂ (ವಂಕಾರಾ. ೩-೨೦-೨೧). ದೂರ್ು: ೧. ಅವನನ್ನು ದೂರುವ ಹಾಗಿಲ್ಲ (ಕಾವ್ಯಸ. ೮೦); ನಾನೇನೂ ಅವನನ್ನು ದೂರಲಿಲ್ಲ (ಕಾಳಿಮ. ೧೯೦); ಬಲಾತ್ಕರಿಸಿ ನಿನ್ನನ್ನು ತಂದೆನೆಂದು ದೂರುತ್ತಾರೆ (ಬಾಲಕ್. ೩೦೦). ೨. ಈ ರೋಹಿನಿಂದವಾನಿರ್ದದೆಯು ರಕ್ಕಸರು ದೂರದಿರರಸುರಪತಿ ಕೇಳ್ದರೆ ಕುತೂಹಲಂ ತೋರುತನ್ನಂ ಪಿಡಿವರು (ವಂಕಾರಾ. ೩-೨-೧೦): ಪೊಂದೊಡಿಗೆಯಂ ತೋರಲೆಂದು . . . ಕಾಮಗೆ ದೂರಲೆಂದು ಕಾಮುಕಿಯರ್ಕೈತಂದು ಬೀದಿಯ ನಡುವೆ ನಿಂದು ಬೆರಗಾಗಿರ್ದರು (ಕುರಂಗ. ೬-೨೩). ೪. ಕಾಡ ಕಾಪಿನವರ್ಗೆ ದೂರಿದೊಡೆ ಬಾಳ್ವೆಯೇಂ (ಕಾಲೂರ. ೧೯-೬೨).

ದೂಱಿಕೊಳ್ಳು = ನಿಂದಿಸು; ಅವಹೇಳನ ಮಾಡು; ಬಯ್ಯು: ಕೊಟ್ಟಡೆ ಕೊಂಡಾಡಿ ಕೊಡದಿರ್ದರೆ ದೂಱಿಕೊಂಡು ಹೋಹಾತ ಜಂಗಮವಲ್ಲ (ಅವಹ. ೨೨೩-೦೦೦೧).

[ದೇ.೩ ತಮಿ. ತೂಱು, ತೂಱ್ಱು; ಮಲ. ತೂಱು; ತುಳು. ದೂರು; ತೆಲು. ದೂಱು]

**ದೂಱ್ಱು**, ದೂರ್ು, ದೂಱ್ (ನಾ). ೧. ನಿಂದೆ; ತೆಗಳಿಕೆ; ಟೀಕೆ: ದೂಱಿದು ತಮ್ಮಯ ಚಿತ್ರಕ್ಕೀಱಿದ ದಿವಸದೊಳ್ ಪೆಲ್ಲಕೆಯ್ದಂ (ಆರ್ದನೇ. ೩-೪೪); ಪ್ರಿಯಾನನಮನೀಕ್ಷಿಸಲುದ್ಯತೆಯಾಗಿ ತಾನೆ ಲಜ್ಜಿಸಿ ತಲೆವಾಗಿ ಕಂಡು ಮಣಿಕುಟ್ಟಿಮದೊಳ್ ನೆಱ ನೋಡಿ ಮತ್ತೆ ಮಾನಸದೊಳಗಿಟ್ಟೊಡಂ ನವಸುಖಾನುಭವಕ್ಕರೆಮುಚ್ಚಿ ಕಣ್ಗಳಂ ಪಸರಿಪ ಹೋವ ಧೂಮತತಿಗೆಂದು ಶಶಿಪ್ರಭೆ ದೂಱನೇಱಿಪಳ್ (ಚಂದ್ರಪ್ರ. ೬-೭೭): ಬಸವನ ದೂಱಿಗೋಳಗ ದನೆಯೆಸುತ ತಲೆದೋಱವತ್ತಲೆ ಸರಿವುತಿರೆ (ಬಸಪು. ೯-೩೦): ಅನ್ಯಥಾ ದೂಱು ಪುಟ್ಟಿತು (ಕರ್ಣಾಸು. ೮೨ ವ್ಯಾಖ್ಯಾ). ೨. ಕೆಟ್ಟ ಹೆಸರು; ಅಪವಾದ: "ಗಾರಣಂ–ದೂಱು" (ಕವಿರ. ಶಬ್ದ. ೨); ಅವರನಾ ಪಾಟ್ಟಿಯೊಳೆ ನಡೆಯಲೀಯದ ಪಾಪಿ ಕಿಡಿಸಿದೊಡೆ ನಿನಗೆ ಪಿರಿದಂ ದೂಱಕ್ಕುಂ (ಆದಿಪು. ೦೫-೨೩ ವ); ಕಾಮಾಂಧಂ ಕೀಚಕನಾಟಿಸಿ ಗಂಧರ್ವರಿನಟ್ಟಿದನೆನಗೆ ದೂಱಿಕ್ಕನೆಗಂ (ಪಂಪಭಾ. ೮-೭೯); ವರಪುರುಷಾಕುಳಕೆಯುನನ್ನಯಕ್ಕೆ ದೂಱಂ ತಂದೆಳ್ (ಶಾಂತಿಪು. ೩-೮೩); ಸುರಭಿಪ್ರಾಲೇಯಂತೋಯಂಗಳಂ ಯುಂವಪಾಂಥರ್ಗೆಱೆವಲ್ಲಿ ತವ್ವು ಲಲಿತಾಂಗೋಪಾಂಗಶೃಂಗಾರಗೌರವಮಂ ಬೀಱುವರೆಂಬ ದೂಱನೆಸಗುತ್ತಿರ್ಪರ್ ಪ್ರಪಾಕಾಂತೆಯರ್. (ಪುಷ್ಪಪು. ೨-೨೨); ದೂಱು ಮೞವೊಳ್ನುಡಿ ವಂಚನೆಯೆಂಬುವಾಯುಮಂ ಪಾಱಿಸಿ ಧರ್ಮಮಂ ನಿಱಿಸಿ ಪಾಲಿಸವೇಟ್ಪುದು ದೇಶಮಂ ನೃಪಂ (ಸೂಕ್ತಿಸು. ೦೬-೮): ತನ್ನಿಂದ ತೋಱಿತು ದೂಱು ದುರ್ಘಯ ಸುದಿಸದಲೇ ತಾಯನೆನುತಳವಳಿದನಾ ಹನುಮ (ತೊರರಾ. ೩-೮-೮೭). ೩. ಮೊರೆ; ಇತರರಲ್ಲಿ ತೋಡಿಕೊಳ್ಳುವಿಕೆ; ಅಹವಾಲು; ರಕ್ಷಣೆಗಾಗಿ ಮಾಡಿಕೊಳ್ಳುವ ಬೇಡಿಕೆ: ದೇವರಿಗೆ ದೂಱ್ಱಿದಲಂ ದೊಱಲಿದಳು ಲಲಿತಾಂಗಿ (ಕುವ್ಯಾಸ. ೦೫-೨೮); ಆಖಿಳ ಸುರಾಳಿಗಳ ದೂಱಿನಲಿ ಲಕ್ಷ್ಮೀಲಲೆ ಇಲ ನಿನ್ನುದರದಲಿ ಜನಿಸುವನು (ತೊರರಾ. ೦-೩-೭). ೪. ಸುದ್ದಿ; ಸಮಾಚಾರ; ವರದಿ. 'ದೂಱಂಗಾಱ' ಪರಾ. ೫. ಸ್ವರೂಪ; ಅಪ್ಪಣೆ; ಸೂಚನೆ: ಬೇಱ ಬೇಱವನೀಶಂಗೆ ಪಡಿಹಾಱವನಂ ಕಳುಹಿದನು ಕೃಷ್ಣನ ದೂಱು ಬರಲಳವಡಿಸಿದರು ಸಂಗ್ರಾಮಸಾಧನವ (ಕುವ್ಯಾಉ. ೦೧-೧೦). ೬. ಚಿಂತೆ; ವ್ಯಸನ; ಕಾಳಜಿ: ಬೇಱ ಮಾತವೇ ನಮಗೆ ಲೋಕದ ದೂಱು ನಿಮ್ಮದು [ಪಾಠಾಂ. ಬೇಱ ಮಾತವಮಗೇನು ಬೊಪ್ಪನ ಚಾರಿ ನಿಮ್ಮದು] ನೀವು ಬೊಪ್ಪನ ನೂಱುಮಡಿಯುಮಗೊಳ್ಳಿದರು ಬೇಱನ್ನು ಹಿತರುಂಟೆ (ಕುವ್ಯಾಳ. ೮-೭೩); ಬಱದೆ ಕಾತದಿರೆಳು ಮನದಲಿ ಮಱಿದವಾಗಳೆ ಕೌರವನು ಮುಂದಱಿಯದವಗಡಿಸಿದನು ಹೋಗಲಿ ನಿಮ್ಮ ದೂಱೇಕೆ (ಕುವ್ಯಾಉ. ೧೦-೮). ೭. ವೇದನೆ; ಬಾಧೆ: ಆಡಾಗಿ ಸಾಯರೆ ದೂಱಿಂಗೆಡೆಯಾಗಿ ಬೇಯರೆ ಪರಸ್ತ್ರೀಗಾಸೆಗೆಯ್ದುರ್ವರ್ (ಧರ್ಮಾಮೃ. ೦೩-೦೩೨); ಮೊದಲೆನ್ನ ಹಸಿವಿನ ದೂಱ ನೀ ದಿಟ ನಿಲಿಸಬಲ್ಲೊಡೆ ಮಾಱುಮಾತುಗಳೇನು ಕಾರಣ (ಪ್ರಭುಲೀ. ೨೩-೦೨). ದೂರ್ು: ೩. ಪುರಂದರನ ಸಮೀಪವನ್ನೈದಿ ದೂರುಗಳ ಪೇಳಿಕೊಳಲೋಸುಗ ಅಮರಾವತೀಪುರಲಕ್ಷ್ಮಿಯೆ ಬರುವಳೊ ಎಂಬಂತೆ (ಸೌಗಂಧಿ. ೪೮೦-೨೦); ಕಷ್ಟದಲ್ಲಿರುವವರ ದೂರನ್ನು ನ್ಯಾಯವಾಗಿ ವಕಾಲತ್ತು ವಹಿಸಿ ನ್ಯಾಯಾಲಯದಲ್ಲಿ ವಾದಿಸುವ ನ್ಯಾಯವಾದಿಗಳಿಗೇ ವಕೀಲರು ಎಂದು ಹೆಸರು (ಪ್ರಶಾಶ. ೯೨); ವಿವಾದದಲ್ಲಿ ಅಥವಾ ದೂರಿನಲ್ಲಿ ನ್ಯಾಯನಿರ್ಣಯ ಮಾಡುವುದಕ್ಕೆ . . . ಅವಕಾಶವನ್ನು ಕಲ್ಪಿಸಬಹುದು (ಭಾಧಾನ. ೧೯೮); ದೂರು ನನ್ನ ಹತ್ತಿರವೂ ಬಂತು (ದೂಪಸಂ. ೦೩); ದೊರೆಯ ತನಕ ದೂರು, ಹೊಳೆಯ ತನಕ ಓಟ (ಗಾದೆ). ೮. ಚಾಡಿ: ಇತರರ ಮೇಲೆ ದೂರನ್ನು ಹೇಳುವುದೇ ಅವನ ಸ್ವಭಾವ (ರೂಢಿ). ದೂಱ್: ೨. ದನುಜಾರಾತಿ ಸ್ವಮಂತರತ್ನವ ನೃಪಂಗೀಯಲ್ಕೆ ದೂಱ್ ಪೋದುದೇ (ಸೋಮೇಶ. ೮೩). ೯. (?): ಪೊಡವಿಪತಿ ಗೊರವನೆನೆ ಬೇಟ್ಟಡೆಯದುವದಕರಿಸಿ ಕಬ್ಬಿಗರ್ದೂಱನೆಯುಂ ಹಡುವಸುಮಱಿಸಿಟ್ಟಸುಗಮ್ಮುಡಿಯೊಳಮಾರ್ಗೆಂದು ನುಡಿವ ಪಟಗನ್ನಡವುಂ (ಕವಿರಾ. ೦-೪೯).

ದೂರು ಹೇಳಿಕೊಳ್ಳು = ಮೊರೆಯಿಡು: ಬಿನ್ನವಿಸಿಕೊಳ್ಳು: ಪಲ್ಲವ್ವನು ಆ ಊರ ದೊರೆಯ ಬಳಿಗೆ ಹೋಗಿ ದೂರು ಹೇಳಿಕೊಂಡಳು (ನೀತಿಚಿಂ. IX, ೩೦). ದೂರು ಹೇಳು=೧. (ತನಗಾದ ತೊಂದರೆಯನ್ನು ಕುರಿತು) ಬಿನ್ನವಿಸು; ಮೊರೆಯಿಡು: ಮೃಗಗಳ ಬಾಧೆಗೆ ಸೈರಿಸಲಾರದೆ ಬಂದು ಧೂರೆಯಾದ ಸುಚರಿತ್ರರಾಮನಿಗೆ ದೂರು ಹೇಳಲಾಗಿ (ಸೌಗಂಧಿ. ೨೪-೪). ೨. ಚಾಡಿ ಹೇಳು: ಅಪಾದನೆಮಾಡು: ತಂಬಟೆ ಹೋಗಿ ಭೇರಿಗೆ ದೂರು ಹೇಳಿದ ಹಾಗೆ (ಗಾದೆ). ದೂರು ಹೊರಿಸು = ನಿಷ್ಕಾರಣವಾಗಿ ಆರೋಪಿಸು: ನನ್ನ ತಂಗಿಯ ಮೇಲೆ ದೂರು ಹೊರಿಸುವುದು ನನ್ನ ವೃತ್ತಿಯೆ? (ವಾತ್ಸಲ್ಯ. ೦೦೮). ದೂಱು ತರು, ದೂರು ತರು = ೧. ಅಪವಾದ ಬರುವಂತೆ ಮಾಡು; ಕೆಟ್ಟ ಹೆಸರು ತರು: ಹೆತ್ತಮನೆಗೆ ದೂರುತರ ಬೇಡವೆಂದು ಹೆಣ್ಣುಮಕ್ಕಳಿಗೆ ಬುದ್ಧಿವಾದ ಹೇಳುವುದು ಸಂಪ್ರದಾಯ (ರೂಢಿ). ೨. ಚಾಡಿ ಹೇಳು: ಕುಂದು ನಿಂದೆ ಬಂದರೆ ದೂಱು ತಂದು ಕೊಡುವರು ಲಕ್ಷ್ಮೀರಮಣ (ಪುರಂದ. ೪-೯-೨). ದೂಱು ಮಾಡು, ದೂರು ಮಾಡು = ಅಪವಾದವನ್ನು ಹೊರಿಸು; ಆರೋಪಣೆ ಮಾಡು: ದೂಱುಮಾಡುವರೇನೆ ರಂಗಯ್ಯನ ದೂಱುಮಾಡುವರೇನೆ (ಪುರಂದ. ೦-೯೪ ಪಲ್ಲವಿ); ಬ್ರಹ್ಮಾನಂದನೂ ಆವಳು ರೋಹಿಣಿಯನ್ನು ಊರು ತುಂಬ ದೂರುಮಾಡಿರುವುದಾಗಿ ಬರೆದನು (ಬಂಕಿಮ. ೭೦). ದೂಱು ಮುಟ್ಟು = ಅಪವಾದ ಬರು; ಆರೋಪಕ್ಕೆ ಗುರಿಯಾಗು: ಮೊಱೆಯಿಟ್ಟ ಕಾಯದಿರೆ ದೂಱು ಮುಟ್ಟುವುದು ಶ್ರೀ ಲಕ್ಷ್ಮೀರಮಣ (ಪುರಂದ. ೪-೯-೦). ದೂಱು ಹೊಱು, ದೂರು ಹೊರು = ೧. ನಿಂದೆ ಬರು; ತೆಗಳಿಕೆ ಅಂಟಿಕೊಳ್ಳು: ಕೆಡದು ದನುಜರು ಕೇಣವಿಲ್ಲದೆ ತೊಡಗಿದಾಹವದೊಳಗೆ ಕೊಂದವ ಕೊಡನ ಮಗನೋ ದೂಱು

ಹೊತ್ತುದು ಬಱದೆ ಹಗೆಗಳಿಗೆ (ಶುವ್ಯಾದಶ್ರೀ. ೧೩-೩೩). ೨. ಅಪವಾದಕ್ಕೆ ಈಡಾಗು; ಆರೋಪಕ್ಕೆ ಪಕ್ಕಾಗು: ದೂರು ಹೊರೋಕಿಂತ ಮಾರಿ ಹೊರೋದು ಕ್ಷೇಮ (ಗಾದೆ).

[ <ದೂಱು.,/ತಮಿ. ತೂಱು ; ಮಲ. ತುಳು. ದೂರು ;
ಕೊಡ. ದೂರೀ ; ತೆಲು. ದೂಱು ]

**ದೂಱುಕಾಱ** 'ದೂಱ ಗಾಱ' ನೋ.

**ದೂಱುಗ,** ದೂರುಗ (ನಾ). ೧. ವರ್ತಮಾನ ಒಯ್ಯುವವನು ; ವರದಿ ಒಪ್ಪಿಸುವವನು ; ದೂತ ; ಸೇವಕ : ಪರಾತ್ಪರವಸ್ತು ನಸುನಗುತ ತೋಱಿದನು ಬಳಿಕುಮೆಗೆ ರಾಮನ ದೂಱುಗರ ನೋಡಿವರನೆನೆ ಹೊರೆಯೇಱ ಹೊಂಪುಳಿಯೋದಳುಮೆ ಮಹಿಮೆಗೆ ಮಧುದ್ವಿಷನ (ತೊರರಾ. ೪-೯-೩೩). **ದೂರುಗ :** ೨. ಅಪವಾದ ಹೊರಿಸುವವನು ; ಆರೋಪ ಮಾಡುವವನು : ಅದು ಇಲ್ಲದಿದ್ದರೆ ವ್ಯಕ್ತಿಯಲ್ಲಿ ಉಡಾಳತನ ಬೇರೂರಿದೆ ಎಂದು ದೂರುಗರಿಗೆ ಅವಕಾಶ ಸಿಕ್ಕಂತಾಗುವುದು (ಗೋಯೂತ್ರ. ೩೩).

[ ದೂಱು₂ + – ಗ₂ ]

**ದೂಱುಗಣ್** (ನಾ). ದೈನ್ಯವನ್ನು ಸೂಚಿಸುವ ಕಣ್ಣು ; ಮೊರೆಯಿಡುವ ಕಣ್ಣು : ಜಾಱದುಬ್ಬಿನ ಹೊತ್ತ ದುಗುಡದ ಮೋಱಗಳ ಮೋನದ ನಿಹಾರದ ದೂಱುಗಂಗಳ ದೇವನಿಕರವ ಕಂಡು ಕರುಣದಲಿ . . . ಶಿವ ತೋಱ ನುಡಿದನು ಪಾಶುಪತ್ಯದ ಸಾರಸಂಗತಿಯ (ಕುವ್ಯಾಕ. ೬-೨೫).

[ ದೂಱು₂ + ಕಣ್ ]

**ದೂಱುಗಾಱ,** ದೂಱುಕಾಱ (ನಾ). ೧. ಸಮಾಚಾರವನ್ನು ತಿಳಿಸುವವನು ; ದೂತ : ಜವನ ದೂಱು[ಪಾಠಾಂ. ದೂದು]ಗಾಱರ ಜಂಗುಳಿ ...ಕೊಡಲಿಯ ಕೂರ್ವಾಳ ಪರುಟವಣೆಯ ಸಡಗರದ ದಟವುಟದಿಂ ಬಂದು ಮುತ್ತಿ ಮುತ್ತಿ ಅಱಗುಲಿ ಜೀವಾತ್ಮನಂ ಸೆಱವಿಡಿದತ್ತು (ರಾಮಾಶ್ವ. ೬೯-೨೦). **ದೂಱುಕಾಱ:** ೨. ಮೊರೆಯಿಡುವವನು : ನಗರ ಮೂಱಱ ದೂಱುಕಾಱರ ದುಗುಡವನು ಪರಿಹರಿಸಿ ಕರುಣಾಳುಗಳರಸ ಶಿವ ಸಂತವಿಟ್ಟನು ಸುರಕದಂಬಕವ (ಕುವ್ಯಾಕ. ೮ ಸೂಚನೆ) ; ಕೇಳಿದನು ಕಡು ದೂಱುಕಾಱರ ನಾಲಿಗೆಯ ರಚಿತೋಕ್ತಿಯನು ಕರುಣಾಳುಗಳ ಬಲ್ಲಹನು ನಿದ್ರಾಯೋಗಮುದ್ರೆಯಲಿ (ತೊರರಾ. ೦-೮-೫೪).

[ ದೂಱು₂ + – ಕಾಱ ]

**ದೂಱುಗೇಳ್** (ಕ್ರಿ). ನಿಂದೆಯನ್ನು ಕೇಳು ; ನಿಂದೆಗೆ ಕಿವಿಗೊಡು : ದೂಸಕರ ದೂಱುಗೇಳ್ದುಂ ಕೊಲ್ಗುಂ ಪೇಸುವನಲ್ಲಂ ಸಮುದ್ರವಿಜಯಂ (ಅರ್ಥನೇ. ೫-೦೪). [ ದೂಱು₂ + ಕೇಳ್ ]

**ದೃಕ್ಕು** (ನಾ). ೧. ಕಣ್ಣು ; ನೇತ್ರ : "ದೃಕ್ಕೆಂಬುದಂ ಕಣ್ಣೆನಲ್ಕಕ್ಕು" (ಶಬ್ದಕ. ೬೩) ; ವಿಭವಕ್ಕೆ ಬಾಹ್ಯದಲ್ಲಿ ಮುಟ್ಟಿ ನೋಡಿಹೆನೆಂದಡೆ ಚಿತ್ತಶುದ್ಧನಲ್ಲದ ಕಾರಣ ದೃಕ್ಕಿಂಗೆ ತೋಱ ಸರ್ವಾಂಗದಲ್ಲಿ ಲಕ್ಷ್ಯವಾಗದೆಂಬುದಕ್ಕೆ ಸೂಚನೆ (ಮೋಳಿಪಾ. ೯೮-೩೭೬) ; ಲಿಂಗದೃಷ್ಟಿ ಪರಿಪೂರ್ಣವಾದಲ್ಲಿ ದೃಕ್ಕಿಂಗೆ ತೋಱುವುದೆಲ್ಲವೂ ಲಿಂಗಮಯವಾಗಿ (ಮಾದೇವ. ೨೮೬-೬೭) : ಭಾವದ ದೃಕ್ಕಿನಿಂದ ನವಲಿಂಗಂಗಳ ನೋಡಿ ಪೂಜಿಸಿ (ಅಖಂಡೇ. ೨೩೧-೮೩). ೨. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ. [ ಸಂ. ದೃಶ್ ]

**ದೃಕ್ಕುಬೊಂಬೆ** (ನಾ). ಕಣ್ಣಿನ ಪಾಪೆ ; ಕಣ್ಣುಗೊಂಬೆ : ಇಂತೀ ಉಭಯ ಬಿನ್ನವಾದಲ್ಲಿ ಎನ್ನ ಮಱವೆಯೇ ನಿನ್ನ ಕೇಡು ನಿನ್ನ ಮಲ ಎನ್ನ ಕೇಡು ಅದು ದೃಕ್ಕುಬೊಂಬೆಯಂತೆ ನಿಶ್ಚಯವಾದಲ್ಲಿ ನೀನೇ ನಿಃಕಳಂಕ ಮಲ್ಲಿಕಾರ್ಜುನಾ (ಮೋಳಿಮಾ. ೩೬-೦೪೯). [ ದೃಕ್ಕು + ಬೊಂಬೆ ]

**ದೃಕ್ಕುಸ್ಥಿತಿ** (ನಾ). [ಯೋಗ] ರಾಜಯೋಗದ ಹದಿನೈದು ಬಗೆಯ ಯೋಗಾಂಗಗಳಾದ ಯಮ, ನಿಯಮ, ತ್ಯಾಗ, ಮೌನ, ದೇಶ, ಕಾಲ, ಆಸನ, ಮೂಲಾಬಂಧ, ದೇಹಸಾಮ್ಯ. ದೃಕ್ಕುಸ್ಥಿತಿ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣೆ, ಧ್ಯಾನ ಮತ್ತು ಸಮಾಧಿ ಎಂಬವುಗಳಲ್ಲಿ ಹತ್ತನೆಯದು : ದೃಕ್ಕು ದೃಶ್ಯವು ನಶ್ಯ ಮೂಱನು ದೃಷ್ಟಿಸಿಯೆ ನೋಡ್ಪಾವವಸ್ತುವು ದೃಷ್ಟದಿಂ ಅದು ತಾನೆಯೆಂದೇ ಅದುವೆ ತಾನಾಗಿ ದೃಷ್ಟಿಸಿಯೆ ತಾ ನೋಡುತಿಹುದೇ ಶಿಷ್ಟ ದೃಕ್ಕುಸ್ಥಿತಿಯಿದೆಂದು ಯಥೇಷ್ಟದಿಂ ಯೋಗಿಗಳಂ ಹೊಗಳ್ವರು ದೃಕ್ಕುಸ್ಥಿತಿಯೆಂದು (ಜ್ಞಾನಸಿಂ. ೦೬-೨೮). [ ದೃಕ್ಕು + ಸ್ಥಿತಿ ]

**ದೃಕ್ಕೋಣ** (ನಾ). ನೋಡುವ ರೀತಿ ; ದೃಷ್ಟಿಕೋನ : ಕೇವಲ ಕರ್ಮಾತಭಾವದಿಂದ, ಪಾಪ ಪುಣ್ಯಗಳ ದೃಕ್ಕೋಣದಿಂದ ನೋಡಿದರೂ ಅರ್ಜುನನು ಯಾರಿಗಾಗಿ ಎಂದರೆ ಯಾವ ಶತ್ರುಗಳಿಗಾಗಿ ಅಳಬಾರದೋ ಅಂಥವರಿಗಾಗಿ ಅಳುತ್ತಿದ್ದಾನೆ (ಭಾರದ. ೧೦೩). [ ಸಂ.

**ದೃಕ್ಕ್ರಿಯಾತ್ಮಕ** (ನಾ). [ ಯೋಗ ] ದರ್ಶನ ಮತ್ತು ಕರ್ಮ ಇವೆರಡನ್ನೂ ಕೂಡಿಕೊಂಡಿರುವುದು ಜ್ಞಾನಯೋಗಿಯಾದವನು ಕರ್ಮಯೋಗಿಯೂ ಆಗಬೇಕು ; ಏಕೆಂಬರೆ ಯೋಗ ದೃಕ್ಕ್ರಿಯಾತ್ಮಕವಾದದ್ದು (ಭಾರದ. ೦೦೫). [ ಸಂ. ]

**ದೃಕ್ಛ್ರುತಿ** (ನಾ). ಕಣ್ಣೇ ಕಿವಿಯಾಗಿರುವ ಪ್ರಾಣಿ; ಹಾವು ; ಸರ್ಪ : "ವಿಷಧರಃ, ದಂದಶೂಕಃ . . . ದೃಕ್ಛ್ರುತಿಃ, ಭುಜಂಗಮಃ – ಈ ೨೫ ಪಾವಿನ ಪೆಸರ್" (ಹಲಾಯು. ೦೦೫-೧೮). [ ಸಂ. ]

**ದೃಕ್ಪಥ** (ನಾ). = ದೃಗುಪಥ : ಭರತಗೆ ರಾಜ್ಯಸಿರಿಯನಿತ್ತಾದೊಡಂ ತಪ್ಪದಿಂದೆನ್ನ ದೃಕ್ಪಥವನಗಲದೆ ಸುಖದೊಳಿಪ್ಪುದುಚಿತವು (ವಂಕಾರಾ. ೨-೯-೩೨). [ ಸಂ. ]

**ದೃಕ್ಪರಿಧಿ** (ನಾ). ನೋಟದ ಮೇರೆ ; ದೃಷ್ಟಿಯ ಎಲ್ಲೆ : ಎತ್ತಣನೊ ದೃಕ್ಪರಿಧಿಯಾಚೆಯಿಂದಲನಂತಸತ್ತ್ವ ತರೆತರೆಯಾಗಿ ಬೀಸಿ ಗೂಢದಲಿ ಚಿತ್ರಿಸುತಿಹುದು ಹೊಸಹೊಸತನವನೆಡೆಬಿಡದೆ (ಮಂಕುಳ. ೯೩). [ಸಂ.]

**ದೃಕ್ಪ್ರಭೆ** (ನಾ). ಕಣ್ಣಿನ ಕಾಂತಿ,-ಪ್ರಕಾಶ; ನೇತ್ರದ ಹೊಳಪು : ದಿಕ್ಚಕ್ರಮನಚ್ಚಜೊನ್ನಮೆಳಸಿತ್ತೆಂಬನ್ನೆಗಂ ತುಂಬೆ ದೃಕ್ಪ್ರಭೆ . . . ಬಂದಳ್ ಕುಡುತುಂ ಶಶಿಪ್ರಭೆ ಜನಾಕ್ಷೀಂದೀವರಾನಂದವಂ (ಚಂದ್ರಪ್ರ. ೬-೬೯).

[ ಸಂ. ದೃಕ್ಪ್ರಭಾ ]

**ದೃಕ್ಸಹಸ್ರ** (ನಾ). ಸಾವಿರ ಕಣ್ಣುಗಳು : ದೇವಗಣಿಕಾತತಿಯಾತನ ಗೀತಮಂ ನಿಜಾನಂದದೆ ಪಾಡೆ ಕೇಳಲೆರಡುಂ ಕಿವಿಯಿಲ್ಲದೆ ತನ್ನ ದೃಕ್ಸಹಸ್ರಂ ದಿಟದಿಂದೆ ಕರ್ಣಾಚಯಮಾಗದೆ ನಿಷ್ಫಲಮಾದುದೆಂದು ಸಂಕ್ರಂದನನೆಯ್ದೆ ಕಣ್ಗೆ ಕಿಸುಗಣ್ಮುವನಾತ್ಮಸಭಾಂತರಾಳದೊಳ್ (ಚಂದ್ರಪ್ರ. ೦೦-೯೭).

[ ಸಂ. ]

**ದೃಕ್ಸಿದ್ಧಾಂತ** (ನಾ). [ಜ್ಯೋತಿ] (ಆಧುನಿಕ ಯಂತ್ರ ಸಹಾಯದಿಂದ) ಗ್ರಹಗಳ ಸ್ಥಿತಿಯನ್ನು ಪ್ರತ್ಯಕ್ಷವಾಗಿ ಕಂಡುಕೊಂಡು ನಿರ್ಣಯಿಸುವ ಖಗೋಳ ವಿಜ್ಞಾನ; ಜ್ಯೋತಿರ್ವಿಜ್ಞಾನ. 'ದೃಗ್ಗಣಿತ' ಪರ್ಯಾ [ ಸಂ. ]

**ದೃಕ್ಸೌಮ್ಯ** (ಗು). ಕಣ್ಣಿಗೆ ಹಿತವನ್ನುಂಟುಮಾಡುವ ; ನೇತ್ರಾನಂದಕರವಾದ : ಪ್ರಕ್ಷುಭಗೋರಸ್ಸ್ಥಳನಂ ದೃಕ್ಸೌಮ್ಯಶರೀರನಂ ಸವೇಣುಸ್ವನನಂ ವಾಕ್ಸಾರನನಾ ಬಳವಿಷ್ವಕ್ಸೇನರ್ ಗೋಪಬಂಧುಗೆತ್ತರ್ ಖಳನಂ (ಜಗವಿ. ೪-೫೦). [ ಸಂ. ]

**ದೃಗಂತ** (ನಾ). ಕಣ್ಣಿನ ಕೊನೆ ; ಅಪಾಂಗ ; ಕಟಾಕ್ಷ : ತನ್ನ ದೃಗಂತದಿಂದೀಕ್ಷಿಸುತ ಪ್ರಿಯ ಪೋಗೆ ಬಂದುದೀ ಬೇಗೆ (ಶಾಕುಂತ. ೦೮ ಅವಿಪದ್ಯ).

[ ಸಂ. ]

**ದೃಗಂತರ** (ನಾ). ಕಣ್ಣಿನ ಒಳಗು,-ಒಳಭಾಗ : ಚರಣಾಲಕ್ತಕಲಾಂಛನಂ ನಿಟಿಲದೊಳ್ . . . ತಾಂಬೂಲರಾಗಂ ದೃಗಂತರದೊಳ್ ಪುಷ್ಪರಜಃ ಪ್ರಲೇಪಮುರದೊಳ್ ತಳ್ತೊಯ್ಯೆ (ಕಾವ್ಯಸಾ. ೬೫೫). [ ಸಂ. ]

**ದೃಗಂಬು** (ನಾ). ಕಣ್ಣೀರು ; ಕಂಬನಿ ; ಅಶ್ರು : ಮೃಗನಯನೆಯ ಮನದ ಖೇದಮಂ ಪಚ್ಚುಗೊಳಲ್ ಬಗೆದಂತಾಕುಳಚಿತ್ತಂ ದೃಗಂಬುವಂ ತೊಡೆದು ಮೆಲ್ಲನಂದಿಂತೆಂದಂ (ಚಂದ್ರಪು. ೩-೫೩). [ ಸಂ. ]

**ದೃಗು** (ನಾ). ೧. = ದೃಕ್ಕು ೧ : ಮೊಗಸದಾದವು ನೋಡಲಮರರ ದೃಗುಗಳಸುರರ ಸುಪ್ರತಾಪದ ಸೆಗಳಿಕೆಯ ಶಿಖಿಯುಬ್ಬರದ ಸಂತಾಪಲಹರಿಯಲಿ (ತೊರರಾ. ೬-೨೦-೫೨). ೨. = ದೃಕ್ಕು ೨ : ನಯನ . . . ದೃಗು ಯಮಳ ಲೋಚನ ದಂಪತಿ ಇಂತಿನಿತುಂ ೨ಕ್ಕೆ ಹೆಸರು (ಸೃಜಹಾ. ೧೦-೦೩). [ <ಸಂ. ದೃಶ್ ]

**ದೃಗುಜಲ** (ನಾ). = ದೃಗಂಬು : ಅಂದು ಭಂಗಿಸುವಲ್ಲಿ ದೃಗುಜಲಬಿಂದು ವೊಂದುಂ ಹೊಱವಡದು . . . ಇಂದದೇನು ನಿಮಿತ್ತಂ ಸಲಿಲಂ ನಿನ್ನ ನಯನದಲಿ (ಲಸಪು. ೧೮-೫೩) : ಕೊರಳ ಸೆರೆ ಹಿಗ್ಗಿದವು ದೃಗುಜಲ ಉರವಣಿಸಿ ಕಡುನೊಂದನಕಟಾ ಕುರುಪತಿಗೆ ಕೇಡಾದುದೆಂದನು ತನ್ನ ಮನದೊಳಗೆ (ಕುವ್ಯಾ.ಉ. ೧೦-೧೧) : ಮಗನ ಮರಣದಲೆಂತು ಜೀವವ ಬಗೆವಳಕಟ ಸುಭದ್ರೆಯೆನುತವೆ ದೃಗುಜಲವ ಬೆರಳಿಂದ ಮಿಡಿದರು ಗೌರಿದೇವಿಯರು (ಕುವ್ಯಾ.ದ್ರೋ. ೬-೯೪) ; ದೃಗುಜಲಗಳೊಱತೆಗಳ ತೋಳಪ್ಪುಗೆಯ ಮಿಗೆ ತೋತ್ಸವದ ಸಮರದ ನಗಮಹೀರುಹ ಮುಕ್ತಹಸ್ತರ ನೋಡುತ್ತೈ ತರಲು (ತೊರರಾ. ೬-೪೧-೪೩). [ ದೃಗು + ಜಲ$_2$ ]

**ದೃಗುದೀಧಿತಿ** (ನಾ). ಕಣ್ಣಿನ ಕಾಂತಿ : ಶತದಳಾಯತಲೋಲ ದೃಗುದೀಧಿತಿಗಳಲ್ಲಿಯೆ ಸಿಕ್ಕಿ ಕಾಲಿಡಲಱಿಯದೋರಂತೆ ರತಿಪನೆಸುವ ನಿಶಾತಮಾರ್ಗಣಹತಿಗೆ ಗುಱಿಯಾದೆನು (ಲಸಪು. ೪೦-೬). [ ದೃಗು + ದೀಧಿತಿ ]

**ದೃಗುಪಥ** (ನಾ). ದೃಷ್ಟಿಯ ಹರಹು ; ಕಣ್ಣಳತೆ ; ನೋಟ : ನೆಗಹಿ ಬೀಸುವ ಚೌರಿಗಳ ಸನ್ನೆಗೆ ಚತುರ್ಬಲವೆಲ್ಲ ದ್ರೋಣನ ದೃಗುಪಥಕೆ ತೋಱಿದರು ತಂತಮ್ಮಾಳು ಕುದುರೆಗಳ (ಕುವ್ಯಾ.ದ್ರೋ. ೯-೦೬). [ ದೃಗು + ಪಥ ]

**ದೃಗುಮಧ್ಯ** (ನಾ). ಕಣ್ಣಿನ ಗುಡ್ಡೆ ; ಕಣ್ಣಾಲಿ : ನಗ ಮರುತಂ ಋಕ್ಷ ಮುಕ್ತಾಫಲಂಗಳ್ ದೃಗುಮಧ್ಯಂ . . . ಶುಭ್ರಾದಿಗಳ್ ತಾರಶಬ್ದಂ (ನಾನಾರ. ೪೦). [ ದೃಗು + ಮಧ್ಯ ]

**ದೃಗುಯುಗ** (ನಾ). ಎರಡು ಕಣ್ಣುಗಳ್ : ಬಿಚ್ಚಿದ ಕೇಶಪಾಶದ ಮುಗಿದ ಸರಸಿಜದಂತೆ ದೃಗುಯುಗದೊರತೆ ಕಂಬನಿಯ ಒಗುವಪಾಂಗದ . . . ಬಿಗಿದ ದಾಳಿಂಬವನು ಹೋಲುವ ಬಾಯ ಬಿಡುತಿರಲು (ಕಾಶಿರಾ. ೧೦-೫೪) ; ನಗೆಮೊಗದ ಮಿಂಚುಗಳ ದೃಗುಯುಗದ ಕಾಂತಿಗಳ . . . ಮಿಗಡೆಯನೆರೆದು ಕಾಳಿಗಳ ಮುಂಕೊಳುತಿರ್ದರು (ಕ್ರಿಮಿಥಾ. ೦೬-೪). [ ದೃಗು + ಯುಗ ]

**ದೃಗುಯುಗಳ** (ನಾ). = ದೃಗುಯುಗ : ದೃಗುಯುಗಳ ಜಲಬಿಂದುಗಳಿಗಾ ಜಲಬಿಂದು ಸೂರಿವಂತೆ ಒಗುವ ಖಂಡಿತಹಾರ ಮುಕ್ತಾಳಿಗಳು ಮೆಱೆದವು (ಕುವ್ಯಾ.ಸ. ೦೪-೬೦) ; ಯುಗದ ಪರಿಯವಸಾನದುದಯದಲಗಧರನು ಲೀಲೆಯಲಿ ಮನುವಿನ ದೃಗುಯುಗಳ ಗೋಚರಕೆ ಸುಳಿದನು ಮತ್ಸ್ಯರೂಪದಲಿ (ನಿಭಾಗ. ೨-೩-೨) : ಬಿಗಿದ ಪದ್ಮಾಸನ ನಾಸಿಕಾಗ್ರದ ದೃಗುಯುಗಳ ಸಂಚಲಿಸದ ಚಿತ್ರ ಬಗೆದೋಱುತಿಹ ರಾಮನಾಮವ ಜಾನಿಪ ಜಗದೆಱೆಯನ ಕಾವ ಕಂಡ (ಮೋಹತ. ೬-೩೪). [ ದೃಗು + ಯುಗಳ ( = ಯುಗಲ) ]

**ದೃಗುವಿಹೀನ** (ನಾ). ಕಣ್ಣುಗಳಿಲ್ಲದವನು ; ಕುರುಡ : ದೃಗುವಿಹೀನರ ಬಾಳಿಕೆಯ ಸುಡಲೆನುತ ತನ್ನೊಳು ಹಿರಿದು ಚಿಂತಿಸಿದ (ಕುವ್ಯಾ.ಭೀ. ೧-೫೪) ; ದೃಗುವಿಹೀನನು ಕತ್ತಲೆಯ ಮೊಗೆಮೊಗೆದು ಕಡೆಗಾಣದವೊಲರಿಸಂಯುಗಕೆ ಸರಣೆಯ ಕಾಣದುಸುರಿಡುತಿರ್ದನಸುರೇಂದ್ರ (ತೊರರಾ. ೬-೪೦-೩). [ ದೃಗು + ವಿಹೀನ ]

**ದೃಗುಶಿಖಿ** (ನಾ). ಕಣ್ಣಿನ ಬೆಂಕಿ ; ನೇತ್ರಾಗ್ನಿ : ದೃಗುಶಿಖಿ ಕಿಡಿಗಳೊಗೆ ಭುಗಿಭುಗಿಲು ಛಿಟಿಛಿಟಿಲೆನುತ ಮಿಗೆ ನೆಗೆಯೆ (ಲಸಪು. ೦೬-೧೯) ; ಸಗರಸುತ ಚರಿತವನು ಕಪಿಲನ ದೃಗುಶಿಖಿಯುಲುರಿದುದನು ಬಳಿಕವರಿಗೆ ಭಗೀರಥ ನಿಳುಹಿದಮರನದೀಕಥಾಂತರವ . . . ಮುನಿಪ ವರ್ಣಿಸಿದ (ಕುವ್ಯಾ.ಆ. ೯-೦೩). [ ದೃಗು + ಶಿಖಿ ]

**ದೃಗುಸನ್ನೆ** (ನಾ). ಕಣ್ಣಿನಿಂದ ಮಾಡುವ ಸೂಚನೆ,-ಸಂಕೇತ; ಕಣ್ಣುಸನ್ನೆ: ಇಂಚರದಮರಿಯರೊಡನಾಡುವ ನೇತ್ರಲಾಂಛನಗುಱಿ ಮೇಘವೆಣ್ಣು ಸಂಚಲದೃಗುಸನ್ನೆಯ ಮಾಡಿದಾದದಿ ಮಿಂಚಡರಿತು ನಭಸ್ಥಲದಿ (ಮೋಹತ. ೪-೩೩). [ ದೃಗು + ಸನ್ನೆ$_2$ ]

**ದೃಗ್ಗಣಿತ** (ನಾ). [ಜ್ಯೋತಿ] ಗ್ರಹ, ನಕ್ಷತ್ರ ಮುಂತಾದುವುಗಳನ್ನು ಪ್ರತ್ಯಕ್ಷವಾಗಿ ಪರಿಶೀಲಿಸಿ ತಯಾರಿಸಿದ ಲೆಕ್ಕ ; ಜ್ಯೋತಿರ್ಗಣಿತ. ‘ದೃಕ್ಸಿದ್ಧಾಂತ’ ಪರಾ. [ ಸಂ. ]

**ದೃಗ್ಗೋಚರ** (ನಾ). ಕಣ್ಣಿಗೆ ಕಾಣಿಸುವಂಥವಂ; ದೃಷ್ಟಿಗೆ ಗೋಚರವಾಗುವಂಥದು : ಕಣಾದನ ವೈಶೇಷಿಕದರ್ಶನ ಅಣುಗಳ ಸಂಯೋಗವಿಯೋಗವಿಶೇಷವೇ ದೃಗ್ಗೋಚರವಾಗುತ್ತಿರುವ ಜಗತ್ತೆಂದಿತು (ಭಾಕಿದ. ೧೨೨) : ಸೂಕ್ಷ್ಮವಾಗಿ ಅವಲೋಕಿಸಿದಾಗ ನಮ್ಮೆದುರು ಮೂರೇ ಮೂರು ಜೀವನ ತತ್ತ್ವಗಳು ದೃಗ್ಗೋಚರವಾಗುತ್ತವೆ (ಧರ್ಮಸಾ. ೩). [ ಸಂ. ]

**ದೃಗ್ದೀಪ್ತಿ** (ನಾ). = ದೃಕ್ಪ್ರಭೆ : ಮುಗಿಲೊಡ್ಡಂ ಕುಡುಮಿಂಚಿನಬ್ಬರವಮಂ ಶಕ್ರಾಸ್ತ್ರಮಂ ತಂದಲಂ ನಗಭಿದ್ಗೋಪಕಳಾಪಮಂ ಕಚಭರಂ ದೃಗ್ದೀಪ್ತಿ ಕಾಂಚೀರವಂ ಸೊಗಯಿಪ್ಪಾಭರಣಾಂಶು ದೇಹರುಚಿ ಕಂಬಾಯ್ ಪೋಲೆ (ಪುಷ್ಪಪು. ೧೪-೪೬). [ ಸಂ. ]

**ದೃಗ್ಯುಗ** (ನಾ). = ದೃಗುಯುಗ : ಹರಿಯಾತನೇ ದೃಗ್ಯುಗಕೆ ಗೋಚರನಾದನು (ಕುವ್ಯಾ.ಅ. ೦೪-೨೦). [ ಸಂ. ]

**ದೃಗ್ಯುಗಳ** (ನಾ). = ದೃಗುಯುಗ: ನಗುವಂತಿರ್ದಪ್ಪುದಿಂತೀ ವದನಮುರುಳಿಗೊಂಡಿರ್ಪುದೀ ಕೇಶಮಿಾ ದೃಗ್ಯುಗಳಂ ಕನ್ನೆಯ್ದಿಲಂತಿರ್ದಪುದು (ಕಾದಂಉ. ೬೩೨) ; ಕೇಳಿಯವರೆ ಸುವಾದವ ತಿದ್ದಲು ಕಾಳಿ ನಿರ್ವಾಣದಾಕೃತಿಯ ತಾಳಿ ಬಂದಿದಿರಾಗಿ ನಿಲಲಚ್ಯುತ ನೋಡಿ ಹೂಳಿದ ದೃಗ್ಯುಗಳವನು (ಮೋಹತ. ೩೮-೨೪). ‘ದೃಗುಯುಗಳ’ ಪರಾ. [ ಸಂ. ದೃಗ್ಯುಗಲ ]

**ದೃಙ್ಮೂಲ** (ನಾ). ಕಣ್ಣಿನ ಕುಣಿಕೆ ; ಕಣ್ಣಿನ ತುದಿ : ದೃಙ್ಮೂಲದೊಳೆ ಮುದಶ್ರುವೊಗೆಯೆ ಕರಯುಗ್ಮಂಗಳ ಮುಗಿದು (ಉತ್ತರದೇ. ೩-೬೦). [ಸಂ.’

**ದೃಢ** (ಗು). ೧. ಭದ್ರವಾದ ; ಮಜಬೂತಾದ ; ಬಿಗಿಯಾದ ; ಗಾಢವಾದ. ೨. ಬಲವಾದ ಶಕ್ತಿಯುಳ್ಳ ; ಬಲಿಷ್ಠ. ‘ದೃಢಾಯುಷ್ಯ’ ಪರಾ. ೩. ಸ್ಥಿರವಾದ ; ಅಚಲವಾದ: “ಸ್ಥಿರ, ಸ್ಥಾಯಿ, ದೃಢ, ನಿತ್ಯ” (Constant. ಪಾರಿಸಿ. ೨೧). ೪. ಕಠಿನವಾದ; ಗಟ್ಟಿಯಾದ. ೫. ನಿಶ್ಚಯವಾದ ; ದಿಟವಾದ ; ಸ್ಥಿರಪಡಿಸಿದ : ಹಿಂದಿರುಗಿ ಬರಬೇಕಾಗಿದ್ದ ಹೊತ್ತು ಬಹಳ ಮೀರಿಹೋದುದರಿಂದ ಅವರ ಅನುಮಾನವು ದೃಢಸಿದ್ಧಾಂತವಾಯಿತು (ಕಪಾಕುಂ. ೬). ೬. ಉತ್ಕಟವಾದ; ತೀವ್ರವಾದ. ೭. ಅಧಿಕವಾದ ; ಹೆಚ್ಚಾದ. (ನಾ). ೮. ಗಟ್ಟಿಯಾದುದು ; ಬಲವಾದುದು ; ಬಿಗಿಯಾದುದು : ಗೋಪಿ ದಾವಿನ್ನಡುವಂ ತೊಡರ್ಚಿ ದೃಢವಾಗಲುಲೂಖಲದಲ್ಲಿ ಕಟ್ಟಿ (ಜಗವಿ. ೩-೫೬). ೯. ಸ್ಥಿರತೆ ; ಅಚಲವಾಗಿರುವಿಕೆ : ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ ಮನದಲ್ಲಿ ದೃಢವಿಲ್ಲದನ್ನಕ್ಕ (ಬಸವ. ೯೯) ; ಕಡೆಗೆ ಮಾಡದ ಭಕ್ತಿ ದೃಢವಿಲ್ಲದಾಳುತನ ಮೃಡನೊಲಿಯ ಹೇಳಿದರೆ ಎಂತೊಲಿವನಯ್ಯ (ಮುಖಾದೇ. ಬ. ೪೫-೧೦೫) ; ಅಮೃತದಲಿ ಬಟುಹಿನಲಿ . . . ದೃಢದಲ್ಲಿ ಮೇಣ್ ವೃತ್ತನಾಮಮೆನಿಕು (ಮಂಗರಾ. ೧೫೪-೬೫) ; ಕರ್ಣನ ದೃಢವ ಕಂಡನು ಮನದೊಳುತ್ಸಾಹಿಸಿದನು (ಕುವ್ಯಾ.ಉ. ೦೦-೨೦). ೧೦. ದಟ್ಟವಾಗಿರುವಿಕೆ ; ಸಾಂದ್ರತೆ : “ನಿಬಿಡಂ,

ನಿಬಿರೀಸಂ, ದೃಢಂ, ಗಾಢಂ–ಈ ೪ ತೆಱಪಿಲ್ಲದುದು" (ಹಲಾಯು. ೧೧೯-೩೩). ೧೧. ನಿರ್ಧಾರ; ನಿಶ್ಚಯ: ತಾ ನುಡಿದ ನುಡಿಯನು ಸಲಿಸುವುದು ನೆಜ಼ ದೃಢವೆ ದೃಢವೆಂದಿತ್ತನಱೆಯದೆ ಸತಿಗೆ ನಂಬುಗೆಯ (ಹರಿಶ್ಚಂ. ೨-೩-೬); ಪಾಂಡಿತ್ಯವೆನುವುದು ಅನುವಾನಕಿನ್ನೊಂದು ಹೆಸರೆಂದು ದೃಢವಾಯಿತೆನಗೆ (ಇಂಚಾಚ. ೨೩೭-೬೨). ೧೨. ಕಠಿನತೆ; ಕಾಠಿನ್ಯ; "ಖರಃ, ಕಠೋರಃ, ಕಠಿನಃ . . . ದೃಢಃ–ಈ ೬ ಬೆಟ್ಟದು" (ಹಲಾಯು. ೩೭-೧೫೭). ೧೩. ಸತ್ಯವಾದುದು; ದಿಟವಾದುದು :ನಡೆಯೊಳಿಚ್ಚ ಅವ ಬಿಡದಿರು ಪರವಶದಿ ದೃಢವನಗಲದಿರು (ಸರ್ವಜ್ಞ. ೩೦೦). [ ಸಂ. ]

ದೃಢಕಾಯ (ನಾ). ೧. ಬಲಿಷ್ಠವಾದದೇಹ; ಗಟ್ಟಿಮುಟ್ಟಾದ ಶರೀರ: ಆದರೆ ಎಲ್ಲಕ್ಕಿಂತ ಮಿಗಿಲಾಗಿ ಮುಕ್ತತಾಪತ್ರಯದ ಅರೋಗದೃಢಕಾಯ ಸಂಪನ್ನತೆಯ ಆತ್ಮಸಂತೋಷ (ಪುನರು. ೨೨೦). ೨. ಗಟ್ಟಿಮುಟ್ಟಾದ ದೇಹವುಳ್ಳವನು; ಬಲಿಷ್ಠ: ದೃಢಕಾಯರಾದ ಯುವಕರು ಶಾಲೆಗಳಿಂದ ಹೊರಬರಬೇಕು (ಶಿಕ್ಷಣ. ೩೮೩); ಬಲಿಷ್ಠನೂ ಅರೋಗದೃಢಕಾಯನೂ ಎಂಬುದು ಆತನ ಚಲನೆಯ ವೈಖರಿಯಿಂದ ತಿಳಿದುಬರುತ್ತಿತ್ತು (ಕಾನೂರು. ೧). [ ದೃಢ + ಕಾಯ ]

ದೃಢಗಲಿ (ನಾ). ಅತಿಶಯವಾದ ಪರಾಕ್ರಮವುಳ್ಳವನು; ಮಹಾಪರಾಕ್ರಮಿ: ದೃಢಗಲಿ ಖಳನುರಸ್ಥಲದೆ ಕಠಾರಿಯು ಬುಡಮುಟ್ಟ ಚುಚಿ ಬೊಬ್ಬಿಱಿದ (ಮೋಹತ. ೧೩-೬೭); ದೃಢಗಲಿಯಹುದೆಂದು ಮಗನ ಮಸ್ತಕವ ಮೆಯ್ದುಡಹಿ ತಕ್ಕೆಯೊಳಟ್ಟಿಕೊಂಡು (ಮೋಹತ. ೧೩-೩೦).

[ ದೃಢ + ಕಲಿ$_2$ ]

ದೃಢಗುಣ (ನಾ). ಅಚಲವಾದ ಗುಣ; ಸ್ಥಿರವಾದ ಗುಣ: ಅತಿ ಸೂಕ್ಷ್ಮತತ್ತ್ವಮಂ ಕಾಣ್ಬತನುವನೊಟ್ಟಿಯಿಸಿ ಕಟ್ಟುವೀ ದರ್ಶನಶುದ್ಧತೆಗಂ ದೃಢಗುಣಸುಸಮರ್ಥತೆಗಂ ಸಲೆ ದೇವಚಂದ್ರಯತಿಪತಿ ನೋಂತಂ (ಚಂದ್ರಪ್ರ. ೧-೩೩). [ ದೃಢ + ಗುಣ ]

ದೃಢಗೊಳ್ಳು (ಕ್ರಿ). ಸ್ಥಿರವಾಗು; ಅಚಲವಾಗು; ಭದ್ರವಾಗು

[ ದೃಢ + ಕೊಳ್ಳು$_1$ (<ಕೊಳ್$_1$) ]

ದೃಢಚರ್ಯೆ (ನಾ). ೧. ಬಿಡದೆ ಆಚರಿಸುವುದು; ಸ್ಥಿರವಾಗಿ ಆಚರಿಸುವುದು. ೨. [ಜೈನ] ಜೈನಮತದ ಧರ್ಮಗ್ರಂಥಗಳನ್ನು ವ್ಯಾಸಂಗ ಮಾಡಿ ಜ್ಞಾನಾಭಿವೃದ್ಧಿಗೆ ಸಹಾಯಕವಾದ ಇತರ ಗ್ರಂಥಗಳನ್ನು ವ್ಯಾಸಂಗ ಮಾಡುವುದು: ಮತ್ತಮುವಕಾರವೃತ್ತಿಲೋಭಗ್ರಹಣಪೂಜಾರಾಧ್ಯ ಪುಣ್ಯಯಜ್ಞ ದೃಢಚರ್ಯೋಪಯೋಗತ್ವಮಂಬೆಂಟುಂಬೆರಸು (ಆದಿಪು. ೦೫-೧೬ ವ); ದೃಢಚರ್ಯವುಮಂ ಉಪಯೋಗಿತ್ವಮೆಂಬೆಂಟು ಗರ್ಭಾನ್ವಿತಕ್ರಿಯೆಯೊಳು (ಚಾವುಂಪು. ೨೩೦); ಅಂಥಾ ಪುಣ್ಯಯಜ್ಞವನ್ನುಳ್ಳವನು ಜೈನಾಗಮಶಾಸ್ತ್ರಂಗಳಂ ಓದಿ ಪೂರೈಸಿ ಅನ್ಯಮತ ಗ್ರಂಥಾರ್ಥಗಳಂ ಸಹ ತಿಳಿದುಕೊಳ್ಳುವುದೇ ದೃಢಚರ್ಯವೆಂಬ ೭ನೇ ಕರ್ಮವು (ಪುರುಷ. ೨೦೭). 'ದೀಕ್ಷಾನ್ವಯಕ್ರಿಯೆ' ನರಾ.

[ ದೃಢ + ಚರ್ಯೆ ]

ದೃಢಚಿತ್ತ (ನಾ). ೧. ಚಂಚಲವಾಗದ ಮನಸ್ಸು; ಗಟ್ಟಿಮನಸ್ಸು; ಅಚಲವಾದ ಚಿತ್ತ. 'ದೃಢಚಿತ್ತವಿಡಿ' ನರಾ. ೨. ಗಟ್ಟಿಮನಸ್ಸುಳ್ಳವನು; ಚಂಚಲನಲ್ಲದವನು: "ಶಂಸಿತನಾ ಸುನಿಶ್ಚಿತಂ ದೃಢಚಿತ್ತನೆಂದೆ ನಿಶ್ಚಯಂ" (ಮಂಗರಾ. ೭೫-೩); ದೃಢಚಿತ್ತಂ ಗುಣನಿಳಯಂ ಕಡುಗಲಿ . . . ಭವ್ಯವನಜವನಕಳಹಂಸಂ (ಧರ್ಮಾಮೃ. ೭-೦೩). [ ದೃಢ + ಚಿತ್ತ ]

ದೃಢಚಿತ್ತವಿಡಿ (ಕ್ರಿ). ದೃಢಮನಸ್ಸಿನಿಂದ ಕೂಡಿರು; ಸ್ಥಿರವಾಗಿರು: ದೃಢಚಿತ್ತವಿಡಿದು ಭೋಗಿಭೂಷಣ ಕೋಪವ ತಾಳಿ ಕಿಡಿಕಿಡಿಯೋಗಿ ಕೆಂಗಿಡಿಗಣ್ಣ ತೆಱೆದ (ಮೋಹತ. ೭-೩೦). [ ದೃಢಚಿತ್ತ + ಪಿಡಿ$_1$ ]

ದೃಢತೆ (ನಾ). ಸ್ಥಿರತೆ; ನಿಶ್ಚಲತೆ. [ ಸಂ. ದೃಢತಾ ]

ದೃಢತ್ವ (ನಾ). ಚಂಚಲವಾಗದಿರುವಿಕೆ; ಸ್ಥಿರವಾಗಿರುವಿಕೆ: "ಗಲ್ಭ–ಅಧಾಪ್ರ್ಯೇ, ದೃಢತ್ವದೊಳ್" (ಶಾಶಕ್ಮ. ೧೨೬). [ ಸಂ. ]

ದೃಢನಿರ್ಧಾರ (ನಾ). ಅಚಲವಾದ ನಿರ್ಣಯ; ಸ್ಥಿರವಾದ ನಿರ್ಧಾರ: ಆ ಬಗ್ಗೆ ಅವನ ಮನಸ್ಸಿನಲ್ಲಿ ದೃಢನಿರ್ಧಾರ ಬಲಿತಿರಲಿಲ್ಲ (ಪುನರು. ೪೩೬).

[ ದೃಢ + ನಿರ್ಧಾರ ]

ದೃಢನಿಶ್ಚಯ (ನಾ). = ದೃಢನಿರ್ಧಾರ: ಸುಲಭವಾಗಿ ಸಡಿಲದ ದೃಢನಿಶ್ಚಯ ಅವನ ಹುಟ್ಟುಗುಣವಾಗಿತ್ತು (ಪುನರು. ೩೩೨).

[ ದೃಢ + ನಿಶ್ಚಯ ]

ದೃಢಪಡಿಸು (ಕ್ರಿ). ನಿಶ್ಚಿತಗೊಳಿಸು; ಖಚಿತಪಡಿಸು; ಬಲಪಡಿಸು: ಅನಂತಕವಿಯ ಗ್ರಂಥದ ಮೇರೆಗೆ . . . ಕೂಷ್ಮಾಂಡಿಯೇ ಮುಖ್ಯ ಪ್ರೇರಕಳೆಂಬುದನ್ನು ದೃಢಪಡಿಸುತ್ತದೆ (ಸಮಾಲೋ. ೨೬೦).

[ ದೃಢಪಡು + – ಇಸು$_1$ ]

ದೃಢಪಡು (ಕ್ರಿ). ನಿಶ್ಚಿತವಾಗು; ಸ್ಥಿರವಾಗು. 'ದೃಢಪಡಿಸು' ನರಾ.

[ ದೃಢ + ಪಡು$_1$ ]

ದೃಢಪತಿವ್ರತೆ (ನಾ). ಗಂಡನನ್ನು ಕುರಿತ ವಿಶ್ವಾಸ ಮತ್ತು ಭಕ್ತಿಗಳಲ್ಲಿ ಸ್ಥಿರವಾದ ನಡವಳಿಕೆಯುಳ್ಳವಳು; ಮಹಾಪತಿವ್ರತೆ: ಇಂದು ಜಯವಧು ದೃಢಪತಿವ್ರತೆಯೆಂದು ಬಗೆದೈ ಭೂಪ ಹುಸಿ ಹೋಗೆಂದು ಗುರುಸುತ ನಗುತ ಹೋದನು ತನ್ನ ಮೋಹರಕೆ (ಕುಮ್ವಾಭ. ೨೯-೨೨).

[ ದೃಢ + ಪತಿವ್ರತೆ ]

ದೃಢಪ್ರತ್ಯಯ (ನಾ). ಸ್ಥಿರವಾದ ವಿಶ್ವಾಸ,–ನಂಬುಗೆ; ದೃಢನಿಶ್ಚಯ.

[ ದೃಢ + ಪ್ರತ್ಯಯ ]

ದೃಢಬುದ್ಧಿ (ನಾ). ಅಚಲವಾದ ಬುದ್ಧಿ; ಗಟ್ಟಿಮನಸ್ಸು: ದೃಢಬುದ್ಧಿಯಿಲ್ಲದವ ಕಡುಮೂರ್ಖ (ಗಾದೆ). [ ದೃಢ + ಬುದ್ಧಿ ]

ದೃಢಬ್ರತ (ನಾ). = ದೃಢವ್ರತ: (ಶ). [ ದೃಢ + ಬ್ರತ ]

ದೃಢಬ್ರತೆ (ನಾ). ಸ್ಥಿರವಾದ ಪ್ರತಿಜ್ಞೆಯನ್ನುಳ್ಳವಳು; ಸ್ಥಿರಸಂಕಲ್ಪದಿಂದ ಕೂಡಿರುವವಳು: ಈಯುಯ್ಯುಮಣುಬ್ರತಮಂ ಕೈಕೊಂಡು ದೃಢಬ್ರತೆಯಾಗು ಸುವ್ರತೆಯಾಗು ಮಗಳೆ (ವಡ್ಡಾರಾ. ೨೨-೨೦).

[ <ಸಂ. ದೃಢವ್ರತಾ ]

ದೃಢಭಕ್ತ (ನಾ). ನಿಶ್ಚಲವಾದ ಭಕ್ತಿಯನ್ನು ಉಳ್ಳವನು: ನಡೆದದ್ದಿಲ್ಲವು ಲಕ್ಷ ಪ್ರದಕ್ಷಿಣೆ ನುಡಿದದ್ದಿಲ್ಲವು ಗಾಯತ್ರಿಮಂತ್ರಗಳು . . . ದೃಢಭಕ್ತರೇನು ಮಾಡಿದರದೇ ಮರಿಯಾದೆ (ಪುರಂದ. ೩-೧೦೬-೨).

[ ದೃಢ + ಭಕ್ತ ]

ದೃಢಭಕ್ತಿ (ನಾ). ನಿಶ್ಚಲವಾದ ಭಕ್ತಿ: ದೃಢಭಕ್ತಿ ನಿನ್ನಲಿ ಬೇಡಿ ನಾನಡಿಗೆಡುಗುವೆನಯ್ಯ ಅನುದಿನ ಪಾಡಿ (ಪುರಂದ. ೦-೯-೨). [ ದೃಢ + ಭಕ್ತಿ ]

ದೃಢಮನಸ್ಸು (ನಾ). = ದೃಢಬುದ್ಧಿ: ದೃಢಮನಸ್ಸು ಮಾಡಿಕೊಂಡು ಕೆಲವು ಕಾಲ ಮನಃಕ್ಲೇಶವನ್ನು ಸಹಿಸಿಕೊಳ್ಳಬೇಕು (ಸಾವಿತ್ರಿ. ೩).

[ ದೃಢ + ಮನಸ್ಸು ]

ದೃಢಮುಷ್ಟಿ (ನಾ). ೧. ಬಲವಾದ ಹಿಡಿ; ಶಕ್ತಿಯುತವಾದ ಮುಷ್ಟಿ: ಒಕ್ಕಿ ದೃಢಮುಷ್ಟಿಯಲಿ ಕಿವಿದರು ಸತ್ವವುಳ್ಳವರೆರಡು ಬದಿಯನು (ಕೌಶಿರಾ. ೨೯-೬). ೨. ಅಚಲವಾದ ನಿರ್ಧಾರ; ಹಿಡಿದ ಪಟ್ಟು ಬಿಡದಿರುವಿಕೆ: ದೃಢಮುಷ್ಟಿಯರಸನ್, ಅರ್ಗಮೊಳಗಲ್ಲದೋನ್ ಸ್ವರ್ಗದಲ್ಲಾಳ್ದಪನ್ (ಬದ್ರಪ್ರ. ೦೯-೩೬೮). ೩. ಕತ್ತಿ; ಖಡ್ಗ. ೪. ಜಿಪುಣ; ಲೋಭಿ; ಜೀನ. 'ಕಪಿಮುಷ್ಟಿ' ನರಾ. [ ದೃಢ + ಮುಷ್ಟಿ$_1$ ]

ದೃಢಮೂಲ (ನಾ). ಬಲವಾಗಿ ಬೇರೂರಿದುದು; ಸ್ಥಿರವಾಗಿರುವುದು: ಭವಾನೀಚರಣನ ಮನದಲ್ಲಿ ಒಂದು ವಿಧದ ಭರವಸೆ ದೃಢಮೂಲವಾಗಿ ಹೋಯಿತು (ಇಹ್ರಳ. ೩೨೮). [ ದೃಢ + ಮೂಲ ]

ರಸ ಗಂಧ ರೂಪು ಶಬ್ದ ಸ್ಪರ್ಶನ ಜನಿಸಿತ್ತು (ಆದಪ. ೨೮-೬೦) : ಕಶ್ಯಪ ಮುನಿಯ ದೆಸೆಯಿಂದಾದುದೀ ಮೇದಿನಿಯ ವಿಸ್ತರವೆಂದು ಮುನಿ ನುಡಿದನು (ತೊರಆ. ೧-೩-೧೨) ; ನಿನಗಿನಿವಿದಿದು ಭಯಾವೇಶವಾರ ದೆಸೆಯಿಂದವಾದುದು (ಶಾಂತಿಪು. ೬-೬೨.ವ) ; ಎಂದುವಿವರ ದೆಸೆಯಿಂದಂ ನಿವಗೊಂದುಂ ಭಯುವಿಲ್ಲಂ (ಚಾವುಂಪು. ೦೩) : ಏಳ್ನೂಱು ಭೂತಮಾಶನ ಪುರಕ್ಕೈದಲಾಳಿದೊಂದು ಭೂತಂ ಬಂದವಂ ಕಾಣದಳುತಿರೆ ಭೋಜನದಱ ದೆಸೆಯಿಂದೆ ಮಗುಳಾ ಗುರುವಿನಸ್ಥಿಗಳ ಪೊಗೆಯೊಳಗೆ ಚಂದದಿಂದವಿಳಜನ ವೆರಸಿ . . . ಶಿವಪುರಕ್ಕೈದಿದಂ (ಆಲಪು. ೩೩-೪೬); ತನ್ನಾಳ್ವನ ದೆಸೆಯೊಳ್ ಭೀತನುಮುಪವಾನಿತನುಮಾಗಿರ್ದಂ (ಶಂಕಕಂ. ೨೪೭-೦೪) ; ಬಸವನಿರವಾದ್ವಾರಪಾಲರ ದೆಸೆಯೊಳಱದು . . . ಗಮನಿಸಲು (ಬಸಪು. ೩೫-೪೨).

[ <ಸಂ. ದಿಶಾ ]

**ದೆಸೆ₃** (ನಾ). ಒಂದು ಬಗೆಯ ತೆರಿಗೆ (?) : ಈ ಧರ್ಮ್ಮದ ಸ್ಥಳದಲ್ಲಿ ಬಳ್ಳಾಳರಿಗೆ ಅನಾಯ ಸನಾಯ ಸಲ್ಲದು ಇಲ್ಲ ಆ ಸ್ಥಳ(ಗ)ದಲು ಇದ್ದ ಪೊಕ್ಕಲಿಗೆ ಬಿಟ್ಟಿ ಬಿರಾಡ ಸಲ್ಲದು ಕಾಣಿಕೆ ದೆಸೆ ಅಪ್ಪಣೆ ಪಡೆದಲ್ಲಿಯೆತ್ತು ಸಲ್ಲದು (ಎಕ. XX, ೯೪-೩೮ ; 1556). [ ? ]

**ದೆಸೆಗಟ್ಟು** (ನಾ). ದಿಗ್ಬಂಧನ : ಆ ಮಹಾತ್ಮರು . . . ಶಿವ್ಮಣ್ಣ ನಾಯಕನಿಗೆ ದೆಸೆಗಟ್ಟಿನ ದೂಳಿತ, ಸಿದ್ಧಮೂಲಿಕೆ, ಕೈಲಂಬು ಇವುಗಳನ್ನು ಕೊಟ್ಟು . . . ಬುದ್ಧಿ ಹೇಳಿ ಹೊರಟು ಹೋದರಂತೆ (ಚಿತ್ರಪಾ. ೭) ; "ದೆಸೆಗಟ್ಟಿನ ಧೂಳಿತ = ಸಣ್ಣಗಿರುವ ಮಣ್ಣಿನ ಹುಡಿಗೆ ಧೂಳು ಎಂದಂ ಹೆಸರು . . . ರೂಢಿಯಲ್ಲಿ ದೇವರ ಪಾದದಲ್ಲಿರುವ ಧೂಳು ಅಥವಾ ವಿಭೂತಿಗೆ ಈ ಹೆಸರು ಬಂದಿದೆ, ಇದಕ್ಕೆ ಪಾದರೇಣು ವೆಂದು ಸಹ ವಾಡಿಕೆ ಇದೆ" (ಚಿತ್ರಪಾ.ಅನುಬಂ. ೩).

[ ದೆಸೆ₂ + ಕಟ್ಟು₂./ತೆಲು. ದೆಸಕಟ್ಟು = ಕಳ್ಳತನಮಾಡುವಾಗ ಬಳಸುವ ಒಂದು ಬಗೆಯ ಸಾಧನ ]

**ದೆಸೆಗಡೆ** (ನಾ). ೧.ದಿಕ್ಕಿನ ತಂದಿ ; ದಿಗಂತ : ಮೆಟ್ಟಿದುದುರಗಪುರವನಳಕೆಯನಱೆಯಟ್ಟಿದುದು ದೆಸೆಗಡೆಗೆ ಮುಟ್ಟಿಲೀಯದೆ ಮೇಲಕೆ ನೂಕಿದುದು ಸುರಪಟ್ಟಣವನು ಚೆಲ್ವಿನಿಂದ (ಕುರಾಸಾಂ. ೦೭-೭). ೨. ಮೂಲೆ ; ಕೊನೆ: ಬಿಡದಿರೆ ಪರಮಪಾತಕಿಯನಿವಳ ದೆಸೆಗಡೆಗಿರದಿಟ್ಟು ಪೋಗುವೆನು (ಕುರಾಸಾಂ. ೬೨-೧೨೦). [ ದೆಸೆ₂ + ಕಡೆ₂ ]

**ದೆಸೆಗಾಣ್** (ಕ್ರಿ). ದಿಕ್ಕನ್ನು ಕಾಣು; ದಿಕ್ಕು ತೋಚು; ಮುಂದುಗಾಣು: ಉರಿಕೊಳೆ ದೆಸೆಗಾಣದೆ ದೆಸೆವರಿವರಿದು ಕುಜಂಗಳಂ ಪಡಲ್ವಡಿಸಿ ಭಯಂ ಬೆರಸೊಳಱೆ ನೆಗೆದುದಾ ವನಕರಿಶರಭಕಿಶೋರಕಂಠಗರ್ಜನೆ ಬನದೊಳ್ (ಶಂಕಥಾ. ೫-೯೦) ; ಅದನಾಂ ಕೇಳ್ದಿರ್ದೆಗೆಟ್ಟು . . . ಕಣ್ಣೀರ ಪೂರದ ಗುರ್ವಿಂ ದೆಸೆಗಾಣದಂದೆಡವುತಂ ತಾಗುತ್ತಂ (ಕಾದಂಪೂ. ೯೦) : ಬೆಳಗೆ ತಿಗ್ಮಕರಂ ದೆಸೆಗಾಣದಿರ್ಪ ಕೌಶಿಕನಯನಂಗಳಂ . . . ಏಕೆಯೊ ಮಾಡಿದ ನಬ್ಜವಿಷ್ಟರಂ (ಶಂರಾಮಾ. ೧-೩೦) ; ಅಗರುವ ಧೂಪಧೂಮದೊದವಿಂ ದೆಸೆಗಾಣದ(ವರ್ಧಪು. ೧-೩೭). [ ದೆಸೆ₂ + ಕಾಣ್ ]

**ದೆಸೆಗಾರ** (ನಾ). ಅದೃಷ್ಟಶಾಲಿ ; ಪುಣ್ಯವಂತ ; ಭಾಗ್ಯಶಾಲಿ : ಅಡಕೆ ಬೆಳೆದವರು ಒಳ್ಳೆ ದೆಸೆಗಾರರಾಗಿ ಬದುಕಿ ಹೋದರು (ದೂಕ).

[ ದೆಸೆ₁ (<ದೆಸೆ) + –ಗಾರ (< –ಕಾಱ) ]

**ದೆಸೆಗಿಡಿಸು** 'ದೆಸೆಗೆಡಿಸು' ನೋ.

**ದೆಸೆಗಿಡು** 'ದೆಸೆಗೆಡು' ನೋ.

**ದೆಸೆಗೂಡು** (ಕ್ರಿ). ಗುಂಪನ್ನು ಸೇರು : ಶಿವಶಿವ ವಲಿಮುಖರ ದೆಸೆಗೂಡೆ ದಳಪತಿ ನೀಲ ಹರಿತಂದ (ಕಾಶಿರಾ. ೨೦-೪೧). [ ದೆಸೆ₂ + ಕೂಡು₁ ]

**ದೆಸೆಗೆಡಿಸು, ದೆಸೆಗಿಡಿಸು** (ಕ್ರಿ). ೧. ದಿಕ್ಕು ತೋರದಂತೆ ಮಾಡು ; ಮುಂದುಗಾಣದಂತೆ ಮಾಡು ; ದಿಗ್ಭ್ರಮೆಯುಂಟುಮಾಡು : ಅಱೆವುಗೆಡಿಸುತ್ತುಮೆಲ್ಲಾ ತೆಱದಿಂ ದೆಸೆಗೆಡಿಸದಿರದು ವಿಷಯಸಮೂಹಕ್ಕೆಱಗಿ ಬಿಡದಂತೆ ಪತ್ತುವ ಮೋಹಕಂ ದಿಙ್ಮೋಹದಂದದಿಂ ಮಾನಿಸರಂ (ಕಾದಂಪೂ. ೩೩೮) ; ಮಸುಳುವನು ಶೋಲುವನು ತೊಡೆವನು ದೆಸೆಗೆಡಿಸುವನು ಬಳಿಕ ಮುಳಿಸಿನೊಳಾ ಮಹಾರಥರ (ಕುವ್ಯಾಕ. ೧೧-೩೭) ; ಎಸಲ ಲರ್ಗಣೆಗಳವಳ . . . ಕರಣಗಳ ದೆಸೆಗೆಡಿಸದವೆನಲವಳ ವಿರಹದೊಂ ದೆಸಕವನೇನ ಪೇಳುವೆನು (ಕುರಾಸಾಂ. ೬೨-೯೯). **ದೆಸೆಗಿಡಿಸು**: ೧. ಒಸೆದು ಯಶೋರ್ದ್ಧ x x x ದೇವನಿದಿರಾಂತವರಂ ದೆಸೆಗಿಡಿಸಿ ವೀರಭೋಜ್ಯಾ ವಸುಂಧರಾ x x x (ಎಕ VIII (S), ಸೊರಬ. ೫೮೬-೨೦ ; 1201). ೨. ಓಡಿಸು; ನಿವಾರಿಸು ; ನಾಶಪಡಿಸು ; ನಲ್ಲಿ . . . ಅಸಿತದಯಃಕಾಂತದ ಮದವಮಂ ದೆಸೆಗಿಡಿಸುಗುವೆಂದೊಡಿಲ್ಲಿ ಸಂದೆಯಮುಂಟೇ (ಅಪಾಂದ. ೩-೬೯); [ ದೆಸೆ₂ + ಕೆಡಿಸು₁ ]

**ದೆಸೆಗೆಡು, ದೆಸೆಗಿಡು** (ಕ್ರಿ). ೧. ದಿಕ್ಕು ತೋಚದಿರು ; ಮುಂದುಗಾಣದಿರು ; ದಿಗ್ಭ್ರಾಂತಿಗೊಳ್ಳು : ದೆಸೆಯಂ ಪೊತ್ತ ಪದೇಭರಾಜಿ ದೆಸೆಗೆಟ್ಟೋಡಲ್ಲಗುಳ್ದತ್ತು (ಶಂಕಥಾ. ೯-೯೪) ; ದೆಸೆಗೆಟ್ಟುದಪ್ಪಿನಿಂದಂ . . . ಅಧೋಮುಖಿಯೆನಿಪ ಮಹಾಶ್ವೇತೆಯುಂ ಕಂಡನಾಗಳ್ (ಕಾದಂಪೂ. ೫೪೨); ಭಯರಸದಿಂ ದೆಸೆಗೆಟ್ಟರ್ ಕಂಡದೃಷ್ಟಪೂರ್ವಮವಾರ್ಯರ್ (ಶಂರಾಮಾ. ೦-೭೦); ಕಾಗೆಯಂ ಕಂಡ ಕೋಗಿಲೆಯಂತೆ ಮಾಲೆಗಾಱರ್ತಿ ದೆಸೆಗೆಟ್ಟು ಪರಿಯೆ (ಧರ್ಮಾಮೃ. ೨-೨೩); ಬಿಸಿಲು ಮಳೆ ಬಿಱುಗಾಳಿಯೊಳು ಬಲು ದೆಸೆಗೆಟ್ಟೆ ತಿರುಗಿ ದೇಶದೇಶದೊಳು (ಪುರಂದ. ೦-೧೭೭-೨). ೨. ಹಾಳಾಗು ; ನಾಶವಾಗು ; ನಿನ್ನ ಮೊಗವುಂ ತಲೆಯುಂ ಬಾತು ಪೋದವುದು ಕಿಚ್ಚಲ್ಲ ವಿಂಚುಂಬುಟು ನೀನಿದನೂದಿ ದೆಸೆಗೆಡವೇಡ (ಶಂಕಕಂ. ೨೪೨-೭) ; ರಾಯನರನೆಲೆ ದೆಸೆಗೆಡಲು ಮೊಳೆಗಿದನು ಪಾರ್ಥ ಕುಮಾರನಳವಿಯಲಿ (ಕುವ್ಯಾದ್ರೋ. ೫-೦೫) : ಬಸವನೆಂದರೆ ಪಾಪ ದೆಸೆಗೆಟ್ಟು ಹೋಗುವುದು (ಸವಾಪ. ೨೯೪). **ದೆಸೆಗಿಡು** : ೨. ನೀಂ ಸ್ತ್ರೀರೂಪದೊಳ್ ತೊಡರ್ದು ದೆಸೆಗಿಡಲ್ವೇಡ (ಚಾವುಂಪು. ೪೦) ; ಕಲಿಕಾಲದೇಳ್ಗೆಯುಂ ದೆಸೆಗಿಡೆ ತೂಳ್ದಿ ತಾಳ್ದಿ . . . ಸಿಙ್ಗವಿಷ್ಟರಮನೇಱದನಾ ಜಯಸಿಙ್ಗವಲ್ಲಭಂ (ಎಕ. VII, ಶಿಕಾರಿ. ೧೨೫-೦೫; 1019); ಸುಖಮುಮಂ ಆಯುಷ್ಯಮುಮಂ ಮಂತ್ರ [ತಂತ್ರವೈದ್ಯಂಗಳಿಂ] ಪಡೆವೆನೆಂದು ದೆಸೆಗಿಡಲ್ವೇಡ (ಧರ್ಮಾಮ. ೪-೩೦).

ದೆಸೆಗೆಟ್ಟವ=ದಿಕ್ಕುಗೆಟ್ಟವನು: "ನಷ್ಟಃ, ಗೃಹೀತದಿಕ್, ಕಾಂದಿಶೀಕಃ, ಭಯದ್ರುತಃ – ಈ ೪ ದೆಸೆಗೆಟ್ಟವಂ" (ಹಲಾಯು. ೬೯-೩೨೫).

[ ದೆಸೆ₂ + ಕೆಡು₁ ]

**ದೆಸೆಗೇಡಿ** (ನಾ). ದಿಕ್ಕಿಲ್ಲದವನು ; ಆಶ್ರಯವಿಲ್ಲದವನು ; ನಿರಾಶ್ರಿತ : ಏತಕ್ಕೆ ಬಿಟ್ಟುಹೋದನು ನಿನ್ನನು ಮಾತೆ ಏತಕ್ಕೆ ಅವನತಿಗಳೆದ ಏತಕ್ಕೆ ನಾ ದೆಸೆಗೇಡಿಯಾದೆನು ಎಂದು ಮಾತೆಯಾವಪ ಬೆಸಗೊಂಡ (ನೀಳಾಸಾಂ. ೪೨-೫): ನಾನೇ ದೆಸೆಗೇಡಿಯಾದ ಅಹಮ್ಮದನು (ಪಮುಂಬಯಿ. ೫-೦೨೫) ; ಹೊಟ್ಟೆಯ ಮಗನು ದೆಸೆಗೇಡಿಯಾದದ್ದರ ಅರಿವು ನಿಮಗೆ ಇಲ್ಲವೇ ಇಲ್ಲವೋ? (ತುಳಸೀ. ೦೦೭೪. [ ದೆಸೆ₂ + ಕೇಡಿ₁ ]

**ದೆಸೆದಪ್ಪು** (ಕ್ರಿ). ದಿಕ್ಕುತಪ್ಪು; ಆಶ್ರಯವಿಲ್ಲದಂತಾಗು: ಪ್ರಮುಖರಪ್ಪ ನಾಯಕರ ಪೆಂಡಿರುಂ ತಮ್ಮ ಗಂಡರಂ ಕೊಳಗುಳದೊಳಱಸಿ ಕಾಣದೆ ಬಾಯಬಱದು ಪಳಯಿಸುತ್ತುಂ ಯೂಥಪತಿ ಕಿಡೆಯ ದೆಸೆದಪ್ಪಿದ ವನಕರಿ ಕರೇಣುಗಳುಮನಡರ್ಪಿಲ್ಲದ ಕಲ್ಪವೃಕ್ಷಮುಡಿದು ಕಿಡೆಯ ಬಂಬಲ ಬಾಡಿದ ವನಲತೆಗಳುಮಂ ಪೋಲ್ತು (ಶಂಕಥಾ. ೧೯-೪ ವ). [ ದೆಸೆ₂ + ತಪ್ಪು₁ ]

**ದೆಸೆದಿರಿ** (ಕ್ರಿ). ದಿಕ್ಕುದಿಕ್ಕುಗಳಲ್ಲಿ ಅಲೆ–ತಿರುಗು : ಜನ್ನಗುದುರೆಯಂ ಕಾಣದಿರೆ . . . ದೆಸೆದಿರಿಯುತುಮಿರ್ಕೆಲನೊಳಱಸುತುಂ (ರಾಮಾಶ್ವ. ೦೦೦-೭). [ ದೆಸೆ₂ + ತಿರಿ₁ ]

**ದೆಸೆದೀವು** (ಕ್ರಿ). ದಿಕ್ಕುಗಳನ್ನು ತುಂಬು, – ವ್ಯಾಪಿಸು : ದೆಸೆದೀವಿತ್ತು ಘೋರಾಂಧಕಾರಂ (ರಾಜಶೇ. ೧೧-೧೯). [ ದೆಸ್ಎ$_2$ + ಕೀವು ]

**ದೆಸೆದೇವತೆ** (ನಾ). ದಿಕ್ಕಿನ ದೇವತೆ : ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ ಬಾಳೊಳ್ ಬಾಳ್ ಪಳಂಚೆ ಮಾರ್ಕಿಡಿವಿಡೆ ನೋಡಲಂಜಿ ದೆಸೆದೇವತೆಗಳ್ ಪೆಱಪಿಂಗೆ (ಪಂಪಭಾ. ೧೦-೪೩) ; ದೆಸೆದೇವತೆಗಗ್ಗಿ ಜಪಾಪ್ರಸೂನದಿಂ ರಕ್ತ ಬಲಿಯುಮಂ ತಾವೆ ಕುಡುವಂತೆಸೆದಿರ್ದರೂ ಕಡೆಗಣ್ಣೊಳ್ ಪಸರಿಸೆ ಕಡುಗೆಂಪು ಭೀಮದುರ್ಯೋಧನರಾ (ಗದಾಯು. ೯-೩) ; ದೆಸೆದೇವತೆಯ ಕುಸುಂಬೆಯ ಕುಸುಮಂಗಳನಿಂಡೆಯಾಡುವಂತಿರೆ (ಅರ್ಧನೇ. ೭-೩೨).

[ ದೆಸ್ಎ$_2$ + ದೇವತೆ ]

**ದೆಸೆಪಟದುಳಿ** (ಕ್ರಿ). ದಿಕ್ಪಾಪಾಲಾಗಿ ಹೋಗುವಂತೆ ಮಾಡು ; ಧೂಳೆಬ್ಬಿಸು ; ನಾಶಮಾಡು : ಸಂಗರಜಯದ ಮಡುವಿನಲಿ ಸಲೆ ಸೊಗಸಿ ತನಿಸೊಕ್ಕಿ ದೆಸೆಪಟದುಳಿದು ಸೌಭದ್ರೇಯಭೃಂಗನ ಬಲುದನಿಯು ಭರವಂಜಿಸಿತು ಜಯಯುವತಿವಿರಹಿಗಳ (ಕುಮಾ.ದ್ರೋ. ೬-೩೦).

[ ದೆಸ್ಎ$_2$ + ಪಟ$_2$ + ತುಳಿ$_1$ (<ತುಟ್$_1$) ]

**ದೆಸೆಬಿದ್ದಂ, ದೆಸೆವಿದ್ದಂ** (ಅ). ೧. ಹೆಚ್ಚಾಗಿ ; ಅತಿಶಯವಾಗಿ : ಚಿತ್ತಜನಾಜ್ಞೆ ಮುತ್ತೆ ದೆಸೆಬಿದ್ದಂ ಬೆರ್ಚೆ ಲಜ್ಜಾರಸಂ ಮನದಿಂ ಸೂಸಿದುದು (ಮಲ್ಲಿಪು. ೫-೭) ; ದೆಸೆಬಿದ್ದಂ ಕುಣಿವಂಗನಾಜನದ ಕಾಂಚೀಘಂಟಿಕಾಘೋಷವೊಂದೆಸೆಯೊಳ್ . . . ಘೂರ್ಣಿಸೆ ಪೂರ್ಣಿಮಾಯ್ಯ ಜನಜನ್ಯೋತ್ಸಾಹ ಕೋಲಾಹಳಂ (ಮಲ್ಲಿಪು. ೧೩-೦೫) ; ಪುಸಿವಡೆ ಪೋಲಲಪ್ಪಿಸವುದು ಪುಸಿಯಲ್ಕಱಿಯದೊಡೆ ಮಾಣ್ಬುದಂತಿರದೆ ಕರಂ ದೆಸೆಬಿದ್ದಂ ಪುಸಿವಡೆ ಬಾರಿಸ ಬಪ್ಪುದೆ ಪುಸಿಯ ಬಸನವಾಗಿಪ್ಪವರಂ (ಸಮಯ. ೧೦-೦೩) ; ಪಸರಿಸೆ ಪೂವಲಿಗಳ್ ಬಾಜಿಸೆ ಬದ್ದವಣಂಗಳೊಡನೆ ಮಿಳ್ಳಿಸೆ ಗುಡಿಗಳ್ ದೆಸೆಬಿದ್ದವಾಡೆ ತರುಣಿಯರೊಸಗೆಯು ಮೇಲೊಸಗೆಯಾದುದು (ಪಂಚಾಮೂ. ೩-೧೩೪) ; ಬದ್ದವಣಂ ಬಾಜಿಸೆ ದೆಸೆಬಿದ್ದಂ ಕುಣಿದಾಡೆ ಗಣಿಕೆಯರ್ . . . ಪರಿದತ್ತು ಹರ್ಷರಸಮಾ ಪುರದೊಳ್ (ಪಂಚಾಮೂ. ೪-೨೮). ೨. ಗುರಿಯೇ ಇಲ್ಲದಂತೆ ; ದಿಕ್ಪಾಪಾಲಾಗಿ ; ಎಲ್ಲ ಕಡೆಗೂ: ಪ್ರವಂಥರಂಗೋಪಾಂಗಸಂಧನ್ನಸಾಯಕಪತ್ರಂಗಳೆಱಂಕೆಯಾಗೆ ದೆಸೆಬಿದ್ದಂ ಪಾಱಿದರ್ ಬೇಗದಿಂ (ಜಗವಿ. ೦೮-೦೩) ; ನೀಂ ದೆಸೆಬಿದ್ದಂ ಮರೆಯಂತೆ ಪಾಪ್ಪುಂದೆಯುಪ್ಪುದಱಂ ಮರೆಯಾಗೆಂದು ಶಾಪಮಂ ಕುಡೆ (ಕೊಂಕ್ಲಾ.ಶಾ. ೦೫-೨೩ ; 1186.) ಎತ್ತಿಸಿ ತೋರ್ಪೆಂ ರಿಪುಬಳಮಂ ದೆಸೆಬಿದ್ದಂ ತೂಳ್ದಿ ಜಯವತಾಕಮನೀಗಳ್ (ಚಂದ್ರಪು. ೧೦-೮೦). **ದೆಸೆವಿದ್ದಂ:** ೧. ದೆಸೆವಿದ್ದಂ ಸುರತೂರ್ಯಮುಣ್ಮೆ ಬರಲಂತಾಯಪ್ಪು ಪ್ರತಿಧ್ವಾನಂ (ನೇಮಿಪು. ೮-೦೨೬).

[<ಸಂ. ದಿಶಾವಿದ್ಧ ?]

**ದೆಸೆಮಿಣಿ** 'ದೆಸೆಮಿಳಿ' ನೋ.

**ದೆಸೆಮಿಳಿ, ದೆಸೆಮಿಣಿ** (ನಾ). (ತೇರು ಮುಂತಾದ ಯಾವುದಾದರೂ ವಸ್ತುವಿನ) ಎರಡು ಮಗ್ಗುಲುಗಳಿಗೆ ಕಟ್ಟಿ ಎಳೆಯುವ ಹಗ್ಗ : ದಬ್ಬುಕ ಪಾಳಾಸ ದೆಸೆಮಿಳಿ ಚೆಲ್ಲಹ ಕಬ್ಬಿ ತಾಪಡಿ ಮೇಲಕ್ಕೆ ಉಬ್ಬಲೀಯದ ಕಟ್ಟುನದ ಗುಂಡು ಪಾಡಿಗಳಬ್ಬರವಿರೆ ಸುಮ್ಮನಿಹುದು (ಕುರಾಹಂ. ೯-೩೭). **ದೆಸೆಮಿಣಿ :** ಹಿಡಿದರಾಗಳೆ ತೇರ ಮಿಣಿಯಂತೆ ಕಟಕದ ಕಡೆವಟ್ಟ ನಿಡುಸರಪಣಿಯ ಎಡಬಲಕಲ್ಲಲ್ಲಿ ಕವಲಾಗಿ ಸರಪಣಿ ನಡೆದುವು ದೆಸೆಮಿಣಿಯಂತೆ (ಭರತ. ೪೪-೦೦೯). [ ದೆಸ್ಎ$_2$ + ಮಿಳಿ$_2$ ]

**ದೆಸೆಮುಟ್ಟು$_1$** (ಕ್ರಿ). ದಿಕ್ಕಿನ ಗಡಿಯನ್ನು ಸೇರು ; ದಿಗಂತವನ್ನು ತಲಪು; ಬಹುದೂರ ವ್ಯಾಪಿಸು : ಮುಟ್ಟೆಂಬುದರ್ಕೆ – ದೆಸೆಮುಟ್ಟಿ, ವಾರ್ಧಿಮುಟ್ಟಿ, ಅಂತಮುಟ್ಟಿ (ಶಮದ. ೨೯೮ ಪ್ರಯೋ) ; ಡೊಡೆಯ ಮಾವುರಿಯ ಭೇರಿಯ ಭೂರಿನಿನಾದಂ ದೆಸೆಮುಟ್ಟೆ ಪಳಂಚಲೆಯೆ (ರಾಮಾಶ್ವ. ೫೦-೨).

[ ದೆಸ್ಎ$_2$ + ಮುಟ್ಟು$_1$ ]

**ದೆಸೆಮುಟ್ಟು$_2$** (ನಾ). ದಿಕ್ಕನ್ನು ಮುಟ್ಟಿದುದು ; ದಿಗಂತವಿಶ್ರಾಂತವಾದುದು : ರಾವಣಂ ಮುಂತಪ್ಪ ದೆಸೆಮುಟ್ಟಿನ ಜಸದ ದೈತ್ಯರಂ ಬೆಟ್ಟಿ ಸೊಟ್ಟಿ ಸೋಲಿಪದ ಶ್ರೀರಾಮಂ ಬೇಳ್ವ ಜನ್ನದ ಹಸುವಂ ಕಳ್ದುಯ್ದುಂ ಬಾಟ್ಟೆನೆಂದು ಬಗೆವ ನೀನಾವುಂ ? (ರಾಮಾಶ್ವ. ೧೧೨-೨೦).

[ ದೆಸ್ಎ$_2$ + ಮುಟ್ಟು$_2$ ]

**ದೆಸೆಮೂಲೆ** (ನಾ). ದಿಕ್ಕುಗಳು ಸೇರಿರುವ ಸ್ಥಳ ; ದಿಕ್ಕಿನ ಗೊಂಟು : ದೆಸೆಮೂಲೆಗಳ್ ಪಳಂಚೆ ಮಾರ್ದನಿಗುಡುವಂತು . . . ಬೊಬ್ಬಿಱಿದಂ ಕಲಿಯುಣಾವಂ (ರಾಮಾಶ್ವ. ೦೬೧-೨೮). [ ದೆಸ್ಎ$_2$ + ಮೂಲೆ ]

**ದೆಸೆಯಾಣ್ಮ** (ನಾ). ದಿಕ್ಕಿನ ಅಧಿಪತಿ ; ದಿಕ್ಪಾಲಕ : ಅಲರಂಬನಯ್ಯ ಬದಿಯುಮರ್ದುಂಬರೆಱೆಯ ದೆಸೆಯಾಣ್ಮರಲರ್ವಟ್ಟೆಗರು . . . ಅಱುಮೊಗನೊಡನೆ ಕಱೆಗೊರಲನೊಪ್ಪಿರ್ದನು (ಧಾವಚಂ. ೯-೪೬) : ದೆಸೆಯಾಣ್ಮರ ಪುರವಿದಕೆಣೆಯಲ್ಲೆಂದು ನಸುನಗೆ ಪುರಲಕ್ಷ್ಮಿಯುವಳ ದಶನಪಂಕ್ತಿಗಳ ಚೆಲ್ವಿನೆ ಕೋಟೆಯಾ ಕಿನೆಯೆಸೆದುವು (ಶಂನವಿ. ೭-೫) ; ದೆಸೆಯಾಣ್ಮರುಂ ಸಂತಸಂಗೊಂಡು ಮುಂತೆ ಆ ಪಿರಿಯ ರಕ್ಕಸನ ಕಡೆಯಂ ಕಾಯುತಿರ್ದರ್ (ಅದ್ಭುತ. ೪೭-೦೭). [ ದೆಸ್ಎ$_2$ + ಅಣ್ಮ (<ಅಳ್ಮ) ]

**ದೆಸೆಯಾನೆ, ದೆಶೆಯಾನೆ** (ನಾ). ಎಂಟುದಿಕ್ಕುಗಳಲ್ಲಿಯೂ ಭೂಮಿಯನ್ನು ಹೊತ್ತಿರುವುದೆಂದು ನಂಬಲಾದ ಐರಾವತವೇ ಮೊದಲಾದ ಆನೆ ; ದಿಗ್ಗಜ : ದೆಸೆಯಾನೆಗಳಾನನದೊಳ್ ಪಸರಿಸಿ ದುಗ್ಧೋದಬಿಂದು . . . ಬೆಳ್ಪಸದನದಂತಿರ್ದುದಜಿತ ಸವನೋತ್ಸವದೊಳ್ (ಅಜಿಪು. ೪-೫೯) ; ಎಣ್ದೆಸೆಯೊಳಿರ್ದ ದೆಸೆಯಾನೆಗಳಂ ಜಳಕೇಳಿಗೆ ಕರೆವಂತಿರೆ (ಮಲ್ಲಿಪು. ೨-೫೦) : ಉಲಿದೆಂಟುಂ ದೆಸೆಯಾನೆಯುಂ ಪಿಡಿದು ಕೋಡಂ ಕಿಟ್ಟು ತಾರೆಂಬುದೇಂ . . . ಬೀರಮೇ (ಕವಿಕಾ. ೨೧೦) : ದೆಸೆಯಾನೆಗಳುಱೆ ಬೆರ್ಚೆ ಕಡಲು ತೆರೆಮಸಗಿ ಮೇರೆಯ ಮೀಱೆ ಪೆರ್ಚೆ ಎಸೆದುದು ಜಯದುಂದುಭಿನಾದ (ಕುರಾಹಂ. ೧೦-೭೫). **ದೆಶೆಯಾನೆ.** ದೆಶೆಯಾನೆಗಳ್ಕ=ಒಂದು ಬಿರುದು : ಮಹಾಮಂಡಲೇಶ್ವರನಯೋಧ್ಯ ಸಿಂಹಾಸನಂ [ಕಂ]ಬುಕುನ್ನೂರ್ಪುರವರೇಶ್ವರಂ ದೆಶೆಯಾನೆಗಳ್ಗನಳಂಪೂರ ಭುಜಂಗರಿಪು ಪಕ್ಷ[ಕ್ಷ]ಯಕಾರಣಂ (ಕಇಳ. ೪೦-೫೮-೧೧ ; 1087).

[ ದೆಸ್ಎ$_2$ + ಆನೆ$_1$ ]

**ದೆಸೆವಂತ** (ನಾ). = ದೆಸೆಗಾರ: ದೆಸೆವಂತರಾಗಿ ಬದುಕ್ಯಾರೆ ರಾಯರು (ಜಗೀತ. ೮೦). [ ದೆಸ್ಎ$_1$ (<ದಸೆ) + – ವಂತ ]

**ದೆಸೆವಡೆ** (ಕ್ರಿ). ಅದೃಷ್ಟವನ್ನು ಹೊಂದು ; ಭಾಗ್ಯವನ್ನು ಪಡೆ ; ಭಾಗ್ಯಶಾಲಿಯಾಗಿರು : ದೆಸೆವಡೆದು ಕೆಲವುದಿನ ಬಸವನಿದ್ದಂತಿರ್ದು . . . ಬಸವ ರಸೆಯಲ್ಲಿ ಬಿದ್ದಳಿದುದೆಂಬ ಬಿಱುನುಡಿಗೇಳಿ (ಗುರುಚಾ. ೧೦-೮೩).

[ ದೆಸ್ಎ$_1$ (<ದಸೆ) + ಪಡೆ$_1$ ]

**ದೆಸೆವರಿ** (ಕ್ರಿ). ದಿಕ್ಕುದಿಕ್ಕಿಗೆ ಓಡು ; ಗುರಿಯಿಲ್ಲದೆ ಚಲಿಸು ; ಸಿಕ್ಕಿದ ಕಡೆಗೆ ಹೋಗು : ಉರಿ ಕೊಳೆ ದೆಸೆಗಾಣದ ದೆಸೆವರಿವರಿದಂ ಕುಜಂಗಳಂ ಪಡಲ್ವಡಿಸಿ ಭಯಂಬೆರಸೊಳೆಱೆ ನೆಗೆದುದಾ ವನಕರಿಶರಭಕಿಶೋರ ಕಂಠಗರ್ಜನೆ ಬನದೊಳ್ (ಪಂಪಭಾ. ೫-೯೧). [ ದೆಸ್ಎ$_2$ + ಪರಿ$_2$ ]

**ದೆಸೆವಲಿ** (ನಾ). ೧. (ಶಾಂತಿಕರ್ಮ ಮೊದಲಾದ ಸಂದರ್ಭಗಳಲ್ಲಿ) ದಿಗ್ದೇವತೆಗಳನ್ನು ತೃಪ್ತಿಪಡಿಸುವುದಕ್ಕಾಗಿ ಕೊಡುವ, ಅನ್ನಾಹಾರಾದಿ ವಸ್ತು; ದಿಗ್ಬಲಿ. ೨. (ಆಲಂ) ದೇಹವನ್ನು ತುಂಡರಿಸಿ ದಿಕ್ಪಾಪಾಲಾಗಿ ಬಿಸಾಡುವಿಕೆ ; ಬಲಿಕೊಡುವಿಕೆ : ಪಿಡಿಪಿಣ್ಣ[೦]ಗೊಣ್ಡು ದೆಸೆವಲಿಗೆಱಪೊಟ್ಟು (ಸೌಇಇ. XI-1, ೦೧-೨೦ ; 965) ; ಪೂರ್ವಪದಂ ತದ್ಭವಮಾದುದರ್ಕೆ – ಗ್ರಾಮರಸ–ಗಾವರಸ . . . ದಿಶಾಬಲಿ – ದೆಸೆವಲಿ (ಶಮದ. ೨೮೯ ಪ್ರಯೋ). 'ದೆಸೆವಲಿಗೊಡು' ಪರಾ. [ ದೆಸ್ಎ$_2$ + ಬಲಿ$_2$ ]

**ದೆಸೆವಲಿಗುಡು** 'ದೆಸೆವಲಿಗೊಡು' ನೋ.

**ದೆಸೆವಲಿಗೆಯ್** (ಕ್ರಿ). ದಿಕ್ಕುಗಳಿಗೆ ಬಲಿಯಂನ್ನಾಗಿ ಮಾಡು; ಕತ್ತರಿಸಿ ದಿಕ್ಪಾಲರಾಗಿ ಎಸೆ: ಉಚಿದಿರ್ದೊಡಾನಬೀವಂ ನಿನ್ನನಿಲ್ಲಿ ದೆಸೆವಲಿಗೆಯ್ಕುಲ್ (ಪಂಪಭಾ. ೬-೫೭); ಕೆಲರಂ ದೆಸೆವಲಿಗೆಯ್ದಂ ಕೆಲರಂ ಭುಜಬಲದಿನಟ್ಟಿದು ಶಿರೆಯೊಳ್ಕೊಯ್ದಂ (ಗದಾಯು. ೩-೧೧); ಅನ್ಯಕಾಂತೆ ಗಾಟಿಸಿದ ದುರಾತ್ಮನಂ ರಣದೊಳನ್ನಿದನವ್ಪೊಡವೋಘಬಾಣದಿಂ ದೆಸೆವಲಿಗೆಯ್ವೆಂ (ಪಂಪಾಮಾ. ೧೧-೩೩): ನಾಳೆ ನಿನ್ನಂ ದೆಸೆವಲಿಗೆಯ್ವಲ್ಲದೆ ಮಾಣೆಂ (ಧರ್ಮಾಮೃ. ೩-೧೦೦ ಅಡಿಪಾಠ); ಏಱು ತೆಜದ ತಾಳವಟ್ಟದ ಪೊಯ್ಲೊಳಂ ನಾಲ್ವತ್ತನಾಲ್ಕು ಗಾತ್ರಾಪರವಾತದೊಳಂ ದೆಸೆವಲಿಗೆಯ್ದು . . . ಮಹಾವನವಂ ವನಕೇಳೀಗಜಂ ಪೊಕ್ಕುದಂ ಕೇಳ್ದು (ಚಂದ್ರಪ್ರ. ೯-೧೦೦ ವ). [ ದೆಸೆವಲಿ + ಕೆಯ್$_1$ ]

**ದೆಸೆವಲಿಗೊಡು, ದೆಸೆವಲಿಗುಡು** (ಕ್ರಿ). = ದೆಸೆವಲಿಗೆಯ್: ಈಕೆ . . . ರಕ್ಕಸರ ಬಳಗವಂ ಸದೆದು ದೆಸೆವಲಿಗೊಟ್ಟು ನಿಮ್ಮಂ ಪೊರೆದ ಶ್ರೀರಘುರಾಮನ ಪಟ್ಟದ ರಾಣಿ (ರಾಮಾಶ್ವ. ೩೯-೩). **ದೆಸೆವಲಿಗುಡು:** ಅಂತು ಭಯ.ಬಲದ ಚಾತುರ್ದಂತಂ ಪೆಸೇಟ್ ಕಾದಿ ದೆಸೆವಲಿಗುಡಲ್ (ಪಂಪಾಮಾ. ೧೩-೯೭); ಬಸಸನದೊಳ್ ದಶಮುಖನಂ ದೆಸೆವಲ್ಗಿಗುಡಲೆಂದು ಭರತ ಶತ್ರುಘ್ನರ್ . . . ಸನ್ನಾಹಭೇರಿಯಂ ಪೊಯಿಸುವುದುಂ (ಪಂಪಾಮಾ. ೧೪-೬೨). [ ದೆಸೆವಲಿ + ಕೊಡು$_1$ ]

**ದೆಸೆವಳ** (ನಾ). ದಿಕ್ಕುಗಳ ಮೇಲೆ ಅಧಿಕಾರವುಳ್ಳವನು: ದಿಕ್ಪಾಲ: ಆಗಳ್ ಸೌವಿತ್ರಿ ಡೋಲಾಯಮಾನಮಾನಸನಾಗಿ ದೇವಿಯರಂ ಬಲವಂದು ಕೈಮುಗಿದು ದೆಸೆವಳರ್ಗೆ . . . ಕೇಳಿಸಿ (ರಾಮಾಶ್ವ. ೩೯-೨).

[ ದೆಸೆ$_2$ + - ವಳ (< - ವಾಳ$_1$) ]

**ದೆಸೆವಾನ** (ನಾ). ಅದೃಷ್ಟಶಾಲಿ; ಭಾಗ್ಯವಂತ: ಬಹಳ ದೆಸೆವಾನ ಆಗುತ್ತ್ಯನಂತ ಅಣ್ಣ ಹೇಳೇ ಹೇಳುತ್ತಾನೆ (ದಾಕೊಟ. ೦೦೦).

[ <ಸಂ. ದಶಾವತ್ ]

**ದೆಸೆವಿದ್ದಂ** 'ದೆಸೆಬಿದ್ದಂ' ನೋ.

**ದೆಸೆವೆಟ್ಟು** (ನಾ). ದಿಕ್ಕಿನ ಕೊನೆಯ ಬೆಟ್ಟ: ತೆಱುವುಗುಡದೆ ಸೂಟ್ಕೆಸುವ ನಿಸ್ಸಾಳದ ಬಲ್ಸರಕೆ ದೆಸೆವೆಟ್ಟುಗಳ್ ನಿಬ್ಬರಂ ಬಿರಿಯೆಯುಂ (ಕಬ್ಬಿಗಕಾ. ೨೮೮). [ ದೆಸೆ$_2$ + ಬೆಟ್ಟು$_2$ ]

**ದೆಸೆಹೊದ್ದು** (ಕ್ರಿ). ಸಾನ್ನಿಧ್ಯವನ್ನು ಹೊಂದು; ಹತ್ತಿರದಲ್ಲಿರು: ಬಿಸರುಹಕುಸುಮಜನ ಕಪಾಲವ ಹಿಡಿದಾತನ ಕೈಯ:ಲ್ಲಿ ಗಸಣಿಗೊಳಗಾದರು ಆತ್ಮನ ರಸಿಕವನಱಿಯದೆ ಈ ಹುಸಿಕರ ನೋಡಿ ದೆಸೆಹೊದ್ದಿಹನೆಂದರೆ [ಪಾಠಾಂ. ಹೊದ್ದೆನೆಂದೆ] ಪಶುಪತಿ ದೂರ (ಷೋಡಶಪು. ೩೯-೨೯೩).

[ ದೆಸೆ$_2$ + ಹೊದ್ದು$_1$ (<ಪೊರ್ದು$_1$) ]

**ದೇಂಟು, ದೇಟು** (ನಾ). ೧. ಮರ, ಗಿಡ ಮುಂತಾದವುಗಳ ತಾಳು,- ಕಾಂಡ: ಕಲಂಬ = ೧. ಬಾಣ. ೨. ದೇಂಟು (ಗಂಗಾಮು. ೭೪). ೨. ತೊಟ್ಟು; ವೃಂತ; ದಂಟು; ತುಂಬು: ಅದರ ಎಲೆಗಳು . . . ದೇಂಟನ ಬುಡದಿಂದ ತ:ದಿಯ ತನಕ ಎರಡೆರಡರಂತೆ ಸಾಲುಗೊಂಡಿರುತ್ತವೆ (ಷುಂಬಯ. ೪-೫೪). **ದೇಟು:** ೨. ವೃಂತ = ಕಾವು, ದೇಟು, ತುಂಬು. (ಗಂಗಾಮು. ೨೯೫); ಗೀತೆ ಕಲ್ಪತರುವಿನ ಒಂದು ಮೊಳಕೆಯೆಂದರೆ, ಜ್ಞಾನ, ಕರ್ಮಗಳು ಅದರ ಎರಡು ಎಲೆಗಳು, ಅದಕ್ಕೆ ಭಕ್ತಿಯೇ ದೇಟು (ಧರ್ಮಸಾ. ೧೦೮); ಎಲ್ಲಾ ಒಂದೇ ದೇಟನ ಮಾವುಗಳು ನಾವು ದೇವನ ದೇಟನ ಕಾಯಿಗಳು (ನವಲ್ಲಿ. ೧೩೨-೬); ಸರಳವಾಗಿ ಒಂದು ಹೂವಿನ ದೇಟನಂತೆ ಪುವಿಪಾಲೆಯು ಬೆಳೆದಿದ್ದಳು (ನಮಜೀ. ೯೬೨): ಅಲ್ಲಿ ದೇಟಗೆ ಅಂಟಿಕೊಂಡು ತಪ್ಪಗಿನ ಕಳ್ಳನಂತೆ ನುಸುಳುತ್ತಿರುವ ಆ ಹಸಿರು ಕೀಟವನ್ನು ಕಂಡಿರಾ ? (ಗಾಳಿಪ. ೦೦೭).

[ ದೇ.?೭ ./ ಮರಾ. ದೇಂಟ್, ದೇಟ್ ]

**ದೇಕಗಾವುಂಡ** (ನಾ). ಒಬ್ಬಾತನ ಹೆಸರು: ತನ್ನ ತಮ್ಮಂ ದೇಕಗಾವುಣ್ಡಂ ಮಾಡಿಸಿದ ಶಿವಾಲಯ (ಎಕ. VII, ಶಿಕಾರಿ. ೨೦-೦೨; 1082).

[ ದೇಕ$_0$ + ಗಾವುಂಡ (<ಗಾಮುಂಡ) ]

**ದೇಕಬ್ಬೆ** (ನಾ). ಒಬ್ಬಾಕೆಯ ಹೆಸರು: ಪೊನ್ನಬ್ಬೆಗಂ ರವಿಗಂಗಂ ಪುಟ್ಟಿದ ದೇಕಬ್ಬೆಯುರಂ . . . ಏಚಂಗೀಯೆ (ಎಕ. IV, ಹೆಗ್ಗಡ. ೧೮-೧೭; 1057).

[ ದೇಕ$_8$ + ಅಬ್ಬೆ$_1$ ]

**ದೇಕಾರ** (ನಾ). ದಾನವಾಗಿ ದೊರೆತುದು: ಆಚಾರ್ಯರೇ ದಕ್ಷಿಣೆ, ದೇಕಾರಗಳು ಕೂಡಿ ತಲೆಗೆ ಎಷ್ಟೆಷ್ಟು ಸಿಕ್ಕಿತು ? (ನಲದ. ೩೩).

[ ←ಮರಾ. ದೇಕಾರ್ ]

**ದೇಕು, ಡೀಕು, ಡೇಕು, ತೀಕು, ದೇಗು, ದೋಕು** (ಕ್ರಿ). ೧. ತಗ್ಗಿ ಮುಂದುವರಿ; ಕುಳಿತುಕೊಂಡು ಜರುಗು,-ಸರಿ: ಗುಡಿಯೊಳಕ್ಕೆ ದೇಕಿಕೊಂಡು ಬರಬಹುದಾಗಿತ್ತು (ಗರಿಶ್ರ. ೦೩). ೨. ಕಷ್ಟಪಡು; ಏಗು; ಹೆಣಗು: ಮ್ಯಾಲೀನ ಓಣೀಯ ಮೂಗ ಸಂಪಗಿ ಹೆಣ್ಣ ದೇಕೂದ ಬಂತ ನಿನಗಾಗಿ (ಕನ್ನಕಾ. ೧೦೮); ನಾನು ಹೊರಗೆ ದುಡೀತಾ ಇದೇನೆ, ನೀನತ ಒಳಗೆ ದೇಕುತಾ ಇದೀಯೆ (ಚಲುಮು. ೪೧). ೩. (ಗೋಲಿಯಾಟದಲ್ಲಿ ಸೋತವನು) ಕೈಯ ಗಿಣ್ಣಿನಿಂದ ಗೋಲಿಯನ್ನು ಮುಂದಕ್ಕೆ ನೂಕು,- ತಳ್ಳು: ಗೋಲಿಯಾಟ ಆಡಿ ಸೋತೂ ಕೂಡ ದೇಕದೆ ಹೋಗುವ ಭಂಡರೂ ಇದ್ದಾರೆ (ಊಹಿ). **ಡೀಕು:** ೨. ಬರಿಯ ಒಂದು ವಿಷಯದಲ್ಲಿ ಸ್ವಲ್ಪ ಗುಣ ಕಡಿಮೆ ಬಿದ್ದು ನವಾಸಾಗಬೇಕು; ಅದಕ್ಕಾಗಿ ಮತ್ತೆ ಆರು ತಿಂಗಳಾದರೂ ಡೀಕುವುದೆ ? (ಭೂಮಿತಾ. ೦೦). ೩. ವೆಂಕಟೇಶನನ್ನು ಸೋಲಿಸಿ ಡೀಕಲಿಕ್ಕೆ ಹಚ್ಚಿದ್ದಾಗ್ಗೆ ಅವನ ಕೈತೊಗಲೆಲ್ಲ ಸುಲಿದು ಬಿಡುತ್ತಿತ್ತು (ಘಲಸಂ. ೫೭). **ಡೇಕು:** ೨. ಅವರೆಲ್ಲ ಗಾಣದೆತ್ತಿನಂತೆ ಬೆಳಗಿನಿಂದ ಸಂಜೆಯವರೆಗೆ 'ಡೇಕು'ತ್ತಿರುವಾಗ ತಾನು ಹಾಯಾಗಿ ಕೈಚಲ್ಲಿ ಕುಳಿತುಕೊಂಡಿರಬೇಕೆ ? (ಕರಿಹಾ. ೨೪). **ತೀಕು:** ೩. ಗೋಲಿಯಾಟದಲ್ಲಿ ಸೋತು, ತೀಕಿ ಮುಂಗೈಯನ್ನೆಲ್ಲಾ ಗಾಯ ಮಾಡಿಕೊಂಡಿದ್ದನು (ಊಹಿ). **ದೇಗು:** ೧. ಸರಸ್ವತಿ ಬಹಳ ಪ್ರಯಾಸದಿಂದಲೇ ದೇಗಿಕೊಂಡು ಬಂದು ಅವನನ್ನು ಸಮೀಪಿಸಿದಳು (ಹೇಮಳೂ. ೪೭). **ದೋಕು:** ೩. ದೋಕು ಬಾಮ್ಮ ಆನಂದು . . . ದೋಕೋಕ್ಕೆ ಹೆದರುತ್ತೇನೇನೋ ? (ನಡದಾ. I, ೫೨೨). ೪. ಹುಲ್ಲನ್ನು ಕೆತ್ತು. 'ಏಗು$_1$', 'ದೋಕರಿ' ಪರಾ.

[ ದೇ.೫ ತುಳು. ದೋಗು; ತೆಲು. ದೇಂಕು, ಡೇಂಕು ]

**ದೇಕ್ಷಿ** (ನಾ). ಅಡುಗೆಗೆ ಉಪಯೋಗಿಸುವ ಒಂದು ಬಗೆಯ ದೊಡ್ಡ ಪಾತ್ರೆ: ಹಿಡಿಪಾತ್ರೆಗಳು, ತಟ್ಟೆಗಳು, ಡಬ್ಬಗಳು, ಡಬರಿಗಳು, ದೇಕ್ಷಿಗಳು, ಹಾಲಿನ ಪಾತ್ರೆಗಳು ಮೊದಲಾದುವನ್ನು ಅಲ್ಯೂಮಿನಿಯಂನಿಂದ ಮಾಡಲಾಗುತ್ತದೆ (ಗೃಹವಿ. ೦೭೭).

[ ←ಪಾರ. ಹಿಂ. ದೇಗಚೀ, ದೇಗಚಾ; ಮರಾ. ದೇಖಚಾ, ದೇಗಚಾ ]

**ದೇಖಣೆ** (ನಾ). ಪ್ರದರ್ಶನ: ಅದರಲ್ಲಿ ಸಾಕಷ್ಟನ್ನು ಮಾರಿಯೂ ಮಾರುತ್ತಾರೆ. ಆದರೆ ದೇಖಣೆಗೆ ಇರಿಸುವುದಿಲ್ಲ (ಸ್ವಕ್ಷಹೊ. ೪೭).

[ ←ಮರಾ. ದೇಖಣೇ = ನೋಡು ]

**ದೇಖರಖಿ** 'ದೇಖರೇಖಿ' ನೋ.

**ದೇಖರೇಖಿ, ದೇಖರಖಿ** (ನಾ). ಮೇಲ್ವಿಚಾರಣೆ; ಉಸ್ತುವಾರಿ; ನೋಡಿಕೊಳ್ಳುವುದು; ರಕ್ಷಣೆ: ಗ್ರಾಂಗ ಮುಖ್ಯರು ತಮ್ಮ ಗ್ರಾಂಗಿನ ದೇಖರೇಖಿ ಮಾಡುತ್ತ ಓಡಾಡಹತ್ತಿದರು (ಅನ್ನ. ೨೦೩); ನಿನ್ನ 'ದೇಖರೇಖಿಯಿದ್ದರೆ ಸಾಕು' ಎಂದು ಗಣಪೂನನ್ನು ಕಳಿಸಿದರು (ಮಾಂತಲುದಾ. ೭೦); ಅವರ ಹುಣಸೀಗಿಡದ ಹೊಲದಾಗ . . . ಅಪ್ಪು ದೇಖರೇಖಿ ಮಾಡಬೇಕಾಗೇದ (ತಿಹುಗು. ೪೦). **ದೇಖರಖಿ:** ಅದೆಲ್ಲದರ ದೇಖರಖಿ ರಾಜಪ್ಪನ ಕಡೆಗಿತ್ತು (ದೀಪಹ. II, ೮). [ ←ಹಿಂ. ಮರಾ. ದೇಖರೇಖ್ ]

**ದೇಖಾವಳಿ** (ನಾ): = ದೇಖರೇಖಿ : ಅಸ್ವಾಸ್ಥ್ಯಯ ದೇಖಾವಳಿ (ಆರೈಕೆ) ನಡೆಯದಿರುವುದನ್ನು ಕಂಡು ಪದ್ಮನಾಭಭಟ್ಟರಿಗೆ ಬಲು ದುಗುಡವಾಯಿತು (ಭ್ರಾಂತಿಸು. ೮೭). [ ←ಹಿಂ. ದೇಖಾಭಾಲಿ, ದೇಖಭಾಲ್ ]

**ದೇಖಾವೆ** (ನಾ). ನೋಡತಕ್ಕದು ; ದೃಶ್ಯ ; (ನಾಟಕ, ಸಿನಿಮಾ ಮೊದಲಾದ) ಪ್ರದರ್ಶನ : ನಿಮ್ಮ ದೇಖಾವೆಯೇ ಅಲ್ಲಿಯ ದೊಡ್ಡ ಆಕರ್ಷಣೆ (ಕೈಲಾಸ. ೯೦); ಲಂಡನಿನಲ್ಲಿ ಅದಿತ್ಯವಾರ ಸಿನಿಮಾ ದೇಖಾವೆಗಳೂ ಇರುವುದಿಲ್ಲ (ಅಪೂಪ. ೯೧) ; ಒಂದೂವರೆ ತಾಸಿನ ಈ ದೇಖಾವೆಯಲ್ಲಿ ಅರುವತ್ತು ಎಪ್ಪತ್ತು ಮಂದಿ ನಟರು ಬಂದು ಯುಗಾಂತರ ಭಾರತದ ಒಂದು ದೃಶ್ಯವನ್ನು ತೋರಿಸಿದರು (ಹುಮುಹು. ೩೦೯).

[ ←ಹಿಂ. ದೇಖಾವ್ ; ಮರಾ. ದೇಖಾವಾ ]

**ದೇಖೀಲು** (ಅ).ಎಲ್ಲಾ ಸೇರಿ ; ಒಟ್ಟಿನಲ್ಲಿ ; ಕೂಡಿ : ಬಿಡಾರದಲ್ಲಂತೂ ಆಳುಕಾಳು ದೇಖೀಲು ಇಪ್ಪತ್ತು ಜನಗಳ ಮೇಲೆ ಭೋಜನಕ್ಕೆ ಸೇರುತ್ತಿದ್ದರು (ಕಲಸಿ. ೨೩೩). [ ←ಮರಾ. ದೇಖೀಲ್ ]

**ದೇಗು** 'ದೇಕು' ನೋ.

**ದೇಗುಲ, ದೇವಳ$_1$, ದೇವುಲ** (ನಾ). ೧. ಗುಡಿ ; ದೇವಸ್ಥಾನ ; ದೇವಾಲಯ : "ದೇಗುಲಂಗಳನೆ ಆಯತ(ನ)ವೆಂಬುದು" (ಹಲಾಯು. ೪೯-೦೩೪) ; ಗಾವುಂಣ್ಡಸ್ವಾಮಿಗಳ ಮಗನ್ನಾಗಮ್ಮಯ್ಯ ಕಲ್ಲ ದೇಗುಲ ಮಪ್ಪಮಾಡಿಸಿದಡೆ ಸಲಿಸಲೆನ್ದು ಕೊಟ್ಟ ಮಣ್ಣು ಒರ್ಕಣ್ಡುಗ (ಎಕ. III, ಮಂಡ್ಯ. ೦೪-೯ ; ೮೯೬) ; ನಿಜರಾಜರಾಜಧಾನಿ ವೆಟುವಿಡುವಿನೊಳಿನ್ದ್ರವಿಮಾನಸಮಾನಮಪ್ಪ [ದೇಗು]ಲಮಂ ಮಾಡಿ (ಸೌಇಇ. XI-1, ೨೨-೯ ; ೮೯೭) ; ಗೋವರಣ್ಣ ಬರ ಪಾಯಿಸಿ ಪೋಟಯಿಲರ್ ತಗುಳ್ದು ತತ್ರಬ ತಱಿದಿಕ್ಕಿ ದೇಗುಲಕೆ ಪೆರ್ಮರನಂ ಕಡಿವಂತೆ ಮಾಡಿದರ್ (ಕಂಶಪ್ರಾ. ೭-೯೩ ಪ) ; ಸಾವಾಗ ದೇಹವ ದೇಗುಲಕ್ಕೊಯ್ಯೆಂಬ ದೇವರಿಗೆ ಹಣ ಬಿಟ್ಟು ಹೇಳಿತ್ತ (ಬಸವ. ೩೩೨) ; ವಸುಧೆಯೊಳು ಪೊಡವಡಲು ದೇಗುಲಂ ಬಿರ್ದ ನುಡಿ ಪಸರಿಸುವ ನಾಡಗಾದೆಯ ಕಡಿದಿ ನಿಮ್ಮ ಸೇವಿಸ ಬಂದು ನಮಗಾಯ್ತು ನರಕವು (ಸಿದ್ಧರಾ. ೦-೩೭) ; ಒಳಗಿದ್ದ ದೇವನ ಕಾಣದೆ ಹೊರಗೆ ದೇಗುಲವ ಪೂಜಿಸುವೆಗ್ಗನಂತೆ (ಧರಹ. ೨-೩೩). ೨. ಹಾಳು ಬಿದ್ದ ಜಾಗ ; ಪಾಳುಮನೆ : ಬಡವಾದಿರರಸ ಕಾಲೊಳ್ ನಡೆದಪರೊಡ ನಾರುಮಿಲ್ಲ ಕಡಲೆಗಳೇಂ ನಿಮ್ಮಡಿಯೊಳಗೆ ಪಡುವ ದೇಗುಲದೆಡೆ ಯಾವುದು ಕುಡದ ನಿಮಗಮಿಯಡಱಾಯ್ತೆ (ಕಮಡ. ೦೦೨ ಪ್ರಯೋ). **ದೇವಳ$_1$** : ೧. ನನ್ನ ಜೀವನಾವಸ್ಥೆಯ ವಿಚಾರದಲ್ಲಿಯೂ ಹೀಗೇನೆ! ದೇವಳದ ಪೂಜೆಭಟ್ಟನಾಗಿದ್ದೆನೆಂದು, ಹರಿಕತೆಯ ಹರಿದಾಸನಾಗಿದ್ದೆನೆಂದು ಏನೆಲ್ಲ ಹೇಳುತ್ತಿದ್ದಾರೆ (ರೂಪಕಾ. ೨೯) ; ಸ್ಥಾನಿಕರಿಗೆ ಅನಾದಿಯಲ್ಲಿ ದೇವಳದ ಅರ್ಚಕತನವಿತ್ತು (ಕುಳುನಾ. ೧೦೭). **ದೇವುಲ** : ೧. ಬ(೦)ಮ್ಮಯ ನಾಯಕ x x x ಯ೦ಂ ದೇವುಲದ ತನ್ನ ಪೂಜೆ ವೃತ್ತಿಯೊ x x x (ಸೌಇಇ. XI-II, ೦೯೭-೭ ; 1121).

[ <ಸಂ. ದೇವಕುಲ./ಪ್ರಾ. ದೇಉಲ./ಮರಾ. ದೇಊಳ, ದೇವಳ ]

**ದೇಗುಲಕಾಱ** (ನಾ). ೧. ದೇವರ ಪೂಜೆ ಮಾಡುವ ಅರ್ಚಕ. ೨. ದೇವಸ್ಥಾನದ ಪಾರುಪತ್ತೆಗಾರ,- ರಕ್ಷಕ : ಆ ದೇಗುಲಕಾಱ ರಱಿಯದುದಂದದಿನೆಯ್ದಿಯಾ ದೇವಿಯ ಬೆಂಗಡೆಯೊಳು ಭೇದಿಸದಂದದರೊಳ ಡಗಿರ್ದು (ಪ್ರಭುಲಿ. ೮-೩೦). [ ದೇಗುಲ + – ಕಾಱ ]

**ದೇಗುಲದೋಂಟ** (ನಾ). ಹೂವು, ತುಳಸಿ, ಬಿಲ್ವ ಮೊದಲಾದುವನ್ನು ಬೆಳೆಸುವ, ದೇವಸ್ಥಾನಕ್ಕೆ ಸೇರಿದ ಉದ್ಯಾನ : ದೇಗುಲದೋಣ್ಟಂ ಪ x x ವೆ ನೂಱು ಬತ್ತದ ಮಣ್ಣು ಯಾಱುವಸುವಂ ಮಾದೇವಗ್ಗೆ ಮಾವಳ್ಳಿ ಗೊಣ್ಡದೇವಗಂ ನನ್ನಾವೆಳಕಿಬ್ಗೆ ಕೊಟ್ಟಂ (ಎಕ. IV, ಗುಂಡ್ಲುಪೇ. ೯೩-೨೩ ; 1049). [ ದೇಗುಲ + ತೋಂಟ ]

**ದೇಗುಲವಱೆ$^1$** (ನಾ). ದೇವಾಲಯಗಳಲ್ಲಿ ಬಾರಿಸುವ ತಮಟೆ, ನಗಾರಿ ಮುಂತಾದ ಚರ್ಮವಾದ್ಯ : ಸನ್ನಯ ಘಂಟಾರವ ದೇಗುಲವಱೆ ರನ್ನಘಟಿದ ನಿರ್ಮಲಾಂಬು (ಶ್ರೀಪಾಲ. ೧೦-೩೪) ; ದೇಗುಲವಱೆಯ ಧ್ವನಿಗಳುಱೆ ಪೆರ್ಚಿದುವು (ಅಬವು. ೫-೨೦) ; ಪೊಳಗಿದುವಲ್ಲಲ್ಲಿ ದೇಗುಲ ವಱೆಗಳು (ಕಂಸವಿ. ೯-೦೭೭). [ ದೇಗುಲ + ಪಱೆ$^1$ ]

**ದೇಗುಲಿಗ** (ನಾ). ದೇವಸ್ಥಾನದ ಸೇವಕ,-ಪರಿಚಾರಕ : ಆಚರಣಕ್ಕೆ – ದೇಗುಲಿಗಂ, ಅಕ್ಕರಿಗಂ, ಚಂದಸಿಗಂ (ಶಮದ. ೦೯೭ ಪ್ರಯೋ).

[ ದೇಗುಲ + – ಇಗ./ಪ್ರಾ. ದೇಉಲಿಅ ]

**ದೇಚಯ್ಯ** (ನಾ). ಒಬ್ಬಾತನ ಹೆಸರು : ಶ್ರೀ ದೇಚಯ್ಯ (ಎಕ. II, ೪೭೦-೦ ; 1060). [ ದೇಚ$_0$ + ಅಯ್ಯ$_1$ ]

**ದೇಟ** (ನಾ). ಒಂದು ಬಗೆಯ ವೀಳೆಯದೆಲೆಯ ಬಳ್ಳಿ ; ಕಾಡು ವೀಳೆಯದೆಲೆಯ ಬಳ್ಳಿ : ಕಾನಡಾ ಜಿಲ್ಲೆಯಲ್ಲಿ ದೇಟೀಯೆಲೆಯ ಬಳ್ಳಿಗಳು ಅಡವಿಯಲ್ಲಿ ತಮಗೆ ತಾವೇ ಬೆಳೆದು ಕೊಳೆತು ಕೆಡುತ್ತಿರುತ್ತವೆ (ಕಥಾಗಿ. ೨೭೭). [ ←ಮರಾ. ದೇಂಟೀ, ದೇಂಠೀ ]

**ದೇಟು** 'ದೇಂಟು' ನೋ.

**ದೇಡ** (ನಾ). ನೇಕಾರ ; ನೆಯ್ಗೆಯವನು : ಬಡಗಿ ೧ ಕಂಪಾಱ ೧ ಸಂಮಗಾಱ ೧ ಅಸಗ ೧ ದೇಡ ಮಗ್ಗ x x ಪ್ಪಿನಿತೆ ಗಾವಲಿ ೨ . . . ಧಾರಾಪೂರ್ವ್ವಕಂ ಮಾಡಿಕೊಟ್ಟರು (ಸೌಇಇ. XX, ೦೭೯-೪೭ ; 1192) ಬಡಗಿ ಕಂಮ್ಮಾಱ ಅಕ್ಕಸಾಲೆ ಅಸಗ ಸಂಮ್ಮಗಾಱ ದೇಡ ಹೊಲೆಯರ ಕೂಡೆವೊಳಗಾಗಿ ಪುರದ ಬೀರವಣಮ ಬಿಟ್ಟರು (ಸೌಇಇ. XX, ೨೯೯-೬ ; 12ನೆಯ ಶತ) ; ಅಸಗ ಸಂಮ್ಮಗಾಱ ದೇಡ ಹೊಲೆಯರ ಕೂಂಟಿ (ಬೊಂಕಹ. ೦೯೩೭, ಸಿಂದಗಿ. ೩೯-೭ ; ?). [ <ದೇಡ ]

**ದೇಡಸೀರೆ** (ನಾ). ಒಂದು ಬಗೆಯ ಸೀರೆ : ಸೀರೆಗೆ ಪಾಗ ೧ ಪೊಟ್ಟಿಯ ಸೀಲೆಗೆ ಪೊಂಗೆ ಪಣ ೧ ದೇಡಸೀರೆಗೆ ಪೊಂಗೆ ಪಣ ೧ (ನಾಂದೇಡ್. ೩-೨೨ ; 1047). [ ದೇಡ + ಸೀರೆ$_1$ ]

**ದೇಣಾಲೇಣ** (ನಾ). ಹಣಕಾಸುಗಳನ್ನು ಬಡ್ಡಿಗೆ ಕೊಡುವುದು ಮತ್ತು ತೆಗೆದುಕೊಳ್ಳುವುದ ; ಲೇವಾದೇವಿ ವ್ಯವಹಾರ : (ಕ).

[ ←ಹಿಂ. ದೇನಲೇನಾ ; ಮರಾ. ದೇನ್‌ಲೇನ್ ]

**ದೇಣಿಗೆ** (ನಾ). ೧. ಕೊಡುಗೆ ; ದಾನ ; ದತ್ತಿ : ನಮ್ಮ ಭೌತಿಕ ನಾಗರಿಕತೆಯು ಇಂದಿನ ಉನ್ನತದೆಸೆ ಕೇವಲ ವಿಜ್ಞಾನದ ದೇಣಿಗೆಯಾಗಿದೆ (ನಿರಶಾ. ೦) ; ನಿನ್ನಿಂದ ಯಾವುದಾದರೊಂದು ದೇಣಿಗೆಯನ್ನು ದೊರಕಿಸುವದಕ್ಕಾಗಿಯಾಗಲಿ . . . ಛತ್ರಸಾಲನು ನಿನ್ನ ದರ್ಬಾರಕ್ಕೆ ಬಂದಿರುವುದಿಲ್ಲ (ರಾಮಿಕೇ. ೨೪೭) ; ಮನುಷ್ಯರು ಎಷ್ಟು ಕೊಟ್ಟರೂ ಸಾಲದು. ದೇವರ ದೇಣಿಗೆ ಮಾತ್ರ ಅಖಂಡವಾಗಿರುತ್ತದೆ (ಸ್ವ್ಯತಿಶಿ. ೧೦). ೨. ಅನುಗ್ರಹ ; ವರ : ಜಗತ್ತಿನಲ್ಲಿ ಕಲೆಯಷ್ಟು ಪವಿತ್ರವಾದದ್ದು ಬೇರೆ ಯಾವುದೂ ಇಲ್ಲ. ಇಂಥ ಪೂಜನೀಯ ದೇಣಿಗೆಯನ್ನು ಪಡೆದವರು ನಿಜಕ್ಕೂ ಧನ್ಯರು (ಗಂಗಾವ. ೦೩೯). [ ←ಮರಾ. ದೇಣಗೀ, ದೇನಗೀ ]

**ದೇಣೆ** (ನಾ). ೧. ಸಾಲ ; ಋಣ : ಶಿವಿಲ್‌ಕೋರ್ಟಿನವರು ದೇಣೆಗಾರನ ದೇಣೆಗೋಸ್ಕರ ಹಕ್ಕು ಬಾಧ್ಯತೆಯನ್ನು ಹರಾಜು ಮಾಡಿದರ (ಗ್ರಾಮೂಕ. ೭೯). ೨. ಕೊಡಬೇಕಾದ ಹಣ : ಬೊಂಬಾಯಿಯವರೆಷ್ಟೋ ಮಂದಿ ಕಾಗದ ಬರೆಯುತ್ತಿದ್ದಾರೆ, ಮೂರುಸಾವಿರ ದೇಣೆ ಕೊಡುತ್ತಾರೆಂದು ಬರೆದಿದ್ದಾರೆ (ಸನ್ಯಾಸಿ. ೮೭). [ ←ಮರಾ. ದೇಣೇ ]

**ದೇಣೇದಾರ** (ನಾ). ಸಾಲವನ್ನು ತೆಗೆದುಕೊಂಡಿರುವವನು ; ಸಾಲವನ್ನು ಹಿಂದಿರುಗಿಸಬೇಕಾಗಿರುವವನು : ಕೋರ್ಟಿನ ಡಿಕ್ರಿಯ ಅಮಲ್ಬಾರಿಯಲ್ಲಿ ಜಡ್ಜ್‌ಮೆಂಟ್ ದೇಣೇದಾರನು ದಸ್ತಗಿರಿ ಮಾಡಲ್ಪಡಲೂ ಕೂಡದು (ಗ್ರಾಮೂಕ. ೩೪). [ ದೇಣೆ + – ದಾರ$_1$ ]

**ದೇನಗವಳೆ** (ನಾ). ಒಂದುಂ ಬಗೆಯ ಉತ್ತಮ ಜಾತಿಯ ಬತ್ತ: ಮಾಧವೇಶ್ವರ ದೇವರ ದೇವತಾಪೂಜೆಗೆ . . . ನೈವೇದ್ಯಕ್ಕೆ ದೇನಗವಳೆ ನೆಲ್ಲು ಬಳ್ಳ ೨ (ಸೌಇಇ. XV, ೨೪೧-೬೮ ; 1174).

[ ದೇನ$_0$ + ಕವಳೆ$_8$ (<ಕಟವೆ) ]

**ದೇಯ$_1$** (ನಾ). ಶರೀರ ; ದೇಹ : ಭಂಮನಾಯಗ ರಾಮನು ಹುಲಿಯ ಕಾದು ದೇಯ ಬಿಟ್ಟು ವಳಿಕಾ ಸ್ವಸ್ತನಾದನು (ಎಕ. VI, ತರೀಕೆ. ೧೬-೬ ; 1193 ?); ದೇಯದ ನೀಲದುಂಗುರದ ಕಾಂತಿಗಳಿಂ ಕರಿದಾಗಿ ಶೋಭೆಯುಂ ಬೀಯದ ಪಾಣಿಶೋಣಮಣಿಕಂಕಣ ಸತ್ಕಿರಣಂಗಳಿಂದೆ ಕೆಂಪಾಯತವಾಗಿ ತೋಱದೊಡೆ ಮಾನಸದೊಳ್ ಪುದಿಯಲ್ಕೆ ಕೌತುಕಂ ಮಾಯದ ಮದ್ಯ ಮೆಂದಬಳೆ ಬಂದೆ ನೋಡಿದಳೊಂದು ಜಾವಮುಂ (ಧಾಧಪು. ೦೦-೦೩೪).

[ <ಸಂ. ದೇಹ ]

**ದೇಯ$_2$** (ಗು). ೧. ಕೊಡಬೇಕಾದ ; ದಾನ ಮಾಡಬೇಕಾದ. ೨. ಕೊಡುವ ; ದಾನಮಾಡುವ: ಸ್ವಸ್ಯ-ದೇಯದ್ರವ್ಯದ. ಅತಿಸರ್ಗಃ- ಕೊಡುವುದು (ತತ್ತ್ವಪ್ರ. ೨೮೩). (ನಾ). ೩. ದಾನಕೊಡಬೇಕಾದ ಪದಾರ್ಥ.-ವಸ್ತು: ದಾನಲಕ್ಷಣಮಪ್ಪಡೆ ದಾತೃವೆಂದುಂ ದೇಯವೆಂದುಂ ಪಾತ್ರವೆಂದುಂ ತ್ರಿವಿಧಮಕ್ಕುಂ (ಚಾವುಂಪು. ೨೨೬) : ಇದೇ ದೇಯಂ ಪಾತ್ರದೇಯಂ ಬಗೆವೊಡಿದು ದಲೆಂಬೀ ವಿಚಾರಕ್ಕಣಂ ಸಲ್ಲದೆ . . . ಕೊಟ್ಟು ದಾರಿದ್ರ್ಯದ ಮಾತಿಲ್ಲೆಲ್ಲಿಯುಂ ಬಾಟಿಗವಖಿಳಧರಾಚಕ್ರದೊಳ್ ತಾನೆನಿಪ್ಪಗ್ಗದ ಮಾತಂ ಮಾಡಿದಂ (ಚಂದ್ರಪು. ೬-೧೦೩). ೪. ದಾನವಾಗಿ ಕೊಟ್ಟುದು: ಪುರವರ್ಗ್ಗದ ಪನ್ನೆರಡು ಮನೆಯ ನೇಸಣಮುಮಂ ನೊನ್ನುಗಾಣಮುಮಂ ಬಿಟ್ಟರಿನ್ನೀ ದೇ[ಯ]ಮಂ ಮೇಲಾಳ್ಕೆಯರಸಿಂಗೆ (ಕಇ. V, ೬-೧೪ ; 1032 ?). 'ಅದೇಯ' ಪರಾ. [ ಸಂ. ]

**ದೇಯಾರ್ಥಿ** (ನಾ). ದಾನವನ್ನು ಬೇಡುವವನು ; ಯಾಚಕ ; ಭಿಕ್ಷುಕ : ರಾಯನಂ ಕಾಣಲಾಗದೆ ಮಂತ್ರಿಯೆಡೆ ಸಾರ್ವ ದೇಯಾರ್ಥಿಗಳಲು ನೀನು (ಮಂಕುಳ. ೦೪೪). [ ದೇಯ$_2$ + ಅರ್ಥಿ$_2$ ]

**ದೇಯಿ** (ನಾ). (ಕರಾ) ಹೆಣ್ಣುದೈವ್ವಗಳಲ್ಲಿ ಒಂದುಂ : 'ದೈಯೊಂ' (ಗಳು) = ದೈವ (ಗಳು) ಎನ್ನುತ್ತಾರೆ. ಅವುಗಳಲ್ಲಿ ಗಂಡುಭೂತಗಳೂ . . . ಇವೆ. ಹೆಣ್ಣುಭೂತಗಳೂ (ಉದಾ :-ಉಳ್ಳಾಲ್ದಿ, ಜುಮಾದಿ, ಕಲ್ಲುರ್ಟಿ, ದೇಯಿ, ಬೈದ್ಯದಿ ಇತ್ಯಾದಿ) ಇವೆ (ತುಳುನಾ. ೨೫೧).

[ ←ತುಳು. ದೇಯಿ./ಪ್ರಾ. ದೇಈ./ಸಂ. ದೇವೀ ]

**ದೇಯಿಂಗೆಱೆ** (ನಾ). ಒಂದುಂ ಸ್ಥಳದ ಹೆಸರು : ಇನ್ನೀ ದಣ್ಣದೊಳಂ . . . ಪುಟ್ಟಿದ ದ್ರವ್ಯಮುಮಂ ಕಳೆವುದ್ದಳೆಯ ಪಣಮುಂ ದೇಯಿಂಗೆಱೆಗೆ (ಎಇ. XX, ೬-೪೧ ; 1012). [ ದೇಯಿ + ಕೆಱೆ ]

**ದೇಯಿಮಯ್ಯ** (ನಾ). ಒಬ್ಬಾತನ ಹೆಸರು : ದಾತಾರಂ ದೇಯಿಮಯ್ಯ ಸೆಟ್ಟಿಯರ × ಗಂ ಮುಟ್ಟಂ ನಲ್ಲಯ್ಯನುಂ . . . ತಿಱ್ದಿ ವೇಳೆ (ಸೌಇಇ. XX, ೧೯-೬೯ ; 1016). [ ದೇಯಿ + ಅಮ (<ಅಮ್ಮ$_1$) + ಅಯ್ಯ$_1$ ]

**ದೇವ** (ಗು). ೧. ದೇವಲೋಕಕ್ಕೆ ಸೇರಿದ. 'ದೇವನದಿ' ಪರಾ. ೨. ಪ್ರಕಾಶಿಸುವ. (ನಾ). ೩. ದೇವಲೋಕದಲ್ಲಿ ವಾಸಿಸುವವನು ; ಸ್ವರ್ಗಲೋಕವಾಸಿ ; ದೇವತೆ ; ದಿವಿಜ : "ದಿವಮೆಂದಿಂತಿದು ತಾನಮುತ್ಕರ್ಭವನಂ ತದುದ್ಭವ [ರ್ಕಳ್] ದಿವೌಕಸರ್ ದೇವರ್ಕಳ್ . . . ತ್ರಿದಶರ್" (ವಸ್ತುಕೋ. ೬-೩೦) ; "ಆದಿತ್ಯಃ, ತ್ರಿದಶಃ, ಸುರಃ . . . ದೈವತಂ-ಈ ೨೧ ದೇವರ್ಕಳ ಪೆಸರ್" (ಹಲಾಯು. ೨-೪) ; ದೇವರ ಪಱೆಗಳ ರವದೊಳ್ ದೇವರ ಸುರಿವರಲ ಸರಿಯ ಬೆಳ್ಸರಿಯೊಳ್ ತದ್ದೇವವಿಮಾನಾವಳಿಯೊಳ್ ತೀವಿದುದೊರ್ಮೊದಲೆ ಗಗನದಿಂ ಧರೆ ಮಧ್ಯಂ (ಪಂಪಭಾ. ೧-೧೪೬) ; ಜೀವಾತ್ಮರುಗಳಿಗೆ ಅವರವರ ಕರ್ಮಾಧೀನವಾಗಿ ಬರುವ ದೇಹವನ್ನು ದೇವ ಮನುಷ್ಯ ತಿರ್ಯಕ್ ಸ್ಥಾವರವೆಂದು . . . ವಿಭಾಗವಮಾಡಿರುತ್ತಾರೆ (ಹಿಂದುಶಾ. ೦೪). ೪. ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನಾದವನು ; ಪರಮಾತ್ಮ ; ಭಗವಂತ ; ಪರಬ್ರಹ್ಮ : ಜೀವನುಮಶುದ್ಧನು ದೇವನತಿಶುದ್ಧನು (ಬಸವಪು. ೩೧-೨೯) ; ದೇವ ಬಂದ ನಮ್ಮ ಸ್ವಾಮಿ ಬಂದನೋ (ಪುರಂದ. ೧-೪೮ ಪಲ್ಲವಿ) ; ದೇವನಾರೆಂದೆನಲು ಬುದ್ಧಿಯ ಭಾವದಲಿ ಭಾವವನಱೆವ ಸದ್ಭಾವರೂಪನು ಸಾಕ್ಷಿಯಾತನೆ ದೇವನೆನಿಸುವನು (ಅಮೃತ. ೩-೧೪೬) ; ಆ ದೇವ ಈ ದೇವ ಮಾದೇವನೆನವೇಡ ಆ ದೇವರ ದೇವ ಭುವನದ ಪ್ರಾಣಿಗಳಿಗಾದವನೆ ದೇವ (ಸರ್ವಜ್ಞ. ೦೯೦) : ಇಬ್ಬನಿಯಲಿ ಸುಖಿಸುವ ಹೃದಯವೆ ದೇವಗೆ ಗುಡಿ (ಅನಿಕೇ. ೩೪-೩). ೫. ಬ್ರಹ್ಮ : "ಸರಸಿರುಹಭವಂ ಬ್ರಹ್ಮಂ ಹಿರಣ್ಯಗರ್ಭಂ ವಿಧಾತೃ ದೇವನಜಂ . . . ಚತುರಾಸ್ಯಂ" (ವಸ್ತುಕೋ. ೩-೦೧). ೬. ಗುರು, ದೊರೆ ಮುಂತಾದ ಹಿರಿಯರನ್ನು ಕುರಿತು ಸಂಬೋಧಿಸುವಾಗ ಬಳಸುವ ಗೌರವಸೂಚಕವಾದ ಮಾತು : ದೇವ ಬಿನ್ನಪ ಮಿಂದು ಖಾಂಡವಮಂ ಕೃಶಾನು ತಗುಳ್ದು ನಾನಾವಿಧಂ ಸುಡೆ . . . ದೇವರೆಂದಱೆದಿರ್ದಂ (ಪಂಪಭಾ. ೩-೯೪): ದೇವ ಪೆಱತಾವುದವ್ಯಕ್ತಾವಯುತದೊಳಂ ಕುಮಾರಸನ್ನಿತಿಕೆಯನುದ್ಭಾವಿಸುತಿರ್ದಪ್ಪ[ದಂ ಪಂ]ಭಾವಿಸು ನೀಂ ಚಕ್ರವರ್ತಿಚಿಹ್ನೋತ್ಕರಮಂ (ಆದಿಪು. ೪೧೯) ; ದೇವ ನಿಮಗಪ್ಪ ಹಿತಿತಮನಾವೆಡೆಯೊಳಮಱಸಿ ಪಡೆದೆವಿಲ್ಲ (ಪಂಚತಂ. ೦೪೪-೨೧) ; ದೇವ ಕನಸಿದು ಕರಂ ದೋಷಾವಹಂ (ಯಶೋಚ. ೩-೦೩). ೭. ಪೂಜ್ಯ, ಮಹನೀಯ ಎಂಬರ್ಥದಲ್ಲಿ ಹೆಸರಿನ ಕೊನೆಯಲ್ಲಿ ಸೇರಿಸುವ ಮಾತು: "ಪಾದಃ, ದೇವಃ, ಭಟ್ಟಾರಕಃ – ಈ ಮೂಱುಂ ಪೆಸರ ಕಡೆಯೊಳ್ ಪೂಜಾವ[ಚ]ನಂ" (ಹಲಾಯು. ೨೩-೦೩೪) ; "ಪೆಸರ್ ಕಡೆಯಾಗುನುಡಿ ದೇವಮಕ್ಕು" (ಮುಂಗರಾ. ೨೬-೭). ೮. ವಿಹರಿಸುವವನು ; ಕ್ರೀಡಿಸುವವನು : ದೇವ ಎಂದರೆ ಕ್ರೀಡಾಮಯ ಎಂದು ಮತ್ತೊಂದು ಅರ್ಥ (ಭಾತತ್ತ್ವ. ೪೮೭). ೯. ದಡ್ಡ ; ಹೆಡ್ಡ. ೧೦. ಮಗು ; ಶಿಶು. ೧೧. [ಛಂದ] ಒಂದುಂ ಅಕ್ಷರಗಣದ ಹೆಸರು; ನಗಣ (UUU): ನಗಣ . . . (ನಾಕ, ಇಂದ್ರನಿಲಯ, ದೇವ, ಇಂದ್ರ) (ಛಂದೋಂಬು. ೩. ೦೨). ೧೨. [ಜೈನ] ಲೋಕಾಂತಿಕ ದೇವತೆ : ದೇವರೊಳಂ ಗುರುಗಳೊಳ ಮಾಗಮದೊಳಂ ನಂಬುಗೆಯುಂ ನಲ್ಮೆಯುಂ ಭಕ್ತಿಯುಮನೂನಮಾಗೆ (ಸುಕುಮಾ. ೩-೪೬ ವ).

**ದೇವಾಂದೇವ** = ದೇವರ ದೇವ ; ದೇವಾಧಿದೇವ; ಪರಮೇಶ್ವರ: ಕಟಿಗ್ಗಣೇಶ್ವರದಾ ದೇವರು ಪರವರಿಯ ಭತ್ತಮುಂ ಕವಿಲೆಯ ಪಾಲುಂ ಎಟ್ಟುಂ × × × ದೇವಾನ್ದೇವನ ಪರಿಜನಮಲ್ಲಾಡೆ ಪೆಱನೊರ್ವನಾರು ಮುಂಡ್ಕೊಮೆಣ್ಣುಕಂ ಇನ್ನುಣ್ಣೋರುಂ ಉಣಿಯ ಕೊಡುವೋನುಂ . . . ಪೂತಿ ಎನ್ನ ನರಗಕ್ಕೆ ಸಲ್ಗೆ (ಎಕ. VI, ಕೊಪ್ಪ. ೩೬-೪; ಸು. 675 ?).

[ ಸಂ. ]

**ದೇವಂಗೆಯ್$_1$** (ಕ್ರಿ). ದೇವತ್ವವನ್ನು ಆರೋಪಿಸು : ದೇವಂಗೆಯ್ವುದು ಕಲ್ಲ ಮಣ್ಣ ಪರಿಜಂ ಚಿಹ್ನಂಗಳಂ ಶೂನ್ಯಮಂ (ಸಂಗತ. ೩-೨).

[ ದೇವ + ಕೆಯ್$_1$ ]

**ದೇವಂಗೆಯ್$_2$** (ನಾ). ದೇವರಿಗೆ ಸೇರಿದ ಸಾಗುವಳಿ ಜಮೀನು : ತೆಂಕ ದೇವಂಗೆಯ್ಯ ಮೇರೆ (ಎಇ. VII, ೨೦೦-೦೦ ; 886).

[ ದೇವ + ಕೆಯ್$_4$ ]

**ದೇವಂಗೇರಿ** (ನಾ). ಒಂದು ಸ್ಥಳದ ಹೆಸರು : ಶ್ರೀಪುರದಾ ಬಡಗಣ ಪಡುವಣ ಕೋಣುಳ್ಳನ್ದೇವಂಗೇರಿ ಮದಮನೆ ಒಂದಂ (ಎಕ. IV, ನಾಗಮಂ. ೮೩-೬೯ ; 776). [ ದೇವ + ಕೇರಿ ]

**ದೇವಋಣ** (ನಾ). ದೇವ, ಋಷಿ ಮತ್ತು ಪಿತೃ ಎಂಬ ಋಣತ್ರಯದಲ್ಲಿ ಮೊದಲನೆಯದು ; ದೇವತೆಗಳು ತನಗೆ ಮಾಡಿರುವ ಉಪ

ಕಾರಕ್ಕಾಗಿ ಮನುಷ್ಯನು ಮಾಡಬೇಕಾದ ಕೃತಜ್ಞತೆಯ ಕಾರ್ಯ: ಪಿತೃಋಣ, ಗುರುಋಣ, ದೇವಋಣ ಇತ್ಯಾದಿ ಎಲ್ಲ ಋಣದ ಭಾರವನ್ನು ನಿವ್ಯೊಬ್ಬರ ತಲೆಯ ಮೇಲೆ ಹೊರಿಸಬೇಕಾಗುತ್ತದೆ (ಹೊಸಕ. ೨೫೨). [ ದೇವ + ಋಣ ]

**ದೇವಋಷಿ** (ನಾ). = ದೇವರ್ಷಿ ೧ : ವರಸಮಯದ ದೇವಋಷಿ ಸಮೂಹಕ್ಕಂ ಪೆಂಡಿರು ಮಕ್ಕಳುಮೊಳರಾಯ್ತಾಪ್ಪರಿಕ್ಕೆ ಮುನಿಗಳ್ಗೆ ಸಲ್ಲ ಜಿನಶಾಸನದೊಳ್ (ಸಮಪ. ೮-೨೦೬); ದೇವವೃಂದವು ಬೆರಸಿ ನಾನಾದೇವ ಋಷಿಯರು ಕೂಡಿ ಭೂಮಿಯದೇವಿಯನು ಸಂತೈಸಿ (ಸಂಭವ. ೬-೬೨). [ ದೇವ + ಋಷಿ ]

**ದೇವಕಂಟಕ** (ನಾ). ದೇವತೆಗಳಿಗೆ ಮುಳ್ಳಿನಂತಿರುವವನು; ದೇವತೆಗಳನ್ನು ಕಾಡುವವನು; ರಾಕ್ಷಸ: ದೇವ ಮಗನಸಲಿಂದ ಕಾದಲು ದೇವಕಂಟಕ ಬಂದ ಮೇಲಿನ್ನಾವುದುಚಿತವು ನೀವೆ ಬಲ್ಲಿಂ ಕಾಳಗದ ಪರಿಯ (ಜೈಮಿನಿ. ೩೬-೨೩). [ ದೇವ + ಕಂಟಕ ]

**ದೇವಕಣಗಿಲೆ** 'ದೇವಗಣಗಿಲು' ನೋ.

**ದೇವಕಣಶ** (ನಾ). ಒಂದು ಬಗೆಯ ಸಸ್ಯ; ಪಚ್ಚೆತೆನೆ: "ದೇವಕಣಶಂ ಪಚ್ಚೆಯಕಬ್ಬು" (ಮಂಗರಾ. ೪೦-೩೦). [ ಸಂ. ]

**ದೇವಕನ್ನಿಕೆ** (ನಾ). ದೇವತಾಸ್ತ್ರೀ; ದೇವಕನ್ಯೆ: ಗರುಡನು ಸೋಮ ××× ತುಜುವ ಮರಳ್ಳಿಯರವಿ × × × ನು ದೇವಕಂನಿಕೆಯರು (ಎಕ. XVI, ಚಿಕ್ಕನಾ. ೧೧೧-೨; 1301). [ ದೇವ + ಕನ್ನಿಕೆ$_1$ ]

**ದೇವಕನ್ಯೆ** (ನಾ).=ದೇವಕನ್ನಿಕೆ: ದೇವಕನ್ಯೆಯ ಸಾಕ್ಷಾತ್ಕಾರಕ್ಕಾಗಿ ಹಂಬಲಿಸಿ ಹತಾಶನಾದ ರಾಜಪುತ್ರನ ಕಥೆಯೊಂದಿದೆ (ದೇಕನ್ಯ. ೫). [ ದೇವ+ಕನ್ಯೆ ]

**ದೇವಕಾಂಚನ** (ನಾ). ಒಂದು ಬಗೆಯ ಮರ; ಕೆಂಪು ಕಂಚಿವಾಳ. [ ಸಂ. ]

**ದೇವಕಾಂತೆ** (ನಾ). = ದೇವಕನ್ನಿಕೆ: ಚಂದ್ರಮಂಡಲಂಗಳನೆಳಮಿಂಚು ತಾಳ್ದಿದವೊಲದ್ದನದೊದ್ದನಮೆದ್ದಮಾಗೆ ಕಾವಳವಿಗೆ ಖಡ್ಗಧಾರಿಣಿಯ ರಾವರನಿಂದೆಗೆ ದೇವಕಾಂತೆಯರ್ (ಅನಂಪು. ೪-೫೦). [ ದೇವ + ಕಾಂತೆ ]

**ದೇವಕಾರ್ಯ** (ನಾ). ೧. ದೇವರ ಅನುಗ್ರಹವನ್ನು ಬಯಸಿ ಮಾಡುವ ವ್ರತೋಪವಾಸಗಳು ಮುಂತಾದ ಕಾರ್ಯ: ದೇವಕಾರ್ಯಕೆ ನೆರೆದು ನೆರೆಯೂರಿಂಗೆ ಪೋಪಂತೆ (ಬಸಪು. ೪೪-೬೨); ಮೊಸರುಹೆಡಿಗೆ ಶಿರದಲಿ ದೇವಕಾರ್ಯ ಮಾಸಲು (ಪ್ರರಂಗ. ೨-೨೦೪-೨); ಆತನಿಗೆ ಹಿಂದೂ ರಾಜ್ಯದ ಪುನರುದ್ಧಾರಕಾರ್ಯ, ದೇಶೋದ್ಧಾರಕಾರ್ಯ, ದೇವಕಾರ್ಯವಾಗಿತ್ತು (ಬಂಕಿಮ. ೬೮೩). ೨. ಕೆಲವು ಪಂಗಡಗಳಲ್ಲಿ ಮದುವೆಗೆ ಮುಂಚೆ ಮಾಡುವ ಕುಲದೇವತೆಯ ಪೂಜೆ: ಈಗ ದನಿಗಳಿಗೆ ಅವಕಾಶ ವಿಲ್ಲ, ದೇವಕಾರ್ಯ ನಡೆದಿದೆ (ಅಮಿನಾ. ೧೧). ೩. ಸಂಪ್ರದಾಯ ನಿಷ್ಠರ ಮನೆಗಳಲ್ಲಿ ವರ್ಷಂಪ್ರತಿ ಒಂದು ವಿಶಿಷ್ಟವಾದ ತಿಥಿಯಲ್ಲಿ ಆಯಾ ಮನೆದೇವತೆಯ ಪ್ರೀತ್ಯರ್ಥವಾಗಿ ನೆರವೇರಿಸುವ ಒಂದು ಪವಿತ್ರಕಾರ್ಯ. [ ದೇವ + ಕಾರ್ಯ ]

**ದೇವಕುಜ** (ನಾ). ದೇವಲೋಕದ ಮರ; ಕಲ್ಪವೃಕ್ಷ: ಇದು ದಲ್ ಚಂದ್ರಮನಲ್ತು . . . ತತ್ಕಂಠವಿಲಂದಿ ದೇವಕುಜಪುಷ್ಪಸ್ರಗ್ರುಚೋವಿಭ್ರಮಂ (ರಾಜಶೇ. ೧೩-೪೪). [ ದೇವ + ಕುಜ ]

**ದೇವಕುರು** (ನಾ). [ಜೈನ] ವಿದೇಹಕ್ಷೇತ್ರದಲ್ಲಿ ಮೇರುಪರ್ವತಕ್ಕೆ ದಕ್ಷಿಣದಲ್ಲಿರುವ ಒಂದು ಭೋಗಭೂಮಿ: ಕರುವಾಡದೇಚನೆಯ ನೆಲೆಯೊಳಿರ್ದಲ್ಲಿ ಸಿಡಿಲ್ ಪೊಡೆಯ ಸತ್ತು ದೇವಕುರುವಿನೊಳ್ ಪುಟ್ಟಿದಂ (ಶಾಂತಿಪು. ೦೩-೪೩ ವ); ಪುರಂ ವಿರಾಜಿಪುದು ದೇವಕುರುಪ್ರತಿಮಾನಮೆಂಬಿನಂ (ಚಂದ್ರಪ್ರ. ೧೧-೬೨). [ ದೇವ + ಕುರು$_3$ ]

**ದೇವಕುಲ, ದೇವಕುಳ** (ನಾ). ೧. ದೇವಾಲಯ; ದೇವಸ್ಥಾನ: ಕುಲನಗಂಗಳೆನಿಪ ದೇವಕುಲದ ಭೋಗದಿಂ ಸರಾಗಮಾದ ರಾಗದಿಂ (ಶಂಪಭಾ. ೧-೩೫ ರಗಳೆ): ಅಮರಾಪಗಾಪಯಃಪೂರಮನಾಂತ ಹೈಮನಗದಂತಿರೆ ದೇವಕುಲಂಗಳೊಪ್ಪುಗುಂ (ಅಜಿತಪು. ೨೯೬); ಕೈತೊಳೆದು ದೇವಕುಲ ಕೈತಂದು ವಿಘ್ನಶಾಂತಿಯ ಬೇಳ್ದು (ಪಾರಿಸ. ೧೦-೨೦೬). ೨. ದೇವತೆಗಳ ಗುಂಪು,–ಸಮೂಹ: "ದೇವಕುಲಕೆ ಬಿಜ್ಜೋದರರುಮಚ್ಛರರುಮಕ್ಕು" (ಅಭಿಕ್ಕ. ೧೧). ೧, ೨: ಧನದನಿವಾಸದಿಂ ಮಣಿಮಯೋಜ್ವಳದೇವಕುಲಂಗಳಿಂದೆ . . . ಪೌದನಪುರಮೊಪ್ಪಿರ್ಪುದಮರಾವತಿಯಂತೆ (ಪಾರ್ಶ್ವಪು. ೧-೧೧೨). **ದೇವಕುಳ**: ೧. ದೇವಕುಳಂಗಳಿಂ [ವ] × ವಧೂಕುಳಹಮ್ಯ್ರಶತಂಗಳಿಂ ಮಹೀದೇವಗೃಹಂಗಳಿಂ ಧನಪತಿಪ್ರಭವೈಶ್ಯಕದಂಬಗೇಹದಿಂ (ಎಕ. XX, ೧೧೬-೨೯; 1167); ತಾರಕವ್ರುತತಿಗಳಾರಯಲ್ಪಡೆವ ದೇವಕುಳಂಗಳ . . . ತಟಾಕಚಯಂಗಳ ಪೆರ್ಮೆಯಿಂದ ಮೂರ್ಜಿತಮೆನಿಪಗ್ರಹಾರಮವು ವಿಷ್ಣುನೃಪಾಳಕನಿತ್ತ ದತ್ತಿಗಳ್ (ಎಕ. VI, ಕಡೂ. ೬೩-೨೯; 1196). [ ದೇವ + ಕುಲ ]

**ದೇವಕುವರ, ದೇವಕೊಮಾರ** (ನಾ). ೧. ದೇವರ ಮಗ; ಏಸುಕ್ರಿಸ್ತ: ದಿವಕೀದು ದೇವಕುವರಂ ಮರಳಿ ಬಹನೆಂಬ ಗೆಲುವಿಂದ ದೇವದೂತರೆ ಬಾರಿಸುವರೂ ಮಂಗಲವಾದ್ಯವೆನಲು (ಗೀಕ್ರಿ.ಕಾ. ೦-೭). **ದೇವಕೊಮಾರ**: ೨. ಒಬ್ಬಾತನ ಹೆಸರು: ಶ್ರೀವರಮತಿಸಾಗರಪಣ್ಡಿತ ಭಟಾರರ ಬೆಸದೊಳಣ್ಣಯ್ಯನುಂ ದೇವಕೊಮಾರಮಂ ಧೋರನುಮಿಬ್ಬು (ಎಕ. III, ಶ್ರೀರಂಗ. ೧೪೮-೧೧; 904 ?). [ ದೇವ + ಕುವರ$_2$ ]

**ದೇವಕುಸುಮ** (ನಾ). ಲವಂಗ: "ಲವಿ ಲವಂಗಂ ದೇವಕುಸುಮಮೆನೆ" (ಮಂಗರಾ. ೪೩-೪೦); "ಲವಂಗಂ, ದೇವಕುಸುಮಂ, ಶ್ರೀಸಂಜ್ಞಂ–ಇ ಲವಂಗದ ಹುವ್ವು, ಲವಂಗ" (ಸಿದ್ಧಾಂತಿ. ೦೬೯). [ ದೇವ + ಕುಸುಮ ]

**ದೇವಕುಳ** 'ದೇವಕುಲ' ನೋ.

**ದೇವಕೂಟ** (ನಾ). ೧. ದೇವಾಲಯ. ೨. ದೇವಸ್ಥಾನದ ಭೋಜನಶಾಲೆ. ೩. ದೇವಸ್ಥಾನದ ಭೋಜನಶಾಲೆಯ ಮೇಲ್ವಿಚಾರಣೆ: ಅಧಿಕಾರವುಳ್ಳ ಸಂಸ್ಥೆಗಳು:—ಊರು (ಊರವರು), ನಾಡು . . . ಸರ್ವಾತಿಥ್ಯಕುಟುಂಬ, ದೇವಕೂಟ, ಕ್ರಮುಕಾರಿಯ (ತುಳುನಾ. ೨೬೦). [ ದೇವ + ಕೂಟ$_1$ ]

**ದೇವಕೃಚ್ಛ್ರ** (ನಾ). ಒಂದು ಬಗೆಯ ಪ್ರಾಯಶ್ಚಿತ್ತ; ಹೆಚ್ಚಾದ ಕಾಯಕ್ಲೇಶದಿಂದ ನಿರ್ವಹಿಸಬೇಕಾದ ಒಂದು ಬಗೆಯ ತಪಸ್ಸು: ದೋಷಪರಿಹಾರಾರ್ಥಮಾಗಿ ಶರೀರಬಾಧಾತ್ಮಕತ್ವದಿಂ ಮಹತ್ಕಷ್ಟಸಾಧ್ಯಂಗಳಾದ ತಪ್ತಕೃಚ್ಛ್ರ ದೇವಕೃಚ್ಛ್ರ ಯಾವಕೃಛ್ರ ಮುಂತಾದುವುಗಳಿಂ ಪಕ್ಷ ಮಾಸಾದಿಕಂಗಳಲ್ಲಿ ಅನ್ನಮಂ ಪರ್ಚಿಸಿ ತಗ್ಗಿಸಿಕೊಂಬುದು (ವಿಚಿಕ. ೦೩೯). [ ಸಂ. ]

**ದೇವಕೃತ** (ನಾ). ೧. ದೇವರಿಂದ ಆದುದು; ಮನುಷ್ಯಶಕ್ತಿಗೆ ಅಸಾಧ್ಯವಾಗಿದ್ದು ಕೇವಲ ಅದೃಷ್ಟದಿಂದ ಒದಗಿಬರುವುದು. ೨. [ಜೈನ] ಮೂವತ್ತು ನಾಲ್ಕು ಅತಿಶಯಗಳಲ್ಲಿ ಒಂದು; ಜೈನರ ಪ್ರಕಾರ ೩೪ ಅತಿಶಯಗಳಿವೆ. ಇವು ತೀರ್ಥಂಕರನಿಗೆ ಉಂಟಾಗುವ ಅತಿಶಯಗಳು. ಇವುಗಳನ್ನು ಸ್ವಾಭಾವಿಕ ಅತಿಶಯಗಳು, ಕರ್ಮಕ್ಷಯಜ ಅತಿಶಯಗಳು ಮತ್ತು ದೇವಕೃತ ಅತಿಶಯಗಳೆಂದು ಮೂರು ವಿಭಾಗ ಮಾಡಿದ್ದಾರೆ. ಸ್ವಾಭಾವಿಕ ಅತಿಶಯಗಳು–ಸ್ವೇದರಹಿತತ್ವ, ನಿರ್ಮಲಶರೀರ, ಹಾಲಿನಂತೆ ಬಿಳಿಯ ರಕ್ತ, ವಜ್ರವೃಷಭನಾರಾಚಸಂಹನನ, ಸಮಚತುರಸ್ರಶರೀರಸಂಸ್ಥಾನ, ಅನುಪಮರೂಪ, ಅತ್ಯಧಿಕಸುಗಂಧತ್ವ, ೧೦೦೮ ಬಗೆಯ ಉತ್ತಮ ಲಕ್ಷಣಗಳನ್ನು ಹೊಂದಿರುವಿಕೆ, ಅತ್ಯಧಿಕ

ವಾದ ಬಲ ಮತ್ತು ಹಿತಮಿತವಾದ ಭಾಷಣ ಎಂಬ ಹತ್ತು ವಿಧಗಳು. ಕರ್ಮಕ್ಷಯಜ ಅತಿಶಯಗಳು–ತನ್ನ ಸುತ್ತಲೂ ನಾಲ್ಕು ದಿಕ್ಕುಗಳಲ್ಲಿ ನೂರುಯೋಜನಗಳವರೆಗೆ ಸುಭಿಕ್ಷತೆ, ಆಕಾಶಗಮನ. ಹಿಂಸೆಯ ಅಭಾವ, ಭೋಜನದ ಅಭಾವ, ಉಪಸರ್ಗಗಳ ಅಭಾವ, ನಾಲ್ಕೂ ಕಡೆಗೆ ಮುಖವಾಗಿರುವ ಸ್ಥಿತಿ, ನೆರಳು ಬೀಳದಿರುವಿಕೆ, ಎವೆ ಬಡಿಯದಿರುವಿಕೆ (ನಿರ್ನಿಮೇಷ ದೃಷ್ಟಿ), ಸಮಸ್ತವಿದ್ಯೆಗಳಲ್ಲಿ ಪ್ರಭುತ್ವ, ನಖ ಹಾಗು ರೋಮಗಳು ಸಮಾನವಾಗಿರುವಿಕೆ ಮತ್ತು ಹದಿನೆಂಟು ಭಾಷೆಗಳಲ್ಲಿಯೂ ಏಳುನೂರು ಕ್ಷುದ್ರಭಾಷೆಗಳಲ್ಲಿಯೂ (ಏಕಕಾಲಕ್ಕೆ) ಹೊರಡುವ ದಿವ್ಯಧ್ವನಿ ಎಂಬ ಹನ್ನೊಂದು ವಿಧಗಳು. ದೇವಕೃತ ಅತಿಶಯಗಳು–ತೀರ್ಥಂಕರ ಮಹಿಮೆಯಿಂದ ಯೋಜನಗಳ ವರೆಗಿನ ವನಗಳಲ್ಲಿ ಎಲೆ, ಹೂ, ಹಣ್ಣುಗಳು ತುಂಬುವುದು, ಮುಳ್ಳು, ದೂಳು ಹೊರಟುಹೋಗಿ ಸುಖವಾದ ಗಾಳಿ ಬೀಸುವುದು, ಜೀವಗಳು ಪರಸ್ಪರ ವೈರಭಾವವನ್ನು ತ್ಯಜಿಸುವುದು, ಭೂಮಿ ಕನ್ನಡಿಯಂತೆ ಸ್ವಚ್ಛವೂ ರತ್ನಮಯವೂ ಆಗುವುದು, ಸೌಧರ್ಮೇಂದ್ರನ ಆಜ್ಞೆಯಿಂದ ಸುಗಂಧಜಲದ ವೃಷ್ಟಿ, ದೇವವಿಕ್ರಿಯೆಯಿಂದ ಸಸ್ಯಫಲಸಮೃದ್ಧಿ, ಎಲ್ಲ ಜೀವಗಳಿಗೂ ನಿತ್ಯ ಆನಂದ, ಶೀತಲವಾದ ಗಾಳಿ ಬೀಸುವಿಕೆ, ಬಾವಿ, ಕೆರೆ, ನದಿಗಳಲ್ಲಿ ನಿರ್ಮಲವಾದ ನೀರು ತುಂಬುವಿಕೆ, ಆಕಾಶ ನಿರ್ಮಲವಾಗುವಿಕೆ, ಎಲ್ಲ ಜೀವಗಳೂ ರೋಗರಹಿತರಾಗಿರುವಿಕೆ, ನಾಲ್ಕು ದಿವ್ಯ ಧರ್ಮಚಕ್ರಗಳ ದರ್ಶನ ಮತ್ತು ತೀರ್ಥಂಕರನ ನಾಲ್ಕೂ ಮಗ್ಗುಲುಗಳಿಗೆ ಸಕಲ ಪೂಜಾದ್ರವ್ಯಗಳುಂಟಾಗುವಿಕೆ ಎಂಬ ಹದಿಮೂರು ವಿಧಗಳು: ಸ್ವಾಭಾವಿಕ ಕರ್ಮಕ್ಷಯಜ ದೇವಕೃತಂಗಳೆಂಬ ಮೂವತ್ತುನಾಲ್ಕು ಮತಿಶಯಂಗಳೊಳೊಂದುಗುಂದದಿರೆಯುಂ (ಶಾಂತಿಪು. ೧೨–೧೪ ವ): ದೇವಕೃತಂಗಳುಮಂ ಸ್ವಾಭಾವಿಕಮುಮನಜಿತ ನೀನೆ ತಾಳ್ದಿದೆ (ಅಜಿಪು. ೬–೨೨). [ದೇವ + ಕೃತ]

**ದೇವಕೊಮಾರ** 'ದೇವಕುವರ' ನೋ.

**ದೇವಕ್ರಿಯೆ** (ನಾ). [ಸಂಗೀತ] ಒಂದು ರಾಗದ ಹೆಸರು: ದೇವಕ್ರಿಯೆ ತ್ರಿಣೇತ್ರಕ್ರಿಯೆ ಭೂತಾಳಕ್ರಿಯೆಯೆಂಬ ಮೂಱುಂ ಕೋಲಾಹಲರಾಗಕ್ಕುಪಾಂಗಗಳು (ವಿವೇಕ. ೩೪೪). [ಸಂ. ದೇವಕ್ರಿಯಾ]

**ದೇವಖಾತ** (ನಾ). ೧. ನೈಸರ್ಗಿಕವಾಗಿ ಉಂಟಾದ ಜಲಾಶಯ; ಅಕೃತ್ರಿಮವಾದ ಸರೋವರ ಮೊದಲಾದ ಜಲಾಧಾರ: "ದೇವಖಾತಮಕೃತ್ರಿಮಖಾತಂ" (ವಸ್ತುಕೋ. ೨೪–೩); "ಅಖಾತಮು ದೇವಖಾತಮೆನಲ್ಕೆ" (ಮಂಗರಾ. ೦೨೩–೦೪): ತಾನಾಗಿ ನಿರ್ಮಿತವಾದ ಪುಷ್ಕರಿಣಿ ಮುಂತಾದವು ದೇವಖಾತವು (ಅಮರ. ೦೬೭). ೨. ಕುರುಕ್ಷೇತ್ರದಲ್ಲಿದ್ದ ಒಂದು ಜಲಾಶಯದ ಹೆಸರು: ನಡುವಗಲಿಟೆವಿನಂ ಕಾದಿ ಬಳಲ್ದು ಕುದುರೆಗಳಂ ನೀರೊಳಿಕ್ಕಲೆಂದು ದೇವಖಾತಮೆಂಬ ಮಡುವಿಂಗೆ ಬರ್ಪುದುಂ (ಪಂಪಭಾ. ೧೧–೦೩೭ ವ). [ದೇವ + ಖಾತ್ತ]

**ದೇವಗಂಗೆ** (ನಾ). ದೇವಲೋಕದ ನದಿ: ಸುಜ್ಞಾನ ನಿರ್ಮಲ ದೇವಗಂಗೆಯಲಿ ಇಳಿದು ಸ್ನಾನಂಗೈದು (ಗಗಶಾ. ೦೬–೧೪). [ದೇವ + ಗಂಗೆ$_1$]

**ದೇವಗಂಟೆ** (ನಾ). ಒಂದು ಬಗೆಯ ಔಷಧಿಸಸ್ಯ: ಹೊಟ್ಟೆ ನುಲಿಯುವುದಕ್ಕೆ:–ದೇವಗಂಟೆಯ ರಸದಲ್ಲಿ ಉಳ್ಳಿ, ಮೆಣಸು ಅರೆದು ಆ ದೇವಗಂಟೆಯ ರಸದಲ್ಲಿ ಕದಡಿ ಮೂಱುದಿನ ಕೊಳ್ಳಲು ಹೊಟ್ಟೆ ಕಚ್ಚುವುದು ಮಾಣ್ಗುಂ (ವಿಶ್ವವಿ. ೭೭); ನಾಲ್ಕುವರಹ ತೂಕ ದೇವಗಂಟೆ ಸೊಪ್ಪನೂ . . . ಒಂದು ಮಾನ ಹಸುವಿನ ತುಪ್ಪದಲ್ಲಿ ಹಾಕಿ ಕಾಸಿ ಹದದಲ್ಲಿ ತೆಗೆದು ನಸಿರದಲ್ಲಿ ನಸ್ಯವುಂ ಮಾಡಿಸಲು ಅರೆದಲೆಬೇನೆ ಮಾಣುವುದು (ವೈದ್ಯಸಾ. II, ೦೩೪). [<ಸಂ. ದೇವಘಂಟಾ]

**ದೇವಗಣ** (ನಾ). ೧. ದೇವತೆಗಳ ಗುಂಪು, –ಸಮೂಹ: ರುದ್ರನ ಹಾವುಗೆ ಉಱಿಯುತ್ತು ದೇವಗಣಂಗಳು ನಿವಾತವಾದರು (ಬಸವ. ೯೩೦); ಭಯಮಂ ದೇವಗಣಕ್ಕೆ ಮಾಡಿ . . . ಅಂದಿನ ಕಾಲನೇಮಿಯೆ ಕಂಸಾಸುರನಾಗಿ ಪುಟ್ಟಿದುದನಾಂ ಬಲ್ಲೆಂ (ಜಗನಿ. ೧–೩೪); ಮಾಲೆಗೊಂಡೆಯ್ತಪ್ಪ ದೇವಗಣತತಿಯೊಳಗೆ ಶಾಂತಾರ್ಕಕೋಟಿಪ್ರಭಾಪುಂಜದಿಂ ಬೆಳಗೆ ಮುಂತೆ ಶಿವಮೂರ್ತಿ (ಸಂಬಿರ. ೬–೧೨೨): ಭಾಸ್ವರಭಕ್ತಿಯಿಂದೆಬಗೆ ದೇವಗಣಂ (ಪುಷ್ಪರ. ೧೦–೦೯). ೨. [ಜ್ಯೋತಿ] ನಕ್ಷತ್ರಗಳ ಮೂರು ಗಣಗಳಲ್ಲಿ ಒಂದು; ದೇವವರ್ಗಕ್ಕೆ ಸೇರಿದಂವೆಂದು ಭಾವಿಸಲಾದ ನಕ್ಷತ್ರಗಳ ಗುಂಪು: ☞ ೧. ಅಶ್ವಿನಿ, ಮೃಗಶಿರೆ, ಪುನರ್ವಸು, ಪುಷ್ಯ, ಹಸ್ತ, ಸ್ವಾತಿ, ಅನೂರಾಧೆ, ಶ್ರವಣ ಮತ್ತು ರೇವತಿ–ಇವು ಒಂಬತ್ತು ಸೇರಿ ದೇವಗಣ. ೨. ಭರಣಿ, ರೋಹಿಣಿ, ಆರ್ದ್ರೆ, ಪುಬ್ಬೆ, ಉತ್ತರೆ, ಪೂರ್ವಾಷಾಢ, ಉತ್ತರಾಷಾಢ, ಪೂರ್ವಾಭಾದ್ರೆ, ಉತ್ತರಾಭಾದ್ರೆ–ಈ ಒಂಬತ್ತೂ ಸೇರಿ ಮನುಷ್ಯಗಣ. ೩. ಕೃತ್ತಿಕೆ, ಆಶ್ಲೇಷೆ, ಮಘೆ, ಚಿತ್ತೆ, ವಿಶಾಖೆ, ಜ್ಯೇಷ್ಠ, ಮೂಲ, ಧನಿಷ್ಠೆ, ಶತಭಿಷೆ–ಇವು ಒಂಬತ್ತು ಸೇರಿ ರಾಕ್ಷಸಗಣ. ಒಬ್ಬ ಕನ್ಯೆಗೆ ಮತ್ತು ಒಬ್ಬ ವರನಿಗೆ ಮದುವೆ ಮಾಡಬಹುದೆ ಎಂಬ ವಿಷಯವನ್ನು ಪರಿಶೀಲಿಸಲು ಜ್ಯೋತಿಷ್ಯಶಾಸ್ತ್ರದಲ್ಲಿ ಹನ್ನೆರಡುಕೂಟಗಳನ್ನು ಹೇಳಿದ್ದಾರೆ. ಅವುಗಳಲ್ಲಿ ಗಣಕೂಟವೆಂಬುದೂ ಒಂದು. ಅದರಲ್ಲಿ ಕನ್ಯೆಯ ಮತ್ತು ವರನ ನಕ್ಷತ್ರಗಳು ಒಂದೇ ಗಣಕ್ಕೆ ಸೇರಿದ್ದರೆ ಪ್ರಶಸ್ತ. ದೇವಗಣ ಮನುಷ್ಯಗಣವಾದರೆ ಮಧ್ಯಮ. ದೇವಗಣ ರಾಕ್ಷಸಗಣವಾದರೆ ಅಧಮ. ಮನುಷ್ಯಗಣ ರಾಕ್ಷಸಗಣವಾದರೆ ನಿಷಿದ್ಧ: ದೆವ್ವ ಭೂತಗಳು . . . ದೇವಗಣದವರಿಗೆ ಕಾಣಿಸುವುದಿಲ್ಲ (ನಡದಾ. III, ೨೦೬೦); ಗಂಡಿನ ನಕ್ಷತ್ರ ದೇವಗಣ. ಹೆಣ್ಣಿನದು ಮನುಷ್ಯಗಣ, ಚೆನ್ನಾಗಿ ಕೂಡಿದೆ (ರೂಢಿ). ೩. [ಛಂದ] ಕರ್ತೃವಿಗೂ ಅವನ ಒಡೆಯನಿಗೂ ಶುಭವನ್ನುಂಟುಮಾಡುವ ಒಂದು ಬಗೆಯ ಗಣ: ಭಾಸ್ವದ್ದೇವಗಣಂಗಳಿಂದಱಿದೆಂ ಪಂಕೇಜವಕ್ತ್ರೇಕ್ಷಣೇ (ಛಂದೋಂಬು. ೦–೯೩); ತಾಳಮಾನಸರಿಸವನಱಿಯ ಓಜೆ ಬಜಾವಣೆಯ ಲೆಕ್ಕವನಱಿಯ ಅಮೃತಗಣ ದೇವಗಣವನಱಿಯೆ (ಬಸವ. ೯೪೪); ಭಾವಿಸೆ ಪದಪದ್ಮಂಗಳೊಳಾವಾವಂ ಗಣಮನಿಸಿಕ್ಕಲವುವಿವುಮನ್ನದೆ ದೇವಗಣಮಿಟ್ಟು ಪಱುದಕ್ರಾವ ಗಣಂ ಬಂದಡುತ್ತಮಂ (ಕವಿಜಿ. ೦–೩೭); ☞ 'ನಗಣ'ಕ್ಕೆ ಅಧಿದೇವತೆಗಳು ದೇವತೆಗಳು. ಆದ್ದರಿಂದ ಕೆಲವರು 'ನಗಣ'ವನ್ನೂ ಕೆಲವರು 'ಮಗಣ'ವನ್ನೂ ದೇವಗಣವೆಂದು ಹೇಳುತ್ತಾರೆ. ಅಮೃತಗಣ ಎಂಬ ಪದದ ವಿಚಾರ ಪಿಂಗಳಾಚಾರ್ಯನ ಛಂದಶ್ಶಾಸ್ತ್ರದಲ್ಲಿಲ್ಲ. ದೇವಗಣವು ಆಯುರ್ವೃದ್ಧಿ ಮಾಡುವುದೆಂದೂ ರಾಕ್ಷಸಗಣವು ಕೆಡುಕನ್ನುಂಟುಮಾಡುವುದೆಂದೂ ನಂಬಿಕೆಯಿದೆ. [ದೇವ + ಗಣ]

**ದೇವಗಣಿಕೆ$_1$** (ನಾ). ಒಂದು ಬಗೆಯ ಗಿಡ: "ಅಂಬಾಲಾ–ದೇವಗಣಿಕೆ" (ಕಾಕಶ್ಯ. ೩೦). [ದೇವ + ಗಣಿಕೆ$_2$]

**ದೇವಗಣಿಕೆ$_2$** (ನಾ). ರಂಭೆ, ಊರ್ವಶಿ, ತಿಲೋತ್ತಮೆ, ಚಿತ್ರಲೇಖೆ, ಮಂಜುಘೋಷೆ, ಮೇನಕೆ, ಸುಕೇಶಿ ಮತ್ತು ಘೃತಾಚಿ ಎಂಬ ಅಪ್ಸರಸ್ತ್ರೀಯರಲ್ಲಿ ಒಬ್ಬಳು: ಭೀಷ್ಮನ್ ಎಟ್ಟಂತೆ ನೆಲ ಮುಟ್ಟದೆ ಬಟ್ಟಿನ್ದೋನಾನ್ ದೇವಗಣಿಕೆಯರಾರ್ಗ್ಗೆಎಪ್ಪಿಡಿದು ಬನ್ದಿದಿಗ್ಗೊಣ್ಡಾಯೆ ವೀರರಲೋಕಕೆ ಸನ್ದೋನ್ (ಎಕ. VIII, ಸೊರಬ. ೧೧–೯; ಸು. 800); ದೇವಗಣಿಕೆಯರನೆ ಪೋಲ್ವಯ್ಯೂರ್ವರರಸಿಯರ್ಕಳಿಂದಂ (ಪದ್ಮಾರಾ. ೬೦–೭): ರಂಭೆ ಊರ್ವಶಿ ತಿಲೋತ್ತಮೆ ಚಿತ್ರಲೇಖೆ ಮಂಜುಘೋಷೆ ಮೇನಕೆ ಸುಕೇಶಿ ಘೃತಾಚಿ ಮೊದಲಾದ ದೇವಗಣಿಕೆಯರುಂ (ವಿವೇಕ. ೨೨೦). [ದೇವ + ಗಣಿಕೆ$_3$]

**ದೇವಗಣಗಿಲು,** ದೇವಕಣಗಿಲೆ (ನಾ). ಸುತ್ತಲೂ ಬಿಳಿ, ಒಳಗೆ ನಸು ಹಳದಿ ಬಣ್ಣದ ದಪ್ಪರೇಕುಗಳಿಂದ ಕೂಡಿದ ಹೂವುಗಳನ್ನು ಬಿಡುವ ಒಂದು ಬಗೆಯ ಮರ ಮತ್ತು ಆದರ ಹೂವು: ಹಳ್ಳಿಗಳಲ್ಲಿ ಸಾಮಾನ್ಯವಾಗಿ ದೇವಾಲಯದ ಹತ್ತಿರವೇ ದೇವಗಣಗಿಲು ಮರಗಳಿರುತ್ತವೆ (ಕೂಹಿ). **ದೇವಕಣಗಿಲೆ:** ದೇವಕಣಗಿಲೆಯ ಮರದ ತುಂಬ ತುಂಬಿದ ಎಲೆಯ ಮಧ್ಯೆ ಕೊಂಬೆಕೊಂಬೆಯಲ್ಲಿ ಬೆಳ್ಳನೆ ಹೂತಿದ್ದಿತು (ಕಣ್ವ್ವ. VII, ೪೧). [ ದೇವ + ಗಣಗಿಲು (< ಕಣಗಿಲೆ₁) ]

**ದೇವಗತಿ** (ನಾ). ೧. ದೇವತೆಯಾಗುವಿಕೆ; ದೇವತ್ವವನ್ನು ಪಡೆಯುವಿಕೆ; ಜೀವನಿಗೆ ಉಂಟಾಗುವ ದೇವ, ಮಾನವ, ತಿರ್ಯಕ್ ಮತ್ತು ನಾರಕ ಎಂಬ ನಾಲ್ಕು ಗತಿಗಳಲ್ಲಿ ಮೊದಲನೆಯದು : ನಿಜದ್ವಿಚರಮ ಸಮಯದೊಳ್ ಅನ್ಯತರ ವೇದನೀಯ ದೇವಗತಿ ತತ್ಪ್ರಯೋಗ್ಯಾನುಪೂರ್ವ ಶರೀರಬಂಧನ ಸಂಘಾತ . . . ನೀಚೈರ್ಗೋತ್ರಗಳೆಂಬ ದ್ವಿಸಪ್ತತಿ ಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೬-೪೯ ವ); ಮುನ್ನಿನ ತಿರ್ಯಗ್ಗತಿ ಬಟ್ಟೆಗಂ ನೆರಪಿದ ದೇವಗತಿ ವಿನಿಷ್ಫಲಮಾದತ್ತು (ಪಾರ್ಶ್ವ ಪು. ೬-೩೭); ಎಲ್ಲ ಪರಿಣಾಮಗಳಿಂದಲೂ ಯಾವ ಗತಿಯಲ್ಲಿ ಸುಖವುಂಟಾಗುವುದೋ ಅದೇ ದೇವಗತಿಯು (ತ್ರಿವಿಚ. ೨೯೩). ೨. ದೇವತೆಗಳಿಗೆ ದಿಕ್ಕಾಗಿರುವವನು ; ಶಿವ : ದೇವಗತಿ ದೇವಮತಿ ದೇವದುರ್ಲಭನೆಂಬ ಕರೆವ ಬಿರುದಿನ ಕಹಳೆಗಳ ಮಹಾರವದೊಳಗೆ ಧರೆ ನಡುಗೆ (ನಂದಿರ. ೭-೧೧೮).  [ ದೇವ + ಗತಿ ]

**ದೇವಗತಿವಡೆ** (ಕ್ರಿ). ದೇವತ್ವವನ್ನು ಹೊಂದು ; ದೇವತೆಯಾಗು : ನಿಜಸ್ವಾಮಿಯಪ್ಪ ಶಂಭುವಿನ ಕೈಯೊಳ್ ಕನ್ಯಾನಿಮಿತ್ತಂ ಸತ್ತು ದೇವಗತಿವಡೆದಲ್ಲಿಂ ಬಂದು (ಶಂಕರಾಪೂ. ೧೬-೩೮ ವ) ; ದೇವಗತಿವಡೆದು ಬಂದೀ ಭೂವಿಶ್ರುತರಾದಿರಿಂತಿದಂ ಮರೆದಿರೆ ಪೇಟ್. ದೇವಿ (ನೇಮಿಪು. ೧೭-೫೭).  [ ದೇವಗತಿ + ಪಡೆ₁ ]

**ದೇವಗರಿಗೆ** (ನಾ). ಒಂದು ಬಗೆಯ ವನಸ್ಪತಿ: ದೇವಗರಿಗೆ, ಹಿರೇಕಣಗಲು . . . ಕಾಡುಜೀರಿಗೆ (ಪ್ರಾಪ್ರಿ. ೩೮-೭೫೯).   [ ? ]

**ದೇವಗಾಂಧಾರ** (ನಾ). [ ಸಂಗೀತ ] ಒಂದು ರಾಗದ ಹೆಸರು: ಆ ರಂಭಾದಿ ವೇಶಿಯರು ದೇವಗಾಂಧಾರರಾಗದಿಂ ದೇವತಾಸಾರ್ವಭೌಮನಾದ ಇಂದ್ರನಂ ಸ್ತುತಿಸಿ (ಸಾಗಂಧಿ. ೫೦೩-೨).  [ ಸಂ. ]

**ದೇವಗಾಂಧಾರಿ** (ನಾ). [ ಸಂಗೀತ ] ಒಂದು ರಾಗದ ಹೆಸರು : ಸಮಸ್ತ ರಾಗಂಗಳೊಳಗೆ ರಾಮಕ್ರಿಯೆ . . . ದೇವಗಾಂಧಾರಿ ... ಮಧ್ಯಮಾವತಿ ಯೆಂಬ ಮೂವತ್ತಾರುರಾಗಂಗಳೇ ಮುಖ್ಯವಾಗಿ ಬಳಕೆಯಿಂದಧುನಾತನರಲ್ಲಿ ಪ್ರಸಿದ್ಧಗೊಂಡಿರ್ಪವು (ವಿವೇಕ. ೨೩೪); ದೇವಗಾಂಧಾರಿ . . . ಸೌರಾಷ್ಟ್ರವೆಂಬ ಪಾವನರಾಗದೊಳರುಹನನೊಲ್ದು ಸಂಜೀವನವೆನಿಸಿ ಹಾಡಿದರು (ಭರತ. ೫-೬೭) ; ದೇವಗಾಂಧಾರಿ ೨೯ನೇ ಮೇಳಕರ್ತ ಧೀರ ಶಂಕರಾಭರಣದಲ್ಲಿ ಜನ್ಯ (ಸಂಗೀತಂ. ೧೧೪).  [ ಸಂ. ದೇವಗಾಂಧಾರೀ ]

**ದೇವಗಾಣ** (ನಾ). ದೇವಸ್ಥಾನಕ್ಕೆ ಸಂಬಂಧಪಟ್ಟ ಎಣ್ಣೆಯ ಗಾಣ : ಧಾರಾಪೂರ್ವಕಂ ಮಾಡಿಬಿಟ್ಟಾಯವೆಂತೆಂದಡೆ . . . ದೇವಗಾಣದೊಕ್ಕಲಲ್ಲಿ ದವಸವಳವೆಂಣೆ ಸೊಳಸವೊಂದು (ಎಕ. XX, ೦೩-೪೯; 1167).  [ ದೇವ + ಗಾಣ₁ ]

**ದೇವಗಾತ್ರ** (ನಾ). ದೇವತೆಗಳ ಶರೀರದಂತೆ ಶರೀರವುಳ್ಳವನು ; ಸುಂದರವಾದ ದೇಹವುಳ್ಳವನು : ಸಜ್ಜೆಯೆಡೆ ನಟ್ಟು ನಿಂತವಧರಿಸಿದಳ್ ದೇವಗಾತ್ರನಂ (ಶ್ರೀರಾಮಾ. ೨೭೩-೨೭೮).  [ ದೇವ + ಗಾತ್ರ ]

**ದೇವಗುಪ್ತ** (ನಾ). [ ಸಂಗೀತ ] ಒಂದು ರಾಗದ ಹೆಸರು : ಸೈಂಧವಿ ಪಂಚಮ ಪಾಡವ ದೇವಗುಪ್ತ . . . ಎಂಬೆಂಟು ರಾಗಂಗಳುಂ ಷಟ್ಸ್ವರಜಾತೀಯಂಗಳು (ವಿವೇಕ. ೨೩೩).  [ ಸಂ. ]

**ದೇವಗುರು** (ನಾ). ದೇವತೆಗಳ ಗುರು ; ಬೃಹಸ್ಪತಿ : ದೇವಗುರು ಬೆಸಸೆ ಜನಕ ಭವಾವಳಿಯಂ ಕೇಳ್ದು ವಿನಯವಿನಮಿತನಾದೊಂ (ಶಾಂತಿಪು. ೭-೬೩); ಖಳನೆಡೆಗೆ ಮೆಲ್ಲನೆ ದೇವಗುರು ಬಿಡದಂಜುತ್ತೈತಂದ (ಕೂರಿರಾ. ೬-೪೬-೪೧); ದೇವಗುರುದರ್ಶನದಿಂದಲೇ ಶಾಂತಿಯನ್ನು ಪಡೆದ ಆತನ ಮನಸ್ಸು . . . ನಿರ್ಮಲವಾಗಿತ್ತು (ಮಹಾಶಿ. ೧೦೦).  [ ದೇವ + ಗುರು₂ ]

**ದೇವಗೃಹ** (ನಾ). ದೇವಾಲಯ ; ದೇವಸ್ಥಾನ : ಇದು ರಮ್ಯಮೆನಿಸಿದಲ್ಲಿಪ್ಪುದು ದಯ್ಯಂ ದೇವಗೃಹದೊಳಿಪ್ಪುದು ಮೇಣೆನ್ನದೆ ಪೊಗೆವುತಮೊಳೆಯೊಳಗಿಪ್ಪುದು ದೈವಮೆನಲ್ಕೆ ಸಲ್ಲದಜವುಳ್ಳಿತಂ (ಸಮುಹ. ೮-೧೬೩).  [ ದೇವ + ಗೃಹ ]

**ದೇವಗೃಹೋದ್ಧರಣ** (ನಾ). ದೇವಾಲಯದ ಜೀರ್ಣೋದ್ಧಾರ ; ಹಳೆಯದಾಗಿ ಬಿದ್ದುಹೋಗುವಂತಿರುವ ದೇವಸ್ಥಾನಗಳ ದುರಸ್ತು, – ರಿಪೇರಿ : ಶ್ರೀಮದಾಹವಮಲ್ಲದೇವ ಪಾದಪದ್ಮೋಪಜೀವಿಯಪ್ಪ ಪೆರ್ಗ್ಗಡೆ ಜೋಗವಯ್ಯಂ ತದೀಯ ದೇವಗೃಹೋದ್ಧರಣಮುಮಂ . . . ಮಾಡಿ (ಕಇಅ. ೬೮-೨-೨೭ ; 1056).  [ ದೇವಗೃಹ + ಉದ್ಧರಣ ]

**ದೇವಗೇಹ** (ನಾ). ಗುಡಿ ; ದೇವಸ್ಥಾನ ; ದೇವಾಲಯ : "ಉಪವನಂದನ ಕೈತವ ದೇವಗೇಹ ಕೇದಾರಮನಿಕ್ಕು" (ನಾನಾರ. ೪೯).  [ ದೇವ + ಗೇಹ ]

**ದೇವಗೊಳಗ** (ನಾ). ಬೆಳೆದ ಧಾನ್ಯದಲ್ಲಿ ಮೊಟ್ಟಮೊದಲು ದೇವರಿಗೆ ಮೀಸಲಾಗಿ ಕೊಳಗದಲ್ಲಿ ಅಳೆಯುವ ಧಾನ್ಯ : ಕೊಟ್ಟಾರದ ಕರಣಂ ದೇವರ್ಗ್ಗೆ ಪೂಜಿಸುವ ಪಣ ೫ . . . ದೇವಗೊಳಗಂ ಧರ್ಮ್ಮಗೊಳಗಂ ಪೊಸ್ದು (ಸೌಇಇ. IX-1, ೧೦೭-೦೮ ; 1050) ; ಕೆಱೆಯ ಕೊರಲು ದೇವಗೊಳಗಂ ಧರ್ಮಗೊಳಗವೆರಡು (ಎಕ. XI, ಚಳ್ಳ,ಕೆ. ೨೦-೨೩ ; 1087) ; ಶ್ರೀಮೂಲಸ್ಥಾನದೇವರ ಗೋಸಗೆಯುಪಹಾರಕ್ಕೆ ಕುಲಕೆ ಪೊಕ್ಕುಳಾಛತ್ರ ದೇವಗೊಳಗವಾಗಿ ಕೊಟ್ಟರು (ಎಕ. VIII, ಸೊರಬ. ೨೪೭-೮ ; 1288).  [ ದೇವ + ಕೊಳಗ₁ ]

**ದೇವಗ್ರಹ** (ನಾ). ಸೂರ್ಯ, ಚಂದ್ರ ಮೊದಲಾದ ಗ್ರಹಗಳಿಂದುಂಟಾಗುವುದೆಂದು ನಂಬಲಾದ ಪೀಡೆ : ನಾನಾಶಸ್ತ್ರಧಾರಣೆ ಮಾಡುವುದರಿಂದ . . . ದೇವಗ್ರಹ, ಗಂಧರ್ವಗ್ರಹ, ಯಕ್ಷಗ್ರಹ ಮುಂತಾದ ದುಷ್ಟಗ್ರಹಂಗಳನ್ನೂ ಶತ್ರುಗಳಿಂದುಂಟಾಗುವ ಹಾನಿಯನ್ನೂ ಕೆಡಿಸುವುದು (ಸಕವ್ಯ. ೫೬).  [ ದೇವ + ಗ್ರಹ ]

**ದೇವಚಾಪ** (ನಾ). ಮಳೆಬಿಲ್ಲು ; ಕಾಮನ ಬಿಲ್ಲು ; ಇಂದ್ರಚಾಪ : ಕಡೆಯೊಳ್ ತಗುಳ್ದ ರತ್ನದ ಬೆಡಂಗುವೆತ್ತೆಸೆವ ದೀಪ್ತವಲಯದ ಚೆಲ್ವಂ ಪಡೆದು ಸಲೆ ದೇವಚಾಪದ ನಡುವಣ ಲಲಿತಾರ್ಧಚಂದ್ರನಿರ್ಪಂತಿರ್ಕುಂ (ಆದಿಪು. ೭-೭೩) : ದೇವಾನಕಂಗಳ್ ಮೊಟಗೆ ಪಲವುಮಾ ಕಾಲದೊಳ್ ದೇವಚಾಪಂ ಜ್ಯೋತಿರ್ಲೋಕಾಧಿಪಾಲಾಭರಣಕಿರಣದಿಂದುರ್ವಿಯಂ ಪರ್ವೆ ಬಂದರ್ (ಶಾಂತಿಪು. ೮-೦೨೦).  [ ದೇವ + ಚಾಪ ]

**ದೇವಚಿಕಿತ್ಸಕ** (ನಾ). ೧. ದೇವತೆಗಳ ವೈದ್ಯ ; ಧನ್ವಂತರಿ. ೨. ಅಶ್ವಿನೀ ದೇವತೆಗಳು : "ದೇವಚಿಕಿತ್ಸಕರಶ್ವಿನಿದೇವರ್" (ವಸ್ತುಕೋ. ೧೦-೫೩): "ನಾಸತ್ಯಾ, ಅಶ್ವಿನೌ, ದಸ್ರೌ, ದೇವಚಿಕಿತ್ಸಕೌ-ಈ ಳ ದೇವರ ವೈದ್ಯರ್" (ಹಲಾಯು. ೦೫೩-೬೪).  [ದೇವ + ಚಿಕಿತ್ಸಕ ]

**ದೇವಚೆನ್ನೆಲ್ಲಕೊಳ** (ನಾ). ಒಂದು ಜಲಾಶಯದ ಹೆಸರು : ದಾಸನೂರಕ್ಕೂಟಸಂಧಿಯಲ್ ಉನ್ನತಭೂಮಿಯ ದೇವಚೆನ್ನೆಲ್ಲಕೊಳಮ್ (ಪ್ರಾಚಿಇ. ೦೯೨೩, ೦೦೫-೪೮ ; 634).  [ ? + ಕೊಳ₂ ]

**ದೇವಚ್ಛಂದ** (ನಾ). ೧. ಒಂದುಂ ಬಗೆಯ ಮುತ್ತಿನ ಸರ; ಎಂಭತ್ತೊಂದು ಎಳೆಗಳುಳ್ಳ ಹಾರ : ವಿಜಯಚ್ಛಂದಹಾರ ದೇವಚ್ಛಂದಾರ್ಧಹಾರ . . .

ಮಾಣವಕಂಗಳೆಂಬ ಪನ್ನೊಂದು ನಾನಾರತ್ನಸುವರ್ಣಪದಕವಿರಚನಾದಿ ಭೇದದಿಂ (ಆದಿಪು. ೮-೫೪ ವ). ೨. ನೂರು ಎಳೆಗಳುಳ್ಳ ಮುತ್ತಿನ ಸರ: "ದೇವಚ್ಛಂದಂ ಯಷ್ಟಿಶತಾವಚ್ಛನ್ನಂ" (ಪಸ್ತುಕೋ. ೭೫-೩) ; "ನೂರು ಸರದ ಮುತ್ತು ದೇವಚ್ಛಂದ ಎಂಬುದು" (ಹಲಾಯು. ೯೨-೪೦೪) ; "ನೂರು ಸರ ಮುತ್ತು ದೇವ[ಚಾಮಾಂ. ಹ]ಚ್ಛಂದವಕ್ಕುಂ" (ಮಂಗರಾ. ೧೦೦-೨೪): ☞ ಈ ಹಾರವಲ್ಲಿರತಕ್ಕ ಎಳೆಗಳ ಸಂಖ್ಯೆಯ ಬಗ್ಗೆ ವಿವಿಧಾಭಿಪ್ರಾಯಗಳಿವೆ. [ ಸಂ. ]

**ದೇವಜಗ್ಧಕ** (ನಾ). ಒಂದು ಬಗೆಯ ಸುಗಂಧದ ಹುಲ್ಲು ; ಕಾಚಿ ಹುಲ್ಲು : "ಕತ್ತೃಣಂ, ಪೌರಂ, ಸೌಗಂಧಿಕಂ, ಧ್ಯಾಮಂ, ದೇವಜಗ್ಧಕಂ, ರೌಹಿಷಂ-೬ ಕಾಚೀಹುಲ್ಲು, ಕಾಚೀಕಡ್ಡಿ, ಹಂಚೀಕಡ್ಡಿ, ಬರಗುಕಡ್ಡಿ ಇವು ಗಳೆಲ್ಲಕ್ಕೂ ಪೆಸರುಗಳು" (ಸಿದ್ಧಾಂತಿ. ೧೫೧). [ ಸಂ. ]

**ದೇವಜನಿತ** (ನಾ). ದೇವರಿಂದ ಉಂಟಾದುದು ; ಪರಮಾತ್ಮನಿಂದಾದುದು : ಲೋಕದಲ್ಲಿ ಪಾಪ, ಅನ್ಯಾಯ, ನೀಚತನಗಳೂ ದೇವಜನಿತವೆಂದು ತಿಳಿಯಬೇಕೆ ? (ಸಮುಕೀ. ೩೦೬). [ ದೇವ + ಜನಿತ ]

**ದೇವಜಾತಿ** (ನಾ). ದೇವತೆಗಳ ಕುಲ,-ಪಂಗಡ : "ಯಕ್ಷಃ . . . ಪೈಶಾಚ, ದೇವಯೋನಿ-ಇಂತಿವೆಲ್ಲಂ ದೇವಜಾತಿಯೆಂಬುದು" (ಹಲಾಯು. ೧೩-೯೭). [ ದೇವ + ಜಾತಿ ]

**ದೇವಜ್ಯೇಷ್ಠ** (ನಾ). ದೇವತೆಗಳಲ್ಲಿ ಹಿರಿಯವನು ; ಬ್ರಹ್ಮ : ದೇವಜ್ಯೇಷ್ಠನ ಬೆಸದಿಂ ರೈವತಕಂ ತಂದು ತನ್ನ ಮಗಳಂ ಕುಡಲ್ . . . ಬಲದೇವಂ ವೈವಾಹೋತ್ಸವದೆ ನೆರೆದು ಸುಖದಿಂದಿರ್ದಂ (ಜಗನಿ. ೧೦-೨). [ ದೇವ + ಜ್ಯೇಷ್ಠ ]

**ದೇವಟ್ಟ** (ನಾ). ದೇವರ ಸ್ವತ್ತು, - ಆಸ್ತಿ : ಈ ದೇಗುಲವ ಮಡಿಸಿ ತರಗಾಲಂ ದೇವಟ್ಟ ಬಿಟ್ಟರ್ (ಮ್ಯಲಿಆ. ೧೯೩೦, ೧೪-೧೧; ಸು. 882). [ <ಸಂ. ದೇವಾರ್ಥ ]

**ದೇವಡಿ**$_1$ (ನಾ). ೧. ದೇವರ ಸೇವೆ ಮಾಡುವವನು ; ದೇವಾಲಯದ ಪೂಜಾರಿ,-ಅರ್ಚಕ : ಧರ್ಮಸ್ಥಳದ ಅಮೃತಪಡಿಗೆ ದೇವಡಿಗಳಿಗೆ ಬಿಟ್ಟ ಬಾಳಿಗೆ ಅರ್ಥ ಅರುವಾರ ಸಲ್ಲ (ಸೌಇಇ. IX-ii, ४೭೦-೭೦ ; 1482). ೨. ಒಬ್ಬಾತನ ಹೆಸರು : ಪಳಿಗ್ಗಾವೆಯುರ ದಾಸಡಿಯುಂ ಅಮಲಿಯರೆ ದೇವಡಿಯು (ಎಕ. VII, ಶಿಕಾರಿ. ೧೫೪-೬ ; ಸು. 686) ; ಬಾಣಗುನ್ದೂರಾ ದೇವಡಿಗಳುಂ ಕುನ್ದಡಿಗಳುಂ ಅಂಬ್ಬಲ್ಪಡಿಯ ಪೇಮಸರುಂ ಆಳಗೆವಿಯರುಂ . . . ಇ ಪೊಲನಂ ನಡೆಯಿಸಿದೋರ್ (ಎಕ. XVI, ಗುಬ್ಬಿ. ೬೫-೫೭ ; 733). [ ದೇವ + ಅಡಿ$_1$ ]

**ದೇವಡಿ**$_2$ (ನಾ). ೧. ಮುಖಮಂಟಪ ; ಕೈಸಾಲೆ ; ಮೊಗಸಾಲೆ : ಶ್ರೀಪ್ರಸಂನಕೇಶವದೇವರ ಪೂಜಾರಿಗಳ್ ದೇವರ ದೇವಡಿಗಳಂ ಕಟ್ಟಲು ಸದ್ವೃತ್ತಿಯಂ ಕೊಟ್ಟರು (ಸೌಇಇ. XV, ೫೪೫-೧೦ ; 1165): ಪಟ್ಟಣಕ್ಕೆ ಬಂದು ಕರ್ತರ ಅರಶಿನವರ ದೇವಡೀ ಬಳಿಯಿಂದ ಬಹದರರ ಬಳಿಗೆ ಬಂದು (ಹೈದಕ. ೧೦೦). ೨. ಮನೆಯ ಮುಂದೆ ಇರುವ ಕಟ್ಟೆ ; ಜಗಲಿ : ಪಶುಗಳ ಮುಂದೆ ನಡೆಯುಂದು ಘರ್ಜಿಸುತ ನಿಂದಿಹರು ದೇವಡಿಯೊಳು (ಕೃಷ್ಣವಿ. ೨-೧೦) ; ಪ್ರಭಣ - ಬಾಗಿಲ ಹೊರಗಿನ ದೇವಡಿ (ಗಂಗಾಪು. ೩೦೯) ; ಇನ್ಸ್‌ಪೆಕ್ಟರರು ಅಚ್ಚಕರೀಬಣ್ಣದ ಡ್ರೆಸ್ಸಿನಿಂದ ಸಜ್ಜಾಗಿ ದೇವಡಿಯ ಮೇಲೆ ಬಂದು ನಿಂತುಕೊಂಡಿದ್ದರು (ಕಳ್ಳಕಾ. ೨೪). ೩. ಮನೆಯ ಬಾಗಿಲಿನಲ್ಲಿ ಅಳವಡಿಸಿರುವ ಬಾಗಿಲುವಾಡದ ಕೆಳಮರ ; ಹೊಸ್ತಿಲು : (೬).
[<ಸಂ. ದೇಹಲೀ./ಹಿಂ. ದೇಹರೀ ; ಮರಾ. ದೇವಡೀ, ದೇವಢೀ, ದೇಹುಡೀ; ಗುಜ. ದೇವ್ರೀ; ಬಂಗಾಳಿ. ದೆಉರಿ, ದೆಹುರಿ ; ಒರಿಯಾ. ದೆಹುರಿ ]

**ದೇವಡಿಗ** (ನಾ). ದೇವಾಲಯದಲ್ಲಿ ದೇವರ ಪೂಜೆ ಮಾಡಿ ಜೀವಿಸುವವನು ; ಪೂಜಾರಿ ; ಅರ್ಚಕ : ಅರಸಗವು × × ಮಕಲಸಮಭಟ್ಟನು ದೇವಡಿಗಗೆ ಕೊಟ್ಟಂ (ಎಕ. XIV, ಶ್ರೀರಂಗ. ३४-०೫ ; 1127) ; ಅಡಿಗ ಪ್ರತ್ಯಯಕ್ಕೆ-ದೇವಡಿಗಂ, ಪಾವಡಿಗಂ, ಪೂವಡಿಗಂ (ಶಮದ. ೨೦೩ ಪ್ರಯೋ): ಹಾವಡಿಗನು ದೇವಡಿಗನೆಂಳಗೆ ಅಡಗಲು ಹಾವೆತ್ತ ಹೋದವೋ ದೇವಾ (ಸಿದ್ಧೇವ. ೦೨೯-೩೦೨) ; ದೇವಡಿಗನು ದೇವಗೊಂದು ಪೂವನರ್ಪಿಸಲದು ದೇವಡಿಗನ ಹೂಗೊ ದೇವನ ಮಹಿಮೆಯೊ ಸ್ವಾಮಿ (ಭರತ. ೫೩-೮೪) ; ದೇವರ ಪೂಜಿಸುವಂ ದೇವಡಿಗಂ (ಕರ್ನಾಸು. ४०४ ವ್ಯಾಖ್ಯಾ) ; ದೇವಸ್ಥಾನದ ಸೇವಕರು . . . ಅಂಬಲವಾಸಿ, ಬರಿಯ, ದೇವಡಿಗ, ದೇವಾಳಿ (ತುಳುನಾ. ೧೬೨). [ ದೇವ + - ಅಡಿಗ$_2$ ]

**ದೇವಡಿತಿ, ದೇವೆಡಿತ್ತಿ** (ನಾ). ೧. ದೇವತಾಸ್ತ್ರೀ ; ಅಪ್ಸರೆ : ಸಗ್ಗಂಗಳೊಳ್ಪರ್ ದೇವಡಿತಿ ತೊಟ್ಟಿರೊಳಟ್ಟಿಯನಾಗಲೀವನೇ (ಶಂಶಧಾ. ೧೦-೪೫). ೨. ದೇವದಾಸಿ : ಪನ್ನೆರಡುಂ ಗಟ್ಟಿ ನೀರ್ವಣ್ಣುಮಂ ಪದಿಂಬರ್ ದೇವಡಿತಿಯಗ್ಗಂ ತಮಗಂ ಮನೆಗಂ . . . ಧಾರೆಯನೆರೆದು ಬಿಟ್ಟು ಕೊಟ್ಟರ್ (ಎಕ. IV, ಚಾಮುರಾ. ೦೮-೮ ; ಸು. 1000 ?).
**ದೇವೆಡಿತ್ತಿ** : ೨. ಇನ್ನುಣ್ಣೋರುಂ ಉಣಿಯ ಕೊಡುವೋನುಂ ದೇವೆಡಿತ್ತಿಯರಿನ್ದುಂ ಸಾಎರಿನ್ದುಂ ಅಭರಮೆತ್ತಿ ಆಯತಿಎ ಕೊಳ್ಳೋರುಂ . . . . ನರಗಕ್ಕೆ ಸಲ್ಗೆ (ಎಕ. VI, ಕೊಪ್ಪ. ३೭-೫ ; ಸು. 675?).
[ ದೇವಡಿ$_1$ + - ಇತಿ$_1$ (< - ಇತ್ತಿ) /ತಮಿ. ತೇವಟಿ ]

**ದೇವಣ** 'ದೇವಣ್ಣ' ನೋ.

**ದೇವಣ್ಣ, ದೇವಣ** (ನಾ). ಒಬ್ಬಾತನ ಹೆಸರು : ಕರಣಿಕ ದೇವಣ್ಣಗಳ ಬರಹ (ಎಕ. XI, ಚಿಕ್ಕರು. ४-४೫ ; 1356). 'ದೇವಣ್ಣಯ್ಯ' ಪರಾ. **ದೇವಣ** : ದೇವಣ ಕ್ರಮಯಿತ ಭಟ್ಟಪೌತ್ರಾಯ (ಇಇ. XVI, ೨೪-೬४ ; 1009). [ ದೇವ + ಅಣ್ಣ$_1$ ]

**ದೇವಣ್ಣಯ್ಯ** (ನಾ). ಒಬ್ಬಾತನ ಹೆಸರು : ವಿಶಿಷ್ಟಜನಾಶ್ರಯನಪ್ಪ ಶ್ರೀಮದ್ದೇವಣ್ಣಯ್ಯ[ಂ] (ಇಇ. XII, ೨೦೯-೦೫; 814); ಶ್ರೀಮದ್ದೇವಣ್ಣಯ್ಯಂ ಬೆಳ್ವೊಲ ಮೂನೂರುಮನಾಳುತ್ತಂ (ಎಇ. VII, ೨೦೬-೧೮ ; 866). [ ದೇವಣ್ಣ + ಅಯ್ಯ$_1$ ]

**ದೇವತನ** (ನಾ). ದೇವತ್ವವನ್ನು ಹೊಂದಿರುವಿಕೆ : ದೇವನೆಂದೇ ನೀವು ಬಗೆವಿರಿ ದೇವತನ ನಮ್ಮಲ್ಲಿ ಲವವಿಲ್ಲ (ಕುವ್ಯಾಉ. ೦-೪೩) ; ದೇವತನವಂ ಬಿಟ್ಟು ನರನಾದವಂಗೆ ಬಳಿಕಾವ ಗೌರವವಿಹುದು (ಕೃಮಿಥಾ. ६-೫४) ; ಬ್ರಾಹ್ಮಣರಿಗೆ ದೇವತನ ಏತರಿಂದ ? . . . ಬ್ರಾಹ್ಮಣರಿಗೆ ದೇವತನ ಅಧ್ಯಯನದಿಂದ (ವಚಭಾ. ೧೮೦). [ ದೇವ + - ತನ ]

**ದೇವತನು** (ನಾ). ದೇವತೆಗಳಿಗೆ ಇರುವಂಥ ಶರೀರ : ದೇವತನುವೆರಸಿ ರಂತಂತಾ ವೈಶಂಪಾಯನಂ ಸುಖನಿಶ್ಚಯದಿಂ ಜೀವಿಸುತಿರ್ದಪಂ (ಕಾದಂಉ. ೪४೪). [ ದೇವ + ತನು ]

**ದೇವತರು** (ನಾ). ೧. ದೇವಲೋಕದ ಮರ ; ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ ಮತ್ತು ಹರಿಚಂದನ ಎಂಬ ಐದು ವೃಕ್ಷಗಳಲ್ಲಿ ಒಂದು : "ಮಂದಾರಃ, ಪಾರಿಜಾತಕಃ, ಸಂತಾನಃ, ಕಲ್ಪವೃಕ್ಷಃ, ಹರಿಚಂದನಂ . . . ೫ ಈದೇವತರವಃ - ದೇವತಾಕಲ್ಪವೃಕ್ಷಗಳ ಹೆಸರುಗಳು" (ಸಿದ್ಧಾಂತಿ. ೨೨) ; ದೇವತರುವಿನ ಕುಸುಮವಮ್ಮಾ ನಾನು ಭಾವಜನ ಪಿತಗೆ ಕೊಂಡು ಬಂದಿದ್ದೆನಮ್ಮಾ (ಶ್ರೀಕೃಪಾ. ೬). ೨. ಅರಳಿಯ ಮರ ; ಅಶ್ವತ್ಥ. [ ದೇವ + ತರು$_2$ ]

**ದೇವತಾಂಶಕೆ** (ನಾ). = ದೇವತಾಧಿಷ್ಠಿತ್ತೆ : ರತಿಗೆಣೆಯೆನಿಸಿದ ಗುಣಸಂತತಿಯುಳ್ಳಾಕೆ ದೇವತಾಂಶಕೆಯೆನಿಪ ಸತಿಯಂ ಕೊಂಡಾಡುಗೆ ತತ್ಪತಿಗಂ ಧರ್ಮಾರ್ಥಕಾಮಭೋಗಂ ನೆಗಟ್ಟುಂ (ಮದತಿ. ೮-೨). [ಸಂ. ದೇವತಾಂಶಕಾ]

**ದೇವತಾಡ** (ನಾ). = ದೇವದಾಳಿ: "ದೇವತಾಡಃ, . . . ದೇವತಾಳೀ ವೃಕ್ಷದ ಹೆಸರುಗಳು" (ಸಿದ್ಧಾಂತಿ. ೧೨೭). [ ಸಂ. ]

**ದೇವತಾಣ** (ನಾ). ದೇವಸ್ಥಾನ; ದೇವಾಲಯ: ಕೇಣವಿಲ್ಲದೆ ಬೀದಿ ಬೀದಿಯೊಳಗೆ ದೇವತಾಣ ನೋಟಕರ ಸಂದೋಹ ವರಾಣದ ವಣ ಸೊಡರ್ವೆಳಗಿನೊಳ್ ಕೃಷ್ಣ ದಿವಾಣದೋಳಿದ್ದನೋಲಗದಿ (ಮೋಹತ. ೧೮-೮). [ ದೇವ + ಠಾಣ./ಸಂ.ದೇವಸ್ಥಾನ ]

**ದೇವತಾತತ್ತ್ವ** (ನಾ). ಜಗತ್ತಿನ ನದಿ, ಕಾಡು ಮೊದಲಾದ ಪ್ರತಿಯೊಂದು ಪ್ರಕೃತಿಸ್ವರೂಪಕ್ಕೂ ಒಬ್ಬೊಬ್ಬ ಅಧಿದೇವತೆಯುಂಟು ಎಂಬ ಸಿದ್ಧಾಂತ: ವೈದಿಕತತ್ತ್ವದಲ್ಲಿ ದೇವತಾತತ್ತ್ವ, ಈಶ್ವರತತ್ತ್ವ, ಆತ್ಮತತ್ತ್ವ ಎಂದು ಮೂರು ವಿಭಾಗಗಳಿವೆ (ಬಂಕಿಮ. ೩೧೯). [ ಸಂ. ]

**ದೇವತಾತ್ಮ** (ನಾ). ದೇವತಾಸ್ವರೂಪ: ದೇವತಾತ್ಮನಾದ, ನೀನು ನಮ್ಮ ಯಜ್ಞದಲ್ಲಿ ಸತ್ಫಲಗಳನ್ನು ಹಂಚುವವನಾಗು (ಋಗ್ಸಾರ. ೧೭).

[ ಸಂ. ದೇವತಾತ್ಮನ್ ]

**ದೇವತಾಧಿಷ್ಠಿತೆ** (ನಾ). ದೇವಾಂಶದಿಂದ ಕೂಡಿಕೊಂಡಿರುವವಳು; ದೇವಾಂಶಸಂಭೂತಳು: ಲಕ್ಷ್ಮೀವಮತಿಯಲವೂ ದೇವತಾಧಿಷ್ಠಿತೆಯಲ್ಲದ ಕೇವಳಮನುಷ್ಯಾಙ್ಗನೆಯೇ (ಎಕ. II, ೦೩೯-೩೩ : 1121).

[ ಸಂ. ದೇವತಾಧಿಷ್ಠಿತಾ ]

**ದೇವತಾನಿಷ್ಠ** (ನಾ). ದೇವರಲ್ಲಿ ನಿಷ್ಠೆಯುಳ್ಳವನು; ಭಕ್ತ: ಪರಮ ಜಿನಪದಾಂಭೋಜಾತದೊಳ್ ಭೃಂಗಮಾಲಾಪರಿಕರಮನೆ ಕ ಣ್ಣ ಳ್ . . . ಶುದ್ಧಚೈತನ್ಯರೂಪಂಗಿರಲೆಡೆಯೆನೆ ಚಿತ್ತಂ ದೇವತಾನಿಷ್ಠನಾದಂ (ಅನಂಪು. ೪-೬೫). [ ಸಂ. ]

**ದೇವತಾಪ್ರಸ್ತ** (ನಾ). ಮದುವೆಗೆ ಮೊದಲು ಕುಲದೇವತೆಯ ತೃಪ್ತಿಗಾಗಿ ಮಾಡುವ ಭೋಜನ ಸಮಾರಂಭ; ದೇವರೂಟ: ಸುವಾಸಿನಿಯರೊಲವಿನಿಂ ಕಂಭಮನುಯರ್ಚಿಸಿ ದೇವತಾಪ್ರಸ್ತವಾ ಲೇಸಿನಿಂ ತೀರ್ಚೆ (ನವಮೋ. ೦೩-೫೪). [<ಸಂ. ದೇವತಾಪ್ರಸ್ಥ ? ]

**ದೇವತಾಭಾವ** (ನಾ). ತಾನು ದೇವರೆಂಬ ಭಾವನೆ,- ತಿಳಿವಳಿಕೆ: ಸುಪ್ರೀತನಾದ ಯಜ್ಞೇಶ್ವರ ಪೂಜಾರ್ಹನಾದ ದೇವತಾಭಾವವನ್ನು ಬಿಟ್ಟು, ಮಿತ್ರಭಾವವನ್ನು ಧರಿಸಿದ (ಜಿತಂಬಾ. ೪). [ ಸಂ. ]

**ದೇವತಾಮನುಷ್ಯ** (ನಾ). ದೇವತೆಯ ಸ್ವಭಾವದ ವ್ಯಕ್ತಿ; ದೈವಿಕ ಗುಣವುಳ್ಳವನು: ದೊಡ್ಡರಾಯರು ಇನ್ನೂ ಇಪ್ಪತ್ತು ವರ್ಷ ಬದುಕುತ್ತಾರೆ. ಅವರು ದೇವತಾಮನುಷ್ಯ (ವಾತ್ಸಲ್ಯ. ೫); ಅವಳು ದೇವತಾಮನುಷ್ಯಳು. ಎಲ್ಲರ ಪರಾಂಬರಿಕೆ ಮಾಡುತ್ತಾಳೆ (ಜ್ಞಾಪಕಾ. ೪೦). 'ದೇವಮಾನವ' ಪರಾ. [ ಸಂ. ]

**ದೇವತಾಮೂಢ** (ನಾ). [ಜೈನ] ಲೋಕಮೂಢ, ದೇವತಾಮೂಢ ಮತ್ತು ಪಾಷಂಡಿ ಎಂಬ ಮೂಢತ್ರಯಗಳಲ್ಲಿ ಒಂದು; ಗಿಡ, ಮರ, ಕಲ್ಲು ಮುಂತಾದುವನ್ನೂ ಅಹಮಿಂದ್ರ, ಪ್ರತೀಂದ್ರ, ಕ್ಷೇತ್ರಪಾಲ ಮೊದಲಾದ ದೇವತೆಗಳನ್ನೂ ಪೂಜಿಸುವುದು: ಜಿನನಲ್ಲ ದಾಪ್ವರಂ ಪಿಡಿದು ನಮವುದುಂ ಕಿಚ್ಚು ಕವಿಲೆ ಮರನಾಯುಧಮೆಂದಿನಿತಕ್ಕಂ ಪೊಡವಡುವುದುಮನೇಕವಿಧ ಬಗೆಯ ದೇವತಾಮೂಢಂಗಳ್ (ಸಮಪ. ೯-೩); ಅಹಮಿಂದ್ರ ಪ್ರತೀಂದ್ರ ಲೋಕಪಾಲಾದ್ಯನೇಕ ಸ್ವರ್ಗಜಾಮರ ನಿಕಾಯಮಂ ನಿರ್ದೋಷಿದೇವರೆಂದಾರಾಧನೆಯಂ ಮಾಳ್ಪುದು ದೇವತಾಮೂಢವೆಂಬುದು (ಹಸಾರ. ೪೬೩). [ ಸಂ. ]

**ದೇವತಾಯಾತ್ರೆ** (ನಾ). ದೇವರ ರಥೋತ್ಸವ; ಜಾತ್ರೆ: ತಿರುವೆಂಗಳನಾಥನ ಧ್ವಜದ ಸೇವೆ ದೇವತಾಯಾತ್ರೆಯನೂ ಪ್ರತಿವರುಷವೂ ನಡಸುವ ಧರ್ಮ (ಎಕ. XVI, ಪಾವುಗ. ೦೦೨-೫ : 1641).

[ ಸಂ. ದೇವತಾಯಾತ್ರಾ ]

**ದೇವತಾರತಿ** (ನಾ). ದೇವರುಗಳ ವಿಷಯದಲ್ಲಿರುವ ಪ್ರೀತಿ,- ಭಕ್ತಿ: ದೇವತಾರತಿಯು ಭಾವವಾಗಿ ಉಳಿದುದು ಸಾಮಾಜಿಕಕಾರಣಕ್ಕಾಗಿ (ಸಾಹಿವಿ. ೨೯). [ ಸಂ. ]

**ದೇವತಾರೂಪ** (ನಾ). ೧. ದೇವತೆಯ ಆಕಾರ,- ಸ್ವರೂಪ. ೨. ದೇವರು: ಈ ಹತಕಲ್ಮಷಂಗೆ ಮಾತಾಪಿತೃಭಾವಮೆಂದು ನಿಮಗಾದುದು ನೀವೆಮಗಂದು ದೇವತಾರೂಪಂ (ಶಾಂತಿಪು. ೦೯-೭೫). [ ಸಂ.]

**ದೇವತಾರ್ಚನೆ** (ನಾ). ದೇವರ ಪೂಜೆ: ನಾವು ಬಲದಲು ನಮ್ಮ ಎಡದಲು ನೀವು ಕುಳ್ಳಿರ್ದತಿ ವಿಶೇಷದ ದೇವತಾರ್ಚನೆಯಂ ಸಲಿಸಿ (ಬಸವು. ೨೪-೨೮); ಮಧ್ವರಾಯರ ದೇವತಾರ್ಚನೆಯ . . . ಮೂಲರಘುಪತಿ ಒಂದು ಮುದ್ದು ಜಾನಕಿ ಒಂದು (ಪುರಂದ. ೩-೧೦೬ ಪಲ್ಲವಿ).

[ ಸಂ. ದೇವತಾರ್ಚನಾ ]

**ದೇವತಾರ್ಪಣ** (ನಾ). ದೇವರಿಗೆ ಸಮರ್ಪಿಸುವುದು. 'ದೇವತಾರ್ಪಣಗೈ' ಪರಾ. [ ಸಂ. ]

**ದೇವತಾರ್ಪಣಗೈ** (ಕ್ರಿ). ದೇವರಿಗೆ ಒಪ್ಪಿಸು: ಸುಜನೆಯರು . . . ನಿತ್ಯವಿಧಿಭಜನೆಯೆಲ್ಲವ ತೀರ್ಚಸಲು ಪರಿಪರಿ ಪಾಕದ್ರವ್ಯಮಂ ಗಡಣಿಸಿಡಲು ನೋಡುತ್ತ ದೇವತಾರ್ಪಣಗೈದು ಸವಿರುಚಿಯು ಮಾಡಿ ಸವಿಸವಿದುಂಡು ತೇಗಿ (ನವಮೋ. ೦೭-೧೮). [ದೇವತಾರ್ಪಣ+ಗೈ$_1$ (<ಕೆಯ್$_1$)]

**ದೇವತಾಲ, ದೇವತಾಳ** (ನಾ). = ದೇವದಾಳಿ: "ದೇವತಾಲ, ಜೀಮೂತ" (ನಾಚಿರಾ. ೬). **ದೇವತಾಳ**: "ವೇಣೀ, ಗರಾಗರೀ, ದೇವತಾಳೀ, ಜೀಮೂತಃ – ಇ ದೇವತಾಳೀವೃಕ್ಷದ ಹೆಸರುಗಳು" (ಸಿದ್ಧಾಂತಿ. ೧೨೭); "ದೇವತಾಳ – ದೇವತಾಳಿ" (ಒಷಧಿ. ೭೯). [ ಸಂ. ]

**ದೇವತಾಲಯ** (ನಾ). ದೇವಾಲಯ; ಗುಡಿ: ಮಂಡಳಮಂ ನಿಜಮಂ ದ್ವಿಜಮಂಡಲಿಗಂ ದೇವತಾಲಯಕ್ಕಂ ಕೊಟ್ಟಂ ಖಂಡಯಮವೆತ್ತಳೆಯಂ ಪರಮಂಡಳಮಂ ವೀರವಿಷ್ಣುವರ್ಧನನಾಳ್ದಂ (ಎಕ. VI, ಕಡೂರು. ೦೫೯-೬೦ : 1173). [ ಸಂ. ]

**ದೇವತಾವರಣ** (ನಾ). ಜಪ, ಪೂಜೆ ಮೊದಲಾದ ಸಂದರ್ಭಗಳಲ್ಲಿ ಆರಾಧ್ಯದೇವತೆಯನ್ನು ಮಂತ್ರಪೂರ್ವಕವಾಗಿ ಆವಾಹನೆ ಮಾಡುವುದು; ಆರಾಧ್ಯದೇವತೆಯ ನಾಮಗ್ರಹಣಪೂರ್ವಕವಾಗಿ ಸಂಕಲ್ಪ ಮಾಡುವುದು: ಋಷಿಚಂದಮುಖ್ಯಾದಿ ದೇವತಾವರಣದಿಂ . . . ಪರಿಶುದ್ಧಿಯೊಡೆದು (ನವಮೋ. ೨-೩೬). [ಸಂ. ]

**ದೇವತಾಸಾನ್ನಿಧ್ಯ** (ನಾ). ೧. ದೇವತಾಮೂರ್ತಿಯ ಬಳಿಯಿರುವುದು; ದೇವರ ಸಾಮಿಪ್ಯ. ೨. ಶಾಸ್ತ್ರೋಕ್ತವಾದ ಕ್ರಮದಿಂದ ಪ್ರತಿಷ್ಠೆ ಮಾಡಿದ ಪ್ರತಿಮೆಗಳಲ್ಲಿ ದೇವರು ನೆಲಸುವುದು; ಆವಾಹನೆ ಮಾಡಿದ ಸ್ಥಳದಲ್ಲಿ ದೇವರು ಇರುವುದು: ಶಿಲಾ, ಮೃತ್, ದಾರು, ರತ್ನ, ಲೋಹಾದಿ ಮೂರ್ತಿಗಳಲ್ಲಿ ಯಾವ ಪರಿಮಿತಿಯಲ್ಲಿ, ಎಷ್ಟು ಕಾಲ ಆಯಾಯ ದೇವತಾಸಾನ್ನಿಧ್ಯವು ನೆಲೆಗೊಳ್ಳುವುದೆಂಬುದೂ . . . ಆಗಮ ಶಾಸ್ತ್ರದಲ್ಲಿ ಉದಾಹೃತವಾಗಿವೆ (ಭಾರರ. ೮೦). [ ಸಂ. ]

**ದೇವತಾಸಿದ್ಧಾಂತ** (ನಾ). ದೇವತೆಗಳನ್ನು ಕುರಿತ ಸಿದ್ಧಾಂತ: ಹೋಮರನ ದೇವತಾಸಿದ್ಧಾಂತ (Theology)ವನ್ನು ಅನೈತಿಕವಾದ.ದೆಂದು ಖಂಡಿಸುವುದರಿಂದ ತೃಪ್ತರಾಗದೆ . . . ಅವನ ಮೇಲೆ ದೋಷಗಳ ವರ್ಷವನ್ನೇ ಹೇರಲು ಅವರು ಶ್ರಮಿಸಿದರು (ಅರಿಕಾ. ೦೩೭ ಅಡಿಟಿ). 'ದೇವತಾತತ್ತ್ವ' ಪರಾ. [ ಸಂ. ]

**ದೇವತಾಸ್ಥಳ** (ನಾ). (ಪ್ರಾಚೀನವಾದ) ದೇವಸ್ಥಾನಗಳು ಇರುವ ಸ್ಥಳ: ಆ ನಿಯಮ ನಿಬಂಧನೆಗಳಂತೆ ನಿರ್ಮಿತವಾದ ದೇವತಾಸ್ಥಳಗಳು ಕ್ಷೇತ್ರಗಳೆಂದು ವಿಖ್ಯಾತಿ ಹೊಂದಿ . . . ಪ್ರಕಾಶಿಸುತ್ತವೆ (ಭಾರರ. ೮೦).

[ ಸಂ. ದೇವತಾಸ್ಥಲ ]

**ದೇವತಾಸ್ಥಾನ** (ನಾ). ದೇವತೆಗಳ ಪ್ರತಿಮೆಗಳನ್ನು ಪೂಜಿಸುವ ಸ್ಥಳ ; ದೇವಾಲಯ ; ದೇವಸ್ಥಾನ: ದೇವತಾಸ್ಥಾನದಲಿ ವಿಪ್ರಸಭಾವಳಯದಲಿ . . . ಉಪಹತಿಯ ಮಾಡುವುದಾವ ಗುಣ ಗರುವರಿಗೆ (ಕುವ್ಯಾಉ. ೩-೦೨೮). [ ಸಂ. ]

**ದೇವತಾಳ** 'ದೇವತಾಲ' ನೋ.

**ದೇವತೂರ್ಯ** (ನಾ). ದೇವತೆಗಳು ನುಡಿಸುವ ವಾದ್ಯ ; ದೇವಲೋಕದ ವಾದ್ಯ : ಬೆಳ್ಗೊಡೆ ಸೊಗಯಿಪ ಭಾಮಂಡಳಂ ದೇವತೂರ್ಯೋದಿತನಾದಂ . . . ವಿಶ್ರುತಮಾಗಿರ್ಕುಂ ಸುರೇಂದ್ರೋಪಕೃತಮೆನಿಸಿ ನಿವ್ಮಾಳ್ (ಸುಕುಮಾ. ೪-೩೦). [ ದೇವ + ತೂರ್ಯ$_{1}$ ]

**ದೇವತೆ** (ನಾ). ಸ್ವರ್ಗನಿವಾಸಿಯೆಂದು ಭಾವಿಸಲಾದ, ಅತಿಮಾನುಷ ಶಕ್ತಿಯುಳ್ಳ ಜೀವ; ದಿವಿಜ: ದೇವತೆ ನಿಂದಿದಂ ನುಡಿದಳಕ್ಕ ನೆಗಟ್ತೆಯ ಪುಷ್ಕರಾರ್ಧದೊಳ್ (ಶಾಂತಿಪು. ೮-೯೩) ; ಕ್ಷೇತ್ರಮುಮಂ ದಯವಪಾಡೆನು ತಲುದ್ದಾವು ಶಿವಭಾವದಿ ಶರಣುವೊಗಲಾ ಮಹಿಮನಾ ದೇವತೆಗಳಂ ಕಾಯ್ದು ಸಲಹುತ್ತ (ಬಸಪು. ೨೩-೦೭): P ಈ ಶಬ್ದ ಪುಂ, ಸ್ತ್ರೀ, ನಪುಂಸಕ ಈ ಮೂರು ಲಿಂಗಗಳಲ್ಲೂ ಉಪಯೋಗವಾಗುತ್ತದೆ. [ ಸಂ. ದೇವತಾ ]

**ದೇವತೋಪದ್ರವ** (ನಾ). ದೇವತೆಯಿಂದುಂಟಾದ ಕೇಡು,-ಅನಿಷ್ಟ : ವಿಗತಜೀವಿತರಾಗಿರ್ದ ಮೂವರನುಜರುಮಂ ಕಂಡಿದು ಮನುಜರಿಂದಾದುಪದ್ರವಮಲ್ಲಮೇನಾನುಮೊಂದು ದೇವತೋಪದ್ರವಮಾಗಲೆವೇಳ್ಕುಮೆಂದು (ಪಂಪಭಾ. ೮-೪೦ ವ). [ ಸಂ. ]

**ದೇವತೋದ್ಯಾನವನ** (ನಾ). ದೇವಾಲಯಕ್ಕೆ ಸೇರಿದ ತೋಟ : ಕಲ್ಕಟಿಯುತ್ತರದಿಶಾಭಾಗದ ದೇವತೋದ್ಯಾನವನಮಧ್ಯಸ್ಥಿತ ಸರೋವರದ ಪಶ್ಚಿಮತಟದಲ್ಪೂರ್ವಾಭಿಮುಖಮಾಗಿಟ್ದು ಶಿವಾಲಯಂ ಪ್ರದಕ್ಷಿಣಂ ಬಂದು (ಶಾಇಇ. XX, ೪೯-೪೮ ; ಸು. 1076). [ ಸಂ. ]

**ದೇವತೋಪಾಸನೆ** (ನಾ). ದೇವರನ್ನು ಒಲಿಸಿಕೊಳ್ಳುವುದಕ್ಕಾಗಿ ಮಾಡುವ ಜಪ, ಪೂಜೆ ಮೊದಲಾದುವು : ಆಗಮೋಕ್ತ ವಿಧಾನಗಳು ಹೊರತು ಬೇರೆ ಮಾರ್ಗಗಳು ಕಲಿಯುಗದಲ್ಲಿ ದೇವತೋಪಾಸನೆಗೆ ಪ್ರಶಸ್ತಗಳಲ್ಲ (ಭಾರದ. ೩೮). [ಸಂ. ದೇವತೋಪಾಸನಾ]

**ದೇವತೋಪಾಸ್ತಿ** (ನಾ). = ದೇವತೋಪಾಸನೆ : ಆ ದೇವತೋಪಾಸ್ತಿಯಾತನೇ ಯೋಗಿಯೆನಲು (ವೀಶೈಪು. ೫-೧೭ ಸೂಚನೆ). [ ಸಂ. ]

**ದೇವತ್ತಿ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು : ತರುವಾಟಗಳಿಂದೆಸೆವ ನಂದನೋದ್ಯಾನಂಗಳೊಳು . . . ಪನ್ನೇರಳೆ ದೇವತ್ತಿ . . . ಸಾರ್ವರ್ತುಕವಾದ ಫಲಂಗಳುಳ್ಳ ತರುನಿಕರಂಗಳುಂ (ವಿವೇಕ. ೨೦೦). [ ದೇವ + ಅತ್ತಿ$_{1}$ ]

**ದೇವತ್ರಯ** (ನಾ). ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ಹೆಸರಿನಿಂದ ಪ್ರಸಿದ್ಧರಾದ ಮೂರು ದೇವತೆಗಳು ; ತ್ರಿಮೂರ್ತಿ: ದೇವತ್ರಯಾದ್ಯನಪ್ಪಾ ದೇವಜ್ಯೇಷ್ಠಂ ಸ್ವನಾಭಿಕಮಳಭವಂ ಮಾದೇವಂ ದ್ವಿತೀಯನೆನಿಪೀ ದೇವಂ ಶ್ರೀವಾಸುದೇವ ನರ್ಘ್ಯನಮೋಘಂ (ಜಗವಿ. ೧೭-೨೭): ದೇವತ್ರಯದೊಳ್ ಪಿರಿಯನದಾವಂ ಶಶಿಮೌಳಿಯೆಂಬ ತೆಜದಿಂದತುಳಾಜ್ಞಾವಿಭವದಿಂದೆ ಪಿರಿಯಂ ಭೂವಿನುತಂ ಚಿಕ್ಕರಾಜನೂರ್ಜಿತತೇಜಂ (ಚಿಕುಮಾ. ೦-೦೩): ರುದ್ರ ವಿಷ್ಣು ಬ್ರಹ್ಮರೆಂಬ ದೇವತ್ರಯದೊಳು ಪ್ರೇರಿಪಾ ತ್ರಿಗುಣಕ್ಕತೀತವಹ ಶಿವತತ್ವಕಾರಣದೊಳು (ವೀಶೈಪು. ೦-೧-೩೨). [ ದೇವ + ತ್ರಯ ]

**ದೇವತ್ರಿತಯ** (ನಾ). = ದೇವತ್ರಯ: ತನಗೆ ದೇವತ್ರಿತಯವಲ್ಲದೆ ದನುಜ ದಿವಿಜಾದಿ ತ್ರಿಲೋಕದ ಜನವಿದಿರೆ ಮೆಚ್ಚಿಸಿತು ಮಗುವಿನ ದಿಟ್ಟತನವೆಂದ (ಕುವ್ಯಾಕ. ೨೦-೩೦). [ ದೇವ + ತ್ರಿತಯ ]

**ದೇವತ್ವ** (ನಾ). ೧. ದೇವತನ ; ದೇವತಾಸ್ವರೂಪ : ಆ ಪುಣ್ಯದಿಂ ಭೋಗಭೂತಳದೊಳ್ ಪುಟ್ಟಿ ಕಷಾಯಮಿಲ್ಲದುದಱಿಂ ದೇವತ್ವಮಂ ಪೆತ್ತೆಂ (ಶಾಂತಿಪು. ೭-೨೦): ಕೆಲರಾ ಸಭೆಯೊಳಿರ್ದು ಕುಣದುಂ ದೇವತ್ವಕ್ಕಾಟಿಪರ್ (ಜಿನಾಕ. ೧೩-೦೩) ; ದೇವತ್ವವಿಹ ನರಂ ಪ್ರತಿಮೆ ತಾಂ ಚಿಂತೆಯಂ ವಿವರಿಹ ನಿರಾಕೃತಿಗೆ ! (ಅಗ್ನಿಹೆ. ೫೫-೨). ೨. ದೇವತೆಯ ಪ್ರಭಾವ,-ಶಕ್ತಿ,-ಮಹಿಮೆ : ನಾದಪ್ರಿಯ ನಂದಿಯನೇಱಿಕೊಂಡು ಅತೀತನ ಮೇಲೆ ಆನಂದಸಿಂಹಾಸನವಿಕ್ಕಿ ಕುಳ್ಳಿತ್ತು ಕೂಡಲಸಂಗಮದೇವರ ದೇವತ್ವ ಕೆಟ್ಟಿತ್ತು (ಬಸವ. ೯೩೦) ; ಆ ದೇವರಲ್ಲಿ ದೇವತ್ವ ಏನಾದರೂ ಇದ್ದ ಪಕ್ಷದಲ್ಲಿ . . . ನನ್ನ ಅದೃಷ್ಟ ಪರೀಕ್ಷೆಮಾಡಲು ತಯಾರಾಗಿದ್ದೇನೆ (ವೀರಯೋ. ೫೫). [ ಸಂ. ]

**ದೇವದತ್ತ** (ಗು). ೧. ದೇವರು ಕೊಟ್ಟ ; ಅದೃಷ್ಟದಿಂದ ಉಂಟಾದ : ನಿನಗೆ ನಗದುಹಣವಿರದಿದ್ದರೂ ದೇವದತ್ತವಾದ ಮೋಹನರೂಪು ಇದೆ (ಹೇಮಂತ. ೧೦೨). (ನಾ). ೨. ಅರ್ಜುನನ ಶಂಖದ ಹೆಸರು: ಇದ ನಿಂದ್ರನಟ್ಟಿದಂ ನಿನಗಿದಱ ಪೆಸರ್ ದೇವದತ್ತಮೆಂಬುದು ನಿನಗಭ್ಯುದಯಕರಂ ಶಂಖಂ (ಪಂಪಭಾ. ೩-೪) ; ದೇವದತ್ತದ ಧರಧುರದ ದೆಖ್ಖಾಳವಿದೆ ಗಾಂಡಿವದ ಬೊಬ್ಬೆಯಿದೆ (ಕುವ್ಯಾವಿ. ೭-೪) : ಈ ಸವ್ಯಸಾಚಿತ್ವಮೀ ದೇವದತ್ತಶಂಖಂ ತನಗಿದೇಕೆ ನಿನ್ನಂ ಜಯಿಸದೆ (ಜೈಮಿಭಾ. ೧೩-೮) : ಅರ್ಜುನನ ದೇವದತ್ತವೆಂಬ ಶಂಖವೂ ಬಂದದ್ದು ಈ ಮಯನಿಂದಲೇಯೆ (ವಚಭಾ. ೭೫). ೩. ಶರೀರದಲ್ಲಿರುವ ಒಂದು ಬಗೆಯ ವಾಯು ವಿಶೇಷ; ಆಕಳಿಕೆ, ಓಕರಿಕೆ ಮತ್ತು ಹೊಟ್ಟೆತೊಳಸು ಮೊದಲಾದುವನ್ನು ಉಂಟುಮಾಡುವ ವಾಯು : ಓಕರಿಕೆಯ ಮಾಡುವುದೊಂದು ದೇವದತ್ತವಾಯು (ಚನ್ನಬ. ೪. ೪೦೦-೮೭೪); ಮತ್ತಮಾ ಉಪವಾಯುಗಳೊಳು ನಾಗವಾಯುವಿನಿಂ ಸೀನು ಕೆಮ್ಮು ದೇವದತ್ತವಾಯುವಿನಿಂ ನಗೆನುಡಿ (ವಿವೇಕ. ೩೪): ವಿಜೃಂಭಣರೂಪಕ್ರಿಯೆಯಂ ಮಾಡುವದರಿಂದ ದೇವದತ್ತ ಸಂಜ್ಞೆಯನ್ನೂ . . . ಪಡೆದುಕೊಂಡಿರುವುದು (ಮುಮುಕ್ಷು. ೩). ೪. ಅನಿರ್ದಿಷ್ಟ ವ್ಯಕ್ತಿಯನ್ನು ಸೂಚಿಸುವಾಗ ಬಳಸುವ ಶಬ್ದ : ದೇವದತ್ತನ ಘಟದ ಮಾಟ್ಕೆ, ದೇವದತ್ತನ ಇರವು (ಶಬ್ದಾನು. ೨೨೭ ಪ್ರಯೋ). [ ಸಂ. ]

**ದೇವದತ್ತಿ** (ನಾ). ದೇವಸ್ಥಾನ ಮೊದಲಾದ ಧರ್ಮಸಂಸ್ಥೆಗಾಗಿ ಕೊಡುವ ದಾನ,-ಉಂಬಳಿ. [ ದೇವ + ದತ್ತಿ ]

**ದೇವದಲ್ಲಣ** (ನಾ). (ತನ್ನ ಪರಾಕ್ರಮದಿಂದ) ದೇವತೆಗಳಿಗೆ ಆತಂಕವನ್ನುಂಟುಮಾಡುವವನು : ದೇವದಲ್ಲಣರೆನಿಪ ದೈತ್ಯರಿಗೋವಿ ಸುರೆಯ ನದೆಱೆದು ಸೊಕ್ಕಿಸಿ (ಸಂಭಪ. ೮-೯೦) ; ಕಪಿಗಳ ಕೆಣಕಿ ಚತುರಾಹವದ ಕೋವಿದ ದೇವದಲ್ಲಣನು ಅಣುವ ಮೊದಲಾದವರ ತೃಣವೆಂದೆಣಿಸಿ (ತೊರೆರಾ. ೩೭-೦೭) : ರಾವಣಗೆ ಹುಟ್ಟಿಹನುಯೆಂಬರು ದೇವದಲ್ಲಣ ನಿಂದಕೀಯನು (ಮೂಲರಾ. ೦-೦). [ ದೇವ + ತಲ್ಲಣ (<ತಲ್ಲಟ) ]

**ದೇವದಾನ** (ನಾ). ದೇವಾಲಯಕ್ಕೆ ಕೊಡುವ ದಾನ,-ದತ್ತಿ,-ಉಂಬಳಿ : ಕೂಲಿಗೊಳ್ಳಂ ನೋಡ ದೇವದಾನದ ಕೆಯ್ಗೆ ಕೂಲಿಗೊಳ್ಳಂ ನೋಡ ವಿಕ್ಕ ಭವಿಗಳ ಕೆಯ್ಗೆ (ಅಶಿರ. ದೇ. ೧೭೪-೦೫) ; ದೇವದಾನದ ಗದ್ದೆ ಬೆದ್ದಲು ಸಹಿತ . . . ಕೊಳ್ಳಿವೆಂದು ಬಿಟ್ಟು (ಎಕ. II, ೩೪೭-೩೨ : ಸು. 1296). [ ದೇವ + ದಾನ ]

**ದೇವದಾಯ** (ನಾ). = ದೇವದಾನ : ನಮ್ಮಯ ವೃತ್ತಿ ದೇವದಾಯಕೆ ಸಂದುದೆಂಬರೆಮ್ಮಭಿಧಾನ ಭಾವಿಸಿ ವಿಶ್ವೇಶ್ವರರೆಂದು (ತ್ರಿಲಿಂಶ. ೧೦-೦೧) : ದೇವದಾಯಂಗೊಟ್ಟು ಅಱಿಂಗೆಯ್ದು (ಚಿಕದೇ. ೪೯-೧೮): ಗುಮ್ಮಟನಾಥಸ್ವಾಮಿಯವರ ದೇವದಾಯಗಳನ್ನೂ . . . ಜೀರ್ಣೋದ್ಧಾರ ಮಾಡಿ (ಚಿಟ್ಟಿಅ. ೪೦-೧೨). 'ದೇವದೇಯ' ಪರಾ. [ ದೇವ + ದಾಯ$_{1}$ ]

ಥಾದಿಸಿದ್ದೆ (ವರ್ಧಪು. ೧೪-೩): ದೇವಾಂಗಾಮೃತಕಣಮಂ ದೇವಾಂಗದಿನೊತ್ತಿ ಶಚಿ ವಿಭೂಷಿಸಿದಳ್ (ಪಾರ್ಶ್ವಪು. ೧೪-೧೦೦) ; ದೇವಾಂಗದಿಂದೆ ತೊಡೆದಳ್ ದೇವಾಂಗನೆ ರತ್ನಮುಕುರಮಂ ತೊಡೆವವೊಲಾ ದೇವಾಂಗವುನೊರ್ದೆ ಜಗುವ ದೇವಾಂಗವಿಭೂಷಣಾಂಶು ಮಾರ್ಪೂಳಿವಿನೆಗಂ (ಅನಂಪು. ೩-೮೦). ೩. ಪರಮೇಶ್ವರನ ದೇಹದಿಂದ ಹುಟ್ಟಿದ ಒಬ್ಬ ಅವತಾರಪುರುಷ; ನೆಯ್ಗೆಯ ಕಲೆಯನ್ನು ಪ್ರಚಾರಕ್ಕೆ ತಂದವನು: (೩). ೪. ನೆಯ್ಗೆಯವರಲ್ಲಿ ಒಂದು ಒಳಪಂಗಡ: "ಜಾಡ, ನೇಕಾರ, ಹಟಗಾರ, ದೇವಾಂಗ" (ಕಂನುಹು. ೭೪); ಕೊಂಕಣರಲ್ಲಿ ನಾಯ್ಕನೆಂದೂ ದೇವಾಂಗರಲ್ಲಿ ಚೆಟ್ಟಿ ಎಂದೂ . . . ಇತ್ಯಾದಿ ಕೌಟುಂಬಿಕ ಹೆಸರುಗಳಿವೆ (ತುಳುನಾ. ೦೪೪).

ದೇವಾಂಗದ ಚೆಕ್ಕು = ಒಂದು ಬಗೆಯ ಚೆಕ್ಕು: "ಪೂತಿಕ್ಕೃಶ– ದೇವಾಂಗದ ಚೆಕ್ಕು" (೬ಪಧಿ. ೧೧೨). [ ದೇವ + ಅಂಗ₂ ]

**ದೇವಾಂಗನೆ** (ನಾ). ದೇವಲೋಕದ ಹೆಣ್ಣು; ದೇವತಾಸ್ತ್ರೀ ; ಅಪ್ಸರೆ: ದೇವಾಂಗನೆಯರ್ ಪಾಡುವರಾವನ ಜಸಮಂ (ಆದಿಪು. ೦೩-೬೬) ; ಕುಲಶಿಖರಿಶೇಖರಿಯರುಮಪ್ಪ ದೇವಾಂ [ಪಾಠಾಂ. ಲೇಖಾಂ]ಗನೆಯರುಮಂ ಗಳೋದರಪರಿಶೋಧನಪ್ರಮುಖ ನಿಖಿಲನಿಯೋಗಭೋಗಕ್ಕೆ ಬೆಸಸುದಂ (ಅನಂಪು. ೪-೭೯ ವ): ದೇವಾಂಗನೆಯರಿಂತು ಪೊಗಟ್ಟುಂ ತೆಗಳ್ದುಂ ಬಯ್ದುಂ ಭಂಗಿಸಿಯುಂ ನುಡಿಸಿದೊಡಂ . . . ಕದಲದ ರಾಯನ ಕಟ್ಟಾಯಸದ ತಪದ ಬಲ್ಮೆಯುಂ ಕಂಡು ದೂರದೆ ಕೈಮುಗಿದು ಬೆಂಗೊಟ್ಟರ್ (ರಾಮಾಶ್ವ. ೬೨-೩). [ ದೇವ + ಅಂಗನೆ ]

**ದೇವಾಂಗವಸನ** (ನಾ). ರೇಷ್ಮೆವಸ್ತ್ರ: ಕಾಂಚನವಂಚೋಪಶೋಭಿತ ದೇವಾಂಗವಸನಪ್ರಚ್ಛದಾಚ್ಛಾದಿತ ಶಯ್ಯಾತಳದೊಳ್ . . . ಪಟ್ಟಿರ್ದ ಗರ್ಭೇಶ್ವರಿಯಲ್ಲಿಗೆ ದೂತನನಟ್ಟಿ (ಶಾಂತಿಪು. ೫-೮೩ ವ).

[ ದೇವಾಂಗ + ವಸನ ]

**ದೇವಾಂಗವಸ್ತ್ರ** (ನಾ). =ದೇವಾಂಗವಸನ: ಇಂದ್ರಾಣಿ ಭಗವದಂಗಸಂಗತ ಜಳಕಣಂಗಳಂ ದೇವಾಂಗವಸ್ತ್ರಂಗಳಿಂದೊತ್ತಿ ಕಳೆದು (ಆದಿಪು. ೭-೦೦೩ ವ): ದಿವಿಜಪತಿ ಪೊಳೆವ ದೇವಾಂಗವಸ್ತ್ರಮಂ ಭುವನಪತಿಯನುಡಿಸಿ (ಶಾಂತಿಪು. ೧೧-೩೩) ; ದೇವಾಂಗವಸ್ತ್ರಮಂ ಸೆಳೆಮಂಚಂ ಕವುಳಡೆ ಧವಳಚ್ಛತ್ರಮುಮಿಪ್ಪೊಪ್ಪೆ ವಾಸಂ ಸಮಂತು ವಾಸುವುದು (ಮಲತಿ. ೦೦-೨೨).

[ ದೇವಾಂಗ + ವಸ್ತ್ರ ]

**ದೇವಾಂಬರ** (ನಾ). ೧. ದೇವತೆಗಳು ಧರಿಸುವ ಬಟ್ಟೆ. ೨. ಅಮೂಲ್ಯವಾದ ಬಟ್ಟೆ ; ಬೆಲೆಬಾಳುವ ಹಾಗೂ ಪ್ರಶಸ್ತವಾದ ಬಟ್ಟೆ: ಥನಕನಕ ದೇವಾಂಬರಾದಿಮುಖ್ಯಾಭರಣಕರ್ಪೂರವೀಟಕಾದಿಗಳನಿತ್ತು ಓವಿ ಸಿಂಹಳ ಮುಖ್ಯರಂ ತಮ್ಮತಮ್ಮ ದೇಶಾವಳಿಗೆ ಬೀಳ್ಕೊಡಲು (ಭಾವಚಂ. ೩-೩೦).

[ ದೆ ವ + ಅಂಬರ ]

**ದೇವಾಗಮ** (ನಾ). ದೇವತೆಗಳ ಆಗಮನ: ನಡೆ ನೋಡಲೊಡಂ ದೇವಾಗಮುಮಂ ಪಿರಿದೊಂದು ದಂದುಗದ ಸಂದಣಿಯಿಂದಮ . . . ನೋವನ ಗಾದುದು (ಆದಿಪು. ೩-೩೩). [ ದೇವ + ಆಗಮ ]

**ದೇವಾಗಮನ** (ನಾ). = ದೇವಾಗಮ: ಆ ವನಿತೆ . . . ಸೌಧೋಪರಿಮತಳದೊಳ್ ನಿಂದು ದೇವಾಗಮನಮಂ ನೋಡಲೊಡಂ (ಆದಿಪು. ೩-೨೨ ವ).

[ ದೇವ + ಆಗಮನ ]

**ದೇವಾಗಾರ** (ನಾ). ೧. ದೇವತೆಗಳ ವಾಸಸ್ಥಾನ; ಸ್ವರ್ಗ: ದೇವಾಗಾರದೊಳುರ್ವಿಯೊಳ್ ಗಗನದೊಳ್ ವಲ್ಮೀಕದೊಳ್ ನಾಕವುಕ್ಕು (ನಾನಾರ. ೬೨). ೨. ದೇವಸ್ಥಾನ; ದೇವಾಲಯ: ನೀರ ಪೊಟ³ . . . ದೇವಾಗಾರಂ ಚೌಮುಮಸದಿರ್ಪಾರವೆಯಂಬೆಡೆಗಳುಚಿತಮೊಸಜ್‌ಗೇಟಲ್ (ಲೋಕೋಪ. ೧೨-೩೩) ; ಅವಿರಳವಾದ್ಯಸಮೇತಂ ಧವಳಪ್ರಾಸಾದಸಾರ ದೇವಾಗಾರಂ (ಜಗವಿ. ೨-೨೩); ಎಬ್ಬಂದು ದೇವಾಗಾರಮಂ ಪೊಕ್ಕು (ಉದ್ಧೃಟ. ೧೦-೧೩೮ ವ) ; ಕೆಱೆಯಂ ಕಟ್ಟಿಸು ಭಾವಿಯಂ ಸವಸು ದೇವಾಗಾರಮಂ ಮಾಡಿಸಜ್ಜೆಱೆಯೊಳ್ಸಿಲ್ಕಿದನಾಥರಂ ಬಿಡಿಸು (ಶಾಇಇ. IV, ೨೬೭-೪೪ ; 1380). [ ದೇವ + ಆಗಾರ ]

**ದೇವಾಜೀವ** (ನಾ). ೧. ದೇವಸ್ಥಾನದಲ್ಲಿ ಪೂಜೆ ಮಾಡಿ ಜೀವಿಸುವವನು ; ದೇವಸ್ಥಾನದ ಅರ್ಚಕ; "ಪೂಜಾರಿ" (ಅಮರ. ೬೬೪). ೨. ದೇವಸ್ಥಾನದ ಕೆಲಸಗಾರ,–ಸೇವಕ.

[ ದೇವ + ಆಜೀವ₁ ]

**ದೇವಾತಿ** (ನಾ). ಒಬ್ಬಾತನ ಹೆಸರು: ಶಿರಿಪುರುಷನ ಮಗ ದೇವಾತಿ ಪಡಿಸಲಿಸಿ ಉಣ್ಪೊನ್ (ಎಕ. VIII, ಸೊರಬ, ೮೩-೯ ; 978). [ ? ]

**ದೇವಾತ್ಮಜಾತ** (ನಾ). ಏಸುಕ್ರಿಸ್ತ: ತನಗೆ ತಾನೆಣೆಯ ದೇವಾತ್ಮಜಾತನ ನೋಡ! (ಗೂರಕ್ಷಾ.ಘಾ. ४-೯೨). [ ದೇವ + ಆತ್ಮಜಾತ ]

**ದೇವಾದಾಯ** (ನಾ). ದೇವಸ್ಥಾನಕ್ಕೆ ದಾನವಾಡಿದ ಭೂಮಿ,–ಜಮೀನು ; ದೇವಮಾನ್ಯ: ಆ ಗ್ರಾಮದ ಕಾಡಾರಂಬ ನೀರಾರಂಬ ಗೊಪ್ಪಲ ಪೊಂಮೆಸುಂಕ ದೇವಾದಾಯ ಬ್ರಂಹಾದಾಯ ನಟ್ಟ ಕಲ್ಲು ಬಿಟ್ಟ ಬಸವ ಮೊದಲಾದುವುಗಳನ್ನು ಈ ಮಠಕೆ ಅಮೃತಪಡಿ ದೀಪಾರಾಧನೆ ಕಾರ್ಯಂಗಳಿಗಾಗಿ ಕೊಡವದು (ಎಕ. IV (R), ಚಾಮರಾ. ೨೮೨-೩೦ ; 1346) ; ನೆರೆಯೂರ ಬೀರಗವುಂಡನೇ . . . ದೇವಾದಾಯ ಮಾಡಿದ ಸಂದರ್ಭದಲ್ಲಿ (ಸವತಿ. ೦೬೬). [ ದೇವ + ಆದಾಯ ]

**ದೇವಾಧಿದೇವ** (ನಾ). ೧. ದೇವರಂಗಳಿಗೂ ದೇವನಾಗಿರುವವನು ; ದೇವತೆಗಳಿಗೂ ನಿಯಾಮಕನಾಗಿರುವವನು; ಪರಮಾತ್ಮ. ೨. ಶಿವ. ೩. ವಿಷ್ಣು. ೪. ಇಂದ್ರ. ೫. ಅರ್ಹಂತ ; ಜಿನ: ದೇವಾಧಿದೇವನಪ್ಪನ ಕೇವಳಬೋಧೋದಯಂ ಪ್ರಸಿದ್ಧೋದಯಮುಂ ದೇವನಿಕಾಯಸಮೇತಂ ದೇವೇಂದ್ರಂ ಮಾಡೆ ನೆಱೆಯೆ ಪೊಗಟ್ಟನುಮೊಳನೇ (ಬಂಹಿರಿ. ೦೩-೩೦). [ ಸಂ. ]

**ದೇವಾಧಿಪ** (ನಾ). ದೇವತೆಗಳ ಒಡೆಯ,– ರಾಜ ; ದೇವೇಂದ್ರ. 'ದೇವಾಧಿಪಪುರ' ಪರಾ. [ ದೇವ + ಅಧಿಪ ]

**ದೇವಾಧಿಪಪುರ** (ನಾ). ೧. ಇಂದ್ರನ ಪಟ್ಟಣ ; ಅಮರಾವತಿ ; ಸ್ವರ್ಗ. ೨. [ಛಂದ] ಮೂರು ಲಘುಗಳಿರುವ ಅಕ್ಷರ ಗಣ; ನಗಣ (ᑌᑌᑌ): ಭೂಮಿ ಜ್ವಾಲೆಂದು ದೇವಾಧಿಪಪುರಗಣಮುಂ ಮುಂತೆ ತೋಯತ್ರಯಂಗಳ್ ತಾಮೆತ್ತಂ ಬಂದು ಚೆಲ್ಪಾಗಿರೆ ... ಸ್ರಗ್ಧರಾನಾಮವೃತ್ತಂ (ಛಂದೋಂಬು. ೨-೧೪೧). [ ದೇವಾಧಿಪ+ಪುರ₁ ]

**ದೇವಾಧೀಶ** (ನಾ). ೧. ದೇವತೆಗಳ ರಾಜ ; ದೇವೇಂದ್ರ. ೨. ವಿಷ್ಣು: ದೇವ ದೇವಾಧೀಶ ಸರ್ವಗುಣಾವಲಂಬನ . . . ನರನಾಟಕದ ಮಾಯಾಶ್ರೀವರನ ಚಿತ್ರೈಸು (ತೊರರಾ. ೬-೩೩-೬೯). ೩. ಅರ್ಹಂತ: ಜಿನ: ದೇವಾಧೀಶನನೊರ್ವ ವರ್ಣಿಸೆ ಮನೋವಾಕ್ಕಾಯಸಂಶುದ್ಧಿಯಿಂ ದೇವೇಂದ್ರತ್ವಮೆ ಸಾರ್ಪುದು (ಅನಂಪು. ೧-೬೧). [ ದೇವ + ಅಧೀಶ ]

**ದೇವಾನಕ** (ನಾ). ದೇವತೆಗಳ ಭೇರಿ,– ದುಂದುಭಿ: ದೇವಾನಕಂಗಳ್ ಮೊಟಗೆ (ಶಾಂತಿಪು. ೮-೧೨೦) ; ದೇವಾನಕರವಮೊದವೆ ನೃಪಾವಾಸದೊಳೊಗೆದುದಿಂತು ಪಂಚಾಶ್ಚರ್ಯಂ (ಪುಷ್ಪಪು. ೧೪-೧೧) ; ವಿಸ್ತರ ದೇವಾನಕಮೃಕ್ಷ ದಿಬ್ಬಗತಿವೆತ್ತಂ ಧಾತ್ರಿ ಭಾಪ್ಪೆಂಬಿನಂ (ಶಾಇಇ. XX, ೨೪೮-೨೯ ; 1228). [ ದೇವ + ಆನಕ ]

**ದೇವಾನಾಂಪ್ರಿಯ** (ನಾ). ೧. ದೇವತೆಗಳಿಗೆ ಪ್ರಿಯನಾದವನು ; ☞ ಇದು ಅಶೋಕಚಕ್ರವರ್ತಿಗಿದ್ದ ಒಂದು ಬಿರುದು. ೨. ಏನೂ ತಿಳಿಯದವನು ; ದಡ್ಡ ; ಮೂರ್ಖ: ದೇವಂಗೆ ವಿಷಯುವಲ್ಲದೆ ದೇವಾನಾಂಪ್ರಿಯರ್ಗೆ ವಿಷಯುಮೇ ಸತ್ಕಾವ್ಯಂ (ಯಶೋಚ. ೦-೬);

ದೇವಾನಾಂಪ್ರಿಯನೆ ವಲಂ ದೇವಗತಿಪ್ರೀತನಪ್ಪವಂ ತದ್ಗತಿಯಂ ದೇವ ಗತಿಯಿಂದೆ ಬಯಸರ್ ಭಾವಿಸೆ ಭವ್ಯರ್ಕಳಲ್ಲಿ (ಪಾರ್ಶ್ವಪು. ೭-೧೫). ೩. (ಯಜ್ಞಕ್ಕೆ ಆಹುತಿಯಾಗಿ ಕೊಡುವ) ಹೋತ. [ಸಂ.]

**ದೇವಾನೀಕ** (ನಾ). ದೇವತೆಗಳ ಗುಂಪು,- ಸಮೂಹ: ಇಬ್ಬರ ದೆಸೆಗೆ ದೇವಾನೀಕ ಮೆಚ್ಚಿತು (ಕುಮಾರವ್ಯಾ. ೦೩-೩೪). [ದೇವ + ಅನೀಕ]

**ದೇವಾನ್ನ** (ನಾ). ದೇವತೆಗಳಿಗೆ ಯೋಗ್ಯವಾದ ಆಹಾರ; ಉತ್ತಮವಾದ ಆಹಾರ; ದಿವ್ಯಾನ್ನ: ಮಾಡದಿಯನ್ನಗಳೊಳಗೆ ಸಕಲ ದೇವಾನ್ನವ ಒಡೆಯರಿಂದಲೂ ಮಿಗಿಲಾಗಿಕ್ಕಲು ತೆಗೆದಿರಿಸಿದೆನು (ಬಸವ. ೪೩೯); ನೀನು ಪ್ರೀತಿಯಿಂ ಸಕಲ ದೇವಾನ್ನಮಂ ಸಲಿಸೆ ನಿನ್ನಯ ನೆನಹಿನಿಂ ಜನಿಸಿದ ಭೂತಜೀವರ್ಗೆ ಸಂತೃಪ್ತಿಯಹುದೆಲೆ ಮಹಾಪೂತ ವಿಖ್ಯಾತ (ಪ್ರಭುಪು. ೪-೫೫). [ದೇವ + ಅನ್ನ$_1$]

**ದೇವಾಪಗೆ** (ನಾ). ದೇವತೆಗಳ ನದಿ; ಗಂಗಾನದಿ: ತಡೆಗುಮೆ ದೇವಾಪಗೆ ತಡೆಯದೆಡೆಯೊಳಂಭೋಧಿವರಂ (ಶಾಂತಿಪು. ೫-೧೪೬); ಹರಿನೀಳ ಶಿಲಾ ಸೋಪಾನಂ ನಿಮಿರ್ದುವು ದೇವಾಪಗೆಯಂ ಬಳಸಿ ಪರಿವ ಯಮುನಾನದಿ ಪೋಲ್ (ಮಲ್ಲಿಪು. ೦೨-೬೭). [ದೇವ + ಆಪಗೆ]

**ದೇವಾಯತನ** (ನಾ). ದೇವಸ್ಥಾನ; ದೇವಾಲಯ: ಆ ರಮಣೀಯ ದೇವಾಯತನನೊತ್ತಸ್ತಂಭವಂ ನೆಟ್ಟು ನಿಂದಿರ್ದು (ಕಾದಂಬರಿ. ೬೮೬); ಶ್ರೀರಾಜಾಧಿರಾಜೇಶ್ವರದೇವರಂ ಪ್ರತಿಷ್ಠೆಗೈಯ್ದು ಮಹೋತ್ಸವಂಗ ದೇವಾಯತನವಂ ಮಾಡಿಸಿ (ಕಜಳ. ೨೨-೭-೨೦; 1083).
[ದೇವ + ಆಯತನ]

**ದೇವಾರ, ದೇಹರ, ದೇಹಾರ$_1$** (ನಾ). ೧. ದೇವಾಲಯ; ದೇವಸ್ಥಾನ: ದೇವಾರಕ್ಕೆ ಜಕ್ಕಲಿಯೊಳ್ ನಾಲ್ಕು ಮತ್ತಲ್ಕೆಯ್ಯಂ ಕೊಟ್ಟರ್ (ಎಕ. VII, ಶಿಕಾರಿ. ೨೧೯-೧೮; 918); ಈ ಕಲ್ಲ ಬಸದಿಯುಮೊನ್ದು ದೇವಾರ ಮುಮಂ ಮಾಡಿಸಿದರ್ (ಎಕ. VIII, ನಗರ. ೪೫-೭; 950); ಆಗಾರಕ್ಕೆ–ಕ್ಷೀರಾಗಾರ–ಕೀರಾರ, ಕೀಲಾರ . . . ದೇವಾಗಾರ–ದೇವಾರ (ಶಮದ. ೨೪೫ ಪ್ರಯೋ); ಬಾಲಕನ ಕಣ್ಣೊಂದು ಬೆಲೆವಣಿಗಟ್ಟನ ದೇವಾರಂ ತೋಱಿವರ್ಪುದಿಂ (ರಾಮಾಶ್ವ. ೭೬-೨೬). **ದೇಹರ**: ೧. ಎಮ್ಮ ವೈಯಂ ದೇಹರದ ಜಗಲಿಯೊಳೂಱಿತಿಯಂ ತಾನಗಿವುತಿದ್ದಹಳು (ಬಸಪು. ೪೭-೨೬). **ದೇಹಾರ$_1$**: ೧. ಊರಿಂಗೀಶಾನ್ಯದ ಪಳ್ಳದ ಬಡಗಣತಡಿಯ ಪಿರಿಯ ದೇಹಾರದ ಕೆಯಿ ತಂಕಣಸೀಮೆ (ಸೌಇಇ. XI-i, ೬೫-೫೦; 1020); ಮಱುದಿವಸಂ ದೇಹಾರಕ್ಕೆ ದೇವರಂ ಕಾಣಲೆಂದು ಬಂದು (ಧರ್ಮಾಮೃ. ೩-೨೩೫): ನೆವ್ಯದಿವ್ಯೋಪಕರಣಪ್ರಮುಖಸಮವಸ್ತುವ್ಯವಹಾರವಂ ದೇಹಾರವಂ ಪೊಕ್ಕು (ಪಾರ್ಶ್ವಪು. ೩-೨೯ ವ). ೨. ದೇವಾರ್ಚನೆಗಾಗಿ ಸಿದ್ಧಪಡಿಸಿದ ಗುಡಾರ: ಮಜ್ಜನದ ದೇಹಾರದ ರೆಂಚೆಯ ಕೊಂಚೆಯದ ಕೂರವದ . . . ವಿಳಾಸನಿವಾಸಂಗಳಿಂದಂ (ಶಾಂತಿಪು. ೧೦-೧೪೬ ವ); ಕಾಡೊಡೆಯಂಗವನೀಪತಿ ಬೇಡಿದುದಂ ಕೊಟ್ಟು ಹರಿಣಪೋತಕಯುಗವಂ ನೀಡಿಲ್ಲದೆ ಕೊಂಡೊಯ್ದಂ . . . ಅಂತು ಕೊಂಡುಪೋಗಿ ತನ್ನ ದೇಹಾರದ ಮನೆಯೊಳ್ ಕಟ್ಟುವುದುಂ (ಪುಣ್ಯಾಸ್ರ. ೨-೧೬ ವ); ಮದುವೆಯುತ್ಸವಕೆಂದು ಕಟಕದ ನಡುವೆಯೊಡ್ಡಿದುದೊಂದು ಹೊಸ ಜನವಾಸ ಅದಕೆ ನೃಪರ ಮನೆ ದೇಹಾರಗಳು ನೆಲಸಿದುವವಸರಕೆ ತಕ್ಕಂತೆ (ಭರತ. ೪೦-೮).

**ದೇಹಾರದ ಸಮಯ** = ದೇವಸ್ಥಾನದ (ಧರ್ಮದರ್ಶಿಗಳ) ಸಭೆ: ದಂಡನಾಯಕ ಕೇಶಿಮಯ್ಯಂಗಳು . . . ದಂಡನಾಯಕ ಉದಯಮಯ್ಯಂಗಳು ಇನ್ನಿನಿಬರುಂ ಧರ್ಮಕ್ಕೆ ಸಹಾಯಕರಾಗಿ ಹೊಯ್ಸಳ ದೇವನ ದೇಹಾರದ ಸಮಯದಲಿರ್ದು (ಮ್ಯಆರಿ. ೧೯೩೭, ೩೪-೧೭; 1142).

[ <ಸಂ. ದೇವಾಗಾರ./ಪ್ರಾ.ದೇಹರಯ; P ಇದನ್ನು ಸಂ. 'ದೇವಗೃಹ'ದಿಂದಲೂ ನಿಷ್ಪನ್ನ ಮಾಡಬಹುದು]

**ದೇವಾರಂಗೆಯ್**, ದೇಹಾರಂಗೆಯ್$_1$ (ಕ್ರಿ). ದೇವಾಲಯವನ್ನು ಕಟ್ಟು; ನಿರ್ಮಿಸು (?): ಇದು ವಿದ್ಯಾದಾನಂ ದೇವಾರಂಗೆಯ್ದು ಬ್ರತಿಗಳುಣ್ಬನ್ (ಎಕ. III, ಸಂಜನ. ೦೫೫-೦; ಸು. 970 ?). **ದೇಹಾರಂಗೆಯ್$_1$**: ಬಸವಸೆಟ್ಟಿ ತನ್ನ ದೇಹಾರಂಗೆಯ್ದ ಚೋವವುಮಂ ಧಾರಾಪೂರ್ವಕಂ ಭೂಮಿಯುಂ ಬಿಟ್ಟಂ ಚೋವವುಮಂ ಬರೆಯಿಸಿದು (ಎಕ. IV, ಹೆಗ್ಗಡ. ೦೩-೨೨; 1021). [ದೇವಾರ + ಕೆಯ್$_1$]

**ದೇವಾರಣ್ಯ** (ನಾ). [ಜೈನ] ಮೇರುಪರ್ವತದ ಕೆಳಗಿರುವ ಭದ್ರಸಾಲವೆಂಬ ವನ: ದೇವಾರಣ್ಯಂ ದೇವರ ದೇವನ ಮಾನಕಂಬನೀಯ ತನ್ನಂದನದೊಳ್ (ಶಾಂತಿಪು. ೮-೧೨೨). [ದೇವ + ಅರಣ್ಯ]

**ದೇವಾರಾತಿ**(ನಾ). ೧. ದೇವತೆಗಳ ಶತ್ರು; ರಾಕ್ಷಸ; ದೈತ್ಯ. ೨. ರಾವಣ: ಏಳು ದೇವಾರಾತಿಯಿಂದಿನ ಕಾಳಗದ ಪರಿ ಹೊಸತು (ತೊರವೆರಾ. ೩೨-೨೯).
[ದೇವ + ಅರಾತಿ]

**ದೇವಾರಿ** (ನಾ). = ದೇವಾರಾತಿ೧: ಮದದೀ/ನೀಂ ಪಡೆವಾ ಸುತಂ . . . ತವಿಕುಮಿವಾ ದೇವಾರಿಯಂ (ಜಗವಿ. ೨-೮೫). [ದೇವ + ಅರಿ$_2$]

**ದೇವಾರ್ಚನ** (ನಾ). ದೇವರ ಪೂಜೆ; ದೇವತಾರಾಧನೆ: ಮೂಱು ಪೊಟ್ಟಿನ ದೇವಾರ್ಚನವುಮಂ ಷಟ್ಕರ್ಮವುಮುಳ್ಳನವದ್ಯಂ ಶ್ರಾವಕರ್ಕಳೊಳ್ ಸಾಮಾಯಿಕಂ (ಅನಂಪು. ೩-೬೧). [ದೇವ + ಅರ್ಚನ]

**ದೇವಾರ್ಚನೆ** (ನಾ).=ದೇವಾರ್ಚನ: ದೇವಾರ್ಚನೆ ದಾನಂ ಸಂಧ್ಯಾವಂದನೆ ಜಪವೆನಿಪ್ಪವಂ ಮಾಟಿಸ್ಸಿ ವಿಪ್ರಾವಳಿಗೆ ದರ್ಭೆಯಿಲ್ಲದೊಡಾ ವನಫಲವಲ್ಲಿ ಮಾಸುರರುಂ ಗಡ ಕೊಳ್ವರ್ (ಸಮುಪ. ೧೨-೪೬); ಮರುಳ ದೇವಾರ್ಚನೆಯೊ ಕನಸಿನ ಸಿರಿಯೊ ಶಿಶುವಿನ ಕೈಯ ರತ್ನವೊ . . . ಹರನನೀ ಚರ್ಮಾಕ್ಷಿಯಲಿ ಗೋಚರಿಸೆ ಬೇಡಿದುದಂಬು ಮರ್ತ್ಯದೊಳೀವು ಮಱು ಭಾಪೆನ್ನ ಪುಣ್ಯವೆನುತ್ತ ಬಿಸುಸುಯ್ದು (ಕುಮಾರವ್ಯಾ. ೭-೩); ದೇವಾರ್ಚನೆಗಳ ಘಂಟಾರಾವಂ . . . ಚೆಲ್ವಿಂದಂ ಕಾವೇರೀಪಟ್ಟಣಂ ಕರಂ ಸೊಗಯಿಸುಗುಂ (ಶ್ರೀಪುವಿ. ೦೦-೪). [ದೇವ + ಅರ್ಚನೆ]

**ದೇವಾರ್ಚನೆಗೆಯ್** (ಕ್ರಿ). ದೇವರ ಪೂಜೆಯನ್ನು ಮಾಡು; ದೇವತಾರಾಧನೆಯನ್ನು ನೆರವೇರಿಸು: ದೇವಾರ್ಚನೆಗೆಯ್ದಲ್ಲಿಂ ಪಾವುಗೆಯಂ ಮೆಟ್ಟಿ ನಡೆದು ಮನೆದೆಯ್ವಕ್ಕಂ ಗೋವಾಜಿಗಜಾಶಸ್ತ್ರಂ [ಶಸ್ತ್ರಕೆ] ಗಾವಿಲ ರತಿಯಿಂದೆ ತಾಮು ಪೊಡೆವಡುತಿಪ್ಪರ್ (ಸಮುಪ. ೯-೮೪).
[ದೇವಾರ್ಚನೆ + ಕೆಯ್$_1$]

**ದೇವಾರ್ಚಿತ** (ನಾ). ದೇವತೆಗಳಿಂದ ಪೂಜಿತನಾದವನು; ದೇವಗುರು; ಬೃಹಸ್ಪತಿ: ಇಂದುಪ್ರಿಯನಂದನಂ ದ್ವಿತಯದೊಳ್ ದೇವಾರ್ಚಿತಂ ನಾಲ್ಕಱೊಳ್ . . . ಆರಲ್ ಗೋವ್ಯಂದಕತ್ಕ್ರತ್ರಮಂ (ಅಭ್ಯಸು. ೮-೧೯೫).
[ದೇವ + ಅರ್ಚಿತ]

**ದೇವಾರ್ಭಕ** (ನಾ). [ಜೈನ] ಅರ್ಹಂತನಾಗುವ ಶಿಶು: ಮಣಿಮಂಡಪದ ನಡುವಣರ್ಚಿಸಿದ ಸಿಂಹಾಸನದೊಳ್ ಪೂರ್ವಾಭಿಮುಖನಾಗಿ ದೇವಾರ್ಭಕನನಿರಿಸುವುದುಂ (ಮಲ್ಲಿಪು. ೦೨-೧೦೨). [ದೇವ + ಅರ್ಭಕ]

**ದೇವಾಲಯ** (ನಾ). ದೇವಸ್ಥಾನ; ದೇಗುಲ; ಗುಡಿ: "ದೇವಾಲಯ ಮಾಯತನಂ" (ವಸ್ತುಕೋ. ೪೭-೦೩); ಎಲ್ಲೆಲ್ಲಿ ದೇವಾಲಯಂಗಳುಂಟಾದಲ್ಲಿ ಅಲ್ಲಲ್ಲಿ ನಿಚ್ಚಂ ಸಹಸ್ರಪೂನ್ಗಳನಲ್ಲಿ ಕೊಡುತ ಬಂದವೆವು (ನಂಬಿರ. ೭-೦೬೦); ಯಾವ ಗುಡಿ ಮಿಗಿಲು ಈ ಭುವನದೇವಾಲಯಕೆ? (ಪಕ್ಷಿಕಾ. ೨೮-೨೫).
[ದೇವ + ಆಲಯ]

**ದೇವಾಲಿಕೆ** (ನಾ). (?): ನುಡಿದುದೆ ದೇವಾಲಿಕೆ ತನ್ನದವಲಿ ಮನುಮಾರ್ಗ್ಗವಾರ್ಪು ಸುರಕುಜದ ಬನಂ ಯೆಡೆಗೊಣ್ಡಾ ರೂಪು ಕಾಮನ ಹಿಡಿದ ಲಗ್ಗಣೆಯೆನಿಪ ದಾವದಣ್ಡಾಧಿಪನಂ (ಎಕ. V, ಚನ್ನರಾ. ೧೯೬-೫೦; 1143). [?]

**ದೇವಾಲೆಯ** 'ದೇವಾಲ್ಯ' ನೋ.

**ದೇವಾಲ್ಯ, ದೇವಲ್ಯ, ದೇವಾಲೆಯ** (ನಾ). ದೇವಸ್ಥಾನ; ದೇವಾಲಯಂ; ಗುಡಿ: ಮೂಲಸ್ಥಾನ ನಂದಿಕೇಶ್ವರದೇವರ ದೇವಾಲ್ಯ(ಲಯ)ವಂ ಜೀರ್ಣೋದ್ಧಾರಂ ಮಾಡಿ (ಇಆ. V, ೦೬-೨೭; 1019); ಸಯಂಬುದೇವರಿಗೆರಡು ಬಟ್ಟಾರ ದೇವಾಲ್ಯವಂ ಮಾಡಿಸಿದಂ (ಎಕ. XIV, ಶ್ರೀರಂಗ. ೩೯-೭; 1126); ಹಸುಳೆಯಾಗಿಯುಂ ನಾನು ಕೆಟೆ ಬಾವಿ ದೇವಾಲ್ಯ ವಿರಚಿಸಿ ಭವಕೆ ಬಂದು ಫಲವನುಂಡು ನರಕಕೆ ಬೀಳುವನ ಕರುಣಕರದಿಂದೆತ್ತಿ ನಿನ್ನ ಹೊರೆಯೊಳಗಿರಿಸಿದೆ ಯೋಗಿನಾಥ (ಕಿನ್ನರಾ. XXIV, ೬೦೮೪); ಗಂಗೇಶ್ವರದೇವರ ದೇವಾಲ್ಯಮಂ ಮಾಡಿಸಿ (ಎಕ. VII, ಶಿವಮೊ. ೫-೯೪; 1218); ಆರಾಮವಗ್ರಾರ ಧರ್ಮತಟಾಕಗಳ ಚಾರುತರದ ದೇವಾಲ್ಯ ಧಾರಿಣಿಯೊಳಗೆ ಕಂಠೀರವೇಶ್ವರನಿಂದ ಪೂರ್ಣಿಸಿ ಮೆಚಿದುವರ್ತಿಯಲಿ (ಕಂನಿವಿ. ೨೬-೩೭). **ದೇವಲ್ಯ:** ಆವಾವ ದಿಕ್ಕಿನಲಿ ಪಟ್ಟಿಯ ಮೇಲ್ಕಟ್ಟು . . . ನವರತ್ನದ ಕುಚ್ಚಿಂದ ದೇವಲ್ಯವೆಸೆದುದು (ಕಂನಿವಿ. ೬-೮೪). **ದೇವಾಲೆಯ:** ಇನ್ನೀ ಸ್ಥಾನಮಾನ್ಯವಂ ಶ್ರೀಮೂಲಸ್ಥಾನಪ್ಪಯಂಭು ಕಲಿದೇವಗ್ಗಂ ಗವರೇಶ್ವರದೇವಗ್ಗಂ ದೇವಾಲೆಯವಂ ಮಾಡಿಸಿ (ಎಕ. XI, ದಾವಣ. ೧೫೫-೨೯; 1124).

[ < ಸಂ. ದೇವಾಲಯ./ತುಳು. ದೇವಲ್ಯ ]

**ದೇವಾವನಿಜಾತ** (ನಾ). ದೇವಲೋಕದ ಮರ; ಕಲ್ಪವೃಕ್ಷ: ಆ ವನನಂದನವಮಧ್ಯದ ದೇವಾವನಿಜಾತವಿಾತನೆಂಬವೊಲಿತ್ತಂ . . . ರಾಜಶೇಖರಕ್ಷಿತಿಪಾಲಂ (ರಾಜಶೇ. ೦೦-೧೦೯). [ ದೇವ + ಅವನಿಜಾತ ]

**ದೇವಾಶ್ವ** (ನಾ). ಇಂದ್ರನ ಕುದುರೆ; ಉಚ್ಚೈಶ್ಶ್ರವಸ್ಸು: "ಉಚ್ಚೈಶ್ಶ್ರವಾ, ದೇವಾಶ್ವಃ – ಈ ೨ ಇಂದ್ರನ ಕುದಿರೆ" (ಹಲಾಯು. ೧೧-೬೧).

[ ದೇವ + ಅಶ್ವ ]

**ದೇವಾಸ** (ನಾ).=ದೇವಸ್ವ (?): ಮುಂಬಳಿ ದೇವಾಸ ಖಂಡಿಕೆ ದಂಡಿಗೆ ವುಡುಗೊರೆ ಮತ್ತೆ ಏನುಳ್ಳದಕ್ಕೂ ಸಲವಾಗಿ ಆವತ್ತು ಹೊನ್ನನುಳಿದು (ಎಕ. VI, ಶೃಂಗೇರಿ. ೧-೧೭; 1346); ಶ್ರೀಮದಶೇಷಮಹಾಜನಂಗಳು ತಮ್ಮ ಹಳಿ ಕೆಂಪಿಡಿಯನು ದೇವಾಸ ಹೊರತಾಗಿ ಬಿದಿರನಾಯ್ಕನ ಮಗಳು ಕಾಚಮನಾಯ್ಕಿತಿ ತಮ್ಮ ಹರಿವಾಣಕ್ಕೆ ಕೊಟ್ಟದು (ಎಕ. VII, ಶಿವಮೊ. ೯೭-೫; 1688). [< ಸಂ. ದೇವಸ್ವ ? ]

**ದೇವಾಸಾಲೆ** (ನಾ). (?) : ನಲ್ಲ ದೇವಾಸಾಲೆ ಹುಲ್ಲೆಗೊಂಬತ್ತು ಮುಖ ಬೆಳ್ಳಿಲಿಗೆ ನಾಲ್ಕು ತನಿಗೋಡು ಮೂಡಿದ್ದ ನಿಲ್ಲಿಯೇ ಕಂಡೆ (ಸರ್ವಜ್ಞ. ೨೦೬೯).

[ ? ]

**ದೇವಾಸುರ** (ನಾ). ೧. ದೇವತೆ ಮತ್ತು ರಾಕ್ಷಸ, 'ದೇವಾಸುರ ಯುದ್ಧ' ಪಠಾ. ೨. (ಅಲಂ) ದೇವತೆಗಳಿಗೂ ರಾಕ್ಷಸರಿಗೂ ನಡೆದ ಯುದ್ಧ: ದೇವಾಸುರದೊಳವಿಂದಿನ ನೋವಂ ನೊಂದಟಿಯೆಂ (ಪಂಪಭಾ. ೧೧-೨೦). ೩. (ಅಲಂ) ಒಳ್ಳೆಯತನಕ್ಕೂ ಕೆಟ್ಟತನಕ್ಕೂ ಉಂಟಾದ ಘರ್ಷಣೆ: ಅಂದು ಮೊದಲಾದುದೇ ದೇವಾಸುರಂ! (ಹೊಂಗಳು. ೩೭-೨೪) ೪. (?) : ಸಿರಿವಚ್ಚನುಂ ಶ್ರೀಪುರುಷನುಂ ದೇವಾಸುರರಾ ಶಿವಮಾರನುಂ . . . ಎನಿಬರು ಎಱದು ಸತ್ತೊರ್ (ಮ್ಯಾಆರಿ. ೧೯೪೪, ೬-೧; ಸು. 808). [ ದೇವ + ಅಸುರ ]

**ದೇವಾಸುರಯುದ್ಧ** (ನಾ). ದೇವತೆಗಳಿಗೂ ರಾಕ್ಷಸರಿಗೂ ನಡೆದ ಯುದ್ಧ,-ಕದನ: ಮುನ್ನಂ ಕೃತಯುಗದೊಳ್ ಸೋಮನ ವರುಣನ ರಾಜಸೂಯದ ಕಡೆಯೊಳ್ ದೇವಾಸುರಯುದ್ಧಂ ನೆಗಟೆ (ಪಂಪಭಾ. ೬-೨೪ ವ); ದೇವಾಸುರಯುದ್ಧಕ್ಕೆ ಕರಗಂಬೊತ್ತಳಂಬಂತನವರತಬಾಷ್ಪ ವಾರಿಧಾರಾಪೂರಪರಿವಾರಿತಪಲ್ಲವನೇತ್ರೆಯುಂ . . . ಎನಿಸಿದ ಪಾಂಚಾಲ ರಾಜತನೂಜೆ (ಗದಾಯು. ೧-೫೫ ವ). [ ದೇವಾಸುರ + ಯುದ್ಧ ]

**ದೇವಾಳಿ** 'ದೇವಳಿ' ನೋ.

**ದೇವಾಳೆ** (ನಾ). ಒಂದು ಬಗೆಯ ಬಾಳೆಯ ಗಿಡ ಮತ್ತು ಅದರ ಹಣ್ಣು: ರಸವಾಳೆ ಪುಟವಾಳೆ ರಾಜವಾಳೆ ಸಕ್ಕರೆಯೆಸೆವಾ ದೇವಾಳೆ . . . ಮೆಚಿದುವರ್ತಿಯಲಿ (ಕಂನಿವಿ. ೫-೮೭). [< ದೇವ+ಬಾಳೆ, (<ಬಾಟೆ)]

**ದೇವಾಳ್ಗೆ, ದೇವಳಿಗೆ** (ನಾ). ಒಂದು ಪ್ರದೇಶದ ಹೆಸರು: ದೇವಾಳ್ಗೆ ವಿಷಯೇ ಕಿಱುಮುಂಡ ನೀರಿಣಾಂ ನಗರಸ್ಯ ದಶವೋಭಾಗಃ (ಮ್ಯಾಆರಿ. ೧೯೩೦, ೩-೧೯ : ಸು. 600). **ದೇವಳಿಗೆ:** ಶ್ರೀಮತ್ ಪೆರ್ಮ್ಮಾನಡಿಗಳ್ ರಾಜ್ಯಂಗೆಯ್ಯುತ್ತಿರೆ ಕಲಿಗಂಗ ದೇವಳಿಗೆಯ್ಬತ್ತುಪ್ಪವನಾಳುತ್ತುಮಿರೆ (ಎಕ. VI, ಚಿಕ್ಕಮ. ೯೨-೭; 959). [ ? ]

△ **ದೇವಾಚ್ಚನ** (ನಾ). = ದೇವಾರ್ಚನ: ದೇವಾಚ್ಚನ ಒಡೆಯೊರ್ವಿ ನದಿಯುಂಕೆ ನದಿಯುಂ ಪಡೆದತ್ತುದು (ಇಆ. XIV, ೨೬-೫೦; ೨ನೆಯ ೩೪).

[ < ಸಂ. ದೇವಾರ್ಚನ ]

**ದೇವಿ** (ನಾ). ೧. ಹೆಣ್ಣುದೇವತೆ; ದೇವತಾಸ್ತ್ರೀ: ನುಡಿಯೊಂದು ಮಾತ ಪೊಂದೆನಿಸಿದ ಮಾನವಂಗೆನಗೆ ದೇವಿ ಹಸಾದಮನೇಕೆ ಮಾಡಿದಳ್ (ಕಾದಂಅಂ. ೨೬೦); ದೇವಿವೆಸರೆಸೆವ ಲಕುಮಾದೇವಿಗಮಾ ವಿಷ್ಣುವರ್ಧನಂಗಂ ತನಯಂ (ಎಕ. VI, ತರೀಕೆ. ೯೫-೩೦; 1190). ೨. ಗೌರಿ; ಪಾರ್ವತಿ; ದುರ್ಗೆ: ಸುಮಾನದಿಂ ಗಮನಿಸುತ ಶಿವನೊಡನೆಂದಳಾ ದೇವಿ (ಬಸಪು. ೫೦-೨); ದೇವಿಯರು ಗುಹ ಗಣಪಮುಖ್ಯಗಣಾವಳಿಗೆ ಪೊಡಮಟ್ಟನು (ಶಂಪ್ರಾಆ. ೬-೧೦೦). ೩. ಪಟ್ಟಾಭಿಷಿಕ್ತಳಾದ ರಾಣಿ; ಪಟ್ಟದ ರಾಣಿ: "ದೇವೀ . . . ಪಟ್ಟಾಭಿಷಿಕ್ತಳಾದ ರಾಣಿಯ ಹೆಸರು" (ಸಿದ್ಧಾಂತಿ. ೩೩); ದೇವಿಯರೊಳೊರ್ಬರೊರ್ಬರ್ ದೇವಿಯ ಪರಿವಾರರಪ್ಪರೋಗಣಮುಂ . . . ಎನಗೆ ಪೊಗಟಲಲುಂಬಂ (ಆದಿಪು. ೬-೧೫); ಏನೇಶಭಿಮತವಂ ವೇಟ್ ನೀನಾಸ್ವಾದಿಸಿದ ದೇವಿಯರಮನೆಯೊಳ್ (ಕಾದಂಪೂ. ೮೫); ದೇವಿಯರ ಪರಕೆಯಿಂದೆನಗಾವುದಟೆ್ೊಳ್ ಕೊಱತೆಯಿಲ್ಲ (ಜಕೋಜ. ೩-೯); ದೇವಿಯ ಬಗೆಯನಲರ್ಚಲ್ ದೇವರವೋಲ್ ಬಲ್ಲರಾರೊ (ಪುಷ್ಪಪು. ೩-೭೪); ದೇವಿ ಏವೆಗಳನಿಡದೆ ನೋಡುತ್ತಾ ವಿಯತ್ತಳದಲ್ಲಿ ಓಹಿಲದೇವನಂ ತಾನಱಿಸಿ ಕಾಣದೆ (ಬಸಪು. ೪೯-೪೦); ಎಲೆ ದೇವಿ, ಇದೆ ಕೊಳ್ ಈ ಕದಳೀಗೃಹಕ್ಕಾ ಕಡೆಯೊಳೆ ಕಣ್ಗೊಳಿಪುದು (ಮಿತ್ರಗೋ. ೩೪); ದೇವಿ ಬರುವಳು; ಆಕೆ ಬಹಳ ಮಾನಗರ್ವಿತೆ (ಶಾಕುಂತ. ೯೨-೦೩). ೪. ಸಿಡುಬುರೋಗ: ಹಳ್ಳಿಯಲ್ಲಿ ಅನೇಕ ಮಕ್ಕಳಿಗೆ ದೇವಿ ಎದ್ದಿದೆ (ರೂಢಿ). ೫. ಹೆಗ್ಗುರುಟಿಕೆ ಗಿಡ: "ಮೂರ್ವಾ, ದೇವೀ . . . ಪೀಲುಪರ್ಣೀ–೧೦ ಹೆಗ್ಗುರುಟಿಕೆಯ ಹೆಸರುಗಳು. ಕುರುಟಿಕೇದೀಜ ಪ್ರಸಿದ್ಧ" (ಸಿದ್ಧಾಂತಿ. ೧೫೧). ೬. ಒಂದು ಬಗೆಯ ಸಂವಾಸನೆಯುಳ್ಳ ಬೇರಿನ ಗಿಡ; ಸಂಕೇಬೇರು: "ಮರುನ್ಮಾಲಾ . . . ದೇವೀ, ಲತಾ, ಲಘುಃ, ಸಮುದ್ರಾಂತಾ, ವಧೂಃ, ಕೋಟಿವರ್ಷಾ, ಲಂಕಾಸಿಕಾ – ೧೦ ಸ್ಪೃಕ್ಕೆಯೆಂಬ ಗ್ರಂಥದ್ರವ್ಯ, ಸಂಕೇ ಬೇರು" (ಸಿದ್ಧಾಂತಿ. ೦೯೩).

[ ಸಂ. ದೇವೀ ]

**ದೇವಿಗ** (ನಾ). ದೇವತಾವಿಗ್ರಹಗಳನ್ನು ಮಾಡುವವನು; ವಿಗ್ರಹ ಶಿಲ್ಪಿ: ದೇವರಂ ಮಾಡುವಂ ದೇವುಳಿಗಂ, ದೇವಿಗಂ (ಶಬ್ದಾನು. ೪೧೦ ಪ್ರಯೋ.). [ ದೇವ + – ಇಗ ]

**ದೇವಿಗೆಱೆ** (ನಾ). ಒಂದು ಕೆರೆಯ ಹೆಸರು: ನಾಗವರ್ಮ್ಮನ್ ಕಟ್ಟಿಸಿದ ದೇವಿಗೆಱೆಗಂ ಪಿರಿಯಕೆಱೆಗಂ ಬಿತ್ತುವಟ್ಟವಂ ಕೊಟ್ಟರು (ಎಕ. III, ನಂಜನ. ೧೯೨-೮; 968). [ ದೇವಿ + ಕೆಱೆ ]

**ದೇವಿತನ** (ನಾ). ಪಟ್ಟದ ರಾಣಿಯ ಪದವಿ,–ಸ್ಥಾನ: ಬುದ್ಧದಾಸಿಗೆ ದೇವಿತನಂಗೊಟ್ಟನಿಂತು ಕಷ್ಟನುವೊಳನೇ (ಧರ್ಮಾಮೃ. ೮-೨೦೯).

[ ದೇವಿ + –ತನ ]

**ದೇವಿದೆಱೆ** (ನಾ). ಒಂದು ಬಗೆಯ ತೆರಿಗೆ : ಬಸದಿಯ ವೃತ್ತಿಯೆಲ್ಲವಕ್ಕಂ ದೇವಿದೆಱೆ ಅಡೆಗಟ್ಟರ್ ಕಾಣಿಕೆ . . . ಸಲ್ಗೆ (ಎಕ. VIII, ನಗರ. ೩೬-೧೫೪ ; 1077). [ ದೇವಿ? + ತೆಱೆ$_{3}$ ]

**ದೇವಿಯಬ್ಬೆ** (ನಾ). ಒಬ್ಬಾಕೆಯ ಹೆಸರು : ಬನ್ನದತ್ತನು ಸೆಟ್ಟಿತ್ತಿ ದೇವಿಯಬ್ಬೆಯಂ ನಿಱಿಸಿ (ಎಕ. VI, ಮೂಡಗೆ. ೧೯-೯ ; ಸು. 1026) ; ಶ್ರೀಮತ್ ಪ್ರಭಾಚನ್ದ್ರಸಿದ್ಧಾನ್ತದ ಭಟ್ಟಾರರ ಸಿಶ್ಶಿನ್ತಿಯರಪ್ಪ ದೇವಿಯಬ್ಬೆ ಕನ್ತಿಯರ ನಿಸಿಧಿಗೆ ಅಯ್ದು ದಿವಸನ್ನೋ× ಸ್ವರ್ಗ್ಗಸ್ತರಾದರ್ (ಎಕ. XV, ಹೊಳೆನ. ೬೩-೧೦ ; 950). [ ದೇವಿ + ಅಬ್ಬೆ$_{1}$ ]

**ದೇವಿಲಿ** (ನಾ). ದೇವರು ಇಲ್ಲವೆಂದು ಭಾವಿಸುವವನು ; ನಾಸ್ತಿಕ ; ನಿರೀಶ್ವರವಾದಿ : ಸಾವಿಗೆ ಹೆದರುವ ಹಳಹೇಡಿಯೋ ? ನಾ ಬೇಯುವೆ ನಿನಗಾಗಿ ಗಾವಿಲಕೆಲ್ಲರು ದೇವಿಲಿಯಾಗರೆ ಭಕ್ತನ 'ಬಲಿ'ಗಾಗಿ (ನನಲ್ಲ. ೩೦-೧೩). [ ದೇವ + – ಇಲಿ$_{3}$ ]

**ದೇವಿಹಾಕಿಸು** (ಕ್ರಿ). ಸಿಡುಬು ಚುಚ್ಚಿಸು ; ಡಾಕುಹಾಕಿಸು ; ವ್ಯಾಲಿ ಚುಚ್ಚಿಸು : ಮೂರುತಿಂಗಳೊಳಗೆ ಮಕ್ಕಳಿಗೆ ದೇವಿಹಾಕಿಸುವುದರಿಂದ ಈ ರೋಗ ಬರುವುದಿಲ್ಲ (ಗೃಹವಿ. ೦೩೦). [ ದೇವಿಹಾಕು + – ಇಸು$_{3}$ ]

**ದೇವಿಹಾಕು** (ಕ್ರಿ). ಸಿಡುಬುರೋಗವನ್ನು ತಡೆಯುವುದಕ್ಕಾಗಿ ಸಿಡುಬು ರಸಿಕೆಯನ್ನು ರಕ್ತಕ್ಕೆ ಸೇರಿಸು ; ಸಿಡುಬುಹಾಕು ; ಡಾಕು ಹಾಕು : ಸಿಡುಬು ಬರದ ಹಾಗೆ ದೇವಿಹಾಕುವುದು ಚೀನೀಯರಿಗೆ ೧೧ನೆಯ ಶತಮಾನ ದಲ್ಲಿ ತಿಳಿದಿತ್ತಂತೆ (ಶಿಲ್ಪನಾ. ೯೯). [ ದೇವಿ + ಹಾಕು (<ಪಾಯ್ಕು$_{1}$) ]

**ದೇವೀಮತ** (ನಾ). [ಶೈವ] ಚಂದ್ರಜ್ಞಾನಾಗಮದ ಹದಿನಾಲ್ಕು ಭೇದ ಗಳಲ್ಲಿ ಒಂದು : ಸ್ಥಿರಸಂಹಿತೆ ಸ್ಥಾಣುಸಂಹಿತೆ ಮಹಂತಸಂಹಿತೆ ನಂದಿ ಸಂಹಿತೆ ನಂದಿಕೇಶ್ವರಸಂಹಿತೆ ಏಕಪಾದಪುರಾಣ ಶಂಕರಾಗಣ ನೀಲ ಭದ್ರತಂತ್ರ ಶಿವಭದ್ರಾಗಮ ಕಲಾಭೇದಾಗಮ ಶ್ರೀಮುಖಾಗಮ ಶಿವಶಾಸನಾಗಮ ಶಿವರೇಖಾಗಮ ದೇವೀಮತವೆಂದು ಚಂದ್ರಜ್ಞಾನಾ ಗಮದ ಹದಿನಾಲ್ಕು ಭೇದಂಗಳು (ವಿವೇಕ. ೭೦). 'ಚಂದ್ರಜ್ಞಾನಾಗಮಂ' ಪರಾ. [ ಸಂ. ]

**ದೇವುರೆ** (ನಾ). ಹರ್ಷವನ್ನು ಸೂಚಿಸುವ ಒಂದು ನುಡಿ : ದೇವ ವೀಧಿ ದೇವುರೆ ಸುರರಾಜರಾಜ ಧಿರಾರೇ ಎನೆ (೧೦ಕ. ೦೦-೭೯).

**ದೇವುಲ** 'ದೇಗುಲ' ನೋ.

**ದೇವುಲಾಳು** (ನಾ). ದೇಗುಲದ ಆಳು (?) : ಆ ವಿಹಿಲಾಳು ಭೋಜ ದೇವುಲಾಳು [ಪಾಠಾಂ. ದೇವುರಾಳು, ದಬಲಾಳ್ಗಳು] ಅನು ಸೂಳೆ ನಮ್ಮ ಕ್ಕನೂ ಸೂಳೆ (ಬಸವ. ೩೨೭). "ದೇವಭಕ್ತ" (ಬಸವ. ಕೋಶ).

[ ದೇವುಲ (<ದೇಗುಲ) + ಆಳು$_{3}$ (<ಆಳ್$_{3}$) ]

**ದೇವುಳಿಗ** (ನಾ). ೧. = ದೇವಡಿಗ೧: ಉಳಿಗ ಪ್ರತ್ಯಯಕ್ಕೆ – ದೇವುಳಿಗಂ ಮಣ್ಣುಳಿಗಂ (ಶಮದ. ೨೦೧ ಪ್ರಯೋ). ೨. = ದೇವಿಗ : ದೇವರಂ, ಮಾಡುವಂ, ದೇವುಳಿಗಂ, ದೇವಿಗಂ (ಶಬ್ದಾನು. ೪೧೦ ಪ್ರಯೋ).

[ ದೇವ + – ಉಳಿಗ$_{3}$ ]

**ದೇವುಳಿಗಿತಿ** (ನಾ). ದೇವುಳಿಗನ ಹೆಂಡತಿ : ಉಳಿಗ—ದೇವುಳಿಗಿತಿ, ಪಾಳುಳಿಗಿತಿ, ಕಯ್ದುಳಿಗಿತಿ (ಶಬ್ದಾನು. ೧೯೩ ಪ್ರಯೋ) ; ಬ್ರಾಹ್ಮಣಿತಿ . . . ದೇವುಳಿಗಿತಿ, ಇತ್ಯಾದಿ (ಹೊನಗ. ೯೬).

[ ದೇವುಳಿಗ + – ಇತಿ$_{1}$ (< – ಇತ್ತಿ) ]

**ದೇವೆಡಿತ್ತಿ** 'ದೇವಡಿತಿ' ನೋ.

**ದೇವೆಱೆಯ** (ನಾ). ಒಬ್ಬಾತನ ಹೆಸರು : ಬಸನ್ತಕುಮರ ಯೆಡೆವೊಬಲ ನಾಡ ಸಲೆವುಗೆಯ ಕೊಟ್ಟ ಶಾಸನವು ಪಡೆದುಂ ಶಾನ್ತವನ ಮಗ ದೇವೆಱೆಯಗೆ ನಷ್ಟಪ್ಪಗೊಣ್ದು ಕೊಟ್ಟನ್ (ಎಕ. VIII, ಸೊರಬ. ೩೭೧-೨೩ ; 692). [ ದೇವ + ಎಱೆಯ ]

**ದೇವೇಂದ್ರ** (ನಾ). ದೇವತೆಗಳ ಒಡೆಯ ; ಸ್ವರ್ಗಲೋಕದ ಅಧಿಪತಿ : ಶ್ರೀದೇವೇಂದ್ರಮುನೀಂದ್ರವಂದಿತಗುಣವ್ರಾತಂ ದಯಾಗೆಯ್ದನಕ್ಕೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ (ಆದಿಪು. ೧-೧) ; ದೇವೇಂದ್ರನುಮಾಗಳ್ ದೇಶಾವಧಿಯಿಂ . . . ಆತ್ಮೀಯಭಾವಮನಱಿದು ವ್ಯತೀ[ತ]ಭವ ಸಂತತಿಯಂ (ಶಾಂತಿಪು. ೫-೭) ; ಅತ್ತಲ್ ದೇವೇಂದ್ರಂ ಮತ್ತಿತ್ತಲ್ ಭುಜ ಗೇಂದ್ರಂ (ಶಮದ. ೦೧೯ ಪ್ರಯೋ) ; ದೇವೇಂದ್ರನು ದೇವತೆಗಳ ಸಹಾಯ ವನ್ನು ಪಡೆದು ತಾನೇ ಐರಾವತದ ಮೇಲೆ ವಜ್ರಧಾರಿಯಾಗಿ ಕುಳಿತು ಹೋರಾಡಿದರೂ ಪ್ರಯೋಜನವಾಗಲಿಲ್ಲ (ಪಕಥಾ. ೬೪).

[ ದೇವ + ಇಂದ್ರ ]

**ದೇವೇಂದ್ರಚಾಪ** (ನಾ). ಇಂದ್ರನ ಧನುಸ್ಸು ; ಕಾಮನ ಬಿಲ್ಲು ; ಮಳೆ ಬಿಲ್ಲು : ದೇವೇಂದ್ರಚಾಪಂ ದಲೆಂಬಿನೆಗಂ ಬಾಹುಬಲೀಶನೇಱಿಸಿದಂ . . . ಚಾಪಮಂ (ಆದಿಪು. ೦೪-೯೯). [ ದೇವೇಂದ್ರ + ಚಾಪ ]

**ದೇವೇಂದ್ರತಮ್ಮಡಿ** (ನಾ). ಒಬ್ಬಾತನ ಹೆಸರು : ಪೊಟ್ಟವಿನೀತೀಶ್ವರಕ್ಕಂ ಸರ್ವ್ವಪರಿಹಾರಂ ಕೊಟ್ಟಮ್ಮ್ಮಣ್ಣುಂ ಮನೆಯುಂ ತೋಟ್ಟಕ್ಕಂ ದೇವೇಂದ್ರ ತಮ್ಮಡಿಗಳಾ ಮುದ್ದೆಗಣರಾ ಗೋಟ್ಟಿಧರ್ಮ್ಮಂ (ಎಕ. IV, ಚಾಮರಾ. ೬೩-೫ ; ಸು. 750). [ ದೇವೇಂದ್ರ + ತಮ್ಮಡಿ$_{1}$ ]

**ದೇವೇಂದ್ರತ್ವ** (ನಾ). ದೇವೇಂದ್ರನ ಅಧಿಕಾರ,–ಪದವಿ : ದೇವಾಧೀಶನ ನೊರ್ಮ್ ವರ್ಣಿಸೆ ಮನೋವಾಕ್ಕಾಯಸಂಶುದ್ಧಿಯಿಂ ದೇವೇಂದ್ರತ್ವಮೆ ಸಾರ್ದುದು (ಅನಂಪು. ೦-೬೧); ತಾರಕನಿಂದ ಭಂಗಂಬಟ್ಟ ದೇವೇಂದ್ರತ್ವ ವೇಕೆಮಗೆ (ಬಸಪು. ೧೮-೨೨). [ ಸಂ. ]

**ದೇವೇಂದ್ರಪಟ್ಟ** (ನಾ). ದೇವೇಂದ್ರನ ಅಧಿಕಾರ ; ಸ್ವರ್ಗಲೋಕದ ಅರಸುತನ ; ದೇವತೆಗಳ ರಾಜನಾಗುವಿಕೆ ; ಇಂದ್ರಪದವಿ : ಆ ನಿಜಫಲಪ್ರಾಪ್ತಿಯುಲಿಯುಸುಮಾನವಿಲ್ಲದೆ ಫಲಿಸಿ ನಿನ್ನಾಧೀನವಾಯಿತ್ತೀಗಳೀ ದೇವೇಂದ್ರಪಟ್ಟವಿದು (ಬಸಪು. ೪೧-೦೦). [ ದೇವೇಂದ್ರ + ಪಟ್ಟ$_{3}$ ]

**ದೇವೇಜ** (ನಾ). ದೇವರನ್ನು ಪೂಜಿಸುವವನು ; ದೇವತಾರ್ಚನೆ ಮಾಡುವವನು : ಸುವಾಚ್, ಸುವಾಚಂ. ಏವಂ ಗುಣಭಾಜಂ, ಅಶ್ವ ಯುಜಂ, ಋತ್ವಿಜಂ, ದೇವೇಜಂ . . . ಪ್ರಷ್ಠವಾಹಂ (ಶಬ್ದಾನು. ೮೯ ಪ್ರಯೋ). [ ಸಂ. ದೇವೇಜ್ ]

**ದೇವೇಶ** (ನಾ). ೧. = ದೇವೇಂದ್ರ : ದೇವೇಶಮುಖ್ಯದಿಗೀಶರುಂ . . . ನೆರೆದೋಲಯಿಸುತಿರಲು (ಬಸಪು. ೩೪-೪೮). ೨. ಶಿವ ; ಪರಮೇಶ್ವರ : ಇಱಿವಂತು ನಿನಗೆ ಮನದೊಳ್ ತಱಿಸಲವುಂಟಪ್ಪೊಡೆವೊ ದೇವೇಶನನೇಂ ಸಱಿವಿಡಿದೆ ತೊಲಗು ದೇವನ ಮುಱಿಯಂ ಬಟಿಕಱಿಯಲಕ್ಕುಮೆನಗಂ ನಿನಗಂ (ಶಂಕಥಾ. ೦೦-೨೨೧); ದೇವೇಶ ನಿಮ್ಮ ಪದರಾಜೀವದ ಭಾವನೆಯ ಪೆರ್ಮೆಯೆಂತುಟೊ (ಕಲಕಂ. ೨-೬೭). [ ದೇವ + ಈಶ ]

**ದೇವೇಶೋತ್ತರ** (ನಾ). [ಶೈವ] ಸಿದ್ಧಾಗಮದ ನಾಲ್ಕು ಭೇದಗಳಲ್ಲಿ ಒಂದು : ಸಾರೋತ್ತರ ದೇವೇಶೋತ್ತರ [ಪಾಠಾಂ. ಶೋಕ್ತ ] ಶಾಲಭೇದ ಶಶಿಮಂಡಲವೆಂದು ಸಿದ್ಧಾಗಮದ ನಾಲ್ಕು ಭೇದಂಗಳು (ವಿವೇಕ. ೭೧).

[ ದೇವೇಶ + ಉತ್ತರ ]

**ದೇವೇಶ್ವರತ್ವ** (ನಾ). = ದೇವೇಂದ್ರತ್ವ : ಅರ್ಜುನನು "ದೇವರಾಜ ! ನನಗೆ ದಿವ್ಯಲೋಕಗಳಾಗಲಿ, ದೇವತ್ವವಾಗಲಿ, ದೇವೇಶ್ವರತ್ವವಾಗಲಿ ಬೇಕಾಗಿಲ್ಲ" ಎಂದನು (ಪಕಥಾ. ೧೨೪). [ ಸಂ. ]

**ದೇವೋತ್ತಮ** (ನಾ). ದೇವತೆಗಳಲ್ಲಿ ಶ್ರೇಷ್ಠನಾದವನು : ಕಮಲಭವ ಸುರವಂದ್ಯ ಗಿರಿಜಾರಮಣ ಭಕ್ತಕುಟುಂಬಿ ದೇವೋತ್ತಮ ತ್ರಿಯಂಬಕ ಪುಷ್ಟಿವರ್ಧನ ಕರುಣಿಸುವುದೆಂದ (ಕುಮಾರ. ೬-೪೪) : ದೇವೋತ್ತಮ ನಟ್ಟೇಶ್ವರನಾವಾಸಮೆನಿಪ್ಪ ಚೇರಮಂಡಳದೊಳ್ (ತ್ರಿಪುವಿ. ೩-೧).

[ ದೇವ + ಉತ್ತಮ ]

**ದೇವೋತ್ತರಕುರು** (ನಾ). [ಜೈನ] ವಿದೇಹಕ್ಷೇತ್ರದಲ್ಲಿ ಮೇರುಪರ್ವತಕ್ಕೆ ದಕ್ಷಿಣದಲ್ಲಿ ಮತ್ತು ನಿಷಧಕ್ಕೆ ಉತ್ತರದಲ್ಲಿ ಇರುವ ಒಂದು ಭೋಗ ಭೂಮಿ : ದೇವೋತ್ತರಕುರುಗಳೆ ನಾನಾವಿಧಕಲ್ಪಾಂಘ್ರಿಪಂಗಳಿಂದಂ ಪತಿಯಂ ಕೀಲಿ ಬಳಸಿರ್ದುವೆನೆ (ಆದಿಪು. ೧೦-೩೩). 'ದೇವಕುರು' ಪರಾ. [ದೇವ + ಉತ್ತರಕುರು]

**ದೇವೋತ್ಸವ** (ನಾ). ದೇವಾಲಯ ಮೊದಲಾದ ಕಡೆಗಳಲ್ಲಿ ನಡೆಯುವ ದೇವರ ಉತ್ಸವ : ಸುಂದರಾಗಮಕಲಿತ ದೇವೋತ್ಸವಂಗಳನು ಸರಸ ಸಜ್ಜನಗೋಷ್ಠಿಸಲ್ಲಾಪಗಳನು ... ನೆನೆದಿಂತು ಸಂಹೃಷ್ಟನಾದನೈ (ಮಲದೇ. ೫೬-೭). [ದೇವ + ಉತ್ಸವ]

**ದೇವೋನ್ಮಾದ** (ನಾ). ದೇವಭಕ್ತಿಯಿಂದ ಉಂಟಾಗುವ ಪರವಶತೆ : ಕೊನೆಕೊನೆಗೆ ಶರೀಫರು ದೇವೋನ್ಮಾದದ ಪೂರ್ಣ ನಿಬ್ಬೆರಗಿನಲ್ಲಿರುತ್ತಿದ್ದರು (ಶರೀಶ. ೬೦ ಶಿವಿಶಾಪ್ಪ ಪರಿಚಯ). [ದೇವ + ಉನ್ಮಾದ]

**ದೇವೋಪಘಾತ** (ನಾ). ದೇವತೆಗಳಿಂದ ಉಂಟಾಗುವ ತೊಂದರೆ,-ಬಾಧೆ : ದೇವೋಪಘಾತಮಂ ಶೌರ್ಯಾವಷ್ಟಂಭದಿನದೆಂತು ಗೆಲ್ದಪೆಯೊ (ಶಾಂತಿಪು. ೮-೬೪). [ದೇವ + ಉಪಘಾತ]

**ದೇವ್ಯಾಗಮ** (ನಾ). [ಶೈವ] ಶೈವಾಗಮಗಳಲ್ಲಿ ಒಂದು; ಶಕ್ತಿಯ ಉಪಾಸನೆ : ಶೈವಾಗಮದಲ್ಲಿ ಅನುಷ್ಠಾನಭೇದದಿಂದ (ಉಪಾಸನಾಭೇದದಿಂದ) 'ಶೈವಾಗಮ, ದೇವ್ಯಾಗಮ ಅಥವಾ ಶಾಕ್ತಾಗಮ, ವಾತು ಲಾಗಮ ಅಥವಾ ತಾಂತ್ರಿಕಾಗಮ' ಮತ್ತು 'ವೀರಶೈವಾಗಮ' ಎಂದು ನಾಲ್ಕು ಒಳಭೇದಗಳಿವೆ (ಭಾರದ. ೬೪). [ಸಂ. (ದೇವೀ + ಆಗಮ)]

**ದೇಶ** (ನಾ). ೧. ಜಾಗ; ಸ್ಥಳ; ಪ್ರದೇಶ: ಸುತ್ತಲುಂ ಗಿಳಿಗಳ ಹಿಂಡುಗಳ್ ನೆರೆದು ಕೂಡಿಯುಮಲ್ಲಿ ಸಹಸ್ರಮುಂ ನಿರಾಕುಳಮನುರಾಗದಿಂ ಪಲವುದೇಶದೊಳಿರ್ಪುವು ಬಂದು (ಕಾದಂಪೂ. ೧೨೬). ೨. ಆಡಳಿತ ಸಪ್ತಾಂಗಗಳಲ್ಲಿ ಒಂದು ; ನಾಡು ; ಸೀಮೆ ; ಜನಪದ : "ಎಸೆವ ನೀವೃಜ್ಜನಪದಂ ದೇಶಮೆನೆ ನಾಡ ಪೆಸರಕ್ಕು" (ಮಂಗರಾ. ೫೬-೨) ; ನಿನ್ನಯ ದೇಶಮೆತ್ತಣದು (ಕಾದಂಪೂ. ೯೦) ; ಅಳಕಾವಿಷಯಮೆಂಬ ದೇಶದೊಳೊಪ್ಪುಗುಂ ನಗರಿ ಕೋಸಳೆಯೆಂದು (ಚಂದ್ರಪು. ೪-೮೦) ; ಹೇಳಿರೈ ನಿಮಗಾವ ದೇಶ ವಿಶಾಲಗೋತ್ರವದಾವುದೆನುತ (ಕುಮ್ಯಾ.ಸ. ೨-೬೩); ಕೋಶ ಬಲ ತಳತಂತ್ರ ಹೆಚ್ಚಿದ ದೇಶ ದುರ್ಗವಮಾತ್ಯ ಮಿತ್ರ ಮಹೀಶಜನ ವೆಂಬುದು ಕಡಾ ಸಪ್ತಾಂಗ ಸನ್ನಾಹ (ಕುಮ್ಯಾಉ. ೯-೩) ; ದೇಶವೆಮ್ಮದು ಹೇಳುವೊಡೆ ಪರದೇಶ ಬಿದಿದಿನ ಬಿಂಕಕಾಜಿರ ವಾಸಿಗರನಲ್ಲೆನಿಸುವಲ್ಲವು ನೆಂಬ ಪೆಸರೆನಗೆ (ಪ್ರಭುಲೀ. ೫-೦೩). ೩. ಎರಡು ವಸ್ತುಗಳ ಮಧ್ಯದ ಅಂತರ,-ಅವಕಾಶ : ಈ ಬೃಹದಂತರಗಳನ್ನು . . . ಊಹಿಸುವುದಕ್ಕೆ ದೇಶವನ್ನು ಎಂದರೆ ಅಂತರವನ್ನು ಕಾಲಮಾನದಿಂದ ಅಳೆಯಬೇಕು (ಜ್ಯೋತಿವಿ. ೨೭೪) ; ಕಾಲವು ನಾನು, ದೇಶವು ನಾನು, ನಿರ್ಗುಣ ನಾನು (ಹಾಂಡಜ. ೧೭-೧೮) ; ಇದು ದೇಶದ (Space) ಮಾತಾಯಿತು. ಇನ್ನು 'ಕಾಲ'ದ ಮಾತು (ನಿಬಂಧ. I, ೨೫೬). ೪. ಭಾಗ ; ವಿಭಾಗ ; ಪಕ್ಕ : 'ಏಕದೇಶ', 'ದೇಶಘಾತಿ' ಪರಾ.

ದೇಶದ ಪೇಟೆ = ಹದಿನೆಂಟು ಪಣದವರು ಅಥವಾ ಬಲಗೈ ಜಾತಿ ಎಂಬ ವ್ಯಾಪಾರಸ್ಥರಾದ ಜನರು ವಾಸಿಸುವ ಪಟ್ಟಣದ ಭಾಗ,-ಪೇಟೆ : (೬). [ಸಂ.]

**ದೇಶಕುಲಕರಣಿ** (ನಾ).= ದೇಶಪಾಂಡೆ ೨ : ಅದಕ್ಕೆ ಮುಖ್ಯ ಗಣಕನಾದವ ದೇಶಪಾಂಡೆ, ದೇಶಕುಲಕರಣಿ. ಇವನು ಗ್ರಾಮದ ಲೆಕ್ಕಪತ್ರಗಳನ್ನು ಇಟ್ಟು ಬರವಣಿಗೆ ಕೆಲಸ ಮಾಡತಕ್ಕವನು. ಇವನಿಗೆ ದೇಶಕುಲಕರಣಿ ಎಂತಲೂ ಹೆಸರು (ಪಾಳೆಗಾ. ೧೦). [←ಮರಾ. ದೇಶಕುಳಕರಣೀ]

**ದೇಶಗತಿ** 'ದೇಸಗತಿ' ನೋ.

**ದೇಶಗಾಹು** (ನಾ). ದೇಶದ ರಕ್ಷಣೆ,-ಪಾಲನೆ : ಬ್ರಾಹ್ಮರ ಜನವ ಸುಲಿವುತ ದೇಶಗಾಹಿನ ಮನ್ನೆಯಾದಿಗಳ ಅನಿತುವನು ಸಂಹರಿಸಿ (ಸಂಭಪ. ೨೬-೪೪). [ದೇಶ + ಕಾಹು₁ (<ಕಾಪು)]

**ದೇಶಗೌಳ** (ನಾ). [ಸಂಗೀತ] ಗೌಳ ರಾಗದ ಉಪಾಂಗರಾಗಗಳಲ್ಲಿ ಒಂದು : ಕರ್ಣಾಟಗೌಳ ದೇಶಗೌಳ . . . ದ್ರಾವಿಡಗೌಳವೆಂಬೀಳುಂ ಉಪಾಂಗಗೌಳರಾಗಂಗಳು (ವಿವೇಕ. ೨೬೪). [ದೇಶ + ಗೌಳ₁]

**ದೇಶಘಾತಿ** (ನಾ). [ಜೈನ] ಜೀವನ ಗುಣಗಳಲ್ಲಿ ಕೆಲವು ಭಾಗಗಳನ್ನು ನಾಶಮಾಡುವ ಕರ್ಮಪ್ರಕೃತಿ ; ೪ ಘಾತಿಕರ್ಮಪ್ರಕೃತಿಗಳು ೪೭. ಅವುಗಳಲ್ಲಿ ೨೬ ದೇಶಘಾತಿ ಮತ್ತು ೨೧ ಸರ್ವಘಾತಿ. ನಾಲ್ಕು ಜ್ಞಾನಾವರಣ, ಮೂರು ದರ್ಶನಾವರಣ, ಹದಿನಾಲ್ಕು ಮೋಹ ನೀಯ ಮತ್ತು ಐದು ಅಂತರಾಯದಾನಾಂತರಾಯಾದಿಗಳು ಸೇರಿ ಇಪ್ಪತ್ತಾರು ದೇಶಘಾತಿಗಳಾಗುತ್ತವೆ : ಅನಂತಭಾಗಹಾರದಿಂದಂ ಭಾಗಿಸಿದೊಡೆ ಬಹುಭಾಗಂ ದೇಶಘಾತಿಗಳ್ಗಕ್ಕುಮೇಕಭಾಗಂ ಸರ್ವಂ ಘಾತಿಸಂಬಂಧದಿ ದ್ರವ್ಯಮಿನಿತಕ್ಕುಮಾ ದ್ರವ್ಯಮಂ ಷೋಡಶಕಷಾಯಂ ಗಳುಂ ಸರ್ವಘಾತಿಗಳಪ್ಪುದರಿಂದಂ ಪದಿನೇಳಕ್ಕುಂ (ಗೊಮ್ಮಸಾ. ೩-೧). 'ಸರ್ವಘಾತಿ' ಪರಾ. [ದೇಶ + ಘಾತಿ₁]

**ದೇಶತ್ಯಾಗ** (ನಾ). ಸ್ವದೇಶವನ್ನು ತ್ಯಜಿಸುವುದು,-ತೊರೆಯುವುದು : ಭಕ್ತರ ಮನವ ಶಿವನು ನೋಡಲಿಕ್ಕೆ ಕಂಟಕವನೊಡ್ಡುವನು . . . ದೇಶ ತ್ಯಾಗವ ಮಾಡಿಸುವನು ಅಲ್ಲಿ ಮಹಾವ್ಯಾಧಿಗಳ ತೋರಿಸುವನು (ವಚಸಂ. ೩೩೬-೪೦): ನಿನ್ನ ದೇಶತ್ಯಾಗದ ದೆಸೆಯೊಳ್ ಪಲಕಾಲಂ ಸತ್ತನೊಳನೆಂಬ ಸುದ್ದಿಯಂ ಕೇಳ್ದಿಮಿಲ್ಲ (ಬಂಹರಿ. ೪-೦೭ ವ). [ದೇಶ + ತ್ಯಾಗ]

**ದೇಶದ್ರೋಹ** (ನಾ). ದೇಶಕ್ಕೆ ಕೇಡುಕನ್ನುಂಟುಮಾಡುವುದು ; ರಾಷ್ಟ್ರ ಘಾತಕತನ : ಅಂದು ದರಬಾರಿನಲ್ಲಿ ಯಾವುದು ನ್ಯಾಯವೆಂದು ನನಗೆ ಕೋರಿತೋ, ಯಾವುದು ರಾಜಧರ್ಮವೆಂದು ಹೊಳೆಯಿತೋ-ಇಂದು ಅದು ಪಾಪವೆಂದೂ, ದೇಶದ್ರೋಹವೆಂದೂ ನನಗೇ ತೋರುತ್ತಿದೆ (ನಾಂಕ್. ೧೩೪). [ದೇಶ + ದ್ರೋಹ]

**ದೇಶದ್ರೋಹಿ** (ನಾ). ದೇಶಕ್ಕೆ ಕೆಡಂಕನ್ನುಂಟುಮಾಡುವವನು ; ರಾಷ್ಟ್ರಘಾತಕ : ಅವನು ಐಗುಪ್ತದೇಶದಿಂದ ಓಡಿಬಂದವನು; ಗತಿಯಿಲ್ಲ ದವನು, ದೇಶದ್ರೋಹಿ ಎಂದರು (ಮುಚಸ. ೪೬) ; ಇತ್ತಲಾ ಬಾದಷಹನು ಕಿಡಿಕಿಡಿಯಾಗಿ, ರಾಜದ್ರೋಹಿಯೂ ದೇಶದ್ರೋಹಿಯೂ ಅದ . . . ಅವನನ್ನು ಶೂಲಕ್ಕೇರಿಸುವೆನೆಂದು ಕೆರಳಿದ್ದ (ಕಲಾಧ. ೫೪). [ಸಂ. ದೇಶದ್ರೋಹಿನ್]

**ದೇಶಧರ್ಮ** (ನಾ). ಒಂದು ದೇಶದಲ್ಲಿ ಹಿಂದಿನಿಂದಲೂ ನಡೆದು ಕೊಂಡು ಬಂದಿರುವ ನಡೆನುಡಿ ಮತ್ತು ಆಚಾರ ವ್ಯವಹಾರ ; ಒಂದು ದೇಶದಲ್ಲಿ ಪರಂಪರಾಗತವಾಗಿ ಬಂದಿರುವ ನಡವಳಿಕೆ : ಕಾಲಧರ್ಮ, ದೇಶಧರ್ಮ ಇತ್ಯಾದಿಗಳಲ್ಲಿ ಕಾಲ ದೇಶಗಳಿಗುಚಿತವಾದ ನ ಡೆ ನು ಡಿ ಗಳೆಂದರ್ಥವು (ಆರ್ಯಾರ. ೧೧). [ದೇಶ + ಧರ್ಮ]

**ದೇಶನ** (ನಾ). ಉಪದೇಶ ; ಬೋಧನೆ : ಗುರು, ಈ ದೇಶನವನ್ನು ಮುಗಿಸಿ . . . ಜಾತಕವನ್ನು ಗುರುತಿಸಿದನು (ಬುದ್ಧ.ಕ. ೦೭). [ಸಂ.]

**ದೇಶನಾಡು** (ನಾ). = ದೇಶ ೨.

ದೇಶನಾಡಿನವರು = ದೇಶದ ಮುಖಂಡರು; ಗ್ರಾಮಾದಿಗಳಲ್ಲಿ ನಡೆ ಯುವ ವ್ಯಾಜ್ಯ, ವ್ಯವಹಾರಗಳನ್ನು ವಿಚಾರಿಸಿ ನ್ಯಾಯನಿರ್ಣಯ ಮಾಡುವ, ಬೇರೆ ಬೇರೆ ಕಡೆಯಿಂದ ಬಂದು ಸೇರುವ ಪಂಚಾಯಿತಿ ಯವರು : ಮಲ್ಲಿಗೆಹೂವನ್ನು ಹಜಾಮರು ಮುಡಿಯಕೂಡದುಯೆನ್ನು ಈ ಮಡಿವಾಳ ಸೆಟಿಗಳೂ ದೇಶನಾಡಿನವರ ಕೂಡ ಹೇಳುವಲಿ (ಎಕ. IX, ಕಾನಕಾ. ೯೦-೦೭ ; 1700). [ದೇಶ + ನಾಡು]

**ದೇಶನಾಲಬ್ಧಿ** (ನಾ). [ಜೈನ] ಕ್ಷಯೋಪಶಮ, ವಿಶೋಧಿ, ದೇಶನಾ, ಪ್ರಾಯೋಗ್ಯ, ಕರಣ ಎಂಬ ಪಂಚಲಬ್ಧಿಗಳಲ್ಲಿ ಮೂರನೆಯದು : P ಆರು ದ್ರವ್ಯಗಳು, ನವಪದಾರ್ಥಗಳು ಇವುಗಳ ಬಗ್ಗೆ ಉಪದೇಶಿಸುವಂಥ ಆಚಾರ್ಯರು ದೊರಕಿ, ಅವರ ಉಪದೇಶವನ್ನು ಕೇಳಲು ಸಿಗುವುದು ಮತ್ತು ಅವರು ಉಪದೇಶಿಸಿದ ಧರ್ಮತತ್ತ್ವವನ್ನು ತಿಳಿದುಕೊಂಡು, ಧರಿಸುವ ಶಕ್ತಿ ಇರುವುದು : ಷಡ್ದ್ರವ್ಯ ಪಂಚಾಸ್ತಿಕಾಯ ಸಪ್ತತತ್ತ್ವ ನವಪದಾರ್ಥೋಪದೇಶಕ ಜೈನಾಚಾರ್ಯ ಪ್ರಭೃತಿ ಲಾಭಮುಂ ದೇಶಿತ ಪದಾರ್ಥಾವಧಾರಣ ಲಾಭಮುಂ ಮೇಣ್ ದೇಶನಾಲಬ್ಧಿಯಕ್ಕುಂ (ತತ್ತ್ವಾಸೂ. ೮೦). 'ಪಂಚಲಬ್ಧಿ' ಪರಾ. [ ಸಂ. ]

**ದೇಶನಿವೇಶೋಪದೇಶ** (ನಾ). [ಜೈನ] ಜೈನ ಪುರಾಣದಲ್ಲಿರಬೇಕಾದ ಎಂಟು ಅಂಗಗಳಲ್ಲಿ ಒಂದು ; ದೇಶದ ವಿನ್ಯಾಸ, ವಿಸ್ತೀರ್ಣ, ರೀತಿ, ರಚನೆ ಮೊದಲಾದುವುಗಳನ್ನು ತಿಳಿಸುವುದು: ಅ ಪುರಾಣಕ್ಕಂ ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ ನಗರಸಂಪತ್ಸರಿವರ್ಣನಮುಂ ರಾಜ್ಯಕಾರಮಣೀಯಕಾಖ್ಯಾನಮುಂ ತೀರ್ಥಮಹಿಮಾಸಮರ್ಥನಮುಂ ಚತುರ್ಗತಿಸ್ವರೂಪನಿರೂಪಣಮುಂ ತಪೋದಾನವ್ಯಾವರ್ಣನಮುಂ ತತ್ಫಲ ಪ್ರಾಪ್ತಿಪ್ರಕಟಮುಮೆಂದಿಂತವಯವಂಗಳೆಂಟಕ್ಕುಂ (ಆದಿಪು. ೧-೪೨ ವ). 'ಪುರಾಣ' ಪರಾ. P 'ಆದಿಪು' ಮತ್ತು 'ಚಾವುಂಪು' ಗಳಲ್ಲಿ, ಪುರಾಣದಲ್ಲಿರಬೇಕಾದ ಅಂಗಗಳು ಎಂಟು ಎಂದು ಹೇಳಿದೆ. ಆದರೆ 'ಅನಂಪು. ೧-೭೭'ರಲ್ಲಿ, ಮುನಿಮಾರ್ಗೋಕ್ತವಾದ ಅಂಗಗಳು ಐದು, ಮತ್ತು ಕವಿಪ್ರೋಕ್ತವಾದ ಅಂಗಗಳು ಎಂಟು (೫+೩) ಎಂದು ಹೇಳಿದೆ. [ ದೇಶ + ನಿವೇಶ + ಉಪದೇಶ ]

**ದೇಶಪದ್ಧತಿ** (ನಾ). ದೇಶದ ಆಚಾರ,-ಸಂಪ್ರದಾಯ : ಅವನ ತಂದೆಯು ದೇಶಪದ್ಧತಿಯಂತೆ ಅವನನ್ನು . . . ಗೋಪಾಲಕರಲ್ಲಿಗೆ ಕಳುಹಿಸಿಕೊಟ್ಟನು (ಮುತಸ. ೭೮) ; ಅವರು ಯಾವ ಸಂದರ್ಭದಲ್ಲೂ ತಮ್ಮ ದೇಶಪದ್ಧತಿಯನ್ನು ಬಿಟ್ಟು ನಡೆಯುವುದಿಲ್ಲ (ರೂಢಿ).
[ ದೇಶ + ಪದ್ಧತಿ ]

**ದೇಶಪರತ್ವ** (ನಾ). ಬೇರೆ ಬೇರೆ ಪ್ರದೇಶಗಳಿಗೆ ಸಂಬಂಧಪಟ್ಟಿರುವಿಕೆ: ಮಾಂತಿಸದ ಗುಣಗಳು ದೇಶಪರತ್ವದಿಂದ ಬೇರೆಬೇರೆಯಾಗುತ್ತವೆ (ಮುಂಬಯಿ. ೫-೧೪). [ ಸಂ. ]

**ದೇಶಪರಿಚ್ಛೇದ** (ನಾ). "ಒಂದು ದೇಶದಲ್ಲುಂಟು ಮತ್ತೊಂದು ದೇಶದಲ್ಲಿಲ್ಲವೆಂದೆನಿಸಿಕೊಂಬುದೇ ದೇಶಪರಿಚ್ಛೇದಮೆನಿಸುವುದು" (ವಿವೇಕ.೨೪) : ಕೆಲವೆಡೆಯಿದ್ದು ಕೆಲವೆಡೆಯಿಲ್ಲದಿರುವಿಕೆಯು ದೇಶಪರಿಚ್ಛೇದ (ಭಾರದ. ೨೪೩). [ ದೇಶ + ಪರಿಚ್ಛೇದ ]

**ದೇಶಪರ್ಯಟನ** (ನಾ). = ದೇಶಾಟನ: ದೇಶಪರ್ಯಟನವೆಂದರೆ ಅವರಿಗೆ ತುಂಬ ಖುಷಿ (ರೂಢಿ). [ ದೇಶ + ಪರ್ಯಟನ ]

**ದೇಶಪರ್ಯಟನೆ** (ನಾ). = ದೇಶಾಟನ : ದೇಶಪರ್ಯಟನೆಯಿಂದ ಜ್ಞಾನಾರ್ಜನೆಯಾಗುತ್ತದೆ (ರೂಢಿ). [ ದೇಶ + ಪರ್ಯಟನೆ ]

**ದೇಶಪಾಂಡೆ** (ನಾ). ೧. ಒಂದು ಜಿಲ್ಲೆಯ ಕಂದಾಯದ ಮುಖ್ಯಾಧಿಕಾರಿ ; ಮಹಾಲ್ಕರಿ : ದಿವಾನಸಹೇಬಾ ದೇಶಮುಕಿ ದೇಶಪಾಂಡೇರೂ . . . ಹುನೆರೆಡು ಆಯಗಾರರು (ಎಕ. XII, ಶಿರಾ. ೦೭-೩ ; ?). ೨. ವತನದಾರನಾಗಿದ್ದುಕೊಂಡು ಗ್ರಾಮದ ಲೆಕ್ಕಪತ್ರಗಳನ್ನು ಬರೆಯುವವನು ; ಶಾನಭೋಗ ; ಕರಣಿಕ ; ಕುಲಕರಣಿ ; ಶ್ಯಾನುಭೋಗ ಅಥವಾ ಮೆನನ್ ಎಂಬುದನ್ನು ಬೊಂಬೈಪ್ರಾಂತ್ಯದಲ್ಲಿ ದೇಶಾಯಿ, ದೇಶಪಾಂಡೆಯೆಂತಲೂ ಗ್ರಾಮದ ಅಕೌಂಟೆಂಟನ ಹೆಸರುಂಟು (ಗ್ರಾಮಾಕ. ೧): ೬ದಕ್ಕೆ ಮುಖ್ಯಗಣಕನಾದವ ದೇಶಪಾಂಡೆ, ದೇಶಕುಲಕರಣಿ (ಶಾಳಗಾ. ೧೧). [ ←ಮರಾ. ದೇಶಪಾಂಡೇ ]

**ದೇಶಪಾಂಡೆತನ** (ನಾ). ದೇಶಪಾಂಡೆಯ ಉದ್ಯೋಗ,- ಅಧಿಕಾರ : ವೆಂಕಟಾದ್ರಿಯಜಮಾನರಿಗೆ ಹುರಳಿಪಾಲದ ದೇಶಪಾಂಡೆತನವನ್ನು ಕೊಟ್ಟವಾಗಿ (ಮೈಆರಿ. ೧೯೨೬, ೬೮-೧೨ ; 1538). [ದೇಶಪಾಂಡೆ + – ತನ]

**ದೇಶಪ್ರೇಮ** (ನಾ). ತನ್ನ ದೇಶದ ಮೇಲೆ ಇರುವ ಮಮತೆ,-ಅಭಿಮಾನ: ಸೋದರ ಸೋದರಿಯರೆ, ಮೇಲೇಳಿ . . . ದೇಶಪ್ರೇಮಾವೇಶವ ತಾಳಿ (ಕೋಗಿಲೆ. ೩೩-೭); ಅವನ ಅಚಲನಿರ್ಧಾರವನ್ನು, ಅನುಪಮದೇಶಪ್ರೇಮವನ್ನು ಕಂಡು ಅವನ ಬಗೆಗೆ ನನಗಿದ್ದ ಆದರವಿನ್ನೂ ಹೆಚ್ಚಿದೆ (ಅಗಸ್ತ್ಯ. ೬೩). [ ದೇಶ + ಪ್ರೇಮ ]

**ದೇಶಬಂಧ** (ನಾ). [ಯೋಗ] ಯೋಗದ ಅಷ್ಟಾಂಗಗಳಲ್ಲಿ ಒಂದು; ಧಾರಣೆ; P ನಾಭಿ ಚಕ್ರ, ನಾಸಿಕಾಗ್ರ, ಜಿಹ್ವಾಗ್ರ ಇವೇ ಮೊದಲಾದ ಸ್ಥಾನಗಳಲ್ಲಿ ಮನಸ್ಸನ್ನು ಬೇರೆ ಕಡೆ ಚಲಿಸದಂತೆ ನಿಲ್ಲಿಸುವುದು: ಧಾರಣೆಯೆಂದರೆ ಶುಭವಾದ ಆಶ್ರಯವಾದ ನಾಭಿಚಕ್ರ, ಹೃದಯ, ಜಿಹ್ವಾಗ್ರ, ನಾಸಾಗ್ರ, ಶಿರಸ್ಸು ಮೊದಲಾದ ಶರೀರದವಯವದಲ್ಲಿ ಅಥವಾ ಹೊರಗಿನ ಶುಭವಾದ ಮಂಗಳಕರವಾದ ವಸ್ತುವಿನಲ್ಲಿ ಚಿತ್ತವನ್ನು ಸ್ಥಿರವಾಗಿ ನಿಲ್ಲಿಸುವ ಅಭ್ಯಾಸಮಾಡುವುದು. ಇದೇ ದೇಶಬಂಧವು (ಹಿಂದಸಾ. ೧೧೮). 'ಅಷ್ಟಾಂಗಯೋಗ' ಪರಾ. [ ದೇಶ + ಬಂಧ ]

**ದೇಶಬಾಂಧವ** (ನಾ). ಒಂದೇ ದೇಶದಲ್ಲಿ ಜನಿಸಿರುವುದರಿಂದ ಪರಸ್ಪರ ಸಂಬಂಧ ಹೊಂದಿದವನು: ದೇಶಬಾಂಧವರ ಬಗ್ಗೆ–ದೀನ ದಲಿತರ ಬಗ್ಗೆ ಎದೆಯಲ್ಲಿದ್ದ ತಳಮಳವನ್ನೆಲ್ಲ ಹೊರಚೆಲ್ಲುವಂತಿದ್ದ ದೃಷ್ಟಿ (ಅಗಸ್ತ್ಯ. ೫).
[ ದೇಶ + ಬಾಂಧವ ]

**ದೇಶಭಕ್ತ** (ನಾ). ತನ್ನ ದೇಶದ ಬಗ್ಗೆ ಭಕ್ತಿಯನ್ನು ಹೊಂದಿರುವವನು,- ಗೌರವವನ್ನು ಹೊಂದಿರುವವನು : ದೇಶಭಕ್ತರ ಉಪದೇಶಗಳನ್ನು ಕೇಳಿ ರೌದ್ರಾವೇಶವನ್ನು ತಾಳತೊಡಗಿದ (ಮರಳು. ४६४); ಸ್ವಾತಂತ್ರ್ಯದ ಹೋರಾಟದಲ್ಲಿ ಅನೇಕ ಜನ ದೇಶಭಕ್ತರು ಅಸು ನೀಗಿದರು (ರೂಢಿ).
[ ದೇಶ + ಭಕ್ತ ]

**ದೇಶಭಕ್ತಿ** (ನಾ). = ದೇಶಪ್ರೇಮ :- ಇವನೂ ದೇಶಭಕ್ತಿಯ ಕಾವಿನಿಂದ ಅಲ್ಲಿಗೆ ಹೋಗತೊಡಗಿದ (ಮರಳು. ४६४) ; ದೇಶಭಕ್ತಿಯನ್ನು ಹೊಂದಿದ್ದ ಅನೇಕ ಮಹನೀಯರು ನಮ್ಮ ನಾಡಿಗಾಗಿ ದುಡಿದರು (ರೂಢಿ).
[ ದೇಶ + ಭಕ್ತಿ ]

**ದೇಶಭಾಷೆ** (ನಾ). ಒಂದು ಪ್ರದೇಶದಲ್ಲಿ ಹಿಂದಿನ ಕಾಲದಿಂದಲೂ ಬಳಕೆಯಲ್ಲಿರುವ ಮಾತು: ನಾಡುನುಡಿ : ಈ ಕೆಲವು ವಿಷಯಗಳು ವಿಶೇಷವಾದ ಪ್ರಾಮುಖ್ಯತೆಯನ್ನು ಹೊಂದಿ, ಗಮನಾರ್ಹವಾಗಿ ನೊಳಂಬರ ಮೂಲವನ್ನು ಮತ್ತು ದೇಶಭಾಷೆಯನ್ನು ನಿರ್ಧರಿಸಲು ಸಹಾಯಕವಾಗುತ್ತದೆ (ನೊಳಂಬ. ೭೪): ಶ್ರೀಬಂಕಿಂಬಾಬು ಅವರ ಅನೇಕ ಗ್ರಂಥಗಳು ... ಯೂರೋಪ್ ಖಂಡದ ದೇಶಭಾಷೆಗಳಿಗೂ ಭಾಷಾಂತರ ಮಾಡಲ್ಪಟ್ಟವೆ (ಕಪಾಕುಂ. ವಿಜ್ಞಾಪನಾ). [ ದೇಶ + ಭಾಷೆ ]

**ದೇಶಭ್ರಷ್ಟ** (ನಾ). ತನ್ನ ಮಾತೃಭೂಮಿಯಿಂದ ಹೊರದೂಡಲ್ಪಟ್ಟವನು ; ತನ್ನ ದೇಶದಲ್ಲಿ ಕಾರಣಾಂತರದಿಂದ ನೆಲೆಯಿಲ್ಲದವನಾಗಿ ಪರದೇಶಕ್ಕೆ ಹೋಗಿರುವವನು; ಗಡೀಪಾರಾದವನು : ತಪ್ಪು ಮಾಡಿ, ಊರಲ್ಲಿದ್ದರೆ ಸಿಕ್ಕಿಬೀಳುತ್ತೇನೆ ಎಂದು ಹೆದರಿ, ದೇಶಭ್ರಷ್ಟನಾಗಿದ್ದಾನೆ (ಕಟುಕ. ೧೭೨); ನೀನು ತಪ್ಪುಕಾಣಿಕೆಯನ್ನು ಕೊಡುವುದಕ್ಕಾಗಲಿ ಅಥವಾ ದೇಶಭ್ರಷ್ಟನಾಗುವುದಕ್ಕಾಗಲಿ ಒಪ್ಪದಿದ್ದ ಮೇಲೆ . . . ಬೇರೆ ಮಾರ್ಗವೇ ಇರಲಿಲ್ಲ (ಸಾಕ್ರಮು. ४३). [ ದೇಶ + ಭ್ರಷ್ಟ ]

**ದೇಶಭ್ರಷ್ಟತ್ವ** (ನಾ). ದೇಶಭ್ರಷ್ಟನಾಗುವಿಕೆ ; ಗಡೀಪಾರಾಗುವಿಕೆ.
[ ಸಂ. ]

**ದೇಶಮುಕಿ** 'ದೇಶಮುಖಿ' ನೋ.

**ದೇಶಮುಖ, ದೇಶಮುಖಿ** (ನಾ). (ಹಿಂದೆ ಮರಾಟರ ಕಾಲದಲ್ಲಿ) ಪರಗಣವೆಂದು ಕರೆಯಲಾಗುತ್ತಿದ್ದ ದೇಶವಿಭಾಗದ ಅಧಿಕಾರಿ; ಪ್ರಾಂತಾಧಿಕಾರಿ: ಮೇಲಾಗಿ ಕೇತವರಾಯರೂ ಎಲ್ಲ ವಿಷಯಗಳಲ್ಲಿ 'ದೇಶಮುಖ'ರಂತೆ ನಡೆದರು (ಸಮಚೀ. ೩೨೫); ರಾಜಾನುಗ್ರಹ ಪಡೆದು ದೊಡ್ಡ ದೇಶಮುಖನೆಂದೆನಿಸಿಕೊಂಬ ಆಶೆಯೂ ಬಹಳ (ಕಥವಿ. II, ೨೫೭): ಒಂದು ಪ್ರಾಂತದ ಆಡಳಿತವೆಲ್ಲವೂ ದೇಶಾಧಿಕಾರಿಯಾದ ದೇಶಮುಖ . . . ದೇಶಪಾಂಡೆ, ದೇಸಾಯಿ . . . ಎಂಬೀ ಅಧಿಕಾರಿಗಳ ಅಧೀನ ವಾಗಿದ್ದವು (ಛತ್ರಿ. ೦೩೭). **ದೇಶಮುಖಿ**: ಮಲಸಿ × ಗೌಡಗೆ ದಿವಾನ ಸಹೇಬಾ ದೇಶಮುಖಿ ದೇಶಪಾಂಡೇರೂ ಕನಗೊಂಡ × ಗೌಡ ಶಾನಬೋಗರು (ಎಕ. XII, ಶಿರಾ. ೮೭-೩; ?).

[← ಮರಾ. ದೇಶಮೂಖ್./ಸಂ. ದೇಶಮುಖ]

**ದೇಶರೂಪ** (ನಾ). ಸನ್ನಿವೇಶಕ್ಕೆ ಅನುಸಾರವಾಗಿರುವುದು; ಔಚಿತ್ಯ; ಹೊಂದಾಣಿಕೆ: "ಅಭ್ರೇಷಃ, ನ್ಯಾಯಃ, ಕಲ್ಪಃ, ದೇಶರೂಪಂ, ಸಮಂಜಸಂ – ಇ ತನಗೆ ಉಚಿತವಾದ ಧರ್ಮಗಳನ್ನು ತಪ್ಪದೇ ತಕ್ಕ ಹಾಗೆ ನಡೆದುಕೊಳ್ಳುವಿಕೆ" (ಸಿದ್ಧಾಂತಿ. ೨೦೮). [ದೇಶ + ರೂಪ]

**ದೇಶವಾಚಕ** (ನಾ). ದೇಶವನ್ನು ತಿಳಿಸುವ ಶಬ್ದ; ಪ್ರದೇಶವನ್ನು ತಿಳಿಸುವ ಶಬ್ದ: ಆ ಪದಗಳು ಭಾಷಾವಾಚಕ ಪದಗಳಾಗಿರದೆ ದೇಶ ವಾಚಕಗಳಾಗಿರಬಹುದು (ದ್ರಾವಿವಿ. ೯೧). [ದೇಶ + ವಾಚಕ]

**ದೇಶವಿರತ** (ನಾ). [ಜೈನ] ದೇಶವಿರತಿವ್ರತವನ್ನು ಹೊಂದಿದವನು: ಪರಮಾಗಮದೊಳ್ ಸಾಗಾರರ ನೆಲೆ ಪನ್ನೊಂದು ಪನ್ನೆರಡಪ್ಪದನಗಾರರ ನೆಗಟ್ಟ ಗುಣಸ್ಥಾನಂ ಪರಿಕಿಪೊಡೇಟಲ್ತೆ ದೇಶವಿರತನಿನವಜೇಳ್ (ಅನಂಪು. ೩-೫೭); ದೇಶವಿರತ–ಯಾವ ಜೀವವು ಜಿನೇಂದ್ರದೇವನಲ್ಲಿ ಅದ್ವಿತೀಯಶ್ರದ್ಧೆಯನ್ನಿಟ್ಟು ತ್ರಸಹಿಂಸೆಯಿಂದ ವಿರತ ಮತ್ತು ಅದೇ ಸಮಯದಲ್ಲಿ ಸ್ಥಾವರಹಿಂಸೆಯಿಂದ ಅವಿರತವಾಗುವುದೋ ಆ ಜೀವಕ್ಕೆ ವಿರತಾವಿರತವೆಂದು ಹೇಳುವರು (ಶ್ರಾವಕಾ. ಪರಿ. II, ೬೦೭).

[ದೇಶ + ವಿರತ]

**ದೇಶವಿರತಿ** (ನಾ). [ಜೈನ] ಶ್ರಾವಕರು ಧರಿಸಿರುವ ದಿಗ್ವಿರತಿ, ದೇಶ ವಿರತಿ ಮತ್ತು ಅನರ್ಥದಂಡವಿರತಿ ಎಂಬ ಮೂರು ಬಗೆಯ ಗುಣ ವ್ರತಗಳಲ್ಲಿ ಒಂದು; P ಆಜೀವ ಪರ್ಯಂತವೂ ನಿಗದಿಯಾದ ದಿನ, ತಿಂಗಳು, ವರ್ಷ ಮುಂತಾದ ಕಾಲಪ್ರಮಾಣಗಳಲ್ಲಿ, ನಿರ್ದಿಷ್ಟವಾದ ಅಡವಿ, ನದಿ, ತಟಾಕ ಮೊದಲಾದ ಪ್ರದೇಶಗಳಿಂದ ಹೊರಗೆ ಸಂಚರಿಸುವುದಿಲ್ಲವೆಂಬ ವ್ರತ: ಇನ್ನೆರಡನೆಯ ದೇಶವಿರತಿಯೆಂತೆನೆ ಯಾವಜ್ಜೀವಂ ಕೊಳಿಸಿದುದರೊಳಗೆಯುಂ ಘಟಿಕೆ ಮುಹೂರ್ತ ದಿನರಾತ್ರಿ ಪಕ್ಷಮಾಸ ಋತುಚತುರ್ಮಾಸ ಅಯನಸಂವತ್ಸರಾದಿಕಾಲ ಪ್ರಮಾಣದಿಂ ಕೆಮ್ಮನೆ ಮೂಡಿಡವಿ ನದೀತಟಾಕ ಇವೇ ಮೊದಲಾದ ಪ್ರದೇಶಾದಿಗಳಿಂದ ತ್ತಲ್ಪೋಗೆನೆಂದು ಪ್ರಮಾಣಿಸುವುದೆರಡನೆಯ ಗುಣವ್ರತಮಕ್ಕುಂ (ಧರ್ಮಾಮೃ. ೩೧೧). [ದೇಶ + ವಿರತಿ]

**ದೇಶವ್ಯಾಪ್ತಿ** (ನಾ). ಆಕಾಶ ಮೊದಲಾದ ಸ್ಥಳಗಳಲ್ಲಿ ಹರಡಿಕೊಳ್ಳು ವಿಕೆ: ದೇಶವ್ಯಾಪ್ತಿಯಿಂದ ಅಣು ಮಹತ್ ಮಹತ್ತರ ಮೊದಲಾದ ವ್ಯವಹಾರಗಳು ಕೂಡುವುವು. ದೇಶವ್ಯಾಪ್ತಿಯೆಂದರೆ ಪರಮಾಣು ಎಷ್ಟು ಆಕಾಶಪ್ರದೇಶವನ್ನು ಆವರಿಸುತ್ತದೆಯೋ ದ್ವ್ಯಣುಕವು ಅದಕ್ಕಿಂತಲೂ ಅಧಿಕಪ್ರದೇಶವನ್ನು ಆವರಿಸುತ್ತದೆ (ಹಿಂದೂಶಾ. ೯೧). [ದೇಶ + ವ್ಯಾಪ್ತಿ]

**ದೇಶವ್ರತ** (ನಾ).=ದೇಶವಿರತಿ: ದೇಶವ್ರತ–ದಿಗ್ವ್ರತದಲ್ಲಿ ಗೊತ್ತುಮಾಡಿದ ಮೇರೆಗಳಲ್ಲಿಯೂ ಈಚೆಗೆ ಸಮೀಪದ ನದೀಪರ್ವತಗಳ ಆಚೆಗೆ ಆಮರಣವೂ ಹೋಗುವುದಿಲ್ಲವೆಂದು ನಿಶ್ಚಯಿಸುವುದು ದೇಶವ್ರತವು (ಜೈನಧ. ೬೯). 'ಗುಣವ್ರತ', 'ಶೀಲವ್ರತ' ಪರಾ. [ದೇಶ + ವ್ರತ]

**ದೇಶವ್ರತಿ** (ನಾ).=ದೇಶವಿರತ: ದೇಶವ್ರತಿಗಳಂ ಪೇಟ್ವೆನೆಂತೆನೆ ದರ್ಶನಿಕನುಂ ವ್ರತಿಕನುಂ . . . ಉದ್ದಿಷ್ಟವಿರತನುಮೆಂದು ದೇಶವ್ರತಿಗುಣಸ್ಥಾನದ ವರ್ಪನ್ನೊಂದು ವಿಕಲ್ಪಮುಷ್ಟವರ್ತಂತಮ್ಮಗುಣಂಗಳತ್ತಣಿಂ ಪೂರ್ವಗುಣಂ ಗಳ್ವೆರಸು ಕ್ರಮದಿಂ ಪೆರ್ಚಿದರ್ (ಧರ್ಮಾ. ೨೯೪). [ದೇಶ + ವ್ರತಿ]

**ದೇಶವ್ರಾತ** (ನಾ). ದೇಶಗಳ ಸಮೂಹ: ಧರ್ಮಜನಿದ್ದ ದೇಶವ್ರಾತ ದೊಳು ಬರಿನಿಲ್ಲ ಸವೆಯವು ಬೆಳೆದ ಬೆಳಸುಗಳು (ಕುಮಾವ್ಯಾ. ೪-೧೨).

[ದೇಶ + ವ್ರಾತ]

**ದೇಶಶಾಖೆ** (ನಾ). ಒಂದು ದೇಶದ ಬೇರೆ ಬೇರೆ ವಿಭಾಗ; ಜಿಲ್ಲೆ. 'ದೇಸಾಕೆ' ಪರಾ. [ದೇಶ + ಶಾಖೆ]

**ದೇಶಸಂಚಾರ** (ನಾ). ದೇಶದಲ್ಲೆಲ್ಲ ತಿರುಗುವಿಕೆ; ನಾಡಿನಲ್ಲೆಲ್ಲ ಸಂಚರಿ ಸುವಿಕೆ; ದೇಶಪರ್ಯಟನೆ: ಆ ಸ್ವಾಮಿಗಳು ದೇಶಸಂಚಾರ ಮಾಡುತ್ತಾ ಜನರಿಗೆ ತತ್ತ್ವಬೋಧೆ ಮಾಡುತ್ತಿದ್ದರು (ಉಪ). [ದೇಶ + ಸಂಚಾರ]

**ದೇಶಸಂಯತ** (ನಾ). [ಜೈನ] ಐದು ಅಣುವ್ರತ, ಮೂರು ಗುಣವ್ರತ ಮತ್ತು ನಾಲ್ಕು ಶಿಕ್ಷಾವ್ರತ– ಈ ಹನ್ನೆರಡು ವ್ರತಗಳನ್ನು ಪಾಲಿಸುವ ಶ್ರಾವಕ: ಏಕದೇಶನಿರ್ವೃತಿ ಲಕ್ಷಣಾಣುವ್ರತ ಗುಣಶಿಕ್ಷಾವ್ರತಸ್ವರೂಪ ಮೇಕಾದಶನಿಲಯಮುಮಪ್ಪ ದೇಶಚಾರಿತ್ರದೊಳು ವರ್ತಿಸುವ ಶ್ರಾವಕ ನೈದನೆಯ ಗುಣಸ್ಥಾನವರ್ತಿ ದೇಶಸಂಯತನಕ್ಕುಂ (ಶ್ರಾವಕಾ. ೬೮-೩).

[ದೇಶ + ಸಂಯತ]

**ದೇಶಸಂಯಮ** (ನಾ). [ಜೈನ] ಅಸಂಯಮ, ದೇಶಸಂಯಮ, ಸಾಮಾ ಯಿಕ, ಛೇದೋಪಸ್ಥಾಪನ, ಪರಿಹಾರವಿಶುದ್ಧಿ, ಸೂಕ್ಷ್ಮಸಾಂಪರಾಯ, ಯಥಾಖ್ಯಾತಶುದ್ಧಿಸಂಯಮ ಎಂಬ ಏಳು ಬಗೆಯ ಸಂಯಮ ಗಳಲ್ಲಿ ಒಂದು; ಹನ್ನೆರಡು ಬಗೆಯ ವ್ರತಗಳನ್ನು ಪಾಲಿಸುವ ಶ್ರಾವಕನ ಚಾರಿತ್ರ: ಸಾಮಾಯಿಕಚ್ಛೇದೋಪಸ್ಥಾಪನಾಪರಿಹಾರ ವಿಶುದ್ಧಿಸೂಕ್ಷ್ಮಸಾಂಪರಾಯಯಥಾಖ್ಯಾತಚಾರಿತ್ರದೇಶಸಂಯಮ ಅಸಂ ಯಮವಿಕಲ್ಪದಿಂ ಸಂಯಮಂ ಸಪ್ತವಿಧಂ (ತತ್ತ್ವಪ್ರ. ೧೭); ಸಮ್ಯಕ್ ಮಿಥ್ಯಾತ್ವ ಗುಣಸ್ಥಾನದಲ್ಲಿರುವ ಜೀವವು ಸಕಲಸಂಯಮ ಇಲ್ಲವೆ ದೇಶ ಸಂಯಮವನ್ನು ಗ್ರಹಣಮಾಡುವುದಿಲ್ಲ (ಶ್ರಾವಕಾ. ಪರಿ. II, ೬೦೭).

[ದೇಶ + ಸಂಯಮ]

**ದೇಶಸಾತ್ಮ್ಯ** (ನಾ). [ವೈದ್ಯಶಾ] ಮೂರು ಬಗೆಯ ಸಾತ್ಮ್ಯಗಳಲ್ಲಿ ಒಂದು; ವಾಸಮಾಡುವ ಪ್ರದೇಶಕ್ಕೆ ಹೊಂದಿಕೊಳ್ಳುವುದು,– ಒಗ್ಗಿಕೊಳ್ಳುವುದು: ವಿರುದ್ಧಪಾನಾಹಾರಂಗಳು ವಿರುದ್ಧಪ್ರಕೃತಿಯುಳ್ಳವ ನಾಗಿದ್ದರೂ ದೇಹಕ್ಕೆ ಒಡಂಬಟ್ಟು ಬಂದರೆ ಅದೇ ಸಾತ್ಮ್ಯವೆನಿಸಿಕೊಂಬುದು. ಆ ಸಾತ್ಮ್ಯವೆಂತೆಂದೊಡೆ . . . ದೇಶಸಾತ್ಮ್ಯ, ದೇಹಸಾತ್ಮ್ಯ, ವ್ಯಾಧಿ ಸಾತ್ಮ್ಯವೆಂದು ಆ ಸಾತ್ಮ್ಯ ಮೂರು ತೆರನಾಗಿಹುದು (ವೈದ್ಯಸಾ. I, ೧೨). 'ದೇಹಸಾತ್ಮ್ಯ' ಪರಾ. [ದೇಶ + ಸಾತ್ಮ್ಯ]

**ದೇಶಸೇವೆ** (ನಾ). ಹುಟ್ಟಿದ ದೇಶಕ್ಕಾಗಿ ಮಾಡುವ ಸೇವೆ,–ಕಾರ್ಯ; ನಾಡ ಸೇವೆ: ಅವರು . . . ಜೀವಿತದ ಕೊನೆಯ ನಿಮಿಷದವರೆಗೂ ದೇಶಸೇವೆ ಮಾಡಿದರು (ಕಥಪು. ೩-೬೩); ಗೃಹಸ್ಥರಿಗೆ ದೇಶಸೇವೆ ಮಾಡುವ ಅಧಿಕಾರವಿಲ್ಲವೇ? (ಭಾರತಿ. ೬೩). [ದೇಶ + ಸೇವೆ]

**ದೇಶಸ್ಥ** (ಗು). ೧. ದೇಶದಲ್ಲಿರುವ; ದೇಶದಲ್ಲಿ ವಾಸಿಸುವ. (ನಾ). ೨. ಒಂದು ದೇಶದಲ್ಲಿ ವಾಸಿಸುವ ವ್ಯಕ್ತಿ. ೩. ಬ್ರಾಹ್ಮಣರಲ್ಲಿ ಒಂದು ಪಂಗಡ; ಮಹಾರಾಷ್ಟ್ರದ ಕಡೆಯಿಂದ ಕರ್ನಾಟಕಕ್ಕೆ ವಲಸೆ ಬಂದು, ಸ್ಮಾರ್ತ ಮತ್ತು ಮಾಧ್ವ ಸಂಪ್ರದಾಯ, ಆಚಾರಗಳನ್ನು ಹೊಂದಿಸಿ ಕೊಂಡಿರುವ ಬ್ರಾಹ್ಮಣವರ್ಗ: ದೇಶಸ್ಥ ಬ್ರಾಹ್ಮಣರು: ಇವರನ್ನು ನಮ್ಮ ಜಿಲ್ಲೆಯಲ್ಲಿ 'ತೋಟಿಗ' ರೆಂದು ಕರೆಯುವುದೂ ಉಂಟು (ತುಳುನಾ. ೦೫೭).

[ಸಂ.]

**ದೇಶಾಂತರ** (ನಾ). ಬೇರೆದೇಶ; ಪರದೇಶ; ವಿದೇಶ: ಧರಣಿ ನುಂಗುವ ಅಬ್ಬರನು ಸಂಗರವ ಜಯಿಸದ ನೃಪನ ದೇಶಾಂತರವ ಚರಿಸದ ಪಂಡಿತನ (ಕುವ್ಯಾಅ. ೩-೨೨); ಹರನುರಿಗಣ್ಣೊಳೆನ್ನಾಳ್ದ ದೇಹವ ಬಿಟ್ಟ ವಿರಹದ ದೇಶಾಂತರವ ಭರವಶದೊಳು ಸಿಕ್ಕಿದ ನಾನು ಮುಂದಕೆ ಸ್ಮರನೆ ಶರಣನೆಂದ ಳವಳು (ಪ್ರೋಹಶ. ೧೦-೨೦); ನಾನು ಸರಕಾರದ ಕೆಲಸದ ನಿಮಿತ್ತವಾಗಿ ದೇಶಾಂತರದಲ್ಲಿರುವಾಗ ನಿಮ್ಮ ತಾಯಿಯೇ ನನ್ನ ಮಕ್ಕಳನ್ನು ಜೋಕೆ ಮಾಡಿದಳು (ಮುಂಬಯಿ. ೪-೦೯೭); ಈಗ ತಂದೆಯ ತೊಡೆಯನ್ನು ಬಿಟ್ಟು . . . ದೇಶಾಂತರದಲ್ಲಿ ನಾನೆಂತು ಜೀವವನ್ನು ಧರಿಸುವೆನು (ಶಾಕುಂಕ. ೫೭-೦೨); ದೇಶಾಂತರ ಹೋದರೆ ದೈವ ಬಿಟ್ಟೀತೆ? (ಗಾದೆ).
[ಸಂ.]

**ದೇಶಾಂತರಂಗೆಯ್**(ಕ್ರಿ). ಪರದೆ ಶಕ್ಕೆ ಹೋಗು; ವಿದೇಶಕ್ಕೆ ಹೋಗು: ಅಬಲೆ ನೀನೆಂತು ದೇಶಾಂತರಂಗೆಯ್ವೆಯಕಟಾ (ನವಪೋ. ೮-೭೯).
[ದೇಶಾಂತರ + ಕೆಯ್$_1$]

**ದೇಶಾಂತರವಾಸ** (ನಾ). ಪರದೇಶದಲ್ಲಿ ವಾಸಮಾಡುವುದು; ಸ್ವದೇಶ ಭ್ರಷ್ಟನಾಗಿರುವುದು: ಈ ಯೂರೋಪ್‌ಖಂಡದವರಲ್ಲಿ ಅನೇಕರು ದೇಶಾಂತರವಾಸ ಮಾಡಿಕೊಂಡು ಗಣಿಗಳಲ್ಲಿ ಕೆಲಸ ಮಾಡಬೇಕೆಂಬ ಶಿಕ್ಷೆಗೆ ಒಳಗಾದವರು (ಭೂಗೋಳ. ೧೦೬). [ದೇಶಾಂತರ + ವಾಸ$_2$]

**ದೇಶಾಂತರವಾಸಿ** (ನಾ). ಪರದೇಶದಲ್ಲಿ ವಾಸಮಾಡುವವನು; ವಿದೇಶ ವಾಸಿ: ಯೌವನಪರಿಪೂರ್ಣದೊಳ್ ದೇಶಾಂತರವಾಸಿಗಳಪ್ಪರಸು ಗಳಾಕೆಯಂ ಬೇಡಿಯಟ್ಟೆ (ಚಾವುಂಪು. ೨೮೨). [ಸಂ. ದೇಶಾಂತರವಾಸಿನ್]

**ದೇಶಾಂತರಿ** (ನಾ). ೧. ಪರದೇಶದಿಂದ ಬಂದಿರುವವನು; ಬೇರೆ ದೇಶಕ್ಕೆ ಸೇರಿದವನು; ವಿದೇಶಿ: ಆ ಕಾಲದೊಳ್ ನೀಂ ದೇಶಾಂತರಿಯಾಗಿಯುಂ ನೀಂ ಬದ್ಧಮಿಥ್ಯಾದೃಷ್ಟಿಪ್ರೀತಿಂಕರನೆಂಬ ವೆಸರನಾಂತು ಬಂದಾ ಪೂಜೆಯಂ ಕಂಡು . . . ವೇರಡವಿಯೊಳು ಯಕ್ಷನಾಗಿ ಪುಟ್ಟಿ (ಪುಣ್ಯಾಸ್ರ ೧-೯೭ ವ). ೨. ವಿರಕ್ತ; ಚರಜಂಗಮ; ಸ್ಥಳದಿಂದ ಸ್ಥಳಕ್ಕೆ ಚಲಿಸುವ ಜಂಗಮ: ದೇಶಾಂತರಿ ದೇಶಾಂತರಿ ಎಂದು ನುಡಿವ ಹುಸಿಭ್ರಷ್ಟರ ನೇನೆಂಬೆನಯ್ಯಾ (ವಚಸಂ. ೦೯೪-೪೪). [ಸಂ. ದೇಶಾಂತರಿನ್]

**ದೇಶಾಂತರಿಗ** (ನಾ). = ದೇಶಾಂತರಿ ೧: ಆ ಗೃಹಸ್ಥನ ಪಂಡತಿ ಮುಖ ದೊಳ್ ಸೆಜ್ಜಂಗಸಿಕ್ಕಿಕೊಂಡು ಮಗಂಗೆ ಮೊಲೆಯೂಡುವುದಂ ಕಂಡು ದೇಶಾಂತರಿಗರಿದೇನೆಂದು ಬೆಸಗೊಂಡೊಡೆ (ಪಂಚತಂ. ೨೨೯-೩).
[ದೇಶಾಂತರ + -ಇಗ]

**ದೇಶಾಕಿ** (ನಾ). [ಸಂಗೀತ] ಒಂದು ರಾಗದ ಹೆಸರು; ದೇಶಾಕ್ಷಿ: ದೇಶಾಕಿ [ಶಾಕಾಂ. ಖ] (ದೇಶಿ ?) ಯಲ್ಲದ ರಾಗ ಉಪ್ಪಿಲ್ಲದ ಊಟ ಸಪ್ಪೆ ಕಾಣಿರೋ ಅಯ್ಯಾ ಮಿಕ್ಕಿನ ರಾಗ ಶಿವನಲ್ಲದ ದೈವ ಫಲವಿಲ್ಲ ಕಾಣಿರೋ ಅಯ್ಯಾ ಮಿಕ್ಕಿನ ತುಂಬುರ ನಾರದರು ಶಿವನ ಕೇಳಿಸುವ ರಾಗ ಮಹಾಲಿಂಗ ಗಜೇಶ್ವರನ ನಚ್ಚಿನ ರಾಗ (ಸವಚ. ೭೪-೪೦೦). [<ಸಂ. ದೇಶಾಕ್ಷೀ]

**ದೇಶಾಕೆ** 'ದೇಸಾಕೆ' ನೋ.

**ದೇಶಾಕ್ಷಿ** (ನಾ). [ಸಂಗೀತ] ಒಂದು ರಾಗದ ಹೆಸರು: ವಾಡಿ ವಸಂತ ಸಂಕೀರ್ಣ ದೇಶಾಕ್ಷಿಯುಗೂಡಿದ ಸಾಳಂಗಗಳೆಂಬ ಗಾಡಿಕಾತಿಯರು ಗಾನವನಾಲಾಪವ ಮಾಡಿದರಂದಮರರು ಸೋಲೆ (ಸೊಬಗೋ. ೨೪-೫೫); ಬಳಿಕ ಸಮಸ್ತರಾಗಂಗಳೊಳಗೆ . . . ದೇಶಾಕ್ಷಿ . . . ಮಧ್ಯಮಾವತಿ ಯೆಂಬ ಮೂವತ್ತಾಱು ರಾಗಂಗಳೇ ಮುಖ್ಯಮಾಗಿ ಬಳಿಕಯಿಂದಧುನಾ ತನರಲ್ಲಿ ಪ್ರಸಿದ್ಧಿಗೊಂಡಿರ್ಪುವು (ವಿವೇಳ. ೨೫೪); ರಾಗ ದೇಶಾಕ್ಷಿ, ನಾದ ನಾಮಕ್ರಿಯೆ (ಪ್ರಸಕೀ. ೮). [ಸಂ. ದೇಶಾಕ್ಷೀ]

**ದೇಶಾಖ್ಯಾನ** (ನಾ). = ದೇಶನಿವೇಶೋಪದೇಶ: ದೇಶಾಖ್ಯಾನಮೆಂಬುದು ವಿಷಯವ್ಯಾವರ್ಣನಂ (ಚಾವುಂಪು. ೧೨). [ದೇಶ + ಆಖ್ಯಾನ]

**ದೇಶಾಚಾರ** (ನಾ). ಒಂದು ದೇಶದಲ್ಲಿ ಮೊದಲಿನಿಂದ ನಡೆದು ಬಂದಿ ರುವ ಪದ್ಧತಿ - ಸಂಪ್ರದಾಯ: ಬ್ರಹ್ಮಚಾರಿ ಯತಿ ದೀಕ್ಷಿತರಿಗೆ ಸೂತಕಾದಿ ಹೊಲೆಗೆಲ್ಲವೆಂಬುದು ಮೊದಲಾದಾಚಾರ ಭೇದಮಿರ್ಪುದಱಿಂ ದೇಶಾಚಾರ . . . ಸಂಪ್ರದಾಯವೆಂಬುದು ಮೊದಲಾದವುಗಳಂ ತಿಳಿದು (ವಿವೇಳ. ೧೦೮೭); ಇಂತು ತಮ್ಮನ್ನರೆನ್ನನ್ನರಿಗೆ ಯಾವುದೇ ಭೂಷಣವ ತೊಡಿಸಿದರೆ ಅದು ನಮಗೆ ನೀಡಿದಂತೆಯೆ. ಇಂತು ನಮ್ಮ ದೇಶಾಚಾರ (ನವರಾ. V, ೨೮); ಇದರೊಳಗಿನ ಆತ್ಮವೀರದ ಕತೆ ದೇಶಾಚಾರ, ಕಾಲಾಚಾರಗಳನ್ನು ವಿಾರಿ ಸಾರ್ವಕಾಲೀನವಾದ ಸಾರ್ವದೇಶಿಕವಾದ ಗುಣವನ್ನು ಹೊಂದಿ ಗುರುತ್ವವನ್ನು ಪಡೆದಿದೆ (ವೀರಯೋ. VI ಮುನ್ನುಡಿ).
[ದೇಶ + ಆಚಾರ]

**ದೇಶಾಟಣ** (ನಾ). = ದೇಶಾಟನ: ದೇಶಾಟಣ ಮಾಡುವುದು ಸಮುದ್ರದ ಮೇಲೆ ನಾವೆಯಲ್ಲಿ ಸಂಚರಿಸುವುದು ಸಹಾ ದೇಹಕ್ಕೆ ಒಳ್ಳೆಯದು ಎಂದು ಅಭಿಪ್ರಾಯ ಪಡುತ್ತಾರೆ (ಶೀಲಮಾ. ೩೨). [<ಸಂ. ದೇಶಾಟನ]

**ದೇಶಾಟನ** (ನಾ). ದೇಶಸಂಚಾರ. 'ದೇಶಾಟನಂಗೆಯ್' ಪರಾ. [ಸಂ.]

**ದೇಶಾಟನಂಗೆಯ್** (ಕ್ರಿ). ದೇಶಸಂಚಾರ ಮಾಡು: ದೇಶಾಟನಂಗೆಯ್ವು ತಾನಂದದಿಂ ಮೂರುಸಾಸಿರಂ ವೀರಮಾಹೇಶ್ವರರ್ವೆರಸಿ ಶಿವಯೋಗಿವರನಿರೆ ಲೀಲೆಯಿಂ (ಕುಮಾಪು. ೨-೫೦). [ದೇಶಾಟನ + ಕೆಯ್$_1$]

**ದೇಶಾಟನೆ** (ನಾ). = ದೇಶಾಟನ: ದೇಶಾಟನೆಯಿಂದ ಲೋಕವ್ಯವಹಾರ ಜ್ಞಾನ ವೃದ್ಧಿಯಾಗುತ್ತದೆ (ರೂಢಿ). [ಸಂ. ದೇಶಾಟನ]

**ದೇಶಾದಿ** (ನಾ). [ಸಂಗೀತ] ಒಂದು ಬಗೆಯ ತಾಳ: ಆದಿ, ದೇಶಾದಿ . . . ಝಂಪೆತಾಳಗಳಲ್ಲಿ ಬಹಳ ಹಾಡುಗಳನ್ನು ರಚಿಸಿದ್ದಾರೆ (ಸಂಗೀತ. ೨೯). [ದೇಶ + ಆದಿ$_2$]

**ದೇಶಾಧಿನಾಥ** (ನಾ). ದೇಶಕ್ಕೆ ಒಡೆಯ; ರಾಜ: ಕೀರ್ತಿ ದೇಶಾಧಿ ನಾಥರು ವೀರ ಪರಿವಾರ ನಾಳೆ ಮೊದಲಾಗರ್ಜುನನ ನಾವ್ ಕಾಳೆಗಕೆ ಬರಲೀಯವು (ಕುಬ್ಯಾದ್ರೋ. ೨-೫). [ದೇಶ + ಅಧಿನಾಥ]

**ದೇಶಾಧಿಪ** (ನಾ). = ದೇಶಾಧೀಶ: ದೇಶಾಧಿಪ ಕೃಷ್ಣರಾಯಂಗೆ ಖಳರಿಂದ ಮೋಸವ ಬರಗುಡನೆಂದು ಶೇಷ ಮಂಡಳಿಸಿದಂದದಿ ವಜ್ರದಾಳ್ವೇರಿ ಲೇಸಾದುದು (ಪ್ರೋಹಶ. ೩-೮); ದೇಶಾಧಿಪರ ಬೆಳ್ಗೊಡೆಗಳು ನಕ್ಷತ್ರ ರಾಶಿಯಂತೆಸೆಯೆ ಮಧ್ಯದಲಿ ಕೇಶವರಾಯನ ದೂಸ ರೋಹಿಣಿಯು ಪ್ರಾಣೇಶನೆಂಬಂತೆ ರಂಜಿಸಿತು (ಪ್ರೋಹಶ. ೩೭-೭೮). [ದೇಶ + ಅಧಿಪ]

**ದೇಶಾಧಿಪತಿ** (ನಾ). = ದೇಶಾಧೀಶ: ದೇಶಾಧಿಪತಿ ಹರಿಶ್ಚಂದ್ರರಾಯನ ಸತ್ಯವಾಸವನ ಸಭೆಯೊಳಗೆ ನೆಗಳ್ದ ಪ್ರಸಂಗದಿಂ ಕೌಶಿಕ ವಸಿಷ್ಠಮುನಿಗಳಿಗೆ ಘನತರದ ಸಂವಾದಮಂ ಮಾಡಿ ತಂದು (ಹರಿಶಾ. ೧ ಸೂಚನೆ); ದೇಶಾಧಿ ಪತಿಯು ಗರ್ಭದಿ ಬಂದು ನಿನಗೀಗ ಹಾಸುವ ವಸ್ತ್ರಗಳಿಲ್ಲ (ಚಂದ್ರಹಾ. ೧-೨೪).
[ದೇಶ + ಅಧಿಪತಿ]

**ದೇಶಾಧೀಶ** (ನಾ). ದೇಶಕ್ಕೆ ಒಡೆಯ; ರಾಜ: ದೇಶಾಧೀಶ ತನೂಭವರ್ ಸೆಡೆವುದುಂ ಸಾಕೇತಸಿಂಹಾಸನಾಧೀಶಂ ಕಂಡು (ಪಂರಾಮಾ. ೫-೮೪).
[ದೇಶ + ಅಧೀಶ]

**ದೇಶಾಭಿ** (ನಾ). [ಸಂಗೀತ] ಒಂದು ರಾಗದ ಹೆಸರು: ಮಾಳವಿ ಮಲಹರಿ ದೇಶಾಭಿ ಗುರ್ಜರಿ ಚಾಳಿ ದೇಶಿ ಧನ್ಯಾಸಿ (ತಕಳಾ. ೭-೫೫).
[?./ಸಂ. ದೇಶಾಭೀರೀ]

**ದೇಶಾಭಿಮಾನ** (ನಾ). ತನ್ನ ದೇಶದ ಮೇಲಿನ ಮಮತೆ; ಮಾತೃ ಭೂಮಿಯ ಮೇಲಿನ ಗೌರವ; ದೇಶಪ್ರೇಮ: ದೇಶಾಭಿಮಾನವೇ ಮತವಾಗಲೆಂದು ದೇಶಸೇವೆಯೆ ನಿರತವ್ರತವಾಗಲೆಂದು (ಕಎಪು. ೧೭-೧೦); ರಾಷ್ಟ್ರೀಯ ಸ್ವಾರ್ಥ ಮತ್ತು ಹೆಮ್ಮೆಗಳು 'ದೇಶಾಭಿಮಾನ'ವೆಂಬ ಸದ್ಗುಣವೆನಿಸಿಕೊಳ್ಳುವುವು (ಜಗಸಂ. ೫೮). [ದೇಶ + ಅಭಿಮಾನ]

**ದೇಶಾಭಿಮಾನಿ** (ನಾ). ದೇಶಾಭಿಮಾನವುಳ್ಳವನು; ದೇಶಭಕ್ತ : ದೇಶಾಭಿಮಾನಿಯಾದ ಮನುಷ್ಯನು ಇವುಗಳಲ್ಲಿ ಯಾವುದನ್ನೂ ಧಿಕ್ಕರಿಸುವ ಹಾಗಿಲ್ಲ (ಭಾಗ್ಯಶಿ. ೩೦) ; ಈಗ ನಮ್ಮ ರಾಷ್ಟ್ರಕ್ಕೆ ದೇಶಾಭಿಮಾನಿಗಳಾದ ನಾಯಕರ ಅವಶ್ಯಕತೆಯಿದೆ (ಒೂ೩). [ ಸಂ. ದೇಶಾಭಿಮಾನಿನ್ ]

**ದೇಶಾಯಿ** 'ದೇಸಾಯಿ' ನೋ.

**ದೇಶಾಯಿಕೆ** (ನಾ). ೧. ದೇಸಾಯಿತನ ; ದೇಸಾಯಿಯ ಅಧಿಕಾರ. ೨. ದೇಸಾಯಿಯ ಅಧಿಕಾರಕ್ಕೆ ಒಳಪಟ್ಟ ಗ್ರಾಮಾದಿಗಳು : ನಂಮ ದೇಶಾಯಿಕೆಯ × × × ಗೆ ಸಲುವ (ಬೊಂಕಶಾ. ೧೯೩೩, ರಾಣಿಬೆನ್ನೂರು. ೧೬-೪೦ ; 1597). [ ದೇಶಾಯಿ (<ದೇಸಾಯಿ) + –ಇಕೆ ]

**ದೇಶಾವಕಾಶಿಕವ್ರತ** (ನಾ). [ಜೈನ] ಶ್ರಾವಕರು ಆಚರಿಸುವ ಒಂದು ವ್ರತ; P ಆನಯನ (ಮರ್ಯಾದಿತ ಕ್ಷೇತ್ರದ ಹೊರಗೆ ಬೇಡುವುದು), ಪ್ರೇಷ್ಯಪ್ರಯೋಗ (ಮರ್ಯಾದಿತ ಕ್ಷೇತ್ರದ ಹೊರಗೆ ಕಳುಹಿಸುವುದು), ಶಬ್ದಾನುಪಾತ (ಮರ್ಯಾದಿತ ಕ್ಷೇತ್ರದ ಹೊರಗಿನವರೊಂದಿಗೆ ಮಾತನಾಡುವುದು), ರೂಪಾನುಪಾತ (ಮರ್ಯಾದಿತ ಕ್ಷೇತ್ರದ ಹೊರಗಿನವರಿಗೆ ಅಭಿಪ್ರಾಯಗಳನ್ನು ತಿಳಿಸುವುದು) ಮತ್ತು ಪುದ್ಗಲಕ್ಷೇಪ (ಮರ್ಯಾದಿತ ಕ್ಷೇತ್ರದ ಹೊರಗಿನವರಿಗೆ ಪತ್ರ ಮೊದಲಾದ ಪದಾರ್ಥಗಳ ಮೂಲಕ ತಿಳಿಸುವುದು)—ಈ ಐದು ಅತಿಚಾರಗಳನ್ನು ಬಿಡುವುದು : ಆವುದೊಂದು ವ್ರತದಲ್ಲಿ ದಿಗ್ವಿರತಿಯಿಂದವು ಹವಣಿಸಲ್ಪಟ್ಟ ದೇಶವಿಭಾಗದಲ್ಲಿ ಹವಣಿಸಲ್ಪಟ್ಟ ಕಾಲವನುಳ್ಳಯಿರವು ಅಹುದು . . . ಆ ವ್ರತವನ್ನು ದೇಶಾವಕಾಶಿಕವ್ರತವೆಂದು ಹೇಳುವರು (ಸಾಗಾಧ. ೩೩). [ ದೇಶಾವಕಾಶಿಕ + ವ್ರತ ]

**ದೇಶಾವಧಿ** (ನಾ). [ಜೈನ] ದೇಶಾವಧಿ, ಪರಮಾವಧಿ ಮತ್ತು ಸರ್ವಾವಧಿ ಎಂಬ ಮೂರು ಬಗೆಯ ಅವಧಿಜ್ಞಾನಗಳಲ್ಲಿ ಒಂದು ; ಕ್ಷೇತ್ರ, ಕಾಲ, ಭಾವಗಳಿಗೆ ಸಂಬಂಧಿಸಿದಂತೆ ಸೀಮಿತವಾದ ಪದಾರ್ಥಗಳ ಜ್ಞಾನ ; P ಜೈನರ ಪ್ರಕಾರ ಇರುವ ಮತಿ, ಶ್ರುತ, ಅವಧಿ, ಮನಃಪರ್ಯಯ ಮತ್ತು ಕೇವಲ ಎಂಬ ಐದು ಬಗೆಯ ಜ್ಞಾನಗಳಲ್ಲಿ ಅವಧಿಜ್ಞಾನವು ಮೂರನೆಯದು : ದೇವೇಂದ್ರನುಮಾಗಳ್ ದೇಶಾವಧಿಯಿಂ . . . ಅಬಿುದಂ ವ್ಯತೀ[ತ]ಭವಸಂತತಿಯಾ (ಶಾಂತಿಪು. ೩-೭) ; ದೇಶಾವಧಿ ಪರಮಾವಧಿ ಸರ್ವಾವಧಿಗಳೆನಿಪ್ಪವುಚಿತನಾಮಯುತಂಗಳ್ (ಚಂದ್ರಪು. ೦೪-೩೩) ; ಅವಧಿಜ್ಞಾನಂ ದೇಶಾವಧಿ ಪರಮಾವಧಿ ಸರ್ವಾವಧಿಯೆಂದು ತ್ರಿವಿಧಂ (ಶಸಾರ. ೩೭೯). [ದೇಶ+ಅವಧಿ]

**ದೇಶಾವಧಿಜ್ಞಾನಿ** (ನಾ). [ಜೈನ] ದೇಶಾವಧಿಜ್ಞಾನವನ್ನು ಪಡೆದಿರುವವನು : ಸ್ತುತಿಯಿಸಿ ದೇಶಾವಧಿಜ್ಞಾನಿಯಪ್ಪ ಸೂರ್ಯಮಿತ್ರಮುನಿನಾಥನತಿವಿಶುದ್ಧಪರಿಣಾಮದಿಂ ಸರ್ವಾವಧಿಜ್ಞಾನಲೋಚನನಾಗಿ ನಿರ್ವಾಣೋರ್ವರಾಂತರ್ಭಾಗದಿಂ ಪೊಱಮಟ್ಟು (ಸುಕುಮಾ. ೪-೩೪ ವ). [ ಸಂ. ದೇಶಾವಧಿಜ್ಞಾನಿನ್ ]

**ದೇಶಾವರ**, ದೇಶಾವರಿ, ದೇಶಾವಾರ (ನಾ). ೧. ಮದುವೆ, ಮುಂಜಿ ಮುಂತಾದ ಶುಭಕಾರ್ಯಗಳಿಗೂ ದೇವರ ಉತ್ಸವ, ವ್ರತ ಮುಂತಾದ ಮತೀಯ ಕಾರ್ಯಗಳಿಗೂ ಊರೂರು, ಮನೆಮನೆ ಅಲೆದು (ಬ್ರಾಹ್ಮಣರು) ಧನರೂಪವಾಗಿ ಮತ್ತು ವಸ್ತುರೂಪವಾಗಿ ಸಹಾಯ ಪಡೆಯುವುದು : ಏಕನಾದವನ್ನು ಹಿಡಿದು ಕನಕಪುರಂದರರ ಕೀರ್ತನೆಗಳನ್ನು ಹಾಡಿಕೊಂಡು ದೇಶಾವರಕ್ಕೆ ಹೋಗುತ್ತಿದ್ದ (ಮಧುನ. ೬೪) ; ಪೂರ್ಣಯ್ಯನವರು 'ಐದು ರೂಪಾಯಿ, ಮಂಡ್ಯದ ಧಾವಳಿ' ಯನ್ನು ದೇಶಾವರದ ದಾಸರಿಗೆ ಸಂಭಾವನೆ ಕೊಟ್ಟರೆ ಸಾಕೆಂದು ಯೋಚಿಸಿದ್ದರು ! (ಜಗದಾ. ೧೬೯) ; ಮನೆಮನೆಗೆ ಅಲೆದು ದೇಶಾವರ ನಡೆಸಿ, ಸಂಭಾವನೆ ಬೇಡಿ ... ಜೀವನಯಾಪನೆಮಾಡುತ್ತಿದ್ದನು (ಮಲಿಮ. ೨೦೯). ೨. ಮನೆಮನೆಗೆ ಹೋಗಿ ಪಡೆಯುವ ಧನಸಹಾಯ. 'ದೇಶಾವರ ಬೇಡು' ಪರಾ. ೩. ವಿದೇಶ ; ಪರದೇಶ ; (+). ೪. ಪರದೇಶದಿಂದ ಬಂದ ವಸ್ತು ; ಆಮದು ಮಾಡಿಕೊಂಡ ಸರಕು : (+). **ದೇಶಾವರಿ :** ೧. ಅವರು ಸುತ್ತಲಿನ ಹಳ್ಳಿಗಳಲ್ಲಿ ತಿರುಗಾಡಿ ಕಾಳುಕಡಿಗಳ ದೇಶಾವರಿಯನ್ನು ಮಾಡಬೇಕಾಗಿ ಬರುತ್ತಿತ್ತು (ಹಮ್ಮಲ. ೯೭) ; ದೇಶಾವರಿಗೆ ಬಂದ ಬ್ರಾಹ್ಮಣರ ನಡೆನುಡಿಯನ್ನು ಸ್ವಲ್ಪ ಕಂಡುಹಿಡಿಯಿರಿ (ಮುಂಗಾಪು. ೦೧೭). **ದೇಶಾವಾರ :** ೧. ಒಂದು ಧಡೆಯ ಭಂಗಾರವನ್ನೂ ಮಾರಿ ಜೀವಿಸಿ ವಕೀಲನೊಬ್ಬನ ಬಳಿ ದೇಶಾವಾರಕ್ಕೆ ಹೋದರಂತೆ (ಕಥಾವಿ. II, ೪೧೯). ೫. ಒಂದು ಬಗೆಯ ಹಸನುಮಾಡಿದ ಅಡಕೆ ; P ಬಹುಶಃ ಪರದೇಶಕ್ಕೆ ಕಳುಹಿಸಲು ಸಿದ್ಧವಾಗುವ ಅಡಕೆ ಇರಬಹುದು : ಹಸಿಯ ಅಡಿಕೆಗಳಲ್ಲಿ ಮಧ್ಯ ಎಳಕು ಮತ್ತು ಬಹಳ ಎಳಕಾದ ಅಡಿಕೆಗಳನ್ನು ಸಣ್ಣಾಗಿ ಕೊರೆದು ಚೂರು ಮಾಡಿ ಕುದಿಸುತ್ತಾರೆ. ಅದರಲ್ಲಿ ಚತುರ್ಭಾಗ ಕೊರಪ, ಲವಂಗಚೂರು, ಮೋಡಿ, ಅಣ್ಣಾವಾರ, ದೇಶಾವಾರ ಎಂದು ಬೇರೆ ಬೇರೆ ರಾಶಿಗಳನ್ನು ಮಾಡುತ್ತಾರೆ (ಕೃಷಿಪ್ರ. ೧೫೩).

ದೇಶಾವರದ ನಗು = ದೇಶಾವರಿನಗೆ : ನಾನು ದೇಶಾವರದ ನಗು ಬೀರಿ "ಏನಿಲ್ಲ ಏನಿಲ್ಲ ಬಿಡಿರಿ" ಎಂದೆ (ನಾಪೂಲೀ. ೪೩). **ದೇಶಾವರದ ನಗೆ, ದೇಶಾವಾರದ ನಗೆ = ದೇಶಾವರಿನಗೆ :** ಮುಖದ ಮೇಲೆ ದೇಶಾವರದ ನಗೆಯನ್ನು ಮೂಡಿಸುತ್ತಾ ಎದ್ದು ನಿಂತೆ (ಮನೋನಂ. ೬೮) ; ಗುರುರಾಜರಾಯರು ಕೂಡ ದೇಶಾವರದ ನಗೆ ಬೀರುತ್ತ (ಮರಳಿ. ೨೩) ; ದೇಶಾವಾರದ ನಗೆ ಬೀರಿ ಅಲ್ಲಿಂದ ನುಸುಳುತ್ತಿದ್ದ (ಊರುಳ. ೩೦). **ದೇಶಾವಾರದ ಜೀರಿಗೆ = ಒಂದು ಬಗೆಯ ಜೀರಿಗೆ :** ಶ್ರೀತೊಳಸಿ, ಹೊಮ್ಮುಗಳು . . . ಪುತ್ರಜೀವಿ, ದೇಶಾವಾರದ ಜೀರಿಗೆ ಇವಿಷ್ಟನ್ನೂ ಅರೆದು ಕೊಡಲು ದಾಹಜ್ವರ, ಮೈನೋವು, ತಲೆಭಾರವಾಗಿರುವುದು ಸಹ ನಿಲ್ಲುವುವು (ಸಕಿವ್ಯ. ೬೮) ; ಶುಂಠಿ ಕರ್ಕಾಟಕಶೃಂಗಿ ಅಳಲೆಕಾಯಿ ಜೀರಿಗೆ ದೇಶಾವಾರದ ಜೀರಿಗೆ ಮುಡಿವಾಳಾ ಲವಂಗಾ ಇವು ಸಮಾನಂಗೊಂಡು ಸಣ್ಣನಾಗಿ ಚೂರ್ಣಿಸಿ (ದ್ರಾಕ್ಷಾದೂ. ೬-೮).

[ ←ಮರಾ. ದೇಶಾವರ್ ]

**ದೇಶಾವರಬೇಡು, ದೇಶಾವರಿಬೇಡು** (ಕ್ರಿ). ಊರೂರು ಸುತ್ತಿ ಸಹಾಯವನ್ನು ಬೇಡು : ತೆಲುಗುಬ್ರಾಹ್ಮಣರು . . . ಮದ್ರಾಸ್ ಇಲಾಖೆಯಿಂದ ದೇಶಾವರಬೇಡುವುದಕ್ಕೆ ಇಲ್ಲಿಗೆ ಬರುವರು (ಕಥಾಗಿ. ೮೩). **ದೇಶಾವರಿಬೇಡು :** ಯಾಚಕನು ನನಗೂ ದೇಶಾವರಿಬೇಡುವನೆಂಬ ಭಯದಿಂದ ಬಿಟ್ಟನಂತೆ (ಶಾಲಂಶಾ. ೩೦). [ ದೇಶಾವರ + ಬೇಡು₁ ]

**ದೇಶಾವರಿ** 'ದೇಶಾವರ' ನೋ.

**ದೇಶಾವರಿನಗು** (ಕ್ರಿ). (ಧನಸಹಾಯವನ್ನು ಬೇಡಲು ಹೋದಾಗ) ಕೃತ್ರಿಮವಾಗಿ ನಗೆಯನ್ನು ತೋರ್ಪಡಿಸು ; ನಗಲು ಕಾರಣವಿಲ್ಲದಿದ್ದರೂ ಸುಮ್ಮನೆ ಹಲ್ಲುಕಿರಿ ; ಕೃತ್ರಿಮಹಾಸವನ್ನು ತೋರ್ಪಡಿಸು : ಬಾಬೂ ಅಪರಾಧಿಯ ದೇಶಾವರಿನಕ್ಕನು (ರಕ್ತಧ್ವ. ೨೩೬). [ ದೇಶಾವರಿ (<ದೇಶಾವರ) + ನಗು₁ ]

**ದೇಶಾವರಿನಗೆ** (ನಾ). ಹುಸಿನಗೆ ; ಕೃತ್ರಿಮವಾದ ನಗು ; ಇಷ್ಟವಿಲ್ಲದಿದ್ದರೂ ತೋರಿಕೆಗಾಗಿ ನಗುವಿಕೆ : ದೇಶಾವರಿನಗೆ ಬೀರುತ್ತ ಪೋಲೀಸರು ಹೊರಡಲು ಅಣಿಯಾದರು (ಹಳ್ಳಿಹಾ. ೬): ನಾನು ದೇಶಾವರಿ ನಗೆ ಹೊರಡಿಸಿದೆ (ಪ್ರಶ್ನವಿ. ೪೩) ; ದೇಶಾವರಿನಗೆ ನಕ್ಕು ಕಲ್ಲಿನ ಮುಖದ ಕಡೆ ನೋಡಹತ್ತಿದ ಪಂಡಿತ (ಅಕೋಳ. ೫); ಸುಬ್ಬಣ್ಣಾಚಾರ್ಯರು ದೇಶಾವರೀ ನಗೆಯನ್ನು ನಕ್ಕರು (ಸಮುಜೀ. ೪೪) ; ಸಾಹೇಬರು . . . ದೇಶಾವರೀನಗೆಯನ್ನು ನಕ್ಕು (ದೀಪಹ. II, ೧೨೧).

[ ದೇಶಾವರಿ (<ದೇಶಾವರ) + ನಗೆ ]

**ದೇಶಾವರಿಬೇಡು** 'ದೇಶಾವರಬೇಡು' ನೋ.

**ದೇಶಾವರಿಭಾಷೆ** (ನಾ). ೧. ಧನಸಹಾಯ ಬೇಡುವಾಗ ಹೇಳುವ, ಕನಿಕರವುಂಟಾಗುವಂತೆ ಮಾಡುವ ಮಾತು; ದೈನ್ಯವನ್ನು ತೋರ್ಪಡಿಸುವ ಮಾತು. ೨. ಕಾರ್ಯಸಾಧನೆಗಾಗಿ ಆಡುವ ಅತಿವಿನಯದಿಂದ ಕೂಡಿರುವ ಮಾತು; ಕೃತ್ರಿಮವಿನಯದಿಂದ ಕೂಡಿರುವ ವ್ಯದುನುಡಿ: ಈಗಾಗಲೇ ನಾವು ದೇಶಾವರೀಭಾಷೆಯಲ್ಲಿ ಪಾರಂಗತರಾಗಿದ್ದೆವು (ದೀಪಹ. II, ೧೦).
[ ದೇಶಾವರಿ (<ದೇಶಾವರ) + ಭಾಷೆ ]

**ದೇಶಾವಾರ** 'ದೇಶಾವರ' ನೋ.

**ದೇಶಿ₁** (ನಾ). ೧. ದೇಶಕ್ಕೆ ಸಂಬಂಧಪಟ್ಟುದು. ೨. ತಾಯಿನಾಡಿನಲ್ಲೇ ತಯಾರಾದುದು; ಸ್ವದೇಶದಲ್ಲಿಯೇ ಉತ್ಪಾದಿಸಲ್ಪಟ್ಟುದು; ಸ್ವದೇಶಿ: ಆ ಜನಸಗಳ ಖರೀದಿಯು ನಮ್ಮ ಆಸಾಮಿಗಳು ನಮಗೆ ಬರಿಯುತ್ತಾರೆ. ಆದರೆ ವಿಲಾಯತೀ ಬೇಕೋ ಅಥವಾ ದೇಶಿ ಬೇಕೋ ಇದರ ಬಗ್ಗೆ ಖುಲಾಸೆಯನ್ನು ಮಾಡುವದಿಲ್ಲ (ಮುಂಬಯ್ವಾ. ೧೦೦).
ದೇಶೀಮೆಟ್ಟು = ನಮ್ಮ ದೇಶದ ವಸ್ತುಗಳಿಂದ, ನಮ್ಮ ದೇಶದಲ್ಲೇ ತಯಾರು ಮಾಡಿದ ಎಕ್ಕಡ,-ಚಪ್ಪಲಿ,-ಪಾದರಕ್ಷೆ; ನಾಟಿಜೋಡು: ತಲೆಯ ಮೇಲೆ ಉರುಟಾಗಿ ಕಟ್ಟಿದ ಪಗಡಿ, ಕಾಲಲ್ಲಿ ದೇಶೀಮೆಟ್ಟುಗಳು (ಪ್ರಕಾಶ. ೮). [ <ಸಂ. ದೇಶೀಯ ]

**ದೇಶಿ₂** (ನಾ). ೧. ಆಯಾ ದೇಶದಲ್ಲಿ ಮಾತ್ರ ವ್ಯವಹಾರದಲ್ಲಿರುವ ಉಡುಪು, ಅಲಂಕಾರ, ಆಚಾರ ಮೊದಲಾದುವುಗಳ ವಿಶಿಷ್ಟ ರೀತಿ,-ಬಗೆ. 'ದೇಶಿಪರಿ' ಪರಾ. ೨. ಒಂದು ದೇಶದ ಅಥವಾ ದೇಶ ವಿಭಾಗದ ಆಡುನುಡಿ; ವ್ಯಾವಹಾರಿಕ ಭಾಷೆ; ಮಾರ್ಗವಲ್ಲದ ನಾಡನುಡಿ: ದೋಸಮನಿತುಂ ಬಗೆದುದ್ಘಾಸಿಸಿ ತಱಸಂದು ಕನ್ನಡಂ ಗಳೊಳೆಂದುಂ ವಾಸುಗಿಯುಮಱಿಯಲಾಱದೆ ಬೇಸಱುಗುಂ ದೇಶಿ ಬೇಱವೇಱಪ್ಪುದಱಿಂ (ಕವಿರಾ. ೧-೪೭); ನವರಸಮುಣ್ಮೆ ಮಾತು ಪೊಸತಾಗಿರೆ ದೇಶಿಯು ದೇಸವೆತ್ತುದೆಂಬವೊಲಿರೆ . . . ಒಡರ್ಚಿದನೀ ಪ್ರಬಂಧಮಂ (ಛಂದೋಂಬು. ೧-೧೧); ಕವಿಗಳ್ . . . ದೇಶಿಯೊಳುದ್ಭವ ಮಪ್ಪ ವರ್ಣದಿಂ ಪಂಚವಿಧಂ ತಾನೆಂದು ಶಿಲ್ಪವರ್ ಶುದ್ಧಗೆಯುಂ (ಶಮುದ. ೩೧); ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ದೇಶಿಗಳನು ಬಳಸಿಕೊಂಡಂತೆ ಗೋಚರವಾಗುತ್ತದೆ (ಕನ್ನಶಾ. ೨೦೭). ೩. [ಸಂಗೀತ] ಒಂದು ರಾಗದ ಹೆಸರು: ದೇಶಿ ಗುಜ್ಜರಿಗಳಿಂದೀಶ ನಿಮ್ಮಂ ಹಾಡಿ ದೇಶಾಕ್ಷಿ ಗೌಳದೆ ಮಹೇಶ ನಿಮ್ಮಂ ಹಾಡಿ (ಲಿಂಗಾರ. ಹ. ೩೩೦-೫); ಸಾಳಂಗ ನಾಟ ಭೈರವಿ ದೇಶಿ ಗುಜ್ಜರಿ ಮಾಳವಿಯಾಹೇರಿ ಕಾಂಬೋಧಿ ಗೌಳ ವರಾಳಿ ವಸಂತ ಭೈರವಿ[ಯರಿ]ದೊಳವನವನೊಲ್ದು ಪಾಡಿದ (ತ್ರಿಶುಕ. ೬-೩೦); ನಾಟ ದೇಶಿ ಗುಜ್ಜರಿಯಾ . . . ಗೌಳಮನಾ ವೀಣೆಯಲ್ಲಿ ಮುನಿ ಬಾಜಿಸಿದಂ (ವೀರವಿ. ೬-೫೯). ೪. [ನಾಟ್ಯ] ಒಂದು ಬಗೆಯ ನೃತ್ಯ: ಚೆಲ್ವಡರೆ ದೇಶಿಯನಾಡುತಿರ್ಪರ್ ಕಳು (ರೇವಣ. ೩೨-೪೪); ಗೋಪಾಂಗ ಪ್ರತ್ಯಂಗ ಭ್ರಮರಿ ಭಾವನೆ ಮಂಡಲಂಗಳಿಂ ಶುದ್ಧ ದೇಶಿ ಗಳೊಳೆಳವಡಿಸಿ . . . ನರ್ತಿಸುವ ನೃತ್ಯದಬಲಾಜನಂ ಕಣ್ಗೆಸೆದುದು (ಚಿಬಪು. ೨-೯); ಭಾವಾಶ್ರಯವಾದ 'ನೃತ್ಯ'ಕ್ಕೆ ಮಾರ್ಗವೆಂದೂ ತಾಲ ಲಯಾಶ್ರಯವಾದ 'ನೃತ್ತ'ಕ್ಕೆ ದೇಶಿ (ದೇಸಿ)ಯೆಂದೂ ಹೆಸರಿರುವಂತೆ ದಶರೂಪಕದಿಂದ ತಿಳಿಯಬರುತ್ತದೆ (ಕೃಸಿಡಿ. ೨೨೩). [ ಸಂ. ದೇಶೀ ]

**ದೇಶಿಕ** (ನಾ). ೧. ಯಾವುದಾದರೊಂದು ವಿಷಯದಲ್ಲಿ ದಾರಿ ತೋರಿಸುವವನು; ಮಾರ್ಗದರ್ಶಿ: ಪಂಡಿತಪ್ರಿಯ ಶಾಂತಿಪೌಷ್ಟಿಕಕರ್ಮದೇಶಿಕನ [ ಪಾಠಾಂ. ದೀಧಿತನ ] . . . ಪೌರೋಹಿತನ ಮಾಡುವುದರಸ ಕೇಳೆಂದ (ಕುವ್ಯಾಉ. ೩-೮೭). ೨. ತತ್ತ್ವೋಪದೇಶ ಮಾಡುವವನು; ಪರಲೋಕಸಾಧನೆಗೆ ಬೇಕಾದ ಧರ್ಮವನ್ನು ಬೋಧಿಸುವವನು; ಆಚಾರ್ಯ; ಗುರು: ದೇಶಿಕರಿಂ ಪೂರ್ವಭವಕ್ಲೇಶಂಗಳನಱಿದು (ಪಂರಾಮಾ. ೧೧-೧೩೦); ಕೆಲವಿತ್ತಡಿಯ ಕಡೆ ನೋಡದಲೆ ದೇಶಿಕನಡಿಯ ನೋಡುತಲಿ (ಗಗಚಾ. ೨-೩೩); ತನ್ನ ಶಿಷ್ಯರಿಗೆ ಜ್ಞಾನೋಪದೇಶವನ್ನು ಮಾಡಿ ಆ ಜ್ಞಾನಬಲದಿಂದ ಮೋಕ್ಷವನ್ನು ಕೊಡುವವನು ಯಾವನೋ ಆತನೇ ದೇಶಿಕನೆಂದು ಹೇಳಿಸಿಕೊಳ್ಳುವನು (ಅಜ್ಞಾವಿ. ೧). ೩. ದಾರಿಗ; ಪ್ರಯಾಣಿಕ. ೪. ದಿಕ್ಕಿಲ್ಲದವನು; ಅನಾಥ; ಪರದೇಶಿ: ರುದ್ರನ ಪಾಶವ ಹೊತ್ತು . . . ಭವಪಾಶದಲ್ಲಿ ತಿರುಗುವ ದೇಶಿಕರ ಕಂಡು ನಾಚಿದೆ (ಮೋಳಿಮಾ. ೧೦೩-೪೦೦); ಯಾರಿಲ್ಲದಾ ದೇಶಿಕನ ತೆರದಿ ರಕ್ಕಸನ ಕೈಸಿಕ್ಕಿ ಯತಿಘಾಸಿಗೊಂಡೆದೆಯೊಡೆದು ಜೀವಿಪನೆ (ನವಮೋ. ೨೯-೯೭); ಅವನು ತನ್ನ ಚಿಕ್ಕವಯಸ್ಸಿನಲ್ಲಿಯೆ ತಾಯಿ-ತಂದೆಗಳನ್ನು ಕಳೆದುಕೊಂಡು ದೇಶಿಕನಾಗಿ ತನ್ನ ಕಕ್ಕನ ಮನೆಯಲ್ಲಿಯೆ ಬೆಳೆದ (ಬಹಿಷ್ಕಾ. ೨); ದೇಶಿಕನಾಗಿ ಮನ್ಮಥನು ಪತ್ನಿಯೊಡನೆ ಹೊರಹೊರಟನು (ಕರ್ನಾಳ. ೨೭೦). 'ದೇಸಿಗ' ಪರಾ. [ ಸಂ. ]

**ದೇಶಿಕಾತಿ** 'ದೇಸಿಗಾತಿ' ನೋ.

**ದೇಶಿಕೋತ್ತಮ** (ನಾ). ಗುರುಗಳಲ್ಲಿ ಶ್ರೇಷ್ಠನಾದವನು; ಶ್ರೇಷ್ಠನಾದ ಆಚಾರ್ಯ: ಅನಘನಪ್ಪಾ ಪಾದಿರಾಜನ ಮನದ ಬಲುಹಂ ನೋಡಿದಪೆ ನಾನೆನುತ ಸದ್ಗುಣಿ ಮಲ್ಲಿಕಾರ್ಜುನ ದೇಶಿಕೋತ್ತಮನು (ಬಸಪು. ೧೯-೮೩); ಬೇಡವೀ ನುಡಿ ದೇಶಿಕೋತ್ತಮ ಮತ್ತೊಂದನಾಡಬಾರದೆ ಬೇಗದೊಳೆಮ್ಮ ಕೂಡೆ (ತ್ರಿಭುತಿ. ೧೯-೧೭); ತಿಳಿವಂತೆ ಪೇಳುವ ದೇಶಿಕೋತ್ತಮನಂಘ್ರಿನಳಿನಂ ಗಳಿಗೆ ಸತಿಗೈದು (ಹದಿಬ. ೮-೩೩). [ ದೇಶಿಕ + ಉತ್ತಮ ]

**ದೇಶಿಗ** 'ದೇಸಿಗ' ನೋ.

**ದೇಶಿಗಣ** (ನಾ). = ದೇಸಿಗಗಣ: ಸ್ವಸ್ತಿ ಶ್ರೀಮೂಲಸಂಘ ದೇಶಿಗಣ ಪುಸ್ತಕಗಚ್ಛ ಕುಂಡಕುಂದಾನ್ವಯದ . . . ತತ್ಕಾಲಧರ್ಮ್ಮಪ್ರವರ್ತ್ತಕರಾದ ಧರ್ಮ್ಮಾಚಾರ್ಯ್ಯರ ಬಿರುದಾವಲಿ ಎಂತೆಂದೊಡೆ (ಎಕ. I (R). ೧೯-೩; 1544). [ ದೇಶಿ₂ + ಗಣ ]

**ದೇಶಿಗಿತಿ** 'ದೇಸಿಗಿತಿ' ನೋ.

**ದೇಶಿಗಿತ್ತಿ** 'ದೇಸಿಗಿತಿ' ನೋ.

**ದೇಶಿನಿ** (ನಾ). ತೋರುಬೆರಳು; ಹೆಬ್ಬೆಟ್ಟಿನ ಪಕ್ಕದ ಬೆರಳು; ತರ್ಜನಿ: ಆನಿಹನು ಕುಡಿ ಶಿಶುವೆ ಬೆರಳನೆನುತ್ತ ಕರುಣಾರಸದಲಿಂದ್ರನು ಕೊಟ್ಟನಾ ದೇಶಿನಿಯನರ್ಭಕಗೆ (ನಿಧಾಗ. ೯-೬-೨೫). [ ಸಂ. ದೇಶಿನೀ ]

**ದೇಶಿಪರಿ** (ನಾ). = ದೇಸಿಪರಿ: ಅಂದವೇಱದ ಗಡ್ಡ ದರ್ಭೆಗಳಿಂದ ನೆಟಿಯುಡಿಗೆಗಳ ನಾಟಕದಿಂದ ಮಟ್ಟೆಯ ಧಟ್ಟು ನೊಸಲಲಿ ದೇಶಿಪರ ಮೆಟಿಯ (ಕುವ್ಯಾಆ. ೧೦-೨). [ ದೇಶಿ₂ + ಪರಿ₃ ]

**ದೇಶೀಯ** (ಗು). ೧. ದೇಶಕ್ಕೆ ಸಂಬಂಧಪಟ್ಟ; ನಾಡಿಗೆ ಸಂಬಂಧಿಸಿದ: ಆ ಪರಿಚಿತ ಸನ್ಯಾಸಿಯು ಬೆಂಕಿಯ ಬೆಳಕಿನಲ್ಲಿ ಅದೇ ದೇಶೀಯ ಕಾಗದದಲ್ಲಿ ಇದ್ದ ಲೇಖನವನ್ನು ತೆರೆದಿಟ್ಟು . . . ಲೆಕ್ಕ ಬಿಡಿಸುತ್ತಿದ್ದನು (ಇಪ್ಪಳ. ೩೭೦). (ನಾ). ೨. ನಾಡಿನಲ್ಲಿಯೇ ಹುಟ್ಟಿ ಬೆಳೆದು ಬಂದುದು; ದೇಶಕ್ಕೆ ಸಂಬಂಧಪಟ್ಟುದು: ಹೀಗೆ ದೇಶೀಯವಾದ . . . ಛಂದೋರೂಪಗಳನ್ನು ಹೊಸರೀತಿಯಲ್ಲಿ ಪ್ರಯೋಗಿಸಿ ಈ ಕವಿತೆಗಳನ್ನು ಕಟ್ಟಿದ್ದೇನೆ (ಇಂಚಾಪ. ೩ ಅರಿಕೆ). ೩. ಒಂದು ದೇಶದ ಸಂಸ್ಕೃತಿ, ನಡವಳಿಕೆ, ದೇಶಭಾಷೆಯ ಪದ, ಅಕ್ಷರ ಮೊದಲಾದುವು: ಇವು ವರ್ಣಾವೃತ್ತಿಗೆ ಸಲ್ಲುವು . . . ದೇಶೀಯವೆನಿಪುವಾ ಹ್ರಸ್ವಮೆನಿಸಿದಾ ಎ ಒ ಸಹಿತಂ (ಶಮುದ. ೧೯); ತದ್ಭವದ ಬೆಸುಗೆಯುಂ ದೇಶೀಯಕಮರ್ದ ಸೊಂಪಂ ತೊಳೆವ ತತ್ಸಮದ ಬಿನ್ನಣವನುಸುರೆಂದು ಕೋವಿದರ್ ಬೆಸಸಲ್ (ಕಲ್ಕಿಕೃ. ೩); ತಱಿಸಂದನಂತನಾಮಂಗಳೊಳ್ ದೇಶೀಯ ಪಲವು ತೆಱಂ

(ಶಬ್ದಮಂ. ೧೨೦). ೪. [ಜೈನ] ಮುನಿಗಳ ಒಂದು ಗುಂಪು,–ಪರಂಪರೆ,–ಗಣ : ಗಣಗಳು : ದೇವ, ಸೇನ, ಬಲಾತ್ಕಾರ, ಬಳಗಾಟ (ಇದು ಬಲಾತ್ಕಾರವಿರಬಹುದೆ ?) ದೇಶೀಯ, ದ್ರವಿಳ . . . ಕಾರೆಯ ಆಜಿ (ಕರಾಅ. ೮೬). [ಸಂ.]

**ದೇಶೀಯಪದ** (ನಾ). ಪರಭಾಷೆಯಿಂದ ಬಾರದ, ಹಾಗೂ ಪರಭಾಷಾ ಪದಗಳಿಂದ ಜನ್ಯವಲ್ಲದ ಪದ ; ದೇಶ್ಯಪದ : ಬೆಟ್ಟರೆ ಕಯ್ಯೊಕ್ಕ ನಿಧಿಯೆನಿಪಪಭ್ರಂಶಕ್ಕಂ ದೇಶೀಯಪದಕಮುಂಟು ಸಮಾಸಂ (ಕಮದ. ೩೯೯). [ದೇಶೀಯ + ಪದ]

**ದೇಶೀಯಾಕ್ಷರ** (ನಾ). ಅಚ್ಚಗನ್ನಡ ಭಾಷೆಯ ಅಕ್ಷರ ; ಬೇರೆ ಭಾಷೆಯಿಂದ ಬಂದು ಸೇರದ ಅಕ್ಷರ : ಎ ಒ ಸಹಿತಂ = ಎ ಒ ಎಂಬಿವು ಸಹಿತವಾಗಿ, ದೇಶೀಯಂ = ದೇಶೀಯಾಕ್ಷರಂಗಳ್, ಎನಿಪುವು = ಎನಿಸುವುವು (ಶಮದ. ೧೯ ಟೀಕು). [ದೇಶೀಯ + ಅಕ್ಷರ]

**ದೇಶೋದ್ಧಾರ** (ನಾ). ಹೀನಸ್ಥಿತಿಯಲ್ಲಿರುವ ದೇಶವನ್ನು ಮೇಲಕ್ಕೆತ್ತುವುದು; ದೇಶದ ಜನರ ಕಷ್ಟಗಳನ್ನು ಪರಿಹರಿಸಿ ನೆಮ್ಮದಿಯನ್ನುಂಟು ಮಾಡುವುದು ; ದೇಶಕ್ಕೆ ಒದಗಿರುವ ಆಪತ್ತನ್ನು ಪರಿಹರಿಸುವುದು; ದೇಶದ ರಕ್ಷಣೆ,–ಅಭಿವೃದ್ಧಿ : ಆತನಿಗೆ ಹಿಂದೂರಾಜ್ಯದ ಪುನರುದ್ಧಾರ ಕಾರ್ಯ, ದೇಶೋದ್ಧಾರಕಾರ್ಯ, 'ದೇವಕಾರ್ಯ'ವಾಗಿತ್ತು (ಬಂಕಿಮ. ೦೬೩); ನಾನು ದೇಶೋದ್ಧಾರ ಮಾಡುವ ಭಾರ ವಹಿಸಿಲ್ಲ. (ಭಾರತಿ. ೧೨೦) : ಆಗ ಸದಾಶಿವರಾಯರ ಮನೆಯೇ ದೇಶೋದ್ಧಾರದ ಚಟುವಟಿಕೆಗಳಿಗೆ ಕೇಂದ್ರಸ್ಥಳವಾಯಿತು (ಕಪಪು. ೩–೬೪). [ದೇಶ + ಉದ್ಧಾರ]

**ದೇಶ್ಯ** (ಗು). ೧. ದೇಶದಲ್ಲಿ ಹುಟ್ಟಿದ ; ದೇಶದಲ್ಲಿ ವಾಸಿಸುವ; ದೇಶದಲ್ಲಿರುವ. (ನಾ). ೨. ಯಾವುದಾದರೊಂದು ಭಾಷೆಯ ಮೂಲ ಪದ : ಸಂಸ್ಕೃತದಿಂದ ಬಂದಿರುವ ಶಬ್ದಗಳನ್ನು ಈ ಭಾಷೆಗಳು ಪರಕೀಯ ಶಬ್ದಗಳೆಂದು ಎಣಿಸಿವೆ. ತಮ್ಮದೇ ಆದ ಶಬ್ದಗಳನ್ನು "ದೇಶ್ಯ" ಎಂದು ಕರೆಯುತ್ತವೆ (ನಮ್ಮನು. ೧೯) ; ಒಂದು ಭಾಷೆಯನ್ನಾಡುವ ಜನರಲ್ಲಿಯೇ ಹುಟ್ಟಿ ಬೆಳೆದ ಶಬ್ದಗಳಿಗೆ "ದೇಶ್ಯ" ಎಂದು ಹೆಸರು (ಕೃಬಿಪಿ. ೧೪). ೩. [ವ್ಯಾಕ] ಅಚ್ಚಗನ್ನಡ ಶಬ್ದ : ಅಚ್ಚಗನ್ನಡದಲ್ಲಿ ಮಾತ್ರವೆ ಪ್ರಯೋಗಿಸಲ್ಪಡುವುದು ದೇಶ್ಯವು (ಹೊಸಗು. ೩೪) ; ನಿಮ್ಮ ಪದರಚನೆಯು ಅವರವುಗಳಿಗಿಂತ ಹೆಚ್ಚು ದೇಶ್ಯ (ಕಾಲೂರ. ೯ ಮುನ್ನುಡಿ). ೪. [ಸಂಗೀತ] (?): ಘನ, ನಯ ಮತ್ತು ದೇಶ್ಯಗಳನ್ನು ಹಾಡುವುದರಲ್ಲಿ ಅವರು ಚೆನ್ನಾಗಿ ನುರಿತವರು (ಸಂಗೀತ. ೪೩). 'ದೇಶೀಯ' ಪರಾ. [ಸಂ.]

**ದೇಶ್ಯಕಾಂಭೋಜಿ** (ನಾ). [ಸಂಗೀತ] ಒಂದು ಮಿಶ್ರರಾಗದ ಹೆಸರು : ಗುಮ್ಮಕಾಂಭೋಜಿ ತೆನಗು ಕಾಂಭೋಜಿ ದೇಶ್ಯಕಾಂಭೋಜಿಯೆಂಬ ಮಾಟಿಜೀ ಕಾಂಭೋಜೀತಿಶ್ರಂಗಳು (ವಿವೇಕ. ೨೬೩). [ದೇಶ್ಯ + ಕಾಂಭೋಜಿ (<ಕಾಂಬೋದಿ)]

**ದೇಶ್ಯಕಾಪಿ** (ನಾ). [ಸಂಗೀತ] ಒಂದು ಮಿಶ್ರರಾಗದ ಹೆಸರು : ಈ ಭಾಷಾಂಗ ಕಾಪಿರಾಗಕ್ಕೆ ಹಿಂದೂಸ್ಥಾನಿಕಾಪಿ, ದೇಶ್ಯಕಾಪಿ ಮತ್ತು ಮಿಶ್ರಕಾಪಿ ಎಂಬ ಹೆಸರುಗಳೂ ಪ್ರಚಾರದಲ್ಲಿವೆ (ಸಂಗೀತ. ೩೦). [ದೇಶ್ಯ + ಕಾಪಿ$_1$]

**ದೇಶ್ಯವರ್ಣ** (ನಾ). = ದೇಶೀಯಾಕ್ಷರ : ದೇಶ್ಯವರ್ಣವೆಂದರೆ ಸಂಸ್ಕೃತದಲ್ಲಿರದೆ ಕೇವಲ ಕನ್ನಡದಲ್ಲಿ ಮಾತ್ರ ಇದ್ದುವು (ಭಾಷಾಶಾ. ೦೦೩). [ದೇಶ್ಯ + ವರ್ಣ]

**ದೇಶ್ಯಶಬ್ದ** (ನಾ). = ದೇಶೀಯಪದ : ಅಚ್ಚಗನ್ನಡದಲ್ಲಿ ದೇಶ್ಯಶಬ್ದಗಳೂ ತದ್ಭವಗಳೂ ಸೇರುತ್ತವೆ (ಕೃಬಿಪಿ. ೬) ; ಹೀಗೆ ಸಾಮಾನ್ಯವಾಗಿ ಯಾವ ಭಾಷೆಯನ್ನು ತೆಗೆದುಕೊಂಡರೂ ಅದರಲ್ಲಿ ದೇಶ್ಯಶಬ್ದಗಳೂ ಅನ್ಯದೇಶ್ಯ ಶಬ್ದಗಳೂ ಸೇರಿರುತ್ತವೆ (ಕೃಬಿಪಿ. ೧೪). [ದೇಶ್ಯ + ಶಬ್ದ]

**ದೇಸ** (ನಾ). ದೇಶ ; ನಾಡು ; ಜನಪದ : ಸ್ವಸ್ತಿ ಶ್ರೀಗಙ್ಗೆಯುಂ ಕಡಾರಮುಂ ಪೂರ್ವ್ವದೇಸಮುಂ ಕೊಣ್ಡ ಉಡಯಾರ್ ಶ್ರೀರಾಜೇನ್ದ್ರ ಚೋಳ ದೇವರ್ಗ್ಗೆ (ಎಕ. X, ಕೋಲಾರ. ೧೪–೧ ; 1035) ; ಸುಕ್ಷೇ[ತ್ರ] ದಿಂದಾಯ್ಯರ್ಖಂಡವುದೊಳ್ಪ ತೋ ೯ ಪ್ಪೂರ್ವ ದ ದ ಬೊ ಳ್ಳ ತ್ತಾ ಳ ವಾ ದೇಸಮುಂ (ಕಕ. I, ೪೧–೪ ; 1417) ; ಉಟಿ ನಾಲ್ಕುದೆಸೆಯ ದೇಸಗಳ ಬಿರುದಿನ ಗಣಿಕೆಯರ್ಪುರವರನಾರಿಯರಿಂದ ಸಿಂಗರಿಸಿಯ್ಯಿದಿದರು (ಕಂನವಿ. ೨೦–೬೪). [<ಸಂ. ದೇಶ]

**ದೇಸಗತಿ, ದೇಶಗತಿ, ದೇಸಗತ್ತಿ** (ನಾ). ೧. ದೇಸಾಯಿಯ ಅಧಿಕಾರ,–ಹುದ್ದೆ ; ದೇಸಾಯಿಯ ಆಳ್ವಿಕೆ,–ಆಡಳಿತ ; ದೇಸಾಯಿತನ : ಈ ಹಾಳು ದೇಸಗತಿ ಇರದೇ ಹೋಗಿ ಮೈತುಂಬ ದುಡಿತ ಇದ್ದಿದ್ದರೆ, ಇಂತಹದು ಸಾಧ್ಯವಿತ್ತೆ ? (ಕಾಗೆಳ. ೩೩) ; ಊರಿನ ದೇಸಗತಿಯನ್ನು ಕಳೆದುಕೊಂಡು ಬಹಳ ದಿನಗಳಾಗಿರಲಿಲ್ಲ (ದೇಭಾ. ೩) ; ಅದರ ಮರಿವರುಷ ಅಂದರ, ನಮ್ಮ ಈ ಊರಿನ ದೇಸಗತಿ ಹಾಳಾಗಿ ಹೋತಂತರಿ ! (ಜನಜೀ. ೮೩) ; ಕಿತ್ತೂರು . . . ದೊಡ್ಡ ದೇಸಗತಿಯ ನೆಲೆಯಾಗಿದ್ದಿತು (ಕವಿಂಚಿ. ೭೦). ೨. ದೇಸಾಯಿಯ ಅಧಿಕಾರಕ್ಕೆ ಒಳಪಟ್ಟ ನಾಡು : ಇದು ನಮ್ಮ ಆಸ್ತಿಯಲ್ಲ. ಇದನ್ನು ದೇಸಗತಿ, ಜಾಗೀರು ಎನ್ನುವುದು ಬರೀ ಭ್ರಮೆ (ಶ್ರೀಮಾಕೃ. ೧೯೦). **ದೇಶಗತಿ :** ೨. ಇವರ ತಂದೆಯವರು ಕುರಿವಟ್ಟ ದೇಶಗತಿಯ ಕಾರಭಾರಿಗಳು (ಜಹುಂತ. ೩೯). **ದೇಸಗತ್ತಿ :** ೧. ಒಕ್ಕಲಿಗರೂ ಶಿಕ್ಷಕರೂ ಬರಬರುತ್ತ ಇಂಥ ವೈಭವಗಳಿಗೆ ಮನಸೋತದ್ದರಿಂದ ದೇಸಗತ್ತಿಯವರ ದರ್ಪವು ಊರಲ್ಲಿ ದಿನದಿನಕ್ಕೆ ಹೆಚ್ಚತೊಡಗಿತು (ಸಮುಚೀ. ೧) ; ಮಲಸರ್ಜನು ೧೭೮೨ನೇ ಇಸವಿಯಲ್ಲಿ ದೇಸಗತ್ತಿಯ ಪಟ್ಟವೇರಿದನು (ಮುಂಬಯಿ. ೪–೨೦೨). [← ಮರಾ. ದೇಸಕತ್]

**ದೇಸಗತ್ತಿ** 'ದೇಸಗತಿ' ನೋ.

**ದೇಸಾಕೆ, ದೇಶಾಕೆ** (ನಾ). ದೇಶದ ಭಾಗ; ದೇಶಕ್ಕೆ ಸೇರಿದುದು; ದೇಶಿ: "ದೇಸಾಕೆ–ದೇಶಶಾಖಾ=ದೇಶಭಾಗ" (ತದ್ಭಕೋ. ೨೦) ; ಪೂರ್ವಪದಾಂತ್ಯ ಲೋಪಕ್ಕೆ–ದೇವಕುಲ–ದೇಗುಲ ; ದೇಶಶಾಖಾ–ದೇಸಾಕೆ (ಕಮದ. ೨೪೪ ಪ್ರಯೋ). **ದೇಶಾಕೆ :** ದೇಶಾಕೆ, ದೇಶಶಾಖಾ (ಶಬ್ದಾನು. ೩೭೮ ವ್ಯಾಖ್ಯಾ). [<ಸಂ. ದೇಶಶಾಖಾ]

**ದೇಸಾಯಣಿ** (ನಾ). ದೇಸಾಯಿಯ ಅಧಿಕಾರವುಳ್ಳವಳು ; ದೇಸಾಯಿಣಿ: ಇದೇ ಕಾಲಕ್ಕೆ ಇವನ ಸೇನೆಯ ಒಂದುಭಾಗವನ್ನು ಬೆಳವಡಿಯ ದೇಸಾಯಣಿಯಾದ ಮಲ್ಲಮ್ಮಾಯಿಯು ತಡೆದಳು (ಹಿಂದುಇ. ೨೨೦). [<ದೇಸಾಯಿ]

**ದೇಸಾಯಿ, ದೇಶಾಯಿ** (ನಾ). ೧. (ಮರಾಟರ ಆಳ್ವಿಕೆಯಲ್ಲಿ) ಪ್ರಾಂತಾಧಿಕಾರಿ ; ಕುಲಕ್ರಮವಾಗಿ ಬಂದ ದೇಶಭಾಗದ ಆಡಳಿತಗಾರ; ನಾಡೊಡೆಯ : ಕಿತ್ತೂರ ದೇಸಾಯಿಯಾದ ಮಲಸರ್ಜನು ಸನ್ ೧೭೮೨ನೇ ಇಸವಿಯಲ್ಲಿ ದೇಸಗತ್ತಿಯ ಪಟ್ಟವೇರಿದನು (ಮುಂಬಯಿ. ೪–೨೦೨). **ದೇಶಾಯಿ:** ೧. "ನಾಯಕ = ಕುಂಕ್ಕುರನುಂ, ಮಲಯಾಳನುಂ, ದೇಶಾಯಿಯುಂ" (ಕಾಶಕೃ. ೦೫೮) ; ವರ ವಾಳಿಯ ಮಲ್ಲೇಶನರುಶಿಷ್ಯ ತೊರೆಸಾಲ ಪರಗಣೆಯ ಕೋಲಾರವರಿಕೆ ದೇಶಾ[ಪಾಠಾಂ. ಸಾ] ಯಿ (ಪ್ರಾಕಿತಾ. ೦–೨೫) ; ಸೀಮೆ ದೇಶಾಯಿ ದೇಶಕರ್ಣಿ (ಎಇ. ೧೯೫೦, ಹಾನಗಲ್. ೦೨೭–೬ ; 1735) ; ಅಂಥಾ ದೇಶಕ್ಕೆ ಮುಖಂಡನಾದವನು ದೇಶಾಯಿ ಅಥವಾ ದೇಶಮುಖಿ (ಹಾಳಿಗಾ. ೧೧). ೨. ಶಾನುಭೋಗ : ಶ್ಯಾನುಭೋಗ ಅಥವಾ ಮೆನನ್ ಎಂಬುದನ್ನು ಬೊಂಬೈಪ್ರಾಂತ್ಯದಲ್ಲಿ ದೇಶಾಯಿ, ದೇಶಪಾಂಡೆಯಂತಲೂ ಗ್ರಾಮದ ಅಕೌಂಟೆಂಟನ ಹೆಸರುಂಟು (ಗ್ರಾಮಾಶ. ೧). [← ಮರಾ. ದೇಸಾಯ್, ದೇಸಾಈ]

**ದೇಸಾಯಿಗೌಡ** (ನಾ). ೧. ಮೊರಸು ಒಕ್ಕಲು ಜನಾಂಗದ ಮುಖಂಡ,-ನ್ಯಾಯತೀರ್ಮಾನ ಮೊದಲಾದವುಗಳಲ್ಲಿ ಪರಮಾಧಿಕಾರವುಳ್ಳವನು,-ಭೂಮಿಗೌಡ : (ಎಸಿಪ್ಯ. XV, ೨೬). ೨. ಕಂದಾಯ ಮತ್ತು ನ್ಯಾಯನಿರ್ಣಯಗಳ ಎರಡೂ ಅಧಿಕಾರಗಳನ್ನುಳ್ಳ ಸ್ಥಳೀಯ ಅಧಿಕಾರಿ. [ ದೇಸಾಯಿ + ಗೌಡ₁ (<ಗಾಮುಂಡ) ]

**ದೇಸಾಯಿತಿ** (ನಾ). ದೇಸಾಯಿಯ ಹೆಂಡತಿ,-ಪತ್ನಿ : 'ದೇಸಾಯಿತಿಯು ಬಸಿರಿದ್ದದ್ದು ನಿಜ ಎಂದಾಯಿತು (ನಿರಾಶ. ೧೦೦) ; ದೇಸಾಯಿತಿ ಹತ್ತನೆ ತಿಂಗಳಲ್ಲಿ ಹಡೆದಳು (ನಿರಾಶ. ೧೦೨).

[ ದೇಸಾಯಿ + -ತಿ₁ (< -ಇತ್ತಿ) ]

**ದೇಸಾಳ** (ನಾ). ದೇಶಕ್ಕೆ ಸಂಬಂಧಪಟ್ಟುದು ; ದೇಶೀಯವಾದುದು (?) : ಉಟ್ಟ ಹೊಸ ದೇಸಾಳದುಡುಗೆ ರಂಜಿಸುತಮಿರೆ (ಹಹರ. ದೇ. ೩೨-೦೯) ; ಕೈಸಾಳಂ ಸನ್ನೆಯೊಳೊತ್ತುತ್ತಿರೆ ದೇಸಾಳಂ ನುಡಿಯೊಳಿ ಬೆಳೆವುತ್ತಿರೆ (ಪ್ರಂಗೀಶ. ಹ. ೯೭೭-೦೯) ; ಅಗ್ಗಳದ ದೇಸಾಳ ನುಡಿಗಡಣ (ರೀಪಟಾ. ೦೨೭-೩೩).

[ ←ಮರಾ. ದೇಸಾಳ್, ದೇಸೋಳೀ, ದೇಶವಳೂ ; ಹಿಂ. ದೇಸವಾರ್ ]

**ದೇಸಿ, ದೇಸೆ** (ನಾ). ೧. ಒಂದುದೇಶದಲ್ಲಿ ಮಾತನಾಡುವ ಭಾಷೆ ; ದೇಶ್ಯಭಾಷೆ : ದೊರೆಕೊಂಡಿರೆ ಸೊಗಯಿಸುಗುಂ ಪುರಾಣಕಾವ್ಯ ಪ್ರಯೋಗದೊಳ್ ತತ್ಕಾಲಂ ವಿರ(ಸ) ಕರವುವು ದೇಸಿಗೆ ಜರದ್ವಧೂವಿಷಯಸುರತರಸರಸಿಕತೆವೋಲ್ (ಕವಿರಾ. ೧-೫೦) ; ಹಳ್ಳಿಯ ಆಡುವ ಭಾಷೆಯ ಜೊತೆಗೆ ಹೋಲಿಸಿ ನೋಡಿದೆನತ್ತ ಶಿವಮೊಗ್ಗೆಯ ದೇಸಿಯ ನುಡಿಯನು ಕೊನೆಗೆ (ಇಂಚರಪ. ೩೩-೫೦). ೨. ಪರಭಾಷೆಯ ಅನುಕರಣವಿಲ್ಲದೆ ಅಚ್ಚಗನ್ನಡ ಶಬ್ದಗಳನ್ನು ಮನೋಹರವಾಗಿ ಬಳಸುವ ಶುದ್ಧಗನ್ನಡದ ಶೈಲಿ : ಪೂರ್ವಾಚಾರ್ಯರ್ ದೇಸಿಯನೆ ನಿಚ್ಚಿಸಿ ಖಂಡಪ್ರಾಸಮನತಿಶಯಮಿದೆಂದು ಯತಿಯಂ ವಿಳ್ಕರ್ (ಕವಿರಾ. ೦-೭೫) ; ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದೊಂದಿ ದೇಸಿಯೊಳ್ ಪುಗುವುದು ಪೊಕ್ಕ ಮಾರ್ಗದೊಳೆ ತಳ್ವುದು ತಳ್ತೊಡೆ ಕಾವ್ಯಬಂಧಮೊಪ್ಪುಗುಮೆಳಮಾವು ಕಂದಳಿರ ಪೂವಿನ ಬಿಣ್ಪೊಣರ್ಚೆಯಿಂ ಬಟಲ್ದು ತುಂಬಿಗಳಿನೆ ತುಂಬಿ ಕೋಗಿಲೆಯ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆವೋಲ್ (ಪಂಪಭಾ. ೦-೮) ; ಅಸಗನ ದೇಸಿ ಪೊನ್ನನ ಮಹೋನ್ನತಿವೆತ್ತ ಬೆಡಂಗು ಪಂಪನೊಂದಸದೃಶವಪ್ಪಪೂರ್ವರಸವಿಾಯ್ದು . . . ನೆಲಸಿರ್ಕೆ ಧಾರಿಣಿ ಮನಂಗೊಳೆ ಮತ್ಕೃತಿಯೊಳ್ (ಧರ್ಮಾಮೃ. ೦-೩೯) ; ಮಾರ್ಗವು ತನ್ನ ಸ್ವಾರಸ್ಯವನ್ನು ಕಳೆದುಕೊಂಡಾಗ . . . 'ದೇಸಿ'ಯು ತಲೆಯೆತ್ತುತ್ತದೆ (ನವ್ಯಕಾ. ೧೦). ೩. ಅಚ್ಚಗನ್ನಡ ಶಬ್ದ,-ಪದ : ಕನ್ನಡಕೆಂತಪ್ಪುವು ಶಬ್ದಮೆಂಬ ವಿದ್ವಜ್ಜನರಾ ಚಿಂತೆ ಪರಿಹರಿಪ ಮಾಟಕ್ಕೆಯೊಳಂತುಸುರ್ವೆಂ ದೇಸಿ ತದ್ಭವಂ ತತ್ಸಮಮಂ (ಶಜು೩. ೨). ೪. ಒಂದು ದೇಶದಲ್ಲಿ ಪರಂಪರಾಗತವಾಗಿ ಬಂದಿರುವ ಸಂಸ್ಕೃತಿ, ಆಚಾರ, ವ್ಯವಹಾರ ಮೊದಲಾದುವು : ಯಹೂದ್ಯರೊಳಿರುವ ದೇಸಿ ಪರದೇಸಿಯ ತನುಮನಧನಂಗಳಂ ಸೂರೆಗೊಂಡು (ಗೂರ್ಲೋಥಾ. ೨-೪೮). ೫. ಸ್ವಾಭಾವಿಕವಾದ ಚೆಲುವು,-ಸೊಬಗು ; ಸಹಜವಾದ ಸೌಂದರ್ಯ : ಎಳೆವರ್ ಕುರುಳ್ಗಳೊಳ್ ತೊಡರ್ದುರ್ ದೇಸಿ[ಪಾಠಾಂ. ಸೆ]ಯನಾವಗಮಿಾವ ಚೆನ್ನ ಪೂಗಳನವನೊಯ್ಯನೋಸರಿಸುತುಂ . . . ಬರ್ಪ ಮಾದ್ರಿಯುಂ . . . ಪಾಂಡುರಾಜಂ ಕಂಡು (ಪಂಪಭಾ. ೨-೦೭) ; ಗಾಡಿಗೆ ಪಾಡಾದ ಮಸದನಕ್ಕಂ ತೇಜಕ್ಕೋಜಾದ ಕಾಂತಿಗಂ ಬೆಡಂಗಿಗೆ ಪಾಂಗಾದ ದೇಸಿಗಂ . . . ಪೊಗಟ್ದು (ಶಾಂತಿಪು. ೩-೩೩ ವ) ; ಚರಣಂ ನವಕೇಸರದೊಂದು ದೇಸಿಯುಂ ಪ್ರಕಟಿಸೆ (ಕಾದಂಅಾ. ೬೧) ; ನೆಲೆವಾಡದ ಪೊಸದೇಸಿಯ ನೆಲೆವಾಡದ ಕಲ್ಪಪದನಮೆಯ್ದುದಣಂ ಕೀಟ್

ನೆಲೆಯಾದುದು (ಪಂರಾಮಾ. ೦-೧೨೬) ; ಕೊಸುಗಳಂ ಮುಂದ್ದಾಡಿಸಿ ದೇಸಿಯ ಮಾತುಗಳನಾಡಿಸಿ ಪೆರ್ಚಿಸಿ (ಧರ್ಮಾಮೃ. ೫-೯೦) ; ದೇಸಿಯ ರಾಜವಟ್ಟದ ಸವಿನುಡಿಗಳನು ಸೃಷ್ಟೀಶ್ವರಗೆ ಬಿನ್ನೈಸುತ ಮಂತ್ರಿಗಳಟ್ಟಣಿಸಿಹರು (ಕಂನವಿ. ೮-೩೭). ೬. ಗತ್ತು ; ಠೀವಿ ; ವಿಜೃಂಭಣೆ : ತಳಿರ ತೊಂಗಲೊಳ್ ಕೊಣೆದೆಯ ಬಿಂಕವುಂ ಬೀಟ್ ಪೊಳೆವ ಕೆಂಗಾಯ್ ನೊಸಲ ಕಣ್ಣ ದೇಸಿಯ ಸೂಸೆ . . . ಶಿವಚಿಹ್ನವಾಂತಂತೆ ನೇಪಾಳ್ವರಂ ಚೆಲ್ವಾದುದು (ಪದ್ಮರಾ. ೮-೩೦) ; ಅಗ್ಗದ ಸಗ್ಗದ ಜೋಸೆಯರೊಂದು ನೆರವಿಯೊಳ್ ದೇಸಿಯಿಂ ಬೆರದಾಗಳುಂ ಬನದಿಸುತ್ತೆ (ರಾಮಾಕ್ಷ್ಮ. ೧೩೭-೧೪). ೭. ಅಲಂಕರಣ ; ಶೃಂಗಾರ : ಆವ ಪರಿಯ ದೇಸಿಯಾಣ್ಮಗೆ ಬಗೆವರ್ಪುದಾ ವಿಧಗಳನಾರೈದು ಭಾವಿಸಿ ತಿಳಿದುಟ್ಟು ತೊಟ್ಟು ಬಣ್ಣಿಗೆಯಿಂದ ಭಾವವ ಬಂದಿಗೊಳುವುದು (ಹರಿಬ. ೩-೦೭). ೮. ಬಗೆ ; ರೀತಿ ; ಕ್ರಮಂ ; ಸಂಪ್ರದಾಯ : ಛಂದಮಿದಾವುದೆಂದೊಡಿಜವರ್ ಪದಬಂಧದೊಳೀ ಪ್ರಯೋಗಮೆಂತಂದೊಡೆ ಬಯ್ಸುರಾವ ಕವಿಮಾರ್ಗಮಿದೆಂದೊಡೆ ಪೊಯ್ಸುರರ್ಥವೇನೆಂದೊಡೆ ತೊಂಡುಭಂಡುಗೆಡೆದುಟ್ಟುದನಿಕ್ಕುವರಾವ ನೀತಿ ಪೇಟಿಂದೊಡೆ ಕೊಲ್ವರೀಗಳಿನ ದೇಸಿಗೆ ಬಿಟ್ಟ ಮಹಾಕವೀಶ್ವರರ್ (ಸೂಕ್ತಿಸು. ೧-೩೫) ; ಮೊಗವೊಂದು ತೋಳೆರಡಟಿಂ ಸ್ಫುರಿಸುತೀ ಪರಿಯಿಂದೆ ವಿಟಜಂಗಮಾಕೃತಿಯನಾಂತು ಪೊಸದೇಸಿ ರಚಿಸೆ (ಪದ್ಮರಾ. ೫-೯೨) ; ಬಲಿದು ಮಕುಟಾವಳಿಯ ಶೋಣಿತವಳೆಯ ರಕ್ಕಸ ದೇಸಿ[ಪಾಠಾಂ. ಶಿ]ಯಲಿ ಬಿಗಿದೆಳೆವ ಹಾಹೆಯನೋಜೆಗೊಳಿಸಿಕ್ಕಲಿಸಿ ಪದಯುಗವ (ಕೊರರಾ. ೧-೧೫-೦೯). ೯. "ನೇರ್ಪು, ತಕ್ಕುಮೆ, ಔಚಿತ್ಯ" (ಗಿಳಿಮಿಂ. ೧೩೭ ಟಿಪ್ಪಣಿ) : ತಕ್ಕಳಿಯದೆ ನಿಲ್ಲು ಕಬ್ಬಿಗನ ಮಾತು ವಿವಾರ್ಶಕನಿತ್ತ ದೇಸಿಯಿಂ (ಗಿಳಿಮಿಂ. ೧೦೦-೮). ೧೦. (ಹಿಂದಿನ ಕಾಲದಲ್ಲಿದ್ದ) ವರ್ತಕರ ಒಂದು ಪಂಗಡ,-ಮಂಡಲಿ : ಅಗ್ರಹಾರ ತುಂಬುಳದಲು ತಂಬುಲಿಗರುಂ ದೇಸಿಯುಂ ಬಿಟ್ಟ ಧರ್ಮ್ಮಂ (ಸೌಇಇ. IX-1, ೨೪೯-೧೭ : 1142) ; ಬಾವಿಯನಗಳಸಿ ತತ್ಸವಿಾಪದಲು ಸಮಸ್ತದೇಸಿಯನುಮುತದಿಂ ದೇಸೀಶ್ವರದೇವರ ಪ್ರತಿಷ್ಠೆಯಂ ಮಾ[ಡಿ] (ಸೌಇಇ. IX-1, ೨೬೮-೯೭ : 1162). 'ನಾನಾದೇಸಿ' ಪರಾ. ೧೧. (ಅಲಂ) ತೋರಿಕೆ ; ಭೂಷಣ ; ಚಂದ : ಒಸೆದವಂವರೆನ್ನದೆ ಸಂತೊಸಮುಪ್ಪಿಸಮಿತ್ತು ಪಡೆವೀ ವಸುಮತಿಯೊಳ್ ವಸುಧೈಕಬಂಧು ಹೆಂಬೀ ಪೆಸರಂ ರೇಚರಸನಂತು ದೇಸಿಯನಾಯ್ತು (ಎಕ. V, ಅರಸೀ. ೭೭-೨೯ : 1220). ೧೨. [ನಾಟ್ಯ] ಒಂದು ಬಗೆಯ ದೇಶೀಯ ನೃತ್ಯ : ತೋರಮುಲ್ಲಿಗೆಯ ತುಱುಂಬು ರಾಹು ತವೆ ನುಂಗಿದ ಚಂದ್ರನನೊಯ್ಯನೊಯ್ಯನಂದುಗುಟ್ಟುವೊಲೊಪ್ಪಿರಲ್ ಬಲದೊಳುರ್ವಿಸಿ ದೇಸಿಗೆ ದೇಸಿಯಾಡಿದಳ್ (ಪಂಪಭಾ. ೭-೮೭) ; ಬುಧಸನ್ನುತ ದೇಶಾದ್ಯ ವಿವಿಧನೃತ್ಯಂ ದೇಸಿಯೆನಿಸಿ ಪೆಂಚುವುದು ಜಗದೊಳ್ (ಲಾಸ್ಯರಂ. ೧-೨೦) ; ಭಾವಾಶ್ರಯವಾದ 'ನೃತ್ಯ'ಕ್ಕೆ ಮಾರ್ಗವೆಂದೂ ತಾಲಲಯಾಶ್ರಯವಾದ 'ನೃತ್ತ'ಕ್ಕೆ ದೇಶಿ (ದೇಸಿ)ಯೆಂದೂ ಹೆಸರಿರುವಂತೆ ದಶರೂಪಕದಿಂದ ತಿಳಿಯಬರುತ್ತದೆ(ಕೃಶಿಡಿ. ೨೨೩). **ದೇಸೆ** : ೨. ಆದಿಪುರಾಣವಸ್ತುಕೃತಿಯಂ ಪೇಟ್ವಂ ಬೆಡಂಗವ್ವ ಮಾರ್ಗದೊಳಂ ದೇಸೆಯೊಳಂ ಪೊದಟ್ದಿಸೆವಿನಂ ಸಂಸಾರಸಾರೋದಯಂ (ಆದಿಪು. ೧೭-೭೫) ; ನೆಗಟ್ದ ರಸಂ ಪುನಂಗೊಳಿಸೆ ಮಾರ್ಗಮೊಡಂಬಡೆ ದೇಸೆ ಕಬ್ಬಮಂ ಬಗೆಗೊಳಲಿಂತು ಪೇಟ್ವುದು (ಗದಾಯು. ೧-೩೭) ; ಪೊಸತೆನಿಸಿ ದೇಸೆಯಿಂ ನವರಸವಸೆಯಲ್ಕೊಳ್ಪುವೆತ್ತ ಮಾರ್ಗದಿನಳೆಗೇನೆಸೆದುವೂ ಸುಕವಿಗಳೆನೆ ನೆಗಟ್ದಸಗನ ಮನಸಿಜನ ಚಂದ್ರಭಟ್ಟನ ನುಡಿಗಳ್ (ಪಂಚತಂ. ೫-೯) ; ನಾಗವರ್ಮನ ನೆನಹು ಹೊನ್ನನ ದೇಸೆ [ಪಾಠಾಂ. ಸಿ] ವಿಜಯನ ಭಾವ ... ಅನುಕರಿಸಲಿ ಕಾವ್ಯದೊಳಗೆ (ಜೀವಂಚ. ೧-೩೦). ೫. "ದೇಸೆಯು ಗಾಡಿಯು ಸೊಬಗಹುದು" (ಕವಿಶಂ. ೨೦೨) ; ಒದವಿದ ನೂಲ ತೊಂಗಲುಲಿ ದೇಸೆಯನಾಂತು ವಿಳಾಸದಿಂದಿಱುಂಕಿದ ನಿಟಿ ಗಂಡರಳ್ಕೆರ್ದೆಗಳಂ ತುಟ್

ಪೋಜೆಯನುಂಟುಮಾಡುವುದದೆ ನಿದುಗಣ್ಣಳೊಳ್ಳಡೆ (ಪಂಪಭಾ. ೪-೩೩) ; ಚಂದ್ರಬಲವಂ . . . ತದಾನನಚಂದ್ರಂ ಕುಡೆ ದೇಸೆ ಪೊಚ್ಚಪೊಸತಾಯ್ತು (ಗದಾಯು. ೧-೬) ; ಆಗಳಂತವುರದಂಗನೆಯರ್ನಡೆತಂದು ಬಾಹುವಲ್ಲರಿ ಕುಡೆ ದೇಸೆಯಂ ತ್ರಿಭುವನಪ್ರಭುಗಿಕ್ಕಿದರೊಲ್ದು ಸೇಸೆಯಂ (ಆಗವಿ. ೧೩-೬೯) ; ನಮ್ಮಯ ಮಾತಿಂಗಿಂಬುಗೊಟ್ಟೊಡೆ . . . ಕೃತಾರ್ಥರೆ ನಾವಿದು ನಮ್ಮ ದೇಸೆಯೊಳ್ ಗಡಣಿಸೆ ನಾಡೆ ಕೌತುಕಮೆನುತ್ತುಮವಳ್ ತಳರ್ದಳ್ ಪ್ರಮೋದದಿಂ (ಕುಸುಮಾ. ೧೩-೧೦); ದೇಸೆಯನಾಂತ ಕನ್ನಡಿತಿಯರ್ ಕವಡೊಂದಿದ ಚೆಂದದಾಂಧ್ರಿಯರ್(ಚಿಕವಿ. ೩-೧೬೩). ೬. ಕನಕಾಂಬುಜ ಪಾದಪೀಠದೊಳ್ ನಿಸದಮೆ ನೀಡಿ ಕಾಲನಿಡೆ ರಾಜಕುಮಾರನದೊಂದು ದೇಸೆಯಿಂ (ಶಾಂತಿಪು. ೮-೯); ದಿಟ್ಟಿಗೆ ನಯಂಬಡೆದ ಪೊಚ್ಚಪೊಸ ದೇಸೆಯಿಂ (ಆದಿಪು. ೪-೭ ರಗಳೆ); ಪೊಸತಿದೆಂದು ನಿರೀಕ್ಷಿಸಲೊಂದು ದೇಸೆಯುಂ ಪೆತ್ತು (ಆಗವಿ. ೨-೨೯). ೭. ಲಲಿತೋನ್ನತವಣಿಮಯಕೂಟದಂದಮದು ಪಲವುಂ ದೇಸೆಯು ಮಾಟದಂದಂ (ಆದಿಪು. ೯-೩೦ ರಗಳೆ). ೧೧. ಸಾಸಿರಕೋಲ್ಗಳುಳ್ಳೆನಗೆ ಕಾಳೆಗಮಿಲ್ಲಿನಿತೊಂದು ಕೋಲ್ಗಳಂ ದೇಸೆಗೆ ಪೂತ್ರನಲ್ಲದಿಟಿವಂತಿರೆ ಪೂತ್ತನೆ. ಪೇಟಿಂ (ಆಗವಿ. ೧೭-೮೩) ; ಯದುರಾಜನ ಮನ್ನಿ ್ರಗೀಗಳೆಂತಚ್ಯುತದೇವನೆಂಬ ಪೆಸರಾದುದಿದಲ್ಲದೆ ದೇಸೆಗಾದುದೇ (ಎಕ. V, ಬೇಲೂರು. ೧೭೩-೨೦ ; 1196): ಗುರುಶಬ್ದಂ ವಾಚ್ಯವಾಯ್ತಲ್ಲದೆ ವರವುನಿಚಂದ್ರಂಗಿದೇಂ ದೇಸೆಗಾದ್ದು (ಸೌಇಇ. XX, ೨೪೮-೯ ; 1228). ೧೨. ತುಱುಗಿ ತುರಂಗವಂ ಪೊಳೆದು ಮೆಟ್ಟುವ ದೇಸೆಯನಾಡಿ ತೋರ್ಪಪೋಲ್ ತುಱುಗಿ ಕಪೋಲರಂಗತಟದೊಳ್ ಕುಣಿಯಲ್ ಮ ಣಿ ಕು ಂ ಡ ಳ ದ್ವ ಯ ಂ (ಪುಷ್ಪ. ೬-೭೪). ೧೩. [ಸಂಗೀತ] (?): ಬಹುಳಾಯ ದೇಸೆ ಪಲ್ಲಣ ಕಳಿಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸವಂ (ಆಗವಿ. ೩-೩) ; ವಾದ್ಯವಿದ್ಯಾಧರನಪ್ಪ ವಿದ್ಯಾಧರಮಾರ್ದಂಗಿಕಂ ಮೃದಂಗಸಂಗತೋತ್ತುಂಗವಾಗಿ . . . ರಿಪುವಣೆ ಸಹರಣೆ ತುಡುಕು ದೆಱದು ವಕ್ಕರಿ ಜಕಿ ಜೋಕೆಯೆಂಬ ದೇಸೆಯ ಶಬ್ದಂಗಳೆಸೆಯೆ ಬಾಜಿಸುತ್ತಿರೆಯಾಂ (ಶಾಂತೀಶ್ವ. ೧೬-೬೭ ವ).

ದೇಸಿಯಂಕಕಾಱ=ಒಂದಂ ಬಿರುದಂ : ಪೂರ ಹಳೆಯರು ತಂಮಡಿಹರದಾಡೆ ಮಂಟಿ ಬೋವ ಮಡೆಯು ಬೋವ ಅಪ್ಪಹರುಯ ಮಲ್ಲಿಗೆಗೆಟಿ ಹೊರಗಾಗಿ ಕೊಟ್ಟರು ಏನೆಸು ಮಗ ದೇಸಿಯಂಕಕಾಱಯಿಸಾಸ×ಗಲ್ಲ ಬರದ ಸೇನಬೋ ಗೋವಯ್ಯ (ಎಕ. XIV, ಮಳವ. ೧೧೨-೨೮ ; ಸು. 1261).

[ <ಪ್ರಾ. ದೇಸೀ./ಸಂ. ದೇಶೀ./ತೆಲು. ದೇಸಿ ]

ದೇಸಿಕಾರ್ತಿ 'ದೇಸಿಗಾರ್ತಿ' ನೋ.

ದೇಸಿಕಾರ್ತಿತನ (ನಾ). ಚೆಲುವು; ಸೊಬಗು; ಬೆಡಗು: ದೇಸಿಕಾರ್ತಿತನಮಂ ನೆಱೆ ಬೀಱುತದೊರ್ವಳೊಪ್ಪಿದಳ್ (ತ್ರಿಪುವಿ. ೨೪-೧೫೭).

[ ದೇಸಿಕಾರ್ತಿ (<ದೇಸಿಗಾರ್ತಿ) + – ತನ ]

ದೇಸಿಕಾಱ 'ದೇಸಿಗಾಱ' ನೋ.

ದೇಸಿಗ, ದೇಶಿಗ (ಗು). ೧. ಪರದೇಶಿತನದ; ನಿರ್ಗತಿಕತನದ: ಪರದೇಶಕ್ಕೆ ದೇಸಿಗವಾರ್ಗದಿಂ ಪೋಗಿ ಸೇರೆಗಿಡಲ್ವೇಡ (ಸುಕುಮಾ. ೨-೩೭ ವ). (ನಾ). ೨. ಪರಸ್ಥಳದವನು; ಬೇರೆ ಕಡೆಯಿಂದ ಬಂದವನು; ಯಾತ್ರಿಕ: ಪಱಕಾಱಗ್ಗಳಿಂ ಪಾತ್ರಕ್ಕಂ ದೇಸಿಗ ಛಾತ್ರಭೋಜನಕ್ಕಮೆಂದು ಸಮಕಟ್ಟಿ . . . ಸರ್ವ್ವನಮಸ್ಯಮಾಗೆ ಕುಡೆ (ಸೌಇಇ. IX-1, ೮೦-೧೭ ; 1018) ; ಅವಮಾನಿಸ್ಯೆ ಸೋಮವಾರದಂದು ದೇಸಿಗ ಪ್ರವಾಸಿಗರ ಆಹಾರದಾನಕ್ಕೆ ಬಿಟ್ಟ ಸತ್ತ್ರಂ (ಎಕ. VII, ಶಿಕಾರಿ. ೧೯-೧೯ ; 1089). ೩. ದಿಕ್ಕಿಲ್ಲದವನು; ಗತಿಗೆಟ್ಟವನು; ಪರದೇಶಿ: ನಿರ್ಗತಿಕ: ಪೊಟಲೆಲ್ಲಮಂ ತೊಟಲ್ದು ಬಸಿಱಂ ಪೊರೆವೊಂ ದೇಸಿಗಂ (ವಡ್ಡಾರಾ. ೪೭-೮) ; ಎನ್ನೀ ಶ್ರೀಪತ್ನೀಶತೆಯುಂ ಬಗೆಯದೆ ಯತ್ನಪರರ್ ದೇಸಿಗಂಗೆ ಕೂಸಂ ಕೊಟ್ಟರ್ (ಶಾಂತಿಪು. ೩-೪೩) ; ಧವಳವಂಗಳಗೇಯದಿನೊಪ್ಪಿ ಬರ್ಪ ಕೌರವಧವಳಂಗೆ ದೇಸಿಗನೆ ಬರ್ಪಪೊರೊರ್ವನೆ ಬರ್ಪುದಾದುದೇ (ಗದಾಯು. ೩-೪೧) ; ಆರುಮಿಲ್ಲದ ದೇಸಿಗರಂತೆ ಕಾಡಂ ಪೊಕ್ಕು (ಧರ್ಮಾಮೃ. ೮-೮೦); ಮಗನರಸಿ ಮಂತ್ರಿಸಹಿತವನಿವಂ ಹಿಂದೆ ದೇಸಿಗನಂತೆ ಕೌಶಿಕನ ಕಾಪಿನೊಳು ಬರೆ (ಹರಿಶ್ಚ. ೮-೭೨) ; ಒರ್ಕಿಡಿತೆ ನೀರ್ಗೆ ಪಱಿಪಟ್ಟಿರ್ಕೆಯು ಪಣ್ಗಲೆಯ ಮುಱಿಗೆ ದೇಸಿಗರಂ ದೇವರ್ಕಳ್ಗೊಡೆಯರ್ ಮಾಟ್ಟರೆ (ಶಮದ. ೨೪ ಪ್ರಯೋ); ಏಳಿರ್ಯೆ ಸಾಕೇಳಿ ಮಕ್ಕಳಿರೇಳಿರ್ಯೆ ದೇಸಿಗರು ನಾವ ಭೂಪಾಲಕರು ನೀವು (ಕುಮ್ಯಾ.ಗ. ೧೧-೩೪); ಈ ಕ್ಷೋಣೀಸುತೆ ಗಂಗೆಯಂ ಕಳೆದು ಕಾಡೊಳ್ಕಪಾಕ್ಷೀಣೆಯಾಗಿ ದೇಸಿಗರಂತೆ ದೆಸೆದೆಸೆಯನೀಕ್ಷಿಸುತೆ ಮಱುಗುತಳುತಿರ್ದುದಂ ಕಂಡೆನು (ಜೈಮಿಭಾ. ೧೮-೪೦). ೪. ಋಷಿ; ಮುನಿ; ತಪಸ್ವಿ: ಕರುಣಾರಾಸಿ ಪವಡಿಸಿರಲ್ಕೆ ಕಂಡಾ ದೇಸಿಗನು ದಂಡಪ್ರಣಾಮ ಮಾಡುತ್ತೈತಂದ (ನಿಭಾಗ. ೯-೯-೨೩)– ದೇಸಿಗರಾಣ್ಮ ! ಬೆಳರ್ಮೆಯ್ಯನಾಂತ ಪಕ್ಕಿದೇರನಂತುಂ ನಾಲ್ಗೆಯ್ಯೊತ್ತ ಬಾಂಬೊಟ್ಟದರೆಯನಂತುಂ ಒತ್ತರೆಯ ಪೊಂಬಸಿಱನಂತುಂ ನಿನ್ನಂ ಕಾಣ್ಬೆಂ (ರಾಮಾಶ್ವ. ೭೩-೨೪). ೫. ಶಿವ ; ಪರಮೇಶ್ವರ: "ಎಣ್ಮಯ್ಯಂ . . . ದೇಸಿಗಂ . . . ಐಮೊಗಂ – ಈ ಶಿಶಿ ಈಶ್ವರಂಗೆ ಪೆಸರ್" (ಕಶಶಾ. ೧-೧) : "ಗೊಂದೆವಟಿಯುಗೆಯ ದೇಸಿಗನೆಂದುಂ . . . ಪೇಟ್ಪರ್ ಸ್ಮರಹರಂಗೆ ನಾಮವಿದೆನುತುಂ" (ಕವಿಕಂ. ೧೭) : "ದೇಸಿಗ ನೀಶ್ವರಂ" (ಕಶರ. ೫೧). ದೇಶಿಗ: ೩. ನೆನೆದನು ಮಱೆದಿರದೆ ತಾ ನಾಮಸುಧೆಯನು ಹರಿಹರಿಯೆ ಗೋವಿಂದ ದೇಶಿಗರೊಡೆಯ ನೀನೆನುತ (ಸಂಭಜ. ೮-೪೪) : ದೇಶಿಗನಾದನೆಂದತ್ತರಿರ್ವರು ದುಗುಡದಲಿ (ಮೋಹತ. ೩೪-೩೩). ೬. ದೇಶದ ಪ್ರಜೆ;-ಜನ; ದೇಶವಾಸಿ: ದೇಶಿಗನು ತನ್ನೂರನುಳಿದು ವಿದೇಶದಲಿ ತೊಳಲುತ್ತ ತನ್ನಯ ದೇಶವನು ನೆನೆದಲ್ಲವನು ಬಿಸುಟ್ಟಿದುವಂದವಲಿ (ನಿಭಾಗ. ೪-೧೩-೩೭). ೭. ಆಚಾರ್ಯ; ಗುರು: ಎಲಾಪೊ ದೇಶಿಗ ಕಂಕಭಟ್ಟನೆ ಹಲವು ಧರ್ಮವ ಬಲ್ಲೆ ಗಡ ನೃಪತಿಲಕಗಱುಹುವುದೇನು ಸನ್ಯಾಸಿಗಳಿಗುಚಿತವಿದು ಶಿಳಿಯ ದೇಶಿಗರಿಂಗೆ ದೇಶಿಗರೊಲವು ಸಮನಿಸಬೇಕು ಸಭೆಯಲಿ ಬಲವಿಹೀನರಿಗಾಪ್ತರಿಲ್ಲೆಂದಬಲೆ ಯೊಱಲಿದಳು (ಕುಮ್ಯಾ.ವಿ. ೩-೧೯). [ <ಸಂ. ದೇಶಿಕ ]

ದೇಸಿಗಗಣ (ನಾ). [ಜೈನ] ಜೈನಮುನಿಗಳ ಒಂದು ಪಂಗಡ; ಪರಂಪರಾಗತವಾದ ಜೈನ ವಿರಕ್ತರ ಒಂದಂ ಗುಂಪು: ದೇಸಿಗಗಣದ ಮಹೇಂದ್ರ ಪಂಡಿತರ್ (ಸೌಇಇ. XI-1, ೩೮-೧೧; 950); ಜಿನಶಾಸನಮಂ ಮೊದಲಿನ್ದಿಂತಳವಟ್ಟ ದೇಸಿಗಗಣ ಶ್ರೀಕೊಣ್ಡಕುನ್ದಾನ್ವಯಾಸ್ಪದವಾಚಾರ್ಯರ್ (ಕಇಆ. ೭೨-೮-೬ ; 1008) ; ದೇಸಿಗಗಣದ ಪುಸ್ತಕಗಚ್ಛದ ಬೋಧವಿಭವದ ಕುಕ್ಕುಟಾಸನ ಮಲಧಾರಿದೇವರ ಶಿಷ್ಯರೆನಿಪ ಪೆಂಪಿಂಗಾದಂ (ಎಕ. II, ೭೩-೩೦: 1118). [ ದೇಸಿಗ + ಗಣ ]

ದೇಸಿಗಣ (ನಾ). = ದೇಸಿಗಗಣ: ಶ್ರೀಮೂಲಸಂಘ ದೇಸಿಗಣ ಪುಸ್ತಕಗಚ್ಛದ × × × ಕೊಂಡಕುಂದಾನ್ವಯರಾರ್ಯ್ಯ ಶುಭೇನ್ದು ಕಂದವಿ[ಜಯ]ಕೀರ್ತಿದೇವರ ಪ್ರಿಯಶಿಷ್ಯರಪ್ಪ ಬಾಹುಬಲಿದೇವರು (ಎಕ. I (R), ೭೩-೨ ; 1390). [ ದೇಸಿ + ಗಣ ]

ದೇಸಿಗತನ (ನಾ). ದಿಕ್ಕಿಲ್ಲದಿರುವಿಕೆ: ನಿರ್ಗತಿಕತೆ: ನಿನ್ನಾಸೆಯೊಳಾಂ ನಿನಗೆ ಸಕಲ ರಾಜ್ಯಶ್ರೀಯಂ ಲೇಸಾಗಿ ಮಾಡದಿರ್ದೊಡೆ ದೇಸಿಗತನದಿಂದೆ ನಮೆವುದೊಂದನೆ ಬಗೆವಾ (ಧರ್ಮಾಮೃ. ೩-೯೯) : ಉಸಿರ್ದಳು ವರರತಿ ದೇಸಿಗತನದ ಸುದ್ದಿಯನು (ಮೋಹತ. ೧೧-೨೦). [ ದೇಸಿಗ + – ತನ ]

ದೇಸಿಗಾತಿ, ದೇಶಿಕಾತಿ (ನಾ). = ದೇಸಿಗಾರ್ತಿ: ದೇಸಿಗಾತಿಯರನೆಸುಗೆಯಲ್ಲಿ ಕರ ನೊಂದು ಬೇಸತ್ತು ಹದೆಯನಿಳುಹದ ಸಾಸಿಗ ಕಾಮನಿಟ್ಟಕ್ಷಯಬಾಣದ ವೊಲು ಮಿಸಾಸೆ ಕಂಪಿಪುದು ಕೇಶವನ (ವರ್ಧಪ.೪-೧೧). ದೇಶಿಕಾತಿ: ಸೂಸಕಂಗಳ ಮುರಿದ ಮುತ್ತಿನ ದೇಶಿಕಾತಿಯರಾನನೇಂದುಗಳಾ ಸುಧಾಕರವನಲು ಗೆಲಿದುದು ಸಭೆ ನಭಸ್ಥಳವ (ಕುಮ್ಯಾಸ. ೧೩-೩೦). [ ದೇಸಿ + – ಕಾತಿ ]

**ದೇಸಿಗಾರ್ತಿ**, ದೇ ಸಿ ಕಾ ರ್ತಿ, ದೇಸೆಕಾರ್ತಿ, ದೇಸೆಗಾರ್ತಿ (ನಾ). ಚೆಲುವೆ ; ಸುಂದರಿ ; ವಿಲಾಸವತಿ : ಮುನ್ನ ಬರ್ಪುದಕ್ಕೆ ವಡಿ ಬಣ್ಣವೇಱ ಕಳೆ ಧೂಸರಮಾದುದು ದೇಸಿಗಾರ್ತಿಯಾ (ವಿಕ್ರಮಾ. ೯೧). **ದೇಸಿಕಾರ್ತಿ** : ಮಿಸುಗುವ ದೋರೆವಲ್ ಕರಮೆ ಮಾಸರ್ವಮಾದುದು ದೇಸಿಕಾ [ಪಾಠಾಂ.ಸೆಗಾ]ರ್ತಿಯೊಳ್ (ಚಂದ್ರಪ್ರ. ೮-೩೧) : (ರಸರ. ೩-೧೩೭ ನೋ:) ಮತ್ತಮೊರ್ವ ದೇಸಿಕಾರ್ತಿ ದೇಸಿಗೆ ತಕ್ಕ ವೇಷವಳವಟ್ಟರೆ . . . ನೋಟಕರ ದಿಟ್ಟಿಗೆ ಮಧುರಮಾಗೆ ಮೆಚ್ಚನಟ್ರೊತ್ತಿರ್ದಳ್ (ವಿಕ್ರಮಾ. ೯೦). **ದೇಸೆಕಾರ್ತಿ** : ಲಲಿತಾಂಗನಂ ಮನಂಗೊಳಿಸುವಂಚ್ಚೆಕಾರ್ತಿನದ ಲಲ್ಲೆಯ ಸಗ್ಗದ ದೇಸೆ[ಪಾಠಾಂ. ಗಾಡಿ]ಕಾರ್ತಿಯರ್ (ಆದಿಪು. ೨-೬೧) ; ಪರಿಣತಿ ರಾಜಿಸುತ್ತುಮಿರೆ ನರ್ತಿಸಿದರ್ ಪೊಸ ದೇಸೆಕಾರ್ತಿಯರ್ (ಅಜಿಪು. ೫-೩೧) ; ಈಸು ಲಾವಣ್ಯವನುಳ್ಳ ಸರ್ವಾಂಗವಿಲಾಸದ ಪೊಸದೇಸೆ [ಪಾಠಾಂ. ಶಿ]ಕಾರ್ತಿ ಆಸೆ ಮಾಡಿದಳು ನಿನ್ನನು (ಕುರಾಸಾಂ. ೨೫-೯೦). **ದೇಸೆಗಾರ್ತಿ** : ಮೇಲಿನ 'ಚಂದ್ರಪ್ರ' ಪ್ರಯೋಗದ ಪಾಠಾಂತರವನ್ನು ನೋಡಿ. [ ದೇಸಿಗಾಱ + – ರ್ತಿ$_1$ (< – ಇತ್ತಿ) ]

**ದೇಸಿಗಾಱ, ದೇಸಿಕಾಱ, ದೇಸೆಕಾಱ, ದೇಸೆಗಾಱ** (ನಾ). ೧. ಚೆಲುವ ; ಸುಂದರ. ೨. ತನ್ನ ಕುಶಲಕಲೆಯಿಂದ ಸೌಂದರ್ಯವನ್ನುಂಟು ಮಾಡುವವನು ; ಕಲಾವಿದ: ಶಿಲ್ಪದ ದೇಸಿಗಾಱರ ಕೈಮೆಗಳು ಲೇಸೈಸಲೇ (ಕುಮ್ಮಾಸ. ೧೩-೨೪). **ದೇಸಿಕಾಱ** : ೧. ಉಸಿರಿನಿಯನೆ . . . ರಸಿಕ ಚೂಡಾಮಣಿ ಪೊಸದೇಸಿ [ಪಾಠಾಂ. ಸೆ] ಕಾಱನೆ ರಸಪೂರ ಜಾತಿ ಸತ್ಕಥೆಯ (ವರ್ಧಮ. ೭-೨). **ದೇಸೆಕಾಱ** : ೧. ಕಲಿಗಳಾದಿತ್ಯಂ ದೆಸೆಕಾಱರದಗಣ್ಡರೊ[ಳ್ದ]ಳಿವಂ ಪಿಸುಣರ್ಗೆ ಮುಳಿವಂ ವಾದ್ಯವಿದ್ಯಾಧರಂ . . . ಸಮಸ್ತ ಪ್ರಶಸ್ತಿಸಹಿತಂ ಶ್ರೀಮನ್ಮಹಾಸಾಮನ್ತನೆಱೆಯಮ್ಮನಿರಲ್ (ಸೌಇಇ. XI-1, ೭೪-೧೨ ; 1041) ; ಗಣ್ಡಮಣ್ಡಳಿಕಗಣ್ಡ ತಳಪ್ರಹಾರಿ ದೆಸೆಕಾಱರ ದೇವ ಮೂಱುರಾಯರಾಸ್ಥಾನಕಲಿ ಬಿರುದರ ಗಂಡ ಶ್ರೀ[ಮ]ನ್ಮಹಾ ಮಣ್ಡಳೇಶ್ವರಂ ಕಾರ್ತ್ತವೀರ್ಯ್ಯದೇವರಸರು (ಕಇ. V, ೨೦-೪೩ ; 1125) ; ದೇಸೆಕಾಱನಂ ನಿಶ್ಚಿಂತನಂ ಸಿದ್ಧರಾಮಯ್ಯನಂ ದೂರದಿಂ ಕಂಡಳು (ಸಿದ್ಧರಾ. ೬-೧). **ದೇಸೆಗಾಱ** ೧ : 'ದೇಸೆಗಾರ್ತಿ' ಪರಾ.

[ ದೇಸಿ + – ಕಾಱ ]

**ದೇಸಿಗಾಱಿಕೆ** (ನಾ). ಬೆಡಗು ; ರೀತಿ ; ಗತ್ತು : ಕಾಸಿಮೆರಸಿ ಕೆಳದರಿ ನೀಂದದೊಂದು ವಿಲಾಸಕೆ ರಂಗದೊಳ್ನಿಂದ ದೇಸಿಗಾಱಿಕೆಯ ಸುಪಾತ್ರ ಮೋಹಿಸುವಂತೆ ಪೊಸರ ನಿಂದ ಮೋಹಿಸುತ (ಭರತೇ. ೫೨-೩೪).

[ ದೇಸಿಗಾಱ + – ಇಕೆ ]

**ದೇಸಿಗಿತಿ, ದೇಶಿಗಿತಿ, ದೇಶಿಗಿತ್ತಿ** (ನಾ). ಅನಾಥೆಯಾದ ಹೆಂಗಸು; ದಿಕ್ಕಿಲ್ಲದ ಮಹಿಳೆ : ಸೆಱೆಸಿಕ್ಕಿಂ ಪಿಡಿತಂದ ದೇಸಿಗಿತಿಯಂ ಭೋಗೋಪಭೋಗಂಗಳಂ ಮಱೆದುಂ ಕಾಣದನಾಥೆಯಂ ನುಡಿಮಪೊಲ್ಲಿನ್ನೊಂದು ಸಂಪತ್ತಿಯಂ ಜಱೆಚುತ್ತಿರ್ದಪೆ (ಅನಂಪು. ೧೧-೯೦) ; ಸ್ವರಲೋಪಕ್ಕೆ – ಘಟ್ಟವಳ್ತಿ . . . ದೇಸಿಗಿತಿ (ಕಮಿದ. ೨೦೯ ಪ್ರಯೋ) ; ಅಸೆಗೊಡುವವರಿಲ್ಲವಕಟಾ ದೇಸಿ[ಪಾಠಾಂ. ಶ, ಶಿ]ಗಿತಿ ತಾನಾಹೆನೇ ನೆಱೆ ದೋಷವಿಲ್ಲವೆ ನಿಮಗೆ ಕಂದನ ಕೊಂದವರು . . . ಎಂದಬಲೆ ಮೋಱೆಯಿಟ್ಟಳು ಭಟಾವಳಿಗೆ (ತೊರವೆ. ೬-೪೫-೨೪) ; ದೇಸಿಗಿತಿಯನು ಕಂಡು ಮಾಯಾಪಾಶಕಿದು ಘನವಲ್ಲೆನುತ ಬೆಸಗೊಂಡನಾ ಸತಿಯ (ಸಿಬಾಗ. ೮-೧೩-೨೭). **ದೇಶಿಗಿತಿ** : ಮೇಲಿನ 'ತೊರವೆ' ಪ್ರಯೋಗದ ಪಾಠಾಂತರವನ್ನು ನೋಡಿ. **ದೇಶಿಗಿತ್ತಿ** : ದೇಶಿಗಿತ್ತಿಯರನು ಕೊಲಲೊಂದು ಸಿಂಗ ಬಂದಾಸೆಪಟ್ಟದೆ ನೋಡಿಮನಲು (ಅಂಜದ. ೧೧-೨೫) ; ದೇಶಿಗಿತ್ತಿಯ ನುಡಿಮಂತೆ . . . ಎನ್ನ ಘಾಸೆ ಮಾಡುವರೆನಿಸಿತಾಗ (ಅನಂಚ. ೧೮-೧೦೩).

[ ದೇಸಿಗ + – ಇತಿ$_1$ (< – ಇತ್ತಿ) ]

**ದೇಸಿಪರಿ** (ನಾ). ದೇಸಿಯಂ ರೀತಿ, ಸೊಬಗು: ಹೊಳೆಹೊಳೆವ ಕೆಂಜೆಡೆಯ ನಹಿಪತಿಯಳುಕೆ ಬಿಗಿದನು ದಂತಿಚರ್ಮವ ನೆಲಕೆ ಮುಂಜೆಱಿಗೆಳೆಯಲುಟ್ಟನು ದೇಸಿಪರಿ ಮೆಱೆಯೆ (ಕುಮ್ಮಾಕ. ೭-೧೧). [ ದೇಸಿ + ಪರಿ$_3$ ]

**ದೇಸಿಯಗಣ** (ನಾ). = ದೇಸಿಗಣ : ಶ್ರೀಮೂಲಸಂಗ ದೇಸಿಯಗಣ ಪುಸ್ತಕಘಛ ಕೊಂಡಕುಂದಾನ್ವಯ ಇಂಗುಳೇಸ್ವರದ ಬಳಿಯ . . . ಪ್ರಭಾಚಂದ್ರದೇವರ ನಿಸಿಧಿ (ಎಕ. I (R), ೮೪-೧ ; 1044) ; ಸ್ವಸ್ತಿಶ್ರೀ ಮೂಲಸಂಘ ದೇಸಿಯಗಣ ಪುಸ್ತಕಗಚ್ಛ ಕೊಂಡಕುಂದಾನ್ವಯದ ತಾತಂಗಿಯ ಶ್ರೀಮಾಘಣಂದಿ ಭಟ್ಟಾರಕ ದೇ × × ಶಾಂತಿನಾಥದೇವರ ಪ್ರತಿಷ್ಠೆಯ ಮಾಡಿದರು (ಎಕ. I (R), ೯-೧ ; ಸು. 12ನೆಯ ಶತ).

[ <ದೇಸೀಯ + ಗಣ ]

**ದೇಸಿವಡೆ, ದೇಸೆವಡೆ** (ಕ್ರಿ). ೧. ಚೆಲುವನ್ನು ಹೊಂದು ; ಸೌಂದರ್ಯವನ್ನು ಹೊಂದು ; ಶೋಭಿಸು ; ಬೆಡಗನ್ನು ಪಡೆ : ಕಡುಚೆಲ್ವಿಂ ರತಿಗೆಗ್ಗಂ ಪಡೆದು ವಿಲಾಸಕ್ಕೆ ದೇಸಿವಡೆದವನಿಪನೊಳ್ ಪಡೆದಾ ಪಿರಿಯರಸಿತನಮಂ (ಹಂಪಾಮಾ. ೨-೬೨) ; ಕೆಂಜೆಡೆಗಳ ಗೊಂಚಲ್ಗಳಿಂ ದೇಸಿವಡೆದುಟ್ಟ ವ್ಯಾಘ್ರಚರ್ಮಾಂಚಲದೊಳ್ಪೆದೆ . . . ಸಾಲೋಕ್ಯಸಾಮಿಪ್ಯದವರೆಸೆದಿರ್ದರು (ಜಬಪು. ೨-೨೫) ; ತರುಣಹರಿಣಗಣಕ್ಕೆ ಸರಸೇಕ್ಷಣದ ಸವಿನೋಟ ಮನುಪದೇಶಿಪಂತೆ ದೇಸಿ[ಪಾಠಾಂ. ದೆಸೆ]ವಡೆದು (ರಾಜಶೇ. ೧-೧೩೫ ವ). **ದೇಸೆವಡೆ** : ೧. ದೇಸೆವಡೆದತ್ತು ರತ್ನಶಿಲಾಸೋಪಾನದಿಂ . . . ಕಾಸಾರಂ (ಜಗವಿ. ೧೦-೬೨) ; ನುಣ್ಪೆಳೆಗನುಗುಳ್ವ ಪದತಳದ ಸೌಂದರ್ಯದಿಂ ದೇಸೆವಡೆದ ಹದಿನಾಱೆಱ ಹೆರೆಯದ ಹರಂ ಕರುಣಿಸಿ ನಡೆತಂದು (ಬಸರ. ೧೨-೧೦೦). ೨. ಹಿರಿಮೆಯನ್ನು ಹೊಂದು ; ದೊಡ್ಡಸ್ತಿಕೆಯನ್ನು ಪಡೆ : ದೇವಾ ನಿಮ್ಮ ಪೂಜಿಸಿ ದಾಸನ ಕುಲ ದೇಸೆ [ಪಾಠಾಂ. ಸಿ] ವಡೆಯಿತ್ತು (ಬಸವ. ೬೦೭).

[ ದೇಸಿ + ಪಡೆ$_1$ ]

**ದೇಸಿವೆಱು, ದೇಸೆವೆಱು** (ಕ್ರಿ). ಚೆಲುವನ್ನು ಪಡೆ ; ಶೋಭೆಯನ್ನು ಹೊಂದು ; ಶೋಭಿಸು : ರಸ ಭಾವಂ ಗಮಕಂ ಕಾಣಿಸೆ ನಾಣ್ಣುಡಿ ದೇಸಿವೆತ್ತ ಪೊಸನುಡಿ ಮಾರ್ಗಂ . . . ಇನಿತೆಱೆಳಿಸಿಯದ ಕೃತಿ ಕೃತಿಯೆ (ರಘಾಮ್ಮ. ೧-೪೦) ; ಅಂಬರವಿತಾನದಿಂ ನರರ ಬರಿಸುತ್ತೊಪ್ಪಿದರಲ್ಲಿ ದೂಸಿಗರ್ದೇಸಿವೆತ್ತು (ಶಬ್ದರಾ. ೮-೭೭) ; ಕಿಱುಗಿವಿ ದೇಸಿವೆತ್ತಸಿಮೊಗಂ . . . ಸೂಕ್ಷ್ಮರೋಮದಿಂ ಮೆಱೆದುವು ಸಂಗರಾಂಗಣದೊಳಪ್ರತಿವೀರನ ವಾಜಿರಾಜಿಗಳ್ (ಅಪ್ರತಿ. ೧೩೩-೭) ; ಮುರಿದೆಳೆವಿಸೆ . . . ಎಡಗಾಲ ತೊಡರ್ವಿರಾಜಿಸುತ್ತಿರೆ ಪೊಸದೇಸಿವೆತ್ತಸೆದುದಲ್ಲಿ ನರೇಂದ್ರಕುಮಾರಸಂಕುಳಂ (ರಾಜಶೇ. ೧೨-೪೫). **ದೇಸೆವೆಱು** : ನವರಸಮುಣ್ಮೆ ಮಾತು ಪೊಸತಾಗಿರೆ ದೇಶಿಯ ದೇಸೆವೆತ್ತುದೆಂಬವೊಲಿರೆ . . . ಒಡರ್ಚಿದೆನೀ ಪ್ರಬಂಧಮಂ (ಧಂದಕೋಱ. ೧-೧೧) ; ಬಾಸೆ ದೇಸೆವೆತ್ತುದು ವಳಿರೇಖೆ ಮಸುಳ್ದು ತೋಱಿದುವು (ಸುಕುಮಾ. ೧೦-೧೯) ; ದೇಸೆವೆತ್ತುವು ಕಮಳಭವಂಗಿಕ್ಕುವಮಳ ಚಮರರುಹಂಗಳ್ (ಜಗವಿ. ೧-೩೦). [ ದೇಸಿ + ಪೆಱು$_1$ ]

**ದೇಸಿಸೆಟ್ಟಿ** (ನಾ). ವರ್ತಕರ ಒಂದು ಪಂಗಡ : ಸಾಸನಿಸೆಟ್ಟಿ, ದೇಸಿಸೆಟ್ಟಿ ಮುಮ್ಮರಿದಂಡಂ ರಪ ಮುಖ್ಯಮಾಗಿ ಆ ಮಹಾಜನಂಗಳ ಸಂನಿಧಾನದಲು (ಕಕಲು. ೪-೧೯ ; ?). [ ದೇಸಿ + ಸೆಟ್ಟಿ ]

**ದೇಸೀಯ** (ನಾ). ದೇಶಕ್ಕೆ ಸಂಬಂಧಿಸಿದುದು ; ದೇಶ್ಯ : "ಕಾಕಂದೆನೆ ದೇಸೀಯಂ" (ಕವಿಕಂ. ೨೪೭). [ < ಸಂ. ದೇಶೀಯ ]

**ದೇಸುಕ್ಕೆ** (ನಾ). ಒಂದು ಉದ್ದಳತೆ (?): ಹೂವಿನ ಹಡಂಗಿಲೆಯ ಚಲ್ಲಿಯ ಕೇರಿಯಲ್ಲಿ ಪರಮಾಳಿಗೆಮನೆ ಸರ್ವ್ವಮಂ ದೇಸುಕ್ಕೆ ಏಳುಪೂರೊಡಗೆಱೆಯ ಕೆಳಗಣ ತೋಂಟು (ಸೌಇಇ. IX-1, ೨೫೪-೭೭ ; 1148). [ ? ]

**ದೇಸೆ** 'ದೇಸಿ' ನೋ.

**ದೇಸೆಕಾರ್ತಿ** 'ದೇಸಿಗಾರ್ತಿ' ನೋ.

**ದೇಸೆಗಾರ್ತಿ** 'ದೇಸಿಗಾರ್ತಿ' ನೋ.

**ದೇಸೆಗಾಜ** 'ದೇಸಿಗಾಜ' ನೋ.

**ದೇಸೆಯಜು** (ಕ್ರಿ). ಬೆಡಗನ್ನು ತಿಳಿ; ಅಂದವನ್ನು ತಿಳಿ: ಭಾಸಿಪ ಬಹುರತ್ನವಿಭೂಷಣದಿಂ ದೇಸೆಯಜುದು ಸಿಂಗರಿಸಿದ ಬಳಿಕ (ಜಯುಕಾ. ೩-೨೪). [ದೇಸೆ (<ದೇಸಿ) + ಅಜು]

**ದೇಸೆವಡೆ** 'ದೇಸಿವಡೆ' ನೋ.

**ದೇಸೆವೆಟು** 'ದೇಸಿವೆಟು' ನೋ.

**ದೇಹ** (ನಾ). ಮೈ; ಶರೀರ; ಅಂಗ: "ಕಾಯಂ ಸಂಹನನಂ ದೇಹಂ ವಪುವೆಯೆಂದಿನಿತುಂ ಭಾವಿಸುವೊಡಂಗವರ್ಯಾಯಂಗಳ್" (ವಸ್ತುಕೋ. ೬೭-೧); ದೇಹಕ್ಕಶುಚಿತ್ವಂ . . . ಅಶುದ್ಧಾಹಾರವೃದ್ಧವಧುಕೀಟಾಹತ ಮತಿದುಸ್ತರಾಮಯಂ ಧಾತುಮಯಂ (ಮಲ್ಲಿಪು. ೧೪-೬೫); ಎಡದ ಕೈಯಲಿ ನಿಗಳವನಿಕ್ಕಿ ಬಲದ ಕೈಯ ಕಡಿದುಕೊಂಡರೆ ನೋಯದಿಪ್ಪುದೆ ಪ್ರಾಣ ವೊಂದಾಗಿ ದೇಹ ಬೇಱಲ್ಲ (ಬಸವ. ४೦೩); ದೇಹಕ್ಕನುಗುಣವಾಗಿರೆ ಬಾಹುಕನೆಂಬಧಮನಾಮಮಂ ತಳೆದಂ (ನಳಕಂ. ೬೪೭): ದೇಹ ತಾನಭಿಮನ್ನುವೋ ದಿಟ ದೇಹಿ ತಾನಭಿಮನ್ನುವೋ ಜಡದೇಹ ತಾನಭಿಮನ್ಯು ವಲ್ಲದು ಕೆಟ್ಟರೇನಾಯ್ತು (ಕುವ್ಯಾದ್ರೋ. ೭-೨೭); ದೇಹವೆಂತೆನೆ–ದೇಹವು ಕೃಶ, ಸ್ಥೂಲ, ಮಧ್ಯಮವೆಂದು ಮೂರು ತೆರನಾಗಿರುವುದು (ಸಕವ್ಯ. ೧೯).

**ದೇಹ ಮಾರು** = ಪರಪುರುಷನಿಗೆ ಶರೀರವನ್ನು ಒಪ್ಪಿಸು; ಅನೈತಿಕ ಸಂಬಂಧವನ್ನು ಬೆಳೆಸು; ವೇಶ್ಯಾವೃತ್ತಿಯನ್ನು ನಡೆಸು: ಶೀಲ ಚೆಲುವೆಯಿರಬಹುದು. ಗುಣವತಿಯಿರಬಹುದು. ಆದರೆ ಅವಳ ತಾಯಿ ನಾಲ್ಕು ಜನಕ್ಕೆ ದೇಹಮಾರಿದಳೆಂದರೆ ಗೌರವವಂತನದ ಹುಡುಗ ಒಪ್ಪುತ್ತಾನೆಯೇ? (ಹೂಹಂ. ೬೫). [ಸಂ.]

**ದೇಹಗುಣ** (ನಾ). ಶರೀರದ ಗುಣ; ಶರೀರಧರ್ಮ: ದೇಹಗುಣಗಳೆಲ್ಲದು ಲಿಂಗದೇಹಿಯಾದ ಶರಣನು ಬಾಹಿರಂಗದ ಬಳಿಕ ಮಾಯಾ ಮೋಹವನ್ನು ಜಱಿದನು (ಅವಹಂ. ३೪೧-೧೩೦೩). [ದೇಹ + ಗುಣ]

**ದೇಹಜ** (ಗು). ೧. ದೇಹದಲ್ಲಿ ಹುಟ್ಟಿದ; ಶರೀರದಲ್ಲಿ ಉಂಟಾದ. (ನಾ). ೨. ಅಂಗಜ; ಕಾಮ; ಮನ್ಮಥ: ದೇಹಜ ತನಗೆ ಮರ್ಮಲೆವ ತಾಪಸರೆಂಬ ವಿಹಂಗಮಗಳ ತಲೆಯನು (ಜ್ಞಾನಸ. ३-೧३). [ಸಂ.]

**ದೇಹಝಾಡೆ** (ನಾ). ಹಳ್ಳಿಯ ಮನೆಗಳ ಮತ್ತು ಜಾನುವಾರುಗಳ ಗಣತಿ: (ಕಿಸಂಗ್ರಾ. ೧೪೭). [←ಮರಾ. ದೇಹಝಾಡಾ, ದೇಹೇಝಾಡಾ]

**ದೇಹತೆ** (ನಾ). ದೇಹದ ಭಾವ,-ಧರ್ಮ; ದೇಹತನ; ದೇಹತ್ವ: ಭಕ್ತಿಯುಕ್ತಿಯನಧಿಕಭಯಮಂ ಭಕ್ತದೇಹಿಕ ದೇಹತೆಯುಮಂ [ಪಾಠಾಂ. ದೇವತನಂಮ] ವ್ಯಕ್ತಮಾಗಲು ನಂಬಿಯಣ್ಣಂಗಱುಹಬೇಕೆಂದು (ಬಸಪು. ३೬-३೪). [ಸಂ. ದೇಹತಾ]

**ದೇಹತ್ಯಾಗ** (ನಾ). ದೇಹವನ್ನು ಬಿಡುವುದು; ಸಾವು; ಮರಣ: ದೇಹಗತ ಆತ್ಮಕ್ಕೆ ಜೀರ್ಣದೇಹತ್ಯಾಗವೂ ನವ್ಯದೇಹಲಾಭವೂ ಸಹಜ (ಭಾರದ. ೧೧೪). [ದೇಹ + ತ್ಯಾಗ]

**ದೇಹತ್ರಯ** (ನಾ). [ವೇದಾಂತ] ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ಶರೀರಗಳು; ೧. ಸ್ಥೂಲಶರೀರ: ಪಂಚಭೂತಗಳಿಂದ ಆಗಿರುವ ಶರೀರ. ೨. ಸೂಕ್ಷ್ಮ ಶರೀರ: ಸ್ಥೂಲಶರೀರದ ಒಳಗಡೆ ಪಂಚಪ್ರಾಣಗಳೂ ದಶೇಂದ್ರಿಯಂಗಳೂ ಮನಸ್ಸೂ ಬುದ್ಧಿಯೂ ಪಂಚತನ್ಮಾತ್ರೆಗಳೂ ಕೂಡಿರುವ ಶರೀರ. ಇದಕ್ಕೆ ಲಿಂಗಶರೀರವೆಂದು ಹೆಸರು. ಇದು ಮರಣಾವಸ್ಥೆಯಲ್ಲಿ ಸ್ಥೂಲಶರೀರವನ್ನು ಬಿಟ್ಟು ಹೋಗಿ ಪುಣ್ಯಪಾಪಫಲಗಳನ್ನು ಅನುಭವಿಸಲು ಬೇರೊಂದು ಸ್ಥೂಲಶರೀರವನ್ನು ಸೇರಿಕೊಳ್ಳುತ್ತದೆ. ಇದು ಮೋಕ್ಷವಾಗುವವರೆಗೂ ಇರುತ್ತದೆ. ೩. ಕಾರಣಶರೀರ: ಇದು ನಿದ್ರೆಯಲ್ಲಿ ಜೀವನಿಗೆ ಆಶ್ರಯವಾಗಿರುವ ಅವ್ಯಕ್ತ ಎಂಬ ಹೆಸರುಳ್ಳ ಅನಾದಿಯಾದ ಮಾಯೆ. ಇದು ಸುಷುಪ್ತಿಯಿಂದ ಅಭಿವ್ಯಕ್ತವಾಗುತ್ತದೆ. ನಿದ್ರಾವಸ್ಥೆಯಲ್ಲಿ ಬುದ್ಧಿಯ ವ್ಯಾಪಾರವೆಲ್ಲ ಈ ಮಾಯೆಯಲ್ಲಿ ಅಡಗಿರುತ್ತದೆ. ಜೀವನು ನಿದ್ರೆಯಲ್ಲಿ ಅಲ್ಲಿದ್ದುಕೊಂಡು ಸುಖವನ್ನು ಅನುಭವಿಸುತ್ತಾನೆ. ಇದು ಅದ್ವೈತದ ಪ್ರಕ್ರಿಯೆ: ಗುರುವು ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ದೇಹತ್ರಯಗಳಲ್ಲಿರುವ ಆಣವ, ಮಾಯಾ, ಕಾರ್ಮಿಕಗಳೆಂಬ ಮಲತ್ರಯಗಳನ್ನು . . . ಸುಟ್ಟು (ಅಷ್ಟಾವಿ. ೧); ದೇಹತ್ರಯದ ಸ್ಮೃತಿಯು ತಪ್ಪಿ ದೇವಾ ನೀನೆ ಗತಿಯು ಎಂದು (ಶರೀಶ. ೧೭-೧). [ದೇಹ + ತ್ರಯ]

**ದೇಹದಂಡಣೆ** (ನಾ). = ದೇಹದಂಡನೆ: ದೇಹದಂಡಣೆಯೇಕೆ ಆಯಾಸಗೊಳಲೇಕೆ ಮಾಯಾರಿ ಶಿವನ ನಿಜಸುಖದೊಳೊಡವೆರೆದ ಕಾಯುವೆ ಶಿವನ ನಿಜರೂಪ (ಗುರುಬೋ. ೩-೮೮). [ದೇಹ + ದಂಡಣೆ]

**ದೇಹದಂಡನೆ** (ನಾ). ತಪಸ್ಸು, ವ್ರತ, ಉಪವಾಸ, ವ್ಯಾಯಾಮ ಮುಂತಾದ ಕಾರಣಗಳಿಂದಾಗಿ ಶರೀರಕ್ಕೆ ಮಾಡಿಕೊಳ್ಳುವ ಕ್ಲೇಶ,-ಶಿಕ್ಷೆ; ಕಾಯಕ್ಲೇಶ: "ತಪಃ–ದೇಹದಂಡನೆ" (ಕಾಶಕ್ಕ. ३೪). [ದೇಹ + ದಂಡನೆ]

**ದೇಹದಾರ್ಢ್ಯ** (ನಾ). ದೇಹದ ಶಕ್ತಿ; ಶರೀರದ ಬಲ: ದೇಹದಾರ್ಢ್ಯವೂ ಸಾಕಷ್ಟಿದ್ದಿತು (ಪಂಗಬ. ೧೯೪). [ದೇಹ + ದಾರ್ಢ್ಯ]

**ದೇಹದೀಪ್ತಿ** (ನಾ). ಶರೀರದ ಕಾಂತಿ,-ಶೋಭೆ: ಹಾರ ಮರೀಚಿಯಂ ಮರಕತಚ್ಛವಿಯಂ ಗೆಲೆ ದೇಹದೀಪ್ತಿ . . . ಬಲಾಚ್ಯುತರದೇನೆಸೆದಿರ್ದರೊ ರಾಮಲಕ್ಷ್ಮಣರ್ (ಹಂಪಾಮಾ. ೩-೦೩೯). [ದೇಹ + ದೀಪ್ತಿ]

**ದೇಹಧರ್ಮ** (ನಾ). ೧. ದೇಹದ ಸ್ವಭಾವ,-ಪ್ರಕೃತಿ. ೨. ಶರೀರದಲ್ಲಿ ತನ್ನಷ್ಟಕ್ಕೆ ನಡೆಯುತ್ತಿರುವ ಶ್ವಾಸೋಚ್ಛ್ವಾಸಾದಿ ಕಾರ್ಯ; ಶರೀರ ವ್ಯಾಪಾರ: ದೇಹಧರ್ಮ ತನ್ನ ಆದಂತೆ ಆಗಲಿ ಕೂಡಲಸಂಗನ ಪೂಜಿಸದಲ್ಲದೆ ನಿಲಲಾಱೆನು (ಬಸವ. ४४೩); ದೇಹಧರ್ಮವೆಂದರೆ ದೇಹದಲ್ಲಿ ತಾನಾಗಿ ನಡೆಯುತ್ತಿರುವ ಪ್ರಾಕೃತಿಕ ಕಾರ್ಯಗಳು (ಆರ್ಯಧ. ೧೧). [ದೇಹ + ಧರ್ಮ]

**ದೇಹಧಾರಣ** (ನಾ). ಶರೀರವನ್ನು ಧರಿಸುವುದು; ಬದುಕಿರುವುದು: ಜೀವನು ತನ್ನ ಕರ್ಮಾನುಸಾರವಾಗಿ ದೇಹಧಾರಣ ಮಾಡುತ್ತಾನೆ (ರೂಢಿ). [ದೇಹ + ಧಾರಣ]

**ದೇಹಧಾರಿ** (ಗು). ೧. ದೇಹವನ್ನು ಹೊಂದಿರುವ; ಶರೀರವನ್ನು ಪಡೆದಿರುವ. (ನಾ). ೨. ದೇಹವನ್ನು ಹೊಂದಿರುವ ಜೀವ; ಬದುಕಿರುವ ವ್ಯಕ್ತಿ. 'ಚರಮದೇಹಧಾರಿ' ಪರಾ. [ಸಂ. ದೇಹಧಾರಿನ್]

**ದೇಹನಿಸ್ಪೃಹ** (ನಾ). ಶರೀರಾಭಿಮಾನವನ್ನು ತೊರೆದವನು; ವಿರಕ್ತ: ಸುಸಮಾಧಿಯೋಗದಲ್ಲೆದು ನಿಜವನು ದೇಹನಿಸ್ಪೃಹನಾಗು ನೀನೆಂದ (ಕುವ್ಯಾದ್ರೋ. ೧೮-೩೮). [ದೇಹ + ನಿಸ್ಪೃಹ]

**ದೇಹನ್ಯಾಸ** (ನಾ). ಜಪ, ಪಾರಾಯಣ ಮೊದಲಾದ ಕಾಲದಲ್ಲಿ ವಿಧ್ಯುಕ್ತವಾದ ರೀತಿಯಲ್ಲಿ ಹೃದಯವೇ ಮೊದಲಾದ ದೇಹಭಾಗಗಳನ್ನು ಮುಟ್ಟಿಕೊಳ್ಳುವುದು: ನಿರುತ ಸತ್ಪ್ರಣಯಾಮವ ತೀರ್ಚಿ ಕರ ದೇಹನ್ಯಾಸಂಗಳಂ ಪೂರಿಸಿ (ನವಮೋ. ३-४೫). 'ಅಂಗನ್ಯಾಸ', 'ಕರನ್ಯಾಸ' ಪರಾ. [ದೇಹ + ನ್ಯಾಸ]

**ದೇಹಪುಷ್ಟಿ** (ನಾ). ಶರೀರವು ಪುಷ್ಟವಾಗುವುದು,-ದೃಢವಾಗುವುದು: ರಸ, ಗಂಧಕ . . . ಕಿರುಮೂಲಕ. ಇವ ಚೂರ್ಣಮಾಡಿ ಕೊಳ್ಳುವುದು. ದೀಪನ ಹುಟ್ಟುವುದು, ದೇಹಪುಷ್ಟಿಯಹುದು (ವಿವೃವಿ. ೧೭೦). [ದೇಹ + ಪುಷ್ಟಿ]

**ದೇಹಪ್ರಕೃತಿ** (ನಾ). ಶರೀರದ ಸ್ವಭಾವ ; ನೈಜವಾದ ಮೈಗುಣ : ದೇಹಪ್ರಕೃತಿಯ (Constitutional) ರೋಗಲಕ್ಷಣಗಳು (Symptoms) ಉಗ್ರವಾಗುತ್ತವೆ (ಶಿಲಕೋ. ೧೬) ; ನನ್ನ ದೇಹಪ್ರಕೃತಿಗೆ ಅದು ಒಗ್ಗುವುದಿಲ್ಲ (ಶದ್ಮಸ. ೨೨೨). [ ದೇಹ + ಪ್ರಕೃತಿ ].

**ದೇಹಬಾಧೆ** (ನಾ). ೧. ಶರೀರಕ್ಕೆ ಒದಗುವ ತೊಂದರೆ. ೨. ಮಲ ಮೂತ್ರ ವಿಸರ್ಜನೆ: ಕತ್ತಲೆಯಲ್ಲಿ ಕಾಣದಾದನು. ದೇಹಬಾಧೆಗೆ ಅವಸರವಾಗಿರಬೇಕು (ಮಲಿಮ. ೮೩೪). [ ದೇಹ + ಬಾಧೆ ]

**ದೇಹಬಿಡು** (ಕ್ರಿ). (ಜೀವಾತ್ಮನು) ಶರೀರವನ್ನು ತ್ಯಜಿಸು ; ಸಾಯು ; ಮರಣಹೊಂದು: ನನಗೆ ದೇಹಬಿಡಲು ಅಪ್ಪಣೆ ಕೊಡು ; ನೀನು ಅನುಜ್ಞೆ ಕೊಟ್ಟರೆ ನನಗೆ ಸದ್ಗತಿ ಲಭಿಸುತ್ತದೆ (ವಚಥಾ. ೩೨೮).
[ ದೇಹ + ಬಿಡು$_1$ ]

**ದೇಹಭಾನ** (ನಾ). ಮೈ ಮೇಲಿನ ಎಚ್ಚರ,–ಪರಿವೆ,–ಪ್ರಜ್ಞೆ: ಮಾತಂಗಾ ದೇಹಭಾನವಿಲ್ಲದೆ ಎದೆಯನ್ನು ಗಟ್ಟಿಯಾಗಿ ಗುದ್ದಿಕೊಂಡಳು (ವಾಸನಾ. ೧೨೧); ದೇಹಭಾನವನ್ನು ಮರೆತು ಸುಶೀಲೆಯ ಜೀವ ಅಲೆಯುತ್ತಿತ್ತು (ಸಮಜೀ. ೬೨೩). [ ದೇಹ + ಭಾನ ]

**ದೇಹಭಾನಗೊಳ್ಳು** (ಕ್ರಿ). ಮೈಮೇಲಿನ ಪ್ರಜ್ಞೆಯನ್ನು ಪಡೆ; ಮೂರ್ಛೆ ತಿಳಿ : ತಾಯಿಯ ದರ್ಶನವಾಗುತ್ತಲೆ ಹೊಸ ದೇಹಭಾನಗೊಂಡು ತಾವು ಮನೆಗೆ ಬಂದೆನೆಂದು ತಿಳಿದುಕೊಂಡಳು (ಹಂಸಾ. ೮).
[ ದೇಹಭಾನ + ಕೊಳ್ಳು$_1$ (<ಕೊಳ್$_1$) ]

**ದೇಹಭಾವ** (ನಾ). ಶರೀರದ ಸ್ವಭಾವ ; ಶರೀರಧರ್ಮ : ದೇಹಭಾವವಳಿದಲ್ಲದೆ ಜೀವಭಾವವಳಿಯದು ಜೀವಭಾವವಳಿದಲ್ಲದೆ ಭಕ್ತಿಭಾವವಳವಡದು (ಅವಚಂ. ೨೬೩-೧೨೨೬). [ ದೇಹ + ಭಾವ$_2$ ]

**ದೇಹಮಬ್ಬು** (ನಾ). ಮೈಮೇಲೆ ಕಪ್ಪುಬಣ್ಣ ಹರಡುವ ಒಂದು ಬಗೆಯ ಚರ್ಮರೋಗ: ದೇಹಮಬ್ಬುವರ್ಧನಕ್ಕೆ :–ಶುಂಠಿ ಪಲ ೧ ತಾಳೀಬೆಲ್ಲ ಪಲ ೩, ಸಮುದ್ರಪಾಳಬೀಜ ಪಲ ೧, ಈ ಮೂರನ್ನೂ ಮರ್ದಿಸಿ ಎಲಚಿಹಣ್ಣಿನ ಪ್ರಮಾಣ ಗುಳಿಗೆಯ ಕೊಡಲು ಕರ ಉಳಿ ಮಾಸಿ ಸಾಯಂಕಾಲದಲ್ಲಿ ಗುಣ (ವಿಷ್ಯವಿ. ೦೦೬).
[ ದೇಹ + ಮಬ್ಬು (<ಮರ್ವು) ]

**ದೇಹಮುಕ್ತ** (ನಾ). ದೇಹದಿಂದ ಬಿಡುಗಡೆ ಹೊಂದಿದವನು ; ಸತ್ತು ಹೋದವನು ; ಮೃತ : ಎರೆಯಂಗರು ದೇಹಮುಕ್ತರಾದರು (ಶಾಂತಲಾ. ೧೮). [ ದೇಹ + ಮುಕ್ತ ]

**ದೇಹಮೋಹ** (ನಾ). ಶರೀರದ ಮೇಲಿನ ಮಮತೆ ; ಬದುಕಬೇಕೆಂಬ ಇಚ್ಛೆ : ತಂದೆಯಳಿದಾ ಹೊತ್ತು ಹಗೆಯನು ಕೊಂದು ಸಾಯದೆ ದೇಹಮೋಹಕೆ ನಿಂದು ನೀ ನಿಶ್ಶಂಕನಾದೈ ವೈರಿಶರಹತಿಗೆ (ಕುವ್ಯಾಕ. ೩-೨೮).
[ ದೇಹ + ಮೋಹ ]

**ದೇಹಯಾತ್ರೆ** (ನಾ). ದೇಹವನ್ನು ಪೋಷಿಸಿಕೊಂಡು ಹೋಗುವಿಕೆ ; ಜೀವನವನ್ನು ಸಾಗಿಸುವಿಕೆ : ಪೋಲೀಸಿನವರಿಗೆ ಗೂಢಚಾರನಾಗಿದ್ದುಕೊಂಡು ದೇಹಯಾತ್ರೆಯನ್ನು ನೆರವೇರಿಸಿಕೊಳ್ಳುತ್ತಿರುವ ಆ ಹರೇರಾಮನೇ ? (ಬಿಶಾಪ. ೧೨). [ ದೇಹ + ಯಾತ್ರೆ ]

**ದೇಹರ** 'ದೇವಾರ' ನೋ.

**ದೇಹರುಚಿ** (ನಾ). = ದೇಹದೀಪ್ತಿ : ಕನಕಚ್ಛಾಯೆಯನಾಳ್ದ ದೇಹರುಚಿ ಚೆಲ್ವಂ ಬೀರೆ (ಪುಷ್ಪಪು. ೦-೧೦). [ ದೇಹ + ರುಚಿ ]

**ದೇಹಲಬ್ಧಾಂಗುಲ, ದೇಹಲಬ್ಧಾಂಗುಳ** (ನಾ). [ಶಿಲ್ಪಶಾ] ದೇವತಾಪ್ರತಿಮೆಗಳನ್ನು ಕಡೆಯುವಾಗ ದೇಹದ ಪ್ರಮಾಣವನ್ನು ನಿರ್ಣಯಿಸುವ ಒಂದು ಅಳತೆ : ಮಾನಾಂಗುಲ, ಮಾತ್ರಾಂಗುಲ, ದೇಹಲಬ್ಧಾಂಗುಲವೆಂಬ ಅಳತೆಗಳಿಂದ ಪಂಚತಾಲ, ನವತಾಲಾದಿ ವಿವೇಚನೆಯಿಂದ ಮೂರ್ತಿಗಳನ್ನು ರಚಿಸುವ ವಿಧಾನಗಳನ್ನೂ...ಶಿಲ್ಪಶಾಸ್ತ್ರ ಮತ್ತು ಆಗಮಶಾಸ್ತ್ರಗಳು ತಿಳಿಸುತ್ತವೆ (ಭಾರದ. ೮೦). **ದೇಹಲಬ್ಧಾಂಗುಳ :** ಪ್ರತಿಮೆಯ . . . ಒಂದೊಂದವಯವಕ್ಕೆಷ್ಟು ಭಾಗವೆಂದು ವಿಭಾಗಿಸುವದೇ ದೇಹಲಬ್ಧಾಂಗುಳಮಕ್ಕುಂ (ವಿವೇಕ. ೩೦೦).
[ ದೇಹ + ಲಬ್ಧ + ಅಂಗುಲ ]

**ದೇಹಲಬ್ಧಾಂಗುಳ** 'ದೇಹಲಬ್ಧಾಂಗುಲ' ನೋ.

**ದೇಹಲಿ, ದೇಹಳಿ** (ನಾ). ೧. ಹೊಸತಿಲು ; ಹೊಸ್ತಿಲು. ೨. ಬಾಗಿಲ ಮುಂದಿನ ಜಗಲಿ : (೬). **ದೇಹಳಿ :** ೧. "ದೇಹಳಿಯದೊಗೆದ ಹೊಸತಿಲೆನಿಕ್ಕುಂ" (ಮಂಗರಾ. ೫೯-೧೨) ; "ನೆಱೆ ದೇಹಳಿಯೆ ಪೊಸಂತಿಲ್" (ಶಬ್ದಶ್ಮ. ೪೬) : "ಹೊಸ್ತಿಲೊಳು ದೇಹಳಿಯೆನಿಕ್ಕು" (ಶಕರ. ೫೨); ಎಳಶರಧಿಪಟ್ಟೋರೆ ದಶದಿಕ್ಕು ದೇಹಳಿ ನೆರೆದ ಜನವೇ ಚಿತ್ರದಿರವಜಾಂಡವೆ ಚೆಂಡು ಸುರತರು ನಿಂಬಭೂಜವಾಗಲದೇ ವಿರತಿ (ಕೃವಲ್ಮ. ೩-೨೦-೧) ; ಪಕ್ಕಂಗಳಂ ನೋಡಿ ಗೆ [ದೇ] ಹಳಿಯ ಸಾರ್ದರದರ್ಕೆ ಮೇಲೆ ನಸು ಬೆಚ್ಚುತ್ತಂಗಳಂಬೊಕ್ಕರ್ (ಚಕವಿ. ೬-೧೧೯); ಶ್ರೀದ್ವಾರದ ದೇಹಳಿಯನ್ನು ದಾಂಟಿಸಿ ನಿಲಿಸಿ (ಚಿಟ್ಕಅ. ೩೬-೨) ; ರಾಣಿಯ ತೊಟ್ಟಿಯ ದೇಹಳಿಗಳ ಪಡಿಯರತಿಯರು ಮಾಚಿಕಬ್ಬೆಗೆ ದಾರಿ ಮಾಡಿಕೊಟ್ಟರು (ಸವತಿ. ೯೩).
[ ಸಂ. ]

**ದೇಹಲೀದೀಪನ್ಯಾಯ** (ನಾ). ಒಂದು ಬಗೆಯ ಲೋಕನ್ಯಾಯ ; ಹೊಸ್ತಿಲಿನ ಮೇಲೆ ದೀಪವನ್ನಿಟ್ಟರೆ, ಹೊಸ್ತಿಲಿನ ಎರಡು ಕಡೆಗೂ ಬೆಳಕು ಹಬ್ಬುತ್ತದೆ. ಹೀಗೆ ಒಂದು ಕಾರ್ಯದಿಂದ ಬೇಕಾದ ಎರಡು ಫಲಗಳು ಲಭಿಸಿದಂತಾಗುತ್ತದೆ. ಇದನ್ನು 'ದೇಹಲೀದೀಪನ್ಯಾಯ'ವೆಂದು ವ್ಯವಹರಿಸುತ್ತಾರೆ. ದೀಪಕಾಲಂಕಾರದಲ್ಲಿ–ಉಪಮಾನವಾಕ್ಯದಲ್ಲಾಗಲಿ, ಉಪಮೇಯವಾಕ್ಯದಲ್ಲಾಗಲಿ ಒಂದು ಕಡೆ ಸಾಮಾನ್ಯಧರ್ಮವನ್ನು ತಿಳಿಸುವ ಪದವನ್ನು ಬಳಸಿದರೆ ಅದು ಎರಡು ವಾಕ್ಯಗಳಿಗೂ ಅನ್ವಯಿಸುತ್ತದೆ–ಎಂಬ ಸಂದರ್ಭದಲ್ಲಿ ಆಲಂಕಾರಿಕರು ಈ ನ್ಯಾಯವನ್ನು ಉದಾಹರಿಸಿದ್ದಾರೆ. [ ಸಂ. ]

**ದೇಹಲೇಪ** (ನಾ). ಮೈಗೆ ಬಳಿಯುವುದು : ಸಹದೇವೀಸೊಪ್ಪಿನ ರಸ . . . ಕಾಯಿಸಿ, ಹದದಲ್ಲಿಳುಹಿ, ದೇಹಲೇಪವಂ ಮಾಡಲು ಶೀತಜ್ವರ, ಗರ್ಭಿಣಿಜ್ವರ ಸಹ ಮಾಣ್ಗುಂ (ಸಕವ್ಯ. ೬೧). [ ದೇಹ + ಲೇಪ ]

**ದೇಹವಂಚಕ** (ನಾ). ಕೆಲಸಮಾಡಲು ಹಿಂದೆಗೆಯುವವನು ; ಮೈಗಳ್ಳ; ಸೋಮಾರಿ : ಆದಿಜಂಗಮಭಕ್ತಿ ತತ್ಪ್ರಸಾದಭೋಗಂ ದೇಹವಂಚಕನಾದವಂಗಳವಡದು (ಬಸಪು. ೩೯-೧೯). [ ದೇಹ + ವಂಚಕ ]

**ದೇಹವಾಸನೆ** (ನಾ). ೧. ದೇಹಧರ್ಮ ; ದೇಹದ ಇಚ್ಛೆ ; ಶರೀರದ ಕಡೆಗಿರುವ ಅಭಿಮಾನ: ಅಂತಾ ಭೇದವಳಿದು ತಾನೆಲ್ಲಾ ಲಿಂಗಮಯವಾಗಿಪ್ಪ ಸದ್ಭಕ್ತಂಗೆ . . . ದೇಹವಿಡಿದಿರ್ದು ದೇಹವಾಸನೆಯಿಲ್ಲ (ವಚಸಂ. ೫೨೮-೩೬೪). ೨. ಹಿಂದಿನ ಜನ್ಮದ ಸಂಸ್ಕಾರ; ಹಿಂದಿನ ಜನ್ಮದಲ್ಲಿ ಪಡೆದಿದ್ದ ದೇಹದ ಮೇಲಿನ ಅಭಿಮಾನ ಮೊದಲಾದ ಭಾವಗಳು ಈಗಿನ ದೇಹಕ್ಕೂ ಅನುಸರಿಸಿ ಬರುವಿಕೆ : ಶಾಸ್ತ್ರವಾಸನೆಯು ಲೋಕಗಳ ವಾಸನೆ ದೇಹವಾಸನೆಯು ವಾಸನೆಗಳಿವು ಮೂರು (ಜ್ಞಾನಸಿಂ. ೩೪-೧೧).
[ ದೇಹ + ವಾಸನೆ ]

**ದೇಹವಿಡಿ** (ಕ್ರಿ). ಶರೀರವನ್ನು ಹೊಂದು ; ದೇಹಧಾರಣೆ ಮಾಡು : ಸದ್ಭಕ್ತಂಗೆ . . . ದೇಹವಿಡಿದಿರ್ದು ದೇಹವಾಸನೆಯಿಲ್ಲ (ವಚಸಂ. ೫೨೮-೩೬೪). [ ದೇಹ + ಪಿಡಿ$_1$ ]

**ದೇಹವಿಡು** (ಕ್ರಿ). ಶರೀರವನ್ನು ಬಿಡು,–ತ್ಯಜಿಸು ; ಮರಣ ಹೊಂದು: ಗುರುಜಯಂತಿ ದಿನ, ದೇಹವಿಟ್ಟ ಗೆಳೆಯ ಚೆನ್ನಮಲ್ಲಪ್ಪ ಗಲಗಲಿ (ಹೃದಸ. ೫ ಅರ್ಪಣ). [ ದೇಹ + ಇಡು$_1$ ]

**ದೇಹಶುದ್ಧಿ** (ನಾ). ಶರೀರವನ್ನು ನಿರ್ಮಲಗೊಳಿಸುವಿಕೆ ; ಸ್ನಾನ ಮಾಡುವಿಕೆ: ದೇಹಶುದ್ಧಿಯನ್ನು ತಳೆದು ಯೋಗಾಭ್ಯಾಸವನ್ನು ಮಾಡಿ ಶಿವೈಕ್ಯವನ್ನು ಪಡೆಯುವ ವಿವರಣೆಗಳು "ಯೋಗಪಾದ"ದಲ್ಲಿ ಉಕ್ತವಾಗಿವೆ (ಭಾರದ. ೬೩). [ ದೇಹ + ಶುದ್ಧಿ ]

**ದೇಹಶೇಷ** (ನಾ). ಹೆಣವನ್ನು ಸುಟ್ಟ ಬಳಿಕ ಉಳಿಯುವ ಬೂದಿ ಮುಂತಾದುವು: ಇವು ಅವರ ದೇಹಶೇಷಗಳು; ಇವನ್ನೂ ಈ ಮಕ್ಕಳನ್ನೂ ನಿಮ್ಮ ವಶಕ್ಕೆ ತೆಗೆದುಕೊಂಡು ಮೃತರಿಗೆ ನಡೆಸಬೇಕಾದ ಉತ್ತರಕ್ರಿಯೆಗಳನ್ನು ನಡೆಸಿ! ಎಂದು ಹೇಳಿ, ಕೌರವರಿಗೆ ಒಪ್ಪಿಸಿ ಹೊರಟನು (ಜಜಥಾ. ೧೫). [ ದೇಹ + ಶೇಷ ]

**ದೇಹಶೋಧನೆ** (ನಾ). ಭೇದಿ ; ವಿರೇಚನ : ೧೦ ನಿಂಬೆಯ ಹಣ್ಣು ಹಿಂಡಿ ಅಟ್ಟು ಇಳುಹಿಕೊಂಡು ದೇಹಶೋಧನೆಯಂ ಮಾಡಿಸಿ . . . ಸೇವಿಸುತ್ತ ಬರಲು ಶ್ವಾಸ . . . ದಾಹ ಮುಂತಾಗಿ ಪರಿಹಾರಮಕ್ಕುಂ (ಸಕವೈ. ೨೩೪). [ ದೇಹ + ಶೋಧನೆ ]

**ದೇಹಸಂಬಂಧ** (ನಾ). ಶಾರೀರಕವಾದ ಸಂಬಂಧ; ದೈಹಿಕವಾದ ಸಂಪರ್ಕ: ಈಗ ಸುಬ್ಬುವಿಗೂ ಅವಳಿಗೂ ದೇಹಸಂಬಂಧ ಇಲ್ಲ. ಪರಸ್ಪರ ಗೌರವ ಮಾತ್ರ ಇದೆ (ಭೀಮಕಾ. ೨೨೯). [ ದೇಹ + ಸಂಬಂಧ ]

**ದೇಹಸಂಬಂಧಿ** (ನಾ). ಶರೀರಕ್ಕೆ ಸಂಬಂಧಿಸಿದವನಂ ; ಜೀವ : ದೇಹಸಂಬಂಧಿಯಾದವನನ್ನು ಜನರು ಅರಿಯಬಲ್ಲರು, ದೇಹಾತಿರಿಕ್ತನನ್ನು ಜನರು ಅರಿಯಲಾರರು (ಶಾಕ್ತ್ಯಾರ. ೨೮೧). [ ಸಂ. ದೇಹಸಂಬಂಧಿನ್ ]

**ದೇಹಸಾತ್ಮ್ಯ** (ನಾ). [ವೈದ್ಯಶಾ] ಮೂರು ಬಗೆಯ ಸಾತ್ಮ್ಯಗಳಲ್ಲಿ ಒಂದು : ವಿರುದ್ಧವಾದ ಆಹಾರ ಪಾನೀಯಗಳಾದರೂ ದೇಹಕ್ಕೆ ಒಗ್ಗುವಿಕೆ : ದೇಶಸಾತ್ಮ್ಯ, ದೇಹಸಾತ್ಮ್ಯ, ವ್ಯಾಧಿಸಾತ್ಮ್ಯವೆಂದು ಆ ಸಾತ್ಮ್ಯ ಮೂಱುತೆಱನಾಗಿಹುದು (ವೈದ್ಯಸಾ. I, ೧೨). 'ದೇಶಸಾತ್ಮ್ಯ' ಪರಾ. [ ದೇಹ + ಸಾತ್ಮ್ಯ ]

**ದೇಹಸಾಮ್ಯ** (ನಾ). [ಯೋಗ] ರಾಜಯೋಗದ ಹದಿನೈದು ಅಂಗಗಳಲ್ಲಿ ಒಂದು; ಆಹಾರ, ಪಾನೀಯ, ನಿದ್ರೆ ಮುಂತಾದುವುಗಳನ್ನು ಪರಿಮಿತಗೊಳಿಸಿ ದೇಹವನ್ನು ದಂಡಿಸಿ, ಒಣಗಿದ ಕಟ್ಟಿಗೆಯಂತೆ ಮಾಡಿ ತನ್ನ ಹತೋಟಿಯಲ್ಲಿಟ್ಟುಕೊಳ್ಳುವುದು: ಯುಕ್ತಹಾರಂಗಳನು ಮಾಡಿಯೆ ಯುಕ್ತನಿದ್ರೆಗಳನ್ನು ಮಾಡಿಯೆ ಯುಕ್ತವುದಕವ ಯುಕ್ತವ್ಯವಹರ ಯುಕ್ತಗಳು ಮಾಡಿ ಯುಕ್ತದಿಂ ದೇಹವನೆ ದಂಡಿಸಿ ಯುಕ್ತದಿಂ ತನ್ನಾಜ್ಞೆಯೊಳಗೆಯು ಯುಕ್ತ ಶುಷ್ಕಾಷ್ಠದಂತಿರಲದು ದೇಹಸಾಮ್ಯ (ಜ್ಞಾನಸಿಂ. ೧೬-೨೭). [ ಸಂ. ]

**ದೇಹಸುಖ** (ನಾ). ಶರೀರದ ಸುಖ : ದೇಹಸುಖಹೇತುಗಳುಮಂ ದೇಹಮುಮಂ ತನ್ನವೆಂದು ಪಂಬಲಿಸದೆ ನಿರ್ಮೋಹದಿನಿರೆ ಯತಿಪತಿಗವ್ಯಾಹತ ಮಳವಟ್ಟುದುತ್ತಮಾಕಿಂಚನ್ಯಂ (ಮಲ್ಲಿಪು. ೧೧-೪೮) ; ದೇಹಸುಖದೂರಂ ಜರಾತನ್ಮಹಾದ್ರುಮ್ಯನಂ ದೇಹಾಂತರಪ್ರಾಪ್ತಿಯುನ್ಮಹಾಧೀರಸ್ತ್ರ ತತ್ರ ಮುಹ್ಯತಿ ನ ಸುಲಸನ್ನೋಹಿಯುಷ್ಟ ಭಗವದ್ವಾಕ್ಯಮುಂಟಪ್ಪ ಕಾರಣಂ (ವೀಶೈಪು. ೩-೩-೧೯). [ ದೇಹ + ಸುಖ ]

**ದೇಹಸುಕರ್ಜ** (ನಾ). ಮೈಮೇಲಿನ ಸುಕ್ಕು,- ಚರ್ಮದ ತೆರೆ : "ದೇಹಸುಕರ್ಜ ತೆರೆಯು" (ಶಬ್ದಮಂ. ೧೦೬). [ ದೇಹ + ಸುಕರ್ಜ₂ ]

**ದೇಹಸ್ಥಿತಿ** (ನಾ). ದೇಹದ ಇರುವಿಕೆ ; ಶರೀರಾರೋಗ್ಯ ; ಶರೀರದ ಪ್ರಕೃತಿ : ಚತುರ್ವಿಧ ದೇವರ್ಕಳ್ಗೆಲ್ಲಾ ಕಾಲಂ ಕಬಳಾಹಾರವಿಲ್ಲದೆಯುಂ ಶರೀರಸ್ಥಿತಿಯುಂಟಾದು ಕಾಣಲ್ಪಪ್ಪುದಱಿಂ ಮೇಣ್ಗರ್ಭಗರ್ಭಕದೊಳು ಕಬಳಾಹಾರಮಿಲ್ಲದೆಯುಂ ಶರೀರಸ್ಥಿತಿ ಕಾಣಲ್ಪಪ್ಪುದಱಿಂ ದೇಹಸ್ಥಿತಿಗೆ ಕಬಳಾಹಾರಮೆ ನಿಯಾಮಮಲ್ತು (ಹಸಾರ. ೩೦೪): ಈಗೀಗ ನನ್ನ ದೇಹಸ್ಥಿತಿಯೇ ಚೆನ್ನಾಗಿಲ್ಲ (ರೂಢಿ). [ ದೇಹ + ಸ್ಥಿತಿ ]

**ದೇಹಳಿ** 'ದೇಹಲಿ' ನೋ.

**ದೇಹಾಂತ** (ನಾ). ದೇಹದ ಕೊನೆ,-ನಾಶ ; ಮರಣ ; ಸಾವು : ಸಂತವಿಡಿರೇ ಮಗನ ನಿಜದೇಹಾಂತಕೃತ ಸಂಕಲ್ಪ ಗಡ ನೃಪನಂತರಂಗವ ಕರೆಸಿಯೆಂದಳಳಿದಳು ಗಾಂಧಾರಿ (ಕುವ್ಯಾಆ. ೨೧-೬೩). [ದೇಹ+ಅಂತ್ಯ]

**ದೇಹಾಂತರ** (ನಾ). ಬೇರೆಯ ಶರೀರ : ವರುಷತನಕ ನಪುಂಸಕದ ಲಾಚರಿಸಬಲ್ಲೆನೆ ಸಾಕು ದೇಹಾಂತರವನಂಗೀಕರಿಸುವೆನಲಾ ತನ್ನ ಸುಡಲೆಂದ (ಕುವ್ಯಾಆ. ೮-೪೩) : ದೇಹಸುಖದೂರಂ ಜರಾತನ್ಮಹಾದ್ರುಮ್ಯನಂ ದೇಹಾಂತರಪ್ರಾಪ್ತಿಯುನ್ಮಹಾಧೀರಸ್ತ್ರ ತತ್ರಮುಹ್ಯತಿ ನ ಸುಲಸನ್ನೋಹಿಯುಷ್ಟ ಭಗವದ್ವಾಕ್ಯಮುಂಟಪ್ಪ ಕಾರಣಂ (ವೀಶೈಪು. ೩-೩-೧೯). [ ಸಂ. ]

**ದೇಹಾಂತಶಿಕ್ಷೆ** (ನಾ). ಗಲ್ಲು ; ಮರಣದಂಡನೆ : ಕಾನೂನು ಕೊಲೆಗಡುಕರಿಗೆ ದೇಹಾಂತಶಿಕ್ಷೆಯನ್ನು ವಿಧಿಸುತ್ತದೆ (ರೂಢಿ). [ ದೇಹಾಂತ + ಶಿಕ್ಷೆ ]

**ದೇಹಾಂಶು** (ನಾ). ಶರೀರದ ಕಾಂತಿ,-ಹೊಳಪು,-ಪ್ರಭೆ: ಉದ್ಯೋತಿಸಿದಂ ಹಿಮಾಂಶುರುಚಿಯಿಂ ದೇಹಾಂಶುವಿಂ ಭೂಭುಜಂ (ಪುಷ್ಪಪು. ೧೩-೨೪). [ ದೇಹ + ಅಂಶು ]

**ದೇಹಾತಿರಿಕ್ತ** (ಗು). ೧. ದೇಹದಿಂದ ಬೇರೆಯಾದ,-ಭಿನ್ನವಾದ. (ನಾ). ೨. ದೇಹದಲ್ಲಿದ್ದುಕೊಂಡು ದೇಹದಿಂದ ಬೇರೆಯಾಗಿರುವವನಂ ; ಜೀವಾತ್ಮ : ದೇಹಸಂಬಂಧಿಯಾದವನನ್ನು ಜನರು ಅರಿಯಬಲ್ಲರು, ದೇಹಾತಿರಿಕ್ತನನ್ನು ಜನರು ಅರಿಯಲಾರರು (ಶಾಕ್ತ್ಯಾರ. ೨೮೧). [ ದೇಹ + ಅತಿರಿಕ್ತ ]

**ದೇಹಾತುರ** (ನಾ). ದೇಹದ ಮೇಲಿನ ಪ್ರಬಲವಾದ ಆಸೆ; ದೇಹವನ್ನು ಪೋಷಿಸಿಕೊಳ್ಳಬೇಕೆಂಬ ಹೆಬ್ಬಯಕೆ : ತನ್ನ ದೇಹಾತುರದಲಡವಿಯೊಳನ್ಯರನು ಸಂಹರಿಸುತಿರೆ (ಹರಿಸಾ. ೪೩). [ ದೇಹ + ಆತುರ ]

**ದೇಹಾಭಿಲಾಷೆ** (ನಾ). ಶರೀರದ ಮೇಲಿನ ಆಸೆ : ಬದುಕಬೇಕೆಂಬ ಆಸೆ : ಅರಸುಕುಲದಲಿ ಹುಟ್ಟಿ ಸಾಪತ್ನರುಗಳಿರೆ ದೇಹಾಭಿಲಾಷೆಯೊಳುರಗನಂತೊಳಗಿಹುದು ಧರ್ಮವೆ (ಕುವ್ಯಾಉ. ೩-೨೨). [ ದೇಹ + ಅಭಿಲಾಷೆ ]

**ದೇಹಾಯಾಸ** (ನಾ). ಶರೀರಶ್ರಮ; ದೇಹಾಲಸ್ಯ : ಮಹಾರಾಜರು ದೇಹಾಯಾಸದಿಂದ ಮಲಗುತ್ತಾರೆ. (ಸಂಕಳ. ೧೦೬). [ದೇಹ + ಆಯಾಸ]

**ದೇಹಾರ₁** 'ದೇವಾರ' ನೋ.

**ದೇಹಾರ₂** (ನಾ). ದೇವರ ವಿಗ್ರಹ ; ದೇವತಾಮೂರ್ತಿ,-ಪ್ರತಿಮೆ : ತನ್ನ ದೇಹಾರವ ತನ್ನ ಕಣ್ಣುಗಳಿಂದ ನನ್ನಿಯಾಗಿಯೆ ಕಾಣ್ಬನ್ನೆವರ ತನ್ನ ದೇಹವು ಮೊದಲಾದ ವಸ್ತುಗಳನು ತನ್ನದಲ್ಲೆಂದುಳಿದಳು (ಅಂಜಚ. ೯-೨೬೪); ತನ್ನ ದೇಹಾರವ ಕಾಣುತಲಾ ಲಕ್ಷ್ಮಿ ತನ್ನ ಕಣ್ಣುಗಳು ಬಂದಂತೆ ಉನ್ನತಹರ್ಷವನ್ನೈದಿದಳದನಿನ್ನು ವರ್ಣಿಸಲೆನ್ನಳವಲ್ಲ (ಅಂಜಚ. ೯-೨೬೦); ಕರಿಕರಿಗೊಂಡು ಬಾಜಿಪ ವಾದ್ಯರಭಸದೊಳುರುಜಯಜಯರಭಸದೊಳು ಕುಱುಕುಱುಮೆಟ್ಟಲಾನೆಯ ಮೇಲೆ ಬಂದನು ಮೆಱೆವ ದೇಹಾರದಂದದೊಳು (ಭರತ. ೨೧-೯೩) : ಬಸದಿಗಳ್ನವರತ್ನಮಯ ಹೇಮಮಯವಲ್ಲಿ ಎಸೆವ ದೇಹಾರಗಳ್ತಾವು ವಿಸುನಿರನ್ನದೊಳು ಸಿದ್ಧಾಸನದಲ್ಲಿ ರಾಜಿಸಿದುವು (ಭರತ. ೬೨-೩೧).

ದೇಹಾರದ ಮಂದಿರ = ದೇವರ ಪ್ರತಿಮೆಯಿರುವ ಮಂದಿರ ; ದೇಗುಲ ; ದೇವಾಲಯ : ಒಂದುದಿನದೊಳಾಕೆಯು ದೇಹಾರದ ಮಂದಿರವನು ಹೊಕ್ಕು ಕಪಟದಿಂದ ಜಿನೇಂದ್ರಬಿಂಬವನೊಯಿದು ನಿಜವಾಸದೊಂದು ತಾಣದೊಳಿರಿಸಿದಳು (ಅಂಜಚ. ೯-೨೪೮).

[ <ಸಂ. ದೇವಾಗಾರ ]

**ದೇಹಾರ$_2$** (ನಾ). ೧. ದೇವರಿಗೆ ಸಮರ್ಪಿಸುವ ಆಹಾರ: ಎಡೆ; ನೈವೇದ್ಯ: ಮನ ಮುಟ್ಟದ ಮಜ್ಜನ ತನು ಮುಟ್ಟದ ದೇಹಾರ ಭಾವ ತಾಗದ ಪೂಜೆ ವಿವೇಕ ತಾಗದ ನೋಟ ವಾಯು ತಾಗದ ಠಾವ ತೋರಿಬ್ಬ (ಅವಚಂ. ೧೯೫-೮೬೩) : ಕಸವ ಬೋಹರಿಸಿ ದೇಹಾರಕ್ಕೆಡೆಮಾಡಿ ಕಸನಿರಲು ದೇಹಾರ ಶುಚಿಗೆ ಸೊಬಿತನಲ್ಲ ಪರದೈವವುಳ್ಳವಂಗೆ ಗುರುಲಿಂಗವಿಲ್ಲ (ಸಮೂವ. ೩೩-೮೪). ೨. ಊಟ ; ಭೋಜನ; ಆರೋಗಣೆ : ಉಡಲುಂ ತುಡಲುಂ ಕೊಟ್ಟಂ ಪಿಡಿ ತೀವಿದ ಪೊನ್ನನಿತ್ತುವನ್ನರೊಳನ್ನರ್ವಡೆಯರ್ದೇಹಾರಮುನುಡ ತುಡಲಿತ್ತುಂ ಕುಡುವರರ್ಥಿಯಿಂದಂ ಜೈನರ್ (ಸಮುಹ. ೭-೩೧) ; ಶಿಷ್ಯನಂ ಮುನ್ನಂ ಸಚ್ಚಾರಿತ್ರಂ ಮಾಡದೆ ದೇಹಾರಮನೀಯಲ್ಕೆ ಮಾಜುಗುತಿಪ್ಪಗೆರ್ೞರವರ್ (ಸಮುಹ. ೧೪-೩೧) ; ಆರೋಗಿಸುವೆಡೆಯೊಳ್ ದೇಹಾರದೊಳ್ . . . ನೃಪನಾರೈದೆಚ್ಚತ್ತು ನಡೆಗೆ (ನೀತಿಸಾ. ೩೫೭). ೩. ಪೂಜೆ : ನೋಡುವರುಳ್ಳರೆ ಮಾಡುವೆ ದೇಹಾರವ . . . ಲಿಂಗವ ತೋರಿಬ್ ಉದರವ ಹೊರೆವ ಭಂಗಗಾಬಿ ನಾನು (ಬಸವ. ೩೦೬) ; ದೇಹಾರವ ಮಾಡಿ ಲಿಂಗಾರ್ಪಿತವ ಮಾಡದೆ ಆಹಾರವ ಕೊಂಡರೆ ಕೋಳಿ ಹುಳುವನಾಯ್ದು ತಿಂದಂತೆ (ದೇದಾವ. ೫೧-೧೦೩) ; ಹೃದಯಕಮಲ ಮಧ್ಯದಲ್ಲಿಪ್ಪ ದೇವನ ದೇಹಾರವ ಮಾಡಲರಿದು ದೇಹಿ ನಿರ್ದೇಹಿಯಾಗದನ್ನಕ್ಕರ ದೇಹಾರವೆಲ್ಲಿಯದೊ ಅನಂತಮುಖದಲ್ಲಿ ದೇಹಾರವ ಮಾಡಲು ದೇವನಲ್ಲಿಲ್ಲ ನೋಡಾ (ಚನ್ನವ. ಕ. ೪೪೫-೯೪೩). [<ಸಂ. ದೇವಾಹಾರ]

**ದೇಹಾರಂಗೆಯ್$_1$** 'ದೇವಾರಂಗೆಯ್' ನೋ.

**ದೇಹಾರಂಗೆಯ್$_2$** (ಕ್ರಿ). ದೇವತಾಮೂರ್ತಿಯನ್ನುಮಾಡು, ಕಂಡರಿಸು: ಶ್ರೀಶಿಲೆಲೇಪ್ಯಕಾಂಸ್ಯರಜತಾಷ್ಮಾಪಾದರತ್ನಂಗಳಿಂ ದೇಹಾರಂಗೆಯಲಂಗ ಸೌಂದರಬಲಂ (ರತ್ನಾಕ. ೪೪). [ದೇಹಾರ$_2$ + ಕೆಯ್$_1$]

**ದೇಹಾರಗೃಹ** (ನಾ). ದೇವತಾಮೂರ್ತಿ ಇರುವ ಗೃಹ ; ದೇವಾಲಯ: ಒಳಗಣ ಪೂಜಾರಚನಾವಿಳಸನಮುಂ ಪೊಱಗೆ ತೋರಿಸುತ್ತುಂ ಮೆಱಗುಂ ಪಳಿಕಿನ ಶಿಲೆಯಿಂ ಮಾಡಿದ ಥಳಥಳಿಪ ವಿಶಾಳ ಚಾರು ದೇಹಾರ ಗೃಹಂ (ಬಾಳಪು. ೧-೧೭೩). [ದೇಹಾರ$_2$ + ಗೃಹ]

**ದೇಹಾರಾಗಾರ** (ನಾ). ದೇಹಾರಗೃಹ ; ದೇವಾಲಯ : ಅಂತು ಬಾಡಂ ದೇಹಾರಾಗಾರಮುಂ ಪೊಕ್ಕು ವೀತರಾಗಶ್ರೀಚರಣಸಮಾರಾಧನಂಗೆಯ್ದು ಬಱಿಯಮಾರೋಗಣೆಯುಂ ಮಾಡಿ (ಬಾಳಪು. ೬-೧೧೫ ಪ). [ದೇಹಾರ$_2$ + ಆಗಾರ]

**ದೇಹಾರಿ** (ನಾ). ದೇವಸ್ಥಾನದ ಅರ್ಚಕ,-ಪೂಜಾರಿ: ದೇವರು ಪೂಜಿಸುವ ದೇಹಾರಿಗಳಿರ್ವರ್ಗಂ ಮತ್ತ ೪೮ (ಕಇಳ. ೯-೩-೩೩೨ ; 1062). [ದೇಹಾರ$_1$ (< ದೇವಾರ) + -ಇ$_2$]

**ದೇಹಾರೈಕೆ** (ನಾ). ದೇಹದ ಪೋಷಣೆ : ಅಭ್ಯಂಜನಾದಿ ದೇಹಾರೈಕೆಗಳಂ ಬಿಟ್ಟು (ಬುಳಸ. ೧೭). [ದೇಹ + ಆರೈಕೆ (<ಆರಯ್ಕೆ)]

**ದೇಹಾಲಸ್ಯ** (ನಾ). ಶರೀರದಲ್ಲಿ ಉಂಟಾಗುವ ಬಳಲಿಕೆ,-ಅನಾರೋಗ್ಯ,-ಅಸ್ವಸ್ಥತೆ : ರಾಜನ ದೇಹಾಲಸ್ಯವನ್ನು ಕುರಿತು ವರ್ತಮಾನ ಕೊಟ್ಟರು (ಪೀಟಿಕೂ. ೨೧). [ದೇಹ + ಆಲಸ್ಯ]

**ದೇಹಾವಗಾಹನ** (ನಾ). [ಜೈನ] ಜೀವಸಮಾಸದ ಹದಿನಾಲ್ಕು ಭಾಗಗಳಲ್ಲಿ ಒಂದು ; ಶರೀರದ ಆಕಾರ,-ಪ್ರಮಾಣ : ಜೀವಸಮಾಸದಲ್ಲಿ ಸಾಮಾನ್ಯವಾಗಿ ಹದಿನಾಲ್ಕುಭಾಗಗಳಾದರೂ ಉತ್ತರಭೇದಗಳು ಐವತ್ತೇಳಾಗುತ್ತವೆ. ಅವುಗಳಲ್ಲಿ (೧) ಸ್ಥಾನ . . . (೩) ದೇಹಾವಗಾಹನ (ಶರೀರದ ಆಕಾರ) (ಜೈನಪ. ೩೦೧). [ದೇಹ + ಅವಗಾಹನ]

**ದೇಹಾವಸಾನ** (ನಾ). ಸಾವು ; ಮರಣ : ಜೀವಭಾವದ ಭ್ರಮೆಯಳಿದು ದೇಹಾವಸಾನದಲಿ ಕೇವಲಾದ್ವಯಪದ ಒದಗುವದು (ಗಗಶಾ. ೨-೧೦). [ದೇಹ + ಅವಸಾನ]

**ದೇಹಿ$_1$** (ನಾ). ೧. ದೇಹವುಳ್ಳುದು; ಪ್ರಾಣಿ, ಮನುಷ್ಯ ಇತ್ಯಾದಿ: ಕೈಕೊಳ್ವದಾತ್ಮಸುಖಮನೆ ಕೈಕೊಳ್ವುದು ದೇಹಿ (ಶಾಂತಿಪು. ೦೧-೮೭) ; ಸಕಲ ದೇಹಿಗೆ ನೀನೆ ಶರಣ್ ಜಿನೇಶ್ವರಾ (ಶಂರಾಮಾ. ೫-೮) : ನೀಂ ನಿಃಶಂಕತೆಯಿನಿನಿತು ದೇಹಿಗಳಂ ಕೊಂದಪೆ (ಯುಶೋಕ. ೪-೭೦). ೨. ದೇಹದೊಳಗೆ ನೆಲಸಿರುವವನು ; ಜೀವಾತ್ಮ : ದೇಹ ತಾನಭಿಮನ್ಯುವೋದಿಟ ದೇಹಿ ತಾನಭಿಮನ್ಯುವೋ (ಕುಮ್ಯಾದ್ರೋ. ೭-೩೭); ದೇಹಿದೇಹೀಯೆಂಬುದಾತ್ಮರೊಳ್ ಬೆರೆತಿಹುದು (ಉದ್ಭದೀ. ೩-೧೫). [ಸಂ. ದೇಹಿನ್]

**ದೇಹಿ$_2$** (ಅ). ೧. "ಕೊಡು" ಎಂಬರ್ಥದ ಒಂದು ಶಬ್ದ: "ಭವತಿ ಭಿಕ್ಷಾಂ ದೇಹಿ" ಎಂಬುದಿದುವೆ ಕಬ್ಬಿಗರ್ಗೆ ಸಿದ್ಧಿಸಿದ ಪರ್ವೆಯ ಸಪ್ತಾಕ್ಷರೀಮಂತ್ರಂ (ರಾಮಾಶ್ವ. ೧೧೮-೧೯) : ಪ್ರಾತ್ಯನೆಡೆಗೆ ದೇಹಿ ಎಂದು ಬಂದೆ (ಗಜೇಶ. ೩-೫೨). ೨. (ಆಲಂ) ದೇಹಿ ಎಂದು ಬೇಡುವವನು ; ಯಾಚಕ : ದೇಹಿ ನೀನು ವ್ಯಾಪಾರಿಗಳು ನಮ್ಮವರು ಬೇಡು ಕೂಡಲಸಂಗಮದೇವಾ ಎಮ್ಮವರ ಕೈಯಲು (ಬಸವ. ೪೪೩); P ತ್ರಾಹಿ, ದೇಹಿ, ಪಾಹಿ, ಮುಂತಾದ ಸಂಸ್ಕೃತದ ಕೆಲವು ಕ್ರಿಯಾಪದಗಳನ್ನು ಅವ್ಯಯಂಗಳೆಂದು ಪರಿಗಣಿಸಿ, ಮುಖ್ಯ ಉಲ್ಲೇಖಗಳಾಗಿ ಕೊಟ್ಟಿದೆ. ಇಲ್ಲಿ 'ದೇಹಿ' ಎಂಬುದು ವಿಶೇಷವಾಗಿ ನಾಮಪದದ ಅರ್ಥದಲ್ಲೂ ಉಪಯೋಗವಾಗಿದೆ. [ಸಂ.]

**ದೇಹುತ** (ನಾ). ದೇವರಿಗೆ ಅರ್ಪಿಸಿದುದು (?) : ಅಲ್ಲಿಯ ಗೌಂಡದೇವರ ದೇಹುತನಾಗಿ ಪಾಡಿದ ಭೂಮಿಯಱದು ಹತಕ್ಕೊಂದು ಮತ್ತರೋಪಾದಿಯಿಂ ಮೂಣಿಗರಮಾಗಿ ಮಾನ್ಯದಿಂ ಮಾಡಿಕೊಂಡುಂಬರು (ಸೌಇಇ. IX-1, ೨೫೪-೪೭ ; 1148). [< ಸಂ. ದೇವಹುತ ?]

**ದೇಹೋಚ್ಛ್ರತಿ** (ನಾ). ದೇಹದ ಎತ್ತರ : ಅಮರನ ದೇಹೋಚ್ಛ್ರತಿ ಮೂಱು ಮೊಳಂ (ಸುಕುಮಾ. ೯-೩೩). [ದೇಹ + ಉಚ್ಛ್ರತಿ]

**ದೇಹೋತ್ಥಾನ** (ನಾ). [ಯೋಗ] ಪ್ರಾಣಾಯಾಮಸಿದ್ಧಿಗಳಲ್ಲಿ ಒಂದು ; ಆಕಾಶದಲ್ಲಿ ನಿರಾಧಾರವಾಗಿ ನಿಂತಿರುವುದು ; ಶ್ವಾಸನಿರೋಧದಿಂದ ದೇಹವು ಹಗುರವಾಗಿ ಮೇಲಕ್ಕೇರುವುದು : ಸ್ವೇದ ಕಂಪನ ದೇಹೋತ್ಥಾನವೆಂಬ ಕ್ರಮದಿಂ ಕನಿಷ್ಠಮಧ್ಯಮೋತ್ತಮ ಪ್ರಾಣಾಯಾಮಸಿದ್ಧಿಸೂಚನಂಗಳಂ (ವಿವೇಕ. ೧೫೦). [ದೇಹ + ಉತ್ಥಾನ]

**ದೇಹೋದ್ಭವ** (ನಾ). ೧. ಶರೀರದಲ್ಲಿ ಹುಟ್ಟಿದುದು. ೨. ಮಗ ; ತನುಜ : ರವಿ . . . ಕುಂಭದೊಳ್ ಕೂಡೆ ದೇಹೋ[ಪಾಠಾಂ. ಧರ್ಮೋ]ದ್ಭವ ಭಾಗ್ಯೋತ್ಸ್ಪೃಷ್ಟನಸ್ತ್ರಂ (ಜಾತತಿ. ೧೭-೦೭). [ದೇಹ + ಉದ್ಭವ]

**ದೇಹೋಪಚಾರ** (ನಾ). ಶರೀರಕ್ಕೆ ಮಾಡುವ ಸೇವೆ,-ಶುಶ್ರೂಷೆ : ಅತ್ತಗೆ ದೇಹೋಪಚಾರ ಮಾಡುತ್ತ ಮಾವನಿಗೆ ದೇವತಾಪೂಜಾದಿಗಳಲ್ಲಿ ಸಹಾಯವಾಗಿದ್ದಳು (ವಚಭಾ. ೧೭೪). [ದೇಹ + ಉಪಚಾರ]

**ದೈತ** (ನಾ). ೧. ಪ್ರೀತಿಪಾತ್ರ ; ಕಾಂತ ; ಗಂಡ ; ಪತಿ : ಆತಂ ನಿನ್ನಯ ಮೋಹದ ದೈತಂ ವಿಭು ನಾಗದತ್ತನಂಗಜವಿಕಳೋಪೇತಂ ಬೆನ್ನೊಳು ಬರುತಿರ್ಪಾತಂ ತಾನೆನಲು ಪರದಿ ವಿಸ್ಮಯಬಟ್ಟಳ್ (ಪುಣ್ಯಾಸ್ರ.೧-೫೫). ೨. ಒಡೆಯ ; ಅಧಿಪತಿ: "ನಾಯಕಂ ನಾಥನಿಂದ್ರಂ ಕಾಂತನೀಶ್ವರಂ ಪ್ರಿಯನಧಿಪಂ ದೈ[ಪಾಠಾಂ. ದಯಿ]ತನೀಶಂ . . . ಎನಲೊಡೆಯಂಗೆ ನಾಮಮಕ್ಕುಂ" (ಪುಂಗರಾ. ೭೭-೭). 'ದೈತೇಂದ್ರ' ಪರಾ. [<ಸಂ. ದಯಿತ]

**ದೈತೆ** (ನಾ). ೧. ಪ್ರೀತಿಪಾತ್ರಳಾದ ಮಹಿಳೆ ; ನಲ್ಲೆ ; ಪ್ರಾಣಕಾಂತೆ; ಮಡದಿ ; ಪತ್ನಿ : ದೈತೆ ನೋಡೆನುತಿಳಿದು ರಾಘವ ಸೇತುವನು ಧನುವಿನಲಿ ಖಂಡಿಸೆ (ತೊರಿರಾ. ೪೪-೧೭). ೨. ಹೆಣ್ಣು ; ಯುವತಿ; ಸ್ತ್ರೀ : ದೈತೆಯಂ ತಂದೊರ್ಬಳಂ ಮದುವೆಯಂ ಮಾಡಿ ಸೈತಿಕ್ಕಿ ಬಿಡಬಾರದಂತೆ ನೇಹಂಗೂಡಿ (ಬಿಂದೋರ. ಹ. ೫೭೩-೧೯). [ದೈತ + -ಎ$_2$]

**ದೈತೇಂದ್ರ** (ನಾ). ಒಡೆಯರ ಒಡೆಯ : ದ್ವೈತೀಯಕ ಜಿನಪಂಗದ್ವೃ ತಂಗಜಿತಂಗೆ ಭುವನದಯಿತಂಗಾಗಳ್ ದೈತೇಂದ್ರರೆಲ್ಲಮೆಱಗಿದರಾತತ ಪುಣ್ಯಂಗೆ ಜಗದೊಳೆಱಗದರೊಳರೆ (ಆಪು. ೫-೩).
[☞ ಇಲ್ಲಿ ಸಂಸ್ಕೃತದ 'ದಯಿತೇಂದ್ರ' ಎಂಬುದನ್ನು ಪ್ರಾಸಕ್ಕಾಗಿ ಕವಿ ಅಂಸವಾಸ ಮಾಡಿಕೊಂಡಂತೆ ತೋರುತ್ತದೆ]

**ದೈತೇಯ** (ನಾ). ೧. ದಿತಿಯ ಮಗ ; ಅಸುರ ; ರಾಕ್ಷಸ : "ದನುಜರ್ ದೈತೇಯರ್ ದಿತಿತನೂಭವರ್ ಪೂರ್ವದೇವರಸುರರ್" (ವಸ್ತುಕೋ. ೬-೩೨) ; "ಅಸುರಃ, ದಾನವಃ, ದೈತ್ಯಃ, ದೈತೇಯಃ . . . ಪಾತಾಲ ನಿಲಯಃ (ಸ್ತ್ರೀತ್ವಾ) – ಈ ೮ ಅಸುರರ ಪೆಸರ್" (ಹಲಾಯು. ೨-೫) ; ಬಲಿದರ್ಪಹರಂ ಜಿತಾರಿ ದೈತೇಯನನಂತಭೋಗನಿಲಯಂ (ಗದಾಯು. ೧-೧). ೨. ಲೋಕಪಾಲಕರಲ್ಲಿ ಒಬ್ಬ ; ನಿರ್ಋತಿ : ತೊಡೆವಂ ಶಕ್ರನ ನಾಮಮಂ ತುಡುಕಿ ನೀರೊಳ್ ಮೆಟ್ಟುವೆಂ ವಹ್ನಿಯಂ ಪೊಡೆವಂ ಕಾಲನನಿಕ್ಕಿ ಡೊಕ್ಕರಿಸುವೆಂ ದೈತೇಯನಂ (ಜಗವಿ. ೩-೨೦). [ ಸಂ. ]

**ದೈತೇಯಿ** (ನಾ). ರಾಕ್ಷಸಿ : ಅಸುರಸ್ತ್ರೀ : ಪಟವುಕಾಯ್ ಎನ್ನವಳ್, ದೈತೇಯಿ ತೀವಿಸಳ್ (ಬಧ್ಯಪ್ರ. ೯೬-೧೦೦೦). [ ದೈತೇಯ + -ಇ ]

**ದೈತ್ಯ** (ಗು). ಅತ್ಯಧಿಕವಾದ ; ಅತಿಶಯವಾದ : ಕಾಯುರ್ಗೆ ಧಾವಿಸಿದನ್ನ ದೇವಾಸುರರ ವಿಸ್ತಾರ, ದೈತ್ಯಬಲಶಾಲಿ, ಆ ವಾಲಿ ! (ಶ್ರೀರಾಮಾ. ೪೦೦-೨೭೩). (ನಾ). ೨. ರಾಕ್ಷಸ ; ಅಸುರ : "ಸುರದ್ವಿಷರೆನೆ ದೈತ್ಯರ್ ಶುಕ್ರಶಿಷ್ಯರಾರ್ಗಮದೃಶ್ಯರ್" (ವಸ್ತುಕೋ. ೬-೩೩) ; ಕೃತಯುಗದಿಂದಾ ದವರ್ ತ್ರೇತೆಯೊಳ್ ಪುಟ್ಟಿದವರ್ ಮತ್ತೀಗಳೀ ದ್ವಾಪರದೊಳೊಗೆದವರ್ ದೈತ್ಯರಿರ್ದಪ್ಪರ್ (ಜಗವಿ. ೧-೬೬) ; ದೈತ್ಯರಂ ಕನಸೊಳ್ ಕಾಣಲು ಬಾರದೈ (ಸೋಮೇಶ. ೭೦) ; ಸಾಕು ದೈತ್ಯನ ಕಿಡಹು . . . ತಡವು ಮಾಡದಿರು (ಶುಭ್ಯಾದಿ. ೧೬-೨೩) ; ದೈತ್ಯರ ಕುಲವ ಸವೆಯಲು ವಿಷ್ಣು ಕ್ಷತ್ರಿಯವಧೆಗೆ ಭಾರ್ಗವನು (ಗಗಶಾ. ೧೬-೫೬). ೩. (ಅಲಂ) ದಡಿಗ ; ಟೊಣಪ. ೪. ಬಹಳ ದುಷ್ಟ ; ಜನರಿಗೆ ಹಿಂಸೆಯನ್ನು ಕೊಡುವವನು. ೫. ಬಹಳ ಶಕ್ತಿವಂತ ; ಅಮಾನುಷ ಪರಾಕ್ರಮಿ. [ ಸಂ. ]

**ದೈತ್ಯಕುಠಾರ** (ನಾ). ರಾಕ್ಷಸರಿಗೆ ಕೊಡಲಿಯಂತೆ ಇರುವವನು ; ರಾಕ್ಷಸರನ್ನು ನಾಶಪಡಿಸುವವನು ; ಕೃಷ್ಣ : ವೀರ ದೈತ್ಯಕುಠಾರ ಗಳಿತ ವಿಕಾರ ಗೋಪೀಜಾರ . . . ಮುರಹರ ಸಲಹಬೇಕೆಂದ (ಶುಭ್ಯಾಧೀ. ೩-೮೬). [ ದೈತ್ಯ + ಕುಠಾರ ]

**ದೈತ್ಯಗುರು** (ನಾ). ೧. ರಾಕ್ಷಸರ ಗುರು, - ಪುರೋಹಿತ ; ಶುಕ್ರಾಚಾರ್ಯ. ೨. ನವಗ್ರಹಗಳಲ್ಲಿ ಆರನೆಯದು ; ಶುಕ್ರಗ್ರಹ : "ಉಶನಾಃ, ಶುಕ್ರಃ, ಕಾವ್ಯಃ, ದೈತ್ಯಗುರುಃ, ಭಾರ್ಗವಃ, ಕವಿಃ, ಧಿಷ್ಣ್ಯಃ — ಈ ೭ ಶುಕ್ರನ ಪೆಸರ್" (ಹಲಾಯು. ೯-೯೮) ; ಧರಣೀಜಂ ಪದಿನೈದು . . . ದೈತ್ಯಗುರುವಿಪ್ಪತ್ತೊಂದು ಸಂವತ್ಸರಂ ಪರಮೋಚ್ಚಾಂಶದೊಳೊಂದಿ ನಿಂದೊಡದು ಪಿಂಡಾಯುಷ್ಯಮಕ್ಕುಂ ಧ್ರುವಂ (ಜಾತಕ. ೮-೧೧). [ ದೈತ್ಯ + ಗುರು ]

**ದೈತ್ಯಜೀವ** (ನಾ). ೧. ರಾಕ್ಷಸರ ಪ್ರಾಣ. ೨. ರಾಕ್ಷಸರ ರೂಪವಾದ ಚೈತನ್ಯ : ದೈತ್ಯರಿಗೆ ಸುಖವಾದರೂ ದೇವಾವೇಶದಿಂದಲೇ ಹೊರತು ದೈತ್ಯಜೀವರಿಗಿಲ್ಲ (ಹರಿದಾ. ೬-೧ ತಾತ್ಪರ್ಯ). [ ದೈತ್ಯ + ಜೀವ ]

**ದೈತ್ಯಧ್ವಂಸಿ** (ನಾ). ರಾಕ್ಷಸರನ್ನು ನಾಶಪಡಿಸುವವನು ; ದೈತ್ಯಾರಿ ; ವಿಷ್ಣು. [ ಸಂ. ದೈತ್ಯಧ್ವಂಸಿನ್ ]

**ದೈತ್ಯನಿಕಾಯ** (ನಾ). ರಾಕ್ಷಸರ ಸಮೂಹ, - ಗುಂಪು : ದಾಯವಿದು ತಮಗೆಂದು ದೈತ್ಯನಿಕಾಯ ಬಂದು ರಸಾತಳಕೆ ಕುರುರಾಯನನು ಕೊಂಡೊಯ್ದು ತಿಳುಹಿದರವರು ಸಾಮದಲಿ (ಕುಭ್ಯಾಅ. ೨೦-೬೩). [ ದೈತ್ಯ + ನಿಕಾಯ ]

**ದೈತ್ಯಮರ್ದನ** (ನಾ). = ದೈತ್ಯಧ್ವಂಸಿ : ದನುಜರ ಕಯ್ಯೊಳಿರ್ದಮರ್ದ ನಾವಗವಿವಾಟಿಕ್ಕೊಳಲೆಂದು ದೈತ್ಯಮರ್ದನನೆನಿಸಿರ್ಪವಂ ಕಪಟದಿಂದ ವಿಲಾಸಿನಿಯಾದ ವೇಷಮಂ ನೆನೆಯಿಸಿದಪ್ಪುದೀ ಪಸಿಯ ಬಣ್ಣಮಿವಳ್ಗೆನೆ (ಕಾದಂಪೂ. ೩೮). [ ದೈತ್ಯ + ಮರ್ದನ ]

**ದೈತ್ಯಮಹತ್ತರ** (ನಾ). ೧. ರಾಕ್ಷಸರಿಗೆ ಮಂತ್ರಿಯಾದವನು ; ಶುಕ್ರಾಚಾರ್ಯ. ೨. ಶುಕ್ರಗ್ರಹ : ನಿಲೆ ದೈತ್ಯಮಹತ್ತರನಸಿವಿಪದೊಳ್ ಸಮಸ್ತ ಧರಣೀಶನಕ್ಕುಮಕುಲೋದ್ಭವನುಂ (ಜಾತಕ. ೧೨-೦೩).
[ ದೈತ + ಮಹತ್ತರ ]

**ದೈತ್ಯರಿಪು** (ನಾ). ರಾಕ್ಷಸರ ಶತ್ರು ; ಅಸುರರ ವೈರಿ ; ದೈತ್ಯಾರಿ ; ಕೃಷ್ಣ : ಮಱುದಿವಸ ವೈಹಾಳಿಯಾನು ಹೊಱವಂಟರನಿಬರು ದೈತ್ಯರಿಪು ಸಹಿತ (ಕುಭ್ಯಾಅ. ೧೧-೧೯). [ ದೈತ್ಯ + ರಿಪು ]

**ದೈತ್ಯವೈರಿ** (ನಾ). = ದೈತ್ಯರಿಪು : ಧರಿಸಿಕೊಂಡಿಹ ದೈತ್ಯವೈರಿ ವಿರಿಂಚಿ ಮುಖ್ಯಾದಿತ್ಯಕಪಾಲಾಸ್ಥಿಮಾಲಾವಳಿಗಳೇ ಸಾಕ್ಷಿ (ಬಸಪು. ೫೪-೫೯).
[ ದೈತ್ಯ + ವೈರಿ ]

**ದೈತ್ಯಾಂತಕ** (ನಾ). = ದೈತ್ಯರಿಪು : ದೈತ್ಯಾಂತಕನಾವುದಿಂದೆಸವ ಲಕ್ಷ್ಮೀ ವಲ್ಲಭಂಗೆತ್ತಿದಾ ಗಗನಚ್ಛತ್ರದ ಹೇಮದಂಡಮೆನಿಸಲ್ ಸಾಲ್ವತ್ತು ಹೇಮಾಚಲಂ (ಜಗವಿ. ೧-೨೫) ; ಮೇಲು ಪೋಗಿನ ಸಿದ್ಧಿ ದೈತ್ಯಾಂತಕನ ಬುದ್ಧಿಯಲಿ . . . ಎನುತ್ತೈತಂದನಾ ಪಾರ್ಥ (ಕುಭ್ಯಾಅ. ೪-೩೪).
[ ದೈತ್ಯ + ಅಂತಕ ]

**ದೈತ್ಯಾಮಾತ್ಯ** (ನಾ). ೧ ರಾಕ್ಷಸರ ಮಂತ್ರಿ ; ಶುಕ್ರಾಚಾರ್ಯ. ೨. ಶುಕ್ರಗ್ರಹ : ತೂಲೆಯೊಳ್ ದೈತ್ಯಾಮಾತ್ಯಂ ನಿಲೆ . . . ಪುಟ್ಟಿದ ಮನುಜನವನಿಪಾಲಕನಕ್ಕುಂ (ಜಾತಕ. ೧೨-೧೬). [ ದೈತ್ಯ + ಅಮಾತ್ಯ ]

**ದೈತ್ಯಾರಾತಿ** (ನಾ). = ದೈತ್ಯರಿಪು : ದೈತ್ಯಾರಾತಿಗೆಱಗಿಯನಂತಶಯನಖ್ಯಾತಿ ವಿಭವವನೀಕ್ಷಿಸುತ ಹರುಷದಲಿ ನಡೆತಂದ (ಕುಭ್ಯಾಅ. ೧೯-೧೬).
[ ದೈತ್ಯ + ಅರಾತಿ ]

**ದೈತ್ಯಾರಿ** (ನಾ). = ದೈತ್ಯರಿಪು : ಒಲ್ದೀಕ್ಷಿಸಿದಂ ನಿಜಾಗ್ರಭವನಂ ದೈತ್ಯಾರಿ (ಜಗವಿ. ೪-೫೮). [ ದೈತ್ಯ + ಅರಿ ]

**ದೈತ್ಯೆ** (ನಾ). ೧. ರಕ್ಕಸಿ ; ರಾಕ್ಷಸಿ. ೨. ಒಂದು ಬಗೆಯ ಸುಗಂಧ ದ್ರವ್ಯ ; ಮುರೆ : "ತಾಲಪರ್ಣೀ, ದೈತ್ಯಾ, ಗಂಧಕುಟೀ, ಮುರಾ, ಗಂಧಿನೀ–೫ ಮುರೆಯೆಂಬುವ ಗ್ರಂಧಿಕ ಜಿನಸು" (ನಿಘಂಟಿ. ೦೨೩).
[ ಸಂ. ದೈತ್ಯಾ ]

**ದೈತ್ಯೇಂದ್ರ** (ನಾ). ರಾಕ್ಷಸರ ರಾಜ ; ಪ್ರಬಲನಾದ ರಾಕ್ಷಸ : ಚತುರಾಸ್ಯೇಂದ್ರಾದಿದೇವಕ್ ನಡೆದು ಜಲಧಿತಲ್ಪಂಗೆ ದೈತ್ಯೇಂದ್ರರು ದೃಪ್ತತೆಯಂ ಪೊಯ್ಕಲ್ಪೆ ಕಂಸಪ್ರಭೃತಿದಿತಿಜರಂ ಕೊಲ್ವೆನಾನೆಂದು ಪೂರ್ಣಾಚ್ಯುತದೇವಂ ದೇವಕೀಗರ್ಭದೊಳುದಯಿಸಲೆಂದಿರ್ದಂ (ಜಗವಿ. ೨-೪೪) ; ನಿನ್ನ ಪಾಡಿನ ದುರುಳರೇ ದೈತ್ಯೇಂದ್ರರೀತನ ಕೆಣಕಿದವರು (ಕುಭ್ಯಾಸ. ೯-೫೯) ; ಭ್ರಾಂತಿಗದ್ದಿದ ಮತಿವಿಕಾರದಾ ದೈತ್ಯೇಂದ್ರನಂ ತಂದನರಮನೆಗೆ . . . ಅತಿಪೀಡದಲಿ (ಶ್ರೀರಾಮಾ. ೬೧೧-೭).
[ ದೈತ್ಯ + ಇಂದ್ರ ]

**ದೈತ್ಯೇಂದ್ರಗುರು** (ನಾ). ೧. ರಾಕ್ಷಸರಾಜನ ಪುರೋಹಿತ, - ಆಚಾರ್ಯ ; ಶುಕ್ರಾಚಾರ್ಯ. ೨. ಶುಕ್ರಗ್ರಹ : ದೈತ್ಯೇಂದ್ರಗುರುವಿಂದೆ ವಾಗ್ಮಿ ಸುರೇಂದ್ರಾರ್ಚಿತನಿಂದೆ ಗೀತವಿದನಕ್ಕುಂ (ಜಾತಕ. ೦೫-೪).
[ ದೈತ್ಯೇಂದ್ರ + ಗುರು ]

**ದೈನಂದಿನ** (ಗು). ಪ್ರತಿದಿನದ ; ಪ್ರತಿದಿನದಲ್ಲೂ ಉಂಟಾಗುವ ; ಪ್ರತಿದಿನವೂ ಜರುಗುವ ; ದೈನಿಕ : ದೈನಂದಿನ ಸಾಮಾನ್ಯದ ನೀರಸವನೆ ಉಜ್ವಲಿಸಿದೆ ಅತೀಂದ್ರಿಯ ಆವೇಶದಲಿ ! (ಅನಿಕೇ. ೪೫-೨೦) ; ಪುರಂದರ,

ತ್ಯಾಗರಾಜ, ಸದಾರಂಗರ ಕೃತಿಗಳನ್ನು ಕೇಳಿದಾಗ . . . ನಮ್ಮ ಮನಸ್ಸು ದೈನಂದಿನ ರಾಗದ್ವೇಷಗಳನ್ನು ಮರೆತು ಪ್ರಶಾಂತಸ್ಥಿತಿಯನ್ನು ಮುಟ್ಟುತ್ತದೆ (ಭಾಕಲ. ೩೭೧) ; ದೈನಂದಿನ ಜೀವನಕ್ಕೆ ಸಂಬಂಧಿಸಿದ ಕೆಲಸಗಳು ಮೊದಲಿಗಿಂತ ಈಗ ಸುಲಭವಾಗಿ ನಡೆಯುತ್ತಿವೆ (ಜೀವಾಶ್ಯ. I ೫೬೫೩); ದೈನಂದಿನ ವರ್ತಮಾನಗಳನ್ನು ಪತ್ರಿಕೆಗಳಲ್ಲಿ ನೋಡಬೇಕು (ರೂಢಿ).

[ ಸಂ. ]

**ದೈನಂದಿನಪತ್ರಿಕೆ** (ನಾ). ಪ್ರತಿನಿತ್ಯವೂ ಹೊರಡುವ ಸಮಾಚಾರಪತ್ರಿಕೆ; ವೃತ್ತಪತ್ರಿಕೆ ; ದಿನಪತ್ರಿಕೆ : ಆ ದಿನದ ದೈನಂದಿನಪತ್ರಿಕೆಯಲ್ಲಿ ಸಿಡಿಮದ್ದಿನ ವಿಷಯವು ದೊಡ್ಡದೊಡ್ಡ ಅಕ್ಷರಗಳಲ್ಲಿ ಮುದ್ರಿಸಲ್ಪಟ್ಟು ಎಲ್ಲೆಲ್ಲಿಯೂ ಮಾರಾಟವಾಗುತಿದ್ದಿತು (ಬಿಕಾಶ. ೯೭). [ದೈನಂದಿನ+ಪತ್ರಿಕೆ]

**ದೈನಾಸ** (ನಾ). ೧. ಅನುಕಂಪ ಬರುವಂತೆ ಬೇಡಿಕೊಳ್ಳುವಿಕೆ ; ಕನಿಕರವುಂಟಾಗುವಂತೆ ಕೇಳಿಕೊಳ್ಳುವಿಕೆ. ೨. ದೈನ್ಯಭಾವ ; ದೀನತೆ : ಅದೆಷ್ಟೋ ದೈನಾಸದಿಂದ ಕಲ್ಪಿಸಿ ಹೇಳಿದ ಯಾವ ಸೇವಕರ ಮಾತಿನಲ್ಲಿಯೂ ಅವಳಿಗೆ ವಿಶ್ವಾಸ ಉಂಟಾಗಲಿಲ್ಲ (ಮಹಾಪೂ. ೫೧) : ಹೇಳು ಕಮಲವೆ ಮೇಲೆ ಮುಖವಮಾಡಿ ದೈನಾಸದಿಂದೇನು ನೋಡುತಿರುವೆ ? (ನವಿಲ್ಲ. ೩೪-೪).

[ <ಸಂ. ದೈನ್ಯ ]

**ದೈನಾಸಪಡು** 'ದೈನಾಸಬಡು' ನೋ.

**ದೈನಾಸಬಡು, ದೈನಾಸಪಡು** (ಕ್ರಿ). ದೀನತನವನ್ನು ಹೊಂದು ; ಕನಿಕರವುಂಟಾಗುವಂತೆ ವರ್ತಿಸು ; ಮೊರೆಯಿಡು : ಈ ಸಮ್ಮಿಲನದ ಸುದ್ದಿಯನ್ನು ಇನ್ನಾರಿಗೂ ಹೇಳಬಾರದೆಂದು ದೈನಾಸಬಡುತ ಬಿನ್ನವಿಸಿಕೊಂಡಳು (ಚೂಡಾಸಾ. ೫೦) ; ವೈದ್ಯರನಾರೆ ಕರಕೊಂಡು ಬರ್‍ರಿ . . . ಹೆಂಡತಿ ದೈನಾಸಬಟ್ಟು ಹೇಳಿಕೊಂಡಳು (ನಿರಾಥ. ೧೧೩) : ಆಚಾರ್ಯರು ದೈನಾಸಬಟ್ಟರು (ಸವಾಜೀ. ೩೫). **ದೈನಾಸಪಡು** : ಮನಸಿಲ್ಲದವಗ ದೈನಾಸಪಡೂದು ಯಾಕ ಬಿಡ (ಮುದ್ದು.ಹ. ೧೬೨). [ ದೈನಾಸ + ಪಡು$_1$ ]

**ದೈನಿಕ** (ಗು). ೧. ದಿನದಲ್ಲಿ ಉಂಟಾಗುವ : "ಒಂದು ದಿನದ ; ಒಂದು ದಿನ ಹಿಡಿಯುವ ; ದೈನಿಕ" (Diurnal. ಇಂಕಡಿ) ; ನಿನ್ನ ದೈನಿಕ ಕಾರ್ಯಕ್ರಮವೇನು ? (ರೂಢಿ). (ನಾ). ೨. ಪ್ರತಿನಿತ್ಯವೂ ಹೊರಡುವ ಸಮಾಚಾರ ಪತ್ರಿಕೆ ; ದಿನಪತ್ರಿಕೆ : ಮುಂಬಯಿಯ ವಿಖ್ಯಾತ ದೈನಿಕಗಳನ್ನೋದುವ ಎಲ್ಲ ವಿದ್ಯಾವಂತರಿಗೂ ಅದು ಗೊತ್ತಿದೆ (ಒಂಟಿರ. ೩).

[ ಸಂ. ]

**ದೈನ್ಯ** (ನಾ). ೧. (ಬಡತನ, ಅಪರಾಧ ಮೊದಲಾದ ಕಾರಣದಿಂದ ಉಂಟಾಗುವ) ಕರುಣಾಜನಕವಾದ ಸ್ಥಿತಿ; ದೀನತನ: "ದೈನ್ಯದಲಿ ಯಜ್ಞೋತ್ಸಾರದಲಿ ಕೋಪದಲಿ ಮನ್ಯುವೆಂದೆಂಬುದು" (ಮುಂಗರಾ. ೦೪೫-೨೮) ; "ದೈನ್ಯದಿ ಯಜ್ಞದಂತ್ಯದೊಳು . . . ಮನ್ಯುವೆನಿಕ್ಕುಂ" (ನಾನಾರ. ೩೭) ; ಮುಖದ ಕಾಮುಕಾವರ್ಣ್ಯಮುಮಂ ದೃಷ್ಟಿಯ ದೈನ್ಯಮುಮನಱಿದು ಏನಾನುಮೊಂದು ನೆವಂಬಡೆದೆದ್ದು (ವಂಚಿಕ. ೪-೧೨); ತನ್ನ ಮಾಡಿದ ತಪ್ಪು ತನ್ನಂ ನೋಯಿಸೆ ತಾನೆ ತಿಳಿಪಲೆಂದು ನುಡಿದಂ ದೈನ್ಯದ ಮಾತಂ (ಆಸಂಪು. ೮-೯) ; ಮುನಿದಿನಿಯನ ಕಡುಮೊನೆವಾತಿಗೆ ನೊಂದು ಕನಲದೆ ಗಾಱುವಡೆಯದೆ ತನುಮನಗಳ ತನ್ನ ಬಸಗೈದು ದೈನ್ಯವ ಕೊನರಿಸಿ ತಂಪುಗೊಳಿಪುದು (ಹದಿಬ. ೩-೨೩) ; ನಾರಾಯಣನು ದೈನ್ಯದಿಂದ ಬೇಡಿಕೊಂಡನು (ಕಂಟಹು. ೧೩೪) ; ದೈನ್ಯದಿಂದ ಬೇಡೋಕಿಂತ ದೈವಾಧೀನವಾಗೋದುತ್ತಮ (ಗಾದೆ). ೨. ದೀನಭಾವದಿಂದ ಕೂಡಿರುವವನು ; ಹೇಡಿ ; ಅಶಕ್ತ : ಪ್ರಿಯವ ನುಡಿದರೆ ದೈನ್ಯನೆಂಬರು ನಯದಿ ಬರಲಸಮರ್ಥನೆಂಬರು (ಕಾಶಿರಾ. ೦೫-೪೯). ೩. ವಂಚನೆಗೆ ಒಳಗಾದವನು: "ವಿಕೃತಂ ವಿಪ್ರಲಬ್ಧನೆನೆ ಸಲೆ ದೈನ್ಯನಕ್ಕು" (ಮುಂಗರಾ. ೭೨-೨೦). ೪. [ಕಾವ್ಯವಿ] ರಸಕ್ಕೆ ಪರಿಪೋಷಕಗಳಾದ ಮೂವತ್ತುಮೂರು ವ್ಯಭಿಚಾರಿಭಾವ ಅಥವಾ ಸಂಚಾರಿಭಾವಗಳಲ್ಲಿ ಒಂದು ; ದುರವಸ್ಥೆಯೊದಗುವುದು ಮೊದಲಾದ ಕಾರಣಗಳಿಂದ ಉಂಟಾಗುವ ಒಂದು ಬಗೆಯ ನಿರುತ್ಸಾಹ ಮನೋಭಾವ,-ಕುಗ್ಗಿದ ಮನಸ್ಸು ; P ಇದು ಪೆಚ್ಚುಮುಖ, ಕ್ಷೀಣಸ್ವರ ಮೊದಲಾದುವುಗಳಿಂದ ಅಭಿನಯಗೊಳ್ಳುತ್ತದೆ : ಮತಿ ನಿರ್ವೇದ . . . ಅಮರ್ಷದೈನ್ಯೋತ್ಸುಕ . . . ಮೃತಿಗಳಿವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೭೯೫) ; ಮನದ ಪರಿತಾಪದಿಂದಂ ಜನಿಯಿಸುಗುಂ ದೈನ್ಯಭಾವಮೆಂದದನಱಿ ಮುಂಡನಶೂನ್ಯರೂಪಮಳಿನಾನನ ವಿಕೃತಾಕಾರಕರಣಮುಮ್ಮ ಕ್ರಮದಿಂ (ಶೃಂಗಾರ. ೨-೨೩) ; ಆದಂ ಹೃತ್ಸ್ವಪದೌರ್ಗತ್ಯಾದಿಯೆ ದೈನ್ಯಕೆ ವಿಭಾವಮಂತಾ ಮುಸುಕಿಂಬಂದ ವ್ಯಜಾತ್ಯಾಗಂ ಮೆಯ್ಸಾದುನ್ನತಭಾರ ದೈನ್ಯವಾಗನುಭಾವಂ (ರಸರ. ೧೧೮ ಸೂತ್ರ) : ದುರ್ಗತಿಯಿಂದ ಜನಿಸುವುದು ದೈನ್ಯ (ಭಾರಮಿ. ೩೪೭).

ದೈನ್ಯವಾಚಾಯುತ = ದೀನಭಾವದಿಂದ ಮಾತನಾಡುವವನು ; ರಕ್ಷಣೆಗಾಗಿ ಬೇಡಿಕೊಳ್ಳುವವನು : ಚಾಪಚ್ಯುತರನಪಗತವಾಹನರ ಪರಿಮುಕ್ತಕೇಶಿಗಳ ಗತಿವಿಹೀನರ ದೈನ್ಯವಾಚಾಯುತರ ತರುವಲ್ಮೀಕ ಜಲಸಂಗತರನಿಱಿವುದು ಧರ್ಮವೇ (ಕುಮ್ಯಾಕ. ೨೬-೩೨). [ ಸಂ. ]

**ದೈನ್ಯಂಗವಿ** (ಕ್ರಿ). ದೀನತೆಯನ್ನು ಹೊಂದು ; ದೈನ್ಯಭಾವದಿಂದಿರು : ದೈನ್ಯಂಗವಿದು ಪೊಗಳುತ ಸಭಯಮಾನಸರಾಗಿ ವಂದಿಸುವ ಅವನಿಸುರರಿಗೆ ಅಭಯಮಂ ಕೊಟ್ಟು (ಬಸರ. ೫೭-೫೦). [ ದೈನ್ಯ + ಕವಿ$_1$ ]

**ದೈನ್ಯಂದೋಱು** (ಕ್ರಿ). ದೀನತನವನ್ನು ತೋರಿಸು: ಆ ತಪೋಧನರೊಳೊರ್ವಂ ಪ್ರಗಲ್ಭತಾಪಸಂ ಕಿಂಕರತೆಯನಾಳ್ದು ಕರಾಂಬುಜಂಗಳಂ ಮುಗಿದು ದೈನ್ಯಂದೋಱಿ ನಿಂದು (ಕಬಿಕಂ. ೨-೨೫೪). [ ದೈನ್ಯ + ತೋಱು ]

**ದೈನ್ಯಂಬಡು, ದೈನ್ಯವಡು** (ಕ್ರಿ). ೧. ದೀನತನವನ್ನು ಅನುಭವಿಸು : ತಾನು ಕೀಳೆಂಬ ಭಾವನೆಯನ್ನು ಹೊಂದು : ಘನದೈನ್ಯಂಬಡುವರ್ ಗುರುತ್ವಗೆಡುವರ್ ಗ್ರಾಸಕ್ಕೆ ಕುಗ್ರಾಮವಾಗೆ (ಸೋಮೇಶ. ೪೮): ನಾಡೆ ದೈನ್ಯಂಬಟ್ಟಭಯಮಂ ಬೇಡಿ . . . ಭಕ್ತರ ಕರುಣವಡೆವೆನು (ಬಸಪು. ೨೬-೭೭). ೨. ದೈನ್ಯದಿಂದ ಬೇಡಿಕೊಳ್ಳು,-ಪ್ರಾರ್ಥಿಸು : ಮಾರಸನ್ನಿಭನ ಪುಸಕಿ ಕರತಾರೆಂದುಯೆನಗೆ ದೈನ್ಯಂಬಡಲು (ನವಕೋ. ೨೬-೪೫). **ದೈನ್ಯವಡು** : ೨. ಕೇಳು ರಘುಪತಿ ಬಿನ್ನಹವನೀ ಖೂಳ ಕೈಮುಗಿದೆನಲು ಬಗೆವನೆ ಧಾಳಿಮಾಡುವೆ ವರುಣಲೋಕವ ಹಾಳುಮಾಡುವೆನು ಗೋಳಿಡಲು ನಾ ಕಟ್ಟ ತಹೆ ನೀ ಕಾಳುಮೂಳನ ಬೇಡಲೇತಕ್ಕೇಳು ರಾಘವ ದೈನ್ಯವಡದಿರುಯೆಂದ ಸುಗ್ರೀವ (ಕಾಶಿರಾ. ೦೫-೪೧).

ದೈನ್ಯಂಬಟ್ಟವ = ಮೋಸಕ್ಕೆ ಸಿಕ್ಕಿ ವ್ಯಥೆಯನ್ನು ಅನುಭವಿಸುತ್ತಿರುವವನು : "ವಿಕೃತಃ, ವಿಪ್ರಲಬ್ಧಃ-ಈ ೨ ದೈನ್ಯಂಬಟ್ಟವಂ" (ಹಲಾಯು. ೭೭-೨೨೮). [ ದೈನ್ಯ + ಪಡು$_1$ ]

**ದೈನ್ಯಗೂಡು** (ಕ್ರಿ). ದೀನತನವನ್ನು ಹೊಂದಿರು ; ಅತ್ಯಂತ ನಮ್ರತೆಯನ್ನು ಪಡೆ : ಒಂದಾನೊಂದುದಿನಮುಮಾದೇವಿಯು . . . ಆ ರಾಜಶೇಖರನ ಎಡದೊಡೆಯೊಳ್ಮೆಳಿತು ವಿಜ್ಞಾಪನಂಗೆಯ್ವಲ್ಲಿ ಮಹಾಭಕ್ತಿಯಿಂದ ಅತ್ಯಂತ ದೈನ್ಯಗೂಡಿ (ಸಕಪ್ಪ. ೬ ಷೋಡಶಾಪ್ರಕರಣ).

[ ದೈನ್ಯ + ಕೂಡು$_1$ ]

**ದೈನ್ಯದೃಷ್ಟಿ** (ನಾ). ದೀನತನವನ್ನು ವ್ಯಕ್ತಪಡಿಸುವ ನೋಟ : ಬಿಡಿದಿರ್ದ ಶಿವನ ಮೆಲ್ಲಡಿಯಂ ಬಿಟ್ಟು ದೈನ್ಯ ದೃಷ್ಟಿಯಿಂ ಶಿವನ ಮೊಗಮಂ ನೋಡುತ್ತಿರಲ್ (ಸಂಬಿರ.೧೭-೯೦); ಪೊಸಬೆಡೆಯೊಳ್ ತೊಡಂಕಿ ನೊಸಲೊಳ್ ನಡೆಪಾಡಿ . . . ಕರಂಗಳೊಳ್ ವಿರಾಜಿಸಿ ಪದದಲ್ಲಿ ಬಿಳ್ದುವು ಭವಾನಿಯ ದೂನಿಯ ದೈನ್ಯದೃಷ್ಟಿಗಳ್ (ಗಿರಿಕ. ೫-೮೭).

[ ದೈನ್ಯ + ದೃಷ್ಟಿ ]

**ದೈನ್ಯಭಾವ** (ನಾ). ೧. ದೀನತನ ; ದೈನ್ಯ. ೨. ದುಃಖ ; ವ್ಯಥೆ : ಮುಂದೆ ನಿಂದಿರ್ದ ಮೇದಿನೀದೇವಿಯ ದೈನ್ಯಭಾವಮಂ ವಿರಿಂಚಿ ಕಾರುಣ್ಯಚಿತ್ತದಿಂ ನೋಡಿ (ಆಗಪು. ೧-೨೭ ವ) ; ತರಣಿಕುಲತಿಲಕನೊಯ್ಯನೆ ದೈನ್ಯಭಾವದಿಂ . . . ಸೌಮಿತ್ರಿಗಿಂತೆಂದನು (ಕೃಮಿಹಾ. ೧೮-೩೭).
[ ದೈನ್ಯ + ಭಾವ ]

**ದೈನ್ಯವಚನ** (ನಾ). ೧. ದೀನತನದಿಂದ ಕೂಡಿದ ಮಾತು. ೨. ದುಃಖವನ್ನು ತೋಡಿಕೊಳ್ಳುವ ವಾಕ್ಯ ; ಮೊರೆ : ವ್ಯಾಕುಳಾಂಗನಾಜನದ ದೈನ್ಯವಚನವರಂಪರೆಗೇಳ್ದು (ಆಗಪು. ೬-೦೧೩ ವ): ಓವಿ ಓ ಎನದಿರ್ದೊಡೆಂತೆಲೆ ದೇವ . . . ಸಂಗಮದೇವ ಎನುತತಿ ದೈನ್ಯವಚನದಲಿ (ಬಸಪು. ೨೨-೩೩). [ ದೈನ್ಯ + ವಚನ ]

**ದೈನ್ಯವಡು** 'ದೈನ್ಯಂಬಡು' ನೋ.

**ದೈನ್ಯವದನ** (ನಾ). ೧. ದೀನತನವನ್ನು ತೋರಿಸುವ ಮುಖ. ೨. ದೀನತನವನ್ನು ತೋರ್ಪಡಿಸುವ ಮುಖವುಳ್ಳವನು ; ದೀನ : ಕೈಯಂ ಮುಗಿದು . . . ದೈನ್ಯವದನನುಂ ಕಾರ್ವಣ್ಯಾ ಕುಂಯನುಮಾಗಿ (ಬಸರ. ೬-೪೪). [ ದೈನ್ಯ + ವದನ ]

**ದೈನ್ಯವೃತ್ತಿ** (ನಾ). ೧. ಬಹಳ ದೀನತನದಿಂದ ಕೂಡಿದ ಜೀವನ ; ಹೀನವಾದ ಬದುಕು : ಕೊಳನ ಬಿಡು ಕಾದೇಳು ಹಿಂದಣ ಹಳವ ತೊಳೆ . . . ಭೂವಳಯಮಾನ್ಯನು ದೈನ್ಯವೃತ್ತಿಯ ಬಳಸುವರೆ ಸುಡು ಮರುಳೆ ಕುರುಪತಿ ಕೈದುಗೊಳ್ಳೆಂದ (ಕುಭಾಗ. ೩-೨೩). ೨. ದೀನಭಾವ ; ದೀನತನ ; ದೈನ್ಯ : ಅರಸ ದ ಶ ರ ಥ ನಾ ವಿಭಾಂಡುಕ ವರಕುಮಾರನ ಚರಣದಲಿ ತನ್ನರಸಿಯರು ಸಹ ದೈನ್ಯವೃತ್ತಿಯ ಭಕ್ತಿಭಾವದಲಿ . . . ವ್ಯೆಯಿಕ್ಕಿದನು (ತೊರರಾ. ೦-೬-೦೫). ೩. ಹೀನವಾದ ವ್ಯವಹಾರವುಳ್ಳುದು : ಗನ್ನಗತಕಂಗಳ ನೆಲೆಗಳಾವನ್ನಿಧಿಗಳತಿಮೋಹ ಮಾಯಾಸನ್ನವರ್ತಿಗಳಸ್ಥಿರಂಗಳು ದೈನ್ಯವೃತ್ತಿಗಳು . . . ವಾರಸತಿಯರ ಮನಸುಗಳು (ಬಸಪು. ೪೦-೬೬). [ ದೈನ್ಯ + ವೃತ್ತಿ ]

**ದೈರ್ಘ್ಯ** (ನಾ). ೧. ಉದ್ದ ; ನೀಳ ; ಆಯಾಮ : "ಸು (ವ್ಯ)ಕ್ತಂ ದೈರ್ಘ್ಯನಾಮಮುಱೆಗಾಯಾಮಂ" (ವಸ್ತುಕೋ. ೦೦೩-೦೫) ; ಅರಿರೌದ್ರಂ ಕರದೈರ್ಘ್ಯಮುಲ್ಲಸದಹೀನಾಲಂಕೃತಂ . . . ರಕ್ಷಿಕ್ಕೆ ಭೂಚಕ್ರಮಂ (ಆಗಪು. ೦-೩) ; ಹಣೆಯಿಂದ ಬಾಲದವರೆಗೆ ನೀಳವಾಗಿ ಮಾಡಿದ ಅಳತೆಯು ದೈರ್ಘ್ಯವೆನಿಸಿಕೊಳ್ಳುವುದು (ಸೌಗಂಧಿ. ೨೬೭-೯) ; ಇದು ಚರಮವಾಳಿ ದೈರ್ಘ್ಯದಿಂ ಗುಣಿಯಿಸಿ ವಿಶೇಷಾಧಿಕವಾಗಿ ಮಾಡುತ್ತಿರಲು (ಕ್ಷೇತ್ರ. ೩೨-೨೨). ೨. ಎತ್ತರ. ೩. ವಿಶಾಲತೆ ; ಹರಹು : "ದೈರ್ಘ್ಯಂ, ಆಯಾಮಃ, ಆರೋಹಃ–೩ ಉದ್ದವಾಗಿರುವ ತಿರ್ಯಕ್ಪರಿಣಾಹ, ನೀಳವಾಗಿರುವಿಕೆ" (ಸಿದ್ಧಾಂತಿ. ೨೦೩). [ ಸಂ. ]

**ದೈವ** (ಗು). ೧. ದೇವರಿಗೆ ಸಂಬಂಧಪಟ್ಟ ; ದೇವರಿಗೆ ಸೇರಿದ. (ನಾ). ೨. ದೇವತೆ ; ದೇವರು ; ಭಗವಂತ : ಪದಿನಾಲ್ಕುಂ ರತ್ನಕ್ಕಂ ಮೊದಲೆನಗೀ ಚಕ್ರರತ್ನಮಿದಱಂ ಮೇಲಾವುದು ದೈವಮೆನಗಿದಯೋಧ್ಯೆಯನಿದು ಪುಗದೆ ತಱುಂಬಿ ನಿಂದ ಕಾರಣಮೇನೋ (ಆದಿಪು. ೦೪-೭) ; ಮಡಕೆ ದೈವ ಮೊಱ ದೈವ ... ದೈವ ದೈವವೆಂದು ಕಾಲಿಡಲಿಂಬಿಲ್ಲಾ. ದೈವನೊಬ್ಬನೆ ಕೂಡಲಸಂಗಮದೇವ (ಬಸವ. ೫೩೩) ; ಎನ್ನ ಕರುಣಾಸಿಂಧುವೇ ನೀವೆನ್ನುತಿ ಪ್ರಿಯಬಂಧುವೇ ನೀವೆನ್ನ ಸತ್ಕುಲದೈವವೇ ಮನೆದೈವವೇ ಅಕಟ (ಬಸಪು. ೩೬-೩) ; ದೈವದಾಧೀನದಲಿ ಜಗವಾ ದೈವ ಮಂತ್ರಾಧೀನ (ಕುಭಾಉ. ೪-೫೦) ; ದೈವವು ಮಂತ್ರವು ತೀರ್ಥವು ವೈದ್ಯವು . . . ಲೋಗರಿಗಿವು ದಿಟಸಿದ್ಧಿಯನೀವುವು (ಕುಶಾಪ. ೬೬-೬೬). ೩. ಕ್ಷುದ್ರದೇವತೆ ; ಪರಿಮಿತವಾದ ಪ್ರಭಾವವುಳ್ಳ ದೇವತೆ : ಲೋಗರ ಬೇಡಿಕೊಂಡುಂಬ ದೈವಂಗಳು ತಾವೇನ ಕೊಡುವುವು (ಬಸವ. ೫೫೫). ೪. ಅಧಿಕಾರಿ ; ಒಡೆಯ ; ಪ್ರಭು : ಜಗದೊಳು ಭೋಗಮೋಕ್ಷಂಗಳಿಗೆ ಶಿವನೇ ದೈವವಹುದು (ಬಸಪು. ೪೯-೧೨). ೫. ಜನ್ಮಾಂತರದಲ್ಲಿ ಮಾಡಿದ ಪುಣ್ಯಫಲ ; ಅದೃಷ್ಟ ; ಭಾಗ್ಯ ; ಸುಕೃತ : ದೈವವಿದಿರ್ಚಿ ಬಂದುದು ಜಗಜ್ಜಯಮಂ ತಳೆ ದೇವ (ಶಾರಂಪು. ೪೨೭) ; ಪುರುಷಂ ದೈವಮೆ ಶರಣೆಂದಿರಲಾಗದು ತನಗೆ ತಾನೆ ಮಾಡದು ದೈವಂ (ಪಂಚತಂ. ೦೯೧–೨೦) ; ತನ್ನ ಚಿಂತೆಯದೊಂದು ದೈವದ ಗನ್ನಗತಕವದೆರಡು ಭಾವದ ಬನ್ನಣೆಯ ಬಗೆ ಮೂಱು ದೈವದ ಭಿನ್ನಮುಖ ನಾಲ್ಕು (ಕುಭಾಉ. ೩-೩) ; ದೈವ ಅಂದರೆ ಅದೃಷ್ಟ ಅಥವಾ ಕರ್ತಾ ಜೀವ (ಹಸಾರ. ೩-೧೦ ವಿಜ್ಞಾನಾರ್ಥ). ಕಾರ್ಯಸಾಧನೆಯಾಗಲು ಯತ್ನ ಮಾಡದಿದ್ದರೆ ನಮಗೆ ದೈವವು ಎಂತು ಸಹಾಯ ಮಾಡೀತು ? (ಸಾವಿತ್ರಿ. ೩) ; ಕಣ್ಣು ಕೊಂಡುಹೋದ ದೈವ ಮತೀಕೊಟ್ಟಿತು (ಗಾದೆ) : ತಾನೆ ಇಂದೆಣಿಸಿದರೆ ದೈವವೊಂದೆಣಿಸಿತು (ಗಾದೆ). ೬. ದೆವ್ವ ; ಪಿಶಾಚಿ ; ಭೂತ : ಅರಸನ ಅಂಕೆಯಿಲ್ಲ ದೈವದ ಕಾಟವಿಲ್ಲ (ಗಾದೆ). ೭. (ಉಕ) ಸಮಾಜ ; ಕುಲದ ಹಿರಿಯರು : ಅವಳ 'ದೈವ'ದ ಗಂಡಸರು ತಮ್ಮ ವ್ಯಕ್ತಿಯನ್ನು ಕೈಕೊಳ್ಳಲು ಹೊಲ, ಕಾಡುಗಳಿಗೆ ಹೋಗಿದ್ದರೆ ಹೆಂಗಸರು ತಿರುವೆಗೆ ಹೋಗಿ ಅದೆಷ್ಟೋ ಸಮಯ ಕಳೆದುಹೋಗಿದೆ (ಬನಸಿ. ೪೯). ೮. ಆಸ್ತಿ ; ಐಶ್ವರ್ಯ.

ದೈವ ತೆರೆ=ಅದೃಷ್ಟವುಂಟಾಗು : ದೈವ ತೆರೆದರೆ ಬಡವ ಬಲ್ಲಿದನಾಹ (ಕೂಶಿ). ದೈವದ ಕಲ್ಲು = ಕ್ಷುದ್ರದೇವತೆಗಳನ್ನು ಪೂಜಿಸುವವರು ದೇವತಾಪ್ರತಿನಿಧಿಯೆಂದು ಪೂಜಿಸುವ ಕಲ್ಲು,-ಪ್ರತಿಮೆ : ಅವರೊಂದುದಿನ ಗ್ರಾಮದ ದೈವದ ಕಲ್ಲನ್ನು ತಂದು, ತಮ್ಮ ಬಚ್ಚಲಮನೆಯಲ್ಲಿ ಹಾಸಿದರು (ಹುಚ್ಚುಮು. ೩೩). ದೈವದ ಕೊಡಿ = ದೇವರ ಬಾವುಟ: ಅದಕ್ಕೆ ವರುಷ ವರುಷ ದೈವದ'ಕೊಡಿ' ಕಟ್ಟಿಸುತಿದ್ದರು. ಆ ಬಳಿಕ ಅದನ್ನಾರಾದರೂ ಕದ್ದು ತಿಂದರೆ ಅವರು ದೈವದ ಕೋಪಕ್ಕೆ ತುತ್ತಾಗುವರೆಂದು ನಂಬಿಕೆ (ರಕ್ತರೂ. ೨). ದೈವದಚ್ಚು = "ದೇವರ ವಿಗ್ರಹಾದಿಗಳಂ ಬರೆದಿರುವ ಯಂತ್ರ" (ಶಬ್ದಸಾ. II, ೮೨೨ ಟಿಳು) : ಪರಕೆಯ ದೈವದಚ್ಚುಗಳನಚ್ಚರಿಯಾಗಿರೆ ಕಟ್ಟುವರ್ ಕೆಲರ್ ಕೊರಲೊಳ್ (ಶಬ್ದಸಾ. II, ೮೨೨; ಧರ್ಮಾಶ). ದೈವರ್= ಅದೃಷ್ಟಶಾಲಿಗಳು ; ಭಾಗ್ಯವಂತರು ; ಕೈವಾರದ ಕೈಮತದಿಂ ಕೈವಾರದಿ ಗೆಲ್ದೆ ಲಜ್ಜತೆಯನೆಂತೆನೆ ಕೇಳ್ ದೈವರ್ಕೂಡಿದೊಡೆತ್ತಂ ದೈವಂ ಮರುಳಾದುದೊಂಬುದಂ ಕೇಳ್ದಱಿಯಾ (ಮರತಿ. ೧೧-೪೩). ದೈವುಳ್ಳತನ = ಶ್ರೀಮಂತಿಕೆ ; ಐಶ್ವರ್ಯ : ಸಂಸಾರದಲ್ಲಿ ನಮಗೆ ದೈವುಳ್ಳತನವಾಗಲಿ ಬಡತನವಾಗಲಿ ಬರುವದು (ಮುಂಬಯಿ. ೮-೧೯೦). ದೈವುಳ್ಳವ = ಐಶ್ವರ್ಯವಂತ ; ಧನಿಕ ; ಸಾಹುಕಾರ : ಅವನು ಬಡವನೇ ಆಗಲಿ, ದೈವುಳ್ಳವನೇ ಆಗಲಿ, ಈ ತರದ ಕೆಲವು ಸಣ್ಣ ದೊಡ್ಡ ಸಂಧಿಗಳು ಬಂದೇಬರುತ್ತವೆ (ಹರಿಸಂ. ೦೯೯) ; ದೈವುಳ್ಳವರಿಗೆ ದಯವೇ ಇಲ್ಲ! ತಿತ್ತಿರಿ ತುಂಬಿದೆ ಕೂಳಿನ ಕೋಟಿ! (ಗರಿ. ೫೪-೧೧) : ದೈವುಳ್ಳವರ ಮಗನೆಂಬ ಗರ್ವವಿದ್ದಿಲ್ಲ (ನಿರಾಳ. ೭೭). [ ಸಂ. ]

**ದೈವಂಬೊಱಸು** (ಕ್ರಿ). ಅದೃಷ್ಟವನ್ನೇ ನಂಬು ; ಅದೃಷ್ಟದ ಮೇಲೆ ಭಾರಹಾಕು : ''ಯದ್ಭವಿಷ್ಯ, ದೈವಪರಃ–ಈ ೨ ದೈವಂಬೊಱ[ಱು] ಸಿರ್ಪವಂ'' (ಹಲಾಯು. ೬೨-೨೨೨). [ ದೈವ + ಪೊಱಸು ]

**ದೈವಕಾರ್ತಿ** (ನಾ). ಮಾಟ, ಮಂತ್ರ, ತಂತ್ರಗಳನ್ನು ಮಾಡುವ ಹೆಂಗಸು ; ಮಂತ್ರಗಾರ್ತಿ : ಆ ದೈವಕಾರ್ತಿ ಬಂದು ಮಾಯಾದೇವತೆಗಳನೀ ಪರಿಯಿಂದೊಲಿದಾರಾಧಿಸಿದಳು (ಶಬರಸಾಂ. ೨೫-೦೦೭).
[ ದೈವಕಾಱ + – ತಿ (< –ಇತ್ತಿ) ]

**ದೈವಕಾಱ** (ನಾ). ಮಾಟ, ಮಂತ್ರ, ತಂತ್ರಗಳನ್ನು ಮಾಡುವವನು ; ಮಂತ್ರಗಾರ ; ಮಾಟಗಾರ. 'ದೈವಕಾರ್ತಿ' ಪರಾ.
[ ದೈವ + – ಕಾಱ ]

**ದೈವಕೃತ** (ಗು). ೧. ಅದೃಷ್ಟದಿಂದ ಮಾಡಿದ,-ಉಂಟಾದ: ನೀವು ಸೇನಾಪತ್ಯವನು ಸಂಭಾವಿಸಿರೆ ಸಾಕಿನ್ನು ಮಿಗಿಲಾ ದೈವಕೃತ ಪೌರುಷವ ನಾಳಿನೊಳಱಿಯಬಹುದೆಂದ (ಕುವ್ಯಾ.ಕ. ೧-೧೮). ೨. ಅದೃಷ್ಟ; ದೈವ. [ ದೈವ + ಕೃತ ]

**ದೈವಕೃತಿ** (ನಾ). ದೇವತೆಗಳು ಮೆಚ್ಚುವಂತಹ ಕಾರ್ಯ: ನೀವು ಮೊದಲಲಿ ಬೆಸಸಿದಿರಿ ಮಾಯಾವಿಗಳ ಮಾಯೆಯಲಿ ಗೆಲುವುದು ದೈವಕೃತಿಯಿದು ರಾಜಮಂತ್ರದ ಸಾರತರವೆಂದು (ಕುವ್ಯಾ.ಗ. ೭-೪೪). [ ದೈವ + ಕೃತಿ ]

**ದೈವಗತಿ** (ನಾ). ಅದೃಷ್ಟದ ಘಟನೆ; ಅದೃಷ್ಟದ ಪರಿಣಾಮ; ದೈವೇಚ್ಛೆ: ದೈವಗತಿಗಾರಳಲಿ ಮಾಡುವುದೇನೆನುತ ನುಡಿಸಿದನು ಕುರುಪತಿಯ (ಕುವ್ಯಾ.ಗ. ೭-೨). [ ದೈವ + ಗತಿ ]

**ದೈವಗೇಡಿ** (ನಾ). ಅದೃಷ್ಟಹೀನ; ದುರ್ದೈವಿ; ದುರದೃಷ್ಟವಂತ: ಇದಕ್ಕೆ ದೈವಗೇಡಿಯಾದ ನಾನು ಇನ್ನೇನು ಮಾಡಲಿ (ಉರಾಚ. ೩೦-೩೮ ವ); ಈ ದೈವಗೇಡಿಗಳಿಗೆ ದೇವರನ್ನು ಬಿಟ್ಟು ಯಾರೂ ಕಾಯೋರಿಲ್ಲ (ಪ್ರೇಮಾಶ್ರ. ೪೭). [ ದೈವ + ಕೇಡು + – ಇ ]

**ದೈವಘಟನೆ** (ನಾ). =ದೈವಗತಿ: ಈಸು ಪೌರುಷ ದೈವಘಟನೆಯೊಳೀಸು ಪರಿಯಂತಾಯ್ತು (ಕುವ್ಯಾ.ಸ. ೧೦-೭); ಆ ಮಹಾಗಿರಿದುರ್ಗವಿದು ತಾ ವ್ಯೋಮಕೇಶನು ಗೆಲಿದ ದುರ್ಗದ ಕೈಮೆಗಿಮ್ಮಡಿಸಾಧ್ಯವಾದುದು ದೈವಘಟನೆಯಲಿ (ತೊರರಾ. ೫೪-೧೪). [ ದೈವ + ಘಟನೆ ]

**ದೈವಚಿಂತಾಸಕ್ತ** (ನಾ). ಭಗವಂತನ ಧ್ಯಾನದಲ್ಲಿ ನಿರತವಾದುದು: ದೈವಚಿಂತಾಸಕ್ತಮಾದೆನ್ನ ಹೃದಯದೊಳು ಹೊಮ್ಮಲಿಂತಃಶರ್ಮಲಹರಿ ಲಹರೀ (ಪುಲಿದೇ. ೫೯-೦೦). [ ಸಂ. ]

**ದೈವಜ್ಞ** (ನಾ). ಗ್ರಹಗತಿಯನ್ನು ತಿಳಿದು ಜನರಿಗೆ ಮುಂದೆ ನಡೆಯುವ ಶುಭಾಶುಭ ಫಲಗಳನ್ನು ತಿಳಿಸುವವನು; ಭವಿಷ್ಯಜ್ಞ; ಜೋಯಿಸ: "ಕಾರ್ತಾಂತಿಕಂ . . . ದೈವಜ್ಞನಾದಿಶಿಗಣಕಂ ತಾನಕ್ಕುಂ" (ವಸ್ತುಕೋ. ೩೦-೨೦); ಮಕ್ಕಳನಾರ್ಗೆ ಕುಡುವಮೆಂದು ದೈವಜ್ಞನಂ ಬೆಸಗೊಂಡೊಡೆ (ವಡ್ಡಾರಾ. ೬೧-೨೦); ದೈವಜ್ಞವದನತಿಲಕಂ ... ಜಾತಕತಿಲಕಂ ತ್ರೈಲೋಕ್ಯತಿಲಕಮಿದು ಕೇವಲಮೇ (ಜಾತಿತ. ೨೪-೩೮); ಚಂಡ ದೈವಜ್ಞನನಧಿಕ ಗುಣಮಂಡನನ ಬಹುಶಾಸ್ತ್ರಪಠನನ ಪಂಡಿತನ ಪೌರೋಹಿತನ ಮಾಡುವುದು (ಕುವ್ಯಾ.ಉ. ೩-೮೬). [ ಸಂ. ]

**ದೈವಜ್ಞೆ** (ನಾ). ಜ್ಯೋತಿಷ್ಯವನ್ನು ತಿಳಿದಿರುವವಳು. [ ಸಂ. ದೈವಜ್ಞಾ ]

**ದೈವತ** (ಗು). ೧. ದೇವರಿಗೆ ಸಂಬಂಧಿಸಿದ,- ಸೇರಿದ. (ನಾ). ೨. ದೇವತೆ; ದೇವರು: "ಆದಿತ್ಯಃ . . . ಅಮೃತಾಶನಃ, ಅನಿಮಿಷಃ, ದೇವಃ (ತಥಾ) ದೈವತಂ-ಈ ೨೧ ದೇವರ್ಕಳ ಪೆಸರ್" (ಹಲಾಯು. ೨-೪); ಬಂದೆವು ಇಕೊ ಹಿಮಪರ್ವತ! . . . ನಿಂತಿದೆ ಅಕೊ ಶಿವದೈವತ! (ಕ್ಶ್ರೀಂಚಧ್ವ. ೨೦-೧೧); ಪಂತರ ಮನೆಯ ದೇವರನ್ನು ತನ್ನ ದೈವತವನ್ನಾಗಿ ಮಾಡಿಕೊಂಡಳು (ದೀಪಕ. II, ೧೬೮); ಕಲೋಪಾಸಕನಿಗೆ ಈ ಎರಡೂ ಮೂಲಭೂತ ದೈವತಗಳು ಕೊನೆಗೆ ಒಂದಾಗಿಯೇ ಕಾಣಿಸಿಕೊಳ್ಳುತ್ತವೆ (ಸವ್ಯಸಾ. ೬೦). [ ಸಂ. ]

**ದೈವದತ್ತ** (ನಾ). ದೇವರಿಂದ ಕೊಡಲ್ಪಟ್ಟುದು; ದೈವಿಕವಾಗಿ ಬಂದುದು; ಶ್ರೇಷ್ಠವಾದುದು: ನೋಡು ನಿನ್ನ ಕಲೆ ದೈವದತ್ತವಾದದ್ದು (ಹುತಗೀ. ೧೩೦). [ ದೈವ + ದತ್ತ ]

**ದೈವದುರ್ವಿಪಾಕ** (ನಾ). ವಿಧಿಯ ದುಷ್ಪರಿಣಾಮ; ದುರ್ದೈವ: ದೈವದುರ್ವಿಪಾಕದಿಂದ ಆ ಶ್ರೀಮಂತ ದರಿದ್ರನಾಗಿಬಿಟ್ಟ (ರೂಢಿ). [ ದೈವ + ದುರ್ವಿಪಾಕ ]

**ದೈವದೂರ** (ನಾ). ಭಾಗ್ಯದಿಂದ ದೂರವಾದವನು; ಅದೃಷ್ಟಹೀನ; ದುರ್ದೈವಿ: ದೈವದೂರರು ಧರ್ಮಹೀನರು ನೆಯ್ದು ನೆಯ್ಗಗಳೆನುತ ಮಿಗೆ ಬಿಸುಸುಯ್ದು ತಿರ್ದರು ಕರ್ಣಕೃಪಗುರುನಂದನಾದಿಗಳು (ಕುವ್ಯಾ.ದ್ರೋ. ೧೪-೪೬); ದೈವದೂರರಿಗೆಂತು ಸೇರುವುದುಚಿತ ಬೋಧೆಗಳು (ಕಾಶಿರಾ. ೨೩-೦೫); ಭವನಗೆಗೆ ನೆಟ್ ಬರಿಸಿ ಕೊಲುವನಲಾ ಕೃತಾಂತನು ದೈವದೂರರನು (ನಿಘಾಗ. ೨-೧-೮). [ ದೈವ + ದೂರ ]

**ದೈವದ್ರೋಹ** (ನಾ). ದೇವರುಗಳ ಬಗೆಗೆ ಮಾಡುವ ಅಪಚಾರ; ದೇವಾಲಯ ಮೊದಲಾದುವುಗಳ ಸ್ವತ್ತನ್ನು ಅಪಹರಿಸುವುದೇ ಮೊದಲಾದ ದುಷ್ಕೃತ್ಯ: ಗುರುವಿರೋಧ ಮಹೀಬುಧರ ಮತ್ಸರವು ದೈವದ್ರೋಹ ... ವೆಂಬಿವನರವರಿಸದಂಗೈಸೆ ಭೂಪನ ಸಿರಿಗೆ ಮೊಳೆಯದೆ ಕೇಡು (ಕುವ್ಯಾ.ಉ. ೩-೬೯); ಆವ ವಿಪ್ರದ್ರೋಹವೋ ತನಗಾವ ದೈವದ್ರೋಹವೋ ಶಿವ ಆವ ಪುಣ್ಯವನಳಿಸಿದೆನೊ (ಕಾಶಿರಾ. ೩೦-೯೩); ಬಗೆವೊಡಿವು ಮುನ್ನ ಮಾಡಿರ್ದ ದೈವದ್ರೋಹದಫಳದಿಂದೆ ಬನದ ಪೊಜ ವಳಯದೊಳ್ಪುಹುಕಂಟಕಿಗಳಾಗಿ ಬಂದು ಸಂಭವಿಸಿರಲ್ ತಳೆತ ಹೊಂಗೇದಗೆಗಳು (ಪ್ರಮಿಥಾ. ೩-೩೩). [ ದೈವ + ದ್ರೋಹ ]

**ದೈವದ್ರೋಹಿ** (ನಾ). ದೇವರಿಗೆ ದ್ರೋಹವನ್ನು ಮಾಡುವವನು,- ಅಪಚಾರ ಮಾಡುವವನು: ದೈವದ್ರೋಹಿಗೆತ್ರಣ ಲೇಸು ಬಹುದೆಂದ (ಕುವ್ಯಾ.ದ್ರೋ. ೧೨-೧೪); ದೈವದ್ರೋಹಿಗಳು ನಿಮಗೆ ಆರಿವಿಜಯವೆಲ್ಲಿಯದು ನೀವ್ ಮನಬಂದರ್ಕೆ ನಿಮ್ಮನ್ನಯವ ಸಂಹರಿಸಿದಿರಿ ಸಾಕೆಂದು ಸಂಜಯ ತೂಗಿದನು ಶಿರವ (ಕುವ್ಯಾ.ಕ. ೧-೦೩); ಏಳು ದೈಹದ್ರೋಹಿ ಭೂದಿವಿಜಾಳಿ ನಿಂದಕ ನಿಂದಿರೆಸುರರ ಕಾಲಕರ್ಮದ ಮೃತ್ಯು ಬಂದಿದೆ ನೋಡು ಕಣ್ದೆರೆದು (ತೊರರಾ. ೬-೯೭-೩೦). [ ಸಂ. ದೈವದ್ರೋಹಿನ್ ]

**ದೈವಪರ** (ನಾ). ೧. ದೇವರಲ್ಲಿ ಒಲವುಳ್ಳವನು; ದೈವಭಕ್ತ: ಅವನು ಒಳ್ಳೆಯ ಸಾತ್ವಿಕ ಮತ್ತು ದೈವಪರ (ರೂಢಿ). ೨. ಕೇವಲ ಅದೃಷ್ಟವನ್ನೇ ನಂಬಿಕೊಂಡಿರುವವನು; ಪೌರುಷಪ್ರಯತ್ನವನ್ನು ಮಾಡದಿರುವವನು: ಜ್ಞಾತಿಬಹಿಷ್ಕೃತಂ ವ್ಯಸನಿ ದೈವಪರಂ ಶಿಶು ದೀರ್ಘರೋಷಿ . . . ಎನಿಪ ನರಪನೊಳೆಂದುಂ ವಿಜಿಗೀಷುಗಳಪ್ಪ ಮಹೀಭುಜರೇದುಂ ಸಂಧಿಪಾಡರ್ (ಪಂಚತಂ. ೨೨೦-೭). [ ಸಂ. ]

**ದೈವಪುರುಷ** (ನಾ). ದೇವಾಂಶದಿಂದ ಹುಟ್ಟಿದವನು; ದೇವಾಂಶಸಂಭೂತ; ಮಹಾತ್ಮ: ಮುನಿಪನ ಬರಿಸಲೆನ್ನಳವಹುದೆ ಕೆರಳಿದಡುರುಹಿ ಕಳೆಯನೆ ದೈವಪುರುಷರು ಸುಲಭರೇ (ಕಾಶಿರಾ. ೧-೪೧). [ ದೈವ + ಪುರುಷ ]

**ದೈವಪ್ರೇರಣೆ** (ನಾ). ಅಂತಃಪ್ರೇರಣೆ; ತಾನಾಗಿಯೇ ಉಂಟಾಗುವ ಅಂತರಂಗ ಪ್ರವೃತ್ತಿ: ಹೊಮ್ಮುಗವೆತ್ತ ವಾನರರ ಸೇರುಪಡಿ ತಾನೆತ್ತ ದೈವಪ್ರೇರಣೆಯದ್ದೆ ಸಲ್ಲದಿದು ನಾವಾರು ಮಾಡುವುದಲ್ಲ (ತೊರರಾ. ೬-೩೦-೮೪). [ ದೈವ + ಪ್ರೇರಣೆ ]

**ದೈವಬಲ, ದೈವಬಳ** (ನಾ). ಅದೃಷ್ಟದ ಶಕ್ತಿ,-ಪ್ರಭಾವ,-ಮಹಿಮೆ: ಕುರುಪತಿಗಿಲ್ಲ ದೈವಬಲಮಾಜಿಗೆ ಮೇಲ್ಮಲೆಗೆಯ್ವರಾಗಳುಂ ಗುರು ಗುರುಪುತ್ರ ಸಿಂಧುಸುತರಾಳ್ದನುಮೆನ್ನನೆ ನಚ್ಚಿ ಪೆರ್ಚಿ ಮುಂ ಪೊರೆದನಿದಿರ್ಚಿ ಕಾದುವರುಮೆನ್ನಯ ಸೋದರರೆಂತು ನೋಡಿ ಕೊಕ್ಕರಿಸದೆ ಕೊಲ್ವೆನೆನ್ನೊಡಲನಾಂ ತವೆವೆಂ ರಣರಂಗಭೂಮಿಯೊಳ್ (ಪಂಪಭಾ. ೯-೬೦); ಆಗಳ ಪಗತವಿಷಾದರುಮುಪಗತಪ್ರಮೋದರುಮಾದಂತಃ ಪುರಾವರೋಧಜನಂಗಳೆಲ್ಲಂ ತನ್ನ ಮೇಗಿಲ್ಲದ ಬಲ್ಲಾಳ್ತನಮುಮಂ ದೈವಬಲಮುಮಂ ಮೆಚ್ಚಿದು (ಶಾಂತಿಪು. ೮-೫೪ ವ); ದೈವಪೌರುಷದೊಳಗೆ ಶಿವ ಶಿವ ದೈವಬಲವೇ ಬಲವಲಾ (ಕುವ್ಯಾ.ದ್ರೋ. ೬೪-೪೬). ದೈವಬಳ: ಪಾಂಡವರ್ ಬಳಸಂಪನ್ನರುದಗ್ರದೈವಬಳಸಂಪನ್ನರ್ (ಪಂಪಭಾ. ೧೦-೩). [ ದೈವ + ಬಲ ]

**ದೈವಬಳ** 'ದೈವಬಲ' ನೋ.

**ದೈವಭಕ್ತಿ** (ನಾ). ದೇವರ ಮೇಲಿನ ಅತಿಶಯವಾದ ಪ್ರೀತಿ: ತಾಯಿದಿರು ಇಂತ ದೃಢಮನ ದೈವಭಕ್ತಿ ಧೃತಿ ಸತ್ಯಚರಿತವ ಮೆರೆಯಬೇಕು (ನಪಜಾ. II, ೩೩); ಅವರು ಬಾಳುವುದು ದೈವಭಕ್ತಿಪೂರಕವಾಗಿ ಸಾಯುವುದು ದೈವಭಕ್ತಿಪೂರಕವಾಗಿ (ಭಾರಿಠ. ೩೨೬). [ ದೈವ + ಭಕ್ತಿ ]

**ದೈವಮಾಯೆ** (ನಾ). ವಿಧಿಯ ಲೀಲೆ, –ವಿಲಾಸ: ದೇವಿಯಾರೆಂದಱಿಯೆಲಾ ನೀನಾವನೆಂಬುದ ಮಱೆದೆ ಶಿವ ಶಿವ ದೈವಮಾಯೆಗೆ ಸಂದೊಡುಳಿದವ ರಳವೆ (ಕಾಶಿರಾ. ೪೩–೩೯). [ ದೈವ + ಮಾಯೆ ]

**ದೈವಯಂತ್ರ** (ನಾ). ದೇವರ ಹತೋಟಿ, – ನಿಯಂತ್ರಣ; ದೇವರ ಪ್ರಭುತ್ವ, –ಆಜ್ಞೆ: ಮಂತ್ರಿ ಮತ್ಸರದಿಂದ ಮುಂದೆ ತಪ್ಪುವ ದೈವ ಯಂತ್ರಭೇದವನಱಿಯದಿಂದುಹಾಸನ ಮೇಲೆ ತಂತ್ರವಂಪಣ್ಣಿ ಕೊಲಿಸು ವೆನೆಂದು ಕಳುಹಿದಂ ಕುಂತಳೇಂದ್ರನ ನಗರಿಗೆ (ಜೈಮಿಭಾ. ೨೯ ಸೂಚನೆ). [ ದೈವ + ಯಂತ್ರ ]

**ದೈವಯಜ್ಞ** (ನಾ). ದೇವರ ಪ್ರೀತ್ಯರ್ಥವಾಗಿ ಮಾಡುವ ಯಾಗ: ಬ್ರಹ್ಮಯಜ್ಞ ಪಿತೃಯಜ್ಞ ದೇವಯಜ್ಞ ಭೂತಯಜ್ಞ ಮನುಷ್ಯಯಜ್ಞ– ಈ ಐದು ಮಹಾಯಜ್ಞಗಳು (ಆರ್ಯಧ. ೧೮೭). [ ದೈವ + ಯಜ್ಞ ]

**ದೈವಯೋಗ** (ನಾ). ಅದೃಷ್ಟದ ಘಟನೆ, –ಸಂಬಂಧ; ಜನ್ಮಾಂತರದ ಪುಣ್ಯಪಾಪಕರ್ಮಗಳ ಫಲವಾಗಿ ಘಟಿಸುವ ಸಂಬಂಧ: ಅರಸ ಕೇಳ್ಕೆ ದೈವಯೋಗವ ಪರಿಹರಿಸಲಾರಳವು (ಕುಮ್ಮಾಗ. ೪–೪೨); ದೈವಯೋಗದಿಂದ ನೀನು ತಪ್ಪಿಸಿಕೊಂಡು ಬಂದೆ (ಶಾಕುಂತ. ೫೨–೧೦): ಈ ಮಿತ್ರನು ದೈವಯೋಗದಿಂದಲೇ ಪ್ರಾಪ್ತನಾದನು (ಮುಂಜುಕ. ೨); ದೈವಯೋಗ ದಿಂದ . . . ಅಲ್ಲೇ ಸಮೀಪದಲ್ಲಿ ಒಂದು ಮರದ ಟೊಂಗೆಯು . . . ಅವನ ದೃಷ್ಟಿಗೆ ಬಿತ್ತು (ಮುಂಬಯಿ. ೪–೩೮). [ ದೈವ + ಯೋಗ ]

**ದೈವರೂಪು** (ನಾ). ದೇವರ ಸ್ವರೂಪ; ದೇವತಾಸ್ವರೂಪ: ತನ್ನ ನೆನಹಿನವೋಲು ಕಾರ್ಯವು ಚೆನ್ನಹಡೆ ಲೋಕಕ್ಕೆ ತಾ ಬೇರಿನ್ನು ದೈವವದೇಕೆ ತಾನೇ ದೈವರೂಪೆಂದ (ಕುಮ್ಮಾಉ. ೩–೫). [ ದೈವ + ರೂಪು ]

**ದೈವರೇಷೆ** (ನಾ). ಅದೃಷ್ಟದ ಗೆರೆ, – ಬರಹ; ಹಣೆಬರಹ; ಭಾಗ್ಯ ರೇಷೆ: ಒಡಲ ನೂಲಿನಿಂದ ನೇಯುವಂತ ಜೇಡ ಜಾಲಾ ತನ್ನ ದೈವರೇಷೆ ಬರೆಯುವಂತೆ ತಾನೆ ಭಾಲಾ (ನಾದಲೀ. ೮೪–೧೦); ಪ್ರತಿಯೊಂದು ಶಬ್ದಕ್ಕೂ ಅದರದರ ದೈವರೇಷೆಯನ್ನು ಕೊರೆಯಿಸುವ ಒಂದು ಜನ್ಮಕುಂಡಲಿ ಸಿದ್ಧವೇ ಆಗಿದೆ (ಭಾಷಾಶಾ. ೧೩೪). [ ದೈವ + ರೇಷೆ ]

**ದೈವರ್ಧಿ** (ನಾ). ಅದೃಷ್ಟದ ಸಮೃದ್ಧಿ, –ಹೆಚ್ಚಳ, –ಅತಿಶಯ: ದೇವ ರೊಳ್ ಕೆಲರ್ಗೆ ಜಾತಿಸ್ಮರಣಂ ಕೆಲರ್ಗೆ ಧರ್ಮಶ್ರವಣಂ ಕೆಲರ್ಗೆ ಜಿನಮಹಿಮಾದರ್ಶನಂ ಕೆಲರ್ಗೆ ದೈ[ಪಾಠಾಂ. ದೇ] ವರ್ಧಿದರ್ಶನಂ ಇಂತು ಸಹಸ್ರಾರಕಲ್ಪಂಬರಂ ಅಕ್ಕುಂ (ತತ್ತ್ವಾಸೂ. ೧೩). [ ದೈವ + ಋದ್ಧಿ ]

**ದೈವವಂತ** (ನಾ). ಭಾಗ್ಯವಂತ; ಧನಿಕ: ಯಾರಾದರೂ ದೈವವಂತರ ಕನ್ಯೆಯನ್ನು ಆರಿಸಿ ತಂದರೆ ಸಿಗುವ ಅಲ್ಪಸ್ವಲ್ಪ ವರದಕ್ಷಿಣೆಗೆ ಒಡೆಯನು ನಾನಲ್ಲದೆ ಇನ್ನಾರು? (ಬಟ್ಟಹೊ. ೪೭). [ ಸಂ. ದೈವವತ್ ]

**ದೈವವಶ** (ನಾ). ಅದೃಷ್ಟ; ಭಾಗ್ಯ: ದೈವವಶದಿಂದ ವಿವಾಹ ಸಂಭ್ರಮ ಗಳೆಲ್ಲ ಮುಗಿದ ಮೇಲೆ ಅದು ವೆಂಕಟರಾಮನ ಗಮನಕ್ಕೆ ಬಂದಿತು (ಗೋಕೂರ. ೧೮೨). [ ದೈವ + ವಶ ]

**ದೈವವಶಾತ್** (ಅ). ಭಾಗ್ಯವಿಶೇಷದಿಂದ; ಸುಯೋಗದಿಂದ; ಅದೃಷ್ಟ ವಶಾತ್: ಅವರು ದೈವವಶಾತ್ ಇಂದು ಅಪಘಾತದಿಂದ ಪಾರಾದರು (ರೂಢಿ). [ ಸಂ. ]

**ದೈವವಾಣಿ** (ನಾ). ದೇವರು ಕೊಟ್ಟ ತಿಳುವಳಿಕೆ; ದೇವರ ಆದೇಶ; ಅಂತರ್ವಾಣಿ: ಆ ದೈವವಾಣಿಯು ಬೇಡವೆಂದುದನ್ನು ಆತನು ಮಾಡು ತ್ತಿರಲಿಲ್ಲವಂತೆ (ಸೋಕ್ರಮ. ೨೦). [ ದೈವ + ವಾಣಿ$_1$ ]

**ದೈವವಿಡಂಬನೆ** (ನಾ). ಅದೃಷ್ಟದ ದುರ್ವಿಲಾಸ; ದೈವದ ಮೋಸ: ತನ್ನಂತಹ ನತದೃಷ್ಟನ ಮುಂದೆ ಲೋಲಾನಂತಹ ಲಾವಣ್ಯವತಿಯು . . . ಯಾಚಿಸುವುದು ದೈವವಿಡಂಬನೆಯೆಂದುಕೊಂಡನು (ಜಯಂತ. ೧೮೩). [ ದೈವ + ವಿಡಂಬನೆ ]

**ದೈವವಿದ** (ನಾ). = ದೈವಜ್ಞ: ದೈವವಿದನಂಗನೆಯೊಳ್ ಕೆಳೆಗೊಳ್ವವಂ . . . ಕುಳೀರಸಂಭವಂ (ಜಾತತಿ. ೧೭–೪). [ ಸಂ. ದೈವವಿದ್ ]

**ದೈವವಿದ್ವಿಷ್ಟ** (ನಾ). ದೇವರಿಗೆ ವಿರೋಧಿಯಾದವನು; ದೇವರ ಶತ್ರು: ಅವನಿಂದೆಯುಂ ದೈವವಿದ್ವಿಷ್ಟರಾರುಂಟು (ಮುರುನಾ. ೧೨೫–೮೭೪). [ ದೈವ + ವಿದ್ವಿಷ್ಟ ]

**ದೈವವಿಮುಖ** (ನಾ). ಪ್ರತಿಕೂಲವಾದ ಅದೃಷ್ಟವುಳ್ಳವನು: ದುರ್ದೈವಿ; ದುರದೃಷ್ಟವಂತ: ದೈವವಿಮುಖಗೆ ತಂದೆತಾಯ್ಗಳೆ ಮೃತ್ಯು ಮಾರಿಗಳು (ಕಾಶಿರಾ. ೩೭–೬೦). [ ದೈವ + ವಿಮುಖ ]

**ದೈವವಿಸೂತ್ರ** (ನಾ). ಬ್ರಹ್ಮ ಸಂಕಲ್ಪ; ವಿಧಿ ನಿಯಮ; ಪೂರ್ವಜನ್ಮದ ಕರ್ಮಾನುಸಾರವಾಗಿ ಇದು ಹೀಗೆಯೇ ಆಗಬೇಕೆಂಬ ನಿಯಮ; ಭವಿತವ್ಯತೆ: ದೈವವಿಸೂತ್ರಮುಂ ಪುರುಷಕಾರಂ ವಿಪಾಟಿಲೇನಕ್ಕುಮೇ (ಜಗವಿ. ೩–೧೯). [ ದೈವ + ವಿಸೂತ್ರ ]

**ದೈವವಿಹೀನ** (ನಾ). ಅದೃಷ್ಟಹೀನ; ದೌರ್ಭಾಗ್ಯವಂತ: ಏಸು ಬಲ ಮೆನೈಶ್ವರಿಯವಿದ್ದೇಸು ಭಟರನಿತಗ್ಗಳೆಯರಿದ್ದೇಸಜಲಿ ಫಲವೇನು ದೈವ ವಿಹೀನರಿವರೆಂದ (ಕುಮ್ಮಾಗ. ೩–೪): ಭಾವಿಸಿದಿರೇ ಜಾಂಬವರೆ ಸದ್ಭಾವದಲಿ ನೀವುತ್ತರಾಯಿಗಳಾವು ದೈವವಿಹೀನರಾದೆವು (ತೊರರಾ. ೬–೫೦–೬೦). [ ದೈವ + ವಿಹೀನ ]

**ದೈವವ್ಯವಸಿತ** (ನಾ). ದೈವ ಸಂಕಲ್ಪ; ದೈವೇಚ್ಛೆ: ಇನ್ನು ದೈವವ್ಯವಸಿತದ ಫಲಿಸುವುದಲಾ ಕೌರವನ ಸಿರಿ ಪಣ್ಯಾಂಗನಾವಿಭ್ರಮವ ವರಿಸಿತಲಾ (ಕುಮ್ಮಾಗ. ೪–೬೦). [ ದೈವ + ವ್ಯವಸಿತ ]

**ದೈವಶಾಲಿ** (ನಾ). ಅದೃಷ್ಟವಂತ; ಭಾಗ್ಯವಂತ; ಧನ್ಯ. [ ಸಂ. ದೈವಶಾಲಿನ್ ]

**ದೈವಶಿಕ್ಷೆ** (ನಾ). ದೇವರು ಕೊಡುವ ಶಿಕ್ಷೆ; ದೇವರಿಂದುಂಟಾಗುವ ತೊಂದರೆ, –ಕ್ಲೇಶ. [ ದೈವ + ಶಿಕ್ಷೆ ]

**ದೈವಶಿಲ್ಪಿ** (ನಾ). ದೇವತೆಗಳ ಬಡಗಿ; ಸ್ವರ್ಗಲೋಕದ ಶಿಲ್ಪಿ: ಎರಡನೆಯದಾಗಿ "ತ್ವಷ್ಟಾ" ಎಂಬ ದೈವಶಿಲ್ಪಿಯ ಹೆಸರು ಋಗ್ವೇದದಲ್ಲಿಯೇ ಉಕ್ತವಾಗಿದೆ (ಭಾರಕ. ೩೦೯). [ ದೈವ + ಶಿಲ್ಪಿ$_1$ ]

**ದೈವಸಂಕಲ್ಪ** (ನಾ). = ದೈವವಿಸೂತ್ರ: ನಾನು ಆ ದಿನ ಮನೆಯಲ್ಲಿರಲಿಲ್ಲ, ಅವನಿಗೂ ಇದು ಯಾರ ಮನೆ ಎಂಬುದೂ ತಿಳಿದಿರಲಿಕ್ಕಿಲ್ಲ. ಎಂತಹ ದೈವ ಸಂಕಲ್ಪ! (ಕರುಳ. ೨೩೯). [ ದೈವ + ಸಂಕಲ್ಪ ]

**ದೈವಸನ್ನಿಧಿ** (ನಾ). ದೇವರ ಸಾನ್ನಿಧ್ಯ: ದೇವರ ಸಮೀಪದಲ್ಲಿ ಇರುವಿಕೆ: ಸಾಕ್ರಟೀಸನ ಸ್ನೇಹಿತನೊಬ್ಬನು ಡೆಲ್ಫಿ ಎಂಬ ಪ್ರಸಿದ್ಧಕ್ಷೇತ್ರಕ್ಕೆ ಹೋಗಿ, ಅಲ್ಲಿಯ ದೈವಸನ್ನಿಧಿಯಲ್ಲಿ . . . ಕೇಳಲಾಗಿ, "ಇಲ್ಲ" ಎಂದು ಆ ದೇವತೆಯು ಉತ್ತರಕೊಡಿಸಿತಂತೆ (ಸೋಕ್ರಮ. ೨೦). [ ದೈವ + ಸನ್ನಿಧಿ ]

**ದೈವಸಹಾಯ** (ನಾ). ದೇವರ ಕೃಪೆ, – ಕರುಣೆ: ದೈವಸಹಾಯವಿದ್ದರೆ ಯಾವ ಕಾರ್ಯವೂ ಸುಲಭವಾಗಿ ನಡೆಯುತ್ತದೆ (ರೂಢಿ). [ ದೈವ + ಸಹಾಯ ]

**ದೈವಸಾಕ್ಷಾತ್ಕಾರ** (ನಾ). ದೇವರನ್ನು ಕಣ್ಣಾರೆ ನೋಡುವಿಕೆ; ದೇವರ ಪ್ರತ್ಯಕ್ಷ ದರ್ಶನ: ತಾನು ಪಡೆದ ಅನುಭವವು ದೈವಸಾಕ್ಷಾತ್ಕಾರವೆಂದೂ, ಅದೇ ಪರಮಸತ್ಯವೆಂದೂ ಅವನು ಬಗೆಯುತ್ತಾನೆ (ದೂರಕ. ೨೬೦). [ ದೈವ + ಸಾಕ್ಷಾತ್ಕಾರ ]

**ದೈವಸಾಧನೆ** (ನಾ). ದೇವತ್ವವನ್ನು ಪಡೆಯಲು ಮಾಡುವ ಸಾಧನೆ; ಆಧ್ಯಾತ್ಮ ಸಾಧನೆ: ಅದಿಯನ್ನು ತಿಳಿಯಲು ಆಶಿಸುವ ಇಂತಹ ಕುತೂಹಲ ಮನೋಭಾವ ತಾನೇ, ಮನುಷ್ಯನನ್ನು ದೈವಸಾಧನೆಗೆ ಎಳೆದಿರುವುದು (ನಿಶಿಲಾ. ೩೩). [ ದೈವ + ಸಾಧನೆ ]

**ದೈವಸೂತ್ರ** (ನಾ). = ದೈವವಿಸೂತ್ರ: ಅರಸ ಕೇಳುವವಾಸಗಳು ಜಾಗರಗಳವಲ ಬ್ರಹ್ಮಚರಿಯದ ನಿರತಿಶಯ ಸುವ್ರತವು ದೊರಕಿತು ದೈವಸೂತ್ರದಲಿ [ಹಾಕಾಂ. ಗತಿಯಿಂದ] (ತೊರಗಾ. ೬-೪೫-೮). [ದೈವ+ಸೂತ್ರ]

**ದೈವಸೃಷ್ಟಿ** (ನಾ). ದೇವರು ಉತ್ಪತ್ತಿಮಾಡಿದುದು; ದೇವರು ನಿರ್ಮಿಸಿದುದು; ಜಗತ್ತು: ದೈವಾನುಗ್ರಹದಿಂದ ಅರಳಿದ ಪ್ರತಿಭಾಪುಷ್ಪ ಮಾರ್ಗಮಧ್ಯದಲ್ಲಿ ಆದಷ್ಟು ದೈವಸೃಷ್ಟಿಯ ಸೇವೆಮಾಡಿ, ಕೊನೆಗೆ ದಿವ್ಯ ಪಾದಗಳಲ್ಲಿ ಲೀನವಾಗಬೇಕು (ಹಂಸಗೀ. ೧೩೦). [ ದೈವ + ಸೃಷ್ಟಿ ]

**ದೈವಹೀನ** (ನಾ). = ದೈವವಿಹೀನ: ದೈವಹೀನನವಿನೀತ ಸೈನ್ಯನನ್ಯಾಯಯನಿಪ ನರಪನೊಳೆಂದುಂ ವಿಜಿಗೀಷುಗಳಪ್ಪ ಮಹೀಭುಜರೆಂದುಂ ಸಂಧಿ ಮಾಡರ್ (ಹಂಕಕಂ. ೩೨೧-೦೩); ದೈವಬಲವವರಲ್ಲಿ ನೀವೇ ದೈವಹೀನರು (ಕುಮ್ಯಾಭೀ. ೧-೨೩); ತಪವನು ನಾನು ಮಾಡಿದೆ ದೈವಹೀನಗೆ ವಿಫಲವಾಯ್ತೆಂದು (ಚಾಶಿರಾ. ೨೩-೩೫). [ ದೈವ + ಹೀನ ]

**ದೈವಹೊಡಕ** (ನಾ). ದೆವ್ವಬಡಿದಿರುವವನು; ಪಿಶಾಚಗ್ರಸ್ತ; ಭೂತಾವೇಶವಾದವನು: ದೈವಹೊಡಕ ಮದ್ಯವ ಪಾನಮಾಡಿದಂತ ಮೊದಲೆ ಮನ್ಮಥವಿಕಾರವುಂಟಾದ ನನ್ನ ಮನಸ್ಸು . . . ಕದಡಿತು (ವಚಕಾ. ೨೪). [ ದೈವಹೊಡೆ + – ಕ₂ ]

**ದೈವಹೊಡೆ** (ಕ್ರಿ). ಪಿಶಾಚಗ್ರಸ್ತವಾಗು; ಭೂತಾವೇಶವುಂಟಾಗು: ದೆವ್ವಬಡಿ: ದೈವಹೊಡೆದಂದದಲಿ ಬೆಚಿತು ಸಭಾವಲಯದಲಿ ಗರ್ವವಿಭ್ರಮಭಾವಭೂಷಿತನಾಗಿ ವೈಹಾಯಸವನೀಕ್ಷಿಸುತ ಹಾವಿನಂದದೊಳಿರದೆ ಹಾಸ್ಯರಸಾವಲಂಬನನಾಗದೆಯು ಸುಖಜೀವಿಯಾಗಿಹುದು ತ್ಯ ಮವ (ಕುಮ್ಯಾಅ. ೮-೩೬). [ ದೈವ + ಹೊಡೆ₁ (<ಪೊಡೆ₁) ]

**ದೈವಾಧೀನ** (ನಾ). ದೇವರಿಗೆ ವಶವರ್ತಿಯಾಗಿರುವುದು; ಅದೃಷ್ಟದ ವಶದಲ್ಲಿರುವುದು: ಎಲೆ ಮರುಳೆ ರಾಧೇಯ ಫಡ ಮನವಿಳುಹದಿರು ತಪ್ಪೇನು ಸೋಲವು ಗೆಲವು ದೈವಾಧೀನ ನಿನ್ನಾಳ್ಗನಕೆ ಸುಂದೇನು . . . ನೀ ಮಾನವಳುಕದಿರು ಹಿಡಿ ಧನುವನನುವಾಗೆಂದನಾ ಶಲ್ಯ (ಕುಮ್ಯಾಕ. ೦೩-೨೧); ಏನ ಮಾಡಿದರೇನು ದೈವಾಧೀನವೆಲ್ಲವು (ಚಾಶಿರಾ. ೨೩-೨೫); ದೈವಾಧೀನದಿ ಬಂದಿದನಾವಂಗಸದಳಮನಿಪ್ಪುದಂ ನಿರವಿಸಿ ನೀಂ ಪಾವನರಂ ಮಾಳ್ಪುದು ಸುತದೇವ ಮಹಾದೇವ ಶಂಭುವೆಮ್ಮನೆನುತ್ತಂ (ಹಾಲಾಸ್ಯ. ೨-೯-೨೮); ಹುಟ್ಟು, ಸಾವು ದೈವಾಧೀನ. ಹುಟ್ಟಿದವನು ಸಾಯಲೇಬೇಕು ಎಂಬ ಮನೋಭಾವವವರದು (ಧರ್ಮಾ. ೧೯೦).

**ದೈವಾಧೀನನಾಗು** = ಸಾಯು; ಮರಣಹೊಂದು: ಇವೊತ್ತಿಗೆ ಹದಿನೇಳು ದಿವಸದ ಹಿಂದೆ ಆತನು ದೈವಾಧೀನನಾದನು (ವಚಕಾ. ೦೫); ಕಡೆಗೊಮ್ಮೆ ಹೃದಯವಿಕಾರದಿಂದ ದೈವಾಧೀನನಾದನು (ನಕ್ಷತ. ೪೭); ನಂಜುಂಡಮ್ಮನವರು ದೈವಾಧೀನರಾಗಲು ನಾನು ಮಾಡಿದ್ದ ಅನುವಾದವನ್ನು . . . ಪ್ರಕಟಿಸಲು ನನಗೆ ಸಾಧ್ಯವಾಗದೇ ಹೋಯಿತು (ಕ್ಕುಕಿವಿ. ೪೧, ಮುಖಪು). ದೈವಾಧೀನವಾಗು = ದೈವಾಧೀನನಾಗು: ಮದ್ದಗಿರಿಯಲ್ಲಿ ಯಿವರ ಚಿಕ್ಕಪ್ಪ ಗುಲಾಮ ಹೈದರಸಾಬರು ದೈವಾಧೀನವಾದ್ದರಿಂದ (ಕೃದರ. ೩೦); ದೈನ್ಯದಿಂದ ಬೇಡೋಕಿಂತ ದೈವಾಧೀನವಾಗೋದು ಉತ್ತಮ (ಗಾಡಿ). [ ದೈವ + ಅಧೀನ ]

**ದೈವಾನ** (ನಾ). ಅದೃಷ್ಟಶಾಲಿ; ಭಾಗ್ಯವಂತ: ದತ್ತಗೇಡಿಗೆ ಕೊಟ್ಟವರಿಲ್ಲಂತ ದೈವಾನರದು ಕಸಗೊಂಡವರಿಲ್ಲಂತ (ಅಲ್ಲವಿ. ೦೦೮).
[ <ಸಂ. ದೈವವತ್ ]

**ದೈವಾನುಕೂಲ** (ನಾ). = ದೈವಸಹಾಯ: ಅನಲನಲ್ಪವದಾದಡೇನದುವನಿಲನಿಂದ ಪ್ರಕಾಶಿಸುತಲಿಹುದನವರತಲಾ ನೀತಿಯಲಿ ದೈವಾನುಕೂಲವದು ಘನವೆನಿಸಿಯ್ಯದುತ್ತಿಹುದುವ ಧರ್ಮನವಸತ್ಕರ್ಮಾಚರಣದಲಿ ಮನುಜರೊಳಗಿದನರಿದು ನಡೆವವ ಜಾಣನಹನೆಂದ (ತಿಮ್ಮಅ. ೨-೨೪); ಅನುದಿನ ಕರ್ಮಶುದ್ಧಿಯ ಕಾರ್ಯವಿದ್ದಾಗ ಅರಿದೆನಿಪ ದೈವಾನುಕೂಲವದಿರದೆ ಕೆಡುವುದು ತಿಳಿದದನು ಎಂಗೆ ನರನು ವೃಥುತರ ಪುಣ್ಯಕರ್ಮವ ಮಾಡಬೇಕೆಂದ (ತಿಮ್ಮಅ. ೨-೨೫). [ ಸಂ. ]

**ದೈವಾನುಕೂಲತೆ** (ನಾ). = ದೈವಸಹಾಯ: ಏನವಾಡಿದಡೇನು ಸದ್ಧರ್ಮಾನುಭಾವಂಗ್ಯಸಲೇ ದೈವಾನುಕೂಲತೆ (ತೊರಗಾ. ೬-೨೦-೪೦).
[ ಸಂ. ದೈವಾನುಕೂಲತಾ ]

**ದೈವಾನುಕೂಲ್ಯ** (ನಾ). = ದೈವಸಹಾಯ: ಏನನಾಡಿದಡೇನು ಫಲ ದೈವಾನುಕೂಲ್ಯದ ಕುಣಿಕೆ ಬೇಱಹುದಾ ವರೇಂದ್ರನ ಸಾರಿ ಸೋತೆವುದು ನಿಮಿಷಮಾತ್ರದಲಿ (ಕುಮ್ಯಾಸ. ೦೩-೫೬). [ ದೈವ + ಆನುಕೂಲ್ಯ ]

**ದೈವಾನುಗ್ರಹ** (ನಾ). ದೇವರ ಕೃಪೆ, – ದಯೆ: ದೈವಾನುಗ್ರಹದಿಂದ ಅರಳಿದ ಪ್ರತಿಭಾಪುಷ್ಪ, ದೈವಾನುಗ್ರಹಕಾತರನಾಗಿ, ಮಾರ್ಗಮಧ್ಯದಲ್ಲಿ ಆದಷ್ಟು ದೈವಸೃಷ್ಟಿಯ ಸೇವೆ ಮಾಡಿ, ಕೊನೆಗೆ ದಿವ್ಯಪಾದಗಳಲ್ಲಿ ಲೀನವಾಗಬೇಕು (ಹಂಸಗೀ. ೧೩೦); ದೈವಾನುಗ್ರಹದಿಂದ ಮಳೆ ಬಂದು ಕೆರೆಗೆ ನೀರು ಬಂದಿದೆ (ರೂಢಿ). [ ದೈವ + ಅನುಗ್ರಹ ]

**ದೈವಾಪರ** (ನಾ). ದೇವರನ್ನು ಅಪರ(ಪರಕೀಯನಲ್ಲದವನೆಂದು ನಂಬಿ)ದವನು; ದೈವಭಕ್ತ; ದೇವರ ಪಕ್ಷಪಾತಿ: ಅನುಪಮಚರಿತ ದೈವಾಪರನು ಪುಣ್ಯನಿಧಿ . . . ಎಂದಿಳೆ ಹೊಗಳುತಿರಲದುವೆ ಕೀಳ್ಸೆ ಸ್ವರ್ಗ (ಕುಮ್ಯಾಉ. ೪-೪೦). [ ದೈವ + ಅಪರ ]

**ದೈವಾಯತ** (ನಾ). ದೇವರ ಅಧೀನದಲ್ಲಿರುವುದು; ಅದೃಷ್ಟದ ಕೈಯಲ್ಲಿರುವುದು; ಮನುಷ್ಯರ ಕೈಯಲ್ಲಿ ಇಲ್ಲದಿರುವುದು; ದೈವಾಯತ್ತ: ನಿನಗೆ ಮುನಿದಡೆ ನೋಯಿಸುವಡಳವಲ್ಲ ಫಡ ದೈವಾಯತಕೆ ನೀನೇಕೆ ಬೆಱತಿಹೆಯೆಂದನಾ ಭೂಪ (ಕುಮ್ಯಾಗ. ೬-೦೦).
[ <ಸಂ. ದೈವಾಯತ್ತ ]

**ದೈವಾಯತ್ತ** (ನಾ). = ದೈವಾಯತ: ಸಮರಜಯಂ ದೈವಾಯತ್ತಮದಱನಾ ಪುರುಷಕಾರಮೆಮಗಾಯತ್ತಾಗಳ್ (ಗದಾಯು. ೩-೪೬); ಫಲವು ದೈವಾಯತ್ತ ನಾವು ಮಾಡುವುದೇನು (ಧ್ವನ್ಯಾಲೋ. ೦೦೬).
[ ದೈವ + ಆಯತ್ತ₂ ]

**ದೈವಿಕ** (ಗು). ೧. ದೇವತೆಗಳಿಗೆ ಸಂಬಂಧಿಸಿದ; ದೇವತೆಗಳಿಂದ ಉಂಟಾದ, – ಒದಗಿದ: ಮಾನುಷ ಪ್ರಮಾಣವು ದೊರೆಯದಿದ್ದ ಪಕ್ಷದಲ್ಲಿ ದೈವಿಕ ಪ್ರಮಾಣವನ್ನು ಪಡೆಯುತ್ತಿದ್ದರು (ಕಾರದ. ೫೬); ಅಲ್ಲಿನ ಶಿಕ್ಷಣ ದೈವಿಕಭಾವನೆ ಮೂಡಿಸುತ್ತಿದ್ದರೂ ಮತಸಹಿಷ್ಣುತೆಯನ್ನು ಬೋಧಿಸುವಂತಿರಲಿಲ್ಲ (ಶಿಕ್ಷದ. ೬೫); ಈ ದೈವಿಕ ಪ್ರೇರಣೆಯು ತನಗೆ ಬಾಲ್ಯದಿಂದಲೂ ಲಭ್ಯವಾಗಿತ್ತೆಂದು ಆತನೇ ಹೇಳಿದ್ದಾನೆ (ಸೋಕ್ರಮು. ೨೦). ೨. ಅದೃಷ್ಟದಿಂದ ಒದಗಿದ; ಆಕಸ್ಮಾತ್ತಾಗಿ ಉಂಟಾದ: ಏನೋ ದೈವಿಕಘಟನೆಯಿಂದ ಅವರ ಭೇಟಿಯೊದಗಿತು (ರೂಢಿ). (ನಾ). ೩. ಅತಿಮಾನುಷವಾದುದು: ಅರಸ ಚಿತ್ತೈಸೇಳು ತಾಳಿವ ಸಂಸದಲಿ ದೈವಿಕದ ಮರನಿವನುರಗನಂದದ ದೈತ್ಯಮುನಿ ಧರಿಸಿಹನು ವಿತಳದಲಿ (ತೊರಗಾ. ೪-೨-೪೫). ೪. ದುರ್ದೈವ; ದುರದೃಷ್ಟ: ಪಲವುಂ ಭವಂಗಳೊಳ್ ನೆರಪಿದೆನ್ನಯ ಪಾಪಮೊ ಮೇಱೆಗೆಟ್ಟ ಕೋಟಲೆಗಳನುಣ್ಣನೆಂಬಲಸೈರಣೆಯೋ ಕಡುಪಿಂ ತಗುಳ್ದು ನಟ್ಟಲೆವಸಮಾಪ್ತವಕ್ರತೆಯೊ ದೈವಿಕಮೋ ನಿನಗೇನನೆಂಬೆ ನಗ್ಗಲಿಸಿಯೆ ನಿಂದುದೆಂತುಮಸು ಪೋಗದೆ ಕಲ್ಲೆರ್ದೆಯಿಂ ಮಹೀಪತೀ (ಕಾದಂಪೂ. ೯೨೧). [ ಸಂ. ]

**ದೈವಿಕಶರ** (ನಾ). = ದೈವಿಕಾಸ್ತ್ರ : ಉರಿವುದುಂದೇ ಕೇರು ಕರ್ಣನ ಗುರು ನದೀನಂದನನ ದೈವಿಕಶರಹತಿಯೊಳೆವಿಣ್ಣಿಂದ ಸಿಂದುದು ಪಾರ್ಥ (ಕುವ್ಯಾಗ. ೮-೫೦). [ ದೈವಿಕ + ಶರ ]

**ದೈವಿಕಾಸ್ತ್ರ** (ನಾ). ದೇವರಿಂದ ಕೊಡಲ್ಪಟ್ಟ ಅಸ್ತ್ರ ; ದಿವ್ಯಾಸ್ತ್ರ ; ಮಂತ್ರಾಸ್ತ್ರ : ನಾವಿಳಿದ ಬಳಿಕೀ ರಥದೊಳಿರಲಾವ ಹದನೋ ನಿನಗೆ ಕಂಡ್ಯ ದೈವಿಕಾಸ್ತ್ರದ ಮಹಿಮೆಗಳನು (ಕುವ್ಯಾಗ. ೮-೩೩). [ ದೈವಿಕ + ಅಸ್ತ್ರ ]

**ದೈವೀಕೃಪೆ** (ನಾ). ದೇವರ ದಯೆ,- ಕರುಣೆ: ದೈವೀಕೃಪೆಯ ಮಂತ್ರದಂಡ ತನ್ನಾವುದೋ ಕಾರ್ಯಕ್ಕಾಗಿ ಅರಸಿದ ಹೂವು ಜನತೆಗೆ ನೀಡುವ ತನ್ನ ಪರಿಮಳಕ್ಕೆ ಸುಂಕ ಕೇಳುತ್ತದೆಯೇ ? (ಹಂಸಗೀ. ೧೩೦). [ ಸಂ. ದೈವೀಕೃಪಾ ]

**ದೈವೀಪ್ರವೃತ್ತಿ** (ನಾ). ದೇವತೆಗಳ ಸಂಬಂಧವಾದ ವ್ಯವಹಾರ,- ಆಚಾರ ; ಸಾತ್ವಿಕ ಕಾರ್ಯಾಚರಣೆ,- ಪ್ರವರ್ತನೆ : ಅವನಲ್ಲಿದ್ದ ಪಾಶವೀಶಕ್ತಿ . . . ಆ ದಿನ ಬೆಳಗ್ಗೆ ಸುಳುಹುದೋರಿದ್ದ ದೈವೀಪ್ರವೃತ್ತಿಯನ್ನು ಮೆಟ್ಟಿ ತುಳಿದು ಭೂಗತವಾಡಿತು (ಪುನರು. ೬೩). [ ಸಂ. ]

**ದೈವೀವಿರುದ್ಧ** (ಗು). ದೈವಿಕ ಪ್ರವೃತ್ತಿಗೆ ವಿರೋಧವಾದ ; ಸಾತ್ವಿಕ ಕಾರ್ಯಾಚರಣೆಗೆ ಪ್ರತಿಬಂಧಕವಾದ ; ಒಳ್ಳೆಯ ಗುಣಗಳಿಗೆ ಬಾಧಕವಾದ : ದೈವೀವಿರುದ್ಧಂ ತಮಃಪ್ರವೃತ್ತಿಯಂ ನಿಗ್ರಹಿಸಿ (ಶ್ರೀರಾಮಾ. ೪೪೩-೪). [ <ಸಂ. ದೈವವಿರುದ್ಧ ]

**ದೈವೀಶಕ್ತಿ** (ನಾ). ದೇವತೆಗಳ ಸಂಬಂಧವಾದ ಬಲ : ದೈವಪ್ರಭಾವ,- ಮಹಿಮೆ ; ದೇವತೆಗಳ ಸಾಮರ್ಥ್ಯ : ಆಗಮವು ದೈವೀಶಕ್ತಿಯ ವಿಲಾಸವನ್ನು ಜಗತ್ತಿಗೆ ಅರಿವು ಮಾಡಿಕೊಡಲು ದೇವಸ್ಥಾನದ ನಿರ್ಮಾಣವನ್ನು ಸಾಧ್ಯವಾಗಿಟ್ಟುಕೊಂಡಿದೆ (ಭಾರದ. ೮೦). 'ದೈವೀಪ್ರವೃತ್ತಿ' ಪರಾ. [ ಸಂ. ]

**ದೈವೀಸಂಪತ್ತು** (ನಾ). ದೇವತೆಗಳಿಗೆ ಸಂಬಂಧಿಸಿದ ಗುಣಗಳ ಸಮೃದ್ಧಿ : ಅಹಿಂಸೆ, ಸತ್ಯ, ಶಾಂತಿ, ತ್ಯಾಗ ಮೊದಲಾದ ಒಳ್ಳೆಯ ಗುಣಗಳು ; ಶೀಲವಂತನಾಗಿ ನಡೆದುಕೊಳ್ಳುವ ಸ್ವಭಾವ ; ಸದ್ಗುಣಗಳನ್ನು ಪ್ರಕಟಿಸುವ ಸ್ವಭಾವ : ಅಹಿಂಸಾ, ಸತ್ಯ . . . ಇತ್ಯಾದಿ ಗುಣಗಳನ್ನು ಘೋಷಿಸಿದ ಆತ್ಮ ದೈವೀಸಂಪದ್ಯುಕ್ತವಾಗಿ ಜಗತ್ಕಲ್ಯಾಣಸಾಧಕವಾಗುತ್ತದೆ (ಶುಕ್ಲಾರ. ೭೪ ಟೀಕೆ). 'ಆಸುರೀಸಂಪತ್ತು' ಪರಾ. [ ಸಂ. ದೈವೀಸಂಪದ್ ]

**ದೈವೀಸ್ಫೂರ್ತಿ** (ನಾ). ದೈವಿಕವಾದ ಸ್ಫುರಣೆ ; ಸಮಯೋಚಿತವಾದ ಸಂಗತಿಯು ತಟ್ಟನೆ ಹೊಳೆಯುವುದು : ಕಾವ್ಯ ಎಂಬುದು ಸೃಷ್ಟಿ, ಅದರಲ್ಲಿ ಆಡುವ ಉಸಿರು ದೈವೀಸ್ಫೂರ್ತಿ- ಎಂದು ಅವರ ನಂಬಿಕೆ (ಸೌಂದಸ. ೦೦೩). 'ದೈವೀಪ್ರವೃತ್ತಿ' ಪರಾ. [ ಸಂ. ]

**ದೈವೇಚ್ಛೆ** (ನಾ). ಪೂರ್ವಜನ್ಮದ ಕರ್ಮಾನುಸಾರವಾಗಿ ಇದು ಹೀಗೆಯೇ ಆಗಬೇಕೆಂಬ ನಿಯಮ ; ವಿಧಿನಿಯಮ ; ಬ್ರಹ್ಮಸಂಕಲ್ಪ ; ಭವಿತವ್ಯತೆ : ಎಮ್ಮ ಸಾವುಮುಳಿವುಂ ದೈವೇಚ್ಛೆಯಾಯ್ತಾಗದೇ (ಹಂಹಛಾ. ೨-೮೯) ; ನನ್ನದು ಹೀಗೆ ಕೊನೆಗಾಣಬೇಕೆಂದು ದೈವೇಚ್ಛೆ ಇತ್ತು. ಅದಕ್ಕೆ ನೀನು ನಿಮಿತ್ತವಾಗಿ ಒದಗಿ ಬಂದೆ (ಹಂಸಗೀ. ೨೦೩). [ ದೈವ + ಇಚ್ಛೆ ]

**ದೈವೋದಯ** (ನಾ). ಒಳ್ಳೆಯ ಅದೃಷ್ಟದ ಆರಂಭ ; ಭಾಗ್ಯೋದಯ : ಅವಳ ದೈವೋದಯವದ್ಯಸಲೆ ಸವಡಿಸೀರೆಯು ಸುತ್ತು ಸಡಿಲದು (ಕುವ್ಯಾಸ. ೦೬-೩) [ ದೈವ + ಉದಯ ]

**ದೈವೋಪಹತ** (ಗು). ದುರದೃಷ್ಟಕ್ಕೆ ಈಡಾದ ; ದುರ್ದೈವಕ್ಕೆ ಒಳಗಾದ: ಐಸಲೇ ದೈವೋಪಹತ ಮನದಾಸಜೀವರಿಂದಡಗುವುದು (ಕುವ್ಯಾಆ. ೨೦-೪೬). [ ದೈವ + ಉಪಹತ ]

**ದೈಶಿಕ** (ಗು). ೧. ದೇಶಕ್ಕೆ ಸಂಬಂಧಪಟ್ಟ : ದಹಿಕ ದೈಶಿಕ ಕಾಲಿಕತ್ರಯ ಗಹನ ಕರ್ಮಗಳುಂಟು (ಹಸಾರ. ೯-೪). (ನಾ). ೨. ಆಯಾ ದೇಶದಲ್ಲಿ ಆಚರಿಸಬೇಕಾದ ಕರ್ಮ : ಮನುಷ್ಯರು ಮಾಡಬೇಕಾದ ಕರ್ಮಗಳು ಮೂರು ಪ್ರಕಾರ, ದೈಹಿಕ, ದೈಶಿಕ, ಕಾಲಿಕ . . . ದೈಶಿಕ ದೇಶಸಂಬಂಧವಾದುದು (ಹಸಾರ. ೯-೪ ತಾತ್ಪರ್ಯ). [ ಸಂ. ]

**ದೈಹಿಕ** (ಗು). ದೇಹಕ್ಕೆ ಸಂಬಂಧಪಟ್ಟ ; ಶರೀರಕ್ಕೆ ಸಂಬಂಧಿಸಿದ : ಜನಾಂಗದ ದೈಹಿಕ ಯೋಗ್ಯತೆ, ಮಾನಸಿಕ ಶಕ್ತಿ... ಇದೇ ಹೆಣ್ಣುಮಕ್ಕಳ ಆರೋಗ್ಯ ಮತ್ತು ಸುಖಸಂತೋಷಗಳನ್ನು ಹೊಂದಿಕೊಂಡಿದೆ (ಅಡುಶಾ. ೨೦) ; ಮೂಢನಂಬಿಕೆಯಾದರೂ ದೃಢವಾದುದಾದರೆ, ಮನಸ್ಸಿಗೆ ಧೈರ್ಯವನ್ನು ತುಂಬಿ ದೈಹಿಕ ಪವಾಡಗಳನ್ನು ನಡಸಬಹುದು (ಮನೋನಂ. ೦೯೬) ; ಮನುಷ್ಯರು ಮಾಡಬೇಕಾದ ಕರ್ಮಗಳು ಮೂರು ಪ್ರಕಾರ : ದೈಹಿಕ, ದೈಶಿಕ, ಕಾಲಿಕ.- ದೈಹಿಕವೆಂದರೆ ದೇಹದಿಂದ ಮಾಡುವ ಸೇವೆಗಳು - ನಮನಾದಿಗಳು (ಹುಕ್ಕಾರ. ೯-೬ ತಾತ್ಪರ್ಯ). [ ಸಂ. ]

**ದೈಹಿಕಮಲ** (ನಾ). ಶರೀರದಲ್ಲಿ ಉತ್ಪತ್ತಿಯಾಗುವ ಹನ್ನೆರಡು ಬಗೆಯ ಅಶುಚಿದ್ರವ್ಯ,- ಕೊಳೆ,- ಹೊಲಸು : ಗುಗ್ಗೆ ಜಬುರು ಕಣ್ಣೀರು ಸಿಂಬಳ ಶ್ಲೇಷ್ಮ ಬೆವರು ಕನುಗು ಜಲ ಮಲ ರಕ್ತ ರೇತಸ್ಸು ಮಜ್ಜೆ ಈ ಹನ್ನೆರಡೂ ದೈಹಿಕಮಲಗಳು (ಆಯುರ್ಧ. ೦೦೦). [ ದೈಹಿಕ + ಮಲ ]

**ದೈಹಿಕಯಾತನೆ** (ನಾ). ಶರೀರಕ್ಕೆ ಉಂಟಾಗುವ ಹಿಂಸೆ,- ಬಾಧೆ : ದೈಹಿಕ ಯಾತನೆಯಾಗಿ ಪರಿಣಮಿಸಿದ ನೈತಿಕ ಜುಗುಪ್ಸೆ . . . ಭಯಂಕರವಾಗಿ ಅವನ ಮನಸ್ಸನ್ನಾಕ್ರಮಿಸಿತು (ಪುನರು. ೨೩೬). [ ದೈಹಿಕ + ಯಾತನೆ ]

**ದೈಹಿಕವಿಕ್ರಮ** (ನಾ). ಶಾರೀರಕವಾದ ಸಾಹಸ,- ಶ್ರಮ : ಹೀಗೆ ದೈಹಿಕ ವಿಕ್ರಮವೇ ಕ್ರಮವೆಂದು ಕೊರೆದುಕೊಂಡನು (ಜಯಂತ. ೨೬೯). [ ದೈಹಿಕ + ವಿಕ್ರಮ ]

**ದೈಹಿಕಶಿಕ್ಷಣ** (ನಾ). ದೇಹಶಕ್ತಿಯನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಕೊಡುವ ವ್ಯಾಯಾಮ ಶಿಕ್ಷಣ ; ಅಂಗಸಾಧನೆಯನ್ನು ಕಲಿಸುವುದು : ದೈಹಿಕಶಿಕ್ಷಣವು ಪ್ರೌಢವಿದ್ಯಾಭ್ಯಾಸದ ಒಂದು ಅವಿಭಾಜ್ಯ ಭಾಗವಾಗಿದೆ (ರೂಢಿ). [ ದೈಹಿಕ + ಶಿಕ್ಷಣ ]

**ದೈಹಿಕಸುಖ** (ನಾ). ಶರೀರದಿಂದ ಅನುಭವಿಸುವ ಸುಖ ; ಕಾಮಸುಖ ; ಕಾಮೋಪಭೋಗ : ಹಸಿವಾದಾಗ ರುಚಿರುಚಿಯಾದ ಭೋಜನ, ಕೋಪ ಬಂದಾಗ ಅಬ್ಬರ, ದೈಹಿಕಸುಖ ಬಯಸಿದಾಗ ಹೆಂಡತಿ ಸಾಯುತ್ತಾ ಬಿದ್ದಿದ್ದರೂ ಅವಳನ್ನು ತಮ್ಮ ಬಯಕೆಗೆ ಬಲಿಕೊಡುವುದು ಅವರಿಗೆ ಸಾಮಾನ್ಯವಾಗಿಹೋಗಿತ್ತು (ಕೀಲುಗೊಂ. ೦೦೩) ; ಹೆಂಡೊಮ್ಮೆ ದೈಹಿಕ ಸುಖಕ್ಕೆ ತನ್ನನ್ನು ಬಳಸಿಕೊಂಡಂತೆ ಮತ್ತೆ ಆಧ್ಯಾತ್ಮಿಕ ಕಲ್ಯಾಣಕ್ಕೆ ಬಳಸಲವಕಾಶ ಕೊಡುವುದಿಲ್ಲವೆಂದೂ . . . ಅವಳು ಯೋಚಿಸಿದಳು (ಪುನರು. ೬೩). [ ದೈಹಿಕ + ಸುಖ ]

**ದೊಂಗರ** 'ಡೊಂಗರ' ನೋ.

**ದೊಂಟೆ** (ನಾ). ಪ್ರಾಣಿಗಳ ಕೊರಳಿಗೆ ಕಟ್ಟುವ ಮರದ ತುಂಡು ; ಗುದಿ : ಕೊರಳ ದೊಂಟೆ ಟಣ್ ಟಣ್ ಎನೆ ಚಿಮ್ಮುತ ಬಿಸಿಲೊಳು ಮಲಗಿಹ ಹೊಮ್ಮಿದ ಹಸುರಲಿ ಕುಣಿಯುವ ಕರುಗಳ ಕೂಡುವೆನು (ಕದಳಿ. ೨-೦೮) ; ಕೊಟ್ಟಿಗೆಯಲ್ಲಿಯೂ ಗೊರಸಿನ ಸದ್ದು, ಕೊಂಬಿನ ಸದ್ದು, ದೊಂಟೆಯ ಸದ್ದು . . . ಕೇಳಿಸತೊಡಗಿತು (ಮಲೆಮ. ೪೦). [ ದೇ.೩ ತಮಿ. ತೊಣ್ಣು ; ಮಲ. ತೊಣ್ಣ ]

**ದೊಂಡಿ** (ನಾ). ಒಂದು ಬಗೆಯ ವಿಮಾನ : ಗಜ ಮಜಿವ ಕಾಗೆಂಡೆಯ್ಯುಯ್ಯರೆಗ ದೊಂಡಿ ಕೆಂಗಬು . . . ಎಂಬ ಪರಿಪರಿಯ ವಿಮಾನ್ಗಳಂ ಗುಡಿಗೆಯ್ದರ (ಹಹಿಶಾ. ೩-೪೩). [ ದೇ.೩ ತಮಿ. ತೊಣ್ಟಿ ; ತೆಲು. ದೊಂಡು, ದುಂದಾವ ]

**ದೊಂಡೆ₁**, ಜೊಂಡು₃, ಜೊಂಡೆ, ತೊಂಡೆ₄ (ನಾ). ೧. ಸಿಕ್ಕು ಸಿಕ್ಕಾಗಿರುವುದು ; ತೊಡರಿಕೊಂಡಿರುವುದು ; ಹೆಣೆದುಕೊಂಡಿರುವುದು : ನಾನಾವ್ಯಾಗಾನೀಕದ ಕರ್ಗಂಡಂಗಳಂ ದೊಂಡೆಗಳೆನಡಸಿ ನುಂಗುತ್ತುಂ (ಶಾಂತೀಶ್ವ. ೩-೬) ; ಪಾರ್ಥನ ಕರುಳ ದೊಂಡೆಯು ಕೂಳ ಮುದ್ದೆಯು ಬಡಿಸಿ ದೈತ್ಯರಿಗೆ . . . ದಣಿಸಿದಡರಸು ಕೌರವನೆನ್ನ ಸಾಕಿತೆಂದು ಫಲವೇದ (ಕುವ್ಯಾ.ಶ. ೮-೪೨): ವೋಜೆವುತಿರ್ದವು ರಣಸಮುದ್ರದ ತೆರೆಯ ಬಲುರವದಂತೆ ನೆಣನುಬ್ಬರದ ನೆತ್ತರಿನಸ್ಥಿಮಾಂಸದ ಮಿದುಳ ದೊಂಡೆಗಳ . . . ನಡುಹಜೆಾದ ಕಟಿಗಳ ಖಳಕದಂಬದ ಸಂಬೆರಕೆಯಲಿ (ತೊರಿರಾ. ೬-೩೬-೪೨). ೨. ಅಜಿಗಿಜಿಯಾದುದಂ ; ಜಿಗುಟಾದುದು : ಕಣವೋದ ಕಾಲ್ ಸಿಡಿದ ಖಂಡದ ದೊಂಡೆಯು ರಾಶಿ ಪೊಕ್ಕವರ್ಗಡಿಯಿಡಲಿಲ್ಲೆನಲ್ (ಮಹಾನೀ. ೧೨-೧೩). **ಜೊಂಡು₃** : ೧. ಬಿಡುವಿಡುಳ ಜೊಂಡಿನಿಂ ನಡುತೊಡೆಯ ತುಂಡಿನಿಂ ಪೊಡಗೆಡೆದು ಬೀಳ್ದರಿಂ ನೆತ್ತರಿನೊಳಾಳ್ದರಿಂ ರಣಧರಣಿ ಕಣ್ಗೆಸೆದುದು (ಜಲಪು. ೩೮-೪೯). **ಜೊಂಡೆ** : ೧. ನರಳ್ದ ವೀರರ ಮಿದುಳ ಜೋಡಿಾನ ಜೊಂಡೆ ಜೋಡಣೆಯ . . . ಭಟರಟ್ಟೆಗಳೆಸೆದುದು ಕೂಡೆ ರಣಭೂಮಿ (ಕುವ್ಯಾ.ಶ. ೦೫-೩೩) ; ಕರುಳ ರಕುತದ ಜೊಂಡೆಯಲಿ ಜರಿದೆಲುಗಳಲಿ ಜವನನುಡು ಕಾಜಿಾದ ನೆಲನವೊಲು ರಣಭೂಮಿ ರಂಜಿಸಿತು (ತೊರಿರಾ. ೩-೬-೧೬). **ತೊಂಡೆ₄** : ೧. 'ತೊಂಡೆಗರುಳು' ವರಾ.

**ದೊಂಡೆ₂** 'ತೊಂಡೆ₃' ನೋ.

**ದೊಂಡೆಕರುಳ್** 'ದೊಂಡೆಗರುಳ್' ನೋ.

**ದೊಂಡೆಗರುಳ್**, ತೊಂಡೆಗರುಳು, ದೊಂಡೆಕರುಳ್, ದೊಂಡೆಗರುಳು (ನಾ). ಕುಚ್ಚುಕುಚ್ಚಾಗಿ ಹೆಣೆದುಕೊಂಡಿರುವ ಕರುಳು ; ಮಾಲೆಗರುಳು : ಮುನಿಸಂ ಮಾಡಿದರಾತಿನಾಥರಡಗಂ ಸುಪ್ಪಲ್ಗೆ ಕೆನ್ನೆತ್ತರಂ ಕೆನೆಗೊಂಡಾಜಿಾದ ಪಾಲ್ಗೆ ದೊಂಡೆಗರುಳಂ ಕರ್ಚಂಗೆ ಲೆಕ್ಕ[ಕ್ಕೆ ತಂ]ದಿನಿಸುಂ ಮಾಣದೆ ಪೀರ್ದು ಪೀರ್ದು ನೊಣೆದು (ಹಂಶಧಾ.೧೨-೦೬೦); ದೊಂಡೆಗರುಳುಂ ತೊರಳೆಯುಂ ಮುತ್ತೆ ಬಾಡುತಂ ವುಂಡಗುಳು ನೀರ್ಸೂರಿಯ ನಡನಡುಗಿ ಕೋಡುತಂ (ಬಿಂಡೂಲಿ. ೦-೭) ; ಕಂಡು ಪವನಜ ತುಡುಕಿ ಮಿಗೆ ಮುಂಕೊಂಡು ನೆಲಕ್ಕವ್ವಳಿಸೆ ಮೆಲ್ಲನೆ ದೊಂಡೆಗರುಳುಚಿ ಸೂಸೆ ಚೆಲ್ಲಿತು ರಾಜಸಭೆಯೊಳಗೆ (ಕುವ್ಯಾ.ವಿ. ೬೩೪. ೪-೬೨) ; ವೀರ ದುರ್ಮುಖನ ದೊಂಡೆಗರುಳಗಲಿದವು ಪನಸನ ತುಂಡುಗಳು ತೂಜಿಾದವು ಮರುಳ್ಗಳ ತಂಡದಲಿ ತಜಿಾದೊಟ್ಟದನು ಮಿಕ್ಕಾದ ಯೂಥಪರ (ತೊರಿರಾ. ೬-೦೭-೨೨) ; ದೊಂಡೆಗರುಳ್ಗಳನುಗಿದು ಸೌಬಲನ ನಾಸಿಕದ ಬಸಿನೆತ್ತರಂ ಸುರಿಯಿಸಿ (ಘೋರಾಸು. ೩೫-೨೩). **ತೊಂಡೆಗರುಳು** : ಮುಂಡದ ಹಲಗೆ ಹೆಣದ ಎಲುವಿನ ಕತ್ತಿ ತೊಂಡೆಗರುಳು ಬಿರುಹಗ್ಗ ಖಂಡದ ಹಿಡಿಗಲ್ಲು ನರದ ಚಬುಕುಗಳ ಗಂಡುಭೂತಗಳೆದ್ದವಾಗ (ಹರಿಶಾಂ. ೩-೫೭) ; ತೊಂಡೆಗರುಳನು ದಂಡೆಯನು ಮಾಡಿಸುವವೆಯುವಳಿಗೆ (ಕರಿಶ. ೩೩-೩). **ದೊಂಡೆಕರುಳ್** : ಪುರ್ಬುರಿಪಾಯೆ ಕಂಠಗತಜೀವಿತರಾದವರೆಕ್ಕಲಂ ಕನಲ್ದುರ್ಬಿ ಬಿಸುಟ್ಟ ದೊಂಡೆಕ[ವಾಶಾಂ. ಗ]ರುಳಂ ತಳೆದಿರ್ಪವರ್ . . . ಸರ್ಬ ಮೃಗಂಗಳಂ ಕಡಪಿ ಬರ್ಪವರೊಪ್ಪಿದರ್ (ಜಚಕು. ೫-೪೦). **ದೊಂಡೆಗರುಳು** : ದೊಂಡೆಗರುಳಿನ ಜಾಯ ಜೋಲಿನ ಕುಂಡಲಿತಕರಜಂಘೆಗಳ ಬಿಡುಮುಂಡೆಗೆದಜಿಾದ ಖಳನ ಕಂಡುದು ಭೂಸುರವ್ರಾತ (ಕುವ್ಯಾ.ಅ. ೧-೩೩) ; ದೊಂಡೆಗರುಳಿನ ರಾಶಿಗಳ ಕೊಡೆಯಿಂದ ಮುರಿದಿಹ ಕಾಲ್ಗಳಿಂ ರಣವಂದು ಭೀಕರಿಸಿದುದು (ದೇವೀವು. ೩-೨೫). [ ದೊಂಡೆ₁ + ಕರುಳ್ ]

**ದೊಂಡೆಗರುಳು** 'ದೊಂಡೆಗರುಳ್' ನೋ.

**ದೊಂಡೆಗೆಸಱು** (ನಾ). ಮಂದವಾದ ಕೆಸರು ; ಅಜಿಗಿಜಿಯಾದ ಕೆಸರು : ರಕುತದ ದೊಂಡೆಗೆಸಜಿಾನೊಳದ್ದುದಗಣಿತ ರಥಗಜಾಶ್ವಚಯ (ಕುವ್ಯಾ.ಶ. ೬-೩೦). [ ದೊಂಡೆ₁ + ಕೆಸಱು (<ಕೆಸಱ್) ]

**ದೊಂಡೆದೊಂಗುವೊಂಗು ?** (ಕ್ರಿ). (?) : ಕದಜಿಾದ ಕಂಠತಳಂ ಕುಸಿದು ಕೊರ್ಬಿದ ಪೆರ್ವೊರಲೆ ದೊಂಡೆದೊಂ[ಪಾಶಾಂ. ಪೊಂ]ಗುವೊಂಗಿದ ತುಟಿ ತಳ್ಪಿನಿಂ ಮುಜಿಾದ ಮೆಯ್ಯ ವಿರೋಪನ ತಳ್ತ ತೋಳ್ಗಳೊತ್ತಿದ ಬಟಿಾವೆುಯ್ಯ ಕೂರುಗುರ ಬಾಸುಟಿ ಭೂಷಣವಾಗಳುಂ ರತಾಂತದೊಳ್ (ರೀಲಾವ. ೧೩-೩೫). [ ? ]

**ದೊಂಡೆನರವು**(ನಾ). ಮುದ್ದೆಗಟ್ಟಿದ ನರ; ಹೆಣೆದುಕೊಂಡ ನರ: ತೊಗಲ ಕೊಯ್ಲಿನ ಮುಜಿಾದ ಮೂಳೆಗಳ ದೊಂ[ಪಾಶಾಂ. ಜೊಂ]ಡೆನರವಿನ ಜಜಿಾತ ಮಿದುಳಿನ . . . ಕಾಲಾಂತಕನ ಹೆಚ್ಚೆಳಸು ಹುಲುಸಾಯ್ತು (ಕುವ್ಯಾ.ಭೀ. ೯-೦೩). [ ದೊಂಡೆ₁ + ನರವು ]

**ದೊಂದಡಿ** 'ದೊಂದುಳಿ' ನೋ.

**ದೊಂದಣ** 'ದೊಂದುಳಿ' ನೋ.

**ದೊಂದಣೆ** 'ದೊಂದುಳಿ' ನೋ.

**ದೊಂದಿ** 'ದೋಂದೆ' ನೋ.

**ದೊಂದಿಬೆಳಕು** 'ದೊಂದಿವೆಳಗು' ನೋ.

**ದೊಂದಿಮಿಾಸೆ** (ನಾ). ಗುಂಜುಗುಂಜಾಗಿರುವ ಮಿಾಸೆ ; ಕೆದರುಮಿಾಸೆ : ದೊಂದಿಮಿಾಸೆಯ ಆ ವ್ಯಕ್ತಿ ಉದ್ದವಾಗಿ ದಡೂತಿಯಾಗಿದ್ದನು (ಪುನರು.೨೫). [ ದೊಂದಿ (<ದೊಂದೆ) + ಮಿಾಸೆ ]

**ದೊಂದಿವೆಳಗು**, ದೊಂದಿಬೆಳಕು (ನಾ). ಪಂಜಿನ ಬೆಳಕು: ದೊಂದಿವೆಳಗಂ ಸಮೆಮಾರ್ಪಿಸಿ ನಿಶೀಥಿನಿಯ ಪಕಳೆ, ದ್ರಾಂಟಿದರಗಂ ಇರ್ವರ್ . . . ಕಪಿಧ್ವಜರ್ ! (ಶ್ರೀರಾಮಾ. ೬೧೦-೦೨). **ದೊಂದಿಬೆಳಕು** : ಒಮ್ಮೆ ದೊಂದಿಬೆಳಕಿನಲ್ಲಿ ಎರಡು ವ್ಯೆಲಿ ಕಾಡು ಸುತ್ತಿ ದಿಕ್ಕುತಪ್ಪಿ ನಿಂತ ಹಸುವನ್ನು ಹುಡುಕಿ (ಬಾಳಿಪ್ಪ. ೦೪). [ ದೊಂದಿ ( < ದೊಂದೆ) + ಬೆಳಗು₁ ]

**ದೊಂದುಳಿ**, ದೊಂದಡಿ, ದೊಂದಣ, ದೊಂದಣೆ (ನಾ). ೧. ಗಂಪು ; ಸಮೂಹ; ಜಂಗುಳಿ: "ಬಂಬಲ್ . . . ದೊಂದುಳಿ . . . ಗೊಂದಣ (ಉಂದಲ್)_ಈ ೪೦ ಸಮೂಹಂ" (ಕಶಸಾ. ೦೦-೨೨೨); "ಜಂಗುಳಿ ಕರಳ್ಕೆ ದೊಂದುಳಿ ನೆರವಿ ಥಟ್ಟು . . . ಸಂದಣಿ ಜಾಳಿಗೆಯುಮೆನೆ ಶ್ರೇಣಿಕಾಖ್ಯಂ" (ಕಬ್ಬಿಗ. ೦೬); "ಸಮೂಹಾರ್ಥದೊಳ್ ದೊಂದುಳಿಯೆನಿಕ್ಕುಂ" (ಕಶರ. ೫೨); ಸುರರ ಸಂದಣಿಯ ಕಿನ್ನರರ ದೊಂದುಳಿ[ಪಾಶಾಂ. ಗೊಂದಣ, ಜಂಗುಳಿ]ಯ ಖೇಚರರ ಗುಂಪಿನ ಪನ್ನಗರ ಪಂಕ್ತಿಯಿಂ . . . ಹರನ ಸಭೆ ಸುಖದ ಸೊಗಸಿನ ಜೊಮ್ಮುವಿಡಿದು ಮೆಜಿಾದಿರಲು (ಸಿದ್ಧರಾ. ೦-೨೩) ; ಸಿಡಿಲ ದೊಂದುಳಿಯಂತೆ . . . ಜಗವ ಸುಡುವ ಪೆರ್ಗಿಚ್ಚಿನಂತಿಹ ಕೋಪಶಿಖಿ ಮುಖದೊಳಿರದೆ (ಅಕ್ಕರಾ. ೩-೪೦). ೨. ಗುಂಪಿನಲ್ಲಿ ಉಂಟಾಗುವ ಸಂತೋಷ,– ಮುದ : "ನೆರವಿ ಮುದಗಳೊಳು ದೊಂದುಳಿ" (ಕಬ್ಬಹುಂ. ೧೦೪) : "ದೊಂದುಳಿ ಮುದಂ" (ಸಂಜೀವ. ೨೫) ; "ದೊಂದುಳಿಯೆನಲ್ ಸಂತೋಷವುಕ್ಕುಂ" (ಕಶರ. ೫೨) ; ಮರಿಯ ತಿಂದಾಮೇಲೆ ಎಳಸವುತೆಯಂ ಮೆದ್ದು ಮೊರೆದು ದೊಂದುಳಿಯನ್ನು ಸಾರುತ್ತಲಿಹುದು (ಕಾಲೂರ.೩೩-೪೦): ಎಲ್ಲಿ ದೊಂದುಳಿಗಳವು ಪಗಲಿರುಳ ತೊಡಕಿಲ್ಲಿ (ಕಾಲೂರ. ೬೮-೦೦೮). **ದೊಂದಡಿ** : ೧. ಸಂದಣಿಯ ಕಳಕಳದ ಮಂದಿಯು ದೊಂದಡಿ [ಪಾಶಾಂ. ಗೊಂದಣ, ದೊಂದಣ]ಯನೊಲ್ಲದೆ ಕೆಲಬರೆರವಿಂದವದನೆಯರುಪ್ಪರಿಗೆಗಳನೇಜಿ ನೋಡುವರು (ಬಸವು. ೫-೩೦). **ದೊಂದಣ** : ೧. ಅಂದಣದ ಸಂದಣಿಯು ದೊಂ[ಪಾಶಾಂ. ಗೊಂ]ದಣ ಮಂದಿಯಿಬ್ಬಗಿಯಾಗಿ . . . ಮುಂದೆ ತೊಲಗದೆ ಬಪ್ಪವರ ಮುಡುಹಿಂದಣೆದು ಹೊಯ್ಯುತ್ತ ಕೈದುಗಳಿಂದ ಚಿಮ್ಮುತ ಬಂದು ಹೊಕ್ಕರು ರಾಜಮಂದಿರವ (ಬಸವು. ೬೦-೨೦) ; ಲಲನಾಶಿರೋಮಣಿಯ ಮುಖತುಹಿನಕಿರಣನಂ ನಲವಿಂದ ಬಯಸಿ ನಡೆತಂದ ತಾರಾಗಣದ ಚೆಲುವ ದೊಂ[ಪಾಶಾಂ. ಗೊಂ]ದಣಗಳೆತ್ತರದಿ ನಿಂದಿರ್ಪವೋಯೆನೆ (ಪಂಚಾರಾ. ೦-೨೦-೫೦). **ದೊಂದಣೆ** : ೧. ದೊಂದಣೆ

ಯೊತ್ತಿನೊಳೊತ್ತರಿಸಿದ ಬಿಲ್ಗಾಣರ್ (ವೀರೇಶ. ೨-೩೩) ; ಉತ್ಕಟದ ದೊಂದಣಿಗಲಸಿ ಬಂದೈ ಸಿರಿಗಿರಿಯೊಳಿರದೆ (ಬಸವು. ೦೮-೯) ; ಭೂತ ವೇತಾಳರಿಂ ಶಾಕಿರಿಂ ಕಡುಭಯಂಕರವಾಗೆ ಸುದಣಿಯು ದೊಂದಣಿಯು ವರ್ಣಿಸುವನಾರಿಳೆಯೊಳು (ಲಕ್ಷ್ಮೀಶಾ. ೩-೩೮) ; ಸಂತತಂ ಶುಕಕೋಕಿಲ ಧ್ವನಿಯ ದೊಂದಣಿಯ ನಾದದ ವಿನೋದದಿಂದ (ಋಕ್ಮಾಂಗ. ೨-೨೫) ; ಸಂಸಾರವನ್ನು ಅಲ್ಲಿ ದುರ್ಜನರ ದೊಂದಣಿಯಿಂದಾಚೆ ಹೂಡಿಬಿಡೋಣ (ಆನಪಾ. ೪೪). 'ತೊಂತುಳಿ' ಹೋ. [←ತೆಲು. ದೊಂದಡಿ, ದಂದಡಿ]

**ದೊಂದುಳಿಸು** (ಕ್ರಿ). ೧. ಗುಂಪುಗೂಡು. ೨. ಗುಂಪಿನಲ್ಲಿ ವಿನೋದ ಪಡು,_ ಸಂತಸಪಡು : ಅಳಿಗುರುಳ್ಗಳ ಮುಂದೆ ತೊಳಪ ನಾಸಿಕದಿ ಮಂಡಿಳಿಪ ಮೌಕ್ತಿಕ ಧಾಳಗೊಳಲಲಂಕಾರ ವೆಗ್ಗಳಿಸಿ ದೊಂದುಳಿಸಿ ಯೊರ್ಗುಳಿಸಿ ವನದೊಳ್ ಬಳಸಿ ಸುಳಿದಾಡಿದರ್ ಸತಿಯರು (ಲಕ್ಷ್ಮೀಶಾ. ೧೫-೨೭). [ ದೊಂದುಳಿ + – ಇಸು<sub></sub> ]

**ದೊಂದೆ**, ದೊಂದಿ (ನಾ). ೧. ಕಟ್ಟು ; ಕಂತೆ ; ರಾಶಿ : ಹೊತ್ತಿಸಿದ ಹುಲ್ಲ ದೊಂದೆಗಳ ಕೇಸುರಿಗಳಿಂ ಸುತ್ತುವರಿದೆಸುವ ಶರಸಂತತಿಯ ಸಮಿತಿಯಿಂದೆ . . . ಆ ನಗರಿ ದಾರುಣತರಂ ಬಡೆದುದು (ಸಮ್ಯಕ್ತ್ವ. ೮-೨೯) ; ಸುಡುವ ಸುಣ್ಣಕಲ್ಲು ಉರಿವ ಪುಲ್ಗಳ ದೊಂದೆ ಸುರಿವ ಕೆಂಡ ತಂಟಿ ಕರವೆಸೆದುದು ದುರ್ಗದೊಳಗೆ (ಕುಮಾರ. ೩೭-೩೩) ; ಹುರಿದ ಮಳಲು ಹುಲ್ಲ ದೊಂದೆಗಳಂ ಭೀಕರಮಾಯ್ತು ಕೋಟೆ (ಜಂಪ್ರಸಾಂ. ೮-೦೦) ; ಬಲ್ಮೊನೆಗೈ ಕೃಶಾನುವೊಳ್ ಬೆರಸಿದ ಪುಲ್ಲ ದೊಂದೆ ಪೆಟಲುಪ್ಪಿನ ಪೆರ್ದಿದಿ ಮುರ್ದಿವಂಬಿವಾ ಸುರಿದು . . . ಅಂಭಟರಿಂತು ಕಾದುತಿರೆ ಮುತ್ತಿದರಳ್ಕದೆ ತನ್ನಹಾಭಟರ್ (ರಾಜಶೇ. ೬-೦೦೭). **ದೊಂದಿ** : ೨. ಕೋಲಿಗೆ ಬಟ್ಟೆಯ ಚೂರುಗಳನ್ನು ಸುತ್ತಿ ಎಣ್ಣೆಯನ್ನು ಸುರಿದು ಹೊತ್ತಿಸಿದ ಪಂಜು,–ಹಿಲಾಲು,–ದೀವಟಿಗೆ: ವೀರಭದ್ರನ ಮುಂಗಡೆಗೆ ಉರಿಯುತ್ತಿರುವ ದೊಂದಿಯನ್ನು ಹಿಡಿದೊಬ್ಬ ನಿಂತ (ಬಲ್ಲಾಮ. ೯೩) ; ಮೂರ್ಢಗ್ರಾಮ್ಯರಾರಾದರೂ ದೂರದಿಂದ ನೋಡಿದ್ದರೆ ಅದನ್ನು ಕೊಳ್ಳಿದೆವ್ವವೆಂದು ತಿಳಿಯುತ್ತಿದ್ದರು; ತಿಳಿದವರು 'ದೊಂದಿ' ಎಂದು ಹೇಳುತ್ತಿದ್ದರು (ಕಾನೂರು. ೦೦೩) ; ರಾತ್ರಿಯ ಅರ್ಚನೆ ಮುಗಿಯುತ್ತಿದ್ದಂತೆ ಹತ್ತಿಸಿದ ದೊಂದಿಗಳು ಮಂಕಾಗಿ ಜಾತ್ರೆಯ ಗಲಿಬಿಲಿ ಕಡಿಮೆಯಾಗುತ್ತದೆ (ಸಂಸ್ಕಾರ. ೦೯೨) ; ದೊಂದಿಗಳನ್ನು ಹೊತ್ತಿಸಿ ದೇವಸ್ಥಾನದ ನವರಂಗಮಂಟಪದ ಮೇಲಿನಂಕಣದ ಶಿಲ್ಪಗಳನ್ನು ನನಗೆ ತೋರಿಸುತ್ತಾನೆ (ಜಂಪ್ರ. ೪೪). [ ದೇ.॥ ತುಳು. ದೊಂದಿ ]

**ದೊಂಬ**, ಡೊಂಬ, ದೊಮ್ಮರ (ನಾ). ಗಳೆಯ ಮೇಲೆ ಲಾಗ ಹಾಕಿ ಕಸರತ್ತುಗಳನ್ನು ತೋರಿಸುತ್ತಾ ಜೀವನವನ್ನು ನಡೆಸುವವನು; ಕೊಲ್ಲಟಿಗ : ಕೌಶಂಬೀಪುರದೊಳ್ ಬಹುಕರ್ವಿಯೆಂಬ ದೊಂಬನ ಮನೆಯೊಳ್ ಸ್ತ್ರೀವೇದದಿಂ ಬೆಳ್ಳಕ್ಕಿಜನಾಗಿ ಪುಟ್ಟಿ (ಸುಕುಮಾ. ೫-೧೨ ವ) ; ಮೇಲೆ ಮರದ ರೆಂಬೆಯೊಂದಕ್ಕೆ ಮತ್ತು ಕೆಳಗೆ ನೆಲಕ್ಕೆ ಬಿಗಿದಿದ್ದ ದಪ್ಪನೆಯ ಮಿಣಿಯ ಇಳಿಜಾರಿನಲ್ಲೊಬ್ಬ ದೊಂಬ ಜರ್ರನೆ ಜಾರಿಬಿಟ್ಟು ನಿಂತು, ಸಲಾಮು ಮಾಡಿದ (ಸಂಸ್ಕಾರ. ೦೫೩) ; ದೊಂಬರ ಮಗುವಿಗೆ ತಂತಿಯೂ ನೆಲ (ಶಿಶಾಲ. ೬೪-೦) ; ದೊಂಬನ ಸಾವು ಗಣೆಯ ಮೇಲೆ, ಬಿಲ್ಲವರ ಸಾವು ಮರದ ಮೇಲೆ (ಗಾದೆ) ; ಅಗಸನ ಕತ್ತೆ ದೊಂಬನಿಗೆ ತ್ಯಾಗ (ಗಾದೆ). **ಡೊಂಬ** : "ಕೊಲ್ಲಟಗನೆನೆ ಡೊಂಬನು" (ಅಭಿಮಂ. ೬೦) ; "ಡೊಂಬನ ಪೆಸರ್ ತವೆ ಕೊಲ್ಲಟಿಗನಕ್ಕುಂ" (ಅಭಿಕೃ. ೩೭) ; "ಡೊಂಬವೆಸರಿಂ ಪೇಟಲ್ಪುದು ಸಲ್ಗು ಕೊಲ್ಲಟಿಗನೆಂದೆನುತುಂ" (ಕವಿಶಿಂ. ೦೬೨) ; ಕೋಳಿಯಂತೆ ಕೂಗಿ ಡೊಂಬರಂತೆ ಕೂಡಿ ಆಡಿ ಬಾಗಿ ಹಿಂಗದಿದ್ದಡೆ ಕೊಂಡಾಡುವ ಈ ಲಾಗ ನೋಡಿಕೊಳ್ಳಿ (ಬಸವಕೃ. ೪೩೪-೩೫) ; ಪದೆಯ ಮಾತಿನಂತೆ ಡೊಂಬರ ತೋಟಿಯಂತೆ (ಧರ್ಮಾಮೃ. ೮-೯೪) ; ಶುಕನೋದಿಂಗುಜಿ ಚೆಲ್ಪೆ ಕಾಕರವ ರಂಭಾನೃತ್ಯಕಂ ಡೊಂಬರೇ (ಸೋಮೇಶ. ೩) ; ಅಗಣಿತರಹ ಡೊಂಬರುಗಳು ಬಗೆಬಗೆಯಾಟವ ತೋಱುತಾಸ್ಥಾನವ ಮಿಗೆ ಮೆಚ್ಚಿಸಿದರು (ಕಂಸವಿ. ೨೦-೯೭) ; ಕಣ್ಣು ಕುಂಬಳ ಹೋಳು ಹೊಟ್ಟೆ ಡೊಂಬರ ಡೋಳು ಕೈಕಾಲು ಬಿದಿರಿನ ಕೋಲು (ಇಂಚಾಪ. ೦೦೦-೪೦). **ದೊಮ್ಮರ್ರ** : ತೆಲುಗು (Telugu) :– ದೇವಾಂಗ, ಸಾಲೆ . . . ಬೋಗಂ, ದೊಮ್ಮರ, ಇತರರು (ತುಳುನಾ. ೦೭೩).

**ದೊಂಬರ ಕೋಡಗ** = ೧. ಕೊಲ್ಲಟಿಗರು ತಮ್ಮ ಆಟಕ್ಕಾಗಿ ಪಳಗಿಸಿ ಉಪಯೋಗಿಸುವ ಕಪಿ. ೨. ಮಂತ್ರೊಬ್ಬನ ಪ್ರೇರಣೆಯಂತೆ ಕಾರ್ಯವನ್ನೆಸಗುವವನು ; ಕಲಿಸಿದಂತೆ ಕಾರ್ಯದಲ್ಲಿ ಪ್ರವರ್ತಿಸು ವವನು : ದುರ್ಯೋಧನಂ . . . ಡೊಂಬರ ಕೋಡಗದಂತೆ ಆಡಿ ಗೆರ್ಲ್ದಾಗಳ್ (ಪಂಪಭಾ. ೬-೭೨ ವ). **ದೊಂಬರಲಾಗ**, **ಡೊಂಬ ಲಾಗ** = ೧. ಡೊಂಬರವನು ಹಾಕುವ ಲಾಗ ; ದೊಂಬರು ಗಣೆ ಹತ್ತಿ ತಲೆ ಕೆಳಗು ಮಾಡಿ ಹಾರುವುದು; ತಿಪ್ಪರಲಾಗ : "ಅಂತರಪಲ್ಟಿ ; ಡೊಂಬರ ಲಾಗ" (Somersault. ಇಂಕನ್ನ) ; ಡಂಭಕ ಭಕ್ತಿಗೆ ಮೆಚ್ಚಿ ಕೊಡನು ಕೃಷ್ಣ ಡೊಂಬಲಾಗವ ಹಾಕಿ ಡೊಂಡೊಂಡೆ ಹೂರಳಿದರಿಲ್ಲ (ಪುರಂದ. ೫-೦೩೮ ಅನುಪಲ್ಲವಿ). ೨. ವಿಶ್ವಪ್ರಯತ್ನ ಮಾಡುವುದು : ಡೊಂಬರ ಲಾಗ ಹಾಕಿದರೂ ಬೇರೆಯವರು ಈ ಕೆಲಸಮಾಡಲು ಸಾಧ್ಯವಿಲ್ಲ (ರೂಢಿ). **ಡೊಂಬರ ಹುಳ** = ಡೊಂಬರಲಾಗದಂತೆ ಲಾಗಹಾಕಿಸಲು ಮಕ್ಕಳು ಆಟಕ್ಕಾಗಿ ಉಪಯೋಗಿಸುವ ಒಂದು ಬಗೆಯ ಹುಳು ; ಭೋರಂಗಿ ಹುಳು : (ಕ). **ದೊಂಬರ ಕುಣಿತ** = ಕಲೆಗಾರಿಕೆಯಿಲ್ಲದೆ ಕುಣಿಯುವ ಕುಣಿತ; ಕುಮಾರರಾಮನಿಗೆ ಸಂಬಂಧಿಸಿದ ಹಾಡುಗಳನ್ನು ಹಾಡಿ ಕೊಂಡು ದೊಂಬರು ಆಚರಿಸುವ ಹಬ್ಬಗಳ ಸಂದರ್ಭದಲ್ಲಿ ದೊಂಬರ ಹೆಂಗಸರು ಮಾಡುವ ಒಂದು ಬಗೆಯ ಜಾನಪದ ನೃತ್ಯ: ದೊಂಬರ ಕುಣಿತ ಇದ್ದಲ್ಲಿ ಜನ ಸೇರಿರುತ್ತಾರೆ (ರೂಢಿ). **ದೊಂಬರಗಿತ್ತಿ** = ದೊಂಬರ ಸ್ತ್ರೀ ; ದೊಂಬಿತಿ : (ಕ). **ದೊಂಬರ ಪೋರಿ** = ೧. ದೊಂಬರವಳು; ದೊಂಬರ ಹುಡುಗಿ : ಆ ದೊಂಬರ ಪೋರಿ ಊರೂರು ಸುತ್ತಿ ಜೀವನ ನಡೆಸುತ್ತಾಳೆ (ರೂಢಿ). ೨. ಬಸವಿ; ಸೂಳೆ: (ಕ). **ದೊಂಬ ರಾಟ**, **ಡೊಂಬರಾಟ** = ೧. ದೊಂಬರು ಆಡುವ ಗಣೆಯ ಆಟ,–ಕಸ ರತ್ತು : ಪೂರ್ವಕಾಲದಲ್ಲಿ ಇಲ್ಲಿಗೆ ಸುತ್ತುಮುತ್ತಲಿನ ಏಳೂರು ಶಿಡಿತೇರು ಗಳು ಬಾರದು ದೊಡ್ಡ ಜಾತ್ರೆಯಾಗಿ ಕುಸ್ತಿ ದೊಂಬರಾಟ ಎಲ್ಲಾ ಆಗುತ್ತಿದ್ದು ವಂತೆ (ಹುಟ್ಟಿತ. ೪) ; ದೊಂಬರಾಟ ಮುಂತಾದ ಹಲವಾರು ಮನರಂಜನೆಯ ಕಾರ್ಯಕ್ರಮಗಳು ಪದ್ಧತಿಯಂತೆ ನಡೆದುವು (ಸವತಿ. ೯೮) ; ದೊಂಬರಾಟ ದವರು ರಂಗಸ್ಥಳದ ಮೇಲಕ್ಕೆ ಓಡುತ್ತಾ ಬಂದರು (ಶಾಕಿಪು. ೦೨೧) ; ಅರಸ ನಿದ್ದನು ಡೊಂಬರಾಟಕೆ ಸೆರೆಯ ಸಿಕ್ಕಿದ ಮನದಲಿ (ಕಎಪು. ೩೭-೦) ; ಸಾಲೆ ಯಲ್ಲಿ ಅದೇನೋ ನಡೆದಿದೆಯೆಂತಲ್ಲ—ಹಗರಣವೋ ಡೊಂಬರಾಟವೋ (ಮೂಕಜ್ಜಿ. ೩೦). ೨. ವಿಶೇಷ ಪ್ರಯತ್ನ ; ಮಹತ್ವವನ್ನು ತೋರಿಸಿ ಕೊಳ್ಳುವುದು ; ಆಟೋಪ : ಯಮುನಿಯಮಗಳ ಡೊಂಬರಾಟದಿಂದ ಫಲವೇನು (ವಿಚಾರ. ೪೯) ; ಕವಿಯ ಕಲ್ಪನಾಶಕ್ತಿ ಎತ್ತರಕ್ಕೆ ಹೋದರೂ ಡೊಂಬರಾಟಕ್ಕಾಗಿ ಎಂದು ತೋರಬಹುದು (ಕಸಾಚ. ೩೦). ೩. ಹಸಿವು; ಕಣ್ಣುರುಮಮ್ಮು ನೋಟ, ಕಾಲು ಸೋಲುವ ತನಕ ಓಟ, ಹೊಟ್ಟೆಯಲ್ಲಿ ಡೊಂಬರಾಟ (ನಿಲಮು. ೬೫-೨). **ದೊಂಬರು ಗಣೆ** = ಕೊಲ್ಲಟಿಗರು ಆಟ ದಲ್ಲಿ ಉಪಯೋಗಿಸುವ ಗಣೆ,–ಬಿದಿರಿನ ಕೋಲು : ಯೆಲ್ಲಕ್ಕನು ಭಾರಿ ದೊಂಬರುಗಣೆ ಮೇಲೆಯಿಂದ ಬಿದ್ದ ಕಾರಣ (ಮೈಅರಿ. ೦೯೩೮, ೯೬-೪ ; ಸು. 17 ನೆಯ ಕಡೆ).

[ ದೇ.॥ ತಮಿ. ತೊಮ್ಮ ; ಮಲ. ದೊಮ್ಮರ್, ಡೊಮ್ಮರ್; ತುಳು. ದೊಂಬೆ, ದೊಮ್ಮರೆ, ಡೊಂಬೆ, ಡೊಂಬಾರೆ; ತೆಲು. ದೊಮ್ಮರ./ಸಂ. ಡೋಂಬ, ಡೋಮ ]

**ದೊಂಬಚ್ಚೆ** (ನಾ). ಒಬ್ಬಾಕೆಯ ಹೆಸರು: ತ್ರೈಲೋಕವೊಬಲಂ ದೊಮ್ಮಚ್ಚೆ ಆಳುತ್ತಿರೆ ಅಲ್ಲಿ ಕೊಟ್ಟದು ಅಜುಗಣ್ಣಾಗ ಮಣ್ಣು (ಎಕ. XII, ಶಿರಾ. ೨೯-೯೩ ; ಸು. ೯೦೦). [ ದೊಂಬಂ + ಅಚ್ಚೆ₁ ]

**ದೊಂಬಿ, ಡೊಂಬಿ₁, ಡೊಂಬು₁, ದೊಂಬೈ₁, ದೊಂಬೆ** (ನಾ). ೧. ಗುಂಪು ; ಸಮೂಹ : ಕುಸುಮಸೌರಭಕೆ ಉಟಿವರಿವ ತುಂಬಿಗಳ ದೊಂಬಿ (ಪೋಹಕ. ೫-೨೫); ದ್ವಾದಶಾರ್ಕಬಿಂಬ ಪೂರ್ವೋದಧಿಯದನುಚ್ಛಳಿಸಿ ಕತ್ತಲೆಯ ದೊಂಬಿಯಂ ತುಳಿವುತುದಯಾಚಲಾಗ್ರವ ನಿಲ್ಕಲಂಬುಜೋದರ . . . ಸಂಗವಸ್ಥಾನಕೈತಂದನೊಲಿದು (ಪಂಕಾರಾ. ೬-೧೮-೧). ೨. ಗದ್ದಲ; ಗೊಂದಲ. ೩. ದಂಗೆ ; ವಿರೋಧದ ಚಳವಳಿ ; ಜಗಳ ; ಕದನ ; ಕಾಳಗ : ದೊಡ್ಡ ದೊಂಬಿ ಉಂಟಾಗುವಂತಿತ್ತು (ವ್ಯಾಸಜ. ೮೦); ದೊಂಬಿಗೆ ಹೋದವನು ಶರೀರದ ಹಂಬಲು ಬಿಟ್ಟರೆ ಲೇಸು (ಗಾದೆ). **ಡೊಂಬಿ₁** : ೧. ನೆರೆನೆರೆದು ಮೊರೆವ ಮಜಿಮುಂಬಿಗಳ ಡೊಂ[ಪಾಠಾಂ. ದೊಂ]ಬಿ (ಕೃಮಿಛಾ. ೨೯-೯೬); ತನಿಗಂಪನುಂಡುಂಡು ಪೆಸಾರಲಮ್ಮದಿಹ ತುಂಬಿಗಳ ಡೊಂಬಿಗಳ ನರವಿ ಕಾಣುತಲಿ (ಪಂಕಾರಾ. ೧-೫-೫೬). ೩. 'ಡೊಂಬಿಗ₁' ವರಾ. **ಡೊಂಬು₁** : ೧. ಸರಸಿಜದ ನಿಜಗಂಧದಲಿ ತನುವರಿಮಳವ ತಕ್ಕೈಸಿ ವನದಲಿ ತರಳೆಯರು ತುಂಬಿದರು ಮಜಿಮುಂಬಿಗಳ ಡೊಂಬಿನಲಿ (ಕುಮ್ಯಾಅ. ೧೮-೩); ಅಂಬುನಿಧಿ ಬಡಬಡವರಿಗೆ ತೆಗೆದುಂಬಿಗೊಡಲೊಡ್ಡುವುದೆ ಕಪಿಗಳ ಡೊಂಬಿಗೀವುದೆ ಬೆನ್ನ ಬೆಟ್ಟಿಕೆ ಕಥೆಯ ಮಾತಲ್ಲ (ತೊರರಾ. ೬-೩೪-೦೯). **ಡೊಂಬೈ₁** : ೨. ಆ ಖಿರ್ವರನ ಕೂಡಲ ಜೋಗಿಗಳು ಡೊಂಬೆಯಂ ಮಾಡಿ ರಾಮಯ್ಯನ ಶಿಷ್ಯರ ನೋಯಿಸಲು (ಭೈರಕಾ. ೩೨೬). **ದೊಂಬೆ** : ೩. ನಿಶ್ಚಯವಾಗಿ ಈ ದೊಂಬೆಯಿಂದ ಸರಕಾರಕ್ಕೆ ಒಳಗೊಳಗೆ ಬಹಳ ಆನಂದವಾಗಿರಲಿಕ್ಕೆಬೇಕು (ಕುಂರಹಿಂ. ೦೧೦). 'ತೊಂಬೆ₁' ವರಾ.

**ದೊಂಬಿ ಎಬ್ಬಿಸು** = ದಂಗೆಯೇಳುವಂತೆ ಮಾಡು : ನಿನಗೇನು ಹಳ್ಳಿಯಲ್ಲಿ ದೊಂಬಿ ಎಬ್ಬಿಸಬೇಕೆಂಬ ಉದ್ದೇಶವೊ ? (ಯೋಧಪು. ೮೫). **ದೊಂಬಿ ಏಳು** = ವಿರುದ್ಧವಾಗಿ ನಿಲ್ಲು ; ದಂಗೆ ಏಳು : ಅವನ ಮನಸ್ಸು ದೊಂಬಿ ಏಳಲು ಯತ್ನಿಸುತ್ತಿತ್ತು (ಬಿಕಂಲಾ. ೦೦೩). **ದೊಂಬಿಮಾಡು, ಡೊಂಬಿ ಮಾಡು, ಡೊಂಬು ಮಾಡು**=ದಂಗೆ ಏಳು: ದೊಂಬಿಮಾಡಿ ಜನರು ಅವರ ಜಾಲದಲ್ಲಿ ಬಿದ್ದಂತೆ ಆಯಿತು (ಯುಕ್ಷಕ್ಷ. ೩೬) ; ಜನರು ತಮ್ಮ ಕರ್ತವ್ಯಗಳನ್ನೇ ಮರೆತು ಪಂಗಡಗಳನ್ನು ಕಟ್ಟಿಕೊಂಡು ದೊಂಬಿ ಮಾಡಲಾಪಕ್ರಮಿಸಿದರು (ಶೃಗಂಅ. ೩) ; ಹಿಮಕರಹಾಸನನು ಸೆಳೆದು ಡೊಂಬಿ ಮಾಡುವ ವಾಲಿತನುಜನ ಸಂಬಳಿಸಿ (ತೊರರಾ. ೬-೪೮-೨೬) ; ಹಾಳಿಸಿತು ರಥ ಜಡಿವ ಕೌರವನಾಳ ರೈಂಪಿಸಿ ಡೊಂಬು ಮಾಡುವ ಹಾಳ ಝಾಡಿಸಿ ಬೈದು ಹೊಕ್ಕನು ಮತ್ತೆ ಗುರುಸೂನು (ಕುಮ್ಯಾಶ. ೦೮-೨೯). **ದೊಂಬಿಯ ಜಗಳ** = **ದೊಂಬಿಜಗಳ** : ಬರಿದೆ ದೊಂಬಿಯ ಜಗಳವನು ನರಹರಿಯ ನೀ ಮಾಡಿದೊಡೆಯೊಪ್ಪೆನು (ಅಜಾಲವಿ. ೦೦-೦೬). **ದೊಂಬಿ ಹಚ್ಚು** = ದೊಂಬಿ ಮಾಡು : ಶತ್ರುಗಳನ್ನು ಎಡೆಬಿಡದೆ ನೆಲಕ್ಕುರುಳಿಸಿದರೆಂದು ಕೂಗುತ ದೊಂಬಿ ಹಚ್ಚಿದರು (ಕೋಹಿನೂ. ೦೯).

[ ದೇ.೫ ತುಳು. ದೊಂಬಿ, ಡೊಂಬಿ, ಡೊಂಬೆ; ತೆಲು. ದೊಮ್ಮಿ ]

**ದೊಂಬಿಗ, ಡೊಂಬಿಗ₁** (ನಾ). ೧. ಗೊಂದಲವನ್ನುಂಟುಮಾಡುವವನು; ಗದ್ದಲ ಮಾಡುವವನು : (೩). **ಡೊಂಬಿಗ₁** : ೨. ಕಾಳಗ ಮಾಡುವವನಂ; ಪೇಲೆಬೇಳುವವನಂ : ಅಂಬರಕೆ ಜಡದಿಟ್ಟನೌಕುವ ಡೊಂಬಿಗರ ದವಡಿಗರ ದಳ್ಳಿದ ರಕ್ಕಸರ ಹನುಮ (ತೊರರಾ. ೩-೪-೨೨).

[ ದೊಂಬಿ + – ಗ₃ ]

**ದೊಂಬಿಗಾರ, ಡೊಂಬಿಗಾರ** (ನಾ). ೧. ಗದ್ದಲ ಮಾಡುವವನಂ ; ಗಲಾಟೆ ಮಾಡುವವನಂ : ಬೀದಿಯ ದೊಂಬಿಗಾರರೊ ಏದ್ಯಾನಿಲಯಗಳನ್ನು ಹೊಕ್ಕು ಅಲ್ಲಿಯೂ ಮರ್ಕಟಚೇಷ್ಟೆ ನಡಿಸುವಂತ (ಏಜಾಮಂ. ೦೦೨). **ಡೊಂಬಿಗಾರ** : ೨. ದಂಗೆಎಬ್ಬಿಸುವವನಂ : ಡೊಂಬಿಗಾರನಿವನಂ ಮರಳೆ ಹಿಡಿವುದೆನೆ ಸಾಧ್ಯವೇನಿನ್ನು (ಗೊರೂಥಾ. ೬-೦೬೦).

[ ದೊಂಬಿ + – ಕಾರ₁ (< – ಕಾಜ) ]

**ದೊಂಬಿಗೊಡು** (ಕ್ರಿ). ಗುಂಪು ಸೇರು ; ಸಂದಣಿಗೊಡು : ಈ ಗುಂಬದಂಬಟೆಯವರ್ ದೊಂಬಿಗೊಡಿ ಪಾಡುವ ಬಣ್ಣಪಾಡಂ ಕೇಳುತ್ತೆ (ಚಕವಿ. ೬-೧೩೯ ಪ). [ ದೊಂಬಿ + ಕೊಡು₁ ]

**ದೊಂಬಿಜಗಳ** (ನಾ). ಬೀದಿಯಲ್ಲಿ ನಡೆಯುವ ಜಗಳ ; ಬೀದಿಜಗಳ ; ಹಾದಿಜಗಳ : ಹೆಚ್ಚು ಗುಡಿಸಲುಗಳಿರುವಲ್ಲಿ ದೊಂಬಿಜಗಳ ಸರ್ವೇಸಾಮಾನ್ಯವಾಗಿರುತ್ತದೆ (೩೬೦). [ ದೊಂಬಿ + ಜಗಳ (<ಜಗಟು) ]

**ದೊಂಬಿತಿ, ಡೊಂಬತಿ, ಡೊಂಬಿತಿ₁** (ನಾ). ದೊಂಬರ ಹೆಂಗಸು ; ಕೊಲ್ಲಟಗಿತ್ತಿ: ತನ್ನ ಗುರು ದೊಂಬಿತಿಯು ಕೂಡುಣುತ್ತಿರಲ್ (ಖಾಸೋಪು. ೧೩-೪). **ಡೊಂಬತಿ** : ಇದು ವಿಷದ ಮರನೆಂದು ಮುಳ್ಳ ಕಟ್ಟಿರಲು ಆದನಟಿದು ಒಬ್ಬ ಡೊಂಬತಿ . . . ರಾಯನ ತೋಟದ ವಿಷದ ಹಣ್ಣ ಮೆದ್ದು (ಭೈರಕಾ. ೧೬೩) ; ಸಂತೆಯುಂಗಡಿ ಸೂಳೆ ಮುಂತೊಲಿವ ಡೊಂಬತಿಯ . . . ಹೋದವನ ಸಂತಾನ ಕೆಡುಗು (ಸರ್ವಜ್ಞ. ೦೯೪೬) ; ಬಲ್ಲಂತೆ ನಾನು ನಾಡಾಡಿ ಡೊಂಬತಿಯಾಗಿ ಗಣಮಿಣಿಗಳನ್ನೇರಿ ಕುಣಿಯ ಬಹುದು (ಸಪೀಗೀ. ೫೯-೬). **ಡೊಂಬಿತಿ₁**: ಅಮಿತವೈಭವದೊಳು ಬರುತ್ತ ಗುರು ಡೊಂಬಿತಿಯು ಮಮತೆಯಿಂ ಪೋದನೆನೆ (ವೀಕೈಪು. ೬-೪-೦೬).

[ ದೊಂಬ + – ಇತಿ₁ (< – ಇತ್ರಿ) ]

**ದೊಂಬಿದಾಸ** (ನಾ). ಊರೂರು ಸಂಚರಿಸುತ್ತಾ ಐತಿಹಾಸಿಕ, ಪೌರಾಣಿಕ ಕಥೆಗಳಿಗೆ ಸಂಬಂಧಿಸಿದ ಹಾಡುಗಳನ್ನು ಹಾಡುತ್ತಾ, ಬಯಲಿನಲ್ಲಿ ರಾತ್ರಿಯ ಹೊತ್ತು ನಾಟಕ ಆಡುವ ವೃತ್ತಿಯವನು ; P ಇವರಿಗೆ 'ಹೆಣ್ಣುವೇಷ' ದವರು ಎಂತಲೂ ಕರೆಯುತ್ತಾರೆ : ದೊಂಬಿಯಾಗಿ ಆಟ ಆಡುತ್ತಿದ್ದುದರಿಂದ ಯಕ್ಷಗಾನವನ್ನು ನನ್ನೂರಿನಲ್ಲಿ ದೊಂಬೀಆಟವೆಂದು, ದೊಂಬೀಆಟ ಆಡುವ ಜನರಿಗೆ ದೊಂಬೀದಾಸರೆಂದೂ ಕರೆಯುತ್ತಾರೆ (ನನ್ನೂರು. ೩೦೩) : ದೊಂಬೀದಾಸರ ಆಟಗಳಲ್ಲಿ ಇದು ಇನ್ನೂ ನಿಂತಿರುವುದನ್ನು ನಾವು ಬಲ್ಲೆವು (ಸಾಹಿಚೀ. ೧೬) ; ದೊಂಬಿದಾಸನ ನಿಲುವಂಗಿ ಹಾಕಿದಂಥ ನಾರದ ಬರುತ್ತಿರಲಿಲ್ಲ (ಯುಕ್ಷಬ. ೧೦೫) :

[ ದೊಂಬಿ + ದಾಸ ]

**ದೊಂಬಿದುಳುಕು** (ನಾ). ಬಹಳವಾದ ತಂಳುಕು ; ಕಲ್ಲೋಲ ಧುಮ್ಮಿಕ್ಕಿದನು ಸರಸಿಯಲಿ ದೊಂಬಿದುಳುಕಿನೊಳದನು ಕಾಣದೆ ಶಂಬರಾಂತಕನಟ್ಟ ಮೂಡಿಗೆಯಂಬಿನಲು ಪೊರಮಟ್ಟ ದಿವ್ಯಾಂಗನೆಯ ರೂಪಿನಲಿ (ಅನಂರಾ. ೪-೦-೦೩). [ ದೊಂಬಿ + ತುಳುಕು₂ (<ತುಳುಂಕು₂) ]

**ದೊಂಬಿಯುದ್ಧ** (ನಾ). ಗುಂಪುಗುಂಪಾಗಿ ಮಾಡುವ ಯುದ್ಧ ; ಅನೇಕ ಜನರು ಆಕ್ರಮಣ ಮಾಡಿ ಮಾಡುವ ಯುದ್ಧ : ಕೌರವಬಲದೊಡನೆ ಯುದ್ಧಕ್ಕೆ ಮುಹೂರ್ತ ಮಾತ್ರವು ದೊಂಬಿಯುದ್ಧವನ್ನು ಮಾಡಿ (ಶ್ರೀಪಾಅ. ೩೫೯). [ ದೊಂಬಿ + ಯುದ್ಧ ]

**ದೊಂಬಿಸಾಕ್ಷಿ** (ನಾ). ಗೊಂದಲವನ್ನುಂಟುಮಾಡುವ ಹೇಳಿಕೆ,-ಸಾಕ್ಷಿ : (೩). [ ದೊಂಬಿ + ಸಾಕ್ಷಿ ]

**ದೊಂಬಿಸ್ವಾಧ್ಯಾಯ** (ನಾ). ೧. ಗುಂಪಿನಲ್ಲಿ ವೇದವನ್ನು ಅಧ್ಯಯನ ಮಾಡುವಿಕೆ. ೨. ಜಾತ್ರೆ ಮುಂತಾದ ಕಡೆ, ಗಲಾಟೆಯ ನಡುವೆ, ಗೊಂದಲದಲ್ಲಿ ನಡೆಯುವ ಅತ್ಯಾಚಾರ : (೩).

[ ದೊಂಬಿ + ಸ್ವಾಧ್ಯಾಯ ]

**ದೊಂಬೆ** 'ದೊಂಬಿ' ನೋ.

**ದೊಕ್ಕನೆ** (ಅ). ೧. ದೊಕ್ಕೆಂದು ಶಬ್ದವಾಗುವ ಹಾಗೆ: ಒಂದೆ ಸರಲಿಂದವುವನರ್ದೆಯಂ ದೊಕ್ಕನೆ ತಿಣ್ಣಮೆಚ್ಚು ಕೊಲಲೊಲ್ಲನೆ ಸಂಕ್ರಂದನನಂದನ

ತನಯಂ (ಪಂಪಭಾ. ೧೧-೯೬): ಇಕ್ಕೆಯೊಳಱಸಿ ಕಾಣದೆ ಪಕ್ಕಿಯಂಬರಕಕ್ಕೞು ಮಿಗೆ ಪಾಱೆ ನೆಲಕೆ ದೊಕ್ಕನೆ ಕೆಡೆದು ಪ್ರಲಾಪಿಸಿತದಱೊಂದು ದುಃಖ ವಂಣದನೇನೆಂಬೆ (ಅಂಜನ. ೭-೧೬೬). ೨. ಕೂಡಲೆ; ಬೇಗನೆ; ತಕ್ಷಣ: ಎಕ್ಕಿಯ ಕೋರಕವಂ . . . ಅರಿದು ಕದಡೀಂಟಲೊಡಂ ದೊಕ್ಕನೆ ಮಣ್ಣಾಗಿ ವೇಕುಳಿಯಕ್ಕಿದ ಶುನಕನ ವಿಷಂ (ಖಮದ. ೧೩-೩೬); ಪಕ್ಕವಿಲ್ಲದ ಪಕ್ಕಿಯಂದದಿ ನನ್ನನಂ ದೊಕ್ಕನೆ ಮಾಡಿದ ಮಗನೆ ದಿಕ್ಕಾವುದು ಪೇಳೆನಗಿನ್ನು ನಂದನ ಅಕ್ಕಟ ತಾಯಂನು ತೊಱೆದೆ (ಕವಿಕ. II, ೪೪. ಕಾಮನ ಕಥೆ); ದಿಕ್ಕುದಿಕ್ಕುಗೇಂದ ಬಂದೊಂದು ಮರದಲಿ ಪಕ್ಷಿ ಕುಳಿತು ರಾತ್ರಿಯಲಿ ಅರ್ಕನುದಯವಾಗೆ ತಮತಮ್ಮ ದಿಕ್ಕಿಗೆ ದೊಕ್ಕನೆ ಪೋಪಂತೆ ಕಾಣ (ದ್ವಾದಶಾ. ೦-೩೬); ರುಗುಪಿಣಿ ದೊಕ್ಕನಾಕೆಯ ಕರಸಿ ನೋಡಿ ದಳಕ್ಕಱಿಂದ (ಸಾಕ್ಷಿಭಾ. ೩೦-೩೩); ಬೊಕ್ಕಸ ಭಂಡಾರ ದೇಶ ರಾಣಿಯ ವಾಸ ಮಿಕ್ಕ ಕುಮಾರವರ್ಗವನು ದೊಕ್ಕನೆ ಬಿಟ್ಟುಹೋದನು (ಅನುಭ. ೩-೩೦೭). [ದೊಕ್ಕು + – ಅನೆ$_1$]

**ದೊಕ್ಕರಿ** 'ಡೊಕ್ಕರ್ಕ' ನೋ.

**ದೊಕ್ಕರಿಗೊಳ್** 'ಡೊಕ್ಕರಂಗೊಳ್' ನೋ.

**ದೊಕ್ಕರಿಸು** 'ಡೊಕ್ಕರಿಸು' ನೋ.

**ದೊಕ್ಕು** (ನಾ). ಒಂದು ಅನುಕರಣ ಶಬ್ದ: ದೊ[ಪಾಠಾಂ. ಧೊ]ಕ್ಕು ಧಡ ಸಬುದಗಳಲಿಳೆ ಗುಮ್ಮಿಕ್ಕೆ ಕೂರಂಮಾನಱುಚೆ . . . ಧೈರ್ಯಬಲ ರೊದಗಿದರು ಸರಿಸದಲಿ (ತೊರರಾ. ೪-೪-೨೭).

**ದೊಕ್ಕೆ** 'ಡೊಕ್ಕೆ' ನೋ.

**ದೊಕ್ಕೆನ್** (ಕ್ರಿ). ದೊಕ್ಕೆಂದಂ ಶಬ್ದವುಂಟಾಗು: ಉರ್ಕಱಬುಗಳೆಱಗಿ ರೋಮರೋಮಕ್ಕೆ ನೆಳಲ್ ನೆಕ್ಕು ಚಳಲ್ ಚಕ್ಕು ದೊಗಲ್ ದೊಕ್ಕನೆ ನಾಂಟದುಮರಾತಿಭಟರವಯವಮಂ (ಜಗವಿ. ೭-೪೦): ಹಾಳಾಹಳಸವಮಾನ ತೀವ್ರಾನುಭಾಗದ ದುರಿತಭಾರದಿಂ ಬೀೞ್ವಂತೆ ದೊಕ್ಕನೆ [ಪಾಠಾಂ. ದೊಕ್ಕನೆ] ಬಿಟ್ಟು (ವರ್ಧಪು. ೧೧-೦೫ ವ); ಕರಘಾತದಲಿ ದಡ ದೊಕ್ಕೆನಲು ಕೆಡಹಿದನು ಕೇಳೀ ಸೌಧಸಂಕುಳವ (ತೊರರಾ. ೫-೪-೦೫).

[ದೊಕ್ಕು + ಎನ್$_1$]

**ದೊಗರು** 'ಡೊಂಗಱು' ನೋ.

**ದೊಗಲ್** (ನಾ). ಒಂದು ಅನುಕರಣ ಶಬ್ದ: ಉರ್ಕಱಬುಗಳೆಱಗಿ ರೋಮರೋಮಕ್ಕೆ ನೆಳಲ್ ನೆಕ್ಕು ಚಳಲ್ ಚಕ್ಕು ದೊಗಲ್ ದೊಕ್ಕನೆ ನಾಂಟದು ಮರಾತಿಭಟರವಯವಮಂ (ಜಗವಿ. ೭-೪೦).

**ದೊಗಲೆ** 'ದಗಲ್ಕೆ' ನೋ.

**ದೊಗಹು** (ನಾ). ಒಂದು ಅನುಕರಣ ಶಬ್ದ: ಘೀಲೆಂಬ ಘಣ್ಣೆಂಬ ದೊಗಹೆಂಬ ದೊಕ್ಕೆಂಬ . . . ಕೂರಸಿಗಳುರವಣೆಯ ದನಿಯುಡುಸುತಂ ಪುಟ್ಟೆ (ಇಹರ. ದೇ. ೪೧-೨೨); ಖಣಿಲ್ಪಟಲ್ದೊಗಹು . . . ಗರಿಗರಿಲೆಂಬ ನಿಷ್ಠುರರವಂ ಏಗೆ ತಬ್ಬಿಬ್ಬಾದತ್ತು ಯುದ್ಧದೊಳ್ (ಗಿರಿಕ. ೬-೩೮).

**ದೊಗಳೆ** 'ದಗಲ್ಕೆ' ನೋ.

**ದೊಗೆ$_1$** (ಕ್ರಿ). ಉಗುರಿನಿಂದ ಗೆಬರು; ಕವರು: ಮಣ್ಣನ್ನು ದೊಗೆದು ಅಲ್ಲಿ ಬಚ್ಚಿಟ್ಟಿದ್ದ ಗೋಲಿಯನ್ನುಹುಡುಕತೊಡಗಿದ (ಬಂಡಿ). [?]

**ದೊಗೆ$_2$** (ನಾ). ಕೆತ್ತಿದ ಪ್ರದೇಶ; ಹಳ್ಳ ಮಾಡಿರುವ ಜಾಗ (?): ಕಲ್ಲ ಮೇಗಣ ದೊಗೆಯುಲುಂ ಜೆಯಕೇತನಿರ್ವ್ವತ್ತು ಮಾ[ಳ]ಕಯ್ಯ ಕೆಲಸಂಗೆಯ್ದು (ಸೌಇಇ. XI-i, ೮೫-೪೦; ೧೦೬೦). [<ದೊಗೆ$_1$]

**ದೊಗ್ಗ** (ನಾ). ೧. ಹುಳಿಯಾದುದು: ಕಳ್ಳಿಂ ಕುಡಿದರಂತೆ ಸೊರ್ಕಿ ದೊಗ್ಗಲೆಯಂತುರ್ಬಿ [ಪಾಠಾಂ. ಕಾಯ್ದ ಪಾಲಂತುರ್ಕಿ] [ಬಳಿವ ಮೊಲೆಯಂತೆ ಕೊರ್ವಿ] ಎಳವೆಱೆಯಂತೆ ವಕ್ರನಾಗಿ (ಕರ್ಣಾಮೃ. ೨-೦೧೫). ೨. ಹುಳಿನುಚ್ಚು; ತರಿಯಿಂದ ಮಾಡಿದ ಗಟ್ಟಿಯಾದ ಅಂಬಲಿ: ಅಗ್ಗಸಂಗ್ಗಿಗಳುಂಟು ದೊಗ್ಗ[ಪಾಠಾಂ. ಡೊಗ್ಗೆ]ಮಜ್ಜಿಗೆಯುಂಟು ಹೆಗ್ಗಳದ ಕಾಯಿಂ ಮೆಲಲುಂಟು (ಸರ್ವಜ್ಞ. ೦೬೦೯). [?]

**ದೊಗ್ಗಳೆ**, ದಗ್ಗಳಿ, ದಗ್ಲಿ (ನಾ). ಒಂದು ಬಗೆಯ ಸಸ್ಯ: ಹುಲಿಗಿಲ್ ದೊಗ್ಗಳೆ[ಪಾಠಾಂ. ಡೊಗ್ಗಗೆ, ದೊಗ್ಗಗೆ]ಯ ಹಜುಹೆಯೆಂಬವಱೆಲೆಯುಂ ಕಟುಯೊಳಱೆ ಕಾಸಿ ಕಟ್ಟಿಲ್ ತೊಲಗುಗುಮೊದಱಸಾವ ಮುಳ್ಳ ವಿಷಮನಿತನಿತುಂ (ಖಮದ. ೨-೨೦೦). ದಗ್ಗಳಿ: ಸೊಪ್ಪುಗಳು: ಅಗಸೆ . . . ಹರಿವೆ, ಚಿಲಕಿ, ದಗ್ಗಳಿ, ಕೆಸವೆ, ದೊಡ್ಡಬಸಲಿ (ನಮ್ಮನು. ೩೩೭). ದಗ್ಲಿ: ದಗ್ಲಿಸೊಪ್ಪು, ಚಿಲಕೀರೇಸೊಪ್ಪು (ವ್ಯಾಕಿ. ೬-೯೬).

[ದೇ.೫ ತುಳು. ದೊಗ್ಗಲಿ, ದೊಗ್ಗೊಲಿ; ತೆಲು. ದೊಗ್ಗಲಿ, ದಗ್ಗಲಿ]

**ದೊಗ್ಗಾಲು** 'ಡೊಗ್ಗಾಲು' ನೋ.

**ದೊಗ್ಗಾಲೂರು** 'ಡೊಗ್ಗಾಲೂರು' ನೋ.

**ದೊಟ್ಟಿ** (ನಾ). (ಕರಾ) ಬಾವಿಯಿಂದ ನೀರನ್ನು ಮೇಲಕ್ಕೆ ಎತ್ತುವ ಸಾಧನ; ಏತ: ನೀರಿನ ಆಳು ಲಕ್ಕು ದೊಟ್ಟಿಯ ನೀರು ಸೇದಲು ಬಂದಾಗ ರಾಮನಾಥ ಹಾಗೂ ಅವನ ತಂದೆ ಇಬ್ಬರೂ ಹಿತ್ತಲಲ್ಲಿದ್ದರು (ಮೂರುಸಾ. ೨೯); ಇಪ್ಪತ್ತು ವರ್ಷ ದೊಟ್ಟಿಯಿಂದ ಅವರು ನೀರನ್ನು ಮೊಗೆಯುತ್ತಿದ್ದರು (ಮಂರಮ. ೫೯). [←ತುಳು. ದೊಟ್ಟಿ]

**ದೊಠಾರ** (ನಾ). ೧. ಶೂರ; ಪರಾಕ್ರಮಿ; ಕಲಿ: ಆರಿವನು ಕಲಿ ಪಾರ್ಥನೇ ತ್ರಿಪುರಾರಿ ಹಿಡಿವಂಬಾಯಿತೆಂಬ ದೊಠಾರನೇ ದೈತ್ಯಾರಿ ಸಾರಥಿಯೆಂಬ ಗರ್ವಿತನೆ (ಕುಮ್ವಾದ್ರೋ. ೯-೪೩); ಮೇಳವದ ಮರಿ ಲೇಸು ಕರ್ಣನ ಸೋಲದಲಿ ಸೀವರಿಸಿದರೆ ಭೂಪಾಲನಾಣೆ ದೊಠಾರರಹರೆನು ತೆಚ್ಚನಾ ಪಾರ್ಥ (ಕುಮ್ವಾಕ. ೨೯-೯೦). ೨. ನಿಂದೆ; ಮೂದಲೆ; ಚುಚ್ಚುಮಾತಾಡುವಿಕೆ; ಬಯ್ಗುಳ. 'ತುಂಟಾರ', 'ದೊಠಾರತನ', 'ದೊಠಾರಿಸು' ಪರಾ. [?]

**ದೊಠಾರತನ** (ನಾ). ೧. ಶೌರ್ಯ; ಸಾಹಸ; ಪರಾಕ್ರಮ: ಆಳುತನದ ದೊಠಾರತನ ಸರಿಯಾಳಿನಲಿ ಸೆಣಸಾದೊಡೊಳ್ಳಿತು ಮೇಳವೇ ಗುರುದೈವದಲಿ (ಕುಮ್ವಾದ್ರೋ. ೦-೨೬); ಆರ ತೇಜದಲೊಲಿಸಿದನು ಮದನಾರಿಯನು ಮಱೆಗಾಳಗದ ದೊ[ಪಾಠಾಂ. ಕು]ಠಾರತನದಲಿ ಮೆಚ್ಚಿ ಕೊಟ್ಟನಲ್ಲೆ ನಿಜಾಸ್ತ್ರವನು (ನಿಠಾಗ. ೧-೦೦-೪೩). ೨. ನಿಂದಿಸುವಿಕೆ; ಮಂದಲಿಸುವಿಕೆ; ಬಯ್ಯುವಿಕೆ: ನಾಡ ಮಾತನು ಕಲಿತು ನಮ್ಮೊಡನಾಡುತಿಹರಿ ದೊಠಾರತನದಲಿ ಮರುಳುತನದಿಂದೆ (ಪ್ರಭುಲೀ. ೦೫-೮೨).

[ದೊಠಾರ + – ತನ]

**ದೊಠಾರಿಸು** (ಕ್ರಿ). ೧. ಪರಾಕ್ರಮವನ್ನು ತೋರಿಸು; ಶೌರ್ಯ ತಾಳು; ಸಾಹಸಮಾಡು: ಅೞವನ ಘಾಟವೆ ದೊಠಾರಿಸಿ ಸೋಲಿಸುವ ದೇನರಿದೆ (ಕುಮ್ವಾಕ. ೨೬-೩೩). ೨. ಮೂದಲಿಸು; ನಿಂದಿಸಿ ಮಾತಾಡು: ಮೋಡಿ ಮಾಡದಿರಲೆ ಕಿರೀಟಿ ವಿಭಾಡಿಸುವುದರಿಂದೇ ದೊಠಾರಿಸಿಯಾಡುವುದು ದೊರೆಗುಚಿತವೇ (ಕುಮ್ವಾಲೀ. ೯-೩೬); ಫಡ ದೊಠಾರಿಸಿ ನುಡಿದ ಜಿಹ್ವೆಯ ಹೆಡತಲೆಯಲುಗಿವೆನು ಕಣಾ (ಕುಮ್ವಾದ್ರೋ.೦೬-೩೪): ಈವನ ದೊಠಾರಿಸುವ ನಾಲಗೆಯ ಕೊಯ್ದಿಗೆ ಶಸ್ತ್ರವಿವೆಯೆನುತ(ಕುಮ್ವಾಕ. ೪-೦೦).

[ದೊಠಾರ + – ಇಸು$_1$]

**ದೊಡಹಳತ** 'ದೊಡ್ಡಹಾಳಿತ' ನೋ.

**ದೊಡ್ಡ** (ಗು). ೧. ಗಾತ್ರದಲ್ಲಿ ಹಿರಿದಾದ; ದಪ್ಪವಾದ; ಸ್ಥೂಲವಾದ: ಅವಳ ತಂದೆ ಒಂದು ಕಡೆ ಕುಳಿತು ದೊಡ್ಡ ಒಂದು ಡೋಲನ್ನು ಬಡಿಯುತ್ತಿದ್ದನು (ಸಂಸ್ಕೃ. IV, ೩೩). 'ದೊಡ್ಡನೇಱಲ್' ಪರಾ. ೨. ವಯಸ್ಸಿನಿಂದ ಹಿರಿಯರಾದ; ಹಿರಿಯ; ಜ್ಯೇಷ್ಠ. 'ದೊಡ್ಡಕ್ಕ', 'ದೊಡ್ಡಣ್ಣ' ಪರಾ. ೩. ಮುಖ್ಯವಾದ; ಪ್ರಧಾನವಾದ. 'ದೊಡ್ಡಗಿಡ್ಡಂಗಿ', 'ದೊಡ್ಡಬೀದಿ' ಪರಾ. ೪. ಉದಾರವಾದ; ಉದಾತ್ತವಾದ;

ಧಾರಾಳ. 'ದೊಡ್ಡಮನಸ್ಸು' ಪರಾ. ೫. ಒಳ್ಳೆಯ; ತಳಿಯ; ಉತ್ತಮವಾದ. 'ದೊಡ್ಡದನ' ಪರಾ. ೬. ವಿಸ್ತಾರವಾದ; ವಿಶಾಲವಾದ; ಅಗಲವಾದ: ಅವನದು ತುಂಬಾ ದೊಡ್ಡಮುಖ (ರೂಢಿ). 'ದೊಡ್ಡಮನೆ' ಪರಾ. ೭. ಎತ್ತರವಾದ; ಬೆಳೆದ. 'ದೊಡ್ಡಮರ' ಪರಾ. ೮. ಉಬ್ಬಿದ; ಚಾಚಿದ. 'ದೊಡ್ಡಹೊಟ್ಟೆ' ಪರಾ. ೯. ಶಕ್ತಿಯುತವಾದ; ಬಲವಾದ. ೧೦. ಉದ್ದವಾದ; ನೀಳವಾದ. 'ದೊಡ್ಡಿತು' ಪರಾ. ೧೧. ಅತಿಯಾದ; ಆಡಂಬರದ; ವೈಭವದಿಂದ ಕೂಡಿದ: ಆಗಾಗ ಅವರ ಮನೆಯಲ್ಲಿ ದೊಡ್ಡ ಮೋಜವಾನಿಗಳು ನಡೆಯುತ್ತಲೇ ಇರುತ್ತವೆ (ರೂಢಿ). ೧೨. ಭರ್ತಿಯಾದ; ತುಂಬಿದ: ಇಂದು ಮಳೆ ಬಂದಿರುವ ಕಾರಣ ದೊಡ್ಡ ಹೊಳೆ ಆರಂಭವಾಗಿರುವುದರಿಂದ ನದಿಯನ್ನು ದಾಟಿ ಬರಲು ಯಾರೂ ಸಾಹಸ ಮಾಡುವುದಿಲ್ಲ (ರೂಢಿ). ೧೩. ಗಟ್ಟಿಯಾದ; ಜೋರಾದ. 'ದೊಡ್ಡದನಿ' ಪರಾ. ೧೪. ಗಾಢವಾದ; ಅಂತ್ಯವಿಲ್ಲದ. 'ದೊಡ್ಡನಿದ್ದೆ' ಪರಾ. ೧೫. ವೇಗದಿಂದ ಕೂಡಿದ; ವೇಗವಾದ. 'ದೊಡ್ಡನಡೆ'. ಪರಾ. ೧೬. ಸಿರಿ ತುಂಬಿದ; ಐಶ್ವರ್ಯವುಳ್ಳ. 'ದೊಡ್ಡೊಕ್ಕಲು' ಪರಾ. ೧೭. ಹೆಚ್ಚಿನದಾದ; ಮಹತ್ವಾದ. 'ದೊಡ್ಡಸುದ್ದಿ' ಪರಾ. ೧೮. ತಿಳಿದ; ತಿಳಿವಳಿಕೆ ಹೊಂದಿದ. 'ದೊಡ್ಡಮಾತು' ಪರಾ.

ದೊಡ್ಡದೊಡ್ಡ (ದ್ವಿರುಕ್ತಿ): ಗಂಡಶೈಲಃ . . . ಬೆಟ್ಟದಿಂದ ಕೆಳಕ್ಕೆ ಉರುಳಿಕೊಂಡು ಜಾರಿದ ದೊಡ್ಡದೊಡ್ಡ ಕಲ್ಲುಗುಂಡುಗಳು (ಸಿದ್ಧಾಂತಿ. ೧೦೮): ದೊಡ್ಡ ದೊಡ್ಡ ಕಣ್ಣುಗಳನ್ನು ಮೆಡ್ಡರಿಸಿಕೊಂಡು . . . ಬಸ್ಸು ಗಾಡಿಗೆ ಎದುರಾಗಿ ಬರುತ್ತಿದ್ದರೆ ಎತ್ತುಗಳಿಗೆ ಬೆಟ್ಟದಾಕಾರದ ಭೂತವೇ ಬಂದಂತೆ ಕಂಡು... ಪರಾರಿಯಾಗುತ್ತಿದ್ದುವು (ನನ್ನೂರು. ೨೯). ದೊಡ್ಡಂಕಂ ಬಡಿವ, ದೊಡ್ಡಂಕ ಬಡಿವ = ಮಹಾಯುದ್ಧಗಳಲ್ಲಿ ಹೋರಾಡುವವನಂ; ಅತಿಶಯವಾಗಿ ಹೋರಾಡುವವನು; ಒಂದು ಬಿರುದು: ತೂಗಿ ತುತ್ತಿಡುವ ಬಿರುದರ ಪೆಣ್ಡರ ಗಣ್ಡಂ . . . ದೊಡ್ಡಂಕಂ ಬಡಿವ ಗೀತಪ್ರಗೀತಂ ಗೇಯವಿನೋದನ್ ನಿಡಕಾಳೋತ್ತುಂಗ ಶ್ರೀಮದೆಟ್ಟಿಯಂಗದೇವ ಸ್ಥಿರಂ ಜೀಯಾತ್ (ಪ್ರಾಅಿ. ೧೯೪೯. ೩೬-೪೦: 1096); ದೊಡ್ಡಂಕ ಬಡಿವ ಜಗವನಣ್ಡಲೆವ ಸಿತಗರ ಗಣ್ಡ ಸಾಮನ್ತ ಬಿಟ್ಟದೇವರು (ಎಕ. XVI, ಕೃನಾ. ೯೮-೦೩ : 1169); ದೊಡ್ಡಂಕ ಬಡಿವನೆಂಬ ಬಿರುದಂ ಚಾಲುಕ್ಯಚಕ್ರವತಿಯಾಹವ[ಮ]ಲ್ಲನ ಕಯ್ಯಲು ಪಡೆದು (ಎಕ. XVI, ಕೃನಾ. ೬೨-೬೨ ; 1242). ದೊಡ್ಡಕುದುರೆ ಚೇಷ್ಟೆ=ಹಣದ ಸಾಮರ್ಥ್ಯವಿದ್ದವರು ಮಾಡುವ ವ್ಯವಹಾರವನ್ನು ಹಣವಿಲ್ಲದವರು ಅನುಕರಿಸುವ ನಡವಳಿ: ಅವರದೆಲ್ಲ ದೊಡ್ಡಕುದುರೆ ಚೇಷ್ಟೆ. ನಾವು ಅವರಿಗೆ ಈಡೇನೂ ಅಲ್ಲ (ಮುಚಾಗ. ೨). ದೊಡ್ಡದಾಗು = ೧. ಗಾತ್ರದಲ್ಲಿ ಹಿರಿದಾಗು; ದಪ್ಪವಾಗು: ಬಲೂನಿನಲ್ಲಿ ಗಾಳಿ ತುಂಬುತ್ತಾ ತುಂಬುತ್ತಾ ಅದು ದೊಡ್ಡದಾಗುತ್ತಾ ಬಂತು (ರೂಢಿ). ೨. ವಿಶಾಲವಾಗು; ವಿಸ್ತಾರವಾಗು: ಜನರಲ್ ವಾರ್ಡಿನಲ್ಲಿ ಪ್ರಪಂಚ ದೊಡ್ಡದಾಗಿತ್ತು (ಕೀಲುಗೊಂ. ೧೪೨). ೩. ನೀಳವಾಗು; ಉದ್ದವಾಗು: ಈ ದಿನದ ನನ್ನ ಭಾಷಣ ಸ್ವಲ್ಪ ದೊಡ್ಡದಾಗಬಹುದು (ರೂಢಿ). ೪. ದೊಡ್ಡವಳಾಗು; ಮೈನೆರೆ: ಆರೇಳು ತಿಂಗಳುಗಳಾದವು. ಹೆಣ್ಣು ದೊಡ್ಡದಾಯಿತು (ಹುಲ್ಲುಹ. ೧೬).

ದೊಡ್ಡದು = ೧. ಹಿರಿದಾದುದು; ಹೆಚ್ಚಿನದು: ನಿಮ್ಮ ಭಾಗ್ಯ ದೊಡ್ಡದೋ ನಮ್ಮ ಭಾಗ್ಯ ದೊಡ್ಡದೋ (ಪುರಂದ. ೨-೩೧ ಪಲ್ಲವಿ): ಕ್ಷಮೆಯು ದೊಡ್ಡದೇ; ಹೊರತಾಗಿ ಪಾಪಕೃತ್ಯದಿಂದುಂಟಾಗುವ ಭೋಗವು ದೊಡ್ಡದಲ್ಲ (ಕೃಪಾಲು. ೩೪); ನಿನ್ನನ್ನು ಕಣ್ಣಿಗೆ ಒತ್ತಿಕೊಳ್ಳಬೇಕೆಂಬ ಆಶೆಯಾಗುವುದು. ನೀನು ಎಷ್ಟು ದೊಡ್ಡವಳು! ನಿನ್ನ ಹೃದಯ ಎಷ್ಟು ದೊಡ್ಡದು, ಶಾಂತಲೆ! (ಶಾಂತಲಾ. ೩೯೨). ೨. ವಿಶಾಲವಾದುದು: ಕುಪ್ಪತ್ತೂರಿನ ದೇವಾಲಯವು ಬಹಳ ಹಳೆಯದು ಮತ್ತು ದೊಡ್ಡದು (ಮ್ಯಾಪ್ತು. ೧೨೨). ೩. ಅಮೂಲ್ಯವಾದುದು; ಮಹತ್ವಾದುದು: ಮಾನವಜನ್ಮ ದೊಡ್ಡದು ಇದ ಹಾನಿ ಮಾಡಲಿಬೇಡಿ ಹುಚ್ಚಪ್ಪಗಳಿರಾ (ಪುರಂದ. ೧-೧೪-೦). ೪. ಅಶಕ್ಯವಾದುದು; ಅಸಾಧ್ಯವಾದುದು: ಇದೇನು ದೊಡ್ಡದೆಂದು ಕೈಯನ್ನು ತೂಗುತ್ತಾ ಪಾಲದಲ್ಲಿ ನಡೆದನು (ಕಾಲೂರ. ೧೦ ಕಥಾಸಾರ). ದೊಡ್ಡದು ಮಾಡು = ಅಲ್ಪವನ್ನು ಅತಿಯಾಗಿ ಭಾವಿಸು: ಇಷ್ಟು ಸಣ್ಣದಾದ ವಿಷಯವನ್ನು ದೊಡ್ಡದು ಮಾಡಬಾರದು (ಆಳನಿ. ೨೪); ತನ್ನ ಹೆಂಡತಿಗಾದ ಒಂದು ಸಣ್ಣ ಅಪಚಾರವನ್ನು ದೊಡ್ಡದು ಮಾಡಿ ಹಿರಿಯ ಮಗ ಮನೆ ಬಿಟ್ಟು ಬೇರೆ ಸಂಸಾರ ಹೂಡಿದ್ದಾನೆ (ರೂಢಿ). ದೊಡ್ಡವ, ದೊಡ್ಡವನು = ೧. ವಯಸ್ಕ; ಹಿರಿಯ: ಎಡ್ಡಮಾ ಮಬ್ಬಿನೊಳ್ ದೊಡ್ಡನುಂ ನೋಡಿದಂ ದೊಡ್ಡವಂ ಕಿರಿದಾಗಿ ಬಯಕೆಯೊಳಗೀಳದಂ (ಶಾಂಪೂರ. ೪೧-೫೧): ಹೌದು ಮಗು, ನೀನೀಗ ತುಂಬ ದೊಡ್ಡವ (ಮರವು. ೩೬೬); ವೆಂಕಟಶಾಮಿ ನನಗಿಂತ ಸುಮಾರು ಹತ್ತು ವರುಷ ದೊಡ್ಡವನು (ಸಣ್ಣಕ. IV, ೩೦): ಮಧು ದೊಡ್ಡವನಾಗುತ್ತಾನೆ, ಓದಿ ವಿದ್ಯಾವಂತನಾಗುತ್ತಾನೆ (ಕೀಲುಗೊಂ. ೮೦). ೨. ಶ್ರೀಮಂತ; ಸಾಹುಕಾರ: ದೊಡ್ಡವನುಂಡರೆ ಮದ್ದು ಬಡವನುಂಡರೆ ಹೇಸಿಗೆ (ಗಾದೆ): ದೊಡ್ಡವನ ಮಾತು ಸವಿ, ಬಡವನ ಊಟ ಸವಿ (ಗಾದೆ). ೩. ಶ್ರೇಷ್ಠನಾದವನು. ದೊಡ್ಡವರು, ದೊಡ್ಡರ್ (ಬಹುವ) = ೧. ಹಿರಿಯರು: ಹೆಡ್ಡರೆಂಬುವರೇನೋ ಲಂಗೋಟಿ ಜನರನ್ನು ದೊಡ್ಡವರೆಂದು ವಂದಿಸುವರು ಯತಿಗಳ (ಪುರಂದ. ೪-೮೮-೩): ಗೊಡ್ಡು ನಾಮ ತೀಡಿಕೊಂಡು ಅಡ್ಡಾದಿಡ್ಡಿ ಮುದ್ರೆಗಳ ಬಡಿದುಕೊಂಡಿನ್ನು ದೊಡ್ಡದೊಡ್ಡ ಮಾತುಗಳಾಡಿ ದೊಡ್ಡವರೆಂದ್ಹೇಳಿಕೊಂಬ ಬಡ್ಡೀ ಧಗಡೀಮಕ್ಕಳಿಗಿನ್ನು ವೈಷ್ಣವ ಸಲ್ಲುವುದೆ (ಪುರಂದ. ೪-೧೧೧-೧): ತಮ್ಮ ಚಾತುರ್ಯವನ್ನು ದೊಡ್ಡವರಿಗೆ ತೋರಿಸಬೇಕೆಂದು ಹುಡುಗರು ಸದಾ ಅಭಿಲಾಷಿಸುವರು (ಶಾವಿಜ. ೨೨): ದೊಡ್ಡವರದೆಲ್ಲವು ದೊಡ್ಡದೆಂಬುವ ಮಾತು ಸುಳ್ಳಲ್ಲ! (ಉಯ್ಯಾಲೆ. ೬೫-೦). ೨. ಸಾಹುಕಾರರು; ಶ್ರೀಮಂತರು: ಗುರುಕಾರರಿಗೆ ಮೈಸೂರಿನಲ್ಲಿ ದೊಡ್ಡವರುಗಳ ಮನೆವಾರ್ತೆಗಳ ಮತ್ತು ಚಾಕರರುಗಳ ನೆಂಟಸ್ತನ ಮತ್ತು ಗೆಳೆತನ ಬಹಳ ಉಂಟಂತೆ (ಕಲಿಸಿ. ೨೨೦): ದೊಡ್ಡವರ ಮನೆ ನೋಟ ಚಂದ, ಬಡವರ ಮನೆ ಊಟ ಚಂದ (ಗಾದೆ): ದೊಡ್ಡವರ ಕೈ ಗಿಡ್ಡ (ಗಾದೆ). ೩. ಮೇಲೆನಿಸಿಕೊಂಡವರು; ಮಹಾವ್ಯಕ್ತಿಗಳು; ಹೆಚ್ಚಿನವರು: ಜಾಗೃತಿಯು ಘನ,–ಕೃತಿಯು ಘನವು,–ವಿಸ್ಮೃತಿಯು ಘನ! ದೊಡ್ಡವರು! (ಉಯ್ಯಾಲೆ. ೬೫-೧೬): ಅಂತು ಪೊಣಮಡುವರಾತಿಕಾಲಾನಲನಂ ಕಂಡು ಕಡ್ನುವಂದ ದೊಡ್ಡರೆಲ್ಲಂ ಮುಸುಕಿ (ಪಂಪಭಾ. ೩-೬೦ ವ): "ವೃದ್ಧರು" (ಪಂಪದೀ. ೦೦೫). ದೊಡ್ಡವಳಾಗು = ೧. ವಯಸ್ಕಳಾಗು: ನೀನು ಚಿಕ್ಕವಳು . . . ದೊಡ್ಡವಳಾದ ಮೇಲೆ ನಿನಗೆ ಎಲ್ಲಾ ಅರ್ಥವಾಗುತ್ತೆ (ಕೀಲುಗೊಂ. ೧೨). ೨. ಪ್ರಥಮ ಋತುಮತಿಯಾಗು; ಪುಷ್ಪವತಿಯಾಗು; ಮೈನೆರೆ: ಈ ಅನಾಥ ಬಾಲಿಕೆಯ ವಿವಾಹದ ಭಾರವೂ ಗುರುಚರಣರ ಮೇಲೆಯೇ ಬಿದ್ದಿದೆ. ದೊಡ್ಡವಳಾಗಿ ಬಿಟ್ಟಿದ್ದಾಳೆ (ಪರಿಚೇ. ೨೯): ಅಬ್ಬಬ್ಬಾ ಅಂದ್ರೆ ಇನ್ನೆರಡು ವರ್ಷಗಳಲ್ಲಿ ದೊಡ್ಡವಳಾಗುತ್ತಾಳೆ (ಕೀಲುಗೊಂ. ೩೦). : ದೊಡ್ಡವಳು=೧. ಹಿರಿಯಳು: ಹಾಗಾದರೆ ನೀನು ದೊಡ್ಡವಳಲ್ಲಾ, ನಿನಗೇಕೆ ಮಕ್ಕಳಾಗೋದಿಲ್ಲ? (ಕೀಲುಗೊಂ. ೧೦). ೨. ಶ್ರೇಷ್ಠಳಾದವಳು: ನೀನು ಎಷ್ಟು ದೊಡ್ಡವಳು! ನಿನ್ನ ಹೃದಯ ಎಷ್ಟು ದೊಡ್ಡದು, ಶಾಂತಲೆ! (ಶಾಂತಲಾ. ೩೯೨). ೩. ಎತ್ತರವಾಗಿರುವವಳು: ಇಬ್ಬರನ್ನೂ ಅಕ್ಕಪಕ್ಕದಲ್ಲಿ ನಿಲ್ಲಿಸಿ ನೋಡಿದರೆ ದೊಡ್ಡವಳು ಯಾರು ಎಂದು ತಿಳಿಯುತ್ತದೆ (ರೂಢಿ). ದೊಡ್ಡ ಹಾಲುಗೆಯ ದೇವರು=ಪ್ರಸಿದ್ಧವಾಗಿದ್ದ ಒಂದು ದೇವತೆಯನ್ನು ಕುರಿತ

ವಿವರಣೆಯನ್ನು ಕೊಡುವ ಪದ : ಸಯಂಭುದೇವರ ಗುಡಿಯ ದೊಡ್ಡ ಹಾಉಗೆಯ ದೇವರ ಕೃಪೆಯಿಂದ ದನಗೂರ ದೊರೆ . . . ಸುಬರಾಜ್ಯಂಗೆ ಯ್ಯುಕ್ತಿರಲು (ಎಳ. III, ಮಳವ. ೮೨-೩ ; 1603). ದೊಡ್ಡಾಳು = ೧. ಎತ್ತರವಾದ ಆಳು : ಅವ್ವಾಜಿಯು ಅಷ್ಟು ದೊಡ್ಡಾಳಲ್ಲವಾದ್ದರಿಂದ ಅವರಿಗೆ ಸರಿಯಾಗಿತ್ತು (ಹಂಗಾಳ್ಳ. ೨೫). ೨. ಬಲವಾದ ಆಳು : ಗಾರೆಕೆಲಸಕ್ಕೆ ನಾಲ್ಕು ಜನ ದೊಡ್ಡಾಳುಗಳು ಅವಶ್ಯಕ (ರೂಢಿ). ದೊಡ್ಡಿಹ= ೧. ದಪ್ಪವಾದ ; ಸ್ಥೂಲವಾದ : ಗಂಡಶೈಲಂಗಳ್ – ಬೆಟ್ಟದತ್ತಣಿಂದ ಉರುಳ್ದ ದೊಡ್ಡಿಹ ಕಲ್ಲುಗಳು (ನಾಚಿರಾ. ೩) ; ಮಹೋಕ್ಷ–ದೊಡ್ಡಿಹ ಎತ್ತು (ನಾಚಿರಾ. ೩). ೨. ಹಿರಿದಾದ ; ಹೆಚ್ಚಿನ ; ಶ್ರೇಷ್ಠ : ಒಡ್ಡಿದ ಮೋಹರಗಳನೊಡೆ ಹಾಯ್ವುವ ದೊಡ್ಡಿಹ ರಾವುತರುಗಳ ಒಡ್ಡಮುಚಿವೆ (ಕುರಾಸಾಂ. ೦೫-೧೬); ಒಡ್ಡಿದ ಶೂಲವ ಹಾಯ್ವ ವೈರಾರದ ದೊಡ್ಡಿಹ [ಹಾಂ.ಯ] ದೇವರಿಂದವನ ಅಡ್ಡಾಕಿಲ್ಲದ ತರಿಸಿ ನಿನ್ನಯ ಕಾಲಿಗಡ್ಡಗೆಡಹುವೆನಂಜದಿರು (ಕುರಾಸಾಂ. ೨೪-೩೭). P ಇದಲ್ಲದೆ ಅನೇಕ ನಾಮವಾಚಕಗಳೊಡನೆ ಕೂಡಿ ಸಂದರ್ಭಕ್ಕನುಸಾರವಾಗಿ ಈ ಶಬ್ದ ಹೆಚ್ಚು ವ್ಯಾಪ್ತವಾದ ಅರ್ಥವನ್ನು ಪಡೆಯುತ್ತದೆ. ಉದಾಹರಣೆಗೆ– ದೊಡ್ಡ ಅಂಗಡಿ, ದೊಡ್ಡ ಊರು, ದೊಡ್ಡಕೆರೆ, ದೊಡ್ಡ ಕೆಲಸ, ದೊಡ್ಡ ಜಾತ್ರೆ, ದೊಡ್ಡ ತಪ್ಪು, ದೊಡ್ಡಧಿಕಾರಿ, ದೊಡ್ಡನದಿ, ದೊಡ್ಡ ಪುಸ್ತಕ ಭಂಡಾರ, ದೊಡ್ಡ ವಸ್ತುಪ್ರದರ್ಶನ, ದೊಡ್ಡ ಸೈನ್ಯ, ದೊಡ್ಡಹಳ್ಳಿ, ದೊಡ್ಡಹೊಟ್ಟೆ ಮುಂತಾದುವು.

[ ದೇ.೩ ತಮಿ. ತೊಟ್ಟ; ತುಳು. ದೊಡ್ಡ, ದೊಡ್ಡು; ತೆಲು. ದೊಡ್ಡ; ಕೊಡ. ದೊಡ್; ಕೊಲಾ. ದೊಡಾಂಡ್ ]

**ದೊಡ್ಡ ಅಂಚಿಹುಲ್ಲು** 'ದೊಡ್ಡ ಹಂಚಿಹುಲ್ಲು' ನೋ.

**ದೊಡ್ಡ ಅಂಟುಪುರಲೆಹುಲ್ಲು** (ನಾ). ಒಂದು ಬಗೆಯ ದೊಡ್ಡದಾದ ಅಂಟುಪುರಲೆ ಹುಲ್ಲು : ದೊಡ್ಡಅಂಟುಪುರಲೆಹುಲ್ಲು, ಕರಿಅಂಟಿಹುಲ್ಲು (ಮೈಶಿಗಿ. ೬೯-೦೧೨೦). [ದೊಡ್ಡ + ಅಂಟುಪುರಲೆ + ಹುಲ್ಲು (<ಪುಲ್)]

**ದೊಡ್ಡ ಏಲಕ್ಕಿ** 'ದೊಡ್ಡೇಲಕ್ಕಿ' ನೋ.

**ದೊಡ್ಡಕಡಗ** (ನಾ). ಒಂದು ಬಗೆಯ ದೊಡ್ಡ ತೇಗದ ಮರ : ಹೆತ್ತೇಗ, ಎಟ್ಟೆಗ, ಎತ್ತಾಗ, ಅರ್ಸಿನತೇಗ, ದೊಡ್ಡಕಡಗ, ಹಡ್ಡ (ಮೈಶಿಗಿ. ೩-೪೦).

[ ದೊಡ್ಡ + ಕಡಗ₂ ]

**ದೊಡ್ಡಕಡವ** (ನಾ). ಒಂದು ಬಗೆಯ ದೊಡ್ಡ ಕದಂಬವೃಕ್ಷ : "ಮಹಾಕದಂಬಃ–ದೊಡ್ಡಕಡವ, ರಾಶ್ಕಿ" (ಓಷಧಿ. ೮೨).

[ ದೊಡ್ಡ + ಕಡವ₁ (<ಕದಂಬ) ]

**ದೊಡ್ಡಕರುಳು** (ನಾ). ಜಠರದ ಕೊನೆಯಿಂದ ಗುದದ್ವಾರದವರೆಗಿನ ಅನ್ನನಾಳದ ಭಾಗ : ಸಣ್ಣಕರುಳಿನಲ್ಲಿ ಸಹ ಅರಗದ ಹಾಗೂ ಶರೀರಕ್ಕೆ ಬೇಡವಾದ ಅನ್ನದ ಭಾಗವು, ದೊಡ್ಡಕರುಳಿನಲ್ಲಿ ಬಂದು ಸೇರುತ್ತದೆ (ಗೋಗ್ರಾಸ. ೪೫) ; ಕೆಲವು ಕೀಟಗಳಲ್ಲಿ . . . ದೊಡ್ಡಕರುಳು (ಕೊಲೊನ್) ಗುದನಾಳದ ಚೀಲ (Rectal sac) ಮತ್ತು ಗುದಗಳೆಂತ ವಿಭಾಗಿಸಬಹುದು (ಕೀಟಶ. ೨೮). 'ಸಣ್ಣಕರುಳು' ಪರಾ.

[ ದೊಡ್ಡ + ಕರುಳು (<ಕರುಳ್) ]

**ದೊಡ್ಡಕಹಿಮೆಣಸು** (ನಾ). ಒಂದು ಬಗೆಯ ಸಸ್ಯ : ಕಂಕೊಳ : "ಕಂಕೊಲ–ಕಂಕೊಳ, ದೊಡ್ಡಕಹಿಮೆಣಸು" (ಓಷಧಿ. ೨೨).

[ ದೊಡ್ಡ + ಕಹಿಮೆಣಸು₁ ]

**ದೊಡ್ಡಕಳವಿ** (ನಾ). ದಪ್ಪವಾದ ಹಣ್ಣುಗಳನ್ನು ಬಿಡುವ ಕಳವಿ ಗಿಡ, ಕಮರಿಕೆಗಿಡ : "ಮಹಾಶ್ವೇತ–ದೊಡ್ಡಕಳವಿ, ಬಿಳಿಯ ಬಳ್ಳಿ, ಸುಂಡೆ, ಕೆಂಜೆಡೆ" (ಓಷಧಿ. ೦೬೬) ; "ಶಿರಿವತ್ರೀ–ದೊಡ್ಡಕಳವಿ" (ಓಷಧಿ. ೦೬೬).

[ ದೊಡ್ಡ + ಕಳವಿ (<ಕಳವೆ₁) ]

**ದೊಡ್ಡಕಳವಿಗೆ** (ನಾ). ಮುಳ್ಳುಗಸೆಯಲ್ಲಿ ಒಂದು ಬಗೆ : "ಗಿರಿಕರ್ಣಿಕೆ–ದೊಡ್ಡಕಳವಿಗೆ" (ಓಷಧಿ. ೪೮). [ ದೊಡ್ಡ + ಕಳವಿಗೆ₂ ]

**ದೊಡ್ಡಕಳ್ಳಂಗಡಲೆ** (ನಾ). ದೊಡ್ಡದಾದ ಕಳ್ಳಂಗಡಲೆ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ ; ದೊಡ್ಡದಾದ ಏಲಾವಾಲುಕ : "ವರ್ಷಪುತ್ರಿ–ದೊಡ್ಡಕಳ್ಳಂಗಡಲೆ" (ಓಷಧಿ. ೦೪೪).

[ ದೊಡ್ಡ + ಕಳ್ಳಂಗಡಲೆ ]

**ದೊಡ್ಡಕಾಗೆ** (ನಾ). ಒಂದು ಬಗೆಯ ಕಾಗೆ ; ಮಂಡಕಾಗೆ : "ಅರಣ್ಯವಾಯಸಃ–ದೊಡ್ಡಕಾಗೆ" (ಓಷಧಿ. ೯) ; "ಕಾಕೋಲ–ಚವ್ವ, ದೊಡ್ಡಕಾಗೆ, ನೀರುಳ್ಳಿ" (ಓಷಧಿ. ೨೯). [ ದೊಡ್ಡ + ಕಾಗೆ ]

**ದೊಡ್ಡಕಾವಲಿ** (ನಾ). ಒಂದು ಬಗೆಯ ಸಸ್ಯ : ಕರಂಡಹಣ್ಣಿನ ಗಿಡ, ಕಬಳಿಗಿಡ, ಕಳಾಗಿಡ, ದೊಡ್ಡಕಾವಲಿ, ಹಜ್ಜಾರಿಗೆ (ಮೈಶಿಗಿ. ೧೮-೩೨೨).

[ ದೊಡ್ಡ + ಕಾವಲಿ₀ ]

**ದೊಡ್ಡಕಿತ್ತೀಳೆ** (ನಾ). ಈಳೆ ಜಾತಿಗೆ ಸೇರಿದ ಒಂದು ಬಗೆಯ ದೊಡ್ಡ ಮರ ಮತ್ತು ಅದರ ಹಣ್ಣು : "ದ್ವಿಪದಃ–ದೊಡ್ಡಕಿ(ತ್ತ)ಳೆ)ತ್ತೀಟಿ[ಳೆ]" (ಓಷಧಿ. ೬೬) : "ದ್ವಿಪಖರ್ಜೂರೀ–ದೊಡ್ಡಕಿತ್ತೀಟಿ[ಳೆ]" (ಓಷಧಿ. ೬೬) : "ಬೃಹತ್ಪಾರಾವತಂ–ದೊಡ್ಡ ಕಿತ್ತೀಟಿ[ಳೆ]" (ಓಷಧಿ. ೦೦೯). [ ದೊಡ್ಡ + ಕಿತ್ತೀಳೆ ]

**ದೊಡ್ಡಕುಶೆ** (ನಾ). ಒಂದು ಬಗೆಯ ದೊಡ್ಡದಾದ ಹುಲ್ಲು : "ಶವಿನಾಬನ್ನಿ, ದೊಡ್ಡಕುಶೆ" (ಓಷಧಿ. ೦೫೯). [ ದೊಡ್ಡ + ಕುಶೆ₁ ]

**ದೊಡ್ಡಕೂವೆ** (ನಾ). ಗೆಣಸಿನಲ್ಲಿ ಒಂದು ಬಗೆ : ದೊಡ್ಡಕೂವೆ, ಕೆಂಪುಕೂವೆ (ಮೈಶಿಗಿ. ೨೬-೫೦೦). [ ದೊಡ್ಡ + ಕೂವೆ₁ ]

**ದೊಡ್ಡಕ್ಕ** (ನಾ). ಅಕ್ಕಂದಿರಲ್ಲಿ ಹಿರಿಯಳಾದವಳು ; ಹಿರಿಯ ಅಕ್ಕ ; ಜ್ಯೇಷ್ಠ ಸೋದರಿ : ದೊಡ್ಡಕ್ಕನನ್ನು ಕಕ್ಕ ಗದರಿಸಿದಳೆಂದು ಮಕ್ಕಳೆಲ್ಲಾ ನಗತೊಡಗುವಾಗ ಯಶೋದೆಯ ಮೊಗದಲ್ಲೂ ಮೂಡುತ್ತಿದ್ದುದು ನಗುವೆ (ವಾತ್ಸಲ್ಯ. ೮೧) : ದೊಡ್ಡಕ್ಕನ ಬಾಳಿ ಮನೆಮುಂದಿಗೆಲ್ಲಾ (ಗಾದೆ).

[ ದೊಡ್ಡ + ಅಕ್ಕ₁ ]

**ದೊಡ್ಡಕ್ಕಿಹುಲ್ಲು** (ನಾ). ಹೊಲದಲ್ಲಿ ತಾನಾಗಿ ಬೆಳೆಯುವ ದೊಡ್ಡದಾದ ಒಂದು ಬಗೆಯ ಹುಲ್ಲು : ದೊಡ್ಡಕ್ಕಿಹುಲ್ಲು, ಮಣ್ಣಕ್ಕಿಹುಲ್ಲು (ಮೈಶಿಗಿ. ೩೦-೫೦೪). [ ದೊಡ್ಡ + ಅಕ್ಕಿಹುಲ್ಲು ]

**ದೊಡ್ಡಕ್ಷರ** (ನಾ). (ಇಂಗ್ಲಿಷ್ ಭಾಷೆಯಲ್ಲಿ) ವಾಕ್ಯದ ಅಥವಾ ಹೆಸರಿನ ಮೊದಲನೆಯ ಅಕ್ಷರ ; ಆದಿಯ ಅಕ್ಷರ : ಪ್ರತಿ ಫಾಂಟಿನಲ್ಲಿಯೂ ದೊಡ್ಡಕ್ಷರಗಳು (Capitals) ಚಿಕ್ಕಅಕ್ಷರಗಳು . . . ಸಂಯುಕ್ತಾಕ್ಷರಗಳೂ ಇರುತ್ತವೆ (ಮುದ್ರಣ. ೦೮). [ ದೊಡ್ಡ + ಅಕ್ಷರ ]

**ದೊಡ್ಡಖಚೋರ** (ನಾ). ಒಂದು ಬಗೆಯ ದೊಡ್ಡದಾದ ಖಚೋರ : ಅಗಿಲು, ಸಣ್ಣಖಚೋರ, ದೊಡ್ಡಖಚೋರ . . . ಇವಿಷ್ಟನ್ನು ಪ್ರತ್ಯೇಕ ಎರಡು ವರಹ ತೂಕಗಳನು ಸೂಕ್ಷ್ಮವಾಗಿ ಚೂರ್ಣಿಸಿ ಹಾಕಿ . . . ನಸ್ಯಂಗಳ ಮಾಡಿಸಲು ನೇತ್ರರೋಗ, ಶಿರೋರೋಗಂಗಳು ಶಮನವಹವು (ವೃದ್ಧಸಾ. II, ೦೩೫). [ ದೊಡ್ಡ + ಖಚೋರ ]

**ದೊಡ್ಡಖರ್ಜೂರ** (ನಾ). ಒಂದು ಬಗೆಯ ದೊಡ್ಡದಾದ ಖರ್ಜೂರದ ಮರ ಮತ್ತು ಅದರ ಹಣ್ಣು : "ರಾಜಪಿಂಡಾ–ದೊಡ್ಡಖರ್ಜೂರ" (ಓಷಧಿ. ೦೫೬) ; "ರಾಜಜ್ಯೇಷ್ಠಾ–ಬಾಟೆ, ದೊಡ್ಡಖರ್ಜೂರ" (ಓಷಧಿ. ೦೫೬). [ ದೊಡ್ಡ + ಖರ್ಜೂರ ]

**ದೊಡ್ಡಗಟ್ಟು** (ನಾ). ದೊಡ್ಡದಾದ ಅಣೆಕಟ್ಟು : ಬ್ರಹ್ಮೇಶ್ವರದೇವರ್ಗ್ಗೆ ಬ್ರಹ್ಮವೇದಿಜೀಯರಂ ಕಾಲಂ ಕರ್ಚ್ಚಿಯೂರಿಂ ಪಡುವ ದೊಡ್ಡಗಟ್ಟನ ಕೆಳಗೆ ಬಿಟ್ಟ ಗಟ್ಟಿ ಮ ತ್ತ ರೊ ೦ ದು (ಎಳ. XI, ದಾವಣ. ೦೨೬-೨೦ ; 1037). [ ದೊಡ್ಡ + ಕಟ್ಟು₂ ]

**ದೊಡ್ಡಗರಿಕೆಹುಲ್ಲು** (ನಾ). ಒಂದು ಬಗೆಯ ಗರಿಕೆಹುಲ್ಲು : (ವೃಶಿಗ. ೩೮-೬೬೮). [ ದೊಡ್ಡ + ಗರಿಕೆ (<ಕಱುಂಕೆ) + ಹುಲ್ಲು (<ಪುಲ್) ]

**ದೊಡ್ಡಗಾದಾರಿ** (ನಾ). ಒಂದು ಬಗೆಯ ಸಸ್ಯ ; ದೊಡ್ಡಮಾಚಿಪತ್ರೆ : (*). [ ದೊಡ್ಡ + ಗಾದಾರಿ ]

**ದೊಡ್ಡಗಿಡ್ಡಂಗಿ** (ನಾ). ಮುಖ್ಯವಾದ ಕಾರಾಗೃಹ : ನಿಮ್ಮನ್ನೆಲ್ಲ ದೊಡ್ಡ ಗಿಡ್ಡಂಗಿಯ ಗುಪ್ತಗೃಹದಲ್ಲಿ ಉಳ್ಳ ಆ ಹಲಕೆಲವು ಮುಟ್ಟುಗಳ ಶಸ್ತ್ರಗಳ ಯಂತ್ರಗಳ ಕಡಿಕರ ಸಾಹಾಯ್ಯದಿಂದ (ಚಟ್ಯಾಅ. ೫೨-೩). [ ದೊಡ್ಡ + ಗಿಡ್ಡಂಗಿ₂ ]

**ದೊಡ್ಡಗುಣ** (ನಾ). ಉದಾರವಾದ ಗುಣ : ದೊಡ್ಡಗುಣವನೊಂದ ನೇನೆಂಬೆ ಪತಿಯ ವ್ಯಯೊಡ್ಡಿನೊಳುಣ ಕುಳಿತಾಗ ಅದ್ಧಣಿಗೆಯನೊಲ್ಲರ ವರೇನು ಲೋಕದ ಹೆಡ್ಡ ಹೆಂಗಳೆ ಹೇಳುವಾಗ (ಭರತ. ೪-೫೯) ; ಕೆಟ್ಟದ್ದನ್ನು ಸರಿಪಡಿಸಿಕೊಳ್ಳುವದೇ ದೊಡ್ಡಗುಣ (ಧೀಮಕಾ. ೨೨೯). [ ದೊಡ್ಡ + ಗುಣ ]

**ದೊಡ್ಡಗುಲಗಂಜಿ** (ನಾ). ದೊಡ್ಡದಾದ ಒಂದು ಬಗೆಯ ಸಸ್ಯ ಮತ್ತು ಅರ್ಧ ಕೆಂಪಾಗಿಯೂ ಅರ್ಧ ಕಪ್ಪಾಗಿಯೂ ಇರುವ ಅದರ ಬೀಜ ; ಆನೆಗುಲಗಂಜಿ : ಮಂಜತ್ತಿ, ಮಂಜಡಿ, ಮುಂಜಟ್ಟಿ, ದೊಡ್ಡಗುಲಗಂಜಿ, ಆನೆಗುಲಗಂಜಿ (ವೃಶಿಗ. ೩-೩೮). [ ದೊಡ್ಡ + ಗುಲಗಂಜಿ (<ಗುರುಗುಂಜಿ) ]

**ದೊಡ್ಡಗೆಣಸು** (ನಾ). ಗೆಣಸಿನಲ್ಲಿ ಒಂದು ಬಗೆ : "ವರಾಹಕಃ-ದೊಡ್ಡ ಗೆಣಸು" (ಒಷಧಿ. ೯೨). [ ದೊಡ್ಡ + ಗೆಣಸು (<ಗೆಟಸು) ]

**ದೊಡ್ಡಗೋಣಿ** (ನಾ). ದೊಡ್ಡದಾದ ಒಂದು ಬಗೆಯ ಗೋಣಿಮರ : (ವೃಶಿಗ. ೬೮-೧೨೯೩). [ ದೊಡ್ಡ + ಗೋಣಿ₁ (<ಗೋಳಿ₁) ]

**ದೊಡ್ಡಗೋರ** (ನಾ). ಒಂದು ಬಗೆಯ ಸೊಪ್ಪು : ಸೊಪ್ಪುಗಳು : ಅಗಸೆ . . . ತುಂಬೆ, ಚಿಟಗಿನ, ಪರಪಾಟಕ, ದೊಡ್ಡಗೋರ, ಹುಳಿ ಬಚ್ಚಲಿ (ನಮ್ಮನು. ೨೩೬). [ ದೊಡ್ಡ + ಗೋರ ]

**ದೊಡ್ಡಗೋರಂಟ** 'ದೊಡ್ಡಗೋರಂಟೆ' ನೋ.

**ದೊಡ್ಡಗೋರಂಟೆ** ದೊಡ್ಡಗೋರಂಟ, ದೊಡ್ಡಗೋರಟೆ (ನಾ). ಕೆಂಪುಹೂವುಗಳನ್ನು ಬಿಡುವ ಕುರವಕಗಿಡದಲ್ಲಿ ಒಂದು ಬಗೆ ; ಹೆಗ್ಗೋರಂಟೆ : "ಅವಮ್ಲಾನಃ, ಮಹಾಸಹಾ-೨ ದೊಡ್ಡಗೋರಂಟೆ" (ಸಿದ್ಧಾಂತಿ. ೧೫೯). **ದೊಡ್ಡಗೋರಂಟೆ** : "ಕುರವಕಃ, ಕೋರಕೇ, ತತ್ರ ಕೆಂಪುಹುವ್ವುಗಳುಳ್ಳ ದೊಡ್ಡಗೋರಂಟ, ಹೆಗ್ಗೋರಂಟ" (ಸಿದ್ಧಾಂತಿ. ೧೦೩). **ದೊಡ್ಡಗೋರಟೆ** : "ಮಹಾಸಹಾ-ಸೇವಂತಿಗೆ, ಕಾಡುದ್ದು, ದೊಡ್ಡ ಗೋರಟೆ, ಕಾಡಹೂರುಳಿ" (ಒಷಧಿ. ೧೦೮). [ ದೊಡ್ಡ + ಗೋರಂಟೆ ]

**ದೊಡ್ಡಗೋರಟೆ** 'ದೊಡ್ಡಗೋರಂಟೆ' ನೋ.

**ದೊಡ್ಡಚಂಚು** (ನಾ). ಒಂದು ಬಗೆಯ ದೊಡ್ಡದಾದ ಹರಳು ಗಿಡ : "ಬೃಹತ್ಚಂಚುಃ-ದೊಡ್ಡಚಂಚು" (ಒಷಧಿ. ೧೦೯). [ದೊಡ್ಡ + ಚಂಚು₁]

**ದೊಡ್ಡಚಿರಾಯತ** (ನಾ). ಒಂದು ಬಗೆಯ ಮೂಲಿಕೆ ; ನೀಲಿ ಹೂವು ಗಳನ್ನು ಬಿಡುವ ಚಿರಾಯತ ಎಂಬ ಸಸ್ಯದಲ್ಲಿ ಒಂದು ವಿಧ : (ವೃಶಿಗ. ೩೬-೨೦೦). [ ದೊಡ್ಡ + ಚಿರಾಯತ (<ಕಿರಿಯಾತು) ]

**ದೊಡ್ಡಚಿಲ್ಲ** (ನಾ). ದೊಡ್ಡದಾದ ಒಂದು ಬಗೆಯ ಚಿಲ್ಲದ ಗಿಡ : "ಕಾಲಮಂಜಿಷ್ಠ-ಕೋಲಿಕಟುಮ, ಕರಿಯ ತಿಗಡೆ, ದೊಡ್ಡ ಚಿಲ್ಲ, ಮೆಣಸು" (ಒಷಧಿ. ೨೮). [ ದೊಡ್ಡ + ಚಿಲ್ಲ₁ ]

**ದೊಡ್ಡಚುಂಚು** (ನಾ). ಒಂದು ಬಗೆಯ ವನಸ್ಪತಿ : "ಮಹಾಚುಂಚುಃ-ದೊಡ್ಡಚುಂಚು" (ಒಷಧಿ. ೧೧೬). [ ದೊಡ್ಡ + ಚುಂಚು₁ ]

**ದೊಡ್ಡಜಡ** (ನಾ). ಕಾಲರಾಬೇನೆ : ಊರಿನಲ್ಲಿ ದೊಡ್ಡಜಡ ಬಂದಂದಿನಿಂದ ಜನಗಳು ನರಳುವುದು ನೋಡಲು ಸಾಧ್ಯವಿಲ್ಲ (ರೂಢಿ). [ದೊಡ್ಡ+ಜಡ]

**ದೊಡ್ಡಜಾಜಿಕಾಯಿ** (ನಾ). ಒಂದು ಬಗೆಯ ಕಾಯಿ : ದೊಡ್ಡಜಾಜಿ ಕಾಯಿ, ಕನಾಗಿ (ವೃಶಿಗ. ೫೬-೧೧೧೫). [ ದೊಡ್ಡ + ಜಾಜಿಕಾಯಿ (<ಜಾದಿಕಾಯ್) ]

**ದೊಡ್ಡಜೀರಗೆ** (ನಾ). ಜೀರಗೆಯಲ್ಲಿ ಒಂದು ಬಗೆ : "ತವಸಃ-ದೊಡ್ಡ ಜೀರಗೆ, ಔಡಲ" (ಒಷಧಿ. ೬೩). [ ದೊಡ್ಡ + ಜೀರಗೆ ]

**ದೊಡ್ಡಜೀರಿಗೆ** (ನಾ). = ದೊಡ್ಡಜೀರಗೆ : ದೊಡ್ಡ ಸೋಂಪು, ದೊಡ್ಡ ಜೀರಿಗೆ (ವೃಶಿಗ. ೩೮-೬೮೬). [ ದೊಡ್ಡ + ಜೀರಿಗೆ ]

**ದೊಡ್ಡಜೀವ** (ನಾ). ಮುಖ್ಯವಾದ ಜೀವ, ಪ್ರಾಣ ; P ಹೆಣ್ಣು ಬಸುರಿಯಾಗಿದ್ದಾಗ ಅವಳನ್ನು ದೊಡ್ಡಜೀವ, ದೊಡ್ಡಪ್ರಾಣ ಎಂದು ಕರೆಯುವುದುಂಟು : ಅವನೆದೆಗೆ ಕಿವಿಯೊಡ್ಡಿ . . . "ದೊಡ್ಡ ಜೀವವೇ ಹಾರಿಹೋಗಿದೆ" ಎಂದವನು ಗೊಣಗುಟ್ಟಿದನು (ಪುನರು. ೪೫೨) ; ಗರ್ಭದಲ್ಲಿದ್ದ ಪಿಂಡವು ತಿರುಗಿ ಸ್ಥಳಪಲ್ಲಟವಾಗಿದ್ದುದರಿಂದ ಅದನ್ನು ಕತ್ತರಿಸಿ ಹೊರತೆಗೆಯದಿದ್ದರೆ ದೊಡ್ಡಜೀವಕ್ಕೆ ಅಪಾಯವೆಂದು ಮಾತ ನಾಡಿಕೊಂಡರು ಆಸ್ಪತ್ರೆಯಲ್ಲಿ (ಜಂಗಬ. ೦೯೬); ಸತತವಾದ ಗಮನವನ್ನು ಕೊಟ್ಟು ಆ ವೈದ್ಯರು ದೊಡ್ಡಜೀವ ಸಣ್ಣಜೀವಗಳೆರಡನ್ನೂ ಉಳಿಸಿದರು (ರೂಢಿ). [ ದೊಡ್ಡ + ಜೀವ ]

**ದೊಡ್ಡಜೋಳ** (ನಾ). ಮುಸುಕಿನ ಜೋಳ : (*). [ ದೊಡ್ಡ + ಜೋಳ ]

**ದೊಡ್ಡಜ್ವರ** (ನಾ). ಕಾಲರಾಬೇನೆ : ಊರೂರಿಗೆ ದೊಡ್ಡಜ್ವರ ಬಂದು ಬಿಟ್ಟಿದೆ (ರೂಢಿ). [ ದೊಡ್ಡ + ಜ್ವರ ]

**ದೊಡ್ಡಣ** (ಗು). ದೊಡ್ಡದಾದಂಥ ; ಗಾತ್ರವಾದ : ಕುಣಿಹಲ್ಲ ಪುರುಷ ನಂತೆ ಮಾತು ದೊಡ್ಡಣ ಕಾಲು ಕೆಂಪಾಗಿದ್ದ ಕೇಶ (ಸಾಮುಂ. ೨೯-೨). [ <ದೊಡ್ಡ ]

**ದೊಡ್ಡಣ್ಣ** (ನಾ). ಅಣ್ಣಂದಿರಲ್ಲಿ ಹಿರಿಯನಾದವನು ; ಮೊದಲನೆಯ ಅಣ್ಣ : ಏನು ಲೀಲೆಯೊಳು ಚಿಕ್ಕಣ್ಣನಿಹನು ತನ್ನ ವಿಜಾನಲೋಚನೆಯ ರೆಂತಿಹರು ತಾನು ದೊಡ್ಡಣ್ಣನಂತುಪವಾಸಗೈವನೊ ಮಾನಿನಿ ಹೇಳೆಂದಳಾಗ (ಭರತ. ೦೯-೫೩) ; ನಮ್ಮ ದೊಡ್ಡಣ್ಣನಿಂದ ಕಾಗದ ಬಂದು ಬಹಳ ದಿನವಾಯಿತು (ರೂಢಿ). [ ದೊಡ್ಡ + ಅಣ್ಣ₁ ]

**ದೊಡ್ಡತಂಗಡಿ** (ನಾ). ಒಂದು ಬಗೆಯ ದೊಡ್ಡದಾದ ತಂಗಡಿ ಸಸ್ಯ : ದೊಡ್ಡತಂಗಡಿ, ಸೀಮೆಅಗಸೆ (ವೃಶಿಗ. ೦೮-೩೨೮). [ ದೊಡ್ಡ + ತಂಗಡಿ ]

**ದೊಡ್ಡತಂದೆ** (ನಾ). ೧. ತಂದೆಯ ಅಣ್ಣ : ದೊಡ್ಡಪ್ಪ. ೨. ತಾಯಿಯ ಅಕ್ಕನ ಗಂಡ : (*). [ ದೊಡ್ಡ + ತಂದೆ ]

**ದೊಡ್ಡತಗಚೆ** (ನಾ). ಒಂದು ಬಗೆಯ ಸಸ್ಯ ; ತಗಚೆಯಲ್ಲಿ ಒಂದು ವಿಧ : ಕೋಲ್‌ತಗಸಿ, ದೊಡ್ಡತಗಚೆ, ಆನೆಸೊಗಚೆ (ವೃಶಿಗ. ೦೯-೩೩೬). [ ದೊಡ್ಡ + ತಗಚೆ ]

**ದೊಡ್ಡತನ** (ನಾ). ೧. ಹಿರಿಯತನ ; ಘನತೆ ; ಮರ್ಯಾದೆ : ದೊಡ್ಡ ತನವೆನಗಿಲ್ಲ ಅಂಜುವೆನಂಜುವೆ ನಿಮ್ಮ ಪ್ರಮಥರಿಗೆ (ಬಸವ. ೪೧೨) ; ದೊಡ್ಡತನವ ನೀಗಿ ಗಡ್ಡದ ತಾಪಸನಡ್ಡಬಿದ್ದಿರೆ ಗೋಪಿಯರು ಗಡ್ಡವ ಪಿಡಿದು ತೂಗುತ ಗೋಪರೊಳು ಪೇಳ್ವರಡ್ಡಬಿದ್ದುದ್ದು ನಗುವರು (ಅಂಜಿಚ. ೨-೬೬): ಅಡ್ಡವೋಜೆಯನಿಕ್ಕಿ ನಗುವಳು ನೋಡುವಳೊಡ್ಡೊಡ್ಡಿ ನುಡಿದೇಡಿಸುವಳು ದೊಡ್ಡತನವೆ ಭಾವ ನಿನಗಿದೆಂಬಳು ರಾಯ ಸಡ್ಡೆ ಮಾಡದೆ ಕೇಳುತಿಹನು (ಭರತ. ೯-೧೦೯). ೨. ಗುಣಾತಿಶಯ ; ಒಳ್ಳೆಯ ಗುಣ : ತಂದೆಯ ಸಹಾನುಭೂತಿಯ ಸಮ್ಮತಿಯಿಂದಾಗಿ ಹೈಮವತಿಯ ಮನಸು ಗೋವರ್ಧನನ ದೊಡ್ಡತನದಲ್ಲಿ ಅನುರಕ್ತವಾಯಿತು (ಎರಿಕ. ೮೦). 'ಸಣ್ಣತನ' ಪರಾ. [ ದೊಡ್ಡ + - ತನ ]

**ದೊಡ್ಡತಾಯಿ** (ನಾ). ೧. ತಾಯಿಯ ಅಕ್ಕ ; ದೊಡ್ಡಮ್ಮ. ೨. ತಂದೆಯ ಅಣ್ಣನ ಹೆಂಡತಿ ; ದೊಡ್ಡಪ್ಪನ ಹೆಂಡತಿ : ದೊಡ್ಡತಾಯಿ ತೀರಿಕೊಂಡ ಬಗೆಗೆ ಹೆಚ್ಚಿನದು ತನಗೇನೂ ತಿಳಿದಿರಲಿಲ್ಲ (ಚಾಕ್ಕಳ್ಳಿ. ೧೦) ; ಆ ವಂಗುವಿ ಗಾದರೂ . . . ತಾಯಿಯೊಡನೆ ಇರಲು ಮನಸ್ಸಾಗದೆ ನಿತ್ಯವೂ ಬಯುಲು, ಬೆಂಗರೆ, ಆರಾಲುಗಳಿಂದು ಮನೆಯ ಹೊರಗೇನೆ ದಿನ ಕಳೆಯುತ್ತಿದ್ದ ದೊಡ್ಡತಾಯಿಯನ್ನು ಹಿಂಬಾಲಿಸುವ ಮನಸ್ಸಾಯಿತು (ಮರಮ. ೧೯೩). [ ದೊಡ್ಡ + ತಾಯಿ (<ತಾಯ್) ]

**ದೊಡ್ಡತಿಪ್ಪಲಿ** 'ದೊಡ್ಡಹಿಪ್ಪಲಿ' ನೋ.

**ದೊಡ್ಡತುಂಬೆ** (ನಾ). ಒಂದು ಬಗೆಯ ದೊಡ್ಡದಾದ ತುಂಬೆ ಗಿಡ ಮತ್ತು ಅದರ ಹೂವು: ಹಸುರುತುಂಬೆ, ದೊಡ್ಡತುಂಬೆ (ವ್ಯಾಕಿಗಿ. ೩೦-೦೦೦೩). [ ದೊಡ್ಡ + ತುಂಬೆ ]

**ದೊಡ್ಡತೊಪ್ಪೆಮರ** (ನಾ). ಒಂದು ಬಗೆಯ ಮರ : ದೊಡ್ಡತೊಪ್ಪೆಮರ, ...ದಲ್ಲಿಮರ, ಬಟ್ಟಗ (ವ್ಯಾಕಿಗಿ. ೪೩-೮೮೩). [ದೊಡ್ಡ+ತೊಪ್ಪೆ+ಮರ]

**ದೊಡ್ಡದಗರೆ** (ನಾ). ಒಂದು ಬಗೆಯ ತಗರೆ ಸಸ್ಯ : (ವ್ಯಾಕಿಗಿ. ೦೮-೩೩೩). [ ದೊಡ್ಡ + ತಗರ ]

**ದೊಡ್ಡದತ್ತೂರಿ** (ನಾ). ಒಂದು ಬಗೆಯ ಎಳ್ಳಗಸೆ ಸಸ್ಯ : ದೊಡ್ಡದತ್ತೂರಿ, ಉಮ (ವ್ಯಾಕಿಗಿ. ೬೩-೦೩೦೪). [ ದೊಡ್ಡ + ದತ್ತೂರಿ ]

**ದೊಡ್ಡದನ** (ನಾ). ಒಳ್ಳೆಯ ತಳಿಯ ಪಶು ; ಉತ್ತಮಜಾತಿಯ ದನ : ಹೆಚ್ಚು ದನಗಳನ್ನು ಇಟ್ಟುಕೊಳ್ಳುವ ಬದಲು ಎರಡು ದೊಡ್ಡದನಗಳನ್ನು ಇಟ್ಟುಕೊಂಡರೆ ಸಾಕು (ರೂಢಿ). [ ದೊಡ್ಡ + ದನ ]

**ದೊಡ್ಡದನಿ** (ನಾ). ಗಟ್ಟಿಯಾದ ಧ್ವನಿ; ಜೋರಾದ ಧ್ವನಿ : ಕೆಲಹೊತ್ತಿನ ಮೇಲೆ ಭಟ್ಟರು ತಮ್ಮ ದೊಡ್ಡದನಿಯಲ್ಲಿ, "ವಾದ್ಯಾ ಬಾರಿಸಿರೋ" ಎಂದರು (ಅಜೋಲಿ. ೩೩).

**ದೊಡ್ಡದನಿ ತೆಗೆ** = ಎತ್ತರದ ಧ್ವನಿಯಲ್ಲಿ ಮಾತನಾಡು ; ಜೋರು ಮಾಡು : ನಾಗಮ್ಮನ ಅಳು ಅಳತೆ ಮೀರಿತು . . . ಅಳುತ್ತ "ನಾನು ನನ್ನ ಮಾವನವರ ಊರಿಗೇ ಹೋಗ್ತೀನಿ" ಎಂದು ದೊಡ್ಡದನಿ ತೆಗೆದಳು (ದಾಸಕಟ. ೮೬) ; ಅವನು ದೊಡ್ಡದನಿ ತೆಗೆಯದೆ ಮಾತನಾಡುವುದೇ ಇಲ್ಲ (ರೂಢಿ). [ ದೊಡ್ಡ + ದನಿ ]

**ದೊಡ್ಡದರ್ಭೆ** (ನಾ). ಒಂದು ಬಗೆಯ ಹುಲ್ಲು: "ಬಹುಮೂಲಃ – ದೊಡ್ಡದರ್ಭೆ, ಮಗ್ಗೆ" (ಓಷಧಿ. ೦೦೬). [ ದೊಡ್ಡ + ದರ್ಭೆ ]

**ದೊಡ್ಡನಡೆ** (ನಾ). ವೇಗದಿಂದ ಕೂಡಿದ ನಡಿಗೆ ; ವೇಗವಾದ ನಡಿಗೆ : ಎತ್ತುಗಳನ್ನು ದೊಡ್ಡನಡೆಯಲ್ಲಿ ಬಿಡು (ರೂಢಿ). [ ದೊಡ್ಡ + ನಡೆ ]

**ದೊಡ್ಡನಸುಕು** (ನಾ). ಇನ್ನೂ ಕತ್ತಲು ಇರುವ ಜಾವ ; ಬೆಳಗು ಬರಲು ಇನ್ನೂ ಸಾಕಷ್ಟು ಸಮಯವಿರುವ ಪ್ರಭಾತಕಾಲ : ದೊಡ್ಡನಸುಕಿನಲ್ಲಿ ಎದ್ದು ಸೋನಾಮಣಿಯು . . . ಬಾಗಿಲಿಗೆ ಬಂದು ಸದ್ದಿಲ್ಲದೆ ನಿಂತಳು (ಇಶ್ವಕ. ೦೫೦) ; ಅವು ಅಡ್ಡಾಡುವ ಕಾಲವೆಂದರೆ ಧೂಳಸಂಜೆ ಅಥವಾ ದೊಡ್ಡನಸುಕು (ಕನ್ನಡಾ. ೨೦). [ ದೊಡ್ಡ + ನಸುಕು ]

**ದೊಡ್ಡನಾತದಗಿಡ** (ನಾ). ಒಂದು ಬಗೆಯ ಸಸ್ಯ : ಅರದ್ರಿ, ದೊಡ್ಡನಾತದ ಗಿಡ, ಇಬನ್ನೆ, ರುಚಿಕತ್ರಿ (ವ್ಯಾಕಿಗಿ. ೦೫-೨೮೩). [ ದೊಡ್ಡ + ನಾತ + ಗಿಡ (<ಗಿಡು) ]

**ದೊಡ್ಡನಾಯಿ** (ನಾ). ೧. ಎತ್ತರವಾಗಿ ಬೆಳೆದಿರುವ ನಾಯಿ, –ಶುನಕ: ದೊಡ್ಡತಲೆ ಯಮನ ದೂತರು ಗಡ್ಡದ ದೂತರು ಓಡಿ ಬಂದರು ದೊಡ್ಡ ನಾಯಿಗಳ ಟೊಂಕಕೆ ಬಿಗಿದು ಚಿಕ್ಕನಾಯಿಗಳ ಎಡಕೈಯಲಿ ಕೊಂಡು (ಪುರಂದ. ೩-೧೨೬-೫). ೨. ಹೆಬ್ಬುಲಿ : "ಶಾರ್ದೂಲಃ, ದ್ವೀಪೀ, ವ್ಯಾಘ್ರಃ– ೩ ದೊಡ್ಡಹುಲಿ, ಹೆಬ್ಬುಲಿ, ದೊಡ್ಡನಾಯಿ" (ಸಿದ್ಧಾಂಕಿ. ೦೫೩). [ ದೊಡ್ಡ + ನಾಯಿ (<ನಾಯ್) ]

**ದೊಡ್ಡನಾಳಲು** (ನಾ). ಒಂದು ಬಗೆಯ ದೊಡ್ಡದಾದ ಹುಲ್ಲುಗಿಡ : ದೊಡ್ಡದಾದ ಜೊಂಡುಗಿಡ : "ದೇವನಾಳಃ – ದೊಡ್ಡನಾಳ(ನ)ಲು" (ಓಷಧಿ. ೭೯). [ ದೊಡ್ಡ + ನಾಳಲು (< ನಾನಲ್) ]

**ದೊಡ್ಡನಿಂಬೆ** (ನಾ). ಒಂದು ಬಗೆಯ ದೊಡ್ಡದಾದ ನಿಂಬೆಯ ಗಿಡ ಮತ್ತು ಅದರ ಹಣ್ಣು ; ಗಜನಿಂಬೆ : "ಜಂಬೀರ = ದೊಡ್ಡನಿಂಬೆ" (ಅಕಾನಿ. ೧೧-೨). [ ದೊಡ್ಡ + ನಿಂಬೆ ]

**ದೊಡ್ಡನಿದ್ದೆ** (ನಾ). ೧. ಗಾಢವಾದ ನಿದ್ರೆ ; ೨. ಸಾವು ; ಮರಣ : "ದೊಡ್ಡನಿದ್ದೆ–ಗಾಢನಿದ್ರೆ, ಸಾವು" (ಚಾಸಕೋ. ೭). [ ದೊಡ್ಡ + ನಿದ್ದೆ ]

**ದೊಡ್ಡನಿದ್ರೆ** (ನಾ). = ದೊಡ್ಡನಿದ್ದೆ : (ಶ). [ ದೊಡ್ಡ + ನಿದ್ರೆ ]

**ದೊಡ್ಡನೀರಂಜಿ** (ನಾ). ಒಂದು ಬಗೆಯ ಸಸ್ಯ ; ನೀರಂಜಿಯಲ್ಲಿ ಒಂದು ವಿಧ : ದೊಡ್ಡನೆಗ್ಗಿಲು, ದೊಡ್ಡನೀರಂಜಿ, ಆನೆನೆಗ್ಗಿಲು (ವ್ಯಾಕಿಗಿ. ೬೦-೦೨೦೬). [ ದೊಡ್ಡ + ನೀರಂಜಿ (<ನೀರುವಂಜಿ) ]

**ದೊಡ್ಡನೀಲಿ** (ನಾ). ಒಂದು ಬಗೆಯ ದೊಡ್ಡದಾದ ನೀಲಿಗಿಡ : "ರಾಜನೀಲಿಕಾ – ದೊಡ್ಡನೀಲಿ" (ಓಷಧಿ. ೦೫೮) ; ಕೊಮ್ಮೆಬೇರು, ದೊಡ್ಡ ನೀಲಿ, ಅಣಬೆ ಇವಿಷ್ಟನ್ನು . . . ಕಲ್ಲೊಳಿಟ್ಟು ಅರೆದು ಹಸುವಿನ ಮಜ್ಜಿಗೆ ಯಲ್ಲಿ ಕುಡಿಯ ಕೊಡಿಸಲು . . . ವಿಷ ಪರಿಹರವಹುದು (ವೈದ್ಯಸಾ. II, ೨೦೬). [ ದೊಡ್ಡ + ನೀಲಿ ]

**ದೊಡ್ಡನೂಲು** (ನಾ). ದಪ್ಪವಾದ, ಒರಟುನೂಲು: ಸ್ಥೂಲ, ಶಾಟಕ – ದೊಡ್ಡನೂಲ ಸೀರೆ (ನಾಚಿರಾ. ಶ). [ದೊಡ್ಡ + ನೂಲು (<ನೂಲ್)]

**ದೊಡ್ಡನೆಕ್ಕರೆ** (ನಾ). ನೇರಳೆ ಬಣ್ಣದ ಹೂವುಗಳನ್ನು ಬಿಡುವ ನೆಕ್ಕರೆ ಎಂಬ ಗುಲ್ಮಜಾತಿಯಲ್ಲಿ ಒಂದು ವಿಧ : (ವ್ಯಾಕಿಗಿ. ೩೩-೦೦೬೯). [ ದೊಡ್ಡ + ನೆಕ್ಕರೆ ]

**ದೊಡ್ಡನೆಗ್ಗಿಲು** (ನಾ). ಒಂದು ಬಗೆಯ ಸಸ್ಯ ; ನೆಗ್ಗಿಲಿನಲ್ಲಿ ಒಂದು ವಿಧ : ದೊಡ್ಡನೆಗ್ಗಿಲು, ದೊಡ್ಡನೀರಂಜಿ, ಆನೆನೆಗ್ಗಿಲು (ವ್ಯಾಕಿಗಿ. ೬೦-೦೨೦೬). [ ದೊಡ್ಡ + ನೆಗ್ಗಿಲು (<ನೆಗ್ಗಿಲ್) ]

**ದೊಡ್ಡನೆಲದಾವರೆ** (ನಾ). ಒಂದು ಬಗೆಯ ಹೂವಿನ ಗಿಡ ; ನೆಲದಾವರೆ ಯಲ್ಲಿ ಒಂದು ವಿಧ : "ಶುದ್ಧಮೂಲಂ – ದೊಡ್ಡನೆಲದಾವರೆ" (ಓಷಧಿ. ೦೬೮). [ ದೊಡ್ಡ + ನೆಲದಾವರೆ ]

**ದೊಡ್ಡನೆಲ್ಲಿ** (ನಾ). ನೆಲ್ಲಿಯಲ್ಲಿ ಒಂದು ವಿಧ : ಬೆಟ್ಟದ ನೆಲ್ಲಿಕಾಯಿ . . . ದೊಡ್ಡನೆಲ್ಲಿ, ಬೆಟ್ಟನೆಲ್ಲಿ (ವ್ಯಾಕಿಗಿ. ೪೪-೬೪೯). [ ದೊಡ್ಡ + ನೆಲ್ಲಿ ]

**ದೊಡ್ಡನೇಟಿಲ್**, ದೊಡ್ಡನೇಟಿಲು (ನಾ). ಗಾತ್ರದಲ್ಲಿ ಹಿರಿದಾದ ನೇರಳೆಹಣ್ಣಿನ ಮರ ಮತ್ತು ಅದರ ಹಣ್ಣು : "ಮಹಾಫಲ – ಬೆಲ್ಲವತ್ತ, ಹಲಸು, ದೊಡ್ಡನೇಟಿಲ್" (ಓಷಧಿ. ೧೦೮). **ದೊಡ್ಡನೇಟಿಲು** : "ಕೋಕಿ ಲೇಕ್ಷ್ವಾ – ದೊಡ್ಡನೇಟಿಲು" (ಓಷಧಿ. ೪೧). [ ದೊಡ್ಡ + ನೇಟಿಲ್ ]

**ದೊಡ್ಡನೇಟಿಲು** 'ದೊಡ್ಡನೇಟಿಲ್' ನೋ.

**ದೊಡ್ಡಪಟಿಕ** (ನಾ). ಸ್ಫಟಿಕದ ಗಿಡದಲ್ಲಿ ಒಂದು ಬಗೆ ಮತ್ತು ಅದರ ಹೂವು : ದೊಡ್ಡಪಟಿಕ, ನಾಗಮಲ್ಲಿಗೆ (ವ್ಯಾಕಿಗಿ. ೬೬-೦೩೯೫). [ ದೊಡ್ಡ + ಪಟಿಕ ]

**ದೊಡ್ಡಪಡಪತ್ರೆ** (ನಾ). ಒಂದು ಬಗೆಯ ಮೂಲಿಕೆ : ದೊಡ್ಡಪಡಪತ್ರೆ ಚೂರ್ಣ ವರಾಹ ತೂಕ ಗುಳಿಗೆ ಮಾಡಿ ಕೊಡಲು ಹಾವುಗಳ ನಾನಾ ವಿಷ, ನಾನಾ ಪ್ರಾಣಿಗಳಿಗೂ ವಿಷ ಹರ (ವಿದ್ಯಾವಿ. ೧೧೪). [ದೊಡ್ಡ+ಪಡಪತ್ರೆ]

**ದೊಡ್ಡಪತ್ರೆ**, ದೊಡ್ಡಿಪತ್ರೆ (ನಾ). ಅಡುಗೆಗೂ ಔಷಧಿಗೂ ಉಪಯೋ ಗಿಸುವ, ದೊಡ್ಡ ದೊಡ್ಡ ದಪ್ಪ ಎಲೆಗಳನ್ನುಳ್ಳ ಒಂದು ಬಗೆಯ ಗಿಡ ಮತ್ತು ಅದರ ಎಲೆ : "ಛತ್ರಕೋಶಾತಕೀ–ದೊಡ್ಡಪತ್ರೆ (ಬೋಟತರ ?)" (ಓಷಧಿ. ೩೯). **ದೊಡ್ಡಿಪತ್ರೆ** : "ಅಜಪಾದಃ – ಎಲೆಗಳ್ಳಿ, ದೊಡ್ಡಿಪತ್ರೆ" (ಓಷಧಿ. ೬). [ ದೊಡ್ಡ + ಪತ್ರೆ ]

**ದೊಡ್ಡಪರೀಕ್ಷೆ** (ನಾ). ಮುಂದಿನ ತರಗತಿಗೆ ತೇರ್ಗಡೆ ಮಾಡಲು ಮಾಡುವ ಪರೀಕ್ಷೆ ; ವಿದ್ಯಾ ಇಲಾಖೆಯವರು ನಡೆಸುವ ಸರ್ವಶಾಲಾ ಪರೀಕ್ಷೆ : ದೊಡ್ಡಪರೀಕ್ಷೆಯೊಳಿನ್ನ ದುರ್ದೈವಕೆ ವಿಜಯವು ಅರಿಬರಿಯಾಗಿ (ಇಂಚಾಪ. ೧೯-೪೦). 'ಸಣ್ಣಪರೀಕ್ಷೆ' ಪರಾ. [ ದೊಡ್ಡ + ಪರೀಕ್ಷೆ ]

**ದೊಡ್ಡಪುಂಡರೀಕ** (ನಾ). ದೊಡ್ಡದಾದ ಬಿಳಿ ತಾವರೆಯ ಬಳ್ಳಿ ಮತ್ತು ಅದರ ಹೂವು : "ಪುಂಡರೀಯಕಂ – ದೊಡ್ಡಪುಂಡರೀಕಂ" (ಒಷಧಿ. ೧೦೦). [ ದೊಡ್ಡ + ಪುಂಡರೀಕ ]

**ದೊಡ್ಡಪುರಲೇಹುಲ್ಲು** (ನಾ). ಒಂದು ಬಗೆಯ ಹುಲ್ಲು : ದೊಡ್ಡಪುರಲೇ ಹುಲ್ಲು, ಸಣ್ಣಊಗು ಹುಲ್ಲು (ಮೃಶಿಗಿ. ೪೯-೬೭೧).
[ ದೊಡ್ಡ + ಪುರಲ್ಲೆ (<ಪುರುಲ್ಲೆ) + ಹುಲ್ಲು (<ಪುಲ್) ]

**ದೊಡ್ಡಪ್ಪ** (ನಾ). ೧. ತಂದೆಯ ಅಣ್ಣ ; ದೊಡ್ಡತಂದೆ : "ಪಿತೃವ್ಯಃ, ಪಿತುರ್ಭ್ರಾತಾ – ತಂದೆಗೆ ಪಡಹುಟ್ಟಿದವನ ಪೆಸರು. ಚಿಕ್ಕಪ್ಪ, ದೊಡ್ಡಪ್ಪ" (ಸಿದ್ಧಾಂತಿ. ೦೭೫); ಇಲ್ಲ ದೊಡ್ಡಪ್ಪ, ಇಲ್ಲಿಯೇ ಮಲಗುತ್ತೇನೆ (ಪಾತ್ಯ್ರ. ೦) ; ವೈದಿಕಲೌಕಿಕೋಭಯವಿದ್ಯಾನಿಪುಣರು ನನ್ನ ಆ ದೊಡ್ಡಪ್ಪನವರು (ಇಂಚಾಪ. ೧೫-೬೦). ೨. ಗೌರವವುಳ್ಳ ವ್ಯಕ್ತಿ ; ಮನ್ನಣೆಯನ್ನು ಹೊಂದಿರುವವನು : ದುಡ್ಡು ದೊಡ್ಡಪ್ಪಾದು ಗಂಡರಾಗಲು ಬಹುದೆ ದುಡಿದುಂಡರು ಗಂಡರಿರದೇಕ (ಕನ್ನಜಾ. ೩೯೬): ದುಡ್ಡಿದ್ದವನೇ ದೊಡ್ಡಪ್ಪ (ಗಾದೆ). [ ದೊಡ್ಡ + ಅಪ್ಪ$_1$ ]

**ದೊಡ್ಡಬರ** (ನಾ). (ಹಿಂದೆ ೧೮೭೬-೭೮ರ ಧಾತು ಮತ್ತು ಈಶ್ವರ ಸಂವತ್ಸರಗಳಲ್ಲಿ ಇಡೀ ರಾಷ್ಟ್ರವನ್ನೇ ತಲ್ಲಣಗೊಳಿಸಿದ) ಒಂದು ದೊಡ್ಡ ಕ್ಷಾಮ ; ಭಯಂಕರವಾದ ಬರ : ಆಚಾರ್ರರು . . . ಮೂರು ವರ್ಷದ ಬರ ಅಥವಾ ದೊಡ್ಡಬರ, ಜೋಳದ ಬರಗಳನ್ನು ಕಂಡಿದ್ದರು (ನನ್ನೂರು.೦೯೨) ; ಮೊದಲೇ ಬಡತನ, ಅದರಲ್ಲಿ ದೊಡ್ಡಬರ (ಕನ್ನಜಾ. ೩೦).
[ ದೊಡ್ಡ + ಬರ$_1$ (<ಬಱ) ]

**ದೊಡ್ಡಬಸಲೆ, ದೊಡ್ಡಬಸಳೆ** (ನಾ). (ಅಡುಗೆಗೆ ಉಪಯೋಗಿಸುವ) ಒಂದು ಬಗೆಯ ಬಳ್ಳಿ ಮತ್ತು ಅದರ ಸೊಪ್ಪು : ಸೊಪ್ಪುಗಳು : ಅಗಸೆ . . . ದಗ್ಗಳಿ, ಕಿಸವೆ, ದೊಡ್ಡಬಸಲೆ, ಬಿಲವರಗ (ನಮ್ಮನು. ೩೫೭).
**ದೊಡ್ಡಬಸಳೆ** : ದೊಡ್ಡಬಸಳೆ ಬಳ್ಳಿ ತಾರಸಿಯ ಮೇಲಕ್ಕೂ ಹಬ್ಬಿಕೊಂಡು ಹೋಗಿದೆ (ಒಂಧಿ). [ ದೊಡ್ಡ + ಬಸಳೆ ]

**ದೊಡ್ಡಬಸಳೆ** 'ದೊಡ್ಡಬಸಲೆ' ನೋ.

**ದೊಡ್ಡಬಿಂದಿಗೆಗಿಡ** (ನಾ). ಒಂದು ಬಗೆಯ ಹೂವಿನ ಗಿಡ : (ಮೃಶಿಗಿ. ೩-೮೭). [ ದೊಡ್ಡ + ಬಿಂದಿಗೆ + ಗಿಡ (<ಗಿಡು) ]

**ದೊಡ್ಡಬೀದಿ** (ನಾ). ಮುಖ್ಯವಾದ ಬೀದಿ ; ಪ್ರಧಾನ ರಸ್ತೆ : ದೇವರ ಉತ್ಸವದ ಕಾರಣ ಆ ದೊಡ್ಡಬೀದಿಯಲ್ಲಿ ಬಹುಜನರು ಸೇರಿದ್ದಾರೆ (ಒಂಧಿ). [ ದೊಡ್ಡ + ಬೀದಿ ]

**ದೊಡ್ಡಬೆಂಡೆ** (ನಾ). ಒಂದು ಬಗೆಯ ದೊಡ್ಡದಾದ ಕಾಯಿಗಳನ್ನು ಬಿಡುವ ಬೆಂಡೆ ಗಿಡ ಮತ್ತು ಅದರ ಕಾಯಿ : ದೊಡ್ಡಬೆಂಡೆ, ಕಾಡುಕುಂಬ್ಳಿ (ಮೃಶಿಗಿ. ೬೬-೦೫೬೦). [ ದೊಡ್ಡ + ಬೆಂಡೆ ]

**ದೊಡ್ಡಬೆಟ್ಟ** (ನಾ). ಎತ್ತರವಾದ ಬೆಟ್ಟ : "ತ್ರಿಕೂಟಃ . . . ಮೂರು ಶಿಖರಗಳುಳ್ಳ ಬಹಳ ಪ್ರಸಿದ್ಧವಾದ ದೊಡ್ಡಬೆಟ್ಟ" (ಸಿದ್ಧಾಂತಿ. ೯೪) ; ಅಂಬುಧಿಯೊಳ್ ಮಗನ ಮಲಗಿಸಿ ಮೇಲೆ ದೊಡ್ಡಬೆಟ್ಟವನ್ನು ಇಟ್ಟು ಬನ್ನಿರೋ (ಪುರಂದ. ೪-೬-೩) ; ಕನ್ನಡ ಶಾಸನಗಳಲ್ಲಿ ಚಿಕ್ಕ ಬೆಟ್ಟವನ್ನು ಕಟ್ಟಪ್ಪು ಎಂದೂ ದೊಡ್ಡಬೆಟ್ಟವನ್ನು 'ಪೆರ್ಗಟ್ಟಪ್ಪು' ಎಂದೂ ಕರೆದಿದೆ (ಕಶಾಅ ೬೮). P ಶ್ರವಣಬೆಳಗೊಳದಲ್ಲಿರುವ ಚಂದ್ರಗಿರಿಗೂ ಊಟಿಯ ಬಳಿಯಿರುವ ನೀಲಗಿರಿಯ ಶಿಖರಕ್ಕೂ ದೊಡ್ಡಬೆಟ್ಟವೆಂಬ ಹೆಸರು ಬಂದಿದೆ. [ ದೊಡ್ಡ + ಬೆಟ್ಟ (<ಬೆಟ್ಟು$_1$) ]

**ದೊಡ್ಡಬೆಲ್ಲಗೆಣಸು** (ನಾ). ಒಂದು ಬಗೆಯ ಸಿಹಿಗೆಣಸು : "ತಾಂಬೂಲ ಪತ್ರಿಕಾ – ದೊಡ್ಡಬೆಲ್ಲಗೆಣಸು" (ಒಷಧಿ. ೩೮).
[ ದೊಡ್ಡ + ಬೆಲ್ಲ + ಗೆಣಸು (<ಗೆಣಸು) ]

**ದೊಡ್ಡಬೆಳ್ಳಿಹಣ** (ನಾ). ಒಂದು ಬಗೆಯ ಬೆಳ್ಳಿ ನಾಣ್ಯ : (*).
[ ದೊಡ್ಡ + ಬೆಳ್ಳಿ + ಹಣ ]

**ದೊಡ್ಡಬೇನೆ** (ನಾ). ಕ್ಷಯ ಮೊದಲಾದ ಭಯಾನಕ ವಾದ ರೋಗ ; ದೊಡ್ಡ ರೋಗ : ಜಗಳದ ಕಾವಿನಲ್ಲಿ ಆಕೆ ನಿನಗೆ ದೊಡ್ಡ ಬೇನೆ ಬರ, ಎಂದು ನಟಿಕೆ ಮುರಿದಳು (ಒಂಧಿ). [ ದೊಡ್ಡ + ಬೇನೆ ]

**ದೊಡ್ಡಬೇವು** (ನಾ). ಒಂದು ಬಗೆಯ ಬೇವಿನ ಮರ : "ರಕ್ತಃ – ದೊಡ್ಡ ಬೇವು, ತಾರೆ, ಕಡುಸಿಗೆ" (ಒಷಧಿ. ೧೩೩) ; "ಪಿನಿಂಬಃ–ದೊಡ್ಡಬೇವು" (ಒಷಧಿ. ೧೩೪). [ ದೊಡ್ಡ + ಬೇವು ]

**ದೊಡ್ಡಬೊಂಬೆಯಾಟ** (ನಾ). ಬೊಂಬೆಯಾಟದಲ್ಲಿ ಒಂದು ಪ್ರಕಾರ.
**ದೊಡ್ಡಬೊಂಬೆಯಾಟದವರು** = ದೊಡ್ಡ ಬೊಂಬೆಯಾಟವನ್ನು ಆಡಿಸುವವರು : (ಎಸಿಮ್ಸ. XXII, ೩). [ ದೊಡ್ಡ + ಬೊಂಬೆಯಾಟ ]

**ದೊಡ್ಡಮದ್ದು** (ನಾ). ಅಶ್ವಗಂಧದ ಬೇರು ; ಹಿರೇಮದ್ದು : (*).
[ ದೊಡ್ಡ + ಮದ್ದು$_1$ (<ಮರ್ದು) ]

**ದೊಡ್ಡಮನಸ್ಸು** (ನಾ). ಉದಾರಬುದ್ಧಿ ; ವಿಶಾಲಹೃದಯ : ಗಿರಿಜ ಬದುಕಿದ್ದಾಗ "ದೋಸೆ ತಿನ್ನು" ಎಂದು ದೊಡ್ಡಮನಸ್ಸು ತೋರಿಸಿರಲಿಲ್ಲ (ಪರ್ವತ. ೬೨) ; ನೀವು ಅಂತಹ ದೊಡ್ಡಮನಸ್ಸಿನವರೆಂಬುದನ್ನು ಮುಂದಿ ಬಲ್ಲುದು ಮಹಾರಾಣಿ (ಸವತಿ. ೧೨).
**ದೊಡ್ಡಮನಸ್ಸು ಮಾಡು**=ಉದಾರಬುದ್ಧಿಯನ್ನು ತೋರು; ಕರುಣೆ ತೋರು : ತಾವು ದೊಡ್ಡಮನಸ್ಸು ಮಾಡಬೇಕು (ಒಡೆಕ. ೯೦) : ಈಗ ಕುಂತಿಯು ದೊಡ್ಡಮನಸ್ಸು ಮಾಡಿದರೆ ನನಗೂ ಮಕ್ಕಳಾದಾವು (ವಚಛಾ. ೧೩). [ ದೊಡ್ಡ + ಮನಸ್ಸು ]

**ದೊಡ್ಡಮನುಷ್ಯ** (ನಾ). ೧. ಗೌರವಯುತ ಮನುಷ್ಯ : ನನ್ನ ಸಬ್ ಡಿವಿಜನ್ ಆಫೀಸರು ದಳವಾಯಿ ಮನೆತನದ ಚಿಕ್ಕದೇವರಾಜೇಅರಸರೆಂಬ ದೊಡ್ಡಮನುಷ್ಯರು (ಕೆಲಸಿ. ೩೦೭) ; ಊರಿಗೆ ದೊಡ್ಡಮನುಷ್ಯ ಅನ್ನಿಸಿ ಕೊಳ್ಳೋಕೆ ನಾನು, ಬಂದೋರ ಚಾಕರಿ ಮಾಡೋಕೆ ನೀವಾ ? (ಕಂಠಕೋ.೩೬). ೨. ಶ್ರೀಮಂತ : "ದೊಡ್ಡಮನುಷ್ಯ, ದೊಡ್ಡಸ್ತಿಕೆಗಾರ" (Aristocrat. ಪಾರಿಸಿ. ೬). [ ದೊಡ್ಡ + ಮನುಷ್ಯ ]

**ದೊಡ್ಡಮನೆ** (ನಾ). ೧. ವಿಶಾಲವಾದ ಮನೆ : ಸಾಹುಕಾರನು ಆ ದೊಡ್ಡ ಮನೆಯಲ್ಲಿ ಬೀದಿಯ ಕಡೆಯ ಒಂದು ಕೊಠಡಿಯನ್ನು ಸುಬ್ಬಣ್ಣನವರಿಗೆ ತೋರಿಸಿ, ನೀವು ಬೇಕಾದರೆ ಇಲ್ಲಿಯೇ ಇರಿ, ಎಂದು ಹೇಳಿದನು (ಸಣ್ಣಕ. X, ೩೪) ; ಒಂದು ಕಾಲಕ್ಕೆ ಅದು ಬಹಳ ದೊಡ್ಡಮನೆ ಆಗಿದ್ದಿರಬೇಕು (ಕಂಠಕೋ. ೩೦). ೨. (ಆಲಂ) ಕಾರಾಗೃಹ ; ಸೆರೆಮನೆ : (*).
[ ದೊಡ್ಡ + ಮನೆ ]

**ದೊಡ್ಡಮಬ್ಬು** (ನಾ). ಬೆಳಗಿನ ಜಾವಕ್ಕೂ ಮುಂಚಿನ ಸಮಯ ; ಬೆಳಗಾಗುವುದಕ್ಕಿಂತ ತುಂಬಾ ಮುಂಚಿನ ಸಮಯ : ಚನ್ನ ದೊಡ್ಡ ಮಬ್ಬಿಗೇ ಊರು ಬಿಟ್ಟು ಮೂರಾಳುದ್ದ ಹೊತ್ತಿಗೆ ಬೆಟ್ಟ ಸೇರಿದ (ನನ್ನೂರು. ೩೦೯). 'ನಸುಮಬ್ಬು' ಪರಾ.
[ ದೊಡ್ಡ + ಮಬ್ಬು (<ಮರ್ವು) ]

**ದೊಡ್ಡಮರ** (ನಾ). ೧. ದೊಡ್ಡದಾದ ಮರ ; ಎತ್ತರವಾದ ವೃಕ್ಷ. ೨. ಹಿರೇಮರ ; ಹೆಮ್ಮರ : "ಮಂಡೂಕಪರ್ಣಃ, ಪತ್ರೋರ್ಣಃ, ನಟಃ, ಕಟ್ವಂಗಃ . . . ೧೨ ಹೆಮ್ಮರದ ಹೆಸರುಗಳು. ದೊಡ್ಡಮರ, ಹೆಗ್ಗೂಗಟೇ ಮರ" (ಸಿದ್ಧಾಂತಿ. ೧೧೯) : ದೊಡ್ಡಮರ, ಹೆಮ್ಮರ, ಹಿರೇಮರ (ಮೃಶಿಗಿ. ೪-೩೮). [ ದೊಡ್ಡ + ಮರ$_1$ ]

**ದೊಡ್ಡಮಳೆ** (ನಾ). ಜೋರಾಗಿ ಸುರಿಯುವ ಮಳೆ ; ಬಿರುಮಳೆ : ದೊಡ್ಡಮಳೆ ಬೆಳ್ಳಿಬಿಸಿಲುಗಳೆರಡ ಮುಕ್ಕುಳಿಸಲೆಡ್ಡಮೆನೆ ಬಾನೊಡಲ್ ಬರಿದಾಗುತಿತ್ತು (ಕಾಲೂರ. ೩೭-೯೩); ಮಳೆಗಾಲದಲ್ಲೆಲ್ಲ ಕೂಡಿ ನಾಲ್ಕಾರು ದೊಡ್ಡಮಳೆಗಳು ಬಿದ್ದರೆ ಬಹು ಸುದೈವ (ಮುಂಬಯಿ. ೩-೧೯೪). [ದೊಡ್ಡ + ಮಳೆ (<ಮಱೆ)]

**ದೊಡ್ಡಮಾತು** (ನಾ). ಅತಿ ಉಚಿತವಾದ ಮಾತು ; ಎಲ್ಲರೂ ಒಪ್ಪ ಬಹುದಾದ ಮಾತು ; ತಿಳಿವಳಿಕೆಯಿಂದ ಕೂಡಿದ ಮಾತು : ದೊಡ್ಡ ಮಾತೇನು, ಗಿಡ್ಡಮಾತೇನು ? (ಪೀಠಿಮಾ. ೨೯) ; ಇಂತಹ ಕೆಲಸ ಮಾಡು ವುದಕ್ಕೆ ನಿಮಗೆ ನಾಚಿಕೆಯಿಲ್ಲವಂತೆ . . . ಮತ್ತೆ ಮರ್ಯಾದಿ ಬಗ್ಗೆ ದೊಡ್ಡಮಾತು ಹೇಳುತ್ತೀರಿ (ದೇವತಾ. ೧೮೩) ; ನಮಗೇಕಪ್ಪ ಅಷ್ಟು ದೊಡ್ಡಮಾತು (ಕತ್ತಲೆ. ೩೯). [ದೊಡ್ಡ + ಮಾತು₁]

**ದೊಡ್ಡಮಾರವಾಳ** (ನಾ). ಒಂದು ಬಗೆಯ ಒಣಹುಲ್ಲು : (*). [ದೊಡ್ಡ + ಮಾರವಾಳ (<ಮಾರುಳ)]

**ದೊಡ್ಡಮಾರ್ಗ** (ನಾ). ಆನೆ, ಕುದುರೆಗಳ ಸವಾರಿಯಿಂದ ಕಿರುದೊಡೆ ಯಲ್ಲುಂಟಾಗುವ ಜಡ್ಡು,-ದಡ್ಡು : "ದೊಡ್ಡಮಾರ್ಗಂ = ಆನೆ ಕುದುರೆ ಗಳೊಳಾದ ಕಿಱುದೊಡೆಯ ಜಡ್ಡು. (ಜಡ್ಡು, ದಡ್ಡು)" (ಕರ್ಣಾಟ. ಶಬ್ದ. ೩): "ದೊಡ್ಡಮಾರ್ಗಮೆಂದಾನೆ ಕುದುರೆಗಳ ಕಿಱುದೊಡೆಯೊಳಿರದಾದ ವಡ್ಡಕ್ಕು" (ಕರ್ಣಾಟ. ೯೧) ; ಆರೂಢಸರ್ವಜ್ಞನ ದೊಡ್ಡ [ಪಾಠಾಂ. ಡ್ಡಿ]ಮಾರ್ಗಂಗಳೆಳ ವಾಟೆಯ ದಿಂಡಿನೊಳ್ ಸಾಣೆಗಟ್ಟದಂತಾದುವು (ಪಂಪಭಾ. ೨-೩೯ ವ) ; ಮದಗಜದ ಪೊರಜು ಪೊಯ್ದೇಟ್ಟ ದೊಡ್ಡಮಾರ್ಗದ ಕಿಣಂಗಳಂ ಕಿಗ್ಗಣ್ಣೊಳ್ ಪದನತನ್ನಪರೀಕ್ಷಿಸಿ (ಅನಂತಪು. ೩-೯). [ದೊಡ್ಡ+ಮಾರ್ಗ]

**ದೊಡ್ಡಮಾವು** (ನಾ). ಒಂದು ಬಗೆಯ ಗಿಡ : "ಶರಾಟಿಕಾ – ದೊಡ್ಡ ಮಾವು" (ಓಷಧಿ. ೧೬೦). [ದೊಡ್ಡ + ಮಾವು]

**ದೊಡ್ಡಮೆಕ್ಕೆಗಿಡ** (ನಾ). ಒಂದು ಬಗೆಯ ಬಳ್ಳಿ ; ಹಾಲ್ಮೆಕ್ಕೆ ಬಳ್ಳಿ : (*). [ದೊಡ್ಡ + ಮೆಕ್ಕೆ + ಗಿಡ (<ಗಿಡು)]

**ದೊಡ್ಡಮೆಣಸಿನಕಾಯಿ** (ನಾ). = ದೊಣ್ಣೆಮೆಣಸಿನಕಾಯಿ : (ವೃಕ್ಷಶಿ. ೧೭-೩೦೩). [ದೊಡ್ಡ + ಮೆಣಸಿನಕಾಯಿ]

**ದೊಡ್ಡಮೇದೆ** (ನಾ). ಒಂದು ಬಗೆಯ ಮೂಲಿಕೆ: "ವೃಕ್ಷಾರ್ಹಃ – ದೊಡ್ಡಮೇದೆ" (ಓಷಧಿ. ೦೩೭). [ದೊಡ್ಡ + ಮೇದೆ]

**ದೊಡ್ಡಮ್ಮ** (ನಾ). ೧. = ದೊಡ್ಡತಾಯಿ ೧ : ಚಿಕ್ಕಮ್ಮಗಾ ರಾಯ ಕೈಲಾಗು ಗೊಟ್ಟೋಳಹೋಕ್ಕು ದೊಡ್ಡಮ್ಮನ ಕಂಡ (ಭರತ. ೩೨-೧೯೦) ; ಕಾಳೂರಿನಲ್ಲಿ ಗಿರಿಜಳ ದೊಡ್ಡಮ್ಮನ ಮನೆಯಿದೆ (ದೇವತಾ. ೯೭). ೨. = ದೊಡ್ಡತಾಯಿ ೨ : ನಿದ್ದೆ ಚೆನ್ನಾಗಿ ಬಂತು ದೊಡ್ಡಮ್ಮ (ಪಾತ್ರಕ್ಕ. ೧೭). ೩. ಕೆಡುಕನ್ನುಂಟುಮಾಡುವವಳೆಂದು ನಂಬಲಾದ ಒಬ್ಬ ಹೆಣ್ಣು ದೇವತೆಯ ಹೆಸರು : ಮಾರುದ್ದ ಮಂಡೇ ಧಂಸೊ ದೊಡ್ಡಮ್ಮಾ ನಿನ್ನ ಮಾಯೆಯಾ ಒಬ್ಬರಿಗೂ ತಿಳಿಯಾದೋ (ಹುಟ್ಟಿ. ೪೨) ; ಕೋಣಗಳನ್ನು ಕಡಿದ ರಕ್ತ ಚಿಕ್ಕಮ್ಮನ ಗುಡಿಯಿಂದ ದೊಡ್ಡಮ್ಮನ ಗುಡಿಯತನಕ ಹರಿದು ಹೋಗುತ್ತಿತ್ತು (ನನ್ನೂರು. ೩೦). ೪. ಸಿಡುಬು : ಮಗೂಗೆ ದೊಡ್ಡಮ್ಮ ಆಗಿರುವುದರಿಂದ ಮೈಲಿಗೆ ಆಗಗೊಡಬಾರದು (ರೂಢಿ). ೫. ದನಗಳಿಗೆ ಬರುವ ಕಾಲರಾ ಜಾತಿಯ ರೋಗ ; ದೊಡ್ಡರೋಗ : (ಎಸಮ್ಮ. XV, ೩೭). [ದೊಡ್ಡ + ಅಮ್ಮ₂]

**ದೊಡ್ಡಯ್ಯ** (ನಾ). = ದೊಡ್ಡಪ್ಪ : (*). [ದೊಡ್ಡ + ಅಯ್ಯ₁]

**ದೊಡ್ಡರತ್ನಗಂಧಿ** (ನಾ). ಕೆಂಪು ಮತ್ತು ಹಳದಿ ಹೂವುಗಳನ್ನು ಬಿಡುವ ಒಂದು ಬಗೆಯ ಮರ ಮತ್ತು ಅದರ ಹೂವು ; ಗುಲ್ಮೊಹೋರ್ ಮರ: ಸೀಮೆಸಂಕೇಶ್ವರ, ದೊಡ್ಡರತ್ನಗಂಧಿ, ಕೆಂಪುತುರಾಯಿ, ಗುಲ್ಮಹರ್ ಮರ, ಕತ್ತೀಕಾಯಿ (ವೃಕ್ಷಶಿ. ೨೯-೩೬೪). [ದೊಡ್ಡ + ರತ್ನಗಂಧಿ]

**ದೊಡ್ಡರಾಗಿ** (ನಾ). ಒಂದು ಬಗೆಯ ರಾಗಿ; ಆರು ತಿಂಗಳಲ್ಲಿ ಕೊಯ್ಲಿಗೆ ಬರುವ ರಾಗಿ : ಹೊಲಗಳಲ್ಲಿ ಗಿಡ್ಡರಾಗಿಯು ಬಂದು, ದೊಡ್ಡರಾಗಿಯ ನಾಟಿಯನ್ನು ಹಾಕಿದರು (ಹುಟ್ಟಿ. ೬೩). [ದೊಡ್ಡ + ರಾಗಿ₁]

**ದೊಡ್ಡರಾಜಾನ್ನ** (ನಾ). ಗಾತ್ರದಲ್ಲಿ ಹಿರಿದಾದ ಒಂದು ಬಗೆಯ ಭತ್ತ,-ನೆಲ್ಲು : "ಗಂಧಾಢ್ಯ-ಶಾಲಿ, ದೊಡ್ಡರಾಜಾನ್ನ" (ಓಷಧಿ. ೪೭). [ದೊಡ್ಡ + ರಾಜಾನ್ನ]

**ದೊಡ್ಡರಿಸಿನ** (ನಾ). ಅರಿಸಿನದಲ್ಲಿ ಒಂದು ಬಗೆ: "ಪೀತದ್ರುಃ, ಕಾಲೀಯಕಃ ... ಪರ್ಜನೀ-ಓ ಮರದರಿಸಿನ, ಕಸ್ತೂರಿಅರಿಸಿನವೆಂದು ಕೆಲವರನ್ನುವರು ದೊಡ್ಡರಿಸಿನ, ಕಾಡುಅರಿಸಿನ" (ಸಿದ್ಧಾಂತಿ. ೧೫೩). [ದೊಡ್ಡ + ಅರಿಸಿನ]

**ದೊಡ್ಡರೋಗ** (ನಾ). ೧. ಭಯಂಕರವಾದ ರೋಗ ; ಸಾವು ತರುವ ರೋಗ; ಕ್ಷಯ ಮೊದಲಾದ ಭಯಾನಕವಾದ ರೋಗ : ನಿಂಗೆ ದೊಡ್ಡರೋಗ ಬರ (ಹುಟ್ಟಿ. ೧೫೯). ೨. ದನಗಳಿಗೆ ಬರುವ ಕಾಲರಾ ಜಾತಿಯ ರೋಗ ; ದೊಡ್ಡಮ್ಮ : (ಎಸಮ್ಮ. XV, ೩೭). [ದೊಡ್ಡ + ರೋಗ]

**ದೊಡ್ಡವನಮುಗುಳಿ** (ನಾ). ಒಂದು ಬಗೆಯ ದೊಡ್ಡದಾದ ಕಾಡುಮರ: (ವೃಕ್ಷಶಿ. ೭೦-೧೯೬೩). [ದೊಡ್ಡ + ವನಮುಗುಳಿ₀]

**ದೊಡ್ಡವರಹ** (ನಾ). ಒಂದು ಬಗೆಯ ನಾಣ್ಯ : ಶಾಸನಗಳಲ್ಲಿ ಬರುವ ನಾಣ್ಯಗಳೂ, ಅಳತೆಗಳೂ:– ಗದ್ಯಾಣ . . . ವರಹ, ದೊಡ್ಡವರಹ, ಮಂಗಳೂರು ಗದ್ಯಾಣ (ತುಳುನಾ. ೨೬೦). [ದೊಡ್ಡ + ವರಹ]

**ದೊಡ್ಡವೂಸಿ** (ನಾ). ಪುಷ್ಯ ಮಳೆ: (ಎಸಮ್ಮ. XV, ೩೦). 'ಚಿಕ್ಕವೂಸಿ' ಪರಾ. [ದೊಡ್ಡ + ಪೂಸಿ₁ (<ಪುಷ್ಯ₁)]

**ದೊಡ್ಡವ್ವ** (ನಾ). = ದೊಡ್ಡತಾಯಿ : (*). 'ಚಿಕ್ಕವ್ವ' ಪರಾ. [ದೊಡ್ಡ + ಅವ್ವ₁ (<ಅವ್ವೆ)]

**ದೊಡ್ಡಶಣಬು** 'ದೊಡ್ಡಸಣಬು' ನೋ.

**ದೊಡ್ಡಶರ** (ನಾ). ಒಂದು ಬಗೆಯ ಹುಲ್ಲು : "ಮಹಾಶರಂ–ದೊಡ್ಡಶರ" (ಓಷಧಿ. ೧೦೭). [ದೊಡ್ಡ + ಶರ]

**ದೊಡ್ಡಸಂಪಿಗೆ** (ನಾ). ಒಂದು ಬಗೆಯ ಸಂಪಿಗೆ ಮರ ಮತ್ತು ಅದರ ಹೂವು : (ವೃಕ್ಷಶಿ. ೩೩-೧೦೭೩). [ದೊಡ್ಡ + ಸಂಪಿಗೆ (<ಸಂಪಗೆ)]

**ದೊಡ್ಡಸಣಬು, ದೊಡ್ಡಶಣಬು** (ನಾ). ಒಂದು ಬಗೆಯ ಗಿಡ: "ಮಹಾಶ್ವೇತವರ್ಣೀ–ದೊಡ್ಡ ಸಣಬು" (ಓಷಧಿ. ೧೨೨). **ದೊಡ್ಡಶಣಬು**: "ಮಹಾಶಣಪುಷ್ಪಿಕಾ – ದೊಡ್ಡಶಣಬು" (ಓಷಧಿ. ೧೨೩). [ದೊಡ್ಡ + ಸಣಬು (<ಸಣಂಬು)]

**ದೊಡ್ಡಸರ್ಲೆಹಕ್ಕಿ** (ನಾ). ಒಂದು ಬಗೆಯ ಪಕ್ಷಿ. ೧. ಸಿರಿಗಿರಿ. ೨. ತಾಡಿಗ್ಗ. ೩. ಸಲಿಕಿಬಾಯಿ ಹಕ್ಕಿ : (*). [ದೊಡ್ಡ + ಸರ್ಲೆ (<ಸರಲೆ) + ಹಕ್ಕಿ₁ (<ಪಕ್ಕಿ₁)]

**ದೊಡ್ಡಸಾಮೆ** (ನಾ). ಸಾಮೆಧಾನ್ಯದಲ್ಲಿ ಒಂದು ವಿಧ ; ಹೆಜ್ಜಾವೆ ; ದೊಡ್ಡ ಜಾತಿಯ ಸಾಮೆ ಅಕ್ಕಿ : (ಎಸಮ್ಮ. I, ೩೦). [ದೊಡ್ಡ + ಸಾಮೆ₁ (<ಸಾವೆ₁)]

**ದೊಡ್ಡಸಾಸುವೆ** (ನಾ). ಸಾಸವೆಯಲ್ಲಿ ಒಂದು ವಿಧ : (*). [ದೊಡ್ಡ + ಸಾಸುವೆ (<ಸಾಸವೆ)]

**ದೊಡ್ಡಸಿವನ್ನಿ** (ನಾ). ಒಂದು ಬಗೆಯ ದೊಡ್ಡದಾದ ಸಿವನ್ನಿ ಮರ : "ಮಹಾಕುಮುದ–ದೊಡ್ಡ ಸಿವನ್ನಿ" (ಓಷಧಿ. ೧೨೨). [ದೊಡ್ಡ + ಸಿವನ್ನಿ (<ಸೀವನ್ನಿ)]

**ದೊಡ್ಡಸಿಹಿಗೆಣಸು** (ನಾ). ಸಿಹಿಗೆಣಸಿನಲ್ಲಿ ಒಂದು ಬಗೆ : "ಮಹಾನೀಲಾ ಕರಿಯ ಗಿರಿಕರ್ಣೆ, ಹಿರಿಯ ನೇಟಿಲ್, ದೊಡ್ಡಸಿಹಿಗೆಣಸು" (ಓಷಧಿ. ೧೧೭). [ದೊಡ್ಡ + ಸಿಹಿಗೆಣಸು (<ಸೀಗೆಣಸು)]

**ದೊಡ್ಡಸುದ್ದಿ** (ನಾ). ವಿಶೇಷವಾದ ಸುದ್ದಿ; ಮಹತ್ವದ ಸಮಾಚಾರ: ಶಾನುಭೋಗರ ಮಗಳಿಗೆ ಮದುವೆ ನಿಶ್ಚಯವಾದದ್ದು ಊರಿಗೆಲ್ಲ ದೊಡ್ಡ ಸುದ್ದಿಯಾಯಿತು (ಊಛ). [ದೊಡ್ಡ + ಸುದ್ದಿ]

**ದೊಡ್ಡಸುರುಟಿ** (ನಾ). ಒಂದು ಬಗೆಯ ಸಸ್ಯ: ದೊಡ್ಡಸೊಳ್ತಿ, ದೊಡ್ಡ ಸುರುಟಿ (ವೃಶಿಗ. ೦೦-೧೬೧). [ದೊಡ್ಡ + ಸುರುಟಿ₀]

**ದೊಡ್ಡಸೇವಗೆ** (ನಾ). ಒಂದು ಬಗೆಯ ಸೇವಿಗೆ; ದಪ್ಪನಾದ ಸೇವಿಗೆ: ಪರಡಿ ಗೌವಲಿಯಷ್ಟ ಮಣಿ ಸಣ್ಣ ಗೋಧೂಮ ಸರವಳಿಗೆ ದೊಡ್ಡಸೇವಗೆ ಕಡುಬುವೋಡಲಿಗೆ ಬೆರಲ ಸೇವಗೆಯಾದಿಯಾಗಿಯಡವಾದ ಕಜ್ಜಾಯಗಳ ತೆಗೆದುಕೊಂಡು (ಸೂಪಶಾ. ೩-೭). [ದೊಡ್ಡ + ಸೇವಗೆ (<ಸೇವಿಗೆ)]

**ದೊಡ್ಡಸೊಳ್ತಿ** (ನಾ). ಒಂದು ಬಗೆಯ ಸಸ್ಯ: ದೊಡ್ಡಸೊಳ್ತಿ, ದೊಡ್ಡ ಸುರುಟಿ (ವೃಶಿಗ. ೦೦-೧೬೧). [ದೊಡ್ಡ + ಸೊಳ್ತಿ₀]

**ದೊಡ್ಡಸೋಂಪು** (ನಾ). ಒಂದು ಬಗೆಯ ದೊಡ್ಡದಾದ ಸಾಂಬಾರದ ಕಾಳು: ದೊಡ್ಡ ಸೋಂಪು, ದೊಡ್ಡಜೀರಿಗೆ (ವೃಶಿಗ. ೩೮-೭೪೭). [ದೊಡ್ಡ + ಸೋಂಪು]

**ದೊಡ್ಡಸೋರೆ** (ನಾ). ಒಂದು ಬಗೆಯ ಸೋರೆ ಬಳ್ಳಿ ಮತ್ತು ಅದರ ಕಾಯಿ: ಕಾಯಿಗಳು:-ಅಗಸೆ . . . ದೊಡ್ಡಕುಂಬಳ, ದೊಡ್ಡಸೋರೆ (ನಮ್ಮನು. ೨೩೭). [ದೊಡ್ಡ + ಸೋರೆ₁]

**ದೊಡ್ಡಸೌತೆ** (ನಾ). ಒಂದು ಬಗೆಯ ತರಕಾರಿ ಬಳ್ಳಿ; ಸೌತೆಗಿಡದಲ್ಲಿ ಒಂದು ಬಗೆ ಮತ್ತು ಅದರ ಕಾಯಿ: "ನಾಗಮಾತಾ — ಮಣಸಿಲೆ, ತುಳಸಿ, ದೊಡ್ಡಸೌತೆ" (ಒಷಧಿ. ೮೭). [ದೊಡ್ಡ + ಸೌತೆ (<ಸವುಂತೆ)]

**ದೊಡ್ಡಸ್ತ** (ನಾ). ದೊಡ್ಡತನವುಳ್ಳವನು; ಹಿರಿಮೆಯುಳ್ಳವನು. 'ದೊಡ್ಡಸ್ತನ', 'ದೊಡ್ಡಸ್ತಿಕೆ' ಪರಾ. [ದೊಡ್ಡ + - ಸ್ತ]

**ದೊಡ್ಡಸ್ತನ, ದೊಡ್ಡಿಸ್ತನ** (ನಾ). ದೊಡ್ಡತನ; ಗೌರವ; ಮರ್ಯಾದೆ; ಹಿರಿಮೆ: "ದೊಡ್ಡಸ್ತನ-ದೊಡ್ಡಸ್ತಿಕೆ" (ಜಾನಕೋ. ೭). **ದೊಡ್ಡಿಸ್ತನ**: ತಮ್ಮ ಅಣ್ಣನ ದೊಡ್ಡಿಸ್ತನವನ್ನು ಕೊಚ್ಚಿಕೊಳ್ಳುತ್ತಾ ಇದ್ದಳು (ಪ್ರತಿಬಿಂ. ೪೭); ನಿಮ್ಮ ಮರ್ಯಾದೆಯ ದೊಡ್ಡಿಸ್ತನವಾದರೂ ಏನು? (ರಂಗಕೋ. ೭೯). [ದೊಡ್ಡಸ್ತ + — ತನ]

**ದೊಡ್ಡಸ್ತಿಕೆ** (ನಾ). ೧. ಹಿರಿಮೆ; ಹೆಚ್ಚುಗಾರಿಕೆ; ಘನತೆ; ಗೌರವ; ಮರ್ಯಾದೆ: ಮನುಷ್ಯನ ಹಿರಿಮೆ ದೊಡ್ಡಸ್ತಿಕೆಗಳು ತಾಯಿ ತಂದೆಗಳನ್ನೇ ಹೆಚ್ಚಾಗಿ ಅವಲಂಬಿಸಿರುತ್ತವೆ (ಶ್ಯಾಮಸೀ. ೧); ಮಾಡಬಾರದು ಎಂದು ಯಾವಾಗ ದೊಡ್ಡವರು ಹೇಳುತ್ತಾರೋ ಹಾಗೆ ಮಾಡದಿರುವುದೂ ಒಂದು ದೊಡ್ಡಸ್ತಿಕೆ! (ಕಂಬಹು. ೬೩); ಇದರಿಂದ ನನ್ನ ಅವನ ದೊಡ್ಡಸ್ತಿಕೆ ಮತ್ತೂ ಬೆಳೆಯಿತು (ಶಾಲಿಮ. ೨೨೮): ಒಂದು ಬಾನಿ ಹೆಂಡಕ್ಕೆ ಎರಡು ಬಾನಿ ನೀರು ಬೆರಸಿ ಸಂಪಾದನೆ ಮಾಡಿದಾರೆ ಈ ದೊಡ್ಡಸ್ತಿಕೇನ (ಮರೆ. ೬೩). ೨. ಠೀವಿ; ಜಬರ್: "ಠೀವಿ = ದೊಡ್ಡಸ್ತಿಕೆ" (ಗಂಗಾಮು. ೧೯೯); ದೊಡ್ಡಸ್ತಿಕೆಯ ಆಶೀರ್ವಾದಗಳಿಂದ ಸಂದೇಶವನ್ನು ಮಾತ್ರ ಕಳಿಸಬೇಕು (ಹುಡುಹು. ೧೦೨). [ದೊಡ್ಡಸ್ತ + — ಇಕೆ]

**ದೊಡ್ಡಸ್ತು** (ನಾ). ಹಿರಿಮೆ; ಘನತೆ: ದೊಡ್ಡಸ್ತಿನೀದೂಡನೆ ಸುಪ್ರಧಾನಿ ವರೇಣ್ಯ ಗದ್ದಮಂ ಗಂಟಿಕ್ಕಿ (ಶರಬು. ೯-೨೦). [ದೊಡ್ಡಸ್ತ + — ಉ₄]

**ದೊಡ್ಡಹಂಚೀಹುಲ್ಲು, ದೊಡ್ಡಅಂಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು: ದೊಡ್ಡಹಂಚೀಹುಲ್ಲು. . . ಕರೀಸಣ್ಣ ಹಂಚೀ ಹುಲ್ಲು (ವೃಶಿಗ. ೯-೧೪೭). **ದೊಡ್ಡಅಂಚಿಹುಲ್ಲು**: ಚಟ್ಟಂಚಿ ಹುಲ್ಲು, ಭೀಮನ ಹಂಚಿ, ದೊಡ್ಡಅಂಚಿಹುಲ್ಲು, ಗುಂಡುಮುಂಚಿ ಹುಲ್ಲು, ಗಂಟುಕಾಚಿ (ವೃಶಿಗ. ೭೪-೦೫೦೯). [ದೊಡ್ಡ + ಹಂಚಿಹುಲ್ಲು]

**ದೊಡ್ಡಹತ್ತಿ** (ನಾ). ಹತ್ತಿಯ ಗಿಡದಲ್ಲಿ ಒಂದು ಬಗೆ: (ವೃಶಿಗ. ೪೦-೭೯೨). [ದೊಡ್ಡ + ಹತ್ತಿ₁ (<ಪಟ್ಟಿ)]

**ದೊಡ್ಡಹನಿಚೆ** (ನಾ). ಒಂದು ಬಗೆಯ ಗಿಡ: (ವೃಶಿಗ. ೦೫-೨೬೫). [ದೊಡ್ಡ + ಹನಿಚೆ]

**ದೊಡ್ಡಹರಳು** (ನಾ). ದೊಡ್ಡ ಗಾತ್ರದ ಹರಳು ಮತ್ತು ಅದರ ಗಿಡ: ದೊಡ್ಡಹರಳು, ಚಿಟ್ಟಹರಳು, ತುರುಕುಹರಳು, ಮರಹರಳು, ಕಾಡು ಹರಳು (ವೃಶಿಗ. ೪೭-೯೯೩). 'ಚಿಟ್ಟುಹರಳು' ಪರಾ. [ದೊಡ್ಡ + ಹರಳು (<ಪರಲ್)]

**ದೊಡ್ಡಹಲ್ಲಿ** (ನಾ). ಒಂದು ಬಗೆಯ ಹೂವಿನ ಗಿಡ: "ಕಂಭವಿಪುಷ್ಪ-ದೊಡ್ಡಹಲ್ಲಿ" (ಒಷಧಿ. ೩೭). [ದೊಡ್ಡ + ಹಲ್ಲಿ₀]

**ದೊಡ್ಡಹಾಲುಗುಂಬಳ** (ನಾ). ಒಂದು ಬಗೆಯ ಕುಂಬಳ ಬಳ್ಳಿ ಮತ್ತು ಅದರ ಕಾಯಿ: "ನಾಡ್ಯಲಾಬೂಃ - ದೊಡ್ಡಹಾಲುಗುಂಬಳ" (ಒಷಧಿ. ೮೩). [ದೊಡ್ಡ + ಹಾಲುಗುಂಬಳ (<ಪಾಲ್ಗುಂಬಳ)]

**ದೊಡ್ಡಹಾಲ್ಮೆಕ್ಕೆ** (ನಾ). ದೊಡ್ಡದಾದ ಹಾಲುಮೆಂಕ್ಕೆ ಗಿಡದಲ್ಲಿ ಒಂದು ಬಗೆ: ದೊಡ್ಡಹಾಲ್ಮೆಕ್ಕೆ, ಹಾವುಮೆಕ್ಕೆಕಾಯಿ, ಇಂದ್ರಾವರುಣ (ವೃಶಿಗ. ೨೨-೪೦೦). [ದೊಡ್ಡ + ಹಾಲ್ಮೆಕ್ಕೆ]

**ದೊಡ್ಡಹಾಳತ, ದೊಡಹಳತ** (ನಾ). ಒಂದು ದೊಡ್ಡ ಅಳತೆಯ ಪ್ರಮಾಣ: ದೊಡ್ಡಹಾಳತದ ಮಣಾವಿನ ತೂಕಕ್ಕೆ ಇದೇ: ೪೪-೪೭ ಸೇರು ಎಂತಲೂ ನಿಬಂಧನೆ ಮಾಡಿದರು (ಚಾಮಚಂ. ೧೧೯). **ದೊಡಹಳತ**: ಹೊನ್ನವರದ ಲಿಂಗಸೆಟರ ಮಗ ಸಿದಲಿಂಗಸೆಟಿ ಯಡವೂರ ಸಿದಲಿಂಗೇಸ್ವರ ಸೋಮಿ ಪದಕೆ ಮಲರ ಸೆ ೩ ನ ಕಳಸ ಯಾ ನಗದ ತೂಕ ದೊಡಹಳತ ನ ೨ ತಿಮೂರು ಸೇರು (ಎಕ. XVI, ಕುಡಿಗ. ೭೮-೨; ?). [ದೊಡ್ಡ + ಹಾಳತ (<ಪಾಳತ)]

**ದೊಡ್ಡಹಿಂಗಿನಬಳ್ಳಿ** (ನಾ). ಒಂದು ಬಗೆಯ ಬಳ್ಳಿ: (ವೃಶಿಗ. ೩೮-೭೪೭). [ದೊಡ್ಡ + ಹಿಂಗು₃ + ಬಳ್ಳಿ]

**ದೊಡ್ಡಹಿಂಡಿಗಿಡ** (ನಾ). ಒಂದು ಬಗೆಯ ಸಸ್ಯ: (ವೃಶಿಗ. ೩-೫೦). [ದೊಡ್ಡ + ಹಿಂಡಿ₂ (<ಪೆಂಡಿ₁) + ಗಿಡ (<ಗಿಡು)]

**ದೊಡ್ಡಹಿಟ್ಟಳಿಕ** (ನಾ). ಒಂದು ಬಗೆಯ ಸಸ್ಯ: "ಮಹಾಪೂಲ-ದೊಡ್ಡ ಹಿಟ್ಟಳಿಕ" (ಒಷಧಿ. ೧೧೮). [ದೊಡ್ಡ + ಹಿಟ್ಟಳಿಕ]

**ದೊಡ್ಡಹಿಪ್ಪಲಿ, ದೊಡ್ಡತಿಪ್ಪಲಿ** (ನಾ). ಒಂದು ಬಗೆಯ ಹಿಪ್ಪಲಿ ಗಿಡ ಮತ್ತು ಅದರ ಕಾಳು; ಬಾಲಮೆಣಸು: "ಕಪಿವಲ್ಲಿ-ದೊಡ್ಡಹಿಪ್ಪಲಿ" (ಗಂಗಾಮು. ೭೦); ಗಜಹಿಪ್ಪಲಿ, ದೊಡ್ಡಹಿಪ್ಪಲಿ (ವೃಶಿಗ. ೬೮-೧೩೯೮); ಜೀನಸುಗಳು-೧ ಅಕ್ಕಲಕಾರ . . . ೭೭ ದೊಡ್ಡಹಿಪ್ಪಲಿ (ಮುಂಬಪ್ರಾ. ೦೨೫). **ದೊಡ್ಡತಿಪ್ಪಲಿ**: (ವೃಶಿಗ. ೬೬-೦೩೪೨). [ದೊಡ್ಡ + ಹಿಪ್ಪಲಿ]

**ದೊಡ್ಡಹೀರೆ** (ನಾ). ಹೀರೆಬಳ್ಳಿಯಲ್ಲಿ ಒಂದು ವಿಧ ಮತ್ತು ಅದರ ಕಾಯಿ: "ಕೋಶಾತಕಿ-ದೊಡ್ಡಹೀರೆ" (ಒಷಧಿ. ೯೧) [ದೊಡ್ಡ + ಹೀರೆ₁ (<ಪೀರೆ)]

**ದೊಡ್ಡಹುಳಕ** (ನಾ). ನೀಳವಾದ ಕೊಕ್ಕಿನ, ವಕ್ರವಾಗಿ ಹಾರುವ ಒಂದು ಬಗೆಯ ಬೇಟೆಯ ಹಕ್ಕಿ; ತೇವದ ಮರಳುಪ್ರದೇಶಗಳಲ್ಲಿ ಸೇರಿಕೊಳ್ಳುವ ಒಂದು ಬಗೆಯ ಹಕ್ಕಿ; ಉಲ್ಲಂಗಿ: (+). [ದೊಡ್ಡ + ಹುಳಕ]

**ದೊಡ್ಡಹುಳಿ** (ನಾ). ಒಂದು ಬಗೆಯ ನಿಂಬೆಯ ಗಿಡ ಮತ್ತು ಅದರ ಕಾಯಿ: ಕಾಡುನಿಂಬೆ, ದೊಡ್ಡಹುಳಿ (ವೃಶಿಗ. ೧೦-೦೬೩). [ದೊಡ್ಡ + ಹುಳಿ₂ (<ಪುಳಿ)]

**ದೊಡ್ಡಹೆಂಡತಿ** (ನಾ). ಮೊದಲನೆಯ ಹೆಂಡತಿ; ಹಿರಿಯ ಹೆಂಡತಿ: "ಕೃತಸಾಪತ್ನಿಕಾ, ಅಧ್ಯೂಢಾ, ಅಧಿವಿನ್ನಾ-ಇ ದೊಡ್ಡಹೆಂಡತಿ, ಹಿರೇ ಹೆಂಡತಿ ಹೆಸರುಗಳು" (ಸಿದ್ಧಾಂತಿ. ೧೯೭). [ದೊಡ್ಡ + ಹೆಂಡತಿ (<ಪೆಂಡತಿ)]

**ದೊಡ್ಡಹೆಮ್ಮರ** (ನಾ). ಹೆಮ್ಮರದಲ್ಲಿ ಒಂದು ಬಗೆ "ಭೂತಸಾರಃ–ದೊಡ್ಡಹೆಮ್ಮರ" (ಒಷಧಿ. ೧೧೩). [ ದೊಡ್ಡ + ಹೆಮ್ಮರ (<ಪೇರ್ಮರ) ]

**ದೊಡ್ಡಹೊಂಗೆ** (ನಾ). ಒಂದು ಬಗೆಯ ಹೊಂಗೆ: "ಕಳಾರಾಮಃ–ದೊಡ್ಡಹೊಂಗೆ" (ಒಷಧಿ. ೨೪). [ ದೊಡ್ಡ + ಹೊಂಗೆ ]

**ದೊಡ್ಡಹೊಟ್ಟೆ** (ನಾ). ದೊಡ್ಡದಾದ ಉಬ್ಬಿದ ಹೊಟ್ಟೆ, – ಉದರ ; ಡೊಳ್ಳುಹೊಟ್ಟೆ : ಮನದೊಳಿದ್ದುದನೆಹಗೆ ಹೇಳದೆಯನುತ ಪಡೆದಾ ದೊಡ್ಡಹೊಟ್ಟೆಯನೆನುತ ಬಡನುಡಿಯಂ ನುಡಿವರೇ (ಬಸಪು. ೩೬–೧೪) : ದೊಡ್ಡಹೊಟ್ಟೆಯಿದ್ದವ ಹೆಡ್ಡನೋ (ಗಾದೆ).

**ದೊಡ್ಡಹೊಟ್ಟೆಯುವ** = ದೊಡ್ಡ ಹೊಟ್ಟೆಯನ್ನು ಉಳ್ಳವನು ; ಗಣೇಶ : "ಪಿರ್ಬೊಡೆಯ, ಪಿರ್ವೊಡೆಯ–ದೊಡ್ಡಹೊಟ್ಟೆಯುವ, ಗಣೇಶ" (ಗಂಗಾಮ. ೨೧೩). [ ದೊಡ್ಡ + ಹೊಟ್ಟೆ₁ (<ಪೊಟ್ಟೆ) ]

**ದೊಡ್ಡಹೊನ್ನೆ** (ನಾ). ಒಂದು ಬಗೆಯ ದೊಡ್ಡದಾದ ಹೊನ್ನೆಮರ: "ಅವಸಾಯನಿ–ದೊಡ್ಡಹೊನ್ನೆ" (ಒಷಧಿ. ೮). [ ದೊಡ್ಡ + ಹೊನ್ನೆ (<ಪೊನ್ನೆ) ]

**ದೊಡ್ಡಹೊಲೆಗಾರ** (ನಾ). ಒಂದು ಬಗೆಯ ಸಸ್ಯ : ದೊಡ್ಡಹೊಲೆಗಾರ, ಚಿಟ್ಟಹೊಲೆಗಾರ (ವೃಜಿಗಿ. ೪೪–೬೬೮). [ ದೊಡ್ಡ + ಹೊಲೆಗಾರ₂ ]

**ದೊಡ್ಡಾಟ** (ನಾ). ಬಯಲಾಟದ ಒಂದು ಪ್ರಕಾರ ; ವೇಳೆ : ಮೊನ್ನೆ ಒಂದು ದೊಡ್ಡಾಟವೂ ಆಯ್ತು, ಸತ್ಯಹರಿಶ್ಚಂದ್ರ ಅಂತ (ತುಂಗಭ. ೧೪). [ ದೊಡ್ಡ + ಆಟ ]

**ದೊಡ್ಡಾಣೆ** (ನಾ). ಎಂಟನೆಯ ಒಂದು (⅛) ರೂಪಾಯಿಯ ಬೆಲೆಯಿದ್ದ ಒಂದು ಹಳೆಯ ಬೆಳ್ಳಿಯ ನಾಣ್ಯ : ಒಂದೆರಡು ದಿವಸಗಳ ಮೇಲೆ ಊದಿದ ಸ್ಥಳಗಳಲ್ಲೆಲ್ಲಾ ದೊಡ್ಡಾಣೆಯಷ್ಟು ಅಗಲ ನೀಲಿಬಣ್ಣದ ಗುಳ್ಳೆಗಳೇಳುತ್ತವೆ (ಗ್ರಾಮಾಳ. ೧೫೦). [ ದೊಡ್ಡ + ಆಣೆ₂ ]

**ದೊಡ್ಡಾನೆ** (ನಾ). ಗುಂಪಿನಲ್ಲಿಯೇ ಹಿರಿದಾದ ಆನೆ ; ಗುಂಪಿನ ಒಡೆಯನಾದ ಆನೆ ; ಸಲಗ : "ಯೂಥನಾಥಃ, ಯೂಥಪಃ–೨ ಆನೆಗಳ ಹಿಂಡಿನಲ್ಲಿ ಮುಖ್ಯವಾದ ಗಜದ ಪೆಸರುಗಳು ; ಸಲಗ, ದೊಡ್ಡಾನೆ" (ಸಿದ್ಧಾಂತಿ. ೨೧೧). [ ದೊಡ್ಡ + ಆನೆ₁ ]

**ದೊಡ್ಡಿ₁** 'ತೊಟ್ಟಿ₁' ನೋ.

**ದೊಡ್ಡಿ₂** (ನಾ). ಸೂಳೆ ; ವೇಶ್ಯೆ. 'ದೊಡ್ಡಿತನ' ಪರಾ. [<ತೊಟ್ಟಿ₃]

**ದೊಡ್ಡಿ₃** (ನಾ). ಒಂದು ಬಗೆಯ ಮೂಲಿಕೆ : ಹುಷಧಕ, ದೊಡ್ಡಿ, ಹಾಲದೊಡ್ಡಿ . . . . ಪ್ರಾತಃಕಾಲದಲ್ಲಿ ಗ ಳ ತೂಕವಂ ಸೇವಿಸುವುದು (ಸಳವ್ಯ. ೨೧೮). 'ತೊಟ್ಟಿ₄' ಪರಾ. [ ? ]

**ದೊಡ್ಡಿಗೂಡು** (ಕ್ರಿ). ದೊಡ್ಡಿಯಲ್ಲಿ ಕೂಡಿಹಾಕು : ಆ ಮಂದೆಯನ್ನು ಅರಮನೆಯ ಅಯ್ಯನೆಯು–ಎಂದರೆ, ತಳಾತಳದ ಹಸರ–ನೆಲವಾಳಿಗೆಯಲ್ಲಿ ದೊಡ್ಡಿಗೂಡಿರು (ಚಟ್ಟ್ರಿ. ೧೪೩–೭). [ ದೊಡ್ಡಿ₁ (<ತೊಟ್ಟಿ₁) + ಕೂಡು₁ ]

**ದೊಡ್ಡಿಗೊಳ್** (ಕ್ರಿ). ಗುಂಪುಗೂಡಂ ; ಗುಂಪಾಗು : ತೆನೆಯ ಸಂದಿಗಕೊಳ್ ಸಂದಣಿಸಿ ನೇಲ್ವ ವೀರಭಟ ಕುಣಪಂಗಳಿಂ ಪೆಣೆದ ಪೆರ್ವಾಟೆಯಂ ಕಳುವ ವಿಳಯಜಳಧರದೊಡ್ಡಿನಂತೆ ದೊಡ್ಡಿಗೊಂಡಿರ್ದುದು (ಅನಂಪು. ೧೧–೪೪ ವ). [ ದೊಡ್ಡಿ₁ (<ತೊಟ್ಟಿ₁) + ಕೊಳ್₁ ]

**ದೊಡ್ಡಿತನ** (ನಾ). ೧. ಸೂಳೆತನ ; ಸೂಳೆಗಾರಿಕೆ : ನಾನು ವೇಶ್ಯೆ ! ನಾನು ಸೂಳೆ ! ಎಂದು ಕಂಡಕಂಡವರೊಡನೆ ಸಾರಿಕೊಳ್ಳುವುದಿದೊಂದು ದೊಡ್ಡತನವೇನು . . . ಅಲ್ಲ ದೊಡ್ಡಿತನ (ಮಂತ್ರಕ. ೨೬–೨೨). ೨. ಮೋಸ ; ವಂಚನೆ : ಸಲೆ ನಂಬಿದರೊಳೆರಡೆಣಿಸುವರು ಕೈವಿಡಿದು ದೊಡ್ಡಿತನ ಮಾಡಿದನ ಲೆಕ್ಕಿಸದಿಹರು (ನಿಜಶ. ೮೪). [ ದೊಡ್ಡಿ₂ + – ತನ ]

**ದೊಡ್ಡಿತು, ದೊಡ್ಡಿತ್ತು** (ನಾ). ೧. ಗಾತ್ರದಲ್ಲಿ ಹಿರಿದಾದುದು ; ದಪ್ಪವಾದುದು ; ಸ್ಥೂಲವಾದುದು : "ದೊಡ್ಡಿತೆನಲ್ಕೆ ಮಹಾರ್ಥಶಬ್ದದೊಳ್" (ಕಶಬ್ದಾ. ೧೮) : ಅಸಿದು ಬೆಳೆಯದೆ ಕೊಬ್ಬಿ ದೊಡ್ಡಿತಹ [ಪಾಠಾಂ. ಗೊಡ್ಡಿದದ] ತೆನೆಗಳೊಳು (ಸಿದ್ಧರಾ. ೨–೫೯) ; ಕಲ್ಲನತಿ ದೊಡ್ಡಿತಂ ಒಡಿದು ತೊಟಿಯೊಳಿಯೆ ಚಿತ್ರೋಲ್ಲಾಸದಿಂದೆತ್ತಿ ಹಾಯ್ಕಲ್ (ಪಾಶೋಪು. ೪–೧೦೬). ೨. ಅಗಾಧವಾದುದಂ ; ಗಹನವಾದಂದು ; ವಂಚಿಕ್ಕಿ ವಾದಂದಂ : ದೇವ ಚಿತ್ತೈಸೈ ಸಲೆ ನಿಜಸೇವಕರು ನಾವಿರಲು ದೊಡ್ಡಿತದಾವುದು (ತೊರಬಾ. ೪–೮–೧೦) : ಅದೇನು ದೊಡ್ಡಿತು ಮಾಂಧಾತ ಸುತ್ಕಾಗವ ಬೇಡ ಬಂದವಗೆ ರಾಗದಿಂದೊಡಲ ಛಿಸ್ಸನೆ ಸೀಳ್ದು ದಕ್ಷಿಣಭಾಗವ ಕೊಟ್ಟುದನಜಾಯಾ (ಮೋಹತ. ೩–೩೪). ೩. ಎತ್ತರವಾದಂದು ; ದೊಡ್ಡಿತಾದ ಎಲವದ ಮರದ ಮೇಲೆ ಅನೇಕ ಗಿಣಿಗಳೆರುವುವು (ಪಕಕಾ. ೩). ೪. ಉದ್ದವಾದಂದಂ ; ನೀಳವಾದುದಂ : ಮಹಾಬಾಹೋ ಎಲ್ರೆ ದೊಡ್ಡಿತಾದ ತೋಳುಗಳುಳ್ಳಂಥಾ ಹೀಗೆ ಸಂಬೋಧನೆ ಮಾಡಿದ್ದರಿಂದ (ಅಶ್ವಟೀ. ೨–೩). ೫. ಗಟ್ಟಿಯಾದುದು ; ಜೋರಾದುದಂ : ಐದು ತಿಂಗಳ ಕೂಸಂ ಸಂಸಿನಿಯೆಂಬ ದೇವತೆ ಒಡಿದೊಡಾ ಕೂಸು . . . ಆಕಾಶವಂ ನೋಡುಗುಂ ದೊಡ್ಡಿತಪ್ಪ ಧ್ವನಿಯಿಂದಳುಗುಂ (ಬಾಲಚಿ. ೦೨೩–೧೭) ; ಒಡ್ಡಿದ ಭೈರವ ಬಲರಾಮನ ಪೆಟ್ಟು ದೊಡ್ಡಿತನುತ್ತೆ ನಿಮ್ಮರದಿ ಒಡ್ಡಿಯ ನುಡಿದು (ಮೋಹತ. ೩೯–೦೩) ; ಕೇಳಿ ಕಿಡಿಕಿಡಿಪೋಗಿ ಬಾಯ್ ದೊಡ್ಡಿತೆಂದೆನ್ನನೊಳುವೆಯ (ಜಲಪು. ೪೭–೨೯). ೬. ಹೆಚ್ಚಿನದು ; ಮಿಗಿಲಾದಂದು ; ಮಹತ್ತಾದುದು : ಕೊಡುವರ್ಗಾವುದು ದೊಡ್ಡಿತ್ತೆ (ಸೋವಜಿಕ. ೮೪) ; ಪರವೊವ್ಮದಸುಭವವೊಂದುಳ್ಳರವನಿಗೆ ದೊರಕದ ದೊಡ್ಡಿತೊಂದುಂಟೆ (ಭರತ. ೩–೮೩) ; ತುಪ್ಪ ಸಕ್ಕರೆ ಪಾಲ ಸವಿವ ಮನುಜರ ತಂದೊಬ್ಬಸುವುದು ದೊಡ್ಡಿತಲ್ಲ (ಕಲವಿ. ೧೧–೪) ; ಎನ್ನೀ ಕೀರ್ತಿಯ ದೊಡ್ಡಿತೆಂಬ ತೆರದಿಂ . . . ಕೀ ರ್ತಿ ಯ ನಾಂ ತು ಕಂಗೊಳಿಸಿದರ್ (ಮ್ಯಸೂಮ. ೬–೨೨೨). ೭. ಅಮೂಲ್ಯವಾದಂದಂ ; ಶ್ರೇಷ್ಠವಾದುದು : ವ್ಯರ್ಥವಾದುದು ಮದ್ವಚನ ಸೃಷ್ಟಿಸುವ ಸಮರ್ಥ ಪೇರ್ಗಾವನೈಶ್ವರ್ಯ ಕರ್ತಳಿಶನ ರಾಣಿ ನಿಖಿಳವ್ಮೈಭೋಗವು ವ್ಯರ್ಥ ದ್ವಾರಕಿ ದೊಡ್ಡಿತಹುದೆ (ಮೋಹತ. ೨೯–೨೭). ೮. ಹೆಚ್ಚಳ ; ಹಿರಿಮೆ ; ಘನತೆ : ನಾವಿವಗೆ ಮನವೊಡ್ಡಿಬಿಡದೆ ಸುಖಿಯಿಸುವ ದೊಡ್ಡಿತೆಂದಿಂಗಹುದೊ ಎಂದು ಕೆಲಬರು ಗುಡ್ಡನೆಕೆಯನೆಣಿಸುವರು (ನೇಮಿಶಂ. ೮–೩೭). ೯. ದೊಡ್ಡವಸ್ತು ; ಹಿರಿಯ ವಸ್ತು : ಪೇತೆ ನೀನೇನು ದೊಡ್ಡಿತು ನನ್ನ ಸರಲ ಮುಯ್ಯಾತುಕೊಂಬೊಡೆ ರುದ್ರಗರಿದು ಮಾತುಗಾಚಿಕೆ ಬೇಡ ಒಡಿಯೆಂದು ಭಾಳದ ತೂತೇಳಲಚ್ಚು ಬೊಬ್ಬಿರಿದ (ಮೋಹತ. ೧೨–೫೯). **ದೊಡ್ಡಿತ್ತು** : ೧. ಆ ಗ್ರಾಮಕ್ಕೆ ಮೊಂದು ಎಳಗನಂ ಕಳಿಪಿ ಯಥೇಷ್ಟ ಗ್ರಾಸವನಿಕ್ಕಿಪುದು ಬಡವಾದಡೆಯು ದೊಡ್ಡಿತ್ತಾ [ಪಾಠಾಂ. ಡ್ಡನಾ] ದಡೆಯು ತಪ್ಪು ಸಮಾನವಮಾಗಿರಿಸದಿರ್ದೊಡೆ ನಿಮ್ಮ ಗ್ರಾಮಮಂ ಕೆಡಿಸುವೆಂ (ಪುಣ್ಯಾಸ್ರ. ೩–೨೭ ವ) ; ಅದಜಲ್ಲಿ ದೊಡ್ಡಿತ್ತಾದ ತಗರು ಹುಟ್ಟಿ ಮಲಪುತ್ತ ಬರಲಾ (ಕೃರಸೂ. ೦೧೨) : ಮೆಯ್ಯು ನುಣುಪಾಗಿ ಬಟುವಾಗಿ ದೊಡ್ಡಿತ್ತಾಗಿ ತನ್ನ ಮೆಯ್ಯಿಗೆ ತಕ್ಕ ಚೆಂದವಾದ ರೂಪು ಕಾಣಿಸುವುದು (ಅಶ್ವಟೀ. ೨೨–೧೧). ೨. ಸುವ್ರತದ ಫಲದಿನುರಗ ನರ ನಾಕಮೆಂಬ ನೆಲಕೊಡೆಯರಾಗುವರ್ ಕೈವಲ್ಯಕಾಂತೆ ಯೊಳಗಲಸದೇ ಕೂಡುವರಿದೇನು ದೊಡ್ಡಿತ್ತೆನಲ್ (ಸಮ್ಯಕ್ಕಾ. ೬–೭). ೩. ಎಲ್ಲರಿಗೂ ಪ್ರಾಣದಾಸೆ ದೊಡ್ಡಿತ್ತಾಗಿರುವುದರಿಂದಲೂ . . . ಬದುಕಿರುವುದು ಕಾರ್ಯವೆಂದು ನಿಶ್ಚೈಸಿ (ಪಕಕಾ. ೪೦). ೪. ಗ್ರಹನಟಯಾ ಆದಿತ್ಯಾದಿ ನವಗ್ರಹಂಗಳೂ ಉರುತತ್ವ ಶಿವಾದಿ ಪೃಥುವ್ಯಾಂತಮಾದ ದೊಡ್ಡಿತ್ತಾದ ಮೂವತ್ತಾಱು ತತ್ವಂಗಳು ಶ್ರೀಗುರುವಿನ ಪಾದದ ಜಂಘೆಯಲ್ಲಿಹವು (ಅಕ್ಕಸ್ತ್ರಿ. ೫ ಟೀಕು) ; ಓಂಕಾರವು ಶಿವಾತ್ಮ ಹಕಾರವು ಉರು ಪಂಚ ಪ್ರಣವ

ದೊಡ್ಡಿತ್ತಾದವ್ವೆರದು ಪ್ರಣವಂಗಳು (ಅಕ್ಕ್ರಿ. ೫೧ ಟೀಕು). ೧೦. ಅಗಲವಾದುದಂ ; ವಿಶಾಲವಾದಂದಂ : ಸಿಂಹಕಟಿತಟಮನಿಳಿಸುವ ರಿಪುತುರಂಗಕಂಠೀರವನ ಕಟಿತಟವೊಲ್ದು ನೋಡುವ ಗಾಡಿಕಾರ್ತಿಯರ ಕಣ್ಗೆ ಕಾಮ[ನ]ಡ್ಡಣವಂತೆ ದೊಡ್ಡಿತ್ತಾಗಿ ಮಾಜುವುದ್ವೃತ್ತತೆಯ [ನೀಟ್ದು] ಕೊಂಡಂತುದ್ವೃತ್ತಂಗಳಾದುವು (ಶಂಶಭಾ. ೨-೩೯ ವ) ; ಹುಕ್ಕಿನವೋಲ್ ಕೆಟಗು. ದೊಡ್ಡಿತ್ತಾಗಿ ಮೇಗಸಿದವ್ವ ಶರೀರರೂಪ (ತತ್ತ್ವಕ್ರ. ೨೯೭). (ಗಂ). ೧೧. ಹಿರಿದಾದ ; ದೊಡ್ಡದಾದ : ತುಕಾರ ದುಕಾರಂಗಳ ಕಡೆಯಾಗಿ ಪಲವು ಗುಣವಚನಂಗಳೊಳವು ; ಅವಱೊಳ್ ತುಕಾರಾಂತಕ್ಕೆ ವಿಕಲ್ಪದಿಂ ದ್ವಿತ್ವಮುಂಟು . . . ಅಗಲಿತ್ತು, ದೊಡ್ಡಿತ್ತು, ಒಳ್ಳಿತ್ತು ಎಂಬಂತೆ ನೋಡಿಕೊಳ್ವುದು (ಶಮದ. ೭೭ ಪ್ರಯೋ).

ದೊಡ್ಡಿದ = ೧. ಹಿರಿಯ ; ಪೂಜ್ಯ : ಭೀಮನ ಮಱುಯಂ ಬಂದು ಪುಗೆ ಕೊಂದು ಕುಡೆ ನೀನಂದಿಂಬಱುಕಹಹ ದೇವ ದೊಡ್ಡಿದನಾದಯ್ (ಗದಾಯು. ೭-೪೯) ; ನಿನ್ನನತ್ತಾದರದಿಂ ದೇವನ ದಿಂಡನೆಯಂದೊಡೆ ದೇವಂ ನೀನೆಂತದೆಂತು ದೊಡ್ಡಿದನಪ್ಪೈ (ಧರ್ಮಾಮೃ. ೯-೦೦೭). ೨. ಶೂರ ; ಪರಾಕ್ರಮಿ : ನಿಮ್ಮ ಕಣ್ಣಗೆ ನರನು ದೊಡ್ಡಿದನುಳಿದ [ಪಾಠಾಂ. ದೊಡ್ಡಿತು ಉಳಿದ] ವೀರರ ಕಣ್ಗೆ ತುಸು ಮಾತ್ರ (ಕುಮಾವ್ಯಾ. ೭-೦೦) ; ವಿನವನು ದೊಡ್ಡಿದನು ಶರಸಂಧಾನಸಮಯಿಗಳಾವು ನವಗಾ ವಾನರಮಿತ್ರತ್ವವೆಂಬುದು ಲೋಕಹಾಸ್ಯವಲೆ (ತೊರರಾ. ೪-೬-೦೪).

ದೊಡ್ಡಿದುವು (ಬಹುವ) = ಗಾತ್ರದಲ್ಲಿ ಹಿರಿದಾಗಿರುವಂಥವು : ನಡೆನೋಟ್ಪೊಡಮಂತುಮಿಂತು ಮೂಱುಸಿಯವು ಮೂಱು ದೊಡ್ಡಿದುವು ಮೂಱುಡೆ ಕೆಳ್ಳಿದುವಂಬುಜಾಕ್ಷಿಯಾ (ಶಂಶಭಾ. ೪-೭೩) ; ಅತಿರಥನಾತಂ ಗಡ . . . ತದ್ರಥದ ಗಾಲಿಗಳ್ದೊಡ್ಡಿದುವೇ (ಗದಾಯು. ೩-೫೫).

ದೊಡ್ಡಿಯ = ಬಲವುಳ್ಳ ; ಶಕ್ತಿಯ : ಇವಂ ದೊಡ್ಡಿಯಾಳ್ಕುದುರೆಯಂ ತೋಱು ಮಾಱು ಕಾಡಿದಡೆ ಎನ್ನ ಸತ್ತ ಸಾವುಂ ಕೆಟ್ಟ ಕೇಡುಂ ನಂಬಿಯುಮಂ ನರಸಿಂಗವೊನೆಯರುಮಂ ತಾಗುವುದು (ಸಂಬಿಶ. ೬-೦೦೩). [ <ದೊಡ್ಡ ]

ದೊಡ್ಡಿತೆ (ನಾ). = ದೊಡ್ಡತನ ೧ : ಅವಳ ದೊಡ್ಡಿತೆಯು ಸಹನಶೀಲತೆಯಲ್ಲಿಯೇ ಮುಗಿಯುವುದಿಲ್ಲ (ಗೂತ್ತುಗು. ೦೩೯) ; ಖಾನನಿಗೆ ತಾವು ಕಂಡ ಆ ದೊರೆಯ ದೊಡ್ಡಿತೆಯನ್ನು ಬಿನ್ನವಿಸುವರು (ಕರ್ಣಾಟ. ೦೪೧) ; ಜ್ಞಾನ ಮತ್ತು ಧೈರ್ಯ–ಇವೇ ದೊಡ್ಡಿತೆಯ ಹಾಗೂ ಹಿರಿಮೆಯ ಅಡಿಗಲ್ಲು (ದಾಬುತ್ತಿ. ೦೪). [ <ದೊಡ್ಡಿತು ]

ದೊಡ್ಡಿತ್ತು 'ದೊಡ್ಡಿತು' ನೋ.

ದೊಡ್ಡಿದಾರ (ನಾ). ದೊಡ್ಡಿಯನ್ನು ನೋಡಿಕೊಳ್ಳಲೆಂದು ನಿಯುಕ್ತನಾದ ಅಧಿಕಾರಿ : ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರವರು ಪ್ರತಿಯೊಂದು ದೊಡ್ಡಿಗೂ ದೊಡ್ಡಿದಾರರುಗಳನ್ನು ಸಹಾ ನೇಮಿಸುವರು (ಗ್ರಾಮುಕ. ೦೦೪). [ ದೊಡ್ಡಿ₁ (<ತೊಟ್ಟಿ₁) + – ದಾರ್₄ ]

ದೊಡ್ಡಿಪತ್ರೆ 'ದೊಡ್ಡಪತ್ರೆ' ನೋ.

ದೊಡ್ಡಿಪ್ಪೆ (ನಾ). ಒಂದು ಬಗೆಯ ಮರ ; ಇಪ್ಪೆಯಲ್ಲಿ ಒಂದು ವಿಧ : ಇಪ್ಪೆ, ದೊಡ್ಡಿಪ್ಪೆ, ಹಿಪ್ಪೆ, ಹಾಲಿಪ್ಪೆ (ವೃಕ್ಷಶಿ. ೦೩-೩೦೪). [ ದೊಡ್ಡ + ಇಪ್ಪೆ₁ (<ಇರ್ಪೆ) ]

ದೊಡ್ಡಿಮರ (ನಾ). ಒಂದು ಬಗೆಯ ಮರ₁–ವೃಕ್ಷ : ದೊಡ್ಡತೊಪ್ಪೆ ಮರ, ದೊಡ್ಡಿಮರ, ಬಿಂದಾರಿಮರ, ದಲ್ಲಿಮರ, ಬಟ್ಟಗ (ವೃಕ್ಷಶಿ. ೪೫-೮೮೫). [ ದೊಡ್ಡಿ₃ + ಮರ₁ ]

ದೊಡ್ಡಿಮೆ (ನಾ). ಮರ್ಯಾದೆ ; ಘನತೆ ; ದೊಡ್ಡಸ್ತಿಕೆ : ವ್ಯಾಪಾರೋದ್ಯೋಗಗಳಲ್ಲಿ ವ್ಯಕ್ತಿಸ್ವಾತಂತ್ರ್ಯವಿದೆ . . . ಒಕ್ಕಲತನದಲ್ಲಿ ದುಡಿತಕ್ಕೆ ತಕ್ಕ ದೊಡ್ಡಿಮೆ ಇದೆ (ಕಳ್ಳಳ್ಯ. ೦೦೨). [ <ದೊಡ್ಡಿತು + – ಮೆ₁ ]

ದೊಡ್ಡಿಲಿ (ನಾ). ದೊಡ್ಡ ಇಲಿ ; ಹೆಗ್ಗಣ : "ಮೂಷೀ–ದೊಡ್ಡಿಲಿ" (ಓಷಧಿ. ೧೨೭) ; ಸಣ್ಣಿಲಿ, ದೊಡ್ಡಿಲಿ, ಮೂಗಿಲಿ . . . ಹುದುಗಿಲಿ, ಎಲ್ಲಾ ಬಂದುವು ಓಡೋಡಿ, ಜೋಗಿಯು ಬಾರಿಸೆ ಕಿಂದರಿಯ (ದೊಡತೋಗಿ. ೦೦-೨೫೭). [ ದೊಡ್ಡ + ಇಲಿ₁ ]

ದೊಡ್ಡಿಲೆ, ದೊಡ್ಲಿ (ನಾ). ಒಂದು ಬಗೆಯ ಕಾಡುನಿಂಬೆಯ ಗಿಡ ಮತ್ತು ಅದರ ಕಾಯಿ : ಮಾದಲ ನಿಂಬೆ ದೊಡ್ಡಿಲೆ ಕಂಚಿ ಕಿತ್ತಿಳೆ ಸ್ವಾದು ಖರ್ಜೂರ ದ್ರಾಕ್ಷೆಗಳು (ದೋಜಕ. ೨೯-೫೨); "ದದ್ದಿಲೆಹಣ್ಣು" (ಕೃಣ್ಣಾ). ದೊಡ್ಲಿ : (ತು). [ ←ತುಳು. ದೊಡ್ಡಲೆ, ದೊಡ್ಲೆ ]

ದೊಡ್ಡಿವೆಸರ್ (ನಾ). ದೊಡ್ಡ ಹೆಸರು ; ಕೀರ್ತಿ : ವಾರಿಜನಾಭಂ ಹರಿಯಂಬುದೊಡ್ಡಿ [ಪಾಠಾಂ. ದೈ]ವೆಸರಂ ಪೊತ್ತಿರ್ದ ನೀಂ ಮಂತ್ರಿಯಾಗೆ (ಶಂಶಭಾ. ೯-೯೭) ; ಬಲದ ಕೆಲದೊಳು ಮಿಱುಮಿಱುಮಿಱುಗಿ ತನ್ನ ಪಡದೊಂಗಂ ತನ್ನ ವೆಸರಿಂದಮೆ ದೊಡ್ಡಿವೆಸರಾಗಿ ನೆಗಟ್ದ ಚಕ್ರಮಂ ನೋಡ (ಶಾಂತಿಪು. ೪-೪೮ ವ). [ <ದೊಡ್ಡಿತು + ಪೆಸರ್ ]

ದೊಡ್ಡಿಸು (ಕ್ರಿ). ವಿವರವಾಗಿ ಹೇಳು ; ವಿವರಿಸು : ಗಂಗಾದೇವಿಗಾ ಗೋವಿಂದನೀ ರೀತಿಯಲಿ ದೊಡ್ಡಿಸಿಯಂದು ತನ್ನಾನಸದ ಬಹುದುಃಖವನು ಬಿಡಿಸಿದನು (ತಿಮ್ಮಳ. ೧೦-೪೭). [ ದೊಡ್ಡಿತು + – ಇಸು₁ ]

ದೊಡ್ಡಿಸ್ತನ 'ದೊಡ್ಡಸ್ತನ' ನೋ.

ದೊಡ್ಡೀಚಲು (ನಾ). ಒಂದು ಬಗೆಯ ಈಚಲುಮರ ಮತ್ತು ಅದರ ಹಣ್ಣು : "ಪಿಂಡಖರ್ಜೂರೀ–ದೊಡ್ಡೀಚಲು" (ಓಷಧಿ. ೯೮). [ ದೊಡ್ಡ + ಈಚಲು₁ (<ಈಂಚಿಲ್) ]

ದೊಡ್ಡೀಳೆ (ನಾ). ಈಳೆಯ ಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಹಣ್ಣು : ತೆಂಗಡಕೆ ಪಲಸುಗಳ್ ನಾರಂಗಂ ಕಿತ್ತೀಳೆ ನಿಂಬೆ ದೊಡ್ಡೀಳೆ[ಳೆ]ಗಳಿಂ ಸಂಗಳಿಸಿದ ಸವಿನಿಂಬೆಗಳಿಂಗಿತದಿಂ ಬೆಳೆದ ರಾಯಗಿತ್ತೀಳೆ[ಳೆ]ಗಳುಂ (ಹಂರಾಸ್ಯ. ೦-೦೪-೦೦). [ ದೊಡ್ಡ + ಈಳೆ ]

ದೊಡ್ಡು₁, ದುಡ್ಡು₂, ದೊಡ್ಡೆ₁ (ನಾ). ಕಾಡುಕೋಣ; ಕಾಸರ : ಅದ್ವವಿಸಿ ಸೋಹಿದರು ಕೋಣನ ದೊಡ್ಡುಗಳ ದಂತಿಗಳ ಮರಿಗಳ ಒಡ್ಡೊಡೆಯದವೊಲಾ ಸುಮಿತ್ರಾಸುತನ ಸರಿಸದಲಿ (ತೊರರಾ. ೩-೩-೧೨) ; ಕಾಡುಕೋಣಗಳಿಗೆ 'ದೊಡ್ಡು' ಎಂದು ಹೆಸರು (ಕಾನೂರು. ೫೪) ; ಕಡ ಮತ್ತು ಸಾರಗದ ಹಿಂಡುಗಳೂ ದೊಡ್ಡುಗಳ ಮಂದೆಗಳೂ . . . ಅಲ್ಲಲ್ಲಿ ಅವಿಶ್ರಾಂತವಾಗಿ ಸುತ್ತಾಡುತ್ತಿದ್ದವು (ಶಂಪಶಂ. ೨). ದುಡ್ಡು₂ : ಗುಡ್ಡಗಳ ವೆಂಬಂತೆ ರಥನಿವಹ ಕಾರ್ಮುಗಿಲಿನೊಡ್ಡಿನಂತಿಭರಾಜಿ ಹಯನಿಕರ ಕಡಲಂತೆ ದುಡ್ಡಿನಂತಿಪ್ಪಪ್ಪಿ ಕಾಲ್ಬಲಂ ಕೂಡಿಕಿದರಾವ ನಾಡೀಡೆಂಬೊಲು (ಜರಶು ೯-೨೦) ; ಕೋಣಕ್ಕೆ "ದುಡ್ಡು" ಎಂದು ನಮ್ಮವರು ಕರೆಯುತ್ತಾರೆ (ಜಾಅಪ್ರ. III, ೦೭೦೯). ದೊಡ್ಡೆ₁ : ಹುಲಿಯಾಗಲಿ ಕರಡಿಯಾಗಲಿ ದೊಡ್ಡೆಯಾಗಲಿ ಉರಿಯುವ ಬೆಂಕಿಗೆ ಅಂಜಿ ಅದರ ಬಳಿ ಸಾರುವುದಿಲ್ಲ (ಮುರಮ. ೨೪೯).

ದೊಡ್ಡಿನ ಮೃಗ = ಕೋಣದ ಜಾತಿಗೆ ಸೇರಿದ ಪ್ರಾಣಿ: ಪರಿಹರಿಕುಂ ದೊಡ್ಡಿನ ಮೃಗ [ಪಾಠಾಂ. ದೊಡ್ಡಿಮೃಗ] ದುರುವಿಷಮಂ ನಸ್ಯಲೇಪ ನಾಂಜನದಿಂದಂ (ಅಮದ. ೦೩-೬೯). ದೊಡ್ಡಿನ ಹೋರಿ = ಹೋರಿ ಕೋಣ: ಉಡು ನವಿಲಾವೆ ಬೆಕ್ಕು ನರಿ ಲಾವುಗೆ ದೊಡ್ಡಿನ ಹೋರಿ ಹೇರಣಲ್ . . . ಕೊಂಡುಗುಱು ಕೂರಗೆಯೆಂಬಿವನ್ನೆದೆ . . . ಪೊತ್ತು ಬೇಡವಡೆ ಬಂದುದು (ಸೂಕ್ತಿಸು. ೩-೦೬೮). [ ಸೆ ೮.೫ ತುಳು. ದೊಡ್ಡು ]

ದೊಡ್ಡೆ₁ 'ದೊಡ್ಡು' ನೋ.

ದೊಡ್ಡೆ₂ (ನಾ). ದಪ್ಪವಾಗಿರುವವಳು; ಸ್ಥೂಲವಾಗಿರುವವಳು : ಕಡು ನಿಡಿಯಳ್ ಕರಮ ಗುಜ್ಜೆ ಮೇಣ್ ಕರಮುಸಿಯಳ್ ಕಡು ದೊಡ್ಡೆಯೆನಿಪ್ಪೊಡಂ ನೋಟ್ಪೊಡೆ ಪುರುಷಾಕಾರೆಯಪ್ಪೊಡಂ ಕಪ್ಪೆಯವಳ್ (ದೋಕೋಷ. ೦೦-೬೦). [ ದೊಡ್ಡ + – ಎ₂ ]

**ದೊಡ್ಡೆಲಚಿ** (ನಾ). ಒಂದು ಬಗೆಯ ಎಲಚಿಮರ ಮತ್ತು ಅದರ ಹಣ್ಣು : "ರಾಜವಲ್ಲಭಃ-ಹಣ್ಣಿನ ಹಾಲೆ, ದೊಡ್ಡೆಲಚಿ" (ಓಷಧಿ. ೦೩೮). [ ದೊಡ್ಡ + ಎಲಚಿ ]

**ದೊಡ್ಡೆಲೆಭೋಗಿ** (ನಾ). ಒಂದು ಬಗೆಯ ಮರ ; ಉನ್ನಿಮರ : ಹೈಗ, ಉನ್ನಿಮರ, ಕಲ್‌ದೋವು, ದೊಡ್ಡೆಲೆಭೋಗಿ (ಮೃಶಿಗಿ. ೪೪-೮೬೪).
[ ದೊಡ್ಡ + ಎಲೆ$_{1}$ + ಭೋಗಿ ]

**ದೊಡ್ಡೇಲಕ್ಕಿ, ದೊಡ್ಡಏಲಕ್ಕಿ** (ನಾ). ಒಂದು ಬಗೆಯ ಏಲಕ್ಕಿ ಗಿಡ ಮತ್ತು ಅದರ ಕಾಯಿ : "ದಿವ್ಯಗಂಧಾ-ದೊಡ್ಡೇಲಕ್ಕಿ" (ಓಷಧಿ. ೭೫). **ದೊಡ್ಡ ಏಲಕ್ಕಿ** : "ಪೃಥ್ವೀಕಾ-ಜೀರಗೆ, ದೊಡ್ಡಏಲಕ್ಕಿ, ಹಿಂಗುಪತ್ರ, ಹರೇಣುಕ" (ಓಷಧಿ. ೦೦೨). [ ದೊಡ್ಡ + ಏಲಕ್ಕಿ ]

**ದೊಡ್ಡೊಕ್ಕಲು** (ನಾ). ಹಿರಿಯ ಒಕ್ಕಲು ; ಮುಖ್ಯವಾದ ಒಕ್ಕಲು ; ಶ್ರೀಮಂತ ಒಕ್ಕಲು : ಊರಿಗೆಲ್ಲಾ ಅವರದೇ ದೊಡ್ಡೊಕ್ಕಲು (ರೂಢಿ).
[ ದೊಡ್ಡ + ಒಕ್ಕಲು$_{2}$ (<ಒಕ್ಕಲ್$_{2}$) ]

**ದೊಡ್ಲಿ** 'ದೊಡ್ಡಿಲೆ' ನೋ.

**ದೊಣೆ$_{1}$, ಜೊಣೆ, ಡೊಣೆ$_{2}$, ಡೋಣೆ$_{1}$, ಧೊಣೆ, ದೋಣೆ$_{2}$, ಧೊಣೆ** (ನಾ). ೧. ಬೆಟ್ಟದ ಮೇಲಿರುವ ಸ್ವಾಭಾವಿಕವಾದ ಹೊಂಡ,-ಕೊಳ: ಮುಗಿಲ ನೀರಂ ನಂಬಿ ದೊಣೆಯ ನೀರಂ ತುಳುಂಕುವ ಕೋಡಗವುಮಂ (ಧರ್ಮಾಮೃ. ೮-೫೧) : ಕಾಯ್ದುಕ್ಕುವ ದೊಣೆಯುದಕ ದೊಳಿಡೆ ಚಂಚು ಬೆಂದು (ಕುಸುಮಾ. ೮-೧೨೮); ಎಲ್ಲರೂ ದೊಣೆಯೊಂದರಲ್ಲಿ ಸ್ನಾನಮಾಡಿ ಮಧ್ಯಾಹ್ನಸಮಯಕ್ಕೆ ಊರಿಗೆ ಹಿಂತಿರುಗಿದರು (ಶಾಂತಲಾ. ೩೭೮) : ಇಲ್ಲಿ ಎಲ್ಲೋ ಒಂದು ದೊಣೆ ಇದ್ದಹಂಗಿತ್ತಪ್ಪಾ (ಮಲೆಮ. ೨೫೪) : ದೊಣೆಗೆ ಹೋದರೂ ಹೊಣೆ ತಪ್ಪದು (ಗಾದೆ). ೨. (ಕಟ್ಟಿಸಿದ ಅಥವಾ ನಿರ್ಮಿಸಿದ) ಕೊಳ,- ಕಲ್ಯಾಣಿ: ಆನಂದಸಂವಚ್ಛರದಲ್ಲಿ ಕಟ್ಟಿಸಿದ ದೊಣೆಯು (ಎಕ. II, ೦೬೨-೦; 1104 ?): ಹೊಸ್ಸಾಗಿ ಹಂಪೆಯ ದೊಣೆಯ ತೋಡ್ಸಿ ಬರಸಿದ ಶಾಸನ (ಸೌಇಇ. IX-1- ೩೫೯-೧೨ : 1340). ೩. ಹಳ್ಳ ; ತಗ್ಗು : "ದ್ರೋಣಿಃ, ಶೈಲಸಂಧಿಃ . . . ಈ ೨ ದೊಣೆಯ ಹೆಸರು" (ಪಾಚಿಶಾ. ೦೦೪) : ದನಕಟ್ಟುವ ಕೊಟ್ಟಿಗೆಯಲ್ಲಿ ದೊಡ್ಡ ದೊಡ್ಡ ದೊಣೆಗಳು ಬಿದ್ದಿವೆ (ರೂಢಿ). **ಜೊಣೆ** : ೧. ಕೆರೆ ತೊರೆ ಮಡು ಜೊಣೆ ಪರಿವಾ ನಿರ್ಝರ (ಶಶಕ. ೫೯೦). **ಡೊಣೆ$_{2}$** : ೧. ಮುಗಿಲ ನೀರಂ ನಚ್ಚಿ ಡೊಣೆಯ ನೀರಂ ತುಳುಂಕಿದ ಕೋಡಗದಂದಂ ನಿನಗಕ್ಕುಂ (ಜಂಬೂಕಂ. ೬೮-೮) ; ನಾವೀ ಪ್ರದೇಶದೊಳು ಕೆಱೆಯಾಗಿ ತೊಱೆಯಾಗಿ ಡೊಣೆಯಾಗಿ ವಾಪಿಕೂಪಂಗಳಾಗಿ ಈಶನಭಿಷವದಗ್ರಜಲಕೆ ಸಂದಿಪ್ಪೆವು (ಸಿದ್ಧಕಾ. ೪-೨೩); ನೀರಡಸಿ ಬಟಲ್ದು ಬಂದು ಬೆಟ್ಟದ ಡೊಣೆಗಳೊಳ್ ಮುನ್ನ ಪೊಕ್ಕಿರ್ದ ಕಳ್ಳಂ ಬಳೆದು ಕಿಳಿದಿರ್ದೊಡದಂ ಕುಡಿದು ಸೊರ್ಕಿ (ಜೀವಸಂ. ೧೪೪-೧೯); ದಂಚೆ ಡೊಣೆ ದೀರ್ಘಿಕೆ ಕರ್ಮಡು ಪಳ್ಳ ಕೊಳ್ಳ ನೀರೊಱೆವ ಕೊಳಂ (ಅಟ್ಟಮ. ೦-೪೩) ; ದಿವಿಜ ಧಾರುಣಿರುಹಂಗಳ ನೆಲೆಯೊ ಕಡವರದಿರವೊ ಶೋಭನದ ಡೊ[ಪಾಠಾಂ. ದೊ]ಣೆಯೊ (ಬಸವ. ೦-೩೯). ೨. ಬಡಗಣ ಭಾಗೆಯ ಪಡುವಣ ಭಾಗದಲು ಕಟ್ಟಿಸಿದ ಡೊಣೆ (ಎಕ. XII, ತುರುಕೂ. ೩೯-೮ ; 1887) ; ಕನ್ನರಿದೇವನ ಮಲಪಗಳು ಕಟ್ಟಿಸಿದ ಲಖುಮಣ್ಣಗಳ ಬಾಗಿಲು ಡೊಣೆ ಸೋಪಾನಕೆ (ಎಕ. X, ಬಾಗೇಪ. ೩೩-೮; 1406). ೩. "ಡೊಣೆ-ತಗ್ಗು" (ಜಾನಕೋ. ೭೩) : "ಬೆಟ್ಟಗಳ ನಡುವಣ ಆಳವಾದ ಗುಂಡು ಪೊಳ್ಳು" (Punch-bowl, ಇಂಕನಿ). **ಡೋಣೆ$_{1}$** : ೧. ಕಾಮ ಧೇನುವಿನ ನಡುವೆಪೊಂದು ಕೋಣ ಕಟ್ಟಯಿದ್ದಿತ್ತು ಕೋಣನ ಗವಲು ತಾಗಿ ಕಾಮಧೇನು ಕೆಡುತ್ತದೆ. ಕೋಣನ ಡೋಣೆ [ಪಾಠಾಂ. ದೊಣೆ]ಗೆ ತಳ್ಳಿ ಕಾಮಧೇನುವ ಕಾಣದಂತೆ ಮಾಡು (ಕೋಲಶಾಂ. ೪೨-೩೨) : ಕೆಱೆ ಬಾವಿ ಬಗರಗೆ ಡೊಣೆ ಡೋಣೆ [ಪಾಠಾಂ. ಣೆ] ದೀರ್ಘಿಕೆಯೊಱತೆ ಕಾಲುವೆ ಬೆಂಚೆ ಪಳ್ಳ ಮೆಱೆದಿರುತಿಹವು (ಕುರಾಶಾಂ. ೪-೬೭) ; ಸುರಕುಜದ ತೋಪು ಸುರಧೇನುವಿನ ಹಿಂಡು ಸಿದ್ಧರಸ ತೀವಿರ್ದ ಡೋಣೆಗಳ ವ್ಯಾತದ ತಟಾಕಗಳು (ನಂದಿಮಾ. ೧೧-೧೦). ೨. ನಾಲ್ಕನೆಯ ಏಟ್ಟಪಯ್ಯಂಗಳ ಪ × × × ಸಿನಲು ಡೋಣೆಯಿಂ ಬಡಗಲು ಶಿವಾರ್ಚಕನ ವೃತ್ತಿಯ ಮತ್ತರು ೪ (ಕೂರ್ಗ್ಶಾ. ೮-೭೪ ; 1147). ೩. ಎರಡು ಕೊರಿಗೆಯ ಡೋಣೆಯ ಹೊಲವೊಂದು ಮಾತ್ರ ಉಳಿದಿದ್ದಿತು (ವಿಸರ್ಗ. ೨೬೨). 'ಡೋಣೆವಟ್ಟೆ' ಪರಾ. **ಧೊಣೆ**: ೧. "ಧುಣಾ=ಧೊಣೆ" (ಕಾಶಕ್ಕ. ೩೩).

**ದೋಣೆ$_{2}$** : ೧. ದೋಣೆಯ ತಿಳಿನೀರ ಕುಡಿದು (ಮುಹಾವಿ. ೭-೩೮); ಬೆಟ್ಟದ ಮೇಲಿನ ದೋಣೆಗಳಲ್ಲಿ ನೀರು ಬಹಳ ಗಲೀಜಾಗುವುದೆಂದು ತಿಳಿದಿದ್ದರಿಂದ ಹೀಗೆಮಾಡಬೇಕಾಯಿತು (ಜಂಗಾಳ್ಯ. ೩೪೮). ೩. 'ದೋಣೆವೋಗು' ಪರಾ. ೪. ತಗ್ಗಿನ ನೆಲ ; ಹಳ್ಳವಾಗಿರುವ ಹೊಲ,- ಗದ್ದೆ : ಸರ್ವನಮಸ್ಯ ಮಾಡಿ ಬಿಟ್ಟ ಮತ್ತರು ೧೦೦ ದೋಣೆಯಿಂ [ತೆಂ]ಕ ದೇ × × × ತೋಟ ಮತ್ತ ೨೭ (ಸೌಇಇ. XX, ೨೩-೨೨; 1029): ಕೇತಯ್ಯಂ ಬಿಟ್ಟ ದೋಣೆಯ ನೆಲ ಮತ್ತ[ರು ನಾ]ಲ್ವತ್ತು (ಸೌಇಇ. XI-1, ೮೩-೨೦ : 1049) : ಶ್ರೀಸೋಮೇಶ್ವರದೇವರ್ಗ್ಗೆ ತಮ್ಮ ಪ್ರಭುತ್ವದ ದೋಣೆಯಿಂ ತೆಂಕ ಒಡ್ಡವಾಡಿಗೆಯ ಬಟ್ಟೆಯಿಂ ಪಡುವ ಬಸ್ಡಿ ಚಿನ್ನಾಮಣೆಯ ಈಪ್ಪರ್ತ್ತೆಂಟು ಗೇಣ ಕೋಲಲು ತಮ್ಮಂ[ಶ]ಕ್ಕೆ ಬಂದ ಮತ್ತರಯ್ವತ್ತೇಳು (ಸೌಇಇ. XX, ೬೯-೪೪; 1107); × × × ಪೇಸ್ವರ ದೇವರ ೩ ದೋಣೆ × ಬೆಣ್ಣೆ × × × ದೇವ[ರು] ನದಿಯೊಱ[ವ]ಯ ಮಲ್ಲಿಕಾರ್ಜುನ [ದೇವ]ರು ಗುಂಡಿಯ ಹಳ್ಳಿಯ ರಾಮಂನಾಥದೇವ (ಸೌಇಇ. XI-1, ೩೦-೩೩ ; ಸು. 12ನೆಯ ಶತ). **ಧೊಣೆ** : ೫. ಬಾವಿ : ಸಾನ್ತರಸ . . . ಬಟರಿಜಿಗ್ಗೆ ಕೊಟಾರ್ ಧೊಣೆಗೊಡಲಾ ನರಡಿ ಇಬ್ಬು ಕೊಟಾರ್ (ಎಕ. VI, ಕೊಪ್ಪ. ೩೯-೪ ; ಸು. 700 ?).

**ದೋಣೆಗೆರೆ** = ಹೊಲ, ಗದ್ದೆಗಳನ್ನು ಉಳುವಾಗ ನೇಗಿಲಿನಿಂದ ಮಾಡುವ ಹಳ್ಳದ ಗೆರೆ ; ಸೀತೆಸಾಲು; ಉಕ್ಕೆಗೆರೆ,-ಸಾಲು : ದೋಣ ಗೆರೆಗಳಿಗೆ ಸರಿಯಾಗಿ ಪೈರನ್ನು ನಾಟಿ ಮಾಡುತ್ತಾ ಹೋಗುತ್ತಾರೆ (ರೂಢಿ). **ದೋಣೆಸಾಲು** = ದೋಣೆಗೆರೆ : ಉಳುವಾಗ ದೋಣೆಸಾಲುಗಳು ಒಂದೇ ಸಮನಾಗಿ ಮೂಡುತ್ತಾ ಹೋಗುತ್ತವೆ (ರೂಢಿ).
[ ದೇ.ಶ ತೆಲು. ದೊನ./ಸಂ. ದ್ರೋಣೀ ]

**ದೊಣೆ$_{2}$** 'ತೊಣೆ$_{2}$' ನೋ.

**ದೊಣೆನಾಯಕ, ಡೊಣೆನಾಯಕ** (ನಾ). ಕೆರೆ, ಕುಂಟೆಯ ಕಾವಲುಗಾರ; ದೊಣೆಯನ್ನು ಕಾಯ್ದುಕೊಂಡಿರತಕ್ಕವನು ; ದೊಣೆಯ ರಕ್ಷಕ : ಹೊಳೇ ನೀರು ಕುಡಿಯಕ್ಕೆ ದೋಣೇನಾಯಕನ ಅಪ್ಪಣೆ ಬೇಕಿಲ್ಲ (ಜಂಗಾಳ್ಯ. ೩೩೩). **ಡೊಣೆನಾಯಕ** : ಹರಿಯೋ ನೀರಿಗೆ ಡೊಣೆನಾಯಕನ ಅಪ್ಪಣೆ ಯೇನು (ಹುಟ್ಟಿಹ. ೦೨೩) : ಹೊಳೆಯ ನೀರಿಗೆ ಡೊಣೆನಾಯಕನ ಅಪ್ಪಣೆಯೇ ? (ಗಾದೆ). [ ದೊಣೆ$_{1}$ + ನಾಯಕ ]

**ದೊಣೆವೋಗು, ಡೊಣೆವೋಗು, ಡೋಣೆವೋಗು, ದೋಣೆಯೋಗು, ದೋಣೆವೋಗು** (ಕ್ರಿ). ಡೊಗರು ಬೀಳು ; ತಗ್ಗುಬೀಳು ; ಹಳ್ಳ ವಾಗು : ಪಿಸುಟ್ಟಿ ಕಿಟ್ಟಿಸ್ರಿಡೆಯುಂ ಕಣೆವೋದ ಕಣಕಾಲುಂ ದೊಣೆ [ಪಾಠಾಂ. ಡೊಣೆ, ದೋಣೆ]ವೋದ ಮೇಗಾಲುಂ ಪಱಿದು ಪಾಯ್ದ ಪಂದಲೆಗಳುಂ (ಪಂರಾಮಾ. ೧೩-೫೪ ವ). **ಡೊಣೆವೋಗು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ಡೋಣೆವೋಗು** : ಕುಮತಿ ಸಿದ್ಧಾಂಜನದಿನೊಡೆದೊಂದು ಕಣ್ಗಳಿಂ ತಱಿದುಕೊಳೆ ಡೋಣೆವೋಗಿರ್ದ ಪೆರ್ಬುಣ್ಗಳಿಂ (ಕಾದಂಬ. ೨೭೦ ಕಗಳ). **ದೋಣೆಯೋಗು** : ೭೦ತು ಚಕ್ರಹತಿಯಿಂ ದೋಣೆಯೋದ [ಪಾಠಾಂ. ವೋದ] ರಣಕ್ಷೋಣಿಯಂ . . . ರಥಗಳಟ್ಟಿಗಳೆಂಬ ಬೆಟ್ಟುಗಳಿಂ ಪೂಟ್ದು ಸಮತಳಂ ಮಾಡಿ

(ಶಾಶ ೯ಪು. ೩-೧೨೦ ವ). **ದೋಣಿವೋಗು** : ಒಡೆದಿರ್ದುಗಿಯಾಗಿ ಪೋಟ್ಟು ನೀರೇಱಿದ ನಾಳಿವುಣ್ಣಡೆದು ಸೌಳಿನ ಸೀಳ್ದುದು ದೋಣಿವೋಪಿನಂ [ಪಾಠಾಂ. ದೋಳಿವೋಪಿನಂ] (ಸುಕುಮಾ. ೫-೧೭) ; ತನು ದೋಣಿವೋದುವು ನೆತ್ತರ್ ಕೊಡನೆತ್ತಿ ಸುರಿವವೊಲ್ ಸುರಿದು (ನೇಮಿಪು. ೧೧-೧೭೩).

[ ದೋಣಿ₁ + ಪೋಗು₁ ]

**ದೊಣ್ಣೆ₁**, **ಡೊಣ್ಣೆ₁** (ನಾ). ೧. ದಪ್ಪವಾದ ಕೋಲು; ದಂಡ: ಲಗುಡ : ಕೈಯಲ್ಲಿ ದೊಣ್ಣೆ [ಪಾಠಾಂ. ದಾಣೆ] ಮನದಲ್ಲಿ ಕ್ರೋಧ ವಚನದಲ್ಲಿ ಕಿಂಕಿಲ ಲಿಂಗದ ವಾರ್ತೆ ನಿನಗೇಕೆ (ಅಪಶಂ. ೨೬೫-೧೨೬೩) ; ಮಂದರಗಿರಿಯನೆತ್ತುವಡೆ ನುಗ್ಗೆಯ ದೊಣ್ಣೆಯಿಂದ ವಿಾಂಟಬಡೇಳುವುದೆ (ಪೋಹಕ. ೨೯-೫೪) ; ನೂತನ ಕತ್ತಿ ಕಠಾರಿ ದೊಣ್ಣೆಯ ಸಾಧಕೋತ್ತಮ ರಾಜಕುವರರು (ಕಂನವಿ. ೭-೧೪) ; ನಾನೆಷ್ಟು ಮುದುಕನಾದೊಡುವೆನಗೆ ಬ್ರಹ್ಮಾಂಡಕಾನದೊಳಗೆಲ್ಲೆಲ್ಲಿಯುಂ ತಿರುಗುವದು ತಪ್ಪದೇನಂ ಮಾಡಲು ಶಕ್ತಿ ಕುಂದಿರ್ಪುದೆಂದೂರಿಕೊಂಡಿರ್ಪ ದೊಣ್ಣೆಯೆಂದು (ಅರ್ಜಾವಿ. ೧-೮೫) ; ಈ ಡಕಾಯಿತರ ಕಥೆಗೆ ಸೂಕ್ತವಾಗಿರುವಂತೆ ಇದರಲ್ಲಿ "ಆ ಕಾಲದ ಪೀನಲ್ ಕೋಡಾಗಿದ್ದ" ದೊಣ್ಣೆಯ ಸ್ತೋತ್ರ ಬರುತ್ತದೆ (ಬಂಕಿಮ. ೨೯೪) ; ಕುಂಬಾರನಿಗೆ ವರುಷ, ದೊಣ್ಣೆಗೆ ನಿಮಿಷ (ಗಾದೆ) ; ಕಂಕುಳಲ್ಲಿ ದೊಣ್ಣೆ ಕೈಯಲ್ಲಿ ಶರಣಾರ್ಥಿ (ಗಾದೆ). (ಗು). ೨. ದಪ್ಪವಾದ; ದೊಡ್ಡದಾದ. 'ದೊಣ್ಣೆಮುಳ್ಳು' ಪರಾ. **ಡೊಣ್ಣೆ₁** : ೧. ಗಿಡುಗನ ಉಡು ನುಂಗಿ ಹೊಡೆವವನ ದಡಿ ನುಂಗಿತ್ತು . . . ಗಿಡುಗನ ಉಡುವ ಹೊಡೆವವನ ಡೊಣ್ಣೆಯ ಬಾಯಿಲ್ಲದ ಇರುಹೆ ನುಂಗಿತ್ತ ಕಂಡೆ (ಅಕೆ೦ಮಾ. ೧೯೭-೧೭೧) ; ಡೊಣ್ಣೆಯೊಳು ಚಚ್ಚಿ ಕೆಲವು ಮೃಗಗಳ ಕೊಂದನು (ನೇಮಿಸಂ. ೨-೫೦) ; ಅಣ್ಣಾತಮ್ಮಂದಿರಿನ್ನು ಜಗದೊಳಿದ್ದವರೆಲ್ಲ ಡೊ[ಪಾಠಾಂ. ದೊ]ಣ್ಣೆಯೊಳ್ಪಡಿದಾಡದಿಹರೆ (ಭರತ. ೪೮-೫೪) ; ಡೊಣ್ಣೆಗಳನ್ನು ಹಿಡುಕೊಂಡು ಬಂದು ಆ ಮೃಗವನ್ನು . . . ಕೊಂದುಬಿಟ್ಟರು (ಮುಂಬಯಿ. ೪-೪೨). ೨. 'ಡೊಣ್ಣೆಮುಳ್ಳು' ಪರಾ. ೩. ಟೊಣಪ : (ಕಿ) **ದೊಣ್ಣೆ ಭಾಗವತ** = ಸೋಮಾರಿ; ಲವಲವಿಕೆಯಿಲ್ಲದವನು ; ಕೂತ ಕಡೆಯೇ ಕೂತಿರುವವನು : ಹೊತ್ತಿಗೆ ಮುಂಚೆ ಏಳದ ದೊಣ್ಣೆ ಭಾಗವತನಂತೆ ಬಿದ್ದು ಕೊಂಡಿರುತ್ತಾನೆ (ರೂಢಿ).

[ ದೇ.೫ ತುಳು. ದೊಣೆಲ್, ಡೊಣ್ಣೆ ; ಕೊಡ. ದೊಣ್ಣೆ; ಕೊಲಾ. ದೊಣ್ ]

**ದೊಣ್ಣೆ₂** 'ತೊಂಡೆ₁' ನೋ.

**ದೊಣ್ಣೆಕಾಟ** 'ತೊಂಡೆಕೇತ' ನೋ.

**ದೊಣ್ಣೆಗ**, ಡೊಣಗ, ಡೊಣ್ಣೆಗ (ನಾ). ೧. ಟೊಣಪ; ದಡಿಗ: ಶಿವಕಥಾಮೃತರಸವ ದೊ[ಪಾಠಾಂ. ಡೊ]ಣ್ಣೆಗರ್ ಕವಟಾಂಧನರರಱಿವರೇ ಪರಮಸತ್ಯವಿಗಳಱಿವಂದದಿ (ರಾಘವ. ೦-೧೯). **ಡೊಣಗ** : ೧. ಈ ಡೊಣಗಕ್ಷತ್ರಿಯಾಧಮನು ಅವರೆಲ್ಲರನ್ನು ಮೂರ್ಖರಲ್ಲಿ ಎಣಿಸಿ, ನಮ್ಮನ್ನು ಶಿಕ್ಷಿಸಬಂದಿರುವನಲ್ಲ (ಧಾಮ್ಸ್ರ. ೨೧೯). ೨. ಪುರುಷನ ಜನನೇಂದ್ರಿಯ: ರಣದೊಳು ಜಯುವಧೂಟಿಯ ಮುಂದೆ ನಿನ್ನಯ ಡೊಣಗನ ಬಿಟ್ಟುಕೊಂಡಿರಲು ಅಣಕವಾಡುವರಪ್ಸರಗಣಕೆಯ ರೆರೆ ರಣಭೀಡ ಹೋಗೆಂದು ನುಡಿದ (ಮೋಹತ. ೩೯-೪). **ಡೊಣ್ಣೆಗ** : ೧. ಮೇಲಿನ 'ದೊಣ್ಣೆಗ' ಉಲ್ಲೇಖಕ್ಕೆ ಕೊಟ್ಟಿರುವ ಪ್ರಯೋಗದ ಪಾಠಾಂತರವನ್ನು ನೋಡಿ. [ ದೊಣ್ಣೆ₁ + -ಗ₃ ]

**ದೊಣ್ಣೆಮುಳ್ಳು**, ಡೊಣ್ಣೆಮುಳ್ಳು (ನಾ). ದಪ್ಪವಾದ ಮುಳ್ಳು ; ದೊಡ್ಡ ಮುಳ್ಳು : (ಕಿ). **ಡೊಣ್ಣೆಮುಳ್ಳು** : ಎಣ್ಣೆ ಬಲು ಕಾಸಿ ಕಣ್ಣೊಳಗೆ ಸುರಿದಂತೆ ಡೊಣ್ಣೆಮುಳ್ಳುಗಳು ನಟ್ಟಂತೆ (ಕನ್ನಜಾ. ೨೩೯).

[ ದೊಣ್ಣೆ₁ + ಮುಳ್ಳು (<ಮುಳ್) ]

**ದೊಣ್ಣೆಮೂಗು**, ಡೊಣ್ಣೆಮೂಗು (ನಾ). ದಪ್ಪವಾದ ಮೂಗು : ಆವಳದು ದೊಣ್ಣೆಮೂಗು, ಲಕ್ಷಣವಾಗಿಲ್ಲ (ರೂಢಿ). **ಡೊಣ್ಣೆಮೂಗು** : ಗುಳ್ಳಗಣ್ಣು ಮತ್ತು ಡೊಣ್ಣೆಮೂಗು ಇರುವವಳೇನು ?(ಪೋಹಿನಿ. ೨೮).

[ ದೊಣ್ಣೆ₁ + ಮೂಗು₁ ]

**ದೊಣ್ಣೆಮೆಣಸಿನಕಾಯಿ**, ಡೊಣ್ಣೆಮೆಣಸಿನಕಾಯಿ (ನಾ). ಹೆಚ್ಚು ಖಾರವಿಲ್ಲದಿರುವ, ದಪ್ಪವಾಗಿಯೂ ದುಂಡಗೂ ಇರುವ ಒಂದು ಬಗೆಯ ಮೆಣಸಿನಕಾಯಿ ; ದಪ್ಪಮೆಣಸಿನಕಾಯಿ ; ಈ ರುಚಿಯಾಗಿರುವುದರಿಂದ ಹೆಚ್ಚಾಗಿ ಇದನ್ನು ತರಕಾರಿಯಾಗಿ ಉಪಯೋಗಿಸುತ್ತಾರೆ : ದೊಣ್ಣೆಮೆಣಸಿನಕಾಯಿಯ ಬೋಂಡ ಬಹಳ ರುಚಿಯಾಗಿರುತ್ತದೆ (ರೂಢಿ). **ಡೊಣ್ಣೆಮೆಣಸಿನಕಾಯಿ** : ಮೆಣಸಿನಕಾಯಿ ಡೊಣ್ಣೆಮೆಣಸಿನಕಾಯಿ ಶಾವಿ ಹುಣಸೀಯಕಾಯಿ ಹುಳಿವಲ್ಯ ದಾಸೋಹಕೆ ಹಣ್ಣುಗಳ ತಂದಿಹರು ತರತರದ (ಸಿದ್ಧಪು. ೧೭-೪೪) ; ನಾನೇನು ನಿಮ್ಮ ಕೈತೋಟದಲ್ಲಿ ಬೆಳೆದ ಬದನೆಕಾಯಿಯೇ, ಚಳ್ಳವರಿಯೇ, ಡೊಣ್ಣೆಮೆಣಸಿನಕಾಯಿಯೇ (ಇಪ್ಪತ್ತ. ೨೧೩). [ ದೊಣ್ಣೆ₁ + ಮೆಣಸಿನಕಾಯಿ ]

**ದೊದಿಪಂದಿಗಲಿ** (ನಾ). ಒಬ್ಬಾತನ ಹೆಸರು : ಪಟ್ಟಬ್ಗಟ್ಟದ ಮೂರನೇ ವಂಷದನ್ನು ದಾವರಬ್ಗದ ದೊದಿಪನ್ದಿಗಲಿಯು ಕಲ್ಲೂರಂ ಕಬೂರು ಮೊಳನಿಕೆ ಕರ್ಪೂರ . . . ತುಱುವನಿಕ್ಕಿಸಿ ಮುಗುಱ್ದು ಬರುಕಿಟ್ಕೊಡೆ (ಎಕ. XII, ತಿಪಟೂ. ೦೦-೪ ; ಸು. ೯೩೦ ?). [ ? ]

**ದೊದ್ದಿ** (ನಾ). ಒಂದು ಬಗೆಯ ಗಿಡ : "ಶಂ(ಕ)ಖರ್ಣಿ-ದೊದ್ದಿ, ಕತ್ರೆ" (ಓಷಧಿ. ೧೭೦). [ ? ]

**ದೊದ್ದೆ₁**, ದೊದ್ದೆಯ (ನಾ). ೧. ಗುಂಪು ; ಸಮೂಹ : ಎನಿತು ದೇವರದೊದ್ದೆ ಹಿಂಡುಗೊಳ್ಳದು ನೆನೆಯ (ರುದ್ರಕ. ದೇ. ೨೦೭-೦೪) ; ಎತ್ತ ನೈರುತಿಗೀರುತಿಗೀವರೆತ್ತ ಜಲಧಿವಗಿಲಧಿಪಂ ಘಡಯೆತ್ತ ಪವನಂಗಿವನ ದೊದ್ದೆಗೆ ಹೊದ್ದಲೇಸಲ್ಲಿ (ಸಾಸಂಕ. ೯-೦೩) ; ದೊದ್ದೆ ತೆಗೆಯಲಿ ಪಾರ್ಥ ಪವನಜರಿದ್ದರಾದರೆ ಬರಲಿ ಸಮರವ ಹೊದ್ದಲಾಪರೆ ಹೊಗಲಿ ಹರಿ ತೋಱಲಿ ಸಹಾಯತೆಯ (ಕುಮ್ಮಾಭೀ. ೮-೨೧) ; ಎದ್ದಾ ನೃಪಂ . . . ನಿರ್ಮಲತಪಸ್ವಿಗಳ ನಿಶ್ಚಲಹೃದಯ ಮಧ್ಯಪಂಕೇಜಾತದ ಗದ್ದುಗೆಯೊಳಿಪ್ಪ ಚಿದ್ರೂಪನಂ ಜಗವಱಿಯೆ ದೊದ್ದೆಯೊಳ್ಮಾಡಿ ತೇಗುರ್ಗಿದುರೆಯುಂ ಪೊಡೆವುದುಂ ಪೊದ್ದಿಸಿದ ಪಾರ್ಥನಾರಿದರರೊಳಿನಲರ್ಜುನಂ ಬಂದಾತನಂ ಕಂಡನು (ಜೈಮಿಭಾ. ೫-೯). ೨. ಗದ್ದಲ ; ದೊಂಬಿ ; ಗಲಭೆ ; ಗೊಂದಲ : ನೆಱೆ ಕೂಗುವ ಕೊಳರ್ವಕ್ಕಿಯ ದೊದ್ದೆ [ಪಾಠಾಂ. ಡ್ಡಿ]ಯ ಪೞಯೊಪ್ಪ ಮಱದುಂಬಿಗಳ ಗಱಿಯ ಝುಂಕಾರಸುಸ್ವರ ಪೂರಿತ ಮಹವುರುಮೆಗಳೞಿಚಿದವಾಗ (ಪೋಹತ. ೬-೦೭). ೩. ಸೈನ್ಯ; ಪಡೆ ನೆರೆದ ದೊದ್ದೆಯನೊರಸಬಹುದೇನೆನಿದು . . . ಗಹನವೆ ನಿನ್ನ ವೀರರಿಗೆ (ಕುಮ್ಮಾಭೀ. ೧-೬) ; ಧಾತುಗೆಟ್ಟುದು ದೊದ್ದೆಯೆಂದೇ ಭೂತಳಾಧಿಪ ಬಗೆಯದಿರು (ಕುಮ್ಮಾದ್ರೋ. ೧೭-೦೩) ; ತವರು ದೊದ್ದೆಯ ಹೊಗಿಸಬೇಡು ಳಿದವರನೇಂದೊಳಪೊಗುತ ನೇಮುವನವಸರದ ಸೇವಕರಿಗಿತ್ತು (ತೊರರಾ. ೨-೨-೨೩) ; ಗದ್ದೆಯ ಗೊರವನೊಳ್ ಕಡಿದಾಡಿ ಪೊಗರುವೆತ್ತಿದ್ದೆ ನೀ ರಣರಂಗದೊಳಗೆ ಬಿದ್ದೆಯ ನನ್ನ ದಾಳಿಗೆ ಕೃಷ್ಣ ಕರೆ ನಿನ್ನ ದೊದ್ದೆಯ ನಿಲಲೊಲ್ಲಗಿರಿದು (ಮೋಹತ. ೪೦-೦೮) ; ಇಂತು ದೊದ್ದೆಯ ಹೊಯ್ಲಿನಿಂ ಕ್ಷಿತಿಯಂತರದಿ ಮಡುಗಟ್ಟಿ ನೆತ್ತರ ಸಂತತಂ ಪರಿಯಲ್ಕೆ (ಅರ್ಜಾವಿ. ೬-೭೯). **ದೊದ್ದೆಯ** : ೧. ಗೆದ್ದುದ್ದೇ ರಣವೆಲಪೂ ದಿವಿಜರ ದೊದ್ದೆಯದ ಸೂಳೆಯರ ಚೌರಿಗೆ ಬಿದ್ದಿನರ ವೀಳೆಯದ ಬಡಗರು ಭಟರ ಮೋಡಿಯಲಿ (ಕುಮ್ಮಾಉ. ೧೯-೨೩).

**ದೊದ್ದೆ₂** (ನಾ). ಉಗ್ಗು ; ತೊದಲುಮಾತು : (ಕಿ).

[ ದೇ.೫ ತುಳು. ದೊದ್ದೆ, ಗೊದ್ದೆ ]

**ದೊದ್ದೆಕಾಟ** (ನಾ). ಕೋಲಾಹಲವನ್ನುಂಟುಮಾಡುವವನು ; ಗೊಂದಲವನ್ನುಂಟುಮಾಡುವವನು ; ತೊಂದರೆಯನ್ನುಂಟುಮಾಡುವವನು: ಗುದ್ದುಗಳ ಮಳೆಗರೆಯೆ ಕೌರವ ದೊದ್ದೆಕಾಟನು ಕಾಣನವನನು ಹೊದ್ದಿಸಿದ ಹೊಲದತ್ತ ಬುತ್ತಿಯನುಂಡು ನಿಂದಿದನ (ಸಂಭಪ. ೨೩-೭೦).
[ ದೊದ್ದ$_1$ + – ಕಾಟ ]

**ದೊದ್ದೆಗ** (ನಾ). ೧. ಸೈನಿಕ: ಇದ್ದರಟುವತ್ತಾಱುಕೋಟಿಯ ದೊದ್ದೆಗರು ಮುನ್ನಮೃತಮಥನದಲ್ಲಿದ್ದವರು ಮತ್ತಲ್ಲಿ ದೇವಾಸುರರ ಕದನದಲಿ (ಸಂಭಪ. ೮-೧೦೫); ಎಲೆಲೆ ದೊದ್ದೆಗರೇಕೆ ಕೊಬ್ಬಿದರಳವನಱಿಯದೆ ನುಗ್ಗುವಂಬಿದರೆ ದಳದ ದೊರೆಗದು ಭಂಗವೇ ಬಾಹಿರನ ಹೊಯ್ಕನುತ (ಕುವ್ಯಾದ್ರೋ. ೧೬-೨೯) : ಅದ್ದಲಿಸಿದುದು ತಲೆ ರಘೂತ್ತಮನಿದ್ದ ಠಾವನು ಹೇಳೆನುತ ಕಪಿ ದೊದ್ದೆಗರನಱೆಯಟ್ಟಿ ಕೊಲುತಿಟ್ಟಣಿಸಿತಿದಿರಿನಲಿ (ಮೂರರಾ. ೬-೨೮-೬೦) : ದೊದ್ದೆಗರೇಕೆ ಹೊಕ್ಕರು ಕೊಲ್ಲುಕೊಲ್ಲೆಂದು ಹೆದ್ದೊರೆ ದೈತ್ಯರೆಯ್ದಿದರು (ಮೋಹತ. ೩೫-೧೮) : ತುಳುನಾಡಿನರಸು ದೊದ್ದೆಗರ ತುಳಿಸುತೆಯ್ದಿ ತುಳಿಲುಗೈದನು ಚಕ್ರಧರಗೆ (ಭರಚ. ೨೨-೫೯) : ದಾನವರ ಬಲದ ನೆರೆದ ದೊದ್ದೆಗರಾನಲರಿಯಾದೋಡಲ್ ಕಂಡು ದುರುಳಬಲ ಶುಂಭ ಧೂಮ್ರಾಕ್ಷವೃತ್ರಾದಿಗಳ್ ಕೈಕೊಂಡರಾಹವವನು (ಚಬಪು. ೨೬-೨೨). ೨. ಸಾಮಾನ್ಯಜನ ; ನಾಡಾಡಿ : ದೊದ್ದೆಗರು ರಕ್ಕಸನ ಕಾಣುತ ಕದ್ದು ಹಾಯ್ದರು ಜನಕ ಚಿಂತಯಲಿದ್ದನವ ನಡೆತಂದನುಗ್ಗಡಣೆಯ ನಿನಾದದಲಿ (ತೊರರಾ. ೦-೧೫-೧೦) : ಮುದ್ದಿಸುತಿಹರು ಮಕ್ಕಳನವು ತೊಡೆಯ ಮೇಲಿದ್ದಂತೆ ಮಲವ ಬಿಡುವುವು ಎದ್ದು ವಸ್ತ್ರವ ಹಾಕಿ ಹೇಸುತಿಹರು ಥೀ ಥೀ ದೊದ್ದೆಗರೆನೆ ನಕ್ಕರವರು (ಭರಚ. ೬೫-೩೦): ಮದ್ದಳೆಯ ಗತಿಗೆ ಜಘನಗಳೆದ್ದಾಡಲು ನಗುತ ಕಂಡು ಲಾಲಿಪರಲ್ಲದೆ ಪದ್ಯ ಪದ ಕಾವ್ಯದರ್ಥವ ದೊದ್ದೆಗರೇಂ ಬಲ್ಲರೆಂದ ಚೂಡಾರತ್ನ (ನೀತಿಸಾ. ೬೩). [ದೊದ್ದ$_1$ +–ಗ$_2$]

**ದೊದ್ದೆಗವಿಸು** (ಕ್ರಿ). ಗುಂಪಾಗಿ ಮುತ್ತುವಂತೆ ಮಾಡು ; ಆಕ್ರಮಣ ಮಾಡಿಸು : ಎದ್ದು ತಾನೈತಂದು ಸೇನೆಯ ದೊದ್ದೆಗವಿಸಿದ ಮುನಿವ ರಾಶ್ರಮಕೆದ್ದು ಗೃಹಮಂಡಲವ ಕೊಂಡರು ಸೂಱೆಗರಂ ನೃಪನ (ಸಂಭಪ. ೨೬-೨೦). [ ದೊದ್ದ$_1$ + ಕವಿಸು ]

**ದೊದ್ದೆಗೂಳು** (ನಾ). ರಾಶಿಗಟ್ಟಲೆಯ ಕೂಳು,–ಅನ್ನ: ದೊದ್ದೆಗೂಳಿನ ಮೈಸಿರಿಯ ಬಲು ಬಿದ್ದನಿಕ್ಕುವ ಭೂತ ಪವಮಾನಜನ ಕಿಬ್ಬರಿಯ ಗುದ್ದಿದರೆ ಕಲಿಭೀಮನದಕುಬ್ಬೆದ್ದು ಗೋಣನು ತಿರುಹಿ ಬಸುಱೊಳಗದ್ದಯಿಸಿ ಯರೆದರೆದು ಕಾಲಲಿ ತಿಕ್ಕಿದನು ಭೀಮ (ಕುವ್ಯಾವಿ. ೭೦೪. ೯-೬೦).
[ ದೊದ್ದ$_1$ + ಕೂಳು$_2$ (<ಕೂಟ್$_1$) ]

**ದೊದ್ದೆಯ** 'ದೊದ್ದೆ'$_1$ ನೋ.

**ದೊದ್ದೆವೋಗು** (ಕ್ರಿ). ಗಲಭೆಯಾಗು ; ಕೋಲಾಹಲವುಂಟಾಗು : ಹೊದ್ದದೊಬ್ಬೊಬ್ಬರು ಕಲಹವಾಗೆದ್ದು ತಾವಿಱಿದಾಡಿದರು ಪುರಿ ದೊದ್ದೆವೋದಂದು ಹುಟ್ಟಿದುದು ವಿಪರೀತವದಱೊಳಗೆ (ಬಸಪು. ೬೦-೩೬).
[ ದೊದ್ದ$_1$ + ಪೋಗು$_1$ ]

**ದೊನಪುರ** (ನಾ). ಒಂದು ಊರಿನ ಹೆಸರು : ನೊಮ್ರ್ಗಡಿ ಚೋಟಂ ನವಲಖ(ಖ್ಯ)ಬಲಂಬೆರಸು ಬಂದು ದೊನಪುರದೊಳ್ ಬಿಟ್ಟಿಟ್ಟು ದೇಸ(ಶ)ವೆಲ್ಲವಂ ಸೂಱೆಗೊಣ್ಡು (ಎಇ. XVI, ೬೪-೨ ; 1007).
[ ? ಇದು 'ದೋನಪುರ' ಅಥವಾ 'ದ್ರೋಣಪುರ' ಎಂಬುದರ ಅಪಲಿಖಿತ ವಿರಬಹುದೇ ? ]

**ದೊನ್ನಮಾರ** (ನಾ). ಒಬ್ಬಾತನ ಹೆಸರು : ಶ್ರೀರಾಮರಾ ರಾಮಡಿನಾಡು ಮೂನೂಱು ನಾಣ್ಡರಸಾ ಆಳೆ ಅವರ ಮಗನ್ದೊನ್ನಮಾರನ್ ಬೊಱದ ನಚ್ಚುಯನ್ನೊಳ್ಬಟ್ಟು (ಎಕ. X, ಗೋರಿಬಿ. ೬೬-೩ ; ಶು. 750).
[ ದೊನ್ನ ? + ಮಾರ ]

**ದೊನ್ನೆ** (ನಾ). ಬಾಳೆಯ ಅಥವಾ ಅಡಿಕೆಯ ಪಟ್ಟೆಯಿಂದ ಮಾಡಿದ ಬಟ್ಟಲು ; ಎಲೆಬಟ್ಟಲು : ಮೃದುತರವೆನಿಪ ಪರಿಮಳಿಪ ಹೊಸ ಖಂಡಂಗಳಂ ಸವಿಗೊಳುತ ಪುಳುಕಿಸಿ ಹೊಲಿದ ದೊನ್ನೆಯೊಳಿರಿಸಿ ಬಾಸಣಿಸಿ (ಬಸಪು. ೧೮-೨೯) ; ದೊನ್ನೆಗಳ ಹರಹಿ ಬಾಳೆಲೆಹಾಳೆಯುಂ ಹಾಕಿ ಬಿನ್ನಣದಿ ಮಾಡಿದಾ ಚೌಕದೆಡೆಗಳ ಮುಂದೆ . . . ಕುಳ್ಳಿರ್ದು (ಸಮ್ಮಕೌ. ೬-೨೩); ಮತ್ತದಕೆ ಹಾಲು ನೀರೆಱೆದು ಸಂಪಳಿಗಲಿಸಿ ಎತ್ತರದ ಮೇಲೆ ದೊನ್ನೆಯನಿರಿಸಿ ತುಪ್ಪವಂ ಹತ್ತದಂದದಿ ತೊಡೆದು ಹೊಯ್ದುಕೊಂಡದನಿಡ್ಡಲಿಗೆಯಂತೆ ಬೇಯಿಸುವುದು (ಸೂಶಾ. ೬-೬) ; ಸಣ್ಣಸುಚ್ಚು ಇಟ್ಟುಕೊ ಗೊಡ್ಡುಳಿ ಕಾಸಿಕೊ ದೊನ್ನೆಯೊಳಗೆ ತುಪ್ಪ ಬಡಿಸಿಕೊ (ಪುರಂದ. ೩-೧೮೭-೬) ; ನಳಿನದಳದ ದೊನ್ನೆಯೊಳು ಶಾಂತೋದಕವ ಮೊಗೆದು ಪಾಸಂಗೈಸಿ (ನವಮೋ. ೬-೬೦) : ಅಡಕೆಯ ಹಾಳೆಗಳಿಂದ ಐದಾರು ದೊಡ್ಡದೊಡ್ಡ ದೊನ್ನೆಗಳನ್ನು ಹೊಲಿದರು (ಕಳಹು. ೬೫).
[ ದೇ.? ತಮಿ. ತೊನ್ನೈ ; ಮಲ. ದೊನ್ನ ; ತುಳು. ತೆಲು. ದೊನ್ನೆ; ಕೊಇ. ಡೊನೊ ; ಕುವಿ. ದುನ್ನೋ ]

**ದೊಪ್ಪನೆ** (ಅ). ದೊಪ್ಪೆಂದು ಶಬ್ದವಾಗುವ ಹಾಗೆ: ರಂಗಮಂಟಪದೊಳು ದೊಪ್ಪನೆ ಬಿದ್ದು (ಲಸರ. ೨-೫೦) ; ದೊ [ಪಾಠಾಂ. ತೊ]ಪ್ಪನೆ ಕೆಡೆಗು ದನಿಗೊಟ್ಟು ಕರೆದು ಕರಂ ಮುಗಿದು ಹೊಡಮಟ್ಟು ಗಿಣ್ಣಲನಂತು ನೂಕುಗು ಮತ್ತೆ ಮುಂದಿಡುಗು (ಬಸಪು. ೦೪-೧೮) ; ತನ್ನ ಬಾಯಂ ಹೊಯ್ದುಕೊಳುತಂ ತನ್ನ ಶೋಕಾಕ್ರಾಂತದಿಂದಂ ತನ್ನ ತಾ ಮಱೆದಿಂತು ದೊ[ಪಾಠಾಂ. ಧೊ]ಪ್ಪನೆ ಕೆಡೆದು ನೆಲದಲ್ಲಿ (ಬಸಪು. ೪೫-೬) ; ನೆಲಕೆ ದೊಪ್ಪನೆ ಹಾಯ್ದುಕೊಂಡನು (ಕುವ್ಯಾಕ. ೧೫-೨೭): ದೊಪ್ಪನೆ ಎಚ್ಚರ ತಪ್ಪಿ ಬಿದ್ದಳು (ಬಂಕಿಮು. ೦೮೧).

**ದೊಪ್ಪದೊಪ್ಪನೆ, ದೊಪ್ಪುದೊಪ್ಪನೆ** (ದ್ವಿರುಕ್ತಿ): ದೊಪ್ಪದೊ [ಪಾಠಾಂ. ತೊಪ್ಪತೊ]ಪ್ಪನೆ ಒರಿಯ ಕಲ್ಲೊಳು ತಪ್ಪಲಿಡುತಂ ಸೋಹುತಂ ಹರಿತಪ್ಪ ಕೆಲವಾಡುಗಳನು . . . ಹೊಡೆದು (ಬಸಪು. ೨೦-೧೪) : ಶೂಲೆ ಬಾಧಿಸುತಿಪ್ಪ ಸಂಕಟಕಾಲದಿಳೆಯೊಳು ದೊಪ್ಪದೊ[ಪಾಠಾಂ. ತೊಪ್ಪತೊ]ಪ್ಪನೆ ಕೆಡೆದು ಹೊರಳುತ್ತ ಮಿಗೆ ನರಳುತಿರಲು (ಬಸಪು. ೪೯-೨೬): ದೊಪ್ಪುದೊಪ್ಪನೆ ಪಜ್ಜೆಯಿಡುವಳು ದುಗುಡವ ಸೊಪ್ಪುಸೊಪ್ಪನೆ ತುಳಿಪಂತೆ (ಭರಚ. ೧೩-೬೫).
[ ದೊಪ್ಪು + – ಅನೆ$_1$ ]

**ದೊಪ್ಪು** (ನಾ). ಒಂದು ಅನುಕರಣ ಶಬ್ದ : ಬೆರಸಿ ಪದಾತಿ ನೆಕ್ಕುನೆರಿಲೆಂಬ ನೆಳಿಲ್‌ನೆಳಿಲೆಂಬ ಘಾರು ಘರ್ಘರ ಘರಿಲೆಂಬ ದೊಪ್ಪು ದೊದಲೆಂಬ . . . ನಿಷ್ಠುರರವಂ ಮಿಗೆ ತಳ್ತಿಱಿದತ್ತು ಯುದ್ಧದೊಳು (ಗಿರಿಕ. ೬-೬೮).

**ದೊಪ್ಪುಟು** (ನಾ). ಒಂದು ಬಗೆಯ ಹುಳು: ಸ್ಪರ್ಶರಸಮೆರಡುಮನಱಿವ ಶಂಖ ಶುಕ್ತಿ ಗುಳ್ಳೆ ಗುಬ್ಬಿ ನಾಯಿನೊಳಲೆ ದೊಪ್ಪುಟು ಗೊಣ್ಣೆಹುಟು ಕ್ರಿಮಿ ಮೊದಲಾದುವೆಲ್ಲಱೊಳಂ (ಜಸಾರ. ೪೯). [ ? + ಪುಟು ]

**ದೊಪ್ಪೆ** 'ಡೊಪ್ಪೆ' ನೋ.

**ದೊಪ್ಪೆಗಿವಿ** (ನಾ). ದೊನ್ನೆಯಂತೆ ಅಗಲವಾಗಿರುವ ಕಿವಿ : ಕೈಕಾಲುವತಿ ತೋರ ದೊಪ್ಪೆಗಿವಿ ದನಿ ಕಾಕು (ಕಕ್ರೋಶ. ೨-೧೬).
[ ದೊಪ್ಪೆ (<ಡೊಪ್ಪೆ) + ಕಿವಿ$_2$ ]

**ದೊಪ್ಪೆನ್** (ಕ್ರಿ). ದೊಪ್ಪೆಂದು ಶಬ್ದಮಾಡು : ಘಾಯವಡೆದಾನೆಗಳು ಗುಳವನು ಹಾಯಿಕಲು ನೆಲಕುರುಳಿದವು ವಾನಾಯುಜಂಗಳು ಬಿಗುಹ ಬಿಡೆ ದೊಪ್ಪೆಂದವಾಚೆಯಲಿ (ಕುವ್ಯಾಕ. ೫-೪) ; ತಲ್ಲಿಂಗಮುಂ ಕಂಡು ಕೋಪಾವೃತಚಿತ್ತಂ ಬೇಗದಿಂ ಕೈಗೊಡಲಿಯನಧಟಿಂದೆತ್ತಿ ಹಾಯ್ದುಕ್ಕಿದಂ ತಕ್ಷಿತನಂ ದೊ[ಪಾಠಾಂ. ಧೊ]ಪ್ಪೆಂದು ಮುಂಡಂ ಕೆಡೆಯೆ ತಲೆ ಕರಂ ಬೀಳ್ವನಂ (ಶ್ರೃಷವಿ. ೬-೧೬). [ ದೊಪ್ಪು + ಎನ್$_1$ ]

**ದೊಬ್ಬಿಕೆ** (ನಾ). ದಬ್ಬುವುದು; ನೂಕುವುದು: ಅನಿರೀಕ್ಷಿತವಾದ ಈ ದೊಬ್ಬಿಕೆಯಿಂದಾಗಿ ಅನಂತನ ಹೆಜ್ಜೆ ತಪ್ಪಿಹೋಗಿ ಅವನು ಮುಗ್ಗರಿಸಿ ಬಿದ್ದನು (ಒಡ್ಡಿಉ. ೧೨೭). [ ದೊಬ್ಬು (<ದಬ್ಬು₁) + – ಇಕೆ ]

**ದೊಬ್ಬಿಸು** 'ದಬ್ಬಿಸು' ನೋ.

**ದೊಬ್ಬು** 'ದಬ್ಬು₁' ನೋ.

**ದೊಬ್ಬುಳಿ** 'ದಂಪ್ಪಳ' ನೋ.

**ದೊಮ್ಮ** (ನಾ). ಒಂದು ಮನೆತನದ ಹೆಸರು (?): ಪುಯ್ಯಲೊಳ್ ದೊಮ್ಮರ ಕಾಡವಂ ಸತ್ತು ಸ್ವರ್ಗ್ಗಾಲಯಕ್ಕೇಱಿದನ್ (ಎಕ. VI, ೦೭೩-೪; 780). [ ? ]

**ದೊಮ್ಮರ** 'ದೊಂಬ' ನೋ.

**ದೊಮ್ಮಳಿ** (ನಾ). ೧. ಗುಂಪು; ಸಮೂಹ. ೨. ಗಾಬರಿ. 'ದೊಮ್ಮಳಿಸು' ಪರಾ. [ <ದೊಂದುಳಿ ? ]

**ದೊಮ್ಮಳಿಸು** (ಕ್ರಿ). ೧. ಗುಂಪುಗೂಡು; ಸಂದಣಿಗೊಳ್ಳು: ಧರಾಚಕ್ರಮನಾಕ್ರಮಿಸಿ ನಿಶಾತಹೇತಿಗರ್ಭಂಗಳುಮನೇಕಪ್ರಕಾರಕೇತನ ವಾಜಿರಾಜಿಗಳುಮಾಗಿ ದೊಮ್ಮಳಿಸಿ ನಡೆವ ರಥಂಗಳುಮಂ (ಪಂಪಭಾ. ೧೧–೩೦ ವ); ಅವಿತಾಳಾಪಂಗಳಿಂ ದೊ[ಪಾಠಾಂ. ದ]ಮ್ಮಳಿಸಿ ಕಿನಿಸಿ ಕೊಟ್ಟೊಳ್ಳ ತಾತ್ಪರ್ಯವೇಂ (ಸುಕುಮಾ. ೭–೪೦); ನೆರೆದ ರಾಜಲೋಕಮೆಲ್ಲಂ ರಾಜಸುತೆಯನೀಡಾಡಿ ಬಂದು ದೊಮ್ಮಳಿಸಿ ಮುಮ್ಮಟಿಕೊಂಡು ನೋಡುತ್ತಮಿರ್ಪುದುಂ (ಅರ್ಧನೇ. ೭–೩೯ ವ); ಅಂತುಭಯಬಳಚತುರಂಗವಾಹನಂಗಳೊಳೊರ್ವೊರ್ವರ ದೊಮ್ಮಳಿಸಿ ಬೆರಸಿದಾಗಳ್ (ವರ್ಧಪು. ೮–೪೭). ೨. ಗಾಬರಿಯಾಗು; ಗಾಬರಿಪಡಂ: "ದೊಮ್ಮಳಿಸು–ತಿರ್ಯಕ್ಸಮೂಹಸಂಭ್ರಮೇ (ದನದ ಹಿಂಡಿನಂತೆ ಗಾಬರಿಪಡು)" (ಶಮುಧಾ); ಅಗ್ನಿಶಿವಾಮುಖಕ್ಕೆ ದೂರಮಪ್ಪ ಬಕ್ಕಬಯಲ ತಾಣದೊಳ್ ದೊಮ್ಮ [ಪಾಠಾಂ. ಮ್ಮ]ಳಿಸಿ ನಿಂದು ಬಹುಜನಂಗಳುಮ್ಮಳಿಸಿ ತಮ್ಮೊಳಿಂತೆಂದರ್ (ಪಂಪರಾಮಾ. ೧೧–೧೩೫ ವ); ಆಗಳಂಜಲಿಮಂಜಲಿಮೆಂದು ಬೆಗಡುಗೊಂಡ ಗೋವಳಿಗರ ನೊಡಗೊಂಡು ದೊಮ್ಮಳಿಸಿ ಮಮ್ಮಟಿಗೊಳ್ವ ಗೋವುಗಳನಟ್ಟಿಕೊಂಡು ಕಿಱಿದಂತರದೊಳಿರ್ದ ಗೋವರ್ಧನಗಿರಿಯ ಮಱಿಗೆ ಪೋಗಿ (ಅರ್ಧನೇ. ೮–೧೦ ವ); ಹಯಂ ತಾಂ ತನಗೆ ತೊಱಿಟಿದ ಕೂರ್ಪಿನ ಪೆರ್ಮೆಯಿಂ ಸೊಮ್ಮುವೆರ್ಚಿ ದೊಮ್ಮಳಿಸಿ ಕಿಚಿಕಿಲ್ದು ಬಿಮ್ಮನೆ ನಡೆದು ಬಱಿಯ ಪೊಱಿಯಿಂ ಮಿಕ್ಕು ಪೊಕ್ಕು ದಿಕ್ಕುಗೆಟ್ಟು ಮುಱುಂಗಿ ಕಣ್ಮಾಯಮಾಯ್ತು (ರಾಮಾಶ್ವ. ೧೨೦–೨೩). ೩. ವೇಗಗೊಳ್ಳು; ರಭಸಗೊಳ್ಳು: ಅಂತು ನೆಗಟ್ಟ ಭಾವವ್ಯತಿಕರಂಗಳ್ ದೊಮ್ಮಳಿಸೆ ತಮ್ಮನಿಬರುಂ ಘಟ್ಟಿಸಿ ನಿಂದು ಕಟ್ಟುತ್ತು ತಾಗಿ ಪೋಗದೆ (ಅನಂಪು. ೭–೪೭ ವ); ಅಂತು ನಿಂದಳವಿಯೊಳ್ ದೊಮ್ಮಳಿಸಿ ನೂಂಕುವ ದೈತೇಯಚಕ್ರಿಯ ಚತುರಂಗಬಲಮುಮನಿತುಮೊಂದೆ ಮುಖದೊಳ್ ಕೈಕೊಂಡು ನಿಜಗಜಘಟಾಪಟಲಕ್ಕೆ ಸೂಚೀಯಾನೆಯಂ ಮಾಡಿ (ಅನಂಪು. ೧೪–೭ ವ).

[ ದೊಮ್ಮಳಿ + – ಇಸು₃ ]

**ದೊಮ್ಮೋಜಾಡ್ಯ** (ನಾ). ಪಶುಗಳಿಗೆ ಬರುವ ಒಂದು ಬಗೆಯ ರೋಗ: (ಎಸಮ್ಮ. XV, ೪೦). [ ದೊಮ್ಮೊ (P←ತೆಲು. ದೊಮ್ಮು) + ಜಾಡ್ಯ ]

**ದೊರಕಿಸು** (ಕ್ರಿ). ಪಡೆ; ಹೊಂದು; ಪಡೆದುಕೊಳ್ಳು: ಎಲ್ಲಾದರೂ ಒಂದು ಉದ್ಯೋಗ ದೊರಕಿಸಿ ಉಪಜೀವನಕ್ಕೆ ಮಾರ್ಗ ಮಾಡಿಕೊಳ್ಳಬೇಕು (ಮುಂಬಯಿ. ೪–೩೦); ಸರ್ಕಾರದ ಆ ಅನ್ಯಾಯದ ವಿರುದ್ಧ ಹೋರಾಡಿ ದೊರಕಿಸಿದ ಪ್ರಥಮವಿಜಯದಿಂದಾಗಿ ಹುಡುಗರೆಲ್ಲ ಹರ್ಷದಿಂದ ಹಾರಾಡುತ್ತಿದ್ದಾರೆ (ಅಗಸ್ಟ್. ೫೦); ಗಾಂಧೀಜಿ ಹೇಳುತ್ತಾರೆ–'ರಾಟೆಯ ತಿರುಗಿಸಿ! ಸ್ವಾತಂತ್ರ್ಯವ ದೊರಕಿಸಿರಿ' ಎಂದು! (ಇತಿಶ್ರೀ. ೧೩೭).

[ ದೊರಕು + – ಇಸು₃ ]

**ದೊರಕು** (ಕ್ರಿ). ಸಿಗು; ಸಿಕ್ಕು; ಪ್ರಾಪ್ತವಾಗು; ಲಭ್ಯವಾಗು; ದೊರೆ; ವರರಾಜ್ಯಂ ಶ್ರೀಸಹಿತಂ ದೊರಕಲ್ ಕೈಕೊಳ್ಳದಿರ್ಪರಾರ್ (ಪಂಚತಂ. ೧೦೦–೧೩); ಮಂದಮತಿಗಳಿಗೆ ದೊರಕದ ಲೇಸನೀಯಬೇಕೆಂದು ಮನದೊಳು ನೆನೆದನು (ಸಿದ್ಧರಾ. ೧–೨೫); ತನಗೆ ಮಣಿ ದೊರಕದೆಂಬೊಂದನುತಾಪದೆ ತಪನನೆಯ್ದಿದನೊ ಶರನಿಧಿಗೆಂಬಿನಮೆಸೆವರಾಗದಿಂ ಭೋಂಕೆನಲಪರಾಂಭೋಧಿಗಿಟಿದನಬ್ಜಸಹಾಯಂ (ರಶಕು. ೩–೧೮); ಧೇನುವೇತಕೆ ದಾನಗೊಂಬ ಮಹಾನುಭಾವರು ದೊರಕದಿದ್ದರೆ (ಸಂಭಪ. ೧೦–೧೧); ಇರಲಿರಲಿ ತೋಱಿಸುವೆ ಮುಂದಕೆ . . . ದೊರಕು ವಶಭವ ಬೀದಿಗಲಹವನೆಂದಳು (ತೊರರಾ. ೨–೧–೨೯); ಪರಮಪಟ್ಟದ ಮಾರ್ಗವಿಾ ಶರೀರದೊಳಿಲ್ಲಿ ದೊರಕಲರಿಯದು (ಚಬಪು. ೩–೨); ದುರ್ಲಭವಾದ ವಸ್ತುಗಳೆಲ್ಲವೂ ಅವನಿಗೆ ದೊರಕಿದ್ದವು (ಪರಿಹೀ. ೧೦).

[ <ದೊರೆ₁./ತುಳು.ದೊರಕು, ದೊರಂಕು, ದೊರಕ್; ತೆಲು. ದೊರಕು ]

**ದೊರಗು** 'ತರಕು' ನೋ.

**ದೊರಗುಉಸುಬು** (ನಾ). ಒರಟಾದ ಮರಳು,–ಉಸುಬು; ದಪ್ಪ ಮರಳಿಂ: ಹೋಗುವ ದಾರಿಗೆ ದೊರಗುಉಸುಬನ್ನು ತಂದು ಸುರಿದು ಚೆನ್ನಾಗಿ ಮಾಡಿದ್ದಾರೆ (ಅಪೂಪ. ೩೨).

[ ದೊರಗು (<ತರಕು) + ಉಸುಬು (<ಉಸುಕು) ]

**ದೊರಗುಗಾಜು** (ನಾ). ಒರಟಾದ ಮೇಲ್ಮೈಯುಳ್ಳ ಗಾಜು; ಪಾರದರ್ಶಕವಲ್ಲದ ಗಾಜು: ಅದರ ಮುಂಗಡೆಯಲ್ಲಿ ಒಂದು ಭೂತಕನ್ನಡಿಯೂ ಹಿಂಗಡೆ ಒಂದು ದೊರಗುಗಾಜಿನ ಹಲಗೆಯೂ ಇವೆ (ವಿಜ್ಞಾವಿ. ೮).

[ ದೊರಗು (<ತರಕು) + ಗಾಜು (<ಕಾಜು) ]

**ದೊರಪಯ್ಯ** (ನಾ). ಒಬ್ಬಾತನ ಹೆಸರು: ಪಡಿಯಲಿ ದೊರಪಯ್ಯನ ಒರಿಯರಸಿ ಪಾಂಬಬ್ಬೆ ತಲೆವಱಿದುಮೂವತ್ತುವರಿಸಂ ತಪಂಗೆಯ್ದುಯ್ದಂ ನೋನ್ತುಚ್ಚ ಮಂಟಾಣಮೇಱಿದರ್ (ಎಕ. VI, ಕಡೂರು. ೦–೧೩; 971).

[ <ದೊರೆ₃ + ಅಪ (<ಅಪ್ಪ₁) + ಅಯ್ಯ₁ ]

**ದೊರಯ್ಯನಾಯಕ** (ನಾ). ಒಬ್ಬಾತನ ಹೆಸರು: ಅಯ್ಯಹರಸರ ಮಗಮ್ ದೊರಯ್ಯನಾಯಕ (ಮೈಆರಿ. ೧೯೩೪, ೯೩–೪; 1021).

[<ದೊರೆ₃ + ಅಯ್ಯ₁ + ನಾಯಕ ]

**ದೊರೆ₁** (ಕ್ರಿ). ೧. ಸಮೀಪಕ್ಕೆ ಬರು; ಬಳಿಸಾರು: ಮುಳಿಯಿಸುವ ಮುಳಿವ ತಿಳಿವುವ ತಿಳಿಪೊಲಿಸುವ ದೊರೆವ ನೆರೆವ ರಮಣೀರಮಣಾಕುಳ ಕಳಕಳದಿಂದಂಗಜವಿಳಾಸದೆಱಿವೆಟ್ಟು ನೆಟ್ಟನಿದೆ ಪೆಱಿತಂಟೀ (ಶಾಂತಿಪು. ೩–೧೦). ೨. ಕಾಣು; ತೋರು: ಮೂಡದೆಸೆಯೊಳ್ಕೆಂಪು ದೊರೆಯೆ ತಾರಗೆ ಪರೆಯೆ ಕೂಡೆ ತಂಗಾಳಿ ಮುಂಬರಿಯೆ (ಪ್ರಮಿಥಾ. ೨–೬೫). ೩. ದೊರಕು; ಸಿಕ್ಕು; ಸಿಗು; ಪ್ರಾಪ್ತವಾಗು; ಲಭಿಸು: ಎಮ್ಮ ಮಮ್ಮಂಗಮೆಮಗವಿನಾಗಳನುವರಂ ದೊರೆಯಲಾಯ್ತು [ಪಾಠಾಂ. ದೊರೆಯಾಯ್ತು] (ಪಂಪಭಾ. ೧೧–೯೨ ವ); ನಗರಾಂಗನೆಯರ್ಮಹೋತ್ಸವಂ ದೊರೆದುದೆನುತ್ತಲಂಪು ಮಿಗೆ ನೋಡಿದರಾ ಮನುಜೇಂದ್ರುಚಂದ್ರನಂ (ಕಾದಂಪೂ. ೪೮೩); ಬಿಱುನಡೆಯ ಮದಹಸ್ತಿಗಳಿವ ಪಲತೆಱದ ಜೀವಿಗಳಿಗೆ ವಿಮೋಕ್ಷಂ ಪೋಱ[ರೆ]ವುದೆಂದಡೆ ಬೊಮ್ಮಯನ ಕೈಯುಲಿ ಮರಣವಾದ (ಬಸಪು. ೩೪–೭೬); ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ (ಪುರಂದ. ೩–೧೪೪ ಪಲ್ಲವಿ); ವಿಶೇಷ ಸುಕೃತದ ಫಲಂ ದೊರೆತುದೆನಗೆಂದಮ ಬಿದ್ದನಚ್ಯುತನಂಘ್ರಿಗೆ (ಪ್ರಮಿಥಾ. ೭–೬೫); ಸೀಮೆಗೆ ಯಿರಪಗೌಡ × ರಡು ಕೈವಡ ಮುಂತಾಗಿ ಸೀಮೆನಹಿಸು ಮುಂತಾಗಿ ದೊರೆವ ತರು ಮುಂತಾಗಿ ಭೂಮಿಗೆ ನಾಲ್ಕುಮೂಲೆಗೆ ಕಲ್ಲು ನೆಟ್ಟದ್ದು (ಎಕ. VII, ಶಿವಮೊ. ೯೩–೨೭; ?); ಪರಮಾತ್ಮನ ದರ್ಶನ

ಕೇವಲ ತಪಸ್ಸಿನಿಂದಲೂ ಕರ್ಮಯೋಗದಿಂದಲೂ ದೊರೆಯಬೇಕೆಂಬುದಿಲ್ಲ (ಧರ್ಮಸಾ. ೮೫). ೪. ಉಂಟಾಗು ; ಸಂಭವಿಸು : ಮಂತ್ರಿ ಚತುರೋಪಾಯಂಗಳಂ ಬಲ್ಲೊಡಂ ದೊರೆವ್ವೋಲ್ ಚಿನ್ನಕೆ ಸೌರಭಂ (ಸೋಮೇಶ. ೧೧).

[ ದೇ.೫ ತೆಲು. ದೊರೆಯು, ದೊರಪು ]

**ದೊರೆ$_2$** (ನಾ). ೧. ಸಮಾನ ; ಎಣೆ ; ಸಾಟಿ; ಸರಿ: "ಸರಿ, ದೊರೆ . . . ಸಂಗಡಂ–ಈ ೧೮ ಸಮಾನಕ್ಕೆ ಪೆಸರ್" (ಶಶಸಾ. ೫೯–೨೯೧) ; ಹರಿಣಧರ ಸರಸಿಜಂಗಳ್ ದೊರೆಯಲ್ತವು ತನಗೆ ತಾನೆ ದೊರೆ ನಿನ್ನ ಮೊಗಂ (ಕವಿರಾ. ೩-೬೬) ; ಇದಱ ದೊರೆಗೆ ಗಿರಿಗಳುಮೊಳವೇ (ಆದಿಪು. ೭-೬೫) ; ಪಾತಕವ್ವೆ ಗುಱಿದ ಪೆಂಡಿರ್ ದೊರೆಯೇ (ಪಂಪಭಾ. ೦-೪೦) ; ನರನಾರಾಯಣರೆಂಬಿರ್ವರುಮೊಡಗೂಡಿದೊಡೆ ಗೆಲ್ವರಾರುಮುರ್ವರೆಯೊಳ್ ನಿರುತಮೆನೆ ನೆಗಳ್ದ ನಿಮ್ಮಿರ್ವರ ದೊರೆಗಂ ಬಗೆವೊಡಗ್ಗಳಂ ನರರೊಳರೇ (ಪಂಪಭಾ. ೧೨-೧೨೩) ; ದೊರೆಗಾಣೆಂ ನಿನಗೆ ಜಿನೇಶ್ವರ ಪೆಱರಂ ನಿನಗೆ ನೀನೆ ದೊರೆಯೆನಿಪೈ (ಅಜಿಪು. ೮-೨೨) ; ತನಿರಸದಿಂದಮೃತದ ದೊರೆಯೆನಿಸುವ ಕುಂಕುಮದ ರುಚಿಯನನುಕರಿಸುವ ಮಾವಿನ ಪಣ್ಣಂ (ಧರ್ಮಾಮೃ. ೮-೧೬): ಕಡೆಯಲೆಂದು ಪಾಲ್ಗಡಲೊಳ್ ತಂದಿರಿಸಿದ ಮಂದರಗಿರಿಗೇಂ ದೊರೆಯಾದುದೊ ಪೊನ್ನ ಕೋಂಟೆ (ಮಲ್ಲಿಪು. ೨-೫೧). ೨. ಸರಿಯಾದಂದಂ ; ಸಮಂಜಸವಾದಂದಂ : ಕವಿಗಳ ನಾಮಧಾರಕನರಾಧಿಪರೋಳಿಯೊಳೀತನೊಳ್ಪಿದಂ ಕವಿ ನೃಪನೀತನೊಳ್ಪಿದನೆನಲ್ ದೊರೆಯಲ್ತು (ಪಂಪಭಾ. ೧-೦೦): ನಿನ್ನಂ ಪುಸಿಯಾಡಿ ಕಾಡಲೆನಗೇಂ ದೊರೆಯೇ (ಪಂಪಭಾ. ೮-೪) ; ದೊರೆಯೊಳೊಬ್ಬನ ಹಾನಿ ಭಟರೆಲ್ಲರಿಗೆ ದೊರೆ (ಕುವ್ಯಾಸ. ೨-೧೯). ೩. ರೀತಿ ; ಬಗೆ; ಕ್ರಮ : ಸ್ಯಂದನಾಶ್ವಂಗಳವೊಂದೆ ದೊರೆಯೊಳ್ ಪರಿಯೆ ಪರಿಚೋದಿಸಿ ಬಾಣಪಾತಪ್ರಮಾಣದೊಳ್ ನಿಱಸುವುದುಂ (ಶಾಂತಿಪು. ೪-೧೦ ವ) ; ಮದಮಾಂದ್ಯೋತ್ಪಾದನಾಪಹರಣಮಾರಣ ವಶೀಕರಣದ್ವೇಷಣಾದಿಗಳ್ಗೆ ಪೆಱವುಮಾ ದೊರೆಯವರ್ಕೆ ಪಿರಿದುಮಾಗಮಂಗಳೆ ಪ್ರಮಾಣಂಗಳ್ (ಕಾದಂಬ. ೬೪೮): ಪೂಮಳೆಯಿಾ ದೊರೆಯಕ್ಕುಮೆಂಬಿನಂ ಸುರಿದುದು ಪುಷ್ಪವೃಷ್ಟಿ (ಎಕ. II, ೨೩೪-೩೯ ; ಸು. 1180).

**ದೊರೆಗೆ ವರ್** = ಸಮನಾಗು ; ಸಮಾನವಾಗು : ಸಮಕ್ಕೆ ಬರು : ಹಾರಾದ್ಯಾಭರಣಂಗಳಿನಾ ರೂಪಾಶ್ಚರ್ಯವಾಗೆ ಮಾಣಿಕಬಟ್ಟಂ ನೀರಂಜಿಸಿ ದಳಿವಿಡಿದ ಮಹಾರತ್ನದ ದೊರೆಗೆವಂದುದಾ ಸ್ತ್ರೀರತ್ನಂ (ಆದಿಪು. ೬-೪೨) ; ಖಳರೋಳಿಯೊಳ್ದೊರೆಗೆವಂದನೆನ್ನನದೇನನೆಂದಪೆಂ (ಕಾದಂಬ. ೪೦೦) ; ಚತುರಾನ್ವಿತಮೆಂಬ ನೆಗಟ್ತೆಯಿಂದಿಳಾವಂತರೊಳಾರುಮೇಂ ದೊರೆಗೆ ವರ್ಪರೆ ಪೋಲಿಸೆ ಭಟ್ಟಪಾರ್ಯನೊಳ್ (ಲೋಕೋಪ. ೧-೧೧) ; ಹರಿಕಾನ್ತೆಯುಮಿಾ ಕಾನ್ತೆಯ ದೊರೆಗೆ ವರಲ್ಕಾಱಳು (ಎಕ. VI, ಮೂಡಗೆ. ೨೨-೨೪ ; 1129). **ದೊರೆಯಾಗು** = ಹೋಲಿಕೆಯನ್ನು ಪಡೆ,–ಹೊಂದು ; ಹೋಲು : ನೇಣ್ಬಲೆಯ ತೊಡರೊಳ್ ತೊಡಂಕಿ ನಡುಗುವ ಕುರಂಗಿಯೊಳ್ದೊರೆಯಪ್ಪಳ್ (ವರ್ಧಪು. ೪-೫೭ ವ) ; ಸುರನದಿಯ ಫೇನಪುಂಜದ ಸಿರಿಯಂ ಸಲೆ ತಳೆದು ತೊಳಪ ತುಹಿನಾಚಲದೊಳ್ ದೊರೆಯಾದಂ (ಕುಸುಮಾ. ೧-೧೨೧). 'ಒರೆ$_7$' ಪರಾ.

**ದೊರೆ$_3$, ಧೊರೆ** (ನಾ). ೧. ಒಡೆಯ ; ರಾಜ ; ಪ್ರಭು ; ಅರಸು : ಗಾಂಗೇಯಂ ದೊರೆಯ ಪಿರಿಯ ಮಗನುಂ ಕ್ರಮಕ್ರಮಾರ್ಹನುಮಿರ್ದಂತೆನ್ನ ಮಗಳಂ ಕುಡೆವು (ಪಂಪಭಾ. ೧-೭೦ ವ) ; ಹೊನ್ನುಳ್ಳ ದೊರೆಯಂತೆ ಭಾವಿಸಿಕೊಂಡಂ ಹಮ್ಮಿನಲಿಪ್ಪನೆ ಭಕ್ತನು (ಚನ್ನವ. ೪. ೧೨೧-೨೬೬) ; ದೊರೆಯೊಳ್ ಸ್ನೇಹವನಾಂತವಂ ಬಡವರಂ ತಾಂ ನೋಲ್ಪನೇ ಪ್ರೀತಿಯಿಂ (ಸೋಮೇಶ. ೪೦) ; ದೊರೆ ತತ್ತರುಳಿದರು ನೆರವು ಬಹುದು (ಕುವ್ಯಾಸ. ೨-೧೯) : ಮಗಳಿಗೆ ವರನಾವ ಧರೆಯ ದೊ[ಪಾಠಾಂ. ಧೊ]ರೆಗಳೊಳಗೆಂದ (ವರ್ಧಚ. ೪-೮೩) : ದೊರೆ ಎನ್ನ ಒಲವು ಸುಸ್ಥಿರವೆಂದೆಲ್ಲರ ಹಗೆ ತರವಲ್ಲ (ಪುರಂದ. ೨-೪೫-೨) : ದೊರೆಯ ರಥವಾದರೂ ಎಣ್ಣೆಯಿಲ್ಲದೆ ತಿರುಗದು (ಗಾದೆ). ೨. ಯೂರೋಪಿನಿಂದ (ವಿಶೇಷವಾಗಿ ಇಂಗ್ಲೆಂಡಿನಿಂದ) ಬಂದ ಮನುಷ್ಯ ; ಇಂಗ್ಲೀಷ್ ಅಧಿಕಾರಿ, ಕಾಫಿತೋಟದ ಒಡೆಯ, ಪಾದ್ರಿ ಮುಂತಾದವರು : ದೊರೆಗಳ ಮನಸ್ಸಿಗೆ, ಅವಳು ಆತ್ಮಹತ್ಯೆ ಮಾಡಿಕೊಂಡಿರಬೇಕೆಂಬ, ಭೀತಿ ಹುಟ್ಟಿತು (ಚೋಮದು. ೯೪) ; ದೊರೆಗಳು ಪುಸ್ತಕಗಳನ್ನು ಇನಾಮು ಕೊಡುವದಕ್ಕೆ ಬರುತ್ತಾರೆ (ಮುಂಬಯಿ. ೧-೧೪). ೩. ಸಾಮರ್ಥ್ಯ ; ಪರಾಕ್ರಮ : ಪರಿಭವದ ಪೊಱೆಯನಾಂತಿರ್ದರಾತಿಗಳ್ಗಳ್ಕಿ ತನ್ನ ಕುಲಮುಂ ಚಲಮುಂ ದೊರೆಯುಂ ಕಿಡೆ ದಾಟ್ಟಂ ಗಂಡರೂಪಿನೊಳ್ ಗಂಡನಲ್ತು ಪೆಂಡತಿಯ ಮಲಂ (ಆದಿಪು. ೧೨-೯೬). ೪. ಹಿರಿಮೆ ; ಯೋಗ್ಯತೆ. 'ದೊರೆಗೆಡಿಸು' ಪರಾ. ೫. ಶ್ರೇಷ್ಠತೆ ; ಆಧಿಕ್ಯ. 'ದೊರೆವೆಟ್ಟು$_3$' ಪರಾ. ಧೊರೆ : ೧. ನಿಮ್ಮ ಧೊರೆಗೆ ಶೀಘ್ರವಾಗಿ ಅರಿಕೆಮಾಡು (ಕೃಪಾಸ. ೫೩) ; ಆ ಸಮಿಾಪದ ಮಹೀಶೂರಪುರದ ಧೊರೆಗಳಂ ಕಾಪಿಟ್ಟುಕೊಂಡು ಇರುತ್ತಿರುವಳು (ಪಟ್ಟಅ. ೧೬-೨೫). ೬. ಅಧಿಕಾರಿ (?) : ಮಳಿಗೆಯೊಳಗೈನೂರ್ವ್ವರ್ ಸ್ವಾಮಿಗಳ್ ಬಿಟ್ಟಾಯಂ ಹೊಂಗೆ ಕೊಟ್ಟವರಲ್ಲಿಯಡಕೆಯೊಂದು ಕೊಂಡವರಲ್ಲಿಯಡಕೆಯೊಂದು ಎಣಿಸಿದ ಧೊರೆಗಳಲ್ಲಿ ಪ್ರತ್ಯೇಕವಡಕೆಯೊಂದು (ಎಇ.XX, ೧೨-೫೩ : 1167).

[ ದೇ.೫ ತಮಿ. ತುರೈ, ಮಲ; ತುರ ; ತುಳು. ದೊರೆ, ಧೊರೆ ; ತೆಲು. ದೊರ, ಧೊರ ]

**ದೊರೆಕಾರ್ಯ** (ನಾ). (ಶ್ರೀಮಂತಿಕೆಯ) ಆಡಂಬರ : ಕಡೆವಳ್ಳಿ ಬೀಟು ಮನೆ ಮುಂಗೆಯ್ಯಾಭರ್ಣಟಂ ಸಾಲದಾ ದೊರೆಕಾರ್ಯಂ ಘೃತವಿಲ್ಲದೂಟದ ಸುಖಂ . . . ಬಱಗೈಯಂ ಸುಱಿದಂತೆ (ಸೋಮೇಶ. ೧೭).

[ ದೊರೆ$_3$ + ಕಾರ್ಯ ]

**ದೊರೆಕುಮಾರಿತಿ** (ನಾ). ದೊರೆಯ ಮಗಳು ; ರಾಜಕುಮಾರಿ : ದೊರೆಕುಮಾರಿತಿಯರಾ ಬೀದಿಯೊಳರ್ತಿಯೊಳಿಡೆಯಾಡುತಿಹರು (ಕಂನವಿ. ೭-೧೯).

[ ದೊರೆ$_3$ + ಕುಮಾರಿತಿ ]

**ದೊರೆಕೊಳ್$_1$, ದೊರೆಕೊಳ್ಳು** (ಕ್ರಿ). ೧. ಸಿಕ್ಕು ; ಸಿಗು ; ಲಭಿಸು ; ಪ್ರಾಪ್ತವಾಗು : "ದೊರೆಕೊಳ್ – ಪ್ರಾಪ್ತೌ" (ಶಮಧಾ) ; ಧರಣೀಶರ ಕಾರುಣ್ಯಂ ದೊರೆಕೊಣ್ಡೊಡೆ (ಎಇ. XIII, ೩೬೦-೧೪ : 929) ; ಪೂರ್ವಪುಣ್ಯಫಲದಿಂ ದೊರೆಕೊಂಡ ವಿಮಾನಂ (ಆದಿಪು. ೨-೬೮); ಸೌಖ್ಯಮದೆಂತುಂ ದೊರೆಕೊಂಡಿತಿಲ್ಲ ಹೃದಯಕ್ಕೋರಂತೆ (ಕಾದಂಪೂ. ೩೪೭); ಸಂದ ತಿರಿಕಂಗೆ ತೊವೆ ತುಪ್ಪಂ ದೊರೆಕೊಳಲುಣ್ಮ ನಲಿವ ತೆಱದಿಂ (ಧರ್ಮಾಮೃ. ೯-೩೦) : ದಿವಸಶ್ರೀ ದೊರೆಕೊಂಡ ಕೋಕಮಿಥುನಂ . . . ವಿರಾಜತ್ಕಳಹಂಸಯುಗ್ಮಮೆನೆ ಕೂಡಿ ಕ್ರೀಡಿಸುತ್ತಿರ್ಪರುತ್ಸವದಿಂದಾ ವಿಜಯಾವತೀಯುವತಿಯುಂ ವಿಶ್ವಂಭರೋರ್ವೀಶನುಂ (ಕುಸುಮಾ. ೩-೨೭) ; ಕೇಳಿದಗೆ ಮೋಕ್ಷದ ಮಂದಿರವು ದೊರೆಕೊಳ್ಳು (ಸಂಭಪು. ೮-೧೪೨). ೨. ಉಂಟಾಗು ; ಸಂಭವಿಸು; ಕೂಡಿಬರು : ನಿಮ್ಮ ಮನದಿಂ ಮಿಥ್ಯಾಕಳಂಕಂ ತೆರಳ್ದಿನಿಸುಂ ಪೋಗದು ಕಾಲಲಬ್ಧಿ ದೊರೆಕೊಂಡಂದಲ್ಲದೇಂ ಪೋಕುಮೇ (ಆದಿಪು. ೨-೨೨) ; ಪ್ರಸವಸಮಯಂ ದೊರೆಕೊಳೆ (ಪಂಪಭಾ. ೧-೭೪೪ ವ) ; ನುಡಿ ತಡವಪ್ಪುದೊಂದು ಮೊಗದೊಳ್ ಮುಱುಕಂ ದೊರೆಕೊಳ್ವುದೊಂದು . . . ಕಳ್ಗುಡಿದವರಂದಮಿಂತು (ಪಂಪಭಾ. ೨-೪೯) ; ಆ ಪುಲಿಯ ಪೂರ್ವಭವವೃತ್ತಾಂತಮುಮಂ ಕಾಲಲಬ್ಧಿ ದೊರೆಕೊಳೆ ತೊಱದಿರ್ದುದುಮಂ ನಱಿಪಿ (ಚಾವುಂಪು. ೨೫) : ಗುರುವಂ ಲಘುಸಂಧಾನದೆ ನರನಿಸೆ ಗುರುಲಘುವಿಮಿಶ್ರಿತಂ ದೊರೆಕೊಳೆ ತದ್ಗುರು ತಚ್ಛಂದೋವೃತ್ತಿಗೆ ದೊರೆಯೆನಿಸಿರ್ದುದು ಮನಕ್ಕೆ ದಱಿಯೋಧನನಾ (ಗದಾಯು. ೪-೪೮) ; ಇನಿತೊದಾಕ್ರೋಶಮಿಾ ನಾಗಶರ್ಮನೊಳೇಕಾರಣದಿಂದಮಿಂದು ದೊರೆಕೊಂಡತ್ತುಂ

(ಸುಕುಮಾ. ೭-೪೩) ; ಪುರುಷಂಗೆ ಸುದೃಢತ್ವಂ ದೊರೆಕೊಂಡೊಡೆ (ಸಮಾಹ. ೩-೧೧) ; ಬಲಿ ಕಾಲಲಬ್ಧಿ ದೊರೆಕೊಳೆ ಬಲವಂದಾ ಯತಿವರಂಘ್ರಿಯಾಗ ದೊಳ್ ಬಿಟ್ಟು (ನೇಮಿಪು. ೩-೨೫) ; ಸ್ವರದಿಂ ಯಲದಿನಸಾದಿಷ್ಟರೇಫದಿಂ ಪರದೊಳವರ್ದು ಕೋಜಿ ಪವರ್ಗಂ ದೊರಕೊಳ್ಗುಂ ವಾದೇಶಂ (ಶಾಬ್ದಾವ. ೭೩) ; ಪರಿಹಾಸಹೇತುಭಾವನೆ ದೊರೆಕೊಳೆ ಚಿತ್ರಕ್ಕೆ ಹಾಸ್ಯ ಮೆಂಬ ರಸಂ ತಾಂ ಸರಸೋಕ್ತಿಗಳಿಂದಮುದಾಹರಿಪೆಂ (ಶೃಂಗಾರ. ೧-೬೭). ೩. ಈಡೇರು ; ನೆರವೇರು : ಬಗೆ ದೊರೆಕೊಂಡುದಿಲ್ಲಿದು ವಿಧಾತ್ರನ ದೋಷವೊ (ಹಂಪಭಾ. ೧೩-೧೦೩) ; "ಲಭಿಸು" (ಹಂಪದೀ. ೫೫೦). ೪. ಸಿಕ್ಕಿ ಬೀಳು ; ವಶವಾಗು ; ಅಧೀನವಾಗು : ದೊರೆಕೊಂಡಯೆಂತು ಮುಂ ಪಂಜರಬಂಧನವಮಾದುದೆಂತು (ಕಾದಂಪೂ. ೯೧). ೫. ಕಾಣು ; ತೋರು ; ಪ್ರಕಟವಾಗು : ಉರದೊಳ್ ಫಣ ಕರದೊಳ್ ಬಿಲ್ ಶಿರದೊಳ್ [ತೊ]ಟ ತೊಡಿಯ ಕೆಲದೊಳೆಸೆದಿರೆ ಪೆಟ ಮುಂಗೊರಲೊಳ್ ಕಟವುಟಯಿಲ್ಲದೆ ದೊರೆಕೊಳೆ ಪ್ಯಡನಡಿಗೆ ಹರಿಗನೆಱಗಿದನಾಗಳ್ (ಹಂಪಭಾ. ೮-೨೪) ; ಗುಣಲೋಪಂ ವರಶಬ್ದಶಾಸ್ತ್ರದೊಳ್ ತಾಂ ದೊರೆಕೊಳ್ಗುಂ (ವರ್ಧಪು. ೧-೯೭). **ದೊರೆಕೊಳ್ಳು** : ೬. ಪಡೆ ; ಹೊಂದು : ಸೀತಾ, ಚಂದ್ರಮತೀ, ದಮಯಂತೀ ಮೊದಲಾಗಿ ಸತಿಯರು ದೊರೆಕೊಂಡ ಸುಖವೇನು? (ಭಾರದ. ೪೮೩). [ ದೊರೆ$_1$ + ಕೊಳ್$_1$ ]

**ದೊರೆಕೊಳ್$_2$**, ದೊರೆಗೊಳ್ (ಕ್ರಿ). ಸಮಾನವಾಗು ; ಸಾಟಿಯಾಗು ; ಹೊಂದಿಕೊಳ್ಳು : ದೊರೆಕೊಂಡಿರೆ ಸೊಗಯಿಸುಗುಂ ಪುರಾಣಕಾವ್ಯ ಪ್ರಯೋಗದೊಳ್ತತ್ಕಾಲಂ ವಿರಸಂ ಕರಮವು ದೇಸಿಗೆ ಜರದ್ದ್ರಭೂವಿಷಯ ಸುರತರಸರಸಿಕತೆವೊಲ್ (ಕವಿರಾ. ೧-೫೦) ; ಪರಿಗೀತಾರ್ಥಂ ಪೂರ್ವಾಪರ ದೊಳ್ಬಗೆವಾಗಲೆಂದುವೊಂದಱೊಳೊಂದುಂ ದೊರೆಕೊಂಡೊಂದದೊಡದು ದುಷ್ಕರಮೆ ವಿರುದ್ಧಾರ್ಥಮೆಂಬುದಾದಂ ದೋಷಂ (ಕವಿರಾ. ೦-೮೦) ; ಸುರವರಲೊಂದು ಬೆಳ್ಸರಿಯದಾತ್ಮತನೂಭವನುತ್ತಮಾಂಗದೊಳ್ ದೊರೆಕೊಳೆ ನಿಲ್ಲದಲ್ಲಿ ಕುಸುಮಂ ಕೆಲವಲ್ಲುಗೆ ತನ್ನ ರತ್ನವಿಸ್ಫುರಿತಕಿರೀಟಮಂ ಕವಿದು ತಾನೆ ನರಂಗೆ ಕಿರೀಟನಾಮಮಂ ಸರಸದಿನಾಗಳುಚ್ಚರಿಸಿ ಸಾಹಸಮಂ ಪೊಗಟ್ದಂ ಸುರಾಧಿಪಂ (ಹಂಪಭಾ. ೫-೧೦೩) ; ನಾಲ್ಕುಂ ಚರಣಂಗಳು ಮೊಂದಕ್ಕೊಂದು ದೊರೆಕೊಂಡಿರೆಯದು ಸಮತ್ವಮೆನಿಪುದು (ಅಪ್ರತಿ. ೯-೧). **ದೊರೆಗೊಳ್** : ಇವಂ ಧರ್ಮದೊಳ್ ಧರ್ಮಸುತನಂ ನೇಮದೊಳ್ ರಾಮಚಂದ್ರನಂ ದೊರೆಗೊಂಡು (ಚಿಕವಿ. ೩-೦೦).

[ ದೊರೆ$_2$ + ಕೊಳ್$_1$ ]

**ದೊರೆಕೊಳಿಸು$_1$** (ಕ್ರಿ). ೧. ಲಭಿಸುವಂತೆ ಮಾಡು ; ದೊರಕುವಂತೆ ಮಾಡು : ಪರ[ವ]ಸದ ಬಗೆಯೊಳೊಂದಂ ದೊರೆಕೊಳಿಸುವುದಱಗತರ್ಕ ತೋಪಸ್ಥಾನಂ ನಿರುತಂ ಸಮಾಹಿತಾಳಂಕರಣಾಂತರಮಕ್ಕುಮಿಂತು ತದುದಾಹರಣಂ (ಕವಿರಾ. ೩-೧೨೩) ; ಪುರುಪರಮೇಶ್ವರನಂದನ ದೊರೆಕೊಳಿಸುಗೆ ನಿನಗೆ . . . ಮಂಗಳಮಂ (ಆದಿಪು. ೧೨-೩೩) ; ನಾಳೆನುಣಿಸ ನೆನಗೆ ದೊರೆಕೊಳಿಸಿ ಬಂದುದು ಕರವೊಳ್ಳಿತಾಯ್ತೆಂದು ನಗುತಿರ್ಪನ್ನೆಗಂ (ಹಂಪಭಾ. ೩-೨೭.ವ) ; ಭಕ್ತಿಸಂಪದವ ದೊರೆಕೊಳಿಸಿ ಪಾಲಿಸಿದ ಪರಮ ಗುರುವೇ (ಶಿವಗೀ. ೬೫-೩೮೩) ; ಪರಿಣಾಮವಶದೆ ಜನ್ಮಾಂತರದೊಳ್ ಶುಭಮಶುಭಮೆಂಬ ಕರ್ಮಂಗಳೊಳಾರ್ ದೊರೆಕೊಳಿಸಿದರಾವುದನಾ ದೊರೆಯದೆ ಫಲಮಕ್ಕುಮವರ್ಗೆ ಪೆಱತಾದಪುದೇ (ಚಂದ್ರಪು. ೩-೬೭). ೨. ಉಂಟುಮಾಡು : ತರಳತರಲೋಚನಂ ನಿರ್ಭರರಾಗರಸಂ ಮುಖಾರ ವಿಂದಂ ನಿನ್ನಾ ದೊರೆಕೊಳಿಸಿದೊಸಗೆಯೇಂ ಬಂಧುರಂ (ಕವಿರಾ. ೩-೧೭) ; ದೊರೆಕೊಳಿಸುವ ತತ್ಕ್ರಿಯೆಯೊಳ್ ಪರಿಣಮಿಸುವ ಫಳಮನಸ್ತ್ರಶಸ್ತ್ರ ತನುತ್ರೋತ್ಕರರಹಿತಂಗಸಹಾಯಂಗರಾತಿಬಲಜಯಮನಳವೆ ದೊರೆಕೊಳಿಸುವವೋಲ್ (ಆದಿಪು. ೧೫-೧೭) ; ಕರವಿಲುಳಿತ ನೀಲಕಬರಿಭರಮಂ ಪಿಡಿದುಂ ಪರಿಭವಿಸಲ್ ಕೃಷ್ಣೆಗೆ ವಿಗೆ ದೊರೆಕೊಳಿಸದೆ ಕೋಪಮುಂ ಮನಸ್ತಾಪಮುಮಂ (ಗದಾಯು. ೧-೫೯) ; ಭಾವಿಸಲ್ಕೌತುಕಮೇನಂ ಮಾಡದೇನಂ ದೊರೆಕೊಳಿಸದೊ ಸಂಸಾರಿಗೇನೇನನೇನಂ (ಸುಕುಮಾ. ೫-೪೮) ; ಮಹಾಬಲನ ಭುಜಾಪರಿಘಕ್ಕೆ ಕುಂದನಿನಿಸಂ ದೊರೆಕೊಳಿಸದನೆಂದೊಡೇಂ ಮಯಂ ದುರ್ಜಯನೋ (ಹಂಪಾಮಾ. ೧೪-೧೩೯) ; ಪಿರಿದುಂ ಬದಿ ನಿಜ ಜನ್ಮಾಕರಮೆನಿಸಿದ ಪದ್ಮಜಾತಿಗಂ ಮ್ಲಾನತೆಯಂ ದೊರೆಕೊಳಿಸಿದನೆನೆ (ಚಂದ್ರಪು. ೮-೧೪). ೩. ಈಡೇರಿಸು ; ನೆರವೇರಿಸು : ಅಮರನಾಯಕರೆಲ್ಲಂ ನೆರೆದು ವಿವಾಹಮನಾಕೆಗೆ ದೊರೆಕೊಳಿಸಿದರ್ (ಆದಿಪು. ೭-೮೭). ೪. ಸೇರಿಸು ; ಕೂಡಿಸು : ಪಿರಿದಾಯಾಸದೆ ಗುಣಮಂ ದೊರೆಕೊಳಿಸಿದೊಡಂ ಖಲಂಗೆ ಗುಣಮಂ ಪಶ್ಚಾತ್ಕರಿಸಿ ಗುಣಿಯಂ ವಿಭೇದಿಪ ಪರಿ ತೀಕ್ಷ್ಣ ಮುಖಂಗೆ ಸೂಚಿಯಂತಿರೆ ಸಹಜಂ (ಲಬಿಕಂ. ೧-೧೭).

[ ದೊರೆಕೊಳ್$_1$ + -ಇಸು$_3$ ]

**ದೊರೆಕೊಳಿಸು$_2$** (ಕ್ರಿ). ೧. ಹೋಲಿಕೆಗೊಳ್ಳು ; ಹೋಲು ; ಸಮವಾಗಿ ಕಾಣು : ಶರದುದಿತಶಿಶಿರಕರಸುಂ ಸರಸಿರುಹಮುಮಿಾ ತ್ವದೀಯ ವದನ ಮುಮಿನಿತುಂ ದೊರೆಕೊಳಿಸುವೊಡೆ ಪರಸ್ಪರವಿರೋಧಿಗಳ್ ನಿರುತಮೆನೆ ವಿರೋಧೋಪಮಿತಂ (ಕವಿರಾ. ೩-೭೫). ೨. ಸರಿಯಾಗಿ ಕಂಡುಹಿಡಿ ; ಗ್ರಹಿಸಂ : ಸ್ಮರನಸ್ತ್ರಸಮಿತಿಯದು ನಿರ್ಭರಮಂಗಮನುರ್ಚಿ ಪೋಗೆಯುಂ ಪೋಬಟಯುಂ ದೊರೆಕೊಳಿಸಲಾಗದದಱಂ ಶರತತಿಯಲ್ತೆಂಬುದಿಂತು ಧರ್ಮಾಪೋಹಂ (ಕವಿರಾ. ೩-೦೮೫). [ ದೊರೆಕೊಳ್$_2$ + -ಇಸು$_3$ ]

**ದೊರೆಕೊಳ್ಳು** 'ದೊರೆಕೊಳ್$_1$' ನೋ.

**ದೊರೆಗದ್ದುಗೆ** (ನಾ). ೧. ರಾಜನ ಪೀಠ,-ಸಿಂಹಾಸನ. ೨. ರಾಜತ್ವ : ತೊರೆದು ದೊರೆಗದ್ದುಗೆಯನಿಲ್ಲಿಗೈತಂದನ್ನೆಸೆ (ಶ್ರೀರಾಮಾ. ೨೦೭-೩೩೫).

[ ದೊರೆ$_3$ + ಗದ್ದುಗೆ$_2$ (<ಗರ್ದುಗೆ$_2$) ]

**ದೊರೆಗಲಿ** (ನಾ). ಸರಿಸಮಾನನಾದ ಪರಾಕ್ರಮಿ,-ಕಲಿ : ಹರಣದ ಬಿಯಕೊಂದಿನಿಸುಮನೆಣಿಸದ ದೊರೆಗಲಿಗಳ್ ಬಿನದಕೆ ನಡೆವಂದದಿ ಹರಿಸಂ ವಿಗೆ ನಡೆತಂದರ್ (ಜಯುಕಾ. ೭-೨೪). [ ದೊರೆ$_2$ + ಕಲಿ$_3$ ]

**ದೊರೆಗಾಣ್** (ಕ್ರಿ). ಸಮಾನವಾಗಿ ಕಾಣು ; ಸರಿಯಾಗಿ ಕಾಣು : ದೊರೆಗಾಣೆಂ ನಿನಗೆ ಜಿನೇಶ್ವರ ಪೆಱರಂ ನಿನಗೆ ನೀನೆ ದೊರೆಯೆನಿಪ್ಪ ಮಂದರಗಿರಿಗೆ ಮಂದರಾದ್ರಿಯೆ ದೊರೆ ಜಲಧಿಗಗಾಧಜಲಧಿ ದೊರೆ ಪೆಱವೊಳವೆ (ಅಜಿತಪು. ೮-೨೨). [ ದೊರೆ$_2$ + ಕಾಣ್ ]

**ದೊರೆಗಿಡಿಸು** 'ದೊರೆಗೆಡಿಸು' ನೋ.

**ದೊರೆಗಿಡು** (ಕ್ರಿ). ೧. ಸಾಮರ್ಥ್ಯವನ್ನು ಕಳೆದುಕೊಳ್ಳು ; ಪರಾಕ್ರಮ ವನ್ನು ಕಳೆದುಕೊಳ್ಳು ; ಅಸಮರ್ಥವಾಗು : ಶರಚಾಪಚಕ್ರಭೀಕರಕರ ವಾಳಾಯುಧವಿರಾಜಿ ಪುತ್ರಕರಯುಗವಿಂ ದೊರೆಗಿಡೆ ಪೆಱಂಗೆ ಮುಗಿವುದೆ (ಆದಿಪು. ೧೨-೧೦೦). ೨. ಹಿರಿಮೆಯನ್ನು ಕಳೆದುಕೊಳ್ಳು ; ಅಯೋಗ್ಯ ವಾಗು : ದೊರೆಗಿಡೆ ಬಾಯ್ಗೆ ಬಂದುದನೆ ಬಯ್ವಂ (ಶೃಂಗಾರ. ೩-೧೫).

[ ದೊರೆ$_3$ + ಕೆಡು (<ಕೆಡು$_1$) ]

**ದೊರೆಗೆಡಿಸು**, ದೊರೆಗಿಡಿಸಂ (ಕ್ರಿ). ಯೋಗ್ಯತೆ, ಹಿರಿಮೆ ಮೊದಲಾದಂ ವನ್ನು ಕಡಮೆ ಮಾಡು,-ಕೀಳಾಗಿಸು : ಸರ್ವೇಶನ ನಿಶ್ಚಳತಪದುರ ವಣೆಯ ತೇಜಮಂ ದೊರೆಗೆಡಿಸಲ್ ಕಳೆರವದಿಂ ಬಗ್ಗಿ ಸುಪರಗಿಳಿಗಳ ಚಪ್ಪ ರಣೆಯೊಂದೆ ಸಾಲದೆ (ಗಿರಿಕ. ೭-೬೨) ; ವರುಣನ ಪುರುಳುಗೆಡಿಸಿ . . . ಧನದನನು ದೊರೆಗೆಡಿಸಿದನೀಶಾನ್ಯನನಿಳೆಯೊಳು ತಿರಿದುಣಿಸಿದನದಟಂದ (ತ್ರಿಪುಸಾಂ. ೭-೬೭). **ದೊರೆಗಿಡಿಸು** : ಕುರುವೃದ್ಧಂ ಕುಲವೃದ್ಧಂ ಸರಿತ್ಸುತಂ ತಕ್ಕನೆಂದು ನಂಬಿದ ಸಭೆಯೊಳ್ ದೊರೆಗಿಡಿಸಿ ನುಡಿದೊಡೇ ನೊಲವರಮೆನ್ನದೆ ನೀನುಮದನೆ ಕೊಂಡೆಸಗುವುದೇ (ಹಂಪಭಾ. ೭-೪೪) ; ಮನುಜರೆಲ್ಲರ ಪೆಂಪಂ ದೊರೆಗಿಡಿಸಿ ವೀರಗಜ್ಜನ ಹನುಮಂ ಧರೆ ಪೊಗಳಲು

**ದೋಷಘ್ನ** (ನಾ). ೧. ಪಾಪವನ್ನು ನಾಶಮಾಡತಕ್ಕವನು; ಪಾತಕವನ್ನು ನಿವಾರಿಸುವವನು: ದೋಷಘ್ನನೆಯಾಪ್ತಂ ತದ್ಭಾಷಾತ್ಮಕಮಪ್ಪುದಾಗಮಂ (ಪಕಾರ. ೪೫೬). ೨. ಕೇಡುಕನ್ನು ನಿವಾರಿಸುವವನು. [ ಸಂ. ]

**ದೋಷಜ** (ನಾ). (ದೇಹಕ್ಕೆ ಸಂಬಂಧಿಸಿದ) ವಾತ, ಪಿತ್ತ ಮತ್ತು ಕಫಗಳೆಂಬ ಮೂರು ನ್ಯೂನತೆಗಳಿಂದ ಉಂಟಾದ ವ್ಯಾಧಿ: ವ್ಯಾಧಿಯುಂ ಕರ್ಮಜವೆಂದೂ, ದೋಷಜವೆಂದೂ, ಕರ್ಮದೋಷಜವೆಂದೂ ಮೂರು ವಿಧವಾಗಿರುವುದು . . . ವಾತ ಪಿತ್ತ ಶ್ಲೇಷ್ಮ ಮೊದಲಾದ ದೋಷಗಳಿಂದುಂಟಾದ ವ್ಯಾಧಿಯು ದೋಷಜವೆನಿಸಿಕೊಂಬುದು (ಸಕವೈ. ೨೩). [ ಸಂ. ]

**ದೋಷಜ್ಞ** (ನಾ). ೧. ತಿಳಿದವನು; ಪಂಡಿತ; ವಿದ್ವಾಂಸ: "ಸೂರಿ ಬುಧಂ ಕವಿ ವಾಗ್ಮಿ ವಿಶಾರದನಭಿರೂಪನನ್ವಿತಂ ದೋಷಜ್ಞಂ" (ವಸ್ತುಕೋ. ೯೮-೪): ದೋಷಜ್ಞರ್ ಮುನಿದೊಸೆದು ಪರೀಕ್ಷಿಸಿದೊಡಮುಸುಪಮ ಗುಣಮೊಂದದಂದು ಕೃತಿ ಸಂದಪುದೇ (ಪಾರ್ಶ್ವಪು. ೧-೭೯). ೨. ಉಪಾಧ್ಯಾಯ. ೩. [ವೈದ್ಯ] ರೋಗವು ಯಾವ ದೋಷದಿಂದ ಉಂಟಾಗಿದೆ ಎಂದು ಗುರುತಿಸಬಲ್ಲವನು; ರೋಗನಿದಾನವನ್ನು ಬಲ್ಲವನು; ವೈದ್ಯ: "ದೋಷಜ್ಞಂ ತಂತ್ರವೇದಿ ಬೆಜ್ಜಂ ವೈದ್ಯಂ" (ವಸ್ತುಕೋ. ೭೪-೪೨); "ಆಯುರ್ವೇದೀ, ಭಿಷಕ್, ವೈದ್ಯ:, ದೋಷಜ್ಞ:, ಚಿಕಿತ್ಸಕ: –ಈ ೫ ವೈದ್ಯಂ" (ಹಲಾಯು. ೧೦೦-೪೫೩). [ ಸಂ. ]

**ದೋಷಜ್ವರ** (ನಾ). (ದೇಹಕ್ಕೆ ಸಂಬಂಧಿಸಿದ) ವಾತ, ಪಿತ್ತ ಮತ್ತು ಕಫಗಳೆಂಬ ಮೂರು ವಿಧವಾದ ನ್ಯೂನತೆಗಳಲ್ಲಿ ಯಾವುದರಿಂದಲಾದರೂ ಉಂಟಾಗುವ ಜ್ವರ: ಕೊಡಸಿಗೆಬೀಜ, ಹಿಪ್ಪಲಿ, ಶೀಗೆ . . . ಕಷಾಯವಿಕ್ಕಿ ಕೊಡಲು, ಪೈತ್ಯಜ್ವರ, ವಿಷಮಜ್ವರ, ದೋಷಜ್ವರ ಸಹ ಗುಣವಾಗುವುವು (ಸಕವೈ. ೮೦). [ ದೋಷ + ಜ್ವರ ]

**ದೋಷತಟ್ಟು** (ಕ್ರಿ). ಕಳಂಕ ತಗುಲು; ಅಪವಾದ ಬರು: ಒಡಲೊಳಗೇ ಉಸಿರಿಲ್ಲ ಒಂದು ಕ್ಷಣವಾದರೆ ಜೀವ ನಿಲ್ಲುವುದಿಲ್ಲ ಮಡಿದರೆ ದೋಷತಟ್ಟುವುದು ಒಂದು ಹಿಡಿ ಅಕ್ಕಿಯಿಂದಲೆ ಕೀರ್ತಿ ಬಾಹೋದು (ಪುರಂದ. ೪-೬೯-೭). [ ದೋಷ + ತಟ್ಟು₁ ]

**ದೋಷತ್ರಯ** (ನಾ). ೧. ದೋಷಾಶ್ರಯಂ, ಛಿದ್ರವಕ್ರ, ಕ್ರಿಮಿದೂಷಣಗಳೇಂದೆಂಬ (ಹವಳದ) ಮೂರು ಬಗೆಯ ನ್ಯೂನತೆಗಳು: ದೋಷಾಶ್ರಯಂ ಛಿದ್ರವಕ್ರಂ ಕ್ರಿಮಿದೂಷಣವೆಂದು ದೋಷತ್ರಯಮುಂಟದನುಳಿದು ನಿರ್ದೋಷವಿದ್ರುಮಮಂ ಕಾಮಿನಿಯರ್ ವಿಶೇಷವಾಗಿ ತಾಳಲ್ ಸುಪಾಯುಷ್ಯಸುಪುತ್ರಾರೋಗ್ಯಾದಿಸಿದ್ಧಿಗಳಪ್ಪುವು (ಹಾಲಾಸ್ಯ. ೨-೧-೧೧೯ವ). ೨. (ದೇಹಕ್ಕೆ ಸಂಬಂಧಿಸಿದ) ವಾತ, ಪಿತ್ತ ಮತ್ತು ಕಫಗಳೆಂಬ ಮೂರು ವಿಧವಾದ ನ್ಯೂನತೆಗಳು: "ದೋಷತ್ರಯಂವಾತ ಪಿತ್ತ ಶ್ಲೇಷ್ಮಂಗಳಕ್ಕು" (ಮಂಗರಾ. ೧೧೪-೩); ಲವಂಗ, ಶುಂಠಿ . . . ಇವಿಷ್ಟನ್ನೂ ಸಮಭಾಗವಾಗಿ ಕೂಡಿ ಒಂದು ತೊಕ ಸಕ್ಕರೆ ಬೆರಸಿ ಬಿಸಿನೀರಿನಲ್ಲಿ ಕಲಸಿ, ತೆಗೆದುಕೊಂಡರೆ ವಾತಪಿತ್ತಶ್ಲೇಷ್ಮ, ದ್ವಂದ್ವಜ್ವರ, ಸನ್ನಿಪಾತಜ್ವರ, ದೋಷತ್ರಯ . . . ಅತಿಸಾರ ಮೊದಲಾದ ಪೈತ್ಯಜ್ವರಂ ವಾಸಿಯಾಗುವುವು (ಸಕವೈ. ೬೬). [ ದೋಷ + ತ್ರಯ ]

**ದೋಷದೂರ** (ನಾ). ೧. ಕುಂದಿಲ್ಲದುದು; ಕಳಂಕವಿಲ್ಲದುದು: ಶಾಸನಂ ವಿಶ್ರುತಮಖಿಳಹಿತಂ ದೋಷದೂರಂ ಗಭೀರಂ (ಎಕ. II, ೬೩-೨: 1313); ಇಂತಿವೈದನಾನೊರ್ಬುಳಿಯಾಗಿ ಪೇಳ್ದೆನೆಲೆ ಮಂತ್ರಿಗಳಾಲಿಪುದೀ ಗುಣಾಂಕದಿಂದುರ್ಬಿದ ದೋಷದೂರಮೆನಿಸುತ್ತ ವಿರಾಜಿಪ ಪಚ್ಚೆಯಂ ಜನರ್ (ಹಾಲಾಸ್ಯ. ೨-೧-೯೦). ೨. ಕಳಂಕಗಳಿಂದ ದೂರವಾದವನು; ಕಳಂಕರಹಿತವಾದವನು: ದೋಷದೂರ ಶ್ರೀಪುರಂದರ ವಿಠ್ಠಲ ಪೋಷಭಕ್ತ ಸುವ್ಯಂದ (ಪುರಂದ. ೩-೨೪-೧೧). [ ದೋಷ + ದೂರ ]

**ದೋಷದೂರತೆ** (ನಾ). ೧. ತಪ್ಪಿಲ್ಲದಿರುವಿಕೆ. ೨. (ದೇಹಕ್ಕೆ ಸಂಬಂಧಿಸಿದ) ವಾತ, ಪಿತ್ತ, ಕಫಗಳೆಂಬ ಮೂರು ನ್ಯೂನತೆಗಳಿಂದ ದೂರವಾಗಿರುವಿಕೆ: ಕಫ ವಾತ ಪಿತ್ತ ದೋಷದೂರತೆಯುಂ ಜರಾಮಯವ್ಯಾಬಾಧಾಬಾಧಿತತ್ವಮುಂ . . . ತನುಗನುಸಂಗತಮಾಗೆ (ಶಾಂತಿಪು. ೧೧-೯೪ ವ). [ ಸಂ. ದೋಷದೂರತಾ ]

**ದೋಷದೂರೀಕರಣ** (ನಾ). ಕುಂದು, ನ್ಯೂನತೆಗಳ ನಿವಾರಣೆ: ಅಶೇಷದೋಷದೂರೀಕರಣಪರಿಣತಾನ್ತಃಕರಣರುಮಪ್ಪ ಶ್ರೀಮನ್ನಯಕೀರ್ತಿ ಸಿದ್ಧಾನ್ತ ಚಕ್ರವರ್ತಿಗಳ್ (ಎಕ. II, ೬೬-೬೯: 1176). [ ದೋಷ + ದೂರೀಕರಣ₂ ]

**ದೋಷದೂಷಿತ** (ನಾ). ಪಾಪದಿಂದ ಕಳಂಕಿತನಾದವನು. [ ದೋಷ + ದೂಷಿತ ]

**ದೋಷದೂಷಿತೆ** (ನಾ). ಪಾಪ ಮಾಡಿದವಳು; ಕೆಟ್ಟ ಕೆಲಸ ಮಾಡಿ ಕಳಂಕ ಹೊಂದಿದವಳು: ಎಲೆ ಎಲೆ ದೋಷದೂಷಿತೆ ದುರಾತ್ಮಿಕೆ ಲಿಂಗದ ಪಾಪನಾಂಗಮಂ ತೊಲಗದೆ ಬಾಯುಗುಳ್ ಸಿಡಿಯೆ ತೂಂತಿಜಿದಪ್ಪೆ ವರಾಕಿ ಪಾಟಿಸುತ್ತಲೆದುಲಿದಾಕೆಯುಂ ನಿಳಯದಿಂ ಪೊಱಗಿಕ್ಕಿ ನಿರೀಕ್ಷಿಪಾಗಳ್ (ವೃಷವಿ. ೯-೩೬). [ ದೋಷ + ದೂಷಿತೆ ]

**ದೋಷದೃಷ್ಟಿ** (ನಾ). ೧. ನ್ಯೂನತೆಯಿಂದ ಕೂಡಿದ ದೃಷ್ಟಿ. ೨. ದೃಷ್ಟಿಯಲ್ಲಿ ನ್ಯೂನತೆಯುಳ್ಳವನು; ದೃಷ್ಟಿ ದೋಷವುಳ್ಳವನು: ಥಳಥಳಿಪ ಪದಾರ್ಥವನೇಂ ಗಳ ಕಾಣ್ಬನೆ ದೋಷದೃಷ್ಟಿ (ಪುಷ್ಪಪು. ೦-೪೭). [ ದೋಷ + ದೃಷ್ಟಿ ]

**ದೋಷನಿವಾರಣ** (ನಾ). ಕುಂದು, ನ್ಯೂನತೆಗಳ ನಿವಾರಣೆ: ಜಡರಂ ಜಾತಿವಿಹೀನರಂ . . . ಪಡೆದಾ ದೋಷನಿವಾರಣಕ್ಕಮೃತದಂಡಾಧೀಶನಂ ಪುಣ್ಯದಿಂ ಪಡೆದಂ ಪದ್ಮಜಂ (ಎಕ. VI, ತರೀಕೆ. ೪೫-೬೨: 1196). [ ದೋಷ + ನಿವಾರಣ ]

**ದೋಷಪ್ರತಿಕಾರ** (ನಾ). ಪಾಪದ ವಿರುದ್ಧ ಮಾಡಬೇಕಾದ ಕ್ರಿಯೆ; ಪಾಪನಾಶ: ನಿಜದ ಕಾಯೋತ್ಸರ್ಗದೊಳ್ ಶುದ್ಧಿ ತಳ್ತಿರೆ ದೋಷಪ್ರತಿಕಾರ ಸಾರತಪಮಂ ತತ್ಪಾಪಸಂ ತಾಳ್ದಿದಂ (ಸುಕುಮಾ. ೪-೧೫). [ ದೋಷ + ಪ್ರತಿಕಾರ₂ ]

**ದೋಷಭಾವ** (ನಾ). ಪಾಪದ ಆಲೋಚನೆ; ಪಾತಕದ ಚಿಂತೆ: ಗಣಭೃತ್ಪದಾಂಬುರುಹಸಂಕುಳವಾಗಮಸ್ಮದೀಯಭಾವಾಂಗ ಪವಿತ್ರಮಾನಸದೊಳಿಂತೆಸೆದಿರ್ಕೆ ಸುರಾಗದೇಟ್ಟಿಯಿಂ ಪಿಂಗದೆ ದೋಷಭಾವಭವಬಂಧನಮುದಾಮಯದು:ಖಸಂಕುಳಂ (ಜಮದ. ೧-೯). [ ದೋಷ + ಭಾವ₂ ]

**ದೋಷಭೂಯಿಷ್ಠ** (ನಾ). (ಅನೇಕ) ನ್ಯೂನತೆಗಳಿಂದ ಕೂಡಿದುದು,–ತುಂಬಿದುದು: ಸಹಜವಾದ ಕರ್ಮವು ದೋಷಭೂಯಿಷ್ಠವಾಗಿದ್ದರೂ ಬಿಡಬಾರದ್ದು (ಭಾರದ. ೧೧೬). [ ದೋಷ + ಭೂಯಿಷ್ಠ ]

**ದೋಷಮುಕ್ತ** (ನಾ). ತಪ್ಪಿಲ್ಲದುದು; ಸರಿಯಾದುದು: ಕಾಸೂನುಕಟ್ಟಳೆಗಳ ಅನ್ವಯ ಮತ್ತು ಅವುಗಳ ವ್ಯಾಖ್ಯಾನ ದೋಷಮುಕ್ತವಾಗಿದೆಯೆ ಇಲ್ಲವೆ ಎಂದು ಸೆನೆಟ್ ಪರಿಶೀಲಿಸುತ್ತದೆ (ಪುನಲು. ೩೪೨). [ ದೋಷ + ಮುಕ್ತ ]

**ದೋಷಮೂರ್ಛಿತ** (ನಾ). ಪಚ್ಚೆಯ ಐದು ವಿಧವಾದ ನ್ಯೂನತೆಗಳಲ್ಲಿ ಒಂದು: ಕೆಂಪುತಾವರೆಯ ಎಲೆಯ ಹಿಂಭಾಗದ ಬಣ್ಣವನ್ನು ಹೊಂದಿರುವ ಪಚ್ಚೆ: ದೋಷಲೇಶಾನ್ವಿತಂ ದುಷ್ಟಂ ದೋಷಮೂರ್ಛಿತಂ ದೋ[ಷಲೇಶಂ] ಮಂದದೋಷಮೆಂದಿಂತೀ ಪಂಚವಿಧಮಾದ ಸದೋಷಜಾತಿ ಮಾರಕತಮಂ ಪೇಳ್ದಿಂ (ಹಾಲಾಸ್ಯ. ೨-೧-೮೮ ವ); ಹಲ್ಲೆಬಾಹ್ಯಪತ್ರದ ವರ್ಣಮಂತಪ್ಪದೆ ಲೋಕದೊಳ್ ಪಾಡಿನಿಂದಮೆ ದೋಷಮೂರ್ಛಿತಮೆಂಬರೆಯ್ದೆ ಪರೀಕ್ಷಕರ್ (ಹಾಲಾಸ್ಯ. ೨-೧-೮೯). [ ಸಂ. ]

**ದೋಷಮೂರ್ಛೆ** (ನಾ). (ದೇಹಕ್ಕೆ ಸಂಬಂಧಿಸಿದ) ವಾತ, ಪಿತ್ತ ಮತ್ತು ಕಫಗಳೆಂಬ ಮೂರು ವಿಧವಾದ ನ್ಯೂನತೆಗಳಲ್ಲಿ ಯಾವುದರಿಂದಲಾದರೂ ಉಂಟಾಗುವ ಮೂರ್ಛೆ: ದುಂಪರಾಷ್ಟೆ, ಪಿಲ್ಲ ಪೀಲುಪಿಂಡರಗೆಡ್ಡೆ . . . ಇವಂ ಸಮಭಾಗವಾಗಿ ಕಷಾಯಂ ಮಾಡಿ ಕೊಡಲು ದೋಷಮೂರ್ಛೆ ಪರಿಹರ (ಕಲ್ಯ. ೧೭೩).

[ ದೋಷ + ಮೂರ್ಛೆ ]

**ದೋಷರಹಿತ** (ನಾ). ೧. ಪಾಪರಹಿತವಾದುದು ; ಶುದ್ಧವಾದುದು : ದೋಷಸಹಿತರಾದವರು ಪೇಳುವ ಧರ್ಮ ಲೇಸಲ್ಲವೆಂದವನುಳಿದು ದೋಷರಹಿತಮಪ್ಪ ದಯಯುತ ಧರ್ಮವ ಲೇಸಾಗಿ ಪಿಡಿಯಬಲ್ಲವರು (ದ್ವಾದಶಾ. ೧೧-೧೨). ೨. ಪಾಪಗಳಿಲ್ಲದವನು ; ಪವಿತ್ರನಾದವನು : ದೋಷಿಯು ನಾನಾದಡೇನಯ್ಯ, ಸರ್ವದೋಷರಹಿತ ನೀನಲ್ಲವೆ (ಪುರಂದ. ೪-೦೪೨-೩). [ ಸಂ. ]

**ದೋಷರಹಿತೆ** (ನಾ). ಕಳಂಕಗಳಿಲ್ಲದವಳು; ಪವಿತ್ರಳಾದವಳು : ಸ್ಫೂರ್ತಿ ಸಿರಿಯು ನೀನುಕ್ಕಿ ಬಾ ಬೆಡಗುಗಾರ್ತಿ ನೀನೊಲಿದು ಬಾ ಭಾವಜಲಧಿ ಕೃಪೆ ದೋರು ಬಾ ದೋಷರಹಿತೆ ನೀ ಸಾರಿ ಬಾ (ಚಂದ್ರಮಾ. ೮-೦೪).

[ ದೋಷರಹಿತ + -ಎ₃ ]

**ದೋಷಲೇಶಾನ್ವಿತ** (ನಾ). ಪಚ್ಚೆಯ ಐದು ವಿಧವಾದ ನ್ಯೂನತೆಗಳಲ್ಲಿ ಒಂದು ; ಕಾಡುನಿಂಬೆ ಬಣ್ಣದ ಕಾಂತಿಯನ್ನು ಹೊಂದಿರುವ ಪಚ್ಚೆ : ದೋಷಲೇಶಾನ್ವಿತಂ ದುಷ್ಟಂ ದೋಷಮೂರ್ಛಿತಂ ದೋ[ಷಲೇಶಂ] ಮಂದದೋಷವೆಂದಿಂತೀ ಪಂಚವಿಧಮಾದ ಸದೋಷಜಾತಿ ಮರಕತಮಂ ಪೇಳ್ವೆಂ (ಜಾಂತಸ. ೨-೦-೮೮ ಪ). [ ಸಂ. ]

**ದೋಷವರ್ಜಿತ** (ನಾ). ೧. ಪಾಪದಿಂದ ದೂರವಾದುದು ; ಪವಿತ್ರವಾದುದು : ದೋಷವರ್ಜಿತಮಂ ಜ್ಞಾನಲತಾಭಿವೃದ್ಧಿಯನಶೇಷಭ್ರೀತಿಯಂ ಲೋಕವಿಶ್ರುತಮಂ ಧರ್ಮಮನೇಕೆ ಮಿಕ್ಕ ಪುರುಷಾರ್ಥಕ್ಕಂ ಸಮಂ ಮಾಬ್ಬರೋ (ಮಲ್ಲಿಕಾ. ೦-೪೩). ೨. ಪಾಪಗಳನ್ನು ಬಿಟ್ಟವನು ; ಪವಿತ್ರನಾದವನು : ದೃಷ್ಟ ಶ್ರುತಾನುಭೂತ ದೋಷವರ್ಜಿತನುಂ ಮಂದ ತರಕಷಾಯಾನುರಂಜಿತಮಪ್ಪಾತಂಗಕ್ಕುಮವ ಬೋಧಿ ಪಾಯ ವಿಚಯಂ (ಚಾವುಂಪು. ೪೪೩). [ ದೋಷ + ವರ್ಜಿತ ]

**ದೋಷವಿಡು** (ಕ್ರಿ). ತಪ್ಪು ಹೊರಿಸು ; ಅಪಾದಿಸು : ತಮ್ಮ ಮೆಚ್ಚಕ್ಕೆ ದೋಷವಿಡಬೇಕಲ್ಲದೆ ಎರಡನೆಯವರಿಗೆ ದೋಷವಿಡಬಾರದು (ಮುಂಬಯಿ. ೫-೮೬). [ ದೋಷ + ಇಡು₁ ]

**ದೋಷವಿದೂರ** (ನಾ). ಪಾಪಗಳಿಂದ ದೂರನಾದವನು ; ಪವಿತ್ರನಾದವನು : ಲೇಸಾಗಿ ಮಡುವಿನೊಳ್ ಶೇಷನ ತುಳಿದಿಟ್ಟ ದೋಷ ವಿದೂರನ ತೂಗಿರೆ (ಪುರಂದ. ೨-೦೩೬-೪). [ ಸಂ. ]

**ದೋಷವಿರಕ್ತ** (ನಾ). ಕೆಟ್ಟ ಗುಣ ಅಥವಾ ಕೆಟ್ಟ ಕಾರ್ಯಗಳಲ್ಲಿ ಆಸಕ್ತಿಯಿಲ್ಲದವನು : ದೋಷವಿರಕ್ತನುಂ ಗುಣಾನುರಕ್ತನುಮಲ್ಲದೆ ಧರ್ಮಾಗೆಯ್ವನುಂ ಎಂತು ಪೆರ್ಚುಗುಂ (ಜೀವಸಂ. ೪೭-೨೦).

[ ದೋಷ + ವಿರಕ್ತ ]

**ದೋಷಸಹಿತ** (ನಾ). ಪಾಪದಿಂದ ಕೂಡಿದ ವ್ಯಕ್ತಿ ; ಪಾಪಿ : ದೋಷಸಹಿತರಾದವರು ಪೇಳುವ ಧರ್ಮ ಲೇಸಲ್ಲವೆಂದವನುಳಿದು ದೋಷರಹಿತಮಪ್ಪ ದಯಾಯುತ ಧರ್ಮವ ಲೇಸಾಗಿ ಪಿಡಿಯಬಲ್ಲವರು (ದ್ವಾದಶಾ. ೧೦-೦೨). [ ದೋಷ + ಸಹಿತ ]

**ದೋಷಸಿದ್ಧಿ** (ನಾ). ಅಪರಾಧಿಯೆಂಬ ನಿರ್ಧಾರ : ಜಾರಿಯಲ್ಲಿರುವ ಒಂದು ವಿಧಿಯನ್ನು ಉಲ್ಲಂಘಿಸಿದುದಕ್ಕಲ್ಲದೆ ಮತ್ತಾವ ಅಪರಾಧಕ್ಕಾಗಿಯೂ ಅವನ ಮೇಲೆ ದೋಷಸಿದ್ಧಿ ನಡೆಯತಕ್ಕದ್ದಲ್ಲ (ಭಾರಾನ. ೧೨).

[ ದೋಷ + ಸಿದ್ಧಿ ]

**ದೋಷಹಚ್ಚು** (ಕ್ರಿ). = ದೋಷವಿಡು : ಅವನಿಗೆ ಕೆಲವು ಜನರು ದೋಷ ಹಚ್ಚುತ್ತಾರೆ (ಮುಂಬಯಿ. ೫-೨೦೬). [ ದೋಷ+ಹಚ್ಚು₁ (<ಪಚ್ಚು₃) ]

**ದೋಷಹರ** (ನಾ). ಕೆಡುಕನ್ನು ನಾಶಮಾಡುವಂಥದು : ಮೂಲಕಂ ಬಾಲಂ ದೋಷಹರಮುಬಾಲಂ ದೋಷಕರಮದಱಿಂ ಪ್ರತ್ಯಕ್ಷ ಪರಿಚ್ಛೇದ್ಯಂ ವಸ್ತುತತ್ತ್ವಮನುಮಾನದಿಂ ವ್ಯಭಿಚರಿಸುಗುಂ (ಶಾಂತಿಪು. ೮-೧೨೮ ಪ).

[ ಸಂ. ]

**ದೋಷಹರಣ** (ನಾ). ೧. ಪಾಪವನ್ನು ನಿವಾರಣೆ ಮಾಡುವಿಕೆ. ೨. (ದೇಹಕ್ಕೆ ಸಂಬಂಧಿಸಿದ) ವಾತ, ಪಿತ್ತ ಮತ್ತು ಕಫಗಳೆಂಬ ಮೂರು ಬಗೆಯ ನ್ಯೂನತೆಗಳನ್ನು ನಿವಾರಿಸುವಿಕೆ.

[ ದೋಷ + ಹರಣ₂ ]

**ದೋಷಹೊರಿಸು** (ಕ್ರಿ). ಅಪವಾದಕ್ಕೆ ಹೊಣೆ ಮಾಡು,-ಈಡು ಮಾಡು : ಚೌಡಪ್ಪನವರ ಮೇಲೆ ದೋಷಹೊರಿಸುವುದು ನನಗೇಕೋ ಸರಿಯೆನಿಸದು (ಹಳ್ಳಿಹಾ. ೦೦೫). [ ದೋಷ + ಹೊರಿಸು (<ಪೊಱಿಸು) ]

**ದೋಷಹೊರು** (ಕ್ರಿ). ಅಪವಾದಕ್ಕೆ ಗುರಿಯಾಗು,-ಈಡಾಗು; ಅಪವಾದ ಹೊರು. 'ದೋಷಹೊರಿಸು' ಪರಾ.

[ ದೋಷ + ಹೊರು (<ಪೊಱು) ]

**ದೋಷಾಂಧ** (ನಾ). ದೋಷದಿಂದ ಕುರುಡಾದವನು : ಕಾಮಾತುರರುಂ ರಜೋಧಿಕರುಮೇಂ ಪೇದಕ್ಕೆ ಪಕ್ಕಾಗದಿರ್ಪರೆ ದೋಷಾಂಧರ್ (ಹಂರಾಮಾ. ೭-೬) : ಪರಮದೇಶಿಕಶಿರೋಮಣಿಯ ದೋಷಾಂಧಮದಕರಿ ವಿಳಸಿತ ಸೃಣಿಯ (ವೀಕ್ಕಿಪು. ೫-೮-೨). [ ದೋಷ + ಅಂಧ ]

**ದೋಷಾಕರ** (ನಾ). ೧. ಪಾಪಗಳ ಆಕರ,-ನೆಲೆ,-ಗಣಿ. ೨. ಕಪ್ಪು ಕಲೆಗಳಿಂದ ಕೂಡಿದವನು ; ಚಂದ್ರ : ಸರಿದಧಿಪತಿಯಂ ದೋಷಾಕರನಂತರ್ಮಲಿನನಾಗಿಯುಂ ಪೆರ್ಚಿಸುಗುಂ (ಕವಿರಾ. ೩-೩೫) : ಮುಗ್ಧ ದೋಷಾಕರನಂ ವಕ್ರತ್ವಮಂ ದುಶ್ಚ್ಯವನನ ಹಯದಿಂ ವೇಗಮಂ ತಾಳ್ದಿ (ಕಾದಂಪೂ. ೫೪೬) ; ಇರದೆಯ್ತರ್ಪಂ ದೋಷಾಕರನವನಂ ನೋಡೆಲಾಗ ದೆಂದಾ ದಿನಪಂ ವರಧರ್ಮರಾಜಜನಕಂ ಕರಕುಳಮಂ ತೆಗೆದು ನೀಳ ಗಿರಿಯಂ ಸಾರ್ದಂ (ಹಮ್ಮೀರ. ೩-೦೩).

[ ಸಂ. (ದೋಷ + ಆಕರ ; ದೋಷಾ + ಕರ) ]

**ದೋಷಾಕರರಹಿತ** (ನಾ). ೧. ಪಾಪಗಳಿಗೆ ನೆಲೆ ನೀಡದಂಥದು ; ಪಾಪರಹಿತವಾದುದು. ೨. ಚಂದ್ರನಿಂದ ದೂರವಾದುದು ; ಚಂದ್ರರಹಿತವಾದುದು. ೧, ೨ : ಸರಸಗುಣಶಾಲಿ ದೋಷಾಕರರಹಿತಂ ಸ್ವಪ್ರಸಿದ್ಧಮಾತಿಬಂಧುರನಾಂಬುರುಹಮದು ಮಿತ್ರರುಚಿವಿಸ್ಫುರಿತಂ ಸಿರಿಗಾದುದಲ್ತೆ ಮನೆ (ರಾಜಶೇ. ೬-೦೨೭). [ ಸಂ. ]

**ದೋಷಾಗಮನ** (ನಾ). ಪಾಪದ ಬರುವಿಕೆ ; ಪಾಪಸಂಬಂಧ ಉಂಟಾಗುವಿಕೆ : ರಾಗಮೆ ದೊರೆಕೊಳಿಕುಂ ದೋಷಾಗಮನಮನೆಂದು ಪೇಳ್ವ ತೆಱದಿಂ ಸಂಧ್ಯಾರಾಗಮೆ ದೊರೆಕೊಳಿಸಿತು ತಿಮಿರಾಗಮಮಂ (ಪುಷ್ಪಪು. ೦೩-೨೦). [ ದೋಷ + ಆಗಮನ ]

**ದೋಷಾಚರ** (ನಾ). ಕತ್ತಲೆಯಲ್ಲಿ ಓಡಾಡುವವನು; ನಿಶಾಚರ: ಖೇಚರ ಕಿನ್ನರ ಯಕ್ಷಪಿಶಾಚರ್ ಗಂಧರ್ವರಪ್ಸರಃಪ್ರಕರಂ ದೋಷಾಚರರೆಂದದ್ಭುತ ಗುಣಗೋಚರರವರೆಯ್ದೆ ದೇವಯೋನಿಗಳೆನಿಪರ್ (ವಸ್ತುಕೋ. ೦೦-೫೪).

[ ಸಂ. ]

**ದೋಷಾತಿರೇಕ** (ನಾ). ೧. ಹೆಚ್ಚಾದ ಕತ್ತಲೆ. ೨. ವಾತ, ಪಿತ್ತ ಮತ್ತು ಕಫಗಳ ಆಧಿಕ್ಯ. ೧, ೨ : ಸೊಡರ್ಗಳಿರುಳೆಣ್ಣೆಯಂ ನಿಲೆ ಕುಡಿದಟ್ಟಮೆ ಮಟ್ಟುಮೆನಿಸಿ ನಮೆದುವು ತನುಗಳ್ ಜಡತೆಯಿನದಂತೆ ಪೊಡರಲ್ ಕುಡುಗುಮೆ ದೋಷಾತಿರೇಕಮಂರುಚಿನಿಮಿತ್ತಂ (ಪುಷ್ಪಪು. ೮-೧೭).

[ ದೋಷ + ಅತಿರೇಕ ]

**ದೋಷಾತಿಸಾರ** (ನಾ). (ದೇಹಕ್ಕೆ ಸಂಬಂಧಿಸಿದ) ವಾತ, ಪಿತ್ತ ಮತ್ತು ಕಫಗಳೆಂಬ ದೇಹದ ಮೂರು ವಿಧವಾದ ನ್ಯೂನತೆಗಳಿಂದ ಉಂಟಾಗುವ ಅತಿಸಾರ,-ಭೇದಿ: ಭದ್ರಮುಸ್ತೆ, ಅಮರದವಳ್ಳಿ . . . ಅತಿಬಲೆ, ಶುಂಠಿ, ನೆಲಬೇವು ಇವಂ ಸಮಭಾಗ ಕಷಾಯಂ ಕಾಸಿ ಕೊಡಲು ದೋಷಾತಿಸಾರಂ ಪೋಣ್ಕುಂ (ಕಳಕ್ಕ. ೩೨೨).
[ ದೋಷ + ಅತಿಸಾರ ]

**ದೋಷಾನುವರ್ತನೆ** (ನಾ). ೧. ಕೆಟ್ಟತನವನ್ನು ಅನುಸರಿಸುವಿಕೆ; ಕೇಡನ್ನು ಅನುಸರಿಸುವುದು. ೨. ರಾತ್ರಿಗೆ ಹೊಂದಿಕೊಳ್ಳುವುದು; ರಾತ್ರಿಯನ್ನು ಅನುಸರಿಸುವುದು. ೧, ೨: ಜಗತ್ಪ್ರೀತಿಕರವಂಗ್ಯಹೀತನಾಗಿಯುಂ ದೋಷಾನುವರ್ತನೆಗೊಳಗಾಗದಕಳಂಕರಾಜನುಂ . . . ಪುಣ್ಯಜನೇಶ್ವರನುಮೆನಿಸಿ (ಪುಷ್ಪಪು. ೩-೨೦ ವ).
[ ದೋಷ + ಅನುವರ್ತನೆ ]

**ದೋಷಾನುಷಂಗ** (ನಾ). ಕತ್ತಲೆಯ ಸಹವಾಸ,-ಸಂಬಂಧ: ಕೋಕವಿಧುಃನಂ ವಿಯೋಗೋದ್ರೇಕಂ ದೋಷಾನುಷಂಗದಿಂ ಸಮನಿಸೆ ಚಿಂತಾಕುಲಿತಮಾದುದಾರ್ಗಂ ವ್ಯಾಕುಲತೆಯನುಂಟುಮಾಡುವಿಪ್ರವಿಯೋಗಂ (ಶಂರಾಮಾ. ೧೧-೧೮೨). [ ದೋಷ + ಅನುಷಂಗ ]

**ದೋಷಾನುಷಂಗೆ** (ನಾ). ೧. ಕಳಂಕವನ್ನು ಹೊಂದಿದವಳು; ಕಳಂಕಿತೆ. ೨. ಕತ್ತಲೆಯ ಸಹವಾಸವನ್ನುಳ್ಳವಳು. ೧, ೨: ಲಕ್ಷ್ಮೀಮಹಾದೇವಿ ಕಮಳನಿಲಲಕ್ಷ್ಮಿಯಂ ಜಡಾಶಯನಿವಾಸಿಯೆನಿಸಿಯುಂ ಇಂದುಲೇಖಾಲಕ್ಷ್ಮಿಯಂ ವಕ್ರಸ್ವಭಾವೆಯೆನಿಸಿಯುಂ ನಕ್ಷತ್ರಲಕ್ಷ್ಮಿಯಂ ದೋಷಾನುಷಂಗೆಯೆನಿಸಿಯುಂ (ಮಲ್ಲಿಪು. ೩-೩೪ ವ).
[ ಸಂ. ದೋಷಾನುಷಂಗಾ (ದೋಷ + ಅನುಷಂಗ + – ) ]

**ದೋಷಾನ್ವೇಷಣ** (ನಾ). ೧. ತಪ್ಪನ್ನು ಹುಡುಕುವುದು; ದೋಷವನ್ನು ಕಂಡುಹಿಡಿಯುವುದು: ತದೀಯ ವಯಸ್ಯನಾತನೆಗ್ಗಂ ಮಾರ್ಕೊಂಡು ದೋಷಾನ್ವೇಷಣಮಂ ಬಾರಿಸಿ (ಶಾಂತಿಪು. ೮-೭೯ವ). ೨. ತಪ್ಪನ್ನು ಹುಡುಕುವವನು: ಕಾಳೋಗ್ರೋರಗನಂತೆ ದಾರುಣಮುಖರ್ ದುಷ್ಟರ್ ಖಳರ್ ದುರ್ಮುಖರ್ ದೋಷಾನ್ವೇಷಣರಪ್ಪವರ್ ಪಟುದೊಡೇನಂ ಮಾಟ್ಪರೇಗೆಯ್ಯರೋ (?) (ಸುಕುಮಾ. ೦-೪೭).
[ ದೋಷ + ಅನ್ವೇಷಣ ]

**ದೋಷಾಪಚಯ** (ನಾ). ೧. ಕೆಟ್ಟತನದ ಹಾನಿ,-ಹ್ರಾಸ. ೨. ಕತ್ತಲೆಯನ್ನು ಹೋಗಲಾಡಿಸುವುದು. ೧, ೨: ಪ್ರಚುರ ಕಲಾನ್ವಿತರಕುಟಿಲ ಚಂಚಲರ್ ಶುದ್ಧಪಕ್ಷವೃತ್ತರ್ ದೋಷಾಪಚಯಪ್ರಕಾಶರೆನೆ ಬಾಲಚಂದ್ರದೇವಪ್ರಭಾವಮೇನಚ್ಚರಿಯೋ (ಶಂರಾಮಾ. ೦-೬೮).
[ ದೋಷ + ಅಪಚಯ ]

**ದೋಷಾಪತಿ** (ನಾ). ರಾತ್ರಿಯ ಒಡೆಯ; ದೋಷಾಕರ; ಚಂದ್ರ: ದೋಷಾಪತಿ ಪಾಪಗ್ರಹಯುತನೆನೆ ಚತುರ್ಥಮಂದಿರದೊಳಾಕೆಗಕ್ಕುಂ ಕ್ಲೇಶಂ (ಜಾತಕ. ೪-೨೮). [ ಸಂ. ]

**ದೋಷಾಬಂಧು** (ನಾ). ರಾತ್ರಿಯ ಬಂಧು; ಚಂದ್ರ: ಸಂಧಿಗಳುಂ ಕೆಲವೆಡೆಯೊಳ್ ಬಂದು ವಿರೂಪಂಗಳಾಗಿ ಸಮನಿಸಿ ಕವಿತಾಬಂಧನದೊಳಾಗೆ ದೋಷಾಬಂಧುಗೆ ಶಶಲಕ್ಷ್ಮದಂತೆ ಕಟಿಯಂ ತರ್ಕುಂ (ಕವಿರಾ. ೦-೯೮).
[ ಸಂ. ]

**ದೋಷಾಭಾಸ** (ನಾ). ತಪ್ಪಿಲ್ಲದಿದ್ದರೂ ತಪ್ಪಾಗಿ ಕಾಣುವಂತೆ ಮಾಡುವಿಕೆ: ದೋಷಾಭಾಸಮನೊದವಿಪರೊಂದೆಡೆಗೆ ದುರ್ಜನಸ್ತುತ್ಯತು ಯೆಂಬುದನನುಕರಿಸಿ ಕವೀಂದ್ರರ್ ಪದಪಿಂ ಕೃತಿಯೊಳ್ ಪರೋಪಕೃತಿಪರತಂತ್ರರ್ (ರಾಜಶೇ. ೦-೪೭).
[ ದೋಷ + ಆಭಾಸ ]

**ದೋಷಾಭಿಸಂಧಿ** (ನಾ). ೧. ಕೇಡುಕನ್ನು ಉಂಟುಮಾಡುವ ಉದ್ದೇಶ; ದೋಷಪೂರ್ಣವಾದ ಉದ್ದೇಶ; ಮೋಸ; ಸಂಚು: ಮನ್ನಿಸುವಿರೆಲೆ ಮಕ್ಕಳಿರ ಸಂಪನ್ನಸತ್ಕರು ನೀವು ಕರ್ವಿಗಳೆನ್ನಪರು ದೋಷಾಭಿಸಂಧಿಯ ಮಟಿದು ಕಳೆಯೆಂದ (ಕುವ್ಯಾಸ. ೦೩-೬೦). ೨. ಕತ್ತಲೆಯ ಸಂಬಂಧ,-ಕೂಟ. ೧, ೨: ವರ್ಣಸಂಕರಂ ಚಿತ್ರದೊಳ್ ದೋಷಾಭಿಸಂಧಿ ದಿವಸವಿರಾಮದೊಳ್ . . . ಪಂಕ್ತಿಭೇದಂ ಲಿಪಿಗಳೊಳ್ ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗಪು. ೨-೧ ವ). [ ದೋಷ + ಅಭಿಸಂಧಿ ]

**ದೋಷಾರಿ** (ನಾ). ಪಾಪಕ್ಕೆ ಶತ್ರುವಾದವನು; ದೇವರು: ಈಶನನೊಲಿದರ್ಚಿಸುವನ ಕೈ ಶುದ್ಧಂ ಶಿವನ ಪಾಡುವನ ಬಾಯ್ ಶುದ್ಧಂ ದೋಷಾರಿಯ ನೆನೆವನ ಮನ ತಾ ಶುದ್ಧ ಕಣಾ (ಶಂಕಿಶಂ. ೯೦). [ ದೋಷ + ಅರಿ ]

**ದೋಷಾರೋಪ** (ನಾ). ತಪ್ಪು ಹೊರಿಸುವುದು; ಅಪಾದನೆ: ಈ ಸಂವಿಧಾನದ ರಾಷ್ಟ್ರಪತಿಯವರನ್ನು ಮಹಾಭಿಯೋಗಕ್ಕೆ ಗುರಿಪಡಿಸಬೇಕಾದರೆ, ಸಂಸತ್ತಿನ ಉಭಯಸದನಗಳಲ್ಲಿ ಯಾವುದೊಂದು ಸದನದವರಾಗಲಿ ದೋಷಾರೋಪ ಮಾಡತಕ್ಕುದು (ಭಾಧಾನ. ೩೦).
[ ದೋಷ + ಆರೋಪ ]

**ದೋಷಾರೋಪಣ** (ನಾ).=ದೋಷಾರೋಪ.
[ ದೋಷ + ಆರೋಪಣ ]

**ದೋಷಾರೋಪಣೆ** (ನಾ).=ದೋಷಾರೋಪ: ಪಾವರ್‌ಚೀಟಿ ತೆಗೆದುಕೊಂಡಿದ್ದ ಒಬ್ಬ ಸಾಲಗಾರನನ್ನು ದೋಷಾರೋಪಣೆಯಿಂದ ತಪ್ಪಿಸಿದ್ದಾಯ್ತು (ಪುನರು. ೨೦೨). [ ದೋಷ + ಆರೋಪಣೆ ]

**ದೋಷಾರ್ತಿ** (ನಾ). ಪಾಪದ ಪರಿಣಾಮದಿಂದ ದುಃಖಿಸುತ್ತಿರುವವನು: ಸಜ್ಜನದ್ವೇಷಿಯುಂ ಸಂಚಳನಂ ದೋಷಾರ್ತಿಯುಂ ದುರ್ಧರತರವಿರಸಕ್ರೀಡನಂ . . . ರಕ್ಷಿಪ್ಪುದು (ರಕ್ಷಾಶ. ೯೭).
[ ದೋಷ + ಆರ್ತಿ ]

**ದೋಷಾಲೇಪ** (ನಾ). ತಪ್ಪುಗಳ ಸಂಬಂಧ: ಈ ಪೇಟ್ದ ಮಾಟ್ಕೆಯುಂ ದೋಷಾಲೇಪಂ ಪೊರ್ದದಂತಿರೆ ಸನ್ನಿಬಂಧವ್ಯಾಪೃತನಕ್ಕೆ ಗುಣವದರ್ಥಂ ವ್ಯಾಪಕಮಾಗೆ (ಕಾವ್ಯಾವ. ೪೯೩). [ ದೋಷ + ಆಲೇಪ ]

**ದೋಷಾವಕಾಶ** (ನಾ). ೧. ಪಾಪ ಅಥವಾ ಕೆಟ್ಟಕಾರ್ಯಗಳಿಗೆ ಅನುಕೂಲವಾದ ಸಂದರ್ಭ,-ಸೌಕರ್ಯ. ೨. ಕತ್ತಲೆಗೆ ಆಸ್ಪದ. ೧, ೨: ಒದವಂ ಭವ್ಯಮುಖಾಂಬುಜಕ್ಕೆ ಮುದಮಂ ಸದ್ಧರ್ಮಚಕ್ರಕ್ಕೆ ಸಂಪದಮಂ ಲೋಕದ ದೃಷ್ಟಿಗಸ್ತಪದಮಂ ದೋಷಾವಕಾಶಕ್ಕೆ . . . ಪಡೆಯುತ್ತಿಕ್ಷ್ವಾಕುವಂಶೇಂದ್ರಶೈಲದಿನತ್ಯೂರ್ಜಿತತೇಜನುದ್ಭವಿಸಿದಂ ತ್ರೈಲೋಕ್ಯನಾಥಂ ಜಿನಂ (ಪುಷ್ಪಪು. ೧೧-೨). [ ದೋಷ + ಅವಕಾಶ ]

**ದೋಷಾವಸಥ** (ನಾ). ೧. ಪಾಪದ ನೆಲೆ,-ಆಶ್ರಯಸ್ಥಾನ: ಪಸೆಯೊಳ್ ಪಸುರ್ವಣಂದರೊಳಗ್ನಿಸಾಕ್ಷಿಯೊಳ್ ಕೊಂಡ ಪಾಂಡುಪತಿಯರ ದೋಷಾವಸಥರ್ ಪಾದರದಿಂ ಜನಿಯಿಸಿದರ್ (ಗದಾಯು. ೩-೩೮). ೨. ಕೆಡುಕಿಗೆ ನೆಲೆ: ನಯಮಂ ಪೇಟ್ಗೊಡೆ ಸಂಧಿ ಮಾಡಿಟಿಯದಿರ್ ಕೌಂತೇಯರೊಳ್ ಯುದ್ಧಮಕ್ಷಯದೋಷಾವಸಥಂ ಪ್ರಧಾನಪುರುಷರ್ ಕ್ಷತ್ರಕ್ಷಯಸ್ಥಾನಮೆಂದು ಯಥಾರ್ಥಂ ನುಡಿದಾರ್ತರಿಲ್ಲ (ಗದಾಯು. ೪-೬೬).
[ ದೋಷ + ಅವಸಥ ]

**ದೋಷಾವಹ** (ನಾ). ಅಮಂಗಳವನ್ನು ತರುವಂಥದು; ಅಶುಭ ಪರಿಣಾಮವನ್ನುಂಟುಮಾಡುವಂತಹುದು: ಮನೆಯಿಂದೊಸಟಿಗೇಳಲೆಂದು ಬರಲಾಗಲ್ ಭೇರಿಪಾಂಗಲ್ಯ ತೂರ್ಯನಿನಾದಂ ಗುಡಿ ತೋರಣಂ . . . ಕಟ್ಟದಿರಾಗಿ ತೋಟಿ ಶುಭದಂ . . . ಮೇಷದವರಂ ಕಾಣಲ್ಕೆ ದೋಷಾವಹಂ (ಲೋಕೋಪ. ೧೨-೩೦); ದೇವ ಕನಸಿದು ಕರಂ ದೋಷಾವಹಂ (ಯಶೋಧ. ೩-೦೩). [ ದೋಷ + ಅವಹ ]

**ದೋಷಾವಳಿ** (ನಾ). ೧. ತಪ್ಪುಗಳ ಗುಂಪು,-ಸಮೂಹ. ೨. ಕತ್ತಲೆಯ ಗುಂಪು,-ಸಮೂಹ. ೧, ೨ : ಮಳಿನತೆ ಇಲ್ಲದ ಕುನ್ದಂ ತಳೆಯದ ಸಲೆ ರಾಹುಪೀಡೆಯ್ಯಿದದ ದೋಷಾವಳಿಯೊಳ್ಪರಿಯಿಸದಸ್ತ್ರಾಚಳಕಳಿಸದ ಚನ್ದ್ರ ನೆನಿಸುವಂ ಶುಭಚಂದ್ರಂ (ಎಕ. VII, ಶಿಕಾರಿ. ೨೨೫-೬೦ ; 1204).
[ ದೋಷ + ಆವಳಿ (=ಆವಲಿ) ]

**ದೋಷಾವಿಲ** (ನಾ). ೧. ತಪ್ಪಿನಿಂದ ಕೂಡಿದುದು. ೨. ಕೆಡುಕಿನಿಂದ ಕೀಳಾದುದು : ಸೇವೆಯ ಕಷ್ಟಂ ಸೀತಾದೇವಿಯನೀಡಾಡಿ ಬರ್ಪುದದವಿಯೊಳಿನೆ ದೋಷಾವಿಲ[ಪಾಠಾಂ. ಳ]ಮನಳ್ಕಿ ರಾಘವದೇವಂಗೆ ಕೃತಾಂತವಕ್ತ್ರನದನೇಗೊಂಡಂ (ಪಂರಾಮಾ. ೦೫-೬೪).
[ ದೋಷ + ಆವಿಲ ]

**ದೋಷಾವೇಶ** (ನಾ). ಪಚ್ಚೆಯ ಐದು ವಿಧವಾದ ನ್ಯೂನತೆಗಳಲ್ಲಿ ಒಂದು ; ಇಬ್ಬನಿ ಬಿದ್ದ ತಾವರೆಯ ಪತ್ರದಂತಿರುವ ಪಚ್ಚೆ : ದೋಷಲೇಶಾನ್ವಿತಂ ದುಷ್ಟಂ ದೋಷವರ್ಜಿತಂ ದೋಷಾವೇಶಂ [ಪಾಠಾಂ. ಷಲೇಶಂ] ಮಂದದೋಷವೆಂದಿಂತೀ ಪಂಚವಿಧಮಾದ ಸದೋಷಜಾತಿಮರಕತಮಂ ಪೇಳ್ವೆಂ (ಹಾರಾಸ್ಕ. ೨-೧-೮೮ ಪ).
[ ಸಂ. ]

**ದೋಷಾಶ್ರಯ** (ನಾ). ಹವಳದ ಮೂರು ಬಗೆಯ ನ್ಯೂನತೆಗಳಲ್ಲಿ ಒಂದು ; ಕಳಂಕವನ್ನು ಹೊಂದಿರುವಂಥ ಹವಳ : ದೋಷಾಶ್ರಯಂ ಧಿದ್ರವಕ್ರಂ ಕ್ರಿಮಿದೂಷಣಮೆಂದು ದೋಷತ್ರಯಮುಂಟದನುಳಿದು ನಿರ್ದೋಷವಿದ್ರುಮವಂ ಕಾಮಿನಿಯರ್ ವಿಶೇಷವಾಗಿ ತಾಳಲ್ ಸುಖಾಯುಃಪ್ರ ಸುಪುತ್ರಾರೋಗ್ಯಾದಿ ಸಿದ್ಧಿಗಳಪ್ಪುವು (ಹಾರಾಸ್ಕ. ೨-೧-೧೧೪ ಪ). 'ದೋಷತ್ರಯಂ' ಪಠಾ. [ ಸಂ. ]

**ದೋಷಿ** (ನಾ). ೧. ಕಳಂಕವನ್ನು ಹೊಂದಿರುವವನು; ಕಪ್ಪು ಕಲೆಗಳಿಂದ ಕೂಡಿದವನು ; ಚಂದ್ರ : ದೋಷಿ [ಪಾಠಾಂ. ಸಿ]ಯೊಡನಾಗಸವ ತಿರುಗಲಲಸಿ ಬಂದು ಧಗಧಗಿಪ ಬೆಳ್ದಿಂಗಳೊರ್ವೋತ್ತಮಾಗಿ ಸೈನಿಗುರಿದತ್ತಂಬವೋಲ್ (ಸಂದಿಮಾ. ೨-೯೦). ೨. ತಪ್ಪುಮಾಡಿದವನು ; ಅಪರಾಧಿ : ಶಂಕಿಸದಿರು ಮುಟ್ಟದು ಗುಣಿಗೆ ದೋಷಿಗಳ್ಕ್ಕಂ ದೋಷಂ (ಶಾಂತಿಪು. ೬-೮೮) ; ದೋಷಿ ಪಿಡಿವಂತೆ ದಿವ್ಯದ ಕಾಸಿದ ಕುಟುವಂ ಕಡಂಗಿ ಕಾಳೋರಗನಂ ಕೂಸು ಪಿಡಿವಂತೆ ಪಿಡಿದಂ ಸಾಸಿಗನವಿವೇಕಿ ಸೀತೆಯುಂ ದಶಕಂಠಂ (ಕುಮಾಮಾ. ೯-೧೦೦) ; ತುಡುಕಿದ ದೋಷಿಯನಲ್ಲದೆ ಪಿಡಿಯದು ಘಟಸರ್ಪನಂತುಟಲ್ಲದೆ ತನ್ನಂ ತುಡುಕದ ನಿರ್ದೋಷಿಯುಮಂ ಪಿಡಿವುದು ಖಳಮುಖಘಟೋಗ್ರಜಿಹ್ವಾಸರ್ಪಂ (ಜಗವಿ. ೦-೦೨) ; ದೋಷಿಗೆ ತಕ್ಕ ದಂಡನೆಯ ಮಾಳ್ಪುದು ಮಾಡದುಪೇಕ್ಷಿಸಿರ್ದೊಡಾ ದೋಷಿ ಬಟಿಕ್ಕೆ ಧಾರಿಣಿಯೊಳಂ ಕುಶಮಿಲ್ಲದ ಹಸ್ತಿಯಂತೆ ನಿರ್ದೋಷಿಗಳಂ ಮದಾಂಧಗುಣದಿಂ ತುಟಿಗುಂ (ಸೂಕ್ತಿಸು. ೦೬-೦೦). ೩. ಕೆಟ್ಟ ನಡತೆಯುಳ್ಳವನು ; ದುರಾಚಾರಿ : ವಿಷಯದ ಸವಿ ತಲೆಗೇಱಿ ಶಿವಪೂಜೆಯ ಬಿಟ್ಟು ವೇಶಿಯರ ಎಂಜಲ ಹೇಸದೆ ತಿಂಬ ದೋಷಿಗಳನೇನೆಂಬೆನೈ (ದೇರಾವ. ೩೫-೬೩).
[ ಸಂ. ದೋಷಿನ್ ]

**ದೋಷಿಗ** (ನಾ). ತಪ್ಪು ಮಾಡಿದವನು ; ಅಪರಾಧಿ : ಆದ ಮುಳಿಸಿಂದ ಮೆಲ್ಲಂ ತೇದುಂ ಕುಡಿಯಲ್ಕೆ ತಕ್ಕ ಪಗೆವನ ರುಧಿರಾಬ್ಯೋದಮನೆ ಕುಡಿದು ಮಣ್ಣ ವೃಕೋದರನೇನಾವ ತೆಱದೊಳಂ ದೋಷಿಗನೇ (ಪಂಪಭಾ. ೧೨-೦೫೪). [ ದೋಷ + -ಇಗ ]

**ದೋಷೆ** (ನಾ). ಕತ್ತಲೆಯಿಂದ ಕೂಡಿದುದು ; ರಾತ್ರಿ : "ತಮಿಸ್ರು ನಿಶ ರಜನಿ ದೋಷೆ ರಾತ್ರಿ . . . ಕ್ರಿಯಾಮ್ಮ ಯಾಮಿನಿಯುಕ್ಕುಂ" (ವಸ್ತುಕೋ. ೦೫-೩) ; "ದೋಷಾ, ನಕ್ತಂ-೨ ರಜನೌ - ಇತಿ ರಾತ್ರಿಯೊಳು ಎಂಬ ಅರ್ಥದಲ್ಲಿ ವರ್ತಿಸುವವು" (ಸಿದ್ಧಾಂತಿ. ೩೬೬). [ ಸಂ. ದೋಷಾ ]

**ದೋಷೇಂಗಿತೆ** (ನಾ). ಅಂತರಂಗದಲ್ಲಿ ಕಳಂಕವುಳ್ಳವಳು : ನಡುಗುವೊಡಂ ಮೂಗರಳ್ವೊಡಂ ವ[ಪ]ದನೆರನನೆತ್ತುವಡವಮುಬಲೆಯರ್ಕಣ್ಮುಡುಕೆಂಪಾದೊಡವರ್ಧರಂ ಕವೆ (?) ತೆತ್ತುವಡಮಱಿಗೆ ದೋಷೇಂಗಿತೆಯರಂ (ಮುದ್ರಿ. ೧೦-೩೩). [ ಸಂ. ದೋಷೇಂಗಿತಾ (ದೋಷ + ಇಂಗಿತ + -) ]

**ದೋಷೇತರ** (ನಾ). ಕೆಡುಕನ್ನುಂಟುಮಾಡದಿರುವಂಥದು : ದೋಷೇತರನಾಪ್ತಂ ತದ್ವ್ಯಾಹೃತಮುಪಹಿಂಸವಾಗಮುಂ ಷಡ್ವೇದಾಕ್ಲೇಶಂ ಪದಾರ್ಥವಿದೆ ಗಂಡೂಷಂ ನಿನಗಕ್ಕೆ ದುರಿತಕಫವಿಳಯನದೊಳ್ (ಶಾಂತಿಪು. ೬-೪). [ ದೋಷ + ಇತರ ]

**ದೋಷೈಕದೃಷ್ಟಿ** (ನಾ). ೧. ಕೇವಲ ತಪ್ಪುಗಳನ್ನೇ ಹುಡುಕುವುದು : ಕರ್ಣರಸಾಯನವೆನಿಸುವ ಕೃತಿಯೊಳು ದೋಷೈಕದೃಷ್ಟಿಯ ಖಳರು . . . ಕುಂದನೆ ಪರಿಗಣಿಸುವರು (ಅಂಜಾಚ. ೬೭-೨೩). ೨. ಕೇವಲ ತಪ್ಪುಗಳನ್ನೇ ಹುಡುಕುವವನು : ದೋಷೈಕದೃಷ್ಟಿಯಾದವನು ವಿಮರ್ಶಕನೆನಿಸಿಕೊಳ್ಳುವುದಿಲ್ಲ (ಆಧು). [ ಸಂ. ]

**ದೋಷೋದ್ಗಮ** (ನಾ). ೧. ಕೆಡುಕಿನ ಹುಟ್ಟು ; ಕೆಡುಕುಂಟಾಗುವಿಕೆ. ೨. ಕತ್ತಲೆಯಾಗುವಿಕೆ. ೧, ೨: ಕೀತಕೀಧೃತಸತ್ಕಂಟಕಮಲ್ಲದಿಲ್ಲ ವಸುಧಾಸತ್ಕಂಟಕಂ ಕಾಳಕಲ್ಪಿತ ದೋಷೋದ್ಗಮಮಲ್ಲದಿಲ್ಲ ಪೆಱವುಂ ದೋಷೋದ್ಗಮಂ ದೇಶದೊಳ್ (ಪುಷ್ಪಪು. ೨-೩೦). [ ದೋಷ + ಉದ್ಗಮ ]

**ದೋಸ** (ನಾ). ೧. ತಪ್ಪು ; ಅಪರಾಧ : ಆ ಸುಕರಂ ಗಡ ತಮಗಿತಿ ಭಾಸುರ ಮೃಗರಾಜನಾಮಮುಂ ಗಡಮೆಂದಾ ದೋಸಕ್ಕೆ ಮುಳಿದು ನೆಗೆಟ್ಟ ರಿಕೇಸರಿ ಕೇಸರಿಗಳನಿತುಮಂ ತಳ್ತಿಱಿದಂ (ಪಂಪಭಾ. ೫-೪೯) ; ನನ್ನಿಗೆ ಬೀಗುವರ್ ನುಡಿ ತೊದಳ್ ದೋಸಕ್ಕೆ ಪಕ್ಕಾದೊಡಂ ಬಡಗಣ್ಣರ್ ಕಲಿಕಾಲದೊಳ್ ಕಲಿಗಳೊಳ್ಗ್ಣಂ ಬರಂ ಗಣ್ಣರೇ (ಎಕ. II, ೦೩೩-೬೦ : ೨೩೪) ; ಕೂಸಂ ಕೊಟ್ಟಪೆನೆಂಬೀ ದೊಸಱಿ ನೀವಿಂತವಳ್ಗೆಯ್ದುತ್ತನ್ನಂ ಬೀಸರಮನೆ ನುಡಿದಪಿರೀ ದೋಸಮೆ ನೀಮಱಿದುಮಱಿಯರೆನ್ನುನ್ನತಿಯಂ (ಹಂಶತಂ. ೨೬೧-೪) ; ಏಂ ದೋಸಮುದೇಂ ಬನ್ನಂ ಬಿಸುಡಾ ಸವಣನ ಪೇಟ್ದ ಜೈನಮುತಮಂ ಬ್ರತಮಂ (ಸುಕುಮಾ. ೬-೪೯). ೨. ಪಾಪ ; ಕೆಟ್ಟ ಕಾರ್ಯ : "ದೋಸಂ ಸಪಾಪಾಹ್ವಯಂ" (ಕರ್ಣಾನಿ. ೬೦) ; ಸಾಸಿಗನೈ ಹರಿ ನೀಂ ಪೆಣ್ಗೂಸಂ ವಧಿಯಿಸಿದೆ ಪಶುವನಟ್ಟಿದ್ದೆ ಮತ್ತಾ ದೋಸಕ್ಕೆ ಹೇಸದೀಗ ಮಹಾಸಭೆಯೊಳಗಗ್ರಪೂಜೆಗಗ್ರಣಿಯಾದ್ಯೆ (ಜಗವಿ. ೦೬-೪೨) ; ಬ್ರಾಹ್ಮಣರುಮಂ ಕವಿಲೆಯು[ಮ]ನಳಿದ ದೋಸಕ್ಕೆ ಹೋಹರ್ (ಸೌಇಇ. IX-1, ೫೩೨-೦೬ ; ಸು. 1190) ; ನರಕಿಗಳು ಹೋಹ ದೋಸಕ್ಕೆ ಹೋಹರು (ಎಕ. IX, ಚನ್ನಪ. ೫೮-೨೩ ; 1478 ?). ೩. = ದೋಷ ೧೩ : ದೋಸಮಿನಿತೆಂದು ಬಗೆದುದ್ವಾಸಿಸಿ ತಱಿಸಂದು (ಕವಿರಾ. ೦-೪೬) ; ದೋಸಮನೆ ಗುಣದವೋಲುದ್ಭಾಸಿಸಿ ಕನ್ನಡದೊಳೊಲ್ದು ಪೂರ್ವಾಚಾರ್ಯರ್ ದೇಸಿಯನೆ ನಿಱಿಸಿ ಖಂಡಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್ (ಕವಿರಾ. ೧-೬೪). [ <ಪ್ರಾ. ದೋಸ./ಸಂ. ದೋಷ ]

**ದೋಸಂಬೊರ್ದು** (ಕ್ರಿ). (ಸೋಲನ್ನು ಪಡೆದು) ಕಳಂಕವನ್ನು ಹೊಂದು; ಕುಂದನ್ನು ಹೊಂದು : ದೋಸಂಬೊರ್ದಿದ ತಂಬಿಲಸಂದನಂತೆ ಕಂದಿ ಚಾರಿತ್ರಂಗೆಟ್ಟ ಋಷಿಯಂತೆ ಮೆಯ್ಯುಱಿಯದೆ ಕೋಳ್ಪಟ್ಟರಂತೆ ಪುಯ್ಯಲಿಟ್ಟೊಳಱಿಯುಟುತ್ತುಮಿರೆ (ಚೀವಸಂ. ೧೦೩-೪೬೪). [ ದೋಸ + ಪೊರ್ದು ]

**ದೋಸವಂತ** (ನಾ). ದೋಷಿ ; ಅಪರಾಧಿ : ಜಗಳವಂತಂ, ದೋಸವಂತಂ (ಶಬ್ದಾಮ. ೪೧೨ ಪ್ರಯೋ). [ ದೋಸ+-ವಂತ ]

**ದೋಸಿ** (ನಾ). ೧. ಕಳಂಕವುಳ್ಳವನು ; ಕಲೆಯುಳ್ಳವನು : ದೋಸಿಯಾದಾ ಸಸಿಯ ತಲೆಯಲ್ಲಿ ತಾಳ್ದ ಪುಬಾಸಿಗದೊಲಿನ್ನನೇಳಿಲಗೈದೆಯಿದು ಮಹಾದೋಸವಪ್ಪುರ್ವರಂ ದಯದಲೆಡಬಲಗಣ್ಣಾಗಿ ನೀಂ ಕಾಣ್ಬುದೆಂದು ನೇಸಱಿಡಿದಾವರೆಯ ಭಯಭಕ್ತಿಯಿಂದಲೋಲೈಸುವಂದದೊಳು

ಸದ್ರುಚಿರತ್ನರುಚಿರಸಿಂಹಾಸನಂ ಭಾಸಮಾನಮದಾಗಿ ರಂಜಿಸಿದುದು (ಸಂದಿಮಾ. ೪-೩೦). ೨. ತಪ್ಪು ಮಾಡಿದವನು; ಅಪರಾಧಿ: ನಡುಗಣ್ಣಿನಿಂದ ಬೀರನ ಪೆತ್ತು ಕಳಿಪೆ ಘುಡುಘುಡಿಸಿ ದೋಸಿಯ ತಲೆಯ ಹೊಡೆದಗ್ನಿಯೊಳಗಾರ್ದು ಕೆಡಹಿ ಕುಚೋದರಿಯಿತ್ತನು (ಶಾಪಶಿ. ೩-೦೩). [< ಪ್ರಾ. ದೋಸಿ./ ಸಂ. ದೋಷಿನ್]

**ದೋಸಿಅರಸ** (ನಾ). ಒಬ್ಬಾತನ ಹೆಸರು: ಬಿಜಯಿತ್ತ ಬಾಣರಸ ಪ್ರಿಥಿವೀರಾಜ್ಯಂಗೆಯೆ ದೋಸಿಅರಸರಾ ಕಳಿವುಲಿನಾಡಬುವತ್ತುಂ ಪಡೆದು ಕೊಟ್ಟೊಡುಂ (ಎಕ. X, ಮುಳಬಾ. ೨೪೪-೭ : ಸು. ೨೦೦). [(ದೋಸಿ? + ಅರಸ₁]

**ದೋಸಿಗ** (ನಾ). = ದೋಸಿ ೧: ದೋಸಿಗನ ಕವದ್ದುರ್ಟದೊರ್ಗೆ ಪರಿಹಾ[ರ]ಂ (ಎಕ. X, ೦೬೪-೬ ; 7ನೆಯ ಶತ?); ದೂಸಕರ ದೂಷುಗೇಳ್ದುಂ ಸಾಸಿಗನೆನ್ನಳವನಱಿದುದುವುದಱಿಯದೆ ಪಿರಿದುಂ ದೋಸಿಗನಾದೊಡೆ ಕೊಲ್ಗುಂ ವೇಸುವನಲ್ಲಂ (ಅರ್ಥನೀ. ೩-೦೩). [ದೋಸ + – ಇಗ]

**ದೋಸೆ₁, ದ್ವಾಶಿ** (ನಾ). ಅಕ್ಕಿ ಹಾಗೂ ಉದ್ದು ಅಥವಾ ಬೇರೆ ಧಾನ್ಯಗಳನ್ನು ಒಂದು ಪ್ರಮಾಣದಲ್ಲಿ ನೆನೆಸಿಟ್ಟು ನಂತರ ರುಬ್ಬಿ ಹೆಂಚಿನ ಮೇಲೆ ಹೊಯ್ದು ಬೇಯಿಸಿ ಮಾಡುವ ಒಂದು ಬಗೆಯ ಖಾದ್ಯ,– ತಿಂಡಿ: ಮಿಸಲು ಸೊಸಲಾಗಿ ದೋಸೆ ಕಡುಬ ಹೊಯ್ದು ಹಬ್ಬವ ಮಾಡಿಹೆನೆಂಬ ಹೇಸಿಗಳ ಮಾತ ಕೇಳಲಾಗದು (ವಚಸಂ. ೩೬೮-೮); ದೋಸೆಯನಟ್ಟ ಪೋಲ್ ಮಳಲ ರಾಶಿಗಳೊಪ್ಪುಮನಾಳ್ದುವು (ಶಾಛಪು. ೪-೭೮); ದೋಸೆಯಿಡ್ಡಲಿಗೆ ತಟಗು...ಎಂಬಿವನಾ ನಾರೀತತಿ ಮುನಿಜನಕ್ಕೆ ಬಡಿಸಿದುದಾಗಳ್ (ಶ್ರೀಪುವಿ. ೧೦-೩೪); ಹೆಸಱ ದೋಸೆಯ ಹೂವಿನೆಸಳಂತೆ ಸಂಬಳಿಸಿ ಪಸನಾಗಿ ಯುಪ್ಪುಮೆಣಸಿಕ್ಕಿ (ಸೂಪಶಾ. ೪-೫೩): ಸಣ್ಣಸೇವಗೆಯ ಮೆದೆ ಎಱೆಯಪ್ಪದಡಕಿಲಿಡ್ಡಲಿಗೆಗಳ ಬೋನ ದೋಸೆಯ ಲಗ್ಗೆ (ಸಮ್ಮಾಕಾ. ೭-೫೩): ದೋಸೆ ಕಜ್ಜಾಯ ... ಕಬ್ಬುವಿಲ್ಲಿಗಳನುಱೆ ಮಾಱುವರ್ ಬರುತಿರ್ದರು (ಹಂಪು. ೪೭-೪೨): ಹಸನಾದ ದೋಸೆಯುಂಡಲಿಗೆ . . . ಪನ್ನೀರನೊಸೆದರ್ಪಿಸಿದರಂದಿಕೆಗೆ (ಕಂಸವಿ. ೨೨-೨೯); ದೋಸೆಯ ಊಟ ಊಟವಲ್ಲ, ದಾಸರ ಆಟ ಆಟವಲ್ಲ (ಗಾದೆ): ಎಲ್ಲರ ಮನೆಯ ದೋಸೆಯೂ ತೂತೇ (ಗಾದೆ); ಆರು ದೋಸೆ ಕೊಟ್ಟರೆ ಅತ್ತೆ ಕಡೆ, ಮೂರು ದೋಸೆ ಕೊಟ್ಟರೆ ಮಾವನ ಕಡೆ (ಗಾದೆ). ದ್ವಾಶಿ: ಯಿದಕೆ ಪಶ್ಚಿಮ ಆಗ್ನೇಯಕದ ಭಾವಿ ಸುತ್ತಲು ವಡೆ ದ್ವಾಶಿಗೆ ಗದೆ ಅಗಲ ೨೦ ಉದ ೨೦ ಬೀಜವರ್ರಿ ಲೌ ೨ (ಎಕ. XI, ಹೊಳಲ್ಕೆ. ೭-೨೯ ; 1668). P ಇದರಲ್ಲಿ ಅಕ್ಕಿದೋಸೆ, ಅವಲಕ್ಕಿದೋಸೆ, ಈರುಳ್ಳಿದೋಸೆ, ಒಗ್ಗರಣೆದೋಸೆ, ಕಡಲೇಬೇಳೆ ದೋಸೆ, ಕಾಯಿದೋಸೆ, ಖಾಲಿದೋಸೆ, ಗೋದಿದೋಸೆ, ತುಪ್ಪದ ದೋಸೆ, ಮಸಾಲೆದೋಸೆ, ಮೆಂತ್ಯದ ದೋಸೆ, ಮೊಟ್ಟೆ ದೋಸೆ, ರವೆ ದೋಸೆ, ರಾಗಿದೋಸೆ, ಹೆಸರುಬೇಳೆ ದೋಸೆ ಮುಂತಾಗಿ ಅನೇಕ ಬಗೆಗಳಿವೆ.

[ದೇ.? ತಮಿ. ತೋಸೈ; ಮಲ. ದೋಶ; ತುಳು. ಕೊಡ. ತೆಲು. ದೋಸೆ]

**ದೋಸೆ₂** (ನಾ). ಒಂದು ಬಗೆಯ ತರಕಾರಿ; ಸೌತೆಕಾಯಿ: ದೋಸೆ, ಸೋರೆಕಾಯಿ, ಸೊಂಡೆಗೆಣಸು, ಹುಳಿ . . . ಮೊಸರು, ಮಜ್ಜಿಗೆ ಮತ್ತು ಗುರುತ್ವವಾದಾಹಾರಂಗಳಿವೆಲ್ಲಂ ಕಾಸ, ಶ್ವಾಸ, ಬಿಕ್ಕಳಿರೋಗಂಗಳವರೆಗೆ ಅಪಥ್ಯಂಗಳೆಂದರಿವುದು (ಸಕಚ್ಚಿ. ೨೪೩). [← ತೆಲು. ದೋಸ]

**ದೋಸೆವದ** (ನಾ). ದೋಸೆಯ ಹಿಟ್ಟಿನ ಹದ; ದೋಸೆಯಂತೆ ತೆಳ್ಳಗೆ ಬಳುಕುವುದು: ಬಿಸಿಲ ಹೊಡೆಯಿಂದ ಕಂದದೆ ದೋಸೆವದದಿ ಸೊಗಯಿಸುವ ಸಕ್ಕರೆಗಳೆಳನೀರ ಕುಯಿದಿಳುಪಿ ತಣ್ಣಸವಾದ ತಾಣದೊಳಗಿರಿಸಿ (ಸೂಪಶಾ. ೨-೩೦). [ದೋಸೆ₁ + ಪದ₁]

**ದೋಸ್ತ** 'ದೋಸ್ತಿ' ನೋ.

**ದೋಸ್ತದಾರ, ದೋಸ್ತಾರ, ದೋಸ್ತುದಾರ** (ನಾ). ಗೆಳೆಯ; ಮಿತ್ರ: ಈ ಪ್ರಕಾರ ನಮ್ಮ ತಮ್ಮ ಸಖಿತ್ವವಾಗಿ ಇರುವ ವಿಸ್ತಾರದಲ್ಲಿ ನಡಸುವ ಬಗ್ಗೆ ದೋಸ್ತದಾರರಿಗೆ ಯಾವಾಗಲೂ ಆಗ್ರಹಾ ಉಂಟಾಗಿ ಇರುವದರಿಂದ (ರಾಜೇಂದ್ರ. ೧೬೬). **ದೋಸ್ತಾರ**: ದೋಸ್ತಾರರ ಮಾತ ಮೀರಬಾರದು (ರಾಜೇಂದ್ರ. ೯೩). **ದೋಸ್ತುದಾರ**: ದೋಸ್ತುದಾರರಾದಂಥವರ ಹೆಸರಿಗೆ ಒಂದು ವಕೀಲು ಟೀಪುಸುಲ್ತಾನರ ಬಳಿಗೆ ನೇಮಿಸಿ ಕಳುಹಿಸುವಾ ಎಂಬುದಾಗಿ, ಬರದು ಕಳುಹಿಸಿ ಇದ್ದೀತು (ರಾಜೇಂದ್ರ. ೧೫೩). [ದೋಸ್ತ (<ದೋಸ್ತಿ) + – ದಾರ₁]

**ದೋಸ್ತಾರ** 'ದೋಸ್ತದಾರ' ನೋ.

**ದೋಸ್ತಿ, ದೋಸ್ತ, ದೋಸ್ತು** (ನಾ). ೧. ಮಿತ್ರತ್ವ; ಗೆಳೆತನ; ಸ್ನೇಹ: ತಮ್ಮ ದೋಸ್ತಿಯಿಂದಾ ನಮ್ಮನಸ್ಸಿನ ಸಂತೋಷ ವಡಂಬಡಿಕೆ ವರ್ತಟಿ ಎಲ್ಲಾ ಜನರಿಗೂ ತಿಳಿಯುವ ಹಾಗೆ ಮಾಡುತ್ತಾ ಇದ್ದೇವೆ (ರಾಜೇಂದ್ರ. ೨೨೮); ನನಗೂ ಅವರಿಗೂ ಬಾಳ ದೋಸ್ತಿ (ಮುಬ್ಬು.ಹೆ. ೦೨೦); ವಕೀಲರದು ನಮ್ಮದು ದೋಸ್ತೀ ಬಹಾಳರಿ (ರಕ್ತಾಕ್ಷಿ. ೦೪೬); ನಮ್ಮಿಬ್ಬರಿಗೂ ಬಹಳ ದೋಸ್ತಿಯಾಯಿತು (ಮಧುನ. ೧೨೬). ೨. ಗೆಳೆಯ; ಮಿತ್ರ: ಅವನೂ ಅವನ ದೋಸ್ತಿ ಗಣೇಶನೂ ಬೀದಿ ಬೀದಿ ಅಲೆಯುತ್ತಾರೆ (ಶ್ಯಾಗಮ. ೦೯೦); ನಿಮ್ಮ ತಂದೆಯ ದೋಸ್ತಿ, ಸಾಮಾನ್ಯವಾದ ವ್ಯಕ್ತಿಯೇನಲ್ಲ (ಪುನರು. ೩೩೦); ಅವನ ಹಳೆಯ ದೋಸ್ತಿಗಳಲ್ಲಿ ಕೆಲವರು ಎಲ್ಲಾ ವಯಸ್ಸಾಗಿ ಶಕ್ತಿ ಉಡುಗಿದವರು (ಯೋಧಪು. ೯೩). **ದೋಸ್ತ**: ೨. ಮಹಾರಾಜಸಾಹೇಬರವರು ತಮ್ಮ ದೋಸ್ತರಾದ ಕರ್ನಲ ಕುಲೂಸ ಸಾಹೇಬರವರ ಹೆಸರಿನಲ್ಲಿ . . . ಕಟ್ಟಿಸಿದರು (ಎಕ. IX, ದನ್ನಪ. ೫-೨ : 1799); ವಸ್ತಾದ ಅಲ್ಲಿಭಟ್ಟರ ಜೀವದ ದೋಸ್ತನಾದ (ಹಲ್ಮಿಟ. ೪೬). **ದೋಸ್ತು**: ೧. ಅವರಿಬ್ಬರಿಗೂ ಒಳ್ಳೆಯ ದೋಸ್ತು (ರೂಢಿ).

**ದೋಸ್ತಿ ಮಾಡು** = ಸ್ನೇಹ ಮಾಡಿಕೊಳ್ಳು; ಗೆಳೆತನ ಬೆಳೆಸು: ಈಗ ಕೊಡಗಿನ ದೊರೆಗಳು ಹೈದರಲ್ಲೀಖಾನರ ಮಗ ಟೀಪುಸುಲ್ತಾನರ ಸಂಗಡ ವಿರುದ್ಧ ಮಡಗಿ ಇಂಗ್ರೇಜಿಯವರ ದೋಸ್ತಿ ಮಾಡಿಕೊಂಡು ಟೀಪುಸುಲ್ತಾನರಿಗೆ ಶತ್ರುವಾಗಿ ಇದ್ದಾರೆ (ರಾಜೇಂದ್ರ. ೮೮). [← ಪಾರ. ಹಿಂ. ಮರಾ. ದೋಸ್ತೀ, ದೋಸ್ತ್]

**ದೋಸ್ತಿಗಾರ** (ನಾ). ಗೆಳೆಯ; ಸ್ನೇಹಿತ: ಅವನ ನಾಲ್ಕೈದು ದೋಸ್ತಿಗಾರರು ಆಗ ಅಲ್ಲಿಂದಲೇ ಹಾದುಹೋಗುತ್ತಿದ್ದರು (ಹೊಸಕ್ಷ. ೬೨). [ದೋಸ್ತಿ + – ಗಾರ (< – ಕಾಱ)]

**ದೋಸ್ತು** 'ದೋಸ್ತಿ' ನೋ.

**ದೋಸ್ತುದಾರ** 'ದೋಸ್ತದಾರ' ನೋ.

**ದೋಸ್ಸಾರ** (ನಾ). ೧. ತೋಳಿನ ಶಕ್ತಿ,–ಸಾಮರ್ಥ್ಯ. ೨. ತೋಳಿನ ಶಕ್ತಿಯುಳ್ಳವನು; ಬಾಹುಬಲವುಳ್ಳವನು; ಪರಾಕ್ರಮಿ: . ಆರಾಧಿಸಿ ಪಡೆದಂ ಗಡ ತೇರಂ ದೋಸ್ಸಾರನಲ್ಲದಂಗೇವುದೊ ಪೇಟ್ ಕೇರೆಂದು ಸಿಂಹರಥಮಂ ವೀರಶ್ರೀರಮಣನೇಱಿದಂ ರಘುವೀರಂ (ಪಂರಾಮಾ. ೧೪-೧೩೦). [ಸಂ.]

**ದೋಸ್ಸಾಹಸ** (ನಾ). ತೋಳಿನ ಬಲ,–ಶಕ್ತಿ,–ಸಾಹಸ; ಬಾಹುಬಲ; ಪರಾಕ್ರಮ: ಅನೇಕಾಹವದೃಷ್ಟದೋಸ್ಸಾಹಸವಿದು ವರಾಟಸುಭಟಬಲಂ (ಆದಿಪು. ೦೩-೪೫ ವ). [ಸಂ.]

**ದೋಹ₁** (ನಾ). = ದ್ರೋಹ: "ದೋಹ – ದ್ರೋಹ = ಹಾನಿ" (ಶಬ್ದಕೋ. ೨೧); ಪರಿವೃತ ರೇಫಲೋಪಕ್ಕೆ — ಕ್ರೇಣಿ – ಕೇಣಿ . . . ದ್ರೋಹ – ದೋಹ (ಶಮದ. ೨೬೦ ಪ್ರಯೋ). [< ಪ್ರಾ. ದೋಹ./ಸಂ. ದ್ರೋಹ]

**ದೋಹ₂** (ನಾ). ೧. ಹಾಲು ಕರೆಯುವುದು. ೨. ಹಾಲು; ಕ್ಷೀರ. ೩. ಹಾಲು ಕರೆಯುವ ಪಾತ್ರೆ. [ಸಂ.]

**ದೋಹಂಬಡೆ** (ಕ್ರಿ). ವಂಚನೆಗೊಳ್ಳು ; ಮೋಸಹೋಗು : ಆಹಾ ಕಾಮದಿ ದೋಹಂಬಡದು ದೇಹದೊಳಾತ್ಮಾಧ್ಯಾಸಂದಳೆದು . . . ಆನೆಂಬೀ ಭಾವಂ ಬಲುಹಾಗಿ ಈ ತೆಱದಿಂ ಪುರಃಷನುಯಿನಿರ್ಪ ವಿತತ ಪ್ರಾಕೃತಸೃಷ್ಟಿಯೊಳಿರ್ಪ (ಶಠಗೀ. ೩-೭). [ ದೋಹ$_1$ + ಪಡೆ$_1$ ]

**ದೋಹದ** (ನಾ). ೧. ಗರ್ಭಿಣಿಯರಿಗೆ ಉಂಟಾಗುವ ವಿಶೇಷ ಬಯಕೆ : ಸನ್ನಿಹಿತಗರ್ಭದೋಹದಸಂಪಾದನದಿಂ ವಿಳಾಸವತೀಮಹಾದೇವಿಯುಂ ಪ್ರಮುದಿತೆಯಪ್ಪಂತು ನೆಗಟುತ್ತುಮಿರೆ (ಕಾದಂಪೂ. ೪೦೫) : ಬಯಕೆಯು ಬಾಗುಳವಿಾ ಕಾಂತೆಯೊಳಂತದು ನೆಗಟ್ದುದಿಲ್ಲಣಂ ತೃಷ್ಣಾತಿರ್ಕ್ಷಯಕರನಿರೆ [ತಾಂ] ಗರ್ಭಾಶಯದೊಳ್ ತೋಱುಗುಮೆ ದೋಹದಂಗಳ್ಪೋದುಂ (ವರ್ಧಮಾ. ೧೧-೬೨) ; ತಾನೆ ಸೀತೆ ದೋಹದದಿನಡವಿಯ ರಿಸಿವೆಣ್ಗಳಂ ಕಾಣಲ್ಕೆಂದು ಬಯಸಿದಳ್ (ರಾಮಾಶ್ವ. ೨೭-೨೭). ೨. ಗರ್ಭ ; ಬಸಿರು. ೩. ಗಿಡಲತೆಗಳು ಪುಷ್ಪಿತವಾಗುವುದಕ್ಕೆ ಸಹಾಯ ಮಾಡುವ ವಿದ್ಯೆ; ವೃಕ್ಷಾಯುರ್ವೇದದಲ್ಲಿ ಹೇಳಿರುವಂತೆ ಗಿಡಗಳಿಗೆ ಮಾಡುವ ಒಂದು ಬಗೆಯ ಚಿಕಿತ್ಸೆ,-ಸಂಸ್ಕಾರ : ದೋಹದವೆಂದರೆ ಮರಗಿಡಗಳಲ್ಲಿ ಅಕಾಲದಲ್ಲಿ ಫಲಪುಷ್ಪಗಳು ಉಂಟಾಗುವಂತೆ ಮಾಡುವ ಕಾರ್ಯ (ಪೋಕೋಪ. XIV ಮುನ್ನುಡಿ) : 'ರತ್ನಾವಳಿ'ಯಲ್ಲಿ ಯಕ್ಷಿಣಿ ದೋಹದ ಮುಂತಾದ ವಿದ್ಯೆಗಳಿಂದಲೂ ಗಿಣಿ ಕೋಗಿಲೆ ಮುಂತಾದ ಪ್ರಾಣಿಗಳಿಂದಲೂ ಕಥೆ ಕಟ್ಟಿ, ಕವಿ ತನ್ನ ಸಂವಿಧಾನಕೌಶಲವನ್ನು ಚೆನ್ನಾಗಿ ತೋರ್ಪಡಿಸಿಕೊಂಡಿದ್ದಾನೆ (ಸಂನಾಟ. ೧೯೭). P ಕಾವ್ಯಗಳಲ್ಲಿ ಪ್ರಯೋಗವಾಗಿರುವ ಕವಿಸಮಯಗಳಲ್ಲಿ ಸುಂದರಸ್ತ್ರೀಯರು ಸ್ಪರ್ಶ ಮಾಡುವುದರಿಂದ ಪ್ರಿಯಂಗು ವೃಕ್ಷವೂ, ಮದ್ಯಪಾನಮಾಡಿ ಉಗುಳುವುದರಿಂದ ವಕುಳವೃಕ್ಷವೂ, ಕಾಲಿನಿಂದ ಒದೆಯುವುದರಿಂದ ಅಶೋಕವೃಕ್ಷವೂ, ಕಡೆಗಣ್ಣನ್ನು ಹಾಯಿಸುವುದರಿಂದ ತಿಲಕವೃಕ್ಷವೂ, ಆಲಿಂಗನ ಮಾಡುವುದರಿಂದ ಕುರವಕವೃಕ್ಷವೂ ಕೂಡಲೇ ಚಿಗುರಿ ಪುಷ್ಪಭರಿತವಾಗುತ್ತವೆ ಎಂದು ವಿವರಣೆಗಳು ಬರುತ್ತವೆ. ೪. ಬಯಕೆ ; ಇಚ್ಛೆ ; ಅಭಿಲಾಷೆ ; ಮನೋರಥ.

**ದೋಹದ ಮಾಡು** = ಗಿಡಲತೆಗಳ ಬಯಕೆಯನ್ನು ಪೂರೈಸು ; ಗಿಡಲತೆಗಳು ಪುಷ್ಪಿಸುವುದಕ್ಕೆ ಸಹಾಯ ಮಾಡು : ರಾಜೋದ್ಯಾನದ ಅಶೋಕವೃಕ್ಷಕ್ಕೆ ದೋಹದ ಮಾಡಿ ಅದರಲ್ಲಿ ಹೂ ಬಿಡಸಬೇಕಾಗಿತ್ತು (ಸಂನಾಟ. ೦೩೪). [ ಸಂ. ]

**ದೋಹದಕ್ರಿಯೆ** (ನಾ). ಗಿಡಲತೆಗಳ ಬಯಕೆಯನ್ನು ಪೂರೈಸುವಿಕೆ ; ಗಿಡಲತೆಗಳು ಪುಷ್ಪಿಸುವಂತೆ ಮಾಡುವಿಕೆ. [ ದೋಹದ + ಕ್ರಿಯೆ ]

**ದೋಹದವತಿ** (ನಾ). ಬಯಕೆಯುಳ್ಳ ಗರ್ಭಿಣಿ ; ಬಸಿರಾಗಿ ಬಯಕೆಗಳನ್ನುಳ್ಳವಳು : "ಶ್ರದ್ಧಾಳು-ದೋಹದವತೀ-೨ ಬಸುರಿಂದ ಬಯಕೆಯುಳ್ಳವಳ ಹೆಸರುಗಳು" (ಸಿದ್ಧಾಂತಿ. ೦೭೩); ಮತ್ತೆ ನೀನು ದೋಹದವತಿಯಲ್ಲವೆ ? – ಏನದು ನಿನ್ನ ಬಯಕೆ ? (ಮಂತ್ರಕ. ೧೯೩-೯).

[ ಸಂ. ದೋಹದವತೀ ]

**ದೋಹದವೃಕ್ಷ** (ನಾ). ಹೂವು ಬಿಡಲು ಸ್ತ್ರೀಯ ಪಾದಾಘಾತ,ಆಲಿಂಗನ, ನಗು, ಉಗುಳುವಿಕೆ ಇತ್ಯಾದಿಗಳನ್ನು ಬಯಸುವ ಮರ,-ವೃಕ್ಷ : P ಇವುಗಳಲ್ಲಿ ಹತ್ತು ಬಗೆಯ ಮರಗಳಿವೆ; ಒಂದೊಂದಕ್ಕೂ ಒಂದೊಂದು ದೋಹದವುಂಟು. ಸುಂದರ ಸ್ತ್ರೀಯ ಪಾದಾಘಾತವನ್ನು ಬಯಸುವುದು ಅಶೋಕ, ಉಗುಳುವಿಕೆಯನ್ನು ಬಯಸುವುದು ವಕುಳ,ಸ್ಪರ್ಶವನ್ನು ಬಯಸುವುದು ಚೂತ,ನಗುವನ್ನುಬಯಸುವುದು ಸುರಹೊನ್ನೆ, ಕಣ್ಣು ಹಾಯಿಸುವಿಕೆ ಅಥವಾ ನೋಟವನ್ನು ಬಯಸುವುದು ತಿಲಕ, ಆಲಿಂಗನವನ್ನು ಬಯಸುವುದು ಕುರವಕ, ಸಂಭಾಷಣೆಯನ್ನು ಬಯಸುವುದು ಕರ್ಣಿಕಾರ, ಉಸುರಿನ ಸೋಂಕನ್ನು ಬಯಸುವುದು ಸಿಂಧುವಾರ, ಹಾಡನ್ನುಬಯಸುವುದು ಪ್ರಿಯಾಳು, ಮುಖಪ್ರಸನ್ನತೆಯನ್ನು ಬಯಸುವುದು ಚಂಪಕ : ಪ್ರೌಢೆಯರಾದ ವನಿತೆಯರೊದೆದಡೆ ಮೇಲುಗಿದೊಡೆ ಸೋಂಕಿದೊಡೆ ನಕ್ಕರೆ ನೋಡಿದೊಡೆ ಆಲಂಗಿಸಿದೊಡೆ ನುಡಿದೊಡೆ ಉಸುರು ಸೋಂಕಿದೊಡೆ ಪಾಡಿದೊಡೆ ಮುಖಪ್ರಸನ್ನತೆ ಕಂಡರೆ ಕ್ರಮದಿಂ ಕುಸುಮಿತಂಗಳಪ್ಪ ಅಶೋಕ ವಕುಳ ಚೂತ ಸುರಹೊನ್ನೆ ತಿಲಕ ಕುರವಕ ಕರ್ಣಿಕಾರ ಸಿಂಧುವಾರ ಪ್ರಿಯಾಳು ಚಂಪಕಂಗಳೆಂಬ ದಶ ದೋಹದ [ಹಾಕಾಂ. ೪] ವೃಕ್ಷಜಾತಿಗಳುಂ (ವಿವೇಕ. ೨೨೬). [ ದೋಹದ + ವೃಕ್ಷ ]

**ದೋಹದಶಂಸಿನಿ** (ನಾ). ದೋಹದವನ್ನು ಮಾಡಲು ಬಯಸುವವಳು: ದೋಹದಶಂಸಿನಿಯು ಒದೆದರೆ ಅಶೋಕವೃಕ್ಷವು ಬಹಳ ಹೂ ಬಿಡುವುದೆಂದು ಒಂದು ಸಂಸ್ಕೃತ ಕವಿಸಮಯವಿದೆ (ಕ್ಕಾಂತಕ್ಷ. X ಮುನ್ನುಡಿ).

[ ಸಂ. ದೋಹದಶಂಸಿನೀ ]

**ದೋಹನ** (ನಾ). ೧. ಹಾಲು ಕರೆಯುವುದು,-ಹಿಂಡುವುದು : "ಕಱೆ-ದೋಹನೇ (ಹಾಲು ಕರೆ)" (ಕಮಧಾ) ; ಯಜ್ಞಾರ್ಥದಿಂ ಪಡೆದ ಪಶುಗಳ ಕ್ರಯವಿಕ್ರಯ ದೋಹನವಾಹನಾದಿಗಳೊಳುಪಯೋಗಿಗಳಾದಂದನಿಷ್ಟಫಳ ಪ್ರಾಪ್ತಿಪ್ರಸಂಗಮಕ್ಕುಂ (ಚಾಪುಂಪು. ೨೯೩) : ತೊರೆಯೆಂಬುದುಂಟು ನದಿಗಳೊಳು ದೋಹನದಲ್ಲಿ ಕಱೆಯೆಂಬುದುಂಟು . . . ಕುಟಿಲತನವೆಂದೆಂಬುದದು ಸಱೆಮಿಂಡಿಯರುಗಳಳಕಂಗಳೊಳಗುಂಟು (ಸಿದ್ಧೇಪು. ೨-೦೭). ೨. ಹಾಲು ಕರೆಯುವ ಪಾತ್ರೆ. ೩. ಬಯಕೆಗಳನ್ನು ಈಡೇರಿಸುವಿಕೆ. ೪. [ಯೋಗ] ನಾಲಗೆಗೆ ಮಾಡುವ ಒಂದು ಸಂಸ್ಕಾರ (?) ಛೇದನ ಚಾಲನ ದೋಹನಾದಿ ಕ್ರಿಯೆಗಳಿಂ ಪೆರ್ಚಿದ ಜಿಹ್ವೆಯಂ ಭ್ರೂಮಧ್ಯಸ್ಥಾನಕ್ಕೇಱಿಸಿ ಸ್ಥಿರವೃತ್ತಿಯಾಗಿಹುದೇ ಬಾಹ್ಯಖೇಚರಿಯೆನಿಸುವುದು (ಶರಮಾ. ೦-೯). [ ಸಂ. ]

**ದೋಹಲ, ದೋಹಳ** (ನಾ). ೧. ಇಚ್ಛೆ ; ಬಯಕೆ ; ಅಪೇಕ್ಷೆ : "ದೋಹಲಮಿಚ್ಛೆ ಮನೋರಥಮೀಹೆ ಸ್ಪೃಹೆ ಕಾಂಕ್ಷೆ . . . ಸಮಾನವಾಚಕಮಕ್ಕುಂ" (ವಸ್ತುಕೋ. ೧೧೦-೩). ೨. ಬಸಿರಾದ ಹೆಂಗಸಿನ ಬಯಕೆ,-ಅಪೇಕ್ಷೆ : "ಗರ್ಭಿಣಿಗಳಪ್ಪ ಕಾಮಿನಿಯರ್ ಬಯಸುವ ಬಯಕೆ ದೋಹಲಂ ದೌಹೃದಮುಂ" (ವಸ್ತುಕೋ. ೩೪-೦೯). ೩. ಒಣಗಿದ ಸಗಣಿ ; ಬೆರಣಿ.ದೋಹಳ : ೧. ಕುಸುಮಾಪಚಯವಿಹರಣ ಪರಿಶ್ರಾಂತಿವಿಹ್ವಲವಪ್ಪ ವನಕೇಳೀದೋಹಳಸುರಕುಮಾರವುಕರಾನುಲಿಪ್ಯಮಾನಸರ್ವಾಂಗೀಣಚಂದನದ್ರವನಿವೇಶದಿಂ (ಚಂದ್ರಪು. ೧-೮೩).೨. "ದೋಹಳಂ, ದೌಹೃದಂ, ಶ್ರದ್ಧಾ, ಲಾಲಸಾ-ಈ ೪ ಬಯಕೆ" (ಹಲಾಯು. ೬೩-೩೪೪) : "ದೋಹಳಂ ದೌಹೃದಂ ಶ್ರದ್ಧೆ ಲಾಲಸೆಯೆನಲು ಬಯಕೆಗಳ್ಕ ನಾಮಂ" (ಮಂಗರಾ. ೯೧-೭) : ಗೆಲ್ದು ಜೆಟ್ಟಿಗರೆಸೆ ಸಂದ ಮಲ್ಲರನೆ ಪೋರಿಸಲುಂ ಬಿರಿದೊಂದು ದೋಹಳಂ ನೆಗಟ್ದುದು ಗರ್ಭದರ್ಭಕನ ದೋರ್ಬಲಗರ್ವಮನಂದು ಪೇಟ್ವವೋಲ್ (ಆದಿಪು. ೮-೪೮) : ಆಕೆಯಂ ದೋಹಳಂ ಕರಂ ಪೆರ್ಚಿದುದು (ಪಂಪಭಾ. ೧-೧೪೨) ; ನಿಮ್ಮಡಿಗಳ ವಕ್ಷಸ್ಥಳಮಂ ವಿದಾರಿಸಿ ರಕ್ತಪಾನಮಂ ಮಾಳ್ಪೆನೆಂಬ ದೋಹಳಮೆನಗೆ ಪಾಪಿಷ್ಠೆಗೆ ಪುಟ್ಟಿರ್ದುದು (ಪುಣ್ಯಾಸ್ರ. ೩-೮೭ ಪ). 'ಪುತ್ರದೋಹಳ' ಪರಾ.

[ ಸಂ. ]

**ದೋಹಳ** 'ದೋಹಲ' ನೋ.

**ದೋಹಳಗ್ಗೈ** (ಕ್ರಿ). ಇಚ್ಛೆಯನ್ನು ಪಡೆ ; ಅಭಿಲಾಷೆಯನ್ನು ಹೊಂದು ; ಬಯಸು ; ಅಪೇಕ್ಷಿಸು : ಇಂತೊಪ್ಪುತಿಹ ನಾರಿಯರು ನಂದನದಲ್ಲಿ ಕಂತುವ ಕೂರಾಳ್ಗಳಂತೆ ಸಂತೋಷದಲಿ ದೋಹಳಗೈದು ವರಪ್ರಾಣಕಾಂತರ ಬಳಿಗೈದಿದರು (ಕಂಪವಿ. ೫-೦೦೯).

[ ದೋಹಳ ( = ದೋಹಲ) + ಗೈ (<ಕೆಯ್$_1$) ]

**ದೋಹಳಸಂದೋಹ** (ನಾ). ಬಯಕೆಗಳ ಸಮೂಹ: ಅಂತು ಚಕ್ರವರ್ತಿ ಜನ್ಮೋತ್ಸವಸೂಚಕವಪ್ಪ ದೋಹಳಸಂದೋಹಂ ನೆಗಟ್ಚೆ ಸುಖಪ್ರಸೂತಿ ಸಮಯದೊಳ್ (ಆದಿಪು. ೮-೩೩ಪ).

[ ದೋಹಳ (= ದೋಹಲ) + ಸಂದೋಹ ]

**ದೋಹಾ, ದೋಹೆ** (ನಾ). ಹಿಂದಿ ಭಾಷೆಯಲ್ಲಿ ಎರಡು ಸಾಲುಗಳಿರುವ ಒಂದು ಬಗೆಯ ಪದ್ಯಜಾತಿ ; ದ್ವಿಪದಿ ; P ೪ ಸಾಲುಗಳಿದ್ದರೂ ಇದನ್ನು ಎರಡು ಸಾಲುಗಳಾಗಿ ಬರೆಯುತ್ತಾರೆ. ೧ ಮತ್ತು ೩ನೇ ಚರಣಗಳಲ್ಲಿ ೧೩ ಮಾತ್ರೆಗಳೂ ೨ ಮತ್ತು ೪ರಲ್ಲಿ ೧೧ ಮಾತ್ರೆಗಳಿದ್ದು ೨ ಮತ್ತು ೪ರ ಸಾಲುಗಳಲ್ಲಿ ಅಂತ್ಯಪ್ರಾಸವಿರುತ್ತದೆ: ಮೈಸೂರಿನಲ್ಲಿ ಹರಿಕಥೆಯ ದಾಸರು ಕಬೀರನ ದೋಹಾಗಳನ್ನು ಹಾಡುತ್ತಿದ್ದುದನ್ನು ನಾನು ಕೇಳಿದ್ದೇನೆ (ಚೂಥಿ). **ದೋಹೆ**: ಕಬೀರನ ದೋಹೆಗಳ ತ್ಯಾಗರಾಜನ ಕೃತಿಗಳ, ಗಗನಭೇದಕ . . . ಜೀವತಲ್ಲೀನಕ ಶಕ್ತಿಯು ರಾಗರಸವಾದ ಕನ್ನಡ ಕೀರ್ತನೆಗಳು ಕನ್ನಡ ಕಂಠದಿಂದ ಬಂದರೆ ಇವುಗಳಲ್ಲಿಯೂ ಹಂಚ್ಚಿಲಾರದೆ ? (ವಿಚಾಮಂ. ೫). 'ದಂಪಯಿ' ಪರಾ.

[ ←ಹಿಂ. ದೋಹಾ, ದೋಹರಾ ; ಮರಾ. ದೋಹಾ, ದೋಹರಾ, ದೋಹೋರಾ ]

**ದೋಹಿ** (ನಾ). ಕೆಟ್ಟವನು ; ದ್ರೋಹಿ : (೩).

[ <ಪ್ರಾ. ದೋಹಿ./ಸಂ. ದ್ರೋಹಿನ್ ]

**ದೋಹಿಲ್, ದೋಹಿಲು, ದೋಹಿಲೆ** (ನಾ). ದೂಷಣೆ ; ಮಿಥ್ಯಾಪವಾದ ; ನಿಂದೆ : "ದೋಹಿಲ್ – ದೂಱುವುದು" (ಕಚುನಿ. ೩. I, ೬೮). **ದೋಹಿಲು** : ಬಯಲಿಗಿಂತಕಟ ದೋಹಿಲಸಿಕ್ಕಿದವನು ನಿರ್ದಯದಿಂದಲೀ ಮುದುಕನವನನೀ ಸಭೆಯ ನಿರ್ಭಯದಿ ಪೊಗಿಸಿದ ಮೂರ್ಖನಾರವಗೆ ತಕ್ಕುದಂ ಮಾಳ್ಪನು (ಸೌಂದಪು. ೪-೬೬). **ದೋಹಿಲೆ**: "ದೋಹಿಲೆ ಗಾರಣವೆಂದು" (ಕವಿಕಂ. ೦೯೭). [ ? ]

**ದೋಹಿಲು** 'ದೋಹಿಲ್' ನೋ.

**ದೋಹಿಲೆ** 'ದೋಹಿಲ್' ನೋ.

**ದೋಹೆ** 'ದೋಹಾ' ನೋ.

**ದೋಳ** 'ದೋಲ' ನೋ.

**ದೋಳು**[1] 'ದೋಲು' ನೋ.

**ದೋಳು**[2] (ನಾ). (?) : ಕೊಳನ ಕರಿಯ ಕಯದೊಡಗುಡಿಯ ಕಟಿಗೌಡಾ ವೀರಗರ ವೈಯಾಣಾ ದೋಳನತಿವಿದನ ಚೀಕವರ ಕಲದಲು ಗುಡಿಗಳು ಕೆರೆಗಳು ಆದಲು (ಎಕ. XI, ಹೊಳೆಕೈ. ೬೬-೩೯ : ೧). [ ? ]

**ದೋಳುಗೆ** (ನಾ). (?) : ಬತ್ತುವ ಬಾಯ್ ವಾತಜ್ವರ ಚೇಷ್ಟೆ ನೋಯೆ ಕಿವಿ ದೋಳುಗೆಗಳ್ (ಕಲ್ಯಾಕಾ. ೩-೬). [ ? ]

**ದೋಱು** 'ಡೊಂಗಱು' ನೋ.

**ದೋಱುಮೀಟ್** 'ಡೊಗರುಬೀಳು' ನೋ.

**ದೋಱುವೋಗು** 'ದೋಱುವೋಗು' ನೋ.

**ದೌಕೂಲ** (ನಾ). ರೇಶಿಮೆಯ ಬಟ್ಟೆ ; ದುಕೂಲ. [ ಸಂ. ]

**ದೌಡಾಯಿಸು** (ಕ್ರಿ). ೧. ಅತಿವೇಗವಾಗಿ ಓಡುವಂತೆ ಮಾಡು ; ವೇಗವಾಗಿ ಓಡಿಸು : ಕುದುರೆಯನ್ನು ದೌಡಾಯಿಸಿಕೊಂಡು ಓಡಿದನು (ಘಾಟೀಮು. ೬೯) ; ಮಿಗಿಲಾದ ಹೆದರಿಕೆಯೊಂದು ಆ ಕಂದಿಯನ್ನು ಮನುಷ್ಯರಿದ್ದೆಡೆಗೆ ದೌಡಾಯಿಸಿ ಓಡಿಸಿರಬೇಕೆಂದು ಮೂರ್ತಿ ಭಾವಿಸಿದನು (ಕಂಜಕಂ. ೨೦೦) ; ಗಾಡಿಗಳನ್ನು ದೌಡಾಯಿಸಿಕೊಂಡು ಮಧ್ಯಾಹ್ನದ ವೇಳೆಗೆ ಸಂತೆಯಂ ಮಾಳವನ್ನು ಸೇರಿದ್ದರು (ಸರ್ವಮಂ. ೩೯೨). ೨. ಓಡು ; ಧಾವಿಸು : ಅವಳ ಅಭಿಲಾಷೆಯು ಹುಚ್ಚು ಕುದುರೆಯಾಗಿ ದೌಡಾಯಿಸಿರದೆ ಆದರ್ಶದ ಅಧೀನವಾಗಿದ್ದಿತು (ಅಂಬುಜಾ. ೨೩) : ಎಲ್ಲರೂ ಸವಾರರಾಗಿ ಇಪ್ಪತ್ತು ಕುದುರೆಗಳನ್ನು ಬೇರೆಯಾಗಿ ಓಡಿಸಿಕೊಂಡು ದೌಡಾಯಿಸಿದರು (ಒಡಳ. ೬೮). ೩. (ಆಲಂ) ಒಂದಂ ಸರಣಿಯಲ್ಲಿ ಹೋಗುತ್ತಿರುವಾಗ ಆತುರದಿಂದ ಮಧ್ಯೆ ಬಿಡು,– ಹಾರಿಸು ; ಚುಟುಕಂಗೊಳಿಸು : ಯಾವ ಭಾಗವನ್ನೂ ಅತಿ ಹಿಗ್ಗಲಿಸದೆ, ಕೊನೆಕೊನೆಯಲ್ಲಿ ದೌಡಾಯಿಸದೆ . . . ಈ ಗುರಿಯನ್ನು ಸಾಧಿಸಿರುವುದು ಆಕ್ಸ್‌ಫರ್ಡ್ ನಿಘಂಟುಕಾರರ ಅಪೂರ್ವವಾದ ಪ್ರಶಸ್ತಿ (ಸಮಾಲೋ. ೨೬೮).

[ <ದೌಡು + – ಇಸು[2] ]

**ದೌಡು**, ದವುಡು (ನಾ). ೧. ಓಡುವುದು ; ಓಟ : ಈ ಮರವಿನ ಭೂತ ಮೆಟ್ಟಿಕೊಂಡ ಆಕರ್ಷಣ್ಯ ದಿನಗಳಿಂದ ಒಂದೇ ದೌಡಿನಲ್ಲಿ ಓಡಿಹೋಗಿ ಬಿಡೋಣ ಎಂಬ ಇಚ್ಛೆಯಾಗುತ್ತದೆ (ನಿಬಂಧ. II, ೧೨೬). ೨. "(ಕುದುರೆ, ವೊ.ಗಳ) ನಾಗಾಲೋಟ (ನಾಲ್ಕು ಕಾಲುಗಳೂ ಒಂದೇ ಬಾರಿ ನೆಲ ಬಿಟ್ಟು ಎಗುರುವ ಓಟ) ; ದೌಡು ; ನಾಗಾಲೋಟದ ಸವಾರಿ" (Gallop. ಇಂಕನಿ). ೩. ಆಕ್ರಮಣ ; ಧಾಳಿ ; ದಂಡಯಾತ್ರೆ : ಕ್ರಿಸ್ತೀಶಕದ ೧೧ನೇ ಶತಕದಲ್ಲಿ ಗಿಝ್ನಿಯ ಮಹಮೂದನು ಹಿಂದುಸ್ಥಾನದಲ್ಲಿ ದೌಡುಗಳನ್ನು ಮಾಡಿದಂದಿನಿಂದ ಉತ್ತರಹಿಂದುಸ್ಥಾನದಲ್ಲಿ ಮುಸಲ್ಮಾನರು . . . ಸಿಂಹಾಸನವನ್ನು ಸ್ಥಾಪಿಸಿದರು (ಕಥಾಗಿ. ೩೩೪). ೪. (ಉಕ) ಬೇಗ ; ಜಾಗ್ರತೆ. ದವುಡು : (೩).

**ದೌಡು ಕೀಳು** = ಪಲಾಯನ ಮಾಡು ; ಬೇಗದಿಂದ ಧಾವಿಸು ; ಓಡು : ಕುದುರೆಯು ಸಮೀಪ ಬರುತ್ತಿರುವುದನ್ನು ಕಂಡು ಭಯದಿಂದೇದುತ್ತ ದೌಡು ಕಿತ್ತರು (ಕೋಹಿನೂ. ೦೭). **ದೌಡು ಬರು** = ಅವಸರವಾಗಿ ಬರು ; ವೇಗವಾಗಿ ಬರು ; ಬೇಗ ಬರು : ಅದರಲ್ಲಿಯೂ ಕೊನೆಕೊನೆಗೆ ಸ್ವಲ್ಪ ಓಡಿ ಓಡಿಯ ದೌಡುಬರಬೇಕಾಯ್ತು (ಮಳಿಮು. ೮೦೧) ; ಸೀತಮ್ಮನವರು ಮುಸುರೆ ಕೈಯಲ್ಲೇ ದಡ ದಡ ದೌಡುಬಂದರು (ಕಾಳಿಗಿ. ೧೨೬). **ದೌಡು ಬಿಡು** = ದೌಡಂ ಕೀಳು : ಅವನು ಕ್ಷಣಮಾತ್ರದಲ್ಲಿಯೇ. . . ಉಸುಬಿನ ಬಯಲ ಮೇಲೆ ನಾಗಾಲೋಟದಲ್ಲಿ ದೌಡುಬಿಡುತ್ತಿದ್ದನು (ಛಾವೀ. ೩೯). **ದೌಡು ಮಾಡು** = ದಂಡೆತ್ತಿ ಬರು ; ಧಾಳಿ ಮಾಡು : ಆ ತಾಲ್ಲೂಕಿನಲ್ಲಿ ದೌಡಂ ಮಾಡುವಂಥಾದ್ದು ನಿಲ್ಲಿಸಿ . . . ಆ ಠಾಣ್ಯದ ಮಂದಿಗೆ ಸರದಾರನಾಗಿ, ಈ ನಗರಹಳ್ಳಿ ಪುಟ್ಟೇಗೌಡನು ಇದ್ದನು (ರಾಜೇಂದ್ರ. ೫೧) ; ಗಿಝ್ನಿಯ ವಂಶದ ತುರ್ಕರು ಹಿಂದುಸ್ಥಾನದ ಮೇಲೆ ದೌಡು ಮಾಡುವವರೆಗೆ ಮುಂದೆ ೨೦೦ ವರ್ಷ ಹಿಂದುಸ್ಥಾನವು ಶಾಂತವಾಗಿದ್ದಿತು (ಹಿಂಮುಸ. ೨೨) ; ತುಗಲಖ ಮಹಮ್ಮದನು ಈ ಪ್ರಾಂತದ ಮೇಲೆ ದೌಡಂ ಮಾಡಿ ನಾಗನಾಯಕನನ್ನು ಹಣ್ಣು ಮಾಡಿದ್ದರಿಂದ (ಕಮಲ. ೮೨). [ ←ಹಿಂ. ಮರಾ. ದೌಡ್ ]

**ದೌಡೆ** 'ದವಡೆ' ನೋ.

**ದೌಡೋಡು** (ಕ್ರಿ). ವೇಗವಾಗಿ ಓಡು ; ಅತಿ ಶೀಘ್ರವಾಗಿ ಓಡು : ತಂದನಿನ್ನೊರ್ವಂ ದುರಂತ ವೃತ್ತಾಂತಮಂ . . . ರಕ್ಕಸರ ಪಡೆ ಕೆಟ್ಟು, ಕಂಗೆಟ್ಟು . . . ಸೇನಾನಿಗಳ ಕಳೇವರಂಗಳಂ ತುಳಿ ತುಳಿದಿರದೆ ಲಂಕೆಯ ಕಡೆಗೆ ಪಡುಮಟ್ಟೆ ದೌಡೋಡಿ ಬರುತಿರ್ಪುದಂ ! (ಶ್ರೀರಾಮಾ. ೬೩೭-೪೧೨); ಇನ್ನೀ ವಂಚಿಸುವಾಟವು ಸಾಗದು ಬಿನದ ಸಾಕಣ್ಣ, ಯಾರಿಗೆ ಮೆಚ್ಚು ? ಇಂತೀ ಕೆರನಾ ಸರಸದಿ ನುಡಿಯಲು ದೌಡೋಡಿತು ಮೃಗ ಬಲು ನಾಚಿದ ಪೊಲು (ಸೌಂದಸ. ೩೬). [ ದೌಡು + ಓಡು[1] ]

**ದೌತಿ** 'ದವುತಿ' ನೋ.

**ದೌತಿಮಣೆ** (ನಾ). ಮಸಿಕುಡಿಕೆಯನ್ನಿಡುವ ಮಣೆ : (ಒಂದು ಅಥವಾ ಹೆಚ್ಚು ದೌತಿಗಳನ್ನಿಡುವುದಕ್ಕೆ, ಸಾ., ಲೇಖನಿಯಾಸರೆ, ವೊ.ಗಳೊಂದಿಗೆ ಇರುವ) ದೌತಿಮಣೆ (Ink Stand. ಇಂಕನಿ).

[ ದೌತಿ (<ದವುತಿ) +ಮಣೆ ]

**ದೌತ್ಯ** (ನಾ). ೧. ದೂತನಾಗಿರುವಿಕೆ; ದೂತನ ಕೆಲಸ: "ದೂತ್ಯಂ, ದೌತ್ಯಂ – ತದ್ಭಾವಕರ್ಮಣೋಃ, ದೂತಭಾವಕ್ಕೂ ದೂತಕೃತ್ಯಕ್ಕೂ ಹೆಸರು, ದೂತನಾಗುವಿಕೆ, ದೂತನು ಮಾಡತಕ್ಕ ಕೆಲಸ" (ಸಿದ್ಧಾಂತಿ. ೨೪೯). ೨. ರಾಯಭಾರ; ದೂತತನ: ಅವರ ದೌತ್ಯವನ್ನು ವಹಿಸಿ, ಖುದ್ದು ವೆಂಕಟುವಿನ ಸವಾರಿಯೇ ಚಂದುವಿನ ಮನೆಗೆ ಹೋಯಿತು (ಚಾರುದಾ. ೭೦). ೩. ಸಂದೇಶ; ವಾರ್ತೆ. [ಸಂ.]

**ದೌವಾಷಾಯ** 'ದಾವಾಷೆ' ನೋ.

**ದೌರಾತ್ಮ್ಯ** (ನಾ). ಕೇಡಿಗತನ; ದುರುಳತನ; ದುಷ್ಟಸ್ವಭಾವ: ಅವನು ನನ್ನ ಮೇಲೆ ಯಜಮಾನಿಕೆ ಮಾಡಬೇಕೆಂಬ ಉತ್ಸಾಹದಿಂದ ದೌರಾತ್ಮ್ಯ ನಡಸಿದ್ದರೆ . . . ಏನೋ ಒಂದು (ಪದಾರ್ಥ) ಆಗುತ್ತಿದ್ದೆ (ನಿಬಂಧ. II, ೪); ನನ್ನ ವ್ಯಕ್ತಿತ್ವದಲ್ಲಿ ಈ ನಾನಾ ವಿರೋಧಗಳ ವಿಷಮ ದೌರಾತ್ಮ್ಯ ಇರುವುದರಿಂದಲೇ . . . ಇಷ್ಟು ನಿರಂತರವೂ ಇಷ್ಟು ಪ್ರಬಲವೂ ಆದ ರೋದನ (ನಿಬಂಧ. II, ೧೨೩). [ಸಂ.]

**ದೌರಿತಕ** (ನಾ). ಧೌರಿತಕ, ಆಸ್ಕಂದಿತ, ಪ್ಲುತ, ವಲ್ಗಿತ, ಚಾರುರೇಚಿತ ಗಳೆಂಬ ಐದು ವಿಧವಾದ ಕುದುರೆಯ ಓಟಗಳಲ್ಲಿ ಒಂದು: ಕುಕ್ಕುಲೋಟ: ಮೇಲಣ ರಾವುತನ ಭಾರವನು ಸಡ್ಡೆ ಮಾಡದೆ ಇದ್ದ ಸತ್ವದಿಂದ ಹುಚುತ ನಡೆಯಲದು ದೌರಿತಕವೆನಿಸಿಕೊಂಬುವುದು (ಅಶ್ವಟೀ. ೨೩–೦). [<ಸಂ. ಧೌರಿತಕ]

**ದೌರ್ಘಟ್ಯ** (ನಾ). ಕೆಟ್ಟ ಘಟನೆಯುಂಟಾಗುವಿಕೆ; ದುರ್ಘಟನೆ ಯಾಗುವಿಕೆ: ಹೀನೋತ್ಪಾತದ ಸೂಚನಾರ್ಥಮೊ . . . ಬ್ರಹ್ಮಾಂಡ ಸೃಷ್ಟ್ಯಂತಮೋ ನಾನೋಪಾಯದೊಳೊಂದಿ ನೋಡಲಮಮಾ ದೌರ್ಘಟ್ಯ ಮಾಯ್ತಲ್ಲದೇ ನೂನಂ ಪೋಗದು (ಹಮ್ಮಿರ. ೭–೯). [ಸಂ.]

**ದೌರ್ಜನ್ಯ** (ನಾ). ೧. ಕೆಟ್ಟತನ; ದುಷ್ಟತನ. ೨. ಕೆಟ್ಟತನವುಳ್ಳ ವ್ಯಕ್ತಿ; ದುರುಳ; ನೀಚ: ಅಮರೇಂದ್ರನಂದನದಿಂ ಶರಚಾಪಗಳ ಧರಿಸಿ ದಿವ್ಯತೇಜೋಮಯದಿ ಮೆರೆವ ನರಪುಂಗವನ ನೋಡಿ ವಿಸ್ಮಿತರಾದರಾಗಲಾ ದೌರ್ಜನ್ಯರು (ವಂಕಾರಾ. ೩–೧೦–೧೨). [ಸಂ.]

**ದೌರ್ಜನ್ಯಕಾರಿ** (ನಾ). ಕೆಟ್ಟ ಕೆಲಸವನ್ನು ಮಾಡುವವನು; ದುಷ್ಟ: ಸಜ್ಜನರು ಸಾಯಲೊಡೆ ನಿರ್ಜರರು ಮಚುಗುವರು ದೌರ್ಜನ್ಯಕಾರಿ ಸತ್ತರೆ ಹತ್ತಿದ್ದ ಕಜ್ಜಿ ಹಚುದಂತೆ (ಸರ್ವಜ್ಞ. ೮೧೪). [ಸಂ. ದೌರ್ಜನ್ಯಕಾರಿನ್]

**ದೌರ್ಜ್ಞ್ಯತಂತ್ರ** (ನಾ). ಕಾರಣಾಗಮದ ಏಳು ವಿಧಗಳಲ್ಲಿ ಒಂದು: ಕಾರಣತಂತ್ರ ಪಾವನತಂತ್ರ ದೌರ್ಜ್ಞ್ಯ[ಪಾಠಾಂ. ದೌರ್ಥ್ಯ]ತಂತ್ರ ಮಹೇಂದ್ರ ತಂತ್ರ ಭೀಮತಂತ್ರ ಮಾರಣತಂತ್ರ ಈಶಾನತಂತ್ರವೆಂದು ಕಾರಣಾಗಮದ ಸಪ್ತಭೇದಂಗಳು (ವಿವೇಕ. ೭೦). [ಸಂ. ?]

**ದೌರ್ಬಲ್ಯ** (ನಾ). ೧. ಬಲಹೀನತೆ; ಅಶಕ್ತತೆ; ದುರ್ಬಲತ್ವ: ಅವನ ದೇಹದ ದೌರ್ಬಲ್ಯಕ್ಕೆ ಕೆಟ್ಟ ಚಟಗಳೇ ಕಾರಣ (ರೂಢಿ). ೨. ಚಾಪಲ್ಯ; ಗೀಳು: ಅವರ ಅಷ್ಟೊಂದು ಸಣ್ಣ ದೌರ್ಬಲ್ಯವನ್ನು ಒತ್ತಿ ತೋರಿಸಲಿಕ್ಕೆ ಅವರಾರಿಗೂ ಮನಸ್ಸು ಬರುವುದಿಲ್ಲ (ಕಂಬಹು. ೭೧); ಅವರಿಗೂ ಕೆಲವು ದೌರ್ಬಲ್ಯಗಳು ಇವೆ. ಆದರಿಂದಾಗಿ ಅವರು ತುಂಬಿದ ಕಷ್ಟದಲ್ಲಿ ಬೀಳುತ್ತಾರೆ (ಕುಸುಸಂ. ೧೪೬); ತನ್ನ ಮೃದುಹೃದಯದೊಂದು ದೌರ್ಬಲ್ಯಮಂ ಗುಪ್ತಮಂ, ಕಳ್ದಡಗಿ ಕಾಣ್ಬನಂ ಕಾಣ್ಬ ಕಲಿಯಾತ್ಮದಮೃತಂ ಕಾಳಕೂಟಕ್ಕೆ ತಿರುಗುವೊಲ್ ಕ್ರೂರವಾಯ್ತಾ ಕರ್ಬುರೇಂದ್ರನ ಭುಗಿಲ್ ಕೋಪ ಕರ್ಕೋಟಕಂ (ಶ್ರೀರಾಮಾ. ೩೭೯–೧೨೬). [ಸಂ.]

**ದೌರ್ಭಾಗ್ಯ** (ನಾ). ೧. ಅದೃಷ್ಟಹೀನತೆ; ದುರ್ದೈವ: ಮಕ್ಕಳು ಸೌಭಾಗ್ಯಗಳೂ ಆಗಬಹುದು, ದೌರ್ಭಾಗ್ಯಗಳೂ ಆಗಬಹುದು (ಶಾಂತಲಾ. ೧೯೩). ೨. ಬಡತನ; ದಾರಿದ್ರ್ಯ: ಬಡವನ ದೌರ್ಭಾಗ್ಯವಾತನ ತುಳಿವುದು ಪಾತಾಳದಿಂದತ್ತ ತಳಕೆ (ಇಂಚಾಹ. ೧೯೭–೭೩). [ಸಂ.]

**ದೌರ್ಮದ್ಯ** (ನಾ). ಕುಡಿದು ಅಮಲೇರಿ ಮಾಡುವ ರಂಪ. [ಸಂ.]

**ದೌರ್ಮನಸ್ಯ** (ನಾ). ದುರುದ್ದೇಶವನ್ನು ಹೊಂದಿರುವ ಮನಸ್ಸಿನ ಸ್ಥಿತಿ: ದುರ್ಯೋಧನ ಮಾಡಿದವರ ದೌರ್ಮನಸ್ಯದಂತೆ ಏನೋ ದುಗುಡ ಎಲ್ಲೆಲ್ಲೂ ದುಮುದುಮುಗುಟ್ಟುತ್ತಿದೆ (ಪುಹಾಕಾ. ೨೯೩). [ಸಂ.]

**ದೌರ್ಹೃದ** (ನಾ). ೧. ಹಗೆತನ; ವೈರ; ದ್ವೇಷ; ಶತ್ರುತ್ವ. ೨. ಗರ್ಭ; ಬಸಿರು. ೩. ಗರ್ಭಿಣಿಯರಿಗೆ ಉಂಟಾಗುವ ವಿಶೇಷವಾದ ಬಯಕೆ. ೪. ಬಯಕೆ; ಅಭಿಲಾಷೆ. 'ದೋಹದ' ಪರ್ಯಾ. [ಸಂ.]

**ದೌಲಚ್ಯಾದ, ದೌಲತ್‌ಜಾದಾ** (ನಾ). ನರ್ತಕಿಯರು ಗಣ್ಯವ್ಯಕ್ತಿಗಳಿಗೆ ಗೌರವ ಸಲ್ಲಿಸಲು ಜಯಕಾರದೊಡನೆ ಮಾಡುವ ಸಲಾಮು: ಅವಳು ಅದೇ ದಿವಸ ಗೆಜ್ಜೆಕಟ್ಟಿ ಬಂದ ಬೀಗರಿಗೆ 'ದೌಲಚ್ಯಾದ' ಮಾಡಿ . . . ನಿನ್ನ ಮಗಳು ನಿನ್ನ ಹೆಸರು ಮಾರಿಸುತ್ತಾಳೆ ಎನ್ನಿಸಿದ್ದಳು (ಹಹಸ. ೩೨); ಪ್ರತಿಯೊಬ್ಬರ ಮುಂದೆ ನಿಂತು ಹರಿವಾಣ ಮುಂದೆ ಹಿಡಿದು ಬಲಗೈಯಲ್ಲಿ 'ದೌಲಚ್ಯಾದ' ಎಂದು ನಮಸ್ಕರಿಸಿದ್ದಾಳೆ ಆಕೆ (ಬಣ್ಣಬಾ. ೧೩). **ದೌಲತ್‌ಜಾದಾ**: ಶೀನಪಯ್ಯನು ಹದಿನೆಂಟು ಬಾರಿ 'ಶೀನಪಯ್ಯ ಮಹಾರಾಜಕೂ ದೌಲತ್‌ಜಾದಾ' ಮಾಡಿಸಿಕೊಂಡನು (ಮುರಮು. ೧೬೪). [←ಅರ. ಮರಾ. ದೌಲತ್‌ಜಾದಾ, ದೌಲತ್‌ಚ್ಯಾದಾ]

**ದೌಲತ್** 'ದೌಲತ್ತು' ನೋ.

**ದೌಲತ್‌ಜಾದಾ** 'ದೌಲಚ್ಯಾದ' ನೋ.

**ದೌಲತ್ತು, ದವಲತ್, ದವಲತ್ತು, ದೌಲತ್** (ನಾ). ೧. ಐಶ್ವರ್ಯ; ಸಂಪತ್ತು; ಸಿರಿ: ದೊರೆಗಳವರ ಖುದ್ದು ದೌಲತ್ತು (ಮುಹಾಮಂ. II, ೩೮): ನಿಮಗೆ ಪ್ರಾಣ, ಮಾನ (ಮರ್ಯಾದೆ), ದೌಲತ್ತು, ಇಜ್ಜತ್ತು ಮುಂತಾದವು ಹೆಚ್ಚಾಗಲಿ (ದೇವೀಚಾ. ೮೪). ೨. ವೈಭವ; ಆಡಂಬರ; ಠೀವಿ; ದೊಡ್ಡಸ್ತಿಕೆ: ಏನ್ರಿ ಅಂತಹ ದೌಲತ್ತು ಬಂದಿರೋದು ನಿಮಗೇ ? ಅಂತ ಕೇಳ್ತೀನಿ! (ಹನ್ನೊಂದ. ೬೩). ೩. ಅಧಿಕಾರ; ಆಳ್ವಿಕೆ; ಒಡೆತನ; ದೊರೆತನ; ಪ್ರಭುತ್ವ: ದೌಲತ್ತು ಕಂಪನಿಸರ್ಕಾರದ ಸುಪರ್ದಾಯಿತಂ (ಕಂಪಾಚ. ೪೩); ಹಿಂದಿನ ಜಗದ್ಗುರುಗಳವರು . . . ಬಾಳೆಹಳ್ಳಿ ದೌಲತ್ತು ಉಜ್ಜಯಿನಿ ಸಂಪತ್ತು ಎಂಬ ನಾಣ್ಣುಡಿಯನ್ನು ಸಾರ್ಥಕಗೊಳಿಸಿ ಸತ್ಕೀರ್ತಿವಂತರಾಗಿದ್ದರು (ಗುರುಚ. ೧೯). **ದವಲತ್**: ೧. ದವಲತ್– ದವಲತ್ತು (ಹೊಸುಗ. ೧೧೨). **ದವಲತ್ತು**: ೧. ದನಗಳೇನು ಧನವಲ್ಲ ದವಲತ್ತೂ ಅಲ್ಲ (ಅಕೋಳ. ೮೬); ರೂಪಾಯಿ ದವಲತ್ತಿಗೆ ಬೆಲೆಯೇ ಹೊರತು ಮನುಷ್ಯರಿಗ್ಯಾರಯ್ಯಾ ಬೆಲೆ ಕಟ್ಟುತ್ತಾರೆ (ಸಾಹೇಬ್. ೧೯೨). ೨. ಠಾಕುಟೀಕಿನ ಕಟ್ಟು ಅದಕೆ ಚಿನ್ನದ ಕಟ್ಟು ಸಾಕೊ ಅಣ್ಣಯ್ಯ ದವಲತ್ತು (ಹಳ್ಳಿಹಾ. ೧೨೦); ಶ್ರೀಮಂತಿಕೆಯ ದವಲತ್ತು ಮತ್ತು ಸಾರ್ವಭೌಮ ವಂಶದೊಡನೆಯ ಸಂಬಂಧ, ಇದರಿಂದಾಗಿ ಅವರ ಶೀಲ ಮತ್ತಷ್ಟು ಹದಗೆಡುತ್ತಿದೆ (ಪುನರು. ೬೨); ದವಲತ್ತೇನೆ ಬೂಬಿ ಅಂದರೆ ಶೇಕದಾರ ನನ್ನ ಅಳಿಯ ಅಂದ್ಲಂತೆ (ಗಾದೆ). ೩. ಸರಕಾರದ ಅಹಂಮದಿ ದವಲತ್ತಿಗೆ ಶ್ರೇಯಸ್ಸು ಅಪೇಕ್ಷಿಸಿಕೊಂಡು ಸುಖದಲ್ಲಿಯಿರೋದು (ಎಕ. IX, ದೊಡ್ಡಬ. ೧೨–೩; ಸು. 1785); ನಮ್ಮ ಮಗನಿಗೆ ಪಿರಿಯಾಪಟ್ಟಣದ ದವಲತ್ತಿನಲ್ಲಿ ನಿಮ್ಮ ಒಡಂಬಡಿಕೆಯಿಂದ ಕೊಡಿಸಿ (ರಾಜೇಂದ್ರ. ೩): ಶ್ರೀರಂಗಪಟ್ಟಣದ ಬೊಕ್ಕಸಕ್ಕೆ ಬಂದ ಹಣವನ್ನು ದವಲತ್ತಿಗೆ ಎಂದು ನಿಷ್ಕರ್ಷೆ ಮಾಡಿದರು (ಚಾಮುಮಂ. I, ೭೨೪); ಇಲ್ಲಿ ಏನಿದ್ದರೂ ಔರಂಗಜೇಬನ ಮಹತ್ವ– ಅವನ ವೈಭವ, ದವಲತ್ತು, ಅಂತಃಪುರ ಇವುಗಳ ವರ್ಣನೆ (ಬಂಕಿಮ. ೨೫೬); ಅವನಿಗೂ ದವಲತ್ತು, ಆಟಾಟೋಪ ಮಾಡಲಿಕ್ಕೆ ಬರುತ್ತದೆ (ಸಾಹೇಬ್. ೩೩೬). **ದೌಲತ್**: ೨. ಒಳ್ಳೆಯ ದೌಲತ್ ನಡೆಸಿದವರಂತೆ ತಮ್ಮ ಕಾಲದಲ್ಲಿ (ಮಠಕಿ. ೮೯). ೩. ಏನು ಮೋಸವಾಯಿತೋ ಸುಲ್ತಾನ ದೌಲತ್ ಯಾರ ಪಾಲಿಗೆ ಸೇರಿತೋ (ಸಾಹರ. ೨೩).

**ದೌಲತ್ತು ಮಾಡು, ದವಲತ್ತು ಮಾಡು, ದೌಲತ್ ಮಾಡು** = ಆಡಳಿತ ನಡೆಸು ; ಅಧಿಕಾರ ಚಲಾಯಿಸು : ಎಲ್ಲಾರೂ ನನ್ನ ಮೇಲೆ ದೌಲತ್ತು ಮಾಡ್ತಾರೆ (ಅನ್ನಾವ. ೪೧) ; ಶ್ರೀರಂಗಪಟ್ಟಣದಲ್ಲಿ ದವಲತ್ತು ಮಾಡಿದ ನವಾಬ ಹೈದರಲ್ಲಿಖಾನಬಹದರವರ ದರಬಾರಿನ ವರ್ತಮಾನದ ವಿವರ (ಹೈದರ. ೨೯) ; ನಮ್ಮೂರಿನಲ್ಲಿ ಒಬ್ಬ ಫ್ರೆಂಚ್‌ಮನುಷ್ಯ ದೌಲತ್ ಮಾಡ್ತಾ ಇದ್ದಾನೆ (ಫುನರು. ೩೧೪).

[ ←ಅರ.ಫಾರ. ಹಿಂ. ದೌಲತ್ ; ಮರಾ. ದೌಲತ್, ದವಲತ್ ]

**ದೌವಾರಪಾರಿಕ** (ನಾ). (?): ಚಿತ್ರನ್ಯಸ್ತ ದೌವಾರಪಾರಿಕಾಪ್ರಕಾಶದಿಂದೆಲೆ ವಿಡುಕದೆ ಮರವಟ್ಟು ನಿಂದ ಮಹಾಪ್ರಾತಿಹಾರ್ಯರುಮಂ (ವರ್ಧಕೂ. ೩-೯ ವ). [ < ದ್ವಾರ ]

**ದೌವಾರಿಕ** (ನಾ). ಬಾಗಿಲುಕಾಯುವವನು ; ದ್ವಾರಪಾಲಕ ; ಪ್ರತೀಹಾರ : "ದ್ವಾಸ್ಥಃ, ದೌವಾರಿಕಃ ... ದ್ವಾರಪಾಲಃ, ಪ್ರತೀಹಾರಃ – ಈ ೮ ಪಡಿ(ಯ)ಹಾರಂ" (ಹಲಾಯು. ೬೦-೨೬೦) ; ಮಕರ ತೋರಣಾಲಂಕೃತ ಜ್ಯೋತಿರಮರದೌವಾರಿಕಪರಿಪಾಲಿತ . . . ಮಂಗಳ ನವನಿಧಿಸಮನ್ವಿತ ಜಾತರೂಪಗೋಪುರಾಭ್ಯಂತರ ಮಹಾವೀಥೀಮಧ್ಯದೊಳ್ (ಆದಿಪು. ೧೧-೨೨ ವ) ; ಖೇಚರಂ ಬಂದು ದೌವಾರಿಕನಿವೇದಿತ ವೃತ್ತಾಂತನಾಗಿ (ಶಾಂತಿಪು. ೨-೧೮ ವ) ; ಸಮಯುವಿದಸಮಯವೆಂದೆನ್ನ ದಂತಃಪುರದ ದೌವಾರಿಕರ್ತಜೆಯದಿರಲಿದೇ ವರವೆಂದನು (ರಾಘವ. ೯-೫೦) ; ಒಳಗೆವೊಗಲೆಳಸೆ ದೌವಾರಿಕರು ತಬುಬಿದೊಡೆ [ಪಾಠಾಂ. ಸಿದರೆ ಕಾವಾಳು ಗಳು ತಡುಟಿ] ಬಳಸಿ ಲಿಂಗಾಲಯವ . . . ಪ್ರದಕ್ಷಿಣ ಬಂದುದಾ ಶುನಕನು (ಗುರುಚಾ. ೭-೮೯). [ ಸಂ. ]

**ದೌವಾರಿಕೆ** (ನಾ). ಬಾಗಿಲು ಕಾಯುವವಳು; ದ್ವಾರಪಾಲಕಿ : ದೌವಾರಿಕೆ ಬಣ್ಣಿಸಿದೊಡಮಾ ವಧು ತನ್ನ ವನನುಜಿದೆ ಪೋದಳ್ ಸಿರಿಯಂ ಜೀವದ ಮತಿ ತರೆ ಪುಣ್ಯಾಭಾವದಿನದು ನೆಲಸಿ ತೊಲಗಿ ಪೋದಂತಾಗಳ್ (ಶಾಂತಿಪು. ೫-೧೩೬); ಅವಳಿ ದೂರದೊಳಿರ್ದ ದೌವಾರಿಕೆಯಂ ವೈಶಂಪಾಯನ ನೊಡಗೊಂಡು ಬರ್ಪುದೆಂದಂ ತದ್ವೃತ್ತಾಂತಾಕರ್ಣನ ಕೌತುಕದಿಂ ಬೆಸಸೆ (ಕಾದಂಪೂ. ೮೧). [ ಸಂ. ದೌವಾರಿಕಾ ]

**ದೌಷ್ಟ್ಯ** (ನಾ). ದುಷ್ಟತನ; ಕೆಡುಕು : ಚಾರುದೃಶ್ಯಂಗಳಿಂ ಪ್ರೀತಿ ಹೃದಯ ವಿಕಾಸ ಕ್ರೂರ ದೌಷ್ಟ್ಯಂಗಳಿಂ ವೀರಾನುಕಂಪ . . . ದಾರಿಯುದ್ಧಾರಕವು (ಮುಂಕುಳ. ೪೫೬) ; ಅತಿಥಿದೇವರಂತೆ ಪೂಜೆಯನ್ನು ಗ್ರಹಿಸಿದವನ ದೌಷ್ಟ್ಯವನ್ನು ಎಣಿಸಬಾರದು (ಮಹಾಂ. ೧೮) ; ಶ್ರೀರಾಮಚಂದ್ರಂ, ವಿಭೀಷಣಶ್ರೀಬುದ್ಧಿ ತಾಂ ಮಂತ್ರಿಯಾಗಿರೆ . . . ದಾನವಕುಲದ ದೌಷ್ಟ್ಯಕೆ ದವಾಗ್ನಿ ತಾನಾಗಿ, ನಮ್ಮನುದ್ಧರ್ನ್ ದೇವಿ ಸೀತೆಯ ಪತಿವ್ರತಾಧರ್ಮ ಧವಳ ಅರಾಜ್ಯಸಾಲಿಯಕೆ! (ಶ್ರೀರಾಮಾ. ೬೨೯-೧೮೬). [ ಸಂ. ]

**ದೌಹಿತ್ರ** (ನಾ). ಮಗಳ ಮಗ ; ಮೊಮ್ಮಗ : "ಮಗಳ ಮಗಂ ದೌಹಿತ್ರಂ" (ವಸ್ತುಕೋ. ೫೫-೨೨) : "ಮಗಳ ಸುತ ದೌಹಿತ್ರವೆಂದೆನಿಕ್ಕುಂ" (ಮಂಗರಾ. ೯೩-೧೯) ; ಕವಿಸುಮನೋಬಾಣನ ಯಾದವ ಕಟಕಾಚಾರ್ಯನೆಸೆವ ದೌಹಿತ್ರನೆ ನಾಂ ಕವಿ ಕೇಶವನೆಂ ಯೋಗಿಪ್ರವರ ಚಿದಾನಂದ ಮಲ್ಲಿಕಾರ್ಜುನ ಸುತನೆಂ (ಶಮದ. ೨ ಪೀಠಿಕೆ). [ ಸಂ. ]

**ದೌಹೃದ** (ನಾ). ೧. ಹಗೆತನ ; ವೈರ ; ದ್ವೇಷ ; ಶತ್ರುತ್ವ. ೨. ಗರ್ಭ ; ಬಸಿರು. ೩. ಗರ್ಭಿಣಿಯಾದ ಹೆಂಗಸಿನ ಬಯಕೆ : "ಗರ್ಭಿಣಿಯರಪ್ಪ ಕಾಮಿನಿಯರ್ ಬಯಸುವ ಬಯಕೆ ದೋಹಲಂ ದೌಹೃದಮುಂ" (ವಸ್ತುಕೋ. ೫೯-೧೯) ; ತತ್ಕಾಂತೆಗೆ ನೆಗಟ್ದುವು ಗರ್ಭಸ್ಥನುತ್ಸಾಹಮಂ ತೋಳ್ಪಲಮಂ ಸಾಮ್ರಾಜ್ಯಮಂ ಸೂಚಿಸುವುವೊಲತಿ ಚೋದ್ಯಂಗಳೀ ದೌಹೃದಂಗಳ್ (ಆದಿಪು. ೮-೩೩). ೪. ಬಯಕೆ; ಅಭಿಲಾಷೆ. "ದೋಹಳಂ ದೌಹೃದಂ . . . ಬಯಕೆಗಕ್ಕು ನಾಮಂ" (ಮಂಗರಾ. ೯೦-೭). [ ಸಂ. ]

**ದ್ಯಾಸ** 'ಧ್ಯಾಸ' ನೋ.

**ದ್ಯು** (ನಾ). ೧. ಹಗಲು ; ದಿವಸ : "ದಿವಸಃ, ದಿವಾ, ದಿನಂ, ದ್ಯುಃ, ಅಹಃ, ವಾಸರಃ, ಘಸ್ರಃ—ಈ ೭ ಹಗಲ್" (ಹಲಾಯು. ೧೪-೧೦೬) ; "ಅಹ ದ್ಯು ದಿನಂ ದಿವಂ ಘಸ್ರಮಾ ದಿವಸಮೆನೆ ಹಗಲ ಪೆಸರೆನಿಕ್ಕುಂ" (ಮಂಗರಾ. ೩೦-೭). ೨. ಆಕಾಶ; ಗಗನ: "ನಭಃ . . . ದ್ಯೌಃ, ವಿಹಾಯಸಃ, ಗಗನಂ, ದ್ಯುಃ—ಈ ೧೫ ಆಕಾಶಂ" (ಹಲಾಯು. ೨೨-೧೩೬). ೩. ಕಾಂತಿ; ಪ್ರಕಾಶ. ೪. ಸ್ವರ್ಗ: ದ್ಯುವಿಂ ಪಂಚಿತ್ರವನ ಸಂಕಲ್ಪಕ್ಷದ ಮನೋರಥಂ (ಸೌನಂದ. ೧೨-೩). [ ಸಂ. ]

**ದ್ಯುಚರ** (ನಾ). ೧. ಆಕಾಶದಲ್ಲಿ ಸಂಚರಿಸುವವನು ; ಗಂಧರ್ವ ; ವಿದ್ಯಾಧರ : ಖೇಚರನಿಶಾಚರದ್ಯುಚರಸಂಚಾರಮಲ್ಲದ ಭೂಚರ ಗೋಚರ ಮಲ್ಲೆಂದು (ಸುಕುಮಾ. ೭-೧೪ವ) ; ದ್ಯುಚರಖಚರಾವನೀಚರ ನಿಚಯಂ ನಿಚಿತಪ್ರಮೋದಭರದಿಂ ಪುರದೊಳ್...ನರ್ತಿಸುತುಮಿರ್ದುದತಿ ಕೌತುಕದಿಂ (ವರ್ಧಪು. ೧೪-೫೬). ೨. ಆಕಾಶದಲ್ಲಿ ಚರಿಸುವಂಥದು ; ಗ್ರಹ. ೩. ಪಕ್ಷಿ ; ಹಕ್ಕಿ. ೪. ದೇವತೆ. [ ಸಂ. ]

**ದ್ಯುತಿ** (ನಾ). ೧. ಬೆಳಕು ; ಕಾಂತಿ ; ಪ್ರಕಾಶ ; ಪ್ರಭೆ : "ಬೆಳಗುಂ ದ್ಯುತಿಯುಂ" (ವಸ್ತುಕೋ. ೧೨೯-೬೬) ; "ಕರವುಸ್ರಮಂಶುವಸುರೋಚಿ ದೀಧಿತಿ . . . ದ್ಯುತಿ ಪ್ರಗ್ರಹಂ ದೀಪ್ತಿ . . . ಶೋಚಿ ಘೃಣಿಯೆ ಪ್ರದ್ಯೋತಮಾ ರಶ್ಮಿ" (ಮಂಗರಾ. ೧೧-೩) : ಶದ್ಯೋಗಿಫಣಾಮಣಿ ದ್ಯುತಿಯ ಕಟ್ಟಲೆಯಂ ತಲೆದೋಱಲೀಯದಾ ನಾಗರ ನಾಗಕನ್ನೆಯರ ರೂಪುಗಳಿಟ್ಟಳವಾಗೆ (ಪಂಪಭಾ ೪-೧೬) ; ಮೃದಹಾಸದ್ಯುತಿಯಂತೆ ಕಂತು ಶರದಂತಿರ್ದಚ್ಚ ವೆದ್ದಿಂಗಳಂ ಕಡುದಣ್ಣಂಗೆಡೆಗೊಂಡಿದೊಂದು ಬಿಸಿಲೆಂದಾಶ್ಚರ್ಯದಿಂದಂ ಜನಂ ನಡೆ ನೋಡುತ್ತೆ (ಜಗವಿ. ೪-೭೪) ; ಕಗ್ಗತ್ತಲೆಯ ಕಲ್ಲಬ್ಬಮಂ ಸೀಳ್ದು ಕೋಟಿಮಿಂಚುಗಳೊಮ್ಮೆ ಮಿಂಚಿದುವೆನಲ್ಕೆ ದ್ಯುತಿ ಪೊಣ್ಮಿದುದು (ಶ್ರೀರಾಮಾ. ೧೪-೩೨೯). ೨. ಕದಿರು ; ಕಿರಣ ; ರಶ್ಮಿ : ಚೆಲ್ವಿಂದಿಟ್ಟಳವೆನಿಸಿರ್ದುವರುಣಚರಣದ್ಯುತಿಗಳ್ (ಕಾದಂಪೂ. ೪೩). ೩. ಸೌಂದರ್ಯ : ಅತುಳ ಸ್ವಚ್ಛಾಂಬುವಿಂ ಮಜ್ಜನಕೆಱೆದು ನವೀನ ಪ್ರಸೂನಪ್ರತಾನದ್ಯುತಿ ಸುತ್ತಲ್ ಸುತ್ತಿ (ರತ್ನಾಕ. ೭೪). [ ಸಂ. ]

**ದ್ಯುತಿಗರೆ** (ಕ್ರಿ). ಬೆಳಕನ್ನು ಬೀರು ; ಹೊಳಪು ನೀಡು ; ಕಾಂತಿಯನ್ನುಂಟುಮಾಡು : ದ್ಯುತಿಗರೆವ ಮಣಿಕಂಕಣಗಳಿಟ್ಟು (ನವಮೋ. ೨೫-೨೯).

[ ದ್ಯುತಿ + ಕರೆ₂ (<ಕಱೆ₁) ]

**ದ್ಯುತಿಗುಂದು** (ಕ್ರಿ). ಕಾಂತಿಹೀನವಾಗು; ನಿಸ್ತೇಜಗೊಳ್ಳು; ಮಂಕಾಗು: ದ್ಯುತಿಗುಂದಿದರ್ಕನು ಪಡುಗಡೆ ನೋಡಿರಿ ಮುಳುಗುತಲಿರುವನು ಭರದೆ (ಇಂಚಾಪ. ೧೧೧-೯೫). [ ದ್ಯುತಿ + ಕುಂದು₁ ]

**ದ್ಯುತಿಮಾಲಿ** (ನಾ). ಕಿರಣಗಳ ಮಾಲೆಯನ್ನುಳ್ಳವನು ; ಸೂರ್ಯ : ಮಿಕ್ಕಂ ವಿಷವಹ್ನಿಯಿಂ ಪ್ರಳಯಕಾಲಜ್ವಾಲೆಯಿಂ ಭೋಗರತ್ನದ ಚೆಲ್ವಿಂ ದ್ಯುತಿಮಾಲಿಯಂ ಮುಸಕದಿಂ ದಂಭೋಳಿಯಂ ಕಾಳಿಯಂ (ಜಗವಿ. ೭-೮೩).

[ ಸಂ. ದ್ಯುತಿಮಾಲಿನ್ ]

**ದ್ಯುತಿವೀಱು** (ಕ್ರಿ). ಬೆಳಕನ್ನು ಬೀರು ; ಕಾಂತಿಯನ್ನು ಸೂಸು ; ಪ್ರಕಾಶಿಸು : ದ್ಯುತಿವೀಱುವ ಮುತ್ತಿನ ಚೆಲಕೆಗೆಯಂ ಯುವತಿಯ ನೆಗತೋಳ್ಗೆ ಕಟ್ಟಿದಳ್ (ಜಗವಿ. ೧೧-೧೧೭). [ ದ್ಯುತಿ + ಬೀಱು₁ ]

**ದ್ಯುತಿಸಂಶ್ಲೇಷಣ** (ನಾ). [ವಿಜ್ಞಾ] ಸಸ್ಯಗಳು ಸೂರ್ಯನ ಬೆಳಕನ್ನು ತೆಗೆದುಕೊಂಡು ಅದರ ಮೂಲಕ ತನಗೆ ಅಗತ್ಯವಾದ ಶಕ್ತಿಯನ್ನು ಉತ್ಪಾದಿಸಿಕೊಳ್ಳುವ ಕ್ರಿಯೆ ; ಬೆಳಕನ್ನು ಸಂಯೋಜಿಸುವಿಕೆ ; ಕಿರಣಸಂಯೋಜನೆ : ಆ ಶಕ್ತಿ ಸಸ್ಯಗಳು ದ್ಯುತಿಸಂಶ್ಲೇಷಣ (Photosynthesis)ದಿಂದ ತಯಾರಿಸಿದ ಆಹಾರದಲ್ಲಿ ಶೇಖರಿಸಿದ ಸೂರ್ಯಶಕ್ತಿಯಿಂದ ಒದಗುತ್ತದೆ (ಕೀಟಲಿ. ೨೧). [ ದ್ಯುತಿ + ಸಂಶ್ಲೇಷಣ ]

**ದ್ಯುತಿಸಂಶ್ಲೇಷಣೆ** (ನಾ). = ದ್ಯುತಿಸಂಶ್ಲೇಷಣ : ದ್ಯುತಿಸಂಶ್ಲೇಷಣೆ (ಫೋಟೊಸಿಂತೆಸಿಸ್) ಉಸಿರಾಡುವಿಕೆ, ನೀರು ಮತ್ತು ಲವಣಗಳನ್ನು ಬೇರುಗಳ ಮುಖಾಂತರ ಹೀರುವುದು, ಇತ್ಯಾದಿ ಶರೀರದ ಕ್ರಿಯೆಗಳಿಗೆ ಉಷ್ಣಾಂಶ ಆವಶ್ಯಕ (ಕವಿಕೋ. I, ೧೦). [ ದ್ಯುತಿ + ಸಂಶ್ಲೇಷಣೆ ]

**ದ್ಯುತ್ತು** (ನಾ). ೧. ಕಾಂತಿ ; ಪ್ರಕಾಶ: ಉಗಾಗಮಂ ಬಂದಲ್ಲಿ ದ್ವಿತ್ವ ಮುಂಟು. ಅಪ್, ವಿಯತ್, ಸಂಯತ್, ವಿದ್ಯುತ್, ಜಗತ್, ದ್ಯುತ್ . . . ತಟಿತ್–ಇವಾದಿಯಾದುವು ಅಬಾದ್ಯಾಕೃತಿಗಣಂ (ಶಮದ. ೮೭ ಅಡಿ); ಅಪ್ ವಿಯತ್ . . . ದ್ಯುತ್ . . . ತಟಿತ್ ಇತಿ ಅಬಾದಿರಾಕೃತಿಗಣಃ (ಶಬ್ದಾನು. ೧೩೩ ಪ್ರಯೋ). ೨. ಕದಿರು ; ಕಿರಣ ; ರಶ್ಮಿ. [ ಸಂ. ದ್ಯುತ್ ]

**ದ್ಯುನ** (ನಾ). [ಜ್ಯೋತಿ] ಲಗ್ನದಿಂದ ಏಳನೆಯ ರಾಶಿ,–ಸಪ್ತಮಸ್ಥಾನ: ದ್ವಾದಶರಾಶಿ ರೀಳಮದು ಜಾಮಿತ್ರ ದ್ಯುನ ದ್ಯೂನವೆಂದು ವಲಂ ಸಪ್ತಮ ರಾಶಿ ಭಿದ್ರಮದು ಲಗ್ನಕೃಷ್ಟಮಸ್ಥಾನಕಂ(ಜಾತಕ.೧-೩೩). 'ದ್ಯೂನ'ಪರಾ. [ ಸಂ. ]

**ದ್ಯುನಗೃಹ** (ನಾ). = ದ್ಯುನ : ದ್ಯುನಗೃಹವಂದು ಪುಂರಾಶಿಯಾದಂದು ಪಾಪಗೃಹಮಂತಾ ರಾಶಿಯಂ ನೋಟ್ಪೊಡೆ ಕೃಶತನುವಕ್ಕುಂ (ಜಾತಕ. ೨೦-೮). [ ದ್ಯುನ + ಗೃಹ ]

**ದ್ಯುನದಿ** (ನಾ). ಸ್ವರ್ಗಲೋಕದ ನದಿ ; ದೇವಗಂಗೆ ; ಸುರನದಿ: ಸಜ್ಜನಾಧಾರನಿರ್ದಂ ದ್ಯುನದೀಫೇನಪ್ರತಾನಪ್ರಥಿತಪೃಥುಯಶಂ ಭಾರತೀ ಕರ್ಣಪೂರಂ (ಪಂರಾಮಾ. ೬-೧೬೦) ; ದ್ಯುನದೀಸಮ್ಮೋಹದಿಂದಂ ಜಡೆಗೆದಳ ಲುಮಮಾವಲ್ಲಭಂ ನಾಡೆಯುಂ ಸಾರ್ವಿನೆಗಂ . . . ಮುದ್ರಿಸಿದಂದು ಜಗಮಂ ಚಾರುಚಂದ್ರಾಂಶುಜಾಲಂ (ಚಂದ್ರಪು. ೮-೯೦ ವ). [ ಸಂ. ದ್ಯುನದೀ ]

**ದ್ಯುನದೀಜ** (ನಾ). ಗಂಗೆಯ ಮಗ ; ಭೀಷ್ಮ : ದ್ಯುನದೀಜಂ ಕುಡೆ ತೋಯಮಂತ್ರಬಲದಿಂ ಪೊಕ್ಕಿರ್ದಪಂ ಕಾಲವಂಚನೆಗೆಯ್ಯಲ್ಕೊಳಸಂ (ಗದಾಯು. ೬-೩೮). [ ಸಂ. ]

**ದ್ಯುನದೀನಂದನ** (ನಾ). = ದ್ಯುನದೀಜ : ಪೆಂಪಂಬರಾಭೋಗಮಂ ದ್ಯುನದೀನನ್ದನನಂ ವಿನೂತಚರಿತಂ ಕೀಲ್ಮಾಡೆ ಮೇಲ್ಮಾಡಿದಂ (ಎಕ. VI, ಕಡೂರು. ೩೦-೩೦ ; 1169). [ ಸಂ. ]

**ದ್ಯುನದೀಶ** (ನಾ). ಗಂಗೆಯ ಒಡೆಯ,–ಪತಿ ; ಶಿವ : ದ್ಯುನದೀಶಂ ಚಿತ್‌ಪ್ರಕಾಶಂ ಶರಣಜನಸದಾತೋಷನಾನಂದಕೋಶಂ (ಶಂಪಾಶ. ೮೦). [ ದ್ಯುನದಿ + ಈಶ ]

**ದ್ಯುಮಣಿ** (ನಾ). ಗಗನದ ರತ್ನ ; ದಿನಮಣಿ ; ಸೂರ್ಯ : "ರವಿ ಮಾರ್ತಾಂಡಂ ... ದ್ಯುಮಣಿ ತರಣಿ ಸಪ್ತಾಶ್ವನಾದಿತ್ಯನಕ್ಕುಂ" (ವಸ್ತುಕೋ. ೧೦-೬೪) ; ಧರ್ಮಾಂಭೋಜಷಂಡದ್ಯುಮಣಿ ಬುಧಜನ ಪ್ರೀಣನಾಗ್ರೇಸರ ಗ್ರಾಮಣಿಯಾದಂ (ಅಜಿಪು. ೧೨-೦೩) ; ದ್ವಿಜನಂಶಾ[ಂಭೋದ]ಮಾರ್ಗ್ಗ ದ್ಯುಮಣಿ ಸಕಳಸಾಮನ್ತ ಚ[ಕ್ರಾಧಿ]ನಾಥಂ (ಕಕಳ. ೩೦-೯೦-೩೭ ; ಸು. 11ನೆಯ ಶತ) ; ದ್ಯುಮಣಿಗೆ ಕಟ್ಟಿಲೆ ಶರಭಕ್ಕೆ ಮೃಗೇಂದ್ರ ಸೆಡೆವ ಮಾಟ್ಕೆಯಿಂ ಸೆಡೆದನಿಮಂ ನಿಮಗೆ (ಪಂರಾಮಾ. ೬-೧೦೯) ; ದ್ಯುಮಣಿ ಯೊದೆದರೆ ತರಹರಿಸುವುದು ತಿಮಿರರಾಜನ ದೇಹವೇ ವಿಕ್ರಮದರಿದ್ರ ರಿಗಳುಳಿದರೆ ಬಳಿಕವ ಧನಂಜಯನೆ (ಕುಪ್ಪ್ರಾದ್ರೋ. ೧೯-೩೩) ; ದ್ಯುಮಣಿ ಕರ್ಣದ್ಯುಮಣಿ ಸಹಿತಸ್ತಮಿಸೆ ಕಮಲಿನಿ ಕೌರವನ ಮುಖಕಮಲ ಬಾಡಿತು ತಿಮಿರ ಹೆಚ್ಚಿತು ಶೋಕತಮದೊಡನೆ (ಕುಪ್ಪ್ರಾಕ. ೨೭-೩೦) ; ದ್ಯುಮಣಿ ಯುಲ್ಲಮ ಸಿಕ್ಕದಾದನು ತಮದ ಮಾಯೆಗೆ (ಪ್ರಭುಲಿ. ೮-೩). [ ಸಂ. ]

**ದ್ಯುಮಣಿದ್ಯುತಿ** (ನಾ). ಸೂರ್ಯನ ಬೆಳಕು : ದ್ಯುಮಣಿದ್ಯುತಿ ಕುಮುದಕ್ಕಂ ಕಮಲಕ್ಕಂ ಮಾಡುವಂತೆ ಸಂಕೋಚ ವಿಕಾಸಮನೇಕ ಸಮಯದೊಳ್ ಶತ್ರುಮಿತ್ರಮಂಡಲಕೆ ಮಾಳ್ಪುವಾತನ ತೇಜಂ (ಮಲ್ಲಿಪು. ೩-೧೬). [ ದ್ಯುಮಣಿ + ದ್ಯುತಿ ]

**ದ್ಯುಮಣಿಪ್ರದ್ಯೋತ** (ನಾ). =ದ್ಯುಮಣಿದ್ಯುತಿ : ದ್ಯುಮಣಿಪ್ರದ್ಯೋತದಿಂ ಪದ್ಮಿನಿಗೆ ನೆಗೆಯುಮಾನಂದಮುಂ ಲೀಲೆಯಿಂ ಶ್ರೀಯುಮುಂ ನೂನಂ. . . ಪುಟ್ಟುವಂತೆ (ಅರ್ಧನೇ. ೪-೭೩). [ ದ್ಯುಮಣಿ + ಪ್ರದ್ಯೋತ ]

**ದ್ಯುಮಣಿಮಂಡಲ** (ನಾ). ಸೂರ್ಯನ ಬಿಂಬ ; ಭಾನುಮಂಡಲ : ತಮದ ಗಂಟಲನೊದೆದ ಹರುಷ ದ್ಯುಮಣಿಮಂಡಲದಂತೆ ಜೀವಭ್ರಮೆಯ ಕವಚವ ಕಳೆದು ಹೊಳೆಹೊಳೆವಾತ್ಮನಂದದಲಿ . . . ಯುಧಿಷ್ಠಿರ ದೇವ ನೆಸೆದನು ರಾಜತೇಜದಲಿ (ಕುಪ್ಪ್ರಾವಿ. ೧೦-೩). [ ದ್ಯುಮಣಿ + ಮಂಡಲ ]

**ದ್ಯುಮಣಿಮಯೂಖ** (ನಾ). = ದ್ಯುಮಣಿದ್ಯುತಿ : ತಮಮಂ ದ್ಯುಮಣಿ ಮಯೂಖಕೋದ್ಗಮಮುಲೆಪವೊಲಲೆಗೆ ಜಗದ ಮಿಥ್ಯಾತ್ವತಮಸ್ತಮನ ಅಕಳಂಕದೇವಪ್ರಮಾಣ ರತ್ನಪ್ರದೀಪರಶ್ಮಿಕಳಾಪಂ (ಅದಿಪು. ೧-೧೭). [ ದ್ಯುಮಣಿ + ಮಯೂಖ ]

**ದ್ಯುಮುಖ** (ನಾ). ಮುಂಜಾವ ; ಉಷಃಕಾಲ ; ಪ್ರಭಾತ : "ದ್ಯುಮುಖಂ ವಿಭಾತ ಪ್ರತ್ಯೂಷಮೆನಲಾ ಪ್ರಭಾತಮೆನೆ . . . ಪ್ರಾಕ್‌ಪ್ರಾತಮೆನಲು ಕಲ್ಯಮೆಂದೆನಲು ಪ್ರಾಕ್ಕಾಲಮಕ್ಕು" (ಮಂಗರಾ. ೨೦-೨). [ ಸಂ. ]

**ದ್ಯುಮ್ನ** (ನಾ). ೧. ಕಾಂತಿ; ಪ್ರಕಾಶ. ೨. ಕಸುವು; ಬಲ; ಪರಾಕ್ರಮ; ಶಕ್ತಿ : "ಪ್ರಾಣಃ, ಸ್ಥಾಮ, ಬಲಂ, ದ್ಯುಮ್ನಂ, ಓಜಃ, ಊಷ್ಮಾ, ತರಃ, ಸಹಃ–ಈ೮ ಬಲ್ಪು(ಬಲುಹು)" (ಹಲಾಯು. ೧೨೦-೩೮). ೩. ಹಣ ; ಸಂಪತ್ತು ; ಐಶ್ವರ್ಯ ; ದ್ರವ್ಯ : "ದ್ಯುಮ್ನಂ ದ್ರವ್ಯಂ ದ್ರವಿಣಂ, . . . ವಿಭವಃ–ಈ ೧೫ ಒಡಮೆಯ ಪೆಸರ್" (ಹಲಾಯು. ೧೯-೫೦) ; "ಧನಮದಾ ದ್ಯುಮ್ನಮಾ ದ್ರವ್ಯಮೆಂದೆನಲು ವಿತ್ತಮದಕ್ಕು" (ಮಂಗರಾ. ೦೭-೧೬). [ ಸಂ. ]

**ದ್ಯುಲೋಕ** (ನಾ). ಸ್ವರ್ಗಲೋಕ ; ದೇವಲೋಕ : ಒಬ್ಬ ಶಿಷ್ಯನು ದ್ಯುಲೋಕವೇ ಪರಬ್ರಹ್ಮವಸ್ತುವೆಂದೂ, ಮತ್ತೊಬ್ಬನು ಸೂರ್ಯನೇ ಪರಬ್ರಹ್ಮನೆಂದೂ . . . ನಿರೂಪಿಸಿದರು (ಛಾತತ್ತ್ವ. ೬೦) ; ಅಗ್ನಿಯು . . . ಪ್ರಜಾಪತಿಯ ಉತ್ಪತ್ತಿಸ್ಥಾನವಾದ ದ್ಯುಲೋಕದಲ್ಲಿಯೂ ಅಸ್ತಿತ್ವ ವನ್ನು ಹೊಂದಿದ್ದಾನೆ (ಋಕಾರ. ೪೨). [ ಸಂ. ]

**ದ್ಯೂತ** (ನಾ). ೧. ಆಟ ; ಕ್ರೀಡೆ. ೨. ಪಗಡೆಯ ಆಟ ; ಜೂಜಂ : "ದ್ಯೂತಮದಕ್ಷವತಿ" (ವಸ್ತುಕೋ. ೬೩-೭೮) ; ಕೃತಕದ್ಯೂತವಿನೋದದಿಂ ದ್ರುಪದಜಾಕೇಶಾಂಬರಾಕೃಷ್ಟಿಯಿಂ ಧೃತರಾಷ್ಟ್ರಾತ್ಮಜ ಪಾಂಡುರಾಜಸುತರ ಮುನ್ನಂ ಕೊಲಲ್ಕೋಡಿದ್ದೆ (ಗದಾಯು. ೬-೯೦) ; ದ್ಯೂತದಲಿ ಮುನ್ನೇನ ನೊಡ್ಡಿದ ಸೋತನೇನನು ಶಿವಶಿವಾ (ಕುಪ್ಪ್ರಾಸ. ೧೯-೩೩) ; ದ್ಯೂತಾದಿಯಿಂ ಕೆಟ್ಟ ಭೂವರರಂ ಬಣ್ಣಿಪರೇಕೆ ಮೂಢ ಕವಿಗಳ್ (ಹಮ್ಮಿರ. ೧-೨೬). ೩. ಜೂಜಿಗೆ ಒಡ್ಡುವ ಹಣ : "ದ್ಯೂತಕರಂ ದ್ಯೂತಪಣಂ ದ್ಯೂತ ಮೆನಿಪ್ಪುವು" (ವಸ್ತುಕೋ. ೧೬೨-೮೮). [ ಸಂ. ]

**ದ್ಯೂತಕರ** (ನಾ). ೧. ಆಟಗಾರ. ೨. ಜೂಜಾಡುವವನು ; ಜೂಜು ಗಾರ : "ದ್ಯೂತಕರನೆನೆ ಕಿತವನೆನೆ ಜೂಜುಗಾರಂ" (ಮಂಗರಾ. ೭೨-೨೪). ೩. ಜೂಜಿಗೆ ಒಡ್ಡುವ ಹಣ : "ದ್ಯೂತಕರಂ ದ್ಯೂತಪಣಂ ದ್ಯೂತಮೆನಿಪ್ಪುವು" (ವಸ್ತುಕೋ. ೧೬೨-೮೮). [ ಸಂ. ]

**ದ್ಯೂತಕಾರ** (ನಾ). = ದ್ಯೂತಕರ ೨ : "ಕಿತವಃ, ದ್ಯೂತಕಾರಃ–ಈ ೨ ಜೂದುಗಾಱಂ" (ಹಲಾಯು. ೬೪-೩೩೪) ; ದ್ಯೂತಕಾರನ ಪತ್ನಿಯು ಅವನಿಂದ ತ್ಯಜಿಸಲ್ಪಟ್ಟವಳಾಗಿ ಪರಿತಾಪ ಪಡುತ್ತಾಳೆ (ಋಕ್ಸಾರ. ೩೦೯). [ ಸಂ. ]

**ದ್ಯೂತಕಾರಕ** (ನಾ). ೧. ಜೂಜನ್ನು ಆಡಿಸುವವನು ; ಜೂಜಿನ ಮನೆ ಯನ್ನು ನಡೆಸುವವನು : "ದ್ಯೂತಕಾರಕನೆನಲ್ಕಾಡಿಸುವನೆನಿಕ್ಕು" (ಮಂಗರಾ. ೭೨-೨೪). ೨. ಜೂಜಾಡುವವನು. [ ಸಂ. ]

**ದ್ಯೂತಕೃತ್ತು** (ನಾ). = ದ್ಯೂತಕರ ೨ : "ಧೂರ್ತಃ, ಅಕ್ಷದೇವೀ, ಕಿತವಃ, ಅಕ್ಷಧೂರ್ತಃ, ದ್ಯೂತಕೃತ್– ೫ ಜೂಜು ಆಡುವವನ ಹೆಸರು" (ಸಿದ್ಧಾಂತಿ. ೨೬೫). [ ಸಂ. ದ್ಯೂತಕೃತ್ ]

**ದ್ಯೂತಕೇಳಿ** (ನಾ). ಪಗಡೆಯ ಆಟ ; ಜೂಜಿನ ಆಟ ; ಜೂಜಾಟ : ಎಲವೊ ಕಪಟದ್ಯೂತಕೇಳೀಕಲುಷಿತಾಂತಃಕರಣ ನಿನ್ನೀ ಬಲಕೆ ಪತಿ ನೀನೋ ಕೃಪಾಚಾರಿಯನೊ ಗುರುಸುತನೊ (ಕುಮಾಗ. ೧–೨) ; ದ್ಯೂತ ಕೇಳಿಯೊಳಜ್ಞಾತವಾಸದೊಳಂದು ಘಾತುಗುಂದದೆ ಪಾಂಚಾಲಿ ಓತು ಪಾಂಡವರನೊಲಿಸಿ ಹದಿಬದೆಯರ ಬೈತಲೆವಣಿಯೆನಿಸಿದಳು (ಹದಿಬ. ೩–೯೮). [ ದ್ಯೂತ + ಕೇಳಿ₂ ( = ಕೇಲಿ) ]

**ದ್ಯೂತಕೌಶಲ** (ನಾ). ಪಗಡೆಯಾಟದಲ್ಲಿ ತೋರಿಸುವ ಕೌಶಲ,– ಚಾತುರ್ಯ ; ಜೂಜಾಟದಲ್ಲಿ ತೋರಿಸುವ ಜಾಣತನ : ಬಿಚ್ಚಿ ದೊಡ್ಡಾಟವೇತಕೆ ವಿಜಯಸಿರಿ ವಾಚಾಟದಿಂಗೆ ಮೆಚ್ಚುವಳೆ ತೋರ್ಪಾ ದ್ಯೂತಕೌಶಲವ (ಕುಮಾವ್ಯಾ.ಸ. ೧೩–೪೭). [ ದ್ಯೂತ + ಕೌಶಲ ]

**ದ್ಯೂತಪಣ** (ನಾ). ಜೂಜಿನಲ್ಲಿ ಒಡ್ಡುವ ಹಣ ; ಒಡ್ಡು : "ದ್ಯೂತಕರಂ ದ್ಯೂತಪಣಂ ದ್ಯೂತವೆನಿಪ್ಪುವು" (ಚಸು.ಕೋ. ೧೮೩–೮೮). [ ದ್ಯೂತ + ಪಣ₂ ]

**ದ್ಯೂತಲೋಲುಪ** (ನಾ). ಜೂಜಿನ ಗೀಳು ಹಿಡಿದವನು ; ಪಂದ್ಯದಲ್ಲಿ ಆಸಕ್ತನಾದವನು : ನೃಪನಗ್ಗಳದ ಧ ರ್ಮ ಜ್ಞ ನು ವಿಶೇಷದ್ಯೂತ ಲೋಲುಪನು (ಕುಮಾವ್ಯಾ.ಸ. ೦೨–೦೮). [ ದ್ಯೂತ + ಲೋಲುಪ ]

**ದ್ಯೂತವರ್ತಿ** (ನಾ). ಜೂಜಿನಲ್ಲಿ ನಿರತನಾದವನು ; ಪಂದ್ಯದಲ್ಲಿ ಅತಿ ಯಾದ ಆಸಕ್ತಿವಹಿಸುವವನು ; ಜೂಜುಗಾರ : ನೃಪರು ಕೆಟ್ಟರೆ ಮಾನ್ಯವುಂಟೇ ಶಪಥವುಂಟೇ ದ್ಯೂತವರ್ತಿಗೆ (ಕಾಶಿರಾ. ೦೯–೨೦). [ ಸಂ. ದ್ಯೂತವರ್ತಿನ್ ]

**ದ್ಯೂತಾಳಿ** (ನಾ). ಜೂಜಾಡುವವನು ; ಜೂಜುಗಾರ : ಬಾಲರಜ್ಞರಿಗೆ ಸ್ತ್ರೀಲೋಲ ದ್ಯೂತಾಳಿಗಂ ಕೇಳು ಸುರೆಮಾಂಸಭಕ್ಷಿಗೆ ವ್ಯಸನದೋಷಿಗಂ ದೀಕ್ಷೆಯಿಂದಮಗೆ ಶಿವ ಶಿಕ್ಷೆಗಳಹವು ಮಗನೆ (ದೀಕ್ಷಾಬೋ. ೧೫–೨೩೦). 'ಜೂದಾಳಿ' ಪರಾ. [ ದ್ಯೂತ + – ಆಳಿ₃ ]

**ದ್ಯೂನ** (ನಾ). [ಜ್ಯೋತಿ] ಜಾತಕನ ಲಗ್ನದಿಂದ ಏಳನೆಯ ಸ್ಥಾನ. 'ದ್ಯೂನಗೇಹ', 'ದ್ಯೂನಾಲಯಂ' ಪರಾ. [ ಸಂ. ]

**ದ್ಯೂನಗೇಹ** (ನಾ). = ದ್ಯೂನ : ಹಿಮಧಾಮಂ ದ್ಯೂನಗೇಹೋಪಚಯ ದೊಳ್ . . . ಸೌಮ್ಯನಿಂ ಪಂಚಮ ಕೇಂದ್ರಾಯತ್ರಿರಂಧ್ರಂಗಳೊಳತಿ ಶುಭದಂ ಶೇಷದೊಳ್ ಪೊಲ್ಲನಕ್ಕುಂ (ಜಾತಕ. ೦೦–೪). [ ದ್ಯೂನ + ಗೇಹ ]

**ದ್ಯೂನಪತಿ** (ನಾ). [ಜ್ಯೋತಿ] ಲಗ್ನದಿಂದ ಏಳನೆಯ ಸ್ಥಾನಕ್ಕೆ ಒಡೆಯ ನಾದವನು ; ಏಳನೆಯ ಮನೆಯ ಅಧಿಪತಿ : ದ್ಯೂನಪತಿಯೆನಿಸೆ ಕುಲದಭಿಮಾನದೇವತೆಯೆನಿಸಿ ತತ್ತ್ವನು ಸೌಭಾಗ್ಯನೆನಿಸುವ ನಾರಿ ದೊರಕುವಳು ಸೋಮಸುತ ನೀಚಾರಿ ಮೂಢದೊಳ್ ಕಾಮಪತಿಯಂದೆನಿಸೆ ಪಾಪಸ್ಥೊಮದಲ್ಲಿರಲವನು ಕುಲನಾಶಕಾರಿಯೆನಿಸುವನು (ಕೇರಪ್ರ.೦೦–೨೦). [ ದ್ಯೂನ + ಪತಿ₂ ]

**ದ್ಯೂನಾಲಯ** (ನಾ). = ದ್ಯೂನ : ದ್ಯೂನಾಲಯಗತವೆನಿತು ಗ್ರಹಮಾ ಲೆಕ್ಕದರೆಡು ಬಿನ್ನಲಾ ಪಶುಗಕ್ಕುಂ (ಜಾತಕ. ೩–೩). [ದ್ಯೂನ + ಆಲಯ]

**ದ್ಯೋತ** (ನಾ). ೧. ಹೊಳಪು ; ಪ್ರಕಾಶ ; ಕಾಂತಿ : ಸುಟಿದುದು ಪದಚಂಚನ್ನಖದ್ಯೋತಸುವ್ಯಕ್ತಪದಂ ಮಾ ರ್ಗ ಳ ಪಾ ಳಂ ಬಳಸಿದ ಜಳದೇವೀಸಮೂಹಂಬೊಲ್ . . . ಇರುಳೊಳ್ ಜಾರನಾರೀಕದಂಬಂ (ಜಗವಿ. ೪–೨೯). ೨. ಸೂರ್ಯನ ಬೆಳಕು ; ಬಿಸಿಲು : "ಪ್ರಕಾಶಃ, ದ್ಯೋತಃ, ಆತಪಃ– ೩ ಬಿಸಲಿನ ಹೆಸರುಗಳು" (ಸಿದ್ಧಾಂತಿ. ೩೩). ೩. ಶಾಖ ; ಉಷ್ಣ. ದ್ಯೋತವಾಗು=ಹೊಳೆ ; ಸ್ಫುರಿಸು : ಕವಿಯ ಆಶಯ ಈ ಪದ್ಯದಿಂದ ಚೆನ್ನಾಗಿ ದ್ಯೋತವಾಗುತ್ತದೆ (ರೂಢಿ). [ ಸಂ. ]

**ದ್ಯೋತಕ** (ಗು). ೧. ಹೊಳೆಯುವ ; ಪ್ರಕಾಶಿಸುವ. (ನಾ). ೨. ಸ್ಪಷ್ಟ ವಾಗಿ ತೋರಿಸುವಂಥದು,–ತಿಳಿಸುವಂಥದು : ಕಥಾಕಾವ್ಯಗಳೂ ಆ ಕಾಲದ ಜನರ ಮನಃಪ್ರವೃತ್ತಿಯ ಎರಡನೆಯ ದ್ಯೋತಕಗಳಾಗಿದ್ದುವು (ಸಾಹಿಸ. ೦೫) ; ಭಾಷೆಯು ಸಾಮಾಜಿಕ ಸಂಬಂಧದ ದ್ಯೋತಕವಾಗಿದೆಯೇ ಹೊರತು, ಜಾನಾಂಗಿಕ ಐಕ್ಯದ ಗುರುತಾಗಲಾರದು (ಭಾಷಾಶಾ. ೩೦) : ಕುಸುಮಾ–ಶೀನರ ಬಗ್ಗೆ ನರಹರಿಯ ಕನಸು ಆವನ ಚಿಂತೆಯ ದ್ಯೋತಕ ವಾಗಿದೆ (ಸಮಾಜೇ.೨೭ ೬೯೪೯ ). [ ಸಂ. ]

**ದ್ಯೋತನ** (ಗು). ೧. ಹೊಳೆಯುವ ; ಪ್ರಕಾಶಿಸುವ ; ಬೆಳಗುವ. ೨. ವಿವರಿಸಿ ತೋರಿಸುವ ; ವಿವರಿಸುವ. (ನಾ). ೩. ಬೆಳಕು ; ಕಾಂತಿ ; ಹೊಳಪು : "ದ್ಯುತ್, ದ್ಯುತಿಃ, ದ್ಯೋತನೀಯಂ, ದ್ಯುತ್ಯಂ, ದ್ಯೌತ್ಯಂ ಈ ೬ ಬೆಳಕು" (ಕಾಶಕ್ಯ. ೧೩೦). ೪. ನೋಟ ; ದೃಶ್ಯ : "ನಿಭಾಳನಂ, ನಿಶಮನಂ, ನಿಧ್ಯಾನಂ, ಅವಲೋಕನಂ, ಲಕ್ಷಣಂ, ದರ್ಶನಂ, ದೃಷ್ಟಿಃ, ದ್ಯೋತನಂ – ಈ ೮ ನೋಟಂ" (ಹಲಾಯು. ೯೩–೯೧). [ ಸಂ. ]

**ದ್ಯೋತಿ₁** (ನಾ). ಹೊಳಪು ; ಪ್ರಕಾಶ ; ಕಾಂತಿ : ಅಮರಧನುರ್ದ್ಯೋತಿಯಿಂ ಪಂಚರತ್ನಚ್ಛವಿಯಿಂ ಕೀಲ್ಮಾಟ್ಟ ಸಲ್ಲಕ್ಷಣಗುಣನಿಧಿಗಳ್ ಪಲ್ಲಣಂ ಗಟ್ಟಿ ಬಂದಿರ್ದುವು . . . ತುರಂಗಂ (ಪುಷ್ಪಪು. ೩–೧೧). [ ಸಂ. ದ್ಯೋತಿಸ್ ]

**ದ್ಯೋತಿ₂** (ಗು). ಪ್ರಕಾಶಮಾನವಾದ ; ಹೊಳೆಯುವ : ಶ್ರೀಮನ್ನಾ ಗೇಂದ್ರಭೋಗಸ್ಫುರದರುಣಮಣಿದ್ಯೋತಿಸಂಧ್ಯಾನಿಬದ್ಧಪ್ರೇಮಂ . . . ಹೇಮಪ್ರಭಾಪ್ರಸ್ಫುರಿತ ಗಿರೀಶ ಚಂಚಜ್ಜಟಾಜಾಲಜೂಟ ವ್ಯೋಮಪ್ರೋ ಧ್ಯಾಸಿಚಂದ್ರಂ ತ್ರಿಭುವನಜನಕಾನಂದಮಂ ಮಾಡುಗೆಂದುಂ (ಕಾದಂಪೂ. ೧). [ ಸಂ. ದ್ಯೋತಿನ್ ]

**ದ್ಯೋತಿತ** (ಗು). ಹೊಳೆಯುವಂತೆ ಮಾಡಿದ ; ಬೆಳಗಿಸಿದ : ಅಳ್ದನಧಿಕ ಬಲನಮನಿಪತಿವ್ರಾತಮಣಿಮಕುಟಕಿರಣದ್ಯೋತಿತಪಾದಂ ಸಪಾದಲಕ್ಷ ಕ್ಷಿತಿಯಂ (ಪಂಪಭಾ. ೦–೦೬) : ಶ್ರೀಮನ್ನಾಕಾಧಿನಾಥಾನತಮಕುಟಮಣಿ ದ್ಯೋತಿತಾಂಘ್ರಿದ್ವಯಂ . . . ಕುಡುಗೆಮಗಮೃತಾವಾಸಮಂ ವೀರನಾಥಂ (ಸುಕುಮಾ. ೧–೧). [ ಸಂ. ]

**ದ್ಯೋತಿತಾತ್ಮ** (ನಾ). ಪ್ರಕಾಶಗೊಂಡ ಆತ್ಮವುಳ್ಳವನು ; ತಿಳಿವು ಹೊಂದಿದ ಅಂತರಂಗವುಳ್ಳವನು : ಆದರೆ ಸೂಕ್ತಿಸಹಸ್ರಗಳಿಂದ ದ್ಯೋತಿ ತಾತ್ಮರಾದ ಮಹಾತ್ಮರ ದೋಷಗಳನ್ನು ಉದ್ಯೋತಿಸುವುದು ವಿಮರ್ಶಕನ ದೋಷವೇ ಆಗುವುದೆಂದು ಭಾವಿಸಿ ಅವುಗಳನ್ನಿಲ್ಲಿ ಬಿಡಿಸಿ ತೋರಿಸಲಿಲ್ಲ (ಧ್ವನ್ಯಾಲೋ. ೮೭). [ ಸಂ. ]

**ದ್ಯೋತಿರಿಂಗಣ** (ನಾ). ಮಿಂಚುಹುಳು ; ದೀಪದ ಹುಳು. 'ಜ್ಯೋತಿ ರಿಂಗಣ' ಪರಾ. [ ಸಂ. ]

**ದ್ಯೋತಿಸು** (ಕ್ರಿ). ೧. ಪ್ರಕಟವಾಗು ; ಕಾಣು ; ತೋರು : ಶೀತಕರ ತೋಯುಂ ದ್ಯೋತಿಸಿರೆ ನೀಲಾಬ್ಜಾಯತನಯನೇ ಕೇಳೋತು ಶಶಿಕಾಂತಂ (ಛಂದೋಂಬು. ೨–೭೭). ೨. ಕಾಣಿಸು ; ತೋರಿಸು ; ಪ್ರಕಾಶಗೊಳಿಸು ; ಪ್ರಕಟಪಡಿಸು : ಮಹಾಪುಂಡರೀಕಮೆಂಬುದು ಕಾಲಾಪೇಕ್ಷೆಯಿಂ ವಜ್ರಧರ ಹಲಧರ ಚಕ್ರಧರಾದಿಗಳ ಉತ್ಪತ್ತಿ ಕಾರಣಮುಂ ಅನುಷ್ಠಾನಮುಂ ದ್ಯೋತಿ ಸುಗುಂ (ತತ್ತ್ವಾರ್ಥ. ೬೬). [ ದ್ಯೋತನ + – ಇಸು₁ ]

**ದ್ಯೋಧುನಿ** (ನಾ). ದೇವನದಿ ; ಗಂಗೆ. [ ಸಂ. ದ್ಯೋಧುನೀ ]

**ದ್ರಂಗ** (ನಾ). ಪುರ ; ಪಟ್ಟಣ ; ನಗರ : 'ದ್ರಂಗ' ಶಬ್ದಕ್ಕೆ ಹೇಮಚಂದ್ರಾ ಚಾರ್ಯನು ಪುರ, ನಗರ ಎಂಬರ್ಥವನ್ನು ಹೇಳಿದ್ದಾನೆ (ಶಬ್ದವಿ. ೭೭). 'ಡಂಗ' ಪರಾ. [ ಸಂ. ]

**ಧರಣೇಶ** (ನಾ). ದೊರೆ; ರಾಜ : ಧರಣೇಶಂ ದಯೆಗೆಯ್ದುಮುಗ್ರಮಹಿಷೀ ಸಂಪತ್ತಿಯಂ . . . ಪುತ್ರಮೋಹರಸಾಸ್ವಾದನತೃಪ್ತಿಯಿಲ್ಲವೆನುತುಂ (ಮಲ್ಲಿಪು. ೩-೧೦೭) ; ಧರಣೇಶನ ಯಂತ್ರದ ಕತ್ತುರಿನೀರಸೆಪವಸಿಯ ಧಾರೆ ಯಗ್ರದೊಳೊರ್ವಳ್ ಸ್ಮರನಸಿಯ ಧಾರೆಯಗ್ರದೊಳಿರವಿಂತುಟು ವಿಜಯ ಲಕ್ಷ್ಮಿಗೆಂಬವೊಲಿರ್ದಳ್ (ಚಂದ್ರಪ್ರ. ೭-೧೩೩) ; ಧರಣೇಶಂ ಕವಿದೊತ್ತಿ ಮುತ್ತಿ ಪೊಸನೀರು ಸೂಸುವ . . . ಕಾಮಿನೀವೃಂದವಂ ಪಿರಿದಾನಂದದಿ ನೊಲ್ದು ನೋಡಿ (ಉದ್ಭಟ. ೯-೧೩೦). [ ಸಂ. ]

**ಧರಣೇಶಕ್ತಿ** (ನಾ). ಭೂಮಿಗೆ ಆಧಾರವಾದ ಶಕ್ತಿ : ಹರಿಯೆ ಧರಣೇಶಕ್ತಿ ತಾನೆಂದೊರೆವನಲ್ಲದೆ ಹರನೆ ಧರಣೀಧರಣನೆಂದೊರೆಯನು(ಬಸಪು. ೩೭-೨೭). [ ಸಂ. ]

**ಧರಣೇಶಾವಾಸ** (ನಾ). ಅರಮನೆ; ರಾಜಭವನ : ಸಿಂಗದ ಸಿಸು ಬಳೆ ವೊಂದಂದದಿಂದಾರ್ವು ತೇಜಸ್ಸ್ಫುರಿತಂ ವಿಕ್ರಾಂತಮೆಂಬೀ ಗುಣವೊಡವೆಳೆ ಯುತ್ತಿರ್ಪನಂ ನಂದನಂ ತದ್ಧರಣೇಶಾವಾಸದೊಳ್ ಶೋಭಿಸುತಿರೆ ಬಳೆದು (ಚಂದ್ರಪು. ೩-೧೦೪). [ ಧರಣೇಶ + ಆವಾಸ ]

**ಧರಣೇಶ್ವರ** (ನಾ). ೧. = ಧರಣೇಶ: ಧರಣೀಶ್ವರ ವಚನಾಮೃತಪರಿಷೇಕದೆ . . . ಪರಮೇಶ್ವರಿ ಮಗನನಂದು ಪೆತ್ತಂತೆಸೆದಳ್ (ಆಚಪು. ೩-೧೫) ; ಧರಣೇಶ್ವರಸುಕೆಯಾಗಿಯುಮುರಣ್ಯದೊಳ್ ಬಿಟ್ಟು ಸಾವ ದುಷ್ಕರ್ಮಫಲಂ ದೊರೆಕೊಂಡತ್ತೆನಗೆ (ಹರಿಚಾಮ. ೧೪-೩೩) ; ಸೊಗಯಿಸುವುದು ಧರಣೇಶ್ವರ ಗೇಹ ವಿಶಾಲವಜ್ರನಿರ್ಮಿತಶಾಳಂ (ಚಂದ್ರಪ್ರ. ೧-೧೩೮). ೨. ಶಿವ. ೩. [ಗಣಿತ] ಹದಿನಾರು ಎಂಬ ಸಂಖ್ಯೆಯ ಸಂಕೇತ ; P ಹದಿನಾರು ಜನ ಚಕ್ರವರ್ತಿಗಳು ಪುರಾಣಪ್ರಸಿದ್ಧರು. ಆದುದರಿಂದ 'ಧರಣೇಶ್ವರ' ಎಂಬ ಶಬ್ದಕ್ಕೆ ೧೬ ಎಂಬ ಅರ್ಥ ಬರುತ್ತದೆ: ಎರಡುಂ ಮೂರುಂ ನಾಲ್ಕುಂ ಗುರುವಿಂ ಪ್ರಸ್ತರಿಸಲುಬುನಿಧಿ ಗಜ ಧರಣೇಶ್ವರ ಗಣ ಮೊಗೆ ಗು ಮ ವ ರ್ಕ ೯ ೦ ಸರಸಿಜಭವವಿಷ್ಣುರುದ್ರಸಂಜ್ಞೆಗಳಕ್ಕುಂ (ಛಂದೋಂಬು. ೩-೩). [ ಸಂ. ]

**ಧರಣೇಸಮುತ್ಥಿತ** (ನಾ). ನೆಲದಿಂದ ಮೇಲೆ ಎದ್ದುದು: ಧರಣೀಸಮುತ್ಥಿತಂ ಪಾಂಸುರೇಣು ಚೂರ್ಣಾಭಿಧಾನಕಂ ಕ್ಷೋದಂ ಧೂಳಿ ರಜಂ ಪರಾಗಮೆಂದಿವು ತೆರಳ್ದು ಪುದಿದಿರ್ದುದಕ್ಕುಮದು ಪಿಂಜಳಕಂ (ಪಸು. ಕೋ ೯೦-೧೩). [ ಸಂ. ]

**ಧರಣೇಸುತ** (ನಾ). ೧. ಅಂಗಾರಕ. ೨. ಭೂದೇವಿಯ ಮೊಮ್ಮಗ ; ಭಗದತ್ತ: ಧರಣೀಸುತನಬಿಂವಂ ದಿಕ್ಕರಿ ಕೆಡೆದುದು ನರಶರಂಗಳಿಂ ಭುವನಮಂವಿಸ್ಮಿರಿಯದಿರದು (ಪಂಪಭಾ. ೧೧-೮೩). P ಇದು 'ಧರಣಿಜಸುತ', ಎಂಬುವರ ಅಪಲಿಖಿತವಿರಬೇಕು. [ ಸಂ. ]

**ಧರಣೇಸುತೆ** (ನಾ). ಭೂಸುತೆ ; ಸೀತೆ: ಅಭಿರಾಮಗುಣಗಣವಶೀಕರಣೀಯತಾಸುಕರಣೀಯ ಧರಣೀಸುತೆಯುಂ (ಎಕ. II (R), ೧೩೮-೨೪ ; 1120). [ ಸಂ. ಧರಣೀಸುತಾ ]

**ಧರಣೇಸುರ** (ನಾ). = ಧರಣಿಸುರ : ಧರಣೀಸುರರಂ ವಿಮಲಾಧ್ವರರಂ ಸಜ್ಜನರಂ . . . ಭೂವರರೊಲ್ದು ರಕ್ಷಿಸದೊಡಾರ್ಪೊರೆವರ್ (ಅದ್ಭಟ. ೨-೨೩) ; ಉಲ್ಲಾಸಿಸಭಕ್ತಿರತಿಸ್ಥಿರರು ಧರಣೀಸುರರು ಹರವೇಷಧರರಘ ಹರರು ಚಿದ್ವರರು (ಬಸಪು. ೪೭-೯) ; ಅನೇಯನು ತಂದಿತ್ತು ಧರಣೀಸುರನ ಮನ್ನಿಸಿ . . . ಕಳುಹಿದನು (ಕುಮಾವ್ಯ. ೩೩-೩೩). [ ಸಂ. ]

**ಧರಣೇಹಾರ** (ನಾ). ಭೂಮಿಗೆ ಸರದಂತೆ ಅಲಂಕಾರಪ್ರಾಯವಾದುದು : ಧರಣೀಹಾರು ಹಸ್ತಿನಪುರ ಮಮರಪುರೋಪಹಾಸಿ ಭೂವನಿತೆಯ ಕರ್ಪುರದ ಕರಂಡಗೆ ಸೌಖ್ಯದ ಪರಮಂ ಪೊಸವೇಟದಿರ್ಕೆ ಸಮ್ಮಿನ ತಾಣಂ (ಶಾಂತಿಪು. ೯-೦೩೪). [ ಸಂ. ]

**ಧರಣಿ** 'ಧರಣ್ಕೆ' ನೋ.

**ಧರಣೇಂದ್ರ** (ನಾ). [ಜೈನ] ಪಾರ್ಶ್ವನಾಥತೀರ್ಥಂಕರನ ಯಕ್ಷ : ಧರಣೇಂದ್ರನಬಿದು ಭೋಂಕನೆ ಧರಾತಳಂ ಬಿರಿಯೆ ನೆಗೆದು ಬರ್ಪಂ (ಆದಿಪು. ೯-೧೦೦) ; ಧರಣೇಂದ್ರನ ಸತಿಯುರ್ಗಂ ಸುರರಾಜನ ಪಂಡವಾಸ ದೊಳ್ಕಂಡಿರ್ಗಂ ಕರಮೆನ್ನರಸಿಯರಯ್ಯೂರ್ವರುಮಗ್ಗಳಮಪರನೆಂತು ಬಿಸುಟಾನಿರ್ಪೆಂ (ಧರ್ಮಾಮೃ. ೧೪-೪೦). [ ಸಂ. ]

**ಧರತಿ, ಧರ್ತಿ** (ನಾ). (ವಿಶಿಷ್ಟವಾದ) ಶೈಲಿ ; ರೀತಿ ; ಧೋರಣೆ ; ಧಾಟಿ : ಕೆಲಸಾನ ಆಟಿಗೆ ಮಾಡೂವ ಸೂಟಿಗೆ ಹಸನಾದ ಧರತಿಗೆ ಮೆಚ್ಚಿದೆ ಗರತಿಗೆ (ಗಂಗಾತ. ೩೩-೧೨) ; ಪಲ್ಲವಿಗಳ ಸೊಲ್ಲೆತ್ತುವ ಧಾಟಿ ಧರತಿಗಳು ಅನೇಕವಿವೆ (ಕರ್ನಾಕ. ೩೭೭) ; ಅವಳು ನಗುವ 'ಧರತಿ' ಪೂರ್ಣ ಹಾಗೆಯೇ ಇದೆ (ಹೊಸಕ್ಕ. ೧೯೭) ; ಅಹಾ ! ಏನು ಧಾಟಿ ! ಆಹಾ ! ಏನು ಹಾಡುವ ಧರತಿ ! (ಕನ್ನಡ. ೪೨). ಧರ್ತಿ : ಇಂದಿರೆಯ ಮಾತಿನ ಧರ್ತಿ ಮೋಜಿನ ದೆನಿಸಿ ಎಲ್ಲರೂ ಬಿದ್ದು ಬಿದ್ದು ನಕ್ಕರು (ಕೊಸಕಾ. ೧೧) ; ತಾನು ಅನಿಕೇತ, ಅನಂತಪ್ರವಾಸಿ ಎನ್ನುವ ಧರ್ತಿಯಲ್ಲಿದ್ದಾಳೆ (ದೀಪಹ. II, ೧೭೩). [ ← ಮರಾ. ಧರತೀ, ಧರ್ತೀ ]

**ಧರಧುರ, ದರದುರ** (ನಾ). ೧. ಆರ್ಭಟ ; ಕೋಲಾಹಲ ; ರಭಸ ; ಅಬ್ಬರ ; ಆಡಂಬರ : ನೆಟ್ ನಂಬೊ ನೆಟ್ ನಂಬೊ ಧರಧುರವಿಲ್ಲದೆ ಸಾವ ವೇದಿಗಳಂತೆ (ಬಸವ. ೦೪೯) ; ಬಿರಿಯಲಬುಜಭವಾಂಡವಿದೆ ಕಪಿವರನ ಕಳಕಳ ದೇವದತ್ತದ ಧರಧುರದ ದೆಖ್ಖಾಳವಿದೆ ಗಾಂಡಿವದ ಬೊಬ್ಬೆಯಿದೆ (ಕುಮಾವ್ಯ. ೭-೪) ; ತುರಗಹೃದಯಧ್ವನಿಯ ಸಿಡಿಲಿನ ಧರಧುರದ ಗರ್ಜನೆಯ . . . ಬಜಿನ ಬರವನು ವಿರಚಿಸುವೊಡೆ ವಿಧಾತೃಗಳವಲ್ಲ (ಕುಮಾವ್ಯ. ೩-೭೩) ; ಗಿರಿಯ ಮುತ್ತಿದ ಮುಗಿಲವೊಲು ಹೊಗೆ ಹೊರಳಿಗಟ್ಟಿತು ಮೇಲೆ ದಳ್ಳುರಿ ಧರಧುರದಲೊಳಬೀಳುತಿದ್ದವು ಕಿಡಿಯ ಚೂಣಿಯಲಿ (ಕುಮಾವ್ಯ. ೦೯-೪೩) ; ನಿಸ್ಸಾಳಕೋಟಿಯು ಧರಧುರದ ದೆಖ್ಖಾಳದಲಿ ಕಲೆದೋಟಿದನು ಪಾರ್ಥ (ಕುಮಾವ್ಯ. ೪-೦೯). ೨. ಹೆಚ್ಚಳ ; ಅತಿಶಯ; ಆಧಿಕ್ಯ : ಹರೆದ ಬಲ . . . ಮೊರೆವ ಬಹುವಿಧವಾದ್ಯರಭಸದ ಧರಧುರದ ಕಂಧೂಳಿಯಲಿ ಮೋಹರಿಸಿ ಮುಸುಕಿತು ಭೀಮಸೇನನ ರಥದ ಬಳಸಿನಲಿ (ಕುಮಾವ್ಯ. ೦೯-೭) ; ಬೆರಳಲಂಬನು ತೂಗಲುರಿ ಫೂತ್ಕರಣೆಯಲಿ ಪಂಠಿಸಿತು ಸುಯ್ಲಿನ ಧರಧುರದ ಬೆಳನೊರೆಯ ಲಹರಿಯ ವಿಷದ ಲೋಳೆಗಳ (ಕುಮಾವ್ಯ. ೨೩-೩) ; ಹೊಬವಡಲಿ ಜನವೈದೆ ಮಧುರಾಪುರಕೆ ಪೋಪುವ ಬಿಲ್ಲ ಹಬ್ಬದ ಧರಧುರದ ಸಂಭ್ರಮವನಾ ಹೊಳಲೊಪ್ಪವನು (ನಿಥಾಗ. ೧೦-೩೯-೦೯). ೩. ತೀವ್ರತೆ ; ತೀಕ್ಷ್ಣತೆ : ಬರಬರಲು ರಿಪುಭಟನ ಹೊಯ್ಲುಗಳ ಧರಧುರಕೆ ಕಲಿ ಸಾತ್ಯಕಿಯ ತರಹರಣೆ ತಗ್ಗಿತು ಮಹಿಮೆ ಮುಗ್ಗಿತು ಮಂಬಿದುದಗ್ಗಳಿಕೆ (ಕುಮಾವ್ಯ. ೦೪-೧೧). ೪. ಉಗ್ರವಾದ ಕಾಳಗ ; ತೀವ್ರವಾದ ಯುದ್ಧ ( ? ) : ಅಸಂಖ್ಯಾತ ನಿವಾತಕವಚರಂ ಧರಧುರದೊಳ್ ತಳತಾಳುಕನಿಕಾಯಮಮ [ಪಾಠಾಂ. ಧುರಂಧರೋದ್ಯತ್ಕಾಳ ತಳತ್ತಾಳನಿಕಾಯಮಂ] ಸಾಯಕಸಘಾತದಿಂ ಯಮಪುರಕ್ಕೆ ಕಳುಪಿ (ಜಗಪಿ. ೧೩-೩ ವ). **ದರದುರ**: ೫. ಶ್ರೇಷ್ಠ ; ಅಧಿಕ ; ದುರಂಧರ: ಅನು ನಿಮ್ಮ ಭಕ್ತಿಯಲ್ಲಿ ದರದುರನೆಂಬೆ ದಿಟಕ್ಕೆ ಬಂದರೆ ಕಾಣದಂತದ್ದಮೊಗ ವಿಕ್ಕುವೆಗರುಡಂಗೆ ಫಟಸರ್ಪನ ತೋರುವಂತೆ (ಬಸವ. ೩೧೧). [ ? ]

**ಧರಭೋಗಿ** (ನಾ). ೧. ವಿಷವನ್ನುಳ್ಳುದು ; ಹಾವು. ೨. ಖಡ್ಗವನ್ನು ಬಳಸುವವನು ; ಖಡ್ಗಯುದ್ಧದಲ್ಲಿ ಸಂತೋಷಿಸುವವನು. ೧, ೨ : ಜಳನಿಧಿವೋಲು(ಲ್) ಗಭೀರನಹಿರಾಜನವೋಲು(ಲ್) ಧರಭೋಗಿ ಚಂದ್ರಮಂಡಳದವೊಲಿ(ಲೀ)ಕ್ಷಣಪ್ರಿಯಂ . . . ಎನುತ್ತೆ ಬಣ್ಣಿಸುತಮಿಪ್ಪುದು ಧಾರಿಣಿ ಚೀಲಗೊಂಡನ (ಎಕ. IV, ೧೧-೩೦ ; 1121). [ ಸಂ. ಧರಭೋಗಿನ್ ]

**ಧರಸೋಡಿ** (ನಾ). ಹೊಲ ಗದ್ದೆಗಳ ಮೇರೆಯನ್ನು ಗೊತ್ತುಮಾಡುವಾಗ ಅಂಕುಡೊಂಕಾಗಿರುವ ಅಂಚನ್ನು ನೇರವಾಗಿರುವಂತೆ ಅಕ್ಕಪಕ್ಕದ ಭೂಮಿಯ ಭಾಗವನ್ನು ಸರಿಪಡಿಸುವ ಪದ್ಧತಿ: ಧರಸೋಡಿ ಕೊಡುವಾಗ ಹ ಎಂಬಲ್ಲಿ ನ ಎಂಬಲ್ಲಿ ಸಹ ಕಂಪಾಸು ಇಟ್ಟು ಅಂತರ ತೆಗೆದು ಉಳಿದ ಅಂತರದಲ್ಲಿ ಕೂಡಿಸಿಕೊಳ್ಳಬೇಕು. ಅದಕ್ಕೆ ಹೊರಗಿನದು ಧರಸೋಡಿ ಅಂದರೆ ಬಿಟ್ಟುಬಿಡತಕ್ಕದ್ದು (ಭೂಮಿಳ. ೪೭).
[ ←ಮರಾ. ಧರಸೋಡ ]

**ಧರಾಗ್ರ** (ನಾ). = ಧರಣೀತಲ : ಸುರನರರಾಜಕಂ ಸಭೆ ಧರಾಗ್ರಮೆ ಕೂಡೆ ಸಮಗ್ರರಂಗಂ (ನೇಮಿಪು. ೮-೧೬೩) ; ವಿದಿತವಾಯುಶ್ರೀಯು ಕೀರ್ತಿಯು ಸದಮಳ ಜ್ಞಾನಾಭಿವೃದ್ಧಿಯು ಒದಗಿ ಬಾಳುತ್ತಿಪ್ಪರವಿರತವೀ ಧರಾಗ್ರದೊಳು (ಬಸಪು. ೪೮-೩೨). [ ಸಂ. ]

**ಧರಾಚಕ್ರ** (ನಾ). = ಧರಣೀಚಕ್ರ ೧: ಪೆಜ[ನಾ]ವಂ ಧರಾಚಕ್ರಕ್ಕೆಬೆಯಂ ಕೆಳೆಯಪ್ಪವಂ ನೆಜೆ ಯಾರಣೆಯೆಂಬನ್ನಂ ಕುಟಿತಬ್ಧಿಗೆ ಬನ್ನಮಂ (ಕವಿರಾ. ೨-೧೨೩) ; ಬೆಸಕೆಯ್ದತ್ತು ಸಮುದ್ರಮುದ್ರಿತಧರಾಚಕ್ರಂ (ಪಂಪಭಾ. ೧-೧೧೦) ; ಶಿಖಿನೆ ತಿರುಗುವ ಧರಾಚಕ್ರಭ್ರಾಂತಿಯೊಳ್ ತಮಗೆ ಚಿತ್ತಭ್ರಾಂತಿಯಾಗೆ (ಗದಾಯು. ೮-೨೦ ವ). [ ಸಂ. ]

**ಧರಾತಲ, ಧರಾತಳ** (ನಾ). = ಧರಣೀತಲ : ಮಾನಕ್ಕೆ ದೊರಕಲು ಸಂತಸದಿ ಕೊಂಡಧಿಕಸಂಭ್ರಮವಾಂತು ಪರಿತರಲೆಡಹೆ ಅಕ್ಕಿ ಧರಾತಲ[ಪಾಠಾಂ. ಳ]ದೊಳೊಗಲು (ಬಸಪು. ೨೬-೧೬) : ಆ ಸತ್ಕೇಶಚಾಮಯನ ಸಾಂಗಭಾಷೆ ಧರಾತಲ[ಪಾಠಾಂ. ಳ]ದೊಳುತ್ತುಂಗವಾಯಿತು (ಬಸಪು. ೩೬-೩೮). **ಧರಾತಳ** : ಪಟೆಯ ಧರಾತಳಮಂ ಗುಣದಟವನೊಡಂಬಡದ ಕಾಪುದಂಗೀಯದದರ್ಕಟಪೆ ದೆಸೆಗಳ್ಗೆ ಕೆಮ್ಮನೆ ಮೊಟಗುವಿರೇಂ ಮೊಟಗಿದಂತೆ ಕೊಳ್ವುವೆ ಮಟೆಗಳ್ (ಕಾವ್ಯಸಾ. ೪೩೬ ಕೊದ್ರಳ) : ಧರಾತಳಮಂ ಕೊಟ್ಟನಿವಂ ಜಳಾಂಜಳಿಯುಮಂ ನಾಂ ಕೊಟ್ಟೆನಿಲ್ಲ (ಗದಾಯು. ೩-೩೦) ; ಬುಡಸಹಿತ ಬಲುಮರ ಧರಾತಳಕುಡಿದು ಬಿದ್ದವು (ತೊರರಾ. ೧-೧೦-೧೪).
[ ಸಂ. ]

**ಧರಾತಳ** 'ಧರಾತಲ' ನೋ.

**ಧರಾತ್ಮಜ** (ನಾ). = ಧರಣಿಸುತ: "ವಕ್ರಃ, ಅಂಗಾರಕಃ . . . ಧರಾತ್ಮಜಃ– ಈ ೫ ಮಂಗಳನ ಪೆಸರ್" (ಹಲಾಯು. ೯-೪೬). [ ಸಂ. ]

**ಧರಾತ್ಮಜೆ** (ನಾ). = ಧರಣಿಜಾತೆ : ತಿಂಗಳ್ಮನೆಯ ಮಿಗಮೆ. . . ಬರುತಿರೆ ಧರಾತ್ಮಜಾವದನಮಂ ತನ್ನ ಸದನಂಗೆತ್ತು (ಶ್ರೀರಾಮಾ. ೨೩೦-೮೨).
[ ಸಂ. ಧರಾತ್ಮಜಾ ]

**ಧರಾದಾನ** (ನಾ). ಭೂಮಿಯನ್ನು ದಾನವಾಗಿ ಕೊಡುವುದು; ಭೂದಾನ : ಷೋಡಶಮಹಾದಾನಗಳನ್ನು ಮಾಡಬೇಕೆಂದು ನಿಶ್ಚಯಿಸಿ . . . ಎಲ್ಲವನ್ನೂ ಮಾಡಿದರು. ಅವು ಯಾವವೆಂದರೆ . . . ೧೧. ಧರಾದಾನ ೧೨. ವಿಶ್ವಚಕ್ರದಾನ (ಚಾಮುವಂ. ೯೬). 'ಷೋಡಶದಾನ' ಪರಾ.
[ ಸಂ. ]

**ಧರಾಧರ** (ನಾ). ೧. ಭೂಮಿಯನ್ನು ಹೊತ್ತಿರುವಂಥದು : ಧುರದಗ್ಗಳದ ಗಮನಕೆ ಕರಿಗಳಡಗೆಡೆದವು ಧರಾಧರದ [ಪಾಠಾಂ. ದಿಶಾವಳಿಯ, ಧರಾತಳದ, ಧರಾತಳಕೆ] (ತೊರರಾ. ೬-೨೬-೬). ೨. ಪರ್ವತ : ಆಯುಂ ಶ್ರೀಯುಂ ವಿಜಯಮುಮಾಯತಿಯುಂ ನೃಪತಿ ನಿನಗೆ ನಿಜಸಂತತಿಯುಂ ನ್ಯಾಯದೆ ಪೆರ್ಚುವುದಕ್ಕೀ ತೋಯಧಿ ಧರ[ಣೀಧ]ರಾಧರಸ್ಥಿತಿವರೆಗಂ (ಕವಿರಾ. ೩-೨೦೬) ; ಅನ್ಯದೈವಧರಾಧರಾಶನಿ ಅನ್ಯದೇವಾರ್ಣವಕಳಶಭವ (ಬಸಪು ೫೩-೪). 'ಧರಾಧರಧರ' ಪರಾ. ೩. ವಿಷ್ಣು. ೪. ದೊರೆ; ರಾಜ : ಚೌಪಳಿಗೆಗಳೊಳ್ ಧರಾಧರಧುರಂಧರಬಂಧುರರಾಜಕಂ . . . ಅಪ್ಪಳಿಸಿರೆ (ಪಂಪಭಾ. ೩-೫೩). [ ಸಂ. ]

**ಧರಾಧರಧನ್ವ** (ನಾ). (ಮೇರು) ಪರ್ವತವನ್ನು ಬಿಲ್ಲಾಗಿ ಮಾಡಿಕೊಂಡವನು ; ಶಿವ : ಧನಪತಿಮಿತ್ರ ಗಾತ್ರರುಚಿ ನಿರ್ಜಿತಮಿತ್ರ . . . ಧರಾಧರಧನ್ವ ಶಶಾಂಕಖಂಡಮಂಡನ (ರಾಜಶೇ. ೧೦-೫೯).
[ ಸಂ. ಧರಾಧರಧನ್ವನ್ ]

**ಧರಾಧರಧರ** (ನಾ). ೧. ಬೆಟ್ಟವನ್ನು ಎತ್ತಿ ಹಿಡಿದವನು. ೨. ಭೂಮಿಯನ್ನು ಮೇಲೆತ್ತಿದವನು ; ವಿಷ್ಣು : ೩. ಕೃಷ್ಣ : ದೋರ್ಗರ್ವದಿಂದಾಂತ ವೈರಿ ಧರಾಧೀಶಬಲಕ್ಕೆ ಗಾಂಡಿವಧರಂ ಗಂಗಾಧರಂ ತುಂಗಶಕ್ತಿಧರಂ ವಜ್ರಧರಂ ಧರಾಧರಧರಂ ಶ್ರೀ ಕೀರ್ತಿ ವಿದ್ಯಾಧರಂ (ಪಂಪಶಂ. ೮-೬) ; ಸಾಹಸದೊಳ್ ಧರಾಧರಧರಂ ಭುಜವೀರ್ಯ್ಯ ನಿಜಪ್ರತಾಪಸನ್ನೋಹದೊಳರ್ಜ್ಜುನಂ . . . ವಿಷ್ಣುನೃಪಾಳನೊಳಾರಿದಿರ್ಪ್ಪವರ್ (ಎಕ. VI, ಕಡೂರು. ೫೧-೧೧, 1169). 'ಗಿರಿಧರ' ಪರಾ.
[ ಸಂ. ]

**ಧರಾಧರಧೈರ್ಯ** (ನಾ). ಬೆಟ್ಟದಂತೆ ಅಚಲವಾದ ಸ್ಥೈರ್ಯವುಳ್ಳವನು : ಗುರುಸನ್ನಿಧಿಯೊಳಮ್ಮನ್ನಂ ಪರಿಣತಿವಡೆದಿರ್ದ ಸಕಳವಿದ್ಯೆಯನೀಗಳ್ ಮರಿವಿಡಿಗೆಯ್ವಂತೆ ಕಳಾಧರನಾದಂ ಶ್ರೀಧರಂ ಧರಾಧರಧೈರ್ಯಂ (ಮಲ್ಲಿಪು. ೪-೧೩೪). [ ಧರಾಧರ + ಧೈರ್ಯ ]

**ಧರಾಧರೇಂದ್ರ** (ನಾ). ದೊಡ್ಡ ಬೆಟ್ಟ; ಪರ್ವತಗಳಲ್ಲಿ ಶ್ರೇಷ್ಠವಾದುದು: ದುರ್ವಾರಾರಿಧರಾಧರೇಂದ್ರಕುಳಿಶಂ ಶ್ರೀವಿಷ್ಣುಭೂಪಾಳನಾರ್ದ್ದರ್ವ್ವಟ್ಟಿರ್ ಸೆಡೆದೋಡಿ ಪೋಗಿ ಭಯದಿಂದಾಬಂದನೀಬಂದನೆಂದುರ್ವ್ವೀಪಾಳರ ಕಣ್ಗೆ ಲೋಕವನಿತುಂ ತದ್ರೂಪವಾಗಿರ್ಪ್ಪುದುಂ ಸರ್ವ್ವಂ ವಿಷ್ಣುಮಯಂ ಜಗತ್ತೆನಿಪುದೇಂ ಪ್ರತ್ಯಕ್ಷಮಾಗಿರ್ದ್ದುದೋ (ಎಕ. V, ಬೇಲೂರು. ೦೬೧-೦೯ : ಸು. 1160). [ ಧರಾಧರ + ಇಂದ್ರ ]

**ಧರಾಧಾರ** (ನಾ). ೧. ದೊರೆ; ರಾಜ : ಪಾರಾವತಮಂ ಗಿಡಿಗಂ ಭೋರೆಂದೋರಂತೆ ಮುಟ್ಟೆ ಬೆನ್ನಟ್ಟೆ ಧರಾಧಾರನೆಯುನ್ನಂ ಕಾವುದಕಾರಣಮಿಮಾ ಶ್ಯೇನಕೋಪಮಪಗತಪಾಪಾ (ಶಾಂತಿಪು. ೯-೮೮). ೨. ಬೆಟ್ಟ ; ಪರ್ವತ. 'ಧರಾಧಾರಧರ್ಮ' ಪರಾ. [ ಸಂ. ]

**ಧರಾಧಾರಧರ್ಮ** (ನಾ). ೧. (ಮೇರು)ಪರ್ವತವನ್ನೇ ಬಿಲ್ಲನ್ನಾಗಿ ಮಾಡಿಕೊಂಡವನು ; ಶಿವ. ೨. ಬಹುಜನರು ಆಶ್ರಯಿಸಿರುವ ಶೈವಧರ್ಮದಲ್ಲಿ ನಿರತನಾದವನು ; ಬಸವೇಶ್ವರ. ೧, ೨ : ಶ್ರೀಶೈಲಾದಿಪ್ರಸಿದ್ಧಂ . . . ಧನದಮಿತ್ರಂ ಧರಾಧಾರಧರ್ಮಂ (ರಾಜಶೇ. ೧-೧).
[ ಸಂ. ಧರಾಧಾರಧರ್ಮನ್ (ಧರಾಧಾರ + ಧರ್ಮ + – ) : (ಧರಾ + ಆಧಾರ + ಧರ್ಮ + – ) ]

**ಧರಾಧಿಪ** (ನಾ). = ಧರಣಿಪ : ಪುಣ್ಯಕಥೆಯಂದದೆ ಭಾವಿಸಿ ಕೇಳ್ವುದಾಧರಾಧಿಪನ ಶರನ್ನಿಶಾಸರಕಳೋಜ್ಜ್ವಳಮಂ ಜಸಮಂ ಜಗಜ್ಜನಂ (ಚಂದ್ರಪು. ೨-೬) : ಧರಾಧಿಪನತುಳಹರುಷದ ತೊನಲಿಸಲಿ ಹೊದಳಿದ್ದು . . ನುಡಿದನು (ತೊರರಾ. ೧-೩-೧೦) ; ಸಂತಾನಕಾಮಿ ಧರಾಧಿಪಂ . . ಪುತ್ರಾಭಿವಾಂಛೆಯ ಸಮಾಧಿಯೊಳ್ ತಾನಿರಲ್ (ಶ್ರೀರಾಮಾ. ೧೨-೩೦೬).
[ ಸಂ. ]

**ಧರಾಧಿಪತಿ** (ನಾ). = ಧರಣಿಪ : ತದ್ಧರಾಧಿಪತಿ ತನ್ಮುನಿನಾಥರ ಪಾದಪದ್ಮದೊಳ್ ಬಿಟ್ಟಿದ್ದು (ನೇಮಿಪು. ೨-೨೪) ; ಬರೆ ಬಳಿಪಾ ಧರಾಧಿಪತಿ ಕಾಲನ ದಾಟಿಯ ಮೂಲಕರ್ತೃವೀ ನರಪತಿಯೆಂಬಿನಂ ನಡೆದು (ಮುಹಾನೇ. ೫-೮೦).
[ ಸಂ. ]

**ಧರಾಧಿಪತ್ಯ** (ನಾ). ಭೂಮಿಯ ಒಡೆತನ : ಧರಾಧಿಪತ್ಯಪತಿಯಾಗದವಂ ಧರಣೀಶಪುತ್ರನೇ (ಮುಹಾನೇ. ೪-೬೪) ; ತಂದಳು ಮತ್ತೆ ವಲ್ಕಲವ ವನನಿವಾಸಧರಾಧಿಪತ್ಯದ ಜನಪತನದುಡುಗೊಳಿಯಿದೀಗೆಂದೆನುತ (ತೊರರಾ. ೨-೩-೪೫). [ ಸಂ. ]

**ಧರಾಧೀಶ** (ನಾ). = ಧರಣಿಪ : ಈಬಂದಂ ಧರಾಧೀಶನೆಂಬರವಂ ಪೊಪುಟಿಪೋಗೆ (ಆದಿಪು. ೧೨-೧೨೬) ; ಚಂಪಾಪುರದ ಧರಾಧೀಶನಪ್ಪ ಸೂರ್ಯವಮಹಾರಾಜನ ಸುತಂ ಸಾಮಾನ್ಯಲ್ಲೆಂಬುದುಂ (ಮಹಾನೀ. ೯-೪೩ ವ). [ ಸಂ. ]

**ಧರಾಧೀಶ್ವರ** (ನಾ). = ಧರಣಿಪ : ಸ್ತ್ರಿಮಿತಸಾಗರ ಧರಾಧೀಶ್ವರನವಿನಶ್ವರ ಸುಖಾನುಭವನಿರತಂ (ಶಾಂತಿಪು. ೧-೭೩ ಪ) ; ಧಿಗಿಲೆಂದುದು ಧರಾಧೀಶ್ವರನ ತಂದೆಯ ಹೃದಯದಲಿ (ಕುಮಾ.ಕ. ೧-೨). [ ಸಂ. ]

**ಧರಾಧ್ರ** (ನಾ). = ಧರಾಧರ ೨ : ಪ್ರತಾಪವಿನನಂ ಘನಧೈರ್ಯಗುಣಂ ಧರಾಧ್ರವುಂ . . . ಗೆಲ್ದು ತೋಟಿದಾ ಭೂಪನ ಖಡ್ಗವೊಂದೆ ಸರಿ ಗೆಲ್ದುದೆ ವೈರಿನರಾಧಿನಾಥರಾ (ರಾಜಶೇ. ೩-೭). [ ಸಂ. ]

**ಧರಾನಂದನೆ** (ನಾ).=ಧರಣಿಜಾತೆ : ಧರಾನಂದನೆಯು ಪಾಣಿಗ್ರಹಣದುಜ್ಜುಗದನಿತ ವೇಳ್ದಿಚ್ಚಟಿಸಿದನು ಮೇಲಣ ಮಹೋತ್ಸವವ (ತೊರರಾ. ೦-೦೩-೮). [ ಸಂ. ಧರಾನಂದನಾ ]

**ಧರಾಪುತ್ರಿ** (ನಾ). = ಧರಣಿಜಾತೆ : ಪಂತದಿಂ ಪಾಡಿನಿಂದೊಬ್ಬರೊಬ್ಬರ ಕಾಡಿ ಕರುಬಿಂದೆ ಬಂದರಲ್ಲಿಗೆ ಧರಾಪುತ್ರಿಯುಂ ಕೈವಿಡಿಯ (ತ್ರೀರಾಮಾ. ೪೦-೩೭೨). [ ಸಂ. ಧರಾಪುತ್ರೀ ]

**ಧರಾಭಾಗ** (ನಾ). ಭೂಮಿ ; ನೆಲ : ಆ ಮರುತಾತ್ಮಪ್ರಭವಂ ಮರುಜ್ಜವದಿನೆಯ್ತಂದುದ್ಧತಂ ಕೌರವೇಶ್ವರನೂರುದ್ವಯಮಂ ಗದಾಪರಿಘದಿಂ ಪೊಯ್ಯಲ್ ಧರಾಭಾಗದೊಳ್ ಗಿರಿ ಬೀಟ್ವಂತಿರೆ ಬಿಟ್ಟಂ (ನೇಮಿಪು. ೧೨-೨೦೨). [ ಸಂ. ]

**ಧರಾಭಾರ** (ನಾ). ಆಡಳಿತದ ಹೊಣೆ ; ರಾಜ್ಯಭಾರ : ನೀನೆ ಪಟ್ಟಗನ್ನೆ ಮುನ್ನಿನೂರಂಟುವೇಡ ಮಗನೇ ಕೈಕೊಳ್ ಧರಾಭಾರವಂ (ಪಂಚತಂ. ೧-೮೦) ; ನಿನಗಸ್ಮದ್ವಚನಂ ವಿಧೇಯಮದರಿಂ ಕೈಕೊಳ್ ಧರಾಭಾರಮಂ (ಪಂಚಾವದಾ. ೭-೮೩) : ಸಂಸಾರಕ್ಕೆ ಪೇಸಿ . . . ಅರಿಂಜಯಂಗೆ [ರಾಜ್ಯಾಭಿಷೇಕಂ ಮಾಡಿ] ಧರಾಭಾರಮನೊಪ್ಪಿಸಿ (ಧರ್ಮಾಮೃ. ೪-೨೬೯). [ ಸಂ. ]

**ಧರಾಮಂಡಲ, ಧರಾಮಂಡಳ** (ನಾ). ಧರಣಿಮಂಡಲ; ಭೂಮಂಡಲ; ಪೃಥ್ವಿ : ಮುಂ ಕೋಟ ಮಂದಿ ಕುದುರೆಗೆ ಧರಾಮಂಡಲಂ ಸಂಕುಲದ ವಾದ್ಯಧ್ವನಿಗೆ ದಿಶಾಮಂಡಲಂ . . . ಸಂಕೋಚಮೆನೆ ಬಂದು ಓದಿದು ಪಾರ್ಥನ ತುರಗಮಂ ಕಟ್ಟಿ ಬಳಸಿ ಪದ್ಮವ್ಯೂಹಮಾಗಿ ನಿಂದಾರ್ದುದಾ ಸೇನೆ ನಲಿದು (ಜೈಮಿಭಾ. ೧೨-೯). **ಧರಾಮಂಡಳ** : ಅಕ್ಕನನ ಸುತಂ ಸಾಸ್ತನೊಳಕ್ಕುಂ ದೊರೆ ಚಾರುದತ್ತ ಬಲಿ[ಸಿ]ಬಿಗುತ್ತಂ ಏಳ್ಕ ನರನಾತನಾರ್ಕ್ಷ್ವ[ರ್] ಗಕ್ಕುಮೆ ದೊರೆಯಾಗಲೀ ಧರಾಮಣ್ಡಳದೊಳ್ (ಸೌಇಇ. XX, ೩೩-೩೪ ; 1081) [ ಸಂ. ]

**ಧರಾಮಂಡಳ** 'ಧರಾಮಂಡಲ' ನೋ.

**ಧರಾಮರ** (ನಾ).= ಧರಣಿಸುರ: ಚಾರಿತ್ರಶುದ್ಧರ್ ಧರಾಮರರೀ ಬ್ರಾಹ್ಮಣರೆದು ಕೊಂಡುಕೊನೆದಾ ಪಟ್ಟಂಡೆಭೂಮಂಡಲೇಶ್ವರನೋರಂತೆ ನೆಗಟ್ಟಿ ಕೂಡೆ ನೆಗಟ್ದತ್ತಿತ್ರಂ ದ್ವಿಜನ್ಮಾನ್ವಯಂ (ಆದಿಪು. ೧೩-೨೦) : ಪರಸುವ ಧರಾಮರರ ಪರಕೆಯ ರವಂಗಳಿಂ (ಅಜಿಪು. ೪-೭) ; ಧಾಮನಾಮಧೇಯಗ್ರಾಮದೊಳಿರ್ಪಂ ಧರಾಮರಂ ವಿಮುಂಚಿಯೆಂಬಂ (ಪಂಚಾವದಾ. ೭-೩೨ ಪ) ; ಧರಾಮರರಂ ಕನಿಷ್ಠಕುಲದ ಮನುಜರಿಗೆ ಸೋಂಕಲಾಗದಿದೇಂಬುದೊಂದುಂಟೇ (ಬಸವು. ೩೩-೩೩). [ ಸಂ. ]

**ಧರಾಮರತ್ವ** (ನಾ). ಬ್ರಾಹ್ಮಣ್ಯ ; ಬ್ರಾಹ್ಮಣನಾಗಿರುವಿಕೆ : ಪಡೆಯಬಾರದ ದಿವ್ಯಮಪ್ಪ ಧರಾಮರತ್ವಮನಮ್ಮ ನೀಂ ಪಡೆದು ಮತ್ತದನೊಲ್ಲದಿಲ್ಲಿಗೆ ಪಂದು . . . ಪೂರ್ವಿದ್ಯೆ ಜನದೀಕ್ಷೆಯಂ (ಧರ್ಮಾಮೃ. ೦-೭೬). [ ಸಂ. ]

**ಧರಾಮರಪತಿ** (ನಾ). ೧. ಭೂಮಿಗೆ ಇಂದ್ರನಂತಿರುವವನಂ ; ದೊರೆ ; ರಾಜ : ಇರೆ ಚಂದ್ರಂ ತೊಲೆಯೊಳ್ ಹಿಮಕಿರಣಸುತಾದಿ ಗ್ರಹತ್ರಯಂ ನೋಡೆ ಧರಾಮರಪತಿ (ಜಾತಕ. ೨೦-೬), ೨. ಶ್ರೇಷ್ಠನಾದ ಬ್ರಾಹ್ಮಣ : ಕಮಂಡಲು ಪಳಚ್ಚನೆಸೆದಿರ್ದುದು ಶುದ್ಧಾಂತಃಕರಣೋಪಾಧ್ಯಾಯಾಂತೇವಾಸಿಯುಪೊಲಾಧರಾಮರಪತಿಯಾ (ಅನಂಪು. ೨-೪೪). [ ಸಂ. ]

**ಧರಾರುಹ** (ನಾ). ಮರ ; ವೃಕ್ಷ : ಪೆಡೆಯೆತ್ತಿ ನಲಿವ ನಾಗಂಗಳಂ ಕೊನೆಗೊಂಬುಗಳೊಳ್ ತಾಳ್ದು . . . ಮಾಣಿಕ್ಯದ ಮರಂಗಳಂತಿರಂದಂಬೆತ್ತ ಚಂದನಧರಾರುಹಂಗಳಿಂ (ಕಬಕಂ. ೩-೩೩ ವ). [ ಸಂ. ]

**ಧರಾವರ** (ನಾ). ರಾಜ ; ದೊರೆ : ಅಂತು ಬಂದ ನಾರದನನಾದರದಿಂದಾ ಧರಾವರಂ ಸಮುಚಿತಾಸನದೊಳಿರಿಸಿ (ನೇಮಿಪು. ೧೧-೬೮ ವ). [ ಸಂ. ]

**ಧರಾವರೆ** (ನಾ). ಶ್ರೇಷ್ಠವಾದ ಭೂಮಿ : ಪಲಕಾಲಂ ಭರತಧರಾವರೆಯಲ್ಲಂ ಭೋಗಭೂಮಿಯಾಗಿರೆ . . . ಭೋಗಭೂಮಿಜರ್ ಸುಖದಿನಿರಲ್ (ಸಮುಕ. ೨-೯). [ ಸಂ. ಧರಾವರಾ ]

**ಧರಾವಲಯ, ಧರಾವಳಯ** (ನಾ). = ಧರಾಮಂಡಲ: ಅಡಿದಳಿಗೆ ಧರಾವಲಯಂ ಕಡುವೆಟ್ಟಿತ್ತಾಗೆ ನಡೆಯಲಟಿಯದೆ ಮನುಜರ್ ಸೆಡೆಯೆ ಹಯಾದಿಗಳಿಂದಂ ನಡೆಯಿಸಿದಂ ಕಲಿಸಿ ವಾಹನಾರೋಹಣಮಂ(ಪಂಚಾವದಾ. ೧-೭೬). **ಧರಾವಳಯ** : ಅಂತು ನಿರಂತರಂ ಧರಾವಳಯಮೆಲ್ಲಂ ಬಲಮಯಮಾಗೆಯುಂ ... ಅಗುರ್ವಾಗಿ ನಡೆಯೆ (ವರ್ಧಮಾ. ೮-೩೦ ವ) ; ಧರಾವಳಯಮಂ ಪ್ರಚಂಡಭುಜದಂಡದೊಳ್ ತಾಳ್ದಿದಂ (ಮಲ್ಲಿಪು. ೩-೦೨) ; ಶೂರತ್ವದೊಳೀ ಧರಾವಳಯದೊಳ್ ವಿಭು ಕೇಶವರಾಜನೊಪ್ಪುವಂ (ಸೌಇಇ. XX, ೨೪೮-೩೪ ; 1228) ; ಧರಾವಳಯಪೂಜಿತನಾ ಜಿತಶತ್ರುಭೂಭುಜಂ ಮಗಳ್ದಿರುಮನಳಿಯನುಮಂ ಮುಂದಿಟ್ಟು ಪುರಮನರಮನೆಯುಮಂ ಪೊಕ್ಕು (ಮಹಾನೀ. ೪-೩೮). [ ಸಂ.]

**ಧರಾವಲ್ಲಭ** (ನಾ). = ಧರಣಿಪ : ಆ ಧರಾವಲ್ಲಭಂ ಮಂಥರೆಯ ಭೀಷಣ್ಯೈಕಾಂತತೆಗೆ ಬಗೆಗರಗಿ (ತ್ರೀರಾಮಾ. ೨೩-೭೦೪). [ ಸಂ. ]

**ಧರಾವಳಯ** 'ಧರಾವಲಯ' ನೋ.

**ಧರಾವಿಭಾಗ** (ನಾ). ಭೂಭಾಗ ; ದೇಶ : ಪನ್ನಗಕೇತನಂಗೆ ಧರಾವಿಭಾಗಮನಿತ್ತು . . . ಬನ್ನವಿಲ್ಲದೆ ಬಾಟ್ಟುದೇಂ ಪುಲುವಾನಸಂಗೆನಗಕ್ಕುಮೇ (ಪಂಚತಂ. ೯-೧೭). [ ಸಂ. ]

**ಧರಾಸುತ** (ನಾ). = ಧರಣಿಸುತ. [ ಸಂ. ]

**ಧರಿತ್ರಿ** (ನಾ). ೧. ನೆಲ ; ಭೂಮಿ ; ಪೃಥ್ವಿ : "ಸ್ಥಿರ ಧರಣಿ ಧಾತ್ರಿ ಮೇದಿನಿ ಧರಿತ್ರಿ ಧರೆಯವನಿ ಪೃಥ್ವಿ . . . ಭೂಮಿ ಭೂ ಗೋತ್ರ ನೆಲಂ" (ವಸ್ತುಕೋ. ೨೬-೧) ; ಧರಿತ್ರಿಯಂ ಜೀಯನೆ ಬೇಡಿಕೊಳ್ಳದ ವಿರೋಧಿನರೇಂದ್ರರನೊತ್ತಿಕೊಂಡುಂ (ಪಂಚತಂ. ೦-೦) ; ನಿನಗಾರ್ ದೊರೆ ಮಾನವರೀ ಧರಿತ್ರಿಯೊಳ್ (ಪುಷ್ಪಪು. ೮-೭೭) ; ವಿರಹ ವಿಸ್ಮೃತಿ ಕೇವಳಮೇ ಧರಿತ್ರಿಯೊಳ್ (ನಳಚಂ. ೭೩); ಅವಗೆ ಧರಿತ್ರಿಯೊಳಗೆಣೆಯಾವನ್ನ ಭೂಪಾಲ (ಕುಮಾ.ಉ. ೩-೭೩). ೨. ಜನ : ಮಗನೆಂಬಂತು ಧರಿತ್ರಿ ನಿನ್ನನುಜರಂ ಕೈಕೊಂಡು ಮುಂ ಪೊಣ್ದ ನನ್ನಿಗೆ ಬನ್ನಂ ಬರಲೀಯದಾರ್ತಸಗಿದೀ ವಿಖ್ಯಾತಿಯುಂ ಕೀರ್ತಿಯುಂ ಮುಗಿಲಂ ಮುಟ್ಟಿದುದಲ್ತೆ (ಪಂಚತಂ. ೧-೮೦). [ ಸಂ. ಧರಿತ್ರೀ ]

**ಧರಿತ್ರೀಜಾತ** (ನಾ). = ಧರಾರುಹ : ಆತಪಂ ಓರಿದಾದಡಂ ಸಂಪ್ರೀತಿಯಲಿ ಬಂದೇಟಾದಡೆ ಚಂದ್ರಾತಪದೊಳಿರಿಸುವ ಧರಿತ್ರೀಜಾತ ಜಾತಿಗಳ (ಬಸವು. ೧೯-೩೯). [ ಸಂ. ]

**ಧರಿತ್ರೀತಳ** (ನಾ). ಭೂಲೋಕ ; ಭೂಮಿ : ಅಪ್ರಮಿತಮುನಿಮಾಳಿಯೊಳ್ ವರ್ಧಮಾನಮುನಿ ನೆಗಟ್ದನೀ ಧರಿತ್ರೀತಳದೊಳ್ (ಸುಕುಮಾ. ೧-೨೪). [ ಸಂ. ಧರಿತ್ರೀತಲ ]

**ಧರಿತ್ರೀತಿಳಕ** (ನಾ). ಭೂಲೋಕಕ್ಕೆ ತಿಲಕದಂತೆ ಭೂಷಣಪ್ರಾಯವಾದಂವ: ಆ ಕುರುಜಾಂಗಲವಿಷಯಮಹೀಕಾಂತೆಗೆ ಪೊಸತೆ ಸಮದ ಮುತ್ತಿನ ಮುಡಿ ಧಾತ್ರೀಕರ್ಣಪೂರಮುವನಿಸ್ತೀಕರಲೀಲಾಂಬುಜಂ ಧರಿತ್ರೀತಿಳಕಂ (ಶಾಂತಿಪು. ೯ ೧೩೮). [ ಸಂ. ಧರಿತ್ರೀತಿಲಕ ]

**ಧರಿತ್ರೀಧವ** (ನಾ). = ಧರಣಿಪತಿ: ಅವರವರ ಮತಗಳ ಧರಿತ್ರೀಧವ ನೊರೆಯಲು (ಶಂಕರಸಂ. ೧೧-೬). [ ಸಂ. ]

**ಧರಿತ್ರೀನಾಥ** (ನಾ). = ಧರಣಿಪ: ಕುಸುಮದತ್ತಂಗೆ ಧಾತ್ರೀನಾಥ ಪದವಿಯ: ಕೊಟ್ಟು ನರಪತಿ ಬಟಿಕ ದೀಕ್ಷೆಯಂ ಕೈಕೊಂದಂ (ಯಶೋಧ. ೪-೭೬). [ ಸಂ. ]

**ಧರಿತ್ರೀಪಾಲ, ಧರಿತ್ರೀಪಾಳ** (ನಾ). = ಧರಣಿಪ: ಕೇಳು ಜನಮೇಜಯ ಧರಿತ್ರೀಪಾಲ ನಿಮ್ಮಯ ಪೂರ್ವವೃಥ್ವೀಪಾಲರಿದ್ದರು ... ವ್ರತದಿಂದ ವಿರಾಟನಗರಿಯಲಿ (ಕುಮಾವ್ಯಾ. ೨-೧). **ಧರಿತ್ರೀಪಾಳ**: ವನದೇವಂ ಕಂಡೋಲಗಿಸಿದಂ ಧರಿತ್ರೀಪಾಳಂಗೆ ಸಗೇಂದ್ರಸುತವಸ್ತೂತ್ಕರಮಂ (ವರ್ಧಮಾ. ೯-೬೩). [ ಸಂ. ]

**ಧರಿತ್ರೀಪಾಳ** 'ಧರಿತ್ರೀಪಾಲ' ನೋ.

**ಧರಿತ್ರೀಮಿತ್ರ** (ನಾ). ಇಡೀ ಭೂಲೋಕಕ್ಕೆ ಗೆಳೆಯನಂತಿರುವವನು; ಲೋಕಕ್ಕೆ ಉಪಕಾರಿಯಾದವನು: ಎಲ್ಲಿ ಬಂದುದೊ ತುರಂಗಂ ಕೇಳಿಯೇಕಾದುದೀ ಶಿಶುವಿಂತೇಕಳಿದತ್ತೊ... ಕೋಪಿಸಿ ಚೋಳಾಧಿಪನೇಕೆ ಕೊಲ್ವನೊ ಧರಿತ್ರೀಮಿತ್ರನಂ ಪುತ್ರನಂ (ರಾಜಶೇ. ೦೪-೪೬). [ ಸಂ. ]

**ಧರಿತ್ರೀರಮಣ** (ನಾ). = ಧರಣಿಪ: ಪತ್ರೀಂದ್ರವಾಹನಂ ಬಳಿಕ್ಕೆದೆ ಪಾಂಡವ ಧರಿತ್ರೀರಮಣರಿದಿರ್ಗೆಂಡರು (ಜೈಮಿಭಾ. ೨-೪೭). [ ಸಂ. ]

**ಧರಿತ್ರೀವಲ್ಲಭ** (ನಾ). = ಧರಣಿಪ: ರತ್ನಕಂಬಲಮುಸಾ ಧರಿತ್ರೀವಲ್ಲಭಂ ಮುಹುರ್ಮುಹುರಾಲೋಕನಕುತೂಹಳಚಿತ್ತನಾಗಿ ವಿಸ್ಮಯಂಬಟ್ಟು (ಸುಕುಮಾ. ೧೧-೧೦೫ ವ). [ ಸಂ. ]

**ಧರಿತ್ರೀಸ್ತುತ್ಯ** (ನಾ). ಲೋಕದ ಹೊಗಳಿಕೆಗೆ ಪಾತ್ರನಾದವನು; ಲೋಕಪೂಜ್ಯ: ಸೂರ್ಯಮಿತ್ರಬ್ರತಿಪತಿಗವಧಿಜ್ಞಾನವೊಷ್ಪಿರ್ದುದಂ ಕಂಡು ಧರಿತ್ರೀಸ್ತುತ್ಯಂ ... ತುಷ್ಟನಾದಂ ಪರಮಜನಮತಾಂಭೋಜಿನೀರಾಜಹಂಸಂ (ಸುಕುಮಾ. ೩-೪೮). [ ಸಂ. ]

**ಧರಿಯಿಸು** 'ಧರಿಸಂ' ನೋ.

**ಧರಿಸು, ಧರಿಯಿಸಂ** (ಕ್ರಿ). ೧. (ಕೈಯಲ್ಲಿ) ಹಿಡಿ; ತೆಗೆದುಕೊಳ್ಳು: ಹರಕೆಯನು ಕೈಕೊಂಡಮಿತವಿಕ್ರಮನಿಹುಧಿಚಾಪಕೃಪಾಣವನು ಧರಿಸಿ ಗಮಿಸಿದನು ಮುನಿಯೊಡನೆ (ತೊರವೆರಾ. ೦-೯-೪೨). ೨. ಹೊರಂ; ನಿರ್ವಹಿಸು; ಹೊತ್ತುಕೊಳ್ಳು: ರುಂಹರಿ ರುಜೆಗೆ ಸಂದಳು ಧರಿಸಲಾಟದೆ ವೈರಿವಾಹಿನಿಯು (ತೊರವೆರಾ. ೬-೦೭-೦೨). ೩. ತಾಳು; ತಳೆ: ತನುವಿನಲ್ಲಿ ಸುಖವ ಧರಿಸಿಕೊಂಡಡೆ ಆ ತನುವಿಂಗೆ ಕೊಟಿತ ನೋಡಾ (ಅಪಚಂ. ೯೬-೪೩೨); ಮಧುಸೇಕಮನಾದರಿಸದೆ ಪಕುಳಂ ಮುಕುಳಮನರಲಂ ಧರಿಸಿದುದು ಕೊಂಬುಕೊಂಬಿನೊಳೆಲ್ಲಂ (ಚಂದ್ರಪು. ೨-೯೨): ಶಿರದೊಳು ಧರಿಸಿಯವರ ನಿಜಾಜ್ಞೆಯಂ (ಬಸವಪು. ೪೮-೨೧); ಬಂಜೆ ಗರ್ಭವ ಧರಿಸುವಳು ಧನಧಾನ್ಯಗೋಧನಸಂಪದಾದಿಗಳು ಭರತವಾಗಿಹವಾ ಮುನಿಪನಿಹ ಧರಣಿಯಲಿ (ತೊರವೆರಾ. ೦-೫-೭೦); ಪರಮಪವಿತ್ರೋದಕವ ಹಸ್ತದೊಳಾಂತಾ ಶಿರದೊಳು ಧರಿಸಿಕೊಂಡು (ಮೋಹತ. ೬-೪೪); ನಕ್ಷತ್ರಮಯ ರಾತ್ರಿಯಂ ಧರಿಸಿ ಸೂರ್ಯನ ಶೋಭಿಪಂತೆ ... ಪೊಳೆದುದು ಕಣ್ಗೆ ಮಂಗಳದಮರ ಮೂರ್ತಿ (ಶ್ರೀರಾಮಾ. ೧೩-೩೪೩). ೪. (ಉಡುಪು, ಆಭರಣ ಮೊದಲಾದಂವನ್ನು) ತೊಡಂ; ಹಾಕಿಕೊಳ್ಳು; ಧಾರಣೆಮಾಡು: ಏಕಮುಖದ ರುದ್ರಾಕ್ಷಿಯ ಒಂದನೆ ಪಶ್ಚಿಮದಲ್ಲಿ ಧರಿಸುವುದಯ್ಯ (ಅಪಚ. ೧೮-೪೫); ನೆನೆದು ಭೋಂಕೆನಲೆದ್ದು ರುದ್ರಾಕ್ಷಿಯಂ ಧರಿಸಿ (ಶಂಕರ. ೦೯-೭೨): ಮಗುವು ವೇಷವ ಧರಿಸಿ ದೂರದಲಗಲಿ ಹೋಗಲು ತನ್ನ ಚಿತ್ತಕೆ ಧಗೆಯು ಡಾವರವಾಯ್ತು (ಕುಮಾರವ್ಯಾ. ೬-೬೪): ಧರಿಸಿದನು ನವರತ್ನಖಚಿತಾಭರಣ ದಿವ್ಯಾಂಬರ ಸುಮಾಲ್ಯಸುಗಂಧನಿಕರವನು (ಸೌಂದ. ೨-೧೧); ಮಿಂಚುವ ಕಿರೀಟವುಂಟದನಂದು ಧರಿಸಿತ್ತಿಲ್ಲುಚಿ ಮನದೊಂದು ಲೀಲೆಯೊಳು (ಭರತ. ೧-೩೪); ಜಡೆಯೆಡೆಯೊಳು ಗಂಗೆಯ ಮುಡಿದಂತೆ ಯಾಗಿ ಧರಿಸಿದ ... ಚೆನ್ನ ನಂಜುಂಡನಡಿದಾವರೆಗೆಣಗುವೆನು (ಶಂಕರ. ೦-೬); ಇನ್ನಿಬ್ಬರು ಒಳ್ಳೇ ಉಡುಪು ಧರಿಸಿದ್ದ ಗಂಡಸರು ಬಂದಿದ್ದರು (ಕಂಗಾಳಿ. ೪೭೩). ೫. ತಿಲಕ, ವಿಭೂತಿ, ಗಂಧ, ಮುದ್ರೆ, ನಾಮ ಮುಂತಾದುವುಗಳನ್ನು ಹಚ್ಚಿಕೊಳ್ಳು, – ಇಟ್ಟುಕೊಳ್ಳು: ನಿಮ್ಮ ಲಾಂಛನವ ಧರಿಸಿಪ್ಪ ಉದರಪೋಷಕ ನಾನಯ್ಯಾ (ಬಸವ. ೩೪೧); ಭಸಿತ ರುದ್ರಾಕ್ಷಾದಿ ಮುದ್ರೆಗಳ ನಿರ್ಮಲತೆಯಿಂ ಧರಿಸಿ ಚರಿಸುತ ಚರ್ಮ ದುರ್ಮುದ್ರೆಗಳನೇ ... ಧರಿಸುವುದುಚಿತವೇ ಹೇಳು (ಬಸವಪು. ೩-೪೮). ೬. ತೊಡಿಸು; ಮಂಡಿಸು; ತೊಟ್ಟುಕೊಳ್ಳುವಂತೆ ಮಾಡು: ಕೆಲರು ಹೂವಿನ ಹಾಸಿಗೆಯ ಕೋಮಲೆಗೆ ಸಮೆದರು ಕೆಲರು ಚಿಗುರಿನ ತೊಡವ ಧರಿಸಿದರು[ಪಾಠಾಂ. ನಾನಾ ವಿವಿಧ ಶೈತ್ಯೋಪಚಾರವ ರಚಿಸಿ] (ಸೌಂದ. ೦-೪೦). ೭. ಪಡೆ; ಹೊಂದಂ: ಕೋಲು ಧರಿಸಿದವೆಟಕೆಗಳನೆನೆ ಚಾಳಿಸಿತು ಪಡೆ (ಕುಮಾರವ್ಯಾ. ೧-೭೦): ರಕ್ತಜಲದಲಿ ಕರುಳ ಹೂಮಾಲೆಯಲಿ ವೀರರಣಾಭಿಷೇಕವನು ಧರಿಸಿ ... ಮನದುಬ್ಬರದಲಿದಾಡಿದರೆ ದಿಟ ಕೃತಕೃತ್ಯ ತಾನೆಂದ (ಕುಮಾವ್ಯಾ.ಕ. ೮-೩೯); ಲತಾಂಗಿಯ ದಕ್ಷಿಣಹಸ್ತಂ ಧರಿಸಿತು ಪಿರಿದುಂ ಚೆಲ್ವಿಕೆಯಾ (ಜಯುಕಾ. ೨-೦೪): ವಿಶೇಷಮಾಂದ್ಯವನಾಂತು ದೊಳ್ಳಿಡೆ ಬಳಲ್ಕೆಯಂ ಧರಿಸಿ (ಚಬಪು. ೪-೧೧); ಶರ್ವ ಎಂಬ ಉಪಪದವನ್ನು ಬ್ರಾಹ್ಮಣರಲ್ಲದೆ ಅನ್ಯರು ಧರಿಸುತ್ತಿದ್ದಿಲ್ಲವೆಂಬುದನ್ನು ಜ್ಞಾಪಕವಿಡ ಬೇಕು (ಕರ್ಣಾಟ. ೭). ೮. (ವ್ರತ ಮೊದಲಾದುವನ್ನು) ಕೈಕೊಳ್ಳು; ಆಚರಿಸಂ: ಪಾಶುಪತ ಸುವ್ರತವ ಧರಿಸಿದುದಾ ಸುಪರ್ವಸ್ತೋಮ (ಕುಮಾವ್ಯಾ.ಕ. ೬-೩೩). ೯. ತಡೆ; ತಡೆಹಿಡಿ; ನಿರೋಧಿಸು; ನಿಲ್ಲಿಸು: ವರನದಿಗಳಲಿ ಮುಳುಗಿ ಮೂಗಿನ ಬೆರಳಲೂರ್ಧ್ವಶ್ವಾಸವವನ ಧರಿಸಿ ಕಾಲತ್ರಯಜಪಾನುಷ್ಠಾನಹೋಮದಲಿ . . . ನೇಮಾಚರಿಸುವುದು (ಕುಮಾವ್ಯಾ.ಕ. ೧೧-೭೦). ೩, ೯: ಶಶಿರವಿಗಳ ನೆಟ್ ಧರಿಸಿ ಸಂತೋಷದೆ ಪಶುಪತಿಯಂತೆ ರಾಜಿಸುತ ... ರಂಜಿಸಿದುದಾ ಬನ ದೊರೆಯಂತ (ಶಂಕರ. ೨-೫೦). ೧೦. ಒಳಕೊಳ್ಳು; ಒಳಗೊಂಡಿರು: ಕ್ಷೀರಾಬ್ಧಿ ಹರಿಯ ಧರಿಸಿಕೊಂಡಿಹುದು (ಶಂಕರ. ೫-೪೨). ೧೧. ಆಧಾರವಾಗು; ಆಸರೆಯಾಗಂ: ಅಗ್ನಿ ವಾಯುವ ಧರಿಸಿ ವಾಯು ಆಕಾಶವ ಧರಿಸಿ ಆಕಾಶ ಅಪ್ಪುವ ಧರಿಸಿ (ಮೋಕ್ಷಮಾ. ೨-೨). **ಧರಿಯಿಸು**: ೨. ಪಲರಾದರಿಸಿದ ಧರಣೀಭರಮಂ ಧರಿಯಿಸಿದಂ ಪ್ರತಿಮನಂಬನಪ್ರತಿಮಬಲಂ (ಪಂಪಭಾ. ೦-೩೪); ಧರಿಯಿಸಿ ಮಂದರಮಂ ಕೂರ್ಮರೂಪದಿಂ (ಜಗವಿ. ೮-೯೩); ಕಡು ಸೊಗಯಿಸುವೀ ಕುಸುಮದ ಫಲಮೇ ಪೊಡವಿಯನೆಲ್ಲಮ ನೊಂದೇ ತೋಳೊಳ್ ಗಡಣದಿ ಧರಿಯಿಪುದವ್ಪುದು ನಿಶ್ಚಯಂ (ಜಯುಕಾ. ೨-೪೭). ೩. ಪರಮಜಿನೇಂದ್ರವಾಣಿಯ ಸರಸ್ವತಿ ದೇಜದು ಪೆಣ್ಣ ರೂಪಮಂ ಧರಿಯಿಸಿ ನಿಂದುದಲ್ತು (ಆದಿಪು. ೧-೯); ಹರಿ ಪರ್ವಜಿಧನುವಂ ಸಂಹರಿಸಲೊಡಂ ಜೈತ್ರಚಾಪಮಂ ಜಿನಚಂದ್ರಂ ಧರಿಯಿಸಿದಂ (ಶಾಂತಿಪು. ೧೧-೧೩೫); ಮಲಮಂ ಧರಿಯಿಸಿ ನಾಣಂ ತೊಲಗಿಸಿ ನಿರ್ಗ್ರಂಥವಿರ್ದು (ಧರ್ಮಾಮೃ. ೦-೦೦೩); ಎಟ್ಟ ಸುಟ್ಟುರೆಯುಪೊಲಪ್ಪದರ್ಥಮನುಪಾರ್ಜಿಸುವಲ್ಲಿ ನಿಜಾಭಿಮಾನಮಂ ಧರಿಯಿಸುವಲ್ಲಿ ಚಾದಗವೊಲಪ್ಪುದು ತಪ್ಪದವಾತ್ಮಲಕ್ಷಣಂ (ಕಾವ್ಯಸಾ. ೪೨೨). ೪. ಧರಿಯಿಸಿ ಮಣಿಮೇಖಲೆಯಂ ಕರಮೆಸೆದತ್ತಲಘು ಜಘನೆಯತಿಘನಜಘನಂ (ಜಗವಿ. ೧೧-೧೦೩). ೭. ಆನಿದಜಂದವಂ ಧರಿಯಿಸಲ್ವೇಟ್ಕೆಂದು ನೀಲೋತ್ಪಲಪ್ರಿಯನಿನ್ನುಂ ನೆಟ್ ಪೆರ್ಚುತು

ಕ್ಕ್ಯಯುತಮಂ ತಾನಿರ್ವನೆಭ್ಯಾಸದಿಂ (ಧರ್ಮಾಮೃ. ೩-೦೬೭) : ಇರೆ ನವಪದ್ಮ ರಾಗಚಷಕಂ ನಿಜಹಸ್ತತಳಾಗ್ರದೊಳ್ ಮನೋಹರಿ . . . ನವೋದಿತಚಂದ್ರ ಬಿಂಬಮಂ ಧರಿಯಿಸಿದಿಂದ್ರುದಿಗ್ವನಿತೆಯಂತಸೆದಳ್ ಮಧುಪಾನಗೋಷ್ಠಿ ಯೊಳ್ (ಅಗವಿ. ೦೬-೧೧೫) ; ಇರದಧಿಕಭ್ರಾಂತತೆಯಂ ಧರಿಯಿಸಿ ಕಡುಗಂದಿ ಜಿನುಗುವಾಬಿಡಿಯಾದಂತಿರೆ ತೋರ್ಪಿ ಪರಿಜನಮಂ ಹರಿಸದೋಳೊಡಗೂಡಿ ತೋಜು ಚರಣಾಂಬುಜಮಂ (ಚಂದ್ರಪ್ರ. ೫-೧೫) ; ಈ ಚಿತ್ರದ ಪಡಿರೂಪಂ ಧರಿಯಿಸಿದಾ ಚೆನ್ನಿಗನಲ್ಲದೆಯುಳಿದವರೆನ್ನಯ ಸೋದರರು (ಜಯುಕಾ. ೩-೭೫) : ಅರಸುಗುಣಂಗಳನತಿಭೀಕರಕಾಂತಂಗಳನವಂ ವಿಯಚ್ಚರರಾಜಂ ಧರಿಯಿಸಿದಂ ಜಳನಿಧಿ ಜಳಚರಚಯಮುಮಂ ರತ್ನಚಯಮುಮಂ ಧರಿಯಿಪ ವೊಲ್ (ಕಾವ್ಯಾವ. ೨೯೯). ೮. ನಿಷ್ಕುರಮಪ್ಪ ಬಾಹ್ಯತಪಮಂ ಧರಿಯಿಸಿದಂ ಸೂರ್ಪನಂದು ಮಹಾಯಾತಪಮಂ (ಧರ್ಮಾಮೃ. ೬-೩೭) : ಸಮಸ್ತ ಬುಧರ್ಮುದರದಿ ಧರಿಯಿಸುವ ರತ್ನತ್ರಯಸುರತ್ನಗಿರಿ ಪೆರ್ಮೆವಡೆದುದು (ಸಾಳ್ವಭಾ. ೦-೭). ೧೦. ಧರಿಯಿಸೆ ತನ್ನಾಜ್ಞೆ ವಸುಂಧರೆಯಂ ಧರೆ ತಾಳ್ದೆ ತನ್ನ ವಿಶದಯಶೋವಲ್ಲರಿಯಂ ವಿದ್ವದ್ಗೋಷ್ಠೀನಿರತಂ ಸುಖಸಂಕಥಾ ವಿನೋದದೊಳಿರ್ದಂ (ಮಲ್ಲಿಪು. ೩-೨೫) : ಶರಧಿಯ ನದಿಗಳ್ ಧರಿಯಿಸ ಲಾರ್ಶಪುವೆ ಕೋಟೆಯ ನೀರಂ ಕೆರೆಗಳ್ ಧರಿಯಿಸಲಾರ್ಪುವೆ ಬಾವಿ ಗಳರಿದೆನಿಸುವ ಕೋಟೆಯ ನೀರ್ಗಳಂ ತಾಳ್ದುಗುಮೇ (ಧರ್ಮಾಮೃ. ೩-೦೩೪). ೧೨. ಪಾಲಿಸು ; ರಕ್ಷಿಸು : ಧರೆಯಂ ಸದ್ಧರ್ಮಾಶ್ರಯು ಧರೆಯಂ . . . ಆಕಲ್ಪಂ ನೀಂ ಧರಿಯಿಸೆ ಶಪಮದೆ (ಚಂದ್ರಪ್ರ. ೯-೯೦).

[ ಧರಣ$_1$ + – ಇಸು$_3$ ]

**ಧರುಮ** 'ಧರ್ಮ$_1$' ನೋ.

**ಧರೆ** (ನಾ). ೧. ನೆಲ ; ಭೂಮಿ ; ಭೂಲೋಕ : "ತಿರೆ ಪೊಡವಿ ರತ್ನವಸಿಬಿಳ್ ಧರೆಯೆಳೆಯೆಂದೆನ್ನಲಿರದೆ ಧಾರಿಣಿಯಕ್ಕುಂ" (ಕವಿಕಂ. ೯೭) : ಧರೆ ರತ್ನಗರ್ಭೆಯಾದುದು ಸುರರೆಲ್ಲಂ ಹರ್ಷಗರ್ಭರಾದರ್ (ಆದಿಪು. ೭-೨೭) : ಧರೆ ಕಂಪಂಗೊಳ್ವಿನಂ ಪೆರ್ವಿಡಗಳೆರಡುವೋರೊಂದಟೆೊಳ್ ತಾಗೆ ತೂರ್ಯಸ್ವರಮುಂ . . . ಕ್ಷುಭಿತಜಲನಿಧಿಧ್ವಾನದಂತಾದುದೆತ್ತಂ (ಶಂರಾಮಾ. ೦೩-೩೭) ; ಮಟೆಯಿಲ್ಲದೆ ಪೊಯ್ಯಾರಿಂ ಬೆಳೆಗುಮೆ ಧರೆ (ಧರ್ಮಾಮೃ. ೧-೯೯) ; ಬಿತ್ತಿ ಬೆಳೆಯಬಹುದೆ ಧರೆಯಿಲ್ಲದೆ (ಬಸವ. ೩೯೮) ; ಧರೆಯುಂ ಮಾಜಿಡಿ ಮಾಡಿದ ಹರಿ ಬರ್ಪೊಡೆ ತಡವೆ (ಜಗವಿ. ೧೦-೫೨) : ಧರೆ ಬೀಜಂಗಳ ನುಂಗೆ ಬೇಲಿ ಹೊಲನೆಲ್ಲಂ ಮೇದೊಡಂ (ಸೋಮೇಶ. ೭೯) ; ಕರೆವ ಕಹಳೆಗಳ ಮಹಾರವದೊಳಗೆ ಧರೆ ನಡುಗೆ (ನೇಮಿರ. ೭-೦೨೦) ; ಧರೆಯುಂ ಸ್ಥಿರೆಯೆನಿಸಿದಂ . . . ಅದೇಂ ಸಮರ್ಥನೊ ಪದ್ಮಂ (ಪುಷ್ಪಪು. ೩-೨) ; ಧರೆಯೊಳೀ ಹೊತ್ತಿನಲಿ ನಿನಗೆ . . . ಅದಾವುದು ಕೊಚಿತೆ (ಕುಮಾರ. ೩-೭೮). ೨. ಭೂಲೋಕದ ಜನ ; ಜನತೆ : ಧರೆ ಬಣ್ಣಿಸೆ ಸ್ವೈಯಡಿಯೊಳ್ . . . ಹರಿಹರಭವನಂಗಳನಚ್ಚರಿಯೆನೆ ಮಾಡಿಸಿದಂ (ಶಂಚಂತಂ. ೧೧-೦೫) ; ಧರೆ ಕೊಂಡು ಕೊನೆದು ಬಣ್ಣಿಪುದರಿದೆ (ಧರ್ಮಾಮೃ. ೯-೨೬೩) ; ಧರೆಗಾಚಾರಮನಚಿಪಲ್ ಗುರುವಿಂ ಕೃತವಿದ್ಯನಾದ ಕೃಷ್ಣಂ ಗುರುವಂ ಗುರುದಕ್ಷಿಣೆಯಂ ಬೇಡೆನೆ (ಅಗವಿ. ೬-೧೯) : ಧರೆಯೊಳಗೆ ಕಡು ಮೂರ್ಖರಿವರಿಬ್ಬರು ಕಣಾ ದುರಿಯೋಧನನು ದಶಶಿರನು (ಕುಮಾರ. ೩-೦೭). ೩. ರಾಜ್ಯ : ಧರೆಯುಂ ಕುಡುವುವಂದೆನಗಂ ಗುರು ತನಗಂ ರಾಜ ನಾಮಮಂ ಕೊಟ್ಟೊಡೆ ನೋಡಿರೆ ತನಗೀಗಳ್ ರಾಜಾಧಿರಾಜನೆಂದಿಟ್ಟು ಕೊಂಡನಡಿಕಿಲ್ತಿಸರಂ (ಆದಿಪು. ೦೪-೭೪) ; ಕುರುಪತಿಯಂ ವಿಷ್ಣು ಬೇಡಿದುದು ಧರೆಯನರೆಯಂ (ಕವಿದ. ೬೪ ಪ್ರಯೋ) ; ಸಕಲ ಧರೆಯ ಜನವ್ಯತಹುದು ಗಡ (ನಿಘಾಗ. ೧೦-೩೪-೧೯). ೪. ಮಣ್ಣು ; ಧೂಳು : ಬೆಂದ ಮಡಕೆ ಮರಳಿ ಧರೆಯ ಕೂಡಬಲ್ಲುದೆ (ಸಿದ್ಧೇಶ. ೨೦೨-೬೨೦). ೫. ಭೂದೇವಿ : ರಮೆ ಧರೆಯರಿಂದಲಾಲಿಂಗಿತ್ತದಿ ಕಮಲಜಾದಿಗಳಿಂದ ತುತಿಸಿಕೊಳ್ಳುತ ಹೃದಯ ಕಮಲದೊಳಗಿರುವ ಶ್ರೀ ವಿಜಯವಿಠಲನ ಕಂಡೆ (ವಿದಾಕೃ. ೫೭-೫). ೬. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ : "ಶಶಾಂಕ ಸೋಮಂ . . . ವಸುಧಾತಳಮಾ ಸಿತಕರ ರಸೆ ಧರೆ ಇಳೆ ರೂಪವ್ಯೆಕಮೊಂದಟಿ ನಾಮಂ" (ವ್ಯವಹಾ. ೯-೧) ; ೧೧ ೧೧ ದಿ೦೧೧ ಗುಣದಿ೦ ೧೧ ಗುಣನಿಕರಂ ಪುರಗಣಿತಂ ಧರೆ ಧರೆ ಧರೆ ಧರೆ ಧರೆ ಧರೆ ಧರೆ ಧರೆ ಧರೆಯಿಂ ಪರಿಗಣಿತಂ (ಭಾಸ್ಕರ. ೪೪-೩). ೭. [ಛಂದ] ಅಕ್ಷರ ಗಣಗಳಲ್ಲಿ ಒಂದು ; ಮಗಣ (– – –) : ಆದಿಯ ಮಧ್ಯಾಂತದೆ ಗುರುವಾದೊಡೆ ಶಶಿ ಸೂರ್ಯ ವಾಯು ಗುರುವಿರೆ ಧರೆ ಮತ್ತಾದಿಯ ಮಧ್ಯಾಂತದೆ ಲಘುವಾದೊಡೆ ಜಲ ವಹ್ನಿ ಗಗನ ಲಘುವಿಂ ನಾಕಂ (ಛಂದೋಂಬು. ೦-೩೭ ಅಡಿಪದ್ಯ) : ಧರೆ ಜಲ ನಿಶಾಕರಂ ಸುರಪುರಗಣಮುಂ ಶುಭಮನಿಕ್ಕುಂ (ಛಂದೋಂಬು. ೧-೪೪).

[ ಸಂ. ಧರಾ ]

**ಧರೆವೋಜು** (ನಾ). ಪ್ರಪಂಚವೇ ಸಂತೋಷದಿಂದ ತುಂಬಿರುವಂತೆ ತೋರುವಿಕೆ ; ಅತಿಯಾದ ಸಂತೋಷ : ಸರಗೀಯ ಕೊಂಡ್ಹಂಗ ಸರದಿತ್ತ ನನ ಮನವು ಸರಿಬಾರದವರು ಇದರೀಗಿ ಬಂದರ ಧರೆವೋಜನ ಮನವು ನೆಲ ನೋಡಿ (ಕನ್ನಜಾ. ೧೦೬). [ ಧರೆ + ಪೋಜು ]

**ಧರ್ತಿ** 'ಧರತಿ' ನೋ.

**ಧರ್ಮ** (ನಾ). ೧. ಜಗತ್ತಿನ ಸ್ಥಿತಿಗತಿಗಳ ದೃಷ್ಟಿಯಿಂದ ದೃಢವಾಗಿ ಹಿಡಿಯಬೇಕಾದುದಂ,–ನಿಷ್ಠೆಯಿಂದ ಪಾಲಿಸಬೇಕಾದುದು ; ವಾಡಿಕೆ ಯಾಗಿ ಬಂದ ಮತಸಂಬಂಧವಾದ ಅನುಷ್ಠಾನ ; ಕಟ್ಟಳೆ ; ವಿಧಿ ; ಆಚಾರ; ಸಂಪ್ರದಾಯ; ವಿಹಿತವಾದ ಆಚರಣೆ: ಈ ಸಂಸ್ಥಿತಿಯೊಳ್ ಧರ್ಮಾಧರ್ಮಸ್ಥಿತಿಯ ಬಲಂ ಸ್ವರ್ಗನರಕಸುಖದುಃಖಕರಂ(ಆದಿಪು. ೫-೭೭): ದಯುವಿಲ್ಲದ ಧರ್ಮವದೇವುದಯ್ಯಾ . . . ದಯುವೇ ಧರ್ಮದ ಮೂಲ ವಯ್ಯಾ (ಬಸವ. ೨೪೭) ; ಧರ್ಮಮನಾದಿಯನೊದವಿದ ಕರ್ಮದ ಕೇಡಿಂಗೆ ಮೂಲಂ (ಜೀವಸಂ. ೨೦೩-೧) : ಧರ್ಮಂ ಧಾರ್ಮಿಕನಿಂದೆ ನಿಲ್ವುದು (ಅನಂಪು. ೩-೭೩) : ಧರ್ಮದಾಧಾರದಲಿಹುದು ಜಗ ಧರ್ಮವುಳ್ಳನನಾಶ್ರ ಯಿಸುವುದು ಧರ್ಮವೇ ನೂಕುವುದು ಜನ್ಮಾಂತರದ ಪಾತಕವ . . . ಆ ಧರ್ಮವನು ಬಿಟ್ಟಿಹುದು ಬದುಕಲ್ಲ (ಕುಮಾರ. ೯-೫೯) : ಧರ್ಮವೆಂದರೆ ಮನುಷ್ಯನು ಇಹಪರದೃಷ್ಟಿಯಿಂದ ಸುಖಕ್ಕಾಗಿ ಮಾಡಬೇಕಾದ ಕೆಲಸಗಳು (ಹಿಂದಸಾ. ೦೪೯). ೨. ಪುಣ್ಯ : "ಧರ್ಮಃ, ಪುಣ್ಯಂ, ವೃಷಃ, ಶ್ರೇಯಃ, ಸುಕೃತಂ–ಈ ೫ ಪುಣ್ಯದ ಪೆಸರ್" (ಹಲಾಯು. ೨೦-೦೨೫) ; ಇದನಾರಾನೊರ್ ಲಿಪ್ಪೋರ[ವ]ರ್ತ್ತಿ ಧರ್ಮಮಾರಾರಿದಾ ಕೆಡಿಪ್ಪೋರವರ್ತ್ತಿ ಪಾಪ (ಕಶಾಇಇ. XX, ೯-೨೦.; ಸು. ೬ನೆಯ ಶತ) ; ಧರ್ಮಕೆ ಕೈಬಾರದೀ ಕಾಲ ಪಾಪಕರ್ಮಕೆ ಮನಸೋಲೋದೀ ಕಲಿಕಾಲ (ಪುರಂದ. ೦-೦೨೦ ಪಲ್ಲವಿ). ೩. ಚತುರ್ವಿಧ ಪುರುಷಾರ್ಥಗಳಲ್ಲಿ ಒಂದು ; ಸದ್ಗತಿಗೆ ಸಾಧನವಾದ ಅನುಷ್ಠಾನ : "ಧರ್ಮಾದಿ ಪುರುಷಾರ್ಥಮಕ್ಕು" (ಮಂಗರಾ. ೭೭-೧೨) : ಪರಮಸುಖಪದ ಶ್ರೀಧರ್ಮಕಾಮಾರ್ಥಮೋಕ್ಷಸ್ಥಿರವಿಷಯ ವಿಶೇಷಾಖ್ಯಾನವಿಖ್ಯಾತತತ್ತ್ವಂ (ಕವಿರಾ. ೩-೨೦೦) ; ಧರ್ಮಾರ್ಥಕಾಮಮೆಂಬಿವು ಧರ್ಮಾರ್ಥಿಜನಕ್ಕೆ ನೆಟಿದ ನೆರ್ಮಂತವಟೆೊಳ್ ಧರ್ಮಂ ಪ್ರಧಾನಮರ್ಥಂ ಧರ್ಮಾಂಘ್ರಿಪಫಲಮದರ್ಕೆ ರಸಮದು ಕಾಮಂ (ಆದಿಪು. ೧೦-೫೦) ; ಅರ್ಥದಿಂ ಧರ್ಮವನು ಧರ್ಮ ದಿನರ್ಥವನು ಧರ್ಮಾರ್ಥವೆರಡನು ವ್ಯರ್ಥಕಾಮದಲಳಿಯಲೇ ರಾಜ್ಯಾಭಿ ಲಾಷೆಯಲಿ (ಕುಮಾರ. ೧-೨೮) : ಧರ್ಮ ಅರ್ಥ ಕಾಮ ಮೋಕ್ಷವೆಂಬ ಚತುರ್ವಿಧಫಲಪದಂಗಳ ನಾನೊಲ್ಲೆನಯ್ಯಾ (ಅಬಂಡೇ. ೦೬೧-೨೨). ೪. ಕರ್ತವ್ಯ : ಮಕ್ಕಳಿಗೆ ಬುದ್ಧಿ ಹೇಳುವುದು ತಂದೆ ತಾಯಿಗಳ ಧರ್ಮ (ರೂಢಿ). ೫. ಯಮರಾಜ: "ಯಮನರ್ಕಸುತಂ ಧರ್ಮಂ . . . ಅಂತಕಂ ಕೀನಾಶಂ" (ಮಶುಕೋ. ೮-೪೦) : "ಯಮಂ ಧರ್ಮನಂತಕಂ . . . ಕೀನಾಶಂ ಕೃತಾಂತನಕ್ಕುಂ" (ಮಂಗರಾ. ೦೫-೧೦) ; ಧರ್ಮನಂ ಮೊದಲಿಸಲ್

ಪೋದಂ ಪುತ್ರನನಬಸಲ್ಪೋದನೆ ಯಮಪುರಕೆ ಮುತ್ತ್ರಾಣಂ ದ್ರೋಣಂ (ಗದಾಯು. ೩–೨೫); ಸುರಪತಿ ದಹನಂ ಧರ್ಮಂ ನಿರುತಿ ವರುಣನನಿಳನೈಳ ಬಿಳನೀಶ ಮಹೇಶ್ವರನೆಂದುವೆಂಬ ದಿಕ್ಪಾಳರುಮಂ ದಶದಿಶೆಯೊಳಿರಿಸಿ ಪರಿಕರಸಹಿತಂ (ಚಂದ್ರಪ್ರ. ೧೨–೧೧೩). 'ಧರ್ಮಜ' ಪರಾ. ೬. ಪಾಂಡವರಲ್ಲಿ ಹಿರಿಯ ; ಯುಧಿಷ್ಠಿರ. ೨. ೬ :. ನುತಧರ್ಮ್ಮಂ ರಿಪುಭೀಮನರ್ಜ್ಜುನ ಯಶಂ ವಿದ್ವಿಷ್ಟಭೂಭೃದ್ಯಮಂ ... ಭಾಸ್ವತ್ಕುಮಿತ್ರೋದ್ಯಮಂ ಕ್ಷಿತಿಪಾಳಂ ನರಸಿಂಹದೇವಂ (ಎಕ. V, ಬೇಲೂರು, ೧೯೩–೯೩ ; 1161). ೭. ಗುಣ ; ಸ್ವಭಾವ ; ಲಕ್ಷಣ : "ಧರ್ಮಃ, ಸ್ವಭಾವಃ, ಆತ್ಮಾ – ಈ ೩ ಸ್ವಭಾವ" (ಶಬ್ದಾಯು. ೦೨೯–೯೭) : "ಧರ್ಮಂ ಗುಣಸ್ವಭಾವವಾಟಿ" (ವಸ್ತುಕೋ. ೧೨೯–೭೧) ; ಬಗೆಯಲ್ಕೆ ಧರ್ಮದಿಂ ಕ್ಷತ್ರಧರ್ಮವರ್ಗೆ ವಿರುದ್ಧಂ (ಗದಾಯು. ೩–೩೫) ; ಪೆಜಿವರ ಧರ್ಮಂಗಳನೇತೆಬಿದಿಂದು ತೆಜಿದು ಪೆಜಿವರೊಳ್ ಪತ್ತಿಸಿ ಕಣ್ದೆಜಿಯೆ ಚತುರೋಕ್ತಿ ಕೃತಿಯೊಳ್ ನೆಜಿದಿರೆ ವೇಟ್ಪುದು ಸಮಾಧಿಯೆನೆ ಪೆಸರ್ವಡೆಗುಂ (ಕಾವ್ಯಾವ. ೩೦೯) ; ಶೈಶವದಲ್ಲಿ . . . ಉಷಾ ಬೆಳೆಯುತ್ತಿದ್ದಳು. ಬೆಳೆಯುವದೇ ಆವಳ ಧರ್ಮವಾಗಿತ್ತು (ಸಮಜೀ. ೧೨೩೩). ೮. ಬಿಲ್ಲು ; ಚಾಪ : ಸ್ಮರವೈರಿಧರ್ಮವಕ್ಷೋಜ ಸ್ಮರಹರಕಾಂಡಚತುರಾವತಾರಪುಷ್ಯೇ (ಪ್ರಾಕ್ರಶ. ೬–೩೩). ೧. ೮ : ಗುಣಮೇಚಿದ ಧರ್ಮಂ ಮಾರ್ಗಣತತಿಯಂ ಲಕ್ಷ್ಯಸಿದ್ಧಿಯೊಳ್ ಕೂಡಿ ನೃಪಾಗ್ರಣಿಯನಿಹಸೌಖ್ಯದಿಂದವೆ ತಣಿಪುದದೆ ಪರಮಸುಖೈಕಕಾರಣಮಲ್ತೇ (ಪುಷ್ಪದಂ. ೩–೧೦). 'ದಶಧರ್ಮಧಾರಿ' ಪರಾ. ೯. ನ್ಯಾಯ ; ನೀತಿ : ಧರ್ಮವೆಂಬುದು ಪರಮಪದವು ಧರ್ಮವನು ಬಿಟ್ಟಿಹುದು ಬದುಕಲ್ಲರಸ ಕೇಳೆಂದ (ಕುಮ್ಮಾಉ. ೪–೩೯) ; ಸತಿ ಸಹಜಾತ ಸುತರುಗಳ ತವಿಸುವುದು ತಾ ಧರ್ಮವಲ್ಲ (ತೊರಿರಾ. ೪–೩–೩೦) : ಧರ್ಮವೇ ಜಯವೆಂಬ ದಿವ್ಯಮಂತ್ರ ಮರ್ಮವನ್ನರಿತು ಮಾಡಲು ಬೇಕು ತಂತ್ರ (ಪುರಂದ. ೨–೭೩ ಪಲ್ಲವಿ) : ಆತನೇ ಪಾಲಿಸುವನಿವನ ಭೂತಳಮಂ ನಿಜಾತಿಶಯಧರ್ಮದಿಂದೆಳ್ಳನಿತು ದೋಷವಿಲ್ಲದೆ (ಜೈಮಿಭಾ. ೧೭–೧೩). ೧೦. ದತ್ತಿ ; ದಾನ ; ಉಚಿತವಾಗಿ ಕೊಟ್ಟುದು : ಈ ಧರ್ಮಮಂ ಕಿಡಿಸಿದಾತ ವಾರಣಾಸಿಯೊಳು ಕುರುಕ್ಷೇತ್ರದೊಳು ಸಾಸಿರ್ವ್ವರ x x ರ ಸಾಸಿರ್ವ್ವ ಕವಿಲೆಯು ಕೊಂದ ಪಂಚಮಹಾಪಾತಕ[ವಕ್ಕು] (ಸಾಇಇ. XX, ೩೨–೪೪ ; 1046) ; ಈ ಧರ್ಮ್ಮಮ ನೋನ್ಪರ್ ಕಿಡಿಸಿದವರಧೋಗತಿಗಿಳಿವರು (ಸಾಇಇ. XX, ೧೭೩–೭೨ ; 1190) ; ಧರ್ಮಕ್ಕೆ ದಟ್ಟಿ ಕೊಟ್ಟರೆ ಹಿತ್ತಲಿಗೆ ಹೋಗಿ ಮೊಳ ಹಾಕಿ ನೋಡಿದ (ಗಾದೆ) ; ಕೊಟ್ಟು ನಂತರ ಸೇರಬೇಡ, ಕೊಟ್ಟು ಧರ್ಮ ತಿರುಗಿ ಕೇಳಬೇಡ (ಗಾದೆ). ೧೧. ನಿಷ್ಠೆ ; ಶ್ರದ್ಧೆ ; ಭಕ್ತಿ : (ಕ). ೧೨. ಮತ ; ದರ್ಶನ : ಜೈನಧರ್ಮವು ವಿಶ್ವದ ಅತ್ಯಂತ ಪ್ರಾಚೀನಧರ್ಮಗಳಲ್ಲೊಂದಾಗಿದೆ (ಭಾರದ. ೧೬೪) ; ಇತರ ಪಂಥದವರು 'ಮತ', 'ದರ್ಶನ', 'ಸಿದ್ಧಾಂತ' ಎಂದು ಯಾವುದನ್ನು ಹೆಸರಿಸುವರೋ ಅದನ್ನು ಬುದ್ಧನು "ಧರ್ಮ" ಎಂದು ಕರೆದನು (ಭಾರದ. ೦೯೧). ೧೩. ದಯೆ ; ಕರುಣೆ ; ಕೃಪೆ : ಬೆಂದ ಮನವೆನ್ನ ಮತಿಗೆಡಿಸಿ ಕಾಡಿತಯ್ಯಾ ಎನ್ನ ತಂದೆ ಕೂಡಲಸಂಗಮದೇವಾ ಇವ ಮಾಣಿಸು ನಿಮ್ಮ ಧರ್ಮ (ಬಸವ. ೪೪) ; ದೇವರ ಧರ್ಮದೊಳಗೊಂದು ಬೇಂಟಿ ದೊರೆಕೊಂಡರೆ ಕೂಡಲಸಂಗಮದೇವಂಗರ್ಪಿತವ ಮಾಡುವೆ (ಬಸವ. ೯೦೭) ; ನೀನೆ ಬಂದಾಳ್ವಾಡೆ ಯುಕ್ತಿ ಕೊಂಬುದೆ ದೇವ ನೀನೇ ಬಂದಾಳಲಿಲು ಧರ್ಮವುಂಟೇ ದೇವ (ನಂಬಿರ. ೭–೦೩). ೧೪. ರೀತಿ ; ಕ್ರಮ : ಶೆಟ್ಟರು ವೃತ್ತಿಯಿಂದ ವ್ಯಾಪಾರಿ. ಅದೇ ಧರ್ಮದಿಂದ ಸಾಕಷ್ಟು ಸಂಪಾದಿಸಿದ್ದರು (ಹೊಸಕ್ಷ. ೩೩). ೧೫. ಒಂದು ಬಗೆಯ ತೆರಿಗೆ : ಒಂದು ಹೊಲದ ಮೇಲೆ ಹಾಕಬಹುದಾಗಿದ್ದ ತೆರಿಗೆ ಗಳವು–ಸಿದ್ಧಾಯ, ಅರಸರ ಸೇಸೆ, ಕಾಣಿಕೆ, ದಾಯ, ಧರ್ಮ ಇತ್ಯಾದಿಗಳು (ಕದಾಳ. ೪೦೫). ೧೬. ನ್ಯಾಯವಾದ ಬುದ್ಧಿ : ಧನವೆಲ್ಲ ಮಲ್ಲಿಕಾರ್ಜುನನ ಧರ್ಮವ್ಯಯದದೆನೆ ಧರ್ಮದೊಳಗೆಮ್ಮ ಭಾಗೆಯರ್ಥದಲಿ ಬೆಳೆವನಿತು ಧರ್ಮವನಾದೊಡಂ ಕರುಣಿಸೆಮಗೆ (ಸಿದ್ಧರಾ. ೮–೫) ; ಒಡಲಿಲ್ಲದುಸುರುಂಟೆ ನಿಮಗೆನ್ನ ಮೇಲೆ ಬಪ್ಪೊಡವೆಯಿಲ್ಲೆನೆ ಧರ್ಮವುಂಟೆ ಕೆಡುವೊಡವೆಯುಂ ಕೊಡೆ ಕಂಡು ಕೆಡದ ಧರ್ಮವ ಕೊಡುವೆನೇ ಎನಲು (ಸಿದ್ಧರಾ. ೮–೬) ; ಈತ ಕದ್ದು ತಂದೆಮ್ಮರ್ಥದೊಳಗೆಮ್ಮ ಭಾಗೆಯಂ ಕೊಡು ಕೊಡದೊಡದಟಬೆಂಬಳಿಯ ಧರ್ಮವನಾದೊಡಂ ಕೊಡೆಂದೆನೆ ಕೊಡಂ (ಸಿದ್ಧರಾ. ೮–೮). ೧೭. ಬಿಟ್ಟಿ ; ಪುಕ್ಕಟೆ : ನೀನೇನು ಧರ್ಮಕ್ಕೆ ಕೆಲಸ ಮಾಡುತ್ತಿಲ್ಲ. ಸಂಬಳ ತೆಗೆದುಕೊಂಡ ಮೇಲೆ ಸರಿಯಾಗಿ ಕೆಲಸ ಮಾಡು (ರೂಢಿ). ೧೮. ಯಜ್ಞ ; ಯಾಗ. ೧೯. ಯಜ್ಞದಲ್ಲಿ ಸೋಮಪಾನ ಮಾಡುವವನು. ೨೦. ಶಿವ. ೨೧. ಅರಸ ; ದೊರೆ. ೨೨. ಉತ್ಪಾತ. ೨೩. ವಿಷ ; ಗರಳ : "ಗಿಂಶನೊಳು ಕಾಲನೊಳು ಪುಣ್ಯದೊಳು ಬಿಲ್ಲಿನೊಳು ಗರಳದೊಳ್ ಕ್ರತುವಿನೊಳು ಧರ್ಮಮಕ್ಕು" (ಮಂಗರಾ. ೧೧೪–೪೪) ; "ಅರಸುತ್ಪಾತಂ ಬಿಲು ವಿಷ ಹರ ಪುಣ್ಯಂ ಯಜ್ಞಮಹಿಂಸೆ ಯಮ ಚಾರಿತ್ರಂ ನಿರುತದಿ ದಶ ಧರ್ಮಾಖ್ಯಂ" (ನಾನಾಕೋ. ೦೦೯). ೨೪. [ಕಾವ್ಯಮಿ] ಉಪಮಾಲಂಕಾರದಲ್ಲಿ ಎರಡು ವಸ್ತುಗಳ ನಡುವೆ ಇರುವ ಸಾಧಾರಣ ಧರ್ಮ,– ಸಾಮಾನ್ಯ ಧರ್ಮ : ಉಪಮೇಯಮುಮುಪಮಾನಮು ಮುಪಮಾವಾಚಕಮುಮಂತೆ ಧರ್ಮಮುಮಿವರಲ್ಲವರ್ತಿಸೊಂದೆರಡು ಮೂರ್ಪವಲಾಕ್ಷಿಯಿದಂಟು ಬಗೆಯ ಲುಪ್ತೋಪಮೆಗಳ್ (ನರಚ. ೧೦–೩). ೨೫. [ಜ್ಯೋತಿ] ಜನ್ಮಲಗ್ನದಿಂದ ಒಂಬತ್ತನೆಯ ಸ್ಥಾನ : ಸಿತನಿಂ ಧರ್ಮಧನಾರಿ ಪಂಚಮ ದಶಾಯಸ್ಥಾನದೊಳ್ ಮಂದನಿಂ ತ್ರಿತಯಾರಾತಿ ಸಂಕಾಂತ್ಯದೊಳ್ . . . ಇಂದ್ರಮಂತ್ರಿ ಶುಭದಂ ಶೇಷಂಗಳೊಳ್ ನಿಂದಿತಂ (ಜಾತತಿ. ೧೦–೧೧) ; ದಸುಬೇಜ್ಯಂ ಧರ್ಮ ಕರ್ಮ ತ್ರಿ ತನು ಧನ ಚತುಷ್ಟಂಪ ರಂಧ್ರಾಯದೊಳ್ . . . ಲೇಸೆನಿಕ್ಕುಂ (ಜಾತತಿ. ೧೦–೧೨). 'ಧರ್ಮನಿವಾಸ' ಪರಾ. ೨೬. = ಧರ್ಮಧ್ಯಾನ : ಆರ್ತ ರೌದ್ರ ಧರ್ಮ ಶುಕ್ಲಾಭಿಧಾನಧ್ಯಾನಚತುಷ್ಟಯಮುಮಂ (ಸುಕುಮಾ. ೩–೩೯ ವ) ; ಪರಿಹರಿಸಿ ಚಿತ್ತದಿಂದಾರ್ತರೌದ್ರಮುಂ ಧರ್ಮ ಶುಕ್ಲಮೆಂಬೀಯೆರಡುಂ ಸ್ಥಿರಮಾಗೆ ದಿವ್ಯಮುನಿಪಂ ನಿರಂತರಧ್ಯಾನಯೋಗತತ್ಪರನಾದಂ (ಮಲ್ಲಿಪು. ೧೧–೪೪). 'ಧ್ಯಾನಚತುಷ್ಟಯ' ಪರಾ. ೨೭. ಇಪ್ಪತ್ತನಾಲ್ಕು ತೀರ್ಥಂಕರರಲ್ಲಿ ಹದಿನೈದನೆಯವನು ; ಧರ್ಮನಾಥ : ವಿಮಳ ಅನಂತ ಧರ್ಮ . . . ವರ್ಧಮಾನರೆಂಬಿಪ್ಪತ್ತುನಾಲ್ವರ್ ತೀರ್ಥಕರರ್ (ಶಾಪುಂಪು. ೪೦೨). ೨೮. = ಧರ್ಮದ್ರವ್ಯ : ಚೇತನಾರಹಿತಮಜೀವ ತತ್ತ್ವಂ ಅದು ಗತಿಸ್ಥಿತ್ಯವಗಾಹಶರೀರಾದಿ ವರ್ತನಾಹೇತು ಧರ್ಮಾಧರ್ಮಾಕಾಶ ಪುದ್ಗಲ ಕಾಲಭೇದದಿಂ ಪಂಚವಿಧಂ (ಆದಿಪು. ೧೦–೬೩ ವ) ; ಲೋಕಾಕಾಶದಲ್ಲಿ ಧರ್ಮ ಎಂಬುವ ಒಂದು ದ್ರವ್ಯವಿದೆ. ಈ ದ್ರವ್ಯವು ಜಗತ್ತಿನಲ್ಲಿ ಹವೆಯು ಇರುವಂತೆಯೇ ಇರುತ್ತದೆ . . . ಇದು ಆತ್ಮನ ಗಮನಕ್ಕೆ ಸಹಾಯಮಾಡುತ್ತದೆ (ಜೈನಧ. ೩೪೦). ೨೯. ದ್ವಾದಶಾನುಪ್ರೇಕ್ಷೆಗಳಲ್ಲಿ ಒಂದು ; ಧರ್ಮವನ್ನು ಕುರಿತ ಚಿಂತನೆ : ಅಧ್ರುವಮಶರಣಮೇಕತ್ವಮನ್ಯತ್ವಮಶುಚಿತ್ವಂ ಸಂಸಾರಂ ಲೋಕಮಾಸ್ರವಂ ಸಂವರೆ ನಿರ್ಜರೆ ಬೋಧಿದುರ್ಲಭ ಧರ್ಮಸ್ವಾಖ್ಯಾತಮೆಂಬುವ ಪನ್ನೆರಡು ಮನುಪ್ರೇಕ್ಷೆಯಂ ಕ್ರಮದಿನನುಸ್ಮರಿಸುತ್ತುಮಿರ್ಪನ್ನೆಗಂ (ಆದಿಪು. ೬–೭೦ ವ). 'ದ್ವಾದಶಾನುಪ್ರೇಕ್ಷೆ' ಪರಾ. ೩೦. [ದ್ವೈತ] ನಲವತ್ತು ವಿಧವಾದ ಗುಣಗಳಲ್ಲಿ ಒಂದು : ರೂಪ, ರಸ, ಗಂಧ, ಸ್ಪರ್ಶ . . . ಧರ್ಮ, ಅಧರ್ಮ, ಸಂಸ್ಕಾರ . . . ಸೌಭಾಗ್ಯವೆಂದು ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಹಿಂದಸಾ. ೨೭೫). ೩೧. [ಯೋಗ] ಮೂರು ಬಗೆಯ ಚಿತ್ತ ಪರಿಣಾಮಗಳಲ್ಲಿ ಒಂದು : ನಿರೋಧ, ಸಮಾಧಿ, ಏಕಾಗ್ರತಾ ಎಂಬ ಮೂರು ವಿಧವಾದ ಚಿತ್ತಸ್ಥಿತಿಗಳು ಧರ್ಮ ಲಕ್ಷಣ ಅವಸ್ಥಾ ಎಂಬ ಸೂಕ್ಷ್ಮ

ಸ್ಥೂಲರೂಪವಾದ ಚಿತ್ತಪರಿಣಾಮಗಳೆನ್ನಲ್ಪಡುವುವು (ಹಿಂದಶಾ. ೧೦೩). P ಧರ್ಮವನ್ನು ಬೇರೆ ಬೇರೆ ವಿಧಗಳಾಗಿ ವಿಂಗಡಿಸುತ್ತಾರೆ. "ಧರ್ಮ-೨: (ಅ) ಪ್ರವೃತ್ತಿಧರ್ಮ, ನಿವೃತ್ತಿಧರ್ಮ (ಮಹಾಭಾ. ಶಾಂತಿ.. ೨೪೦-೬, ಅನುಶಾಸನ. ೨೧೧). (ಆ) ವಿದಿತ (ವ್ಯಕ್ತ), ಅವಿದಿತ (ಅವ್ಯಕ್ತ) (ಕೇನ. ೨-೪ ಭಾ). (ಇ) ಪಶುಧರ್ಮ, ಪತಿಧರ್ಮ (ಕ್ರಿಯಾಸಾರ. ಉಪದೇಶ. ೩). ಧರ್ಮ-೩: (ಅ) ದ್ವಿಜಾತಿಯ: ಅಧ್ಯಯನ, ಇಜ್ಯಾ, ದಾನ (ಗೌಧಸೂ. ೧೦-೧; ೮-೯ಭಾ; ಭಾಗ. ೧೧-೩೯; ಕಾಠಕ. ೨೮). (ಆ) ಬ್ರಾಹ್ಮಣರಿಗೆ ವಿಶೇಷವಾಗಿರುವ: ಪ್ರವಚನ (ಅಧ್ಯಾಪನ), ಯಾಜನ, (ಶುದ್ಧನಾದವನಿಂದ) ಪ್ರತಿಗ್ರಹ (ಗೌಧಸೂ. ೧೦-೨; ೭-೧ ಭಾ.; ಧರ್ಮಸಿಂ. ಪೂ. ೩-೨೪೦). ಅಥವಾ - ಯಾಜನ ಅಧ್ಯಾಪನ, ಶುದ್ಧ ಪ್ರತಿಗ್ರಹ (ಮನು. ೧೦-೭೬-೪೧೧) (ಇ) ನಿತ್ಯಕರ್ಮ, ನೈಮಿತ್ತಿಕ ಕರ್ಮ, ಕಾಮ್ಯಕರ್ಮ (ವ್ಯಾಸಸ್ಮೃತಿ, ೩-೧; ಛಾಂದೋಗ್ಯ. ೧೦೬೫). (ಈ) ಕಾಯಿಕ, ವಾಚಿಕ, ಮಾನಸಿಕ (ಚರಕ. ೧೧-೫೪). (ಉ) ಸತ್ಯ, ತಪಸ್ಸು, ಅಧ್ಯಯನಾಧ್ಯಾಪನ (ತೈತ್ತಿರೀ. ೩೨೩). (ಊ) ಯಜ್ಞ, ದಾನ, ತಪಸ್ಸು (ಗೀತಾಭಾ. ೧೮-೩). (ಋ) ದೈವ, ಪಿತ್ರ್ಯ, ಮಾನುಷ (ಬೃಹದಾ. I, ೫೬). (ೠ) ಹೀನ, ಮಧ್ಯಮ, ಉತ್ತಮ (ಚರಕ. ೨೨೭). (ಎ) ಫಲಭೋಗದ ದೃಷ್ಟಿಯಿಂದ: ಸಂಚಿತ, ಆರಬ್ಧ, ಆಗಾಮಿ (ತೈತ್ತಿರೀ. ೪). (ಏ) ಸಾತ್ತ್ವಿಕ, ರಾಜಸ, ತಾಮಸ (ಗೀತಾಭಾ. II ೧೮-೨೩-೨೫). (ಐ) ಶಸ್ತ್ರಚಿಕಿತ್ಸೆಯ: ಪೂರ್ವಕರ್ಮ, ಪ್ರಧಾನ ಕರ್ಮ, ಪಶ್ಚಾತ್ ಕರ್ಮ (ಸುಶ್ರುತ). (ಒ) ಪೂಜಾರಾಧ್ಯ, ಪುಣ್ಯಯಜ್ಞ, ದೃಢಚರ್ಯಾ (ಆದಿಪು. ೧೫-೧೬ ವ). (ಓ) ಶಸ್ತ್ರಕರ್ಮ, ಕ್ಷಾರಕರ್ಮ, ಅಗ್ನಿಕರ್ಮ (ಚರಕ. II ೧೪-೩೫). (ಔ) ಕರ್ಮ, ಅಕರ್ಮ, ವಿಕರ್ಮ (ಗೀತಾಭಾ. ೨೫೨). (ಅಂ) ಮೃದಂಗವಾದನದ: ತ್ವಂಕ್ಯ, ಆಲಿಂಗ್ಯ, ಊರ್ಧ್ವಕ (ವಿಚಿಂ. ೪-೩೯೪). (ಅಃ) ಪರಸ್ವಾನಭಿಧ್ಯತೆ, ಸರ್ವಸತ್ತ್ವಸೌಹಾರ್ದ, ಕರ್ಮಫಲಶ್ರದ್ಧೆ (ಮಹಾಭಾ. ಅನುಶಾಸನ. ೧೩-೫). (ಕ) ಪರಸ್ವಗ್ರಹಣ, ಅಶಾಸ್ತ್ರೀಯಹಿಂಸೆ, ಪರದಾರಗ್ರಹಣ (ಮನು. ೧೨-೭). ಧರ್ಮ-೫: (ಅ) ವರ್ಣಧರ್ಮ, ಆಶ್ರಮ-, ಗುಣ-, ವರ್ಣಾಶ್ರಮ-, ನಿಮಿತ್ತ-(ಗೌಧಸೂ. ೧-೧-ಭಾ). (ಆ) ಅಹಿಂಸಾ, ಸತ್ಯ, ಅಕ್ರೋಧ, ಶೌಚ, ಇಂದ್ರಿಯಸಂಯಮ (ಮನು - ಗೌಧಸೂ. ೧೦-೧ ಭಾ). (ಇ) ಸತ್ಯ, ಅಕ್ರೋಧ, ದಾನ, ಅಹಿಂಸಾ, ಪ್ರಜನನ (ವಸಿಷ್ಠ - ಗೌಧಸೂ. ೧೦.೫೧ ಭಾ). (ಈ) ಶಬ್ದಪ್ರವೃತ್ತಿಗೆ ನಿಮಿತ್ತವಾದವು: ಜಾತಿ, ದ್ರವ್ಯ, ಗುಣ, ಕ್ರಿಯೆ, ಸಂಬಂಧ. (ಉ) ಯೋಗಾಭ್ಯಾಸದ: ಪ್ರಾಣಾಯಾಮ, ಧ್ಯಾನ, ಪ್ರತ್ಯಾಹಾರ, ಧಾರಣಾ, ಸ್ಮರಣ (ವಾಯುಪು. I-೧೦-೭೧). ಧರ್ಮ-೮: (ಅ) ಕ್ಷಮೆ, ಸತ್ಯ, ದಯೆ, ದಾನ, ಶೌಚ, ಇಂದ್ರಿಯನಿಗ್ರಹ, ದೇವಪೂಜೆ, ಹವನ, ಸಂತೋಷ, ಸ್ತೇಯವರ್ಜನ (ಧರ್ಮಸಿಂ. ೧-೮). (ಆ) ಧರ್ಮದ (i) ಇಜ್ಯಾ, ಅಧ್ಯಯನ, ದಾನ, ತಪಸ್ಸು, ಸತ್ಯ, ಕ್ಷಮಾ, ದಮ, ಅಲೋಭ (ಮಹಾಭಾ. ವನ. ೨-೭೫). (ii) ತಪ, ಸತ್ಯ, ಕ್ಷಮಾ, ದಯ, ಶೌಚ, ದಾನ, ಯೋಗ, ಬ್ರಹ್ಮಚರ್ಯ (ವಾಮನ. ಅ. ೨೨-ಸಂ. ೧೫೧). ಧರ್ಮ-೯: ಸಾರ್ವವರ್ಣಿಕ ಧರ್ಮಗಳು: ಅಕ್ರೋಧ, ಸತ್ಯವಚನ, ಸಂವಿಭಾಗ, ಕ್ಷಮಾ, ಸ್ವಪತ್ನಿಯಲ್ಲಿ ಪ್ರಜನನ, ಶೌಚ, ಅದ್ರೋಹ, ಆರ್ಜವ, ಭೃತ್ಯಭರಣ (ಮಹಾಭಾ. ಶಾಂತಿ. ೬೦-೭, ೮). ಧರ್ಮ-೧೦: (ಅ) ಆತ್ಮನ: ಉತ್ತಮ ಕ್ಷಮೆ, ಮಾರ್ದವ, ಆರ್ಜವ, ಶೌಚ, ಸತ್ಯ, ಸಂಯಮ, ತಪಸ್ಸು, ತ್ಯಾಗ, ಆಕಿಂಚನ್ಯ, ಬ್ರಹ್ಮಚರ್ಯ (ತತ್ತ್ವಪ್ರ. ೯-೩೨೫, ೩೨೬; ಪೂರ್ವಪು. ೧೧-೧೦೩, ೧೦೪). (ಆ) ಭೈಕ್ಷ, ಅಸ್ತೇಯ, ಶೌಚ, ಅಪ್ರಮಾದ, ಅವ್ಯವಾಯ, ಭೂತದಯೆ, ಕ್ಷಮಾ, ಅಕ್ರೋಧ, ಗುರುಶುಶ್ರೂಷಾ, ಸತ್ಯ (ವಾಯುಪು. I-೮-೧೭೬, ೧೭೭)" (ಶ್ರೀವತ್ಸ. ೨೧೮).

**ಧರ್ಮ ಕೊಡು**=ದಾನಮಾಡು: ಕಷ್ಟದಲ್ಲಿರುವವರಿಗೆ ಧರ್ಮ ಕೊಡಲು ಹಿಂಜರಿಯಬಾರದು (ರೂಢಿ). **ಧರ್ಮದ ಬಡ್ಡಿ** = ನ್ಯಾಯವಾದ ಬಡ್ಡಿ: ಧರ್ಮದ ಬಡ್ಡಿಯ ಮೇಲೆ ಹಣ ಕೊಡುವ ವಿಷಯದಲ್ಲಂತೂ ಯಾವ ಸಂದೇಹವೂ ಇರಲಾರದು (ಹೋಧಪು. ೩೧). **ಧರ್ಮದ ಮದುವೆ** = ತೆರ ಇಲ್ಲದೆ ಹೆಣ್ಣನ್ನು ತಂದುಕೊಳ್ಳುವುದು. **ಧರ್ಮದ ಮೇರು**= ಧರ್ಮದ ಆಚರಣೆಯಲ್ಲಿ ಮೇರುವಿನ ಉನ್ನತಿಯನ್ನು ಪಡೆದವನು; ಒಂದು ಬಿರುದು: [ಗು]ಣಸಂಪನ್ನಂ ಸ್ಥಿರನುಡಿಮಾತಂ ಧರ್ಮ್ಮದ ಮೇರು ಸೋಮೇಸ್ವರ[ದಾ]ಸಿ ಪಾ × × × ಪಯ್ಯಂ (ಸೌಇಇ. XX, ೨೪-೩೪; 1084): ವಿಪ್ರಕುಳಪ್ರದೀಪರೀಶ್ವರಚರಣಾಬ್ಜಭೃಂಗರಧಿಕಸ್ಸ್ವರ್ಲೆ ಧರ್ಮ್ಮದ ಮೇರುಗಳ್ (ಸೌಇಇ. XX, ೫೭-೦೩; 1084). **ಧರ್ಮ ನೀಡು** = ಧರ್ಮ ಕೊಡು: ಪ್ರವಾಹಪರಿಹಾರನಿಧಿಗೆ ಆ ಸಂಸ್ಥೆಯು ಉದಾರವಾಗಿ ಧರ್ಮ ನೀಡಿತು (ರೂಢಿ). **ಧರ್ಮ ಬೇಡು**= ದಾನ ಬೇಡು: ಕೆಲವರು ಸೋಮಾರಿಗಳಾಗಿ ಧರ್ಮ ಬೇಡುವುದನ್ನೇ ಅಭ್ಯಾಸ ಮಾಡಿಕೊಂಡು ಬಿಡುತ್ತಾರೆ (ರೂಢಿ). **ಧರ್ಮ ಮಾಡು** = ೧. ಸತ್ಕರ್ಮವನ್ನು ಮಾಡು; ಪುಣ್ಯಕಾರ್ಯ ಮಾಡು: ಧರ್ಮ ಮಾಡುತ್ತೇನೆಂದು ಸುಳ್ಳು ಹೇಳಿ ಧನಾರ್ಜನೆ ಮಾಡುತ್ತಾನೆ (ಜಾತಕ. ೧೭-೧೦ ಟೀಕೆ). ೨. ದಾನ ಮಾಡು: ಇಂಥಾ ಜನ್ಮಾ ನೋಡೋ ಧರ್ಮಾ ಮಾಡೊ (ದಾಸಗಿ. ೬೭-೨); ಧರ್ಮ ಮಾಡಿದರೂ ಮರ್ಮ ತಿಳಿಯಬೇಕು (ಗಾದೆ). **ಧರ್ಮ ಹಾಕು** = ಧರ್ಮ ಕೊಡು: ಆಗರ್ಭಶ್ರೀಮಂತರಾದವರು ಹಿಂದಿನ ಕಾಲದಲ್ಲಿ ಪ್ರತಿನಿತ್ಯ ಧರ್ಮ ಹಾಕುವುದಕ್ಕಾಗಿಯೇ ಸ್ವಲ್ಪ ದ್ರವ್ಯವನ್ನು ಮೀಸಲಾಗಿಡುತ್ತಿದ್ದರು (ರೂಢಿ).

[ ಸಂ. ]

**ಧರ್ಮವಿತ್ತ** (ನಾ). = ಧರ್ಮ್ಮೇತ (?): ಶ್ರೀ[ಮ][ದಾ]ಹವಮಲ್ಲದೇವರಲ್ಲಿ ಮೂನೂಱು ಗದ್ಯಾಣಂ ಧರ್ಮವಿತ್ತಬಿಗ್ಗೆಯ್ಯೆ ಪ[ಶ್ಚಾ]ರ ಸಂವಜಮಾಗಿ ಪ್ಯಡೆದಂ ಊರಂ ವಿದ್ಯಜ್ಜನಕ್ಕಾದರದೊಳ್ ಭರಣಂಗೆಯ್ದು (ಸೌಇಇ. XI-i, ೪೫-೪೭; 980). [P ಇದು 'ಧರ್ಮವಿತ' ಎಂಬುದರ ಅಪಲಿಖಿತ]

**ಧರ್ಮವಿತ** 'ಧರ್ಮೇತ' ನೋ.

**ಧರ್ಮಂಗೆಯ್** (ಕ್ರಿ). ೧. ಪುಣ್ಯಕಾರ್ಯವನ್ನು ಮಾಡು: ಧರ್ಮಂಗೆಯ್ಯಲ್ ಬಯಸುಗುಮೊರ್ಮೆ ಜಿನಾಗಮಮನೋಜೆಯಿಂ ಕೇಳ್ದ ನರಂ (ಸಮುಪ. ೩-೫೦): ಧರ್ಮಂಗೆಯ್ವನ ಫಲಮನಿಲ್ಲಿಯ ಮನ್ನಣೆಯುಮಂ ಮಹಿಮೆಯನಱಿಪುತಿರ್ಪುದನೊಳ್ಪಿತ್ತು ಬಗೆದು ಭಾವಿಸಿ ನೋಟ್ಪುದು (ಲಂಹರಿ. ೧೦-೧೨ ವ). ೨. ದಾನಮಾಡು: ಬಸವಯ್ಯಂ ರುದ್ರಹೋಮಂಗ್ಗೆಯ್ದು ಸಹಸ್ರಭೋಜನಮಾಡಿ ಬಲಿಯಂ ಕಳೆದು ಧರ್ಮ್ಮಂಗೆಯ್ದು (ಎಕ. IV, ಹೆಗ್ಗಡ. ೧೬-೭; 1021). [ ಧರ್ಮ + ಕೆಯ್$_1$ ]

**ಧರ್ಮಂಬೆಱು** (ಕ್ರಿ). ಧರ್ಮದೀಕ್ಷೆಯನ್ನು ಪಡೆ: ಆ ಮುನಿನಾಥಂ ಜಿನಮಾರ್ಗಮನೀಯೆ . . . ಶುಕ್ರನುಮಾ ವಿನುತ ಬೃಹಸ್ಪತಿಯುಮಂತೆ ಧರ್ಮಂಬೆತ್ತರ್ (ನೇಮಿಪು. ೫-೨೬). [ ಧರ್ಮ + ಪೆಱು$_1$ ]

**ಧರ್ಮಂಬೇಟ್** (ಕ್ರಿ). ನ್ಯಾಯವಾದುದನ್ನು ಹೇಳು; ಧರ್ಮಸಮ್ಮತವಾದುದನ್ನು ತಿಳಿಸು: ಕರ್ಮಮುಳ್ಳಂ ಮನುಷ್ಯಭವಂಬಡೆದು ಧರ್ಮಮಂ ಮಱೆದು ನೆಗಟ್ದೊಡಂ . . . ಧರ್ಮಂಬೇಟಲ್ ಬಲ್ಲವರುಮೋಗೆಯ್ವರ್ (ಜೀವಸಂ. ೬೩-೨೪ವ). [ ಧರ್ಮ + ಪೇಟ್ ]

**ಧರ್ಮಕಂಟಕ**(ನಾ). ೧. ಧರ್ಮಕ್ಕೆ ಉಂಟಾಗುವ ತೊಂದರೆ,-ವಿಪತ್ತು. ೨. ಧರ್ಮಕ್ಕೆ ಹಾನಿಯನ್ನುಂಟುಮಾಡುವವನು : ಧರಣಿಯಲಿ ಮುರವೈರಿಯಿರ್ದಡೆ ನಿರುತ ತಮಗೀ ವಿಧಿಯೆ ದುಷ್ಪರ ಶಿರವನುಚಿ ಚೆಂಡಾಡದಿಹನೇ ಧರ್ಮಕಂಟಕರ (ನಿಭಾಗ. ೧-೧೩-೧೧). [ ಧರ್ಮ + ಕಂಟಕ ]

**ಧರ್ಮಕಥನ** (ನಾ). ಧರ್ಮವನ್ನು ಕುರಿತು ಹೇಳುವುದು,-ವ್ಯಾಖ್ಯಾನ ಮಾಡುವುದು; ಧರ್ಮಬೋಧೆ : ಮುನಿಪತಿ ವಾಚನೆಯಿಂ ಪೃಚ್ಛನೆ ಯಿನನುಪ್ರೇಕ್ಷೆಯಿಂ . . . ಧರ್ಮಕಥನದಿಂದಂ ವಿನುತಸ್ವಾಧ್ಯಾಯವೆಂಬ ತಪಮಂ ತಳೆದಂ (ಸುಕುಮಾ. ೪-೧೮). [ ಧರ್ಮ + ಕಥನ ]

**ಧರ್ಮಕಥೆ** (ನಾ). ಧಾರ್ಮಿಕ ವ್ಯವಹಾರವನ್ನು ತಿಳಿಸುವ ಕಥೆ : ಇತ್ತ ಮೇಘರಥಂ . . . ಧರ್ಮಕಥೆಯಿಂ ಪಲರ್ಗೆ ಪೇಟುತ್ತಿರ್ಪನ್ನೆಗಂ (ಶಾಪುಂಪು. ೩೦೮) ; ವೇಸುವದಣ್ಣನಾಯಕಂ . . . ಧರ್ಮ್ಮಕಥಾಪ್ರಸಂಗದಿಂ ಧರ್ಮ್ಮಕಾರ್ಯ್ಯತತ್ಪರನಾಗಿ (ಸೌಇಇ. XX, ೧೩೭-೩೬ : 1161). [ ಧರ್ಮ + ಕಥೆ ]

**ಧರ್ಮಕರ** (ನಾ). ೧. ಧರ್ಮವನ್ನು ಮಾಡುವವನು. ೨. ಬಿಲ್ಲನ್ನು ಹಿಡಿದಿರುವವನು. ೧, ೨ : ಕನಕನಗೇಂದ್ರಧರ್ಮಕರನಾಗಿಯುಮುನ್ನತ ಧರ್ಮಹಂತೃ . . . ಎಂದೆನಿಸಿರ್ದನಹೀಂದ್ರಭೂಷಣಂ (ರಾಜಶೇ. ೧೪-೧೪೪). [ ಸಂ. ]

**ಧರ್ಮಕರಕ** (ನಾ). ಭಿಕ್ಷುಗಳು ಉಪಯೋಗಿಸುವ ನೀರಿನ ಪಾತ್ರೆ : ಸ್ಥವಿರನು [ಒಂದು] ಧರ್ಮಕರಕದಲ್ಲಿ ನೀರು ಹಿಡಿದುಕೊಂಡು (ಬುದ್ಧಪ. ಮಿಲಿಂದ. ೯೩). [ ಧರ್ಮ + ಕರಕ ]

**ಧರ್ಮಕರ್ತ** (ನಾ). ದೇವಸ್ಥಾನದ ಖರ್ಚಿನ ಮೇಲ್ವಿಚಾರಕ; ಧರ್ಮದರ್ಶಿ ; ಧರ್ಮಾಧಿಕಾರಿ : (ಶ). [ ಧರ್ಮ + ಕರ್ತ ]

**ಧರ್ಮಕರ್ಮ** (ನಾ). ೧. ಧಾರ್ಮಿಕ ಕಾರ್ಯ ; ಯಜ್ಞ, ಯಾಗ, ಪೂಜೆ ಮೊದಲಾದ ಕರ್ಮ : ಜನ್ಮಕುಲಧನಜಾತಿವರ್ಣಪ್ರಭೇದವಂ ಗಣಿಸದೆಯು ಮನದ ಹೃದಯದ ಧರ್ಮಕರ್ಮವನೆ ಹಿಡಿದು ಮನ್ನಣೆಮಾಡಿ (ಶ್ರೀರಾಮಾ. ೭-೧೬೧) ; ವೇದಗಳೂ ವೇದೋದಿತ ಧರ್ಮಕರ್ಮಗಳೂ ಅಳಿಸಿ ಹೋಗುವ ಕಲಿಯುಗದಲ್ಲಿ ಸ್ಮೃತಿಗಳನ್ನು ಕೇಳುವವರಾರು ? (ಭಾರದ. ೬೮). ೨. ಪುಣ್ಯಕರ್ಮ ; ಪುಣ್ಯಸಂಪಾದನೆಯ ಕಾರ್ಯ.

ಧರ್ಮಕರ್ಮ ಸಂಯೋಗ = ೧. ಪುಣ್ಯಕರ್ಮ ಫಲಿಸುವಿಕೆ ; ಅದೃಷ್ಟ ಕೂಡಿಬರುವಿಕೆ : ಧರ್ಮಕರ್ಮ ಸಂಯೋಗದಿಂದ ಅದೇ ವೇಳೆಗೆ ಅವರೂ ಅಲ್ಲಿಗೆ ಬಂದುದರಿಂದ ನನಗೆ ಅವರ ದರ್ಶನ ಆಯಿತು (ರೂಢಿ). ೨. ಆಕಸ್ಮಿಕ. [ ಧರ್ಮ + ಕರ್ಮ ]

**ಧರ್ಮಕಹಳೆ** 'ಧರ್ಮಗಹಳೆ' ನೋ.

**ಧರ್ಮಕಾಯ** (ನಾ). ಧರ್ಮರೂಪವಾದ ದೇಹವುಳ್ಳವನು ; ಧರ್ಮವೇ ಶರೀರವಾಗಿರುವವನು : ಬುದ್ಧನ ಪಾರ್ಥಿವವಾದ ಕಾಯ ಕಣ್ಮರೆ ಯಾದರೂ ಆತ 'ಧರ್ಮಕಾಯ'ನಾಗಿ ಶಾಶ್ವತನಾಗಿದ್ದಾನೆ (ಭಾರದ. ೧೯೩). [ ಧರ್ಮ + ಕಾಯ ]

**ಧರ್ಮಕಾರ್ಯ** (ನಾ). ೧. ಧರ್ಮ ಅಥವಾ ಮತಸಂಬಂಧವಾದ ಆಚರಣೆ ; ಸದಾಚಾರ. ೨. ಸತ್ಕರ್ಮ ; ಪರೋಪಕಾರದ ಕೆಲಸ ; ಪುಣ್ಯಕಾರ್ಯ : ಆದಿಭಟ್ಟಾರಕವೃತ್ತಿಕರಸ್ಥಿತಿಯನಾನಂದನೆಂಬಂ ಧರ್ಮ ಕಾರ್ಯನಿಮಿತ್ತಂ ಬಂದಟಿಪಿದೊಡೆ (ಆದಿಪು. ೧೭-೪೯ ವ); ಮೃತ್ಯುಪಾಶದಲ್ಲಿ ಸಿಕ್ಕಿರುವ ಚತುರಂಗಸೇನೆಯನ್ನು ಮೃತ್ಯುವಿನಿಂದ ಬಿಡುಗಡೆ ಮಾಡಿದರೆ ಅದು ಒಂದು ದೊಡ್ಡ ಧರ್ಮಕಾರ್ಯವಾಗುತ್ತದೆ (ವಚಭಾ. ೨೫೦). [ ಧರ್ಮ + ಕಾರ್ಯ ]

**ಧರ್ಮಕುಮಾರ** (ನಾ). ಯಮಧರ್ಮನ ಮಗ ; ಧರ್ಮರಾಯ ; ಯುಧಿಷ್ಠಿರ : ಪಾಂಡವರಾಯ ಧರ್ಮಕುಮಾರ ಗೆಲಿದನು ಕೌರವೇಶ್ವರನ (ಕುಮ್ಯಾ.ಕ. ೪ ಸೂಚನೆ). [ ಧರ್ಮ + ಕುಮಾರ ]

**ಧರ್ಮಕೃತ್ಯ** (ನಾ). = ಧರ್ಮಕಾರ್ಯ ೨ : ಭಾಷೆಯನ್ನು ಯಾರೂ ಯಾರ ಉಪಕಾರಕ್ಕೆ ಕಲಿಯುವುದಿಲ್ಲ ; ಅದು ಧರ್ಮಕೃತ್ಯವೂ ಅಲ್ಲ ; ಉಸಿರಾಟದಂತೆ ಅದು ಸ್ವಾಭಾವಿಕವೂ ಅಲ್ಲ (ವಿಚಾರ್ಮ. ೧೮). [ ಧರ್ಮ + ಕೃತ್ಯ₂ ]

**ಧರ್ಮಕ್ಷೇತ್ರ** (ನಾ). ೧. ಧರ್ಮವು ಬೆಳೆಯಲು ಯೋಗ್ಯವಾದ ಕ್ಷೇತ್ರ ; ಪುಣ್ಯಕ್ಷೇತ್ರ; ಪವಿತ್ರಕ್ಷೇತ್ರ; ತೀರ್ಥಕ್ಷೇತ್ರ: ಅಂತು ಧರ್ಮಕ್ಷೇತ್ರಂಗಳಂ ವಿಹಾರಿಸಿ ವಿನೇಯಜನಾಶಯಕುಶೇಶಯಂಗಳನಲರ್ಚುತಂ ಬಂದು (ಆದಿಪು. ೧೧-೬೮ ವ) ; ಅಮರಾನೀಕಮನೇಕಂ ಕ್ರಮಯುಗವಿನ್ಯಸ್ತಮಸ್ತಕಂ ಬಳಸಿರೆ ವಿಶ್ರಮಿಸುವವೋಲ್ ಧರ್ಮಕ್ಷೇತ್ರಮದಾವುದೆನೆ ಸಮವಸರಣ ದೆಡೆಯನೆ ನಡೆದಂ (ಶಾಂತಿಪು. ೧೨-೩೧) ; ಧರ್ಮಕ್ಷೇತ್ರವೇ ಕರ್ಮಕ್ಷೇತ್ರ (ಭಾರದ. ೧೧೦). ೨. ಭಾರತ. ೩. ಧಾರ್ಮಿಕನಾದ ವ್ಯಕ್ತಿ. [ ಧರ್ಮ + ಕ್ಷೇತ್ರ ]

**ಧರ್ಮಗತಿ** (ನಾ). ೧. ಧರ್ಮದ ಮಾರ್ಗ; ಧರ್ಮದ ಹಾದಿ: ಧರ್ಮಗತಿಯ ತಾರತಮ್ಯವ ತಿಳಿಯೊಡೆ ಪೆರ್ಮೆಯ ಬಿಟ್ಟು ಬೇಸಱದೆ ನಿರ್ಮಲಮತಿಯಾಗಿ ನೀ ನಡೆ ಮಿಥಿಲೆಗೆ ಧರ್ಮವ್ಯಾಧನ ಬಳಿಗೆ (ಹದಿಬ. ೩-೪೯). ೨. ನ್ಯಾಯವಾದ ಕ್ರಮ,-ರೀತಿ ; ಸರಿಯಾದ ನಡವಳಿಕೆ : ದುಷ್ಟಬುದ್ಧಿಯ ತಂದೆ ಪ್ರೇಮಮತಿ ಮತಿಗೆಟ್ಟು ಧರ್ಮಗತಿಯಂ ಬಿಟ್ಟು (ಶಂಕರಂ. ೧೭೭-೩೦) ; ಗೆಲವಿದೆಂತುಟೊ ತನ್ನ ಸೋಲಿದು ಬಳಿಕ ಸೋತರೆ ಧರ್ಮ ಗತಿಯನು ತಿಳಿದು ಹೇಳಲಿ ತತ್ಸಭಾಸದರೆಂದಳೆಂದುಮುಖಿ (ಕುಮ್ಯಾ.ಸ ೧೪-೮೦). [ ಧರ್ಮ + ಗತಿ ]

**ಧರ್ಮಗರಣಿಗ** (ನಾ). ಧರ್ಮಕಾರ್ಯಕ್ಕೆ ಮಾಡುವ ವ್ಯಯವನ್ನು ಬರೆಯುವವನು; ಧರ್ಮಕಾರ್ಯಗಳ ಲೆಕ್ಕವನ್ನಿಡುವವನು: ಪಾಲಿಪು ಕೊಳ್ಳಿಯುಂ ಅರಮನೆ ತಾಣದ ಭಾಗಮುಂಮ್ ಅರ್ಚ್ಚಕಮ್ಮನ್ನಿಯಂ ಕೊಟ್ಟ ಸೇನವರಸರುಂ ಧರ್ಮ್ಮಗರಣಿಗರುಂ (ಎಕ. VI, ಕೊಪ್ಪ. ೩೭-೧೧ : ಸು. 6767). [ ಧರ್ಮ + <ಕರಣಿಕ ]

**ಧರ್ಮಗಹಳೆ**, **ಧರ್ಮಕಹಳೆ**, **ಧರ್ಮಗಾಳೆ** (ನಾ). ಯುದ್ಧದಲ್ಲಿ ಗೆದ್ದವರು ಕರುಣೆಯಿಂದ ಯುದ್ಧವನ್ನು ನಿಲ್ಲಿಸುವ ಸೂಚನೆಗಾಗಿ ಊದಿಸುವ ಕಹಳೆ: ಮುಱಿಯಲಿಱಿದು ಪಾಳೆಯ ಪರಿಯಂತರ ಒಱಲಿಸಿ ಧರ್ಮಗಹಳೆಯ [ಪಾಠಾಂ.ಗಾಳೆಯನು]ನೆಱಿಗಲಿ ರಾಮ ತಿರುಗಿದನೊಯ್ಯನೆ ತನ್ನುಳುವ ಭಟರ ಮೋಹರದೊಳು (ಕುಂರಾಸಾಂ. ೦೩-೧೨೧) : ಬರಲು ಬಹುದು . . . ದುರ್ಧರದ ಸಾಹಸರೇದು ಅಡ್ಡೈತರೆ ವಿಭೀಷಣ ಧರ್ಮಗಹಳೆಗಳಲಿಯಲಿತ್ತರದಿ (ಜೈರಾಮಾ. ೨೬೨-೭೧). **ಧರ್ಮಕಹಳೆ** : ತಿಮ್ಮಣ್ಣನಾಯಕನು ಧರ್ಮಕಹಳೆಯನ್ನು ಹಿಡಿಸಿದನು. ಕದನವು ನಿಂತಿತು (ಕವೀರ. ೧೨೨) ; ದಂಡಿನವರ ತಿಳುವಳಿಕೆಗೆ ಕೂಚುನಗಾರಿ, ಧರ್ಮಕಹಳೆ ಮೊದಲಾದ್ದನ್ನು ಉಪಯೋಗಿಸುತ್ತಿದ್ದಂತೆ ತಿಳಿಯಬರುವ ಸಂಗತಿಯು . . . ಸೇನೆಯಲ್ಲಿ ಒಂದು ವಿಧವಾದ ತರಬಿಯತ್ತು ಇತ್ತೆಂದು ತೋರಿ ಸುವುದು (ಚಿತ್ರಪಾ. ೭ ಉಪೋದ್ಘಾತ). **ಧರ್ಮಗಾಳೆ** : ಪಾಳೆಯ ಪರಿಯಂತ ಮುಱಿಯಲಿಱಿದು ಧರ್ಮಗಾಳೆಯ ದನಿಯನೆಲ್ಲರನು ಕೇಳಿಸುತೊಯ್ಯನೆ ತಿರುಗಿದನಂದು ಕಟ್ಟಾಳು ಕಾಟಣ್ಣ ಲೀಲೆಯೊಳು (ಕುಂರಾಸಾಂ. ೯೩-೭೮) : ದಾಳಿಯಂ ಮಾಡಿದುದು ಹರಗಣಂ ಪುರದ ಪೆರ್ಬಾಗಿಲೊಳ್ ಗಾಡದಿಂ ಧರ್ಮಗಾಳೆಯನಿರದೆ ಪಿಡಿಸಿ ತಿರುಗಿತು ವಿಜಯದುತ್ಸವದೊಳು (ಚಿಬಪು. ೯೯-೬೭) ; ಸಾವಿಗೆ ಭಯಗೊಂಡು ಬೇಡಿಕೊಳ್ಳವರನು ಕಾವೆನು ಭಯ ಬೇಡೆಂದು ಕೀವಿದ ಧರ್ಮಗಾಳೆಯ ಹಿಡಿಸಿದನಾ ಭೂವರನಂಜರಾಜೇಂದ್ರ (ಕಂನವಿ. ೧೭-೯೫). 'ದಮ್ಮಗಹಳೆ' ಪರಾ. [ ಧರ್ಮ + ಕಹಳೆ ]

**ಧರ್ಮಗಳ್** (ನಾ). ಉಚಿತವಾಗಿ ಕೊಡುವಕಳ್ಳು; ದಾನವಾಗಿ ಕೊಡುವ ಮದ್ಯ: ನೆರೆದೆಲ್ಲರ್ ಕಳ್ಗುಡಿಯುತ್ತಿರೆ ಬಡವರ್ಗಲ್ಲಿ ಧರ್ಮಗಳ್ಳೆಂದೆಱೆವರ್ (ಧರ್ಮಾಮೃ. ೧-೦೯೯). 'ಧರ್ಮಗಳ್ಗುಡಿ' ಪರಾ. [ ಧರ್ಮ + ಕಳ್$_3$ ]

**ಧರ್ಮಗಳೆ** (ನಾ). (ಲಕುಲೀಶ) ಯತಿಯ ಧರ್ಮದಂಡ; ಯೋಗದಂಡ: ಹರನರಸಂ ಸುರನರ್ನ್ನರದ ಗುಣ್ದು ಜಟಾವಳಿ ತೊಂಗಲಿನ್ದ್ರ ದುರ್ಧರಗಿರಿ ಸೇತು ಧರ್ಮ್ಮಗಳೆಯಂಕದ ಮದ್ದಳೆ ಧೂಮ ವೇಳೆ ವಿಸ್ಫುರಿತ ಶಿವಾಗಮಂ ಸುರಿಗೆಯಾಗಿರೆ ಪಾಪವನೊತ್ತಿ ಕುತ್ತಿ ನಿಷ್ಕುರಮಿಱಿದಿನ್ತು ಕೊನ್ದ ತಪದಂಕವಿದೀ ತಪದಂಕಕಾಱಿನ (ಎಕ್. XII, ಶಿರಾ. ೩೯-೬೮ : ೯೬೩). [ ಧರ್ಮ + ಗಳೆ (<ಗಟ$^3$) ]

**ಧರ್ಮಗಳ್ಗುಡಿ** (ಕ್ರಿ). ಉಚಿತವಾಗಿ ಕಳ್ಳನ್ನು ಕುಡಿ; ಬಿಟ್ಟಿ ಹೆಂಡ ಕುಡಿ: ಕಳ್ಳೊಳ್ ಬೊಟ್ಟನಿಟ್ಟುಕೊಂಡು ಕೆಲವರ್ಗಲ್ಲಂ ಬೊಟ್ಟಿಟ್ಟು ಕಿಱಿಯರ್ಪಿರಿಯರೞಿದು ಪೊಡಮಟ್ಟು ಧರ್ಮಗಳ್ಗುಡಿವರ್ಗಲ್ಲಂ ವಿಸಸಲ್ಗಳ್ಳನೆಱಿದು (ಶಂಪಥಾ. ೯-೮೭ ವ). [ ಧರ್ಮಗಳ್ + ಕುಡಿ$_1$ ]

**ಧರ್ಮಗಾಮಿ** (ನಾ). ಧರ್ಮಮಾರ್ಗದಲ್ಲಿ ನಡೆಯುವವನು: ಧರ್ಮಗಾಮಿಗಳಾದ ಅವರು ಹೆಚ್ಚುಕಡಮೆಯಾಯಿತೆಂದರೆ ಸುಮ್ಮನಿರುವುದಿಲ್ಲ (ವಕಥಾ. ೨೯). [ ಸಂ. ಧರ್ಮಗಾಮಿನ್ ]

**ಧರ್ಮಗಾಮುಂಡ** (ನಾ). ಒಬ್ಬಾತನ ಹೆಸರು: ಶ್ರೀಪಾಲನಾಚಾಸ್ಯ ಧರ್ಮ್ಮಗಾಮುಣ್ಡ ಪುತ್ರಃ ಪ್ರಾತಿಷ್ಠಿಪಟ್ಟಿಲಾಪಟ್ಟಂ ಸ್ಥೇಯಾದಾಚನ್ದ್ರತಾರಕಂ (ಸೌಇಇ. XX, ೯-೦೪ : ಸು. ೮ನೆಯ ಶತ). [ ಧರ್ಮ + ಗಾಮುಂಡ ]

**ಧರ್ಮಗಾರಿಯ** (ನಾ). = ಧರ್ಮಕಾರ್ಯ೨: ಯಾ ಮರಿಯಾದೆಯುಳು ಧರ್ಮ್ಮಗಾರಿಯವನು ನಡಸುವರು (ಎಕ್. XI, ಹೊಳೆಕೈ. ೬೩-೨೦ : 1406 ?). [ <ಸಂ. ಧರ್ಮಕಾರ್ಯ ]

**ಧರ್ಮಗಾಳೆ** 'ಧರ್ಮಗಹಳೆ' ನೋ.

**ಧರ್ಮಗುಣ** (ನಾ). ೧. ಸತ್ಕರ್ಮವನ್ನು ಮಾಡುವ ಗುಣ; ಸದ್ಗುಣ: ವನಜದ್ವಿಟ್ಸುತನೊಂದಿದಂದುದಯದೊಳ್ ಪ್ರಾಜ್ಞಂ . . . ಜಾಮಿತ್ರು ಕೇತನದೊಳ್ ಧರ್ಮಗುಣಾನ್ವಿತಂ (ಜಾತಕ. ೦೮-೧೦). ೨. ಬಿಲ್ಲಿನ ಹೆದೆ: ಸೊಗಯಿಪ ಧರ್ಮಗುಣಂಗಳನಗಲಿದೊಡಾಕ್ಷಣದೊಳಸ್ಕರಂ ಕೊಂದವ ವಂಬುಗೆಳೆಂದಡೆ ವಿರಹಿತಧರ್ಮಗುಣರ್ ಪೆಱರೇ ವಿಘಾತಿಸು ವುದದ್ಭುತಮೇ (ಜಾಧಕು. ೧೩-೬೩) ೧, ೨: ಕೃತವಿದ್ಯರ ಭೀಕರಶರ ತತಿ ಮೊಳೆತೀವಂತೆ ಸಮೆದು ಬಿಟ್$^1$ ಸಂಗರದೊಳ್ ಗತಿಗಂತುಟು ಧರ್ಮಗುಣಚ್ಯುತದಿ ನರ್ಧೋಗತಿಗೆ ಬೀಳ್ವುದೊಂದಚ್ಚರಿಯೇ (ಗದಾಯು. ೪-೬೩); ಕಡುವೇಗಿ ಧರ್ಮ್ಮಗುಣಮಂ ಬಿಡುವುದು ಖರದೂಷಣಾನ್ವಿತಂ ಮೂದಲೆಯಂ ಪಡೆದುದು ಬಲ್ಲಾಳನ ದಿಟನುಡಿಯೊಳ್ಪಡಿಯಾಗಲಾಪ್ಪುದೇ ರಾಮಶರಂ (ಎಕ್. V, ಬೇಲೂರು. ೦೭೩-೯; 1186) [ ಧರ್ಮ + ಗುಣ ]

**ಧರ್ಮಗುತ್ತಿ** (ನಾ). ಒಂದು ಬಗೆಯ ಬತ್ತ: ಕುಂದದ ಚಂದ್ರಲೇಖೆ . . . ನಿರಂತರಮೊಪ್ಪುವ ಧರ್ಮಗುತ್ತಿಯೆಂಬೀಪದನೇಕ ನಾಮವೆಸೆಗುಂ ಮೃದುಬಂಧುರ ಗಂಧಶಾಲಿಗಳ್ (ಮಲ್ಲಿಕಾ. ೪-೬೮). [ ? ]

**ಧರ್ಮಗುರು** (ನಾ). ಧರ್ಮಮಾರ್ಗವನ್ನು ಉಪದೇಶಿಸುವ ಗುರು: ಶ್ರೀಮನ್ನಾಗಸ್ವಾಮಿ × × × ಧರ್ಮ್ಮಗುರುಗಳಲ್ಲಿ ಜವಳ[ಗು]ಳವಂ ಮುನ್ನಣ ಪ್ರತಿಪತ್ತಿವೆರಸು ಬ್ರಹ್ಮಪುರಿಗೆ ಕೇರಿಯು [ಕೆ]ಯ್ಯುಮ್ಮಂ . . . ಪಡೆದು (ಸೌಇಇ. XI-1, ೬೪-೦೮ : 1028); ಡಾ. ಆಬಟ್‌ರು ಆಗ ಟಿಳಕರ ಧರ್ಮಗುರುವಾಗಿದ್ದರೆಂದು ಹೇಳಲಡ್ಡಿಯಿಲ್ಲ (ಸ್ಮೃತಿಚಿ. ೦೯೭). [ ಧರ್ಮ + ಗುರು$_2$ ]

**ಧರ್ಮಗೇಹ** (ನಾ). ೧. ಧರ್ಮಕ್ಕೆ ಆಶ್ರಯವಾದುದು: ಧರ್ಮದ ನೆಲೆ: ನಿಜನೇತ್ರಂ ಲೋಕನೇತ್ರಂ ನಿಜಭರಣವಿಳಾಚಕ್ರಭಾರಾವಹಂ ಮೇಣ್ ನಿಜವಾಹಂ ಧರ್ಮಗೇಹಂ ನಿಜಧನು ದನುಜಾರಾತಿಜಾತಾಧಿವಾಸಂ . . . ಕುಡುಗೆ ಮಗತುಳ ಶ್ರೇಯಮಂ ಶೈಲಜೇಶಂ (ರಾಜಶೇ. ೦-೨). ೨. [ ಜ್ಯೋತಿ ] ಜಾತಕನ ಜನ್ಮಲಗ್ನದಿಂದ ಒಂಬತ್ತನೆಯ ಸ್ಥಾನ. [ ಧರ್ಮ + ಗೇಹ ]

**ಧರ್ಮಗೊಡ್ಡು** (ನಾ). ೧. ಕಂದಾಚಾರದಲ್ಲಿ ನಿಷ್ಠೆ; ವ್ಯವಹಾರಜ್ಞಾನವಿಲ್ಲದಿರುವಿಕೆ: ಧರ್ಮಗೊಡ್ಡಿನ ಹುಚ್ಚಾನೀ ನಮ್ಮವನ ಕಯ್ಗೆ ಈ ಶಾಸನವು ದೊರೆವಟ್ಟು (ಮಂತ್ರಶ. ೧೩-೧೦). ೨. ವ್ಯವಹಾರಜ್ಞಾನವಿಲ್ಲದಿರುವ ವ್ಯಕ್ತಿ; ಕರ್ಮಠ. [ ಧರ್ಮ + ಗೊಡ್ಡು$_1$ ]

**ಧರ್ಮಗೊಳಗ** (ನಾ). ಕಣದ ಧಾನ್ಯರಾಶಿಯಲ್ಲಿ ಧರ್ಮಕ್ಕಾಗಿ ಮೊಟ್ಟ ಮೊದಲು ತೆಗೆದಿಡುವ ಒಂದು ಕೊಳಗದಷ್ಟು ಧಾನ್ಯ: ಅದಱ ಸೀಮೆ ಮಾಡಲು ವಿರಟನ ದಿಬ್ಬ ಬಡಗ ಕೈರವಿಯ ಹಳ್ಳ ತೆಂಕ ಕಱಿಯ ಹಳ್ಳಂ ಮೇರೆ ಕಱಿಯ ಕೊರಲು ದೇವಗೊಳಗಂ ಧರ್ಮಗೊಳಗವೆರಡು ದೇವರ ನಂದಾದೀವಿಗೆಗೆ ಬಿಟ್ಟ ಗಾಣವೆರಡು (ಎಕ್. XI, ಚಳ್ಳಕೆ. ೨೦-೩೬; 1087). 'ದೇವಗೊಳಗ' ಪರಾ. [ ಧರ್ಮ + ಕೊಳಗ$_1$ ]

**ಧರ್ಮಗೋಷ್ಠಿ** (ನಾ). ಧಾರ್ಮಿಕ ಪ್ರವಚನಗಳ ಸಭೆ, – ಕೂಟ: ಮಸೀದಿಗಳಲ್ಲಿ ಕೊರಾನಿನ ಪಠನದ ಮೂಲಕ ನಡೆಯುವ ಸನ್ಮಾರ್ಗ ಬೋಧನೆಯೂ ಹಿಂದೂದೇವಾಲಯಗಳಲ್ಲಿ ನಡೆಯುವ ಧರ್ಮಗೋಷ್ಠಿಗಳೂ . . . ಉತ್ತಮವೂ ಉದಾತ್ತವೂ ಆದ ಸಮಾಜನಿರ್ಮಾಣಕ್ಕೆ ನೆರವಾಗುತ್ತಿವೆ (ಶಿಕ್ಷದ. ೬೩). [ ಧರ್ಮ + ಗೋಷ್ಠಿ ]

**ಧರ್ಮಗೌರವ** (ನಾ). ಧರ್ಮದ ಬಗೆಗೆ ಇರುವ ಆದರ; ಧರ್ಮವನ್ನು ಕುರಿತ ಶ್ರದ್ಧೆ: ಈ ಕ್ರೂರಜನರ ನಡತೆಯಿಂದ ನಿನ್ನ ಧರ್ಮಗೌರವವೆಲ್ಲಾ ಹೋಗಿ ಬಿಟ್ಟಂತೆ ಕಾಣುತ್ತದೆ (ವಕಥಾ. ೯೯). [ ಧರ್ಮ + ಗೌರವ ]

**ಧರ್ಮಗ್ರಂಥ** (ನಾ). ಮತದ ಪ್ರಕ್ರಿಯೆ, ತತ್ತ್ವ, ವಿಧಿ ಮುಂತಾದುವುಗಳನ್ನು ವಿವರಿಸುವ ಗ್ರಂಥ; P ವೇದ, ಬೈಬಲ್ಲು, ಕೊರಾನು ಮುಂತಾದುವು: ವೈದಿಕರೂ ಅವೈದಿಕರೂ ಪರಸ್ಪರರ ಧರ್ಮಗ್ರಂಥಗಳ ಅಧ್ಯಯನವನ್ನು ಮಾಡಬಹುದಲ್ಲವೆ? (ಮಾಧವ. ೪೨೦); ಲಕುಲೀಶ–ಪಾಶುಪತದ ಧರ್ಮಗ್ರಂಥಗಳು ದೊರಕಿದಂತೆ ಕಾಳಾಮುಖರ ಧರ್ಮಗ್ರಂಥಗಳು ಪ್ರತ್ಯೇಕವಾಗಿ ದೊರೆತಿಲ್ಲ (ಕಶಾಅ. ೦೩೩). [ ಧರ್ಮ + ಗ್ರಂಥ ]

**ಧರ್ಮಗ್ಲಾನಿ** (ನಾ). ಧರ್ಮದ ಹಾನಿ; ಧರ್ಮ ನಷ್ಟವಾಗುವಿಕೆ: ಕೃಷ್ಣಾವತಾರವಾದದ್ದು ದ್ವಾಪರಯುಗದ ಅಂತ್ಯದಲ್ಲಿ ನಡೆದ ಧರ್ಮಗ್ಲಾನಿಯ ಕಾರಣದಿಂದ (ಭಾರದ. ೧೦೪); ಅರ್ಜುನನ ಅಳಲಿಗೆ ಕಾರಣ . . . ವರ್ಣಸಾಂಕರ್ಯ, ವರ್ಣಸಾಂಕರ್ಯದಿಂದ ಧರ್ಮಗ್ಲಾನಿ, ಧರ್ಮಗ್ಲಾನಿಯಿಂದ ನರಕಪ್ರಾಪ್ತಿ (ಭಾರದ. ೧೧೨). [ ಧರ್ಮ + ಗ್ಲಾನಿ ]

**ಧರ್ಮಘಾತಕ** (ನಾ). ೧. ಧರ್ಮದ ಉಲ್ಲಂಘನೆ; ಧರ್ಮದ್ರೋಹ: ನನ್ನನ್ನು ಕೋರದೆಯೇ ನೀನು ಆ ರಾಜನ ಸಹವಾಸ ಮಾಡಿದ್ದು ಧರ್ಮಘಾತಕವೇನಲ್ಲ (ಚಕಥಾ. ೩೯೩). ೨. ಧರ್ಮವನ್ನು ಉಲ್ಲಂಘಿಸುವವನು; ಧರ್ಮದ್ರೋಹಿ. [ ಧರ್ಮ + ಘಾತಕ ]

**ಧರ್ಮಚಕ್ರ** (ನಾ). ೧. ಧರ್ಮಸಾಮ್ರಾಜ್ಯ; ಧರ್ಮವುಳ್ಳ ಚಕ್ರಾಧಿಪತ್ಯ. ೨. ಧರ್ಮರಕ್ಷಣೆ ಮಾಡಿದ ಚಕ್ರಾಯುಧವನ್ನು ಧರಿಸಿದವನು; ವಿಷ್ಣು. ೧, ೨: ಪ್ರತಿಪಾಲಿತಧರ್ಮಚಕ್ರಂ . . . ಈ ಚಳುಕ್ಯನಾರಾಯಣದೇವ ನೀಗೆಮಗೆ ಮಂಗಳಕಾರಣಮುತ್ಸವಂಗಳಂ (ಗದಾಯು. ೧-೧). ೩. ಬುದ್ಧ. ೪. [ ಬೌದ್ಧ ] ಧರ್ಮದ ಸಂಕೇತವಾದ ಚಕ್ರ: ಭರತಖಂಡದ ರಾಷ್ಟ್ರ

ಧ್ವಜದಲ್ಲಿ . . . "ಧರ್ಮಚಕ್ರ" ವಿಶ್ವಸಾಮರಸ್ಯವನ್ನು ಸಾಕ್ಷಾತ್ಕರಿಸಿದ ವೈದಿಕಋಷಿಗಳ ದಿವ್ಯಸಂದೇಶದ ಪ್ರತೀಕ (ಜುಕ್ಕಾರ. ೪೭ ಜೀಠಕೆ) : ಸಕಲ ಜಗತ್ತಿಗೂ ಮಾರ್ಗದರ್ಶಕವಾಗಿರಬೇಕೆಂದು ನೆಹರೂ ಅವರು ವೇದ ಪ್ರಶಂಸಿತವಾದ ಆದಿತ್ಯನ ಧರ್ಮಚಕ್ರವನ್ನೂ . . . ರಾಷ್ಟ್ರಧ್ವಜದಲ್ಲಿ ಅಳವಡಿಸಿ (ಜುಕ್ಕಾರ. ೧೨೦ ಜೀಠಕೆ) ; ಎಂತಾದರೂ ಈ ದುರಂತಕೆಹುದೆ ಕೊನೆಯ ಅಂಕವು? 'ಸಂಭವಾಮಿ ಯುಗೇಯುಗೇ' ಅಗೋ ಧರ್ಮಚಕ್ರವು (ನೆರಮು. ೪೦-೩೪) ; ಬೌದ್ಧರಿಗೆ (ಹೀನಯಾನ) ಪೂಜಾರ್ಹವಾದ ಸಂಕೇತ ಗಳನ್ನು ಮೂರು ಗುಂಪುಗಳನ್ನಾಗಿ ವಿಭಾಗಿಸಬಹುದು . . . (iii) ಉದ್ದೇಶಿತ: ಸ್ತೂಪ, ಧರ್ಮಚಕ್ರ ಮತ್ತು ತ್ರಿರತ್ನಚಿಹ್ನೆಗಳು ಇದರಲ್ಲಿ ಮುಖ್ಯವಾದುವು (ಭಾರದ. ೪೯೫). 'ಧರ್ಮಚಕ್ರಪ್ರವರ್ತನ' ಪರಾ. ೫. [ಜೈನ] ತೀರ್ಥಂಕರನು ವಿಹಾರ ಮಾಡುವ ಸಮಯದಲ್ಲಿ ಆತನ ಮುಂದೆ ಚಲಿಸುವ, ಸೂರ್ಯನನ್ನು ಮೀರಿಸುವ ಪ್ರಕಾಶದಿಂದ ಕೂಡಿದ, ಸಾವಿರ ಅರಗಳನ್ನುಳ್ಳ ಚಕ್ರ : ಜಿನಚಂದ್ರದೇವಂ ನಡೆಯೆ ಧರ್ಮಚಕ್ರಂ ಮುಂದೆ ನಡೆಯೆ (ಶಾಂತಿಪು. ೧೩-೧೯ ವ) ; ಪಸರಿಸಿದ ಕುತೀರ್ಥಧ್ವಾಂತಮಂ ತೂಳ್ದಿ . . . ಪೆಂಪಿಂ ವಿಶದವಿಭವತೇಜ ಶ್ಶಕ್ರಪರ್ಕಂಬೊಲುದ್ಯೋತಿಸು ಸಕಲಧಾತ್ರೀಚಕ್ರದೊಳ್ ಧರ್ಮಚಕ್ರಂ (ಅಜಿಪು. ೧-೧೭) ; ಪಡೆದಚ್ಚರಿಯಂ ಸಹಸ್ರಭಾನು ತ್ವಿ [ಡ] ದುದ್ಯೋತಿ ಸುರೇಂದ್ರಕಲ್ಪಿತಾರ್ಘ್ಯಂ ಕಿಡೆ ದುರ್ವರ್ತದುಸ್ತಮ ಪ್ರಭಾವಂ ನಡೆಗುಂ ಸಂದಿಸಿ ಮುಂದೆ ಧರ್ಮಚಕ್ರಂ (ವರ್ಧಮಾ. ೧೯-೩೭). ೬. ಯಕ್ಷರ ತಲೆಯ ಮೇಲೆ ಸಮವಸರಣಕಾಲದಲ್ಲಿ ಇರುವ ಚಕ್ರಾಕಾರವಾದ ಒಂದು ಬಗೆಯ ಆಭರಣ : ಧರ್ಮಚಕ್ರಪರಚಕ್ರಮನಾಕ್ರಮಿಸಲ್ಕೆ ಸಾಲ್ದ ಭಾಸುರತರ ತೇಜಪ್ರತೇಜದಪರಾಜಿತ ಮಾಟ್ಕೆಮುತಿಪ್ರಕಾಶವಮಂ (ಮಲ್ಲಿಪು. ೧-೯) ; ನಾಲ್ಕುಂ ದೆಸೆಯೊಳಂ ಧರ್ಮಚಕ್ರಮಂ ಧರಿಯಿಸಿರ್ದ ಯಕ್ಷೇಂದ್ರರಿಂ . . . ಪ್ರಥಮಪೀಠಮಕ್ಕುಂ (ಜಸಾರ. ೫೬೭). ೭. ಚಕ್ರಾಕಾರವಾದ ಒಂದು ಬಗೆಯ ಆಭರಣವನ್ನು ಧರಿಸಿರುವವನು : ಅದಜ ನಾಲ್ಕುಂ ದಿಙ್ಮುಖಂಗಳೊಳ್ . . . ಧರ್ಮ ಚಕ್ರರ್. ಯಕ್ಷರ್ಕಳಿರ್ಪರ್ (ಮಹಾನೇ.೧೫೫-೭೮ ವ). [ಧರ್ಮ + ಚಕ್ರ$_1$]

**ಧರ್ಮಚಕ್ರಪ್ರವರ್ತನ** (ನಾ). ೧. [ಬೌದ್ಧ] ಧರ್ಮಚಕ್ರವನ್ನು ಚಲಿಸು ವಂತೆ ಮಾಡುವುದು. ೨. "ಬುದ್ಧನು ಮಾಡಿದ ಮೊತ್ತಮೊದಲನೆಯ ಉಪದೇಶಕ್ಕೆ 'ಧರ್ಮಚಕ್ರಪ್ರವರ್ತನ' ವೆಂದೂ ಆತನ ವಚನಗಳ ಮಣಿಹಾರಕ್ಕೆ 'ಧರ್ಮಪದ'ವೆಂದೂ ಹೆಸರು" (ಭಾರದ. ೧೯೩) : ನಾಲ್ಕು ಆರ್ಯಸತ್ಯಗಳನ್ನು ಭಗವಂತನು ತನ್ನ ಮೊದಲ ಶಿಷ್ಯರಿಗೆ ವಿಶದೀ ಕರಿಸಿದನು. ಈ ಪ್ರಸಂಗವನ್ನು "ಧರ್ಮಚಕ್ರಪ್ರವರ್ತನ" ಎಂದು ಕರೆದಿದ್ದಾರೆ. ಇಲ್ಲಿ 'ಚಕ್ರ'ವೆಂದರೆ 'ರಾಜ್ಯ'. ಭಗವಂತನು ಧರ್ಮರಾಜ್ಯವನ್ನು 'ಪ್ರವರ್ತನ' ಮಾಡಿದನೆ ಹೊರತು 'ಸ್ಥಾಪನ' ಮಾಡಲಿಲ್ಲವೆಂಬ ಒಳ ಅರ್ಥ ವನ್ನು ಇಲ್ಲಿ ಗಮನಿಸಬಹುದು (ಭಾರದ. ೧೯೭) ; ಭಗವಂತನು ಧರ್ಮಚಕ್ರ ಪ್ರವರ್ತನವನ್ನು ಗೈದಾಗ . . . ಅನೇಕ ದೇವತೆಗಳೂ ಧರ್ಮವನ್ನು ಕಂಡುಕೊಂಡರು (ಬುದ್ಧಪ. ಮಿಲಿಂದ. ೨೫). [ಧರ್ಮಚಕ್ರ + ಪ್ರವರ್ತನ]

**ಧರ್ಮಚಕ್ರಮುದ್ರೆ** (ನಾ). [ಶಿಲ್ಪಶಾ] (ಬುದ್ಧನ) ಮೂರ್ತಿಶಿಲ್ಪದ ಒಂದು ಭಂಗಿ,-ಮುದ್ರೆ : ವೈರೋಚನನ ಪ್ರತಿಮೆಯು "ಧರ್ಮಚಕ್ರ ಮುದ್ರೆ" ಇಂದಲೂ ಅಕ್ಷೋಭ್ಯಬುದ್ಧನ ಪ್ರತಿಮೆಯು 'ಭೂಮಿಸ್ಪರ್ಶ' ಮುದ್ರೆಯಿಂದಲೂ . . . ಕೂಡಿರುತ್ತವೆ (ಭಾರದ. ೫೦೪). [ಧರ್ಮಚಕ್ರ + ಮುದ್ರೆ]

**ಧರ್ಮಚತ್ರ**, ಧರ್ಮಛತ್ರ (ನಾ). ಧರ್ಮಾರ್ಥವಾಗಿ ಊಟ ವಸತಿ ಗಳನ್ನು ಒದಗಿಸುವ ಸ್ಥಳ : ಮೈಸೂರಿನಲ್ಲಿರುವ ಪೂರ್ಣಯ್ಯನವರ ಧರ್ಮಚತ್ರವು ಹಿಂದಿನ ಕಾಲದಿಂದಲೂ ಬಡಬಗ್ಗರಿಗೆ ಆಶ್ರಯ ನೀಡುತ್ತಿದೆ (ರೂಪಿ). **ಧರ್ಮಛತ್ರ** : ರಂಗಮ್ಮನ ಮಠಾರವೇನು ಧರ್ಮಛತ್ರ ಕೆಟ್ಟು ಹೋಯ್ತೆ ? (ರಂಗಮ ೩೩) ; ಆ ಧರ್ಮಛತ್ರದ ಆವಾರದಲ್ಲಿ . . . ವಸುಮತಿಯೂ ಒಬ್ಬಳಾಗಿ ನಿಂತಳು (ಮುಕ್ತಮು. ೦೪೫). [<ಸಂ. ಧರ್ಮಸತ್ರ]

**ಧರ್ಮಚರಿತ** (ನಾ). = ಧರ್ಮಚಾರಿ : ಧರ್ಮಚರಿತ ದಃಕಿತದೂರ : . . ಪ್ರಪಂಚರಹಿತ ಪರಾಪರ (ಸಿದ್ಧೇವ. ೩-೭). [ಧರ್ಮ + ಚರಿತ]

**ಧರ್ಮಚಾರಿ** (ನಾ). ಧರ್ಮಮಾರ್ಗದಲ್ಲಿ ನಡೆಯುವವನು ; ಧರ್ಮ ವನ್ನು ಆಚರಿಸುವವನು : ಧರ್ಮವೇ ಖಂಡಿತವಾಗಿಯೂ ಧರ್ಮಚಾರಿ ಯನ್ನು ರಕ್ಷಿಸುತ್ತದೆ (ಭಾರದ. ೧೯೩). [ಸಂ. ಧರ್ಮಚಾರಿನ್]

**ಧರ್ಮಚಿಂತಾಪನ್ನೆ** (ನಾ). ಧರ್ಮಾಚರಣೆಯ ಕ್ರಮವನ್ನು ಕುರಿತು ಚಿಂತೆಗೆ ಒಳಗಾದವಳು : ನಿನ್ನ ನೆನೆದಂಗನೆಗೆ ಬಹುದು ಪತಿಪ್ರತಾಭಾವ ಎನ್ನನುಜ್ಞೆಗೆ ಧರ್ಮಚಿಂತಾಪನ್ನೆಯಾಗದಿರೆಂದು ಕೃಪೆಯಲ್ಲಿ ತನ್ನ ಸಿರಿಕರ ತಳವನಿರಿಸಿದನುತ್ತಮಾಂಗದಲಿ (ಕುಮಾ.ಅ. ೧೭-೫೩). [ಸಂ. ಧರ್ಮಚಿಂತಾಪನ್ನಾ]

**ಧರ್ಮಚಿಂತಾಯಕ** (ನಾ). ಧರ್ಮವನ್ನು ಕುರಿತು ಚಿಂತಿಸುವವನು : ಸಿದ್ಧಾರ್ಥಸೆಟ್ಟಿಪಂ . . . ಭಾನುದತ್ತಶೆಟ್ಟಿಯ ಧರ್ಮಚಿಂತಾಯಕನಪ್ಪ ಧನದತ್ತನ ಸಮಾಪದೊಳಿರಿಸಿ (ಮಹಾನೇ. ೪-೧೧೯ ವ). [ಧರ್ಮ + ಚಿಂತಾಯಕ]

**ಧರ್ಮಚಿಂತೆ** (ನಾ). ಧರ್ಮದಲ್ಲಿ ಆಸಕ್ತಿ ; ಧರ್ಮವನ್ನು ಕುರಿತ ಎಣಿಕೆ ; ಧರ್ಮಬುದ್ಧಿ : "ಉಪಾಸ್ತಿ:, ಧರ್ಮಚಿಂತಾ-ಈ ೨ ಧರ್ಮಬುದ್ಧಿ" (ಹಲಾಯು. ೦೨೭-೮೫) ; ಅನುಪಮ ಧರ್ಮಚಿಂತೆ . . . ಕಿಂಕರರ ಪರಿವರ್ತನ ಕ್ರಿಯೆಯ ಸಮ್ಮದದೊಳ್ ಸಲೆ ಕೂಡಿ ತದ್ಧರಾವರನಖಿಲಾವನೀವಳಯಮಂ ಪರಿಪಾಲಿಸುತಿರ್ದಂ (ಮಹಾನೇ. ೩-೨೨). [ಸಂ. ಧರ್ಮಚಿಂತಾ]

**ಧರ್ಮಚಿತ್ತ** (ನಾ). ಧರ್ಮಬುದ್ಧಿ : ಧರ್ಮಿಷ್ಠತೆ : ಬರ್ಮಗಾವುಣ್ಡಂ ಧರ್ಮಚಿತ್ತದೊಳ್ನೆಗಳ್ದು . . . ಧಾರಾಪೂರ್ವ್ವಕದಿಂ ಬೆಂಗೇರಿಯ ಕೆಱೆಯ ಕೆಳಗೆ ಬಿಟ್ಟ ಗಟ್ಟಿ ಮತ್ತರೊನ್ದು (ಸಾಇಇ. XX, ೩೫-೦೦ ; 1055). [ಧರ್ಮ + ಚಿತ್ತ]

**ಧರ್ಮಚ್ಯುತ** (ನಾ). ಧರ್ಮವನ್ನು ಬಿಟ್ಟವನು ; ಧರ್ಮಭ್ರಷ್ಟ ; ಧರ್ಮಮಾರ್ಗದಿಂದ ದೂರವಾದವನು : ರಾಜನನ್ನು ಕೊಂದು ಧರ್ಮಚ್ಯುತನಾದ ಇವನಿಗೆ ಪೂಜೆ ಮಾಡಿದೆಯಲ್ಲಾ, ಇಂಥ, ನೀನು ಧರ್ಮಾತ್ಮ ಹೇಗಾದೀಯೆ ? (ವಚಥಾ. ೪೩). [ಧರ್ಮ + ಚ್ಯುತ]

**ಧರ್ಮಚ್ಯುತಿ** (ನಾ). ೧. (ಕೈಕೊಂಡ) ಧರ್ಮವನ್ನು ಬಿಡುವುದು ; ಧರ್ಮಭ್ರಷ್ಟತೆ. ೨. ಬಿಲ್ಲನ್ನು ಬಿಟ್ಟುಹೋಗುವುದು ; ಬಿಲ್ಲಿನಿಂದ ಚಿಮ್ಮಿ ಮುಂದಕ್ಕೆ ಹೋಗುವುದು. ೧, ೨ : ಧೃತಧರ್ಮಚ್ಯುತಿ ಬಾಣಸಂಹತಿಗೆ ಬದ್ಧಾವೈಕೃತಂ ವಾರಣಕ್ಕೆ ತಮಃಸಂಗತಿ ರಾತ್ರಿಗೆ . . . ಜನಕ್ಕಿಲ್ಲಲ್ಲಿ ಬೇಟೆಲ್ಲಿಯುಂ (ಪುಷ್ಪಪು. ೨-೩೯). [ಧರ್ಮ + ಚ್ಯುತಿ]

**ಧರ್ಮಛತ್ರ** 'ಧರ್ಮಚತ್ರ' ನೋ.

**ಧರ್ಮಜ** (ಗುಂ). ೧. ಧರ್ಮಬುದ್ಧಿಯಿಂದ ಹುಟ್ಟಿದ. (ನಾ). ೨. ಯಮ ಧರ್ಮನ ಮಗ ; ಪಾಂಡವರಲ್ಲಿ ಹಿರಿಯ ; ಯುಧಿಷ್ಠಿರ: "ಪಾಂಡವಂ ಧರ್ಮಜಂ ಯುಧಿಷ್ಠಿರನು ಧರ್ಮಪುತ್ರನೆಂದೆನಿಕು" (ಮಂಗರಾ. ೭೮-೩) ; ಈ ಕೇನಾರ್ಥೀ ಕೋ ದರಿದ್ರಃ ಎನುತುಮನಿತುಮಂ ಧರ್ಮಜಂ ಸೂಱೆಗೊಟ್ಟಂ (ಪಂಪಭಾ. ೬-೪೦) ; ಹರಿ ಕೇಳ್ ಧರ್ಮಜ ಕೇಳ್ ಸುರೇಂದ್ರಸುತ ಕೇಳ್ ಮಾದ್ರೀಸುತರ್ ಕೇಳಿಮಿರ್ವರುಮಿಂತೆಯ್ದಿದುದಲ್ತೆ . . . ಭೀಮಪ್ರತಿಜ್ಞಾಕ್ಷರಂ (ಗದಾಯು. ೮-೬೪) ; ಜೂಜನಾಡಿ ಧರ್ಮಜ ಮುಖ್ಯರೆಲ್ಲರು (ಬಸಪು. ೪೪-೭೪) ; ವಾರುವದ ಖುರ ನಾಲ್ಕಱಲಿ ಮಣಿಚಾರು ಕನಕವ ಸುರಿದು ಧರ್ಮಜ ತೇರನೇಱಿದನು (ಕುಮಾ.ಭೀ. ೧-೬೨) ;

ನಿರ್ಮಲವಾಜಿಯಿಂ ಸುವೇಗಂ ತಂದು ನಿಲಿಸಿದಂ ಧರ್ಮಜನ ಸಮ್ಮುಖದೊಳಿಂ (ಜೈಮಿಥಾ. ೫-೧೧). ೩. ಬಿಳಿಯ ಹಕ್ಕಿ ; ಈ ಧರ್ಮಜ ನೆಂದರೆ ಪಾಂಡವ. 'ಪಾಂಡವ' ಶಬ್ದಕ್ಕೆ 'ಬಿಳಿಹಕ್ಕಿ' ಎಂಬರ್ಥವೂ ಉಂಟು : ಸುರಪತಿಯ ಬೆಳ್ಗೊಡೆಯು ರಥಚರಣದ ಪಾವಕನ ಮಾನಿಯ ಧರ್ಮಜನ ಲಸತ್ಪುರಗದ ಗಜಗಂಡದ ಭಾಸುರವಾದ್ಯದ ಪೆಸರ ಖಗಕುಳಂ ಕರಮೆಸೆಗುಂ (ರಾಜಶೇ. ೫-೭೦). ೪. ಔರಸಪುತ್ರ. [ಸಂ.]

**ಧರ್ಮಜನಕ** (ನಾ). ೧. ಯಮನ ತಂದೆ ; ಸೂರ್ಯ. ೨. ಧರ್ಮವನ್ನು ಪ್ರಚಾರ ಮಾಡುವವನು; ಧರ್ಮಿಷ್ಠ. ೧, ೨ : ಕಮಲಾನಂದನಕಾರಿ ಚಾರುಕಮಳ ಪ್ರೋದ್ಭಾಸಿಹಸ್ತಂ ವಿರೋಧಿವದಧ್ವಾಂತವಿಭೇದಿ ಧರ್ಮ್ಮಜನಕಂ ಸನ್ಮಾರ್ಗ್ಗವಿದ್ಯೋತನಂ . . . ಲೋಕಮನೆಲ್ಲಂ ಬೆಳಗುತ್ತ ವಿರ್ಕ್ಕೆ ದೊರೆವೆತ್ತಾದಿತ್ಯನತ್ಯೂರ್ಜ್ಜಿತಂ (ಎಕ್.VI, ಕಡೂರು. ೬೬-೪೮ ; 1172). [ಧರ್ಮ + ಜನಕ]

**ಧರ್ಮಜಾಗೃತಿ** (ನಾ). ಧರ್ಮವು ಉಚ್ಛ್ರಾಯಸ್ಥಿತಿಯಲ್ಲಿರುವುದು: ಭಾರತದಲ್ಲಿ ಅನೇಕ ಮಹಾತ್ಮರು ಜನಿಸಿ ಧರ್ಮಜಾಗೃತಿಯನ್ನುಂಟು ಮಾಡಿದ್ದಾರೆ (ರೂಢಿ). [ಧರ್ಮ + ಜಾಗೃತಿ]

**ಧರ್ಮಜ್ಞ** (ನಾ). ಧರ್ಮವನ್ನು ಬಲ್ಲವನು : ಧರ್ಮಜ್ಞರಧರ್ಮಮೆನೆ ವಾರ್ಧಕರಸಂಬದ್ಧಮೆನೆ . . . ಸಮುದ್ರಕ್ಷೋಭದಂತೆ ಪೂರ್ಣಿಸುವ ಜನಕ್ಷೋಭಮಂ ಕೈಕೊಳ್ಳದೆ (ಆದಿಪು. ೨-೫೩ವ) ; ಕಾರುಣಿಕರ್ ಧರ್ಮಜ್ಞರ್ ಚಾರಿತ್ರಸಮೇತರೆನಿಪ ನಿಮ್ಮನ್ನರನಾಗಾರತೆಯಿಂ ಪಾವನ ಮನಗಾರತೆಯಿಂದೆಸಗುವೆಸಕಮಿಂ ಪೆಡತುಂಟೇ (ಚಂದ್ರಪ್ರ ೯-೯೦); ಧರ್ಮ್ಮಜ್ಞನೇ ಧರ್ಮ್ಮಜಂ ಬಲವದ್ವೈರಿಮದಪ್ರತಾಪಹ[ರ]ನೇ ಅಮ್ಮಮ್ಮ ತಾನನ್ತಕಂ . . . ಬುಧನುತ ಶ್ರೀನಾಕಭೂಪಾಳಕಂ (ಸೌಇಇ. XX, ೩೦೩-೬ ; ಸು. 12ನೆಯ ಶಶ) ; ನೀನೆಲಾ ಧರ್ಮಜ್ಞನೆಂದಾ ಮಾನಿನಿಯರ ವಿವಾಹದಲಿ ನೀನೇನ ಮಾಡಿದೆ ಬೇಸಜಾಸಿ ಬಳಲಿಸಿದೆ ಬಾಲಕಿಯ (ಕುಮಾ.ಸ. ೧೦-೯೦) : ಜನನಿ ಶಿಶುವನು ಸತ್ಕುಲೀನನು ವಿನುತ ಸದ್ವರ್ತನೆಯ ಸತ್ಪುರುಷನು ಸದಾಚಾರವನು ಸಜ್ಜನನಧಿಕ ಸದ್ಗುಣವ ಜನವನೈಶ್ವರಿಯವನು ಧರ್ಮಜ್ಞನು ಯಶೋಲಭ್ಯವನು ಸಲಹುವ ನೆನಹಿನವೊಲಭಿಮಾನರಕ್ಷೆಯ ಸತಿಯ ಕಪಿ ಕಂಡ (ತೊರರಾ. ೫-೩-೨೫). [ಸಂ.]

**ಧರ್ಮಜ್ಞತೆ** (ನಾ). ಧರ್ಮವನ್ನು ತಿಳಿದಿರುವಿಕೆ; ಧರ್ಮಜ್ಞನಾಗಿರುವಿಕೆ: ಯತಿಗಳಾದರಿ ನೀವು ರೋಷಚ್ಯುತರಲೇ ಬಳಿಕೇನು ಧರ್ಮಜ್ಞತೆಯ ನೆಲೆಗಳನಜಾಂದ ಮನವೆಡಗುವುದೆ ಕಾಳಗಕೆ (ಕುಮಾ.ಉ. ೬-೨೧).
[ಸಂ. ಧರ್ಮಜ್ಞತಾ]

**ಧರ್ಮಡೋಣಿ** (ನಾ). (ದನಕರುಂ ಮೊದಲಾದುವುಗಳು ನೀರು ಕುಡಿಯುವುದಕ್ಕಾಗಿ) ಧರ್ಮಾರ್ಥವಾಗಿ ಕಟ್ಟಿಸಿದ ತೊಟ್ಟಿ ಅಥವಾ ದೋಣಿ : ನಂಮ ಗ್ರಾಮಕೆ ಧರ್ಮಡೋಣಿಗೆ ನೀರ ಹೊಯಿವದಕೆ ಊರಿಗೆ ಪಡುವಲು ಅಲದ ಮರನ ಪಟಯನು ಧರ್ಮಪತದ ನೀರ ಯೆತುವದಕೆ ನಾಲು ಸರ್ವಮಾನ್ಯವಾಗಿ ಬಿಟೆಉ . . . ಗಟ ತಿಂಮೋಜ ಗೊಪುಲಪಲಿ ಮಲ್ಲೋಜಯಿವರು ಮುಂತಾದ ವೋಜುಗಳು ಧರ್ಮಡೋಣಿಗೆ ನೀರ ಎತುವ ಕಬಿನದ ಏತದ ಬಾನೆ ಕದಿನದ ಕಟ್ಟು ಯಿಷ್ಟುಂ ಧರ್ಮವನು ತಪದೆ ನಡಸಿ ಬಾಹೆಉ (ಸೌಇಇ. IX-ii, ೬೭೦-೯ ; 1559).
[ಧರ್ಮ + ಡೋಣಿ (<ದ್ರೋಣಿ)]

**ಧರ್ಮತತ್ಪರ** (ನಾ). ಧರ್ಮದ ಆಚರಣೆಯಲ್ಲಿ ಆಸಕ್ತನಾದವನು ; ಧರ್ಮಪರಾಯಣ : ಸಕಳಾಗಮಕೋವಿದರೆಂದು ಧರ್ಮ್ಮತತ್ಪರರೆಂದು ಕೂರ್ತ್ತು ಮಲಯಾಳ ತಪೋನಿಧಿ ದೇವಸಿಂಗಿಜೀಯರ ಪದಯುಗ್ಮಮಂ ಪಡೆದು ಕಟ್ಟಿದರ್ (ಸೌಇಇ. XX, ೯೯-೫೮ ; 1076?).
[ಧರ್ಮ + ತತ್ಪರ]

**ಧರ್ಮತನಯ** (ನಾ). ೧. ಯುಧಿಷ್ಠಿರ; ಧರ್ಮರಾಯಂ : ಶಶಾಂಕಸಂಕಾಶಯಶೋಧವಳಿತಭುವನಂ ತಾಗಿದನವಯವದಿಂ ಬಂದು ಧರ್ಮತನಯನ ಬಲದೊಳ್ (ಪಂಪಭಾ. ೧೨-೩೯) : ಒಡವುಟ್ಟಿದನೆಂದಣಿದೊಡೆ ಕುಡುಗುಂ ರಾಜ್ಯಮನೆ ಧರ್ಮತನಯಂ ನಿನಗಾಂ ಕುಡಲಾರ್ತೆನಿಲ್ಲ (ಗದಾಯು. ೫-೧೯). ೨. ಧರ್ಮವನ್ನು ತನ್ನ ಬಳಿ ಕಲಿತ ಶಿಷ್ಯ, - ವಿದ್ಯಾರ್ಥಿ : ರಾಮದೇವಾಚಾರ್ಯನ ಧರ್ಮತನಯನಾದ ಜಯದೇವಪಂಡಿತನಿಗೆ . . . ಪೂಜಾರ್ಥವಾಗಿ ಕೊಟ್ಟನು (ಕರ್ನಾಇ. ೮೯). ೩. ಧರ್ಮಶಾಸ್ತ್ರದ ಪ್ರಕಾರ ಮಗನೆನಿಸಿಕೊಳ್ಳುವವನು. [ಧರ್ಮ + ತನಯ]

**ಧರ್ಮತೂಂಬು** (ನಾ). ಧರ್ಮಾರ್ಥವಾಗಿ ಕಟ್ಟಿಸಿದ ತೂಬು : ಇದುವೆ ಸೊಡೂಬು ನೊಯ್ಯವಾಲರಯ್ಯಮ್ಮನ್ಗೆ ಧರ್ಮತೂಂಬುಂ ಕೊಟ್ಟರ್ (ಎಕ್. XIV, ತಿರುಮ. ೨೫೩-೧೨ ; ಸು. 800). [ಧರ್ಮ + ತೂಂಬು]

**ಧರ್ಮದ** (ನಾ). ಧರ್ಮ ಮಾಡುವವನು; ಧರ್ಮಿಷ್ಠ : ಪ್ರಿಯಮಾದುದು ಧರ್ಮಂ ಪೃಥ್ವಿಯ ಸೂನುವಿನಿಂದಧರ್ಮಮಂತದು ತಾನಪ್ರಿಯಮಾಯ್ತು ತನಗೆ ಸಹಜಾರಿಯಿಂದಮೇನಾ ಧರಾಧಿಪಂ ಧರ್ಮದನೋ (ವರ್ಧಮಾ. ೭-೫೫) : ಧರ್ಮದರಾಗೆ ಮೇಗೆ ಸುಖಿಯಪ್ಪುದು ಸಂದೆಯಮೆಂದು ಗೆಯ್ಯದಿರ್ಪೋದು ಮರುಳ್ತನಂ ತಗುಳ್ದಮಂದಿರಂ (ಬಂಹರಿ. ೧೨-೧೪).
[ಸಂ.]

**ಧರ್ಮದರ್ಶಿ** (ನಾ). ಛತ್ರ, ದೇವಾಲಯ, ಮಠ ಮುಂತಾದ ಸಾರ್ವಜನಿಕ ಸಂಸ್ಥೆಗಳಿಗೆ ಸೇರಿದ ಆಸ್ತಿಯನ್ನು ನೋಡಿಕೊಳ್ಳುವ ಗೌರವ ಸದಸ್ಯ ; ಟ್ರಸ್ಟಿ : ದೇವಸ್ಥಾನಕ್ಕೆ ಹೀಗೆ ಬಂದ ದತ್ತಿಗಳನ್ನು ರಕ್ಷಿಸಲು ನಾಲ್ಕಾರು ಜನರನ್ನು ಧರ್ಮದರ್ಶಿಗಳಾಗುವಂತೆ ಕೇಳಿಕೊಳ್ಳುತ್ತಿದ್ದರು (ಕಹಾಇ. ೦೬೯) : ಕಂದಾಯ ರಾಜ ಅಥವಾ ರಾಜಾಧಿಕಾರಿಗಳ ಸ್ವಂತ ವೇತನವಲ್ಲ ; ಅದು ಪ್ರಜೆಗಳಿಗೆ ಸೇರಿದುದು. ಆದಕ್ಕೆ ಅವರು ಬರಿಯ ಧರ್ಮದರ್ಶಿ ಮಾತ್ರ (ಭಾರರ. ೩೬೦) : ಅಂತರರಾಷ್ಟ್ರೀಯ ಹಣಕಾಸಿನ ವಿಷಯಗಳ ಬಗ್ಗೆ ಧರ್ಮದರ್ಶಿ (Trustee) ಅಥವಾ ಏಜಂಟ್ ಆಗಿ ವರ್ತಿಸುವುದು ಮೊದಲನೆಯ ಬಗೆಯ ಕಾರ್ಯಾಚರಣೆಯಾಗಿದೆ (ಅಂಕಸಂ. ೧೯೬). [ಸಂ. ಧರ್ಮದರ್ಶಿನ್]

**ಧರ್ಮದರ್ಶಿಮಂಡಲಿ** (ನಾ). ಧರ್ಮದರ್ಶಿಗಳ ಸಮಿತಿ : ಭಗವಂತನಿಂದ ಸಂಸ್ಥಾಪನೆಗೊಂಡಿದ್ದ ಈ ಸುಸ್ಥಿರ ಸಂಸ್ಥೆಗೆ ಕೇವಲ ಮಾನವೀಯ ಸಂಸ್ಥೆಯಾದ ಧರ್ಮದರ್ಶಿಮಂಡಲಿಯ ರಕ್ಷಣೆ ಅತ್ಯಗತ್ಯವಾಗಿತ್ತು (ಪುನರು. ೩೯೩). [ಧರ್ಮದರ್ಶಿ + ಮಂಡಲಿ]

**ಧರ್ಮದಾಯ** (ನಾ). ಸಾರ್ವಜನಿಕ ಧರ್ಮಕಾರ್ಯಗಳನ್ನು ನಡೆಸುವುದಕ್ಕಾಗಿ ಬಿಟ್ಟುಕೊಟ್ಟ ದತ್ತಿ, - ಕಾಣಿಕೆ, - ದೇಣಿಗೆ : ಪೂರ್ವದಿಂದ ನಡೆದುಬರುತ್ತಿರುವ ದೇವದಾಯ ಬ್ರಹ್ಮದಾಯ ಧರ್ಮದಾಯ . . . ಉಂಬಳಿ ರಕ್ತಕೊಡಗೆ ಮುಂತಾದುವೇನೂ ಹೆಚ್ಚುಕಡಮೆಯಾಗದಂತೆಯೂ . . . ನಮ್ಮ ಕರಣಿಕರು ಎಚ್ಚತ್ತಿರಬೇಕು (ಬಿರುಗಂ. ೩೬-೨೧).
[ಧರ್ಮ + ದಾಯ]

**ಧರ್ಮದೀಕ್ಷೆ** (ನಾ). ಯಾವುದಾದರೂ ಒಂದು ಮತಕ್ಕೆ ಸೇರಿಸಿಕೊಳ್ಳುವಾಗ ಮಾಡುವ ಸಂಸ್ಕಾರ : ಕ್ರಿಸ್ತೀಯಧರ್ಮದ ಅಭ್ಯಾಸವಾದ ನಂತರ ನಾಲ್ಕುತಿಂಗಳಿಗೆ ಮುಂಬಯಿಯ ಭೇಂಡೀಬಜಾರದಲ್ಲಿರುವ ಅಮೆರಿಕನ್ ಮಿಶನ್ನದ ಚರ್ಚಿನಲ್ಲಿ ಧರ್ಮದೀಕ್ಷೆ ಕೊಟ್ಟರು(ಸ್ಮೃತಿಚಿ. ೧೮೬).
[ಧರ್ಮ + ದೀಕ್ಷೆ]

**ಧರ್ಮದೂರ** (ನಾ). = ಧರ್ಮಚ್ಯುತ : ಧರ್ಮದೂರನು ನಿನ್ನವನು ಸತ್ಕರ್ಮಬಾಹಿರನಾತ್ಮರಚಿತವಿಕರ್ಮದೋಷದೊಳಿಳಿವ ನಿನ್ನವನೆಂದನಾ ವಿದುರ (ಕುಮಾ.ಉ. ೬೦೩. ೩-೦೩ ಹೆಚ್ಚಿನ ಪದ್ಯ).
[ಧರ್ಮ + ದೂರ]

ಲಿಂಗದಲ್ಲಿ ಕಠಿಣವುಂಟು . . . ಪ್ರಸಾದದಲ್ಲಿ ಅನುರುಚಿಯುಂಟು ಈ ತ್ರಿವಿಧದಲ್ಲಿ ಭಾವಭೇದವನರಿಸುವೆನು ಕೂಡಲಸಂಗಮದೇವಾ ಧಾರೆವಟ್ಟಲನ್ನ ಭಕ್ತಿ (ಬಸವ. ೨೮೫); ಬಿಟ್ಟು ರಸವನುಜಿ ಕಸವ ಪಿಡಿವ ಧಾರೆವಟ್ಟಲ ಪೋಲ್ವ ದೂಸಕರು (ನಾಗಕು. ೧-೭೨). [ ಧಾರೆ + ಬಟ್ಟಲು(<ಬಟ್ಟಲ್) ]

**ಧಾರೆಸೀರೆ** (ನಾ). ಧಾರೆಯೆರೆದು ಕೊಡುವಾಗ ಹೆಣ್ಣಿಗೆ ಉಡಿಸುವ ಸೀರೆ : ಪೆಟ್ಟಿಗೆಯ ಮೇಲೆ ಮುಚ್ಚಳಕ್ಕೆ ಬಿಗಿದ ಧಾರೆಸೀರೆ ಮತ್ತು ಕುಪ್ಪಸ (ನನ್ನೂರು. ೮೩). [ ಧಾರೆ + ಸೀರೆ ]

**ಧಾರೆಹುಳಿ** 'ದಾರೆಹುಳಿ' ನೋ.

**ಧಾರೋದಕ** (ನಾ). = ಧಾರೆನೀರು : ಧಾರೋದಕದಿಂದ ಯಥಾವಿಧಿಯಾಗಿ ಧಾರೆಯೆರೆದು ... ಶಾಂತಲೆಯನ್ನು ಆ ಮಹಾಭಾಗನಿಗೆ ಇತ್ತರು (ಶಾಂತಲಾ. ೦೦೫). [ ಸಂ. ]

**ಧಾರೋಷ್ಣ** (ಗು). ೧. (ಹಾಲು) ಕರೆಯುವಾಗ ಧಾರೆಯಲ್ಲಿ ಇರುವಷ್ಟು ಬಿಸಿಯ: ಆರೋಗ್ಯವುಳ್ಳ ದನದ ಆಗ ತಾನೆ ಕರೆದ ಧಾರೋಷ್ಣ ಹಾಲು ಕುಡಿಸುವುದು (ಮನೆಮ. ೨೩). (ನಾ). ೨. ಆಗ ತಾನೇ ಕರೆದ ಬೆಚ್ಚನೆ ಹಾಲು : ಏಲಕ್ಕಿ, ಜೀರಿಗೆಯುಂ ಸಮಸಕ್ಕರೆಗೂಡಿ ನಿತ್ಯವು ೨ ವರಹತೂಕವಂ ಧಾರೋಷ್ಣದಲ್ಲಿ ತೆಗೆದುಕೊಳ್ಳಲು ಪಿತ್ತಹರ (ಸಕಳವ. ೦೪೨). [ ಸಂ. ]

**ಧಾರ್ತರಾಷ್ಟ್ರ** (ನಾ). ೧. ಧೃತರಾಷ್ಟ್ರನ ಮಗ; ಕೌರವ; (ವಿಶೇಷವಾಗಿ) ದುರ್ಯೋಧನ ; P ನೂರು ಜನ ಧಾರ್ತರಾಷ್ಟ್ರರ (ಧೃತರಾಷ್ಟ್ರನ ಪುತ್ರರ) ಹೆಸರುಗಳ ಪಟ್ಟಿ ಹೀಗಿದೆ: ದುರ್ಯೋಧನ, ದುಶ್ಶಾಸನ, ದುಸ್ಸಹ, ದುಶ್ಶಲ, ಜಲಸಂಧ, ಸಮ, ಸಹ, ವಿಂದ, ಅನುವಿಂದ, ದುರ್ಧರ್ಷ, ಸುಬಾಹು, ದುಷ್ಪ್ರಧರ್ಷಣ, ದುರ್ಮರ್ಷಣ, ದುರ್ಮುಖ, ದುಷ್ಕರ್ಣ, ಕರ್ಣ, ವಿವಿಂಶತಿ, ವಿಕರ್ಣ, ಶಲ, ಸತ್ವ, ಸುಲೋಚನ, ಚಿತ್ರ, ಉಪಚಿತ್ರ, ಚಿತ್ರಾಕ್ಷ, ಚಾರುಚಿತ್ರ (ಶರಾಸನ), ದುರ್ಮದ, ದುರ್ವಿಗಾಹ, ವಿವಿತ್ಸು, ವಿಕಟಾನನ, ಊರ್ಣನಾಭ, ಸುನಾಭ, ನಂದ, ಉಪನಂದಕ, ಚಿತ್ರಬಾಣ, ಚಿತ್ರವರ್ಮ, ಸುವರ್ಮ, ದುರ್ವಿರೋಚನ, ಅಯೋಬಾಹು, ಮಹಾಬಾಹು, ಚಿತ್ರಾಂಗ, ಚಿತ್ರಕುಂಡಲ, ಭೀಮವೇಗ, ಭೀಮಬಲ, ಬಲಾಕೀ, ಬಲವರ್ಧನ, ಉಗ್ರಾಯುಧ, ಸುಷೇಣ, ಕುಂಡೋದರ, ಮಹೋದರ, ಚಿತ್ರಾಯುಧ, ನಿಷಂಗೀ, ಪಾಶೀ, ವೃಂದಾರಕ, ದೃಢವರ್ಮ, ದೃಢಕ್ಷತ್ರ, ಸೋಮಕೀರ್ತಿ, ಅನೂದರ, ದೃಢಸಂಧ, ಜರಾಸಂಧ, ಸತ್ಯಸಂಧ, ಸದಸ್ಸುವಾಕ್, ಉಗ್ರಶ್ರವ, ಉಗ್ರಸೇನ, ಸೇನಾನೀ, ದುಷ್ಪರಾಜಯ, ಅಪರಾಜಿತ, ಪಂಡಿತಕ, ವಿಶಾಲಾಕ್ಷ, ದುರಾಧರ, ದೃಢಹಸ್ತ, ಸುಹಸ್ತ, ವಾತವೇಗ, ಸುವರ್ಚಸ (ಬಹ್ವಾಶೀ), ಆದಿತ್ಯಕೇತು, ನಾಗದತ್ತ, ಅಗ್ರಯಾಯಿ, ಕವಚೀ, ಕ್ರಥನ, ದಂಡೀ, ದಂಡಧಾರ, ಧನುರ್ಗ್ರಹ, ಉಗ್ರ, ಭೀಮರಥ, ವೀರಬಾಹು, ಅಲೋಲುಪ, ಅಭಯ, ರೌದ್ರಕರ್ಮ, ದೃಢರಥಾಶ್ರಯ, ಅನಾಧೃಷ್ಯ, ಕುಂಡಭೇದೀ, ವಿರಾವೀ, ಚಿತ್ರಕುಂಡಲ, ಪ್ರಮಥ,ಪ್ರಮಾಥೀ (ವೀರ್ಯವಾನ್), ದೀರ್ಘರೋಮ,ದೀರ್ಘಬಾಹು, ಮಹಾಬಾಹು, ವ್ಯೂಢೋರು, ಕನಕಧ್ವಜ (ಕುಂಡಾಶೀ), ವಿರಜಾ. ಹೀಗೆ ಧೃತರಾಷ್ಟ್ರನಿಗೆ ನೂರು ಜನ ಗಂಡುಮಕ್ಕಳೂ ದುಶ್ಶಲಾ ಎಂಬ ಹೆಣ್ಣುಮಗಳೂ ಗಾಂಧಾರಿಯಲ್ಲಿ ಜನಿಸಿದರು. ಯುಯುತ್ಸು ಎಂಬುವನು ಧೃತರಾಷ್ಟ್ರನಿಗೆ ವೇಶ್ಯೆಯಲ್ಲಿ ಹುಟ್ಟಿದ ಮಗ. ಹೀಗೆ ಧಾರ್ತರಾಷ್ಟ್ರರು 'ನೂರೊಂದು ಮಂದಿ' ಎಂದು ಮಹಾಭಾರತದ ಆದಿಪರ್ವದ ೧೧೭ನೆಯ ಅಧ್ಯಾಯದಲ್ಲಿ ಹೇಳಿದೆ (ಗೋರಖಪುರದ ಪ್ರತಿ). ಇವರ ಹೆಸರು ಮತ್ತು ಆನುಪೂರ್ವಿಯಲ್ಲಿ ಬೇರೆ ಬೇರೆ ಪ್ರತಿಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸವು ಕಂಡುಬಂದಿದೆ. (ಶ್ರೀಪತ್ಸ. ೨೨೩ ನೋ) : ಕೆಡೆದನಿಳಾಭಾಗದೊಳ್ ಧಾರ್ತರಾಷ್ಟ್ರಂ (ಪಂಪಭಾ. ೧೪-೯೭); ನಿಜಭುಜಗದೆಯಿಂ ತೂಗಿದಂ ಧಾರ್ತರಾಷ್ಟ್ರಂ (ಗದಾಯು. ೭-೩೦). ೨. ಕೊಕ್ಕು ಮತ್ತು ಕಾಲು ಕಪ್ಪಾಗಿರುವ ಹಂಸ ಪಕ್ಷಿ : "ಕರಿಯವಪ್ಪ ಕಾಲ್ಮೊಗಂಗಳಿಂ ಧಾರ್ತರಾಷ್ಟ್ರಂಗಳೆಂಬುದು" (ಹರಿವಂಯು. ೬೩-೯೯) ; "ಅ ಕಾಲ್ಮೊಗಂ ಕಪ್ಪನಲು ಧಾರ್ತರಾಷ್ಟ್ರವೆನಿಕು" (ಮಂಗರಾ. ೫೦-೭). ೧, ೨ : ಭ್ರೂಲತೆಯ ಸುರಚಾಪದುರುಕೇಶಾಳಿಗಳ ಕಾರ್ಮುಗಿಲಪಾಂಗದ ಸಾಲ ಕುಡಿಮಿಂಚುಗಳ ನೂಪುರರವದ ಪೊಳಗುಗಳ ಆ ಲತಾಂಗಿಯ ಗಮನವೇ ಮಳೆಗಾಲದಂತಿರೆ ಧಾರ್ತರಾಷ್ಟ್ರಕುಲಾಳಿ ನಿಲುವುದೆ ಪವನಜನ ಸಂಪ್ರತಿಯು ಸೇರುವೆಗೆ (ಕುಮ್ಮಾಪು. ೬-೧೭) ; ಅಹಿತರುಗಳಂ ಧಾರ್ತರಾಷ್ಟ್ರರಂ ಕೂಡಿಕೊಂಡಿಹುದಜಿಂದಚಲನಾಗಿಹನೆಂದು ಹರಿಯೊಡನೆ ಬಹ ಪಾರ್ಥನಂ ಕರೆದು ಮೊದಲಿಪ ತೆಜದಿಂದೆ ವಿಂಧ್ಯಾದ್ರಿ ಮುಂದೆಸದುದು (ಕೃಮಿಥಾ. ೧೧-೨). [ ಸಂ. ]

**ಧಾರ್ಮಿಕ** (ಗು). ೧. ಧರ್ಮಕ್ಕೆ ಸಂಬಂಧಪಟ್ಟ; ಮತ ಅಥವಾ ದರ್ಶನಕ್ಕೆ ಸಂಬಂಧಿಸಿದ : ವಿಚಾರಪರ ತಾತ್ವಿಕ ಧಾರ್ಮಿಕಗ್ರಂಥಗಳು ರವೀಂದ್ರರನ್ನು ಸಾಹಿತ್ಯಲೋಕದ 'ಗುರುದೇವ'ನನ್ನಾಗಿ ಮಾಡಿವೆ (ಧರ್ಮಸಾ. ೫೦) ; ಯಾವುದಾದರೂ ಧಾರ್ಮಿಕ ಅಥವಾ ಸಾಂಪ್ರದಾಯಿಕ ಸಂಸ್ಥೆಯ ಕಾರ್ಯಕಲಾಪಗಳ ಸಂಬಂಧದ ಯಾವನಾದರೂ ಪದಧಾರಿಯಾಗಲಿ . . . ಯಾವುದಾದರೂ ವಿಶಿಷ್ಟ ಸಂಪ್ರದಾಯಕ್ಕೆ ಸೇರಿದವನಾಗಿ ಇರಬೇಕೆಂದು ಉಪಬಂಧವನ್ನು ಮಾಡಿರುವ ಯಾವುದೊಂದು ವಿಧಿಯ ಅಮಲಿಗೂ ಬಾಧಕವಾಗತಕ್ಕುದಲ್ಲ (ಭಾಧಾನ. ೯). ೨. ಧರ್ಮಬುದ್ಧಿಯ; ಧರ್ಮಿಷ್ಠನಾದ : ಆ ಬರಗೆಟ್ಟ ಬಡ ಹುಡುಗರು ಉಣ್ಣುವ ಸಂಭ್ರಮ ನೋಡಿ, ಆ ಧಾರ್ಮಿಕ ವೈದ್ಯನಿಗೆ ಪರಮಸಂತೋಷವಾಯಿತು (ಮುಂಬಯಿ. ೪-೭೮). (ನಾ). ೩. ಧರ್ಮದಿಂದ ಕೂಡಿದುದು ; ಪುಣ್ಯಕರವಾದುದು: ಕೃತಯುಗಮಾದುದು ಕಲಿಯುಗವಾತಿ ಧಾರ್ಮಿಕಮಾಯ್ತು ವಿಕ್ರಮಾದಿತ್ಯನೃಪಂ ಪ್ರತಿಪಾಳಿಪ ರಾಷ್ಟ್ರಂ (ಎಇ. XXVIII, ೫-೯ : 1082). ೪. ಧರ್ಮವನ್ನು ಆಚರಿಸುವವನು : ಬಸವಾಯಂ ಕವಿ ವಾಗ್ಮಿ ದೀರ್ಘಮುಖಕಂಠಂ ಧಾರ್ಮಿಕಂ ತ್ಯಾಗಿ . . . ಧನುರ್ಗೇಹಜಂ (ಜಾತಕಿ. ೧೭-೯) ; ಧರ್ಮಂ ಧಾರ್ಮಿಕನಿಂದೆ ನಿಲ್ವುದದಜಿಂದು ಧಾರ್ಮಿಕಾಗ್ರೇಸರಂ ಧರ್ಮಂ (ಅನಂಪು. ೭-೭೩) ; ಕಾಪಥವೇಕೆ ನಿಮಗಿದು ಪಾಂಡುಪುತ್ರರು ನೀವು ಧಾರ್ಮಿಕರು (ಕುಮ್ಮಾಆ. ೧೭-೩೪) ; ಫಲಸಂಪ್ರಸರ ಛತ್ರುವನೆಸಗಿಯುಪವನ ವೆಸದುದ್ದೆ ಧಾರ್ಮಿಕನವೊಲು ಯದುರಾಯನಿದಿರಿನಲಿ (ಕುಮ್ಮಾಪು. ೭-೨೪). ೫. ಬಿಲ್ಲನ್ನು ಹಿಡಿದಿರುವವನು. ೪, ೫ : ಮಾಣಿಯ ಕೌಂಕುಟ ಚರಿತ ಪುರಾಣದ ಕವಳಿಗೆ ಸಮಾನಮಾಯ್ತುಮಳವಚೋಬಾಣಂ ತೆಕ್ಕನೆ ತೀವಿದ ತೂಣೀರತಳಾಗ್ರಭಾಗದೊಳ್ ಧಾರ್ಮಿಕನಾ (ಅನಂಪು. ೨-೯೩). [ ಸಂ. ]

**ಧಾರ್ಮಿಕಜನ** (ನಾ). ಧರ್ಮದಲ್ಲಿ ಶ್ರದ್ಧೆಯುಳ್ಳ ಜನ; ಧರ್ಮಿಷ್ಠರಾದ ಮಂದಿ : ಧಾರ್ಮಿಕಜನಜನಿತಾನಂದಸಂದೋಹವಿದ್ಯಾರಸದೊಳ್ ಸಂಸಾರ ಸಾರೋದಯವಿರಚಿತದೊಳ್ ವಾಗ್ವಧೂಮುದ್ರೆಯೊಳ್ ಮು ದ್ರಿ ಸಿ ನಿಂದತ್ತಾದಿತೀರ್ಥೇಶ್ವರನ ಚರಿತದೊಳ್ ವಾಕ್ಯಮಾಣಿಕ್ಯಕೋಶಂ (ಆದಿಪು. ೧೬-೭೯). [ ಧಾರ್ಮಿಕ + ಜನ ]

**ಧಾರ್ಮಿಕಜಿಜ್ಞಾಸೆ** (ನಾ). ೧. ಧರ್ಮವನ್ನು ಕುರಿತ ಆಸಕ್ತಿ, - ಕುತೂಹಲ. ೨. ಧರ್ಮವನ್ನು ಕುರಿತ ವಾದ : ಅನುಭವಮಂಟಪದಲ್ಲಿ ನಡೆದ ಧಾರ್ಮಿಕಜಿಜ್ಞಾಸೆಯ ಸಮಯದಲ್ಲಿ ಅಪಾರವಾದ ವಚನರಾಶಿ ನಿರ್ಮಾಣವಾಯ್ತು (ಶೂನ್ಯಕು. ೨೫). [ ಧಾರ್ಮಿಕ + ಜಿಜ್ಞಾಸೆ ]

**ಧಾರ್ಮಿಕತತ್ವ** (ನಾ). ಧರ್ಮಕ್ಕೆ ಸಂಬಂಧಿಸಿದ ಸಿದ್ಧಾಂತ : ಶೂನ್ಯ ಸಂಪಾದನೆಯಲ್ಲಿ ಅನೇಕ ಧಾರ್ಮಿಕತತ್ವಗಳ . . . ಪ್ರಸಕ್ತಿ ಬರುತ್ತದೆ (ಶೂನ್ಯಕು. ೧೩೯). [ ಧಾರ್ಮಿಕ + ತತ್ವ$_1$ ]

**ಧಾರ್ಮಿಕತನ** (ನಾ). ಸದಾಚಾರಸಂಪನ್ನತೆ ; ಗುಣವಂತಿಕೆ ; ಧರ್ಮಪರತೆ : ವಿದೇಹ ಪರಂಪರೆಯ ನೃಪರ ಚರಿತವನು ಕೊಂಡಾಡಿ ಜನಕನ ನಿರತಿಶಯವಂಶಪ್ರಸಿದ್ಧಸ್ಫುರಿತಧಾರ್ಮಿಕತನವನೊರೆದನು ಮುನಿ ವಸಿಷ್ಠಂಗೆ (ತೊರರಾ. ೧-೧೬-೨೦). [ ಧಾರ್ಮಿಕ + – ತನ ]

**ಧಾರ್ಮಿಕತೆ** (ನಾ). = ಧಾರ್ಮಿಕತನ : ಅಜಂತಾಕಲೆಯಲ್ಲಿನ ಮಾನವೀ ಲಕ್ಷಣ, ಸಂತೋಷ, ನಯವಾದ ಉದ್ದೀಪನ, ಪರಿಶುದ್ಧ ಧಾರ್ಮಿಕತೆ ಇವೆಲ್ಲವೂ ರಜಪೂತ ಕಲೆಯಲ್ಲಿದೆ (ಭಾರದ. ೫೨೯). [ಸಂ. ಧಾರ್ಮಿಕತಾ ]

**ಧಾರ್ಮಿಕವೃತ್ತಿ**(ನಾ). ೧. ಧರ್ಮಕ್ಕೆ ಸಂಬಂಧಪಟ್ಟ ವೃತ್ತಿ,-ನಡವಳಿಕೆ. ೨. ಬಿಲ್ಲನ್ನು ಹಿಡಿದಿರುವುದು. ೧, ೨: ವಿತತಗುಣಮಾರ್ಗಣಾಸಕ್ತತೆಯಿಂದನವರತ ಮೋಕ್ಷಸಂಧಾನಮನಸ್ಕತೆಯಿಂ ಧಾರ್ಮಿಕವೃತ್ತಿಯಿನತಿಶಯಿಪಂ ನೇಮಿಚಂದ್ರಸೈದ್ಧಾಂತೀಶಂ (ಚಂದ್ರಪು. ೧-೩೪). [ ಧಾರ್ಮಿಕ + ವೃತ್ತಿ₂ ]

**ಧಾರ್ಮಿಕಶಿಕ್ಷಣ** (ನಾ). ಮತೀಯ ತತ್ತ್ವಗಳ ಹಾಗೂ ಆಚಾರಗಳ ಬೋಧನೆ: ರಾಜ್ಯನಿಧಿಯಿಂದ ಸಂಪೂರ್ಣವಾಗಿ ಪೋಷಿತವಾದ ಯಾವುದೇ ವಿದ್ಯಾಸಂಸ್ಥೆಯಲ್ಲಿ ಯಾವ ಧಾರ್ಮಿಕ ಶಿಕ್ಷಣವನ್ನೂ ಕೊಡತಕ್ಕದಲ್ಲ (ಭಾಧಾನ. ೧೬). [ ಧಾರ್ಮಿಕ + ಶಿಕ್ಷಣ ]

**ಧಾರ್ಷ್ಟಿಕ** (ಗು). ದಿಟ್ಟನಾದ ; ಧೈರ್ಯವಂತನಾದ. [ ಸಂ. ]

**ಧಾರ್ಷ್ಟ್ಯ** (ನಾ). ೧. ಉದ್ಧಟತನ ; ಔದ್ಧತ್ಯ ; ಕೊಬ್ಬು : ಬಿನ್ನಪಂಗೆಯ್ವುದೆ ಧಾರ್ಷ್ಟ್ಯಂ ಸೇವೆಯುಂ ಚಾಪಲಂ . . . ಈವುದೆ ವಿಭವದ ಗರ್ವಂಬೊಲಾದಪ್ಪುದೀಗಳ್ (ಕಾದಂಬ. ೧೧೩) ; ವಿದೂರೆ ಪೆಂಪೂ ಲಕ್ಷ್ಮಿ ನಿಜವಲ್ಲಭೆ ಜಾಹ್ನವಿ ತನ್ನ ಪಾದಪದ್ಮೋದಕಂ ... ಎಂದೆನಿಪ್ಪ ದುಗ್ಧೋದಧಿತಲ್ಪನಂ ನರನಭಿಷ್ಟುತಿಗೆಯ್ವುದು ಧಾರ್ಷ್ಟ್ಯಮಲ್ಲವೇ (ಜಗವಿ. ೧-೨೦) ; ಬಂಗಾಳಿ ಭಾಷೆಯ ಪರಿಚಯವಿಲ್ಲದ ನಾನು ಠಾಕೂರರ ಶೈಲಿಯ ಪ್ರಸ್ತಾಪ ಮಾಡಿರುವುದು ಒಂದು ದೃಷ್ಟಿಯಿಂದ ಧಾರ್ಷ್ಟ್ಯ (ನಿಬಂಧ. II, IX ಮುನ್ನುಡಿ). ೨. ದಿಟ್ಟತನ ; ಕೆಚ್ಚು : ಧೈರ್ಯ : ಸರ್ ಕೆ. ಶೇಷಾದ್ರಿ ಅಯ್ಯರ್ ಅವರ ಧಾರ್ಷ್ಟ್ಯದಿಂದಲೂ . . . ದೇಶವು ಹೊಸರೂಪವನ್ನೇ ತಾಳಿತು (ಮೈವಾಸು. ೨೦). [ ಸಂ. ]

**ಧಾರ್ಷ್ಣ್ಯ** (ನಾ). ಉದ್ಧಟತನ ; ಜೋರು ; ಜುಲುಮು ; ಒರಟುತನ. [ ಸಂ. ]

**ಧಾಲಕೆ ?** (ನಾ). (?) : ಸ್ವಸ್ತ್ಯಕಾಳವಂಷದೇವ ಶ್ರೀಪೃಥು(ಥಿ)ವೀವಲ್ಲಭ ಮಹಾರಾಜಾಧಿರಾಜನಾನೆವೆಡೆ(ಡ)ಜ್ಗಂ ಮದಗಜಮಲ್ಲಂ ಧಾಲಕೆ ನಲ್ಲಾತಂ ಶ್ರೀಕನ್ನರದೇವನ ರಾಜ್ಯಮುತ್ತರೋತ್ತರಂ ಸಲುತ್ತಿರೆ (ಇಆ. XII,೨೫೬-೨; ೨೬1). [ P ಇದು 'ಥಲಕೆ' ಎಂಬುದರ ಅಪಲಿಖಿತವಿರಬಹುದು ]

**ಧಾವ** (ನಾ). (ಉಕ) ಬಂಡಿಯ ಗಾಲಿಗಳಿಗೆ ಸುತ್ತಲೂ ಬಡಿದಿರುವ ಕಬ್ಬಿಣದ ಪಟ್ಟಿ ; ಚಕ್ರದ ಪಟ್ಟಿ ; ಗಾಡಿಪಟ್ಟಿ ; ಗಾಡಿಯ ಹಳಿ : ಧಾವ ಬಿಗಿಸುವುದಕ್ಕೆ ಗಾಡಿಯ ಗಾಲಿಗಳನ್ನು ಕಮ್ಮಾರನ ಮನೆಗೆ ಕಳಿಸಿದೆ (ರೂಢಿ). [ ←ಮರಾ. ಧಾವ ]

**ಧಾವಂತ, ದಾವಂತ** (ನಾ). ೧. ಅವಸರ ; ಗಡಿಬಿಡಿ ; ತರಾತುರಿ : ನಮ್ಮ ಧಾವಂತದಲಿ ನಮಗೆ ಕಾಣುವುದೆಲ್ಲ ಕೋಳಿ ಬೆದಕಿದ ಬೂದಿರಾಶಿ (ಶಿರಾಲ. ೮೬-೬) ; ಈ ದಿನ ರಜ. ಧಾವಂತವೇನೂ ಇಲ್ಲ (ಜೀವಾತ್ಮ. ೧೩೮) ; ಈಗ ಇಷ್ಟೊಂದು ವಿದುಸಿರು ಬರುವಂಥ, ಕೆಲಸಕಾರ್ಯಗಳ ಧಾವಂತವಿರಲಿಲ್ಲ (ನಿಬಂಧ. II, ೩೧). ೨. ಕಕ್ಕುಲತೆ ; ಮೋಹ ; ಮಮಕಾರ : ಊರು, ಕೇರಿ, ದೇಶ ಅಂತ ಧಾವಂತ ಮಾಡಬಾರದು. ದೇಶವೆಲ್ಲ ನಮ್ಮ ಸಂಸಾರ . . . ಅಂತ ಭಾವಿಸಬೇಕು (ಚಂಗೂಲಿ. ೧೩). ೩. ಕಠಿನವಾದ ಕೆಲಸ ; ಘನವಾದ ಕಾರ್ಯ (?) : ನನಗೇನ ಅಡಿಗೆ ಧಾವಂತೇನ ಬಿಡ (ರಕ್ತಧ್ವ. ೨೩೦). ೪. (?) : ಅಷ್ಟಾಂಗ ಬಂಧಕವು ಆಸನದ ಬಂಧಕವು ದೃಷ್ಟಿ ಕುಡುರಿಸುವ ಧಾವಂತ ಬಂಧಕವು (ಚಿದಾಕೋ. ೧೦೦-೬). **ದಾವಂತ:** ೫. ಬಳಲಿಕೆ ; ಸಂಕಟ ; ಆಯಾಸ ; ಶ್ರಮ : ನಡಯಿಂದ ದಾ[ಪಾಠಾಂ. ಧಾ]ವಂತಮಾಯಿತು (ಪಂಕರಾ. ೨-೨೪-೫೨) ; ಬಲರಾಮನಿಗೆ ಹಸಿವಿನ ದಾವಂತದಿಂದ ವಾಸನಾಶಕ್ತಿ ಎರಡರಷ್ಟಾಗಿ ಭಕ್ಷ್ಯಗಳನ್ನಿಟ್ಟಿದ್ದ ಅಲಿಮಾರುವಿನ ಬಳಿಗೆ ಅಂಬು ಎಸೆದಂತೆ ಆತ ಹೋಗಿನಿಂತನು (ಕೊನಕ್ಕ. ೨೬). [?./ತಮಿ. ತಾವನ್ತ ; ತೆಲು. ದಾವಂತ ]

**ಧಾವಂತಪಡು, ದಾವಂತಬಡು** (ಕ್ರಿ). ೧. ಆತುರಪಡು ; ನೀವೇ ಬೀಗರಾಗುವ ಹಾಗೆ ಧಾವಂತಪಡುತ್ತಿದ್ದೀರಲ್ಲಪ್ಪಾ (ರಾಗಿಹ. ೧೮೨). **ದಾವಂತಬಡು :** ೨. ಬಳಲಿಕೆಯನ್ನು ಹೊಂದು ; ಬಳಲು ; ಆಯಾಸಪಡು : ದಾವಂತಬಡುತ ತನ್ನಿಚ್ಛೆಯನೆ ಘೋಷಿಸುವ ಭಾವವೆಂತಹ ಭಕುತಿ (ಮಂಕುಕ. ೫೮೦). [ ಧಾವಂತ + ಪಡು₁ ]

**ಧಾವಕ** (ಗು). ೧. ಶುದ್ಧಿಗೊಳಿಸುವ ; ತೊಳೆಯುವ. 'ಅಸಿಧಾವಕ' ಪರಾ. ೨. ಓಡುವ; ವೇಗವಾಗಿ ಹೋಗುವ. [ ಸಂ. ]

**ಧಾವತಿ, ದಾವತಿ** (ನಾ). ೧. ದಣಿವು ; ಬಳಲಿಕೆ ; ಆಯಾಸ ; ಶ್ರಮ : ಈಸು ಧಾವತಿಯಿಂದೆ ನಾ ಕಡುಘಾಸಿಯಾದೆನು ಬೆಂದ ಹುಣ್ಣನು ಕೀಸುವರೆ ಕಂಬಿಯಲಿ ಕೇಳಕಟೆಂದಳಾ ಮಾಯೆ (ಪ್ರಭುಲೀ. ೭-೬೪) ; ಭಾವಿಸಿ ಗುಳಿಗೆಯನಿತ್ತರೆ ಜ್ವರಗಳ ಧಾವತಿ ಪರಿಹರವಹುದು (ಸಾಳ್ವಸಾಂ. ೧೯) ; ನಾನಾ ತರದ ದುಃಖ ಧಾವತಿಯಿಂದೆ ಆತ್ಮ ಕೆಟ್ಟು ನಷ್ಟವಾಗಿ ಹೋಯಿತ್ತು ನೋಡಾ (ಅಜಂಡೇ. ೧೦-೬) ; ಇಬ್ಬರೂ ತನಗಾಗಿ ಪಡುತ್ತಿದ್ದ ಧಾವತಿ ಕಂಡು ಅವಳು ನಕ್ಕಳು (ಶನಿಸಂ. ೧೧೮). ೨. ನೋವು ; ತೊಂದರೆ ; ದುಃಖ : ಭವವುಳ್ಳನ್ನಕ್ಕರ ಧಾವತಿ ಮಾಣದು ಶರೀರ ಉಳ್ಳನ್ನಕ್ಕರ ಅವಸ್ಥೆ ಮಾಣದು (ಅವಚಂ. ೩೦-೧೩೫) ; ಆಯ್ಯ ನಿಮ್ಮ ಮಹಂತರ ಕೂಡಿಯಗಲುವ ಧಾವತಿಯಿಂದ ಸಾವುದೇ ಕರ ಲೇಸು ಕಂಡಯ್ಯ (ಮಹಾದೇ. ಬ. ೬೦-೧೯೯) ; ಈ ಸತಿಯನೀ ಶುಚಿಯನೀ ಪತಿವ್ರತೆಯ ನಾನೀಸು ಧಾವತಿಗೊಳುಗುಮಾಡಿದೆನು (ಹದಕಾ. ೧೩-೪೬) ; ಸ್ಮೃತಿಪುರಾಣದೊಳು ತೊಳಲಿ ಕಂಗಾಣದಲೆ ಪರಿಪರಿಯ ಮಾರ್ಗಗಳ ಹಿಡಿಹಿಡಿದು ಧಾವತಿಯೊಳು ಬಳಲುವರು (ಪಂಕರಾ. ೫-೨೧-೧೩) ; ದೇವನಲ್ಲಿ ಬಕುತಿಭಾವದಲ್ಲಿ ನಿಷ್ಠೆ ನೋವಿಗೆ ಹೆದರಬೇಡವ್ವ ಸಂಸಾರದಿ ಧಾವತಿ ತಿಳಿದು ನಡೆಯವ್ವ (ಸಿದ್ಧಪು. ೧-೬೫). ೩. ದುಡಿಮೆ ; ಕೆಲಸ ; ಉದ್ಯೋಗ; ಪರಿಶ್ರಮ : ತನ್ನ ತಾನರಿಯುವ ಧಾವತಿ ಹಗುರವಲ್ಲ (ಬಾಳಬ. ೨೦) ; ಧಾವತಿ ಮುಗಿದ ಮೇಲೆ ನೆಲದ ಮೇಲೆ ಅವನ ದೃಷ್ಟಿ ಬಿತ್ತು (ಕೃಹಿಅ. ೧೦೬) ; ಆಯುಧವನು ಹೂಡದೇನೆ ಆದ ಪಾರ್ಥಸಾರಥಿ ಯುದ್ಧವೆ ಸ್ಥಿರವಾದರೂನು ಶಾಂತಿಗಾಗಿ ಧಾವತಿ (ನಲಮು. ೪೦-೮). ೪. ಗಡಿಬಿಡಿ ; ಅವಸರ : ಬಹಳ ಧಾವತಿಯಲ್ಲಿ ಹೊರಟು ಬರಬೇಕಾಯ್ತು (ರೂಢಿ). **ದಾವತಿ :** ೧. ಕಿತಕಂ ದೇವತೆಗೇಕೆ ಪೇಟ್ ಪರಸಿ ಗಂಡಂ ಬೇಡಿಕೊಂಡೆನ್ನ ಪೆಂಡತಿಗಿತ್ತ್ಯ ಪುಟ್ಟಿತೊಂದು ಪೆಣ್ಣಿದನೊಲ್ಲಳ್ನೀನೆ ಕೊಳ್ಳದ ದಾವತಿಯಕ್ಕುಂ (ಅರ್ಧನೇ. ೭-೫೦) ; ಬಲು ದಾವತಿಯಾಯ್ತು ಮಂತ್ರಿ ನಿನಗೆ (ಜನರಾ. ೬-೧೩೪); ಸಂಸ್ಕೃತಿಯ ದಾವತಿಯ ಕಳೆದು ಘನಮುಕ್ತಿಯೆಂದೆಂಬ ಭಾವೆಯೊಡವೆರಸಿ (ಕೃಕವ. ೧-೧-೫); ಹೈಮಾವತಿಯ ಅಡಿಗೆಯ ದಾವತಿಯನ್ನು ತಪ್ಪಿಸುವುದು (ಎರಸಿ. ೧೦೩). ೨. ತನ್ನ ಸುತನಾದ ಮಾಲುಹಣಗೆ ಆತನು ದಾ[ಪಾಠಾಂ. ಧಾ]ವತಿಯಿಲ್ಲದಂತೆ ದಿನಕ್ಕೆ ಸಾವಿರ ಹೊನ್ನ ಬಳಸಿ ಸುಖವಿರಲಿಯೆಂದು (ಭ್ರರಸೂ. ೪೯). ೩. "ದಾವತಿ = ದುಡಿಮೆ ; ಕೆಲಸ"(ಜಾನಕೋ. ೪); ಹೊತ್ತ ಹೊರೆಗಳಿಂದ ನೆತ್ತಿ ಬೋರೆಯು ಹರಳೊತ್ತಿ ಪಾದವು ಬೊಕ್ಕೆಯೊಡೆದು ಹಸ್ತಕೆ ದಾವತಿಯಿಲ್ಲವೆಂದೆನಲಾಗ (ಅಮುಸಾಂ. ೬-೫) ; ಹಿರಿಯ ಗೌಡನು ದಾವತಿಗಳನ್ನು ಹಂಚಿ ಹಾಕುವುದರಲ್ಲಿಯೂ ... ಕೆಲಸ ಸರಿಯಾಗಿ ನಡೆದಿದೆಯೊ ಇಲ್ಲವೊ ಎಂಬುದನ್ನು ನೋಡುವುದರಲ್ಲಿಯೂ ತನ್ನ ಎಲ್ಲ ವೇಳೆಯನ್ನು ಕಳೆಯುತ್ತಿದ್ದನು (ಮತಂಓ. ೫೩). 'ಧಾವಂತ' ಪರಾ.

ದಾವತಿ ಬೀಳು = ಕಷ್ಟಪಡು; ಶ್ರಮಿಸು: (ಆ). ದಾವತಿ ಮಾಡು = ದಾವತಿ ಬೀಳು: (ಆ). [ ?./ಮರಾ. ಧಾವತೀ ]

**ಧಾವತಿಗೆಡು** (ಕ್ರಿ). ಕೆಲಸವಿಲ್ಲದಿರು : ಧಾವತಿಗೆಟ್ಟು ನಾ ತಿರುಗೆನು ಕರುಣೆಯ ತೀವಿದ ಸಾಕಾರ ನೀನಿರಲು (ಸಿದ್ಧಪು. ೬-೫). [ಧಾವತಿ+ಕೆಡು₁]

**ಧಾವತಿಗೊಳ್**, ದಾವತಿಗೊಳ್, ಧಾವತಿಗೊಳು, ಧಾವತಿಗೊಳ್ಳು (ಕ್ರಿ). ೧. ಆಯಾಸಪಡು ; ಬಳಲು; ದಣಿ: ದೇವ ನಿಮ್ಮ ಪೂಜಿಸಿ ಧಾ[ಪಾಠಾಂ. ದಾ]ವತಿಗೊಂಬಡೆ ಆ ದಾವತಿಯಿಂದ ಮುನ್ನಿನ ವಿಧಿಯೇ ಸಾಲದೆ (ಅವಚಂ. ೧೭-೬೬); ಕಾಯ ಕಲ್ಪಿತಕ್ಕೆ ಒಳಗು ಜೀವ ಭವಕ್ಕೊಳಗು ಈ ಉಭಯದ ಠಾವನರಿಯದೆ ಧಾವತಿಗೊಂಬರೆಲ್ಲರು (ನಗಿಮಾ. ೪೧೯-೨೭); ಅನ್ಯರಾಳಾಗಿ ದುಡಿದು ಧಾವತಿಗೊಂಡು ಧನವನಾರ್ಜಿಸಿ (ಹಶಕಾ. ೦೨-೩೯). ೨. ಶ್ರಮಪಡು ; ಕಷ್ಟಪಡು ; ದುಡಿ ; ಕೆಲಸಮಾಡು : ಹಲವು ಕಾಲ ಧಾ[ಪಾಠಾಂ. ದಾ]ವತಿಗೊಂಡು ಒಟ್ಟಿದ ಹಿದಿರೆಯು ಒಂದು ಮಿಡುಕುಬಲ್ಲಿ ಬೇವಂತೆ (ಬಸವ. ೨೧೩). **ದಾವತಿಗೊಳ್** : ೧. ಮೇಲಿನ 'ಅವಚಂ. ೧೭-೬೬' ಪ್ರಯೋಗದ ಪಾಠಾಂತರವನ್ನು ನೋಡಿ. **ಧಾವತಿಗೊಳು** : ೧. ದೈವತಂತ್ರಾಖ್ಯವೆ ಬಿಂಬ ಕ್ರಿಯವೇ ತೀರೆ ಧಾವತಿಗೊಳದಿರಿ ಇದನೆ ತೊರದು ವ್ಯರ್ಥ (ವಿಶ್ವಸು. ೨೭-೧೫). **ಧಾವತಿಗೊಳ್ಳು** : ೧. ಕೈಗೆ ಕೈಗಳ ಪಿಡಿವುತೊರ್ವರೊರ್ವರನಪ್ಪಿ ಬನದಿ ಧಾವತಿಗೊಳ್ಳುತ ಸುಯ್ಗುಂವ ಬೀರುತೆಡೆಯಾಡುತೆ (ಪಂಕಾರಾ. ೨-೨೦-೦೨); ಧಾವನಂದನದಲ್ಲಿ ಯಾವ ಹೂವರಳಲು ಧಾವತಿಗೊಳ್ಳುತ ಕೋಗಿಲೇ ! ಯಾವ ನೂತನ ನನ್ನಿ ಕಾವನ ಶರಕೆಂದು ಕೂಗುವಿ ನೀ ಹೇಳು ಕೋಗಿಲೇ ! (ಗಶಿ. ೨೭-೮). ೨. ಹಿಂದೆ ಧಾವತಿಗೊಂಡು ಫಲವೇನಿಂದು ಕೆಡಿಸದ ರಾವಣನೆಂದಳಲಿತ್ತು ಕಪಿಸೇನೆ (ಕಾಶಿರಾ. ೪೩-೫೫); ಶೃಂಗಾರದಲ್ಲಿ ದೇರಿಳಿಸಿ, ವೀರದಲ್ಲಿ ಕುದಿವರಿದು, ಹಾಸ್ಯಾದಿಗಳಲ್ಲಿ ಹಬ್ಬುಗೊಂಡು ಶಾಂತಿಯಲ್ಲಿ ನೆಲಸಿ ನಿಲ್ಲುವಂತೆ ರಸಿಕತೆಯು ಧಾವತಿಗೊಳ್ಳುತ್ತದೆ (ಸುವರ್ಣ. ೪೨). [ ಧಾವತಿ + ಕೊಳ್₁ ]

**ಧಾವತಿಗೊಳಿಸು** (ಕ್ರಿ). ೧. ಬಳಲಿಸು ; ಆಯಾಸಪಡಿಸು : ಆ ಮನಸ್ಸು ಸಂಕಲ್ಪ ವಿಕಲ್ಪದಿಂದ ಹಿಡಿಯುತ್ತ ಬಿಡುತ್ತ ಬೇಕು ಬೇಡ ಎಂಬೆರಡರಲ್ಲಿ ಸರ್ವರನ್ನೂ ಧಾವತಿಗೊಳಿಸುತ್ತಿರುವುದು (ಅವಚಂ. ೩೯೨-೭೪ ಭಾವಾನುವಾದ). ೨. ದುಃಖಗೊಳಿಸು ; ತೊಂದರೆಪಡಿಸು : ಹಸಿವು ನೀರಡಿಕೆ ನಿದ್ರಾಲಸ್ಯವಾಗಿ ಸೇದಿಸಿ ಹೋಗಿ ಹೊಕ್ಕಲ್ಲಿ ಹೊಕ್ಕು ಧಾವತಿಗೊಳಿಸಿ ಹುಸಿಗೆ ಹೊಂಕೊಳಿಸುವೆ (ಹಶಕಾ. ೯-೧೮); ಒಬ್ಬುಳ್ಳ ಮಗ ದುರುಳನಾಗಿ ಜಡನಾಗಿ ಧಾವತಿಗೊಳಿಸದೆ ನಡೆದು ಹರದಾಡಿ ಗಳಿಸಿದಪೆನೆಂಬುದನು ನಮ್ಮೊಡಲು ಹದುಳಿಪ್ಪಲ್ಲಿ ಕಂಡೆವು (ಸೋಮಚ. ೧-೯೭).

[ ಧಾವತಿಗೊಳ್ + – ಇಸು₃ ]

**ಧಾವತಿಗೊಳು** 'ಧಾವತಿಗೊಳ್' ನೋ.

**ಧಾವತಿಗೊಳ್ಳು** 'ಧಾವತಿಗೊಳ್' ನೋ.

**ಧಾವತಿಪಡು** 'ಧಾವತಿಬಡು' ನೋ.

**ಧಾವತಿಬಡು**, ದಾವತಿಪಡು, ದಾವತಿಬಡು, ಧಾವತಿಪಡು (ಕ್ರಿ). ದಣಿ; ಬಳಲು ; ಆಯಾಸಪಡು : ಗೋವ ಕಾಯಲು ಪೋಗಿ ಧಾವತಿಬಟ್ಟು ಬಹು ದೇವಕಿದೇವಿಯ ಈವಾಗ ಬಂದೆನು (ಪುರಂದ. ೦-೮೦-೦); ಧಾವತಿಬಟ್ಟು ಬಂದಿರಿ ಬಳಲಿದಿರಿಯೆಂದಾ ವಿಭು ಮೈದುನಗೊರೆದ (ಭರಪ. ೭೯-೬೬). **ದಾವತಿಪಡು** : ಇವರು ಆತನ ಪರಮಮಿತ್ರರೆಂದೇ ಇಲ್ಲಿಯ ತನಕ ದಾವತಿಪಟ್ಟು ಬಂದಿದ್ದಾರೆ (ಅರಗಿ. ೦೨). **ದಾವತಿಬಡು** : ಪದ್ಮಾವತಿ . . . ನೆಟ್ ದಾವತಿಬಡುತ್ತಳವಳಿವ ಕಾಷ್ಠಾಂಗಾರಕನ ಕಂಡು ಕ್ಷಿತಿಯೊಳಿವನಿಂತಿಲ್ಲ ಬಿಡದ ಧೃತಿಬಡುವ ನರನೆಂದು ವಿಟಗದ್ಯುತದಿ ತೋಟಿಸಲು (ಜೀವಂಚ. ೩-೫). **ಧಾವತಿಪಡು** : ಕುಲಕೆ ದುರ್ಯಶಮಡಸಿತೆಂದು ಧಾವತಿಪಟ್ಟು ಜಲಧಿಯಂ ಕಟ್ಟಿ (ವಂಕಾರಾ. ೬-೬೩-೨೮). [ ಧಾವತಿ + ಪಡು₁ ]

**ಧಾವನ** (ನಾ). ೧. ಓಡುವುದು. ೨. ಹರಿಯುವುದು. ೩. ಆಕ್ರಮಣ ; ಮುತ್ತಿಗೆ. ೪. ಉಜ್ಜುವುದು ; ತೊಳೆಯುವುದು ; ಶುದ್ಧಗೊಳಿಸುವುದು : "ಧಾವನಂ ತೀಡುವುದೆನಿಕ್ಕು" (ಮುಂಗರಾ. ೧೦೦-೨೫). 'ದಂತಧಾವನ' ಪರಾ. [ ಸಂ. ]

**ಧಾವನಿ** (ನಾ). ಒಂದು ಬಗೆಯ ಗಿಡ ; ನರಿಹೊನ್ನೆಗಿಡ : "ಕ್ರೋಷ್ಟು ವಿನ್ನಾ, ಸಿಂಹಪುಚ್ಛೀ, ಕಲಶೀ, ಧಾವನೀ, ಗುಹಾ–ಶಿ ನರಿಬಾಲದ ಹುಲ್ಲು, ನರಿಬಾಲದ ಹೊನ್ನೆ" (ಸಿದ್ಧಾಂತಿ. ೦೦೬). [ ಸಂ. ಧಾವನೀ ]

**ಧಾವಲ್ಯ**, ಧಾವಳ್ಯ (ನಾ). ಬಿಳುಪು ; ಬಿಳಿಯ ಬಣ್ಣ : ವಿಸುಪ ನಯನಂಗಳೋ ತನ್ನೊಳಗೆ ತೋಱುವೀಶಾಂಘ್ರಿನಖಧಾವಲ್ಯಮೋ (ಆರಾಚ. ೫-೨); ಮದಧಾರಾಸಾರದಿಂ ಧಾರಿಣಿಯನಣಿಯರಂ ನಾಂದು ತದ್ಗಂಧಧಾವಲ್ಯದ ವಿಂಚಿಂದೆಲ್ಲ ದಿಕ್ಕಂ ತೊಳಗಿ ಬೆಳಗುತಂ . . . ಒಪ್ಪಿದುದು ಮುದಿತ ನೀಲಾಚಲಾಭಂ ಮದೇಭಂ (ಮಲ್ಲಕಾ. ೪-೬೨೦). 'ಧಾವಲ್ಯಗಾತ್ರ' ಪರಾ. **ಧಾವಳ್ಯ** : ನೀರಿನಲ್ಲಿ ಶೈತ್ಯವು ತಗ್ಗಿಗೆ ಇಳಿಯೋಣವೂ, ಭೂಮಿಯ ಮೇಲೆ ಇರೋಣವೂ . . . ಅಣುತ್ವವೂ ಧಾವಳ್ಯವೂ ಅಣಗದೆ ಇರೋಣವೂ ಈ ಮೊದಲಾದ ಗುಣಗಳು ಉಂಟು (ಅನಂತ. ೪೬). [ ಸಂ. ]

**ಧಾವಲ್ಯಗಾತ್ರ** (ನಾ). ಬೆಳ್ಳನೆಯ ಮೈಬಣ್ಣದವನು : ಗೌರಾಂಗ : ಧಾತ್ರಪಂಚಮಶಿರಪಾತ್ರ ಪನ್ನಗಯಜ್ಞಸೂತ್ರ ತ್ರಿನೇತ್ರ ಧಾವಲ್ಯಗಾತ್ರ (ಭೃಂಗವೇ. ೦-೪). [ ಧಾವಲ್ಯ + ಗಾತ್ರ ]

**ಧಾವಳಿ₁** 'ದಾವಣಿ₂' ನೋ.

**ಧಾವಳಿ₂** 'ಧಾಬಳಿ' ನೋ.

**ಧಾವಳ್ಯ** 'ಧಾವಲ್ಯ' ನೋ.

**ಧಾವಿಸು** (ಕ್ರಿ). ವೇಗವಾಗಿ ಚಲಿಸು ; ಓಡು : ಧಾವಿಸಿತ್ತತಿಜವದಿ ಕಡವೆ ಹಿಂಡೊಂದು (ಶ್ರೀರಾಮಾ. ೧೫೬-೧೧೦); ಅನಾಥ ಜೀವದಂತೆ ರೈಲು ಧಾವಿಸುತ್ತಿತ್ತು (ರೂಪಸ. ೧); ಪುರುಷರು . . . ಗಲಭೆ ನಡೆಯುತ್ತಿದ್ದ ಸ್ಥಳಕ್ಕೆ ಧಾವಿಸಿದರು (ಯೋಧರು. ೧). [ ಧಾವನ +– ಇಸು₃ ]

**ಧಾಷತ್ತು₁** (ನಾ). ಹೆದರಿಕೆ ; ಭಯ ; ದಿಗಿಲು : (ಆ).

[ ←ಪಾರ. ಹಿಂ. ಮರಾ. ದಹಶತ್ ]

**ಧಾಷತ್ತು₂** (ನಾ). ದಿಟ್ಟತನ ; ಧೈರ್ಯ : (ಆ). [ <ಸಂ. ಧೃಷತ್ ]

**ಧಾಳ** 'ಡಾಲು₂' ನೋ.

**ಧಾಳಾಧೂಳಿ** 'ದಾಟಾದಾಟಿ' ನೋ.

**ಧಾಳಿ** 'ದಾಟಿ' ನೋ.

**ಧಾಳಿಕಾರ** 'ದಾಟಿಕಾಱ' ನೋ.

**ಧಾಳಿಕ್ರಮ** (ನಾ). ಆಕ್ರಮಣದ ರೀತಿ,–ಬಗೆ : ಅರಸದ್ಧಾಳಿಕ್ರಮದೊಳ್ ಶಿವಾಪಂನ ಪಿಡಿದು ಮಗುಳೆ ಬಂದು ಪೂವಿನ ಪಡಂಗಿಲಿಯಪ್ಪಯಣಾವೀಡಿನೊಳ್ (ಸೌಇಇ. IX-1, ೧೦೧-೨೯ ; 1045).

[ ಧಾಳಿ (<ದಾಟಿ ) + ಕ್ರಮ ]

**ಧಾಳಿಗೊಳ್** (ಕ್ರಿ). ಆಕ್ರಮಣಕ್ಕೆ ಈಡಾಗು,–ಒಳಗಾಗು : ಧಾಳಿಗೊಂಡವರೊಳಗೆ ಮುನ್ನಿನ ಕಾಲನೇಮಿಯ ಪರಿಯ ಕದನವ ಹೋಲಿಸಲು ಬಹುದಲ್ಲಿ (ಕುಮಾರ. ಓರಿಇ. ೨೬-೨೭). [ ಧಾಳಿ (<ದಾಟಿ) + ಕೊಳ್₁ ]

**ಧಾಳಿಡು** 'ದಾಟಿಯಿಡು' ನೋ.

**ಧಾಳಿನಡೆಸು** (ಕ್ರಿ). ೧. ಮೇಲೆ ಬೀಳು; ಮುತ್ತು; ಮುತ್ತಿಗೆ ಹಾಕು; ಆಕ್ರಮಣ ಮಾಡು: ಮುಷ್ಕರದ ಸಮಯದಲ್ಲಿ ವಿದ್ಯಾರ್ಥಿಗಳು ಪೋಲೀಸ್ ಠಾಣೆಯ ಮೇಲೆ ಧಾಳಿ ನಡೆಸಿದರು (ರೂಢಿ). ೨. (ಬರಹ ಅಥವಾ ಮಾತಿನ ಮೂಲಕ) ಪ್ರತಿಭಟಿಸು ; ವಿರೋಧಿಸು : ನಾವು ಹೇಳಿಕೊಡುವವರ ಮೇಲೆಲ್ಲ ಪತ್ರಿಕೆಯಲ್ಲಿ ಧಾಳಿ ನಡೆಸೋಣ (ಶಾಲಮ. ೫೮).

[ ಧಾಳಿ (<ದಾಟಿ) + ನಡೆಸು₁ (<ನಡೆಯಿಸು) ]

**ಧಾಳಿಯಿಡು** 'ದಾಟಿಯಿಡು' ನೋ.

**ಧಾಳಿವರಿ** 'ದಾಳಿವರಿ' ನೋ.

**ಧಾಟಾಧಾಟಿ** 'ದಾಟಾದಾಟಿ' ನೋ.

**ಧಾಟಿ** 'ದಾಟಿ' ನೋ

**ಧಾಟಿಡು** 'ದಾಟಿಯಿಡು' ನೋ.

**ಧಾಟಿವರಿ** 'ದಾಳಿವರಿ' ನೋ.

**ಧಿಂ** (ನಾ). ಒಂದು ಅನುಕರಣ ಶಬ್ದ. 'ಧಿಮ್ಮೆನ್' ಪರಾ.

**ಧಿಂಧಿಂ** (ದ್ವಿರುಕ್ತಿ): ಧಿಂಧಿಂ ಧಿಮಿಕ್ಕು ಧಿಮಿಕೆಂದಿಂದೀವರಲೋಲ ಲೋಚನೆಯ ಮುಂದೊಲವಿಂ ವೃಂದಾರಕವಧೂವೋರ್ವಳ್ ಕುಂದದ ಜಾಣಿಂದ ಮುರಜಮಂ ಬಾಜಿಸಿದಳ್ (ಬಾಧಪು. ೬-೫೮); ತಂದೋಂ ಧಿಕ್ತೋಂ ಧೋಮೆಂದೆನುತುಂ ಧಿಂಧಿಂ ಧಿಮಿಧೀಧಿಮಿತೆಂದೆನುತಂ (ತುಂಗಳ. ೩).

**ಧಿಂಕಿಡು** 'ಧೀಂಕಿಡು' ನೋ.

**ಧಿಂಕು** 'ಧೀಂಕು' ನೋ.

**ಧಿಂಗು, ಡಿಂಗ್ಸು, ದಿಂಗು** (ನಾ). ೧. "ಉಲ್ಲಾಸ; ಸಂತೋಷ" (ಶ್ರಭಣ್ಣ): ಹೊಂಗಿತಿತ್ತಲು ವಿಜಯ ದುರ್ಜಯ ನುಂಗಿತಿತ್ತಲು ರಾಯಭೇರಿ ಮೃದಂಗ ವಿತ್ತಲು ಬಾಯ ಹೊಯ್ಗುಳವತ್ತ ಮೊಳಗಿದುದು ಧಿಂಗುಯಿತ್ತಲು ಧುರದ ಭಾರಿಯ ಕಂಗಡಿತೆ ಮೇಣತ್ತ (ಅಂಬಿಕಾ. ೨೮-೪೪). **ಡಿಂಗ್ಸು**: ೨. ಆಡಂಬರ; ಠೀವಿ; ಡೌಲು: ಈಗ ನೋಡಿದರೆ ಅಂಗಳದಲ್ಲಿ ಚಪ್ಪರ ಸಹ ಡಿಂಗು ಆಗಿ ಬಿಟ್ಟದೆ (ಮಕಮು. ೮೪). **ದಿಂಗು**: ೩. ಅಬ್ಬರ; ಗದ್ದಲ; ಕೋಲಾಹಲ: ಬಲಸಹಿತಲೆ ದಿಂಗಿನಿಂದೈತಂದು ಸಾಗರನ ಬಲುಸಾಹಸಂಗಳ ಮ್ಮುರಿದು (ತುರಂಗ. ೨೧-೪೭).

**ದಿಂಗಾಗು** = ಠೀವಿಯಿಂದ ಕೂಡಿರು; ಜೋರಾಗಿರು: ಇನ್ನೂ ಮೀಸೆ ಹುಟ್ಟದ ಬೋಳ, ಆಗಲೆ ಆ ಹುಡುಗೀನ ಕಟ್ಟಿಕೊಂಡು ಏನು ದಿಂಗಾಗಿದಾನೆ (ಮಳಮು. ೦೮೭). [ ←ಮರಾ. ಧಿಂಗಾ ]

**ಧಿಕು** (ನಾ). ತಿರಸ್ಕಾರವನ್ನು ಸೂಚಿಸುವ ಒಂದು ಮಾತು,–ನುಡಿ.

**ಧಿಕುಧಿಕು** (ದ್ವಿರುಕ್ತಿ): ಮುಕುತಿಯ ಒಲ್ಲೆ ಮುಕುತಾರ್ಥ ಇದನೆ ಬೇಕು ಧಿಕುಧಿಕು ಈ ಸೌಖ್ಯ ಬೇಡದವನ ಜನ್ಮ (ಪೋಕ್ಷದೀ. ೨೪-೨). [ ಸಂ. ಧಿಕ್ ]

**ಧಿಕ್ಕನೆ** (ಅ). ಕೂಡಲೆ; ಬೇಗನೆ: "ತುರುಹಂ, ಭೋರೆನೆ, ಭೋಂಕನೆ, ಚಿಕ್ಕನೆ, ಗಬಗಬನೆ, ಧಿಕ್ಕನೆ, ಘಟಿಲನೆ, ಬೇಗಂ – ಈ ೮ ಶೀಘ್ರಂ" (ಕಶಶಾ. ೧೩-೨೨೪); "ಚಿಕ್ಕನೆ ಧಿಕ್ಕನೆ ಭೋರನೆಯನೆ ಭೋಂಕನೆನಲು . . . ಗಬಗಬನೆ . . . ಘ[ಟಿ]ಲನೆನ್ನಲದು ಶೀಘ್ರಾರ್ಥಂ" (ಕವಿಕಂ. ೧೧೧); ಧಿಕ್ಕನೆ ಮನೆಯ ಶೆಟ್ಟಿ ಬಂದನಾ ಹೊತ್ತಿನೊಳು (ಕಾರಿಠಿ. ದೇ. ೨೫೩-೬); ಇತ್ತ ಸದ್ಗುರುಮೂರ್ತಿಯಂ ಕಾಣುತ್ತ ಧಿಕ್ಕನೆ ಹದಟಿ ಸಂಭ್ರಮಿಸುತ್ತ ಬಸವನು . . . ಸಾಷ್ಟಾಂಗದೊಳೆಆಗಿ ನಮಿಸಿ (ಬಸಪು. ೪-೫೮); ಮಾಂಧಾತ ಸುತ್ತಾಗವ ಬೇಡ ಬಂದವಗೆ ರಾಗದಿಂದೊಡಲ ಧಿಕ್ಕನೆ ಸೀಳ್ದು ಭಾಗವ ಕೊಟ್ಟುದನರಿಯಾ (ಮೋಹತ. ೫-೫೪); ಧಿ[ಪಾಠಾಂ. ದಿ]ಕ್ಕನೇಳನ್ನು ಮುನ್ನಿನ ಭೋಗದಿಂದ ಶತಕೋಟಿ ಮಡಿ ಮಿಗಿಲಪ್ಪುದು (ಗುಭಹ. ೨-೧೦೬); ಸಂಸಾರ ಧಿಕ್ಕನೆ ಬಿಟ್ಟು ತಂದೆಗೆ ತಿಳಿದು (ಷಠಿಲ. ೩-೧೩೨). 'ದಿಕ್ಕನೆ' ಪರಾ. [ ಧಿಕ್$_0$ + – ಅನೆ$_1$ ]

**ಧಿಕ್ಕರಣೆ** (ನಾ). ತಿರಸ್ಕಾರ: ನಿಂದೆ; ಧಿಕ್ಕಾರ: ಸಗರನಂದನರುರಿಯೊಳದ್ದರು ಮುನಿಯ ಧಿಕ್ಕರಣೆಯ ವಿಘಾತಿಯಲಿ (ತೊರರಾ. ೧-೧೩-೧೨). [ ಸಂ. ಧಿಕ್ಕರಣ ]

**ಧಿಕ್ಕರಿಸು** (ಕ್ರಿ). ೧. ಹೀಯಾಳಿಸು; ನಿಂದಿಸು; ತಿರಸ್ಕರಿಸು; ಕಡೆಗಣಿಸು; ಕೀಳುಮಾಡು: ನಿನಗೆ ತರಳತೆಯಿದತ್ತಣಿಂ ಬಂದುದೆಂದು ವ್ಯೆರ್ಯಾರ್ಯಮೆ ಧಿಕ್ಕರಿಸುವಂತೆಯುಂ ಅತಿಲಜ್ಜಿತೆಯಾಗಿ (ಕಾದಂಬ. ೭೫); ಜಾಯಿಲನ ಬಡನಡುವಂ ಚಕ್ಕನೆ ತುಂಡಿಸಿ ಮಲೆಯುತೆ ಧಿಕ್ಕರಿಸಿತ್ತತುಳಕೋಪನೀಡಂ ಕ್ರೋಡಂ (೧೧ಠಿಕ. ೦-೦೦೫); ಏರಿಯರೆವೆಂದು ಧಿಕ್ಕರಿಸಿ ಬಯ್ವುದು ತಕ್ಕುದೆ (ಶಮದ. ೨೨೦ ಪ್ರಯೋ); ಇಂತು ಕಿನ್ನರಬೊಮ್ಮಿದೇವ ಮಹಂತನಂ ಧಿಕ್ಕರಿಸಿ ನುಡಿಯಲು (ಬಸಪು. ೨೯-೨೨); ದಿಕ್ಕರಿಸಿಕರುಬುಟಮನುರುಮುದದಿಂ ಧಿಕ್ಕರಿಸುವ ಗಜಘಟೆ (ಜಯಕಾ. ೬-೦೮); ಮೃಡನ ಧಿಕ್ಕರಿಸುವೆನೆಂದು ಕೋಪವ ತಾಳಿ ನಡೆದ ಮನ್ಮಥ ಸೂಟಯಲಿ (ಮೋಹತ. ೬-೨೬); ರಕ್ಕಸನು . . . ಸರ್ವರ ಸೊಕ್ಕಿ ಪೆಕ್ಕಸವಾಗಿ ಗರ್ವದಿ ಧಿಕ್ಕರಿಸಿ ನುಡಿವ (ಅಮ್ಮಕ. ೨-೩೨). [ ಧಿಕ್ಕರಣೆ + – ಇಸು$_1$ ]

**ಧಿಕ್ಕವಣೆ** (ನಾ). [ಸಂಗೀತ] (?): ರಚಿಂಕಾರದ ಸುಸಿರಿಕೆಯಂ ನೋಡಿ ಸಂಚದೊಳ್ ಸುಸಂಚನನಿಸಿ ಕರಂಗಳ ಬಹುರೇಖೆಯ ಚಾರಣೆಯ ಧಿಕ್ಕವಣೆಯ ನೇವಣ ಬೊಲ್ಲವಣೆಯ ಬೆಡಂಗು ಬಿತ್ತರಿಕೆಯಂ ಬೀಜಿ ಬಾಜಿಸುತ್ತಿರೆಯುಂ (ಶಾಂತೀಶ್ವ. ೬-೯೩ ವ). [ ? ]

**ಧಿಕ್ಕಾರ** (ನಾ). ೧. ನಿಂದೆ; ತಿರಸ್ಕಾರ; ಅಗೌರವ: ವಾರಿತಾಹಂಕಾರನಂ ಹೂಂಕಾರವಮದಧಿಕ್ಕಾರನಂ ಗತಮಾರಕರ್ಮವಿಕಾರನಂ ವೀರಾವತಾರನನು (ಬಸಪು. ೫-೦೬); ಪ್ರಾಚೀನಸಂಪ್ರದಾಯ ಪಾಲಿಸಿದ ಭಾರತೀಯರಿಗೆ . . . ಸಾರ್ವಜನಿಕಸ್ಥಳಗಳಲ್ಲಿ ಧಿಕ್ಕಾರ (ಹುಕ್ಕಾರ. ೧೧೫ ಟೀಕೆ). ೨. ತಿರಸ್ಕಾರಕ್ಕೆ ಯೋಗ್ಯವಾದುದು; ಹೀನಾಯ: ತಾಯಿಯ ಮಾತು ನಿನಗೂ ಧಿಕ್ಕಾರವಾಗಿದೆ (ಕಾವೇರಿ. ೨೪). [ ಸಂ. ]

**ಧಿಕ್ಕಿಟ** (ನಾ). ಒಂದು ಅನುಕರಣ ಶಬ್ದ: ಟಕ ಏಕಟ ಧಿಕ್ಕಿ[ಪಾಠಾಂ. ಕ್ಕ]ಟ ಧಿಕಟ ಧಿಮ್ಮಿಕಟವೆಂಬಾ ರವವೆಸೆವ ಕೇಳಿಕೆಯನಾಡಿಸುತ್ತಿದ್ದಹರು (ಬಸಪು. ೩೭-೮); ನೀರಿನೊಂದಿಗೆ ಆರು ಬಿಂದಿಗೆ ಹೇರಿ ನೆತ್ತಿಯ ಮೇಲಕೆ, ಹಾರಿ ಧಿಕ್ಕಿಟ, ಕುಣಿವನಕ್ಕಟ ನೀರು ಹೊರಗಡೆ ಚೆಲ್ಲದೆ (ಕಪು. ೩೮-೬).

**ಧಿಕ್ಕೃತ** (ಗು). ೧. ತಿರಸ್ಕರಿಸಿದ; ಕಡೆಗಣಿಸಿದ: "ಅವಮಾನಂ ಧಿಕ್ಕೃತಂ" (ವಸ್ತುಕೋ. ೦೦೬-೫೦). (ನಾ). ೨. ಬೈಗುಳು; ನಿಂದೆ. [ ಸಂ. ]

**ಧಿಕ್ಕೃತಿ** (ನಾ). = ಧಿಕ್ಕಾರ ೧. 'ಧಿಕ್ಕೃತಿಗೈ' ಪರಾ. [ ಸಂ. ]

**ಧಿಕ್ಕೃತಿಗೈ** (ಕ್ರಿ). ತಿರಸ್ಕಾರ ಮಾಡು; ಅಂಗೀಕರಿಸದಿರು: ಹಿಮಕಣಸಂಗತ ಕುಂದವನಳಿವೊಲ್ ಹಿತವಾಗನುಭವಿಸಲುಮಿವಾಕೆಯ ಧಿಕ್ಕೃತಿಗೈಯಲುಮಪಾರಂ (ಶಾಕುಂತ. ೭೭ ಅಡಿಟಿ). [ ಧಿಕ್ಕೃತಿ + ಗೈ (<ಕೆಯ್$_1$) ]

**ಧಿಕ್ಕೃತೆ** (ನಾ). ತಿರಸ್ಕಾರವನ್ನು ಹೊಂದಿದವಳು; ತಿರಸ್ಕೃತೆ: ಎನ್ನಿಂ ಧಿಕ್ಕೃತೆಯಾಗಿ ತನ್ನ ಜನಮುಂ ಬೆನ್ನಂಟಲುದ್ಯುಕ್ತೆಯಪ್ಪನ್ನಂ (ಶಾಕುಂತ. ೮೫-೬). [ ಸಂ. ಧಿಕ್ಕೃತಾ ]

**ಧಿಗಿಲ್** (ನಾ). ಒಂದು ಅನುಕರಣ ಶಬ್ದ: ಅಗಲಿದನೆಂದೆನ್ನ ಮನ ಧಿಗಿಲೆಂದಿತ್ತಲಗವ್ವಾ (ಬಸವ. ೩೭೪); ಜಗದಾಧಾರಕನದಟಿಂ ಧಿಗಿಲನೆ ಮೇಲೇಟಿ ತುಳಿದು ರಾಕ್ಷಸನಸುವಂ ತೆಗೆದು (ಜಗವಿ. ೬-೭೭); ಬೆದಱಿತಾ ಯಾಸ್ಥಾನ ಧಿಗಿಲೆಂದುದು ಧರಾಧೀಶ್ವರನ ತಂದೆಯ ಹೃದಯದಲಿ (ಕುಪ್ಪಾಕ. ೧-೨); ಧೊಕ್ಕು ಧಡ ಸಬುದಗಳಲಿಳೆ ಗುಮ್ಮಿಕ್ಕಿ ಕೂರುಮನಱುಚಿ ದಿಗ್ಗಜ ಧಿಕ್ಕು ಧಿಗಿಲೆನೆ ಧೈರ್ಯಬಲರೊದಗಿದರು ಸರಿಸದಲಿ (ತೊರರಾ. ೪-೪-೨೭). 'ದಿಗಿಲ್' ಪರಾ.

**ಧಿಗಿಲನೆ** (ಅ). ೧. ಕೂಡಲೆ; ಬೇಗನೆ; ಸರಕ್ಕನೆ: ಧಿಗಿಲನೆ ಮನಂ ಬೆದಱಿ ಪರವೆ ಕಾಣುತ್ತಲ್ಲಿ (ಸಂಧಿರ. ೯-೧೧೧); ಯೋಗವಟ್ಟಿಗೆಯ ಏಱಿ ಸಡಿಲಿಸಿ ಧಿಗಿಲನೆದ್ದನು (ನಿಭಾಗ. ೪-೩-೩೮); ಧಿಗಿಲನೆದ್ದಳು ಕುಸುಮಾಜಿ ಕೈಮುಗಿದಿಂದು . . . ಸುಗತನಿವಾಸಕೆ ಪೋಪೆನೆಂದಳು (ಭರತ. ೬-೧೧); ಆಱು ಖಂಡದ ನೃಪರು ಚಕ್ರಿಗೆ ತೊಂದರವನೆಮ್ಮ ಮನೆಗೆ ಧಿಗಿಲನೆಯ್ದು ವನೇನು (ಭರತ. ೩೭-೪೯). ೨. ಭಯದಿಂದ ಕೂಡಿ; ನಿಬ್ಬೆರಗಾಗಿ: ಧಿಗಿಲ[ಪಾಠಾಂ. ಲೆ]ನೆ, ಭುಗಿಲನೆ, ಭೋರನೆ ಎಂಬನುಕರಣಪದಂಗಳ್ ಬರೆಯುಂ . . . ಅವ್ಯಯಪದಂಗಳಪ್ಪುವು (ಶಮದ. ೩೦೦ ವೃತ್ತಿ). 'ದಿಗಿಲನೆ' ಪರಾ. [ ಧಿಗಿಲ್ + – ಅನೆ$_1$ ]

**ಧಿಟ್ಟ** 'ದಿಟ್ಟ₁' ನೋ.

**ಧಿಟ್ಟತನ** 'ದಿಟ್ಟತನ' ನೋ.

**ಧಿವಾಕು** 'ದಿವಾಕು' ನೋ.

**ಧಿಮಿ** (ನಾ). ಒಂದು ಅನುಕರಣ ಶಬ್ದ: ಧೀಧಿಂ ಧಿಮಿ ಧೀ ಧಿಮಿ ತ್ರೆಂದೆನುತಂ (ತುಂಗಭ. ೨).

ಧಿಮಿಧಿಮಿ (ದ್ವಿರುಕ್ತಿ): ಬೊಗರಿಯಂತೆಯೆ ತಿಗರಿಯಂತೆಯೆ ನೆಗೆದು ಕುಣಿದನು ಧಿಮಿಧಿಮಿ (ಕಷಪು. ೩೮-೮).

**ಧಿಮಿಕಿಟ** (ನಾ). ಒಂದು ಅನುಕರಣ ಶಬ್ದ: ಮದ್ದಳೆಗಳಂ ಹರುಷದಿಂ ಧಿಂ ಧಿಮಿಕಿಟೆಂದು ಧ್ವನಿಮಾಡೆ (ಗುರುಚಾ. ೧-೧೯).

**ಧಿಮಿಕು** (ನಾ). ಒಂದು ಅನುಕರಣ ಶಬ್ದ: ತದ್ದಿಮಿಾ ಧಿಮಿಕೆಂದು ಕುಣಿಸೆ ಕುಣಿದಾಡುತ್ತ (ವಿದಾಕ್ಯ. ೯೮-೩).

**ಧಿಮಿಕ್ಕು** (ನಾ). ಒಂದು ಅನುಕರಣ ಶಬ್ದ: ಧಿಂಧಿಂ ಧಿಮಿಕ್ಕು ಧಿಮಿಕೆಂ ದಿಂದೀವರಲೋಲಲೋಚನೆಯ ಮುಂದೊಲವಿಂ ವೃಂದಾರಕವಧು ವೊರ್ವಳ್ ಕುಂದದ ಜಾಣಿಂದ ಮುರಜಮಂ ಬಾಜಿಸಿದಳ್ (ಚಾರಪು. ೬-೮೮).

**ಧಿಮುಕ** (ನಾ). ತಟ್ಟುವಿಕೆ; ಚುಕ್ಕುಬಡಿಯುವಿಕೆ: ಅತ್ತಾನ ಕಾಡ್ಯಾನ ಮತ್ತೇನು ಬೇಡ್ಯಾನ ಮೆತ್ತಮೆತ್ತನ ಧಿಮುಕವ ಕೊಟ್ಟರ ಗಪ್ಪುಚಿಪ್ಪಾಗಿ ಮಲಗ್ಯಾನ (ಗರತಿ. ೮೫); "ಏಟು" (ಗರತಿ. ಕೋಶ). [ ? ]

**ಧಿಮ್ಮನೆ** (ಅ). ಕೂಡಲೆ; ತಟ್ಟನೆ: ಧಿಮ್ಮನೆ ಭೀಷ್ಮನೆಡಹಾಯ್ದು ಸೆಳೆದು ಕೊಂಡನು ಖಡುಗವನು (ಕುಪ್ಯಾಸ. ೧೧-೨೬); ಎನಲು ಧಿಮ್ಮನೆ ಕೊಳ ದೊಳಗೆ ನಿಂದನು ಮುಕುಂದನು ಸುರಪಸುತನಾನನವ ನೋಡುತದೇನ ದೇನೆನೆ ಬಿಕ್ಕಿ ಬಿರಿದಳುತ ತನಯುನಳಿಯದೆ ವಾಣಾ ಗಗನಧ್ವನಿಯೊಳಾದುದು ವಾರ್ತೆ (ಕುಪ್ಯಾದ್ರೋ. ೮-೬); ಧರಣಿಪತಿ ಮುನಿಸಾರ್ವಭೌಮನ ಬರವ ಕಾಣುತ ಧಿ [ ಪಾಠಾಂ.ದಿ ] ಮ್ಮನುರುವಿಷ್ಟರವನಿಳಿದಿರ್ದೆಂದು (ತೊರರಾ. ೧-೯-೨೦); ಆ ನುಡಿಗೆ ಸುಕೇತು ಕಿಸುಗಣ್ಣಿ ಗಜೆಗೊಂಡು ತನ್ನಾ ತೇರಿನೆಳಗೆ ಧಿಮ್ಮನೆ ಧುಮ್ಮಿಕ್ಕಿ (ರಾಮಾಶ್ವ. ೯೫-೨೪); "ರಭಸದಿಂದ" (ಪ್ರಭು); ಧಿಮ್ಮನೇ ಬರಲಿಹರು ಈ ದಿನ ಅಂ ಮಹಾಶಯರು (ಅರಕೋ. ೩). 'ದಿಮ್ಮನೆ' ಪರಾ. [ಧಿಂ + -ಅನೆ₁]

**ಧಿಮ್ಮಿಕಿಟ** (ನಾ). ಒಂದು ಅನುಕರಣ ಶಬ್ದ: ಟಕ ವಿಕಟ ಧಿಕ್ಕಟ ಧಿಕಟ ಧಿಮ್ಮಿಕಿ [ಪಾಠಾಂ. ಕ]ಟವೆಂಬಾ ರವವೆಸೆವ ಕೇಳಿಕೆಯನಾಡಿಸುತಿದ್ದಹರು (ಬಸಪು. ೩೬-೮).

**ಧಿಮ್ಮೆನ್** (ಕ್ರಿ). ಧಿಂ ಎಂದು ಶಬ್ದವಾಗು: ದಂಧಣಂ ಧಳಧಳ ಧಳಂಧಳ ಧ್ವನಿಗೆ ದಿಕ್ಸಂಧಿಗಳ್ ಸಡಿಲಲಾ ಫಣಿಪ ದಿಕ್ಕರಿಗಳ ಶಿರಂ ಧಿಮ್ಮೆನುತ್ತೆ ಕಿವುಡೆಸೆಯಲಾ . . . ಜಗದೊಳಂಧಕಾಸುರನ ಭೇರೀರವಂ ಪೊಣ್ಮಿದಾದು (ಚಬಸು. ೪೬-೩೦). [ಧಿಂ + ಎನ್₁]

**ಧಿರು** (ನಾ). ಭಲೆ, ಭಾಪು ಎಂಬಂತೆ ಮೆಚ್ಚಿಕೆಯನ್ನು ಸೂಚಿಸುವ ಒಂದು ಮಾತು.–ಕೊಂಡಾಟದ ನುಡಿ: ಧಿರು ಮಾಧವಿಯುರ್ವಶಿ ಹೋಯಿರೆ ನಚ್ಚಣಿ ರಂಭೆ ಭಲ ತಿಲೋತ್ತಮೆ ... ಎನೆ ಪೊಗಟ್ದರಲ್ತೆ ಸುರಭಾರತಿಯರ್ (ಅನಂಪು. ೪-೯೧); ಮುಂದೆ ಮಾಯವಧಾರು ರಿಪುನೃಪ ಬಂದಿಕಾಜವಧಾರು ಧಿರುಪಯವೆಂದು ಕಳಕಳ ಗಜಬು ಮಿಗೆ ಕುರುಭೂಮಿಗೈ ತಂದ.(ಕುಪ್ಯಾದ್ರೋ. ೧-೧೯).

ಧಿರುಧಿರು (ದ್ವಿರುಕ್ತಿ): ಪೂತು ಸಾರಥಿ ಭಾಪು ಮಝುರೇ ಸೂತ ಧಿರ.ಧಿರು ಎನುತ ರಥಿಕವ್ರಾತ ಮಿಗೆ ಬೋಳೈಸಿಕೊಂಡರು ಹಯದ ವಾಘೆಗಳ (ಕುಪ್ಯಾಭೀ. ೪-೯೩); ಹಳುರೆ ಧಿರುಧಿರು ಭಾಪು ಮಝು ಮಂಗಳೆ ಮಹಾಸತಿಯಾದಿಪಾಮಾಲಲನೆಯುವಧಾರೆಂಬ ದನಿ ಕೇಳಿಸಿತು ರಘುಪತಿಯ (ತೊರರಾ. ೬-೫೩-೪೯).

**ಧಿರುರೆ, ಧೀರುರೆ** (ನಾ). = ಧಿರು: "ಅರರೆ ಧಣಾ ಭಾಪು ಭಳಿರೇ ಧಿರುರೇ [ಪಾಠಾಂ. ಧೀರುರೆ] ಮರಘು ಪೂತುರೆ ಪಾಯ್ಯು ಚಾಗು ಸಲಿ ಸುಂಪುರೆಯೆನೆ ಕೊಂಡಾಟದ ನುಡಿ" (ಭಾರನಿ. ೪೬); ಧಿರುರೆ ಮಾಯವಧಾರೆನಲು ಸತಿಯರ ಸಮೇಳದಲಬಲೆ ಮಣಿಬಂಧುರದ ಹಾವುಗೆಯಿಂದ ಬಂದಳು ಮಜ್ಜನದ ಮನೆಗೆ (ತೊರರಾ. ೦-೧೪-೧೪); ಭಾಪುರೆ ಧಿರುರೆ ತಿರುರೆ ಝಣಾರೆಂಬ ನುಡಿಗಳೊಪ್ಪಿದುವು (ಭರತ. ೬೩-೪೬); ಸುರರು ಭಾಪು ಧಿರುರೆ ಎನಲು ಹರಿ ಸುರೇಂದ್ರ ಜೀಯುವೆನಲು (ಸುಸಾರ. ೪೧-೩). ಧೀರುರೆ: ಮೇಲಿನ 'ಭಾರನಿ' ಪ್ರಯೋಗದ ಪಾಠಾಂತರವನ್ನು ನೋಡಿ.

**ಧಿವಡ** (ನಾ). ವಿಷವಿಲ್ಲದ ಸರ್ಪಗಳಲ್ಲಿ ಒಂದು ಬಗೆ: ನಿರ್ವಿಷಸರ್ಪಗಳಲ್ಲಿ ಹೆಬ್ಬಾವು ಶ್ರೇಷ್ಠ. ಇವಲ್ಲದೆ ಮಣ್ಣುಮುಕ್ಕ, ಧಿವಡ, ಧಾಮಣ, ಅಧೇಲಾ, ಹಸರುಹಾವು ಮುಂತಾದ ಜಾತಿಗಳು ಹಲವುಂಟು (ಕಭಾಗ. ೬೬).

[ ? ]

**ಧಿಷಣ** (ನಾ). ೧. ಬುದ್ಧಿವಂತ; ಮೇಧಾವಿ; ಪಂಡಿತ: "ಪ್ರತಿಭಾ ಸಂವಿತ್ಪ್ರಜ್ಞಾವಂತಿ . . . ಪ್ರತಿಪತ್ತಿ ಧೀ ಮನೀಷಾನ್ವಿತನಪ್ಪಂ ಪಂಡಿತಂ ವಿಪಶ್ಚಿದ್ಧಿಷಣಾ" (ವಸ್ತುಕೋ. ೯೮-೩); ಧಿಷಣರ ಕೃತಿಗಳೊಳೆಸೆವಭಿಲಷಿತ ಗುಣಂಗಳನೆ ಬಿಸುಟು . . . ದೋಷಾವಿಷಮನೆ ಪೊರ್ದಿರ್ಪವಲ್ತೆ ಕುಕವಿ ಬಕಂಗಳ್ (ಆದಿಪು. ೧-೨೨); ಎಸೆವ ಸತ್ಯತ್ಯಾಗಶೌರ್ಯೋಚಿತ ವ್ಯವಸಾಯೇತರನಪ್ಪವಂಗೆ ಧಿಷಣರ್ ನಿಮ್ಮಂದಿಗರ್ . . . ಈವುದೆ ಖಗೇಂದ್ರಚಕ್ರವರ್ತಿತ್ವಮಂ (ಪಂಚತಂ. ೨೨೬-೮); ಧಿಷಣನೆನಿಪ್ಪ ಮಂತ್ರಿ ಗುಣಚಿತಂ ಪತಿಕಾರ್ಯಂ (ಜಗವಿ. ೫-೬೪). ೨. ದೇವತೆಗಳ ಗುರು; ಬೃಹಸ್ಪತಿ: "ವಾಚಸ್ಪತಿಃ, ಅಂಗಿರಸಃ, ಬೃಹಸ್ಪತಿಃ, ಗುರುಃ, ಜೀವಃ, ಧಿಷಣಃ, ತ್ರಿದಶಾಚಾರ್ಯಃ,ಚಿತ್ರಶಿಖಂಡಿಪ್ರಸೂತಿಃ (ಕಥ್ಯತೇ)–ಈ ೮ ಬೃಹಸ್ಪತಿಯ ಪೆಸರ್" (ಹಲಾಯು. ೯-೪೭); ದಂಡದೊಳ್ ರೋಹಿಣೀ ನಂದನನಂತಾ ದ್ವಂದ್ವದೊಳ್ಸಿತ್ರುತಮನೆ ಧಿಷಣಂ ಕರ್ಕಿಯೊಳ್ಸಂತವಿಯಂತಿ ರ್ಷಿನಂ . . . ಪುತ್ರನಂ ಪೆತ್ತಳಾಗಳ್ (ಸುಕುಮಾ. ೧೧-೨೬); ಆ ದೇವರ್ಷಿ ನಿಕಾಯಂ ಧಿಷಣಯುತಂ ಮನದೊಳ್ಸಂದಿಂತು ಪೊಗಳ್ದುದು (ವಿಷ್ಣುಪು. ೨-೧೬೦). ೩. (ಆಧ್ಯಾತ್ಮಿಕ ವಿಷಯಗಳಲ್ಲಿ) ಗುರು. [ ಸಂ. ]

**ಧಿಷಣೆ** (ನಾ). ಬುದ್ಧಿಶಕ್ತಿ; ಪ್ರಜ್ಞೆ: "ಬುದ್ಧಿಃ, ಮನೀಷಾ, ಧಿಷಣಾ, ಧೀಃ . . . ಚೇತನಾ–೧೪ ಬುದ್ಧಿಯ ಹೆಸರುಗಳು" (ಸಿದ್ಧಾಂತಿ. ೪೪).

[ ಸಂ. ಧಿಷಣಾ ]

**ಧಿಷ್ಣ್ಯ** (ನಾ). ೧. ರಾಕ್ಷಸರ ಗುರು; ಶುಕ್ರಾಚಾರ್ಯ: "ಉಶನಾ, ಶುಕ್ರಃ, ಕಾವ್ಯಃ, ದೈತ್ಯಗುರುಃ, ಭಾರ್ಗವಃ, ಕವಿಃ, ಧಿಷ್ಣ್ಯಃ–ಈ ೭ ಶುಕ್ರನ ಪೆಸರ್" (ಹಲಾಯು. ೯-೪೮). 'ಧಿಷ್ಣ್ಯಶಿಷ್ಯ' ಪರಾ. ೨. ಸ್ಥಾನ; ಜಾಗ; ನಿವಾಸ; ಮನೆ: "ಆವಾಸಃ . . . ಮಂದಿರಂ, ಧಿಷ್ಣ್ಯಂ, ಧಾಮ . . . ನಿವಸನಂ, ಆಲಯಃ–ಈ ೩೧ ಮನೆ" (ಹಲಾಯು. ೪೯-೧೩೬); ಧಿಷ್ಣ್ಯವರಧರ ವಿಗತತೃಷ್ಣಾಘ ರಜತಗಿರಿಧಿಷ್ಣ್ಯ (ಪದ್ಮರಾ. ೭-೧); ತುಷ್ಟಮಾನಸರಾಗಿ ತಿರುಗಿ ತಾವಿಬ್ಬಿರ್ದಿರ ಧಿಷ್ಣ್ಯಕ್ಕೆ ಬರುತ (ವರ್ಷವ. ೩-೪೨). ೩. ಬೆಂಕಿ; ಅಗ್ನಿ: "ಧಿಷ್ಣ್ಯಂ ಗೃಹರ್ಕ್ಷ ಪಾವಕನಾಮಂ" (ವಸ್ತುಕೋ. ೧೨೦-೦೩). 'ಧಿಷ್ಣ್ಯನೇತ್ರ' ಪರಾ. ೪. ತಾರೆ; ನಕ್ಷತ್ರ: "ರಿಕ್ಷಮುಡು ತಾರೆ ತಾರಗೆ ನಕ್ಷತ್ರಂ ಜ್ಯೋತಿ ತಾರಕಂ ಭಂ [ಧಿಷ್ಣ್ಯಂ]" (ವಸ್ತುಕೋ. ೧೪-೭೮). 'ಧಿಷ್ಣ್ಯವರ' ಪರಾ. ೫. ನಕ್ಷತ್ರಪುಂಜ; ಅಶ್ವಿನೀ, ಭರಣೀ ಮೊದಲಾದ ಇಪ್ಪತ್ತೇಳು ನಕ್ಷತ್ರಗಳು. ೬. ಬುದ್ಧಿವಂತ; ಧೀಮಂತ; ಮೇಧಾವಿ. ೭. ಬ್ರಹ್ಮ; ಚತುರ್ಮುಖ: "ಭವನಂ ನಕ್ಷತ್ರ ಧೀಮಾನ್ವನಜಜವಿವು ಧಿಷ್ಣ್ಯಾಭಿಧಾನಂ" (ನಾನಾರ. ೬೦). ೮. ಭಕ್ತ (?): ಧಿಷ್ಣ್ಯಗಣಸೇವ್ಯೋನ್ನದಿಷ್ಣು ದನುಜ ನಿರಾಕರಿಷ್ಣು ಜಯ ವಿಶ್ವನಾಥ (ಪದ್ಮರಾ. ೭-೧). [ ಸಂ. ]

**ಧಿಷ್ಣ್ಯನೇತ್ರ** (ನಾ). ಕೆಂಡಗಣ್ಣು ; ಶಿವ : ಧಿಷ್ಣ್ಯನೇತ್ರಾಪತ್ರಪಿಷ್ಣು ದಕ್ಷ ಸಹಿಷ್ಣು . . . ಜಯ ವಿಶ್ವನಾಥ (ಪದ್ಮರಾ. ೭-೧).
[ ಧಿಷ್ಣ್ಯ$_4$ + ನೇತ್ರ ]

**ಧಿಷ್ಣ್ಯವರ** (ನಾ). ನಕ್ಷತ್ರಗಳ ಒಡೆಯ ; ತಾರಾಪತಿ ; ಉಡುಪತಿ ; ಚಂದ್ರ. 'ಧಿಷ್ಣ್ಯವರಧರ' ಪರಾ. [ ಧಿಷ್ಣ್ಯ$_4$ + ವರ$_8$ ]

**ಧಿಷ್ಣ್ಯವರಧರ** (ನಾ). ಚಂದ್ರನನ್ನು ಧರಿಸಿದವನು ; ಶಿವ: ಧಿಷ್ಣ್ಯವರಧರ ವಿಗತತೃಷ್ಣೌಘ ರಜತಗಿರಿಧಿಷ್ಣ್ಯ . . . ಜಯ ವಿಶ್ವನಾಥ (ಪದ್ಮರಾ. ೭-೧).
[ ಸಂ. ]

**ಧಿಷ್ಣ್ಯಶಿಷ್ಯ** (ನಾ). ಶುಕ್ರಾಚಾರ್ಯನ ಶಿಷ್ಯ ; ರಾಕ್ಷಸ ; ಅಸುರ : ಧಿಷ್ಣ್ಯಶಿಷ್ಯಾರಿನಂತ ಕೃಷ್ಣಕಂಕಾಳಕರ . . . ಜಯ ವಿಶ್ವನಾಥ (ಪದ್ಮರಾ. ೭-೧). [ ಧಿಷ್ಣ್ಯ$_5$ + ಶಿಷ್ಯ ]

**ಧಿಜ್ಜನೆ** (ಅ). ಜೋರಾಗಿ ; ಗಿರ್ರನೆ ; ರಭಸವಾಗಿ ; ಹೊಡೆದ ನಿಷ್ಠುರಹತಿ ಗಂಧ್ವ್ರಮಗೊಂಡು ಪೇರೊಡಲ ಧಿಜ್ಜನೆ ತಿರುಗಿಸುತೆ (ಮೋಹತ. ೩೮-೬೦).
[ ಧಿಜ್$^0$ + – ಅನೆ$_1$ ]

**ಧೀ** (ನಾ). ಅರಿವು ; ಬುದ್ಧಿ ; ಜಾಣ್ಮೆ ; ವಿವೇಕ : "ಪ್ರೇಕ್ಷಾ, ಪ್ರಜ್ಞಾ, ಪ್ರತಿಭಾ, ಧೀಃ, ಧಿಷಣಾ . . . ಉಪಲಬ್ಧಿಃ – ಈ ೧೩ ಬುದ್ಧಿ" (ಹಲಾಯು. ೫೫-೧೬೯) ; ಗಾಯತ್ರಿಯನೆ ಪರಮಮಂತ್ರಮೆಂದಾರ್ಯರ್ ಧೀಯಂ ಪ್ರಚೋದಿಸೆಂದನುದಿನದಿ ಬೇಡಿದರು ಶ್ರೇಯಸ್ಸು ಧೀಮಹಿಮ (ಮಂಕುತ. ೫೪೬) ; ಧೀಯೆಂದರೆ ಶಾಸ್ತ್ರದಿಂದಲೂ, ಅನುಭವದಿಂದಲೂ, ಹಿತಾಹಿತವನರಿಯುವ ಬುದ್ಧಿಯು (ಆರ್ಯಧ. ೨೨೨). [ ಸಂ. ]

**ಧೀಂಕಿಡು, ದಿಂಕಿಡು, ದೀಂಕಿಡು, ಧಿಂಕಿಡು** (ಕ್ರಿ). ೧. ನೆಗೆ; ಜಿಗಿ; ಎಗರು; ಹಾರು : "ಧೀಂಕಿಡುವುದೆಂದುಂ, ಕೊಣಕಿಡುವುದೆಂದುಂ, ಸರಳಿಸಿತೆಂದುಂ ದಾಂಟುವುದರ್ಕೆ ಪೆಸರ್" (ಶಶಸಾ. ೭-೧೧೧) ; ಉಪವನತಳದೊಳ್ ತಳ್ತು ದೆಂಬಂತೆ ದಿಗ್ಗಾಜಗಳೊಳ್ ಧೀಂ[ಪಾಠಾಂ. ಧಿಂ]ಕಿಟ್ಟುದೆಂಬಂತೆ . . . ಒಗೆದತ್ತುತ್ತಾರರಾಗಂ ತ್ರಿಭುವನಭವನೋದ್ಭೇದಿ ಶಂಖಪ್ರಣಾದಂ (ಕಾದಂಸಂ. ೬೨೪) ; ಮುಂಕೊಂಡು ಧೀಂಕಿಟ್ಟು ಪಾಯುತ್ತಮಿರುತ್ತೋಡುತ್ತೆ ಪೀಟು ತ್ರಿಡಸಿ ಕಿಡಪಿತೊಂದೇಣನಾ ಚಿತ್ರಕಾಯಂ (ಗಿರಿಕ. ೧-೯೫) ; ನೆಲಗಟ್ಟನೊಳ್ ಮೆಟಿದು ಮಾರ್ಪೊಳೆಯುತ್ತಿರೆ ಕಂಡು ಕುಂತಲು ಕೆದಟ್ ಕುಚಂ ಕದಕ್ಕದಿಸೆ . . . ಇದೊಂದು ದೂಳಿಚಿತ್ರದ ಖಣಮೆಂದು ಮೈಯೊರಸಿ ಧೀಂಕಿಡುವರ್ ಕಡೆಯೊಳ್ ಲತಾಂಗಿಯರ್ (ಅನಂಪು. ೭-೪೪); ಧೀಂಕಿಟ್ಟನಲ್ಲಿಂದೆ ಕಲಿ ಹನುಮನಾ ರಣದೊಳಂತಿತದ ಕುಶನ ಬಾಣಂಗಳಿಂ (ಕೃಷಿಭಾ. ೨೦-೧೧) ; ಅಬುಲ್‌ಫಜಲ್, ಧೀಂಕಿಟ್ಟು ಬಂದು . . . ಪ್ರಶ್ನಿಸಿದ (ಸೂರಜ. ೧೪) ; ಓಡು, ಧೀಂಕಿಡು, ಹರಿ, ಧಾವಿಸು (ಕಂಸುಕು. ೮೦). ೨. ಹಬ್ಬು ; ಚಾಚು ; ಪಸರಿಸು ; ದಾಂಗುಡಿಯಿಡು : ಸಂತತಂ ಸೌಭಾಗ್ಯಲತೆ ಧೀಂಕಿಡುತಿರಲ್ (ಮಾನರ. ಹ. ೬೫-೩೨) ; ನಿಸ್ಸಾಳಧ್ವನಿ ದಿಕ್ತಟಕ್ಕೆ ಧೀಂ[ಪಾಠಾಂ. ದಿಂ]ಕಿಡೆ ಭೇರೀರವಂ ಬೊಮ್ಮಾಂಡವನಡರೆ (ನೇಮಿಚ. ೧೮-೮೫) ; ನಾನಾಪಟಹಪಟು ನಿನಾದಂ ನಭಕ್ಕಾಕ್ಷಣಂ ಧೀಂಕಿಡೆ (ಕುಸುಮಾ. ೩-೨೮) ; ಇಂತು ತಪೋಬೀಜಂ ಚಿತ್ತಭೂಮಿಯೊಳ್ ಬೇರೂಱ . . . ನಿಷ್ಠೆಯೊಳ್ ಕುಡಿವರಿದು ಪಂದು ಪರ್ವಿ ಪುರಹರನರಸಿಯ ಮೆಲ್ಲಡಿಗೆಲ್ಲ ನಿಲ್ಲದೆ ಧೀಂಕಿಡೆ (ಗಿರಿಕ. ೩-೧೨ ವ). ೩. ಮುಂದುವರಿ ; ಮುನ್ನುಗ್ಗು : ಪೊಡೆಯಲರಾತನಕ್ಷಿಗಮಗೋಚರಮಾಗಿರೆ ನೀಟ್ಕ ನೋಡಿ ಧೀಂಕಿಡುವ ರಥಧ್ವಜಾಗ್ರಮನದುಂ ಮಸುಳುತ್ತಿರೆ ತೇರ ಧೂಳಿಯಂ ಬಿಡೆ ನಡೆ ನೋಡಿ (ಜಗವಿ. ೫-೧೦೦) ; ಝುಗಝುಗಿಸಿ ಹೊಳೆ ಹೊಳೆವ ಬಾಯ್ದಾರೆಗಳ ಬೆಳಗಿನ ದಾಳಿ ಧೀಂಕಿಡೆ ಮೊಗೆದವರ್ಜುನನಂಬು ರಿಪುಚತುರಂಗಜೀವನವ (ಕುಮ್ಮಾಭೀ. ೮-೩೧). **ದಿಂಕಿಡು :** ೧. "ದಿಂಕಿಡು ದಾಂಟು ಮಿಳ್ಳಿಸೆನೆ ಸರಳಿಸೆನೆ ಕೊಣಕಿಡುವುದಕ್ಕು" (ಶಬ್ದಮಂ. ೩೨) ; ಪಠಿವ ಲೋಹಿತದಿಂ ಪರಿದಂಬರಕ್ಕೆ ದಿಂ[ಪಾಠಾಂ. ಧಿಂ]ಕಿಡುವ ಶಿರಂಗಳಿಂದತಿ ಭಯಂಕರಮಾದುದು ಸಂಗರಾಂಗಣಂ (ಶಂಕರಾಮಾ. ೧೩-೧೧೪) ; ಜಳಮೃಣಾಳನಾಳಮಂ ಜಳವ್ಯಾಳಮೆಂದು ಕೆಲದ ಬಿಲದಿಂ ಪಿಡಿಯಲೆಂದು ದಿಂ[ಪಾಠಾಂ. ಧೀಂ]ಕಿಡುವ ವಿಷಾಪಹಾರಶಾಲೂರಜಾಲಂಗಳೊಳಂ (ಚಂದ್ರಪ್ರ. ೫-೪೦ ವ). ೨. ಅಷ್ಟದಿಗ್ಭಿತ್ತಿಯಂ ದಿಂ[ಪಾಠಾ. ಧೀಂ]ಕಿಟ್ಟತ್ತು ರಘುಪ್ರವೀರವಿಜಯ ಪ್ರಸ್ಥಾನಭೇರೀರವಂ (ಶಂಕರಾಮಾ. ೧೨-೧೭). ೩. ಕಡುದೀರ್ಘ ಗುಹೆ ಬಲುಕಾಲ ಮುಚ್ಚಿದ್ದು ಬಾಯ್ಬಿಡುವಾಗ ಬೆಂಕಿ ದಿಂಕಿಡದೆ (ಭರಜ. ೨೮-೭೬). **ದೀಂಕಿಡು :** ೧. ನಲಿನಲಿದು ದೀಂ[ಪಾಠಾಂ. ಧಿಂ]ಕಿಟ್ಟು ತಾಯ ಮುಂದೆ ಪರಿವೆಳಗಟುವಿನಂತೆ (ವರ್ಧಪು. ೧೧-೯೯ ವ) ; ಜಂಕೆಯೊಲು ದೀಂಕಿಡುವ ಸೋಂಕು ಸೊಗವೇ (ಗಂ. ೪-೭). **ಧಿಂಕಿಡು :** ೧. ಜಲಧಿಯನು ಧಿಂಕಿಟ್ಟು ಸೀತಾಲಲನೆಗುಂಗುರವಿತ್ತ (ಅರ್ಜಾವಿ. ೧೪-೧೦). ೩. ಪಂಚವಟಿಯಿಂದ ಅಣ್ಣ ರಾವಣನಲ್ಲಿಗೆ ಓಡಿಹೋದ ಶೂರ್ಪಣಖಿಯಂತೆ ಗಾಢಾಂಧಕಾರದ ಕಾಡಿಗೆ ಧಿಂಕಿಟ್ಟುದು (ಹಗಂ. ೪೮). [ ಧೀಂಕು + ಇಡು$_1$ ]

**ಧೀಂಕು, ದಿಂಕು, ದೀಂಕು, ಧಿಂಕು** (ನಾ). ೧. ನೆಗೆತ ; ಜಿಗಿತ ; ಹಾರಿಕೆ. 'ಎರಲೆಧೀಂಕು', 'ಧೀಂಕಿಡು' ಪರಾ. **ದೀಂಕು :** ೧. ದಿಂಕಿಂ ತೆಗೆನೆಟ ದಿಸೆ ಚಾಪಂ ಕುಟಿಲತೆಗೆಟ್ಟು . . . ಬಲ್ಲ ಕೊಪ್ಪು ಕೊಡಂಕಿಯ ಕೊಬ್ಬಿನ ಪೊಲಮರೆ (ಶಾಂತಿಪು. ೪-೪೩). 'ಎರಲೆದಿಂಕು', 'ದಿಂಕುಗೊಳ್', 'ದಿಂಕುವಾಯು' ಪರಾ. ೨. ಉಲ್ಲಾಸದಿಂದ ಕುಣಿದಾಡುವಿಕೆ, – ಕಂಪ್ಪಳಿಸುವಿಕೆ : (೩). **ದೀಂಕು :** ೧. 'ದೀಂಕಿಡು' ಪರಾ. **ಧಿಂಕು :** ೧. ಮಱಾಗಿಟಿಗೆಯೊಂದು ಧಿಂಕಾದತ್ತು ಹುಡುಗನೆನಿಸುವ ಪಾರ್ವನಾ ಪರಶುರಾಮನೆಚ್ಚಂಬಿಗೊಳಗಾದುದಬ್ಧಿ (ವೀಕ್ಕಿಪು. ೨-೩-೧೪). [ ? ]

**ಧೀಂದ್ರಿಯ** (ನಾ). ಮನಸ್ಸು, ಕಣ್ಣು, ನಾಲಗೆ, ಮೂಗು, ಚರ್ಮ ಮತ್ತು ಕಿವಿಗಳೆಂಬ ಆರು ಜ್ಞಾನೇಂದ್ರಿಯಗಳು : "ಧೀಂದ್ರಿಯಂ – ಮ ನೋ ನೇ ತ್ರಾ ದಿ ಮನೋನೇತ್ರಜಿಹ್ವಾಘ್ರಾಣತ್ವಕ್‌ಶ್ರೋತ್ರಗಳ ಹೆಸರು" (ಸಿದ್ಧಾಂತಿ. ೪೭). P ಕೆಲವರು ಮನಸ್ಸನ್ನು ಬಿಟ್ಟು ಐದುಂ ಜ್ಞಾನೇಂದ್ರಿಯಂಗಳೆಂದು ಹೇಳಿದ್ದಾರೆ. ಕೆಲವರು ಮನಸ್ಸನ್ನೂ ಸೇರಿಸಿ ಆರು ಎಂದು ಹೇಳಿದ್ದಾರೆ. [ ಧೀ + ಇಂದ್ರಿಯ ]

**ಧೀತೃಷ್ಣೆ** (ನಾ). ಬುದ್ಧಿಯ ಬಯಕೆ ; ಜ್ಞಾನಪಿಪಾಸೆ : ನಿನ್ನೀ ಮೇರು ಕೃತಿಯ . . . ಮಾನಸಸರೋವರದಿ ಪೂರ್ಣತೃಪ್ತಿಯನೀಂಟಿ ಶಾಂತವಾದುದು ನನ್ನ ಧೀತೃಷ್ಣೆ (ಅಗ್ನಿಹಂ. ೮೪-೭). [ ಧೀ + ತೃಷ್ಣೆ ]

**ಧೀಬಿಗರ್ತ ?** (ನಾ). ನರಕಕೂಪ (?) : ಧರ್ಮಮನಿದಂ ಪರಿಪಾಲಿಸಿದಂಗೆ ಸರ್ಬ್ಬಪಾಪಕ್ಷಯಮುದ್ದತಿಕ್ಕೆಯಿನಿದಕ್ಕೀವಂ ಬ ಗೆ ದ ಂ ಗ ಶೇ ಷ ಮ ಂ ಶ ಕ್ಷ ಯ ವಕ್ಕುಮಾ ಖಳನಿಳಾಮರ ಗೋನಿಪಹಂಗಳಂ ಸ್ವಹಸ್ತಕ್ಷತಿಗೆಯ್ದ ಪಾತಕನಮಂ ನೆಱೆ ಬೀಳುವ ಧೀಬಿಗರ್ತ್ತದೊಳ್ (ಶಾಸಕ. ೯೭ ; ೧೧೭೪). [ ? ]

**ಧೀಮಂತ** (ನಾ). ೧. ಬುದ್ಧಿವಂತ ; ಜಾಣ ; ಮೇಧಾವಿ : ಮಹಾಮಹಿಭುಜರ್ ಶೌರ್ಯೋಗ್ರ ಧೀಮಂತರಂಕದ ಸಾಮಂತರುದಾರವೀರವಿಭವಶ್ರೀಮನ್ನೆಯರ್ (ಪುಷ್ಪಪು. ೮-೩೯) ; ಕುವರವಿಷ್ಣು ಯೋಗ್ಯಪುತ್ರ, ಧೀಮಂತ, ಸತ್ತ್ವಶಾಲಿ (ಶಾಂತಲಾ. ೩೮). ೨. ಜ್ಞಾನಿ ; ಪಂಡಿತ : ಧೀಮಂತಂ ದೇವದೇವಂ ಪುಲಿಗಿರಿನಗರೀಶಾಸನಾಂಕಂ ಮೃಗಾಂಕಂ (ಸೋಮೇಶ. ೧) ; ಧೀಮಂತರುದ್ದೀಪ್ತ ಚಿತ್ತದುಳಿವನು ಮರೆವ ನಾರಣನ ಕರುಣಾಕಟಾಕ್ಷ (ಮಲೆದೇ. ೫೮-೯). [ ಸಂ. ಧೀಮತ್ ]

**ಧೀಮಂತಿಕೆ** (ನಾ). ಬುದ್ಧಿವಂತಿಕೆ ; ಜಾಣ್ಮೆ : ಕಾವೇರಿಯ . . . ದರ್ಶನ ತೆಗೆದುಕೊಂಡವರಲ್ಲಿ ಸ್ವಾತಂತ್ರ್ಯ, ಧೀಮಂತಿಕೆ, ಗಂಭೀರತೆಯನ್ನು ತುಂಬಿ ಕಳುಹಿಸುತ್ತಿದೆ (ಅವತಂ. ೨೯). [ ಧೀಮಂತ + – ಇಕೆ ]

**ಧೀಮಣಿ** (ನಾ). ೧. ಬುದ್ಧಿವಂತರಲ್ಲಿ ಶ್ರೇಷ್ಠ ; ಮಹಾಮೇಧಾವಿ : ಬಲದೇವಧೀಮಣಿ ತನಯಳಂ ಬಸವಂಗೆ ಭಕ್ತಿಯೊಳಿತ್ತು ಶರಣೆಂದ (ಬಸಪು. ೪ ಸೂಚನೆ) ; ಭೂಮಿಯೊಳು ಕೇಳುವೆವೆ ಕಾಂಚಿವ ಪೇಮಧೀಮಣಿ

ನಿಮ್ಮೊಳಲ್ಲದೆ ಸೋಮನೇಮ ಕಪರ್ದರೂಪಾ ಸತ್ಯಸಲ್ಲಾಪ (ಬಸಪು. ೯೬-೭೫). ೨. ಪಂಡಿತಶ್ರೇಷ್ಠ : ಒಡನೆ ಚಾವಡಿಗೆಯ್ದಿ ಧೀಮಣಿಗಳಂ ಕರೆಸಿ (ಗುರುಚಾ. ೦೪-೬೪). [ <ಸಂ. ಧೀಮನ್ಮಣಿ ]

**ಧೀಮತಿ** (ನಾ). ಜಾಣೆ ; ಬುದ್ಧಿವಂತೆ "ಪ್ರಾಜ್ಞಾ, ಧೀಮತೀ–೨ ಬಹಳ ಬುದ್ಧಿಯುಳ್ಳವಳು" (ಸಿದ್ಧಾಂತಿ. ೧೬೦). [ ಸಂ. ಧೀಮತೀ ]

**ಧೀಮಾಯಿ** (ನಾ). ಜಡತೆ ; ಮಾಂದ್ಯ ; ಚುರುಕಿಲ್ಲದಿರುವಿಕೆ : ತಮ್ಮ ಅಧಿಕಾರ ತಮ್ಮ ಘನತೆಗೆ ತಕ್ಕುದಲ್ಲವೆಂಬ ಭಾವನೆಯಿಂದಲೋ ಅಥವಾ ಸ್ವಾಭಾವಿಕ ಧೀಮಾಯಿ ಇಂದಲೋ, ಅವರು ಕೆಲಸವನ್ನು ಹೊತ್ತು ಮುತವರ್ಜಿ ತೋರಿಸುತ್ತಿರಲಿಲ್ಲ (ಕಲಿನಿ. ೨೧೬).

[ ←ಮರಾ. ಧಿಮಾಈ, ಧಿಮ್ಮಾಈ ]

**ಧೀಮೂಢತೆ** (ನಾ). ಬುದ್ಧಿಯಿಲ್ಲದಿರುವಿಕೆ ; ತಿಳಿವಳಿಕೆಯಿಲ್ಲದಿರುವಿಕೆ ; ಮೂಢತ್ವ : ವೈಮುಟ್ಟಿ ಮನಮುಟ್ಟಿ ಬರುವೆ, ರೂಪವ ನೋಡೆ ನೀ ಮೂಡಿ ಬುದ್ಧಿಯೊಳು ನೆಡುವ, ರಸವನು ಸವಿಯೆ ಧೀಮೂಢತೆಯು ನೊಡೆದು ನಿಲ್ಲಿಸುವ ಚಿತ್ರವನು (ಗಿರಿ. ೯-೩). [ ಧೀ + ಮೂಢತೆ ]

**ಧೀಯುತ** (ನಾ). = ಧೀಮಂತ ೧ : ಧೀಯುತರು ನವನಾಥಸಿದ್ಧರಡೇಯ ಸಾಧ್ಯಪುವರಮುಖ್ಯಮಹಾಯತೀಂದ್ರರು ಬಂದರೀಶನನೋಲಯಿಸಲೆಂದು (ಬಸಪು. ೧-೯೧) ; ಧೀಯುತಂ ನೀನುಗ್ರಕೋಪಮಂ ಬಿಡಬೇಹುದು (ವೀಶೈಪು. ೩-೧೧-೨೮). [ ಧೀ + ಯುತ ]

**ಧೀರ** (ಗು). ೧. ಧೈರ್ಯದಿಂದ ಕೂಡಿದ ; ದಿಟ್ಟತನದ. ೨. ಸ್ಥಿರವಾದ ಮನಸ್ಸುಳ್ಳ ; ದೃಢತೆಯುಳ್ಳ : ಧೀರ ಪಗಲೊತ್ತಿಣೆಯಾಂಡಂ ರಾರಾಜಿಸುತಿರ್ದ ಪುಷ್ಪಕಂ . . . ತಾರಾದ್ರಿಗೆ ಬಂದುದಭವನಾಜ್ಞೆಯೊಳಾಗಳ್ (ತ್ರಿಪುವಿ. ೦೨-೩೦). ೩. ಗಂಭೀರವಾದ ; ಉದ್ವೇಗವಿಲ್ಲದ : ಅತಿಕುಶಲ [ಸ]ಲೀಲಾಚಾರ ಲೋಕೋಪಕಾರೋದಿತ ಪರಮಗುಣೈಕೋದಾರ ಧೀರಾಧಿಕಾರಂ (ಕವಿರಾ. ೩-೨೦೯). 'ಧೀರಪ್ರಕೃತಿ' ಪರಾ. ೪. ಮನೋಹರವಾದ. (ನಾ). ೫. ಧೈರ್ಯ ; ದಿಟ್ಟತನ ; ಎದೆಗಾರಿಕೆ : ಅರಿದರಿದು ತೆಗೆವವನ ಧೀರವು ಹಿರಿದು ನೋಡೆನಲಖಿಳದೇವರ ನೆಂವಿ ಭಾವನೆ (ಜಾಶಿರಾ. ೨-೯೩). 'ಧೀರನಿಧಿ' ಪರಾ. ೬. ಧೈರ್ಯಶಾಲಿ ; ದಿಟ್ಟ : ಧೀರಂ ಮದೀಯುತನಯಂ ಮಾರನಿಭಂ ತೊಟೆದನೆನ್ನ ಕಾರಣದಿಂದಂ ಚಾರುತರಸ್ತ್ರೀಯರಂ (ನೇಮಿಪು. ೩-೨೮) ; ನಮ್ಮ ಕೂಡಲಸಂಗನ ಶರಣರು ಧೀರರು ಉಳಿದವರೆಲ್ಲಾ ಅಧೀರರು (ಬಸವ. ೪೪೪) ; ಧೀರಂ ಧೀರಂಜಿತಂ ನಿಂ ತಡೆದಿರದೆ ಯಶಸ್ಸಾಧನಂ ಸಾಧನಂ (ಜಗವಿ. ೦೩-೫೬) ; ಧೀರಾ ನಮೋಸ್ತು ಗಣನಾಗನಾಥಾರಾರಾಜಿತ ತಮಃಕ್ರಮೋದಿತ ಶೂರಾ (ಜೀವಸಂ. ೧೦೦೬-೫೩) ; ಧೀರಂ ಪಿಂಗಳಲೋಚನಂ ನಿಶಿತದಂಷ್ಟ್ರಂ ಭೀಷ್ಮವಕ್ತ್ರಂ . . . ವಿರಾಜಿಸಿದುದುದ್ವಿಧ್ವೀಕರಂ ಸೂಕರಂ (ಗಿರಿಕ. ೧-೧೧೦) ; ಸಿಟ್ಟಿ ಕರವಾಳ್ಗಮೆನಗಂ . . . ಬೆದಱದೆ ನಿಂದಟ್ಟಿಯನೆ ನುಡಿವರವರ ನೆಗಟ್ಟಿ ಕರಂ ಪಿರಿದ ಧೀರರಕಟ ಕುಮಾರರ್ (ಯಶೋಚ. ೦-೬೧) ; ಧೀರಂ ದಿವ್ಯಮಹತ್ವಸತ್ವಮಹಿತಂ ಭರ್ಗೋಪಮಂ ಭಾಸುರಾಕಾರಂ (ವೃಷವಿ. ೩೬-೨). ೭. ಬುದ್ಧಿವಂತ ; ಜಾಣ : ಧೀರನಪ್ಪನುಮಂ ಹಾಸ್ಯಂಮಾಟ್ಪಳ್ . . . ವಿನೀತನಂ ದೂರದಿಂ ನೋಡಿ ಪಾತಕನಿವನೆಂದು ತಿಳಿದು ಪೋಗಲೆಂದಿರೆ ನಂಜದಿರ್ (ಶಾರಂಪೂ. ೩೯೯). ೮. ಪಂಡಿತ ; ವಿದ್ವಾಂಸ : "ಧೀರಃ, ಧೀಮಾನ್ . . . ಮತಿಮಾನ್–ಈ ೨೮ ವಿದ್ವಾಂಸರ್" (ಹಲಾಯು. ೫೫-೦೭೭). ೯. ಸಮುದ್ರ ; ಕಡಲು. ೧೦. ಕೇಸರ ; ಕುಂಕುಮಕೇಸರಿ. ೧೧. ಗೌತಮ ಬುದ್ಧ. [ ಸಂ. ]

**ಧೀರತನ** (ನಾ). = ಧೀರತೆ ೧ : ಶರಣು ದಶರಥರಾಮದೂತಗೆ . . . ಧೀರತನದಲಿ ಅಕ್ಷಕುಮಾರನ ಪ್ರಾಣವನು ಕೊಂಡಗೆ (ಕನಕ. ೦೩-೦).

[ ಧೀರ + – ತನ ]

**ಧೀರತನು** (ನಾ). ದೃಢವಾದ ಶರೀರವುಳ್ಳವನು : ಧೀರತನು ಧುರದುಂಡಿ ಹನುಮಯ್ಯರಿಂ ಸೇವಿಸಿದ ನಿಮ್ಮಂಘ್ರಿಕಮಲವ ದೂರ ಮಾಡದೆ ಸಲಹಯ್ಯ (ಕನಕ. ೭-೩). [ ಧೀರ + ತನು ]

**ಧೀರತೆ** (ನಾ). ೧. ಕೆಚ್ಚು ; ದಿಟ್ಟತನ ; ಧೈರ್ಯ : ವಸುಮತಿ ಸಾಕ್ಷಿ ಧೀರತೆಗೆ . . . ರಿಪುಬ್ರಜಿ ಮಂಡಳಮೆಯ್ದೆ ಸಾಕ್ಷಿ ಸಾಹಸಕೆ (ಸೌಇಇ. XX, ೯೬-೩೦ ; 1072) ; ಧೀರತೆಯನೊಡನೆ ತೊಟೆದು ತಪೋರಮಣಸಹಸ್ರಮಂತು ಬಳಸಿರ್ಪನೆಗಂ ತಾರಾನಿಕರಂ ಬಳಸಿದ ಮೇರುವಿನಂತಿರ್ದನಾ ಜಗತ್ರಯಃತಿಲಕಂ (ಅನಂಪು. ೯-೭೮). ೨. ದೃಢತೆ ; ಸ್ಥೈರ್ಯ. 'ಧೀರತೆಗಿಡು' ಪರಾ. [ ಸಂ. ಧೀರತಾ ]

**ಧೀರತೆಗಿಡು** (ಕ್ರಿ). ಸ್ಥೈರ್ಯವನ್ನು ಕಳೆದುಕೊಳ್ಳು ; ದಾರ್ಢ್ಯವಿಲ್ಲದಾಗು : ಧೀರತೆಗಿಡದೆ ಪರೀಷಹವೀರರನುಗ್ರೋಗ್ರತಪದೊಳಂ ಗೆಲ್ದು (ಶಾಂತಿಪು. ೪-೧೦೯). [ ಧೀರತೆ + ಕಿಡು (<ಕೆಡು₁) ]

**ಧೀರತೆವಿಡಿ** (ಕ್ರಿ). ದಿಟ್ಟತನವನ್ನು ಹೊಂದು ; ಕೆಚ್ಚಿನಿಂದ ಕೂಡಿರು : ಅರಿವಿನ ಬೇಲಿಯು ತಲೆಮಟ್ಟ ಧೀರತೆವಿಡಿಯುತ ಹಾರುತ ನೆಗೆಯುತ ಚಿದ್ಘನಜವಲೆಯು ಸಾಗುತಿರೆ (ಪ್ರಬಂಧ. ೧೦೮). [ ಧೀರತೆ + ಪಿಡಿ₁ ]

**ಧೀರತ್ವ** (ನಾ). ೧. ಕೆಚ್ಚು ; ಧೈರ್ಯ : ಊರಿಂಗೆ ದೊರೆ ರೂಪು . . . ರಾಜಂಗೆ ಧೀರತ್ವ ರೂಪು (ಸರ್ವಜ್ಞ. ೬೦೮). ೨. ದೃಢತೆ ; ಸ್ಥೈರ್ಯ : ನನೆಗೋಲ್ ನಟ್ಟು ಕೊನರ್ತವೋಲ್ ಪುಳಕಮುಣ್ಮಿತ್ತು . . . ದಿಟದಿಂ ಹೃದ್ಗೇಹಮಂ ತನ್ನಿತಂಬಿನಿ ಪೊಕ್ಕಂತಿರೆ ಕಂಪನಕ್ಕೆ ತನು ಕೈಗೊಟ್ಟತ್ತು ಧೀರತ್ವಮಂ ಮನದಿಂ ಸುಯ್ ಪೊಱಗಗ್ಗೆ ಪೊತ್ತಡಕುವಂತಿರ್ದತ್ತು ಭೂಪಾಲನಾ (ಕಾವ್ಯಸಾ. ೫೬೦) ; ನೀನೀಗ ಧೀರತ್ವವಳಿದು ಮೇರೆಯ ಮೀಱಿ ಬಲು ಮೋಹವಾರಿಧಿಯೊಳು ಮುಳುಗುವುದ (ಕಂಸವಿ. ೯-೦೫೨). [ ಸಂ. ]

**ಧೀರನಿಧಿ** (ನಾ). ಧೈರ್ಯಕ್ಕೆ ಆಕರನಾದವನು ; ಧೈರ್ಯನಿಧಿ : ಧೈರ್ಯಸ್ಥ : ಧೀರನಿಧಿ ಬಿಟ್ಟದೇವನೊಳೋರಗೆ ಬಲ್ಲಾಳನಿಂತು ನರಸಿಂಹಸುತಂಗಾರಣೆ (ಯಶೋಚ. ೦-೦೩). [ ಧೀರ + ನಿಧಿ ]

**ಧೀರಪ್ರಕೃತಿ** (ನಾ). ಗಂಭೀರಸ್ವಭಾವ: ಧೀರಪ್ರಕೃತಿಗೆ ಸೌಮ್ಯಾಕಾರಕ್ಕನುಗುಣಮೆನಿಪ್ಪ ನಯವಿನಯವಚಸ್ಸಾರತೆಗೆ ಮೆಚ್ಚಿ ರಘುಕುಲವೀರಂ ಕಾಣ್ಣ ದೃಷ್ಟಿಯಿಂದೀಕ್ಷಿಸಿದಂ (ಶಂರಾಮಾ. ೧೧-೯೧). [ ಧೀರ + ಪ್ರಕೃತಿ ]

**ಧೀರಪ್ರಶಾಂತ** (ನಾ). = ಧೀರಶಾಂತ : ನಾಯಕನಲ್ಲಿ ಧೀರೋದಾತ್ತ, ಧೀರಲಲಿತ, ಧೀರೋದ್ಧತ, ಧೀರ(ಪ್ರ)ಶಾಂತ ಎಂದು ನಾಲ್ಕು ವಿಧ . . . ಧೀರ(ಪ್ರ)ಶಾಂತನಲ್ಲಿ ವಿಶೇಷಗುಣಗಳಿಲ್ಲ. ಮೇಲೆ ಹೇಳಿದ ನಾಯಕಸಾಮಾನ್ಯಲಕ್ಷಣಗಳು ಮಾತ್ರ ಇರುತ್ತವೆ. (ಇವರು ಪ್ರಾಯಿಕವಾಗಿ ಬ್ರಾಹ್ಮಣರು ಅಥವಾ ವೈಶ್ಯರು). ಉದಾಹರಣೆ :–ಮಾಧವ, ಚಾರುದತ್ತ (ಕೃಪಿಡಿ. ೨೦೯) ; ವೀರಶೃಂಗಾರದ ಪ್ರಧಾನನಾಯಕ 'ಧೀರಲಲಿತ', ದಾನವೀರ–ಧರ್ಮವೀರ–ಶಾಂತರಸಗಳಲ್ಲಿ ಪ್ರಧಾನನಾಯಕ 'ಧೀರಪ್ರಶಾಂತ' (ಧ್ವನ್ಯಾಲೋ. ೧೩೮ ಅಡಿಟಿ). [ ಧೀರ + ಪ್ರಶಾಂತ ]

**ಧೀರಮೂರ್ತಿ** (ನಾ). ಧೈರ್ಯವಂತ ; ದಿಟ್ಟ : ಮೊಸಳೆಯ ರಾಜಾಧಿರಾಜನು ನೀರೊಳು ಇಲಿ ಬಿಲದೊಳು ಧೀರಮೂರ್ತಿ (ಇಂಚಾಪ. ೨೩೩-೫೯).

[ ಧೀರ + ಮೂರ್ತಿ ]

**ಧೀರಲಲಿತ** (ನಾ). [ ಕಾವ್ಯಮೀ ] ಕಾವ್ಯ ಅಥವಾ ರೂಪಕದ ನಾಯಕರಲ್ಲಿ ಒಂದು ಭೇದ ; ಮೃದುಸ್ವಭಾವದವನೂ ಸಂಗೀತ, ಸಾಹಿತ್ಯದಲ್ಲಿ ಆಸಕ್ತನೂ ಆದ ನಾಯಕ : ಧೀರೋದಾತ್ತ ಧೀರೋದ್ಧತ ಧೀರಲಲಿತ ಧೀರಶಾಂತರೆಂಬ ಚತುರ್ವಿಧ ಶೃಂಗಾರನಾಯಕರಿಂ (ವಿವೇಕ. ೩೩೮) ; ಧೀರಲಲಿತನ ವಿಶೇಷಗುಣಗಳು–ಮೃದುಸ್ವಭಾವ, ಸಂಗೀತಸಾಹಿತ್ಯಗಳಲ್ಲಿ ಆಸಕ್ತನಾಗಿ ನಿಶ್ಚಿಂತನಾಗಿ ಸುಖವಾಗಿ ಇದ್ದು ಬಿಡುವಿಕೆ. ಉದಾಹರಣೆ–ವತ್ಸರಾಜ (ಸಂನಾಟ. ೧೭). [ ಧೀರ + ಲಲಿತ ]

**ಧೀರವಶಿ** (ನಾ). ವಿದ್ವಾಂಸರಿಗೆ ವಶವಾಗುವವನು: ಶ್ರೀರಾಮನಾಹ್ಲಾದ ರೂಪಿ. ಔದಾರ್ಯನಿಧಿ . . . ಮತ್ಸರವಿದೂರನತ್ಯಂತಶಾಂತಿಖನಿ. ಪ್ರಿಯ ಭಾಷಿ. ಹಿತಸಖಂ. ವಿತಮಾರ್ಗಿ. ಧೀರವಶಿ (ಶ್ರೀರಾಮಾ. ೫೭-೯೪). [ ಸಂ. ಧೀರವಶಿನ್ ]

**ಧೀರಶಾಂತ** (ನಾ). [ಕಾವ್ಯಮೀ] ಕಾವ್ಯ ಅಥವಾ ರೂಪಕದ ನಾಯಕರಲ್ಲಿ ಒಂದು ಭೇದ; ರಸಿಕನೂ ಮಾರ್ದವವುಳ್ಳವನೂ ಶುಚಿಯೂ ಸುಖಿಯೂ ಪ್ರಸನ್ನನೂ ಮನೋಹರನೂ ಆಗಿದ್ದು, ಬ್ರಾಹ್ಮಣನೋ ಅಥವಾ ವಣಿಜನೋ ಆಗಿರುವ ನಾಯಕ: ಧೀರೋದಾತ್ತ ಧೀರೋದ್ಧತ ಧೀರಲಲಿತ ಧೀರಶಾಂತರೆಂಬ ಚತುರ್ವಿಧ ಶೃಂಗಾರ ನಾಯಕರಿಂ (ವಿವೇಕ. ೩೩೮); ಧೀರೋದಾತ್ತಲಲಿತರೀ ಧಾರಿಣಿಯೊಳ್ ನೆಗಟ್ಟ ಧೀರಶಾಂತೋದ್ಧತರೆಂದಾರಯೆ ಪೇಟ್ದೀ ಗುಣಯುತರೋರಂತಿರೆ ನಾಲ್ವರಾದರ್ (ರಸರ. ೩-೭೩ ಸೂತ್ರ); ಧೀರಶಾಂತನಲ್ಲಿ ವಿಶೇಷಗುಣಗಳಿಲ್ಲ. ನಾಯಕ ಸಾಮಾನ್ಯಲಕ್ಷಣವೇ ಅವನ ಗುಣಗಳು (ಅವನು ಸಾಮಾನ್ಯವಾಗಿ ಬ್ರಾಹ್ಮಣ ಅಥವಾ ವೈಶ್ಯನಾಗಿರುತ್ತಾನೆ). ಉದಾಹರಣೆ – ಮಾಧವ, ಚಾರುದತ್ತ (ಸಂನಾಟ. ೦೮). [ ಧೀರ + ಶಾಂತ ]

**ಧೀರಾರಾಧಿತ** (ಗು). ಜ್ಞಾನಿಗಳಿಂದ ಪೂಜಿತವಾದ: ಧೀರಾರಾಧಿತಪಾದ ಪದ್ಮನಖಿಲಶ್ರುತ್ಯಂತವಿದ್ಯೋದಿತಂ (ಪಶ್ಚಿಮ. ೧೦೮). [ ಧೀರ + ಆರಾಧಿತ ]

**ಧೀರುರೆ** 'ಧಿರುರೆ' ನೋ.

**ಧೀರೈಸು** (ಕ್ರಿ). ಧೈರ್ಯದಿಂದ ಎದುರಿಸು: ದೂರದ ಸೀಮೆಗೆ ನಾರಿ ನಾನೊಬ್ಬಳೆ ಧೀರೈಸಲಾರೆ ದಿನಗಳ (ನಾಶದ. ೬೮).

**ಧೀರೈಸಿಕೊಳ್ಳು** = ಧೈರ್ಯ ತಂದುಕೊಳ್ಳು; (ಮನಸ್ಸಿಗೆ) ಸಮಾಧಾನ ಹೇಳಿಕೊಳ್ಳು: ದೂರದ ಅಕ್ಕಯ್ಯ ಸುಖದಾಗೆ ಇದ್ದಾಳೆಂದು ಧೀರೈಸಿಕೊಂಡೆ ಮನದಾಗೆ (ನಾಶದ, ೬೮). [ ಧೀರ + – ಇಸ್ಸು ]

**ಧೀರೋದಾತ್ತ** (ಗು) ೧. ಆಳವಾದ ಮತ್ತು ಉನ್ನತವಾದ: ಧೀರೋದಾತ್ತ ಗುಣೋತ್ತರನಾರಯೆ ಚಿಕದೇವರಾಯನತಿರವಿತೇಜಂ(ಅಪ್ರತಿ.೪೪-೧೭); ಜನಕಜಾರಮಣ ಧೀರೋದಾತ್ತ ವಕ್ಷವಾರ್ಧಿಯ ನೀಲನಾವೆಯೊಳ್ ತೇಲಿದನು ಶಾಂತಿಯ ತುರೀಯಕೆ (ಶ್ರೀರಾಮಾ. ೧೬೪-೩೪೭); ಇಂತಹ ಪ್ರತಿಮೆಯಲ್ಲಿ ಧೀರೋದಾತ್ತಗುಣಗಳೂ ಮಾನವ ಮೈತ್ರಿಯ ಲಕ್ಷಣಗಳೂ ಸೇರಿ ಪ್ರತಿಮೆಯ ಬಹುಮುಖತೇಜಸ್ಸನ್ನು ಉಜ್ವಲಿಸುತ್ತವೆ (ಬದ್ರಶ್ರ. Lxvii ಟೀಕೆ). (ನಾ). ೨. ಧೀರನೂ ಉದಾತ್ತವಾದ ಗುಣಗಳಿಂದ ಕೂಡಿದವನೂ ಆದ ವ್ಯಕ್ತಿ; ಗಂಭೀರನೂ ಸದ್ಗುಣಿಯೂ ಆದವನು: ಬಸವರಾಜಂ ಲಿಂಗಸದರ್ಥಂ ಜಂಗಮಸುರತರುಸಾರಹೃದಯಂ ಧೀರೋದಾತ್ತಂ ಸತ್ಯಸಂಧಂ ದಯಾನಿಧಿ (ಬಸರ. ೧೨-೫೦); ಚಚ್ಚರ ಬೆಸಸು ಬೆಸನಾವುದೆಂದು ಧೀರೋದಾತ್ತನೆರಡುಕೈಮುಗಿಯುಲು (ಹರಿಕಾ. ೮-೯೮); ಧೀರೋದಾತ್ತಂ ಜಲಧಿಗಭೀರಂ (ನಳಚಂ. ೧೫೦); ಚೆಲ್ಲಿದ ಕರಣಂಗಳಂ ಮೆಲ್ಲನೆ ಸಂತೈಸಿಕೊಂಡು ಧೀರೋದಾತ್ತ ಸಾರ್ವಭೌಮಂ ಮುಂದಣ್ಗೆ ನಡೆತರುತ್ತಂ (ರಾಜಶೇ. ೭-೭೧ ವ). ೩. [ಕಾವ್ಯಮೀ] ಕಾವ್ಯ ಅಥವಾ ರೂಪಕದ ನಾಯಕರಲ್ಲಿ ಒಂದು ಭೇದ; ಉದಾತ್ತನೂ ಗಂಭೀರನೂ ಆದ ನಾಯಕ: ಧೀರೋದಾತ್ತ ಧೀರೋದ್ಧತ ಧೀರಲಲಿತ ಧೀರಶಾಂತರೆಂಬ ಚತುರ್ವಿಧ ಶೃಂಗಾರನಾಯಕರಿಂ (ವಿವೇಕ. ೩೩೮); ಧೀರೋದಾತ್ತನಲ್ಲಿರುವ ವಿಶೇಷ ಗುಣಗಳೇನೆಂದರೆ:–ಸುಖದುಃಖಗಳಿಂದ ಚಲಿತವಾಗದಿರುವ 'ಮಹಾಸತ್ತ್ವ', ಗಾಂಭೀರ್ಯ, ಕ್ಷಮೆ, ಆತ್ಮಶ್ಲಾಘನೆ ಮಾಡಿಕೊಳ್ಳದಿರುವುದು, ಸ್ಥೈರ್ಯ, ವಿನಯದಿಂದ ಮುಚ್ಚಿದ ಅಹಂಕಾರ, ಹಿಡಿದ ಕೆಲಸವನ್ನು ಸಾಧಿಸುವ ಸಾಮರ್ಥ್ಯ. ಉದಾಹರಣೆ:– ದುಷ್ಯಂತ, ರಾಮ, ಜೀಮೂತವಾಹನ, ಹರಿಶ್ಚಂದ್ರ ಇತ್ಯಾದಿ (ಕೈಪಿಡಿ. ೩೦೯). [ ಧೀರ + ಉದಾತ್ತ ]

**ಧೀರೋದಾರ** (ನಾ).=ಧೀರೋದಾತ್ತ ೨: ತನಯನನೆತ್ತಿಕೊಳುತ ಮಂತ್ರಿಯನು ಮಾತಾಡಿಸುತ ಸತಿಯನೋವುತ್ತ ನಕ್ಷತ್ರಕನ ಕೂಡುತ್ತರ್ರೆಗುಡುತ ರಣ್ಯಮಂ ನೋಡುತ್ತ ನಡೆದ ಧೀರೋದಾರನು[ಪಾಠಾಂ. ನಾ ಭೂಪಾಲನು] (ಹರಿಕಾ. ೧೦-೧). [ ಧೀರ + ಉದಾರ ]

**ಧೀರೋದ್ಧತ** (ನಾ). [ಕಾವ್ಯಮೀ] ಕಾವ್ಯ ಅಥವಾ ರೂಪಕದ ನಾಯಕರಲ್ಲಿ ಒಂದು ಭೇದ; ದರ್ಪ, ಮಾತ್ಸರ್ಯ, ಅಹಂಕಾರ, ರೌದ್ರ, ಚಾಂಚಲ್ಯ, ಆತ್ಮಶ್ಲಾಘನೆ ಮೊದಲಾದ ವಿಶೇಷ ಗುಣಗಳಿಂದ ಕೂಡಿದ ನಾಯಕ ಅಥವಾ ಪ್ರತಿನಾಯಕ: ಧೀರೋದ್ಧತನಲ್ಲಿರುವ ವಿಶೇಷಗುಣಗಳೇನೆಂದರೆ:–ದರ್ಪಮಾತ್ಸರ್ಯಗಳು, ಮಾಯಾಮೋಸಗಳು, ಅಹಂಕಾರ, ರೌದ್ರ ಚಾಂಚಲ್ಯಗಳು, ಆತ್ಮಶ್ಲಾಘನೆ. (ಪ್ರತಿನಾಯಕನು ಸಾಮಾನ್ಯವಾಗಿ ಧೀರೋದ್ಧತನಾಗಿರುತ್ತಾನೆ). ಉದಾಹರಣೆ:– ದುರ್ಯೋಧನ, ರಾವಣ (ಕೈಪಿಡಿ. ೩೦೯); ನಾಯಕರಲ್ಲಿ ಧೀರೋದಾತ್ತ, ಧೀರಲಲಿತ, ಧೀರೋದ್ಧತ, ಧೀರಶಾಂತ ಎಂದು ನಾಲ್ಕುವಿಧ (ಸಂನಾಟ. ೦೭); ವೀರರೌದ್ರದ ಪ್ರಧಾನ ನಾಯಕ 'ಧೀರೋದ್ಧತ' (ಭ್ರಶ್ರಾಕೃತೀ. ೦೫೮ ಅಡಿಟಿ). [ ಧೀರ + ಉದ್ಧತ ]

**ಧೀವರ** (ನಾ). ೧. ಬುದ್ಧಿಯಿಂದ ಶ್ರೇಷ್ಠನಾದವನು; ಬುದ್ಧಿವಂತ; ಜ್ಞಾನಿ: ಹರುಷದಿಂ ತಾನುಂ ಬಸವಧೀವರನುಮಖಿಳನಿಯೋಗದೊಳಗವೆರಸಿ ಬರುತಿಪ್ಪೆಡೆಯೊಳು (ಬಸಪು. ೫-೧೯); ವರದ ಮಹಿಮಾನ್ವಿತನೆ ಧೀವರನುರುಜಿತೇಂದ್ರಿಯ ಪರಮಚಿದ್ಘನ (ಮಡಿಳ. ೪). ೨. ಬೆಸ್ತರವನು; ಮೀನುಗಾರ; ಜಾಲಗಾರ: "ಕೈವರ್ತಃ, ಧೀವರಃ, ದಾಶಃ, ಮತ್ಸ್ಯಬಂಧೀ, ಜಾಲಿಕಃ – ಈ ೫ ಜಾಲಗಾರನು" (ಹಲಾಯು. ೯೭-೪೯೦); "ಧೀವರ ಜಾಲಿಕ ದಾಶನಾಮ ಮೀಂಗುಲಿಗಂ" (ಪಸ್ತುಕೋ. ೬೬-೮೯); ಕರೆಸಿದನು ಧೀವರನ ನಯ್ಯಂಗರಸಿಯಾಗಲಿ ನಿನ್ನ ಮಗಳೆನಲು (ಕುವ್ಯಾ.ಆ. ३-३೭); ಪ್ರಳಯ ಕಾಲದೇಕಾರ್ಣವದೊಳುನ್ಮತ್ತ ಕಚ್ಛಪ ಮತ್ಸ್ಯಯುಗಮಂ ಕೆಗೆವ ಧೀವರೋತ್ತಂಸರೂಪಂ ಹರಂ (ಪದ್ಮರಾ. ೧೦-೧೩೪); ಧೀವರಗೆ ಬೇಡಿದುದನಿತ್ತು ಕಳುಹೆ (ಪ್ರಾಕರಾ. ೧೧-೬೩). ೩. ಬೇಟೆಗಾರ; ಬೇಡ; ವ್ಯಾಧ: ಹಸ್ತಮನಾ ಪಾವಿನ ಪಲ್ಗೆ ಕೊಟ್ಟು ಸತ್ತಾತನ ಪೊಟಲೊಳೆ ಮುಖ್ಯನಪ್ಪ ಧೀವರ[ಪಾಠಾಂ. ದೀವರ, ದೀವಳ]ನಾದಂ (ಅರ್ಧನೇ. ೩-೮೫); ಪಿಡಿದೊಂದು ಪೆರ್ಬುಲಿಯನೊರ್ವಂ ಕಕ್ಷದೀಂದೊತ್ತಿ ತನ್ನ ಗೃಹಕ್ಕೆಟ್ಟರುತಿರ್ದನೊಂದೆಡೆಯೊಳುದ್ಧದ್ಧೀವರಂ ಧೀವರಂ (ಜಗವಿ. ೦೭-೩೦); ಬಂದ ಸುಜನಮ್ಮಗ ಧೀವರಂ[ಪಾಠಾಂ. ನಖಿಳ ಮುನಿಪಾವನಂ, ನಖಿಳ ಮುನಿಪಾವಕಂ, ದ.ಬೋಧಭಾವಕಂ] ಕಪಟಪಟು ಕೌಶಿಕಂ ವಾಸಿಷ್ಠಮುನಿ ಹೋದ ಹೊತ್ತನಜೀದು (ಹರಿಕಾ. ೩-೫); ಹೇವವಿಲ್ಲದೆ ಕಾದಬೇಹುದು ಧೀವರರ ಪೋಲ್ ತಡಿಕೆವಲೆಯಲಿ ಲಾವುಗೆಯ ಹೊಯ್ದಂದವಲ್ಲೆನುತೆಚ್ಚನಾ ಪಾರ್ಥ (ಕುವ್ಯಾ.ಕ. ३३-३೮); ಗಗನಗಹನದೊಳೆ ಗಮಿಯಿಪ ಖಗಕ್ಕೆ ಪತ್ರಿಂದ್ರ ಧೀವರಂ ಬೀಸಿದ ರೇಣುಗಣ ನವಜಾಲಕೊಳಗಾಯ್ತೊಗಃಮಿಗೆಯಿಂದನಿವಿಷ ಪ್ರತಾನಂ ಚಿತ್ರಂ (ರಾಜಶೇ. ೬-೯೩). [ ಸಂ. ]

**ಧೀವರೆ** (ನಾ). ಬೇಡಿತಿ; ಶಬರಿ: ಪೊಸಮುತ್ತಿನ ಪುಟ್ಟುವ ನೀರೊ ತೋರ್ಪ ಬೆಳ್ದಿಂಗಳ ಬಯ್ಕೆಯೋ ಜಗದ ಧೀ[ಪಾಠಾಂ. ದೀ]ವರೆಯರ್ಕಳ ಕಣ್ಣ ಬೆಳ್ಪು ಬೆಳ್ಪಂಗೆಡೆದತ್ತೊ ಪೇಟಿಮೆನೆ ನಿರ್ಮಳವಾದುದು ನೀರಜಾರಂ (ಅರ್ಧನೇ. ೫-೧೦೦). [ ಧೀವರ + – ಎ ]

**ಧೀವರ್ತನೆ** (ನಾ). ಬುದ್ಧಿಪೂರ್ವಕವಾದ ಆಚರಣೆ: "ಬುದ್ಧಿಯ ನಡತೆ" (ಮಂಕುಕ. ಕೋಶ): ದೈವವೆನಿಸಿರುತೆ ವಿಶ್ವಪ್ರಕೃತಿಶಕ್ತಿಯಲಿ ಜೀವವಾಸನೆಗಳಲಿ ಪೂರ್ವಕೃತವೆನಿಸಿ ಧೀವರ್ತನೆಯಲಿ ಪೌರುಷವೆನಿಸಿ ಪರಸತ್ತ್ವ ತ್ರೈವಿಧದೊಳಿರುತಿಹುದು (ಮಂಕುಕ. ೦೫೦). [ ಧೀ + ವರ್ತನೆ ]

**ಧೀವಶ** (ನಾ). ೧. ಬುದ್ಧಿಗೆ ವಶವಾದುದು. ೨. ಕೆಚ್ಚು ; ಧೈರ್ಯ : ಆಳ ನೋಯಿಸಿ ನೋಡುತಿಹ ಹೀಹಾಳಿ ತಾನೇಕಕಟಕಟ ದೊರೆಯಾಳ ಧೀವಶವೆನುತ ಸಹದೇವಾದಿಗಳು ಜಱಿದು (ಕುವ್ಯಾಸ. ೧೧-೩೯). ೩. ಉದ್ಧಟತನ; ಧಾರ್ಷ್ಟ್ಯ : ತಪೋವನದೊಳಿಂದೆಮ್ಮ ನೀಂ ಕೊಱಚಾಡಲೆಂದು ಬೀಡಂ ಬಿಟ್ಟೆಯಱಿದಱಿದು ನಿನ್ನ ಧೀವಶವೆಂದನಂ (ಹಕಶಾ. ೮-೫). [ ಸಂ. ]

**ಧೀವಶಿ** (ನಾ). ದಿಟ್ಟ ; ಶೂರ ; ಸಾಹಸಿ : ಇನ್ನೇಕೆ ನುಡಿದನ್ನ ನಾಚಿಸುವೆ ಭೂಪಾಲ ನಿನ್ನಂತೆ ಸತ್ಯರುತ್ತಮರಧಿಕಧೀವಶಿಗಳುನ್ನತ ಶಿವೈಕ್ಯರಿಳೆಯೊಳಗಿಲ್ಲ (ಹಶಶಾ. ೧೧-೩೯) ; ಭಟರು ಬಳಲಿದರಿಂದು ರಣವುತ್ಕಟವು ಧೀವಶಿಗಳು ಮಹಾರಥರಟಕಟಿಸುತಿದೆ (ಕುವ್ಯಾದ್ರೋ. ೧೫-೪೨). [ ಸಂ. ಧೀವಶಿನ್ ]

**ಧೀವಸ** 'ದೀವಸ' ನೋ.

**ಧೀವಸತನ** (ನಾ). ಎದೆಗಾರಿಕೆ ; ಧೈರ್ಯ : ಬಿಸಿಲು ಮಳೆ ಚಳಿಗಳಿಗೆ ಸಲೆ ಸ್ಥೈರಿಸುವ ದೇಹವೆ ನಿನ್ನದಿದು ಧೀವಸತನಕ್ಕಾ[ಪಾಠಾಂ. ದೀವಸಿಕೆಗಾ]ವಂಜುವೆವು ಕೆಲಸಾರು ನೀನೆಂದ (ತೊರರಾ. ೨-೩-೩೫).
[ ಧೀವಸ (<ದೀವಸ) + – ತನ ]

**ಧೀವಸಿ** 'ದೀವಸಿ' ನೋ.

**ಧೀವಸಿಗ** 'ದೀವಸಿಗ' ನೋ.

**ಧೀವಾಸ** (ನಾ).. ಮನಸ್ಸಿನ ಆಶಯ ; ಮನೋರಥ ; ಸಂಕಲ್ಪ : ಆ ಸರೋಜಾನನೆಯ ಬಲು ಧೀವಾಸವೆಂತುಟೊ ತಪವಪೆತ್ತ ಶಿರೀಷ ಕುಸುಮಾಧಿಕ ಸುಕೋಮಲಗಾತ್ರೆ ತಾನೆತ್ತ (ನಿಭಾಗ. ೪-೫-೨೮)). [ ಸಂ. ]

**ಧೀಶಕ್ತಿ** (ನಾ). ಬುದ್ಧಿಶಕ್ತಿ ; ಪ್ರಜ್ಞೆ : ವೈಜ್ಞಾನಿಕ ಅನ್ವೇಷಣೆಗೆ ಬೇಕಾದ ಧೀಶಕ್ತಿಯಿಂದಲೂ . . . ಜೀವವನ್ನು ಪಡೆಯದಿರುವ ಮತಶ್ರದ್ಧೆ ಶ್ರದ್ಧೆಯಲ್ಲ (ಪುಕಶ್ಯಾರ. ೪ ಪೀಠಿಕೆ). [ ಧೀ + ಶಕ್ತಿ ]

**ಧೀಸಚಿವ** (ನಾ). ಬುದ್ಧಿಶಾಲಿಯಾದ ಮಂತ್ರಿ; ಸಲಹೆಗಳನ್ನು ಕೊಡಲು ಸಮರ್ಥನಾದ ಮಂತ್ರಿ : "ಮಂತ್ರೀ, ಧೀಸಚಿವಃ, ಅಮಾತ್ಯಃ – ೩ ಆಲೋಚನೆಯನ್ನು ಹೇಳುವ ಮಂತ್ರಿಯ ಹೆಸರುಗಳು" (ಸಿದ್ಧಾಂತಿ. ೨೩೫).
[ ಧೀ + ಸಚಿವ ]

**ಧುಂಧುಮಾರ** (ನಾ). ೧. ಒಂದು ಬಗೆಯ ಹುಳು ; ಇಂದ್ರಗೋಪ. ೨. ಮನೆಯಿಂದ ಹೊರಬರುವ ಹೊಗೆ. ೩. ಹಲ್ಲಿ. [ ಸಂ. ]

**ಧುಡುಂ** (ನಾ). ಒಂದು ಅನುಕರಣ ಶಬ್ದ. 'ಧುಡುಮ್ಮಿಱಿ' ಪರಾ.

**ಧುಡುಮಿಸು** (ಕ್ರಿ). ಧಾವಿಸು : ಕೂಡಲೇ ಸಲಿಲಿನಲ್ಲಿ ಧುಡುಮಿಸುತ್ತಿರಿ (ಗಾಳಿಪ. ೮೧). [ ಧುಡುಂ + – ಇಸು₃ ]

**ಧುಡುಮ್ಮಿಱಿ** (ಕ್ರಿ). ಎರಡೂ ಕೈಗಳಿಂದ ನೀರಿನಲ್ಲಿ ಧುಡುಂ ಎಂದು ಶಬ್ದಮಾಡು : ಮನೋಜಸುಖಾರ್ಣವಮಧ್ಯದೊಳ್ ಮನಂಗುಡುತ ಮುಮುರ್ಚುತೀಸುತೆ ಧುಡುಮ್ಮಿಱಿಯುತ್ತಮೆ ಪಾಂಥನೊಪ್ಪಿದಂ (ಗಿರಿಜಾ. ೨-೧೯). [ ಧುಡುಂ + ಇಱಿ₁ ]

**ಧುಡುಮ್ಮಿಱಿವೊಯ್** (ಕ್ರಿ). "ನೀರನ್ನು ಟುಮಕಿ ಹೊಡೆ" (ಪ್ರಶಬ್ದ) : ಮೇಲಕೆ ಪುಟನೆಗೆವ ಧುಡುಮ್ಮಿಱಿವೊಯ್ವ ತಿರಿವ ತೇಂಕಾಡುವ ಮುತ್ಕುಳಿಪ . . . ಅಬಲಾಸಂತತಿ . . . ಅರಸನ ಬಗೆಯಂ ಬಂಧಿಸಿತು (ಜಯಾಕಾ. ೧೧-೪೧).
[ ಧುಡುಮ್ಮಿಱಿ + ಪೊಯ್₁ ]

**ಧುಡುಮ್ಮಿಱಿವೊಯ್ಲು** (ನಾ). ಎರಡೂ ಕೈಗಳಿಂದ ನೀರನ್ನು ಸಶಬ್ದವಾಗಿ ಹೊಡೆಯುವಿಕೆ : ವಿಳಸದ್ವಿಮಲಾಬ್ಜದ ಕಳಿವೂವಿಂ ಕಳಿದೆಸೆವೆಸಳ ನಡುವೆ ತಮ್ಮಯ ಕರತಳದ ಧುಡುಮ್ಮಿಱಿವೊಯ್ಲಿಂದೇಳ್ವಮಲಾಂಬುಕಣಂ ಬಿಳ್ದು ತಳತಳಿಸುತ್ತಿರೆ (ಜಯಾಕಾ. ೧೧-೮೧).
[ ಧುಡುಮ್ಮಿಱಿ + ಪೊಯ್ಲು ]

**ಧುತ್** (ನಾ). ಒಂದು ಅನುಕರಣ ಶಬ್ದ. 'ಧುತ್ತೆನ್' ಪರಾ.

**ಧುತ** (ಗು). ೧. ಅಲ್ಲಾಡಿಸಿದ; ಕಲಕಿದ; ಕಂಪನಗೊಳಿಸಿದ. ೨. ಬಿಟ್ಟ; ತ್ಯಜಿಸಿದ. (ನಾ). ೩. [ನಾಟ್ಯ] ತಲೆಯನ್ನು ಮೆಲ್ಲನೆ ಎಡಕ್ಕೂ ಬಲಕ್ಕೂ ಅಡ್ಡಲಾಗಿ ತಿರುಗಿಸುವುದು : ಪಲ್ಲಟದಿಂದೆಡಬಲಕಂ ಮೆಲ್ಲನೆ ತಿರುಪಲ್ಕೆ ಶಿರಮನದು ಧುತಮೆನಿಕುಂ (ಲಾಸ್ಯರಂ. ೧-೭೯) ; ಧುತಂ ವಿಧುತಂ . . . ಸಮಂ ಪಾರ್ಶ್ವಾಭಿಮುಖಂ–ಈ ಹತ್ತೊಂಬತ್ತುಂ ಶಿರೋಭೇದಂಗಳ್ (ಲಾಸ್ಯರಂ. ೧-೭೮ ವ). [ ಸಂ. ]

**ಧುತಿಪುರ** (ನಾ). ಒಂದು ಊರಿನ ಹೆಸರು : ಧುತಿಪುರೇ ನಿವರ್ತನಾನಿ ಅಷ್ಟ (ಎಇ. V, ೮-೫ ; 650). [ ಧುತಿ₀ + ಪುರ₂ ]

**ಧುತ್ತೂರ** 'ದುತ್ತೂರ' ನೋ.

**ಧುತ್ತೂರಮತ್ತ** (ನಾ). ದತ್ತೂರಿಯನ್ನು ಸೇವಿಸಿ ಭ್ರಮೆಗೊಂಡವನು,– ಹುಚ್ಚು ಹಿಡಿದವನು : ಧುತ್ತೂರಮತ್ತರೊಳ್ ಸ್ತಂಭಕುಂಭಾದಿಗಳೆಲ್ಲಂ ಶಾತಕುಂಭಾಭಾಸಂಗಳಾಗಿ ತೋರ್ಪಂತೆ (ಚಂದ್ರಪು. ೮-೫೫ ವ). P ದತ್ತೂರಿಯನ್ನು ಸೇವಿಸಿದವರಿಗೆ ಲೋಕವೆಲ್ಲ ಹಳದಿಯಾಗಿ ಕಾಣುವುದೆಂಬ ನಂಬಿಕೆಯಿದೆ. [ ಧುತ್ತೂರ (<ದುತ್ತೂರ) + ಮತ್ತ₃ ]

**ಧುತ್ತೆನ್** (ಕ್ರಿ). ಧುತ್ ಎಂದು ಕಾಣಿಸು ; ದಿಢೀರನೆ ಎದುರಿಗೆ ನಿಲ್ಲು : ಮುರಾರಿಯ ಸಮಸ್ಯೆ ಧುತ್ತೆಂದು ಬಂದಿತು (ಮುಗಿಮು. ೮) ; ಮಗಳ ಮದುವೆಯ ಚಿಂತೆ ಧುತ್ತೆಂದು ಮುಂದೆ ನಿಂತು ಎದೆಯನ್ನು ಚೂರುಚೂರು ಮಾಡಿತು (ಅಪವಾ. ೧೦೫) ; ಜೀವಮಾನದಲ್ಲಿ ಎಂದೂ ಕಾಣದ ಸಮಸ್ಯೆಗಳು ಅವರ ಮುಂದೆ ಧುತ್ತೆಂದು ನಿಂತುವು (ಮುಕ್ತ್ಯಡಿ. ೧೬); ಅನ್ನದ ಸಮಸ್ಯೆ 'ಧುತ್ತೆಂದು' ಬಾಯ್ದೆರೆದು ನುಂಗಲು ನಿಂತಿತು (ಬರಹಾ. ೯೨).
[ ಧುತ್ + ಎನ್₁ ]

**ಧುತ್ಯಾ** (ನಾ). ೧. ಅನಿರೀಕ್ಷಿತವಾಗಿ ಬಂದು ಎದುರಿಗೆ ನಿಲ್ಲುವವನು. ೨. ದಾಂಡಿಗ ; ದಡಿಯ : ಎಂಟು ಜನಾ ಹಾವನೂರವರು, ಧುತ್ಯಾನಂತವರು ಬಂದರ ಅಸಗೊಳ್ಳಲಿಲ್ಲರಿ ಅಂವಾ (ಗ್ರಾಮಾಯ. ೨೪೦).
[ ←ಮರಾ. ಧುತ್ಯಾ ]

**ಧುನಿ** (ನಾ). ನದಿ ; ಹೊಳೆ : "ಹ್ರದಿನಿ ತರಂಗಿಣಿ . . . ಸಮುದ್ರಸತಿ ಧುನಿ ತೊಱೆ" (ವಸ್ತುಕೋ. ೨೩-೧೧) ; "ನದಿ ತರಂಗಿಣಿ ತಟಿನಿ ಧುನಿ . . . ಎನೆ ತೊಱೆಗೆ ನಾಮಂ" (ಮಂಗರಾ. ೧೨೨-೧೧) ; ಧುನಿ ಶಶಿ ನಿಟಿಲಾಕ್ಷಂ . . . ಪಂಚಾಸ್ಯದಿಂದಮಿಾಶ್ವರನೆಸೆದಂ (ಶ್ರೀಪುವಿ. ೩೪-೧೮) ; ಗೋಮತಿ ಸಮಾಖ್ಯದ ಧುನಿಯದೊಂದುಂಟು (ತಿಮ್ಮಶಾಂ. ೧೧-೩೭) ; ಮುಂತೆ ನಿಲುಮೀಯ್ಯದತಿಘೋರರಲೋಹಿತದ ಧುನಿ ಲವಣಾಬ್ಧಿಯೋಲ್ ಕಡೆವೊಲು (ಪಂಕಾಪಾ. ೬-೩೬-೪೨) ; ಹೊಸಸೃಷ್ಟಿಯ ಕನಸೊಂದನು ಬಗೆಗೊಂಡನೊ ನಲ್ಲಂ . . . ಈ ವನಕಂದರರವಂ, ಮಂಜುಳನಾದಿನಿ ಧುನಿಯುಂ, ಸ್ವರ್ಣಾರುಣನಭವಂ (ಮಾಂದಳಿ. ೪೬-೧೧). [ ಸಂ. ]

**ಧುನಿಕುಮಾರಕ** (ನಾ). ನದಿಯ ಮಗ ; ಗಾಂಗೇಯ ; ಭೀಷ್ಮ : ಧುನಿಕುಮಾರಕ ನುಡಿದನು (ತಿಮ್ಮಶಾಂ. ೨-೬೭). [ ಧುನಿ + ಕುಮಾರಕ ]

**ಧುನಿಬಾವಾ** (ನಾ). ಸಾಂಬ್ರಾಣಿ ಮೊದಲಾದ ಸುಗಂಧದ್ರವ್ಯಗಳ ಹೊಗೆ ಹಾಕಿ ಮೈಕಾಯಿಸಿಕೊಳ್ಳುವ ಸಾಧು,–ಗೋಸಾಯಿ : ಶಿವನ ನಕಲು ಮಾಡುವ ಧುನಿಬಾವಾಗಳೂ ಇಲ್ಲಿದ್ದರು (ಚರಿತಾ. ೧೫೯೫).
[ ಧುನಿ₀ (P← ಹಿಂ. ಧೂನೀ) + ಬಾವಾ ]

**ಧುನಿರಾಣಿ** (ನಾ). ನದಿಗಳ ಅರಸಿ ; ಮಹಾನದಿ : ಧುನಿರಾಣಿ ಗಂಗೆಯೆ ನಿನಗೆ ನೆನವಿಹುದೇನಾ ಶುಭಗಳಿಗೆ (೧೪ಏಂ. ೧೦-೫). [ ಧುನಿ + ರಾಣಿ ]

**ಧುಪ್ಪುಧುಪ್ಪು** (ನಾ). ಒಂದು ಅನುಕರಣ ಶಬ್ದ : ಇರ್ವರು ಧುಪ್ಪುಧುಪ್ಪೆಂಬಂತೆ ಹೊಡೆದಾಡುತಿರ್ದರಾಹವದೆ (ಮೋಹತ. ३೮-३೭). 'ದುಪ್ಪುದುಪ್ಪು' ಪರಾ.

**ಧುಬಲಿ** (ನಾ). ದಪ್ಪವಾದ ಹೆಂಗಸು ; ಟೊಣಪಿ : ನಮ್ಮವ್ವ ! ಏನು ಕಾಟ ಈ ಧುಬಲೇರದು ! (ಎತ್ತಿಕ್ಕ. ೯೭) ; ಗೋಲ ಉಟಗೊಂಡು ಧುಬಲಿ ಬರತದಲ್ಲ, ಅದರ ಜೋಡಿ ಹೋಗಿದ್ದಾಳು ಹವಾ ತಿನ್ನಲಿಕ್ಕೆ ! (ಎತ್ತಿಕ್ಕ.೧೨೨). [<ಡುಬಲಿ./ಮರಾ. ಢಬುಲಾ ]

**ಧುವಮ್** (ನಾ). ಒಂದು ಅನುಕರಣ ಶಬ್ದ. ಧುಮ್ಮೆನ್' ಪರಾ.

**ಧುಮಧುಮಲಾಡು** (ಕ್ರಿ). ದುಮುಗುಟ್ಟು ; ಸಿಡುಕು ; ಕೋಪವನ್ನು ವ್ಯಕ್ತಪಡಿಸು : ಹಬ್ಬದ ದಿನದಿಂದಲೂ ಸೊಸೆಯ ಮೇಲೆ ಆಕೆ ಧುಮ ಧುಮಲಾಡುತ್ತಲೇ ಇದ್ದಾಳೆ (ಲಕ್ಷ್ಮೀಪ್ರ. ೯೩). [←ತೆಲು. ದುಮದುಮಲಾಡು ]

**ಧುಮಶ್ಚಕ್ರಿ** (ನಾ). ಗೊಂದಲ; ಗಲಾಟೆ: ಈ ಪ್ರಕಾರ ಆ ಜನವಸತಿಯಿಂದ ದೂರವಾಗಿದ್ದ ಗೃಹದಲ್ಲಿ ತಾಸೆರಡು ತಾಸು ಧುಮಶ್ಚಕ್ರಿಯು ನಡೆದರೂ ಯಾರಿಗೂ ಗೊತ್ತಾಗಲಿಲ್ಲ (ಮಂಜುಳ. ೭೯). [←ಮರಾ. ಧುಮಶ್ಚಕ್ರೀ]

**ಧುಮುಕು** 'ದುಮ್ಮಿಕ್ಕು' ನೋ.

**ಧುಮ್ಮನೆ** (ಅ). ಧುವಮ್ ಎಂಬ ಶಬ್ದದೊಡನೆ: ಅನುಕರಣಕ್ಕೆ–ಖಣಿಲ್ಲನೆ, ಖಟಿಲ್ಲನೆ. ಧಮ್ಮನೆ, ಧುಮ್ಮನೆ [ಜಾತಾಂ. ಧುಮ್ಮನೆ] (ಕಮಿದ. ೧೯ ಪ್ರಯೋ). [ ಧುವಮ್ + – ಅನೆ$_1$ ]

**ಧುಮ್ಮಿಕ್ಕು** 'ದುಮ್ಮಿಕ್ಕು' ನೋ.

**ಧುಮ್ಮಿಡು** (ಕ್ರಿ). ಕೆಳಗೆ ಇಳಿ ; ಬೀಳು : ಮುಡಿಯುಳಿದ ಶಿರೋಜ ಧುಮ್ಮಿಟ್ಟು–ನೆಲದೊಳಗೀಜ ಮೂರ್ಜಡೆಗಳುಗಟ್ಟಿ ತನು ಬಾಗಿ ಬಳಲುತಲಿ (ಹನುಮ. ೩೯–೩). [ ಧುವಮ್ + ಇಡು$_1$ ]

**ಧುಮ್ಮುಚಿ** 'ದುಮಂಜಿ' ನೋ.

**ಧುಮ್ಮೆನ್** (ಕ್ರಿ). ಧುವಮ್ ಎಂದು ಶಬ್ದಮಾಡು: ಧುಡುಹೆಂಬ ಧುಮ್ಮೆಂಬ ಘೋರೆಂಬ ಭೋರೆಂಬ ಕೊರಸಿಗಳುರವಣೆಯ ದನಿಯುಡಸುತಂ ಪುಟ್ಟೆ (ಇಹರ. ದೇ. ೪೨–೨). [ ಧುಮ್ + ಎನ್$_1$ ]

**ಧುರ$_1$** 'ದುರ' ನೋ.

**ಧುರ$_2$** (ನಾ). ೧. ನೊಗ. ೨. ಬಂಡಿಯ ಈಸಿನ ಮುಂಭಾಗ ; ಗಾಡಿ ಯಲ್ಲಿ ನೊಗವನ್ನು ಕಟ್ಟುವ ಭಾಗ ; ಮೂಕಿ. ೩. ಕಡಾಣಿ ; ಕಡೆ ಗೀಲು. ೪. ಉಚ್ಚಸ್ಥಾನ ; ಗೌರವಪೂರ್ಣವಾದ ಸ್ಥಾನ. ೫. ಭಾರ; ಹೊಣೆ ; ಜವಾಬ್ದಾರಿ : ದೊರೆತನದ ಜಟಿಲಗಳ, ಕುಲಟಗಳ, ಕಠಿನಗಳ ಭರತನುಳಿಸಿದನೆ ರಾಮನ ತೀರ್ಪಿಗೇದು ? ಅರಿವಿಗಿಹ ಕರ್ತವ್ಯಭಾರವನು ತಾನರಿತು ಧುರವ ಧರಿಸಿದನವನು (ಮಂಕುತ. ೭೦೯). [ ಸಂ. ಧುರ್ ]

**ಧುರಂಧರ** (ಗು). ೧. ಭಾರವನ್ನು ಹೊರುವ. – ಹೊತ್ತಿರುವ. ೨. ಹೊಣೆಗಾರಿಕೆಯನ್ನು ಹೊತ್ತಿರುವ. (ನಾ). ೩. ಭಾರ ಹೊರಲು ಯೋಗ್ಯವಾದ ಪಶು; ಹೊರೆ ಹೊತ್ತುಕೊಳ್ಳಲು ಅರ್ಹವಾದ ಪ್ರಾಣಿ : "ಧೂರ್ವಹಃ, ಧುರ್ಯಃ, ಧೌರೇಯಃ, ಧುರೀಣಃ, ಧುರಂಧರಃ–ಶಿ ಬಂಡಿ, ಗೋಣಿ, ನೇಗಲು ಮುಂತಾದ ಭಾರವನ್ನು ಹೊತ್ತು ಶೆಳೆಯುವ ಎತ್ತು ಮುಂತಾದ ದನಗಳ ಹೆಸರುಗಳು" (ಸಿದ್ಧಾಂತಿ. ೨೯೩). ೪. ಹೊಣೆಯನ್ನು ಹೊರುವವನು ; ಮುಖಂಡ ; ನಾಯಕ ; ಮುಂದಾಳು ; ವಿಚಿತ್ರವೀರ್ಯನಂ ಗಾಂಗೇಯಂ ಧರಾಭಾರ ಧುರಂಧರನಂ ಮಾಡಿ (ಪಂಪಭಾ. ೧–೬೩ ವ). 'ಧುರಂಧರಿಕೆ' ಪರಾ. ೫. ಕೆಲಸವನ್ನು ನಿರ್ವಹಿಸುವವನು ; ಸಮರ್ಥ : ಸಹದೇವನಾತನ ಸವಹರೆಯ ನಕುಲಾಂಕನಿವರಾಹವಧುರಂಧರರು (ಕುಮಾವ್ಯಾ. ೨–೧೫) ; ಅಸಹಾಯಶೂರ ಧೈರ್ಯದ ಪರಾಕ್ರಮಧೀರನಸಮಕೀರ್ತಿಯ ವಿಸ್ತಾರ ಜಸದ ಕಾರ್ಯಕ ಧುರಂಧರ ನಂಜರಾಜೇಂದ್ರ ರಸೆಯ ತೊಟಿದು ಪೋದ ನಿಂದು (ಕಂನವಿ. ೧೯–೯೪.) 'ಕಾರ್ಯಂಧುರಧರ' ಪರಾ. [ ಸಂ. ]

**ಧುರಂಧರತೆ** (ನಾ). ೧. ಹೊಣೆಗಾರಿಕೆ ; ಜವಾಬ್ದಾರಿ ವಹಿಸಿಕೊಳ್ಳು ವುದು : ವಿಶ್ವವಿಶ್ವಂಭರಾ ಧುರಂಧರತೆಗಂ ವೀರಶ್ರೀನಿವಾಸವಿಳಾಸಕ್ಕಂ. . . ತಾನೊರ್ವನೆ ನಿರುಪಮಜನ್ಮಭೂಮಿಯಾಗಿ (ಶಾಂತಿಪು. ೩–೪೯ ವ) ; ರಾಜ್ಯಭರಧುರಂಧರತೆಗೆ ಕುಮಾರಂ ತರುಣನಾದೊಡಂ ನೀಮೆ ಸಾಲ್ವಿರ್ (ಮಲ್ಲಿಪು. ೯–೯೯). ೨. ಸಾಮರ್ಥ್ಯ : ಈ ರಣಧುರದೊಳ್ ಧುರಂಧರತೆಯಿಂ ಹರಿಕಂಧರನೆಂಬನೊಡ್ಡಿದಂ (ವರ್ಧಮಾ. ೪–೩೦). [ ಸಂ. ಧುರಂಧರತಾ ]

**ಧುರಂಧರಿ, ಧುರಂಧುರಿ** (ನಾ). ೧. ಆದ್ದೂರಿ ; ವೈಭವ ; ಭವ್ಯತೆ : ನಿನ್ನ ಮನಿ ಲಗ್ನದ ಧುರಂಧರಿ ನೋಡಿದರ ಜಮಖಂಡಿ ಮಹಾರಾಜನ ಲಗ್ನ ನೆನಸೂ ಹಂಗ ಆಯ್ತು (ಗಂಪಾಯಿ. ೧೩೮) ; ಕಲ್ಯಾಣಮಂಟಪವು ಹೇಗಾಗಿದೆ . . . ಏನು ಕೇಳುವಿಯಪ್ಪ ! ಎಷ್ಟು ಧುರಂಧುರಿಯಿಂದ ಮಾಡಿರುವಿ (ಕನಕ. ೬೫). **ಧುರಂಧುರಿ** : (ಗು). ೨. ಸಡಗರದ; ಅದ್ದೂರಿಯಾದ : ಹಗಲಾಗಲಿ ಧುರಂಧುರಿ ಜಾತ್ರಿ ನಿದ್ದಿಗಿರಲಿ ರಾತ್ರಿ (ಹಾಡುಪಾ. ೪೨–೩). [←ಮರಾ. ಧುರಂಧರೀ, ಧುರಂಧುರೀ ]

**ಧುರಂಧರಿಕೆ** (ನಾ). ಮುಂದಾಳುತನ ; ಮುಖಂಡತ್ವ : ಧುರಧುರಂಧರಿಕೆ ಯನು ತಾನೇ ಧರಿಸಿ ಕಳುಹಿದನಿಂದ್ರಜಿತುವನು (ತೊರರಾ. ೬–೨೦–೬). [ ಧುರಂಧರ + – ಇಕೆ ]

**ಧುರಂಧುರಿ** 'ಧುರಂಧರಿ' ನೋ.

**ಧುರಕೋಳಾಹಳಿಗ** (ನಾ). ಯುದ್ಧದಲ್ಲಿ ಕೋಲಾಹಲವನ್ನು ಮಾಡು ವವನು ; ಶೂರ : ರಣದಗ್ಗಳೆಯ ಸುಭಟರ ಜಯಿಸು ಧುರಕೋಳಾಹಳಿಗ ನೆನಿಸು (ಕುವ್ಯಾದ್ರೌ. ಓರಿಇ. ಪಠಿ. ೨೭೯). [ ಧುರ್$_1$ (<ದುರ) + ಕೋಳಾಹಳ (=ಕೋಲಾಹಲ) + – ಇಗ ]

**ಧುರಗಲಿ** 'ದುರಗಲಿ' ನೋ.

**ಧುರಗಳ್ಳ** (ನಾ). ಯುದ್ಧದಿಂದ ಪಲಾಯನ ಮಾಡುವವನು,–ತಪ್ಪಿಸಿ ಕೊಳ್ಳುವವನು ; ರಣಹೇಡಿ : ವೀರರಂಗವ ಬಿಟ್ಟು ನೀನೀ ಚೋರರಂಗವ ಕಲಿತೆ ಹೊಸತೇ ನಾರಿಗಳ್ಳನು ತಂದೆ ನೀ ಧುರಗಳ್ಳ ಹಸನಾಯ್ತು (ಕಾಶಿರಾ. ೧೯–೨೮). [ ಧುರ್$_1$ (<ದುರ) + ಕಳ್ಳ$_1$ ]

**ಧುರಚಮತ್ಕೃತಿ** (ನಾ). ಯುದ್ಧದಲ್ಲಿ ತೋರುವ ಕೌಶಲ,–ಚಾತುರ್ಯ: ಜೋದರ ಧುರಚಮತ್ಕೃತಿ ಬೆಳಗನಿತ್ತುದು ದೇವಸಂತತಿಗೆ (ಕುವ್ಯಾಭೀ. ೪–೮೬). [ ಧುರ$_1$ (<ದುರ) + ಚಮತ್ಕೃತಿ ]

**ಧುರಧರ** (ನಾ). ಜವಾಬ್ದಾರಿಯನ್ನು ಹೊರುವವನು ; ಹೊಣೆಗಾರ : ಎಂದಾದಪನೀ ಲಲನೆಗೆ ನಂದನನುರುರಾಜ್ಯಭಾರಧುರಧರನೆಂಬೀ ಸಂದೇಹ ಮೆನ್ನ ಮನದೊಳ್ ಕುಂದದೆ ನೆಲಸಿರ್ದುದೆಂದು ಬಿನ್ನಯಿಸಲೊಡ (ಬಾಧಪು. ೩–೩೮). [ ಸಂ. ]

**ಧುರಧರಣಿ** (ನಾ). = ಧುರಧರೆ : ಅಂಧಾಸುರಧ್ವಂಸಧರಧರಣಿಯಂತೆ ನೀಲಕಂಠನೃತ್ಯಾಡಂಬರವುಂ (ಕುಸುಮಾ. ೧–೭೪ ವ) ; ಧುರಧರಣಿ ಮೆಣ ಮಯಮಾಗೆ ಭಯಂಕರಮನಾಳ್ದುದಾಹವರಂಗಂ (ಮಹಾನೇ.೧೨–೬೪) ; ಪರಿ ಮಿತಪರಿವಾರ ತುರಗಸಹಿತ ರಾಮ ಧುರಧರಣಿಯೊಳು ಮಾಜಾಂತು ಇರದೆ ನಿಂದನು ಸುರುತಾಳನ ಸಕಲ ಮೋಹರಕಿದಿರಾಗಿ ಬೇಗದೊಳು (ಕುರಾಸಾಂ. ೪೩–೩೦). [ ಧುರ$_1$ (<ದುರ) + ಧರಣಿ$_1$ ]

**ಧುರಧರೆ** (ನಾ). ಕಾಳಗದ ಕಣ ; ಯುದ್ಧಭೂಮಿ ; ರಣರಂಗ : ನೆತ್ತರ ಪೆರ್ಮಟ್ ಕಟಿದತ್ತುಪೇಂದ್ರನಿಂ ಧುರಧರೆಯೊಳ್ (ಪಂರಾಮಾ. ೯–೬೬) ; ಶರಣೆನುತಂಜ ಬಂದು ಮಱಿವೊಕ್ಕಡೆ ಕಾವೆಡೆಯಲ್ಲಿ ವಜ್ರಪಂಜರ . . . ಧುರಧರೆಯಲ್ಲಿ ಕಾಳೆಶ್ರಿತಾಂತನೆನುತ್ತ ಜಗ್ಗೆಕುಂ ವರವಿಬುಧವ್ರಜಂ (ಕಇ. IV, ೧–೬೮ ; 1204) ; ಧುರಧರೆಯಲ್ಲಿ ಸೋಲ್ವ ತಮವೇಳ್ವರಗಾ ಕೃತಿಯಿಂ ವರರೂಢಮಂ ಧರಿಯಿಸಿ (ತ್ರಿಪುವಿ. ೭–೫೨). [ ಧುರ$_1$ (<ದುರ) + ಧರೆ ]

**ಧುರಧಾರಿಣಿ** (ನಾ). = ಧುರಧರೆ : ಧುರಭರವನಾಂಪ ತನಗದು ಸಿರಕ್ಕೆ ಸಿವುಡೆನಿಸೆ ತೆರ್ಕೆಯಿಂ ಶುಂಡಂ ದೋಃಪರಿಘಾಸಿಯಿಂದೆ ಪೊಯ್ದಂ ಕರಿಕರಮಂ ಪಱಿದು ಪಾಱಿ ಧುರಧಾರಿಣಿಯೊಳ್ (ಮಹಾನೇ. ೧೨-೬೮). [ ಧುರ$_1$ (<ದುರ) + ಧಾರಿಣಿ]

**ಧುರಧೀರ** (ನಾ). ಯುದ್ಧಮಾಡುವುದರಲ್ಲಿ ಶೂರನಾದವನು ; ರಣಧೀರ : ಧರಣೀಶಂ ಧುರಧೀರನಾಗೆ ಧನಮುಳ್ಳಂ ತ್ಯಾಗಿಯಾಗಲ್ . . . ದೊರೆವೋಲ್ ಚಿನ್ನಕೆ ಸೌರಭಂ (ಸೋಮೇಶ. ೧೧) ; ಧುರಧೀರ ಸಾಹಸ ಚಿತ್ರಸೇನನುದಾರಗುಣನಿಧಿ ಬಂದು ಕಂಡನು ವಿಚಿತ್ರಭಾವದಲಿ (ಕುವ್ಯಾ. ಉ. ೧೧-೨೭) ; ಧುರಧೀರ ಸೇದಿರಾಜಂ ಗುರುತರ ಗಣಪದಮನಿತ್ತು ಸುರತತಿ ಪೊಗಳುತ್ತಿರೆ ಪೆಱಿದೊಪ್ಪುವ ಪುಲಿಗೆಱಿಪುರಪತಿ ಸೋಮೇಶನೊಲ್ದು ಪಾಲಿಕೆ ನಮ್ಮಂ (ಶ್ರೀಪುವಿ. ೨೫-೧) ; ಧುರಧೀರ ರಕ್ತಬೀಜಾಸುರನಂ ಭಕ್ಷಿಸುವುದಕ್ಕೆ ಬಾಯ್ದೆಱೆದಿರ್ದ್ದ ವರದುರ್ಗಿಯ ಪಲ್ಗಳವೊಲ್ ಹಿರಿದುಸ್ಸರ ಗೋಂಟೆದೆನೆಗಳೊಪ್ಪಿದವಮವು (ಹಮ್ಮೀರ. ೧-೬೧). [ ಧುರ$_1$ (<ದುರ) + ಧೀರ ]

**ಧುರಧುರಂಧರ**(ನಾ). ಹೋರಾಟದಲ್ಲಿ ಮುಂದಾಳು: ವರಯುಧಾಮನ್ಯುತ್ತಮೌಂಜಸನುರು ಶಿಖಂಡಿ ಸುಚೇಕಿತಾನರು ಧುರಧುರಂಧರ ವೀರ ಪಾಂಚಾಲಕ್ಷಿತೀಶ್ವರರು (ಕುವ್ಯಾ. ಉ. ೧೧-೨೨) ; ವಿಮಲ ಸಹಣಿಗಳವರ ಕರೆಯೆನುತ ಧುರಧುರಂಧರರೊಱಲಿದರು (ಕುವ್ಯಾ. ಭೀ. ೪-೧೭) ; ವಿರಚಿಸಿದನಾ ವೀರ ದಶಕಂಧರಶಿರಃಕಂತುಕವಿನೋದದ ಧು[ಪಾಠಾಂ. ಧ]ರ ಧುರಂಧರ ದುಷ್ಟದೋರ್ದಂಡಪ್ರತಾಪಕವ (ತೊರರಾ. ೬-೫೨-೩). [ ಧುರ$_1$ (<ದುರ) + ಧುರಂಧರ ]

**ಧುರಧುರೀಣತೆ** (ನಾ). ಯುದ್ಧದ ಮುಂದಾಳುತನ,-ನಾಯಕತ್ವ : ಸರಿಯದಾರ್ಕೈ ನಿನಗೆ ನಂಬುಗೆಗೆರವ ತಾರದೆ ಸ್ವಾಮಿಕಾರ್ಯದ ಧುರಧುರೀ [ಪಾಠಾಂ. ಧುರದ ಪರಿ]ಣತೆ ನಿನ್ನೊಳಾಯ್ತು (ತೊರರಾ. ೬-೩೮-೧೪). [ ಧುರ$_1$ (<ದುರ) + ಧುರೀಣತೆ ]

**ಧುರಪರಿಷ್ಕೃತ** (ನಾ). ಅನೇಕ ಯುದ್ಧಗಳನ್ನು ಮಾಡಿ ದಕ್ಷತೆಯನ್ನು ಪಡೆದವನು; ಯುದ್ಧಪರಿಣತ: ಎಲವೋ ಧುರಪರಿಷ್ಕೃತನಲ್ಲ ಸಾರ್ಸುಡು ನಿನ್ನ ಸಾಹಸವ (ತೊರರಾ. ೬-೪೪-೨). [ಧುರ$_1$ (<ದುರ) + ಪರಿಷ್ಕೃತ]

**ಧುರಪಲಾಯನ** (ನಾ). ಯುದ್ಧಮಾಡಲಾರದೆ ಅಂಜಿ ಓಡಿಹೋಗುವುದು ; ಹೋರಾಟದಿಂದ ಪಲಾಯನ ಮಾಡುವಿಕೆ : ಆರ ದಳವದು ಧುರಪಲಾಯನ ಚಾರುದೀಕ್ಷಿತರಾಯ್ತು (ಕುವ್ಯಾ. ಶ. ೧೪-೪). [ ಧುರ$_1$ (<ದುರ) + ಪಲಾಯನ ]

**ಧುರಭರ** (ನಾ). ಯುದ್ಧದ ವೇಗ; ಕದನದ ತೀವ್ರತೆ : ಧುರಭರವನಾಂಪ ತನಗದು ಸಿರಕ್ಕೆ ಸಿವುಡೆನಿಸೆ ತೆರ್ಕೆಯಿಂ ಶುಂಡಂ ದೋಃಪರಿಘಾಸಿಯಿಂದೆ ಪೊಯ್ದಂ ಕರಿಕರಮಂ ಪಱಿದು ಪಾಱಿ ಧುರಧಾರಿಣಿಯೊಳ್ (ಮಹಾನೇ. ೧೨-೬೮). [ ಧುರ$_1$ (<ದುರ) + ಭರ ]

**ಧುರಮಂಡಲ** (ನಾ). = ಧುರಧರೆ : ಧುರಮಂಡಲದೆ ದೇವರ ಪಾದಪದ್ಮವ ಹರುಷದೆ ಕಾದು ಬೆಸಸಿದ ಪಿರಿದು ಸೇವೆಯ ಪಾಳ್ಪಿವೆಂಬೂಳಿಗದರ ಬಿರುದಿನ ನುಡಿಗಳೊಪ್ಪಿದುವು (ಕಂಸವಿ. ೮-೪೩). [ ಧುರ$_1$ (<ದುರ) + ಮಂಡಲ ]

**ಧುರಮುಖ** (ನಾ). ಯುದ್ಧದ ಮುಂಚೂಣಿ : ಧುರಮುಖದೊಳಂತಕನ ಹಸಿವಡಗೆ ಮಾರಿ ಕೊಕ್ಕರಿಸಿ (ಹಡಿಶಾ. ೧೧-೧೪). [ ಧುರ$_1$ (<ದುರ ) + ಮುಖ ]

**ಧುರವಿಜಯ** (ನಾ). ಯುದ್ಧದಲ್ಲಿ ಗೆದ್ದವನು,-ಜಯಶಾಲಿಯಾದವನು: ವರಚಂದ್ರಗಿರಿಯ ಸುಪರಿಸ್ಫುರಣವನಾಶ್ರಯಿಸಿರಲ್ಕೆ ಸೈನ್ಯಸಮೇತಂ ಧುರವಿಜಯನನಿಕ್ಕೇರಿಯ ಮುಱಿಯಿಪನಂ ಕಳುಹಿ ಮುಗುಳ್ದದಂ ಪತಗೆಯ್ದಂ (ಶಿಲಸ್ತ. ೧೧-೫೬). [ ಧುರ$_1$ (<ದುರ) + ವಿಜಯ ]

**ಧುರವಿಶಾರದ** (ನಾ). ಯುದ್ಧದಲ್ಲಿ ನಿಷ್ಣಾತ ; ಹೋರಾಟದಲ್ಲಿ ನಿಪುಣ ; ಶೂರ : ಧುರವಿಶಾರದನಹೆ ವಿರಾಟನ ಹಿರಿಯ ಮಗ ನೀನು (ಕುವ್ಯಾ. ಭೀ. ೫-೨೫). [ ಧುರ$_1$ ( <ದುರ) + ವಿಶಾರದ ]

**ಧುರಾವನಿ** (ನಾ). = ಧುರಧರೆ : ನೆತ್ತರ ತೆರೆಱಿಗಳ್ ಪರಿದವು ಸುತ್ತುಂ ಬಳಸು ಧುರಾವನೀಮಂಡಳದೊಳ್ ಸತ್ತ ಚತುರಂಗವಿನಿತೆನಲತ್ಯಳಗಂ ಬಗೆದು ನೋಟ್ಪಡಾ ಬ್ರಹ್ಮಂಗಂ (ಮಹಾನೇ. ೧೨-೧೩೫) ; ಪರಿಹರಿಸಿ ನರನಂ ಧುರಾವನಿಯೊಳದೆಗೆಡಹಿ ಹರನಂದು ಮೆಟ್ಟಿ ಮಲ್ಲಡಿ ಸೋಂಕಮಾತ್ರದಿಂದರುಣಜಲಮಂ ಕಾಱಿದಂ. (ಕಬಪು. ೫೩-೫೭). [ ಧುರ$_1$ (<ದುರ) + ಅವನಿ ]

**ಧುರಾವಹ** (ನಾ). ಹೊಣೆಯನ್ನು ಹೊರುವವನು ; ಹೊಣೆಗಾರ : ನೀವು ಕೌರವ ಸರ್ವದಳದ ಧು[ಪಾಠಾಂ. ದು]ರಾವಹರಲೇ ಬಾಣಸೃಷ್ಟಿ ಕೃತಾವಧಾನವ ತೋಱಿನುತ ನೃಪನೆಚ್ಚು ಬೊಬ್ಬಿಱಿದ (ಕುವ್ಯಾ. ಕ. ೨-೫೫). [ ಸಂ. ]

**ಧುರೀಣ** (ಗು). ೧. ಭಾರವನ್ನು ಹೊತ್ತ,-ವಹಿಸಿಕೊಂಡ ; ಹೊಣೆಗಾರಿಕೆಯನ್ನು ವಹಿಸಿಕೊಂಡಿರುವ,-ಹೊತ್ತಿರುವ. (ನಾ). ೨. ದಕ್ಷನಾದವನು ; ಸಮರ್ಥ ; ನಿಪುಣನಾದವನು : ತಳ್ತೀಸಾಡಿದಂ ಕೋಟಿಗೊರ್ವನೆ ಬಿಲ್ಗೊಂಡು . . . ಧನುರ್ಧರಧುರೀಣಂ ದ ರ್ಧರಂ ಲಕ್ಷ್ಮಣಂ (ಪಂಪರಾಮಾ. ೧೪-೧೭೭) ; ಅಪಾರವಾಗಿ ದುಡಿದ ಪಾಶ್ಚಾತ್ಯ ಸೇವಾಧುರೀಣರಲ್ಲಿ . . . ಇವನೂ ಉನ್ನತಸ್ಥಾನವನ್ನು ಪಡೆದಿದ್ದಾನೆ (ಪಾಶ್ಚಾವಿ. ४೯೬). ೩. ಮುಂದಾಳು ; ಅಗ್ರಗಣ್ಯ ; ನಾಯಕ : ಆಧುನಿಕ ಪ್ರಪಂಚದ ಕೆಲವೊಂದು ಮುಖ್ಯಮುಖ್ಯ ಸಂಗತಿಗಳು ಭಾರತದ ಪ್ರಮುಖ ಧುರೀಣರ ಹಾಗು ಸಾರ್ವಜನಿಕ ಸೇವಾನಿರತಜನರ ಮನಸ್ಸನ್ನು ಸೆಳೆದಿದ್ದವು (ಮಹಾಯೋ. ೨೮) ; ಕ್ರಾಂತಿದೇವಿಯ ಪರಮಭಕ್ತರೂ ಸ್ವಾತಂತ್ರ್ಯ ಚಳವಳದ ಧುರೀಣರೂ ಆಗುವರು (ಜಗಸಂ. ೨) ; ಸಾಮ್ಯವಾದ ಮತ್ತು ಮಾನವತಾವಾದದ ಧುರೀಣರ ಅಭಿಪ್ರಾಯದ ಮೇರೆಗೆ ಸಾಮಾಜಿಕ ಸುಲಿಗೆಯ ಸಾಧನವನ್ನು ಸಿದ್ಧಪಡಿಸುವುದಕ್ಕಾಗಿ ಧರ್ಮವು ಸುಳ್ಳುಸುಖದ ಕಲ್ಪನೆಯನ್ನೀಯುತ್ತದೆ (ಧರ್ಮಸಾ. ೧೧). ೪. ಭಾರ ಹೊರುವ ಪ್ರಾಣಿ ; ನೊಗವನ್ನು ಹೊರುವ ಎತ್ತು : "ಧುರೀಣ ಧೌರೇಯ ಧುರ್ಯನಾಮ ಭದ್ರಂ" (ವಸ್ತುಕೋ. ೮೯-೩); "ಧೂರ್ವಹಃ, ಧುರ್ಯಃ, ಧೌರೇಯಃ, ಧುರೀಣಃ, ಧುರಂಧರಃ-ಈ ಬಂಡಿ, ಗೋಣಿ, ನೇಗಲು ಮುಂತಾದ ಭಾರವನ್ನು ಹೊತ್ತು ಸೆಳೆಯುವ ಎತ್ತು ಮುಂತಾದ ದನಗಳ ಹೆಸರುಗಳು" (ಸಿದ್ಧಾಂತಿ. ೨೯೩). [ ಸಂ. ]

**ಧುರೀಣತೆ**(ನಾ). ೧.ಕಾರ್ಯಚತುರತೆ,-ಸಾಮರ್ಥ್ಯ. ೨. ಮುಂದಾಳುತನ ; ನಾಯಕತ್ವ ; ಪ್ರಾಮುಖ್ಯತೆ : ಜಾನಕಿಬಾಯರ ಧುರೀಣತೆಯು ಮನೆಯಲ್ಲಿ ತೀರ ಪ್ರಖರವಾಗಿತ್ತು (ಸಮಜೀ. ೭೩). [ ಸಂ. ಧುರೀಣತಾ ]

**ಧುರೀಣತ್ವ** (ನಾ). ಮುಂದಾಳುತನ ; ನಾಯಕತ್ವ : ಕುಸ್ತಿಯಲ್ಲಿ ಭಾಗವಹಿಸಲು ಪಾದಳ್ಳಿಯ ಕುಸ್ತಿಗಡಿಗಳು ದಾದಾನ ಧುರೀಣತ್ವದಲ್ಲಿ ಬಂದಿದ್ದರು (ಗ್ರಾಮಾಯ. ೫೧). [ ಸಂ. ]

**ಧುರ್ಯ** (ನಾ). ೧. ಸಮರ್ಥ ; ಚತುರ ; ಕಾರ್ಯಧುರಂಧರ : ಧನುರ್ವೇದ್ಯಂ . . . ನಿಲೆ . . . ದುಮಪತಿಕ್ಷೇತ್ರದೊಳ್ ಧನವಂತಂ ಧರಣೀಶ ಕಾರ್ಯಭರಧುರ್ಯಂ ಸತ್ಯಶಾಕೋವಿದಂ (ಜಾತತಿ. ೧೭-೨೪) ; ನಿಜಗುರು ಸ ಪ ರಿ ಯ ಕ್ಷೀ ಣ ನಂ ಗುರುಚರಣಗಂಧಾಘ್ರಾಣನಂ ಗುರುಕಾರ್ಯಧುರ್ಯನನು (ಬಸಪು. ೫೯-೫೩) ; ಜಕ್ಕಣಾಚಾರ್ಯ ಭಕ್ತಿಸಾಕಾರ್ಯ ಪರಮಶಿವಸಮಯ ಧುರ್ಯ (ಪ್ರಾಥರಾ. ೧೧-೮). ೨. ಪ್ರಮುಖಸ್ಥಾನದಲ್ಲಿರುವವನು ; ಆಡಳಿತಗಾರ. ೩. ಸಚಿವ. ೪. ಮುಂದಾಳು ; ನಾಯಕ ; ಅಗ್ರಗಣ್ಯ. ೫. (ಬಂಡಿಯ ಮೂಕಿಗೆ ಹೊಂದಿಸಿರುವ)

**ಧೂಳೀಧ್ವಂಸ** (ನಾ). ಮಣ್ಣುಪಾಲಾಗುವಿಕೆ ; ನಾಶ ; ಹಾಳಾಗುವಿಕೆ : ನೆಲಕ್ಕೂ ಭೂಮಿಗೂ ನಡುವೆ ಮಿಂಚು ಬಡಿಯುವುದು. ಇಂಥ ಬಡಿತಕ್ಕೆ ಮರಗಳೂ ಕಟ್ಟಡಗಳೂ ಧೂಳೀಧ್ವಂಸವಾಗುವುದುಂಟು (ಬಾಲಪ್ರ. III, ೧೨೩೪). [ ಸಂ. ಧೂಲೀಧ್ವಂಸ ]

**ಧೂಳೀಪಟ** (ನಾ). = ಧೂಳಿಪಟ : ಎಷ್ಟು ಸಾಮ್ರಾಜ್ಯಗಳು ಧೂಳೀಪಟವಾಗಿವೆ (ನನದಿ. ೩೮).

ಧೂಳೀಪಟ ಮಾಡು=ಧೂಳಿಪಟಮಾಡು ; ನಾಶಮಾಡು ; ಹಾಳುಮಾಡು: ಎಲ್ಲರನ್ನೂ ಧೂಳೀಪಟ ಮಾಡಿ ಹೇಳಹೆಸರಿಲ್ಲದೆ ಮಾಡಿಬಿಡುತ್ತಿದ್ದ (ಕುರುಕಾ. ೯೮) ; ರಾಯ ರಾಮಲಿಂಗನ ಸೂಚನೆ ಕೇಳಿದೊಡನೆಯೆ ಬಿರುಗಾಳಿಯಂತೆ ಶತ್ರುಗಳ ಮೇಲುನುಗ್ಗಿ ಧೂಳೀಪಟ ಮಾಡಿದನು (ಅಳಿಳ. ೨೨).

[ ಸಂ. ಧೂಲೀಪಟ ]

**ಧೂಳೀಪಟಲ** 'ಧೂಲೀಪಟಲ' ನೋ.

**ಧೂಳೀಪಟ್ಟ** (ನಾ). = ಧೂಳಿಪಟ : ಮಾಂತ್ರಿದನೋ ಇಂದೆ ಕೋಂಟೆ ಧೂಳೀಪಟ್ಟಂ [ಪಾಠಾಂ. ಧೂಳಿಪಟಂ] (ಶಮರ, ೫೭ ಪ್ರಯೋ); ಇದಿರಾದ ಬಲುದುರ್ಗಗಳನು ಧೂಳೀಪಟ್ಟಮಂ ಮಾಡುತ (ಸಮ್ಯಕ್. ೮-೨೭). ೨. ಧೂಳಿನ ರಾಶಿ, ಒಟ್ಟಿಲು : ''ಧೂಳೀಪಟ್ಟಮೆನಲ್ಕಡರಿ ಧೂಳಿ ಪುಟ್ಟಿದುದಕ್ಕುಂ" (ಭಾರವಿ. ೬೭). [ ಸಂ. ಧೂಲೀಪಟ್ಟ ]

**ಧೂಳೀಪ್ರತಾನ** 'ಧೂಲೀಪ್ರತಾನ' ನೋ.

**ಧೂಳೀಪ್ರಾಕಾರ** (ನಾ). = ಧೂಳೀಶಾಲ : ಆ ಧೂಳೀಪ್ರ[ಪ್ರಾ]ಕಾರದಿಂದೊಳಗೆ ನಾಲ್ಕುಂ ದಿಶಾಭಾಗದೊಳಮಿನ್ನೇಸಱುಮಿರ್ಬದಲುಮಾಗಿ ನೀಳ್ದ ಪೆರ್ವೀದಿಗಳ ನಟ್ಟನಡುವೆ (ವರ್ಧಮಾ. ೧೩-೩೮ ವ).

[ ಸಂ. ಧೂಲೀಪ್ರಾಕಾರ ]

**ಧೂಳೀಶಾಲ, ಧೂಳೀಶಾಳ** (ನಾ). [ಜೈನ] ಸಮವಸರಣಮಂಟಪದ ಮೊದಲನೆಯ ಪ್ರಾಕಾರ : ಕೈಳಾಸಾಚಳಮನೇಱಿ ಧೂಳೀ[ಪಾಠಾಂ. ಳಿ] ಶಾಲದಿಂ ತಗುಳ್ದು ಪೂರ್ವೋಕ್ತವರ್ಣನೋಪೇತಮಪ್ಪ ವೃಷಭನಾಥನಾಸ್ಥಾನ ಮಂಟಪಮಂ ನೋಡುತ್ತುಂ (ಆದಿಪು. ೧೩-೮೨ವ). ಧೂಳೀಶಾಳ : ಪಲಯಾಕೃತಿಯಿಂದಿದನೇಂ ಬಳಸಿದುದೋ ಸುರೇಂದ್ರಚಾಪಮಂಡಲಮೆನೆ ಬಳ್ಳಳ ಬಳಿದ ಪಂಚರತ್ನದ ಬೆಳಗಿಂದಂ ಬೆಳಪುದಲ್ಲಿ ಧೂಳೀಶಾಳಂ (ಆದಿಪು. ೧೦-೨೩) ; ಪಂಚರತ್ನಧೂಳೀಶಾಳದಿಂ ಪರಿವೇಷಂಗೊಂಡ ಸಮವಸರಣಮಂಡಳಮಂ ಪುಗುವ ಸಹಸ್ರಾಕ್ಷನ (ಮಲ್ಲಿಪು. ೦೪-೨೧೦).

[ ಸಂ. ಧೂಲೀಶಾಲ ]

**ಧೂಳೀಶಾಳ** 'ಧೂಳೀಶಾಲ' ನೋ.

**ಧೂಳೀಸಾಳ** (ನಾ). = ಧೂಳೀಶಾಲ : ರುತುಮಾನದ ದ್ವಾರಕುಟ್ಟಂ ಮೊದಲ್ಗೊಂಡು ಧೂಳೀಸಾಳಂಬರಮಂತರಾಳಚಕ್ರವಾಳಸ್ಥಳದೊಳೆಲ್ಲಂ ಕಿಕ್ಕಿಱಿಗಿಱಿದು (ಭಾರಪು. ೧೬-೨೨೦ ವ). [ ಸಂ. ಧೂಲೀಸಾಲ ]

**ಧೂಳು** 'ದೂಳಿ' ನೋ.

**ಧೂಳುಭೂಮ** (ನಾ). ಮದುವೆಯ ಸಂದರ್ಭದಲ್ಲಿ ಗಂಡು ಹೆಣ್ಣನ್ನು ಒಟ್ಟಿಗೆ ಕೂರಿಸಿ ಸಂಜೆಯ ಹೊತ್ತು ಹಾಕುವ ಊಟ : ವಧೂವರರನ್ನು ಧೂಳುಭೂಮಕ್ಕೆ ಕೂರಿಸಿದ್ದಾರೆ (ಜಾನ).

[ ಧೂಳು (< ದೂಳಿ) + ಭೂಮ₁ (< ಭೂವ) ]

**ಧೂಳುಮಣಿ³** (ನಾ). ಘರ್ಷಣೆಯಾಗುವುದನ್ನು ತಪ್ಪಿಸಲು ರಥಕ್ಕೆ ಹಾಕಿರುವ ಮರದ ಅಥವಾ ಕಬ್ಬಿಣದ ಕಾಪು;–ಸಾಧನ : "ರಥಗುಪ್ತಿಃ, ವರೂಥಃ–ಈ ೨ ಧೂಳುಮಣಿ³" (ನಾಚಿರಾ. ೦೩೪).

[ ಧೂಳು (< ದೂಳಿ) + ಮಣಿ³₂ ].

**ಧೂಳೆಬ್ಬಿಸು** (ಕ್ರಿ). ೧. ಧೂಳು ಏಳುವಂತೆ ಮಾಡು ; ಧೂಳನ್ನು ಏಳಿಸು : ಕುದುರೆಗಳು ಧೂಳೆಬ್ಬಿಸುತ್ತಾ ಓಡಿದವು (ಜಾನ). ೨. ಮಣ್ಣುಪಾಲುಮಾಡು ; ಹಾಳುಮಾಡು : ಇವತ್ತು ಇವರ ಮಾನ ಮರ್ಯಾದೆಯೆಲ್ಲಾ ಧೂಳೆಬ್ಬಿಸಿಬಿಡ್ತೀನಿ (ರಂಗವ. ೨೨೯). ೩. (ಆಲಂ) ತಿರುಗು ; ಅಲೆದಾಡು : ಅವನ ಎಣಿಕೆಯಲ್ಲಿ–ಆ ಸ್ನೇಹಿತರು ಬಂದದ್ದಾದರೆ, ನಾಲ್ಕು ದಿನ ನಗರವನ್ನೆಲ್ಲ ಧೂಳೆಬ್ಬಿಸಬಹುದು – ಎಂದಿತ್ತು (ಅಳಿವಿ. ೧೯೭). ೪. ಕೀಟಲೆಮಾಡು : ಸುಮ್ಮನೆ ಧೂಳೆಬ್ಬಿಸುವುದೇ ಅವನ ಸ್ವಭಾವ (ಜಾನ). [ ಧೂಳು (< ದೂಳಿ) + ಎಬ್ಬಿಸು (< ಎಟ್ಬಿಸು) ]

**ಧೂಳೆರಚು** (ಕ್ರಿ). ೧. ಮಣ್ಣನ್ನು ಎರಚು. ೨. (ಆಲಂ) ಕಳಂಕಗೊಳಿಸು ; ಕೆಟ್ಟ ಹೆಸರನ್ನು ತರು : ವಂಶದ ಮೇಲೆ ಧೂಳೆರಚಿದೆಯಲ್ಲ (ಕಗದ್ಯ. II, ೨೯).

[ ಧೂಳು (< ದೂಳಿ) + ಎರಚು (< ಎಱಚು) ]

**ಧೂಳೋದಕ** (ನಾ). [ವೀಶೈ] "ಗುರು ಮನೆಗೆ ಬಂದಾಗ ಪಾದ ತೊಳೆದ ತೀರ್ಥ" (ಶರಸಾ. ೨೪-೭). [ಪ್ರ: ಇದು 'ಧೂಳ್ಯುದಕ' ಎಂಬುದರ ಅಶುದ್ಧವಾದ ರೂಪ]

**ಧೂಳ್ಗೋಂಟೆ** 'ದೂಳಿಗೋಂಟೆ' ನೋ.

**ಧೃತ** (ಗು). ೧. ತಳೆದ; ಧರಿಸಿದ: ಧೃತದೇವೇಂದ್ರವಿಮಾನರುಂದ್ರಮಹಿಮಂ . . . ಕಲಧೌತತುಂಗಕಲಶಾ ಚೆಲ್ವಾಯ್ತು ರಾಜಾಲಯಂ (ಆದಿಪು. ೬-೧೦೭) ; ಆರೋಪಿತಚಾಪಂ ಸಂಧಾರಿತಕವಚಂ ಧೃತೋಗ್ರಶರಧಿಯುಗಂ ತಾನಾರುದ ಮಲ್ಲಪಂ (ಪಂಪಭಾ. ೮-೧೩) ; ಧೃತ ಪಂಚರತ್ನಮಂ ರಾಗಿತೆಯೊಳ್ ಭೂಷಣಮನಾಂಪ ತೆಱದಿಂದೆ ವಿರಾಗಿತೆಯೊಳ್ . . . ಆತನಾ ವಿಭು ತಪಮಂ (ಚಂದ್ರಪು. ೧೮-೨) ; ಧೃತಪಂಕಾದ್ರ್ರಮಯಾಳಿಕಂ ಧೃತ ವಿಶೀರ್ಣಾಗೆ ೦ಚ್ಚಶೃಂಗಂ . . . ಬರುತಿದ್ದುದುದ್ಧತಘಸಧ್ವಾನೋತ್ಕರಂ ಶಾಕ್ವರಂ (ಕುಸುಮಾ. ೧೦-೦೪೩) ; ಧೃತನಿವ್ರಾಲಸ್ಯಭಾರಂ ತೊಲಗೆ (ಸೂಕ್ತಿಸು. ೯-೬೫) ; ಧೃತಚಕ್ರವಾಕಿನೀಪರಿಪೂತನಾಕಿನೀ . . . ಎನುತಿರ್ದರು (ವೀಶೈಪು. ೩-೨೩-೬೪). ೨. ಹಿಡಿದ : ಧೃತಕನಕವೇತ್ರಲತೆ ಚಿತ್ರಿತಮಾಗೆ ಕರಾಂಗುಳೀಯಕಪ್ರಭೆಯಿಂದಂ ಪ್ರತಿಹಾರಪದಮಿಯಾ ತಳೆದು (ಪುಷ್ಪಪು. ೧೩-೦೦೫). ೩. ಹೊಂದಿದ ; ಪಡೆದಿರುವ : ಧೃತನಾನಾವರ್ಣಪರ್ಣಚ್ಛವಿಸಮುದಯಸಂದರ್ಶನೀಯಂ . . . ಪೌರರ್ಗೆ ಪಂಚೇಂದ್ರಿಯಸುಖದೊದವಂ ನಂದನಂ ಮಾಳ್ಪುದೆಂದುಂ (ಚಂದ್ರಪು. ೧-೦೧೩). ೪. ಕಾಪಾಡಲ್ಪಟ್ಟ ; ರಕ್ಷಣೆಗೊಂಡ. ೫. ಇಟ್ಟ ; ಇಡಲ್ಪಟ್ಟ. ೬. ನಿರ್ಧರಿಸಿದ ; ದೃಢವಾದ. ೭. ತಯಾರಾದ ; ಸಿದ್ಧವಾದ. ೮. ಉಪಯೋಗಿಸಿದ ; ಬಳಸಿದ. (ನಾ). ೯. ಹೊರುವುದು ; ತಳೆಯುವುದು ; ಧರಿಸುವುದು ; ಧಾರಣೆ. [ ಸಂ. ]

**ಧೃತಕಂಟಕ** (ನಾ). ಮುಳ್ಳುಗಳನ್ನು ಪಡೆದಿರುವುದು ; ಮುಳ್ಳುಗಳನ್ನುಳ್ಳದ್ದು : ಧೃತಕಂಟಕಮಾದೊಡಮುನ್ನತಿಯಿಂ ಕೇತಕಿಯೊಳೆಱಗಿದುದು ಮಧುಕರಂ (ಗಿರಿಕ. ೩-೬೪). [ ಧೃತ + ಕಂಟಕ ]

**ಧೃತಕಂಬಲ** (ನಾ). ಕಂಬಲನೆಂಬ ಸರ್ಪವನ್ನು ಧರಿಸಿದವನು ; ಶಿವ : ನಿಜಾಂಗಧೃತಕಂಬಲ ಧನಂಜಯ ಮದಂಬಕ (ಹಾಜಶೀ. ೧೩-೫೪).

[ ಧೃತ + ಕಂಬಲ ]

**ಧೃತಕಳಾಕಳಾಪ** (ನಾ). ೧. ಅರುವತ್ತುನಾಲ್ಕು ಕಲೆಗಳನ್ನು ಪಡೆದವನು. ೨. ಹದಿನಾರು ಕಲೆಗಳನ್ನು ಹೊಂದಿದವನು. ೧, ೨ : ಅಂಗೋತ್ರಭೇದಿ ವಿಬುಧೇಶ್ವರನಲ್ಲಂ ಧೃತಕಳಾಕಳಾಪಂ ದೋಷಾಕರನಲ್ಲಂ (ಕವಿರಾ. ೩-೧೧೨).

[ ಧೃತ + ಕಳಾಕಳಾಪ (= ಕಲಾಕಲಾಪ) ]

**ಧೃತಗೋತ್ರ** (ನಾ). (ಮಂದರ) ಪರ್ವತವನ್ನು ಹೊತ್ತವನು; ಕೂರ್ಮ: ಚಿತ್ರವದನೇವೇಳುವನು ಧೃತಗೋತ್ರನುತ್ಸಾಸದಲಿ ವರವೇದತ್ರಯಂಗಳ ನುಗುಳಿದನು ಕಾರುಣ್ಯನಿಧಿಯೆಂದ (ನಿಭಾಗ. ೨-೩-೫೨).

[ ಧೃತ + ಗೋತ್ರ₂ ]

**ಧೃತಚಂದ್ರ** (ನಾ). ಚಂದ್ರನನ್ನು ಧರಿಸಿದವನು ; ಶಶಿಧರ ; ಶಿವ ಮಳೆಯರಾಜನ ಕಥೆಯ ಕೇಳ್ದರ್ಗೆ ಧೃತಚಂದ್ರ ಮಾಡಿಪ್ಪನೀವನು (ಪ್ರೌಢರಾ. ೯-೭೩). [ ಧೃತ + ಚಂದ್ರ$_2$ ]

**ಧೃತದೀಕ್ಷ** (ನಾ). ವ್ರತವನ್ನು ಹಿಡಿದವನು ; ವ್ರತವನ್ನು ತೊಟ್ಟವನು : ಧಾತ್ರಿಯೊಳಾವನ್ನಾಭಯಾಸಕ್ರದೆ ಧೃತದೀಕ್ಷರಲ್ತೆ ಪುರುಕುಲದರಸರ್ (ಶಾಕುಂತ. ೨೮-೩೧). [ ಸಂ. (ಧೃತ + ದೀಕ್ಷಾ + –) ]

**ಧೃತಧೈರ್ಯ** (ನಾ). ಧೈರ್ಯವನ್ನು ಉಳ್ಳವನು ; ದಿಟ್ಟ : ಧೃತಧೈರ್ಯಂ ತುಂಗಶೌರ್ಯಂ ರಜತಶಿಖರಿಧಾಮಂ . . . ಪಂಪಾಧಿನಾಥಂ (ಉದ್ಭಟ. ೧೨-೧೩೮). [ ಧೃತ + ಧೈರ್ಯ ]

**ಧೃತನವಶಶಿ** (ನಾ). ಬಾಲಚಂದ್ರನನ್ನು ಧರಿಸಿದವನು ಶಿವ: ಅತಿಶಯ ಮಹಿಮಾ ಧೃತನವಶಶಿವಿಶ್ರುತವರಗುಣಗಣಧಾಮಂ (ಹರಿಶ್ಚಂ. ೨-೧೦). [ ಧೃತ + ನವಶಶಿ ]

**ಧೃತಮಂಡಲಿ** (ನಾ). ಒಂದು ಬಗೆಯ ಸಸ್ಯ : "ತ್ರಿಪದಿ ಧೃತಮಂಡಲಿ [ವಾರಾಂ. ೪] ಮೆರಾಳಪದಿಯೆನೆ ಹಂಸಪಾದಿ" (ಮಂಗರಾ. ೪೨-೩೯). [ ಸಂ. ]

**ಧೃತಮನೋರಥ** (ನಾ). ದೃಢವಾದ ಮನಸ್ಸುಳ್ಳವನು : ಸ್ಥಿರಮನಸ್ಕ : ಆ ಪುರಮನಾಳ್ವನಭ್ಯುದ್ಗತ ಗೋಪುರಮಂ ವಿಜಿತ ಶಕ್ರ ಧನಪತಿ ವರುಣ ಶ್ರೈಪುರಮಂ ಧರಣೀಮಣಿ ನೂಪುರಮಂ ಧೃತಮನೋರಥಂ ಪದ್ಮರಥಂ (ಅನಂತಪು. ೩-೧೯). [ ಧೃತ + ಮನೋರಥ ]

**ಧೃತಮೋಹ** (ನಾ). ಮೋಹಕ್ಕೊಳಗಾದವನು : ಹಾಹಾಧ್ವನಿ . . . ಸುಕ್ತಿರ್ದೊಡದು ಸಾಹಸಿಗಂ ಕೇಳ್ದುಂ ಧೃತಮೋಹಂ ಕೇಳ್ದುಮೆ ಜಿತಾರ್ತ ಕುರರೀರವಮಂ (ಶಾಂತಿಪು. ೭-೩೩). [ ಧೃತ + ಮೋಹ ]

**ಧೃತರಜ** (ನಾ). ಧೂಳಿನಿಂದ ಕೂಡಿದುದು : ಧೃತರಜನನಿಲಂ ದಿತಿಜಪ್ರತಿಕೂಲಂ ಹರಿಗೆ ಸೈನ್ಯದರ್ಶನದನುಕೂಲತೆಯಂ ಮಾಡಿವಂ (ಜಗವಿ. ೧೫-೦೫). [ ಧೃತ + ರಜ$_1$ ]

**ಧೃತರಾಷ್ಟ್ರ** (ನಾ). ೧. ಸ್ಥಿರವಾದ ಚಕ್ರಾಧಿಪತ್ಯವನ್ನು ಉಳ್ಳವನು. ೨. ಒಳ್ಳೆಯ ಅರಸ. ೩. ಒಳ್ಳೆಯ ಅರಸನಿಂದ ಆಳಲ್ಪಟ್ಟ ದೇಶ. ೪. ಕುರುವಂಶದ (ದುರ್ಯೋಧನ ಮುಂತಾದ ನೂರು ಜನ ಕೌರವರ ತಂದೆಯಾದ) ಅಂಧ ದೊರೆ : "ಅಂಧರಾಜನೆನೆ ಧೃತರಾಷ್ಟ್ರನಕ್ಕುಂ" (ಮಂಗರಾ. ೭೮-೩) ; ಧೃತರಾಷ್ಟ್ರಂ ನುಡಿದಾರ್ತನೇ ಹರಿ ಭರಂಗೆಯ್ದಾರ್ತನೇ (ಶಂಕರಭಾ. ೧೨-೧೦) ; ಧೃತರಾಷ್ಟ್ರಕ್ಷಿತಿಪಾಲ ಕೇಳ್ ಜನನಿ ಕೇಳ್ ಗಾಂಧಾರಿ (ಗದಾಯು. ೭-೩೫) ; ಭರತವಂಶದೊಳ್ಗಿದು ಮಿಗೆ ನೂರ್ವರು ಕುಮಾರರು ಪಾಂಡು ಧೃತರಾಷ್ಟ್ರರಿಗೆ ಜನಿಸಿದರು (ಕುಮಾ.ಅ. ೪ ಸೂಚನೆ). ೫. ಒಂದು ಹಾವಿನ ಹೆಸರು : ಬಳಿಕ ಧೃತರಾಷ್ಟ್ರನೆಂಬ ದುರ್ವ್ಯಾಳಪತಿ ನುಡಿವನು (ಜೈಮಿಭಾ. ೨೪-೨೦). ೬. ಒಬ್ಬ ಗಂಧರ್ವನ ಹೆಸರು : ಪುರಂದರಂ ಧೃತರಾಷ್ಟ್ರನೆಂಬ ಗಂಧರ್ವಂಗೆ ನೇಮಿಸಿದನು (ಜೈಮಿಭಾ. ೫-೪೧). ೭. ಒಬ್ಬ ಯಕ್ಷನ ಹೆಸರು : ಹೇಮಕೂಟಪರ್ವತದಲ್ಲಿ ಮಣಿಭದ್ರ . . . ಧೃತರಾಷ್ಟ್ರ ಪೂರ್ಣಭದ್ರ ವಿರೂಪಾಕ್ಷರೆಂಬವರು ಮೊದಲಾದ ಕೋಟಿಯಕ್ಷರ ಪಟ್ಟಣಂಗಳಂ (ವಿವೇಕ. ೨೧೭). ೮. ಒಂದು ಬಗೆಯ ಪಕ್ಷಿ. ೯. (ಅಲಂ)ಕುರುಡ ; ಅಂಧ. [ ಸಂ. ]

**ಧೃತವೇತ್ರ** (ನಾ). ದಂಡವನ್ನು ಹಿಡಿದುಕೊಂಡವನು : ಧೃತವೇತ್ರಂ ಚಾರುಚೀನಾಂಬರರಚಿತಶಿರೋವೇಷ್ಟನಂ . . . ಅವನಿಪನೊಡ್ಡೋಲಗ ಕೈಲ್ದೆ (ಚಂದ್ರಪು. ೨-೭೪). [ ಧೃತ + ವೇತ್ರ ]

**ಧೃತವ್ರತ** (ನಾ) ೧. ಶ್ರೇಷ್ಠವಾದ ವ್ರತಗಳ ನಿಯಾಮಕ : ಎಲೈ ಅಗ್ನಿಯೇ, ಧೃತವ್ರತನೂ, ಸಕಲರಿಗೂ ಪ್ರಭುವೂ, ಪ್ರಕಾಶಮಾನನೂ ಆದ ವರುಣನೂ ನೀನೆ (ಋಕ್ಸಾರ. ೧೭). ೨. ವ್ರತವನ್ನು ಹಿಡಿದವನು. [ ಧೃತ + ವ್ರತ ]

**ಧೃತಶಕ್ತಿ** (ನಾ). ೧. ವೀರನನ್ನು ಹೊಂದಿದವಳು ; ಪರಾಕ್ರಮಿಯ ಹೆಂಡತಿ. ೨. ಸಮರ್ಥರಾದವರನ್ನು ಪೋಷಿಸುವವಳು ; ಶೂರರಿಗೆ ಆಶ್ರಯವನ್ನು ಕೊಡುವವಳು. ೧, ೨ : ಶ್ರೀರಮಣಿ ಗೌರಿ . . . ಪತಿಭಕ್ತಿ ಧೃತಶಕ್ತಿಯೆನೆ ಸನ್ದೀ ವೀರನಿಧಿಯುಂ ಚಲದ ವಾರಿನಿಧಿಯುಂ ಗುಣದ ಚಾರುನಿಧಿಯುಂ ನೆಗರ್ದ ದೇಕಲೆಯನಿನ್ನೀ ನಾರಿಜನರನ್ನಮನದಾರೊ ಮಣಿವರ್ (ಎಕ. IV, ಹೆಗ್ಗಡ. ೧೮-೨೯ ; 1057). ೧೧೭-೧೧). [ ಸಂ. ಧೃತಶಕ್ತಾ ]

**ಧೃತಶಶಿಖಂಡ** (ನಾ). ಚಂದ್ರಕಳೆಯನ್ನು ಧರಿಸಿದವನು ; ಶಿವ : ಧೃತಶಶಿಖಂಡ ಜಿತಸುಮಕಾಂಡ ವಿಕರಣಶೌಂಡ ಭೃತಜಗದಂಡ (ಶಾಕುಂತ. [ ಧೃತ + ಶಶಿಖಂಡ ]

**ಧೃತಶಶಿಶಕಲ** (ನಾ).=ಧೃತಶಶಿಖಂಡ: ಧೃತಶಶಿಶಕಲಂ ಕೃತಭವನಕುಲಂ . . . ನುತಗಿರಿಜಾರಮಣಂ (ವೃಷವಿ. ೩೪-೭೫). [ ಧೃತ + ಶಶಿಶಕಲ ]

**ಧೃತಶಸ್ತ್ರ** (ನಾ). ಶಸ್ತ್ರವನ್ನು ಧರಿಸಿದವನು ; ಶಸ್ತ್ರಧಾರಿ : ಕೊಲಬಹುದು ಧೃತಶಸ್ತ್ರನಾದಡೆ ಕೊಲುವೆನೆಂಕಾಚಾರ್ಯಸುತನನು ತಿಳಿಯಾ ಹೇಳೆಂದೆಸುತ ಬೀಡಿಕೆಗಾಗಿ ನಡೆತಂದ (ವಿಭಾಗ. ೧-೪-೩೦). [ ಧೃತ + ಶಸ್ತ್ರ ]

**ಧೃತಶೈತ್ಯ** (ನಾ). ತಂಪನ್ನು ಹೊಂದಿರುವುದು ; ಶೈತ್ಯವನ್ನೊಳಗೊಂಡಿರುವುದು: ಧೃತಶೈತ್ಯಂ ಧಾರಾಜಲಸಂಯುತಮನುಕಂಪಾನ್ವಿತಂ ದಲೆನಿಸಿಯುಂ . . . ರಿಪುನೃಪರ್ಗೀವುದಧಿಕತಾಪೋದಯಮಂ (ಚಂದ್ರಪು. ೨-೩). [ ಧೃತ + ಶೈತ್ಯ ]

**ಧೃತಸತ್ತ್ವೆ** (ನಾ). ಗರ್ಭಿಣಿ : "ಗುರ್ವಿಣಿ ಧೃತಸತ್ತ್ವೆಯುಮಂತರ್ವತ್ನಿಯೆನಿಪ್ಪುದಾಕೆ ಗರ್ಭಿಣಿಯೆನಿಕ್ಕುಂ" (ವಸ್ತುಕೋ. ೩೪-೧೪). [ ಸಂ. ಧೃತಸತ್ತ್ವಾ ]

**ಧೃತಸೋಮ** (ನಾ). =ಧೃತಚಂದ್ರ : ಧೃತಸೋಮ ಗತಕಾಮ ಚಿರಲಿಂಗ ವರಸಂಗ . . . ಗಿರಿಜೇಶ (ಹಚಶಾ. ೧-೫). [ ಧೃತ + ಸೋಮ ]

**ಧೃತಿ** (ನಾ). ೧. ಹಿಡಿದುಕೊಳ್ಳುವುದು ; ತೆಗೆದುಕೊಳ್ಳುವುದು. ೨. ತಾಳುವಿಕೆ ; ಧರಿಸುವುದು. ೩. ಪಡೆಯುವುದು ; ಹೊಂದುವುದು. ೪. ಧೈರ್ಯ ; ಧೀರತನ ; ಎದೆಗಾರಿಕೆ ; ಕೆಚ್ಚು : ಧೃತಿಯನವಲಂಬಿಸಿ . . . ನಡೆವಾಗಳ್ (ರಾಮಾಪ. ೭-೪೯) ; ಪೂಜಿಗತುಳ ಧೃತಿಯ ನಾಂತು ನೆಟ್ಟ ಮನದೊಳ್ ತಳೆದನೆಸೆವ ಕುಸುಮಾವಳಿಯಂ (ಕುಸುಮಾ. ೧೦-೧೦೩) : ಮರಳಿ ಧೃತಿಯಿಂದೆದ್ದು ಕೋಪಾತುರನು ತುರಗವನೊದೆದು ಕೆಡಹಲು (ಕಾಶಿರಾ. ೨೭-೨೯) ; ಪೆಣ್ಣಾದೊಡಂ ನೀನೆನಗೆ ಮತಿಯೊಳಂ ಧೃತಿಯೊಳಂ ಗಂಡಿಗಣಿ (ಶ್ರೀರಾಮಾ. ೨೧೫-೧೨೭). ೫. ತಾಳ್ಮೆ ; ಸಹನೆ ; ಸಂಯಮ : ಧೃತಿ ಬಂದಾಗಳೆ ಮಾಣೆಂಬ ತೆಱದೆ ಪೇಸಿದನರಸಂ (ಹುಟೋಚ. ೨-೩೩) : ವಿರತಿ ವಿವೇಕ . . . ಧೃತಿ ಸ್ಮೃತಿ . . . ತಪಸ್ಸು ಯೋಗ ನಿಶ್ಚಯ ಮುಂತಾದ ಸಾತ್ತ್ವಿಕಗುಣಗಳಿಂ ಸುಖಮಹಿತೋರ್ಧ್ವಲೋಕಂಗಳಂ ಸಾರ್ದು (ವಿವೇಕ. ೨೪೭) ; ಅಱಿದು ಪಂಚಾರ್ಥವನು ಧೃತಿಯನು ಮೆಱೆದು ಮನವನು ನಿಲಿಸಿ ತನ್ನೀ ದಿವ್ಯಮೂರ್ತಿಯಲಿ ಅಱಿಯದಿತರವನಿರಲು ನೀವೆನ್ನಱಿಕೆಯಲಿ ನಾಲುಕು ಯುಗಗಳುತ್ತರಿಸಲಾ ನಿಮಗಂದು ಮೈದೋಱಿದೆನು ನಾನೆಂದ (ವಿಭಾಗ ೧೦-೪-೨). ೬. ಸ್ಥಿರವಾಗಿರುವುದು ; ಅಚಲತೆ ; ಸ್ಥೈರ್ಯ : ಆತನ ಮಾತಂ ಕೇಳ್ದಪಗತಶೋಕನುಮುಪಗತವಿವೇಕನುಮಾಗಿ ಧೃತಿಯುಂ ತಾಳ್ದು (ಅಜಿಪು. ೯-೭೫) ; ಧೃತಿಯಿಂ ಮಚ್ಚರಿಸುವ ಪರ್ವತಮಂ ತಾನಿಕ್ಕಿ ಮೆಟ್ಟಿದಂತಿರೆ . . . ಇರ್ದಂ ಯೋಗಧುರ್ಯನಚಲಿತಧೈರ್ಯಂ (ಅರ್ಧನೇ. ೭ ೨೦) ; ಅರ್ಥಬಂಧುಸುತಾದಿಗಳ ಪ್ರಾಪ್ತ್ಯಪ್ರಾಪ್ತಿಗಳಲ್ಲಿ ಹರ್ಷಶೋಕವಿಲ್ಲದಿರ್ಪುದೇ ಧೃತಿಯೆನಿಸುವುದು (ವಿವೇಕ. ೦೪೯) ; ಧೃತಿಯು ಶ್ರದ್ಧಾ ಸುಖವಿವಿದಿಷಾವಿವಿದಿಷಮೆಂಬತಿಶಯಗಳೈದು ವಿಧಮಂತು ಮತ್ತದ ತಿಳಿದು ಮತಿಯಿಂದ ಮತ್ತುಸಿರಿ ಕೊನೆಗಾಣಲೆಸಗುವುದೆ ಧೃತಿ(ವಂಕಾರಾ. ೩-೭-೪೩);

ಹಾನಿವೃದ್ಧಿಯಿಂ ಮತಿಗೆ ವಿಕೃತಿ ತೋರದಿರಲದೆ ಧೃತಿ (ವೇದಾಂಪ. ೩-೫-೧೭). ೭. ಸಂತೋಷ; ಆನಂದ; ಉಲ್ಲಾಸ. 'ಧೃತಿವೆಱು' ಪರಾ. ೮. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು: ಚಂದ್ರನಾದೊಡೆ ಅಮೃತ . . . ಧೃತಿ ಶಶಿನಿ ಚಂದ್ರಿಕೆ . . . ಕಾಮದಾಯಿನಿಯೆಂಬ ಷೋಡಶಕಲೆಗಳಿಂ ಭರಿತನಾಗಿ (ವಿವೇಕ. ೨೬೭). ೯. ಒಂದು ಬಗೆಯ ಸಸ್ಯ: "ಧೃತಿ [ಪಾಠಾಂ. ದ್ಯುತಿ]ಯೆನಲು ಮುಷ್ಪೆಯುಕ್ಕು" (ಮಂಗರಾ. ೪೫-೪೮) ೧೦. ಒಂದು ನಾಡಿಯ ಹೆಸರು: ಧಮನಿ, ಗಮನಿ, ಲೋಲೆ, ಧೃತಿ, ಸರ್ವಗಾ ಎಂಬೈದು ನಾಮವನುಳ್ಳ ನಾಡಿಯು . . . ಕಾಣಬರುವುದು (ಸಕವೈ. ೧೦). ೧೧. ವಿಶ್ವೇದೇವತೆಗಳಲ್ಲಿ ಒಬ್ಬ ದೇವತೆಯ ಹೆಸರು. 'ವಿಶ್ವೇದೇವ' ಪರಾ. ೧೨. ಮನಸ್ಸಿನ ಹದಿನಾರು ಬಗೆಯ ವಿಕಾರಗಗಳಲ್ಲಿ ಒಂದು: ಐತರೇಯೋಪನಿಷತ್ತಿನಲ್ಲಿ ಸಂಜ್ಞಾನ (ಚೇತನಭಾವ) . . . ಪ್ರಜ್ಞಾನ, ಮೇಧಾ, ದೃಷ್ಟಿ, ಧೃತಿ, ಮತಿ, ಮನೀಷಾ . . . ಈ ಹದಿನಾರು ಮನಸ್ಸಿನ ವಿಕಾರಗಳೆಂದಿರುವವು (ಅಮೃತ. ೬-೨೭ ಟೀಕು). ೧೩. [ಛಂದ] ಅಕ್ಷರ ಛಂದಸ್ಸಿನಲ್ಲಿ ಹದಿನೆಂಟನೆಯ ಛಂದಸ್ಸಿನ ಹೆಸರು: ಉಕ್ತೆ ಅತ್ಯುಕ್ತೆ . . . ಧೃತಿ ಅತಿಧೃತಿ . . . ಉತ್ಕೃತಿ ಎಂದಿಪ್ಪತ್ತಾಱು ಛಂದಂಗಳಕ್ಕುಂ (ಛಂದೋಂಬು. ೧-೪೬ವ). ೧೪. [ಜ್ಯೋತಿ] ವಿಷ್ಕಂಭ ಮೊದಲಾದ ಇಪ್ಪತ್ತೇಳು ಯೋಗಗಳಲ್ಲಿ ಎಂಟನೆಯದು: ವಿಷ್ಕಂಭ ಪ್ರೀತಿ . . . ಧೃತಿ ಶೂಲ . . . ಬ್ರಹ್ಮ ಐಂದ್ರ ವೈಧೃತಿಗಳೆಂಬಿಪ್ಪತ್ತೇಳು ಯೋಗಂಗಳುಂ (ವಿವೇಕ. ೩೩೦); ಯೋಗಗಳತಿಶಯವನರಿಯೆಯ್ಯಿಯ ಪೇಳುವೆ ವೃತಿಯು ಧೃತಿ ವಿಷ್ಕಂಭ ಶೂಲವು (ಗಗಶಾ. ೪-೭೯). 'ಧೃತಿಯೋಗ' ಪರಾ. ೧೫. [ಕಾವ್ಯಮಿ] ಮೂವತ್ತಮೂರು ಸಂಚಾರೀಭಾವಗಳಲ್ಲಿ ಒಂದು; ಜ್ಞಾನ, ಅಭೀಷ್ಟಪ್ರಾಪ್ತಿ ಮುಂತಾದುವುಗಳಿಂದ ಆಸೆಯು ಪೂರ್ಣವಾಗುವುದು; ಸಂತುಷ್ಟಿ; ತೃಪ್ತಿ: ಧೃತಿ ನಿದ್ರಾ ವೇಗ . . . ಇವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೭೯೩); ಮತಿ ಲಜ್ಜೆ . . . ಧೃತಿ ತರ್ಕ ಉನ್ಮಾದ . . . ಅಪಸ್ಮಾರಗಳೆಂಬ ಮೂವತ್ತುಮೂಱುಂ ಸಂಚಾರೀಭಾವಂಗಳಿಂ ಪರಿವರ್ಧಿಸಿ (ವಿವೇಕ. ೨೨೭); ಜ್ಞಾನ ಮೊದಲಾದವುಗಳಿಂದ ಉಂಟಾಗುವ ಸಂತುಷ್ಟಿಯೇ ಧೃತಿ (ಭಾರಮಿ. ೩೪೭). ; ೧೬. [ಯೋಗ] ಧ್ಯೇಯವಸ್ತುವಿನಲ್ಲಿ ಅಚಲವಾಗಿ ಮನಸ್ಸನ್ನು ನೆಲೆಗೊಳಿಸುವುದು; ಧಾರಣ. 'ಧೃತಿತ್ರಯ' ಪರಾ. ೧೭. [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ನಾಲ್ಕನೆಯದು: ದ್ವಾದಶಾಂಗದೊಳ್ ಪೇಳ್ದ ಆಧಾನ ಪ್ರೀತಿ ಸುಪ್ರೀತಿ ಧೃತಿ . . . ಎಂಬಯ್ವತ್ತುಮೂಱು ಗರ್ಭಾದಿ ನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫೩ವ); ೨ನೇ ತಿಂಗಳ ಗರ್ಭವತಿಗೆ . . . ಅತ್ತಿಹಣ್ಣಿನ ರಸವಂ ಸಹ ಮಂತ್ರಪೂರ್ವಕ ಉದರದ ಮೇಲೆ ಬೀಳುವಂತೆ ಹಾಕುವುದೇ ಧೃತಿಯೆಂಬ ನಾಲ್ಕನೆ ಕರ್ಮವು (ಪುರುಷ. ೧೯೯). 'ದೀಕ್ಷೆ' ಪರಾ. ೧೮. [ನ್ಯಾಯ] ದೇವರಿದ್ದಾನೆಂದು ಸಾಧಿಸುವ ಹೇತುಗಳಲ್ಲಿ ಒಂದು; ಈ ವಿಶ್ವವು ಕುಸಿದು ಬೀಳದಂತೆ ಧಾರಣೆ ಮಾಡುವ ಕಾರ್ಯದಿಂದ ಅದಕ್ಕೆ ಕಾರಣಭೂತನಾದವನು ಒಬ್ಬನು ಇರಲೇಬೇಕು-ಅವನೇ ದೇವರು ಎಂದು ತಾರ್ಕಿಕರು ಸಾಧಿಸುತ್ತಾರೆ: ಧೃತಿಯೆಂದರೆ ಭೂಗೋಳ ಖಗೋಳ ಮೊದಲಾದ ವಸ್ತುಗಳನ್ನು ಧರಿಸುವ ಪುರುಷನಿರಬೇಕು (ಹಿಂದಶಾ. ೧೨೭). [ಸಂ.]

**ಧೃತಿಗಿಡಿಸು** 'ಧೃತಿಗೆಡಿಸು' ನೋ.

**ಧೃತಿಗಿಡು** 'ಧೃತಿಗೆಡು' ನೋ.

**ಧೃತಿಗುಂದು** (ಕ್ರಿ). ಎದೆಗುಂದು; ಧೈರ್ಯವನ್ನು ಕಳೆದುಕೊಳ್ಳು: ಪಂಡವಮಾಮೆ ದಲ್ ನಿನಗೆ ನೀಂ ಧೃತಿಗುಂದದಿರು (ಕುಸುಮಾ. ೦೪-೧೧೮); ಪುರಹರನಿಟ್ಟ ಪುಲ್ಲ ಮುಱಿಯಂ ಮುರವೈರಿ ವಿರಿಂಚಿ ಮುಖ್ಯ ನಿರ್ಜರರದ ನೆತ್ತಲಾಱದೆ ವಲಂ ಧೃತಿಗುಂದಿದರ್ (ರಾಜಶೇ. ೦೩-೨೪).
[ಧೃತಿ + ಕುಂದು$_1$]

**ಧೃತಿಗೆಡಿಸು, ಧೃತಿಗಿಡಿಸು** (ಕ್ರಿ). ಅಧೈರ್ಯವನ್ನುಂಟುಮಾಡು; ಎದೆಗೆಡಿಸು: ಅತಿಕಾಂಕ್ಷೆಯೆಂಬಗಳತಿ ವಿಸ್ಮಯವಾಗಿ ಕ್ಷಿತಿಯನೊಡೆದು ನಾಗತಿಯ ಧೃತಿಗೆಡಿಸುತ ಬಳಸಿಹುದಾ ಪುರದೊಳು (ತ್ರಿಪುಸಾಂ ೪-೪೦); ದಿನದಿಂದ ದಿನಕ್ಕೆ ಆತನನ್ನು ಧೃತಿಗೆಡಿಸುತ್ತಿದ್ದವು ಅಂಥವೇ (ವಾತ್ಸಲ್ಯ. ೨೭೬). ಧೃತಿಗಿಡಿಸು: ಮೂದಲಿಸಿ ಧೃತಿಗಿಡಿಸಿ ಬೆಂಕೊಣ್ಣು ಮತ್ತಂ (ಎಕ. II, ೨೪೦-೨೭; ಸು. 1175). [ಧೃತಿ + ಕೆಡಿಸು$_1$]

**ಧೃತಿಗೆಡು, ಧೃತಿಗಿಡು** (ಕ್ರಿ). ಧೈರ್ಯವನ್ನು ಕಳೆದುಕೊಳ್ಳು; ಅಧೈರ್ಯಪಡು; ಎದೆಗುಂದು: ಮದನ ಮದೋದ್ರೇಕದಿನನ್ನಿದಿರೊಳ್ ಧೃತಿಗೆಟ್ಟು ಸಿಗ್ಗಿನಿಂ ತನ್ನೊಳ್ ಪೊಲ್ಲದನೆತ್ತಾಚರಿಸುಗುವೆಯೋ (ಕಾದಂಪೂ. ೮೨೩); ಮತಿಗೆಟ್ಟನು ಮನದ ವಿಕಾರದಿಂದ ಧೃತಿಗೆಟ್ಟನು ಕಾಯವಿಕಾರದಿಂದ (ಬಸವ. ४३); ವ್ರತಿಗಳ್ . . . ಮತಿಗೆಟ್ಟರ್ ಧೃತಿಗೆಟ್ಟರ್ (೧೦೪. ೮-೨೩); ಇನಿತು ಧೃತಿಗೆಡಲೇಕೆ (ಬಸಪು. ೨೫-೨೩); ಪಟುಭಟರು ಧೃತಿಗೆಟ್ಟು ದೆಸೆದೆಸೆಗಳಲಿ ಮಿಗೆ ಸೂಲಿಟ್ಟು ಸಂದರು (ಕುವ್ಯಾಕ. ೧೯-೯೮). ಧೃತಿಗಿಡು: ಧೃತಿಗಿ[ಪಾಠಾಂ. ಗೆ]ಡಬೇಡ ಧೈರ್ಯವನಾಂತು ಬಾರೆಂದು ರತಿರಾಜ ಮೂದಲಿಸಿದನು (ಮೋಹತ. ೦೨-೯೨). [ಧೃತಿ + ಕೆಡು$_1$]

**ಧೃತಿತ್ರಯ** (ನಾ). [ಯೋಗ] ಸಾತ್ತ್ವಿಕಿ, ರಾಜಸಿ ಮತ್ತು ತಾಮಸಿ ಎಂಬ ಮೂರು ಬಗೆಯ ಧೃತಿ,–ಯೋಗಾಂಗವಾದ ಧಾರಣ; ಈ ಯೋಗಾಭ್ಯಾಸದಿಂದ ಮನಸ್ಸು, ಪ್ರಾಣ, ಇಂದ್ರಿಯವ್ಯಾಪಾರಗಳನ್ನು ಹತೋಟಿಯಲ್ಲಿಟ್ಟುಕೊಂಡು ಬೇರೆ ಕಡೆಗೆ ತಿರುಗದಂತೆ ಮಾಡುವುದು ಸಾತ್ತ್ವಿಕೀಧೃತಿ; ಫಲಾಪೇಕ್ಷೆಯಿಂದ ಮನಸ್ಸು, ಪ್ರಾಣ, ಇಂದ್ರಿಯಗಳನ್ನು ಬಿಗಿಹಿಡಿದು ಮಾಡುವ ಧ್ಯಾನ ರಾಜಸೀ ಧೃತಿ; ನಿದ್ರೆ, ಭಯ, ಶೋಕ, ವಿಷಾದ, ಮದ ಇವೊಂದನ್ನೂ ಬಿಡದೆ ದುರ್ಬುದ್ಧಿಯಿಂದ ಕೂಡಿರುವುದು ತಾಮಸೀಧೃತಿ. ಹೀಗೆ ಭಗವದ್ಗೀತೆಯಲ್ಲಿ ಧೃತಿತ್ರಯದ ವಿವರಣೆ ಇದೆ: ತಾಪತ್ರಯ ಕರ್ಮತ್ರಯ . . . ಧೃತಿತ್ರಯ ಗುಣತ್ರಯ ಶಕ್ತಿತ್ರಯ ಕಾಲತ್ರಯ (ವೇದಾಂಪ. ೪-೧೮-೪). [ಧೃತಿ + ತ್ರಯ]

**ಧೃತಿಯುಕ್ತ** (ಗು). ೧. =ಧೃತಿಯುತ ೧. (ನಾ). ೨. =ಧೃತಿಯುತ ೨: ಧೃತಿಯುಕ್ತರ್ ಶೌರ್ಯಯುಕ್ತರ್ ಕುರುಕುಲಧರಣೀಶರ್ಕಳ್ (ಮಹಾನೀ. ೦೩-೯). [ಸಂ.]

**ಧೃತಿಯುತ** (ಗು). ೧. ಧೀರತೆಯನ್ನು ಹೊಂದಿದ; ಧೈರ್ಯವುಳ್ಳ: ಧೃತಿಯುತಕ್ಷತ್ರಿಯನು ವೇದಪ್ರತಿಯುತಶ್ರೋತ್ರಿಯನಹಂಸಾರತನು ಮಹಪುರುಷನು (ಕುವ್ಯಾಅ. ೨೩-೪೧). (ನಾ). ೨. ಧೀರ; ಧೈರ್ಯಶಾಲಿ: ಪತಿಯ ಮುಸುಕಿದನಾ ಸುಮಂತನು ಧೃತಿಯುತರ ನೆಱೆಗಾಹಲಿರಿಸಿದ ಸುತರ ಬಳಿಗಟ್ಟಿದನು ದೂತರ ಬೇಗ ಬಹುದೆನುತ (ಕೌಶಿರಾ. ೪-೭). [ಸಂ.]

**ಧೃತಿಯೋಗ** (ನಾ). = ಧೃತಿ ೧೪: ಧೃತಿಯೋಗಕೆ ರವಿ: ೪೨ ಗಳಿಗೆ ಮೇಲೆ ತ್ಯಾಜ್ಯ (ಭಾಸ್ಕರ. ೭೦-೮). [ಧೃತಿ + ಯೋಗ]

**ಧೃತಿವೆಱು** (ಕ್ರಿ). ಉತ್ಸಾಹದಿಂದ ಕೂಡಿರು; ಉಲ್ಲಾಸಗೊಳ್ಳು: ಸಂಭ್ರಮಂಪಡಂ: ಧೃತಿವೆತ್ತು ತವದಿಗ್ಗಯೋದ್ಯಮಭವದ್ಭೇರೀಪ್ರಣಾದಕ್ಕೆ ಕಂಪಿತಮಪ್ಪಾದಿಯ ಕೂರ್ಮನಂ ಫಣಿಪನಂ . . . ಭೂಮಿ ಬಿಸುಟ್ಟು ಬಂದು ಪಿರಿದುಂ ನಿಶ್ಚಿಂತದಿ ಸುಪ್ರತಿಷ್ಠಮಾಗಿರ್ಪುದು ಸುಪ್ರತಿಷ್ಠಿತ ಪಟಿಷ್ಠೋದ್ದಂಡದೋರ್ದಂಡದೊಳ್ (ಅರ್ಧನೇ. ೪-೩೪); ಧೃತಿವೆತ್ತಂ ನೃಪಕಂತುವೀ ತೆಱಿಂ (ಕುಸುಮಾ. ೧೦-೧೧೪). [ಧೃತಿ + ಪೆಱು$_1$]

**ಧೃತಿಹೀನ** (ನಾ). ಧೈರ್ಯವಿಲ್ಲದವನು : ಕ್ಷಿತಿಯೊಳು ಧನಾಢ್ಯರುಂ ಸಕಲ ವ್ಯವಹಾರಿಗಳು ಧೃತಿಹೀನತರೆಡನೆ ಕುಬೇರರೆಂದೆನಿಸುವರು. . .ವೈಶ್ಯರು (ನವಮೋ. ೩-೪೧). [ಧೃತಿ + ಹೀನ]

**ಧೃಷ್ಟ** (ಗು). ೧. ಧೈರ್ಯವುಳ್ಳ ; ಕೆಚ್ಚಿನ ; ಆತ್ಮವಿಶ್ವಾಸದ. ೨. ದಯೆಯಿಲ್ಲದ ; ಕ್ರೂರವಾದ ; ಒರಟಾದ. ೩. ನಾಚಿಕೆಯಿಲ್ಲದ ; ಲಜ್ಜೆಯಿಲ್ಲದ. ೪. ವಿಷಯಲಂಪಟನಾದ ; ದುರ್ಮಾರ್ಗಿಯಾದ. ೫. ಮುಂದೆ ನುಗ್ಗುವ ಸ್ವಭಾವದ ; ಧಾರ್ಷ್ಟ್ಯದ ; ದುಡುಕುತನದ. ೬. ದುರಭಿಮಾನದ; ಗರ್ವದಿಂದ ಕೂಡಿದ. (ನಾ). ೭. ಆತ್ಮವಿಶ್ವಾಸವುಳ್ಳವನು ; ಗಟ್ಟಿಗ ; ಧೈರ್ಯಶಾಲಿ : ಧೃಷ್ಟಂ ವರವಕ್ರೋಕ್ತಿ ವಿಶಿಷ್ಟಂ . . . ಎನಿಪ್ಪ ದೂತಮುಖ್ಯನಂ (ಪಾರ್ಶ್ವಪು. ೩-೫೦). ೮. ಧಾರ್ಷ್ಟ್ಯವುಳ್ಳವನು; ಉದ್ಧಟ; ದಂಡಂಕಿನವನು: "(ಧೃಷ್ಟ) ನಾತಂ ವಿಯಾತಂ" (ವಸ್ತುಕೋ. ೯೯-೬); "ವಿಯಾತಾ. ಧೃಷ್ಟಃ – ಈ ೨ ಬಗೆಯದವಂ" (ಹಲಾಯು. ೬೧-೩೦೩); "ಧೃಷ್ಟಃ, ಧೃಷಃ, ವಿಯಾತಃ– ೩ ದಿಟ್ಟತನವುಳ್ಳವನ ಪೆಸರು" (ಸಿದ್ಧಾಂತಿ. ೩೨೯) ; ಈ ಕಥೆ ಗುಣ್ಪುವೆತ್ತುದವರುಂ ಜ್ಞಾನರ್ಧಿಸಂಪನ್ನರುಂದಿರದಾಂ ಧೃಷ್ಟನನೀ ಕಥಾಬ್ಧಿಯುಮನೇನೀಸಲ್ಪನಂದಂದೆನೋ (ಆದಿಪು.೧-೩೫). ೯. [ಕಾವ್ಯಮಿಾ] ದಕ್ಷಿಣ, ಧೃಷ್ಟ, ಅನುಕೂಲ ಮತ್ತು ಶಠ ಎಂಬ ನಾಲ್ಕು ಬಗೆಯ ಶೃಂಗಾರನಾಯಕರಲ್ಲಿ ಒಂದು ವಿಧ: "ಧೃಷ್ಟನೆಂದರೆ, ತನ್ನ ಪತ್ನಿಯಲ್ಲಿ ಅಪರಾಧ ಮಾಡಿ ದೋಷಗಳು ಸ್ಪಷ್ಟವಾಗಿದ್ದು ತಾನು ಆಕ್ಷೇಪಣೆಗೆ ಗುರಿಯಾದರೂ ನಾಚಿಕೆ ಪಟ್ಟುಕೊಳ್ಳದವನು" (ಕೈಪಿಡಿ. ೩೦೦); ಅಗಳರಸನಾ ಧೃಷ್ಟನ ಖಾತ್ವಾಸಮಿಾಕರಣನ್ಯಾಯಮಾದ ಮುಳಿಸುಂ ತಿಳಿಪುವಿರ್ವರ್ಗ ಮುಬ್ಬೆಗಮಾ ಪಡೆದುದೆಂದಿಂತೆಂದಂ (ಚಂದ್ರಪ್ರ. ೮-೫೪ವ) ; ಶೃಂಗಾರನಾಯಕರಲ್ಲಿ ದಕ್ಷಿಣ, ಧೃಷ್ಟ, ಅನುಕೂಲ, ಶಠ ಎಂದು ನಾಲ್ಕು ವಿಧ (ಸಂನಾಟ. ೧೮). [ಸಂ.]

**ಧೃಷ್ಣು** (ಗು). ೧. ಕೆಚ್ಚಿನ; ದಿಟ್ಟತನವುಳ್ಳ; ಧೈರ್ಯವುಳ್ಳ. ೨. ನಾಚಿಕೆಯಿಲ್ಲದ; ನಿರ್ಲಜ್ಜೆಯ. ೩. ಬಲವುಳ್ಳ ; ಪ್ರಭಾವವುಳ್ಳ. (ನಾ). ೪. ದಿಟ್ಟತನವುಳ್ಳವನು; ಉದ್ಧಟ : "ಧೃಷ್ಟ, ಧೃಷ್ಣು, ವಿಯಾತ" (ನಾಚಿರಾ. ೬); "ಧೃಷ್ಟಃ, ಧೃಷ್ಣುಃ, ವಿಯಾತಃ–೩ ದಿಟ್ಟತನವುಳ್ಳವನ ಪೆಸರು" (ಸಿದ್ಧಾಂತಿ. ೩೨೯). [ಸಂ.]

**ಧೇನಿಕೆ, ಗೇಣಿಕೆ, ಗೇನಿಕೆ** (ನಾ). ಯೋಚನೆ; ಧ್ಯಾನಿಸುವಿಕೆ : ಎದೆ ಶೀವಿ, ಕಣ್ ತುಂಬಿ ನಲುಮೆ ಹರಿದಾಡಿತ್ತು ತಾಯ ಧೇನಿಕೆ, ಎಣಿಕೆ ಅದರಲ್ಲಿ ಮುಳುಗೆ (ಬಿಪಾಸ. ೩೬-೮). **ಗೇಣಿಕೆ:** "ಗೇಣಿಕೆ–ವಿಚಾರ; ಕಲ್ಪನೆ" (ಜಾನಕೋ. ೫೦). **ಗೇನಿಕೆ :** ಕೈಯೋಗೆ ಕಾಸಿದ್ದರೆ, ಕುಣಿದಾಡಿಸಿಬಿಡುವೆ. ಮತ್ತೆ ಮನಸ್ಸಿನೊಳಗೆ ಗೇನಿಕೆ ಹಾಕ ಹತ್ತಿದ (ಕೊತಕಾ. ೩೨). 'ಧೇನಿಸು' ಪರಾ. [<ಧ್ಯಾನ + – ಇಕೆ]

**ಧೇನಿಸು, ಗೇಣಿಸು, ಗೇನಿಸು, ಜಾನಿಸು** (ಕ್ರಿ). ೧. ಚಿಂತಿಸು ; ಧ್ಯಾನ ಮಾಡು : ಈಸು ಪುಣ್ಯವ ಮಾಡಿ ದಿನದಿನ ಧೇನಿಸೆ (ವೃಕಂವ. ೩-೪೪) ; ಮನೋಭಾವವ ಧೇನಿಸಿ ನೋಡುತ್ತ (ವಿದಾಶ್ವ. ೧-೪೪) ; ಅಹರ್ನಿಶೀ ಧೇನಿಸುವೆ ನಿನ್ನನ್ನು (ಜಗದಾ. ೧೬೮) ; ತವುಗೊಗ್ಗಿದುದನು ಧೇನಿಸಿ ಜರ್ಜಿಸಿ ನಭದಲಿ ನೆಗೆದು ಸೊಬಗನು ವರ್ಣಿಸಿ (ಚಿಂತನ. ೫೦-೩೩). ೨. ಯೋಚಿಸು; ವಿಚಾರಿಸು ; ಬಗೆ : ಧೇನಿಸಿದರೀ ಜಗದೊಳೆಲ್ಲಿಯು ಕಾಣೆ ನಿನಗನು ರೂಪ ಪುರುಷನ (ಪಾರ್ವಪ. ೩-೪೭) ; ಪದ್ಮಾವತಿಯು ಮನದಲ್ಲಿ ಧೇನಿಸಿದಳು (ಸಮಜೀ. ೯೭). ೩. ನೆನೆಸಿಕೊಳ್ಳು ; ಸ್ಮರಿಸು : ಆಗ ಕಂಡ ಅವಳನ್ನು ಅನಂತನು ಚೆನ್ನಾಗಿ ಧೇನಿಸಿಕೊಂಡ (ಕಾಗಳ. ೩೩). **ಗೇಣಿಸು :** ೨. ಅವಳನ್ನು ಮುಂದೆ ಕೂಡ್ರಿಸಿಕೊಂಡು ಬಲು 'ಖುಷಿ'ಯಿಂದ ಮಕ್ಕಳಾದ ಮೇಲೆ ಉತ್ತಮ ನಡತೆನವನ್ನು ಮಾಡೋಣವೆಂದು ಗೇಣಿಸುತ್ತಾನೆ (ಕನ್ನಕಾ. ೬೦). **ಗೇನಿಸು :** ೨. ಏನು ಮಾಡಲಿ . . . ಎಂದು ಮನಸ್ಸಿನೊಳಗೆಯೇ ಗೇನಿಸುತ್ತಿದ್ದಳು (ಕೊತಕಾ. ೪೩) ; ಬಿದ್ದುಕೊಂಡೇ ಗೇನಿಸತೊಡಗಿದಳು (ಮಾಲತಿ. ೧) ; ಗೇನಿಸಿ ಗೇನಿಸಿ ಜಂಪುಹತ್ತಲು ಒಂದು ಕನಸು ಸುಳಿಯಿತು (ಪವನ. ೩೬). **ಜಾನಿಸು:** ೧. "ಜಾನಿಸು–ಧ್ಯಾನೇ" (ಶಮುಧಾ) ; ದೇವರಂ ಜಾನಿಸುತ್ತಂ ಪಂಚನಮಸ್ಕಾರಮಂ ಮನದೊಳುಚ್ಚರಿಸುತ್ತಂ (ವಡ್ಡಾರಾ. ೧೧೦-೦೬) ; ಜಿನೇಂದ್ರನಂ ಬಗೆವ ಮನಂ ಗಡಂ ಮಾಸುಬ್ಬು ಜಾನಿವ ಕಣ್ಣ ಗಡಂ (ಆದಿಪು. ೩-೬೦) ; ಮುನ್ನಿನಂದದೊಳ್ ಮನುಗೊಂಡು ಜಾನಿಸುತಿರ್ದಂ (ಕಾದಂಲು. ೪೪೬). ೨. ಈ ನುಡಿಯನ್ನು ಕೇಳಿ ಭೀಷ್ಮಕಭಗಿನಿ ಜಾನಿಸಿ ನುಡಿದಳು ಜಾಣೆ (ಕಾಮುಕ. ೧-೩೭) ; ಎಂದಿಗವನ ಪಡಿವೊಗದೊಳು ಸಂದವನೆಂದೆಡೆವಿಡದೆ ಜಾನಿಸುವಳು (ಹದಿಬ. ೭-೩೯) ; ರಘುಪ್ರವರನುಂ ಮನಮಜುಗಿ ಇನಿಸುಂ ಪೊಳ್ತು ಜಾನಿಸಿ (ರಾಮಾಶ್ವ. ೩೦-೩೪). ೩. ಆನಂದವ ಮಾಡು ಮಾಡುತೊಪ್ಪುವೃತ್ತಮಾಂಗಿಯಂ ಜಾನಿಸಿದಂ ನೃಪಾಲಕಂ (ಉದ್ಭಟ. ೩-೧೧೧). ☞ ಇಲ್ಲಿ ಒಟ್ಟಿಗೆ ಪರಿಶೀಲಿಸಿರುವ 'ಧೇನಿಸು' ಎನ್ನುವ ಶಬ್ದದ ಪರ್ಯಾಯಂರೂಪಗಳ ವ್ಯುತ್ಪತ್ತಿಯ ಬಗ್ಗೆ ಅನುಮಾನವಿದೆ. 'ಧೇನಿಸು', 'ಜಾನಿಸು' ಎನ್ನುವ ರೂಪಗಳು 'ಧ್ಯಾನ' ದಿಂದಲೂ, 'ಗೇಣಿಸು', 'ಗೇನಿಸು' ಎನ್ನುವ ರೂಪಗಳು 'ಜ್ಞಾನ' ದಿಂದಲೂ ನಿಷ್ಪನ್ನವಾಗಿರಬೇಕು. ಇದು ಪರಿಶೀಲನಾರ್ಹ. [<ಧ್ಯಾನ + – ಇಸ್ಸು]

**ಧೇನು** (ನಾ). ೧. ಆಕಳು ; ಹಸು ; ಗೋವು : ಮೊಸರಂ ದುಗ್ಧಮನಾಜ್ಯಮಂ ಸೆಗಣಮಂ ಧಾನ್ಯಂಗಳಂ ಧೇನುವಂ . . . ಬಸೆಯಂ ತನ್ನಿದಿರಾಗಿ ಬರ್ಪವ(ನಿಂ)ಕಣ್ಬಂತುಟತ್ಯುತ್ತಮಂ (ಲೋಕೋಪ. ೧೩-೪೮); ಹರಿಶ್ಚಂದ್ರ ಭೂಭುಜಂ ತನ್ನ ಸಾರ್ದರ . . . ತನ್ನಂತ ಮಾಳ್ಪುನ್ನತಿಕೆಯುಂ ಕಂಡು . . . ಮರುಗುವಟ್ಟುದಮರರ ಧೇನು [ಕಾಮಧೇನು] (ಹರಿಶ್ಚಂ. ೧-೪೩) ; ಧೇನುಮಹಾತ್ಮ್ಯೆಯನಿತೊಂದು ದೊಡ್ಡಿತೇಂ (ರಾಮಾಶ್ವ. ೧೦೪-೮) ; ನಾನು ಅತಿಶಯವಾದ ಸ್ತುತಿಯ ಮೂಲಕ ಧೇನುವಿಗೆ ಆಹ್ವಾನ ಕೊಡುತ್ತೇನೆ (ಋಗ್ವೇ.ಕ. ೩೬೯). ೨. ಹೊಸದಾಗಿ ಕರುಹಾಕಿರುವ ಹಸು ; ಈದ ಆಕಳು ; ಎಳಗಂದಿ : "ಧೇನು ನವಸೂತಿ . . . ಸೈಚಿಕಯೆನಿಕುಂ" (ವಸ್ತುಕೋ. ೯೦-೭); "ಧೇನುಃ, ನವಪ್ರಸೂತಾ–ಈ ೨ ಎಳಗಂದಿ" (ಹಲಾಯು. ೪೫-೧೧೫) ; . ಎಳಗಂದಿ ಧೇನುವಕ್ಕು" (ಮಂಗರಾ. ೫೪-೪). ೩. ಬಯಸಿದುದನ್ನು ಕೊಡುವ ದೇವಲೋಕದ ಹಸು; ಕಾಮಧೇನು: "ಸುರಭಿ ಸುರಪಶು ಧೇನುವನೆ ಕಾಮಧೇನುವಿಗೆ ಪೆಸರಕ್ಕುಂ" (ಮಂಗರಾ. ೯-೩೦). ೪. ಹೆಣ್ಣಾನೆ ; ಪಿಡಿ : "ವಶಾ ಕರಿಣೀ ಧೇನು ಕರೇಣುಗಳ್ ಗಜವಧೂಪರ್ಯಾಯದೊಳ್ ವರ್ತಿಕುಂ" (ವಸ್ತುಕೋ. ೮೭-೩೦). ೫. ಬ್ರಾಹ್ಮಣರಿಗೆ ಕೊಡುವ ಹಸು ಅಥವಾ ಅದರ ಬದಲಾಗಿ ಇನ್ನು ಯಾವುದಾದರೂ ವಸ್ತುಗಳ ದಕ್ಷಿಣೆ,–ದಾನ. ೬. ಭೂಮಿ. ೭. ಖಡ್ಗ ; ಅಸಿಧೇನು : ಮುನಿಯಂತೆ ಕರಿಯಂತೆ ಶಶಿಯಂತೆ ಭಟನಂತೆ ವನಕುಸುಮದಂತೆಯಿಾಶಾನ್ಯವ್ಯಭವದಂತೆ ಘನತರವ್ರತವಶಾಲೋಹಿಣೀ ಧೇನು ಸಂಸುರಭಿ ವೃಷಯುಕ್ತಮಾಗಿ . . . ವೃಶಾಖಿಶಬ್ದದೊಳ್ ಪ್ರಜಮಸೆದುದು (ಚಿಬಪು. ೧೧-೦೪). [ಸಂ.]

**ಧೇನುಕ** (ನಾ). ೧. ಕತ್ತೆಯ ಆಕಾರದ ಒಬ್ಬ ರಾಕ್ಷಸ ; ಧೇನುಕಾಸುರ ; ಆ ಮಹಾ ತಾಳವನಮಂ ಧೇನುಕನೆಂ ರಾಸಭರಾಕ್ಷಸಂ ಕಾದಿರ್ಪಂ (ಜಗವಿ. ೪-೩೯ವ) ; ಸುರರು ಭಾವಿಸೆ ತಾಳವನವನು ಬೆರಸಿ ಮಾಜಿದರು ಬಾಲಕೇಳಿಯ ಪರಿಣತರು ಧೇನುಕನಸಚ್ಚುಕರಾಮರುರವಣಿಸಿ (ನಿಘಾಗ. ೧೧-೦೫ ಸೂಚನ). ೨. [ಕಾಮಶಾ] ಒಂದು ವಿಧವಾದ ರತಿಬಂಧ ; ಹಸುವಿನಂತೆ ಅಂಬೆಗಾಲಿನ ಬಂಧದಲ್ಲಿರುವ ಸ್ತ್ರೀಯನ್ನು ಪುರುಷನು ಗೂಳಿಯ ರೀತಿಯಲ್ಲಿ ಸಂಭೋಗಿಸುವುದು : ಸ್ತ್ರೀಯು ಪಶುವಿನ ಹಾಗೆ

ವ್ಳ್ಳಗಾಲು ಮೇಲೆಯೆರಡು ಕೈಗಳನಿಕ್ಕಿ ಮೆಲ್ಲನೆ ನಡೆಯಲ್ಕೆ ಗೂಳಿಯಂತೆ ಎತ್ತುಗಳ ರವಂಗೆಯ್ಯುತ್ತಾ ಪುರುಷ ರಮಿಸುತ್ತಾ ನಡೆಯುತ್ತಿರೆ ಧೇನುಕ ಮೆಂಬ ಕರಣಂ (ಕಾಮಶಾ. ೬-೦೯೪). [ಸಂ.]

**ಧೇನುಕಕರಣ** (ನಾ). = ಧೇನುಕ ೨ : ಬಾಗಿ ಪದಯುಗಕೆ ಕಾಮಿನಿ ಕೆಯ್ಗಳ ನಿಟ್ಟೊಯ್ಯನಡಿಯಿಡಲ್ ಪ್ರಿಯನದರ್ಿಂ ಬಾಗಿ ತಳವೂರು ಪೃಷ್ಠ ವಿಭಾಗದೆ ಮನ ವೋಲ್ದು ನೆರೆಯೆ ಧೇನುಕಕರಣಂ (ಮನ್ಮವಿ. ೦೪-೩೬). [ಸಂ.]

**ಧೇನುಕುಚ** (ನಾ). ಹಸುವಿನ ಕೆಚ್ಚಲು : ಸುಗಂಧಿಯೆಂಬ ವಿಷಯಮುಂಟ ದಜ್ಜೊಳ್ ಕರಪೀಡನಂ ಧೇನುಕುಚದೊಳ್ ಬಂಧನಂ ಕಜದೊಳ್ . . . ಅಲ್ಲದಿಲ್ಲಮೆಲ್ಲಿಯುಂ (ಚಂದ್ರಪ್ರ. ೩-೯೭). [ಧೇನು + ಕುಚ]

**ಧೇನುಕೆ** (ನಾ). ೧. ಹೊಸದಾಗಿ ಕರು ಹಾಕಿರುವ ಹಸು; ಈದ ಆಕಳು; ಎಳಗಂದಿ. ೨. ಹೆಣ್ಣಾನೆ; ಪಿಡಿ : "ಪಿಡಿಯಾನೆಯಲ್ಲಿಯುಂ ಧೇನುಕಾ, ಗಣಿಕಾ ಎಂಬುದು" (ಹಲಾಯು. ೦೩೩-೦೩). ೩. ಆನೆಯ ಹೆಣ್ಣು ಮರಿ; ಮರಿ ಹೆಣ್ಣಾನೆ : "ಎಳೆಯ ಪಿಡಿಯಾನೆಯಲ್ಲಿ ಅನುಗೊಳಿಸಿ ಧೇನುಕಾ ಗಣಿಕಾಯೆನಿಪುದು"(ಮಂಗರಾ.೦೩೯-೭). ೪. (ಯಾವುದಾದರೂ) ಹೆಣ್ಣುಪ್ರಾಣಿ. ೫. ಕಠಾರಿ; ಸುರಿಗೆ; ಚೂರಿ: "ಬಾಲಕರೇಣು ಶಸ್ತ್ರ ದನುಜಂ ಪಶುವಿಂತಿವು ಧೇನುಕಾಖ್ಯ" (ನಾನಾರ. ೯೯). [ಸಂ. ಧೇನುಕಾ]

**ಧೇನುವಿಗ್ರಹಣ** (ನಾ). ಹಸುಗಳನ್ನು ಸೆರೆಹಿಡಿದೊಯ್ಯುವುದು; ಗೋಗ್ರಹಣ : ಧೇನುವಿಗ್ರಹಣವನು ಮಾಡಿದನೆಂದು ಕುರುರಾಯ (ಕುಮ್ಯಾವಿ. ೪-೩೦). [ಸಂ.]

**ಧೇನುಷ್ಯೆ** (ನಾ). ೧. ಸಾಲ ತೀರುವವರೆಗೂ ಹಾಲು ಕರೆದುಕೊಳ್ಳಲು ಸಾಲ ಕೊಟ್ಟವನ ವಶದಲ್ಲಿರುವ ಹಸು : "ಧೇನುಷ್ಯಾ-ಬಂಧಕೇ-ಸೆರೆ ಯಲ್ಲಿ ಸಿಕ್ಕಿದ ಆಕಳಿಗೂ ಅಡವು ಹಾಕಲ್ಪಟ್ಟ ಆಕಳಿಗೂ ಹೆಸರು" (ಸಿದ್ಧಾಂತಿ. ೨೯೩). ೨. ಕ್ಷೀರಾಗಾರದಲ್ಲಿರುವ ಹಸು. [ಸಂ. ಧೇನುಷ್ಯಾ].

**ಧೇಯ** (ಗು).. ೧. ಇಡಬೇಕಾದ. ೨. ತೆಗೆದುಕೊಳ್ಳಬೇಕಾದ. ೩. ಉತ್ಪತ್ತಿಯಾಗುವ. (ನಾ). ೪. ಉತ್ಪತ್ತಿಯಾದುದು. [ಸಂ.]

**ಧೈಂಚ** (ನಾ). ಒಂದು ಬಗೆಯ ಸಸ್ಯ: ಮುಳ್ಳು ಜೀನಂಗಿ, ಧೈಂಚ (ವ್ಯಾಜಿ. ೩೯-೦೪೦೪). [?]

**ಧೈಂಡಿ** (ನಾ). (ಮೊಸರು) ಗಟ್ಟಿಯಾದುದು ; ಗಡ್ಡೆ ; ಗರಣೆ: ಒಳ್ಳೆಯ ಹಪ್ಪ ಹಾಕಿದ ಧೈಂಡಿ ಮೊಸರು (ರಂಗಳ. ೧೨೬); ಅವರೆಕಾಯಿ ಹುಳಿ, ಹುರುಳಿ ಹಪ್ಪಳ ಮತ್ತು ಧೈಂಡಿ ಮೊಸರು (ಮನೋಜಂ. ೨೦೦). [?]

**ಧೈನುಕ** (ನಾ). ಹಸುಗಳ ಸಮುದಾಯ ; ಆಕಳ ಹಿಂಡು. [ಸಂ.]

**ಧೈರಿಯ** (ನಾ). ದಿಟ್ಟತನ ; "ಧೈರ್ಯ" (ಪ್ರಭಾ). [<ಸಂ. ಧೈರ್ಯ]

**ಧೈರ್ಯ** (ನಾ). ೧. ದಿಟ್ಟತನ ; ಕೆಚ್ಚು ; ಎದೆಗಾರಿಕೆ : "ಧೈರ್ಯದೊಳು ಹೊನ್ನಿನೊಳು ಕ್ರೂರದೊಳು ... ಪರುಷವಕ್ಕು" (ಮಂಗರಾ. ೧೩೦-೫೦); ಎಲ್ಲಿತ್ತೊ ಧೈರ್ಯಮುಪಶಮಮಲ್ಲಿತ್ತೊ ಜಿತೇಂದ್ರಿಯತ್ವಗುಣಮಲ್ಲಿತ್ತೋ ಎಲ್ಲಿತ್ತೊ ನಿನ್ನ ಶೌರ್ಯಮದಲ್ಲಿತ್ತುಪಭೋಗರಾಗವಿಷಯದ್ವೇಷಂ (ಕಾದಂಪೂ.೭೭೩); ಮಜಿಸ್ಥುಗೆ ಕಾವಂ ಯುದ್ಧದುರಂಧರಂ ಧೈರ್ಯ್ಯಧರಾಧರೊ (ಸೌಇಇ. XI-1, ೯೨-೮; 1054). ಧೈರ್ಯಂ ಘೋರತಪಂ ಪರೀಷಹ ಸಮೂಹಪ್ರಾಪ್ತಿಯೊಳ್ ಸಂದ ತಾತ್ಪರ್ಯಂ (ಚಂದ್ರಪ್ರ. ೧-೩೩); ಧೈರ್ಯಂ ಸರ್ವಪರೀಷಹಾನ್ವಯ ಜಯಂ (ಜೀವಸಂ. ೨-೩); ತಳರು ಬಾಡದೆ ಧೈರ್ಯಸುರಾಜದ (ಕುಮ್ಯಾಸ. ೦೪-೮೬); ಬಳಿಕ ಧೈರ್ಯಂ ಸರ್ವತ್ರಸಾಧನ ವೆಂಬ ವಿಳಸಿತ ವಾಕ್ಯಾರ್ಥವನು ತಿಳಿದವನೀಶ್ವರನಲೆವ ವಿಷಾದವ ತೊಳೆದು ವಿವೇಕಜಲದೊಳು (ಕುರಾಸಾಂ. ೪೨-೩೩); ನಡೆತಂದನಾ ವೀರಭದ್ರಂ ಧೈರ್ಯರಸಸಮುದ್ರಂ (ವೀಶೈಪು. ೩-೩-೪೨); ತೃಷ್ಣೆಯೆ ದೇವಿಯೆ ನಿನಗಿದೊ ನಮನವು ಧೈರ್ಯವಿಪ್ಲವಕಾರಿಯೆಂದೆ ಮೂರು ಲೋಕದ ನಾಥನಾದರು ವಿಷ್ಣುವು ವಾಮನನಾದ ನಿನ್ನಿಂದೆ (ಇಂಜಾಪ. ೦೬೨-೯೨). ೨. ಅಚಲವಾಗಿರುವುದು ; ಗಾಂಭೀರ್ಯ ; ನಿಶ್ಚಲತೆ ; ದೃಢತೆ : "ಪಾಷಾಣಮುಂ ಪರ್ವತಂ ಧೈರ್ಯಂ ಗ್ರಾವಸಮಾಹ ಯಂ"(ನಾನಾರ.೧೦೭). ೩. ಸಹನೆ ; ಶಾಂತತೆ ; ತಾಳ್ಮೆ. [ಸಂ.]

**ಧೈರ್ಯಂಗಿಡು** 'ಧೈರ್ಯಂಗೆಡು' ನೋ.

**ಧೈರ್ಯಂಗೆಡು, ಧೈರ್ಯಂಗಿಡು, ಧೈರ್ಯಗೆಡು** (ಕ್ರಿ). ಎದೆಗುಂದು ; ಅಧೈರ್ಯಪಡು ; ಧೈರ್ಯವನ್ನು ಕಳೆದುಕೊಳ್ಳು ; ಧೈರ್ಯಂಗೆಟ್ಟತ್ತು [ಪಾಠಾಂ. ಕೆಟ್ಟತ್ತು] ಸರ್ವಾಕ್ಷವಮಮೆನಿಪುದರಿಂಳ್ಳೆರ್ತಿಸುತಿರ್ಪೆನಿಂತೀ ತಿರ್ಯಗ್ಜಾತಿತ್ವದೊಳ್ (ಕಾದಂಬ. ೭೦೩); ಎದುರು ಬಂದಡಸಿರಲು ಧೈರ್ಯಂಗೆಡು ವರೇ (ಕೌಶಿರಾ. ೯-೨೭). **ಧೈರ್ಯಂಗಿಡು** : ಮಜುಗಿಸೆ ಪರೀಷಹಂಗಳ್ ನೆಜೆ ಧೈರ್ಯಂಗಿಡುವವನ್ಯಜಾತಿಗಳ್ (ಸವಶಿ. ೬-೨೦) ; ನಿಷ್ಕಂಪಿತಶರೀರ ನಾಗಿ ಧೈರ್ಯಂಗಿಡದಿರಲ್ವೇಟ್ಕುಂ (ವರ್ಧಪು. ೧೨-೧೧೭). **ಧೈರ್ಯಗೆಡು** : ಇವನ ಕಡುನಿಬ್ಬರದ ಧಾಳಿಗೆ ಧೈರ್ಯ [ಪಾಠಾಂ. ಧಾತು]ಗೆಟ್ಟುದು ಕೂಡೆ ಪುರುಷೇನೆ (ಕುಮ್ಯಾದ್ರೋ. ೧೬-೦೨). [ಧೈರ್ಯ + ಕೆಡು$_1$]

**ಧೈರ್ಯಕ್ಷತಿ** (ನಾ). ಕೆಚ್ಚಿನ ನಾಶ,-ನಷ್ಟ ; ಎದೆಗೇಡು ; ಅಧೈರ್ಯ : ದುರ್ಯೋಧನನ ಮನದ ಧೈರ್ಯಕ್ಷತಿಗೆ ಮನಃಕ್ಷತನಾಗಿ ಸಿಗ್ಗಾಗಿ ತಲೆಯಂ ಬಾಗಿ ಧರ್ಮನಂದನನಿರೆ (ಗದಾಯು. ೬-೩೯೭). [ಧೈರ್ಯ + ಕ್ಷತಿ]

**ಧೈರ್ಯಗುಂದು** (ಕ್ರಿ). ಧೈರ್ಯಕುಗ್ಗು : ಅಸಮಸಾಹಸಿ ಧೈರ್ಯ ಗುಂದದೆ ದೆಸೆಯ ನೋಡದೆ ಕಾದುತಿರೆ (ಕೌಶಿರಾ. ೨೬-೩೨). [ಧೈರ್ಯ + ಕುಂದು$_1$]

**ಧೈರ್ಯಗುಣ** (ನಾ). ಸ್ಥಿರತ್ವ ; ನಿಶ್ಚಲತೆ : ಕ್ಷಿತಿಪತಿಯ ಧೈರ್ಯಗುಣ ಪರ್ವತಮಂ ಕಜಿಗೆರೆಗಳೊಟ್ಟಲಂ ತೂಳ್ದುವವೋಲ್ ಅತಿವೇಗದ ವಾಜಿಸಿದುದು ಸುತವಿರಹವ್ರಳಯಪರುಷಪವನಾಪಾತಂ (ಚಂದ್ರಪ್ರ. ೩-೯). [ಧೈರ್ಯ + ಗುಣ]

**ಧೈರ್ಯಗೆಡಿಸು** (ಕ್ರಿ). ಭಯಂಪಡಿಸು ; ಎದೆಗೆಡಿಸು : ಜಬ್ಬುರದ ಡಿಂಡಿಮ ಡಮರು ಪಟಹದ ಧಡಧುರದ ದನಿ ಧೈರ್ಯಗೆಡಿಸಿತು ಸಕಲಸಾಗರವ (ಕುಮ್ಯಾಶ. ೦೦-೮). [ಧೈರ್ಯ + ಕೆಡಿಸು$_1$]

**ಧೈರ್ಯಗೆಡು** 'ಧೈರ್ಯಂಗೆಡು' ನೋ.

**ಧೈರ್ಯಗೊಳಿಸು** (ಕ್ರಿ). ಧೈರ್ಯವನ್ನು ತುಂಬು. [ಧೈರ್ಯಗೊಳ್ಳು + - ಇಸು$_3$]

**ಧೈರ್ಯಗೊಳ್ಳು** (ಕ್ರಿ). ಕೆಚ್ಚನ್ನು ಪಡೆದುಕೊಳ್ಳು, - ಹೊಂದು ; ಧೈರ್ಯಶಾಲಿಯಾಗು. [ಧೈರ್ಯ + ಕೊಳ್ಳು$_1$ (< ಕೊಳ್$_1$)]

**ಧೈರ್ಯದರಿದ್ರ** (ನಾ). ಕೆಚ್ಚನ್ನು ಕಳೆದುಕೊಂಡವನು ; ಎದೆಗುಂದಿದ ವನು ; ಎದೆಗೇಡಿ : ಘನವಿಕರ್ಮದ ವಿಲಗದಲಿ ನಿಜತನುಜಶೋಕದ ತಗಹಿನೊಳಗರ್ಜುನನು ಧೈರ್ಯದರಿದ್ರನಾದನು (ಕುಮ್ಯಾದ್ರೋ. ೮-೩೩). [ಧೈರ್ಯ + ದರಿದ್ರ]

**ಧೈರ್ಯನಿಧಿ** (ನಾ). ಕೆಚ್ಚಿನ ಆಗರ,-ಆಶ್ರಯಸ್ಥಾನ ; ಬಹಳ ಧೈರ್ಯ ಶಾಲಿ ; ಅಚಲವಾಗಿರುವವನು: ಧೈರ್ಯನಿಧಿ ಕೊಂಡಕುಂದಾಚಾರ್ಯರ ಚರಣಂಗಳೊಲದು ನೆಲಮುಟ್ಟದ ತಾತ್ಪರ್ಯದಿಂದಳಿದೆಂ (ಅರ್ಹನೇ. ೧-೦೪) ; ಅಡಿಗೆಜಗಿ ನಡೆದನಾ ಧೈರ್ಯನಿಧಿ ಭೂಪಾಲನು (ಹರಿಶ್ಚ. ೮-೬೦). [ಧೈರ್ಯ + ನಿಧಿ]

**ಧೈರ್ಯಪರ** (ಗು). ೧. ಧೀರತ್ವವನ್ನು ಹೊಂದಿದ ; ಧೀರನಾದ : ಧೈರ್ಯಪರ ಗೃದ್ಧಪಿಂಛಾಚಾರ್ಯ ಪಟ್ಟಾಸಿಂಹನಂದಿ ಜಗಲ್ಪ್ರಖ್ಯಾತಾಚಾರ್ಯ ಪ್ರಭಾವಮತ್ಕಾಶ್ಚರ್ಯಮದಂ ಪೊಗೞ್ದಡಬ್ಜಜಂಗವಸಾಧ್ಯಂ (ಮಹಾನೇ. ೧-೦೪). (ನಾ). ೨. ಧೀರ ; ಅಚಲನಾಗಿರುವವನು : ಧೈರ್ಯಪರರ್ಸ್ವಪರತಪಸ್ಕಾರ್ಯರ್ ತತ್ತ್ವಾರ್ಥಕರ್ತೃಗಳ್ ಜಿನಮತತಾತ್ಪರ್ಯರ್ (ಸುಕುಮಾ. ೧-೦೩). [ಸಂ.]

**ಧೈರ್ಯಯುತ** (ನಾ). = ಧೈರ್ಯಪರ : ಧೈರ್ಯಯುತರ್ಧರಸೇನಾಚಾರ್ಯರ್ . . . ದಯುಗೆಯ್ಗೆ ವಿಮಳರತ್ನತ್ರಯುವಂ (ಧರ್ಮಾಮೃ. ೦-೦೩). [ ಸಂ. ]

**ಧೈರ್ಯವಂತ** (ನಾ). = ಧೈರ್ಯಶಾಲಿ : ಸುಕುಮಾರಸ್ವಾಮಿಯನಹೊ ಸೂರಾ ಅಹೊ ಮಹಾಪುರುಷ ಅಹೊ ಧೈರ್ಯವಂತ ಅಹೊ ಸಂಸಾರಭೀರು ... ಎಂದು ದೇವತೆಗಳ್ ಪೊಗಟ್ದ ಕಳಕಳಧ್ವನಿಯುಮಂ ದೇವದುಂದುಭಿಯ ರವಮುಮಂ ಯಶೋಭದ್ರೆ ನೋಡಿ (ವಡ್ಡಾರಾ. ೨೯-೨೧).

[ ಸಂ. ಧೈರ್ಯವತ್ ]

**ಧೈರ್ಯಶಾಲಿ** (ನಾ). ದಿಟ್ಟತನವುಳ್ಳವನು ; ಕೆಚ್ಚು ತುಂಬಿದವನು : ಅವನು ತುಂಬ ಧೈರ್ಯಶಾಲಿ (ರೂಢಿ). [ ಸಂ. ಧೈರ್ಯಶಾಲಿನ್ ]

**ಧೈರ್ಯಸ್ಖಲನ** (ನಾ). ಎದೆಗೆಡುವಿಕೆ ; ಹೆದರುವಿಕೆ : ಜಲವೃಷ್ಟಿಮಾಟ್ದು ಧೈರ್ಯಸ್ಖಲನಾರ್ಥಂ ಬೆಟ್ಟುಗಳ್ ಸಿಡಿಲ್ವೊಡೆದು ಪರ್ವತಗಳಳಿಗಿದೊಡೆ ಯೋಗೋತ್ಕಲಿತಮನರ್ ಬಯಲೋಪರ್ವತಭಾಗದೊಳ್ (ಶಾಂತೀಶ್ವ. ೩-೧೦೩). [ ಧೈರ್ಯ + ಸ್ಖಲನ ]

**ಧೈರ್ಯಸ್ಥ** (ನಾ). ಭಯಪಡದವನು ; ಧೈರ್ಯವನ್ನು ಕಳೆದುಕೊಳ್ಳದವನು ; ಧೈರ್ಯಶಾಲಿ : ಅವನು ಬಹಳ ಧೈರ್ಯಸ್ಥನಾದ ಮನುಷ್ಯ (ರೂಢಿ). [ ಸಂ. ]

**ಧೈರ್ಯಾವಲಂಬೆ** (ನಾ). ದಿಟ್ಟತನವನ್ನು ಅವಲಂಬಿಸಿರುವವಳು : ಧೀರೆ : ಧೈರ್ಯಾವಲಂಬೆಯೆನಿಸಿದ ಭಾರ್ಯೆಯ ಧೀರಾಭಿಧಾನಮಂ ತಾಳ್ದಿಗುಂ (ಶೃಂಗಾರ. ೩-೩೭).

[ ಸಂ. ಧೈರ್ಯಾವಲಂಬಾ ( ಧೈರ್ಯ + ಅವಲಂಬ + – ) ]

**ಧೈವತ** (ನಾ). [ಸಂಗೀತ] ಸಪ್ತಸ್ವರಗಳಲ್ಲಿ ಆರನೆಯದು : ಷಡ್ಜ ವೃಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಗಳೆಂಬ ಸಪ್ತಸ್ವರಮುಮಂ (ಅಜಿಪು. ೫-೩೦ಪ) ; ಶೃಂಗಾರಾದ್ರ್ಯಂ ಕಕುಭಜನಿತಂ ಧೈವತಂ ಸಂಗ್ರಹನ್ಯಾಸಾಂಗಂ . . . ಮಧ್ಯಮಂ ಮಂದ್ರಮೆಂಬೀ ಪಾಂಗಿಂ ವೇಳಾವಳಿಯನೊಲವಿಂ ಪ್ರೌಢೆ ಪಾಡುತ್ತುಮಿರ್ದಳ್ (ಲೀಲಾವ. ೨-೩೦) ; ಮಧ್ಯಮ ಧೈವತ ಷಡ್ಜ ಪಂಚಮ ನಿಷಾದ ರುಷಭ ಗಾಂಧಾರಂಗಳೆಂಬ ಸಪ್ತಸ್ವರ ಸಂಯೋಗಸಂಜಾತ ದೇಶೀಯರಾಗಂಗಳಂ . . . ವಲಿ ಹವಣಿ ರಾಯಂಗಳಿಂದಾಳಾಪನಂಗೆಯ್ದು (ಶಾಂತಿಪು. ೯-೧ ಪ) ; ಷಡ್ಜಮಾ ಋಷಭಮಾ . . . ಧೈವತಂ ಸುನಿಷಾದಮೋರಂತೆ ಸಪ್ತಸ್ವರಂಗಳಕ್ಕು (ಪಾಂಗಲಾ. ೨೩-೩) ; ಕ್ರಮವಾಗಿ ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾದ ಎಂದು ಸಪ್ತಸ್ವರಗಳ ಹೆಸರುಗಳು (ಸಂಗೀತಂ. ೦೫).

[ ಸಂ. ]

**ಧೊಕ್** (ನಾ). ಒಂದು ಅನುಕರಣ ಶಬ್ದ.

**ಧೊಕ್ಕನೆ** = ಧೊಕ್ ಎಂಬ ಶಬ್ದದೊಡನೆ : ಪೇರುರಮಂ ಧೊಕ್ಕನೆ ಕುತ್ತಿ ಚಕ್ಕನೆ ಭುಜದ್ವಂದ್ವಂಗಳಿಂದೆತ್ತಿ (ಎಕ. VI, ತರೀಕ. ೯೫-೩೩; 1196).

**ಧೊಕ್ಕನೆ** (ಅ). ಕೂಡಲೇ ; ತಕ್ಷಣ ; ಬೇಗನೆ : ಇಕ್ಕಲ್ ಧೂಪಮಾನದು ತಾಂ ಧೊಕ್ಕನೆ ಫಣಿವೃಶ್ಚಿಕಾಖುವಿಷಮಂ ಕಳೆಗುಂ (ಖಮದ. ೧೭-೯೮) ; ಧೊಕ್ಕನೆ ಪೊಱಮಟ್ಟು ಶ್ರೀಕೃಷ್ಣ ಸಲೆ ಪೌಜಕ್ಕೆ ಪೇಳಿಸಿದ ಭೂಭುಜರ (ಮೋಹತ. ೩೭-೩). 'ದೊಕ್ಕನೆ' ಪರಾ. [ ಧೊಕ್ + – ಅನೆ₁ ]

**ಧೊಣೆ** 'ದೊಣೆ₁' ನೋ.

**ಧೊಪ್** (ನಾ). ಒಂದು ಅನುಕರಣ ಶಬ್ದ.

**ಧೊಪ್ಪನೆ** = ಧೊಪ್ ಎಂಬ ಶಬ್ದದೊಡನೆ : ಧೊಕ್ಕನೆ. ಧೊಪ್ಪನೆ. [ಪಾಠಾಂ. ಧೋಪನೆ] ಭೋಂಕನೆ (ಭಾಷಾಭೂ. ೧೧ ವೃತ್ತಿ) ; ಅನುಕರಣಕ್ಕೆ ಖಣಿಲ್ಲನೆ . . . ಧೊಪ್ಪನೆ[ಪಾಠಾಂ ಧೊಪ್ಪನೆ, ದೊಪ್ಪನೆ] ಪೊಟ್ಟನೆ (ಶಮದ. ೧೪ ಪ್ರಯೋ).

**ಧೊಪ್ಪನೆ** (ಅ). ಧೊಪ್ ಎಂದು ಶಬ್ದವಾಗುವಂತೆ ; ಒಮ್ಮೆಲೆ : ತಿರುನೀಲಕಂಠರುಬ್ಬರಿಸುತ್ತ ಪರಿತಂದು ಚರಣತಳದಲ್ಲಿ ಧೊಪ್ಪನೆ ಕೆಡೆದು (ತಿರುಲ. ದೀ. ೨೫-೨೦) ; ಸುಭದ್ರೆ ನಡೆತಂದು ನೆಲಕೆ ಧೊಪ್ಪನೆ ಕೆಡೆದು ಸಭೆಯಲಿ ಹಲುಬಿದಳು (ಕುಮಾರವ್ಯಾ. ೭-೦೩) ; ಧೊಪ್ಪನೆ ಕೆಡೆದು ಹೊರಳಿದನು (ಕೌಶಿಕಾ. ೨೨-೫೭) ; ಹಾ ರಣಧೀರ ಹಾಹಾಯೆಂದು ಧೊಪ್ಪನೆ ಕೆಡೆದಳಾ ತಾರೆ (ತೊರರಾ. ೪-೫-೨).

**ಧೊಪ್ಪಧೊಪ್ಪನೆ** (ದ್ವಿರುಕ್ತಿ): ಧೊಪ್ಪಧೊಪ್ಪನೆ ಕಲ್ಗಳಿಂದಿಡುತೋಡು ವಾಡುಗಳಂ ಕರಂ ತಪ್ಪುವಂತಿರೆ ಮೆಲ್ಲಮೆಲ್ಲನೆ ಬಂದು (ವೃಷಪು. ೦೧-೬೪).

[ ಧೊಪ್ + – ಅನೆ₁ ]

**ಧೊಪ್ಪಳಿಸು** (ಕ್ರಿ). ಧೊಪ್ ಎಂದು ಉರುಳು, -ಕುಸಿ : ಎರಡನೆಯ ಕ್ಷಣಕ್ಕೆ 'ಅಯ್ಯೋ' ಎಂದು ಕಿರುಚಿ ನೆಲಕ್ಕೆ ಧೊಪ್ಪಳಿಸಿದಳು (ಕುಡಿಕೂ. ೨೫) ; ಕಣಿಯ ಎದುರಿಗೆ ನಿಲ್ಲಿಸಿದ ಹೊಡೆಮಂಚದ ಮೇಲೆ ಅದು ಧೊಪ್ಪಳಿಸಿ ಎರಗಿತು (ಕುಡಿಕೆಂ. ೩೦೩). [ < ಧೊಪ್ + – ಇಸು₃ ]

**ಧೊರಯ್ಯ** (ನಾ). (?) : ಕನ್ನಡಕಮಾಳನ ಧಟಕೆ ಧೊರಯ್ಯಂ ವೈರಿ ಕಾಳಾನಳಂ ಚಣ್ಣಮಾತ್ತಣ್ಣಂ (ಎಕ. VIII, ಸೊರಬ. ೮೮-೨ ; 912) ; ಗುಣಕೆ ಧೊರಯ್ಯ ಸುಭಟಚೂಡಾಮಣಿ ಸತ್ಯರತ್ನಾಗರಂ ತೇಜಾಗರಂ ಶ್ರೀಮತ್ಸಾನ್ತಿವರ್ಮ (ಎಕ. VIII, ಸೊರಬ. ೪೭೭-೦೦; 991). [ ? ]

**ಧೊರೆ** 'ದೊರೆ₃' ನೋ.

**ಧೊರೆಪೂಜೆ** (ನಾ). ವೈಭವದಿಂದ ಮಾಡುವ ಪೂಜೆ,-ಆರಾಧನೆ : ಸುರಹರಿ ನಮ ದೇವರ ಕಾಲಿ ಧೊರೆಪೂಜೆ ಮಾಡುವೆನ (ಪುಲ್ಲಿಗ. ೩).

[ ಧೊರೆ ( < ದೊರೆ₃ ) + ಪೂಜೆ₂ ]

**ಧೋ** (ನಾ). ಒಂದು ಅನುಕರಣ ಶಬ್ದ. 'ಧೋಯೆನ್' ಪರಾ.

**ಧೋಧೋ** (ದ್ವಿರುಕ್ತಿ) : ರಾತ್ರಿಯಲ್ಲಿ ಧೋಧೋ ಮಳೆ ಬಿದ್ದಿತು (ಬುದ್ಧಜಾ. ೧೨) ; **ಧೋಧೋಕಾರ** = ಮಳೆಯ ಹೊಡೆತದ ಶಬ್ದ : ಏಕಪ್ರಕಾರವಾಗಿ ಸುರಿಯುವ ಮಳೆಯ ಧೋಧೋಕಾರ (ವಾತ್ಸಲ್ಯ. ೨).

**ಧೋಂಕಾರ** (ನಾ). ಒಂದು ಅನುಕರಣ ಶಬ್ದ : ನಮ್ಮ ತನು ಮನ ಆತ್ಮಗಳಲ್ಲಿ ಆ ಧೋಂಕಾರದ ಶಂಖನಾದ ದುಮುದುಮಿಸತೊಡಗಿತು (ಮಾಕ್ತ. ೫೩).

**ಧೋಕಾ, ಡೋಕಾ, ಧೋಖಾ** (ನಾ). ೧. ಅನರ್ಥ; ಅಪಾಯ : ಧೋಂಡೂ ಬಾಯಿಗೆ ತುಳಸಿಯನ್ನು ಕಸಬಿನ ಕಣದಲ್ಲಿ ನಿರಂತರ ಬಿಡುವುದು ಧೋಕಾದ್ದೆಂದು ಅನಿಸತೊಡಗಿತ್ತು (ದೀಪಹ. II, ೪೦೭). **ಡೋಕಾ** : (ಈ). **ಧೋಖಾ** : ೨. ಮೋಸ ; ವಂಚನೆ ; ಅದರಲ್ಲೇನು ಧೋಕಾ ಇಲ್ಲ (ಒಡಮು. ೩). [ ← ಹಿಂ. ಧೋಕಾ, ಧೋಖಾ ; ಮರಾ. ಧೋಕಾ ]

**ಧೋತರ** 'ಧೋತ್ರ' ನೋ.

**ಧೋತಿ** 'ಧೋವತಿ' ನೋ.

**ಧೋತ್ರ, ದೋತರ, ದೋತ್ರ, ಧೋತರ** (ನಾ). ೧. ಉಡುವ ಬಟ್ಟೆ,-ವಸ್ತ್ರ : ಕೂಡೆ ಕುಳ್ಳಿರ್ದಖಿಳ ವಿಪ್ರರ ನೋಡಿ ಮೆಲ್ಲನೆ ಧೋತ್ರ ದರ್ಭೆಯ ಗೂಡ ಸಂವರಿಸುತ್ತ ಸಭೆಯಿಂದೆದ್ದನಾ ಪಾರ್ಥ (ಕುಮಾರವ್ಯಾಆ. ೧೫-೯) ; ನೆಲ ಕೆಳಲ್ಕೆ ಬಹಿರ್ವಾಸ ಪಲ್ಲ ಧೋತ್ರಂಗಳ (ವೀರವಿ. ೪-೧೧) ; ಕಟ್ಟದಿರಿನೊಳ್ ತೋರ್ಪ ಮಟ್ಟಿಯ ಮರಳ್ ವಿಪ್ರರುಟ್ಟ ಧೋತ್ರಂಗಳಂ ಸೆಳೆದು ಭಂಗಿಸಿ (ಕಬಪು. ೬೨-೪೫) ; ಧೋತ್ರಗಳನ್ನು ಉಡುಗೊರೆಯಾಗಿ ಕಳುಹಿದ್ದಳು (ದೇವೀಚಾ. ೫). ೨. ಭುಜದ ಮೇಲೆ ಹಾಕಿಕೊಳ್ಳುವ ವಸ್ತ್ರ ; ವಲ್ಲಿ ; ಉತ್ತರೀಯ : "ವಿಪರ್ಯಸ್ತಕಂ ಧೋತ್ರಮಕ್ಕು" (ಶೃಂಗಾರಾ. ೭೬-೯) ; ತೆಗೆ ಶಿಲವನೌಪಾಸನದ ಕೊಳವಿಗಳ ಧೋತ್ರವ ಪುಸ್ತಕವ (ತೊರರಾ. ೫-೮-೭೦) ; ಜರಿಯ ಧೋತ್ರವನ್ನು ಹೊದ್ದುಕೊಂಡು ಸ್ವಯಂ ವೆಂಕಪ್ಪನಾಯಕರು ದಯಮಾಡಿಸಿ (ಶ್ರೀರಾಯ. ೧೪೭). **ದೋತರ** : ೧. ದೋತರ ಉಟ್ಟುಕೊಂಡು ಬೀದಿಯೊಳಗೆ ನೀರು ಹೊತ್ತುಕೊಂಡು ಹೋಗುವ

ಯಾವುದೊ ಅನಾಥ ಬಡ ವಿಧವಾ ಕಾಣಿಸ್ತಾಳೆ (ಸಂಧ್ಯಾಕಾ. ೯೩); 'ಈತನ ಕವನವನ್ನೂ ತೀರದಿರೆ ವಿಘ್ನಕೆ ನಿಮ್ಮುಯ ವಾಣಿಯ ತಂದಿರೆ' ಎನ್ನುವ ನಾಮುನಿ ದೋತರವೇಳೆದು (ಗಜೇಶ. ೧೧-೨೨೭); ಒಂದು ಚಕ್ಕಡಿಯು ಬರುತ್ತಿತ್ತು . . . ಹಿಂದಕ್ಕೂ ಮುಂದಕ್ಕೂ ದೋತರ ಬಿಗಿದುದರಿಂದ ಅದರಲ್ಲಿ ಯಾರಿರುವರೆಂಬುದು ತಿಳಿಯುತ್ತಿರಲಿಲ್ಲ (ರಕ್ತರ್ಕ್ರ. ೧೨). ೨. ಧಡಿಯ ದೋತರವನ್ನು ಹೆಗಲ ಮೇಲೆ ಸರಿಯಾಗಿ ಒಗೆದುಕೊಂಡು ಒಂದು ಮೂಲೆಗೆ ಹೋಗಿ ಬಾಯೊಳಗಿನ ತಾಂಬೂಲವನ್ನು ಉಗುಳಿ ಬರುತ್ತ ನುಡಿದ (ಅಕೋಕ. ೪).

**ದೋತ್ರ:** ೧. ಎಸೆವ ದೋತ್ರದಿನುಜ್ಜ್ವಲಿವ ಕಟಿದೇಶಂ (ಪದ್ಮರಾ. ೩-೧೬); ನುತ ಪಲ್ಲವವು ದೋತ್ರಮುಂ ಬಹಿರ್ವಾಸಮುಂ ತತಕಿಕಸ್ವರವು ವೇದಸ್ವರಂ . . . ಎನೆಯೊಂದಶೋಕವೃಕ್ಷಂ ಮೆಱೆದುದು (ಪದ್ಮರಾ. ೫-೨೮); ದೋತ್ರ ದೊಡ್ಡದಾದರೆ ಗೋತ್ರ ದೊಡ್ಡದೇ (ಗಾದೆ). **ಧೋತರ:** ೧. ಹಳೆಯ ಮಾದರಿಯ ಅಂಗಿ, ಅಂಥದೇ ಕೋಟು, ಒಂದು ಧೋತರ (ರಕ್ತಗೋ. ೩); ಪಾದಗಳನ್ನೂ ಮುಚ್ಚುವಂತೆ ಉಟ್ಟ ಶುಭ್ರವರ್ಣದ ಧೋತರ (ಅಕೋರೀ. ೧೩೦); ನನಗೆ ಒಂದು ಜೋಡಿ ಧೋತರ ಬರುತ್ತವೆ ಎಂದು ಮತ್ತಷ್ಟು ಹಿಗ್ಗಿಯಿತು (ವ್ಯವಿ. ೧೭೯); ವ್ಯೆಯಾಗೆ ಒಂಟೀ (ಪಟ್ಟಿ) ಧೋತರವಾ ಧರಿಸ್ಯಾರೋ (ಹುಟ್ಟಿಹ. ೦೦೦); ಕೋಟು ಶರ್ಟುಗಳನ್ನು ತೆಗೆದು, ಧೋತರದ ಮೇಲೆ ಮಲಗಿದ್ದ ರಾಯರು (ಘಲಸಂ. ೫೦). ೨. ಧೋತರದಿಂದ ಹಣೆಯ ಮೇಲಿನ ಬೆವರು ಹನಿಗಳನ್ನು ಒರೆಯಿಸಿಕೊಂಡರು (ಹಂದುಟಿ. ೦೦೦); ಧೋತರವನ್ನು ಹೊದ್ದುಕೊಂಡು ಶೆಟ್ಟಿಯ ಮನೆಗೆ ಹೋಗೋಣ ನಡಯಿರಿ (ಹಳ್ಳಿಬ. ೧೯). 'ಧೋವತಿ' ಪರಾ.

[ ←ಮರಾ. ಧೋತ್ರ್, ಧೋತ್ರಾ, ಧೋತರ್ ; ಹಿಂ. ಧೋತರ್, ಧೋತರಾ./ತುಳು. ದೋತ್ರ ]

**ಧೋಬಿ, ಡೋಬಿ, ದೋಬಿ, ದೋಭಿ** (ನಾ). ಬಟ್ಟೆಗಳನ್ನು ಒಗೆದು ಮಡಿಮಾಡುವ ಕಸಬಿನವನು; ಅಗಸ; ಮಡಿವಾಳ; ರಜಕ: ನಮ್ಮ ಧೋಬಿ ಬಟ್ಟೆಗಳನ್ನು ಚೆನ್ನಾಗಿ ಒಗೆಯುತ್ತಾನೆ (ರೂಢಿ). **ಡೋಬಿ:** ಅಗಸ, ಡೋಬಿ, ಮಡಿವಾಳ (ತುಳುನಾ. ೦೭೩); ರೈಲಿನಲ್ಲಿ ಹಜಾಮರಿದ್ದಾರೆ ಡೋಬಿಗಳೂ ಇದ್ದಾರೆ (ಅಳಸಿ. ೩). **ದೋಬಿ:** ಅವಲು ಬದಲಾಗಿ ಹುದೀಯುಂಗಿಯನ್ನುತ ದೋಬಿಯ ಬರಿದೆ ದೂರುವರೆ (ಹಂಪ್ರವೀ. ೦೦೭-೨೨). **ದೋಭಿ:** ದೇವಭಾವದ ಹೊಳಗೆ ಮರುಳುಕಡ ಸಾವಿ, ಕಲ್ಲು ಕಡಮ್ಮು ಗುಡಿ ಭಟ್ಟನೇ ದೋಭಿ (ಗಜೇಶ. ೭೦-೪).

[ ←ಹಿಂ. ಮರಾ. ಧೋಬೀ ]

**ಧೋಯೆನ್** (ಕ್ರಿ). ಧೋ ಎಂದು ಕೂಗು: ಈಯುಲಿಱಿಯಲ್ ಶರಣ್ಬಗೆ ಕಾಯಲ್ ಕ್ಷತ್ರಿಯರೆ ಬಲ್ಲರಲ್ಲದೆ ಬ್ರಹ್ಮರ್ ಭೋಯೆನಲುಂ ಬಲ್ಲರ್ ಕೊಲೆ ಧೋಯೆನಲುಂ ಬಲ್ಲರಿಱಿಯಲವರೆತ್ತಱಿವರ್ (ಗದಾಯು. ೩-೧೬). P ಗದಾಯುದ್ಧಸಂಗ್ರಹದಲ್ಲಿ ಶೀನಂಶ್ರೀಯವರು ಸ್ವೀಕರಿಸಿರುವ ಪಾಠಾಂತರ 'ಅವಿಧೋ' ಎನ್ನುವುದು. ಈ ಶಬ್ದವನ್ನೂ ನಿಘಂಟಿನಲ್ಲಿ ಸ್ವೀಕರಿಸಲಾಗಿದೆ. 'ಅವಿಧೋ' ಪರಾ. [ ಧೋ + ಎನ್$_1$ ]

**ಧೋರ$_1$** 'ದೋರ್ನ' ನೋ.

**ಧೋರ$_2$** (ನಾ). ಒಂದು ಬಗೆಯ ವಾದ್ಯ; ನಗಾರಿ; ಭೇರಿ: ಕಾಹಳ ವೇಣು ಗೌರಿಕಾಳೆ ದುಂದುಭಿಯೆಂಬ ಧೋರ . . . ವಾದ್ಯಂಗಳಂ (ವಿವೇಕ. ೨೬೬). [ ? ]

**ಧೋರಣ** (ನಾ). ೧. (ಆನೆ, ಕುದುರೆ, ರಥ ಮೊದಲಾದ) ವಾಹನ: "ಅದಿದೆನ್ನದೆ ವಾಹನವಾವುದಾದೊ[ಡಂ] ಪತ್ರ ಯುಗ್ಯ ಧೋರಣನಾಮಂ" (ವಸ್ತುಕೋ. ೮೮-೪೦); "ಪಕ್ಷಮೂ ವಾಹನಂ ಧೋರಣಂ ರಥ ಹಯಂ" (ಮಂಗರಾ. ೮೩-೨೩); "ಯಾನಂ, ಯುಗ್ಯಂ, ಪತ್ರಂ, ಧೋರಣಂ ಆ ಸರ್ವಂ ವಾಹನಂ – ನಾನಾ ಬಗೆಯಾದ ಸಕಲ ವಾಹನಗಳಿಗೂ ಹೆಸರುಗಳು" (ಸಿದ್ಧಾಂತಿ. ೨೫೪). ೨. ಕುದುರೆಯ ನಡಗೆಯಲ್ಲಿ ಒಂದು ಪ್ರಕಾರ. ೩. ಚುರುಕಾಗಿ ಹೋಗುವುದು; ಚಟುವಟಿಕೆಯಿಂದ ನಡೆಯುವುದು. ೪. ಗುರಿ; ಧ್ಯೇಯ: (+). ೫. ಕ್ರಮ; ಧಾಟಿ: (+). ೬. ಶೈಲಿ; ರೀತಿ: (+). ೭. ವಿಚಾರಧಾರೆ; ಆಲೋಚನೆಯ ಮಾರ್ಗ: ಎಲ್ಲೋ ವಿಳಾಸ ತಪ್ಪಿ ಬಂದಿರಬೇಕು ಎಂಬ ಧೋರಣದಿಂದ ಆ ಆಗಂತುಕನನ್ನು ಅವರು ಪ್ರಶ್ನಿಸಿದ ಹಾಗಿತ್ತು (ಹೊಸಕ್ಕ. ೯೦); ಆದಷ್ಟು ವಸತಿಗಳನ್ನು ತಪ್ಪಿಸಿದಾರಿ ಹಿಡಿಯುವ ಧೋರಣವನ್ನಿಟ್ಟುಕೊಂಡೆವು (ಮೇದಿಮ. ೧೨೯). ೮. ವರ್ತನೆ; ವೃತ್ತಿ; ನಡವಳಿಕೆ: ತಮ್ಮ ಸಂಸ್ಥೆಯ ಆಡಳಿತವನ್ನು ನೋಡಲು ಧೋರಣವನ್ನು ಕಾಯಲು ನಿರ್ದೇಶಕರ ಮಂಡಲವೊಂದನ್ನು ಆರಿಸುತ್ತಾರೆ (ತಕ್ಕಡಿ. ೪೬). ೯. ಒಲವು; ಪ್ರವೃತ್ತಿ: (+). [ ಸಂ. ]

**ಧೋರಣೆ** (ನಾ). ೧. (ರಚಿಸುವುದರಲ್ಲಿ) ಒಳ್ಳೆಯ ಶೈಲಿ,-ರೀತಿ: (+). ೨. ಧಾಟಿ; ಕ್ರಮ: ಮ್ಯಾನೇಜರರಿಗೆ ಅಧ್ಯಕ್ಷರ ಧೋರಣೆ ಸರಿ ಬೀಳಲಿಲ್ಲ (ದುಂಬಿಕ. ೧೫೯); ವಿಶಿಷ್ಟಾದ್ವೈತ ಧೋರಣೆಯು ಇಲ್ಲಿ ಒಂದು ವೈಲಕ್ಷಣ್ಯವನ್ನು ತೋರಿಸುತ್ತದೆ (ಭಾರರ. ೨೫೯); ಈ ಪ್ರಜಾಸತ್ತಾತ್ಮಕ ಧೋರಣೆಯು ಸಾಹಿತ್ಯವನ್ನಾದರೂ ಆವರಿಸಿದೆ (ಪ್ರಬಂಧ. ೦); ನೀವು ಈಗ ಎಂತಹ ಅನುಚಿತ ಧೋರಣೆಯನ್ನು ತಳೆದಿದ್ದೀರಿ (ಹಳ್ಳಿಬ. ೨೨೯); ಇದುವರೆಗೆ ಕಾಂಗ್ರೆಸ್ ಮುಂದಾಳುಗಳ ಧೋರಣೆಯಲ್ಲಿ ತಿಲಕ್ ನಂಬಿಕೆಯನ್ನಿಟ್ಟಿದ್ದರು (ಸ್ವಾವೀರ. ೫೯). ೩. ವಿಚಾರಧಾರೆ; ಆಲೋಚನೆಯ ಮಾರ್ಗ: ಒಂದೇ ರೀತಿಯ ವಿಚಾರವನ್ನೂ ಧೋರಣೆಗಳನ್ನೂ ಬೆಳೆಸಿಕೊಂಡು ಬಂದಿದ್ದೇವೆ (ದೂರಸ. ೮೦); ಅವರಿಗೆ ನನ್ನ ಮಾತುಗಳು, ವಿಚಾರಗಳು ಮತ್ತು ಧೋರಣೆಯ ಬಗ್ಗೆ ಸಂಪೂರ್ಣ ಅರಿವಿದ್ದಿತು (ಜೇಮಂತ. ೨೩೩); ಪತ್ರದ ಧೋರಣೆಯನ್ನು ತಿಳಿದುಕೊಂಡು ದೇಸಾಯರಿಗೆ ಅವಮರ್ಯಾದೆಯಾದಂತಾಯಿತು (ಗಂಮಾಯಿ. ೯೪). ೪. ವರ್ತನೆ; ವೃತ್ತಿ; ನಡವಳಿಕೆ: ಇವರೆಲ್ಲರ ಮಧ್ಯೆ ತಟಸ್ಥ ಧೋರಣೆಯನ್ನು ವಹಿಸುವವಳೆಂದರೆ ಮುದುಕಿ (ಹಳ್ಳಿಹಾ. ೧೦೭); ಬರ್‌ಬ್ಯಾಂಕ್ . . . ತನ್ನ ಧೋರಣೆಗಳಲ್ಲಿ ಟೀಕೆ ಅಥವಾ ತರ್ಕಕ್ಕೆ ಅವಕಾಶ ಕೊಡದವನು (ಸಸ್ಯಕ. ೩೨). ೫. ಗತ್ತು; ಠೇಂಕಾರ; ಹಮ್ಮು: ಅವರು ತುಂಬ ಧೋರಣೆಯಿಂದ ಮಾತನಾಡುವರು (ರೂಢಿ); ಅವನು ತುಂಬ ಧೋರಣೆಯ ವ್ಯಕ್ತಿ. (ರೂಢಿ). ೬. ನಿಲುವು: ಈಗಿನ ಸಾಹಿತ್ಯದ ಧೋರಣೆ ಪ್ರಾಚೀನಸಾಹಿತ್ಯಕ್ಕೆ ಹೊಂದುವುದಿಲ್ಲ (ರೂಢಿ); ೭. (ಅಲಂ) ಉದಾಸೀನತೆ; ಅಲಕ್ಷ್ಯ: ದುರ್ಯೋಧನನ ಆಶ್ರಯದಲ್ಲಿದ್ದುಕೊಂಡು ಪಾಂಡವರನ್ನು ಧೋರಣೆಯಿಂದ ನೋಡುತ್ತಿದ್ದನು (ಪಕಥಾ. ೧೮); ರಭಸ ಪ್ರವೃತ್ತಿಯನ್ನೋ ಧೋರಣೆಯನ್ನೋ ಅವಲಂಬಿಸಿದರೆ ತಪ್ಪಾಗುವುದು ಅನಿವಾರ್ಯ (ಕನ್ನಸಂ. ೦೬೩); ಇದಕ್ಕೆ ಬಹುಮಟ್ಟಿಗೆ ಇಂಜಿನಿಯರಿಂಗ್ ಖಾತೆಯ ಧೋರಣೆಯೆ ಕಾರಣ (ಶಿಕ್ಷರ. ೭೩೫. [ ಸಂ. ಧೋರಣ ]

**ಧೋವತಿ, ದೋವತಿ, ಧೋತಿ** (ನಾ). ಗಂಡಸರು ಉಡುವ ಬಟ್ಟೆ; ಪಂಚೆ; ಧೋತ್ರ: ಬಂದನಿತ್ತಲು ಪಾರ್ವನೊಲಿದಂದು ಪೂಸಿದ ವಿಭೂತಿ ರುದ್ರಾಕ್ಷಿ ಧೋವತಿಯೆಸೆಯೆ (ಕಣ್ಣರ. ದೇ. ೧೩೩-೧೫); ವಿಗಿಲು ಧೋ[ಪಾಠಾಂ. ದೋ] ವತಿ ದರ್ಭೆ ಸಂಬಳಿಗೆಗಳನೊಂದೆಡೆಯಲಿ ಮಡಗಿ (ಬಸಪು. ೩೭-೨೮). **ದೋವತಿ:** ದೋವತಿಯುಂ ಪಾದರಕ್ಷೆಯುಂ [ಪಾಠಾಂ. ಧೋತ್ರಮುಮಂ ಪಾದರಕ್ಷೆಯುಂ] ಸುತ್ತಿ (ಸಮುಕ. ೧೯-೧೩೪); ಪುಲಿದೊವಲ ದೋವತಿಯ ನಿರ್ಮಲಂ . . . ವಿರೂಪಾಕ್ಷನೊಪ್ಪಿದಂ (ಕಾರಿರ. ದೇ. ೨೯೭-೧೬); ಜನ್ನಿವಾರಮಂ ನೇರಗಟ್ಟಿ ದೋವತಿಯಂ ಮಲ್ಲಗಾಸೆಯನುಟ್ಟು (ವ್ಯಪವಿ. ೩೮-೯೦೩). **ಧೋತಿ:** ಒಟ್ಟಿಗೆ ನಾಲ್ಕು ಧೋತಿಗಳನ್ನು ಕೊಂಡುಕೊಳ್ಳಬೇಕು (ರೂಢಿ). 'ಧೋತ್ರ' ಪರಾ.

[ <ಸಂ ಧೃತವಸ್ತ್ರ ?./ಹಿಂ. ಧೋವತೀ, ಧೋತಿ ; ಮರಾ. ಧೋತೀ./ತೆಲು. ದೋವತಿ, ದೋತಿ ]

**ಧೌತ** (ಗು). ೧. ತೊಳೆದ; ಸ್ವಚ್ಛಮಾಡಿದ; ಶುಭ್ರಗೊಳಿಸಿದ: ತರುಣೋರುಗನವನಿರ್ಮೋಕರುಚಿರಮೆನಿಸಿರ್ದ ಧೌತಧವಳಾಂಬರದಿಂ ಕರಮೆಸೆದಂ . . . ನರೇಂದ್ರಂ (ಕಾದಂಪೂ. ೭೮); ಶ್ರೀಮದಮರಮಣಿ ಮ ಕು ಟ ರಂ ಜಿ ತ ರತ್ನಧಾಮಾಬದ್ಧಧಾರಾಧೌತಶಾತೋದರಸಾಂಘ್ರಿಯುಗಲ ವೀರನಾಥನುದ್ದಾಮಸುಖವನೀವುದೆಮಗೆ (ಶ್ರೀಪಾಲ. ೦-೧). ೨. ಬೆಳ್ಳಗಿರುವ; ಕಾಂತಿಯುಕ್ತವಾದ: ಎಂದಾಗಳ್ ಅಮಿತತೇಜಂ ದಂತಾಂಶು ಧೌತಕಪೋಳಫಳಕನಾಗಿ (ಆದಿಪು. ೪-೮೦೩). (ನಾ). ೩. ತೊಳೆದುದು; ಶುಭ್ರವಾದುದು; ಸ್ವಚ್ಛವಾದುದು: "ನಿರ್ಣಿಕ್ತಂ, ಪ್ರಕ್ಷಾಳಿತಂ, ಧೌತಂ – ಈ ೩ ತೊಳೆಯಲ್ಪಟ್ಟುದು" (ಹಲಾಯು. ೬೮-೩೫೪); "ಧೌತಮೆನಲು ಪ್ರಕ್ಷಾಳಿತಮದೆನಲು ತೊಳೆವುದಕ್ಕೆ ನಾಮಂ" (ಮಂಗರಾ. ೭೭-೮); ಅಸಿಲತೆ ರಣಧೌತಮದಿ' [ಪಾಠಾಂ. ರಣಧೌತಿಮದಿ] ಮಸಿಮುಸುಡನ ಜೀವಕಲ್ಪನಿಂ ಕಂದಿದೆಡೆಡೆನ್ನೆಸೆಯನಡರ್ದನ್ನ ಕೀರ್ತಿಪ್ರಸರದ ಕುಡಿ ಕೈವೆಸೊರೆಯ ಕುಡಿ ಯಮೂಲಕ್ಕಂ (ಯಶೋಚ. ೨-೩೩). ೪. ಬೆಳ್ಳಗಿರುವುದು: "ಧೌತಂ ಸಿತಂ ಗೌರಮರ್ಜುನಂ . . . ನಿಜ ಶ್ವೇತಮಕ್ಕು" (ಮಂಗರಾ. ೧೩೦-೨೨). ೫. ಬೆಳ್ಳಿ; ರಜತ. ೬. ಮಡಿ ಮಾಡಿದ ಬಟ್ಟೆ; ಒಗೆದ ಬಟ್ಟೆ: ಒಂದುದಯದಲ್ಲೆದ್ದು ಸುಸ್ನಾನಮಂಗೈದು ಚಂದದಿಂ ಧೌತಮುಮನುಟ್ಟು (ನವಮೋ. ೦೧-೬); ಅಸುರೇಂದ್ರ ಸ್ನಾನವ ಮಾಡಲಿದು ತರುಣಿಯರು ಧೌತಮನೀಯ್ಕಳ ವಟ್ಟು ಮಣಿಖಚಿತವಾವುಗೆಗಳಾ ತ್ವರಿತದಿಂದೀಯ್ಕಲವನಡಿಯುಂಗಂಗೆ ಗವರ್ಚಿ (ನವಮೋ. ೦೮-೪೦). ೭. (ಆಲಂ) ಮಸೆದುದು; ಹರಿತ ಮಾಡಿದುದು: "ನಿಶಾತಂ, ನಿಶಿತಂ, ಧೌತಂ, ತೇಜಿತಂ – ಈ ೪ ಮಸೆದುದು" (ಹಲಾಯು. ೭೮-೩೩೦); "ಧೌತಂ ತೇಜಿತಂ ಮಸೆವ ತೆಱನಕ್ಕು" (ಮಂಗರಾ. ೮೮-೩೮). [ಸಂ.]

**ಧೌತಕೀರ್ತಿ** (ನಾ). ಧವಳಕೀರ್ತಿ; ಶುದ್ಧವಾದ ಯಶಸ್ಸು: ಅನವದ್ಯ ಜನಾಗಮವಿದ್ಯನಿದ್ಧದುಗ್ಧೋದಧಿಧೌತಕೀರ್ತಿವಿಶದಂ ಭರತಾವನಿರಾಜ ಪೂಜಿತಂ (ಶಾಂತಿಪು. ೦-೨೮). [ಧೌತ + ಕೀರ್ತಿ]

**ಧೌತವಲ್ಕಲ** (ನಾ). ಬೆಳ್ಳಗಿರುವ ನಾರುಬಟ್ಟೆ: ಧೌತವಲ್ಕಲಮನಲಂಬು ವಕ್ಷಮಣಿಯಂ ಸಮೆವೀ ವ್ಯವಸಾಯಮೆಂತ್ರಲಂ (ಕಾದಂಪೂ. ೨೨೪). [ಧೌತ + ವಲ್ಕಲ]

**ಧೌತವಸನ** (ನಾ). = ಧೌತವಸ್ತ್ರ; ಕುಶಜಾತಪವಿತ್ರಮಾತ್ರಧೌತವಸನ ಮುದ್ರಮೌಂಜಿ ಮೃಗತುಂದಿಯರುಟ್ಟೊಸ ಕೋ ವ ಣ ಂ ಗ ಳಿ ೦ ಬಿ ವು ಕಡುರಮ್ಯಮಾದ ವಟುವೇಷಮನಾಂತು (ವರ್ಧಪು. ೧೬-೪); ಪರಿವೃತ ಧೌತವಸನಸಮುಚಿತ ಕೋಮಳ ಕಳೇವರರುಂ (ರಾಜಶೇ. ೪-೨೬ವ). [ಧೌತ + ವಸನ]

**ಧೌತವಸ್ತ್ರ** (ನಾ). ಮಡಿಮಾಡಿದ ಬಟ್ಟೆ; ಶುಭ್ರವಸ್ತ್ರ: ತದ್ದರ್ಮ ಕಳಸಾರೋಹಣವಾಗಿ ನೆಱೆಯನಿರ್ವಹಿಸಿದಗ್ಗಂಗಾಜಳಧೌತವಸ್ತ್ರಪವಿತ್ರೀಕೃತೋತ್ತಮಾಂಗಿಯರಪ್ಪರ್ ಶ್ರೀಮದಕ್ಕಂ ನಾಲಬರಸಿಯರು (ಕಇಇ. ೪೮-೩-೩೭; 973); ತೀರ್ಥಸ್ನಾನಾರ್ಥಂ ಪರಸ್ಥಾನಂಗೆಯ್ದಿ ವಾನಪ್ರಸ್ಥ ಜನಂಗಳ ಧೌತವಸ್ತ್ರಪವಿತ್ರಾಕ್ಷಸೂತ್ರಂಗಳಂ ತಮ್ಮ ಕವಲ್ಗೊಂಬುಗಳೊಳ್ ನೇಱಿಸಿಕೊಂಡಿಂಬಿನೊಳವರೊಡನೆ ನಡೆವ ಸಾರಂಗಸಮೂಹಮುಮಂ (ಪಂಪಭಾ. ೧೧೯-೨); ಪ್ರಾತಃಸಮಯದೊಳ್ ಜರಾಸಂಧಚಕ್ರವರ್ತಿ ಪಾವನಜಳಸ್ನಾನಪವಿತ್ರಗಾತ್ರನುಂ ಧೌತವಸ್ತ್ರಪರಿಧಾನನುಮಾಗಿ (ನುಹಾನೇ. ೧೧-೧೪೦ವ). [ಧೌತ + ವಸ]

**ಧೌತಾಂಬರ** (ನಾ). ೧. = ಮಡಿಬಟ್ಟೆ: "ಮರಣದೊಳು ಧೌತಾಂಬರದೊಳು ಮಡಿ" (ಶಬ್ದಮಂ. ೯೩); ಮಡಿಯೆಂಬುದು ಧೌತಾಂಬರದೆಡೆಯೊಳ್ಪಡಿಯೆಂಬುದಲ್ಪದಂಡದೊಳೆಗಂ ಪಡಿಯೆಂಬುದು ಕರಣಿಯೊಳೆಡೆವಿಡದಿರ್ಪುವು ಬೇಱೆ ಮತ್ತವಿಲ್ಲ ನಾಡೊಳ್ (ವೀರವಿ. ೦-೪೮). ೨. ಬಿಳಿಯಂ ಬಟ್ಟೆ: ಅಂಬರಮೆಲ್ಲಂ ಕೂಡೆ ಧೌತಾಂಬರದ ನವವಿತಾನಂಬೊಲಿಂಬಾದುದು (ರಾಜಶೇ. ೧೧-೭೭). [ಧೌತ + ಅಂಬರ]

**ಧೌತಾಂಶುಕ** (ನಾ). = ಧೌತವಸ್ತ್ರ: ಧೌತಾಂಶುಕದೊಳಗೆ ತಂಬುಲವ ಕಟ್ಟಿದರು (ಕುಮಾವ್ಯಾಉ. ೧೮-೮). [ಧೌತ + ಅಂಶುಕ]

**ಧೌತಿ** (ನಾ). [ಯೋಗ] ಧೌತಿ, ಬಸ್ತಿ, ನೇತಿ, ತ್ರಾಟಕ, ನೌಲಿಕ ಮತ್ತು ಕಪಾಲಭಿತ್ತಿ ಎಂಬ ಹಠಯೋಗದ ಆರು ಅಂಗಗಳಲ್ಲಿ ಒಂದು; ೪ ನಾಲ್ಕು ಅಂಗುಲ ಅಗಲದ, ಹದಿನೈದು ಮೊಳ ಉದ್ದದ ವಸ್ತ್ರವನ್ನು ನೆನೆಸಿ ಸ್ವಲ್ಪ ಸ್ವಲ್ಪವಾಗಿ ನುಂಗಿ ಪುನಃ ಅದನ್ನು ಗುದದ್ವಾರದ ಮೂಲಕ ಹೊರಗೆ ತೆಗೆಯಬೇಕು. ಈ ಧೌತಿಕರ್ಮದಿಂದ ಕೆಮ್ಮು, ಕುಷ್ಠ ಮುಂತಾದ ಇಪ್ಪತ್ತು ವಿಧ ಶ್ಲೇಷ್ಮರೋಗಗಳೂ ವಾಸಿಯಾಗುವುವು: ಬಿಳಿಯ ಮಾವದೆಯನೊಂದು ತುದಿಯಂ ಪಿಡಿದು ಮತ್ತೊಂದು ತುದಿಯ ಮೆಲ್ಲನೆ ಹೃದಯಪರ್ಯಂತಮಾಗಿ ನುಂಗಿ ತೆಗೆವುದೂ ಧೌತಿಯೆನಿಪುದು (ಶಿವಪ್ರ. ೬-೩). [ಸಂ.]

**ಧೌತೋದಕ** (ನಾ). ಶುದ್ಧವಾದ ನೀರು: ವಿಮಲಧೌತೋದಕ . . . ಸಕಲಭೋಗಾಹುತಿಗೆ ಪೋಷೋದಕವೆನಿಪುದೀ ವರಪಾದೋದಕಂ (ಶಂಕದಾ ೧೦-೬೦). [ಧೌತ + ಉದಕ]

**ಧೌರಿತಕ** (ನಾ). [ಅಶ್ವಶಾ] ಕುದುರೆಯ ಚಲನೆಯಲ್ಲಿ ಒಂದು ಪ್ರಕಾರ; ಕುಕ್ಕುಲೋಟ: "ಧೌರಿತಕಂ, ಬಿರುನಡೆ, ಭರದಾಂಡ್" (ಸಿದ್ಧಾಂತಿ. ೨೩೦). 'ಪಂಚಧಾರೆ' ಪರಾ. [ಸಂ.]

**ಧೌರೇಯ** (ನಾ). ೧. ಭಾರ ಹೊರಲು ಯೋಗ್ಯವಾದ ಎತ್ತು, ಕುದುರೆ ಮುಂತಾದ ಪ್ರಾಣಿ: "ಧುರ್ಯಃ, ಧೌರೇಯಃ – ಈ ೨ ಹೂಟದೆತ್ತು" (ಹಲಾಯು. ೪೪-೧೧೦); "ಧೂರ್ವಹಃ, ಧುರ್ಯಃ, ಧೌರೇಯಃ, ಧುರೀಣಃ, ಧುರಂಧರಃ – ೫ ಬಂಡಿ, ಗೋಣಿ, ನೇಗಲು ಮುಂತಾದ ಭಾರವನ್ನು ಹೊತ್ತು ಸೆಳೆಯುವ ಎತ್ತು ಮುಂತಾದ ದನಗಳ ಹೆಸರುಗಳು" (ಸಿದ್ಧಾಂತಿ. ೨೯೩). ೨. ಭಾರವನ್ನು ಹೊತ್ತಿರುವವನು; ಹೊಣೆಗಾರಿಕೆಯನ್ನು ವಹಿಸಿಕೊಂಡವನು; ಜವಾಬ್ದಾರಿಯನ್ನು ಹೊತ್ತಿರುವವನು: ಚಾಳುಕ್ಯರಾಜರಾಜ್ಯಭಾರಧೌರೇಯನುಂ (ಕಇಇ. ೩-೨-೧೯೬; 1068); ಅರ್ಥಿಜನಕಾಮಸುರಭೂಜಾರಾಮಂ ಧರ್ಮೋದ್ಯಮಧೌರೇಯನುದಾತ್ತ ಚಿತ್ರನಭಿನವಪಂಪಂ (ಪಂಪಾಮಾ. ೬-೧); ವಿಶ್ವವಿಶ್ವಂಭರಾಭಾರಧಾರಣಾ ಧೌರೇಯನುಮಾಸಾದಿತ ಯುವರಾಜಪದವಿರಾಜನುಮಾಗಿ (ವರ್ಧಮಾ. ೬-೭೮ ವ). ೩. ಕುದುರೆ; ಅಶ್ವ. [ಸಂ.]

**ಧೌರೇಯಕ** (ನಾ). = ಧೌರೇಯ. [ಸಂ.]

**ಧ್ಯಾತೃ** (ನಾ). ಧ್ಯಾನ ಮಾಡುವವನು: ಆ ಧ್ಯಾನಯೋಗಮರ್ಹತ್ಸಮಯದೊಳ್ ಧ್ಯಾನಂ ಧ್ಯೇಯಂ ಧ್ಯಾತೃ ಫಲಮೆಂದು ಚತುರಂಗಮಕ್ಕುಂ (ಆದಿಪು. ೮-೨೮ ವ); ಧ್ಯಾತೃಹೃದಯಾಮಹೌಘಶಮಲವ್ರಾತಪರ್ವತವಜ್ರನನು . . . ತಾಪಕ್ಲೇಶಜಲನಿಧಿಸೇತುವನು ನೆನೆವುದು ತದಂಘ್ರಿಸರೋಜವನ ಬಿಡದೆ (ನಿಘಾಗ. ೩-೦೩-೪೯); ಧ್ಯಾನದಾಧಿಕ್ಯದ ವಿವೇಕದಿಂ ಧ್ಯಾತೃವಾ ಧ್ಯಾನಾದಿ ಭೇದವಳಿದಾ ಧ್ಯೇಯ ಸುಸ್ವರೂಪ (ವೀಶೈಪು. ೫-೧೭-೧೬). [ಸಂ.]

**ಧ್ಯಾನ** (ನಾ). ೧. ಚಿಂತನೆ; ಮನಸ್ಸಿನಲ್ಲೇ ಯೋಚನೆ ಮಾಡುವುದು; ಮನನ: "ಲಕ್ಷಣಂ ದರ್ಶನಂ ಧ್ಯಾನಮವಲೋಕನಂ ನೋಟಮಕ್ಕು" (ಮಂಗರಾ. ೯೩-೨); ಧ್ಯಾನದೊಳಭವಂ ನೆಱೆದಿನಿಸಾನುಮನರೆಮುಚ್ಚಿ ಕಣ್ಗಳಂ (ಪಂಪಭಾ. ೮-೦೩); ಎನ್ನ ಚಿತ್ತವು ನಿಮ್ಮ ಧ್ಯಾನವಯ್ಯಾ (ಬಸವ. ೫೦೬); ಶಿವನುತಿಧ್ಯಾನದೊಳು ಮೂರ್ಛೆವೋದರ್ಕಲರು (ತಿರುರ. ದೇ. ೦೫-೪); ವನಜನಾಭಧ್ಯಾನಸುಧೆಯಲಿ ನನೆದು ಹೊಂಗಿದ ಕರಣ ಹೊರೆಯೇಱಿತ್ತು ನಿಮಿಷದಲಿ (ಕುಮಾವ್ಯಾದ್ರೋ. ೦-೨೨); ಬಿನ್ನಹ ಗುರುವೇ ಧ್ಯಾನಕೆ ಬಿಸಜಾಂಬಾಗ ನಿನ್ನನಾದಿಯಂ ಮಾಡಿಕೊಂಡು ಕನ್ನಡದೊಳಗೊಂದು ಕಥೆಯ

ಪೇಳುವೆವದು ನಿನ್ನಾಣ್ಣೆ ಕಂಡ್ಕ ನನ್ನೊಡೆಯ (ಭರತ. ೧-೩) ; ಒಂದು ಸಂಜೆ ಸಂಚಾರ ಹೊರಟು ಯಾವುದೋ ಧ್ಯಾನದಲ್ಲಿ ನಡೆಯುತ್ತಿರುವಾಗ (ಭಾವಗೀ. ೦೨). ೨. ಗಮನ ; ಲಕ್ಷ್ಯ : ಹಾಗದ ಕರಹ ಹೊಜಿಗೆ ಕಳೆದು ದೇಗುಲಕ್ಕೆ ಹೋಗಿ ದೇವರಿಗೆ ನಮಸ್ಕಾರವ ಮಾಡುವನಂತೆ ತನ್ನ ಕೆರಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲ (ಬಸವ. ೧೯೯). ೩. ಆತ್ಮನನ್ನು ಯಾವಾಗಲೂ ಧ್ಯಾನಿಸುತ್ತಿರುವುದು ; ಆತ್ಮಚಿಂತನೆ ; ತಪಸ್ಸು : ಧ್ಯಾನಮರೀಚಿಯಿಂ ಬೆದಱಿ ಘಾತಿತಮಸ್ತಮಂ (ಆದಿಪು. ೧೦-೦೭) ; ಧ್ಯಾನ ನಿಶಿತಖಡ್ಗದಿನಘಸಂಕುಳಮೆಯ್ದೆ ಬೆದಱಿ (ಶಾಂತಿಪು. ೯-೩೭) ; ಪ್ರಾಯಶ್ಚಿತ್ತಂ ವಿನಯಂ ವೈಯ್ಯಾವೃತ್ಯಂ ಜನಂಗೆ ಕೂಡದು ದೋಷಾಪಾಯತಿಯಿಂ ಧ್ಯಾನಂ ಸ್ವಾಧ್ಯಾಯವ್ಯುತ್ಸರ್ಗಮುಂಟು (ಅಜಿಪು. ೧೨-೪೧) ; ಧ್ಯಾನಂ ಮುಕ್ತಿಪ್ರಾಪ್ತಿವಿಧಾನಂ (ಮಲ್ಲಿಪು. ೧೪-೭೭) ; ಮುಖದಲ್ಲಿ ಮಂತ್ರ ಹೃದಯದಲ್ಲಿ ಧ್ಯಾನ ಪ್ರಾಣದಲ್ಲಿ ಲಿಂಗ ನೆನಹು ಕರಿಗೊಂಡ ಶಿವಾತ್ಮ ಶರಣನ ಹೃದಯವೇ ಪರಮೇಶ್ವರಂಗೆ ನಿವಾಸಸ್ಥಾನ (ನೆಲೆವನೆ)ಯಾಗಿಪ್ಪುದಯ್ಯ (ಸಿದ್ಧೇವ. ೬೫-೨೨೪) ; ಶೋಧಿಸಿದ ನಿಜಚೈತನ್ಯ ತಾನೆಂದೆಂಬುದೇ ಧ್ಯಾನ (ಅಮೃತ. ೬-೮೦) ; "ದೇಹಾದಿಗಳ ಎಚ್ಚರವಿಲ್ಲದೆ ತಾನು ಬ್ರಹ್ಮವೆಂದಿರುವುದು" (ಅಮೃತ. ಟೀಕು) ; ಧ್ಯಾನವೆಂದರೆ ಇತರ ವಿಷಯಗಳಲ್ಲಿ ಹೋಗದೆ ಆತ್ಮ ವಿಷಯದಲ್ಲೇ ಮನಸ್ಸನ್ನು ಸ್ಥಿರವಾಗಿಡುವ ಅಭ್ಯಾಸ (ಹಿಂದಸಾ. ೩೨೦). 'ಆತ್ಮಧ್ಯಾಸ' ಪರಾ. ೪. [ಯೋಗ] ಯೋಗದ ಅಷ್ಟಾಂಗಗಳಲ್ಲಿ ಒಂದು ; ಮನಸ್ಸನ್ನು ಒಂದೇ ವಿಷಯದಲ್ಲಿ ಸ್ಥಿರವಾಗಿ ಇಡುವುದು ; ಏಕಾಗ್ರತೆ : "ತತ್ರಾದಿ ಚಿಂತನಂ ತಾಂ ಧ್ಯಾನಂ" (ವಸು.ಕೋ. ೨೦-೦೮) ; ಯಮನಿಯಮಸ್ವಾಧ್ಯಾಯಧ್ಯಾನಧಾರಣಮೋನಾನಷ್ಠಾನ ಜಪಸಮಾಧಿ ಶೀಲಸಂಪನ್ನನರ್ (ಸೌಇಇ. XX. ೯೬-೦೭: 1072); ಮಿಂಚುಲಿಗನ ಹಕ್ಕಿಯಂತೆ ನೀರ ತಡಿಯಲ್ಲಿದ್ದು ಮೂಗ ಹಿಡಿದು ಧ್ಯಾನವ ಮಾಡು[ವಿ]ರಯ್ಯಾ (ಬಸವ. ೫೭೮) ; ಯಮನಿಯಮ . . . ಧ್ಯಾನಧಾರಣಸಮಾಧ್ಯಷ್ಟಾಂಗಯೋಗನಿಷ್ಠ (ವಿವೇಕ. ೦೪೩) ; "ಧ್ಯಾನ (ಅದನ್ನೇ ಎಡೆಬಿಡದೆ ನೆನೆಯುವುದು)" (ಅಮೃತ. ೨-೩೭ ಟೀಕು) ; ಯಮನಿಯಮ . . . ಧ್ಯಾನಧಾರಣಸಮಾಧಿಗಳೆಂಬ ಅಷ್ಟಾಂಗಯೋಗದೊಳಗೆ (ಅಖಂಡೇ. ೨೧೪-೩೩) ; ಪ್ರಾಣಾಯಾಮ ಪ್ರತ್ಯಾಹಾರ ಧಾರಣ . . . ಧ್ಯಾನಸುಸಮಾಧಿಗಳ ಸಾಧಿಸಲು (ಗಣಶಾ. ೦೦-೬೮) ; ಧ್ಯಾನವೆಂದರೆ ಧ್ಯೇಯವಸ್ತುವಿನಲ್ಲಿ ಚಿತ್ತಸ್ಥಿರೀಕರಣವು (ಹಿಂದಸಾ. ೧೧೩); ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಎಂಬ ಈ ಎಂಟೂ ಆವಶ್ಯಕ (ಭಾರಕ. ೧೩೭). 'ಅಷ್ಟಾಂಗಯೋಗ' ಪರಾ. ೫. ರಾಜಯೋಗದ ಹದಿನೈದು ಅಂಗಗಳಲ್ಲಿ ಒಂದು : ರಾಜಯೋಗಕ್ಕೆ . . . ಅಂಗ ತಾ ಹದಿನೈದು . . . ಯಮ ಪ್ರಥಮ ನಿಯಮವೆರಡು . . . ಹದಿನಾಲ್ಕು ಧ್ಯಾನವು ಚಿತ್ರಕರಿ ಹದಿನೈದನೇಯದು ಸಮಾಧಿ (ಜ್ಞಾಸಿ. ೧೭-೦೪). 'ರಾಜಯೋಗ' ಪರಾ.

ಧ್ಯಾನ ಮಾಡು = ಚಿಂತನೆ ಮಾಡು ; ಧ್ಯಾನಿಸು : ಇದರಲ್ಲಿ ಸ್ಥೈರ್ಯ ವುಟಾದರೆ ಮುಂದಕ್ಕೆ ಧ್ಯಾನ ಮಾಡುವುದಕ್ಕೆ ಅರ್ಹತೆಯುಂಟಾಗುತ್ತದೆ (ಭಾರಕ. ೦೬೪) ; ಧ್ಯಾನ ಮಾಡುತ್ತ ಕುಳಿತ ಕೂಡಲೆ ಗುರುವಿನ ಧ್ಯಾನಸ್ಥ ಮೂರ್ತಿಯು ಪ್ರತ್ಯಕ್ಷ ನನ್ನ ಎದುರಿಗೆ ಬಂದು ನನಗೆ ಯಾವುದೂ ಕಾಣದಾಗುತ್ತದೆ ! (ಮಾಧವ. ೯೨) ; ಇಲ್ಲಿಯೂ ಕುಳಿತು ಧ್ಯಾನ ಮಾಡುತ್ತಾರೆ ; ನದಿದಂಡೆಯಲ್ಲವ್ವೇ ಅಲ್ಲ (ಅಳಿನಿ. ೦೦೦). ೬. ಜೈನರ ಪ್ರಕಾರ ಆರ್ತಧ್ಯಾನ, ರೌದ್ರಧ್ಯಾನ, ಧರ್ಮಧ್ಯಾನ ಮತ್ತು ಶುಕ್ಲಧ್ಯಾನ ಎಂದು ಧ್ಯಾನದಲ್ಲಿ ನಾಲ್ಕು ಬಗೆ. ಈ ಒಂದೊಂದರಲ್ಲೂ ಉಪಭೇದಗಳಿವೆ. [ಸಂ.]

**ಧ್ಯಾನಂಗೈ** (ಕ್ರಿ). ಚಿಂತನೆಮಾಡಂ ; ಧ್ಯಾನಮಾಡು ; ಧ್ಯಾನಿಸು : ಸಕಲವಿಶ್ವವನಾ ವಿರಾಡ್ರೂಪೆಂದು ಧ್ಯಾನಂಗೈಯುವುದೆ ನಿಶ್ಚಯದವಸರ ಸಮಾಹಿತಿಯು (ಗಣಶಾ. ೦೪-೯೩). [ಧ್ಯಾನ + ಗೈ (<ಕೆಯ್$_1$)]

**ಧ್ಯಾನಂಬೆಱು** (ಕ್ರಿ). = ಧ್ಯಾನಂಗೈ : ಭಕ್ತಿಯಿಂ ತತ್ಪದಧ್ಯಾನಂಬೆತ್ತು ದಯಾಬ್ಧಿಯಂ ಘನತತವಂಗೆಯ್ದೊಚ್ಚತಂ ಮೆಚ್ಚಿಪೆಂ (ಶಬಕಂ. ೨-೮೯. [ಧ್ಯಾನ + ಪೆಱು$_1$]

**ಧ್ಯಾನಗಮ್ಯ** (ಗು). ೧. ಏಕಾಗ್ರತೆಯಿಂದ ಕೂಡಿದ ಚಿಂತನೆಗೆ ಗೋಚರವಾಗುವ. (ನಾ). ೨. ಏಕಾಗ್ರತೆಯಿಂದ ಕೂಡಿದ ಚಿಂತನೆಗೆ ಗೋಚರವಾಗುವುದು : ಶಿಲೆಯಿಂದ, ಮರದಿಂದ . . . ಮರಳಿನಿಂದ ಧ್ಯಾನಗಮ್ಯವಾದ ಮನೋಮಯಮೂರ್ತಿಯಾಗಿ ಮತ್ತು ರತ್ನಾದಿಗಳಲ್ಲಿ ನಿರ್ಮಿಸಿಕೊಂಡು ಪೂಜಿಸಬಹುದೆಂದು ಆಧಾರವಿದೆ (ಭಾರಕ. ೭೮). ೩. ಏಕಾಗ್ರತೆಯಿಂದ ಕೂಡಿದ ಚಿಂತನೆಗೆ ಗೋಚರನಾಗುವವನು ; ಪರಮಾತ್ಮ. [ಧ್ಯಾನ + ಗಮ್ಯ]

**ಧ್ಯಾನಗಮ್ಯೆ** (ನಾ). ಏಕಾಗ್ರತೆಯಿಂದ ಕೂಡಿದ ಚಿಂತನೆಗೆ ಗೋಚರವಾಗುವವಳು : ಎಲೆ ಮಾತೆ ! ನೀಂ ಭಕ್ತವತ್ಸಲೆ ಸಾಜಂ ! ಧ್ಯಾನಗಮ್ಯೆ ಸಾಜಂ ! (ರಾಮಾಶ್ವ. ೬೨-೧೧). [ಸಂ. ಧ್ಯಾನಗಮ್ಯಾ (ಧ್ಯಾನ + ಗಮ್ಯ + –)]

**ಧ್ಯಾನಗೋಚರ** (ನಾ). ಏಕಾಗ್ರಚಿಂತನೆಯಿಂದ ಕಾಣಿಸುವವನು : ಧ್ಯಾನಗೋಚರನಾಗಿ ವನಿತೆಯ ಮಾನಿಸದಲಿಹ ಪರಮಹಂಸನು ಮಾನುಷಾಕೃತಿಯಾಗಿ ತೋಱಿದ ಬಾಹ್ಯರಚನೆಯಲಿ (ಕುಪ್ರಾಳ. ೦೬-೩೩). [ಧ್ಯಾನ + ಗೋಚರ]

**ಧ್ಯಾನಚತುಷ್ಟಯ** (ನಾ). [ಜೈನ] ಆರ್ತ, ರೌದ್ರ, ಧರ್ಮ ಮತ್ತು ಶುಕ್ಲ ಎಂಬ ನಾಲ್ಕು ಬಗೆಯ ಧ್ಯಾನ : ಆರ್ತರೌದ್ರಧರ್ಮಶುಕ್ಲಾಭಿಧಾನಧ್ಯಾನಚತುಷ್ಟಯಮುಮಂ (ಸುಕುಮಾ. ೩-೩೯ ವ). [ಧ್ಯಾನ + ಚತುಷ್ಟಯ]

**ಧ್ಯಾನಚಿತ್ತ** (ನಾ). ಏಕಾಗ್ರಚಿತ್ತದಿಂದ ಚಿಂತನೆ ಮಾಡುವವನು ; ಧ್ಯಾನದಲ್ಲಿ ಮನಸ್ಸನ್ನಿಟ್ಟವನು : ಶಿವಸಂಗಧ್ಯಾನಚಿತ್ತಂ ಶಿವಚರಣಲತಾಪುಷ್ಪವೃಂದಾಯಮಾನಂ (ಸಂಶಿ. ೨ ಸೂತವ). [ಧ್ಯಾನ + ಚಿತ್ತ]

**ಧ್ಯಾನತತ್ಪರ** (ನಾ). = ಧ್ಯಾನಪರಾಯಣ : ಹಗಲು ಹಸಿವಿನ ಚಿಂತೆ ಇರುಳು ವಿಷಯದ ಚಿಂತೆ . . . ಇವು ಮಾದಲ್ಲದೆ ಸದಾಶಿವನ ಧ್ಯಾನತತ್ಪರನಾಗಿ ಶಿವತತ್ತ್ವವಿಚಾರದೊಳಗಿರಲೊಲ್ಲನು ನೋಡಾ (ಸಿದ್ಧೇವ. ೪೫-೧೨೮) ; ಹುಕ್ಕನು ... ಕೈಜೋಡಿಸಿ ಕಣ್ಣು ಮುಚ್ಚಿಕೊಂಡು ಗುರುಧ್ಯಾನತತ್ಪರನಾಗಿ ಕುಳಿತುಕೊಂಡುಬಿಟ್ಟನು (ಮಾಧವ. ೯೩). [ಧ್ಯಾನ + ತತ್ಪರ]

**ಧ್ಯಾನದರ್ಶಿತ** (ಗು). ಧ್ಯಾನಕ್ಕೆ ಗೋಚರವಾಗುವ ; ಧ್ಯಾನದಿಂದ ತೋರಿಸಲ್ಪಟ್ಟ : ಕೇವಲ ಧ್ಯಾನದರ್ಶಿತಾನುಭವಗಳಿಂದಲೂ ಸೌಂದರ್ಯಾನುಭವಸಾಧ್ಯ (ಸೌಂದಸ. ೭೮) ; ಧ್ಯಾನದರ್ಶಿತ ದೇವತೆಗಳ ಈ ವರ್ಣನೆಯೇ ಮುಂದಿನ ಶಿಲ್ಪಕಲಾಚಾರ್ಯರ ಪರಿಭಾವನೆಯ ವಸ್ತುಗಳಾಗಿ, ಭಾರತೀಯ ದೇವದೇವತಾವಿಗ್ರಹಗಳ ಮಾದರಿಗಳೂ ಆದುವೆನ್ನುವುದು ಗಮನಾರ್ಹವಾದ ಸಂಗತಿ (ಸೌಂದಸ. ೯೯). [ಧ್ಯಾನ + ದರ್ಶಿತ]

**ಧ್ಯಾನನಿಯೋಗವಾದ** (ನಾ). [ಅದ್ವೈತ] ಪರಬ್ರಹ್ಮದ ಚಿಂತನೆಯಿಂದ ಉಂಟಾದ (ನಿಯೋಗವೆಂಬ) ಪುಣ್ಯಸಂಸ್ಕಾರದ ಮೂಲಕ ಮೋಕ್ಷವು ಲಭ್ಯವಾಗುವುದೆಂಬ ಸಿದ್ಧಾಂತ, – ತತ್ತ್ವ : ಇದರಲ್ಲಿ ಧ್ಯಾನನಿಯೋಗವಾದ, ನಿಷ್ಪ್ರಪಂಚೀಕರಣನಿಯೋಗವಾದ ಇವೇ ಮೊದಲಾದ ಪ್ರಭೇದಗಳಿರುವುವು (ಹಿಂದಸಾ. ೩೨೩). [ಧ್ಯಾನ + ನಿಯೋಗ + ವಾದ]

**ಧ್ಯಾನಪರ** (ಗು). ೧. (ಪರಮಾತ್ಮನ) ಚಿಂತನೆಯಲ್ಲಿ ಮನಸ್ಸನ್ನಿಟ್ಟ. (ನಾ). ೨. (ಪರಮಾತ್ಮನ) ಚಿಂತನೆಯಲ್ಲಿ ಮನಸ್ಸನ್ನಿಟ್ಟವನು : ಆ ನಗರದೊಳ್ಕುಂತಳೇಶ್ವರಂ ನಿರ್ಮಲಜ್ಞಾನದಿಂ . . . ಧ್ಯಾನಪರನಾಗಿರ್ಪನು (ಜೈಮಿಭಾ. ೩೦-೪೩) ; ಬಾಲ್ಯದಿಂದೆ ನೀನಗಧರಧ್ಯಾನಪರನಾಗಿರ್ಪೆ (ಜೈಮಿಭಾ. ೩೦-೭೦). [ಸಂ.]

**ಧ್ಯಾನಪರಾಯಣ** (ನಾ). ಚಿಂತನೆಯಲ್ಲಿ ಆಸಕ್ತನಾದವನು, – ಮಗ್ನನಾದವನು, — ತನ್ಮಯನಾದವನು : ತ್ರಿಜಗದ್ಗುರುವೇ ಗುರುವೊದು ತತ್ಪದಸರಸಿಜಧ್ಯಾನಪರಾಯಣನಾಗಿ (ಆದಿಪು. ೧೬-೭೨ವ). [ ಧ್ಯಾನ + ಪರಾಯಣ ]

**ಧ್ಯಾನಬಲ** (ನಾ). ಧ್ಯಾನದಿಂದ ಉಂಟಾಗುವ ಶಕ್ತಿ ; ಸತತವಾದ ಚಿಂತನೆಯಿಂದ ಒದಗುವ ಬಲ ; ಆಧ್ಯಾತ್ಮಿಕ ಚೈತನ್ಯ : ನಿಯಾಮುವ ನಾಂತು ಜಲಿಸುವ ವಾಗ್ವಿಷೀಯ್ಯದಲೆಂತು ಮಾಯಾವಿಲಯುವಪ್ಪುದು ಧ್ಯಾನಬಲಮಿರದೇ (ಗಗಕಾ. ೧೦-೨೦). [ ಧ್ಯಾನ + ಬಲ₃ ]

**ಧ್ಯಾನಮಗ್ನ** (ನಾ). = ಧ್ಯಾನಪರಾಯಣ : ಆಗ ತ್ರಿಕಾಲಜ್ಞಾನಿಯಾದ ಋಷಿಯು ಸ್ವಲ್ಪ ಹೊತ್ತು ಧ್ಯಾನಮಗ್ನನಾದನು (ಮುಣಿಸ. ೭೩). [ ಧ್ಯಾನ + ಮಗ್ನ ]

**ಧ್ಯಾನಮುದ್ರೆ** (ನಾ). ಚಿಂತನೆಯಿಂದ ಕೂಡಿದ ಮುಖಭಾವ : ಲಕ್ಷ್ಯೈಕಾಗ್ರತೆಯಿಂ ಧ್ಯಾನಮುದ್ರಾಸಮನ್ವಿತನಾಗಿ ಕುಳ್ಳಿರ್ದು (ವಿವೇಳ. ೦೦೩) ; ಅವನ ಮುಖ ಧ್ಯಾನಮುದ್ರೆಯಿಂದ ಗಂಭೀರವಾಗಿತ್ತು (ಪುನರು. ೬೩). [ ಧ್ಯಾನ + ಮುದ್ರೆ ]

**ಧ್ಯಾನಯೋಗ** (ನಾ). = ಧ್ಯಾನ ೩ : ಧ್ಯಾನಯೋಗಾದಿಗಳಿಂ ತನ್ನೊಳ ಪೊಱಗೆಲ್ಲಮುಂ ದೇವತಾತಾದಾತ್ಮ್ಯಮಂ ಪಡೆದು (ವಿವೇಳ. ೦೦೩) : ಶುದ್ಧಪ್ರಸಾದಜ್ಯೋತಿಯು ಧ್ಯಾನಿಸುವುದೇ ಧ್ಯಾನಯೋಗ (ಅಙಂಡೀ. ೨೨೦-೮೦) ; ಮರೆಯನೆಯದದು ಧ್ಯಾನಯೋಗವು (ಗಗಕಾ. ೨೦-೦೮) ; ದೇಹೇಂದ್ರಿಯವಿಷಯುಗಳನ್ನೆಲ್ಲಾ ದೃಶ್ಯಭಾವದ ಅಕ್ಷರವನ್ನು ಮಾಡಿಕೊಂಡು ಆತ್ಮಧ್ಯಾನದಲ್ಲಿಯಿರುವದೇ ಧ್ಯಾನಯೋಗಯೆಂಬುವದು (ತತ್ವಚಿಂ. ೨೭-೦೪). [ ಧ್ಯಾನ + ಯೋಗ ]

**ಧ್ಯಾನಯೋಗಿ** (ನಾ). ಧ್ಯಾನ ಮಾಡುವವನು ; ತಪಸ್ವಿ : ಧ್ಯಾನಯೋಗಿಯು ಏಕಾಂತಮನಸ್ಕನಾಗಿ, ಪ್ರತ್ಯೇಕನಾಗಿ ಭಾವಗಳನ್ನು ಚರ್ಚಿಸುತ್ತಾನೆ (ಬಂಕಿಮು. XXII, ಮುನ್ನುಡಿ). [ ಸಂ. ಧ್ಯಾನಯೋಗಿನ್ ]

**ಧ್ಯಾನಶೀಲ** (ಗು). ೧. ಚಿಂತನಶೀಲವಾದ ; ಯೋಚನಾಪರ. (ನಾ). ೨. ಧ್ಯಾನಮಗ್ನನಾದವನು ; ಚಿಂತನಶೀಲ. [ ಸಂ. ]

**ಧ್ಯಾನಸ್ಥ** (ಗು). ೧. = ಧ್ಯಾನಶೀಲ ೧ : ಧ್ಯಾನ ಮಾಡುತ್ತ ಕುಳಿತ ಕೂಡಲೆ ಗುರುವಿನ ಧ್ಯಾನಸ್ಥಮೂರ್ತಿಯು ಪ್ರತ್ಯಕ್ಷ ನನ್ನ ಎದುರಿಗೆ ಬಂದು ಕುಳಿತುಕೊಳ್ಳುವುದರಿಂದ, ಆ ದಿವ್ಯಮೂರ್ತಿಯ ದರ್ಶನಾನಂದದೊಳಗೆ ನನಗೆ ಯಾವುದೂ ಬೇಡಾಗುತ್ತದೆ ! (ಮಾಧವ. ೯೨). (ನಾ). ೨. = ಧ್ಯಾನಶೀಲ ೨: ಧ್ಯಾನಸ್ಥನಾಗುವ ಮೊದಲು ಹೀಗೆ ಕರ್ತವ್ಯಭ್ರಷ್ಟನಾಗಿ ಕುಳಿತುಕೊಳ್ಳುವದು ಯೋಗ್ಯವಲ್ಲೆಂದು ಪಶ್ಚಾತ್ತಾಪಪಡುವೆನು (ಮಾಧವ. ೯೨) ; ಧ್ಯಾನಸ್ಥನಾಗಿರುವ ತಪಸ್ವಿಯೊಬ್ಬನ ತಲೆಯನ್ನು ಕತ್ತಿ ಹಿಡಿದಿರುವ ಸೈನಿಕನೊಬ್ಬನು ಕತ್ತರಿಸಿದ್ದಾನೆ (ಕಲಾಅ. ೩೪೭). [ ಸಂ. ]

**ಧ್ಯಾನಾತೀತ** (ನಾ). ಚಿಂತನೆಗೆ ಮೀರಿದುದು ; ಪರಾತ್ಪರವಸ್ತು ; ಪರಮಾತ್ಮ : ಧ್ಯಾನ ಮೌನವನಱಿಯೆ ಧ್ಯಾನಾತೀತ ತಾನೆಯಾಯಿತ್ತಾಗಿ ಜ್ಞಾತೃಜ್ಞಾನಜ್ಞೇಯಂಗಳೆಲ್ಲವೂ ವಿನಾಟಿ ಅಭಿನವಮಲ್ಲಿಕಾರ್ಜುನನಲ್ಲಿ ಪರಮಸುಖಿಯಾದೆನು (ವಚಸಂ ೩೦೩-೪೨). [ ಧ್ಯಾನ + ಅತೀತ ]

**ಧ್ಯಾನಾಧೀನ** (ಗು). ಚಿಂತನೆಗೆ ಒಳಗಾದ ; ಧ್ಯಾನಪರವಾದ : ಸುಧರ್ಮಾಚಾರ್ಯರುಜ್ಜಯಂತಪರ್ವತದೊಳಾಧ್ಯಾತ್ಮಧ್ಯಾನಾಧೀನಮಾನಸರಾಗಿ ಘಾತಿಕರ್ಮಂಗಳಂ ಘಾತಿಸಿ ಕೇವಲವಿಭೂತಿಯಂ ಪಡೆದು (ಸುಕುಮಾ. ೪-೨೪) ; ಧ್ಯಾನಾಧೀನಮನಂ ಮುನೀಂದ್ರನಿರೆ ಕರ್ಮಂ ಘಾತಿಸಂಘಾತಮಾ ಧ್ಯಾನೋಗ್ರಾನಳನಿಂದಮಂದುರಿಯೆ (ಮಹಾನೇ. ೩-೧೪೩). [ ಸಂ. ]

**ಧ್ಯಾನಾನಂದ** (ನಾ). ಪರಬ್ರಹ್ಮದ ಚಿಂತನೆಯಿಂದ ದೊರಕುವ ಆನಂದ: ' ಥಿಯೊರಿಯಾ ' ಎಂದರೆ ' ಧ್ಯಾನಾನಂದ'. ಅದು ದೇವನ ಒಂದು ಲಕ್ಷಣ. ಮನುಷ್ಯನ 'ಧ್ಯಾನಾನಂದ' ಅನುಭವವು ದೇವನ 'ಧ್ಯಾನಾನಂದ'ದ ಅಂಶವೇ ಎಂದು ಹೇಳಬಹುದು (ಧರ್ಮಶಾ. ೧೪೪). [ ಧ್ಯಾನ + ಆನಂದ ]

**ಧ್ಯಾನಾರೂಢ** (ನಾ). ೧. ಧ್ಯಾನವನ್ನು ಕೈಕೊಳ್ಳುವುದು ; ಪರತತ್ವದ ಚಿಂತನೆ: ಶ್ರೀನಾ[ರೀ]ನಿಳೆಯಂ ಶ್ರೀವಿಮಾನಾಂಬರ ದಿವ್ಯಸ್ಥಾ[ನಾ] [ಮೋ]ದಿ ಚೂಡಾಮಣಿಮುನಿಪಂ ಧ್ಯಾನಾರೂಢದೆ ನೋಡಿ ತಾವೊಪ್ಪೆ ಕೇವಳಜ್ಞಾನ ಪ್ರಸಿದ್ಧಪೋಲ್ ಪ್ರಕಟಿಸಿದ (ಕಶಾಅ. ೩೪-೩೩-೨ : ?). ೨. ಧ್ಯಾನವನ್ನು ಕೈಗೊಂಡವನು. [ ಧ್ಯಾನ + ಆರೂಢ ]

**ಧ್ಯಾನಿ** (ನಾ). ಪರತತ್ತ್ವವನ್ನು ಕುರಿತು ಚಿಂತಿಸುವವನು ; ಧ್ಯಾನಶೀಲ : ವಿಗತೇಂದ್ರಿಯಾ ಮನೋವಿಷಯನಭವಾನವರತಂತರ್ಗತಧ್ಯಾನಿ (ಬಸವು. ೩೩-೧) ; ಕಣ್ಣಿನಲ್ಲಿ ಕಾಮ ಮನದಲ್ಲಿ ಕ್ರೋಧ . . . ಅಱುಹಿನಲ್ಲಿ ಮಾಯಾ ಉಳ್ಳನ್ನಕ್ಕರ ಎಂತು ಭಕ್ತನೆಂಬೆ . . . ಎಂತು ಧ್ಯಾನಿಗಳೆಂಬೆ ಎಂತು ಅನುಭಾವಿಗಳೆಂಬೆ (ಸಿದ್ಧೇವ. ೯೧-೨೭೩). [ ಸಂ. ಧ್ಯಾನಿನ್ ]

**ಧ್ಯಾನಿಸು** (ಕ್ರಿ). ೧. ಪರತತ್ತ್ವವನ್ನು ಕುರಿತು ಚಿಂತಿಸು ; ಧ್ಯಾನಮಾಡು: ಶುಕ್ಲಧ್ಯಾನಮಂ ಧ್ಯಾನಿಸಿ ಎಂಟು ಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆ ಪೋದರ್ (ವಡ್ಡಾರಾ. ೧೧೪-೦೭) : ನಾಲ್ಕುಂ ಧರ್ಮಧ್ಯಾನಮಂ ಧ್ಯಾನಿಸುತ್ತುಂ (ಆದಿಪು. ೧೦-೧೪ವ) ; ಇಂತೀ ತ್ರಿಶುದ್ಧಿಗಳಿಂ ಧ್ಯಾನಿಸುವೆಮ್ಮನೋತೆಱಗುವೆಮ್ಮಂ ಬಾದಿಪೆಮ್ಮಂ ತ್ರಿಕಾಲಗಯೋಗರ್ ಪರಮೇಶ್ವರರ್ ಪರಮಗಿಂ ವಾತ್ಸಲ್ಯದಿಂ (ಶಾಂತಿಪು. ೧-೩) : ಪ್ರಶಸ್ತಧ್ಯಾನಮಂ ಧ್ಯಾನಿಸುವಾಗಳ್ (ಅಜಿಪು. ೮-೨೮ವ) : ಜಾನಿಪೊಡೆ ಚತುರ್ಭುಜನಂ ಧ್ಯಾ[ಪಾಠಾಂ. ಜಾ] ನಿಪ್ಪುದೋ ಮೇಣ್ದಶಾವತಾರದ ರೂಪಂ ಧ್ಯಾ [ಪಾಠಾಂ. ಜಾ] ನಿಪ್ಪುದೊ (ಸಮುಪ. ೮-೧೪೩): ಷಡ್ವಸ್ತುವಂ ಷಡ್ಚಕ್ರಭುವನೇಜಮಧ್ಯದೊಳ್ ಧ್ಯಾನಿಸಿ (ಪದ್ಮರಾ. ೨-೪೮) ; ರುದ್ರಾಣಿ ಘನಧೈರ್ಯದಿಂದೆ ಸಾನುರಾಗದೆ ತನ್ನ ಹೃತ್ಕಮಲಮಧ್ಯದೊಳ್ ಧ್ಯಾನಿಸಿದಳೀಶನಂ (ಶಬಪು. ೩೭-೩). ೨. ಚಿಂತನೆ ಮಾಡು ; ಗಮನದಲ್ಲಿಡು : ಆಲೋಚಿಸು : ಗಗನವಂ ಪೃಥ್ವಿಯಂ . . . ಭದ್ರವೀರಸೌಂದರ್ಯವಂ, ಧ್ಯಾನಿಸುತೆ ಭಾವಿಸುತೆ ರೂಪಿಸುತೆ ಕಾವಿಸಿದನಾ ಭೂಮಿಪಂ (ಶ್ರೀರಾಮಾ. ೧೨-೩೧೦) ; ಪರಿಭಾವಿಸು ! ಆಸ್ವಾದಿಸು ! ಧ್ಯಾನಿಸು ! ಒಂದಾಗು ! (ಅನಿಕೇ.೦೮-೧೦). ೩. ಆತ್ಮಚಿಂತನೆ ಮಾಡು; ಆತ್ಮವನ್ನು ಕುರಿತು ಚಿಂತಿಸು: ದೇಹ ಬೇಱಾತ್ಮ ಬೇಱೆಂದಾತ್ಮ ಕಲೆಯು ಮುನ್ನೊಲ್ದು ಧ್ಯಾನಿಸಿದ ಫಲದಿಂದ ದೊರೆಕೊಂಡುದಾ ರಾಯಗಾ ರೂಪು (ಭರೆಕ. ೦-೩೪); ಧ್ಯಾನಿಸಿದನೊಂದೆರಡು ಗಳಿಗೆ (ಜೈಮಿಭಾ. ೦೦-೩೭). [ ಧ್ಯಾನ + –ಇಸು₃ ]

**ಧ್ಯಾಮ** (ನಾ). ೧. (ಒಂದು ಬಗೆಯ) ಸುಗಂಧಪೂರಿತವಾದ ಹುಲ್ಲು ; ಸುವಾಸನೆಯನ್ನು ಬೀರುವ ಹುಲ್ಲು. ೨. ಹಂಚೀಕಡ್ಡಿ : " ಕತ್ತೃಣಂ ಪೌರಂ, ಸೌಗಂಧಿಕಂ, ಧ್ಯಾಮಂ [ಪಾಠಾಂ. ಧ್ಯಾಯಂ], ದೇವಜಗ್ಧಕಂ, ರೌಹಿಷಂ – ೭ ಕಾಚೀಹುಲ್ಲು, ಕಾಚೀಕಡ್ಡಿ, ಹಂಚೀಕಡ್ಡಿ, ಬರಗುಕಡ್ಡಿ, ಇವುಗಳೆಲ್ಲಕ್ಕೂ ಹೆಸರುಗಳು " (ಸಿದ್ಧಾಂತಿ. ೦೩೦). [ ಸಂ. ]

**ಧ್ಯಾಸ, ದ್ಯಾಸ** (ನಾ). ೧. ಚಿಂತನೆ ; ಧ್ಯಾನ : ಈ ಸಾಧನಶಾಸ್ತ್ರದಲ್ಲಿಯ ಭವತಾರಕರು ಹೇಳುವ ಮೊದಲನೆಯ ಅಂಶವು ನ್ಯಾಸ ಮತ್ತು ಧ್ಯಾಸ ಎಂಬುದು (ಪಂಪ. ೩೮) ; ರಂಗಕ್ಕನಿಗೆ ಮಾತ್ರ ಆ ಶೀರೆಯ ಧ್ಯಾಸ ಬಿಡಲಿಲ್ಲ (ದೀಪಪ. II, ೦೨೨). ೨. ಎಚ್ಚರ ; ಪ್ರಜ್ಞೆ ; ಅರಿವು : ಅಲ್ಲಿದ್ದವರಿಗೆ . . . ಅಜಿತ ಮನೋರಮೆಯ ವಿಷಯದಲ್ಲೂ ಧ್ಯಾಸವಿರಲಿಲ್ಲ (ಶೀಪ್ರಕ್ರಿ. ೩೨) : ನಾನು ಎರಡು ಸಲ ಕೂಗಿದೆ, ನಿನಗೆ ಇತ್ತ ಧ್ಯಾಸವೇ ಇರಲಿಲ್ಲ (ಮಳಿಮು. ೩೭); ಅವನ 'ಧ್ಯಾಸ'ವೇನೂ ಅತ್ತ ಇದ್ದ ಹಾಗಿಲ್ಲ (ಡಂಗಾಗ್. ೭). ೩. ನೆನಪು ; ಜ್ಞಾಪಕ . ನನಗೆ ಬಂದೂನ ಕ್ರಾಪಿನದೇ ಧ್ಯಾಸ (ವ್ಯನಿ. ೭೦) : ಅದರ ಧ್ಯಾಸವೇ ಉಳಿಯಲಿಲ್ಲ (ಕನಕ. ೨೭). ೪. ಲಕ್ಷ್ಯ ; ಗಮನ : ಬರೇ ತಿನುವರ ಕಡೇನ ಧ್ಯಾಸಾ (ದೀಪಪ. II, ೫೭).

**ಧ್ಯಾಸ :** ೨. "ಸ್ವಾಮಿಗೆ ಯಾಕೋ ಹೊರಗಿನ ಧ್ಯಾಸೇ ಇಲ್ಲ" ಎಂದು ಅವರ ಗಮನವನ್ನು ತನ್ನತ್ತ ಸೆಳೆದ (ಸುತಸಂ. ೭೯). ೩. ನೆನಪು : (ಧ್ಯಾಸ-ನೆನಪು ಜಾನಪಕೋ. ೪).

**ಧ್ಯಾಸ ಬರು** = ಗಮನಕ್ಕೆ ಬರು ; ಲಕ್ಷ್ಯಕ್ಕೆ ಬರು : ಅವನ ದನ ಸೋತಿದ್ದುದು ಧ್ಯಾಸ ಬಂದಿತು ಮೇಖಳೆಗೆ (ಅಳಾಳ. ೦೫೬).

[ ←ಮರಾ. ಧ್ಯಾಸ ]

**ಧ್ಯೇಯ** (ಗು). ೧. ಉದ್ದೇಶಿಸಿದ ; ಲಕ್ಷಿಸಿದ : ಸಮಾಧಿಯೆಂದರೆ ಈ ಧ್ಯಾನವೆಂಬ ಅತಿ ಸ್ವಚ್ಛಚಿತ್ತವೃತ್ತಿಪ್ರವಾಹಕ್ಕೂ ಧ್ಯೇಯವಸ್ತುವಿಗೂ ಭೇದ ತೋರದೆ ಧ್ಯೇಯವಸ್ತು ಸ್ವರೂಪದಲ್ಲೇ ಲೀನವಾಗುವಿಕೆ. ಇದನ್ನು ಧ್ಯೇಯವಮಾತ್ರಸ್ಫೂರ್ತಿಯೆನ್ನುವರು (ಹಿಂದಸಾ. ೦೦೬). (ನಾ). ೨. ಲಕ್ಷ್ಯ ; ಉದ್ದೇಶ ; ಗುರಿ : "ಉದ್ದೇಶ ; ಗುರಿ; ಧ್ಯೇಯ" (Cause. ಪತ್ರಿಸಿ. ೧೩) ; ಜೀವನಕ್ಕೆ ಧ್ಯೇಯಪೂದಿದೆಯೆಂಬುದನ್ನು ಅರಿಯುವುದ ಕಷ್ಟ (ಶುಕ್ಮಾರ ೧. ಪೀಠಿಕೆ) ; ನಿರಂತರ ಸೇವೆಯೇ ನದಿಗಳ ಧ್ಯೇಯ (ನನದಿ. ೧೭) ; ಜೈನರಂತೆ ಶೈವರೂ ಸರ್ವಭೂತಹಿತವನ್ನೇ ತಮ್ಮ ಉಚ್ಚ ಧ್ಯೇಯವನ್ನಾಗಿ ಮಾರ್ಪಡಿಸಿಕೊಂಡರು (ಸಾಹಿಸ. ೦೩೪). ೩. ಧ್ಯಾನದ ವಸ್ತು,-ಗುರಿ : ಪ್ರಾಯೋಪಗಮನವಿಧಿಯಿಂ ಕಾಯಮಪನಳವಡಿಸಿ ವಿಮಳಶುದ್ಧಧ್ಯಾನಂ ಧ್ಯೇಯ [ಪಾಠಾಂ. ದೇಯ, ಧೇಯ]ದೊಳವುರೆ ಮುಮುಕ್ಷುಜ್ಯಾಯಂ ಪಂಡಿತಸಮಾಧಿವಿಧಿಯಂ ತಳೆದಂ (ಅನಂಪು. ೪-೩೭). ೪. ಆದರ್ಶ. 'ಧ್ಯೇಯಜೀವಿ', 'ಧ್ಯೇಯವಾದಿ' ಪರಾ. [ ಸಂ. ]

**ಧ್ಯೇಯಜೀವಿ** (ನಾ). ಉತ್ತಮ ಉದ್ದೇಶವನ್ನಿಟ್ಟುಕೊಂಡಿರುವವನು ; ಆದರ್ಶವಾದಿ : ಮೈ ಮನಸ್ಸನ್ನು ಮನ್ನಿಸದೆ, ಒಂದು ಕ್ಷಣ ಕುಳ್ಳಿರಲೂ ಒಲ್ಲದೆ, ಕರ್ಮನಿರತರಾಗುವುದು ಧ್ಯೇಯಜೀವಿಗಳ ಹುಚ್ಚು (ಕವಿಸಾ. IX. ಪೀಠಿಕೆ). [ ಸಂ. ಧ್ಯೇಯಜೀವಿನ್ ]

**ಧ್ಯೇಯವಸ್ತು** (ನಾ). ಧ್ಯಾನ ಮಾಡಬೇಕಾದ ವಸ್ತು ; ಪರಮಾತ್ಮ : ಧ್ಯಾನಯೋಗದ ಧ್ಯೇಯವಸ್ತುವೆ ತಾನೆನುತ (ಗಗಹಾ. ೦೬-೬೯) ; ಸಮಾಧಿಯೆಂದರೆ ಈ ಧ್ಯಾನವೆಂಬ ಅತಿಸ್ವಚ್ಛಚಿತ್ತವೃತ್ತಿಪ್ರವಾಹಕ್ಕೂ ಧ್ಯೇಯ ವಸ್ತುವಿಗೂ ಭೇದ ತೋರದೆ ಧ್ಯೇಯವಸ್ತುಸ್ವರೂಪದಲ್ಲೇ ಲೀನವಾಗುವಿಕೆ (ಹಿಂದಸಾ. ೦೦೬). [ ಧ್ಯೇಯ + ವಸ್ತು ]

**ಧ್ಯೇಯವಾದ** (ನಾ). ಉತ್ತಮವಾದ ಉದ್ದೇಶದ ಸಾಧನೆಯನ್ನು ಪ್ರತಿಪಾದಿಸುವ ವಾದ ; ಆದರ್ಶವಾದ : ಧ್ಯೇಯವಾದದ ಅಂತರಿಕ ಸ್ಫೂರ್ತಿಯು ಆತ್ಮದ ಅಮರವಾದ ಆಕಾಂಕ್ಷೆಗಳೊಳಗಿಂದಲೇ ಉದ್ಭವಿಸುತ್ತಿರುವುದು (ಪ್ರಬಂಧ. ೧೧೧) ; ಅವನು ಜೀವನದ ಎಲ್ಲ ವಿಷಯಗಳನ್ನೂ ಧ್ಯೇಯವಾದದ ದೃಷ್ಟಿಕೋನದಿಂದ ನೋಡುವ ಮನುಷ್ಯ (ದೂರಸ. ೪).

[ ಧ್ಯೇಯ + ವಾದ್ಯ ]

**ಧ್ಯೇಯವಾದಿ** (ನಾ). = ಧ್ಯೇಯಜೀವಿ : ಮೊದಲಿನಿಂದಲೂ ಕನ್ನಡರು ವೀರರು, ಉದಾತ್ತರು, ಧ್ಯೇಯವಾದಿಗಳು (ಧಾಷಾಹಾ. ೨೫೮).

[ ಸಂ. ಧ್ಯೇಯವಾದಿನ್ ]

**ಧ್ಯೇಯಸಾಧನೆ** (ನಾ). ಉದ್ದೇಶದ ಸಾಧನೆ ; ಗುರಿಯನ್ನುಮುಟ್ಟಲು ಮಾಡುವ ಪ್ರಯತ್ನ : ಧ್ಯೇಯಸಾಧನೆಯು ಪ್ರಯತ್ನವೂ ವಾಸನವನ ಸಹಜಪ್ರವೃತ್ತಿಯೇ ಹೊರತು ಕೃತಕವಲ್ಲ (ಶುಕ್ಮಾರ. ೦ ಪೀಠಿಕೆ).

[ ಧ್ಯೇಯ + ಸಾಧನೆ ]

**ಧ್ರುಪದ** 'ದುರಪದ' ನೋ.

**ಧ್ರುವ** (ಗು). ೧. ಸ್ಥಿರವಾದ ; ಅಚಲವಾದ. ೨. ನಿಶ್ಚಿತವಾದ ; ಸಂಶಯವಿಲ್ಲದ ; ದೃಢವಾದ. ೩. ನಿತ್ಯವಾದ ; ಬದಲಾಗದ ; ಶಾಶ್ವತ ; ನಿರಂತರ ; ಸತತ. (ನಾ). ೪. ನಿತ್ಯವಾದುದು ; ಸ್ಥಿರವಾದುದು ; ಶಾಶ್ವತವಾದುದು : "ಸತತಂ . . . ಧ್ರುವಮವಿರತಂ [ನಿರು]ತರಮಜಸ್ರಮೆನೆ ತಾಂ ನಿತ್ಯಂ" (ವಸ್ತುಕೋ. ೧೦೯-೬೭) ; "ನಿತ್ಯಂ ಧ್ರುವಂ ಶಾಶ್ವತಮದು ಸನಾತನಮನಶ್ವರಂ ಸ್ಥಿರಮೆನಿಕ್ಕು" (ಮಂಗರಾ. ೬-೨೫) ; ಧ್ರುವವಳಾ ರಾಜಾಗತೋರ್ಧ್ವರ್ವು ವಿದಿತವಿದ ನೀವಜಾಯಿರೇ (ಬಸವು. ೫೫-೮) ; ದಿವಿಜರಿವು ಕೇಳಲವೂ . . . ಧ್ರುವವು ನಿನಗಾಯುಷ್ಯ ವೆಂಬುತ್ಸವದಿ ನವ್ಮನು ಕಣಿಕಿ ಲಯವ್ಯತ್ಯುವಿನ ಕೈವಶವಾದ ನೀನೆಂದಸುರ ಹರ ನುಡಿದ (ತೊರರಾ. ೭-೩೦-೦೩) ; ಅಧ್ರುವವನು ತೂರಿ, ಧ್ರುವದೆದೆಯನು ತೋರಿ . . . ಪುಣ್ಯಸವಿಚಾರನು ಬರುತಿಹನು (ಪಾಂಚಜ. ೨೩-೭). ೫. ಉತ್ತಾನಪಾದರಾಯನ ಮಗ ; ಧ್ರುವಲೋಕದ ಅರಸು : ಲೋಕೋತ್ತರದ ಪದದಲಿ ನಿಂದನಾ ಧ್ರುವನಧಿಕತೇಜದಲಿ' (ನಿಭಾಗ. ೪-೯ ಸ೩೫ನ) ; ಕರಿ ಧ್ರುವ ಬಲಿ ಪಾಂಚಾಲಿ ಅಹಲ್ಯೆಯು ಪೊರೆದವ ನೀನಂತೆ (ಪುರಂದ. ೨-೭೦-೧) ; ಜಲಜಾಕ್ಷಭಕ್ತಿಯಿಂ ಪ್ರಹ್ಲಾದನಾಗಿ ನಿಶ್ಚಲ ಹರಿಧ್ಯಾನದಿಂ ಧ್ರುವನಾಗಿ (ಕೃಮಿಭಾ.೨೯-೦೪). ೬. ಒಂದು ನಕ್ಷತ್ರದ ಹೆಸರು. "ಧ್ರುವ:, ಔತ್ತಾನಪಾದಿ: - ೨ ಧ್ರುವನಕ್ಷತ್ರದ ಹೆಸರು" (ಸಿದ್ಧಾಂತಿ. ೩೦). 'ಧ್ರುವನಕ್ಷತ್ರ' ಪರಾ. ☞ ಧ್ರುವನು ನಾರದರಿಂದ ಮಂತ್ರೋಪದೇಶವನ್ನು ಪಡೆದು ತಪಸ್ಸನ್ನಾಚರಿಸಿ, ಸಾಮ್ರಾಜ್ಯವನ್ನಾಳಿ ಬಳಿಕ ಧ್ರುವಮಂಡಲವಾದನೆಂದು ಪುರಾಣಗಳಲ್ಲಿ ಹೇಳಿದೆ. ೭. ಎಂಟು ಜನ ವಸುಗಳಲ್ಲಿ ಒಬ್ಬ. 'ಅಷ್ಟವಸು' ಪರಾ. ೮. ಭೂಮಿಯ ಅಕ್ಷದ ಉತ್ತರ ಹಾಗು ದಕ್ಷಿಣದಿಕ್ಕಿನ ಕೇಂದ್ರಬಿಂದುಗಳು ; ಉತ್ತರಧ್ರುವ ಮತ್ತು ದಕ್ಷಿಣಧ್ರುವ : ಭೂಮಿಯು ತನ್ನ ಮೈಸುತ್ತು ಸರ್ವಕಾಲವೂ ತಿರುಗುತ್ತಿದ್ದಾಗ್ಯೂ ಅದರ ಬುಡ, ತಲೆ, ಇವೆರಡು ಬಿಂದುಗಳು ಸ್ಥಿರವಾಗಿ ಇರುತ್ತವೆ. ಈ ಸ್ಥಿರಬಿಂದುಗಳನ್ನು ಧ್ರುವಗಳೆಂದೆನ್ನುವರು (ಮುಂಬಯಿ. ೭-೭೦) ; ಪೂಜಕನೂ ಪೂಜ್ಯನೂ ಬೇರೆ ಬೇರೆ ಎಂಬುದರ ಕಲ್ಪನೆಗೂ ಇಬ್ಬರೂ ಒಂದೇ ಎಂಬ ಕಲ್ಪನೆಗೂ ಎರಡು ಧ್ರುವದ ಅಂತರ (ಭಾರದ. ೨೮೪) ; ಇಂದ್ರಿಯಾನುಭವಕ್ಕೆ ಪ್ರತಿಭಾಸವೂ ಭಾವನೆಗೆ ಆಲೋಚನೆಯೂ ಎದುರು ಧ್ರುವಗಳಂತಿವೆ (ಶಿಕ್ಷರ. ೬೩೩). ೯. ಅಯಸ್ಕಾಂತದ ಪ್ರತಿತುದಿಯಲ್ಲೂ ಇರುವ ಪ್ರದೇಶ : ಕಬ್ಬಿಣವನ್ನು ಆಕರ್ಷಿಸುವ ಗುಣವನ್ನೇ ಕಾಂತತ್ವವೆಂದು (Magnetism) ಕರೆಯುವರು. ಈ ಗುಣವು ಕಾಂತದ ತುದಿಯಲ್ಲಿ ಹೆಚ್ಚಾಗಿದೆ . . . ಹೀಗೆ ಈ ಗುಣವು ಕೇಂದ್ರೀಕೃತವಾಗಿರುವ ಸ್ಥಾನಗಳನ್ನು ಕಾಂತದ ಧ್ರುವಗಳೆಂದು (Poles) ಕರೆಯುತ್ತೇವೆ (ಭೌತವಿ. ೩೦೦). ೧೦. ಕಂಬ ; ಗೂಟ : "ಧ್ರುವಂ ಶಂಕ್ವಾಖ್ಯಂ" (ವಸ್ತುಕೋ. ೩೧-೭) ; "ಗೂಂಟ ಮತ್ತೆ ಶಿವಕಂ ಧ್ರುವಂ ಪುಳಕಮೆನಿಸಿಕ್ಕು" (ಮಂಗರಾ. ೮೫-೨೭). ೧೧. (ಕೊಂಬೆ, ರೆಂಬೆಗಳನ್ನು ತರಿದ) ಮರದ ಬೊಡ್ಡೆ,-ಕಾಂಡ ; ಮೋಟುಮರ ; ಮರದ ತುಂಡು : "ಸ್ಥಾಣು:, ಧ್ರುವ:, ಶಂಕು:-೩ ಮೋಟನ ಹೆಸರು. ಗೂಟ, ಮೇಕು" (ಸಿದ್ಧಾಂತಿ. ೧೧೧). ೧೨. ಎಣ್ಣೆಯ ಗಾಣದಲ್ಲಿ ಉಪಯೋಗಿಸುವ ಮರದ ತುಂಡು,-ದಿಮ್ಮಿ. ೧೩. [ಜ್ಯೋತಿ] ವಿಷ್ಕಂಭ ಮೊದಲಾದ ಇಪ್ಪತ್ತೇಳು ಯೋಗಗಳಲ್ಲಿ ಹನ್ನೆರಡನೆಯದು ; ☞ ಇದೊಂದು ಶುಭ ಯೋಗವೆಂದು ಹೇಳುತ್ತಾರೆ : ವಿಷ್ಕಂಭ ಪ್ರೀತಿ ಆಯುಷ್ಮಾನ್ ಸೌಭಾಗ್ಯ ಶೋಭನ ಅತಿಗಂಡ ಸುಕರ್ಮ ಧೃತಿ ಶೂಲ ಗಂಡ ವೃದ್ಧಿ ಧ್ರುವ ವ್ಯಾಘಾತ ಹರ್ಷಣ ವಜ್ರ ಸಿದ್ಧಿ ವ್ಯತೀಪಾತ ವರೀಯಾನ್ ಪರಿಘ ಶಿವ ಸಿದ್ಧ ಸಾಧ್ಯ ಶುಭ ಶುಕ್ಲ ಬ್ರಹ್ಮ ಐಂದ್ರ ವೈಧೃತಿ ಗಳೆಂಬಿಪ್ಪತ್ತೇಳು ಯೋಗಂಗಳುಂ (ವಿವೇಕ. ೩೩೦) ; ಯೋಗಗಳತಿಶಯವನರಿಯ್ಯೆಯ್ಯ ಪೇಳುವೆ ವ್ಯತಿಯು ಧೃತಿ ವಿಷ್ಕಂಭ ಶೂಲವು . . . ಧ್ರುವ ಪರಿಘ (ಗಗಹಾ. ೪-೬೪). ೧೪. [ಸಂಗೀತ] ಒಂದು ತಾಳದ ಹೆಸರು : ಬೇಗದಿ ಧ್ರುವ ಮಠೆಯವು ಪಡಿಮಾಕೆಯವು ಯೇಗೈದುಲಡತಾಳಗಳು (ತರಗಳ. ೭-೫೭) ; ಧ್ರುವ, ಮಠ್ಯ, ರೂಪಕ, ಜಂಪೆ, ತ್ರಿಪುಟ, ಅಟ್ಟ,

**ನಂಟಸ್ತ, ನೆಂಟಸ್ತ** (ನಾ). ಬಾಂಧವ್ಯವುಳ್ಳವನು; ಬಂಧಂ. 'ನಂಟಸ್ತಿಕೆ' ಪರಾ. **ನೆಂಟಸ್ತ**. 'ನೆಂಟಸ್ತಿಕೆ' ಪರಾ. [ <ನಂಟು$_2$ + – ಸ್ತ ]

**ನಂಟಸ್ತನ, ನೆಂಟಸ್ತನ** (ನಾ). = ನಂಟತನ : ಸಮುದ್ರದ ನಂಟಸ್ತನ ಉಪ್ಪಿಗೆ ಬಂಡಾಟ (ಹುಟ್ಟಿಹ. ೬೯); ಯೋಗ್ಯರಾದವರೊಂದಿಗೆ ನಂಟಸ್ತನ ಮಾಡಬೇಕು (ರೂಢಿ). **ನೆಂಟಸ್ತನ :** ಈ ಗೆದ್ದಲಿರಾಯನ ನೆಂಟಸ್ತನ ಸಾಹಿತ್ಯದೊಡನೆ ಅಷ್ಟೇ ಅಲ್ಲ, ಕಂಬಳಿಯೊಡನೆಯೂ ಇದೆಯೋ–ಎಂದು ಕೊಂಡೆ (ಮಾಂಗಾಪು. ೦೬). 'ದೊಡ್ಡಸ್ತನ' ಪರಾ.

[ < ನಂಟಸ್ತ + – ತನ ]

**ನಂಟಸ್ತಿಕೆ, ನೆಂಟಸ್ತಿಕೆ** (ನಾ). = ನಂಟತನ : ಆ ಎರಡು ಮನೆತನಗಳ ನಡುವೆ ಮದುವೆಯ ನಂಟಸ್ತಿಕೆ ಕೂಡ ಬೆಳೆದಿತ್ತು (ನೋಳಂಲ. ೬೨); ಈಗಿನ ಕಾಲದಲ್ಲಿ ನಂಟಸ್ತಿಕೆ ಹೆಚ್ಚಿದಷ್ಟೂ ಸಂಸಾರ ನಿಭಾಯಿಸುವುದು ಕಷ್ಟ (ರೂಢಿ). **ನೆಂಟಸ್ತಿಕೆ :** ನೆಂಟಸ್ತಿಕೆ ಬೆಳೆಸುವುದಕ್ಕಾಗಿ ನೀವೆ ಬಿಟ್ಟೂರಿಗೆ ಹೋಗ ಬೇಕಾಗುವುದು (ಘೂರಾಜಿ. ೩೩); ಹೋಗಲೇಬೇಕೆಂದು ಯೋಚಿಸಿ ಕೂಡಲೇ ಹೋಗಲು ಇಲ್ಲಿ ಚಿನ್ನದ ಕೊಪ್ಪರಿಗೆಯಿದೆಯೋ ಅಥವಾ ಕುಬೇರನ ನೆಂಟಸ್ತಿಕೆಯಿದೆಯೇ ? (ವಾತ್ಸಲ್ಯ. ೨೯). 'ದೊಡ್ಡಸ್ತಿಕೆ' ಪರಾ.

[ ನಂಟಸ್ತ + – ಇಕೆ ]

**ನಂಟಿಕೆ** (ನಾ). = ನಂಟತನ : ತಂಟೆಯಂವನ ನಂಟಿಕೆ ಸಲ್ಲ, ಒಂಟಿಯಾಗಿ ಹೋಗಸಲ್ಲ (ಗಾದೆ). [ ನಂಟ + – ಇಕೆ ]

**ನಂಟಿತಿ, ನೆಂಟಿತಿ, ನೆಂಟಿತ್ತಿ** (ನಾ). ನಂಟರವಳು ; ಸಂಬಂಧಿಯಾದವಳು: (+). **ನೆಂಟಿತಿ :** ಮನೆಗೆ ಬಂದ ನೆಂಟಿತಿಯರಿಗೆ ಉಡುಗೊರೆಯಾಗಿ ಕೊಡಲು ತಂದಿದ್ದ ಸೀರೆಗಳ ವಿಚಾರ ಸಲಹೆ ಕೊಡುವ ನೆವದಿಂದ . . . ತಿಳಿಯಲು ಪ್ರಯತ್ನಿಸುತ್ತಿದ್ದನು (ಮಾಳಿಮ. ೨೨೦). **ನೆಂಟಿತ್ತಿ :** ಮನೆಯ ಮಗಳೂ ನೆಂಟಿತ್ತಿಯ ಹಾಗೆ ಮದುವೆಯ ದಿನವೇ ಬಂದಿದ್ದಾಳೆ (ರೂಢಿ).

[ ನಂಟ + – ಇತಿ$_1$ (< – ಇತ್ತಿ) ]

**ನಂಟು$_1$** (ಕ್ರಿ). ತಾಗು ; ಕೂಡು : ಸೇರು: ಅವ್ರ ತಾಮ್ರ್ರರ್ಟನೊಳೊರ್ಮೆ ಕಂಡು ಕಿಡಿಯುಂ ಕೆಂಡಂಗಳಂ ಸೂಸೆ ನಂಟುವ [ಪಾಠಾಂ. ಗಂಟುವ, ತಾಗುವ, ನಂಟದ]ವೊಲ್ ಬೆಟ್ಟನೊಳೊಂದು ಬೆಟ್ಟು ಭವಬದ್ಧಕ್ರೋಧದಿಂ ಕಾಯ್ದು ತಾಗುವುದುಂ (ಅರ್ಧನೇ. ೯-೧೨೦).

[ ದೇ.॥ ತಮಿ. ನಣ್ಣು, ನಣಾಜ್ಯು, ನಣುಕು ]

**ನಂಟು$_2$, ನೆಂಟು** (ನಾ). ೧. ಸಂಬಂಧ ; ಬಾಂಧವ್ಯ : "ನಂಟಣ್ಪನಿಕ್ಕುಂ" (ಶಬ್ದಕ್ಕೆ. ೬೯); ಜವನೊಡವುಟ್ಟು ಮಾರಿಯೊಡನಾಡಿ ಲಯಾಗ್ನಿಯ ನಂಟು . . . ಸಿಡಿಲ ಸಂಗಡವಿನಾಶನ ಬೆಂಕೆಗಣ್ಣ ಬಾಂಧವನೆನೆ ಶೌರಿ ಮರ್ದಿಸಿದ ನಪ್ರತಿಮಲ್ಲರೆನಿಪ್ಪ ಮಲ್ಲರು (ಜಗವಿ. ೬-೭೩); ಕೆಳೆತನದ ನಂಟು [ಪಾಠಾಂ. ಬಂಧು] ವಿಷಯದ ಬಂಧುಮಾತುಗಳ ಬಲದೊಳಾಂ ಕವಿಯೆಂದು ಕವಿರಾಯ ನೆಂದು ವೆಗ್ಗಳಿಸಿ . . . ನಂಟನೀಡಾಡಿ ಮಲೆತು (ಹಕಳಾ. ೧-೩೦); ಕರಕಷ್ಟರೊಳು ನಂಟದೇತಕಳಿ ಶುಭವನೆಣಿಸು (ಮಂಕಾರಾ. ೩-೯-೬); ಹಳಗನ್ನಡಕ್ಕೂ ತಮಿಳಿಗೂ ಇರುವ ನಿಕಟವಾದ ನಂಟು ನೋಡಬೇಕಾದುದು (ದ್ರಾವಿವಿ. ೧೧೨); ಸಮುದ್ರದ ನಂಟು ಉಪ್ಪಿಗೆ ಬಡತನ (ಗಾದೆ). 'ನಂಟು ಗಾಣಿಸಂ' ಪರಾ. ೨. ಪ್ರೀತಿ ; ಪ್ರೇಮ : ನಂಟಂ ಬಯಸುತ್ತಿನಿಯನ ನಂಟ ಮಹಾತುರದಿನಪ್ಪಿ ಮೀಗೆ ಪುಳಕಿಸುತುಂ . . . ಜೋಡೆಯರ್ನೆರೆ ಯುತಂದೆಸೆದರ್ (ಉದ್ಭಟ. ೧೦-೦೧೩); ನನಗೂ ನಿನಗೂ ಅಂಟಿದ ನಂಟನ ಕೊನೆ ಬಲ್ಲವರಾರು ಕಾಮಾಕ್ಷಿಯೆ! (ಸಹೀಗೀ. ೪೬-೯೬೧). **ನೆಂಟು :** ೧. ಸ್ತುತಿಯಿಲ್ಲ ನಿಂದೆಯಿಲ್ಲ ನೆಂಟಿಲ್ಲ [ಪಾಠಾಂ. ನಂಟಿಲ್ಲ, ನೆಂಟರಿಲ್ಲ] ಹಗೆಯಿಲ್ಲ ಅಱುಹಿಲ್ಲ ಮಱಹಿಲ್ಲ ತಾನೆಂಬ ನೆನಹಿಲ್ಲವಾಗಿ (ಆದವ. ೧೬೦-೩೮೫); ರಾಮಣ್ಣನ ನೆಂಟೂ ನಮಗೆ ಗಂಟುಬೀಳುತ್ತದೊ ಏನೋ (ಮಹಾಗ. ೩೩೧); ಅಕ್ಕನ ಹಗೆ ಭಾವನ ನೆಂಟು (ಗಾದೆ).

**ನಂಟು ಮಾಡು, ನೆಂಟು ಮಾಡು**=ಸಂಬಂಧವನ್ನು ಮಾಡು; ಬಾಂಧವ್ಯ ವನ್ನು ಬೆಳೆಸು : ವಧುವಂ ತಂದೀಯೆ ಮುನ್ನಿನ್ನ ಚಿತ್ರದೊಳಿರ್ದಂದದೆ ನಂಟು ಮಾಡಿ ಸಿರಿಯಿಂದೆನ್ನೊಳ್ ಸಮಂ ಮಾಳ್ಪಂ (ವರ್ಧಪು. ೬-೩೯); ನೀರೆಱೆದೋವಿದವರ ಕಾಲ ಕುಂಟು ಮಾಡುವ ಬೇಲದಂತೆ ಕಂಟಕವನು ಕಾಣವರು ಕೆಲಂಬರು ನಂಟು ಮಾಡುವ ಮಾನ್ಯರಿಗೆ (ಪ್ರಭಂಜ. ೧-೨೨); ಒಂದೇ ಗಂಡುದೇವರ ಒಕ್ಕಲಾಗಿದ್ದರೂ ಹೆಣ್ಣುದೇವರು ಬೇರೆ ಬೇರೆ ಯಾಗಿದ್ದರೆ ನೆಂಟು ಮಾಡುವುದುಂಟು (ಹುಟ್ಟಿಹ. ೨೩).

[ <ನಂಟು$_1$./ತಮಿ. ನಟ್ಟು, ನಣ್ಪು ; ತುಳು. ತೆಲು. ನಂಟು ]

**ನಂಟುಗಾಣಿಸು** (ಕ್ರಿ). ಹೊಂದಾಣಿಕೆಯನ್ನುಂಟುಮಾಡು; ಹೊಂದಿಸು: ಒಂಟಿದಂಡಿಗೆಯೊಳು ಹಲವು ದಂಡಿಗೆಯೊಳು ನಂಟುಗಾಣಿಸಿ ಶ್ರುತಿಮುಟ್ಟಿ ಮಂಟಪ ಗುಮುಗುಮುಗುಮ್ಮನೆ ಕೊರಳೆದೆಗಂಟಾಗಿ ಬಾಯದೋಱದರು (ಭರತೇ. ೦೮-೦೩೬). [ ನಂಟು$_2$ + ಕಾಣಿಸು ]

**ನಂಟುಗೊಳುಹ** (ನಾ). ಹೊಂದಾಣಿಕೆಯನ್ನುಂಟುಮಾಡಿಕೊಳ್ಳುವಿಕೆ ; ಸಂಬಂಧವನ್ನು ಸ್ವೀಕರಿಸುವಿಕೆ ; ಸಮನ್ವಯಂ ಮಾಡಿಕೊಳ್ಳುವಿಕೆ : "ಸಾಮ ಎಂದೊಡೆ ವಿನಯದಿಂ ನಂಟುಗೊಳುಹ" (ನಾಚಿರಾ. ೬).

[ ನಂಟು$_2$ + ಕೊಳುಹ ]

**ನಂಟುತನ, ನೆಂಟುತನ** (ನಾ). = ನಂಟತನ : ಹರಿ ಕರಿಕಳಭದುರುಬಂಧುತ್ವ ಫಣಿ ಮುಂಗುಲಿಯ ನಂಟುತನ . . . ಇರ್ದುದು ಬನದೊಳಾ ಮುನಿಯ (ತೊರರಾ. ೧-೫-೪೩); ಕೂಳ ಬೆಮೆಯಲಿ ನಂಟುತನ ದಾಕ್ಷಿಣ್ಯಪರನಾಗಿ (ಮುದ್ರಿಭ. ೨೩); ಎಂದುಪಾಯದಿ ಮಮತೆ ನಂಟುತನ ತೋರಿ ಮುಂದು ಮರಿಯಲು ; ಮನದಿ ಸಂದೇಹ ಮೀರಿ (ಕವಿಪು. ೧೨-೧೫); ಆ ಕನ್ಯೆಯರ ಪಾಣಿಗ್ರಹಣ ಮಾಡುವುದರಿಂದ . . . ಆ ಸಾಮಂತರಿಗೂ ದೊಡ್ಡವರೊಡನೆ ನಂಟುತನ ಬೆಳೆಸಿದೆವೆಂಬ ಮಾನಗೌರವಗಳೂ ಉಂಟಾಗುತ್ತಿದ್ದುವು (ಶಾಂತಲಾ. ೯೬). **ನೆಂಟುತನ :** ನೆಂಟುತನ ಹೊಸೆವ ಕಾಲೂರ್ಮುದುವೆ ಪಿರಿದು (ಕಾಲೂರ. ೩೯-೪೫). [ ನಂಟು$_2$ + – ತನ ]

**ನಂಟುಭಕ್ತಿ** (ನಾ). ಬಾಂಧವರ ಮೇಲಿರುವ ಮೋಹ : ಸಂಸಾರಬಂಧು ಗಳೆನ್ನವರೆಂದೊಡೆ ನಂಟು[ಪಾಠಾಂ. ಟ]ಭಕ್ತಿ ನಾಯಕನರಕ ಇಂತೆಂದುದು ಕೂಡಲಸಂಗನ ವಚನ (ಬಸವ. ೬೯); ಅಣ್ಣತಮ್ಮ ಹೆತ್ತಣ್ಣ ಗೋತ್ರ ವಾದರೇನು ಲಿಂಗಸಾಹಿತ್ಯವಿಲ್ಲದವರ ಎನ್ನವರೆನ್ನೆನಯ್ಯಾ ನಂಟುಭಕ್ತಿ ನಾಯಕನರಕ (ಬಸವ. ೭೧೩). [ ನಂಟು$_2$ + ಭಕ್ತಿ ]

**ನಂಟುಮೊಱೆ** (ನಾ). ನೆಂಟತನದ ಸಂಬಂಧ, – ಬಾಂಧವ್ಯ : ಈ ಅಪ ದೆಸೆಯಂ ಕಂಡೊಂದು ಬಕಂ ಬೆಳರ್ತು ಮಂಂಗಾಣದೆ ತನ್ನ ನಂಟು ಮೊಱೆಯು ಮೀಂಗಳ್ಗೆ ಮುಂತೆ ಬಟ್ಟೆ ಯಾವುದೆಂದಾವಗಮುಗಲದೆ ಚಿಂತಾ ಪರನಾಗಿರ್ಕುಂ (ರಾಮಾಶ್ವ. ೫೧-೨೫). [ ನಂಟು$_2$ + ಮೊಱೆ$_3$ ]

**ನಂಟುವಳಿ** (ನಾ). ಬಾಂಧವ್ಯ ; ನಂಟತನ : ನಂಟುವಳಿ ಜನ್ನಿಪುದು ತತ್ಸತಿಯ ದೆಸೆಯಿಂ (ಅಂಬಿಕಾ. ೩೩-೨೩). [ ನಂಟು$_2$ + – ವಳಿ$_1$ ]

**ನಂಡುಲಿ** (ನಾ). (ಕರಾ) ಮಳೆ ಬಿದ್ದು ಮಣ್ಣು ಸ್ವಲ್ಪ ಹಸಿಯಾಗಿರು ವಾಗ ಬಿತ್ತುವುದು : ಇಷ್ಟು ಬೇಗನೆ ಮಳೆ ಬರುತ್ತದೆಯೆಂದು ಯಾರಿಗೆ ಗೊತ್ತು ಕಡುಲಿಯಂತೂ ತಪ್ಪಿತು, ಇನ್ನು ನಂಡುಲಿಗಾದರೂ ಬಿತ್ತಬೇಕು (ರೂಢಿ). 'ಕಡುಲಿ' ಪರಾ. [ ? ]

**ನಂತರ$_1$** (ನಾ). ತರುವಾಯದ ಕಾಲ : ಹರನ ಪಾದಂಗಳಿಗೆ ವಂದಿಸಿ ಸುರರು ನಂತರದಲ್ಲಿ ಗಿರಿಜೆಯ ಚರಣಸರಸಿಜಗಳನು ನಮಿಸುವರು (ಪಾರ್ವಪ. ೩೦).

[ < ಅನಂತರ$_1$ ]

**ನಂತರ$_2$** (ಅ). ತರುವಾಯ ; ಆಮೇಲೆ : ಕಲ್ಲು ಕಾಮಗಾರ್ರಿ ಕರ್ಚ ೨೦ ವರಹ ಕೊಟ್ಟುಯಿಧಾಳೆ ಬಾವಿ ತೀರಿದಲಿ ನಂತ್ರರ ದೋವಿಗಳಿಗೆ ವುಡುಗರೆ ೧೦ ಹ ಕೊಟ್ಟುಯಿಧಾಳೆ (ಮ್ಯಾಆರಿ. ೧೯೨೯, ೯೬-೯; ಸು. 1764);

ಈ ವೆನೀಸಿಯನರು . . . ಪುನಃ ತನ್ನ ಆಸ್ಥಾನಕ್ಕೆ ಹಿಂದಿರುಗಿ ಬರುವ ಭರವಸೆಯನ್ನು ಅವರಿಂದ ಪಡೆದ ನಂತರವೇ . . . ಏರ್ಪಾಡು ಮಾಡಿಸಿದನು (ಪ್ರವಾಇ. II, ೮). [ < ಅನಂತರ$_2$ ]

**ನಂದ** (ನಾ). ೧. ಸಂತೋಷ ; ಆನಂದ ; ಸಂಖ. 'ನಂದವಿಡಂ' ಪರಾ. ೨. ಕೃಷ್ಣನ ಸಾಕುತಂದೆ ; ನಂದಗೋಪ : ನಂದಾದಿಗೋಪರಿಂದು ಪುರಂದರಮಹವೆಂದು ಹರ್ಷದಿಂ ಸಂಭ್ರಮಿಸಲ್ (ಜಗಪಿ. ೯-೭೭) ; ನಂದ ನಿತ್ರಲು ಕೇಳ್ದು ವಸುದೇವನ ತದುಕ್ತಿಗಳ ನೊಂದು ಶಂಕಿಸಿ ಚಿತ್ರದೊಳಗೆ ಮುಕುಂದನನು ಮಚಿಪೊಕ್ಕು ಮರಳಿದು ಬಂದನಾ ಮುಮ್ಮಾರ್ಗದಿಂದ ನಿಜಾಲಯಕ್ಕೊಲಿದು (ನಿಘಗ. ೧೦-೩-೨೭); ಮಂದಗಮನೆ ಇವನಾರೆ ಪೇಳಮ್ಮ . . . ನಂದನ ಕಂದ ಮುಕುಂದ ಕಾಣಮ್ಮ (ಪುರಂದ. ೨-೭೦-೧). 'ನಂದನಂದನ' ಪರಾ. ೩. ಚಾಣಕ್ಯನಿಂದ ರಾಜ್ಯವನ್ನು ಕಳೆದುಕೊಂಡ ಪಾಟಲೀಪುತ್ರದ ಒಬ್ಬ ರಾಜ ಮತ್ತು ಅವನ ವಂಶದ ಹೆಸರು : ಪಾಟಲೀಪುತ್ರವೆಂಬುದು ಪೊಬಲದನಾಳ್ವೊಂ ನಂದವಂಶದೊಂ ಪದ್ಮನೆಂಬೊಂ (ಪದ್ಮಾರಾ. ೧೮೦-೧೩) ; ನಂದರಿಗೆ ಮಂತ್ರಿಯಾದ ರಾಕ್ಷಸನು ಚಂದ್ರಗುಪ್ತನ ದೆಶೆಯಿಂದ ಭೀತನಾಗಿ ಆ ರಾಜ್ಯದಲ್ಲಿ ನಿಲ್ಲಲಶಕ್ಯವಾದ ಕಾರಣ ಇಲ್ಲಿಗೆ ಬಂದನೋ ! (ಮುದ್ರಾಮಂ. ೨೭೦). ೪. ಕುಬೇರನ ನವನಿಧಿಗಳಲ್ಲಿ ಒಂದು. ೫. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : ನವ, ಪದಾರ್ಥ, ರಂಧ್ರ, ನಂದ . . . ನಾಟ್ಯಾಂಗ ಇಂತಿನಿತುಂ ೯ಕ್ಕೆ ಪೆಸರು (ವ್ಯವಹಾ. ೧೦-೩). ೬. [ಛಂದ] ಒಂದು ವರ್ಣವೃತ್ತದ ಹೆಸರು : ದಿನೇಶನಿಂದತ್ತ ನೀಲಕಂಠರ್ ತನೂದರೀ ನಿಲ್ಕೆ ನಂದ[ಹಾಸಾಂ. ನಿಲ್ಕನಂಗ]ಮಕ್ಕುಂ(ಛಂದೋಂಬು. ೨-೭೧). [ ಸಂ. ]

**ನಂದಕ** (ನಾ). ೧. ಸಂತೋಷಗೊಳಿಸುವಿಕೆ ; ಆನಂದಗೊಳಿಸುವಿಕೆ. ೨. ಸಂತೋಷ ; ಆನಂದ. ೩. ಕತ್ತಿ ; ಖಡ್ಗ. ೪. ವಿಷ್ಣುವಿನ ಕತ್ತಿ, ಖಡ್ಗ : ನಂದಕಮಂ ದಿವಿಜಗಣಾನಂದಕಮಂ ಕೊಂಡು ಚೇದಿಪತಿಯೊಳ್ ಪೊಣರ್ದಂ ಮಂದರಧರಂ (ಜಗಪಿ. ೭-೯೭) ; ಘನಕರಿಗಿಕ್ಕಿದಂಕುಶಮಿದಬ್ಜಮುಖಂದನ ನಂದಕಾಯುಧಂ (ರಾಜಶೇ. ೮-೦೦೦) ; ಓಹೋ, ಈ ನಂದ ಕಾಸಿಯು ಬಂದಿತು (ಭಾಸನಾ. ೩೦). ೫. ಕಪ್ಪೆ. ೬. ಕೃಷ್ಣನ ಸಾಕುತಂದೆ. ೭. [ಛಂದ] ಒಂದು ವರ್ಣವೃತ್ತದ ಹೆಸರು : ಬಂದು ಪಣ್ಣಿಯೊಳ್ ನಿಂದೊಡಾಲಗಂ ಸುಂದರಾಂಗಿ ಕೇಳ್ ಸಂದ ನಂದಕಂ (ಛಂದೋಂಬು. ೨-೭೭). [ ಸಂ. ]

**ನಂದಕೆ** (ನಾ). = ನಂದಕ ೪ : ಭವನ ಶೂಲದ ಗಾಯದಿಂದವೆ ಕವಲುದಲೆಯಾದವರು ಬಲು ಮಾಧವನ ನಂದಕೆಯಿಂದ ಮೂಳೆಗಳೆದ್ದ ಬೆನ್ನವರು (ಕೌಶಿರಾ. ೨೦-೧೩). [ ಸಂ. ನಂದಕ ]

**ನಂದಗಿರಿ** (ನಾ). ಒಂದು ನಾಡಿನ ಹೆಸರು; P ಈಗಿನ ಕೋಲಾರ ಜಿಲ್ಲೆಯ ನಂದಿಬೆಟ್ಟದ ಸುತ್ತುಮುತ್ತಲಿರುವ ಪ್ರದೇಶವಿರಬಹುದು : ಮಹಾರಾಜಾಧಿರಾಜ ಕೊಳಾಲಪುರವರೇಶ್ವರ ನನ್ದಗಿರಿನಾಥಂ (ಎಕ. III, ನಂಜನ. ೧೩೩-೩; ಸು. 970) ; ಮಹಾರಾಜಾಧಿರಾಜಂ ಕೋಳಾಳಪುರ ವರೇಶ್ವರಂ ನನ್ದಗಿರಿನಾಥಂ ಜಯದುತ್ತರಂಗಂ ಗಂಗಚೂಡಾಮಣಿ . . . ವಿಕ್ರಮಾದಿತ್ಯದೇವರ್ (ಸೌಇಇ. XX, ೩೩-೩; 1066) ; ಮಹಾರಾಜಾಧಿರಾಜ ಪರಮೇಶ್ವರಂ ಕೋಳಾಲಪುರವರೇಶ್ವರಂ ನಂದಗಿರಿನಾಥಂ ಮದಗಜೇಂದ್ರಲಾಂಛನಂ (ಎಕ. VII, ಶಿವಮೊ. ೯-೮೭; 1122). [ ನಂದ + ಗಿರಿ$_1$ ]

**ನಂದಗೋಕುಲ** (ನಾ). ೧. ಯಮುನಾನದೀತೀರದಲ್ಲಿರುವ ಒಂದು ಸ್ಥಳದ ಹೆಸರು ; ಕೃಷ್ಣನ ಸಾಕುತಂದೆಯಾದ ನಂದಗೋಪನು ಇದ್ದ ಸ್ಥಳ : ಉತ್ತರಿಸಿ ಯಮುನೆಯನು ಹರಿಯನು ಹೊತ್ತುಕೊಂಡುರದೊಳಗೆ ಹೋಗಿ ಯದೂತ್ತಮನು ನಟ್ಟಿರುಳು ಹೊಕ್ಕನು ನಂದಗೋಕುಲವ (ನಿಘಗ. ೧೦-೪-೧೭). ೨. (ಅಲಂ) (ಮಕ್ಕಳಿಂದ ತುಂಬಿ) ಆನಂದಮಯವಾದ ಸಂಸಾರ, – ಕುಟುಂಬ : ಪಂತರವಾಡೇ ನಂದಗೋಕುಲವಾಗಬಹುದು (ದೀಪಹ. II, ೨೦೯) ; ಅವರ ಸಂಸಾರ ನಂದಗೋಕುಲವಾಗಿದೆ (ಅದೇ). [ ನಂದ + ಗೋಕುಲ ]

**ನಂದದೀವಿಗೆ** 'ನಂದಂ' ಪರಾ.

**ನಂದನ** (ನಾ). ೧. ಸಂತೋಷಗೊಳಿಸುವಿಕೆ ; ಆನಂದಗೊಳಿಸುವಿಕೆ. ೨. ಆನಂದ ; ಸಂತೋಷ : ನಂದನನಾಮದ ನಂದನನಂತಪ್ಪ ನಂದನಂ ಜನಿಕೆ ತಮಗೆಂದು ಧರೆಯೊಳಾನಂದದಿಂ ಬಯಸದವರಿಲ್ಲಾ (ವರ್ಧಪು. ೦೩-೦೦೧) ; ಶಂಕರ ನಿಮ್ಮ ಶ್ರೀಪದದ ಸಂದು ನಿಜದಿ ಧ್ಯಾನಿಸುವುದೇ ನಂದನಂ ವ್ಯಾಮೋಹದಿಂ ಘನವೆಂದು ಶಂಕರದಾಸಿ ಪೇಳಿದ ಜಡೆಯ ಶಂಕರಗೆ (ಶಂಕದಾ. ೧೭-೦೦). 'ಚೇತೋನಂದನ' ಪರಾ. ೩. ಮಗ ; ತನಯ ; ಪುತ್ರ : "ತನಯಂ ಸ್ತನಂಧಯಂ ತೋಕಂ ಸುತಂ ಸೂನು ತನುಜನಾತ್ಮಜನಪತ್ಯಂ ತುಕ್ ಪ್ರಸೂತಿ ನಂದನನೆನಲು ಪುತ್ರನೆನಿಸಿಕ್ಕು" (ಮಂಗರಾ. ೯೦-೯) ; ನಿನಗೆ ಭರತಾವನೀತಲಮನಿತನಿತುಮನಾಳ್ವನೊರ್ವ ನಾದಪ್ಪಂ ನಂದನಂ (ಆದಿಪು. ೮-೨೮) ; ನಿಜನಂದನರಂ ನೀನಿರೆ ನೃಪೇಂದ್ರ ಕೊಲ್ವರುಮೊಳರೇ (ಅಜಿಪು. ೧೦-೩೮) ; ನಂದನಜನ್ಮೋತ್ಸವದೊದವಿಂದಂ ಪರಿತಂದು ಪೂರ್ಣಪಾತ್ರಮ ತ್ಯಾನಂದದವೊದವಲ್ಕೆ ಪರಿಜನಮೆಂದೆಳೆಕುಳಿಗೊಳ್ವ ಸೈಪು ಸಮನಿಸಿದವುದೋ (ಕಾದಂಪೂ. ೩೩೩) ; ಆ ಕನಸುಗಳನನು ಕ್ರಮದಿಂ ಕೇಳ್ದು . . . ತತ್ಫಲಮನಜುಪಲಂದಿಂತೆಂದಂ . . . ಮೃಗರಾಜನಿಂ ಪುರುಷಸಿಂಹಂ ಪುಟ್ಟುಗುಂ ನಂದನಂ (ಜಗಪಿ. ೨-೯೩) ; ನಂದನನಕ್ಕುಂ ನಮಗಿನ್ನೆಂದಧಿಪನವೋಘವಚನದಿಂ ವನಿತೆ ಮಹಾನಂದವ ನಾಂತಂಬುದರವದಿಂದಾನಂದಿವ ಮಾಯೂರವನಿತೆಪೊಲಾದಳ್ (ಚಂದ್ರಪು. ೦೩-೨೦) ; ಆ ಜಂಪತಿಗಳ್ಗೆ ಕಳಾರಾಜಿತಮತಿಗಳ್ಗೆ ತತ್ಸಹಸ್ರಾರದ ವಿಭ್ರಾಜಿತಸುರವರನುರುತರತೇಜಂ ನಂದನಸಮಾಖ್ಯನಂದನನಾದಂ(ವರ್ಧಪು. ೦೩-೦೦೨ ; ನಂದನನೆಳೆಮೆಯ ಕೈಮೆಯನಂದಿಂಗಾ ನಂದಗೋಪನಾಲಿಸಿ ನಲಿದಂ (ಜಗಪಿ. ೪-೦೯೯). 'ನಂದನಂದನ' ಪರಾ. ೪. ಇಂದ್ರನ ತೋಟ, – ಉದ್ಯಾನವನ : ಸಾರಸಹಂಸಕೋಕಿಳಕುಳಧ್ವಾನೋತ್ಕರಂ ಚೆಲ್ವನಾಯ್ತು ಕರಂ ಸ[ಕೃ] ನಿಳಿಂಪದಂಪತಿಗಳಿಂದಾ ನಂದನಂ ನಂದನಂ (ಹಂಪಭಾ. ೩-೮೦) ; ನಂದನದಂದದಿಂದೆಸೆವಿನಂ ಬನವಂ ಮನದಟ್ಟಜಿಂದೆ ಸಂಕ್ರಂದನಸನ್ನಿಭಂ . . . ವಿಶ್ವನಂದಿವಿಭು ಮಾಡಿಸಿದಂ (ವರ್ಧಪು. ೨-೨) : ವನ ಇಂದ್ರನ ನಂದನದಂತಿದೆ (ಶಾಂತಲಾ. ೯೦) ; ಇನ್ನು ಎಲ್ಲಿಗೋಟ ನಂದನದ ತೋಟ! (ಗರಿ. ೯೯-೦೨). 'ನಂದನವನ' ಪರಾ. ೫. ತೋಟ; ಉದ್ಯಾನವನ : ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರ ಾದ ಮಾನಸರೆ ಮಾನಸರಂತವರಾಗಿ ಪುಟ್ಟಲೇನಾಗಿಯುಮೇನೊ ತೀರ್ದಪು[ದೆ] ತೀರದೊಡಂ ಮಜಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿದೇಶದೊಳ್ (ಪಂಪಭಾ. ೪-೨೯) ; ಸುಳಿವಂಚೆಗಳಿಲ್ಲದುದಿಲ್ಲ ನಂದನಂ (ಜಗಪಿ. ೨-೦೦) ; ಪ್ರಚುರಚಂದನನಂದನ ಗಂಧದಿಂ ದಿಶಾಪರಿಧಿಯನೆಯ್ದೆ ಬಾಸಣಿಸುತಿರ್ಪುದು ಸುಗಂಧಿಮಂಡಲ ಮಿಳಾರಮಣೀರಮಣೀಯಕುಂಡಲಂ (ಚಂದ್ರಪು. ೩-೦೦) ; ಮರುಭೂಮಿ ನಗುವ ನಂದನವಪ್ಪುದಿದನೀಂಟೆ (ಶ್ರೀರಾಮಾ. ೧೪-೩೩೭). ೧, ೫ : ರಾಜ ಕೀರಚ್ಛದಾನಿಳಲೋಲತ್ಕಣಿಶಾಳಿಶಾಳಿ ಜನಚೇತೋನಂದನಂ ನಂದನಂ (ಜಗಪಿ. ೨-೨) ; ಘನತರಭದ್ರಶಾಳದಿನಿತ್ತೆಡೆಮಾಡದೆ ನಂದನಕ್ಕೆ ನಂದನದಿನದೊಂದು ಬೇಗದೊಳೆ ಸೌಮನಸಕ್ಕೆ ತಗುಳ್ದು ಮತ್ತೆ ಸೌಮನಸದಿನೆಯ್ದೆ ಪಾಂಡುಕವನಕ್ಕದರ್ತತ್ತು ಸುರೇಂದ್ರವಾರಣಂ (ಚಂದ್ರಪು. ೦೩-೦೦೪). ೬. ಅರುವತ್ತು ಸಂವತ್ಸರಗಳಲ್ಲಿ ಇಪ್ಪತ್ತಾರನೆಯದು : ಮತ್ತಮಾ ವರುಷಮೇ ಪ್ರಭವ ವಿಭವ . . . ನಂದನ . . .

ಅಕ್ಷಯವೆಂದೆಱವತ್ತು ತೆಱನಾಗಿಹುದು (ವಿವೇಕ. ೩.೨೦); ನಂದನಸಂವತ್ಸರದ ಪಾಲ್ಗುಣ ಶು ೧ ಲು . . . ಗುಡಿಯ ಜೀರ್ಣಉದರ ಮಾಡಿದ ವಿವಾರ (ಎಕ್. III (R), ಸಂಜನ. ೩೩೨-೨; 1663). ೭. ಶಿವ. ೮. ವಿಷ್ಣು. ೯. [ಜೈನ] ರುಚಕಾಚಲದ ಜಿನನಿಲಯದ ಎಂಟು ಶಿಖರಗಳಲ್ಲಿ ಒಂದು : ಜಿನನಿಲಯರುಚಿರರುಚಕಾಚಲದ ಪೂರ್ವದಿಗ್ಭಾಗದ ವೈಡೂರ್ಯ ಕಾಂಚನಕನಕಾರಿಷ್ಟದಿಕ್ಸ್ವಸ್ತಿಕನಂದನಾಂಜನಮೂಲಕಂಗಳೆಂಬೆಂಟುಂ ಕೂಟಂ ಗಳೊಳ್ (ಆದಿಪು. ೬-೩ ವ). ೧೦. [ಸಂಗೀತ] ಒಂದು ರಾಗದ ಹೆಸರು.
[ ಸಂ. ]

**ನಂದನಂದನ** (ನಾ). ನಂದಗೋಪನ ಮಗ; ನಂದಕುಮಾರ; ಕೃಷ್ಣ: ಅಂತು ವಿಜಯಮಂಗಳಂ ನೆಗೞೆ ಗೋಕುಲಮಂ ಪೊಕ್ಕು ನಂದನಂದನಂ ಗೋಪಾಲವಿನೋದಮ ನಿಶ್ಶೋಕ್ಸವವಾಗೆ ಸುಖದಿಂದಿರ್ದನ್ನೆಗಂ (ಜಗವಿ. ೪-೫೮ ವ); ನಂದನಂದನಸನ್ನಿಭನು ಸಾನಂದದಿಂದರೆ ನಮ್ಮವನು ಕೃಪೆಯಿಂದ ಸಲಹಂಗೆ ದೇವ ಜಗದಾರಾಧ್ಯ ಗುರುರಾಯ (ಕುಮ್ಹಾ. ೧-೧೨).
[ ನಂದ + ನಂದನ ]

**ನಂದನಚರ** (ನಾ). [ಜೈನ] ಹಿಂದಿನ ಜನ್ಮದಲ್ಲಿ ಮಗನಾಗಿದ್ದು ಸಂಸಾರ ಚಕ್ರದಲ್ಲಿ ಸುತ್ತುತ್ತಿರುವವನು: ಅರಸನುಮಾಗಳ್ ನೆತ್ತದ ಭರದಿಂ ಕೊಳ್ಳೆನುತುಮಿಕ್ಕೆ ನವಿಲಂ ಕೊಳ್ಳೆಂದರೆನುತ್ತೆ ಪಿಡಿದುದಂಬಾಚರಿ ಕುಕ್ಕುರಿ ನೊಂದು ಬೀೞ್ವ ನಂದನಚರನಂ (ಯಶೋಚ. ೩-೪೨). [ ಸಂ. ]

**ನಂದನಬನ** (ನಾ). = ನಂದನವನ ೨: ಕಾಗೆ ನಂದನಬನದೊಳಗಿರ್ದರೇನು ಕೋಗಿಲೆಯಾಗಬಲ್ಲುದೇ ಹೇಳಾ (ಬಸವ. ೯೮); ಹಿರಿಯ ಜಕ್ಕಿಯಂವೆಯು ಕೆಱೆಯ ಹಿಂದಣ ನಂದನಬನದೊಳಗೆ ಗವೆ ಸಲಗೆ ಖಿ ೨ (ಎಕ್. II (R), ೫೩೫-೮; 1250). [ ನಂದನ + ಬನ ]

**ನಂದನವನ** (ನಾ). ೧. ಇಂದ್ರನ ವನ, - ಉದ್ಯಾನವನ : ನಂದನವನದೊಳ ಗೇನೇಂ ಬಂದವೊ ಮರನೆಂದು ಕಂತು ಬೆಸಗೊಳೆ ಮಾವಿಂ ಬಂದಿರ್ದುವೆಂದು ಬಿನ್ನವಿಪಂದದೆ ಕೋಗಿಲೆಗಳುಲಿದುವಾವುದ್ರುಮದೊಳ್ (ಆದಿಪು. ೬-೦೩); ನಂದನವನಮಧ್ಯದ ಕೊಳದಿಂದಗಲದ ಹಂಸಮಿಥುನವೆನೆ . . . ನಲಿಯು ತಿರ್ದರಾ ದಂಪತಿಗಳ್ (ಜಗವಿ. ೨-೫೨); ನಂದನವನಸಂಭವಹರಿಚಂದನ ಸಂತಾನ . . . ಕುಸುಮಕೋಟಿಯಂ (ಪುಷ್ಪಪು. ೧೧-೪೪); ನಮ್ಮ ದೂರೆ ನಂದನವನಕ್ಕೆ ಬೇಂಟೆವೋಗಿ ತಂದಿರ್ದನೀ ಕಂದರ್ಪನಂದನವನನ್ I (ಚಂದ್ರಸ. ೩೯-೧). ೨. (ಸುಂದರವಾದ) ತೋಟ; ಉದ್ಯಾನವನ: ಬರಿಸುವನಿಂದು ನಂದನವನಾಂತರದಲ್ಲಿಗೆ ಕಾಂತನಂ ಸಮಾಶ್ರಿತರಿಸುವೆನಂತ ನಂತಸುಖಸಂಗತಮಂಗಳಕಾರಣಂಗಳಂ (ಕವಿರಾ. ೨-೧೦೦೪); ನೀನುಮಪುಂ ತಿಱಿಯಂದೊರ್ವರುಪಾಧ್ಯಾಯರ ಪಕ್ಕದೊಳೋದುಮದು ನಂದನವನ ದೊಳಗೆ ನೀನೆನ್ನ ಪುಣ್ಣ ಪ್ರತಿಜ್ಞೆಯಂ ನೆನೆದಾ (ವಡ್ಡಾರಾ. ೦೨೫-೨); ನಂದನವನಪವನಂ ಬಟ್ಟೆವಂದೊಡಗೊಂಡೊಯ್ದು ಪುಗಿಸೆ ಬನಮಂ ಪುಗಲೆಂಬೊಂದನ್ನಭೃತಕ್ಕಾಣಿತಿವಂದಂತಾಯ್ತುತನು ಬೆಸಸೆ ಕುಸುಮಾ ವೋದಂ (ಶಾಂತಿಪು. ೮-೩); ಶ್ರೀಕಾಳಂ ದೇವತಾಚ್ರ್ಚನಂಗೆಯ್ಯುದಕ್ಕಂ ದೇವಗ್ರ್ಗೆ ನಂನ್ದನವನಂ ಮಾಡುವುದಕ್ಕಂ . . . ಬ್ರಹ್ಮಲಿಂಗಿಭಟಗ್ರ್ಗೆ ಕೊಟ್ಟುದು (ಮ್ಯಆರಿ. ೧೯೪೭, ೨೮-೦೭; 1032); ಆ ದ್ವಿತೀಯ ಮುನೀಶ್ವರ ನಗ್ರಮುನೀಶ್ವರಾದೇಶದಿಂ ನಂದನವನೋದ್ದೇಶದೊಳಿರ್ದ ಜನ್ಮಾಂಧಕ ಯಲ್ಲಿಗೆ ಬಂದು ಮುಂದೆ ನಿಂದು (ಸುಕುಮಾ. ೫-೨೩ ವ); ನಂದನವನಂಗಳಿಂ ಮಾಕಂದಮಹೀಜಾತರಂಜಿತೋದ್ಯಾನಗಳಿಂ ಸೌಂದರತೆವಡೆದು ತೋಱುವ ನಂದಿಗ್ರಾಮಕ್ಕೆ ಬಂದನಾ ನೃಪತನಯಂ (ಪುಷ್ಪಾಸ್ರ. ೩-೯).
[ ನಂದನ + ವನ ]

**ನಂದನವಿಮಾನ** (ನಾ). [ಜೈನ] ಸ್ವರ್ಗಲೋಕದಲ್ಲಿರುವ ಒಂದು ಸ್ಥಳದ ಹೆಸರು: ವರಾಹಾರ್ಯನುಂ ನಂದನವಿಮಾನದೊಳ್ ಮಣಿಮಕುಟ ಕೇಯೂರಮಣಿಕುಂಡಲವಿಭೂಷಣನಾಗಿ ಮಣಿಕುಂಡಲನೆಂಬೊಂ ದಿವಿಜ ನಾದಂ (ಆದಿಪು. ೫-೭೦ ವ). 'ವಿಮಾನ' ಪರಾ.
[ ನಂದನ + ವಿಮಾನ ]

**ನಂದನಾವಲಿ, ನಂದನಾವಳಿ** (ನಾ). ವನಗಳ ಗುಂಪು, - ಸಮೂಹ: ಊರ್ಜಿತವಸಂತಂ ಸಂತತಂ ನಂದನಾವಲಿಗೆಲ್ಲಂ ರತಕೇಳಿರಾಗವನಿತಂ ಸ್ತ್ರೀಮುವ್ರಜಕ್ಕೆಲ್ಲಮುಜ್ಜ್ವಲಚಂದ್ರಾತಪಮೋರ್ಮೆಯುಂ ರಜನಿಜಾತ ಕ್ಕೆಲ್ಲಮಾ ದೇಶದೊಳ್ (ಜಗವಿ. ೨-೩). ನಂದನಾವಳಿ: ಕರಜಳಧರ ಕಳಧೌತೋತ್ಕರವರ್ಷದೆ ವಂದಿ ನಂದ[ನಾ]ವಳಿಗಳ ವಿಸ್ತರಿಪುವೆನೆ ದಾನಮುಖ ಕೋರ್ವ್ವರಿಗೆ ವಿಚಿತ್ರೋಕ್ತಿ ರೂಪವಿದ್ಯಾಧರಿಯ (ಸೌಇಇ. XX, ೯೯-೩೭; 1076 ?). [ ನಂದನ + ಆವಲಿ ]

**ನಂದನಾವಳಿ** 'ನಂದನಾವಲಿ' ನೋ.

**ನಂದನೆ** (ನಾ). ಮಗಳು; ತನುಜೆ: "ವೇಣ್ ದುಹಿತೆ ನಂದನೆ ಪುತ್ರಿ ಸುತೆಯೆನಿಕ್ಕುಂ" (ಮಂಗರಾ. ೯೧-೯); ಈ ಭುಜಾದಂಡಮುಂ . . . ಈ ಧನುರ್ದಂಡಮುಮುಂಬ್ಬಿನಂ ದ್ರುಪದನಂದನೆ ಸಂಧಿಯನಾಗಲೀವೆನೇ (ಗದಾಯು. ೦-೭೩); ಕಮಲಭವ ಜಗವಱಿಯೆ ನಂದನೆಯ ಏದೆಯನು ನೆಱೆ ಮಾಡಿಯರೆವೆಣ್ಣಾದನೀಶ್ವರನಿಂದ್ರಗಿಂದ್ರರ ಹಾದಿಯದು ನಗೆಯಿ ತ್ರಣವರನು ಹೇಳಲೇನೆಂದ (ತೊರಣ. ೧-೫-೩೭); ನಂದನೆ ನೊಂದವಳಂ ದೊಲ್ದಿಂದುಧರಂ ಪಿಡಿದು ನೆಗಪಿ ನಿಜಕರದಿನವಳ್ಗಂದಣ್ಣೆ ವಾಲನೀಂಟದಂ (ವೃಷವಿ. ೯-೮೨). [ ಸಂ. ನಂದನಾ ]

**ನಂದನೋತ್ಕರ** (ನಾ). = ನಂದನಾವಲಿ: ಶರತ್ಪವನತಾಪದಿಂ ಕೊರಗಿ ಕೂಡೆ ಕೋಲೈಸಿದಾ ನರೇಶ್ವರವಧೂಕದಂಬಕಮನಾಱೆಸಲ್ಕಾಗಳಬ್ಜರೇಣು ಗಳನೆತ್ತಿ ಬಂದುದಿದಿರ್ವರ್ಪವೋಲ್ ನಂದನೋತ್ಕರಂಬಿಡಿದು ಮಾರುತಂ ಚಳತರಂಗೆಯಿಂ ಗಂಗೆಯಿಂ (ಆದಿಪು. ೧೧-೫೩). [ ನಂದನ + ಉತ್ಕರ ]

**ನಂದಯಂತಿ** (ನಾ). [ಸಂಗೀತ] ಒಂದು ರಾಗದ ಹೆಸರು: ಗಾಂಧಾರಿ ರಕ್ತಗಾಂಧಾರಿ . . . ನಂದಯಂತಿ ಕರ್ಮಾವ್ರಭಚಾರಿಣಿ ಕೌಶಿಕಿಯೆಂಬ ಹತ್ತು ರಾಗಂಗಳು ಮಧ್ಯಮಗ್ರಾಮದಿಂ ಪುಟ್ಟಿದವು (ವಿವೇಕ. ೨೩೩).
[ ಸಂ. ನಂದಯಂತೀ ]

**ನಂದವರ್ತೆ** (ನಾ). = ನಂದಿಬಟ್ಟಲು: ನಂದವರ್ತೆಯನೊಲಿವನಮ್ಮ ಶಂಕರ ನೆಂಬ ಮಂಡೈವ ಕಂಪೆ ಸಾಲ್ಸುದು ಶಿಶಿರಗಂಗೆಬ (ಬಸರ. ೭-೫೩).
[ <ಸಂ. ನಂದ್ಯಾವರ್ತ ]

**ನಂದವಾಡಿಗೆ** (ನಾ). ಒಂದು ಊರಿನ ಹೆಸರು: ನವಿಲೆಯ [ಜಟ]ಯ ಸಂಕರ ದೇವಾಲಯಮುಮಂ ನನ್ದವಾಡಿಗೆಯೊಳ್ ಶ್ರೀನಾಗಲೇಶ್ವರಮು(ಂ) ನಲ್ಲಿಯ ಮಟಮುಮಂ (ಸೌಇಇ. XI-I, ೧೦೩-೨೭ ?). [ ? ]

**ನಂದವಿಡು** (ಕ್ರಿ). ಸಂತೋಷಗೊಳಿಸು; ಆನಂದಪಡಿಸು: ಅಂದು ಗುರುಮನವೊಲಿದು ಪಾರ್ಥನ ನಂದವಿಟ್ಟನು ತನ್ನ ವಿದ್ಯಾವೃಂದವನು ತಾನೀವೆನೆನುತಲಿ ದ್ರೋಣ ಹರುಷಿಸಿದ (ಸಂಭಾ. ೧೮-೧೯).
[ ನಂದ + ಇಡು₁ ]

**ನಂದವಿಲ್ಲುಮಡಿ** (ನಾ). ಒಬ್ಬಾತನ ಹೆಸರು: ನನ್ದವಿಲ್ಲುಮಡಿಯರಾ ಮಗನೆ ಪಲಿಪಱ್ (ಎಇ. IX, ೨೦-೭; 800). [ ? ]

**ನಂದಳಕ** 'ನಂದು' ಪರಾ.

**ನಂದಾಉಳ** 'ನಂದು' ಪರಾ.

**ನಂದಾತ್ಮಜ** (ನಾ). = ನಂದನಂದನ: ನಾರಾಯಣ ನಾಗಶಯನ ನಂದಾತ್ಮಜ ಮಾರಜನಕ ಮಂಜುಳಾಂಗ ಸಾರಸನಯನ ಸಕಲಲೋಕೇಶ್ವರ ಸಾರಿದೆ ಸಲಹೆನ್ನನೊಲಿದು (ಕತಕಾ. ೭೦-೩). [ ನಂದ + ಆತ್ಮಜ ]

**ನಂದಾದೀಪ** 'ನಂದಂ' ಪರಾ.

**ನಂದಾದೀಪ್ತಿ** 'ನಂದಂ' ಪರಾ.

**ನಂದಾದೀವಿಗೆ** 'ನಂದು' ಪರಾ.

**ನಂದಾದ್ಯುತಿ** 'ನಂದು' ಪರಾ.

**ನಂದಾಪುರ** (ನಾ). ಒಂದು ಊರಿನ ಹೆಸರು; P ಈಗಿನ ಮಂಗಳೂರಿನ ಸಮೀಪದ ಒಂದು ಹಳ್ಳಿ, ಹಿಂದೆ ಇದು ನಂದಅರಸರ ರಾಜಧಾನಿಯಾಗಿತ್ತು: ನನ್ದಾಪುರದೊಳ್ ಕೇತೇಶ್ವರಮುಮಂ ಕೋಹಳ್ಳಿಯೊಳ್ ದಾನವಿನೋದತ್ರೈಪುರುಷದೇವರ ಸಾಲೆಯುಂ . . . ಮಾಡಿಸಿ (ಕಾಇಇ. XI-I, ೧೦೩-೨೦ ; ?). [ನಂದ + ಪುರ$_2$]

**ನಂದಾಬೆಂಕಿ** 'ನಂದು' ಪರಾ.

**ನಂದಾಬೆಳಕು** 'ನಂದು' ಪರಾ,

**ನಂದಾವನ** 'ನಂದು' ಪರಾ.

**ನಂದಾವಳ** 'ನಂದು' ಪರಾ.

**ನಂದಾವುಳ** 'ನಂದು' ಪರಾ.

**ನಂದಾವೆಳಕು** 'ನಂದು' ಪರಾ.

**ನಂದಿ** (ನಾ). ೧. ಸಂತೋಷಗೊಳಿಸುವವನು; ಮಗ. ೨. ಸಂತೋಷಪಡುವವನು: ಅಂತು ದುಶ್ಶೀಲ ದುರಾಚಾರ ದುರ್ಯಶೋನಂದಿಯಾದ ವಿಶಾಖಸಂದಿ . . . ಪರಿಭ್ರಮಣಪರಿಣತನಾಗಿ ತೊಟಲೆಯ್ವಂ (ವಡ್ಡಾರಾ. ೨-೩೬ ವ). ೩. ಶಿವನ (ವಾಹನವಾದ) ಒಬ್ಬ ಅನುಚರ; ಬಸವ: "ನಂದಿ ತಂಡುಪಕ್ಕುಂ" (ಮಂಗರಾ. ೩-೮೪); ಏಱಿ[ಯ] ನಂದಿ[ಯನಾ] . . . ಭೂತನಾಥಂ ಬಂದಂ (ಶಂಶಧಾ. ೧೨-೦೩೯); ನಾದಪ್ರಿಯ ನಂದಿಯ ನೇಱಿಕೊಂಡು ಅತೀತನ ಮೇಲೆ ಆನಂದಸಿಂಹಾಸನವಿಕ್ಕಿ ಕುಳ್ಳಿತ್ತ ಕೂಡಲಸಂಗಮದೇವರ ದೇಪತ್ತ ಕೆಟ್ಟಿತ್ತು (ಬಸವ. ೯೩೦); ಆ ರಜತಗಿರಿ ಶಿಖರದೊಳ್ ಮದನಾರಿಯುಂ ಗೌರಿಯುಮುಚಿತಲೀಲಾರಚಿತಸುಖ ಸಂಕಥಾಪ್ರಸಂಗಕೌತುಕದೋಳಿರಲು ವೀರ ವೀರಕ ನಂದಿರೇಣುಕ . . . ಪ್ರಮಥರೋಳ್ಪೈಪ ಸಮುಪದೊಳು (ಬಸಪು. ೧-೩೪); ನಂದಿಯನು ಏಱಿದನ ಚಂದಿರನ ಸೂಡಿದನ ಕಂದನ ಬೇಡಿ ನಲಿದಾನು ನೆಗವುತ್ತ ಮುಂದೆ ಪೇಳುವೆನು (ಸರ್ವಜ್ಞ. ೦); ಶಂಕರನ ಮುಂದೆ ನಂದಿಯೂ ಅಷ್ಟು ವಿಧೇಯತೆ ಯಿಂದ ನಮ್ರತೆಯಿಂದ ನಿಲ್ಲುತ್ತಾನೋ ಇಲ್ಲವೋ (ಸುಮಸಂ. ೮೧); ಕೆಂದುಬಣ್ಣದ ಬಿಲು ಚೆಂದ ಚಂದ ಹೋರಿಗಳು ನಂದಿಯ ಹಂಗ ಮೈಮಾಟ ಹಂಡ ಬಾಡ ಗೊಂದಿ ನಡೆದವು ಸಾಲುಗೊಂಡು (ಸಿದ್ಧಪು. ೦೭-೨೦). 'ನಂದಿವಾಹನ' ಪರಾ. ೪. ಬಸವನ ವಿಗ್ರಹ,-ಮೂರ್ತಿ: ನಂದಿಗಳು ಗಾತ್ರದಲ್ಲಿ ದೊಡ್ಡವಾಗಿವೆ (ವ್ಯಾಸು. ೧೨೦). ೫. ಒಂದು ಬಗೆಯ ಮರ: "ಪುಂಗವವೆಸರ್ ನಂದಿ" (ಮಂಗರಾ. ೩೭-೦೯); ನಂದಿ, ದೋಳಂದರು, ಬೆಲ್ಮತ್ತಿ (ಮ್ಯಾಜಿಗಿ. ೪೯-೯೭೪); ಮರಗಳು: ಹೆಸವ, ಹೆಬ್ಬಲಸು . . . ತಡಸಲು, ಕಪಸಿ, ನಂದಿ, ಕುಂಕುಮ, ಸಂಪಿಗೆ (ನವ್ಯಾನು. ೨೩೭). 'ನಂದಿಮರ', 'ನಂದಿವೃಕ್ಷ' ಪರಾ. ೬. [ಜೈನ] ಸಂಘಗಳಲ್ಲಿ ಒಂದು ಬಗೆ: ಸಂಘಗಳು: ಮೂಲ, ನಂದಿ, ಯಾಪನೀಯ, ಯಾಪನೀಯ ನಂದಿ, ದ್ರಾವಿಡ, ಶ್ರೀಸಂಘ, ಕಿತ್ತೂರು (ಕಶಾಅ. ೮೭). 'ನಂದಿಸಂಘ' ಪರಾ. ೭. ಜೈನಮುನಿಗಳ ಗಣಗಳಲ್ಲಿ ಒಂದು ಬಗೆ: ಗಣಗಳು ದೇವ, ಸೇನ . . . ನಂದಿ, ಗ(ಕ)ವಾಟ . . . ಅಜ (ಕಶಾಅ. ೮೭). ೮. ಒಬ್ಬ ಜೈನಯತಿಯ ಹೆಸರು: × × × ಪೌತ್ರ ನನ್ದಿಮುನಿಪ × × × ಮಾಯಂ್ಕನ × × × (ಎಕ. II, ೦೦೧-೩; ಸು. 700). ೯. ಗ್ರಾಮಾಧಿಕಾರಿ (?): ಸೀಮಾಂತರಸ್ಯ ಸಾಕ್ಷಿಣಾಂ ಕೊತ್ತಮಙ್ಗಲದ ನಂದಿಯರು ಹಡದ ನಡೆದು ಪುಡೆಯುರು ಗಣಗನೂರ ಅನವಕರು ತಲಕಾಡಹನ್ನುವರು ಮದ್ದೂರ ಗಣೆಯರುಂ (ಎಕ. III (R), ನಂಜನ. ೫೩೨-೨೬ ; 969). ೧೦. (?): ನನ್ದಿಯ ಸ್ಥಾನ ಮುಮೆನಾಯಗ ×× ಮಂನಿಱಿವನಂದಜ್ಜಿಗೆ ವನ್ದಿಟ್ಟು ತುರುವನಿಕ್ಕಿಸಿ ಸತ್ತಂ (ಎಕ. IX, ದೇವನ. ೬೨-೯ ; 900 ?).

ನಂದಿ ಬಿಡು = ಸತ್ತವರಿಗಾಗಿ ಮಾಡುವ ಅಪರಕರ್ಮದ ಸಂಬಂಧದಲ್ಲಿ ಒಂದು ಮರಿಯೆತ್ತನ್ನು ಸ್ವತಂತ್ರವಾಗಿ ಓಡಾಡಲು ಬಿಡು: ಸತ್ತಾತನು ವಂಶದ ಹಿರಿಯನಾದುದರಿಂದ ಉತ್ತರಕ್ರಿಯೆ ಮಾಡುವಾಗ ಯಾವುದಕ್ಕೂ ಕಡಮೆ ಮಾಡದೆ, ನಂದಿ ಬಿಡುವುದಕ್ಕೂ ಕೈಹಿಡಿಯಲಿಲ್ಲ (ರೂಢಿ). **ನಂದಿಯ ಕುಣಿತ** = ನಂದಿಕೋಲನ್ನು ಹಿಡಿದು ಮಾಡುವ ಕುಣಿತ: ಆ ದಿನದ ಉತ್ಸವದಲ್ಲಿ ನಂದಿಯ ಕುಣಿತ ಬಹಳ ಆಕರ್ಷಣೆಯುಳ್ಳದಾಗಿತ್ತು (ರೂಢಿ). **ನಂದಿಯ ಕೋಲು** = ನಂದಿಚಿಹ್ನೆಯ ಧ್ವಜವನ್ನುಳ್ಳ ಕೋಲು; ನಂದಿಕಂಬ: ಆಕೆ ಕುರೂಪಿ; ನಂದಿಯ ಕೋಲಿನಂತೆ ಉದ್ದವಾದ ಸೊರಗಿದ ದೇಹ (ಭೂಮಿತಾ. ೭೨). ನಂದಿಯ ಧ್ವಜ = ನಂದಿಧ್ವಜ ೩: ನಂದಿಯ ಧ್ವಜವನ್ನು 'ನಂದೀಕೋಲು' 'ನಂದಿಕಂಬ' ಎಂದೂ ಕರೆಯುತ್ತಾರೆ (ರೂಢಿ). ನಂದಿಯ ಹಳವಿಗೆ, ನಂದಿಯ **ಹಳವಿಗೆ** = ನಂದಿಧ್ವಜ ೧: ನಂದಿಯ ಪಳವಿಗೆ ಮೀಱಿರುತೆ ದುಂದುಭಿರವದೊಳಗೆ . . . ಪೊಕ್ಕಂ (ತ್ರಿಪುವಿ. ೩೨-೭೯ ; ಇಂದುಚೂಡನು ಸುತ್ತಿದೋಲೆಯನೊಂದು ನಂದಿಯ ಹಳವಿಗೆಯನಾಗಳು ಹಿಡಿದುಕೊಂಡು . . . ಕಣಜಂಗಳಿಗೆ ಹರಿತಂದು (ಬಸಪು. ೫೨-೧೬). ನಂದಿಯುಂಗುರ=ಶಿವಭಕ್ತರು ಧರಿಸುವ ಬಸವನ ಕೆತ್ತನೆಯುಳ್ಳ ಉಂಗುರ.

[ಸಂ. ನಂದಿನ್]

**ನಂದಿಕ** (ನಾ). ಶಿವನ ವಾಹನ; ನಂದಿ; ಬಸವ. 'ನಂದಿಕೇಶ' ಪರಾ.

[ಸಂ.]

**ನಂದಿಕಂಬ** (ನಾ). ನಂದಿಯ ವಿಗ್ರಹವಿರುವ, ಅಲಂಕೃತವಾದ ಉದ್ದವಾದ ಕಂಬ: (ಕ). 'ನಂದಿಕೋಲು' ಪರಾ.

[ನಂದಿ + ಕಂಬ$_1$ (< ಕಂಭ)]

**ನಂದಿಕಲ್ಲುಸೊಪ್ಪು** (ನಾ). ಒಂದು ಬಗೆಯ ಸೊಪ್ಪು: (ಮೃಜಿಗಿ. ೦೨-೨೨೦). [? + ಸೊಪ್ಪು$_8$]

**ನಂದಿಕಾಡ** (ನಾ). ಒಬ್ಬಾತನ ಹೆಸರು: ಕೂಡಲೂರ್ಪ್ಪಾಡಿ ಒಡೆಯ ನನ್ದಿಕಾಡನಾ ಎಱನಾಗನಾ ವ್ಯವಹಾರದನ್ತರು ಸಾಲವಿಲ್ಲಾಮ್ (ಎಕ. X, ಕೋಲಾರ: ೭-೩ ಸು. 760). [?]

**ನಂದಿಕೆ** (ನಾ). (ದೀಪ ಮೊದಲಾದುವು) ನಂದುವಿಕೆ; ಆರಿಹೋಗುವಿಕೆ: ಒಂದಿಕೆ, ಒಂದಿಕೆಗಳ್; ನಂದಿಕೆ, ನಂದಿಕೆಗಳ್ (ಶಬ್ದಾನು. ೫೬೮ ಪ್ರಯೋ).

[ನಂದು + – ಇಕೆ]

**ನಂದಿಕೇಶ** (ನಾ). ೧. = ನಂದಿಕೇಶ್ವರ ೧: ಶ್ರೀಸದಾಶಿವನೊಡನೆ ಗರ್ವಿಸಿ . . . ವ್ಯಾಸದೇವಂ ಕೈಯನೆತ್ತಿದೊಡಾ ಸಮಯದಲಿ ನಂದಿಕೇಶನು ಕೇಸಿ ಮುಳಿಯನೆ ಆತನೆರಡು ಕರಂಗಳಂ ಮುನಿದು (ಬಸಪು. ೫೪-೯೯); ಎಲೆ ಗುರುವೆಯಾ ಶುಕ್ರಗಾ ಮಂತ್ರವೇತೆಱದೆ ನೆಲೆಯಾಯ್ತ್ತಿದಂ ಪೇಳ್ವುದೈ ನಂದಿಕೇಶ (ವೀಶೈಪು. ೨-೦೩-೨೦). ೨. ಈಶ್ವರ; ಶಿವ. ೧, ೨: ಶ್ರೀಶೈವಶ್ರೇಯಮಂ ಮಾಳ್ಕೆಮಗನವರತಂ ನಂದಿಕೇಶಂ ಮಹೇಶಂ (ರಾಜಶೇ. ೦-೦). [ನಂದಿಕ + ಈಶ]

**ನಂದಿಕೇಶ್ವರ** (ನಾ). ೧. ಈಶ್ವರನ ಪ್ರಮಥಗಣದಲ್ಲಿ ಪ್ರಮುಖನಾದವನು; ಬಸವ: ನಂದಿಕೇಶ್ವರ ಭೃಂಗನಾಟ್ಯ ನಮ್ಮ ಲಿಂಗನ ಮುಂದೆ (ಬಸವ. ೫೬೩); ಮೃಡ ಮೃಡಾಣಿ ಕುಮಾರ ಗಣಪತಿ ಮೃಡಸಮಾನದ ನಂದಿಕೇಶ್ವರ (ಸಾವಂತ. ೯-೯); ಮನ್ಮತದಿಂದಯೋನಿಜನಾಗಿಯೊಗೆದನು ನಂದಿಕೇಶ್ವರನೆಂಬ ಪೆಸರಿಂದಾ ಶಿಲಾದಂಗೆ (ಬಸಪು. ೨-೧೦); ಚಂದಯ್ಯ ಪ್ರೀತಿಯ ನಂದಿಕೇಶ್ವರನ ಮುನ್ನ ಕಂದ ಗಣಪದೇವಯ್ಯ ಅಂದದ ಶಿವಶರಣರುಯಿರುತಿರೆ ಚಂದವನೇನ ಬಣ್ಣಿಸುವೆ (ಕಪೋಕ. ೬-೫೭). ೨. ಈಗಿನ ಬಿಜಾಪುರಜಿಲ್ಲೆಯ ಬಾದಾಮಿ ಪತ್ತಿನದ ಒಂದು ಗ್ರಾಮದ ಹೆಸರು. [ನಂದಿಕ + ಈಶ್ವರ]

**ನಂದಿಕೇಶ್ವರಶೈವ** (ನಾ). [ಶೈವ] ಶೈವಮತದ ಎಂಟು ಪ್ರಭೇದಗಳಲ್ಲಿ ಒಂದಂ : ಶೈವಮತದಲ್ಲಿ ನಾವು ಎಂಟು ಪ್ರಭೇದಗಳನ್ನು ಕಾಣಬಹುದು. (೧) ದ್ವೈತ ಪಾಶುಪತ, (೨) ದ್ವೈತಶೈವಸಿದ್ಧಾಂತ, (೩) ದ್ವೈತಾದ್ವೈತಲಕುಲೀಶ ಪಾಶುಪತ, (೪) ವಿಶಿಷ್ಟಾದ್ವೈತಶೈವ, (೫) ವಿಶೇಷಾದ್ವೈತ (ವೀರಶೈವ), (೬) ನಂದಿಕೇಶ್ವರಶೈವ, (೭) ರಸೇಶ್ವರಶೈವ, (೮) ಕಾಶ್ಮೀರ ಶೈವ (ಭಾರದ. ೨೦೦). [ ನಂದಿಕೇಶ್ವರ + ಶೈವ ]

**ನಂದಿಕೇಶ್ವರಸಂಹಿತೆ** (ನಾ). [ಶೈವ] ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಗಳಲ್ಲಿ ಒಂದು : ಸ್ಥಿರಸಂಹಿತೆ ಸ್ಥಾಣುಸಂಹಿತೆ ಮಹತ್ಸಂಹಿತೆ ನಂದಿಸಂಹಿತೆ ನಂದಿಕೇಶ್ವರಸಂಹಿತೆ ಏಕಪಾದಪುರಾಣ ಶಂಕರಾಗಮ ನೀಲಭದ್ರತಂತ್ರ ಶಿವಭದ್ರಾಗಮ ಕಾಲಭೇದಾಗಮ ಶ್ರೀಮುಖಾಗಮ ಶಿವಶಾಸನಾಗಮ ಶಿವರೇಖಾಗಮ ದೇವೀಮತವೆಂದು ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಂಗಳು (ವಿವೇಕ. ೭೧). 'ನಂದಿಸಂಹಿತೆ' ಪಠಾ. [ ನಂದಿಕೇಶ್ವರ + ಸಂಹಿತೆ ]

**ನಂದಿಕೋಲು** (ನಾ). =ನಂದಿಕಂಬ : ಅನ್ನಿಜ ಸುಲದ ಕಂಬಕಂ ಕುಲಿಶಾವನ ಶಿಶ್ರಾ ನಂದಿಕೋಲು ಸಂಗಮೇಶ್ವರನ ನುಡಿಗೆ ಸಬಳ ಶಾಸ್ತ್ರಿಕಸಯಲ್ಲಿ ಕತ್ತಿ ತಡಾಯ ಖಡಲ್ಲಿಡಯಲ್ಲಿ ಬಿಲ್ಲು ನಾರಾಚ ಗದೆ ಸೂಲ್ಗಿ ಚಕ್ರ ವಂಕಿ ಚೂರಿ ಜಯ ಬಾಡಿಶ್ರುಂಗಾರ ತೊಡಪು ಸಂಣ ಚಂದ್ರಾಯುಧಾ ಚಿಲುತಲಿ ಮೊದಲಾದಾ ಬತ್ತೀಶಾಯುಧಾ (ಎಕ. XVI, ಗುಬ್ಬಿ. ೬೪-೨೧; ಸು. 1672) ಒಂದು ನಂದಿಕೋಲಿನಷ್ಟು ಆಳ ಅವ (ದೀಪಕ. I, ೪೯); ಗಣೆ ಅಥವಾ ನಂದಿಕೋಲನ್ನು ಮೆರಸುತ್ತ ಒಯ್ಯುವುದು (ಕರ್ಣಾಪೂ. II, ೬೯).

**ನಂದಿಕೋಲು ಕುಣಿತ**=ನಂದಿಕಂಬವನ್ನು ಹಿಡಿದು ಮಾಡುವ ನೃತ್ಯ : ನಂದಿಕೋಲು ಕುಣಿತದಲ್ಲಿ ಆ ಕಂಬಕ್ಕೆ ಕಟ್ಟಿರುವ ತಾಳಗಳು, ಕುಚ್ಚುಗಳು, ತಾಳಹಾಕಿದಂತೆ ಶಬ್ದಮಾಡುತ್ತವೆ (ಡಿ೦). **ನಂದಿಕೋಲು ಕುಣಿಸು** = ನಂದಿಕಂಬವನ್ನು ಹಿಡಿದು ಕುಣಿ: ನಂದಿಕೋಲು ಕುಣಿಸ್ತಾ ಇದ್ದೀಯಾ? (ತುಂಗಭ. ೩). [ನಂದಿ + ಕೋಲು$_1$ (<ಕೋಲ್$_1$)]

**ನಂದಿಗುಂದ** (ನಾ). ೧. ಒಬ್ಬಾತನ ಹೆಸರು : ನಂದಿಗುನ್ದರ್ಗೆ ದಾನಂ ಗೊಟ್ಟದು ಕಿಸುಗೊಳದ ಪಾಜನಂ ಒನ್ದಡುವು ಮರ್ದೂರೊಳ್ (ಎಕ. IV, ಹೆಗ್ಗಡ. ೪-೩೬; ಸು. 750). ೨. ಒಂದು ಊರಿನ ಹೆಸರು : ನನ್ದಿಗುನ್ದದ ಪಸುವೊನ್ನವೊಟ್ಟಿಯಿಂ × × × ಗಾಣಗಾವುಣ್ಡನಾಡಲ್ಲ ಪಾಚಿದೊಡಂ (ಎಕ. IX, ದೇವನ. ೪೨-೬; ಸು. 900 ?). [ ? ]

**ನಂದಿಗೊಳಿ** (ನಾ). ಒಂದು ಊರಿನ ಹೆಸರು : ಶ್ರೀಮದಿಜೀವನೊಟ ಮ್ಮಾಧಿರಾಜರ ನನ್ದಿಗೊಳಿಯ ಗವುಣ್ಡ × × ಮಿಯಾ ಭುಸವ್ವಕೆ . . . ದೇವಭೋಗ × × × ಎಲ್ಲ ಸಲ್ಲುದು (ಎಕ. IX, ಹೊಸಕೋ. ೩೬-೧೨; ಸು. 950). [?]

**ನಂದಿಣಗೆ** (ನಾ). ಒಂದು ಊರಿನ ಹೆಸರು : ನನ್ದಿಣಗೆ ನಾಮಗ್ರಾಮ (ವೇ)ಪೂರ್ವ್ವಸ್ಯಾಂದಿಶಿ (ಅಕ. VII, ೪೪-೯೨; 10ನೆಯ ಶತ). [ ? ]

**ನಂದಿತ** (ಗು). ಸಂತೋಷಗೊಂಡ ; ಸಂತುಷ್ಟವಾದ : ನಂದಿತಾಮಳ ಭಕ್ತಿರಸ ಸಾನಂದಪುಳಕಂಗಳು ತನುವಿನೊಳ್ ಸಂದಣಿಸೆ ದಂಡಪ್ರಣಾಮವನಿಕ್ಕಿ ವಂದಿಸುತ (ಬಸಪು. ೨-೨೦). [ ಸಂ. ]

**ನಂದಿದೇವ** (ನಾ). ಒಬ್ಬಾತನ ಹೆಸರು : ಆಚಾರ್ಯ್ಯಪುರುಷ ಇಱಿದು ಬಸವಟ್ಟಿಯದೆ ಬೀಟಿಪ್ಪೊವರ್ ತೆಱನ ಮೆಚ್ಚದೊಂ ಪಿಸುಣರ ಪೊಸಪೊ ಕುಠಿಲಂ ಪೊ × × ವ ಈಯದೆ ಈಱಿಯದೆ ನನ್ನಿ ನುಡಿಯದೆ ನನ್ದಿದೇವಂ ಗಟ್ಟಿಸಿಮುಯ್ಯುವ್ವಡೆ ದೊಂಗರ ಅಲೆದೊಂ ಮೂಡದಲಿಪೊಂ (ಎಇ. XXIV, ೨೬-೦೩; ಸು. 885). [ ನಂದಿ + ದೇವ ]

**ನಂದಿದ್ರುಮ** (ನಾ). ನಂದಿಮರ ; ನಂದಿವೃಕ್ಷ : ಅಲ್ಲಿ ಸೌಧರ್ಮೇಂದ್ರಂ ನಂದಿದ್ರುಮದೊಳ್ ಮಣಿಮಯಶಿಬಿಕಾಯಾನಮನಿಟ್ಟುವುದುಂ (ಶಾಂತಿಪು. ೧೦-೧೦೩ವ). [ ನಂದಿ + ದ್ರುಮ]

**ನಂದಿಧ್ವಜ** (ನಾ). ೧. ನಂದಿಯ ಚಿಹ್ನೆಯುಳ್ಳ ಧ್ವಜ,-ಬಾವುಟ : ಎತ್ತಿಸಿದ ನಂದಿಧ್ವಜಂಗಳ ಮೊತ್ತದ ಪತಾಕೆಗಳ ಪಲ್ಲವಸತ್ತಿಗೆಯ ಸಾಲುಗಳನೇಕವ್ಯಾಸಹಸ್ರಗಳಿಂ . . . ದೇವಾ ಪೃಥ್ವಿ ಬಂದೆಸೆಯೆ (ಬಸಪು. ೫೬-೩೩) ; ಬಿಂಕದ ಬಿರಂದಿನ ನಂದಿಧ್ವಜವಿತತಿ ಪುರದೊಳಿರ್ದುದು ಚೆಲ್ವಿಂ (ಹಮ್ಮಿರ. ೧-೬೫) ; ಶ್ರೀವೃಷಭರಾಜನನುಯಾರೋಹಣಂಗೆಯ್ಯೆ . . . ಬಿರುದ ಕೊಂಡಾಡಿ ಕೈವಾರಿಸುವ ಚಂಡಕೀರ್ತಿಗಳು ಮುಂವಿಡಿದ ಶ್ರೀನಂದಿಧ್ವಜವೂ (ನವಮೋ. ೨೨-೫೦). ೨. ನಂದಿಯ ಚಿಹ್ನೆಯುಳ್ಳ ಧ್ವಜವನ್ನು ಹೊಂದಿದವನಂ ; ಶೈವ : ದೇವಾಂಗರು 'ನಂದಿಧ್ವಜ' ರೆಂದು ಹೇಳಿದೆ (ಕರ್ಣಾಪೂ. II, ೨೦). ೩. ನಂದಿಯ ಚಿಹ್ನೆಯುಳ್ಳ ಧ್ವಜವನ್ನು ಹೊಂದಿರುವ ಕೋಲು ; ನಂದಿಕಂಬ ; ನಂದಿಕೋಲು : (*). [ ನಂದಿ + ಧ್ವಜ ]

**ನಂದಿನಾಗರಿ** (ನಾ). ಒಂದು ಬಗೆಯ ಲಿಪಿ : ನಂದಿನಾಗರಿ ಕನ್ನಡ ಮತ್ತು ಗ್ರಂಥಲಿಪಿಗಳನ್ನು ಉಪಾಧ್ಯಾಯರು ಬಾಲಕರಿಗೆ ಹೇಳಿಕೊಡುತ್ತಿದ್ದಿರಬೇಕು. ಆ ಕಾಲದ ಶಾಸನಗಳೂ ಕೂಡ ಕನ್ನಡ, ಗ್ರಂಥ ಮತ್ತು ನಂದಿನಾಗರಿಲಿಪಿಗಳಲ್ಲಿರುವುದು ಗಮನಾರ್ಹ (ಕಶಾಅ. ೨೪೩) ; ಅದರ ಕೆಳಗೆ ನಂದಿನಾಗರಿ ಅಕ್ಷರಗಳಲ್ಲಿ "ಷಣ್ಮುಖದಾಸ" ಎಂದಿದೆ (ಹೊಯ್ಸವಾ. ೧೫೦). [ ಸಂ. ನಂದಿನಾಗರೀ ]

**ನಂದಿನಾಥ** (ನಾ). = ನಂದಿಕೇಶ್ವರ ೧ : ಇಂದುಧರನನುಮತದೊಳಾದಿಮ ನಂದಿನಾಥನು ಬಸವನಾಮದಿ ಬಂದಪಂ ಶಿವಭಕ್ತಿಯಂ ಮಸುಮತಿಗೆ ಪಸರಿಸಲು (ಬಸಪು. ೨ ಸೂಚನೆ) ; ನಂದಿನಾಥನಂ ಭೃಂಗವೀರೇಶ ಷಣ್ಮುಖ ಸಂದಿಹ ವಿಘ್ನೇಶ್ವರನು ಇಂದುಧರನ ಎಡಬಲದಲ್ಲಿ ಸೂರಿಯ ಚಂದ್ರರು ಮೆರೆದು ರಾಜಿಪರು (ಕಪೋತ. ೫-೦೩). [ನಂದಿ + ನಾಥ ]

**ನಂದಿನಿ** (ನಾ). ೧. ಸಂತೋಷವನ್ನುಂಟುಮಾಡುವವಳು; ಆನಂದವನ್ನು ಕೊಡುವವಳಂ ; ಮಗಳಂ. ೨. ಕಾಮಧೇನುವಿನ ಮಗಳು ; ವಸಿಷ್ಠ ಮಹರ್ಷಿಯ ಹೋಮಧೇನು : ಸರಸಚರಿತನೆ ನಂದಿನಿಯ ಪರಿಚರಿಯೆಯನು ಹಗಲಿರುಳು ತಪ್ಪದೆ ವರವ ಪಡೆಯುವವರೆಗೆ ಮಾಡುವದೆಂದು ಮುನಿಯುಸುರಿ ಪರಸಿದನು (ರಘುವಂ. ೧-೪೦). ೩. ಒಂದು ಬಗೆಯ ವೃಕ್ಷ ; ನಂದಿಮರ : "ನಂದಿನೀ – ಹರೇಣುಕ, ಹಸು, ನಂದಿಯ ಮರ, ಎತ್ತುನಾಲಗೆ" (ಓಷಧಿ. ೮೩). ೪. ಒಂದು ನಾಡಿಯ ಹೆಸರು : ಪೂರ್ವದಿಕ್ಕಿನ ನಂದಿನೀ ಎಂಬ ನಾಮಾಂತರವುಳ್ಳ ಧಾರಿಣೀನಾಡಿಯಲ್ಲಿ ಶುಕ್ಲವರ್ಣನಾಗಿ ವಾಸುದೇವ, ದಕ್ಷಿಣದಲ್ಲಿ ಪಿಂಗಳಾನಾಡಿಯಲ್ಲಿ ಪಿಂಗಳವರ್ಣನಾಗಿ ಸಂಕರ್ಷಣ, ಮಧ್ಯದಲ್ಲಿ ಸುಷುಮ್ನಾನಾಡಿಯಲ್ಲಿ ರಕ್ತವರ್ಣನಾಗಿ ನಾರಾಯಣ–ಹೀಗೆ ೫ ರೂಪಗಳಿಂದ ಭಗವಂತನಿರುವನು (ಹಸಾರ. ೪೭೬). ೫. ನಾದಿನಿ : "ಸ್ವಸೃತನಯಂ ಸ್ವಸ್ರೀಯಂ ಪೆಸರಂ ನಾದುನಿ ನನಾಂದೃ ನಂದಿನಿಯೆನಿಕುಂ" (ಪಸ್ತುಕೋ. ೫೬-೨೪). P ಇದು 'ನಾದಿನಿ' ಎಂಬುದರ ಅಪಲಿಖಿತವಿರಬಹುದಂ. [ ಸಂ. ನಂದಿನೀ ]

**ನಂದಿನೆಲಬೇವು** (ನಾ). ಒಂದು ಬಗೆಯ ಸಸ್ಯ : (ತ್ರುಕಿಗಿ. ೪೮-೯೫೨). [ ? ]

**ನಂದಿಪತಾಕ** (ನಾ). = ನಂದಿಧ್ವಜ ೧ : ನಂದಿಪತಾಕಮುದಬ್ಧಿಸದಾವಂದರ ಮಂದಿರ ಚಂದ್ರಕಲಾ . . . ಸುಬಂಧು ಜಯಾ (ಹಾಲಾಸ್ಯ. ೧-೪-೦೬). [ನಂದಿ + ಪತಾಕ ]

**ನಂದಿಪತಾಕೆ** (ನಾ). = ನಂದಿಧ್ವಜ ೧ : ಕಣಯ ಕುಣಿಕಿಲ ಬಂಡಿಯಂ ಬಚ್ಚಣಿಸಿ ನಂ[ಪಾಠಾಂ. ವಂ]ದಿಪತಾಕೆಗಳ ತೋರಣವನದಟಿೂಳಲಂಕರಿಸಿ (ಬಸಪು. ೫೫-೫). [ ನಂದಿ + ಪತಾಕೆ ]

**ನಂದಿಪುರಾಣ** (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದಂ : ಸನತ್ಕುಮಾರಪುರಾಣ ನಾರಸಿಂಹಪುರಾಣ ನಂದಿಪುರಾಣ ಶಿವಧರ್ಮಪುರಾಣ

ದೂರ್ವಾಸ ಪುರಾಣ ನಾರದೀಯಪುರಾಣ ಕಪಿಲಪುರಾಣ ಮಾನವಪುರಾಣ ಉಶನಃಪುರಾಣ ಬ್ರಹ್ಮಾಂಡಪುರಾಣ ವಾರುಣಪುರಾಣ ಕಾಳೀಪುರಾಣ ವಾಸಿಷ್ಠಲೈಂಗಪುರಾಣ ಸಾಂಬಪುರಾಣ ಸೌರಪುರಾಣ ಪರಾಶರಪುರಾಣ ಮರೀಚಿಪುರಾಣ ಭಾರ್ಗವಪುರಾಣವೆಂಬವೇ ಆಯಾ ನಾಮಧೇಯಮುಳ್ಳ ವರಿಂ ನಿರೂಪಿತಮಾದ ಹದಿನೆಂಟು ಉಪಪುರಾಣಂಗಳು (ವಿವೇಕ. ೮). [ ನಂದಿ + ಪುರಾಣ ]

**ನಂದಿಬಟ್ಟಲು, ನಂಜವಟ್ಟಲು, ನಂಜುಬಟ್ಟಲಂ, ನಂದಿವಟ್ಟ, ನಂದಿವಟ್ಟಲು** (ನಾ). ಸುವಾಸನೆಯುಳ್ಳ ಬಿಳಿಯ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ; ತಗರ; ನಂದ್ಯಾವರ್ತ; ವಂಜಟಿ: "ನಂದ್ಯಾವರ್ತ . . . ನಂದಿಬಟ್ಟಲ ಹೂವು" (ಗಂಗಾಮ. ೧೭೭); ಮನೆಯ ಮುಂದೆ ಚಮನ್, ರೋಜಾ, ಡೇರಾ, ನಂದಿಬಟ್ಟಲು ಗಿಡಗಳ ಮಧ್ಯೆ ಪನ್ನೇರಳೆ ಹಣ್ಣಿನ ಮರ (ಹೊಸಕ್ಷ. ೦೨೩). **ನಂಜವಟ್ಟಲು**: ನಂಜವಟ್ಟಲಿನ ಗಿಡದ ತುಂಬ ಹೂವು ಅರಳಿದೆ (ಅದೇ). **ನಂಜುಬಟ್ಟಲು**: ನಂಜಪ್ಪ ಬೆಳೆದನೆ ನಂಜುಬಟ್ಟಲ ಹೂವ ಮಲ್ಲಯ್ಯನೆದನೆ ಮರುಗವ (ಜಾಪದ. ೧೦೦). **ನಂದಿವಟ್ಟ**: "ನಂದಿವಟ್ಟಮದು ತಗರಸಂಜ್ಞಕಂ ತಾನಕ್ಕುಂ" (ವಸ್ತುಕೋ. ೩೮-೩೩); ಪೊಕ್ಕುಟು ನಂದಿವಟ್ಟದರಲಂ ಚೆಲ್ವಿಂದು ಗುಕರ್ಗೊಡೆ ಕೇದಗೆಯಂ . . . ಕೈವಿಗೆ ಪುಷ್ಪಾಸ್ತ್ರನ ಪಂಚಬಾಣ ವಿವಳಂಬಾಶಂಕೆಯಂ ಮಾಡಿದಳ್ (ಧರ್ಮಾಮೃ. ೭-೨೦೭); ನಂದಿವಟ್ಟದ ಪಾಯವಟ್ಟಮುಮಂ ಕಾಂಚಿವಾರದ ಕಾಂಚಿಯುಮಂ . . . ವಿವಿಧ ಕಿಸಲಯದ ಕಿಸಲಯಮುಮಂ ಮನೋಹರಮೆನೆ ಸಮೆದು ತಮತಮಗೆ ಪಸದನಂಗೊಂಡು (ಚಂದ್ರಪ್ರ. ೭-೧೦೯ ವ); ಪಾದರಿ ಪಾರಿಜಾತವು ನಂದಿವಟ್ಟವು ಹಾದರಿ ತುಂಬುರ ಜಾಲಿ (ದೇವಾಂಪು. ೬-೨೬೦). **ನಂದಿವಟ್ಟಲು**: "ನಂದ್ಯಾವರ್ತಃ–ನಂದಿವಟ್ಟಲು, ಮಿನಿನ ಭೇದ" (ಓಷಧಿ ೮೯); ಗುಲಾಬಿ, ನಂದಿವಟ್ಟಲು . . . ಮೊಲ್ಲೆ, ಮಲ್ಲಿಗೆ, ಇರುವಂತಿಗೆ ಇವುಗಳಲ್ಲಿ ಕೆಲವು ಕೊಳ್ಳೆಗಳನ್ನು ಕೆಲವು ಅಂಟ ಗಳನ್ನು ಮಾಡಿ ಹಚ್ಚಬೇಕು (ಕೃಷಿಪ್ರ. ೨೦೦). [ ದೇ. ಶ ತಮಿ. ನನ್ನಿಯಾವಟ್ಟ; ತುಳು. ನಂದಿಬಟ್ಟಲ್ ]

**ನಂದಿಮರ, ನಂದಿಯ ಮರ** (ನಾ). ಒಂದು ಬಗೆಯ ಮರ; ನಂದಿವೃಕ್ಷ: "ಕಚ್ಛಃ –ನಂದಿಮರ" (ಓಷಧಿ. ೨೦); ಅದೂರದಿಂದಾಲಾಪವನೆಗೆ ಮೊದಲ್ಗೆಯ್ದುದೊರ್ ಖಂಜನಂ, ಹಿಂಬಾಲಿಸಿದುಪದಂ . . . ಇಲ್ಲಿ ಬಿದಿರ ತುದಿಯಿಂದಲ್ಲಿ ನಂದಿಮರದೀದಿತ್ತ . . . ಎತ್ತ ಕಿವಿಯಿತ್ತೊಡತ್ತಣಿಂದೆ (ಶ್ರೀರಾಮಾ. ೯೮೦-೧೭೦). **ನಂದಿಯ ಮರ**: "ಜಟಾವೃಕ್ಷಃ–ನಂದಿಯ ಮರ" (ಓಷಧಿ. ೭೦); ಹೊಳೆಯ ದಡದ ಮೇಲಣ ನಂದಿಯ ಮರನ ಒಕ್ಕಿನಲು (ಎಕ. VIII, ತೀರ್ಥಹ. ೦೯೦-೬೬; 1407). [ ನಂದಿ + ಮರ₁ ]

**ನಂದಿಮುಖಿ** (ನಾ). ನಂದಿಯಂ ಎದುರು,–ಸಮಕ್ಷ (?): ಹಾರುವರೆಲ್ಲರೂ ನೆರೆದು ಶೂದ್ರನ ಹಾರುವನ ಮಾಡುವಲ್ಲಿ ನಂದಿಮುಖಿವಲ್ಲದೆ ಮಾಡಲಾಗದು ವಿಭೂತಿಯಲ್ಲದೆ ಮತ್ತೇನನೂ ಮಾಡಲಾಗದು (ಬಸವ. ೭೦೯). [ ನಂದಿ + ಮುಖಿ ]

**ನಂದಿಮುದ್ರೆ** (ನಾ). ನಂದಿಯ ಗುರುತು; ವೃಷಭನ ಚಿಹ್ನೆ: ವಂದಿಸುತ ಮುಂದೆಸೆಯೊಳಿರಲಂತವರ ಹಣೆಗಳಲಿ ನಂದಿಮುದ್ರೆಯನೊತ್ತಿ (ಬಸಪು. ೫೦-೯೭). [ ನಂದಿ + ಮುದ್ರೆ ]

**ನಂದಿಮೆಟ್ಟಲು** (ನಾ). ಬಸವನ ವಿಗ್ರಹಗಳನ್ನು ಎರಡು ಕಡೆಗಳಲ್ಲೂ ಹೊಂದಿರುವ ಮೆಟ್ಟಲು; ದೇವಾಲಯಗಳ ಶಿಲ್ಪರಚನೆಯ ಒಂದು ಭಾಗ: ಮೊದಲು ನಾಲ್ಕು ಗರ್ಭಗುಡಿಗಳು . . . ಒಂದೇ ಸಾಲಿನಲ್ಲಿದ್ದವೆಂದು, ಅನಂತರ ಐದನೆಯ ಗರ್ಭಗುಡಿಯನ್ನು ಸೇರಿಸಲಾಯಿತೆಂದು ಅಂತರಾಳಗಳಿಂದಲೂ ನಂದಿಮೆಟ್ಟಲುಗಳಿಂದಲೂ . . . ಸ್ಪಷ್ಟವಾಗಿದೆ (ಹೊಯ್ಸವಾ. ೧೪೩). [ ನಂದಿ + ಮೆಟ್ಟಲು ]

**ನಂದಿಯಮರ** 'ನಂದಿಮರ' ನೋ.

**ನಂದಿಯಾಲ, ನಂದ್ಯಾಲ** (ನಾ). ಒಂದು ಊರಿನ ಹೆಸರು: ಶ್ರೀನಿರ್ವ್ವನೀತರಾ ಕಿಱಿಯಾ ಮಗನ್ದಿರ್ಕಾಡುವಟ್ಟಯರಿನ್ದಮ್ ವಲ್ಲವರಸರಿನ್ದಂ ಕೊಱ್ಗ್ಗೊಣ್ಡವಟಂ ಸೂಡಿದೊರಾ ಅನುಜೋಣನ್ದ್ರುಕನಲ್ಗೊಳಿ ನನ್ದಿಯಾಲ ರಾವಿಟ್ಟದುಪಡೆಮ್ವೆಲಾಮುಅಮಸಪಾಲುಮ್ (ಎಕ. VI, ಚಿಕ್ಕಮ. ೫೦-೩; ಸು. 490); ಮಣಿಯಡೆಗುರೆಯ ನಂದಿಯಾಲ ಸೀವಪ್ಪಾಲ ನಾಣ್ಣುಱಿಯ ಮದಣ್ನ (ಮ್ಯಆರಿ. ೦೯೨೪, ೭೮-೩೬; ?). **ನಂದ್ಯಾಲ**: ಮಣಿಗ್ರಾಮಶ್ರೇಣಿ ಚತುಃಸಾಮನ್ತ ಟಿಗುರೆ ಅಮಣಿಯ ನಂದ್ಯಾಲ ಸೀಂಬಾಲದೇಶ ಪ್ರ ಕೃ ತ್ಯಾ ಧ್ಯ ಕ್ಷ ಣಾ ಂ (ಮ್ಯಆರಿ. ೦೯೩೦, ೩-೨೦; ಸು. 600); ಶೀಯವಲ್ಲವರಸರು ಟಿಗುರೆಯರುಂ ವಣಿಯರಾನ್ನಂದ್ಯಾಲರುಂ ಶೀವಪ್ಪಾಲರುಂ ಚಾತುರ್ವ್ವೈರ್ದ್ಯಮುಮುಜಿಯಂ ಪೆತ್ತಾ ಎಲ್ಲಾ ಸಾಮನ್ತರು ಮತ್ತಾಣಿಉಂ ಸಾಕ್ಷಿ (ಮ್ಯಆರಿ. ೦೯೪೦, ೦-೩೯; ಸು. 788); ಶ್ರೀಮನ್ಮಹಾಮಂಡಲೇಶ್ವರ ನಂದ್ಯಾಲದ ವೀರರಾಜ ಶ್ರೀರಂಗರಾಜಗಳ ಮಕ್ಕಳು (ಎಕ. X, ಮುಳಬಾ. ೪-೦೨; 1547). [ ? ]

**ನಂದಿಯುಂಡಿಗೆ** (ನಾ). ನಂದಿಯ ಚಿಹ್ನೆ,–ಮುದ್ರೆ; ವೃಷಭನ ಮೊಹರು: ತಾಮ್ರವರ್ಣಿಯ ಮುತ್ತುಗಳುಂ ನಂದಿಯುಂಡಿಗೆಯ ವಿಸುನಿಯ ಪೊಂಗಳುಂ . . . ಬಸವನ ಮನೆಯ ಮುಂದೆ ಸುರಿದು ರಾಸಿಯಾಗಿರೆ (ಬಸರ. ೦೨-೬೮); ಪಡಿಪೊನ್ನ ಜಾಳಿಗೆಯನಂತದಂ ಸೌಂದರಂ ಕೈಕೊಂಡು . . . ನಂದಿಯುಂಡಿಗೆಯ ರಾಯಸವಿರಲು ಕಂಡದಕೆ ವಂದಿಸಿ ನಿಜೋತ್ತಮಾಂಗದೊಳಿಟ್ಟು (ಸೌಂದಪು. ೦೯-೧೧). [ ನಂದಿ + ಉಂಡಿಗೆ₃ ]

**ನಂದಿಲಿಪಿ** (ನಾ). ಒಂದು ಬಗೆಯ ರಹಸ್ಯ ಲಿಪಿ: ದೇವಲಿಪಿ ನಂದಿಲಿಪಿಯಾ ಅಗಣಿತ ಲಿಪಿಗಳ ನೋಡಲಱಿಯದೆ ಬಿಜ್ಜಳರಾಯನ ಸಭೆಯೊಳು ತಳಕಳಗೊಳುತಿದ್ದರು ವಿದ್ವಾಂಸರುಗಳೆಲ್ಲಾ (ಭಾಸ್ಕರ. ೭೭-೭). [ ನಂದಿ + ಲಿಪಿ ]

**ನಂದಿವಟ್ಟ** 'ನಂದಿಬಟ್ಟಲು' ನೋ.

**ನಂದಿವಟ್ಟಲು** 'ನಂದಿಬಟ್ಟಲು' ನೋ.

**ನಂದಿವರ್ಧನ** (ನಾ). ೧. ಈಶ್ವರ; ಶಿವ. ೨. ಮಗ; ತನಯ. ೩. ಸ್ನೇಹಿತ; ಮಿತ್ರ. ೪. ನಂದಿಮರ ಮತ್ತು ಅದರ ಹೂವು: "ತುನ್ನಃ, ಕುಬೇರಃ, ಕುಣಿಃ, ಕಚ್ಛಃ, ಕಾಂತಕಲಃ, ನಂದಿವೃಕ್ಷಃ–ಓ ನಂದೀಯಂಬುವ ಮರದ ಹೆಸರು. ಬಸವನ ಗಿಡ, ನಂದಿವರ್ಧನಹುಪ್ವ ಪ್ರಸಿದ್ಧ" (ಸಿದ್ಧಾಂತಿ. ೦೯೧). ೫. ಒಂದು ಬಗೆಯ ದೇವಸ್ಥಾನದ ರಚನೆ. ೬. [ಜ್ಯೋತಿ] ಹುಣ್ಣಿಮೆಯ ಅಥವಾ ಅಮಾವಾಸ್ಯೆಯ ಹೆಸರು; ಪಕ್ಷದ ಕೊನೆಯ ದಿವಸ. [ ಸಂ. ]

**ನಂದಿವಳ್ಳಿ** (ನಾ). ಒಂದು ಊರಿನ ಹೆಸರು: ಕಿಱುವಳ್ಳಿ ಬಾಳವುರು ಇತ್ಯೇಕಾಂತೇಗ್ರಾಮಾಣಾಂ ಮಧ್ಯೇ ನೆಜ್ಗಿಯೂರ್ನನ್ದಿವಳ್ಳಿ ಸಹಿತಸ್ಸಳ್ಳಿಯೂರ್ನಾಮಗ್ರಾಮೋದತ್ತಃ (ಎಕ. X, ಕೋಲಾರ. ೬೩-೩೮; 757). [ ನಂದಿ + ವಳ್ಳಿ₁ ]

**ನಂದಿವಾಹ** (ನಾ). = ನಂದಿವಾಹನ. [ ನಂದಿ + ವಾಹ ]

**ನಂದಿವಾಹನ** (ನಾ). ವೃಷಭನನ್ನು ವಾಹನವಾಗಿ ಉಳ್ಳವನು; ಶಿವ: ಮುಕ್ಕಣ್ಣ ಅಂದದಹಿಕುಂಡಲ ಚತುರ್ಭುಜ ನಂದಿವಾಹನ ಗೌರಿಸಹಿತಂ ಮುಂದೆ ನಿಂದು ಮಹೇಶನೀಶನು ಪಾಶಧರಕರನು (ಬಸಪು. ೨೭-೨೬). [ ನಂದಿ + ವಾಹನ ]

**ನಂದಿವಾಳ** (ನಾ). ಒಂದು ಬಗೆಯ ಹೂವು: ಮಲ್ಲಿಗೆಯಂ . . . ನಂದಿವಾಳ ಮುಡಿವಾಳ ಸೌಗಂಧಿ ಕಣಗಿಲು ಚಂಪಕಾ ಸಲ್ಲಲಿತ ಪಾರಿಜಾತಾದಿ ಬಹುಪುಷ್ಪಗಳ ನಲ್ಲೆಯರುಯತಿಜಿಕಸದಿಂ ತಿರಿತಂದು (ನವಮೋ. ೨೪-೫೯). [ ? ]

**ನಂದಿವೃಕ್ಷ** (ನಾ). = ನಂದಿವಂರ; "ನಂದಿವೃಕ್ಷಃ-ನಂದಿವಾುರ" (ಓಪಧಿ. ೮೪); ಅಶ್ವತ್ಥಾಕಾರವಪ್ಪ ನಂದಿವೃಕ್ಷ (ನಾಚಿಲಾ. ೬); ಶಿಂಪುಗಂಧಗಿರಿ, ನಂದಿವೃಕ್ಷ . . . ಗಂಧಗರಿಗೆ (ಪ್ರುಣಿ. ೦೯-೩೪೮). [ ನಂದಿ + ವೃಕ್ಷ ]

**ನಂದಿಸಂಘ** (ನಾ). [ಜೈನ] ಜೈನಸಂಘದ ಪ್ರಭೇದಗಳಲ್ಲಿ ಒಂದು: ನಂದಿಸಂಘದರುಂಗಳಾನ್ವಯದ ಗುಣಸೇನಪಣ್ಡಿತದೇವರ್ಗ್ಗೆ . . . ಕೊಟ್ಟರು (ಎಕ. I, ೭೨-೯೩; 1059); ಸ್ವಸ್ತಿಶ್ರೀ ರಾಜಾಧಿರಾಜ ಕೊಂಗಾಳ್ವನಬ್ಬೆ ಪೋಚಬ್ಬರಸಿಯರ್ದ್ರಾವಿಟಗಣದ ನನ್ದಿಸಂಘದರುಙ್ಗಳ ನ್ವಯದ ಗುಣಸೇನಪಣ್ಡಿತದೇವರ ಗುಡ್ಡಿ ಮಾಡಿಸಿದ ಬಸದಿ (ಎಕ. I, ೬೮-೦; ?); ಈ ಸಂಪ್ರದಾಯದಲ್ಲಿ . . . ಬೌದ್ಧರ ಮಹಾಸಾಂಘಿಕರಂತೆ ನಂದಿಸಂಘ ಗಣಸಂಘ ದೇವಸಂಘ ಮೊದಲಾದ ಸಂಘಪ್ರಭೇದಗಳಿದ್ದರೂ ಈ ಗ್ರಂಥಗಳು ಸರ್ವಸಮ್ಮತಗಳಾಗಿರುವವು (ಹಿಂದಸಾ. ೭೯). [ ನಂದಿ + ಸಂಘ ]

**ನಂದಿಸಂಹಿತೆ** (ನಾ). [ಶೈವ] ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಗಳಲ್ಲಿ ಒಂದು: ಸ್ಥಿರಸಂಹಿತೆ ಸ್ಥಾಣುಸಂಹಿತೆ ಮಹತ್ಸಂಹಿತೆ ನಂದಿಸಂಹಿತೆ ನಂದಿಕೇಶ್ವರಸಂಹಿತೆ . . . ದೇವೀಮತವೆಂದು ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಂಗಳು (ವಿವೇಕ. ೭೦). 'ನಂದಿಕೇಶ್ವರ ಸಂಹಿತೆ' ಪರಾ. [ ನಂದಿ + ಸಂಹಿತೆ ]

**ನಂದಿಸು₁**, ನೊಂದಿಸು (ಕ್ರಿ). ೧. (ದೀಪ, ಉರಿ, ಬೆಳಕು ಮೊದಲಾದುವನ್ನು) ಆರಿಸು; ಇಲ್ಲದಂತೆ ಮಾಡು: ಕಪ್ಪಂಗವಿಯಾಗಿ ಕವಿವ ದ್ರುಪದವಿಳಯಾನಳನಂ ದ್ರೋಣಾ ಮಹಾದ್ರೋಣ ಪುಷ್ಕಳಾವರ್ತಕಂಗಳೆಂಬ ವಿಳಯಕಾಳನೀಳಜಳಧರವರ್ಷಂಗಳಿಂ ನಂದಿಸೆಯುಂ ನಂದದೆ ಮುಟ್ಟವರೆ (ಪಂಪಭಾ. ೧೨-೨೦೨); ತಮ್ಮೆಲಂಕೆಯ ಗಾಳಿಯಿಂ ಪೊಗೆಯುಂ ನಂದಿಸಲೀಯದೆ ಹೋಮಾನಲಪ್ರಜ್ವಲನಮನೆಸಗುವ ಸೋಗೆನವಿಲ್ಗಳಂ ಸೊಗಯಿಂಸುವುದು (ಕಾದಂಪೂ. ೨೨೩); ಜಿನಧರ್ಮಮೆಂಬ ನೀರಿಂ ಕರ್ಮಮೆಂಬ ಕಿರ್ಚಂ ನಂದಿಸದೆ ... ಇರ್ದೊಡೆ ಶಾಶ್ವತಸುಖಂ ದೊರೆಕೊಳ್ಳದು (ಧರ್ಮಾಮೃ. ೭-೯೭); ತೆಳ್ಳೊಯ್ದ ವಾರಾಸಿಯಿಂ ತದ್ಗಿರಿ ಮಸ್ತುಜ್ವಾಲೆಯಂ ನಂದಿಸಿ ಬಟ್ಟಿತ ಜರಾಸಂಧಸೇನಾಸಮೂಹಾಂತರಮಂ ಕಾಲಾಗ್ನಿರುದ್ರಂ ಪುಗುವ ತೆಱದೆ ದೈತ್ಯಾಂತಕಂ ಬಂದು ಪೊಕ್ಕಂ (ಜಗವಿ. ೮-೪೭); ಶಿಶಿರೋಪಚಾರಮಂ ಲಲನೆಗೆ ಮಾಳ್ಪಂದು ಘೃತದಿಂ ಕಿರ್ಚಂ ನಂದಿಪ ತೆಱವಾಗಿ ತೋಱುತಿದೆ (ಗಿರಿಕ. ೪-೦೦೫); ತರುಣ ಪಾಶುಪತಾಸ್ತ್ರವಾದಿಯ ದಿವ್ಯಮಾರ್ಗಣವ ಪುರಹರನ ಕೃಪೆಯಿಂದ ಪಡೆದಂತರಿಗಳನು ಸಂಹರಿಸಿ ನಿನ್ನಮ ಪರಿಭವಾಗ್ನಿಯ ನಂದಿಸುವೆ (ಕುವ್ಯಾ.ಆ. ೪-೩೧). ೨. ನಾಶಮಾಡು; ಕೊನೆಗಾಣಿಸು; ಕೊಲ್ಲು: ಉರಃಪ್ರದೇಶಮಂ ನಿಸೆ ನೆತ್ತರೊಕ್ಕು . . . ಜೋಲ್ದೊಡಾದಮೆ ನುಸುನೊಂದು ನಂದಿಸದೆ ತನ್ನನೆ ನಿಂದಿಱಿದಂ ದಿನೇಶಜಂ (ಪಂಪಭಾ. ೧೨-೧೧೭). ೩. ನಿವಾರಿಸು; ಕಳೆ: ರವಿಚಂದ್ರರ್ ನಿಲೆ ಸಿಂಹಲಗ್ನದೊಳಿಳಾಜಾತಾರ್ಕಜರ್ ನೋಡೆ ನೇತ್ರವಿಹೀನಂ . . . ಆ ದುರಿತಮಂ ನಿಶ್ಶೇಷವಾರ್ ನಂದಿಪರ್ (ಜಾತತಿ. ೫೦-೩೮); ತತ್ಪುರದೊಳಿರ್ದ ವಿಶಾಖನಂದಿ ಪಸಿವಂ ನಂದಿಸಲೆಂದು ಲಂದಣಿಗರ ಮಂದಿರಕ್ಕೆ ಪೋಪವಂ ಮಣಿದೆ ಸಂದಣಿಸಿ ನಿಂದ ನೆರವಿಯಿಂ ಭೋಂಕೆನೆ ಕಂಡು (ವರ್ಧಪು. ೩-೧೨೪); ತಂದೆಯು ಮಸದಾಗ್ರಹಮಂ ನಂದಿಸುವೆನೆನುತ್ತ ಮುಗಿದ ಕೈಮೆರಸಾಗಳ್ ತಂದೆಗೆ ಎನಃದಳದರವಿಂದಾನನೆ ಮಧುರವಚನರಚನೆಗಳಿಂದಂ (ಭೃಂಗಾಸ್ತ್ರ. ೬-). ನೊಂದಿಸು: ೧. ಭೀಮನಂ ಕಿಳುಪಿ ನಾನಾಪರಿಯಲಿ ನೊಂದಿಸಿದ ಶೋಕಶಿಖಿಯನ್ನಾಗ ಬಳಿಕ ಯಮನಂದನನು (ತುರಂಗ. ೧೫-೬೨); ಅಡವಿಯಲ್ಲಿ ಅಡಿಗೆ ಮಾಡಿಕೊಂಡು ನೊಂದಿಸದೆ ಹೊರಟು ಹೋಗುತ್ತಾರೆ (ಮುಂಬಯಿ. ೫-೩); ಬಂಡಾಯದ ಬೇಗೆಯನ್ನು ಕಾಲಲ್ಲಿ ತುಳಿದು ನೊಂದಿಸಿಬಿಟ್ಟಿತು (ಇಪ್ಪಕ. ೦೯೪). [ ನಂದು + – ಇಸು₁ ]

**ನಂದಿಸು₂** (ಕ್ರಿ). ಸಂತೋಷಗೊಳಿಸು; ಆನಂದಪಡಿಸು: ಒಂದು ದಾರಿಯಲೀಗ ಕ್ಷಣದಲ್ಲಿ ಸಾಗಿ ವಂದಿಸುವೆ ನಂದಿಸುವೆ ಮಾತಿನನುರಾಗಿ (ಕಬಪು. ೧೨-೪). [ ನಂದನ + – ಇಸು₁ ]

**ನಂದಿಸೇನ** (ನಾ). ಒಬ್ಬ ಜೈನಯತಿಯ ಹೆಸರು: ಉಱುಪತ್ವನ್ನನ್ದಿಸೇನಪ್ರವರಮುನಿವರನ್ದೇವಲೋಕಕ್ಕೆ ಸನ್ದಾರ್ (ಎಕ. II, ೫೮-೯; ಸು. 700). [ ನಂದಿ + ಸೇನ ]

**ನಂದಿಸೋಪಾನ** (ನಾ). = ನಂದಿಮೆಟ್ಟಿಲು: ತಂಗಿಯುವ್ವಾ-ಹೋಗಿ ತಗತಾರ ಭಾಸಿಂಗ ನಂದಿಸೋಪಾನದ ನಸಲೀಗಿ (ಮಲ್ಲಿಗ. ೭೯). [ನಂದಿ+ಸೋಪಾನ]

**ನಂದಿಹಾಳ** (ನಾ). ಒಂದು ಬಗೆಯ ಜೋಳ: ಮೂರು ತಿಂಗಳ ಜೋಳ, ದೊಡ್ಡಜೋಳ . . . ನಂದೀಹಾಳ ಈ ಆರು ಜಾತಿಗಳನ್ನು ಮುಖ್ಯ ವೈರುಗಳಾಗಿ ಬಿತ್ತುವರು (ಕಛಾಗ. ೨೬೦). [ ? ]

**ನಂದೀಮುಖಿ** (ನಾ). ಒಂದು ಬಗೆಯ ಗೋದಿ: ನಂದೀಮುಖಿಯೆಂಬ ಸಣ್ಣವಾಗಿಯೂ ಉದ್ದವಾಗಿಯೂ ಇರುವ ಗೋದಿಯು ಶೀತ ಒಗರು (ಅಷ್ಟಾಂಗ. ೦೦೫). [ ? ]

**ನಂದೀಶ** (ನಾ). = ನಂದಿಕೇಶ್ವರ ೧: ನಂದೀಶಂ ವೀರಭದ್ರಂ ಘನರವನಚಲಂ (ಗಿರಿಕ. ೦೦-೭೫); ನಂದೀಶ ವೀರಭದ್ರ ಸ್ಕಂದ ಗಜಾನನಮುಖಾಖಿಲ ಪ್ರಮಥಗಣಂ . . . ಎಸೆದಿರ್ಕುಂ (ಉದ್ಭಟ. ೧೨-೧೭೫); ನಿರುತದಿಂ ದಶವೀರಘೋರಾಪರಿಮಿತೋತ್ಕಟಪಟುತಪವನಾಚರಿಸಿದನು ನಂದೀಶನತಿಶಯಮತಿಶಯಮಿದೆನಲು (ಬಸಪು. ೨-೧೫). [ ನಂದಿ + ಈಶ ]

**ನಂದೀಶ್ವರ** (ನಾ). ೧. = ನಂದಿಕೇಶ್ವರ ೧: ಆದಿಶಿವಲಿಂಗಕ್ಕೆ ವಾಹನವಾದ ನಂದೀಶ್ವರನೆ ಮತ್ತೆ ಶಿಲಾದಮುನಿಗುದಯಿಸಿದ ಪರಿಯಂ ಪೇಳ್ವೆನು (ಬಸಪು. ೧ ಸೂಚನ); ನಂದೀಶ್ವರವಂಶಜನಿವನೆಂದಱುವ ತೆಱದೊಳವಳ ಗಗನಾಂಗಣದೊಳ್ ಸ್ಪಂದದ ಬಿಂಕದ ಬಿರುದಿನ ನಂದಿಧ್ವಜವಿತತಿ ಪುರದೊಳಿರ್ದುದು ಚೆಲ್ವಿಂ (ಹಮ್ಮೀರ. ೧-೬೭); ಬೇಗದಿಂದೈದಿ ನಂದೀಶ್ವರಂ ಗರುಡನಂ ಪೋಗದಿರ್ತಲೆಯನಾಭರಣಕ್ಕೆ ತಾರೆಂದು ನಾಗಭೂಷಣನಟ್ಟಿದಂ ತನ್ನನೀಯದೊಡೆ ನಿನಗೆ ಬಹುದುಪಹತಿಯೆನೆ (ಪ್ರಭುಲಿಂ. ೦೯-೨೧). ೨. [ಜೈನ] ಮಧ್ಯಮಲೋಕದ ಎಂಟನೆಯ ದ್ವೀಪ. ೩. ಜೈನರ ಒಂದು ವ್ರತ-ಹಬ್ಬ; P ಕಾರ್ತೀಕ, ಫಾಲ್ಗುಣ, ಆಷಾಢ-ಈ ಮೂರು ತಿಂಗಳುಗಳ ಕಡೆಯ ಎಂಟುದಿನಗಳಲ್ಲಿ ನಂದೀಶ್ವರವೆಂಬ ದ್ವೀಪದಲ್ಲಿ ಸೌಧರ್ಮಾದಿ ಇಂದ್ರರು ಅದೇ ಸಮಯದಲ್ಲಿ ಲೋಕದ ಜನರೂ ಈ ರೀತಿ ಪೂಜಿಸುತ್ತಾರೆ. ಇದಕ್ಕೆ ನಂದೀಶ್ವರ ಎಂದು ಹೆಸರು: ಇತ್ತ ದಾದಿಯುಂ . . . ನಂದೀಶ್ವರದೆಂಟುದಿವಸಮಭಿಷೇಕಮುಮರ್ಚನೆಯುಮುಪೋಪವಾಸಮುಮಂ ಮಾಡಿ (ವಡ್ಡಾರಾ. ೦೦೭-೫); ಶಕವರ್ಷಮೆಂಟುನೂಱಿಕೆ ಕಡೆಯೊಳಱುಪತ್ತುಮೂಱು ಸಂದಂದು ಜಗತ್ಪಟ ಪ್ಲವಸಂವತ್ಸರದ ಕಾರ್ತಿಕಂ ಮುದಮನೀಯೆ ನಂದೀಶ್ವರದೊಳ್ (ಆದಿಪು. ೦೭-೭೬); ಶಕವರ್ಷಂ ಪಂಚದಶಾಧಿಕ ನವಶತಮಾಗೆ ವಿಜಯಸಂವತ್ಸರ ಕಾರ್ತಿಕ ನಂದೀಶ್ವರದಿನದೊಳ್ ಪ್ರಕಟಿಸಿದುದು ರತ್ನನಿಂದಜಿತಪುರಾಣಂ (ಅಜಿಪು. ೧೨-೫೪); ಭವಭವದೊಳ್ ಕಟ್ಟಿದನೇಕವಿಧದ ದುಷ್ಕರ್ಮವಂ ಕಟಲ್ಚಲ್ ಪುಣ್ಯಾಸ್ರವದೊಳ್ ನೆರೆಯಲ್ ಭವ್ಯರ್ಗಿವೆ ದಿವಸಮೆನಲ್ಕೆ ಬಂದ ನಂದೀಶ್ವರದೊಳ್ (ಪುಣ್ಯಾಪು. ೩-೧೨೪); ಚಂದಣವರ್ಣಿಯ ನಂದೀಶ್ವರದ ನೋಂಪಿಯ ಕಥೆ ಒಂದು ಚಂಪೂಗ್ರಂಥ (ಯುಕೋಶಂ. ೭೭ ಪೀಠಿಕೆ). 'ತಿಱುನಂದೀಶ್ವರ' ಪರಾ. ೪. ಬಾಹುಬಲಿವಿಗ್ರಹದ ಮುಂದಿರುವ ಮಂದರವೆಂಬ ತೇರಿನ ಭೇದಗಳಲ್ಲೊಂದು: ಬಾಹುಬಲಿವಿಗ್ರಹ . . . ಇದರ ಮುಂದಿರುವ "ತೇರಿ"ಗೆ ಮಂದರವೆಂಬ ಹೆಸರು. ಮಂದರಗಳಲ್ಲಿ ನಂದೀಶ್ವರ ಮತ್ತು ಮೇರು ಎಂಬ ಭೇದಗಳಿವೆ (ಹೊಯ್ಸಳವಾ. ೨೦೭).

**ನಂದೀಶ್ವರದಷ್ಟಮಿ** = ನಂದೀಶ್ವರವ್ರತವನ್ನು ಆಚರಿಸುವ ಅಷ್ಟಮಿ: ಜೈನಶಾಸನಗಳಲ್ಲಿ ಮುಖ್ಯವಾಗಿ ಎರಡು ಹಬ್ಬಗಳ ಅಥವಾ ವ್ರತಗಳ ಪ್ರಸಕ್ತಿ ವಿಶೇಷವಾಗಿ ಬರುತ್ತದೆ. 'ಜೀವದಯಾಷ್ಟಮಿ' ಎಂಬ 'ಪರ್ವ' ಒಂದು; ಮತ್ತೊಂದು 'ನಂದೀಶ್ವರದಷ್ಟಮಿ'; ಎರಡನೆಯ ಪರ್ವಕ್ಕೆ 'ಶಿಖಿನಂದೀಶ್ವರ' ಎಂಬ ಹೆಸರೂ ಉಂಟು (ಕಶಾಅ. ೯೯). **ನಂದೀಶ್ವರದ್ವೀಪ** = ಜೈನರು ನಂದೀಶ್ವರನೋಂಪಿಯ ಕಾಲದಲ್ಲಿ ಜಿನನನ್ನು ಪೂಜಿಸಲಂ ಹೋಗುವ ದ್ವೀಪ: ನಂದೀಶ್ವರದ್ವೀಪಮಹಾಚೈತ್ಯಾಳಿಯೊಳ್ ಪಾವನತರನಮಸಂಗೀತಕಕ್ರೀಡೆಯಂಮಾಡಿ ಮನಃಪ್ರಹ್ಲಾದಮಂ ತಾಳ್ದುವನನವರತಂ ಶ್ರೀಧರಂ ಕೇಳಿಶೀಳಂ (ಚಂದ್ರಪ್ರ. ೪-೭೬). **ನಂದೀಶ್ವರನೋಂಪಿ** = ನಂದೀಶ್ವರ ೩: ನಂದೀಶ್ವರನೋಂಪಿಯ ಸಮಯದಲ್ಲಿ ದಾನ ಮಾಡುವುದು ಶ್ರೇಷ್ಠವೆಂದು ಶಾಸನವೊಂದು ಹೇಳುತ್ತದೆ (ಕಶಾಅ. ೯೯). [ ಸಂ. ]

**ನಂದೀಶ್ವರಂಗೆಯ್** (ಕ್ರಿ). ನಂದೀಶ್ವರವ್ರತವನ್ನು ಮಾಡು,-ಆಚರಿಸು: ಫಾಲ್ಗುಣಮಾಸದ ನಂದೀಶ್ವರದಂದಬಾವರುಂ ಕೊಡಗೂಸುಗಳುಮ ವಾಸಂಗೆಯ್ದು ಬಸದಿಗರ್ಚನೆಯುಂ ಕೊಂಡು ಪೋಗಿ ದೇವರನರ್ಚಿಸಿ ನಂದೀಶ್ವರಂಗೆಯ್ದು ಬಂದಿಸಿ (ವಡ್ಡಾರಾ. ೧೧೩-೦೮).

[ ನಂದೀಶ್ವರ + ಕೆಯ್$_1$ ]

**ನಂದು, ನೊಂದು$_1$** (ಕ್ರಿ). ೧. (ಬೆಂಕಿ, ಬೆಳಕು ಮೊದಲಾದುವು) ಆರಿಹೋಗು ; ಇಲ್ಲವಾಗು : " ನಂದು – ವಿನಾಶೇ, ಗತತೇಜಸಿ ಚ ( ಬೆಳಕು ತಪ್ಪಿಹೋಗು ) " (ಶಮದ) ; ಇಂದುಕಿರಣಂಗಳಿಂದಂ ಚಂದನರಸದಿಂದೆ ಮಾಗಿಯಾ ನೀರಿಂದಂ ನಂದದು ಪರಿತಾಪಾನಳನಿಂದಜಿದಂ ನಿನ್ನ ಮೆಯ್ಯ ಕಾಮಜ್ವರಮಂ (ಕವಿರಾ. ೩-೧೬೪) ; ಹೋಮಾಗ್ನಿಯನೆಬಿಂಕೆಯ ಗಾಳಿಯಿಂ ನಂದಲೀಯದುರಿವುವ ರಾಜಹಂಸೆಗಳುಮಂ (ಪಂಪಭಾ. ೦-೦೦೩ ವ) ; ಕಿಚ್ಚು ನಂದಿದೊಡೆ ಮತ್ತಮಿಂಧನಮನಿಕ್ಕಲೇದು ಕೊಡಲಿಗೊಂಡು ಪುಳ್ಳಿಯಂ ಪೋಟ್ಸಾಗಳ್ (ಜಾವುಂಪು. ೩೭೪) ; ಮನಬೀಸರವೆಂಬ ಗಾಳಿ ಬೀಸಿತ್ತು ವಿದ್ಯಾಮುಖದ ಜ್ಯೋತಿ ನಂದಿತ್ತು (ಅವಕಂ. ೪೦-೧೭೦) ; ಮರೀಚಿ ನಂದುವ ಸೊಡರ ಕುಡಿವೆಳಗಿನಂತೆ (ವರ್ಧಪು. ೧೦-೯೪ವ) ; ಕಿಚ್ಚು ನೀರಿಂದ ನಂದುವುದದು ನೆಯ್ಯಿಂದ ಹೆಚ್ಚುವುದಂತೆ ಕಾಮಾಗ್ನಿ ಸಚ್ಚಿದಾನಂದಾತ್ಮರಸದಿ ನಂದುವುದದು ಹೆಚ್ಚುವುದಬಲೆಯರಿಂದ (ಭರತೇ. ೬೩-೪೦). ೨. ಶಮನವಾಗು ; ಕುಂದು ; ನಾಶವಾಗು : ವಿರ್ದೆಗೆಟ್ಟನೀಗಳೀ ದಿಟ್ಟ ಮರಳ್ದು ನಂದಿದಪುದು (ಕಾದಂಪೂ. ೦೯೯) ; ತಂದೆಯನಗಲ್ದ ವಿರಹಂ ನಂದದೆ ಕಾರ್ಪಾಸಶಿಖಿಯೊಲೊಳಗೊಳಗಬಲಂ ಸಂಧಿಸೆ ನಿಲಲಾಱದೆ ನಿಜಮಂದಿರದೊಳ್ ರಾಜ್ಯಸುಖಪರಾಙ್ಮುಖನಾದಂ (ಅನಂಪು. ೦೦-೩೩) ; ಹೆಚ್ಚಿತು ಧರ್ಮ ಧರೆಯೊಳು ದುರ್ಮಾರ್ಗದ ಕಿಚ್ಚಿನೇಳಿಗೆ ನಂದಿತು (ಕಂನವಿ. ೩-೧೦); ನಂದಿದರು ದುಷ್ಕೃತ್ಯದ ಮನಸತ್ಯೋನ್ನತರು ರಾಮಕೃಷ್ಣಾದಿಗಳು ದಿವ್ಯಭೂತಿಗಳು (ಮಕರ್ದೀ. ೪೧-೧). 'ನಂದಿಸು$_1$' ಪರಾ. ೩. ಕಳೆಗುಂದು ; ತೇಜೋಹೀನವಾಗು ; ಮಂಕಾಗು : ಕಡುನಂದಿ ಕುಂದಿ ಸಮ್ಯಕ್ತ್ವಲದೀಪಕಂಗೆ ಮಗುಳ್ದುದುಸಿರ್ದರ್ ಸಚಿವರ್ವಿಷಾದದಿಂ (ಉದ್ಭಟ. ೧೦-೪೦). **ನೊಂದು$_1$** : ೧. ಸವತಿಮತ್ಸರವು ಪ್ರಪಂಚದಲ್ಲಿ ಹೆಣ್ಣಿನ ಪಾಲಿಗೆ ಬಂದ ನೊಂದದ ಕಿಚ್ಚು (ಕನ್ನಜಾ. ೦೦೩). ೨. ಅತ್ರಿಯ ಸುತನೆ ನಿನ್ನಯ ಕಳೆಯು ನೊಂದುಗುವೆಂದು ಸುರಗುರು ನಳಿನವೈರಿಗೆ ಶಾಪವಿತ್ತನು (ಸಂಭಪ. ೧೨-೩); ಎಂದಿಗಾನುಂ ನಿನ್ನ ಪೂರ್ವಗುಣಗಳ ಲೆಕ್ಕ ನೊಂದಬೇಕೆಂದಿರ್ದೊಡಿಂದೆ ಮೊದಲನಿಡು (ಮಂಕುಳ. ೭೩೭).

**ನಂದದೀವಿಗೆ, ನಂದಾದೀವಿಗೆ** = ಆರದೆ ಇರುವ ದೀಪ ; (ದೇವರ ಮುಂದೆ) ನಿರಂತರವಾಗಿ ಉರಿಯುವ ದೀಪ,-ಜ್ಯೋತಿ: ಜಿನಚಂದ್ರಕುಮಾರಂ. . .ಪೋಲ್ತು ಕನಕರುಚಿಯಿಂದಮಾ ಪಳಿಕಿನ ಕೊಡನೊಳಗಿರ್ದ ನಂದದೀವಿಗೆಯಿರವಂ (ಜಾಂಕಿಪು. ೦೦-೪೨) ; ಮೂಲಸ್ಥಾನಕಲಿದೇವಸ್ವಾಮಿಗೆ ವಿಷ್ಣುದೇವರ್ಗ್ಗೆ ನನ್ದದೀವಿಗೆಗಂ ನಿವೇದ್ಯಕ್ಕಂ ಶ್ರೀಖಣ್ಡಕ್ಕಂ ಧೂಪಕ್ಕಂ ಮೊದಲ್ಗೊಟ್ಟ ಗದ್ಯಾಣಂ ಪದಿನೈಯ್ದು (ಸಾಇಇ. XI-1, ೯೨-೩೩; 1064); ಈ ಪೊನ್ನ ವೃದ್ಧಿಯೊಳಂ ಕೆಯ್ಯ ಗುತ್ತಗೆಯೊಳಂ ಗಂಧಧೂಪನಿವೇದ್ಯ ನಂದದೀವಿಗೆಗಂ ಅಟ್ಟಿಸುವ ಮಾಣಿಯ ಜೀವಿತಕ್ಕಂ ಕುಡುವುದು (ಕಇ. II, ೯-೨೮; 1076) ; ಶ್ರೀಪಾದವಯದೇವಗೆ ಸ್ನಾನಕ್ಕೆ ಆ ಕವಿಲೆಯ ಬಿಟ್ಟ ನನ್ದನವನ ಮಾಡಿಸಿ ನಂದಾದೀವಿಗೆಯಂ ಪಾಲೆ ಪೂವ ನದಿಯ ಸಿಲ × × × ಬ್ರಹ್ಮಚಾರಿಯ × × × ನದೊಳು (ಎಕ. IV, ಗುಂಡ್ಲುಪೇ. ೮೯-೬; 1007) ; ಮತ್ತಂ ದೇವರ್ಗೆ ನನ್ದಾದೀವಿಗೆಗಿತ್ತ ಗಾಣವೊನ್ದದಕೆ ಕರವಂದ ತಳಭೋಗಮಸತು ಮೊದಲಾಗೆ ಸರ್ವಬಾಧಾಪರಿಹಾರಂ (ಸಾಇಇ. XI-1, ೫೨-೬೪; 1007) ; ದೇವರ್ಗ್ಗೆ ಒನ್ದು ನನ್ದಾದೀವಿಗೆ ಚನ್ದ್ರಸೂರ್ಯ್ಯರ್ಕೃತಂ ಕುನ್ದದೆ ನಡೆವನ್ನೆಗೆ (ಎಕ. XIV, ಮಳವ. ೧೨೪-೦; 1014); ನಂದಾದೀವಿಗೆಯ ನಡೆಸಿಹೆವೆಂಬವರ ಮುಖವ ನೋಡಲಾಗದು (ಬಸವ. ೨೨೩) ; ಶಂಕರ, ಮಧ್ವ, ರಾಮಾನುಜರಂಥ ಆಚಾರ್ಯರು . . . ಭಗವದ್ಗೀತೆಯಿಂದ ಸ್ಫೂರ್ತಿ ಪಡೆದಿದ್ದಾರೆ; ತಮ್ಮ ಬಾಳ ನಂದಾದೀವಿಗೆಯನ್ನು ಹೊತ್ತಿಸಿಕೊಂಡಿದ್ದಾರೆ (ಧರ್ಮಸಾ. ೦೨೭). **ನಂದಳಿಕ** = ನಂದದೀವಿಗೆ (?): ನಯಿವೇದ್ಯ ನಂದಳಿಕ ನಿತ್ಯಚಿತ್ರ (ಸಾಇಇ. ೧೦೬೨. ಉಡುಪಿ. ೩೪೦-೮; ?). ☞ ಇದು 'ನಂದಾವೆಳಕು' ಎಂಬುದರ ಅಪಲಿಖಿತವಿರಬಹುದು. **ನಂದಾಉಳ, ನಂದಾವಳ, ನಂದಾವುಳ**=ನಂದದೀವಿಗೆ: ಶ್ರೀಬಿಕ್ಕಿದೇವಯ್ಯಗಳ ಕಯ್ಯಲು ಶ್ರೀಮಧುಕನಾಥದೇವರಿಗೆ ಮೂಱುನಂದಾಉಳವನೂ ಆಚಂದ್ರಾರ್ಕ್ಕಸ್ಥಾಯಿಯಾಗಿ ನಡಸುವಂತಾಗಿ ಕೊಟ್ಟರು (ಸಾಇಇ. XX, ೩೭೭-೯; ಸು.14ನೆಯ ಶತ) ; ನೈವೇದ್ಯ ನಂದಾವಳ ಪೂಜಾರಿಯ [ ಜಿ ]ತಸತ್ರ (ಸಾಇಇ. XX, ೨೨೯-೨೭; 1369 ?); ನಂದಾವುಳಕೆ ಪೋದು ಗಾಣದ ಮಾನೆಣ್ಣೆ ಸಲುವದು (ಎಕ. VIII, ತಿಪಟೂ. ೩೯-೨೬; 1320). **ನಂದಾದೀಪ** = ನಂದದೀವಿಗೆ : ಹೊಂದಿ ನಿದ್ರೆಯ ದೇವ ನಂದಾದೀಪವ ಅಂದು ಪ್ರಜ್ವಲಿಸುತ ವಿಂದುಟ್ಟು ಪೊಂದಟ್ಟಿಯ ಮಣಿವ್ಯಂದದ ಭೂಷಣ ಸಿಂಧೂರಸೀಮಂತದಲಿಟ್ಟು (ಪ್ರಸಭಾ. ೦೯-೦) ; ವಿಜ್ಞಾನಮಂದಿರದಲ್ಲಿ ಒಂದು ಪ್ರಕಾಶವಾದ ನಂದಾದೀಪ ನಂದಿದಂತೆ ಆಯಿತು (ಸಸ್ಯಕ. ೬೬) ; ಅರ್ಚಕ ಜನ್ನಯ್ಯ . . . ನಂದಾದೀಪಕ್ಕೆ ಎಣ್ಣೆ ಸುರಿದು . . . ಧ್ವಜಮರದ ಕಟ್ಟೆಯ ಹತ್ತಿರ ಬಂದಿದ್ದರು (ಜನ್ಮಸ. ೨೨೭). **ನಂದಾದೀಪ್ತಿ** = ನಂದದೀವಿಗೆ : ಆ ಪುರದಲ್ಲಿ ಪುಟ್ಟಿದ ದ್ರವ್ಯದಲ್ಲಿ ರುದ್ರಾಭಿಸೇಕ ಅಮ್ರುತ್ಪಡಿ ನಂದಾದೀಪ್ತಿ . . . ಮುಂತಾಗಿ ನಡೆಯಬೇಕೆಂದು ಆ ಪುರವನೊ . . . ಕೊಟೆಉ (ಎಕ. XV$^{I}$ ಚಿಕ್ಕನಾ. ೮೩-೦೯; 1529) ; ದೇವಸ್ಥಾನ ಕಿಕ್ಕೆ ಅಮೃತಪಡಿ ನಂದಾದೀಪ್ತಿ ಮುಂತಾದ ದೇವತಾಪೆಚ್ಚಕ್ಕೆ . . . ಉಂಡಿಗೆ ವಿವರ (ಎಕ. VII, ಶಿಪಟೂ. ೨-೮೨; 1641) ; ಬಿನ್ನಹ ಸ್ಥಾನಿಕ ತಂಮಣನು ಗಣಾಚಾರದ ಕಟ್ಟುಗೆಯ ತೆರ್ಲುವ ಹಣವನು ಸಿವರಾತ್ರೆ ಪುಣ್ಯಕಾಲದಲೂ ಧಾರಾಪೂರ್ವಕವಾಗಿ ನಂದಾದೀಪ್ತಿಗೆಂ . . . ನಂದಾದೀಪ್ತಿಯನು ನಡಸುದು (ಎಕ. VII, ಶಿಪಟೂ. ೨೧-೦೦; ?). **ನಂದಾದ್ಯುತಿ** = ನಂದದೀವಿಗೆ : ಕಡವೂರ ವೀರೇಶ್ವರದೇವರಿಗೆ ಅಮೃತಪಡಿ ನಂದಾದ್ಯುತಿ ಆಗರಂಗವಯಿಭೋಗಕ್ಕೆ . . . ಸಮರ್ಪಿಸ್ತೆವು (ಎಕ. XI, ಹೊಳಲ್ಕೆ. ೮೧-೮; 1840). **ನಂದಾಬೆಂಕಿ** = ಆರದೆ ಇರುವ ಬೆಂಕಿ ; ನಿರಂತರವಾಗಿ ಉರಿಯುವ ಅಗ್ನಿ : ಆ ಬೆಂಕಿ ನಿನ್ನೆ ಮೊನ್ನೆಯದಾಗಿರಲಿಲ್ಲ ; ಅನೇಕ ದಿನಗಳಿಂದ ಇಪ್ಪತ್ತನಾಲ್ಕು ಗಂಟೆಯೂ ಆರದೆ ಸಜೀವವಾಗಿದ್ದ 'ನಂದಾಬೆಂಕಿ 'ಯಾಗಿತ್ತು (ಮರಳು. ೬೭೪). **ನಂದಾಬೆಳಕು, ನಂದಾವೆಳಕು** = ನಂದದೀವಿಗೆ : ಆ ಕಿಮಿಸೆಟಯರು . . . ಸಂಕ[ ರ ] ನಾರಾಯಣ ( ೦ ) ದೇವರಿಗೆ ಕಟಕಂಡ ತೆಱು ಒಂದು ನಂದಾಬೆಳಕು ವರುಶ ೧ದಕು ಯೆಂಣೆ ಹಾನೆ ೩೬ನು ನಡಸುವರು

(ಸೌಇಇ. IX-II, ೪೦೯-೨೩; 1380); ನೂಱು ಬತ್ತದ ಮಣ್ಣು ಯೂಱು ಪಸುವಂ ಮಾದೇವರ್ಗ್ಗವಾ ಪಳ್ಳಿಗೊಣ್ಣ ದೇವಗಂ ನನ್ದಾವೆಳಕಿಂಗೆ ಕೊಟ್ಟಂ (ಎಕ.IV, ಗುಂಡ್ಲುಪೇ. ೯೩-೨೭; 1049); ಅಡಿಗನಂ ಭಾಗವ ಹಿತ್ತಿಲ ಮೇಲೆ ವೊಂದು ನಂದಾವೆಳಕು . . . ಪೂ[ಲ] ಗಡಿಯಿಂದಲುವೊಂದು ನಂದಾವೆಳಕು . . . ಗುಡಿಯ ಹಿತಿಲ ಮೇಲೆ ಒಂದು ನಂದಾವೆಳಕು (ಕೆಇ. III, ೪-೧೭; 1339); ಸೌಮ್ಯರನಾರಾಯಣದೇವರ ಅಮೃತಪಡಿಗೆ × × × ಪ್ರತಿದಿನ ೧ ಕಂ ನಾಡಹಾನೆ ೩ ನಂದಾವೆಳಕಿಂಗೆ . . . ನಡೆಸುವ ಯೆಂಣೆ ವರುಷ ೧ ಕಂ ಹಾನೆ ೨೪ಡನೂ ನಡೆಸುವಂತಾಗಿ (ಸೌಇಇ. IX-II, ೪೦೩-೦೦; 1357). ನಂದಾವನ = ಸದಾಕಾಲವು ಹೂವು ಬಿಡುವ ತೋಟ: ಪ್ರತಿದಿನವೂ ಶಿರುಪಡಿವಾಳ ಸಮರ್ಪಿಸುವ ನಂದಾವನ ಮಾಡುವ ಸಂಬಳ ೬ ವರಹ (ಎಕ. XIV, ಶ್ರೀರಂಗ. ೯೩-೩; 1535); ದೇವರ ನಂದಾದೀವಿಗೆ ಕೆಱೆಯ ಕೆಳಗಣ ನಂದಾವನೆಯುಷ್ಟನು ಸರ್ವ್ವಮಾನ್ಯವಾಗಿ ನಡಸಿ ಬಹಾಂಗೆ ಬಿಟ್ಟ ವಂಗ್ಗ ತೋಟ (ಎಕ. XIV, ಶಿರುಮ. ೨೪೩-೫; ?). ನಂದಿ ಪೋಗು, ನಂದಿ ಹೋಗು, ನೊಂದಿ ಹೋಗು = ೧. ಇಲ್ಲವಾಗು; ನಾಶವಾಗು; ಶಮನವಾಗು: ವಾಮನಪದಹತಿವಿದೀರ್ಣ ಜೀಮೂತವಿಮುಕ್ತಬಹಳಜಲಧಾರೆಗಳಿಂದಂ ಮುನಿಜನಾಪಕಾರಕ ಧೂಮಧ್ವಜನೆಯ್ದೆ ನಂದಿ ಪೋದತ್ತಾಗಳ್ (ಅರ್ಜನೀ. ೬-೩೩); ನಾನೆಂಬ ಜೀವರು ನಂದಿಹೋಗುವರ್ಸೆಯವದಿರಿಗಹುದೆ ಶಿವಪದವು (ಸಂಭಹ. ೧೩-೫೦). ೨. ಆರಿಹೋಗು; ಬೆಳಕನ್ನು ಕಳೆದುಕೊಳ್ಳು: ಕಪಾಲಕುಂಡಲೆಯು . . . ಕೊಠಡಿಯನ್ನು ಬಿಟ್ಟು ಹೊರಗೆ ಹೊರಬಿದ್ದದ್ದೇ ತಡ ಮನೆಯ ದೀಪವು ನೊಂದಿಹೋಯಿತು (ಕಪಾಕುಂ. ೦೨೯). ನಂದೆವೊಯ್ = ನಂದುವಂತೆ ಹೊಡೆ; ನಾಶವಾಗುವಂತೆ ಮಾಡು: ಧೂರ್ಜಟಿಯ ನೊಸಲ ಕಣ್ಣಿಂ ಸ್ಮರಂ ನಂದೆವೊಯ್ದಂ (ಮಲ್ಲಿಪು. ೨-೫೭); ಉರಿಲಿಂಗವನಾಲಿಂಗಿಸಲುಂ ಯುಗಾಂತಹುತವಹನಂ ನಂದೆವೊಯ್ವಲುಂ (ಜಗವಿ. ೭-೮೪ವ); ತಳ್ತ ಚುಂಬನವಾನೆ ಹರ್ಷಿ ತತ್ಪ್ರದುಚಿತಕ್ರಿಯೆಯಿಂದಮ ನಂದೆವೊಯ್ವು (ಚಂದ್ರಪು. ೮-೯೪); ಮನಸ್ತಾಪಮಂ ಧೃತಿಸಾಂದ್ರಚಂದ್ರಿಕೆಯಿಂ ನಂದೆವೊಯ್ದು (ರಾಜಶೇ. ೧೩-೯೭ವ).

[ದೇ.೮ ತಮಿ. ನನ್ನು, ನತು, ನುತು, ನೊನ್ನು, ನೊತು]

**ನಂದುರಿ** (ನಾ). ಒಂದು ಬಗೆಯ ಮರ: ಕೆಂಪುಗಂಧಗಿರಿ, ನಂದಿವೃಕ್ಷ, ಟೂನಮರ, ನೊಗೆ, ನಂದುರಿ, ಬೆಳಂದಿ, ಗಂಧಗರಿಗೆ (ವೃಕಿಗಿ. ೦೯-೩೪೪).

[?]

**ನಂದುವ** (ನಾ). ಒಂದು ವಂಶದ ಹೆಸರು (?): ಜಕ್ಕಿಯಬ್ಬೆ ನಾಟಾನ್ಗ್ಗವುಣ್ಡುಗೆಯುಮ್ಮಿತ್ತಿರೆ ನಣ್ದುವರ ಕಲಿಗಂ ಪೆರ್ಗ್ಗಡೆತನಂ ಗೆಯ್ಯೆ (ಎಕ. VII, ಶಿಕಾರಿ. ೨೦೯-೦೨; 918). [?]

**ನಂದೆ** (ನಾ). ೧. ಶಕ್ತಿದೇವತೆ; ದುರ್ಗೆ; ಪಾರ್ವತಿ. ೨. [ಜ್ಯೋತಿ] ಎರಡೂ ಪಕ್ಷಗಳ ಪಾಡ್ಯಮಿ, ಷಷ್ಠಿ ಮತ್ತು ಏಕಾದಶಿ ತಿಥಿಗಳು: ಅಭಿಧಾನಕ್ರಮದಿಂ ನಂದೆ ಭದ್ರೆ ಜಯೆ ರಿಕ್ತೆ ಪೂರ್ಣೆಯೆನಿತುಂ ಪ್ರತಿಪತ್ತಿಥ್ಯಾದಿನಾಮಂಗಳುಂ (ಲೋಕೋಪ. ೦-೨); ನಂದಾ ಭದ್ರಾ ಜಯಾ ರಿಕ್ತಾ ಪೂರ್ಣೆಯೆಂದು ಪಾಡಿವಾದಿಯಾಗಿ ತಿಥಿಪಂಚಕಂಗಳಕ್ಕುಂ (ಜಸಾರ. ೬೭); ನಂದೆಯನು ಭದ್ರೆಯನು ಒಂದಾಗಿ ಅರ್ಥಿಸಲು ಅಂದಿನ ತಿಥಿಗೆ ಸವನಾಗೆ ಗ್ರಹಣ ತಾ ಮುಂದೆ ಬಂದಿಲ್ಲ (ಸರ್ವಜ್ಞ. ೧೫೭೦); ಇರಿ ತಿಥಿಗಳಲ್ಲಿ ನಂದಾ, ಭದ್ರಾ, ಜಯಾ, ರಿಕ್ತಾ, ಪೂರ್ಣಾ ಎಂಬ ಸಂಕೇತವು ಪಾಡ್ಯ ಮೊದಲು ಪಂಚಮಿವರೆಗೂ ಆಗುವುವು. ಹೀಗೆ . . . ಅಮಾವಾಸ್ಯೆ ಪರ್ಯಂತ ೬ ಸಲ ಸುತ್ತಿಬರುವವು (ಹಸಾರ. ೩೯೦ ಪದ್ಮಾರ್ಥ). [ಸಂ. ನಂದಾ]

**ನಂದ್ಯಾಮ್ಲ** (ನಾ). ಒಂದು ಬಗೆಯ ಸಸ್ಯ: "ಕೋಶಾಮ್ರಃ-ನಂದ್ಯಾಮ್ಲ" (೬ಪಧಿ. ೪೧). [?]

**ನಂದ್ಯಾಲ** 'ನಂದಿಯಾಲ' ನೋ.

**ನಂದ್ಯಾವರ್ತ** (ನಾ.) ೧. = ನಂದಿಬಟ್ಟಲು: "ಗಂಧರಾಜಃ - ಶ್ರೀಗಂಧ, ನಂದ್ಯಾವರ್ತ, ಜವಾದಿ" (೬ಪಧಿ. ೪೬); ಕುಂದ ಮುಚುಕುಂದ ಮಂದಾರೇಂದೀವರನಂದ್ಯಾವರ್ತ . . . ಮಲ್ಲಿಕಾದ್ಯನೇಕ ಸುರಭಿಕುಸುಮಂಗಳಂ ಸಜ್ಜುಕಮಪ್ಪವಂ ಪುಟ್ಟಿಯೊಳ್ ತೀವಿಕೊಂಡು (ಪಂಚತಂ. ೦೦೬-೩); ನಂದ್ಯಾವರ್ತದ ಪೂವಂ ತಂದುಜಿ ನೊಣವಜಿಾದೆಡೆಗೆ ಪೂಸುಗೆ (ಅಮರ. ೦೩-೦೦೬); ನಂದ್ಯಾವರ್ತದ ಹೂವನ್ನು ಧರಿಸಿದರೆ - ನೇತ್ರದಲ್ಲಿ ಹುಟ್ಟಿದ ಹೂವು, ಕಾಯಿ ಮುಂತಾದ ರೋಗಗಳಂ ಪರಿಹರಿಸಿ . . . ವಿರಹವೇದನೆಯನ್ನು ಪರಿಹರಿಸುವುದು (ಸಕವೈ. ೪೪); ಪಾರಿಜಾತ, ನಂದ್ಯಾವರ್ತ . . . ಮೊದಲಾದ ಹೂಗಳೂ ಅಲ್ಲಿ ಬೇಕಾದಷ್ಟು ಇದ್ದವು (ಕರ್ಣಾಜ. ೦೫೫). ೨. ಪಶ್ಚಿಮದ ಬಾಗಿಲಿಲ್ಲದ ಒಂದು ಬಗೆಯ (ವರ್ತುಲಾಕಾರದ) ವಿಶಿಷ್ಟಾಕೃತಿಯ ಕಟ್ಟಡ: ದಿಕ್ಸ್ವಸ್ತಿಕಮೆಂಬ ಸಭಾಭೂಮಿಯುಂ ನಂದ್ಯಾವರ್ತಮೆಂಬ ಶಿಬಿರನಿವೇಶಮುಂ (ಆದಿಪು. ೦೩-೩ವ); ಸರ್ವತೋಭದ್ರಾಖ್ಯಯವಿಶೇಷದಿಂ ನೋಂಪಿಯ ವಿಶೇಷಮಂ ನಂದ್ಯಾವರ್ತ ರಮಣೀಯತೆಯಿಂ ನಂದನವನಾಂತರಾಳಮಂ ಸ್ವಸ್ತಿಕವಿಸ್ತಾರದಿಂ ವಿವಾಹಮಂಟಪಮನನುಕರಿಸಿ ಶೋಭಿಸುವುದು (ಸುಕುಮಾ. ೦೦-೫೦ವ); ಮಣಿಸತ್ತಿಗೆಯ ಮೊಗಮಂಟಪದ ಬಣ್ಣವಟ್ಟಗೆಯ ಅಮಳಗುಳಿಯ ನಂದ್ಯಾವರ್ತದ ತೋರಣದೋರಣದ ಲೋವೆಯ ಮದನಗೈಯ ಬಾಗಿಲ್ವಾಡದ ಸಿಂಗರದೊಂದು ದೇಗುಲಂ ಕಣ್ಗೆದ್ದವಾಗಿ ರಂಜಿಕುಂ (ರಾಮಾಕ್ಟ. ೩೪-೨೫)- ೩. ಒಂದು ಬಗೆಯ ದೊಡ್ಡ ವಿಮಾನ: "ನಂದ್ಯಾವರ್ತಃ-ನಂದಿವಟ್ಟಸು, ವಿಮಾನಿನ ಭೇದ" (೬ಪಧಿ. ೮೪). ೪. [ಅಶ್ವಶಾ] ಒಂದು ಬಗೆಯ ಚಿಹ್ನೆ-ಗುರುತು: ಶ್ರೀವತ್ಸಂ ಕನ್ನಡಿ ನಂದ್ಯಾವರ್ತಂ ವರ್ಧಮಾನಕಂ ಸ್ವಸ್ತಿಕಮೆಂಬೀ ವಿವಿಧಲಾಂಛನಂಗಳನಾಮಂಸಿದ ವಾಜಿಗಾಯ ಶ್ರೀಶದ್ದರ್ಪಣಂ (ಅಶ್ವಶಾ. ೫-೩೭). ೫. ದೇಹದ ಮೇಲೆ ಇರುವ ಒಂದು ಗುರುತು (?): ನಾಭಿರಾಜಾಂಗಸಂಗತಮಪ್ಪ ನಂದ್ಯಾವರ್ತದಂತೆ ಸೊಗಯಿಸುವ ನಂದ್ಯಾವರ್ತಂಗಳೊಳಂ (ಆದಿಪು. ೭-೦೦೬ ವ). P ಇದು ವಕ್ಷಸ್ಥಳದಲ್ಲಿರುವ ಶ್ರೀವತ್ಸಲಾಂಛನವಿರಬಹುದು: (ಶಾಪುಂಪು. ೩೭೧ ನೋ).

[ಸಂ.]

**ನಂದ್ಯಾವರ್ತವಿಮಾನ** (ನಾ). [ಜೈನ] ಒಂದು ಸ್ವರ್ಗದ ಹೆಸರು: ವಾನರಾರ್ಯನುಂ ನಂದ್ಯಾವರ್ತವಿಮಾನದೊಳ್ ಸುರನಾರೀಮನೋಹರಂ ಮನೋಹರನೆಂಬನಿಮಿಷನಾದಂ (ಆದಿಪು. ೫-೬೦ ವ).

[ನಂದ್ಯಾವರ್ತ + ವಿಮಾನ]

**ನಂಬರು** (ನಾ). ೧. ಅಂಕೆ; ಸಂಖ್ಯೆ: ನಿಮ್ಮದು ಎಷ್ಟನೆಯ ನಂಬರು? (ರೂಢಿ). ೨. ಪರೀಕ್ಷೆ ಮುಂತಾದ ಮೌಲ್ಯಮಾಪನದಲ್ಲಿ ಕೊಡುವ ಗುಣಾಂಕ: ನೀವು ರಷ್ಯನ್ ಮತ್ತು ಲೆಖ್ಖದಲ್ಲಿ ಹೆಚ್ಚು ನಂಬರುಗಳನ್ನು ತೆಗೆದುಕೊಳ್ಳುವವರೆಗೆ ನಿಮ್ಮನ್ನು ಅದರಲ್ಲಿ ಸೇರಿಸಿಕೊಳ್ಳುವುದಿಲ್ಲ (ಶಾಲಿಮ. ೬೫); ಎಲ್ಲದರಲ್ಲೂ ಹೆಚ್ಚು ನಂಬರು ಗಳಿಸಿ ತರಗತಿಗೇ ಅವನು ಮೊದಲಿಗನಾಗಿದ್ದಾನೆ (ರೂಢಿ). ೩. ಸರಕಾರಿದಾಖಲೆಯಲ್ಲಿ ಒಂದು ಅಂಕೆಯನ್ನು ಪಡೆದಿರುವ ಜಮೀನು: ನೂರಿಪ್ಪತ್ತು ನಂಬರುಗಳು ಖಾಸಗಿ ಜಮೀನು ಎಂಬ ಆಧಾರ ಸಿಕ್ಕಿತು (ಗ್ರಾಮಾಯ. ೪); ದೂರದಿಂದಲೇ ಒಂದು ನಿಟ್ಟಿನಿಂದ ಮತ್ತೊಂದು ನಿಟ್ಟಿಗೆ ಕೈಮಾಡಿ ಅವೆಲ್ಲ ತನ್ನ ನಂಬರುಗಳೇ ಎಂದು ಇದ್ದು ಬಿದ್ದ ಹೊಲಗಳನ್ನು ತೋರಿಸಿದಾಗ ರಾಧಕ್ಕನ ತಂದೆ ಹಿರಿಹಿರಿಹಿಗ್ಗಿದರು (ಗಂಗಾಸಾ. ೪೫); ಖಾತೆ ಇಲ್ಲ, ಎಕರೆ ಇಲ್ಲ, ನಂಬರಿಲ್ಲ, ಇದೇನ್ಬುದ್ಧಿ ನೀವೆ ಹಿಂಗ್ಮಾಡ್ತೀರಿ (ಹುಟ್ಟುಹ. ೧೩೪).

ನಂಬರ ಮನೆ = (ಉಕ) ಊಟದ ಮನೆ; ಖಾನಾವಳಿ: ರಾಮಣ್ಣನಿಗೆ ಎರಡಾಣೆ ಕೊಟ್ಟು ನೇರವಾಗಿ ನಂಬರ ಮನೆಯಲ್ಲಿ ಊಟಮಾಡಿ ಬಂದ (ಜೀದಾನ. ೩೫); ಊಟ ಮಾಡುವ ನಂಬರ ಮನೆಗೆ ಹೋದರೆ ತನ್ನ ಹೆಸರು

"ಅ–ಬ" ಎಂದು ಹೇಳುತ್ತಾನೆ! (ಬೋಹಿನೀ. ೧೨೭) ; ನಂಬರ ವಾನೀಕಿಂತಾ ಸೋವಿ ಮಾಡಿ ತೋರಿಸತೀನಿ (ವ್ಯನಿ. ೨೮೭).

[ ←ಇಂ. Number ]

**ನಂಬಿ** (ನಾ). ೧. ಭಕ್ತ. ೨. ದೇವಾಲಯದ ಅಧಿಕಾರಿ,-ಸ್ಥಾನಿಕ : ಗೋಪಾಲದೇವರ ಸ್ಥಾನೀಕ ನಂಬಿಯರು ಗಡಬಡೆಯರು ಯಾ ಧರ್ಮ್ಮಕೆ ಸಹಾಯಿ ಖಡೆಯದಲ್ಲವ್ವನವರು (ಎಕ. XI, ಚಿತ್ರದು. ೬-೩೭; 1338) ; ಆ ದೇವರ ನಂಬಿಗಳು ತೆಜುವ ವಿಭೂತಿ (ಎಕ. X (8), ಮಾಲೂರು. ೯೪-೦೮; 1406) ; ನಿರೂಪದಿಂದ ನಂಬಿಗಳು ಅವಟಿ ಅನತಪಗಳಿಗೆ (ಸೌಇಇ. ೧೯೩೪, ಪುಂಗನೂರು. ೧೫೭-೪; 1419) ; ಗೋವಿಂದರಾಜದೇವರ ನೈವೇದ್ಯ ಪ್ರಸಾದ ವನೂ ತಿರುಪತಿಯ ವರಿಗೆ ಕಾಣಿಪರಾಗಿ ನಾಲ್ಕು ಹರಿವಾಣಆಉ ನಂಬಿಗಳಿಗೆ ಒಂದು ಹರಿವಾಣವೂ . . . ಕೊಟ್ಟು (ಸೌಇಇ. IX-11, ೯೬೨-೨; 1487) ; ಪುರೋಹಿತವರ್ಗ (Priests) (ಬ್ರಾಹ್ಮಣರೂ, ಇತರರೂ) ಆಚಾರ್ಯ . . . ನಂಬಿ, ನಂಬಿದಿ, ಪಾಡಿಯ (ತುಳುನಾ. ೧೬೧). ೨. ತಮಿಳುನಾಡಿನ ಅರುವತ್ತುಮೂವರು ಪುರಾತನರಲ್ಲಿ ಒಬ್ಬ : ನಂಬಿಯಣ್ಣ : ನಂಬಿ ಕರೆದೊಡೋ ಎಂದೆ ತೆಲುಗ ಜೊಮ್ಮಯ್ಯಂಗೆ ಒಲಿದೆ ದೇವಾ (ಬಸವ. ೫೦೯) ; ಹರ ತಾಂ ಕುಂಟಣಿಯಾಗೆ ನಂಬಿಯೊರೆದಂ (ಸೋಮೇಶ. ೭೪) ; ಪುಷ್ಪದತ್ತಾಖ್ಯನನಿಳೆಯಜಿಯಲ್ ನಂಬಿಯೆಂದಿಟ್ಟು ಮತ್ತಂ ಹರ ನೀನೊಲ್ದಾ ಕಥಾಸಾರವನವಧರಿಸೈ ಶ್ರೀವಿರೂಪಾಕ್ಷಲಿಂಗಾ (ನಂಬಿರ. ೧ ಸೂಚನೆ) ; ಕುಂಬಾರ ಗುಂಡಯ್ಯ ನಂಬಿ ತ್ರಿಯಂಬಕಂ ನಿಂಬವ್ವೆ ನಿಂಬಂ ಕಂಬಿಯಲಿ ಭೈರಯ್ಯನುದ್ಭಟದೇವರ್ (ಸಾನಂದ. ೯-೮೦) ; ಹಲವು ಸೂಳೋರಂತೆ ನಂಬಿಯ ಬಳಗೆಲಸವ ಮಾಡಲಾಜದೆ ಬಳಲಿಕೆಯನಾಜಿಸಿ ಕೊಳಲು ಬಲ್ಲಡವಿಯೊಳಗಿರ್ದ್ಯ (ಬಸಪು. ೦೮-೦೨).

[ ದೇ. ತಮಿ. ನಮ್ಬಿ; ಮಲ. ನಮ್ಬಿ; ತುಳು. ಕೊಡ. ತೆಲು. ನಂಬಿ ]

**ನಂಬಿಕಸ್ತ** (ನಾ). ನಂಬಿಕೆಗೆ ಅರ್ಹನಾದವನು ; ವಿಶ್ವಾಸಕ್ಕೆ ಯೋಗ್ಯನಾದವನು : ಅವನೊಬ್ಬ ನಂಬೀಸ್ತನಾದ ಸೇವಕ (ರೂಢಿ).

[ < ನಂಬಿಕೆ + –ಸ್ತ ]

**ನಂಬಿಕಸ್ತಿಕೆ** (ನಾ). = ನಂಬಿಕೆ : ಅವನ ನಂಬಿಕಸ್ತಿಕೆ ಯಾರಾದರೂ ಮೆಚ್ಚುವಂಥದು (ರೂಢಿ). [ ನಂಬಿಕಸ್ತ + –ಇಕೆ ]

**ನಂಬಿಕೆ** (ನಾ). ಶ್ರದ್ಧೆ ; ವಿಶ್ವಾಸ : ಬೆಳ್ಳಿ, ಬಂಗಾರ ಕೈಯಲ್ಲಿದ್ದರೆ . . . ಬೇಕಾದ ವಸ್ತುಗಳನ್ನು ಕೊಳ್ಳುವ ಶಕ್ತಿ ಬರುವುದೆಂದು ಜನರಿಗೆ ದೃಢವಾದ ನಂಬಿಕೆ (ಹಂಪ್ರ. ೧೭) ; ಇಂದು ನನ್ನ ನಂಬಿಕೆ ಸಡಿಲವಾದಂತೆ ಭಾಸವಾಗುತ್ತಿದೆ (ಬಾಂಅ. ೩೮೦).

**ನಂಬಿಕೆ ಮೂಡಿಸು**=ವಿಶ್ವಾಸವನ್ನು ಹುಟ್ಟಿಸು ; ಭರವಸೆಯನ್ನುಂಟುಮಾಡು ವಿಷಯವನ್ನು ಒಳಹೊಕ್ಕು ನೋಡಿದರೆ ತಾಸವರಿಗೆ ಕಟ್ಟು ಗೊಂಡಿದ್ದುದಾಗಿಯೂ ಅಲ್ಲಿ ನಂಬಿಕೆ ಮೂಡಿಸಿದ್ದುದಾಗಿಯೂ ಅವನು ತಿಳಿದುಕೊಂಡಿದ್ದನು (ಭುನರು.೧೨೪). **ನಂಬಿಕೆ ಹುಟ್ಟಿಸು**=ವಿಶ್ವಾಸವುಂಟಾಗುವಂತೆ ಮಾಡು ; ನಂಬಿಸು : ನನ್ನ ಮಾತಿನಲ್ಲಿ ಅವರಿಗೆ ನಂಬಿಕೆ ಹುಟ್ಟಿಸಲು ಬಹಳ ಶ್ರಮಪಡಬೇಕಾಯಿತು (ರೂಢಿ). **ನಂಬಿಕೆ ಹುಟ್ಟು** = ವಿಶ್ವಾಸ ವುಂಟಾಗು ; ನಂಬು : ಅವರ ಮಾತಿನಲ್ಲಿ ನನಗೆ ಎಳ್ಳಷ್ಟೂ ನಂಬಿಕೆ ಹುಟ್ಟಲಿಲ್ಲ (ರೂಢಿ).

[ ನಂಬು + –ಇಕೆ./ತಮಿ. ನಮ್ಬಿಕ್ಕೈ, ನಮ್ಬಕೆ; ಮಲ. ನಮ್ಬಿಕ್ಕ; ತುಳು.ನಂಬಿಗೆ ; ತೆಲು. ನಮ್ಮಕ, ನಮ್ಮಿಕೆ, ನಮ್ಮಿಗ ]

**ನಂಬಿಕೆದ್ರೋಹ** (ನಾ). ವಿಶ್ವಾಸವುಳ್ಳವರಿಗೆ ಕೇಡುಂಟುಮಾಡುವಿಕೆ ; ವಿಶ್ವಾಸಘಾತುಕತನ "ನಂಬಿಕೆದ್ರೋಹ, ವಿಶ್ವಾಸಘಾತುಕತೆ" (Breach of trust. ಪಾರಿನಿ. ೧೧) ; ಪಾಲುದಾರ ನಂಬಿಕೆದ್ರೋಹ ಮಾಡಿದ್ದರಿಂದ ಕೋರ್ಟಿಗೆ ಹೋಗಬೇಕಾಯಿತು (ರೂಢಿ). [ ನಂಬಿಕೆ + ದ್ರೋಹ ]

**ನಂಬಿಕೆದ್ರೋಹಿ** (ನಾ). ನಂಬಿಸಿ ಮೋಸಮಾಡುವವನು ; ವಿಶ್ವಾಸಘಾತುಕ. [ ನಂಬಿಕೆ + ದ್ರೋಹಿ ]

**ನಂಬಿಗ** (ನಾ). ನಂಬಲು ಯೋಗ್ಯನಾದವನು ; ವಿಶ್ವಾಸಯೋಗ್ಯ : ಇದೆ ಸಮಯವಣ್ಣ ಇದೆ ಸಮಯ ತಮ್ಮ ನವ್ ನಿಮ್ಮ ಆತ್ಮಗಳಿಗೆ. ಅಂಬಿಗನು ಬಂದ ನಂಬಿಗನು ಬಂದ ಬಂದದ ದಿವ್ಯಗಳಿಗೆ (ಹೃದಸ. ೧-೮).

[ ನಂಬಿಗೆ (<ನಂಬುಗೆ) + –ಅ ]

**ನಂಬಿಗಸ್ತ** (ನಾ). = ನಂಬಿಕಸ್ತ : (ಶಿ). [ <ನಂಬುಗೆ + –ಸ್ತ ]

**ನಂಬಿಗಸ್ತಿಕೆ** (ನಾ). = ನಂಬಿಕಸ್ತಿಕೆ : (ಶಿ). [ ನಂಬಿಗಸ್ತ + –ಇಕೆ ]

**ನಂಬಿಗೆ** 'ನಂಬುಗೆ' ನೋ.

**ನಂಬಿರ** (ನಾ). (?) : ಇವೆಲ್ಲವನು ದೇವರ ಅಮೃತಪಡಿ ನಂದಾದೀಪ ಪಡಿ ದೀಪ ಗಂಧ ವಸ್ತ್ರವಯಿಭೋಗ ಪರ್ವತಿಥಿ ನಂಬರ ಹೂವಡಿಗ ಪೊಗಬುರಜ ಮತ್ತಾವ ವಿನಿಯೋಗವನು ನಡಸಿ ಬಹರುಯೆಂದು ಸಮರ್ಪಿಸಿದ್ದು (ಎಕ. III, ತಿರುಮ. ೩೭-೦೬; 1513).

[ ? ಇದು 'ನಂಬಿ' ಎಂಬುದರ ಅಪಲಿಖಿತವಿರಬಹುದು ]

**ನಂಬಿಸು**(ಕ್ರಿ). ೧. (ಸ್ನೇಹ, ಅಪ್ರತೆ, ಧರ್ಮ ಮುಂತಾದುವುಗಳ ವಿಷಯದಲ್ಲಿ) ನಂಬಿಕೆಯನ್ನುಂಟುಮಾಡು ; ವಿಶ್ವಾಸವನ್ನುಂಟುಮಾಡು ; ಭರವಸೆ ಮೂಡಿಸು ; ಶ್ರದ್ಧೆಯನ್ನುಂಟುಮಾಡು : "ನಂಬಿಸು – ಅನು ಮೋದನೇ" (ಕರ್ಮಾ) ; ಈ ರೂಪಂ ತೋಱಿ ನಂಬಿಸಿ ನಿಮ್ಮ ಪ್ರಾಣ ಕೃಪಾಯಮಂ ಮಾಡಲ್ ಬಗೆದು (ವಡ್ಡಾರಾ. ೦೭೬-೦೯) ; ನಂಬಿದ ಬರವುಮಂ ನಂಬದ ಬರವುಮನಱಿದು . . . ನಂಬದುದಂ ನಂಬಿಸಲುಂ ನಂಬಿದುದಂ ಬಿಡಿಸಲುಂ .... ನಿಮ್ಮಡಿಯ ಕೆಲದೊಳಾನೆ ಬಲ್ಲೆಂ (ಪಂಪಭಾ. ೫-೯೩ ವ) ; ತನಗಲ್ಲದೊಡಲ್ಗೊಡಮೆಗೆ ಮನಮಿಟ್ಟಪವರ್ಗಮಾರ್ಗಮಂ ಪೊರ್ದದೆ ತನ್ನನೆ ತಾನೆ ನಂಬಿಸುವೊಡಾತ್ಮನಂತು ಪೇಟಾತ್ಮವಂಚಕರ್ ಪೆಱರೊಳರೇ (ಅಜಿಪು. ೨-೫೫) ; ಮಕ್ಕಳ ಕೈಯ ಮಾಣಿಕವಂ ಗುಗ್ಗುರಿಯಂ ತೋಱಿ ನಂಬಿಸಿ ಕೊಳ್ವಂತೆ (ಧರ್ಮಾಮೃ. ೧೦-೮೩) ; ಎಂತಕ್ಕೆ ನಾ ನಿಮ್ಮ ದೇವರೆಂದಱಿದನು ಇಂತಾಗಿ ನೀವೆನ್ನನಾರೆಂದಱಿಯಿರಿ ನಂಬಲಱಿಯ ನಂಬಿಸಲಱಿಯ (ಬಸವ. ೨೭೪) ; ಹಿಂದೆ ನಂಬಿಸಿ ಭೀಷ್ಮ ಗುರುವನು ಕೊಂದ ಗೆಲುವಿನಲುಬ್ಬಬೇಡ (ಕುಮ್ಯಾಶ. ೨-೫). ೨. ಹಾಲುಣಿಸು; ಹಾಲುಕೊಡು: ಕಂಬನಿಯನೊಗುತಾ ಮಱಿಯ ಪಾಯ್ಕಂಬನದು ನಕ್ಕುತ್ತ ಮೋಹದಿ ನಂಬಿಸುತ್ತಸುವುಳಿವುಳಿದುದಯ್ಯೋ ವಿಮೋಹ ಕಷ್ಟವಲ (ಸಾಶ್ಯಶಾ. ೫-೨೮).

[ ನಂಬು + –ಇಸು. / ತೆಲು. ನಮ್ಮಿಂಚು ]

**ನಂಬಿಸುಹ** (ನಾ). ನಂಬಿಸುವಿಕೆ ; ಭರವಸೆಯನ್ನುಂಟುಮಾಡುವಿಕೆ : "ಸ್ವಾಂತಮನೆ ಸಾವುವನೆ ನಂಬಿಸುಹಮಮಕ್ಕೆ" (ಮಂಗರಾ. ೧೪೫-೩೭).

[ ನಂಬಿಸು + –ಹ ]

**ನಂಬು** (ಕ್ರಿ). ೧. (ಸ್ನೇಹ, ಅಪ್ರತೆ, ಧರ್ಮ ಮುಂತಾದುವುಗಳ ವಿಷಯದಲ್ಲಿ) ನಂಬಿಕೆಯಿಡು ; ವಿಶ್ವಾಸವಿಡು ; ಭರವಸೆಯನ್ನು ಹೊಂದು : "ನಂಬು–ವಿಶ್ವಾಸೇ" (ಕರ್ಮಾ) ; ಆ ಲಘುಗಳಲ್ಲದ ತಾಣದೊಳಂ ಲಘೂ ಭಾಗಮಕ್ರಮದೆ ನಂಬುಗೆ ಲಾಘವದೋಷವಂ (ಛವಿಶಾ. ೧-೧೨೭) ; ಧರ್ಮಮಂ ಕೇಳ್ದು ಮೆಚ್ಚಿ ನಂಬಿ ಶ್ರಾವಕಬ್ರತಂಗಳಂ ಕೈಕೊಂಡು ಶ್ರಾವಕನಾಗಿ (ವಡ್ಡಾರಾ. ೦೭೬-೯) ; ನಂಬು ನಂಬೆನ್ನ ಕಣ್ಣಿಂ ಕಿಡಿಯುಂ ಕೆಂಡಂಗಳುಂ ಸೂಸಿದವುವಹಿತರಂ ನೋಡಿ ಪಂಕೇಜವಕ್ತ್ರೇ (ಪಂಪಭಾ. ೭-೦೩) ; ತುಬಿಲ್ಗಳನಿರ್ವರುಮಂ ಕಟಿಪಿ ಸುಯೋಧನನ ಬಾಬ್ಬುದಂ ನಂಬಿದಿರೇ (ಗದಾಯು. ೩-೬೫) ; ಅಂಬುಮನೆಱಿವಾಗಳ್ ಪ್ರತಿಬಿಂಬಿಸೆ ಕಿಯ್ಯಾರಿಸೊಳವಳ ವದನಂ ಪಥಿಕಂ ನಂಬಿ ನಲಿದೀಂಟಿದಂ (ಗಿರಿಕ. ೨-೨೬) ; ಅವನಿಪಾಲರು ಕಂಗಳಿಂದವೆ ಕಿವಿಗೆ ಕರವೊಳೈದರು ಕಂಡುದನವರು ನಂಬರು ಕೋಡೆಯುದ ನುಡಿಗೇಳ್ದು ನಂಬುವರು (ಕುಮ್ಯಾದ್ರೋ. ೧೮-೨) ; ತಾ ಕಳ್ಳ ಪರರನ್ನು

ನಂಬ (ಗಾದೆ). ೨. ನೆಮ್ಮು ; ಆಧರಿಸು ; ಆಶ್ರಯಿಸು : ವೆಯುಮಂ ನಂಬುವೊಡೆನ್ನ ಪೇಟ್ವ ಸತಿಯಂ ಕೈಕೊಂಡಂ (ಪಂಪಭಾ. ೧-೭೭) ; ಅಧರ್ಮ ಯುದ್ಧದೆ ನರಂ ಕೊಲ್ವಲ್ಲಿ ಕಂಡುಂತುಪೇಕ್ಷಿಸಿ ನೀಮುಂ ನಡೆ ನೋಡು ತಿರ್ದಿರೆನೆ ಮತ್ತಿನ್ನಾರನಾಂ ನಂಬುವೆಂ (ಪಂಪಭಾ. ೧೧-೯೩); ಜ್ಞಾನಕ್ಕೆ ಲೇಪವಾದವನಿರವು ತುಪ್ಪವ ನಂಬಿದ ಬತ್ತಿಯಂತೆ ಕಾದ ಲೋಹದ ಜಲ ದಿರವಿನಂತೆ (ಪ್ರಭುಲಿಂಗ. ४-೧೦) ; ನಂಬದಿರು ಈ ದೇಹ ನಿತ್ಯವಲ್ಲ ಅಂಬು ಜಾಕ್ಷನ ಭಜಿಸಿ ಸುಖಿಯಾಗು ಮನವೆ (ಪುರಂದ. ೧-೨೭ ಪಲ್ಲವಿ).

ನಂಬೆ ನುಡಿ = ನಂಬಿಸು ; ವಿಶ್ವಾಸವನ್ನುಂಟುಮಾಡು: ಅನಲ್ಲಿಗೆ ಪರ್ಬಿನಂ[ದಾ ಪಾಣ್ಮ]ನಂ ನಂಬೆ ನುಡಿದು (ಪಂಪಭಾ. ೬-೭೩). ನಂಬೆ ಪಡು = ನಂಬಲ್ಪಡು : ಕೊಲ್ಲದ ಪುರುಷಂ ಎಲ್ಲರಿಂ ನಂಬೆ ಪಡುವನುಂ ಪೂಜ್ಯನುಂ ಅಕ್ಕುಂ (ಶಬ್ದಸ್ಮೃ. ೨೬೧).

[ ದೇ.॥ ತಮಿ. ನಮ್ಪು ; ಮಲ. ನಮ್ಪು ; ತುಳು. ನಂಬು, ನಮ್ಮು ; ಕೊಡ. ನಂಬ್ ; ತೆಲು. ನಮ್ಮು ]

**ನಂಬುಗೆ**, ನಂಬಿಗೆ (ನಾ). ೧. ನಂಬಿಕೆ ; ಶ್ರದ್ಧೆ ; ವಿಶ್ವಾಸ : “ವಿಸ್ರಂಭಃ, ವಿಶ್ವಾಸಃ - ಈ ೨ ನಂಬುಗೆ” (ಅಭಿಧಾನ. ೦೨೭-೯೪) ; ಕನಸುಗಂಡುದಂ ತವಗೆ ನೇಸರ್ಮೂಡೆ ಪೇಟ್ಗೊಡೆ ನಂಬುಗೆಯಾಗಿ ಉಬ್ಬೆಗಂಬಟ್ಟು (ವಡ್ಡಾರಾ. ೧೧೦-೦೯) ; ಆರ್ ಕೆಲಂಬರರಸನನೋಲೈಸುವರ್ ಅವರೈಶ್ವರ್ಯಂ ಪರಾಧೀನವಾಗಿಹುದು . . . ಜೀವಿಸುಹತ್ತಂ ನಂಬುಗೆಯಿಲ್ಲದುದು (ಪಂಚತಂ. ೧೩೩-४) ; ತಳ್ವಿಲ್ಲದೆ ಪಿರಿದಾದರದಿಂ ಕೊಲ್ಲದ ಧರ್ಮವನೆ ಪಿಡಿಗೆ ನಂಬುಗೆಯಿಂದಂ (ಧರ್ಮಾಮೃ. ೦-೦೯೬) ; ಶಂಭುವದಭಕ್ತಿ ನಂಬುಗೆಯ ಹಂಬಲು ಬೇಕು (ದೀಕ್ಷಾಬೋ. ೯೯-೦೦) ; ಗುರುಗಳಲಿ ನಂಬುಗೆ ನಿರರ್ಥಕವಾಯ್ತೆನುತ ಕುರುರಾಯ ಬಿಸುಸುಯ್ದು (ಕುಮಾರವ್ಯಾ. ४-೫). ೨. ಭಾಷೆ; ಮಾತುಕೊಡುವಿಕೆ ; ಆಣೆ. ‘ನಂಬುಗೆಗೊಳ್ಳು’ ನೋಡಿ. ನಂಬಿಗೆ : ೧. ಜಂಗಮದೊಳಗೆ ಲಿಂಗಯ್ಯನಿದ್ದಾನೆಂದು ನಂಬಿಗೆಯುಳ್ಳರೆ ತೋರುವ ಕೂಡಲಸಂಗಯ್ಯ (ಬಸವ. ೦೯೬); ಭಾಷೆಗೆಡುಕನಿಗೆ ನಂಬಿಗೆ [ಪಾಠಾಂ. ಟುಗೆ] ಯೇತಕೆ (ಪುರಂದ. ೨-೭೯-೫) ; ನಂಬೆಗಿಂ ಹುಳಿಯಿಲ್ಲ ತುಂಬೆಗಿಂ ಕರಿದಿಲ್ಲ ನಂಬಿಗೆಯಿಂದಧಿಕ ಗುಣವಿಲ್ಲ (ಸರ್ವಜ್ಞ. ೨೩೫) ; ನನ್ನ ಬೆಂಬಲದ ನಂಬಿಗೆಯ ಮಂದಿರ ನೀನು (ಉದ್ಭಟಕಾ. ೯೦-೦೭); ಗೋಂಬೆಗೆ ಕೈಮುಗಿದರೂ ನಂಬಿಗೆ ಇರಬೇಕು (ಗಾದೆ). [ ನಂಬು + - ಗೆ]

**ನಂಬುಗೆಗೆಡು** (ಕ್ರಿ). ವಿಶ್ವಾಸವನ್ನು ಕಳೆದುಕೊಳ್ಳು ; ಭರವಸೆಯನ್ನು ಕಳೆದುಕೊಳ್ಳು: ತಂಬುಲಿಗರ್ ನಂಬುಗೆಗೆಟ್ಟವರಂತೆ ಪಟಸಾರೆ(ಧರ್ಮಾಮೃ. ३-४೯). [ ನಂಬುಗೆ + ಕೆಡು₁ ]

**ನಂಬುಗೆಗೆಯ್** (ಕ್ರಿ). ನಂಬು ; ವಿಶ್ವಾಸವಿಡು : ಬಗೆ ನಿಲುಕದತುಳ ಕೈವಲ್ಯಪರಿವೃತರಜತನಗವೃಷಭವಾಯ್ತೊ ಹೇಳೆಂಬ ಸಂಶಯಕೆ ನಂಬುಗೆಯ್ಯೆ ಪುಂಗವನ ನುತದೇವಪುಂಗವಂ ನಲಿದೀಚ್ ಕಣ್ಗೆಸದನು (ಸೋಮೇಶ. ४-೯೦). [ ನಂಬುಗೆ + ಕೆಯ್₁ ]

**ನಂಬುಗೆಗೇಡು** (ನಾ). ನಂಬಿದವರಿಗೆ ಮೋಸಮಾಡುವಿಕೆ ; ವಿಶ್ವಾಸದ್ರೋಹ : ಈ ಉಪ್ಪಿಗೆ ನಂಬುಗೇಡನ್ನು ಅಹಿತವನ್ನು ಮನಸ್ಸಿನಲ್ಲಿಯೇ ನಡೆಯಿಸಿದಿರಾದರೂ, ನಿಮ್ಮ ಗತಿಯೇನು (ಅದ್ಭುತ. ೫೫-೧).
[ ನಂಬುಗೆ + ಕೇಡು ]

**ನಂಬುಗೆಗೇಳು** (ಕ್ರಿ). ನಂಬಿಕೆಯ ಮಾತನ್ನು ಒಪ್ಪು ; ವಿಶ್ವಾಸವಿಡು; ಭರವಸೆಯಿಡು : ಹೇಳಿದೀ ಕುಹುಹುಗಳು ತಪ್ಪದು ಕೇಳಿದ್ಯೆ ಹನುಮಂತ ನಂಬುಗೆಗೇಳದಿರೆ ಮನವೇನಮಾಡುವೆನೆಂದಳಾ ಸೀತೆ (ತೊರರಾ. ೫-३-೯೯).
[ ನಂಬುಗೆ + ಕೇಳು (<ಕೇಳ್) ]

**ನಂಬುಗೆಗೊಡು** (ಕ್ರಿ). ನಂಬಿಕೆಯನ್ನುಂಟುಮಾಡು ; ಭರವಸೆಯನ್ನು ಕೊಡು; ವಿಶ್ವಾಸವನ್ನುಂಟುಮಾಡು:ನುಡಿದೊಡವೆಯಂ ಕೊಡುವೆನೆಂದು ನುಡಿದಂದದಿಂ ನಡೆವನೆಂದೊಬ್ಬರೊಬ್ಬರಿಗೆ ನಂಬುಗೆಗೊಟ್ಟು [ಪಾಠಾಂ. ಯಿತ್ತು] (ಹರಿಶ. ೦೦-३६) ; ಸುದತಿ ತಪ್ಪದುಯೆಂದು ನಂಬುಗೆಗೊಡಲಾ ವಿಧುಮುಖಿ ನಲಿದಿರುತಿರ್ದಳ್ (ಜೀವಂಧರಸಾಂ. ೦೭-೫३) ; ಇವನ ಪ್ರಾಣಗಳಿಗೆ ತಪ್ಪಿದೆಸಾದರೆ ಶಿವನ ಪಾದಗಳಾಣೆಯೆನುತೆ ಧವಳಸರೋಜಾಕ್ಷಿಗೆ ನಂಬುಗೆ ಗೊಟ್ಟು ಕುವರನನೊಡಗೊಂಡು ಬಂದ (ಪ್ರಭುಲಿಂ. ३५-೫३) ; ಶರಣು ಹೊಕ್ಕರಿಗೆ ನಂಬುಗೆಗೊಟ್ಟು ಮುಂದಕ್ಕೆ ತೆರಳಿದನಾ ಖಾಸನಾಗ (ಕಂಠೀರವ. ೧೧-೫೭). [ ನಂಬುಗೆ + ಕೊಡು₁ ]

**ನಂಬುಗೆಗೊಳ್**, ನಂಬುಗೆಗೊಳ್ಳು (ಕ್ರಿ). ೧. ನಂಬಿಕೆಯನ್ನು ಹೊಂದು; ವಿಶ್ವಾಸವನ್ನು ಪಡೆ ; ಭರವಸೆಯನ್ನು ಹೊಂದು : ಬೇಹಡವ್ವೊಡನೆ ಬಾ ತೋರ್ಪೆವೆನೆ ಹೈ ಬಂದವಂ ತೋಱೆ ಕೊಡಿರಯ್ಯ ಎಂದು ಪೊಡಮಟ್ಟು ನಂಬುಗೆಗೊಂಡು ಹೋದನಾ ಪರುಷಯೊಡನೆ (ಸಿದ್ಧರಾ. ३-४३). ನಂಬುಗೆ ಗೊಳ್ಳು : ೨. ಪ್ರಮಾಣವನ್ನು ಪಡೆ ; ಭಾಷೆಯನ್ನು ಪಡೆ : ಕೃಶಾನು ನಂಬುಗೆಗೊಂಡನಾ ನೃಪನ [ಪಾಠಾಂ. ವರವನು ಕೊಟ್ಟನಾ ನೃಪಗೆ] (ಶಬ್ದಮಸ. ೫-೦೫) ; ರಾಗದ ಮದನನ ಕೈಯ ನಂಬುಗೆಗೊಂಡು ಭೋಗದ ರತಿದೇವಿಯಂತೆ ಭೂಗದೀಶ್ವರ ಕಂಠೀರವೇಂದ್ರಗೆ ಕೈಲಾಗಿತ್ತಳೊರ್ವಬ್ಬ ನೇತ್ರೆ (ಕಂಠೀರವ. ३९-೭६) ; ಇಂತೆಂದು ವೇಳೆ ನಂಬುಗೆಗೊಂಡು ಗುರು ವರ್ಯ ಕಂತುವಿಂ ಬೀಳ್ಕೊಂಡು ಪೊರಮಡಲು (ನವಮೋ. ೫-೦೯).
[ ನಂಬುಗೆ + ಕೊಳ್₁ ]

**ನಂಬುಗೆಗೊಳ್ಳು** ‘ನಂಬುಗೆಗೊಳ್’ ನೋ.

**ನಂಬುಗೆದಾಳು** (ಕ್ರಿ). ನಂಬಿಕೆಯನ್ನು ಹೊಂದು ; ವಿಶ್ವಾಸವನ್ನು ಇಡು: ಪೇಳಿದತಿಗುಹ್ಯದಲಿ ನಂಬುಗೆದಾಳಿ ವಾಙ್ಮನಕಾಯಗಳಲದ್ವೈತವನೆ ಬಳಸಿ (ಗಣಭಾ. ೦೭-३೦). [ ನಂಬುಗೆ + ತಾಳು₁ (<ತಾಳ್₁) ]

**ನಂಬುಗೆದೋಱು** (ಕ್ರಿ). ವಿಶ್ವಾಸವುಂಟಾಗು ; ಒಪ್ಪು : ಮೂಲಭಾಗದ ಸಂಶಯವು ಕೆಲಸಾರಿತವನೀಸುತೆಗೆ ನಂಬುಗೆದೋಱದಿರೆ ತುದಿಯಂಶದಲಿ ಹನುಮಂತನಾ ಹದನ ವಾಱಾನುಡಿಯಿರದಿರಲು (ತೊರರಾ. ೫-३-೯೦).
[ ನಂಬುಗೆ + ತೋಱು ]

**ನಂಬುಗೆಯೀ** (ಕ್ರಿ). ಭಾಷೆಯನ್ನು ನೀಡು; ವಚನ ಕೊಡು: ಅರ್ಧರಾತ್ರಿಯ ಹೊತ್ತಿನೊಳಗಾಗಿ ಸುಗುಣಾನಿರುದ್ಧನ ತಪೆನೆಂದು ನಗುತ ನಿರ್ಧರವಾಗಿ ನಂಬುಗೆಯಿತ್ತು ಬೀಳುಕೊಂಡಿದ್ದಳು (ಪ್ರಭುಲಿಂ. ३೦-೦೦).
[ ನಂಬುಗೆ + ಈ₂ ]

**ನಂಬುಗೆವಂತ** (ನಾ). ನಂಬಿಕೆಗೆ ಪಾತ್ರನಾದವನು ; ಭರವಸೆಯಿಡಲು ಅರ್ಹನಾದವನು : ಸಾಷ್ಟಾಂಗವೆಱಗಿ ನಂಬುಗೆವಂತರೆದ್ದು ಸಂತುಷ್ಟದಿ ಬೀಳ್ಕೊಂಡರು (ಭರತೇ. ३೯-೦३೩) ; ಅರಮನೆಗಾಗಿ ನಂಬುಗೆವಂತರತ್ತ ತಮ್ಮರಸಿಯರ್ಕಳನೊಯ್ಯಲಿತ್ತ ಅರುಹನಾಲಯಕೆಯ್ದೆ ತಂದೆಯ ಬಳಿಗಾಗಿ ಬರುತಿರ್ದನಾ ಯುವರಾಜ (ಭರತೇ. ३೦-३೮). [ ನಂಬುಗೆ + - ವಂತ ]

**ನಂಬುಗೆವಡೆ** (ಕ್ರಿ). = ನಂಬುಗೆದಾಳು : ಅಂಬುಜಭವ ಭವೇಂದ್ರಾದಿ ದೇವತೆಗಳ ನಂಬುಗೆವಡೆದ ರಕ್ಕಸರ ಕಂಬುಚಕ್ರಾಂಕಿತ ನಿಮ್ಮೊಳು ಮಥನಿಸಿ ಮುಂಬರಿದರು ಯಮಪುರಿಗೆ (ಪ್ರಭುಲಿಂ. ३೭-३४). [ ನಂಬುಗೆ + ಪಡೆ₁ ]

**ನಂಬುಗೆವಿಡಿ** (ಕ್ರಿ). = ನಂಬುಗೆದಾಳು : ಶಂಭುವದಭಕ್ತಿ ನಂಬುಗೆವಿಡಿದು ಅಗಲದೆ ಇರಬಲ್ಲರೆ ಶರಣ (ಸಿದ್ಧೇಶ. ೯೪-३೦೭) ; ಪ್ರಮಿತವಚನದಲುದಿಸಿ ದೊಡೆ ವಿಕ್ರಮದ ಬಗೆ ಬಳಕಱಿಯಬಹುದೆಂಬಮರಿವಿನ ನುಡಿಗೆ ನಂಬುಗೆವಿಡಿದನರುಣಸುತ (ತೊರರಾ. ३-೦೦-३४). [ ನಂಬುಗೆ + ಪಿಡಿ₁ ]

**ನಂಬುಗೆವೆರೆ** (ಕ್ರಿ). ವಿಶ್ವಾಸ ಹೊಂದು ; ಭರವಸೆ ಪಡೆ ; ನಂಬು : ಕರಿಯ:ದಿರೊಳಗಿರ್ಪಂದದು ಕರಿಯಲ್ಲೆಂದೈದಿದಂದು ಸಂಶಯಿಸುತ್ತುಂ ನಿರುಕಿಸಿ ಪಕ್ಷಿಯ ನಂಬುಗೆವೆರೆದಂತಾಯ್ತೆನ್ನ ಮನದೊಳಾದ ವಿಕಾರಂ (ಶಾಕುಂತ. ೦೦३-೦೯४). [ ನಂಬುಗೆ + ಬೆರೆ₁ ]

**ನಂಬುಗೆವೆಟು** (ಕ್ರಿ). ಶ್ರದ್ಧೆಯನ್ನು ಹೊಂದು; ನಂಬಿಕೆಯಿಂದ ಕೂಡಿರು : ನಂಬುಗವೆತ್ತ ಭಕ್ತಜನದಿಂದತಿರಂಜಿಪ ಚೋಳದೇಶದೊಳ್ . . . ಇರ್ಪುದು ಪೆಂಪನಾಂತು ಪೊನ್ನಾಂಬಲವೆಂಬ ನಾಮದ ಮಹಾಪುರಂ (ಶ್ರೀಪುವಿ. ೬-೨). [ನಂಬುಗೆ + ಪೆಟು₁]

**ನಂಬುಗೈ** (ನಾ). ಪ್ರತಿಜ್ಞೆಗಾಗಿ ನೀಡುವ ಕೈ : ಇದೆ, ಬಿಡಿ ನಂಬುಗೈಯಂ ನಿನ್ನಾಣೆ, ಕುಲದೈವದಾಣೆ ! ಎಂದುಂ ಪೆಱವರೊಳೊರೆಯೆಂ (ರಾಮಾಶ್ವ. ೧೧೮-೧೩). [ನಂಬು + ಕೈ₂ (<ಕೆಯ್₂)]

**ನಂಬುಗೊಳ್** (ಕ್ರಿ). ನಂಬಿಕೆಯುಂಟಾಗು : ದಾಸರ ಗಂಗಮ × × ದ ಕೆಲಸದ ಶಸ್ತ್ರವನೊತ್ತೆಯಿಟ್ಟು ಹೋದಡೆ ಆ ಸ್ಥಳದಲು ಇರಬೇಕೆಂದು ತಮ್ಮ ಹೆಸರನಿಕ್ಕಿಯೆಂದಡೆ ಚಿಂಚಯ್ಯನು ಕೊಟ್ಟು ನಂಬುಗೊಳೆ ಹೆಸರನಿಕ್ಕಿ ಶಸ್ತ್ರವಂ ಹೊಸಿದನು (ಎಕ. VII, ಚನ್ನಗಿ. ೩೨-೨೪೪; 1050 ?).

[<ನಂಬುಗೆ + ಕೊಳ್₁]

**ನಂಬ್ರಾನ್** (ನಾ). ದೇವರು ; ಒಡೆಯಂ : ನಮ್ಬ್ರಾನ್ಸ್ಗೋವದೋರಾ (ಎಇ.IX, ೧೮-೬; ಸು. 800). [←ತಮಿ. ನಮ್ಬಿರಾನ್]

**ನಕ** (ನಾ). ಉಗುರು ; ನಖ : ನಖ – ನಕ ; ಪರಿಖೆ – ಪರಿಕೆ (ಶಮದ. ೨೫೫ ಪ್ರಯೋ). [<ಸಂ. ನಖ]

**ನಕಮಕ** (ನಾ). ಮೋಸ ; ತಟವಟ : ಕೌರವಾನುಜರೂ ನಕಮಕದ ವಿದ್ಯೆಗಳ ಸಾಧಿಸಿ ದಿಕುವಿಗಂನ್ನುತ ಭಾರರಾದರು (ಜಿಸಭಾ. ೯-೨೪) ; ಶಸ್ತ್ರಗಳನು ಹಾಯೆಂದು ಬಾಯ್ದೆರೆದು ನುಂಗುಹಳರಿದು ನಕಮಕದಿ ಕೀಡಿದವಲಂಘ್ಯದಿಂ ಗ್ರಹಿಸಿಕೋಯೆಂದು ಕೂಗುತಲು . . . ಖಡ್ಗಮಂ ಝಳಪಿಸುತ ಬಹಳರಿದು (ಜಿನಮು. ೩೪-೧೭). [ ? ]

**ನಕರ, ನಖರ₁, ನಗರೆ₂** (ನಾ). ವರ್ತಕರ ಒಂದು ಸಂಘ ; ವ್ಯಾಪಾರಿಗಳ ಒಂದು ಪಂಗಡ; ಕೊತ್ತಳಿ : ದೇವಾಳ್ಗೆವಿಷಯೇ ಕಿಟುವುಂಡನೀರಿಣಾಂ ನಾರಸ್ಯ ದಶಮೋಭಾಗಃ (ಮೈಆರಿ. ೧೯೩೦, ೩-೧೯ ; ಸು. 500) ; ಆ ಎರಮ್ಮನಂ ಅಯ್ನದಿಂಬರುಂ ನಕರಮುಂ ಸೇಣಿಯುಂ ಬಟಸುವಿಟ್ಟು ಗೆಲ್ದಲ್ಲಿ ಮೂಲವ್ವೆಡಿಯಕ್ಕೆ ಒವ್ವೆಳ್ಳನೆಯ್ನುಱಿಸಿದಾ (ಎಕ. VI, ಕಡೂರು. ೦೪೩-೬; ಸು. 750) ; ಇದಕ್ಕೆ ಸಾಕ್ಷಿ ನಾಲ್ಕು ಸಮಯಿಗಳು ನಾಡುನ್ನಕರಮುನ್ನರ ಸಾಸನಮುವಿವರೇ (ಎಇ. X, ೬೬-೫೪; 892) ; ಎಡೆನಾಡಪ್ಪತ್ತಱ ಗಾವುಣ್ಡುಗಳು ಪದಿ ಎಳರ ಗಾವುಣ್ಡು × × × ನಕರಮುಂ ಎಳುಪುರಮುಂ ಪಾದಮೂಲಮುಂ ಸಾಕ್ಷಿ (ಎಕ. IV, ಚಾಮರಾ. ೦೮-೨೦ ; 1000 ?) ; ಪದಿನಜುವಜುಂ ನಕರಮುಮಿನ್ತೀ ಧರ್ಮಮಂ ಪ್ರತಿಪಾಲಿಸುವುದು (ಎಇ. XIII, ೧೬೨-೩೭; 1055) ; ಶ್ರೀಮತ್ ನಕರೇಸ್ವರದೇವರ್ಗ್ಗೆ ನಕರಂ ಕೊಟ್ಟ ಸೊಂಟಿಗೆಯೊನ್ದು (ಸೌಇಇ. XI-1, ೧೧೨-೧೦; 1072) : ಪುಲಿನಾಡ ಕೊಳತೂರಂ ಪಲ್ಲವಾದಿತ್ಯ ಪೂರವಾಗೆ ನಕರಂ ಮಾಡಿ . . . ಕೊಟ್ಟಂ (ಸೌಇಇ. IX-1, ೪೦-೧೬; 11ನೆಯ ಶತ) ; ತಿಂಮಣಗೆ ಕೊಟ್ಟ ನಕರ ಕೊಡಗೆ ಹೊಲ (ಎಕ. X (8). ಕೋಲಾರ. ೩೦೮-೪; 16ನೆಯ ಶತ) ; ಉದಯಾಪುರದ ನಕರಸಹಿತಂ ಪೊನ್ನುಟ್ಟದ ನಕರಕ್ಕೆ (ಎಇ. IX, ೨೩-೬; ?). **ನಖರ₁** : ಸಿಂಗಗಾವುಂಡನು . . . ಮಹಾಜನ ನಖರ[ವಱ]ಯಲೆ [ಆ] ಚಂದ್ರಾರ್ಕ್ಕತಾರಂ ಸಲಲೆಂದು (ನಾಂದೇಡ್. ೧೪-೧೫; 1115) ; ಹೊಸಪಟ್ಟಣ ಬಸುರೆಪುರದ ನಖರೇಶ್ವರದೇವರ ಸನ್ನಿಧಾನದಲು ಸಮಸ್ತ ನಖರಮುಂ × × × ಮೆಯು ಅಲ್ಲಿಯ ನೆಲನಂ ಕೂಡಿರಲು (ಸೌಇಇ. IX-1, ೩೯೩-೧೦; 1165) ತಳಕಾಡ ಸಮಸ್ತ ನಖರವು (ಮೈಆರಿ. ೧೯೩೩; ೬೦-೩; 1173); ಹಲುಂಗಪುರ ಹಂನಿರ್ವ್ವರು ಗಾವುಣ್ಡು ಸಮಸ್ತ ಪ್ರಜೆ ನಖರ ಮುಮ್ಮುರಿ ದಂಡಂಗಳಿಗೆ ಆ ಸ್ತಳದ ದಸಬಳವನು ಸರ್ವನಮಸ್ಯವಾಗಿ ಬಿಟ್ಟರು (ಎಇ. XVI, ೩೩೬-೩೨ ; 1255) ; ನಾಂಡುಗ್ರಾಮ ನಖರ ಹಂಜಮಾನ ಆಚರ ಮುಂತಾಗಿ (ಸೌಇಎ. ೧೯೨೯, ಮಂಗಳೂರು. ೪೬೦-೨೫ ; 1297) ; ಯೆಳುಮಲೆಯಪ್ಪತ್ತೇಳುಮೆ ಪೊಳಗಾದ ನಖರ ಹಂಜಮಾನದ ಸಮಸ್ತ ಹಲರು ಮುಂದಿಟ್ಟು (ಸೌಇಎ. ೧೯೩೦, ಉಡುಪಿ. ೫೬೯-೯; 1397). **ನಗರೆ₂** : ಮತ್ತಲಸೆಟ್ಟಿಯ ಮಗ ದೆಸವಾಣಿಕಸೆಟ್ಟಿಯೊಟಗಾದ ಮಣಲಿಯ ಸಮಸ್ತ ನಗರೆಯುಂ ಆ ಪಟ್ಟಣದ ಸಮಸ್ತ ಸಥವ (?) ಮಾಡಿಸಿ ಕೊಟ್ಟ (ಮೈಆರಿ. ೧೯೩೩, ೪೬-೨೦; 1278). 'ನಗರ್ತ' ಪರ್ಯಾ. [<ಸಂ. ನಗರ]

**ನಕರ್₁** 'ನಗಾರಿ₂' ನೋ.

**ನಕಲಿ** 'ನಕಲು' ನೋ.

**ನಕಲಿಗಾರ** (ನಾ). ಹಾಸ್ಯಕ್ಕಾಗಿ ಅನುಕರಣೆ ಮಾಡುವವನು ; ಅಣಕ ಮಾಡುವವನು ; ವಿನೋದಪಡಿಸುವವನು ; ಹಾಸ್ಯಗಾರ : ಸ್ವಭಾವವಾಗಿ ನಕಲಿಗಾರರಾಗಿರುವವರು ಎಲ್ಲರನ್ನೂ ಗಟ್ಟಿಯಾಗಿ ನಗಿಸುತ್ತಿದ್ದರು (ಹುಟ್ಟಿಹ. ೨೨) ; ರಾಜಾಸ್ಥಾನದ ನಕಲಿಗಾರನ ಅನುಕರಣ ಮಾಡಿ ಮೃಗಗಳಂತೆ ಪಕ್ಷಿಗಳಂತೆ ಕೂಗುವದೂ ಬಾಲಕನ ಮತ್ತೊಂದು ವಿದ್ಯೆಯಾಯಿತು (ಕಥವಿ, II, ೩೨೩).

[ನಕಲಿ (<ನಕಲು) + –ಗಾರ (< –ಕಾರ)]

**ನಕಲು, ನಕಲಿ** (ಗು). ೧. ನೈಜವಲ್ಲದ ; ಅನುಕರಣೆಯ ; ಕೃತಕವಾದ : ಪಡುವಲದ ಗಾಳಿ ಆಡಿದರೆ ತೂಗುವುದಷ್ಟೆ—ಎಂಥ ಮಾರ್ದನಿ, ಎಂಥ ನಕಲು ಕುಣಿತ ! (ಚಿಟಲಂ. ೧೦೪-೦೮): (ನಾ). ೨. (ಬರವಣಿಗೆ, ಚಿತ್ರ ಮೊದಲಾದುವುಗಳ) ಮೂಲದ ಪ್ರತಿಕೃತಿ ; ಎರಡನೆಯ ಪ್ರತಿ ; ದ್ವಿಪ್ರತಿ : ಮಲಿಗೆಹೂವುಹನ್ನು ಮುಡಿಯುವದುಯಿಲವೆಂದು ಕಟಿಯುಲಿ ಕರಾರು ಬರದು ಕೊಟ್ಟು ಬಂದುಯಿರುತ್ತಾರೆ ಯಿದರ ನಕಲನ್ನು ನಮ್ಮ ಕುಲಸ್ತರಿಗೆ ಕಳಿಸಿರುತ್ತೇವೆ (ಎಕ. IX, ಕಾನಕಾ. ೯೦-೭೩ ; 1700) ; ದಾ ಸನದಿ ನಕಲಂನೂ ಶಿರಸ್ತೇದಾರರ ದಪ್ತರಕೆ ಬರಸಿಕೊಂಡು ಅಸಲ ಸನದಂನೂ ಹೆಚೆ ತಿಂಮಯನ ವಶಕೆ ಕೊಡುವದು (ಎಕ. VI, ಕೊಪ್ಪ. ೪೮-೫೧; 1811); ಆ ಪ್ರತಿಯು ನೇರವಾದ ನಕಲುಗಳೇ ಇವು . . . ಅಥವಾ ಆ ಪ್ರತಿಯ ನಕಲಿನ ಮರುನಕಲಿನ ಬಳಿನಕಲುಗಳೇ ಇವು ? (ಕನ್ನಸ. ೫೯) ; ಆ ಪ್ರಶ್ನೆಯ ಸಂಬಂಧದಲ್ಲಿ ತಾವು ಮಾಡಿರತಕ್ಕ ತೀರ್ಮಾನದ ಒಂದು ನಕಲಿನ ಸಹಿತವಾಗಿ ವಾಪಸು ಕಳುಹಿಸಿಕೊಡಬಹುದು (ಧಾಧಾನ. ೧೨೫) ; ಮೊದಲೆರಡು ಕಾಗದಗಳ ನಕಲನ್ನು ಒಳಗಿಡು (ರಂಗಕ. ೧೧೬). ೩. ಅನುಕರಣೆ ; ಅನುಕರಿಸಿದುದು : ಕಾವ್ಯವು ಲೋಕಸ್ಥಿತಿಯ ನಕಲಾಗಬೇಕಾಗಿಲ್ಲ (ಧಾರಮಿ. ೧೯೫) ; ಛಾಯಾವಾದೀ ಕವಿತೆಯನ್ನು ರವೀಂದ್ರಕಾವ್ಯದ ನಕಲು ಮಾತ್ರವೆಂದು ಭಾವಿಸುವ ಪ್ರವೃತ್ತಿ ಪ್ರಬಲವಾಗಿದ್ದ ಆ ಕಾಲದಲ್ಲಿ . . . ಆರೋಪವನ್ನು ಹೊರಿಸುತ್ತಿದ್ದರು (ಶ್ರೀಪ್ರಪ್ರ. ೧೯೦). **ನಕಲಿ** : ೧. ಅವಳು ಹೋದನಂತರ . . . ಸೇವಕರು ನಕಲಿ ಕೈಯೊಂದರಿಂದ ಕೈಪೆಟ್ಟಿಗೆಯನ್ನೇಕೆ ತೆರೆದಿರಬಾರದು ? (ಪುಸರು. ೧೦೪) ; ನಕಲಿ ಮಾತಲ್ಲ ಅಯ್ಯಯ್ಯೋ ತಂದೆಯೇ (ಕನ್ನಜಾ. ೨೮೫). ೪. ಅನುಕರಣೆಯಿಂದ ಕೂಡಿರುವುದು ; ಅಣಕ; ಹಾಸ್ಯ ; ತಮಾಷೆ; ವಿನೋದ : ನಕಲಿಗಳಲ್ಲಿ ಗ್ರಾಮದೋಷಗಳನ್ನು ಮುಖಂಡರ ರೀತಿನೀತಿಗಳನ್ನೂ ಅವರಾತಹ ಸಡಸುಡಿಗಳಿಂದ ಜನರ ಮುಂದಿಡುತ್ತಿದ್ದರು (ಹುಟ್ಟಿಹ. ೨೮). ೫. ಹಾಸ್ಯಗಾರ: ಮೆರವಣಿಗೆಯ ಮುಂದೆ ಅನೇಕ ನಕಲಿಗಳು ಹೋಗುತ್ತಿರುತ್ತಾರೆ (ಪ್ರಜಾಇ.II, ೩೧೮); ರಂಗಸ್ಥಳದಲ್ಲಿ ಬಗೆಬಗೆಯ ನಕಲಿಗಳು, ಯಕ್ಷಗಾನ . . . ದಾಸಯ್ಯಗಳ ವೇಷಗಳೆಲ್ಲಾ ಬಂದು ಜನರನ್ನು ವಿನೋದಗೊಳಿಸುತ್ತವೆ (ಹಳ್ಳಿಬಾ. ೮); ಲೋದ್ಸ್ನೀಗೆ ನಕಲಿಯವರ ಟೋಪಿ ಹಾಕಿದರೆ ಅದು ವಿಚಿತ್ರವಾಗಿ ಕಾಣುತ್ತದೆ (ಕಾರಿಮ. ೨೦೨).

ನಕಲಿಶ್ಯಾಮ = ಹಾಸ್ಯಗಾರ ; ಬಫೂನ್ : ಸರ್ಕಸ್ಸಿನಲ್ಲಿದ್ದ ನಕಲಿಶ್ಯಾಮು ಮಕ್ಕಳನ್ನೆಲ್ಲಾ ನಕ್ಕು ನಲಿಯುವಂತೆ ಮಾಡಿದನು (ರೂಢಿ).
ನಕಲು ತೆಗೆ = ಮೂಲದಂತೆ ಪ್ರತಿಯನ್ನು ತಯಾರಿಸು : ಹಿಂದೀಚಿತ್ರ

ಕಾರರು ಪ್ರಕೃತಿಯೊಳಗಣ ರೂಪನ್ನು ಯಾಂತ್ರಿಕರೀತಿಯಿಂದ ನಕಲು ತೆಗೆಯಲು ಯತ್ನಿಸಲಿಲ್ಲ (ಭಾಚಿತ್ರ. ೧೨). ನಕಲು ಮಾಡು, ನಕಲಿಮಾಡು= ೧. ಮೂಲದಂತೆ ಪ್ರತಿಮಾಡು; ಪ್ರತಿಕೃತಿಯನ್ನು ತೆಗೆ; ಪ್ರತಿಯನ್ನು ತಯಾರಿಸು : ಕೆಟ್ಟುಹೋದ ಚಿತ್ರವನ್ನು ನಕಲು ಮಾಡಿದಾಗ ಅದು ಕೆಟ್ಟದಾಗಿ ಬರೆದ ಚಿತ್ರದಂತೆಯೇ ಇರುವುದು ಸ್ವಾಭಾವಿಕ (ಭಾರದ. ೩೬೫); ವಸ್ತುವಿಗೆ ಸಮಾನವಾದ್ದರ ಸೃಜನೆಯೇ ಸಾದೃಶ್ಯ. ಕಂಡ ದೃಶ್ಯವನ್ನು ನಕಲು ಮಾಡುವುದಲ್ಲ (ಸೌಂದಸ. ೦೩೦). ೨. (ಇನ್ನೊಬ್ಬರಂತೆ) ಮಾತನಾಡಿ, ನಡೆದಾಡಿ ಅಣಕ ಮಾಡು,–ತಮಾಷೆ ಮಾಡು,–ಹಾಸ್ಯ ಮಾಡು : ತರುವಾಯ ಹದಿನೈದು ನಿಮಿಷಗಳ ಕಾಲ ಉಪಾಧ್ಯಾಯರೊಬ್ಬರು ನಕಲಿ ಮಾಡಿದರು (ರಂಗಳ. ೯೩).

[ ←ಪಾರ. ಅರ. ನಕ್ಲ್, ನಕ್ಲೀ; ಹಿಂ. ಮರಾ. ನಕಲ್, ನಕಲೀ ]

**ನಕಾರ** (ನಾ). ೧. 'ನ' ಎಂಬ ಅಕ್ಷರ : ಪ್ರಥಮಪಾದದಲ್ಲಿ ಓಂಕಾರಕ್ಕೆ ನಕಾರ ಬೀಜಾಕ್ಷರ ಆ ನಕಾರ ಉಭಯ ಕೂಡಿದ ಮಾತ್ರೆ ಮಕಾರ ಬೀಜಾಕ್ಷರ (ಸರ್ವವ. ೧೩೩-೬೬೬); ಅಸಮಾಸದೊಳಂ ದೊರೆವೆತ್ತ ಸಮಾಸದೊಳಂ ಣಕಾರದಿಂ ಪರದೊಳ್ ಸಂದಿಸಿದ ನಕಾರಂ ಣತ್ವಂ ಪ್ರಸಿದ್ಧಮುಚ್ಚರಿಸುವರ್ಗೆ ದುಷ್ಕರಮಾದುವುಂ (ಶಮುದ. ೧೩೮). ೨. ನಿರಾಕರಣವನ್ನು ಸೂಚಿಸುವಿಕೆ; ಆಗುವುದಿಲ್ಲವೆಂದು ಹೇಳುವಿಕೆ : ಪ್ರಸ್ತುತ ಪರಿಸ್ಥಿತಿಯಲ್ಲಿ ನಕಾರವಲ್ಲದೆ ಬೇರೊಂದು ಉತ್ತರವಿದ್ದಿಲ್ಲ (ದಾಸಹು. ೬೫); ಅವಳಿಂದ ನಿನಗೆ ನಕಾರ ಬರದು (ದೀಪಹ. II, ೧೬೯). [ ಸಂ.]

**ನಕಾರಾತ್ಮಕ** (ಗು). ನಿಷೇಧರೂಪವಾದ ; ನಿರಾಕೃತವಾದ ; ತಿರಸ್ಕೃತವಾದ : ಅದು ಈಗ ಸಂಪೂರ್ಣವಾಗಿಯೂ ಸಾರವನ್ನು ಕಳೆದುಕೊಂಡ ನಕಾರಾತ್ಮಕ ಬಾಳುವೆಯಾಗಿ ಉಳಿದಿತ್ತು (ದೂರಸಿ. ೩೯೧). [ ಸಂ. ]

**ನಕಾರಿಸು** (ಕ್ರಿ). ಬೇಡವೆನ್ನು ; ಒಪ್ಪದಿರು : ಇಂಥ ಮಸೂದೆಗೆ ಸಮ್ಮತಿಯನ್ನ ನಕಾರಿಸುವ ಹಕ್ಕು ಅರಸನಿಗೆ ಇದ್ದಾಗ್ಯೂ (ಮುಂಬಯಿ. ೬-೦೩೪).

[ ನಕಾರ + – ಇಸು₃ ]

**ನಕಾಶ** 'ನಕ್ಷೆ' ನೋ.

**ನಕಾಶತೆಗೆ** (ಕ್ರಿ). ೧. (ಚಿತ್ರ, ಭೂಪಟ ಮೊದಲಾದುವನ್ನು) ಚಿತ್ರಿಸು,–ರೇಖಿಸು,–ಬರೆ : (*). ೨. ಪ್ರತಿಮಾಡು ; ಪ್ರತಿಕೃತಿಯನ್ನು ತಯಾರಿಸು : (*). [ ನಕಾಶ (<ನಕ್ಷೆ) + ತೆಗೆ₁ ]

**ನಕಾಶೆ** 'ನಕ್ಷೆ' ನೋ.

**ನಕಾಸು** 'ನಕ್ಷೆ' ನೋ.

**ನಕಾಸುಕೆಲಸ** 'ನಕಾಸೆಕೆಲಸ' ನೋ.

**ನಕಾಸೆ** 'ನಕ್ಷೆ' ನೋ.

**ನಕಾಸೆಕೆಲಸ, ನಕಾಸುಕೆಲಸ** (ನಾ). ಕುಸುರಿಗೆಲಸ ; ಮರ, ಲೋಹ, ದಂತ ಮುಂತಾದುವುಗಳಲ್ಲಿ ಚಿತ್ರವನ್ನು ಖಿಡಿಸುವ ಕೆಲಸ; ಚಿತ್ತಾರ: ನಕಾಸೆಕೆಲಸದ ಅಲಂಕಾರದ ವಸ್ತುಗಳು ಈಗ ತುಂಬಾ ಬೆಲೆಬಾಳುತ್ತವೆ (ಜೂಧಿ). **ನಕಾಸುಕೆಲಸ** : ಕಾಶಿಯಿಂದ ಬಹು ಬೆಲೆಯುಳ್ಳ ನಕಾಸುಕೆಲಸ ಮಾಡಿದ ಮೇನೆಯೊಂದನ್ನು ತರಿಸಿದನು (ಘೂರಾತಿ. ೬೬).

[ ನಕಾಸೆ (<ನಕ್ಷೆ) + ಕೆಲಸ ]

**ನಕೀಬ** (ನಾ). ಸ್ತುತಿಪಾಠಕ ; ಹೊಗಳುಭಟ್ಟ ; ಚಾರಣ : ಚೋಪದಾರ ಮಹಲದಾರ ನಕೀಬ . . . ಇವರೇ ಮೊದಲಾದವರು ಅಲಾಹಿದ ಷಾಗಿರ್ದಪೇಷಾ ಕಚೇರಿಗೆ ಸೇರಿದವರು (ಚಾಮವಂ. ೩೨೬).

[ ← ಅರ. ಹಿಂ. ನಕೀಬ್ ]

**ನಕುಲ₁, ನಕುಳ** (ನಾ). ೧. ಕೀರ ; ಮುಂಗುಸಿ ; ಮುಂಗುರಿ : "ವಿಷಜದಂ ಬಭ್ರು ನಕುಲಂ ಮುಂಗುರಿಯೆನಿಕ್ಕುಂ" (ಮಂಗರಾ. ೪೯-೧೪) ; ಇಂತೀ ಶಾರ್ದೂಲ ಮರಾಮಗೋಲಾಂಗೂಲ ನಕುಲಂಗಳ್ ನಾಲ್ಕುಂ ಭವದ್ಧ್ಯಾನಾನುಮೋದದಿಂ ಜಾತಿಸ್ಮರಂಗಳಾಗಿ ಭೋಗಭೂಮಿಗೆ ಬದ್ಧಾಯುಷ್ಯಂಗಳಾದುವು (ಆದಿಪು. ೫-೩೦ವ); ಅಹಿನಕುಲಂಗಳ್ ಹರಿಣಚಮೂರಂಗಳ್ ಶಾಂತರೂಪದಿಂದಿರ್ದುವಜಿತನಾಥನ ಕೆಲದೊಳ್ (ಅಜಿಪು. ೬-೬) ; ಪಾವಿನ ಬಾಯಿಂ ಬರ್ದುಂಕಿದ ತತ್ತ್ರಿಗಳಂ ನಕುಲಂಗಳ್ ತಿಂದುವು (ಪಂಪಶಂ. ೧೭೪-೧೫) ; ಉಳಿದ ಬೆಳೆಯಂ ನಕುಲಹೆಗ್ಗಣಂಗಳು . . . ತಿಂದು ತಳಪಟಂ ಮಾಡಿ ನಾಡೆಲ್ಲಮಂ ಗೋಳಿಡಿಸುತಿರ್ದುವು (ಹಪಳಾ. ೩-೬೩) : ಗಿರಿಜೆಸಹಿತಾ ಶಿವಂ ಪಲವು ರೂಪಂ ತಳೆದು ಕರಿ ಶರಭ . . . ಉರಗ ನಕುಲಂ ಮೊಸಳೆ ಮತ್ಸ್ಯ . . ಚಕ್ರವಾಕರೂಪಙವರ ಚರಣಾಂಬುಜಕ್ಕೆ ಶರಣು (ಲಶಿಚಂ. ೦೬-೫) ; ವಿವೇಕವಿಲ್ಲದೆ ವನಿತೆ ನಕುಲನ ಕೊಂದ ಗಾದೆಯ ಹನಮ ಮಾಡಿದನೆನಿಸಬಾರದು (ಕಾಶಿಂಖ. ೧೦-೯೫); ಶರಭನಿಭಾರಿ...ಪೂತಿಮೆಕ್ಕು ನಕುಲಂ ಮರಮಾವುಗಳೆಂಬಿವಾಗಳುಂ ಕರಮೆಸೆದಿರ್ಪನು ಮೇಖೆದುದಾ ವಿಪಿನು ವಿಪಿನದ್ಧಕಂದರಂ (ಶಬಶಂ. ೩-೩೪). ೨. ಪಂಚಪಾಂಡವರಲ್ಲಿ ನಾಲ್ಕನೆಯವನು ; ಮಾದ್ರೀಸುತರಲ್ಲಿ ಒಬ್ಬ : "ನರಬಾಂಧವನೆನಲ್ಕೆ ನಕುಲನೆನಿಕ್ಕು" (ಮಂಗರಾ. ೬೮-೩) ; ನಕುಲಂ ಕುಂತಶಸ್ತ್ರದೊಳತಿಪ್ರವೀಣನುಮಾಗಿ (ಪಂಪಭಾ. ೨-೩೬ವ); ಈತನೇ ಧರ್ಮಜನುಯಿರಡನೆಯಾತ ಭೀಮನು ಬಳಿಕ ಮೂಱನೆಯಾತನರ್ಜುನ ನಕುಲನೈದನೆಯಾತ ಸಹದೇವ (ಕುಮ್ವ್ಯಾಆ. ೪-೬೦) ; ಗುಣದೊಳಾಯೌವನಾಶ್ವಕ್ಷಿತಿಪನೆಱಗಿ . . . ನರನ ಸದ್ಗುಣವನುಱೆ ಕೊಂಡಾಡಿ ಬಳಿಕ ಸಹದೇವನಕುಲಾದ್ಯರಂ ಮನ್ನಿಸಿದನು (ಜೈಮಿಭಾ. ೫-೧೮). ೧, ೨ : ಮತ್ತಮಾ ಮಹಾವನಂ . . . ಪಾಂಡವಪ್ರಕರದಂತಾತ್ತಭೀಮನಕುಲ ದ್ರುಪದಮುಂ ಅರ್ಜುನೋರ್ಜಿತಮುಂ . . . ಸ್ಥಾಣುನಿವಸನಮಾಗಿಯುಂ ಅಪರ್ಣಾನ್ವಿತಮುಲ್ತು (ಚಂದ್ರಪು. ೫-೩೨ವ) ; ಸಹದೇವನಾಗಿ ಸಮುದಿತ ನಕುಲನಾಗಿ . . . ಹರಿಯೊಡನೆ ಬಹ ಪಾರ್ಥನಂ ಕರೆದು ಮೂದಲಿಪ ತೆಱದಿಂದೆ ವಿಂಧ್ಯಾದ್ರಿ ಮುಂದೆಸೆದುದು (ಜೈಮಿಭಾ.೧೦-೨); ಮತ್ತಮಾ ವನಂ . . . ಯುಧಿಷ್ಠಿರಸದ್ಮದಂತೆ ವೃಕೋದರನಕುಲಾಧಿಷ್ಠಿತಮುಂ . . . ಎನಿಸಿ (ರಾಜಶೇ. ೫-೬೪ವ). ೩. ಒಂದು ಬಗೆಯ ವೀಣೆ; ಎರಡು ತಂತಿಗಳುಳ್ಳ ವೀಣೆ: ನೂರುತಂತಿಗಳನ್ನು ಮೊಟ್ಟಮೊದಲಾಗಿ ಹೊಂದಿದ್ದ ವೀಣೆ, ತಂತಿಗಳ ಸಂಖ್ಯೆಯಲ್ಲಿ ಇಳಿಮರಿ ಹೊಂದುತ್ತಾ ಬಂದು, ಎರಡು ತಂತಿಗಳ 'ನಕುಲ' . . . ಒಂಭತ್ತು ತಂತಿಗಳ 'ವಿಪಂಚೀ' ಎಂಬ ಹೆಸರುಗಳಿಂದ ತಂತಿಗಳ ಸಂಖ್ಯೆಯಲ್ಲಿ ಏರುಪೇರು ತೋರುತ್ತದೆ (ಸಂಗೀಶಂ. ೩೧೧). **ನಕುಳ** : ೧. ತದ್ವೃತ್ತಾಂತಮೆಲ್ಲಮನಱಿದು ತತ್ಪುರಾಧೀಶಂ ದಂಡಿಸೆ ಗತಜೀವಿತನಾಗಿ ಬಂದಿಲ್ಲಿ ನಕುಳನಾದಂ (ಆದಿಪು. ೫-೩೦ವ) ; ಪಸುರ್ವಣ್ ಕರಿದಪ್ಪ ಮಣ್ ಕರಂ ಕಡುವಿಳಿದಪ್ಪ ಮಣ್ ನಕುಳಮೆಂಬಿವನುಕ್ರಮದಿಂದೆ ತೋಱುಗುಂ (ಲೋಕೋಪ. ೫-೨೫). [ ಸಂ. ]

**ನಕುಲ₂** 'ನಗಲು' ನೋ.

**ನಕುಲಾರಿ** (ನಾ). ಮುಂಗುಸಿಯ ಶತ್ರು ; ಹಾವು : "ನಕುಲಾರಿ – ಮುಂಗಲಿಯ ವೈರಿ. ಹಾವು" (ಗಂಗಾಮ. ೧೬೬). [ ನಕುಲ₁ + ಅರಿ₆ ]

**ನಕುಲೇಷ್ಟೆ** (ನಾ). (ಮುಂಗುಸಿಯು ಸೇವಿಸುವುದೆಂದು ನಂಬಲಾದ) ಒಂದು ಬಗೆಯ ಸಸ್ಯ; ಗಂಧನಾಕುಲಿ; ಭುಜಂಗಾಕ್ಷಿ: "ನಾಕುಲೀ, . . . ಗಂಧನಾಕುಲೀ, ನಕುಲೇಷ್ಟಾ, ಭುಜಂಗಾಕ್ಷೀ, ಛತ್ರಾಕೀ, ಸುವಹಾ – ಎ ಸರ್ಪಾಕ್ಷಿಗಿಡದ ಹೆಸರುಗಳು" (ಸಿದ್ಧೌಂತಿ. ೧೨೧). [ ಸಂ. ನಕುಲೇಷ್ಟಾ ]

**ನಕುಳ** 'ನಕುಲ₁' ನೋ

**ನಕ್ಕಬಡಿ, ನಕ್ಕಬಳಿ** (ಕ್ರಿ). ಬಹಳ ಸಂಕಟಪಡು ; ದುಃಖಪಡು : ಪಾಪ, ಅವರು ಮಕ್ಕಳಿಲ್ಲದೆ ನಕ್ಕಬಡೀತಿದಾರೆ (ಮುಳಿಮ. ೩೧). **ನಕ್ಕಬಳಿ** : ನನ್ನ ಸೊಸೆ ಗೋಳೋ ಹೇಳಬಾರದು . . . ಅಂತರಾಳದಲ್ಲಿ ಸಿಕ್ಕಿ ನಕ್ಕಬಳೀತಾ ಅದೆ (ಮುಳಿಮ. ೩೬೪). [ ? ]

ನಕ್ಕಬಳಿ 'ನಕ್ಕಬಡಿ' ನೋ.

ನಕ್ಕರವದ್ದಿ (ನಾ) (?): ತುಱುಗೆಮೆ ನೀಳ್ದ ಪುರ್ವು ನಿಡುಗಣ್ ಪೊಱೆಯಲ್ಲದೆ ಬಟ್ಟಿತಪ್ಪ ಬಾಯ್ದೆಱೆ ತನುರೇಖೆಗೊಂಡ ಕೊರಲೊಡ್ಡಿದ ಪೆರ್ಮೊಲೆ ತೆಳ್ವಸಿಱ್ ಕರಂ ನೆಱೆದ ನಿತಂಬದಿಂಬುವಡೆದೊಳ್ತೊಡೆ ನಕ್ಕರವದ್ದಿ (?)[ಪಾಠಾಂ. ನಕ್ಕರವದ್ದಿ, ನೆಕ್ಕೊರೆವೊದ್ದಿ]ತಾನೆ ಪೋ ಕಿಱುದೊಡೆಯೆಂದು ಧಾತ್ರಿ ಪೊಗಟ್ಟುಂ ಪೊಗಟ್ವನ್ನರೆ ಕುಂತಿ ಮಾದ್ರಿಗಳ್ (ಪಂಪಭಾ. ೧-೧೦೮). 'ನೆಕ್ಕೊರವಟ್ಟೆ' ಪರಾ. [ ? ]

ನಕ್ಕರೀಗಿಡ (ನಾ). ಒಂದು ಬಗೆಯ ಗಿಡ: ನಾಗರೀಗಿಡ, ನಕ್ಕರೀಗಿಡ, ಕಂದರಕ್ಕರೆ (ವೃಕ್ಷಗಿ. ೭೯-೧೬೧೭). [ ? + ಗಿಡ (<ಗಿಡು) ]

ನಕ್ಕಲು$_1$ (ನಾ). ಮೊರಸು ಒಕ್ಕಲು ಜನಾಂಗದಲ್ಲಿ ಒಂದು ಪಂಗಡ: (ಎಸಿಮ್ಸ್. XV, ೪೫). [ ? ]

ನಕ್ಕಲು$_2$ (ನಾ). ರತ್ನಕ್ಕೆ ದೋಷವನ್ನುಂಟು ಮಾಡುವ ಒಂದು ಬಗೆಯ ಬಣ್ಣ (?): ಕರ್ಪುರು ಕೋಮಲಂ ಮಂದ ದೀಪಂ ಹೊಗೆಯುಂ ನಕ್ಕಲಿನ ಬಣ್ಣಮದು ಮೂರು ರತ್ನಂಗಳೊಳು ಪೊಕ್ಕು ಮಿಶ್ರಿತವಾಗಿ ದೋಷವಮ್ಮಸಗಿ ತಾ ಪಾರೊಳ್ಪೆರೆಬೇರೆ (ರತ್ನಶಾ. ೯-೫). [ ? ]

ನಕ್ಕಿ$_1$ (ನಾ). ೧. ಬಟ್ಟೆ, ಕಸೂತಿ, ಹಾರ ಮೊದಲಾದಂವುಗಳಿಗೆ ಸೇರಿಸುವ ಹೊಳೆಯುವ ಬಣ್ಣಬಣ್ಣದ ಬಿಲ್ಲೆ: ಆ ಮಗುವಿನ ಕೆಂಪು ಲಂಗಕ್ಕೆ ನಕ್ಕಿಗಳನ್ನು ಇಟ್ಟು ಕಸೂತಿ ಮಾಡಿರುವುದು ತುಂಬಾ ಚೆನ್ನಾಗಿದೆ (ರೂಢಿ). 'ನಕ್ಕಿಕೆಲಸ' ಪರಾ. ೨. ಥಳಥಳಿಸಿ ಹೊಳೆಯುವ ಒಂದು ಬಗೆಯ ಪುಡಿ; ಚಮಕಿ: ರಂಗೋಲಿಯ ಮೇಲೆ ನಕ್ಕಿ ಉದುರಿಸಿದರೆ ಚೆನ್ನಾಗಿ ಕಾಣುತ್ತದೆ (ರೂಢಿ). [←ಅರ. ನಕ್ಕೀ ; ಮರಾ. ನಕ್ಕೀ, ನಕ್ಷೀ ]

ನಕ್ಕಿ$_2$ (ನಾ). ಖಾತರಿ; ಖಂಡಿತ: ಪ್ರಸಿಡೆಂಟ ಗಾಯಕವಾಡರ ಮನೆಗೆ ಹೋಗಿ ಕೆಲಸ ನಕ್ಕಿ ಮಾಡಿಸಿಕೊಂಡು ಬಂದಿದ್ದಳು (ಕೃಕಿಲ. ೬೨).
[ ← ಅರ. ನಕೀ ; ಮರಾ. ನಕ್ಕೀ ; ನಕೀ ]

ನಕ್ಕಿ$_3$ (ನಾ). [ಸಂಗೀತ] ತಂತೀವಾದ್ಯಗಳನ್ನು ಮೀಟುವಾಗ ಬೆರಳಿನ ತುದಿಗೆ ಹಾಕಿಕೊಳ್ಳುವ, ಉಂಗುರದಂತಹ ಸಾಧನ; ಕೃತಕವಾದ ಉಗುರು: ರಾಗಕ್ಕೆ ತಕ್ಕಂತೆ ಮೆಟ್ಟಲುಗಳನ್ನು ವಾದ್ಯವಲ್ಲಿ ಅಳವಡಿಸಿಕೊಳ್ಳುವ ಸೌಲಭ್ಯವಿದ್ದು, ನಕ್ಕಿಗಳ (Plectra) ಉಪಯೋಗವೂ ಇತ್ತೆಂದು ನಿಜಗುಣರ ಈ ರಚನೆಯಿಂದ ವ್ಯಕ್ತವಾಗುತ್ತದೆ (ಸಂಗೀಶಂ. ೩೧೪).
[ ←ಮರಾ. ನಖೀ./ಸಂ. ನಖ ]

ನಕ್ಕಿಕುಂಟೆ (ನಾ). ಒಂದು ಕೊಳದ ಹೆಸರು: ಬಾಲದಿನ್ನೆ ಬೆಳೆದುನೆಪಿ ಪುಣುಸೆಯಿನ್ನೆ ನಕ್ಕಿಕುಣ್ಟೆಯುಂದೆ ಒ × × ಈಶಾನ್ಯದ ಕಿಸುವಾಲಿಯಿನ್ನೆ ನಿನ್ನ ಕಲ್ಲಿನ್ದೆ (ಮ್ಯಅರಿ. ೧೯೧೪, ೦೩-೭೯; ೩೦೬). [ ನಕ್ಕಿ ? + ಕುಂಟೆ$_2$ ]

ನಕ್ಕಿಕೆಲಸ (ನಾ). ಹೊಳೆಯುವ ಬಿಲ್ಲೆಗಳಿಂದ ಮಾಡಿದ ಚಿತ್ತಾರದ ಕೆಲಸ: ನಕ್ಕಿಕೆಲಸದ ಚಪ್ಪಲಿಯ ಮೆಟ್ಟಿ ಜರತಾರಿ ಚಿಮ್ಮಿಲ್ಲ (ನಡಿದಾ. I, ೩೬೭). [ ನಕ್ಕಿ$_1$ + ಕೆಲಸ ]

ನಕ್ಕಿಸು, ನೆಕ್ಕಿಸು (ಕ್ರಿ). ನಾಲಗೆಯಿಂದ ಸವರುವಂತೆ ಮಾಡು. – ನೆಕ್ಕುವಂತೆ ಮಾಡು, – ನೇವರಿಸುವಂತೆ ಮಾಡು: ಪೆಣ್ಗೋಡಗ . . . ತಿನ್ನುವ ಪಣ್ಣನಣುಗಂಗೆ ಕನಿಕರದೆ ಕೊಟ್ಟು ಗಂಡನಿಗೆ ತನ್ನಯ ಹಸ್ತವನು ನಕ್ಕಿಸಿದುದು (ಪುಹಾಂತೀ. ೨೨-೩೫). ನೆಕ್ಕಿಸು: ವಜ್ರಕಂಟಕಾನ್ವಿತನಪ್ಪ ಜಿಹ್ವೆಯು ಗೋವಂ ಪುಟ್ಟಿಸಿಯಾ ಗೋವಿಂ ನೆಕ್ಕಿಸಿ ಕೊಲಲ್ ಆ ಶಿರಸ್ಸಿನಸ್ಥಿಯೊಳ್ ಅರ್ಧಂ ಶಕ್ರಂಗೆ ವಜ್ರಾಯುಧಮಾಯ್ತು (ಧರ್ಮಾಪ. ೪-೧೪ ವ).
[ ನಕ್ಕು$_1$ + - ಇಸು$_3$ ]

ನಕ್ಕಿಱಿ (ಕ್ರಿ). ದನಗಳನ್ನು ಓಡಿಸಲು ಬಾಯಲ್ಲಿ ಶಬ್ದ ಮಾಡು: ಕೋಬಾಯೆಂದಲ್ಲಿ ಆತ್ಮಭೇದ ಉಂಬೆಯೆಂದಲ್ಲಿ ಅಱಿವಿನ ಭೇದ ಹೊಲದೋ ಎಂದು ನಕ್ಕಿಱಿವಲ್ಲಿ ಚಿದಾತ್ಮನ ಭೇದ ಇಂತೀ ಗುಣದ ಪಶು ಅಸುವಿನ ಬರೆಯ ಕಾಯೊಡ್ಡಿಸಬೇಕು ಗೋಪತಿನಾಥ ವಿಶ್ವೇಶ್ವರಲಿಂಗಕ್ಕೆ (ತುಱುಗಾ. ೫-೧೪). [ ನಕ್ಕು$_1$ + ಇಱಿ$_1$ ]

ನಕ್ಕು$_1$, ನೆಕ್ಕು$_1$ (ಕ್ರಿ). ೧. (ರಸವನ್ನು ಹೀರಲು) ನಾಲಗೆಯಿಂದ ಉಜ್ಜು, –ತೀಡು. –ಸವರು: "ನಕ್ಕು (ನೆಕ್ಕು)–ಲೇಹನೇ" (ಶಮದ೨); ನರಭೋಗವೆಂಬೀ ಪನಿವುಲ್ಲಂ ನಕ್ಕಿ ತೃಷ್ಣೆ ಪೇಱ್ ಪೋದಪುದೇ (ಆದಿಪು. ೯-೫೭); ಅಂಜನಶಿಲಾವೆ ದಿಕೆಯೊಳ್ ನೆತ್ತರಿಂ ಪೊರೆದ ಕಯ್ಗಳಿಂ ಜವನಪ್ಪಳಿಸಿದಂತಿರ್ದ ರಕ್ತಚಂದನಚರ್ಚೆಗಳಂ ನೆತ್ತರೆ ಗೆತ್ತು ನಕ್ಕುವ ಬಳ್ಳುಗಳುಮಂ . . . ಅವಲೋಕಿಸುತ್ತುಂ ಪೋಗೆವೋಗೆ (ಕಾದಂಉ. ೨೬೯); ಸಿಂಧುರ[ದ] ಸಕಳಂಗಳಂ ತುರಗರಾಜಿ ನಕ್ಕಿದವು ತಗುಳೆ ಮೂರಿವಿಡುತ್ತುಂ (ಪರ್ಮಾ. ೮-೯೫): ಖಡ್ಗಧಾರೆಯ ಜೇನೆಯ್ದುಂ ನಕ್ಕುವಂತೆ ಸಂಸಾರಸುಖಕ್ಕಾನಳಿವೆ (ಪಂರಾಮಾ. ೨-೧೮); ಕಂಬಸಿಯನೊಗುತಾ ಮಱಿಯ ಮಯ್ಯಂಬನದು ನಕ್ಕುತ್ತ ಮೋಹದಿ ಸಂಬಿಸುತ್ತಸುವೀದುದಯ್ಯೋ ವಿಮೋಹ ಕಷ್ಟವಲಾ (ಸಾಳ್ವಭಾ. ೫-೨೮); ಅರುಣೋದಯದರುಣದ್ಯುತಿ ಗಿಂಕಟಕದ ಪಳಿಕಿನಲ್ಲಿ ಬಿಂಬಿಸೆ ಕಾಣುತ್ತರ ಣಜಲಂಗತ್ತಲ್ಲಿಯ ಹರಿಣಾರಿಯ ಮಱಿಗಳೆಯ್ದೆ ನಕ್ಕುತ್ತಿರ್ಕುಂ (ಕಬಿಸಂ. ೨-೩೦). ನೆಕ್ಕು$_1$: ೧. ಬೆಲ್ಲದ ಮೋಹಕ್ಕೆ ಸುರಗಿಯ ಬಾಯ ಧಾರೆಯುಂ ನೆಕ್ಕುವಂತೆ (ಧರ್ಮಾಮೃ. ೬-೧೭೫); ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆನ್ನ ಬಾಳುವೆ (ಬಸವ. ೩೫); ಕೆಳೆಯುಂ ಪಗೆಯುಂ ದುರ್ಜನನೊಳನುತ್ತಮಂ ನೋಡೆ ದಲ್ ಶುನಕಂ ಕೂರ್ತು ಮುಳಿದುಮಾಪ ಕಾರವಂ ಮೊಕ್ಕಳವಾಗಿಱೆ ನೆಕ್ಕಿ ಕರ್ಚಿ ಮಾಡದುದುಂಟೇ (ಪಾರ್ಶ್ವಪು. ೪-೪೭); ಬೆಳೆಮುಂಬಿನ ಗಾಯದ ಬಾಯ್ದೆಱೆಯಿಂದ ಬೀಳುತ ಗೋಣ್ಮುರಿಗೊಂಡು ಬೀಳುಗಳವ ಹಸುಳೆಯ ನೆಕ್ಕುವ ಹುಲ್ಲೆಯೋಳಿಯುಳಿದಪತಱೊಳಗೆ (ಜೇಮಿಸಂ. ೨-೫೪); ಆ ಉರಿನಾಲಗೆ ನನ್ನ ಬಹಿರಂಗವ ನೆಕ್ಕಿ ಹೋಯಿತು (ಅಂತರಾ. ೭); ನೆಕ್ಕೋ ನಾಯಿಗೆ ಲಿಂಗವೇನು ಪಾಣಿಪೀಠವೇನು? (ಗಾದೆ). ೨. (ಆಲಂ) ಸ್ಪರ್ಶಿಸು; ಮುಟ್ಟು; ಆವರಿಸು: ಮೂರ್ತಿಸಾಗರದ ತೆರೆಗಳಲ್ಲಿ ಕಲ್ಲೋಲಮಾಲೆಯಾಗಿ ನೆಕ್ಕಿ ಬರುತಿಹುದು ನಯನತೇಜವೇ ರೂಪಜ್ವಾಲೆಯಾಗಿ (ಅರಳು. ೪೬೩-೨೦); ನಮ್ಮೊಳವ ನೆಕ್ಕುಗುಂ ಸಲವು (ಕಾಬೂರ. ೭೭-೪೧). ೩. ನುಂಗು; ನಾಶಮಾಡು; ಕಬಳಿಸು: ಸಾವಿರ ಹೆಡೆಯ ಅಜಗರ ಇಡೀ ಪೌರಾಣಿಕವಂಶವನ್ನೇ ನೆಕ್ಕಿದುದನ್ನು ನಾನು ನೋಡಿದ್ದೇನೆ (ಬಾಣಲ. ೩೮೫).
[ ದೇ.೫ ತಮಿ. ಮಲ. ತುಳು. ನಕ್ಕು; ಕೊಡ. ನಕ್ಕ್; ತೆಲು. ನಾಕು; ನಾಯ್ಕ. ಗದಬ. ನಾಕ್; ಪರ್ಜಿ. ನೇಕ್ ]

ನಕ್ಕು$_2$ 'ನಗ್ಗು$_1$' ಪರಾ.

ನಕ್ಕುಳ (ನಾ). (ಕರಾ) ಎರೆಹುಳು; ಮಣ್ಣುಹುಳು.
[ ←ತುಳು. ನಕ್ಕು, ನಕ್ಕುರು ]

ನಕ್ಕೆ (ನಾ). ನರಿ. 'ನಕ್ಕೆಚಿಕ್ಕನಾಕು' ಪರಾ.
[ ದೇ.॥ ತಮಿ. ನಕ್ಕನ್; ತೆಲು. ನಕ್ಕ ]

ನಕ್ಕೆಚಿಕ್ಕನಾಕು (ನಾ). ಒಂದು ಬಗೆಯ ಸಸ್ಯ; ನರಿಹೊನ್ನೇಗಿಡ: "ಪೃಶ್ನಿಪರ್ಣೀ, ಪೃಥಕ್ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಿಕಾ... ಕೋಲಪೊನ್ನ ಎಂಬುವದು, ನರಿಹೊನ್ನೇಗಿಡ, ನಕ್ಕೆಚಿಕ್ಕನಾಕು" (ಸಿದ್ಧಾಂಕಿ. ೧೧೭)
[ ನಕ್ಕೆ + ಚಿಕ್ಕನಾಕು ? ]

ನಕ್ತ (ನಾ). ೧. ರಾತ್ರಿ; ಇರುಳು; ನಿಶೆ: "ತಮಿಸ್ರಾ . . . ನಕ್ತಂ . . . ಶ್ಯಾಮಾ, ರಾತ್ರಿಃ – ಈ ೧೯ ಇರುಳಿನ ಪೆಸರ್" (ಹಲಾಯು. ೧೮-೦೦೭); "ಇರುಳು ತಮಿ ಯಾಮಿನೀವಸತಿರ್ನಿಶಾ ವಿಭಾವರಿ ತಮಸ್ವಿನಿ ವಾಸತೇಯಿ ನಕ್ತಮುಷೆ ಶರ್ವರಿ ದೋಷೆ ರಜನಿ ಕ್ಷಪೆ ಕ್ಷಣದೆ ಶ್ಯಾಮೆಯೆನೆ ರಾತ್ರಿಗಭಿಧಾನಮಕ್ಕುಂ"(ಮಂಗರಾ.೨೦-೬); ಕೊಂಕಿಸಿ ನಕ್ತಸಮಯದಿ ನೋಡಿ ಮಾಕನ್ನಫಳವ ಹಳಿವ ಭುಕ್ತಿಗೆಯ್ಯದೆ ದೂರದಿಂ ರಸಾನ್ನವ ಹಳವ (ಲಿಂಗಪು. ೧-೨೭);

ಬೋಧಿಸಿದಡವನೀಶಗಹೂದದು ವಿಷಯಾಯವಾದುದಾಯಿತಿನ್ನೇನು ನಕ್ತ ಬರಲಾಗ ಸುಮುಕ್ತನಂಗೋಳಸದಿರಲು (ಜಿನಮು. ೧೨-೩). 'ನಕ್ತಜೀವ' ಪರಾ. ೨. = ನಕ್ತಭೋಜನ. [ ಸಂ. ]

**ನಕ್ತಂಚರ** (ನಾ). ೧. ರಾತ್ರಿಯಲ್ಲಿ ಸಂಚರಿಸುವಂಥದು; ನಿಶಾಚರ. ೨. ಕಳ್ಳ; ಚೋರ. ೩. ಗೂಬೆ. ೪. ಬೆಕ್ಕು. ೫. ಭೂತ; ಪಿಶಾಚಿ. ೬. ರಾಕ್ಷಸ: ಚತುಸ್ತ್ರಿಂಶತ್ಸಹಸ್ರನಕ್ತಂಚರಪರಿವೃತ ಹಳಂಭೂಷಮು ಸಲಾಯುಧ ಕಾಳನೀಳವಿದ್ಯುನ್ಮಾಲ್ಯಾದಿಗಳುಂ ಬಂದು ಕೂಡೆ (ಪಂಪಭಾ. ೧೦-೨೭ ವ); ಒಡಲೊಳಗುಡಿದ ಸರಲ್ ಪೊಣಮಡುವುದಯಾಂತ ಸನ್ನಿಧಾನದೊಳಂತಂತೊಡಲಿಂಪೋದುದು ಮುನಿಸಿನ ಪೌರ್ವ ನಕ್ತಂಚರಂಗೆ ಶಿಶುಸನ್ನಿಧಿಯೊಳ್ (ಪಂಪರಾ. ೪-೮೯); ನಕ್ತಂಚರನ ಮಸ್ತಕಮಂ ಮುಷ್ಟಿಯಿಂ ಕಿವಿದು (ಜಗವಿ. ೪-೫೬ವ); ನಕ್ತಂಚರರ ರುಧಿರಪಾನಕ್ಕೆ ಬೀಭತ್ಸ . . . ಚಕೋರ ವ್ರಜಕೆ ಶಾಂತಿದಸ ಪ್ರವಾಹಪೂರವೆನೆ ನವರಸೋದಯಮಯುವೆನಿಸಿದ ಒವುಕರನೆಸೆದಿರುತಿರ್ದನು (ಹದಿಶಾ. ೩-೮೫). [ ಸಂ. ] ೭. ನೈಋತಿ: "ಯಾತು . . . ನಕ್ತಂಚರಃ, ನೈಋತಃ, ಕೋಣಪಃ, ಕೈಕಸೇಯಃ – ಈ ೯ ನೈಋತಿಯ ಪೆಸರ್" (ಅಭಿಧಾ. ೧೩-೭೩);

**ನಕ್ತಂಚರಿ** (ನಾ). ರಾತ್ರಿಯಲ್ಲಿ ಸಂಚರಿಸುವವಳು; ರಾಕ್ಷಸಿ: ನಿಜರಕ್ತಂ ರಿಪುಕುಕ್ಷಿಯೊಳ್ನಿಜಶಿರಂ ನಕ್ತಂಚರೀಹಸ್ತದೊಳ್ (ಗದಾಯು. ೫-೫); ನವರಕ್ತಾಸಕ್ತನಕ್ತಂಚರೀಮುಖದೊಳ್ ತೂಂತುವು ದಾಂತರಂ ದಶಮುಖೋತ್ಪಾತಾಸಿಧಾರಾಪುಂಖಂ (ಪಂಪರಾಮಾ. ೧೦-೨೨೩).
[ ಸಂ. ನಕ್ತಂಚರೀ ]

**ನಕ್ತಕ** (ನಾ). ಕೊಳಕಾದ ಅಥವಾ ಹರಿದ ಬಟ್ಟೆ: "ನಕ್ತಕಃ, ಕರ್ಪಟಃ – ೨ ಹರುಕುಬಟ್ಟೆ, ಚಿಂದಿಬಟ್ಟೆ, ಇದು ಕೊಳೆಯುಳ್ಳ ಬಟ್ಟೆಗೂ ಹೆಸರು" (ಸಿದ್ಧಾಂತ. ೩೦೩). [ ಸಂ. ]

**ನಕ್ತಕರಜೂಟ** (ನಾ). ತಲೆಯಲ್ಲಿ ಚಂದ್ರನನ್ನು ಧರಿಸಿದವನು; ಶಿವ: ವ್ಯಕ್ತದಿಂ ದವಳಾರವಂ ಪಾಡಿ ಸಂತತಂ ನಕ್ತಕರಜೂಟಶರಣರ ಸೇವೆಯಂ ಮಾಡಿ (ಪ್ರಭುಪು. ೯-೧೩೩). P ಇದು ಛಂದಸ್ಸಿಗೋಸ್ಕರ ಮಾಡಿಕೊಂಡ ರೂಪ. [ <ಸಂ. ನಕ್ತಂಕರಜೂಟ ]

**ನಕ್ತಜೀವ** (ನಾ). = ನಕ್ತಂಚರ ೬: ಕುಲದಿಂ ಪಾತ್ರಮಲ್ತಿವರ್ ಸ್ವಗುಣದಿಂ ರಾಕ್ಷಸರ್ ಭಯಕ್ಕಲ್ಲದೆ ನಯಕೆ ಸೋಲರೀ ನಕ್ತಜೀವರ್ (ಶ್ರೀರಾಮಾ. ೬೦೫-೧೪೬). [ ನಕ್ತ + ಜೀವ ]

**ನಕ್ತಭೋಜನ** (ನಾ). ಹಗಲೆಲ್ಲ ಉಪವಾಸವಿದ್ದು, ರಾತ್ರಿ ಪೂಜೆ ಮಾಡಿ ಪ್ರಸಾದವನ್ನು ಸ್ವೀಕರಿಸುವ ಒಂದು ವ್ರತ; ನಕ್ತವ್ರತ: ಪ್ರತಿ ಸೋಮವಾರವೂ ನಕ್ತಭೋಜನ, ಪಕ್ಷಪ್ರದೋಷ . . . ಈ ಪ್ರಕಾರ ನಡೆಸುತ್ತಿದ್ದನು (ಚಿತ್ರಪ. ೫೮). [ ನಕ್ತ + ಭೋಜನ ]

**ನಕ್ತಮಾಲ** (ನಾ). ಒಂದು ಬಗೆಯ ಮರ; ಹುಲಿಗಿಲು; ಹೊಂಗೆ: "ಚಿರಿಬಿಲ್ವಃ, ನಕ್ತಮಾಲಃ, ಕರಜಃ, ಕರಂಜಃ – ೪ ಹುಲಿಗಿಲಮರದ ಹೆಸರು, ಇದಕ್ಕೆ ಹೊಂಗೇಮರವೆಂದು ಕೆಲವರು ಅರ್ಥ ಹೇಳುವರು" (ಸಿದ್ಧಾಂತ. ೧೦೭). [ ಸಂ. ]

**ನಕ್ತವ್ರತ** (ನಾ). = ನಕ್ತಭೋಜನ: ಯಾರು ಈ ತೀರ್ಥದಲ್ಲಿ ಸ್ನಾನವಂ ಮಾಡಿ ಉಪವಾಸವನಾದರೂ ನಕ್ತವ್ರತವನಾದರೂ ಭಕ್ತಿವ್ರತವನಾದರೂ ಮಾಡುವರೊ ಅವರೆಲ್ಲರು ಯೆನ್ನಲಿ ಸಾಯುಜ್ಯಮುಕ್ತಿಯನೈದುವರು (ಗರುಡ. ೭-೪೪-೨). [ ನಕ್ತ + ವ್ರತ ]

**ನಕ್ತಿಸು** (ಕ್ರಿ). ರಾತ್ರಿಯಾಗುವಂತೆ ಮಾಡು; ಕತ್ತಲೆಯಾಗುವಂತೆ ಮಾಡು: (?) ಶಕ್ತಿಯಾರಂ ಸದಾಖ್ಯಾನಾರನಾವಗಂ ವ್ಯಕ್ತಿಸುತ ಕರಣವಾರಂ ವಿಶೇಷಣವಿಡಿದನುಕ್ತಿಸುತ ಲಿಂಗವಾರಂ ವಿನಮ್ನತೆವಡೆದು ನಕ್ತಿಸುತ ಭವನಂಗಳಾ (ಲಿಂಗಪು. ೯-೧೭). [ ನಕ್ತ + -ಇಸು ]

**ನಕ್ತೈಕಭುಕ್ತ** (ನಾ). = ನಕ್ತಭೋಜನ: ನಿತ್ಯೋಪವಾಸಿಗಳು ನಕ್ತೈಕಭುಕ್ತ ಪುನರುಕ್ತಿಯಿಂ ಧಾರಣೆಯ ಪಾರಣಾನೇಮಂಕರು (ಲಕಿಚಂ. ೩೧-೨೩). P ಸಂಸ್ಕೃತ ವ್ಯಾಕರಣದ ಪ್ರಕಾರ ಇದು ಅಶುದ್ಧ ಪದ.
[ ನಕ್ತ + ಏಕಭುಕ್ತ ]

**ನಕ್ತೋಪವಾಸ** (ನಾ). = ನಕ್ತಭೋಜನ: ನಕ್ತೋಪವಾಸ ಚಾಂದ್ರಾಯಣಂ ಮೊದಲಾದ ನಿತ್ಯನಿಯಮಂಗಳು . . . ಕೊಳಲು (ಲಕಿಚಂ. ೪೬-೭).
[ ನಕ್ತ + ಉಪವಾಸ ]

**ನಕ್ರ** (ನಾ). ೧. ಒಂದು ಬಗೆಯ ಜಲಚರ ಪ್ರಾಣಿ; ಮೊಸಳೆ; ನೆಗಳು: "ನಕ್ರಮೆನೆ ಕುಂಭೀರಮೆನೆ ಮೊಸಳೆ ಗ್ರಾಹಮಾ ನಕ್ರ ಅವಹಾರ ಮೇನೆ ನೆಗಟಕ್ಕು" (ಮಂಗರಾ. ೧೨೧-೭); ನಿಜದೇಶಪ್ರಸ್ಥಾನಾಭಿಮುಖರ್ ಅಂತಸ್ಥಕೋಪಾವಲೇಪರ್ ಬಹಿಃಪ್ರಮೋದಂಗಳಿಂ ಸಂವೃತಾಕಾರರ್ ಗೂಢನಕ್ರಪ್ರಸನ್ನಹ್ರದಗಳಂತೆ ಪಯಣಂಬೋದರ್ (ಶಾಂತಿಪು. ೭-೩ವ); ಜಡಸ್ಥಿತಿ ನಕ್ರದೊಳ್ ಪ್ರಹರಣಶ್ರಮಂ ಖರಳಿಯೊಳ್ . . . ಮಹಾಮಾತ್ರ ವರ್ತನಂ ಸೃಣಿಯೊಳಲ್ಲದಿಲ್ಲಮೆಲ್ಲಿಯುಂ (ಚಂದ್ರಪ್ರ. ೩-೯ ವ); ಕರಿಮಕರ ನಕ್ರಶೈವಾಳ . . . ತಿಮಿಂತಿಮಿಂಗಿಳೋತ್ಕರಜಳೂಕವ್ಯಾಳಕೋಳಾಹಳ ಧ್ವಾನವೆರಸಿ ಜಲನಿಧಿ ಮೆರೆದುದು (ಪದಶಾ. ೦-೩೩); ಆತನ ಪಾಗಳ್ . . . ನಂದನವನದ ಹೊಂದಾವರೆಯ ಕೊಳದೊಳ್ ಕಾಲಂ ತೊಳೆಯಲ್ಪುಗೆ ಅಲ್ಲಿರ್ದ ನಕ್ರಂ ಚಿಕ್ಕನೆ ಚರಣಮಂ ಪಿಡಿಯಲ್ (ಪುಣ್ಯಾಸ್ರ. ೬-೧೪ ವ); ಮಾರಿಕೇಳಿಯ ಸುರನಾರಿಯರ್ಗಳ ಕಂಡು ಬೀರುಕರ್ಮರು ಸೋತು ಓಡಿಯೆ ವಾರಿ ಕಪಿಸಲೇಳು ದಾರುಮಾದರು ನಕ್ರಾಕಾರವನ್ಮಾಂತರಂತಲ್ಲ (ಭೈರವೇ. ೨-೩೦); ಕ್ರೂರನಕ್ರಾಕುಲದೊಳಿರ್ದ ಪೆರ್ಮಡು ಗಭೀರ ನಿರ್ಮಲಜಲದೊಳೆಸೆವಂತೆ ಮನದೊಳ್ ಕಠೋರತರಭಾವಮಂ ತಳೆದು ಬಹಿರಂಗದೊಳ್ ವಿನಯಮಾಶ್ರಿತನಾಗಿ (ಜೈಮಿಭಾ. ೨೮-೨೮); ಜಲದೇವಿಯರೆ, ಮಕರನಕ್ರಗಳಿಂದೆ ರಕ್ಷಿಸಿಂ (ಶ್ರೀರಾಮಾ. ೮೫-೨೦೫). ೨. ಮೀನು. 'ನಕ್ರಕೇತನ' ಪರಾ. ೩. ಒಂದು ನರಕದ ಹೆಸರು: ಪೆರದೀ ಪ್ರಕಾಶನಮುಮಿರದೆಯಿಂವೆ ಗ್ರಾಹಕುಂಭೀರಂಗಳುಂ ನೆರದ ನಕ್ರಾಖ್ಯವಿಮ್ಮ ನರಕಪ್ರಧಾನವರರಿರವೆ ಪ್ರಚಂಡಭೂಮಂಗಿವೈದುಂ (ಸಾಪಂಡ. ೫-೩೦); ಉಗ್ರ ಪ್ರಕಾಶ್ಯ ಗ್ರಾಹ ಕುಂಭಿ ನಕ್ರಮೆಂಬೈದುಮಂತ್ರಿನರಕಂಗಳಿಂದೊಡಗೂಡಿಪ್ರಚಂಡವೆಂಬರಸುನರಕವಿಹುದು (ವಿವೇಕ. ೦೮೦). [ ಸಂ. ]

**ನಕ್ರಕೇತನ** (ನಾ). ೧. ಮೀನಿನ ಗುರುತುಳ್ಳ ಧ್ವಜ, -ಬಾವುಟ. ೨. ಮೀನಿನ ಗುರುತನ್ನು ಧ್ವಜದಲ್ಲಿ ಉಳ್ಳವನು; ಮನ್ಮಥ: ಕರಶೂಲ ನಕ್ರಕೇತನನಾಶ . . . ತನುಭವಾಂಬೋಧಿ ಬಾಡಬ ಸಂಗಮೇಶ (ಪ್ರಾಶರಾ. ೯-೧); ನಕ್ರಕೇತನ ಪರಿವ ಕರ್ಣಾಯತೇಕ್ಷಣೆಯ . . . ಸಲಹು ಮೂಲೋಕಮಾತೇ (ನವಮೋ. ೦೦-೨). [ ನಕ್ರ + ಕೇತನ ]

**ನಕ್ರಚಕ್ರ** (ನಾ). ಮೊಸಳೆಗಳ ಗುಂಪು, -ಸಮೂಹ: ಪರಿಧಾವಂ ನಕ್ರಚಕ್ರ ಕ್ರಮಾಣರಮಣಸಂಜಾತಕಲ್ಲೋಳಮಾಲಾಸ್ಫುರದುದ್ಯಚ್ಛೀಕರೌಘಸ್ಥಗಿತಗಗನ ದಿಗ್ಮಂಡಳಂ (ಎಕ. XI, ದಾವಣ. ೪೩-೩; 1164). [ ನಕ್ರ + ಚಕ್ರ₁ ]

**ನಕ್ರಧ್ವಜ** (ನಾ). ೧. = ನಕ್ರಕೇತನ ೧: ಶಕ್ರತನಯನ ಸಂಭವಂ ಬಳಿಕ ರೋಷದಿಂ ಚಕ್ರಾಯುಧನ ಸುತನ ಸೂಕಸಂ ಕುದುರೆಯಂ ನಕ್ರಧ್ವಜವನತುಲ ಚಾಪಮಂ ಕತ್ತರಿಸಿ ವಿರಥನಂ ಮಾಡೆ (ಜೈಮಿಭಾ. ೨೨-೨೭). ೨. = ನಕ್ರಕೇತನ ೨. [ ನಕ್ರ + ಧ್ವಜ ]

**ನಕ್ರನಿದ್ರೆ** (ನಾ). ೧. ಮೊಸಳೆಯಂತೆ ನಿಶ್ಚಲವಾಗಿ ಮಾಡುವ ನಿದ್ರೆ; ಗಾಢವಾದ ನಿದ್ರೆ. ೨. (ಆಲಂ) ಮನದಲ್ಲಿ ಕ್ರೌರ್ಯವನ್ನು ತುಂಬಿಟ್ಟುಕೊಂಡಿರುವ ತೋರಿಕೆಯ ನಿದ್ರೆ: ರಾಕ್ಷಸರಾಜನರಮನೆಯ ಶಬ್ದಶೂನ್ಯತೆಯ ನಕ್ರನಿದ್ರೆಗೆ ತರಲ್ ಭಂಗಮಂ (ಶ್ರೀರಾಮಾ. ೫೭೬-೨೭).
[ ನಕ್ರ + ನಿದ್ರೆ ]

**ನಕ್ರಪದ** (ನಾ). = ನಕ್ರಕೇತನ ೨ : ತ್ರಿಪುರಹರ ನಕ್ರಪದಗಾತ್ರವನಶುಕ್ರ ನಗಪುತ್ರಿಪತಿ . . . ಭೂಚಕ್ರನುತ ನಂಜೇಶ್ವರಾ (ಗುರುಚಾ. ೧೬-೫೭).

[ ನಕ್ರ + ಪದ$_2$ ]

**ನಕ್ರಹರ** (ನಾ). ಮೊಸಳೆಯನ್ನು ಸಂಹರಿಸಿದವನು ; ವಿಷ್ಣು : ನಕ್ರಹರನು ಬಾದ ಚಕ್ರಧರನು ಬಂದ (ಪುರಂದ. ೧-೪೪-೪). [ ನಕ್ರ + ಹರ ]

**ನಕ್ಷತ್ರ$_1$** (ನಾ). ೧. ತಾರೆ ; ಉಡು ; ಚುಕ್ಕೆ : "ಭಂ, ನಕ್ಷತ್ರಂ . . . ಉಡು–ಈ ೯ ನಕ್ಷತ್ರದ ಪೆಸರ್" (ಹಲಾಯು. ೧೧-೫೦) ; "ಆಬ್‌ಲಿಂದು ಮಿನುಗಿ ನಕ್ಷತ್ರವಕ್ಕು" (ಅಭಿ. ೭೪) ; ಮೂಗನ್ನು ಅಚುವತ್ತು ನಕ್ಷತ್ರಕ್ಕೆ ಬಾಯಿಬಿಟ್ಟುಕೊಂಡಿಪ್ಪುದೆ ಸಿಂಪು ಅದು ಸ್ವಾತಿಗಲ್ಲದೆ ಬಾಯ್ದೆಱೆಯದು (ಬಸವ. ೯೦೯) ; ನಕ್ಷತ್ರವೆಪ್ಪಾದೊಡಂ ದೊರೆಯೇ ಚಂದ್ರಗೆ (ಸೋಮೇಶ. ೧೧) ; ಗಗನಮಾರ್ಗ ಸವಿಧಿ ರವಿರಶ್ಮಿಗಳೆ ಧೂಮವು ವರ್ಷೆಯೆನಿಪುದೆ ಹಗಲು ನಕ್ಷತ್ರಗಳೆ ಕಿಡಿಗಳು (ಹಸಾರ. ೬-೩) ; ಸ್ವಯಂಪ್ರಕಾಶವಾಗಿ ಆಕಾಶದಲ್ಲಿ ಮಿನುಗುತ್ತಿರುವುವೇ ನಕ್ಷತ್ರಗಳು (ಆಕಾಶ. ೪೯) ; ಮಿಂಚಿನಂಚಿನ ದೇವತಾಚರಣಸಂಚಾರದಾ ಪದಚಿಹ್ನೆಗಳ್ ಪೊಳೆದುವವಿತನಕ್ಷತ್ರಗಳ ಪೋಲ್ (ಶ್ರೀರಾಮಾ. ೦೯-೯೭೪) ; ನಿದ್ರಾಂಗನೆಯ ಪರಮಸಖಿ, ಸ್ವಪ್ನ ಸುಂದರಿ, ವಿಭಾವರಿಯ ನಕ್ಷತ್ರಖಚಿತಾಂಬರವನುಟ್ಟು . . . ಭೂಯಾತ್ರೆಗೈಯುತಿರೆ (ಚಿತ್ರಾಂಗ. ೨-೪೪) ; ನಕ್ಷತ್ರಗಳು ವಿವಿಧ ಕಾಂತಿಗಳಿಂದ ಬೆಳಗುತ್ತಿರುವುದರಿಂದ ಕಾಂತಿಗಳಿಗನುಗುಣವಾಗಿ ನಕ್ಷತ್ರಗಳನ್ನು ಗುರುತಿಸಿದೆ (ನಕ್ಷತ್ರ. ೧೨). ೨. [ಜ್ಯೋತಿ] ಚಾಂದ್ರಮಾನಗತಿಯಲ್ಲಿ ಗಣನೆ ಮಾಡುವ ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು ; P ಅಶ್ವಿನಿ, ಭರಣಿ, ಕೃತ್ತಿಕೆ, ರೋಹಿಣಿ, ಮೃಗಶಿರೆ, ಆರ್ದ್ರೆ, ಪುನರ್ವಸು, ಪುಷ್ಯ, ಆಶ್ಲೇಷೆ, ಮಘೆ, ಪುಬ್ಬೆ, ಉತ್ತರೆ, ಹಸ್ತ, ಚಿತ್ತೆ, ಸ್ವಾತಿ, ವಿಶಾಖ, ಅನೂರಾಧ, ಜ್ಯೇಷ್ಠ, ಮೂಲ, ಪೂರ್ವಾಷಾಢ, ಉತ್ತರಾಷಾಢ, ಶ್ರವಣ, ಧನಿಷ್ಠೆ, ಶತಭಿಷೆ, ಪೂರ್ವಾಭಾದ್ರ, ಉತ್ತರಾಭಾದ್ರೆ, ರೇವತಿ ಎಂಬ ಇಪ್ಪತ್ತೇಳು ನಕ್ಷತ್ರಗಳಲ್ಲಿ ಚಂದ್ರನು ಸಂಚರಿಸುತ್ತಾನೆ. ಇದು ನಕ್ಷತ್ರಮಾನದಲ್ಲಿ ಒಂದು ತಿಂಗಳಾಗುತ್ತದೆ: ಪ್ರಶಸ್ತದಿವಸವಾರ ನಕ್ಷತ್ರಮುಹೂರ್ತದೊಳ್ ಮುಂಜಿಬಂಧನಕ್ರಿಯೆಯಂ ಮಾಡಿದ ಬಟಿಕ್ಕೆ (ವರ್ಧಮಾ. ೬೩-೨೦) ; ಅಶ್ವಿನಿ ಮೊದಲಾಗೆ ಅಭಿಜಿತ್ತು ಸಹಿತಮಾಗಿ ಇರ್ಪತ್ತೆಂಟು ನಕ್ಷತ್ರಂಗಳ್ (ಲೋಕೋಪ. ೦-೬ ಟೀಕೆ) ; ನಕ್ಷತ್ರ ಕೀಳದವನ ಸಾವು ಕ್ಷಣ ಹೊತ್ತಾದರೂ ನಿಂತೀತೇ (ಗಾದೆ). ೩. [ಗಣಿತ] ಇಪ್ಪತ್ತೇಳು ಎಂಬ ಸಂಖ್ಯೆಯ ಸಂಕೇತ : "ನಕ್ಷತ್ರಮಿಪ್ಪತ್ತೇಟೆನಿಕುಂ" (ಮಂಗರಾ. ೧೧೯-೯). ೪. [ಜೈನ] ಜ್ಯೋತಿಷ್ಕ ದೇವತೆಗಳಲ್ಲಿ ಒಂದು ಭೇದ : ಯಕ್ಷರು ಗರುಡರು ಸುರರು ನಕ್ಷತ್ರರಮರರು ನರರು ಆ ಕ್ಷಣದೊಳು ಬಂದು ನಮಿಸಿ ಬೀಳ್ಕೊಂಡರು ದೀಕ್ಷಿತರಾದ ಯೋಗಿಗಳ (ಭರತೇ. ೭೦-೧೧೭).

[ ಸಂ. ]

**ನಕ್ಷತ್ರ$_2$**, ನಕ್ಷತ್ರಿಕ, ನಕ್ಷತ್ರೀಕ (ನಾ). ೧. = ನಕ್ಷತ್ರಕ ೧ : ಇಂತು ನಕ್ಷತ್ರನ ಕೂಡಾಗ ನಡೆಯುತ ಚಿಂತೆಯೊಳಗೆ ಭೂಪಾಲ (ಹರಿಸಾಂ. ೩-೩೯). ನಕ್ಷತ್ರಿಕ : ೨. = ನಕ್ಷತ್ರಕ ೨ : ಆ ನಕ್ಷತ್ರಿಕ ಬಂದರೆ ತನ್ನ ಕೆಲಸ ಆಗೋವರೆಗೂ ಕುಳಿತ ಜಾಗ ಬಿಟ್ಟು ಕದಲುವುದಿಲ್ಲ (ರೂಢಿ). ನಕ್ಷತ್ರೀಕ : ೨. ಈ ನಕ್ಷತ್ರೀಕ ಬಂದರೆ ನನ್ನ ಕೆಲಸವೆಲ್ಲಾ ಹಾಳು (ರೂಢಿ).

[ <ಸಂ. ನಕ್ಷತ್ರಕ ]

**ನಕ್ಷತ್ರಕ** (ನಾ). ೧. ಹರಿಶ್ಚಂದ್ರನನ್ನು ಪೀಡಿಸಲು ನಿಯಮಿತನಾದ ವಿಶ್ವಾಮಿತ್ರನ ಒಬ್ಬ ಶಿಷ್ಯ : ತನ್ನ ಶಿಷ್ಯಾಳಿಯೊಳು ನೋಡಿ ಹುಸಿಯ ಸೂಯಾನೀಚವೃತ್ತಿನಿರ್ದಾಕ್ಷಿಣ್ಯನಿಷ್ಠುರಣನೀತಿಗಳೆಲಿ ಹೆಸರುಳ್ಳ ಹಿರಿಯ ನಕ್ಷತ್ರಕನೆನಿಪ್ಪ ವಟಾಸನನೆಕ್ಕಟಗರೆದು ಕೈವಿಡಿದು ಕಿವಿಯೊಡ್ಡಿ ವಸುಧಾಧಿಪತಿಯ ಬಳಿವಿಡಿದು ಕಳುಹಲು ಬುದ್ಧಿಗಲಿಸಿದನು (ಹರಿಶ್ಚ. ೯-೦೫) ; ಸತಿಸುತನಕ್ಷತ್ರಕರನ್ನೊಡಗೂಡಿ . . . ಪೋಗುತ (ಹಮುಚ. ೮೪). ೨. (ಆಲಂ) ಅತಿಯಾಗಿ ಉಪದ್ರವ ಕೊಡುವ ವ್ಯಕ್ತಿ : ತಗಾದೆ ಮಾಡುವವನು ; ತಗಾದೆಗಾರ ; ಬೆಂಬಿಡದೆ ಕಾಡುವವನು: ಆ ನಕ್ಷತ್ರಕನ ಸಹವಾಸ ಬಹಳ ಕಷ್ಟಕರವಾದುದು (ರೂಢಿ). [ ಸಂ. ]

**ನಕ್ಷತ್ರಕೂಟ** (ನಾ).=ನಕ್ಷತ್ರಪುಂಜ : ಆಕಾಶದಲ್ಲಿ ಅಲ್ಲಲ್ಲಿ ಬಿಡಿನಕ್ಷತ್ರಗಳನ್ನು ಕಾಣುವಂತೆ, ನಕ್ಷತ್ರಕೂಟ(Clusters)ಗಳನ್ನು ಕಾಣಬಹುದು (ಬಾಂಭ್ರ. I, ೨೯೩). [ ನಕ್ಷತ್ರ$_1$ + ಕೂಟ$_3$ ]

**ನಕ್ಷತ್ರಗುಚ್ಛ** (ನಾ). = ನಕ್ಷತ್ರಪುಂಜ : ಆಕಾಶಗಂಗೆಯು ನಕ್ಷತ್ರ ಮಹಾ ನಗರದಲ್ಲಿ ಒತ್ತಾಗಿ ಸೇರಿಕೊಂಡಿರುವ ಹಲವು ನಕ್ಷತ್ರಗುಚ್ಛಗಳಿವೆ (ನಕ್ಷತ್ರ. ೧೨೮). [ ನಕ್ಷತ್ರ$_1$ + ಗುಚ್ಛ ]

**ನಕ್ಷತ್ರಚಿಹ್ನೆ** (ನಾ). ನಕ್ಷತ್ರಾಕಾರದ ಗುರುತು,–ಸಂಕೇತ : (ಪಟ್ಟಿಯಲ್ಲಿ ಹೆಸರು, ಮೊ. ಕ್ಕೆ) ನಕ್ಷತ್ರಚಿಹ್ನೆ ಹಾಕು, ಚುಕ್ಕಿಗುರುತು ಹಾಕು (Star, ಇಂಕನಿ) ; ಆ ಪುಸ್ತಕದಲ್ಲಿ ವಿಶೇಷಾಂಶಗಳನ್ನು ನಕ್ಷತ್ರಚಿಹ್ನೆಯಿಂದ ಸೂಚಿಸಿದೆ (ರೂಢಿ). P ವಿಶೇಷ ವಿಷಯಗಳನ್ನು ಸೂಚಿಸಲು ಪಕ್ಕದಲ್ಲಿ ನಕ್ಷತ್ರಾಕಾರದ ಗುರುತು ಹಾಕಿ ಅಡಿಟಿಪ್ಪಣಿಯಲ್ಲಿ ವಿವರಣೆ ನೀಡುವುದು ಲೇಖಕರ ಪದ್ಧತಿ. [ ನಕ್ಷತ್ರ$_1$ + ಚಿಹ್ನೆ ]

**ನಕ್ಷತ್ರಜ್ಯೋತಿ** (ನಾ). ನಕ್ಷತ್ರದ ಬೆಳಕು,–ಪ್ರಕಾಶ : ನಕ್ಷತ್ರಜ್ಯೋತಿ ಜುನ್ನೆದ ತೂಳ್ಳೆ ಹಿಮವಚ್ಛೈಲಾಂಶುವಂ ವಿಪಾಟಿ ದಿಗ್ವಾತ್ರಿಪ್ಯೋಮವಿಭಾಗ ಗಾಮಿಯೆನಿಸಿತ್ತುಚ್ಛೃಂಖಳಂ ದಾಮನಂದಿ ತ್ರೈವಿದ್ಯಮುನೀಂದ್ರ ನಿರ್ಮಳ ಯಶಶ್ರೀ ಶುಭ್ರತಾವಿಭ್ರಮಂ (ಚಂದ್ರಪ್ರ. ೧-೩೩).

[ ನಕ್ಷತ್ರ$_1$ + ಜ್ಯೋತಿ ]

**ನಕ್ಷತ್ರಪಾಠಕ** (ನಾ). ನಕ್ಷತ್ರಗಳ ಆಧಾರದ ಮೇಲೆ ಕಾಲಗಣನೆ ಮಾಡುವವನು ; ಜ್ಯೋತಿಷಿ : ಗಳಿಗೆವಟ್ಟಲಂ ಪರಿವೇಷ್ಟಿಸಿರ್ದ ನಕ್ಷತ್ರಪಾಠಕರಂ (ಗಿರಿಜ. ೧೦-೨೮೮). [ ನಕ್ಷತ್ರ$_1$ + ಪಾಠಕ ]

**ನಕ್ಷತ್ರಪಾದ** (ನಾ). [ಜ್ಯೋತಿ] ಒಂದು ನಕ್ಷತ್ರವು ಪ್ರಭಾವವನ್ನು ಬೀರುವ ಕಾಲದ ¼ ಭಾಗ : ಒಂದು ನಕ್ಷತ್ರವನ್ನು ನಾಲ್ಕು ಸಮಭಾಗಗಳನ್ನಾಗಿ ಮಾಡಿದರೆ, ಒಂದೊಂದು ಭಾಗವೂ ನಕ್ಷತ್ರದ ಒಂದು ಪಾದವಾಗುತ್ತದೆ. ಒಂದು ನಕ್ಷತ್ರಪಾದಕ್ಕೆ ३⅓ ಡಿಗ್ರಿಗಳು (ನಕ್ಷತ್ರ. ೪೭). P ಸಾಮಾನ್ಯವಾಗಿ ಜಾತಕನ ನಕ್ಷತ್ರದ ಕಾಲವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ ಜಾತಕದಲ್ಲಿ ಪ್ರಥಮ, ದ್ವಿತೀಯ, ತೃತೀಯ, ಮತ್ತು ಚತುರ್ಥಪಾದವೆಂದು ಗುರುತಿಸುತ್ತಾರೆ.

[ ನಕ್ಷತ್ರ$_1$ + ಪಾದ ]

**ನಕ್ಷತ್ರಪುಂಜ** (ನಾ). ನಕ್ಷತ್ರಗಳ ಗುಂಪು,–ಸಮೂಹ : "ನಕ್ಷತ್ರಪುಂಜ ತಾರಾಪುಂಜ" (Cluster of Stars. ಪಾರಿಸಿ. ೦೬) ; ಕ್ರಾಂತಿಪಥ ಮತ್ತು ನಕ್ಷತ್ರಪುಂಜ (ಆಕಾಶ. ೮೩) ; ಕೆಲವು ಗುಂಪುಗುಂಪಾಗಿ ಮೈದೋರಿ ನಕ್ಷತ್ರ ಪುಂಜಗಳಾಗಿ ಮೆರೆಯುವುವು (ಸಾಹಿಸ. ೦೦೩). [ ನಕ್ಷತ್ರ$_1$ + ಪುಂಜ$_2$ ]

**ನಕ್ಷತ್ರಬಾಣ** (ನಾ). ಬಾಣಬಿರುಸುಗಳಲ್ಲಿ ಒಂದು ಬಗೆ ; ಆಕಾಶಬಾಣ ; ಆಕಾಶಕ್ಕೆ ಹಾರಿ ನಕ್ಷತ್ರದಂತೆ ಮಿನುಗುವ ಒಂದು ಬಗೆಯ ಸುಡುಮದ್ದು,–ಪಟಾಕಿ: ಈ ಜಾನಸಾಲೆಯಲ್ಲಿ ಹಗಲುಬತ್ತಿ, ಹೂವಾಣ, ಆಕಾಶಕೊಳವಿ, ಚಕ್ರಬಾಣ, ನಕ್ಷತ್ರಬಾಣ . . . ಈ ಬಾಣಗಳನ್ನು ನವರಾತ್ರ್ಯುತ್ಸವ, ದೇವತಾಉತ್ಸವ ಮುಂತಾದ ಉತ್ಸವಕಾಲಗಳಲ್ಲಿ ಹತ್ತಿಸುವಂತೆ ಕಟ್ಟಲೆ ಮಾಡಿಸಿದರು (ಚಾಮರಾ. ೦೨೬).

[ ನಕ್ಷತ್ರ$_1$ + ಬಾಣ ]

**ನಕ್ಷತ್ರಮಂಡಲ** (ನಾ). ನಕ್ಷತ್ರಗಳ ಗುಂಪು,–ಸಮೂಹ : ನಕ್ಷತ್ರಮಂಡಲದಲ್ಲಿ ೯೭ ಗೋಳಗುಚ್ಛಗಳಿವೆ (ನಕ್ಷತ್ರ. ೧೩೦) ; ನಕ್ಷತ್ರಮಂಡಲಗಳಲ್ಲಿ ಕೆಲವನ್ನಾದರೂ ಪರಿಚಯಮಾಡಿಕೊಳ್ಳಬೇಕು (ಆಕಾಶ. ೫೯) ;

ನಕ್ಷತ್ರಮಂಡಲದಿನಾಚೆಯಿಂದೊಂದು ದನಿ ವಕ್ಷೋಗುಹಾಂತರದಿನೊಂದು ದನಿಯಿಂತೀ ಸಾಕ್ಷಿದ್ವಯವು ನಿನ್ನೊಳೊಂದುಗೂಡಿದೊಡದೇ ಪ್ರೇಕ್ಷೆ ಪರಬೊಮ್ಮಸದು (ಮಂಕುಕ. ೬೦). [ ನಕ್ಷತ್ರ$_1$ + ಮಂಡಲ ]

**ನಕ್ಷತ್ರಮಾನ** (ನಾ). ನಕ್ಷತ್ರಗಳ ಚಲನೆಯಿಂದ ಗಣನೆ ಮಾಡುವ ಕಾಲಪ್ರಮಾಣ : ಈ ರೀತಿಯ ನಕ್ಷತ್ರಮಾನ ಕಾಲನಿರ್ಣಯದಲ್ಲಿ ಮೂರು ನಾಲ್ಕು ನಿಮಿಷಗಳಷ್ಟು ತಪ್ಪು ಕೂಡಿಬರಬಹುದು (ನಕ್ಷತ್ರ. ೬೦) ; ಸಾಯನ ಸೌರಮಾನ (ಟ್ರಾಪಿಕಲ್) ಮತ್ತು ನಕ್ಷತ್ರಮಾನ (ಸೈಡೀರಿಯಲ್) ಮೇಷ ಸಂಕ್ರಮಣಗಳು ಒಟ್ಟಾಗಿ ಸೇರಿದ್ದವೆಂದು ಅಂದಾಜು ಮಾಡಲಾಗಿತ್ತು (ಕವಿಕಾ. I, ೯೩೪). ⓟ ನಕ್ಷತ್ರಮಾನದಿಂದ ಮಾಡುವ ಕಾಲಗಣನೆಯಲ್ಲಿ ಅರುವತ್ತು ಘಳಿಗೆಗೆ ಒಂದು ದಿವಸ, ಮೂವತ್ತು ದಿನಗಳಿಗೆ ಒಂದು ತಿಂಗಳು, ಮುನ್ನೂರಅರುವತ್ತು ದಿನಗಳಿಗೆ ಒಂದು ವರ್ಷ. ಇದನ್ನು ಆಯುರ್ಗಣನೆಯಲ್ಲಿ ಉಪಯೋಗಿಸಬೇಕು ಎಂದು ಸೂರ್ಯಸಿದ್ಧಾಂತದಲ್ಲಿ ಹೇಳಿದೆ. [ ನಕ್ಷತ್ರ$_1$ + ಮಾನ ]

**ನಕ್ಷತ್ರಮಾಲಿಕೆ** (ನಾ). ೧. = ನಕ್ಷತ್ರಮಾಲೆ ೨ : (ಕ). ೨. [ಛಂದ] ಇಪ್ಪತ್ತೇಳು ವೃತ್ತಗಳಿರುವ ಒಂದು ಬಗೆಯ ಕಾವ್ಯಜಾತಿ : ತಾರಾವಳಿ : ನಿರ್ವಾಣಲಕ್ಷ್ಮೀಪತಿ ನಕ್ಷತ್ರಮಾಲಿಕೆ : ಇದರಲ್ಲಿ ೨೭ ವೃತ್ತಗಳವೆ (ಕವಿಚ. I, ೩೦೦). [ ನಕ್ಷತ್ರ$_1$ + ಮಾಲಿಕೆ ]

**ನಕ್ಷತ್ರಮಾಲೆ** (ನಾ). ೧. = ನಕ್ಷತ್ರಪುಂಜ : ಚರಣನಖಚಂದ್ರಮಾಲೆಗೆ ನಕ್ಷತ್ರಮಾಲೆಯನೋಲಗಿಸುವಂತೆ ಮುಕ್ತಾಫಲನೂಪುರವಂ ತುಡಿಸಿಯುಂ (ಶಂರಾಮಾ. ೫-೯೩ವ); ಕಗ್ಗತ್ತಲೆಯ ರಾತ್ರಿ ನಕ್ಷತ್ರಮಾಲೆಯಿಂ ಮೆರೆವಂತೆ, ಮೇಣುಮಾಯು ಭಾಳದಲಿ 'ಬೆಳ್ಳಿ'ಯೊಂದೆಯೆ ಮಿರುಗುವಂದದಲಿ, ಕುಂತಲ ವನಲರಿಂದಲಂಕರಿಸಿ . . . ಮೆರೆದಳಾ ಪಾರ್ಥಿವಕುಮಾರಿ (ಚಿತ್ರಾಂಗ. ೮೯-೩೦೧). ೨. ಇಪ್ಪತ್ತೇಳು ಮುತ್ತುಗಳಿರುವ ಕಂಠಹಾರ : "ಇಪ್ಪತ್ತೇಳು ಮುತ್ತಿನ ಸರಮಂ ನಕ್ಷತ್ರಮಾಲೆಯೆಂಬುದು" (ಹಲಾಯು. ೯೩-೯೦೯) ; ವಿಜಯಚ್ಛಂದಹಾರ ದೇವಚ್ಛಂದಾರ್ಧಹಾರ ರಶ್ಮಿಕಲಾಪಗುಚ್ಛ ನಕ್ಷತ್ರಮಾಲಾರ್ಧಗುಚ್ಛಮಾಣವಕಾರ್ಧಮಾಣವಕಂಗಳೆಂಬ . . . ಹಾರಂಗಳುಮಂ (ಆದಿಪು. ೮-೩೮ವ) ; ಉಗಿಯಲ್ಕಂಕುಶದಿಂ ತೊಡಂಕಿ ಪಱಿದೆತ್ತಂ ಸೋರ್ವ ನಕ್ಷತ್ರಮಾಲೆಗಡರ್ಪಾದ ಮನೋಜಸಾಮಜಲಸತ್ಕುಂಭಂಗಳ್ (ಪುಷ್ಪಪು. ೫-೨೭) ; ಅಮಳ ನಕ್ಷತ್ರಮಾಲೆಯನು ಕೊರಳ್ಗಮಱಿದರು (ನವಮೋ. ೨೩-೩೬). ೧, ೨ : ಕಮನೀಯಾಕಾಶಗಜಕ್ಕೆ ಮಾಡಿದವದಾತಕರ್ಣಚಮರರುಹಸಮಂ ಹಿಮಕರಕರಮನೆ ನಕ್ಷತ್ರಮಾಲೆ[ ನಕ್ಷತ್ರಮಾಲೆ ]ಯೆನಿಸಿದುವಾಗಳ್ (ಶಾಂತಿಪು. ೮-೭೦). ೩.=ನಕ್ಷತ್ರಮಾಲಿಕೆ ೨.

[ ನಕ್ಷತ್ರ$_1$ + ಮಾಲೆ ]

**ನಕ್ಷತ್ರಮೀನು** (ನಾ). "ಐದು (ಅಥವಾ ಹೆಚ್ಚು) ತ್ರಿಜ್ಯಾಕಾರದ ಚಾಚುಗಳನ್ನುಳ್ಳ ಒಂದು ಕಂಟಕಚರ್ಮಿ ಸಮುದ್ರಪ್ರಾಣಿ "(Star-fish. ಇಂಕನ್) : ನಕ್ಷತ್ರಮೀನುಗಳ ತಟ್ಟೆಯಂತಿರುವ ಮಧ್ಯಭಾಗದಿಂದ ಕಿರಣಗಳಂತೆ ಚಾಚಿರುವ ಐದು ತೋಳುಗಳಿರುತ್ತವೆ (ಪ್ರಾಣಿಶಾ. ೨೬೩) ; ನಕ್ಷತ್ರಮೀನು (Star-Fish) ಕಣ್ಣುಗುಳಿಹೊಂದಿದ ಮೊದಲ ಜೀವಿ (ನಿಮ್ಮದೃ. ೨). [ ನಕ್ಷತ್ರ$_1$ + ಮೀನು$_2$ ( < ಮೀನ್$^3$ ) ]

**ನಕ್ಷತ್ರರಾಶಿ** (ನಾ). = ನಕ್ಷತ್ರಪುಂಜ : ನಕ್ಷತ್ರರಾಶಿಗಳಿಗೆ ಇಟ್ಟಿರುವ ಪಾಶ್ಚಾತ್ಯಹೆಸರುಗಳೆಲ್ಲ ಗ್ರೀಕ್ ಹೆಸರುಗಳು (ನಕ್ಷತ್ರ. ೨೭) ; ನಕ್ಷತ್ರರಾಶಿಗಳಲ್ಲಿ ಒಂದೊಂದೂ ಒಂದೊಂದು ಪ್ರಾಣಿಯನ್ನು ಹೋಲುವುದು (ಆಕಾಶ. ೮೧). [ ನಕ್ಷತ್ರ$_1$ + ರಾಶಿ ]

**ನಕ್ಷತ್ರಲೋಕ** (ನಾ). ಆಕಾಶ ; ಅಂತರಿಕ್ಷ ; ಗಗನಮಂಡಲ : ಇಂಥ ತಾರಾಯುಗ್ಮಗಳು ನಕ್ಷತ್ರಲೋಕದಲ್ಲಿ ಕಂಡುಬರುತ್ತಿವೆ (ನಕ್ಷತ್ರ. ೧೩೩).

[ ನಕ್ಷತ್ರ$_1$ + ಲೋಕ ]

**ನಕ್ಷತ್ರವೀಕ್ಷಕ** (ನಾ). ನಕ್ಷತ್ರಗಳ ಗಣನೆ ಮಾಡುವವನು ; ಜ್ಯೋತಿಷಿ : "ನಕ್ಷತ್ರವೀಕ್ಷಕ ; ಜ್ಯೋತಿಷಿ" (Star-gazer. ಇಂಕನ್). [ನಕ್ಷತ್ರ$_1$ + ವೀಕ್ಷಕ]

**ನಕ್ಷತ್ರವೀಧಿ** (ನಾ). ೧. ನಕ್ಷತ್ರಗಳ ಮಾರ್ಗ ; ಆಕಾಶಮಾರ್ಗ ; ಗಗನಮಾರ್ಗ : ಆ ಕನ್ಯಾರತ್ನಂಗಳಂ ಪ್ರಭಾಮಂಡಲದ ವಿಮಾನಾರೂಢರ್ಮಾಡಿ ನಕ್ಷತ್ರವೀಧಿಯಿಂ ಕ್ಷಣಮಾತ್ರದೊಳ್ ರಣಭೂಮಿಯಿಯನೆಯ್ದು (ಶಂರಾಮಾ. ೧೧-೬೩ವ). ೨. ಅಸಂಖ್ಯಾತ ನಕ್ಷತ್ರಗಳು ಬಹು ಒತ್ತಾಗಿರುವುದರಿಂದ ಆಕಾಶದಲ್ಲಿ ಹಾಲು ಚೆಲ್ಲಿದಂತೆ ಸುತ್ತುವರಿದು ಕಾಣುವ ತೇಜಃಪುಂಜ ; ಕ್ಷೀರಪಥ ; ಆಕಾಶಗಂಗೆ : 'ರಾಜಹಂಸ' (Swan or Swan cross) ಎಂಬ ಹೆಸರನ್ನುಳ್ಳ ತಾರಾಗಣಕ್ಕೆ ನಾತಿದೂರದಲ್ಲಿಯೂ 'ನಕ್ಷತ್ರವೀಧಿ' (Milky way)ಗೆ ಸಮೀಪದಲ್ಲಿಯೂ ಈ ಅಭಿಜತ್ತು ಶ್ವೇತಕಾಂತಿಯಿಂದ ಉರಿಯುತ್ತಿರುವುದು (ಜ್ಯೋತಿರ್ವಿ. ೬೩) ; ನೂರು ತೇಜದ ಗೋಲ ತಿರುಗುತಿವೆ ಪಂಥದಲಿ ಊರುಗೋಲಿಗೆ ಸಾಕ್ಷಿ ನಕ್ಷತ್ರವೀಧಿ (ನಲಿಮು. ೨೦-೨೪). [ ನಕ್ಷತ್ರ$_1$ + ವೀಧಿ ( < ಬೀದಿ ) ]

**ನಕ್ಷತ್ರವ್ಯೂಹ** (ನಾ). ಸಮಾ ಒಂದು ಆಕಾರದಲ್ಲಿರುವಂತೆ ಕಾಣುವ ನಕ್ಷತ್ರಗಳ ಗುಂಪು,–ಸಮೂಹ : ಧ್ರುವನಕ್ಷತ್ರದಿಂದ ಮೇಲೆ ಸ್ವಲ್ಪ ಎಡಗಡೆಗೆ ನಕ್ಷತ್ರದಿಂದ ಸುಮಾರು ೩೦ ಡಿಗ್ರಿಗಳ ಅಂತರದಲ್ಲಿ M ಆಕಾರದ ನಕ್ಷತ್ರವ್ಯೂಹವೊಂದು ಕಾಣುತ್ತದೆ (ನಕ್ಷತ್ರ. ೨೭). [ ನಕ್ಷತ್ರ$_1$ + ವ್ಯೂಹ ]

**ನಕ್ಷತ್ರಾಕಾರ** (ನಾ). ನಕ್ಷತ್ರದ ಆಕಾರ,–ಆಕೃತಿ : ಇಡೀ ದೇಗುಲ ನಕ್ಷತ್ರಾಕಾರದ ಶ್ರೀ ಜಗಲಿಯ ಮೇಲೆ ನಿಲ್ಲುತ್ತದೆ (ಸವತಿ. ೯೫) ; ಒಂದು ಸಮಚತುರಸ್ರವನ್ನು ಅಕ್ಷದ ಮೇಲೆ ತಿರುಗಿಸುತ್ತ ಬಂದರೆ . . . ಹನ್ನೆರಡು, ಹದಿನಾರು ಶಾಖೆಗಳುಳ್ಳ ನಕ್ಷತ್ರಾಕಾರದ ತಲವಿನ್ಯಾಸಗಳು ಕಂಡುಬರುತ್ತವೆ (ಹೊಯ್ಸಳಶಾ. ೧೫). [ ನಕ್ಷತ್ರ$_1$ + ಆಕಾರ$_2$ ]

**ನಕ್ಷತ್ರಾಧಿಪ** (ನಾ). ತಾರೆಗಳಿಗೆ ರಾಜನಾದವನು ; ಚಂದ್ರ : ನಿರುತ ನಕ್ಷತ್ರಾಧಿಪ ಗ್ರಹವರನಯನನಿಧಿ ತನ್ನಯುಂತಃಕರಣಯೋಗದೊಳಿರೆ . . . ಬಸವರಾಜಂಗರಿದಿದೆನಲಲ್ಲಾ ದಿನಂಗಳು ಶುಭದಿನಂಗಳಲಾ(ಬಸಪು. ೬-೯೪).

[ ನಕ್ಷತ್ರ$_1$ + ಅಧಿಪ ]

**ನಕ್ಷತ್ರಾನುಕೂಲ** (ನಾ). (ವಧೂವರರ) ನಕ್ಷತ್ರಗಳಿಗೆ ಹೊಂದಾಣಿಕೆಯಿರುವಿಕೆ; ⓟ ಈ ಹೊಂದಾಣಿಕೆಯನ್ನು ಗೊತ್ತುಪಡಿಸಲು ಜ್ಯೋತಿಶ್ಶಾಸ್ತ್ರದಲ್ಲಿ ಹನ್ನೆರಡು ಕೂಟಗಳನ್ನು ಹೇಳಿ ಮೂವತ್ತಾರು ಗುಣಗಳನ್ನು ಕಲ್ಪಿಸಿದ್ದಾರೆ. ನಿರ್ದಿಷ್ಟವಾದ ಗಣನೆಯಿಂದ ನಕ್ಷತ್ರಾನುಕೂಲವನ್ನು ಜೋಯಿಸರು ಗೊತ್ತುಪಡಿಸುತ್ತಾರೆ: ಮದುವೆಗೆ ನಕ್ಷತ್ರಾನುಕೂಲ ಕೂಡಿ ಬರಬೇಕು (೩೫೦). [ ನಕ್ಷತ್ರ$_1$ + ಅನುಕೂಲ ]

**ನಕ್ಷತ್ರಿಕ** 'ನಕ್ಷತ್ರ$_3$' ನೋ.

**ನಕ್ಷತ್ರೀಕ** 'ನಕ್ಷತ್ರ$_3$' ನೋ.

**ನಕ್ಷತ್ರೇಶ** (ನಾ). = ನಕ್ಷತ್ರಾಧಿಪ: "ಹಿಮಾಂಶುಃ . . . ನಕ್ಷತ್ರೇಶಃ, ಕ್ಷಪಾಕರಃ–೨೦ ಚಂದ್ರನ ಹೆಸರುಗಳು" (ಸಿದ್ಧಾಂತಿ. ೨೯). [ನಕ್ಷತ್ರ$_1$ + ಈಶ]

**ನಕ್ಷತ್ರೇಷ್ಟಿ** (ನಾ). ಒಂದು ಬಗೆಯ ಯಾಗ,–ಯಜ್ಞ : ರಾಜಸೂಯ ಅಶ್ವಮೇಧಾದಿಗಳಂ ಆಯುಷ್ಯೋಮೇಷ್ಟಿ ಕುಂಡಲೇಷ್ಟಿ ಪುತ್ರಕಾಮೇಷ್ಟಿ ನಕ್ಷತ್ರೇಷ್ಟ್ಯಾದಿಗಳಂ ಯಥಾಲಾಭಮಾಗಿ ಮಾಳ್ಪಲ್ಲಿ (ವಿವೇಕ. ೦೩೪) ; ನಕ್ಷತ್ರೇಷ್ಟಿವಿಧಿಯಲ್ಲಿ ಯಾವ ಅಗ್ನಿಯು ಒಪ್ಪಿಸಿದನೋ ಮತ್ತು ಯಾವ ಅಗ್ನಿಗೆ ಒಪ್ಪಿಸಿದನೋ ಅವರಿಬ್ಬರಿಗೂ ಸಮಾನ ನಾಮ ರೂಪಗಳನ್ನೇ ಹೇಳಿರುತ್ತದೆ (ಬ್ರಹ್ಮಭಾ. ೯೬೪). [ ನಕ್ಷತ್ರ$_1$ + ಇಷ್ಟಿ ]

**ನಕ್ಷತ್ರೋದಯ** (ನಾ). ನಕ್ಷತ್ರವು ಕಾಣಿಸಿಕೊಳ್ಳುವುದು : ತ್ವದ್ವಚನಮಹೋದಧಿಯೊಳ್ ಕಿಱುದನಱುವುದಂ ನುಡಿವಂ ಚಂದ್ರೋದಯದ ಕೆಲದ ನಕ್ಷತ್ರೋದಯಮಂಸಿಯದವೊಲೆನ್ನ ನುಡಿಯೆಸದಪುವೇ (ಶಾಂತಿಪು. ೨-೩೭).

[ ನಕ್ಷತ್ರ$_1$ + ಉದಯ ]

**ನಕ್ಷತ್ರೋಪಜೀವಿ** (ನಾ). ನಕ್ಷತ್ರಗಳ ಬಗೆಗಿರುವ ತಿಳಿವಳಿಕೆಯಿಂದ ಜೀವನ ಸಾಗಿಸುವವನು; ಜ್ಯೋತಿಷಿ : ನಕ್ಷತ್ರೋಪಜೀವಿಗಳಾಗಿಯುಂ ಗ್ರಾಮಪುರೋಹಿತರಾಗಿಯುಂ . . . ವರ್ತಿಸುವಂಥಾ ಪಾರ್ವರೆಲ್ಲರುಂ ಚಂಡಾಲರಿಗೆ ಸಮಾನರಾಗಿರ್ಪರು (ಭಾರತಾಂ. ೭೮-೩೦೩).

[ ಸಂ. ನಕ್ಷತ್ರೋಪಜೀವಿನ್ ]

**ನಕ್ಷುದ್ರ** (ನಾ). ಚಿಕ್ಕಮೂಗುಳ್ಳವನು : "ನಕ್ಷುದ್ರನೆಂಬವಂ ಚಿಕ್ಕಮೂಗಿನವಂ" (ಹಲಾಯು. ೯೯-೪೩೩). [ ಸಂ. ]

**ನಕ್ಷೆ, ನಕಾಶ, ನಕಾಶೆ, ನಕಾಸು, ನಕಾಸೆ** (ನಾ). ೧. (ಭೂಮಿಯ) ಸ್ಥಾನ, ಅಳತೆ, ಆಕಾರ, ಪ್ರಮಾಣಗಳನ್ನು ಗುರುತಿಸಿದ ರೇಖಾಚಿತ್ರ; ಭೂಪಟ : ಓದುವುದಕ್ಕೆ ಅನುಕೂಲವಾಗಿರುವ ಹಾಗೆ ನಕ್ಷೆಯ ಕಾಗದವನ್ನು ಕೈಲಿ ಹಿಡಿದು . . . ತಿಳಿಯತಕ್ಕದ್ದು (ಭೂಮಿಅ. ೧೩); ನಕ್ಷೆಗೂ ಭೂಮಿಯ ಆಕೃತಿಗೂ ವ್ಯತ್ಯಾಸವಿರಬಾರದು. ನಕ್ಷೆಯೆನಲಾಗಿ ಭೂಮಿಯ ಸ್ಥಿತಿಯನ್ನು ಕಾಗದದಲ್ಲಿ ತೋರಿಸುವಿಕೆಗೆ ಹೆಸರು. ಇದು ವಿಸ್ತಾರವಾದ ಭೂಪ್ರದೇಶವನ್ನು ಸ್ವಲ್ಪವಾದ ಕಾಗದದಲ್ಲಿ ಅಡಗಿಸಲ್ಪಡುವುದು (ಭೂಮಿಅ. ೩೯); ನಿಮಗೆ ಕೊಟ್ಟಿರುವ ನಕ್ಷೆಯಲ್ಲಿ ಭಾರತದ ನದಿಗಳನ್ನು ಗುರುತುಮಾಡಿ (ರೂಢಿ). ೨. ಕಟ್ಟಡದ ಸ್ಥಾನ, ಅಳತೆ, ಆಕಾರ ಮೊದಲಾದುವನ್ನು ಸೂಚಿಸುವ ರೇಖಾಚಿತ್ರ: ನಕ್ಷೆಯ ಕಾಗದದ ಮೇಲೆ ಮನೆ ಬೆಳೆಯುತ್ತ ಬಂದ ಹಾಗೆಲ್ಲಾ ಬ್ಲ್ಯಾಂಡಿಂಗ್ಸರು ಅದನ್ನು ನೋಡಿ ಹಿಗ್ಗಿದ್ದೂ ಹಿಗ್ಗಿದ್ದೇ (ಯೂರಪು. ೩೯). ೩. (ಆಕಾರದ) ವಿವರಗಳನ್ನೊಳಗೊಂಡ ಸ್ವರೂಪ; ನೀಲಿನಕಾಶೆ : ಪೂರ್ವದ್ರಾವಿಡ ಧ್ವನಿಮಾಗಳು ಇಂದಿನ ದ್ರಾವಿಡಭಾಷೆಗಳಲ್ಲಿ ಇರುವ ಕ್ರಮವನ್ನು ಮುಂದೆ ಪಟ್ಟಿಮಾಡಿ ನಕ್ಷೆಯಂತೆ ಸಿದ್ಧಗೊಳಿಸಿ ಕೊಟ್ಟಿದೆ(ದ್ರಾವಿ. ೩೦೩). ೪. ಚಿತ್ರ; ಆಕೃತಿ : ಶಾಸನದ ಮೇಲ್ಗಡೆಯಲ್ಲಿ ಸುರುಳಿ ಹಾಕಿ ಕೂತು ಹೆಡೆಯನ್ನು ಬಿಚ್ಚಿದ ಹಾವಿನ ನಕ್ಷೆಯು ಇದೆ (ತುಳುನಾ. ೬೬). **ನಕಾಶ** : ೧. ನಾನು ಆ ಪ್ರದೇಶದ ನಕಾಶವನ್ನು ಮಾಡಿಟ್ಟುಕೊಂಡಿದ್ದೇನೆ (ತೋಳವು. ೨೬೩); ಈ ಹೋಟೆಲಿನ ಸ್ಥಾನ ಲಂಡನ್ನಿನ ನಕಾಶದಲ್ಲಿ ಬಲು ಪ್ರಾಮುಖ್ಯವಾದುದು (ಸಮುಜೀ. ೮೬೮). ೩. ಧೂಳಿ ಜಾಡಿಸಿ ಸುರುಳಿ ಬಿಚ್ಚಿದ ನಕಾಶದಲಿ ಮೂಡಿಸಿರಿ ಹೊಸಬಾಳ ಸಂಚಿಕೆಯನು (ನಲಮು. ೨೦-೦೫); ಮೂಲಲೇಖ ಯಾವ ಲಿಪಿಯಲ್ಲಿರುವುದೋ ಆ ಲಿಪಿಯ ನಕಾಶವನ್ನು ಎದುರಿಗಿಟ್ಟುಕೊಂಡೊಡನೆ ಆ ಲೇಖದ ರಹಸ್ಯವೆಲ್ಲ ಬಯಲಾಗುವಂತಿತ್ತು ಆ ನಕಾಶದಿಂದ (ರತ್ನಗೋ. ೦೦). **ನಕಾಶೆ** : ೧. ಎರ್ಯಾಟಸ್ಥನೀಸ್ . . . ಭೂಮಿಯ ಸುತ್ತಳತೆಯನ್ನು ಲೆಕ್ಕಹಾಕಿ ಅಕ್ಷಾಂಶ ರೇಖಾಂಶಗಳನ್ನು ನಕಾಶೆಯ ಮೇಲೆ ಗುರುತು ಮಾಡಿದವನು (ಶಿಲ್ಪಾನಾ. ೫೯). ೩. ಸುಬೇದಾರರು ನಕಾಶೆಯನ್ನು ನೋಡುತ್ತ . . . ಒಂದು ಕೊನೆಯಲ್ಲಿ ತಮ್ಮ ರುಜುವನ್ನು ಮಾಡಿದರು (ಸಾವಿತ್ರಿ. ೬೦); ಪುಟವಿಂಗಡಣೆಗೆ ಆರಂಭಿಸುವುದಕ್ಕೆ ಮೊದಲು . . . ಪುಟಗಳ ನಕಾಶೆಯೊಂದನ್ನು ತಯಾರಿಸಿ, ಅದನ್ನು ಅನುಸರಿಸುವುದು ಕೆಲಸವನ್ನು ತ್ವರಿತಗೊಳಿಸುತ್ತದೆ (ಮುದ್ರಣ. ೩೩); ಪಟೇಲರು ಪೇಟ ಸುತ್ತಿ . . . ಕೈಯಲ್ಲಿ ನಕಾಶೆಯ ಕೊಳವೆ ಹಿಡಿದರು (ನನ್ನೂರು. ೦೯೭). ೫. (ಕಲ್ಲು, ದಂತ, ಮರ, ಲೋಹ ಮೊದಲಾದುವುಗಳ ಮೇಲೆ ಮಾಡುವ) ಕೆತ್ತನೆಯ ಕೆಲಸ,-ಕಂಸುರಿಗೆಲಸ : ಆ ದ್ವಾರವು ಬೆಳ್ಳಿಯ ನಕಾಶೆಯ ಕೆಲಸದಿಂದ ಚಿತ್ರಿತವಾಗಿದ್ದಿತು (ಶ್ರೀರಾಯ. ೯೯). **ನಕಾಸು** : ೫. ತಂಬೂರಿ, ವೀಣೆಗಳಿಗೆ ದಂತದ ಚಿಕ್ಕ ಬಿಲ್ಲೆಗಳ ನಕಾಸಿನ 'ಕಂಗೂರಿ' ಕಟ್ಟಿರಬೇಕು (ಸಾಹಿಜೀ. ೦೦). **ನಕಾಸೆ** : ೨. ಇದು ಸದ್ಯದ ಕರಡು ನಕಾಸೆ ಮಾತ್ರ (ಸವತಿ. ೯೩). ೫. ಕಂಬಗಳು . . . ಒಂದರಂತೆ ಮತ್ತೊಂದು ಇರುವಂತೆ ಕಂಡರೂ ಇವುಗಳ ಮಾದರಿಯಲ್ಲಿಯೂ ನಕಾಸೆಯಲ್ಲಿಯೂ ಬೇಕಾದಷ್ಟು ವೈವಿಧ್ಯವಿರುತ್ತದೆ (ಮೈವಾಸ್ತು. ೯೦).

ನಕ್ಷೆ ತಯಾರಿಸು = ನಕ್ಷೆಯನ್ನು ಸಿದ್ಧಮಾಡು: ಮನಸ್ಸಿಗೆ ಒಪ್ಪುವಂತೆ ಅವರು ಮನೆಯ ನಕ್ಷೆ ತಯಾರಿಸಿದರು (ರೂಢಿ).

[ ← ಅರ. ನಕ್ಶಾಹ್; ಹಿಂ. ನಕ್ಷಾ, ನಕಾಶೀ, ನಕ್ಶಾಶೀ ; ಮರಾ. ನಕಾಶಾ, ನಕಶೀ ]

**ನಖ** (ನಾ). ೧. ಉಗುರು: "ಪಾಣಿಜಂ ಕಾಮಾಂಕುಶಂ ನಖಮೆನಲ್ಕುಗುರು" (ಮಂಗರಾ. ೯೩-೮); ಕರತಲದೊಳೆಸೆವ ಮಣಿಬಂಧದೊಳಂಗುಲಿಯೊಳ್ ನಖದೊಳ್ ನರ್ತನವಿಲಾಸಮಂ ಮೆರೆದಿರೆಂದ್ರಸೌಂದರಿಯರ್ಕಳ್ (ಆಪು. ೩-೨೦); ಅಂಗದೊಳಗಣ ಸವಿ ಸಂಗದೊಳಗಣ ರುಚಿ ಅಂಗನೆಯ ನಖದೊಳಗೆ ಒಂದು ಮೂರುತಿಯಾಯಿತ್ತು . . . ಗುಹೇಶ್ವರನೆಂಬ ನಿಲವ ನಖದ ಮುಖ ನುಂಗಿತ್ತು (ಅವಚಂ. ೧೩೦-೬೯೩); ಮುಖಿ ಮುಕುರ ಕರತಳ ತಳಿರು ನಖ ಕುಸುಮ ತೋಡಿಗೆಗಳ ಮುತ್ತು ನನೆಯಕ್ಕಿ ಪುರ್ಬಿಕ್ಷುದಂಡ (ಹಕಾ. ೯-೭); ನಖದಿಂ ಕೆರಂಕುದುರಿಸುವ ಸುಖಮುಂ ಬಟಿಕೊ(ಲ್ಲ)ನುರಿವ ದುಃಖಮುಮಂತಂತಖಿಳವಿಷಯೋಪಭೋಗದ ಸುಖಲವಮನುದುಃಖಮನಘ ನೀನಱಿಯದುದೇ (ಪುಷ್ಪ. ೧೩-೬೫); ಕಳಲೆಯ ನಖದಲಿ ಚಿವುಟಲಹುದು ಮುಂದೆ ಲಳಿಗೆ ಕೂರುಗುರಿಗಂಜುವುದೇ (ದೋಹಕ. ೧೧-೧೩). 'ನಖಕ್ಷತ' ಪರಾ. ೨. ಪ್ರಾಣಿಗಳ ಮೊನೆಯುಗುರು; ಪಂಜ: ಆನೆ ಅಂಕುಶಕ್ಕಂಜುವುದೆ ಅಯ್ಯಾ ಮಾಣದೆ ಸಿಂಹದ ನಖವೆಂದು ಅಂಜುವುದಲ್ಲದೆ (ಬಸವ. ೭೩೬). ೩. ಗೊರಸು; ಖುರ. 'ನಖಪುಟ' ಪರಾ. ೪. ಒಂದು ಬಗೆಯ ಗಂಧದ್ರವ್ಯ: ನಖ (ನಖಲ)(ಮುಂಬಿಟ್ಟ. ೧೬೨). ೫. ಒಂದು ಬಗೆಯ ಸಸ್ಯ: "ಶರಃ–ಬಿಲ್ಲವತ್ತ, ನಖ, ಲೊಕ್ಕಿ, ತಾಳಮರ" (ಓಷಧಿ. ೦೫೯). ೬. [ಗಣಿತ] ಇಪ್ಪತ್ತು ಎಂಬ ಸಂಖ್ಯೆಯ ಸಂಕೇತ : "ನಖಮದಿಪ್ಪತ್ತು" (ಮಂಗರಾ. ೦೦೪-೯).

ನಖಬಣ್ಣವ ಕಾಣು = ಖುತು ಮ ತಿ ಯಾ ಗು; ಬಹಿಷ್ಠೆಯಾಗು : ಭೇ ಷ್ಠ ಕ ರಾ ಯ ನಾ ತ್ಮ ಸಂ ಜಾ ತೆ ನಖಬಣ್ಣವ ಕಂಡು ನಾಲ್ಕಿನೆಗಂಡು ವೈದಿಕದಲ್ಲಿ ಮಿಂದಳುತ್ಸವದಿ (ದೋಹಕ. ೯-೨೭). **ನಖಮಾಂಸಪ್ರೀತಿ** = ಉಗುರಿಗೂ ಮಾಂಸಕ್ಕೂ ಇರುವ ಸಂಬಂಧದಷ್ಟು ಹತ್ತಿರದ ಪ್ರೀತಿ, ಅನ್ಯೋನ್ಯತೆ : ಆತನೊಡವೋಯ್ತು ವಗೆ ನಿಮಗಾತನಿನಗ್ಗಳದ ಮಗನೆನಾಂ ನಖಮಾಂಸಪ್ರೀತಿಯೊಳೆ ನೆಗೞ್ದೆಂ (ಶಂಪಭಾ. ೧೪-೭); ಸುಖಸಂಕಥಾವಿನೋದದಿನಖಿಳಸುಖೋಪಭೋಗಮಂ ಭೋಗಿಸುತಂ ನಿಖಿಳಬಳ ಸುಬಳನೃಪತಿಗೆ ನಖಮಾಂಸಪ್ರೀತಿಯಿಂದೊಡಂಬಡೆ ನೆಗೞ್ದಂ (ಸುಕುಮಾ. ೨-೪೦). **ನಖಮಾಂಸಸ್ಥಿತಿ** = ನಖಮಾಂಸಪ್ರೀತಿ : ಪಜ್ಜಾಯುಧಂಗಂ ಹಸನ್ಮುಖಿ ಲಕ್ಷ್ಮೀಮತಿಗಂ ಪುರಾತನಭವಸ್ನೇಹಕ್ಕೆ ಪೂರ್ಣಂ ಮಹಾಸುಖಮಾಗುತ್ತಿರೆ ಬಂದು ಪುಟ್ಟಿ ಗುರುವುಂ ತಾನುಂ ಮನಂಗೊಂಡರಾ ನಖಮಾಂಸಸ್ಥಿತಿಯಪ್ಪ ಪತ್ತುಗೆಗಳಿಂ ಕ್ಷೇಮಂಕರಾಧೀಶನಂ (ಶಾಂತಿಪು. ೭-೦೨೦). [ ಸಂ. ]

**ನಖಂಪಚ** (ಗು). ೧. ಉಗುರುಬೆಚ್ಚಗಿರುವ. (ನಾ). ೨. ಉಗುರು ಬೆಚ್ಚಗಾದುದು : ಮದನದವಾಗ್ನಿತಪ್ತರೆಯರ ಸುಯ್ಯು ನಖಂಪಚವಾಗಿ ಬರ್ಪ ತಣ್ಣದಿರನೆಲರ್ಗೆ (ಅನಂಪು. ೭-೮೧). [ ಸಂ. ]

**ನಖಕ್ಷತ** (ನಾ). [ಕಾಮಶಾ] ಉಗುರಿನಿಂದಾದ ಗೀರು,-ಗುರುತು ; **P** "ನಖಕ್ಷತ –ಅ : ಆಚ್ಛುರಿತಕ, ಅರ್ಧಚಂದ್ರ, ಮಂಡಲ, ರೇಖಾ, ವ್ಯಾಘ್ರನಖ, ಮಯೂರಪದಕ, ಶಶಪ್ಲುತಕ, ಉತ್ಪಲಪತ್ರಕ(ಕಾಮ. ೪೪)" (ಶ್ರೀವತ್ಸ. ೩೩೮). ನಖಕ್ಷತದ ಎಂಟು ಬಗೆಗಳನ್ನು ಹೀಗೆ ವಿವರಿಸುತ್ತಾರೆ. ೧. ಆಚ್ಛುರಿತಕ = ಗುರುತಾದರೂ ನೋವಾಗದಂತೆ ಜಿಗುಟುವಿಕೆ. ೨. ಅರ್ಧಚಂದ್ರ = ಅರ್ಧಚಂದ್ರಾಕಾರದ ಗುರುತು ಬೀಳುವಂತೆ ಜಿಗುಟುವಿಕೆ. ೩. ಮಂಡಲ = ವೃತ್ತಾಕಾರದ ಗುರುತು ಬೀಳುವಂತೆ ಜಿಗುಟುವಿಕೆ. ೪. ರೇಖಾ = ಒಂದು ಗೆರೆಯಾಕಾರದಲ್ಲಿ

ಗುರುತು ಬೀಳುವಂತೆ ಜಿಗುಟುವಿಕೆ. ೫. ವ್ಯಾಘ್ರನಖ = ಹುಲಿಯ ಉಗುರಿನ ಆಕಾರದ ಗುರುತು ಬೀಳುವಂತೆ ಜಿಗುಟುವಿಕೆ. ೬. ಮಯೂರಪದಕ = ನವಿಲ ಕಾಲಿನ ಗುರುತಿನಂತೆ ಗುರುತು ಬೀಳುವ ಹಾಗೆ ಜಿಗುಟುವಿಕೆ. ೭. ಶಶಪ್ಲುತಕ = ಮೊಲದ ನೆಗೆತದಲ್ಲಿ ನೆಲದ ಮೇಲೆ ನಾಲ್ಕು ಕಾಲುಗಳ ಗುರುತು ಬೀಳುವಂತೆ ನಾಲ್ಕು ಕಡೆ ಗುರುತು ಬೀಳುವಂತೆ ಜಿಗುಟುವಿಕೆ. ೮. ಉತ್ಪಲಪತ್ರಕ = ಕಮಲದ ಎಲೆಯಾಕಾರದ ಗುರುತು ಮಾಡುವಿಕೆ. ಈ ಗುರುತುಗಳ ಬಗ್ಗೆ ವಾತ್ಸ್ಯಾಯನನ ಕಾಮಸೂತ್ರದಲ್ಲಿ ವಿವರಣೆಗಳು ಸಿಕ್ಕುತ್ತವೆ: ಹಾರಗಳನ್ನೊಕ್ಕಿಕದಿಂ ನಖಕ್ಷತಯುತಂ ವಕ್ಷೋಜಯುಗ್ಮಂ ಮನಂಬುಗೆ ರಾಗಂ ಮಿಗೆ ಮೇಲುದಂ ಮುಟಿದು ನೋಟ್ಟಬ್ಬಾಕ್ಷಿ ಕಣ್ಗೊಟ್ಟಿದರ್ (ಪುಷ್ಪಪು. ೫-೨೭) ; ತೊಡೆ ನಡು ಕಂಠತಟಂ ಬೆಂಗಡೆ ಹೃತ್ಕಟಿ ಕಕ್ಷಪಾರ್ಶ್ವ ಜಘನಂ ಗುಹ್ಯಂ ಪೆಡತಲೆ ಮೊಲೆ ಮುಂಗೈ ಪಣೆ ನಿಡುದೋಳ್ ಕರ ಪೃಷ್ಠಮಿವು ನಖಕ್ಷತದೆಡೆಗಳ್ (ಮನ್ಮವಿ. ೧೩-೪) ; ಇದು ನಖಕ್ಷತವ ನಿಡುವೆಡೆ ದಂತಹತಿಯು ನೆಲೆಯಿದುವೆ (ನವಮೋ. ೧೭-೫೩).

[ ನಖ + ಕ್ಷತ ]

**ನಖಗಂದೆ** (ನಾ). = ನಖಕ್ಷತ : ಉಸುರನೊಳದೆಗೆವುತ್ತಾ ಬಾಗಿ ತೋಳ್ತೊಡೆಯ ನಖಗಂದೆಗಳನೊರಸಿಕೊಳುತ (ಹರಿಶ್ಚ. ೪-೩೨). [ನಖ+ಗಂದೆ]

**ನಖಘಾತ** (ನಾ). ೧. ಉಗುರಿನಿಂದ ಗಾಯಗೊಳಿಸುವಿಕೆ. ೨. = ನಖಕ್ಷತ: ಪುಲಿಯುಗುರೋಳಿ ವಕ್ರಗತಿ ಕೋಮಲವಪ್ರಘನತ್ರಿರೇಖೆ ಮಂಡಲಕ ಶಶಪ್ಲುತಾರ್ಧಶಶಿ ಕದ್ಗ್ರಹಣಂ ಶಿಖಿಭೇಕವಾದವೃತ್ಪಲಸರಸೀಜಪುಷ್ಪ ಯುಗಳಾಕೃತಿಸಪ್ತಮಕಂ ದ್ವಿಸಪ್ತಕಾಖಿಲನಖಘಾತಮಿಂತು ಪೆಸರ್ವೆತ್ತುಪು ಷೋಡಶರೂಪಭೇದದಿಂ (ಮನ್ಮವಿ. ೧೩-೩). [ ನಖ + ಘಾತ₂ ]

**ನಖದೀಧಿತಿ** (ನಾ). ಉಗುರಿನ ಹೊಳಪು,-ಕಾಂತಿ : ಬಿಳಿದು ಕರಿದೆಂಬಾಬಿವರ್ಣದ ಹೊಲಬು ಹೊದ್ದದ ಸೂರ್ಯಕೋಟಿಯ ಹೊಳಹು ನಖದೀಧಿತಿಯ (ಕುಮಾವ್ಯಾ. ೩-೬೫). [ ನಖ + ದೀಧಿತಿ ]

**ನಖದೀಪ್ತಿ** (ನಾ). = ನಖದೀಧಿತಿ : ನಖದೀಪ್ತಿಮುಖೇಂದುಮಯೂಖಮಾನತೋಪಾಸಕವಾಣಪದ್ಮವನಮಂ ಮುಗಿಸುತ್ತಿರೆ (ಪುಷ್ಪಪು. ೧೩-೧೧೯).

[ ನಖ + ದೀಪ್ತಿ ]

**ನಖನಿಕರ** (ನಾ). = ನಖಪಂಕ್ತಿ : ಉರಿದವರಸನ ನಖನಿಕರ ಹೊಗೆವೆರಸಿ ಕೌಂಡಲೋಡಿ ಹೊಕ್ಕರು ನರವೃಕೋದರರಸುರರಿಪುವಿನ ಪಶ್ಚಿಮಾಂಗದಲಿ (ಕುಮಾವ್ಯಾ.ಗ. ೦೦-೬೭). [ ನಖ + ನಿಕರ₁ ]

**ನಖನಿಕಾಯ** (ನಾ). = ನಖಪಂಕ್ತಿ : ನಖನಿಕಾಯದಿನುಣ್ಮುವ ಕಾಂತಿಜಾಳ ಮಂಜರಿ ಲುಳಿಕಾಂಗುಳಿಪ್ರಕರದಿಂ ಪೊಱಪೊಣ್ಮುವ ವಾರಿಧಾರೆಯುಂತಿರೆ (ಕಾದಂಪೂ. ೬೫). [ ನಖ + ನಿಕಾಯ ]

**ನಖಪಂಕ್ತಿ** (ನಾ). ಉಗುರುಗಳ ಸಾಲು,-ಸಮೂಹ: ರಾಜಸದ ಸಂಜನಿತ ತಾಮಸ ಬೀಜಶೇಷದ ಪಜವಮುಖಿ ನೋಡಿದಳು ನಖಪಂಕ್ತಿಗಳನವನಿಪನ (ಕುಮಾವ್ಯಾ.ಗ. ೧೦-೬೩). [ ನಖ + ಪಂಕ್ತಿ ]

**ನಖಪಂಜರ** (ನಾ). = ನಖ ೨ : ಹುಲಿಯು . . . ತನ್ನ ನಖಪಂಜರದ ಒಂದೇ ಹೊಡೆತದಿಂದ ದೊಡ್ಡದೊಡ್ಡ ಮೃಗಗಳ ಹೊಟ್ಟೆಯನ್ನು ಹರಿಯುತ್ತದೆ (ಮುಂಬಯಿ. ೪-೩೬).

[ ನಖ + ಪಂಜರ₂ (<ಪಂಜಾ) ]

**ನಖಪುಟ** (ನಾ). ಗೊರಸು ; ಕೊಳಗು ; ಖುರ : ಅರುಣಾಕ್ಷಂ . . . ದೀರ್ಘವಾಲಂ ಕಠಿಣ ನಖ[ಪಾಠಾಂ. ಖುರ]ಪುಟಂ ರೇಣುಭಾಳಸ್ಥಳಂ ಕರ್ಬುರ ನಾದಂ ವೃತ್ತಕಾರಂ ಕುಸುಮಧವಳಮಂ ಶೋಣಿ ಫೇನಂ ಕರಂ ಭೀಕರ ಮಾಗಲೊಪ್ಪುಗುಂ ಕಾನನದೊಳಿಭಸಮಾನಂ ಲುಲಾಯಪ್ರತಾನಂ (ಮಲ್ಲಿಕಾ. ೩-೧೭೯) ; (ದಸಕು. ೪-೩೯ ನೋ.). [ ನಖ + ಪುಟ₁ ]

**ನಖಪ್ರಹಾರ** (ನಾ). ಪಂಜದ ಹೊಡೆತ : ಉದಿತಕ್ರೂರನಖಪ್ರಹಾರಭರದಿಂದ್ಯದಾಜಿ ದಾಷ್ಟ್ರೋಗ್ರಪಾತದಿನೇಟಿಂಟು ಸುರುಳ್ದುರುಳ್ವನೆಗವೇಣ ಶ್ರೇಣಿಯಂ ಪಾಯ್ದು ಕೊಂದುದನೇವೇಟ್ವುದೊ ಶತ್ರುಸಂಹರಣಕೇಳೀಶೀಘ್ರಮಂ ವ್ಯಾಘ್ರಮಂ (ಪುಷ್ಪಪು. ೫-೭೧).

[ ನಖ + ಪ್ರಹಾರ ]

**ನಖಭಾಗ** (ನಾ). ೧. ಉಗುರಿನ ಭಾಗ. ೨. ಆಕಾಶವಲ್ಲದುದಂ. ೧, ೨ : ಆವುವು ಕತ್ತಲೆಮೊತ್ತವನೋಡಿಸಿ ಖಭಾಗಶೋಭೆಯ ಪಸರಿಸುತ ನಖಭಾಗದಿ ಮೇಣತ್ತಲು ತೋರುತ ಪದುಮದ ಸಿರಿಯನು ದೊರೆಕೊಳುತ (ಧ್ವನ್ಯಾಲೋ. ೯೬). [ ಸಂ. (ನಖ + ಭಾಗ ; ನ + ಖ + ಭಾಗ) ]

**ನಖಮಯೂಖ** (ನಾ). = ನಖದೀಧಿತಿ : ಶ್ರೀಪತಿಗೆ ಯುದ್ಧಮಲ್ಲ ಮಹೀಪತಿಗೆ ನೆಗಟಿಸ್ತಿ ಪುಟ್ಟೆ ಪುಟ್ಟಿದನಖಿಳಕ್ಷ್ಮಾಪಾಲಮೌಳಿಮಣಿಕಿರಣಾಪಾಳಿತನಖಮಯೂಖ ರಂಜಿತಚರಣಂ (ಪಂಪಭಾ. ೧-೦೮) ; ಸುರಗಣಸ್ತೋಮಮಣಿ ಮಕುಟಮಂಡಿತ ನಖಮಯೂಖಪದಕಾಮರಸಯುಗಳ ಪರಮಾರಾಧ್ಯ ಮರುಳುಸಿದ್ಧೇಶ ಸಲಹು (ಗುಭಕ. ೦-೧). [ ನಖ + ಮಯೂಖ ]

**ನಖಮರೀಚಿ** (ನಾ). = ನಖದೀಧಿತಿ : ಕೃತಕಭೀಮನ ಕೊಂಡು ಮುಳುಗಿತು ಕ್ಷಿತಿಪತಿಯ ರೋಷಾಗ್ನಿಯಾತನ ಸತಿಯ ಖತಿ ಮಗ್ಗಿತು ಮಹೀಶನ ನಖಮರೀಚಿಯಲಿ (ಕುಮಾವ್ಯಾ.ಗ. ೧೧-೬೮). [ ನಖ + ಮರೀಚಿ ]

**ನಖಮಿತ್ತೆಲ್ಲ** (?) (ನಾ). ಒಂದು ಬಗೆಯ ಖಾದ್ಯ (?): ತಱಗು ಚಕ್ಕುಲಿ ಹೂಸಣಂಬ ಹೂರಿಗೆಗಳಂ ಅಱುಬೋನ ಫೇಣಿ ಗಾರಿಗೆ ಇಡ್ಡಲಿಗೆ ಅವುಗು ಶಿಱಿಸೇವಗೆಯನು ಸರವಳಿಗೆ ಪರಡಿಗೆಯ ನಖಮಿತ್ತೆಲ್ಲ[ಪಾಠಾಂ. ನಖಮಲ್ಲತ್ತಿ, ನಖವಿಮುಲ್ಲಕ್ತಿ] ಅಡ್ಡುಗೆಯನು . . . ಗಡಣಿಸುತ್ತ ಗುಡ್ಡರುಗಳಿಗೆ (ಸಿದ್ಧರಾ. ೮-೮೫). [ ? ]

**ನಖರ₁** 'ನಕರ' ನೋ.

**ನಖರ₂** (ನಾ). ೧. ಉಗುರು ; ನಖ : "ಕಾಮಾಂಕುಶಾಃ, ಕರರುಹಾಃ, (ಪುನರ್ನವಾಃ) ಪಾಣಿಜಾಃ, ನಖಾಃ, ನಖರಾಃ – ಈ ೫ (೬ ?) ಉಗುರ್" (ಹಲಾಯು. ೫೪-೩೫೭) : ಭುಜಯುಗವಿಶಾಲವ ಕರತಲರಸಾಲವ ನಖರ ಮಲ್ಲಿಕಾಲವ (ಕಳವಿ. II, ೧೮೩). ೨. ಸಿಂಹ, ಹುಲಿ ಮೊದಲಾದ ಪ್ರಾಣಿಗಳ ಮೊನಚಾದ ಉಗುರು,-ಪಂಜ : ಮೃಗರಾಜನ[ಪಾಠಾಂ. ಕ, ಮ]ಖರ ಬಾಣಾಳಿಗಳಿಂ ತೆಗೆನೆಱೆದು ಶಲ್ಯನುಱಿದಿಸೆ ಬಿದುವಂ ಮೃಗರಾಜಂಗಳ ಪೋಟ್ಟಪೊಲಗಲ್ವಿನಂ ಪೋಟ್ದು ವುಗ್ರಬಾಣಾವಳಿಗಳ್ (ಪಂಪಭಾ. ೦೦-೧೦೯) ; ಕಿರಣಂ ತೀಕ್ಷ್ಣಕರಂಗೆ ತೀಕ್ಷ್ಣನಖರಂ ಸಿಂಗಕ್ಕೆ ವಜ್ರಾಯುಧಂ ಪುರುಹೂತಂಗೆ (ಪಂಪಾಮ. ೧೧-೩೫). [ ಸಂ. ]

**ನಖರಂಜನಿ** (ನಾ). ಉಗುರು ತೆಗೆಯುವ ಸಾಧನ ; ಬಾಣ : ಶಿವನಂ ಪ್ರಮಥರಂ ತನ್ನ ಗುರುಪನಾನಂದದಿಂ ನುತಿಗೆಯ್ದು ವಂದಿಸುತೆ ಮನದೊಳಗೆ ಮುಂದಿರ್ದ ಯಾಮಿಕರ ಕರದೊಳೆ ಸೇರಿರ್ದ ನಖರಂಜನಿಯ ಮೇಲೆ ಮುದದಿಂ ಚೆಂದಮಪ್ಪಂತೆ ಕೆಳೆಯುತೆ ಮೂಲಮಂತ್ರದಿಂದೊಂದಿ ಮಂತ್ರಿಸೆ ಪಟ್ಟ ಭೂತಿಯು ಬಳಿಕ ತಱಿಸುಂದ ತನ್ನಖರಂಜನಿಯನೊಸೆದು ಕಳೆಕೊಂಡು ಲಿಂಗಜಲದಿಂದ ಕರ್ಚಿ (ಅರಾಚ. ೪-೨-೩೨).

[ < ಸಂ. ನಖರಂಜನೀ ]

**ನಖರಚ್ಛಾಯೆ** (ನಾ). = ನಖದೀಧಿತಿ: ಚತುರಂತಕ್ಷಿತಿಭಾರಮಂ ಕಳೆವುಲುಂ ಸಾರ್ದಿರ್ದೊಡಂ ರಾಜ್ಯಮೋಹಿತನಾಗಿರ್ದಪನಿಂದುಮೊಂದು ನಖರಚ್ಛಾಯಾ ಕದಂಬಂಗಳಿಂ ಸುಕಬಾಹಾಪರಿಘಂ ಸಮಂತು ನಗುವಂತಿರ್ದಪ್ಪುದು (ಚಂದ್ರಪು. ೪-೦೩). [ ನಖರ₂ + ಛಾಯೆ ]

**ನಖರಾ** (ನಾ). ಬೆಡಗು ; ಒಯ್ಯಾರ ; ಬಿನ್ನಾಣ ; ಒನಪು : ಅವಳು ನಖರಾ ಮಾಡುವ ಸುಂದರಯುವತಿಯಾಗಿದ್ದಳು (ಆಕಿಶ್ರೀ. ೦೫೯).

[ ← ಅರ. ಪಾರ. ನಖರಹ್; ಹಿಂ. ಮರಾ. ನಖರಾ. ]

**ನಖರಾಯುಧ** (ನಾ). ೧. ಮೊನಚಾದ ಉಗುರುಗಳನ್ನು ಆಯುಧವಾಗಿ ಉಳ್ಳುದು; ಸಿಂಹ: "ಹರಿಃ, ಮೃಗಪತಿಃ . . . ನಖರಾಯುಧಃ, ಮೃಗರಿಪುಃ, ಸಿಂಹಃ, ಕಂಠೀರವಃ– ಈರ್ ೯ ಸಿಂಹದ ಪೆಸರ್" (ಹಲಾಯು. ೩೭-೭೦); ಕರಿ ನಖರಾಯುಧಂ ಮುಳಿಯುವನ್ನೆಗಮುಗ್ರನಿಶಾಟರಚ್ಯುತಂ ಪರಿಯಿಡದನ್ನೆಗಂ . . . ಮರ್ದಿಸದಂ ವೃಷನಂ ಜನಾರ್ದನಂ (ಜಗಎ. ೫-೩೮). ೨. ಹುಲಿ. ೩. ಹಂಜ. [ ನಖರ್2 + ಆಯುಧ ]

**ನಖರುಚಿ** (ನಾ). = ನಖದೀಧಿತಿ : ದೂಣದ ಪಾದವೆ ತೊಟ್ಟಲ್ ರೇಣುವೆ ಬಾಯ್ವೆಣ್ಣೆ ನಖರುಚಿಯೆ ಪೊಲೆವಾಲ್ ಮತ್ಪ್ರಾಣವೆ ನಿಮ್ಮಯ ಕರುಣಂ ಕ್ಷೋಣಿಯೊಳೆನಗಾಗೆ ಬಸವನಾದೆಂ ಬಳಿಕಂ (ಬಸರ. ೮-೩ ಪದ್ಯ); ನೆಱೆವೆಱೆ ಮೊಗದ ಮೃಗಾಕ್ಷಿಯ ಮಿಱುಗುವ ನಖರುಚಿಗೆ ಸೋಲ್ತು (ರಾಜಶೇ. ೭-೪೪).

[ ನಖ + ರುಚಿ ]

**ನಖರೇಖೆ** (ನಾ). = ನಖಕ್ಷತ: ಈ ನೆಲವೆ ಹರನನೊಲಿಸುವ ರೂಪ್ಪು ಶಿವಶಿವನೆ ಪೊರೆದರಿಸಿನದ ಕಂಪು ನಖರೇಖೆ ನಗೆಮೊಗಂ ಹರಪೂಜೆಯೆಂಕಿದೇಕ [ ಕೃ] ಟಾ ಸೋಜಿಗಂ ಎನುತೆ ಕಳ್ಳಿರ್ದು (ನಂಬಿರ. ೧೭-೯); ಚಂದ್ರಮುಖಿಗೆ ಚಕ್ರಿ ನಖರೇಖೆಯೆಂಬರ್ಧಚಂದ್ರಾಭರಣವ ತೊಡಿಸಿ (ಭರತ. ೪೨-೧೦).

[ ನಖ + ರೇಖೆ ]

**ನಖಿಲು** (ನಾ). ಜೀರ್ಣವಾದುದು; ಖಿಲವಾದುದು: ಆ ಮಠ ನಖಿಲಾಗಿ ಅರಮನೇ ಸಿಸ್ತಿಗೆ ಕೂಡಿಬರುತಿದ್ದಲ್ಲಿ ಯಾ ಮಠಧರ್ಮಕೆ ಬಿಟ್ಟದು (ಎಕ. VIII, ತೀರ್ಥಹ. ೯೭-೦೫; 1664). [ ? ]

**ನಖವ್ರಣ** (ನಾ). = ನಖಕ್ಷತ: ತೋಳ ನಖವ್ರಣಕೆಱಗಿದ ಬಾಳೆಗಳಂ ನೋಟ್ಟ ಬಾಳೆ ಕಣ್ಮೇನೆಂಬಾಳೋಳಮನೊಡರಿಸೆ ಸಲೆ ನೃಪಮಾಳೆಗೆ ಪಡೆದಳ್ ಮೃಗಾಕ್ಷಿ ಪರಿಸಂಭ್ರಮಮಂ (ಶಾಂತಿಪು. ೮-೪೩); ಮೃದುತರ ಕಲಿಪಾರ್ಜನವರ್ಣನಂ ನಖವ್ರಣಮೆಸೆಗುಂ (ಮನ್ಮವಿ. ೦೩-೨).

[ ನಖ + ವ್ರಣ ]

**ನಖಶಿಖಾಂತ** (ಅ). ಕಾಲುಗುರಿನಿಂದ ತಲೆಯ ಮುಡಿಯವರೆಗೆ; ಆಪಾದಮಸ್ತಕ; ಮೈಯೆಲ್ಲ; ಪೂರ್ಣವಾಗಿ: ತುಂಗಕ್ಕ ಅದಾಗಲೇ ನಖಶಿಖಾಂತ ಹೊತ್ತಿಕೊಂಡಿದ್ದಳು (ಮೂರುದಾ. ೦೪೫); ರತ್ನ ಬಾಗಿಲಲ್ಲಿ ನಿಂತಿದ್ದ ಸರಸಮ್ಮನನ್ನು ಒಮ್ಮೆ ನಖಶಿಖಾಂತ ನೋಡಿದಳು (ಕುಸುಸಂ. ೩೯).

[ <ಸಂ. ನಖಶಿಖಾಂತಂ ]

**ನಖಹತಿ** (ನಾ). ೧. = ನಖಕ್ಷತ: ಕಳಂಬೊಕ್ಕ ನಿರಿಸುಗೆಯ್ದು ನಖಹತಿ ದಶನಹತಿ ಪಾದಪಾತಂ ಮುಷ್ಟಿಪಾತಮೆಂಬ ದೋಷಂಗಳಂ ಪೊರ್ದದ ನಾಲ್ಕುಂ ಸ್ಥಾನದೊಳಂ . . . ನೆಱೆದು (ಚಂದ್ರಪ್ರ. ೫-೭೭ವ). ೨. ಪಂಜದ ಹೊಡೆತ: ನರಹರಿಯ ನಖಹತಿಗೆ ಬಿಕ್ಕನೆ ಬಿಂದ ನೆತ್ತಿಯ ಭಟರು (ಕೌಶಿರಾ. ೨೧-೦೩). [ ನಖ + ಹತಿ ]

**ನಖಾಂಕ** (ನಾ). ಉಗುರಿನಿಂದಾದ ಗುರುತು, –ಚಿಹ್ನೆ: ಏಲಾಸದೆ ನಿಂದು ನಿರ್ಜರಸ್ತ್ರೀ ಪದೆದೊತ್ತಿ ಮೇಲುದನಭೀಕ್ಷಿಪಳುತ್ಕುಚದೊಳ್ ನಖಾಂಕಮಂ (ರಾಜಶೇ. ೨-೮೯). [ ನಖ + ಅಂಕ2 ]

**ನಖಾಂಶು** (ನಾ). ಉಗುರಿನ ಕಾಂತಿ: ರಂಜಿಸುವ ವಸಂತಲಕ್ಷ್ಮಿಯ ಕಿಶಲಾಗ್ರದೊಳಿಕ್ಕಿ ನಖಾಂಶುಜಾಲಮಂ ಪಸರಿಸುತಿರ್ಪ ತನ್ನ ಕರೆಮಂ ವನದೇವತೆ ಪಾರಿಜಾತದೊಂದೆಸೆವಲಗೊರ್ಗಂಚಲಂ ಒಡಿದು ನಂದನದೊಳ್ ಬರುತೊರ್ವಳೊಟ್ಟದಳ್ (ಶಾರದಾಂಪು. ೭೭೭). [ ನಖ + ಅಂಶು ]

**ನಖಾಕ್ಷಿಪ್ತ** (ಗು). ಉಗುರಿನಿಂದ ಚಿಮ್ಮಿದ, –ಮಿಡಿದ: ಬಾಲಿಕೆ ಗದ್ಗದ ಕಂಠೆ ವಾಮಕರಪಲ್ಲವಾಂಗುಳಿನಖಾಕ್ಷಿಪ್ತಾಶ್ರುಸ್ರವೆ . . . ಬಿನ್ನಪಿಕುಂ (ಶಾಂತಿಪು. ೬-೬೩ವ). [ ನಖ + ಆಕ್ಷಿಪ್ತ ]

**ನಖಾಗ್ರ** (ನಾ). ಉಗುರಿನ ತುದಿ, –ಮೊನೆ: ದೇವರ್ಕಳ್ ಸನತ್ಕುಮಾರ ಚಕ್ರವರ್ತಿಯ ರೂಪಂ ಪಾಳಾಗ್ರದಿಂ ತೊಟ್ಟು ನಖಾಗ್ರಂಬರೆಗಂ ನಖಾಗ್ರದಿಂ ತೊಟ್ಟು ಪಾಳಾಗ್ರಂಬರೆಗಂ ಏಱೆಯುಮಿಱಿದುಯುಂ ನೀಡುಂ ಭಾವಿಸಿ ನೋಡಿ ಚೋದ್ಯಂಬಟ್ಟು (ವಡ್ಡಾರಾ. ೬೭-೨).

[ ನಖ + ಅಗ್ರ1 ]

**ನಖಾನಖಿ** (ನಾ). ಪರಸ್ಪರ ಉಗುರುಗಳಿಂದ ಮಾಡುವ ಕಾದಾಟ, –ಜಗಳ: ಮಲ್ಲಾಮಲ್ಲಿ ನಖಾನಖಿಗಳ ಮಾಡಿದಲ್ಲದಿವಳು ಬಿಡಳೆನ್ನ (ಶಂರಾಸಾಂ. ೩೨-೧೨೧); ಸ್ಮರಸಂಗ್ರಾಮದ ಭೋಗರಾಜರೆದಟಂ . . . ತದ್ರಾಜಮಂದಿರಮಂ ಪೊಕ್ಕು ರಾಜಮಂಡಲದ ಭಂಡಾರಂಗಳಂ ಸೂಱೆಗೆಯ್ದರೆಬರ್ ಕಾದೆ ನಖಾನಖಿ ಪ್ರಬಳದಂತಾದಂತಿಯಿಂ ಕಾದಿದರ್ (ಹಮ್ಮೀರ. ೨-೮೭); ಓರ್ವರೊಳೋರ್ವರ್ ಮುಷ್ಟಾಮುಷ್ಟಿ ರಣಂ ನೆಗಳ್ದುದು ನಖಾನಖೀಸ್ಫುಟಯುದ್ಧಂ (ರಾಜಶೇ. ೬-೫೫). 'ಹಣಾಹಣಿ' ಪರಾ. [ ಸಂ. ]

**ನಖಾಯುಧ** (ನಾ). ಉಗುರೇ ಆಯುಧವಾಗುಳ್ಳುದು; ಸಿಂಹ: "ಹರಿ ಮೃಗೇಂದ್ರಂ ಪಂಚವಕ್ತ್ರಂ ನಖಾಯುಧಂ . . . ಕೇಸರಿಯೆನಲ್ ಸಿಂಹಮೆನಿಸಿಕ್ಕುಂ" (ಮಂಗರಾ. ೪೭-೭). [ ನಖ + ಆಯುಧ ]

**ನಖಾಯುಧವೈರಿ** (ನಾ). ಸಿಂಹದ ವೈರಿ; ಆನೆ: ವಾರಣಾಗ್ರಣಿಯುಂ ಮಹಾಸ್ತಂಬೇರಮೋತ್ತಮಂನಂ ನಖಾಯುಧವೈರಿಯುಂ ದುರ್ಧಾರಕುಂಜರ ರಾಜನಂ ತನ್ನಿ (ಬಸಪು. ೫೭-೩೨). [ ನಖಾಯುಧ + ವೈರಿ ]

**ನಖಾವನೇಜನವಾರಿ** (ನಾ). ಕಾಲುಂತೊಳೆದ ನೀರು; ಪಾದತೀರ್ಥ: ಆವನೊಬ್ಬನ ವಾಮಪಾದನಖಾವನೇಜನವಾರಿಯನು ಭಸ್ಮಾವಶೇಷದ ಲೋದಿ ಸಂದರು ಸಾಧು ಸದ್ಗತಿಗೆ (ನಿಭಾಗ. ೦-೮-೩೨); ಆವನೊಬ್ಬನ ವಾಮಚರಣನಖಾವನೇಜನವಾರಿಯನು ಗೌರೀವರನು ನೆಱೆ ಧರಿಸಿ ಪಾವನನಾದನೀ ಜಗಕೆ (ನಿಭಾಗ. ೦೦-೭೪-೦೪). [ ಸಂ. ]

**ನಖಾವಳಿ** (ನಾ). = ನಖಪಂಕ್ತಿ: ತೊಳಗುವ ಶಿಳಿವೆಳಗಿಂ ಶಶಿಕಳೆಯನುಱೆಕೆಗೈದ ಭಕ್ತರೆಲ್ಲರ ಮಿಡುಕಂ ಕಳೆಯಲ್ ಸಲೆ ನೆಱೆವ ನಖಾವಳಿಯೆಮ್ಮಂ ಪೊರೆಗುದಾತ್ತನರಕೇಸರಿಯಾ (ಧ್ವನ್ಯಾಲೋ. ೩).

[ ನಖ + ಆವಳಿ1 (= ಆವಲಿ)]

**ನಗ1** (ನಾ). ೧. ಒಡವೆ; ಆಭರಣ: ಹೊಸದಾಗಿ ಒಂದು ಬೆಳ್ಳಿ ಬಂಗಾರದ ಅಂಗಡಿಯನ್ನು ಆರಂಭಿಸಲು ಸಾಕಾಗುವಷ್ಟು ನಗಗಳನ್ನು ಹೇರಿಕೊಂಡಿದ್ದಾಳೆ (ನಾಡಿಗೇ. ೨೮೫); ಮೈತುಂಬ ನಗ ಹಾಕಿಕೊಳ್ಳಬೇಕು (ಕಾಮಿಕಾಂ. ೬೭); ಅವಳ ಮೈಮೇಲೆ ಸಾವಿರಾರು ರೂಪಾಯಿ ಬೆಲೆಬಾಳುವ ನಗಗಳಿದ್ದವು (ಗರುದಾ. ೨೫): ಒಂದು ಮಹಾಸಂಕಟ ಮಾತ್ರ ಅವನನ್ನು ಬಿಟ್ಟಿರಲಿಲ್ಲ: ತನ್ನ ಮಗಳ ಮೈಮೇಲೆ ಹಾಕಿದ್ದ 'ನಗ' ಮಗಳ ಜೊತೆ ಒಂದಿರುಗುತ್ತದೆಯೋ ಇಲ್ಲವೋ ಎಂದು (ಪಾಲಿಮ. ೨೪೭). 'ನಗನಟ್ಟು', 'ನಗನಾಣ್ಯ' ಪರಾ. ೨. ಸರಕುಗಳ ಕಟ್ಟು, –ಹೊರೆ: ಮಲೆನಾಡ ಕೊಡಲಿಪೇಟೆಯೊಳಿಟ್ಟ ಜವಳಿಗಳ ಬಲುನಗಗಳ್ಮಾರಿತೋ ಮೇಣಿಲ್ಲವೋ ಸುದ್ದಿ ಬರಲಿಲ್ಲ (ಅರ್ಜವಿ. ೩೧-೩೭); ಒಂದು ಕೂರಿಗೆ ಹೊಲಕ್ಕೆ ನಾಲ್ವತ್ತು ನಗ ಒಣಮೆಣಸಿನಕಾಯಿಗಳಾಗುವವು (ಕೃಷಿಶ್ರ. ೭೧); ಆಮೇಲೆ ನಗಗಳನ್ನು ಕಟ್ಟಿ ಮಾರಾಟಕ್ಕೆ ಕಳಿಸುವರು (ಮುಂಬಯಿ. ೩-೨೯); ಗ್ರೋಸಿನಲ್ಲಿ ನಗಗಳು ೧೪೪ ಇರುತ್ತವೆ. ೫೦ ಗ್ರೋಸ ಅಂದರೆ ೭೨೦೦ ನಗ ಕಟ್ಟಿ ಪೆಟ್ಟಿಗೆಗಳು ಆಕಬಂದ ಪೆಟ್ಟಿಗೆಯಲ್ಲಿರುತ್ತವೆ. (ಮುಂಬವ್ಯಾ. ೦೯೦); ಮಾಲು ಖರೀದಿ ಮಾಡತಕ್ಕ ವೇಳೆಯಲ್ಲಿ ಗಿರಾಕಿಯರಿಗೆ ಒಂದೊಂದು ನಗ (ಡಾಗು) ತಿರುವಿಸಿ ತೋರಿಸಬೇಕಾಗುತ್ತದೆ (ಮುಂಬವ್ಯಾ. ೨೦೦); ಇಂಥಾ ೧೨ ಮಣದ ಒಂದು ನಗಕ್ಕೆ ಸೂರ್ತಿ ರೂಪಾಯಿಗಳ ಮೇಲೆ ಧಾರಣೆ ಇದ್ದು ಇದಕ್ಕೆ ಕರೋಡಗಿರಿ ದರ ರಾಶಿಗೆ ಮೂರು ರೂಪಾಯಿ ಪ್ರಕಾರ ಇರುತ್ತದೆ (ಮುಂಬವ್ಯಾ. ೨೮೭).

[ ದೇ.II ತಮಿ. ನಕ್ಕೆ; ತುಳು. ತೆಲು. ನಗ./ಹಿಂದಿ. ಮರಾ. ನಗ್ ]

**ನಗ$_{೩}$** (ನಾ). ಹಡಗು: ಕಳೆದ ವರ್ಷ ಹೊನ್ನಾವರದಲ್ಲಿ ಬಂದರದ ಎದುರಿಗೇನೇ ಮಾಲು ತುಂಬಿದ ಮೂರು ನಗಗಳು ಮುಳುಗಿದುವು . . . ಇಲ್ಲವಾಗಿದ್ದರೆ ನಮ್ಮ ನಗ. ಇಲ್ಲಿಂದ ಅಕ್ಕಿ ಸಾಗಿಸಿಕೊಂಡು ರತ್ನಾಗಿರಿಯಿಂದ ಸ್ವಲ್ಪ ಮ್ಹಾಲು ತೆಗೆದುಕೊಂಡು ಮುಂದೆ ಹೋಗಬೇಕಿತ್ತು (ಜಾರುದಾ. ೪೯); ನಡುವುರಿಯುತ ನಗನಾವೆಗೆ, ಕೂವೆಗೆ ಉಡಿಸಿದ ಹಾಯಿಯು ಹರಿಯುತ ಬಿರಿಯುತ ಹಡಗನು ಕೀಲಿಸಿ, ತುಮುರನು ತೇಲಿಸಿ, ದಡದಲಿ ಝಾಡಿಸಿ, ದೋಣಿಯನಾಡಿಸಿ (ಕಎಪು. ೨೭-೩). [ತುಳು. ನಗ./ಸಂ. ನೌಕಾ]

**ನಗ$_{೪}$** (ನಾ). ಒಂದು ಬಗೆಯ ಸುಗಂಧದ್ರವ್ಯ; ನಖ: ಮೃಗಮದ ಶ್ರೀಖಂಡಮಂ ಶಿರವಟ್ಟಿ ನಗ ಜವಾದಿ ಕಯಿರಗುಳಿಗೆಯಂ ತಂದಿಟ್ಟು (ಲಿಂಗಪು. ೧೬-೪೪). [<ಸಂ. ನಖ]

**ನಗ$_{೫}$** (ನಾ). ೧. ಚಲಿಸದೆ ಇರುವುದು; ಸ್ಥಾವರ; ಪರ್ವತ; ಬೆಟ್ಟ: "ಅಚಳಃ . . . ನಗಃ, ಶಿಖರೀ, ಸಾನುಮಾನ್, ಧರಃ, ಅದ್ರಿಃ, ಕುಧ್ರಃ– ಈ ೧೪ ಬೆಟ್ಟು" (ಹಲಾಯು. ೨೬-೧೧); "ಧರಮದ್ರಿ ಕುಧರಮದಹಾರ್ಯಂ ನಗಂ ಶಿಖರಿ . . . ಗೋತ್ರಮೆನಲು ಬೆಟ್ಟಕ್ಕೆ ನಾಮಂ" (ಮಂಗರಾ. ೨೯-೧); ಚಾತುರ್ಬಲಯುತನಾ ನಗವ ಬಳಸಿ ಬೀಡಂ ಬಿಟ್ಟಂ (ಆದಿಪು. ೫-೫); ಆ ವಿಂಧ್ಯನಗದೊಳಾ ನಾಯ್ ಪಾಪಾಯ್ತಾ ನವಿಲೆಯುಮ್ಮೆವಿಗ ಮಾಯ್ತು (ಯಶೋಚ. ೩-೪೫); ದೆಸೆದೆಸೆಗೆ ಹರಿಹರಿದು ಕಪಿಗಳು ವಸುಧೆಯೊಳಗಣ ನಗವ ತರುತಿರೆ (ತೊರಿರಾ. ೧೬-೫); ಮಿಗೆ ಶಾರದಾಭ್ರದಿಂ ಚಂದ್ರಮಂ ರೋಹಣದ ನಗದಿಂದ ಚೆಲ್ವ ರನ್ನಂ . . . ಪೂರ್ವಾದ್ರಿಯಿಂ ಝುಗಝುಗಿವ ಬಾಲಾರ್ಕನುದಯಿಸಿದನು (ಭಾವಚಿಂ. ೪-೧೪); ನಗವೆತ್ತಿದ ಕೂರ್ಮನಿಗೇಂ ತಗಲಿದ ಜಲಕಣವು ಭಾರವೇ (ಶಂಕರ. ೬-೨೩); ಇಲ್ಲಿಗೀರೈದು ಹರಿದಾರಿ ದೂರದೊಳೊಂದು ತಾನಿರ್ಪುದು ನಗಂ (ಶ್ರೀರಾಮಾ. ೦೪೮-೩೬೦). 'ನಗಜಾತೆ', 'ನಗಧರ' ಪರಾ. ೨. ಮರ; ವೃಕ್ಷ: "ವೃಕ್ಷಃ, ಅಂಘ್ರಿಪಃ . . . ನಗಃ, ದ್ರುಮಃ, ಪಾದಪಃ– ಈ ೧೯ ಮರು" (ಹಲಾಯು. ೨೯-೨೩); "ತರುವನಸ್ಪತಿ ಸಾಲಮಂಘ್ರಿಪಂ ದ್ರು ದ್ರುಮಂ ಧರಣಿಜಂ ಶಾಖಿ ಶಿಖಿ ನಗವದ್ರಿ ... ಕುಜಮೆನಲು ವೃಕ್ಷಕ್ಕೆ ನಾಮಪಕ್ಕಂ" (ಮಂಗರಾ. ೩೦-೧); ಪೂತಲರ್ದೊಪ್ಪುವ ಕರ್ಣಿಕಾರಭಾಸುರನಗದಂತೆ ಕಣ್ಗೆ ನಿದನಾಳ್ದುದು ಭೂರಿಸುವರ್ಣಭೂಧರಂ (ಕಬಕಿಂ. ೧-೩೫). ೩. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ: "ಋಷಿ ನಗ ಹಯಸ್ವರವುದೇಳು" (ಮಂಗರಾ. ೦೦೩-೮); ಯುಗ ಋತು ಗಜ ನಾಗಾಂಬರ ಮೃಗಧರ ನಗ ಷಟ್ಕವೆನಿಪ ವೃತ್ತದ ಲೆಕ್ಕಂ ಸೂಗಯಿಸಿ ತೋರ್ಕುಂ ಗಣಿಯಿಪುದಗಣಿತ ಗುಣಾನಿಲಯ ನಾಗವರ್ಮನ ಮತದಿಂ (ಛಂದೋಂಬು. ೨-೨೦೦); ಸಪ್ತ ಭಯ . . . ನಗ . . . ದ್ವೀಪ ಅಶ್ವ ಇಂತಿನಿತುಂ ಏಕ್ಕೆ ಹೆಸರು (ವ್ಯವಹಾ. ೦೦-೩೦). ೪. ಇಪ್ಪತ್ತೇಳು ಅಂಕೆಗಳುಳ್ಳ ಸಂಖ್ಯೆ: ಸ್ಥಾನಸಂಜ್ಞೆಯ ನಡುಪುದಕ್ಕೆ ಸೂತ್ರಂ:–ಏಕಂತು ಪ್ರಥಮಂ ಸ್ಥಾನಂ ದ್ವಿತೀಯಂ ದಶಸಂಜ್ಞಿಕಂ . . . ಸಪ್ತವಿಂಶ ನಗಚ್ಚೈವ ಅಷ್ಟವಿಂಶ ಮಹಾನಗಃ (ವ್ಯವಹಾ. ೮-೧೪). [ಸಂ.]

**ನಗಕುಲ, ನಗಕುಳ** (ನಾ). ಬೆಟ್ಟಗಳ ಸಮೂಹ; ಪರ್ವತಗಳ ಗುಂಪು: ಇರ್ದುದು ಮಹೇಂದ್ರಾಚಲಂ . . . ಮುಡಿಯಿಂ ಮುಗಿಲ್ಮುಟ್ಟಿ ನಗಕುಲ ಜಗದ ಜಟ್ಟಿ (ಶ್ರೀರಾಮಾ. ೩೬೩-೩೦). **ನಗಕುಳ**: ನಗಕುಳಕುಂಜರಂ ಜಳಧಿಕಾನನಮುರ್ವರೆಯೆಂಬಿವೆಲ್ಲಮಾವಗಮೊಳಗಾದುದೂ ಕುಳಿಶಮಚ್ಚಿಗೆ (ಪುಪ್ಪಪು. ೮-೭೩). [ನಗ$_{೫}$ + ಕುಲ]

**ನಗಕುಳ** 'ನಗಕುಲ' ನೋ.

**ನಗಚೂಳ** (ನಾ). ಬೆಟ್ಟದ ತುಂದಿ,–ಶಿಖರ: ಆ ನಗಚೂಳದೊಳ್ ಶಬರ ಬಾಲಕಿಯರ್ ವಿಧುಬಿಂಬದಲ್ಲಿ ತಮ್ಮಾನನಮಂ ನಿರೀಕ್ಷಿಸಿ (ಚಂದ್ರಪು. ೧೦-೩೨). [ನಗ$_{೫}$ + ಚೂಳ$_{೩}$ (= ಚೂಲ)]

**ನಗಜ** (ನಾ). ಪರ್ವತದಲ್ಲಿ ಹುಟ್ಟಿದುದು; ಆನೆ. [ಸಂ.]

**ನಗಜವಮ್ಮ** (ನಾ). ಒಬ್ಬಾತನ ಹೆಸರು: ಅಪ್ಪಯ ಸೆಟ್ಟಿಯ ಮಕ ನಗಜವಮ್ಮನ ಪಲಿಗ ಬೀರನೊಟಲಬಸ ರಾಜ್ಯದೊಳ ತುರುಗೋಳ ಕಾದಿ ಸತ್ತ (ಎಕ. X, ಗೋರಿಬಿ. ೮೫-೩; ಸು. ೯೭೦). [?]

**ನಗಜಾತೆ** (ನಾ). ಪರ್ವತದಲ್ಲಿ ಹುಟ್ಟಿದವಳು; ಗಿರಿಜೆ; ಪಾರ್ವತಿ: ಬೆಟ್ಟುಗಳ ರಟ್ಟೆಯಂ ಕಟ್ಟಿದಮರಾವತಿಯ ದಿಟ್ಟತನವಂ ನೋಳ್ಪೆನೆಂದು ನಗಜಾತೆಗೆಡೆಗೊಟ್ಟ ಗಿರಿ ವ್ಯಗರೂಪತಾಳಿ ಸುರಪನ ಕುಲುಹ ಕೇಣದಬಸುತ ಬಂದುದೋ (ಹಕಳಾ. ೨೦೪ ಹರಿ); ಮಗನಂ ತುಱುಂಬಿನೊಳಗಿಟ್ಟು ಕೊಂಡಿರ್ದಳಾ ನಗಜಾತೆ (ವೀಕ್ಕಪು. ೪-೮-೨೯); ಪುರಹರನೆ ಇರಿಸಿಕೊಂಡಳಿದವರ ಕಂಡು ಮನ ಮಱುಗದೇ ಅವರ ಗೊಡವೇತಕೆಂಬುದ ನನಗೆ ಅಱುಹಿಕೊಡಬೇಕೆಂದು ನಗಜಾತೆ ಬಿನ್ನವಿಸೆ (ಪ್ರಾತರಾ. ೬-೪೬); ನಗಜಾತೆ ಕೇಳೆಂದು ನಂದಿ ಸುಪ್ರಮಥರಿಗೆ ಗಗನಾಪಗಾಜಟನುಸುರುತಿರಲು (ದುರಪು. ೩-೨). [ಸಂ. ನಗಜಾತಾ]

**ನಗಜಾರಮಣ** (ನಾ). ಪಾರ್ವತಿಯ ಪತಿ; ಶಿವ: ನಗಜಾರಮಣ ನಾಗಾಸುರಚರ್ಮಾಂಬರನಿಗೆ ಮಿಗಿಲಾದ ದೈವಯಿನ್ನುಂಟೆ (ಅಭ್ಯಲೀ. ೪-೨೦). [ಸಂ.]

**ನಗಜೆ** (ನಾ). = ನಗಜಾತೆ: ನಿನಗೆಱುವಲ್ ಬಂದಂ ಶರ್ವನ ವಧು ಶರ್ವಾಣಿಯೆಂದು ನಗಜೆಯ (ಗಿರಿಕ. ೪-೬೮). [ಸಂ. ನಗಜಾ]

**ನಗಣ** (ನಾ). [ಛಂದ] ಮೂರು ಲಘುಗಳುಳ್ಳ ಒಂದು ಅಕ್ಷರಗಣ (UUU): ಮೂಱು ಲಘುವಾಗೆ ನಗಣಂ (ಛಂದೋಂಬು. ೦೩-೦೦); ಗುರು ಲಘು ಏಱುರಿರೆ ಮ–ನ–ಗಣ (ಕೃಬಿಡಿ. ೭೦). [ಸಂ.]

**ನಗಣ್ಯ** (ನಾ). ೧. ಗಣನೆಗೆ ಬಾರದುದು; ಗಣನೆಗೆ ಯೋಗ್ಯವಲ್ಲದುದು; ಕ್ಷುಲ್ಲಕ: ಆ ಹೆಬ್ಬುಲಿಯ ಕೂಗಿನ ಮತ್ತು ದೊಡ್ಡಾನೆಗಳ ಭಯಂಕರ ರಾವದ ಇದಿರು ನಾಯಿಯ ಬೊಗಳು ನಗಣ್ಯವಾಗಿ ಬಿಟ್ಟಿತು (ಮಲೆಮ. ೨೫೦). ೨. ಗಣನೆಗೆ ಯೋಗ್ಯವಲ್ಲದವನು; ಕ್ಷುಲ್ಲಕವ್ಯಕ್ತಿ: ಯಾರನ್ನು ಪಾಪಿಗಳು, ಹೇಯರೂ ಎಂದೂ ನಗಣ್ಯರು ಎಂದೂ ಅವರು ತ್ಯಾಗಮಾಡಿ ಬಂದಿರುವರೋ ಆ ಸಂಸಾರೀ ವ್ಯಕ್ತಿಗಳೇ ಇವರಿಗೆ ಅನ್ನವನ್ನು ಒದಗಿಸುವರು (ನಿಬಂಧ. I, ೬೦). [ಸಂ.]

**ನಗತ್ರೆ** (ನಾ). ಒಂದು ಬಗೆಯ ಸಸ್ಯ: ಮಲರಗ, ನಗತ್ರೆ (ಮೃಜಿಗಿ. ೪೦-೭೮೮). [?]

**ನಗದಿ** 'ನಗದು' ನೋ.

**ನಗದಿಗುಮಾಸ್ತ, ನಗದಿಗುಮಾಸ್ತೆ** (ನಾ). (ಕಚೇರಿ ಮೊದಲಾದೆಡೆಗಳಲ್ಲಿ) ಹಣದ ವ್ಯವಹಾರ ನಡೆಸುವ ಗುಮಾಸ್ತ,–ಕಾರಕೂನ,–ಸರಾಫ: ನಗದಿಗುಮಾಸ್ತರೆ, ನಿಮ್ಮ ಲೆಕ್ಕಕ್ಕೂ ಎರಡುಕಾಸು ಸೇರಿತು! (ಸಂಬಳ. ೨೫). **ನಗದಿಗುಮಾಸ್ತೆ**: "ಬ್ಯಾಂಕಿನ ಅಥವಾ ವರ್ತಕನ ಹಣದ ಜವಾಬ್ದಾರಿಯುಳ್ಳವನು; ನಗದಿಗುಮಾಸ್ತೆ" (Cashier. ಇಂಕನಿ). [ನಗದಿ (<ನಗದು) + ಗುಮಾಸ್ತ]

**ನಗದಿಗುಮಾಸ್ತೆ** 'ನಗದಿಗುಮಾಸ್ತ' ನೋ.

**ನಗದಿಪುಸ್ತಕ** 'ನಗದುಪುಸ್ತಕ' ನೋ.

**ನಗದಿಬುಕ್ಕು** (ನಾ). = ನಗದುಪುಸ್ತಕ: ಹಣಕಾಸಿನ ಲೆಕ್ಕಾಚಾರವನ್ನು ನಗದಿ ಬುಕ್ಕಿನಲ್ಲಿ ಬರೆದಿಡಲಾಗುತ್ತಿದೆ (ರೂಢಿ). [ನಗದಿ (<ನಗದು) + ಬುಕ್ಕು]

**ನಗದಿಮಾಡು** (ಕ್ರಿ). ಹಣವನ್ನು ಕೊಡು,–ಪಾವತಿಮಾಡು: ಈ ಕುಪ್ಪಟೂರ ಸೀಮೆಗೆ ಮೊಗಲರ ಬಗೆ ಹಣ ಸೀಮೆಗೆ ನಗದಿಮಾಡಿದು ಗ ೯೦೦೦ ॥ ವರಹ ॥ ಸೇನಬೋವರಿಗೆ ಗ ೨೦೦೦ ॥ ವರಹ (ಎಕ. VIII, ಸೊರಬ. ೨೬೬-೦೫; 1629). [ನಗದಿ (<ನಗದು) + ಮಾಡು$_{೧}$]

**ನಗದಿಲೆಕ್ಕ** 'ನಗದುಲೆಕ್ಕ' ನೋ.

**ನಗದಿವ್ಯವಹಾರ** (ನಾ). = ನಗದಂವ್ಯಾಪಾರ.

[ ನಗದಿ (<ನಗದು) + ವ್ಯವಹಾರ ]

**ನಗದಿವ್ಯಾಪಾರ** 'ನಗದಂವ್ಯಾಪಾರ' ನೋ.

**ನಗದು, ನಗದಿ** (ನಾ). ೧. ಹಣ ; ರೊಕ್ಕ ; ರೋಖು ; ಹಣಕಾಸು : ಪೇಟೆಯಲ್ಲಿ ಯಾವುದನ್ನು ಮಾರಿದ ತಕ್ಷಣ ನಗದು ಕೈಗೆ ಬರುವುದೊ, ಅಂಥ ನಗದಿಗೆ ಸಮಾನವಾದ ಹಣಪತ್ರಗಳನ್ನು (Liquid Assets) ಕೊಂಡಿಟ್ಟುಕೊಳ್ಳುತ್ತಾರೆ (ಹಣಪ್ರ. ೬೪) ; ಏನಾದರೂ ಮನೆಗೆ ಬಂದರೆ ಅವನಿಗೆ ಕೊಡುವುದಕ್ಕೆ ಎರಡುಸಾವಿರ ರೂಪಾಯಿಗಳನ್ನು ನಗದು ಇಟ್ಟಿದ್ದೇನೆ (ರಂಗಳ. ೦೨೩) ; ಹೆಂಡತಿಯ ಕೈಗೆ ೧,೫೦೦ ಪೌಂಡುಗಳನ್ನು ಕೊಟ್ಟು . . . ಉಳಿದ ನಗದು, ಸಾಮಾನ ಕೈಲಿಟ್ಟುಕೊಂಡೆ (ಗಂಪ್ರ. ೦೦೪) ; ಇಂದು ನಗದು ನಾಳೆ ಸಾಲ (ರೂಢಿ). 'ನಗದುಂವ್ಯಾಪಾರ', 'ನಗದುಹಣ' ಪರಾ. ನಗದಿ : ೧. ಹಣ ನಗದಿ ಕೊಟ್ಟು ಸಾಮಾನು ಗಳನ್ನು ಕೊಂಡುಕೊಳ್ಳುವುದು ಯಾವಾಗಲೂ ಒಳ್ಳೆಯದು (ಅಡುಸಾ. ೦೨೩). 'ನಗದಿವ್ಯಾಪಾರ' ಪರಾ. ೨. = ನಗದಿಗುಮಾಸ್ತ : (Cashier. ಪಾರಿಶಿ. ೧೨).

[ ←ಅರ. ನಕದ್, ನಕ್ದ್ ; ಮರಾ. ನಕ್ಕದ್, ನಗದ್, ನಗದೀ ; ಹಿಂ. ನಕದ್, ನಕ್ದ್, ನಗದ್, ನಗದೀ ]

**ನಗದುಗುತ್ತ** 'ನಗದಂಗುತ್ತೆ' ನೋ.

**ನಗದುಗುತ್ತೆ, ನಗದಂಗುತ್ತ** (ನಾ). ಧನರೂಪದಲ್ಲಿ ಕೊಡುವ ಕಂದಾಯ : (ಕಸಂಗ್ನಾ. ೦೪೯). **ನಗದುಗುತ್ತ** : (ಮೈಗೆಜೆ. IV, ೭೮೦).

[ ನಗದು + ಗುತ್ತೆ ]

**ನಗದುಗೇಣಿ** (ನಾ). ಧನರೂಪದಲ್ಲಿ ಕೊಡುವ ಗೇಣಿ,–ಗಂತ್ತಿಗೆ : ಕೆಲವು ತೋಟಗಳು . . . ಬತ್ತದ ಗದ್ದೆಗಳು ನಿಗದಿಯಾದ ಟಾಂಗ (ಟಂಕ ? : ಒಂದು ತರ ಹಣ) ನಗದುಗೇಣಿ ಕೊಡಬೇಕು (ಪ್ರವಾಇ. II, ೪೭೩).

[ ನಗದು + ಗೇಣಿ (<ಕೇಣಿ$_3$) ]

**ನಗದುಧಾನ** (ನಾ). ಹಣದ ರೂಪದಲ್ಲಿ ಕೊಡಂವಿಕೆ ; ಹಣದ ರೂಪದ ಕೊಡುಗೆ : ಮಧ್ಯಸ್ಥಗಾರಿಕೆ ರುಸುಮುವನ್ನು ಮುಂಗಡವಾಗಿ ಕೊಡುವು ದಿಲ್ಲವೆ? ನಗದುದಾನದಲ್ಲಿ ಬಹುಗುಣವಿದೆ (ಕಮಳ. ೬೦).

[ ನಗದು + ದಾನ ]

**ನಗದುನಾರಾಯಣ** (ನಾ). ಐಶ್ವರ್ಯವಂತ ; ಲಕ್ಷಾಧೀಶ್ವರ : ವ್ಯಾಪಾರ ದಲ್ಲಿ ಚೆನ್ನಾಗಿ ಮುಂದುವರಿದು, ಕೇವಲ ಎರಡು ಮೂರು ವರ್ಷಗಳಲ್ಲಿಯೇ ಅವರು ನಗದುನಾರಾಯಣರಾದರು (ರೂಢಿ). [ ನಗದು + ನಾರಾಯಣ ]

**ನಗದುಪುಸ್ತಕ, ನಗದಿಪುಸ್ತಕ** (ನಾ). ಹಣಕಾಸಿನ ಲೆಕ್ಕಾಚಾರವನ್ನು ಬರೆದಿಡುವ ಪುಸ್ತಕ ; ಖಾತೆಕಿರ್ದಿ : (Cash register. ಇಂಕಿನಿ). **ನಗದಿ ಪುಸ್ತಕ** : "ನಗದುರೆಕ್ಕದ ಪುಸ್ತಕ ; ನಗದಿಪುಸ್ತಕ ; ರೊಕ್ಕದ ಪುಸ್ತಕ" (Cash-book. ಇಂಕಿನಿ). [ ನಗದು + ಪುಸ್ತಕ ]

**ನಗದುಬಹುಮಾನ** (ನಾ). ಧನರೂಪದಲ್ಲಿ ಕೊಡುವ ಬಹುಮಾನ : ಉತ್ತಮಕವಿತೆಗಳಿಗೆ ಅವನು ನಗದು ಬಹುಮಾನಗಳನ್ನು ಕೊಟ್ಟು ಪ್ರೋತ್ಸಾಹಿಸುತ್ತಿದ್ದನು (ಬಂಕಿಮು. ೧೨). [ ನಗದು + ಬಹುಮಾನ ]

**ನಗದುಬೆಲೆ** (ನಾ). ಹಣದ ರೂಪದ ಬೆಲೆ ; ಹಣ ಕೊಟ್ಟು ಕೊಳ್ಳುವ ಬೆಲೆ · ಧನಮೌಲ್ಯ ; ಸಾಲವಾಗಿ ಕೊಳ್ಳುವ ಬೆಲೆಗೆ ಬೇರೆಯಾ ದುದಂ,–ವಿರುದ್ಧವಾದುದಂ (Cash price. ಇಂಕಿನಿ).

[ ನಗದು + ಬೆಲೆ ]

**ನಗದುಲಾಭ** (ನಾ). ಹಣದ ರೂಪದಲ್ಲಿ ಬರುವ ಆದಾಯ : ಪ್ರದರ್ಶನ ಗಳಿಂದ ಪ್ರದರ್ಶಕರಿಗೆ ಆಗುವ ನಗದುಲಾಭ ಬಹಳ ಕಡಿಮೆ (ರಾಮಂರಾ. ೬೦).

[ ನಗದು + ಲಾಭ ]

**ನಗದುಲೆಕ್ಕ, ನಗದಿಲೆಕ್ಕ** (ನಾ). ಹಣಕಾಸಿನ ಲೆಕ್ಕಾಚಾರ,–ಖಾತೆ : "ನಗದು ಲೆಕ್ಕ ; ನಗದು ಲೇವಾದೇವಿ ; ರೊಕ್ಕದ ಖಾತೆ" (Cash account. ಇಂಕಿನಿ). **ನಗದಿಲೆಕ್ಕ** : (Cash account ಪಾರಿಶಿ. ೦೨).

[ ನಗದು + ಲೆಕ್ಕ ]

**ನಗದುಲೇವಾದೇವಿ** (ನಾ). = ನಗದಂಲೆಕ್ಕ : "ನಗದು ಲೆಕ್ಕ ; ನಗದುಲೇವಾ ದೇವಿ ; ರೊಕ್ಕದ ಖಾತೆ" (Cash account. ಇಂಕಿನಿ).

[ ನಗದು + ಲೇವಾದೇವಿ ]

**ನಗದುವ್ಯಾಪಾರ, ನಗದಿವ್ಯಾಪಾರ** (ನಾ). ಕೈಮೇಲೆ ಹಣ ಕೊಟ್ಟು ನಡೆಸುವ ವ್ಯಾಪಾರ ರೋಖುವ್ಯಾಪಾರ : (Terms Cash. ಪಶ್ರಿನಿ. ೨೭) ; ನಗದುವ್ಯಾಪಾರ ತೆರೇ ನೀರಿನ ಹಾಗೆ (ಗಾದೆ). **ನಗದಿವ್ಯಾಪಾರ** : ಹಗಲು ಕೊಡು ರಾತ್ರಿ ಪಡೆ ಇಲ್ಲಿ ನಗದಿವ್ಯಾಪಾರ (ಉದುರ್ಶಾ. ೦೦೩).

[ ನಗದು + ವ್ಯಾಪಾರ ]

**ನಗದುಸಂಬಳ** (ನಾ). ಹಣದ ರೂಪದಲ್ಲಿ ಕೊಡುವ ವೇತನ : "ಆದಾಯ ಗಳು" ಎಂದರೆ . . . ನಗದುಸಂಬಳ ಮತ್ತು ಇತರ ಎಲ್ಲಾತರದ ವೇತನ (ಗ್ರಾಮಾಕ. ೮೫). [ ನಗದು + ಸಂಬಳ$_1$ ]

**ನಗದುಸಾಲ** (ನಾ). ಹಣದ ರೂಪದಲ್ಲಿ ಕೊಡುವ ಸಾಲ : ಈಗೀಗ ಗ್ರಾಮಸ್ಥರಿಗೆ ಸರಕಾರದಿಂದ ನಗದುಸಾಲ ದೊರೆಯುವ ಸೌಲಭ್ಯವಿದೆ (ರೂಢಿ). [ ನಗದು + ಸಾಲ$_1$ ]

**ನಗದುಸಿಲ್ಕು** (ನಾ). ಕೈಯಲ್ಲಿ ಉಳಿದಿರಂವ ಹಣ ; ವಿಂಕ್ಕ ಹಣ : ಸರಕಾರದ (Cash Balance) ನಗದುಸಿಲ್ಕನ್ನು ರಿಸರ್ವ್‌ಬ್ಯಾಂಕು ತನ್ನ ಕೈಯಲ್ಲಿಟ್ಟುಕೊಳ್ಳುವುದು (ಹಣಪ್ರ. ೩೦೭). [ ನಗದು + ಸಿಲ್ಕು$_4$ ]

**ನಗದುಹಣ** (ನಾ). ಸಿದ್ಧವಾಗಿರಂವ ಹಣ,–ರೊಕ್ಕ ; ರೋಖು : ಆಕೆ ತನ್ನ ಹತ್ತಿರವಿದ್ದ ನಗದುಹಣವನ್ನೆಲ್ಲಾ ಅದಕ್ಕಾಗಿ ತೆಂಬೇಕಾಯಿತು (ಬಂಕಿಮು. ೦೩೩) ; ಅಷ್ಟಿಷ್ಟು ನಗದುಹಣವೂ ಇತ್ತು (ಅಲ್ಲಿವಿ. ೦೧೦) ; ಬ್ಯಾಂಕಿಗೆ ಹೋಗಿ ಚೆಕ್ ಕೊಟ್ಟು ನಗದುಹಣ ತೆಗೆದುಕೊಳ್ಳಬೇಕಾದರೆ ಅರ್ಧಗಂಟೆ ಕಳೆದುಹೋಯಿತು (ರಕ್ತಗೋ. ೭೭). [ ನಗದು + ಹಣ ]

**ನಗಧರ** (ನಾ). ೧. ಬೆಟ್ಟವನ್ನು ಎತ್ತಿ ಹಿಡಿದವನು ; ಗೋವರ್ಧನಧರ ; ಕೃಷ್ಣ : ನಗಧರನೆತ್ತನೇ ಧನುವನೇಱಿಸನೇ . . . ಪೂರ್ಬನೇಱಿಸುವ ಮಾಟ್ಕೆಯಿನಶ್ರಮದಿಂ ಪೊಡರ್ಪು ಕೈಮಿಗೆ ರಿಪುವರ್ದನಂ ಧನುವನೆತ್ತಿದ ನೇಱಿಸಿದಂ ಜನಾರ್ದನಂ (ಪಂಪಭಾ. ೩-೦೦೦) ; ನಗಧರನ ನಿಶಿತನಾರಾಚ ಗಣಂ ನಡೆ ಪಾಯ್ದು ರಿಪುಭಟಾರುಣಜಲಧಾರೆಗಳಂ . . . ಪೂತನಿಯ ರಾಂತು ಕುಡಿದರ್ ಧುರದೊಳ್ ಜಗವಿ. ೭-೮೨) ; ಮುರಹರ ನಗಧರ ಮುಕುಂದ ಮಾಧವ ಗರುಡಗಮನ ಪಂಕಜನಾಭ . . . ನಮೋ ನಮೋ (ಪುರಂದ. ೩-೪೦-೧) ; ರುಕ್ಮಿಣಿ ಗಂಡುಮಗನಾಗಬೇಕೆನಲೊಡನೆ ನಗಧರ [ಪಾಠಾಂ. ಅಗಧರ, ಅಘಹರ] ಕೊಟ್ಟನಿವಳ್ಗೊಂದು ವರವನು (ಮೋಹತ. ೧೦-೧೨) ; ನಗುತಲೆಂದನು ವೈಷ್ಣವನು ಕೃತಯುಗದಿ ಹರಿ ಶ್ವೇತಾಂಗ . . . ದ್ವಾಪರದೊಳಗೆ ರಕ್ತಾಂಗ ನಗಧರಂ ಕೃಷ್ಣಾಂಗನೀ ಕಲಿಯುಗದೊಳಾಗಿಹ ನೆಂದು ವೇದಂ ಪೊಗಳುತಿರ್ಪುವು (ಶಂಕರಾ. ೧೦-೩೩). ೨. [ಜೈನ] ಲಕ್ಷ್ಮಣ : ಗಗನೇಚರಸೈನ್ಯಮಿಸುವ ಪೊಸ ಮಸೆಯ ಸರಲ್ ನಗಧರನ ಮೇಲೆ ಪಾಯ್ದುವು ನೆಗೆವಗ್ನಿಮುಖಕ್ಕೆ ಪಾಯ್ದು ಶಲಭಂಗಳವೋಲ್ (ಪಂಪರಾಮಾ. ೯-೬೦). 'ಅಗಧರ' ಪರಾ. [ ಸಂ. ]

**ನಗಧರೆ** (ನಾ). ವಸುಧೆ ; ಭೂಮಿ : "ಧರಣಿ ಧಾರಿಣಿ . . . ನಗಧರೆ ರತ್ನಗರ್ಭೆ ಬಂಧಿನಿ ವಿಪುಳೆ ಸರ್ವಂಸಹಾಷ್ವೆಯೆನೆ ನೆಲಕೆ ನಾಮಂ" (ಚುಂಗರಾ. ೨೮-೧). [ ? ]

**ನಗಧ್ವನಿ** (ನಾ). ಬೆಟ್ಟದ ಬಳಿಯಲ್ಲಿ ಉಂಟಾಗುವ ಮರಂಕೂಗು,– ಮಾರ್ದನಿ,–ಹೊಳಲು : ಜನಮುಱುಜುದನ್ನೆಗಂ ಮುನ್ನಂ ನಯಮಱಿ

ದಟಿಪಲಾರ್ವೊಡದು ಮಂತ್ರಿಗುಣಂ ಜನವಾದಂ ನೆಗಟ್ ನಗಧ್ವನಿವೋಲನು ಕರಣವಾರ್ತೆ ಮಂತ್ರಿಯ ಗುಣಮೇ (ಕವಿರಾ. ೩-೧೯೩). [ ನಗ$_4$ + ಧ್ವನಿ ]

**ನಗನಂದನ** (ನಾ). ಬೆಟ್ಟದ ಮೇಲಿರುವ ವನ,–ಉದ್ಯಾನ : ಆ ಗಿರಿ ಕಟದಿಂದವನಂ ಪೋಗಿಸಿ ತದ್ವನನಿವಾಸಮಂ ಕರುಣಿವುದಂತಾಗದೊಡೆ ಮಗೀವುದು ನೀಡಾಗದೆ ಪೆಚಿತೆಂದನುಚಿತ ನಗನಂದನವಂ (ಶಲಕಂ. ೨-೧೦೨). [ ನಗ$_4$ + ನಂದನ ]

**ನಗನಟ್ಟು** (ನಾ). = ನಗನಾಣ್ಯ : ಸುಬ್ಬಣ್ಣ ಹೆಗ್ಗಡೆಯವರಿಗೆ ಬೇಕಾದಷ್ಟು ಆಸ್ತಿಪಾಸ್ತಿ ನಗನಟ್ಟುಗಳಿದ್ದರೂ ತಿಮ್ಮಪ್ಪಹೆಗ್ಗಡೆಗೆ ಹೆಣ್ಣುಕೊಡುವುದಕ್ಕೆ ಹೆದರುತ್ತಿದ್ದರು ಹಡೆದ ತಂದೆ ತಾಯಿಗಳು (ಮಲೆಮ. ೩೩); ತೊಡುವುದಕ್ಕೆ ನಗನಟ್ಟು ಆಯಿತು (ದೇವೀಚ್. ೩೦).

[ ದೇ.॥ ತಮಿ. ನಗ್ಯೆನಟ್ಟು; P ತಮಿಳಿನಲ್ಲಿ ಇದನ್ನು ದ್ವಿರುಕ್ತಿಯೆಂದು ಗಣಿಸಲಾಗಿದೆ]

**ನಗನಾಣ್ಯ** (ನಾ). ಒಡವೆ, ಹಣ, ಮುಂತಾದವು; ಆಭರಣ, ಐಶ್ವರ್ಯ ಮುಂತಾದುವು : ಆ ಬಗೆ ನಗನಾಣ್ಯದಲ್ಲಿ ಒಳ್ಳೆ ಒಳ್ಳೆ ಅನರ್ಘ್ಯವಾದ ಕೆಲವು ನಗಗಳನ್ನು ಆ ಟಂಕಮುತ್ತನು ತೆಗೆದುಕೊಂಡು. ಉಳಿದ ನಗನಾಣ್ಯ ಯಾವತ್ತೂ ಕೋಟೆ ಅರಸುಗಳಿಗೆ ಕೊಟ್ಟನು (ರಾಜೇಂದ್ರ. ೯೮); ಇಂದು ಕಂಡುಬರುವ ಸರ್ಕಾರೀ ಯಂತ್ರದ ಅಂಗೋಪಾಂಗಗಳೆಲ್ಲ . . . ಹಳೇ ನಗನಾಣ್ಯಗಳಂತೆ ಕೇವಲ ಐತಿಹಾಸಿಕ ಕುತೂಹಲದ ವಿಷಯವಾಗಿ ಉಳಿಯುವುವು (ಮೂಡಾದ. ೧೬೯); ಅಪರಿಮಿತ ನಗನಾಣ್ಯಗಳನ್ನು ಬೇರೆ ಅಮಿತಾನಂದ ಪೂರಿತವಾದ ದಾನದಿಂದ ತೃಪ್ತನಾದನು (ಮುದ್ರಿಥ. ೯೨).

[ ನಗ$_1$ + ನಾಣ್ಯ (<ನಾಣೆಯ) ]

**ನಗಪ** (ನಾ). = ನಗಪತಿ : ನಗಪಾ[ಪಾಠಾಂ. ಪ್ರಾ]ಗ್ರದೊಳಂ ಕುಜಪ್ರತತಿಯೊಳ್ ಸರಸೀಕುಳದೊಳ್ ವಿರಾಜಿಸುತ್ತುಗ್ರನನೀಶನಂ . . . ತಂದಪಂ (ಗಿರಿಕ. ೮-೯೩). [ ಸಂ. ]

**ನಗಭಿದ್** (ನಾ). ಪರ್ವತಗಳ ಶತ್ರು ; ನಗಾರಿ ; ಇಂದ್ರ.

**ನಗಭಿದ್ ಮಗ** = ಇಂದ್ರನ ಮಗ ; ಅರ್ಜುನ : ನಗಭಿದ ಮಗನನು ಮೃಗನೆವನದಿ ಕಾಳಗ ಮಾಡಿ ಮೆಚ್ಚಿದ (ವಿದಾಳ್ಯ.೬೬-೧). [ ನಗ$_4$ + ಭಿದ್$_2$ ]

**ನಗಪತಿ** (ನಾ). ೧. ಪರ್ವತಗಳಿಗೆ ಒಡೆಯನಾದವನು; ಪರ್ವತರಾಜ ; ಹಿಮವಂತ : ನಗಪತಿಯೆಂದುದುಂ ಸಲಿಸಿ ನಾರದನಾತನ ಕೂಡೆ ರುದ್ರನಂ ಮೃಗಧರಚೂಡನಂ ಶಿವನನರ್ಚಿಸಿ (ಗಿರಿಕ. ೯-೬೯). ೨. ಮೇರುಪರ್ವತ ; ಮೇರುಗಿರಿ : ನಗಪತಿಗಿದೆ ಪೆರ್ಚ್ನೊಸಲೆನೆ ಸೊಗಯಿಪ ಪಾಂಡುಕ ಶಿಲಾಶಿಳೆಯೊಳದೇಂ ದಿಟ್ಟಿಗೆ ವಂದುದೊ (ಚಂದ್ರಪ್ರ. ೧೨-೧೧೦). ೩. ಚಂದ್ರ.

[ನಗ$_4$ + ಪತಿ$_2$ ]

**ನಗಮನೆ** (ನಾ). ಆಭರಣಗಳನ್ನಿಟ್ಟಿರುವ ಮನೆ ; ಖಜಾನೆ (?) : ಈ ಗ್ರಾಮಕ್ಕೆ ಉಂಟಾದ ಚತುಃಸೀಮೆಯೊಳಗುಳ್ಳ . . . ತೋಟ ತುಡುಕಿ ನಗಮನೆ ಪಣಸುಂಕ ಸುವರ್ಣಾದಾಯ ಕಲಕೊಠಾರ ಕಾಲೋಣ ನಿರೋಣಿಯೇನುಂಟಾದ ಸಕಲಾಯ ಸ್ವಾಮ್ಯವನು ಸರ್ವಮಾನ್ಯವಾಗಿ ಸ್ವರುಚಿಯಿಂದ ಒಡಂಬಟ್ಟು ಕೊಟ್ಟ ದಾನಶಾಸನ (ದಲ್ಯಅ. ೨೯೦).

[ ನಗ$_1$ + ಮನೆ ]

**ನಗಯಜ್ಞ** (ನಾ). ಪರ್ವತಕ್ಕೆ ಮಾಡುವ ಒಂದು ಬಗೆಯ ಪೂಜೆ : ಮುಕುಂದಂ ನಗಯಜ್ಞೋಪಯೋಗದ್ರವ್ಯಂಗಳಂ ತಂದು ಮುಂದೆ ನಿಂದಿರ್ದ ನಂದಗೋಪಪುರೋಗಮರನನುರಾಗದಿಂ ನೋಡಿ (ಜಗವಿ. ೯-೮೦ ವ). [ ನಗ$_4$ + ಯಜ್ಞ ]

**ನಗರ** (ನಾ). ೧. ಮುಖ್ಯಪಟ್ಟಣ ; ಪುರ : "ಪತ್ತನಂ . . . ನಗರಂ, ನಗರೀ . . . ಪುರೀ – ಈ ೧೧ ಪಟ್ಟಣಂ" (ಹಲಾಯು. ೯೮-೧೩೦) ; "ನಗರಿಪುಟಭೇದನಂ ಪೂಃ ಪುರಂ ಪತ್ತನಂ . . . ನಗರಮೆನೆ ಪಟ್ಟಣಂ" (ಮಂಗರಾ. ೩೬-೩) ; ಗ್ರಾಮ[1] ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತುಂ (ವಡ್ಡಾರಾ. ೬-೨); ಅಳಕಾನಗರೀಶಂ ಬಕ್ರ್ಮಿಮೆ ತನ್ನಗರದ ಕಡೆವಟ್ಟ ಪರದರೊರೆಗಂ ದೊರೆಗಂ(ಜಗವಿ. ೯-೧೦೬) ; ನಗರದ ಮನೆಮನೆದಪ್ಪದೆ ಸೊಗಯಿಸೆ ಬಹುವರ್ಣ ವಿವಿಧಪಟದೊಳ್ಗುಡಿಗಳ್ ನೆಗಟ್ದಿರೆ ಬಹುಪ್ರಕಾರದ ಮುಗಿಲೊಗೆದವುವೆನಿಸಿತಾಗಳಾಕಾಶತಳಂ (ಪುಷ್ಪಕು. ೧೨-೧೬) ; ಕರೆಸಿದನು . . . ನಗರದನುಪಮ ವಾರನಾರಿಯರ (ತೊರರಾ. ೦-೩-೨೬) ; ನೋಡದೋ : ನನ್ನ ಪದತಲದಿ ಎಂಬಂತೆ ನಗರ ನಾಗರೀಕತೆಯ ಜೀವನಂ (ಚಕ್ಕಕಾ. ೨೯-೩೬) ; ಕನ್ನಡಿ ಹೇಗೆ ನಾಗರಿಕತೆಯ ಚಿಹ್ನವೋ ಹಾಗೆ ನಗರಕ್ಕೆ ಪ್ರಾಣಶಾಲೆ (ಈಳಕ. ೧೧೮). ೨. ವರ್ತಕರ ಸಂಘ ; ವ್ಯಾಪಾರಿಗಳ ಸಂಸ್ಥೆ ; ಕೊತ್ತಳಿ : ಶ್ರೀರಾಮಪುಣ್ಯವಲ್ಲಭೇನ ಲಿಖಿತವಿದಂ ಶಾಸನಂ ಭವಗವಮಣ್ಣನು ಚನ್ದಗವಮಣ್ಣನು ಎಡೆವೊಟಲ್ನಾಡು ಬನವಸಿಯ ನಗರಮುಂ ಸಕ್ಷಿ (ಎಕ. VIII, ಸೊರಬ. ೩೬೦-೩೮ ; 692) ; ಅಲಂದೆಯ ನಗರಂ ದೇವರಿಗೆ ಪಾಟಿದ ಪೇಟಾಂಗಯ್ಯತ್ತೆಲೆಯುಂ ಬೆಟ್ಟರಿಂತಿ ನಿತುಮುಂ ನಗರಮಹಾಜನ ಪಂಚಮಠಸ್ಥಾನಮಾಚಂದ್ರಾರ್ಕ ಸ್ಥಾಯಿಪರಂ ನಡೆಯಿಸುವರು (ಎಇ. XXVIII, ೩೩-೫೮ ; 1032) ; ಎಂಬತ್ತು ಕೊತ್ತಳಿಯುಂ ನಗರದ ಪಶವರ್ತ್ತಿಗಳುಮಿಪ್ಪು (ಇಆ. V, ೩೪೩-೧೮ ; 1093). ೩. ವರ್ತಕಸಂಘದ ಸದಸ್ಯ : ಸುರಪತಿಯಂತೆ ಸರ್ವವಿಬುಧಾಶ್ರಯರ್ . . . ಅಹಿರಾಜನನ್ತ ನಿಖಿಳಕ್ಷಮೆಗಾಸ್ಪದರೆನ್ದೊಡೀಗಳಾದ್ಯೋರೆಯರೊ ಬಳ್ಳಿಗಾವೆಯ ಮಹಾನಗರಂಗಳೊಳೀ ಧರಿತ್ರಿಯೊಳ್ (ಎಕ. VII, ಶಿಕಾರಿ. ೧೧೦-೯೩ ; 1129) ; ಶ್ರೀಮತು ಕುಬೇರ ವಂಶಾನ್ವಯರಪ್ಪ ಶ್ರೀಮದಶೇಷ ನಗರಂಗಳು ವರ್ಷಂಪ್ರತಿ ಕೊಡುವನ್ತಾಗಿ (ಸೌಇಇ. IX–1, ೨೯೩-೩೧ ; 1172). [ ಸಂ. ]

**ನಗರಂಜಿತ** (ನಾ). [ಛಂದ] ಕೃತಿ ಛಂದಸ್ಸಿಗೆ ಸೇರಿದ ಪಾದದಲ್ಲಿ ಇಪ್ಪತ್ತು ಅಕ್ಷರಗಳನ್ನುಳ್ಳ ಒಂದು ವೃತ್ತ : ರಾಜಚತುಷ್ಟಯಮೋಳಿಯೊಳ್ಪೆತರೆ ಪಾವಕಾನಿಲರಲ್ಲಿ ಮತ್ತೋಜೆಯೊಳೊಂದಿ ಹರೀಶ್ವರರಾಗಿರೆ ಮಿಶ್ರಮಂ ದಿನನಾಥರೊಳ್ ರಾಜಿಸುತುಂ ನಿಲೆ ನಾಕಿಗನೆಂದಾರು ರೂಢಿವೆತ್ತಿರೆ ಸಂದುದಿಂತೀ ಜಗದೊಳ್ನಗರಂಜಿತಮೆಂಬುದು (ಛಂದೋಂಬು. ೨-೧೬೮).

[ ಸಂ. ]

**ನಗರಕ** (ನಾ). = ನಗರಪಾಲಕ : ನಗರರಕ್ಷಣೆಯು ನಗರಪಾಲಕ ಅಥವಾ ನಗರಕನೆಂಬ ಅಧಿಕಾರಿಯ ಕರ್ತವ್ಯವಾಗಿತ್ತು (ಧಾಇಪ್ರ. ೬೬).

[ <ಸಂ. ನಾಗರಕ ]

**ನಗರಜೀವನ** (ನಾ). ಪಟ್ಟಣದಲ್ಲಿ ವಾಸಿಸುವಿಕೆ ; ಪಟ್ಟಣದ ಬದುಕು : ಹಳ್ಳಿಯಜೀವನ ನಗರಜೀವನಕ್ಕಿಂತ ಸರಳವಾದುದು (ರೂಢಿ).

[ ನಗರ + ಜೀವನ ]

**ನಗರತ್ತ, ನಗರ್ತ** (ನಾ). ಪಟ್ಟಣಗಳಲ್ಲಿ ವ್ಯಾಪಾರಮಾಡುವವನು; ಒಂದು ವೈಶ್ಯ ಪಂಗಡದವನು ; ನಾಡಸೆಟ್ಟಿ : ಉಗ್ರಕಾಮೇಶ್ವರಕ್ಕೆ . . . ನಿರಟ್ಟೊರಾಪನ್ನಿಪ್ಪತ್ತೈಯ × × × ಎಲ್ಲಂ ಕಣ್ಣಾಗಮಾನವುಂ ನಗರತ್ತೊರು ಪೆಚ್ಚಿಗದೇಉಗೆ ಕೊಟ್ಟರ್ (ಎಕ. IX, ಹೊಸಕೋ. ೮೨-೩ ; ಸು. ೬೩೦); ಉತ್ತನೂರ ಮಡವಳದ ಗಉರಿದೇವಿಯ ಸ್ಥಾನಿಕ ಕೂರಣಕೊಳ ಆಡವುಗಳೂ ನಗರತ್ತರೂ ಮಂಗರಸಗೆ ಕೊಟ್ಟ ಕಟೀಯ ಕಟ್ಟು ಕೊಡಗಿಯ ಮಾನ್ಯದ ಗದ್ದೆಯ ಶಾಸನ (ಎಕ. X, ಮುಳಬಾ. ೧೩೧-೩ ; 1407). **ನಗರ್ತ** : ಪೈರುಗಳಂ ತಂದು ತುಂಬಿ ಬ್ಯಾರವಂ ಮಾಡುವ ಬೆರಿಯರು ಬಣಜಿಗರು ನಗರ್ತರು (ಸೌಗಂಧಿ. ೦೩೩-೯) ; ತಮಿಳಿನಲ್ಲಿ ನಗರತ್ತಾರ್ ಎಂದು ಒಂದು ಜನಸಮುದಾಯಕ್ಕೆ ಹೆಸರು, ಎಂದರೆ ನಗರದವರು. ಇದು ಕನ್ನಡದಲ್ಲಿ ನಗರ್ತರು ಎಂದು ವಾಡಿಕೆಗೆ ಬಂದಿದೆ. ನಿಜದಲ್ಲಿ ಇದರ ಅರ್ಥ ನಗರದ ಎಂದು. ಆದರೆ ಈಗ ಈ ಪದ ಒಂದು ಅಂಕಿತನಾಮವಾಗಿದೆ(ನಮ್ಮನು. ೧೦೬).

ನಗರ್ತಪೇಟೆ, ನಗರ್ತರ ಪೇಟೆ = ನಗರ್ತರ ಪೇಟೆ ವ್ಯಾಪಾರಿಗಳು ಇರುವ, ಪಟ್ಟಣದ ಒಂದು ಭಾಗ ; ವ್ಯಾಪಾರ ನಡೆಯುವ ಸ್ಥಳ ; ಪೇಟೆ ಬೀದಿ : ಬೆಂಗಳೂರಿನಲ್ಲಿ ನಗರ್ತಪೇಟೆಯಿದೆ (ರೂಢಿ) ; ಬೆಂಗಳೂರಿನ ನಗರ್ತರ ಪೇಟೆಯಲ್ಲಿ ಸರಾಫ್ ಅಂಗಡಿಗಳಿವೆ (ರೂಢಿ).
[ ← ತಮಿ. ನಕರತ್ತು, ನಕರತ್ತಾ./ಸಂ. ನಗರ ]

**ನಗರನಿವಾಸಿ** (ನಾ). ನಗರದಲ್ಲಿ ವಾಸ ಮಾಡುವವನು ; ಪೌರ : ನಗರವು ಶುಚಿಯಾಗಿರಬೇಕಾದರೆ, ನಗರನಿವಾಸಿಗಳೇ ಹೊಣೆಗಾರರಾಗಬೇಕು (ರೂಢಿ).
[ ನಗರ + ನಿವಾಸಿ ]

**ನಗರನೈರ್ಮಲ್ಯ** (ನಾ). ಪಟ್ಟಣದ ಶುಭ್ರತೆ,–ಸ್ವಚ್ಛತೆ : ನಗರನೈರ್ಮಲ್ಯದ ಕೆಲಸವನ್ನು ಮುನಿಸಿಪಾಲಿಟಿಯು ವಹಿಸುತ್ತದೆ (ರೂಢಿ).
[ ನಗರ + ನೈರ್ಮಲ್ಯ ]

**ನಗರಪಾಲಕ** (ನಾ). ಪಟ್ಟಣವನ್ನು ಪಾಲಿಸುವವನು ; ಪುರಸಭೆಯ ಸದಸ್ಯ ; ಮುನಿಸಿಪಾಲಿಟಿಯ ಸದಸ್ಯ ; ನಗರರಕ್ಷಕ : ನಗರಪಾಲಕರು ಇತ್ತ ಕಡೆ ಗಮನವನ್ನೇ ಕೊಡುತ್ತಿಲ್ಲ (ನಂಟರು. ೪೪).
[ ನಗರ + ಪಾಲಕ ]

**ನಗರಪಾಲಿಕೆ** (ನಾ). ಸ್ಥಳೀಯ ಆಡಳಿತಾಧಿಕಾರವುಳ್ಳ ಪುರಸಭೆ,– ಪೌರಸಂಸ್ಥೆ ; ಮುನಿಸಿಪಾಲಿಟಿ : ಯಥಾಶಕ್ಯವಾಗಿ ಮೂರನೆಯ ಒಂದು ಭಾಗದ ಸದಸ್ಯರು, ಆ ರಾಜ್ಯದಲ್ಲಿಯ ನಗರಪಾಲಿಕೆಗಳ ಜಿಲ್ಲಾಮಂಡಲಿಗಳ . . . ನಿರ್ವಾಚಕಮಂಡಲಗಳಿಂದ ನಿರ್ವಾಚಿತರಾಗತಕ್ಕದ್ದು (ಭಾಧಾನ. ೯೦).
[ ನಗರ + ಪಾಲಿಕೆ ]

**ನಗರಪಿತೃ** (ನಾ). ಪಟ್ಟಣಕ್ಕೆ ತಂದೆಯಂತಿರುವವನು ; ಮುನಿಸಿಪಾಲಿಟಿಯ ಮುಖ್ಯಾಧಿಕಾರಿ : ಪಟ್ಟಣದಲ್ಲಿ ಹರಡುವ ಕಾಲರಾ ಮುಂತಾದ ಸಾಂಕ್ರಾಮಿಕರೋಗಗಳ ಪ್ರತಿಬಂಧಕೋಪಾಯವನ್ನು ನಗರಪಿತೃಗಳು ಮಾಡಿಯೇ ಮಾಡುತ್ತಾರೆ (ರೂಢಿ). [ ನಗರ + ಪಿತೃ ]

**ನಗರಮಹಾಸಭೆ** (ನಾ). = ನಗರಪಾಲಿಕೆ : "ಪೌರಸಂಸ್ಥೆ, ನಗರಮಹಾಸಭೆ" (Municipal Corporation. ಪಕ್ರನಿ. ೩೫). [ ನಗರ + ಮಹಾಸಭೆ ]

**ನಗರಮುಸ್ತೆ** (ನಾ). ಒಂದು ಬಗೆಯ ಸಸ್ಯ : (ವೃಕ್ಷಿಗಿ. ೩೮-೩೩೭).
[ ಸಂ. ನಗರಮುಸ್ತಾ ]

**ನಗರರಾಜ್ಯ** (ನಾ). ಒಂದೊಂದು ಪಟ್ಟಣವೇ ಪ್ರತ್ಯೇಕ ರಾಜ್ಯವಾಗಿರುವುದು,–ಸ್ವತಂತ್ರ ಆಡಳಿತವನ್ನು ಹೊಂದಿರುವುದು : ಕ್ರಿ.ಪೂ. ಏಳನೆಯ ಶತಮಾನದ ಹೊತ್ತಿಗೆ ಗ್ರೀಸ್‌ನಲ್ಲಿ . . . ನಗರರಾಜ್ಯಗಳು (City States) ಕಾಣಿಸಿಕೊಳ್ಳಲಾರಂಭಿಸಿದುವು (ಅರಿಶಾ. ೨೦೮).
[ ನಗರ + ರಾಜ್ಯ ]

**ನಗರಲ** (ನಾ). ಒಂದು ಊರಿನ ಹೆಸರು ; P ಮೈಸೂರುಜಿಲ್ಲೆಯ ನಂಜನಗೂಡು ತಾಲ್ಲೂಕಿನ ಈಗಿನ ನಗರ್ಲೆ : ಶ್ರೀಮತ್ಪೆರ್ಮ್ಮಾನಂಗಳ್ಗೆ ವಿದ್ಯಾಧರಯ್ಯಂ ಬಿನ್ನಪಂಗೆಯ್ದು ನಗರಲ ನನ್ನಯ್ಯನ ದೇಗುಲಕ್ಕೆ ಮುತ್ತುರೆಯಂ ಪಡೆದುಕೊಟ್ಟಂ (ಎಕ. III, ನಂಜನ. ೧೬೩-೫ ; 970?). [ ? ]

**ನಗರವರ್ಧಕಿ** (ನಾ). ಪಟ್ಟಣವನ್ನು ನಿರ್ಮಾಣ ಮಾಡುವವನು ; ಶಿಲ್ಪಿ : ನಗರವನ್ನು ಕಟ್ಟಲು ಬಯಸುವ ನಗರವರ್ಧಕಿಯು ಮೊದಲು ನಗರದ ಸ್ಥಾನವನ್ನು ಶೋಧಿಸುವನು (ಬುದ್ಧಚ. ೪೫). [ ನಗರ + ವರ್ಧಕಿ ]

**ನಗರವಾಸ** (ನಾ). ಪಟ್ಟಣದಲ್ಲಿ ವಾಸಿಸುವಿಕೆ,–ಜೀವನ ನಡೆಸುವಿಕೆ : ನಗರವಾಸಕ್ಕಿಂತ ಗ್ರಾಮವಾಸ ಸರಳತರವಾಗಿರುತ್ತದೆ (ರೂಢಿ).
[ ನಗರ + ವಾಸ ]

**ನಗರವಾಸಿ** (ನಾ). ಪಟ್ಟಣದಲ್ಲಿ ವಾಸಿಸುವವನು ; ಪಟ್ಟಣಿಗ : ನಗರವಾಸಿಗಳಿಗಿಂತ ಗ್ರಾಮವಾಸಿಗಳು ಹೆಚ್ಚು ಆರೋಗ್ಯಶಾಲಿಗಳು (ರೂಢಿ).
[ ಸಂ. ನಗರವಾಸಿನ್ ]

**ನಗರಶೋಧಕ** (ನಾ). ಪಟ್ಟಣದ ಕಾವಲುಗಾರ, – ಪಹರೆಯವನು.
[ ನಗರ + ಶೋಧಕ ]

**ನಗರಶೋಧನ** (ನಾ). = ನಗರಶೋಧನೆ. [ ನಗರ + ಶೋಧನ ]

**ನಗರಶೋಧನೆ** (ನಾ). ಪಟ್ಟಣದ ಪಹರೆ : ಪಾದರಿಯನಟಿಸಿ ಪಿಡಿದುರುವಣಿಸಿ ದರ್ನಗರಶೋಧನೆಯ ತಳವಾರರಂತೆ ಬನದೊಳ್ಪೆಣ್ಗಳು (ಕ್ರಿಮಿಧಾ. ೮-೩೩).
[ ನಗರ + ಶೋಧನೆ ]

**ನಗರಶೋಭನೆ** (ನಾ). ಪಟ್ಟಣಕ್ಕೆ ಅಲಂಕಾರವಾಗಿರುವವಳು ; ವಾರಸ್ತ್ರೀ ; ಗಣಿಕೆ ; P ಈ ಅಭಿಧಾನಕ್ಕೆ ಪಾತ್ರರಾದವರು ಅಸಾಮಾನ್ಯ ರೂಪವತಿಯರಾದುದರಿಂದ ನಗರದಲ್ಲಿ ಯಾರೊಬ್ಬರ ವಿಶಿಷ್ಟ ಸ್ವತ್ತೂ ಆಗದೆ, ಸಾರ್ವಜನಿಕರ ಸ್ವತ್ತಾದವರು. ಹೀಗೆಂದು ಜನಪದ ತೀರ್ಮಾನಿಸುತ್ತಿತ್ತು. ಆದುದರಿಂದ ಇವರಿಗೆ 'ನಾಗರಸ್ತ್ರೀ' ಎಂದೂ ಹೆಸರು. ಈ ವರ್ಗದ 'ಗಣಿಕೆ'ಯರು ಎಲ್ಲರಿಗೂ ಸುಲಭವಾಗಿ ಲಭಿಸುತ್ತಿರಲಿಲ್ಲ. ಇವರು ಬೆಲೆವೆಣ್ಣುಗಳಾದರೂ ಇವರ ಬೆಲೆ ತುಂಬಾ ದುಬಾರಿ, ಉದಾಹರಣೆಗೆ 'ಅಡ್ಡಕಾಸೀ' (ಅರ್ಧಕಾಶೀ) ಎಂಬ ನಗರಶೋಭನೆಗೆ ಒಂದು ರಾತ್ರಿಗೆ ಕಾಶೀನಗರದ ಹುಟ್ಟುವಳಿಯಲ್ಲಿ ಅರ್ಧದಷ್ಟು ತೆರಬೇಕಾಗಿತ್ತು. ಆಮ್ರಪಾಲಿ ಈ ವರ್ಗಕ್ಕೆ ಸೇರಿದವಳು : ತನ್ನ ರಾಜಧಾನಿಯಲ್ಲಿ ಅವಳಂತಹ ನಗರಶೋಭನೆಯಿಲ್ಲವಲ್ಲಾ, ಎಂದು ಬಿಂಬಸಾರನು ಖಿನ್ನನಾದನು (ಹಕ್ಕುತು. ೯೯). 'ನಾಗರಸ್ತ್ರೀ' ಪರಾ. [ ನಗರ + ಶೋಭನ ]

**ನಗರಶ್ರೇಷ್ಠಿ** (ನಾ). ಪಟ್ಟಣದ ಪ್ರಧಾನವ್ಯಕ್ತಿ : ಚಂದ್ರಗುಪ್ತನು ಸಂತುಷ್ಟನಾಗಿ ಚಂದನದಾಸಸೆಟ್ಟಿಗೆ ಸರ್ವನಗರಶ್ರೇಷ್ಠಿಪದವಿಯನ್ನು ಕೊಟ್ಟಿದ್ದಾನೆ (ರಾಕ್ಷಸ. ೧೦೮). [ ನಗರ + ಶ್ರೇಷ್ಠಿ ]

**ನಗರಸಭೆ** (ನಾ). ಸ್ಥಳೀಯ ಆಡಳಿತಾಧಿಕಾರವುಳ್ಳ ಪುರಸಭೆ,– ಪೌರಸಂಸ್ಥೆ ; ಮುನಿಸಿಪಾಲಿಟಿ : ಎಲ್ಲಿಯಾದರು ಕಸರು ಕಡ್ಡಿಯ ಹುಡುಕಿ ತೆಗೆಯಿರಿ ನೋಡುವ ಕೆಸರೂ ಬೇಕಾದಷ್ಟು ನಡೆಯಿರಿ ನಗರಸಭೆಗೇ ತೂರುವ (ನೆಲಮು. ೦೨-೧೪) ; ನಗರಸಭೆ ಮತ್ತು ಕೆಲಸಗಾರರು ಶೀಘ್ರದಲ್ಲಿ ಒಂದು ತಳಹದಿಯ ಮೇಲೆ ಒಪ್ಪಂದಕ್ಕೆ ಒಪ್ಪುವಂತಾಗಲಿ (ಅಪನಾ. ೧೩೪).
[ ನಗರ + ಸಭೆ ]

**ನಗರಸೌಂದರ್ಯ** (ನಾ). ಪಟ್ಟಣದ ಅಂದ,–ಶೋಭೆ : ನಗರಸೌಂದರ್ಯವನ್ನೂ ನಾಗರಿಕರು ಇದ್ದ ರೀತಿಯನ್ನೂ ಪ್ರವಾಸಿಗಳು ಬರೆದಿಟ್ಟಿದ್ದಾರೆ (ರೂಢಿ). [ ನಗರ + ಸೌಂದರ್ಯ ]

**ನಗರಾಖ್ಯಾನ** (ನಾ). ಪಟ್ಟಣದ ವರ್ಣನೆ : ನಗರಾಖ್ಯಾನಮೆಂಬುದು ನಗರವ್ಯಾವರ್ಣನಂ (ಕಾವ್ಯಾವ. ೧೨). [ ಸಂ. ]

**ನಗರಾಜ** (ನಾ). = ನಗಪತಿ ೧ : ಮಾನಿತನಗರಾಜನತುಳಘನಹಿಮತೇಜಂ (ಹಮ್ಮೀರ. ೦-೪೩) ; ಕರೆತಾರೆ ಕಾಮಿನಿ ಕಮಲಜಪಿತನ . . . ನಗರಾಜವೈರಿಯ ಮಗನ ಬೇಗನ (ಕನಕ. ೯೩-೨). [ ನಗ + ರಾಜ ]

**ನಗರಾಡಳಿತ** (ನಾ). ಪಟ್ಟಣದ ಮೇಲ್ವಿಚಾರಣೆ,–ಆಳ್ವಿಕೆ : ನಗರಾಡಳಿತವು ನಗರಸಭೆಗೆ ಸೇರಿದುದಾಗಿದೆ (ರೂಢಿ). [ ನಗರ + ಆಡಳಿತ ]

**ನಗರಾಧಿಕಾರಿ** (ನಾ). ಪಟ್ಟಣದ ಉಸ್ತುವಾರಿ ಮಾಡುವವನು ; ಪುರದ ಮೇಲ್ವಿಚಾರಣೆಯನ್ನು ಮಾಡುವವನು : ಅನಂತರದಲ್ಲಿ ನಗರಾಧಿಕಾರಿ ಭಾವನೂ, ಆತನ ಹಿಂದೆ ಹಿಂಗಟ್ಟುಮುರಿಯುಳ್ಳ ಪುರುಷನನ್ನು ಹಿಡಿದುಕೊಂಡು ಇಬ್ಬರು ಕಾವಲುಗಾರರೂ ಬರುವರು (ಶಾಕುಂತ. ೭೫-೧).
[ ನಗರ + ಅಧಿಕಾರಿ ]

**ನಗರಿ** (ನಾ). = ನಗರ ೧ : "ನಗರಂ ಪುಟಭೇದನಂ ಪೂಃ ಪುರಂ ಪತ್ತನಂ ನಿಗಮಂ ಪುರೀ ಪ್ರಜಾಸ್ಥಾನಮಾ ದುರ್ಗಮೆನೆ ನಗರಮೆನೆ ಪಟ್ಟಣಂ" (ಮಂಗರಾ. ೫೭-೩) : ಚರಿಸುವುದು ರಥವೊಂದು ವಾಗೀಶ್ವರನ ಪುರಿಗೆ . . . ಉರಗರಾಜನ

ವಗರಿಗದಱ್ಂ ಧರೆಯೊಳಗೆ ಹೆಸರಾದುದಾ ಭೂವ ಶಿರೋರತ್ನಂಗೆ ದಶರಥ ನೆಂಬ ಗುಣನಾಮ (ತೊರರಾ. ೧-೩-೨೧) ; ನಾಗವೇಣಿ ನಗರಿಗೆ ನಾಂ ಪೋಗಿ ಬರುವೆನೆ (ಶಾಕುಂತ. ೪೪ ಅಡಿಟಿ). [ ಸಂ. ನಗರೀ ]

**ನಗರಿಗ** (ನಾ). ಪಟ್ಟಣದಲ್ಲಿ ವಾಸಮಾಡುವವನು ; ನಾಗರಿಕ : ನಗರದಿ ಗೂಢದಲ್ಲಿ ನಡೆವ ವೇಳೆಯಲಿ ನಗರಿಗರ ಬಾಳುವೆಯ ಕೆಲವೆರಡು ಅವಸರವ ಕಂಡು (ನವರಾ. ೩-೨). [ ನಗರ + – ಇಗ ]

**ನಗರಿಪು** (ನಾ). = ನಗವಗೆ : ನಗರಿಪುಗೆ ಚಿಂತೆ ಸಂತಸಮೊಗೆದುದು ರವಿ ರಾಗವಳಿದಂ (ರಾಜಶೇ. ೧೩-೮೦). [ ನಗ$_4$ + ರಿಪು ]

**ನಗರೀಕರಣ** (ನಾ). ಪಟ್ಟಣವಾಗಿ ಮಾರ್ಪಡಿಸುವುದು ; ಪಟ್ಟಣ ಜೀವನದ ಪ್ರಭಾವವನ್ನು ಬೀರುವುದು : ಜನಪದಜೀವನದ ಮೇಲೆ ನಗರೀಕರಣದ ಪ್ರಭಾವ ಬಿದ್ದಷ್ಟೂ, ಆಧುನಿಕ ವಿದ್ಯಾಭ್ಯಾಸದ ಪರಿಚಯ ಹೆಚ್ಚಿದಷ್ಟೂ ಜನಪದದ ಮೂಲಸೊಗಸು, ದೇಸೀಸೊಗಡು ಕಡಿಮೆ ಯಾಗುತ್ತಾ ಹೋಗುತ್ತದೆ (ಸುವರ್ಣ. ೩೩). [ ಸಂ. ]

**ನಗರು** (ಕ್ರಿ). ಏದುಸಿರು ಬಿಡಂ ; ಏದಂ ; ತೇಕಂ : ಬಿಸಿಲಿನಲ್ಲಿ ಕಟ್ಟಿದ ಎಮ್ಮೆ ನಗರುತ್ತಿದೆ (ಕೂಢಿ). [ ? ]

**ನಗರೂರ್** (ನಾ). ಒಂದು ಊರಿನ ಹೆಸರು : ನಗರೂರ ಬೆಳ್ಳಿಯರುಂ ಮಾರಪುರ ವಣ್ಣಾಕರುಂ (ಮೈಆರಿ. ೧೯೨೭, ೧೧೮-೪೪ ; 726). [ ನಗರ + ಊರ್ ]

**ನಗರೆ$_1$** (ನಾ) ೧. ಒಂದು ಬಗೆಯ ಸಂವಾಸನೆಯುಳ್ಳ ಬೇರು,–ಗಡ್ಡೆ ; ಭದ್ರಮುಸ್ತೆ ; ಕೊನ್ನಾರಿ : ಮೇಲು ಚಂದನಮುಂ ನಗರೆಯುಂ ಹೋಲಿ ಸುವಡೆ ಸಮಾನವಹುದೇ (ಬಸಪು. ೪೯-೩೫) ; ಅಗರು ಚಂದನ ಪಟ್ಟಿ ರುಃಲ್ಲಿ ಬಪ್ಪಂಬುಧಿ ನಗರವಾಳುವ ನರಪತಿಗೆ ನಗರೆ ಕಂಬಳಿ ಪೀಲಿಗಳನುಳ್ಳ ನಾಡಿನ ವಿಗಡಮನ್ನೆಯರು ಪಾಸಟಿಯ (ಕುರಾಸಾಂ. ೧೧-೨೧). ೨. ಒಂದು ಬಗೆಯ ಮರ ಮತ್ತು ಅದರ ಬೀಜ, ಕಾಯಿ, ಹಣ್ಣು : ನಗರೆ[ಪಾಠಾಂ. ರಿ]ಯ ಗೊಟ್ಟೆಯನರೆದಾಖುಗಳಿಕ್ಕಿದ ಹಿಕ್ಕೆ ಸಹಿತಮೆಣ್ಣೆಯೊಳೊಂದರ್ ಬಗೆದೆಡೆಯೊಳ್ ಧೂಪಮನಿಕ್ಕುಗೆ ತದ್ಗೃಹದಿಂದೆ ಮೂಷಕಂ ಪೊಱಮಡುಗುಂ (ಜಮುದ. ೧೬-೮೪); ನಗರೆಯೆಲೆ ಕನಕಪತ್ರವುಮೊಗನಿಯ ತಿಗುಡಿಂತಿವೆಲ್ಲವುಂ ಕೊಟ್ಟದೊಳಿಕ್ಕುಗೆ ವಾಜಿಗೆ (ಅಶ್ವಶಾ. ೧೨-೪೪) ; ಹಾಲೆ ಬದಿರಿಪ್ಪೆ ಹುಣಿಸಂಕೋಲೆಲಟಿಯ ಬಾಗೆ ನಗರೆ . . . ಬನ್ನಿ ಹೊನ್ನೆಯ ತರುಗಳ್ (ಹಮ್ಮಿಕ. ೪-೬೯) ; ಬೆಳಲು ಬಿಲ್ವಪತ್ರ . . . ತುಂಬುರ ನಗರೆ ಮುಂತಾದ ವಣ್ಗಳ ತಂದರಾಳ್ದನ ಬಳಿಗೆ (ತೋಹಕ. ೧೯-೩೬) ; ಹಾವುವೆಕ್ಕೆಯ ಬೇರು, ನಗರೆಯ ಬೀಜ ಇವಂ ಎಣ್ಣೆಯಲ್ಲಿ ಅಟ್ಟು ಪೂಸಲು ಗಂಡಮಾಲೆಯು ಮಾಣ್ಗುಂ (ವಿಶ್ವವಿ. ೮೦) ; ನಗರೆ, ದೊಡ್ಡಕಾರೆ, . . . ಒಳ್ಳೆಕಾರೆ (ಮೈಶಿಗ. ೬೬-೧೩೪೯). [ದೇ. ಔ ತೆಲು. ನಗಿರ]

**ನಗರೆ$_2$** 'ನಕರ$_1$' ನೋ.

**ನಗರೆ$_3$** (ನಾ). ಒಂದು ಸಂಖ್ಯೆಯ ಸಂಕೇತ (?) : "ಪೇಟುವೊಡೆ ಕೇಮಿ ಅರಯ ಮುದ್ದಣಂ . . . ಹತ್ತು ದಶಕಂಸ ಕಾರತಯ ನಗರೆಯಾಗಿ ತೇಯುಂ . . .ಬೆಟ್ಟು ಪಣವೆನಲು ನೀರಿದಯನಿಕ್ಕುಂ" (ಮಂಗರಾ. ೧೧೨-೪). [ ? ]

**ನಗರೆವಳ್ಳ** (ನಾ). (ನಗರ್ಲೆಯಂಲ್ಲಿ ಹರಿಯುವ) ಒಂದು ಹಳ್ಳದ ಹೆಸರು : ಅನ್ತೆ ಬಂದು ಪಾಲಕಟ್ಟಿಗನೆ ಬಂ ಪುಣಸೆಯಿಂ ಅನ್ತೆ ಬನ್ದು ನಗರೆವಳ್ಳದಿ ಮೂಡಣಬೇಲಿಯಿಂ (ಎಕ. III, ನಂಜನ. ೧೩೯-೧೬ ; 915 ?). 'ನಗರಲ' ಪರಾ. [ ನಗರೆ ? + ವಳ್ಳ ]

**ನಗರೋಪಕಂಠ** (ನಾ). ಪಟ್ಟಣದ ಸಮೀಪ ; ಪಟ್ಟಣದ ಹತ್ತಿರದ ಪ್ರದೇಶ.–ನೆರೆಹೊರೆ : ಜೀಯ ಬಲಿಗಳ ತೆಗಸು ನಡೆ ನಿರ್ದಾಯದಲಿ ನಿಮ್ಮಡಿಯ ಬೇಟೆಗೆ ರಾಯ ಮೃಗವೈತಂದವಿವೆ ನಗರೋಪಕಂಠದಲಿ (ಕುವ್ಯಾಆ. ೮೨-೧೫). [ ನಗರ + ಉಪಕಂಠ ]

**ನಗರ್ತ** 'ನಗರತ್ತ' ನೋ.

**ನಗಲಿಕ** (ನಾ) ಮೀನು ಹಿಡಿಯುವವನು ; ಬೆಸ್ತ (?) : ಅಟಕರಿ, ಬಣ್ಣ ಗಾರ, ಬಿಳಿಮಗ್ಗ, ದೇವಾಂಗ, ಜಾಡ, ನಗಲಿಕ, ಪಟ್ಟೆಗಾರ, ಸಾಲೆ, ಸೇಣಿಯ (ತುಳುನಾ. ೧೭೩). [ < ನಗಲು ? + – ಇಕ ]

**ನಗಲು, ನಕುಲ$_2$** (ನಾ). ಒಂದು ಬಗೆಯ ಮೀನು : ಬಿಳಿಚ ಚಿಪ್ಪಲು . . . ನಗಲು[ಪಾಠಾಂ. ನರಗ, ನಲಗು] ಹೆಲ್ಲರಂ ಬಂಕುರುಂ ಹಳಲೆ ಕಪ್ಪೆ ಗಳೊಱಲೆ ಬೋಟೆ ಗಿಱಲುಗಳೆಂಬ ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹದಕಾ. ೩-೪೬). ನಕುಲ$_2$ : ಬಾಣಾ ವಳಿಯ ತಡಿಕೆಯಲಿ ಹೊಯ್ಯುವ ನಕುಲಜಾತಿಯನು (ಕುವ್ಯಾಕ. ೨೨-೨೯). [ ? ]

**ನಗವರ** (ನಾ). ಶ್ರೇಷ್ಠವಾದ ಪರ್ವತ : ಹಾ ನೃಪಕುಲವಿದಿತಸುವೃತ್ತರಿರಾ ಹಾ ನಗವರಸನ್ನಿಭಚಿತ್ತರಿರಾ (ಜೀವಸಂ. ೨೪-೪೬ ರಗಳೆ). [ ನಗ$_4$ + ವರ$_2$ ]

**ನಗವಾಯ್** (ನಾ). ಮೇಲಕ್ಕೆ ಎದ್ದಿರುವ ಪೀಠ : ನಗವಾಯಿಂ ಕುಮುದಂ ಗಳಿಂ ನೆಗೆದ ಜಂಘಾಕಾಂಡದಿಂ ರನ್ನವಟ್ಟಗೆಯಿಂ ದಂಡಲತಾವಿಚಿತ್ರ ಮಯ ಪತ್ರವ್ರಾತದಿಂ ಘಂಟೆಯಿಂ ಬಗೆಯಂ ಬಲ್ಸೆಱಗೆಯ್ವ ಪುತ್ತಳಿಗಳಿಂರಂಗ ಸ್ಥಳೀಸ್ತಂಭಮಾವಗಮೊಪ್ಪುತ್ತಿರೆ ರಂಜಿಕುಂ ಹರಿಹರಶ್ರೀದೇವತಾ ಮಂದಿರಂ (ಎಕ. XI, ದಾವಣ. ೨೫-೬೬ ; 1224) ; "ನಗವಾಯ್ ಇತ್ಯಾದಿ ಕಟ್ಟಡಕ್ಕೆ ಸಂಬಂಧಿಸಿದ ಸಂಕೇತ ಶಬ್ದಗಳು" (ಶಾಶಮಂ. ೨೯೫ ಟಿಪ್ಪಣಿ). [?]

**ನಗವೃಂದ** (ನಾ). ಪರ್ವತಗಳ ಸಮೂಹ,–ಗುಂಪು. 'ನಗವೃಂದಾಧಿಪ' ಪರಾ. [ ನಗ$_4$ + ವೃಂದ ]

**ನಗವೃಂದಾಧಿಪ** (ನಾ). = ನಗಪತಿ ೧ : ನಗವೃಂದಾಧಿಪ ಕನ್ಯಕಾಧಿಪತಿಗಾದಾ ತುತ್ತುತುತ್ತಿಂಗೆ ಮೆಲ್ಲಗೆ ಕೂರ್ತರ್ಪಿಸುತಿರ್ದದೊಂದು ದಿವಸಂ (ಉದ್ಭಟ. ೦೨-೧೯). [ ನಗವೃಂದ + ಅಧಿಪ ]

**ನಗವೆಣ್ಣ** 'ನಗೆವೆಣ್' ನೋ.

**ನಗವೈರಿ** (ನಾ). ಪರ್ವತಗಳಿಗೆ ಶತ್ರುವಾದವನು,–ಇಂದ್ರ : ಭೂರುಹ ಮಿದು ದಿವ್ಯಂ ಬಿಡಬಾರದೆನಲ್ ದೇವ ರಾಜ್ಯಕಂಠಿಕೆ ತನಗಿಂ ಬಾರದು ಬಕರ್ಗಂ ತನ್ನಗವೈರಿಯ ಕಂಠಕ್ಕೆ ಮತ್ಸುದರ್ಶನಚಕ್ರಂ (ಜಗವಿ. ೦೩-೩೨). [ ನಗ$_4$ + ವೈರಿ ]

**ನಗಶರ** (ನಾ). ಬೆಟ್ಟಗಳನ್ನು ಸೀಳಿಸುವ ಬಾಣ : ನಗಶರವನ್ನು ಕವಿಸಿದ ಚಿನುಮಯಾತ್ಮಕಳಾದ ದೇವಿಯ ತನುವಿನ ಮೇಲುರುಳಿದವು ಮಹಪರ್ವತ ಗಳು (ದೇವೀಮ. ೦೭೦-೧೦). [ ಸಂ. ]

**ನಗಶಿಖರ** (ನಾ). ಬೆಟ್ಟದ ಅಗ್ರಭಾಗ,–ತುದಿ : ನಗಶಿಖರಾಗ್ರದಿಂ ಸರಭಸಂ ನೆಗೆವಚ್ಚರಿಯುನ್ನತಸ್ತನಂ ಮಿಗೆ ಮುಗಿಲಂ ಪಳಂಚಲೆದು ಪೊಯ್ಯೆ . . . ಮೇಣದು ಶೋಕರಾವಮಂ ನೆಗಳ್ದುದೊ ತಳ್ತದೆಂಬಿನಮಳುಂಬಮದೊಪ್ಪುಗು ಮಂಬುದಸ್ತನಂ (ಕಬಕಂ. ೦-೪೭). [ ನಗ$_4$ + ಶಿಖರ ]

**ನಗಸಾನು** (ನಾ). ಬೆಟ್ಟದ ತಪ್ಪಲು,–ಇಳಿಜಾರು ಪ್ರದೇಶ : ನಗಸಾನು ತಲಂ ಮನುಜರ್ಗಗೋಚರಂ ಕಟ್ಟೆ ಗುಡಿಯನಿರ್ದಪರಾರ್ (ಶಂರಾಮಾ. ೧೦-೫೦) ; ಬಗಿದು ಪುಗಲ್ಕರಿದೆಲ್ಲಿಯುಮೊಗೆದ ಮರಂ ಪೊದಱು ಬಳ್ಳಿ ಗಿಡು ವೆಂಬಿವಱಂ ಮಿಗಿಲೆನಿಪ ಬಲ್ಲೆ ನಗಸಾನುಗಳೊಳದಂತಾವ ಮೆಯ್ಯೊಳಂ ಪುದಿದಿರ್ಕುಂ (ಕಾವ್ಯಾವ. ೯೭). [ ನಗ$_4$ + ಸಾನು ]

**ನಗಸಾರ** 'ನಗುಂಸಾರ' ನೋ.

**ನಗಸುತಾವರ** (ನಾ). ಪಾರ್ವತಿಯ ಪತಿ ; ಈಶ್ವರ ; ಶಿವ : ನಗಸುತಾವರ ನೊಲುಮೆ ನೆಟ್ಟನೆ ಸೊಗಸಿಹುದು ನಿನ್ನಗ್ರಜಗೆ (ತೊರರಾ. ೬-೩-೩೦). [ಸಂ.]

**ನಗಸುತೆ** (ನಾ). ಪರ್ವತರಾಜನ ಮಗಳು ; ಪಾರ್ವತಿ : ಕರೆತಾರೆ ಕಾಮಿನಿ ಕಮಲಜಪಿತನ , . . ನಗಸುತಾಪತಿಕಾಯದೊಳು ಮೂಡಿಹನ (ಚನಕ. ೯೩-೨). [ ನಗ$_4$ + ಸುತೆ ]

**ನಗಹರ** (ನಾ). ೧. =ನಗವೈರಿ : ನಗಹರನ ಗಣಿಕಾಶಿರೋಮಣಿ ಮಿಗೆ ದಯಾಮತಿಯಿಂದೆ ಬೋಧಿಸ ಬಗೆದು ತಾನಿಂತೆಂದಳು (ಬಸಪು. ೪೦-೫). ೨. [ಛಂದ] ಇಂದ್ರಗಣ ; ನಗಣ : ನಗಹರೇಂದುಗಣತ್ರಿತಯಂಗಳ ಮುಂದಗಲದೀಶ್ವರನಿರ್ದೊಡೆ . . . ಅಭ್ಯುದಯಂ (ಛಂದೋಂಬು. ೨-೧೪೦). [ ನಗ್$_4$ + ಹರ ]

**ನಗಾಗ್ರ** (ನಾ). ಬೆಟ್ಟದ ತುದಿ,-ಶಿಖರ : ಕ್ಷಿತಿಜಂ ಹತ್ತುಋತುಕಿನಜಂ ಚತುರ್ಥದೊಳ್ . . . ಇರೆ ನಗಾಗ್ರದೆ ಮಡಿಗಂ (ಜಾತಕ. ೨೩-೪) ; ಬಂದು ತಪೋನಿವೇಶನಮನೀಕ್ಷಿಸಿ ಬರ್ಪ ನಿದಾಘಕಾಲದೊಳ್ ಸಂದ ನಗಾಗ್ರದಲಿ ನಿಲವೇಳ್ಕುಮೆನುತ್ತುಮೆ ನಿಂದು (ಗಿರಿಳ. ೯-೨) [ ನಗ್$_4$ + ಅಗ್ರ$_1$ ]

**ನಗಾಗ್ರಣಿ** (ನಾ). ಪರ್ವತಗಳಲ್ಲಿ ಶ್ರೇಷ್ಠವಾದುದು : ಅಗ್ರಹವುಂ ಬಿಸುಟಡುವೆ ನಗಾಗ್ರಣಿಯೆಂದಿದನೆ ನೋಡೆ ಬಲಗೊಳ್ವುವು ನಿರ್ವ್ಯಗ್ರತೆಯಿಂ ಚಂದ್ರಾದಿತ್ಯಗ್ರಹನಕ್ಷತ್ರತಾರಕಾನಿಕರಂಗಳ್ (ಆದಿಪು. ೨-೩೦). [ ನಗ್$_4$ + ಅಗ್ರಣಿ ]

**ನಗಾಟ** (ನಾ). ಅತಿಶಯವಾಗಿ ನಗುವಿಕೆ : ಅವರ ನಗಾಟದ ಗದ್ದಲವನ್ನು ಕೇಳಿ ಮಗು ಎದ್ದುಬಿಟ್ಟಿತು (ರೂಢಿ). 'ಕೂಗಾಟ' ಪರಾ. [ ನಗು$_1$ + ಆಟ ]

**ನಗಾಡು** (ಕ್ರಿ). ಅತಿಶಯವಾಗಿ ನಗು,-ನಗೆಯಾಡು : ಮಗುವು ತಟ್ಟೆಯೊಳಗೆ ತನ್ನ ಪ್ರತಿಬಿಂಬವನ್ನು ನೋಡಿ . . . ಚಪ್ಪಾಳೆ ಹೊಡೆಯುತ್ತಾ ನಗಾಡಿತು (ಮೂಗು. ೩೭) ; ಚಂದ್ರಾಪೀಡನು . . . ಆಡಿದ ಮಾತುಗಳನ್ನು ಕೇಳಿ ಅಲ್ಲಿ ನೆರದಿದ್ದ ಹೆಮ್ಮಕ್ಕಳೆಲ್ಲರು ಗೊಳ್ಳನೆ ನಗಾಡಿದರು (ಕಾಗೆಕಾ. ೪೫); ಶೀಲೆ ನಗಾಡಿದಳು (ದೇವಶಾ. ೯೭) ; ಎಳೆಯನೂ ನಗಾಡುತ್ತಾ . . . ಕಾದು ನಿಂತನು (ಒಡ್ಡಿಉ. ೫). 'ಕೂಗಾಡು' ಪರಾ. [ ನಗು$_1$ + ಆಡು$_1$ ]

**ನಗಾತ್ಮಜೆ** (ನಾ). = ನಗಜಾತೆ. 'ನಗಾತ್ಮಜೇಶ್ವರ' ಪರಾ. [ ನಗ್$_4$ + ಆತ್ಮಜೆ ]

**ನಗಾತ್ಮಜೇಶ್ವರ** (ನಾ). ಪಾರ್ವತಿಗೆ ಪತಿಯಾದವನು ; ಶಿವ : ದೇವ ಮಹೇಶ . . . ಸದ್ದೇವ ಮದೀಶದೇವ ಗರಳಾಶನದೇವ ನಗಾತ್ಮಜೇಶ್ವರಾ (ಶಬಶಂ. ೫-೨೦). [ ಸಂ. ]

**ನಗಾಧೀಶ್ವರ** (ನಾ). ಪರ್ವತಗಳಿಗೆ ಒಡೆಯನಾದವನು ; ಪರ್ವತರಾಜ; ಹಿಮವಂತ : ಪರಭೂಪಾಲವಿಶಾಲಮೌಳಿಮಣಿಸಂಘಾತಪ್ರಭಾಪುಂಜವಿಸ್ತರಪಾದಂ . . . ಪ್ರಚಂಡಭುಜನೊಪ್ಪಿರ್ದಂ ನಗಾಧೀಶ್ವರಂ ( ಗಿರಿಳ. ೨-೧೧೩). [ ನಗ್$_4$ + ಅಧೀಶ್ವರ ]

**ನಗಾಯತ** (ನಾ). ಪರ್ವತದಂತೆ ಎತ್ತರನಾದವನು ; ಪರ್ವತಸದೃಶನಾದವನು : ಆಯುಧವ ತನ್ನವರಿಗಿತ್ತು ನಗಾಯ [ಪಾಠಾಂ. ಗಾಯಿ, ಗಾಯು, ಘಾಯ, ಘಾಯಿ]ತನು ಮಣಿಖಚಿತಕನಕದ ಸಾಯಕವನಂಘ್ರಿಗೆ ಸಮರ್ಪಿಸಿ ಚಾಚಿದನು ಶಿರವ (ಕೂಕರಾ. ೬-೩-೨೨). [ ನಗ್$_4$ + ಆಯತ$_4$ ]

**ನಗಾರಖಾನೆ** 'ನಗಾರ್ಖಾನೆ' ನೋ.

**ನಗಾರಿ$_1$** (ನಾ).=ನಗವೈರಿ : ತ್ರಿದಶಪತಿ ಪಾರಿಜಾತಪ್ರದನಾಗದೊಡಾಧಿಪತ್ಯಸವನವಮದಿನ್ನಾಗದು ತನ್ನಗಾರಿಗಾಗಿಪ್ಪುದು ಧಾರಾಖಡ್ಗಸವನವುಂ ಮತ್ಖಡ್ಗಂ (ಜಗವಿ. ೧೩-೩೧). [ ನಗ್$_4$ + ಅರಿ$_6$ ]

**ನಗಾರಿ$_2$**, ನಕರ್$_3$, ನಗಾರೆ (ನಾ). ಒಂದು ಬಗೆಯ ದೊಡ್ಡ ಚರ್ಮವಾದ್ಯ ; ಭೇರಿ: ಹೊಡೀ ನಗಾರಿ ಮೇಲೆ ಕೈಯ ಘಡಘಡ ಹೊಡೀ ನಗಾರಿ ಮೇಲೆ ಕೈಯ (ಪುರಂದ. ೨-೧೧೪ ಪಲ್ಲವಿ) ; ನಗಾರಿಯಂತೆಯು ಧ್ವನಿಯುಳ್ಳ ಕರ್ಣಗಳು (ಸೌಗಂಧಿ. ೨೭೯) ; ಅಧಿಕವಾಗಿ ತಮ್ಮ ಸಂಸ್ಥಾನದ ಪದ್ಧತಿ ಮೇರೆಗೆ ನಗಾರಿ ನವಪತ್ತುಗಳನ್ನು ಸಹ ಕೊಟ್ಟು . . . ಕಳುಹಿಸಿ ಕೊಟ್ಟರು (ಮಹಮುಖಂ. ೧೩೭) ; ತಮ್ಮ ಸೀಮೆಯ ಪದ್ಧತಿಯ ಮೇರೆಗೆ ನಗಾರಿ ನೌಬತ್ತುಗಳನ್ನೂ ಇವರು ಕಳುಹಿಸಿಕೊಟ್ಟದ್ದು (ಮಹಾಪಂ. I, ೧೪೪); ಎನ್ನೆದೆಯೂ ಮೊರೆವ ನಗಾರಿ ! (ಕ್ರಾಂತಿಧ್ವ. ೫೬-೩); ಹೊಣರು ಮಕ್ಕಳ ಚೆಂಡಾಟ ಮಾಡಿ. ಹೆಂಗಸರ ಬೆನ್ನಿನ ಮೇಲೆ ನಗಾರಿ ಬಾರಿಸಿದಾಗ ಭಾರತೀಯರು ಎಚ್ಚರಾದರು (ಭಾರತಿ. ೧೩೮); ಅವರು ಯುದ್ಧಕ್ಕೆ ಹೋಗುವಾಗ ನಗಾರಿಗಳನ್ನು ಬಾರಿಸುತ್ತ ಹೋಗುವರು (ಕರ್ನಾಅ. ೬೦); ನಗಾರಿಯ ಧ್ವನಿ ಮೊಳಗಿತು (ಬಾಂಅ. ೧೮). **ನಕರ್$_3$**: ಬುಂದಿಯ ಅರಸರಿಗೆ ತಮ್ಮ ನಕರವನ್ನು ರಾಜಧಾನಿಯ ಬೀದಿಗಳಲ್ಲಿ ಲಾಲ್‌ದರವಾಜೆನವರೆಗೆ ಹೊಡಿಸಲು ಅಡ್ಡಿಯಿರಬಾರದು (ಅಕ್ಬರ. ೬೦). **ನಗಾರೆ**: ಹೊಟ್ಟೆಯೂದಿಕೊಂಡು ನಗಾರೆಯಂತಾಗಿದೆ (ಪುನರ್ಮಿ. ೧೫೬).

**ನಗಾರಿಯ ಬಸವ**=ನಗಾರಿಗಳನ್ನು ಹೇರುವ ಬಸವ,-ಹೊರುವ ಎತ್ತು : ಸಾಲುಗ್ಗಡಿಗಳು, ಧ್ವಜಗಳು, ನಗಾರಿಯ ಬಸವಗಳು (ಬಿರುಗಂ. ೨೬-೧೩). [ ← ಅರ. ನಕಾರಾ, ನಕ್ಕಾರಹ್; ಪಾರ. ನಕ್ಕಾರಾ; ಹಿಂ. ನಕಾರಾ, ನಕ್ಕಾರಾ; ಮರಾ. ನಗಾರಾ ]

**ನಗಾರೆ** 'ನಗರಿ$_2$' ನೋ.

**ನಗಾರ್ಖಾನೆ**, ನಗಾರಖಾನೆ (ನಾ). ನಗಾರಿ, ನೌಬತ್ತು ಮೊದಲಾದ ವಾದ್ಯಗಳನ್ನು ಇಡುವ ಸ್ಥಳ ; ನಗಾರಿ ಮೊದಲಾದ ವಾದ್ಯಗಳನ್ನು ಬಾಜಿಸುವ ಸ್ಥಳ : ತೀರ ಬಯಲಲ್ಲಿ ಎದುರು-ಬದುರಾಗಿ ಕಟ್ಟಿದ ನಗಾರ್‌ಖಾನೆಗಳ ಮೇಲ್ಮಳಿಗೆಗಳಲ್ಲಿದ್ದ ಪಾರ್ವತಿ-ಪರಮೇಶ್ವರರ ಬಣ್ಣದ ಪ್ರತಿಮೆಗಳು, ನೋಡುವವರನ್ನು ನಿಂತಲ್ಲಿಯೆ ನಿಲ್ಲಿಸುತ್ತಿವೆ (ಜನಜೀ. ೧೯೨). **ನಗಾರಖಾನೆ**: ಈ ಇಮಾರತಿಯು ಸ್ವತಂತ್ರವಾಗಿರದೆ ಬೀಳುವ ಸ್ಥಿತಿಯಲ್ಲಿರುವ ಒಂದು ನಗಾರಖಾನೆಯಾಗಿ ಇರುತ್ತದೆ (ವಿಜರ್ಚ. ೨೨). [ ← ಮರಾ. ನಗಾರ್‌ಖಾನಾ; ಹಿಂ. ನಕ್ಕಾರ್‌ಖಾನಾ ]

**ನಗಾರ್ಚನೆ** (ನಾ). = ನಗಯಜ್ಞ : ತನತನಗೊಲವಿಂ ಕೈಗೆಯ್ವ ನಗಾರ್ಚನಪರಿಕರಂಗಳಂ ನೆರಪುವ ಗೋಧನಮನಲಂಕರಿಸುವ ಘೋಷನಿವಾಸಿಗಳಿಂದಮಾಯ್ತು ಕಳಕಳನಿನದಂ (ಜಗವಿ. ೪-೮೦). [ ನಗ್$_4$ + ಅರ್ಚನೆ ]

**ನಗಾರ್ಯ** (ನಾ). ಗೌರವಾರ್ಹನಾದ ವ್ಯಕ್ತಿ : "ಠಕ್ಕುರ = ನಗಾರ್ಯರುಂ (ಠಕ್ಕುರರು)" (ನೀತಿವಾ. ೨೬-೯೨). [ ನಗ ? + ಆರ್ಯ ]

**ನಗಾಹಿತ** (ನಾ). = ನಗವೈರಿ : ನಿಡುಗಳಿಲೆಯ ಮೊನೆಯುರ್ಚಿದ ಜಡಧರ ಮೆಱದುದು ನಗಾಹಿತ ಪ್ರಣಧಿಯಿದೆಂದಡರ್ದತಿರೋಷದಿನಾ ಗಿರಿ ತೊಡರ್ಚಿ ಪಿಡಿದುಗ್ರಶೂಲದೊಳ್ ತೋಱುವವೋಲ್ (ಕಲಶಂ. ೩-೩೭). [ ನಗ್$_4$ + ಅಹಿತ ]

**ನಗಿಸು** (ಕ್ರಿ). ೧. ನಗುವಂತೆ ಮಾಡು ; ಹರ್ಷಗೊಳ್ಳುವಂತೆ ಮಾಡು ; ವಿನೋದಗೊಳಿಸು : ಪಗರಣದೊಳ್‌ಟಾದ ಮೂಜಂ ನಗಿಸುಗುಮಪ್ಪುದಱಿನಲ್ಲಿಗಂತವದೋಷಂ (ಕವಿರಾ. ೧-೬೪) ; ಆಡಿಯುಂ ಪಾಡಿಯುಂ ನಗಿಸಿಯುಂ (ಪದ್ಮಾರಾ. ೧೧೬-೧೫) ; ಬೇಡದುದಂ ಬೇಡುವ ಪುಡಿಯಾಡುವ ತೊದಳೊದವೆ ನುಡಿವ ನಗಿಸುವ ಬಾಲಕ್ರೀಡೆ ಮುರಾರಿಯ ಬಾಲಕ್ರೀಡೆಯನನುಕರಿಪುದಾದುದರಿಕೇಸರಿಯಾ (ಪಂಪಭಾ. ೨-೭) ; ನಗಿಸಲ್ ನುಡಿಸಲು ಮಜಿತನ ನಗೆಗಣ್ಗಳ ಚೆಲ್ವನೊಸೆದು ನೋಡಲ್ ಪಡೆಯಲ್ ನಗೆಮೊಗದ ನೀಱಯರ್ [ ನಗು ] ಮೊಗದಿಂದಂ ಪಕ್ಕುಗಾಣದಗಲಗಲಿರ್ದರ್ (ಅಜಿಪು. ೫-೯೨) ; ದೇವನೊಳ್ಪಿದನೆಂದು ಮುಯ್ಯಾನಲು ಬೇಡಾ . . . ಅಳಿಸುವ ನಗಿಸುವನೊಳ್ಪಿದನೆ (ಬಸವ. ೧೯೮) ; ಸಂಪಗೆಯ ನನೆಗೆಯ್ದು ಬಟ್‌ಕೊಯ್ಯಗೆ ಜಾಬುವ ತುಂಬಿ ನಗಿಸಿದುದು ಮಲ್ಲಿಗೆಯಂ (ಕಬ್ಬಿಗಕಾ. ೫೮) ; ಅಳುವವರ ನಗಿಸುವುದು ನಗುವರನಳಿಸುವುದು ಗೆಲಿದವರ ಸೋಲಿಸಿ ಗೆಲಿಸುವುದು ಸೋತವರನೀ ವಿಪರೀತಗತಿ ವಿಧಿಗೆ (ಕುಮಾರಳ. ೧೨-೩) ; ನಗುವ ನಗಿಸುವ ನಗಿಸಿ ನಗುತ ಬಾಳುವ ವರವ ನಿಗೆ ನೀನು ಬೇಡಿಕೊಳ್ಳೊ (ಮಂಕುತಿ. ೯೧೭). ೨. ಪರಿಹಾಸ ಮಾಡಿಸು ; ಅಪಹಾಸ್ಯ ಮಾಡಿಸು ; ಅವಮಾನ

ಗೊಳಿಸು : ನಿನಗೊರ್ವಂಗಲ್ಲವಸ್ತ್ವಾಂತರವಮುರಜನಕ್ಕೆಲ್ಲಮಿಾ ಪಾಂಗೆ ಕಾರಣ್ಯನಿನಾದಂ ನಿನ್ನನಾದಂ ನಗಿಸುಗುಂ (ಆದಿಪು. ೩-೬) ; ಎನ್ನಂ ಲೆಕ್ಕಿಸದಿರ್ದುಂ ಕಡೆಗಿನ್ನೂ ಮಗಳೇ ನಿನ್ನಾತಂ ಸರ್ವೇಶನೇ ಜಗದೊಳ್ ನಗಿಸದೆ ಬಿಟ್ಟೊಡೆ ದಕ್ಷನೆ ನಾನೆಂದತಿ ಘೂರ್ಮಿಸಿದನು (ವೀರೇಶ. ೦-೬೪). ೩. ಪರಿಹಾಸ ಮಾಡಿಸಿಕೊಳ್ಳು ; ನಗೆಗೀಡಾಗು : ವಿನಯಮುಮಯಿಕ ಮುಮವುಪ್ಪುದು ಸನಾಭಿಗಳ್ ಸಂಗತಂಗಳಪ್ಪೊಡೆ ಪಸರ್ಗೊಂಡನಿತಱೊಳೆನ್ನಂ ಸ್ಮೈರಿಸನೆನೆ ಭರತಂಗೆಬಿಗಿ ಲೋಕದಿಂ ನಗಿಸುವೆನೇ (ಆದಿಪು. ೧೪-೬೬).

ನಗಿಸಿಕೊಳ್, ನಗಿಸಿಕೊಳ್ಳು = ಅಪಹಾಸ್ಯಮಾಡಿಸಿಕೊಳ್ಳು ; ಅವಮಾನ ಮಾಡಿಸಿಕೊಳ್ಳು : ಗುರುಗಳಂ ಕುಲವೃದ್ಧರನಾಜಿಗುಯ್ದು ಕೆಮ್ಮಗೆ ಪಗೆ ವಾಡಿಯೊಳ್ ನಗಿಸಿಕೊಂಡೊಡೆ ಬಂದಪುದೇಂ ಸುಯೋಧನಾ (ಪಂಪಭಾ. ೧೧-೧೬) ; ಜೋವದ ದೇವತೆಗಳುಮಂ ಸೇವಿಪನೆಂದಂದು ನಗಿಸಿಕೊಳ್ವನೆ ತನ್ನಂ (ಸಮಪ. ೯-೯೭) ; ಕಯ್ಯೆಲುಂಡುಂ ಬತ್ತಲಿರ್ದುಂ ನಗಿಸಿಕೊಂಡೆ ಅಯ್ಯಲಾನಿಂತು ನಾಯುಣ್ಣದ ವಿಧಿಯನುಂಡೆ ಏನೆಂಬೆನೀಶ್ವರಾ ಕಾವುದೆನ್ನಂ ದೇವ (ವಾಗೀಶ. ಚೇ. ೩೬೦-೩) ; ನಾಲ್ಕುಜನರಿಂದ ನಗಿಸಿಕೊಳ್ಳುವಂತ ಬಾಳಬಾರದು (ರೂಢಿ). ನಗಿಸುವ ವಾಯು = ನಗುವನ್ನುಂಟುಮಾಡುವ ಗುಣವುಳ್ಳ ಒಂದು ಬಗೆಯ ವಾಯು : ಸಾರಜನಕ, ಆಮ್ಲಜನಕಗಳ ಸಂಯೋಗದಿಂದ 'ನಗಿಸುವ ವಾಯು' (Laughing gas-Nitrous oxide) ಉತ್ಪನ್ನವಾಗುವುದು (ವಿಜ್ಞಾ. ಕ. ೬೮). ನಗಿಸುವ ಹೊಗೆ = ನಗಿಸುವ ವಾಯು : ನಗಿಸುವ ಹೊಗೆ (ಲಾಫಿಂಗಗ್ಯಾಸವು) – ಇದು ನಿರ್ಗಂಧ ವಾಯುವಿನ ಒಂದು ಬಗೆಯ ಅಮ್ಲಜವಿಕಾರವು (ಮುಂಬಯಿ. ೬-೪೧).

[ ನಗು₁ + – ಇಸು₃ ]

ನಗು₁ (ಕ್ರಿ). ನಕ್ಕು₂ (ಭೂತನ್ಯೂ) ೧. ಸಂತೋಷ, ಹಾಸ್ಯ ಅಥವಾ ಅಪಹಾಸ್ಯ ಮುಂತಾದುವುಗಳನ್ನು ಸಶಬ್ದವಾಗಿ ಮುಖವಿಕಾರದೊಡನೆ ತೋರ್ಪಡಿಸು, – ವ್ಯಕ್ತವಾಡು : "ನಗು – ಹಸನೇ" (ಶಮುಥಾ) ; ಕಾಣದಾ ರೂಪಂ ಕಂಡು ನಕ್ಕು ದುಃಖುಮಂ ಮಱೆದೊಳ್ (ವಡ್ಡಾರಾ. ೧೧೯-೩೦) ; ದಿವಿಜಾಶ್ವತ್ಥಾಮದೊಳ್ ಭುವನಂಗಳ್ ನಡುಗೆ ಶಿಶು ಸರಂಗೆಯ್ದೊಡೆ ನಕ್ಕವಯವದೆ ಕುಂಭಸಂಭವನಿವನಶ್ವತ್ಥಾಮನೆಂದು ಪೆಸರಿಡೆ ನೆಗಟ್ದಂ (ಪಂಪಭಾ. ೨-೪೪) ; ವಿದೂಷಕನಬುತ್ತುಂ ಬಂದ ತನ್ನಂ ನಗುತುಂ ಪೋಪಂತೆ ಸಂತೋಷಂ ಮಾಡಿಸಿದುದರ್ಕೊಡಂಬಟ್ಟು ಚಾರುಹಾಸಿನಿ ನಿಜ ನಿವಾಸಕ್ಕೆ ಪೋದಳ್ (ಗದಾಯು. ೩-೦೦ ವ) ; ದಯಾಮಿತ್ರಸೆಟ್ಟಿ ಬಾಯ ತಂಬುಲಂ ಸೂಸೆ ಕಳಕಳಿಸಿ ನಕ್ಕು (ಧರ್ಮಾಮೃ. ೦-೧೬೨) ; ತರುಣಿಯ ಮುಖ ಚಂದ್ರಮನಂ ತಳ್ವದೆ ನೋಡಿ ನಕ್ಕನುದ್ಭಟದೇವಂ (ಉದ್ಭಟ. ೧೧-೨೦) ; ಉಂಡು ನಗದಿಹ ಮೋಱಿ ಅದು ಕಹಿಯ ಸೋರೆ (ಕನಕ.೫೦-೪). ೨. ತಿರಸ್ಕಾರವನ್ನು ಸೂಚಿಸು ; ಅಪಹಾಸ್ಯಮಾಡು ; ಅವಮಾನಗೊಳಿಸು : ನಾನುಮೆರಡಂ ನುಡಿದೊಡೆ ಹರಿಹರಹಿರಣ್ಯಗರ್ಭರ್ ನಗರೇ (ಪಂಪಭಾ. ೦-೮೨) ; ಮುಂ ತೊಟ್ಟಂಬನದನುಗಿದು ಕುಂದಿಸಿದಂ ಭಯದಿಂ ಕರ್ಣನೆಂದು ಲೋಕಂ ನಗದೇ (ಪಂಪಭಾ. ೧೨-೧೯೯) ; ಮತ್ತಿದಱೆಲದೊಳ್ ಸಣಸುತ್ತುಂ ದಿವಮಂ ನಗ ತ್ತುಮಪಹಾಸ್ಯಂಗೆಯ್ಯುತ್ತುಂ ಸೊಗಯಿಪುವು . . . ಹೇಚರೇಂದ್ರಪುರಂಗಳ್ (ಶಾಂತಿಪು. ೩-೨) ; ನಗದಂತು ಜಗಂ ಗುರುಗಳ್ ಪೊಗಟ್ವಂತನುಜಾವಿಗಳ್ಗೆ ಶುಭಮಪ್ಪಂತು . . ಆಗಣಿತಗುಣನೆನಿಸಿ ನಿಲ್ವುದಾಕಲ್ಪಾಂತಂ (ಕಾದಂಪೂ. ೫೭೭) ; ಲೋಕಪಾವನವೆನಿಸಿ ಹರಿವ ಕಾವೇರಿಯಿಂ ನಾಕಮಂ ನಗುವ ನಗರಂಗಳಿಪ್ಪೋಜೆಯಿಂ (ತಿರುಕ. ಚೇ. ೨-೪) ; ಲೋಕಂ ನಗುವ ಮಾತನಾಡದಿರಿ (ಸಿದ್ಧರಾ. ೧-೪೦) ; ಕುಣಿಸಿ ನಗನೇ ಕವಿಕುಮಾರವ್ಯಾಸನುಳಿದವರ (ಕುವ್ಯಾಭಾ. ೧-೦೬) ; ಕರಿಗಳನು ಮುಱಿದಿಡುವ ಸಿಂಹಕೆ ನರಿಗಳಿದಿರೇ ತಾನು ನಿಮಗಂ ತರವೆ ಸಾಕಂತಿರಲಿ ಕಂಡವರೆಲ್ಲ ನಗದಿಹರೆ (ನಳಚ. ೨-೦೮). ೩. (ಅಲಂ) (ಹೂವಿಗೆ ಸಂಬಂಧಿಸಿದಂತೆ) ತೆರೆದುಕೊಳ್ಳು ; ಅರಳು : ಮಿಕ್ಕು ಮಾಸುವ ಬೆಳಗು ಕಂಪಡರ್ದ ಮುಗಿಲು ತಲೆಯಿಕ್ಕುವಬುಜಂ ನಗುವ ಕುಮುದ . . . ನಲಿವ ಜಾರೆಯರು ಸಂಜೆಯಲಿ ರಂಜಿಸಿದರು (ಸೋಮಮಂ. ೨-೦೦) ; ಮಲ್ಲಿಗೆ ಬಾಯ್ಬಿಟ್ಟು ನಗುತಾವೆ (ಜನಪದ. ೦೨೯).

ನಗು ನಗು (ದ್ವಿರುಕ್ತಿ) : ನಗುನಗುವ ಕಣ್ಣಳಿಗೆ ಹೊಗೆಯುಸೂದಲು ಬೇಡ (ಮಂಕುತಿ. ೯೬೩) : ಯಾವಾಗಲೂ ನಗುನಗುತ್ತಿದ್ದ ಹುಡುಗಿ ಯಾಕೋ ಮಂಕಾದಳು (ರೂಢಿ). ನಕ್ಕಾಡು = ಹಾಸ್ಯದಿಂದ ವಿಶೇಷವಾಗಿ ನಗು : ಸಿಕ್ಕಿಲ್ಲ ತೀರ್ದುದಿನ್ನೆಮ್ಮ ಪಟ್ಟಣ ಸಮಿಾಪಕ್ಕೆ ತೋಱಿತು ಕಾಣ್ಕೆಯೆಂದು ನಕ್ಕಾಡಿ ಕೈಹೊಯ್ದು ಸರಸವಾಡುತ ಕಾಲನಿಕ್ಕುತಿದ್ದುದು ರಾಜಕಟಕ (ಭರತೇ. ೫೩-೨೨) ; ಸೋಗಿಗರೊಳ್ ನಕ್ಕಾಡುತುಂ ಮುದ್ದುಗರೆವುತುಂ ಲೀಲೆಯಿಂ ಮಕ್ಕಳಾಟಕೆಯೊಳೆಸೆದಂ ಜಗವನಾಡಿಸುವ ಸೂತ್ರಧಾರಂ ಕೃಪುದೊಳು (ಚಿಬಪು. ೩-೩೬).

[ ದೇ. ೫ ತಮಿ. ನಕು ; ಮಲ. ನಗೆ ; ತೆಲು. ನಗು, ನವ್ವು ]

ನಗು₂ (ನಾ). ೧. ನಗುವಿಕೆ : ನಗುವೊಂದು ರಸಪಾಕ ಅಳುವೊಂದು ರಸಪಾಕ (ಮಂಕುತಿ. ೯೩೪) ; ಅಂತರಾಳದಲ್ಲಿ ನಗು ಕೇಳಬಂದಿತು (ಯಕ್ಷಪ್ರ. ೩) ; ಅವನ ತುಟಿಯ ಮೇಲೆ ಒಂದು ಸಣ್ಣನಗು ಸುಳಿಯಿತು (ರೂಪಸ. ೩). ೨. ಅಪಹಾಸ್ಯ : ಪರಿಹಾಸ : (ಕ). ೩. (ಹೂವು ಮೊದಲಾದವು) ಅರಳುವಿಕೆ : ವಿಕಾಸವಾಗುವಿಕೆ.

ನಗುಬರಿಸು = ನಗುವನ್ನುಂಟು ಮಾಡು : ಆಗ ನಡೆದ ಘಟನೆಯು ತುಂಬಾ ನಗುಬರಿಸುವಂತಹದು (ರೂಢಿ). ನಗುಬರು = ನಗುವುಂಟಾಗು : ಯೋಚನಿಸು : ಪ್ರಸಂಗವನ್ನು ನೆನೆಸಿಕೊಂಡಾಗೆಲ್ಲ ನಗುಬರುತ್ತೆ (ನಾಡಿಗೇ. ೦೮೩) ; ಇವರು ನಗಿಸುವುದಕ್ಕೆ ಪಡುವ ಪಡಿಪಾಟ, ಅಂಗಚೇಷ್ಟೆಗಳು ಮುಂತಾದವನ್ನು ನೋಡಿದರೆ ನಿಜವಾಗಿಯೂ ನಗುಬರುತ್ತೆ (ನಾಡಿಗೇ. ೦೮೩).

[ <ನಗು₁ ]

ನಗುಗೇಡು (ನಾ). = ನಗೆಗೇಡಂ : (ಕ). [ ನಗು₂ + ಕೇಡು ]

ನಗುತ (ನಾ). ಅಪಹಾಸ್ಯ ; ಹಾಸ್ಯದ ಮಾತು : ನೀನೆಲ್ಲಿ ಜನಿಸಿದೆಯದಾರ್ ತಂದೆತಾಯ್ಗಳ್ ನಿಧಾನವೆಮ್ಮೊಡನುಸುರಿಮೆಂದಜಂ ನುಡಿದನಿಂದಾ ನಗುತಮೇ ಸ್ತೋತ್ರಮಾಯ್ತು ಸರ್ವೇಶರಸ ಮಹಿಮೆಯೆಂತೋ ಜಗದೊಳು (ಚಿಬಪು. ೧೮-೧೨). [ ನಗು₁ + – ತ₂ ]

ನಗುಪಾಟಲು (ನಾ). ಅಪಹಾಸ್ಯ ; ಹಾಸ್ಯಾಸ್ಪದವಾದುದು : ಈ ಆದರ್ಶವಾದ ಅನೇಕವೇಳೆ ನಗುಪಾಟಲಾಗುವಷ್ಟು ಮಿತಿಮಿಾರಿತ್ತೆಂದರೂ ಅತಿಶಯೋಕ್ತಿಯಲ್ಲ (ಭಾರತ. ೪೭೦) ; ಪ್ರಸಿದ್ಧರಾಜರು ಬಗ್ಗಿಸಲಾರದ ಬಿಲ್ಲನ್ನು ಅಸ್ತ್ರವಿದ್ಯೆಯನ್ನರಿಯದ ಈ ಕೈಲಾಗದ ಬ್ರಾಹ್ಮಣ ಬಗ್ಗಿಸಿಯಾನೇ ? ರಾಜರಲ್ಲಿ ಬ್ರಾಹ್ಮಣರಿಗೆ ನಗುಪಾಟಲು (ಪಚಭಾ. ೩೩) ; ಪ್ರಯತ್ನವು ಸಾಗದೆ ವಿಫಲವಾದರೆ ಉಪಹಾಸಕ್ಕೆ ಕಾರಣವಾಗಿ ಹೆಂಗಸರಲ್ಲಿ ನಗುಪಾಟಲಿಗೆ ಗುರಿಯಾಗಬೇಕಾಗುವುದು (ಕೋಹಿನೂ. ೪೫) ; ಅವರ ಮಧ್ಯೆ ರಂಗಣ್ಣನ ಇರವು ನಗುಪಾಟಲು (ದುಂಡಿ. ೬೪). 'ನಗೆಪಾಟಲು' ಪಠಾ.

[ ನಗುಪಾಟು (<ನಗುಪಾಡು) + – ಅಲು (< – ಅಲ್₂) ]

ನಗುಪಾಟು 'ನಗುಪಾಡು' ನೋ.

ನಗುಪಾಡು,ನಗುಪಾಟು (ನಾ). = ನಗುಪಾಟಲು : . ಈ ಕೆಲಸ ಸರಿಯಾಗಿ ಆಗದಿದ್ದರೆ ನಗುಪಾಡೇ ಸರಿ (ರೂಢಿ). ನಗುಪಾಟು : ಅವರ ಜೀವನ ನಗುಪಾಟಿಗೆ ಗುರಿಯಾಯಿತು (ರೂಢಿ).

[ ನಗು₂+ ಪಾಡು₃./ತೆಲು.ನಗುಬಾಟು ]

ನಗುಮುಖ (ನಾ), ನಗುವ ಮುಖ ; ನಗುವಿನಿಂದ ಕೂಡಿದ ಮುಖ : ಹಸನ್ಮುಖ : ಅವರ ಕಣ್ಣು ಕೂಡಿದಾಗ ಅವಳು ನಗುಮುಖವನ್ನು ತೋರುತ್ತಿದ್ದಳು (ರಂಗಿರೋ. ೨೬). [ ನಗು₁ + ಮುಖ ]

**ನಗುವೊಗ** (ನಾ). = ನಗುವಮುಖ : ನಗಿಸಲ್ ನುಡಿಸಲುಮಜತನ ನಗೆಗಣ್ಣಳ ಚೆಲ್ವನೊಸೆದು ನೋಡಲ್ ಪಡೆಯಲ್ ನಗೆಮೊಗದ ನೀರೆಯರ್ [ನಗು] ವೊಗದಿಂದಂ ಪಕ್ಕಂಗಾಣದಗಲಗಲಿರ್ವರ್ (ಅಜಿಪು. ೩-೯೨); ಬಡತನದ ನಿಕೃಷ್ಟಾವಸ್ಥೆಯಲ್ಲಿಯೂ ರಾಜೀವಿ ಅನಂತನನ್ನು ನಗುವೊಗದಿಂದಲೇ ಹುರಿದುಂಬಿಸಿದಳು (ಒಡ್ಡಿಉ. ೧೧೨); ನಗುವೊಗದರಸಿಯಾದ ಕವಿತಾ ಸುಂದರಿಯ ವರವನ್ನು ಪಡೆಯಲು ಬಗಿಮಿಗೆ ಜಪಿಸುವ ಹಂಬಲ ಈ ಕವಿಗಿದೆ (ಸಾಸಪಮ. ೧೩೦). [ ನಗು₁ + ವೊಗ ]

**ನಗುವೋರೆ** (ನಾ). = ನಗುಮುಖ : ಬೆರಗುಗಣ್ಣಿನ, ಬೆರಳವಿಸೆಯ ಬೆರಸಿದಾ ನಗುವೋರೆಯಾ ಅರಸನಿದ್ದನು (ಕವಿಪು. ೩೭-೦); ಹೈಮವತಿ ನಗುವೋರೆಯಿಂದ ಮುಗ್ಧದೃಷ್ಟಿಯಿಂದ ನೋಡುತ್ತ . . . ಎಂದಳು (ಎರಸಿ. ೧೧). [ನಗು₁ + ವೋರೆ (<ವೋಱೆ) ]

**ನಗುಸಾರ**, ನಗಸಾರ (ನಾ). = ನಗೆಚಾಟಿಕೆ ೧ : ಇದು ಹಗೆಸಾರವಲ್ಲ ನಗುಸಾರವೆಂದು ತಿಳಿದುಕೊ (ಕಥಾಮಂ. IV, ೧೩೩). **ನಗಸಾರ** : ಹೊಗಳು ಭಟ್ಟರನ್ನು ನಿರ್ಮಿಸಲು ಈಶ್ವರನು ಸ್ತೋತ್ರಪ್ರಿಯನೋ ? ಕೀರ್ತಿ ಕಾಮುಕನೋ ? ತನ್ನ ಪ್ರತಾಪಪ್ರದರ್ಶನಕ್ಕಾಗಿ ರಚಿಸಿದನೆಂಬುದು ಒಂದು ನಗಸಾರದ ಮಾತು (ಜೀವಾತ್ಮ. ೨೯೬); ಸಂಘಾನ ನಗಸಾರ ಮಾಡ್ದ (ಇತನೋ. ೪೧); ಮಾತ್ರೇನು ನಗಸಾರಕ್ಕೆ ಹೇಳ್ಳೇನಾ ? (ಜಂದಕೋ. ೩೮೦). 'ನಗೆಸಾರ' ವರಾ.

ನಗುಸಾರಗಾರ = ನಗಿಸುವವನು : ಹಾಸ್ಯಗಾರ : ಅವನು ಒಳ್ಳೆಯ ನಗುಸಾರಗಾರ (ರೂಢಿ). [ ನಗು₂ + - ಸರ್₃ ? ]

**ನಗೆ** (ನಾ). ೧. ನಗುವಿಕೆ : "ಚಲ್ವೆ ನಗೆ" (ಕಲ್ಯಮಂ. ೬೬); ಮೊಗವೆಂಬಂ ಬುಜದರಲಾ ನಗೆಯೆಂಬ ವಿಕಾಸವೊಪ್ಪುವದಟೊಳ್ಪುಟಿಗುಂ ಮಿಗೆ . . . ಸುಯುಕ್ತರೂಪಕವಕ್ಕುಂ(ಕವಿರಾ.೩-೨೫);ನಗೆ ಸಬ್ಬಂ ಬನದಮೆಂದಿವಜಂ ಲಲಿತಾಂಗನಂ ಮನಂಗೋಳಿಸುವರಿಚ್ಚೆಕಾರ್ತನದ ಲಲ್ಲಿಯ ಸಗ್ಗದ ದೇಸೆ ಕಾರ್ತಿಯರ್ (ಆದಿಪು. ೨-೬೦); ನಗೆಯೊಳ್ ಬಿರಿವಂತಿರೆ ಬಿರಿವುವಲ್ಲಿ ಪೊಸಮಲ್ಲಿಗೆಗಳ್ (ಶಾಂತಿಪು. ೨-೯೬) : ಪುರಜನಂಗಳ್ ಕೇಳ್ದು ಕರುಳಂ ಒಡಿದು ನಗೆಯೊಳ್ ಪೊರಳ್ದರ್ (ಪಂಚತಂ. ೦೧೬-೩೨); ಶಾಂತರೂಪಂ ಬಿಟ್ಟು ಕ್ರೂರರೂಪಂ ಕೈಕೊಂಡು ನಗೆಯಂ ಬಿಟ್ಟು ಮುಳಿಸನೊಳಕೊಂಡು (ಧರ್ಮಾಮೃ. ೬-೬೩); ನಗೆಗೆ ನಗೆ ಕಂಟಣ ವಿವೇಕದ ಹೊಗೆಗೆ ಹೊಗೆ ಸವಿಯಾದುದು (ಕುಮಾ.ಸ. ೧೨-೪೨); ನಗೆಯು ಬರುತಿದೆ ಎನಗೆ ನಗೆಯು ಬರುತಿದೆ ಜಗದೊಳಿರುವ ಮನುಜರೆಲ್ಲ ಹಗರಣ ಮಾಡುವುದ ಕಂಡು (ಪುರಂದ. ೧-೨೨ ಪಲ್ಲವಿ); ನಗೆ ತಡೆಯಲಾರದೆಯೆ ಹೊರಗೆ ಬಂದಲ್ಲಿ ಬಿರಿವಿರಿಯ್ಯನಗೆ ತೊಡಗಿದನ್ . . . ನಗೆಗೆ ಮಿಾರ್ದುದಾ ಧೂಮದೃಶ್ಯಂ (ಶ್ರೀರಾಮಾ. ೦೪೮-೧೮೦). ೨. ಅಪಹಾಸ್ಯ ; ಪರಿಹಾಸ ; ಕುಚೋದ್ಯ : ಮನುಮಾರ್ಗನಿಪುಣನೆನಿಸಿದ ನಿನಗಾಮಿ ರಾಜಮಾರ್ಗಮಂ ತೋಱೆ ಜಗಜ್ಜನಕೆ ನಗೆಯಲ್ತೆ (ಆದಿಪು. ೮-೦೨); ಎಲೆ ಧನಂಜಯ ಧರ್ಮಪುತ್ರನ ಕೊಲುವೆನುಳುಹುವಡಿಲ್ಲವೆಂಬಗ್ಗಳಿಕೆಯದು ನಗೆಯಲ್ಲವೇ(ಕುಮಾ.ಕ.೧೭-೧೨). ೩. (ಹೂವು ಮೊದಲಾದವು) ಅರಳುವಿಕೆ ; ವಿಕಸಿಸುವಿಕೆ : ಕುಮುದಂಗಳ ನಗೆ ಬತ್ತಿದುವು ಪಾಯ್ತು ನೇಸಱನಾಗಳ್ [ಪಾಠಾಂ. ನೆಗೆಯುಗೆಯುತ್ತಿ ಪೋಯ್ತು ಮುನ್ನೇಸಱನೊಳ್] (ಲೀಲಾವ. ೩-೩). ೪. ಸಂತೋಷ ; ಆನಂದ : ನಗೆ ಹೋಗಿ ಹೊಗೆಯಾಯ್ತು (ರೂಢಿ). ೫. ವಿನೋದ ; ತಮಾಷೆ ; ಹಾಸ್ಯ : ನಗೆಯೊಳಮಪ್ಪೊಡಮಿಂತೀ ತೆಗಟ ದುರುಕ್ತಿಗಳನೆ ಪ್ಲೊಳಂ ನುಡಿಯಲ್ ನೀಂ ಬಗೆಯೊಳ್ ಬೇಱೊಂದನಣಂ ಬಗೆಯಲ್ ಗಡ ನಿನಗೆ ಸುಮತಿ ಬೇಱಾಂ ಬೇಱೇ (ಕಾವ್ಯಾವ. ೪೧೨). ೬. ಕಾಂತಿ ; ವಿಲಾಸ. 'ನಗೆಗಣ್' ವರಾ.

ನಗೇಡಾಗು = ನಗೆಗೆ ಗುರಿಯಾಗಂ ; ಅಪಹಾಸ್ಯಕ್ಕೆ ಒಳಗಾಗು : ನೀನಿಂತು ನಗೇಡಾದ ನುಡಿಗಳಂ ನುಡಿಯುತ್ತಮೆನಗೆ ಮುಳಿಸನಾದೊಡಂ ಪುಟ್ಟಿಸಲಿಲ್ಲಂ (ಕಾದಂಉ. ೩೬೬); ತನ್ನೆಲ್ಲ ಸಂದೇಹಗಳು ಬರೇ ಸಂದೇಹಗಳಾದರೆ, ತಾನು ನಗೇಡಾಗಬಹುದು ಎಂಬ ಭಾವನೆ ಆಕೆ ಉತ್ತರಿಸದಂತೆ ತಡೆಯಿತು (ಪಾತ್ನಲ್ಕ. ೧೪೯). ನಗೆಗೆಡೆ = ಅಪಹಾಸ್ಯಕ್ಕೆ ಈಡಾದುದು ; ವಿಡಂಬನೆಗೆ ಗುರಿಯಾದುದು : ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಯ ಕೊಂದು ನಲಿನಲಿದಾಡುವ ತನ್ನ ಮನೆಯ ಲೊಂದು ಶಿಶು ಸತ್ತರೆ ಅದಕೆ ಮಱುಗುವಂತೆ ಅವಕೇಕೆ ಮಱುಗನು . . . ಎಂಬುದಾಗಿ ಜಾಲಗಾಱನ ದುಃಖ ಜಗಕ್ಕೆಲ್ಲ ನಗೆಗೆಡೆ (ಮಹಾದೇ. ಬ. ೪೬-೧೧೯); ಬಗೆಯಲಱೆಯದು ನಿನಗೆ ಪುರುಷಾಮೃಗ ಮನೋವೇಗದಲಿ ನಡೆವುದು ನಗೆಗೆಡೆಯ ಮಾಡಿದೆಯಲಾ ಕಲಿಭೀಮ ನೀನೆಂದು (ಕುಮಾ.ಸ. ೬೦೩. ೬-೧೬); ಗಾಳಿಯುಱುಬೆಗೆ ಮಲೆತ ಮೇಘದ ತೋಳುವಲ ನಗೆಗೆಡೆಯಲಾ ಕುರುಪಾಲನೆತ್ತಲು ಭೀಮನೆತ್ತಲು ಶಿವಶಿವಾ ಎನುತ (ಕುಮಾ.ಭೀ. ೩-೧೪); ಮಗಳೆ ನೀ ನಿನಗಲ್ಲದಿರ್ದೋಜೆಗಳ ನಡೆವರೆ ರಾಜಕುಲದಲಿ ನಗೆಗೆಡೆಯ ಮಾಡುವರೆ . . . ನಗಳಲಹುದೇ ಪುರುಷಸಂಗವನೆಂದಳಾ ಜನನಿ (ಪ್ರಭುಲಿ. ೩-೩೬). ನಗೆಗೆಡೆಮಾಡು = ಅಪಹಾಸ್ಯಕ್ಕೆ ಗುರಿಮಾಡಂ ; ವಿಡಂಬನೆಗೆ ಒಳಗುಮಾಡು : ಎರೆಯ ಕಡೆಗಣಿಸಿರುವ ಆಳ್ಮನೆಯ ಗೆಯ್ಮೆಯನೆ ಮರವೆ ನಗೆಗೆಡೆಮಾಡೆ ಮಾರೊಡ್ಡಿ ಮುನಿವಂ (ಕಾಲಿಂತ. ೩೦-೬೬). ನಗೆಗೆಡೆಯಾಗು = ಅಪಹಾಸ್ಯಕ್ಕೆ ಗುರಿಯಾಗು ; ಪರಿಹಾಸಕ್ಕೊಳಗಾಗು : ನಗೆಗೆಡೆಯಾಗೆ ದೈವಮೆನಗೇನನೊಡರ್ಚಿಸಿತೀಗಳ್ (ಕಾದಂಪೂ. ೫೦೯); ನೀಂ ಶಬ್ದಮಾತ್ರಕ್ಕೆ ಬೆರ್ಚಿದೊಡಿಂತಪ್ಪ ನಗೆಗೆಡೆಯಪ್ಪಿರ್ (ಪಂಚತಂ. ४३-೧); ಹಗರಣ ನಗೆಗೆಡೆಯಾಯಿತ್ತು (ಬಸವ. ೩೦೦); ಮುನಿವರರಿಗೆ ನಗೆಗೆಡೆಯಾಗಿ ನಿಷ್ಕಾರಣಂ ಮಡಿವರೇ ಕಂದ (ಹರಿಶಾ. ೧೨-೩೦); ನರವಿ ನಗೆಗೆಡೆಯಾಗೆ ಮುಸುಕಿನ ಮುರುವಿನಲಿ ಪಾಳಯವ ಹೊಕ್ಕರು (ಕುಮಾ.ದ್ರೋ. ೮-೪೮). ನಗೆಯೊಡಲಾತಂ = ಇಂದ್ರ : ನಗೆಯೊಡಲಾತನಂ ಹರಣಗೊಂಬವನಂ . . . ಒಳ್ಪಿದನೆಂಬರೆ ಭೂಪ ಕೂರ್ಮೆಯಿಂ (ನಳಚಂ. ೨೮೭). [ ದೇ. ೫ ತಮಿ. ನಕ್ಕ ]

**ನಗೆಕಾರ** 'ನಗೆಗಾಱ' ನೋ.

**ನಗೆಕಾರ್ತಿ** 'ನಗೆಗಾರ್ತಿ' ನೋ.

**ನಗೆಕಾಱ** 'ನಗೆಗಾಱ' ನೋ.

**ನಗೆಕುಂಟೆ** (ನಾ). ಒಂದು ಸ್ಥಳದ ಹೆಸರು : ಪುಲಿನಾಡ ನಗೆಕುಂಟೆಯಂ ಪಲ್ಲವಾದಿತ್ಯ ನೊಳಂಬ ಗಾವುಣ್ಣಂಗೆ ಕೊಡಗೆಯಾಗಿ ಕೊಟ್ಟಂ (ಎಪ್ರಿಅ೦. ೧೯೩೨ , ೪೮-೧೬ ; ೩೬೦). [ ನಗೆ₀ + ಕುಂಟೆ₃ ]

**ನಗೆಗಡಲ್**, ನಗೆಗಡಲು (ನಾ). ತುಂಬು ಹಾಸ್ಯ ; ಅತಿಯಾದ ನಗು,- ವಿನೋದ : ಕೌಶಿಕನೃಪ ನಗೆಗಡಲೊಳಾಳುತ . . . ಅಱಹೆ (ಮಂದೇಪು. ೨೩-೨೪); ಬೋಡುಮಾಯಂ ತಱೆದೇಡಿವ ಕೋಡಗಂಗಳಂ ನೀಡುಂನೋಡಿ ನಗೆಗಡಲೊಳೋಲಾಡುವ ಬೇಡವೆಣ್ಣಳಿಂ . . . ವಿಜೃಂಭಿಸಿ ಕಣ್ಗೆ ಕೌತುಕಾವಹಮಾಗಿರ್ದುದಲ್ಲಿ (ರಾಜಶೇ. ೩-೩೩ ವ). **ನಗೆಗಡಲು** : "ನಗೆ ಗಡಲು" ಎಂಬ ಹೆಸರನ್ನಿಟ್ಟು ಈ ಕಥೆಯನ್ನು ಬರೆದಿದ್ದೇನೆ (ನಗಗ. ಸೂಚನೆ). [ ನಗೆ + ಕಡಲ್₂ ]

**ನಗೆಗಡಲು** 'ನಗೆಗಡಲ್' ನೋ.

**ನಗೆಗಣ್**, ನಗೆಗಣ್ಣು (ನಾ). ಕಾಂತಿಯುಕ್ತವಾದ ಕಣ್ಣು ; ಪ್ರೀತಿ, ಸಂತೋಷ, ವಿನೋದಗಳನ್ನು ಸೂಚಿಸುವ ಕಣ್ಣು : ಮಹೀಲಲನೆಯ ನಗೆಮೊಗದಂತೆ ತಿಳಿದ ಕೊಳಂಗಳುಮಾತನಂತೆಪುರಕಾಂತೆಮಾರ ನಗೆವೊಗದ ನಗೆಗಣ್ಣಳ ಬೆಡಂಗನೆ ಕಱನಗೆ ನಗುವಂತೆ (ಆದಿಪು. ೧೧-೩ ವ) ; ನಗೆಗಣ್ ಸೋರ್ವ ಕದುಪ್ಪವಾರಿಚಯದಿಂ ಬಿಂಬಾಧರಂ ಸುಯ್ಯ ಬೇಕೆಗಳಿಂ ನಾಡೆ ದೆಡಂಗುಗೆಟ್ಟರವಿದಿಂತೇ ಕಾರಣಂ (ಪಂಪಭಾ. ४-೬೩) ; ನಗಿಸಲ್ ನುಡಿಸಲು

ಮಱಿತನ ನಗೆಗಣ್ಗಳ ಚೆಲ್ವನೊಸೆದು ನೋಡಲ್ ಪಡೆಯಲ್ ನಗೆಮೊಗದ ನೀರೆಯರ್ [ನಗು]ಮೊಗದಿಂದು ಪಕ್ಕಗಾಣದಗಲಗಲಿರ್ಪರ್ (ಆದಿಪು. ೩-೯೨) ; ಆ ಸತಿಗೆ ಪುಟ್ಟೆ ಹರ್ಷವಿಲಾಸಂ ಮಧುಬಿಂದುಮಾಳೆ ನೀಲೋತ್ಪಲದಿಂ ಸೂಸುವೊಲ್ನಗೆಗಣ್ಣಿಂ ಸೂಸಿದುವಾನಂದಬಾಷ್ಪಬಿಂದುವಿತಾನಂ (ಮಲ್ಲಿಪು. ೪-೩೦) ; ಬಂದರ್ ನಗೆಗಣ್ಗಳ ಚೆಲ್ಲೆಗಣ್ಗಳಲರ್ಗಣ್ಗಳ ನಿಡುಗಣ್ಗಳ ಬೆಡಂಗಿಯರ್ ಕೋಮಲೆಯರ್ (ಜಗವಿ. ೪-೧೨೪) ; ನಗೆಗಣ್ಗಳ ಕಾಂತಿಯ ಸೆಳ್ಳುಗುರ್ಗಳ ಕಾಂತಿಯ ಕರದ್ವಯದ ಕಾಂತಿಯ ಮಾಲೆಗಳಂ ಹೊಸ ಹೂವಿನ ಮಾಲೆಗೆತ್ತು ಬೆಲೆಗೊಟ್ಟುಕೊಂಡು ನಗಿಸಿದನೊರ್ವಂ (ಗಿರಿಕ. ೨-೮೬) ; ನಗೆಗಣ್ಗಳ್ ನೈದಿಲಂ ಸಾಲಿಡೆ ಬಿಗಿದ ಕುಚಂ ಬಿಂಕವಂ ಬೀಱೆ ಕಾಲಂದುಗೆ ಬಂಡುಂಡೆರ್ದ ಪೆಣ್ದುಂಬಿಗಳ ರವಮನೊಟ್ಟೈಸೆ . . . ಬಂದರೀರ್ವರ್ ಸುಲಲಿತ ಚತುರಾಪಾಂಗೆಯರ್ ಕಾಂತೆಯರ್ಕಳ್ (ಪುಷ್ಪಸ್ತ್ರ. ೧-೯೨). **ನಗೆಗಣ್ಣು :** ಎಳೆಯಳ ಮುಖಸರಸಿಯೊಳೆಯ್ದೆ ತುಂಬಿದ ಕಳೆಯನಿಪಮಲಾಂಬುವಿನೊಳು ಪೊಳೆವ ತರಳಪಾಠೀನಗಳಂತೆ ಕಂಗೊಳಿಸಿದುವಾ ಪೆಣ್ಣ ನಗೆಗಣ್ಣು (ಶ್ರೀಭಾತಿ. ೨೦-೬೩) ; ಓ ತಾಯಿ, ಕನ್ನಡದ ಶೆರ್ಕಾಯಿ . . . ಸುಳಿಗುರುಳು, ನಗೆಗಣ್ಣು ಏನು ಕಪ್ಪೆ ನಿನಗೆ–ಮುತ್ತಿಡುವ ಕಪ್ಪು ! (ಹೊಂಗಳು. ೧೫-೧೯) ; ಒಬ್ಬರ ಕಣ್ಣು ಮತ್ತೊಬ್ಬರ ಕೈಯಲ್ಲಿರುತ್ತದೆ ಎಂದು ನಗೆಗಣ್ಣಿನ ಮುದುಕ ನುಡಿದನು (ಪುನರು. ೩೦೪). [ನಗೆ + ಕಣ್]

**ನಗೆಗಣ್ಣು** 'ನಗೆಗಣ್' ನೋ.

**ನಗೆಗಣ್ನೋಟ** (ನಾ). ಕಾಂತಿ ಅಥವಾ ವಿಲಾಸಯುಕ್ತವಾದ ಕಣ್ಣಿನ ನೋಟ,–ದೃಷ್ಟಿ: ಸೊಗಯಿಪ ನಗೆಗಣ್ನೋಟ [ಪಾಠಾಂ. ಕಡೆಗಣ್ನೊಪ್ಪ] ವಿಂತಾಗವೇಡಾ ಕೊಳದಿಂದಂ ಬಂದ ಲಕ್ಷ್ಮೀವಧುವೆನಿಸುವ ಪೆಣ್ಗಾವ ವಿಂತಾಗವೇಡಾ (ಗದಾಯು. ೮-೬೦). [ನಗೆಗಣ್ + ನೋಟ]

**ನಗೆಗಣ್ಬೆಳಗು** (ನಾ). ನಗೆಗಣ್ಣಿನ ಕಾಂತಿ,–ಹೊಳಪು: ಪಾಲ್ಗಡಲ ಮೂಲಸ್ಥಾನವೊ ಬನದ ಸಿರಿಯ ನಗೆಗಣ್ಬೆ [ಪಾಠಾಂ. ಣ್ಣೆ]ಳಗು ನಿಂದುದೊ ಸಿರಿಯ ಮುತ್ತಿನ ಬಿತ್ತೊ (ಸಾಳ್ವಭಾ. ೦೬-೮). [ನಗೆಗಣ್ + ಬೆಳಗು$_2$]

**ನಗೆಗಾರ** 'ನಗೆಗಾಱ' ನೋ.

**ನಗೆಗಾರ್ತಿ, ನಗೆಕಾರ್ತಿ** (ನಾ). ೧. ನಗೆಯನ್ನುಂಟುಮಾಡುವವಳು ; ವಿನೋದವನ್ನುಂಟುಮಾಡುವವಳು. ೨. ನಗೆಯನ್ನು ಉಳ್ಳವಳು ; ವಿಲಾಸವತಿ : ಸೊಬಗಿನ ಸೋನೆಯ ನಗೆವೆತ್ತ ನಲ್ಲಳ ಮುಂಗುಳ ಮೊಲೆಯ ಮೋಹಿನಿಯ ಬಗಸೆಗಂಗಳ ಬಾಲೆಯುಂ ರಂಗಾಯೆಂಬ ನಗೆಗಾರ್ತಿಯನೆಂದು ಸಂಧಿಪೆನೊ (ಕಕಸಾಂ. ೨೭-೯೦). **ನಗೆಕಾರ್ತಿ :** ೧. ನಗೆಕಾರ್ತಿ, ನುಡಿಕಾರ್ತಿ (ಶಬ್ದಾನು. ೨೦೧ ಪ್ರಯೋ); ಹಸತಿ = ನಕ್ಕಪಂ . . . ಹಸಂತೀ = ನಗೆಕಾರ್ತಿಯುಂ, ಕುಂಪಟಿಯುಂ (ಕಾಶಿಕೃ. ೬೨).

[ನಗೆಗಾಱ + –ತಿ$_1$ (< –ಇತ್ರಿ)]

**ನಗೆಗಾಱ, ನಗೆಕಾರ, ನಗೆಕಾಱ, ನಗೆಗಾರ** (ನಾ). ೧. ನಗೆಯನ್ನುಂಟುಮಾಡುವವನು ; ನಗಿಸುವವನಂ ; ನಗೆಗಾಱನಂತೆ ಕಾಡೆನುತ್ತುಂ [ಪಾಠಾಂ. ಕಮ್ಮಾರನಂತಡೆಯನುತ್ತುಂ] ಪಗೆಗಾಱನಂತೆ ಪಾಡೆನುತ್ತುಂ (ಧರ್ಮಾಮೃ. ೨-೬೧). ೨. ನಗುವವನಂ ; ನಗೆಯನ್ನುಳ್ಳವನಂ : ತೋಱಿಸಿದ ದೀವಿಗೆಗೆ ಕರುಣವ ತೋಱುತಿತ್ತನು ದಾಲವನು ನಗೆಗಾಱರಿಗೆ ನಾಟಕವ ನಟಿಸುತ ವೀರ ಹನುಮಂತ (ತೊರರಾ. ೫-೬-೪೫). ೩. ವಿದೂಷಕ ; ಹಾಸ್ಯಗಾರ : ಅಂತು ಬಂದ ಬಸಂತದೊಳೊರ್ಮೆ ನನೆಯಂಬಂ ತನ್ನ ಮೋಂದ ಕೆಳೆಯನಪ್ಪ ನಗೆಗಾಱನಂ ಬಱಿಯಟ್ಟಿ ಬರಿಸಿ (ಕಬ್ಬಿಗಕಾ. ೬೨). **ನಗೆಕಾರ :** ೧. ಹಸತಿ= ನಕ್ಕಪಂ, ಹಾಸಕಃ = ನಗೆಕಾರಂ' (ಕಾಶಿಕೃ. ೬೨) ; ದೇಶವಿದೇಶಗಳ ಗಾಯಕರು, ನಗೆಗಾರರು, ನರ್ತಕಿಯರು . . . ತಂತಮ್ಮ ವಿದ್ಯಾಪರಿಶ್ರಮದ ಕಲಾಪರಿಣತಿಯ ಸಾಧಕಗಳಿಂದ ಆಸ್ಥಾಯಿಕೆಯ ಮನೋರಂಜನವನ್ನು ಸಿದ್ಧಿಗೊಳ್ಳತೊಡಗುವರು (ಕಲ್ಯಾಣ. ೩೨-೬). **ನಗೆಕಾಱ :** ೧. ನಗೆಯೊಳ್ ಪ್ರವಣಂ ವ್ಯಾಪೃತಂ ಮೇಣ್ ನಗೆಕಾಱಂ (ಶಬ್ದಾನು. ೪೨೩ ಪ್ರಯೋ) ; ಅಱಿಯೆಯಾ ನೀನಿದ ನಗೆಕಾಱ ಬಗೆಕಾಱ ಮಱೆಕಾಱ ಬಲು ಟೌಳಿಕಾಱ ಅಱಿಯದಂದದೊಳೆನ್ನ ಕೇಳ್ವೆಯೆಂದವಳೊಳಗಱಿದೊತ್ತಿ ನುಡಿದಳು ನೃಪನ (ಭರತೇ. ೮-೨೫). ೨. ಜಗತೀಶಂ ನೋಟ್ಟ ಕಣ್ಗಂ ನುಡಿವ ದನಿಗಮಿಂಬಾಗಿ ಕುಳ್ಳಿರ್ದರಂದೋಳಿಗಳಂ ದಂಡಾಧಿಪರ್ ಮಾಂಡಳಿಕ ರಥಿಕ ಸಾಮಂತರಂತರ್ನಿಯುಕ್ತರ್ . . . ನಗೆಕಾಱರ್ ವಾದ್ಯಕರ್ ಚಿತ್ರಕರಣಾಗಿನವರ್ ಸೂಳೆವಾಳರ್ ಪಯಾಳರ್ (ಅನಂಪು. ೨-೨೬) ; **ನಗೆಗಾರ :** ೧. ನಗೆಗಾರರು, ಕವಿಗಳು ಆದ ಬೇಂದ್ರೆಯವರು ಎಷ್ಟೋ ನಗೆಹಾಡುಗಳನ್ನು ಬರೆದಿರುವದು ಸ್ವಾಭಾವಿಕವಾಗಿದೆ (ನಿಠಾಳ. ೭ ಮುನ್ನುಡಿ) ; ಮಿಗಿಲಾದವನ ಹತ್ತಿ ಹಗೆ ಸಲ್ಲ, ನಗೆಗಾರನ ಹತ್ತಿರ ಮೈತ್ರಿ ಸಲ್ಲ (ಗಾದೆ). ೩. ಪರದರ ಕರಣಿಕರ . . . ನಗೆಗಾರರ . . . ನಿಡುಗೇಂಗಳು ಆ ದುರ್ಗದಲ್ಲಿ ವ್ಯವಸ್ಥೆಗೊಂಡಿವೆ (ಸಂಚುಂಡ. ೦೨೬). [ನಗೆ + –ಕಾಱ]

**ನಗೆಗುಂದು** (ಕ್ರಿ). ನಗೆಯನ್ನು ಕಳೆದುಕೊಳ್ಳು ; ಕಾಂತಿಹೀನವಾಗು ; ಸೊರಗು : ಪಗೆಯ ಕೆಳೆಗೊಂಡ ಪದ್ಮಿನಿ ನಗೆಗುಂದಿದಳ್ (ವೃಷವಿ. ೮-೪೪).

[ನಗೆ + ಕುಂದು$_1$]

**ನಗೆಗೂಡು** (ಕ್ರಿ). ನಗುವನ್ನು ಹೊಂದು ; ಸಂತೋಷಗೊಳ್ಳು : ಕಾವ್ಯಮಿದು ಭುವನದೊಳ್ಸಕಲಜನರಿಂದ ಸುಶ್ರಾವ್ಯಮಪ್ಪಂತೆನ್ನ ವದನಾಬ್ಜದಲ್ಲಿ ನೀನೇ ವ್ಯಾಪಿಸಿರ್ದಮಲಸುಮತಿಯುಂ ತಾಯೆನಗೆ ಕಾಯೆ ನಗೆಗೂಡಿ ನೋಡಿ (ಕೃಮಿಭಾ. ೦-೪). [ನಗೆ + ಕೂಡು$_1$]

**ನಗೆಗೆಡು** (ಕ್ರಿ). ಆನಂದ ಕುಗ್ಗು,–ಕಡಮೆಯಾಗು : ಜಗವ ಮಾಡುವ ಗುಣ[ಣ]ಗಳಿಂ ಕಾ ನಗೆಗೆಡನು (ನಿಭಾಗ. ೧೧-೩೪-೧೯). [ನಗೆ + ಕೆಡು$_1$]

**ನಗೆಗೇಡಿ** (ನಾ). ನಗೆಗೆ ಈಡಾದವನಂ ; ಅಪಹಾಸ್ಯಕ್ಕೆ ಒಳಗಾದವನಂ : ಕುಲಜರಾವ್ ರಘುವಂಶದಲಿ ನಿಷ್ಕಲುಷರಾವ್ ಮಾರ್ಗದಲಿ ಲೋಕದ ಹಳಿವಿಗೊಳಗಿಹರಲ್ಲ ನಗೆಗೇಡಿಯಹರು ನಾವಲ್ಲ (ತೊರರಾ. ೬-೩೩-೦೦೮).

[ನಗೆ + ಕೇಡಿ$_1$]

**ನಗೆಗೇಡು** (ನಾ). ಹಾಸ್ಯಾಸ್ಪದವಾದುದಂ ; ಅವಮಾನಕರವಾದುದಂ : ಮೊದಲು ಜನನವನಱಿಯೆ ಮರಣದ ಹದನ ಕಡೆಯಲಿ ತಿಳಿಯೆ ನಾ ಮಧ್ಯದಲಿ ನೆಱೆ ನಾ ನಿಪುಣನೆಂಬುದು ಬಳಿಕ ನಗೆಗೇಡು (ಹರಿಸಾ. ೯೫) ; 'ನಾ ಬಲ್ಲೆ', 'ಗೊತ್ತಿಲ್ಲ' ಎಂಬ ವಾದದ ಹಾದಿ ಬಗೆಗೇಡು ನಗೆಗೇಡು ಹತಮತಿಯು (ಅರಳು. ೯೬-೧).

**ನಗೆಗೇಡಾಗು** = ಹಾಸ್ಯಾಸ್ಪದವಾಗು ; ಅಪಹಾಸ್ಯಕ್ಕೆ ಒಳಗಾಗು : ಅಱಿವು ತಲೆಕೆಳಗಾಯ್ತು ಧೈರ್ಯದ ನಿಱಿಗೆ ನಗೆಗೇಡಾಯ್ತು [ಪಾಠಾಂ. ನಗೆಗೆಡೆಯಾಯ್ತು] (ಕುಮಾವ್ಯಾ. ೨-೧೨) ; ಕಾನನಕೆ ಬರಲೇಕೆ ರಕ್ಕಸ ಜಾನಕಿಯ ಸೆಱೆವೊಯ್ಯಲೇತಕೆ ಭಾನುಕುಲಜನ ಬದುಕು ನಗೆಗೇಡಾಯ್ತಲಾಯೆಂದ (ಕಾಶಿರಾ. ೨೨-೬೦). [ನಗೆ + ಕೇಡು]

**ನಗೆಗೇಡುಗೂಡು** (ಕ್ರಿ). ನಗೆಗೇಡಾಗು ; ಅಪಹಾಸ್ಯಕ್ಕೆ ಗುರಿಯಾಗು : ಒಂದುಗಡಿಸಲ್ಕಿದು ವೇಳೆಯೆನುತ್ತೆ ಪತ್ರಸಾರ್ದೆಸಗಿದನಿಕ್ಕಿ ಪಟ್ಟಣಕೆ ಮುತ್ತಿಗೆಯಂ ನಗೆಗೇಡುಗೂಡಿದಂ (ಚಳವಿ. ೫-೧೯).

[ನಗೆಗೇಡು + ಕೂಡು$_1$]

**ನಗೆಚಾಟ** (ನಾ). ವಿನೋದ ; ಹಾಸ್ಯ ; ಕುಚೋದ್ಯ : ಇಂದೇಕೆ ನನ್ನ ಮೇಲೆ ಇಷ್ಟೊಂದು ದಯೆ ಇವಳಿಗೆ ? . . . ಅವಳ ನಗೆಚಾಟವೇ ಆಗಿದ್ದರೆ ಸುಮ್ಮನೆ ನಾಚಿಕೆಗೇಡಾದೀತು (ಪ್ರೇಮೂರ್ತಿ. ೨೩೭).

[ನಗೆ + –ಚು$_1$ + ಆಟ]

**ನಗೆಚಾಟಿಕೆ** (ನಾ). ೧. ನಗೆಚೇಷ್ಟೆ : ವಿನೋದ ; ಹಾಸ್ಯ ; ತಮಾಷೆ : ಆತ ತನ್ನ ನಗೆಚಾಟಿಕೆಯ ಮಾತನ್ನು ಕೇಳಿ ಮುಗಿಸಿಕೊಳ್ಳದೆ . . . ಮಾತನಾಡಿದುದನ್ನು ಕಂಡು ಅಷ್ಟೇ ಆಶ್ಚರ್ಯವಾಯಿತು (ಚಿತಂಬಾ. ೩೯) ;

ಅವನ ಸ್ವಭಾವಸಹಜವಾದ ನಗೆಚಾಟಿಕೆಯ ಮಾತುಗಳಿಗೆ ಆಗೀಗ ಹೊಟ್ಟೆ ತುಂಬ ನಗಲಿಲ್ಲವೆ ? (ಮೂರುದಾ. ೨೦೪) ; ನಗೆಚಾಟಿಕೆ ಮಾಡುವುದನ್ನಂತೂ ಮನಸ್ಸಿನಲ್ಲಿ ತರಲೇಬೇಡಿರಿ (ಬೃಹ್ಮಜೀ. ೯೫) ; ಅವನ ನಗೆಚಾಟಿಕೆಯಿಂದ ಜೀವವನ್ನು ಹಗುರ ಮಾಡಿದರು (ಕನಕ. ೧೬). ೨. ಅಪಹಾಸ್ಯ ; ನಗೆಗೇಡು : ಅವಳ ತವರಿನ ಬಳಗದಲ್ಲಿ ಇದೊಂದು ನಗೆಚಾಟಿಕೆಯ ವಿಷಯವಾಗಬಾರದಲ್ಲ ಎಂದು ಕಾಳಜಿಯಾಯಿತು (ಕಾಗೆಕ. ೧೦೫).

[ ನಗೆಚಾಟ + -ಇಕೆ ]

**ನಗೆಚೇಷ್ಟೆ** (ನಾ). ಹಾಸ್ಯ ; ವಿನೋದ ; ತಮಾಷೆ : ಎಲ್ಲದರ ಬೆಲೆ ತಪ್ಪಿಹೋದ ಸಮಾಜಕ್ರಾಂತಿಯ ಈ ಕಾಲದಲ್ಲಿ ನಗೇಚೇಷ್ಟೆ ಯಾವುದು, ಕುಚೇಷ್ಟೆ ಯಾವುದು ಎಂಬುದನ್ನು ಹೇಳುವುದು ಬಿಗಿಯಾಗಿದೆ (ಸಾಹಿವಿ. ೧೦೪).

[ ನಗೆ+ ಚೇಷ್ಟೆ ]

**ನಗೆದೋಱು** (ಕ್ರಿ). ೧. ನಗುವನ್ನು ತೋರಿಸು ; ನಗು ; ಹರ್ಷವನ್ನು ಸೂಚಿಸು : ಹೇಱಿದವು ಹರುಷವನು ತನು ನಗೆದೋಱಿದವು ಮುಖಕಮಲ ಕಾಂತಿಯ ಬೀಱಿದವು ಭುಜಲತೆಗಳು (ತೊರೆರಾ. ೦-೮-೨). ೨. ಅರಳು; ವಿಕಾಸವಾಗು : ಒಸರಿದುದು ಶಶಿಕಾಂತಶಿಲೆ ಧವಳಿಸಿದುದಂಬರ ವಂಬುನಿಧಿ ಲಳಿ ವಸಗಿದುದು ನಗೆದೋಱಿದವು ನೈದಿಲು (ತೊರೆರಾ. ೫-೩-೪).

[ ನಗೆ + ತೋಱು ]

**ನಗೆನಗು** (ಕ್ರಿ). ನಗೆಯನ್ನು ನಗು ; ನಗುವನ್ನು ತೋರು : ನಗೆನಗುತ ಕಲಕೇತಬೊಮ್ಮಣ್ಣಗಳು ಅಱಿ ಮಣ್ಣಂ ಹಿಡಿಯೆ ಪೊನ್ನುಗಳ ಮಯವಾಗೆಸೆಯಲು (ಬಸವು. ೨೮-೩೨). [ ನಗೆ + ನಗು₁ ]

**ನಗೆನಯನ** (ನಾ). = ನಗೆಗಣ್ : ನಗೆನಯನಮಡಿಗಳರುಣಂ ಮೊಗಸಸಿ ವಿಗೆ ನೀಳ್ದ ಕೇಶಪಟ್ಟದಿಗಳ್ಪಾನುಗುರ್ದೀಧಿತಿ ನಡೆಯಿಭಗತಿ ಸೊಗಯಿಸುವ ಪೂರ್ವಾಳ್ಗೆನಲ್ಕಮದು ನಿರ್ದೋಷಂ (ಕವಿಜಿ. ೪-೧೧). [ ನಗೆ + ನಯನ ]

**ನಗೆನಾಟಕ** (ನಾ). ನಗು ಹುಟ್ಟಿಸುವುದಕ್ಕಾಗಿಯೇ ಇರುವ ನಾಟಕ ; ಹಾಸ್ಯನಾಟಕ ; ಪ್ರಹಸನ ಹಾಸ್ಯನಾಟಕ, ಪ್ರಹಸನ ಎಂಬುದಕ್ಕೆ ಸಾಮಾನ್ಯವಾಗಿ ನಗೆನಾಟಕವೆಂದೂ ಹೇಳುತ್ತಾರೆ (ಜೂಧಿ). [ನಗೆ+ನಾಟಕ]

**ನಗೆನುಡಿ** (ನಾ). ನಗುವಿನಿಂದ ಕೂಡಿದ ಮಾತು ; ಸರಸವಾದ ಮಾತು ; ಹಾಸ್ಯೋಕ್ತಿ : ದ್ರೌಪದಿಗೆ ಹರಿಯರಸಿ ನುಡಿದಳು ಸತ್ಯಭಾಮಾ ಸರಸಿಜಾನನೆ ನಗೆನುಡಿಯ ಸಮ್ಮೇಳಮೇಳದಲಿ (ಕುಮ್ಯಾಅ. ೧೫-೨೦) ; ಮಾತಿನಿಂ ನಗೆನುಡಿಯು, ಮಾತಿನಿಂ ಹಗೆ ಕೊಲೆಯು . . . ಲೋಕಕ್ಕೆ ಮಾತೆ ಮಾಣಿಕವು (ಸರ್ವಜ್ಞ. ೭೪೩) ; ನಗೆನುಡಿಯೊಳುಪಚರಿಸಿ ಚದುರಿನ ಬಗೆಯೊಲಿಸುವುದೆನುತ ಸೀತಾಮೃಗವಿಲೋಚನೆಗರಸುಗಳ ತೋರಿದನು ಸನ್ನೆಯಲಿ (ಅನಂರಾ. ೦-೨೩-೨೬) ; ಅದೊ ಅವನ ನೇಹಿಗನ ನಗೆನುಡಿ-ಅಗಲಿದರು-ಬಹನಿತ್ತೆಡೆ ! (ಗಣೇಶ. ೪೯-೦). [ ನಗೆ + ನುಡಿ₂ ]

**ನಗೆನೋಟ** (ನಾ). ವಿಲಾಸದಿಂದ ಕೂಡಿದ ನೋಟ ; ಹಾಸ್ಯ, ಪ್ರೀತಿ, ಸಂತೋಷಗಳನ್ನು ಸೂಚಿಸುವ ನೋಟ : ನಗೆನೋಟ ಮೆಲ್ಮಾತು ಮುನಿಸು ಮೋಹನಗಳಿಂ ಬಗೆಯ ಬಂದವರೊಳೊಳಗೂಡಿ ಮೋಹಿಪಳ್ಮ ಗುಳಿಂಬನರಸಿಗೆಣೆಯಲ್ಲ (ಉದ್ಭಟ. ೧೦-೯೬) ; ಲಲ್ಲೆಗಣ್ಣ ವರ್ ನಗೆನೋಟದ ಕೋರೆ ಧಮ್ಮಿಲ್ಲೆಯರೆಯ್ದೆತೊಗ್ಗಿನಲಿ (ಮೋಹತ. ೨೪-೧೨) ; ನಗೆನೋಟಂ ಪೊಸಮಾತು ರೀತಿ ಗಮಕಂ . . . ಎಲ್ಲಮವರ್ಗೇಂ ವೈಸಂದುವಳ್ಕಿರ್ದುದೋ (ರಾಜಶೇ. ೧೧-೮೩). [ ನಗೆ + ನೋಟ ]

**ನಗೆಪಾಟಲು** (ನಾ). = ನಗುಪಾಟಲು : ಇನ್ನೂ ನಾಟಕವಾಗುತ್ತಿರುವಾಗಲೇ ಹೀಗಾದರೆ ನಾಲ್ಕು ಜನರಲ್ಲಿ ನಗೆಪಾಟಲಲ್ಲವೇ ? (ಹಾಡಿಲ. ೦೩೪). 'ನಗುಪಾಟಲು' ಪರಾ.

**ನಗೆಪಾಟಲಾಗು** = ನಗೆಗೇಡಾಗು; ಅಪಹಾಸ್ಯಕ್ಕೊಳಗಾಗು : ತಾನು ದೀಪಾಳಿಗೆ ಇಂದು ಬಂದದ್ದು ಎಂಥ ನಗೆಪಾಟಲಾಯಿತು ಎನ್ನಿಸಿತು (ಅವತಂ. ೪೫) : ಮಹನ್ಮಹಾದೇವತೆಗಳನ್ನು ಇಷ್ಟು ನಗೆಪಾಟಲಾಗಿ ಚಿತ್ರಿಸುವ ನಮ್ಮ ದಿಗ್ದರ್ಶಕರ ದಾಷ್ಟಿಕವೆಷ್ಟೆಂದು ಹೇಳಲಿ (ನಾಡಿಗೇ. ೧೮೩).

**ನಗೆಪಾಟಲು ಮಾಡು**=ಅಪಹಾಸ್ಯಕ್ಕೀಡುಮಾಡು ; ನಗೆಗೀಡುಮಾಡು: ಸಾಮ್ರಾಜ್ಯದ ಕಾರ್ಯವನ್ನು ಬಡ ಹೊಗಸಾದ ನಾನು ಮಾಡಲಾದೀತೇ ? ಸುಮ್ಮನೆ ತೂಗುಟ್ಟಿ ನಗೆಪಾಟಲುಮಾಡಲೇ ? (ದಾನಚಿಂ. ೧೬೮).

[ ನಗೆ + ಪಾಟ್ಟು₂ ( < ಪಾಡ್ಯು₃ ) + - ಅಲು ( < - ಅರ್₁ ) ]

**ನಗೆಬಗೆ** (ನಾ). ಹಾಸ್ಯದ ರೀತಿ,-ಕ್ರಮ,-ಸೊಗಸು; ನಿನ್ನ ನಗೆಬಗೆ-ಎಂಥ ಲಗುಬಗೆಯಿಂದ ಕಣ್ಮರೆ ಸಂದೆಯೋ (ಹಾಡುಹಾ. ೪೯-೮) ; ಅಪ್ಸರೆಯರನ್ನು ನಗೆಬಗೆಯಿಂದ ನೋಡಿ ಅವರ ಹೃದಯವನ್ನು ಅರಿತಂತೆ (ಅಹಲ್ಯ. ೬೪-೦೩).

[ ನಗೆ + ಬಗೆ₃ ]

**ನಗೆಬರಹ** (ನಾ). ನಗುವನ್ನುಂಟುಮಾಡುವ ಲೇಖನ : ಶ್ರೀ ನಾಡಿಗೇರ ಕೃಷ್ಣರಾಯರ ಉತ್ತಮ ನಗೆಬರಹಗಳನ್ನು ಸಂಗ್ರಹಿಸಿ 'ನಾಡಿಗೇರರ ನಗೆಬರಹಗಳು' ಎಂಬ ಶೀರ್ಷಿಕೆಯಲ್ಲಿ ಪ್ರಥಮ ಸಂಕಲನ ೧೯೫೧ರಲ್ಲಿ ಪ್ರಕಟವಾಯಿತು (ನಾಡಿಗೇ. ಪ್ರಕಾಶಕರ ನುಡಿ).

[ ನಗೆ + ಬರಹ ( < ಬರೆಪ )]

**ನಗೆಬೀರು** 'ನಗೆವೀಱು' ನೋ.

**ನಗೆಮಚ್ಚರ** (ನಾ). ಹುಸಿಮಾತ್ಸರ್ಯ ; ಹುಸಿಯಾದ ಅಸೂಯೆ,-ಹುರುಡು: ಮಾಯಾಕಾರನು ಕೃಷ್ಣಯಲ್ಲಿ ಪೋದನಾಯೆನುತ್ತ ನಲ್ಲೆಯರು . . . ಘಳಿಲನೆ ಸೋಪಾನವಿಳಿದು ನಗೆಮಚ್ಚರದಿ ಜಲಜಂಗಳಂ ನಾಳಸಹ ಕೀಳ್ತು ಪಿಡಿದ (ನವಮೋ. ೧೦-೫೪). [ ನಗೆ + ಮಚ್ಚರ ( < ಮಚ್ಚರ ) ]

**ನಗೆಮಾಡು** (ಕ್ರಿ). ಹಾಸ್ಯಮಾಡು ; ಗೇಲಿಮಾಡು : ತಮ್ಮ ಭಾವನಂ ಧನದೇವನಂ ಕರೆದು ನಗಲಂ ಬಿಡಿಸೆಂಬುದುಮಾಕೆ ತನಗೆ ನಾದುನಿಯಪ್ಪುದಱಿಂ ನಗೆಮಾಡಿ . . . ಬಿಡಿಸಿದಂ (ಸುಕುಮಾ. ೬-೧೬ ವ) ; ಯಾದವರ ಬಡಕರುವೆ ಬಾ ಬಾ ಎಂದು ಚಿಟಕಿಸಿ ಕರೆದು ಗುರುಸುತ ಸಾತ್ಯಕಿಯ ತಾಗಿದನು ನಗೆಮಾಡಿ (ಕುಮ್ಯಾಕ. ೩-೧೬). [ ನಗೆ + ಮಾಡು₁ ]

**ನಗೆಮಾತು** 'ನಗೆವಾತು' ನೋ.

**ನಗೆಮುಖ** (ನಾ). ನಗುವಿನಿಂದ ಕೂಡಿದ ಮುಖ ; ಹಸನ್ಮುಖ ; ನಗುಮುಖ : ನಕ್ಕರೆ ನಗಲವ್ವಾ ನಗೆಮುಖದ ಖ್ಯಾದೀಗಿ ನಾ ಮುಟ್ಟಿ ಮುಡಿವ ಪರಿಮಳದಾ ಹೂವ ಅವಳೊಂದು ಘಳಿಗೆ ಮುಡಿಯಲೆ (ಗರತಿ. ೦೦೬).

[ ನಗೆ + ಮುಖ ]

**ನಗೆಮೊಗ** (ನಾ) ಸಂತೋಷವನ್ನು ಸೂಸುವ ಮುಖ ; ನಗುಮುಖ : ನಗೆಮೊಗ[ ದಿ ]ಮ್ [ ಶ ] ಮ್ [ ಭು]ವನೆ ಸಂಬು ನೆನೆಯುತ್ತಿಬ್ಬಮ್ (ಇಅ. XX, ೬೦-೮ ; ೧ನೆಯ ಶತ) ; ಆತನ ಬರವಿನುತ್ಸವಕ್ಕೆ ಸಂತಸಂಬಟ್ಟು ಮಹೀಲಲನೆಯ ನಗೆಮೊಗದಂತೆ ಶಿಳಿದ ಕೊಳಂಗಳುಂ (ಆದಿಪು. ೦೦-೫ ವ) ; ಸೊಗಯಿಸಿ ಬಂದ ಮಾಮರನೆ ತಳ್ತಲೆವಳ್ಳಿಯೆ . . . ನೋಟಱೊಪ್ಪಿಡುವ ಬೆಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿದೇಶದೊಳ್ (ಪಂಪಭಾ. ೪-೨೮) ; ನಗೆಮೊಗದರಸಾ ಅವಧಾರು ಕೂಡಲಸಂಗಮದೇವಾ ಬಗಿದು ಹೊಗುವೆ ನಾ ನಿಮ್ಮ ಮನವನು (ಬಸವ. ೪೮೮) ; ನಗೆಮೊಗಮಬ್ಬಮಾಗೆ ಬಾಯ್ದೆಱೆ ಬಂದುಗೆಯಾಗೆ ಮೂಗು ಸಂಪಗೆಮುಗುಳಾಗೆ . . . ಚೆಲ್ವೊಗೆವಿನೆಗಂ ವಿನಿರ್ಮಿಸಿದ ಪೆಂಡಿರ ಪಾಶಿ ಕರಂ ಮನೋಹರಂ (ಲೀಲಾವ. ೧೧-೬೧) ; ವರಕಸ್ತೂರೀತಿಲಕಮನರಸಿಯ ಕಡುಚೆಲ್ವ ನೊಸಲೊಳಿಟ್ಟಳ್ ಸುರಸೌಂದರಿಯೊರ್ವಳ್ ನಗೆಮೊಗಮೆಂಬುರುಚಂದ್ರಮನಲ್ಲಿ ಮೆಱೆವ ಕಱೆಯೆಂಬಿನೆಗಂ (ಬಾಹುಪು. ೬-೬೮) ; ನಗೆಮೊಗವು ಬಾಡಿದವು ಮನದೊಳು ದುಗುಡಮೇಳಿಸೆ ಭೀಷ್ಮಜಗೆ (ಸಾಳ್ವಭಾ. ೩೦-೦೨). [ ನಗೆ + ಮೊಗ ]

**ನಗೆಮೋರೆ** (ನಾ).=ನಗೆಮುಖ : (೬). [ನಗೆ + ಮೋರೆ ( < ಮೋಱೆ)]

**ನಗೆಯಾಟ** (ನಾ). ೧. ಹಾಸ್ಯ ; ತಮಾಷೆ ; ಹುಡುಗಾಟಿಕೆ ; ವಿನೋದ:

ಈ ಧಗೆಯುಲಿ ನಗೆಯಾಟದ ಹಗೆ ಹೂಡಿದರಾರು ? (ಸೂರ್ಯಕಾ. ೬-೭). ೨. ಹಾಸ್ಯ, ವಿನೋದಗಳಿಂದ ಕೂಡಿದ ನಾಟಕ ; ಪ್ರಹಸನ : "ಲಘುವಾಗಿಯೂ . . . ಹರ್ಷಾಂತವಾಗಿಯೂ ಇರುವ ನಾಟಕ, ಹರ್ಷನಾಟಕ, ಪ್ರಹಸನ; ನಗೆಯಾಟ (Comedy. ಇಂಕಿನಿ). [ ನಗೆ + ಆಟ ]

**ನಗೆಯಾಡು** (ಕ್ರಿ). ೧. ನಗು ; ಹರ್ಷಸೂಚನೆ ಮಾಡು : ನೋಡದಿರ್ದಪೆನೆಂಬೆ ಕಣ್ ನೋಡದಿರವು . . . ನಗೆಯಾಡದಿರ್ದಪೆನೆಂಬೆ ಮುಸುಡು ನಗದಿರದು (ಸೋಮಶ. ೨-೬೩). ೨. ಗೇಲಿಮಾಡು ; ಪರಿಹಾಸಮಾಡು; ಅಪಹಾಸ್ಯಮಾಡು ; ಕುಚೋದ್ಯಮಾಡು : ಬರಿಗೈಯಿಂದ ಮರಳಿದ ಭೃಂಗಿಯ ಪರಿಯನ್ನು ಕಂಡು ಪಾರ್ವತಿ ನಕ್ಕಳು . . . ಅವನನ್ನು ಬಹುವಾಗಿ ಜರಿದು ನಗೆಯಾಡಿದಳು (ಬಿದುರೆ. ೬೯); ನಗೆಯಾಡದಿರು ನನ್ನ ನಲುಮೆ ಒಲುಮೆಯ ಕುರಿತು (ಉಯ್ಯಾಲೆ. ೨೪-೦); ಬೇಲದ ಗಾತ್ರದ ತಮ್ಮುಡಿ ಹರಕನು ನೋಡದೆ ಮುಚ್ಚದೆ ಖಳರು ಸಾಸಿವೆಕಾಳಿನ ಹೆರರುಡೆ ಹರಕನು ನೆರೆ ನೋಡಿ ನಗೆಯಾಡಿದಪರು (ಇಂದಾಪ. ೬೫-೧೩). ೩. ವಿನೋದದಿಂದ ನಗು ; ವಿನೋದಮಾಡು ; ಹಾಸ್ಯಮಾಡು ; ತಮಾಷೆಮಾಡು : ಈ ನನ್ನ ತೊದಲ್ನುಡಿಯ ಸಾಹಿತ್ಯವನ್ನು ಕಂಡು ತಾವು ನಗಬಹುದು; ತಾವು ಯಾವುದೇ ರೀತಿಯಿಂದಾ ನಗೆಯಾಡಿದರೂ ನನಗೆ ಸಂತೋಷವೇ ಸರಿ (ಅಮುಗಾಂ. III, ಪ್ರಸ್ತಾವನೆ) ; ಆಯುಷ್ಯದಲ್ಲಿ ಇಷ್ಟು ಬೇಗನೆ ನೀವು ಯೋಗಿಗಳೊಡನೆ ಸಂಬಂಧ ಬೆಳಸಿದ್ದೀರಾ ? ಎಂದು ಆ ತರುಣಿಯು ನಗೆಯಾಡಿದಳು (ಸಮುಜೀ. ೩೧೯) ; "ಅಹುದು ನಾನು ಮಾತಿನ ಮಲ್ಲ" ಎಂದು ಮಲ್ಲಪ್ಪ ನಗೆಯಾಡಿದನು (ದಾನಚಿಂ. ೪೦) ; ನಂಬದಿದ್ದ ಮಾತ್ರಕ್ಕೇನೇ ನಾನೇನೂ ನಾಸ್ತಿಕನಾಗುವುದಿಲ್ಲ ಎಂದು ತಂದೆಯು ನಗೆಯಾಡುತ್ತಾ ಹೇಳಿದನು (ಮೊಹಾಸಾ. ೪೨) ; ಇವರ ಮಾಮೂಲಿಯ ಮಾತುಗಾರಿಕೆಯು, ಕತೆಗಾರನ ಸರಸತೆಯನ್ನು ನಗೆಯಾಡುವಂತೆ . . . ಶುಭ್ರತೆಯನ್ನು ಸೇರುವುದು (ವಿಚಾಮುಂ. ೯೯). [ ನಗೆ + ಆಡು$_1$ ]

**ನಗೆಯಾನ್** (ಕ್ರಿ). ನಗುವನ್ನು ಹೊಂದು,–ಪಡೆ: ಜೊಲ್ಲು ಸುರಿವ ಮುದ್ದು ಮೊಗದಲ್ಲಿ ನಗೆಯಾಂತು ಸೊಲ್ಲಿಸುವನು ತೊದಳ್ನುಡಿಯ (ಮೋಹತ. ೧೭-೬೯). [ ನಗೆ + ಆನ್$_1$ ]

**ನಗೆಯುಡುಗು** (ಕ್ರಿ). ೧. ಸಂತೋಷ ಕಡಮೆಯಾಗು,–ಕುಗ್ಗು. ೨. ಮುಚ್ಚಿಕೊಳ್ಳು ; ಸಂಕೋಚವಾಗು : ತಲೆದೋರಿದನು ದಿನಪ ನಗೆಯುಡುಗಿ ನಾಚಿದವು ಕುಮುದಾಳಿಗಳು ಮುಂಗಾಣಿಕೆಯ ಹರುಷದೊಳಗಿದು ವಿರಹವ ದೀಳುಕೊಟ್ಟುವು ಚಕ್ರವಕ್ಕಿಗಳು (ಕುಮ್ಮಾಭೀ. ೧-೨೮). [ ನಗೆ + ಉಡುಗು$_1$ ]

**ನಗೆಯೆಳ್ಳು, ನೆಗೆಳ್ಳು** (ನಾ). (ಕರಾ) ಮಕರಸಂಕ್ರಾಂತಿಯಂದು ಸ್ತ್ರೀಯರು ಎಲ್ಲರ ಮನೆಗೆ ಸಂತೋಷದಿಂದ ಬೀರುವ ಎಳ್ಳು: ಸಂಕ್ರಾಂತಿ ಹತ್ತಿರ ಬರುತ್ತಿರುವುದರಿಂದ ಈಗಲೇ ನಗೆಯೆಳ್ಳನ್ನು ಸಿದ್ಧಪಡಿಸಿಕೊಳ್ಳಬೇಕು (ರೂಢಿ). **ನೆಗೆಳ್ಳು** : ಹೆಣ್ಣುಮಕ್ಕಳಿಗೆ ನೆಗೆಳ್ಳು ಬೀರುವುದೊಂದು ಬಹಳ ಆಸಕ್ತಿಯ ಕೆಲಸ (ರೂಢಿ). [ ನಗೆ + ಎಳ್ಳು ( < ಎಳ್ ) ]

**ನಗೆವಡಿಕಾಱ** (ನಾ). ನಗುವನ್ನುಂಟುಮಾಡುವವನು ; ಹಾಸ್ಯಗಾರ ; ವಿದೂಷಕ : ನಗೆವಡಿಕಾಱಂ ನೀಱಂ ಬಗೆಕಾಱಂ ಪಾಟಕಾಱನೊಳ್ನುಡಿಕಾಱಂ (ಕಾವ್ಯಾವ. ೩೨೫); ಕಾಱಕ್ಕೆ— ನಡೆವಳಿಕಾಱಂ . . . ನಗೆವಡಿಕಾಱಂ, ಬಗೆಕಾಱಂ (ಶಮಾದ. ೧೯೯ ಪ್ರಯೋ). [ ನಗೆವಡಿ$_0$ + – ಕಾಱ ]

**ನಗೆವಾತು, ನಗೆಮಾತು** (ನಾ). ನಗುವಿನಿಂದ ಕೂಡಿದ ಮಾತು; ಹಾಸ್ಯದ ನುಡಿ: ಅವರ ಸರಳತನದ ನಡತೆ, ತೀಕ್ಷ್ಣಬುದ್ಧಿಯ ಹರಿತವಾದ ನೋಟ, ನಗೆವಾತುಗಳು ಇವೆಲ್ಲ ನನಗೆ ಒಗ್ಗಿದುವು (ಕಾಲಯಾ. ೪). **ನಗೆಮಾತು** : ತಂಗಿಗೆ ಮನೆಯ ನೋವು ಮರೆಸಲೆಂದು ಏನಾದರೂ ನಗೆಮಾತು ಆಡುತ್ತಿದ್ದ (ವಾತ್ಸಲ್ಯ. ೨೦೧) ; ದೊಡ್ಡವನು ಹುಡುಗಿಯರನ್ನು ನೋಡಿ ನಗೆಮಾತನ್ನಾಡಿದಾಗ ಚಿಕ್ಕವನು ನಕ್ಕನೇ ಹೊರತು, ತಾನು ಸ್ವತಃ ಯಾವ ಮಾತನ್ನೂ ಆಡಲಿಲ್ಲ (ರಂಗವ. ೨೧೩); ನನ್ನ ನಗೆಮಾತಿಗೆ ಮರುಳಾಗಿ ಮೃತ್ಯುವು ಕೂಡ ಮೈಮರೆಯಿತೊ ಹೇಗೆ (ಇಂದಾಪ. ೯೦-೮೬) ; ಇದೇನೋ ನಗೆಮಾತು ಎಂದು ನಾನನ್ನುವದರ ಸತ್ಯತೆಯ ಮನವರಿಕೆಯು ಎಷ್ಟೋ ಜನರಿಗೆ ಆಗದಿದ್ದರೆ ನಾನಿನ್ನೂ ಅನೇಕ ಉದಾಹರಣೆಗಳನ್ನು ಕೊಡಬಹುದು (ನಿರಾಘ. ೧೬೨). [ ನಗೆ + ಮಾತು$_1$ ]

**ನಗೆವೀಱು, ನಗೆಬೀರು** (ಕ್ರಿ). ನಗುವನ್ನು ಸೂಸು ; ನಗು ಹೊಮ್ಮಿಸು ಕೃಷ್ಣನ ಮೇಲೆ ಬಾಲೆ ಕಣ್ಸೋಲದಿನಂದು ಬಿತ್ತರಿಸಿದಳ್ ನಗೆವೀಱುವ ಮುದ್ದುವೀಱುವಾಲೋಲತೆವೀಱುವುಜ್ಜ್ವಲತೆವೀಱುವ ಮುಗ್ಧ ಕಟಾಕ್ಷಮಾಲೆಯಂ (ಜಗವಿ. ೧೦-೭೯). **ನಗೆಬೀರು** : ಅವನು ನನ್ನನ್ನು ನೋಡಿ ನಗೆಬೀರಿದನು (ರೂಢಿ). [ ನಗೆ + ಬೀಱು$_1$ ]

**ನಗೆವೆಣ್**, ನಗವೆಣ, ನಗೆವೆಣ್ಣು, ನಗೆಹೆಣ್ಣು, ನಗೆಹೆಣ್ಣೆ, ನೆಗೆಣ್ಣೆ, ನೆಗೆಣ್ಣು, ನೆಗೆವೆಣ್ಣೆ, ನೆಗೆಹೆಣ್ಣು, ನೆಗೆಹೆಣ್ಣೆ(ನಾ).೧. ಗಂಡನ ಅಣ್ಣ ಅಥವಾ ತಮ್ಮನ ಹೆಂಡತಿ; ಓರಗಿತ್ತಿ: "ಯಾತೃಗಳೆನಲ್ಕೆ ನಗೆವೆಣ್ಗಳಕ್ಕು" (ಮಂಗರಾ. ೯೨-೧೨) ; ದೊಚಿತ್ರ ಮಾವ ಮೈದುನ ನಗೆವೆಣ್ಣಾನು ಗಾಱುಗತ್ತಲೆಮಾಡಿಯಳುತ ಮೂಱು ದಿನಕೆ ನೀನು ಬೇಱಾಗು ಹೋಗೆಂದು ಸಾಱಿ ಹೇಳಿದೊ ಮಗಳೊಡನೆ (ಅಮುಸಾಂ. ೩-೧೩೩). **ನಗವೆಣ್ಣೆ** : ೧. ವಿನಯಾನ್ವಿತೆಯಾದ ಮಲ್ಲಮ್ಮನು ಮಹದಪ್ಪಣೆ ಎಂದು ನುಡಿದು ನಗವೆಣ್ಣೆಯರನ್ನು ಹಿಂಬಾಲಿಸಿ, ಗೃಹಕೃತ್ಯಗಳ ಸಲುವಾಗಿ ಒಳಗೆ ಹೊರಟುಹೋದಳು (ಮಲ್ಲಮ್ಮ. ೬). **ನಗೆವೆಣ್ಣು** : ೧. "ಯಾ(ತಾ)ತೃವೆಂಬುದು ನಗೆವೆಣ್ಣು (ನೆಗಣ್ಣೆ ಎಂದಿರಬಹುದು)" (ಹಲಾಯು. ೮೪-೩೨೪); ಮುಪ್ಪರು ಮೈದುನರು ಹುಲಿಯಂಥಾ ಅವದಿರು ನಾಲುವರು ನಗೆವೆಣ್ಣು ಕೇಳು ತಳಿ (ಮಹಾದೇ. ಬ. ೧೪೩-೩೨೮) ; ಅಪ್ಪರು ಭಾವದಿರಯ್ಯರು ನಗೆವೆಣ್ಣು [ಪಾಠಾಂ. ನೆಗೆಣ್ಣು] ಅಯ್ಯರಯ್ಯರು ಕೂಡಿ ಕಾಡುವರು (ಶಿವಗೀ. ೧೩೮-೬೯೩). ೨. ಗಂಡನ ಅಥವಾ ಹೆಂಡತಿಯ ಸಹೋದರಿ ; ನಾದಿನಿ : ನಾ ನಿಮ್ಮ ಭಾವನಲ್ಲಯ್ಯನು ನೀನೆನಗೆ ನಗೆವೆಣ್ಣು (ಅವಕೇ. ೨೦೦-೯೯೩). **ನಗೆಹೆಣ್ಣು** : ೧. ನಗೆಹೆಣ್ಣು [ಪಾಠಾಂ. ನೆಗಣ್ಣೆ]ಯಂಬೋಳು ಮುಂಗೋಪಿ (ಪುರಂದ. ೪-೧೬-೪). **ನಗೆಹೆಣ್ಣೆ** : ೧. ಹೊನ್ನಮ್ಮ . . . ಗಂಡನ ಅಗಲಿಕೆಯ ದುಃಖವನ್ನು ಮರೆತು ಇದೀಗ ನಗೆಹೆಣ್ಣೆಯ ಕೆಲಸದಲ್ಲಿ ಸಹಕಾರಿಣಿಯಾಗುತ್ತಿದ್ದಳು (ಜನಜೀ. ೩೮). **ನೆಗೆಣ್ಣೆ** : ೧. ಅಲ್ಲದಂತತ್ತೀಗೆ ಬೆಲ್ಲದಂತ ನಾದೂನಿ ನೆಲ್ಲಿಕಾಯಂತ ನೆಗೆಣ್ಣೆ ಕೂಡಾಡಿ ಕಲ್ಯಾಣ ತವರ ಮರತೇನ (ಜನಗೀ. ೫೮) ; ಎಡಮನೆಯ ಬಾಗಿಲದ ಒಡತಿ ನೀ ನೆಗೆಣ್ಣೆ ಬಡಿವಾರ ಬ್ಯಾಡ ಮನೆ ಜೋಕೆ (ಜನಗೀ. ೮೧) ; ನವಿಲುಗುಂದಕ್ಕೆ . . . ನೆಗೆಣ್ಣೆಯ ಬಾಣಂತಿತನಕ್ಕೆ ಹೋಗಿದ್ದಳು (ಶಾವಿಚ. ೧೮) ; ನೆಗೆಣ್ಣೆಯಾದಂತೆ, ಒಮ್ಮೆ ಅತ್ತೆಯಾಗಿಯೂ ಅಜ್ಜಿಯಾಗಿಯೂ ಅನ್ನಿಸಿಕೊಳ್ಳುವಳು (ಗರಡಾ. ೨). **ನೆಗೆಣ್ಣು** : (೬). **ನೆಗೆವೆಣ್ಣೆ** : ೧. ನೆಗೆವೆಣ್ಣೆಯರು ದುರುಳಮನದೆ ಮತ್ಸರಗೊಂಡು (ಮಲ್ಲಚ. ೨-೧೯). **ನೆಗೆಹೆಣ್ಣು** : ೧. "ನೆಗೆಹೆಣ್ಣು = ಅಣ್ಣತಮ್ಮರ ಹೆಂಡಂದಿರು" (ಜಾನಕೋ. ೧೨) ; ಕಾಮವೆಂಬೊ ನೆಗೆಹೆಣ್ಣು ಎನ್ನ ಕಟ್ಟಿ ಆಳುತಾಳೆ ಕ್ರೋಧವೆಂಬೊ ಸವತಿ ಕೊಲ್ಲುತಾಳೆ (ಪುರಂದ. ೫-೧೧೨-೦). **ನೆಗೆಹೆಣ್ಣೆ** : ೧. ಅತ್ತಿಗೆ ನೆಗೆಹೆಣ್ಣೆ ಹೊತ್ತುಹೊತ್ತಿನೊಳೆನ್ನ . . . ಸೆಣಸುವರಮ್ಮ (ಪುರಂದ. ೨-೪೩-೨). [ ನಗೆ ? + ಪೆಣ್ ]

**ನಗೆವೆಣ್ಣು** 'ನಗೆವೆಣ್' ನೋ.

**ನಗೆವೆಳಗು** (ನಾ). ನಗೆಯ ಬೆಳಕು,–ಕಾಂತಿ : ನಗೆವೆಳಗಿಂ ಕೈರವಮಂ ಸೊಗಯಿಪ ಕರತಳದ ಕಾಂತಿಯಿಂ ಜಳರುಹಮಂ ನಗಿಸಿ ನಱುಸುಯ್ಯ ಕಂಪಿಂ ಮಿಗೆ ಪೊರೆದವನಲ್ಲಿ ಮಾಱುವರ್ ಮಾನಿನಿಯರ್ (ವೃಷವಿ. ೪-೮೫) ; ನಗೆವೆಳಗು ಮಲರಿದುದು ಮೊಗಕೆ (ಶ್ರೀರಾಮಾ. ೫೩೬-೨೨೨) ; ಚಿನ್ನದ

ನಗೆವೆಳಗನೆ ಚಿಮುಕಿಸುವಾಕಾಶಪಟಕ್ಕೆ . . . ದೀರ್ಘದಿಗಂತದ ಫಣಿಸಮು ರೇಖೆ ಹರಿ ಹರಿಹರಿಯಿತು ತೆರೆತೆರೆತೆರವೋಗಿ (ಕೋಗಿಲೆ. ೮೯-೩).
[ ನಗೆ + ಬೆಳಗ್ಗು$_2$ ]

**ನಗೆವೆಳ್ಪು** (ನಾ). ನಗುವಾಗ ಕಾಣುವ ಹಲ್ಲಿನ ಬಿಳಿಯ ಬಣ್ಣದ ಕಾಂತಿ ; ದಂತಕಾಂತಿ: ಸೊಗಯಿಸಿ ಗೊಟ್ಟಿಯೊಳ್ ಓರಿದು ಸದ್ಗುಣಮನಿತ್ತು . . . ಮೆಲ್ಲು ಮನಂಬುಗೆ ಗಂಡನೆಂಬ ತುಂಬಿಗೆ ನಗೆವೆಳ್ಪನೋಲಗಿಸುತಿರ್ಪುದು ವಲ್ಲಿಗೆಯಂತೆ . . . ಬುದ್ಧಿವಂತೆಯರ್ (ಲೀಲಾವ. ೧೪-೪೩) ; ಮೇಗೆ ಬಗಬಗೆವಣ್ಣದಲರ್ಗಳಿಂದವರಧರರಾಗ ನಗೆವೆಳ್ಪಿನಿಂ ಪಲ್ಲಟಸಿದುವು (ಚಂಪು. ೪೫-೯೦) ; ನಗೆವೆಳ್ಪಿಂಬೆಳೆಜೊನ್ನಮಾ ಪರಿಪ ಕಾಂತಾಸ್ಯಾಂಬುಜಾತಂಗಳಂ ನಗಿವರ್ (ರಾಜಶೇ. ೧೧-೮೦). [ ನಗೆ + ಬೆಳ್ಪು ]

**ನಗೆವೇಱು** (ಕ್ರಿ). ನಗುವವನ್ನು ಪಡೆ ; ಹಸನ್ಮುಖಿಯಾಗು : ಸೊಬಗಿನ ಸೋವೆಯು ನಗೆವೆತ್ತ ನಲ್ಲಳ . . . ಎಂದು ಸಂದಿಪೆನೊ (ಶಶಿಸಾಂ. ೨೭-೪೦).
[ ನಗೆ + ವೇಱು$_1$ ]

**ನಗೆಸಾರ** (ನಾ). = ನಗಂಸಾರ : ಇದು ಒಂದು ನಗೆಸಾರದ ಮಾತಾದರೂ ಇದರಲ್ಲೊಂದು ಗೂಢಸತ್ಯವಡಗಿದೆ (ಜೀವಾತ್ಮ. ೧೫). [ನಗೆ + – ಸರ್$_4$ ?]

**ನಗೆಹನಿ** (ನಾ). (ಆಲಂ) ನಗುವನ್ನುಂಟು ಮಾಡುವ ಚಿಕ್ಕಮಾತು ; ಚುಟಕ : ರಾಜನ ಆ ಒಂದು ನಗೆಹನಿ ದಾಸೋಜನಲ್ಲಿ ಹೊಸಶಕ್ತಿಯನ್ನು ಆವಾಹಿಸಿತು (ಸವಿತ. ೪೫). [ ನಗೆ + ಹನ್$_2$ (<ಪನ್$_2$) ]

**ನಗೆಹಾಡು** (ನಾ). ಹಾಸ್ಯದಿಂದ ಕೂಡಿದ ಹಾಡಂ; ವಿನೋದದಿಂದ ಕೂಡಿದ ಕವನ: ಬೇಂದ್ರೆಯವರ ನಗೆ-ಹಾಡುಗಳಲ್ಲಿ ಕೆಲವು ಅಣಕವಾಡು (parody) ಇವೆ (ನಿರಾಳ. ೧೦ ಮುನ್ನುಡಿ). [ನಗೆ + ಹಾಡು$_2$(<ಪಾಡು$_2$) ]

**ನಗೆಹಾಯಿಸು** (ಕ್ರಿ). ನಗುವನ್ನು ಹೊಮ್ಮಿಸು ; ನಗಂ : ಒಂದನ್ನೊಂದು ಸಂಧಿಸುವಾಗ ಚಂಚಲದಳವು ನಗೆಹಾಯಿಸಿ ಕೇಳಿತು–'ಮಿತ್ರರೇ ! ಚೆನ್ನಾಗಿ ಸರಸವಾಡಿದಿರಾ?' (ಮಂಕಳೂ. ೨೨). [ನಗೆ + ಹಾಯಿಸು (<ಪಾಯಿಸು)]

**ನಗೆಹೆಣ್ಣು** 'ನಗೆವೆಣ್' ನೋ.

**ನಗೆಹೆಣ್ಣ್** 'ನಗೆವೆಣ್' ನೋ.

**ನಗೇಂದ್ರ** (ನಾ). ದೊಡ್ಡ ಬೆಟ್ಟ : ವನಸ್ಥಲದೊಳೊಂದಿಥಮಿರ್ದುದು . . . ಮದಗಜವಲ್ಲಿದಿಂದ್ರನೋಲಿರ್ಚಿದ ನೀಲನಗೇಂದ್ರಮೆಂಬಿನಂ (ಶಂಖಮಾ. ೧೦-೧೩೯). [ ನಗ$_4$ + ಇಂದ್ರ ]

**ನಗೇಂದ್ರಮೂಲ** (ನಾ). ಪರ್ವತದ ಬುಡ,–ತಪ್ಪಲು : ತಾವರೆಯಲ್ಲಿ ತಾರೆ ಜನನಂಬಡೆದಂದು ನಗೇಂದ್ರಮೂಲದೊಳ್ಪಾವಿಸೆ ಬಾಳೆಗಂಬ ವೊಗೆದಂದಂ . . . ಸತಿಯಂಗಮನಾಂ ಪೂಗಳಲ್ಕೆ ಸಾಲ್ದಪೆಂ (ರಾಜಶೇ. ೭-೨೭). [ ನಗೇಂದ್ರ + ಮೂಲ ]

**ನಗೇಂದ್ರಯಜ್ಞ** (ನಾ). = ನಗಯಜ್ಞ : ನಗೇಂದ್ರಯಜ್ಞಮಂ ನೆಗಟ್ದು ಗೋಪಸವಾಜಂ ವಿರಾಜಿಸೆ (ಜಗನ್ನಿ. ೪-೮೨ ವ). [ ನಗೇಂದ್ರ + ಯಜ್ಞ ]

**ನಗೇಶ್ವರಜೆ** (ನಾ). ಪರ್ವತರಾಜನ ಮಗಳು ; ಪಾರ್ವತಿ ; ಗಿರಿಜೆ : ನಗೇಶ್ವರಜಾನನ ಜಂಬಾಲಜಾತಹಂಸ . . . ಪೊರೆಯಭವಾ (ಹಮ್ಮಿರ. ೨-೨). [ ಸಂ. ನಗೇಶ್ವರಜಾ ]

**ನಗೋತ್ಸಂಗ** (ನಾ). ಪರ್ವತದ ಪಕ್ಕ,–ಸಾನು : ಉತ್ತುಂಗನಗೋತ್ಸಂಗ ಮಾನೇಱುವ ಮೃಗರಾಜನಂ ಪೋಲ್ತು (ಶಾಂತಿಪು. ೩-೯೦ ವ).
[ ನಗ$_4$ + ಉತ್ಸಂಗ ]

**ನಗೋಪಕಂಠ** (ನಾ). ಪರ್ವತದ ಹತ್ತಿರದ ಸ್ಥಾನ : ಪಾಲ ಪೊನಲ್ ಪೊದಟ್ಟೊದವಿ . . . ಶೈಲದರೀಗೃಹಂಗಳುಮನೊರ್ಮೆಯೆ ತೆಕ್ಕನೆ ತೀವಿ ತತ್ತ್ಥಳಸ್ಥೂಲಭುಜಂಗವಿಶ್ವಸಿತಮಾನಗದಿಂ ಪೊಱಪೊಣ್ಮೆ ಲೋಲಕಲ್ಲೋಲ ಪರಂಪರಾಪರಿಗತಂ ಪರಿದತ್ತು ನಗೋಪಕಂಠದೊಳ್ (ಆದಿಪು. ೪-೭೩);
[ ನಗ$_4$ + ಉಪಕಂಠ ]

**ನಗೋಪತ್ಯಕ** (ನಾ). ಪರ್ವತದ ಬುಡದ ಭೂಮಿ,–ತಪ್ಪಲು : ಬೆಳದೋರಂತೆಱಗಿರ್ದ ಶಾಳಿವನದಿಂ ಸೇವ್ಯಂ ನಗೋಪತ್ಯಕಂ (ಆದಿಪು. ೧-೬೪) ; ಪ್ರತ್ಯಂತದೇಶ ಭೂಭೃದವತ್ಯರನಟ್ಟಟ್ಟಿ ಪುಗಿಸಿ. ಕಾಂತಾರ ನಗೋಪತ್ಯಕಮುಂ ಕೌಸಲ್ಯಾವತ್ಯಂಗೋಲಗಿಪನವರ ಹರಿವಿಷ್ಟರಮಂ (ಶಂಖಮಾ. ೬-೧೩೪). [ ನಗ$_4$ + ಉಪತ್ಯಕ ]

**ನಗೋಪರಿಮತಲ** (ನಾ). ಪರ್ವತದ ಮೇಲ್ಭಾಗದ ಪ್ರದೇಶ; ಶಿಖರ : ವಂಶಸ್ಥಲ ನಗೋಪರಿಮತಲದೊಳ್ ವಿಚಿತ್ರಚೈತ್ಯಭವನಂಗಳಂ . . . ಪೊಱಲಂ ಮಾಡಿಸಿ (ಶಂಖಮಾ. ೮-೭೭ ವ). [ನಗ$_4$ + ಉಪರಿಮ + ತಲ]

**ನಗೌಕಸ** (ನಾ). ೧. ಬೆಟ್ಟ ಅಥವಾ ಮರದಲ್ಲಿ ವಾಸಿಸುವಂಥದು ; ಪಕ್ಷಿ : "ಶಕುನಿ ವಿಹಗಂ ವಿಹಂಗಂ ಪತ್ರಿ ವಿಷ್ಕಿರಂ ವಿಕಿರಂ ನಗೌಕಸಂ . . . ಶಕುಂತಂ ಶಕುಂತಿಯೆನೆ ಪಕ್ಷಿ" (ಮಂಗರಾ. ೫೦-೧). ೨. ಸಿಂಹ. ೩. ಕಾಗೆ. ೪. ಶರಭ. [ ಸಂ. ನಗೌಕಸ್ ]

**ನಗ್ಗಲು** 'ನೆಗ್ಗಿಲ್' ನೋ.

**ನಗ್ಗಿ** (ನಾ). ತಗ್ಗಿಹೋದದಂದು ; ಚಪ್ಪಟೆಯಾದುದು ; ಸೊಪ್ಪಾದುದು: ಬೆನ್ನೊಳು ತೊ . ಳೊ ಳು ವೊನೆಗಾಯವಿದೆ ತೊಡೆಯನ್ನೆಂತೊ ಕಟಗಳೊಳಂತೊ ನಗ್ಗ ನಗ್ಗಿಗಳಾದುವೀ ಮೊಲೆಗಳು ಮರುಳು ಚೆನ್ನಾಗಿ ತಾಳಿದೌ ಧೀರೆ (ಭರತ. ೬೨-೭). [ ನಗ್ಗು$_1$ (<ನಱುಂಕು) + – ಇ$_3$ ]

**ನಗ್ಗಿಲು** 'ನೆಗ್ಗಿಲ್' ನೋ.

**ನಗ್ಗಿಸು** 'ನೆಗ್ಗಿಸು' ನೋ.

**ನಗ್ಗು$_1$** 'ನಱುಂಕು' ನೋ.

**ನಗ್ಗು$_2$** 'ನೆಗ್ಗು$_2$' ನೋ.

**ನಗ್ಗೆತ್ತಿಸು** (ಕ್ರಿ). (ಪಾತ್ರ ಮೊದಲಾದಂವುಗಳ) ತಗ್ಗನ್ನು ಎತ್ತಿಸು,–. ಸರಿಮಾಡಿಸು ; ತಗ್ಗೆತ್ತಿಸು : ಕಂಚುಗಾರನಿಂದ ಹಳೆಯ ಪಾತ್ರಗಳನ್ನು ನಗ್ಗೆತ್ತಿಸಬೇಕು (ರೂಢಿ). [ ನಗ್ಗೆತ್ತು + – ಇಸು$_3$ ]

**ನಗ್ಗೆತ್ತು** (ಕ್ರಿ). (ಪಾತ್ರ ಮೊದಲಾದಂವುಗಳ) ತಗ್ಗನ್ನು ಸರಿಮಾಡು : ತಗ್ಗೆತ್ತು : ಕಂಚುಗಾರ ಪಾತ್ರಗಳನ್ನು ನಗ್ಗೆತ್ತುತ್ತಾನೆ(ರೂಢಿ). 'ನಗ್ಗೆತ್ತಿಸು' ಪರಾ. [ ನಗ್ಗು$_2$ (<ನೆಗ್ಗು$_2$) + ಎತ್ತು$_1$ ]

**ನಗ್ನ** (ಗು). ೧. ಬತ್ತಲೆಯಾಗಿರುವ ; ಬತ್ತಲೆಯಂ : ಪ್ಲಾನ, ಶೂನ್ಯ, ದೀರ್ಘ, ನಗ್ನ, ರಿಕ್ತ, ಋಜು ದಿಗಂತದಿ ಗಗನಕೆದುರು ನಿಂತಿದೆ ತರು ಮಸಿಯ ಚಿತ್ರದಂದದಿ (ಅನಿಕೇ. ೧೪-೧). ೨. ಸಾಗುವಳಿಯಿಲ್ಲದಿರುವ ; ಬೀಳಾದ. ೩. ಮುಚ್ಚುಮರೆಯಿಲ್ಲದ ; ಸ್ಪಷ್ಟವಾದ. 'ನಗ್ನಸತ್ಯ' ಪರಾ. (ನಾ). ೪. ಮೈಮೇಲೆ ಹೊದಿಕೆ, ಬಟ್ಟೆಗಳಿಲ್ಲದಿರುವುದಂ ; ದಿಗಂಬರವಾಗಿರುವುದಂ ; ಬತ್ತಲೆ ; ನಿರ್ವಾಣ : ಕೆಲವು ಪುರುಷ ಮತ್ತು ಸ್ತ್ರೀ ವಿಗ್ರಹಗಳು ನಗ್ನವಾಗಿಯೇ ನೃತ್ಯಭಂಗಿಯನ್ನು ತೋರಿಸುತ್ತಿರು ವುದರಿಂದ ದೇವತಾಪೂಜೆಯ ಕಾಲದಲ್ಲಿ ನಗ್ನತ್ವ ಅವಶ್ಯಕವೆಂಬ ಭಾವನೆ ಹೊಂದಿದ್ದಿರಬಹುದು (ಭಾರತ. ೧೩). 'ನಗ್ನ ನೃತ್ಯ' ಪರಾ. ೫. ಬತ್ತಲೆಯಾಗಿರುವವನು ; ದಿಗಂಬರ : "ನಗ್ನಃ, ಅವಾಸಾಃ, ದಿಗಂಬರಃ – ೩ ದಿಗಂಬರನ ಹೆಸರು, ಬೆತ್ತಲೆಯಾಗಿರುವವನು" (ಸಿದ್ಧಾಂತಿ. ೩೩೩). ೬. ದಿಗಂಬರ ಸಂನ್ಯಾಸಿ ; ಜೈನಭಿಕ್ಷು. ೭. ಶಿವ ; ಈಶ್ವರ. ೮. ಬರಿದಾಗಿರುವುದಂ ; ರಿಕ್ತವಾದದಂ ; ಶೂನ್ಯ : ಪೋಂದವಿಯ ಮನದನ್ನನ್ . . . ಪತಿಪುತ್ರಹೀನೆಯುಂ ದುಃಖಾತಿದೀನೆಯುಂ, ಕೌಸಲ್ಯೆಯುಂ ಕಂಡನಂತಃಪುರದ ನೆಲದ ನಗ್ನದಲಿ (ಶ್ರೀರಾಮಾ. ೧೦೩-೧೦೬). ೯. ನಿರ್ವಾಣ ಸ್ಥಿತಿಯನ್ನು ಪಡೆದವನು ; ಬುದ್ಧ : ಎವೆಯಿಕ್ಕದೆ ನೋಡಿದ . . . ಭೂಭುಜರ ಕಡಿದ ಶಿವನ ಬಿಲ್ಲನು. ಮುಱಿದ ದೇವಕಿಕುವರ ನಗ್ನನು[ಹಾಕಾಂ. ವೆಗ್ಗಳ]ಹಯವನೇಱಿದ (ಕನಕ. ೭೫-೨). P ದಾಸರ ಕೀರ್ತನೆಗಳಲ್ಲಿ 'ನಗ್ನ' ಎಂಬುದನ್ನು ಬುದ್ಧನಿಗೆ ಅನ್ವಯಿಸಿ

ಹೇಳಿದ್ದಾರೆ. ಬಹುಶಃ ಇದನ್ನು 'ನಿರ್ವಾಣ' ಎಂಬುದಕ್ಕೆ ಸಂವಾದಿಯಾಗಿ ಹೇಳಿರಬಹುದೇ? ೧೨. ವಂದಿ; ಮಾಗಧ: ಹೊಗಳಭಟ; ಸ್ತುತಿಪಾಠಕ: ನಟ ನಗ್ನ ಭಗ್ನಗಾಯಕ ವಟು ಪಾಠಕ ಪಂಡಿತರ್ಕಳಭಿವರ್ಣನದುತ್ಕಟನಾದಮೆಯ್ದುದುದು ದಿಕ್ತಟಮಂ (ಮಹಾನೇ. ೧೧-೧೪೩). [ ಸಂ. ]

**ನಗ್ನಕ** (ನಾ). ೧. ನಗ್ನನಾಗಿರುವವನು; ಬತ್ತಲೆಯಾಗಿರುವವನು. ೨. ಜೈನಸಂನ್ಯಾಸಿ. ೩. ಸ್ತುತಿಪಾಠಕ. [ ಸಂ. ]

**ನಗ್ನಖಡ್ಗ** (ನಾ). ಒರೆಯಿರದ ಖಡ್ಗ; ಮುಚ್ಚಿರದ ಕತ್ತಿ: ಸೊಂಟದಿಂ ಜೋಲ್ದುದು ಮಹಾಭೀಳ ನಗ್ನಖಡ್ಗಂ (ಶ್ರೀರಾಮಾ. ೬೪೩-೩೫). [ ನಗ್ನ + ಖಡ್ಗ ]

**ನಗ್ನತೆ** (ನಾ). ೧. ಬತ್ತಲೆಯಾಗಿರುವಿಕೆ; ದಿಗಂಬರನಾಗಿರುವಿಕೆ: ಸಹಜ ನಗ್ನತೆ ನಮಗೆ, ಸಹಜ ನುಡಿದಾಡಿಗಳು ಬಹುಯುಗದ ಸಂಸ್ಕಾರ ವಸ್ತ್ರ ಸಿಂಗಾರ (ಮಂಕುಳ. ೨೦೪). ೨. ಅನನ್ಯತೆ; ಲೀನವಾಗಿರುವಿಕೆ: ಭೀಮಕಾಯಂ ಕಠಿನಗಂಭೀರನಾ ಯೋಗಿ ಕೌತುಕಂಬಟ್ಟರುಂ ವಿಸ್ಮಯ ಕ್ಕೆಡೆಗೊಡದೆ, ಮಗ್ನನಾದಂ ಧ್ಯಾನದದ್ವೈತ ನಗ್ನತೆಗೆ! (ಶ್ರೀರಾಮಾ.೧೪೩-೯೦). [ ಸಂ. ನಗ್ನತಾ ]

**ನಗ್ನತ್ವ** (ನಾ). = ನಗ್ನತೆ ೧: ಕೆಲವು ಪುರುಷ ಮತ್ತು ಸ್ತ್ರೀ ವಿಗ್ರಹಗಳು ನಗ್ನವಾಗಿಯೇ ನೃತ್ಯಭಂಗಿಯನ್ನು ತೋರಿಸುತ್ತಿರುವುದರಿಂದ ದೇವತಾ ಪೂಜೆಯ ಕಾಲದಲ್ಲಿ ನಗ್ನತ್ವ ಅವಶ್ಯಕವೆಂಬ ಭಾವನೆ ಹೊಂದಿದ್ದಿರಬಹುದು (ಭಾರದ. ೧೩). [ ಸಂ. ]

**ನಗ್ನನೃತ್ಯ** (ನಾ). ಬತ್ತಲೆಯಾಗಿ ಮಾಡುವ ನೃತ್ಯ: ಬತ್ತಲೆ ಕುಣಿತ: ಈ ಆದಿವಾಸಿ ಮಾನವರ ನಗ್ನರೂಪ, ನಗ್ನನೃತ್ಯಗಳು ಅವನಿಗೆ ಬೇಸರ ವನ್ನುಂಟುಮಾಡಿದ್ದುವು (ಸ್ವಪ್ನಹೊ. ೨೪೬). [ ನಗ್ನ + ನೃತ್ಯ ]

**ನಗ್ನರೂಪ** (ನಾ). ೧. ಬತ್ತಲೆಯ ರೂಪ; ದಿಗಂಬರತೆ: ಈತನು ಮೌನ ವಾಗಿರುತ್ತಿದ್ದನು. ನಗ್ನರೂಪದಲ್ಲಿ ವಿಹರಿಸುತ್ತಿದ್ದನು (ಭಾರದ. ೦೬೪); ಈ ಆದಿವಾಸಿ ಮಾನವರ ನಗ್ನರೂಪ, ನಗ್ನನೃತ್ಯಗಳು ಅವನಿಗೆ ಬೇಸರ ವನ್ನುಂಟುಮಾಡಿದ್ದುವು (ಸ್ವಪ್ನಹೊ. ೨೪೬). ೨. ಮುಚ್ಚುಮರೆಯಿಲ್ಲದ ಸ್ವರೂಪ; ಸ್ಪಷ್ಟಚಿತ್ರ; ಬಹಿರಂಗ ರೂಪ: ಸೊಸೈಟಿಯ ವ್ಯವಹಾರ ದಲ್ಲಿ ನಡೆಯುತ್ತಿದ್ದ ಅನ್ಯಾಯಗಳ ನಗ್ನರೂಪ ಗೋಚರವಾಗತೊಡಗಿತು (ಮರಳಿ. ೦೦೮). [ ನಗ್ನ + ರೂಪ ]

**ನಗ್ನಸತ್ಯ** (ನಾ). ಯಾವ ಮುಚ್ಚುಮರೆಯೂ ಇಲ್ಲದ ನಿಜಸ್ಥಿತಿ, ಮಾತು ಮುಂತಾದುದು; ಸ್ಪಷ್ಟವಾದುದು: ನಗ್ನಸತ್ಯ ಯಾರಿಗೂ ಸೇರದು (ಬಾಬುಕ್ರಿ. ೨೨). [ ನಗ್ನ + ಸತ್ಯ ]

**ನಗ್ನಹು** (ನಾ). ೧. ಮದ್ಯದ ತಯಾರಿಕೆಯಲ್ಲಿ ಹುಳಿ ಹಿಡಿಸುವುದಕ್ಕಾಗಿ ಬಳಸುವ ಒಂದು ಬಗೆಯ ಮಾದಕದ್ರವ್ಯ; ಕಿಣ್ವ. ೨. ಮದ್ಯದ ಮೇಲೆ ಹಿಡಿಯುವ ಮಷ್ಟು. ೩. ಮದ್ಯವನ್ನು ತಯಾರಿಸುವ ಪಾತ್ರೆ,-ಮಡಕೆ: "ಕಿಣ್ವಂ, ನಗ್ನಹೂ – ೨ ಮದ್ಯದ ಹಿಪ್ಪೆಯಲ್ಲೂ ಮದ್ಯವ ಮಾಡುವ ದೋಣಿಯಲ್ಲೂ ವರ್ತಿಸುವದು" (ಸಿದ್ಧಾಂತಿ. ೨೬೪). [ ಸಂ. ನಗ್ನಹು, ನಗ್ನಹೂ ]

**ನಗ್ನಾಂಗ** (ನಾ). ೧. ಬರಿಯ ಮೈ; ಹೊದಿಕೆಯಿಲ್ಲದ ದೇಹ; ಬತ್ತಲೆಯಾದ ಶರೀರ. ೨. ಬತ್ತಲೆಯಾಗಿರುವವನು; ನಿರ್ವಾಣದಲ್ಲಿ ರುವವನು; ದಿಗಂಬರ. [ ನಗ್ನ + ಅಂಗ₁ ]

**ನಗ್ನಾಂಗಿ** (ನಾ). ಬತ್ತಲೆಯಾಗಿರುವವಳು; ವಿವಸ್ತ್ರಳಾಗಿರುವ ಸ್ತ್ರೀ: ಕೊಳದೊಳ್ಮಿಂದು ತರತ್ತರಂಗಜಳಮಂ ಮಿಂದಲ್ಲಿ ನಗ್ನಾಂಗಿ ಪೊಕ್ಕಿರೆ ನಾದಚ್ಛಲದಿಂ ಕುಮಂತ್ರಜಪಮಂ ತದ್ವೇಷದಿಂ ಮೂಡೆ... ಮೈಗಂದಿ ಬಿಳ್ದಳಿದಂ... ಭಾಸ್ಕರುಂ (ಜಾಜಿಕೀ. ೦೩-೩೨). [ ನಗ್ನಾಂಗ + -ಇ₂ ]

**ನಗ್ನಾಟ** (ನಾ). ೧. ಬರಿಮೈಯಲ್ಲಿ ತಿರುಗುವವನು; ಬತ್ತಲಿಗ. ೨. ಜೈನ ಸಂನ್ಯಾಸಿ; ದಿಗಂಬರ: "ನಗ್ನಾಟಃ, ದಿಗ್ವಾಸಾಃ, ಕ್ಷಪಣಃ ... ನಿರ್ಗ್ರಂಥಃ, ಸಾಧುಃ – ಈ ೧೦ ಸಪಣರ ಪೆಸರ್" (ಹಲಾಯು. ೩೬-೧೮೪); "ಸಾಧು ನಿರ್ಗ್ರಂಥರಾ ನಗ್ನಾಟರು" (ಮಂಗರಾ. ೬೬-೦). [ ಸಂ. ]

**ನಗ್ನಾವಸ್ಥೆ** (ನಾ). ೧. ವಿವಸ್ತ್ರವಾಗಿರುವ ಸ್ಥಿತಿ; ಬತ್ತಲೆ. ೨. ಹೊದಿಕೆ ಯಿಲ್ಲದಿರುವಿಕೆ; ಆ ವ ರ ಣ ಗ ಳಿ ಲ್ಲ ದಿ ರು ವಿ ಕೆ: ನಗ್ನಬೀಜಗಳು (Gymnosperms) ... ಬೀಜಗಳ ಸುತ್ತಲೂ ಇವುಗಳಲ್ಲಿ ಫಲಕೋಶದ ಕವಚವಿರುವುದಿಲ್ಲ. ಆದ್ದರಿಂದ ಬೀಜಗಳು ನಗ್ನಾವಸ್ಥೆಯಲ್ಲಿರುತ್ತವೆ (ಸಸ್ಯಶಾ. ೪). [ ನಗ್ನ + ಅವಸ್ಥೆ ]

**ನಗ್ನಿಕೆ** (ನಾ). ೧. ಬತ್ತಲೆಯಾಗಿರುವವಳು; ವಿವಸ್ತ್ರಳಾದ ಸ್ತ್ರೀ: "ನಗ್ನಿಕಾ, ಕೋಟವೀ – ೨ ಬಟ್ಟೆಯುಡದೇ ಬತ್ತಲೇ ಇರುವವಳ ಹೆಸರು ಗಳು" (ಸಿದ್ಧಾಂತಿ. ೧೩೦). ೨. ಋತುಮಂತಿಯಾಗದ ಹುಡುಗಿ; ಮೈ ನೆರೆಯದವಳು: "ಮೆಯ್ನೆಱೆಯಲಾದವಳಂ ನಗ್ನಿಕಾಯೆಂಬುದು" (ಹಲಾಯು. ೬೯-೩೩೦); "ಗೌರಿ, ನಗ್ನಿಕಾ, ಅನಾಗತಾರ್ತವಾ – ೩ ಮೈನೆರೆಯದೆ ಇರುವ ಪ್ರಾಯದ ಹುಡುಗಿ ಹೆಸರುಗಳು" (ಸಿದ್ಧಾಂತಿ. ೧೪೬). [ ಸಂ. ನಗ್ನಿಕಾ ]

**ನಗ್ನೆ** (ನಾ). ೧. = ನಗ್ನಿಕೆ ೧: "ನಗ್ನಾ, ಕೋಟವೀ – ಈ ೨ ನಗ್ನೆ" (ಹಲಾಯು. ೬೯-೩೨೪). ೨. = ನಗ್ನಿಕೆ ೨. [ ಸಂ. ನನಗ್ನಾ ]

**ನಚ್ಚಣ, ನಚ್ಚಣಿ, ನಚ್ಚನೆ** (ನಾ). ನರ್ತನ; ನಾಟ್ಯ; ಕುಣಿತ: "ನಚ್ಚಣ ಮೆಂದು ನರ್ತನಂ" (ಕಶಸಾ. ೨೩-೩೩೦); "ನೆನಸು ನಚ್ಚಣಮೆ ನರ್ತನಂ" (ಕವಿಕಂ. ೨೦೬); ನಚ್ಚಣಂಗಳನೊಲ್ದಾಗಿಪ ನರ್ತಕೀಸಮುದಯಂ ... ಶಾವಿತ್ತುವುಪ್ಪಳ ಮೋದುಂಬಡೆದೀಕ್ಷಿಪಾ ಪುರಜನಕ್ಕುತ್ಸಾಹಸಂದೋ ಹಮಂ (ಅಭ್ಯುಟಿ. ೫-೩೩); ನಚ್ಚಣದ ಆ ಸಂಭ್ರಮ ಮುಗಿದ ಮೇಲೆ ಸಭೆ ಹರಿಯಿತು (ಸುವತಿ. ೬); ಇನ್ನು ಈ ರತಿಗಳು – ಮೋಹನಾಂಗಿಯರಿ ಬ್ಬರಿಗೂ ಆದ ಓಲಗದಲ್ಲಿಯಾದರೂ, ನಚ್ಚಣದ ಹಸೆಯ ಮೇಲೆ ಹೊರ ತಾಗಿ ಅವಸರವಿಲ್ಲ (ಚಟ್ಟಲ. ೨೦೯-೮) ನಚ್ಚಣಿ: ನಚ್ಚಣಿಯ ಬಾಜನೆಯ ... ಬಿಜ್ಜಣಿಗೆಯ ದೇವಾಂಗನೆಯರ ಗೊಂದಣಂ (ರಾಮಾಶ್ವ. ೬೬-೨೫). ನಚ್ಚನೆ: ಮಚ್ಚರದಾಯಮಂ ಮುಱಿದು ಕೈದುಗಳಂ ತೊಱೆದುಟ್ಟು ತೊಟ್ಟ ಪೆಣ್ಬಟ್ಟಮೊಡಂಬಡಂ ಪಡೆಯ ಮೈಲೆಯನಚ್ಚನೆಯಂತೆ ಸೂಲಮಂ ಬಟ್ಟಿಸಿ (ಅನಂಪು. ೦೩-೯೬). [ < ಪ್ರಾ. ಣಚ್ಚಣ./ ಸಂ. ನರ್ತನ ]

**ನಚ್ಚಣಪಕ್ಕಿ** (ನಾ). ನರ್ತನ ಮಾಡುವ ಹಕ್ಕಿ; ನವಿಲು: ನುಡಿವಕ್ಕಿ ನಚ್ಚಣ ವಕ್ಕಿಯವಳ್ಗಕ್ಕಿ ನಡೆವಕ್ಕಿಗಳಿವು ನಿಮ್ಮ ನುಡಿ ಮುಡಿ ಮೊಲೆಗೆಣೆ ಯಂದೆಂಬವಿವ ನೋಡು ಮಡದಿಯನುತಲೈದಿದನು (ರಾಮವಿ. ೯-೦೨೬). [ ನಚ್ಚಣ + ಪಕ್ಕಿ₁ ]

**ನಚ್ಚಣಿ** (ನಾ). ನಾಟ್ಯ ಮಾಡುವವಳು; ನರ್ತಕಿ: ಆರುಂ ಮೆಚ್ಚೆ ಪೊಗಟ್ಟೆ ನೆಗಮೊರ್ವಳ್ ನಚ್ಚಣಿ ನರ್ತಿಸಿದಳಚ್ಚೆಯಱಿದಚ್ಚರಮೋಲ್ (ಸುಕುಮಾ. ೧೦-೨೨); ಹಸನಿಸುವೆನೆ ಭೃಂಗಿಯೂರುವಸಿ ತಿಲೋತ್ತಮಾದಿ ದಿವಿಜ ಕುಸುಮಗಂಧಿನಿಯರೆ ನಚ್ಚಣಿಯರುಂ (ಮಹಾದೇ. ಬ. ೦೧೩-೩೪೦); ಕೆಲಕೆ ನಸುಬಾಗುವಂಚಿತವಲಿಗುಂ ಮನಮೊಲವ ಲೋಲಿತಂ ನಚ್ಚಣಿಯಾ (ಲೀಲಾವ. ೯-೦೨೩); ಎಳಲತೆಯೆಂಬ ನಚ್ಚಣಿಯನಾಡಿಸಿ ತುಂಬಿಗಳೆಂಬ ಗಾಯಕಾವಳಿಯನಱಿಂ ತಗುಳೆ ಪಾಡಿಸಿ (ಅನಂಪು. ೦-೯೨); ನಚ್ಚಣಿಯ ಕಾಲು ಮಾನಕ್ಕೆ ಕಣ್ಣೆನಲು ವಿದ್ಯಚ್ಚಯಕೆ ಪರಿತೋಷವಾಗೆ ಸರ್ವಮೋಹನ ವನಟ್ಟಿೃತ್ತಿದರು ತಾಳದಡಿಗಳಗಣಿತ ಶಬ್ದದುಚ್ಚರಣೆ ಸೊಗಸಾಗಲು (ಸೌಂದಪು. ೮-೩); ಹೊಲೆಯರೀ ಮೇಳದ ನಡುವೆ ಮಿಗೆ ನಲಿವ ಚೆಲು ನಚ್ಚಣಿಯನಳಟೀ ಕುಲದೊಳಗೆ ಪುಟ್ಟಿಸಿದನಜನು (ಸಾಳ್ಳಿಭಾ. ೧೮-೯೨). 'ನರ್ತಿಣಿ' ಪಠಾ. [ < ಪ್ರಾ. ಣಚ್ಚಣೀ./ ಸಂ. ನರ್ತನೀ ]

. . . ಪರಿಪರಿಯ ಊರಗದ ನಡತೆಕಾಱರುಗಳಿಂ ಪುರರಕ್ಷಕರ ಮಹಿಷ ಗಾಱರೆಡೆಯಾಟದಿಂದೊಪ್ಪಿತಾ ರಾಜವೀಧಿ (ಗುರುಚಾ. ೧-೫೫).

[ ನಡತೆ + – ಕಾಱ ]

**ನಡತೆಗೆಡು** (ಕ್ರಿ). ೧. ಸರಿಯಾದ ನಡತೆಯಿಲ್ಲದಿರು; ನಡವಳಿಕೆಯನ್ನು ಕೆಡಿಸಿಕೊಳ್ಳು; ಸಂಪ್ರದಾಯವನ್ನು ಬಿಡು: ನಡತೆಗೆಟ್ಟ ವ್ಯಕ್ತಿಗೆ ಎಲ್ಲೂ ಬೆಲೆ ದೊರಕದು (ಜಾಪ್ರ). ೨. ಶೀಲವನ್ನು ಕೆಡಿಸಿಕೊಳ್ಳು; ನೀತಿಗೆಡು: ಅಯ್ಯೋ ಕೆಟ್ಟ ಹುಡುಗಿ! ನೀನು ನಡತೆಗೆಟ್ಟಿರಲೇಬೇಕು (ನಿಕಲು. ೫೩). [ ನಡತೆ + ಕೆಡು$_1$ ]

**ನಡತೆವಂತ** (ನಾ). ಒಳ್ಳೆಯ ನಡವಳಿಕೆಯುಳ್ಳವನು,-ನಡೆನುಡಿಯುಳ್ಳವನು: ನೀನು ವಿದ್ಯಾವಂತ ನಡತೆವಂತ ಗುಣವಂತ; ಇಂಥವನು ಅಸತ್ಕುಲಪ್ರಸೂತರೂ ದುರಾತ್ಮರೂ ಘಾತುಕರೂ ನಾಚಿಕೆಕೆಟ್ಟವರೂ ನಡೆಯುವಂತೆ ನಡೆಯಬಾರದು (ವಕಥಾ. ೨೩೮). [ ನಡತೆ + – ವಂತ ]

**ನಡನಡ** (ನಾ). ಒಂದು ಅನುಕರಣ ಶಬ್ದ. 'ನಡನಡನೆ' ಪರಾ.

**ನಡನಡನೆ** (ಅ). ನಡನಡ ಎಂದು: ಪಾಱಲಳವಲ್ಲದೆ ನಡನಡನೆ [ಪಾಠಾಂ. ಗಡಗಡನೆ] ನಡುಗಿ ಸಿಡಿಮಿಡಿಗೊಂಡೆಱಕೆಗಳೆಳೆ ಕೊರಲ್ಮುಸಿಯ ಜೋಲ್ದು ನೇಲ್ವ ಪಕ್ಷಿಗಳಿಂ (ರಾಜಶೇ. ೫-೫೫ ವ). [ ನಡನಡ + – ಅನ್ನೆ$_1$ ]

**ನಡಪತಿ** (ನಾ). ವಿವಾಹವಾಗದೆ ಗಂಡನಂತೆ ನಡೆದುಕೊಳ್ಳುವವನು: ಕಲ್ಯಾಣದಲ್ಲಿ ಮಾಳಾದೇವಿಯೆಂಬ ವಾರಾಂಗನೆಯು . . . ಜಂಗಮದೇವರಿಂದಾ ಲಿಂಗವು ಸಾಧ್ಯಮಪ್ಪುದೆಂಬುದ ತನ್ನ ನಡಪತಿಯಾದ ಭಕ್ತರಿಂದ ತಿಳಿದು (ಭೈರಸೂ. ೦೯೭). [ ನಡವು$_1$ + ಪತಿ$_2$ ]

**ನಡಪಾಡಿಸು** (ಕ್ರಿ). ಅಲೆ; ಚದರಿಹೋಗು; ಓಡು: ಗುರುಸಂಭವನ ಮಂತ್ರದ ಮಾಡಿ ನಡಪಾಡಿಸಿತು ಪಾಂಡವರ (ಕುವ್ಯಾಗ. ೧೦-೩೩).

[ ನಡವು$_3$ + ಅಡಿಸು ]

**ನಡಪಾಡು**, ನಡೆಪಾಡು (ಕ್ರಿ). ನಡೆದಾಡು; ಸಂಚರಿಸು; ಓಡಾಡು; ಅಡ್ಡಾಡು: ದಾದಿಯುಂ ಸಖೀಜನಂಗಳ್ ಬೆರಸು ನಡಪಾಡುತ್ತಿರ್ದಳ ಮುಂದಾ ಕೆಯ್ಯಂ ಪರ್ದು ತಂದಿಕ್ಕಿದೊಡೆ (ವಡ್ಡಾರಾ. ೦೧೮-೦೩); ಪಾಡುವ ತುಂಬಿ ಕೋಡುವ ಪುಟಾಲ್ ನಡಪಾಡುವ ರಾಜಹಂಸೆ (ಪಂಪಭಾ. ೩-೩೭); ಆ ಚಂದ್ರಿಕೆಯೊಳ್ ನೃಪರೂಪಚಂದ್ರಂ ಕೇಳೀಶೈಲದ ತಪ್ಪಲೊಳ್ನಡಪಾಡುತಿರ್ಪುದುಂ (ಕಾದಂಬ. ೧೯೭); ಮುಡಿಯ ತಡಿವಿಡಿದು ಮೆಲ್ಲನೆ ನಡಪಾಡುವ ಕಳಮಗಾಟಿಕಾಜನದ ಬೆಡಂಬಿಡಿದ ವಿಕಟಾಕ್ಷಿಬಿಂಬಂ ಪದೆಗಂ ಪಗಲೊಳಮವರಲ್ದ ಕುಮುದಶ್ರೀಯಂ (ವರ್ಧಮಾ. ೧೦-೦೪); ನಡಪಾಡುವ ವನದೇವಿಯರಡಿಯೂಡಿದಲಕ್ತಕದ್ರವಂ ಪತ್ತಿದವೋಲ್ ಕಡುಗೆಂಪನಾಳ್ದು ಪೊಂದೆಸೊಂದೆಡೆ ವನಚರವಿದ್ಧ ಮೃಗಗಣಾರುಣಜಳದಿಂ (ಚಂದ್ರಪ್ರ. ೫-೪೯); ಕಾರಕಾತ್ಮಜಂ ನೋಡುತಿರ್ದನ್ ಬೆರಗುಬಡಿದು ನಡಪಾಡುತಿರ್ದ ದೈತ್ಯನೃಪನಂ (ಶ್ರೀರಾಮಾ. ೩೩೯-೫೫೭). **ನಡೆಪಾಡು**: ಸಮದಗಜಗಮನೆಯರ್ ಮುಗಿಲ ಮೇಲೆ ನಡೆಪಾಡುವೀವಾಕೆಗಳ್ ತಮಗೆ ಧರಾಗಮನಂ ಪೊಸತಪ್ಪುದಱಿಂದಮರ್ದಿರೆ ನಡನಡದು ನಡೆಯಲಾಱದೆ ಸುಟಾದರ್ (ಪಂಪಭಾ. ೭-೮೯); ನಡೆಪಾಡುತಿರ್ದೆಡಪಿ ಕೆಡೆವ ಜರತ್ಪಾವಸರ ಕೆಯ್ಯಂ ಪಿಡಿದೊಯ್ಯನೆತ್ತುವ ಗೋಲಾಂಗೂಲಜಾಲಮುಮಂ (ಪಂಚತಂ. ೧೧೮-೦೭); ಗಿಳಿ ಪಣ್ಗಳನೀಂಟುವ ಭಂಗಿಯಿಂ ವಿನೋದದೆ ನಡ[ಪಾಡಿ] ಚುಂಬನದ [ಚೀತ್ಕೃತಿಯಂ] ಕಲಲಾ ಜನಕ್ಕೆ ಬರ್ಪುದು ಪಿರಿದುಂ ನುಮಿತ್ಸಪಚರಕಿನ್ನರವನ್ನಗಕನ್ಯಕಾಜನಂ (ಶಾಂತೀಶ್ವ. ೦೩-೦೧೮).

[ ನಡವು$_2$ + ಆಡು$_1$./ತೆಲು. ನಡಪಾಡು, ನಡುಪಾಡು ]

**ನಡಪಾಡುಹ** (ನಾ). ನಡೆದಾಡುವಿಕೆ; ಓಡಾಡುವಿಕೆ; ಸಂಚರಿಸುವಿಕೆ: "ವಿಹಾರ, ಪರಿಕ್ರಮ = ನಡಪಾಡುಹ" (ನಾಚಿರಾ. ೬).

[ ನಡಪಾಡು + – ಹ$_2$ ]

**ನಡಪು$_1$**, ನಡಹು$_1$, ನಡೆಪು$_1$ (ಕ್ರಿ). ೧. ನಡೆಯುವಂತೆ ಮಾಡು; ನಡೆಸು; ಗಮಿಸುವಂತೆ ಮಾಡು: ನಡುವಗಲಲ್ಲಿ ತಾಂ ನಡಪಿ ದಂತಿಗಳಂ ರವಿತಪ್ತಂ ಸೂಥಮಂ ಬಿಡದತಿಶೀತಲಸ್ಥಲವ ಸೇವಿಸುವಂತೆವೋಲೀ ನರೇಶ್ವರು ಇಡಿದನುರಾಗದಿಂ ಪ್ರಜೆಗಳಂ ನಿಜಪುತ್ರರ ಪೋಷಿಪಂದದಿಂ ನಡಪಿ ವಿವಿಕ್ತ ಮಾದೆಡೆಯ ಸೇವಿಸುವಂ ಸಲೆ ಶಾಂತಮಾನಸಂ (ಶಾಕುಂತ. ೬೩-೦೦೫). ೨. ಸಲಹು; ಪೋಷಿಸು; ಪಾಲಿಸು; ಕಾಪಾಡು: ಎರಟ್ಟೂಱು ತಿಂಗಳಿಂಗೆ ತಾಯ್ ಕಟ್ಟಿದೊಡೆ ಬಂದ ನಂಟರ್ ನಡಪೆ ಬಳೆದೊಡಾ ನಂಟರುಂ ಕಟ್ಟಿದುಳ್ಳರೆಲ್ಲಂ ಸತ್ತು ಕುಲಕ್ಷಯಮಾದೊಡೆ (ವಡ್ಡಾರಾ. ೬೩-೦೭); ಮುನ್ನ ವೃಷಭನಾಥನ ನಡಪಿದ ದುಮಂ ತಮ್ಮ ನಣ್ಪುಮಂ ಬಗೆದು ಕುರುರಾಜಾದಿಮೂರ್ಧಾಭಿಷಿಕ್ತ ಪಾರ್ಥಿವರ್ . . . ಭರತೇಶ್ವರ ಚಕ್ರವರ್ತಿಯನಾಸ್ಥಾನದೊಳ್ ಬಂದು ಕಂಡು (ಆದಿಪು. ೦೪-೫೦೮); ನಡಪಿದನಜ್ಜನೆಂದು ವಿಜಯಂ ಕಡುಕೆಯ್ದುಸನನ್ನ ಮಮ್ಮನಾಂ ನಡಪಿದನೆಂದು ಸಿಂಧುತನಯಂ ಕಡುಕೆಯ್ದಿಸಂ (ಪಂಪಭಾ. ೧೧-೧೮); ಪಡಿಯೊಳ್ ಪೊರಳುತ್ತುಂ ಕಂಠಗತಪ್ರಾಣನಾಗಿರ್ದುದನೀ ಗಿಳಿಯಂ ಕಂಡು ಕರುಣಿಸಿ ತಂದೆ ನಡಪಿ ಗಱಿವೂಡಿದ ಬಟ್ಟಕ್ಕಂ ಪಾಱಿ ಪೋಕುಂ (ಕಾದಂಪೂ. ೩೬೩); ವರ್ಷ ೯[೨೭] ನೆಯ ವಿಶ್ವಾವಸು ಸಂವತ್ಸರದ ಫಾಲ್ಗುಣ ದಮಾವಾಸ್ಯೆಯಾದಿತ್ಯವಾರ[ದ]ನ್ದು ನಡಪಿದ ಸತ್ತಿಗಂ ಬೆಸಸೆ (ಶಾಸಂ. XI-1, ೫೦-೩; 1006); ತಜ್ಜಗಮನೆ ಪುಟ್ಟಿಪಂ ನಡವುಮಂ ನಡಯಿಪಂ ಕಿಡಿಪಂ ಕೃಪಾದಿಂದದವಾನೆ (ಸಮಪ. ೧೦-೦೬೪); ಬೇವಿನ ಗಿಡುವಂ ತಂದಿಟ್ಟಾವಿನ ಸೊಱೆವಾಲನೆಱೆದು ನಡಪಿದೊಡಂ ಕೇಳ್ ಬೇವಿಂಸೆ ಕೈಪೆ ಪಿಂಗದು (ಧರ್ಮಾಮೃ. ೫-೦೫೭); ಆಕೆಯ ನಡಪಿದ ದಾದಿಯ ಮಗಳು ಕಾಮಲತೆಯೆಂಬಳಾಕೆ ರೂಪಸಿ (ಪುಣ್ಯಾಸ್ರ. ೭-೭೫). **ನಡಹು$_1$**: ೨. ಹೊನ್ನದೇವರು ಬೆಸಸಲು ಕಾದಿ ಸುರಲೋಕಪ್ರಾಪ್ತನಾದ ಹಿಂನ್ದಾ ದನ್ತಹವರೂ ಲೇಸಾಗಿ ನಡಹುವರು (ಮ್ಯಆರಿ. ೦೯೩.೨, ೩೦-೪; 1126). **ನಡೆಪು$_1$**: ೨. ಕರಿ ಪೋಗವು ಹರಿ ಪೋಗವು ಪರಿವಾರಂ ಪೋಗವೂಡನೆ ನಡಪಿದ ನಾಲ್ವರ್ ನೆರವಾಗಿ ಪೋಗರಂತಕಪುರಕ್ಕೆ ಪೋಪೆಡೆಯೊಳ ರಸರೊರ್ವರೆ ಪೋಪರ್ (ಅಜಪು. ೨-೦೦೪); ನೆಗಳ್ದ ಭಾವಶಿವದೇವ ಕ್ಷೌಣಿಯ ಮಾಣಿಯಂ ಕೈಕೊಣ್ಡು ಪೋಷಿಸಿ ಮದುವಿಯಂ ಮಾಡಿ ನಡೆಪಿದ ಧರ್ಮ ಸನ್ತತಿಯ ಬ್ರಾಹ್ಮಣ ಸರ್ವ್ವಧರ್ಮ್ಮಾಧಿಕಾರಿ ಬ್ರಹ್ಮಪುರಿ ಮುಂಖ್ಯಂ (ಶಾಸಂ. XI-1, ೬೪-೦೭; 1028); ಮತ್ತಲ್ಲಿ ಜಲಕೇಳಿಯಾಡುವ ಗಾಡಿಕಾರ್ತಿಯರು ಕಾಡಲೆಂದೊಳ್ಳಿಗಳಂ ತಂದು ಬಿಡಿಸಿಯವರ್ಕೆ ಪಾಲನೆ ಱೆದು ನಡೆವುತಿರ್ಪನ್ನೆಗಂ (ಪಂಚತಂ. ೦೩೩-೩೦); ಮಗನಂ ನಡಪಿ ಬಾವಿಯೊಳ್ ನೂಂಕುವಂತೆ (ಧರ್ಮಾಮೃ. ೯-೦೫೭); ಎನ್ನ ಮಗಲ್ದಾದ ತನುಜರು ಪಿಡಿದು ರಾಜ್ಯದೊಳ್ ನಡೆಪುತ್ತುದುದು ನಿಲೆ ನುಡಿಯಿಸಿ (ನೇಮಿಪು. ೩-೨೭ ವ).

[ ನಡೆ$_1$ + – ಪು$_1$./ತಮಿ. ನಟವು; ತುಳು. ನಡಪು; ತೆಲು. ನಡಪು, ನಡುಪು ]

**ನಡಪು$_2$**, ನಡಹು$_2$, ನಡೆಪು$_2$ (ನಾ). ನಡೆಯುವಿಕೆ; ಚಲಿಸುವಿಕೆ; ಓಡಾಟ; ಸಂಚಾರ. 'ನಡಪಾಡು' ಪರಾ. **ನಡಹು$_2$**: ಕಡಿತಲೆಯ ಮಿಂಚುಗಳ ಹೊಯ್ಲಿನ ಸಿಡಿಲುಗಳ . . . ಬಿಡುಮಿಡುಳ ಹೊರಳಿಗಳ ಹಂಸೆಯ ನಡಹುಗಳ ನವಖಡದೊಳು ಹೆಣನಡವಿ ತಳಿತಿರೆ ಮೆಱೆದುದ್ದೈ ಸಂಗ್ರಾಮ ಕಾರ್ಗಾಲ (ಕುವ್ಯಾಭೀ. ೯-೩೭). **ನಡೆಪು$_2$**: 'ನಡೆಪಾಡು' ಪರಾ.

[ ನಡೆ$_1$ + – ಪು$_2$./ತಮಿ. ನಟವು; ಮಲ. ನಡಪ್ಪು; ತುಳು. ನಡಪು; ತೆಲು. ನಡವು, ನಡುಪು ]

**ನಡಪ್ಪಳ್ಳಿ** 'ನಡುಪಳ್ಳಿ' ನೋ.

**ನಡಪ್ರಾಯ** (ನಾ). ಹುಲ್ಲು, ಜೊಂಡುಗಳಿಂದ ತುಂಬಿರುವಿಕೆ. [ ಸಂ. ]

**ನಡಬಾವಿ** 'ನಡೆಬಾವಿ' ನೋ.

**ನಡಭಾವಿ** 'ನಡೆಬಾವಿ' ನೋ.

**ನಡಮಣ್ಣ** (ನಾ). ಒಂದು ಬಗೆಯ ಜಮೀನು ; ಸಾಗುವಳಿ ಜಮೀನು (?): ಆತಂಗಂ ನಡಮಣ್ಣ ಪನ್ನಿಮ್ಮತ್ತನೆಲ್ಲ ಮಣ್ಣ ಖ × × × ವಳ ಸೂಳೆವಳ್ಳ (ಎಕ. XI, ದಾವಣ. ೧೦೯-೭ ; ೯೮೦). [ ? ]

**ನಡವಿಮಾನ** (ನಾ). ಒಂದು ಬಗೆಯ ವಿಮಾನು. [ ಸಂ. ]

**ನಡವಮುರುಕನಬಳ್ಳಿ** (ನಾ). ಒಂದು ಬಗೆಯ ಬಳ್ಳಿ : (ಕ). [ ? + ಬಳ್ಳಿ ]

**ನಡಯಿಸು** 'ನಡೆಯಿಸು' ನೋ.

**ನಡಲು** (ನಾ). ಒಂದು ಸ್ಥಳದ ಹೆಸರು : ನೇಚಾಲೆಯುಂ ಮೂಯಿತ್ತಿಂ ನಡಪ್ಪಳ್ಳಿ ಮೂಟಾಣಂ ನಡಲು ಎಪ್ಪತ್ತಳ್ಳದತ್ತಿಟ್ ಕೆಱೆಯ ಒರಲಿಲ್ಗೆಡು (ಎಕ. VI, ತೀರ್ಥಹ. ೯೩-೧೬ ; ಸು. 1026 ?). [ ? ]

**ನಡವಣ** 'ನಡೆವಳಿ$_1$' ನೋ.

**ನಡವಳಿ** 'ನಡೆವಳಿ$_1$' ನೋ.

**ನಡವಳಿಕಸ್ತ** (ನಾ). ಒಳ್ಳೆಯ ನಡವಳಿಕೆಯುಳ್ಳವನು,–ನಡತೆಯುಳ್ಳವನು : ಈಶ್ವರರಾಯರು ಒಳ್ಳೆಯ ನಡವಳಿಕಸ್ತರಾದುದರಿಂದ ನ್ಯಕ್ಕಳೆಗಳಲ್ಲಿ ಅಷ್ಟಕ್ಕಷ್ಟ (ಕಲಾಪಾ. ೩). [ ನಡವಳಿಕೆ (<ನಡೆವಳಿಕೆ) + – ಸ್ತ ]

**ನಡವಳಿಕಾರ** 'ನಡೆವಳಿಕಾಱ' ನೋ.

**ನಡವಳಿಕಾಱ** 'ನಡೆವಳಿಕಾಱ' ನೋ.

**ನಡವಳಿಕೆ** 'ನಡೆವಳಿಕೆ' ನೋ.

**ನಡವಳಿತ** (ನಾ). ೧. ನಡತೆ; ನಡವಳಿಕೆ; ವರ್ತನೆ: "ನಡವಳಿತ = ನಡತೆ" (ಗಂಗಾಪು. ೧೭೭) ; ನುಡಿದೊಡೇನ್ನೆ ಶ್ರುತಿಸ್ಮೃತಿಗಳಂ ನಡವಳಿತದೊಳು ಶುದ್ಧಮಿಲ್ಲದ (ಶಂಕರಾ. ೧೨-೧೦). ೨. = ನಡೆವಳಿಕೆ ೩ : ಕೂಟು ವಡವಳಿತವನ್ನು ಕುರಿತ ಸಿವಿಲ್ ಪ್ರೊಸೀಜರ್ ಕೋಡಿನ . . . ಪ್ರಕರಣದ ಮೇರೆಗೆ ಆರು ತಿಂಗಳು (ಗ್ರಾಮಾಕ. ೧೬೦). [ ನಡವಳಿ ( < ನಡೆವಳಿ$_1$) + – ತ$_2$ ]

**ನಡವೆ** 'ನಡುವೆ$_1$' ನೋ.

**ನಡಸಂಹತಿ** (ನಾ). ಹುಲ್ಲು, ಜೊಂಡುಗಳ ಸಮೂಹ,–ಗುಂಪು. [ ಸಂ. ]

**ನಡಸು$_1$** 'ನಡೆಯಿಸು' ನೋ.

**ನಡಸು$_2$** 'ನಡಿಸು$_2$' ನೋ.

**ನಡಹ** 'ನಡೆಹ' ನೋ.

**ನಡಹು** 'ನಡವು$_1$' ನೋ.

**ನಡಹು$_2$** 'ನಡವು$_2$' ನೋ.

**ನಡಾವಳಿ** 'ನಡೆವಳಿ$_1$' ನೋ.

**ನಡಾವಳಿಕೆ** 'ನಡೆವಳಿಕೆ' ನೋ.

**ನಡಾಳ** (ನಾ). ಒಂದು ಬಗೆಯ ಹಗ್ಗ,–ಮಿಣಿ. 'ನಡಾಳಮಿಣಿ' ನೋ. [ ←ಮರಾ. ನಾಡಾ ]

**ನಡಾಳಮಿಣಿ** (ನಾ). ನೊಗವನ್ನು ಮೂಕಿಗೆ ಬಂಧಿಸುವ ಹಗ್ಗ : (ಕ). [ ನಡಾಳ + ಮಿಣಿ (<ಮಿಳಿ$_3$) ]

**ನಡಿ** 'ನಡೆ$_1$' ನೋ.

**ನಡಿಕೆ** 'ನಡಗೆ' ನೋ.

**ನಡಿಗೆ$_1$** 'ನಡಗೆ' ನೋ.

**ನಡಿಗೆ$_2$**, ನೆಡುಗೆ(ನಾ). ೧. ನಡುವಿಕೆ ; ನಾಟುವಿಕೆ ; ಸ್ಥಿರಗೊಳಿಸುವಿಕೆ. ೨. ನಾಟಿ ; ನೇಜಿ. ನೆಡುಗೆ: ೧. "ತಲ–ಪ್ರತಿಷ್ಠಾಯಾಂ, ನಡುಗೆಯೊಳ್" (ಕಾಶಕ್ಕ. ೨೬೧).

ನಡಿಗೆಯ ಹಿತ್ತಿಲು = ನಾಟಿ ಹಾಕಿರುವ ಹಿತ್ತಿಲು ; ಸಸಿಗಳನ್ನು ನಟ್ಟಿರುವ ಸ್ಥಳ : ಬಸವಂತನ ನಡಿಗೆಯ ಹಿತ್ತಿಲು ತೋಟದಲೂ (ಶಾಶಾ. IX-II, ೪೭೬-೩೦ ; 1606). [ <ನಡು$_1$ + – ಗೆ ]

**ನಡಿಸು$_1$** 'ನಡೆಯಿಸು' ನೋ.

**ನಡಿಸು$_2$**, ನಡಸು$_2$, ನೆಟಿಸು, ನೆಡಿಸು (ಕ್ರಿ). ೧. (ಗಿಡ, ಸಸಿ ಮೊದಲಾದುವನ್ನು ನೆಲದಲ್ಲಿ) ನಡುವಂತೆ ಮಾಡು ; ನಾಟುವಂತೆ ಮಾಡು : "ಪೀಲತೀತಿ ನಡಿ(ಟ್ಟ)ಸಿದವುದೆಂಬುದು" (ಕಾಶಕ್ಕ. ೪೩) ; ದಿವ್ಯಶಕ್ತಿಪ್ರಭಾವದಿಂದ ಮಾನುಷಾರಣ್ಯಂಗಳ ಮಹಾದ್ರುಮಂಗಳಂ ತರಿಸಿ ನಡಿಸಿ (ಆದಿಪು. ೦೩-೫೨ ವ). ೨. (ಕಲ್ಲು, ಕಂಭ ಮೊದಲಾದುವನ್ನು ನೆಲದಲ್ಲಿ) ಹೂಗಿಸು ; ಹೂಳಿಸು ; ಸ್ಥಾಪಿಸು : ಯಾತಕೂರೊಳ್ ಚಲ್ಲೇಶ್ವರದ ಮುಂದೆ ಕಲ್ಲನ್ನಡಿಸಿ ಪಿರಿಯ ಕೆಱೆಯ ಕೆಟಗೆ ಮಟ್ಟಿಕಾಲುಂಡ್ಗೆಕೊಳ್ಳಗಂಡುಗಂ ಮಣ್ಣು ಕೊಟ್ಟರ್ (ಎಕ. III, ಮಂಡ್ಯ. ೪೧-೦೨ ; ೯೬೦); ಕಡಲ ತಡದಡಿಯೊಳಾತಂ ನಡಿಸಿದ ಕಾಂಚನಜಗಜ್ಜಯಸ್ತಂಭಗಳ್ ಕುಡಿನಿಮಿರ್ದು ನಾಕಿನಿಳಯಮನಡರ್ವ ಯಶೋಲತೆಗಡರ್ಪನಿಟ್ಟವೋಲೆಸಗುಂ (ಚಂದ್ರಪ್ರ. ೭-೩೧). ೩. (ಕತ್ತಿ ಮೊದಲಾದುವನ್ನು ಮೈಯೊಳಗೆ) ನಾಟಿಸು ; ಚುಚ್ಚುವಂತೆ ಮಾಡು : ತನ್ನ ಕಠಾರಿಯನ್ನು ಪೂರ್ತಿಯಾಗಿ ಅದರ ದೇಹದಲ್ಲಿ ನಡಿಸಿದಳು (ಸುದಿಪು. ೦೦೪); ಅಡವೀಬೆಕ್ಕುಗಳು ಬೇಟೆಯ ಮೈಯೊಳಗೆ ಹಲ್ಲು ನಡಿಸಿ, ಅದನ್ನು ಕೊಲ್ಲುತ್ತವೆ (ಮುಂಬಯು. ೫-೩೧). ನಡಸು$_2$ : ೩. ಫಡಫಡೆನುತ ಬಕಾಸುರನ ಮಗ ನಡಸಿದನು ಕೂರಂಬನು (ಕುಮಾರವ್ಯಾ. ೦೫-೭೭). ನೆಟಿಸು : ೨. ಗುರವನಾಯಂ ಕೊಟು ಕಲ್ಲ ನೆಟಿಸಿದನ್ (ಎಕ. VIII, ಸಾಗರ. ೦೦೦-೦೫ ; ೯೬೬ ?). ನೆಡಿಸು : ೧. ತಡೆಯದ್ಯೆದಂಗುಲಕೆ ರಥವನು ನೆ[ಪಾಠಾಂ. ನ] ಡಿಸಿದನು ಹರಿ ಧರೆಗೆ ಪಾರ್ಥನ ಮುಡಿಯ ಸರಿಸಕೆ ಬಾಣ ಬಂದುದು ಕೊಲುವ ತವಕದಲಿ (ಕುಮಾರವ್ಯಾ. ೨೫-೨೮). ೨. ಮುಂದೆಸೆಯೊಳುಱೆ ಬಸಿದ ಶೂಲವನೊಂದನಾಗಳೆ ತರಿಸಿ ನೆಡಿ[ಪಾಠಾಂ. ನಡಿ]ಸಿತೆಂದನು (ಬಸವಪು. ೩೮-೪೭) ; ತೊಡೆವೆನೀ ತೋರ್ಪೀ ನಿಶಾಚರವಡೆಯ ಭಾಗ್ಯದ ಭಾಳಲಿಪಿಯನು ನೆಡಿಸುವೆನು ನೈಶಾಟವಿಜಯಸ್ತಂಭಡಂಬರವ (ತೊರರಾ. ೩-೬-೪) ; ನೆ [ಪಾಠಾಂ. ನ] ಡಿಸಿದನೆರಡು ಕಂಬವಂ (ಕೃಮಿಭಾ. ೨೬-೫೦).

ನಡನಡಿಸು(ದ್ವಿರುಕ್ತಿ) : ಸಿಡಿಲ ಬೊಬ್ಬೆಯ ಧಾಳಿಯಲಿ ನಡನಡಿಸಿತಾಗಿ ನಿದಾಘಭೂಪನ ಹಿಡಿದು ಹೆಕ್ಕಳಿಸಿದನು ಮೇಘಾಗಮ ಮಹೀಪಾಲ (ತೊರರಾ. ೪-೬-೪). [ ನಡು$_1$ + – ಇಸು$_2$ ]

**ನಡು$_1$**, ನೆಟ್ಟು$_1$, ನೆಡು (ಕ್ರಿ). ನಟ್ಟ$_1$, ನೆಟ್ಟ (ಭೂತಕೃ). ನಟ್ಟು$_1$, ನಾಟ್ಟು, ನೆಟ್ಟು (ಭೂತನ್ಯೂ) ೧. (ಕಲ್ಲು, ಕಂಬ ಮೊದಲಾದುವುಗಳ ಕೆಳಭಾಗವನ್ನು ನೆಲದಲ್ಲಿ) ಹೂಳು ; ನಿಲ್ಲಿಸು ; ಸ್ಥಾಪಿಸು ; ಸ್ಥಿರಗೊಳಿಸು : "ನಡು–ಸಂಸ್ಥಾಪನೇ, ಮಧ್ಯೇ ಚ" (ಶಮದಾ) ; "ಸ್ಥಾಪನ – ಮಧ್ಯದ ಸ್ಥಾನಂಗಳೊಳ್ ನಡು" (ಶಬ್ದಮಂ. ೯೪) ; ಅಜವರ್ಮ್ಮನ ಕಲ್ಲ ನೊಟವ್ವಪ್ಪುರ್ವಟ್ಟೊಡೆ ಇವ್ವರ್ಗ್ಗೆ ಈ ಕಲ್ಲು ನಟ್ಟುದು (ಎಕ. XI, ಜಗಳೂ. ೦೯-೭ ; ೯೦೭) ; ಮಹಾದ್ರುಮಂಗಳಂ ತರಿಸಿ ನಡಿಸಿ ನಟ್ಟ ಕಂಭಂಗಳ ಮೇಗೆ ಸಾರದಾರುಗಳನಡೆಗಿಱಿದಿರೆ ಪಾಸಿ ಪಸರಿಸಿ (ಆದಿಪು. ೧೩-೫೨ ವ) ; ಮಟ್ಟಿ ಕೆಱೆಯ ತೆಂಕಣ ಕಡೆಯಂ ಪಿರಿಯಯ್ಯ ಪುಣುಸೆಪರು ನಟ್ಟ ಓಳಿಗಲ್ಲಿನ್ದಂ ಪಡುವಣ ತೆವರಿಂದೊಳಗೆ ಅಯ್ದು ಕೊಳಗ ಬೆದೆ ಪೂಂಬೊಲನುಂ . . . ಸಲ್ವುದು (ಎಕ. IV, ಹೆಗ್ಗಡ. ೧೭-೨೦ ; 1021) ; ಕಮ್ಮನೂರ ಬಳಸಿಯೊಳು ಅಯ್ಗಣ್ಣುಗಂ ಬೆಟ್ಟದೆ ಅಯಂಗಳು ಕಲ್ಲು ನಾಟ್ಟು ಸೊಭೆ ಕೆಯ್ದಂ (ಎಕ. XIV, ಎಡತೊ. ೪೮-೧೧ ; 1078) ; ಮತ್ತುಟಿದವರಂ ದೇವರೆನವೇಡ ಧರೆಯೊಳ್ ದೇವರೆ ನಟ್ಟಿರ್ದ ಕಲ್ಲುವೊಟ್ಟಿದ ಮಣ್ಣುಂ (ಧರ್ಮಾಮೃ. ೮-೩೧) ; ಇದು ವೈರಾಗ್ಯದ ಕೊತ್ತಳದ ಮೇಲೆ ಮನ್ಮಥನು ನಟ್ಟ ವಿಜಯಪತಾಕೆಯಂತೆ ಕಾಣಿಸುತ್ತದೆ (ಕಾವ್ಯಸ. ೫೮). ೨. (ಗಿಡ, ಸಸಿ, ಬೀಜ ಮೊದಲಾದುವನ್ನು ನೆಲದಲ್ಲಿ) ಊರು ; ಹಚ್ಚು ; ನಾಟಿಹಾಕು : ತೆಂಗಿನೆಳನೀರುಮಂ ಕೊಳಲಿಂಬಪ್ಪಂತಿರೆ ಮಾಡಿ ನಟ್ಟ ಕೌಂಗಿನ ತೆಂಗಿನ

ಮರಂಗಳುಮಂ (ಹಂಪಭಾ. ೫-೪೭ ವ) ; ಒಂದು ದೆಸೆಯೊಳೆರ್ತಡಿವಿಡಿದು ನಟ್ಟ ತಮಾಲದ ತಳಿರ್ಗೊಂಬುಗಳಿಂ ಸಮೆದ ವನಲೇಖೆಗಳುಮಂ (ಕಾದಂಬ. ೨೦೪) ; ಪೂಗಿಡುವೆಂಬ ಪೆಸರಿಂಗೆ ಕೊಳವಳ್ಳಿಯ ಗಿಡುಗಳಂ ನಟ್ಟು ನೀರೆಱೆದು ನಡೆಪೆ ಮಲ್ಲಿಗೆಯ ಪೂವಿನಂತಾಗಲಱಿಯದಂತೆ (ಧರ್ಮಾಮೃ. ೭-೬೪) ; ನೀ ನಟ್ಟ ಸಸಿ ಸುರಕುಜವಲೇ ಕೊಡದೇ ಮನೋರಥವ (ಕುಮಾ.ಅ. ೧೨-೫೪) ; ನಟ್ಟು ಧರ್ಮಭಯವನೆದೆಗೆ ಹುಟ್ಟಿಗೊಂದು ಅರ್ಥವಿತ್ತರು (ರಾಮೂನ. ೨ ನಿವೇದನ). ೩. (ಬಾಣ, ಕತ್ತಿ, ಮುಳ್ಳು ಮೊದಲಾದುವು) ಚುಚ್ಚು; ನಾಟು; ಒಳಹೊಗು; ಇರಿ ; ಭೇದಿಸು : ನಟ್ಟ ಸರಲ್ಗಳಿಂದಿದಕರಂಕ x ಯಿಂ ಕಿಡಿಕೆಯ್ವು (ಎಕ. II, ೧೩೮-೧೫ ; ಸು. ೯೫೦) ; ತಡದಡಿಸುತ್ತುಮಿಱಿಯಲ್ ಪರಿವಾತಂ ವಾಪೀಸೋಪಾನ ಮನಡರುತ್ತುಂ ಜಾಱಿವಱಿದು ಕೆಡೆದಾರದೊಳ್ ನಟ್ಟ ಸುಂಗೆ ಬೆನ್ನೊಳ್ಮೂಡೆ (ಆದಿಪು. ೨-೦೪ ವ) ; ತಡೆಯದೆ ರಾಜರಾಜನಿದಿರಂ ಬರೆ ಭೋರ್ಗರೆದೆಚ್ಚೊಡಂಬುಗಳ್ ನಡದೆ ಸಿಡಿಲ್ವುದಾಂ (ಹಂಪಭಾ. ೧೦-೧೩೯); ವಾಮನನು ದರ್ಭೆಯೊಳೋವದ ಕುತ್ತೆ ನಟ್ಟು[ಪಾಠಾಂ. ದರ್ಭೆಯೊಳಾಸಿದೊಡಾರೆ ನಾಂಟ] ಶುಕ್ರನ ಬಲಗಣ್ಣವಾಗಳೊಡೆದತ್ತು (ಕಮುಕ. ೧೦-೯೭) ; ಬಾಲಾಭ್ಯಾಸವ ಮಾಡಹೋದರೆ ಎನ್ನ ಸುಂಗೆ ಎನ್ನ ನಟ್ಟಿತ್ತು (ಬಸವ. ೬೨೪); ನಂಜುಮುಳ್ಳಡಿಯನು ನಟ್ಟು ನಡೆಗೆಟ್ಟನೋ (ಸಿದ್ಧರಾ. ೨-೪೫) ; ರೋಮಗಳೆಲ್ಲ ಬಾಣಮಯವಾಗೆ ನಟ್ಟವು ಕಣೆಗಳು (ಸಂಭಪ. ೧೭-೦೨) ; ಎಡೆಬಿಡದಿಡುವ ತುಪಾಕಿಯ ಗುಂಡಿನ ಕಡುಹಿಂದ ನಡುವ ಬಾಣಗಳ ಗಡಣದಬ್ಬರದಿಂದ ಕೂಡಿದ ರಿಪುಬಲ ಕಡಿಖಂಡವಡೆದುದು (ಕಂಪವಿ. ೩-೬೬). ೪. ನೆಲೆಗೊಳ್ಳು ; ಸ್ಥಿರವಾಗು ; ಕೀಲಿಸು ; ಅಲುಗದೆ ನಿಲ್ಲು ; ಕೂಡು : ದಿಟ್ಟ ಮನವೆಂಬಿವು ತೊಟ್ಟನೆ ನಟ್ಟು ನಟ್ಟವೋಲ್ ಘಟಯಿಸೆ (ಆದಿಪು. ೩-೯೦) ; ಆತನ ವಿಷಮಶರಶಲಾಕೆಗಳಿಂ ಕೀಲಿತಮಾದಂತವಯವಂಗಳ್ ನಟ್ಟು ನಿಂದುವು (ಕಾದಂಬ. ೬೩೮) ; ಆಲಿ ನಿಮ್ಮಲ್ಲಿ ನಟ್ಟವು ನೋಡಯ್ಯ (ಮಹಾದೇ. ಬ. ೩೮-೯೦) ; ತನ್ನಯ ಸುಭೋಗಸಮಾಶ್ರಯಭಂಗಶಂಕೆಯಿಂ ದುನ್ನತ ಚಿಂತೆ ನಟ್ಟು ನಿಲೆ (ರಾಧಪು. ೩-೮) ; ಕುಮಂತ್ರಿಗಳ ವಚನವತಿಗಾಢದಲಿ ನಟ್ಟುದು (ಕುಮಾ.ಭೀ. ೦-೨೫). ನೆಟ್ಟು₁ : ೧. ಸಿವಾರಗಾವುಣ್ಡರ ಮಗ ಪೊನ್ನಯ್ಯನ ದಣ್ಣಗೆ ನೆಟ್ಟದ ಕಮ್ಬ (ಎಕ. VI, ಕಡೂರು. ೧೦-೨೩ ; 1126?). 'ಕಿತ್ತು₁' ಪರಾ. ನೆಡು : ೧. ಆತನ ತಮ್ಮ ರಾಯನು ಅಳಿಯ ಮಾದಯ್ಯನುವಿಾ ಕಲ್ಲ ನೆಟ್ಟರ್ (ಎಕ. VIII, ಸೊರಬ. ೨೩೪-೧೨ ; ೯೯೯); ಹುಟ್ಟಿದ ವೀರ ನಟ್ಟ ಕಲ್ಲು ಮತ್ತೇತರ ಇಷ್ಟದಲ್ಲಿ ಒತ್ತಿದ ಲಿಂಗಮುದ್ರೆ ಇರಲಿಕೆ ಕಿತ್ತುಕೊಂಡವ ದ್ರೋಹಿ ಎಂಬರು (ಕೊನ್ನಸಂ. ೨೬೫-೧೫) ; ಜಂಬೂದ್ವೀಪದ ನಡುವೆ ನಿತಂಬದ ಮಣಿಕಾಂತಿ ನಿಮಿರೆ ದೆಸೆದೆಸೆಗೆ ದಿಶಾಸ್ತಂಬೇರಮಕ್ಕೆ ಬಿದಿ ನೆಟ್ಟಂಬಿನ [ಪಾಠಾಂ. ಬಿಸುದಿನದೆಂಬಿನ]ಪೊಂಗಂಭಮೆನಿಸಿ ಮಂದರಮೆಸೆಗುಂ (ಪಾರ್ಶ್ವಪು. ೧-೧೦೮) ; ಜಗದ ಜಾಣರು ಸೀಮೆಯಲಿ ಹಳವಿಗೆಯ ನೆಟ್ಟರು (ಕುಮಾ.ದ್ರೋ. ೫೦. ೨೬೫) ; ೬೦ ವರಹದ ಭೂಮಿಯಂನು ಕಲ್ಲು ನೆಟ್ಟು ಫಲಿಸಿಕೊಟ್ಟುದರಿಂದ (ಎಕ. VII, ಶಿವಮೊ. ೧೦೮-೨೦ ; 1566). ೨. ವರ್ಷದ ಯಾವ ಸಮಯದಲ್ಲಿಯೂ ಮೆಣಸಿನ ಗಿಡ ನೆಡಬಹುದು (ಅಡುಸಾ. ೧೨೮) ; ಒಂದು ದಿನ ಹಿತ್ತಿಲ ಕಡೆ ಒಂದು ತೆಂಗಿನ ಸಸಿಯನ್ನು ನೆಡುವುದಕ್ಕಾಗಿ ಗುದ್ದಲಿಯಿಂದ ಅಗೆಯುತ್ತಿದ್ದೆ (ಪ್ರಕಾಪ. ೪೮). ೩. ನಗುತಲಿಱಿದುಕೊಂಡರೆ ಅಲಗು ನೆಡದಿಹುದೆ (ಬಸವ. ೬೬೧) ; ಅನ್ಯವಿಮಲಾಂಭೋಜಾತಪತ್ರಾಕ್ಷಿ ಮಾಬ್ಬುರು ಬಿಬ್ಬೋಕದಲಂಪಿನಿಂವು ಮನಮಂ ತಾಂ ನೆಟ್ಟುದೋ(ಉದ್ಭಟ.೧೧-೨೪); ಇಂತಂಗಾಲ ನೆಟ್ಟು ಕಟ್ಟುಗಿಯಲಾ ನೋವಿನಿಂ ನಡೆಯುಡುಗುತಂದು ನೊಂದು . . . ಈ ಬಲ್ದಸಿಯಂ ತೆಗೆದಪೆನೆಂದೊಡೆ (ಉದ್ಭಟ. ೧೧-೧೦೩ ವ) ; ಬಿರಿಯೆ ಬಲುವಜ್ರಾಂಗಿ ಹಾಯ್ದುವು ಗಜಸಹಿತಲುಬ್ಬೇಸಿ ನೆಲದಲಿ ಶರಳು ನೆಟ್ಟವು ಕರ್ಣ ನೆನೆದನು ರುಧಿರಧಾರೆಯಲಿ (ಕುಮಾ.ಕ. ೧೧-೨೯) ; ಇಟ್ಟಡೆ ಸೆಲ್ಲೆಹ ಕಂಗಲ ಜೋಡನು ತಟ್ಟುರ್ಚಿ ಮೆಯ್ಯನುಚ್ಚಳಿಸಿ ನೆ[ಪಾಠಾಂ. ನ]ಟ್ಟಹುದವನಿಯನೆನೆ ರಾಮನೀಡಿನ ಘಟ್ಟವಾಳಿಕೆಯನೇಸೆಂಬೆ (ಕುರಾಸಾಂ.೧೩-೦೧೭). ೪. ಅಷ್ಟಭೋಗಂಗಳು ಲಿಂಗದಲ್ಲಿ ಮನಮುಟ್ಟ ನೆ[ಪಾಠಾಂ. ನ]ಟ್ಟರಲು ಅದೇ ಅರ್ಪಿತ ಅಂಗಲಿಂಗಾರ್ಪಿತವಾಗಿ (ಅರವ. ೨೩-೬೨) ; ನೆಟ್ಟ ನೇಹದಲವಳು ನುಡಿಗೊಡಬಟ್ಟಳ್ಳೆ (ಕೊರರಾ. ೨-೧-೩೭) ; ಪರರಾಯರ ನಿಯೋಗಿಗಳಿಗೆ ಭಯಾನಕ ರಸವು ನೆಡುವಂತೆ (ಸಾಗಂಧಿ. ೬-೧೭).

ನಟ್ಟ ಕಂಭ=ಸ್ಥಿರವಾಗಿ ನಿಲ್ಲಿಸಿದ ಸ್ತಂಭ: ಮಹಾದ್ರುಮಂಗಳಂ ತರಿಸಿ ನಡಿಸಿ ನಟ್ಟ ಕಂಭಂಗಳ ಮೇಗೆ ಸಾರದಾರುಗಳನೆಡೆಗಿಱಿದಿರೆ ಪಾಸಿ ಪಸಂಸಿ (ಆದಿಪು. ೧೩-೫೨ವ) ; ನಟ್ಟ ಕಂಭದ ಹಾಗೆ ದಿಟ್ಟವೀರನು ಇರಬೇಕು (ಗಾದೆ). ನಟ್ಟ ಕಲ್ಲು,ನೆಟ್ಟ ಕಲ್ಲು=(ಗಡಿಯನ್ನು ಸೂಚಿಸಲು, ಶಾಸನವನ್ನು ಕೆತ್ತಲು ಅಥವಾ ಸ್ಮಾರಕಕ್ಕಾಗಲಿ) ನೆಟ್ಟಿರುವ ಕಲ್ಲು : ಸ್ಥಾಪಿಸಿರುವ ಕಲ್ಲು : ಪ್ರಥಮಂ ದುಗ್ಗನ್ಕೆಱೆ ಮೂಡ್ಯಕಡೆ ಗೋಡೆವಿ ಸಂಗ ಪೋಯರಾ ಕೆಱೆಯಿನ್ತೆಂಕ್ಕೆ ನಟ್ಟ ಕಲ್ಲೆ ಪೆರ್ಗ್ಗಟಬಿಯಿನ್ ಬಡಗ್ಗೆ ನಟ್ಟ ಕಲ್ಲೆ (ಎಕ. X (8), ಚಿಕ್ಕಬ. ೬೬-೦೭ ; ೮೬೦) ; ಸರ್ವರಱಿಯಲು ನಟ್ಟಕಲ್ಲೆ ನಿಸದಿಳೆಯೊಳಗೆ ಸುಳಿವ ಶಾಸನವೆನಿಸಿ ಪೇಳ್ವನೀ ಸತ್ಕೃತಿಯನು (ಸಿದ್ಧರಾ. ೦-೫) ; ಸಿಂಹಪೋತನ ಮಗಳು . . . ಮಹಾದೇವಿಯ ಆಳು ಬಸಮುನ್ ಎಂಬುವನು ನೆಟ್ಟ ಕಲ್ಲಿಗೆ ಕೆಲವು ದಾನಗಳನ್ನು ಮಾಡಿದ್ದರೆಂದು ತಿಳಿದು ಬರುತ್ತದೆ (ನೊಳಂಬ. ೨೭). ನಟ್ಟಕ್ಷಿ, ನೆಟ್ಟಕ್ಷಿ = ಚಲಿಸದೆ ಇರುವ ಕಣ್ಣು ; ಒಂದೇ ಕಡೆಗೆ ಸ್ಥಿರವಾಗಿ ದೃಷ್ಟಿಯಿಟ್ಟ ಕಣ್ಣು ; ಅಚಲವಾದ ನೋಟ : ಆತನಿಗೆ ನಟ್ಟಕ್ಷಿಯಾಗಿ (ಚಿಟ್ಟಿ.ಅ. ೦೩೯-೦೨) ; ಚೆಲುವ ಕೃಷ್ಣನ ಮೂರ್ತಿಯನು ಭೂವಳಯದಂಗನೆಯರು ನಿರೀಕ್ಷಿಸಿ ಬಲಿದು ನಟ್ಟಕ್ಷಿಗಳ ತೆಗೆಯದೆ ಯೋಗಿಗಳವೋಲು ಸಲೆ ಸುಖಾಬ್ಧಿಯಲಾಳುವರು (ನಿಭಾಗ. ೧೧-೩೬-೩). ನಟ್ಟಗಣ್ಣು, ನೆಟ್ಟಗಣ್ಣು = ನಟ್ಟಕ್ಷಿ : ಸ್ವಾಮಿಗೆ ಜರುಗುವ ವಿಶೇಷಪೂಜೆಗಳನ್ನು ಶಾಂತಲಾದೇವಿ ನಿಂತೇ ನಟ್ಟಗಣ್ಣಿನಿಂದ ನೋಡಿದಳು (ಸವತಿ. ೨೮೮); ನೆಟ್ಟಗಣ್ಣಿನಿಂದ ನೋಡಬೇಡ (ರೂಢಿ). ನಟ್ಟಚ್ಚ = ನಟ್ಟಕ್ಷಿ : ನಟ್ಟಚ್ಚಿಯಿಂದೆ ನಿರ್ವ್ಯಾಣಮಿಾಕ್ಷಿಸುತ್ತುಂ (ಸಂಸಪ. ೨೨-೨). ನಟ್ಟ ದಿಟ್ಟ, ನೆಟ್ಟ ದಿಟ್ಟ = ನಟ್ಟಕ್ಷಿ : ತಾಂ ಪಿಂಗದೆ ನಟ್ಟ ದಿಟ್ಟಿಯನವಂ ಕಿಟಲೆಂದನುಗೆಯ್ದು ತೂಗಿದಂ (ಆದಿಪು. ೧೨-೧೩) ; ಬಗೆ ಬೆಚ್ಚು ನಟ್ಟ ದಿಟ್ಟಿಯನುಗಿಯಲ್ಕಂ ಬಗೆಯತಾಱದೆ (ಶಾಂತಿಪು. ೫-೫) ; ಕಿವಿಯಂ ಕತ್ತರಿಸಿ ಶರೀರವಂ ಸಂಕೋಚಿಸಿ ನಟ್ಟ ದಿಟ್ಟ[ಪಾಠಾಂ. ದಿಟ]ಗಳ್ವರಸು ನಿನ್ನನೆ ನೋಡುತ್ತುಮಿರ್ಕುಂ (ಪಂಚತಂ. ೧೬೬-೦೨) ; ಮಿಡುಕದೆ ಮೆಯ್ಯಿಕ್ಕದೆ ವನಿತಾರತ್ನಮಂ ವಜ್ರಲೇಪದೊಳ್ಪತ್ತಿದಂತೆ ನಟ್ಟ ದಿಟ್ಟಿಯಂ ತೆಗೆಯಲಾಱದೆ ನೋಡಿ ನೋಡಿ (ಧರ್ಮಾಮೃ. ೩-೦೩೮ ಅಡಿಟಿಪ್ಪ); ಕದಪಿನಲಿ ನೆಲಸಿದ ಕೈ ನೆಟ್ಟ ದಿಟ್ಟಿಯ ಕಾಮುಕರಲಸದೀಕ್ಷಿಸಿದರಂದವಳ (ಕಂಪವಿ. ೯-೯೪). ನಟ್ಟ ದೃಷ್ಟಿ=ನಟ್ಟಕ್ಷಿ : ನೋಡುತಿರ್ದನಾ ನಟ್ಟದೃಷ್ಟಿಯೊಳೊಗುವ ಜಲದಲಿ ರೋಮಪುಳಕದಲಿ (ಕುಮಾ.ಅ. ೬-೬೮). ನಟ್ಟ ಬಡಪ = ನಿರಂತರವಾಗಿ ಸುರಿಯುವ ತುಂಳೆ ; ಜಡಿಮಳೆ : ತುಂತುರ್ ತುಷಾರವಿಡುಕುಂಬನಿ ತಂದಲೊನ್ನೇನೆ ನಟ್ಟ ಬಡಪಮೆನಲ್ ಸುರಿದುವು ಬಿಡದೆ ಮಬ್ಬಿಗಳಿರುಳುಂ ಪಗಲುಂ (ಜಗವಿ. ೪-೩೨). ನಟ್ಟವನಿ, ನೆಟ್ಟವನಿ = ನಟ್ಟಬಡಪ: ಅಡಸರಿ ಬಲ್ಸರಿಯುಱೆವಳೆಯಿಡುಕುಬನಟ್ಟವನಿ ತುಷಾರಂ . . . ತುಂತುರ್ ಬಿಡದಡಿಯಿಡಗೊಡದ ಕಱೆದುವಿರುಳುಂ ಪಗಲುಂ(ತ್ರಿಶುವಿ. ೮-೩೯); ಲೋಪವಿಲ್ಲದುಚಿತಾಕ್ಷರಾಗಮಕ್ಕೆ—ನಟ್ಟೆವಾನ್, ನಟ್ಟೆವನೆ, ನಟ್ಟೆಗೆಸೆಂಬು, ನಟ್ಟೆವನಿ. ಇಲ್ಲಿ ಎಕಾರಮುಚಿತವರ್ಣಾಗಮಂ (ಶಮದ. ೦೬೭ ಪ್ರಯೋ). ನಟ್ಟಾಲಿ, ನೆಟ್ಟಾಲಿ = ನೋಟ ಬದಲಾಯಿಸದ ಕಣ್ಣುಗುಡ್ಡೆ ; ನೇರವಾಗಿ ನೋಡುವ ಕಣ್ಣು ; ನಿಡುನೋಟದ ದೃಷ್ಟಿ : ಪದೆದಾಂ ನೋಡಿದೆನಾತನಿರ್ದ ದೆಸೆಯಂ ನಟ್ಟಾಲಿ ಬೀಳ್ವನ್ನೆಗಂ

(ಕಾದಂಪೂ. ೭೮೯); ಬಹುಕದನವನನೊರ್ಡುರ್ಲೆಂದು ನಟ್ಟಾಲಿಗೊಂಡು ಮುಟ್ಟಿವರ್ಪನಂ ಕಂಡು (ಜಗವಿ. ೯-೩೯ ವ); ನೋಡಿದಳಬ್ಜಾನನೆ ನಿನ್ನ ಚಿತ್ರಪಟವಂ ನಟ್ಟಾಲಿ ಬೀಳ್ಳನ್ನೆಗಂ (ರಶಕು. ೦೨-೩೩); ಮಲೆಯಂ ಸಾರ್ದೋಡಿ ಬಾಲಂ ತೊನೆಯೆ ಕುಸಿದ ಗೋಣೆತ್ತಿ ನಟ್ಟಾಲಿಯಿಂ ಹೆವ್ವಳಿ ಸುತ್ತಂ ನೋಡಿ (ಶ್ರೀಪುವಿ. ೨೭-೭೦); ಬಟ್ಟಲೊಳ್ವಿಡಿದ ಮಧುರಸವನಾ ವೇಕ್ಷಿಯಿಂ ನಟ್ಟಾಲಿಯಿಂದೀಕ್ಷಿಸಲ್ (ಜಬಪು. ೧೦-೬೨); ಕಟ್ಟದಿರೊಳೊಂದು ಚಟಕ ನೀಡದೋಳ್ದುರ್ಗಿ ಕಿಱುವುಱುಯಂ ತುಟುಂಕಿತ್ತು . . . ಲಲ್ಲೆ ಗೆಯ್ವುದಂ ನಟ್ಟಾಲಿಯೊಳಭೀಕ್ಷಿಸಿ ಮಕ್ಕಳ ಬಯಕೆಯಂ ಜಾನಕಿ ಸಖಿ ಗಿಂತೆಂದಳ್ (ರಾಮಾಶ್ವ. ೧೮-೩); ನೆತ್ತಿ ಮುಸುಕಿನ ಕೈಯ ಗಲ್ಲದ ಕುತ್ತದಲೆ ನೆಟ್ಟಾಲಿಗಳ ಚಲಚಿತ್ತರಿದ್ದುದು ಸಕಲ ನಾಯಕವಾಡಿ ದುಗುಡದಲಿ (ಕುಮಾರವ್ಯಾ. ೯-೯). ನಟ್ಟು ನಿಲ್ = ಸ್ಥಿರವಾಗಿ ನಿಲ್ಲು: ಅಚಲವಾಗಿ ನಿಲ್ಲು: ಆವೆಡೆಯೊಳಂ ವಿಕ್ರಮಂ ಕ್ರಮಮೆನಿಸಿದುದಱಿಂ ಪರಾಕ್ರಮಧವಳ ನುಂ ಎಂತಪ್ಪ ಸಂಗ್ರಾಮದೊಳಂ ಪೋಗದೆ ನಟ್ಟು ನಿಲ್ಕುದಱಿಂ ಸಮರೈಕ ಮೇರುವುಂ (ಪಂಪಭಾ. ೧೯-೩೭ವ). ನಡೆ ದಿಟ್ಟಿಸು = ನೆಟ್ಟನೋಟದಿಂದ ನೋಡು; ದುರುಗುಟ್ಟಿಕೊಂಡು ನೋಡು: ಪರಸ್ಪರರನ್ನು ನುಂಗಿ ಕೊಳ್ಳಲೆಂಬಂತೆ ಕೆಂಡಗಣ್ಣಾಲಿಂದಿವರಂ ನಡೆ ದಿಟ್ಟಿಸುತ್ತಿರುವುದು ಇವರುಗಳ್ಳ ಪೂರ್ವಪರಿಚಯವನ್ನು ಬಿಟ್ಟಾಡಿ ಕುಡುಕ್ತಿದೆ (ಮಂತ್ರಕ. ೨೨-೬). ನೆಟ್ಟಗಣ್ಣು ಬೀಳು = ಗುಡ್ಡೆ ಅಲುಗಾಡದಿರು; ಸಾವು ಸಮೀಪಿಸು.

[ದೇ.॥ ತಮಿ. ನಟು; ಮಲ. ನಡು; ಕೊಡ. ನಡಿ]

**ನಡು₁ (ನಾ).** ೧. ಮಧ್ಯಭಾಗ; ಕೇಂದ್ರ: "ನಡು–ಸಂಸ್ಥಾಪನೇ, ಮಧ್ಯೇ ಚ" (ಶಮದಾ); "ಮಧ್ಯಮಿಯಾಯಮೆನೆ ಮಧ್ಯಮೆನೆ ನಡುವಕ್ಕು" (ಮಂಗರಾ. ೦೩೩-೩೮); ಪೂವಿನ ಓವ್ವರಗೆ[ಯ ನಾಲ್ಕುದೆಸೆಯ ಪೊಲೆಮೇರೆಯಂ ನ]ಡು ಸರಿಯಾಗಿ ನಡದು[೦]ಕೊಟ್ಟರ್ (ಸೌಇಇ. XI-i, ೯-೨೪ ; 862); ಕಡೆವಿಡಿದು ಬಳಸಿ ನೀರಿರೆ ನಡು ಬತ್ತಿದ ಕೆಱೆಯನಿಂತು ಕಂಡುದಱಿಂದಂ ನಡು ನಾಡೊಳಱಂ ನೆಲಸದೆ ಕಡೆಯೊಳ್ ನೆರೆಗೊಳ್ಗುಂ (ಆದಿಪು. ೦೩-೪೦); ಎತ್ತೆತ್ತಂ ನೋಟ್ಟಡೆಂತುಂ ಕಡೆ ನಡು ಮೊದಲೆಂದೀ ವಿಭೇದಂಗಳು ತೋಱು ತ್ತಿಲ್ಲಂತೆಂದೆನಿಪ್ಪಾಗಸದೊಳ್ (ಶಾಂತಿಪು. ೧-೩೦); ಕರಗುಸದ ನಡು ಬಡ ವಾದರೆಯುಃ ಕೊಱೆದಿಕ್ಕದೇ ತರುವ (ಸಂಭಶ. ೨೦-೨೯); ತುದಿ ಮೊದಲು ನಡುವೆಂಬ ಲಯುದಭ್ಯುದಯವೆಂಬ ವಿಕಾರಗಳು ಸೋಂಕದ ಸನಾತನಗಾಯ್ತು ಲೀಲೆ ಮನುಷ್ಯರೂಪಿನಲಿ (ತೊರರಾ. ೦-೮-೬೨). ೨. ಶರೀರದ ಮಧ್ಯ ಭಾಗ; ಸೊಂಟ; ಟೊಂಕ: "ಅವಲಗ್ನಂ, (ವಿ)ಲಗ್ನಂ, ಮಧ್ಯಂ, ಮಧ್ಯಮಂ – ಈ ೪ ನಡು" (ಹಲಾಯು. ೦೫-೩೬೩); ಬಡಿ ಕೊರ್ ಕಟ್ಟಱಿ ಪುಱಿ ಕಡಿ ನಡುವಂ ಕೊಱೆ . . . ನುಂಗೆಂದು ಮುಸುಱೆ ನಾರಕರಾಗಳ್ (ಮಲ್ಲಾ. ೧೫೭-೧೦); ಆಕೆಯ ನಡುವಿನ ಬಡತನವುಂ ಪಗೆವರ ಸಿರಿಯು ವೊಡನೊಡನೆ ಕೆಟ್ಟುವು (ಪಂಪಭಾ. ೧-೧೪೧ ವ); ನಡುವುಡಿವನ್ನಮೇಱೆ ಬರಿಯಲ್ಪುಡಿವನ್ನಗಮೊತ್ತಿ . . . ಉರವನಿರ್ಬಗಿಯಾಗಿರೆ ಪೋಟ್ಟು (ಗದಾಯು. ೫-೪); ತಡೆಯದೆ ಮಗಳೆಂದೆಲಿಯನ ನಡುವಂ ತಟ್ಟಿಸಿಕೊಂಡು ಹಿತ್ತಲ ದೆಸೆಯೊಳ್ ಬಿಡದೋಡುವಾಕೆ ಕಾಣದೆ ಕೆಡೆದಳ್ಲಣದಿನಾಗಳೆಂಜಲ ಕುಱಿಯೊಳ್ (ಧರ್ಮಾಮೃ. ೩-೪೪); ಸಿಂಗದ ನಡು ಮುಱಿಯಲಾ ಸಿಂಗ ವೇನು ಬಾತೆ (ಬಸವ. ೬೩೪); ಸಡಿಲೆ ಮುಡಿ ಬಳ್ಕೆ ನಡು ದಡದಡಿಸುತ್ತಿರೆ ತೊಡೆಗಳಲ್ಲಿ ನೂಪುರನಿನದಂ (ಕುಸುಮಾ. ೮-೯); ಕಾಲು ಖಂಡಿಸಿ ಬೀಳೆ ಕರುಳಿನ ಮಾಲೆಯೊಳು ತೊಡಕಿದುವು ಹಣದದ ಬಾಲೆಯುದದೊಳುಡಿಯ ತೊಡೆ ನಡು ಮುಱಿಯ ಕಟ ಕೆದಱೆ (ಕುಮಾರವ್ಯಾ. ೯-೩೦); ದೈಗಿನ ಕೆಂಬಿಸಿಲ ಬೆಳಗಿಂಗೆ ದೊರೆವರ್ಪ ಪೀತಾಂಬರದುಡೆ ನಡುವಿನೊಳ್. ವಿರಾಜಿಸೆ (ರಾಮಾಶ್ವ. ೭೯-೨೦).

ನಡುಕಲ = ಮಧ್ಯದ; ನಡುವೆಯ: ನಡುಕಲ ಹೆಂಡತಿಯಾದ ಕೈಕೆಯ ಹೊಟ್ಟೆಯಲ್ಲಿ ಭರತ ಹುಟ್ಟಿದನು (ನೀತಿಶಂ. I, ೧೩); ನಾನು ಇನ್ನೂ ಮಗು ವಾಗಿದ್ದಾಗ, ನನ್ನ ನಡುಕಲ ಅಣ್ಣ ಸಿವಿಲಿಯನ್ ಆಗಿ ನಮ್ಮ ದೇಶಕ್ಕೆ ಹಿಂತಿರುಗಿ ಬಂದಿದ್ದನು (ನಿಬಂಧ. II, ೩೪); ಹಿರಿಯವನು ಒಂಬತ್ತು, ನಡು ಕಲವನು ಆರು, ಕಿರಿಯವನು ಎರಡು ಆನೆಗಳನ್ನು ಹಂಚಿಕೊಂಡರು (ಕಸಾಕ. ೧-೧೨೯). ನಡುವಣ = ಮಧ್ಯಭಾಗಕ್ಕೆ ಸಂಬಂಧಿಸಿದ; ಮಧ್ಯ ದಲ್ಲಿರುವ: "ಮಧ್ಯಮಂ, ಮಧ್ಯಮಿಯಾಯಂ, ಮಧ್ಯಂದಿನಂ – ಈ ೩ ನಡು ವಣದು" (ಹಲಾಯು. ೧೨೭-೯೦); ಸದಭಿಸ್ಸುತಮಪ್ಪೋಂಕುಂದದ ನಡುವಣ ನಾಡೆ ನಾಡೆ ಕನ್ನಡದ ತಿ ುಳ್ (ಕವಿರಾ. ೧-೩೭); ಕೌರವರ್ ಕಡಲ ನಡುವಣ ಪರ್ವತದಂತಳ್ವಾಡೆ (ಪಂಪಭಾ. ೭-೧೫ ವ); ಎರಡುಂ ಕೆಲದೊಳು ಮಿ ರ್ವ ರು ಮ ರ ಸಿ ಯ ರಿ ರೆ ಸೊಗಯಿಸಿರ್ದನವನಿಪನೆರಡುಂ ಕರಿಣಿಗಳ ನ ಡು ವ ಣೆ ಡೆ ಯೊ ಳ್ ಕರೀಂದ್ರನೊಪ್ಪುವವೊಲ್ (ಶಾಂತಿಪು. ೧-೭೫); ಪೊಸವಂದರ ನಡುವಣ ಪೂವಿನಸಟ ಪಾಸಿನೊಳಿರ್ದಳ್ (ಕಾದಂಬ. ೨೨೩); ಕಡೆಯ ದಳಂಗಳೆ ವಜ್ರಂ ನಡುವಣ ಕರ್ಣಿಕೆಯೆ ಕೇವಣಂ (ಗದಾಯು. ೬-೪೩); ನಕ್ಷತ್ರಗಣಂಗಳ ನಡುವಣ ಚಂದ್ರಬಿಂಬದಂತಿರ್ದ ನಂಬಿಯಣ್ಣನಂ ಕಂಡು (ನಂಬಿರ. ೨-೪೪); ದಿಗ್ವಾಚಿಯು ಅಣ್ಗೆ . . . ನಡುವಣಂ, ಕಡೆಯಣಂ . . . 'ನಡು' ಎಂಬುದು ಶರೀರಮಧ್ಯವಂ ಕುಱಿತು ದಿಗ್ವಾಚಕವಲ್ತು, ಮಧ್ಯಮಂ ಕುಱಿತು ದಿಗ್ವಾಚಕಂ (ಶಮದ. ೧೧೦ ಪ್ರಯೋ); ಸುಳಿಯ ಬಹುದಂಬುಧಿಯ ನಡುವಣ ಸುಳಿಯೊಳಗೆ . . . ಕಾಣನು ಗೆಲುವ ಹದನನು ಮಗನೆ ಪದ್ಮವ್ಯೂಹದೊಡ್ಡಣೆಯು (ಕುಮಾರವ್ಯಾ. ೪-೩೭). ನಡುವಣಂ = ನಡುವೆ ಇರುವವನು; ಮಧ್ಯದವನು: ಪುದಿದಿ ಶ್ವೇತಾತಪತ್ರೋತ್ಕರದ ನಡುವಣಂ ವಜ್ರದಂತಂ ಸಮಂತೆತ್ತಿದ ಪಿಂಛಚ್ಛತ್ರಪುಂಡಂಗಳ ನಡುವೆಸೆವಂ ವಜ್ರಬಾಹುಕ್ಷಿತೀಶಂ (ಆದಿಪು. ೪-೨೫); ಮೇಗಣಂ, ಕೆಟಗಣಂ, ನಡುವಣಂ (ಶಮದ. ೧೧೦ ಪ್ರಯೋ). ನಡುವಣಕ್ಕರ = [ಛಂದ] ಅಂಶಗಣದ ಒಂದು ಪದ್ಯಜಾತಿಯ ಹೆಸರು; ಐದು ಬಗೆಯ ಅಕ್ಕರಗಳಲ್ಲಿ ಒಂದು,– ನಡುವಿನದಂ: ಜಳಜಸಂಭವಗಣಮಕ್ಕೆ ಮೊದಲೊಳೆ . . . ಕಾಮಬಾಣಾ ವಳಿಯ ಪಾಂಗೆಯ್ದೆ ಗಣಮಕ್ಕೆ ನಡುವಣಕ್ಕರಕೆ ಸಖೀ (ಛಂದೋಂಬು. ೫-೨೪೪); ನಾಗವರ್ಮನು ೫ ಅಕ್ಕರಗಳನ್ನು ಹೇಳಿರುವನು:– ಪಿರಿಯಕ್ಕರ, ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ, ಕಿರಿಯಕ್ಕರ (ಕೈಪಿಡಿ. ೧೨೫); ನಡುವಣಕ್ಕರದ ಗಣಯೋಜನೆ . . . ಮೊದಲು ಒಂದು ಬ್ರಹ್ಮ, ನಡುವೆ ಮೂರು ವಿಷ್ಣು, ಕೊನೆಯಲ್ಲಿ ಒಂದು ರುದ್ರಗಣ (ಛಂದೋವಿ. ೧೩೯). ನಡುವಲ, ನಡುವಳ = ಮಧ್ಯದ; ನಡುಕಲ: ನಡುವಲವನು ಮಾರಯ್ಯ ಮನೆಯಲ್ಲಿದ್ದಾನೆ (ರಾಜಕಂ. ೮೩); ಹಿರಿಯ ಮಗನ ಕಾಲ ಮುಱಿದು ನಡುವಳ ಮಗನ ಕಣ್ಣು ಮುಱಿದು ಕಿಱಿಯ ಮಗನ ಬಾಯ ಮುಚ್ಚಿ (ಅಱವಮ. ೧೪೭-೫೫೯).

[ದೇ.॥ ತಮಿ. ನಟು; ಮಲ. ಕೊಡ. ತುಳು. ನಡು; ತೆಲು. ನಡು, ನಡಿ; ಕೊಲಾ. ನಡುಮ್; ನಾಯ್ಕಿ. ನಜುಮ್; ಪರ್ಜಿ. ನಜುಬ್]

△ ನಡುಂಗು 'ನಡುಗು₁' ನೋ.

**ನಡುಕ (ನಾ).** ೧. (ಚಳಿ, ಭಯ, ಜ್ವರ ಮುಂತಾದ ಕಾರಣಗಳಿಂದ) ಕಂಪಿಸುವಿಕೆ; ಅದಿರುವಿಕೆ; ನಡುಗುವಿಕೆ; ಕಂಪನ: "ವೇಪಥುಃ, ಕಂಪಃ – ಈ ೨ ನಡುಕಂ" (ಹಲಾಯು. ೯೮-೪೪೩); "ವೇಪಥು ಪಂಪಮೆನೆ ನಡುಕವಪ್ಪುಂ" (ಮಂಗರಾ. ೦೦೩-೨); ಆಗಳಾದಿತ್ಯನಾಕೆಯ ಮನದ ಶಂಕೆಯುಮಂ ನಡುಗುವ ಮೆಯ್ಯ ನಡುಕಮುಮಂ ಕಿಡೆ ನುಡಿದಿಂತೆಂದು (ಪಂಪಭಾ. ೧-೯೨ ವ); ಶೀತಂ ನಡುಕಂ ಬೆಮರುದ್ಭೂತಂ ತಲೆಬೇನೆ . . . ವಾತಜ್ವರಚೇಷ್ಟೆ ನೋಯೆ ಕಿವಿದೋಳುಗೆಗಳ್ (ಕಲ್ಯಾಕಾ. ೩-೭); ಕಾರೊಳ್ ನಡುಕಂ ಮೆಯ್ಯೆರ್ಚೆ ಗುಂಟಲ್ ಕುಸಿದು ಕಿವಿಯೆಬ್ಬಲ್ದಂದು ನಿಂದಿರ್ದುದೋ ರೊಂದೆಡೆಯೊಳ್ ತಾಱಲ್ಗಕೊತ್ತಂಬಿಡಿದು ಮೃಗಮ್ಮಗೀವ್ವಂದಮೋರಂದ

ದಿಂದಂ (ಶಂದ್ರಪು. ೮-೪೭) ; ಭಾವದೊಳ್ ಕ ಪ್ರತ್ಯಯಮುಂಟು–ಉಡುಕಂ, ನಡುಕಂ – ಎಂಬಂತೆ (ಶಮಡ. ೨೦೩ ಪ್ರಯೋ) ; ಶಿರದ ಗಂಗೆಯ ಶೃಂಖ ತುಹಿನಾಕರನನುಂಬರಕಟ್ಟು ಹಣೆಗಣ್ಣುರಿಯನೆಬ್ಬಿಸಿ ತನುವನೊಡ್ಡಿದನಭವ ನಡುಕದಲಿ (ತೊರಅ. ೩-೨-೩) ; ನಡುಕಂ ಕೈಮಿಾಱೆ ದಂತಚ್ಛದಮೊಡೆ ದುಹುಹುಧ್ವಾನಮುಂ ಪೊಣ್ಮೆ . . . ಪಾಂಥತೆರ್ಣಡೆ ತೋಳ್ಗಳ್ಕೂಡೆ ಜಾನು ಪ್ರಹಿತಶಿರದೇನಿರ್ದರೋ ಶೀತಭೀತರ್ (ರಾಜಶೇ. ೯-೨೨). ೨. ಅಂಜಿಕೆ; ಭಯ ತಲ್ಲಣ ; ಭೀತಿ : ಮೆಲ್ಲಿರ್ದೆಯ ನಡುಕಮಂ ಮಾಣ ಸಲ್ಸಂಭ್ರುವಿಸುವಂತಿರಾ ಕಂಪಿಪವಯವಂಗಳುಂ (ವರ್ಧಪು. ೩-೧೨ ವ) ; ತುರಗಾಕಾರದ ಶೈಲಮನಿರದರ್ದೇಱಿದೊಡೆ ಬೆಟ್ಟ ನಡುಕದಿನಾಗಳ್ ತುರಗಾಶ್ರಮನುಚ್ಚೈಶ್ರವತುರಗೋಪಮನಿತ್ತು [ತ್ರ] ದೊಂದು ತುರಗಮ ನಿತ್ತಂ (ಬಂಹರಿ. ೮-೩೧) ; ಸೌಂದರನುಂ ತುಂಬುರನುಂ ಬೆಗಡುಗೊಂಡು ಬೆಬ್ಬಳೆವೋಗಿ ನಡುಕದ ಮಳೆ ಕಱೆದು . . . ಕೌತುಕರಸದೊಳವಗಾಹವಿರ್ದು (ನಂಚಿರ. ೦೮-೪೩) ; ಶ್ರೀವಂತರ ಮನೆ ಅಂದರೇನೇ ನನಗೆ ನಡುಕ ಬರುತ್ತದೆ (ಪಕ. ೪) ; ಈ ಮಾದರಿಯ ಬೈಗುಳಗಳನ್ನು ಎಂದೂ ಕೇಳದ ಜ್ಞಾನಾಂಬೆಗೆ ನಡುಕವುಂಟಾಗಿ ಜ್ವರವೂ ಬಂದು ಗರ್ಭಕ್ಕೆ ಧಕ್ಕೆ ಬರುವಂತಾಗಿ ಬಿಟ್ಟಿತು (ಪ್ರಜಾಪ. ೪೧). ೩. (ಅಲಂ) ಚಂಚಲವಾದುದು ; ಸ್ಥಿರವಲ್ಲದುದು : ಪೊಲಸಿನಂತಕುಚಿಯಪ್ಪ ವಾತದಂತೆ ನಡುಕಮಪ್ಪ . . . ಕೊಡದ ನೀರಂತೆ ಪೆರ್ಜಿಸಲರಿದಪ್ಪ ಸಂಸಾರಮಂ ನಂಬಿ ದರ್ಶನಮುಮಂ ವ್ರತಮುಮಂ ಕೆಡಿಸು ವುದೆಗ್ಗಿಕೆ (ಧರ್ಮಾಮೃ. ೩-೧೮೭). ೨, ೩ : ನಡುಕಮುಮಾಱಿದಿಯುಂ ಚೂತ ಮಂಜರಿಯೊಳ್ (ಎಇ. XIII, ೩೩೨-೪೩ ; ೪೭೦).

[ < ನಡುಗು$_1$./ತಮಿ. ನಟುಕ್ಕ ]

**ನಡುಕಂಗಿಡು** (ಕ್ರಿ). ಕಂಪನ ನಿಲ್ಲು ; ನಡುಗುವಿಕೆ ಇಲ್ಲದಾಗು : ಪದುಳಸ ದುಗವೆಬ್ಬಱದ ಕಣ್ಮಲರ್ . . . ನಡುಕಂಗಿಡದೊರು ಗುಂದೆಯೆಟದ ಕರಘಾತಮೊಪ್ಪೆ ಸುಸಿಲಿಂ ತಣಿದೊಯ್ಯನೆ ಜಾರೆ ಜಾಱಿದರ್ (ಲೀಲಾವ. ೩-೦೫). [ ನಡುಕ + ಕಿಡು ( < ಕೆಡು$_1$ ) ]

**ನಡುಕಂಗೊಳ್** (ಕ್ರಿ). ೧. ಕಂಪಿಸು ; ನಡಗು. ೨. ಭಯವನ್ನು ಹೊಂದು; ಹೆದರು : "ಸಡಿದನೆಂದುಂ, ನಡುಕಂಗೊಂಡನೆಂದುಂ . . . ಕೆಮರ್ತನೆಂದುಂ–ಈ ೮ ಭಯಂಗೊಂಡಮ" (ಶಶಾ. ೫೬-೨೨೫) ; ಇಂದ್ರಂ ವಹ್ನಿ ಧರ್ಮಂ ನಿರುತಿ ಜಲಧಿಪಂ ವಾಯು ವಿತ್ತೇಶನೀಶಂ ನಡುಕಂಗೊಳ್ವಂ ಸುರುಳ್ವಂ ಸುಗಿವಸಗಿವನುಳ್ಳಳ್ಕುವಂ ಬಳ್ಕುವ ೯ ಪಾವಡರ್ದೆಂತಿರ್ಪಂ ಬೆಮರ್ವಂ ಜಯಿಪೊಡೆದ ರವಕ್ಕದ್ಭುತಂ ಕಂಸಚಾಪಂ (ಜಗವಿ. ೬-೩೦).

[ ನಡುಕ + ಕೊಳ್$_1$ ]

**ನಡುಕಂಬೆರು**, ನಡುಕವೆರು (ಕ್ರಿ). ೧. ನಡುಕವನ್ನು ಹೊಂದು; ಕಂಪಿಸು : ನಡುಗು. ೨. ಭೀತಿಯನ್ನು ಹೊಂದು ; ಹೆದರು ; ಭಯಗೊಳ್ಳು : ನಡುಕಂಬೆತ್ತಿರ್ಪಳ ಸೋಂಕುವೆಯುಡಿಗಡಿಗಂ (ಶಾಕುಂತ. ೦೦-೨೪). **ನಡುಕವೆರು** :೧. ನಡುಕವೆತ್ತಿದ ಅವಳ ಕೈಬೆರಳುಗಳು . . . ಬಳೆಗಳನ್ನು ತೆಗೆಯಲೊಲ್ಲದೆ ಹೋದುವು (ಶಾರವೀ. ೩).

[ ನಡುಕ + ಪೆರು$_1$ ( < ಪೆಱು$_1$ ) ]

**ನಡುಕಟ್ಟು$_1$** 'ನಡುಗಟ್ಟು$_1$' ನೋ.

**ನಡುಕಟ್ಟು$_2$** 'ನಡುಗಟ್ಟು$_2$' ನೋ.

**ನಡುಕಡಲು** 'ನಡುಗಡಲ್' ನೋ.

**ನಡುಕವೆರು** 'ನಡುಕಂಬೆರು' ನೋ.

**ನಡುಕಾನನ** (ನಾ). ಅರಣ್ಯದ ಮಧ್ಯಭಾಗ ; ನಟ್ಟಡವಿ : ನಡೆದರು ಪುಣ್ಯದ ನಿಜಪುತ್ರಿಯಂತೆ . . ನಡುಕಾನನವ ಹೊಕ್ಕರು ಉಗ್ರುದಡವಿಯ ಮೃಡ ಬಲ್ಲನವರ ದುಃಖಗಳ (ಹರಿಶಾಂ. ೩-೩೮). [ ನಡು$_2$ + ಕಾನನ ]

**ನಡುಕೇರಿ** 'ನಡುಗೇರಿ' ನೋ.

**ನಡುಕೋಣೆ** (ನಾ). ಮನೆಯ ನಡುವಿನಲ್ಲಿರುವ ಕೋಣೆ : ನಡುಮನೆ : ನರ್ಸಿಗೆ ಹೊರಗಿನಿಂದ ಉತ್ತರ ಬಾರದಿರಲು, ಅವಳಾಗಿಯೇ ನಡುಕೋಣೆಗೆ ಬಂದು ನೋಡಿದಳು (ಒಡ್ಡಿಉ. ೪೯). [ ನಡು$_2$ + ಕೋಣೆ$_2$ ( < ಕೋಣ್ ) ]

**ನಡುಕೋಲ್** 'ನಡುಗೋಲ್' ನೋ.

**ನಡುಗಂತಿ** (ನಾ). ಎಳಗಂದಿಯಾಗಿರುವ ಸ್ಥಿತಿಯನ್ನು ದಾಟಿದ ಹಸು ; ಕರುವಿನ ಮಧ್ಯಕಾಲದಲ್ಲಿರುವ ಹಸು : ನಡುಗಂತಿಯಾದ ಹಸಿಗೆಯ ಹಸುವಿನ ಮೊಸರು ಕಡೆದ ಹೊಸ ಬೆಣ್ಣೆಯಂ ಸೋದಿಸಿಯೊಲೆಯೊಳಿತ್ತಿ... ತುಪ್ಪಮಂ ಹಸವಾಳ್ಳುದು (ಸೂಪಶಾ. ೨-೧೭). 'ಎಳೆಗಂತಿ' ಪರಾ.

[ ನಡು$_2$ + ಕಂತಿ$_1$ ( < ಕಂದಿ$_1$ ) ]

**ನಡುಗಂಬ** 'ನಡುಗಂಭ' ನೋ.

**ನಡುಗಂಭ**, ನಡುಗಂಬ (ನಾ). ಮಧ್ಯಭಾಗದಲ್ಲಿರುವ ಕಂಭ,–ಸ್ತಂಭ : ಅವಳ ವಿಪರೀತವೇಷಂ ತನಗೆ ರೋಷಮಾನೀಯೆ ಸಾಯೆ ಸದೆಬಡಿದು ಮನೆಯ ನಡುಗಂಭದೊಳಡಸಿ ಕಟ್ಟಿ ಕಳ್ಳಸೋರ್ಕಿನೊಳಮವಳ ಪೊರ್ಕುಳ ಯೊಳಂ ಬಟಲ್ಲು ನಿದ್ರಿತನಪ್ಪುದುಂ (ಶಂಚತಂ. ೭೪-೨೦). **ನಡುಗಂಬ** : ಸುತ್ತುಮೆಟ್ಟಲು ಹಂತದ ನಡುಗಂಬ (Newel. ಇಂಕನ).

[ ನಡು$_2$ + ಕಂಭ ]

**ನಡುಗಟ್ಟು$_1$**, ನಡುಕಟ್ಟು$_1$ (ಕ್ರಿ). ೧. ಸೊಂಟಕ್ಕೆ ಬಟ್ಟೆ ಮುಂತಾದು ವನ್ನು ಸುತ್ತು,–ಕಟ್ಟು : ಎಲೆ ಮರುಳೆ, ನಡುಗಟ್ಟಿ ವೀರಮುಂಡಿಯನಿಕ್ಕಿ ಬಲಗೆಯ್ಯಿನೆಳದು ಕಿವಿಗಾನಿಸುವೆ ಸರಳಂ ! (ಗೀವಿಂ. ೨೮-೦೭). ೨. (ಅಲಂ) ಟೊಂಕಕಟ್ಟು ; ಸಿದ್ಧವಾಗು ; ಸಜ್ಜಾಗು : ರಣದಲ್ಲಿ ನಡುಗಟ್ಟಿ ಹಿಮ್ಮೆಟ್ಟಿ ದೊಡಲೊಡ್ಡಿ ಯತ್ನದಲಿ ಬಲುಬಳಲಿ (ವಿಶಗೀ. ೫೩-೦೭). **ನಡುಕಟ್ಟು** : ೨. ಹೆಚ್ಚೆಹೆಚ್ಚಗೆ ನಿಧಿಯ ಕೊಪ್ಪರಿಗೆ ಕಾದಿಹುದು ... ಎಡವಿಬೀಳುವ ದೊಂದೆ, ಹಿಡಿದು ಅಗೆದವರಿಲ್ಲ ನಡುಕಟ್ಟಿ ನಿಂತವ ೦ ಪಡೆಯಬಹುದು (ನಲಮು. ೨೦-೨೦).

ನಡುಗಟ್ಟಿ ನಿಲ್ಲು, ನಡುಕಟ್ಟಿ ನಿಲ್ಲು = ಟೊಂಕ ಕಟ್ಟಿ ನಿಲ್ಲಂ ; ಸಿದ್ಧವಾಗಿ ನಿಲ್ಲು ; ಸಜ್ಜಾಗು : ನಾವೀಗ ನಡುಗಟ್ಟಿ ನಿಲ್ಲಬೇಕಾದುದು ನಮ್ಮ ಧರ್ಮ (ನವತಿ. ೬೩) ; ಅವುಗಳ ಪಕ್ಕದಲ್ಲಿ ನಂಜರಾಜಯ್ಯನ ನಚ್ಚಿನ ಜ್ಯೋತಿಷಿ ಉಪಾಧ್ಯಾಯ ನಡುಕಟ್ಟಿ ನಿಂತಿದ್ದ (ಚಿರೀವ. ೦೩೨).

[ ನಡು$_2$ + ಕಟ್ಟು$_1$ ]

**ನಡುಗಟ್ಟು$_2$**, ನಡುಕಟ್ಟು$_2$ (ನಾ). ಸೊಂಟಕ್ಕೆ ಕಟ್ಟುವ ಬಟ್ಟೆ ಮುಂತಾದ ಪಟ್ಟಿ ; ಸೊಂಟಪಟ್ಟಿ : ತೊಟ್ಟಸೆವಾ ಕರಿಯ, ನಡುಗ [ಪಾಠಾಂ. ಕ]ಟ್ಟನಂಗಿಗೆವೆರಸಿದ ತಲ್ಲೇಖವಾಹನುನ್ನತದೇಹಂ (ವರ್ಧಪು.೩-೦೩). **ನಡುಕಟ್ಟು$_2$** : ಬೆಳ್ಳಿಯ ನಡುಕಟ್ಟು–ನೀಲಿಯ ಮೇಲಂಗಿ (ಅರ್ಚನ. ೦) ; ಪ್ರತಿಯೊಬ್ಬನೂ ತನ್ನ ನಡುಕಟ್ಟನಲ್ಲಿ ಆವಾಗಲೂ ಒಂದು ಚೂರಿಯನ್ನೋ, ಕಠಾರಿಯನ್ನೋ ಇಟ್ಟೇ ಇರುತ್ತಿದ್ದನು (ರಾಜಾಮ. ೨೦) ; ಕಾಡುಕೋಳಿ ಗಳನ್ನೂ, ಕೆಲವು ವೇಳೆ ಬೇರೆ ಪ್ರಾಣಿಗಳನ್ನೂ ಕೊಂದು ನಡುಕಟ್ಟನಲ್ಲಿಟ್ಟು ಕೊಂಡು ಬರುತ್ತಿದ್ದನು (ಮಲೆನಾ. ೦೨೮) ; ಆಗದೋನೆ ಭೋಗದೋನೆ ನಾಗರಾ ನಡುಕಟ್ಟನೋನೆ (ಹಳ್ಳಿಹಾ. ೬೭). [ ನಡು$_2$ + ಕಟ್ಟು$_3$ ]

**ನಡುಗಡಲ್**, ನಡುಕಡಲು, ನಡುಗಡಲು (ನಾ). ಸಮುದ್ರದ ಮಧ್ಯ ಭಾಗ ; ನಡುನೀರು : ನಡುಗಡಲೊಳ್ ಪಱುಗೋಲಂ ನಡೆಯುಸುವಂಬಿಗ ನಂತೆ (ಧರ್ಮಾಮೃ.೬-೨೦೯); ಇಂತು ನಡುಗಡಲೊಳಾಳುವಂಗೆ ತೆಪ್ಪವಾಗುತ್ತ ಪಿಂಗುವರೆ (ಬಸಠ. ೪-೩೦). **ನಡುಕಡಲು** : ನಡುಕಡಲಿನಲ್ಲಿ ಮುಳುಗು ತ್ತಿದ್ದವನಿಗೆ ತಪ್ಪವಾಗಿ, ಕೈಬಿಡುವಿರಾ ? (ಶುಂಗಭ. ೪೦). **ನಡುಗಡಲು** : ಎಲೆ ವಿಧಾತನೆ ವೃಥಾ ಹೊಳೆಯ ನಡುಗಡಲೊಳಗೆ ಸಾವೆಯಂ ಮುಳುಗಿ ಸಿದೆಲ್ಲೈ (ಕುರಂಗ. ೨-೨೭). [ ನಡು$_2$ + ಕಡಲ್$_2$ ]

**ನಡುಗಡಲು** 'ನಡುಗಡಲ್' ನೋ.

**ನಡುಗಡ್ಡೆ** (ನಾ). ಸುತ್ತಲೂ ನೀರಿನಿಂದ ಸುತ್ತುವರಿದ ಭೂಪ್ರದೇಶ; ದ್ವೀಪ: "ಅಂತರೀಪ – ನಡುಗಡ್ಡೆ, ದ್ವೀಪ" (ಗಂಗಾವು. ೨); ದಕ್ಷಿಣ ಮಹಾಸಾಗರದಲ್ಲಿ ಹಲವು ನಡುಗಡ್ಡೆಗಳುಂಟು (ಮುಂಬಯಿ. ೪-೧೦೫); ಆ ನಡುಗಡ್ಡೆಯ ರಾಜಧಾನಿಯಿರಬೇಕು ಆ ಅಪೂರ್ವ ವಿಚಿತ್ರರೂಪಸಿ (ಸಿಡಿಲು. ೩೬); ಒಂದು ಕಾಲಕ್ಕೆ ಹಿಂದೀಉಪಸಾಗರದಲ್ಲಿದ್ದು, ಈಗ ಮುಳುಗಿಹೋದ 'ಲೆಮೂರಿಯಾ' ಎಂಬ ನಡುಗಡ್ಡೆಯಿಂದ ಇವರು ಬಂದವರು (ಭಾಷಾಶಾ.೬೬); ದೋಣಿಯು . . . ಝಾಂಝೀಬಾರ ನಡುಗಡ್ಡೆಯ ದಂಡೆಗೆ ಸ್ವಲ್ಪ ಹೊತ್ತಿನ ಮೇಲೆ ಬಂದು ತಲುಪಿತು (ಪೀದಿವು. ೦೦೦). [ ನಡು$_2$ + ಗಡ್ಡೆ ]

**ನಡುಗಣ್** (ನಾ). ೧. ಕಣ್ಣಿನ ಮಧ್ಯಭಾಗ. 'ನಡುಗಣ್ಬೆಳಗು' ನೋಡಿ. ೨. (ಹಣೆಯ) ಮಧ್ಯದಲ್ಲಿರುವ ಕಣ್ಣು; ಹಣೆಗಣ್ಣು: ಸುರನದಿಯು ಕುಂಡಲದ ನಡುಗಣ್ಣ ಪಂಚಾಸ್ಯದೀರ್ಘಭುಜದ . . . ನಿಜದ ಮೂರ್ತಿಯಂ ತೋರಿಸಿದನು (ಸಿದ್ಧರಾ. ೩-೩೬); ಪಿಕಿಲ್ಗಂಜಿ ನಂಜುಂಡಂ . . . ಪಣೆಯ ನಡುಗಣ್ಣ ಕಿಚ್ಚನುಚ್ಚಳಿಸಿ ಸಜ್ಜನ ಬಂಬೂದಿಯಂ ಮೆಯ್ಗೆ ಪೂಸಿ ದಟ್ಟದೊವಲಂ ಪೊದದಗಜವೆರಸು ಬೆರೆವೊಡಲೊಳಿರ್ದಂ (ರಾಜಶೇ. ೧೦೫-೩). [ ನಡು$_2$ + ಕಣ್ ]

**ನಡುಗಣ್ಣು**, **ನೆಡುಗಣ್ಣು** (ನಾ). ಅತ್ತಿತ್ತ ಚಲಿಸದ ಕಣ್ಣು; ಒಂದೇ ಕಡೆಗೆ ಸ್ಥಿರವಾದ ದೃಷ್ಟಿಯುಳ್ಳ ಕಣ್ಣು; ಅಚಲವಾದ ನೋಟ: ನಿಟ್ಟಡಿಯಿಂದ ಹೋಗಿ, ಚೆನ್ನನಿಗೆ ನಿಂತು, ಆತನಿಗೆ ನಡುಗಣ್ಣಾಗಿದ್ದು (ಮಂತ್ರಶ. ೮೨-೬). **ನೆಡುಗಣ್ಣು**: ನರಸಣ್ಣನು ನೆಡುಗಣ್ಣಾಗಿ ನೋಡುತ್ತ ನಿಂತುಬಿಟ್ಟನು (ನಡದಾ. I, ೪೩೬). [ ನಡು$_1$ + ಕಣ್ಣು (<ಕಣ್) ]

**ನಡುಗಣ್ಬೆಳಗು** (ನಾ). ಕಣ್ಣಿನ ಗುಡ್ಡೆಯ ಕಾಂತಿ; ಅಲಿಯ ಹೊಳಪು: ಸಿರಿಮೊಗಮಂ ನಸುಬಾಗಿ ಕರಂ ಭೂವರನಂ ಪುರ್ಬೇರಿಸಿ ನಡೆ ನೋಡುವ ತರುಣಿಯ ನಡುಗಣ್ಬೆಳಗಾ ಯುವೆಯಾ ಪುರ್ಬಿನೆಡರಿ ಪರಿಯೆ (ಅದಿಪು. ೪-೦೩). [ ನಡುಗಣ್ + ಬೆಳಗು$_2$ ]

**ನಡುಗನ್ನಡ** (ನಾ). ಮಧ್ಯಕಾಲದ ಕನ್ನಡ; ಹಳಗನ್ನಡ ಮತ್ತು ಹೊಸಗನ್ನಡಗಳ ನಡುವಿನ ಕಾಲದ ಕನ್ನಡ: ಈಗ ನಾವು ಬಳಸುತ್ತಿರುವ ಭಾಷೆ "ಹೊಸಗನ್ನಡ". ಇದಕ್ಕೆ ಹಿಂದೆ ಇದ್ದ ರೂಪವನ್ನು "ನಡುಗನ್ನಡ" ವೆನ್ನುತ್ತಾರೆ (ಕೃಬಿಡಿ. ೧); ಅನೇಕ ದೃಷ್ಟಿಗಳಿಂದ ಹನ್ನೆರಡನೆಯ ಶತಮಾನದ ಮಧ್ಯಭಾಗವನ್ನು ಒಂದು ಪರ್ವಕಾಲವೆಂದು ಕರೆಯಬಹುದು . . . ಭಾಷೆಯ ದೃಷ್ಟಿಯಿಂದ ನೋಡಿದರೆ ಹಳಗನ್ನಡವು ನಡುಗನ್ನಡವಾಗಿ ಸಂಕ್ರಮಣವಾಗುತ್ತಿದ್ದುದು ಆ ಕಾಲದಲ್ಲಿಯೇ (ಕಶಾಇ. ೬); ನಡುಗನ್ನಡ-ಹೊಸಗನ್ನಡ ಕವಿತೆಗಳಲ್ಲಿ ಮತ್ತು ಆಡುನುಡಿಯಲ್ಲಿ ನೀನು, ನಾನು, ತಾನು ಎಂಬಿವಕ್ಕೆ ನೀ, ನಾ, ತಾ ಎಂಬಿವು ಸ್ಥಾನಿಗಳಾಗುತ್ತವೆ (ಸಂಶೋಧ. ೬೩). [ ನಡು$_2$ + ಕನ್ನಡ$_1$ ]

**ನಡುಗಲ್** (ನಾ). ನಟ್ಟಿರುವ ಕಲ್ಲು; ನಿಲ್ಲಿಸಿರುವ ಕಲ್ಲು: ಮುಚ್ಚನ್ನಿ ನ್ನಡುಗಲ್ಲೆ ಪಡುವಯಾಲೆ ತಾಯನ್ನೆ ಕೆಱೆಯ ವಡಗಾಯ್ನುಡುಗಲ್ಲೆ ಕೊತ್ತನ್ನೆ ಱೆಯೆ (ಎಕ. X (8), ಚಿಕ್ಕಬ. ೧೦೬-೩೪; 850). [ ನಡು$_2$ + ಕಲ್$_3$ ]

**ನಡುಗಾಡು** (ನಾ). ಕಾಡಿನ ಮಧ್ಯಭಾಗ; ಅರಣ್ಯದ ಮಧ್ಯಪ್ರದೇಶ; ಕಾಡಿನ ಒಳಗಿನ ಪ್ರದೇಶ: ಹೊತ್ತಿಹ ಹೊಱೆಯಂ ನಡುಗಾಡಿನಲ್ಲಿ ಮಡುಗುತ್ತೊಡೆಯರೆ ಬರಲಮ್ಮೆವೆಂದು ನುಡಿದರ್ಭಯದಿಂ (ನನ್ನಚಾ. ೨-೪೦); ಪರಮುಕ್ಕಪಾಕರನೆಂಬೀ ಸಿನುದಂ ಬಿಸುಟುಕಟ ಶಂಕರಾ ಶಂಕರನಂ ಹರಸಿ ನಡಗಾಡೊಳಂಧೆಯು ಕರದುಂಡಮನೆಳೆದುಕೊಂಡವೋಲ್ಮಾಡಿದೆಯ್ಯ (ರಾಜಶೇ. ೦೩-೦೨೪). [ ನಡು$_2$ + ಕಾಡು$_2$ ]

**ನಡುಗಾನಲ್** (ನಾ). = ನಡುಗಾಡು: ಮಿಕ್ಕ ಸರುವಿಂಗೆ ದರುವಿಂಗೆ . . . ನಡುಗಾನಲಿಂಗೆ [ಪಾಠಾಂ. ನಡುವಾನಲಿಂಗೆ, ನಳುನಾನಲಿಂಗೆ] ತಕ್ಕೆಗತ್ತಲೆಗೆ . . . ಇಕ್ಕೆವನೆಯಾನೆಂದು ಬೊಬ್ಬಿಟ್ಟು ಪೇಳ್ವಂತೆ ಘೀಳಿಡುತ್ತುಲಿದುದಡವಿ (ಸೋಮಶ. ೩-೩). [ ನಡು$_2$ + ಕಾನಲ್ ]

**ನಡುಗಾಲ** (ನಾ). ೧. ಮಧ್ಯಕಾಲ; ಮಧ್ಯಂತರ ಕಾಲ. ೨. ಸ್ಥಿರವಾದ ತೀರ್ಮಾನ ಕೈಕೊಳ್ಳುವ ಮುಂಚಿನ ಕಾಲ, -ಸಮಯ; ತಾತ್ಕಾಲಿಕವಾಗಿ ನಿರ್ಣಯ ತೆಗೆದುಕೊಳ್ಳುವ ಕಾಲ.

ನಡುಗಾಲದ ವರದಿ=ತಾತ್ಕಾಲಿಕವಾದ ವರದಿ; ಸ್ಥಿರವಲ್ಲದ ಸುದ್ದಿ: (Interim report. ಪತ್ರಿಪಿ. ೪೬). ನಡುಗಾಲದ ಸರಕಾರ=ಮಧ್ಯಕಾಲದ ಸರಕಾರ; ತಾತ್ಕಾಲಿಕವಾದ ಆಡಳಿತ: ರಾಜ್ಯದ ಮಂತ್ರಿಮಂಡಲವು ಬಹುಮತವನ್ನು ಕಳೆದುಕೊಂಡಾಗ ರಾಜ್ಯಪಾಲರು ನಡುಗಾಲದ ಸರಕಾರವನ್ನು ನೋಡಿಕೊಳ್ಳುತ್ತಿದ್ದರು (ರೂಢಿ). [ ನಡು$_2$ + ಕಾಲ ]

**ನಡುಗಿಸು** (ಕ್ರಿ). ೧. ನಡುಗುವಂತೆ ಮಾಡು; ಅಲುಗುವಂತೆ ಮಾಡು; ಅಲ್ಲಾಡಿಸು: ಅಂಗವಂ ನಡುಗಿಸುತ ಬಸುಱಂ ಪೊಂಗಿಸುತವಕ್ಕಳಿಸುತಂ ವಾದ್ಯಂಗಳಿಗೆ ಬೆಚ್ಚುತ ಬೆದಱುತಂ (ಬಸಪು. ೧-೪೯); ಮೂಲೋಕಮಂ ಮಾಗಿ ನಡುಗಿಸಿತು ಮೇಣುಡುಗಿಸಿತು ಪೆರ್ಚಿದ್ದೈಕಿಲಿಂದೆ (ಕೃಮಿಧಾ. ೨೮-೨); ಕಾಶೀಮ ಕೈ ನಡುಗಿಸುತ್ತ ಚೀಟಿ ಬರೆಯಹತ್ತಿದ (ಜೀವರಂ. ೩); ಒಳ್ಳಿದರ ನೆಚ್ಚರಿಸೆ ಪಿಡಿದು ನಡುಗಿಸುಗುಂ (ಕಾಲೂರ. ೬೬-೧೪೦). ೨. ಭಯಗೊಳಿಸು; ತಲ್ಲಣಗೊಳಿಸು: ಧುರದೊಳರಿಗಳಂ ನಡುಗಿಸುವುದಾಗಿ ಚತುರಂಗಬಲವೆನಿಸಿತೀ ಛತ್ರವು (ಹದಶಾ. ೬-೦೪); ಸಹದೇವ ನಕುಲರ ನಡುಗಿಸಿದನುಡುಗಿಸಿದನಾಟೋಪವನು ಪವನಜನ (ಕುಭ್ಯಾ.ಕ. ೩-೦೩).

ನಡನಡುಗಿಸು (ದ್ವಿರುಕ್ತಿ): ನಡನಡುಗಿಸಿ ನಲ್ಲನೆದೆಯ ಧೈರ್ಯವ . . . ಪೊಂಗೊಡವೋಲೆಸೆವೆಂಗಳು ಮುಸುಕಿತು ಮೃಡತಪಧ್ವಂಸಿಯ ಪಿತನ (ಮೋಹತ. ೦೯-೩೦). [ ನಡುಗು$_1$ + – ಇಸು$_2$ ]

**ನಡುಗು$_1$**, **ನಡುಂಗು** (ಕ್ರಿ). ೧. ಅದುರು; ಅಲ್ಲಾಡು; ಕಂಪಿಸು: "ನಡುಗು (ನಡಗು)—ಕಂಪನೇ" (ಶಮದರ್ಪ); "ಕಂಪಿಸಿದುದೆನಲ್ಕೆ ನಡುಗಿದುದು" (ಕರ್ಣಾಟಿ. ೨೪); ತೆಂಕಣಗಾಳಿಯೊಳಾದ ಸೋಂಕಿನೊಳೆ ನಡುಗುವಶೋಕವಲ್ಲರಿಯು ಪಲ್ಲವದೊಳೆ ನವಚೂತವಲ್ಲವಂ ತೊಡರ್ದಪೊರಾಗೆ (ಹಂಪಥಾ. ೩-೬೩); ಎಲರಲೆಪದಿಂ ನಡಂಗುವೆಲೆದುಱುಗಲಿಂ ಕದಳೀವನಂಗಳು ಮೈಕಿಲದರ್ದು ನಡುಗಿದವುವೆಂಬಂತೆಯುಂ (ಕಾದಂಬ. ೨೦೯); ಭಯದಿಂದಂ ನೋಡಿ ನಾಡೆ ನಡುಗುತ್ತಿರ್ದರ್ (ಧರ್ಮಾಮೃ. ೩-೯೩); ನಡುಗುವ ನರದರೆಯಿಂ ನರೆತು ಸಡಿಲ್ದ ಸರ್ವಾಂಗದಿಂ (ಸಂಬಿಚ. ೬-೨೩); ಸವನಿಸೆ ಹಮ್ಮದಂ ನಡುಪ ಕಾಲ್ ಬೆಮರಂ ಬಿಡುತಿರ್ಪ ಗಲ್ಲಮುಂಮ್ಮುವ ನವಿರ್ . . . ಇವರೊಳೊಪ್ಪೆ ನೋಡಿದರ್ (ಕಲ್ಯಾಕ. ೩೩೨); ಕರ ನಡುಗೆ ಮೈ ಬಲಿಯು ಹುಬ್ಬುಗಳುಱೆ ಬಿಗಿಯ (ಕುಭ್ಯಾ.ಶ. ೧೨-೦೦). ೨. ಹೆದರು; ಭಯಪಡು; ಭೀತಿಗೊಳ್ಳು: ನಡುಗುವುದುಂತೆ ಪಾಂಡವಬಲಂ ನಿನಗರ್ಜುನ ನೆಂಬನೆಂದುಮುಕುಂದನುಗಿ ಸುರುಳ್ದನೀಯೆಡೆಗೆ ಪೇಟ್ ಪೆಱರಾರ್ ದೊರೆ . . . ಅಂಗಮಹೀತಳಾಧಿಪಾ (ಶಂಪಥಾ. ೦೨-೩೧); ಮುಳಿದು ಕೊಲಲಿರ್ದ ಕುಂಭನೆಂಬ ರಕ್ಕಸಂಗೆ ನಡುಗಿ ಚಂಡಕೌಶಿಕಂ ಮುಂಡಕೌಶಿಕನನೊಯ್ದು ದ್ರಿಗುಹಾಂತರದೊಳ್ ಪ್ರಯತ್ನಂ ಬೆರಸಿರಿಸಿ ಕಾವುದುಂ (ಶಾಂತಿಪು. ೬-೨೫೫); ನಡುಗಿ ಮೊಡವಡುವುದುಂ ಮೊಱೆಯಿಡುವುದುಮೇಕಣ್ಣ (ಸಮಪು. ೯-೫೦); ಕಳ್ಳರ ಕೊಟ್ಟಮಿದೆಂದೊಡೆ ಬಲ್ಲಿದರುಂ ನಡುಗುತಿರ್ಪರ್ (ಧರ್ಮಾಮೃ. ೧೨-೨೩೬); ಒಡೆಯರಾಡುವ ಮಾತ ಕಡೆವರಿಯಂತರ ಕೇಳಿ ಇದಿರುವೋಗಿ ಕಿಂಕರನಾಗಿ ನಡುಗುತ್ತ ಬಿನ್ನಹವ ಮಾಡುವ ಸದ್ಭಕ್ತರ ತೋಱಯ್ಯಾ (ಬಸವ. ಕ. ೦೭೩-೪೪೯); ಸುರನಗರಿ ನಡುಗಿತ್ತು ಸುರಪತಿ ಹರನ ನೆನೆದನು . . . ಎನೆ ನರನ ಕಡುದುಮ್ಮಾನ ನೆಱೆ ಹದಱಸಿತು ಮೂಜಗವ (ಕುಭ್ಯಾದ್ರೋ. ೮-೧೦). △ **ನಡುಂಗು**: ೧. "ಝೊಂಪಿಸಿದನೆನೆ ನಡುಂಗಿದನಕ್ಕುಂ" (ಕವಿಕಂ. ೧೧೦).

**ನಡಂನಡುಗು, ನಡನಡುಗು, ನಡುನಡುಗು** (ದ್ವಿರುಕ್ತಿ) : ಕೆಡೆಯ ಕೃಪಂ ನಡಂನಡುಗಿ ಶಲ್ಯನುರುಳ್ದರೆ . . . ಗಗನೇಚರರ್ ಒಡಿದು ಕಟ್ಟಿದರಾ ಧೃತರಾಷ್ಟ್ರಪುತ್ರರಂ (ಜಗನ್ನಾಥ. ೧೦-೯೬) ; ಪರಿಭವಾ[ನ]ಲನಿಂ ತೋಳಾ ನಲನಿರ್ಮಡಿಸಿ ನಡುನಡುಗಿ ಕಾಯ್ಕಿನೊಳ್[ಪಿ]ಡುಗಿ . . . ಇಂತೆಂದಳ್ (ಶಂಖಳ. ೮-೭೦೪) ; ಬಂದ ಜಂಗಮದ ಇಂಗಿತಾಕಾರವನಱಿತು ಇದಿರೆದ್ದು ವಂದಿಸಿ ಕೈಮುಗಿದು ನಡ[ಪಾಠಾಂ. ಡು]ನಡುಗಿ ಕಿಂಕರನಾಗಿ . . . ಇರಬಲ್ಲರೆ ಅದು ವರ್ಮ (ಅವಚಂ. ೨೨೩-೧೦೧೦) ; ನುಡಿಯಲಾಱನು ಮಕ್ಕಳಿರ ನೀರಡಿಸಿದೆನು ಹರಿದಾಗಿಯೆನೆ ನಡನಡುಗಿ ದುರ್ಯೋಧನನು ದೂತರ ಕರೆದು ನೇಮಿಸಿದ (ಕುಮ್ಯಾಭಾ. ೧೦-೨೪) ; ನೆಲ ಬಿರಿವಂತೆ ನಾನಾ ವಾದ್ಯರಭಸದಿ ಕುಲಗಿರಿ ನಡನಡುಗಿದುವು (ಬೋಧಿಹ. ೧೯-೮೭) : ಅಂತು ಶಾಪಂಗುಡಲಾಂ ನಡುನಡುಗಿ ಕಯ್ಗಳಂ ಮುಗಿದು . . . ಏನಾದೊಡ ಮೆನಗೆ ಶಾಪಾಂತಕಾರಣಮಂ ಬೆಸಸೆಂಬುದುಂ (ಕಾದಂಬ. ೬೦೪) : ಪೆಲವು ನಾಯ್ಗಳ ನಡುವಣ ಪುಲ್ಲೆಯಂತೆ ನಡುನಡುಗಿ (ಧರ್ಮಾಮೃ. ೬-೯೨) ; ವೇದ ವೇಧಿಸಲಱಿಯದೆ ಅಭೇದ್ಯಲಿಂಗವೆಂದು ನಡುನಡುಗಿತ್ತು (ಬಸವ. ೯೩೮) ; ಮಡದಿ ತನ್ನಯ ಪತಿಗೆ ತೋಱಲು ನಡುನಡುಗಿಯಾ ವರಕುವಾರನ ಪೊಡವಿಪತಿಗವನೀಯೆ(ಸಂಭಿಶ.೦೩-೬). **ನಡನಡಂ ನಡುಗು, ನಡನಡ ನಡುಗು**= ನಡಂನಡಂಗಂ : ಲುಬ್ಧಕಂ . . . ಬರ್ಪುದಂ ತಡೆಯದೆ ಕಂಡು ನಡನಡಂ ನಡುಗಿ ತಲ್ಲಣಿಸಿ . . . ಪಾಱಲನುವಾಗಿ ತೂಱರ್ಗೊಂಬಿನೊಳಿರ್ಪ ವಿಹಂಗ ಸಂಕುಳದಿಂ (ಗಿರಿಶಿ. ೧-೧೨೮೪) ; ನಡನಡ ನಡುಗುವಿನವಮಡಸಿ ತಡೆಯದೆ ಖಳನಂ ಒಡಿದುಡಿಯೆ ಕಟ್ಟು (ವಡ್ಡಾರಾ. ೧೨೭-೬) ; ಗಾಳಿಗೊಡ್ಡಿದ ಸೊಡರಂತೆ ನಡನಡ ನಡುಗುವ ಕಱುರುಧ್ವಜನಿಯಂ ಕಂಡು . . . ಇಂತೆಂದಂ (ಶಂಖಳ. ೮-೦೦೧೪) ; ನಡನಡ ನಡುಗಿ ಮಿಡುಮಿಡು ಮಿಡುಕಿ . . . ಪುಯ್ಯಲಿಡುತ್ತುಂ (ಅಜಿಪು. ೧೧-೦೦೪).

[ ದೇ.೩ ತಮಿ. ನಟುಕ್ಕು, ನಟುಙ್ಕು ; ಮಲ. ನಡುಙ್ಙು ; ತುಳು. ನಡುಗು ; ತೆಲು. ನಡುಂಗು, ನಡುಂಕು ]

**ನಡುಗು₂** (ನಾ). ೧. (ಚಳಿ ಮುಂತಾದುವುಗಳಿಂದ) ಅದಿರುವಿಕೆ ; ಕಂಪಿಸುವಿಕೆ; ನಡುಕ; ಕಂಪನ : "ನಡುಕ=ನಡುಗು" (ಗಂಗಾಮ. ೦೭೭) ; ಪದಾರ್ಥಗಳ ಕಂಪನವೆಂದರೆ ನಡುಗು (ಮುಂಬಯಿ. ೫-೧೦೦) ; ಅದಕ್ಕೆ ನಾವು ಕಂಪ ಅಥವಾ ನಡುಗು ಎನ್ನುತ್ತೇವೆ (ಮುಂಬಯಿ. ೫-೦೦೨). ೨. ಹೆದರುವಿಕೆ ; ಭಯಂಗೊಳ್ಳುವಿಕೆ ; ಅಂಜಿಕೆ : ಈತನನ್ನು ನೋಡಿ ದರೆ ನನಗೆ ನಡುಗು ಬರುತ್ತದೆ (ಅಬಾಡ. ೧೦) ; ತಿಳಿಯದ ಮಂತ್ರ ಹೇಳಲಾರಂಭಿಸಿದರೆ ನನಗೆ ನಡುಗು ಬರುತ್ತದೆ (ಹುಚ್ಚಾಟ. ೦೨); ನೀನು ಹೇಳೋದು ಕೇಳಿ ನನಗೆ ನಡುಗು ಹುಟ್ಟಿತು (ಕಂದುಬ. ೬೮).

[ <ನಡುಗು₁./ತಮಿ. ನಟುಕ್ಕು ; ಮಲ ; ನಡುಙ್ಙು; ತೆಲು. ನಡುಂಗು, ನಡುಂಕು ]

**ನಡುಗುಂಪೆಣ** (ನಾ). ಅತ್ಯಂತ ಭಯಂಗೊಂಡ ವ್ಯಕ್ತಿ : ನಡುಗುಂ ಪೆಣನಾಗಿ, ತನ್ನ ವರ್ಗ ಕಯ್ಮಾಣಿತಿದೋರುವನು (ಮಂತ್ರಶ. ೮೩-೬).

[ನಡುಗು₁ + ಪೆಣ]

**ನಡುಗುಡ್ಡ** (ನಾ). ಗುಡ್ಡದ ಬುಡಕ್ಕೂ ತುದಿಗೂ ಮಧ್ಯವಿರುವ ಪ್ರದೇಶ : (+). [ ನಡು₂ + ಗುಡ್ಡ₂ ]

**ನಡುಗುಹೆ** (ನಾ). ಗುಹೆಯ ಮಧ್ಯಭಾಗ ; ಗವಿಯ ನಡುಭಾಗ ; ಗುಹಾಮಧ್ಯ : ಕಡುಗೆಡಲದ ಮೃಗಾಧಿಪನ ನಡುಗುಹೆಯೊಳಿಹ ಸುಧೆಯ ಘಟವೀ ಪೊಡವಿಯೊಡೆತನ ಸದರವೇ ಕಡುಬಡವರಿಗೆ ದೊರೆಕೊಂಬುದೇ (ಕುಮ್ಯಾಸ. ೧-೬೭). [ ನಡು₂ + ಗುಹೆ ]

**ನಡುಗುಱುವ** (ನಾ). = ನಡುಂಗಡ್ಡೆ : "ಅಂತರೀಪಂ ನೀರೆ ನಡು ಗುಱುವಮೆನಿಸಿಕ್ಕುಂ" (ಮಂಗರಾ. ೦೨೩-೦೩). [ ನಡು₂ + ಕುಱುವ₁ ]

**ನಡುಗೆರೆ** (ನಾ). ಕೆರೆಯ ನಡುಭಾಗ ; ಮಧ್ಯದ ಕೆರೆ : ಕೆರೆಯಲ್ಲಿ ಈಜಲು ಹೋಗುತ್ತಿದ್ದೆ . . . ನಡುಗೆರೆಯನ್ನೂ ಮೀರಿ ಹೋಗುತ್ತಿದ್ದೆ (ಧರ್ಮಶ್ರೀ. ೨೦). [ ನಡು₂ + ಕೆರೆ₂ (<ಕೆಱು) ]

**ನಡುಗೇರಿ, ನಡುಕೇರಿ** (ನಾ). ಕೇರಿಯ ಮಧ್ಯಭಾಗ : ಬೀದಿಯ ಮಧ್ಯಭಾಗ : ನಡುಗೇರಿ ಉರಿದು ನಾನಾ ಭಟರು ಮಡಿದಾರು (ಶಿವಗೀ. ೮೦೭) ; ಮಾರನ ಚಾಪಾಗಮಮಿಸ್ತಾರಮನೀಕ್ಷಿಪ ತವಂಗಮಂಗನೆಯರ ಶೃಂಗಾರರಸಂ ತೀವಿದ ನಡು[ಪಾಠಾಂ. ಡೆ]ಗೇರಿಯಿದೆನೆ ಸೂಳೆಗೇರಿ ಮಿಗೆ ಸೊಗಯಿಸುಗುಂ (ಪಾರ್ಶ್ವಪು. ೭-೩೬). **ನಡುಕೇರಿ** : ಪೆಡಗಯ್ಯ ಕಟ್ಟಿಸಿ ಪುರವರದ . . . ನಡುಕೇರಿಯೊಳ್ಳಿಲ್ಲರು ನೋಡುವಂದದಿ ನಡೆಯಿಸಿದನು ಮಂತ್ರಿಯವರ (ಕುರಾಸಾಂ. ೩೭-೬೨) ; ಕಾಣಿಕೆಯನಿತ್ತಾನೆಯ ಸಜ್ಜಾರ ನಡುಕೇರಿಯೊಳಗೊಮ್ಮಿತಿಹುದು (ಕಂಪಿವಿ. ೬-೩೨). [ನಡು + ಕೇರಿ]

**ನಡುಗೊಂಬು** (ನಾ). =ನಟ್ಟಗೊಂಬು: "ನಟ್ಟಗೊಂಬೆಂದು ನಡುಗೊಂಬು" (ಕರ್ಣಕೃ. ೦೮) : "ನಡುಗೊಂಬೆಂದು ನಾಡೆ ತಾ ನಟ್ಟಗೊಂಬಕ್ಕು" (ಕಲ್ಯಮಂ. ೨೫). [ ನಡು₂ + ಕೊಂಬು₁ ]

**ನಡುಗೊಣ** 'ನಡಂಗೊಳ್' ನೋ.

**ನಡುಗೊರಲು, ನಡುಗೊರಳು** (ನಾ). ಕೊರಳಿನ ಮಧ್ಯಭಾಗ; ಕುತ್ತಿಗೆಯ ಮಧ್ಯಭಾಗ : ನಡುಗೊರಲ ಸುಟಿ ದೇವಮಣಿ (ಮಂಗರಾ. ೦೩-೨೦). **ನಡುಗೊರಳು** : ಬರುತಿಹ ಬಾಣವನು ಖಳ ಕಂಡು . . . ಬಲುಹುಳುಕ್ಕಿಯೊಳಿಟ್ಟೊಡನಿತನು ಮುಳಿದು ನುಂಗಿತು ಕಡಿದುದಮುಮಾ ಖಳನ ನಡುಗೊರಳ (ಕೌಶಿರಾ. ೨೭-೫೫).

[ ನಡು₂ + ಕೊರಲು (<ಕೊರಲ್) ]

**ನಡುಗೊರಳು** 'ನಡುಗೊರಲು' ನೋ.

**ನಡುಗೊಳ, ನಡಂಗೊಣ** (ನಾ). ಪುಷ್ಕರಿಣಿಯ ಮಧ್ಯಭಾಗ ; ಸರೋವರದ ಮಧ್ಯಭಾಗ : ತೊಳೆದು ಚರಣಾನನವ ನಡುಗೊಳದೊಳಗೆ ಹೊಕ್ಕು . . . ಶೀತಳಜಲವ ಕುಡಿದು (ಕುಮ್ಯಾಅ. ೧೦-೩೬). **ನಡುಗೊಣ** : ಗುರುತನುಜಂ ಕೃಪನ ಕೃತವರ್ಮನ ನುಡಿಗಳಂ ನಡುಗೊಣದಿ ನುಡಿವ ನವ್ವಿವರ ಮಾರೆನುಡಿಗಳಮ್ಮೊರೆಯ ಗಡಬಡೆಗಳಿಂ ಧ್ವನಿಯ ಕಡುಬೆಡಗಿ ನಿಂದರಿದು (ತುರಂಗ. ೭೪-೪೧). [ ನಡು₂ + ಕೊಳ₂ ]

**ನಡುಗೋಲ್, ನಡುಕೋಲ್** (ನಾ). ಸರಳಿನ ಮಧ್ಯಭಾಗ : ಬಾಣದ ಮಧ್ಯಭಾಗ : ನಡೆ ನಡುಗೋಲ್ವರಂ ದಶಮುಖಂ ಮನಮಂ ಸುಮನ ಶ್ಶಿಲೀಮುಖಂ . . . ಸತ್ಕಶೌಚಗುಣಸಂಪದವೇಳಿದನಾದಂ (ಪಂಪರಾಮಾ. ೯-೮೫). **ನಡುಕೋಲ್** : ಭೋರೆಂದು ಕವಿವ ಬಿಸುನೆತ್ತರ್ ಕಣ್ಣಂ ಕವಿಯೆ ಸೀಂಟ ಕಳೆದು ನಡುಕೋ[ಪಾಠಾಂ. ಕಾ]ಲ್ವರಂ ನಟ್ಟ ಕೂರ್ಗಣೆಗಳಂ ಗಱುವೆರಸು ತೊಱೆದು ಕಳೆದು (ಪಂಪಭಾ. ೦೨-೭೪ ವ); ಸ್ಮರನ ಸರಲ್ಗಳ್ ನಡುಕೋಲ್ವರೆಗಂ ನಡೆ (ಧರ್ಮಾಮೃ. ೮-೦೬೮). [ ನಡು₂ + ಕೋಲ್₁ ]

**ನಡುಚವುಕಿಗೆ** (ನಾ). ಮೊಗಸಾಲೆಯ ಮಧ್ಯಭಾಗ : ನಡುಚವುಕಿಗೆಗೆ ಬಿಗಿದ ತೊಲೆಯ ಪೊಱವಳಸಿನುಗ್ಗಡದ ನಾನಾ ವರ್ಣಚಿತ್ರಪತ್ರಿಕೆಗಳಂ . . . ಪೊಗಳ ಲಳವೆ (ಜೀಆಪು. ೫-೦೨). [ ನಡು₂ + ಚವುಕಿಗೆ (<ಚೌಕಿಗೆ) ]

**ನಡುಜವ್ವನ** (ನಾ). ತುಂಬುಜವ್ವನ : ಪರಿಯೌವನ : ಒಡಿದ ತುಂಬು ನೀರ ಪೊಂಗೊಡಮನಿಟ್ಟು ಪಡಿಮೊಗದ ನರೆವೆಡ ನಡುಜವ್ವನದ ಕೆಳದಿ ಯೊರ್ವಳಂ ಸನ್ನೆಯಿಂ . . . ಎನೆ (ರಾಮಾಶ್ವ. ೫೦-೦೬).

[ ನಡು₂ + ಜವ್ವನ ]

**ನಡುತರ** (ನಾ). ಮಧ್ಯಮ ಮಟ್ಟ, - ರೀತಿ : ಒಂದು ಅಳತ ಹಿಟ್ಟು . . . ನಡುತರದ ಚಮಚದಲ್ಲಿ ಒಂದು ಚಮಚ ಸಕ್ಕರೆ (ಅಡುಸಾ. ೯೬).

[ ನಡು₂ + ತರ₂ (<ತರಹ) ]

**ನಡುತಲೆ** 'ನಡಂದಲೆ' ನೋ.

**ನಡುತೂತು** (ನಾ). ಮಧ್ಯದಲ್ಲಿರುವ ತೂತಂ,-ರಂಧ್ರ : ನಾಭಿ-ರಥದ ಗಾಲಿಯ ನಡುತೂತು (ಗಂಗಾವು. ೧೮೧).

[ ನಡು$_2$ + ತೂತು$_2$ (<ತೂಂತು$_2$) ]

**ನಡುತೂಬು** (ನಾ). = ನಡುತೂತು : "ಪಿಂಡಿಕಾ, ನಾಭಿಃ-ಬಂಡಿಯ ಕಣ್ಣಿನ ನಡುತೂಬಿಗೆ ಹೆಸರು" (ಸಿದ್ಧಾಂತಿ. ೨೫೩).

[ ನಡು$_2$ + ತೂಬು (<ತೂಂಬು) ]

**ನಡುತೊಟ್ಟಿ** (ನಾ). = ನಡುಂಚವುಕಿಗೆ : "ಕಕ್ಷ್ಯಾ-ಉಪ್ಪರಿಗೆ, ಮನೆಗಳ ನಡುತೊಟ್ಟಿ" (ಸಿದ್ಧಾಂತಿ. ೪೧೧). [ ನಡು$_2$ + ತೊಟ್ಟಿ$_1$ ]

**ನಡುದಟ್ಟಿ** (ನಾ). ಸೊಂಟಕ್ಕೆ ಸುತ್ತಿಕೊಳ್ಳುವ ಬಟ್ಟೆ,-ವಸ್ತ್ರ : ನಡುಪಟ್ಟಿ : (ಕ). [ ನಡು$_2$ + ದಟ್ಟಿ$_1$ ]

**ನಡುದಲೆ, ನಡುತಲೆ** (ನಾ). ತಲೆಯ ಮೇಲಿನ ಮಧ್ಯಭಾಗ; ನೆತ್ತಿ : ತುಡೆ ಧನ್ವಿ ಸರಲನೊರ್ವಂಗೆಡೆವುಗೆ ಮತ್ತೊರ್ವನವನನಡು ತಱಿವವೊಲೊಳ್ಪುಡುಗದೆ ಯಕ್ಷಪ್ರತಿಮೆಯ ನಡುದಲೆಯೊಳ್ ಜಿಬ್ಬುದಕನಿಸರ್ಗಪ್ರಿನೆಗಂ (ಶಾಂತಿಪು. ೬-೨೯) ; ನಡುದಲೆ ಗೋಣ್ ನೊಸಲ್ . . . ಪುರ್ಬುಗಳೆಂಬೆಡೆಯಂ ಮಹಾಹಿ ಕೊಂಡೊಡೆ ಗರುಡಂಗಮತ್ತಲರಿದೆಂದೊಡೆ ಪೇೞುಱಿದಂಗೆ ಸಾಧ್ಯಮೇ (ಲೋಕೋಪ. ೧೦-೪). **ನಡುತಲೆ** : ಪಾರ್ವನ ಕಾಲ್ ಮೋದೆ ನಡುತಲೆಯಲಿರ್ಪುದುಮಾಱದುದು ನಿಮಗೆಂದು ನುಡಿದು ಕಾಯ್ಪಿನೊಳೊದೆದ (ಹಂಪಭಾ. ೨-೬೪). [ ನಡು$_2$ + ತಲೆ$_1$ ]

**ನಡುದಾರ** (ನಾ). ಸೊಂಟಕ್ಕೆ ಕಟ್ಟುವ ನೂಲಿನ ಅಥವಾ ಚಿನ್ನ, ಬೆಳ್ಳಿಯ ಎಳೆ ; ಉಡಿದಾರ : (ಕ). [ ನಡು$_2$ + ದಾರ$_1$ ]

**ನಡುದಾರಿ** (ನಾ). ಮಾರ್ಗದ ಮಧ್ಯ ; ದಾರಿಯ ಮಧ್ಯ ; ನಡುಮಾರ್ಗ : ಹುಲಿ . . . ಕುದುರೆಯ ಮೇಲೆ ಬೀಳಲು ಸಿದ್ಧವಾಗಿ ನಡುದಾರಿಯಲ್ಲಿ ಕುಳಿತುಬಿಟ್ಟಿತು (ಕಳಕು. ೬). [ ನಡು$_2$ + ದಾರಿ ]

**ನಡುದೆರಪು** (ನಾ). ನಡುವಿನ ಸ್ಥಳ,-ಅಂತರ : ಎರಡುಂ ಸಗ್ಗಂಗಳ ನಡುದೆರಪಿನೊಳಧಿಯಾದ್ಯಮನ್ಯಮಲ್ಲದ ಮಧ್ಯಾಜರದೊಳ್ ಧರ್ಮಗ್ಲಾನಿಯ ನರಕದೊಳಲ್ಲರುವಾನಕಟ ! ನೆನೆಗಿಮ ! ಕೃಷ್ಣಂ (ಜಟ್ಟಿಅ. ೯-೬). [ ನಡು$_2$ + ತೆರಪು (<ತೆಱಪು) ]

**ನಡುದೊಱೆ**[3] (ನಾ). ನದಿಯ ಮಧ್ಯಭಾಗ ; ನಡುನೀರು : ನಡುದೊಱೆಯಲ್ಲಿ ಹುಟ್ಟುಹಾಕಿದಡೆ ಹಱುಗೋಲು ಮುಳುಗದೆ ಏಱಿದವರು ಸತ್ತರು (ಅವಚಂ. ೮೦-೩೩೦) ; ನಡುದೊ[ಪಾಠಾಂ. ತೊ]ಱೆಯೊಳಗೆ ಹಱುಗೋಲನಿಳಿದಾತಾಯಿತ್ತೆನ್ನ ಭಕ್ತಿ (ಬಸವ. ೯೮-೨೯೩).

[ ನಡು$_2$ + ತೊಱೆ$_3$ ]

**ನಡುನಾಡು** (ನಾ). ೧. (ದೇಶದ) ಮಧ್ಯಭಾಗ ; (ರಾಜ್ಯದ) ಮಧ್ಯಪ್ರದೇಶ : ಕಡೆವಿಡಿದು ಬಳಸಿ ನೀರಿರೆ ನಡು ಬಿತ್ತಿದ ಕೞಿಯನಿಂತು ಕಂಡುದಱಿಂದಂ ನಡುನಾಡೊಳಱಂ ನೆಲಸದೆ ಕಡೆಯೊಳ್ ನೆಲೆಗೊಳ್ವಂ (ಆದಿಪು. ೦೫-೪೦) ; ಕಡೆನಾಡ ಲಿಂಗವ ನಡುನಾಡಿಗೆ ತಂದೆನೆಂಬ ಅಹಂಕಾರವ ಮುಂದುಗೊಂಡಿದ್ದೆಯಲ್ಲಾ . . . ಗೊಹೇಶ್ವರಲಿಂಗವು ನಿನ್ನ ತಪ್ಪಿಸಿ ಹೋದುದ ಮಱೆದೆಯಲ್ಲಾ (ಅವಚಂ. ೨೦೯-೯೯೨) ; ಊರೂರ್ದಪ್ಪುದೆ ದೇವತಾನಿಳಯದಿಂ ಸದ್ವೃಕ್ಷದಿಂ ಚೆಲ್ವುವೆತ್ತೂರೂರ್ದಪ್ಪುದೆ ಬಲ್ಲಕುಂದೆ ನಡುನಾಱ್ ಸಂತಂ ಬಸಂತಂ ಕರಂ (ಜಾಪವಂ. ೯೬೪) ; (ಎಕ. XIV, ೨೭೦-೦೯ ; 1181 ನೋ). ೨. (ಮೂರು ಲೋಕಗಳಲ್ಲಿ) ಮಧ್ಯದಲ್ಲಿರುವ ಲೋಕ ; ಭೂಲೋಕ ; ಮರ್ತ್ಯಲೋಕ : ನಡುನಾಡ ರಸದ ಪದ್ಮೋಗ್ಬಾ ನಡುವಳ್ಳಿಯ ಕಾಮಧೇನು[ವಂ]ಗಣದೊಳಿನಿಪ್ಪದೆ ಪಣ್ತ ಕಲ್ಪತರುವೆಂದಡದೇವಣ್ಣಿಪುದೊ ರೂಪ ವಿದ್ಯಾಧರಿಯ (ಸಾಇಇ. XX, ೪೯-೩೫ ; ಸು. 1076 ?) ; ನಡುನಾಡು ಮೇಲ್ನಾಡು ಕೀಳುನಾಡೆಂಬ ಮುಪ್ಪೊಡವಿಯೊಡೆಯನ ಹೆಮ್ಮಗೆಗೆ ತಡೆಯುಂಟೆ (ಭರತ. ೪೪-೬೬).

ನಡುನಾಡ ತೀರ್ಥ = ೧. ಭೂಲೋಕಕ್ಕೆ ಪೂಜ್ಯವಾದ ಸ್ಥಳ,-ಶ್ರೇಷ್ಠವಾದ ಪ್ರದೇಶ : ನಡುನಾಡ ತೀರ್ಥಮೆನಿಸಲ್ಪಡೆದಿಂದ್ರಪ್ರಣಯಮೆಂಬ ಪರ್ವತಕಟಕಂಬಿಡಿದು ನಿಜಕಟಕಮಂ ತಾಂ ಬಿಡಿಸಿ ಮಗಂಗಿತ್ತು ಕೊಡೆಯುಮಂ ಪಟ್ಟಮುಮಂ (ಅನಂಪು. ೧೨-೨೯). ೨. ಭೂಲೋಕಕ್ಕೆ ಪೂಜ್ಯನಾದವನು ; ಓಂದಂ ಬಿರುದಂ : ಸಕಳಗುಣಸಂಪೂರ್ಣ್ಣಂ ಕಲಿಕಾಲಕರ್ಣ್ಣನಮಳಚರಿತ್ರಂ ನಡುನಾಡ ತೀರ್ತ್ಥಂ ಶ್ರೀಮತ್ಕೊಸಪೂರಾಯ್ಯಗಾವುಣ್ಡಂ (ಸಾಇಇ. XI-I, ೬೫-೨೯ ; 1028) ; ಬಮ್ಮ[೦]ಗಣ್ಡ ಎಲಪ್ಪೊರ್ಗಳೆ ನೆಗಟ್ದನವನೀತಳದೊಳ್ . . . ಕುನ್ದುಗನೊಳ್ಪಡೆದು ನಡು[ನಾ] [ಡ] ತೀರ್ತ್ಥನೀ ಮಹಿಮಂಗಳಂ (ಸಾಇಇ. XX, ೨೯ ೦೪ ; 1034).

[ನಡು$_2$ + ನಾಡು ]

**ನಡುನಿದ್ದೆ** (ನಾ). ನಿದ್ರೆಯ ಮಧ್ಯಕಾಲ ; ಗಾಢನಿದ್ರೆ : ಇದು ಬೇರೊಂದು ಕಾಲ ; ನಡುನಿದ್ದೆಯಲ್ಲಿ ಕನಸು ಬಿದ್ದ ಹಾಗೆ ತಣಿವಿಗಾಗಿ ಈ ನಾಡನ್ನು ತೆರೆದಂತಿದೆ (ಕುಸುಸಂ. ೧೩೮). [ ನಡು$_2$ + ನಿದ್ದೆ ]

**ನಡುನಿಲ್** (ಕ್ರಿ). (ಅಲಂ) ನಿಷ್ಪಕ್ಷಪಾತದಿಂದಿರು : ಎರಡುಂ ಪಕ್ಕಮುಮೊಂದೇ ಸರಿಯನೆ ನಡುನಿಂದು ನೆಗೞೆಯಾ ದ್ವಿಜವರನೊಳ್ ಕರವೊಸೆದು ತನ್ನ ಭಾರಮನಿರಿಸಿದವೊಲ್ ಪೆಂಪುಗೊಳಿಪನುತ್ತಮಪುರುಷಂ (ಚಕವಿ. ೧-೪೨). [ ನಡು$_2$ + ನಿಲ್ ]

**ನಡುನೀರ್, ನಡುನೀರು** (ನಾ). (ಸರೋವರ, ನದಿ ಮುಂತಾದಂವುಗಳ) ನೀರಿನ ಮಧ್ಯಭಾಗ,-ಜಲಮಧ್ಯ : ಅಂಜದೆ ಪೊಕ್ಕು ನಡುನೀರೊಳಾಡುವ ವನದೇವಿಯರ ಸೋರ್ಮುಡಿಯಿಂ ಪರೆದರಲ ಬೆರಕೆಗಂಪಿನ ಪೊಂಪುಳಿಯೊಳಂ (ಕಾದಂಪೂ. ೧೦೭) ; ಅನ್ಯಾಯದೊಳ್ಪಡೆದರ್ಥಂ ನಡುನೀರಿನೊಳಿಕ್ಕಿದೊಡಂ ಕಿಡುಗುಂ (ಧರ್ಮಾಮೃ. ೬-೧೫೮) ; ಹಿಡಿದುದ ಬಿಡದಿದ್ದರೆ ಕಡೆಗೆ ಚಾಚುವ ಅಲ್ಲದಿದ್ದರೆ ನಡುನೀರಲ್ಲದ್ದುವ ನಮ್ಮ ಕೂಡಲ ಸಂಗಮದೇವ (ಬಸವ. ೩೩೦) ; ಎಲೆ ಭಕ್ತ ನೀನೇಕೆ ನಡುನೀರೊಳರ್ದಪೆ (ರುದ್ರ. ಡೇ. ೨೦೦-೯) ; ನಡುನೀರೊಳೊಗೆದ ನಳಿನಮಂ ಮುಱಿಯಲೆಳಸಿ ಮುಗುಳ್ದು ತೆರೆವಿಡಿದೀಸುವೆಳೆವೇಡಿತಿ (ರಾಜಶೇ. ೬-೨೪೮). **ನಡುನೀರು** : ಕೃಪ ಗುರುಸುತರ ನುಡಿಗಳನು ನಡುನೀರಲಿ ನೃಪಧ್ವನಿಯ ಅಱಿದರುವರಾಲಿಸಿದರು (ಕುಮಾಗ. ೪-೪೩).

ನಡುನೀರಲ್ಲಿ ಕೈಬಿಡು, ನಡುನೀರಲಿ ಕೈಬಿಡು = ೧. ಪ್ರವಾಹದ ಮಧ್ಯದಲ್ಲಿ ಹಿಡಿತದ ಸಹಾಯವನ್ನು ತಪ್ಪಿಸು : ನಡುನೀರಲ್ಲಿ ಕೈಬಿಟ್ಟ ಹಾಗೆ (ಗಾದೆ). ೨. ನಂಬಿಕೊಂಡವರಿಗೆ ಅತ್ಯಗತ್ಯವಾದ ಸಮಯದಲ್ಲಿ ಉದ್ದೇಶಪೂರ್ವಕವಾಗಿ ಸಹಾಯ ನಿಲ್ಲಿಸು ; ಕೈಕೊಡು : ಆಕೆಯು ಅಂತಃಸ್ಥಿನ ಭವಿಷ್ಯವೆಲ್ಲ ನನ್ನ ಕೈಯೊಳಗಿರುವಾಗ್ಗೆ ನಾನೀಗ ಆಕೆಯನ್ನು ನಡುನೀರಲಿ ಕೈಬಿಡುವುದೆ ? (ನಡಿಆ. II, ೪೭೦). [ ನಡು$_2$ + ನೀರ್$_1$ ]

**ನಡುನೀರು** 'ನಡುನೀರ್' ನೋ.

**ನಡುನೆತ್ತಿ** (ನಾ). ತಲೆಯ ಮೇಲಿನ ಮಧ್ಯಭಾಗ ; ನಡುದಲೆ : ಮುಡುಮುಂ ಬೆನ್ನಂ ಕೊರಲಂ ನಡುನೆತ್ತಿಯನೆತ್ತಿಪೊಯ್ದು ರೊರ್ವರನೊರ್ವರ್ (ಗದಾಯು. ೮-೦೫); ಎರಡುಂ ಬಾಳಕ ಪದ್ಮಕಮೊರಡುಂ ಚಂದನಮೆನಿಪ್ಪುವಂ ತೆಳ್ಗಟ್ಟಿಯಿಂದರೆದು ನಡುನೆತ್ತಿಯೊಳ್ ಪೂಸೆ ರುಜಾರ್ತನ ತೃಷೆಯ ದಾಹದೊದವಂ ಕಳೆಗುಂ (ಲೋಕೋಪ. ೯-೨೮) ; ಆಧಾರ ಸ್ವಾಧಿಷ್ಠಾನ . . . ಆಜ್ಞೆ ಎಂಬ ಷಡಾಧಾರದ ಬಳಿವಿಡಿದು ನೆತ್ತಿಯಿಂದುತ್ತರಕ್ಕೆ ಉಜ್ವಳಿಸಿ ಹಾಯ್ದು ನಡುನೆತ್ತಿ ತೂತಾದರೂ ಲಿಂಗಸಾಹಿತ್ಯವಿಲ್ಲ (ಅರವ. ೧೧-೨೧) ; ನಿರವಧಿಯಂ ಕುಳಿರ್ಪುದಕಮಂ ನಡುನೆತ್ತಿಯೊಳಾಂತು ತನ್ನ ಕಣ್ಣುರಿಗುಪಶಾಂತಿಯಂ ಪಡೆದನಿಲ್ಲಭವಂ (ದಶಕು. ೧-೫೩) ; ಒಡೆದು ನಡುನೆತ್ತಿಯನು ಝಳಪಿಸಿ ಕಡುವೆಳಗು ಥಳಥಳಿಸಿ ತರಣಿಯ ತಾಡುಕಿ ಹಾಯ್ದುದು ರಶ್ಮಿ ರಂಜಿಸಿತಖಿಳದಿಗುತಟವ (ಕುಮಾದ್ರೋ. ೧೫-೭೧) ; ನಡುನೆತ್ತಿ ಬಿರಿದು

ಮುತ್ತುಗಳೊಡೆದುಚ್ಚಳಿಸುತ್ತೆ ಪಾಱೆ (ರಾಜಶೇ. ೩-೪೦). [ನಡು$_2$+ನೆಕ್ಕಿ]

**ನಡುನೆಲ** (ನಾ). ಮಧ್ಯದ ಪ್ರದೇಶ,–ಸ್ಥಳ: ಸನ್ನೆಯ ಭೇರಿಕಾಱರು ನಡುನೆಲದಲ್ಲಿ ಸನ್ನದ್ಧರಾಗಿ ನೆರೆದರು (ಧರಜ. ೫೧-೨೯). [ನಡು$_2$ + ನೆಲ]

**ನಡುನೆಲೆ** (ನಾ). ಮಧ್ಯಸ್ಥಿಕೆ; ನಿಷ್ಪಕ್ಷಪಾತತೆ: ನಡುನೆಲೆಯುಳ್ಳವನ ಬದುಕು ಅಱಿವಿಲ್ಲದೆ ಸಂತತಿಗಂ ಕಾಪುಳ್ಳುದಕ್ಕುಂ (ಕುಟಿಲ್. ೧-೧೨-೨).
[ ನಡು$_2$ + ನೆಲೆ ]

**ನಡುನೇಸಱ್**, ನಡುನೇಸಱು (ನಾ). ನಡುಹಗಲು; ಮಧ್ಯಾಹ್ನ: ಒಡಲಿಂತ ತನುವೀತನ ನೆವದಿಂದೆಂದು ಕಡುಗಳಲ್ದಾಕಾಶಮೆಂಬ ಮೃಢನುರಿಗಣ್ಣ ತೆಱೆದವೋಲು ನಡುನೇಸಱಡಸಿದುದೆಂದು ಬಣ್ಣಿಸುವ (ಶ್ರೀಪಾಲ. ೪-೫೪). **ನಡುನೇಸಱು**: ನಡುನೇಸಱಲಿ ತವು ನಿಲಬಲ್ಲದೇ ಜನನಾಥ (ನಿಘಾಗ. ೫-೧೨-೨೭). [ ನಡು$_2$ + ನೇಸಱ್ ]

**ನಡುನೇಸಱು** 'ನಡುನೇಸಱ್' ನೋ.

**ನಡುನೊಸಲು** (ನಾ). ಹಣೆಯ ಮಧ್ಯಭಾಗ: ಜಡೆಮುಡಿಯುನಳವಡಿಸಿ . . . ಭೂತಲೇಪನದೊಡಲು ನಡುನೊಸಲೊಳು ತ್ರಿಪುಂಡ್ರದ ರೇಖೆಗಳು ಮೆಱೆಯೆ (ಲಸಪು. ೩-೨೬). [ ನಡು$_2$ + ನೊಸಲು (<ನೊಸಲ್ ) ]

**ನಡುನೋಟ** (ನಾ). ಸ್ಥಿರವಾದ ನೋಟ; ನೆಟ್ಟ ದೃಷ್ಟಿ: ಪಸುಳೆಗುಪರಂ ತನ್ನ ಕಟ್ಟಿದಿರ ಪುರುಷೋತ್ತಮಮೂರ್ತಿಯನೆಮೆಯಿಕ್ಕದ ನಡುನೋಟದಿಂ ದಿಟ್ಟಿಸುತೆ ಕುಳ್ಳಿರಲ್ (ರಾಮಾಶ್ವ. ೭೭-೪). [ ನಡು$_1$ + ನೋಟ ]

**ನಡುಹಗಲ್** 'ನಡುವಗಲ್' ನೋ.

**ನಡುಪಟ್ಟಿ?** (ನಾ). (?): ತೊಡೆಯಿಂ ಕಡುಗುದುರೆಗಳು ವೇಗದಿಂ ನಡು [...] ಪಟ್ಟಿ ದಂತಿಯುಂ ನಿಮಿರ್ದೋಳು ಕಡುವಾಳಂ ಕೂರಸಿಯಿಂ ಕಪಂಗಿಪಣೆಯಂ ಸಮಂತು ಬಸವಾಗಿಸುವಂ (ಕಾವ್ಯಾವ. ೨೩೧); ಚಿತ್ರಭವ ಚಕ್ರವರ್ತಿಯ ನಡುವಟ್ಟ ಪಟ್ಟದಾನೆಯಂತೆ ಮಾಗಮಾಗಿಸುವ ಮದಮದದ ಸೊನೆಸೊನೆಯಂ ಬಿಡುವ ಬಾಳರಸಾಳಂಗಳಿಂ ಕಾಮದೇವನ ದೀಪದ ಓಡಿನಂತಿರ್ಪ ಕಳಪಂಸೆಗಳಿಂ . . . ಮನಂಗೊಳಿಸಿ (ಅರ್ಧನೇ. ೪-೬೨ ವ).
[ ? ]

**ನಡುಪಟ್ಟಿ** (ನಾ). ೧. ಸೊಂಟಕ್ಕೆ ಕಟ್ಟಿಕೊಳ್ಳುವ ಚರ್ಮ, ವಸ್ತ್ರ, ಲೋಹ ಮುಂತಾದಂವುಗಳ ಪಟ್ಟಿ; ಬೆಲ್ಟು: ಅವಳು ಬಿರುಬಿರನೆ ಕೈಚಾಚಿ, ನೋಟನ್ನು ಕಸಿದುಕೊಂಡು ತನ್ನ ನಡುಪಟ್ಟಿಯ ಕೆಳಗೆ ಬಚ್ಚಿಟ್ಟುಕೊಂಡಳು (ಪುನರು. ೧೯೫); ಕಯ್ಯ ಪಟ್ಟದ ಖಡ್ಗವನ್ನು ನಡುಪಟ್ಟಿಯ ಒರೆಯೊಳಕ್ಕೆ ಸಶಬ್ದವಾಗಿ ನೂಂಕಿಬಿಡುವನು (ಬಿರುಗಂ. ೩೧-೬). ೨. ಸೊಂಟದಲ್ಲಿ ಧರಿಸುವ ಒಂದು ಬಗೆಯ ಆಭರಣ; ಒಡ್ಯಾಣ; ಡಾಬು. [ ನಡು$_2$ + ಪಟ್ಟಿ$_2$ ]

**ನಡುಪಳ್ಳಿ**, ನಡಪ್ಪಳ್ಳಿ (ನಾ). ಒಂದು ಸ್ಥಳದ ಹೆಸರು: ನಡುನಾಡರಸದ ಪೆರ್ದೊರೆಟ ನಡುಪಳ್ಳಿಯ ಕಾಮಧೇನು[ವಂ] ಗಣದೊಳೆನಿಪ್ಪುದೆ ಪಣ್ಣು ಕಲ್ಪತರುವೆಂದಡದೇವಣ್ಣಿಪುದೊ ರೂಪವಿದ್ಯಾಧರಿಯ (ಸೌಇಇ. XX, ೪೬-೩೫: ಸು. 1076 ?). **ನಡಪ್ಪಳ್ಳಿ**: ನೇಱಿಲೆಯುಂ ಪಮಿಯೊತ್ತಿಂ ನಡಪ್ಪಳ್ಳಿಮೂಱುಣಂ ನಡಲು ಎಪ್ಪಳ್ಳಿ (ಎಕ. VI, ಚಿಕ್ಕಮ. ೯೫-೧೫; ಸು. 1025 ?). [ ನಡು$_3$ + ಪಳ್ಳಿ$_1$ ]

**ನಡುಪಾಯ್** 'ನಡುಂಪಾಯ್' ನೋ.

**ನಡುಪ್ರಾಯ** (ನಾ). ಮಧ್ಯವಯಸ್ಸು: ಅವರು ನಡುಪ್ರಾಯದಲ್ಲಿ ತೀರಿ ಹೋದುದರಿಂದ ಸಂಸಾರಕ್ಕೆ ಬಹಳ ಕಷ್ಟವಾಗಿದೆ (ರೂಢಿ).
[ ನಡು$_2$ + ಪ್ರಾಯ ]

**ನಡುಬನ** (ನಾ). ಕಾಡಿನ ಮಧ್ಯಭಾಗ; ಅರಣ್ಯದ ಒಳಭಾಗ: ಸ್ವರ್ಗಸ್ಥರಾದರು ತಂದೆ ಕನ್ನಡಿಗನ ನಡುಬನದೊಳು ಬಿಟ್ಟ ಹಾಗೆ (ಕಂಠಾಪ. ೨೧-೯೫). [ ನಡು$_2$ + ಬನ ]

**ನಡುಬಾನು** (ನಾ). ಆಕಾಶದ ಮಧ್ಯಭಾಗ: ನಡುಬಾನೇಱಿದುಷ್ಣಾಂಶುಮಂಡಲವಲ್ಲಿ ಕಡು ಸೊಗಸಿತು (ಶ್ರೀಪಾಲ. ೪-೪೮).
[ ನಡು$_2$ + ಬಾನು$_3$ (<ಬಾನ್$_3$ )]

**ನಡುಬಾವಿ** (ನಾ). ಬಾವಿಯ ಮಧ್ಯಭಾಗ: ಶ್ರೀವಿಜಯಮುನಿ ಹೋಗಿ ತಾ ನಡುಬಾವಿಯುಲಿ ಬಿದ್ದನು (ಲಸಪು. ೫೧-೧೭). [ ನಡು$_2$ + ಬಾವಿ ]

**ನಡುಬೀಡು** (ನಾ). ಸ್ವಲ್ಪ ಬೆಳೆ ಬೆಳೆಯುವ ಹೊಲ ಮುಂತಾದಂವು: ಕೀಳು ಮೇಲು ನಡುಬೀಡುಬೀಡು ಬಿಯ ಕಪ್ಪುಪೊಪ್ಪ (ಸೌಇಇ. ೧೯೩೬, ಪುತ್ತೂರು. ೧೧೪-೯; 1282). [ ನಡು$_2$ + ಬೀಡು$_2$ ]

**ನಡುಬೀದಿ** 'ನಡುವೀದಿ' ನೋ.

**ನಡುಬೆಟ್ಟ** (ನಾ). ಬೆಟ್ಟದ ಮಧ್ಯಭಾಗ: ನಡುಬೆಟ್ಟಕ್ಕೆ ಹತ್ತುವ ವೇಳೆಗೆ ಬಿಸಿಲೇರಿಬಿಟ್ಟಿತು (ರೂಢಿ). [ ನಡು$_2$ + ಬೆಟ್ಟ (<ಬೆಟ್ಟು$_2$)]

**ನಡುಬೆಟ್ಟು** (ನಾ). = ನಡುಬೆರಳು: (*).
[ ನಡು$_2$ + ಬೆಟ್ಟು$_3$ (<ಬೊಟ್ಟು$_1$) ]

**ನಡುಬೆನ್**, ನಡುಂಬೆನ್ನು (ನಾ). ಬೆನ್ನಿನ ಮಧ್ಯಭಾಗ: ಇಱಿದು ಮರದಿಂದಮಾಗಳ್ ಕೆಲಗೆಲ್ಲಂ ಪರೆದು ಬಿರ್ದ ಶುಕಸಂತತಿಯಂ ಗಟಗಟಿಸಿ ಕಟ್ಟಿ ನಡುಬೆನ್ನಿಱಿವಿನೆಗಂ ಪೊತ್ತು ಪೋದನಾ ಮುದುವೇಢಂ (ಕಾದಂಪೂ. ೮೮೬); ನಡುಬೆನ್ನಂ ಸಟ್ಟನೆ ಸೀಟಿಯುಂ (ಅಜಿಪು. ೧೦-೧೦ ವ). **ನಡುಬೆನ್ನು**: ಮೂಟೆ ಹೊತ್ತು ನಡುಬೆನ್ನು ಮುರಿದುಹೋಯಿತು (ರೂಢಿ).
[ ನಡು$_2$ + ಬೆನ್ ]

**ನಡುಬೆನ್ನು** 'ನಡುಬೆನ್' ನೋ.

**ನಡುಬೆರಳು** (ನಾ). (ಹಸ್ತದ ಅಥವಾ ಪಾದದ ಐದಂ ಬೆರಳಂಗಳಲ್ಲಿ) ಮಧ್ಯದ ಬೆಟ್ಟು, – ಬೆರಳು: ಮಗುವಿನ ನಡುಬೆರಳಿನಲ್ಲಿ ಉಂಗುರವಿದೆ (ರೂಢಿ). [ ನಡು$_2$ + ಬೆರಳು ( < ಬೆರಲ್ ) ]

**ನಡುಬೊತ್ತು**, ನಡುಹೊತ್ತು (ನಾ). = ನಡುನೇಸಱ್: ಮತ್ತಂ ಪೊಗೆಹೋದ ತಱಿಗೆಂಡದೊಳಗೆ ನಡುಬೊತ್ತಾಗುವನ್ನವರ ಮಬಚ್ಚಳಂ ಮುಚ್ಚಿರಿಸಿ (ಸೂಪಶಾ. ೨-೧). ಅಂಬರಮೆಂಬವನಿಯ ಹೊತ್ತ ಭೂಧರವೆಂಬ ಶೇಷನ ಮಸ್ತಕದ ಕೆಂಬೆರಲೆನೆ ನಡುಬೊತ್ತಿನೊಳೆಸೆದುದು ಬಿಂಬಮಂಭೋರುಹಸಖನ (ಶ್ರೀಪಾಲ. ೭-೪೯). **ನಡುಹೊತ್ತು**: ದೂರದ ಪೊಳಲಿಗೆ ಯಾತ್ರೆ ಹೊರಟಿದ್ದೇನೆ. ನಡುಹೊತ್ತಿನಲ್ಲಿ ಆಸರೆ ಸಿಕ್ಕೀತೆಂದು ಇಲ್ಲಿಗೆ ನುಗ್ಗಿದೆವು (ಹಾಹುತ್ತ. ೯೦).
[ ನಡು$_2$ + ಪೊತ್ತು$_3$ ( < ಪೊಟ್ಟು ) ]

**ನಡುಭವಗಾವುಂಡ** (ನಾ). ಒಬ್ಬಾತನ ಹೆಸರು: ಅಂಕಗವುಣ್ಡಗೆ ಪಲಮ್ಮೆಗೆ ಟಿಗಾವಣ್ಡಂ ನಡುಭವಗಾ[ವು]ಣ್ಡಂಗೆ ತೆಲುಗರ ಮಾರಿಗಾವುಣ್ಡನೊಳ್ಪಿಣ್ಗಿಟ (ಎಕ. IV, ಹೆಗ್ಗಡ, ೧೦೪-೧೮; 1037).
[ ? + ಗಾವುಂಡ ( < ಗಾಮುಂಡ ) ]

**ನಡುಭಾಗ** (ನಾ). ಮಧ್ಯಭಾಗ: ನದಿಯ ನಡುಭಾಗದಲ್ಲಿ ಬಹಳ ಆಳವಿದೆ (ರೂಢಿ). [ ನಡು$_2$ + ಭಾಗ ]

**ನಡುಮಂಡೆ** (ನಾ). = ನಡುದಲೆ: ಭಂಡರಾದವಲಾಯೆನುತ ನಡುಮಂಡೆಯನು ತುಡುಕಿದನು ಮೆಱೆವುದ್ದಂಡಜಡೆಯನು ಕಿತ್ತು ಬೀಸಾಡಿದನು ಭೂತಳಕೆ (ನಿಘಾಗ. ೪-೨-೪); ದಂಡೆ ಕಾಣದು ನಮ್ಮೂರು ನಡುಮಂಡೆ ಸ್ಥಳವೆ ನಮ್ಮೂರು (ಪುರಂದ. ೫-೭೧-೧). [ ನಡು$_2$ + ಮಂಡೆ$_1$ ]

**ನಡುಮಟ್ಟ$_1$** (ನಾ). ನಡುವಿನ ಮಟ್ಟ; ಸೊಂಟದ ಸಮ: ಅವನು ನಡುಮಟ್ಟದ ನೀರಿನಲ್ಲಿ ನಿಂತಿದ್ದಾನೆ (ರೂಢಿ). [ ನಡು$_2$ + ಮಟ್ಟ$_1$ ]

**ನಡುಮಟ್ಟು$_2$** (ಅ). ಸೊಂಟದ ವರೆಗೆ; ಸೊಂಟದ ತನಕ: ಆ ಕೆರೆಯಲ್ಲಿ ಒಬ್ಬ ಮನುಷ್ಯನ ನಡುಮಟ್ಟ ಬರುವಷ್ಟು ಮಾತ್ರ ನೀರಿದೆ (ರೂಢಿ).
[ ನಡು$_2$ + ಮಟ್ಟ$_6$ ]

**ನಡುವಣ್ಣು** (ನಾ). (ತಕ್ಕಮಟ್ಟಿಗೆ ಚೆನ್ನಾಗಿರುವ) ಮಧ್ಯಮವರ್ಗದ ಭೂಮಿ: (ಕಸಂಗ್ರಾ. ೧೬). [ ನಡು₂ + ಮಣ್ಣು (<ಮಣ್) ]

**ನಡುಮಧ್ಯ₁** (ನಾ). ನಡುಭಾಗ ; ಮಧ್ಯಭಾಗ ; ನಟ್ಟನಡು : ನಡುಮಧ್ಯದಲ್ಲಿ ನಕ್ಷತ್ರ ಉದಯವಾಗಲಂ . . . ಕಾಳರಾದೇವಿ ಕಿಡೆಮುಱಿದೋಡಿದಳು ನೋಡಾ (ಸಿದ್ಧೇವ. ೪೮-೦೩೩) ; ಸುತ್ತ ಮೆರೆದಿಹ ಸೇನೆ ನಡುಮಧ್ಯದೊಳು ಹಿಮಕರನಾ ಚಿತ್ರಧವನವೊಯೆನಲು ರಂಜಿಸುವೆತ್ತ ನಿಜಬೀಡಿನಲಿ . . . ಎಸೆದನು ಕೇಳು ಕೌರವನು (ಜೈಭಾ. ೫೭-೨) ; ಬಿಡಾರವಿರುವವನಿಗೆ ನಡುಮಧ್ಯವಾದರೇನು ? (ಗಾದೆ).

[ ನಡು₂ + ಮಧ್ಯ₁ ]

**ನಡುಮಧ್ಯ₂** (ಅ). ಮಧ್ಯಭಾಗದಲ್ಲಿ ; ನಟ್ಟನಡುವೆ : ನಡುಮಧ್ಯ ಇರುವಂಥ ಸೀಮೆಯನ್ನು ಕಟ್ಟಿಕೊಂಡು (ರಾಜೇಂದ್ರ. ೨೮).

[ ನಡು₂ + ಮಧ್ಯ₂ ]

**ನಡುಮಧ್ಯೆ** (ಅ). ಮಧ್ಯಭಾಗದಲ್ಲಿ ; ನಟ್ಟನಡುವೆ : ಇಬ್ಬರು ದುಷ್ಟರಿಗೆ ಜಗಳವಾಗುತ್ತಿರುವಾಗ ನಡುಮಧ್ಯೆ ಪ್ರವೇಶಿಸುವುದು ಅಪಾಯಕರ (ರೂಢಿ); ನಡುಮಧ್ಯೆ ಇವರ ಕಿತಾಪತಿ ಬೇರೆ (ರೂಢಿ). [ ನಡು₂ + ಮಧ್ಯೆ₂ ]

**ನಡುಮನೆ** 'ನಡುಂವನೆ' ನೋ.

**ನಡುಮರ** (ನಾ). ವೃಕ್ಷದ ಮಧ್ಯಭಾಗ : ನಡುಮರ ಹತ್ತಿ ಬುಡ ಕಡಿದ (ಗಾದೆ). [ ನಡು₂ + ಮರ₁ ]

**ನಡುಮಾಳ** (ನಾ). ಮೈದಾನದ ಮಧ್ಯಭಾಗ ; ನಡುಬಯಲು ; "[illegible]" ([illegible]) : [illegible] : [illegible] . . . [illegible] ಮಾಗಿ ನೀರ್ವಿಲ್ಲದ ಮಗುಬೀಳ್ವುದು ಪಿಂದಿರಾರ್ಗೆಂಬು (ಪಂಪಭಾ. ಸ. ೧೯೩ ಪ್ರಯೋ). 'ನಿಡುಂವಾಳ್' ಪಠಾ. [ ನಡು₂ + ಮಾಳ₄ ]

**ನಡುಮುರಿ₁** (ಕ್ರಿ). ೧. ಸೊಂಟ ಬಾಗು, – ಬಗ್ಗು : ನಡುಮುಱಿ[ಂ]ದು ಗುಡುಗಳಿ ತಲೆ ನಡುಗಿ . . . ಒಂದನಾಡಹೋಗಿ ಒಂಬತ್ತನಾಡುವ ಅಜ್ಜಾನಿಗಳೆಲ್ಲರೂ ಹಿರಿಯರೆ (ವಚನ. ೪. ೧೫೯-೩೩೩). ೨. (ಅಲಂ) ಸಂಪೂರ್ಣ ಶಕ್ತಿಗುಂದು. [ ನಡು₂ + ಮುರಿ₁ ]

**ನಡುಮುರಿ₂** (ಕ್ರಿ). ೧. ಸೊಂಟವನ್ನು ಮುರಿದುಹಾಕು. ೨. (ಅಲಂ) ನಾಶಮಾಡು ; ಹಾಳುಮಾಡು : ಬರುತದೆ ! ಮೈತೋರದೆ ಬರುತದೆ ! ಅದೆ – ನಡುಮುರಿಯುತ ನಗನಾವೆಗೆ, ಕೂವೆಗೆ (ಕೆವಿಪು. ೨೭-೩).

[ ನಡು₂ + ಮುರಿ₂ (<ಮುಱಿ₁) ]

**ನಡುಮೂಗು** (ನಾ). ಮೂಗಿನ ಮಧ್ಯಭಾಗ ; ನಾಸಿಕದ ನಡುಭಾಗ : ನಡುಮೂಗು, ನಾಸಾಸೇತು (Bridge of the nose. ಪಾರಿಸಿ. ೧೦).

[ ನಡು₂ + ಮೂಗು₁ ]

**ನಡುರಂಗ** (ನಾ). (ದೇವಸ್ಥಾನದ) ಮಧ್ಯಭಾಗದಲ್ಲಿರುವ ರಂಗಮಂಟಪ, ಸಭಾಮಂಟಪ ; ನವರಂಗ : ಗುಡಿಯ ಬೋದಿಗೆ ಕಲ್ಲು ನಡುರಂಗ ತಾ ಕಲ್ಲು ಕಡೆಮೂಲೆ ಸೆಬಗು ತಾ ಕಲ್ಲು ವರವನು ಕೊಡುವಾತ ಬೇಱಿ (ಸರ್ವಜ್ಞ. ೨೦೫). [ ನಡು₂ + ರಂಗ₂ ]

**ನಡುರಾತ್ರಿ** (ನಾ). ಮಧ್ಯರಾತ್ರಿ ; ಸಮರಾತ್ರಿ : ನಡುರಾತ್ರಿಯಿಂದ ಮುಂಜಾನೆ ನಾಲ್ಕು ಗಂಟೆಯ ತನಕ ವಿಶ್ರಾಂತಿ ತೆಗೆದುಕೊಳ್ಳುವರು (ರಾಜವಿ. ೭೮). [ ನಡು₂ + ರಾತ್ರಿ ]

**ನಡುರಾತ್ರೆ** (ನಾ). = ನಡುರಾತ್ರಿ : ಆತನಿಗೆ ಈಗ ನಡುರಾತ್ರೆಗೆ ತನ್ನನ್ನು ಕರೆದು ಮನೆ ತುಂಬಿದ ಕಣ್ಣುಗಳಿಂದ 'ನನ್ನನ್ನು ರಕ್ಷಿಸು' ಎನ್ನುತ್ತಿದ್ದ ತಂಗಿಯನ್ನು ಇದಿರಿಸುವುದು ಸಾಧ್ಯವಾಗಲಿಲ್ಲ (ವಾತ್ಸಲ್ಯ. ೩೩೭) ; ಈ ನಡುರಾತ್ರೆಯಲ್ಲಿ ಭೀತಿಯಿಲ್ಲದೆ ನನ್ನ ಬೆಂಬತ್ತಿ ಬಂದವನು ನೀನು ಯಾರು ? (ಬಕ್ಕೀಸ. ೩೦). [ ನಡು₂ + ರಾತ್ರೆ ]

**ನಡುವಂತರ** (ನಾ). ೧. ನಡುವೆ ಇರುವ ಸ್ಥಳ. ೨. ಮಧ್ಯದ ಅವಸ್ಥೆ, ಕಾಲ : ಹೀಗೆ ನಡುವಂತರದಲ್ಲಿ ಕೈಬಿಟ್ಟುಬಿಟ್ಟರೆ ಯಾರು ಗತಿ ? (ರೂಢಿ).

[ ನಡು₂ + ಅಂತರ ]

**ನಡುವಗಲ್, ನಡುಂವಗಲ್, ನಡುಂವಗಲು, ನಡುಂಹಗಲು** (ನಾ). ಹಗಲಿನ ಮಧ್ಯಭಾಗ; ಮಧ್ಯಾಹ್ನ; ನಡುಂಹೊತ್ತು: "ಮುಂಬಗಲ್, ನಡುವಗಲ್, ನಡೆವಗಲ್ – ಇವು ೩ ತ್ರಿಕಾಲಂಗಳ್" (ಶಬಸಾ. ೫೭-೨೫೦) ; ನಡುವಗಲ ಬಿಸಿಲ್ವೆಸ್ನಂ ಸುಡೆ ವನಕರಿ ಕಮಳಬಂಧುವೊಳ್ದಿನಕರನೊಳ್ ಕಡುಗಾಯ್ಪಿನೆ ಸರಸಿಜವುಂ ಕಿಡಿಸಲ್ಕಾಂ ಪೊಕ್ಕುದಾಗ ಬಗೆಗಾ ಕೊಳನಂ (ಕವಿರಾ. ೩-೦೦೪); ನರೇಂದ್ರ ನೋಡೀ ನಡುವಗಲೊಳ್ ಚಕ್ರವಾಕವಧು ವಿರಹಿಸುವಳ್ (ಆದಿಪು. ೧೧-೬೩) ; ಕಡುವೊತ್ತಾದುದು ರವಿಯುಂ ನಡುವಗಲೊಳ್ಮಂದು ಕಿದಱಿದಂ ಕರತತಿಯಿಂ ಕಿಡಿಗಳನೆನೆ ಬಿಱುವಿಸಿಲುಂ ಸುಡುತಿರೆ ನೀರಡಿಕೆ ತಿಣ್ಣಮಾದತ್ತಾಗಳ್ (ಶಾಂತಿಪು. ೧೯೬) ; ನಡುವಗಲಾದಿತ್ಯನಂತೆ ನೋಡಲರಿದು (ಧರ್ಮಾಮೃ. ೩-೦೫೬) ; ಸೊಲ್ಲಿಸಲು ಬಾರದಾನಂದದಿಂದಾಡಿ ಪಾಡಿದನು ನಡುವಗಲ ತನಕ (ಸಿದ್ಧರಾ. ೨-೦೬) ; ನಡುವಗಲೊಳ್ ಕಡುನೀರ ನೊಳೊಡವೆರೆದ ಬಳಲ್ಕೆಗಳೆಯಲೆಳಸಿ ಪೊಳಲನೊಳಪೊಕ್ಕು ಮೈದೊಳೆದು (ರಾಜಶೇ. ೬-೨೪೫) ; ನಡುವಗಲ ಭಾಸ್ಕರಂ ನಿಶ್ಚಲಂ ಪೊಳೆಯುತಿರ್ದಂ (ರಾಮಾಶ್ವ. ೩೧-೧೩). **ನಡುಹಗಲ್** : ಮರುಸ್ಥಳದ ಪಾಳದೊಳ್ ನಡುಪಗಲ್ವರಂ ಗ್ರೀಷ್ಮದೊಳ್ ಸುರುಳ್ವಿನೆಗಮುಱ್ದ ಬೇವವರ್ಗೆ ಜೋಂಪ ಮಿಮ್ಮಾ ಪ್ರವಿಜ್ಜುರಾಂಬು ದೊರೆಕೊಳ್ವವೊಲ್ (ಆದಿಪು. ೧೩-೫೭) ; ನಡೆಯಲ್ಕೆಂದು ಪೋಗಿ [illegible] ನಡುಪಗಲಂ [illegible] (ಪರ್ವಪು. ೩-೨). [illegible] : ನಡುವಗಲಿನ ಸನ್ನೆಯಾದುದು ವಾದಕರೆದುಬಲಕೊಲೆದು ಸಾಗಿದರು (ಭರತೇ. ೧೬-೦೨೪) ; ನಡುವಗಲಿನ ಬೇಸಗೆಯ ಮಾರ್ತಂಡನ ಕಡುಝಳದುಬ್ಬರಕಾಗ ಅಡಗುವ ಹಿಮದೊಲಿಪ್ಪತ್ತುಸಾವಿರಬಲ ಮಡಿದುದು (ಕಂನವಿ. ೦೫-೫೯) ; ನಡುವಗಲಲ್ಲಿ ತಾಂ ನಡಪಿ ದಂತಿಗಳಂ ರವಿತಪ್ತಯೂಥಮಂ ಬಿಡದತಿ ಶೀತಲಸ್ಥಲವ ಸೇವಿಸುವಂತೆವೊಲ್ (ಶಾಕುಂತ. ೬೨-೧೦೫) ; ಬೆಳಗು ಬೈಗನು ದುಃಖ ಸುಖದ ಸಮಶೀತೋಷ್ಣದೊಳಗದ್ದಿ, ನಡುವಗಲು ಕುದಿಸಿ ಒಣಗಿಸಿ (ನಲಮು. ೬೪-೩). **ನಡುಹಗಲು** : ಕಂಡಿರೇ ಮುರವೈರಿ ದಳಪತಿ ಚಂಡಬಳನಹ ನಡುಹಗಲ ಮಾರ್ತಾಂಡನಂತಿರೆ ತೋಱುತ್ತದನೆ ರಥವ ತಿರುಹಿಂದ (ಕುಮಾವ್ಯಾ. ೦೪-೩೭) ; ನಡುಹಗಲ ಸೂರ್ಯನನಳುಕಿಸುವುದೇ ಮಂಜು (ನಿಘಾ. ೧೦-೫೭-೪೮) ; ನಡುಹಗಲ ಸಿರಿಹೊತ್ತು, ಭಾಸ್ಕರನ ಸುಳುವಿಲ್ಲ (ಗೊರೂ.ಘಾ. ೧೦-೨೭೩) ; ನಡುಹಗಲಿನ ಆಕಾಶವನ್ನು ನೀವು ನೋಡಿರಬಹುದು (ರಾಮಾನ. ೧೦೪) ; ನಡುಹಗಲಲ್ಲಿ ಸೂರ್ಯನ ಸೆಕೆಯಿಂದ ಪಾರಾಗಲು, ತಂಪಾದ ನೆರಳಲ್ಲಿ ಮಲಗಿ ವಿಶ್ರಾಂತಿ ಪಡೆದರು (ಮಂಡಸ. ೭೯).

[ ನಡು₂ + ಪಗಲ್ ]

**ನಡುವಗಲು** 'ನಡುವಗಲ್' ನೋ.

**ನಡುವಗಲ್ಪಂಜು** (ನಾ). (ದೇವರ ಅಥವಾ ಹಿರಿಯ ವ್ಯಕ್ತಿಗಳ ಗೌರವಾರ್ಥವಾಗಿ) ಮಧ್ಯಾಹ್ನದಲ್ಲಿ ಉರಿಸುವ ಪಂಜು ; ಹಗಲುದೀವಟಿಗೆ : ಪಿಡಿದೆರಳ್ ಸತ್ತಿಗೆಗಳೆರಡೆರಳ್ ಚವರಗಳ ನಡುವಗಲ್ಪಂಜುಗಳ . . . ಗದಾದಿಯಾಯುಧಮನುಱಿ ಜಡಿವುತ್ತ ಸಿಡಿಲ ಬಳಗಂಗಳೆನೆ ಬಂದುದು ಪದಾತಿಬಲಮೇನೆಂಬೆನು (ಚಬಪು. ೪೭-೩೭). [ ನಡುವಗಲ್ + ಪಂಜು ]

**ನಡುವಟ್ಟು** (ನಾ). ಬಿಂಬದ ಮಧ್ಯಭಾಗ ; ಮಂಡಲದ ನಡುಭಾಗ : ಒಡಲೊಳ್ ಪುತ್ರಪವಾವ ವಸ್ತುವನಹೀಂದ್ರಂ ಕಂದದೊಳ್ ಶಾರ್ಙ್ಗನುಂ ನಡುವಟ್ಟೊಳ್ ಪಗಲಾಣ್ಮಂ . . . ತೊಡರ್ದಿರ್ಕಾ ಪರವಸ್ತು ವೀರ ಚಿಕದೇವೇಂದ್ರಕ್ಷಮಾಪಾಲನಂ (ಚಿಕವಿ. ೫-೨) ; ಅಚ್ಚಪೊಚ್ಚವೊಸ ಸೇವಂತಿಗೆಯೆಸಟ್ಟರದ ಸುತ್ತಿನಿಂದಿನಿಸುಂ ನಡುವಟ್ಟನುಱಿದು ತಲೆಯೆಡೆಯಂ

ಬೆಳರ್ಗಿಸುವೋರೆಸಿಕ್ಕಿ ತನ್ನ ಕುಲದೇವಿಗ್ಗೆಯಂ ನಿಟ್ಟಸಲ್ಕಿಟಿತಂದ ಚಂದಿರನೆಂಬ ಸಂದೆಯುಮಂ ಸಮನಿಸುತ್ತಿದೆ (ಚಿಕವ. ೮೧-೨೧).

[ ನಡು₂ + ಬಟ್ಟು₁ ]

**ನಡುವಟ್ಟೆ** (ನಾ). ಮಧ್ಯದಾರಿ ; ಮಾರ್ಗಮಧ್ಯ : ಪೆಸರ್ವೆತ್ತ ತೀರ್ಥ ಕ್ಷೇತ್ರಂಗಳೊಳ್ ಸಂಚರಿಸುತಿಪ್ಪನ್ನಂ ನಡುವಟ್ಟೆಯೊಳ್ ಪಲಂಬರಂ ಕರ್ವೇಡರಂ ಕಂಡಂ (ಧರ್ಮಾಮೃ. ೭೭-೧೩). [ ನಡು₂ + ಬಟ್ಟೆ₁ ]

**ನಡುವನ** (ನಾ). ಕಾಡಿನ ಮಧ್ಯಭಾಗ; ಅರಣ್ಯದ ಮಧ್ಯಭಾಗ: ನೆರಹಿದರದಟಗಂಧರ್ವರು ಭಟವ್ರಜವ ಬಂದುದದು ನಡುವನಕೆ ಕೌರವ ವೃಂದವನು ಕರೆದರು ವಿನೋದಕೆ ಬಂದಿರ್ದೆ ನಾರಾಚಸಲಿಲಕ್ರೀಡೆಯಿದ ಯೆನುತ (ಕುವ್ಯಾ.ಅ. ೧೯-೩೩). [ ನಡು₂ + ವನ ]

**ನಡುವನೆ, ನಡುಮನೆ** (ನಾ). ಮನೆಯ ಮಧ್ಯಭಾಗ : "ನೆಟ್ ನಡುವನೆ ನಟ್ಟವನೆಯುಮುಕ್ಕು ಬುಧರಿಂ" (ಕವಿಕಂ. ೧೪೪). ನಡುಮನೆ : "ನಟ್ಟವನೆ ಯೆನೆ ನಡುಮನೆಯುಮಕ್ಕು" (ಕಲ್ಯಾಕೃ. ೪೩); ಅಸುವೆವೊರರಲೊನಕೆ ಗೂಟಂ ಪೊಸತಿಲು ನಡು[ಪಾಠಾಂ. ಮನೆ]ಮನೆಯ ಕಂಭವೊಲೆ ಪಡಿ ಪಾಲುಂ . . . ಸಮಸ್ತಂ ದೆಯ್ವವಿಂತಿವೆಂಬವರ್ಗೋಥರ್ (ಸಮಹ. ೯-೮೨); ನಡುಮನೆ ಯೊಳಿರ್ದವನ ಕೋಣೆಗೊಡಗೊಂಡೊಯ್ದು ಪಡಿಗದವನಿಕ್ಕಿ ಉಮ್ಮಳಿಸಿ ಸುಜ್ಜನೆ ಸುಯ್ದು ಬಂದ ಭಕ್ತರ್ಗೆ ನೆಟ್ ಬೋನವಂ ಮಾಡುತಿರೆ (ಕಲಿಕಾ. ೭೭-೦೭) ; ತನ್ನ ಭಾತ್ರನಪ್ಪ ಯಜ್ಞನಂ ನಡುಮನೆಯ ಜಗಲಿಯಿಂ ತೆರಳಲಾಗದೆಂದು ನಿಯಮವಾಜ್ಞೆಯಂ ಕೊಟ್ಟು ಪೋಗೆ (ಧರ್ಮಾಪ. ೩-೦೩೮); ನಡುಮನೆಯೊಳಗೊಂದು ನಾಲ್ಕು ತೆಂಗಿನ ಮರ . . . ತಲೆ ಮೊದಲಿಲ್ಲದ ಬೆಳದು ಹಣ್ಣಾಯಿತು (ಪುರಂದ. ೨-೧೯೦ ಹಲ್ಲವಿ); ಊಟವಾದ ಮೇಲೆ ನಡುಮನೆಯಲ್ಲಿ ಕುಳಿತುಕೊಂಡು ಮೂವರೂ ಲೆಕ್ಕದ ಪರಿಶೀಲನೆ ಮಾಡ ತೊಡಗಿದರು (ಮುಳಿ. ೦೫೮) ; ವೆಂಕಮ್ಮನವರು ನಡುಮನೆಗೆ ಬಂದು ಹುಡುಗರ ಗುಂಪನ್ನು ನೋಡಿ ಸ್ವಲ್ಪ ದಿಗಿಲು ಬಿದ್ದರು (ಕಳಹು. ೧೦).

ನಡುಮನೆ ಕಂಬ = ಮನೆಗೆ ಆಧಾರಸ್ತಂಭದಂತಿರುವವನು ; ಮನೆಯ ಹಿರಿಯ,–ಮುಖ್ಯಸ್ಥ. [ ನಡು₂ + ಮನೆ ]

**ನಡುವರಿ** (ನಾ). [ನಾಟ್ಯ] ಕರಣಗಳಲ್ಲಿ ಒಂದು ಬಗೆ: ನಡುವರಿ ಮೊಸಳೆವರಿ ಜಲಶಯನಚ್ಯುತಂ ಮತ್ಸ್ಯಪುಟಂ ಲಂಕಾದಹನವೆಂಬ ಪಲವುಂ ತೆಱದ ಕರಣಂಗಳಿಂ . . . ಎರಡುಂ ತೆಱದ ನೃತ್ಯಭೇದದಿಂದಾಡಿ (ಧರ್ಮಾಪ. ೨-೨೭೫). [ ? ]

**ನಡುವಲೆ** (ನಾ). ಬಲೆಯ ಎರಡು ಬೇರೆ ಬೇರೆ ಕೊನೆಗಳನ್ನು ಭೂಮಿ ಯಲ್ಲಿ ನಾಟಿರುವ ಒಂದು ಬಗೆಯ ಬಲೆ (?) : ತಡಿಕವಲೆ ಕಣ್ಣವಲೆ . . . ನಡುವಲೆ ತಡೆವಲೆ ಸಿಡಿವಲೆ ನಿಡುವಲೆಗಳೊಪ್ಪಿದವು ಲಬ್ಧಕರೊಳ್ (ಗಿರಿಕ. ೧-೮೦). 'ನಡೆವಲೆ' ಪರಾ. [ ನಡು₁ + ಬಲೆ₁ ]

**ನಡುವಳಿ** (ನಾ). ಮಧ್ಯಭಾಗ : ನೀರುಳ್ಳಿ ಹಸಿಯಲ್ಲದ ಹುಡಿಯ ತುಪ್ಪದಿ ಹುರಿದು ಮತ್ತವಾ ಹೋಳುಗಳ ನಡುವಳಿಯ ಕತ್ತಿಯೊಳು ಸೀಳಿಕೊಂಡು . . . ನಾರಿಂದವಂ ಬಿಗಿವುದು (ಸೂಪಶಾ. ೫-೧೩) ; ಆ ಮಧ್ಯದ್ವೀಪದ ನಡುವಳಿಯ ಮಹಾಮೇರುಮಹೀಧರಮೆಸದತ್ತು (ಜಯುಕಾ. ೧-೩೨).

[ ನಡು₂ + ಬಳಿ₃ (< ಬಟ್ಟೆ₁) ]

**ನಡುವಾಯ್, ನಡುಪಾಯ್** (ಕ್ರಿ). ೧. ನಡುವೆ ಹಾಯಂ ; ಮಧ್ಯೆ ಪ್ರವೇಶಿಸು. 'ನಡುವಾಯಿ' ಪರಾ. ನಡುಪಾಯ್ : ೨. ಕಾಲಕ್ಕೆ ಮುಂಚಿತವಾಗಿ ಹೊರಬೀಳು ; ಮಧ್ಯಕಾಲದಲ್ಲಿ ನೆಗೆ : ಈಂಬ ಸಿಂಹಿಕಿಶೋರಂ ನಡುಸೂಲೊಳ್ಳಿರ್ ಕಣ್ಣಂ ತೆಱದಿಭಪತಿಯಂ ತಾಬಿಲೊಳ್ಕಂಡು ಕಾಯ್ಬಿಂ ನಡುಪಾಯ್ದಾ ತಾಯ್ಗೆ ದುಃಖಪ್ರಸವಸಮಯ ದೊಳ್ತಂದುದುತೊಂದಲಂಪಂ (ಅನಂಪು. ೧೨-೬೨).

[ ನಡು₂ + ಪಾಯ್₁ ]

**ನಡುವಾಯಿ** (ನಾ). ಮಧ್ಯೆ ಪ್ರವೇಶಿಸುವವನು ; ನಡುವೆ ತಲೆಹಾಕು ವವನು : ಬಣಗುಗಳು ಭೀಮಾರ್ಜುನರು ಕಾರಣಿಕ ನೀ ನಡುವಾಯಿ ಧರ್ಮದ ಕಣಿ ಯುಧಿಷ್ಠಿರನೆತ್ತ ಬಲ್ಲನು ನಿನ್ನ ಮಾಯೆಗಳ (ಕುವ್ಯಾಗ. ೮-೩೯). [ ನಡುವಾಯ್ + – ಇ₃ ]

**ನಡುವಾಯು** (ನಾ).ಸೊಂಟದಲ್ಲಿ ಬರುವ ವಾಯುರೋಗ,–ಸಂಧಿವಾತ: (ಕಿಸಂಗ್ಗಾ. ೦೦೪). 'ಕಟಿವಾತ' ಪರಾ. [ ನಡು₂ + ವಾಯು ]

**ನಡುವಿಡಿ** (ಕ್ರಿ). ನಡುವನ್ನು ಹಿಡಿ ; ಸೊಂಟವನ್ನು ಬಳಸು : ಉಟ್ಟಿರ್ದ ಬೆಳ್ದಳಂಬಂ ಸುತ್ತಿ ನಡುವಿಡಿದ ಕಟ್ಟನ್ನಗೇಂ ನೇವಳಂ ಬಿಗಿವುದಲ್ತೆ (ಕಾಲಿಂ.ಆರ. ೧೪೮-೩೨೩). [ ನಡು₂ + ಪಿಡಿ₁ ]

**ನಡುವಿರುಳ್₁**, ನಡುವಿರುಳು₁ (ನಾ). = ನಡುರಾತ್ರಿ : "ನಿಶೀಥಃ, ಮಹಾನಿಶಾ – ಈ ೨ ನಡುವಿರುಳ್" (ಹಲಾಯು. ೧೪-೧೧೯) ; ಜಿನಮಂದಿರ ದೊಳ್ ನಡುವಿರುಳಿನ್ನಂ ಪೂಜಾವ್ಯಭವಮಂ ನೋಡುತ್ತಿರ್ದು (ಧರ್ಮಾಮೃ. ೨-೨೦೭) ; ನಡುವಿರುಳೊಳಿದ್ದ ಕುರುಡಂಗೆ ಅಗಸೆಯಲ್ಲಿ ಬೆಳಗಾದಂತೆ (ಬಸವ. ೨೮೭). ನಡುವಿರುಳು₁: ನಡುವಿರುಳಲ್ಲಿ ಹೊರಟವರಿಗೆ ಹೆಬ್ಬಾಗಿಲಲ್ಲಿ ಬೆಳಗಾಯಿತು (ಗಾದೆ). [ ನಡು₂ + ಇರುಳ್ ]

**ನಡುವಿರುಳ್₂**, ನಡುವಿರುಳು₂ (ಅ).ಮಧ್ಯರಾತ್ರಿಯಲ್ಲಿ; ನಡುರಾತ್ರಿಯ ಸಮಯದಲ್ಲಿ : ನಡುವಿರುಳ್ ಕರ್ಪಟನುಮಂ ಪಱದುಟ್ಟು ನಾಗಪುರಕ್ಕೆ ಪೋಗಿ (ಶಾಂತಿಪು. ೯-೧೦೮) ; ನಡುವಿರುಳವರ್ ನಾಟಕಂ ನಲಿದು ಮಱ ದೊಱಗಿರ್ದ ಸಮಯದೊಳ್ (ಹಂಪಹಂ. ೨೭೪-೧) ; ನಡುವಿರುಳಾರುಮಿಲ್ಲ ದೆಡೆಯೊಳ್ ಕೊರಲೊಳ್ ವಧು ಕೋಱು ಬಳ್ಳಿಯಂ ಮಡಿಯಲೊಡರ್ಚೆ (ಪಂಪಭಾ. ೮-೦೫) ; ತರುಣಿ ನಡುವಿರುಳ್ಳಿದಿ ಕರ್ಣನ ಹೊರೆಯೊಳಾ ವಿರ್ಥವಿಸಲು (ಕುವ್ಯಾ.ಅ. ೭.೮೩. ೨೩-೪). ನಡುವಿರುಳು₂ : ನೆಲೆವಟ್ಟಣಕ್ಕೆ ಬರೆ ನಡುವಿರುಳು ನಡೆತಂದು ಊರ ಹೊಱಗಣ ಮಸಣವಟ್ಟಗೆಯೊಳಿರ ಲಂದು (ನಂಬಿರ. ೭-೫೪) ; ನಡುವಿರುಳು ಕಲಿಪಾರ್ಥನರ್ಚಿಸಿದನು ನಿಜಾಯುಧವ (ಕುವ್ಯಾದ್ರೋ. ೯-೩) ; ಪೊಡವಿಪತಿಯಡಿಗೊಯ್ಯೆಯಾತನ ಬಿಡಲಿ ಮೇಣಲ್ಲದೊಡೆ ಕೊಲಿಸಲಿ ನಡುವಿರುಳು ರಣದೊಳಗೆ ಕೊಂದುದ ಮಱದುದಿಲ್ಲೆಂದ (ಕಾಶಿರಾ. ೩೪-೪೭) ; ದೀವಿಗೆಯು ಕಡುಬೆಳದು ಸುಟ್ಟುದೆನಿಪ ಶಂಕೆಯ ಬೆಳಸಿ ಕಡುನಡುವಿರುಳದಕೆ ಕಿಚ್ಚಿಕ್ಕಿ ಹೊಱವಂಟ (ಸಾಳ್ವಭಾ. ೩೫-೫); ಬೇಗೆಯೊಳು ಹೋಗದಿರು ಮೂಗರೊಳು ನುಡಿಯದಿರು ಆಗದರ ನಂಬಿ ಕೆಡದಿರು ನಡುವಿರುಳು ಹೋಗದಿರು ಪಯಣ (ಸರ್ವಜ್ಞ. ೦೫೪೫). [ < ನಡುವಿರುಳ್₁ ]

**ನಡುವಿರುಳು₁** 'ನಡುವಿರುಳ್₁' ನೋ.

**ನಡುವಿರುಳು₂** 'ನಡುವಿರುಳ್₂' ನೋ.

**ನಡುವೀದಿ, ನಡುಬೀದಿ** (ನಾ). ಬೀದಿಯ ನಡುಭಾಗ ; ದಾರಿಯ ಮಧ್ಯಭಾಗ : ನಿಜಜನನಿ ನೀರ್ಗೆ ಪೋದ ಪೊಳ್ತಿನೊಳಾ ಕಳಕಳಮಂ ಕೇಳ್ದು ನೋಡಲೆಳಸಿ ಸಡಗರಂ ಮಿಗೆ ನಡುವೀದಿಗೆ ತಡೆಯದೆ ಬಂದು (ರಾಜಶೇ. ೧೩-೯೫೮). ನಡುಬೀದಿ : ಪಶು ಮಡುವಿನ ಅಗ್ಗಣಿಯ ಕುಡಿದು ನಡುಬೀದಿ ಯಲ್ಲಿ ಬರುತಿರಲು (ಸಿದ್ಧೇವ. ೪೮-೧೫೭) ; ಅವಳನ್ನು ಕುರಿತು ಯೋಚಿಸಲು ನಡುಬೀದಿ ತಕ್ಕ ಸ್ಥಳವಲ್ಲ (ದುಂಡಿಳ. ೭) ; ಏನಿಲ್ಲಿ ನಿಂತುಬಿಟ್ಟಿರಿ ಮೂಣಿಗಳ ನಿಳಂಹಿ ನಡುಬೀದಿಯಲ್ಲಿ ? (ಚಂದ್ರಸ. ೪೨).

[ ನಡು₂ + ಬೀದಿ ]

**ನಡುವು** (ನಾ). ನಡು ; ಮಧ್ಯಭಾಗ : ಏಣಾನಂಬುಬುವುಮಂ ನೀರಿಲ್ಲದ ಕೆಱಯ ನಡುವುಮಂ . . . ಇಂತೀ ಪದಿನಾಱುಂ ಕನಸುಗಳಂ . . . ಕಂಡೆನೆಂದುಱ (ವಡ್ಡಾರಾ. ೮೫-೨೭) ; ನಡುವಿನಲ್ಲಿ ಅಧಿಕಾರ ಬಂದರೆ ಅವನನ್ನು ಹಿಡಿಯ ಸಲ್ಲ, ನಡುವಿನಲ್ಲಿ ಸೀರೆ ಹರಿದರೆ ಉಡ ಸಲ್ಲ (ಗಾದೆ).

[ ದೇ.೩ ತಮಿ. ನಟುವು ; ತುಳು. ನಡುವುಲು ; ತೆಲು. ನಡುಮು.]

**ನಡುವೂರು** (ನಾ). ಊರಿನ ಮಧ್ಯಭಾಗ ; ಪಟ್ಟಣದ ಮಧ್ಯಸ್ಥಳ,– ಕೇಂದ್ರಪ್ರದೇಶ : ದುರಾಸೆ ಮುಂದುಗೊಂಡು ನಾನಾ ದೇಶವ ತಿರುಗಿ ಹುಸಿಯ ಬೊಗಳೆ ವ್ಯಾಪಾರದ ಮಾಟಿಯಿಂದ ನಡುವೂರ ಬೀದಿ ನಡುವೆ ಕುಳಿತು (ಮಡಿಮಾ. ೪೭–೬೪).. [ ನಡು$_2$ + ಊರು$_3$ ( < ಊರ್ ) ]

**ನಡುವೆ$_1$**, ನಡವೆ (ನಾ). ಮನೆಯ ಮಧ್ಯದ ಭಾಗ; ನಡುಮನೆ : ಇಷ್ಟರಲ್ಲಿಯೇ ಪುನಃ ನಡುವೆಯ ಬಾಗಿಲಲ್ಲಿ ಅಮ್ಮ್ಯವ್ವ ಬಂದು ನಿಂತಿದ್ದರು (ಕಂಗಾಳ್ಯ.೪); ನಡುವೆಯ ಕಡೆಗೆ ಬಾಗಿಲು ತೆರೆದ ಕೋಣೆಯಿಂದ ತಂಬಾಕು ಹೊಗೆಯನ್ನು . . . ಕುಡಿಯುತ್ತಿದ್ದಂತೆ ಅವಳ ಬಯಕೆ ಕಾವೇರುತ್ತಿತ್ತು (ಪುನರು. ೦೩೭). ನಡವೆ : ಒಡನಾ ಪೂಧತ್ತಾಟ್ಟಾರ್ ನಡವೆಯೊಳಿನಿತೆಡೆಯುನೀವುದನೆ (ದಿವ್ಯಕ. ೨–೯) ; ಗಣಿಕಾವನಿತಾಲಯಂ ಮೆರೆಗುಮವುಗಳೊಂದರ ಮುಂಬಾಗಿಲ ನಡವೆಯ ಜಗುಲಿಯ ರತ್ನಪಂಜರ ದಲ್ಲಿ (ಅಜಿತಪು. ೨೦–೩೦೫) ; ಒಬ್ಬ ಬ್ರಾಹ್ಮಣನ ಮನೇ ನಡವೆಯಲ್ಲಿ ಇಳುಕೊಂಡರು (ಕಥಾವಂ.IV, ೨೮); ಅಂದಣಾವನೇರಿ ಬಂದಳಣ್ಣನ ಮನೆಗೆ ನಿಂದೀರು ಅಕ್ಕ ನಡವೇಲಿ ಒಳಗೀರೊ ರಂಭೇಯ ಕೇಳಿ ಬರತೀನಿ (ಹಳ್ಳಿಪ. ೦೧೨). [ <ನಡು$_1$./ ತೆಲು. ನಡುವ, ನಡವ ]

**ನಡುವೆ$_2$** (ಅ). ಮಧ್ಯೆ ; ಮಧ್ಯಭಾಗದಲ್ಲಿ : ಇತ್ತರಸನುಮಾ ಇರುಳೊಳ್ ಶ್ವೇತವೃಷಭನಂ ಕನಸಿನೊಳ್ ಕಂಡು ಪೊಟ್ರಬೆನೋಲಗದೊಳ್ ಆಸ್ಥಾನದ ನಡುವೆ ಸಿಂಹಾಸನಮಸ್ತಕಸ್ಥಿತನಾಗಿ ತನ್ನ ಕಂಡ ಕನಸಂ ಮಂತ್ರಿಗೆ ಪೇಟ್ಪೊಡೆ (ಪದ್ಮಾಕಾ. ೦೦೨–೦೦) ; ರಮಣೀಯಮಪ್ಪ ಗಂಧಿಲವಿಷಯದ ನಡುವೆ . . . ನೂಱ ಪತ್ತುಂ ಪೊಬಲ್ಗಳನೊಳಕೊಂಡು (ಆದಿಪು. ೦–೯೨೫): ಅಂತು ಪೇರೆದಷ್ಟರ್ ಬಗೆದ ಮಹಾಸಮುದ್ರಂಗಳೆರಡಱ ನಡುವೆ ಕುಲಗಿರಿಯಿರ್ಪಂತಿರ್ದಶ್ವತ್ಥಾಮನಂ ಕಂಡು (ಹಂಪಭಾ. ೨–೬೩೮) : ಮೂಱುಂ ಬೆಳ್ಗೊಡೆಯ ನಡುವಿರ್ಪ ನೀನಿರ್ದೆಡೆಯುಮನೆಮಗಱಿಯ ದಂತಾಟಾದುದೆ ಮಗನೇ (ಗದಾಯು. ೩–೬೪) ; ದುಷ್ಟರ ನಡುವಿರ್ದ ಶಿಷ್ಟಂಗೇಗೆಯ್ದುಂ ಸುಖವಾಗಲಱಿಯದು (ಹಂಚತಂ. ೧೪೬–೦) ; ಕೂಡಲ ಸಂಗಮದೇವ ಭಕ್ತನ ನುಡಿಯ ನಡುವೆ ರಾಶಿಯಾಗಿರ್ಪನು (ಬಸವ. ೧೪೫) : ಬಿಡದೆ ಬೆಂಡೆದ್ದೇಳ್ವ ತಲೆಗಳ ಗಡಣ ನೀರ್ವಕ್ಕಿಗಳ ಸರಸಿಯ ನಡುವೆ ನಲಿನಲಿದಾಡುತಿರ್ದುದು ಭೀಮವನದಂತಿ (ಕುಮಾರವ್ಯಾ. ೦೨–೨೩) ; ನನ್ನ ಅವರ ನಡುವೆ ಮೊದಲಿನ ಸೌಜನ್ಯವಿರಲಿಲ್ಲ (ನಾಡಿಗೇ. ೦೭).

**ನಡುನಡುವೆ, ನಡನಡುವೆ** (ದ್ವಿರುಕ್ತಿ) : ನಡುನಡುವೆ ಯಮನ ಪಟ್ಟಣವು ಎನ್ನೊಡೆಯ ಪಂಚೇಂದ್ರಿಯ ದೈವಕರು ತಡೆಯದಂತೆ ನೀ ದಯಮಾಡೊ (ಪುರಂದ. ೩–೧೭೭–೩) : ಈ ವನದ ನಡುನಡುವೆ ತೊಳ ತೊಳಗುತಿರುತಿಹ ಸರೋವರದೊಳೆ . . . ಮೊರೆಮೊರೆವ ಭೃಂಗಾವಳಿಯ ಗಾವಳಿಯ ಕಳಕಳಂಗಳ ನೋಡು ನೋಡು ರವಿತನಯತನಯ (ಜೈಮಿಥಾ. ೩–೩೭); ತಿಂಗಳಿಗೊಮ್ಮೆ ತರುವ ಮತ್ತು ನಡುನಡುವೆ ತರಬೇಕಾಗುವ ಸಾಮಾನುಗಳನ್ನು ಪಟ್ಟಿಮಾಡಿಟ್ಟುಕೊಳ್ಳಬೇಕು (ಅಡುಸಾ. ೫೩) ; ನಡ ನಡುವೆ ''ಚಾಯ್‌ಗರಮ್'' ದವರ ಚಾಯ–ಗರಮು ಗದಗವಿಸುತ್ತಿತ್ತು (ದೀಪಕ. II, ೩೯೮). [ <ನಡುವೆ$_1$./ತಮಿ. ನಟುವೆ ; ತುಳು. ನಡುವೆ ]

**ನಡುವೆಟ್ಟು** (ನಾ). ಬೆಟ್ಟದ ನಡು,–ಮಧ್ಯಭಾಗ : ಸಿಡಿಲಾಳ್ ತಡೆ ಯದೆಡೆಯ ನಡುವೆಟ್ಟುಗಳ್ಗೆ ಕಟ್ಟುಬ್ಬರದಿಂ ಬಂದೆಱಗುಗುಂ (ರಾಮಾಶ್ವ. ೧–೬). [ ನಡು$_2$ + ಬೆಟ್ಟು$_2$ ]

**ನಡುವೊಗು** (ಕ್ರಿ). ನಡುವೆ ಪ್ರವೇಶಿಸು ; ಮಧ್ಯೆ ತಲೆಹಾಕು : ತಗರ್ ಕಾದುವಲ್ಲಿ ನಡುವೊಕ್ಕು ನರಿ ಸತ್ತುದು (ಪಂಚತಂ. ೭೯–೧೮).

[ ನಡು$_2$ + ಪೊಗು(<ಪುಗು) ]

**ನಡುಸಂತೆ** (ನಾ). ೧. ಸಂತೆ ಸೇರಿರುವ ಸ್ಥಳದ ಮಧ್ಯಭಾಗ. ೨. ಸಂತೆ ಯಲ್ಲಿ ವ್ಯಾಪಾರ ಭರಾಟೆಯಿಂದ ನಡೆಯುವ ಸಮಯ,–ವ್ಯಾಪಾರದ ಸಮಯದ ಮಧ್ಯಕಾಲ : ಈಗ ನಡುಸಂತೆಯ ಹೊತ್ತು. ಜನ ನುಗ್ಗು ತ್ತಿದ್ದಾರೆ (ರೂಢಿ). ೩. ಹೇರಳವಾಗಿರುವಿಕೆ ; ಆಧಿಕ್ಯ ; ಯಥೇಚ್ಛ ವಾಗಿರುವುದು : ಎಡಬಲದೊಳಗೋಲೈಪ ಕೋಮಲೆಯರು ತೊಡೆದ ಲೇಪನವುಟ್ಟ ದುಗುಲ ಮುಡಿಹೂದಂಬುಲಗಂಪಿನ ಕಂಪಿನ ನಡುಸಂತೆ ಯಾದುದಾಸ್ಥಾನ (ಶ್ರೀಪಾಲ. ೩–೬) ; ತೆಂಗಿನ ನಡುಸಂತೆಯಲ್ಲಿ ಕಾಯಿಗೆ ಬರವೇ ? (ರೂಢಿ). [ ನಡು$_2$ + ಸಂತೆ$_1$ ]

**ನಡುಸರಕು** (ನಾ). ವ್ಯವಹಾರದಲ್ಲಿ ವಿನಿಮಯಕ್ಕಾಗಿ ಇಬ್ಬರ ನಡುವೆ ಬಳಸುವ ಸರಕು,–ಪದಾರ್ಥ : ಅಕ್ಕಿ, ಜೋಳ ಒಂದು ಉಪಯುಕ್ತ ಧಾನ್ಯವಿನಿಮಯದ ''ನಡು–ಸರಕು'' ಆಗಬಹುದು (ಪೂಪಾಅ. ೦೦೪).

[ ನಡು$_2$ + ಸರಕು$_3$ ]

**ನಡುಸರು** (ನಾ). ನಡುವಿನ ಉಸಿರು ; ಮಧ್ಯೆ ಮಧ್ಯೆ ತೆಗೆದುಕೊಳ್ಳುವ ಉಸಿರು (?) : ಕಿಡಿನಯನ ಘರ್ಷಣೆಯೊಳುದಾರ್ವಾರಿಕಲ್ಗಳಂತೊಡನೆ ಸುರನದಿಯ ನಡುಸರು ಬಿರ್ದವಂತಾಗ ಮೃಡ ಪೊಡವಿದಣಿದಮೃತಫಲ ಬತ್ತದಂತಾಗ ಕೊಡುತಿರ್ದ ಶರಣಜನಕೆ (ಮರುಳಾ. ೦–೯).

[ ನಡು$_2$ + ಉಸರು$_3$ ( < ಉಸಿರ್$_3$ ) ]

**ನಡುಸಾಲೆ** (ನಾ).=ನಡುಮನೆ : ಬಾಗಿಲು ದಾಟಿದ ಕೂಡಲೆ ಒಂದು ವಿಶಾಲ ವಾದ ನಡುಸಾಲೆ ಕಾಣುತ್ತದೆ (ಕವಿಕೋ. I, ೧೯೮) ; ಪಡಸಾಲೇ ಊಟ, ನಡುಸಾಲೇ ನಿದ್ರೆ (ಗಾದೆ). [ ನಡು$_2$ + ಸಾಲೆ$_2$ ]

**ನಡುಸುಳಿ** (ನಾ). ನಡುವೆ ಇರುವ ಸುಳಿ, – ಆವರ್ತ, – ಗರ್ತ : ಹೋಲಿಸುವಡಿದು ಮೃತ್ಯುವಿನ ಗೋಣಾಳಿ ಹೊಗುವಡೆ ಕಡಲ ನಡುಸುಳಿ ಕಾಳಮೇಘದ ಮೊತ್ತವೆನೆ ರಂಜಿಸಿದುದಾ ವ್ಯೂಹ (ಕುಮಾರವ್ಯಾ. ೬೦೩. ಪಂ. ೨೭೬). [ ನಡು$_2$ + ಸುಳಿ$_2$ ( < ಸುಟ್$_2$ ) ]

**ನಡುಸೂಲ್** (ನಾ). ಪ್ರಸವದ ಮಧ್ಯಸಮಯ ; ಹೆರಿಗೆಯ ಮಧ್ಯ ಭಾಗ : ಬೇನೆಯಿಂ ಧೂಳಿಡುತುಂ ಶೈಲಾಗ್ರದೊಳ್ಮುಕ್ಕುಳಿಸಿ ಮಾಱುಕ ದಿಂದೀಂಬ ಸಿಂಹಿಕಿಶೋರಂ ನಡುಸೂಲೊಳ್ಸಿರ್ಕ ಕಣ್ಣಂ ತೆಱೆದಿಭಪತಿಯಂ ತಾಱಿಲೊಳ್ಕಂಡು ಕಾಯ್ಕುಂ ನಡುಪಾಯ್ದಾ ತಾಯ್ಗೆ ದುಃಖಪ್ರಸೂಸಮಯ ದೊಳ್ಬಂದುದಂತೊಂದಲಂಪಂ (ಅನಂಪು. ೦೨–೬೨).

[ ನಡು$_2$ + ಸೂಲ್ ]

**ನಡುಸೆಱಂಗು** (ನಾ). ಸೆರಗಿನ ಮಧ್ಯಭಾಗ : ಉಡಿ ; ಮಡಿಲು : ಉಕಾರಕ್ಕೆ . . . ನಿಡುದೆಱೆಳ್. ನಿಡುವಯಣಂ, ನಡುಸೆಱಂಗು (ಶಮುದ. ೧೫೧ ಪ್ರಯೋ). [ ನಡು$_2$ +ಸೆಱಂಗು ]

**ನಡುಹಗಲು** 'ನಡುವಗಲ್' ನೋ.

**ನಡುಹಣೆ** (ನಾ).=ನಡುನೊಸಲು : ಕೊರಳೊಳು ವಿಷವುಂಟು ತಲೆಯೊಳು ಹಾವುಂಟು ನಡುಹಣೆಯೊಳು ಬೆಂಕಿಯುಂಟು (ಇಂಚಾಪ. ೭೫–೬೧).

[ ನಡು$_2$ + ಹಣೆ$_1$ ( < ಪಣೆ$_2$ ) ]

**ನಡುಹರೆಯ** (ನಾ). ಮಧ್ಯವಯಸ್ಸು ; ಪ್ರಾಯದ ಮಧ್ಯಾವಸ್ಥೆ : ನಡುಹರೆಯದವಳು ಕಾತ್ಯಾಯನಿಕೆಯಕ್ಕ (ಮಂಗಲಾ. ೮೯–೨).

[ ನಡು$_2$ + ಹರೆಯ ( < ಪರೆಯ ) ]

**ನಡುಹಾದಿ** (ನಾ).=ನಡುದಾರಿ : ನಡುಹಾದಿಯಲ್ಲಿ ವಿಮಾನದ ಪಾಡು ಕೆಟ್ಟುಹೋಯಿತು (ರಾಜಪ. ೫೧) ; ಹೊರಬಂದ ಗುಂಡಣ್ಣನಿಗೆ, ಕತ್ತಲೆಯ ನಡುಹಾದಿಯ ಆಚೆ ಅಂಗಳಕ್ಕಿಳಿಯುತ್ತಿದ್ದ ಸಾಮಾನುಗಳು ಗೋಚರಿಸಿ ದುವು (ರಂಗಪ. ೮೦). [ ನಡು$_2$ + ಹಾದಿ ( < ಪಾದಿ$_1$ ) ]

**ನಡುಹಾಳೆ** (ನಾ). "ಪುಸ್ತಕದ ಹಾಳೆಗಳ ನಡುವೆ ಸೇರಿಸಿದ (ಸಾ., ಬರಿಯ) ಹೆಚ್ಚುಹಾಳೆ, ನಡುಹಾಳೆ" (Interleaf. ಇಂಕನ್ನ).

[ ನಡು$_2$ + ಹಾಳೆ$_1$ ( < ಪಾಳೆ$_1$) ]

**ನಡುಹೊತ್ತು** 'ನಡುಬೊತ್ತು' ನೋ.

**ನಡುಹೊಳೆ** (ನಾ). ೧. ನದಿಯ ಮಧ್ಯಭಾಗ ; ನಡುನೀರು : ಇಂದು ನಾನು ಹರಿಗೋಲಲ್ಲಿ ಕುಳ್ಳಿರ್ದು ನಡುಹೊಳೆಯಲ್ಲಿ ಹೋಗಲಿಕೆ ಕಾಮವೆಂಬ ಕೊಱಡು ಅಡ್ಡಬಿದ್ದಿತ್ತು (ವಚಸಂ. ೨೯೯-೨೩) ; ನಡುಹೊಳೆಯ ಹರಿಗೋಲ ಮಾಱಿಯ ಕಡಿದಿರ್ದಡರೆ ನಮ್ಮ ಪುಣ್ಯದ ಬಿಡುಗಡೆಯ ಕಾಲವು ಶಿವಾಯೆಂದರಸ ಬಿಸುಸುಯಿದ (ಕುವ್ಯಾಛೀ. ೯-೩). ೨. ಒಂದು ಊರಿನ ಹೆಸರು : ನಂಜೇಗವಡ ವಿರಕ್ತಗವಡಯಿ.ವರ ಕುಲದೇವರು ನಡುಹೊಳ್ಳುವೇಸ್ವರ (ಎಕ. III, (R), ಗುಂಡ್ಲುಪೇ. ೩೧-೩೩; 1027).

**ನಡುಹೊಳೆಯಲ್ಲಿ ಕೈಬಿಡು** = ೧. ಹೊಳೆಯ ಮಧ್ಯದಲ್ಲಿ ಹಿಡಿತದ ಸಹಾಯವನ್ನು ತಪ್ಪಿಸು : ನಡುಹೊಳೆಯಲ್ಲಿ ಕೈಬಿಟ್ಟ ಹಾಗೆ (ಗಾದೆ). ೨. ನಂಬಿಕೊಂಡವರಿಗೆ ಅತ್ಯಗತ್ಯವಾದ ಸಮಯದಲ್ಲಿ ಉದ್ದೇಶಪೂರ್ವಕವಾಗಿ ಸಹಾಯ ನಿಲ್ಲಿಸು ; ನಡುನೀರಲ್ಲಿ ಕೈಬಿಡು : ನನ್ನನ್ನು ನಡುಹೊಳೆಯಲ್ಲಿ ಕೈಬಿಡಬೇಡ (ಮಸಕೊ. ೩೮).

[ನಡು₃ + ಹೊಳೆ₃ ( < ಪೊೞ₁ ) ]

**ನಡೆ₁, ನಡಿ, ನೆಡೆ** (ಕ್ರಿ). ೧. (ಕಾಲುಗಳಿಂದ) ಚಲಿಸು ; ಹೋಗು ; ಗಮಿಸು : "ನಡೆ-ಗಮನೇ" (ಶಮದಾ) ; ಜಯದ್ರಥನಂ ಕೋಡಗಗಟ್ಟು ಗಟ್ಟಿ ಬೆನ್ನಂ ಬಿಲ್ಲ ಕೊಪ್ಪಿನೊಳಿಱಿದು ನಡೆಯೆಂದು ನಡೆಯಿಸಿ (ಪಂಪಭಾ. ೭-೩೦ವ) ; ಆ ಧರಿತ್ರೀನಾಥನತ್ಯಂತಹರುಷಾಂತರಂಗನಾಗಿ ಸಿಂಹಾಸನದಿಂದಿೞಿದು ಮುಂದನೇಳಡಿಯಂ ನಡೆದು (ಸುಕುಮಾ. ೮-೪೭ವ) ; ನಡೆದೊಡೆ ಕಾಲ್ನೋದವುದು (ಧರ್ಮಾಮೃ. ೩-೫೫) ; ತಲೆಯಿಲ್ಲದ ಕಾಗೆ ನೆಲದಲ್ಲಿ ನಡೆಯಿತ್ತು (ಆದವ. ೦೫-೩೩) : ನಡೆಯುತ್ತ ನಡೆಯುತ್ತ ಬಳಲುವರಲ್ಲದೆ ಬಟ್ಟೆ ಬಳಲುವುದೆ (ಬಸವ. ೦೦೩) ; ತಲೆ ಮೇಲಣಗೆ ಟಿಗಿದುದು ಮುಂಡ ನಡೆದುದು ನೂಱು ಹೆಜ್ಜೆಯನು (ಕುವ್ಯಾಳ. ೨-೨೦) ; ಭೂತಳದೊಳಗಂಬೆಗಾಲಿಟ್ಟು ನಡವಂತೆ ಚೇತನವಾದುದಂಗಜಗೆ (ಪೋಹತ. ೧೧-೫೯) ; ಪಾದಗಳಿಂದ ಹೆಚ್ಚು ದೂರ ಮತ್ತು ಜಾಗ್ರತೆಯಾಗಿ ನಡೆಯುವುದು ಕಷ್ಟ (ಪಾಡಿಗೀ. ೯೯) ; ನಡೆಯೋದು ಕಾಲ್ನಿಡಿ ಆಡೋದು ಪಾಲ್ಕಿ ಮೇಲೆ (ಗಾದೆ). ೨. ಮುಂದುವರಿ ; ಮುಂದೆ ಸಾಗು ; ಸಾರೋದ್ಧಾರವಾಗು : ತೊಱೆಯ ತಡಿಯೊಳೋಡಮಂ ನಡೆಯಿಸುವ ಮತ್ಸ್ಯಗಂಧಿಯಂ ಕಂಡಮ್ಮನೀ ತೊಱೆಯಂ ಪಾಯಿಸಂಬುದುಂ ಸಾಸಿರ್ವರೇಱಿದೊಡಲ್ಲದೀ ಯೋಡಂ ನಡೆಯದೆಂಬುದುಂ (ಪಂಪಭಾ. ೧-೬೦ವ) ; ಪನ್ನೆರಡು ಪಲ್ಲಿಗವೀ ಸ್ಥಿತಿಯೊಳ್ ಸಲ್ವುದು ಚನ್ದ್ರಾದಿತ್ಯರ್ಕಳ್ ಉಳ್ಳನ್ನವ್ವರಂ ನಡವುದು (ಎಕ. IV, ಚಾಮುರಾ. ೯೮-೦೩ ; 965) ; ಪಿರಿಯಂ ಜಯಕುಮಾರಂಗೆ ಕುಡುವುದು ಕೊಟ್ಟಂದು ಕುರುಕುಲಸಂಬಂಧಮವಿಚ್ಛಿನ್ನಮಾಗಿ ನಡೆಗುಂ (ಚಾಪುಂಪು. ೭೮-೨೬); ಸಮರಾಭಿಮುಖನಾಗಿ ನಡೆವ ಫಣಿರಾಜಕೇತನನಂ ಸಂಜಯನಂಜದೆ ಮಾರ್ಕೊಂಡು (ಗದಾಯು. ೩-೯೯ ವ) : ಪೆರ್ಜ್ಜಾಂಕದದಿಗೆಯನ್ನಡವ ಕೋಲಮುಮುತ್ತೋಣಿಯಾಗಿ ನಡೆವ ಗದ್ಯಾಣ ಆ ಮಾರ್ಗ್ಗದ ಪನ್ನಾಯದಿಂದಕ್ಕೋಣಿಯಾಗಿ ನಡೆವ ಗದ್ಯಾ ೧ (ಸಾಇಇ. XX. ೪೮-೨೯ ; 1071) ; ಕೂಡಲಸಂಗನ ಶರಣರು ನಡೆದ [ಪಾಠಾಂ. ಹೋದ] ದಾರಿ ಭಯ ಕಾಣಿರಣ್ಣಾ (ಬಸವ. ೦೪೭) ; ಖಟಿಲೆ ನುಡಿದಟಲೆ ಬಗ್ಗಿಸಿ ಘಟಿಲನೆ ನಡೆಯೆಂದು ಜಡಿದು ಸಾರಥಿಯಂ (ಕಮರ. ೦೯ ಪ್ರಹೊ) : ಅದ್ದುದತಳಕೆ ಅವನಿಯೆನೆ ಹೊದಱಿದ್ದು ನಡೆದುದು ದಂತಿಘಟೆ ಬರುತಿದ್ದುದಗಣಿತ ರಥಪದಾತಿಗಳಾಹವಾಂಗಣಕೆ (ಕುವ್ಯಾದ್ರೋ. ೯-೦೩) : ಈಸುದಿನ ನಮ್ಮಗ್ಗಿ ಹೋತ್ರಕೆ ವಿಘಸಲಳಿಯದೆ ನಡೆದುದೀಗ ವಿನಾಶಕರವಾಯ್ತುದಱಿನಾದುದು ಬರವು ನಮಗೆನಲು (ಕೊರರಾ. ೦-೯-೨೫) : ಲಿಪಿರಹಿತಭಾಷೆಯನ್ನು ಆಡುವವರ ವ್ಯವಹಾರವೆಲ್ಲಾ ಹೆಚ್ಚಾಗಿ ಸಂಭಾಷಣೆಯಲ್ಲೇ ನಡೆಯುತ್ತದೆ (ದ್ರಾವಿವಿ. ೯೩) ; ಧರ್ಮಾತ್ಮರಾದ ಮಹೀಶೂರಮಾನೆತನದಲ್ಲಿ ಹುಟ್ಟಿದ . . . ದೇವರಾಜಮ್ಮಣ್ಣಿಯವರಿಗೆ ಪುತ್ರನ ವಂಶವು ನಡೆಯಲಿ (೭ಹಕ. ೨೦).

೩. ತೆರಳು ; ಹೊರಡು : ಅಂತೆರಡುಂ ಪಡೆಗಳುಂ ಪಣ್ಣಪಣ್ಣನೆ ಪಣ್ಣಿ ಕಾಳಗಕ್ಕೆ ನಡೆಯಲೊಡರಿಸಿದಾಗಳ್ (ಪಂಪಭಾ. ೧೦-೩೦ವ); ಬೇಡಿದರ್ಗೆ ಬೇಡಿತಂ ಕೊಟ್ಟು ಬಂದಿಱಿವ ಕಸವರಗಲಿಗಳುಮಂ ಮತ್ತಮಣ್ಣೆ ನಡೆದಿಱಿವ ನಡೆಗಲಿಗಳುಮಂ ನೋಡಿ (ಗದಾಯು. ೯-೩೪ವ) : ನಡೆವೆ ನಾನಿರಲೊಲ್ಲೆ ಕೈಲಾಸಪುರಕೆನುತೆ . . . ಪೊಱಮಟ್ಟಳವ್ವಾವ್ವ ಪುರಜನಂ ನೋಡುತಿರೆ (ಕಾರಿಕ. ರೀ. ೨೮೮-೩) ; ಒಡಲನೊಡೆದಾ ಜ್ಯೋತಿ ಗಗನಕೆ ನಡೆದುದಿತ್ತಲಿ ಸುರರು ಮರ್ತ್ಯರು ಸುಡುಸುಡೆಂದುದು ಸಾತ್ಯಕಿಯ ದುಷ್ಕರ್ಮವಾಸನೆಗೆ (ಕುವ್ಯಾದ್ರೋ. ೧೪-೨೪) ; ದಶದಿಕ್ಕಿನ ಪುರಾಧಿಪರೆಡೆಗೆ ನಡೆದುದು ದಂಡು ಬಳಿಕೆಂದ (ತೊರರಾ. ೦-೮-೩೦) ; ನಡೆ ಮಜ್ಜನ ಭೋಜನಕೆ ಶೃಂಗಾರದ ತೊಡವುಗಳಿಡು ನೀ ಬೇಗ (ಕಂಸವಿ. ೯-೦೩೩). ೪. ತೊಲಗು ; ದೂರ ಸರಿ : ಉಂಬ ಜಂಗಮ ಬಂದರೆ ನಡೆಯೆಂಬರು ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ (ಬಸವ. ೦೯೪). ೫. ಆಚರಿಸು ; ಆಚರಣೆ ಮಾಡು : ಶ್ರೀಪಾಲಾ ಮೇಲ್ಸಿಪಿ ಮೇಲೆ ಸರ್ವ್ವದ ಮಹಾದಾನ್ಗಳುದುಳ್ಳಲ್ಲಪೊಳ್ ಸಾಲಾಮ್ಮಾಲ ತಪೋಗ್ರದಿನ್ನು ನಡದೂಂ ನೂಱಿನ್ನುಸಂವತ್ಸರಂ (ಎಕ.II, ೨೨-೨ ; ಸಂ. 700) ; ನಡೆಯಿಂ ಧರ್ಮದ ಬಟ್ಟೆಯೊಳ್ ಬಿಸುಡಿಯಾದು ಪ್ಪಾಪದು ಮಾರ್ಗಮಂ (ಸುಕುಮಾ. ೦-೪) ; ಪೊಲ್ಲದಂ ಬಿಸುಟ್ಟನುಪಮಜೈನಮಾರ್ಗದೊಳೆ ತಾಂ ನಡೆಗುಂ ಪರಮೋಕ್ಷಕಾಂಕ್ಷೆಯಿಂ (ಸಮಪ. ೦-೦೮) ; ಜೈನಾಗಮದೋಜೆಯಿಂ ನಡೆ ಬಾಧಪ್ರಾಪಕ ಲೇಸಾಗು (ಧರ್ಮಾಮೃ. ೪-೩೭೦) ; ನುಡಿದಂತೆ ನಡೆಯಲು ಬಾರದಯ್ಯಾ ಕೂಡಲಸಂಗನ ಶರಣರ ಭಕ್ತಿ ಬಾಳ ಬಾಯ ಧಾರೆ (ಬಸವ. ೨೦೦). ೬. ವರ್ತಿಸು ; ನಡೆದುಕೊಳ್ಳು ; ವ್ಯವಹರಿಸು : ಕಡುಗಲಿತನಮುಂ ಚಾಗದ ಪಡೆಮಾತುಂ ವಿದ್ಯೆಯುರ್ಕುಮೊರ್ವನೊಳೆಂತುಂ ನಡೆಯವು ಭುವನಾಂತರದೊಳ್ (ಆದಿಪು. ೦೨-೦೦೪) ; ದಯೆಗೆಯ್ಯೆಂ ಪ್ರಸಾದಮೆಂಬಿವು ಪೆಱರೊಳ್ ನಡೆಗೆಮ್ಮ ನಿನ್ನಯೆಡೆಯೊಳ್ ನಡೆಯಲ್ವೇಡೆನಗೆ ಕೆಯ್ಯನ್ನೆ ರಾಧೇಯಾ (ಪಂಪಭಾ. ೨-೮೩) ; ನಿಮಗೆ ಕರಿಗಳ್ ದೊರೆಕೊಳ್ವನ್ನಂ ನಿಚ್ಚಲೊಂದೊಂದು ಮೃಗಮನಟ್ಟುವೆವದು ಕೈಕೊಂಡಿಂತು ನಡೆವಿರಪ್ಪೊಡೆ ನಿರ್ವಹಿಪೆವಾಗದೊಡೋಡಿಪೋಪೆವೆನೆ (ಪಂಚತಂ. ೮೮-೦೦) ; ಒಡೆಯಂಗುತ್ತಮವಾಗೆ . . . ಗಡಿದುರ್ಗಂಗಳು ಭದ್ರಮಾಗೆ ಧನಧಾನ್ಯಂ ಕೀವೆ ಭಂಡಾರದೊಳ್ ನಡೆಮ ಮಂತ್ರಿವರೇಣ್ಯನೈ (ಕೋಮಲ. ೩೫) ; ಪೊಡವಿಪನೊಲುಮೆಯ ಕಡುನೆಚ್ಚಿಗರ್ವದಿ ನಡೆಯದಿರೆಚ್ಚಱಿಕೆ (ಪುರಂಜ. ೨-೪೫-೧) ; ನೃಪಹಿಂದಣಳಲನು ನೆನೆಯದೆನ್ನಪದೆಂದು ನಡೆ ಕಾಮಂಗೆ ಕೊಡದಾರ್ಗಿತ್ತಪಿರಿಸುತೆಯ (ಸಾಕ್ಯಕಾ. ೩೦-೧೦) ; ನಿನಗಿಂತ ಹಿರಿಯರಾದವರು ಹೇಳಿದ ಮೇರೆಗೆ ನಡೆ (ಮುಂಬಯಿ. ೪-೫೯). ೭. ಕೆಲಸ ಮಾಡು ; ಕಾರ್ಯ ಮಾಡು : ಈ ಗಡಿಯಾರ ಸರಿಯಾಗಿ ನಡೆಯುತ್ತಿಲ್ಲ (ರೂಢಿ); ರಜಾದಿನಗಳಲ್ಲಿ ಶಾಲೆಗಳು ನಡೆಯುವುದಿಲ್ಲ (ರೂಢಿ). ೮. ಜರುಗು ; ಘಟಿಸು ; ಉಂಟಾಗು : ದೇಶದ ಮೇಲೆ ನಡೆದ ಸುದ್ದಿ ತಿಳುಕೊಳ್ಳುವುದಕ್ಕಾಗಿ ವರ್ತಮಾನಪತ್ರಗಳನ್ನು ತರಿಸುತ್ತಾರೆ (ಮುಂಬಯಿ. ೪-೮೭) ; ಆ ಊರಿನಲ್ಲಿ ಜಾತ್ರೆ ನಡೆಯುತ್ತದೆ (ರೂಢಿ) ; ಅವರ ಮನೆಯಲ್ಲಿ ಹಬ್ಬ ಹುಣ್ಣಿಮೆಗಳು ವಿಜೃಂಭಣೆಯಿಂದ ನಡೆಯುತ್ತವೆ (ರೂಢಿ). ೯. ಈಡೇರು ; ನೆರವೇರು ; ಪಾಲನೆಯಾಗು : ಲೇಸಿನಿಪ ಮಹಿಪಾಜ್ಞೆಯೊಳಪದ ಭಾಷೆ ನಡೆಯಲು . . . ಅರ್ಥವನೋಸರಿಸ ದಿಂತರ್ಪಿಸುತ್ತಿರೆ (ಬಸಪು. ೨೭-೯). ೧೦. ಚಲಾವಣೆಯಾಗು ; ಚಾಲತಿಯನ್ನು ಹೊಂದಿರು ; ಬಳಕೆಯಾಗು : ಷವಳಿ ನಾಣ್ಯ ನಡೆಯುವುದಿಲ್ಲ (ರೂಢಿ) ; ಈಗ ಅವನಿಗೆ ಹದಿನಾಲ್ಕನೆಯ ವರ್ಷ ನಡೆಯುತ್ತಿದೆ (ರೂಢಿ). ೧೧. ಆಕ್ರಮಣ ನಡೆಸು ; ಮುತ್ತು ; ಮೇಲೆ ನುಗ್ಗು : ನಿನಗುತ್ತರಾರ್ಧಮೊಂದರ್ಧನಿಮೇಷಮುಹೂರ್ತಮಾತ್ರದಿಂ ಬಾರದೆ ಕೈಗಿನಿತುಮರಂ ದೇಮರ್ ನಡೆವನಿತುಂ ಮಾಣ್ಬನಿತುಮಂತದಾವುದು ಗಹನಂ (ಆದಿಪು. ೦೩-೨೨).

೧೨. ಸಲ್ಲು ; ಒಳಪಡು : ತುರಗಮೇಧಾಧ್ವರದ ಮೇಲಾರ್ಕೆ ನಡೆದುದು ಪರಮಪುಟಿಜಾದಾಲಿಗವನೀಶ್ವರರ ಮಾನ್ಯತೆಯ ಪರುಟವಣೆ ವಿಜಯಂಗೆ ಸೇರಿತು (ಕೂರಣ. ೧-೭-೨೪). ೧೩. ಪ್ರವರ್ತಿಸು ; ತೊಡಗು : ಎನ್ನವರಾದರೆ ಜನ್ನಕ್ಕೆ ನಡೆವರೆ ಎನ್ನವರಲ್ಲ ಕೂಡಲಸಂಗಾ ನಿಮ್ಮಾಣೆ (ಬಸವ. ೭೧೩). ೧೪. ಗದ್ಯ ಅಥವಾ ಪದ್ಯದ ಲಯಕ್ಕೆ ಹೊಂದಿಕೊಳ್ಳು : ಷಟ್ಪದಿ ಈಗ ಮಾತ್ರೆಗಳಿಂದ "ನಡೆ"ದರೂ ಒಮ್ಮೆ ಅಂಶಗಳಿಂದ "ನಡೆ" ಯುತ್ತಿದ್ದಿತೆಂಬುದನ್ನೂ . . . ಮರೆಯದಾರದು (ಕೃಷಿ. ೧೪೭). ೧೫. ಪ್ರಭಾವಶಾಲಿಯಾಗು ; ಯಶಸ್ವಿಯಾಗು : ನನ್ನ ಮುಂದೆ ನಿನ್ನ ಯಾವ ಆಟವೂ ನಡೆಯುವುದಿಲ್ಲ (ರೂಢಿ). 'ಕೈನಡೆ' ನೋ. ೧೬. ನಡಗೆಯಿಂದ ಅಳತೆ ಮಾಡು ; ಹೆಜ್ಜೆಯಿಂದ ಅಳೆ (?): ರಣಾವಳೋಕ ಶ್ರೀಕಮ್ಬಯ್ಯನ್ ಪೃಥುವೀರಾಜ್ಯಂಗೆಯ್ ಬ × × × ರಸಕ್ಕರ್ಟ್ವವ್ಪ × × × ೪ ಪೆಗ್ಗರ್ಟ್ವಪ್ಪನಾ ಪೊಲದನ್ನಡದು ಕೊಟ್ಟದು (ಎಕ. II, ೩೩-೪ ; ಶ. ೮೦೦). ☞ ಇದು ಅನೇಕ ಕಡೆ ನಾಮಪದದೊಡನೆ ಸೇರಿದಾಗ ಬೇರೆ ಬೇರೆ ಅರ್ಥವನ್ನು ಕೊಡುತ್ತದೆ. ಉದಾಹರಣೆಗೆ-'ಆಟನಡೆ', 'ಜೀವನ ನಡೆ', 'ಮಾತುನಡೆ', 'ವ್ಯಾಪಾರ ನಡೆ' ಇತ್ಯಾದಿ. ನಡಿ : ೧೦. ಸವಿಗೌಂಡನಹಳ್ಳಿಯೆಂದು ಹೆಸರು ನಡಿಯಬೇಕು (ಎಕ. VII, ಶಿವಮೊ. ೪೩-೩೩ ;?). ನಡೆ : ೨. ಸುರ್ಗಚಂದರುಯಿರೊ ಪರಿಯಂತ್ರ ನಡೆಯಬೇಕೆಂಯೆಂದು ಆ ಗ್ರಾಮವನು ಹುಗಿನು ಹೊಯಿಸಿ ಪಲಿಸಿಕೊಟರು (ಎಕ. VII, ಶಿವಮೊ. ೦೦೮-೩೪ ; 1568). ೧೭. ಬಾಳು; ಬದುಕು : ಜನರು ಕೂಡಿ ನೆಡೆಯಬೇಕೆಂದು ನಾಗಚಂದ್ರದಮೆಂಬೊ ಗ್ರಾಮವನು ಹೆಸರಗಿ ಕಟಿಸಿ (ಎಕ. VII, ಶಿವಮೊ. ೦೦೮-೩೨ ; 1568).

**ನಡೆನಡೆ** (ದ್ವಿರುಕ್ತಿ) : ಸವಡ ಗಜಗಮನೆಯರ್ ಮುಗಿಲ ಮೇಲೆ ನಡೆಪಾಡುವಾಕೆಗಳ್ ಕವಾಗೆ ಧರಾಗಮನಂ ಪೊಸತಪ್ಪುದರಿಂದಮರ್ದಿರೆ ನಡೆನಡೆದು ನಡೆಯಲಾಜದೆ ಸುಟ್ಟಿದರ್ (ಶಂಶಭಾ. ೭-೮೪); ನಡೆನಡೆದೊಯ್ಯುವೇಡ ನಿನಗೇಕೆ. ತಪಸ್ಸಿನ ಕಾತ್ರವೆಂದು ನೇರ್ವಡೆ ಜಡಿದಟ್ಟ (ಧರ್ಮಾಮೃ. ೮-೮೮); ನಡೆನಡೆದು ನಿಂದಡಿಗಡಿಗೆ ನೆನೆವು (ಸಿದ್ಧರಾ. ೦-೩೬); ಕ್ರಿಯಾಸಮಭಿಹಾರಕ್ಕೆ – ನಡೆನಡೆಯೆಂದು; ಇದಿರ್ಪದರ್ಪನೆ ಜಟಾಯು (ಶಮದ. ೧೯೩ ಪ್ರಯೋ); ಸಕಳೇಶನ ನಿರೂಪವಿದಕ್ಕೆ ನಡೆನಡೆ ಮಗನೆ ಹೋಹವೆನುತ್ತ (ಬಸಪು. ೪೭-೩೦); ತಿರುಹಿ ಗಾಲಿಯ ತೆಗೆದು ಮುಂಗೈಗೊಂಡು ನಡೆನಡೆದು ಅರಿಬಲವನಿಡೆ (ಕುಮ್ಮಾರರಾ. ೬-೨೨). **ನಡೆದಾಟ** = ಓಡಾಟ; ಅಲೆತ; ಸಂಚಾರ : ಅತಿಯಾದ ನಡೆದಾಟದಿಂದ ಮೈಗೆ ಆಲಸ್ಯವಾಗಿದೆ (ರೂಢಿ). **ನಡೆದಾಡಿಸು**=೧. ನಡೆಯುವಂತೆ ಮಾಡು; ಓಡಾಡಿಸು : ಸಣ್ಣ ಮಗುವನ್ನು ಹೆಚ್ಚು ನಡೆದಾಡಿಸಬೇಡ (ರೂಢಿ). ೨. ನಡೆದುಕೊಳ್ಳುವಂತೆ ಮಾಡು : ವ್ಯವಹರಿಸುವಂತೆ ಮಾಡು : ಹುಡುಗರು ಆಸ್ತಿಗೆ ಅಧಿಕಾರಿಗಳಾಗಿ ಬಂದಾಗ ತಾವೇ ತಾವಾಗಿ ಸರ್ವಾಧಿಕಾರವನ್ನೂ ಸ್ವಾಧೀನಪಡಿಸಿಕೊಂಡು ಆ ಹುಡುಗರನ್ನು ಸ್ವೇಚ್ಛೆಯಂತೆ ನಡೆದಾಡಿಸಿಕೊಂಡದ್ದುಂಟು (ಇಮ್ಮಡಿ. ೩೦೨). **ನಡೆದಾಡು** = ಓಡಾಡು ; ಅಡ್ಡಾಡು : ಅರಸಂಡೆವಾಚ್ ನಡೆದಾಡುತಪ ತಾಯೊಡನೆ (ಸಾಳ್ವಭಾ. ೩-೯) ; ಮೇರು ನಡೆದಾಡೆ . . . ದಿನಕರ ಕಾರಿರುಳಾಗೆಸೆಯೆ ಸತಿಯರಂ ನಂಬುವರೇ (ನನ್ನಿಅ. ೩-೪೨) ; ಕಂಡಿಕೆಗಂಗಳ ಧಾವಿನಿಯರು ನಡೆದಾಡುತಿರ್ದರು (ಅಭಿರೂ. ೩-೧೧೮) ; ಹೆಚ್ಚು ನಡೆದಾಡಿ ಆಯಾಸ ಮಾಡಿಕೊಳ್ಳಬೇಡ (ರೂಢಿ). **ನಡೆದುಕೊಳ್ಳು, ನಡಕೊಳ್ಳು** = ೧. ವರ್ತಿಸು; ವ್ಯವಹರಿಸು : ರಾಮನು ಯಾವಾಗಲೂ ಗುರುಹಿರಿಯರಲ್ಲಿ ವಿಧೇಯನಾಗಿಯೆ ನಡೆದುಕೊಳ್ಳುತ್ತಿದ್ದನು (ವಾರಾಕೈ. ೩೬) ; ಎಲ್ಲ ಪ್ರಜೆಗಳೂ ಇವರ ಅಪ್ಪಣೆಯ ಮೇರೆಗೆ ನಡಕೊಳ್ಳತಕ್ಕದ್ದು (ಮುಂಬಯಿ. ೯-೩). ೨. ವ್ರತ, ಪೂಜೆ ಮುಂತಾದುವನ್ನು ಆಚರಿಸಿ ಭಕ್ತಿಯನ್ನು ತೋರಿಸು : ಇವರು ಯಾವತ್ತು ಹಿಂದೂದೇವತೆಗಳಿಗೆ ನಡಕೊಳ್ಳುವರು (ಕಭಾಗ. ೧೦೫) ; ಪಥ್ಯ-ಉಪಚಾರವನ್ನು ಮಾಡಿದ್ದಾಯಿತು. ದೇವರು-ದಿಂಡರಿಗೆ ನಡಕೊಂಡದ್ದಾಯಿತು. ಏನೂ ಉಪಯೋಗವಾಗಲಿಲ್ಲ (ಹೊಸಕ. ೧೮೪). **ನಡೆದು ಬರು**= ಮುಂದುವರಿ; ಮುಂದೆ ಸಾಗು : ನಾನು ಸ್ಥಾಪಿಸಿರುವ ಧರ್ಮದಾರ್ಢ್ಯವು ಬಹುಕಾಲದವರೆಗೂ ನಡೆದುಬರುವುದು (ಕಗದ್ಯ. II. ೧೦). **ನಡೆದೊವಲ ಪಾವೆ** = ಚಲಿಸುವ ತೊಗಲ ಬೊಂಬೆ ; ಶರೀರ ; ದೇಹ : ನಡೆದೊವ[ಪಾಠಾಂ. ಗ]ಲ ಪಾವೆ...ಘನರೋಗದಾಗರಂ ತಾನೆನಿಪೀಯೊಡಲಿದು ಕಾಲನ ತಿಂಗುಳ್ ಜಡಮನುಜರ್ ನಿತ್ಯವೆಂದು ಮಯ್ಯಾಟಿದಿರ್ಪರ್ (ತ್ರಿಪುವಿ. ೩೩-೧೧೨).

[ ದೇ.೫ ತಮಿ. ನಟ; ಮಲ. ಕೊಡ. ನಡ; ತೆಲು. ನಡಚು, ನಡುಚು; ಕೊಲಾ. ಅಡ್ಗ್; ನಾಯ್ಕಿ. ಅರ್ಗ್ ]

**ನಡೆ₄** (ನಾ). ೧. (ಕಾಲಿನಿಂದ) ನಡೆಯುವಿಕೆ ; ನಡಗೆ ; ಚಲನೆ ; ಗಮನ : "ವಂಕ್ರದುಂ ಪರಿಸರ್ಪಮೆನೆ ನಡೆ" (ಮಂಗರಾ. ೧೩೦-೧೬) ; ಒರ್ವ[ನೊರ್ವ]ಳ ನಡೆಯು ನುಡಿಯು ಮುಡಿಯು ಗಾಂಟಿಂಗೆ ಮುಗುಳ್ನಗೆ ನಕ್ಕು ತನ್ನ ಕೆಳೆಯಂಗೆ ತೋರ್ದು (ಶಂಶಭಾ. ೪-೯೩೨) ; ಬಾಳ ಮೊನೆಯಂಬಿನ ತಿಂತಿಣಿಯೊಳ್ ತಗುಳ್ದು ಕಿಕ್ಕಿರ್ದುಗಿರ್ದದಿರ್ದ ಕೊಳ್ಗುಳದೊಳಂ ನಡೆವೀ ನಡೆಗೆಂತು ನೋಂತೆಯೋ (ಶಂಶಭಾ. ೧೩-೩೨) ; ಕಡುಗೂರ್ಪಿಲ್ಲದ ಕರವಾಳ್ . . . ನಡೆಯಿಲ್ಲದ ಕರ್ತೆ ಮನಕ್ಕಿಡಂಬಡಂ ಮಾಟ್ಯುಮರ್ತಿಯುಂ ಮಾಡುಗುಮೇ (ಅಜಿಪು. ೬-೪೩) ; ಅವೆಡೆ ಹಂಸಗೀ ನಡೆಯು ಚೆಲ್ವನೆ ನೂಪುರದಿಂಚರು ಸ್ಮರಂ ಜೇವೊಡೆದಂದದವಾಗೆ . . . ಬಂದಳದೊಂದು ಲೀಲೆಯಿಂ (ಮಲ್ಲಿಪು. ೪-೭೩) ; ಮರಾಳಂ ನಡೆಯೊಳುರುಪಿಕಂ ನಾದದೊಳ್ . . . ಭೃಂಗಂ ವಿಚಲನ್ನೀಲಾಳಕಾನೀಕದೊಳಮರ್ದೆಸೆಯಲ್ ಶೋಭಿಕುಂ ವಾರನಾರೀನಿಚಯಂ (ಉದ್ಭಟ. ೧೨-೪೩) ; ಬನದೊಳಡೆಯಾಡುವ ಸಬರಿಯರ ನಡೆಯನೇಡಿಸುವಂತೆ ಮೆಲ್ಲಡಿಯಿಡುವ ಪೆಣ್ಣಂಚೆಗಳ ಬಳಗಂಗಳ (ಕಬ್ಬಿಗ. ೧೮) ; ಮಾಯೆ ತನ್ನಂತೆ ನಡೆಯ ಕಲಿಸಿದಳಂಚೆವಿಂಡಿಗೆ ನುಡಿಯ ಕಲಿಸಿದಳರಗಿಳಿಗೆ (ಪ್ರಭುಲೀ. ೩-೩೨) ; ಅಂಚೆಯ ನಡೆಯನಿದಂ ತನತೆನುತುಂ ಮಂಚಲ್ಪಿಡಿವೊಳ್ನಡ (ಜಯುಕಾ. ೨-೨) ; ನಡೆ ಮಂದವಾಯ್ತು ನಡುಗಡಸಿತ್ತು ಬಡತನಂ ನುಡಿ ಮೆಲ್ಲನಾಯ್ತು ಕೆಳವೆಯ ಮಡಿಗಳಂ ಕಾವ ಮಡದಿಯರ್ಗೆ (ಭಾವಜಿಂ. ೨-೯). ೨. ಆಚರಣೆ ; ನಡವಳಿಕೆ ; ಆಚಾರ ; ಚರ್ಯೆ ; ಸಂಪ್ರದಾಯ ಎನ್ನ ನಡೆಯೊಂದು ಪರಿ ಎನ್ನ ನುಡಿಯೊಂದು ಪರಿ . . . ನುಡಿಯ ತಕ್ಕ ನಡೆಯ ಕಂಡೊಡೆ ಕೂಡಲಸಂಗಮದೇವನೊಳಗಿರ್ಪನಯ್ಯಾ (ಬಸವ. ೩೦); ಪೊಡವಿಗಚ್ಚರಿ ನಿಮ್ಮ ಭಕ್ತಿಯ ನಡೆ ಸೊಗಸದೆಮಗೀ ಹಿರಿಯತನಗೆಡದೆ ಹೋಬವಡಿ ಸಾಕು (ಶೆಸಪು. ೩೩-೧೯) ; ಸಂತೋಷ ಪರಿಣಾಮ ನುಡಿ(ನಡೆ) ತತ್ವ ನಡೆ(ನುಡಿ) ಪಾವನ ಆತನ ಸುಳುಹು ವಸಂತಗಾಳಿ (ಸಿದ್ಧೇವ. ೧೩೩-೪೭೩) ; ನಿನ್ನ ನಡೆಯು ನಿನ್ನ ನುಡಿಯ ನಿನ್ನೊಳೆ ಕಂಡು ನಿನ್ನ ಮುಂದೋದಿದೆನರಸಾ (ಭರತ. ೨-೩೬) ; ನಡೆಯೊಳಗೆ ನುಡಿ ತುಂಬಿ ನುಡಿಯೊಳಗೆ ನಡೆ ತುಂಬಿ . . . ಲಿಂಗವ ಕೂಡಬಲ್ಲಾತನೇ ಶರಣ ನೋಡಾ (ಅಬಂಧೇ. ೦೪೭-೦೩೯) ; ಸತ್ಯರ ನುಡಿ ತೀರ್ಥ ನಿತ್ಯರ ನಡೆ ತೀರ್ಥ ಉತ್ತಮರ ಸಂಗವದು ತೀರ್ಥ ಹರಿವ ನೀರೆತ್ತಣದು ತೀರ್ಥ (ಸರ್ವಜ್ಞ. ೮೨೧) ; ಪೆತ್ತರಂ ಸೋಲಿಪಂ ನಲ್ಲಮಗನೊಳ್ಪುಗುಣಂಗಳಿಂ ಮಂಗಿಲೊಸ್ವಲ್ ನಡೆಯಿಂ ನೀರಿಂ ಲೋಗರು ನಲವೇರಿಪಂ (ಸೌನಂದ.೨-೩೦); ಅವರ ಕಡೇಲಿ ಏನು ನಡೆ ಇದೆಯೋ ಹಾಗೆಯೇ ಮಾಡಲಿ (ಬೆಳುವ. ೨೦೬) ; ನುಡಿ ಪುರಾತನದು ನಡೆ ಕಿರಾತನದು (ಗಾದೆ). ೩. ಶೀಲ ; ನಡತೆ : ಎನ್ನಲ್ಲಿ ನಡೆಯಿಲ್ಲಾಗಿ ನಾನು ಭಕ್ತನೆಂತಪ್ಪೆನಯ್ಯಾ (ಬಸವ. ೨೯೧) ; ಹುಡುಗಿಯ ಗುಣವನು ಜನರು ನಿರ್ಣಯಿಪರು ತಾಯಿಯ ನಡೆಯನು

ನೋಡಿ (ಅಂಡಾಪ. ೩೦೨-೨೯). ೪. ಮೊಂದುವರಿಕೆ; ಮುನ್ನಡೆ; ಪ್ರಗತಿ : ಜ್ಞಾನವಿಜ್ಞಾನಕ್ಷೇತ್ರಗಳಲ್ಲಿ ಹಲವು ಪ್ರಯೋಗಗಳನ್ನು ನಡೆಸಿ ಪಾಶ್ಚಾತ್ಯ ಜಗತ್ತು ಅಣುದಾಂಬನ್ನು ಕಂಡುಹಿಡಿದಿದೆ. ಇಲ್ಲಿಗೆ ಪಾಶ್ಚಾತ್ಯಜಗತ್ತಿನ ನಡೆ ನಿಂತಿತು (ಭಾರದ. ೫೮೦) ; ನವ್ಮ ಸಯ್ಯಿನ ಬಿದಿಯು ನಡೆಗೆ ತೊಡ ರೊದಗದೊಲ್ ಸರ್ವಮಂ ಪುರುಷಪ್ರಯತ್ನಮಂ ಮಾಳ್ಪ ನಾವ್ ! (ಚಂದ್ರಸ.೧೩-೨೧).೫. ಪ್ರಯಾಣ; ಸಂಚಾರ: "ನಡೆ ಸಿದ್ಧಯಾತ್ರಯಕ್ಕು" (ಖಂಗರಾ. ೦೨೧-೩). ೬. ಎತ್ತುಗಳು ಒಂದು ಸಲ ಒಟ್ಟಿಗೆ (ಒಂದು ರಾತ್ರಿಯಲ್ಲಿ) ನಡೆಯುವಷ್ಟು ದಾರಿ; ಸುಮಾರು ಮೂವತ್ತು ಮೈಲಿ: ಈ ಊರಿನಿಂದ ಹೊರಟರೆ ನಮ್ಮ ಎತ್ತಿನ ಗಾಡಿಯು ಎರಡು ನಡೆಯಲ್ಲಿ ತುಮಕೂರು ಸೇರಬಹುದು (ಬೂಢಿ). ೭. ದಾರಿ ; ಹಾದಿ. 'ನಡೆದಾಳಿ'. ಪರಾ. ೮. ದನಕರು, ಕಾಲ್ನಡೆ ಇತ್ಯಾದಿ : ಮಠದ ಧರ್ಮಕೆ ಹೇರುವ ಮಾನ್ಯದ ಎತ್ತು ನಡೆ ೫೦ ಆಯಿವತ್ತುಯೆತ್ತಿನ ಮಾನ್ಯವನೂ ಶಿವಾರ್ಪಿತ ವಾಗಿ ಬಿಟ್ಟಿಧೇವೆ (ಎಕ. VII, ಶಿವಮೊ. ೨೮-೧೩ ; 1670) ; ಧಾರಾಮಾರ್ಗದ ವೈರ್‍ಯಿಗೆ ಅರವಾನೆ ಕಟ್ಟಲಿ ನಿಂತ್ರ ನಡೆ ೧ ವಂದಕ್ಕೆ ಹಂ (ಎಕ. X (8), ಕೋಲಾರ. ೨೫೮-೧೭ ; 1761) ; ಯಾ ಹುಳಿಯಾರ ಸುಂಕದಲ್ಲಿ ನಾನಾ ದಿನಿಶಿನ ನಡೆಗಳಿಗೆ ಬದ್ದನೆ ಪ್ರಕಾರಾ ಲೆಕ್ಕಾ ಹಾಕಿಕೊಳುತ್ತಯಿದ್ದಾರೊ ಅದೆ ಪ್ರಕಾರಕ್ಕೆ ಬದ್ದವೆ ನಿಂತ್ರ ನಡೆ ೧ಕ್ಕೆ ಕಂಟಿರಾಯಿ ೮೦೦೦೦ (ಎಕ. XVI, ಚಿಕ್ಕನಾ. ೯೦-೦೭ ; 1802) ; ಒಡಕು ಕೊಟ್ಟಿಗೆ ಹಿಡಿಯಲಾರದು, ನಡೆಗಳಿಪ್ಪತ್ತಾದವು (ಕವಿಪು. ೧೮-೦೦). 'ಕಾಲ್ನಡೆ' ಪರಾ. ೯. (ಕೆಲವು ವಿಶೇಷ ಸಂದರ್ಭಗಳಲ್ಲಿ) ನಡೆಯುವ ದಾರಿಗೆ ಹಾಕುವ ಹಾಸು: ನಡೆಮಡಿ ; ಹಡದಿ (ಉಕ) : ವಿಳಸತ್ಕಾಂತಂ ವಸಂತಂ ತಳರದಿರೆ ವನಶ್ರೀ ಮುಂದುಬೆತ್ತು ಮುಕುಳಕುಳದಿಂ ನೀಳ್ಘದಿಂದಿಕ್ಕಿದ ನಡೆಗಳೊ ಪೇಟೆಂತಿ ಮೆಂಬಂದದಿಂ ಕಣ್ಗೊಳಿಸುತ್ತಿರ್ದಪ್ಪುವಂತಾ ವನದೊಳಗೇವೊರ್ಯಿಲ್ಲಿಂದ ಮಲ್ಲಿಕ್ಕ ನವ್ಯಾಮಳಪುಷ್ಪಂಗಳ್ ಜನುಂಗುತ್ತಿಬಿಗಿದ [ಮದ]ಭೃಂಗಾವಳೀ ಸಂಗದಿಂದಂ (ಕುಸುಮಾ. ೭-೦೦೩). ೧೦. ಗದ್ಯ ಅಥವಾ ಪದ್ಯದ ಲಯ,-ಓಟ : ಅವರ ಕಾವ್ಯದ ನಡೆ ಇತರರ ಕಾವ್ಯದ ರೀತಿಗಿಂತ ಭಿನ್ನವಾಗಿದೆ (ಬೂಢಿ). ೧೧. ಒಂದು ಬಾರಿ ಹೊರುವಷ್ಟು ಪ್ರಮಾಣ ; ಒಂದು ಹೊರೆ,-ಹೇರು ; ಸಾರಿಗೆ (ಉಕ) : ಕಲಿನಾಥ ದೇವರ ಗಂಧ ಕಸ್ತೂರಿಗೆ ಎಲೆಯ ನಡಗೆ ತಾರ ೧ ನು ಬಿಟ್ಟರು (ಸೌಇಇ. IX-1, ೩೯೯-೯೭ ; 1292) ; ಎತ್ತಿನ ಮಾನ್ಯ ಹದಿನೈದು ನಡೆಲು ಅಡಕೆ ಮೆಣಸು (ಎಕ. VIII, ತೀರ್ಥಹ. ೭೩-೨೨ ; 1674). ತೆಂಗಿನಕಾಯಿ, ನಡೆ ೧೧೧೦ಕ್ಕೆ ಪಕ್ಕಾ ಸಾವಿರ ಅಂತ ತಿಳಿದು ಅದರ ಮೇಲೆ ಧಾರಣೆ ಇರುತ್ತದೆ (ಮುಂಬವ್ಯಾ. ೨೮೩) ; ರೈತ ಬೆಳಗಿನಿಂದ ಐದು ನಡೆ ಗೊಬ್ಬರ ಹೇರಿದ್ದಾನೆ (ಬೂಢಿ). ೧೨. [ನಾಟ್ಯ] ತಟ್ಟು, ಮೆಟ್ಟು, ನಾಟು, ತಟ್ಟುಮೆಟ್ಟು, ಕುದಿತ ಮೆಟ್ಟು, ಮೈ, ಮುಡಿ, ಜಾತಿ, ಅರುಧಿ ಮತ್ತು ನಡೆ ಎಂಬ ಹತ್ತು ವಿಧವಾದ ಅಡವುಗಳಲ್ಲಿ ಒಂದು : ಮೊಗದೊಳೆನಗೆದೋಳ್ ಬಿನ್ನಣದ ನಡೆ ಸೋಲಪುಡಿಳಾಯುಧರು ಕಾಲರವೆಯ ಚೆಲ್ವಡರೆ ದೇಶಿಯವಾಡು ತಿರ್ದಳು ವಿಲಾಸವಿಭ್ರಮಹಾವಭಾವಮೆಸೆಯೆ (ರೇವಣ. ೩೩-೯೯).

**ನಡೆನಡೆ$_2$** (ದ್ವಿರುಕ್ತಿ) : ನಡೆನಡೆಗೆ ಬಾವುಲಿಯ ಪೊಡೆಯ ಕೊಡರುಗಳು ಘಲಘಲನೆ ಮೊರೆಯಲು ಬಿಡದೆ ತಾಟಿಪ ಹಲಗೆ ಘಂಘಂಘಲಿಗು ಘಲಿಲೆನಲು (ಬಸಪು. ೦೩-೦೭). **ನಡೆನುಡಿ** = ೧. ನಡಗೆ ಮತ್ತು ಮಾತು : ಕೈಕಾಲ್ ನಡೆನುಡಿಯುಳ್ಳ ಮನುಷ್ಯನಿಂದೆಂತುಂ ಕಾರ್ಯಮುಂಟು (ಪಂಚತಂ. ೩೯-೦೫) ; ನಡೆನುಡಿ ಬಳಲ್ಕೆ ಮುನ್ನಂ ಕಡುಚೆನ್ನೆಯ ರೂಪುಗುಂಡ ಬಳಿಕಂ ನಡೆಯರ್ ನುಡಿಯರ್ ನೀರುಂ ಕುಡಿಯರ್ ನಡೆ ನೋಡುತಿರ್ಪರತನುಶಿಥಿಲರ್ ಪಥಿಕರ್ (೧೮೯. ೨-೨೫). ಪಾಲಿಸಿದಳಂತು ನಡೆನುಡಿಗಳಂ ಕಲಿಪಲ್ಲಿ ಪರಿಯುತಮಾ ಶಿಶುವನು (ಕೃಮಿಭಾ. ೨೮-೧೯). ೨. ನಡತೆ; ನಡವಳಿಕೆ ; ಆಚಾರ : ಸಂಪ್ರದಾಯ ; ನಡೆನುಡಿ ಹುಸಿಯುಂಟಾದರೆ ಕೂಡಲಸಂಗನ ತೋರಿದ ಚೆನ್ನಬಸವಣ್ಣನಾಣೆ (ಬಸವ. ೭೦೫) ; ಶುಕ್ಲಶೋಣಿತದಿಂದ ತನುಮನ ಜನಿಸಿತ್ತು ತಮುಮನದಿಂದ ನಡೆನುಡಿ ಜನಿಸಿತ್ತು (ಆದಯ. ೨೭-೮೦) ; ನಡೆನುಡಿಯೊಳಭವನೆಂದೆನಿಸಿರ್ದನಾಪುರಕೆ (ತಿರುಕ. ದೀ. ೯-೫) : ದೃಢಭಾವವೇ ತಕ್ಕವೆದೆಗುಡದೆ ಬಲಿತವನ ನಡೆನುಡಿಯು ಬಗೆದ ಸರಿನೂಲಿಮಂತೆ ಮೃಡನೊಳು ತೊಡಂಕಿ ಬಿಡದಡರ್ದುದೆನಲೀಹ ಸಡಿಫಡ ಶರಣನಿರವನಾವಂ ಬಣ್ಣಿಪಂ (ಸಾಮಂಕ. ೧-೬೯) ; ನಡೆನುಡಿ ಭಕ್ತಿ ಮಸ್ತುಗಳ ಕೊಳ್ಳಿಡುಮಂಜಕೆ ಕಾಯಶುದ್ಧಿ ಮಾಟ್ಟುಡುಮೆನಿಸಿರ್ಪ ಮಂಚಸವಿಚಿಕಿತ್ಸಿತಿಯುಂ ತಳೆದುಂ (ಅನಂತಪು. ೯-೦೨) ; ವ್ಯಕ್ತಿಯ ನಡೆನುಡಿಗಳು, ಮನೋಭಾವಗಳು, ದೃಷ್ಟಿಧ್ಯೇಯಗಳು . . . ಇವೆಲ್ಲದರ ಮೇಲೂ ಬುದ್ಧಿಶಕ್ತಿ ತನ್ನ ನಿರ್ದಿಷ್ಟ ಪ್ರಭಾವವನ್ನು ಬೀರುತ್ತದೆ (ಶಿಕ್ಷದ. ೭೧೨). **ನಡೆನುಡಿಮುಗ್ಧ** = ಆಚಾರ, ವಿಚಾರಗಳಲ್ಲಿ ಮುಗ್ಧನಾದವನು,-ನಿಷ್ಕಪಟಿಯಾದವನು; ಶುದ್ಧವಾದ ಚಾರಿತ್ರವುಳ್ಳವನು: ಅಂಗಳ ನೋಟ ಲಿಂಗಕ್ಕೆ ಧಾರ ಲಿಂಗಜೀವಿಗಳ ಕೂಡೆ ಕೂಡಿವನೆ ಶರಣನು ನಡೆನುಡಿಮುಗ್ಧ ಗುಹೇಶ್ವರ ನಿಮ್ಮ ಶರಣನು (ಅವಕಂ. ೮೦-೩೬೯). **ನಡೆಮಾಡು** = ೧. ಚಲಿಸು ; ಸುತ್ತಾಡು ; ಸುತ್ತಲೂ ಹಾಯು : ಕೃತಹವೆ ಕಜ್ ನಡೆಯಾಡೆ ಲತಾಂಗಿ ಕಂಡಳುಜ್ಜ್ವಳಕಳಶಂಗಳಂ ಘನರಸಾಕಳಿತಂಗಳನುನ್ನತಂಗಳಂ (ಆಪಂತು. ೯-೦೦೮). ೨. ನಡೆದುಕೊಳ್ಳು ; ಆಚರಿಸು ; ವ್ಯವಹರಿಸು : ಮದನಕದಳೀವನಕುಠಾರರುಂ . . . ಪಾಪಾಟವೀಪಾವಕರುಮಪ್ಪ ಶ್ರೀಪದ್ಮಪ್ರಭಮಲಧಾರಿದೇವರು ತಪೋನಿಷ್ಠರಾಗಿ ನಡೆಯಾಡಿ (ಸೌಇಇ. IX-1, ೨೭೮-೨೯ ; 1185).

[ <ನಡೆ$_1$ /ತಮಿ. ನಟೈ ; ಮಲ. ನಡ ; ತುಳು. ನಡೆ, ನಡಿ ; ತೆಲು. ನಡ]

**ನಡೆ$_3$** (ಅ). ಚೆನ್ನಾಗಿ ; ವಿಶೇಷವಾಗಿ ; ಅತಿಶಯವಾಗಿ : ಎಡೆಯಬಿಡದು ತೊಳಗುವಂತಿರೆ ಸಿಡಿಲ್ದು ಪೋಯ್ತುಟ್ಟುದಾಗಳಂಗಜಕಲೆಯೊಳ್ ನಡೆ ಮೊಗ ಮಿಕ್ಕು ಛಾಯಂಗಿಡದೊಡನುಲಿದುವು ಬೆರಲ ಕೊರಲ ನಾಲಗೆಯುಲಿಗಳ್ (ಕಾವ್ಯಸಾ. ೬೫೮ ಕಾದಂಬರಿ): ತೀಡೆ ತುಷಾರವಾಯು ನಡೆ ಕೋಡಿ ಕಡಂಗಿ ಜಲಕ್ರೀಡೆಯೊಳಂತೆ ಸೇಡುವಡೆದೊಪ್ಪಿದವೊಲ್ (ಲೀಲಾವ. ೧೯-೦೭) ; ತದವಸರದೊಳೆ ನೆಲದ ಪತಿ ಪೊಸವೆಣ್ಣಂ ನಡೆ ಬಗ್ಗಿಸುತಂ . . . ಅತಿಶಯ ಚತುರೆಯನಿರದಾರೋಹಣಮಂ ವಿಗೆ ಮಾಡುತಿರಲ್ (ಹಾಲಾಸ್ಯ. ೩-೧೨-೩೭); ನಡೆ ವಿಡುಕದ ಚಮರದ ನೀಳ್ದೊಡಲೆತ್ತಿದ ಕಿವಿಯು ತಮ್ಮ ಪದರಜಮುಂ ಪಾರ್ಯ್ದಪ್ಪಡೆ ಸಿಲ್ಕದಶ್ವಗಳ್ ಧೀಂಕಿಡುವುವು (ಜಾತಂಕ. ೯-೮). 'ನಾಡೆ' ಪರಾ.

**ನಡೆ ನೋಟ** = ಚೆನ್ನಾದ ನೋಟ ; ಅತಿಶಯವಾದ ದೃಷ್ಟಿ: ನಡೆನೋಟದಿಂದೆ ಬೆಮರು ಪಡೆದು ಮನೋಭವನ ಮಸಮುಮಂ ನನೆವಿಲ್ಲಂ ಪಿಡಿದಿಸುವ ಕೆಯ್ಮಮಂ ಕೇಳ್ ನಡುಗಿಸದೊಡೆ ನಿನ್ನ ಕೆಳದಿಯಲ್ಲಂ ಕೆಳದೀ (ಲೀಲಾವ. ೧೧-೮೨). **ನಡೆ ನೋಡು** = ಚೆನ್ನಾಗಿ ನೋಡು ; ನಟ್ಟ ದೃಷ್ಟಿಯಿಂದ ನೋಡು : ನಿಡಿಯಲಗಣ್ಗಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾರದೆ ತಡೆಯೆ ಪಗಲ್ ಒರಿಯುವಪ್ಪವಾ ಪುರವರದೊಳ್ (ಕಾವ್ಯಸಾ. ೦೬೮ ಕಾದಂಬರಿ) ; ಮೆಲ್ಲನೆ ಮೃಗಮೊಂದು ಸಾರ್ದು ನೆಟನಂ ನಡೆ ನೋಡಿ ನರೇಂದ್ರನೆಚ್ಚು ಭೋಂಕನೆ ಮೃಗಚಾರಿಯಂ ತನಗೆ ಮಾಣದೆ ತಂದನದೊಂದು ಮಾರಿಯಂ (ಪಂಪಭಾ. ೦-೭೦೧) ; ಎಳವೆಂಡಿನ್ನೆಲೆವಾಡ ದೊಳೆಳಸಿರೆ ನಡೆ ನೋಡಿ ಸೋಲ್ತುಪೋಲ್ಕಿಂದ್ರಂ ಮಾರ್ಪೊಳವ ನೆವದಿಂ ಪೊರಳ್ವಂ ಮುಳಿಯದರೆಸೆಹತ್ತರತ್ನಕುಟ್ಟಿಮತಳದೊಳ್ (ಕಾದಂಪೂ. ೩೦೯) ; ನಡೆ ನೋಟ್ಟರ ಕಡೆಗಣ್ಣಂ ಕಡುನಲ್ಲರ ಮನವುಮೊಡನೆ ಪೊತ್ತುವು ಪುರದೊಳ್ ಮಡದಿಯರ ಮೊಲೆಯನಲ್ಲದೊಡುಡಿಯುವ ಬಳುವಳಿಕೆವಡೆದ ಬಡನಡು ಭರದಿಂ (ಆದಿಪು. ೯-೨೨); ಕೃತಕಗಿರಿಯೊಳ್ ನವಿಲೆಬ್ಬಿಡುವುದೂ

ಪಥಿಕರ್ ನಡೆ ನೋಡುವರರ್ದೆ ಧಕ್ಕೆವಾಜಿಸುತ್ತಿರ್ಪನೆಗಂ (ವರ್ಧಕು. ೨-೨೨) ; ತೊವಲನುಗಿದು ಕರುಳ ತೊಡಂಕಂ ಬಿಡಿಸಿ ನಡೆ ನೋಟ್ಪನೊಳಗೆಲು ಪಡಗಿರ್ಪುದು ಜೀವನಿರ್ಪೂರ್ಡಲ್ಲಿಗೆರ್ಪೋದು (ಯಕೋಶ. ೪-೧೯) ; ಕುಸುಮ ಮಾಲೆಯ ಶಿರುಹುತೆತ್ತಿದ ಮುಸುಡಿನರೆನೋಟದಲಿ ಲಜ್ಜೆಯ ಬೆಸುಗೆಯುಲಿ ನಡೆ[ಪಾಠಾಂ. ನಡೆ$^3$, ಎಗೆ]ನೋಡುತಿರ್ದಳು ಸೀತೆ ರಘು ಪತಿಯ (ತೊರರಾ. ೧-೦೫-೩೯) ; ನಡೆ ನೋಡಿ ನಲವಿಂದ ಹರಸಿದವರು ಮತ್ತೊಡನೆ ಲಾಘಿಸಿದರಂಬರಕೆ (ಭರತ. ೩-೧೨೯) ; ಜನಪತಿಯ ವದನವಮಂ ಕಣ್ಗೊನೆಯಿಂ ನಡೆ ನೋಡಿ ನಾಡೆ ಮುದವಮಂ ತಳೆದರ್ (ರಾಜಶೇ. ೪-೬).

**ನಡೆಕೆಯ್** ? (ಕ್ರಿ). (?) : ಎಡೆವಣಿಗೀ ನಡೆಕೆಯ್ದು ತವಂ ಸಯ್ಯಮ ಮಾನ್ಯೊಳತ್ರ್ಯಾರ ಸಂಘ × × ವಡೆ ಕೊಣಿದಿನ್ತು ವಾಟ್ಸುದುದು (ಎಕ. II, ೯೩-೧ ; ಕು. 700). [ ? ]

**ನಡೆಕೋಲು** 'ನಡೆಗೋಲು' ನೋ.

**ನಡೆಗ** (ನಾ). ೧. ನಡೆಯುವವನು ; ನಡೆಗಾರ : "ಕಸನ್, ಕಸಕ, ಈ ೨ ನಡೆಗಂ" (ಕಾಶಕ್ಯ. ೦೫೦). ೨. ಒಳ್ಳೆಯ ನಡಗೆಯುಳ್ಳ ಒಂದು ಬಗೆಯ ಕಂದುರೆ ; ನಡೆಗ ನಾಗರ ಮಣಿ ಮಿಡಿವ ಚೆನ್ನಿಗರ ಮುಂಗುಡಿಯುರ್ಲೇಟುವ ಮುದ್ದುವೊಗದ ಕಡುರಭಸದ ಕಾಡಿಗೆಗಣ್ಣ ತೇಜಿಯ ಪೊಡವಾವಂಗೆ ತೋಱದರು (ಅಂಜಕ. ೬-೮೪) ; ನಡೆಗನನೇಱ ಮೇಳದವಳಂ ಪೆಱಗೇಱಿಸಿ ಕೊಂಡು ಪಕ್ಕದೊಳ್ ಗಡಣಿಸಿ ಮೇಳದೊಳ್ ನಗಸುತಂ ಬರೆವಾದಿಗೆ ಗೆಂಟುವೋಗಿ (ಸೂಕ್ತಿಸು. ೧೨-೩೭). [ ನಡೆ$_1$ + -ಗ$_2$ ]

**ನಡೆಗಲ್**, ನಡೆಗಲಿ$_1$ (ಕ್ರಿ). ನಡಗೆಯನ್ನು ಕಲಿ ; ಓಡಾಡಲು ಕಲಿತುಕೊಳ್ಳು : ಆ ಬಾಲಕಂ ಬಾಲದುಡಿಗೆಗಳಂ ತೊಟ್ಟು ನಡೆಗಲ್ತೊಂದು ದಿವಸಂ ಗೋವ್ರಜಂಗಳೊಳ್ ಸೋಂಕುವುದನಾಂ ಕಂಡು (ಹಂಡತಂ. ೦೮೭-೯); ನಡೆಗಲ್ವಂದುಂ ಬಿಣ್ಪಂ ಕೊಡೆನೆಗೆದಪುದುರ್ವಿಯೆಂದು ವಾಸುಗಿ ಪಲವುಂ ಪೆಡೆಯಂ ಶಿಶುನಡಮೆಡೆಯೊಳ್ ಪಡೆದಂತು ಸಹಸ್ರಫಣನೆನಲ್ ಪೆಸರ್ವಡೆದಂ (ಹಂರಾಮ. ೩-೦೨೯) ; ದೃಢಚಿತ್ತಂ ಗುಣನಿಳಯಂ ಕಡುಗಲಿ ಕಿಱಯಂದು ದಿವ್ಯಜನಮುನಿಗಳ ಮೆಲ್ಲಡಿಯಂ ಪಿಡಿದು ತಳರ್ನಡೆ ನಡೆಗಲ್ತಂ ಭವ್ಯವನಜ ವನಕಳಹಂಸಂ (ಧರ್ಮಾಮೃ. ೬-೦೩); ನಡೆಗಲ್ವಲ್ಲಿಯೆ ಧರ್ಮದಲ್ಲಿ ನಡೆಯಲ್ ಕಲ್ತಂ (ಎಕ. V, ಹಾಸನ. ೬೨-೩೩ ; 1160) ; (ಹಾಪಮಂ. ೬೧೦ ನೋ) ; ನಡೆಗಲ್ವಂದೆ ತಳರ್ನಡೆ ನಡೆಯಿಸಿದುಂ ನೃಪಕುಮಾರನೆಳೆಯಂ ಬಿಣ್ಪಂ ನುಡಿಗಲಂದೆ ತೊದಳ್ನುಡಿ ನುಡಿಯಿಸಿದುಂ ತನಗೆ ಸೋಲ್ತ ವಾಕ್ಕನ್ನಿಕೆಯಂ (ಅರ್ಧನೇ. ೨-೩೦) ; ವಿಚಾರಿಪಂತಿದು ನಡೆಗಲ್ತು ಸಂಚರಿಪ ಮೇಚಕಶೈಲವೊ . . . ಪೇಳೆನೆ ತೋಱದುದಾ ವರಾಹಕಂ (ಕಬಕಂ. ೪-೩). **ನಡೆಗಲಿ$_1$** : ಅಂಬೆಗಾಲಿಟ್ಟು ನಡೆಗಲಿತನು ಶ್ರಾವಕರ ಗಡಣವಾರಣ್ಯದಾವಾನಲ ಮೃಡಭಕ್ತ ಪಡೆದರ್ಗರ್ತಿಯನೀವ್ಪತಿರ್ದ (ಅಲ್ಲಮ. ೨-೫೩).

[ ನಡೆ$_1$ + ಕಲ್$_1$ ]

**ನಡೆಗಲಿ$_1$** 'ನಡೆಗಲ್' ನೋ.

**ನಡೆಗಲಿ$_2$** (ನಾ). ಆಕ್ರಮಣ ನಡೆಸುವ ಶೂರ ; ಮುನ್ನುಗ್ಗುವ ವೀರ : ಬೇಡಿದರ್ಗೆ ಬೇಡಿತಂ ಕೊಟ್ಟು ಬಂದಿಱವ ಕಸವರಗಲಿಗಳುಮಂ ಮತ್ತಮಣ್ಣೆ ನಡೆದಿಱವ ನಡೆಗಲಿಗಳುಮಂ ನೋಡಿ (ಗದಾಯು. ೯-೩೪ ವ).

[ ನಡೆ$_1$ + ಕಲಿ$_2$ ]

**ನಡೆಗಲಿಸು** (ಕ್ರಿ). ನಡಗೆಯನ್ನು ಕಲಿಸು ; ನಡೆಯುವುದನ್ನು ಹೇಳಿ ಕೊಡು : ನಡೆಗಲಿಸುತ್ತುಮಂಬೆಗಳನೋದಿಸುತುಂ ಗಿಳಿಯಂ ಪಿಕಕ್ಕೆ ಮಾಮಿಡಿಗಳನಿಕ್ಕುತುಂ . . . ನಿರಂತರಂ ತೊಲಗದಿರ್ಪುದು ಪೌರವಿಲಾಸಿನೀ ಜನಂ (ಮಲ್ಲಿಕಾ. ೨-೩೯). [ ನಡೆ$_1$ + ಕಲಿಸು$_1$ ]

**ನಡೆಗಟ್ಟಿ** (ನಾ). ಹೇರನ್ನು ಹೊರುವ ಕತ್ತೆ : ಭಾರವನ್ನು ಹೊತ್ತು ನಡೆಯಂವ ಕತ್ತೆ : ನಡೆಗಟ್ಟಿಗಳನಿರ್ಬರ್ಗಮೇಱಲ್ ಕೊಟ್ಟು ಪಿರಿದಾಳಂ ನೆರಂಬೇಟ್ಟು ಕಿಱದಂತರಂ ಕಟ್ಟುವುತ್ತುಂ ಬಂದು (ಸುಕುಮಾ. ೨-೫೯ ವ).

[ ನಡೆ$_1$ + ಕಟ್ಟಿ ]

**ನಡೆಗಾಣ್** (ಕ್ರಿ). ೧. ನಡಗೆಯನ್ನು ನೋಡು : ನಡೆಗಂಡು ಕವಿವ ಕಳಹಂಸೆಯುಂ ಜಡಿವ ಸವಿನುಡಿಗೇಳ್ದು ಮುತ್ತುವರಗಿಳಿಗಳಂ, ಕೊಡಹಿ (ಹದಳಾ. ೪-೩೦). ೨. ನಡವಳಿಕೆಯನ್ನು ತಿಳಿ ; ಆಚಾರ ವ್ಯವಹಾರಗಳನ್ನು ತಿಳಿದುಕೊಳ್ಳು : ಸಂಪ್ರದಾಯವನ್ನು ಅರಿತುಕೊಳ್ಳು : ಕಡೆಯ ದಿನದೊಳು ಮೂಱನೆಯ ಜಾವದೊಳೆಲ್ಲ ಕಡೆಯಿಂದ ಕೂಡಿದ ಪ್ರಜೆಗೆ ನಡೆಗಂಡು ಸಂಘಪೂಜೆಯ ಮಾಡಲಾ ಚಕ್ರಿ ತೊಡಗಿದನೇನ ಬಣ್ಣಿಪೆನು (ಭರತ. ೬೧-೧೦೦). [ ನಡೆ$_2$ + ಕಾಣ್ ]

**ನಡೆಗಿಡು** 'ನಡೆಗೆಡು' ನೋ.

**ನಡೆಗುಱಿ** (ನಾ). (ಗುಂಪಿನಲ್ಲಿ) ಪಸಂದಕ್ಕೆ ಹೋಗುವ ಕುರಿ : ಕೊಱದು ತೆಱಡೆಗೊಳ್ ಕಾಯ್ದು ಕೋದ ಸಂಕಲೆಯಿಂದೆ ಕೊಱದು ಕಿವಿಯೊಳ್ ಕೊಱದು ಚಿಬುಕದೊಳ್ ನೇಣಿಂದೆ ನಡೆಗುಱಿಗಳಂ ಮಾಡಿ ಕೈಯನೆಟ್ಟು ಪರಿರದೆ ನಡೆಯಿಸೆಬ್ಬಿದರ್ ಕಾಲ್ಗಳನರಿದು ಬಿಡದಿರದೆ ತಲೆಗಳಂ ತುದಿ ಮೂಗನೆಚ್ಚು ಕೆಡಪುವರಹೋ (ಶಾನಂದ. ೪-೧೮೯ ರಗಳೆ).

[ ನಡೆ$_1$ + ಕುಱಿ$_2$ ]

**ನಡೆಗೆಡಿಸು** (ಕ್ರಿ). ನಡಗೆಯನ್ನು ನಿಲ್ಲಿಸು ; ಚಲನೆಯನ್ನು ತಪ್ಪಿಸು,- ಅಡ್ಡಿಪಡಿಸು ; ನಿಲ್ಲುವಂತೆ ಮಾಡು : ವಿಟರ ಮೇಳಂಗಳಿಂ ಚೇಟಿಯರ ಗಡಣದಿಂ . . . ವಾರನಾರೀಜನಂ ಕಟಕದೊಳ್ಕಮುಕರ ನಡೆಗೆಡಿಸು ತೊಗ್ಗಿನಿಂ ಪೊಱಮಟ್ಟು ಬರುತಿರ್ದುದು (ಕ್ರಮಿಥಾ. ೬-೬).

[ ನಡೆ$_2$ + ಕೆಡಿಸು$_1$ ]

**ನಡೆಗೆಡು**, ನಡೆಗಿಡು (ಕ್ರಿ). ೧. ನಡೆಯಲಾರದಾಗು ; ಚಲನೆ ಇಲ್ಲವಾಗು; ಮುಂದು ಹೋಗಲು ಆಗದಿರು : ತೊಡೆ ದಡದಡಿಸೆ ನಡೆಗೆಟ್ಟು ಕಟಲುಲಿಗೆ ಬಱಸಲ್ದ ಕಳಹಂಸಮಂಡಲಕ್ಕಯಶಮಂ ಮಾಡಿಸಿಯುಂ. . . ತತ್ಕಾಂತೆ ಒಂದೆರಡಡಿಯನಿಡುವಲ್ಲಿ (ಶಾದಂಲಾ. ೩೬) ; ನಭಮೆತ್ತವೋದುದೆ ನಿಸಲ್ನಡೆಗೆಟ್ಟುದು ಗಾಳಿ ರೂಪುಗೆಟ್ಟುದು ದೆಸೆ (ಆಗವಿ. ೬-೮೦) ; ಕಳಹಂಸಮಾಲೆ ಕಾಸಾರದೊಳಂಜಿ ಪೊಕ್ಕುವು ರಥಾಂಗರಥಂ ನಡೆಗೆಟ್ಟುವದ್ಭುತಂ (ಗಿರಿಕ. ೮-೦೦) ; ನಂಜುಮುಳ್ಳಡಿಯನು ನಟ್ಟು ನಡೆಗೆಟ್ಟನೋ (ಸಿದ್ಧರಾ. ೨-೪೫) ; ಮೆಲ್ಲಡಿಯ ಇಡಲಱಯದಿನ್ನನಿತು ಕಾನನದೆಡೆಯೆನುತ ದೆಸೆಗೊಂಬಳೀ ಪರಿ ನಡೆನಡೆದು ನಡೆಗೆಟ್ಟು ನೆಮ್ಮಿದಳಾತ್ಮವಲ್ಲಭನ (ತೊರರಾ. ೨-೪-೧೬) ; ಆರು ಕರುಣಿಸುವವರು ನಡೆಗೆಟ್ಟಡವಿಯುಲಿ ಬೀಳೆ (ಶಿಖಾಗ. ೩-೧೪-೧೨) ; ಜಡೆಗನ ತಪಗೇಡಿಯ ಸೂನು ತನ್ನಯ ಪೊಡೆಯೊಳಗಿರಲು ಬಾಲಕನ ನಿಡಿದೋಳ ಮೊದಲ ಭೂಭಾರವ ನೆಲೆದಾಳ್ದು ನಡೆಗೆಟ್ಟು ಬಿಸುಸುಯ್ಯುಪಳು (ತೋಹಕ. ೦೭-೯) ; ೨. ಕ್ರಮಂ ತಪ್ಪು ; ರೀತಿ ತಪ್ಪು : ನಾವು . . . ವಿತಿಮೀರಿ ಅತಿರೇಕದಿಂದ ಸೊಕ್ಕಿನಿಂದ (Hubris) ನಡೆಯುತ್ತೇವೆ.. ಹೀಗೆ ನಡೆಗೆಟ್ಟ ತಪ್ಪಿಗೆ ತಕ್ಕ ಶಿಕ್ಷೆ ನಮ್ಮನ್ನು ಬಡಿಯುತ್ತದೆ (ಬದ್ಧಕ್ರ. XXXV ಅ೧೬) ; ನಡೆಗೆಟ್ಟ ಕಟ್ಟಳೆಯೊಳಿಯಚ್ಚು ಪೆರ್ಚಿನಿಂ ಸುಡುವ ನನ್ನಿಯನುಳಿಸೆ ತಿಳಿಯದೆಡೆಗೆಟ್ಟಂ (ಕಾಲೂರ. ೦೬೧-೩೫೭). ೩. (ಸಾಮಾನ್ಯವಾದ) ಆಚರಣೆಗೆ ಅಸಾಧ್ಯವಾಗು ; (ಸಾಧಾರಣವಾದ) ವ್ಯವಹಾರಕ್ಕೆ ಒಳಪಡದಿರು : ತಾ ನಡೆವಡೆ ನಡೆಗೆಟ್ಟ ನಡೆಯ ನಡೆಯಬೇಕು ತಾ ನುಡಿವಡೆ ನುಡಿಗೆಟ್ಟ ನುಡಿಯ ನುಡಿಯಬೇಕು (ಅವಚಂ. ೯೯-೪೪೮). **ನಡೆಗಿಡು** : ೧. ನಡೆಗಿಡೆ ಗಾಳಿ ಪೂಟ ಗಗನಸ್ಥಳಿ ಕೆಕ್ಕನೆ ಕೀವೆ ದಿಙ್ಮುಖಂ . . . ದೇವರುಂ ದಿವಿಜಕಾಂತೆಯರುಂ ಬೆಱಗಾಗೆ ಪೂಣೆವೊಕ್ಕೊಡನೊಡನಾರ್ದೆರಟ್ಟಿಡೆಯ ಬಿಲ್ವಡೆ ಬೀಱದುದಸ್ತ್ರವಿದ್ಯೆಯಂ (ಹಂರಾಮಾ. ೧೩-೪೪) ; ನಡೆಗಿಡೆ ಗಾಳಿ . . . ಘನಾಘನಂ ಕಱಯೆ ಪೆರ್ಮಟೆ ಕೊಂಡವು ಸರ್ವಸತ್ವಮೋಗಡಿಸೆ ತದಭ್ರ

ಕಾಲಮವನೀವಳಯಕ್ಕೆ ಶಿಬಿರೋದ್ಯಮಪ್ಪನಂ (ಮಹಾಪೋ. ೭-೫೪) ; ನಡೆಗಿ[ಡಾಳಂ ಗೆ]ಡೆ ಚಿತ್ತಂ ಧೃತಿಲತೆ ಕುಡಿಗಿಡೆ ಮನಸಿಜ ವಿರಹರತಿ ಮಾನಸ್ಸದೊಳ್ಪಡೆಗಿಡೆ . . . ವಿರಹವಿಹ್ವಳನಾದಂ (ವೃಷಪ. ೮-೨೦) ; ಕಾಲಿಡಲ್ಕಾಶಿಲೆಯೊಳಾ ತುರಂಗದ ಖುರಂ ಕೀಲಿಸಿತು ಭಿನ್ನಿಸದೆ ಕೂಡೆ ಬೆಚ್ಚಂದದಿಂ ಮೇಲೆ ನಡೆಗೆಟ್ಟು ನಿಂದುದು (ಕೃಮಿಥಾ. ೧೦-೧೦). [ ನಡೆ₂ + ಕೆಡ್ಸು ]

ನಡೆಗೇಡು (ನಾ). ನಡೆಗೆಗೆ ಒದಗುವ ಅಡ್ಡಿ,-ತೊಂದರೆ : ಕಲಕೂಟಗಿರ್ದ ಬಲ್ಸರವಿಯಂ ಬಲಗ್ಯೆ ಜಡಿದೊಟ್ಟಿ ತೂಗೆ ನೀಳ್ಪಲಿದೆಡೆಗ್ಯೆಯೊಳಾವರೆಯ ಪಂದಲರ್ಗಳ್ನಡೆಗೇಡು ಮಾಡೆ . . . ಒಪ್ಪಿದರ್ ಕೆಲಬಲದೂರ್ಗೆ ಪೋಗಿಯಳೆ ಮಾಟಿ ಮಗುಳ್ಬರುತಿರ್ಪ ಗೋಪಿಯರ್ (ಲೀಲಾವ. ೫-೧೦೦).

[ ನಡೆ₂ + ಕೇಡು ]

ನಡೆಗೊಳ್, ನಡೆಗೊಳು (ಕ್ರಿ). ೧. ಚಲಿಸು ; ಹೋಗು ; ಸಾಗು ; ತೆರಳು : ಆಗಳಶ್ವತ್ಥಾಮನುಂ ಕೃಪನುಂ ಸಿಗ್ಗಾಗಿ ಹಿಮವತ್ಪರ್ವತಕ್ಕೆ ನಡೆಗೊಂಡರ್ (ಪಂಪಭಾ. ೧೩-೧೦೭ವ) ; ನಡೆಗೊಂಡತ್ತು ಮದೇಭದಾನ ಜಲಧಾರಾಸಾರದಿಂ ಮಾರ್ಗತಂ ನಡೆಗೆಟ್ಟಿರ್ಪನಂ. . .ರಘುತನೂಜಾಖರ್ವ ಚಾತುರ್ಬಲಂ (ಪಂರಾಮಾ. ೧೨-೩೨) ; ಒಡನೆಯ್ದಿದ ವಲರ್ಗಣ್ಗಳ್ ಬಿಡದೆ ಮನಂ ಪೋಯ್ತು ಮನದ ಪಿಂತನೆ ಧೈರ್ಯಂ ನಡೆಗೊಂಡುದು ಧೈರ್ಯದ ಬೆಂಬಿಡದೊರ್ವಳ ಜೀವವಿರದೆ ಪೋದತ್ತಾಗಳ್ (ಜಗಪಿ. ೫-೯೯). ೨. ನಡೆಯಲು ಸಮರ್ಥವಾಗು ; ಗತಿಯನ್ನು ಪಡೆ : ಆಗಳಾಗಳೆ ಪೆಟವಂ ನಡೆಗೊಂಡಂತುಂ ಕುರುಡಂ ಕಣ್ಬಡೆದಂತುಂ ಷಂಡಂ ಪುರುಷನಾದಂತುಂ ಪೆರ್ಚಿದೊಂದು ಸಂತಸದಿಂ . . .ಕರ್ವಟ್ಟಮನೇಟಿ ಪೋದರ್ (ರಾಮಾಶ್ವ. ೮೨-೧೨). ೩. ಹೊರಡು ; ಹೊರಬೀಳು : ಪಡೆಯಂ ನಡೆಯಲ್ಕೆ ಬೇಟಿ ಭೋರೆಂದು ಗಭೀರನಾದದಿನದೇಂ ನಡೆಗೊಂಡುದೊ ಚಕ್ರವರ್ತಿಯಾ (ಶಾಂತಿಪು. ೧೧-೯೭) ; ಅಂತು ನಡೆಗೊಂಡು ಕುಂಡಿನೀಪುರಾಭಿಮುಖನಾಗಿ ಪೋಗುತ್ತುಮಾತ್ಮಗತದೊಳ್ ಗರುತ್ಮನನಾಮಂತ್ರಣಂಗೆಯ್ಯೆ (ಜಗಪಿ. ೮-೭೯ವ). ೪. ಬಿಟ್ಟುಹೋಗು ; ತೊಲಗು ; ದೂರಸರಿ : ನಾಣ್ ನುಣ್ಸೋಲದೊದವಿಂ ಕಣ್ ನಸುಮುಗುಳ್ದೆಸೆಯೆ ನಸೆಯನೆಸಗುವ ಪಲವುಂ ನುಣ್ನುಡಿ ಪಸರಿಸೆ ಮನದಿಂ ಜಾಣ್ ನಡೆಗೊಳೆ ತೊಡರ್ದರಿನಿಯರ್ಕೂಟದೊಳಿನಿಯರ್ (ಚಂದ್ರಪು. ೮-೬೯). ೫. ಮೇಲೆ ನುಗ್ಗು ; ಆಕ್ರಮಣ ನಡೆಸು : ಬಲದಲ್ಲಿ ಮಹೇಶ್ವರನನ್ನರುಮಾಯದಲ್ಲಿ ತನ್ನುವಿನನ್ನೆಡಿಸ್ಜನಾನಡಲ್ ಬ್ರಹ್ಮನನ್ನಯ್ಯ್ರಮ ವರುಣ ವಾಯವ್ಯ ಚೇರ ಚೋಳ ಪಾಣ್ಡ್ಯರ್ಕಳನ್ನಡೆಗೊಂಡು ಕನ್ನರದೇವನ ಕರುಮಾಂ (ಎಕ. IV, ಹೆಗ್ಗಡ, ೧೭-೧೫ ; 1033). ನಡೆಗೊಳು : ೧. ಪೊಳೆವ ಬೆಳ್ಗೊಡೆ ಚಾಮರಂ. . .ಮುಂತಾದ ಸಕಲವಿನಿಯೋಗಸಹಿತಂ ಸೌಂದರಾಧೀಶನು ಒಲಿದು ತಿರುವಾರೂರ್ಗೆ ನಡೆಗೊಂಡ (ಸೌಂದಪು. ೫-೩೪) ; ಜೋಡಿಸಿದ ಕರಿತುರಗರಥವೆಡೆಯಾಡಿದವ್ವ ಗುಡಿಮಂಡವಿಗೆಗಳ ಹೊಡೆದೆತ್ತಿನ ಬಂಡಿಗಳು ನಡೆಗೊಂಡವಗಲದಲಿ (ಕೊರರಾ. ೨-೬-೯) ; ರಾಜವರಾಳ ಮತ್ತೇಭಸಂಕುಲಕೆ ಸರೋಜಾಂಘ್ರಿಯುಗದ ಸದ್ಗತಿಯ ಮಾಜದೆ ಮನಗೊಳಿಸುವವೊಲು ನಡೆಗೊಂಡುದಾ ಜಾಣೆಯ ಸಖೀನಿವಹ (ವೀರಾಹ. ೪೦-೩೭) ; ಎಣ್ದೆಸೆಯ ಮಟ್ಟದುದು ಸಕಲ ವಾದ್ಯಂಗಳ ನಿನದಮಲ್ಲಿ ಮಟ್ಟರಚ್ಚರಿಯರುತ್ಸವವನೀಕ್ಷಿಸಲೆಂದು ಪುರಜನಂ ನಡೆಗೊಂಡುದು (ಹಬಪು. ೬-೫೨) ; ಶರಣ್ಗೊಂಡು ಮುನಿವ ಅತ್ತ ನಡೆಗೊಳಲಿತ್ತ ದನುಜೇಂದ್ರ ತನ್ನನದಿ ಚಿತ್ರಭವನದಿಪ ದಿನಮಂ ಕಂಕಿಸುತ್ತಿರಲು (ನವಮೋ. ೧೧-೧೯). [ ನಡೆ₂ + ಕೊಳ್₁ ]

ನಡೆಗೊಳಿಸು(ಕ್ರಿ). ೧. ನಡೆಯುವಂತೆ ಮಾಡು ; ನಡೆಸು : ಪಸುರ್ಬುಲ್ಲಂ ಮೇವುತಿರ್ದ ಪೊಸವಾಣಿತಿಪುಲ್ಲೆ . . . ಪಟ್ಟಿರ್ದ ಕೊಣಸುಮಂ ಬಿಟ್ಟು ಬರಲಾಟದೆ . . . ಕೊರೆದ ಮೊಲೆಯಂ ಸಾರ್ಚಿ ತಣಿಯೂಡದೆ ನಡೆಗೊಳಿಸ ತವಕದಿಂ ಬರುತ್ತುಂ (ಪುಷ್ಪಪು. ೩-೭೬ವ). ೨. ಹೋಗುವಂತೆ ಮಾಡು; ತಳ್ಳು; ಅಟ್ಟು: ಭೂಪನ ಸೈನ್ಯಸಾಗರವ ಸಂದಿಸಿಯ ನಿವಿಷಾರ್ಧದಲಿ ಯಮಮಂದಿರಕೆ ನಡೆಗೊಳಿಸಿ ಮುಖಜರ ಮಂದಿಗಿತ್ತನು ಸಕಲ ಭೂಮಿಯು ಜಾಮದಗ್ನಿಕನು (ಸಂಭಪ. ೨೬-೪೭) ; ರಿಪುಪರಿವಾರವನು ನಡೆಗೊಳಿಸಿದನು ಯಮರಾಜನಾಲಯಕೆ (ಕುಮಾರಮ. ೯-೧೦).

[ ನಡೆಗೊಳ್ + – ಇಸು₃ ]

ನಡೆಗೊಳು 'ನಡೆಗೊಳ್' ನೋ.

ನಡೆಗೊಳ್ಳಿ (ನಾ). ನಡೆದಾಡುವ ಕೊಳ್ಳಿ ; ಚಲಿಸುವ ಕೊಳ್ಳಿ : ಅಡೆ ಪೊತ್ತುವ ಬೇಸಗೆಯೊಳ್ ಪೆಡವಣ ಬಡೆ ಕಾಯ್ದು ನೆತ್ತಿ ಧಟಧಟಲೆನುತುಂ ನಡೆಗೊಳ್ಳಿಯಂತೆ ನಡೆದುದು ಗಿಡುಗಳ ನೆಟಲಾಸೆಗಹಿವನಸುವಿಡುತುಸಿರು (ಸೂಕ್ತಿಸು. ೧೦-೧೧೧). [ ನಡೆ₁ + ಕೊಳ್ಳಿ₁ ]

ನಡೆಗೋಂಟೆ, ನಡೆಗೋಟೆ (ನಾ). ೧. ಯುದ್ಧದಲ್ಲಿ ಶತ್ರುಗಳಿಂದ ರಕ್ಷಿಸಿಕೊಳ್ಳಲು ಉಪಯೋಗಿಸುವ (ಸೈನ್ಯದಿಂದ ರಚಿಸಿರುವ) ರಕ್ಷಣೆಯ ವ್ಯೂಹ : "ಜಂಗಮಃ 'ಪ್ರಾಕಾರಃ – ನಡೆಗೋಂಟೆ" (ನೀತಿವಾ. ೨೦-೭) ; ಸಂಗರಭೂಮಿಯೊಳೊಡ್ಡಿ ನಿಂದೆಡ್ಡಮಾಗಿ ಬಗ್ಗಿಸಿ ಮೊಗ್ಗರಿ ಸುತ್ತೊಗ್ಗಿಗೆಗಡದೆ ನಡೆಗೋಂಟೆಯಂತೆ ನೆರೆವರ್ಚಿ ನಿಂದು (ಗಿರಿಕ. ೬-೫೫ವ) ; ಕಟ್ಟಿದಲಗಿನ ಕನ್ನಡಿಯ ತೊಲಗದ ಕಂಬದ ವೀರಘಂಟೆಯ ನಡೆಗೋಂಟೆಯ ಜಾಯಿಲದ ಪೊಂಬಟ್ಟೆಯ . . . ಬೆಳಗುಗಳ್ ಮಾರ್ತಂಡಂಗೆ ಮಾರ್ಪೊಳೆಯೆ (ಮಹಾಪೀ. ೧೨-೦೯ವ); ಬಿಡದ ನಡೆಗೋಂಟೆಗಳ ಮೊಗ್ಗರಂ ನೂಂಕಿದವು ಪುರದ ಪೊಂಜಬಳಿಸಿನೊಳ್ ಪಡಿಯಟ್ಟಣೆಗಳೆಳ್ದುವು (ಹಬಪು. ೪೨-೩೪). ೨. ರಕ್ಷಣೆಯ ಸಾಧನ : ಮಂಟಪದೊಳು ಸುತ್ತಿ ಸುಳಿದರೊಳ್ಳೆಯ ನಡೆಗೋಂಟೆಯೊಯೆಂಬ ರೀತಿಯೊಳು (ಭರತ. ೧೩-೭೯). ನಡೆಗೋಟೆ : ೧. ತಾಟಿಸಿದರೊಡನೊಡನೆ ಕುಲಗಿರಿ ದೂಟಿ ಬಿದ್ದವು ಚಿತ್ರದಲಿ ನಡೆಗೋಟೆಯೆನೆ ಮಂಡಳಿಸಿ ಬಲಿದರು ತೆಕ್ಕವರಿಗೆಗಳ (ಕುಮಾರಭೀ. ೯-೫೫) ; ಈ 'ನಡೆಗೋಟೆ'ಗಳು 'ತಳ' 'ಮುಳುವೇಲಿ'ಗಳಂತೆ ಪಾಳೆಯದ ಸುರಕ್ಷಣೆಗಾಗಿಯೂ ಇದ್ದಿರಬಹುದು (ಕೆಶಾಶಾ. ೩೯).

ನಡೆಗೋಂಟೆಮಲ್ಲ, ನಡೆಗೋಟೆಮಲ್ಲ = ನಡೆಗೋಟೆಯಂತೆ ರಕ್ಷಿಸುವವನು; ಏಕಾಂಗವೀರ; ಮಹಾ ಪರಾಕ್ರಮಿ; ಒಂದು ಬಿರುದು: ಮಣ್ಡಳಿಕ ನಿಜಸೇನೆಗೆ ವಜ್ರದ ಕೋಂಟೆಯಾಗಿ ತೋಱುಗು ನಡೆಗೋಂಟೆಮಲ್ಲನ ಭುಜಾಬಳವೀ ಅವನೀತಳಾಗ್ರದೊಳೂ (ಎಕ XI, ಚಿತ್ರದು. ೨-೦೬; 1355) ; ಸುಭಟರಾಚಾರ್ಯ (ಂ) ಸತ್ಯರತ್ನಾಕರಂ ನಡೆಗೋಟೆಮಲ್ಲಂ ಗ (ಂ) ಣ್ಡರಗೋವಂ ಮಣ್ಡಳೀಕ ನಾರಾಯಣಂ (ಸಾಇಇ. XI-1. ೫೭-೨೦ ; 1019) ; ಶ್ರೀಮತು ಮಹಾಮಂಡಳೇಶ್ವರಂ ಉಭಯದ[ಳ]ಪಿತಾಮಹ ನಡೆಗೋಟೆಮಲ್ಲ ಸೆಟ್ಟಿ ಸಾ[ಹಸ]ಧೀಮ ಗುಂಡರಸನು ತಂನಾಳ್ಕೆಯೊಳು ಕಾ[ಳ್ಪ]ಗೆಯಲ್ಲಿ ಕೊಟ್ಟ ಮ ೧೨ ಮನೆ ೧ (ಸಾಇಇ. XX. ೨೨೬-೨೪ ; 1306).

[ ನಡೆ₁ + ಕೋಂಟೆ ]

ನಡೆಗೋಟೆ 'ನಡೆಗೋಂಟೆ' ನೋ.

ನಡೆಗೋಟೆಕಾಱ (ನಾ). ಸೈನ್ಯದಿಂದ ರಚಿಸಿರುವ ರಕ್ಷಣೆಯ ವ್ಯೂಹದಲ್ಲಿರುವ ಮುಂದಾಳು,-ಪರಾಕ್ರಮಿ : ನಡೆಗೋಟೆಕಾಱರು ಕಿಣಕಿದರು ಕಟಿರಾಜಸೈನಿಕವ (ಕೊರರಾ. ೬ ೩೩-೨).

[ ನಡೆಗೋಟೆ (<ನಡೆಗೋಂಟೆ) + – ಕಾಱ ]

ನಡೆಗೋಲು, ನಡೆಕೋಲು (ನಾ). ನಡೆಯುವಾಗ ಊರಿಕೊಳ್ಳಲು ಹಿಡಿದುಕೊಳ್ಳುವ ಕೋಲು; ಊರುಗೋಲು ; ಬೆತ್ತ : ಆ ವ್ಯಕ್ತಿ ಮಿರುಮಿರನೆ ಮಿಂಚುತ್ತಿದ್ದ ಹಿಡಿಕೆಯನ್ನುಳ್ಳ ನಡೆಗೋಲನ್ನು . . . ನೆಲದ ಮೇಲೂರುತ್ತ ಹಳ್ಳಿಯ ಬೀದಿಯಲ್ಲಿ ನಡೆದು ಬರುತ್ತಿದ್ದನು (ಪುನರು. ೨೭೬); ಕಡೆಗೆ ಬಾರದೇ ಬಂದ ಒಬ್ಬ ಮುದುಕ, ನಡೆಗೋಲು ಅವನೆತ್ತರ (ಶಿಲಾಂ. ೯೭-೧೭). ಏ, ನನ್ನ ನಡೆಗೋಲು ಎಲ್ಲಿ ? (ಉದಮ್ಮ. ೫೯). ನಡೆಕೋಲು :

ವ್ಯಾಸಸ್ಫೂರ್ತಿಗೆ ನಡೆಕೋಲಾದನೆ ಮರುಳ್ಗಳ ಹುರುಳೇ ಎಡರಾಳುವನೇ ಏ ಬನದಕೆ ನನ್ನೆಡೆಗೈತಂದೆ (ಗಣೇಶ. ೨-೪೭).

[ ನಡೆ$_1$ + ಕೋಲು$_1$ (<ಕೋಲ್$_1$) ]

**ನಡೆಗೋಳ** (ನಾ). (ಅಲಂ) (ಆತ್ಮನಿಗೆ) ನಡೆದಾಡುವ ಬಂಧನ: ದೇಹ : ಕೂಳು ನೀರನ್ನು ಕೊಂಡು ತನುವಿದು ಮೇಲೆಮೇಲುಬ್ಬುರಿಸಿ ಬೆಳೆವುದು . . . ಬೀಳುವುದು ಕೊಡದಿರ್ದಡೀ ನಡೆಗೋಳದಲ್ಲಿ ನಾ ಸಿಲುಕಿ ಬಿಡದೇ ಬೇಳಿಗೊಳ್ಳದಿರು (ನಿಜಾಗ. ೯-೧೮-೦೨). [ ನಡೆ$_1$ + ಕೋಳ$_1$ ]

**ನಡೆಗೌಡ** (ನಾ). (?) : ಮುನಿಭದ್ರಗೌಡರ ಮಕ್ಕಳು . . . ರೇಗರೇವಂತ ನಡೆಗೌಡ ಸುರಿತಂಣ ಹಿರಿಯತಮ್ಮಗೌಡರು ಮುಖ್ಯವಾದ ಆತನ ಅನುಜ ಪದ್ಮಯನು (ಎಕ. VII, ಶಿಮೊ. ೧೧೪-೧೫ ; ೯೬೦ ?).

[ P ಇದು 'ನಾಡಗೌಡ' ಎಂಬುದರ ಅಪಲಿಖಿತವಿರಬಹುದೆ ? ]

**ನಡೆಚಪ್ಪರ** (ನಾ). ೧. ದಾರಿಯುದ್ದಕ್ಕೂ ಹಾಕಿರುವ ಚಪ್ಪರ : ಅಂಬರ ಸ್ಥಳವಂ ಮುಸುಕಿದಾಡಂಬರದ ನಡೆಚಪ್ಪರಂಗಳು ಬಿಂದಿಸುವ ಧವಳಾತ ಪತ್ರವು ಚಾಮರಾದಿಗಳು (ಬಸಪು. ೬-೨೨). ೨. ಕೆಲವು ವಿಶೇಷ ಸಂದರ್ಭಗಳಲ್ಲಿ, ಮರ್ಯಾದೆಗಾಗಿ ಜನರು ಹಿಡಿದಂ ತರುವ ನಾಲ್ಕು ಕೋಲುಗಳುಳ್ಳ ಚಪ್ಪರದಾಕಾರದ ವಿತಾನ; ಸಿಂಧೂವ : ನೃಪತಿಲಕರ ಪಲವು ಕೊಡೆಯೂಗಸವಂ ಪಂದಲಿಸುತ್ತಂ ವಡೆತರೆ ನನೆವಿಲ್ಲಂ ರಿಪುದುರ್ಗಕೆ ನಡೆಯಿಪ ಗಡಣದ ನಡೆಚಪ್ಪರವೆನಲೆಸಕವಡೆದುದಾಗ (ಜಯಶ್ರೀ. ೮-೨೬); ಪಟ್ಟಾವಳಿಯ ನಡೆಚಪ್ಪರದ . . . ಚಾಮರದ ಘನಸಂಕುಳದಲವನಾಯನಂ ಬರವನೆಡಗಲಿಸಿ ನಡೆದುದು ಕೊಡೆ ಯಮುನಾನದಿಗೆ ಜನನಿವಹ (ನಿಜಾಗ. ೧೦-೧೧೦-೧೧) ; ರಾಜಮರ್ಯಾದೆಗಳಾದ ರಾಜದಂಡ ಛತ್ರಿ ಚಾಮರ . . . ನಡೆಚಪ್ಪರ-ಇತ್ಯಾದಿ ಬಿರುದುಗಳು ಬಂದ ಮೇಲೆ . . . ಅತ್ಯಂತ ಗೌರವದಿಂದ ಕರೆದುಕೊಂಡು ಬರುತ್ತಾನೆ (ತುಂಗಭ. ೭೦). ೩. ಯುದ್ಧಕಾಲದಲ್ಲಿ ಉಪಯೋಗಿಸುತ್ತಿದ್ದ ಒಂದು ಬಗೆಯ ರಕ್ಷಣೆಯ ಸಾಧನ: ಡೆಂಕಣಗಳಂ ಮೇಳೈಸಿ ನಡೆಚಪ್ಪರವನ್ನು ನಡೆಯಿಸಿ . . . ದೂಳಿಗೋಂಟೆಯ ಕೊಳ್ಳಬೇಕೆಂಬ ಪಡಿಯಚರ ಕಳಕಲಂ ಕರಮೊಪ್ಪಿತು (ಸಮ್ಯಕ್. ೮-೩೦) ; ನಡೆಚಪ್ಪರದ ಮರ ಬದ್ದರ ಡೆಂಕಣಿ ಸುಡುವ ಪಟಲು ಕೋಟೆಯನು ಕೆಡಪುವ ಡೆಗ್ಗೆ ಹತ್ತುವ ನಿಚ್ಚಣಿಗೆಗಳಂದೊಡನೈದಿದ ವಸಂಖ್ಯಾತ (ಶುದ್ಧಾಂ. ೩೭-೬೭). [ ನಡೆ$_1$ + ಚಪ್ಪರ ]

**ನಡೆಜಂತ್ರ** (ನಾ). ಚಲಿಸುವ ಯಂತ್ರ; ನಡೆದಾಡುವ ಯಂತ್ರ : ಆದಿತ್ಯ ವಿರಹದೊಳಮಕ್ಷೋದತಮಂ ಪರ್ವಿವಂತೆ ಜಗಮಂ ಜೀವಂ ಪೋದೊಡ ಮದಂಗರುಚಿ ಬೀಳಾದುದು ನಡೆಜಂತ್ರಮಲ್ತೆ ನರರ ಶರೀರಂ (ಶಾಂತಿಪು. ೬-೯೭) ; ಕುಸುಮಾವಳಿದೇವಿ ಬರುತ್ತುಮಿರ್ದಳಾ ಮನಸಿಜನಾಡಿಪೊಂದು ನಡೆಜಂತ್ರದ ಪುತ್ರಿಕೆಯೆಂಬ ಭಂಗಿಯಿಂ (ಕುಸುಮಾ. ೦೨-೦೨೫).

[ ನಡೆ$_1$ + ಜಂತ್ರ ]

**ನಡೆಜಾಣ** (ನಾ). ನಡವಳಿಕೆಯನ್ನು ಚೆನ್ನಾಗಿ ತಿಳಿದವನು ; ರೀತಿನೀತಿಗಳನ್ನು ಬಲ್ಲವನು : ನುಡಿಜಾಣ ನಡೆಜಾಣ ನೆಲೆಜಾಣ ಕಡುಜಾಣ ಜಗಕೆ ಸುಜಾಣ ಎಡೆಬಿಡದೆನ್ನಂತರಂಗದೊಳಿರು ಜಾಣರೊಡೆಯ ಚಿದಂಬರ ಪುರುಷಾ (ಭರತೇ. ೭-೭೬). 'ನುಡಿಜಾಣ' ಪರ್ಯಾ. [ ನಡೆ$_2$ + ಜಾಣ ]

**ನಡೆಜಾಣ್ಮೆ** (ನಾ). ವ್ಯವಹಾರದಲ್ಲಿ ಜಾಣತನ,-ಬುದ್ಧಿವಂತಿಕೆ : ನುಡಿಜಾಣ್ಮೆ ನಡೆಜಾಣ್ಮೆ ನನಗೂ ದೇವರಿಗೂ ಸಂಗಡದ ಭೂಪರು ಮೇಳಲೆಂದ (ಭರತೇ. ೪೯-೧೧೭). 'ನುಡಿಜಾಣ್ಮೆ' ಪರ್ಯಾ.

[ ನಡೆ$_2$ + ಜಾಣ್ಮೆ ]

**ನಡೆಜೋಡು** (ನಾ). ನಡಿಗೆಗೆ ಹೊಂದಿಕೊಳ್ಳುವ ಜೋಡಿ,-ಜೊತೆ : ಕೂಡೆ ಸಂಜಯನಟ್ಟಿಸಿದನು ನಡೆಜೋಡಿನವು [ಪಾಠಾಂ. ಪಯಪಾಡಿನಲಿ] ವಾನೂಟಿ ಕುದುರೆಯ ಕೂಡಿ ಕೌರವನೃಪನ ಕಾಣದೆ ಕಳವ ಚೌಕದಲಿ (ಕುಮಾವ್ಯಾಗ. ೨-೩). [ ನಡೆ$_2$ + ಜೋಡು ]

**ನಡೆಡೆಂಕಣಿ** (ನಾ). ಕೋಟೆಯ ಬುರುಜಿನ ಮೇಲೆ ಚಲಿಸುವಂತೆ ಏರ್ಪಡಿಸಿರುವ ಒಂದು ಬಗೆಯ ಆಯುಧ ; ಚಲಿಸುವ ಡೆಂಕಣಿ : ನಡೆಡೆಂಕಣಿ ಸೂಸುಡೆಂಕಣಿ ಬಲುಗುಂಡನಿಡುವ ಡೆಂಕಣಿ ಕೋಟೆದಡೆಗೆ ಸಿಡಿವ ಡೆಂಕಣಿ ರಾಯಡೆಂಕಣಿಗಳ ಸಾಲು ಬಿಡದೊಪ್ಪಿದವು ದುರ್ಗದೊಳು (ಶುದ್ಧಾಂ. ೪೨-೩೯). 'ಡೆಂಕಣಿ' ಪರ್ಯಾ. [ ನಡೆ$_1$ + ಡೆಂಕಣಿ ]

**ನಡೆತ** (ನಾ). ನಡೆಯುವಿಕೆ ; ನಡಿಗೆ. [ ನಡೆ$_1$ + -ತ$_2$ ]

**ನಡೆತರ್**, ನಡೆತರು (ಕ್ರಿ). ಬರು ; ಆಗಮಿಸು : ಕಯ್ಯಿಕ್ಕು ಕಾದಲ್ ನಡೆತರ್ಪಾವೇಗದೊಳ್ ಮುಮ್ಮಟಿಸಿದ ಪಲವುಂ ರಾಜಚಿಹ್ನಂಗಳಂ ಬೆಳ್ಗೊಡೆಗಳ್ ತಳ್ಪೊಯ್ದುದೇಂ ಕಣ್ಗೊಳಿಸಿದುದೊ ಚಳಚ್ಚಂದ್ರ ಕಚ್ಛತ್ರಪಿಂಡಂ (ಪಂಪಭಾ. ೦೩-೩೮) ; ಚೆಲ್ವನಾಳ್ದ ಮೆಲ್ಲನೆ ನಡೆತರ್ಪ ನೀಲಮಣಿಪುತ್ರಿಕೆಯಂದದಿನಾದವೊಳ್ಪಿದಳ್ (ಕಾದಂಪೂ. ೩೮): ಸಾಯಂಕಾಲ ಶೃಂಗಾರಸಮಯಮೆಂದು ಮಧುರಾಪುರಾಧೀಶ್ವರನಲ್ಲಿಗೆ ಪೋಪ ಬಗೆಯಿಂ ಕುಬ್ಜೆಯೆಂಬ ಸೈರಂಧ್ರಿ ನಡೆತರೆ (ಜಗವಿ. ೬-೧೮೪) ; ಉರವಣಿಸಿ ನಡೆತರುತ್ತುಂ ಗಿರಿಶಿಖರಮನೇರಲಾಬದೆರಡುಂ ದೆಸೆಯೊಳ್ ಬರಲನುವಂ ಕಂಡು ದಿವಾಕರನಂದಿ ದಕ್ಷಿಣೋತ್ತರಾಯಣನಾದಂ (ಗಿರಿಕ. ೧-೫೩) ; ಕಡುಸೊರ್ಕಿಂದಲರಂಬನಾನೆಯೆನಿಪೀ ತಂಗಾಳಿ ತನ್ನಿಚ್ಛೆಯಿಂ ನಡೆತಂದಪ್ಪುದು ಬೇಗದಿಂ ಬಿರಯಿ ನೀಂ ಪೋ ಪೋಗು (ಕಬ್ಬಿಗ. ೫೫). **ನಡೆತರು** : ಕಪ್ಪಡಿಯ ಸಂಗಮುಮಂ ಪೊಕ್ಕು ಕೇರಿ ಕೇರಿಯೊಳು ನಡೆತಪ್ಪಾಗಳು ಶಂಕರಾಲಯಮಂ ಭೋಂಕನೆ ಕಂಡು (ಬಸವ. ೨-೫೦) ; ಆ ಸಮಯದಲ್ಲಿ ರಾಯವೇದವ್ಯಾಸಮುನಿ ನಡೆತಂದು ಗತಪರಿತೋಷನನು ಸಂತೈಸಿ ಕರಸಿದನಂದು ಸಂಜಯನ (ಕುವ್ಯಾಭೀ. ೧-೫೫) ; ತೆಗೆದ ತೊಟಿಕಾಲುವೆಗಳುದ್ಯಾನಗಳ ಕಳವೆ ದ್ರಾಕ್ಷೆ ಧವಳೇಕ್ಷುಗಳ ವನವೀಧಿಗಳನೀಕ್ಷಿಸುತರಸ ನಡೆತಂದ [ಪಾಠಾಂ. ನೈತಂದ] (ಕೊರರಾ. ೧-೬-೧೧) ; ಸತಿಯರ ಗಡಣದಲಿ ನಡೆತಂದಳಂದುಮುಖಿ (ನಳಚ. ೩-೫೫) : ಪಂಪರಿ ಪಾತ್ರವೆಂಗಳು ಸಿಂಗರಿಸಿಯೆ ಹರುಷದೊಳಗೆ ನಡೆತಂದು (ಕಂಠವಿ. ೬-೦೦೭).

[ ನಡೆ$_1$ + ತರ್ ]

**ನಡೆತರು** 'ನಡೆತರ್' ನೋ.

**ನಡೆತೋರಣ** 'ನಡೆದೋರಣ' ನೋ.

**ನಡೆದಾಣ** (ನಾ). ನಡೆದಾಡುವ ಸ್ಥಳ ; ಓಡಾಡುವ ಜಾಗ ; ದಾರಿ : ಪೊಂಬೆಟ್ಟಂ ಪೊಂಬಸಿರಂಗಿಂಬುವಸದಿಯುಮಾಲವ್ಪೊಡೆಯಂಗೆ ನಡೆದಾಣಮುಂ . . . ಚೋಟಯಾರ್ಗ ಮೇಳದೆಡೆಯುಮೆನಿಸಿ ಕಣ್ಗೊಳಿಕುಂ (ರಾಮಾಶ್ವ. ೭-೫). [ ನಡೆ$_1$ + ತಾಣ ]

**ನಡೆದಾರಿ** (ನಾ). ನಡೆದಾಡುವ ದಾರಿ ; ಓಡಾಡುವ ಮಾರ್ಗ : ಆಟೀಟಿ ಹುಡುಕುತ್ತ, ಜಾನೂ ಅಮ್ಮನ ಕೋಣೆಯ ಪಾರ್ಶ್ವಭಾಗದ ಇಕ್ಕಟ್ಟಾದೊಂದು ನಡೆದಾರಿಯನ್ನು ಸೇರಿದನು (ಕಾಲಭ್ರೂ. ೨೫) ; ತೋಟಗಳು ಸಾಮಾನ್ಯವಾಗಿ ಚೌಕ ಇಲ್ಲ, ನಿಡುಚೌಕ ಇದ್ದು . . . ಒಳಗೆ ತಿರುಗಾಡಲು ನಡೆದಾರಿಗಳು ಇದ್ದವು (ಇಷ್ಟಾಂಸಂ. ೦೮೯). [ ನಡೆ$_1$ + ದಾರಿ ]

**ನಡೆದುಳಿ** (ಕ್ರಿ). ದಾರಿಯನ್ನು ತುಳಿ; ದಾರಿ ಸವೆಸು : ಅಡಿಯ ನೆಲದೊಳ್ ಬಿಸಿಲ್ ಕಡೆಸಾಲ ಬರೆಯುತಿರೆ ನಡೆದುಳಿದು ನೆಲ್ಲೂರ ಮನೆಗೆ ನಡೆತಂದಂ (ಕಾಂಜೀರ. ೧೧೨-೨೩೦). [ ನಡೆ$_2$ + ತುಳಿ$_1$ ( < ತುಟಿ$_1$ ) ]

**ನಡೆದೇಗುಲ** (ನಾ). ಚಲಿಸುವ ದೇವಸ್ಥಾನ ; (ಒಂದೆಡೆ ಸ್ಥಿರವಾಗಿರದೆ) ಉತ್ಸವದಲ್ಲಿ ಎಳೆಯುವ ದೇವರ ವಿಗ್ರಹವಿರುವ ಮಂಟಪ, ತೇರಂ,- ರಥ : ಪಲರಂ ರಕ್ಷಿಸಿ ಮತ್ತಂ ಪಲವಂ ನಡೆದೇಗುಲಂಗಳಂ ಮಾಡಿಸಿದಂ ನೆಲನೆಲ್ಲಮಟಿಯೆ ಚಟ್ಟಂ ನೆಲೆದೇಗುಲಮುಮನಿದೊಂದನೊತ್ತೆಶ್ರಿಸಿದಂ (ಎಕ. V, ಬೇಲೂರು. ೧೯೩-೯೪ : 1160). [ ನಡೆ$_1$ + ದೇಗುಲ ]

**ನಡೆದೋರಣ,** ನಡೆತೋರಣ (ನಾ). ಎರಡು ಕಡೆ ಹಿಡಿದಿರುವ ಕೋಲುಗಳ ತುದಿಗಳಿಗೆ ಕಟ್ಟಿ, ಉತ್ಸವಾದಿಗಳ ಮುಂದೆ ಹಿಡಿದುಕೊಂಡು ಹೋಗುವ ತೋರಣ; ಚಲಿಸುವ ತೋರಣ; ಮಕರ ತೋರಣ : ಸಿರಿವತ್ಸ ಕ ನ ಕ ದ ಂ ಡ ದ ಚಾಮರ ಸೀಗುರಿ ನಡೆದೋರಣನಿಚಯ ಪರುಠವಿಸಿರ್ದ ನಾನಾವಿಧ ಛತ್ರಿಯ ತರಕೆತು ನಭವನಲ್ಲಿಲ್ಯುದು (ಚೋಹಕ. ೧೩-೩೧). ನಡೆತೋರಣ : ನುಡಿವ ನಾನಾವಾದ್ಯಘೋಷಣ ಕಲಶ ಕನ್ನಡಿಯ ವಣ್ಣಿಗೆ ರಾಗರಚನೆ ಇಡಿಕಿಱಿದುದು ಸೆಟ್ಟಿಸಮಯರುಗಳ ಕೆಯ್ಯ ಗುಡಿ ನಡೆ ತೋರಣನಿಚಯ (ಚೋಹಕ. ೪೦-೩೪) ; ರಾಜವೀಧಿಯೊಳ್ತಿರ ಪತಾಕೆಗಳ ಸೂಸುವ ಸೀಗುರಿಗಳ ಭೀಸುವ ಚಾಮರಂಗಳ ಸೊಗಯಿಪ ಧವಳ ಪತ್ರಂಗಳ ನವರತ್ನದ ನಡೆತೋರಣಂಗಳ . . . ಸಿರಿ ಕಂಗೊಳಿಸೆ (ವೃಷವಿ. ೩-೪೪೩). [ ನಡೆ$_1$ + ತೋರಣ ]

**ನಡೆನಿಱಿಗೆ** (ನಾ). ಓಡಾಟದ ರೀತಿ,-ಸೊಗಸು ; ನಡಗೆಯ ಸೊಬಗು : ನೆರವನೆಯಂ ಪೋಪ ಬರ್ಪ ಜವ್ವನಿಗರ ನಡೆನಿಱಿಗೆಯಿನಿಡಿಕಿಱಿದ ಪಂತಿಯಿಂ (ರಾಮಾಶ್ವ. ೨೩-೬). [ ನಡೆ$_2$ + ನಿಱಿಗೆ ]

**ನಡೆಪಾಡಿಸು** (ಕ್ರಿ). ನಡೆದಾಡಿಸು; ನಡೆಯುವಂತೆ ಮಾಡು; ಚಲಿಸುವಂತೆ ಮಾಡು ; ಓಡಾಡಿಸು : ಹಂಸಾವಳಿಯು ನಡೆಪಾಡಿಸು ಕೋಕಿಳ ನಾದಮನಾಲಿಸುಸಿರದಿರ್ಪರೆ ಮದನಾ (ಗಿರಿಕ. ೮-೬೦) ; ವಾರುವಮಂ ನಡೆವಾಡಿಸಲ್ಕೆ ನೋಡುವ ಮಱಿಗಳ್ಗೆ ಪಾಲನೆಱೆವುಜ್ಜುಗವಂ ತಳೆದಿರ್ಪ ನಾವಗಂ (ನಳಚಂ. ೬೪೯). [ ನಡೆಪಾಡು ( <ನಡಪಾಡು ) + – ಇಸು$_3$ ]

**ನಡೆಪಾಡು** 'ನಡಪಾಡು' ನೋ.

**ನಡೆಪು$_1$** 'ನಡಪು$_1$' ನೋ.

**ನಡೆಪು$_2$** 'ನಡಪು$_2$' ನೋ.

**ನಡೆಬಾವಿ,** ನಡಬಾವಿ, ನಡಭಾವಿ, ನಡೆಭಾವಿ (ನಾ). ಇಳಿದು ನೀರು ತುಂಬಿಕೊಳ್ಳುವಂತೆ ಸೋಪಾನಗಳಿರುವ ಬಾವಿ,-ಮೆಟ್ಟಿಲುಗಳುಳ್ಳ ಬಾವಿ,-ಕೊಳ : ಪೊಸದುರ್ಗವಂ ಪಾಟಿಸಿ ಪಿರಿಯ ನಡೆ [ಪಾಠಾಂ. ಡ] ಬಾವಿಗಳನಗುಳಿಸಿದನದಱೊಳಗೆ (ಬಸವು. ೧೫-೦೦). ನಡಬಾವಿ : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. ನಡಭಾವಿ : ಅಮೃತರಸ ಪರಿಪೂರ್ಣವಾದಮೃತಸಂಜೀವಿನಿ ಎಂಬ ಹೆಸರುಳ್ಳ ಒಂದು ನಡಭಾವಿಯು ಉಂಟಾಗಬೇಕೆಂದು ದೇವರನ್ನು ಬೇಡಿ (ಕೃವಾಳ. ೩೪). ನಡೆಭಾವಿ : ನೂರು ಸೇದೋ ಭಾವಿ ಕಟ್ಟಿಸುವುದಕ್ಕಿಂತಲೂ ಒಂದು ನಡೆಭಾವಿ ಕಟ್ಟಿಸುವುದುತ್ತಮ (ಕೃವಾಳ. ೧೭೦).

[ ನಡೆ$_1$+ ಬಾವಿ. / ತಮಿ. ನಟ್ಟಿವಾವಿ, ನಟ್ಟಿಬಾವಿ, ನಟಿಪಾವಿ; ತೆಲು. ನಡಬಾವಿ ]

**ನಡೆಬೆಡಗು** (ನಾ). ನಡಗೆಯ ಸೊಗಸು,-ಒಯ್ಯಾರ : ನಡೆಬೆಡಗೋ ನಿಲುಬಗೆಯೋ ನಗುವೊಗವೋ ತಹ ಸೊಗವೋ ಕನಸಿಗು ಇಂಥವ ಸುಳಿವೊಲ್ಲ (ಗೋಕುನಿ. ೧೩-೦೦). [ ನಡೆ$_2$ + ಬೆಡಗು ( <ಬೆಡಂಗು ) ]

**ನಡೆಭಾವಿ** 'ನಡೆಬಾವಿ' ನೋ.

**ನಡೆಮಂದಸ** (ನಾ). ಚಲಿಸುವ ಪೆಟ್ಟಿಗೆ : ರಿಪುವೆಚ್ಚಱಿದಿಟ್ಟ ಕೈದುವನ್ನುದರ ದೊಳೆಯ್ದೆ ತಳ್ಳಿಡಿದಿರಲ್ ಯಮರಾಜನ ಶ ಸ್ತ್ರ ಕೋ ಟ ಕೀವಿದ ನಡೆ ಮಂದಸೆಂಬಿನೆಗಮಿರ್ಪನದೆಂದೊ ಮಹಾಜಿರಂಗದೊಳ್ (ಜಗವಿ. ೧೭-೮೭).

[ ನಡೆ$_1$ + ಮಂದಸ ]

**ನಡೆಮಡಿ,** ನಡೆಮುಡಿ (ನಾ). ದೇವರ ಕಾರ್ಯ ಮುಂತಾದ ಶುಭ ಸಂದರ್ಭದಲ್ಲಿ ಉತ್ಸವಗಳು ನಡೆಯುವಾಗ ಉತ್ಸವದ ದಾರಿಯಲ್ಲಿ ಗೌರವಾರ್ಥವಾಗಿ ಹಾಸುವ ಮಡಿಯಾದ ವಸ್ತ್ರ,-ಬಟ್ಟೆ ; ಹಡದಿ : ದೇವಾಂಗಪಟ್ಟೆಕದ ಸೆಱಿಗಿನ ಸರಿಯಂ ನಡೆಮಡಿಯ ಹಾಸಿ . . . ಧೂಪಾರತಿ ಘಂಟೆ ಸಹವಾಗಿ ಪ್ರಭುದೇವರ ಕರೆಯ ಬಹ ಸಂಭ್ರಮದಿಂದಿರುತ್ತಿರಲು (ಚೆನ್ನಸಂ. ೯೯-೨೨) ; ನಡೆಮಡಿ ಗಂಧದಕ್ಷತೆ ಫಲಾವಳಿ ಪೂವಿನ ವಱಲೆ ಮುತ್ತು ಕನ್ನಡಿ ಕಳಸಂ . . . ಚಾಮರವುಂಬಿಪೊಪ್ಪವುಂ ಕೂಡೆ ಜನದತ್ತೆಯೇಂ ನಡೆದಳೋ (ಅರ್ಧನೇ. ೧-೮೪) ; ಆ ನಗೆಗಣ್ಗಳ ಕಡೆಯ ಬೆಳಂತಿಗೆವೆಳಗು ಪರಿದು ಮುಂಗುಡಿಯೊಳ್ ಪಸರಿಸಲೆಸೆದುದು ನಡೆಮಡಿಯಂ ಪಾಸಿದ ತೆಱದಿ (ಜಯುಕಾ. ೩-೩೬) ; ಕಟ್ಟಿದ ಗುಡಿ ತೋರಣ ನಡೆಮಡಿ ಮೇಲ್ಕಟ್ಟು ಮೌಕ್ತಿಕರಂಗವಲ್ಲಿಯಿಂ ಅಲಂಕೃತವಾದ ನಿಜಾಲಯದೊಳು . . . ಕುಳ್ಳಿರಿಸಿ (ಶಾಂತೀಶ. ೯-೨೨) ; ನಡೆಮಡಿಗಳ ಪಾಸುತ್ತುಂ ಸದಗರದಿಂ ಶೋಭನಂಗಳಂ ಪಾಡುತ್ತುಂ ಮುದದಿಯುರಿದಿರ್ಗೊಂಡರಲ್ಲಿ ವಿಶ್ವೇಶ್ವರನಂ (ವೀರವ ೯-೫೮) ; ನಡೆಮಡಿ ನಾಲ್ಕೆಂಟುಮವರ್ಕೆದಲಲ್ಲಲ್ಲಿಗೊಡ ನೆತ್ತುವಾರತಿ ಸೇಸೆ ಇಡುವ ನಿವಾಳಿ ಢಾಳಿಸುವ ಚಾಮರಗಳಿಂದೆಡಬಿಡದಿಡಿಸಿದರು ಯೋಗಿಗಳ (ಭರಹ. ೩-೪೦) ; ಸುರರು ಸಮಂತು ಪೂರಿದ ಭವಂಗೀ ಧರೆ ಪಾಸಿದ ನಡೆಮಡಿಯನೆ ಕರಮೆಸೆದುದು ವಿಮಳಗಣದಿನಾ ನದಿ ಪದಪಿಂ (ಧರ್ಮನೇ. ೨-೩) ; ಹರಿಹರದೇವರು ನಡೆದು ಬರುವ ಹಾದಿಯುದ್ದಕ್ಕೂ ನಡೆಮಡಿಯನ್ನು ಹಾಸಿ ಹೂವುಗಳನ್ನು ಚೆಲ್ಲುತ್ತಿರುವರು (ತುಂಗಳ. ೬೦). ನಡೆಮುಡಿ : ಬೀಯ ಛತ್ರಿ ನಡೆಮುಡಿ ಕಲಶ ಕನ್ನಡಿಗಳು ಇಲ್ಲದ ಮೆರವಣಿಗೆಯೇ ಇಲ್ಲ (ಹರೀಜ. ೧೯೩) ; ಯಾವ ಮೋತೀಬಾಯಿಗಾಗಿ ರಾಜನು ಸೆಡೆಮುಡಿಯನ್ನು ಹಾಸುತ್ತಿದ್ದನೋ ಅವಳು ಪಾಪ, ಬೀದಿ ಬೀದಿ ಅಲೆಯುತ್ತಿದ್ದಾಳೆ (ಘೂಂಘಟ. ೦೦೫) ; ಊರಿನ ಅಗಸ "ನಡೆಮುಡಿ" ಹಾಸಿಕೊಂಡು (ದಾರಿಯುದ್ದಕ್ಕೂ ಬಟ್ಟೆ ಹಾಸಿಕೊಂಡು) ಅವರನ್ನು ನಡೆಸಿಕೊಂಡು ಬರುತ್ತಾನೆ (ಸರ್ವಜ್ಞಮಂ. ೧೯೨). [ ನಡೆ$_1$ + ಮಡಿ$_2$ ]

**ನಡೆಮಾಡ** (ನಾ). ಚಲಿಸುವಂತೆ ರಚಿಸಿರುವ ಒಂದು ಬಗೆಯ ಮನೆ ; ವಿಮಾನ; ವ್ಯೋಮಯಾನ : "ನಡೆಮಾಡವೆಂದುಂ ವಿಮಾನಂ" (ಕಶಸಾ. ೨೮-೫೬೩) ; ನಡೆಮಾಡ [ಪಾಠಾಂ. ಡು] ವಾಱನೆ ವ್ಯೋಮಯಾನನಾಮಂ (ಶಬ್ದಮಂ. ೦೦) ; "ನಡೆಮಾಡಮೆನೆ ಸುರವಿಮಾನಂ" (ಕಕಿರ. ೫೨) ; ಗಜೇಂದ್ರಂ ತುರಂಗಂ ನಡೆಮಾಡಂ ದಣ್ಣನಾಥೋತ್ಸವಪದವಿ ಮಹಾತೂರ್ಯಮೆಂಬಿಂತಿವಂತುಂ ಪಡೆದು ಚೆಲ್ವಿಂದೆ ವೀಸೋತ್ಸರವಿದಿತಧರಾ ದೇವನಿಷ್ಟಪ್ರಭಾವಂ (ಎಕ. XIII, ೩೩೦-೦೩ ; ೧೨೨೩) ; ಅವಱ ಮುಂದೆ ಸಾಹಣೌಘದೊಳಗಿರಿಸುವ ಪಂಚಕಲ್ಯಾಣದ ಸೂಚೀಯಾನಗಳ್ಗೆಂದು ನಿಱಿಸಿದ ನಡೆಮಾಡಸಾಲೆಗಳಿಂದು (ಶಾಂತಿಪು. ೦೦-೦೯೬೫) ; ನಡೆಮಾಡಂ ನಡೆಗೊಪ್ಪುವಶ್ವತತಿ ಚೆಂಬೊನ್ನಂದಣಂ ವಾಜಿ ಪರ್ವಿಡಿ ಪೇರಾನೆ ಸುಖಾಸನಂ ತುಱುಗೆ ಬಂದರ್ಗಾಯಕರ್ವಾದಕರ್ (ಮಲ್ಲಿಪು. ೩-೬೬) ; ತನತು ವಿಚಿತ್ರಮಪ್ಪ ನಡೆಮಾಡದ ಗಾಡಿಯ ಸದ್ವಿಮಾನಮುಂ ತನತು ಸುರರುಮ್ಮಹರ್ಮ್ಯದ ವಿಳಾಸದ ರುಂದ್ರಫಣೀಂದ್ರಗೇಹಮುಂ . . . ಇಂತು ಕನಸು ಪದಿನಾಱುಮನಂಬುಜವದನೆ ಕಂಡಳ್ (ಪುಷ್ಪಪು. ೯-೦೦೧) ; ನಡೆಮಾಡದೊಳಗಿರ್ದ ರಾತ್ರಿಂಚರನರ್ನೋಡಿ ಮಿಡಿದು ತಂಕಮ್ಮ ಬಲ್ಲಳನೈದೆ ಗರ್ಜಿಸುತೆ (ಶೀಷಣ. ೧೪-೩೪) ; ಪಡೆವಳರೆಲ್ಲರ್ . . . ನಡೆಮಾಡಮುನಡರ್ದು ಹಯಮನುಯ್ದು ಮರ್ಬಿಗನುಂ ತಱುಬಿ ಅಱಿವಡೆಯುಂ ಬಱಿಕೆಯ್ದು ಮಮಣಾಯುನ ಕಟ್ಟಾಣತಿಯಂ ಪಾಲಿಸುತಿರ್ಪುದು (ರಾಮಾಶ್ವ. ೦೦೦-೦೭) : ಆಕಾಶದೊಳಗಿಂದ ಅಥವಾ ಹವೆಯೊಳಗಿಂದ ಹೋಗುವ ವಾಹನಕ್ಕೆ ವಿಮಾನ ಅಥವಾ ನಡೆಮಾಡಂದೆನ್ನುತ್ತಾರೆ (ಮುಂಬಯಿ. ೩-೯೨). [ ನಡೆ$_1$ + ಮಾಡ$_2$ ]

**ನಡೆಮುಡಿ** 'ನಡೆಮಡಿ' ನೋ.

**ನಡೆಯಡಿ** (ನಾ). ನಡೆಯುವ ಕಾಲು ; ಚಲಿಸುವ ಪಾದ : ಕಂದರ್ಪವಂಗನೆಯು - ಪ್ರಳಾಪಿಸುತ ನಡೆಯಡಿಗಳಿಂದ ಬರವರಲ್ (ನವಮೋ. ೭-೩). [ ನಡೆ$_1$ + ಅಡಿ$_1$ ]

**ನಡೆಯಿಸು,** ನಡಯಿಸು, ನಡಸು$_1$, ನಡಿಸು$_1$, ನಡೆಸು, (ಕ್ರಿ). ೧. ನಡೆಯುವಂತೆ ಮಾಡು ; ಚಲಿಸುವಂತೆ ಮಾಡು : ಜಯದ್ರಥನಂ

ಕೋಡಗಗಟ್ಟುಗಟ್ಟಿ ಬೆನ್ನಂ ಬಿಲ್ಲ ಕೊಪ್ಪಿನೊಳಿಟ್ಟು ನಡೆಯೆಂದು ನಡೆಯಿಸಿ (ಪಂಪಭಾ. ೬-೩೧ ಪ) ; ಮ್ಲೇಚ್ಛಖಂಡಮಂ ದಾಯ್ಮೋಳಿಸಿ ಚಕ್ರ ಪೂಜೆಗೆಯ್ದು ಕಟಕಮಂ ನಡೆಯಿಸಿ (ಚಾವುಂಪು. ೪೧) ; ನಡೆನಡೆಯೆಂದು ನಡೆಯಿಸಿದರ್, ಕೊಯ್ ಕೊಯ್ ಎಂದು ಕೊಯಿಸಿದರ್ (ಭಾಷಾಭೂ. ೨೧೬ ಉದಾ) ; ಪುರವರದ ನಡುಕೇರಿಯೊಳೆಲ್ಲರು ನೋಡುವಂದದಿ ನಡೆಯಿಸಿ ದನು ಮಂತ್ರಿಯವರ (ಶಬರಾಶಾಂ. ೩೬-೬೨). ೨. ಮುಂದುವರಿಸು ; ಮುಂದೆ ಸಾಗಿಸು ; ಸಾಗಿಸಿಕೊಂಡು ಹೋಗು : ನೆಗಟ್ದೀ ಕ್ರಿಯಾ ವಿಶೇಷಂಗಳನಿಲ್ಲಿಂದಿತ್ತಡೆಯುಡುಗದೆ ನಡೆಯಿಸುವುದು (ಆದಿಪು. ೧೫-೧೬೮); ಇದನ್ ತಪ್ಪದೆ ನಡೆಯಿಸಿದಾತಮ್ ಸಾಸಿರಮ್ ಕವಿಲೆಯ ಕೋಡುವ್ . . . ಸಹಶ್ರ(ಸ್ರ)ಭೋಜನವ್ ಊಡಿದ ಫಲಮ್ ಅಕ್ಕುಂ (ಇಅ. XII, ೨೫೬-೧೬ ; 951) ; ಇದು ಕಯ್ಕೊಂಡು ನಡೆಯಿಸಿದಾತಂಗೆ ಅನಂತ ಪುಣ್ಯ (ಎಕ. IV, ನಾಗಮಂ. ೫೧-೨೪ ; 972) ; ಇನ್ತೀ ಧರ್ಮ್ಮಮಂ ಕಾದು ನಡೆಯಿಸಿದಂಗೆ ವಾರಣಾಸಿ ಕುರುಕ್ಷೇತ್ರ ಪ್ರಯಾಗೆಯರ್ಘ್ಯತೀರ್ತ್ಥ ಗಂಗೆ ಗಂಗಾಸಾಗರದೊಳ್ ಸಾಸಿರ ಕವಿಲೆಯಂ . . . ಕೊಟ್ಟ ಫಲವಕ್ಕು (ಸೌಇಇ. XI-1, ೪೬-೧೯ ; 994). ೩. ಹೋಗುವಂತೆ ಮಾಡು; ಕಳಿಸು: ಅಡಿದಳಿರ್ಗೆ ಧರಾವಲಯಂ ಕಡುವಟ್ಟಿತ್ತಾಗೆ ನಡೆಯಲಾರಿಯದೆ ಮನುಜರ್ ಸಿಡೆಯೆ ಹಯಾದಿಗಳಿಂದಂ ನಡೆಯಿಸಿದು ಕಲಿಸಿ ವಾಹನಾರೋಹಣಮಂ (ಶಂಕಾಪು. ೦-೬೬). ೪. (ರಥ ಮೊದಲಾದುವನ್ನು) ಚೋದಿಸು ; ಹೊಡೆ : ದೇವಕೀನಂದನಂ ಸ್ಯಂದನಮಂ ಕಿಟ್ಟಿದು ನಡೆಯಿಸೆ (ಜಗವಿ. ೪-೪೦೪). ೫. ಆಚರಿಸು ; ನಿರ್ವಹಿಸು ; ಜರುಗಿಸು ; ಮಾಡು : ಅವರಿಬ್ಬರೂ ನಡೆಯಿಸಿದ ಜೀವನದ ಅದ್ಭುತರಸಾಯನದ ಪ್ರಯೋಜನವು ಕನ್ನಡನಾಡಿಗೆ ಇನ್ನೂ ಆಗಬೇಕಾಗಿದೆ (ನನಲ್ಲ. ೬ ಕವಿಚರಿತೆಯು). ೬. ಈಡೇರಿಸು ; ನೆರವೇರಿಸು ; ಪಾಲಿಸು: ಚಕ್ರವರ್ತಿಯೇ ತಮ್ಮ ಅಪ್ಪಣೆಯನ್ನು ನಡೆಯಿಸಿರುವೆನು (ಮುಡಿಸ. ೫೬) ; ದಂದುಗಡ ಬಿಡುಗಡೆಗೆ ಮನೆಯೊಡವೆಗಳ ಕೆತ್ತು ಪೊಂದಿದೊಸಗೆಯ ನಡೆಯಿಪುದು ಕೊರಗನೆಣಿಕೆ (ಕಾಲಾರ. ೦೬೯-೩೭೬). ೭. ಪಾಲನೆ ಮಾಡು ; ರಕ್ಷಿಸು ; ಕಾಪಾಡು : ಎಮ್ಮ ಕಾರಣದಿನಿತ್ತಣ ಪಂಬಲನೀಕೆ ಮಾಡದಂತಿನ್ನಡೆಯಿಪ್ಪುದೊಂದೆ ತೆಱನಪ್ಪುದಿದಂ ಸೆಱಗೊಡ್ಡಿ ಬೇಡಿದೆಂ (ಚಂದ್ರಪು. ೬-೮೬). ೮. (ಆಸಕ್ತಿ ಮುಂತಾದುವನ್ನು) ಉಂಟುಮಾಡು ; ಒದಗಿಸು ; ದೊರಕುವಂತೆ ಮಾಡು : ಕಡಿದೊಡೆ ಸೊರ್ಕಿಸದವು ನಾಣ್ಗೆಡಿಸದವು ಮನಕ್ಕಲಂಪನೀವುವು ರತಮಂ ನಡೆಯಿಪುವೆನಿಸುವ ಮಧುಗಳನೆಡೆಯುಡುಗದೆ ಕುಡುಗುಮುಚಿತಮದ್ಯಾಂಗಕಜಂ (ಆದಿಪು. ೫-೩೨) ; ಪ್ರಸಾದಪರಿಮಳಮಂ ಘ್ರಾಣಕ್ಕೆ ನಡೆಯಿಸುವ ಸೊಪಗೆಯ ಮುಗುಳ ನಾವೆಯಂತೆಸೆವ್ವ ನಾಸಿಕದ . . ರೂಪು ಸೌಂದರ್ಯದಿಂ (ಬಸರ. ೨-೨೬). **ನಡಯಿಸು :** ೧. ಮುಂದಕೆ ನಡಯಿಸಿ ಪುಲಿವೊಗವಿಕ್ಕುವ ಬಂದರ ಕೊಡೆ ದೂರದೊಳು ನಿಂದಿಱಿದಾಡುವ ಬಲು ಭದ್ರವೆಸಗುವರಿಂದ ಕಣ್ಗೆಸೆದುದಾ ದುರ್ಗ (ಶಬರಾಶಾಂ. ೫೬-೬೩). ೨. ಧರ್ಮ್ಮಂಗಳಂ ನಮಸ್ಯಂ ನಡಯಿಸಿ ಬಱಿಯವೊನ್ದು ವರ್ಷಂ ರಾಜ್ಯಮಂ ಪತ್ತುವಿಟ್ಟು (ಎಕ. II, ೫೯-೧೦೯ ; 974). ೯. ವ್ಯವಹರಿಸುವಂತೆ ಮಾಡು ; ವರ್ತಿಸುವಂತೆ ಮಾಡು. ೧, ೯ : ದೇವನು ತನಗೆ ಕುಂಟಣಿ ಮಾಡಿ ನಡಯಿಸುವ ತೆಱನೀ ತೆಱನೆಂಬುದಂ ತೋಱುವಂತೆ ಮೆಲ್ಲಮೆಲ್ಲನೆ ದಟ್ಟಡಿಯಿಡುತ್ತುಂ (ಸಂಬಿರ. ೨-೬). **ನಡಸು$_1$ :** ೧. ಭೃತ್ರುಮನೇಱಿಸಿ ನಡಸೆ ಕೆಲವು ದಿನಕ್ಕೆ ತಿಳಕದ್ವೀಪಮನೆಯ್ದಿ (ಪುಣ್ಯಾಸ್ರ. ೮-೬೪) ; ಹಿಡಿವ ಬಿಡುವೊಬ್ಬುಳಿಗೆ ತಹ ಬಲನೆಡಕೆ ಹಾಯ್ಕುವ ಸುತ್ತಲೊತ್ತುವ ತಡೆವ ನಡಸುವ ಸೆಳೆವ ತಿರುಹುವ ಹದಿರ ಜೋಕೆಯಲಿ ಗಡಣಿಸಿದನು (ಕುಮಾರರಾ. ೩-೧೧); ಮೊಗಕೆ ಮುತ್ತುಗದೆಲೆಯ ಮಱೆವಿಡಿದಗಲಿದುಮ್ಮಹದಿಂದ ಜನಕನ ಮಗಳ ನಡುಸುತ ತಂದರೊಂದು ಮಹಾಸರೋವರಕೆ (ತೊರರಾ. ೨-೪-೧೯) ; ಕರುಣಾಳು, ಬಾ, ಬೆಳಕೆ, ಮುಸುಕಿದೀ ಮಬ್ಬಿನಲಿ, ಕೈಹಿಡಿದು ನಡಸೆನ್ನನು (ಇಂಗೀತ. ೯೭-೨). ೨. ಧರ್ಮ್ಮವೆಱವವರೆಲ್ಲರು ಪೊಡೆಯರಾಗಿ ಪರಿರಕ್ಷೆಗೆಯ್ದು ಸ್ವಧರ್ಮ್ಮದಿವ್ ನಡಸುವ್ರದು (ಇಅ. XVIII, ೩೯-೨೬ ; 999) ; ಇದಪ್ ನಡಸಿದರ್ಗ್ಗೆ ಅನನ್ತಪುಣ್ಯ[ಂ] (ಇಅ. XII, ೨೨೫-೦೬ ; ಸು.12ನೆಯ ಶತ) ; ಆಚಂದ್ರಾರ್ಕ್ಕ ನಿತ್ಯಪಡಿ ಕಿ ಯವಾನ ಹಲ ನಡಸುವ್ರದು (ಎಕ. II, ೨೪೪-೨೩ ; ಸು.1274) ; ಶಿವಾರ್ಪಿತವಾಗಿ ನಡಸುವ ಅಗ್ರಹಾರದ ಧರ್ಮಕೆ ಉತ್ತಾರವ ಮಾಡಿಸಿಕೊಟ್ಟ ಕಾಶೀ ನಾಥಪುರದ ಗ್ರಾಮಕ್ಕೆ ಶಿಲಾಸ್ಥಾಪಿತ ಮಾಡಿಸಿ ಅದೆ (ಎಕ. VII, ಶಿವಮೊ. ೦೮-೧೦ ; 1714). ೫. ಸಂಪದಾದಿಗಳು ಭರಿತವಾಗಿಹವಾ ಮುನಿಪನಿಹ ಧರಣಿಯಲಿ ನೀನಾ ಮುನೀಂದ್ರನ ಬರಸಿ ಕ್ರತುವನು ನಡಸಿದರೆ ಸುತರಹರು ನಿನಗೆಂದ (ತೊರರಾ. ೧-೫-೫೯) ; ಎಮ್ಮ ಲಿಂಗವು ಕೊಟ್ಟ ಕಾಯಕವ ನಡುಸುತ್ತಿಹೆವಂತಾಗಿಯುಂ ಭವಿಯೊಡನೆ ಮಾತಾಡೆವು (ಬಸಪು. ೪೦-೩೬) ; ನಾನೀಗ ನಡಸಿರುವುದರಲ್ಲಿ ಅವಸರವೇನಾದರೂ ಕಾಣುತ್ತದೆಯೇ ? (ಅಶ್ರುತು. ೧೨) : ನಮ್ಮ ಪ್ರಾಚೀನ ಕಾವ್ಯಗಳ ಅಭ್ಯಾಸವನ್ನು ಸೂಕ್ಷ್ಮವಾಗಿ ನಡಸಿ ಸರಿಯಾಗಿ ಅವಲೋಕಿಸಿದರೆ ನಮ್ಮ ಹಿಂದಿನ ಕವಿಗಳಿಗೂ ಲಾಕ್ಷಣಿಕರಿಗೂ ಭಾಷೆಯನ್ನು ಕುರಿತು ಪ್ರತ್ಯೇಕವಾಗಿ ವಿಚಾರ ಮಾಡುವ ಪ್ರವೃತ್ತಿ ಇತ್ತೆಂಬುದು ಓದುಗರಿಗೆ ಮನದಟ್ಟಾಗುತ್ತದೆ (ದ್ರಾವಿವಿ. ೧೧ ಹಿನ್ನಲೆ). ೬. ಘಡಘಡರ್ಜನ ಹೋಗುಹೋಗಳವಡದು ಸೈಂಧವನಳಿವು ಭಾಷಯ ನಡಸುಬಲ್ಲರೆ ಬೇಗ ಬೆಳಗಿಸು ಹವ್ಯವಾಹನನ (ಕುಮಾರದ್ರೋ. ೧೪-೩೧). ೯. ದುರ್ಜನಸ್ವಭಾವಮಂ ಕೆಡು ಯತ್ನದಿಂ ನಡಸುವೊಡಂ ನೈಜಗುಣಂ ಬಿಡದು (ಪಂಚತಂ. ೧೦೫-೧) ; ಮುನ್ನ ಪರಸತಿ ಪಾರ್ವತಿಯೆಂದು ನಡಸಿತ್ತು ನುಡಿಸಿತ್ತು ಗುರುವಚನ (ಸರ್ವವ. ೮೬-೪೮೦). ೧೦. ಪ್ರಯೋಗಿಸು ; ಬಳಸು ; ಉಪಯೋಗಿಸು : ಮಡದಿ ಪಕ್ಷದಿಯರಿಯದಲೆ ಮದದೊಡಗಿ ಕಾಣನು ಇನ್ನು ಬುದ್ಧಿಯ ನಡಸು ಸ್ವಾಮಿದ್ರೋಹಿ ಬಸವನೆಯೆಂದನಾ ಮಂತ್ರಿ (ಬಿಜ್ಜಪು. ೬೩-೫೮). ೧೧. ರೂಪಿಸು ; ಹೊಂದಿಸು ; ಸಾಧಿಸು ; ಅಳವಡಿಸು ; ಸಿದ್ಧಪಡಿಸು: ಋಕಾರಾಂತಗಳಾದ 'ಕರ್ತೃ' ಮೊದಲಾದುವನ್ನು 'ಗುರು' ಎಂಬುದರಂತೆ ನಡಸಬಹುದು (ಮಧ್ಯಮ. ೬೮) **ನಡಿಸು$_1$ :** ೬. ಯಿನ್ನು ತಂನ ಮಾತು ನಡಿಸಬೇಕು (ಎಕ. VII, ಶಿವಮೊ. ೧೦೮-೨೫ ; 1558). ೯. ನಾರಿ ಕೇಳ್ನಿನ್ನ ಮನೋರಥ ನೆಱೆ ಕೈಸಾರಿತು ಚೆಲುವರೆಱೆಯನ ಮೇರೆಯಱಿತು ನಡಿಸೆಂದಾಗ ಸಖಿಯು ಪಚಾರವ ಪೇಳ್ದಳಂಗನೆಗೆ (ಕಂನವಿ. ೦೦-೫೬). **ನಡೆಸು :** ೧. ಹುಟ್ಟುಗಾರುಡನ ಕೈಯ ಕೋಲ ಕೊಟ್ಟು ನಡೆಸುವಂತೆ ನಡೆಸಯ್ಯಾ ಎನ್ನ (ಬಸಶ. ೨೬೫) ; ಪೊಡವಿಯಲಿ ಕೈಗೊಟ್ಟು ಭೋಗಂ ನಡೆಸಲಡಿಯಿಡ ಕಲಿತನು (ಬಸಪು. ೨೫-೮) ; ಕಾಲಿಲ್ಲದೆ ನಡೆಸುವ ಕೈಯಿಲ್ಲದೆ ಹಿಡಿಸುವ ಹಲ್ಲಿಲ್ಲದೆ ಮೆಲಿಸುವ (ಪುರಂದ. ೩-೧೧೯-೧) ; ದಿವಿಜರು ಪೆತ್ತ ರತ್ನವಿಮಾನಕೋಟಿಯ ಸೂತ್ರಿಸಿದವೊಲು ನಡೆಸಿದರು ಸುರವೇತ್ರಪಾಣಿಗಳು (ಸಾಳ್ವಭಾ. ೩೩-೩೮) ; ಪೊಡೆಸು ಭೇರಿಯ ನಿಂದೆ ನಡೆಸು ಮಾತ್ಸ್ಯನ್ಯವಂ (ಜಲಪು. ೪೬-೨೨) ; ಆ ಕುದುರೆ . . . ಲೋಕವಂ ತಣಿಸುತ್ತೈತರಲಖಿಳದೆಸೆಯೊಳದನಾಕೆವಾಳರ್ತಡೆಯ ಬಿಡಿಸ ಬೇಕನಿಬರಿಂ ನೂಕದೊಡೆ ಕರ್ತೃ ತಾನಾದೊಡಂ ಪೋಗಿ ನಡೆಸುವುದು ಬಳಿಕಾ ಹೆಯವನು (ಜೈಮಿಭಾ. ೨-೨೯). ೨. ಈ ಧರ್ಮವ[ಂ] ನಡೆಸಿದವರಿಗಕ್ಷಿ(ಕ್ಷ)ಯಪುಣ್ಯ[ಂ] (ಇಅ. XII, ೨೨೫-೧೯ ; ಸು. 11ನೆಯ ಶತ) ; ಹತ್ತುಮತ್ತರದ ಭೂಮಿ ಬತ್ತುವ ಹಯನು ನಂದಾದೀವಿಗೆಯ ನಡೆಸಿಹವೆಂಬವರ ಮುಖವ ನೋಡಲಾಗದು (ಬಸವ. ೨೨೫) ; ಪೊಡೆಯರು ನಡಸಿ ××× ನಡೆಸುವ ಯೆಂಣೆ ವರುಶ ೧ ಕಂ ಹಾನೆ ೨ ಡನೂ ನಡೆಸುವಂತಾಗಿ (ಸೌಇಇ. IX-II, ೪೦೫-೧೧ : 1367) ; ಅಲ್ಲಿ ಇಂಗ್ಲಿಷ್‌ನಲ್ಲಿ ಪ್ರೌಢವಿದ್ಯಾಭ್ಯಾಸ ಮಾಡಿದವರೂ ಕೂಡ ಮಾತೃಭಾಷೆಯಲ್ಲಿ ಸಂಭಾಷಣೆಯನ್ನು ನಡೆಸುತ್ತಿದ್ದುದನು

ನೋಡಿದೆ (ಚಂಗಾಳ್ವ. ೨ ಮುನ್ನುಡಿ). ೫. ಸಕಳಮಂ ಕೌತುಕದಿ ನಡೆಸುತ ಸಕಳದೊಳು ನಡೆಯದ ಸುಜಾಣನು ಸಕಳವಳಿಯಲು ಸಕಳದೊಳು ಕಾನಳಿಯದಿಹನಿತ್ಯ (ಬಸಪು. ೫೦-೪೪); ತೊಡಿಗೆಯಿಂದಿರ್ವರು ದೇವಪೂಜೆಯ ಮಾಡಿ ನಡೆಸಿದರಾಗವೋಕ್ತಿಯಲಿ (ಮೋಹತ. ೩೦-೪); ದೇವರನ್ನು ಮೂಲದೇವರ ಗುಡಿಯ ಮುಂದೆ ಬಿಳಿಬಟ್ಟೆಯ ಮೇಲೆ ಕುಳ್ಳಿರಿಸಿ ಗುಡಿಯೊಳಗೆ ಪೂಜೆ ನಡೆಸುತ್ತಾರೆ (ನನ್ನೂರು. ೫೧). ೬. ನುಡಿದ ಭಾಷೆಯನಿಂತು ನಡೆಸಲು ಬಸವನೇ ಬಲ್ಲ (ಬಸಪು. ೩೬-೨೬); ನಮ್ಮ ಕರ್ತವ್ಯ ಒಡೆಯನ ಅಪ್ಪಣೆಯನ್ನು ತಲಬಾಗಿ ನಡೆಸುವುದು (ಚಂಗಾಳ್ವ. ೪೬). ೭. ಪಟೆಯಿಲ್ಲದಂತೆ ಪ್ರಪಂಚುವಿಲ್ಲದಂತೆ ವೈಶಿಕವಿಲ್ಲದಂತೆ ನಡೆಸಯ್ಯಾ (ಬಸವ. ೩೧); ನಿಮ್ಮನೆಂದೂ ಅಗಲದಂತೆ ಮಾಡಿ ನಡೆಸಯ್ಯ (ಮುಹಾದೇ. ಬ. ೧೫-೧೯); ನಿಚ್ಚಂ ಪ್ರಿಯದಿಂದಂ ನೋಡುವರ್ ಮನ್ನಿಸಿ ನಡೆಸುವರೆಮ್ಮತ್ತೆವಿರ್ ದೇವಕೀದೇವಿಯರ್ (ಜಗವಿ. ೧೨-೧೦೬); ಅರಸೊಲಿದು ನಡೆಸಿದರೆ ಹಿರಿಯಾಕ್ಯ ಜಸವಕ್ಕು ಕರಿತುರಗ ಬಲವು ಹಿರಿದಕ್ಕು ಮುನಿದರೆ ಕರ ನಾಶವಕ್ಕು (ಸರ್ವಜ್ಞ. ೬೩೨). ೮. ಘಡ ತೊಲಗು ಕೌರವಕೃತಾಂತನ ಪಡೆಗೆ ಮಾರಣೆಯೊಗಳೀಗಳೆ ನಡೆಸುವೆನು (ಕುಮಾರವ್ಯಾಸ. ಶರಿ. ೨೮೮). ೯. ಸಾಧುತ್ವಮಂ ಕೆಡಿಸಿ ನಡೆ[ಪಾಠಾಂ. ಡ]ಸುವ ದುರಾಚಾರೆ ಕಪಟನಾಟಕಶತಿಗೆ ತಾನೆ ನೆಲೆಯೆನಿಸುವಳ್ (ಕಾದಂಪೂ. ೫೫೩); ಇನಿತುಂ ಮೋಹಂ ಕೀಳೀತನಮೇಲಿಂ ಪಿರಿದುಮೆನ್ನೊಳುಂಟಪ್ಪುದರಿಂದನಿಯತಿಕೆಯಿಂದೆ ನಡೆಸಲ್ಕಿನಿತಾದುದು ಶಿಕ್ಷೆಗೆಟ್ಟ ಕಾರಣದಿಂದಂ (ಧರ್ಮಾಮೃ. ೨-೮೧). ೧೦. ಅಟ್ಟು; ತಳ್ಳು: ಹೊಡೆದು ಹೊಡೆಚೆಂಡಾಡಿ ರಿಪುಗಳ ಗಡಣವನು ಯಮರಾಜಧಾನಿಗೆ ನಡೆಸುವೆನು (ಕುಮಾರವ್ಯಾಸ. ೮-೮). ℗ ಈ ಧಾತು ಅನೇಕ ಕಡೆ ನಾಮಪದದೊಡನೆ ಸೇರಿ ವಿಶಿಷ್ಟವಾದ ಧಾತುವಾಗಿ ಬೇರೆಬೇರೆ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಉದಾಹರಣೆಗೆ 'ಉತ್ಸವ ನಡೆಸಂ', 'ಶಾಲೆ ನಡೆಸು' ಇತ್ಯಾದಿ.

**ನಡೆಸಿಕೊಡು, ನಡಸಿಕೊಡು** = ೧. ಮಾಡಿಕೊಡು; ಮಾಡು: ನೀನು ಸೂಚಿಸಿದಂತೆಯೇ ನಡೆಸಿಕೊಡುತ್ತೇನೆ (ವಚಥಾ. ೪). ೨. ಪಾಲಿಸು: ಈಡೇರಿಸು: ನಿನ್ನಲ್ಲಿ ಭರವಸೆಯಿಟ್ಟು ಒಂದು ಮಾತು ಹೇಳುತ್ತೇನೆ. ಅದನ್ನು ನೀನು ನಡಸಿಕೊಡಬೇಕು (ವಚಥಾ. ೬). [ ನಡೆ$_1$ + – ಇಸು$_2$ ]

**ನಡೆಯುಡುಗು** (ಕ್ರಿ). ನಡೆಯಲಾರದಾಗು; ಚಲನೆ ಇಲ್ಲದಂತಾಗು: ನಡೆಯುಡುಗಿ ಮುಪ್ಪಾಗಿ ಕಾಂತಿ ಮಸುಳಿಸಿ . . . ಬೇಳ್ಕೊಂಡೆಸೆಯ ಕಡೆಯೊಳಳಿವಂತಾದುದೀಗ (ಹಕಳಾ. ೩-೬೪); ಭಕ್ತಿ ಚಿತ್ರಮನೋವೆ ಕಂಪಿಸುತ ನಡೆಯುಡುಗೆ ಮನವಕ್ಕುಟಿಂ ಕರಗೆ (ಬಸರ. ೩-೧೧೧); ನಡೆನಡೆದು ಕಡೆಕಡೆಗೆ ನುಡಿಯುಡಗೆ ನಡೆಯುಡುಗೆ (ಕ್ರಾಂತಿಕ. ೦೫೦-೩೩೦). [ ನಡೆ$_2$ + ಉಡುಗು$_1$ ]

**ನಡೆಯೂಡು** (ಕ್ರಿ). ಚೆನ್ನಾಗಿ ತಿನ್ನಿಸಂ: ನಡೆಯೂಡೆ ಮದ್ದು ವಿಷಮೂಡಲಿಂಗೆ ಹಿತವೆಂಬ ನುಡಿಯಂತೆ ಸುಖವಿಲ್ಲ ಪುಣ್ಯಮುಂಟಾಳಿದ ಹಲವೆಡೆಯ ಸುಕ್ಷೇತ್ರಂಗಳೊಳಗೆ (ಹಕಳಾ. ೦೦-೩೫). [ ನಡೆ$_3$ + ಊಡು$_1$ ]

**ನಡೆಲಿಂಗ** (ನಾ). [ವೀಶೈ] ಚಲಿಸುವ ಲಿಂಗವೆಂದು ಭಾವಿಸಲಾದವನು; ಜಂಗಮ: ಬಡವರೆಂದನಬೇಡಾ ಲಾಂಛನಧಾರಿಯನು ಕಂಡು ಸ್ನೇಹದಿಂದವರ ಪೂಜೆಯ ಮಾಡುವುದು ನಿಜವಡಗಿದ ರೂಪು ನಿರ್ಮಯಲ ಸ್ಥಾನ ನಡೆಲಿಂಗ ಜಂಗಮ (ಬಸವ. ೪೧೫). [ ನಡೆ$_1$ + ಲಿಂಗ ]

**ನಡೆವಕ್ಕಿ** (ನಾ). (ಚಿತ್ತಾಕರ್ಷಕವಾಗಿ) ನಡೆಯುವ ಹಕ್ಕಿ: (ಮನೋಹರವಾಗಿ) ಚಲಿಸುವ ಪಕ್ಷಿ; ಹಂಸ: ನಡೆವಕ್ಕಿಯ ನಲ್ಮೆಯ ಪೂಣರ್ವಕ್ಕಿಯ ನುಡಿವಕ್ಕಿಯ . . . ಬಳಗಂ ಬಳಸಿದುದಾ ನೃಪಸತಿಯಾ (ಆದುಳಾ. ೨-೧೮); ನಡೆವಕ್ಕಿ ನುಡಿವಕ್ಕಿ ... ಗಜಿಗಣ್ಣಕ್ಕಿಗಳಾ ನೆಲದೆಡೆಯ ಬನದೊಳಿರುತಿಹವು (ಕುರಾಶಂ. ೨-೩೦); ಆ ವನದ ಮಧ್ಯದೊಳು ನಡೆವಕ್ಕಿ ನುಡಿವಕ್ಕಿ ಪಾವನತ್ವವನೈದಿ ಜೀವಿಪ್ಪವು ಭಯವನುಳಿದು (ಪ್ರಭುಪು. ೩-೦೪). 'ನುಡಿವಕ್ಕಿ' ಪರಾ. [ ನಡೆ$_1$ + ಹಕ್ಕಿ$_1$ (<ಪಕ್ಕಿ$_1$) ]

**ನಡೆವಡು** (ಕ್ರಿ). ಹೋಗು; ಚಲಿಸು; ಗಮಿಸು: ತಾಂ ತನಗೆ ಹಯಂ ತಡೆವಿಟ್ಟ ಪಾವೆಂತಂತು ನಡೆವಟ್ಟು ಕನ್ನಿಚ್ಚೆಯಿಂ ಪೋಗೆ (ಕಾದೂಕ. ೧೩೮-೦೩). [ ನಡೆ$_2$ + ಪಡು$_1$ ]

**ನಡೆವಣಿಗ** (ನಾ). ಪಾದಚಾರಿ; ಕಾಲಾಳು: ನಡೆವಣಿಗ ಘೋಳಾಯ್ಲ ಸೂಳಾಯ್ತುಡಪವಳ ಬಳಿಗಾಳಿ ಕಮ್ಮಟ ನಾಡಿಗ ಕುಂಬಳಿ ಕಂಚುಗಾಜಿರ ಕೇರಿ ಮೆಚ್ಚಿದಿಹವು (ಶಾಳ್ವಭಾ. ೨-೮). [ ನಡೆ$_1$ + – ವಣಿಗ ]

**ನಡೆವಲೆ** (ನಾ). ಒಂದು ಬಗೆಯ ಬಲೆ: ಇಡುವಲೆ ಸಿಡಿವಲೆ ಕಿಬ್ಬಾವಲೆ ನಡೆವಲೆ . . . ಬಿಡಂವಲೆಗಳೆನಿಪ್ಪುವೆಸೆದುವಾ ಬೇಂಟೆಗಾರರೊಳ್ (ಕಬಕಂ. ೩-೨೪). [ ನಡೆ ? + ಬಲೆ ]

**ನಡೆವಳಿ$_1$, ನಡವಣೆ, ನಡವಳಿ, ನಡಾವಳಿ** (ನಾ). ೧. ನಡೆಯುವಿಕೆ; ನಡಿಗೆ: ನಡೆವಳಿಗಳಿಂದೆ ಪೊಡವಿಯನು ನಗ್ಗಿಪ ಹಸ್ತಿಗಡಣ (ನವಪೋ. ೩೦-೨೬). ೨. ನಡವಳಿಕೆ; ವ್ಯವಹಾರ; ನಡತೆ; ವರ್ತನೆ: ಬಕ್ಕೆಯಂ ಬೇರುಮಾನುಂಡಡವಿಯೊಳಗಿರ್ಪ ಮುನಿಗಳ ನಡೆವಳಿಯೆತ್ತೆತ್ತ ದುವತಿಜನದನುರಾಗಂ (ಕಾದಂಪೂ. ೮೧೮); ಪಟಿಯಂ ಕೇಳ್ದನೊ ಮೇಣ್ನಡೆವಟಿ[ಳಿ]ಯಂ ತಪ್ಪಿದನೊ ಕಾಣೆ ಕಣ್ಣಿಂದಂ ಕೂರ್ತಲ್ಲಿವರಂ ಬಗೆದನೊ ಪಚ್ಚಟಿದನೊ ಪೇಟ್ಮೂಡಿ ನಿನ್ನೊಳಂಗಾಧಿಪತೀ (ಗದಾಯು. ೫-೧೪); ℗ ಇದನ್ನು ಪ್ರಾಸಕ್ಕಾಗಿ 'ಟ' ವನ್ನಾಗಿ ತಿದ್ದಿಕೊಂಡಿರಬಹುದು; ಹಗಲಿರುಳು ಉದಯ ಬೈಗುಗಳು ಧರ್ಮವೆ ಎಂಬಿವು ಮನುಷ್ಯರ ನಡೆವಳಿಯನಜುವುವು (ಚಂಕತಂ. ೧೬೨-೧೧); ಪರವಧುಗಳಿಪ್ಪುದುವಿಹಂ ಪರವಟಿಗುಂ ನಿನ್ನ ಮಹಿಮೆಗಿದು ನಡೆವಳಿಯೇ (ಚಂರಾಮಾ. ೯-೦೪೫); ನಡೆವಳಿಯೊಳ್ ತನ್ನ ಸಮಂಬಡೆವಾರುಂ ನಡೆದರಿಲ್ಲ (ಪುಷ್ಪಪು. ೧-೨೯); ಹರಿಯ ಚಕ್ರವ ತುಡುಕಿಸುವೆ ವಾನರಪತಾಕನ ರಥವ ಹಿಂದಕೆ ಮುರಿಯಲಿಸುವೆನು ಮಹಿಮರಿಬ್ಬರ ನಡೆವಳಿಯ ಕೆಡಿಸಿ (ಕುಮಾರವ್ಯಾಸ. ೧-೪೧); ನಡೆವಳಿಯ ನೋಡಿದಿರೆ ಲೋಗರ ಮಡದಿಯರು ತನ್ನವರು ಠಕ್ಕಿನ ಕಡಲು ಕೃಷ್ಣನ ನಂಬಲಿಹಪರವಿಲ್ಲ (ಕುಮಾರವ್ಯಾಸ. ೧೪-೦೮); ನುಡಿಗೆ ನಾಚಿದನರಸ ಹುಸದ ನಡೆ[ಪಾಠಾಂ. ಡ]ವಳಿಗೆ ಮೆಚ್ಚಿದನು (ನಳಚ. ೨-೨೧). ೩. ಸಂಪ್ರದಾಯ; ಪದ್ಧತಿ; ರೂಢಿ: ಹಿರಿಯರೆಲ್ಲರ್ನಡೆದ ನಡೆ[ಪಾಠಾ. ಡ]ವಳಿಯನೊಲ್ಲೆನೆಂಬುದು ಬಲ್ಲತನವಲ್ಲ (ವೃಷವಿ. ೩-೫೨೫.) ೪. (ಸಂಘ, ಸಂಸ್ಥೆ ಮುಂತಾದುವುಗಳ ಅಧಿವೇಶನಗಳಲ್ಲಿ ನಡೆದ) ಕಾರ್ಯಕಲಾಪ, – ಕಾರ್ಯಕ್ರಮ ಮತ್ತು ಅದರ ವರದಿ: "ಕಾರ್ಯ; ವರ್ತನೆ; ನಡೆವಳಿ" (Proceeding. ೫೦೪೨). **ನಡವಣೆ**: ೨. ಧರ್ಮದ ನಡವಣಿಗೆ ಮೆಚ್ಚಿದೆನು ಸತ್ಯವ ಕೆಡದವೋಲು ರಕ್ಷಿಸಿದೆ (ತಿಮ್ಮಅ. ೧-೩೪). **ನಡವಳಿ**: ೨. ಅವರವರ ದಯ್ಯದಂದಮನವರ ಮರಾಗಮದೊಳವರ ನಡವಳಿಗಳ [ಪಾಠಾಂ. ಕಥೆಗಳೊಳಂ] ನೋಡುವಡವೆ ದೂಷಿಸಿದಪ್ಪವಿನ್ನವರನ್ನರ್ನುಡಿಯೆ ಮುಳಿವರಾ ಸಮಯದವರ್ (ಸಮಪ ೮-೨೦೬); ಅಳವಟ್ಟ ಹಿರಿಯ ಸಿರಿ ನಲ್ಲಳ ನಡ [ಪಾಠಾಂ. ಡೆ] ವಳಿಯೊಳ್ಪು . . . ಮನಂಗೊಳ್ಪತಿರೆ ಪಲಕಾಲಮರಸುಗೆಯ್ಯುತ್ತಿರ್ದೆ (ವರ್ಧಪು. ೧೧-೬೯); ಕುಲವಧುವಿನ ನಡವಳಿಯೊಳ್ ಕುಲಮುಮಾ ಚಲಮುಮಾ ಪತಿಬ್ರತಾಗುಣದಿಂದಂ ನೆಲಸಿಕ್ಕುಮ್ (ಶಾಇಇ. XX, ೨೪೮-೪೯; 1228); ವನಧಿಪನ ಗಾಂಭೀರ್ಯ ರವಿನಂದನನ ನಡವಳಿ ಧರೆಯ ಸ್ಥೈರಣೆಯನಿತು ದಶರಥಸಾರ್ವಭೌಮಂಗಲ್ಲದಿಲ್ಲೆಂದ (ತೊರರಾ. ೧-೩-೨೬). **ನಡಾವಳಿ**: ೨. ನಮ್ಮ ನಡಾವಳಿಗೆ ನಮ್ಮ ಪುರಾತರ ನುಡಿಯೆ ಇಷ್ಟವಯ್ಯ (ಸಿದ್ಧವ. ೪. ೨೬೧-೮೫೬); ಜಗತ್ತಿನ ರೀತಿನೀತಿ ನಡತೆ ನಡಾವಳಿಯ ಅನುಭವ ನನಗೆ ಸಾಕಷ್ಟಾಗಿದೆ (ಪರಿಚೀ. ೪೫): ಇದೆಲ್ಲಕ್ಕಿಂತಲೂ ಪ್ರಭಾಕರನ ಮನಸ್ಸನ್ನು

ಗಾಸಿ ಮಾಡಿದುದು ನಿರ್ವಾಲೆಯ ನಡಾವಳಿ (ಕೇಮೋಕ. ೦೦೮) ; ಅವರಿಗೆ ಒಳ್ಳೇ ನಡಾವಳಿಯ ಬಯಕೆಯು ಹೆಚ್ಚಾಗುವ ಹಾಗೆ ತಕ್ಕ ಕಾರಣವನ್ನೇ ನೋಡಿ ಕೊಡಬೇಕು (ಪ್ರಾಂಬಯ. ೩-೯೩) ; ಕ್ರಮವುದ್ಧ ಹೇವವವಾ ನೀತಿ ನಡಾವಳಿಗಳೂ ವೊಳೆಯುವಂತೆ ಪ್ರೋತ್ಸಾಹಿಸಿದರು (ಕಪ್ರ. ೬-೧೩೦); ೩. ಕುಮ್ರಿ ಕಡಿಯುವ ನಡಾವಳಿಯು ಧಾರವಾಡಜಿಲ್ಲೆಯಲ್ಲಿಲ್ಲ (ಕಭಾಗ. ೩೪) ; ಬೈಲುಸೀಮೆಯಲ್ಲಿ ಮಳೆ ಕಡಿಮೆ ಬೀಳುವದರಿಂದ ಮಾಳಿಗೇಮನೆಗಳನ್ನು ಕಟ್ಟುವ ನಡಾವಳಿ ವಿಶೇಷವುಂಟು (ಪ್ರಾಂಬಯ. ೯-೦೦೮). ೫. ಧರ್ಮಸ್ಥಳದಲ್ಲಿ ಹನ್ನೆರಡು ವರ್ಷಗಳಿಗೊಮ್ಮೆ ನಡೆಯುವ ಒಂದು ಉತ್ಸವ,-ಹಬ್ಬ : ಉಡುಪಿಯಲ್ಲಿ ಎರಡು ವರ್ಷಗಳಿಗೊಮ್ಮೆ ನಡೆವ ಪರ್ಯಾಯ, ಪಡುಬಿದ್ರೆಯಲ್ಲಿ ಜರಗುವ ಢಕ್ಕೆಬಲಿ, ಧರ್ಮಸ್ಥಳದಲ್ಲಿ ಹದಿನೆರಡುವರ್ಷಗಳಿಗೊಮ್ಮೆ ನಡೆವ 'ನಡಾವಳಿ' ಎಂಬ ಉತ್ಸವ . . . ಇವುಗಳು ಪ್ರಾಮುಖ್ಯವಾದುವುಗಳಾಗಿವೆ (ತುಳುನಾ. ೨೫೩).

[ ನಡೆ₁ + :- ವಳಿ₁. / ತಮಿ. ನಟವಟ, ನಟ್ಪವಟಿ; ಮಲ. ತೆಲು. ನಡವಡಿ; ತುಳು. ನಡಾವಳಿ, ನಡುವಡಿ ]

**ನಡೆವಳಿ₂** (ನಾ). ನಡೆಮಡಿ; ನಡೆಯುವ ದಾರಿಗೆ ಹಾಸುವ ಮಡಿಬಟ್ಟೆ : ಸುಗ್ಗಿಯೊಳ್ ಮದುವೆಯನೆ ಕುಳಿರಗಸ ನಡೆವಳಿಯು ಹಿಗ್ಗಿನಿಂ ಬಿಡಿಸುವನು ಕೋಳಿದಡೆಯು ಕೋಳಿಯಾ (ಕಾಲೂರ. ೬೪-೧೩೪) ; "ನಡೆವಳಿ=ನಡೆಬಟ್ಟೆ (ಮದುವೆಯಲ್ಲಿ ಮಂಟಪದ ಸುತ್ತು ಹಾಕುವ ಬಟ್ಟೆ)" (ಕಾಲೂರ. ೨೦೩೬).

[ ನಡೆ₁ + ವಳಿ₆ (<ವಟ್₆) ]

**ನಡೆವಳಿಕಾರ** 'ನಡೆವಳಿಕಾಬ' ನೋ.

**ನಡೆವಳಿಕಾರತನ** (ನಾ). ನಡತೆ ; ನಡವಳಿಕೆ ; ಸಂಪ್ರದಾಯ : ಶ್ರೀರಾಜ ಒಡೆಯರವರ ಸನ್ನಿಧಾನವು ಒಡ್ಡೋಲಗಕ್ಕೆ ಬಿಜಯಮಾಡಿದೊಡನೆಯೇ ಆಸ್ಥಾನಿಕರೆಲ್ಲ ಇದಿರೆದ್ದು ತಮ್ಮ ತಮ್ಮ ಮಾನಾನುಗುಣವಾಗಿ ನಮಸ್ಕರಿಸಿ ಗೌರವಿಸಿಕೊಳ್ಳಬೇಡವ ? ಓಲಗದ ನಡೆವಳಿಕಾರತನವಿದು (ಬಟ್ಟೆಅ.೩೯-೦೬).

[ ನಡೆವಳಿಕಾರ (<ನಡೆವಳಿಕಾಬ) + – ತನ ]

**ನಡೆವಳಿಕಾರ್ತಿ** (ನಾ). ನಡವಳಿಕೆಯನ್ನು ತಿಳಿದವಳು ; ಆಚಾರ ವಿಚಾರಗಳನ್ನು ಬಲ್ಲವಳು : "ನರೀ, ನಾರೀ, ಈ ೨ ನಡೆವಳಿಕಾರ್ತಿ" (ಕಾಶಕ್ಕ. ೨೪೬). [ ನಡೆವಳಿಕಾರ (<ನಡೆವಳಿಕಾಬ) + – ತಿ₁ (< – ಇತ್ತಿ) ]

**ನಡೆವಳಿಕಾಬ**, ನಡವಳಿಕಾರ, ನಡವಳಿಕಾಬ, ನಡೆವಳಿಕಾರ (ನಾ). ೧. ನಡವಳಿಕೆಯನ್ನು ತಿಳಿದವನು ; ಆಚಾರ, ವ್ಯವಹಾರಗಳನ್ನು ಬಲ್ಲವನು ; ನಡತೆವಂತ : ಕಾಟಿಕ್ಕೆ-ನಡೆವಳಿಕಾಬಂ, ನುಡಿವಳಿಕಾಬಂ . . . ಪಗೆಕಾಬಂ, ಬಗೆಕಾಬಂ (ಕಮಡ. ೦೯೯ ಪ್ರಯೋ). **ನಡವಳಿಕಾರ** : ೧. "ನರನ್, ನರ್ತಾ, ನ್ನಾ, ನರು, ಈ ೪ ನಡವಳಿಕಾರು" (ಕಾಶಕ್ಕ. ೨೪೬). **ನಡವಳಿಕಾಬ** : ೨. (ದೇವಸ್ಥಾನ, ಮನೆ, ಮೊದಲಾದುವುಗಳ) ವ್ಯವಹಾರಗಳನ್ನು ನೋಡಿಕೊಳ್ಳುವವನು,-ಮೇಲ್ವಿಚಾರಣೆ ನಡೆಸುವವನು : ಪೂಜಾರಿಗ ಪರಿಚಾರಕರಳಗಾದ ನಡವಳಿಕಾಬರ ಜೀವಿತಕ್ಕಂ . . . ಮಹಾಜನಂಗಳು ಬಿಟ್ಟ ದತ್ತಿ (ಪ್ರಾಚಿ. ೧೯೩೨, ೪೬-೩೫ ; 1181) ; ರಾಜಾರ್ತ್ಥವನೂ ತೀಜಿಸಿಕೊಡುವರು ಶಡವಳಿಕಾಬ ಪ್ರಭುಗಳು (ಸೌಇಇ. IX-11, ೪೩೩-೩೩ ; 1408) : ತಿಂಮಣರಾಯರ ಮನೆಯ ನಡವಳಿಕಾಬಂ ಹೊಂನಪ್ಪನಾಯಕರು (ಪ್ರಾಚಿ. ೧೯೩೩, ೨೩-೨ ; 1618). **ನಡೆವಳಿಕಾರ** : ೧. "ಸರ್ತಾ, ಸರಕಃ, ಈ ೨ ನಡೆವಳಿಕಾರಂ" (ಕಾಶಕ್ಕ. ೬೩).

[ ನಡೆವಳಿ₁ + – ಕಾಬ ]

**ನಡೆವಳಿಕೆ**, ನಡವಳಿಕೆ, ನಡಾವಳಿಕೆ (ನಾ). ೧. ನಡತೆ ; ನಡೆನುಡಿ ; ಆಚಾರ, ವ್ಯವಹಾರ ; ವರ್ತನೆ: ಆದರೆ ಕೃತಿಯು ಏನಾದರೂ ನುಡಿವಳಿಕೆ; ಚಾರಿತ್ರ್ಯವು ನಡೆವಳಿಕೆ. ನುಡಿವಳಿಕೆಯು ಅತ್ಯುಚ್ಚವಾಗಿ ನಡೆವಳಿಕೆಯು ಅದರ ಕನ್ನಡಿಯಂತಿದ್ದರೆ, ಆ ಮನುಷ್ಯನು ಸಾಧುವೆಂದೆನಿಸಿಕೊಳ್ಳುವನು (ಸಾಹಿಸಂ. ೨) ; ಅಂದೆ ನೆಲವು ಪಡೆದೀತು ಅವರಜೀವಂತಶಾಂತಿಯನ್ನು ಎಂದು ನಾಡ ನಡೆವಳಿಕೆಯಲ್ಲಿ ನೆಲೆಗೊಂಬುದೊಂದೆ ನಿಜವು (ಅರಳು.೧೬೩-೨) ; ನಡೆವಳಿಕೆಗಳು ಮತ್ತೂ ಉತ್ತಮಗೊಂಡು (ಮುನಿಮಾ. ೬೯). ೨. ರೂಢಿ ; ಪದ್ಧತಿ ; ಸಂಪ್ರದಾಯ : ನಮ್ಮ ಸೀಮೆಯಲ್ಲಿ ನಡೆವಳಿಕೆಗೆ ಬಂದಿರುವ ಅಳತೆಯು ಯಾವುದನ್ನು ಅನುಸರಿಸಿರುವುದು (ಭೂಮಿಅ. ೦). ೩. (ಸಂಘ, ಸಂಸ್ಥೆ, ಸಭೆ ಮೊದಲಾದುವುಗಳ ಅಧಿವೇಶನಗಳಲ್ಲಿ ನಡೆದ) ಕಾರ್ಯಕಲಾಪ,-ಕಾರ್ಯಕ್ರಮ ಮತ್ತು ಅದರ ವರದಿ : ರಾಯಲ್ ಸೊಸೈಟಿಯ ನಡೆವಳಿಕೆಗಳು (Proceedings of Royal Society. ಇಂಕಿನಿ). **ನಡವಳಿಕೆ** : ೧. ಅಂದಿನ ತನ್ನ ನಡವಳಿಕೆಯಲ್ಲೇನೋ ಕಳಂಕವಿದೆಯೆಂದು ಮನಸ್ಸು ಹೇಳುತ್ತಿತ್ತು (ಮುಕುಳು. ೩೭) ; ಆದರೆ ನಿಮ್ಮ ನಡವಳಿಕೆಗಳು ಅರ್ಥವಾಗದೆ ಹೋದರೆ ಅವು ತಪ್ಪುಮಾಡುತ್ತವೆ (ಕಾಲಮ. ೧೫೨) ; ಅರ್ಥವಾಗದ ನಡವಳಿಕೆಯು ಕೆಕ್ಕ (ವಾತ್ಸಲ್ಯ. ೯೮) ; ವಿದ್ಯಾರ್ಥಿಗಳು ತಮ್ಮ ನಡವಳಿಕೆಯನ್ನು ಉತ್ತಮಪಡಿಸಿಕೊಳ್ಳಬೇಕೆಂಬ ಹುರುಪಿನಲ್ಲಿರುವಾಗ ಅವರನ್ನು ತಿದ್ದುವುದೂ ಶಿಕ್ಷಕನ ಕರ್ತವ್ಯ (ಕ್ರಿಯಾಶಿ. ೨೮). ೩. ನಡವಳಿಕೆಗಳು (Proceedings. ಪತ್ರಿನಿ. ೬೪). **ನಡಾವಳಿಕೆ** : ೨. ವ್ಯವಸಾಯದಲ್ಲಿ ಹಿಂದಿನ ನಡಾವಳಿಕೆ ಹೋಗಿಲ್ಲ (ಕೃಷಿ).

[ ನಡೆವಳಿ₁ + – ಕೆ./ತಮಿ.ನಟವಟಿಕ್ಕೈ ; ತೆಲು. ನಡವಡಿಕ ]

**ನಡೆವಳಿಗ** (ನಾ). (ಅರಮನೆ, ದೇವಸ್ಥಾನ ಮೊದಲಾದುವುಗಳ) ವ್ಯವಹಾರಗಳನ್ನು ನೋಡಿಕೊಳ್ಳುವವನು,-ಮೇಲ್ವಿಚಾರಣೆ ನಡೆಸುವವನು ; ಪಾರುಪತ್ಯಗಾರ : ಪಡೆವಳ್ಳರ ಪರದೇಶಾಧೀಶರ ನಡೆವಳಿಗರ ನಲ್ಮೆಯ ಸಚಿವರ . . . ಪೊಸಪೂವಲಿಗುಡುವ ಮಡದಿಯರ ವೊತ್ತಂ ಕಣ್ಗೊಪ್ಪಿದುದಾವುದಯದೊಳು (ಜಯಶಾ. ೧೨-೧೩). [ ನಡೆವಳಿ₁ + – ಗ₂ ]

**ನಡೆವಳಿದಪ್ಪು** (ನಾ). ನಡೆವಳಿಕೆಯ ತಪ್ಪು ; ನಡತೆ, ಆಚಾರ, ವ್ಯವಹಾರಗಳಲ್ಲಿಯ ದೋಷ : ನಡೆವಳಿದಪ್ಪು ಪ್ರಾಪಂಚಿಕರಿಗಿಲ್ಲದೆ ಜ್ಞಾನಮಯಗಿರದು (ಗಗಶಾ. ೦೬-೯೬). [ ನಡೆವಳಿ₁ + ತಪ್ಪು₁₂ ].

**ನಡೆವೆಣ** (ನಾ). ನಡೆಯುವ ಹೆಣದಂಥವನು ; ಸತ್ತಂತೆ ಇರುವವನು ; ನಿರ್ವೀರ್ಯ ; ಜೀವಚ್ಛವ : ನಡೆವೆಣನ ನುಡಿವೆಣನ ಸಂಸಾರವೇನವನ (ಬಸವ. ೦೫೭) ; ಸಂಸಾರವೆಂಬ ಮಹಾವ್ಯಾಧಿ ಬಾಧಿಸಿ ನಡೆವೆಣನ ಮಾಡಿ ಕಾಡುತ್ತಿದೆ ನೋಡಯ್ಯಾ (ವಚಕ. ೪೩-೦೬೧) ; ಕೇಳು ನಡೆವೆಣನೇ ದ್ರುಪದ್ರುನು ಸಾಲದೆನಿಸಿದ ದಕ್ಷಿಣೆಯ ಯಜ್ಞಾಳಿ ನಿಷ್ಫಲವೆಂದು ನುಡಿದನು ರಾಯ ಕೌಂತೇಯ (ಕುವ್ಯಾಅ. ೨೩-೯೩) ; ತೊಡೆಯನೇಜಲು ಬಂದ ಮಗನನು ಮಡದಿ ಪಾತಕಿ ಬೈದು ಭಂಗಿಸಿ ಜಡಿದು ನೂಕಲು ನೋಡುತ್ತಿದ್ದನು ಕಾಣದವನಂತೆ ನಡೆವೆಣನಪ್ಪನ್ನೇನ ಕೇಳುವೆ (ನಿಭಾಗ. ೪-೭-೨೦) ; ಸತ್ತ್ವದೆಯಾಡುವ ನಡೆವೆಣನೊಲು ಕೈಹೊತ್ತುಕೊಂಡಿದೆ ತೆರಳಿದನು (ಮೋಹತ. ೯-೨೦) ; ಗುಣ ಜಪ್ಪನ ಕುಲ ರೂಪುಗುಂದಿದ ನಡೆವೆಣಕೀಯಲಾಗದು ಪೆಣ್ಣ (ಹರಿಲ. ೩-೦೭). 'ನುಡಿವೆಣ' ವಿರು. [ ನಡೆ₁ + ಪೆಣ ]

**ನಡೆವೆಱು** (ಕ್ರಿ). ನಡಗೆಯನ್ನು ಹೊಂದಂ ; ಚಲನೆಯನ್ನು ಪಡೆ : ಪ್ರಾಯಂ ಕೂಸಾದೊಡೇನೀ ಸಾಯಕಂ ಕೂಸಕ್ಕುಮೆ ! ಜಗದೆ ನೀಮೆ ಬಲ್ಲಾಳ್ಗಳ್ ! ಅಂ ನಡೆವೆತ್ತು ಸೀರ್ಪುಬಾಗೆವೆ ! (ರಾಜಶೇಕ್ಕ. ೦೫೪-೨೦).

[ ನಡೆ₁ + ಪೆಱು₁ ]

**ನಡೆಸರ** 'ನಡೆಸಾರ' ನೋ.

**ನಡೆಸಾರ**, ನಡೆಸರ (ನಾ). ೧. (ನದಿ, ಕಂದಕ ಮೊದಲಾದುವನ್ನು ದಾಟಲು ಕಟ್ಟುವ) ಕೃತಕವಾದ ಮರ, ಬೊಂಬು ಮುಂತಾದುವುಗಳಿಂದ ಕಟ್ಟುವ ಸೇತುವೆ: ಕೋಟೆಯನ್ನು ಹತ್ತುವುದಕ್ಕೆ ಈ 'ಸಾರ'ಗಳನ್ನು ಕಟ್ಟುತ್ತಿದ್ದರು . . . ಸಾರ ಕಟ್ಟುವುದನ್ನು ಅನೇಕರು ನೋಡಿರಬಹುದು. 'ನಡೆಸಾರ' ಎಂಬುವು ಅಗಳನ್ನು ದಾಟಿಹೋಗುವುದಕ್ಕಾಗಿ ಉಪಯೋಗವಾಗು

ತ್ರಿದ್ದವು (ಕರ್ಣಾಜ. ೩೮). ೨. ಕೋಟೆ ಮೊದಲಾದುವನ್ನು ಏರಲು ತಯಾರಿಸಿದ ಒಂದು ಸಾಧನ : ದುರ್ಗಕ್ಕೆ ನಿಚ್ಚಣಿ ಸಾಚುರ್ಗಂದೊಳೆ ವೀರಸೇತು ನಡೆಸಾರಂ ಬದ್ಧರಂ . . . ಪಡಿಗೋಂಟೆಯೆಂಬ ಬಹುಕೋಟಾ ಯಂತ್ರಸಾಮಗ್ರಿ ತಿಂತಿಣಿಗೊಂಡಾಂತಿರೆ (ಅಜಿತಪು. ೧೧-೮೩); ನಡೆಸಾರಂ ನೆಲವಾಳಿಗೆ ಪೆಡೆಕೆಡುವ ಡೆಗ್ಗೆ ಬದ್ದಿರುಂಗಳಿನಾರ್ದಂದೆಡೆಗುಡದಧಟಿಂ ಕೋಂಟೆಯನಡದರ್ದ ರಿಪುಭಟರನಿಕ್ಕಿದು ಕಲಿಕಾಮಂ (ತ್ರಿಪುವಿ. ೫-೧೧). ನಡೆಸರ : ೨. ಭೈರವ ಬದ್ಧರದ ನಡೆಸ [ಪಾಠಾಂ. ವ]ರದ ಡುಬ್ಬುಕ ಡಂಕಣಿ ಗಳನು ತೂಱಿದರು ನಭಕೆ (ಕೊರಕರಾ. ೬-೧೦-೦೯). 'ನಡೆಸೇತು', 'ಸಾರಮಾರಿ' ಪರ್ಯಾ. [ ನಡೆ$_1$ + ಸಾರ$_1$ ]

ನಡೆಸು 'ನಡೆಯಿಸು' ನೋ.

ನಡೆಸೇತು (ನಾ). ನಡೆಯುವ ಸೇತುವೆ; ಚಲಿಸುವ ಸೇತುವೆ : ಕೇತನಾವಳಿಯತ್ತ ವಾದ್ಯ ಘೂರ್ಣಿಸೆ ನಡೆಸೇತುಗಳಂತಾನೆ ನಡೆಯೆ ಭೂತಳ ತುಂಬಿ ಪ್ರಾಯ್ದುಳ ಬರೆ ಬಂದು ಏನೀಕಪುರದೊಳಾಗ ಹೊಕ್ಕ (ಭರತ. ೫೮-೩೭). 'ನಡೆಸಾರ' ಪರ್ಯಾ. [ ನಡೆ$_1$ + ಸೇತು ]

ನಡೆಸೊಡರು (ನಾ). (ಯಾರಾದರೂ ಓಡಾಡುವಾಗ ಕೈಯಲ್ಲಿ ಹಿಡಿದು ಮುಂದೆ ದಾರಿ ತೋರಿಸಲು ಉಪಯೋಗಿಸುವ) ದೀವಟಿಗೆ : ನಿನ್ನಂಗಣದಲ್ಲಿ ಬೊಗಳುವ ಶ್ವಾನನಯ್ಯಾ ನಿನ್ನ ಮನೆಯ ನಡೆಸೊಡರಯ್ಯಾ (ವಚಸಂ. ೦೯೬-೪೮). [ ನಡೆ$_1$ + ಸೊಡರು (<ಸೊಡರ್) ]

ನಡೆಹ, ನಡಹ (ನಾ). ೧. ನಡೆಯುವಿಕೆ ; ಚಲಿಸುವಿಕೆ : "ಗತಿಃ, ವಿಂಖಃ, ವಿಹಾರಃ, ಪರಿಸರ್ಪಃ, ಪರಿಕ್ರಮಃ–ಈ ೫ ನಡೆಹ" (ಹಲಾಯು. ೦೨೦-೪೧). ನಡಹ : ೨. ನಡೆದುಕೊಳ್ಳುವಿಕೆ ; ವ್ಯವಹರಿಸುವಿಕೆ : ಸ್ವತಂತ್ರ ವೃತ್ತಾಂತಂ ವಿವೃತ್ತಿಯನಲೋಲದಂತೆ ನಡಹಮುಕ್ಕುಂ (ಮುಂಗರಾ. ೦೩೩-೩೦).

[ ನಡೆ$_1$ + – ಹ$_2$ ]

ನಡ್ಡಿಮೂಗು (ನಾ). ಚಪ್ಪಟೆಯಾದ ಮೂಗು; ತಗ್ಗಿದ ನಾಸಿಕ : "ಅವಟೀಟಃ, ಅವನಾಟಃ, ಅವಭ್ರಟಃ, ನತನಾಸಿಕಃ –೪ ಚಳಿಮೂಗಿನ ವನ ಹೆಸರುಗಳು, ಚಿಕ್ಕಮೂಗುಳ್ಳವನು, ನಡ್ಡಿಮೂಗುಳ್ಳವನು" (ಸಿದ್ಧಾಂತಿ. ೦೫೭). [ ←ತೆಲು. ನಡ್ಡಿಮುಕ್ಕು ]

ನಡ್ಡೆ (ನಾ). ಜೊಂಡು ಹುಲ್ಲಿನ ರಾಶಿ : "ನಡ್ವಾ, ನಡಸಂಹತಿಃ – ಹೊಲ ಗದ್ದೆಗಳ ಬಗುವುಗಳಲ್ಲಿಯೂ, ತೋಟದ ಸಾರಿಗೇ ಬದುವುಗಳಲ್ಲಿಯೂ ಗುಂಪಾಗಿ ಬೆಳೆದಿರುವ ಹುಲ್ಲುಗಳ ಸಮೂಹ" (ಸಿದ್ಧಾಂತಿ. ೦೩೩).

[ ಸಂ. ನಡ್ವಾ ]

ನಡ್ವಲ, ನಡ್ವಳ (ನಾ). ಜೊಂಡುಹುಲ್ಲು ಹೆಚ್ಚಾಗಿ ಬೆಳೆದ ಭೂಮಿ : "ನಡ್ವಾನ್, ನಡ್ವಲಃ, ನಡಪ್ರಾಯಃ,–ಪತ್ರಹುಲ್ಲು ಬಹಳವಾಗಿರುವ ದೇಶದ ಹೆಸರು, ಹುಲ್ಲುನೆಲದ ಪ್ರಾಂತ್ಯವು" (ಸಿದ್ಧಾಂತಿ. ೮೯). ನಡ್ವಳ : "ನಡ್ವಳಂ, ನಳಸಂಯುತಂ–ಈ ೨ ನಾ(ಣ)ನಲುಳ್ಳ ಭೂಮಿ" (ಹಲಾಯು. ೨೬-೪); "ನಡ್ವಳಂ ನಳಯುತಂ ನಳ್ಳುವೆಲನಕ್ಕು" (ಮುಂಗರಾ. ೨೮-೨). [ ಸಂ. ]

ನಡ್ವಳ 'ನಡ್ವಲ' ನೋ.

ನಣ್ಕೆ (ನಾ). ನಂಟತನ ; ಬಾಂಧವ್ಯ : ಸಂಸಾರದಪಾಯಮುಮಂ ನಿನ್ನಱಿವಿನ ಬಲ್ಮೆಯುಮಂ ಧೈರ್ಯದೊಳಾದ ನಣ್ಕೆಯುಮಂ ಕಂಡಂ (ಜೀವಸಂ. ೨೩-೪೭ವ). [<ನಣ್ಪು ? ]

ನಣ್ಪು (ನಾ). ೧. ನಂಟು ; ಬಾಂಧವ್ಯ ; ಸಂಬಂಧ : "ನಣ್ಪು ನಂಟು" (ಕರ್ಣಾನಿ. ೨೩) ; ಕುಲಜನುಮಲ್ಲಂ ನಣ್ಪಿನ ಬಲಮುಂ ತನಗಿಲ್ಲ ಕಣ್ಗೆ ಮೋಹಿದನಾರೊಳ್ ನೆಲಸಿರನಲ್ಲಿಯುಮ[ವಹ]ಂ ಚಲವೆಂದು ಪತ್ತುವಿಡದದೊಂದಾಂಟು ಗುಣಂ (ಕವಿರಾ. ೩-೬೬) : ಬೆಳ್ಗಟ್ಟಿಯ ನರಸರ್ಕಳೇಱುವುದಂ ಕಂಡುದಱಿಂದುತ್ತಮಕುಲದವರ್ಗಳ್ಗೆ ಕುಲಜರಲ್ಲದವರೊಡನೆ ಮದುವೆಯೊಳ್ ಕೊಟ್ಟ ಣಣ್ಪುಗಳಕ್ಕುಂ (ವಡ್ಡಾರಾ. ೮೭-೦೩); ಸುಯೋಧನನೆನಗೊಳ್ಳಿಕೆಯ್ದ ಕೃತಮಂ ಪೆಱಗಿಕ್ಕಿ ನೆಗಟ್ತೆ ಪಱಸೆ ಪಣ್ಪಿನ ನೆವದಿಂದೆ ಪಾಂಡವರನಾನೊಳವೊಕ್ಕೊಡೆ ನೀಮೆ ಪೇಸಿರೇ (ಪಂಪಭಾ. ೯-೬೮) : ರಾಗದಿಂದಿವ್ವಿರ್ಗೆ ಮದುವೆಯುಂ ಮಾಟ್ಟುದೆಂದಟ್ಟಿದಂ ನಿಮ್ಮನುಜನ್ಮಂ ನಿಮ್ಮ ನಣ್ಪಂ ಬಯಸಿ ಪದೆಪಿನಿಂದಮ್ಮ ವಿದ್ಯಾಧರೇಂದ್ರಂ (ಪಂಪರಾಮಾ. ೧೦-೧೦೪) ; ಎನ್ನವರೆಂದು ಪುತ್ರಪಿತೃಮಿತ್ರ ಕಳತ್ರದ ನಣ್ಪು ನಾಡೆ ಸೋವಂ ನಿನಗುಂಟುಮಾಡೆ (ಜೀವಸಂ. ೬೮-೦೨) ; ಪೆಂಪಿನ ಸೊಂಪಿನ ನಣ್ಪನಾಳ್ದು ಪೊಂಗೊಡನನವಾರ್ಚಿದಂತೆಸೆವುವಾ ಲಲಿತಾಂಗಿಯ ಪೀವರಸ್ತನಂ (ಕಾವ್ಯಸಾ. ೩೦೫); ನಿನ್ನಯ ಮಱುಕಕೆ ಒಡಮುಱುಗಿದೆನಾನ್ ಎಮ್ಮಯ ನಣ್ಪಂದಾನ್ ಸೆಳೆಗೊಂಡೆನ್ (ಬದ್ಧಪ್ರ. ೦೭-೩೪೦). ೨. ಸ್ನೇಹ; ಕೆಳೆ : ನೋಡು ನಣ್ಪಿಂ ನಿಮಗಮೆಮಗವಾಮ್ನಾಯದಿಂ ಬಂದುದಿಂತೀ ಜಿನಧರ್ಮಂ (ಆದಿಪು. ೨-೨೦); ಪಗೆಗೆ ಕಣಿಯೊಂದುಂಟೇ ನಣ್ಪಿಂಗಮಾಗರ ಮುಂಟೆ ನೀಂ ಬಗೆಯ ಪಗೆಯುಂ ನಣ್ಪಂ ಕೆಯ್ಕೊಂಡ ಕಿಚ್ಚು ದಿನಲ್ತೆ ಪುಟ್ಟುಗುಮರಸುಗಳ್ಗೆ (ಪಂಪಭಾ. ೧೩-೧೦); ಓರ್ಮೆ ಬಂದೆನಗೆ ಮಾಟ್ಟುದು ಪೆರ್ಮೆಯ ನಿಮ್ಮ ನಣ್ಪಿನಿಂ ಜವಿಯಿಸಿದೀ ಕದರ್ಥನೆಗೆ ಸೈರಿಪುದು (ಕಾದಂಬ. ೧೯೩); ಪಲಕಾಲದ ರಾಕ್ಷಸವಾನರವಂಶದ ನಣ್ಪನ್ನಿಂದಮಾಟಿದು ದೆಂಬುದು ಲೋಕಂ (ಪಂಪರಾಮಾ. ೦೦-೦೬೨); ಮಕೆಳ್ವರ್ಗಂ ನೀನೀಗಳಾಕೆಯ ನಣ್ಪನೇಕೆ ಮಾಣ್ದೆಯೆಂದಾ ಕೆಳೆಯಂಗಿಂತೆಂದಂ (ಲೀಲಾವ. ೨-೦೦೦ವ). ೩. ನಂಬಿಕೆ ; ವಿಶ್ವಾಸ : ಅಗಳಾ ಭೂಪವೇಂದ್ರನ ಮದಗಜಮಂ ಸದೆವಂತೆ ಮದಗಜಮಂ ಮಾಟಿವೇವನಾರ್ಗಂ ಸದೆಯ ಭಕ್ತಿವ್ರಜಂ ಕಂಡು ನಣ್ಪನೊಳಕೊಂಡು ಕೊಂಡಾಡುತ್ತಮಿರೆ (ವೃಷವಿ. ೦೨-೩೮ವ). ೪. ಪ್ರೀತಿ; ಅನುರಾಗ: "ನಣ್ಪನಲ್ಲಿಯುಂ ಪ್ರಸರವೆಂಬುದು" (ಹಲಾಯು. ೦೩೫-೨೪) : ಪಾಂಡುರ ಕೀರ್ತಿಯ ನೆಗಟ್ಗಂ ಪಾಂಡುತನೂಭವರ ನಣ್ಪಂ ನೆಗಟ್ಗಮೆ ಬಟಿಯಂ (ಜಗವಿ. ೦೫-೩೩) ; ಪಡೆಮುದೆ ಬರ್ಲಮೇ ಸುತನ ವಕ್ತ್ರಮನೀಕ್ಷಿಪ ಲಲ್ಲೆಗ್ರವ ನಣ್ಪಿಡಿದನುರಾಗದಿಂ ನಗಿಸುವಳ್ಕಱಿಕೊಳಪ್ಪುವ . . . ಅಡಿಗಡಿಗಂ ತೊದಳ್ನುಡಿಯನಾಲಿಪ ಸೈಪು ಸರೋರುಹೇಕ್ಷಣೇ (ವೃಷವಿ. ೨-೩೩) ; ತಾರೇಶಂ ನಣ್ಪಂ ಮು[ಮ]ತ್ತಾ ರೋಹಿಣಿಯಲ್ಲಿ ಕೂರ್ಪನವಳೇ ಧನ್ಯಳ್ (ಶಬರ. ೫೨-೦೨೧).

[ ನಂಟು$_1$ + – ಪು$_1$/ತಮಿ. ನಣ್ಪು; ತೆಲು. ನನ್ಪು, ನನುವು, ನನುವು ]

ನಣ್ಪುಗೆ? (ಕ್ರಿ). (?) : ಅನ್ನೆಗಂ ಮುಂಬಯ್ಯಿರ್ವರುಂ ಬಂದದು ಕಾಣದೆ ಮಾಣದೆ ತಮ್ಮೊಳೋರೊರ್ವರು ನಣ್ಪುಗೆ ಕಪ್ಪರಿಗಟ್ಟಾ ಇಱಿಯಱಿದು ತಮ್ಮೊಳ್ವರುಮಱಿಯಮೆಯಿಂ ಬಿಟ್ಟಿರಲ್ಕೆ (ಶಾಂತಿಪು. ೨-೭೦ವ). [ ? ಇದು 'ನಣ್ಪುಗಟ್ಟು' ಎಂಬುದರ ಸ್ಖಲಿತ ರೂಪವಿರ ಬಹುದು ]

ನಣ್ಪುಗೆಯ್ (ಕ್ರಿ). ಸಂಬಂಧವನ್ನುಂಟುಮಾಡು, –ಅಳವಡಿಸು : ಕಳೆಯಂ ಪತ್ತಿಸಿ ರಾಗಮಂ ನಿಲಿಸಿ ನುಣ್ಪಂ ನಣ್ಪುಗೆಯ್ದಂಪನಿರ್ಕೆಳೆ ಗೊಂಡೊಟ್ಟಿದೆಯಂ ನಿಮಿರ್ಚಿ ... . ಗೋವಳರಾಯಂ ಕೊಟಲೂದಿದಂ ನೆಗಟ್ಟನಂ ಮಾಧುರ್ಯಶೌರ್ಯಸ್ಸನಂ (ಜಗವಿ. ೫-೨).

[ ನಣ್ಪು + ಕೆಯ್$_1$ ]

ನಣ್ಪುನೆತ್ತರ್ (ನಾ). ನಂಟಿನ ರಕ್ತ ; ಸಂಬಂಧಿಗಳ ನೆತ್ತರುಂ : ನನೆಯಮ್ಮ ದುರ್ವಿಧಿಯ ಅಣ್ಣಂದಿರಿರ್ವರನ್ ಸಮಸಾವು ಸತ್ತರ್ ನಣ್ಪುನೆತ್ತರನಸಱು, ಓರೊರ್ವರಾ ಕಯ್ಯನೊರ್ಪಗಲ್ ಕೊಲೆಯಿನ್ (ಅಂತಿಗೊ. ೩-೪೭).

[ ನಣ್ಪು + ನೆತ್ತರ್ ]

ನಣ್ಪುವೆಱು (ಕ್ರಿ). ವಿಶ್ವಾಸವನ್ನು ಹೊಂದಂ ; ನಂಬಿಕೆಯನ್ನು ಪಡೆ : ಕುಸುಮ ವಿಲೇಪನಾದಿ ಬಹುವಸ್ತುಗಳಂ ವಿಗೆ ಕೊಟ್ಟು ನಣ್ಪುವೆತ್ತಸೆವನ ನೊರ್ವನಂ ಚರನನೊಲ್ದನುಯಾಯಿಯುನಿತ್ತು . . . ಕಳುಪಿದಂ (ವೃಷವಿ. ೯-೫). [ ನಣ್ಪು + ಪೆಱು$_1$ ]

**ನತ** (ಗು.) ೧. ಬಾಗಿದ ; ಬಗ್ಗಿದ ; ವಕ್ರವಾದ. 'ನತಚಂಚು' ಪರಾ. ೨. ಎರಗಿದ ; ನಮಸ್ಕರಿಸಿದ ; ಮಣಿದ : ಅತಿವಿಶದಯಶೋವೃತ್ತಂ ನತಸಕಳಾರಾತಿಜನವಿತಾನಂ ಮತ್ತಂ ವಿತತಶ್ರೀಸಂಪತ್ತಂ ಶತಮಖ ಸದೃಶಾನುಭಾವನೊಲವಿಂ ಪೆತ್ತಂ (ಕವಿರಾ. ೨-೪೪) ; ನತನಾನಾಮರಮೌಳಿ ರತ್ನಕಿರಣಂ ನಾನಾಪ್ಸರಃಕೇಕರದ್ಯುತಿ ನಾನಾಚಮರೀಜವಾಯು ಸಭೆಯಂ ತಳ್ಪೊಯ್ಯಲಿರ್ದಂ ಜಗತ್ಪತಿಯೊಡ್ಡೋಲಗದೊಳ್ (ಜಗವಿ. ೧-೨೬) ; ನತನಾನಾವನಿಪಾಲಮೌಳಿಮಣಿಮಾಲಾಸಂಘಸಂಘಟ್ಟನೋದ್ಧತರೇಣುವ್ರಜ ವರ್ಣಪೂರರಚಿತಂ ರಾಜಾಲಯಪ್ರಾಂಗಣಕ್ಷಿತಿಯಾಗುತ್ತಿರೆ ನಿಚ್ಚ ವಿಂತರಸುಗೆಯ್ಯುತ್ತಿರ್ಪಂ . . . ತತ್ಖೇಚರಾಧೀಶ್ವರಂ (ಶಾಂತೀಶ್ವ. ೭-೫) ; ನತ ಸಂತತಿಚಿಂತಾಮಣಿ ಭುವನಸ್ತುತಲಿಂಗಂ ತಾನಿದೆಂದು ಪೊಗಳ್ದಂ ಭೂಪಂ (ರಾಜಶೇ. ೧೩-೫೧). ೩. ಕುಗ್ಗಿದ ; ತಗ್ಗಿದ. 'ನತನಾಸಿಕ' ಪರಾ. ೪. ಶರಣಾದ. 'ನತಜನ' ಪರಾ. (ನಾ). ೫. ಬಾಗಿದುದು ; ವಕ್ರವಾದುದು : "ವಕ್ರಂ, ವೃಜಿನಂ, ಭಂಗುರಂ, ಅವಿದ್ಧಂ, ವೇಲ್ಲಿತಂ, ನತಂ, ಜಿಹ್ಮಂ . . . ಊರ್ಮಿಮತ್–ಈ ೧೨ ಕೊಂಕಿದುದು" (ಹಲಾಯು. ೦೦೬-೦೧) ; "ನತಂ, ನಮ್ರಂ, ಬಂಧುರಂ–ಈ ೩ ಎರಗಿರ್ದುದು" (ಹಲಾಯು. ೦೨೫-೭೫) ; "ನಮ್ರಮೆನೆ ನತಮೆನಲ್ಕೆರಗುವುದು" (ಮಂಗರಾ. ೦೩೪-೬೨). ೬. ನಮಸ್ಕರಿಸಿದವನು ; ನಮಸ್ಕಾರ ಮಾಡಿದವನು : ನತನಾಗಿ ಕೃಷ್ಣನಿರೆ ಕುರುಪತಿಯೆಂದು (ನೇಮಿಪು. ೦೧-೨೩) ; ನತನಾದನಲ್ತೆ ಕಾಣಾತ್ತತಿರಾಗದೆ ಚಂದ್ರಭೂತಿ ಕಂದರ್ಪಮಹೀಪತಿಗೆ (ಕುಸುಮಾ. ೮-೩) : ಬೇಡಿದುದಿತ್ತು ಸಲಹುವೆನಂಜಲೇವುದೆನೆ ಕೃತಕೃತ್ಯನಾಗುತಂ ನಂಬಿಯಣ್ಣಂ ನಿಂದು ನತನಾಗಿ ಶಂಭುವಂ ಹಾಡತೊಡಗಿದನಂದು (ಸಂಬಿರ. ೭-೧೪೬) : ಮಂದರಗಿರಿ ಧೈರ್ಯನೆಂದೆನಿಪ ವೃಭೇಂದುಮುನಿಪಗೆ ನತನಹೆನೂ (ಧನ್ಯಕ. ೮) : ಹೆರುಷದಿಂ ಮುಳುಗೆ ಗರ್ಭಂ ಜಾಱ್ ಪುದುಪತ್ನ ತ್ವರಿತದಿಂದ ವರನಾವರಿಸೆ ಸುರಜಾಲತ್ರ್ಯಂಬಕ ನತರಾದರು (ಬಕೋಕು. ೧೩-೫೭). ೭. ಒಂದು ಗ್ರಹಕ್ಕೂ ಮತ್ತು ಖಗೋಳ ಮಧ್ಯರೇಖೆಗೂ ಇರುವ ಅಂತರ. 'ನತಕೋನ' ಪರಾ. [ ಸಂ. ]

**ನತಕೋನ** (ನಾ). "(ನಕ್ಷತ್ರ ಮೊ.ಗಳ) ಕ್ಷಿತಿಜದ ಕೆಳಗಿನ ಕೋನದೂರ : ನತಿ ; ಅವನತಿ . . . ನತಕೋನ" (Depression. ೩೦೪೩).
[ ನತ + ಕೋನ ( <ಕೋಣ್ ) ]

**ನತಚಂಚು** (ನಾ). ೧. ಬಾಗಿದ ಕೊಕ್ಕು. ೨. ಬಾಗಿದ ಕೊಕ್ಕನ್ನುಳ್ಳುದು: ಕುಡಿದಳಿರನುಗುರ ಮೊನೆಯೊಳ್ ಒಡಿದುದು ನತಚಂಚು ನೀಡಿ ಗಳಕಂದಳಮಂ ಮಡಗೆದಱ್ ನವಾಮ್ರದ ಪೂಮಿಡಿಯುಂ ಕರ್ದುಕಿದುದು ಪರಭೃತಂ ಪರಭೃತದಿಂ (ಮಲ್ಲಿಪು. ೫-೩೮). [ ನತ + ಚಂಚು ]

**ನತಜನ** (ನಾ). ೧. ನಮಸ್ಕರಿಸಿದ ಜನ : ನತಜನಕಭಿಮತವೀವಪ್ರಕಿವನೆನಿಪ್ಪ ಭವಸುತನೆ ಚಿತ್ತೈಸು (ತ್ರಿಪುವಿ. ೩೨-೪೭) : ನತಜನವರದಂ ಶ್ರುತಿನುತಶುಭಗಂ . . . ರತಿಪತಿಹರಣಂ ಜಿತಭವಮರಣಂ ಕ್ಷಿತಿವರನಿದಿರೊಳಿನಿಂದಂ (ಹಮ್ಮಿರ. ೨-೦೦). ೨. ಶರಣಾದವನು : ನತಜನಾಶ್ರಯಧೇನು ಭಕ್ತವತ್ಸಲ ಕೃಪಾಕರ ಮಹಾಭಯನಿವಾರಣ ನೃಸಿಂಹ ತ್ರಾಹಿಯೆನುತಿರ್ದನಾ ಸುಧನ್ವಂ ಮಱಿಯದೆ (ಕೃಪಿಥಾ. ೦೧-೩೭). [ ನತ + ಜನ ]

**ನತದೃಷ್ಟ** (ನಾ). ಅದೃಷ್ಟಹೀನ ವ್ಯಕ್ತಿ; ದುರ್ದೈವಿ; ದುರದೃಷ್ಟಶಾಲಿ: ಒಟ್ಟನಲ್ಲಿ ನಾವು ಮೂವರು ಅವರ ಕುಟುಂಬದಲ್ಲಿಯ ಮೂರು ನತದೃಷ್ಟ ವ್ಯಕ್ತಿಗಳೆಂದು ಪರಿಗಣಿಸಲ್ಪಟ್ಟೆವು (ಸ್ಮೃತಿಜಿ. ೩೩); ನನ್ನಂತಹ ನತದೃಷ್ಟಳನ್ನು ಬಿಟ್ಟು ಅವರು ಬೇರೆ ಯಾರನ್ನಾದರೂ ಪ್ರೀತಿಸಿದ್ದರೆ ಎಷ್ಟು ಸುಖವಾಗಿರುತ್ತಿದ್ದರು ! (ದೂರಸ. ೨೪೦) ; ನೀನು ಎಂದೂ ನತದೃಷ್ಟರ ಕೈಹಿಡಿಯುವುದಿಲ್ಲ (ವಕಭಾ. ೭೭) ; ನಾನು ನತದೃಷ್ಟ (ದೀಪದ. ೧೬೨).
[ <ಸಂ. ನತಾದೃಷ್ಟ (ನತ + ಅದೃಷ್ಟ) ]

**ನತದೃಷ್ಟೆ** (ನಾ). ಭಾಗ್ಯಹೀನಳಾದವಳು ; ದುರ್ದೈವಿ : ಆಕೆ ನತದೃಷ್ಟೆಯಾದ್ದರಿಂದಲೇ ಎಲ್ಲವನ್ನೂ ಕಳೆದುಕೊಂಡಳು (ರೂಢಿ).
[ ನತದೃಷ್ಟ + –ಎ ]

**ನತದೇಹ** (ನಾ). ಬಾಗಿರುವ ದೇಹ ; ಬಗ್ಗಿರುವ ಶರೀರ : ನತದೇಹವಂ ಸೀಳಿ ಭಿನ್ನಭಿನ್ನಂ ಮಾಡಿದೊಡೆಯಾತ್ಮರೂಪಿರ್ಪುದೇ (ವೀಕ್ರಪು. ೪-೭-೩).
[ ನತ + ದೇಹ ]

**ನತನಾಸಿಕ** (ನಾ). ತಗ್ಗಾದ ಮೂಗುಳ್ಳವನು ; ಚಪ್ಪಟೆಯಾದ ನಾಸಿಕವುಳ್ಳವನು ; ನಡ್ಡಿಮೂಗುಳ್ಳವನು : "ಅವಟೀಟಃ, ಅವನಾಟಃ, ಅವಭ್ರಟಃ, ನತನಾಸಿಕಃ–೪ ಕುಳಿಮೂಗಿನವನ ಹೆಸರುಗಳು, ಚಿಕ್ಕಮೂಗುಳ್ಳವನು, ನಡ್ಡಿಮೂಗುಳ್ಳವನು" (ಸಿದ್ಧಾಂತಿ. ೧೫೭). [ ನತ + ನಾಸಿಕ ]

**ನತಬಂಧು** (ನಾ). ಶರಣು ಬಂದವರಿಗೆ ನಂಟನಾಗಿರುವವನು : ಬಂಧುರದ ವಿದ್ಯೆಯನು ಕಲಿಸಿ ಮದಾಂಧನ ಕೊಲಿಸಿದನಲಾ ನತಬಂಧುವನು ನಾವಗಲಿದುಳಿವೆವದೆಂತು (ವಿಥಾಗ. ೧-೧೦-೫೨).
[ ನತ + ಬಂಧು ]

**ನತಭುವನತ್ರಯ** (ನಾ). ಮೂರುಲೋಕದವರಿಂದಲೂ ನಮಸ್ಕರಿಸಲ್ಪಡುವವನು,–ವಂದಿಸಲ್ಪಡುವವನು ; ತ್ರಿಲೋಕಪೂಜ್ಯ : ನತಭುವನತ್ರಯನೀಶ್ವರಸುತನವಿರಳದಾನನಧಿಕಸಿದ್ಧಿಸಿಧಾನಂ ಧೃತಪರಶುಗಣಪನಸ್ಮತ್ಕೃತಿಯಂ ಕೆಯ್ಕೊಂಡು ಮಾಳ್ಕೆ ನಿರ್ವಿಘ್ನತೆಯಂ (ಲೋಕೋಪ. ಪೀಠಿಕೆ ೨). [ ನತ + ಭುವನತ್ರಯ ]

**ನತಮುಖಿ** (ನಾ). ಮುಖವನ್ನು ಬಾಗಿಸಿದವಳು ; ತಲೆಯನ್ನು ತಗ್ಗಿಸಿದವಳು : ನನ್ನ ದೃಷ್ಟಿ ಮತ್ತು ಅವಳ ದೃಷ್ಟಿಗಳು ಒಂದು ಕ್ಷಣ ಕಾಳಗವಾಡಿದವು. ಅವಳು ಪುನಃ ನತಮುಖಿಯಾದಳು (ಹೇಮಂತ. ೧೯೪).
[ ಸಂ. ನತಮುಖೀ (ನತ+ಮುಖ+–) ]

**ನತರಕ್ಷಾಚತುರ** (ನಾ). ನಮಸ್ಕರಿಸಿದವರನ್ನು ಕಾಪಾಡುವುದರಲ್ಲಿ ಜಾಣನಾದವನು ; ಶರಣು ಬಂದವರನ್ನು ರಕ್ಷಿಸುವುದರಲ್ಲಿ ಕುಶಲನಾದವನು : ಶ್ರೀಚಂಡಿಕಾಮುಖೇಂದುವಿಲೋಚನರುಚಿಚಂದ್ರಿಕಾ ಚಕೋರಂ ನತರಕ್ಷಾಚತುರಂ ಭವಪಾಶವಿಮೋಚಕನೆಮಗೀಗೆ ಸೌಖ್ಯಮಂ ಶಿವಲಿಂಗಂ (ರಾಜಶೇ. ೦೧-೦). [ ಸಂ. ]

**ನತವಾಣಿ** (ನಾ). ಸರಸ್ವತಿಯಿಂದ ನಮಸ್ಕೃತಳಾದವಳು; ವಾಣಿಯಿಂದ ಪೂಜ್ಯಳಾದವಳು : ನತವಾಣಿ ಕನಕಾಚಲಶರ್ವಾಣಿ ಕಾಳಾಹಿವೇಣಿ (ಕನಾಕ. ೨೨೪). [ ನತ + ವಾಣಿ₁ ]

**ನತಾಸ್ಯ** (ನಾ). ಮುಖವನ್ನು ಬಾಗಿಸಿದವನು ; ತಲೆಯನ್ನು ತಗ್ಗಿಸಿದವನು : ನಯದಿಂದೆಳ್ದು ನತಾಸ್ಯನಾಗಿ . . . ದಿಟ್ಟವಾರಿಯ ಧೀರಂ ವೃಷಭೇಂದ್ರನಪ್ರತಿಮಕಾಯಂ ಮುಂದೆ ನಿಂದಿರ್ಪುದುಂ (ಗಿರಿಜ. ೧೦-೭೮).
[ ನತ + ಆಸ್ಯ ]

**ನತಿ** (ನಾ). ೧. ಬಾಗಿರುವಿಕೆ : ವಕ್ರವಾಗಿರುವಿಕೆ. ೨. ನಮಸ್ಕಾರ ; ವಂದನೆ : ಜಿನಚರಣದೊಳಿರೆ ನತಿ ಮತಿ ಜಿನಗುಣಸಂಪತ್ತಿಯೊಳ್ ಪೊದಟ್ಟಿರೆ (ಶಾಂತಿಪು. ೭-೮೦) ; ನಿರ್ಮಳಮೌಕ್ತಿಕಾಕ್ಷತೋತ್ಕರಮನುಮೇಂದ್ರವಾದದುಷ್ಪಪೂವಿಂಗೆ ಸೂಸಿದನುತ್ಸಹಂ ಪೊದಟ್ಟಿರೆ ವನಪಾಳಕಂ ನತಿಚಳಾಳಕ[ಪಾಠಾಂ. ವಿನತಜಾಲಕ]ನುದ್ಗತರೋಮಜಾಳಕಂ (ಜಗವಿ. ೧೪-೪೩) ; ನತಿ ನುತಿಪೂಜೆಗಳಂ ಸನ್ನುತಿ ಜಿನಪತಿಗಿಂತು ಭಕ್ತಿಯಿಂ ಮೊವರೊಳ್ ಗೋಪತಿ ಮಾಡಿ ನೋಡಿದಂ ದಶಶತನಯನದೆ ಸಮಾವಸೃತಿಯ ಶೋಭೋನ್ನತಿಯಂ (ವರ್ಧಪು. ೧೫-೮೭) ; ನತಿಯಂ ನುತಿಯಂ ಸತ್ಸಂಗತಿಯಂ ಸಂಸ್ತುತಿಯನತಿಶಯಾಸ್ಪದ ಪೂಜಾತತಿಯಂ ಜಿನೇಂದ್ರಪದದೊಳ್ ಮತಿವಂತಂ ಮಾಳ್ಪುದರ್ಥಿಯಿಂ ಸ್ವಾರ್ಥಪರಂ (ಉಪಾರ. ೫೧) ; ಶ್ರೀಗುರುವಿಗಾಗಿ ತನುಧಾರಿಯಾಗಿ ಬಂದಂಥ ಸದಾಶಿವಗೆ ಅನಂತಾನಂತ

ನತಿಯು ಉಪಕೃತಿಯು ಒಪ್ಪಿಸುವವು ಇವಗೆ (ಅರಳು. ೨೪೩-೨). ೩. "(ನಕ್ಷತ್ರ. ಮೊ. ಗಳ) ಕ್ಷಿತಿಜದ ಕೆಳಗಿನ ಕೋನದೂರ : ನತಿ ; ಅವನತಿ . . ನತಕೋನ" (Depression. ಇಂಕನ). [ಸಂ.]

**ನತಿಗೆಯ್**, ನತಿಗೈ (ಕ್ರಿ). ನಮಸ್ಕರಿಸು ; ಪೊಡಮಡು ; ಕೈಮುಗಿ : ಭಯಭಕ್ತಿಯಿಂದಡಿಗಳ್ಗೆ ಲೀಲೆಯಿಂ ದಂಡವನ್ನತಿಗೆಯ್ದು ಮಗುಳ್ದೆಳ್ದು ನಿಂದು ಕರಯುಗವ ಮುಗಿದು (ಕುಮಾಪು. ೨-೫೧). ನತಿಗೈ : ಪ್ರತಿಮೆಯ ರೂಪದ ಪಂಕಜನಾಭಗೆ ನತಿಗೈದು ನಲವೇಱುವಂತೆ ಪತಿಯು ರೂಪದೆ ತನ್ನ ಪಾಲಿಗೆ ಬಂದ ಶ್ರೀಪತಿಯ ಪಾದವ ಭಜಿಸುವುದು (ಹದಿಬ. ೩-೬). [ನತಿ + ಕೆಯ್$_1$]

**ನತಿಗೈ** 'ನತಿಗೆಯ್' ನೋ.

**ನತೆ** (ನಾ). ನಮಸ್ಕಾರ ಮಾಡಿದವಳು : ನತೆಯಾಗಿ ತತ್ಸಪತ್ರುತ ಯುತೆಯರ ಪಕ್ಕದೊಳೆ ಪರಮನಿಷೆ ಯನರ್ಹನ್ನತಕಥಿತಸಿಂಹ ನಿಃಕ್ರೀಡಿತಾ ದಿನೋಂಪಿಗಳನಾಂತು ನೋನುತ್ತುಮಿರ್ದಳ್ (ಮುಹಾನೇ. ೧೬-೧೩).
[ಸಂ. ನತಾ]

**ನತೋನ್ನತ** (ಗು). ಏರು ತಗ್ಗುಗಳುಳ್ಳ ; ಹಳ್ಳತಿಟ್ಟುಗಳಿಂದ ಕೂಡಿದ ಇಳಿದೇರಿ ಮರ ಪೊದೆಯ ಚೆಲ್ವಿನ ನತೋನ್ನತವನಾದ್ರಿಸೀಮೆಯನಾ ವಿಭೀಷಣಂ ಮರೆಯಾಗೆ (ಶ್ರೀರಾಮಾ. ೮೧೬-೧೮೨). 'ನಿಮ್ನೋನ್ನತ' ಪರಾ. [ನತ + ಉನ್ನತ]

**ನತ್ಕುಟಕ** (ನಾ). [ಛಂದ] ಪ್ರತಿಯೊಂದು ಚರಣದಲ್ಲಿಯೂ ಹದಿನೇಳು ಅಕ್ಷರಗಳಿರುವ ಒಂದು ಸಮವೃತ್ತದ ಹೆಸರು ; ಸುಮಂಗಲಿ : ನಜಭಜಜಂಲಗಂ ಬರೆ ಸುಮಂಗಲಿಯೆಂಬರದಂ ಇದಕ್ಕೆ ನತ್ಕುಟಕ ಎಂದು ಮತ್ತೊಂದು ಹೆಸರು (ಛಂಬು. ೮೫). 'ನರ್ಕುಟಕ' ಪರಾ. [?]

**ನತ್ರ** (ನಾ). (?) : ಪೂರು ನತ್ರದ ಸುತ್ತಲೂ ಮತ್ತು ಇತರ ಕಿಷ್ಕಿಂಧವಾದ ಕಿರುಮಂದಿ ಹಿತ್ತಲುಗಳು ಮುಂತಾದ ಸ್ಥಳದಲ್ಲಿ ಬಾಂದುಗಳಿಗೆ ಬದಲು ಕಲ್ಲುಗಳನ್ನು ಹೂಳಬಹುದು (ಭೂಮಿಅ. ೨೪). [?]

**ನತ್ರಿ** 'ನತ್ತು$_2$' ನೋ.

**ನತ್ತು$_1$** (ಕ್ರಿ). (ಸ್ವಾಭಾವಿಕವಾಗಿ ಅಥವಾ ಉದ್ರೇಕದಿಂದ) ಬಿಕ್ಕುತ್ತ ಮಾತನಾಡು ; ಉಗ್ಗು ; ತೊದಲು.

ನತ್ತಿ ಮಾತಾಡು = "(ಸ್ವಾಭಾವಿಕವಾಗಿ ಅಥವಾ ಉದ್ರೇಕದಿಂದ) ಬಿಕ್ಕುತ್ತ, ಉಗ್ಗುತ್ತ, ನತ್ತಿ,-ಮಾತಾಡು, ಹೇಳು" (Stammer. ಇಂಕನ) ; ನತ್ತಿ ಮಾತಾಡುವವನ ಮಾತು ಸುತ್ತಿ ತೊಳಲಿದರೆ ಪಟ್ಟು ಆದೀತೇ ? (ಗಾದೆ). [ದೇ. ‖ ಮಲ. ತೆಲು. ನತ್ತು]

**ನತ್ತು$_2$**, ನತ್ತಿ (ನಾ). ಉಗ್ಗುವಿಕೆ ; ಬಿಕ್ಕುತ್ತ ಮಾತನಾಡುವಿಕೆ ; ಬಿಕ್ಕಲು : "ಉಗ್ಗು, ಬಿಕ್ಕಲು, ನತ್ತು" (Stammer. ಇಂಕನ). ನತ್ತಿ : "ಉಗ್ಗು, ಬಿಕ್ಕಲು, ತೊದಲು, ನತ್ತಿ" (Impediment in one's speech. ಇಂಕನ) ; ಶಾಸ್ತ್ರಿಗಳ . . . ನಾಲಿಗೆಯಲ್ಲಿ ನತ್ತಿ ಇಲ್ಲದೆ ಇದ್ದಿದ್ದರೂ ಬಹುಶಃ ಅವರು ಅದೇ ಶಿಕ್ಷಣಕ್ರಮವನ್ನು ಅನುಸರಿಸುತ್ತಿದ್ದರೆಂದು ತೋರುತ್ತದೆ (ಶ್ರೀಶಕೆ. ೦೩೮) ; ಪಾರಾಯಣಕಾಲದಲ್ಲಿ ಅವರನ್ನು ನೋಡಿ ದವರು ಅವರಿಗೆ ನತ್ತಿ ಇತ್ತೆಂಬುದನ್ನು ನಂಬುತ್ತಿರಲಿಲ್ಲ (ಶ್ರೀಶಕೆ. ೧೪೨).
[<ನತ್ತು$_1$./ತೆಲು. ನತ್ತಿ]

**ನತ್ತು$_3$** (ನಾ). ಮೂಗಿನಲ್ಲಿ ಧರಿಸುವ ಆಭರಣ : ಹರಳೋಲೆ ಹೊನ್ನ ಪೂ ಮಾಣಿಕದ ಪೊಸನತ್ತು ಮೋಹನದ ಮಾಲೆ ಬಹುಭೂಷಣಂಗಳ ನಿಡುತ್ತ (ಚತುಪು. ೧-೬-೯) ; ರಜಪೂತ ಹೆಂಗುಸಿನ ಮುಖ್ಯ ಕುರುಹು ಆಕೆಯ ನತ್ತು (ಶಭಾಗ. ೦೧೪) ; ಮುತ್ತೈದೆರೆಲ್ಲರೂ ನತ್ತಿಟ್ಟು ನಲಿಯುತ ಮುತ್ತಿನಾರುತಿ ಬೆಳಗುತ ಹಾಡಿದರು (ಸಿದ್ಧಪು. ೧-೬೮) ; ಮಾನವು ಮುತ್ತಾಗಿಹುದು ನತ್ತಾಗಿ ಧರಿಸಿಕೋ ನೀವು ಕೆರೆಯುವ ಮುನ್ನ (ಕಲ್ಯಾಣಿ. ೯-೬) ; ಮೊಗಕೊಪ್ಪುವ ಮಾಟಾದ ಮೂಗಿನಲ್ಲಿ ಅಂದವಾದ ನತ್ತು (ಕರಿಹಾ. ೧) ; ನತ್ತಿಗೆ ಯೋಗ್ಯಳಾದವಳು ಮುತ್ತು ಬಯಸಿದ ಹಾಗೆ (ಗಾದೆ).

ನತ್ತಿನೋರು = ಸೂಳೆಯರು ; ವೇಶ್ಯೆಯರು ; ℙ ಕೆಲವು ಪ್ರದೇಶಗಳಲ್ಲಿ ವೇಶ್ಯಾವೃತ್ತಿಯ ಜನ ಪುರುಷನನ್ನು ತನ್ನವನನ್ನಾಗಿ ಒಪ್ಪಿಕೊಳ್ಳುವುದಕ್ಕೆ ಮುಂಚೆ ಅವನಿಂದ ಒಂದು ಮೂಗಿನ ಬಟ್ಟು ಎಂಬ ಒಡವೆಯನ್ನೋ ಅಥವಾ ಒಂದು ಸೀರೆಯನ್ನೋ ಪಡೆದು ಹಿಂದಿನಿಂದ ಬಂದ ಸಂಪ್ರದಾಯವನ್ನು ಅನುಸರಿಸುವ ಕ್ರಮವಿದೆ : ಈ ಊರಿನ 'ನತ್ತಿನೋರೆಲ್ಲಾ' ಅವನ ಮನೆಯವರೇ. 'ನತ್ತಿನೋರು ಅಂದರೆ' . . . ಸೂಳೇರು (ಗುಲಾಬಿ. ೧೯).
[←ಅರ. ನತ್ಥ್ ; ಹಿಂ. ನತ್ಥ್, ನಥ್, ನಾಥ್ ; ಮರಾ. ನಥ್./ಪ್ರಾ. ಣತ್ಥ]

**ನತ್ತು$_4$** (ನಾ). ೧. ಹೇನಿನ ಸಣ್ಣ ಮರಿ ; ಸಣ್ಣ ಹೇನು : ಸೀರು ಸಿರವನು ತಿಂತು ನತ್ತು ನರವನು ತಿಂತು ಚಿಂತೆಯು ಜನುಮವ ತಿಂತು (ಇಂಚಾಜ. ೧೬೧-೪೪) ; ಅವಳ ತಲೆಯಲ್ಲಿ ತುಂಬ ನತ್ತು, ಹೇನುಗಳಿವೆ (ರೂಢಿ). ೨. ಕೀಟ ; ಹುಳು. [ದೇ. ‖ ತಮಿ. ನತ್ತು, ನತ್ತೈ = ಶಂಖದ ಹುಳು ; ಮಲ. ನನ್ನ ; ತೆಲು. ನತ್ತ = ಶಂಖದ ಹುಳು]

**ನತ್ವ** (ನಾ). ನ ಎಂಬ ಅಕ್ಷರ : ಪರದೊಳ್ ಸ್ವರಮಿರೆ ಬಿಂದುಗೆ ದೊರೆಕೊಳ್ಗುಂ ನತ್ವಮಾತ್ಮಂ (ಶಮದ. ೦೦೪). [ಸಂ.]

**ನದ** (ನಾ). ೧. ಶಬ್ದ ಮಾಡುವಿಕೆ ; ಗದ್ದಲ ಮಾಡುವಿಕೆ ; ಸಪ್ಪಳ ; ಶಬ್ದ. ೨. (ಶಬ್ದದೊಂದಿಗೆ ರಭಸವಾಗಿ ಹರಿಯುವ) ದೊಡ್ಡ ನದಿ ; ಗಂಡುತೊರೆ ; ಗಂಡುನದಿ ; ℙ ಪ್ರಸಿದ್ಧ ಸಂಸ್ಕೃತ ಟೀಕಾಕಾರ ಮಲ್ಲಿನಾಥನ ಅಭಿಪ್ರಾಯದಂತೆ ಪಶ್ಚಿಮಕ್ಕೆ ಹರಿಯುವ ನದಿ : "ಭದ್ರಃ, ಉದ್ರಃ, ನದಃ – ಈ ೩ ಗಂಡುದೊಱೆ" (ಹಲಾಯು. ೦೦೦-೪೪) ; "ನದಮುದ್ರಮೆನೆ ಭದ್ರಮೆನೆ ಗಂಡುದೊಱೆಯದು" (ಮಂಗರಾ. ೦೨೨-೧೦) ; ಪುಣ್ಯನದೀನದನಗ[ಲಾ]ಪಣ್ಯವಿಭೂಷಣೆಯನೊಲ್ದು ನೋಡುತ್ತುಮಿಳಾಪುಣ್ಯಸ್ತ್ರೀಯಂ ಸಂಚಿತಪುಣ್ಯರ್ ಪಾಂಚಾಲದೇಶಮಂ ಪುಗುತಂದರ್ (ಶಂಪಥಾ. ೩-೩೬) ; ಪೊಱಮಟ್ಟುಭಂ ಬಿನದದಿಂ ನದದಿಂ ನದದಿಂದ್ರವಜ್ರನಿಷ್ಠುರವೆಱಗಿತ್ತಿಭಾಪಘನವಂ ಘನವಂ ಘನವಂಶ ದಾಲವಂ (ಜಗವಿ. ೧೬-೯) ; ಮದವದಿಭೇಂದ್ರದಾನಸಲಿಲಂ ನದರೂಪಮನೆಯ್ದೆ . . . ರಾಗದೆಯ್ದಿದನಿರದಾ. ಸುಧರ್ಮಮುನಿಪೋತ್ತಮನಾಶ್ರಮಂ ನೃಪೋತ್ತಮಂ (ಕುಸುಮಾ. ೪-೯೪) ; ಅಲ್ಲಿಗಲ್ಲಿಗೆ ಗವಾಕ್ಷದಗಳಿಂ ನದಗಳಿಂದಾ ದೇಶಮೊಪ್ಪಿರ್ದುದು (ಚಂಪು. ೦೦-೪). ೩. ಸಮುದ್ರ ; ಸಾಗರ. ೪. ಮೋಡ ; ಮೇಘ.

ನದನದಿ = ಗಂಡು ಮತ್ತು ಹೆಣ್ಣು ಹೊಳೆಗಳು : ನದ[ನ]ದ್ಯುದ್ಭೂತವಾರಿಪ್ರಸರಮೆಸ[ರ] ನೀರಂದದಿಂ ಕಾಯ್ದುದಾಕಾಶದಿಶಾಭಿ . . . ಎಂಬ ವೈಶಾಖದೊಳಾ ಯೋಗೀಶ್ವರು ಕಲ್ಮೆಲೆ ನೆಲಸಿ ಹಿಮಾದ್ರೀಂದ್ರ ವಿವರ್ತಂತಿರಿರ್ದಂ (ಸುಕುಮಾ. ೪-೧೩) ; ನದನದೀಕುಳದೊಳ್ ಪರಿವರ್ಧಿಕುಂ ಜಗಜ್ಜೀವನಜೀವನಂ ಮಱಿಗಳಿಂ ಮಱಿಯುಂ ಕಱಿವಂ ಹಿತಾರ್ಥಮಿ ಭೂವಳಯಕ್ಕೆ ಶಕ್ರನದು ಕಾರಣಮರ್ಚಿಪುದಿಂದ್ರಮಂ ಜನಂ (ಜಗವಿ. ೪-೬೬) ; ನದನದ್ಯೌಘಾಂಬುವಂ ಪೀರ್ದೆಳೆ ನೆಱೆಯದೆ ಬಾಯ್ವಿಟ್ಟು ಪೊಲ್ ಬೀಡೆಗಳ್ ಪರ್ವಿದುವು (ಚಂದ್ರಪು. ೯-೬೬). [ಸಂ.]

**ನದನಿಕಟ** (ನಾ). ಹೊಳೆಯ ತೀರದ ಪ್ರದೇಶ : ವಿದಳಿತ ನಳಿನೀಸುಖದಂ ನದನಿಕಟಂ ವಿವಿಧವರ್ಣಮಣಿಗಣಶೋಭಾಸದನಂ ಪರ್ವತನಿಕಟಂ ಮದಗಜ ಮದಸಲಿಲಸದನಮಟವೀನಿಕಟಂ (ಮಲ್ಲಿಪು. ೨-೦೦). [ನದ + ನಿಕಟ]

**ನದರಿಡು**, ನೆಪರಿಡು, ನೆದರಿಡು (ಕ್ರಿ). ೧. ಲಕ್ಷಿಸು ; ಗಮನವಿಡು

ರಾತ್ರಿವುದಯ ಸಾಯಂಕಾಲ ನವರಿಟ್ಟು ಹಸು ನಿದ್ರೆದೊಳದು ಪದವಿರ್ದ ಲಿಂಗ ಪೂಜಿಸುವವಾರುಯನ್ನಂತ ಮುದಿವಮೂರ್ತಿಗಾರು ಮನ್ನಿಪರು (ದೀದಕಾ. ೯-೦೩) ; ಸದಮಲಜ್ಞಾನದ ಕುದಿ ಉಕ್ಕಿ ಬರುವಾಗ ನದರಿಟ್ಟು ನಿನ್ನೊಳು ಸದಮಲ ತತ್ವವಿ ತಿಳಿಕೋ ಬರಕೋ (ಶರೀಶ. ೭೭ ಶವಿಕಾವ್ಯ ಸಂಚಯ). ನೆಜರಿಡು : ೧. ಒಂದೀಟು ನೆಜರಿಟ್ಟು ನಡಿ. ನಮ್ಮ ಬಿಚ್ಚು ವಷಪ್ಪ . . . ಕೂಡದಲೀಲಿ ಉರುಲು ಹಾಕಾಂವ (ಪತಿತೋ. ೭೭). ನೆದರಿಸು : ೧. ಸದ್ಯ ನದರಿಟ್ಟು ನೋಡಿಕೋ ಉದಿಸಿದ್ಯಾವಲ್ಲೆ (ಶರೀಶ. ೩೬-೦೩). ೨. ಬಯಸು ; ಕಾಮಿಸು ; ಅಪೇಕ್ಷಿಸು : ಮಾವೀನ ಹಣ್ಣು ವನಿಯಾಗ ಇಟಗೊಂಡು ನೀರಲಕ್ಯಾಕ ನದರಿಟ್ಟ (ಗರತಿ. ೦೩೪).

[ ನದರು (<ನಜರು) + ಇಡು₁ ]

**ನದರಿಸು** 'ನಜ್ರಿಸು' ನೋ.

**ನದರು** 'ನಜರು' ನೋ.

**ನದರುಕಾಣಿಕೆ** 'ನಜರುಗಾಣಿಕೆ' ನೋ.

**ನದರುಗಾಣಿಕೆ** 'ನಜರುಗಾಣಿಕೆ' ನೋ.

**ನದರುಗೆಡು** (ಕ್ರಿ). ಕಂಗೆಡು ; ದಿಗ್ಭ್ರಮೆಗೊಳ್ಳು : ಮದನಗಂಜುತ ವಾಂದಳಿಗಿದೆಬೆದರುತಳಿವಿಂಡುಗಳ ರಭಸಕೆ ನದರುಗೆಡುತ . . . ಚಂಡ ರಕ್ಕಸ ಬೆದರುತ್ತಿದಿದ ಬನದೊಳಗಡೆಯ ಕಾಬ ತವಕದಲಿ (ಅಂದಿಕಾ. ೦೮-೮). [ ನದರು (<ನಜರು) + ಕೆಡು₁ ]

**ನದಿ** (ನಾ). ಹೊಳೆ ; ತೊರೆ ; ೯ ಎಂಟು ಸಾವಿರ ಧನುಃಪ್ರಮಾಣಕ್ಕೆ ಕಡಮೆಯಿಲ್ಲದಷ್ಟು ದೀರ್ಘವಾಗಿಯೂ ಅಗಲವಾಗಿಯೂ ಹರಿಯುವ ಜಲಪ್ರವಾಹಕ್ಕೆ 'ನದಿ' ಎಂದು ಟೀಕಾಕಾರರು ಸೂಚಿಸುತ್ತಾರೆ : "ಸಿಂಧುಃ, ಸ್ರವಂತೀ, ತಟಿನೀ, ತರಂಗಿಣೀ, ನದೀ, ಧುನೀ . . . ರೋಧೋವಕ್ರಾ – ಈ ೨೧ ತೊಱೆ" (ಹಲಾಯು. ೦೦೦-೯೩) ; "ನದಿ ತರಂಗಿಣಿ ಶಟನಿ ಧುನಿ ಸಿಂಧು . . . ದ್ವೀಪವತಿಯಾಪಗೆಯೆನೆ ತೊಱೆಗೆ ನಾಮಂ" (ಚುಂಗರಾ. ೬೨೩-೦೦) ; ಜಂಬೂದ್ವೀಪದ ಮೇರುವಿನ ಮೂಡಣ ವಿದೇಹದ ಸೀತಾನದಿಯ ಬಡಗಣ ತಡಿಯೊಳ್ (ಅದಿಪು ೩-೭೪) ; ಹರಿವ ನದಿಗೆ ಮೈಯೆಲ್ಲ ಕಾಲು ಉರಿವ ಕಿಚ್ಚಿಗೆ ಮೈಯೆಲ್ಲ ಬಾಯಿ (ಅದಕಂ. ೦೬೩-೭೭೩) ; ನದಿಯಂ ನಾದಿಕಸಂತೆ ಪೊಕ್ಕು ಗುಱೆಯಂ ಧಾನುಷ್ಕನೆಂಬಂತೆ ತಪ್ಪದಿದಂ ಕಂಟಮನೆಚ್ಚುದು (ಜಾತ್ಕೇತು. ೦೦-೦೫೦) ; ನದಿ ಕಡ್ಡೆಱೆದಂತೆ ಪೊಳಂಕಿದ ಮಾನಂ ಮೊಸಳೆ ಪಾಯ್ದು ನರಪತಿಯು ವಿನೋದದ ಗುಜ್ಜಸಿಕ್ಕಿ ಪಿಡಿದತ್ತದನಧಿಪತಿ ಜಾಲಗಾಱಿಂ ತೆಗೆಯಿಸಿದಂ (ಯಶೋಚ. ೩-೪೮) ; ಮಱುದಿವಸ ವೇದಾವತಿಯ ಸಾರ್ದರು ಬಳಿಕ್ಕವಳ್ಲಿ ರಜನಿಯ ಪರಿಹರಿಸಿ ದಾಂಟಿದರು ನದಿಯನು ಮೂಱನೆಯ ದಿವಸ (ತೊರವೆ. ೨-೯-೯) ; ನದೀ ದಾಟಿ ಬದೀಲಿ ಬಿದ್ದ ಹಾಗೆ (ಗಾದೆ).

ನದಿನದ, ನದೀನದ = ಹೆಣ್ಣು ಮತ್ತು ಗಂಡು ಹೊಳೆಗಳಂ : ಮಱೆಱಿದ ಗಾಳಂಗಳಿಂ . . . ಸೊಗಡುಗೊಳುಂಗಳ ಮದ್ದುಗಳ ಮುಸಳದಿಂದಂ ನದಿನದಾಳಿಯೊಳು ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂನಾಥನು (ಹಪಕಾ. ೩-೯೪) ; ಅಂತವರಿರ್ವರುಂ ತಾನಾನದೀನದಾಂತರಾಳಸಂಪಸ್ನನಪದಂಗಳಂ ಕಳೆದು ಕತಿಪಯಪ್ರಯಾಣಂಗಳಿಂ . . . ಬಂದು (ಸುಕುಮಾ. ೨-೯೫೦) ; ನದೀನದೌಘಮಾಗಳೆ ಬ ಱು ಗ ೦ ಪ ಲಾ ಯ್ತು ಕುಱಿಯುಂ ತವರಂ ಸಮನಾಯ್ತುದೆತ್ತಲುಂ (ಭವ್ಯಪು. ೩-೯೭) ; ಕಾವಿ ತಾರ್ಥವನೀವವಂದಿನ ಭೂಮಿ ಬಿತ್ತದೆ ಜನಿಪ ವಸ್ತುಸ್ತೋಮವನು ತಂದೀವುದನ್ನದೀನದಾದಿಗಳು (ನಿಜಾಶ. ೦-೬-೪) ; ಅಕ್ಷಯವಾದ ಸರೋವರ ವೊಂದರಿಂದ ಅನೇಕ ದಿಕ್ಕುಗಳಲ್ಲಿ ಸಹಸ್ರಾಧಿಕ ನದೀನದಗಳು ಹೊರಹೊರಟು ಬರುವಂತೆ (ತತ್ವಪ್ರಾ. ೨೦೫). ನದಿಯ ಮಗ = (ಗಂಗಾ) ನದಿಯ ಸುತ ; ಗಾಂಗೇಯ ; ಭೀಷ್ಮ : "ನಾದೇಯಃ, ನದೀಸುತಃ– ಈ ೨ ನದಿಯ ಮಗಂ" (ಹಲಾಯು. ೬೨-೩೪೭) : ಇದು ಮಹಾಮಖವಿಲ್ಲಿ ಪೂಜ್ಯನು ಯದುಗಳರಸನು ಭಟ್ಟನಿಲ್ಲಿಗೆ ನದಿಯ ಮಗನಿಲ್ಲಿಗೆ ಸದಸ್ಯರು ನಾರದಾದಿಗಳು (ಕುಪ್ರಾಸ. ೦೦-೩೯) ; ನದಿಯ ಮಗ ಗುರು ಗುರುತನೂಜನು ವಿದುರಧಾರದ್ವಾಜಮುಖ್ಯರು . . . ಬಹಳಭ್ಯುದಿತಬಲ ನೆರೆದೆದ್ದು ನಡೆದುದು ಭರದ ಪಯಣದಲಿ (ಕುಪ್ರಾಅ. ೬೦೩. ೨೩-೬). ನದಿ ಹಾಯು = ಹೊಳೆಯನ್ನು ದಾಟು,–ಕ್ರಮಿಸು : ನದಿ ಹಾಯೋನಿಗೆ ತಿದಿ ಯಾಕೆ ? (ದುರಂಗಾ. ೯೯). [ ಸಂ. ನದೀ ]

**ನದಿಗವುಂಡ** (ನಾ). ಒಬ್ಬಾತನ ಹೆಸರು : ಸದಯನೂರ ನದಿಗವುಣ್ಡನು ತಿಬ್ಬೂರ ಮಾರಗವುಣ್ಡ (ಕ್ಕುಆರಿ. ೧೯೦೯, ೦೦-೭೩ ; ೯೦೦).

[ ನದಿ + ಗವುಂಡ (<ಗಾವುಂಡ) ]

**ನದಿಜ** (ನಾ). = ನದೀಜ ೩ : ಇದಿರುಗೊಂಡರು ಹಿರಿದು ಮನ್ನಿಸಿ ವಿದುರನನು ಕೊಂಡಾಡಿ ಗುರು ನೃಪ ನದಿಜ ಧೃತರಾಷ್ಟ್ರಾದಿಗಳ ಸುಕ್ಷೇಮ ಕುಶಲಗಳ ವಿದುರನಾಗಮನಪ್ರಪಂಚದ ಹದನನೆಲ್ಲವ ಕೇಳಿದರು (ಕುಪ್ರಾಅ. ೦-೦೩).

[ <ಸಂ. ನದೀಜ ]

**ನದಿಪು** (ಕ್ರಿ). (ಬೆಂಕಿ, ದೀಪ, ಉರಿ, ಬೆಳಕು, ತಾಪ ಮೊದಲಾದುವನ್ನು) ನಂದಿಸು ; ಆರಿಸು : ಭರತನ ಮೊಗದೊಳ್ ಪರ್ವಿದ ಖರಕೋಪಾನಲನನೆಯ್ದೆ ನದಿಪುವವೊಲ್ [ಪಾಠಾಂ. ನಂದಿಪವೋಲ್] ತನ್ನರಕತ ಮಣಿವರ್ಣಂ ಕರಪರಿಘದಿನೊಡನೊಡನೆ ತುಳ್ಕಿದುದು ಶಿಳಿನೀರಂ (ಆದಿಪು. ೦೯-೦೦೩) ; ಬಲದೇವನ ಮನದೊಳಾದ ಮುಳಿಸೆಂಬ ಕಿಚ್ಚಂ ತನ್ನ ಮೃದು ಮಧುರವಚನರಚನಾಜಲಂಗಳಂ ತೀಳಿದು ನದಿಪಿದಂ (ಪಂಪಭಾ. ೩-೨೨೭) ; ಮದನದಾವಾಗ್ನಿಯಂ ನದಿಪೆ ಮಾಡಿದ ಕಾಮನದಿಯನಿಸುವುವು ದಿವಿಜದುಂಪತಿಕತದೊದವಿದ ರತದ ಪದನಲ್ಲಿ (ಶಾಂತಿಪು. ೨-೯೩) ; ದವರೌದ್ರಜ್ವಲನಾದ್ಭುತಂ ಹೃದಯದೊಳ್ ಶೋಕಾಗ್ನಿ ಕೈಗಣ್ಮೆ ಪೊಣ್ಮುವ ಕಿಚ್ಚಂ ನದಿಪಲ್ಕೆ ಬರ್ಪ ತೆಱದಿಂದಂ ಕಣ್ಗಳಿಂದಜಸ್ರ ಪೊಣ್ಮುವ ನೇತ್ರಾಂಜನವಿಶ್ರ ಬಾಷ್ಪಜಲಧಾರಾಬಿಂದುಗಳ್ ಕೂಡೆ (ಅಜಿತಪು. ೦೦-೯೩) ; ಅಳವಿಗಟಿದ ಕರ್ವ ಮದನಾನಳನಂ ನದಿಪಲ್ಕೆ ಪಲವುಮಮೃತದ ಪನಿಯುಂ ತಳವಂತೆ ದಂತರುಚಿಗಳ್ ತುಳುಂಕೆ ನೃಪಸುತನನಾರ್ಯಸುತನಿಂತೆಂದಂ (ಲೀಲಾವ. ೪-೩೫) ; ಉಂತೆ ಜಗಂಗಳಂ ತಿಗುರಿಗಂ ತರುತಿರ್ಪ ಮನೋಜನೀ ವಸಂತಂ ತಲೆದೋಱೆತಿಂ ಹರನ ಕಣ್ಬುರಿಯಂ ನದಿಪಲ್ ಸಮರ್ಥನೋ (ಚಂದ್ರಪು. ೭-೪೭).

ನದನದಿಪು (ದ್ವಿರುಕ್ತಿ) : ನಿಚ್ಚಂ ಪಗಲಿನಕಾಂತದ ಕಿಚ್ಚನಿರುಳ್ ಚಂದ್ರಕಾಂತದೊಱೆವಂ ಪಡೆದಾ ಕಿಚ್ಚ ನದ[ದ]ನದಿಪ [ಪಾಠಾಂ. ನದನದಿಸೆ, ಸದನಡಿಸೆ] ಮಾಡುಗುಮಚ್ಚರಿಯಂ ಪಗಲುಮಿರುಳುಮಾ ವಿಜಯಾರ್ಧಂ (ಅಜಪು. ೯-೨೨). [<ನಂದು ? ]

**ನದಿಮೊಗ** (ನಾ). ಹೊಳೆಯಂಪಾತ್ರ,–ಪ್ರವಾಹ : ಮೂರು ಖಂಡಗಳೇಳು ಸಾಗರಂಗಳನು ಹದಿಮೂರು ನದಿಮೊಗಗಳನು ದಾಟಿ ಬಂದೆಲ್ಲಿ ಭಾರತೀಯರ ಹೃದಯ ದೈವಸಾಮ್ರಾಜ ದರಬಾರ ನಡೆಸಿದನೆಲ್ಲಿ–ನೋಡಿದುವೆ ಇಲ್ಲಿ ! (ಕಿಎಪು. ೩೩). [ ನದಿ + ಮೊಗ ]

**ನದಿಯಮರ** (ನಾ). ಒಂದು ಬಗೆಯ ಮರ : "ಬೃಹತ್ಪತೀ, ಬೃಹಸ್ಪತೀ ಈಯೆರಡು ನದಿಯಮರ, ನೇಱಲ್" (ಓಷಧಿ. ೦೦೯).

[ ನದಿ + ಮರ₁ ]

**ನದಿವಾಸಿ** (ನಾ). ಹೊಳೆಯ ಬಳಿ ವಾಸಿಸುವವನು : ನದಿವಾಸಿಗಳು ವನವಾಸಿಗಳು ಗಿರಿವಾಸಿಗಳು ಗುಹ್ಯ ಗುಹೆವಾಸಿಗಳು ಇಂದ್ರಿಯಭಯಂಗಳಿಗೆ ಅಂಜಿ ಕಂದಮೂಲಾದಿಗಳ ಭಕ್ಷಿಸುವ ಕಾನನದ ಮರುಳುಗಳೆಲ್ಲಾ ಲಿಂಗಪ್ರಾಣಿಗಳಿಗೆ ಪ್ರಾಣಲಿಂಗ ಸಂಬಂಧಿಗಳಾದ ಪರಮಶಿವಯೋಗಿಗಳಿಗೆ ಸರಿಯೇ ಈ ಭ್ರಾಂತರೆಲ್ಲಾ (ಏದೇಮ. ೦೦೬-೩೫೯). [ ನದಿ + ವಾಸಿ₁ ]

**ನದೀಚರ** (ನಾ). ಹೊಳೆಯಲ್ಲಿ ಸಂಚರಿಸುವುದು : ಪಿರಿದು ಪೊಟ್ಟಂ ವನಪ್ರಚಾರದೊಳಲಸಿದ ನದೀಚರನಪ್ಪ ಯೂಥಪತಿಯಂತೆ ವನವಿಹಾರದೊಳಲಸಿ ಬಂದು ರಾವಣಮಂ ಪುಗೆ (ಶಾಂತಿಪು. ೮-೩೩ವ). [ ಸಂ. ]

**ನದೀಜ** (ಗು). ೧. ಹೊಳೆಯಲ್ಲಿ ಹುಟ್ಟಿದ. (ನಾ). ೨. ಹೊಳೆಯಲ್ಲಿ ಹುಟ್ಟಿದುದು ; ನೀರಿನಲ್ಲಿ ಹುಟ್ಟಿದುದು. ೩. (ಗಂಗಾ) ನದಿಯ ಮಗ ; ಗಾಂಗೇಯ ; ಭೀಷ್ಮ : ಬಿಲ್ತೋಳ್ ಮುನ್ನಂ ಪಿನಾಕಾಯುಧನೆ ಸಕಲಚಕ್ರಾಯುಧಂ ಜಾಮದಗ್ನ್ಯಂ ಬಲ್ಲಂ ರಾಮಂ ನದೀಜಂ (ಎಕ. VI, ಚಿಕ್ಕಮ. ೭೭-೫೪ ; 1180) : ತತ್ಸೇನೆ ದಾವಾಗ್ನಿಯಿಂ ನೆಲೆವೆರ್ಚಿರ್ದಟವೀಪ್ರತಾನಮುರಿಯುತ್ತಿರ್ದಪ್ಪುದೆಂಬಂದಮಂ ಗೆಲೆ ಮಾಡಿತ್ತು ನದೀಜನುಗ್ರಶರಪಾತೋದ್ಭೂತಜಾತಾದ್ಭುತಂ (ಮಹಾನೇ. ೦೨-೦೬೬) ; ಮುರಹರ ಗುರು ನದೀಜರ ಬೀಳುಕೊಟ್ಟನು ಕೃಪನ ಮನ್ನಿಸಿ ಮನೆಗೆ ಕಳುಹಿದನು (ಕುಮಾ.ಉ. ೮-೧). ೪. ಅರ್ಜುನವೃಕ್ಷ ; ನೀರುಹಲಸಿನ ಮರ ; ಕದಂಬವೃಕ್ಷ : ಕವಿಗಳ ಕೊಂಡಾಟ ವಿವಿಧರೂಪಗಳನ್ನು ತಾಳಿತು. ಮರಕ್ಕೆ ಅವರು ಕೊಟ್ಟಿರುವ ವಿಶೇಷಣಗಳನ್ನು ನೋಡಿ. ಷಟ್ಪದೇಷ್ಟ . . ನದೀಜ, ದಾಸವೃಕ್ಷ (ಹಸುಹೂ. ೪೬). [ ಸಂ. ]

**ನದೀಜಾತ** (ನಾ). = ನದೀಜ ೩ : ವೈರಾಗ್ಯಂ ಭೋಂಕನೆ ಕೆಯ್ಮಾರೆ ಮನಕ್ಕಾಗಳಾ ನದೀಜಾತಂ ಸಂಸಾರಕ್ಕೀವೈಸಿ ದಯಾಧಾರು ಪರಮಾತ್ಮ ತತ್ತ್ವನಿಷ್ಠಿತನಾದಂ (ಮಹಾನೇ. ೦೨-೦೬೩). [ ಸಂ. ]

**ನದೀತನೂಜ** (ನಾ). = ನದೀಜ ೩ : ಆಗಳ್ ನದೀತನೂಜಭಾರದ್ವಾಜಕೃಪರವಿರಳ ಬಾಷ್ಪವಾರಿ ದುರ್ದಿನ ದೀನಾನನರಾಗಿರೆ ವಿದುರಂ ತಾನಱಿದುಮಱಿಯದಂತೆ ಶೋಕಾಕ್ರಾಂತನಾಗಿ (ಪಂಪಭಾ. ೩-೮ ವ). [ ಸಂ. ]

**ನದೀತರಣ** (ನಾ). ಹೊಳೆಯನ್ನು ದಾಟುವಿಕೆ : ಹಯಶಾಸ್ತ್ರಂ ಸೂಪಶಾಸ್ತ್ರಂ ನದೀತರಣಂ ತಾಪನಮಿಂದ್ರಜಾಲಮೊಱಂ . . . ಅಖಿಲವ್ಯಾಹೋತ್ಕರಮೆಂಬಿನಿತಱೊಳಂ ಬಲ್ಲರಲ್ಲರುಂ ಮೆಚ್ಚಿ ಪಡೆದನತಿಕೌಶಲಮಂ (ಪುಷ್ಪ.ಪು. ೪-೫೯). [ ಸಂ. ]

**ನದೀತೀರ** (ನಾ). ಹೊಳೆಯ ದಂಡೆ,-ತೀರ : ಬಾಳಿಯ ಗರ್ಭದೊಳಿರ್ದ ಬಾಳೆಯುಂ ಬಾಳನುಮಂ ಕಂಡೆತ್ತಿಕೊಂಡು ಮತ್ಸ್ಯಗಂಧಿಯುಂ ಮತ್ಸ್ಯಗಂಧನುಮೆಂದು ಪೆಸರನಿಟ್ಟು ನಡಪಿ ಯಮುನಾನದೀತೀರದೊಳಿರ್ಪನ್ನೆಗಂ (ಪಂಪಭಾ. ೦-೭೮ ವ) ; ಆ ನದೀತೀರಕ್ಕೆ ಸಮಾಧಿಗುಪ್ತರೆಂಬ ದಿವ್ಯಮುನೀಶ್ವರರ್ ಬಂದಸ್ತಮಯಸಮಯದೊಳ್ ರಾತ್ರಿಪ್ರತಿಮೆಯೊಳಿರೆ (ಮಹಾನೇ. ೦೩-೦೦ ವ) ; ನದೀತೀರದ ರಮ್ಯಸ್ಥಾನ (ಚಿತಾಸು. ೬೨). [ಸಂ.]

**ನದೀನಂದನ** (ನಾ). = ನದೀಜ ೩ : ನದೀನಂದನಂ ವಾರಣಾಸಿಯಂ ಪೊಱಮಟ್ಟೇಕೆ ಬಂದಿರೆಲ್ಲಿರ್ದಿರೆಂದುಂ ಬೆಸಗೊಳ್ವುದುಂ (ಮಹಾನೇ. ೯-೧೦೦ ವ) : ಈ ನದೀನಂದನನ ಬಲದಲಿ ಸೆಣಸೆ ಶಿಖಿಗಂಜುವುದೆ (ಕುಮಾ.ಉ. ೦-೩೩). [ ಸಂ. ]

**ನದೀನಾಥ** (ನಾ). ೧. ಹೊಳೆಗಳ ಒಡೆಯ ; ಸಾಗರ ; ಸಮುದ್ರ. ೨. [ಜೈನ] ಒಂದು ಕಾಲಪ್ರಮಾಣ : ಕೆಲ್ಪ ಷೋಡಶ ನದಿ[ದೀ]. ನಾಥೋಪಮಾಯುಷ್ಯರುಂ ದಿವ್ಯ ಸುಖ ಮಾನಂದು (ಮಹಾನೇ. ೦೩-೦೪೬ವ). [ಸಂ.]

**ನದೀನಿಕಟ** (ನಾ). ತೊರೆಯ ತೀರದ ಪ್ರದೇಶ ; ಹೊಳೆಯ ತೀರ : ವಿದಳಿತ ಕಂಜವಿಲ್ಲದ ಕೊಳಂ ಗಜವಿಲ್ಲದ ಕಾಡು ಚೂತವಿಲ್ಲದ. ಬನಮಂಚಿಯಿಲ್ಲದ ನದೀನಿಕಟಂ . . . ಅತ್ಯುದಾತ್ತಗುಣವಿಲ್ಲದ ಮಾನವರಿಲ್ಲದೆಲ್ಲಯುಂ (ಪುಷ್ಪ.ಪು. ೨-೦೦). [ ಸಂ. ]

**ನದೀಪೂರ** (ನಾ). ಹೊಳೆಯ ಪೂರ್ಣಪ್ರವಾಹ ; ತುಂಬುಹೊಳೆ : ಘನಶೋಕ ಘನಾಗಮಜಳಜನಿತೋತ್ಕರ್ಷಮನನೂನಬಾಂಧವಜನಿತಾಶ್ರು ನದೀಪೂರಮನುಡುಗಿಪುದಿನತೇಜವಸಂತದಂತೆ ಬಂದೀ ಕ್ಷಣದೊಳ್ (ಚಂದ್ರಪ್ರ. ೩-೦೪). [ ಸಂ. ]

**ನದೀಪ್ರವಾಹ** (ನಾ). ಹೊಳೆಯ ಪ್ರವಾಹ,-ಹರಿವು : "ಉಟ್ಟು-ನದೀಪ್ರವಾಹಂ" (ಶಮದ. ಶಿ. ೦) ; ತೊಲಗಿರ್ಪ ಮುನಿವರರು ಒಱದೇ ಹೊಳೆಯೊಳಗೆ ಹೋಗದಿರಿ ದಿವದಿಂದಿಳಿದ ದಿವ್ಯನದೀಪ್ರವಾಹದ ಸತ್ಕ್ಷಮವೆನಲು ಅಲಘುವಾಕಿ ಕೇಳುತ್ತ ಘುಳುಘುಳುಘುಳು ಮಿಗಲು ಬಹ ನದಿಯನೀಕ್ಷಿಸಿ ತೊಲಗದಾಪೋಶನವ ಕೊಂಡನು ಜನ್ಹುಮುನಿ ನಗುತ (ನಿಘಂಗ. ೯-೮-೪೬). [ ಸಂ. ]

**ನದೀಬೂದು** (ಗು). ನದಿಯಲ್ಲಿ ನೆರೆ ಬಂದಾಗ ನೀರಿನಲ್ಲಿ ಮುಳುಗುವ ; ಹೊಳೆ ಸಾಲಿನ : ದೇಸಾಯರ 'ನದೀಬೂದು' ಜಮೀನು, ನಾಡಗೌಡರ 'ಮಡಿಗದ್ದೆ', ಕೇಶವರಾಯನ ಮಾವಿನ ಗಿಡಗಳು ನಿನ್ನ ಕಣ್ಣು ತುಂಬಲಾರವೆ? (ಹಳ್ಳಿ.ಉ. ೩೩). [ ←ಮರಾ. ನದೀಬುಡ ]

**ನದೀಮಾತೃಕ** (ನಾ). ೧. ಹೊಳೆಯ ನೀರಿನಿಂದ ಬೆಳೆ ಬೆಳೆಯುವ ಭೂಮಿ ; ನೀರಾವರಿ ಭೂಮಿ : "ತೊಱೆಯ ನೀರಿಂ ಬೆಳೆವ ಭೂಮಿ ನದೀಮಾತೃಕವೆಂಬುದು" (ಹಲಾಯು. ೨೭-೬) ; "ಹೊಳೆಯ ನೀರಿಂ ಬೆಳೆವ ಮಹಿ ನದೀಮಾತೃಕಂ" (ಮಂಗರಾ. ೨೫-೪) ; ಭೂತಲವರ್ತಿಯಪ್ಪ ವಿಷಯಾಳಿ ವಿಚಾರಿಪೊಡಾವಗಂ ನದೀಮಾತೃಕ ದೇವಮಾತೃಕಮೆ (ಚಂದ್ರಪ್ರ. ೦-೯೦) ; ಅದಲ್ಲದೆಯುದೆ ನದೀಮಾತೃಕಮುಂ ದೇವಮಾತೃಕಮುಮೆಂಬ ಭೇದಮಂ ಬೇರ್ಪಡಿಸಿ (ಪುಷ್ಪ.ಪು. ೨-೦೪೩); ನೂತನ ನಾರಿಕೇಳಜಲದಿಂ ಛವಳೇಕ್ಷುಗಳಾವಗಂ ನದೀಮಾತೃಕ ದೇವಮಾತೃಕದ ಪಂಗುಳಿದೊಳ್ಪೆಳಸಾಗಿ ರಂಜಿಕುಂ (ತ್ರಿಷಷ್ಟಿ. ೨-೩೬); ಬೆಳೆವುವು ಶಾಲಿ ಪಾಮರಿಯರ ಪೊಗಸಟು ವೆಳಗಿಗೊಸರುವಿಂದುಕಾಂತದ ಜಲದಿಂದೆ ದೇವಮಾತೃಕ ನದೀಮಾತೃಕಗಳ ಬಗೆಗೊಳದಾ ನಾಡೊಳು (ತ್ರಿಭುತಿ. ೨-೧೪). ೨. ಗದ್ದೆ ; ತರೀ ಜಮೀನಂ. 'ದೇವಮಾತೃಕ' ಪರಾ. [ ಸಂ. ]

**ನದೀಮಾತೃಕೆ** (ನಾ). = ನದೀಮಾತೃಕ ೧ : ದೇವಮಾತೃಕೆ ನದೀಮಾತೃಕೆಯಾದ ನಾನಾವಿಧ ಬೆಳೆಯ ಭೂಮಿಗಳು ಅವಾಗ ಬೆಳೆದೊಱಗುವ ಧಾನ್ಯಸಂದೋಹಕಾವಾಸವಾಗಿರುತಿಹುದು (ನಾಗಕು. ೨-೦೮).

[ ಸಂ. ನದೀಮಾತೃಕಾ ]

**ನದೀಮುಖ** (ನಾ). ಹೊಳೆಯು ಸಮುದ್ರಕ್ಕೆ ಸೇರುವ ಸ್ಥಳ; ಅಳಿವೆ: ಸ್ವಯಂಭೂರಮಣ ಸಮುದ್ರದ ಮಹಾಮತ್ಸ್ಯಂಗಳ್ಸಾಸಿರಯೋಜನದೀರ್ಘಂ ನದೀಮುಖದೊಳು ಐನೂಱು ಯೋಜನ ನೀಳಂ (ಧ್ಯಾನಕಾ. ೦೨೩) : ನದೀಮುಖ (The mouth) ಅಂದರೆ ನದಿಯು ಸಮುದ್ರಕ್ಕೆ ಸೇರುವ ಸ್ಥಳ (ಭೂಗೋಳ. ೦೨) ; ಗಂಗಾನದಿಯಲ್ಲಿ ನದೀಮುಖದಿಂದ ಎಪ್ಪತ್ತುಮೈಲಿಗಳವರೆಗೂ ಹಡಗುಗಳು ಹೋಗುತ್ತವೆ (ಸಳದಿ. ೨೦) ; ಈ ವಲಯದಲ್ಲಿ ನದೀಮುಖಗಳಲ್ಲಿರುವ ಮೆಕ್ಕಲುಮಣ್ಣು ನೀರಾವರಿಗೆ ಅನುಕೂಲವಾಗಿದೆ (ಶಿಲ್ಪಶಾ. ೩೬೧). [ ಸಂ. ]

**ನದೀಮುಖಖಂಡ** (ನಾ). = ನದೀಮುಖಜಭೂಮಿ: "ನದೀಮುಖಖಂಡ ಅಥವ ಡೆಲ್ಟ (Delta)" ಅಂದರೆ ಒಂದು ನದಿಯ ಮುಖಭಾಗದಲ್ಲಿರುವ ತ್ರಿಕೋಣಾಕಾರವಾದ ಭೂಮಿ (ಭೂಗೋಳ. ೦೩). [ನದೀಮುಖ + ಖಂಡ]

**ನದೀಮುಖಜಭೂಮಿ** (ನಾ). ನದಿಯು ಸಮುದ್ರಕ್ಕೆ ಸೇರುವಲ್ಲಿ ನಿರ್ಮಾಣವಾಗುವ, ಮೆಕ್ಕಲುಮಣ್ಣಿನಿಂದ ಕೂಡಿದ ನೆಲ; ಮೆಕ್ಕಲು ಭೂಮಿ; ಜಲಾನಮನ ಭೂಮಿ: "ನದೀಮುಖದಲ್ಲಿ ಇಂತಹ ತ್ರಿಕೋನಾಕಾರವಾಗಿ ಏರ್ಪಟ್ಟ ಮೆಕ್ಕಲುಭೂಮಿ : ನದೀಮುಖಜಭೂಮಿ; ಕುದುರು" (Delta. ೩೦೪೨) ; ನದಿಗಳು ತಮ್ಮ ಗತಿಗಳನ್ನು ಬದಲಾಯಿಸುವುದು, ನದೀಮುಖಜಭೂಮಿಗಳೆಂದು ಹೊಸ ಪ್ರದೇಶಗಳು ಸಿದ್ಧವಾಗುವುದು . . . ಮುಂತಾದುವು ಪ್ರಕೃತಿಯಲ್ಲಿ ಯೋ ನಡೆದಿರುವ ಘಟನೆಗಳು

(ಭಾಇಪ್ರ. ೬) ; ದಕ್ಷಿಣ ಭಾರತದ ನದಿಗಳು . . . ಸಮುದ್ರ ಸೇರುವ ನದೀಮುಖಜಭೂಮಿಯಲ್ಲಿ ಮಾತ್ರ ಅವು ಭೂಮಟ್ಟದಲ್ಲಿ ಹರಿಯುತ್ತವೆ (ಸನದಿ. ೩೨). [ ಸಂ. ]

**ನದೀಮೂಲ** (ನಾ). ನದಿಯ ಉಗಮಸ್ಥಾನ ; ನದಿಯು ಹುಟ್ಟುವ ಸ್ಥಳ : "ನದೀಮೂಲ" (Source) ಅಥವ "ಉಗಮ" ಅಂದರೆ ನದಿಯು ಹುಟ್ಟುವ ಸ್ಥಳ (ಭೂಗೋಳ. ೦೨) ; ಋಷಿಮೂಲವನ್ನೂ ನದೀಮೂಲವನ್ನೂ ಗುರುಮೂಲವನ್ನೂ ಹುಡುಕಬಾರದು (ಲೂಢಿ). P ಈ ರೀತಿಯಲ್ಲಿ ಮೂಲಗಳನ್ನು ಬೆದಕುತ್ತಾ ಹೋದರೆ ಅಪ್ರಿಯವಾದ ವಿಷಯಗಳೂ, ಅಪಾಯ ಪ್ರಸಂಗಗಳು ಉಂಟಾಗುತ್ತವೆ ಎಂಬುದು ರೂಢಿವಾಕ್ಯದ ತಾತ್ಪರ್ಯ. [ ಸಂ. ]

**ನದೀಯೋಜನೆ** (ನಾ). ನದಿಗಳಿಂದ ಉಪಯೋಗ ಪಡೆಯಲು ಅಣೆಕಟ್ಟು ಕಟ್ಟುವ ವ್ಯವಸ್ಥೆ,-ಏರ್ಪಾಡು : ನದೀಯೋಜನೆಗಳು ನಮ್ಮ ದೇಶದ ಇಂಜನಿಯರ್‌ಗಳ . . . ಕೆಲಸಗಾರರ ಪ್ರತಿಭೆಯ ಪ್ರತೀಕಗಳು (ಸನದಿ. ೩೮). [ ಸಂ. ನದೀಯೋಜನಾ ]

**ನದೀಸರ್ಜ** (ನಾ). ಒಂದು ಬಗೆಯ ಮರ ; ಅರ್ಜುನವೃಕ್ಷ ; ಮತ್ತಿಮರ : "ನದೀಸರ್ಜಃ, ವೀರತರುಃ, ಇಂದ್ರದ್ರುಃ, ಕಕುಭಃ, ಅರ್ಜುನಃ-ಈ ತೋರಮತ್ತೀಗಿಡ, ಕೆಂಪುಮತ್ತೀಗಿಡ, ರಕ್ತಾರ್ಜುನವೃಕ್ಷ" (ಸಿದ್ಧಾಂತಿ. ೦೨೨). [ ಸಂ. ]

**ನದೀಸುತ** (ನಾ). = ನದೀಜ ೩ : "ನಾದೇಯಃ, ನದೀಸುತಃ-ಈ ೨ ನದಿಯ ಮಗಂ" (ಹಲಾಯು. ೮೨-೩೪೭) ; ಗುರು ಗುರುಪುತ್ರ ಶಲ್ಯ ಭಗದತ್ತ ನದೀಸುತರೆಂಬ ಸಂದ ಬೀರರೆ ಮಟುವಕ್ಕುಂ (ಪಂಪಭಾ. ೦೦-೧೨); ತ್ರಿದಶನದೀಸುತನಿಂ ತೀರದ ಕಜ್ಜಂ ಮುನ್ನಂ ಕಳಶಸಂಭವನಿಂ ತೀರದ ಕಜ್ಜವಿನಜನಿಂ ತೀರದ ಕಜ್ಜಂ ದ್ರೋಣಪುತ್ರನಿಂ ತೀರ್ದಪುದೇ (ಗದಾಯು. ೩-೬೦) ; ಆ ನದೀಸುತನಡಿಗೆಜಗಿ ರವಿಸೂನು ಕಳುಹಿಸಿಕೊಂಡು ಬಹಳ ಮನೋನುರಾಗದಲ್ಕೈದಿದನು ಕುರುರಾಯನೋಲಗವ (ಕುಮ್ಯಾದ್ರೋ. ೦-೬೨). [ ಸಂ. ]

**ನದೀಸೂನು** (ನಾ). = ನದೀಜ ೩ : ಕಾನೀನಂ ದ್ರೋಣ ನದೀಸೂನುಗಳ ಟಾದಿಂಬಟುಕ್ಕೆ ಪೆಜರೆನಗಿಲ್ಲೆಂದಾನೆ ಗಳಿತಾಶ್ರುಜಲದಿಂ ಸೇನಾಪತ್ಯಾಭಿಷೇಕವುಂ ಮಾಡಿದಪೆಂ (ಗದಾಯು. ೩-೬೬). [ ಸಂ. ]

**ನದೀಹ್ರದ** (ನಾ). ನದಿಯ ಆಳವಾದ ಭಾಗ ; ಮಡುವು : ಜಳಾವಗಾಹಾಸೆಯಿಂ ವೈತರಣಿಯ ಓರಿಯ ದರಿಯಂ ಮೆಟ್ಟಿ ಸುಣ್ಣಾಲಂ ಮಣಲ್ದೀಂಟಿಗೆತ್ತದಟ ಪರಿತಪ್ತಲೋಹರಜಸ್ಸಿಕತಿಳತಳದೊಳ್ ಮೆಯ್ಯನೀಡಾಡುವುದುಂ . . . ಅಂತಲ್ಲಿಯುಂ ಸೈರಿಸದೆ ನದೀಹ್ರದಮಂ ಪುಗುವುದುಂ (ಶಾಂತಿಪು. ೬-೯೨ವ). [ ಸಂ. ]

**ನದುಗು**₁ (ಕ್ರಿ). ಪರಾಙ್ಮುಖವಾಗು ; ಮುಖ ತಿರುಗಿಸು : ಒದವಿದ ಪುರುಡಿಂದಂ ನೋಡದು ನುಡಿಯದು ಪೊರ್ದದೆನಿತು ಕಾಲ್ವಿಡಿದೊಡಮೊಲ್ಲದು ಕಿನಿಸಿ ಕಡುಪಿನಿಂದಂ ನದುಗಿದಪುದು ತಿಳಿಯದೆಂತುಮಾರ್ ತಿಳುಪಿದೊಡಂ (ಕಾದಂಸಾ. ೬೬). [ ? ]

**ನದುಗು**₂ (ನಾ). ಗುನುಗು : ಪಾಪದ ಕಡೆಯಿಂದ ಲ್ಲಾ ಬಂದಿದೆ ಅದನಿಗೇನು ನದುಗು ? (ಲೂಢಿ). [ ? ]

**ನದುರು** 'ನಜರು' ನೋ.

**ನದರುಗಾಣಿಕೆ** 'ನಜರುಗಾಣಿಕೆ' ನೋ.

**ನದುಳು** (ಗು). ೧. ಒಳಗಿರುವ ; ಹುದುಗಿರುವ ; ಮುಂಚಿಟ್ಟಿರುವ : ಕಿದರಿದಾಲಿಯ ಕಿಡಿಯ ಮಾಲೆಯ ವದನದೆಗಹಿನ ದೌಂಷ್ಟ್ರ ಬಿಗುಹಿನ ನದುಳು ಜಿಹ್ವೆಯ ಗಳದ ಹ್ಯಂಹೆಯ ಸುಟ್ಟು ಹೊಯ್ಲುಗಳ ಪದಯ ನಾಮದ ಬದಿಯ ರೋಮದ ತ್ರಿದಳ ಕನಿದ ಕದಳಿವರ್ಣದ ಪದದ ಕೇಸರಿಯುದಿಸಿ ರೋಷದಿ ಕವಿದವಂಭಟನ (ಅಂಬಿಕಾ. ೩೨-೩೮). (ನಾ). ೨. ಮುಂಚಿಟ್ಟಿರುವಿಕೆ ; ಹುದುಗಿರುವಿಕೆ : ವಿಷದ ಲಹರಿಯ ಲಳಿಯ ನದುಳಿನ [ಪಾಠಾಂ. ಉಸುರಿನ] ಹಸರಿಕೆಯ ಚೂರಿಸುವ ಜಿಹ್ವಾಪ್ರಸರದುರುಫೂತ್ಕಾರದಹಿಪಂಜರದ ಮಧ್ಯದಲಿ ಎಸೆದನೈ ಲವ (ತೊರಠಾ. ೬-೦೬-೯). 'ನದುಳುನಗೆ' ಪರಾ. [ ? ]

**ನದುಳುನಗೆ** (ನಾ). ಹೊರತೋರದ ನಗೆ ; ಹತ್ತಿಕ್ಕಿದ ನಗೆ ; ಅಂತರಂಗಿಕವಾದ ನಗೆ : ನೋಡಿದುದಖಿಳಖಳನಿಕರ ನದುಳು [ಪಾಠಾಂ. ಪುದಿದ]ನಗೆಗಳ ಮೊಗದ ಮುರುಹಿನ ವದನದರಮುಸುಕುಗಳಲಿದ್ದುದು (ತೊರಠಾ. ೩-೬-೦೩) ; ನ[ಪಾಠಾಂ. ನು] ದುಳುನಗೆಗಳಲಿವರು ಮೂವರು ಪುದಿದ ಪರಿತೋಷದಲಿ ರಾಮನ ಪದಪಯೋಜವ ಸಾರಿದರು ಕಪಿಕಟಕ ನಲಿದಾಡೆ (ತೊರಠಾ. ೬-೨೭-೬೨). [ ನದುಳು + ನಗೆ ]

**ನದ್ಧ** (ಗು). ೧. ಸೇರಿರುವ ; ಕೂಡಿಕೊಂಡಿರುವ ; ಕಟ್ಟಿದ. (ನಾ). ೨. ಬದ್ಧನಾದವನು ; ಒಳಪಟ್ಟವನು ; ಸೇರಿದವನು : "ಬದ್ಧಃ, ನದ್ಧಃ, ಸಂಯಾತಃ-ಈ ೩ ಕಟ್ಟುಪಟ್ಟವಂ" (ಹಲಾಯು. ೫೬-೦೪೮.) ; ಕರಿಸೇನಾಸಾರಿನದ್ಧೋತ್ತರಳಕದಳಿಕಾಕಾನನೋಚ್ಚುಂಬ್ಯಮಾನಾಂಬರಚಕ್ರಂ (ಆದಿಪು. ೪-೩೪). [ ಸಂ. ]

**ನದ್ಧ್ರೀ** (ನಾ). ಚರ್ಮದ ಪಟ್ಟಿ ; ತೊಗಲಿನ ಹಗ್ಗ : "ನದ್ಧ್ರೀ ವಧ್ರೀ ಸಂಜ್ಞೆಯದು ವರತ್ರಯೆನಿಕ್ಕುಂ" (ವಸ್ತುಕೋ. ೫೦-೩೬) ; ನದ್ಧ್ರೀ, ವಧ್ರೀ, ವರತ್ರಾ-೩ ತೊಗಲ ಮಿಣಿಯ ಪೆಸರು, ತೊಗಲ ಹಗ್ಗ" (ಸಿದ್ಧಾಂತಿ. ೨೩೯). [ ಸಂ. ನದ್ಧ್ರೀ ]

**ನದ್ಯಂಬು** (ನಾ). ನದಿಯ ನೀರಿನ ಆಶ್ರಯ. [ ಸಂ. ]

**ನದ್ಯಾಮ್ಲ** (ನಾ). ಒಂದು ಬಗೆಯ ಸಸ್ಯ : "ಉಪಕರದಂತಿ-ನದ್ಯಾಮ್ಲ" (ಓಷಧಿ. ೦೬). [ <ಸಂ. ನದ್ಯಾಮ್ರ ]

**ನದ್ಯುತ್ತರಣ** (ನಾ). ನದಿಯನ್ನು ಹಾಯುವಿಕೆ,-ದಾಟುವಿಕೆ : ಅಂತುಭಯನದಿಯ ವೈಷಮ್ಯಮುಮನಾಶ್ಚರ್ಯಂಬಟ್ಟು ನೋಡಿ ನದ್ಯುತ್ತರಣೋಪಾಯಮಾವುದೆಂದು ಬಗೆದು (ಆದಿಪು. ೦೩-೫೦ವ). [ ಸಂ. ]

**ನನವತಿ** (ನಾ). ಒಂದು ಸ್ಥಳದ ಹೆಸರು : ನೆಲ್ಲಿ ಕುಡಿಕ್ಕಿಯುವಳೆ ನನವತಿ ಸಾಗಲ ತಟಾಕಸ್ಯಾಕ್ (ಮೈಶಿ. ೦೯೩೯, ೩೦-೩೯ ; 670). [ ? ]

**ನನವರಿಕೆ** 'ನೆನವರಿಕೆ' ನೋ.

**ನನಸು, ನೆನಸು**₁ (ನಾ). ನಿಜಸ್ಥಿತಿ ; ವಾಸ್ತವಸ್ಥಿತಿ ; ಸತ್ಯ ; ದಿಟ ; ನಿಶ್ಚಯ : "ನನಸು = ದಿಟಂ" (ಕಮುದ. ಶಂ. ೨) ; "ನನ್ನಿ, ನಿಕ್ಕುವಂ, ನಿಸದಂ, ಸಾಜಂ, ನ.[ಪಾಠಾಂ. ನೆ]ನಸು, ದಿಟಂ-ಈ ೬ ಸತ್ಯಂ" (ಕಳಕಾ. ೦೩-೨೫೪) ; ಪುಳಿನಕರಿಸರಪ್ರದೇಶದೊಳ್ ಮಟಿದೊಟಗುವೈರಾವತದಂತೆ ಪವಡಿಸಿ ಕಿಡುದಾಸಾಂ ಬೇಗದೊಳ್ ಸುಭದ್ರೆಯುಂ ಕನಸಿನೊಳ್ ಕಂಡು ನನಸೆಂದು ಬಗೆದು (ಪುಣ್ಯಕಥಾ. ೪-೦೦೦೦ವ) ; ಭೀತಿಯುಂಬಟ್ಟದನೆ ಕನಸು ಗಂಡುಮ್ಮಳಂಗೊಂಡು ಚೋದ್ಯಂ ನನಸೆಂದೆಚ್ಚತ್ತಿರುತ ತಂನೆಯ ತಲೆಯನತಿಭ್ರಾನ್ತನಂದಿಂದು ನೋಳ್ಕುಂ (ಎಕ. VII, ಶಿವಮೊ. ೬೪-೩ ; 1112) ; ಕನಸೆಂದೊಡಂ ನನಸದೆಂದಾಳ್ದಲ್ [ಪಾಠಾಂ. ನೆನಸನುತ್ತಾಂತಳ್] ಮಹಾಚಿಂತೆಯುಂ (ಜಗವಿ. ೦೭-೦೦೬) ; ತಮ್ಮ ಕಲ್ಪನೆಯ ಕನಸನೆ ನನಸಿನ ನನ್ನಿ ಎಂಬಂತೆ ಏನೇನೊ ಕಣವೇಳುತಿಹುದವರ ಬಾಳಿ (ಚಂದ್ರಸ. ೧೨-೨೨); ಅವಳು ಕನಸಿನಲ್ಲಿ ಮೈತೋರಿ, ನನಸಿನಲ್ಲಿ ನಿಧಿಯನ್ನು ತೋರಿಸಿಕೊಟ್ಟಳು! (ರಾಷ್ಟ್ರೋದ. ೦೮೬). **ನೆನಸು**₁ : "ನೆನಸೆಂದು ದಿಟಂ" (ಶಬ್ದನಿ. ೦೯೦) ; "ನನ್ನಿ ಸಾಜ ನೆನಸುಂ ದಿಟಮೆಂದುಸಿರಲ್ಕೆ ಸತ್ಯಮಕ್ಕುಂ" (ಕವಿಕಂ. ೦೨೦) ; "ನೆನಸನಲ್ ನಿಶ್ಚಯಂ" (ಕಜಿ. ೫೬) ; ಕನಸಂ ಧನದತ್ತಂ ನೆನಸೆಂದು ಭೋಂಕನೆಚ್ಚತ್ತು (ಪಂಚತಂ. ೫೯-೦೦) ; ಕನಸಿಂದಂ ನೆರೆದಪನರ ನೆನಸಿಂ ನೆರೆದಪ್ಪನೆಂದು ತರವೇಟ್ಟಪೆ ಹಂತನಂ (ಜಗವಿ. ೦೭-೦೧೨); ದನುಜರಟ್ಟಿದ

ಕನಸ ಕಂಡರೆ ನೆನಸಿನಲಿ ನರರಂಜಾತಿಪ್ಪರು (ಶಾಂತಿಪು. ೩೩-೮); ಮಾಬುವಗಲುದಯದೊಳರಸಂ ತುಱುಗಿರೆ ಕಡುಹರಿಸಮಿರುಳ ಕನಸಂ ನೆನಸಂದರ್ಶಿಪಲಳಿಸಿಂಗ ರಾ ಯ ರ್ ಗ ರ ನು ಬ ದಿ ೦ ದ ೦ ಕರೆಯಲಟ್ಟಿದಂ ಪಡಿಯುಱಂ (ಚಳವಿ. ೩-೧೧೦).

ನನಸಾಗು, ನೆನಸಾಗು = ಪ್ರತ್ಯಕ್ಷವಾಗಿ ಕಾಣುವಂತಾಗು; ವಾಸ್ತವವಾಗು : ನುಡಿದೊಡಂ ಬರೆಯಿಸಿದೊಡಂ ಕಳಿಪಿದೊಡಂ ನನಸಾಗಿ ತೋಱಲಕ್ಕುಮೆ (ಪದ್ಮರಾ. ೧೦-೧೪೮); ಅವನು ಕಾಣುತ್ತಿದ್ದ ಕನಸುಗಳೆಲ್ಲಾ ನನಸಾದವು (ರೂಢಿ): ಅಂತುದಾರವಮಹೇಶ್ವರನೀಶ್ವರಮರಪ್ರಸಾದವೆಲ್ಲಂ ತನಗೆ ನೆನಸಾಗೆಯುಂ ಕನಸಿನಂದದವಾಗಿ ತೋಱೆ (ಶಂಪಥಾ. ೧೦-೧೪೦ ವ). [ದೇ.॥ ತಮಿ. ನನವು, ನನಾ]

**ನನಸುಗಿರು** (ಕ್ರಿ). ದಿಟವೆಂದು ಭಾವಿಸು; ನಿಜವೆಂದು ಭ್ರಮಿಸು: ಅಹುದೆ! ಬರಿದೆ ಬೆದರಿದೆ, ಅಜ್ಜ, ಕನಸಂ ನನಸುಗಿತ್ತು! (ಚಂದ್ರಸ. ೨೬-೨೩). [ನನಸು + ಗಿರು (< ಗಿಱು)]

**ನನಾಂದೃ** (ನಾ). ಗಂಡನ ಸೋದರಿ; ನಾದಿನಿ ಅಥವಾ ಅತ್ತಿಗೆ: "ನಾದುನಿ ನನಾಂದೃ ನಂ[ನಾ]ದಿನಿಯೆನಿಕುಂ" (ಅಸು.ಕೋ. ೩೭-೨೪); ಋಕಾರಾಂತಕ್ಕೆ-ಪಿತೃ, ಸವಿತೃ . . . ನನಾಂದೃ, ಯಾತೃ, ಮಾತೃ, ಧಾತೃ (ಶಮದ. ೮೪ ಪ್ರಯೋ). [ಸಂ.]

**ನನೂರು** 'ನಾಲ್ನೂಱು' ನೋ.

**ನನೆ₁, ನೆನೆ₁** (ಕ್ರಿ). ನನೆತು, ನನೆದು, ನೆಂದು, ನೆನೆದು (ಭೂತನ್ಯೂ). ೧. ಆರ್ದ್ರವಾಗು; ಒದ್ದೆಯಾಗು; ತೋಯು: "ನನೆ-ಆರ್ದ್ರಭಾವೇ, ಪುಷ್ಪಕುಟ್ಮಲೇ ಚ (ಮೊಗ್ಗು)" (ಶಮುಧಾ); ಅಂತೆಟ್ಟುತ್ತು ನೆತ್ತರ ಪೊನಲೊಳ್ ನಾಂದು ನನೆದ ಮೆಯ್ಯುಮಂ ತೊಯ್ದು ತಳ್ಪೊಯ್ದ ಜಡೆಯುಮಂ ಕಂಡು (ಶಂಪಥಾ. ೧-೧೦೩ ವ); ನಿರವಧಿಪ್ರೇಯಪ್ರೀತಿವಹನಂ ಪುಳಕದೊಳ್ ನನೆತು ಹರ್ಷದೊಳರಲ್ದು ಆನಂದಾಶ್ರುಭರದೊಳ್ ತುಳುಂಕಿ (ಅನಂಪು. ೩-೩೩ವ); ಮೊಮ್ಮಂದಿರುಗಳಳಿನ ಘನತೆಯನು ಕಿವಿಗೊಟ್ಟು ಕೇಳಿದು ನನೆದುದಂತಃಕರಣ ಕಂಬನಿದುಂಬಿದನು ಭೀಷ್ಮ (ಕುಮ್ಹಾಭೀ. ೬-೨೪); ಎಲೆ ವನಜಾಕ್ಷ ಬೆಟ್ಟವಂ ಕೊಡೆವಿಡಿದು ಪಟ್ಟಿಯಂ ನನೆಯುಲೀಯದವೋಲೀ ಪಾರ್ಥನಂ ರಕ್ಷಿಸುವೆ ನೀಂ ಕೃಪೆಯೊಳು (ಕೃಮಿಥಾ. ೧೩-೬೪). ೨. ನೀರನ್ನು ಹೀರಿ ಮೃದುವಾಗು,-ಮೆತ್ತಗಾಗು: ಕಲ್ಲಿಂತುಂ ನನೆಯದವೋಲ್ ಪೊಲ್ಲಮೆಯೊಳ್ ಕೂಡಿ ರೌದ್ರವಕ್ಕಿಟಿವವರುಂ ಸಲ್ಲಲಿತಮಪ್ಪ ಧರ್ಮಕ್ಕೆಲ್ಲಿಯುವೋರಂತೆ ಬಾರರಘವಶದಿಂದಂ (ಧರ್ಮಾಮೃ. ೧೦-೧೬೬); ಉತ್ತಮದ ಸೊಜ್ಜಿಗೆಯ ಬಟ್ಟವಾಲೊಳು ನನೆಹಿ ಮತ್ತೆ ನನೆ[ಶಾಂ. ಮೆತ್ತನಾ]ದಾಗ ತೆಗೆದದನು ಒಟ್ಟಿಯ ಹಿಟ್ಟನೊತ್ತಿ (ಸೂಪಶಾ. ೧-೧೧). ನೆನೆ₁: ೧. ಎಱೆದರೆ ನೆನೆಯದು ಮಱೆದರೆ ಬಾಡದು ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ (ಬಸವ. ೧೯೬); ಚಿತ್ರದಂತಕನೊಂದುದಿನವುದ್ಧತ್ತಪೋಧನ ವೇಷದಿಂ ನೆನೆವುತ್ತ ಮಳೆಯೊಳು ನಡುಗುತಂ ನಡುವಿರುಳು ನಡೆತರಲು (ಬಸಪು. ೨೭-೯೭); ಸೂ ಕ್ತಿ ಸು ಧಾ ರ ಸ ದಿ ನೆಱೆ ನೆನೆದುದಾತನ ಮೈ ವಿಲೋಚನವಾರಿಪೂರದಲಿ (ಕುಮ್ಹಾಶ. ೧೭-೩೩); ಮೊದಲೇ ಸೀಮೆಎಣ್ಣೆಯಲ್ಲಿ ನೆಂದ ಚಂಡು ಉರಿಯತೊಡಗಿತು (ಗೋಪುರ. ೪೪); ನೆನೆದ ಕಲ್ಲು ಮೆತ್ತಗೆ ಆದೀತೇ? (ಗಾದೆ). ೨. ಕೂಡಲಸಂಗಮದೇವ ಬಱಿಯುದಕದಲ್ಲಿ ನೆನೆವನೆ (ಬಸವ. ೦೪೪); ಧರಣಿ ನೆನೆದುದು ಗಂಧರಸಕಸ್ತೂರಿಯ ಪನ್ನೀರುಗಳ ಹೊನಲೊಡನೆರಸಿ (ಕುಮ್ಹಾವಿ. ೧೧-೯೩). 'ನೆನೆಗಡಲೆ', 'ನೆನೆಯಕ್ಕಿ₁' ಪರಾ. [ದೇ.॥ ತಮಿ. ನನ್ನೈ; ಮಲ. ನನ, ನನೆ; ತುಳು. ನನೆ; ಕೊಡ. ನೆಲೆ, ನೆಲ]

**ನನೆ₂** (ಕ್ರಿ). ೧. ಹೂವು ಬಿಡು; ಮೊಗ್ಗಾಗು; ಮುಗುಳಾಗು: "ನನೆತುದೆಂದು ನನೆವೆತ್ತುದು" (ಶಶಸಾ. ೯-೧೪೯); "ನನೆತುದು ನನೆಯೇಱಿದುದು" (ಶವಿಶಂ. ೭೭); "ನನೆತುದೆನೆ ಮೊಗ್ಗೇರಿದುದು" (ಶಶರ. ೫೩); ತಳಿತ್ತೆಱಗುವಶೋಕೆಗಳುಂ ನನೆತೆಲ್ಲ ಜಾದಿಗಳುಂ ಮುಗುಳ್ತ ಮಂಜಿವ ಮೊಲ್ಲೆಗಳುಂ (ಲೀಲಾವ. ೬-೬೦ ವ): ಬೆಳಕು ಚೆಂಕಿ ಬೆರೆತುಕೊಂಡು ಭಾವವು ಹೋದರೊಡನೆ ಬಾಳು ಮೊಳೆತು ಸುಗ್ಗಿ ನನೆತು ಹೂವಿನಂತೆ ಮಾಡಿದೆ (ಗೊಂಚಲು. ೨೩-೭). ೨. ಚಿಗುರು ಬಿಡು; ಅಂಕುರಿಸು. 'ನನೆವೊಯ್' ಪರಾ. [ದೇ.॥ ತಮಿ. ನನ್ನೈ; ತೆಲು. ನನಯು, ನನಚು, ನನುಚು]

**ನನೆ₃** (ನಾ). ೧. ಅರಳದ ಹೂವು; ಮೊಗ್ಗು; ಕುಟ್ಮಲ: "ನನೆ-ಆರ್ದ್ರಭಾವೇ, ಪುಷ್ಪಕುಟ್ಮಲೇ ಚ" (ಶಮುಧಾ); "ನನೆ ಕುಟ್ಮಲಂ" (ಶಶಸಾ. ೯-೧೪೪); "ನನೆಯೆನಲು ಕುಟ್ಮಳಮಕ್ಕು" (ಶಶರ. ೫೩); ನನೆಯ ಕೊನೆಯ ತಳಿರ ಮುಗುಳ ವನಲತಾನಿಕುಂಜದಿಂ ಪ್ರಸೂನರಜದ ಪುಂಜದಿಂ (ಹುಪಥಾ. ೧-೫೮ ರಗಳೆ); ಬನದಿಂ ಬನಕ್ಕೆ ನನೆಯಿಂ ನನೆಗಲರಿಂದಲರ್ಗೆ ಪೊರೆದು ಬಿರಯಿಗಳೆರ್ದೆ ಪೌವನ ವಾಱಿ ಪರಿಬಗುಂ ಕಾಮನಿಕಾಮಶಿಲೀಮುಖರಿ ಶಿಲೀಮುಖನಿವಹಂ (ಮಲ್ಲಿಪು. ೨-೯೧); ತುಱುಗಿದ ತಳಿರಿಂ ನನೆಯಿಂ ಕೆಱ ಮಿಡಿಯಿಂದೆಸೆದುದುಸದಳಂ ಮಾಕಂದಂ (ಕಾವ್ಯಾವ. ೨೩೨); ಸಣ್ಣ ನನೆಯೊಳಗಣ ಪರಿಮಳದ ಹೊಂಬಸೊಂಪಿ ಇದಿರಿಂಗೆಱಹಿಸಬಲ್ಲುದೇ ವಾಯು (ದೇಪಾಶ. ೬೩-೨೩೪); ಸಂಪಗೆಯ ನನೆಗೆಯ್ದಬಟ್ಟೆಕೊಯ್ಯಾಗೆ ಜಾಱುವ ತುಂಬಿ ನಗಿಸಿದುದು ಮಲ್ಲಿಗೆಯಂ (ಕಲ್ಯಾಕಾ. ೩೮); ತನುಪುಳಕ ತಲೆದೋಱೆ ರೋಮಾಂಚನದ ಬಿಗುಹಡಗಿತ್ತು ಕಂಗಳ ನನೆಗಳರಳಿದವಾಯ್ತು ಭೀಷ್ಮಂಗಿತ್ತ್ರಣವಧಾವ (ಕುಮ್ಹಾದ್ರೋ. ೧-೨೨); ಪೂವಳ್ಳಿಗಳ್ ನನೆಕೊನೆ ಮುಗುಳಲರ ಮುಗುಳ್ ಬಿರಿಮುಗುಳಂಕುರಲರ್ದ ಪೊಸಮಲರ್ಗಳಿಂದೆ ಸೊಗಯಿಸೆಯುಂ. ಮನೋಹರಮಾಯ್ತು ಪೊಸಸುಗ್ಗಿ (ರಾಮಾಶ್ವ. ೧೭-೧). ೨. ಹೂವು; ಪುಷ್ಪ: ಕುಸುಮಂ: ನನೆಯನೆ ಪೇಱೆ ಕಂದಳಿರೊಳೆಯ್ದೆ ಬಟಲ್ದಿಳಮಾವು (ಆದಿಪು. ೧-೬೪). 'ನನೆಗಣೆ', 'ನನೆವಾಸು₂' ಪರಾ.

ನನೆಯ ಕೋಲ್=ಹೂಬಾಣ; ಪುಷ್ಪಬಾಣ ನೀಂ ನಾಲ್ಕೆರಡು ಪಗಲೊಳೆವಸ್ತುಡೆಯನ ಕೈಯ ನನೆಯ ಕೋಲ ಕಾರಾಟಮಂ ಕಾಣ್ಬೆನುತೋಲಗಸಾಲೆಯಂ ಪೊಱಮಟ್ಟು (ಕಲ್ಯಾಕಾ. ೧೪೪). ನನೆಯ ಶಿಶು = ಮೊಗ್ಗು; ಮುಗುಳು: ಜ್ಞಾನಿಯ ಸಂಗ ನನೆಯ ಶಿಶುವಿನಂತಿರಬೇಕು ಜ್ಞಾನಿಯ ಸಂಗ ಭಾನುವಿನ ತಾವಿನಂತಿರಬೇಕು (ಷೋಳಸೂ. ೯೭-೩೬೫). ನನೆಯ ಶರ = ಪುಷ್ಪಬಾಣವನ್ನುಳ್ಳವನು; ಕಾಮ; ಮನ್ಮಥ: ನನೆಯ ಶರಂಗೆ ಚಿತ್ರದೆಡೆಯಂ ಕುಡದಿರ್ದನ ಪೆಂಪು ಜಾಣ್ ಜಸಂ . . . ಕೂರ್ಪು ಪೊಡರ್ಪೆಸೆದಿರ್ಪುದು (ಶಾಂತಿಪು. ೬-೬೩). ನನೆಯ ಶರಲ್=ನನೆಯ ಕೋಲ್: ನನೆಯ ಶರಲ್ಗಳುಮಂ ಕರ್ಬಿನ ಬಿಲ್ಲುಮನೊಲ್ಲದಿಲ್ಲಿಗವತರಿಸಿದನಂಗನನೆಯ್ದೆ ಕಾಣ್ಬವೋಲ್ ಕಂಡು ನೃಪಕುಮಾರರ್ ಸ್ವಯಂವರಾಸೆಯನುಱಿದರ್ (ಶಾಂತಿಪು. ೩-೯೪); ನನೆಯ ಶರಲ್ಗಳಂತೆ ನೆಱೆದಿಂಗಳ ತಣ್ಗದಿರಂತೆ . . . ಲೋಲಲೋಚನರು ಬಿ ಸಂತ್ರಿಮುತ್ತಿದುದಶೇಷಸ್ಯಪಾಲಸಭಾಂತರಾಳಮಂ (ಶಂಪಥಾ. ೩-೭೦); ಕೃತ್ರಿಮ ವಿಹಗಾವಳಿ ಶುಕಪಿಕಮೆನಲಾ ಮಂಡಪಮತಿ ಶೋಭಿಸಿದುದು ನನೆಯ ಸರಲ ನೀಱನ ಕೇಳೀವನದಂದಮನನುಕರಿಸಿ (ಅಮುಳಕ. ೮-೫೦).

[<ನನ್ನೆ/ತಮಿ. ನನ್ನೈ, ನಕ್ಕೆ; ಕೊಡ. ಕೊಡ. ನನ್; ತೆಲು. ನನ]

**ನನೆಕೇರ್** (ನಾ). ಮೊಗ್ಗಿನಿಂದ ನಿರ್ಮಿಸಿದ ಗೋಡೆ: ನನೆಕೇಱಿಂ ಕಂಪಿನಪ್ಪಂ ಕುಸುಮಿತ ಲತಿಕಾದಂಡಸಂದೋಹದಿಂ . . . ಒಪ್ಪುವ ನವಸುಮನೋಮಂಡಪಕ್ಕೆಯ್ದೆ ಮಂದಳ್ (ಲೀಲಾವ. ೧೦-೫೯). [ನನೆ₃ + ಕೇರ್₁]

**ನನೆಕೊನೆ** (ನಾ). ೧. ಚಿಗುರಿದ ಕುಡಿ; ಅಂಕುರ; ಮೊಳಕೆ: ನನೆಕೊನೆಯು ತಳಿರ ಪೂವಿನ ಬನವಮನಿತುಂ ಕಿವಿಗಳೆಳರೆ ಬೆಂಕಿಯ ಪೊಂಬ್ಬುರ್ವಿನೊಳೆ ಕೊರಗಿರ್ದ ಲತೆಗಳ ಕೊನೆಗೊನೆಯನೆ ದಹನನಲುರ್ದ ಕೊನೆಗೊನೆಗೋಡಂ (ಶಂಪಥಾ. ೩-೯೭); ಇಂದೋ ನಾಳೆಯೋ ಮತ್ತೆ ಮೈಯೆಲ್ಲ ನನೆಕೊನೆಯು

ಪ್ರಳಯವಾದುದರಿಂ ನಿಂತರೂ ಒಣಗಿಲ್ಲ ವನವು (ಕರುಶ್ರಾ; ೧೦-೨೩). ೨. (ಆಲಂ) ಹಿಗ್ಗು ; ಸಂತೋಷ ; ಆನಂದ : ನೆನಹು ನೆಮ್ಮಿತು ಶಿವಪಾಶರದ ನನೆಕೊನೆಯ ತೆರಳಿಕೆಯ ತೊಡಚೆಯ ಮನದ ಸಂಚಲವೀಜುವೋದುದು ಕಲಿಧನಂಜಯನ (ಕುಪ್ಪಾಅ. ೮-೯೨) ; ಒಂದರಿಂದಿನ್ನೊಂದು ಮನೆಗಿಲ್ಲಿ ನಡೆದರೇನೆ ವಿಜಯಯಾತ್ರೆಯು ನನೆಕೊನೆ! (ಚಂಕನ. ೬೭-೪). 'ನನೆಕೊನೆ ವೋಗು' ಪರಾ.

**ನನೆಕೊನೆಯಾಗು** = ವಿಕಸಿತವಾಗು ; ಅರಳು : ಸಲ್ಲನೆ ನಗೆನುಡಿಗಾಚಿನ ವೆಣ್ಣಲರ್ವಿಲ್ಲನ ನುಡಿ ಬಸಂತದೊಳು ಪಲ್ಲವಿಸುತೆ ನನೆಕೊನೆಯಾಯ್ತು ಚಿತ್ರಸಂಘ[ವು]ಲ್ಲವಲ್ಲರಿ ಬಗೆಗಾಚಿ (ವರ್ಧಚ. ೯-೨); ಭರತೇಶ – ಕುಸುಮವಾಜಿಯರ ದಿವ್ಯಪ್ರಣಯದ ಸುರತರದಲ್ಲಿ ನನೆಕೊನೆಯಾಗುತ್ತದ (ಭಸಾಅ. ೩೬೦). [ ನನ್ನೆ + ಕೊನೆ$_{2}$ ]

**ನನ್ನೆಕೊನೆಯೇರು** 'ನನೆಕೊನೆಯೇಱು' ನೋ.

**ನನೆಕೊನೆಯೇಱು,** ನನೆಕೊನೆಯೇರು (ಕ್ರಿ). ಚಿಗುರು ; ಕೊನರು ; ಮೊಳೆ ; ಅಂಕುರಿಸು : ಜನಕಜೆ ವಕ್ತ್ರದೀಪಕಲಿಕಾಕೃತಿಯಿಂ ಪುಗೆ . . . ನರೇಂದ್ರನಂದನಗೆ ಮನೋವಿಕಾರದೊಡನಂಗವಿಕಾರವಂದೇಂ ಪೊದಟ್ಟುದೋ ನನೆಕೊನೆಯೇಱುವಂತೆ ವನರಾಜಿ ವಂಧುಪ್ರಥಮಪ್ರವೇಶದೊಳ್ (ಪಂರಾಮಾ. ೩-೫೦). **ನನೆಕೊನೆಯೇರು :** ಇಂತುಹರ ನೆನಹು ನನೆಕೊನೆಯೇರಿ ಪ್ಯಾರಿಶಿಲ್ಪದಿ ಚಿತ್ರವರಳುತಿರೆ, ಎತ್ತ ಹೊರಳಿದರು ನೂತನ ಸೃಷ್ಟಿ (ಶಿಲಾಮು. ೭೦-೯). [ ನನೆಕೊನೆ + ಏಱು$_{1}$ (<ಏಱ್$_{1}$) ]

**ನನೆಕೊನೆವೋಗಿಸು** (ಕ್ರಿ). ೧. ಚಿಗುರು ಮತ್ತು ಹೂವುಗಳಿಂದ ತುಂಬಿರುವಂತೆ ಮಾಡು. ೨. ಸಂತೋಷಗೊಳಿಸು ; ಹರ್ಷಪಡಿಸು : ವನದೊಳು ಚರಿಸಿ ವಸಂತನಾ ವನವ ಭ್ರೋಂತನೆ ಚಿಗುರೇಱಿಸುವಂತೆ ವನಧಿಮಧ್ಯದ ಧರಣಿಯ ನಿನ್ನ ಸುಳುಹಿಂದ ನನೆಕೊನೆವೋಗಿಸು ನೃಪತಿ (ಭರತ. ೫೦-೧೩). ೧, ೨ : ಮನಸಿಜಕಲ್ಪಲತಾನಂದನಮನೆ ಬಿಂಕಕ್ಕೆ ಕೊಂಡಿಯಾಜನವಂ ನನೆಕೊನವೋಗಿಸುತಿರ್ಪುದು ಮನುಜವನೋಭವ ಭವದ್ವಿಲಾಸವಸಂತಂ (ಯಶೋಚ. ೩-೩). [ ನನೆಕೊನೆವೋಗು + – ಇಸು$_{2}$ ]

**ನನೆಕೊನೆವೋಗು** (ಕ್ರಿ). ೧. ಚಿಗುರು ; ಪಲ್ಲವಿಸು ; ಅಂಕುರಿಸು : ನನೆಕೊನೆವೋಯ್ತು ತನ್ನ ನನೆಯಿಂ ಮುದವುರ್ವಿಗೆ ತನ್ನ ಪುಷ್ಪದಿಂ ಮನಸಿಶಯುಂಗೆ ಪುಷ್ಪಶರನೆಂಬ ಪೆಸರ್ ಬೆಳಗಿತ್ತು (ಜಗಿವಿ. ೧೪-೬೨) : ಮನಸಿಜ ಮತ್ತವಾರಣಮೊ ಕಾಮನ ಕಾರ್ಮುಕಗೇಹಮೋ . . . ನನೆಕೊನೆವೋದ ಮಾಮರನೊ ಪೇಳ್ ನ ರಂಜಿಸಿದತ್ತು ಮಾಮರಂ (ರಆಶ. ೪-೬೩) ; ಬೀದಿವರಿದುದು ಬಿಂಕನನೆಕೊನೆವೋದುದಾಶಾದೀಜ ಲಕ್ಷ್ಮಿಯ ಹೋದ ಮೂಗಿಗೆ ಕದಪ ಹೊಯ್ದನು (ಕುಪ್ಪಾಕ. ೦-೨೫) ; ನನೆಕೊನೆವೋದ ನವಾಮ್ರದ ನೆಳಲೊಳ್ ಮನವಂ ತನುವಂ ಬೇರ್ಕೆಯ್ದೊರ್ವಂ ಮುನಿಕುಲತಿಲಕಂ ಯೋಗದೊಳಿರೆ ಕಂಡಂ ಜಯಭೂವರನು (ಜಯುಕಾ. ೯-೯೦). ೨. ಉಬ್ಬು ; ಉತ್ಸಾಹಿಸು ; ಹಿಗ್ಗು ; ಸಂತೋಷಗೊಳ್ಳು : ಅಂತು ಮೂರ್ಧಾಪ್ರಸಂಗನಾದ ಪನ್ನಗಪತಾಕಂಗೆ ಶಿಶಿರೋಪಚಾರಕ್ರಿಯೆಗಳು ಮಾಟ್ಟಸಂಜಯನಿರವಂ ತತ್ಪುರಿಜನಂ ಕಂಡು ಪೇಟ್ ಗಾಂಧಾರಿ ಮನದೊಳ್ಳಳ್ಳಿ ನನೆಕೊನೆವೋಗಿ (ಗದಾಯು. ೩-೭೭ ವ) ; ಪುತ್ರದೋಹಳದಿಂ ಸಮನಿಸಿದುದ್ದೀಪನಧಾರ[ವ]ವೆಂಬವುದಿನ ಮಟ್ಟಿಯು ಮಡಲ್ತು ನನೆಕೊನೆವೋಗಿ (ಅರ್ಥಪೀ. ೧-೯೨ ವ) ; ತನತನಗುರ್ವುತುಂ ಬಿಡದ ಕೊರ್ವುತೆ ಪರ್ವುತುಮುರ್ವಿಯೊಳ್ ಕರಂ ನನೆಕೊನೆವೋಗಿ ಮಾಯ ಕೊಬಚಾಡದ ಮಾಣ್ಬುದೆ ಹಂಪೆಯಾರ್ಶ್ವನೇ (ಹಂಪಾಶ. ೬೫); ಅನುಪಮಚಿದ್ವನಾರ್ಯರುಗಳ್ ಪರಿದುತ್ಸವದಿಂದ ಬಂದು ತಜ್ಜನಪತಿಪುತ್ರನಂ ಸಚಿವಪುತ್ರನುಮಂ ನಡೆ ನೋಡಿ ಚಿತ್ರದೊಳ್ ನನೆಕೊನೆವೋಗಿ (ರಾಜಶೇ. ೪-೮೩) ; ನುಡಿಗಬ್ಬದ ಗಬ್ಬುದುಬ್ಬರದಿಂ ನನೆಕೊನೆವೋಗಿ (ರಾಮಾಶ್ವ. ೧೫೩-೬). [ ನನೆಕೊನೆ + ಪೋಗು$_{1}$ ]

**ನನೆಗಣೆ** (ನಾ). ಹೂವಿನ ಬಾಣ ; ಪುಷ್ಪಬಾಣ ; ಹೂಬಾಣ : ಅಂತು ತಿರುವಿಂ ಬರ್ದುಂಕಿದ ಕಂತುವ ನನೆಗಣೆಗಳಂತೆವೋಲ್ ನಡೆತಂದರ್ ಸಂತಸದೆ (ಪಂಪಭಾ. ೯-೧೦೦) ; ಬಾಲೆಯ ಕಡೆಗಣ್ಣೋಟಮೆ ಸಾಲದೆ ನನೆಗಣೆಗಳೇವುವೆಂದು ಮನೋಜಂ ಶೂಲಿಯ ನೊಸಲುರಿಗಣ್ಣಿಂ ಪೀಲಿಯ ಕಣ್ಣಿಂಬಂ (ಪಂರಾಮಾ. ೫-೪೪) ; ನನೆಗಣೆಯಂ ಸ್ಮರಂ ಪಡೆದ [ಪೂಗೊ]ಳದಂತೆಪೊಲಿರ್ದುದಚ್ಚವಿಂಚಿನ ಸುಲಿಪಲ್ಗಳ್ (ಅರ್ಥನೇ. ೨-೧೪) ; ನನೆಗಣೆ ನಡುಗುಂ ಕಾಮಿಗಳೆಂಬ ಮಾತಿಲ್ಲಿ ಪುಸಿ ಪರಸ್ತ್ರೀರತರಂ ನನೆಯ ಮೊನೆಯಿಂಬು ಮಲರಲಗಿನಂಬುಮಾ ಬನದೊಳರ್ಚಿ ನೋಯಿಪುದು ದಿಟಂ (ಶರ್ವಚ. ೧೧-೨೬) ; ವಸಂತಂ ವಸಂತನಂ ಕಾಮಂ ಕಾಮನಂ ಇಕ್ಷುಚಾಪಂ ಇಕ್ಷುಚಾಪವಂ ನನೆಗಣೆ ಸಾರ್ವಂತೆ ಪಾರ್ವತಿಯಂ ನವಯೌವನಂ ಸಾರ್ವಲ್ಲಿ (ಗಿರಿಕ. ೪-೭ ವ) ; ಜಕ್ಕುಲಿಪ ಮನದ ನನೆಗಣೆಚಿನರಸಿಗೆ ನೋಡೆ ಸೊಕ್ಕಸ್ವಮವೆನಿಪ ರೂಹಿನ ಮೋಹನಂ ಜನಿಪ ಚಿಕ್ಕಹರೆಯದ ಬೆಟ್ಟದೆರಳೆಗಣ್ಣರಲ ಪೆಣ್ಣಕ್ಕಳೆಯ್ತಂದರೊಸೆದು (ಹದ್ಮರಾ. ೩-೬೭). [ ನನ್ನೆ$_{2}$ + ಕಣೆ$_{1}$ ]

**ನನೆಗಣೆಗೊನೆ** (ನಾ). ಹೂಬಾಣಗಳ ತುದಿ ; ಪುಷ್ಪಬಾಣಗಳ ಮೊನೆ : ಆ ನನೆಗಣೆಗೊನೆಯಿಂದುದಯಿಸಿದುಗ್ರಾನಲನೊಳ್ಪುರಿಯೊಳು ತದ್ವಿರಹದ ಮಾನಿನಿ ಕಣ್ಗೆ ವಿರಾಜಿಸಿದಳ್ ಸ್ವಾಹಾವಧುವೆಂಬಂತೆ (ಜಯುಕಾ. ೪-೯೨).

[ ನನೆಗಣೆ + ಕೊನೆ$_{2}$ ]

**ನನೆಗಣೆದೊಡು** (ಕ್ರಿ). ಪುಷ್ಪಬಾಣವನ್ನು ತೊಡು ; ಹೂಬಾಣವನ್ನು ಹೂಡು : ಕವಿದೆನ್ನನಿಸಲೆಂದು ತಿರುವಿನೊಳು ನನೆಗಣೆದೊಟ್ಟು ಹದಿವಟ್ಟು ಕಂದರ್ಪನು ಸನ್ನದ್ಧನಾಗಿ ನಿಂದು (ಸೌಂದಪು. ೧೭-೪೩).

[ ನನೆಗಣೆ + ತೊಡು$_{1}$ ]

**ನನೆಗಣೆಯ** (ನಾ). ಹೂವಿನ ಬಾಣಗಳನ್ನು ಹೊಂದಿದವನು ; ಕಾಮ ; ಮನ್ಮಥ : ನನೆಗಣೆಯನ ಕಣೆಗಳವೊಲು ಗೋಪರಂಗನೆಯರ ನಯನ ಮರೀಚಿ ತನುವಿನೊಳಗೆ ಪಸರಿಸಲಾ ತಾಪಸ ಮನವನಿತ್ತನು ಮನಸಿಜಗೆ (ಅಂಜನ. ೨-೭೩); ಕಡುಚೆಲ್ವಂ ಪಡೆದನಾವಗಂ ನನೆಗಣೆಯಂ (ಕಬ್ಬಿಕಾ. ೦೪೭) ; ನನೆಗಣೆಯನೊಲಿದರ್ಚಿಸುವ ಮೋಹನದ ಸಿರಿಯೋ ಕಬ್ಬುವಿಲು ಗಾಚಿನ ನಲವಿನಾರಾಧಿಸುವ ಮಂತ್ರಾಧಿದೇವತೆಯೋ (ಶಾಕ್ಕಭಾ. ೨-೨೩) ; ನನೆಗಣೆಯನ ನೇಹದ ಪಾಳವೊ ಪೇಳೆನೆ ಗಣಿಕಾಜನವೆಸೆದುದು ಸೌವರ್ಣದ ಸೌಧದ ಮುಂಬಿನೊಳು (ಉದ್ಭದೇ. ೪-೧೯). [ ನನೆಗಣೆ + – ಅ$_{7}$ ]

**ನನೆಗಪ್ಪಡ** (ನಾ). ತೊಯ್ದ ವಸ್ತ್ರ ; ಒದ್ದೆಯಾದ ಬಟ್ಟೆ : ಮನಂದಣಿಯೆ ಚೊಕ್ಕಳದಿಂ ನೀರೊಳಾಡಿ ಮಿಂದು ಬಂದು ತಡಿಯನಡರ್ದು ನನೆಗಪ್ಪಡ ಮನುಟ್ಟದು ಪೊಸಸೀರೆಯಂ ನಿಱಿವಿಡಿದಿಟ್ಟು (ರಾಮಾಶ್ವ. ೦೨೯-೨).

[ನನ್ನೆ$_{1}$ + ಕಪ್ಪಡ]

**ನನೆಗುದಿ,** ನೆನೆಗುದಿ (ನಾ). ೧. ಅರ್ಧ ಬೇಯಲವುದುಂ; ಹೆಚ್ಚಾಗಿ ನೆನೆದಂ ಪೂರ್ತಿ ಬೇಯಂದಿರುವುದುಂ : ಹೊತ್ತುವುದು ಸರಿಯಹುದು ನನೆಗುದಿಯಹುದು . . . ಒಣಗಿಹುದು ದೋಷಮಪನಕ್ಕಿಂಬು ತೆಱಪಪ್ಪುದು (ಸೂಪಶಾ. ೩-೧). 'ನೆನೆಗುದಿಗೊಳ್' ಪರಾ. ನೆನೆಗುದಿ: ೨. (ಆಲಂ) ಪೇಚು ; ತಳಮಳ : ಆತ ಈ ಕೆಲಸ ಮಾಡಬೇಕೋ ಬೇಡವೋ ಎಂದು ನೆನೆಗುದಿಯಿಂದ ಒದ್ದಾಡುತ್ತಿದ್ದ (ರೂಢಿ).

**ನೆನೆಗುದಿಗೆ ಬೀಳು** = ಅನಿಶ್ಚಿತವಾಗಿರು; ಅನಿರ್ಧಾರವಾಗಿರು; ಬಗೆಹರಿಯದಿರು : ಹೀಗೆ ಪ್ರಣಯ ನೆನೆಗುದಿಗೆ ಬಿದ್ದ ಮೂಲಕ ಕಟ್ಟಿ ಕಂಗಾಲಾದನು (ಗಂಮಾಯಿ. ೯೯) ; ಸದ್ಯದ ಮಟ್ಟಿಗಂತು ಆ ವಿಲಾಸಭವನದ ನಿರ್ಮಾಣಕಾರ್ಯವು ನೆನೆಗುದಿಗೆ ಬಿದ್ದಿತಂ (ಸ್ವಾಲಮಿ. ೩೯) ; ಆಮೇಲೆ ಮಂತ್ರ ಆಂದೋಲನವು ನೆನೆಗುದಿಗೆ ಬಿದ್ದ ಮೇಲೆ ತಂದೆಯ ಒತ್ತಾಯದ ಮೂಲಕ ಕಾಲೇಜು ಸೇರಿದ್ದು (ದಾಸಹು. ೮೪).

[ ನನ್ನೆ$_{1}$ + ಕುದಿ$_{2}$ ]

**ನನೆಗುದಿಗೊಳ್** (ಕ್ರಿ). ತಳಮಳ ಹೊಂದಂ : ಮನಸಿಜಕರೀಂದ್ರಕಟಮೊಳ್ ಸೊಣೆ ತೊಳ್ತನೆ ಪುಟ್ಟುವಂತೆ ವಕುಳಕ್ಕೆ ವಸಂತನ ಪುಟ್ಟಿ ಬಿರಯಿಯರ್ದೆಗಳ್ ನನೆಗುದಿ[ಪಾಠಾಂ, ದಿ]ಗೊಂಡವು ಬಸಂತಮಾಸದ ಪುಗಿಲೊಳ್ (ಮಲ್ಲಿಪು. ೩-೧೬). [ ನನೆಗಂದಿ + ಕೊಳ್$_1$ ]

**ನನೆಗೈದುಗಾಜಿ** (ನಾ). ನನೆಯೆಂಬ ಆಯುಧವನ್ನು ಹಿಡಿದವನು ; ಮನ್ಮಥ : ನನೆಗೈದುಗಾಜಿನೆಂದೆನಿಪ ಧೀವರ ದಿವಿಜ ದನುಜ ಮಾನುಜರ ಧೈರ್ಯಮೆಂಬ ಮಾತ್ಸ್ಯಂಗಳಂ ತನಗೆ ವಸಮಾಡಿಕೊಳಲು (ಶಾಂತಪು. ೦೬-೩೬). [ ನನೆ$_2$ + ಕೈದುಗಾಜಿ (<ಕೆಯ್ದುಗಾಜಿ) ]

**ನನೆಗೊಂಬು** (ನಾ). ಹೂವುಗಳಿಂದ ತುಂಬಿದ ರೆಂಬೆ,-ಕೊಂಬೆ : ಬಂಡನುಂಡು ನನೆಗೊಂಬುಗಳಿಂ ಮೊರೆದೇಟ್ಟ ಭೃಂಗರಝಂಕಾರವೆ ಪಾಟ್ಟುದಾರ ಬಳಗಂ . . . ಹರ್ಷಭಾರಮಂ (ಹಂಪಾಯ. ೦-೧೦೮) ; ನನೆಗೊಂಬಂ ನೀಳ್ಕಿ ಚಂದ್ರಾತಪಮ ಪುದಿದುದೆಂಬನ್ನೆಗಂ ನೋಡಿ ಚಂದ್ರಾನನೆ ಪೂವಂ ಲೀಲೆಯಿಂದಂ ತಿಱಿಯೆ (ಮಲ್ಲಿಪು. ೬-೭೬) ; ನನೆಗೊಂಬಾಣತಿಮಾಡಿ ಪಾಡುವಪೊಳ್ದಿರ್ದತ್ತು ಭೃಂಗಾಂಗನಾಧ್ವನಿಯಿಂದಂ (ಸೂಕ್ತಿಸು. ೦೦-೫೦). [ ನನೆ$_2$ + ಕೊಂಬು$_1$ ]

**ನನೆಗೊಯ್** (ಕ್ರಿ). ಹೂವುಗಳನ್ನು ಕೀಳು,-ಬಿಡಿಸು,-ತಿರಿ : ತೆಗೆದು ನನೆಗೊಯ್ವು ಬಿಡೆ ಮೇಲೊಗೆವೆಳದಳಿಗೊಂಬು ಪೋಲ್ತುದಾ ಪೂವಿನ ಸೂಳ್ಗೆ ಕೊವಲಂ ಪಿಡಿದು ಮದಾಳಿಗಳುಲಿಯಿಂ ಪುಯ್ಯಲಿಡುವಶೋಕೆಯ ಸೈಯಂ (ಚಂದ್ರಪು. ೭-೧೦೦೦). [ ನನೆ$_2$ + ಕೊಯ್ ]

**ನನೆಗೋಲ್** (ನಾ) = ನನೆಗಣೆ : ನನೆಗೋಲ್ ನಟ್ಟು ಕೊನರ್ತಪೊಲ್ಮುಳಕ ಮಮ್ಮೆಕ್ಕಲ್ಲಿ ರಕ್ತಾಂಬುಗಳ್ ಪನಿವಂತಿರ್ದುದು ಘರ್ಮವಾರಿ (ಲೀಲಾವ. ೩-೬೫) ; ಮಿಸುಪನ್ನಮಯ ಪುರ್ವಿನ ಕರ್ವಿಲ್ಲ ನೋಟದ ನನೆಗೋಲ ಲೀಲೆಯೊಳೆ ಸೋಲಿಸುವೆಂ ಜಿತಕಾಲಶೂಲಿಯಂ (ಗಿರಿಜೆ. ೭-೭೭) ; ನನೆಗೋಲ್ಬಿನಬಿಲ್ಲದಾಳೆಕುಳಲೇಪಾವಾರ್ವಿಯೊಂಬರ್ನೋಡನ ಬಿಲ್ಲಂ (ಅನಂತಪು. ೯-೦೧) ; ಜೊನ್ನೊಡಲಂ ನಿಮಿರ್ಚಿದಪನಗ್ನಿಯ ಕಣ್ಣದಿಂದ ಮೋಹೊ ನೀನುನ್ನನೆಗೋಲ್ಗಳಂ ಸಿಡಿಲ್ಗೆ ಸಾಟಿಯುನಾಗಿಪ ಪಂಚಸಾಯಕಾ (ಚಕಲಂತ. ೬೨-೩೬). [ ನನೆ$_2$ + ಕೋಲ್$_1$ ]

**ನನೆಗೋಲ** (ನಾ). =ನನೆಗಣೆಯಂ : ನನೆಗೋಲನಂಪಟಳದಲಿ ಭ್ರಾಂತಿಗೊಂಡಿರ್ದ ವನಚರ ಪೂತ ಸಂಪಗೆಯ ಕೊನೆಗಳ ಮುಱಿದಿಡಲಂದ ತಾಪಸ ರೆಲವನೆಗಾತಿಯರನಪ್ಪಿದರು (ಮೋಹತ. ೭-೦೫) ; ವಿನಯದಿ ಮಾತಾಡು ಮಳರಾಯ ನಿನ್ನಯ ತನಯಳಿಗೋಸುಗ ಬಂದ ಮನೆಯಳಿಯನ ಕೂಡೆ ಮಚ್ಚುಪನೇಕೆಂದು ನನೆಗೋಲನಾತ್ಮಜ ನುಡಿದ (ಮೋಹತ. ೩೩-೨೮). [ ನನೆಗೋಲ್ + - ಅ$_7$ ]

**ನನೆದಂಡೆ** (ನಾ). ಹೂವಿನ ದಿಂಡಂ,-ಮಾಲೆ : ಗಂಡನಿಂದಲೇ ಗಂಳದಾಳಿ, ಅರಿಷಿಣ, ಕುಂಕುಮ, ಮಲ್ಲಿಗೆಯ ನನೆದಂಡೆ (ಕನ್ನಶಾ. ೦೩೩). [ ನನೆ$_2$ + ದಂಡೆ$_1$ ]

**ನನೆದುಱುಗಲ್** (ನಾ). ಹೂವಿನ ಗೊಂಚಲು,-ಗುಚ್ಛ : ನೆಱೆ ಬಸಂತನ ಮದನಶರಕಂದೆಱೆಕರೋವಿದ ಚೆಂದಿರ ನನೆದುಱುಗಲೊದವಿದಶೋಕೆಗಳು ಬನದೊಳು ವಿರಾಜಿಪವು (ಶಾಳ್ಮಲಾ. ೨-೩). [ ನನೆ$_2$ + ತುಱುಗಲ್ (<ತುಱುಂಗಲ್) ]

**ನನೆದೊಡಿಗೆ** (ನಾ). ಹೂವಿನ ಆಭರಣ,-ಅಲಂಕಾರ : ಇಂತು ಜಲಕ್ರೀಡೆಗೆಂದು ಕೊಳನಂ ಪೊಕ್ಕಲ್ಲಿ ನನೆದೊಡಿಗೆಯ ನಾಯಕಿಯರುಂ ತಿಲಕದಲಲನೆಯರುಂ . . . ಗಿರಿಜೆಯ ಚರಣಕಮಲಕ್ಕೆ ಭರದಿಂದೆಱಗುತ್ತಂ (ಗಿರಿಜೆ. ೯-೨೦ ವ). [ ನನೆ$_2$ + ತೊಡಿಗೆ (<ತೊಡುಗೆ) ]

**ನನೆದೋಱು** (ಕ್ರಿ). ಮೊಗ್ಗನ್ನು ಹೊಂದಂ; ಮುಗುಳಂ ಬಿಡು: ಇದಿರೊಳ್ ನನೆದೋಱೆ ವಸಂತದೂತಿಯನೆ ತಾನೆ ನೆಗಟ್ಟ ಮಾಧವಿಯನೆ ಸಂದದಿರ್ಮುತ್ಕೈಯ ಪುಗೊಂಚಲ ಪುದುವಿನೊಳೆಱಗಿದ ಮದಾಳಿಗಳ್ ಮಱೆದಪ್ಪುವೇ (ಆದಿಪು. ೧೧-೦೦೮) ; ದೇವಿ ನೀಂ ನಡಪಿದೆಳಲತೆ ನನೆದೋಱಿತೆಂದು ಬಿನ್ನವಿಸಿದ ಬಾಲಕಿಯರನಾಭರಣಪ್ರದಾನಾತಿ ಸನ್ಮಾನಂಗಳಿಂ ಸಂತೋಷಂಬಡಿಸುತಿರ್ದಳ್ (ಕಾದಂಬ. ೨೫) ; ನನೆದೋಱಿತ್ತು ವಸಂತದೂತಿ (ಮಲ್ಲಿಪು. ೩-೭) ; ಕಡವಲವರ್ಪೂತ್ತು ಮೊಲ್ಲೆ ಮುಗುಳ್ಚಿತ್ತು ಪೊದಟ್ಟು ಪೊಲಂ ಪಸುರ್ತುವಾಸಡಿ ಕುಡಿಯೇಱೆ ಮುತ್ತೆ ನನೆದೋಱೆ (ಕುಸುಮಾ. ೬-೦೩) ; ಮರುಗ ಮೊನೆ ನನೆದೋಱೆ ಸುರಗಿ ಜಾಜಿಯ ನನೆಗಳರಳೆ ಪರಿಮಳದಲೆಸೆಯಲ್ಕೆ (ಹಡಿಕಾ. ೬-೩೬) ; ಎಲೆ ಸುಲಿದೆಡೆಗಳ [ಕಣ್]ಕಣ್ಗಲೆಯೆಡೆ ಗಂಟೊಡೆದು ಮೊನೆ ನನೆದೋಱಿ[ಪಾಠಾಂ, ಕೊನೆದು] ಮುಗುಳ್ಗಲರ್ದು ಮಱಿದುಂಬಿಗಂ ತಂಬೆಲರ್ಗಂ ಮುದ್ದಾದುವಲ್ಲಿ ಪೊಸ ಮಲ್ಲಿಗೆಗಳ್ (ಯಶೋಧ. ೯-೩). [ ನನೆ$_2$ + ತೋಱು ]

**ನನೆನಾಱು** (ಕ್ರಿ). ಹೂವಿನಿಂದ ಗಮಗಮಿಸು,-ಸುವಾಸನೆ ಬೀರು : ನನೆಯೆಳಗಂಪವನಕ್ತಿಯುಮಣಂ ನನೆನಾಱಿದರಲ್ಲನೇಕಕೋಕನದ ವನಂಗಳೊಳ್ ಸುಟಱಿದು ತಣ್ಣಸಮಾಗದೆ . . . ತೀಡಿದುದು ತೆಂಕಣಗಾಳಿ ವಸಂತಮಾಸದೊಳ್ (ಹಂಪಶಾ. ೩-೪೮). [ ನನೆ$_2$ + ನಾಱು$_1$ ]

**ನನೆಬಿಜ್ಜಣಿಗೆ** (ನಾ). ಹೂವಿನಿಂದ ಮಾಡಿದ ಬೀಸಣಿಗೆ : ನನೆಬಿಜ್ಜಣಿಗೆಯ ತಣ್ಣೆಲರಿನಾಱದುಯಿಮ್ಮ ತನುತಾಪ (ಹಡಿಕಾ. ಹರಿ. ೨೧೦). [ ನನೆ$_2$ + ಬಿಜ್ಜಣಿಗೆ ]

**ನನೆಮುಗುಳ್** (ನಾ). ಎಳೆಯ ಮೊಗ್ಗು ; ಹೊಸ ಮೊಗ್ಗು : ನನೆಮುಗು[ಪಾಠಾಂ ಗ]ಳ್ ಕೊನೆಮುಗುಳ್ಗರಿದಿರೆ ಮುಗುಳ್ಗಳಂ ತನಿಗಂಪು ತೀವಿರ್ದ ಪೊಚ್ಚಪೊಸಪೂಗಳಂ ಕೊಂಡು ಕುಕಿಲಿಱಿವುತಂ ನಡೆತಂದು (ಪುಷ್ಪರ. ಹ. ೫೨೩-೨೭) ; ನನೆಮುಗುಳ್ ನನೆಕುಸುಮ ವಸುಗಾಯ್ . . . ಕೊನೆದು ತೂಗುವ ಫಲಭರಂಗಳ ಘನತರದ ಸಹಕಾರ ಸಹ ಸುರವನಕದಂಬಕ ನೆಸೆದುದಿದಿರಲಿ ಕಟಿಕಂಲೇಶ್ವರನ (ತೊರಶಾ. ೩-೩ ೧೯). [ ನನೆ$_2$ + ಮುಗುಳ್$_2$ ]

**ನನೆಮೊನೆ** (ನಾ). ಮೊಗ್ಗಿನ ತುಂದಿ,-ಅಗ್ರಭಾಗ : ತೋಳಿನೊಳೊಱಗಿ ದಿನಿಯಳ ಕರ್ಣಪೂರಕೂಳೆಱೆಯ ಕತ್ತುರಿರಸವ ನನೆಮೊನೆಯಿಂದ ಲೇಖಿಸಿದ (ಸಾಳ್ಮಲಾ. ೦೬-೦).

**ನನೆಮೊನೆಯಾಗು** = ಚಿಗುರು : ನನೆಮೊನೆಯಾಗಿ ಬಂದುವೆಳಮಾವೆಳ ಮಾವಿನ ಮುಂಚೆ ಬಂದ ಪೂವಿನ ಪೊಸಗೊಂಚಲೊಪ್ಪಿದುವು (ಶಾಂತಿಪು. ೭-೦೨೩). [ ನನೆ$_2$ + ಮೊನೆ$_1$ ]

**ನನೆಯಂಬ** (ನಾ). = ನನೆಗಣೆಯಂ : ನನೆಯಂಬಂ ತಾವರೆಪೂವಿನ ಕೈಪೊಡೆಯಿಂ ಮನೋಭವಂ ತೊಡೆವಪೊಲು ಮಿಳಿಕೆಯ ಸಬಾಷ್ಪಲೋಚನ ಮನವನಿವತಿ ಕೋಣಪಾಣತಳದಿಂ ಕೊಡೆದಂ (ಮಲ್ಲಿಪು. ೯-೦೬) ; ಹೂವಿನ ಬಿಲ್ಲನೊಟ್ಟತಂಗೊಂಡರ್ಚಿಸುತ್ತಿರ್ಪ ನಿಡುಪುರ್ವಿನ ನೀಱೆಯರಿಂ ನನೆಯಂಬಂ ಕೆಯ್ಗಯ್ದ ಸವಿನೋಟದ ಸಾಧಾರಣೆಯರಿಂ (ಗಿರಿಜೆ. ೭-೦೦ ವ) ; ನೀನೇ ಪೂವಿನ ಪೊಟಲೊಳ್ ನನೆಯಂಬನೆಂಬರಸಾದೆ (ಕಲ್ಯಾಶಾ. ೩೧೯) ; ಸೊಕೆವೆಡುರಾಂತು ಕತ್ತುರಿಗಂಧಿ ಬರೆದಳು ನನೆಯಂಬನ ಚಿತ್ರಪಟವ ವಿನಯದಿ ಕೈಕೊಂಡು ಬಂದಳು ಸ್ಮರವರತನಯನ ಶಯನ ಸ್ಥಳಕೆ (ಮೋಹತ. ೨೯-೫೩). [ ನನೆಯಂಬು + - ಅ$_7$ ]

**ನನೆಯಂಬು** (ನಾ). = ನನೆಗಣೆ : ಮೊನೆಯಂಬುಗಳೊಳ್ ಪೂಣ್ಪಪಸನಿಬರುಮಂ ಕಿಱಿದು ಬೇಗದಿಂ ಹರಿಗನದರ್ಕೆನಗೆಡೆವೇಟ್ಕುಮೆಂ ಎಂಬವೊಲನಿ ಬರುಮಂ ಪುನ್ನಾಗ[ತಪಂ] ನನೆಯಂಬುಗಳಿಂ (ಹಂಪಶಾ. ೩-೩೬) ; ನನೆಯಂಬಂ ಮಿಗೆ ಕನ್ನಡಿಕ್ ಮಕರಧ್ವಜಂ ಕ್ರೋಢಧ್ವಜಂ ಪೋಲೆ (ಗದಾಯು. ೦-೩) ; ಮನೋಜಂ ನನೆಯಂಬಿನಿಂದಿಸ ತದಸ್ತ್ರಾಘಾತಜಾತಾನಿಲಂ ನಿಮಿರ್ದೋರಂತರಳುರಲ್ಕೆ ಹೃತ್ತು ಟಿಯ ನಾ . . ಕಂದರ್ಪರಾಱದೆಂದ ನಾ

(ಕುಸುಮಾ. ೧೧-೧೧೦); ಧೈರ್ಯದ ಜೋಡ ತೊಟ್ಟದಿರಾಗಿ ನಿಲೆ ನನೆಯಂಬು ನಾಟುವುವೆ (ಕುಮಾ.ಅ. ೮-೩೩); ಎನ್ನ ನನೆಯಂಬಿನ ಮೊನೆಗೆ ಸಂಗಿದಹಲ್ಕೆಯುಂ ನೀಮೆ ಶರಣ್ಬೊಕ್ಕುದೇನಱಿಯದುದೇ! (ರಾಮಾಶ್ವ. ೫೬-೦೦). [ ನನೆ₂ + ಅಂಬು₂ ]

ನನೆಯಕ್ಕಿ, ನೆನೆಯಕ್ಕಿ₁ (ನಾ). ೧. ನೆನೆಯಿಸಿದ ಅಕ್ಕಿ; ನೀರಿನಿಂದ ಒದ್ದೆ ಮಾಡಿದ ಅಕ್ಕಿ: ಮನೆಯ ಸಾರಿಸಿ ರಂಗವಲ್ಲಿಯನಿಕ್ಕಿ ... ನನೆಯಕ್ಕಿ ಕಡಲೆ ವಣ್ಣಾರದಿ[ಪಾಠಾಂ. ನನೆಯರಳ್ಹರಳಂಬ ವುಣ್ಯಹರ] ನಿಖಿಲಾರ್ಚನೆಯ ವಸ್ತುಗಳ ಸಾರ್ಚಿದರು (ಬೋಹೆಕ. ೧೮-೮೨). ೨. ಶುಭಕಾರ್ಯಗಳಲ್ಲಿ ಆಶೀರ್ವಾದಕ್ಕಾಗಿ ಉಪಯೋಗಿಸುವ ಅಕ್ಷತೆ: ತೆಳ ತೊಟ್ಟಲೊಳಿಟ್ಟು ಸಣ್ಣ ಸನಗಳ ನನೆಯಕ್ಕಿಯನಿಕ್ಕಿ ವಣ್ಣ ಬಾಯಿನವುನಣ್ಣವಳಿಯದೆ ಕೊಟ್ಟು ಚೂತವಲ್ಲಭನೆಂಬ ಪೆಸರಿಟ್ಟು (೧೦ಕ. ೨-೭೧ ಪ). ನೆನೆಯಕ್ಕಿ₁: ೧. ನೆನೆಯಕ್ಕಿ ನೆನಗಡಲಿ ಗೊನೆಯ ಬಾಳೆಹಣ್ಣು ... ತಗೊಂಡು ಗಂಗವ್ವ ಹೊಡೆಗೈದಾರ (ಜೋಕಗೀ. ೦೬೨). 'ನೆನಗಡಲೆ' ವರಾ.

[ ನನೆ₁ + ಅಕ್ಕಿ₁ ]

ನನೆಯಿಕ್ಕು, ನೆನೆಯಿಕ್ಕು (ಕ್ರಿ). ತೋಯಿಸು; ಒದ್ದೆ ಮಾಡು; ನೆನೆಹಾಕು: ನನೆಯಿಕ್ಕಿದ ಕಡಲೆಯ ತುರಗನಿಕಾಯಕ್ಕಱಿದು ಕಟ್ಟುವುದು (ಅಶ್ವಶಾ. ೭-೫೭). ನೆನೆಯಿಕ್ಕು: ಗರುಗದ ಸೊಪ್ಪಿನ ರಸದಲ್ಲಿ ಎರಡು ವರಹ ತೂಕ ಚೂರ್ಣವ ನೆನೆಯಿಕ್ಕಿ ಬೆಲ್ಲವ ಬೆರೆಸಿ ಕೊಡಲು ಪಾಂಡುರೋಗ, ಕ್ಷಯರೋಗ ಪರಿಹರ (ವೈದ್ಯಸಾ. I, ೩೩೭). [ ನನೆ₁ + ಇಕ್ಕು ]

ನನೆಯೆಸಳ್ (ನಾ). ೧. ಹೂವಿನ ಎಸಳು, -ದಳ. ೨. ಹೂವಿನ ಚಿತ್ರ, -ಕಸೂತಿ, -ನಕ್ಷೆ: ನನೆಯೆಸಳಿಂದಮಾದ ಗುಟವುಂ ಪೊಳೆಯುತ್ತಿರೆ ನೀಳ್ದುವೆತ್ತ ಪೂವಿನ ಪೊಸಟೆಕ್ಕೆದುಂ ಮಿಳಿರೆ ... ಮೆಲ್ಲನೆ ನಡೆತಂದು ವಂದು ಪೊಸಮಾವಿನಪುಗ್ಗಡದಗ್ಗದಾನೆಗಳ್ (ಕಬ್ಬಿಕಾ. ೨೦೦).

[ ನನೆ₂ + ಎಸಳ್ ]

ನನೆಯೇೞು (ಕ್ರಿ). ಹೂವು ಬಿಡು; ಹೂವು ತುಂಬು: "ನನೆತುದೆನೆ ನನೆಯೇೞ್ದುದು" (ಶಬ್ದಮಂ. ೨೨): "ನನೆತೂದು ನನೆಯೇೞ್ದುದೆಂದೆನುತಂ" (ಕವಿಕಂ. ೭೭); ನನೆಯೇೞ್ದ ಮಲ್ಲಿಗೆಯಂತೆ ಪೂರ್ಣಚಂದ್ರನ ಸಿರಿಯಂತೆ ... ರುದ್ರಭಟ್ಟನ ಕವಿತಾರಸಂ ಮನಮನಿರ್ಕುೞಿಗೊಳ್ವುದು ಸಜ್ಜನರ್ಕಳಾ (ಜಗವಿ. ೧-೧೬); ವಿಾಱಿ ಮುಗಿಲಿದಿರೇೞ್ ನಿಶಿ ಹರುಷವೇೞ್ ನನೆಯೇೞ್ ಕುಂದವ್ರಜಕೆ ಕಡದಲರ ಸಿರಿಯ ಸೊಂಪೇೞ್ (ಸಾಳ್ವಭಾ. ೨೬-೧೮); ಪಳೆಯೊಲೆಯಕ್ಕಿ ಸಣ್ಣನನೆಯೇೞ್ದ ಪಾಟಳಿಪೂವನಾಂತು ಕಂಗೊಳಿಸುವ ಕರ್ಣಿಕಾರ ಮಲರ್ದೀವಿದ ಮುತ್ತಮದೆತ್ತ ನೋಳ್ಪೊಡಂ (ರಾಜಶೇ. ೯-೪೭); ಬನಂ ... ನನೆಯೇೞ್ದ ಸುರಯಿಯಿಂ, ಬಕುಳದಿಂ, ಸಿರಿಸದಿಂ, ಪುನ್ನಾಗದಿಂ, ಸೊಗಯಿಸಿ ತೋರ್ಕುಂ (ರಾಮಾಶ್ವ. ೫೬-೨೨).

[ ನನೆ₂ + ಏೞು₁ ( < ಏೞ್₁ ) ]

ನನೆಯೊತ್ತು (ಕ್ರಿ). ೧. ಅರಳು; ವಿಕಾಸವಾಗು; ಮೊಗ್ಗು ಹೊರಬರು: ಶಿವಾಚಾರಲತೆ ನನೆಯೊ[ಪಾಠಾಂ. ವ]ತ್ತೆ (ಸೋಮಜ. ೧-೭೩); ನನೆಯೊತ್ತೆ ಮಿಸುಪ ಮಲ್ಲಿಗೆ ನನೆಯೊತ್ತುವುದತನುಸತಿಯ ಲಾವಣ್ಯರಸಾಭಿನವನದಿ ಸುರಭಿಗಂಧದಿನೆನಸುಂ ಶೀವಿದೊಡೆ ಶೀವುವುದು ತೊದಳಂಟೇ (ಶಾಕ್ಯಕಥ. ೯-೫೬). ೨. (ಅಲಂ) ಸಂತಸಗೊಳ್ಳು: ಧರ್ಮಜನು ಸುರಮುನಿ ಸೂಕ್ತಿಸುಧೆಯಭಿಷೇಕದಲಿ ನವೆಯೊತ್ತಿದಂತಃಕರಣನರಮನೆಗಾಗಿ ನಡೆತಂದು (ನಿರಂಜ. ೧ ೯-೪೫). [ ನನೆ₂ + ಒತ್ತು₁ ]

ನನೆಲತೆ (ನಾ). ಹೂವು ಬಿಟ್ಟ ಬಳ್ಳಿ; ಹೂಬಳ್ಳಿ: ಚಾತುರದಿಂ ಬೀಸುವ ಬೀಸುಗಾಳಿಯ ತಣ್ಪಿನಿಂ. ತೊಯ್ದು ನನೆಲತೆಗಳ ಮೇಳದ ಮನ್ನಣೆಯ ಕನ್ನೆಯರ ಲತಾಂಗಂಗಳೊಳ್ ಲಾವಣ್ಯರಸವಿಸರದ ಬಿಂದುಗಳ್ ತಲೆದೋಱಿದುವು (ಲೀಲಾವ. ೪-೦೭ ಪ). [ ನನೆ₂ + ಲತೆ ]

ನನೆವಾಸು₁ (ನಾ). ತೊಯ್ದ ಹಾಸಿಗೆ: ಆರ್ದ್ರವಾದ, ತಂಪಾದ ಹಾಸಿಗೆ: ತನುವಲ್ಲದತನುತಾಪಂ ತನುವಂ ಸಂಡೆ ನಿಲಿಸಲೆಂತುಮಾಱದೆ ತನುವಂ ತನುಮಧ್ಯೆಯರಲರ್ವಾಸಿನ ನನೆವಾಸಿನ ಮೇಲೆ ಪಾಸಿದರ್ ತನುತನುವಂ (ಮಲ್ಲಿಪು. ೩-೩೩). [ನನೆ₁ + ಪಾಸು₂ ]

ನನೆವಾಸು₂ (ನಾ). ಹೂವಿನ ಹಾಸಿಗೆ: ಪುಷ್ಪಶಯ್ಯೆ: ನನೆವಾಸಿನೆ ಮುತ್ತಿನ ಪಸೆ ಮನಸಿಜನನೆ ಕುವರನಲ್ಲಿ ನೆಲಸಿರೆ ಲಜ್ಜಾವನತಾಂಗಿ ಕೆಲದೊಳಿಳುಪಿದ ನನೆವಿಲ್ಲನೆ ಸುಗುಣವತಿ ಕರಂ ಮೆಱೆದಿರ್ದಳ್ (ರಾಜಶೇ. ೮-೭೧). [ ನನೆ₂ + ಪಾಸು₂ ]

ನನೆವಿಲ್ (ನಾ). ಹೂವಿನ ಬಿಲ್ಲು; ಹೂಬಿಲ್ಲು; ಪುಷ್ಪಚಾಪ: ಪುರಿದಂತಾದುವು ಪೂವಿನಂಬು ನನೆವಿಲ್ ನಿಸ್ಸಾರವಾದತ್ತು (ಮಲ್ಲಿಪು. ೧-೧೯): ನನೆವಿಲ್ಲನೆತ್ತುವಂತೆ ನನೆಯ ನಿಡಿಯ ದಂಡೆಗಳಂ ... ಎತ್ತುವ ಮಾಲೆಗಾರ್ತಿಯರ ಕಟಾಕ್ಷಕುಸುಮವಾಲೆಗಳಂ ಸೌಂದರ್ಯಧನದಿಂ ವಾಱುಗೊಳುತ್ತರಸಂ ಬರೆವರೆ ಪೂವಿನ ಸಂತೆಯಿಂ ಪೊಱಗೆ (ಲೀಲಾವ. ೨-೨೬ ಪ); ನನೆವಿಲ್ಲಂ ಬಿಟ್ಟು ವಿದ್ಯುಲ್ಲತೆಯ ತಿಱುವುವೊಯ್ದೆಂದ್ರ ಕೋದಂಡಮಂ ಕೊಂಡು ... ಮೊಲ್ಲೆಯ ನನಗಣೆಯಂ ತೂಗುತ್ತಂ ಕಂತುವೀಬಂದಂ (ಜಗವಿ. ೪-೨೦); ನನೆವಿಲ್ಮಿನ್ನಣೆಯೋವಳೊರ್ವ ವಧುವಾ ಕಾಂತಾಳಕಶ್ರೇಣಿಗೊಯ್ಯನೆ ಮುಂದಿಕ್ಕಿದ ಚಂದನಾಂಬುವನಲಂಪಂದೆತ್ತು ತಾಂ ಪಿಂಡಿದಳ್ (ಉದ್ಭಟ. ೮-೨೦); ನನೆವಿಲ್ಗಾಱಿವೆದೆಯೇಱುವ ಪೊಲ್ಲ ನಿತಾವಣೆಯಿಂತೊಪ್ಪುವ ರೂಟಿಗೆ ಮಿನುಗುವ ಮಿಱುಂದೌವನವೇಱ್ ವಿರಾಜಿಸುತಿರೆ (ಜಯುಕಾ. ೩-೪೪): ನನೆವಾಸನೆ ಮುತ್ತಿನ ಪಸೆ ಮನಸಿಜನನೆ ಕುವರನಲ್ಲಿ ನೆಲಸಿರೆ ಲಜ್ಜಾವನತಾಂಗಿ ಕೆಲದೊಳಿಳುಪಿದ ನನೆವಿಲ್ಲನೆ ಸುಗುಣವತಿ ಕರಂ ಮೆಱೆದಿರ್ದಳ್ (ರಾಜಶೇ. ೮-೭೧). 'ನನೆವಿಲ್ಲ' ವರಾ.

ನನೆವಿಲ್ಲ ಬಲ್ಲಹ = ಹೂಬಿಲ್ಲಿಗೆ ಒಡೆಯನಾದವನು; ಪುಷ್ಪಬಾಣ ಪ್ರಯೋಗದಲ್ಲಿ ಶೂರನಾದವನು; ಕಾಮ; ಮನ್ಮಥ: "ನನೆವಿಲ್ಲ ಬಲ್ಲಹನೆನಲ್ ಪೂವಿಲ್ಲ ಕಾವಂ" (ಕರ್ಣಾನಿ. ೮); ಅವನ ಪಜ್ಜಳಿಪ್ಪ ಜಸವೆಣ್ಣ ಸೆಯೊಳ್ ನೆಲಸಿರ್ಪುದಾತನೀಗಾವಗವೆನ್ನ ಜಾಣ್ಣುಡಿಗೆ ಮೆಯ್ಸಿರಿಯಂ ನನೆವಿಲ್ಲ ಬಲ್ಲಹಂ (ಕಬ್ಬಿಕಾ.೦): ಜಗದ್ವಳಯುವುನದಟಲೆದು ನುಲಿದು ಕೋಟಲೆಗೊಳಿಸುವ ನನೆವಿಲ್ಲ ಬಲ್ಲಹನ ದಿಗ್ವಿಜಯಕ್ಕಾಗಿ ... ಬೆಳಗುವಚ್ಚಬೆಳ್ದಿಂಗಳ್ ಪಿರಿದುಂ ಪರ್ಚಿ ಬಿಚ್ಚದೆ ನಿಬಿಡವಾಗಿ ಬಿಡದಡರ್ದು ಕಿದಱಿ ನಾಂದು ಪೊದಱುಗಟ್ಟಿ ಪರಕಲಿಸಿ ಪಸರಿಸುತ್ತುಮಿರೆ (ಕಾಧಪು. ೧೫-೫೦ ಪ); ಇದು ಕುಸುಮಾಸ್ತ್ರನಸ್ತ್ರವಿದು ದರ್ಪಕನಾರ್ಪು ಮನೋಜ ನೋಡೆ ನೋಡಿದು ನನೆವಿಲ್ಲ ಬಲ್ಲಹನ ಬೆಳ್ಪಿದು ... ಎಂದೆನಿಸಿರ್ದುದು ರೂಪು ನೀಱೆಯಾ (ರಾಜಶೇ. ೭-೬೩). ನನೆವಿಲ್ಲ ಬೀರ = ನನೆವಿಲ್ಲ ಬಲ್ಲಹ: ಬಂದು ಬಸಂತನೊಲ್ದು ಸಂವರಣೆಯನೆಯ್ದೆ ತೋಱಿ ತಲೆದೂಗುವುದು ನನೆವಿಲ್ಲ ಬೀರನಾ (ಕಬ್ಬಿಕಾ. ೨೦೦). ನನೆವಿಲ್ಲಾತ = ಪುಷ್ಪಧನುಸ್ಸನ್ನುಳ್ಳವನು; ಕಾಮ; ಮನ್ಮಥ: ನನೆವಿಲ್ಲಾತನ ಮುಂಕೈಣ್ಣನ ತಕ್ಕಂ ನೋಡ ವೇಟ್ಕುಮೆಂದೊಲವಿಂದು ತನತನಗೆ ಬಂದು ಮುಗಿಲೊಡ್ಡಿನ ಕೆಲದೊಳ್ ಸಗ್ಗದವರ್ಗಳೆಲ್ಲರ್ ನಿಂದರ್ (ಕಬ್ಬಿಕಾ. ೨೮೯). [ ನನೆ₂ + ಬಿಲ್₂ ]

ನನೆವಿಲ್ಲ (ನಾ). ೧. ಹೂವಿನ ಬಿಲ್ಲುಳ್ಳವನು; ಕಾಮ; ಮನ್ಮಥ: ನನೆವಿಲ್ಲನೆಸೆವ ಬಿರಿದಿನ ನಾಟಕವ ಬಿಂಕವನೆ ಕಂಡೆನೆಂದು ಕಳವಳಿಸಿ ಮಂಗಳೆ ತನ್ನ ತನುಡೆಯುಂ ಪಲ್ಲಕಿಯೊಳಿರಿಸಿ ಶಂಭುವನು ಬೀಳ್ಕೊಂಡು ಮನೆಗೆಯ್ತಂದಳು (ಸೌಂದಪು. ೮-೧೮); ಪೊಸ ಕವ್ಪಂಗಳವೆಯ ತೆನೆಯ ತುದಿಯ ತನಿಗಂಪಂ ಭುಂಜಿಸಲೆನುತನುರಾಗದಿನವೞ್ಕೊಳ್ಳುತಿರ್ದಾಱಿ ಪಸುಳೆಗಳು ಅನುವಂ ಪಡೆದುವು ... ನನೆವಿಲ್ಲನ ಪಸುರ್ಗಾವಿನ ವಿಂಗಸೊಕ್ಕಿನ ಪೊಸಮಿಂಟೆಯನೆ (ಜಯುಕಾ. ೧-೩೯); ಖಳನೀ ನನೆವಿಲ್ಲಂ ... ನಲ್ಲಂ ತೊಲಗಿದ ಪದದೊಳಗೆನ್ನೊಡಲಲ್ಲಿ ನಡಾವಪೊಲರಳ್ಕೆಯ್ಗಾಣಿಸಿ

ನಿಲ್ಲದೆ ಮನವನೆಸುತ್ತಿರ್ದಪನೆಂದಳ್ಪಿರಹಿಣಿ ಸಖಿಯೊಳ್ (ಉದ್ಯೋ. ೪-೩೩).
೨. [ಜೈನ] ಬಾಹುಬಲಿ; ಕಾಮ: ಎಕ್ಕಿ ನೀನಣ್ಣನೊಡನೆ ಕಾದಿದಾಗ ತೊಂಭತ್ತಾಱುಸಾವಿರ ಹೆಣ್ಣು ಚಿತ್ರ ನೋಯದೆ ನಮಗೆಂಟುಸಾವಿರಕಳ ಲೊತ್ತದಿಹುದೆ ನನೆವಿಲ್ಲಾ (ಭರತ. ೩೦-೯೩). [ ನನೆವಿಲ್ + – ಅ, ]

**ನನೆವೂ** (ನಾ). ಬಿರಿದ ಹೂವು; ವಿಕಸಿತ ಕುಸುಮ: ತೋಳ ಮೊದಲ್ಕನೆ ಪೂವನೆತ್ತುವಂತಿರೆ ನನೆಯಂಬುಗಳ್ಗೆ ಬಿರಲೆತ್ತುವರಲ್ಲಿಯ ಮಾರೆಗಾರ್ತಿಯರ್ (ಮಲ್ಲಿಪು. ೨-೫೯). [ ನನೆ$_3$ + ಪೂ$_2$ ]

**ನನೆವೂದುಱುಗಲ್** (ನಾ). ಅರಳಿದ ಹೂವುಗಳ ಗೊಂಚಲು,-ಗುಚ್ಛ: ತಳಿರ್ಗಳನೊಂದು ಕೊಂಬು ನನೆವೂದುಱುಗಲ್ಗಳನೊಂದು ಕೊಂಬು . . . ತಳೆದಿಂತು ಮನೋಹರಮಾಯ್ತು ಮಾಮರಂ (ಕುಸುಮಾ. ೧೦-೧೩೩).
[ ನನೆವೂ + ತುಱುಗಲ್ (< ತುಱುಂಗಲ್) ]

**ನನೆವೆರಸು**$_1$ (ಕ್ರಿ). ಮೊಗ್ಗುಗಳಿಂದ ಕೂಡಿರು; ಪುಷ್ಪಭರಿತವಾಗಿರು: ನನೆವೆರಸಿದಸುಗೆದಳಿರುಳ್ಳೊಡೆಯ ವೇಣುವಿಂ ಜನಿಸಿದ ನವೀನಮುಕ್ತಾ ಫಲದ ಮಾಗುತಿಯ . . . ನಿತಂಬಿನಿಯರತಿಹರುಷದಿಂ ರಂಜಿಸಿದರು (ಸೌಂದಪು. ೦೮-೦೯). [ ನನೆ$_3$ + ಬೆರಸು$_1$ ]

**ನನೆವೆರಸು**$_2$ (ಅ). ಹೂವುಗಳಿಂದ ಕೂಡಿಕೊಂಡು; ಪುಷ್ಪಸಹಿತವಾಗಿ: ನನೆವೆರಸು ಗುಜ್ಜುಮಾವಿನ ಕೊನರ್ಗಳನುಡಿದುಡಿದು ನೀಡೆ ಬೇಟದ ಓಡಿಯೇಂ ಮನವೊಸೆದು ಮೇವುತಿರ್ದುದೊ ವನಕರಿ ಪರಿದಂತೆ ದಂತಹಸಿತ ಕಟಾಕ್ಷಂ (ಅರ್ಧನೇ. ೩-೯೪); ನನೆವೆರಸುಟ್ಟು ಮಾಂದಳಿರನೊಪ್ಪಿರೆ . . . ಓಪನಿಗೆ ಪುಳಿಂದ ಪಾಡಿದಳೊಱಲ್ದು ಗುಣಪ್ರಿಯನಂಕಮಾಲೆಯಂ (ಲೀಲಾವ. ೮-೩೦). [ ನನೆ$_3$ + ಬೆರಸು$_2$ ]

**ನನೆವೆಱು** (ಕ್ರಿ). ಮೊಗ್ಗುಗಳನ್ನು ಪಡೆ; ಮುಗುಳು ಬಿಡು: "ನನೆತುದೆಂದು ನನೆವೆತ್ತುದು" (ಶಶಸಾ. ೯-೦೮೯); ತನಯಂ ಬಂದಾ ವಾರ್ತೆಗೆ ಆನುವುಳಕದ ತೆಕ್ಕೆವೆತ್ತು ಶಿಶಿರದ ಸೋಂಕಿಂ ನನೆವೆತ್ತೊವ್ವುವ ಮಾಲತಿಯನೆ ವಿಜಯಾವತಿ ಸಮಂತು ಪೋಲ್ತೆಸೆದಿರ್ದಳ್ (ಕುಸುಮಾ. ೧೩-೯೮). [ ನನೆ$_3$ + ಪೆಱು$_1$ ]

**ನನೆವೊಯ್** (ಕ್ರಿ). ೧. ಚಿಗುರು; ಪಲ್ಲವಿಸು: ತನಿಗರ್ಬಿನ ಸೋರ್ವ ರಸ ಪ್ರವಾಹದಿಂದವೆ ನನೆವೊಯ್ದು ಕಾಯ್ತುಱುಗಿ ಪಣ್ತುದು ಮಾಮರಂ (ಲೀಲಾವ. ೬-೧೩೮). ೨. ಉಂಟುಮಾಡು; ಹೊಮ್ಮಿಸು: ಪನಿವುಲ್ಲಂಬು ಕಣಂಗಳಂ ಕೆದಱುತುಂ ಕೋಕಂಗಳೊಳ್ ರಾಗಮಂ ನನೆವೊಯ್ದುಣ್ಮಿಸುತುಂ . . . ತಣ್ಣನೆ ತೀಡಿತ್ತನಸುಂ ಪ್ರಭಾತಸಮಯಪ್ರೋದ್ಭೂತಶೀತಾನಿಲಂ (ಕುಸುಮಾ. ೧-೩೨). [ ನನೆ$_3$ + ಪೊಯ್$_2$ ]

**ನನೆವೊಱೆ** (ನಾ). ಹೂವುಗಳ ಭಾರ; ಪುಷ್ಪಭಾರ: ನನೆವೊಱೆಯಿಂ ಬಳ್ಕಿದ ಮಾವಿನ ಕೊಂಬಿನೊಳಳಿಯ ಮಾಲೆ ಮೊರೆಯುತ್ತುಂ ಪೂವಿನ ಬಿಲ್ಲನತನು ಜೇವೊಡೆದನುಗೆಯ್ದೇಱಿಸುವ ಚೆಲ್ವನೇಂ ಬೀಱಿದುದೋ (ಪಾರ್ಶ್ವಪು. ೯-೩೩). [ ನನೆ$_3$ + ಪೊಱೆ$^3$ ]

**ನನೆವೋಗು** (ಕ್ರಿ). ಮೊಗ್ಗು ಬಿಡು; ಮೊಗ್ಗಾಗು: ಅಧೀಶವಚನಕದಂಬಕ ಮೆಂಬೊಂದು ತೆಂಕಣಲರೊಳ್ ನನೆವೋಯ್ತೆಂಬಿನಮಾಕೆಯ ತನುಲತೆ ತುಂಬಿದುದತಿಬಹಳಪುಳಕವಿಪುಲಶ್ರೀಯಿಂ (ಆದಿಪು. ೬-೩೦).
[ ನನೆ$_3$ + ಪೋಗು$_1$ ]

**ನನೆಸು, ನೆನಸು$_2$, ನೆನೆಸು$_2$** (ಕ್ರಿ). ಒದ್ದೆಯಾಗುವಂತೆ ಮಾಡು; ತೋಯಿಸು; ಆರ್ದ್ರಗೊಳಿಸು: ನಾರದ ಕಲಹತಾತ್ಪರ್ಯದೆ ತರಳ ಕುಮಾರನ ಕೊಂದೆ ನೀನೆನುತೆ ಮಾರಮಾತ್ರಕೆ ರುಕ್ಮಿಣಿ ಸತ್ಯಭಾಮೆ ಕಣ್ಣೀರಿಂದ ನನೆಸಿದರೊಡಲ (ಮೋಹತ. ೩೭-೨೦). ನೆನೆಸು$_2$: ಅಪ್ಲಾವ, ಅಪ್ಲವ. ಸ್ನಾನಂ-ಶಿ ಸ್ನಾನದ ಹೆಸರು. ತಲೆ ಮುಂತಾದ ಸರ್ವಾಂಗವನ್ನು ನೀರಿನಲ್ಲಿ ನೆನಸಿ ತೊಳೆಯುವಿಕೆ (ಸಿದ್ಧಾಂತಿ. ೨೦೬). ನೆನೆಸು$_2$: ಭಟ್ಟನಿಯ ಕಣ್ಣುಗಳಲ್ಲಿ ನಾನು ಒಂದು ಅಪೂರ್ವಮಾಧುರಿಯನ್ನು ಕಂಡೆ . . . ಅ ದೃಷ್ಟಿ ನನ್ನನ್ನು ಅಭಿನವರಸದಲ್ಲಿ ನೆನೆಸುತ್ತಾ, . . . ಒಂದು ಅನನುಭೂತ ಜಗತ್ತಿಗೆ ಎಳೆದೊಯ್ಯಿತು (ಬಾಣಭ. ೩೦೪). [ ನನೆ$_1$ + – ಸು$_1$ ]

**ನನೆಹ** (ನಾ). ನೆನೆಯುವಿಕೆ; ಒದ್ದೆಯಾಗುವಿಕೆ; ತೇವಗೊಳ್ಳುವಿಕೆ: "ತೇವ ಸ್ರೇವ ಸಮುಂದನ ಈ ಮೂಱು ನನೆಹದ ಹೆಸರು" (ನಾಚಿರಾ. ೬).
[ ನನೆ$_1$ + – ಹ$_3$ ]

**ನನ್ನಗ** (ನಾ). ಒಬ್ಬಾತನ ಹೆಸರು: ನ x ಗರಮುಪ್ಪ ವಯುಚಯನ್ ತುರಗಗೊಳ್ಕಾಗಿ ದುಗ್ಗದರಸನುಂ ಕೊದಳ್ದು ವೇಳೆಯುವನಾಳು x ಪಱಿಯುಭತ್ತಂ ಬಪ್ಪುದ ನನ್ನಗನ್ನಾದ (ಸೌಇಇ. IX-1, ೨೨-೬; ೭೨೨). [ ? ]

**ನನ್ನಪ** (ನಾ). ಒಬ್ಬಾತನ ಹೆಸರು: ಆಹವಶೌಣ್ಡವೀರನುದಾರಂ ಕಣ್ಣಿವ ಭಾರದ ನನ್ನಪನೃಪಂ ಮಹಸಾಮಂತಂ (ಎಕ. IX, ಜನ್ನಪ. ೧೪೧-೦೮; ೧೦೦೨). [ <ನನ್ನಿ ? + ಅಪ (<ಅಪ್ಪ$_1$) ]

**ನನ್ನಯ್ಯ** (ನಾ). ಒಬ್ಬಾತನ ಹೆಸರು: ಶ್ರಿಮತ್ಸರ್ವ್ವನಂಗಳ್ಗೆ ವಿದ್ಯಾಧರಯ್ಯಂ ಬಿನ್ನವಂಗೆಯ್ದು ನಗರಲ ನನ್ನಯ್ಯನ ದೇಗುಲಕ್ಕೆ ಮುಕ್ತೆರೆಯು ಪಡೆದು ಕೊಟ್ಟಂ (ಎಕ. III, ನಂಜನ. ೧೩೩-೩; ೯೭೦).
[ <ನನ್ನಿ ? + ಅಯ್ಯ$_1$ ]

**ನನ್ನಾನನ್ನಿ, ನನ್ನಾನಿನ್ನಿ** (ನಾ). ಸಣ್ಣಸಣ್ಣದು; ಚೂರುಚೂರಾದುದು; ಪುಡಿಪುಡಿ: ಸನ್ನಾಹಭೇರಿಗಳುನ್ನಾದದಿಂ ದೆಸೆ ನನ್ನಾನನ್ನಿಯಾಗೊಡೆಯ ತನ್ನ ಮೋಹರಗೂಡಿ ಚೆನ್ನರಾಮುಗ ಶೌರ್ಯದುನ್ನತಿಕೆಯೊಳೆಯ್ದಿದನು (ಕುಮಾರಾ. ೧೨-೩೬); ಚೆನ್ನಯ ನಿಟ್ಟಿಸಿ ಕಾಪನಂಬಿಂ ನನ್ನಾನನ್ನಿಯಾದರು ನೋಟಕರು (ರಾಮವಿ. ೬-೧೪೩). ನನ್ನಾನಿನ್ನಿ: ಬನ್ನಣದಿಂದೆಚ್ಚರು ರಿಪು ಭಟರೆರ್ದೆ ನನ್ನಾನಿನ್ನಿಯಪ್ಪಂತೆ (ಶಂಶ್ರಸಾಂ. ೮-೩೩).
[ ←ಹಿಂ. ನನ್ನಾ, ನನ್ಹಾ ]

ನನ್ನಾನಿನ್ನಿ 'ನನ್ನಾನನ್ನಿ' ನೋ.

**ನನ್ನಾರಿ** (ನಾ). ಒಂದು ಬಗೆಯ ಸಸ್ಯ; ಸೊಗದೆ: ಸುಗಂಧೀಬೇರು, ಸೊಗದೇಬೇರು, ನಾಮದ ಬೇರು, ನನ್ನಾರೀಬೇರು (ಮೃತಿಗಿ. ೭೨-೮೪೦).
[ ದೇ.॥ ತಮಿ. ಮಲ. ನನ್ನಾರಿ ]

**ನನ್ನಿ** (ನಾ). ೧. ಸಹಜವಾದುದು; ವಾಸ್ತವವಾದುದು; ಸತ್ಯ; ದಿಟ; ನಿಜ; ನಿಶ್ಚಯ: "ಸತ್ಯದೊಳ್ ನನ್ನಿಯಕ್ಕುಂ" (ಕರ್ಣಾನಿ. ೩೧); "ನನ್ನಿ ಸಾಜ ನೆನಸುಂ ದಿಟಮೆಂದುಸಿರಲ್ಕೆ ಸತ್ಯಮಕ್ಕುಂ" (ಕವಿಕಂ. ೦೨೦); "ನಿಶ್ಚಯದೊಳಂ ನನ್ನಿಯೆಂದಕ್ಕು" (ಕಶಶ. ೩೩); ನನ್ನಿಯನೀ ಪಲ್ಲವಮೆನೆ ಸನ್ನುತರೂಪಿಂ ವಿಪರ್ಯಯೋಪಮಮಕ್ಕುಂ (ಕವಿರಾ. ೩-೬೨); ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ (ಪಂಪಭಾ. ೧೪-೬೪); ಅನೃತಂ ಲೋಭಂ ಭಯಮೆಂಬಿನಿತುಂ ನೀನಿರ್ದ ನಾಡೊಳಿಲ್ಲಮೆ ರವಿನಂದನ ನನ್ನಿ ಚಾಗಮಣ್ಮೆಂಬಿನಿತರ್ಕಂ ನೀನೆ ಮೊತ್ತಮೊದಲಿಗನಾದೈ (ಗದಾಯು. ೩-೦೬); ಇನ್ನರ ನಂಡಿ ಕನಸಿನೊಳಂ ನನ್ನಿಯೆನಲ್ ಕೇಳ ದಿವ್ಯಪುರುಷು ಪ್ರತ್ಯಕ್ಷಂ ನಿನ್ನ ಮುಂದೆ ನುಡಿಯಲ್ಕಿನ್ನುಮದೇನೆಂಬೆ ಸಂದೆಗಕ್ಕೆಡೆಯುಂಟೇ (ಕಾದಂಪೂ. ೯೪೩); ಅನ್ನವನು ಇಕ್ಕುವದು ನನ್ನಿಯನು ನುಡಿಯುವದು ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಾಣವಕ್ಕು (ಸರ್ವಜ್ಞ. ೭೦೩); ಏವಣ್ಣವೆನ್ನ ಮನದ ನನ್ನಿಯ ನೆಲೆಯಂ (ಚಳವಿ. ೩-೯೭).
೨. ಸತ್ಯವಂತಿಕೆ; ಸತ್ಯಸಂಧತೆ: ನೆನೆಯದಿರಣ್ಣ ಭಾರತದೊಳಂ ಪೆಱರಾರುಮನೊಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ . . . ಕರ್ಣನ ಕಡುನನ್ನಿ ಕರ್ಣನಳಮಂಕದ ಕರ್ಣನ ಚಾಗಮೆಂದು ಕರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ (ಪಂಪಭಾ. ೧೨-೨೦೭); ನನ್ನಿ ವಿನಯಂ ನಯಂ ಜಯಮುನ್ನತಧೃತಿ ಸತ್ವಮೆಂಬ ರಾಜಗುಣಂಗಳ್ ನಿನ್ನೊಳ್ ನೆಲಸಿದುವಿನ್ನುಂ ಮುನ್ನುಂ ನಿನ್ನನ್ನರೊಳರೆ ರಾಜಕುಮಾರಾ (ಲೀಲಾವ. ೪-೩೭); ದಿಟಂ ನನ್ನಿಯುಳ್ಳವನೆಂದು ಬಗೆದು ಬೇಡಿದೆನುತ್ತಮದ್ವಿಜರು

ಕೊಂಬುದೆಂದು (ಹರಿಶ್ಚ. ೧೧-೨೦). ೩. ಅಕ್ಕರೆ; ಪ್ರೀತಿ; ವಿಶ್ವಾಸ: ಎನ್ನ ಭವತಿಮಿರಭಾನುವೇ . . . ಎನ್ನ ನನ್ನಿಯೆಯೆನ್ನ ಚೆನ್ನಿಗನೆಯೆನ್ನ ಗತಿಯೇ ಮತಿಯೇ ಧೈತಿಯೇ ಪತಿಯೇ (ಅದ್ಭುರಾ. ೭-೩೯); ತನ್ನರಸಿ ವರಚಂದ್ರಮತಿಗೆ ವಿಭಿನ್ನ ನಾಲಕು ಜಂಬುಫಲವನು ನನ್ನಿಯಿಂದಿತ್ತಾಗ ಸುರಸೆಗೆ ಕೊಟ್ಟನೊಂದುವನು (ಸಂಭವ. ೦೯-೫೦); ನಿನ್ನಂಗಸಂಗವುನ ಗಲ್ದಾಯ್ತು . . . ಎಂತು ಸ್ವೈರಿಪರೊ ಕಾಂತನೊಳ್ನನ್ನಿಯುಳ್ಳರಸಿಯರ್ ದ್ರೌಪದಿ ಸುಭದ್ರೆಯರೆಂದೆಂತುಳಿವರಕಟೆಂದರು (ಜೈಮಿಭಾ. ೨೩-೫೯); ಬಲ್ಲಾಲಂಬಡಿದು ನೀನೆ ಗತಿಯೆಂದು ನನ್ನಿಯಿಂ ನಂಬಿದಳಂ ಮಱೆದು ಸವತಿಯೊಂದು ಪಿಸುಣ್ಗೆ ಎಱೆಯಂ ಮಾಡುವೋದಂ (ರಾಮಾಶ್ವ. ೨೨-೮). ೪. ಕೊಟ್ಟಮಾತು; ಭಾಷೆ; ವಚನ; ಪ್ರತಿಜ್ಞೆ: ಕಿಡುಗುಮೆ ರಾಜ್ಯಂ ರಾಜ್ಯದ ತೊಡರ್ವದೇವಾಟ್ಟಿ ಬಾಟ್ಟಿ ನನ್ನಿಯ ನುಡಿಯಂ ಕಿಡೆ ನೆಗಟ್ ನಾನು ಮೆರಡಂ ನುಡಿದೊಡೆ ಹರಿಹರಹಿರಣ್ಯಗರ್ಭರ್ ನಗರೇ (ಪಂಪಭಾ. ೦-೮೨); ಮದುವೆಯ ದಿವಸದಂದು ಬರವೇಟ್ಟುದು ನೀನೆಂದೆನ್ನನಂದು ನೀಂ ಚದುಗ್ಗಿಡೆ ನುಡಿದೊಡಾಂ ನುಡಿದ ನನ್ನಿಗೆ ವಂದೆಂ (ಸುಕುಮಾ. ೭-೨೨); ನಿನ್ನಂ ಬಿಡಿಸಿದಪೆಂ ನಂಬೆನ್ನಂ ಸಂದೇಹಮಿಲ್ಲವೆಂದೊಲವಿಂದಂ ನನ್ನಿಯನೀಯು (ಚಕಳು. ೮-೨೮೪); ಪುಸಿ ಪೊಂದದ ಪೊಸನುಡಿಯಂ ವಸುಮತಿಯೊಳ್ ನುಡಿಯಲಕ್ಕುಮಿಾ ನೃಪಸುತನಂಕಸುವಳಿಗುಮೆಂಬ ಬಗೆಯೊಳೆಮುಸುರುವ ನನ್ನಿಗಳ ನಾಯಕರ್ವೆಱರೊಳರೇ (ರಾಜಶೇ. ೦೯-೨೦). ೫. ಒಳ್ಳೆಯದಂ; ಸರಿಯಾದುದಂ; ಸಮಂಜಸವಾದುದಂ: ನಿನ್ನಂ ತನ್ನೊಳ್ ಭೇದಂ ಮಾಡದೆ ನಲ್ಮೆಯನೆಸಗದ ನೀಚನೊಳು ಕನ್ಯಮಿದಿರನಱಯದೆ ಹೋರುವುದಿದು ನನ್ನಿಯೆ (ಜಯಸೇ. ೭-೫೦). ೬. ಚೆಲುವು; ಅಂದ; ಸೌಂದರ್ಯ.

ನನ್ನಿ ಕಂದರ್ಪ = ಚೆಲುವಿನಲ್ಲಿ ಮನ್ಮಥನಂತಿರುವವನು; ಒಂದು ಬಿರುದು: ಸ್ವಸ್ತಿಶ್ರೀ ಸಾಮನ್ತರಾಮನ್ನನ್ನಿಕನ್ದರ್ಪ ಸಿರಿವುರದೊ ಅಣ್ಣಿಗನೊಳ್ ಕಾದಿ ಸತ್ತ ಅರಕಿಲ್ಲನ ಮಗ (ಮೈಆರಿ. ೦೯೬೨, ೩೭-೨; ಸು. ೯೫೦). ನನ್ನಿಗಾಶ್ರಯಂ = ಸತ್ಯಕ್ಕೆ ಆಶ್ರಯನಾದವನಂ; ಒಂದು ಬಿರುದಂ: ಸ್ವಸ್ತಿ ಸಮಧಿಗತ ಪಞ್ಚಮಹಾಶಬ್ದ ಪಲ್ಲವಾತ್ಮಯಂ ನನ್ನಿಗಾಶ್ರಯಂ ಶ್ರೀಮತು ಅಯ್ಯಪದೇವಂ ರಾಜ್ಯಂಗೆಯ್ಯೆ (ಎಕ. XI, ಚಿತ್ರದು. ೬೩-೫; ೯೧೮). ನನ್ನಿ ಚಳುಕಿ = ಸತ್ಯವಂತನಾದ ಚಾಲುಕ್ಯ; ಒಂದು ಬಿರುದಂ: ಚಾಳುಕ್ಯಕರ್ಣ್ಣಮಹಾರಾಜಂ ಧರಣೀಲೋಕಾಶ್ರಯನಭಿಮಾನ ಗಳ್ಪನಹಿತರ ಗಣ್ಣಂ ಮಾವನ ಗನ್ಧವಾರಣಂ ನನ್ನಿಚಳುಕಿ ಶ್ರೀಮತ್ ರಾಜಾದಿತ್ಯ (ಮೈಆರಿ. ೦೯೭೫, ೯೦-೫೦; ೯೫೦?). ನನ್ನಿನಾರಾಯಣ = ಸತ್ಯಕ್ಕೆ ನಾರಾಯಣನಂತಿರುವವನು; ಸತ್ಯರಕ್ಷಕ; ಸತ್ಯಪಾಲಕ; ಒಂದು ಬಿರುದು: ಇನ್ತು ನನ್ನಿನಾರಾಯಣಂ ಸಮ್ಯಕ್ತ್ವರತ್ನಾಕರಂ . . . ಎನಿಸಿ ಶ್ರೀಮತ್ಪಡೆವಳ್ಳ ತೈಲಪಯ್ಯಂ ಮೂಸವಾಡಿನೂಱನಾಳ್ವತ್ತುಮಿರೆ (ಸೌಇಇ. XI-1, ೫೨-೩೫; 1007). ನನ್ನಿಮಹಾರ್ಣವ = ಸತ್ಯಕ್ಕೆ ಸಾಗರದಂತಿರುವವನಂ; ಒಂದು ಬಿರುದಂ: ವೀರಶ್ರೀ ನೇತ್ರನುಂ ನನ್ನಿಮಹಾರ್ಣ್ಣವನುಂ ಕನ್ದುಕಪುರನ್ದರನುಮೆನಿಸುವ ವೀರಾಗ್ರಣಿಯ ಪರಾಕ್ರಮಮೇದೊರೆ (ಸೌಇಇ. XI-1, ೫೨-೦೪; 1008). ನನ್ನಿ ಮಾಡು = ದಿಟ ಮಾಡಂ; ಸತ್ಯವನ್ನಾಗಿಸಂ; ಸಾಬೀತುಗೊಳಿಸಂ: ಪೊಣನನಿಱುದು ಪಗೆಗೊಂಡರೆಂಬ ನಾಣ್ನುಡಿಯಂ ನನ್ನಿ ಮಾಡಿ (ಪಂಪಭಾ. ೬೩-೫೯ಪ); ಅಂತು ಪಪಡಿಸಿದ ಪರಮೇಶ್ವರಂಗೆ ಮನೋಗತಮಲ್ಲದ ಕಾವಿನಿಯಂತೆ ಯಾಮಿನಿ ತನ್ನ ಕ್ಷಣದಾ ಭಿಧಾನಮಂ ನನ್ನಿ ಮಾಡಿ (ಶಾಂತಿಪು. ೦೦-೦೫೫ ಪ); ಕಳ್ಪಂಗೆ ಬೆಳ್ದಿಂಗಳ್ ಸೊಗಸದೆಂಬ ನಾಣ್ನುಡಿಯಂ ನನ್ನಿ ಮಾಡಿ (ಧರ್ಮಾಮೃ. ೨-೦೨೪); ಪ್ರಾರಬ್ಧಸ್ಯಾಂತಗಮನಂ ಮಹಾಪುರುಷಸ್ಯ ಲಕ್ಷಣಮೆಂಬ ನಾಣ್ನುಡಿಯಂ ನನ್ನಿ ಮಾಡಿ (ಸೌಇಇ. IX-1, ೨೭೩-೮೭; 1179); ಪರಮಾತ್ಮನಂ ಧ್ಯಾನಿಸುವೊಡಂತರಾತ್ಮನೊ ಪರಮಾತ ನಕ್ಕುಮೊಯೆಂಬ ಸಮಯುತ್ತ್ವಮಂ ನನ್ನಿ ಮಾಟ್ಪೆನೆಂಬಂತೆ ಪಗಲುಮಿರುಳುಂ ವಸುದೇವನನೇ ಧ್ಯಾನಿಸುತ್ತಿರೆ (ಬಂಹರಿ. ೦-೫೬ ಪ). ನನ್ನಿಮಾರ್ತಂಡ = ಸತ್ಯವನ್ನು ಪ್ರಕಾಶಪಡಿಸುವ ಸೂರ್ಯನಂತಿರುವವನು; ಒಂದು ಬಿರುದು: ಶ್ರೀನನ್ನಿಮಾರ್ತ್ತಣ್ಡ ಪಟ್ಟಳಿಗೆಯ ಎಱೆಯಂಗರಸನ ಮಗ ಚಿಣ್ಣಮ್ಮರಸ (ಮೈಆರಿ. ೦೯೯೩, ೨೭-೦; 1080). ನನ್ನಿಯ ಗಂಗ = ಒಬ್ಬ ಸ್ತ್ರೀತನ ಹೆಸರು: ಸತ್ಯವಾಕ್ಯ ರಾಚಮಲ್ಲಪೆರ್ಮ್ಮಾನಡಿ ಪೃಥುವೀರಾಜ್ಯಂಗೆಯ್ಯುತ್ತಿರೆ × × × ನನ್ನಿಯ ಗಂಗನ ಪರಿ ಬನ್ದು ಬೆಳ್ಗಿಱಿಯಂ ಕುನ್ದೂರುಮನಿಱಿದು ಹೋಗೆ (ಎಕ. XII, ತಿಪಟೂ. ೫೫-೦; ಸು. ೯೬೦): ಶ್ರೀಮತ್ ಪಿಟ್ಟುವಿಪತಿಯ ಮಗ ನನ್ನಿಯ ಗಂಗನಣ್ಣಿಯೆಂಬ ಗಣ್ಡ ಬೀರನೊಟವ್ಪಂ ತಾಗಿ ಕಾನ್ನರ ನೆಱೆಯರಟ್ಟಿದೊಡೆ (ಎಕ. X, ಗೌರೀಬಿ. ೪-೧೧, ಸು. ೯೨೦); [ನ]ನ್ನಿಯ ಗಂಗಂ ಬೂತಯ್ಯಂ ಪುರಿಗೆಟ್ ಮೂನೂಱುಂ ಬೆಳ್ವೊಲ ಮೂನೂಱು ಮನಾಳುತ್ತಿರೆ (ಸೌಇಇ. XI-1, ೩೭-೫; ೯೪೬); ಜಯಲಕ್ಷ್ಮೀಪತಿ ಮಾರಸಿಂಗನನುಜಂ ಸತ್ಯಪ್ರಿಯಂ ಸನ್ದ ನನ್ನಿಯ ಗಂಗ ಕ್ಷಿತಿಪಾಳಕಂ (ಎಕ. VII, ಶಿಕಾರಿ. ೪-೭೦; 1122). ನನ್ನಿಯ ಮೇರು = ಒಂದು ಬಿರಂದು: ಸ್ವಸ್ತಿ ಶ್ರೀಮನ್ಮಹಾಪ್ರಭು ನಂನಿಯ ಮೇರು ಕಲಿಕಾಲ ಧರ್ಮ್ಮರಾಜ ಕೆದಾಹು ನಾಡಾಳುವ . . . ಬಾಚೆಯ ಹಳ್ಳಿಯ ಗಂಡನಾರಾಯಣಸೆಟ್ಟಿಯರು (ಎಕ. VI(B), ಕೃಷ್ಣರಾ. ೭೭-೩; 1179). ನನ್ನಿವೆಡಂಗ = ಸತ್ಯದ ಬೆಡಗುಳ್ಳವನು; ಒಂದು ಬಿರಂದು: ನನ್ನಿವೆಡಂಗು ಕನ್ನಟಿಯ ಕೊಟ್ಟು ಕೆಱೆಗೆ ಯಶಮಂ ಪಡೆದು (ಕಇ. II, ೪-೫; ೯೧೮).

[ದೇ.೩ ತಮಿ. ನನ್ನಿ, ನನ್ನು; ಮಲ. ತುಲು. ನನ್ನಿ]

ನನಿಕರ್ತಾರ, ನನ್ನಿಕಾರ್ತರ (ನಾ). ಒಬ್ಬಾತನ ಹೆಸರು. ಬಾಧಪರಿಹಾರಮ್ ನನ್ನಿಕರ್ತಾರ ಭಟರರ್ಗೆ ಧಾರೆ ಎಱೆದು ಕೊಟ್ಟವ್ (ಪ್ರಾಕಲೆ. ೦೯೦೭, ೦೩-೦೬; ೯೦೦). ನನ್ನಿಕಾರ್ತರೆ: ಸರ್ವ್ವಬಾದಾಪರಿಹಾರ ನನ್ನಿಕಾರ್ತ್ತರ ಭಟರರ್ಗೆ ಎ × × × ಱೆದು ಕೊಟ್ಟ (ಎಕ. III, ಮೈಸೂರು. ೩೭-೫; ಸು. ೯೦೦ ?). [ನನ್ನಿ + ಕರ್ತಾರ]

ನನ್ನಿಕಾರ್ತರ 'ನನ್ನಿಕರ್ತಾರ' ನೋ.

ನನ್ನಿಕಾಱ (ನಾ). ಸತ್ಯವಂತ; ದಿಟವಂತ; ಸತ್ಯನಿಷ್ಠ; ದಿಟಗಾರ: ಕಾಯಕ್ಲೇಶದಿನಡವಿಯ ಕಾಯಂ ಪಣ್ಣುಮನುದಿರ್ಚಿ ಶಿಂದಗಲದೆ ನಿಂದೀಯರ್ಮ್ಮರಾವ ತೆಱದಿಂ ನೋಯಿಸರ್ವೆ ನಿನ್ನ ನನ್ನಿಕಾಱನ ಮನಮಂ (ಪಂಪಭಾ. ೭-೪೮); ಹುಸಿಯುಂ ಹುಸಿಮಾತಂ ಸ್ವೈರಿಸನೆಂದುಂ ನಂನಿಕಾಱ ನಂನಿಗೆ ಸಂತಸಪೆಯ್ದುವನಿಂತಿದು ಭಾವಿಸ ಹಬ್ಬೆಯನಾಯಕಂಗೆ ಸಲೆ ಸಹಜಗುಣಂ (ಕಇ. I, ೨೫-೪೮; 1186); ಮುನ್ನೆಲ್ಲರಂ ಸಾಡುವ ಕಾಡಾವುದೆಂದು ನೋಳ್ಪನ್ನೆಗಂ ಹಲವು ಕೆಲವುರಿಯ ಬಳಗಂ ಕಂಡು ನನ್ನಿಕಾಱಂ ಕಾವ ಕಾಡತ್ತ ನಡವಾಗ (ಹರಿಶ್ಚ. ೦೨-೩೦); ನನ್ನಿಕಾಱರ ದೇವ ಕೇಳ್ಪಾತನೆನಗೆ ಸಾಮ್ರಾಜ್ಯಸುಖಸಂಪನ್ನತೆಯ ಸೌಭಾಗ್ಯ (ತೊರರಾ. ೧-೫-೦೭).

[ನನ್ನಿ + -ಕಾಱ]

ನನ್ನಿಗ (ನಾ). = ನನ್ನಿಕಾಱ: ನಿನ್ನನ್ನೆನೆದಾಪೊನ್ನನ್ನಿಗ ಜಜುಬಿಲ್ಲದ ಜಾಗಿಗಳಾಣ್ಮ ಎನ್ನಯ ಮೊಗ ಮುಂದೇ ಬಸ್ನಂದೆತ್ತನ್ನಯ ಬಿನ್ನಪಮಂ ಮನ್ನಿಸು (ಅದ್ಭುರಾ. ೩-೨೯); ನನ್ನಿಗರಿಂಪುಗಾಱರಿನಿವಾತುಗರ್ . . . ತನ್ನೊಡನಾಡೆನಾಡೆ ನಲಿಗುಂ ಚಿಕದೇವನೃಪಂ ಕೃಪಾಕರಂ (ಚಿಕವಿ. ೫-೧೧೦); ಇಂತೆನಿಂದು ಮಾಟ್ಕೆಯಂ ಪೊಱನಲ್ಮೆಯಂ ಕವಡುಗಾತಿಯು ಕಲ್ಲೆರ್ದೆಯೊಳ್ ನಾಂಟಿದ ನಾಡಾಡಿ ನನ್ನಿಗ ಚೆನ್ನಿಗನ ಮನೋರಥದೊಂದು ಹಯದ ಕಾಲ್ಗಳಂತಿರೆ ಕಲ್ಲೊಳ್ ಕೀಲಿಸಿರ್ಪುದುಂ ಕಂಡು (ರಾಮಾಶ್ವ. ೦೩೭-೫); ನಿಮ್ಮವರ ನನ್ನಿಗರ ಹಿಂದು ಸಿಖ್ ಮುಸಲ ಹರಿಜನರ, ನಿಮ್ಮೊಲವು ಧೀರ ಮಾನವತೆಯೇ ಅಡಿಗಡಿಗೆ ಕಾಡಿತ್ತು, ಬೆನ್ನಟ್ಟಿ ಬೇಟೆಯಾಡಿತ್ತು (ಅಮತಂ. ೨೦-೭).

[ನನ್ನಿ + -ಗ೩]

**ನನ್ನಿಗೆಡು** (ಕ್ರಿ). ಮಾತು ತಪ್ಪು; ಭಾಷೆ ತಪ್ಪು: **ಸುಳ್ಳಾಡು**: ನಾಣ್ಗೊಳಿದು ನನ್ನಿಗೆಟ್ಟೊಗಡಿಸದೆ ನಾನಾವರ್ಣದೆಂಜಲ ತಿಂದು ಬಾಳುವ ಗನ್ನಗತಕದ ವೇಶ್ಯೆಯರ ಸುಡಲಿ (ಜೀವಂಧ. ೬-೩೭); ನನ್ನಿಗೆಟ್ಟಂತು ನುಡಿವರೆ ಸಲ್ಲದಿದು ನೀನು ಖಿನ್ನನಾಗಿರದೆ ಭಜಿಸ್ಯ ಪಾರ್ವತೀಶ್ವರನ (ಶಾಂತಪು. ೬-೩); ಎನ್ನ ರಾಜತೇಜಕರಸ ನನ್ನಿಗೆಡಲು ಮೂಱು ತಪ್ಪಿನಿಂ ನರೇಶನೆಡೆಯ ಬಿಡುವೆನೊಪ್ಪಿಡಡೆ ಗಡ (ಮಲೇಪು. ೨೨-೫೭). [ನನ್ನಿ + ಕೆಡು₁]

**ನನ್ನಿಗೆಯ್** (ಕ್ರಿ). ನಿಜಗೊಳಿಸು; ಸಾಬೀತುಗೊಳಿಸು; ಸತ್ಯವನ್ನಾಗಿಸು: ಬಿಸಿಯೆಲ್ಲವಂ ಕಿದರೆ ಚಳಿಯಂದು ಕುದುರೆ ಮೇಣ್ ಬಿಸುಗೆಯೊಳ್ ನೆಲೆ ನಿಲ್ಸಿದಂ ನನ್ನಿಗೆಯ್ವಂ (ಕಾಲೂಕ. ೧೭೭-೨೭೮). [ನನ್ನಿ + ಕೆಯ್₁]

**ನನ್ನಿಗೊಡು** (ಕ್ರಿ). ಭಾಷೆ ಕೊಡು; ಮಾತು ಕೊಡು: ಓರಿಯದೊಂದು ಮನೆವಾಳ್ತಿಯುಂಬೆಗಳೆ ಪೋಗಿ ಬಂದಪ್ಪಂ ಬಂದ ಬಟಿಕ್ಕನ್ನಂ ಮೆಚ್ಚಿದಂತೆ ಮಾಡೆಂದು ನನ್ನಿಗೊಟ್ಟು ನಂಬಿಸಿ ಪೋದೊಡೆ (ವಡ್ಡಾರಾ. ೧೬-೯). [ನನ್ನಿ + ಕೊಡು₁]

**ನನ್ನಿಗೊಳ್** (ಕ್ರಿ). ಪ್ರತಿಜ್ಞೆಯನ್ನು ಪಡೆ; ಭಾಷೆಯನ್ನು ಕೊಡುವಂತೆ ಮಾಡು; ಮಾತು ಪಡೆ: ಚಾಣಾಕ್ಯಂ ಕೇಳ್ದು ಅರಸನಂ ಕಂಡಾನರಸಿಯಾ ಬಯಕೆಯಂ ನೆಱಪುವೆನಾಯರಸಿಗೆ ಪುಟ್ಟಿದ ಕೂಸನೆನಗೀಯವಾರ್ಪೊಡಂ ದೊಡರಸನೀವೆನೆಂದೊಡರಸಿಯುಮಂ ನನ್ನಿಗೊಂಡಾರುಮಱಿಯದಂತಿರ (ವಡ್ಡಾರಾ. ೧೮೭-೦೪). [ನನ್ನಿ + ಕೊಳ್₁]

**ನನ್ನಿದಪ್ಪು** (ಕ್ರಿ). ಭಾಷೆ ತಪ್ಪು; ಮಾತು ತಪ್ಪು: ನನ್ನಿಯಹುದೆ ನಿಮ್ಮ ವಾಕ್ಯ ನನ್ನಿದಪ್ಪುದೆಮ್ಮೆಯೆಂದೊಡೆನ್ನದೊಂದು ನುಡಿಯನಾಲಿಸುವುದು (ಮಲೇಪು. ೨೨-೫೭). [ನನ್ನಿ + ತಪ್ಪು₁]

**ನನಿನುಡಿ** (ಕ್ರಿ). ದಿಟವನ್ನು ನುಡಿ; ಸತ್ಯವನ್ನು ಹೇಳು: ಈಯದೆ ಈಱಯದೆ ನನ್ನಿ ನುಡಿಯದೆ ನಣ್ಣೆ ದೇವಂಗಟ್ಗಿಸ್ಸಿ ಮುಯ್ಯುವ್ಪಡೆದೊಂಗರ ಅಲಿದೊಂ ಮೂದಲಿಪ್ಪೊಂ (ಎಪಿ. XXIV, ೨೭-೦೩; 886). [ನನ್ನಿ + ನುಡಿ₁]

**ನನ್ನಿನೊಳಂಬ** (ನಾ). ಒಬ್ಬಾತನ ಹೆಸರು: ಆತನ ಮಗಂ ನನ್ನಿನೊಳಂಬನ್ (ಮ್ಯಾಎರಿ. ೧೯೬೩, ೯೮-೯; ಸು. ೯೮೦); ಶ್ರೀಪೃಥ್ವೀವಲ್ಲಭ ಪಲ್ಲವಕುಲತಿಲಕ ಏಕವಾಕ್ಯಮಿಱಿವನೊಳಂಬ ಶ್ರೀಮದೆಲಿಪಯ್ಯನ ಮಗ ನನ್ನಿನೊಳಂಬನ ಬಿಟ್ಟ ಬ್ರಹ್ಮಾದೇಯಂ (ಎಕ. XI, ಹಿರಿಯೂ. ೧-೩; 976). [ನನ್ನಿ + ನೊಳಂಬ]

**ನನಿಮಟಲೂರ್** (ನಾ). ಒಂದು ಊರಿನ ಹೆಸರು (?): ಶೌಚವಣಾಲೆಯರುಂ ನನ್ನಿಮಟಲೂರುಂ ಸನ್ನೊನವಾಳ ಕಿಱುವೆಟ್ಟಗಳಾ ಪನ್ನಿರ್ವರ್ಗ್ಗಂ ರಣವಾರರಾ ವಡಾಲೆಯರಸರಾ ಸಮಾಧಿಯ ಸಮಾಧಿ (ಎಕ. XIV, ತಿರುಮ. ೨೫೩-೨; ಸು. 800). [? + ಊರ್]

**ನನ್ನಿವಂತ** (ನಾ). ಸತ್ಯವಂತ; ಧರ್ಮಿಷ್ಠ: ನನ್ನಿವಂತರ ದೇವ ಬಾರ್ಯೆ ಮನ್ನಣೆಯ ಮದಗಜವೆ ಬಾರ್ಯೆ (ಕಾಶಿರಾ. ೩೯-೬೦); ಯತಿಯ ರತಿಕನೆನಿಸಿ ಪತಿವ್ರತೆಯ ಸಿತಗೆಯೆನಿಸಿ ದಿವ್ಯವ್ರತಿಯ ಗತಿವಿಹೀನನೆನಿಸಿ ನನ್ನಿವಂತರ ಮತಿಗೆ ಸಟೆಯ ದಿಕ್ಕಿದಾಗಿ (ಮಲೇಪು. ೨೨-೨೭). [ನನ್ನಿ + -ವಂತ]

**ನನ್ನಿವಾತು** (ನಾ). ಪ್ರತಿಜ್ಞೆಯ ಮಾತು; ಶಪಥದ ನುಡಿ: ಮಱು ಮಾತಿಂಗೆಡೆಯಿಲ್ಲದಂತಿರೆ ನುಡಿದ ಪಡೆಮೆಚ್ಚಗಂಡನ ಗಂಡವಾತುಮಂ ನನ್ನಿವಾತುಮಂ ಮುರಾಂತಕಂ ಮೆಚ್ಚಿ (ಪಂಪಭಾ. ೫-೭೫ ವ). [ನನ್ನಿ + ಮಾತು₁]

**ನನ್ನಿವೇಟ್** (ಕ್ರಿ). ಸತ್ಯವನ್ನು ನುಡಿ; ನಿಜವನ್ನು ಹೇಳು: ತನ್ನರಸಿಯ ಉಱುಗಿಲ್ಲದ ನಡೆಗೆ ದೇವರ್ಕಳಂ ಸಾಕ್ಷಿಗೊಟ್ಟು ಅಗಳೆ ತನ್ನತನ್ನೆಯಮಂ ಮನ್ನಿಸೆಂದು ನನ್ನಿವೇಟ್ದು ಸಂತವಿಟ್ಟು (ರಾಮಾಶ್ವ. ೧೬೩-೯). [ನನ್ನಿ + ವೇಟ್]

**ನನ್ನು** (ನಾ). ಅರಿಸಿನ, ಕುಂಕುಮ ಮೊದಲಾದುವನ್ನು ತೂಗುವ ಒಂದು ಬಗೆಯ ತೂಕ: ಸುಗಂಧಗಳಿಗೆ ಪಚ್ಚಕರ್ಪ್ಪುರ ಕೂರು ಒಂದಕ್ಕೆ ಹಾಗ ಪನ್ನೆಕುರು ಒಂದಕ್ಕೆ ಬೇಳೆ ಕಸ್ತುರಿ ತೊಲೆ ಒಂದಕ್ಕೆ ಬೇಳೆ ಕುಂಕುಮ ನನ್ನು ಒಂದಕ್ಕೆ ಹಾಗ ಅಗಿಲು ತೊಲೆ ಒಂದಕ್ಕೆ ಅಡ್ಡ (ಎಕ. V, ಬೇಲೂರು. ೭೫-೮೨; 1382). [?]

**ನನ್ನೂಱು** 'ನಾಲ್ನೂಱು' ನೋ.

**ನಪತ್ತು** 'ನೌಬತ್ತು' ನೋ.

**ನಪರ** 'ನಫರ' ನೋ.

**ನಪಾಸು** 'ನಾಪಾಸು' ನೋ.

**ನಪಿರಿ, ನಪೂರಿ, ನೌಪೂರಿ** (ನಾ). ಒಂದು ಬಗೆಯ ವಾದ್ಯ; ತುತ್ತೂರಿ: ಚಂಬಕ ಡವುಡೆ ನಪಿರಿ ಬುರುಗುಗಳುಱ್ ಕೊಂಬಿನ ಕಾಳೆ ಮವುರಿಯ ಬೊಂಬುಳಿ ಡೋಳು ನಿಸ್ಸಾಳಗಳಬ್ಬರ ತುಂಬಿತಾಕಾಶಮಂಡಲವ (ಕಂನವಿ. ೧೯-೨); ಚಂಬಕ; ಡವುಡೆ; ನಪಿರಿ; ದುಂದುಭಿ . . . ಜಬರುಜಂಗಿ ಇತ್ಯಾದಿ (ಭಾಷಾಭೂ. ೫). **ನಪೂರಿ**: ನಿರ್ಜೀವಿ ಯಾವುವೆಂದೊಡೆ... ಲೋಹವಿಡಿದ ಶಬ್ದ ತಾಳ ಕಂಸಾಳ ಗಂಟೆ ಕಹಳೆ ಕರ್ನೆ ನಪೂರಿ ಸ್ವನಾಯಿ (ವಡಸಂ. ೯೦೫-೯೯); ನುಡಿವ ಮದ್ದಳೆ ಜೋಡುಶಂಖ ನಪೂರಿಯು ಬಡಿವ ತುಡುಮು ಡಮಾಮಿಗಳು ಹೊಡೆವ ಭೇರಿಯು ದೇವದುಂದುಭಿ ಮೊದಲಾದ ಗಡಣವೆಣ್ಣೆಸೆಯ ವ್ಯಾಪಿಸಿತು (ಅಲ್ಲಂಉ. ೪-೮೨); ಭೇರಿ ಹೆಗ್ಗಾಳೆ ನಪೂರಿ ನಾಗರ ಡೋಳು ಬಾರಿಸುತಿರಲು (ಬೀರಲಾ. ೯-೩); ಭೇರಿ, ಕಹಳೆ, ಕರ್ನೆ, ನಪೂರಿ, ನಗಾರಿ, ಜಾಗಟೆ, ಕರಡಿ ಸಮ್ಮೇಳ (ಗುರುದ. ೦೦). **ನೌಪೂರಿ**: ಕಹಳಾ ಭೇರಿ ನಗಾರಿ ತಮ್ಮಟೆ ತುತತೂರೀ ಮೌರಿ ನೌಪೂರಿಂಗಳ್ ಬಹು ವಾದ್ಯಾದುರು ತಾಂ ಧಳಂಧಳೆರವಂ ಪರ್ಬುತ್ತಿರಲ್ಕೆತ್ತಲುಂ (ದೀವಂ. ೨-೨೭೦).

[←ಪಾರ. ನಫೀರೀ, ನಫೀರೂ; ಹಿಂ. ನಫೀರ್, ನಫೀರೀ, ನಫೇರೀ, ನಪ್ಪೇರೀ; ಮರಾ. ನಫೇರೀ]

**ನಪುಂಸ** (ನಾ). = ನಪುಂಸಕ ೧: ಈರ್ವರಿಗೆ ಸೂರ್ಯಸ್ಮರ ನಡೆಯಲ ನಪುಂಸನಹನೂ (ನವಮೋ. ೦೯-೪೫). [ಸಂ.] ೦

**ನಪುಂಸಕ** (ನಾ). ೧. ಪುರುಷನೂ ಅಲ್ಲದ ಸ್ತ್ರೀಯೂ ಅಲ್ಲದ ವ್ಯಕ್ತಿ; ಗಂಡೂ, ಹೆಣ್ಣೂ ಅಲ್ಲದ ಮನುಷ್ಯ; ಷಂಡ. ೨. ಖೋಜ; ಕೊಜ್ಜೆ: "ಕ್ಲೀಬಃ, ವರ್ಷವರಃ, ಷಂಡಃ, ಷಂಡಕಃ, ನಪುಂಸಕಃ – ಈ ೫ ನಪುಂಸಕಂ" (ಹಲಾಯು. ೭೦-೨೭೭); "ಷಂಡಂ ಕ್ಲೀಬನೆನೆ ನಪುಂಸಕನೆನಿಕ್ಕುಂ" (ಮಂಗರಾ. ೫೦-೮); ಮೌತ್ರಮಾ ನಾರಕರೆಲ್ಲಂ ಹುಂಡಮುಂಡಸಂಸ್ಥಾನರುಮತಿವಿರೂಕ್ಷ ಕೃಷ್ಣವರ್ಣರುಮತಿದುರ್ಗಂಧರುಂ ನಪುಂಸಕರುಂ (ಸುಕುಮಾ. ೦೦-೯೫ ವ); ನಪುಂಸಕ ವ್ಯವಹರಿಸಬಲ್ಲನೇ ಅಯ್ಯ (ಸಿದ್ಧೇವ. ೦೭೨-೫೨೬); ಅರ್ಜುನಂಗೀ ಸೂ ತ ತ ನ ವೆ ತ್ರ ಲು ನಪುಂಸಕವೇಷ ವೀಕ್ಷಿಸಲು (ಕುಮ್ಮಾವಿ. ೬-೦೫). ೩. = ನಪುಂಸಕತ್ವ ೧: ವರುಷ ತನಕ ನಪುಂಸಕದಲಾಚರಿಸಬಲ್ಲೆನೆ ಸಾಕಂ ದೇಹಾಂತರವನಂಗೀಕರಿಸುವೆನಲಾ ತನ್ನ ಸುಡಲೆಂದ (ಕುಮ್ಮಾಭ. ೮-೯೫). ೪. (ಆಲಂ) ನಿರ್ವೀರ್ಯನಾದವನು; ದುರ್ಬಲ; ಬಲಹೀನ: ಈ ನಪುಂಸಕರುಗಳ ನಂಬಿದ ನಾನು ನೀತಿಜ್ಞನೆ ಮಹಾದೇವೇನ ಹೇಳುವೆನೆನುತ ಭೀಷ್ಮನ ಹೊರೆಗೆ ನಡೆತಂದ (ಕುಮ್ಮಾಭೀ. ೪-೭೭); ನಾನು ದುರ್ಯೋಧನನಿಗೆ ಧನಾಧೀನನಾಗಿ ನಪುಂಸಕನಾದ್ದರಿಂದ (ಕೃಪಾಭೀ. ೨೭). ೫. [ವ್ಯಾಕ] ಮೂರು ಲಿಂಗಗಳಲ್ಲಿ ಒಂದು; ಪುಲ್ಲಿಂಗ, ಸ್ತ್ರೀಲಿಂಗಗಳಲ್ಲದ ಲಿಂಗ ಮತ್ತು ಅದಕ್ಕೆ ಅಳವಡದ ಶಬ್ದ: ಸ್ವರವಿದಿರೊಳಕಾರಾಂತಕ್ಕಿರೆ . . . ನಪುಂಸಕಕ್ಕೆ ದಾಗಮಮಕ್ಕುಂ (ಕಾವ್ಯಾವ. ೦೦೪); ಕರ್ಣಾಟಕದೊಳ್ ಪೀನಂ ಸ್ತ್ರೀಪುಂ ನಪುಂಸಕೋಭಯ ಪುಂಸ್ತ್ರೀ ಸ್ತ್ರೀ ನಪ್ಪಮಸ್ತ ವಾಚ್ಯಾನ್ಯೂನಾವ್ಯಯಮೆಂದು ಲಿಂಗವೊಂಬತ್ತು ತೆಱಂ (ಶಮದ. ೫೫); ಕೆಲವು ಹಲವು ಎಂಬುವು

ನಪುಂಸಕ ಬಹುವಚನದ ರೂಪಗಳು (ಶುದ್ಧಕು. ೪೪). ೧. ೫ : ಮನವ ನಪುಂಸಕವೆಂದೆ ನಾನವಳನು ಕರೆತರಲಟ್ಟಿದೆ ಮನವು ರಮಿಸುತದಲ್ಲಿಯೆ ವಂಚಿತ ನಾದೆನು ಪಾಣಿನಿಯಂತಹ ಕಿತವ (ಇಂಚಾಶ. ೮೩-೧೭).

ನಪುಂಸಕಪಕ್ಷಿಗ್ರಹ = ಒಂದು ಬಗೆಯ ಹಕ್ಕಿರೋಗ : ಮಾಡುಹು ಗಳಲ್ಲಿಯೂ ಬೆನ್ನಿನಲ್ಲಿಯೂ ಕಳಿ ಬದ್ಧಿಹುದು. ವ್ಯ ಉರಿತ, ಕಾರುವಣ, ಉಚ್ಚುವಣ, ಬಾಯಾಚಿಕೆ. ಇವಿಷ್ಟು ಉಂಟಾಗಿದ್ದರೆ ನಪುಂಸಕಪಕ್ಷಿಗ್ರಹ ಹಿಡಿದಿದೆ ಎಂದರಿವುದು (ವೃದೃಶಾ. II. ೧೩). [ಸಂ. ]

ನಪುಂಸಕತನ (ನಾ). = ನಪುಂಸಕತ್ವ ೧ : ಉತ್ತರಗೋಗ್ರಹಣದ ಸಮಯಕ್ಕೆ ಅರ್ಜುನನ ನಪುಂಸಕತನ ಕೊನೆಗೊಂಡಿತು (ಲೂಪ). [ ನಪುಂಸಕ + – ತನ ]

ನಪುಂಸಕತ್ವ (ನಾ). ೧. ಪುರುಷನೂ ಸ್ತ್ರೀಯೂ ಅಲ್ಲದಿರುವ ಸ್ಥಿತಿ; ಕ್ಲೀಬತ್ವ; ಷಂಡತನ : ಅರ್ಜುನನು ಊರ್ವಶಿಯ ಶಾಪದಂತೆ ಒಂದು ವರ್ಷಕಾಲ ನಪುಂಸಕತ್ವವನ್ನು ಹೊಂದಿದ್ದನು (ಲೂಪ). ೨. [ವ್ಯಾಕ] ಪುಂ, ಸ್ತ್ರೀಲಿಂಗಗಳಿಗೆ ಸೇರದಿರುವಿಕೆ; ನಪುಂಸಕಲಿಂಗವಾಗಿರುವಿಕೆ : ನಿತ್ಯಂ ನಪುಂಸಕತ್ವಮಪತ್ಯಕಲತ್ರಾದಿ ಶಬ್ದದೊಳ್ ಸ್ತ್ರೀಪುಂಸವ್ಯಕ್ತಿಯುಮಕ್ಕುಂ ಕರುಣೋಪಕ್ಕುಕೆಗಳೊಳಂ ವಧಾಭಿಲಾಷಾದಿಯೊಳಂ (ಕಾವ್ಯಾವ. ೧೬೦). [ ಸಂ. ]

ನಪುಂಸಕಲಿಂಗ (ನಾ). = ನಪುಂಸಕ ೫ : ಪುರುಷರುಂ ಪೇಟ ಶಬ್ದಂಗಳ್ ಪುಲ್ಲಿಂಗಂಗಳ್ ; ಸ್ತ್ರೀಯರುಂ ಪೇಟ್ಟ ಶಬ್ದಂಗಳ್ ಸ್ತ್ರೀಲಿಂಗಂಗಳ್ ; ಉಳಿದು ವೆಲ್ಲಂ ನಪುಂಸಕಲಿಂಗಂಗಳ್ (ಶಮದ. ೬೧ ವೃತ್ತಿ) ; ಪುಲ್ಲಿಂಗವೆಂತಲೂ ಸ್ತ್ರೀಲಿಂಗವೆಂತಲೂ ನಪುಂಸಕಲಿಂಗವೆಂತಲೂ ಮೂರು ವಿಧವಾಗಿರುವುದು (ಹೊಸುಗ. ೩೫) ; ಪುಲ್ಲಿಂಗವೂ ಸ್ತ್ರೀಲಿಂಗವೂ ಅಲ್ಲದ ಪದಗಳೆಲ್ಲಾ ನಪುಂಸಕ ಲಿಂಗ (ಮಧ್ಯಕು. ೩೦). [ ನಪುಂಸಕ + ಲಿಂಗ ]

ನಪುಂಸಕವೇದ (ನಾ). [ಜೈನ] ಒಂದು ಬಗೆಯ ನೋಕಷಾಯ; ಚಾರಿತ್ರಮೋಹನೀಯದ ಭೇದಗಳಾದ ಮೂರು ಬಗೆಯ ವೇದ ಗಳಲ್ಲಿ ಒಂದು; ಆತ್ಮನಿಗೆ ಚೈತನ್ಯರೂಪ ಪರ್ಯಾಯದಲ್ಲಿ ಮೈಥುನರೂಪವಾದ ಚಿತ್ತವಿಕ್ಷೇಪವುಂಟಾಗುತ್ತದೆ. ಇದಕ್ಕೆ ವೇದವೆಂದು ಹೆಸರು. ಇದರಲ್ಲಿ ಪುರುಷವೇದ, ಸ್ತ್ರೀವೇದ, ನಪುಂಸಕ ವೇದವೆಂದು ಮೂರು ಬಗೆಗಳಿವೆ. ಪುರುಷವೇದದ ಉದಯದಿಂದ ಸ್ತ್ರೀವಿಷಯಕವಾದ ಕಾಮವುಂಟಾಗುತ್ತದೆ. ಸ್ತ್ರೀವೇದದ ಉದಯದಿಂದ ಪುರುಷವಿಷಯಕವಾದ ಕಾಮವುಂಟಾಗುತ್ತದೆ. ನಪುಂಸಕವೇದದ ಉದಯದಿಂದ ಸ್ತ್ರೀಪುರುಷೋಭಯಾತ್ಮಕ ವಾದ ಕಾಮವುಂಟಾಗುತ್ತದೆ. ನಪುಂಸಕವೇದದಿಂದ ಉಂಟಾಗುವ ಭಾವವು ಆವಿಗೆಯಲ್ಲಿರುವ ಬೆಂಕಿಯಂತೆ ದೀರ್ಘಕಾಲವಿರುತ್ತದೆ. ಆ ಕಾರಣದಿಂದ ವ್ಯಕ್ತಿಯು ಪುರುಷಶಕ್ತಿ, ಸ್ತ್ರೀಶಕ್ತಿ ಎರಡೂ ಇಲ್ಲದವನಾಗುತ್ತಾನೆ. ಹೀಗೆ ಬೇರೆ ಬೇರೆ ವಿವರಣೆಗಳು ಜೈನಗ್ರಂಥ ಗಳಲ್ಲಿ ನಿರೂಪಿತವಾಗಿವೆ : ಮತ್ತಂ ಕಟಿದು ಬೇಗದಿಂ ಕ್ರಮಾಕ್ರಮದೊಳ್ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ.... ಕ್ಷಾತಿಸಿ (ಆದಿಪು. ೧೦-೦೪ ವ); ಅಭಿಭವಿಸಿ ನಪುಂಸಕವೇದ ಭಾವಿನೀವೇದಯುಗಳದೊಡ ನೊಡನೆ ಜಗದ್ವಿಭು ಹಾಸ್ಯರತ್ಯರತಿಶೋಕಭಯಜುಗುಪ್ಸೆಗಳನಾಟಿಸುಮಂ ಬೆಂಕೊಂಡಂ (ಮಲ್ಲಿಪು.೧೪-೮೪) ; ಮತ್ತಂ ಕತಿಪಯಸಮಯದೋಳನು ಕ್ರಮದಿಂ ನಪುಂಸಕವೇದಂ ಸ್ತ್ರೀವೇದಮೆಂಬ ಎರಡುಮನದಿರ್ಪ (ಶಂಧ್ರಪು. ೧೪-೬೯ ವ) ; ಸ್ತ್ರೀವೇದಂ ಪುರುಷಾಭಿಲಾಷೆಯಂ ಮಾಟ್ಟುದು ಪುರುಷವೇದಂ ಸ್ತ್ರೀಯಭಿಲಾಷೆಯಂ ಮಾಟ್ಟುದು ನಪುಂಸಕವೇದಮುಭಯಾಭಿಲಾಷೆಯಂ ಮಾಟ್ಟುದು (ಜಸಾರ. ೧೨) ; ನಪುಂಸಕವೇದಮನಡಿಯಿಟ್ಟು ಹಾಸ್ಯಾದಿಯಾಱ (ವರ್ಧಕ. ೧೨-೩೦). 'ನೋಕಷಾಯ' ಪರಾ. [ ಸಂ. ]

ನಪುಂಸಕಶಿಲೆ (ನಾ). ಮೂರ್ತಿಶಿಲ್ಪಕ್ಕೆ ನಿರುಪಯುಕ್ತವಾದ ಶಿಲೆ; ಮೂರ್ತಿ ಶಿಲ್ಪಕ್ಕೆ ಉಪಯೋಗವಾಗದ ಶಿಲೆ : ಶಿಲೆಯಲ್ಲಿ ಪುಂಶಿಲೆ, ಸ್ತ್ರೀಶಿಲೆ, ನಪುಂಸಕಶಿಲೆಯೆಂದು ಮೂರು ವಿಧ. ಕಂಚಿನ ತಾಳದ ನಾದದಂತೆ ಧ್ವನಿಕೊಡುವ ಶಿಲೆಯು 'ಪುಂಶಿಲೆ' ಯೆಂದೂ, ಘಂಟಾನಾದದಂತೆ ಧ್ವನಿತ ವಾಗುವ ಶಿಲೆಯು 'ಸ್ತ್ರೀಶಿಲೆ' ಯೆಂದೂ, ತಾಳವಿಹೀನವಾದ ಶಿಲೆಯು 'ನಪುಂಸಕಶಿಲೆ' ಯೆಂದೂ ಉಕ್ತಿ ಇದೆ . .. ಸ್ತ್ರೀದೇವತಾವಿಗ್ರಹಗಳನ್ನು ಸ್ತ್ರೀಶಿಲೆಯಿಂದಲೂ, ಆಧಾರಪೀಠಾದಿಗಳನ್ನು ನಪುಂಸಕಶಿಲೆಯಿಂದಲೂ ಮಾಡಬೇಕೆಂದು ವಿಧಿಸಿದೆ (ಛಾಕರ. ೬೭). [ ನಪುಂಸಕ + ಶಿಲೆ ]

ನಪುಂಸಕಿ (ನಾ). ಸ್ವರೂಪದಲ್ಲಿ ಹೆಣ್ಣಾಗಿ ಕಂಡರೂ ಹೆಣ್ತನವಿಲ್ಲದ ವ್ಯಕ್ತಿ : ಪರವಧುವಂ ನಪುಂಸಕಿಯರುಂ ಗುರುಭಾರ್ಯೆಯರುಂ ಮುನೀಂದ್ರ ಸೌಂದರಿಯರನಂತ್ಯ ಜಾತಿಯವಳಂ ವ್ರತವುಳ್ಳಳನಂಗಹೀನೆಯಂ ತಿರಿವ ವಳಂ ಕುಲಕ್ಷಯೆಯನಾ ಕೊಡಗೂಸುಗಳಂ ವಿದಗ್ಧನಾದರದೊಳೆ ಕೂಡಲುಂ ಬಯಸಿನೋಡಲು ಮಾಗದು ಕೂರ್ತು ಬಂದೊಡಂ (ಮದತಿ. ೯-೨). [ ನಪುಂಸಕ + – ಇ₂ ]

ನಪೂರಿ 'ನಪಿರಿ' ನೋ.

ನಪೆ 'ನಫೆ' ನೋ.

ನಪ್ತಾರ (ನಾ). ಮೊಮ್ಮಗ ; ನಪ್ತೃ : ಪಿತೃ ಮೊದಲಾದ ಶಬ್ದಗಳನ್ನುಳಿದ ಋಕಾರಾಂತ ಶಬ್ದಗಳ ಋಕಾರಕ್ಕೆ ಆರಾದೇಶ ಬರುತ್ತದೆ . . . ಸ್ವಸೃ – ಸ್ವಸಾರನು ; ನಪ್ತೃ – ನಪ್ತಾರನು ಇತ್ಯಾದಿ (ಹೊಸುಗ. ೧೦೬). [ ಸಂ. ನಪ್ತೃ ]

ನಪ್ತೃ (ನಾ). ಮಗನ ಅಥವಾ ಮಗಳ ಮಗ ; ಮೊಮ್ಮಗ : "ದೌಹಿತ್ರಃ, ನಪ್ತಾ–ಈ ೨ (ಮ)ಗಳ ಮಗಂ ; ಪೌತ್ರನುಂ ಅಹಂ" (ಹಲಾಯು. ೬೩-೬೫೧); "ಮಗನ ಮಗಂ ನಪ್ತೃ ಪೌತ್ರನೆನಿಸುಂ" (ವಸ್ತುಕೋ. ೫೫-೨೨) ; ಋಕಾರಾಂತಕ್ಕೆ–ಪಿತೃ, ಸವಿತೃ, ನಪ್ತೃ . . . ಧಾತೃ (ಶಮದ. ೬೪ ಪ್ರಯೋ) ; ಮಡದಿಯರಂ ಮಕ್ಕಳಂ ಮೊಮ್ಮಕ್ಕಳಂ ನಪ್ತೃಗಳಂ ನಿಗ್ರಹಾನುಗ್ರಹಪೂರ್ವಕಮಾಗಿ ಸಂರಕ್ಷಣೆಯನೆಸಗು (ಧಾರಶಾ. ೬೭-೪೧೩). [ ಸಂ. ]

ನಪ್ತ್ರಿ (ನಾ). ಮಗನ ಅಥವಾ ಮಗಳ ಮಗಳು ; ಮೊಮ್ಮಗಳು : "ನಪ್ತ್ರೀ,–ಪೌತ್ರೀ, ಸುತಾತ್ಮಜಾ – ಮಗನ ಮಗಳ ಹೆಸರುಗಳು, ಮಗಳ ಮಗಳಿಗೂ ಹೆಸರು, ಮೊಮ್ಮಗಳು" (ಸಿದ್ಧಾಂತಿ. ೧೫೨). [ ಸಂ. ನಪ್ತ್ರೀ ]

ನಪ್ಪು (ನಾ). [ವ್ಯಾಕ] ನಪುಂಸಕಲಿಂಗ ಎಂಬುದರ ಸಂಕೇತ : ಪುರುಷರ ಪುಲ್ಲಿಂಗಂ ಸ್ತ್ರೀಯರ ತಾಂ ಸ್ತ್ರೀಲಿಂಗಮುಳಿದುವೆಲ್ಲಂ ನಪ್ಪಾಗಿರೆ ಸಲ್ಗುಂ ಕನ್ನಡದೊಳ್ ಪರಿವರ್ತಿಸವುದುದ ಲಿಂಗಮೊಳವಾಗಿರ್ದುಂ (ಶಮದ. ೯೦); ನಪ್ಪಾಗಿರೆ = ನಪುಂಸಕಲಿಂಗವಾಗಿರೆ (ಶಮದ. ೯೦ ಟೀಕೆ). [ ಸಂ. ನಪ್ ]

ನಪ್ಪುರಿ₁ (ಕ್ರಿ). ಗಾಡಿ, ನೇಗಿಲು ಮುಂತಾದವುಗಳ ಚಲಿಸುವ ಎತ್ತು ಗಳನ್ನು ನಿಲ್ಲಿಸಲು, ಬಾಯಿಂದಲ್ಲಿಯ ಶಬ್ದದಿಂದ ಸೂಚನೆ ಕೊಡು : ಎತ್ತುಗಳನ್ನು ಗೌಡರು ನಪ್ಪುರಿದು, ಗಾಡಿಯನ್ನು ಮನೆಯ ಮುಂದೆ ನಿಲ್ಲಿಸಿ, ಮುಖದಲ್ಲಿ ಆ ಗೆಲುವಿನ ನಗೆಯನ್ನು ಸೂಸುವಾಗ ಅವನಿಗೆ ಪೂರ್ತಿ ಜೀವ ಬಂತು (ನನ್ನೂರು. ೧೩೪). 'ನಕ್ಕುಳು', 'ಮುಂಪ್ಪುರಿ' ಪರಾ.

ನಪ್ಪುರಿ₂ (ನಾ). "ನೇಗಿಲಿಗೆ ಅಥವಾ ಗಾಡಿಗೆ ಕಟ್ಟಿದ ಎತ್ತುಗಳನ್ನು ನಿಲ್ಲಿಸಲು ಬಾಯಿಂದಲ್ಲಿ ಮಾಡುವ ಒಂದು ರೀತಿಯ ಶಬ್ದದ ಸನ್ನೆ" (ನನ್ನೂರು. ಕೋಶ). [ <ನಪ್ಪುರಿ₁ ]

ನಫರ್ 'ನಫರ' ನೋ.

ನಫರ್‌ಜಾಮಿಾನು 'ನಫರಜಾಮಿಾನು' ನೋ.

ನಘರ, ನವರ, ನಫರ್ (ನಾ). ೧. (ಕೀಳು ತರಗತಿಯ) ಆಳು ; ದಾಸ ; ಸೇವಕ. ೨. ವ್ಯಕ್ತಿ ; ಮನುಷ್ಯ : ಇಸಮಂ : ನಿಜ, ಅಹುದು ! ಆದರೆ ಈ ಹಳೇ ನಫರನಾದ [ಮನುಷ್ಯನಾದ] ನನ್ನ ದೆಸೆಯೇನಾಗಬೇಕು ? (ಕಹಾಕಂ. ೮೦). 'ನಘರಜಾಮಿನಾನು' ಪರ್ಯಾ. ನಘರ : ೧. ನಪರನ ಹೆಂಡತಿಗೆ ಹುರನ ಕಾವಲು (ಗಾದೆ). ನಘರ್ : ೧. 'ನಫರ್‌ಜಾಮಿನ್' ಪರ್ಯಾ. [←ಅರ. ಹಿಂ. ನಫರ್ : ಮರಾ. ನಫರ್, ನಪ್ಪರ್ ]

ನಘರಜಾಮಿನು, ನಫರ್‌ಜಾಮಿನ್ (ನಾ). ಒಬ್ಬ ವ್ಯಕ್ತಿಯು ಒಂದು ಹರತ್ತನ್ನು ಪಾಲಿಸುವುದಕ್ಕೆ ಬದ್ಧನಾಗಿ ನ್ಯಾಯಾಸ್ಥಾನದ ಎದುರಿಗೆ ಒಪ್ಪಿಕೊಳ್ಳುವಿಕೆ ; ಸ್ವಂತಜಾಮಿನು : (+). ನಘರ್‌ಜಾಮಿನ್ : ನಫರ್‌ಜಾಮೀನ್ ಖತ್ತಿನ (recognisance) ಮೇಲೆ. ಹನ್ನೆರಡು ವರ್ಷಗಳು (ಗ್ರಾಮೂಳ. ೧೭೦). [ ನಘರ + ಜಾಮಿನು ]

ನಘಾ 'ನಫೆ' ನೋ.

ನಫೆ, ನಪೆ, ನಫಾ (ನಾ). ವ್ಯಾಪಾರದಲ್ಲಿ ಬರುವ ಆದಾಯ ; ಲಾಭ ; ಫಾಯಿದೆ ; ಕಿಫಾಯಿತ್ತು : ಈಚೆಗೆ ಒಂದಕ್ಕೆ ಎರಡರಷ್ಟು ನಫೆ, ವ್ಯಾಪಾರದಲ್ಲಿ ಬಂದದ್ದರಿಂದ ಕಾವುಗಾರಿ ಪ್ರಯತ್ನ ಮಾಡಿದೆವು (ಎಳ. ಸಿVI, ಮುದ್ರ ೧. ೦೦೭-೮ ; 1812) ; ಉತ್ತಮವಾದ ರತ್ನಗಳನ್ನು ಹನುಮಂತರಾಯನು ಅಂದಾಜು ನೋಡಿ ತಾನೇ ಕ್ರಯಕ್ಕೆ ತೆಗೆದುಕೊಂಡು ಅವುಗಳನ್ನು ನಫೆಗೆ ಮಾರುತ್ತಿದ್ದನು (ಮುಂಸುಗ. ೬೨) ; ವಾಸ್ತವವಾಗಿ ಬಂದ ನಫೆಯ ಮೇಲೆ ನೇಕಡ ಹತ್ತರಂತೆ ದಳ್ಳಾಳಿಯನ್ನು ಕೊಡುವ ಪದ್ಧತಿ (ಭಾಗ್ಯಕಿ. ೨೭) ; ಅಂತೂ ಲುಕ್ಸಾನಿಲ್ಲ. ನಫೆಯಾಗಿದೆ (ಭೀಮಮುಕಾ. ೬). ನಪೆ : ಈ ದಿನದ ವ್ಯಾಪಾರದಲ್ಲಿ ಆತನಿಗೆ ಹೆಚ್ಚು ನಪೆಯಾಯಿತು (ರೂಢಿ). ನಫಾ : ಯಾರಿಗೆ ಹ್ಯಾಗೆ ಖರೀದಿ ಮಾಡಲ್ಪಟ್ಟದೆಯೋ ಅದರ ಹಾಗೆ ಅವರು ನಫಾ ಕಿಮ್ಮತ್ತಿನಲ್ಲಿ ಸಾಮಿಲಮಾಡಿ ಹೇಳುತ್ತಾರೆ (ಮುಂಬಪ್ಯಾ. ೧೯೪).
[←ಅರ. ನಫ್ಅ; ಹಿಂ. ನಫಾ ; ಮರಾ. ನಫಾ, ನಪ್ಪಾ ]

ನಬಾಬ 'ನವಾಬ' ನೋ.

ನಬೀ (ನಾ). ದೈವಪ್ರೇರಿತವಾದ ಧರ್ಮೋಪದೇಶಕ ; ಪೈಗಂಬರ ; ಪ್ರವಾದಿ ; ದೇವದೂತ ; "ಧರ್ಮಸ್ಥಾಪಕ" (ಜಾನಕೋ. ೯).
[ ←ಪಾರ. ಅರ. ಹಿಂ. ಮರಾ. ನಬೀ ]

ನಬ್ಯ (ನಾ). ಹೊಸತು ; ನವ್ಯ : "ನಬ್ಯ-ನವ್ಯ = ಹೊಸತು" (ಕರ್ಣಕೋ. ೨೦) ; ತರಿಸಿಯೊಟ್ಟಿಸಿ ನಬ್ಯ[ಪಾಠಾಂ. ವ್ಯ]ದಿವ್ಯಾಂಬರ ನಿಕರವಂ (ಜಸಪು. ೩೭-೧೮). [ <ಸಂ. ನವ್ಯ ]

ನಭ (ನಾ). ೧. ಬಾನು ; ಆಗಸ ; ವ್ಯೋಮ ; ಆಕಾಶ ; ಗಗನ : "ನಭಃ . . . ಗಗನಂ, ದ್ಯು:-ಈ ೧೫ ಆಕಾಶಂ" (ಹಲಾಯು. ೨೨-೧೩೬) ; "ತಾರಾಪಥಂ ವ್ಯೋಮಮಂತರಿಕ್ಷಂ ನಭಂ . . . ಅಂಬರಂ ವಿಷ್ಣುಪದಮೆನಲು ಗಗನಮಕ್ಕುಂ" (ಮಂಗರಾ. ೯-೩೦) ; ಒತ್ತಿ ತಜುಂಬ ಸಿಂದ ರಿಪುಭೂಜ ಸಮಾಜದ ಬೇಗಳಂ ನಭಕ್ಕೆತ್ತದೆ ಬಂದು ತನ್ನ ವಾಜಿವೊಕ್ಕೊಡೆ ಕಾಯದೆ ಚಾಗದೊಳ್ಪಿನಚ್ಚೊತ್ತದೆ ಮಾಣ್ದು ಬಾಳ್ವ ಪುಟುವಾನಸನೆಂಬನಜಂಡ ಮೆಂಬುದೊಂದಿತ್ತಿಯು ಪಡೆಕ್ಕೊಳಿಪ್ಪ ಪುಟುವಲ್ಲದೆ ಮಾನಸನೇ ಮುರಾಂತಕಾ (ಶಂಕಶಾ. ೫-೭೫) ; ನಭದಿಂದಮಿಟಿದವಂ ರಾಜಭವನಮಂ ಪೊಕ್ಕು ಪವನಸುತ ವಾದನಖಿಪ್ರಭೆ ಪಸರಿಸಿ ತನಗೆ ಶಿರೋವಿಭೂಷಣಶ್ರೀಯನೀಯೆ ವಿನಮಿತನಾದು (ಶಂರಾಮಾ. ೧೧-೨೭) ; ಭೋರೆನೆ ತೂರ್ಯವಂಚೆಯನಜಂ ಗಜಮಂ ಬಳವೈರಿ . . . ವಿಮಾನವಮಂ ಮಾರಹರಪ್ರಿಯಂ ವೃಷಭನಂ ಹರನೇಱ ನಭಕ್ಕೆ ಸಲ್ವುದುಂ (ಜಗವಿ. ೦-೩೬) ; ಗ ಗ ನ ರು ಧ್ರ ಪೊ ಅಲುಗಗುಡದಂತೆ ಕೀಲಿಸಿದ ವಜ್ರವೊಳಗಳೊ ನಭದ ಲತೆ ಹಬ್ಬಿಯೊಗೆದ ನನೆಯೊ ಕಡುಹಸಿದವೆಂದು ಶಶಿಯೆಲ್ಲಾ ಚಕೋರಕ್ಕೆ ಕೊಡುವ ಸವಿದುತ್ತುಗಳೊ . . . ಎನೆ ತಾರಾಳಿಯೆಸೆದುವಾ ಜಗದ ಜನ ನಲಿಯುತಿರಲು(ಹಹಳಾ. ೩-೮೯) ; ತೊಳಗುವ ನಭದೊಳ್ ಚಿತ್ತಾವಿಳದೃಷ್ಟಿಗವಿದ್ಯಮಾನಮೇಚಕರುಚಿಯೊಂದೆಳಸಿ ಎಗೆ ತೋರ್ವ ತೆಜದಿಂ ಖಳಂಗೆ ಪೊಲನಲ್ತೆ ಕೃತಿಯೆಳ್ಲದೂ ದೋಷಂ (ಪುಷ್ಪಪು. ೧-೪೮) ; ನಭಮಿಂದಿಳಿವ ಗಂಗೆಯ ಧಾರೆ ಮೆಚಿಸುದುಧ ಪುರದ ಬಾಹೆಯಲಿ (ಕುಮ್ಯಾಅ. ೭-೩೨) ; ಶುದ್ಧಿಸದೆ ನಭ ಧರೆಯ ಮರ ಮರಳಿ ಮಳೆಯಿಂ ? (ಮುಂಕುಕ. ೪೭೪). ೨. ವಂಗಿಲು ; ಮೋಡ. 'ನಭಪ್ರಸೃತಿ', 'ನಭೋಗ' ಪರ್ಯಾ. ೩. ಚಾಂದ್ರಮಾನ ವರ್ಷದಲ್ಲಿ ಒಂದು ತಿಂಗಳ ಹೆಸರು; ಶ್ರಾವಣಮಾಸ: "ಶ್ರಾವಣಮಾಸಮಂ ನಭ ಮೆಂಬುದು" (ಹಲಾಯು. ೧೯-೧೦೪); "ಶ್ರಾವಣಃ, ನಭಾಃ, ಶ್ರಾವಣಿಕಃ-೩ ಶ್ರಾವಣಮಾಸದ ಹೆಸರುಗಳು" (ಸಿದ್ಧಾಂತಿ. ೩೮). ೪. ಸೊನ್ನೆ ; ಶೂನ್ಯ : "ನಭ ಸೊನ್ನೆ" (ಮಂಗರಾ. ೧೧೯-೮). ೫. [ಛಂದ] ಅಕ್ಷರಗಣಗಳಲ್ಲಿ ಒಂದು; ಆದಿಯಂಲ್ಲಿ ಎರಡು ಗುರುವಿರುವ ಗಣ; ತಗಣ : (- - ∪): "ಆದಿಗುರುವೆರಡಿರಲು ನಭವಕ್ಕು" (ಮಂಗರಾ. ೧೧೭-೨೦) ; "ಇದು ನಭಂಗಳ್ಸುರವುರವವನೆಂದುದ್ಧಯವಾಗಿರೆ . . . ಧರೆಗಿದು ಪೆಸರಾಯ್ತೆಲ್ಲಿಯುಮುದ್ಧವಕರವೆನೆ ತನ್ನಿಂ (ಛಂದೋಂ. ೩-೧೯೦). ೬. [ಜ್ಯೋತಿ] "ಲಗ್ನದಿಂದ ಹತ್ತನೆಯ ಸ್ಥಾನ" (ಜಾತಕ. ಹಿ. ೩). [ ಸಂ. ]

ನಭಃಪಯೋಜ (ನಾ). (ಆಲಂ) ಅತ್ಯಂತ ಅಸಂಭವವಾದುದು ; ಗಗನಕುಸುಮ : ಅದಜಿಂದೆ ನಂಬಿ ಜಪಿಸಿದೊಡದಜಿಂ ದೊರೆಕೊಳ್ಗು ಮವಾಳ ಶಿವಪದವಿಂತಲ್ಲದೆ ಪೆಜತು ಮಾರ್ಗದಿಂದಪ್ಪುದು ತಾನೆಂಬುದು ನಭಃಪಯೋಜಪ್ರಾಯಂ (ರಾಜಶೇ. ೪-೯೫). [ ಸಂ. ]

ನಭಃಪ್ರಸೃತಿ (ನಾ). ಮೋ ಡ ಗ ಳ ಗುಂಪು.-ಸಮೂಹ : ಎಱ ವಿಮಾನವಮಂ ಕೃತಕ ಗಾಯಕಿಯರ್ . . . ಯಾನವೇಂ ಕೀಱದುದೋ ನಭಃಪ್ರಸೃತಿಗಿಟ್ಟೆಡೆಯಿಟ್ಟೆಡೆಯಾದುದೆಂಬಿನಂ(ಶಾಂತಿಪು. ೨-೮೨). [ ಸಂ. ]

ನಭಃಫಲ (ನಾ). (ಆಲಂ) (ಗಗನಕುಸುಮವಂದಂತೆ) ಅತ್ಯಂತ ಅಸಂಭವವಾದುದು : ಅದಱ ಕಾಂಕ್ಷಣಮೆಂಬುದು ಗಾ ವಿ ಲ ಂ ನಭಃಫಲದುಪಭೋಗವುಂ ಬಯಸಿ ಬಾಯ್ದೆಱದುವಂದಮನುಂಟುಮಾಡುಗುಂ (ಜಾಥಪು. ೫-೬೩). [ ಸಂ. ]

ನಭಶ್ಚರ (ನಾ). ಆಕಾಶದಲ್ಲಿ ಸಂಚರಿಸುವವನು ; ಖೇಚರ ; ವಿದ್ಯಾಧರ : ಸದ್ವಸ್ತುಭಾಜನನಪ್ಪೆನ್ನೊಳೆ ವಮಾಟ್ಟುದಾಕೆಗೆ ವಿವಾಹೋದ್ಯೋಗಮಂ ರಾಗದಿಂ ಎಂದವನಲ್ತೆ ನಭಶ್ಚರವೃಂದಾರಕಂ (ಚಂದ್ರಪು. ೬-೨೨) ; ಕರಮೆಸೆದತ್ತು ದೇವನಗದಿಂ ಬನದಿಂ ಬಿನದಂಬಡುತ್ತ ಸಂಚರಿಪ ನಭಶ್ಚರ ಪ್ರಕರದಿಂ . . . ಖಗದಿಂ ಮೃಗದಿಂ ನಗದಿಂದೆ ಕದರು (ಶಂಕಶಾ. ೨-೩೬). 'ಖಚರ' ಪರ್ಯಾ. [ ಸಂ. ]

ನಭಶ್ಚರಪತಿ (ನಾ). ಆಕಾಶದಲ್ಲಿ ವಿ ಮಾ ನ ದ ಲ್ಲಿ ಸಂಚರಿಸುವ ವಿದ್ಯಾಧರರೇ ಮೊದಲಾದವರ ರಾಜ ; ಖೇಚರರಾಜ : ಅನುಕೂಲ ಮಿತ್ರನನುರಕ್ತ ನಾಯಿಕಾನೀಕನನುಗತ ಪ್ರಕೃತಿ ಚಿರಂತನರೆನಿಪ ಚಕ್ರವರ್ತಿಗಳ ನೆಗಟ್ಟ ನೆಗಟ್ತೆ ತನ್ನಭಶ್ಚರಪತಿಯಾ (ಶಾಂತಿಪು. ೨-೩೦).
[ ನಭಶ್ಚರ × ಪತಿ ]

ನಭಶ್ಚರಾನ್ವಯ (ನಾ). ಖೇಚರರ ವಂಶ : ನಿಜದಿಂ ಗೂಢಂಗಳ್ ಗುಲ್ಫಜಾನುಗಳ್ ಮಂತ್ರದಂತೆ ರಕ್ತತರಂಗಳ್ ನಿಜಕರವಾದತಲಂ ಪ್ರಪ್ರಜೆಯಂತೆ ನಭಶ್ಚರಾನ್ವಯಾಂಬರರವಿಯಾ (ಶಾಂತಿಪು. ೩-೪೩).
[ ನಭಶ್ಚರ + ಅನ್ವಯ ]

ನಭಶ್ಚರೇಂದ್ರ (ನಾ). = ನಭಶ್ಚರಪತಿ : ನೆಗಟ್ತೆಯೊಳ್ ತೊಡರ್ದಿರೆ ವೃದ್ಧರಾಜ್ಯಮುಮದೆನೆಸೆದತ್ತೋ ನಭಶ್ಚರೇಂದ್ರನಾ (ಆದಿಪು. ೨-೨೯): ವೈರಿಜಯಶ್ರೀ ಸೆಱಯಿರೆ ಭೂ ರಿ ಭು ಜಾ ಂ ತ ರ ದೊ ೞ ೩ ಕೆ ಕಟ್ಟಿದ ಮುಕ್ತಾಹಾರವನೆ ಪೋಲ್ತು ನವಕೇಯೂರಂ ಸೊಗಸಿತು ನಭಶ್ಚರೇಂದ್ರನ ಕೋಳೆಕೊಳ್ (ಶಾಂತಿಪು. ೩-೩೫). [ ನಭಶ್ಚರ + ಇಂದ್ರ ]

**ನಭಶ್ಶಲಿ** (ನಾ). =ನಭಶ್ಚರ : ತಾಣಮಂ ತೀವುದೆ ತಡಂ ಮಹಾವೀರರಿಂ, ಪರ್ವತೋಪಮಧೀರರಿಂ ನಭಶ್ಶಲಿಗಳಿಂ . . . ಲಂಕೆಯನಿದಂ ದಹಿಸದೇ ನಿರ್ಘದೆ ಧರಾತ್ಮಜಾವಲ್ಲಭನ ರೌದ್ರರೋಷಂ ? (ಶ್ರೀರಾಮಾ. ೫೦೩-೩೬೨). [ ಸಂ. ನಭಶ್ಶಲಿನ್ ]

**ನಭಶ್ಚುಂಬಿ** (ನಾ). ಗಗನವನ್ನು ಮುಟ್ಟುವಂಥದು ; ಅತ್ಯಂತ ಎತ್ತರವಾದುದು ; ಗಗನಚುಂಬಿ : ಜನಮನೋಮಂದಿರದ ಸುಸ್ವಪ್ನ ಗೋಪುರದ ಕಲಶಂ ನಭಶ್ಚುಂಬಿಯಾಗದಿರೆ . . . . ಏನಿರ್ದುಮೇನ್ ಅನಾಗರಿಕತಾ ಶ್ರೀ ದಿಟಂ ಮಸಣಮಾ ಪತ್ತನಮಯೋಧ್ಯೆ, ತಾನಾದೊಡಂ! (ಶ್ರೀರಾಮಾ. ೧೭೩-೬೨). [ ಸಂ. ನಭಶ್ಚುಂಬಿನ್ ]

**ನಭಸ** (ಗು). ೧. ಮಂಜುಮುಸುಕಿದ; ಮಸುಕಾದ. (ನಾ). ೨. ಆಕಾಶ; ಆಗಸ ; ಬಾಂದಳ. ೩. ಮಳೆಗಾಲ. ೪. ಸಾಗರ ; ಸಮುದ್ರ ; ಕಡಲು. [ ಸಂ. ]

**ನಭಸಂಗಮ** (ನಾ). ಆಕಾಶದಲ್ಲಿ ಸಂಚರಿಸುವುದು ; ಖಗ ; ಪಕ್ಷಿ : "ಖಗಃ, ವಿಹಂಗಃ, ವಿಹಗಃ, ವಿಹಂಗಮಃ . . . ನಭಸಂಗಮಃ—೧೭ ಸಾಮಾನ್ಯವಾಗಿ ನಾನಾ ಬಗೆ ಪಕ್ಷಿಗಳೆಲ್ಲಕ್ಕೂ ಹೆಸರುಗಳು" (ಸಿದ್ಧಾಂತಿ. ೧೯೩). [ ಸಂ. ]

**ನಭಸ್ಥಲ, ನಭಸ್ಥಳ** (ನಾ). ೧. ಬಾಂದಳ ; ಆಕಾಶಭಾಗ ; ಗಗನತಳ : ವಿಸ್ತೀರ್ಣಮೆನಿಪ ನೀಲಪ್ರಸ್ತರದೊಳ್ ಮುನಿಪನಿರ್ದನವಗತ ಜೀಮೂತ ಸ್ತೋಮಮಪ್ಪ ವಿಮಳನಭಸ್ಥಲ [ಪಾಠಾಂ. ಳ]ದೊಳ್ ತೊಳಪ ಚಂದ್ರ ನಂದದಿನಾಗಳ್ (ಚಂದ್ರಪ್ರ. ೩-೨) ; ಬಲದೇವಂ ಬರೆ ಕಂಡು ತದ್ವ್ಯಪಥ ಸೇನೋರ್ವೀಶನಿಸ್ತ್ರಿಂಶಲಿತ್ರಲೆನುತ್ಕಂ ಪರಿತಂದು ತಾಗಿ ಕಟಿದಂ ಕೂರಂಬಿನಾಸಾರಮಂ . . . ನಭಸ್ಥಲಮತ್ತಲ್ ದೆಸೆಯತ್ತಲೆಂದೆನಿಸ ದಾಣವ್ಯಾಪ್ತಘಾತಂ ತಮಂ (ಮಹಾನೇ. ೧೪-೩೬). ೨. ಶಿವನ ಒಂದು ಹೆಸರು. **ನಭಸ್ಥಳ** : ೧. ತಳರೆ ಮಹೀರಜದಿಂ ಘನವಿಳಾಸ ಗಜಘಟೆ ಯನವನಿಯಂ ನಭಕೆ ನಭಸ್ಥಳಮಂ ನೆಲಕ್ಕೆ ತಂದಂತಳುಂಬಮಾದುದು ತದೀಯ ಚತುರಂಗಬಲಂ (ಶಾಂತಿಪು. ೧೦-೧೪೭) ; ಶರನಿಕರಂ ಕರಂ ಬಿಡದೆ ಪಾಟಿ ನಭಸ್ಥಳದೊಳ್ ನಿರಂತರಂ ಬಟಿನೆಟಲಾಯ್ತು ಮುನ್ನಮದಟಿಂದೆ . . . ರಣಾಗ್ರಭೂತಳಂ (ಬಂಹಿರಿ. ೧೦-೧೧೯) ; ಮುಸುಕಿ ನಭಸ್ಥಳಂ ನೆಟಿಯೆ ಶೀವ ದಿಶಾತತಿಯರ್ಕಮಂಡಲಂ ಮಸುಳೆ . . . ಶೀವಿದುದಾ ಬಲಪಾದಘಾತದಿಂ ಪಸರಿಪ ಧೂಳಿ (ಮಹಾನೇ. ೧೦-೬೫). [ ಸಂ. ]

**ನಭಸ್ಥಳ** 'ನಭಸ್ಥಲ' ನೋ.

**ನಭಸ್ಫಟಿಕ** (ನಾ). ಪಾರದರ್ಶಕವಾದ ಸ್ಫಟಿಕ ; ಗಗನಸ್ಫಟಿಕ : ಅದಟಿಂ ದೊಳಗೆ ನಭಸ್ಫಟಿಕದ ವೇದಿವಿರಾಜಮಾನ ಮರಕತ ಮಾಣಿಕ್ಯದ ಗೋಪುರಂಗಳಮಗ್ರದೊಳಂ ಪೂರ್ವೋಕ್ತ ರಚನೆಗಳ್ ಪುದಿದಿರ್ಕುಂ (ಮಹಾನೇ. ೧೫-೬೭): ಮಕರತೋರಣಾದ್ಯಲಂಕಾರಗಳಿಂದಲೂ ದ್ವಾರಸ್ಥಿತ ಶಂಖಾದಿ ನವನಿಧಿಗಳು ರಕ್ಷಿಸುತ್ತಿರುವ ದೇವರ್ಕಳಿಂದಲೂ ಪೊಳೆಯುತ್ತಿರುವ ನಭಸ್ಫಟಿಕಮಯ ಪ್ರಾಕಾರವಂ ನಿರ್ಮಿಸೆಂದಾಜ್ಞಾಪಿಸಿದನು (ಪುರುದ ೧೨೪). [ ಸಂ. ]

**ನಭಸ್ಯ** (ನಾ). ಚಾಂದ್ರಮಾನ ವರ್ಷದ ಆರನೆಯ ತಿಂಗಳಿನ ಹೆಸರು ; ಭಾದ್ರಪದಮಾಸ : "ಭಾದ್ರಪದಮಾಸಮಂ ನಭಸ್ಯಮೆಂಬುದು" (ಹಲಾಯು. ೧೯-೧೧೪); "ನಭಸ್ಯಃ, ಪ್ರೌಷ್ಠಪದಃ, ಭಾದ್ರಃ, ಭಾದ್ರಪದಃ— ೪ ಭಾದ್ರಪದಮಾಸದ ಹೆಸರುಗಳು" (ಸಿದ್ಧಾಂತಿ. ೩೮). [ ಸಂ. ]

**ನಭಸ್ಸು** (ನಾ). ಆಕಾಶ ; ಆಗಸ ; ಬಾಂದಳ : "ತಾರಕಿತಂ—ನಭಸ್ಸು" (ಶಾಶಕ್ಕ. ೭೮); ಪಯಸ್ಸು, ನಭಸ್ಸು, ರಜಸ್ಸು (ಶಬ್ದಾನು. ೬೯ ಪ್ರಯೋ). [ ಸಂ. ನಭಸ್ ]

**ನಭಿ** (ನಾ). ಚಕ್ರ ; "ಗಾಲಿ" (ಗಂಗಾಮಾ. ೧೭೮). [ ಸಂ. ]

**ನಭೋಂಗ** (ನಾ). ಮೋಡದಂತೆ ಶರೀರವುಳ್ಳವನು ; ನೀಲವರ್ಣ ; ವಿಷ್ಣು : ಜಯತು ಜನಾರ್ದನ ಜಯ ಮುರಮರ್ದನ ಜಯಶ್ರೀ ವರಾಂಗ ನಭೋಂಗ (ಕಿಶಸಾಂ. ೭೯-೨೨). [ ಸಂ. ]

**ನಭೋಂಗಣ** (ನಾ). =ನಭಸ್ಥಲ ೧ : ದೊಣೆಗಳಿಸುರ್ಚುವ ತಿರುವಾಯ್ಗೊಣರ್ಚಿ ತೆಗೆನೆಟಿವ ಬೇಗಮಂ ಕಾಣದೆ ಕೂರ್ಗಣೆಗಳ ಪಂದರನೆ ನಭೋಂಗಣದೊಳ್ ಕಂಡತ್ತು ದೇವಗಣಮಿನಸುತನಾ (ಪಂಪಭಾ. ೧೨-೧೪೪) : ಇಂದ್ರದಿಗ್ದೇವಿ ನವಾರ್ಕಮಂಡಲಮನಾಂತಿರೆ ತತ್ಪ್ರಭೆಯಿಂ ನಭೋಂಗಣ ಶ್ರೀವಧುವೊಂದೆ ಕಾಲದೊಳೆ ತಾಳ್ದಿ ವಿರಾಜಿಸುವೊಂದು ಮಾಟ್ಕೆಯಿಂ (ಜಗವಿ. ೨-೮೭). [ ಸಂ. ]

**ನಭೋಗ** (ನಾ). ಆಕಾಶದಲ್ಲಿ ಸಂಚರಿಸುವವನು ; ದೇವತೆ ; ಸುರ ; ಅಮರ : ಮಂಜುಮಹಿಮಾಸ್ಪದಂ ಚಾರುವೃತ್ತಂ ಕಲಾಪುಂಜಂ ಸದಾ ನಭೋಗಂ (ಕ್ರಮಿಭಾ. ೨೮-೬೨) ; ಸದಾನ ಭೋಗಂ . . . ಸದಾ ನಭೋಗಂ (ಚಂದ್ರಸ. ೪೪). 'ನಭೋಗಪುರ' ಪರಾ. [ ಸಂ. ]

**ನಭೋಗತಿ** (ನಾ). ೧. ಗಗನದಲ್ಲಿ ಸಂಚರಿಸುವಿಕೆ ; ಆಕಾಶಗಮನ : ನಭೋಗತಿಯಂ ಸಾಧಿಸಲಕ್ಕು ಬೆಟ್ಟಗಳ ಚೂರ್ಣಂ ಮಾಡಲಕ್ಕೀಕ್ಷಿಸಲ್ ಸತಿಯಾ ಚಿತ್ತಮಭೇದ್ಯಮೈ (ಸೋಮನುಚ. ೮೦). ೨. ಆಕಾಶದಲ್ಲಿ ಸಂಚರಿಸುವವನು ; ಆಕಾಶಗಾಮಿ ; ಖೇಚರ : ಬೇಗಮುಸಿರ್ ಮುಟ್ಟಿಗವರ ಮೇಗುಸಿಗೊಂಡೊಮ್ಮೆಗೊಮ್ಮೆಗಗಿವೊ[ಮ]ಟ್ಟದೆ ಬಂದಾಗಳೆಟಿಗಿರ್ದ ನಂದು ನಭೋಗತಿಯೊರ್ಬಂ ನೃಪೇಂದ್ರಪದಸರಸಿಜದೊಳ್ (ಶಾಂತಿಪು. ೯-೮೩). ೩. ಹಕ್ಕಿ ; ಪಕ್ಷಿ. [ ಸಂ. ]

**ನಭೋಗಪುರ** (ನಾ). ಆಕಾಶದಲ್ಲಿ ಸಂಚರಿಸುವ ಪಟ್ಟಣ ; ತ್ರಿಪುರ : ಹರಿಯಿಂದಂ ಹರನಿಂದೆ ಶಕ್ತಿಧರನಿಂ ನೀರಿಂದೆ ವಾಳಾದ ದುಷ್ಕರ ಲಂಕಾ ಪುರಮಂ ನಭೋಗಪುರಮಂ . . . ಸುಸ್ಥಿರೆ ಹಮ್ಮೀರಪುರಕ್ಕೆ ತೋಡಿಸ ಲೊಡಂ ಮೂಢೋಕ್ತಿ ಮಾರ್ಲೋಕದೊಳ್ (ಹಮ್ಮೀರ. ೧-೬೪). [ ನಭೋಗ + ಪುರ೩ ]

**ನಭೋಗಮನ** (ನಾ). ೧.=ನಭೋಗತಿ ೧ : ನಾರದಂ ನಭೋಗಮನ [ಪಾಠಾಂ. ಮಾರ್ಗ]ದಿಂದಿಟಿದು ಬಂದು ಜನಾರ್ದನನ ವದನಾರವಿಂದಮಂ ನೋಟ್ಪುದುಂ (ಮಹಾನೇ. ೭-೧೪೧). ೨. = ನಭೋಮಾರ್ಗ : ಆಗಳಾ ದೇಶವುರುಷಂ ಬಂದನೆಂದು ಅಷ್ಟಶೋಭೆಗೆಯ್ದಿದಿರ್ಗೊಳೆ ಮತ್ತಮಂತೆ ನಭೋಗಮನದೊಳು ಬರೆ (ಚಾವುಂಪು. ೬೭). [ ಸಂ. ]

**ನಭೋಜನ** (ನಾ). ಆಕಾಶದಲ್ಲಿರುವವರು ; ದೇವತೆಗಳು : ಎಲ್ಲರುಂ ಭೋಗಿಗಳಪ್ಪ ತಾಳಗಕರೆನಿಸರೆಲ್ಲರುಂ ವಿದ್ಯಾಧರರ್ನಭೋಜನ ರೆನಿಸರ್ (ಕ್ರಮಿಭಾ. ೨-೧೦). [ ಸಂ. ]

**ನಭೋದೇಶ** (ನಾ). =ನಭಸ್ಥಲ ೧: ತುಂಬಿದತ್ತಶರೀರ ಗಂಧರ್ವಗಾಯನಂ ನೀರವನಿಶಾನಭೋದೇಶಮಂ (ಶ್ರೀರಾಮಾ. ೦೩-೯೨೩). [ ಸಂ. ]

**ನಭೋನಗರ** (ನಾ). =ನಭೋಗಪುರ. 'ನಭೋನಗರ ಹರಣ' ಹರಾ. [ ಸಂ. ]

**ನಭೋನಗರಹರಣ** (ನಾ). (ಆಕಾಶದಲ್ಲಿದ್ದ) ತ್ರಿಪುರಗಳನ್ನು ನಾಶಗೊಳಿಸಿದವನು ; ತ್ರಿಪುರಾರಿ ; ಶಿವ : ಜಯಜಯ ನಭೋನಗರಹರಣ ಪಟುನಿಟಲಾಕ್ಷ ಜಯಜಯ ಜಲಂಧರಮದಾಂಧಗಜಹರ್ಯಕ್ಷ (ರಾಜಶೇ. ೧೯-೦೬೯ ರಗಳೆ). [ ನಭೋನಗರ + ಹರಣ೩ ]

**ನಭೋನಿನದ** (ನಾ). ಆಕಾಶದಿಂದ ಹೊಮ್ಮುವ ಮಾತು ; ಆಕಾಶವಾಣಿ ; ಅಶರೀರವಾಣಿ : ಇಲ್ಲಿ ನಿಲ್ಲರ್ಜುನ ತಪೋವನಕಿಲ್ಲಿ ನೆಲೆ ಶ್ರುತಿಯುವತಿ ಸೂಸುವ ಚೆಲ್ಲೆಗಂಗಳಮೊನೆಗೆ ಮಾಸಲುಗುಡದ ಮೈಸಿರಿಯ . . . ಶಿವನ ಕ್ಷೇತ್ರವಿದೆಯೆಂದುದು ನಭೋನಿನದ (ಕುಮಾ್ಯಾಭಿ. ೯-೪೦). [ ಸಂ. ]

**ನಭೋನೌಕೆ** (ನಾ). ಅಂತರಿಕ್ಷ ವಿಮಾನ; ಪುಷ್ಪಕ ವಿಮಾನ: ಮತ್ತಂ ಮತ್ತಪ್ಪಳಿಸಿದನು ಆ ನಭೋನೌಕೆ ಪಕ್ಷಸಂಚಲಿತರುಜುಂರಝಾವಾತಗರ್ತಕ್ಕೆ ಸಿಲ್ಕಿ ತಿರ್ರನೆ ಪುರ್ಪುರಿಗಂ ತಿರುಗುವಂತೆ (ಶ್ರೀರಾಮಾ. ೯೨೮-೩೬೩). [ ಸಂ. ನಭೋನೌಕಾ]

**ನಭೋಭಾಗ** (ನಾ).=ನಭಸ್ಥಲ: ೧ ಅಂತು ನಭೋಭಾಗದಿಂ ಭೂಮಿ ಭಾಗಕ್ಕಿಳಿದು ತನ್ನ ಮುಂದೆ ನಿಂದರವಿಂದಬಾಂಧವನಂ ನೋಡಿ (ಶಂಕರಾ. ೧-೫೦ ವ); ಇಂದ್ರಂ ಬರ್ಪಂತೆ ಬಂದು ಕಂಡೊಡವರೆ ನಭೋಭಾಗದೊಳ್ ಪಯಣಂಬಂದು ಚರಿಪಾಪುರಮನೆಯ್ದಿ ಪುರಬಹಿಂಗೆಯೊಳ್ ಬೀಡಂ ಬಿಟ್ಟರ್ದರ್ (ಬಂಕರಾ. ೪-೫೦ ವ). [ ಸಂ. ]

**ನಭೋಮಂಡಲ** (ನಾ).=ನಭಸ್ಥಲ ೧: ಆ ನಾರದಂ ನಭೋಮಂಡಲದಿಂ ಸಭಾಮಂಡಲಕ್ಕವತರಿಸೆ (ಶಂಕರಾ. ೬-೧೯ ವ); ಕೊಂಡುಬಂದೆಳೆನೀರ್ಗಳಂ ಸುರಿಯಲುಬಿ ನಭೋಮಂಡಲವನಪ್ಪಳಿಸೆ (ಕೃಮಿಳಾ. ೧೧-೩೮); ಇನ್ನು ಬರಲಿರುವ ಆರನೆಯ ಕಾಲವಂತೂ ಹಿಂಸೆಯ ಪತಾಕೆಯನ್ನು ನಭೋ ಮಂಡಲಕ್ಕೆ ಹಾರಿಸುವುದೆಂದಂ ಸರ್ವಜ್ಞರ ವಾಣಿ (ಭಾರದ. ೧೬೩). [ಸಂ.]

**ನಭೋಮಣಿ** (ನಾ). ಸೂರ್ಯ; ಗಗನಮಣಿ; ಭಾನು: ಆ ಮಣಿ ಮೆಚಿದುದು ತರುಣನಭೋಮಣಿ ನಿಜಸುಪ್ರತಾಪವಿಜಿತಂ ಪರಿತಂದಾ ಮಹಿತರಾಜಶೇಖರ ಭೂವಿನಾಶ್ವರನಂಘ್ರಿಕಮಳಮಂ ಸೇವಿಪವೋಲ್ (ಲೀಲಾ. ೫-೨೬). [ ಸಂ. ]

**ನಭೋಮಾರ್ಗ** (ನಾ). ಮೇಘಮಾರ್ಗ; ಆಕಾಶ: ಭೋಗಭೂಮಿಜರ ಕನ್ಯಾಗಳ್ ನಭೋಮಾರ್ಗಪರ್ಯಟನಂ ಶಿಕ್ಷಿಸಿ ಪೋದರಾತ್ಮಸಿಯಮಕ್ಕ ತ್ರ್ಯಾರ್ಯರಿತ್ತನ್ನೆಗಂ (ಶಾಂತಿಪು. ೬-೪); ತಾನೈರಾವತಸ್ಕಂಧದೇಶನಿಷಣ್ಣಂ ಸುರರಾಜನಾತ್ಮಶಚೀದೇವೀ ಸಂಯುತಂ... ಮೃದುಮೃದಂಗಧ್ವಾನಮುಂ ಗಾಯಕೀಜನಕಮಂಗಲಗೇಯಮುಮಂ ಸೊಗಯಿಸಲ್ ಬಂದಂ ನಭೋ ಮಾರ್ಗದೊಳ್ (ಮಹಾನೇ. ೮-೮೮). [ ಸಂ. ]

**ನಭೋಮಾಸ** (ನಾ). ಚಾಂದ್ರಮಾನದ ಪ್ರಕಾರ ಬರುವ ಶ್ರಾವಣ ಮಾಸ: "ಮಧು ಮಾಧವಂ ಶುಕ್ರಮಾ ಶುಚಿ ನಭೋಮಾಸರುದು ನಭಸ್ಯಮಿಷಮೂರ್ಜಂ ಸಹಂದದಮುಂದದು ಸ ಹ ಸ್ಯ ಂ ತಪಮುದಾ ತಪಸ್ಯಾಖ್ಯಮೆನೆ ಚೈತ್ರಾದಿ ನಾಮಮಂಕ್ಕುಂ" (ಶಬ್ದಗರಾ. ೨೦-೧೦).
[ ಸಂ. ]

**ನಭೋಯಾನ** (ನಾ). ಆಕಾಶಗಮನ; ಬಾನಿನಲ್ಲಿ ಹೋಗುವುದು: ಮತ್ತಂ ನಭೋಯಾನದೊಳ್ ಕಿಡಿದು ಪೊಣ್ಮುಗೆಯುಂ . . . ಧರ್ಮೋಪದೇಶಂಗೆಯುತ್ತುಮುತ್ತಮತೀರ್ಥೇಶ್ವರಂ ವಿಹಾರಿಸೆ (ಶಾಂತಿಪು. ೧೨-೨೩ ವ); ನಭೋಯಾನದೆ ಕಾಲಶಂಬರ ಖಗೇಂದ್ರಂ ಬಂದು (ಮಹಾನೇ. ೮-೧೭). [ ಸಂ. ]

**ನಭೋವಚನ** (ನಾ). = ನಭೋನಿನದ: ಮ ರು ಳ ನೀ ಕೌಂತೇಯ ಮಾದ್ರೇಯರನು ನೋಡುವುದಿತ್ತ ನನಗುತ್ತರವನಿತ್ತುದಕವನು ಕುಡಿ ಯೆಂದುದು ನಭೋವಚನ (ಕುಮಾ.ಭ. ೨೩-೩೪); ನೊಂದ ನೋವೆಲ್ಲಡಗಿ ರಣದಲಿ ಹೊಂದಿದವರೇಳುವರು ಮಾ ರು ತಿ ಯಿಂ ದ ಚಿಂತಿಸದೇಕ ಕೇಳೆಂದುದು ನಭೋವಚನ (ಜಾಶಿರಾ. ೨೯-೨೨). [ ಸಂ. ]

**ನಭೋವಳಯ** (ನಾ). = ನಭಸ್ಥಲ ೧: ಬಂದು ಭವತ್ಪುರಾಗ್ರಿಮ ನಭೋವಳಯಾಂತರದಲ್ಲಿ ನಿಂದು ಪೋಗೆಂದೊಡೆ ಬಂದೆನಾಂ (ಚಂದ್ರಪ್ರ. ೬-೨೦). [ ಸಂ. ನಭೋವಲಯ ]

**ನಭೋವಾಣಿ** (ನಾ). ಅಶರೀರವಾಣಿ. [ ಸಂ. ]

**ನಭೋವೀಥಿ** (ನಾ).=ನಭೋಮಾರ್ಗ: ನಭೋವೀಥಿ[ಪಾಠಾಂ. ಧಿ] ಯೊಳುಮಾಕಾಂತೆಯುಂ ಮಹೇಶ್ವರನುಂ ಮಾನಿತೋನ್ನತದಿವ್ಯರತ್ನವಿಮಾನ ರೂಢಿತಯಾನರಾಗಿ ಸುಮಾನದಿಂ ಗಮನಿಸುತ (ಬಸ. ೫೦-೨). [ ಸಂ. ]

**ನಮ** (ನಾ). ವಂದನೆ; ನಮಸ್ಕಾರ: "ನಮಂ [ಪಾಠಾಂ. ತಂ] ವಂದನಂ ಪೊಂಗಿ ಪೊಡಮಡುಹ" (ಶಬ್ದಗರಾ. ೧೩೬-೩೪); ನಮ ಸ್ವಸ್ತಿ (ಎಸಿ. II, ೨೩-೧: 700); ಎಲ್ಲರಿಂಗವಿನಾಗ ನಮೋ-ಬಂಧುಗಳೆ, ಭಾಗಿಗಳೆ . . . ಕೊಳ್ಳಿರೀ ನಮಮನೆನು (ಮಂಕುಳ. ೯೨೨). [ ಸಂ. ನಮಸ್ ]

**ನಮಃಶಿವಾಯ** (ನಾ). ೧. ಶಿವನಿಗೆ ನಮಸ್ಕಾರ: P ವೀರಶೈವರು ಭಜನೆಯಂತೆ ಈ ಶಬ್ದಗಳನ್ನು ಉಚ್ಚರಿಸುತ್ತಾರೆ. 'ನಮಃಶಿವಾಯ' ಪಂಚಾಕ್ಷರಿಮಂತ್ರವೆಂದು, 'ಓಂ ನಮಃಶಿವಾಯ' ಎಂಬುದಂ ಷಡ ಕ್ಷರಿಮಂತ್ರವೆಂದಂ ತಿಳಿಯಲಾಗಿದೆ: ನಮಃಶಿವಾಯ ನಮಃ ಶಿವಾಯ ಶರಣೆಂದಿತ್ತು ಲಲಾಟಲಿಖಿತ ಬರೆದ ಬಳಿಕ ಪಲ್ಲಟಮ ಮಾಡಬಾರದು (ಬಸವ. ೮೬). ಶಿಥಿಲಾಕ್ಷರಂಗಳಿಂ ನಮಃಶಿವಾಯ ನಮಃಶಿವಾಯಯೆನುತ್ತೆ (ನಂಬಿರ. ೬-೨೬); ಎನ್ನ ರೇಚಕವೇ ನಮಃಶಿವಾಯ ನಮಃಶಿವಾಯ ನಮಃ ಶಿವಾಯ ಎನ್ನುತಿಪ್ಪುದು ನೋಡಾ (ಸಿದ್ಧೇವ. ೬೨-೨೦೮); ನಮಃ ಶಿವಾಯಾದಿಸುತಾಪ್ರಿಯಾಯ ತೇ (ವೃಷವಿ. ೬-೧೦). ೨. ಶಿವನಿಗೆ ಅರ್ಪಿತವಾದುದಂ; ಶಿವಾರ್ಪಣ: ಲೋಗರೇನೆನಂದೊಡಂ ನಮಃ ಶಿವಾಯವಾಗೆ ತನಗೆ ತಾಗಿದಚ್ಚಪರಿಮಳಂ ನಮಃಶಿವಾಯವಾಗೆ (ನಮರ. ದೇ. ೧೯೮-೧೩). [P ಸಂಸ್ಕೃತದಲ್ಲಿ ಇವು ಭಿನ್ನಪದಗಳು]

**ನಮಃಶಿವಾಯಪಿಡಿ** (ಕ್ರಿ). ನಮಃಶಿವಾಯಂ ಎಂಬ ಮಂತ್ರವನ್ನು ಬಿಡದೆ ಜಪಿಸು: ಇಂತು ಪಂಚವರ್ಣದಿಂ ಶರೀರವಾಗಿ ಬೀಗಿ ಬೆಳೆದು ಸಂತತಂ ನಮಃಶಿವಾಯಪಿಡಿದು ತೀವಿ ತುಳುಕಿ ತಳೆದು (ಶಮರ. ದೇ. ೧೯೮-೧೦). [ ನಮಃಶಿವಾಯ + ಪಿಡಿ$_1$ ]

**ನಮಕ್‌ಹರಾಮ್** 'ನಮ್ಮಕ್‌ಹರಾಮ' ನೋ.

**ನಮಕ** (ನಾ). ರುದ್ರವೆಂಬ ಮಂತ್ರ; P ಯಜುರ್ವೇದದ ಒಂದು ಭಾಗ. ನಮಃ ಎಂದು ಮುಗಿಯುವ ರುದ್ರಮಂತ್ರ: ಚಮಕದಿಂ ದಖಿಲಾಧಿಪತ್ಯವ ನಮಕದಿಂದಖಿಲಾತ್ಮಭಾವವನಮರ ಮನುಜ ಭುಜಂಗ ಮುಖದೊಳ್ಪತ್ತರಿಸುತಿರಲು (ವಿವೇಕ. ೧೨-೯೯); ಪರಮಭಕ್ತಿಲಿ ಹಿಡಿದು ಗದ್ದುಗೆ ಮೇಲೆ ಕುಳ್ಳಿರಿಸಿ ನಮಕಚಮಕಗಳಿಂದ . . . ಸ್ವಾಮಿಗಭಿಷೇಕವನು ಮಾಡಿಸಿ (ಕೊಲ್ಲಮಾ. ೬೦-೪). [ ಸಂ. ]

**ನಮಕಾನುವಾಕ** (ನಾ). ನಮಃ ಶಬ್ದದ ಆವೃತ್ತಿಯಿಂದ ಕೂಡಿದ ಯಜುರ್ವೇದದ ಒಂದು ಭಾಗ; ರುದ್ರಾಧ್ಯಾಯ: ವೇದಾಂತ ವಾಕ್ಯಗಳ ನಮಕಾನುವಾಕಗಳ . . . ನೀನುತ್ಕ್ರಮಿಸೆ ಸಾಧನವೊ ಮುಕ್ತಿಗದು (ಮಂಕುಳ. ೯೩೦). [ ನಮಕ + ಅನುವಾಕ ]

**ನಮತ** (ನಾ). ಒಡೆಯ; ಯಜಮಾನ: ನಮತಂ ಚಾತುರ್ವರ್ಣಮಂ ಸಮರಕ್ಕೆನುವಾಗಲೊಡ್ಡಿ ಸೇನೆ ಮುರರಿಪು ದೇವ ಮಹಾಪ್ರಸಾದ ಮೆನುತುಂ . . . ಆಕರ್ಷಿಸಿದಂ (ಮಹಾನೇ. ೧೨-೧೬). [ ಸಂ. ]

**ನಮನ** (ನಾ). ೧. ಬಾಗಿಸುವಿಕೆ; ಮಣಿಸುವಿಕೆ. ೨. ಬಾಗು ವುದು; ಮಣಿಯುವುದು; ನಮಸ್ಕರಿಸುವುದು; ನಮಸ್ಕಾರ; ವಂದನೆ: "ಬಳ್ಳು – ನಮನೇ" (ಕಮರಾ); "ಮೊಟ್ಟು – ನಮನೇ" (ಕಮರಾ); ದಾರಿದ್ರ್ಯಲಕ್ಷ್ಮಿಯ ನೀ ಕೊಟ್ಟ ಅಂಜನವದ್ಭುತ ಕೋ ಲಕ್ಷ ನಮನ ನಾ ಕಂಡೆನೆಲ್ಲರನಾರು ಕಾಣರು ನನ್ನ ಪರಿಚಯವಿದ್ದರು ಮುನ್ನ (ಅಂಜಾಪ. ೧೧೩-೫೫); ಈ ಗುರುವೃಂದಕ್ಕೆ ಅನಂತ ನ ಮ ನ ಗ ಳು (ದ್ರಾವಿವಿ. XII ಪುಟದಂ ಮಾತು); ಆ ಮರದ ಬದಿಗೊಮ್ಮೆ ಸುಳಿದ ಯಾದೊಡೆ, ಪಥಿಕ! ಹೇ! ದೇವಿ! ನಿನಗೊಂದು ನಮನವನ್ನು! (ಚಿಂತನ. ೧೩-೨೦). ೩. [ಭೌತವಿ] ಬಾಗುವಿಕೆ; ಬಾಗುವ ಕ್ರಿಯೆ; ವಕ್ರ ನಿಯೋಜನ: ಬೆಳಕಿನ ಅಥವಾ ಇತರ ಅಲೆಗಳು ತಡೆಗಳನ್ನು ಸುತ್ತಿ ಕೊಂಡು ಬಂದು ಪ್ರತಿಯೋಗ ಹೊಂದುವುದರಿಂದ ಉಂಟಾದ ಘಟನೆಗೆ ನಮನ (Diffraction) ವೆಂದು ಹೆಸರು (ಭೌತವಿ. ೨೦೦). [ ಸಂ. ]

**ನಮಲ್ಕು₁, ನೆವರ್ಚು₁** (ಕ್ರಿ). ೧. ದವಡೆಹಲ್ಲುಗಳಿಂದ ಆಹಾರವನ್ನು ನುಣ್ಣಗೆ, ಸಣ್ಣಗೆ ಮಾಡಿ ತಿನ್ನು; ಅಗಿದಗಿದು ತಿನ್ನು; ಅಗಿ; ಚರ್ವಣಮಾಡು; ನುರಿಸು: ರಕ್ಕಸಿಯು ಮಾನುಗಳನ್ನು ನಮಲುತ್ತ ಅವಾಗಲಾದರೊಮ್ಮೆ ಸುರೆಯನ್ನು ಸ್ವಲ್ಪ ಸ್ವಲ್ಪ ಕುಡಿಯುತ್ತಿದ್ದಳು (ಶ್ರೀರಾಪ. ೧೧೭). ೨. ಮೆಲುಕುಹಾಕು; ಮೆಲುಕಾಡಿಸು: (ಈ). **ನೆವರ್ಚು₁**: ೧. ನೆವರಕೊಂಡು ಹೋಗುವವ ಬವರಕ್ಕೆ ಬಂದಾನೆ? (ಗಾದೆ). [ದೇ. ॥ ತುಳು. ನವುಂತು, ನವುಂಪು, ನೌಂತು, ನೌಂಪು; ತೆಲು. ನವಲು, ನವುಲು, ನವ್ಲು, ನೆವರು]

**ನಮಲ್ಕು₂, ನೆಮರು** (ನಾ). ೧. ಅಗಿಯುವಿಕೆ; ತಿನ್ನುವಿಕೆ. 'ನವಲುಗರೆ' ಪರಾ. ೨. ಮೆಲುಕುಹಾಕುವಿಕೆ; ಮೆಲುಕಾಡಿಸುವಿಕೆ. ನೆಮರು.

ನಮಲು ಹಾಕು, ನೆಮರು ಹಾಕು = ಮೆಲುಕುಹಾಕು; ಮೆಲುಕಾಡಿಸು: (ಈ); ದನಕರುಗಳು ನೆಮರುಹಾಕುವುದು ನಿನ್ನೆ ಮೊನ್ನೆ ಕಲಿತ ಅಭ್ಯಾಸವಲ್ಲ (ಪ್ರಾಕಪ್ರ. ೨೫). [<ನವಲ್ಕು₁]

**ನಮಲುಗರೆ** (ಕ್ರಿ). ಕಚ್ಚಿ ತಿನ್ನು; ಅಗಿದು ತಿನ್ನು: ಮಾನುಗಳನ್ನು ನವಲುಗರೆಯುತ್ತ ಅಮ್ಮ, ಅಯೋಧ್ಯೆಗೆ ಹೋಗುವುದು ಯಾವಾಗ? ಎಂದನು (ಶ್ರೀರಾಪ. ೧೧೭). [ನವಲ್ಕು₂ + ಕರೆ ?]

**ನಮಶ್ಶಿವಾಯ** (ನಾ). ☰ ನಮಃಶಿವಾಯ: ನಮಶಿವಯ ನಮಶ್ಶಿವಾಯಂ ನಮಶಿವಯಂ ನಮಶ್ಶಿವಾಯ ನಮಶಿವಯೆನುತಂ ಮಮತೆಯಲಿ ನೆನೆವುದೆಂದೀಕ್ರಮದಿಂದುಪದೇಶವೆಳ್ದ ಸಾನಂದೇಶಂ (ನನ್ನಚ. ೩-೧೫೫). [ಸಂ.]

**ನಮಸಿತ** (ಗು). ೧. ಪೂಜಿಸಿದ; ಸಮ್ಮಾನಿತ; ನಮಸ್ಕರಿಸಿದ. (ನಾ). ೨. ನಮಸ್ಕರಿಸಿದಂದಂ: "ಅರ್ಹಿತಂ, ನಮಸ್ಯಿತಂ, ನಮಸಿತಂ, ಅಪಚಾಯಿತಂ, ಅರ್ಚಿತಂ, ಅಪಚಿತಂ – ೬ ಪೂಜಿಸಲ್ಪಟ್ಟದ್ದು, ನಮಸ್ಕರಿಸಲ್ಪಟ್ಟದ್ದು" (ಸಿದ್ಧಾಂತಿ. ೩೦೩). [ಸಂ.]

**ನಮಸ್ಕರಣ** (ನಾ). ನಮಸ್ಕಾರ; ವಂದನೆ. 'ನಮಸ್ಕರಣಂಗೆಯ್' ಪರಾ. [ಸಂ.]

**ನಮಸ್ಕರಣಂಗೆಯ್** (ಕ್ರಿ). ನಮಸ್ಕಾರ ಮಾಡು; ವಂದಿಸು: ಶರಣರು ಕಂಡಾಕ್ಷಣಂ ತನ್ನಮಸ್ಕರಣಂಗೆಯ್ಯದೆ ಪೋದೆನೋ (ವೃಷವಿ. ೩೦-೨೦). [ನಮಸ್ಕರಣ + ಕೆಯ್₁]

**ನಮಸ್ಕರಿಸು** (ಕ್ರಿ). ನಮಸ್ಕಾರ ಮಾಡು; ವಂದಿಸು: ವಿಮಲಸ್ವರೂಪಗೆ ಭುವನಸ್ತುತ್ಯಗೆ ಯೀ ಶಾಸ್ತ್ರಪ್ರಾರಂಭದಲ್ಲಿ ನಮಸ್ಕರಿಸುವಾತನಪ್ಪೆಂ (ಶಮದ. ೧ ವೃತ್ತಿ, ಪೀಠಿಕೆ): ಧಿಕ್ಕನೆ ಭೂಮಿಯೊಳು ಸಾಷ್ಟಾಂಗವೆರಗಿ ನಮಸ್ಕರಿಸುತಿರಲು (ಬಸಪು. ೪೭-೭೭): ತಾಯಿಗೂ ದ್ರೌಪದಿಗೂ ನಮಸ್ಕರಿಸಿ (ಕುಂಗಾಳ್ಯ. ೨೦). [ನಮಸ್ಕರಣ + -ಇಸು₂]

**ನಮಸ್ಕಾರ** (ನಾ). ೧. (ದೇವರು, ಗುರು ಹಿರಿಯರು ಮೊದಲಾದವರಿಗೆ ಗೌರವವನ್ನು ಸೂಚಿಸುವುದಕ್ಕಾಗಿ) ಬಾಗುವಿಕೆ; ವಂದನೆ; ಪ್ರಣಾಮ: "ಪಾದಗ್ರಹಣಂ, ಅಭಿವಾದನಂ ಈ ೨ ನಮಸ್ಕಾರ ಮಾಡುವುದು" (ನಾಚಿರಾ. ೦೫೧); "ತುಳಿಲೆರಗು ಮೊಟ್ಟುಗ ಮಣಿ ಕುಂಬಿ ಪೊಡಮಡಿಕೆಯು ನಮಸ್ಕಾರಕೆ ತವೆ ಸಂದ ನಾಮ" (ಕಬ್ಬಿಮಂ. ೩೫); ಒಳ್ಳಿತಪ್ಪ ಮುಹೂರ್ತದೊಳ್ ದೀಕ್ಷೆಯಂ ಕೊಟ್ಟು ಪಂಚಮಹಾವ್ರತಂಗಳನೇಱಿಸಿ ಪಡಿಕಮಣಂ ಪೇಟ್ದು ತದನಂತರವಿಂ ಕಲ್ಪಿಸಿವೆಂದೊಡೆ ನಮಸ್ಕಾರಂಗಳುಮಾಲೋಚನೆಗಳುಂ ನಿಯಮಮುಮನೋದಿದೊಡಲ್ಲದೆ ಪೇಟಲಾಗದೆಂದೊಡೆ (ವಡ್ಡಾರಾ. ೬-೪); ಹಾಗದ ಕೆರಹ ಹೊಱಗೆ ಕಳೆದು ದೇಗುಲಕ್ಕೆ ಹೋಗಿ ದೇವರಿಗೆ ನಮಸ್ಕಾರವ ಮಾಡುವನಂತೆ ತನ್ನ ಕೆರಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲಾ (ಬಸವ. ೦೯೭); "ನಮಸ್ಕಾರ"! ಎಂದೆದ್ದು ನಡೆದಿರೆ ವಿಭೀಷಣಂ, ಮೇಲೆಳ್ದನಲೆ (ಶ್ರೀರಾಮಾ. ೩೮೨-೨೦೦); ಗುರುತಿನವರನ್ನು ಕಂಡರೆ . . . ಅವರಿಗೆ ನಮಸ್ಕಾರ ಮಾಡಬೇಕು (ಮುಂಬಯಿ. ೪-೩೪). ೨. ನಮಸ್ಕರಿಸುತ್ತೇನೆ ಎಂದು ಆದರ ಸೂಚಿಸುವುದಕ್ಕಾಗಿ ಹೇಳುವ ಮಾತು: ನಮಸ್ಕಾರ, ಬನ್ನಿ ಕುಳಿತುಕೊಳ್ಳಿ (ರೂಢಿ). ೩. ಗ್ರಂಥಗಳ ಆದಿಯಲ್ಲಿ ಬರುವ ದೇವತಾಪ್ರಾರ್ಥನೆ ಎಂಬ ನಾಂದಿಯಲ್ಲಿ ಒಂದು ವಿಧ,-ಬಗೆ.

ನಮಸ್ಕಾರ ಹಾಕು = ೧. ಪ್ರಣಾಮ ಮಾಡು; ವಂದಿಸು: ದೇವರಿಗೆ ನಮಸ್ಕಾರ ಹಾಕಿ ಬರುತ್ತೇನೆ (ರೂಢಿ). ೨. ವಿದಾಯ ಹೇಳು: ಆತ ಈ ಕೆಲಸಕ್ಕೆ ನಮಸ್ಕಾರ ಹಾಕಿ ಹೊರನಡೆದ (ರೂಢಿ). ನಮಸ್ಕಾರ ಹೊಡೆ = ೧. ನಮಸ್ಕರಿಸು; ವಂದಿಸು: ಅವನು ಅವರನ್ನು ನೋಡಿದಾಗಲೆಲ್ಲಾ ನಮಸ್ಕಾರ ಹೊಡೆದು ತನ್ನ ಬಡ್ತಿಯ ಬಗ್ಗೆ ಕೇಳುತ್ತಾನೆ (ರೂಢಿ). ೨. = ನಮಸ್ಕಾರ ಹಾಕು: ೨: ಕೆಲಸ ಮಾಡಲಾರದೆ ಆ ಕೆಲಸಕ್ಕೆ ನಮಸ್ಕಾರ ಹೊಡೆದ ಆತ (ರೂಢಿ). [ಸಂ.]

**ನಮಸ್ಕಾರಂಗೆಯ್** (ಕ್ರಿ). ನಮಿಸು; ವಂದಿಸು: ಅರಸಂ . . . ದೇವರ್ಗೆ ನಮಸ್ಕಾರಂಗೆಯ್ದು ಋಷಿಯರಂ ಬಂದಿಸಿ ತನ್ನ ಮನೆಗೆವೋದಂ (ವಡ್ಡಾರಾ. ೩೩-೦೨); ನಾರದಂಗೆ ನಮಸ್ಕಾರಂಗೆಯ್ದು ಚಿತಾಸನದೊಳಿರಿಸುವುದುಂ (ಮುಹಾನೀ. ೦೦-೯೦ ವ). [ನಮಸ್ಕಾರ + ಕೆಯ್₁]

**ನಮಸ್ಕಾರಮಂತ್ರ** (ನಾ). [ಜೈನ] ಣಮೋ ಅರುಹಂತಾಣಂ ಇತ್ಯಾದಿ ಮಂತ್ರ; ಜೈನಧರ್ಮದ ಪಂಚಗುರುಗಳಿಗೆ ಸಲ್ಲುವ ನಮಸ್ಕಾರ: ಣಮೋ ಅರಹಂತಾಣಂ, ಣಮೋ ಸಿದ್ಧಾಣಂ, ಣಮೋ ಆಯಾರಿಯಾಣಂ, ಣಮೋ ಉವಜ್ಝಾಯಾಣಂ, ಣಮೋ ಲೋಏ ಸಬ್ಬ ಸಾಹೂಣಂ (ಅರ್ಹಂತರಿಗೆ ನಮಸ್ಕಾರ, ಸಿದ್ಧರಿಗೆ ನಮಸ್ಕಾರ, ಆಚಾರ್ಯರಿಗೆ ನಮಸ್ಕಾರ, ಉಪಾಧ್ಯಾಯರಿಗೆ ನಮಸ್ಕಾರ, ಲೋಕದಲ್ಲಿರುವ ಸರ್ವಸಾಧುಗಳಿಗೂ ನಮಸ್ಕಾರ) – ಇದು ಪಂಚ(ಪರಮೇಷ್ಠಿಗಳ)ನಮಸ್ಕಾರ ಮಂತ್ರ . . . ಈ ನಮಸ್ಕಾರಮಂತ್ರ ಜೈನರ ಗಾಯತ್ರಿ ಎನ್ನಬಹುದು (ಆದಿಸಂ. XI ಪೀಠಿಕೆ). [ನಮಸ್ಕಾರ + ಮಂತ್ರ]

**ನಮಸ್ಕಾರಮುದ್ರೆ** (ನಾ). ಪೂಜೆ ಮೊದಲಾದ ಸಂದರ್ಭಗಳಲ್ಲಿ ಮಾಡುವ ಒಂದು ಮುದ್ರೆ; ಹಸ್ತದ ಬೆರಳುಗಳನ್ನು ಹೊಂದಿಸುವ ರೀತಿ: ಗಾಯತ್ರೀಮುದ್ರೆ ಕಾಲಕಂಠಮುದ್ರೆ ಶೂಲಮುದ್ರೆ ನಮಸ್ಕಾರಮುದ್ರೆ . . . ಸಂಹಾರಮುದ್ರೆಯೆಂಬಾದಿಯಾಗಿ ಸಕಲಮುದ್ರೋಪಮುದ್ರಾಬಂಧಲಕ್ಷಣಗಳಂ ಗುರುಮುಖದಿಂದಱಿತು (ವಿವೇಕ. ೧೦೩). [ನಮಸ್ಕಾರ + ಮುದ್ರೆ]

**ನಮಸ್ಕಾರಿ** (ನಾ). ಮುಟ್ಟಿದರೆ ಎಲೆಗಳನ್ನು ಮುದುರಿಕೊಳ್ಳುವ ಒಂದು ಬಗೆಯ ಸಸ್ಯ; ಮುಟ್ಟಿದರೆ ಮುನಿ; ಮುಟ್ಟಲ ಮುರುಕ: "ನಮಸ್ಕಾರೀ, ಗಂಧಕಾರೀ, ಸಮಂಗಾ, ಖದಿರಾ – ೪ ಮುಟ್ಟಿದರೇ ಮುನಿವನ ಹೆಸರುಗಳು. ಮುಟ್ಟುಮುಡುಗಿಡ" (ಸಿದ್ಧಾಂತಿ. ೦೯೪). [ಸಂ. ನಮಸ್ಕಾರೀ]

**ನಮಸ್ಕಾರ್ಯ** (ನಾ). ನಮಸ್ಕರಿಸಲು ಯೋಗ್ಯನಾದವನು; ಪೂಜ್ಯ: ಆರ್ಯಮಾರ್ಯರ್ಗಂ . . . ಸಜ್ಜನಂ ಶಿವಕಾರ್ಯಧುರ್ಯರ್ಗಂ ಭುಜನ ನಮಸ್ಕಾರ್ಯನೆನಿಸಿದ (ಬಸಪು. ೨೨-೨೪). [ಸಂ.]

**ನಮಸ್ಕೃತಿ** (ನಾ). ನಮಸ್ಕಾರ ಮಾಡುವಿಕೆ; ವಂದನೆ: ನಮಸ್ಕೃತಿಗಗ್ರಭಾಗದೊಳ್ ಕೂಡುತುಮಿರ್ಪ ಕೆಯ್ಗಳುಮನಿತ್ತೆ (ಚಂದ್ರಪು. ೧೨-೧೩೩). [ಸಂ.]

**ನಮಸ್ಕ್ರಿಯಾವಿಧಿ** (ನಾ). ನಮಸ್ಕಾರದ ನಿಯಮ, – ಕಟ್ಟಳೆ: ನಂದೀಶ್ವರಾದ್ಯಮಿತದ್ವೀಪ ನಮಸ್ಕ್ರಿಯಾವಿಧಿಗಳು ನೀಂ ಮಾಡು ದೇವಾಧಿಪಾ (ಶಾಂತಿಪು. ೬-೨೫). [ಸಂ.]

**ನಮಸ್ತೇ** (ನಾ). ೧. ನಿನಗೆ ನಮಸ್ಕಾರ : ಶ್ರೀಮದಜಿತಭಟ್ಟಾರಕಜಿನ ನಮಸ್ತೇ ನಮಸ್ತೇ (ಅಜಿಪು. ೪-೭೯ ಗದ್ಯ); ಭವಿತನವ ಕಳೆದು ಭಸ್ಮನ ಮಾಡಿ . . . ತ್ರಿವಿಧ ಸುಖಸಮುಚಿಯನವಿರತಂ ದಯೆಗೆಯ್ದು ಧವಗೇಡಿ ಯೆನಿಸದವರ ಅವಿರಳನೇ ಗುರು ನಮಸ್ತೇ (ಬ್ರ್ಯಲಾರ. ೦೮೮-೧) ;ಅನಿಚ್ಛನ್ನಪಿ ಕೈ ಮುಗಿದೆಂದೆ ಗುಲಾಬಿಗೆ : "ನಮಸ್‌ತೇ!" (ಅಫಿಕೀ. ೩೨-೦೭). ೨. = ನಮಸ್ಕಾರ ೨ : ಹೋಗಿ ಬರುತ್ತೇನೆ ನಮಸ್ತೇ (ಲೂಧಿ).

[ P ಇದು ಸಂಸ್ಕೃತದಲ್ಲಿ ನಮಃ ಮತ್ತು ತೇ ಇವು ಸೇರಿ ಆದ ಒಂದು ವಾಕ್ಯ ]

**ನಮಸ್ಯ** (ಗು). ೧. ಪೂಜಿಸಬೇಕಾದ; ಪೂಜ್ಯವಾದ. (ನಾ). ೨. ನಮಸ್ಕಾರ ವನ್ನು ಪಡೆಯುವವನು; ಪೂಜ್ಯನಾದವನು : ಚತುರಾಸ್ಯನುಮಹ ಮಿಂದ್ರ ನಮಸ್ಯನುಂ . . . ಆಗಿ (ಶಾಂತಿಪು. ೦೨-೧ ವ) ; ವರಬುಧಪೋಷಾ ಸ್ಯನಂ ಭೂತಳನಮಸ್ಯನಂ ಹರಶರಣಸಿಂಹನಂ (ಅರಾಜ. ೦-೩೩). ೩. ತೆರಿಗೆ ವಿನಾಯಿತಿ : ನೂಱಯ್ವತ್ತು ಮ[ತ್ತ]ರ್ಕ್ಕೆಯ್ಯಂ ನಮಸ್ಯವಾಗಿ ಬಿಟ್ಟರ್ (ಸೌಇಇ. XX, ೦೮-೪೨ ; ೬೮೦) : ನಂದಾದೀವಿಗೆಗಂ ಏಕಾದೆಸಿಯಭ್ಯಂಗ ದೆಣ್ಣೆಗಂ ನಮಸ್ಯವಾಗಿ ಬಿಟ್ಟ ಗಾಣ ೨ (ಸೌಇಇ. XV, ೦೨-೩೪ ; 1128). 'ಸರ್ವನಮಸ್ಯ' ಪರಾ.

ನಮಸ್ಯಂ ಬಿಡು = ತೆರಿಗೆ ವಿನಾಯಿತಿಯೊಂದಿಗೆ ಭೂಮಿಂ ಮೊದಲಾದುವನ್ನು ಕೊಡು,–ದಾನಮಾಡು : ಶ್ರೀಮತ್ತಿಸುಪೊಳಲ ಮೂಲಸ್ಥಾನದ ಮಹಾದೇವರುಪಭೋಗಕ್ಕೆ ಸರ್ವಬಾಧಾ ಪರಿಹಾರವಾಗಿ ನಮಸ್ಯಂಬಿಟ್ಟ ಸಣ್ಣನ ಮಾಹಾಳಿಯ ಕಿಯಿ ಮತ್ತ ೧೨ (ಕೊಲ್ಲಾಶಾ. ೨-೧೪ ; 1069). [ ಸಂ. ]

**ನಮಸ್ಕೃತ** (ಗು). ೧. ಪೂಜಿಸಿದ ; ಗೌರವಿಸಿದ. (ನಾ). ೨. ನಮಸ್ಕರಿಸಿದುದು : "ಅರ್ಹಿತಂ, ನಮಸ್ಕೃತಂ, ನಮಸಿತಂ, ಅಪಚಾಯಿತಂ, ಅರ್ಚಿತಂ, ಅಪಚಿತಂ – ೬ ಪೂಜಿಸಲ್ಪಟ್ಟದ್ದು. ನಮಸ್ಕರಿಸಲ್ಪಟ್ಟದ್ದು" (ಸಿದ್ಧಾಂತಿ. ೩೦೩). 'ನಮಂಸಿತ' ಪರಾ. [ ಸಂ. ]

**ನಮಸ್ಯೆ** (ನಾ). ನಮಸ್ಕಾರ ; ವಂದನೆ : "ನಮಸ್ಯಾ, ವಂದನಾ – ಈ ೨ ಪೊಡವಡಿಕೆ" (ಹಲಾಯು. ೧೨೮-೯೦). [ ಸಂ. ನಮಸ್ಯಾ ]

**ನಮಾಜು, ನಿಮಾಜು** (ನಾ). ಮುಸಲ್ಮಾನರ ದೇವತಾಪ್ರಾರ್ಥನೆ : ನಮಾಜು ಮಾಡಲು ಮಸೀದಿಗೆ ಹೋಋನು (ಶೃಗಂಬ. ೧೩೩) : ಇಲ್ಲಿಯವರು ಬಹುಬೇಗ ಪೂಜೆ, ನಮಾಜುಗಳಲ್ಲಿ ಆಸಕ್ತರಾಗುವರು (ಘೂರಾತಿ. ೦೦೯) ; ಮಹಮ್ಮದಪೈಗಂಬರರು ಪ್ರತಿನಿತ್ಯ ನಮಾಜು ಮಾಡುವುದೊಂದು ಸ್ಥಳ ವಿತ್ತಂತೆ (ಸೂಧವ. ೭); ನಮಾಜು ಮಾಡುವುದಕ್ಕೆ ಹೋದಾಗ ಮಸೀದಿ ಮೇಲೆ ಬಿತ್ತು (ಗಾಲಿ). ನಿಮಾಜು : ಜಾತಿದೇವರ ಧ್ಯಾನಕೆಸಗಿ ನಿಮಾಜು ವೆಂದ್ಮಸೂತಿಯನು ಗೈಸಿ (ಕದಂಪು. ೮೪).

[ ← ಪಾರಸಿ. ಪೂರ್ಜ಼್ ; ಹಿಂ. ಮರಾ. ನಮಾಜ್, ನಿಮಾಜ್ ]

**ನಮಿ** (ನಾ). [ಜೈನ] ಇಪ್ಪತ್ತನಾಲ್ಕು ಜನ ತೀರ್ಥಂಕರರಲ್ಲಿ ಒಬ್ಬ : ಇಪ್ಪತ್ತೊಂದನೆಯ ತೀರ್ಥಂಕರ : ವಿನಮಿಯುಂ ನಮಿಯುಂ ನ್ಯಯದಾಳ್ದರ್ (ಶಾಂತಿಪು. ೫-೧೪೯) ; ಶ್ರೀಪಂಚಮಹಾಕಲ್ಯಾಣೋಪೇತಂ ಕರ್ಮಗಹನದಹನಂ ಮುಕ್ತಿಶ್ರೀಪತಿಸಂಸಾರೋಗ್ರಭ(ಯೊ)ಯೋಪಹರಂ ವರದನಕ್ಕೆ ನಮಿ ತೀರ್ಥಜಿನಂ(ಕರು) (ಪಾವುಂಪು. ೩೧೯); ಮುಚುಕುಂದಂ ತಾಂ ನಮಿಸ್ವಾಮಿಗಳ್ಗೊಲವಿಂಗಾಬ್ಬಕೆ ಸೇವ್ಯಮಾನಮೆನಲುಂ ಪೂಜಾವಿಧಾನೋತ್ಕರಂ (ಪುಣ್ಯಾಸ್ರ. ೧-೧೦೩). [ ಸಂ. ]

**ನಮಿತ** (ಗು). ೧. ಬಗ್ಗಿದ ; ಮಣಿದ : ನಮಿತೋದ್ಯತ್ಕಣಿಶಪ್ರಕೀರ್ಣ ಕಳಮಪ್ರಸ್ವಾತಕೇದಾರಜಾಲಮಯಂ (ಕುಸುಮಾ. ೧೦-೦೩೪) ; ನಮಿತ ಕದಳೀಫಲಸ್ತಬಕಂಗಳಂ ತೂಗಿ (ಉದ್ಭಟ. ೧೦-೧೨೩): ಪಾರ್ಥನ ನಮಿತ ಮಕುಟವ ನೆಗಹಿ ಪುಳಕಾಶ್ರುಗಳ ಪೂರದಲಿ . . . ಬಿಜಯಂಗೈದನಸುರಾರಿ (ಕುಮಾಗ. ೧೩-೧೪). ೨. ನಮಸ್ಕರಿಸಿದ ; ವಂದಿಸಿದ : ನಮಿತಲೋಕ ವೆನಿಪ್ಪವಂ ಸಕಳೇಶ ಮಾದರಸ (ಬಸಪು. ೧೯-೩) ; ನಮಿತಜನ ದುರ್ಮಾರ್ಗ ಕಪ್ಪ್ರಯಾಣಕ್ಕೆ ವಿಘ್ನಮನೆಸಪ . . . ಶಾಂತಮಲ್ಲೇಶ್ವರಾ (ವೀಶ್ಯಪು. ೬-೩-೧). ೩. [ಭೌತವಿ] ಬಾಗಿದ. 'ನಮಿತಪ್ರತಿಬಿಂಬ' ಪರಾ. (ನಾ). ೪. ನಮಸ್ಕರಿಸಲ್ಪಟ್ಟವನು : ಗುರುದೇವೇಂದ್ರ ಮುನೀಂದ್ರ ನಿಂದ್ರನಮಿತಂ ದೇವಂ ಕಥಾನಾಯಕಂ ಪುರುದೇವಂ (ಆದಿಪು. ೧-೨೩) : ನಮಿತಂ ಖಚರಾನುಚರಂ ಕ್ರಮದಿಂ ತಿಳಿವಂತು ತನಗೆ ತನಯನ ವೃತ್ತಾಂತ ಮನಱಿಪೆ . . . ಪಲವು ಸೂಟ್ಟಿಸಗೊಂಡಂ (ಹಂರಾಮಾ. ೬-೪೪). [ ಸಂ. ]

**ನಮಿತಪರ್ವ** (ನಾ). ಗೆಣ್ಣುಗಳಲ್ಲಿ ಬಾಗನ್ನುಳ್ಳುದು : ಸುರವ್ರತಕಂಟಕರೆನಿಸಿದ ಸುರರಿಪುಗಳನಿರದೆ ತೂಳ್ದುವಿವೆರಡೆ ಧರಣೀಶ್ವರ ನಿನ್ನ ಶಿರೀಮುಖಮುಂ ನರಸಿಂಹನ ನಮಿತಪರ್ವಮೆನಿಸಿದ ನಖಮುಂ (ಶಾಕುಂತ. ೯೯-೦೬೬). [ ನಮಿತ + ಪರ್ವ ]

**ನಮಿತಪ್ರತಿಬಿಂಬ** (ನಾ). [ಭೌತವಿ] ನಮನಹೊಂದಿದ ಪ್ರತಿಬಿಂಬ : ಕೋನವನ್ನು ಮಾಡುವ ನೇರದಲ್ಲಿ ಕಿರಣಗಳೆಲ್ಲಾ ಒಂದೇ ದಶೆಯಲ್ಲಿ ಸೇರುವುದರಿಂದ ಮೊದಲನೆಯ ನಮಿತಪ್ರತಿಬಿಂಬವು (Diffracted Image) ಉಂಟಾಗುವುದು (ಭೌತವಿ. ೨೧೨). [ ನಮಿತ + ಪ್ರತಿಬಿಂಬ ]

**ನಮಿತಶಿರಸ್ಕೆ** (ನಾ). ತಲೆಯನ್ನು ಬಾಗಿಸಿದವಳು; ನಮಸ್ಕರಿಸಿದವಳು: ನಮಿತಶಿರಸ್ಕೆಯಾಗಿ ನಸುಂದೂರದೊಳಂಜಲಿಹಸ್ತದಿಂ ಸಸಂಭ್ರಮೆಯಿರೆ ಯಾಕೆಯುಂ ದಯೆಯಿನೀಕ್ಷಿಸಿ (ದಿವ್ಯಕ. ೭-೨೮).

[ ಸಂ. ನಮಿತಶಿರಸ್ಕಾ ]

**ನಮಿತಾನನೆ** (ನಾ). ಮುಖವನ್ನು ತಗ್ಗಿಸಿದವಳು: ನಮಿತಾನನೆ ಲಜ್ಜಾನಿಷ್ಟ ಮೋಹಪರವಶತೆಯಿಂದೆ ಮಾಱುತ್ತರಮಂ ಸಮನಿಸದಿರಲ್ (ದಿವ್ಯಕ. ೬-೪೭). [ ಸಂ. ನಮಿತಾನನಾ ]

**ನಮಿತಾರಿ** (ನಾ). ಶರಣಾಗತರಾದ ಶತ್ರುಗಳುಳ್ಳವನು ; ಶತ್ರುಗಳನ್ನು ಶರಣಾಗಿಸಿಕೊಂಡವನು : ನಮಿತಾರಿಗೆ ದಮಿತಾರಿಗೆ ಸಮಸ್ತ ಧಾತ್ರೀ ವಿಭಾಗದೊಳ್ ಭಾವಿಸೆ . . . ಪೋಲ್ಕೆಗಾಮಂ ಬರ್ಪಂ (ಕಾವ್ಯಾವ. ೩೪೬).

[ ನಮಿತ + ಅರಿ₆ ]

**ನಮಿಯಿಸು** 'ನಮಿಸು' ನೋ.

**ನಮಿಸು, ನಮಿಯಿಸು** (ಕ್ರಿ). ಬಾಗು ; ನಮಸ್ಕರಿಸು ; ವಂದಿಸು : ನಮಿಸುತಂ ಕಂಪಿಸುತೆ ಮನವೊಲಿದು ಹೊಗಳುತಂ (ಬಸರ. ೩-೧೦೮) ; ನಮಿಸಿದ ಕಾದಲರಂ ತನ್ನಮಳಕರದೊಳೆತ್ತಿ ಪರಸಿ . . . ಬೀಳ್ಕೊಂಡಂ (ಉದ್ಭಟ. ೮-೭೭); ಕಿನ್ನರಯ್ಯನ ಪಾದಪಂಕಜಕಂ ನಮಿಸುತಾ ಬಸವರಾಜನು (ಬಸಪು. ೨೮-೪೬) : ಗುರುವಿನ ದಳಿಪ ಹೊಕ್ಕನು ನಮಿಸಿ ಬಿನಹ ಮಾಡಿದನು ನಗುತ (ಕುಮ್ಯಾದ್ರೋ. ೧೦-೪೨) : ನಮಿಸುತೆ ಪೂಜ್ಯರುಹಿಪದಕೆ ಬೀಳುಕೊಂಡರು ಮೂವರುಂ ಪಂಚವಟಿಗಾಗಿ (ಶ್ರೀರಾಮಾ. ೧೯೩-೪೭೮). ನಮಿಯಿಸು : ನಮನಮಂ ಮಾಡುವಂ_ನಮಿಸುವಂ, ನಮಿಯಿಸುವಂ (ಶಬ್ದಾನು. ೫೩೪ ಪ್ರಯೋ). [ ನಮನ + – ಇಸು₁ ]

**ನಮೀಕೃತ** (ಗು). ಬಾಗಿಸಿದ; ಪಣಿಸಿದ; ಶರಣಾಗತರನ್ನಾಗಿ ಮಾಡಿದ: ದೃಢೀಕೃತಕಳವರ್ಗನುಂ ನಮೀಕೃತಸಾಮಂತವರ್ಗನುಮಾಗಿ (ಚಂದ್ರಪು. ೪-೨೮ ವ). [ ಸಂ. ]

**ನಮೂದಿಸು** (ಕ್ರಿ). ಉಲ್ಲೇಖಿಸು ; ದಾಖಲೆಮಾಡು ; ಬರೆದಿಡು : ಏಜೆಂಟ್ ಅಥವಾ ಮುತಾಲಿಕನ ಹೆಸರನ್ನೂ ನಮೂದಿಸಬೇಕು (ಗ್ರಾಮೂಳ. ೬): ಪೋಲೀಸಿನವರು ಸಾಕ್ಷಿಪಟ್ಟಿಯಲ್ಲಿ ಅವನ ಹೆಸರನ್ನು ನಮೂದಿಸಿರಲಿಲ್ಲ (ಹಂಚಹಂ. ೧೦೩) ; ಈ ವಿಷಯ ಕಾಜಿಗಳಿಗೂ ಗೊತ್ತಿಲ್ಲ ; ಗೊತ್ತಿದ್ದರೆ: ಕುರಾನಿನಲ್ಲಿ ನಮೂದಿಸದೆ ಬಿಡುತ್ತಿರಲಿಲ್ಲ (ತತ್ವಜ್ಞಾ. ೫೬೬).

[ ನಮೂದು + – ಇಸು₁ ]

**ನಮೂದು** (ನಾ). ಉಲ್ಲೇಖ ; ದಾಖಲೆ ; ನೋಂದಣಿ.

ನಮೂದಾಗು=ನೋಂದಣಿ ಆಗು ; ದಾಖಲು ಆಗು : 'ವೃಯಿಲ್ಲು' ಬರೆದು ಸಿದ್ಧವಾಯಿತು. ಇಷ್ಟರಲ್ಲಿ ನಮೂದಾಗುವದಿತ್ತು (ಸಮುಜೀ. ೩೫೧). **ನಮೂದುಮಾಡು** = ಉಲ್ಲೇಖಿಸು ; ಬರೆದು ತಿಳಿಸು : 'ಡಿನ್ನರ್' ಇಷ್ಟು ಹೊತ್ತಿಗೆ ಎಂದು ಲಗ್ನಪತ್ರಿಕೆಯಲ್ಲಿ ನಮೂದುಮಾಡಿದ್ದರು (ನಾಡಿಗೇ. ೧೩೬) : ಜ್ವರ ಬಂದ ಕಾರಣ ನಮೂದುಮಾಡಿ, ಪರೀಕ್ಷೆಯ ಕತ್ತರಿಯಿಂದ ನುಸುಳಿ (ದೀಪಹ. II, ೦೮).

[ ←ಪಾರ. ಹಿಂ. ನಮೂದ್ ; ಮರಾ. ನಮೂದ್, ನಮೋದ್ ]

**ನಮೂನಿಸುಳಿ** (ನಾ). ದನದ ಮೈಮೇಲಿನ ಸುಳಿಗಳಲ್ಲಿ ಒಂದು ಬಗೆ: ದನಾ ಪರೀಕ್ಷೆ ಮಾಡೋವಾಗ ಹೀನಸುಳಿ, ಪಾತಾಳಸುಳಿ, ದಾಮಣಿಸುಳಿ, ಫರಕಲಸುಳಿ, ನಮೂನಿಸುಳಿ, ಸಿಡಕ್ಯಾಲು, ಕೋರಬಗ್ರಿ, ಕೊಡುವಹಲ್ಲು ಇವೆಲ್ಲಾನೂ ಚಂದಾಗಿ ನೋಡಿ ಒಳ್ಳೆಸುಳಿ ಇರೋದ ತತ್ತಾರಾ (ಹುಟ್ಟಿಹ. ೧೬೩). [ <ನಮೂನೆ + ಸುಳಿ₂ (<ಸುಟ್ಟಿ₂) ]

**ನಮೂನೆ** (ನಾ). ೧. ಮಾದರಿ ; ತೆರ ; ಕ್ರಮ ; ಪ್ರಕಾರ; ರೀತಿ; ವಿಧ; ಬಗೆ : ನೋಟದಲ್ಲಿ ಒಂದು ನಮೂನೆಯ ಬಿಂಕ (ಅಂಹೂ. ೦೮) ; ಆ ಮಾಸ್ತರ ಹೇಳಿದ ನಮೂನೆ ನೋಡಿದರೆ ಈಗಾಗಲೆ ಏನು ಮಾಡಿ ಕುಳಿತಾಳೊ (ಹೂರುಬಾ, ೩೮) ; ಚೊಕ್ಕ ಬಂಗಾರವೇ ಬೇಕೆಂಬ ಹಟವೇಕೆ ನಿನಗೆ ಈ ಲೋಕದಲ್ಲಿ ನಾನಾ ನಮೂನೆ ಲೋಹವಿರುವಾಗ ? (ನೆಲರುಬು. ೨೭-೬); ಪಾಟಿಯ ವಿವಿಧ ನಮೂನೆಗಳನ್ನು ಬೆಳೆಸಲು ಉದ್ಯುಕ್ತನಾದನು (ಸಸ್ಯಕ. ೮೬). ೨. ರಚನಾಕ್ರಮ; ನಕ್ಷೆಯ ವಿನ್ಯಾಸ : ಆ ಕೋಟೆ ನಮೂನೆ ಯಾವ ಮೇಳೆ ಇದೆ (ರಾಜೇಂದ್ರ. ೨೪). ೩. ಚಿತ್ರಾಕೃತಿಯ ಮಾದರಿ : ಎಲ್ಲಿ ಅವನಿಗೆ ಚಿತ್ರಕಲೆಯ ಸುಂದರವಾದ ನಮೂನೆಗಳು ದೊರೆಯುತ್ತಿದ್ದವೋ ಅಲ್ಲಿಗೆ ಅವನು ಹೋಗಿಯೇ ಹೋಗುತ್ತಿದ್ದನು (ಮ್ಯೂಜಿಂ. ೧೮) ; ಅವನ ಚೌಕಳಿ . . . ಮಾಟ ಬೆಂಡೋಲೆಗಳ ನಮೂನೆ ಕಂಡಿತು ನನಗೆ (ಪ್ರನಿ. ೮); ಈಗಿನ ದಿನಗಳಲ್ಲಿ ಸುಂದರವಾದ ಹಾಗೂ ಆಕರ್ಷಕವಾದ ಅನೇಕ ನಮೂನೆಯ ಮನೆಕೆಲಸದ ಸಲಕರಣೆಗಳು ಸಿಗುತ್ತವೆ (ಅಡುಗಾ. ೩೨). ೪. ಅರ್ಜಿ, ದಾಖಲೆ ಮೊದಲಾದಂವುಗಳಲ್ಲಿ ಉಲ್ಲೇಖಿಸಬೇಕಾದ ಅಂಶಗಳನ್ನೊಳಗೊಂಡ ಪತ್ರ,-ಕಾಗದ : ಆ ಸರ್ಕಾರದವರಿಂದ ವಿಧಾಯಕವಾಗಿರುವ ನಮೂನೆಯಲ್ಲಿ ಮತ್ತು ರೀತಿಯಲ್ಲಿ ಕೊಟ್ಟಂಥ ಆವೇದನಪತ್ರದ ಮೇಲೆ (ಭೂದಾನ. ೫) ; ಈಗಿದ್ದ ಮರಾಟಿ ನಮೂನೆಗಳು ತೀರಿದ ಬಳಿಕ ಕನ್ನಡ ನಮೂನೆಗಳನ್ನು ಮುದ್ರಿಸಬೇಕು (ಕನ್ನಸು. I, ೨೬). ೫. ಮಾದರಿಗಾಗಿ ಕೊಟ್ಟುದು; ಮಾಸಲೆ (ಉಕ): ನಮೂನೆಗೆ ಸ್ವಲ್ಪ ತೆಗೆದುಕೊಂಡು ಬಾ (ರೂಢಿ); ೬. (ಆಲಂ) ವಿಚಿತ್ರವಾದುದು ; ಅಸಮಾಧಾನಕರವಾದುದು : ಅವರ ಮುಖ ಒಂದು ನಮೂನೆಯಾಗಿತ್ತು (ರೂಢಿ).

[ ←ಪಾರ. ನಮೂನಾ, ನಮೂನಹ್ ; ಹಿಂ. ನಮೂನಾ ; ಮರಾ. ನಮೂನಾ, ನಮೋನಾ ]

**ನಮೆ₁, ನವೆ₁** (ಕ್ರಿ). ೧. ದುಃಖಿಸು ; ನರಳು ; ಕೊರಗು : ಬಳಿಕ ಪಶ್ಚಾತ್ತಾಪದೊಳ್ಪುಳುವಾಗಿ ನಮೆಗುಂ (ಎಕ. VIII, ಸಗರ. ೩೦-೧೧ ; 870); ಚಕ್ರದಿಂ ನಾಲ್ಕು ಕಾಲುಮನೊರ್ಮೋದಲೆ ಪಱಿಯಿಟ್ಟೊಡೆ . . . ಆ ಇರುಳೆಲ್ಲಾಮ ಫಿರಿದು ವೇದನೆಯಿಂದಂ ನಮೆದುಂ ಸತ್ತು (ವಡ್ಡಾ. ೦೨೦-೨೦) ; ಕೂರದರ್ ನೆಲನನೊಟ್ಟಜೆಯಿಂ ಕೊಳೆ ಕೊಟ್ಟು ಮುಟ್ಟು ಗೆಟ್ಟಿನ್ನುಮರಣ್ಯದೊಳ್ ನವೆದಪಂ ಯಮನಂದನಂ (ಪಂಪಭಾ. ೬-೫೫) ; ಎನಿತಂ ದ್ರೌಪದಿ ಮುಕ್ತಕೇಶಿ ನವೆವಳ್ (ಗದಾಯು. ೬-೨೪). ಎನ್ನ ಮಕ್ಕಳುಮಾನುಂ ದುಃಖಾಗ್ನಿಯೊಳ್ ಪುಡುಪುಡನೆ ಪುರ್ಗಿ ನಮೆವ ಪಾಪದ ಫಲಮಂ ನೀನವೋಘೆಮುಣ್ಬೆಯೆಂದು ಮೂದಲಿಸಿ (ಸುಕುಮಾ. ೫-೭೮) ; ಮೊಂಟಾಗಿ ಕೈಗಳೆರಡುಂ ಗೆಂಟಾಗಿರೆ ತನಗೆ ಸಿರಿಯುಂ ಕೂಟುಂ ಕಾಲುಂ ಕುಂಟಾಗಿ ನಮೆಯುತಿರ್ಪರ್ ಟಂಟಣಿಸಿ ಮಹಾತಪಂಗಳಂ ಕಿಡಿಸಿದವರ್ (ಧರ್ಮಾಮೃ. ೬-೧೮೦) ; ಅಳಿಯಾಸೆಯಿಂ ನವೆಯದಿರ್ಬೇಡಾಗ್ರಹಂ (ಅನಂಪು. ೧೧-೯೨) ; ಬಂದರೇನಪರಾಧವೇ ಇನ್ನೆಂದುಮರಿಯಂತವರು ನಮೆವರು (ಕುಮಾವ್ಯಾ. ೧-೨೦) ; ನಮೆವ ದೀನಾಂಧಬಧಿರರುಂ ದೀನ ಧರ್ಮಂಗಳಿಂ ಪಾಲಿಸುತಂ (ರಾಮಾಕ್ಯ. ೦೫-೧೯); ಆಗದುದಕೆ ಹೋಗದುದಕೆ ಆಸೆಪಟ್ಟು ಭಂಗಪಡುತೆ ನವೆವುದೇತಕೆ? (ವಿಸೀಗೀ. ೬೫-೦೦). ೨. ಸೊರಗು; ಕೃಶವಾಗು ; ಬಡವಾಗು : "ನಮೆ-ಗುರುಯಾಪ್ಯೇ (ಬಡವಾಗು) ದಾರಿದ್ರ್ಯೇ ಚ" (ಶಮುಧಾ) ; ಅದೋಧಬೋಧಿತ ತಪೋದಾನವಿಧಾನದು ಮುಧಾಕ್ಲೇಶಾಯಾಸನಿರತರಾಗಿ ನಮೆವರ್ (ಆದಿಪು. ೨-೯೫) ; ಉಪವಾಸದೊಳ್ ನಮೆದು ನೋಂಪಿಗಳೊಳ್ ನಿಯಮಕ್ರಮಂಗಳಂ ಸಲಿಸಿದರ್ (ಪಂಪಭಾ. ೦-೧೩೬) ; ತೆರ್ಪತ್ತು ಬಿಟ್ಟು ನಮೆಯುತ್ತಿರ್ಪರ್ ವಾರಕರ್ (ಶಾಂತಿಪು. ೬-೯೯): ಲೋಕದೊಳಾಂ ಕಾಣದಿರಿಲ್ಲೀ ಕುತ್ತಂ ಪೊರ್ದಿ ನಮೆವ ಮಾನಿಸರುಂ ಕೇಳೀ ಕಷ್ಟನಂದದಿಂ ಮೆಯ್ಯಾಕಾರಂಗೆಟ್ಟು ನಮೆವರಂ ಕಂಡಱಿಯೆಂ (ಧರ್ಮಾಮೃ. ೪-೯೦). ೩. ಬಡವನಾಗು : "ನಮೆ-ಗುರುಯಾಪ್ಯೇ (ಬಡವಾಗು), ದಾರಿದ್ರ್ಯೇ ಚ" (ಶಮುಧಾ): ೪. ಮಹತ್ವವನ್ನು ಕಳೆದುಕೊಳ್ಳು : (?). **ನವೆ₁** : ೧. ಮಹಾನರಕದೊಳ್ ದುಃಖಾಗ್ನಿಯಿಂ ಬೆಯ್ದೊಡಂ ನವೆಯುತ್ತಿರ್ಪೊಡಂ (ಧರ್ಮಾಮೃ. ೪-೩೧) ; ಹಲಕಾಲ ನವೆವುತಲ್ಲಿರ್ದ ಹೆಳವಂಗೆ ಕಾಲ್ . . . ಬರಲ್ (ಸೋಮಂಚ. ೪-೬) ; ಕಟಕಟಾ ಪೇರಡವಿಯೊಳಗೆಕ್ಕಟಿಯಿದೇತಕೆ ನವೆವುತಿರ್ದಪೆ (ಬಸವು. ೧೮-೯) ; ಸತ್ಯವ ಕಾದು ಹದಿಮೂಱಬುದ ನವೆದಿರಿ ಮುಂದೆ ಲೇಸಹುದು (ಕುಮಾವ್ಯಾ. ೨-೦೫) ; ಪಾಪದಿ ಪೆಱದಡಾವಿಳಗೊಳಿದು (ಹರಿಸು. ೯೫) ; ನವೆವುತ್ತಿದೇನೆ ಭವರೋಗವ ನಿಲಿಸಯ್ಯಾ (ಶಂಕಳಂ. ೯೫) ; ತನ್ನ ಗಂಡನು ಎಷ್ಟು ರೀತಿಯಿಂದ ನವೆಯಬೇಕಾಗುತ್ತದಲ್ಲಾ ಎಂದು ಮನಸ್ಸು ಕರಗಿ ಕಂಬನಿ ಹರಿಯತೊಡಗಿದವು (ಗಂಡೂಯಿ. ೨೫೮). ೨. ನವೆದಂ ರೋಗಂಗಳಿಂದಂ (ರಕ್ಷಾಕ. ೨೪) ; ಕಡುಜರದಿಂ ಕರಂ ನವೆದು (ದಶಕು. ೮-೩೦೩) ; ದಾರಿದ್ರ್ಯದಿಂದಂ ನವಡ ನಡುವನಾಶ್ರೈಸಿದಂ . . . ಎಂದೈತರ್ಪ ಬಾಸೆಯಂ (ಭಾವಕಂ. ೩-೯೨). ೫. ಕ್ಷಯಿಸು ; ನಾಶವಾಗು : ಶ್ರವಣದಿಂ ಪಾತಕ ಕುಲಂಗಳು ನವೆದು ಪೋಪುವು (ಗಗಶಾ. ೦೬-೫೧).

**ನಮೆದು ನಾರುಗಿ** = ದೇಹದ ಸೆರೆಗಳಂ ಎದ್ದುಕಾಣು ; ಸೊರಗಿ ಜರ್ಜರಿತವಾಗು,-ಶಿಥಿಲವಾಗು: ಉಣ್ಣದ ಮಿಾಯದಂಗ ನಿರ್ಜೀವಕವೆತ್ತು ದೆತ್ತ ವಿಫಲದ್ವಯಿದಾನವಿಧಾನಮೆತ್ತ ನಾನಾ ವಿಧದಿಂದಮೇಂ ನವೆದು ನಾರುಗಿದಿರ್ಪರೊ ಜೈನದೀಕ್ಷಿತರ್ (ಶಾಂತಿಪು. ೮-೧೨೯) ; ಅವಿವಿದು ದುಃಖದೊಳ್ ನವೆದು ನಾರುಗಿದು ಪೊಗೆದು ಸತ್ತಲ್ಲಿ ನಿಷಾದನ ಮನೆಯೊಳ್ಪೆಣ್ಣಾಯಾಯ್ತು ನೆನೆದೊಡಾಶ್ಚರ್ಯಮಲ್ತೆ ಸಂಸ್ಕೃತಿಚಕ್ರಂ (ಸುಕುಮಾ. ೫-೧೯).

[ ದೇ. ೫ ತುಳು. ನವೆ; ತೆಲು. ನವಯು, ನವಿಯು ]

**ನಮೆ₂, ನವೆ₂** (ನಾ). ೧. ಕಾಟ ; ಪೀಡೆ ; ತೊಂದರೆ ; ಕಿರುಕುಳ : ಕಣ್ಣಿನ್ ಚಿದಱಿತು ಕಟ್ಟಲೆ ಪಾರಯ್ ! ನಮೆಯಾ ಭ್ರಮೆಯಾ ಕಟ್ಟಲೆ ಪಾರಯ್ ! (ಅಕ್ಕಾ. ೨೯-೫೬೨). **ನವೆ₂** : ೨. ತಂಬಿಕೆ ; ತಿನಿಸು ; ಕೆರೆತ: ತಕ್ಕು - ಕಿರ್ಯಕ್ಕಂಡೂತಿಲೇಹನೇ (ನವೆಗೆ ನೆಕ್ಕು) (ಶಮುಧಾ) : ಆಗವನು ಲೈಲಾಕ್ ಪೊದೆಯ ಹಿಂದೆ ಬಿದ್ದಿದ್ದುದರಿಂದ ತುರುಚಿ ಗಿಡ ಅವನ ಕೈ ಕಚ್ಚಿ ನವೆಹತ್ತಿಕೊಂಡಿತ್ತು (ಪುನರು. ೨೬೩). ೩. ಚಪಲ; ತವಕ: ಸುನಂದೆಯನ್ನು ಗಂಡ ಬಿಟ್ಟಿರುವನೆಂಬುದು ತಿಳಿದಿತ್ತು. ನಾಲಿಗೆಗೆ ನವೆ, ಮಾದಲಿಸಿ ಲೇವಡಿ ಮಾಡುವ ತವಕ (ಜಾಕಾಂಗಿ. ೨೦೦). 'ನವೆತ್ತ₂' ಪರ್ಯಾ.

[ ದೇ. ೫ ತಮಿ. ನವ್ವು, ನವ್ವೈಪ್ಪು, ನವ್ವೈಚ್ಚಲ್ ; ತುಳು. ನವುಂಟು; ತೆಲು. ನವ ]

**ನಮೆಯಿಸು**, ನವಸು, ನವೆಸು (ಕ್ರಿ). ೧. ಕೊರಗಿಸು ; ಕಷ್ಟಕ್ಕೆ ಗುರಿಪಡಿಸು : ಪಲಕಾಲಂ ನವೆಯಿಸಿದ ಪಗೆಯುವಂ ನೆನೆದು (ವಡ್ಡಾರಾ. ೨೮೧–೨೦); ಲೋಗರೊಡವೆಯುಂ ಋಣಿಳಿಯುಂಗೊಂಡನಿವನಂ ಪಲವು ದಿವಸಂ ನಮಯಿಸಿ ಕೊಲ್ಲಿಂ (ಸುಕುಮಾ. ೮–೩೬ ವ). ೨. ಸೊರಗಿಸು ; ಕೃಶಗೊಳಿಸು : ತವದೊಳ್ ನಮೆದು ತಮ್ಮ ಶಿಷ್ಯರ್ಕಳುಮಂ ತಾಂ ಶಿವಗೊರವಿ ಬೆಸಕನುವಂ ತಿರಿಯಿಪಳೆಂಬ ತಜದ ನೆಟಿ ನವೆಯಿಸುವರ್ (ಶಾಂತಿಪು. ೮–೧೩೦) : ಬಸಿಱ ಕುತ್ತದಂತೆ ನವೆಯಿಸುವುದು (ಧರ್ಮಾಮೃ. ೪–೦೬೩). ನವಸು : ೩. ನಾಶವಾಗುವಂತೆ ಮಾಡು ; ಕೆಡಿಸು ; ಹಾಳುಮಾಡು : ವಿವಿಧ ರಕ್ಕಸರು . . . ಎನ್ನ ಕಾರ್ಯವಮಂ ನವಸಿದಲ್ಲದೆ ವಾಣರೆಂತಿದಕುಪಾಯವೇನೆಂದು ಯೋಚನೆಗೈದನು (ಪಂಕಾರಾ. ೫–೨–೪೩). 'ನವಸಿಗ' ಪರಾ. ನವೆಸು : ೧. ಈ ಶಿಶುವ ಶಿವಕುಮಾರಂ ತಿಳಿಯಲು ಮುಂದೆ ಮಜ್ಜನಭೋಜನಾದಿ ನಾನಾಕ್ರಿಯೆಗಳೊಂದಟಿಳೊಳ್ ನರವೇಷಕಾಯವಮಂ ನವೆಸಬೇಡೆಂದು ಕೈವೆಡೆಗೊಟ್ಟಳ್ (ಕಲಿತ್ಯ. ೫–೫೦) ; ಕುವಲಯ ಪ್ರಿಯಕಾಂತ ನಮ್ಮನೇಂ ಕಾರಣದಿ ನವೆಸುವೆ ಜಗನ್ಮೋಹನನೆ (ಪಂಕಾರಾ. ೫–೪–೨೦). [ ನವೆ೨ + – ಇಸು೨ ]

**ನವೇರು** (ನಾ). ೧. ಒಂದು ಬಗೆಯ ಮರ ಮತ್ತು ಅದರ ಹೂವು ; ಸುರಹೊನ್ನೆ; ಸುರಗಿ: ನವೇರು ಮಂದಾರ ಸಂತಾನಕ ಪಾರಿಜಾತಂಗಳೆಂಬ ಪೂಗಳಂ ಸುರಿಯುತ್ತಂ (ವಡ್ಡಾರಾ. ೬೪–೭) : ಸೂಡಿದ ಪಾರಿಜಾತದ ನವೇರುವ ಬಾಸಿಗವೊಯ್ಯನೊಯ್ಯನಿರ್ಪೋಗಿದುದು (ಆದಿಪು. ೩–೭) ; ಎಱಗದೆ ಪೂತ ಚಂಪಕವನಕ್ಕೆ ನವೇರುಮಹೀರುಹಕ್ಕೆ ಬಂಡೆಱಗುವ ಚಂಚರೀಕದವೊಲಾಕೆಯು ಕೇಕರಮನ್ನರಾಜಕಕ್ಕೆಱಗದೆ ರಾಘವಂಗೆಱಗೆ (ಪಂಪರಾಮಾ. ೫–೭೦) ; ನಿನಗೆ ಶುಭವೆಂದ ವಂದಿಯ ಮನೆಯಂಗಣದೊಳಗೆ ಪಣ್ಣು ಪರ್ವಿದ ಮಂದಾರ ನವೇರು ಪಾರಿಜಾತದ ಬನದೊಳ್ಸಿರಿ ಮೆಱೆವುದಲ್ತೆ ವನಕೇಳೀಗಳಂ (ಯಶೋಧ. ೩–೨) ; ನವೇರುಕುಸುಮನೋವರ್ಷಂ ಸ್ಫುಟಂ (ಎಕ. II (R), ೩೩೭–೫೦ : 12ನೆಯ ಶತ); ವನಪ್ರದೇಶದೊಳಗಿರ್ಪ ನವೇರುವಿನಂತೆ (ಪುಷ್ಪಪು. ೯–೨೮) ; ಉದ್ಯಾನದಲ್ಲಿದ್ದ ನವೇರುವೃಕ್ಷದಡಿಯನ್ನು ಸೇರಿದ (ಧೂಮುದು. ೬೧). ೨. ಒಂದು ಬಗೆಯ ಮರ; ರುದ್ರಾಕ್ಷಿ ಮರ. [ ಸಂ. ]

**ನವೇರುಕುಜ** (ನಾ). = ನವೇರು ೧ : ಪಂಕಜವೋ ನವೇರುಕುಜವೋ . . . ಗಿಳಿಯೋ ಕಂಡಿರೆ ಪೇಱೆಮೆಮ್ಮ ಪತಿಯಂ (ಸುಕುಮಾ. ೧೨–೨೧). [ ನವೇರು + ಕುಜ ]

**ನವೇರುಕುಸುಮ** (ನಾ). ಸುರಗಿಹೂವು ; ಸುರಹೊನ್ನೆಯ ಹೂವು : ಕಿವಿ ಸಾರ್ದು ಜಿನಂಗೆ ಸೌರಭಕ್ಕಾಡುವ ತುಂಬಿಗಳ್ಗೆ ವಿಜನಾಥನವರ್ಕೆ ಕನಲ್ದು ಮಾಣದೀಡಾಡುವನಾ ನವೇರುಕುಸುಮಸ್ತಬಕಂಗಳ ಕರ್ಣಪೂರವಂ (ಪಂಪರಾಮಾ. ೩–೧೬) : ಸುರಿದುದು ನವೇರುಕುಸುಮದ ಸರಿ ಮೊಗದಿದು ದಮರಪಟಹಂ (ಪುಷ್ಪಪು. ೧೪–೪೧) ; ತಾನೆಳಸದಿರ್ದೊಡಂ ಪರವಧುವಿನ ಮೇಲ್ವಾಯ್ವೊಡಳಿಪಿ ಮಂದರಶೈಲಂ ಸ್ವಾನನಿವನೆನಿಸಿ ನಿಂದಭಿಮಾನಿಗೆ ಸುರಿಯದೆ ನವೇರುಕುಸುಮಾಸಾರಂ (ಉಷಾರ. ೯೮).

[ ನವೇರು + ಕುಸುಮ ]

**ನವೇರುಭೂಜ** (ನಾ). = ನವೇರು ೨ : ನವೇರುಭೂಜಮಂ ತಳಿರ ಸುಮೇರುಮೇಖಳೆ (ಚಂದ್ರಪು. ೦೨–೨೮). [ ನವೇರು + ಭೂಜ ]

**ನಮೋ** (ನಾ). ೧. ನಮಸ್ಕಾರ ಮಾಡುತ್ತೇನೆ ಎಂಬರ್ಥದ ಪದ.– ಶಬ್ದ : ಪರಮರೂಪನೇ ನಮೋ ಪರತತ್ತ್ವನೇ ನಮೋ ಆದಿಯಾರೂಢ ಭಯಂಕರನೇ ನಮೋ . . . ಎಂದು ಶ್ರುತಿಯು ಸಾರುತ್ತಿರಲು (ಬಸವ. ೩೩೭); ಹರಿ ನಮೋ ಜಯ ಭಕ್ತರಘಸಂಹರ ನಮೋ ಜಯಸಕಲ ಭುವನೇಶ್ವರ ನಮೋ ಜಯಕೃಷ್ಣ ಕೇಶವ ವಿಷ್ಣುವಾಮನನೆ(ಕುಮಾವ್ಯಾ. ೨೩–೩೩); ಎಲ್ಲಂಗವಿಾಗ ನಮೋ–ಬಂಧುಗಳೆ, ಭಾಗಿಗಳೆ (ಮುಂಕುಳ. ೯೨೨). ೨. ಸಾಕು; ಸಾಕು, ಇನ್ನು ಇದರ ಗೊಡವೆ ಬೇಡ ಎಂಬರ್ಥದಲ್ಲಿ ಹೇಳುವ ಮಾತು : ಪೊಡವಿಯಿಾದುದೊ ಮೋಹರವನಿದಟಿಒಡನೆ ಕಾದುವನಾವ ನಾತನೆ ಮೃಡನು ಶಿವಶಿವ ಕಾದಿ ಗೆಲಿದೆವು ಬಲಕೆ ನಮೋಯೆಂದ (ಕುಮಾವ್ಯಾವಿ. ೬–೬) ; P ಇಲ್ಲಿ 'ನಮೊ' ಎಂಬ ಹ್ರಸ್ವರೂಪ ಛಂದಸ್ಸಿಗಾಗಿ ಮಾಡಿಕೊಂಡುದು; ಇದು 'ಲಂಚ' ವಾದರೆ ನಮೋ ಎನುತ್ತೇನೆ (ಗಾಳಿಪ. ೮೦).

ನಮೋನಮೋ (ದ್ವಿರುಕ್ತಿ) : ಕೂಡಲಸಂಗಮದೇವಾ ನಿಮ್ಮ ಸದ್ಭಕ್ತರಿಗೆ ನಮೋ ನಮೋ ಎಂಬೆನು (ಬಸವ. ೪೬೯); ನಾರಾಯಣ ತೇ ನಮೋ ನಮೋ ಭವ ನಾರದಸನ್ನುತ ನಮೋ ನಮೋ (ಪುರಂದ. ೩–೪೦ ಪಲ್ಲವಿ) ; ಎಷ್ಟು ದುಡಿದೆ ನೀನೆಷ್ಟು ಪಡೆದೆ ಹೇ ನಮೋ ನಮೋ ನಿನಗೆ (ಅರಳು. ೨೯೩–೩) ; ಅವನು ನಮೋ ನಮೋ ಎಂದು ದುಂಡತೆಪ್ಪು ದೈವ ಕೂಡುವನು (ಕನ್ನಜಾ. ೧೯). [ < ಪ್ರಾ. ಣಮೋ. / ಸಂ. ನಮಸ್ ]

**ನಮೋಸ್ತು** (ನಾ). ೧. ನಮಸ್ಕಾರ; ವಂದನೆ: ಅತ್ಯಂತ ರೂಪವತಿಯುಪ್ಪ ಬಾಲಕಿಯು ಬರುತ್ತಿಪ್ಪುದು ಯತೀಂದ್ರುಂ ಕಂಡು ನೋಡುತ್ತಿಪ್ಪನವಾಕೆ ಬಂದು ನಮೋಸ್ತು ಎಂದು ನಿಲಿಸಲು (ಕಗವಿ. ೯೩; ಲಾಕಾವರೀ ೪೫). 'ನಮೋಸ್ತುಗೆಯ್' ಪರಾ. ೨. [ಜೈನ] ಸಂನ್ಯಾಸಿ; ಸವಣ : ಅರಸಿ ಮಂಚದಿಂದಿೞಿದು ಕೈಗಳಂ ಮುಗಿದು ನಮೋಸ್ತುದೇನೆಂದು ನುಡಿದೊಡೆ (ವಡ್ಡಾರಾ. ೦೭೭–೨೨) ; ನಮೋಸ್ತುಗಳಿರ್ಪಂದದಿನಿರ್ದಂ(ನಮೋಸ್ತುಗಳೆಂದು ಸವಣರ್ಗೆ ಪೆಸರಾಯ್ತು) (ಕಮಲ. ೭೫ ಪ್ರಯೋ) ; ಜನಮುಖಕಮಲದೊಳುದಿಸಿ ನಮೋಸ್ತುಗಳೆನಿಪ್ಪ ನುಡಿಯೊಳು ಬಳೆದು ಜನನುತೆ ಮುಕ್ತಿಗೆ ಸಖಿಯಾದ ಶಾರದೆಗನುನಯದಿಂ ವಂದಿಸುವೆನು (ಶ್ರೀಪಾಲ. ೧–೧೧) : ನೆಟ್ಟ ನೋರ್ವನೆ ಬೈಗಿನಿಂ ರವಿ ಪುಟ್ಟುವನ್ನೆಗ ಜಾನ ಜಪವಳವಟ್ಟು ನಿಲುವಾ ಪಾಲಕೀರ್ತಿ ನಮೋಸ್ತು[ಗೆ]ಬಗುವೆನು (ಸಾಳ್ವಭಾ. ೦–೨೨). P ಇದು ಸಂಸ್ಕೃತದಲ್ಲಿ ಒಂದು ಶಬ್ದವಲ್ಲ ವಾಕ್ಯ.

**ನಮೋಸ್ತುಗೆಯ್**, ನಮೋಸ್ತುಗೈ (ಕ್ರಿ). ನಮಸ್ಕಾರ ಮಾಡು ; ವಂದಿಸು: ಶಾನೊಂದು ಬಟ್ಟೆಯೊಳ್ಪೋಗಿ ಯತೀಂದ್ರನಂ ಕಂಡು ನಮೋಸ್ತುಗೆಯ್ದು (ಪುಣ್ಯಾಸ್ರ ೩–೭೫ ವ) ; ವಿಭವದಿಂ ಗುಹೆಯನೆಯ್ದಿ ನಮೋಸ್ತುಗೆಯ್ದು ಬಾವಲಿಯಂ ಪ್ರಾರ್ಥಿಸೆ (ಕಗವಿ. ೯೨ ಲಾಕಾವರೀ ೪೫). ನಮೋಸ್ತುಗೈ : ಶುದ್ಧಚಿತ್ತದೊಳು ನಮೋಸ್ತುಗೈದರೆ ಧರ್ಮವೃದ್ಧಿಯೆಂದುಱಿ ಹರಸಿದರು (ಭರತ. ೭೦–೦೦೭). [ ನಮೋಸ್ತು + ಕೆಯ್೧ ]

**ನಮೋಸ್ತುಗೈ** 'ನಮೋಸ್ತುಗೆಯ್' ನೋ.

**ನಮ್ಮಕ್‌ಹರಾಮ್** 'ನಮ್ಮಕ್‌ಹರಾಮ' ನೋ.

**ನಮ್ಮಕ್‌ಹರಾಮ**, ನಮಕ್‌ಹರಾಮ್, ನಮ್ಮಕ್‌ಹರಾಮ್, ನಿಮಕ್‌ಹರಾಮ, ನಿಮ್ಮಕ್‌ಹರಾಮ (ನಾ). ಉಪ್ಪಿಟ್ಟವನಿಗೆ ಎರಡು ಬಗೆಯುವವನು; ಉಂಡಮನೆಗೆ ಎರಡು ಬಗೆಯುವವನು; ಸ್ವಾಮಿದ್ರೋಹಿ ; ಕೃತಘ್ನ : ನಾನು ನಮ್ಮಕ್‌ಹರಾಮನೆನಿಸಿಕೊಳ್ಳದೆ, ಇದು ವರೆಗೂ ಸ್ವಾಮಿಭಕ್ತಿಯಿಂದಲೇ ಚಾಕರಿಮಾಡಿಕೊಂಡು ಇರುತ್ತಿದ್ದೆನು (ಮಹಾವಂ. I, ೨೬೨) ; ಬುದ್ಧೀ ಬುದ್ಧೀ ನಮ್ಮಕ್‌ಹರಾಮಾ ಬುದ್ಧಿ, ಸುಳ್ಳು ಹೇಳುತ್ತಾನೆ ನನ್ನೊಡೆಯ (ನಮ್ಮಳ್ಳಿ. ೯೬). ನಮಕ್‌ಹರಾಮ್ : (ಕ). ನಮ್ಮಕ್‌ಹರಾಮ್ : ಸರ್ಕಾರದ ಉಪ್ಪು ತಿಂದು ಸರ್ಕಾರ ಬಯ್ಯುವವರಿಗೆ 'ನಮ್ಮಕ್‌ಹರಾಮ್' ಅಂತಾರೆ (ಪಂಚಪಂ. ೦೭೦). ನಿಮಕ್‌ಹರಾಮ : ನಮ್ಮ ಇಸ್ಲಾಂಮತವು ನಿಮಕ್‌ಹರಾಮರನ್ನು ಎಂದೂ ಹೆರುವುದಿಲ್ಲ ಮಹಾರಾಜ (ರಾಜಯೋ. ೦೩೩). ನಿಮ್ಮಕ್‌ಹರಾಮ: ಆ ನಿಮ್ಮಕ್‌ಹರಾಮ ಹೇಳಿದ್ದು (ರಾಜೇಂದ್ರ. ೪).

[ ← ಪಾರ. ನಮಕ್‌ಹರಾಮ್ ; ಹಿಂ. ನಮಕ್‌ಹರಾಮ್, ನಿಮಕ್‌ಹರಾಮ್ ; ಮರಾ. ನಿಮಕ್‌ಹರಾಮ್ ]

**ನಮ್ಮಕ್‌ಹಲಾಲ್,** ನಿಮ್ಮಕುಹಲಾಲು (ನಾ). ಉಪ್ಪಿಟ್ಟವನನ್ನು ನೆನೆಯುವವನು ; ಸ್ವಾಮಿಭಕ್ತ ; ಸ್ವಾಮಿನಿಷ್ಠ. ನಿಮ್ಮಕುಹಲಾಲು: ಅವರಿಗೆ ದೂರಮಾಡಿ, ಬದಲು ಅಮಲುದಾರರ ನಿಮ್ಮಕುಹಲಾಲಾಗಿ ಇರು ವಂಥವರ ನೋಡಿ ನಿಲ್ಲಿಸ್ಯಾರು ಎಂಬುದಾಗಿ ನಾವು ತಿಳಿದು ಇದ್ದೆವು (ರಾಜೇಂದ್ರ. ೧೦೪). [ ← ಹಿಂ. ನಮಕ್‌ಹಲಾಲ್ ; ಮರಾ. ನಿಮಕ್‌ಹಲಾಲ್ ]

**ನಮ್ಮು** 'ನೆಮ್ಮು$_1$'ನೋ.

**ನಮ್ಮೆ** (ನಾ). "ಹಬ್ಬ" (ಹುಲಿಹಾ. ೬೦೬) : ಮನೆಯವರೆಲ್ಲ ಸಾಲಾಗಿ ಕುಳಿತು ಪುತ್ತರಿ ನಮ್ಮೆಯ ಬಿರ್ದೂಟದನ್ನು ಮಾಡಿದರು (ಹುಲಿಹಾ. ೧೮೪). [ ← ಕೊಡ. ನಮ್ಮೆ ]

**ನಮ್ಯ** (ಗು). "ಬಾಗುವ ; ಬಳುಕುವ ; ನಮ್ಯ" (Litho. ೩೦೪೩). [ ಸಂ. ]

**ನಮ್ಯತೆ** (ನಾ). ಬಾಗುವಿಕೆ ; ಮಣಿಯುವಿಕೆ : ಇಂಗ್ಲಿಷ್ ಮೊದಲಾದ ಯೂರೋಪಿಯ ಭಾಷೆಗಳು ಭಾಷಾಂತರಸಾಹಿತ್ಯವಿಲ್ಲದಿದ್ದರೆ ಇಂದಿನ ಪ್ರಬುದ್ಧಾವಸ್ಥೆಗೇರುತ್ತಿರಲಿಲ್ಲ. ಸುಲಭ ನಮ್ಯತೆಯನ್ನಾಗಲೀ ಹಿಗ್ಗು ಕುಗ್ಗುಗಳನ್ನಾಗಲೀ ಪಡೆಯುತ್ತಿರಲಿಲ್ಲ (ಸುವರ್ಣ. ೨೫೭). [ಸಂ. ನಮ್ಯತಾ]

**ನಮ್ರ** (ಗು). ೧. ಬಾಗಿದ ; ಮಣಿದ. ೨. ಬಗ್ಗಿಸಿದ ; ತಗ್ಗಿಸಿದ. 'ನಮ್ರಶಿರೋಧರೆ' ನೋಡಿ. ೩. ವಿಧೇಯ ; ವಿನಯಶೀಲ ; ವಿನಯ ಪೂರ್ವಕವಾದ : ಒಮ್ಮೆಯಾದರೂ ತಣಿಯಿರೆಂದು ನಮ್ರ ಬಿನ್ನಹ (ಕನ್ನ.ಚಾ. ೪೨). 'ನಮ್ರವಚನ' ನೋಡಿ. ೪. (ನಾ). ನಮಸ್ಕರಿಸಿ ದುದು ; ವಂದಿಸಿದುದು. ೫. ಬಾಗಿದುದು : "ನತಂ, ನಮ್ರಂ, ಬಂಧುರಂ – ಈ ೩ ಎರಗಿರ್ದುದು" (ಹಲಾಯು. ೦೨೫-೭೫). ೬. [ನಾಟ್ಯ] ತೋಳುಗಳಿಂದ ಮಾಡುವ ಹದಿನಾರು ಬಗೆಯ ಅಭಿನಯಗಳಲ್ಲಿ ಒಂದು ; "ತೋಳನ್ನು ಸ್ವಲ್ಪ ಬಗ್ಗಿಸುವುದು" (ಅಭಿನ. ೨೬೧ ಗದ್ಯಾನುವಾದ) : ಬಗೆಗೊಂಬೂರ್ಧ್ವದ ತಿರ್ಯಕ್ . . . ಕುಂಚಿತಮುಂ ರಂತ [ರ]ನಮ್ರಾಖ್ಯ ಸರಳಮಾಂದೋಳಂಗಳ್ ತರುಣಿ ಪದಿನಾಱು ಭೇದದಿ ನೆರೆವುದು ಕೇಳ್ ಬಾಹುವಿಂತು ಭರತಾಗಮದೊಳ್ (ಅಭಿನ. ೨-೧೨೨) : ಊರ್ಧ್ವ, ಅಧೋಮುಖ, ತಿರ್ಯಕ್, ಅಪವಿದ್ಧ, ಪ್ರಸಾರಿತ, ಅಂಚಿತ, ಮಂಡಲಗತಿ, ಸ್ವಸ್ತಿಕ, ಉದ್ವೇಷ್ಟಿತ, ಪೃಷ್ಠಾನುಸಾರಿ, ಆವಿದ್ಧ, ಕುಂಚಿತ, ನಮ್ರ, ಸರಳ, ಆಂದೋಲಿತ, ಉತ್ಸಾರಿತ – ಈ ಹದಿನಾಱು ತೋಳ ಭೇದಂಗಳ್ (ಅಭಿನ. ೨-೧೨೨ವ). [ ಸಂ. ]

**ನಮ್ರತೆ** (ನಾ). ೧. ಹೆಮ್ಮೆಯಿಲ್ಲದಿರುವಿಕೆ ; ಅಹಂಕಾರವಿಲ್ಲದಿರುವಿಕೆ ; ವಿನಯಶೀಲತೆ : ಧರ್ಮಪುತ್ರನ ನಮ್ರತೆ ಭೀಮನಿಗೆ ಹಿಡಿಸಲಿಲ್ಲ (ವ್ಯಾಸಪಿ. ೯೮) : ನೆಕ್ಲದೋವ್ ನಮ್ರತೆಯಿಂದ ಮಾರುತ್ತರವಿತ್ತನು (ಪುನರು. ೧೮೭). ೨. ನಮಸ್ಕಾರ ಮಾಡುವಿಕೆ ; ನಮನ : ಜನಪಾಲ ಕಾಸುವಮುಪದಾಬ್ಜಯುಗ್ಮದೊಳು ನಮ್ರತೆಯಿಂ ನಲವಿಂದೆ ಮಾಡಿದರ್ (ಮುಹಾನೇ. ೮-೪೩). [ ಸಂ. ನಮ್ರತಾ ]

**ನಮ್ರತ್ವ** (ನಾ). ೧. ಬಾಗಿರುವಿಕೆ ; ಮಣಿದಿರುವಿಕೆ. ೨. ಬಾಗುವುದು: "ಬಾಗು – ನಮ್ರತ್ವೇ" (ಕಮಧಾ). ೩. = ನಮ್ರತೆ. [ ಸಂ. ]

**ನಮ್ರಭಾವ** (ನಾ). = ನಮ್ರತೆ ೧ : ಅವರ ನಮ್ರಭಾವ ಎಂಥವರ ಮನಸ್ಸ ನ್ನಾದರೂ ಸೆಳೆಯಬಲ್ಲುದು (ಲೂಧಿ). [ ನಮ್ರ + ಭಾವ$_2$ ]

**ನಮ್ರಮೂರ್ತಿ** (ನಾ). ವಿನಯಶೀಲನಾದವನು ; ಅಹಂಕಾರವಿಲ್ಲದ ವನು ; ಹೆಮ್ಮೆಯಿಲ್ಲದವನು : ಪಡೆವಳ್ಳಂಗೆ ರಥಾಂಗಹೇತಿ ನಡೆಯ ಲ್ವೇಚಿ ಬೇಗವಿದಾ ನಿನ್ನ ಪೆರ್ಪಡೆಯುಂ ನೀನೆನೆ ನಮ್ರಮೂರ್ತಿ ಬೆಸವೆತ್ತಾ ಬೀರವಟ್ಟಕ್ಕೆ ಪೊಟ್ಟಿಡೆ . . . ಪಡೆಯುಂ ಕೈಸನ್ನೆಗೆಯ್ಯುದ್ಧತಂ ನಡೆಯ ಲ್ವೇಚಿಸ್ಗಿದಿ (ಶಾಂತಿಪು. ೧-೧೦೭). [ ನಮ್ರ + ಮೂರ್ತಿ ]

**ನಮ್ರವಚನ** (ನಾ). ವಿನಯದಿಂದ ಕೂಡಿದ ಮಾತು : ಅವಿಂತ ನಮ್ರ ವಚನಗಳಿಂದಲುಪಚರಿಸಲು (ಮಂಕಾರಾ. ೨-೮-೭). [ ನಮ್ರ + ವಚನ ]

**ನಮ್ರಶಿರೋಧರೆ** (ನಾ). ಕತ್ತನ್ನು ಬಾಗಿಸಿದವಳು ; ಕೊರಳನ್ನು ತಗ್ಗಿಸಿ ದವಳು : ನಮ್ರಶಿರೋಧರೆ ಸೀತೆ ಲೋಕಸಂತ್ರಾಸಿಯ ರೂಪು ಪಾದನಖ ದರ್ಪಣದೊಳ್ ಪಲವಾಗಿ ತೋಱೆ ಕಂಡಾ ಸತಿ ಬೆರ್ಚಿ ಮುಚ್ಚಿದಳೆರಲ್ಪರದಿಂ ತರಲೇಕ್ಷಣಂಗಳಂ (ಪಂರಾಮಾ. ೯-೧೦೨). [ ಸಂ. ನಮ್ರಶಿರೋಧರಾ ]

**ನಮ್ರಸ್ತ** (ನಾ). ವಿನೀತನಾದವನು ; ವಿನಯಶೀಲ : ಹಸ್ತಮೆರಡರಲಾತು ಊರ್ಗರ್ಹಸ್ತಿಕತ್ತರಿಯಾಣಗಳ ನಮ್ರಸ್ತರಾಗೆಲ್ದಿದ್ದು ನಿಂದರ ನೋಡಿ ಭೂಭುಜನು (ಬಿಜ್ಜಪು. ೬೦-೨೩). [ ನಮ್ರ + – ಸ್ತ ]

**ನಯ$_1$** (ನಾ). ೧. ಮೃದುವಾಗಿರುವಿಕೆ ; ನುಣುಪು ; ಸ್ನಿಗ್ಧತೆ ; ಕೋಮಲತೆ ; ಸೌಕುಮಾರ್ಯ : ತುಂಬಿ ಕುರುಳ್ ತಳಿರ್ ತಳಂ . . . ಕೊನೆ ಸೆಳ್ಳುಗುರ್ಗಳ್ ಕುಡಿ ಕೋಲ್ ನಯಂ ನಯಂ ನೆಲೆ ನೆಲೆ ಭಂಗಿ ಭಂಗಿ ಪದವೆಣ್ ಬೆಳವಾರ್ಗೆಯಾ ಪೆಚಿತಲ್ಲಿದೆಂತೊ ಕೋಮಲಲತೆ ಪೇಟಿಮನ್ನಿನಿ ಯಾಳಂ ಮಱೆಗೊಂಡುದೊ ಸೂಱೆಗೊಂಡುದೋ (ಪಂಪಭಾ. ೫-೧೨) ; ತ್ರಿದಶನದೀಸಲಿಲದ ಪೂರದಿನಂಗನೆ ನಯದೊಳಭಿಷವೋತ್ಸವಮಸೊಡ ರ್ಚಿದಳೆನೆ ಜಿನಜನನಿಗೆ ರಾಗದಿನಿಕ್ಕಿದಳೆರ್ವರ್ಳಮರಿ ಚಮರೀರುಹಮಂ (ಶಾಂತಿಪು. ೯-೮೭೪) ; ಸುಂದಣಿಪ ತೋಳ್ಗಳಗ್ಗಳಿಪ ನಯಮಂ ಕಱೆಯ (ಇಹರ. ದೇ. ೩೨-೧೭) : ಕ್ಕೈಲಲೇಪದ ನಯದ ಹೊಗರಿನ . . . ಕಾಳೋರ ಗನ ಕಂಡಿನಾಲಗೆಯವೊಲೆಸೆದುದಂಕುಶ ಭಟನ ಮುಷ್ಟಿಯಲಿ (ಕುಮಾವ್ಯಾ. ೩-೩೭) ; ನಯವಿರಬೇಕು ನುಡಿಗಡಣದಲ್ಲಿ (ಅಜಂಡೀ. ೧೪೧-೦೦೦). ೨. ಮೆಲುಂಪು ; ಸೌಮ್ಯತೆ : ಮೇಲುದಱ ಸೆಱಂಗಿನಿಂ ನಯದೆ ಬೀಸಿದನಾ ಮನುಹೇಂದ್ರಚಂದ್ರಮಂ (ಕಾದಂಪೂ. ೯೨೪) : ನಯದಿಂದೆ ಕೊಗ್ಗಿ ಪಟಿ ಗೆಣ್ಣೆಯನುಪ್ಪಂ ಬೆರಸು ಕರ್ಣಕೂಲವ್ಯಥೆಗೆ . . . ; ಮಾದವಸಲೆಗಳ ದಳ ದೊಳೊಂದು ಕಿವಿಯೊಳ್ (ಲೋಕೋಪ. ೯-೬೩) ; ನಯದಿಂ ಕೋಕಿಳನಾದ ನಿಮ್ಮರಸರಿಂಚೇಕಾರಣಂ ಬಂದರ್ (ಅನಂಪು. ೧೧-೩೪). ೩. ಸೊಗಸು ; ಅಂದ ; ಕಳೆ ; ಮನೋಜ್ಞತೆ : ನಯದಿಂ ರಾಜೇಂದ್ರಚಂದ್ರಂಗಭಿಷವ ವಿಧಿಯಂ ಮಾಡುವೆಂ ಚಂದ್ರಿಕಾವಾರಿಯಿನೆಂಬಂತೆತ್ತಲುಂ ತಣ್ಬೆಳಗಿನ ಬಳಗಂ ಸಿಂಪಿಸಲ್. . .ಉದಯಿಸಿತುದಯಾದ್ರೀಂದ್ರದೊಳ್ ಚಂದ್ರಬಿಂಬಂ (ಕಾದಂಕಾ. ೩೭೬) ; ನಯಮಂ ಬೀಱುವ ಚಿತ್ರಪತ್ರ ನಿಧಿಂಕೂಟಸ್ತಂಭ ಭಿತ್ತಿಚ್ಛದಾಶ್ರಯದಾಲಕ್ಷಣಮಾನಮೇಯ ಗುಣರೇಖಾಶುದ್ಧಿ ಸರ್ವಾರ್ಥ ಸಿದ್ಧಿಯ ತದ್ರತ್ನವಿಮಾನವಲ್ಲಿಯುಮಿವಿಲ್ಲೆಂಬೀ ಜಸಕ್ಕಾದುದಾಶ್ರಯಂ (ಚಂದ್ರಪು. ೧೫-೯೩) ; ನಯದ ಹರಿನೀಳಕಟ್ಟಮುಮಯದ ವಿಮಾನಂಗಳಲ್ಲಿ (ಶಾಂತೀಶ್ವ. ೧೩-೧೧೭) : ನಯಪಳವಟ್ಟ ಜವ್ವನದ ರೂಢಿಯ ಗಾಡಿಯ ಪೆಂಡಿರೆಲ್ಲಮಲ್ಲಿಯ . . . ಪೆಸರಾದ ಸಮಸ್ತವಸ್ತುವಲ್ಲಿಯ ಪೆಱಕೊಂದು ಪಟ್ಟಣದೊಳಿಲ್ಲೆನೆ ಪಟ್ಟಣವೊಪ್ಪಿ ತೋಱುಗುಂ (ಸೂಕ್ತಿಸು. ೪-೧೦೩). ೪. ಪ್ರೀತಿ ; ಅನುರಾಗ : ಪುತ್ರವರಾರ್ಥಿಗಳಾಗಿ ತನ್ನ ಕಟ್ಟದಿರೊಳ ಸಿಂದರು ನಯದೆ ನೋಡೆ ಮುನೀಂದ್ರನ ದಿವ್ಯದೃಷ್ಟಿಮಂತ್ರದೊಳೆ ಪೊದಳ್ದುದಾ ಸತಿಯರಿರ್ವರೊಳಂ ನವಗರ್ಭವಿಭ್ರಮಂ (ಪಂಪಭಾ. ೧-೮೫) ; ನಯದಿಂ ಮುನಿಪತಿ ಜಿನದೀಕ್ಷೆಯನಂಬರಚರತನೂಭವಂಗನುನಯದಿಂ ದಯೆಗೆಯ್ಯೆ (ಧರ್ಮಾಮೃ. ೮-೧೫೩). ೫. ನವಿರು ; ನಾಜೂಕು ; ಸೂಕ್ಷ್ಮತೆ ; ಕಲಾತ್ಮಕತೆ : ನಯದಿಂದಂ ಬರೆದಂತೆಯುಂ ಕಡೆದು ತಂದಿ ಟ್ಟಂತೆಯುಂ . . . ಇರ್ಕುಂ ಜಿನಬಾಲರೂಪಮೆರ್ದೆಯೊಳ್ ಮುಂ ಕಂಡಗಲ್ದಿರ್ದರಾ (ಶಾಂತಿಪು. ೧೦-೮೫) ; ನಯದಿಂ ಪಾಪನೊಱಿಲ್ದು ಪಿರ್ವಿಡಿದ ಪೊನ್ನಂ ಪ್ರೀತಿಯಿಂ ಪೇಟ್ದ . . . ತತ್ಕಾವ್ಯತ್ರಯಕ್ಕಂ ಜಗತ್ತ್ರಯಮುಂ ಮುಂ ಬೆಲೆಯಾಗಿ ಪೋಯ್ತನೆ (ಚಂದ್ರಪು. ೧-೭೭). ೬. [ಕಾವ್ಯಮೀ] ಕಾವ್ಯದ

ಹತ್ತು ಗುಣಗಳಲ್ಲಿ ಒಂದು; ಸೌಕುಮಾರ್ಯ; ಮೃದುವರ್ಣಗಳಿಂದ ಕೂಡಿರುವಿಕೆ: ಇನಿತುಮವರ್ಕೆ ಮತ್ಕೃತಿಯೊಳೇ ಘನೆ ಬಣ್ಣಿಸೆ ಸಂದ ಶಂಖವರ್ಮನ ಬಗೆ ಶಾಂತಿವರ್ಮನ ನಯಮು (ಜಗಿವಿ. ೧-೧೦). ೭. [ಸಂಗೀತ] ಮಾರ್ದವ; ⓟ ೧. ವೀಣೆಯ ತಂತಿಗೆ ಅನ್ವಯಿಸಿದಾಗ: ವೀಣೆಯ ಕಕುಭ (ಇಂದಿನ 'ಕುದುರೆ', 'ಬ್ರಿಡ್ಜ್')ದ ಮೇಲೆ ಲಾಕ್ಷಾರಸದಿಂದ ಅಂಟಿಸಿದ ಲೋಹದ ಪತ್ರಿಕಾ. ಇಂದಿನ 'ರೇಕು' ಎಂಬ ಭಾಗ. ವೀಣಾತಂತಿಯಲ್ಲಿ ನಾದಸಮೃದ್ಧಿಯನ್ನೂ ಸ್ವರಕ್ಕೆ ನುಣುಪನ್ನೂ ಜೀವವನ್ನೂ ಕೊಡುವ ಜೀವಾ (ಇಂದಿನ 'ಜೀವಾಳ') ಎಂಬ ರೇಷ್ಮೆ, ಹತ್ತಿ ಅಥವಾ ಬಿದಿರಿನ ನೂಲು. ಇದಕ್ಕೂ ತಂತಿಗೂ ಸುಶ್ಲಿಷ್ಟವಾಗಿರುತ್ತದೆ. ೨. ಸ್ವರಕ್ಕೆ ಅನ್ವಯಿಸಿದಾಗ: ಸ್ವರದಲ್ಲಿ ಸ್ವನಿಷ್ಟವಾಗಿರುವ ನಾದಸಮೃದ್ಧಿಗೂ ರಂಜನೆಗೂ ಆಸ್ಪದವಾಗಿರುವ ಆವರ್ತಕಧ್ವನಿಗಳ ವ್ಯೂಹದಲ್ಲಿ ಪರಸ್ಪರ ಸಂಘರ್ಷವೂ ವಿರೋಧವೂ ಇಲ್ಲದಿರುವುದು; ಇದರಿಂದಾಗಿ ಸ್ವರವು ಒರಟಾಗಿರದೆ ನುಣುಪಾಗಿರುತ್ತದೆ. ೩. ಗಾನವ್ಯವಹಾರಕ್ಕೆ ಅನ್ವಯಿಸಿದಾಗ: ಒಂದು ಸ್ವರಶ್ರೇಣಿಯಲ್ಲಿರುವ ರಾಗಭಾವವನ್ನು ಮುಂದಿನ ಸ್ವರಶ್ರೇಣಿಯಲ್ಲಿರುವ ರಾಗಭಾವಕ್ಕೆ ಒಯ್ಯುವ ಅಗ್ರಸ್ವರ. ಹೀಗೆ ನಯಶಬ್ದವು ಸಂಗೀತ ವರ್ಣನಾ ಸಂದರ್ಭಗಳಲ್ಲಿ ಬೇರೆ ಬೇರೆ ಅರ್ಥಗಳಲ್ಲಿ ಪ್ರಯುಕ್ತವಾಗಿರುವುದು ಕಂಡುಬರುತ್ತದೆ: ಪದ ಕೊರಲಿಂಪನಪ್ಪುಕೆಯ [ಕೊಂಕು ನ]ಯಂ ಗಮಕಂಗಳಿಂ ಪೊದರ್ಕೊದಳಿಟ[3] ದಿಕ್ಕಿದಂತೆ ಸುತಿಯೊಳ್ ಸಮವಾಗಿರೆ ಜಾಣನಾಂತು ಮೆಚ್ಚಿದ ತೆಱದಾಸೆವಟ್ಟಿಸದೆ ಕಿನ್ನರವೋಲ್ ದೊರೆವೆತ್ತು ದೂಱಿದಾಱದ ದನಿ ಮುಟ್ಟೆ ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್ (ಪಂಪಭಾ. ೭-೮೫); "ನುಣುಪು" (ಪಂಪದೀ. ೨೬೬); ಘನ, ನಯ ಮತ್ತು ದೇಶ್ಯಗಳನ್ನು ಹಾಡುವುದರಲ್ಲಿ ಅವರು ಚೆನ್ನಾಗಿ ನುರಿತವರು (ಸಂಗೀತ. ೯೩).

**ನಯನಾಜೂಕು, ನಯನಾಜೋಕು** = ಕೋಮಲತೆ; ಸೂಕ್ಷ್ಮತೆ: ಸೂಕ್ಷ್ಮರೇಖಾವಿನ್ಯಾಸಗಳೊಂದಿಗೆ ಜಯಪುರ ಕೃತಿಗಳು ನಯನಾಜೂಕಿನ ಕೃತಿಗಳಾಗಿದ್ದವು (ಭಾರದ. ೫೩೦): ಅವಳು ಸ್ವಲ್ಪ ನಯ – ನಾಜೋಕು (ಫ್ಯಾಷನ್)ಗಳಿಂದ ಇರಲೆಂದು ನನ್ನ ಆಸೆ (ಗಂಹೆದು. ೨೨). **ನಯ ಮಾಡು** = ನುಣುಪುಗೊಳಿಸು: ಅವರು ತೋಪರ ಹಾಕಿ ಮರಗಳನ್ನು ನಯ ಮಾಡಿದರು (ಗಂಕ್ರಿ. ೯೯). **ನಯವಾಗು** = ೧. ನುಣ್ಣಗಾಗು; ಮೆತ್ತಗಾಗು: ಹಿಟ್ಟು ಬಹಳ ನಯವಾಗಬೇಕೆಂದಿಲ್ಲ (ಅಡುಗೆ. ೯೬). ೨. ಕಲಾತ್ಮಕತೆಯಿಂದ ಕೂಡಿರು; ನಾಜೂಕಾಗಿರು: ಹಣಗೆ ಮತ್ತು ಕಸೂತಿ ಕೆಲಸಗಳನ್ನು ನಯವಾಗಿ ಮಾಡಿಕೊಡುತ್ತಾಳೆ (ಸುಹಾಕ್ಕ. ೮೬).

[ ದೇ.₂ ತಮಿ. ಮಲ. ತುಳು. ತೆಲು. ನಯ ]

**ನಯ₂** (ನಾ). ೧. ಒಯ್ಯುವಿಕೆ; ತಲುಪಿಸುವಿಕೆ. ೨. ನಿರ್ವಹಿಸುವಿಕೆ. ೩. ನಡವಳಿಕೆ; ವರ್ತನೆ; ಗುಣ. ೪. ವಿವೇಕಯುತವಾದ ನಡವಳಿಕೆ; ಯೋಗ್ಯವಾದ ವರ್ತನೆ; ವಿವೇಕ; ಸದ್ಗುಣ; ದೂರದೃಷ್ಟಿ: ಜಿನ ನಿನ್ನ ಮೂರ್ತಿ ಜಿನ ನಿನ್ನ ನಯಂ ಜಿನ ನಿನ್ನ ಸಮತೆ . . . ಜಿನ ನಿನ್ನ ಕಾಂತೆ ವರ್ಣಿಸಲಳವೇ (ಪುಷ್ಪಪು. ೧೧-೫೭); ಕಲಿತರ್ಕ ಬಲ್ಪಿಡೆಯಂ ವೇದಮುಂ ನೀತಿ ನಯ ವಿನಯ ನಿಯತಿಯಂ (ಶ್ರೀಣಾಮಾ. ೨೫-೬೭೦); ಸತ್ಯಭಕ್ತಿಯ ಸೇವೆಗೆಯ್ದವಂ ಭರತಂ ನಿತ್ಯ ಜೀವನದಿ ನೀವಾ ನಯವನನುಸರಿಸೊ (ಮುಂಕುಕ. ೭೦೦). ೫. ಒಳ್ಳೆಯತನ; ವಿನಯ; ಸೌಜನ್ಯ; ಸಭ್ಯತೆ: ನಯದಿಂದಮಾ ಸರೋರುಹನಯನೆಯುನಳವಡಿಸಲಾರ್ತೆನಿಲ್ಲಳವಡಿಪಂ ಭಯದಿಂದಂ (ಪಂರಾಮಾ. ೯-೦೬೭); ನಯದಿಂ ಗಂಧರ್ವವಿದ್ಯಾಪ್ರಮುಖನತಿನುತಂ ಬಂದು (ನೇಮಿಪು. ೩-೧೭೮): ನಯದಿಂದೆಳ್ದು ನತಾಸ್ಯನಾಗಿ (ಗಿರಿಕ. ೧೦-೭೮); ನಯದಿಂ ವಿನೋದಕೊಡಂಬಡಂ ಪಡೆಯದಿಂದೌತ್ಸುಕ್ಯದಿಂ ತಂದ ಸಲ್ಗೆಯ ನೀಂ ಮನ್ನಿಸು (ಕಾಚಂಪು. ೧೨-೮೫): ನಯಮಿಲ್ಲದರೊಳ್ ನಯಮಂ ಬಯಸಲ್ಕೇಂ ಬಪ್ಪುದುಂಟೆ (ನಳಚಂ. ೨೦೩); ನಯ ವಿದ್ದಲ್ಲಿ ಭಯವಿಲ್ಲ (ಗಾದೆ). ೬. ಭಕ್ತಿ; ಪೂಜ್ಯಭಾವ: ನಯದಿಂ ಜಿನೇಂದ್ರ ಚರಣದ್ವಯಮಂ ಚಿತ್ತದೊಳೆ ನಿಲಿಸಿ (ಧರ್ಮಾಮೃ. ೩-೯೫). ೭. ಔಚಿತ್ಯ; ನ್ಯಾಯ; ನೀತಿ: ನಯಮಂ ನಂಬುವೊಡನ್ನ ಪೇಟ್ಟ ಸತಿಯಂ ಕೈಕೊಂಡಂ (ಪಂಪಭಾ. ೧-೭೭); ಸನ್ಮಾರ್ಗಕ್ಕೆ ಮಯ್ಯಾರದು ನಯಮಂ ಸಾರದನಾವ ಕಾಳೆಗದೊಳಂ ಕಣ್ಣಾರದಂ ನಾರದಂ (ಪಂರಾಮಾ. ೩-೦೫); ನಯವಿಂದು ಶೂರಂ ಭೇದೇನ ಯೋಜಯೇತ್ತೆಂಬ ನೀತಿಯಿದವಱಿದು: ನಯನಾನಯ ವಿದ್ಯರ್ಮಿಜ ನಮ್ಮೊಳ್ ಪ್ರಯೋಗಿಸಲ್ ಬಲ್ಲ ಸಚಿವನಾವಂ ದೇವಾ (ಸುಕುಮಾ. ೦೨-೦೬೨). ೮. ಸರಿಯಾದ ರೀತಿ; ಯೋಗ್ಯವಾದ ವಿಧಾನ. ೯. ರಾಜನೀತಿ; ರಾಜ್ಯಭಾರಕ್ರಮ; ಮುಂತ್ಸದ್ದಿತನ: ಇರ್ದುದಲ್ತು ನಯಮಿನ್ನೀ ಪೊಟ್ಟೆ ಪೊಟ್ಟಾಗಿ ವೀನೊಡಗೊಂಡುಯ್ವುದು ಕನ್ನೆಯಂ ತಡೆಯದಿರ್ (ಪಂಪಭಾ. ೫-೨೦); ನಯುವಂ ಪೇಟ್ವ್ವೊಡೆ ಸಂಧಿಮಾಡಿ ಜೀಯದಿರ್ಪೋತೇಯರೊಳ್ (ಗದಾಯು. ೪-೬೫): ಕೀರ್ತಿ ದಿಗ್ವಳಯಾಂತಂ ನುಡಿ ಮೇರುಶೈಲಲಿಖಿತಂ ಧರ್ಮ್ಮಂ ಜಗನ್ಮಿತ್ರ ಭೂತಳದುದ್ಯಂ ಚರಿತಂ ನಯಂ ಜನನುತಂ ಶ್ರೀಸಿಂಹಭೂಪಾಳನಾ (ಎಕ. VIII. ಸೊರಬ. ೦೫೪-೦೦ : 1088): ಅಮಳಗುಣನಮಳಕುಳನತ್ಯಮಳಚರಿತ್ರೈಕನಿಳಯನಮಳ ನಯುಪ್ರಕ್ರಮನಮಳಯಶೋರಶೋಜ್ಞಮಾವ್ಯತಾಶಾಳೆಯನಿಸಿದಂ ರೇಚರಸಂ (ಎಕ. VII. ಶಿಕಾರಿ. ೦೨೩-೩೭ : 1159): "ನೀತಿ" (ಶಾಪಮಂ. ೨೭೪ ಕೋಶ): ನಯದಿಂ ಜಪಕ್ಕೆ ಪುಣ್ಯೋದಯದಿಂ ಪಾರ್ಥಿವಪಾಕೆ . . . ದಯೆಮಾಡುವೆ ನೀನೆ ದಲ್ ಚಮತ್ಕೃತಿಯೊದವಂ (ಚಂದ್ರಪು. ೯-೩೪). ೧೦. ಯೋಜನೆ; ಉಪಾಯ; ಹಂಚಿಕೆ: ⓟ ಸಾಮ, ದಾನ, ಭೇದ ಮತ್ತು ದಂಡ ಎಂಬ ನಾಲ್ಕು ಬಗೆಯ ಚತುರೋಪಾಯಗಳು: ಸಾಮಭೇದಮುಪಪ್ರದಾನದಂಡಮೆಂಬ ನಾಲ್ಕುಂ ನಯಂಗಳನಱಿದು (ಬಂಹರಿ. ೭-೦ ವ). 'ನಯವಿವೇಕ' ಪರಾ. ೧೧. ಶಾಸ್ತ್ರ; ತತ್ತ್ವ; ಸೂತ್ರ; ನಿಯಮ; ಸಿದ್ಧಾಂತ: ಪೂರ್ವಮೀಮಾಂಸೆಯು ಸಂಶಯಗ್ರಸ್ತವಾದ ಅಥವಾ ಅನೇಕಾರ್ಥಗರ್ಭಿತವಾದ ವೇದವಾಕ್ಯಗಳನ್ನು ಸರಿಯಾಗಿ ಅರ್ಥಮಾಡುವುದಕ್ಕೆ ಉಪಯುಕ್ತವಾದ ರೀತಿ ನಯಗಳನ್ನು ಉದಾಹರಿಸುತ್ತ, ಧರ್ಮ, ಸ್ವರೂಪವಿವೇಚನೆಯಲ್ಲಿ ತೊಡಗಿರುವ ದರ್ಶನವಾಗಿ ಏರ್ಪಟ್ಟಿದೆ (ತತ್ತ್ವಶಾ. ೨೮೫). ೧೨. ತಿದ್ದುವಿಕೆ. 'ನಯನಿಪುಣ' ಪರಾ. ೧೩. [ನಾಟ್ಯ] ಲಯಬದ್ಧವಾದ ಗತಿ; ಭಾವಸೂಚಕವಾದ ಗಮನ: "ಅನುಕರಣೆ ನಯಮೆನಿಕುಂ" (ಪಂಗರಾ. ೨೪-೬): ರಸಭಾವಾಭಿನಯಂಗಳ್ ಪೊಸತೆ . . . ನಯಂ ಪೊಸವೆ ಕರಣಂಗಳುಂ ನಿಪ್ಪೊಸವೆನೆ ಪೊಸಯಿಸಿದರಾಕೆ ನಾಟ್ಯಾಗಮಮಂ (ಆದಿಪು. ೯-೨೫); ಪದಗತಿ ಹಸ್ತಂಗಳ ಚಾಲಯುಮತಿಶಯಮಂಗಹಾರದುಲ್ಲಾಸಂ ದೃಷ್ಟಿಯ ಭೇದಂ ಕರಣಂಗಳ ನಯಂ ನಯಮಂಬಡೆಯೆ ನರ್ತಿಪವಮರಿಯರಿಂದಂ (ಸುಕುಮಾ. ೦೩-೫೯). ೧೪. [ಜೈನ] (ತಿಳಿಯುವವನ ಅಭಿಪ್ರಾಯಕ್ಕೆ ವಿಷಯವಾದ) ವಸ್ತುವಿನ ಏಕದೇಶ ಜ್ಞಾನ: ⓟ ಜೈನಸಿದ್ಧಾಂತದಲ್ಲಿ ಸಪ್ತಭಂಗಿಯನ್ನು ಅಂಗೀಕರಿಸಿರುವುದರಿಂದ ಯಾವುದರಲ್ಲೂ ನಿರ್ಣಯವಿಲ್ಲದಿರುವುದಾಗಿ ಲೋಕವ್ಯವಹಾರವು ನಡೆಯುವುದು ಕಷ್ಟವಾಗುತ್ತದೆ. ಹೀಗಾಗಿ, ನಯವನ್ನು ಅಂಗೀಕರಿಸುತ್ತಾರೆ. ಹೇಗೆಂದರೆ ಉದಾಹರಣೆಗೆ ಗಡಿಗೆ ಇದೆಯೆ ಎಂದು ಕೇಳಿದರೆ ಗಡಿಗೆಯು ಇರುವುದೂ ಸಂಭವಿಸಬಹುದು ಎಂದು ಜೈನಸಿದ್ಧಾಂತದಂತೆ ಹೇಳಬೇಕು. ಇಲ್ಲಿ ನಿರ್ಣಯವಾಗುವುದಿಲ್ಲ. ಆದರೆ ಇದು ಪ್ರಮಾಣವಾಗಿದೆ. ಇದರಲ್ಲಿ ಗಡಿಗೆಯಿರುವುದು ಎಂಬ ಒಂದು ಅಂಶವನ್ನು (ಇರಬಹುದು ಎಂಬುದನ್ನು ಬಿಟ್ಟು) ಗ್ರಹಿಸಿದರೆ ಆಗ ಗಡಿಗೆ ಇದೆಎಂದು ಅರ್ಥವಾಗುತ್ತದೆ.

ಹೀಗೆ ಒಂದಂಶವನ್ನು ಗ್ರಹಿಸುವುದು ನಯ. ಒಟ್ಟಿನಲ್ಲಿ ಸ್ಯಾದ್ವಾದದಲ್ಲಿ ಪ್ರಮಾಣವು ಸಂಶಯದಂತಿದ್ದರೂ ವ್ಯವಹಾರಕ್ಕೆ ನಯವು ಬೇಕೇಬೇಕು. ಆದುದರಿಂದಲೇ ಜೈನಸಿದ್ಧಾಂತವು ಸಂಶಯ ಸಿದ್ಧಾಂತವಲ್ಲ. ಒಂದಂಶವನ್ನು ಪರಿಗ್ರಹಿಸಿ ಲೋಕವ್ಯವಹಾರವನ್ನು ನಡೆಸಬಹುದು. "ನಯ-೨: ದ್ರವ್ಯಾರ್ಥಿಕ, ಪರ್ಯಾಯಾರ್ಥಿಕ (ತತ್ತ್ವಪ್ರ. ೧-೬ ವ್ಯಾ-೧೧); ನಯ-೪: ಭಿನ್ನವೇದನಯ, ಅಚ್ಛಿನ್ನಭೇದ-, ತ್ರಿಕ-, ಚತುರ್-(ಜೈಧ. ೧೫೭). ನಯ-೭: ನೈಗಮ, ಸಂಗ್ರಹ, ವ್ಯವಹಾರ, ಋಜುಸೂತ್ರ, ಶಬ್ದ, ಸಮಭಿರೂಢ, ಏವಂಭೂತ (ರತ್ನಕ. ೬೨೮); ನಯ-೯: ನಯ-೨+ನಯ-೭. ಅಂತರ್ಭೇದಗಳು (i) ದ್ರವ್ಯಾರ್ಥಿಕನಯದಲ್ಲಿ-ಕರ್ಮೋಪಾಧಿ ನಿರಪೇಕ್ಷ, ಸತ್ತಾಗ್ರಾಹಕ, ಭೇದವಿಕಲ್ಪನಿರಪೇಕ್ಷ ಕರ್ಮೋಪಾಧಿ ಸಾಪೇಕ್ಷ, ಉತ್ಪಾದವ್ಯಯಸಾಪೇಕ್ಷ, ಭೇದಕಲ್ಪನಾಸಾಪೇಕ್ಷ, ಅನ್ವಯ, ಸ್ವದ್ರವ್ಯಾದಿ ಗ್ರಾಹಕ, ಪರದ್ರವ್ಯಾದಿ ಗ್ರಾಹಕ, ಪರಮ ಭಾವಗ್ರಾಹಕ (೧೦), (ii) ಪರ್ಯಾಯಾರ್ಥಿಕನಯದಲ್ಲಿ - ಅನಾದಿ ನಿತ್ಯ, ಸಾದಿ ನಿತ್ಯ, ಅನಿತ್ಯಶುದ್ಧ, ಅನಿತ್ಯ ಅಶುದ್ಧ, ಅನಿತ್ಯ-ಶುದ್ಧ, ವಿಭಾವ-ಅನಿತ್ಯ-ಅಶುದ್ಧ (೬), (iii) ನೈಗಮನಯದಲ್ಲಿ-ಭೂತ, ವರ್ತಮಾನ, ಭಾವಿ, (iv) ಸಂಗ್ರಹನಯದಲ್ಲಿ-ಶುದ್ಧ, ಅಶುದ್ಧ (v) ವ್ಯವಹಾರನಯದಲ್ಲಿ-ಶುದ್ಧಾರ್ಥಭೇದಕ, ಅಶುದ್ಧಾರ್ಥ ಭೇದಕ (vi) ಋಜುಸೂತ್ರನಯದಲ್ಲಿ-ಸೂಕ್ಷ್ಮ, ಸ್ಥೂಲ (ದೇವ ಸೇನಕೃತ ನಯಚಕ್ರ-ಕನ್ನಡ ರತ್ನಕರಂಡಕ, ೬೨೮)." (ಶ್ರೀವತ್ಸ. ೨೨೯): ಪ್ರಮಾಣನಯನಿಕ್ಷೇಪಾನುಯೋಗಸದಾದಿಗಳಿಂ ನಿಶ್ಚಯಿಸಿದ ಸಪ್ತತತ್ತ್ವಂಗಳೊಳಗೆ ಚೇತನಾಲಕ್ಷಣವಪ್ಪುದು ಜೀವತತ್ತ್ವಮಾಜೀವ ತತ್ತ್ವಮುಂ ಸಂಸಾರಿಮುಕ್ತಭೇದದಿಂ ದ್ವಿವಿಧಮಕ್ಕುಂ (ಆದಿಪು. ೧೦-೬೩ ವ): ನಯನಿಕ್ಷೇಪಪ್ರಮಾಣಂಗಳೊಳೆ ಪಡೆದನೈಕಾಂತಸಿದ್ಧಿಪ್ರತಿಜ್ಞಾಜಯಮಂ (ಚಂದ್ರಪು. ೧-೪); ಅಧಿಗಮೋಪಾಯಮಂ ನ್ಯಾಸಮೆಂಬುದು ಅದನಱಿವಭಿಪ್ರಾಯಮಂ ನಯಮೆಂಬುದು (ತಸೂವ್ಯ. ೩೦): ದ್ರವ್ಯಾರ್ಥಿಕಮುಂ ಪರ್ಯಾಯಾರ್ಥಿಕಮುಂ ನೈಗಮಮುಂ ಸಂಗ್ರಹಮುಂ ವ್ಯವಹಾರಮುಂ ಋಜುಸೂತ್ರಮುಂ ಶಬ್ದಮುಂ ಸಮಭಿರೂಢಮುಂ ಏವಂಭೂತನಯಮುಮೆಂದು ನಯಮೊಂಭತ್ತುಭೇದಮಕ್ಕುಂ (ಪಸಾರ. ೮೨); ಸಮಗ್ರ ಪದಾರ್ಥವನ್ನು ತಿಳಿಯುವುದು ಪ್ರಮಾಣ; ಏಕದೇಶವನ್ನು ತಿಳಿಯುವುದು ನಯ ಎಂದು ಪರಿಭಾಷೆ (ಹಿಂದಶಾ. ೬೩); ಪ್ರಮಾತೃವಿನ ಅಭಿಪ್ರಾಯಕ್ಕೆ ವಿಷಯವಾದ ಯಾವುದೊಂದೇ ಭಾವವನ್ನು ಅನುಲಕ್ಷಿಸಿ ವಿಷಯವನ್ನು ನಿರೂಪಿಸುವುದು ನಯವೆನಿಸುವುದು (ಜೈನಧ. IX. ಉಪೋದ್ಘಾತ); ವಸ್ತುವಿನ ಅಂಶವನ್ನು ಗ್ರಹಿಸುವ ಜ್ಞಾತೃವಿನ ಅಭಿಪ್ರಾಯವು ನಯವು. ವಸ್ತುವನ್ನು ನಾನಾ ಸ್ವಭಾವಗಳಿಂದ ವ್ಯಾವರ್ತನ ಮಾಡಿ ಒಂದು ಸ್ವಭಾವದಲ್ಲಿ ತಂದು ನಿಲ್ಲಿಸುವುದು (ನಯತೀತಿ ನಯಃ) ನಯವು (ಜೈನಧ. ೪). 'ನಯಮಾರ್ಗ' ಪರಾ.

ನಯದ ಘಟ್ಟ = ಸೌಜನ್ಯದ ಪುಂಜ; ವಿನಯದ ಕಣಿ; ಒಂದು ಬಿರುದು: ವನಧಿಪರೀತ ಧಾತ್ರಿ ನೆಱೆ ಬಣ್ಣಿಸುಗುಂ . . . ಗುಣ ರತ್ನರಾಶಿಯಂ ಮಾನಸಿಜರೂಪನಂ ನಯದ ಘಟ್ಟಿಯನಗ್ಗದ ಕಾಮಿಸೆಟ್ಟಿಯಂ (ಕಇ. IV, ೦-೪೭; 1204). ನಯಧೀರ = ಒಂದು ಬಿರುದು: ಶ್ರೀಕಲಿನೆ ಏಟಿಮ್ಯಾಧಿರಾಜ ಶ್ರೀಕೊಲ್ಲಿಯರಸರಾ ತತ್ಪುತ್ರಃ ನಿಜ ರಾಮ[ನುಂ] ನಯಧೀರನುಂ ಒಡನಿಟ್ಟು ತಿಷ್ಯೆರುರಾನ್ ಬ್ರಹ್ಮದೇಯ ಕೊಟ್ಟಮ್ (ಎಕ. VI(R), ಶ್ರೀರಂಗ. ೬೩-೦೫; ?). ನಯಮಾಗು = ತಕ್ಕುದಾಗು; ಉಚಿತವಾಗು: ಯೋಗ್ಯವಾಗು: ನಯವಾದು ನಯಮಾಗಿ ಕೂಡೆ ಪೊಳೆಯಲ್ ನಿಕ್ಷೇಪಮಾಕ್ಷೇಪಮಾರಯವಿಲ್ಲೆಂದೆನಿಸಲ್ (ಪುಷ್ಪಪು. ೦-೪). [ಸಂ.]

**ನಯಂಗುಂದು**, ನಯುಗುಂದಂ (ಕ್ರಿ). ಕಾಂತಿಗುಂದು; ಕಳೆಗುಂದು: ಬೇಸಗೆಯ ಬಿಸಿಲ ಸೋಂಕಿಂ ವಾಸಂತೀವಲ್ಲಿ ಸರಮುವಿರ್ದಂತಿರೆ ನಿನ್ನೀ ಸುಕುಮಾರಲತಾಶಿವಿಳಾಸಮಿದೇಕಾರಣಂ ನಯಂಗುಂದಿದುದೋ (ಮಲ್ಲಿಪು. ೪-೭). **ನಯುಗುಂದು**: ತನ್ನೆರೆಯನತಿಚಿಂತೆಯಿಂ ಜಲಧಿ ಮುಳುಗಿದನು ಯಿನ್ನೆಂದು ಕಾಣ್ಬೆನೋಯೆನುತಲತಿತಾಪದಿಂದ ನಯುಗುಂದಿ ತಲೆವಾಗಿ ಮುರುಟಿದವೊಲು ಕುಮುದಾಳಿ ಮುಗಿಯಲೊಡನೆ (ನವಮೋ. ೧೧-೪೦). [ ನಯ$_1$ + ಕುಂದು$_1$ ]

**ನಯಂಗೆಡು** (ಕ್ರಿ). ಅಂದಗೆಡು; ಕಳೆಗೆಡು: ಕಿಚ್ಚು ತಗುಳ್ದ ಮರದಂತೆ ನಯಂಗೆಟ್ಟು (ಧರ್ಮಾಮೃ. ೦-೧೬೮). [ ನಯ$_1$ + ಕೆಡು$_1$ ]

**ನಯಂಬಡೆ**, ನಯವಡೆ (ಕ್ರಿ). ೧. ಮೃದುತ್ವವನ್ನು ಪಡೆ; ನುಣುಪನ್ನು ತಳೆ: ಓದಿನೊಳ್ ಮಾಧುರ್ಯಂಬಡೆದು ಪಾಡಿನೊಳ್ ಪರಿವಡೆದು ನೋಡಿಯೊಳ್ ನಯಂಬಡೆದು (ಗಿರಿಕ. ೨-೧೦೫ ವ). ೨. ಆನಂದವನ್ನು ಪಡೆ; ಚೆಲುವನ್ನು ತಳೆ; ಸೊಗಸಾಗಿರು: ಮೊಗ ರಾಗಮಂ ಪಡೆಯೆ ನೋಟಮನಂಗನ ಬಿಲ್ಲ ಬಲ್ಮೆಯಂ ಪಡೆಯೆ ನಯಂ ನಯಂಬಡೆಯೆ (ಆದಿಪು. ೨-೪); ದಿಟ್ಟಿಗೆ ನಯಂಬಡೆದ ಪೊಚ್ಚಪೊಸ ದೇಸೆಯಿಂ (ಅಜಿಪು. ೪-೭ ರಗಳೆ); ಮೆಲ್ಲಿದುವಾಗಿ ನಯಂಬಡೆದಲ್ಲಿಯುಮಾ ತಾಮ್ರಭಾವಮೆಸೆದಿರೆ ಪಲವುಂ ಸಲ್ಲಕ್ಷಣಂಗಳಿಂದುತ್ಫುಲ್ಲಾಂಬುಜಮದನಯಡಿದಳಿರ್ ಸೊಗಯಿಸುಗುಂ (ಬಂಹರಿ ೭-೨೧); ಪಯಗತಿ ಹಸ್ತಂಗಳ ಚಾಲಯಮತಿಶಯಿ ಪಂಗಹಾರದುಲ್ಲಾಸಂ ದೃಷ್ಟಿಯ ಭೇದಂ ಕರಣಂಗಳ ನಯಂ ನಯಂಬಡೆಯೆ ನರ್ತಿಪಮರಿಯರಿಂದಂ (ಮುಹಾನೀ. ೦೫-೩೯). **ನಯವಡೆ**: ೨. ಪಳುಕಿಂದ ನಯವಡೆದ ನೆಲಗಟ್ಟು (ಸೋಮಚ. ೨-೦೯). ೩. ಸೌಮ್ಯತೆಯನ್ನು ಪಡೆ; ಶಾಂತವಾಗಿರು: ಕಂಗಳ ಕಡಲಿಡುವ ಕರುಣಾಮೃತದ ನಯವಡೆದ ನಯನಾಂಬುಜದ ಮೃಡನನು ಕಂಡು (ನಿಧಾಗ. ೪-೩-೨೭). [ ನಯ$_1$ + ಪಡೆ$_1$ ]

**ನಯಂಬೆಱು** (ಕ್ರಿ). ೧. = ನಯಂಬಡೆ ೨: ಪಗೆವನೊಳ್ ತಡೆಯದೆ ತಾಗುವೆವ್ಮ ರಥಸಮಂ ಕೇಳ್ದು ವಿಮಾನಾಜಿರದೊಳಿರ್ದ ನಿಮ್ಮ ಸೊಸೆ ಬಾಡಿದ ಸಸಿ ಮುಟ್ಟಿಯಂ ಪೆತ್ತಂತೆ ರಾಗಿಸಿ ನಯಂಬೆತ್ತಿಂತೆಂಬಳ್ (ಶಾಂತಿಪು. ೬-೩೩ ವ). ೨. ಇಂಪನ್ನು ತಳೆ; ಮಧುರವಾಗಿರು: ಎರಡುಂ ಬಂಚಂಗಳಿಂದಿಂಚರಮೊಸರ್ವಿನೆಗಂ ಕಿನ್ನರದ್ವಂದ್ವಮೊತ್ತುತ್ತಿರೆ ನಾನಾ ಭಂಗಿಯಿಂ ನಾರದತನಯೆ ನಯಂಬೆತ್ತುದೆಂಬಂತೆ ಪಾಡುತ್ತಿರೆ (ಕಾದಂಬ. ೧೬೮). [ ನಯ$_1$ + ಪೆಱು$_1$ ]

**ನಯಕಾರ** (ನಾ). ಪಳಗಿಸುವವನು; ತರಬೇತಿಗೊಳಿಸುವವನು; ಶಿಕ್ಷಕ: ತೂಮತ್ತಿರ್ವರ್ ನಯಕಾರರೀತನ ಗಜಪ್ರಾತಂಗಳಂ ತಿದುರ್ಪವರ್ (ಶಾಂತಿಪು. ೫-೧೦೩). [ ಸಂ. ]

**ನಯಕಾರಿಣಿ** (ನಾ). (ಔಚಿತ್ಯದಿಂದ) ಸುಖವನ್ನುಂಟುಮಾಡುವವಳು; (ಉಚಿತ ವರ್ತನೆಯಿಂದ) ಸಂತೋಷವನ್ನುಂಟುಮಾಡುವವಳು: ಎಣೆಯಿಲ್ಲೆನಿಸುವ ಸಲ್ಲಕ್ಷಣಯುತ ಕುಲಜನಿತವಿನುತವನಿತೆಯನಗಧಾರಿಣಿಯಂ ನಯನಮನೋಹಾರಿಣಿಯಂ ರುಗ್ಮಿಣಿಯನಖಿಳ ನಯಕಾರಿಣಿಯಂ ಕಂಡು (ಬಂಹರಿ. ೭-೨೦). [ ಸಂ. ನಯಕಾರಿಣೀ ]

**ನಯಕ್ರಮ** (ನಾ). ರಾಜ್ಯವ್ಯವಹಾರದ ನೀತಿ (?): ಪರಹಿತದೊಳ್ ನಯಕ್ರಮದೊಳಾಯಂತಿಯೊಳ್ ಸುಚರಿತ್ರದೊಳ್ ದಯಾಪರಿಣತಿಯೊಳ್ . . . ಸುಜನಾಗ್ರಣಿ ಶಾಂತಿವರ್ಮ . . . ನಿನಗಾರ್ ದೊರೆ (ಪುಷ್ಪಪು. ೧-೮೦). [ ನಯ$_2$ + ಕ್ರಮ ]

**ನಯುಗಂಬಳಿ** (ನಾ). ನುಣುಪಾದ ಕಂಬಳಿ; ನಯವಾದ ಉಣ್ಣೆಯ ಕಂಬಳಿ: ಅವರ ಮನೆಯ ಹಜಾರದಲ್ಲಿ ನಯುಗಂಬಳಿಯನ್ನು ಹಾಸಿದ್ದಾರೆ (ರೂಢಿ). [ ನಯ$_1$ + ಕಂಬಳಿ ]

**ನಯಗಾತಿ** (ನಾ). ಉಪಾಯಗಾತಿ ; ಚೂಪುಗಾರಿಕೆಯುಳ್ಳವಳು : ಆಕೆ ತುಂಬಾ ನಯಗಾತಿಯಾದ್ದರಿಂದ ಕೆಲಸವನ್ನು ಸುಲಭವಾಗಿ ಸಾಧಿಸಿದಳು (ರೂಢಿ). [ ನಯ$_1$ + – ಕಾತಿ$_2$ ]

**ನಯಗಾರ** 'ನಯಂಗಾಱ' ನೋ.

**ನಯಗಾರೆ** (ನಾ). ನುಣುಪಾಗಿ ಅರೆದ ಗಚ್ಚು,–ಗಾರೆ : ನಯಗಾರೆ : ಮೆತ್ತಿಗೆ ; ಅಂಟುವುಡಿ ; ಅಂಟುಲೇಪ (Compo. ಇಂಕನಿ). [ ನಯ$_1$ + ಗಾರೆ$_1$ ]

**ನಯಗಾಱ**, ನಯಂಗಾರ (ನಾ). ೧. ಸೌಜನ್ಯಶೀಲ ; ವಿನಯಶಾಲಿ : ಸತ್ತ್ರಗೆರ್ ಪಾದಪೂಜೆಯನೆಸಪ ನಯಗಾಱನ್ (ಅಕ್ಕಕಾ. ೪೦–೮೧೩). **ನಯಗಾರ** : ೨. ಉಪಾಯಗಾರ ; ಚೂಪುಗಾರಿಕೆಯುಳ್ಳವನು : ಆತ ಬಹಳ ನಯಗಾರ (ರೂಢಿ). [ ನಯ$_1$ + – ಕಾಱ ]

**ನಯಗುಂದು** 'ನಯಂಗುಂದು' ನೋ.

**ನಯಗುಣ** (ನಾ). ಒಳ್ಳೆಯ ಗುಣ ; ಯೋಗ್ಯವಾದ ಗುಣ : (+). [ ನಯ$_2$ + ಗುಣ ]

**ನಯಗೆಡು** (ಕ್ರಿ). ಔಚಿತ್ಯ ಕೆಡು ; ನೀತಿ ತಪ್ಪು : ದೃಷ್ಟಿಮೋಹನ ಮೂರ್ತಿಗಳು ನಯಗೆಟ್ಟ ನಾಲ್ವರು ಸಿದ್ಧರಮ್ಮನು ಬಿಟ್ಟ ಕಂಗಳಲೀಕ್ಷಿಸಿ ದರುಱ ಜಱೆದು ನುಡುವಂತೆ (ಸಿಭಾಗ. ೬–೩–೧೦) ; ಬಯಲು ರೂಪಿನ ವಸ್ತು ಜೀವವೆದಕೆ ಗುಣ ನಿಯತದಿಂದಱವು ಕಾಣ್ಕೆಗಳು ನಯಗೆಟ್ಟ ನರಸುರರಾದಿಯಾದಾಕಾರಚಯಗಳೆದಱ ಪರಿಯಾಯ (ಭರತ. ೬೭–೦೨೩). [ ನಯ$_2$ + ಕೆಡು$_1$ ]

**ನಯಚಿತ್ತ** (ನಾ). ಯೋಗ್ಯವಾದ ನಡತೆಯುಳ್ಳವನು; ವ್ಯವಹಾರವನ್ನು ಬಲ್ಲವನು. 'ನಯಚಿತ್ತೆ' ಪರಾ. [ ನಯ$_2$ + ಚಿತ್ತ ]

**ನಯಚಿತ್ತೆ** (ನಾ). ಯೋಗ್ಯವಾದ ನಡತೆಯುಳ್ಳವಳು ; ವ್ಯವಹಾರವನ್ನು ಬಲ್ಲವಳು ; ವ್ಯವಹಾರ ಚತುರೆ : ನಯಚಿತ್ತೆ ಚಿತ್ರಮತಿದೇವಿಯ ನಾ ವಿಜಯಾಪತೀಮಹಾದೇವಿ ಮನಃಪ್ರಿಯದಿಂದೆ ಬರಿಸಿ ಕೊರಲಪ್ಪಿಯೆ ಪಿರಿದುಂ ಮೆಱೆದಳಾತ್ಮಮಹಿಮೋನ್ನತಿಯಂ (ಸುಕುಮಾ. ೧೩–೦೪೦). [ ನಯಚಿತ್ತ + – ಎ$_2$ ]

**ನಯಜ್ಞ** (ನಾ). ರಾಜನೀತಿನಿಪುಣ : ಜಯಂಪಥುಗಾಣ್ಮನಾಗಿಯು ಮಸೌಮ್ಯನೆ . . . ಮಹಿತನಾಗಿಯುಮುದ್ರುತನೇನ ಯಜ್ಞನಾಗಿಯು ಮಕೃತಜ್ಞನೇ (ಶಾಂತಿಪು. ೧೧–೬೬) ; ದಶದಿಶೆಯೊಳಿಂದುಕರರುಚಿ ಯಶಮಂ ಪರೆಪಲ್ ಪರನೃಪರುಮನೊತ್ತರಿವಲ್ ಸಾಲ್ವುದು ನಯಜ್ಞಹಿತಮಿತ ವಚನಂ (ರಾಜಶೇ. ೧೩–೦೫) ; ಗೋಳಿಡುವ ದ್ರೌಪದಿಯ ಕುಡಿನೋಟದಲಿ ನೋಡಿ ಈ ನಯಜ್ಞನು ನೆಲದಲೇನನೋ ಬರೆಯುತಿಹನು (ಭಾಸನಾ. ೩೮). [ ಸಂ. ]

**ನಯಣ** (ನಾ). [ಜೈನ] ಗಿರಿಯ ತಪ್ಪಲಿನಲ್ಲಿ ವಿಶ್ರಾಂತಿಗಾಗಿ ಕಟ್ಟಿಸಿದ ಶಿಲಾಮಂಟಪ,–ಕಲ್ಲಿನ ಗೃಹ : ಬೊಪ್ಪದೇವನ ತಾಯಿ ಜಕ್ಕಮಂಬ್ವೆ ಮೋಕ್ಷತಿಳಕಮಂ ನೋಂತು ನೋಂಬರೆ ನಯಣದ ದೇವರ ಮಾಡಿಸಿ ಪ್ರತಿಷ್ಠೆಯ ಮಾಡಿಸಿದರು (ಎಕ. II, ೩೬೬–೪ ; 1120) ; ಶುಭಚಂದ್ರದೇವರ ಗುಡ್ಡಿ ಜಕ್ಕಿಮಬ್ವೆ ಕೆಱೆಯ ಕಟ್ಟಿಸಿ ನಯಣದ ದೇವರ ಮಾಡಿಸಿದರು (ಎಕ. II, ೩೬೮–೨ ; 1120) ; ತಳಿರ ನೆಲಗಟ್ಟು ಪೊಸದಳಿರ್ಗಳ ಕಂಬಂ ತಳಿರ ಭಿತ್ತಿ ತಳಿರ ಲೋವೆ ಕೆಂದಳಿರ್ಗಳ ಜಂತೆಗಳೊಪ್ಪಿರೆ ತಳಿರೋವರಿ ತಳಿರ ನಯಣ[ಪಾಠಾಂ. ತಳಿರಾವಳಿ ತಳಿರ ಸದನ]ಮೆನೆ ಕಣ್ಗೊಳಿಕುಂ (ಪಾರ್ಶ್ವಪು. ೯–೨೯) ; ಅನುನಾಸಿಕ ಯಕಾರಕ್ಕೆ–ಮೇಯಿಸಿದಂ, ನೋಯಿಸಿದಂ, ಮಯಣಂ, ನಯಣಂ, ಮಾಯಂ (ಶಮದ. ೧೬ ಪ್ರಯೋ) : ಪೂರ್ವ ನಯಣದ ಮೇಲೆ ಮತ್ತೊಂದು ನಯಣಮಂ ರಚಿಸಲ್ವೇಕೆಂದು ಪ್ರತಿಮೆ ಘಟಿಸಿದ ಕಾರಣಮಂಲ್ಲಿ ನೆಲಸಿತ್ತನೆ . . . ಕರಕಂಡುಮುಹಾರಾಜಂ ತನ್ನ ಪೆಸರೊಳಂ ತನ್ನ ತಾಯಿ ಪದ್ಮಾವತಿಯ ಪೆಸರೊಳಂ ತನ್ನಂ ಸಲಹಿದ ಬಾಲದೇವನ ಪೆಸರೊಳಂ ಮೂಱು ನಯಣಮಂ ಮಾಡಿಸಿ ಜಿನಪ್ರತಿಷ್ಠೆಗಳಂ ಮಾಡಿ (ಪುಣ್ಯಾಸ್ರ ೨–೬೯ ಪ). [<ಪ್ರಾ. ಲಯಣ, ಲೇಣ ; ಪಾಲಿ. ಲೇಣ./ಸಂ. ಲಯನ ]

**ನಯದಪ್ಪು** (ಕ್ರಿ). ನೀತಿಯನ್ನು ಮೀರು ; ಅನ್ಯಾಯ ಮಾಡು : ಮರಳಿ ಹೊಡೆ ಹಿಂಡಾಕಳನು ಗೋವರನು ಬಿಡು . . . ನಮ್ಮರಸ ನಯದಪ್ಪಿದನು ತುಱುಸೆಱೆವಿಡಿವರೇ ನೃಪರು (ಕುವ್ಯಾವಿ. ೭–೩೫). [ ನಯ$_2$ + ತಪ್ಪು$_1$ ]

**ನಯದಾಳ್** (ಕ್ರಿ). ಔಚಿತ್ಯವನ್ನು ಪಡೆ,–ಹೊಂದು : ಕ್ಷೋಣಿಗೆ ಹಾರವಾಲ್ತೆ ರಜತಾದ್ರಿ ತದದ್ರಿಗೆಱಂಕೆ ನೋಡುಭಶ್ರೇಣಿಗಳಂತವಂ ವಿನಮಿಯುಂ ನಮಿಯುಂ ನಯದಾಳ್ದರ್ (ಶಾಂತಿಪು. ೫–೧೪೯). [ ನಯ$_2$ + ತಾಳ್$_1$ ]

**ನಯದೃಷ್ಟಿ** (ನಾ). [ಜೈನ] ವಸ್ತುವಿನ ಒಂದು ಗುಣ, ಧರ್ಮಕ್ಕೆ ಪ್ರಾಧಾನ್ಯ ಕೊಟ್ಟು ಉಳಿದ ಗುಣ, ಧರ್ಮಗಳನ್ನು ಗೌಣವೆಂದು ಪರಿಗಣಿಸುವುದು : ಎಲ್ಲಿ ಒಂದು ಧರ್ಮಕ್ಕೆ ಪ್ರಾಧಾನ್ಯತೆ ಕೊಟ್ಟು, ಉಳಿದ ಧರ್ಮಗಳನ್ನು ಗೌಣವೆಂದು ತಿಳಿದುಕೊಳ್ಳಲಾಗುವುದೋ. ಅದಕ್ಕೆ ವಿಕಲಾದೇಶ–ಅಪೂರ್ಣದೃಷ್ಟಿಯೆಂದು ಹೇಳಲಾಗುವುದು. ಸಕಲಾದೇಶಕ್ಕೆ ಪ್ರಮಾಣದೃಷ್ಟಿಯೆಂದೂ ವಿಕಲಾದೇಶಕ್ಕೆ ನಯದೃಷ್ಟಿಯೆಂದೂ ಹೇಳಲಾಗಿದೆ (ಜೈನಪ. ೨೦೯). [ ನಯ$_2$ + ದೃಷ್ಟಿ ]

**ನಯನ** (ನಾ). ೧. ಕರೆದೊಯ್ಯುವುದು ; ಸಾಗಿಸುವುದು ; ತೆಗೆದುಕೊಂಡುಹೋಗುವುದು : ಪದಾರ್ಥ ಸಾಗಿಸುವಿಕೆಗೆ ನಯನ, ಅನಯನ ಎಂದೂ, ಇಂಗ್ಲಿಷಿನಲ್ಲಿ ಟ್ರಾನ್ಸ್‌ಪೋರ್ಟ್ ಎಂದೂ ಹೆಸರು (ಭೂವಿವ. ೨೦೦). ೨. ಚಲಿಸುವುದು ; ಗಮನ. ೩. ಕಣ್ಣು : "ದೃಕ್, ದೃಷ್ಟಿಃ, ನೇತ್ರಂ, ಲೋಚನಂ ಚಕ್ಷುಃ, ನಯನಂ, ಅಂಬಕಂ, ಈಕ್ಷಣಂ, ಅಕ್ಷಿ – ಈ ೯ ಕಣ್" (ಹಲಾಯು. ೮೬–೩೬೫) : ಅಳಕಾನನ ನಯನಂಗಳೊಳೆ ಪಳಿನೋತ್ಪಳವಿಕಾಶಮಂ ಗೆಲ್ದುದಱಿಂ ತಿಳಿಗೊಳನಂ ಪೋಲ್ತಿರ್ದುಂ ತಿಳಿಯದಿದೇನೆಂಬುದುಂ ತದನ್ವಯಮದಱೊಳ್ (ಕವಿರಾ. ೧–೮೮) : ಗಳಿತಶರಮಾಯ್ತು ಹಸ್ತಂ ಗಳಿತರಣೋತ್ಸಾಹಮಾಯ್ತು ಹೃದಯಂ ನಯನಂ ಗಳಿತಾಶ್ರುವಾಯ್ತು ಕೌರವಕುಲತಿಲಕಂಗಾ ಕುಮಾರನಂ ಕಾಣಲೊಡಂ (ಗದಾಯು. ೪–೬೦) ; ನಯನಂ ನೀಲಸರೋಜಮಂ ಸೆಣಸುಗುಂ (ಪಂರಾಮಾ. ೦–೯೫) ; ನಯನದಲ್ಲಿ ಮೂರುತಿ ತುಂಬಿ . . . ನಿಮ್ಮ ಚರಣ ಕಮಲದಲಾನು ತುಂಬಿ (ಬಸವ. ೪೯೨) ; ನಯನ ಬುದ್ಧಿಯೊಳಗೊ ಬುದ್ಧಿ ನಯನದೊಳಗೊ ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ (ಕನಕ. ೬೮–೧). ೪. ವಾಹನ. ೧, ೩, ೪ : ಜನನುತ ರಾಜಹಂಸನಯನಂ ಕಮಳಾವಸಥಂ ಕಳಾನಿಕೇತನನೆನಿಸಿರ್ದ ಪೆಂಪುಪಮಮತ್ತೊಡಮೇನೊ . . . ರಕ್ಷಮೊಂದದ ಸತ್ತ್ವನಿಧಾನನೆಂಬ ಪೆಂಪನುಗುಣಮಾದ ಲೋಕಹಿತನೊಲ್ದು ಚತುರ್ಮುಖನೀಗೆ ರಾಗಮಂ (ಜಗಪಿ. ೦–೨). ೫. ಅನ್ವಯ : ಮೂಲದಲ್ಲಿ 'ಆಕ್ಷೇಪಕ್ಕೆ' ಬೇರೆ ಉದಾಹರಣೆಯೇ ಇಲ್ಲವಾದ್ದರಿಂದ ಇದನ್ನೇ ಹೇಗಾದರೂ ನಯನ ಮಾಡುವ ಉದ್ದೇಶದಿಂದಲೋ ಎಂಬಂತೆ (ಧ್ವನ್ಯಾಲೋ. ೩೦ ಅಡಿಟಿ). ೬. ಪೋಷಿಸುವುದು ; ಪೋಷಣೆ : "ನಯಃ, ನಯಿಃ, ನಯುಃ, ನಾಯಃ, ನಯನಂ, ನಯನೀಯಂ, ಈ ೬ ಹೊರೆತಂ" (ಕಾಶಕ್ಕ. ೦೦೦). ೭. ಎರಡು ಎಂಬ ಸಂಖ್ಯೆಯ ಸಂಕೇತ : ಅಮರೇಜ್ಯಂ ಕೇಂದ್ರ ಲಾಭಷಷ್ಠಮಸಹಜಧನಸ್ಥಾನದೊಳ್ . . . ಧಾತ್ರೀಜನಿಂ ಕೇಂದ್ರನಿಧನ ನಯನಾಯಂಗಳೊಳ್ ಪೂಜ್ಯನಕ್ಕುಂ (ಜಾತಕ. ೧೧–೦೦); ಯಮ ನಯನ ಕರ್ಣ ಕರ ಪದ . . . ಸಮ ಉಭಯಂ ಬಾಹು ಕಿವಿಗಳೆರಡಱ ನಾಮಂ (ಪ್ರವಹಾ. ೯–೨) ; ಉಡುದೇವ ನಿಧಿ ನಯನೇಂದು ಸಂಖ್ಯೆಗಳೋವಿ ಶಕವರುಷಂಗಳಾಗಲು . . . ಬಸವಚರಿತೆ ಸಮಾಪ್ತವಾಯಿತ್ತು (ಬಸಪು. ೬೦–೯೨). [ ಸಂ.]

**ನಯನಕರ್ಣ** (ನಾ). ಕಣ್ಣೇ ಕಿವಿಯಾಗಿರುವುದು; ಹಾವು; ಸರ್ಪ: **ನಯನಕರ್ಣವಿಪಕ್ಷ** = ಹಾವುಗಳ ಹಗೆ; ನವಿಲು. ನಯನಕರ್ಣವಿಪಕ್ಷಲಕ್ಷಣ = ಧ್ವಜದಲ್ಲಿ ನವಿಲಿನ ಗುರುತನ್ನುಳ್ಳವನು; ಮಯೂರಧ್ವಜ; ಷಣ್ಮುಖ: ನಯನಕರ್ಣವಿಪಕ್ಷಲಕ್ಷಣ ಜಯತು ಸಿದ್ಧೇಶ (ಬಸಪು. ೨೦-೩೭). **ನಯನಕರ್ಣಾಶನ** = ೧. ನವಿಲು; ಮಯೂರ. ೨. ಗರುಡ. **ನಯನಕರ್ಣಾಶನವರಧ್ವಜ** = ಗರುಡಧ್ವಜ; ವಿಷ್ಣು: ನಯನಕರ್ಣಾಶನವರಧ್ವಜನಯನ ಭುವನೇಶಾರ್ಚಿತಕ್ರಮ (ಬಸಪು. ೨೦-೩೭). **ನಯನಕರ್ಣಾಹಾರ** = ೧. ನವಿಲು; ಮಯೂರ. ೨. ಗರುಡ. **ನಯನಕರ್ಣಾಹಾರವಾಹನ** = ಗರುಡವಾಹನ; ವಿಷ್ಣು. **ನಯನಕರ್ಣಾಹಾರವಾಹನನಯನ** = ಶಿವ: ನಯನಕರ್ಣಾಹಾರವಾಹನನಯನ ಭುವನೇಶಯಾನ ನಯವಾನಯನ ಭುವನತ್ರಯನಯನ ಕರ್ಣಾಕಲಿತಕರ್ಣ (ಬಸಪು. ೨೦-೩೭). [ಸಂ.]

**ನಯನಚ್ಛದ** (ನಾ). ಕಣ್ಣಿನ ರೆಪ್ಪೆ. [ಸಂ.]

**ನಯನಜಲ, ನಯನಜಳ** (ನಾ). ಕಣ್ಣೀರು; ಕಂಬನಿ; ಬಾಷ್ಪ: ಬಳೆದ ಸುತಶೋಕದಿಂದಿಳೆಗೆ ಸುರಿಗುವ ಸುರಿಯುತಾ ಜಯದ್ರಥನ ಚಿತಾನಲನಿಂದವೊಗೆದ ಪೊಗೆಗಳ್ ಕೊಳೆ ಸುರಿವೊಡೆ ಸುರಿವುವನ್ನ ನಯನಜಲಂಗಳ್ (ಪಂಪಭಾ. ೧೧-೧೧೯); ಕರುಣಂ ಕೈವಿಗೆ . . . ಮಸ್ಸು ಮಿಕ್ಕು ನೆಯನಜಲಂಗಳ್ ಸುರಿದು (ಸುಕುಮಾ ೩-೩): ಪರಮಸುಖದಿರಿ ತನುವ ಮಱೆದನು ನಯನಜಲವೊಗಲು (ಕುಮಾ.ಊ. ೮-೩). **ನಯನಜಳ**: "ಅಶ್ರು, ಬಾ(ಷ್ಪಂ)ರ್ಪಂ, ರೋದನಂ, ನಯನಜಳಂ, ಅಸ್ರಂ – ಈ ೫ ಕಣ್ಣ ನೀರ್" (ಹಲಾಯು. ೩೬-೩೬೩). [ನಯನ+ಜಲ]

**ನಯನಜಳ** 'ನಯನಜಲ' ನೋ.

**ನಯನತ್ರಯ** (ನಾ). ೧. ಮೂರು ಕಣ್ಣುಗಳು: ಲೋಕವಿಸ್ತರಣ ಪ್ರಭಾವನಯನತ್ರಯಂ ದೇವ ಗಂಗಾಧರಂ ಬಿಡದೆ ಸಲಹುಗೆ ನಮ್ಮನು (ಕೃಮಿಧಾ. ೦-೨). ೨. ಮುಕ್ಕಣ್ಣ; ಶಿವ: ಭುವನೇಶಯುವನಭುವನನಯನ ನಯನತ್ರಯ ನಯನಕರ್ಣಾಕಲಿತಕರ್ಣ (ಬಸಪು. ೩೧-೫೦). ೩. (?): ನಯನತ್ರಯಯುತರತ್ನತ್ರಯನಿಧಿ ಲೋಕತ್ರಯಂ ಸಲೋಕಿತ ತಾಳತ್ರಯ ಪಾಂಡುರಾತಪತ್ರತ್ರಯಮಿವು ನಿನಗಲ್ಲದಜಿತ ಪೆಱರ್ಗೊಪ್ಪುಗುಮೆ (ಅಜಿಪು. ೮-೯). [ನಯನ + ತ್ರಯ]

**ನಯನತ್ರಿಭಾಗ** (ನಾ). ಕಣ್ಣಿನ ಕೊನೆ; ಕಡೆಗಣ್ಣು; ಕೇಕರ: ಕುಸುಮಶರಾಸ್ತ್ರವೃಷ್ಟಿರಜದಿಂ ಪೊರೆದಂತಿರೆ ಬಾಷ್ಪವಾರಿಗಳ್ ಪಸರಿಸೆ ರಾಗವಗ್ಗಲಿಸೆ ಚಾರುಚಲನ್ನಯನತ್ರಿಭಾಗದಿಂ ಕುಸಿಕುಸಿದೆನ್ನ ನೀಕ್ಷಿಸುವಳ್ (ಅದಿಪು. ೮೫); ಜೀವಿತೇಶನಿಮ್ಮಿಗೆ ಕೆನ್ನನಾಗ್ರಹಿಸೆ ಸೊಲ್ಲಿಸಲೊಲ್ಲದೆ ನಾಣ್ಚಿ ನೋಡಿದಳ್ ಶಾಮ್ಯನದನ್ನಕಪ್ಪ ಕಳಭಾಷಿಣಿಯಂ ನಯನತ್ರಿಭಾಗದಿಂ (ಚಂದ್ರಪ್ರ. ೬-೬೬); ನಯನತ್ರಿಭಾಗದಿಂದೆನ್ನಯ ಮೊಗಮಂ ನೋಡಿ ಮಗುಟ್ದು ಮಱವಟ್ಟಂತಾಕ್ರಿಯೆಯಿಲ್ಲದ ಲತೆ ತೆಂಗಾಳಿಯೊಳಲ್ಲಾಡುವವೊಲಾಕೆ ಕಣ್ಗೆಸೆದಿರ್ದಳ್ (ವಡ್ಡಾ. ೯-೯೦). [ನಯನ + ತ್ರಿಭಾಗ]

**ನಯನಪಕ್ಷ್ಮ** (ನಾ). ಕಣ್ಣಿನ ರೆಪ್ಪೆ; ಎವೆ: ವಿಷದ ಪೂತನಿ ನಯನಪಕ್ಷ್ಮದೊಳಗಿರಲಿ? (ಮಂಕುಳ. ೯೧೬). [ನಯನ + ಪಕ್ಷ್ಮ]

**ನಯನಪಾವಕ** (ನಾ). ಕಣ್ಣಿನ ಬೆಂಕಿ; ನೇತ್ರಾಗ್ನಿ: ಹರಿ ಸರೋಜಾಸನರು ಶೂಲಿಯ ಹೊರೆಗೆ ಬಂದರು ದೇವದೈತ್ಯರ ಪುರವಧರ್ವಾದ ಬೇಟೆಯಾದುದು ನಯನಪಾವಕನ ಕರೆದು ಬೆಸಸುವಡದು ಸಮಯ . . . ಎಂದರು ಪಾರ್ವತೀವತಿಗೆ (ಕುಮಾ.ಕ. ೭-೩೯). [ನಯನ + ಪಾವಕ]

**ನಯನಪುತ್ರಿಕೆ** (ನಾ). ಕಣ್ಣಿನ ಗೊಂಬೆ; ಪಾಪೆ: ಜಾನಕಿ . . . ಧಾರಾನಿಳಯ ಜಲಯಂತ್ರಪುತ್ರಿಕೆಯಂತೆ ನಯನಪುತ್ರಿಕೆಗೆ ಮಣಿಭೂಷಣವೆನಿಸಿ (ಪಂರಾಮಾ. ೫-೯೦ ವ). [ನಯನ + ಪುತ್ರಿಕೆ]

**ನಯನಪ್ರಭೆ** (ನಾ). ಕಣ್ಣಿನ ಕಾಂತಿ: ನಯನಪ್ರಭೋಜ್ವಲ ಜ್ಯೋತ್ಸ್ನೆಯನಾದಂ ಕಣ್ಣೆ ಮುನ್ನ ಧವಳಿಸಿ ಭೂಷಾವಿಚಯಮಣಿಗಣನಿಚಯದ ತಾಂ ಬಯಲಂ ಚಿತ್ರಿಸಿದಳೆಯ್ದೆ ಗವಮನೋತ್ಸವದೊಳ್ (ಚಂದ್ರಪ್ರ. ೩-೦೦೫). [ನಯನ + ಪ್ರಭೆ]

**ನಯನಮಧ್ಯ** (ನಾ). ಕಣ್ಣಿನ ಕರಿಯ ಗುಡ್ಡೆ,–ಆಲಿ: "ಕನೀನಿಕಾ, ನಯನಮಧ್ಯಂ, ತಾರಾ – ಈ ೩ ಕರಿಯಾಲಿ" (ಹಲಾಯು. ೬೬-೩೬೬). [ನಯನ + ಮಧ್ಯ]

**ನಯನಮನೋಹರ** (ಗು). ೧. ಚೆಲುವಾದ; ಸುಂದರವಾದ; ನೋಟಕ್ಕೆ ಆಪ್ಯಾಯಮಾನವಾದ: ಹಾ ನಯನಮನೋಹರ ರೂಪರಿರಾ ಹಾ ನರಪಕುಲೋಜ್ಜ್ವಲದೀಪರಿರಾ (ಜೀಚಸಂ. ೨೪-೪೫ ೮೧೪). (ನಾ). ೨. ಚೆಲುವಾದುದು; ಸುಂದರವಾದುದು: ನಯನಮನೋಹರಂ ಮನುಜನಿರ್ಮಿತವಲ್ಲದು . . . ಎಂಬ ನಿಶ್ಚಯಮನೊಡರ್ಚೆ ವಿಸ್ಮಯರಸಾಕರಮಾ ಕರುಮಾಡವೊಪ್ಪುಗುಂ (ಮಲ್ಲಿಪು. ೨-೬೫); ಶಾಂತವಾಗಿರುವ ತನುವಿನಿಂದ ನಯನಮನೋಹರವಾಗಿರುವ ರುದ್ರಮೂರ್ತಿ (ಮುಹಾಂ. ೩೦). [ಸಂ.]

**ನಯನಮನೋಹರಿ** (ನಾ). ಅಂದವಾಗಿರುವವಳು; ನೋಟಕ್ಕೆ ಆಪ್ಯಾಯಮಾನವಾಗಿರುವವಳು: ನಯನಮನೋಹರಿ ಹೃದಯಾಶ್ರಯನ ಸತೀ ಸದೃಶಿ ನೃಪವಧೂಮುಖತಿಳಕಂ ಪ್ರಿಯಕಾರಿಣಿಯಾ ಭೂಪ ಪ್ರಿಯೆಯವರ್ಗಳ್ ಸ್ವಪ್ನದಿನಾಳುತಿರೆ ತತ್ಪುರಮಂ (ಮುಹಾಸೇ. ೨-೩೩). [ಸಂ. ನಯನಮನೋಹರೀ]

**ನಯನಮರೀಚಿ** (ನಾ). ಕಣ್ಣಿನ ಕಿರಣ,–ಕಾಂತಿ: ನನೆಗಣೆಯಾನ ಕಣೆಗಳವೊಲು ಗೋಪತಂಗನೆಯರ ನಯನಮರೀಚಿ ತನುವಿನೊಳಗೆ ಪಸರಿಸಲಾ ತಾಪಸ ಮನವನಿತ್ತನು ಮನಸಿಜಗೆ (ಅಂಜನ. ೫-೭೩); ನಯನಮರೀಚಿಯುಮಂ ಕಬರಿಕಾಂತಿಯುಮಿರ್ದಸಿಗಿಂದ್ರನೀಲಮಾಲೆಯ ವರಮೌಕ್ತಿಕಾವಳಿಯ ರಜ್ಜುಗಳಂತಿರೆ (ಸೂಕ್ತಿಸು. ೮-೩೩೩); ನಯನಮರೀಚಿಗಳ್ ಪುದಿಯೆ ನೀಲದ ಮಾಲೆಗಳಂತೆ . . . ಅಚ್ಚಜಾದಿಯ ಪೊಸಮಾಲೆಗಳ್ಪಿಡಿದು ಮಾಱುವ ನೀಱೆಯನಲ್ಲಿ ಮಾಲೆಗಾರ್ತಿಯೋ ಮಣಿಗಾರ್ತಿಯೋ ಎನುತೆ ನೋಟ್ಪುದು ವಿಸ್ಮಯಭಾಜನಂ ಜನಂ (ಧರ್ಮನಾ. ೩-೭೯). [ನಯನ + ಮರೀಚಿ]

**ನಯನಯುಗ** (ನಾ). ಕಣ್ಣುಗಳ ಜೊತೆ; ಎರಡು ಕಣ್ಣುಗಳು: ನಯನಯುಗಂ ನಾಸಾಗ್ರಪ್ರಯುಕ್ತಮವ್ಯಕ್ತವರ್ತನಂ ಪ್ರಾಣಾಪಾನಾಯುಗಂ (ಧರ್ಮಪು. ೧೫-೬೨); ನಯನಯುಗಂ ತಳತ್ತಳಿಸೆ ದಂತಮರೀಚಿ ಲಸತ್ಕಪೋಳಭಿತ್ತಿಯನವಳಂಬಿಸಲ್ . . . ರಂಜಿಸಿದಂ ನಿಷಧಾಧಿನಾಯಕಂ (ನೇಪಚಂ. ೦೫೯); ನಯನಯುಗದಿಂ ಜಗವ ಪೊರೆದು ನಿಟಿಲಾಕ್ಷಿಯಿಂ ಲಯವಡಿಸುವುದದೇನು ಶಿವಯೋಗಿಗಳಿರೆ? (ಮುಕ್ತಾಳ. ೬೧೩). [ನಯನ + ಯುಗ]

**ನಯನಯುಗಳ** (ನಾ). = ನಯನಯುಗ: ಅಳಿ ನಳಿನೋತ್ಪಳರುಚಿಗಳ ನಳಕಾನನ ನಯನಯುಗಳದಿಂ ಗೆಲ್ದಿರ್ದುಂ ಕೊಳದೊಳಗೇನಂ ನೋಟ್ಪೆಗ ವಿಳಾಸಿನೀ ನಿನ್ನವೊಲಲದೇನತಿಶಯಮೋ (ಶಬಿಂ. ೦-೫೭). [ನಯನ + ಯುಗಳ (= ಯುಗಲ)]

**ನಯನರೋಗ** (ನಾ). ಕಣ್ಣಿನ ಬೇನೆ,–ರೋಗ: ಹಿತ್ತಾಳೆಯೊಳು ನಯನರೋಗದೊಳು ಬಾಣಲೆಯೊಳು . . . ವಿಮಾನದೊಳು ಪುಷ್ಪಕಮೆನಿಕ್ಕು (ಮಂಗರಾ. ೦೫೩-೬೩); ನಯನರೋಗದೊಳು ಭೇದನದೊಳರಿಯೆಂಬ ಶಬ್ದಂ (ಶಬ್ದಮಂ. ೦೦೫). [ನಯನ + ರೋಗ]

**ನಯನರೋಮ** (ನಾ). = ನಯನಪಕ್ಷ್ಮ: "ನಯನರೋಮಂ ಪಕ್ಷ್ಮಂ" (ವಸ್ತುಕೋ. ೭೦-೨೨). [ನಯನ + ರೋಮ].

**ನಯನವಾರಿ** (ನಾ). = ನಯನಜಲ : ಗಳಿಯಿಸುತಿರೆ ಕಬಂಧರಂ ಗಳಿಯಿಸುತಿರೆ ನಯನವಾರಿ ನಿನ್ನಾನನದಿಂ (ಗದಾಯು. ೧-೬೩) ; ಇವರುಬ್ಬರಿಸಿದರು ಹರುಷದಲಿ ನೆನೆದರು ನಯನವಾರಿಯಲಿ (ಕುವ್ಯಾ.ಆ. ೨೦-೨೦) ; ಕೃಷ್ಣನ ವರಸುಧಾಪಾಯವಚನವನು ಪಂಕರುಹಮುಖಿ ಕೇಳುತ್ತ ನನೆದಳು ನಯನವಾರಿಯಲಿ (ಕುವ್ಯಾ.ಅ. ೮-೨೪). [ ನಯನ + ವಾರಿ₂ ]

**ನಯನವಿಹ್ವಲ** (ನಾ). ಕಂಗೆಟ್ಟವನು ; ದಿಗ್ಭ್ರಮೆಗೊಳಗಾದವನು : ನಯನದ್ವಯದಿಂ ತವೆ ನೋಡಲ್ ನೆಱೆಯದೆ ನಯನವಿಹ್ವಲಂ ಹರಿ ಸಹಸ್ರಲೋಚನನಾದಂ (ಶಾಂತಿಪು. ೧೦-೬೦). [ ನಯನ + ವಿಹ್ವಲ ]

**ನಯನವೀಧಿ** (ನಾ). ಕಣ್ಣಿನ ನೋಟದ ಪರಿಧಿ,-ಹರವು: ಸರಸಿಜದ ಮಧು ಮಧುಕರನನನುಕರಿಸಿದೊಡೆ ಚಂದ್ರಿಕೆ ಚಕೋರನ ವರಿಸಿದರೆ ನಿಧಿ ಲಕ್ಷ್ಮಿ ಸುಳಿದರೆ ನಯನವೀಧಿಯಲಿ ಗರುವೆಯರು ಮೇಲಿಕ್ಕಿ ಪುರುಷನ ನೆಱಿಸಿದರೆ ದಾಱುವರೆ ಸುಡಲಾ ಸರಸಿಜವನಾ ಚಂದ್ರಿಕೆಯನಾ ನಿಧಿಯನಾ ವಧುವ (ಕುವ್ಯಾ.ಆ. ೮-೩೩). [ ನಯನ + ವೀಧಿ (<ಬೀದಿ) ]

**ನಯನಶಿಖಿ** (ನಾ). ಕಣ್ಣಿನ ಬೆಂಕಿ : ನಿಟಿಲನೇತ್ರನ ನಯನಶಿಖಿಯುಬ್ಬಟೆಗೆ ಸವು ಜೋಡಿಸಿತು ಕರ್ಣನ ಚಟುಳವಿಕ್ರಮಪವನವಂಗಕಱಾಣಶಿಖಿನಿಕರ (ಕುವ್ಯಾ.ಕ. ೧೩-೩೯). [ ನಯನ + ಶಿಖಿ ]

**ನಯನಶ್ರವಣ** (ನಾ). = ನಯನಕರ್ಣ. 'ನಯನಶ್ರವಣವೇಣಿ' ಪರಾ. [ ನಯನ + ಶ್ರವಣ₂ ]

**ನಯನಶ್ರವಣವೇಣಿ** (ನಾ). ಹಾವಿನಂಥ ಜಡೆಯುಳ್ಳವಳು ; ನಾಗವೇಣಿ : ಭಯಪಾಪತಾಪದೂರೆ ಜಯಜಯ ಗುಣಸಾರೆ . . . ನಯನಶ್ರವಣವೇಣಿ (ಶೀರ್ಘಮ. ೧೧). [ ನಯನಶ್ರವಣ + ವೇಣಿ ]

**ನಯನಸಂಪ್ರೀತಿ** (ನಾ). ನೋಟ ಮಾತ್ರದಿಂದಲೇ ಉಂಟಾಗುವ ಪ್ರೀತಿ ; ಚಕ್ಷೂರಾಗ : ನಸುನಗುತ ಕಡೆಗಣ್ಣಲಂಗನೆಯೆಸೆವ ಮುಖವನು ನೋಳ್ಪನು . . . ಶಶಿವದನೆ ಯತಿಯಲಿ ಕಟಾಕ್ಷವ ಹಸರಿಸಿದಳಿಂತಿಬ್ಬರಿಗೆ ಮನ ಬೆಸುಗೆವಡೆದುದು ನಯನಸಂಪ್ರೀತಿಯಲಿ ತಮ್ಮೊಳಗೆ (ನಿಧಾಗ. ೦೦-೬೨-೨೩). [ ನಯನ + ಸಂಪ್ರೀತಿ ]

**ನಯನಸಲಿಲ** (ನಾ). = ನಯನಜಲ : ಪ್ರೇಮಪುಳಕದ ನಯನಸಲಿಲದ ರೋಮಹರ್ಷದ ಸತ್ವಭಾವದ ಭೂಮಿಪತಿ ಮೈಯಿಕ್ಕಿದನು ಮುನಿವರನ ಚರಣದಲಿ (ಕುವ್ಯಾ.ಆ. ೪-೮). [ ನಯನ + ಸಲಿಲ ]

**ನಯನಸುಂದರತೆ** (ನಾ). ನೋಟಕ್ಕೆ ಅಂದವಾಗಿರುವಿಕೆ ; ನಯನಮನೋಹರತೆ: ಆಲೋಕಪ್ರಿಯಜನನ ನಯನಸುಂದರತೆಯುಂ (ಶಾಂತಿಪು. ೧೨-೦೯ ವ). [ ಸಂ. ನಯನಸುಂದರತಾ ]

**ನಯನಾಂಚಲ, ನಯನಾಂಚಳ** (ನಾ). ಕಣ್ಣಿನ ಕೊನೆ ; ಕಡೆಗಣ್ಣು ; ಕಟಾಕ್ಷ : ತಮ್ಮ ನಯನಾಂಚಲಚಂದ್ರಿಕೆಯುಂ ನವೇಂದುಕಾಂತದ ಗಿಳಿಯಂತೆ ಕೌತುಕಮನಾ ಕ್ಷಣದೊಳ್ ಕುಡೆ (ಪಂಪಾಮಾ. ೧-೦೧೮) ; ವಲ್ಲಭವಾಜಿವಾರಣಾಂಗಳ ನಯನಾಂಚಲಂಗಳಿಂ ಗಳಿತಾಶ್ರುಬಿಂದುಗಳಿನಾನಂದಾಶ್ರುಬಿಂದುಗಳಿಂದುಂ (ಮಹಾನೇ. ೦೩-೪೪ ವ) ; ನಲಿಯುತೆ ನಯನಾಂಚಲವ ಕವಿಸಿ ನಿನಗೊಲಿವನು ಸಂದೆಗವಿಲ್ಲ (ಕನಾ೯ಕ. ೨೨೬). ನಯನಾಂಚಳ : ತಳರ್ವೆಳವೆಣ್ಗಳ ನಯನಾಂಚಳರುಚಿಚಂದ್ರಿಕೆಯನಾಂತು . . . ಅಲ್ಲಿಯ ಸೋಮಸೂರ್ಯವೀಧಿಗಳೆಸಗುಂ (ರಾಜಶೇ. ೨-೯೦) ; ಸರಾಗನಯನಾಂಚಳಮೊಪ್ಪಿರೆ . . . ಎಳೆಯಳೊಱಲ್ಬಂದು ಮಣಿವಾಗಿಲೋಳೀಕ್ಷಿಸಿದಳ್ ಮಹೀಶನಂ (ರಾಜಶೇ. ೭-೯) ; ಸೊಂಪೊದವಿದೊಡಲ ರಾಗನಯನಾಂಚಳಮೊಪ್ಪಿರೆ ನೋಡಿದಳ್ ಮನೋಮುದದಿನರಾತಿಭೂಪಚಯಮೌಳಿವಿರಾಜಿತಪಾದಪದ್ಮನಂ (ಯಾದಚಂ. ೩-೭). [ ನಯನ + ಅಂಚಲ ]

**ನಯನಾಂಚಳ** 'ನಯನಾಂಚಲ' ನೋ.

**ನಯನಾಂಜನ** (ನಾ). ೧. ಕಣ್ಣಿಗೆ ಲೇಪಿಸುವ ಕಾಡಿಗೆ ; ಕಣ್ಕಪ್ಪು : ನಯನಾಂಜನಮಂಜನಮೆನೆ ನಯದಿಂ ಮುಸುಕಿದ ದುಕೂಲಮಮರ್ದಿರೆ ಮೊಗದೊಳ್ ಪ್ರಿಯನಿಧಿಯಂ ಕೃತ್ಯಕಾಶೇಶಯಲೋಚನೆ ನೋಡುವಂತೆ ಸೊಗಯಿಸೆ (ಲೀಲಾವ. ೭-೬೮) ; ಖಳರ ಹೃದಯದ ಗರುಡಿ ಘೂಕಾವಳಿಯ ನಯನಾಂಜನ . . . ಅದನೇವೊಗಳುವೆನು ಮಸಗಿತು ತಮಸ್ತೋಮ (ಕುವ್ಯಾ.ದ್ರೋ. ೦೩-೨೮). ೨. ನಿಧಿ, ನಿಕ್ಷೇಪಗಳನ್ನು ಕಾಣುವ ಶಕ್ತಿಯನ್ನು ಕೊಡುವುದೆಂದು ನಂಬಲಾದ ಅಂಜನ ; ಸಿದ್ಧಾಂಜನ. [ ನಯನ + ಅಂಜನ ]

**ನಯನಾಂಬು** (ನಾ). ಕಣ್ಣೀರು ; ಕಂಬನಿ : ಪೊಳೆವಲರ್ಗಂಗಳಿಂ ಪೊಳೆವ ಬೆಳ್ಪು ರಸಾತ್ಮಕಮಾಗಿ ಗಂಡಮಂಡಳತಳದಿಂದಮಂದಿಟ್ಟಿಯುತಿರ್ದಾದೆನಲ್ ನಯನಾಂಬುಲೋಚನಂಗಳಿನಿರದುಣ್ಮೆ (ಕಾದಂಪೂ. ೬೯೯) ; ಸುರಿವ ನಯನಾಂಬುಗಳ ಮೂಗಿನ ಬೆರಳ ತೂಗುವ ಮಕುಟದವನೀಶ್ವರನು ಮೌನದೊಳಿದ್ದನೊಂದು ವಿಗಳಿಗೆ ಮಾತ್ರದಲಿ (ಕುವ್ಯಾ.ಸ. ೦೨-೩೩). [ ನಯನ + ಅಂಬು₁ ]

**ನಯನಾಂಶು** (ನಾ). = ನಯನಮರೀಚಿ : ಶಿಶುಗೆ ನಯನಾಂಶು ದುಗ್ಧಪ್ರಸರದೆ ಜನ್ಮಾಭಿಷೇಕಮಂ ಮುನ್ನೊಂದಂ ಪೊಸೆಯಿಸಿ . . . ಇಂದ್ರಾಣಿ ನೆಗಟಿದಳ್ ಕಂದಳದಿಂ (ಚಂದ್ರಪು. ೧೨-೩೫) ; ಪೊಣ್ಮೆ ನಯನಾಂಶು ಗಗನಕೆ ಕಟಿಲ್ಲತೆಯ ಪರ್ವಂ ಪಡೆಯಲು ಬರುತಿರ್ದರಖಿಳಸ್ತ್ರೀಯರು (ಶಾಂತಿ. ೩-೧೨). [ ನಯನ + ಅಂಶು ]

**ನಯನಾಕರ್ಷಣವಿದ್ಯೆ** (ನಾ). (ಬೇರೆಯವರ) ನೋಟವನ್ನು ತನ್ನ ಕಡೆಗೆ ಸೆಳೆಯುವ ಕಲೆ,-ಸೆಳೆಯುವಿಕೆ : ನಯನಾಕರ್ಷಣವಿದ್ಯೆ ಗಂಡುವರಿಜಂ ಕೈಕೊಂಡುದೋ . . . ಪೇಟಿಂಬಿನಂ . . . ಪೊಕ್ಕಂ ಸಭಾಸದ್ಮಮಂ (ಪಂಪಾಮಾ. ೩-೩೮). [ ನಯನ + ಆಕರ್ಷಣ + ವಿದ್ಯೆ ]

**ನಯನಾಗ್ನಿ** (ನಾ). (ಶಿವನ) ಕಣ್ಣಿನ ಬೆಂಕಿ : ಕಂಡನಾ ಸಮಯದೊಳ್ ಕಮಲಜಂ ಹರಕರದೆ ಖಂಡಿಸಿದ ತನ್ನುತ್ತಮಾಂಗಮಂ ರುಧಿರಜಲಮುಂಡು ಪೊಳಿಸಿದ ನಯನಾಗ್ನಿಯಂ ಪೊಗಳುತಿಹ ಸಕಲವೃಂದಾರಕರನು (ಚಿಬಪು. ೧೮-೦೬). [ ನಯನ + ಅಗ್ನಿ ]

**ನಯನಾತಿಥಿ** (ನಾ). ನೋಟಕ್ಕೆ ವಸ್ತುವಾದ ವ್ಯಕ್ತಿ ; ಕಣ್ಣಿಗೆ ಕಾಣಿಸುವ ವ್ಯಕ್ತಿ : ಅಂತಾ ಮಹಾತಿಥಿ ನಯನಾತಿಥಿಯಾಗಿರ್ಪುದುಂ (ಪಂಪಾಮಾ. ೨-೧೯ ವ) ; ಬಟ್ಟಿಗರಱಿವಟ್ಟಗೆಯಾ ಬಾಲೆಯರ ನಯನಾತಿಥಿಗಳಾದರ್ (ರಾಮಾಶ್ವ. ೩೨-೧೧). [ ನಯನ + ಅತಿಥಿ ]

**ನಯನಾನಂದ** (ಗು). ೧. ಕಣ್ಣಿಗೆ ಸುಖಕರವಾದ ; ಅಂದವಾದ ; ಮನೋಹರವಾದ: ನಯನಾನಂದವಿಳಾಸರೂಪನಮರೀನೀಲಾಲಕಾಲೀಢಪಾದಯುಗಂ ಅದೇಂ ನಲಿದನೋ (ಆದಿಪು. ೩-೭೧) ; ನಯನಾನಂದಮೃಗಾಂಕಬಿಂಬಮುದಯಂಗೆಯ್ವರ್ಕಜಂಬಂ . . . ಪ್ರಿಯಗಳ್ಪಂಗೊಸೆದೀಗೆ ಮಂಗಳಮಹಾಶ್ರೀಯಂ ಜಯಶ್ರೀಯುಮಂ (ಪಂಪಭಾ. ೦೯-೩೩). ೨. ಕಣ್ಣಿಗೆ ಉಂಟಾಗುವ ಆನಂದ ; ನೋಟದ ಸುಖ : ನಯನಾನಂದಮನುಂಟುಮಾಡಿ ಮಧುವಿಂ ಕೈವಂದುದು . . . ಉದ್ಯಾನಮಾಲೆಯನಾವಂ ರಸಚಿತ್ರಮಾಗೆ ಬರೆವಂ (ಮಲ್ಲಿಪು. ೩-೯೪) ; ನಯನಾನಂದಮನಿತ್ತುದಿಂದ್ರನಟನಪ್ರಾಗಲ್ಭ್ಯದಿಂ . . . ದೇವಕಾಂತೆಯರಲ್ಲಾಡದೆ ಸಂದ ಸೆಳ್ಪುಗುರ ಸೂಚೀನರ್ತನಂ (ಅನಂಪು. ೩-೯೭). [ ನಯನ + ಆನಂದ ]

**ನಯನಾನಂದಕರ** (ನಾ). ಕಣ್ಣಿಗೆ ಸಂತೋಷವನ್ನುಂಟುಮಾಡುವುದು ; ಅಂದವಾದುದು ; ಸೊಗಸಾಗಿರುವುದು: ನಯನಾನಂದಕರಂ ಸುಖಚಯಸಹಿತಂ . . . ಸಜ್ಜನಚಿತ್ತಪ್ರಿಯಮೆನಲೆಸೆದಿರ್ಪುದಧಿಪಮೆನೆ ಕುಸುಮಪುರಂ (ದಶಕು. ೧-೨೪). [ ಸಂ. ]

**ನಯನಾನಂದನ** (ಗು). ಕಣ್ಣಿಗೆ ಸುಖಕರವಾದ, -ಆಪ್ಯಾಯನವಾದ ; ಅಂದವಾದ : ನಯನಾನಂದನದಾಮಮಂ ಹಿಮಕರಾಂಶೂದ್ದಾಮಮಂ ಕನ್ನೆ ತನ್ನಯ ಕೆಯ್ಯೊಳ್ ಕುಡೆ (ಶಾಂತಿಪು. ೩-೧೬೦). [ನಯನ+ಆನಂದನ]

**ನಯನಾಭಿರಾಮ** (ಗು). (೧). ಕಣ್ಣಿಗೆ ಸುಂದರವಾದ ; ಮನೋಹರವಾದ : ನಯನಾಭಿರಾಮದೇಹಂ . . . ನಯವಿನಯನಿತ್ಯಶೀಲಂ ಜಯಕಾಂತಾಕಾಂತನಲ್ತೆ ನಳಭೂಕಾಂತಂ (ನಳಚಂ. ೧೫೨). (ನಾ). ೨. ಕಣ್ಣಿಗೆ ಮನೋಹರನಾದವನು ; ಸುಂದರ ; ಒಂದು ಬಿರುದು : ಬಪ್ಪನಂಕಕಾಜಂ [ಕುಮಾರ]ಂಕಭೀಮಂ ನಯನಾಭಿರಾಮಂ . . . ಶ್ರೀಮದ್ಮುವ ರಾಜಂ ಮಲ್ಲಿಕಾರ್ಜುನದೇವರು (ಶಾಶಿಅ. XX, ೭೧-೦೦ ; 1106). ೩. ಕಣ್ಣಿಗೆ ಸುಂದರವಾದುದು ; ಮನೋಹರವಾದುದು : ನಯನಾಭಿರಾಮಮೆಂಬುದುಮಿದು ಕೃಷ್ಣನಿರ್ಪ ಪುರಂ (ಮಹಾನೀ. ೭-೦೩೦).
[ ನಯನ + ಅಭಿರಾಮ ]

**ನಯನಾಮೃತ** (ನಾ). ಕಣ್ಣಿಗೆ ಅಮೃತಪ್ರಾಯವಾದುದು, -ಆಪ್ಯಾಯಮಾನವಾದುದು ; ನೋಟಕ್ಕೆ ಸುಖಕರವಾದುದು : ನಯನಾಮೃತಕ್ಕೆ ಮತ್ತಾರಯ ಕರ್ಣರಸಾಯನಕ್ಕೆ ಸುರನರಜನತಾಶಯಸೌಖ್ಯಕ್ಕಾದ್ಯವಭೂಮಿಯಿದೆನೆ ಸಂಗೀತಭೂತಳಂ ಸೊಗಯಿಸುಗುಂ (ಚಂದ್ರಪ್ರ. ೦೩-೭೦).
[ನಯನ + ಅಮೃತ ]

**ನಯನಾಶ** (ನಾ). [ಕಾವ್ಯಮಿ] ಕಾವ್ಯದ ಹದಿನೆಂಟು ಬಗೆಯ ದೋಷಗಳಲ್ಲಿ ಒಂದು ; ಕವಿಸಂಪ್ರದಾಯಕ್ಕೆ ವಿರುದ್ಧವಾದುದು : ಅಸದರ್ಥಂ ವಿಪರೀತ ಕಲ್ಪನೆಯಭವ್ಯಂ ದುಷ್ಕರಂ . . ನಷ್ಟಸಮಾಸಂ ನಯನಾಶರೀತಿವಿಫಲಂ ದುರ್ಲಕ್ಷಣಂ ಹಾಸ್ಯವಾಗ್ಮಿತಮಾಸೌಮ್ಯಮನೋಜೆಯೆಂಬವಿನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೧-೪೬ ಅಡಿಟಿಪ್ಪ). 'ಅಷ್ಟಾದಶದೋಷ', 'ದುರ್ಲಕ್ಷಣ' ಪರಾ.
[ ನಯ$_2$ + ನಾಶ ]

**ನಯನಾಶ್ರು** (ನಾ). ಕಣ್ಣೀರು ; ಕಂಬನಿ : ಅಲ್ಲಲ್ಲಿ ಶಿವಪುರಾಣಂಗಳಂ ಕೇಳುತಂ ಸಲ್ಲೀಲೆವೆರ್ಚೆ ನಯನಾಶ್ರುವಂ ಸೂಸುತಂ (ತಿರುರ. ದೀ. ೯-೧೩).
[ ನಯನ + ಅಶ್ರು ]

**ನಯನಾಸ್ಪಂದ** (ನಾ). ಕಣ್ಣುಗಳನ್ನು ಅಲುಗಾಡಿಸುವಿಕೆ (?) : ವಂದಿಸಿ ದರಿವರ್ಕೆವರವಾನಂದಜಲಪರಿಲುಳಿತ ನಯನಾಸ್ಪಂದ ಪರಿತೋಷದಲಿ ತೆಗೆದಪ್ಪಿದರು ಪಾಂಡವರ (ಕುವ್ಯಾಅ. ೧೭-೪೦). [ ಸಂ. ]

**ನಯನಿಪುಣ** (ನಾ). ೧. ರಾಜನೀತಿಯಲ್ಲಿ ನುರಿತವನು ; ರಾಜನೀತಿಕುಶಲ ; ಕೋವಿದ : ನಯನಿಪುಣರುಪಾಯಚತುಷ್ಟಯದೊಳ್ ಸಾಮಮನಗಣ್ಯಷಾಡ್ಗುಣ್ಯದೊಳಾರಯೆ ಸಂಧಿಯಂ ಮೊದಲ್ ಮಾಡಿಯೆ ಪೇಟ್ದರ್ (ಪಾರ್ಶ್ವಪು. ೨-೩೯). ೨. (ಪ್ರಾಣಿಗಳನ್ನು) ತಿದ್ದಿ ಪಳಗಿಸುವ ವಿದ್ಯೆಯಲ್ಲಿ ನಿಷ್ಣಾತನಾದವನು ; ಶಿಕ್ಷಾವಿಧಾನದಲ್ಲಿ ನುರಿತವನು : ನಯನಿಪುಣ ಸೂತ್ರಧಾರರ್ ನಿಯಮಿಸುವರ್ ಭದ್ರಮಂದಮೃಗಸಂಕೀರ್ಣಾನ್ವಯದ ನೃಪಕರಿಗಳಂ ಪ್ರಣಿಧಿಯೊಡಂಬಡೆ ಸಕಳಶಿಕ್ಷೆ ಕಣ್ಣೋಜಾಮಿನಂ (ಪುಷ್ಪಪು. ೨-೫೬). [ ನಯ$_2$ + ನಿಪುಣ ]

**ನಯನುಡಿ** (ನಾ). ಮೃದುವಾದ ಮಾತು; ಹಿತವಾದ ಮಾತು: ರಾಮನ ಮವವ ನಯನುಡಿಯಿಂದ ತಿಳುಹಿದನು (ಕುವ್ಯಾಗ. ೬-೩೫) ; ಬದ್ಧವಾದ ನಯನುಡಿಯು ಇಲ್ಲದಾತನ ಹೊಲೆಯು (ಪುರಂದ. ೧-೦೭೮-೩).
[ ನಯ$_1$ + ನುಡಿ$_2$ ]

**ನಯನೋತ್ಸವ** (ನಾ). = ನಯನಾನಂದ ೨ : ನಯನೋತ್ಸವಮಂ ನವಕಳಿಕೆಯನ್ನುದ್ಭವಿಸಳದಿನೀವ ಸಂತಾನದ ಲೀಲೆಯನಾಂತು ಖಚರರಾಜಂ ಸ್ವಯಂಪ್ರಭೆಯುಮಾರ್ಕಕೀರ್ತಿಯುಮಿಬೆರಸಿರ್ದಂ (ವರ್ಧಪು. ೩-೪೨).
[ ನಯನ + ಉತ್ಸವ ]

**ನಯನೋತ್ಸವಕರಿ** (ನಾ). ಕಣ್ಣಿಗೆ ಆನಂದವನ್ನುಂಟುಮಾಡುವವಳು : ನಯನೋತ್ಸವಕರಿ ರತಿಪತಿ ಜಯಲಕ್ಷ್ಮೀಸಮಸ್ತಸತ್ಕಳಾಕೋವಿದೆ ಪುಣ್ಯಯಶೋರ್ಥಿನಿ ಪೆಸರ್ವೆತ್ತಳ್ ಸ್ವಯಂಪ್ರಭಾದೇವಿ ಯಾತನನುಜಾತೆ ವಲಂ (ವರ್ಧಪು. ೩-೭೩). [ ಸಂ. ನಯನೋತ್ಸವಕರೀ ]

**ನಯನೋತ್ಸಾಹ** (ನಾ). ಮತ್ತೆ ಮತ್ತೆ ನೋಡಬೇಕೆಂಬ ಆಸೆ; ನೋಟದ ಆಕರ್ಷಣೆ : ನಯನೋತ್ಸಾಹಮನಿತ್ತು ದೇಹರುಚಿಯಿಂದೆಯ್ತಂದನಾಕಾಶಗಂಗೆಯಾ ನೀರ್ಪರ್ಬಾನಿಸನೆಂಬಿನಂ . . . ನಾರದಂ (ಶಂರಾಮಾ. ೩-೧೮). [ ನಯನ + ಉತ್ಸಾಹ$_1$ ]

**ನಯನೋದಕ** (ನಾ). ಕಣ್ಣೀರು ; ಕಂಬನಿ: ನಾದಿದಳು ನೃಪನಂಘ್ರಿಯನು ನಯನೋದಕದ ಧಾರೆಯಲಿ (ಕುವ್ಯಾಅ. ೨೦-೬) ; ಕೊರಗಿದಾನನದೊಸರ್ವ ನಯನೋದಕದ ಸುಯ್ಲಿನ ಹಸರಿಕೆಯಲ್ಲಿತಂದರಿರುಳು ದಶಾಸ್ಯನಿದ್ದೆಡೆಗೆ (ತೊರರಾ. ೩-೦೨-೧). [ ನಯನ + ಉದಕ$_2$ ]

**ನಯನೋದ್ಗತ** (ಗು). ಕಣ್ಣಿನಲ್ಲಿ ಹುಟ್ಟಿದ, -ಉಂಟಾದ: ನಯನೋದ್ಗತ ಕುಸುಮಗ್ರಂಥಿಯಲ್ಲಮೊರ್ವೆಯ ತೆರಳ್ದು ಕಿಡುವುದು (ಲೋಕೋಪ. ೯-೭೬). [ ನಯನ + ಉದ್ಗತ ]

**ನಯನೋದ್ಗಳಿತ** (ಗು). ಕಣ್ಣಿನಿಂದ ಹೊಮ್ಮಿದ, -ಸೂಸಿದ : ನಯನೋದ್ಗಳಿತಜಲಧಾರೆಯಲಿ ನೆನೆದುದು ಸಭೆ ವಿಷಾದದಲಿ (ಕುವ್ಯಾಸ. ೦೪-೭೩). [ ಸಂ. ನಯನೋದ್ಗಲಿತ ]

**ನಯನೋನ್ಮಾದ** (ನಾ). ಕಣ್ಣುಗಳಿಗೆ ನೋಟದಿಂದ ಉಂಟಾಗುವ ಆನಂದಾತಿಶಯ : ನಯನೋನ್ಮಾದಮನೀಯೆ ನುಣ್ಬರಿಜಾಗಳ್ ಕಣ್ಬೇಟದಿಂ (ಅನಂಪು. ೩-೧೭). [ ನಯನ + ಉನ್ಮಾದ ]

**ನಯನೋನ್ಮೀಲನ** (ನಾ). ಕಣ್ಣು ತೆರೆಯುವಿಕೆ : ರತಿದೇವಿ ಲೀಲೆಯಿಂ ಪೊಸಪುತ್ಥಳಿ ಕಿರ್ದ ನಯನೋನ್ಮೀಲನ ಮಾಡಿದಂತಾಯ್ತು (ಶ್ರೀಪಾಲ. ೪-೦೨೪). [ ನಯನ + ಉನ್ಮೀಲನ ]

**ನಯನೋಪಾಂತ** (ನಾ). ಕಣ್ಣಿನ ಕೊನೆ: ಕಡೆಗಣ್ಣು ; ಕಟಾಕ್ಷ : "ನಯನೋಪಾಂತಃ ಅಪಾಂಗಃ—ಈ ೨ ಕಡೆಗಣ್" (ಹಲಾಯು. ೦೬-೩೭೭).
[ ನಯನ + ಉಪಾಂತ ]

**ನಯಪಂಡಿತ** (ನಾ). ನೀತಿವಿದ; ವಿವೇಕಿ: ನೀಂ ಪ್ರಾಣಜಂ. ದೇಶಕಾಲಾನುವೃತ್ತಿಯ ನಯದಿ ನಯಪಂಡಿತಂ (ಶ್ರೀರಾಮಾ. ೩೭೦-೩೯೯).
[ ನಯ$_2$ + ಪಂಡಿತ ]

**ನಯಮಂತ** (ನಾ). ವಿವೇಕಿ ; ಗುಣವಂತ : ಧಾತ್ರಿಗೆಲ್ಲವಿಪಾಶ್ರಯನಾದಂ ಭಯಮುಮಂ ಲೋಭಮುಮಿಲ್ಲದ ನಯಮಂತ್ರಂ ಪ್ರಜೆಗೆ ನಲ್ಲನಾಹವಮಲ್ಲ[ಂ] (ಕೊಲ್ಲಾಶಾ. ೯-೦೦ ; 1147).
[ P ಇದು 'ನಯವಂತ' ಎಂಬುದರ ಅಪಲಿಖಿತವಿರಬಹುದು ]

**ನಯಮಱ** (ಕ್ರಿ). ರಾಜನೀತಿಯನ್ನು ತಿಳಿ ; ನೀತಿನಿಪುಣನಾಗಿರು : ಅಡಪವಳಂ ಪಡೆವಳ್ಳಂ ಮಡಿವಳ್ಳಂ ಸೆಜ್ಜೆವಳ್ಳನಜ್ಜಂ ಬೆಜ್ಜಂ ಅಡಪಳ ನೆಂದಿಂತಿವರಂ ಕಡಂಗಿ ಬಿಡೆ ಜಡಿಯದಿರ್ಕೆ ನಯಮಱವರಸಂ (ಕಾವ್ಯಾವ. ೩೬೬). [ ನಯ$_2$ + ಅಱ ]

**ನಯಮಾತು** (ನಾ). =ನಯನುಡಿ : (೬). [ ನಯ$_1$ + ಮಾತು$_1$ ]

**ನಯಮಾರ್ಗ** (ನಾ). [ಜೈನ] ವಸ್ತುವಿನ ಒಂದಂಶವನ್ನು ಮಾತ್ರ ಪರಿಗ್ರಹಿಸಿ ವ್ಯವಹರಿಸುವುದು : ಒಂದಂಶವನ್ನು ಮಾತ್ರ ಪರಿಗ್ರಹಿಸಿ ವ್ಯವಹರಿಸುವುದು ನಯಮಾರ್ಗವು (ಹಿಂದಸಾ. ೭೮). 'ನಯ$_2$' ಪರಾ.
[ ನಯ$_2$ + ಮಾರ್ಗ ]

**ನಯಮೂರ್ತಿ** (ನಾ). ರಾಜನೀತಿಯೇ ಮನುಷ್ಯಸ್ವರೂಪವನ್ನು ತಾಳಿದಂತಿರುವವನು: ಪ್ರಿಯೆಯ ಬರವಾರ್ಪೊಲಪ್ರಿಯ ಗಗನಚರೇಂದ್ರ

ರುಂದ್ರಸೇನೆಯ ಬರಪಾರ್ವಯವಮೂರ್ತಿಯುಮಂ ನಯಮೂರ್ತಿಯುಮಂ ಪೋಲ್ವರನಪಾರಪೌರುಷಪರರಂ . . . ಅಪರಾಜಿತಾನಂತವೀರ್ಯರಂ ಕಂಡು (ಶಾಂತಿಪು. ೩-೭೫). [ ನಯ₁ + ಮೂರ್ತಿ ]

**ನಯಯುಕ್ತ** (ನಾ). ನಯಜ್ಞ; ನೀತಿವಂತ; ವಿವೇಕಿ : ನಯಯುಕ್ತರಗ್ನಿವತ್ಸ್ವಾಶ್ರಯಮೇವ ದಹಂತಿ ದುರ್ಜನಾ ಎಂಬುದನಾರಯುದಿರಿಸಿದಂದು ನಮ್ಮನ್ನಯಕಂ ಕೇಡಕ್ಕುಮಿವನನೀಗಳೆ ಕಳೆವೊಂ (ಪಾರ್ಶ್ವಪು. ೪-೩೦). [ ನಯ₁ + ಯುಕ್ತ ]

**ನಯವಂಚಕ** (ನಾ). ಒಳ್ಳೆಯಂತನಪ ಸೋಗಿನಲ್ಲಿ ಮೋಸ ಮಾಡುವವನು : ಅವನೊಬ್ಬ ನಯವಂಚಕ (ರೂಢಿ). [ ನಯ₁ + ವಂಚಕ ]

**ನಯವಂತ** (ನಾ). ೧. ರಾಜನೀತಿನಿಪುಣ; ನೀತಿವಿಶಾರದ : ನಯವಂತನಾದೊಡಂ ಕೇಳ್ವುದತಿಹಿತವಚನಮಂ (ಮಹಾವಿ. ೮-೫೦). ೨. ಗುಣವಂತ. 'ನಯವಂತೆ' ಪರಾ. [ ಸಂ. ನಯವತ್ ]

**ನಯವಂತಿಕೆ** (ನಾ). ನಯ; ಕೋಮಲತೆ; ಸೌಕುಮಾರ್ಯ; ಮಾರ್ದವ : ಅವರ ಗಾಯನದಲ್ಲಿ ಬಾಯಿಹಾಡುಗಾರಿಕೆಯ ಎಲ್ಲ ನಯವಂತಿಕೆ, ಚಾತುರ್ಯ ಮತ್ತು ಸೊಗಸುಗಳನ್ನು ಕೇಳಬಹುದಾಗಿತ್ತು (ಸಂಗೀತ. ६೦). [ ನಯ₁ + - ವಂತ + - ಇಕೆ ]

**ನಯವಂತೆ** (ನಾ). ವಿನಯವತಿ; ಸೌಜನ್ಯಶೀಲೆ; ಗುಣವಂತೆ : ಆಚಭೂಪನ ಕಾನ್ತೆ ದಯಾವಂತೆ ಭಾಗ್ಯವಂತೆ ನಿತಾಂತಂ ಶಾನ್ತೆ ನಯವಂತೆ ಸತ್ಕುಳವಂತೆ ಮಹಾದೇವಿಯೆಂಬ ಪೆಸರಿಂದೆಸೆದಳ್ (ಎಇ. XX, ೦೨-೦೫; 1167). [ ನಯವಂತ + - ಎ₂ ]

**ನಯವಡೆ** 'ನಯಂಬಡೆ' ನೋ.

**ನಯವರ್ತನೆ** (ನಾ). ಸೌಜನ್ಯದಿಂದ ಕೂಡಿದ ನಡವಳಿಕೆ : ನಿನ್ನ ನುಡಿನುಣ್ಪಿಂಗೆ, ನಿನ್ನ ನಯವರ್ತನೆಗೆ, ನಾಣ್ಚುತಿಹೆನಾಂ (ಶ್ರೀರಾಮಾ. ೪೬೦-೫೬೮). [ ನಯ₁ + ವರ್ತನೆ ]

**ನಯವಾದ** (ನಾ). [ಜೈನ] ಲೋಕವ್ಯವಹಾರಕ್ಕಾಗಿ ವಸ್ತುವಿನ ಒಂದು ಅಂಶವನ್ನು ಪರಿಗ್ರಹಿಸಬೇಕೆಂಬ ವಾದ; ಸಮಗ್ರಜ್ಞಾನವನ್ನು ಪಡೆಯಲು ವಸ್ತುವಿನ ಒಂದೊಂದು ಅಂಶವನ್ನು ಕ್ರಮವಾಗಿ ಗ್ರಹಿಸುವುದು : ನಯವಾದಂ ನಯಮಾಗಿ ಕೂಡೆ ಪೊಳೆಯಲ್ . . . ಪೇಟ್ಟರೀಗೆಮಗುಪಾಧ್ಯಾಯರ್ ಸುಖೋಪಾಯಮಂ (ಪುಷ್ಪಪು. ೦-೪); ವಸ್ತುವಿನ ಒಂದೊಂದು ಭಾಗ (ಧರ್ಮ)ವನ್ನು ಗ್ರಹಿಸುವ ಜ್ಞಾನವು ಸಂಪೂರ್ಣವಾಗಿ ಪ್ರಮಾಣವಾಗಲಾರದು. ಈ ವಾದಕ್ಕೆ ನಯವಾದವೆಂದು ಹೆಸರು (ಭಾರತತ್ತ್ವ. ೨೨೫). 'ನಯ₁' ಪರಾ. [ ನಯ₁ + ವಾದ₂ ]

**ನಯವಿದ** (ನಾ). ೧. ರಾಜನೀತಿನಿಪುಣ; ನಯಜ್ಞ : ಸದುದಿತಗುಣನದಟಿಂ ನಯವಿದನಪ್ಪಂ ಕಾಲಮಂ ನೆರಂ ತೋರ್ಕೆ ನೃಪಂ (ಕವಿರಾ. ೩-೧೪೭); ಕಾವುದು ನೀನೆಮ್ಮನ್ನಯವಿದ ಧರ್ಮಮಾರ್ಗದಿಂ ಗಜವೈರೀ (ಪಂಪಭಾ. ೮೮-೬); ನಯವಿದನಂ ಸಾಮದಿನವನಯನಂ ದಂಡದೊಳೆ ಗೆಲುವುದು (ಪಾರ್ಶ್ವಪು. ೨-೪೨); ನಯವಿದರಲ್ಲಮಲ್ಲಿಯ ಕಳಾನ್ವಿತರಲ್ಲಿಯೆ (ಪುಷ್ಪಪು. ೯-೧೭); ನಯವಿದನು ಹೊಂಬಟ್ಟಲಲಿ ವೀಳೆಯವನನುಬರಿಗಿತ್ತು . . . ವಾಳೆಯಕೆ ನೇಮವ ಕೊಟ್ಟನು (ಕುಮಾರವ್ಯಾ. ೨-೦೨). ೨. ಒಳ್ಳೆಯ ನಡತೆಯಿಂದ ಕೂಡಿದವನು; ಸದಾಚಾರಸಂಪನ್ನ : ನಯವಿದನಪ್ಪುದಱಿಂ ದುರ್ನಯಮಂ ಬಿಸುಟೇಕಚಿತ್ತದಿಂ ನಂಬಿರ್ದಂ ... ಜನಪತಿಯಂ (ಧರ್ಮಾಮೃ. ೧೨-೨೫). ೩. ಸೌಜನ್ಯವುಳ್ಳವನು; ಮಾರ್ದವದಿಂದ ಕೂಡಿದ ನಡವಳಿಕೆಯುಳ್ಳವನು: ನಯವಿದನೊಪ್ಪುವ ಬಿಯಕಾಜಿನೊಳ್ಪಿದ ಪ್ರಿಯತಮನಾಗೆ ತನ್ನ ಮುನ್ನೋಂತ ನೋಂಪಿಯ ಫಲವೈಸೆ ಬೆಲೆವೆಣ್ಣೆ (ಲೀಲಾವ. ೨-೩೪); (ಸೂಕ್ತಿಸು. ೮-೩೪೪ ನೋ); ನಯವಿದರಱಿವುದು ರತಿವಿಸ್ಮಯಂಕೋಪೋತ್ಸಾಹಶೋಕಹಾಸ್ಯಜಂಗುಪ್ಸಾಭಯಮೆಂಬೆಂಟುಂ ಭಾವಪ್ರಯೋಗದೊಳ್ ಸ್ಥಾಯಿಭಾವಮೆನೆ ಪೆಸರ್ವಡೆಗುಂ (ಶೃಂಗಾರ. ೨-೪). ೪. ವಿವೇಚನೆಯುಳ್ಳವನು; ವಿವೇಕಿ: ನಯವಿದನೆ ಲವ ಕೇಳು ಬಾದಳು ಮಯನ ಸುತೆ . . . ಕರ್ಪೂರದಾರತಿಯ ಕೆಂಡೊಡರ ಸೊಂಪಿನಲಿ (ತೊರವೆರಾ. ६-೪६-೩೦). [ ಸಂ. ನಯವಿದ್ ]

**ನಯವಿದೂರ** (ನಾ). ಒಳ್ಳೆಯ ನಡವಳಿಕೆಯನ್ನು ಬಿಟ್ಟವನು : ಚಿತ್ರಾಂಗದ ವಿಕರ್ಣನ ನಯವಿದೂರರ ತಂದರಿವ್ವತ್ತೈದು ಸಹಭವರ (ಕುಮಾ.ಅ. ೦೯-೫೨). [ ನಯ₁ + ವಿದೂರ ]

**ನಯವಿದ್ಯಾವಿದ** (ನಾ). ನೀತಿಶಾಸ್ತ್ರವನ್ನು ಬಲ್ಲವನು : ನಯವಿದ್ಯಾವಿದರಿಂ ಕವಿಪ್ರಕರದಿಂ ತರ್ಕಜ್ಞರಿಂ . . . ದೇವತಾಲಯದಿಂದೊಪ್ಪುವ ಗು ಪ್ರ ವಂ ಶ ವ ಜು ಧಾ ಧೀ ಶಾವಳೀರಾಜಧಾನಿಯನುಜ್ವಯನಿಯನೆಯ್ದು ಬಂದನಜಿತಂ (ಪಂಪಶಂ. ೦೯೩-೦೫). [ ಸಂ. ನಯವಿದ್ಯಾವಿದ್ ]

**ನಯವಿನಿಮಯ** (ನಾ). ರಾಜರು ಪರಸ್ಪರ ನೀತಿಗಳನ್ನು ತಿಳಿದುಕೊಳ್ಳುವುದು,-ಪರಸ್ಪರ ರಾಜ್ಯಸಂಬಂಧದ ವಿಚಾರವನ್ನು ಅರಿಯುವುದು: ನಯವಿನಿಮಯ ನಾನಾಮಂತ್ರದೂತಪ್ರಯಾಣಾಕ್ಷಯ ಸಮಯವಿಲಾಸೋಲ್ಲಾಸಿ ಸಂಗ್ರಾಮತಾಂಗಂ (ಕವಿರಾ. ೩-೨೦೩); "ನೀತಿ ವಿನಿಮಯ" (ಕವಿರಾ. ಟಿಪ್ಪಣಿ). [ ನಯ₁ + ವಿನಿಮಯ ]

**ನಯವಿವೇಕ** (ನಾ). ಯೋಜನೆಯ ಕುಶಲತೆ : ಮಯನ ಮತದಲಿ ವಿಶ್ವಕರ್ಮನ ನಯವಿವೇಕದಲಮಲ ಮಖಶಾಲೆಯನು ನಿರ್ಮಿಸಿದನು ಸುಲಕ್ಷಣ ಶಾಸ್ತ್ರಸೂತ್ರದಲಿ (ಕುಮಾ.ಸ. ೬-೩೪). [ ನಯ₁ + ವಿವೇಕ ]

**ನಯವಿಹೀನೆ** (ನಾ). ಔಚಿತ್ಯವನ್ನು ತಿಳಿಯದವಳು : ಪಾಂಚಾಲಿಯನು ಕರಸಿದಳು ನಯವಿಹೀನೆ ಸುದೇಷ್ಣೆ (ಕುಮಾ.ವಿ. ೩-೧). [ ಸಂ. ನಯವಿಹೀನಾ ]

**ನಯವೇಱು** (ಕ್ರಿ). ಕಳೆಯೇರು; ಅಂದ ಹೆಚ್ಚಾಗು; ಸೊಗಸಾಗು : ಉದಯಗಿರೀಂದ್ರಮನಿನನೇಱೆ ಸರೋಜಸಮಿತಿ ನಯವೇಱುವವೊಲ್ (ಚಂದ್ರಪ್ರ. ೬-೨); ಅಂತರಂಗದ ಗರ್ಭವೊಡನೊಡನೆ ಬೆಳೆವುತಿರೆ ಅಂಗಲತೆ ನಯವೇಱಿ ಬೇಱಿಱೊಂದು ಚೆಲುವಾಗೆ (ಬಸವ. ೧-೧೦೭). [ ನಯ₁ + ಏಱು₁ (< ಏಱ್₁) ]

**ನಯಶಟ್ಟ** (ನಾ). ಒಂದು ಊರಿನ ಹೆಸರು : ಶ್ರೀ[ಪೃಥುವೀವಲ್ಲಭ] ಮಹಾರಾಜಾಧಿರಾಜಪರಮೇ[ಶ್ವರ] ಪರಮಭಟ್ಟಾರಕಂ ನಯಶಟ್ಟಪುರವರೇಶ್ವರಂ (ಸೌಇಇ. XX, ೦೯-೭; 1016). [ ? ]

**ನಯಶಾಲಿ** (ನಾ) ೧. ನೀತಿನಿಪುಣ; ನಯಜ್ಞ : ವೀರನುದಾರಂ ಶುಚಿ ಗಂಭೀರಂ ನಯಶಾಲಿ ಕೈದುವೊತ್ತಂ ದೇವಂಗಾರೆಣೆಗರ್ ನೃಪತುಂಗಂಗೆ (ಕಮುದ. ೧೪೦ ಪ್ರಹೋ). ೨. ಒಳ್ಳೆಯ ನಡತೆಯುಳ್ಳವನು; ಸದಾಚಾರಿ: ನಯಶಾಲಿ ವತ್ಸಗೋತ್ರಶ್ರಯಣೀಯನನೇಕಸಕಳಶಾಸ್ತ್ರಾರ್ಥವಿನಿಶ್ಚಯ ಮತಿಕೃತಿ ಮಾಧವಸೋಮಯಾಜಿ ಸಲೆ ನೆಗಟ್ಟ (ಪಂಪಭಾ. ೧೪-೪೨). ೩. ವಿನಯಶಾಲಿ; ಸೌಜನ್ಯಶೀಲ : ನಯಶಾಲಿಯಾದವ ಜಸುಶಾಲಿಯಾದಾನು (ಗಾದೆ). [ ಸಂ. ನಯಶಾಲಿನ್ ]

**ನಯಶಾಸ್ತ್ರ** (ನಾ). ರಾಜನೀತಿ; ರಾಜ್ಯಭಾರದ ಕ್ರಮವನ್ನು ಕುರಿತ ಶಾಸ್ತ್ರ : ನಯಶಾಸ್ತ್ರಕ್ರಮದಿಂ ವಿರೋಧಿನೃಪರಂ ಗೆಲ್ದು (ಪಂಪಶಂ. ೦೭-೨೦); ನಯಶಾಸ್ತ್ರಂ ಧರ್ಮಶಾಸ್ತ್ರಂ ಕರತಳಕಳಿತವ್ಯಕ್ತಮುಕ್ತಾಫಳು . . . ಮದೀಯಾನ್ವಯರಾಜ್ಯಶ್ರೀಲತಾಲಂಬನಮೆನೆ ನೆಗೞ್ದ ಪುತ್ರ ನಿನ್ನನ್ನನಾಮ (ಮಲ್ಲಿಪು. ೯-೮೭); ನಯಶಾಸ್ತ್ರನೀಕಮಾರ್ಗವನೆ ಪಡೆದು ದಿಯಂತ ಸನ್ಮಂತ್ರಿವಿಖ್ಯಾತಿಯನಾದಂ ತಾಳ್ದ ಮಂತ್ರೀಶ್ವರತತಿ (ಶಾಂತೀಶ್ವ. ೦೫-೮೭); ಸಂಸ್ಥಾನವನ್ನು ನೀತಿಯುಕ್ತ ಮಾಡಲಿಕ್ಕೆ ನಯಶಾಸ್ತ್ರವಾಯಿತು (ವಿಚಾಮಂ. ೪೫). [ ನಯ₁ + ಶಾಸ್ತ್ರ ]

**ನಯಸಂಪನ್ನ** (ನಾ). ನೀತಿವಂತ ; ನಯವಿದ : ನಯಸಂಪನ್ನನತೀವ ಯುವ್ವನಯುತಂ ರೂಪಾನ್ವಿತಂ . . . ಸಂಭೋಗಸಂಪ್ರಿಯನುತ್ಸಾಹಿ ಯೆನಿಪ್ಪನೊಳ್ನಿರವ ವೇಶ್ಯಾ ರಂಭೆಯೋಲ್ ಸಾಟಿಯೆ (ಲೀಲಾ. ೧೦-೧೨೦) ; ನಯಸಂಪನ್ನನಧೀತಶಾಸ್ತ್ರನಿಚಯಂ ನಾನಾಕಲಾಶಾಲಿ . . . ಬಲದೇವ ನೆಂಬನನಘಂ ಗಾಂಭೀರ್ಯರತ್ನಾಕರಂ (ವೃಷವಿ. ೪-೯೭).

[ ನಯ$_2$ + ಸಂಪನ್ನ ]

**ನಯಸಪ್ತಭಂಗಿ** (ನಾ). [ಜೈನ] ಏಳು ಬಗೆಯಾಗಿ ನಿರೂಪಿಸಬಹುದಾದ ವಸ್ತುವಿನ ಒಂದು ಧರ್ಮವನ್ನು ಮಾತ್ರ ಹೇಳುವುದು : ನಯಸಪ್ತ ಭಂಗಿಯೊಳೇಕಾರವಿಶೇಷವಾಕ್ಯವೆಂದಱಿದುಕೊಂಬುದು (ಜನಾಕ. ೧೦೦); ಸಪ್ತಭಂಗಿಯು ಪ್ರಮಾಣಸಪ್ತಭಂಗಿಯೆಂದೂ ನಯಸಪ್ತಭಂಗಿಯೆಂದೂ ಎರಡು ವಿಧ . . . ನಯಸಪ್ತಭಂಗಿಯೆಂದರೆ ವಸ್ತುವಿನ ಒಂದು ಧರ್ಮವನ್ನು ಬೋಧಿಸುವ ವಾಕ್ಯ ಎಂದರ್ಥ (ಧಾಕಕ್ಷ. ೨೯೭).

[ ನಯ$_2$ + ಸಪ್ತಭಂಗಿ ]

**ನಯಸರ** (ನಾ). ಮೃದುವಾದ ದನಿ ; ಇಂಪಾದ ಸ್ವರ ; ಮಧುರವಾದ ಧ್ವನಿ : ಮೊರೆವ ತುಂಬಿಯ ಗಾಯಕರ ನಯಸರದ ಕೋಕಿಲಪಾಠಕರ . . . ಆತುರ ವಸಂತನೃಪಾಲ ನಡೆದನು ಪಾಂಡುವಿನ ಮೇಲೆ (ಕುಬ್ಯಾಭ. ೩-೭) ; ಬೀಱುತಿರ್ದವು ನಯಸರವ ಮದವೇಱಿದೆಳೆಗೋಗಿಲೆಗಳೊಳು ನುಡಿದೋಱುತಿರ್ದವು ರಾಜಕೀರ (ಕೊರಂಶ. ೩-೧-೩೯).

[ ನಯ$_1$ + ಸರ$_2$ ]

**ನಯಸಾಣೆ** (ನಾ). ನಯವಾಗುವಂತೆ ಮಾಡುವುದಕ್ಕಾಗಿ ಉಜ್ಜುವಿಕೆ ; ಸಾಣೆಕಲ್ಲಿನಿಂದ ನಯ ಮಾಡಿದ ಸ್ಥಿತಿ : ಬೆಳ್ನಕ್ಕದ ತುಂಬುವೆಱ ಗಳನೊಟ್ಟಿಸಿ ಮೂಸೆಯೊಳಿಟ್ಟು ತಿದಿಯೊತ್ತಿ ಕರಗಿಸಿಯುಂ . . . ನಯಸಾಣೆ ಪಿಡಿದುಂ ಸಮೆದುದೆಂಬಂತಿರೆ ತಟತಟನೆ ಪೊಳೆದು ಬಿತ್ತರಂಬಡೆದ ಬಿದುಗಲ್ಲ ಸುತ್ತಣ ಮೆಟ್ಟಡಿಯಿಂ (ರಾಮಾಶ್ವ. ೩೨-೧೭). [ ನಯ$_1$ + ಸಾಣೆ ]

**ನಯಸಾಧ್ಯ** (ನಾ). ಒಳ್ಳೆಯ ಮಾತಿನಿಂದ ವಶನಾಗುವವನು ; ಸಾಮೋಪಾಯಕ್ಕೆ ವಶನಾಗುವವನು: ವನಜಾಕೇಳಿಯರ್ಥಿಯೊಡೆಯಂ ನಯಸಾಧ್ಯನಧೋವಲೋಕನಂ . . . ಕುಬ್ಜಶರೀರಿ ಕುಳೀರಸಂಭವಂ (ಜಾತತಿ. ೦೭-೪). [ ನಯ$_2$ + ಸಾಧ್ಯ ]

**ನಯಹೀನ** (ನಾ). ೧. ವಿವೇಕಶೂನ್ಯನಾದವನು ; ಅವಿವೇಕಿ : ನಯಹೀನವಾದ ನರನಾಥನಾಳುವ ನಾಡು ದಯೆಯಿಲ್ಲದಾ ತಪಸಿ ಮಾಡುವ ತಪಂ . . . ಲಯಮಾಗದೇ (ಸಮ್ಯಕ್ತ್ವ. ೪-೦೪). ೨. ಸೌಜನ್ಯವಿಲ್ಲದವನು; ಸಭ್ಯತೆಯಿಲ್ಲದವನು : ನಯಹೀನರ್ಪಿಡಿದೊತ್ತಿ ಕೆನ್ನೆವರೆಗಂ ಕರ್ಣಂಗಳಂ ಕೊಯ್ದು ನಿರ್ದಯದಿಂ ಪೀಡಿಸಿ (ಸುಕುಮಾ. ೬-೨೯).

[ ನಯ$_2$ + ಹೀನ ]

**ನಯಾಂಕವಚಸ್ಕ** (ನಾ). ರಾಜನೀತಿಯನ್ನು ಅರಿತ ಮಾತುಗಾರ : ಸಮದರ್ಶಿ ಸದ್ಗುಣಯುತಂ ಸತ್ಕೀರ್ತಿಯುಕ್ತಂ ನಯಾಂಕವಚಸ್ಕಂ ಶತಿಮೋಹಿನಾಮದಿನಲಂಪಿಂ ಮಂತ್ರಿಪಂ ರಂಜಿಪಂ (ರಾಜಶೇ. ೩-೨೨).

[ ಸಂ. ]

**ನಯಾಗಮ** (ನಾ). ನೀತಿಶಾಸ್ತ್ರ : ಮತಿಹೀನರಪ್ಪ ಮನುಜರ್ ಪತಂಗ ವೃತ್ತಿಯನೆ ಕೊಂಡು ಕೋಪೆಯುತ್ತಿಪ್ಪರ್ ಸತತಮದೆಂತುಂ ವಿಬುಧ ಪ್ರತತಿಗನಿಷ್ಟಂ ನಯಾಗಮಕ್ಕೆ ವಿರುದ್ಧಂ (ಪಂಚತಂ. ೨೧೭-೪).

[ ನಯ$_2$ + ಆಗಮ ]

**ನಯಾನುಗಾಮಿ** (ನಾ). ರಾಜನೀತಿಗೆ ಅನುಗುಣವಾಗಿ ನಡೆಯುವವನು. ವರ್ತಿಸುವವನು: ನಯಾನುಗಾಮಿಗಳು ದೇಶ ಕಾಲಾವಸ್ಥೆಗಳನ್ನು ನೋಡಿ ತಾನೇ ಕಾರ್ಯವನ್ನು ತೋರಿಸುವುದು (ಭಾಸನಾ. ೪೩).

[ ಸಂ. ನಯಾನುಗಾಮಿನ್ ]

**ನಯಾನ್ವಿತ** (ನಾ). ನೀತಿಯಿಂದ ಕೂಡಿರುವವನು : ರಾಜನೀತಿನಿಪುಣ : ನಯಮೆಸೆಯೆ ನೆಗಟ್ದ ಶಕ್ತಿತ್ರಯದೊಳ್ ಪ್ರಭುಶಕ್ತಿ ಎಸೆವವೋಲೆಸೆದಂ ಶಕ್ತಿಯುತನಯ[ಮಾರ್ಗ]ವರೊಳಂ ನಯಾನ್ವಿತಂ ಕಾಳಿದಾಸದಣ್ನಾಧೀಶ[ಂ] (ಕಶಾಲ. ೩-೨-೭೦ ; 1058). [ ನಯ$_2$ + ಅನ್ವಿತ ]

**ನಯಿಂದ** 'ನಾವಿದ$_1$' ನೋ.

**ನಯಿಸು** (ಕ್ರಿ). ಮಾಡು ; ಯೋಜಿಸು (?) : ಜಾಯೆ ನಿಜವಲ್ಲಭನಂ ರತಿಕೇಳಿಯೊಳ್ ಮನಂಬಯಸಿದ ಹಾಗೆ ತರ್ಜನ ವಿಡಂಬನ ಗರ್ಹಣ ತಾಡನಾದಿಯಂ ನಯಿಸಲ್ ಅದೇಂ ವಿರೋಧಮೋ (ಶತಕ. ೭೮).

[ ನಯ$_2$ + – ಇಸು$_3$ ]

**ನಯೀತಾಲೀಂ** (ನಾ). ಹೊಸ ಶಿಕ್ಷಣ ಪದ್ಧತಿ ; ಕ್ರಿಯಾತ್ಮಕಶಿಕ್ಷಣ ; ಮೂಲಶಿಕ್ಷಣ : ಮಹಾತ್ಮಾಗಾಂಧಿಯವರು ಕ್ರಿಯಾತ್ಮಕಶಿಕ್ಷಣಪದ್ಧತಿಯನ್ನು (Basic Education) ನಿರ್ಮಿಸಿದರು . . . ಅದನ್ನು "ನಯೀತಾಲೀಂ" ಎಂದು ಕರೆದರು (ಕೃಯಾತಿ. ೧೩೩).

[ ← ಹಿಂ. ನಯೀತಾಲೀಮ್ ]

**ನಯುತ** (ನಾ). [ಜೈನ] ಕಾಲಗಣನೆಯ ಅಪರಿಮಿತವಾದ ಒಂದು ಪರಿಮಾಣ,–ಅವಧಿ : ಹದಿನೈದು ದಿನಗಳಿಂದ ಒಂದು ಪಕ್ಷವು, ಎರಡು ಪಕ್ಷಗಳಿಂದ ಒಂದು ಮಾಸವು, ಎರಡು ಮಾಸಗಳಿಂದ ಒಂದು ಋತುವು. ಮೂರು ಋತುಗಳಿಂದ ಒಂದು ಅಯನವು, ಎರಡು ಅಯನಗಳಿಂದ ವರುಷವು, ಐದು ವರುಷಗಳಿಂದ ಯುಗವು, ಎಂಬತ್ತುನಾಲ್ಕುಲಕ್ಷ ವರುಷಗಳಿಂದ ಪೂರ್ವಾಂಗವು, ಎಂಬತ್ತುನಾಲ್ಕುಲಕ್ಷ ಪೂರ್ವಾಂಗಗಳಿಂದ ಒಂದು ಪೂರ್ವವು, ಎಂಬತ್ತುನಾಲ್ಕು ಪೂರ್ವಗಳಿಂದ ನಯುತಾಂಗವು, ಎಂಬತ್ತುನಾಲ್ಕುಲಕ್ಷ ನಯುತಾಂಗಗಳಿಂದ ನಯುತವು (ಜೈನಪ. ೩೦೭).

[ ಸಂ. ]

**ನಯುತಾಂಗ** (ನಾ). [ಜೈನ] ಕಾಲಗಣನೆಯ ಅಪರಿಮಿತವಾದ ಒಂದು ಅವಧಿ : ಎಂಬತ್ತುನಾಲ್ಕುಲಕ್ಷ ವರುಷಗಳಿಂದ ಪೂರ್ವಾಂಗವು, ಎಂಬತ್ತುನಾಲ್ಕು ಲಕ್ಷ ಪೂರ್ವಾಂಗಗಳಿಂದ ಒಂದು ಪೂರ್ವವು, ಎಂಬತ್ತುನಾಲ್ಕು ಪೂರ್ವಗಳಿಂದ ನಯುತಾಂಗವು, ಎಂಬತ್ತುನಾಲ್ಕುಲಕ್ಷ ನಯುತಾಂಗಗಳಿಂದ ನಯುತವು (ಜೈನಪ. ೩೦೭). 'ನಯುಂತ' ಪಾಠ. [ ನಯುತ + ಅಂಗ$_2$ ]

**ನಯೋಕ್ತಿ** (ನಾ). ವಿನಯದಿಂದ ಕೂಡಿದ ನುಡಿ : ಹಗಲೂ ಕತ್ತಲೆಯಹುದಂ ಕತ್ತಲೆ ಹಗಲಹುದು ತಾನಿದುವೆ ಸಲೆ ಸೋಜಿಗವಲಾ ನೀ ನೋಡಿಕೋಯೆಂದರು ನಯೋಕ್ತಿಯಲಿ (ಕೊರಶಾ. ೭-೧೨-೩).

[ ನಯ$_2$ + ಉಕ್ತಿ ]

**ನಯೋದಯ** (ನಾ). ರಾಜನೀತಿಯ ಏಳಿಗೆ,–ವೃದ್ಧಿ : ಜಯಮೊಡವುಟ್ಟಿದುದು ನಯೋದಯಮೊಡವಳೆದುದು ವಿಳಾಸಮೊಡನಾಡಿದುದನ್ನಯ ದೊದವು ತಾಯುಮಂ ತಂದೆಯುಮಂ ಕಣ್ಬದುದು (ಶಾಂತಿಪು. ೧-೭೮).

[ ನಯ$_2$ + ಉದಯ ]

**ನರ$_1$** 'ನರವು' ನೋ.

**ನರ$_2$** (ನಾ). ೧. ಮನುಷ್ಯ ; ಮಾನವ ; ಪುರುಷ : "ಮನುಷ್ಯಃ, ಮಾನುಷಃ, ಮರ್ತ್ಯಃ . . . ಪೂರುಷಃ, ವಿಟ್ – ಈ ೧೨ ಮಾನಸರ್" (ಕರ್ಣಾಟ. ೩೩-೧೭೬) ; ನರಖಚರನಿಶಾಚರರಾದರದಿಂ ಬೆಸಕೆಯ್ಯೆ (ನೇಮಿಪು. ೧೯-೮೨) ; ವ್ಯಾಧನೊಂದು ಮೊಲನ ತಂದರೆ ಸಲಂಬ ಹಾಗಕ್ಕೆ ಬಲಿವರಯ್ಯಾ . . . ಮೊಲನಿಂದ ಕರಕಷ್ಟ ನರನ ಬಾಳುವೆ (ಬಸವ. ೧೩೮) ; ದುಗ್ಧೋದಧಿತಲ್ಪನಂ ನರನಭಿಷ್ಟುತಿಗೆಯ್ವುದು ಧಾರ್ಷ್ಟ್ಯಮಲ್ಲವೇ (ಜಗವಿ. ೨-೨೦); ನರಕರಿತುರಗವರೂಥೋತ್ಕರ ಸರಭಸಗಮನದಿನೊಗೆವ ರೇಣುವ್ರಜ ಮಂಬರದತ್ತಭಿಮುಖಮಾಗುತ್ತಿರೆ (ಕುಸುಮಾ. ೪-೨೦೩) ; ನರರನ್ಯರಿಲ್ಲಾ ಗುತ್ತು ಮಂಥರೆಯ ಲೋಕಕ್ಕೆ (ಶ್ರೀರಾಮಾ. ೨೭-೭೦೭). ೨. ಅರ್ಜುನನ

ಹೆಸರುಂಗಳಲ್ಲಿ ಒಂದು : ನರನಂ ಮುಂ ಕೊಲ್ವೆನಾಂ ಕರ್ಣನನಟ್ಟಿದುಡಟಿಂ ಕೊಲ್ವೆನಾ ಭೀಮನಂ ಸಂಗರದೊಳ್ / ಸೀಳ್ವೊಟ್ಟಿ ದುಶ್ಶಾಸನನಟಲನದಂ ನೀಗುವೆಂ (ಪಂಪಭಾ. ೧೩-೨೦) ; ನರನುಂ ನಾರಾಯಣನುಂ ಪರಿಕಿಸ ಲಿಂದೆನುತುಮಿರ್ಪುದೀ ಧರೆ (ನೇಮಿಪು. ೧೧-೧೩೪) ; ನರ ಕೊರುಬಿನಲೆಚ್ಚ ಅವಂಗೊಲಿದೆಯಯ್ಯಾ (ಬಸವ. ೬೩). ೩. ಒಬ್ಬ ಋಷಿಯ ಹೆಸರು ; ☞ ಸ್ವಾಯಂಭುವ ಮನ್ವಂತರದಲ್ಲಿ ಧರ್ಮಮುನಿಯ ಇಬ್ಬರು ಪುತ್ರರಲ್ಲಿ ಹಿರಿಯವ. ವಿಷ್ಣು ಹಿರಣ್ಯಕಶಿಪುವನ್ನು ಸಂಹರಿಸಿದ ಬಳಿಕ ಆತನ ಸಿಂಹರೂಪ ನಾರಾಯಣನಾಗಲು,ಮನುಷ್ಯರೂಪ ನರನೆಂದು ಪ್ರಖ್ಯಾತಿಗೊಂಡಿತು. 'ನರನಾರಾಯಣಾಶ್ರಮ' ಪರಾ. ೪. ಒಬ್ಬ ಮನುಷ್ಯನ ಅಳತೆ; ಒಬ್ಬ ಪುರುಷನ ಎತ್ತರ. ೫. (?) : ನರನಾಗ ಶೈಲಸಪ್ತಂ ಷಡುರುತು ಶರಬಾಣ ಶರಧಿಪಾರುಧಿ ಮತ್ತಾ ಅನಲಾಗ್ನಿ ನಯನಲೋಚನ ಹಿಮಕರ ಶಶಿಯನ್ನು ನಿಧಿಯೊಳುಳಿವದು ಮತ್ತಾ (ಭಾಸ್ಕರ. ೪೪-೩). [ ಸಂ. ]

ನರಂ 'ನರಮ್' ನೋ.

ನರಂಜಿಬಳ್ಳಿ (ನಾ). ಒಂದು ಬಗೆಯ ಬಳ್ಳಿ : ನರಂಜಿಬಳ್ಳಿ, ಹಸುರಾಣಿ ಬಳ್ಳಿ, ಭೂಚಕ್ರ ಬಳ್ಳಿ (ಮೃಶಿಗಿ. ೨೯-೪೪೪). [ ನರಂಜ್ಞ + ಬಳ್ಳಿ ]

ನರಕ (ನಾ) ೧. ಪಾಪ ಮಾಡಿದವರನ್ನು ಮರಣಾನಂತರ ಯಮ ಲೋಕದಲ್ಲಿ ಶಿಕ್ಷೆಗೆ ಗುರಿಪಡಿಸುವ ಸ್ಥಳವೆಂದು ಭಾವಿಸಲಾದ ಲೋಕ; ಯಮಧರ್ಮರಾಯನ ಆಳ್ವಿಕೆಗೊಳಗಾಗಿದೆಯೆಂದು ನಂಬಲಾದ ಲೋಕ; ಅಧೋಲೋಕ ; ☞ ಸ್ವರ್ಗ ಭೂಮಿಯ ಮೇಲ್ಭಾಗದಲ್ಲೂ ನರಕ ಭೂಮಿಯ ಕೆಳಭಾಗದಲ್ಲೂ ಇದೆ ಎಂಬ ನಂಬಿಕೆ ಇದೆ. ಇಲ್ಲಿ ಕೊಡುವ ಶಿಕ್ಷೆಗಳ ವಿವರದಿಂದ ಜನರು ಪಾಪಕ್ಕೆ ಹೆದರುತ್ತಾರೆಂದು ಜನಸಾಮಾನ್ಯರ ನಂಬಿಕೆ. ಮುಖ್ಯವಾದ ೨೮ ನರಕಗಳನ್ನು ಇಲ್ಲಿ ಹೆಸರಿಸಿದೆ. ಇವುಗಳ ಹೆಸರು ಮತ್ತು ಸಂಖ್ಯೆಗಳ ವಿಷಯದಲ್ಲಿ ಆಕರ ಗ್ರಂಥಗಳಲ್ಲಿ ವ್ಯತ್ಯಾಸವು ಕಂಡುಬರುತ್ತದೆ. ೧. ತಾಮಿಸ್ರ. ೨. ಅಂಧ ತಾಮಿಸ್ರ. ೩. ರೌರವ. ೪. ಮಹಾರೌರವ. ೫. ಕುಂಭಿಪಾಕ. ೬. ಕಾಲಸೂತ್ರ. ೭.ಅಸಿಪತ್ರವನ. ೮. ಸೂಕರಮುಖ. ೯. ಅಂಧ ಕೂಪ. ೧೦. ಕೃಮಿಭೋಜನ. ೧೧. ಸಂದಂಶ. ೧೨. ತಪ್ತ ಸೂರ್ಮಿ ೧೩. ವಜ್ರಕಂಟಕ. ೧೪. ಶಾಲ್ಮಲಿ. ೧೫. ವೈತರಣಿ. ೧೬. ಪೂಯೋದ ೧೭.ಪ್ರಾಣರೋದ. ೧೮.ವಿಶಸನ. ೧೯.ಲಾಲಾಭಕ್ಷ್ಯ. ೨೦.ಸಾರಮೇಯಾದನ. ೨೧. ಅವೀಚಿ. ೨೨. ಅಯಃಪಾನ. ೨೩. ಕ್ಷಾರಕರ್ದಮ. ೨೪. ರಕ್ಷೋಗಣಭೋಜನ. ೨೫. ಶೂಲಪ್ರೋತ. ೨೬. ದಂಶಶೂಕ. ೨೭. ಪರ್ಯಾವರ್ತನ. ೨೮. ಸೂಚೀಮುಖ: "ನರಯಃ, ದುರ್ಗತಿಃ– ಈ ೨ ನರಕಂ" (ಹಲಾಯು. ೦೦೩-೩) ; ನರಕವ್ಯಾವರ್ಣನೆಯನಾ ಭಟಾರ ರಿಂತೆಂದು ಪೇಟ್ವುದುಂ ಕೇಳ್ದಂ (ವಡ್ಡಾರಾ. ೧೨೬-೧೨) ; ನರಕದೊಳೆಯ್ದುದ ದುಃಖಾಂತರಮಂತದು ಬಗೆವೊಡಾರ್ಗಗುವರ್ಲ್ವೆ (ಆದಿಪು. ೯-೪೬) ; ನರಕ ದೊಳಡಿಗಡಿಗೆ ಮಹಾದುರಿತದ ಫಲದಿಂದ ಬಿರ್ದು ನವೆವರ್ (ಧರ್ಮಾಮೃ. ೧೪-೦೩೪) ; ಆಚಾರವೆ ಸ್ವರ್ಗ ಅನಾಚಾರವೇ ನರಕ (ಬಸವ. ೨೪೯) ; ನರಕದ ವಿಚಿತ್ರದುಃಖೋತ್ಕರಮಂ ತಾವುಣುತುಮಿದಿರುಮಂ ಬಾಧಿಸುವರ್ (ವರ್ಧಪು. ೧೧-೩೩)' ; ಹಿಂಸಾಪರನ ಹಿಸುಣನ ಶಠನ ಕೃಪಣನ ನರಕವಾಗರಿ ಕೊಲ್ಲದಿದ್ದರೆ ನಾಳೆ ಸ್ಯೆಂಧವನ (ಕುಮಾರವ್ಯಾ. ೮-೩೬); ರಾಜರಾದವರೆಲ್ಲರೂ ನರಕವನ್ನು ನೋಡಲೇಬೇಕು (ಪಡಭಾ. ೩೯೦). ೨. ಪಾಪ ಮಾಡಿದವರು ಮರಣಾನಂತರ ನರಕಲೋಕದಲ್ಲಿ ಅನುಭವಿಸುವ ದಂಡನೆ.-ಶಿಕ್ಷೆ : ನರಕವ ಮುನ್ನಲುಂಡು ಪಿರಿದಾಗಿಹ ಧರ್ಮವನೆಯ್ದುದಿರ್ಪ ಭೂಸುರರುಂ (ನನ್ನಚಾ. ೬-೦೯೩). ೩. ಒಬ್ಬ ರಾಕ್ಷಸನ ಹೆಸರು ; ☞ ವರಾಹಾವತಾರ ಮಾಡಿದ ವಿಷ್ಣುವಿನ ಬೆವರು ಭೂಮಿಯ ಮೇಲೆ ಬೀಳಲು ಅಲ್ಲಿ ಜನಿಸಿ, ಪ್ರಾಗ್ಜ್ಯೋತಿಷ ಪಟ್ಟಣದಲ್ಲಿ ರಾಜನಾಗಿದ್ದನು. ಕೊನೆಗೆ ಕೃಷ್ಣನಿಂದ ಸಂಹಾರವಾದನು : ನರಕನಾತಂ . . . ದಶಾಸ್ಯಾದಿಗಳಂ ಬಲಾಧಿಕಂ (ಜಗವಿ. ೧-೩೯). 'ನರಕಮರ್ದನ' ಪರಾ. ೪. [ಜೈನ] ನರಕ, ತಿರ್ಯಂಚ, ಮನುಷ್ಯ ಮತ್ತು ದೇವ ಎಂಬ ಚತುರ್ಗತಿಗಳಲ್ಲಿ ಒಂದು : ನರಕಾದಿ ಚತುರ್ಗತಿಯೊಳ್ ಬೆರಸಿದ ಜೀವಸ್ವರೂಪ ಭೇದಮುನಾ ಜನವರಂ . . . ಪೇಟುತ್ತಿರ್ದಂ (ಚಾರುಪು. ೧೭-೨೭೭). ೫. [ಜೈನ] ರತ್ನಪ್ರಭೆ, ಶರ್ಕರಾಪ್ರಭೆ, ವಾಲುಕಾಪ್ರಭೆ, ಪಂಕಪ್ರಭೆ, ಧೂಮಪ್ರಭೆ, ತಮಃಪ್ರಭೆ ಮತ್ತು ಮಹಾತಮಃಪ್ರಭೆ ಎಂಬ ಏಳು ನರಕಗಳು : ಏಟನೆಯಾ ನರಕದಾ ಪುಟು ಅಕು(ಕ್ಕು)ವ್‌ (ಇಆ. X. ೬೦-೯; 878) ; ಏಟೆಂಬ ನರಕಮಾವುದೊ ಪೇಟೆಂಬ ದುರಂತದುಃಖ ದೊಳೆ ಕೇಳಿಸಿ ನಿಂದೇಟುಂ ಶರೀರಧಾತುಗಳೇಟುಂ ನರಕಂಗಳವಱೊಳೇ ಗುಂದದವೋಲ್ (ಅಜಿಪು. ೨-೩೪) : ನರಕಗತಿಯಲ್ಲಿ ರತ್ನಪ್ರಭೆ . . . ಮಹಾತಮಃಪ್ರಭೆಯೆಂದೇಟುಂ ನರಕಂಗಳಕ್ಕುಂ (ಜಸಾರ. ೧೪೬). ೬. (ಆಲಂ) ಅಮೇಧ್ಯ : ನರಕದ ನೆಲೆ ಪೇಸಿಕೆಗಳ ಕರು ಮಸಣದ ಪ್ರಾಪ್ತು ಪಾಪದಟ ಪಾತಕದಾಗರವಾದು ನೆನೆವರ್ಗೆ ಭಯಂಕರವತಿಪಾಪಕರ ಮಾಡುದುದ್ವೇಗಕರಂ (ಕಾದಂಬ. ೭೮೭). ೭. ದುಃಖ ; ಯಾತನೆ ; ಕ್ಲೇಶ : ನಾಲ್ಕುಗೋಡೆಗಳ ಮಧ್ಯದಲ್ಲಿ ನಾನು ಕಂಡ ನರಕದ ಅರಿವು ಈ ಬಾಹ್ಯ ಪ್ರಪಂಚಕ್ಕಿದೆಯೇ ? (ಕಾವೇರಿ. ೧೯೩). [ ಸಂ. ]

ನರಕಂಬುಗು, ನರಕಂಬೊಗು (ಕ್ರಿ). ನರಕವನ್ನು ಪ್ರವೇಶಿಸು ; ನರಕಕ್ಕೆ ಹೋಗು,–ಸೇರು : ದೇಗಂ ನರಕಂಬುಗಲ್ವೇಡಿರ್ದ ಜೀವಮುಮಂ ಅಭವ್ಯನಪ್ಪ ಜೀವನುಮಂ ಪರಮಾಗಮಮೆನಿತು ಲೇಸಾಗಿಯುಂ ಸೋಲಿಸ ಲಾಱದು (ಧರ್ಮಾಮೃ. ೬-೬೬) ; ಎನಗಱ [ಮಂತಿರೆ ಧರ್ಮಮಾನಱ] ಪಿ ಸಮುದ್ರರಿಸಿದರಲ್ಲದೊಡೆ ಮಗುಟ್ ನರಕಂಬುಗೆನೇ (ವರ್ಧಪು. ೧೩-೨೦) ; ನರಕಂಬುಗಲ್ಕೆ ಕಡೆಯ್ದೆ ಮಾಯಾವಿಯಪ್ಪಾತ್ಮನೇ (ಜೀವಸಂ. ೦೪೭-೨೭). ನರಕಂಬೊಗು : ಸ್ಕಂದಕುಮಾರನೆಂಬ ರಿಸಿ . . . ತನ್ನ ಶರೀರಮುಮಂ ಭಸ್ಮಂ ಮಾಡಿ ಸುಟ್ಟು ಸತ್ತೀಬನೆಯ ನರಕಂಬೊಕ್ಕಂ (ವಡ್ಡಾರಾ. ೧೮೮-೧೯) ; ನರಕಂಬೊಕ್ಕ ಪಂಚಮಹಾಪಾತಕನಕ್ಕು (ಸೌಇಇ. XX. ೨೯-೨೦ ; 1044) ; ದುರಿತೋದಯದಿಂ ನರಕಂಬೊಗಲಿರ್ದವರುಂ ಪರತ್ರೆಯುಂ ಕಾಣರ್ (ಧರ್ಮಾಮೃ. ೪-೨೩೪). [ ನರಕ + ಪುಗು ]

ನರಕಂಬೊಗು 'ನರಕಂಬುಗು' ನೋ.

ನರಕಕರ್ಮ (ನಾ). ದುರ್ಗತಿಯನ್ನುಂಟುಮಾಡುವ ಕೆಲಸ ; ನರಕ ವಾಸವನ್ನು ತರುವ ಕೃತ್ಯ,– ಕಾರ್ಯ ; ಪಾಪಕೃತ್ಯ : ನರಕಕರ್ಮವ ಮಾಡಿ ಇಹದೊಳು ದುರಿತಭಾಜನನಾಗಿ ಕಡೆಯೊಳು ನರಕ ಬಾಹಿರನಾಗಿ (ಕುಮಾರವ್ಯಾ. ೩-೨೯). [ ನರಕ + ಕರ್ಮ ]

ನರಕಕುಂಡ (ನಾ). ನರಕದಲ್ಲಿ ಪಾಪಿಗಳನ್ನು ಶಿಕ್ಷಿಸುವುದಕ್ಕಾಗಿ ಇರುವುದೆಂದು ಭಾವಿಸಲಾದ ಕುಣಿ,– ಕುಳಿ,–ಘೋರವಾದ ಯಾತನೆಯ ಸ್ಥಳ ; ☞ ಇವು ಅನೇಕವಾಗಿವೆ. ಬೇರೆ ಬೇರೆ ಪುರಾಣಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ವರ್ಣಿತವಾಗಿವೆ. ಕಾಲಕಾಲಕ್ಕೆ ನರಕಸಂಖ್ಯೆಗಳೂ ಅವುಗಳ ವಿವರಗಳೂ ಬೆಳೆಯುತ್ತ ಹೋಗಿರಬಹುದು ಮತ್ತು ಇವಕ್ಕೆ ಚಾರಿತ್ರಿಕ ಹಿನ್ನೆಲೆಯಿರಬಹುದು. ಬ್ರಹ್ಮವೈವರ್ತಪುರಾಣದಲ್ಲಿ ಎಂಬತ್ತಾರು ಕುಂಡಗಳ ಹೆಸರುಗಳು ಮತ್ತು ಯಾವ ಯಾವ ಪಾಪಿಯು ಯಾವ ಯಾವ ಕುಂಡದಲ್ಲಿ ದಂಡನೆಯನ್ನನುಭವಿಸುವನೆಂಬುದು ನಿರೂಪಿತವಾಗಿದೆ. ೧. ವಹ್ನಿ ಕುಂಡ–ಕೆಟ್ಟ ಮಾತುಗಳನ್ನಾಡುತ್ತಾ ನೆಂಟರಿಷ್ಟರ ಹೊಟ್ಟೆ ಉರಿ ಸುವವನು. ೨. ತಪ್ತಕುಂಡ–ಬ್ರಾಹ್ಮಣರಿಗೂ ಅತಿಥಿಗಳಿಗೂ ಅನ್ನ ಹಾಕದವನು. ೩. ಕ್ಷಾರಕುಂಡ–ನಿಷಿದ್ಧ ದಿನಗಳಲ್ಲಿ ಬಟ್ಟೆಗೆ ಚೌಳುಪ್ಪು

ಹಾಕಿ ಒಗೆಯುವವನು. ೪. ವಿಟ್ಕುಂಡ-ಹಿಂದಿನವರು ಬ್ರಾಹ್ಮಣರಿಗೆ ಕೊಟ್ಟಿದ್ದ ವೃತ್ತಿಗಳನ್ನು ಅಪಹರಿಸುವವನು. ೫. ಮೂತ್ರಕುಂಡ-ಬೇರೆಯವರು ಕಟ್ಟಿಸಿದ ಕೆರೆಗಳನ್ನು ಒಡೆದುಹಾಕುವವನು. ೬. ಶ್ಲೇಷ್ಮಕುಂಡ-ಒಬ್ಬನೇ ಮೃಷ್ಟಾನ್ನ ಭೋಜನ ಮಾಡುವವನು. ೭. ಗರಕುಂಡ-ತಾಯಿ-ತಂದೆ, ಹೆಂಡತಿ-ಮಕ್ಕಳನ್ನು ಸಾಕದಿರುವವನು. ೮. ದೂಷಿಕಾಕುಂಡ-ಅತಿಥಿಗಳನ್ನು ವಕ್ರದೃಷ್ಟಿಯಿಂದ ನೋಡುವವನು. ೯. ವಸಾಕುಂಡ-ಒಬ್ಬನಿಗೆ ದಾನಮಾಡಿ ಅದನ್ನೇ ಮತ್ತೊಬ್ಬರಿಗೂ ದಾನಮಾಡುವವನು. ೧೦. ಶುಕ್ರಕುಂಡ-ಜಾರ ಮತ್ತು ಜಾರಿಣಿ. ೧೧. ಅಸೃಕ್ಕುಂಡ-ಗುರುಹಿರಿಯರನ್ನು ಹೊಡೆದು ರಕ್ತಬರಿಸುವವನು. ೧೨. ಅಶ್ರುಕುಂಡ-ಭಗವಂತನ ಸ್ತೋತ್ರಗಳನ್ನು ಹಾಡುತ್ತ ಬಾಷ್ಪಗದ್ಗದಕಂಠನಾಗುವ ಭಕ್ತನನ್ನು ಗೇಲಿಮಾಡುವವನು. ೧೩. ಗಾತ್ರಮಲಕುಂಡ-ಕೊಳಕು ಮನಸ್ಸಿನವನು. ೧೪. ಕರ್ಣವಿಟ್ಕುಂಡ-ಕಿವುಡರನ್ನು ಲೇವಡಿ ಮಾಡುವವನು. ೧೫. ಮಜ್ಜಕುಂಡ-ತನ್ನ ಹೊಟ್ಟೆಗಾಗಿ ಪ್ರಾಣಿಹಿಂಸೆ ಮಾಡುವವನು. ೧೬. ಮಾಂಸಕುಂಡ-ಹಣಕ್ಕಾಗಿ ಹೆಂಗುಸನ್ನು ಮಾರುವವನು. ೧೭. ನಖಕುಂಡ ಮತ್ತು ೧೮. ಲೋಮಕುಂಡ-ಶ್ರಾದ್ಧ ಮತ್ತು ಉಪವಾಸ ದಿನಗಳಲ್ಲಿ ಜಿತೇಂದ್ರಿಯನಾಗದಿರುವವನು. ೧೯. ಕೇಶಕುಂಡ-ಕೂದಲು ಸೇರಿರುವ ಮಣ್ಣಿನಿಂದ ಮಾಡಿದ ಪಾರ್ಥಿವ ಲಿಂಗವನು ಪೂಜಿಸುವವನು. ೨೦. ಅಸ್ಥಿಕುಂಡ-ಗಯೆಯಲ್ಲಿ ವಿಷ್ಣುಪಾದದಲ್ಲಿ ಪಿತೃಗಳಿಗೆ ಪಿಂಡಹಾಕದವನು. ೨೧. ತಾಮ್ರಕುಂಡ-ಗರ್ಭಿಣಿಯೊಂದಿಗೆ ಬೆರೆಯುವವನು. ೨೨. ಲೌಹಕುಂಡ-ಮುಟ್ಟುನೀರು ಹಾಕಿಕೊಂಡ ದಿನ ಆ ಹೆಂಗುಸಿನ ಮತ್ತು ಪತಿ-ಪುತ್ರರಿಲ್ಲದ ಹೆಂಗುಸಿನ ಕೈಯ್ಯಲ್ಲಿ ಊಟಮಾಡುವವನು. ೨೩. ತೀಕ್ಷ್ಣಕಂಟಕಕುಂಡ-ಕಠೋರವಾದ ಮಾತುಗಳಿಂದ ಗಂಡನನ್ನು ಮೂದಲಿಸುವವಳು. ೨೪. ವಿಷಕುಂಡ-ವಿಷ ಕೊಟ್ಟು ಜನರನ್ನು ಕೊಲ್ಲುವವನು. ೨೫. ಧರ್ಮಕುಂಡ-ಬೆವರುಕೈಯ್ಯಿಂದ ದೇವರ ವಸ್ತುಗಳನ್ನು ಮುಟ್ಟುವವನು: ೨೬. ತಪ್ತಸುರಾಕುಂಡ-ಶೂದ್ರಾನ್ನಭಕ್ಷಕ. ೨೭. ಪ್ರತಪ್ತತೈಲಕುಂಡ-ಕೋಲಿನಿಂದ ಎತ್ತುಗಳನ್ನು ಹೊಡೆಯುವವನು. ೨೮. ಕುಂತಕುಂಡ-ಈಟಿ, ಕಬ್ಬಿಣದ ಆಯುಧ, ಗಾಳ ಮೊದಲಾದುವುಗಳಿಂದ ಪ್ರಾಣಿವಧೆ ಮಾಡುವವನು. ೨೯. ಕ್ರಿಮಿಕುಂಡ-ಮೀನು ತಿನ್ನುವ ಬ್ರಾಹ್ಮಣ; ಮಾಂಸವನ್ನು ತಿನ್ನುವವನು; ದೇವರಿಗೆ ನೈವೇದ್ಯಮಾಡದೆ ತಿನ್ನುವವನು. ೩೦. ಪೂಯಕುಂಡ-ಶೂದ್ರಪೌರೋಹಿತ್ಯ, ಶೂದ್ರಶ್ರಾದ್ಧ, ಶೂದ್ರಾಂತ್ಯಸಂಸ್ಕಾರಗಳಿಂದ ಹೊಟ್ಟೆ ಹೊರೆಯುವವನು. ೩೧. ಸರ್ಪಕುಂಡ-ಕೃಷ್ಣನ ಪಾದ ಚಿಹ್ನೆಯುಳ್ಳ (ನಾಗರ) ಹಾವನ್ನು ಕೊಲ್ಲುವವನು. ೩೨. ಮಶಕಕುಂಡ-ಶಾಸ್ತ್ರನಿಯಮಕ್ಕೆ ವ್ಯತಿರಿಕ್ತವಾಗಿ ಕ್ಷುದ್ರಜಂತುಗಳನ್ನು ಕೊಲ್ಲುವವನು. ೩೩. ದಂಶಕುಂಡ-ಶಾಸ್ತ್ರನಿಯಮಕ್ಕೆ ವ್ಯತಿರಿಕ್ತವಾಗಿ ಪ್ರಾಣಿವಧೆ ಮಾಡುವವನು. ೩೪. ಗರಲಕುಂಡ-ಜೇನುನೊಣಗಳನ್ನು ಕೊಂದು ಜೇನುತುಪ್ಪವನ್ನು ತೆಗೆದುಕೊಳ್ಳುವವನು. ೩೫. ವಜ್ರದಂಷ್ಟ್ರಕುಂಡ-ನಿರಪರಾಧಿಗಳನ್ನೂ ಶ್ರೋತ್ರಿಯರನ್ನೂ ದಂಡಿಸುವವನು. ೩೬. ವೃಶ್ಚಿಕಕುಂಡ-ಹಣದ ಮೇಲಿನ ದುರಾಸೆಯಿಂದ ಪ್ರಜೆಗಳನ್ನು ದಂಡಿಸುವವನು. ೩೭. ಶರಕುಂಡ ಮತ್ತು ೩೮. ಶೂಲಕುಂಡ ಮತ್ತು ೩೯. ಖಡ್ಗಕುಂಡ-ಆಯುಧವನ್ನು ಹಿಡಿಯುವ ಅಗಸ ಹಾಗು ಸಂಧ್ಯಾವಂದನೆ ಮತ್ತು ವಿಷ್ಣುಭಕ್ತಿಗಳಿಲ್ಲದ ಬ್ರಾಹ್ಮಣ. ೪೦. ಗೋಲಕುಂಡ-ಸಣ್ಣ ಪುಟ್ಟ ತಪ್ಪಿಗಾಗಿ ಪ್ರಜೆಗಳನ್ನು ಬಂಧಿಸಿ ಸೆರೆಯಿಡುವ ರಾಜ. ೪೧. ನಕ್ರಕುಂಡ-ನೀರಿನಿಂದ ಮೇಲಕ್ಕೆದ್ದ ಮೊಸಳೆ ಮೊದಲಾದ ನೀರುಪ್ರಾಣಿಗಳನ್ನು ಕೊಲ್ಲುವವನು. ೪೨. ಕಾಕಕುಂಡ-ಕಾಮದಿಂದ ಹೆಂಗುಸಿನ ಎದೆ, ನಿತಂಬ, ಮುಖಗಳ ಮೇಲೆ ಕಣ್ಣಿಡುವವನು. ೪೩. ಸಂಚಾಲಕುಂಡ-ಚಿನ್ನವನ್ನು ಕದಿಯುವವನು. ೪೪. ವಾಜಕುಂಡ-ತಾಮ್ರ, ಕಬ್ಬಿಣ ಮತ್ತು ಉಕ್ಕುಗಳ ಕಳ್ಳ. ೪೫. ವಜ್ರಕುಂಡ-ದೇವತಾಮೂರ್ತಿಗಳ ಮತ್ತು ದೇವರ ಸ್ವತ್ತಿನ ಕಳ್ಳ. ೪೬. ತಪ್ತಪಾಷಾಣಕುಂಡ-ದೇವಬ್ರಾಹ್ಮಣರ ಬೆಳ್ಳಿ, ಗೋವು, ಬಟ್ಟೆಬರೆಗಳ ಕಳ್ಳ. ೪೭. ತೀಕ್ಷ್ಣಪಾಷಾಣ ಕುಂಡ-ದೇವಬ್ರಾಹ್ಮಣರ ಹಿತ್ತಾಳೆ, ಕಂಚು ಪಾತ್ರೆಗಳ ಕಳ್ಳ. ೪೮. ಲಾಲಾಕುಂಡ-ಸೂಳೆಗಾರಿಕೆಗೆ ಅವಕಾಶ ಮಾಡಿಕೊಟ್ಟು ಹೊಟ್ಟೆಹೊರೆಯುವವನು. ೪೯. ಮಸೀಕುಂಡ-ಮ್ಲೇಚ್ಛರ ಸೇವೆಯಿಂದ ಜೀವಿಸುವವನು ಮತ್ತು ಬರಹದಲ್ಲಿ ಮೋಸಮಾಡಿ ಜೀವಿಸುವವನು. ೫೦. ಚೂರ್ಣಕುಂಡ-ದೇವಬ್ರಾಹ್ಮಣರ ದವಸಧಾನ್ಯ, ತಾಂಬೂಲ, ಆಸನಗಳನ್ನು ಕದಿಯುವವನು. ೫೧. ಚಕ್ರಕುಂಡ-ಬ್ರಾಹ್ಮಣರ ಹಣವನ್ನು ಕದಿಯುವವನು. ೫೨. ವಕ್ರಕುಂಡ-ಬ್ರಾಹ್ಮಣರಿಗೂ ನಂಟರಿಷ್ಟರಿಗೂ ಪ್ರತಿಕೂಲವನ್ನು ಮಾಡುವವನು. ೫೩. ಕೂರ್ಮಕುಂಡ-ಶ್ರೀಮಹಾವಿಷ್ಣು ಮಲಗಿರುವಾಗ ಅಂದರೆ ಆಷಾಢಶುದ್ಧ ಏಕಾದಶಿಯಿಂದ ಕಾರ್ತಿಕಶುದ್ಧ ದ್ವಾದಶಿಯವರೆಗೆ ನಾಲ್ಕು ತಿಂಗಳು ಚಾತುರ್ಮಾಸದಲ್ಲಿ ಆಮೆಯ ಮಾಂಸವನ್ನು ತಿನ್ನುವ ಬ್ರಾಹ್ಮಣ. ೫೪. ಜ್ವಾಲಾಕುಂಡ ಮತ್ತು ೫೫. ಭಸ್ಮಕುಂಡ-ದೇವ ಬ್ರಾಹ್ಮಣರಿಗೆ ಸೇರಿದ ತುಪ್ಪ, ಎಣ್ಣೆ ಮೊದಲಾದುವನ್ನು ಕದಿಯುವವನು. ೫೬. ದಗ್ಧಕುಂಡ-ದೇವಬ್ರಾಹ್ಮಣರ ನೆಲ್ಲೀಚಟ್ಟು, ಗಂಧ, ಎಣ್ಣೆ ಮೊದಲಾದುವನ್ನು ಕದಿಯುವವನು. ೫೭. ತಪ್ತಶೂರ್ಮಿಕುಂಡ-ಬಲಾತ್ಕಾರದಿಂದ ಇತರರ ಭೂಮಿಯನ್ನು ಆಕ್ರಮಿಸಿಕೊಳ್ಳುವವನು. ೫೮. ಅಸಿಪತ್ರಕುಂಡ-ಹಣದ ದುರಾಸೆಯ ಪರಿಣಾಮವಾಗಿ ಕತ್ತಿ ಮೊದಲಾದ ಆಯುಧಗಳಿಂದ ಜನರ ಪ್ರಾಣವನ್ನು ತೆಗೆಯುವವನು. ೫೯. ಕ್ಷುರಧಾರಕುಂಡ-ಊರು, ಪಟ್ಟಣಗಳನ್ನು ಸುಟ್ಟು ಹಾಕುವವನು. ೬೦. ಸೂಚೀಮುಖಕುಂಡ-ಇತರರ ಕಿವಿಯಲ್ಲಿ ಪಿಸುಗುಟ್ಟಿ ಪರನಿಂದೆ ಮಾಡುವವನು, ಇತರರ ದೋಷಗಳನ್ನು ಎತ್ತಾಡುವವನು. ೬೧. ಗೋಧಾಮುಖಕುಂಡ-ಮನೆಯನ್ನು ಒಡೆದು ಪಾತ್ರೆ ಪರಟೆ, ದನಕರುಗಳು, ಆಡುಕುರಿಗಳನ್ನು ಕದಿಯುವವನು. ೬೨. ನಕ್ರಮುಖಕುಂಡ-ಸಾಮಾನ್ಯವಸ್ತುಗಳನ್ನು ಕದಿಯುವವನು. ೬೩. ಗಜದಂಶಕುಂಡ-ಆನೆ, ಕುದುರೆ, ಆಳುಕಾಳುಗಳ ಕಳ್ಳ. ೬೪. ಗೋಮುಖಕುಂಡ-ಹಸು ನೀರುಕುಡಿಯುವುದನ್ನು ತಪ್ಪಿಸುವವನು. ೬೫. ಕುಂಭೀಪಾಕಕುಂಡ-ಗೋಹತ್ಯೆ, ಸ್ತ್ರೀಹತ್ಯೆ, ಯತಿಹತ್ಯೆ, ಭ್ರೂಣಹತ್ಯೆ, ಬ್ರಹ್ಮಹತ್ಯೆಗಳನ್ನು ಮಾಡಿದವನು; ತಾನು ಬೆರೆಯಲು ಉಚಿತವಲ್ಲದ ಸ್ತ್ರೀಯರೊಂದಿಗೆ ಬೆರೆಯುವವನು; ವ್ರತ, ಸಂಧ್ಯಾವಂದನೆಗಳನ್ನು ಬಿಟ್ಟವನು; ಪುಣ್ಯಕ್ಷೇತ್ರಗಳಲ್ಲಿ ದಾನ ತೆಗೆದುಕೊಳ್ಳುವವನು; ಗ್ರಾಮಪುರೋಹಿತ, ಪೂಜಾರಿ, ಶೂದ್ರರಿಗೆ ಅಡಿಗೆ ಮಾಡಿ ಜೀವಿಸುವವನು; ಋತುಮತೀವಿವಾಹವನ್ನು ಮಾಡಿಕೊಂಡಿರುವವನು. ೬೬. ಕಾಲಸೂತ್ರಕುಂಡ-ಸೂಳೆಯೊಂದಿಗೆ ಬೆರೆಯುವವನು; ಸೂಳೆಯ ಅನ್ನವನ್ನು ತಿನ್ನುವವನು. ೬೭. ಅವಟೋದಕುಂಡ-ಕುಲಟೆ ಮೊದಲಾದ ಆರು ಬಗೆಯ ಸೂಳೆಯರನ್ನು ಅನುಭವಿಸುವವನು. ೬೮. ಅರುಂತುದ ಕುಂಡ-ಚಂದ್ರಸೂರ್ಯಗ್ರಹಣದಲ್ಲಿ, ನಿಷಿದ್ಧ ಕಾಲದಲ್ಲಿ ಊಟಮಾಡುವವನು;

೭೯. ವಾಂಶುಭೋಜಕುಂಡ–ಒಬ್ಬನಿಗೆ ಮಗಳನ್ನು ಕೊಡುವುದಾಗಿ ಮಾತುಕೊಟ್ಟು ಬೇರೊಬ್ಬನಿಗೆ ಮದುವೆ ಮಾಡುವವನು. ೮೦. ಪಾಶವೇಷ್ಟಕುಂಡ–ದತ್ತಾಪಹಾರಿ. ೮೧. ಶೂಲಪ್ರೋತಕುಂಡ–ಭಕ್ತಿಯಿಲ್ಲದೆ ಶಿವಲಿಂಗವನ್ನು ಪೂಜಿಸುವವನು. ೮೨. ಪ್ರಕಂಪನ ಕುಂಡ–ಬ್ರಾಹ್ಮಣರನ್ನು ದಂಡಿಸುವವನು, ಅವರಿಗೆ ಭಯವನ್ನುಂಟು ಮಾಡುವವನು. ೮೩. ಉಲ್ಕಾಮುಖಕುಂಡ–ಗಂಡನ ವಿಷಯದಲ್ಲಿ ಮುಖವನ್ನು ಗಂಟುಹಾಕಿಕೊಂಡು ಕಟುವಾಗಿ ಮಾತನಾಡುವವಳು. ೮೪. ಅಕೂಪಕುಂಡ–ಶೂದ್ರನೊಂದಿಗೆ ಬೆರೆಯುವ ಬ್ರಾಹ್ಮಣಿ. ೮೫. ವೇಧನಕುಂಡ–ಐದಾರು ಮಂದಿಯೊಂದಿಗೆ ಸಂಪರ್ಕವಿಟ್ಟುಕೊಂಡಿರುವವಳು; ವೇಶ್ಯೆ; ಸೂಳೆ. ೮೬. ದಂಡತಾಡನಕುಂಡ–ಏಳೆಂಟು ಮಂದಿಯೊಂದಿಗೆ ಸಂಪರ್ಕವಿಟ್ಟು ಕೊಂಡಿರುವವಳು; ರಂಡೆ. ೮೭. ಜಾಲಬದ್ಧಕುಂಡ–ಎಂಟಕ್ಕಿಂತಲೂ ಹೆಚ್ಚು ಜನರೊಂದಿಗೆ ಸಂಪರ್ಕವಿಟ್ಟುಕೊಂಡಿರುವವಳು; ಮಹಾವೇಶ್ಯೆ. ೮೮. ದೇಹಚೂರ್ಣಕುಂಡ–ಇಬ್ಬರೊಂದಿಗೆ ಸಂಪರ್ಕವಿಟ್ಟುಕೊಂಡಿರುವವಳು; ಕುಲಟೆ. ೮೯. ದಲನಕುಂಡ–ನಾಲ್ವರೊಂದಿಗೆ ಸಂಪರ್ಕವಿಟ್ಟುಕೊಂಡಿರುವವಳು; ಸ್ವೈರಿಣಿ. ೯೦. ಶೋಷಣಕುಂಡ–ಮೂವರೊಂದಿಗೆ ಸಂಪರ್ಕವಿಟ್ಟುಕೊಂಡಿರುವವಳು; ಧೃಷ್ಟೆ; ಪುಂಶ್ಚಲಿ. ೯೧. ಕಷ್ಟಕುಂಡ–ತನ್ನ ಜಾತಿಯ ಪರಸ್ತ್ರೀಯೊಂದಿಗೆ ಬೆರೆಯುವವನು. ೯೨. ಸೂರ್ಪಕುಂಡ–ಬ್ರಾಹ್ಮಣಸ್ತ್ರೀಯೊಂದಿಗೆ ಬೆರೆಯುವ ಕ್ಷತ್ರಿಯ ಮತ್ತು ವೈಶ್ಯ. ೯೩. ಜ್ವಾಲಾಮುಖಕುಂಡ–ಕೈಯಲ್ಲಿ ತುಲಸಿ, ಗಂಗಾಜಲ, ಸಾಲಿಗ್ರಾಮ ಮೊದಲಾದುವನ್ನು ಹಿಡಿದುಕೊಂಡು ಪ್ರಮಾಣಮಾಡಿ ಅದನ್ನು ನಡೆಸದಿರುವ ಸುಳ್ಳ,-ವಿಶ್ವಾಸಘಾತಕ; ಸುಳ್ಳುಸಾಕ್ಷ್ಯವನ್ನು ಹೇಳುವವನು. ೯೪. ಜಿಹ್ಮಕುಂಡ–ಅವರವರ ಸಂಪ್ರದಾಯದಂತೆ ನಿತ್ಯಕರ್ಮಗಳನ್ನು ಮಾಡದೆ, ದೇವರಸೇವೆಯಲ್ಲಿ ಆಸ್ಥೆಯಿಲ್ಲದೆ ಹುಸಿನಗೆ ನಗುತ್ತಾ ಕಾಲಕಳೆಯುವವನು. ೯೫. ಧೂಮಾಂಧಕುಂಡ–ದೇವಬ್ರಾಹ್ಮಣರ ಹಣವನ್ನು ಕದಿಯುವವನು,-ಕಸಿದುಕೊಳ್ಳುವವನು. ೯೬. ನಾಗವೇಷ್ಟನಕುಂಡ–ವೈದ್ಯರ ಮತ್ತು ಜೋಯಿಸರ ವೃತ್ತಿಯನ್ನು ಕಸಿದುಕೊಳ್ಳುವವನು; ಅರಗು, ಲೋಹ, ಎಣ್ಣೆ ಮೊದಲಾದುವುಗಳನ್ನು ಮಾರಾಟಮಾಡುವ ಬ್ರಾಹ್ಮಣ: ತನ್ನಿಂದಾಗಿ ಮೇರಿ ನರಕಕುಂಡಕ್ಕೆ ಬೀಳುವುದು ಮಾಸ್ತರಿಗೆ ಬೇಡವಾಗಿತ್ತು (ಅಪರಿ. ೧೬೯). [ ನರಕ + ಕುಂಡ$_1$ ]

**ನರಕಕೂಪ** (ನಾ). ೧. = ನರಕಕುಂಡ : ಅಗಮ ತಿಳಿಯದೆ ನರಕಕೂಪದಲ್ಲಿ ಬೀಳುವಿರಲ್ಲ (ಪುರಂದ. ೪-೭೦-೨). ೨. (ಅಲಂ) ಹೊಲಸಿನ ಕುಳಿ; ಅಸಹ್ಯದ ಬಿಲ : ಶುಕ್ಲರಕ್ತೋತ್ಕರ ಕರಂಡಂಗಳು ಸದಾ ಪ್ರತ್ಯಕ್ಷಮಾಗಿರ್ದ ನರಕಕೂಪಂಗಳು (ಬಸಪು. ೪೦-೭೦). [ ನರಕ + ಕೂಪ$_1$ ]

**ನರಕಕೊಂಡ** (ನಾ). = ನರಕಕುಂಡ : ಕಡೆಗೆ ಯಮನ ಕೈಯಲ್ಲಿ ಸಿಲ್ಕಿ ನರಕಕೊಂಡದಲ್ಲಿ ಮುಳುಗೇಳುವುದೇ ನಿಶ್ಚಯ (ವಚಸಂ. ೨೦೮-೬೦).

[ <ನರಕಕುಂಡ ]

**ನರಕಗತಿ** (ನಾ). ೧. ನರಕದಲ್ಲಿರುವುದು; ನರಕಕ್ಕೆ ಹೋಗುವುದು; ನರಕಲೋಕವಾಸ: ರವಿಸುತ ವಿಧುಸುತರಲ್ಲಿ ನರಕಗತಿಯಂ ಕುಡುವರ್ (ಜಾತತಿ. ೨೩-೨೪); ಆ ಪಾತಕಂ ನರಕಗತಿಗೆಯ್ದುವ ಧೂರ್ತತನದಿಂ ಕುಟಿಲಮಾರ್ಗಾಂತರ್ಗತನಾಗಿ ಪೋಗೆ (ಶಂಚತಂ. ೭೦-೦೯); ರಾಮನಿರ್ಮಿತ ಕ್ಷೇಮಭೂಮಿಯನುಳಿಯೆ ಕುಂಭಕರ್ಣನ ಬಾಯ್ಗೆ ಮಿಗಿಲಲಾ ನರಕಗತಿ ನಮಗೆ? (ತೊರಾಮಾ. ೬೮೪-೧೬೯). ೨. = ನರಕ ೪ : ತೊಡರ್ವ ಸಂಚರಿಸುವ ನರಕಗತಿಯೊಳ್ ತೊಡರ್ವುದೆ ತೊಡರದೆ ಜಿನೇಂದ್ರಮತದೊಳ್ ಹಿತದೊಳ್ (ಅಜಪು. ೨-೭೦); ನರಕಗತಿಗಿಟ್ಟಿವೊಡಂ ನಿರ್ಜರ ನಿಳಯಮನೆಯ್ದಿ ಸುಖಮಾನುಣ್ಬೊಡಮನ್ನರ್ ನೆರಮಲ್ಲರ್ (ಧರ್ಮಾಮೃ. ೯-೧೫೮); ನರಕಗತಿ ಸಮಮ ತಿರ್ಯಙ್ನರಸುರಗತಿಗಳುಮದಂತೆ ದಲ್ (ಪಾರ್ಶ್ವಪು. ೧೫-೬೨). ೩. [ಜೈನ] ನಿದ್ರಾನಿದ್ರಾ, ಪ್ರಚಲಾಪ್ರಚಲಾ, ಸ್ತ್ಯಾನಗೃದ್ಧಿ, ನರಕಗತಿ, ತಿರ್ಯಗ್ಗತಿ, ಏಕೇಂದ್ರಿಯಜಾತಿ, ದ್ವೀಂದ್ರಿಯಜಾತಿ, ತ್ರೀಂದ್ರಿಯಜಾತಿ, ಚತುರಿಂದ್ರಿಯಜಾತಿ, ನರಕಗತಿ ಪ್ರಾಯೋಗಾನುಪೂರ್ವಿ, ತಿರ್ಯಗ್ಗತಿಪ್ರಾಯೋಗ್ಯಾನುಪೂರ್ವಿ, ಆತಪ, ಉದ್ಯೋತ, ಸ್ಥಾವರ, ಸೂಕ್ಷ್ಮ ಮತ್ತು ಸಾಧಾರಣ ಎಂಬ ಹದಿನಾರು ಕರ್ಮಪ್ರಕೃತಿಗಳಲ್ಲಿ ಒಂದು; ಇದರ ಉದಯವಾದಾಗ ನರಕರ್ಮ ಹೋಗಿ ನಾರಕೀಯಅವಸ್ಥೆ ಪ್ರಾಪ್ತವಾಗುತ್ತದೆ : ಅಂತರ್ಮುಹೂರ್ತದಿಂ ನಿದ್ರಾನಿದ್ರಾಪ್ರಚಳಾಪ ಚಳಾಸ್ತ್ಯಾನಗೃದ್ಧಿ ನರಕಗತಿ ತತ್ಪ್ರಾಯೋಗ್ಯಾನುಪೂರ್ವತಿರ್ಯಗ್ಗತಿ ತತ್ಪ್ರಾಯೋಗ್ಯಾನುಪೂರ್ವೈಕೇಂದ್ರಿಯ ವಿಕಳೇಂದ್ರಿಯ ಜಾತ್ಯಾತಪೋದ್ಯೋತ ಸ್ಥಾವರ ಸಾಧಾರಣ ಸೂಕ್ಷ್ಮಂಗಳೆಂಬ ಪದಿನಾಱುಂ ಕರ್ಮ ಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೦-೮೪ ವ); ನರಕಗತಿ ತತ್ಪ್ರಾಯೋಗ್ಯಾನುಪೂರ್ವಿತಿರ್ಯಗ್ಗತಿ . . . ಸ್ಥಾವರ ಸಾಧಾರಣಸೂಕ್ಷ್ಮಂ[ಗಳೆಂಬ] ಷೋಡಶಕರ್ಮಪ್ರಕೃತಿಗೆ ವಿಳಯಂ ಮಾಡಿ (ಶಾಂತಿಪು. ೧೧-೧೧೧ ವ). [ ನರಕ + ಗತಿ ]

**ನರಕಗಾಮಿ** (ನಾ). ನರಕಕ್ಕೆ ಹೋಗುವವನು; ನರಕಕ್ಕೆ ಪಾತ್ರನಾಗವನು : ಈ ಧರ್ಮ್ಯವಾನಳಿದ ಮಹಾಪಾತ ××× ನರಕಗಾಮಿಯಕ್ಕು (ಸೌಇಇ. XX, ೩೮-೩೩ : 1068). [ ಸಂ. ನರಕಗಾಮಿನ್ ]

**ನರಕಚತುರ್ದಶಿ** (ನಾ) ಆಶ್ವಯುಜ ಮಾಸದ ಕೃಷ್ಣಪಕ್ಷದ ಚತುರ್ದಶಿ; ಶ್ರೀ ಕೃಷ್ಣನು ನರಕಾಸುರನನ್ನು ಕೊಂದುದರ ನೆನಪಿಗಾಗಿ ಆ ದಿನ ಆಚರಿಸುವ ಹಬ್ಬವೆಂದು ಸಾಮಾನ್ಯವಾಗಿ ನಂಬಲಾಗಿದೆ. ಆದರೆ ಇದಕ್ಕೆ ಪುರಾಣಗಳಲ್ಲಿ ಆಧಾರವಿದ್ದಂತಿಲ್ಲ. ನರಕಚತುರ್ದಶಿಯ ದಿನ ಮಾಡುವ ವ್ರತ ಪೂಜಾಕರ್ಮದಲ್ಲಿ ನರಕಕ್ಕೆ ಬೀಳದಿರುವಂತೆ ಆಗಲೆಂದು ಹಾರೈಕೆಯನ್ನು ಹೇಳುವ ಮಂತ್ರವಿದೆ: ಆಶಯುಜ ಬಹುಳ ಹದಿನಾಲ್ಕನೆಯ ತಿಥಿ ನರಕಚತುರ್ದಶಿ (ಧಾಹಬ್ಬ. ೦೪೩). [ ನರಕ + ಚತುರ್ದಶಿ ]

**ನರಕಚೋರ** (ನಾ). ಒಂದು ಬಗೆಯ ಸುಗಂಧ ದ್ರವ್ಯ,-ಕಚೋರ : ನರಕಚೋರ, ನವಸಾಗರ, ನಾಗರ ಮೋಥೆ (ಮುಂಬಬ್ಯಾ. ೧೨೩).

[ ನರ$_3$ + ಕಚೋರ ]

**ನರಕಜೀವಿ** (ನಾ). ನರಕದಲ್ಲಿ ತೊಳಲುವವನು; ಪಾಪಿ : ಆಕಾರವಿಲ್ಲದ ನಿರಾಕಾರಲಿಂಗವ ಕೈಯಲ್ಲಿ ಹಿಡಿದು ಕೊರಳಲ್ಲಿ ಕಟ್ಟಿದೆವೆಂಬರು ನರಕ[ಪಾಶಾಂ. ೩]ಜೀವಿಗಳು (ಮಹಾದೇ. ಬ.೧೬೦-೨೯೮).

[ ನರಕ + ಜೀವಿ$_1$ ]

**ನರಕದರ್ಶನ** (ನಾ). ನರಕವನ್ನು ನೋಡುವಿಕೆ; ನರಕದ ನೋಟ : ದ್ರೋಣನು ನಿನ್ನ ಮಾತಿನಿಂದ ಮೋಸಹೋದನು. ಆ ತಪ್ಪಿನ ಫಲದಿಂದ ನಿನಗೆ ನರಕದರ್ಶನವಾಯಿತು (ವೀತಿಕಂ. IV, ೩೨); ನರಕ ತಪ್ಪಿತು ಧರ್ಮಜಂಗೆ, ದಿಟ, ಆದೊಡೇಂ ? ನರಕದರ್ಶನದುಃಖ ತಪ್ಪದಾಯಿತಲ? (ಮಂಕುಳ. ೫೦೦); ಅದಕೆ ತಕ್ಕಂತೆ ನಿನಗೆ ಮತ್ತೊಬ್ಬರ ನೆವದಿಂದ ನರಕದರ್ಶನವಾಯಿತು (ವಚಭಾ. ೩೯೦). [ ನರಕ + ದರ್ಶನ ]

**ನರಕದುಃಖ** (ನಾ). ನರಕದ ಶಿಕ್ಷೆಯಿಂದುಂಟಾಗುವ ದುಃಖ,-ಸಂತಾಪ : ಕೇವಲಮ ನರಕದುಃಖಂ ಕೇವಲವಿಜ್ಞಾನವಿಷಯಮಲ್ಲಶ್ರುತದೊಳ್ ಭಾವಿಪೊಡಾರ್ ನೆಱೆ ನುಡಿವರೊ ದೇವಂ ಸರ್ವಜ್ಞನೊರ್ವನೇ ನೆಱೆ ನುಡಿಗುಂ (ಅಜಪು. ೦೧-೧೨); ನರಕದುಃಖವ ಮತ್ತೆ ಭೋಗಿಸಬೇಕು ದೇಹಿಗಳು (ತಿಮ್ಮಸ್ತ. ೧-೩೦). [ ನರಕ + ದುಃಖ ]

**ನರಕನಿಳಯ** (ನಾ).=ನರಕ ೧ : ಆ ಪಾಪಿ . . . ನರಕನಿಳಯಕ್ಕೆ ಪೊತ್ತುಂ ಪೋಪನೆಂದು ಮನದಂದಾಗಳ್ (ಪುಣ್ಯಾಸ್ರ. ೫-೩೭).

[ ನರಕ + ನಿಳಯ ( = ನಿಲಯ ) ]

**ನರಕಪಾತ** (ನಾ). ನರಕದಲ್ಲಿ ಬೀಳುವುದು : (Damnation, ಜಾರಿನಿ. ೨೬).

[ ನರಕ + ಪಾತ$_1$ ]

**ನರಕಪಾಲ** (ನಾ). ಮನುಷ್ಯನ ತಲೆಬುರುಡೆ : ನರಕಪಾಲದೊಳು ತೀವಿದ ಹಸಿಯ ಗೋಮಾಂಸವ ಮೆಲುತ (ಹಕಾ. ೧೧-೩೧) ; ನರಕಪಾಲದ ಪಾತ್ರೆಗಳ ತಿಲದೊರಳಿಗಳ ಕೇಶೌಘದರ್ಭಾಂಕುರದಲಾಹವಯಜ್ಞದೀಕ್ಷಿತ ನಹೆನು ತಾನೆಂದ (ಕುಮ್ಯಾಉ. ೧೦-೧೯) ; ನರಕಪಾಲದಲ್ಲಿ ಆಸವವು . . . ತುಂಬಿದ್ದಿತು (ಕಪಾಲಿಕುಂ. ೨೫). [ ನರ$_2$ + ಕಪಾಲ$_2$ ]

**ನರಕಬಾಧೆ** (ನಾ). ೧. ನರಕದಲ್ಲಿ ಅನುಭವಿಸುವ ನೋವು; ನರಕದ ದುಃಖ : ಮುರಹರ ನಗಧರ ಮುಕುಂದ ಎನ್ನದೆ ನರಕಬಾಧೆಗೆ ಗುರಿಯಾಗುತಿ (ಪುರಂದ. ೪-೦೨೫-೪) ; ನರಸಮಿತಿ ಕೊಂದರೆಂದಡೆ ಪೆರವಾಗದೆ ನೋಡದೋಡಿದರು ನಿನ್ನವರೆಂದರೆ ನರಕಬಾಧೆಗವರೇಂ ಪೆರವಪ್ಪರೆ (ನನ್ನಿಡಾ. ೫-೪೪) ; ಪರಲೋಕಸಾಧನಗಳು ಚರಿಸುವ ಚತುರರಿಗೆ ನರಕಬಾಧೆಗಳಿಲ್ಲ (ವಿಕಾಸು. ೮೪-೭). ೨. (ಆಲಂ) ತೀವ್ರವಾದ ಯಾತನೆ.

[ ನರಕ + ಬಾಧೆ ]

**ನರಕಬಿಲ** (ನಾ). [ಜೈನ] ನರಕ : ಅಲ್ಲಿಂದತ್ತಮೇಕರಜ್ಜುಪ್ರಮಾಣಾಂತರದೊಳಮರಿಷ್ಟೆಯೆಂಬಪೆಸರನುಳ್ಳ ಧೂಮಪ್ರಭೆಯೆಂಬಯ್ದನೆಯ ನರಕಬಿಲಂಗಳೆಲ್ಲಂ ಮೂಱುಲಕ್ಕಮಕ್ಕುಂ (ಆಪು. ೧೧-೬ ವ).

[ ನರಕ + ಬಿಲ ]

**ನರಕಭಯ** (ನಾ). ೧. ನರಕಲೋಕಕ್ಕೆ ಹೋಗುವ ಹೆದರಿಕೆ ; ನರಕಗತಿಯುಂಟಾಗುವ ಭಯ,-ಅಂಜಿಕೆ : ನಾಮಕೀರ್ತನೆ ಅನುದಿನ ಮಾಳ್ಪಗೆ ನರಕಭಯಗಳುಂಟೆ (ಪುರಂದ. ೨-೦೦೬ ಪಲ್ಲವಿ). ೨. ನರಕಾಸುರನ ಭಯ. ೧, ೨: ನರಕಭಯಂ ಹರಿಕಥೆಯೊಳ್ . . . ಪಿರಿದುಂ ಮುಖಭಂಗತ್ವಂ ಜರೆಯೊಳ್ಪೆಯ್ದೇರ್ಪುವಲ್ಲದಿಲ್ಲಾ ಪಾಡೊಳ್ (ಶ್ರೀಪುವಿ. ೨-೩೧).

[ ನರಕ + ಭಯಂ ]

**ನರಕಭಾಜನ** (ನಾ). ೧. ನರಕಕ್ಕೆ ಪಾತ್ರನಾದವನು; ದುಷ್ಕರ್ಮಿ : ಪುರಹರನ ಪ್ರತಿಬಿಂಬವೆನಿಸಿದ ಶರಣರಂ ಧಿಕ್ಕರಿಸಿ ನಿಂದಿಸಿ ನರಕಭಾಜನರಾದಿರೀಶ್ವರದೂಷಕರು ನೀವು (ಬಸಪು. ೫೭-೪೦): ಹಿಗ್ಗುವೆ ಯಾಕೋ . . . ಪರರ ಸೇವೆಯ ಮಾಡಿ ನರಕಭಾಜನನಾಗಿ ಮರಳಿ ಮರಳಿ ಬಿದ್ದು ಉರುಳುವ ದೇಹಕ್ಕೆ (ಪುರಂದ. ೦-೧೨೨-೩). ೨. ನರಕಕ್ಕೆ ಸಮಾನವಾದುದು; ಪುಣ್ಯಾಸ್ಪದವಲ್ಲದುದು: ಹರಹರ ತ್ರ್ಯಾಯುಷ್ಯ ಕರುಣಾಕರ ಮಹಾದೇವೀ ದುರಂತದ ನರಕಭಾಜನಮುಚಿತಮೇ ನಿಮ್ಮಂಘ್ರಿದರ್ಶನಕೆ (ಕುಮ್ಯಾಅ. ೧೬-೫೭) ; ಶಿರುಕರಿಲ್ಲದ ಊರು ನರಕಭಾಜನಮಕ್ಕು (ಸರ್ವಜ್ಞ. ೫೦೯).

[ ನರಕ + ಭಾಜನ ]

**ನರಕಭೂತಾಳೆ** (ನಾ). ಒಂದು ಬಗೆಯ ಗಿಡ : ಗಬ್ಬುಚಿಕ್ಕೆ, ನರಕಭೂತಾಳೆ (ಮೈಸಗಿ. ೩೯-೭೭೦). [ ನರಕ + ಭೂತಾಳೆ ]

**ನರಕಭೂಮಿ** (ನಾ). = ನರಕ ೧ : ಅಂತು ರತ್ನಪ್ರಭೆಯಿಂ ತೊಟ್ಟು ನಾಲ್ಕುವರೆ ನರಕಭೂಮಿವರಂ ಉತ್ಕೃಷ್ಟಮುಷ್ಣಮುಂ ಅಲ್ಲಿಂದತ್ತರಡುವರೆ ಭೂಮಿವರಮತಿಶೀತಮಕ್ಕುಂ (ಆಪು. ೧೧-೬ವ).

[ ನರಕ + ಭೂಮಿ ]

**ನರಕಮರ್ದನ** (ನಾ). ನರಕಾಸುರನನ್ನು ಸಂಹಾರ ಮಾಡಿದವನು; ಕೃಷ್ಣ : ನರಕಮರ್ದನ ಕೇಳು ಕೌರವನರಿಗಳಿದಿರೆ . . . ತೊಡೆವೆನು ಕೃತಾಂತನ ಧಾಳದಕ್ಕರವ (ಕುಮ್ಯಾಉ. ೬-೨೮).

[ ನರಕ + ಮರ್ದನ ]

**ನರಕಯಾತನೆ** (ನಾ). ೧. ನರಕಬಾಧೆ ೧ : (೬). ೨. (ಆಲಂ) ಅತಿಯಾದ ನೋವು ; ಅಸಹನೀಯವಾದ ದುಃಖ : ವಾಸಂತಿಯ ಹೃದಯ ನರಕಯಾತನೆಯನ್ನನುಭವಿಸಿತು (ಕೀಮೋಣ. ೯೨) ; ಸಹಸ್ರಾರು ಮಂದಿ, ಕೇವಲ ಭ್ರಮೆಯಿಂದಲೇ–ಸಂಶಯದಿಂದಲೇ ನರಕಯಾತನೆ ಅನುಭವಿಸುತ್ತಿದ್ದಾರೆ (ವೀರಯೋ. ೪೯). [ ನರಕ + ಯಾತನೆ ]

**ನರಕರೋಟಿ** (ನಾ). = ನರಕಪಾಲ : ಮೃತಭಸಿತಸಂ ಪಿಶಿತವನು ನರಕರೋಟಿಯೊಳು ಕೃತಕರ್ಮಭೇದನದಿ ತೀವಿ (ಸಿಂಗಿರಾ. ೦೮-೭).

[ ನರ$_2$ + ಕರೋಟಿ$_2$ ]

**ನರಕಲೋಕ** (ನಾ). = ನರಕ ೧ : ವೈರಿವರ್ಗಮನಡಿಯೊಳಿಟ್ಟಂತೆ ನರಕಲೋಕಮಡಿಯೊಳಿರ್ದುದು (ಜೀವಸಂ. ೩೩-೧). [ ನರಕ + ಲೋಕ ]

**ನರಕವಾಸ** (ನಾ). ೧. ನರಕದಲ್ಲಿ ಇರುವಿಕೆ. ೨. (ಆಲಂ) ಘೋರ ಯಾತನೆ : ಬೇರೆ ನರಕವಿದೆಯೇ ? . . . ನಿತ್ಯ ನರಕವಾಸ ಅನುಭವಿಸುತ್ತಿರುವೆನು (ಕಾವೇರಿ. ೦೧೧). [ ನರಕ + ವಾಸ$_2$ ]

**ನರಕವಾಸಿ** (ನಾ). ನರಕದಲ್ಲಿ ವಾಸಿಸುವವನು : ಹರಿಭಕುತಿ ಉಳ್ಳವರ ಶರೀರವೆ ಕುರುಕ್ಷೇತ್ರ ಅವರು ನರರೆಂದು ಬಗೆವವರೆ ನರಕವಾಸಿಗಳು (ಪುರಂದ. ೧-೧೦೮ ಅನುಪಲ್ಲವಿ). [ ಸಂ. ನರಕವಾಸಿನ್ ]

**ನರಕವಿ** (ನಾ). (ದೈವದತ್ತ ಪ್ರತಿಭೆ ಇಲ್ಲದ) ಸಾಮಾನ್ಯಕವಿ: ವರಕವಿಗಳ ಮುಂದೆ ನರಕವಿಗಳ ವಿದ್ಯೆ ತೋರಬಾರದು (ಕನಕ. ೩೩ ಪಲ್ಲವಿ).

[ ನರ$_2$ + ಕವಿ$_2$ ]

**ನರಕವೇದನೆ** (ನಾ). = ನರಕಬಾಧೆ ೧ : ಅವರು ತಾವು ಮಾಡಿದ ತಪ್ಪಿಗೆ ಬದುಕಿದ್ದಾಗಲೇ ನರಕವೇದನೆ ಅನುಭವಿಸಿದರು (ರೂಢಿ).

[ ನರಕ + ವೇದನೆ ]

**ನರಕಸ್ಥಾನ** (ನಾ). ೧. ನರಕದ ನೆಲೆ; ನರಕಲೋಕ: ನರಕಸ್ಥಾನದೊಳೆಂದು ತಾನೆನಗೆ ಬಂದಾ ದುರ್ಧರಾವಸ್ಥೆಯಿಂ ಪಿರಿದೇಂ (ಶಾಂತೀಶ್ವ. ೯-೧೪೪). ೨. ಹೇಸಿಗೆಯ ನೆಲೆ : ಕ್ರಿಮಿ ಮೇಣ್ ಭಸ್ಮಂ ಮೇಣ್ಪೆಟ್ಟಿ ಮೇಣ್ ಶರೀರಕ್ಕೆ ನಿಟ್ಟೆಯಿಾ ದೊರೆಯುದಟಿರೊಳ್ ಕಮನೀಯಮೊಂದುಮಿಲ್ಲಶುಚಿ ಮಲಾಧಿಷ್ಠಾನಮಿದುವೆ ನರಕಸ್ಥಾನಂ (ಆಪು. ೨-೫೩).

[ ನರಕ + ಸ್ಥಾನ ]

**ನರಕಾಂತಕ** (ನಾ). ೧. = ನರಕಮರ್ದನ : ಆ ನರಕಾಂತಕನೀಕೆಗೆಂದು ಕೊಟ್ಟನೆ ನಿಜಲಕ್ಷ್ಮಿಯಂ ಮಱೆದಂ (ಪಂಪಭಾ. ೪-೮೩). ೨. [ಜೈನ] ವಾಸುದೇವ : ಅಂತಾ ವಿದ್ಯೆಗಳಂ ನರಕಾಂತಕನಲಸದೆ ವಿಷಂ ವಿಷಸ್ಯೌಷಧಮೆಂಬಂತಿರೆ ವಿದ್ಯೆಗಳಿಂ ಗೆಲ್ದಂ (ಶಾಂತಿಪು. ೫-೬೨). [ ನರಕ + ಅಂತಕ ]

**ನರಕಾಗ್ನಿ** (ನಾ). ನರಕದಲ್ಲಿ ಶಿಕ್ಷೆ ಕೊಡಲು ಉಪಯೋಗಿಸುವ ಬೆಂಕಿ : ನರಕಾಗ್ನಿಗಳ್ಕೆ ನಿನ್ನೊಳ್ನೆರೆಯದೊಡೀ ಕಾಮವಹ್ನಿ ಸುಟ್ಟಪುದು (ವೃಷವಿ. ೨೮-೦೦೦). [ ನರಕ + ಅಗ್ನಿ ]

**ನರಕಾಧಿಪತಿ** (ನಾ). ನರಕಲೋಕದ ಒಡೆಯ ; ಯಮ.

[ ನರಕ + ಅಧಿಪತಿ ]

**ನರಕಾಯುಷ್ಯ** (ನಾ). [ಜೈನ] ಹದಿನಾರು ಕರ್ಮಪ್ರಕೃತಿಗಳಲ್ಲಿ ಒಂದು; ನರಕದಲ್ಲಿ ವಾಸಮಾಡುವ ಕಾಲ,— ಅವಧಿ ; ಧನ-ಧಾನ್ಯ ಪರಿಗ್ರಹ ಮೊದಲಾದುವುಗಳಲ್ಲಿ ಅತಿಯಾದ ಮೋಹ, ಹಿಂಸೆ ಮೊದಲಾದ ಪಾಪಕರ್ಮಗಳಲ್ಲಿ ಆಸಕ್ತಿ-ಇವುಗಳಿಂದ ಉಂಟಾಗುವ ಕರ್ಮಬಂಧ : ನಿವತನೂಜರೊಡನೆ ಖೇಚರ ಗೋಚರ ವಿಭವಮನನುಭವಿಸಿ ಬಹ್ವಾರಂಭ ಸಂರಂಭರೌದ್ರಧ್ಯಾನಪರಿಣತನುಪಾರ್ಜಿತ ನರಕಾಯುಷ್ಯಂ ಪ್ರತ್ಯಾಸನ್ನ ಮೃತ್ಯುವಾಗಿ (ಆದಿಪು. ೨-೧೧ ವ): ಆ ಸಮಯದೊಳಾತಂಗೇಟನೆಯ ನರಕಾಯುಷ್ಯಂ ನೆಟಿಯೆ (ಪುಣ್ಯಾಸ್ರ. ೩-೫೪ ವ). ‘ ನರಕಗತಿ ’ ಪರ್ಯಾ.

[ ನರಕ + ಆಯುಷ್ಯ ]

**ನರಕಾರಿ** (ನಾ). ೧. = ನರಕಮರ್ದನ : "ಶ್ರೀವತ್ಸಂ ನರಕಾರ್ಯಧೋಕ್ಷಜ ನಜ್ಞ ಪೀತಾಂಬರಂ . . . ಹೃಷೀಕೇಶಂ ಸುಪರ್ಣಧ್ವಜಂ" (ವಸು_ಕೋ. ೯-೨೨). ೨. [ಛಂದ] ವಿಷ್ಣುಗಣದ ಒಂದು ಬಗೆ : ವಿಷ್ಣುಗಣಮೆಂತಂ ದೊಡೆ:-೧. ಗೋವಿಂದಂ . . . ೫. ಕಂಸಾರಿ ೬. ನರಕಾರಿ (ಛಂದೋಂಬು. ೩-೨೧೦ ವ). [ನರಕ + ಅರಿ₂]

**ನರಕಾವಸ್ಥೆ** (ನಾ). ನರಕಕ್ಕೆ ಬಿದ್ದಿರುವ ಸ್ಥಿತಿ ; ನರಕವಾಸ : ನರಕಾವಸ್ಥೆ ಯೊಳಿರ್ದುದು ನೆನೆ ಬಬ್ಬಿಕ್ಕಂ ಧರ್ಮದಿಂದೀ ವಿಯಚ್ಚರಸಂಪತ್ತಿಗೆ ಬಂದುದಂ ನೆನೆ (ಶಾಂತೀಶ್ವ. ೯-೧೩೦). [ನರಕ + ಅವಸ್ಥೆ]

**ನರಕಾಸುರ** (ನಾ). = ನರಕ ೩ : ನರಕಾಸುರ ಮದಕರಿಪಂಚವದನ ಕುಸುಮಾ ಯುಧಮಂಗಳಜನ್ಮಸದನ (ಪಂಪಭಾ. ೦೬೩-೩); ಕಾಳಗದಲಿ ನರಕಾಸುರನ ಸೀಳಿ ಬಿಸಾಡಿ . . . ಸುದತಿಯರೆಲ್ಲರ ಆಳಿದ ವಸುದೇವಾತ್ಮಜಗೆ (ಪುರಂದ. ೦-೩೬೬-೨); ಆಹಾ ನಿಶಾಚರಿಯರಲ್ಲವೇ ನರಕಾಸುರನಮನೆಯ ಬಾಲಕಿ ಯರು (ಕೃಮಿಥಾ. ೨-೩೯); ಶ್ರೀಕೃಷ್ಣ . . . ಸತ್ಯಭಾಮೆಯ ಕಡೆಯಿಂದಲೇ ನರಕಾಸುರನನ್ನು ಕೊಲ್ಲಿಸಿದ (ಭಾಹಬ್ಬ. ೧೪೩). [ನರಕ + ಅಸುರ]

**ನರಕಿ** (ನಾ). = ನರಕಭಾಜನ ೧ : ನರಕಿಗಳೆನಗೊಮ್ಮೆ ತೋಱದಿರಾ ರಾಮನಾಥಾ (ದೇವಾವ. ೩೩-೩೯) ; ಒಡಲ ಗುಣಧರ್ಮಂಗಳು ಬಿಡದೆ ನಡೆವನ್ನಕ್ಕ ಎಡವಟ್ಟಯದ ಪೂಜೆಯು ತೊಡಿಹನೆಂಬ ನರಕಿಗಳವರೆತ್ತ ಬಲ್ಲರೋ (ಚಿಕ್ಕಚ. ೪. ೩೧೩-೦೦೧೨) ; ಕೃತಘ್ನನೆ ನರಕಿ ವಿದ್ಯಾಧಮ ಮದಾಂಧನೆ ಬಾಹಿರನು (ಕುಮ್ಯಾಕ. ೨೩-೯೩) ; ನರಕಿಗಳು ನಾವವ್ವ ಜಗ ದೊಳು ಧರೆಗೆ ಭಾರಕರು (ಕಾಶಿರಾ. ೯-೦೩). [ಸಂ. ನರಕಿನ್]

**ನರಕೀಟ** (ನಾ). ಕೀಟದಂತಿರುವ ಮನುಷ್ಯ ; ಕ್ಷುದ್ರನಾದ ಮನುಷ್ಯ ; ದುರ್ಬಲನಾದ ಮನುಷ್ಯ : ನರಕೀಟದ್ವಯಸಂಗರಕ್ಕೆ ಖಚರೇಂದ್ರಾಧೀಶನಿಂತೇಕೆ ಕಾತರನಪ್ಪಂ ಗಡಂ (ಶಾಂತಿಪು. ೩-೯೦) ; ಕಲಿಕಾಲದ . . ನರಕೀಟಂಗಳು ಜಿನರೂಪಂ ಧರಿಯಿಸುವುದರಿಂದೆಂದು ಮನದೊಳ್ಳಗೆವುದೆಂತನೆ (ಪಾರ್ಶ್ವ.೩.೨೨). [ನರ₂ + ಕೀಟ₂]

**ನರಕೀಟಕ** (ನಾ). = ನರಕೀಟ : ಈ ನರಕೀಟಕರ ಮಾತುಗಳವೇತಕೆ ಕೋಟ ಯೇಕೋ ರುದ್ರ ನ ದ್ವಿತಿಯೆಂದು ಶ್ರುತಿ ಮೊರೆಯೆ (ಬಸವಪು. ೩೯-೦೭). [ನರ₂ + ಕೀಟಕ₂]

**ನರಕು, ನೆರಕು** (ಕ್ರಿ). ಅವ್ಯಕ್ತವಾದ ಧ್ವನಿಯಿಂದ ನೋವನ್ನು ವ್ಯಕ್ತ ಪಡಿಸು, ನಿಶ್ಶಕ್ತಿಯನ್ನು ಸೂಚಿಸು; ನರಳು: ಎಂಟು ಸಾರಿಯುಂಬಳು ಕುಂಟಿಯಾಗಿರುವಳು ನಂಟರು ಬಂದರೆ ನರಕುವಳು ಶಿವಶಿವ ನಂಟರು ಬಂದರೆ ನರಕುವ ಪೋರಿಯ ಸೊಂಟವ ಮುರಿ (ಹಾಸ್ಯಮಂ. ೩) ; ದೊರಕಿದ ಬಟ್ಟೆ ಹರಕು ಆದರೆ ನರಕೋದು ಯಾಕೆ ? (ಗಾದೆ). **ನೆರಕು** : ಕಾಲಾಳ್ಗಳು ನೆರಕುತಿರ್ದವು ಕಾಲು ಕೈ ಪರಿದು ಘಾಯದಿಂ ಸುರಿವುತಿರ್ದವು ರಕ್ತ (ಹುರಂಗ.: ೩೩-೨೦).
[ದೇ. ೩ ಮಲ. ನರಣ್ಣು, ಞರಣ್ಣು, ನರಕ್ಕ = ನರಳುವಿಕೆ ; ತುಳು ನರಕು, ನರ್ಕು; ಕೊಡ. ನೆರಕ್; ಮಲ್ತೊ. ನಿರೆ]

**ನರಕುಟಿ** 'ನರಗುಟಿ' ನೋ.

**ನರಕೇಸರಿ** (ನಾ). = ನರಸಿಂಹ ೧ : ಮುಳಿದ ನರಕೇಸರಿಯ ದಾಡೆಯ ಥಳಥಳತ್ಕಾರವೊ ಮಹಾಸ್ತ್ರದ ಬೆಳಗೊ (ಕುಮ್ಯಾದ್ರೋ. ೧೯-೦೩). [ಸಂ. ನರಕೇಸರಿನ್]

**ನರಗ₁** (ನಾ). = ನರಕ ೧ : ಪಞ್ಚಮಹಾಪಾತಕಸಂಯುಕ್ತನಾಗಿ ಪೂತಿ ಎನ್ವ ನರಗಕ್ಕೆ ಸಲ್ಗೆ (ಎಕ. VI, ಕೊಪ್ಪ ೩೭-೮ ; ಸು. ೮೭೮).
[< ಸಂ. ನರಕ]

**ನರಗ₂** (ನಾ). ೧. ಒಬ್ಬಾತನ ಹೆಸರು : ನರಗನಿಱಿಯೆ ತನ್ನಡಿಯನುಂ ತನ್ನ ಮಕ್ಕಳುಂ ತನ್ನೊಕ್ಕಲುಂ . . . ಪೆರ್ಮ್ಮಾಡಿಯ ಬೆಸದೊಳಿಱಿದು (ಎಕ. I, ಕಡೂರು. ೦೯೭-೫ ; ೮೭೩) ; ಕಾಳಗನೋ ರಾವಣನೋ ಶಿಶು ಪಾಳನೋ ತಾನೆನಿಸಿ ನೆಗಟ್ದ ನರಗನ ತಲೆ ತನ್ನಾಳಾಳ ಕಯ್ಗೆ ವನ್ದುದು (ಎಕ. II, ೩೯-೯೫; ೯೭೪). ೨. ಒಬ್ಬಾತನ ಹೆಸರು ; ಚಾಳುಕ್ಯ ವಂಶದ ಅರಿಕೇಸರಿಯ ತಂದೆ : ಎಱಂ ಮಾಳವಮುಮಂ ಪಾಱಿಟೆ ತಗುಳ್ದಿ ಱಿದು ನರಗನುರಿಪಿದೊಡೆ ಕರಿಂಕಿಟಿಸಿದಾತನ ತೇಜದ ದೀಟಲವನುಕರಿವು ವಾದುವೊಗೆದುಂವುರಿಗಳ್ (ಪಂಪಭಾ. ೧-೩೩). [< ಸಂ. ನರಸಿಂಹ ?]

**ನರಗ₃** (ನಾ). [ಛಂದ] ಪ್ರತಿಸಾಲಿನಲ್ಲಿಯೂ ಏಳು ಅಕ್ಷರಗಳಿರುವ ಉಷ್ಣಿಕ್ ಎಂಬ ನಾಲ್ಕು ಸಾಲಿನ ವರ್ಣಛಂದಸ್ಸಿನ ಒಂದು ವೃತ್ತ ; ಪ್ರತಿಸಾಲಿನಲ್ಲಿಯೂ ᑌᑌᑌ, -ᑌ-, -ಹೀಗೆ ಗಣನಿಯಮವುಳ್ಳ ವೃತ್ತ : ನರಗಮೆಂಬ ವೃತ್ತಾಕ್ಷರಹೊ ಪಾದಮಾಗುತ್ತಿರೆ ಶಶಾಂಕವಕ್ತ್ರೇ ವರಗನಾಮವೃತ್ತಂ (ಛಂದೋಂಬು. ೨-೯೦). P ನಗಣ, ರಗಣ ಮತ್ತು ಒಂದು ಗುರು ಇದು ಈ ವೃತ್ತದ ಲಕ್ಷಣ. ಈ ಲಕ್ಷಣಸಂಕೇತವೇ ಇದರ ಹೆಸರಾಗಿದೆ. [ಸಂ.]

**ನರಗಂಡಮಾಲೆ** (ನಾ). ಕೊರಳ ನರಗಳ ಮೇಲೆ ಗಂಟುಗಂಟಾಗಿ ಕಾಣಿಸಿ ಕೊಳ್ಳುವ ಒಂದು ಬಗೆಯ ರೋಗ : ಮಾವು, ಮಾವಿನ ಒಳನಾರು, ಎಳ್ಳೆಣ್ಣೆ, ಮೆಣಸು ಇವು ನಾಲ್ಕು ಸಹವಾಗಿ ಕೊಳ್ಳಲು ಗಂಡಮಾಲೆ, ನರಗಂಡಮಾಲೆ ಮಾಣ್ಗುಂ (ವಿಷ್ಯವಿ. ೭೯).
[ನರ₁ (<ನರವು) + ಗಂಡಮಾಲೆ]

**ನರಗಟ್ಟು** (ನಾ). ನರಮಂಡಲ ; ನರವ್ಯೂಹ : ನರಗಟ್ಟು, ನರವಾನಿಸಂ, ಬರವಟ್ಟೆ, ತಱವೊನ್, ಬಡನಡು (ಕಬ್ಬಾಸು. ೩೩೨ ವ್ಯಾಖ್ಯಾ).
[ನರ₁ (<ನರವು) + ಕಟ್ಟು₃]

**ನರಗತಿ** (ನಾ). ಮನುಷ್ಯ ಜನ್ಮ : ನರಗತಿಯನಿಂದು ಭೃಗುಜರ್ ತಿರ್ಯಗ್ಗ ತಿಯುಂ ಕುಜರವಿಗಳ್ . . . ಕುಡುವರ್ (ಜಾತಕ. ೨೩-೨೪).
[ನರ₂ + ಗತಿ]

**ನರಗಬ್ಬಿಗ** (ನಾ). = ನರಕವಿ : ಜಾಣರಿಗೆ ಸುಕವಿಗಳಿಗುಱುವ ನರಗಬ್ಬಿಗರ ಕುಕವಿಗಳ ಸಂಗಮಂ ಸಂತತಂ ತೊಱೆದು ಮೆಱೆವಾ ಅಱಿತ ಸೋಮೇಶ ನೊಲಿದಿತ್ತನಾಹತಮತಿಯ ಕುಱುಹಿನಭಿನವಮಂಗನುಸುರ್ದ ಸತ್ಕೃತಿಯನಿದ ಜಱಿವರಾರ್ (ಮಂಗಳಾ. ೩-೭). [ನರ₂ + ಕಬ್ಬಿಗ]

**ನರಗು** (ನಾ). ಇಕ್ಕಟ್ಟು ; ಸ್ಥಳ ಸಾಲದಿರುವಿಕೆ (?) : ಹೊರಗಿನ ಕೋಟೆಗೆ ಒಳಗಿನ ಜನ ಸಾಲಲಿಲ್ಲ. ಆ ಕೋಟೆ ನರಗಾಯಿತು, ಪಟ್ಟಣದ ಜನ ಹೊಂಡದ ನೀರಿಗೆ ಹೋಗಲು ಸಾಧ್ಯವಾಗಲಿಲ್ಲ (ಚಿತ್ರಹಾ. ೯೭). [<ನರಕು ?]

**ನರಗುಂಜಿ** (ನಾ). ಒಂದು ಬಗೆಯ ಸಸ್ಯ : ನರಗುಂಜಿಸೊಪ್ಪು ತಂದು ನೀರ ಬಿಟ್ಟುಕೊಂಡು ತುಳಿದು ಸೊಲ್ಲಿಗೆ ರಸವ ತೆಗೆದು ಅದನ್ನು ಹಸುವಿನ ಮಜ್ಜಿಗೆ ಬೆರಸಿ ಕೊಳ್ಳೆ ನೀರಕೊಂಬಿನ ವ್ಯಾಧಿ ಮಾಣ್ಗುಂ (ವಿಷ್ಯವಿ. ೭೦). 'ನಱುವಂಜಿ' ಪರ್ಯಾ. [?]

**ನರಗುರಿ** 'ನರಗುಟಿ' ನೋ.

**ನರಗುರಿಗ** (ನಾ). = ನರಗುಟಿ: ನರಗುರಿಗನು ನಾನು ಪರಿಪರಿ ವಿಧದಿಂದಾಂತರಿ ಯಲಿ ಧ್ಯಾನವಾಚರಿಸಲು ಪುಣ್ಯವೆಂದರಿಯಲು ಮನಸು ನಿಂದಿರದೆ . . . ಪಾಪದ ಕಡೆಗೆ ಪರಮಪ್ರೀತಿಬಡುವುದು (ಮೋಕ್ಷದೀ. ೨೨೨-೨೨) : ನರ ಗುರಿಗ ನಾನು ಎನ್ನ ಎತ್ನವಲ್ಲಾ ಗುಣಗಳ ದಯಮೆಂತೊ ಅವರಿಗರಹೊ (ವಿಶಾಕು. ೮೪-೩). [ನರಗುರಿ (<ನರಗುಟಿ) + -ಗ₂]

**ನರಗುಟಿ, ನರಕುಟಿ, ನರಗುರಿ** (ನಾ). ಕುರಿಯಂತಹ ಮನುಷ್ಯ ; ಕ್ಷುಲ್ಲಕನಾದ ಮನುಷ್ಯ ; ವಿವೇಕವಿಲ್ಲದವನು : ನಿಮ್ಮ ಪಾಡೇನೋ ನರಗುಟಿಗಳಿರಾ (ವಚಸಂ. ೦೪೪-೩೩) : ಇದಱ ನೆಲೆಯನಱಿಯದೆ ಈ ಮನವ ಬೆಂಬಳಿಗೊಂಡಾಡಿದವರೆಲ್ಲ ನರಗುಟಿಗಳಾದರಯ್ಯ (ಲಿಂಗವ. ೨೩-೯೩) : ನರಗುಟಿಗಳಿಗೆ ರೋಗ ದಾರಿದ್ರ್ಯ ಅಪಜಯಂಗಳು ಬರುತ್ತಿರಲು

. . . ಎಲ್ಲಿಯುಡೊ ಶಿವಭಕ್ತಿ (ಚನ್ನಪ. ಶ. ೩೩೦-೪೯೩) ; ನರಗುಚಿಯ ನಡೆ ಕಾಳಗಕೆನುತ ಹಿಡಿದೆಳೆದನುತ್ತರನ (ಕುಮಾವ್ಯಾ. ೬-೨೦) ; ಅಚಿಯನದ ನೇನುವನು ಬಾಲಕ ನರಗುಚಿಗಳುಪಚಾರವನು ಮೈಮಚಿದು ಮುನಿವಂದಿತನ ಚರಣವನೊಪ್ಪಿ ಮನದೊಳಗೆ . . . ಹರಿಯ ಸ್ತುತಿಸುತ (ನಿಜಗು. ೯-೭೯೬). **ನರಕುಚಿ** : ನರಕುರಿ[ಚಿ]ಗಳನೆಲ್ಲ ಭರದಿ ರಕ್ಷಿಪುದಕೆ ಪರಮ ಪಾವನನಾವು ಇದು ಸಾಲದೆ (ಪುರಂದ. ೩-೭೬-೧೪) : ಆ ಮಹಾತ್ಮನ ನರಕುಚಿಗಳೆಂತಚಿವರೈ ಶ್ರೀಗಿರಿಯಧೀಶ್ವರನ (ಅಬ್ಬು.ಕ. ೨ ೦). **ನರಗುರಿ** : ವಿರಸವಿಲ್ಲದೆ ನಗೆನುಡಿಯುಳ್ಳ ಸತಿಯಳ ಹರಸದವನು ನರಗುರಿಯು (ಶಪೋಕ. ೧೮-೭೦) ; ಓ ಮಂಕು ನರಗುರಿಯೆ, ಭೂಮಿ ಬರಿ ದೋಣ ಕಣೊ! (ಹಾಂಡಜ. ೩೦.೧೪). 'ಕುಚಿವಾನಿಸ' ಪರಾ. [ನರ$_2$+ಕುಚಿ$_3$]

**ನರಗೊರಲ್** (ನಾ). ನರಗಳು ಉಬ್ಬಿ ಹೊರಗೆ ಕಾಣುಂವಂತಿರುವ ಕೊರಳಂ : ನರಗೊರಲ[ಪಾಠಾಂ. ನೆರಗೊರಳ] ನೊರೆವಾಯ ಹಾವಸವರಿದ ವಲ್ಗಳ ಜೋಲ್ದುಟಿಯ . . . ಕುಜುಬನು (ಬಸವು. ೫೮-೧೧).
[ನರ$_1$ (<ನರವು) + ಕೊರಲ್]

**ನರಚಲು, ನರುಚಲು** (ನಾ). ಸರಿಯಾದ ಬೆಳವಣಿಗೆ ಇಲ್ಲದುದು; ನರಟಾದುದು ; ಪೀಚು : ಬಿಸಿಲು, ನೀರು ಇಲ್ಲದೆ ಗಿಡ ನರಚಲಾಗಿದೆ (ರೂಢಿ). **ನರುಚಲು** : ಅವನು ನೀಲದುಟಿಯ ಕಂಡು ಹಳದಿ ಮೋರೆಯ ನರುಚಲಾದ ಪಡ್ಡೆಹುಡುಗ (ಪುನರು. ೪೪೦). 'ನರಟು$_2$' ಪರಾ.
[ದೇ.॥ ತಮಿ. ನರೈಚ್ಚಲ್]

**ನರಜಂತು** (ನಾ). ಮನುಷ್ಯಜೀವಿ ; ಮನುಷ್ಯ : ಪುಣ್ಯಪಾಪದ ಮಿಶ್ರ ನರಜಂತುವು (ಮಂಕುಳ ೩೧೭). [ನರ$_2$ + ಜಂತು]

**ನರಜನ್ಮ** (ನಾ). ಮನುಷ್ಯನ ಹುಟ್ಟು ; ಮಾನವಜನ್ಮ : ನರಜನ್ಮದಲ್ಲಿ ಹುಟ್ಟಿ ಲಿಂಗಮುಖವನಚಿಯದೆ ಉದಮದ ಸೊಕ್ಕಿ ತಲೆಗೇಚಿತ್ತ (ಬಸವ. ೫೮೫) ; ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ (ಮಹಾದೇ. ಬ. ೨೩-೪೩) ; ಎನ್ನ ನರಜನ್ಮವಂ ಹಿಂಗಿಸಲ್ ಬಂದಿರೋ (ಅಶಿಜಂ. ೩೬-೧೪) ; ನರಜನ್ಮ ಬಂದಾಗ ನಾಲಿಗೆ ಇರುವಾಗ ಕೃಷ್ಣ ಎನಬಾರದೆ (ಪುರಂದ. ೧-೭೦ ಅನುಬಲ್ಲವಿ). [ನರ$_2$ + ಜನ್ಮ]

**ನರಜೀವ** (ನಾ). ಮನುಷ್ಯ : ಮೆರುಗನೊಂದುವುದು ಪೊನ್ ಪುಟಕಾದ ಬಳಿಕ ನರಜೀವವಂತು ಶುಚಿಯಹುದು ದುಃಖಾತ್ಕುವಿಂ (ಮಂಕುಳ. ೮೬೫).
[ನರ$_2$ + ಜೀವ]

**ನರಜೀವಿ** (ನಾ). ಮನುಷ್ಯಜನ್ಮ ಪಡೆದವನು ; ಮಾನವ ; ಮಾಯೆಗೆ ಮರುಳಾದ ನರಜೀವಿಗಳ ಬಹಿರಂಗದ ಬಚಿಯ ಸಂಸ್ಕಾರಮಾತ್ರದಿಂದ ಭವಿ ಭಕ್ತನಪ್ಪನೆ (ಚನ್ನವ. ಶ. ೨೦೯-೯೭೬); ಯಾವತ್ತು ಪ್ರಕಾರ ದಳವರಾಧಗಳಿಗೆ ಪಾತ್ರರಾದ ನರಜೀವಿಗಳು ನಾವು ಒಬ್ಬರನ್ನೊಬ್ಬರು ಕ್ಷಮಿಸದೆ ಇರುವುದು ಕೇವಲ ನೀಚತನವು (ಮುಂಬಯಿ. ೪-೮೭). [ನರ$_2$ + ಜೀವಿ$_1$]

**ನರಟಿಸು** (ಕ್ರಿ). ೧. ಬೆಳವಣಿಗೆ ನಿಂತುಹೋಗುವಂತೆ ಮಾಡು ; ಬೆಳವಣಿಗೆಯನ್ನು ಕುಂಠಿತಗೊಳಿಸು. ೨. ಹೆಚ್ಚದಂತೆ ತಡೆ ; ಮೊಟಕುಗೊಳಿಸು : ಯತಿಜನರ ಧೈರ್ಯಮಂ ಮುರುಟಿಪರ್ಸುರುಟಿಪರ್ನರಟಿಪರ್ ಸತಿಯರನಘಾ (ಷಟಿಂ. ೨-೬೯). [ನರಟು$_1$ + – ಇಸು$_3$]

**ನರಟು$_1$** (ಕ್ರಿ). ಬೆಳವಣಿಗೆ ಹೊಂದದಿರು ; ಪೀಚಾಗು : ಕೇಶವನ ಧಾತುಪಾಠದಲ್ಲಿ ಮಾತ್ರವಲ್ಲ, ದರ್ಪಣದ ಇತರ ಭಾಗಗಳಲ್ಲಿಯೂ ಇಲ್ಲವೆಂದು ಕಿಟ್ಟೆಲ್‌ರ ನಿಘಂಟಿನಿಂದ ಎಣಿಸಬಹುದಾದ ಕೆಲವು ಸಿದ್ಧಧಾತುಗಳನ್ನು ಕೆಳಗೆ ಕಾಣಿಸಿದ್ದೇನೆ – ಇಣಿಕು, ಕುಲಕು, ಬೆದಕು . . . ಜಜ್ಜು, ಪುಟ, ನರಟು, ಗಿಟ್ಟು, ಅಂಟು (ಕಸಾಪ. I, ೨೪೦).
[ದೇ.॥ ತಮಿ. ನೆರುಟು=ಒರಟಾಗಿರುವುದು ; ತುಳು. ನರಡ್= ಬೆಳವಣಿಗೆ ಕುಂಠಿತವಾಗಿರುವಿಕೆ , ಒರಟಾತನ]

**ನರಟು$_2$, ನರುಟು, ನರಡು$_1$** (ನಾ). ೧. (ಮಕ್ಕಳು, ಗಿಡಗಳು, ಹಣ್ಣು ಮೊದಲಾದುವುಗಳ ವಿಷಯದಲ್ಲಿ) ಸರಿಯಾಗಿ ಬೆಳವಣಿಗೆ ಹೊಂದದಿರುವಿಕೆ ; ಪೀಚುಪೀಚಾಗಿರುವಿಕೆ : ಹುಡುಗ ನರಟು, ಹತ್ತುವರ್ಷದವನಾದರೂ ಐದುವರ್ಷದ ಹುಡುಗನಷ್ಟೇ ಕಾಣುತ್ತಾನೆ (ರೂಢಿ). **ನರುಟು** : ೧. "ಹ್ಲಸಿತಂ, ಹ್ಲಸಃ, ಹ್ಲಸೀ, ಹ್ಲಸಃ:, ಹ್ಲಸ್ ಈ ಶನರಟು" (ಶಾಶ್ವ. ೬೨). 'ನರಂಟುಗೊಳ್' ಪರಾ. **ನರಡು$_1$** : ೨. ಒರಟುತನ ; ಹುಂಬತನ. 'ನರಡ' ಪರಾ. [< ನರಟು$_1$]

**ನರಟು$_3$** (ನಾ). ಗೊಣಗುಟ್ಟುವಿಕೆ ; ಗೊಣಗಾಟ. 'ನರಟುಗಾರ' ಪರಾ. [ದೇ.॥ ತುಳು. ನರಟು = ಗೊಣಗು]

**ನರಟುಗಾರ** (ನಾ). ಗೊಣಗುವವನು ; ತೃಪ್ತಿಯಿಲ್ಲದವನು : ನರಟುಗಾರ ಒರಟಾಡುತ್ತಾನೆ (ಗಾದೆ). [ನರಟು$_3$ + – ಗಾರ$_1$ (< – ಕಾಱ)]

**ನರಡ** (ನಾ). ಒರಟ; ಹುಂಬ ; ಅನಾಗರಿಕ : ನರಡನಿಗೆ ಕೊರಡು ಕುರುಡನಿಗೆ ಕೋಲು (ಗಾದೆ). [ನರಡು$_1$ (<ನರಟು$_2$) + – ಅ$_7$]

**ನರಡಿ** 'ನರಡು$_2$' ನೋ.

**ನರಡಿರೋಗ** 'ನರಡುರೋಗ' ನೋ.

**ನರಡು$_1$** 'ನರಟು$_2$' ನೋ.

**ನರಡು$_2$, ನರಡಿ, ನೆರಡಿ** (ನಾ). ದನ, ಆಡು, ಕುರಿ ಮೊದಲಾದುವುಗಳಿಗೆ ಬರುವ ಒಂದು ಬಗೆಯ ರೋಗ : ನರಡುರೋಗಕ್ಕೆ – ಭರದಿಂ ಸುಜ್ಜಿನೆ ಸುಯ್ಕೆ ಸೂಗುರಿಸೆ ಕಣ್ಣಾಕ್ಕಾಲಿಗಳ್ ಬೀಟ್ ಮೆಯ್ ಮರವಟ್ಟಂತಿರೆ ನೋ(ಡಿ)ಡೆ ಪೇಟ್ ನರಡಿ[ಪಾಠಾಂ. ಪೇಟ್‌ರಡಿ]ದಾಯ್ತೆಂದಿಂದು ನಿಶ್ಚೈಸಿ (ಲೋಕೋಪ. ೯-೩೦೭) ; ನರಡಾದೆಕ್ಕಿನಂತೆ ನಾಲಗೆಯನುರ್ಚುವ ಪರಿಜನವುಮಂ (ಧರ್ಮಾಮೃ. ೩-೨೦೬). **ನರಡಿ** : ದನಕರುಗಳಿಗೆ ದೊಡ್ಡ ಜಾಡ್ಯ ಚಪ್ಪೆಜಾಡ್ಯ ನರಡಿ ಶಿರೆ ವಗೈರೆ ಅಂಟುಜಾಡ್ಯಗಳು ವ್ಯಾಪಿಸಿರುವದುಂಟು (ಗ್ರಾಮಕೆ. ೧೦೫) ; ಹುಚ್ಚುನಾಯಿಯ ಹುಚ್ಚು ; ಕೋಳಿ ಜಡ್ಡು ; ದನಗಳ ನರಡಿ . . . ಇತ್ಯಾದಿ (ವಿಕಾಸ. I, ನಿವೇದನ). **ನೆರಡಿ** : ದನ, ಕುರಿ, ಮೇಕೆ, ಕುದುರೆಗಳಿಗೆ ಬರುವ ರೋಗ ನೆರಡಿ. ಈ ರೋಗದ ಪ್ರಾಣಿಯ ಜೊಲ್ಲು, ಸಗಣಿಗಳಲ್ಲಿ ರೋಗಾಣುಗಳು ಇರುವುವು. ಕಟುಕರು, ಚರ್ಮಹದಕಾರರು, ತೊಗಲು ತುಪ್ಪಟಗಳನ್ನು ಕೂಡಹಾಕಿ ಕೆಲಸಮಾಡುವವರಿಗೂ ನೆರಡಿ ಅಂಟಬಹುದು (ಕವಿಕೋ. I, ೩೭೫). [ದೇ.॥ ತೆಲು. ನರಿಡಿ]

**ನರಡುರೋಗ, ನರಡಿರೋಗ** (ನಾ). = ನರಡು$_2$ : ನರಡುರೋಗಕ್ಕೆ . . . ಸಿಂಧುರುಹಂ ಸಾಸಿವೆ . . . ಎಂಬಿವಂ ಕುಡುಗೆ, ಸೈತಕ್ಕುಂ ಮನೋವೇಗದಿಂ (ಲೋಕೋಪ. ೯-೩೦೭). **ನರಡಿರೋಗ** : ಆಡುಗಳಿಗೆ ಬರುವ ಅಂಟುರೋಗಗಳಲ್ಲಿ ಬೊಬ್ಬೆರೋಗ, ದೊಡ್ಡರೋಗ, ನರಡಿರೋಗ ಮೊದಲಾದುವು ಮುಖ್ಯವಾದುವು (ಕವಿಕೋ. I, ೬೫೯). [ನರಡು$_2$ + ರೋಗ]

**ನರತತಿ** (ನಾ). ಜನರ ಗುಂಪು ; ಜನಸ್ತೋಮ ; ಜನಸಮೂಹ ; ನರ[ಪಾಠಾಂ. ಸುರ]ತತಿ ನೊಂದಳಲ್ದು ಮೊಚಿಯೋ ಮೊಚಿಯೋ . . . ಎನುತುಂ ಸುರುಳ್ದು ಸೂಗುರಿಸಿ (ಗಿಂಕ. ೬-೬). [ನರ$_2$ + ತತಿ$_2$]

**ನರತಿ** (ನಾ). ೧. ಕೊರದಲು ನರೆತವಳು ; ಮುದುಕಿ : ಪೊಲತಿ, ನರತಿ, ಎಡತಿ – ಎಂಬ ಮೂಱು ಶಬ್ದದಿತ್ಪಕ್ಕೆ ಸಮಾಸದಂತಿರತ್ತಂ (ಶಮದ. ೨೦೫ ಪ್ರಯೋ). ೨. ಬಿಳಿಯ ಚುಕ್ಕೆಗಳಿರುವ ಹಸು: ಅವನಾದೊಡಂ ಅಳಿಪಿದವನು ಗಂಗೆಯ ತಡಿಯಲು ಕಪಿಲೆಯಂ ಕೊಂದ ಪಾಪದಲು ಹೋಹನು ನರತಿಯ ಕೊಂದ ಪಾಪದಲು ಹೋಹನು (ಶಾಇಕ. IX-1, ೩೭೭-೨೨; 1226).
[<ನರೆ$_2$ + – ತಿ$_1$ (<–ಇತ್ತಿ)./ತುಳು. ನರತಿ]

**ನರತೆ** (ನಾ). ಗಂಡಸಿನ ಸ್ವಭಾವ; ಪುರುಷಸ್ವಭಾವ : ನರತೆಯಣು ನಾರಿಯಲಿ ನಾರೀತ್ವ ನರನೊಳಣು ತಿರಿಚುತಿರುವುದು ಮನವ (ಮಂಕುಳ. ೪೦೩). [ನರ$_2$ + – ತೆ$_3$]

**ನರತ್ವ** (ನಾ). ಮನುಷ್ಯನಾಗಿರುವಿಕೆ : ನಿರ್ಜರನಾಗಿದ್ದು ನ[ಶಾಶ್ವ ದ್ಗವು]ರತ್ವಮಂ ಪಡೆದು [ತಾಂ] ಸುಗ್ರೀವನಾಯ್ತು ವಸುಂಧರೆಯೊಳ್ಕಾನೆನೆ (ಪುಣ್ಯಾಸ್ರ. ೪-೨). [ಸಂ.]

**ನರದೇವ** (ನಾ). ಅರಸ ; ರಾಜ : "ರಾಜಾ, ರಾಜನ್ಯಃ, ರಾಟ್ . . . ಪಾರ್ಥಿವಃ, ನರದೇವಃ, ಲೋಕಪಾಲಃ – ಈ ೧೨ ಅರಸು" (ಹಲಾಯು. ೬೯-೨೬೭) ; ನರದೇವಕುರುಪತಿ ಮತ್ತೆ ನುಡಿದನು ನಗುತ ಸೈಂಧವಗೆ (ಕುಮಾವ್ಯಾ. ೮-೩೩). [ನರ$_2$ + ದೇವ]

**ನರಧರ್ಮ** (ನಾ). ಮನುಷ್ಯಧರ್ಮ ; ಮಾನವಸ್ವಭಾವ : ಪಂತಪಿಸು ವುದು ಜೀವ ಜೀವಸರಸವನೆಳಸಿ ನರಧರ್ಮಸೂಕ್ಷ್ಮವಿದು (ಮಂಕುತಿ. ೪೨೩). [ನರ$_2$ + ಧರ್ಮ]

**ನರನಂದನ** (ನಾ). ಅರ್ಜುನನ ಮಗ; ಅಭಿಮನ್ಯು : ನರನುಂ ನರನಂದನನುಂ ಗುರುವುಂ ಗುರುಸುತನ ಮಾದ್ರಭೂರಿಶ್ರವನುಂ ಸುರಸಿಂಧುಸುತನು ಮಿಂತಜುವರುಮಿತಿರಥರಲ್ತೆ (ಗದಾಯು. ೩-೩೦); ನರನಂದನನಾ ಸರಲಂ ಸರಭಸ[ದಿನೆ]ಚ್ಚು ನಿಜಶರದಿಂ ಭೀಕರಮಪ್ಪ ರಾಶಿಯಾದವು ಸರಲ್ಗಳಿಕ್ಕಡಿಸಿ ಬಿಟ್ಟು ಧರ್ಧಾರಿಣಿಯೊಳ್ (ಮುಹಾನೇ. ೧೨-೧೨೦) ; ನರನಂದನನ ರಥವನು ತಱಿಬಿ ನಿನ್ನಯ ತನಯನಡ್ಡೈಸಿದನು ಕೌರವರಾಯ ಖಾತಿಯಲಿ (ಕುಮಾವ್ಯಾ. ೩-೧೯). [ನರ$_2$ + ನಂದನ]

**ನರನರ** (ನಾ). ಒಂದು ಅನುಕರಣಶಬ್ದ : ತರುಗಳನು ಕೀಳುತ್ತ ಬುಡ ದೊಡನುರುಳಿಸುತ್ತಪ್ಪಳಿಸಿ ನೆಲದೊಳು ನರನರೆನ್ನಲು ರಂಬೆಗಳ ಮುರಿ ಮುರಿಯುತೆಸೆಯುತ್ತೆ (ರಾಮಾಸಂ. ೫-೩-೩೦).

**ನರನಾಟಕ** (ನಾ). ಮನುಷ್ಯನ ನಡೆವಳಿಕೆ : ನರನಾಟಕದ ಸುಪಾದನೆಗೆ ಕಂಡನಿತ ದೇವರ ಪಾದಕುಸುರುವನು (ಕೊರರಾ. ೬-೪-೧೭). [ನರ$_2$ + ನಾಟಕ]

**ನರನಾಥ** (ನಾ). ಅರಸ ; ರಾಜ : ಘನರಥ ನರನಾಥನ ಬವಣೆಯೊಳ್ ತಾವ್ಪುಚುಳಂಗಳಾಗಿ ಪೋರುತ್ತುಮಾವಿರೆ (ಶಾಂತಿಪು. ೪-೭೦ ವ) : ನರ ನಾಥಂಗಿತ್ತು ತನ್ನಂ ನೆನೆದ ಸಮಯದೊಳ್ ಬರ್ಪೆನಾನೆಂದು ಮೆಚ್ಚಿಂ ಚರಿತಾರ್ಥಂ ಭಕ್ತಿಭಾರಾನತಮಣಿಮಕುಟಂ ಹರ್ಷಬಾಷ್ಪಾಂಬುವರ್ಷಂ ಗರುಡಂ . . . ತನ್ನ ಲೋಕಕ್ಕೆ ಪೋದಂ (ಪಂಪಾರಾ. ೮-೩೬) ; ನರನಾಥರ್ ಬೆಸಕೆಯ್ವ ಪೆಂಡಿರೆಳಸಿರ್ಪ ರೂಢಿಯಂ ಗಾಡಿಯುಂ , . . . ಈ ಶೌರ್ಯಮುಂ ಧೈರ್ಯಮುಂ ಹರಿಯೊಳ್ ಕಾದಿ ಕೃತಾರ್ಥಮಕ್ಕುಂ (ಜಗವಿ. ೬-೩೮). [ನರ$_2$ + ನಾಥ]

**ನರನಾಥಾಗ್ರಣಿ** (ನಾ). ರಾಜರಲ್ಲಿ ಶ್ರೇಷ್ಠನಾದವನು : ನರನಾಥಾಗ್ರಣಿ ನೀಂ ಮೊಗಕ್ಕೆ ಮುಳಿಸಂ ತರ್ಪನ್ನಮೇನುಂಟೆ ಸಂಗರಂ ಜಗವಿ. ೭-೯೭) : ನರನಾಥಾಗ್ರಣಿ ತನ್ನಧುಪ್ರಭುನುತಂ ತೀವ್ರಪ್ರತಾಪಂ ವಸುಂಧರೆಯಂ ರಕ್ಷಿಸುತಿರ್ಪನಂ (ನೇಮಿಪು. ೮-೨೮). [ನರನಾಥ + ಅಗ್ರಣಿ]

**ನರನಾಯಕ** (ನಾ). =ನರದೇವ: ನರನಾಯಕನಂ ನಿಂದಾನಿರದೀಗಳೆ ಕಾಂತನಂ ನೆರೆದೇನದಱಿಂದಿಲ್ಲಾ ನೆರೆದಿರ್ದಾಗೆನಾಗೆನೆ (ಕವಿರಾ. ೨-೦೨೩). [ನರ$_2$+ ನಾಯಕ]

**ನರನಾರಾಯಣಾಶ್ರಮ** (ನಾ). ಹಿಮಾಲಯಪ್ರದೇಶದಲ್ಲಿ ನರ ನಾರಾಯಣರು ತಪಸ್ಸು ಮಾಡಿದ ಆಶ್ರಮ, – ಪುಣ್ಯಕ್ಷೇತ್ರ; ಬದರಿಕಾಶ್ರಮ ; P ಸಹಸ್ರಕವಚನೆಂಬ ರಾಕ್ಷಸನು ಲೋಕಕಂಟಕ ನಾಗಿರಲು, ಅವನ ಸಂಹಾರಕ್ಕಾಗಿ ವಿಷ್ಣು, ನರ ಮತ್ತು ನಾರಾಯಣ ಎಂಬ ಇಬ್ಬರು ಋಷಿಗಳಾಗಿ ಅವತರಿಸಿದನು. ಆ ರಾಕ್ಷಸನು ಪಡೆದು ಕೊಂಡಿದ್ದ ವರಕ್ಕೆ ಅನುಸಾರವಾಗಿಯೇ ಇಬ್ಬರು ಋಷಿಗಳೂ ಸಾವಿರ ಸಾವಿರ ವರ್ಷಗಳು ತಪಸ್ಸು ಮಾಡುತ್ತಾ ಒಂದೊಂದಾಗಿ ಅವನ ಕವಚಗಳನ್ನು ಭೇದಿಸುತ್ತಿದ್ದರು. ಕೊನೆಗೆ ಇನ್ನೊಂದು ಕವಚ ಉಳಿದಿದ್ದಾಗ ಅವನು ಕಾರಣಾಂತರದಿಂದ ಸತ್ತು ಕವಚದೊಂದಿಗೆ ಕರ್ಣನಾಗಿ ಹುಟ್ಟಿದನು. ವಿಷ್ಣುವಿನ ಅಂಶವಾದ ನರನು ಅರ್ಜುನ ನಾಗಿ ಹುಟ್ಟಿ ಕರ್ಣನನ್ನು ಕೊಂದನು. ನಾರಾಯಣನ ಅಂಶವಾದ ಕೃಷ್ಣನು ಅವನಿಗೆ ಸಹಾಯ ಮಾಡಿದನು ಎಂಬ ಕಥೆ ಪ್ರಚಾರದಲ್ಲಿದೆ. 'ನರ$_2$' ನೋ. [ನರ$_2$ + ನಾರಾಯಣ + ಆಶ್ರಮ]

**ನರಪ** (ನಾ). ದೊರೆ ; ರಾಜ : ಅರಿನರಪಶಿರೋದಳನಪರಿಣತೋಗ್ರಾಸಿ ಭಯಂಕರಕರರ್ (ಪಂಪಭಾ. ೧-೨೨) ; ನರಪ ನೀಂ ಮುನಿದಂದು ಕೊಂದಪೆ ಯಲ್ಲರು (ಧರ್ಮಾಮೃ. ೯-೩೦೪) ; ನರಪರೊಳಗೊಂದು ಕೋಟಿಯುಮರೆ ಚಾಪಬಲಕ್ಕಧೀಶನಂ ದುಂದುಭಿಯಂ ಬರಿಸಿ (ಕಾವ್ಯಾವ. ೧೧೨). [ಸಂ.]

**ನರಪತಿ** (ನಾ).=ನರಪ : ನರಪತಿಯಂ ಕಪಿವೃತನಾಪರಿವೃತನಂ ಜಲಧಿತಟ ದೊಳಣಾವಂ ಕಂಡಂ (ಕವಿರಾ. ೨-೮೯) : ನರಪತಿ ಬೆನ್ನೊಳಿಟ್ಟೊನಿದಿ ರಾನ್ತುದು ವೈರಿಸಮೂಹಮಿಲ್ಲಿ ಮಚ್ಚರಿಸುವರೆಲ್ಲರು (ಎಳ. III, ಮುಂಡ. ೪೦-೧೭ : ೯೩೦) ; ನರಪತಿ ತೈಲಪಂ ಬೆಸಸೆ ಘೂರ್ಜರಸೇನೆಗೆ ಸೂಚಿಯಾನೆ ಯಂ ಪರಿಯಿಸಿ ಗೆಲ್ದಂ (ಗದಾಯು. ೨-೪೭) : ಗಜಪತಿ ಹಯಪತಿ ನರಪತಿ ಯೆನಿಪ ಮಹೀಪಾಲರಾಸ್ಥಾನದಲ್ (ಎಕ. VI, ೨೦೭-೯ : 1087) ; ನರಪತಿ ಬರ್ದಿನನೆಂದಾದರದಿಂ ಗೃಹಲಕ್ಷ್ಮಿ ಬೋನಮೆತ್ತಿದುದೆಂಬಂತಿರೆ ಚೊಾಧ್ಯ ಮಪ್ಪಿನಂ ಚಿತ್ರರದೆತ್ತಿದ ಬೋನದಿರವು ಚೆಲ್ವಾಯ್ತಾಗಳ್ (ಸುಕುಮಾ. ೧೦-೨೩) ; ನರಪತಿ ತಾನೆ ತನ್ನ ಚತುರಂಗಬಲಂ ಬೆರಸೆತ್ತಿ ಬರ್ಪುದಂ . . . ಕಂಡು (ಪುಣ್ಯಾಸ್ರ. ೫-೩೩). [ನರ$_2$ + ಪತಿ$_2$]

**ನರಪತಿತನಯ** (ನಾ). ಅರಸನ ಮಗ ; ರಾಜಕುಮಾರ : ನರಪತಿ ತನಯನಾಯತತರಳಾಪಾಂಗದೊಳೆ ನೋಡಿ (ಕವಿರಾ. ೧-೬೦). [ನರಪತಿ + ತನಯ]

**ನರಪತಿಸೇನೆ** (ನಾ). ಅರಸನ ಸೈನ್ಯ : ನರಪತಿಸೇನೆಯೊಳ್ ಪಲರೊಳಂ ಮುಖ್ಯಂಗೆ ಗುಣದೊಳತ್ಯಧಿಕಂಗೊರ್ವರೊಳಾನುಮಿಲ್ಲದೊರ್ವನೆ ಬರೆ ತನಗೆಂದಱಿತುಕೊಳ್ಗೆ ಶಕಟನದ ಮತಮಂ (ಲೋಕೋಪ. ೧೨-೨). [ನರಪತಿ + ಸೇನೆ]

**ನರಪಶು** (ನಾ) ಪಶುವಿಗೆ ಸಮಾನವಾದ ಮನುಷ್ಯ ; ಪಶುವಿನಂತೆ ವರ್ತಿಸುವವನು; ಅವಿವೇಕಿ: ವಿದ್ಯೆಯಿಲ್ಲದ ನರನು ನರಪಶುವವನ ಜನ್ಮ ನಿರರ್ಥಕರ (ಕುಮಾರೆಉ. ೩-೦೦೫) ; ಇರುಳು ಹಗಲು ನರಹರಿಯನು ತುತಿಸದೆ ನರಪಶುಗಳ ಕೊಂಡಾಡುತಿ (ಪುರಂದ. ೪-೦೨೫-೪) ; ಅವನ ಮಾತೆತ್ತಬೇಡಿರಿ ನನ್ನೆದುರು ! ನರಪಶು (ಕಮಲ. ೧೧). [ನರ$_2$ + ಪಶು]

**ನರಪಾಲ, ನರಪಾಳ** (ನಾ). = ನರಪ : ನರಪಾಲವ್ರಜಮರ್ಮಜಾಲ ವಿಲಸನ್ಮಾಣಿಕ್ಯಮಾಲಾಂಶುಪಿಂಜರಿತಂ (ಆದಿಪು. ೧೪-೯೨) ; ನರಪಾಲಂ ಮೇಘರಥಂ ಪರಿಪಾಲಿಸುತಿರ್ಪಂ (ಮುಹಾನೇ. ೧೬-೪). **ನರಪಾಳ**: ನರಪಾಳ ಮೌಳಿಮಾಲಾಪರಸ್ಪರಪ್ರೋತರತ್ನರುಗ್ಜಾಳದಿನಂಬರವಿದಪ್ಪೂರ್ವಂ ದಿವ್ಯಾಂ ಬರಮಾದುದು ಭವನಲಕ್ಷ್ಮಿಗೇಪೊಗಟ್ಟನಿದಂ (ವರ್ಧಪು. ೫-೩) ; ನರಪಾಳ ಪುತ್ರಿಯೊರ್ವಳ್ ಸುರಪತಿಗಂ ರಮಣಿಯಾಗಿ ಸುಖದಿಂದಿರ್ದಳ್ (ಪುಣ್ಯಾಸ್ರ. ೩-೮). [ಸಂ.]

**ನರಪಾಳ** 'ನರಪಾಲ' ನೋ.

**ನರಪಿಶಾಚಿ** (ನಾ). ಮನುಷ್ಯಸ್ವರೂಪದಲ್ಲಿರುವ ಪಿಶಾಚಿ,–ದೆವ್ವ : ಎಲೆ ನರಪಿಶಾಚಿ! ನನ್ನನ್ನು ನನ್ನಿದಿರಿನಲ್ಲಿಯೇ ನಾಯಿಯೆಂದು ಕರೆಯುವಷ್ಟು ದಿಟ್ಟತನವು ನಿನಗುಂಟಾದುದೇ ? (ಪಿಶಾಚ. ೫೭). [ನರ$_2$ + ಪಿಶಾಚಿ]

**ನರಪಿಳ್ಳೆ** (ನಾ). ೧. ಚಿಕ್ಕ ಹುಡುಗ, ೨. (ಅಲಂ) ಸಾಧಾರಣ ವ್ಯಕ್ತಿ ; ಮನುಷ್ಯ ಮಾತ್ರ; ಸಾಮಾನ್ಯ ಮನುಷ್ಯ: ಅವರು ಅಲ್ಲಿಗೆ ಬಂದಿದ್ದದ್ದು ಒಂದು ನರಪಿಳ್ಳೆಗೂ ಗೊತ್ತಾಗಲಿಲ್ಲ (ವಕಥಾ. ೫೦) : ಒಂದು ನರಪಿಳ್ಳೆಯ ಧ್ವನಿಯೂ ಎಲ್ಲಿಯೂ ಕೇಳಿಸುತ್ತಿಲ್ಲ (ವಾರಾಶ್ಯ. ೪೩) ; ನಾರಣಪ್ಪನ

ಸಾವನ್ನು ಕೇಳಿ , . . . ಅಗ್ರಹಾರದ ಒಂದು ನರಪಿಳ್ಳೆಗೂ ವ್ಯಥೆಯಾಗದಿದ್ದರೂ ಕೂಡ ಎಲ್ಲರ ಹೃದಯದಲ್ಲು . . . ಕಳವಳ ಹುಟ್ಟಿತು (ಸಂಸ್ಕಾರ. ೫). [ ನರ್$_{2}$+ಪಿಳ್ಳೆ ]

**ನರಪುಂಗವ** (ನಾ). ಮನುಷ್ಯರಲ್ಲಿ ಶ್ರೇಷ್ಠನಾದವನು ; ಉತ್ತಮ. [ ನರ್$_{2}$ + ಪುಂಗವ ]

**ನರಪೇತ, ನರಪೇತು** (ನಾ). ಬದುಕಿದ್ದೂ ಹೆಣದಂತಿರುವವನು ; ತೀರ ಕೃಶನಾದವನು; ಜೀವಚ್ಛವ; ಕೈಲಾಗದವನು; ಅಶಕ್ತ; ದುರ್ಬಲ : ನರಪೇತರ ನರಕದಲ್ಲಿ ಹೊಸೆಯದಿರೀ ಕಗ್ಗ (ಅಶಳು. ೪೧೩-೦೩) ; ಬರಿಯ ಎಮುಕೆ ; ನರಪೇತ ; ಕದಿರುಕಡ್ಡಿ (Bag of Bones. ಇಂಕನ್ನ). **ನರಪೇತು** : ಬೀತ ನರಪೇತುಗಳಿರಾ! ಬಾತಂಥ ಪ್ರೇತಗಳಿರಾ! (ಗರಿ. ೫೦-೪).

[ ನರ್$_{2}$ + ಪೇತ ]

**ನರಪೇತಲ, ನರಪೇತಲು** (ನಾ). ೧.=ನರಪೇತ: ಹಲವಾರು ರೋಗಿಗಳು ನರಪೇತಲರಾಗಿರುತ್ತಾರೆ (ಮನೋಚಿಸಂ. ೩೧೧) ; ಕಾಲಬಲವಿಲ್ಲದ ಶಿಖಂಡಿ ನರಪೇತಲ ಗೊರಸುತುಳಿತಕ್ಕೆ ಸಿಕ್ಕಿಬಿದ್ದ (ಚಂಡಮು. ೩೦-೦೩) ; ಅವನು ಮೂಳೆ ಚಕ್ಕಳಗಳ ಉದ್ದನೆಯ ನರಪೇತಲ (ಪುನರು. ೪೦೩); ಬಿಸಿಲು ಮತ್ತು ಹಸಿವಿನಿಂದ ಇನ್ನಷ್ಟು ನರಪೇತಲನಾಗಿ ಮನೆಗೆ ಬಂದು (ಸಂಸ್ಕಾರ. ೬೫). ೨. ಕೃಶವಾದುದು; ಸೊರಗಿದುದು: ಹುರಿನ ಹೆಸರು ನೆನಪಿಗೂ ಬಾರದ ಹಾಗೆ ಬತ್ತಲೆ ನಿಂತ ನರಪೇತಲ ಮರಗಳು (ಹೊಸಕ್ಷಿ. ೩೭೪). **ನರಪೇತಲು** : ೧. ಹೆಸರು ಭೀಮಸೇನ. ನೋಡುವುದಕ್ಕೆ ನರಪೇತಲು (ಹೊಸಕಿ. ೧೯).

**ನರಪೇತಲ ನಾರಾಯಣ** = ಕೃಶನಾಗಿರುವವನು ; ನರಪೇತ : ಎಷ್ಟೇ ತಿಂದರೂ ಅವನು ನರಪೇತಲ ನಾರಾಯಣನಾಗಿದ್ದಾನೆ (ರೂಢಿ).

[ <ನರಪೇತ ]

**ನರಪೇತಲು** 'ನರಪೇತಲ' ನೋ.

**ನರಪೇತು** 'ನರಪೇತ' ನೋ.

**ನರಪೋತ** (ನಾ). ಅಲ್ಪನಾದ ಮನುಷ್ಯ : ಆ ನರಪೋತಂಗಳ್ಗೆಲ್ಲ ನಾನಂಜಲುಂಟೆ (ಪಾರ್ಶ್ವನಾ. ೬.೨). [ ನರ್$_{2}$ + ಪೋತ$_{2}$ ]

**ನರಪ್ರಾಣಿ** (ನಾ). = ನರಜಂತು : ಸೊಗಸು ಬೇಡದ ನರಪ್ರಾಣಿಯಲ್ಲಿ ಹುದಯ್ಯ? (ಮಂಕುತಿ. ೪೪೩). [ ನರ್$_{2}$ + ಪ್ರಾಣಿ ]

**ನರಪ್ರೇತ** (ನಾ). ೧. ಮನುಷ್ಯನ ಹೆಣ. ೨. (ಆಲಂ) ಜೀವಚ್ಛವ ; ಹೇಡಿ:ಉದಾರಹೃದಯಿಗಳಾಗಿರಬೇಕಾದಂಥ ತರುಣರು ಕೂಡ ನರಪ್ರೇತರೇ ಆಗಿದ್ದಾರೆ (ಶ್ರೀಮುಖ. ೨೩). [ ನರ್$_{2}$ + ಪ್ರೇತ ]

**ನರಬಲ** (ನಾ). ಪದಾತಿ ಸೈನ್ಯ ; ಕಾಲಾಳುಗಳ ಪಡೆ : ನರಬಲದೊಳ್ ತುರಂಗಬಲದೊಳ್ ರಥಸಂಕುಲದೊಳ್ ಮದಾಂಧಕುಂಜರಕುಲದೊಳ್ ಸಿರಂ ಸಿಡಿಯೆ ಸೀಳೆ ಬಸುರ್ಕಡಿಯೋಗಿ ನಾಳಿ ಕೀಲ್ ಸುರಿತರೆ ಮಸ್ತಕಸ್ಥಾನದ ಮೌಕ್ತಿಕಮುಣ್ಮುವಸೃಗ್ಜಲಂಗಳೊಳ್ ಬೆರಸಿ ಸರಲ್ ಸುಪಕ್ರಮನೆ ಸಂದುವು ಶೃಂಗಾರರಂಗಭೂಮಿಯೊಳ್ (ಪಂಪಭಾ. ೭-೧೯). [ ನರ್$_{2}$ + ಬಲ$_{2}$ ]

**ನರಬಲಿ** (ನಾ). ಭೂತ, ಪ್ರೇತಗಳ ಅಥವಾ ದೇವತೆಗಳ ಪ್ರೀತ್ಯರ್ಥವಾಗಿ ಕೊಡುವ ಮನುಷ್ಯನ ಬಲಿ; ಮನುಷ್ಯನನ್ನು ಕ್ಷುದ್ರದೇವತೆಗಳ ಮುಂದೆ ಪ್ರಾಣಿಗಳನ್ನು ಕೊಲ್ಲುವಂತೆ ಕೊಲ್ಲುವುದು: ನರಬಲಿಯನಿತ್ತ ಬಳಿಕಾ ಬಿಸಿಯ ನೆತ್ತರಿಂ ಪೊರೆದ ಮಣ್ಣಿಂದಲ್ಲದೀ ಕೋಂಟೆ ನಿಲ್ಲದನೆ (ಸಮ್ಮಿಳಾ. ೨-೫೪) ; ಬಲಗಾಲ್ ಬುಡದಿಂ ಬಿಡುಗಡೆ ಬಿಡಿಸಲು ನರಬಲಿಯೇ ಬೇಕು ! (ಗರಿ.೭೭-೦೫) ; ಖೊಂಡರು – ಎಂಬ ಜನರು ಪೂರ್ವದಲ್ಲಿ ನರಬಲಿ ಕೊಡುತ್ತಿದ್ದರು (ಭೂಗೋಳ. ೮೧) ; ನಿನ್ನ ಮಕ್ಕಳಲ್ಲಿ ಒಬ್ಬನನ್ನು ನರಬಲಿಗೋಸ್ಕರ ಕೊಡು (ನೀತಿಚಿಂ. XIV, ೦೩). [ ನರ್$_{2}$ + ಬಲಿ$_{2}$ ]

**ನರಭಕ್ಷಕ** (ನಾ). ೧. ಮನುಷ್ಯನನ್ನು ತಿನ್ನುವ ಪ್ರಾಣಿ ; ಹುಲಿ, ಸಿಂಹ ಇತ್ಯಾದಿ : ಒಂದು ಸಿಂಹವು ಮನೆ ಮಾಡಿಕೊಂಡು, ಗಂಡಾಂತರವನ್ನುಂಟು ಮಾಡುತ್ತಿದೆ . . . ಆ ನರಭಕ್ಷಕನ ಹಾವಳಿಯನ್ನು ತಡೆಗಟ್ಟು (ಪಂಚಸ.೮೮). ೨. ಮನುಷ್ಯನ ಮಾಂಸವನ್ನು ತಿನ್ನುವ ವ್ಯಕ್ತಿ. ೩. ರಾಕ್ಷಸ (ಶ). [ ನರ್$_{2}$ + ಭಕ್ಷಕ ]

**ನರಭಕ್ಷಕಿ** (ನಾ). ಮನುಷ್ಯರ ಮಾಂಸವನ್ನು ತಿನ್ನುವ ಹೆಂಗಸು : ನನ್ನನ್ನೇಕೆ ತಿಂದುಬಿಡುವಂತೆ ನೋಡುತ್ತೀಯ. ನೀನೇನು ನರಭಕ್ಷಕಿಯಾ ? (ಹಸುಹೊ. ೨೦೫). [ ನರಭಕ್ಷಕ+ –ಇ$_{2}$ ]

**ನರಭಕ್ಷಣ** (ನಾ). ೧. ಮನುಷ್ಯನನ್ನು ತಿನ್ನುವುದು: ಮನುಷ್ಯನನ್ನು ತಿನ್ನುವಿಕೆ: ನರಭಕ್ಷಣ (Anthropophagy. ಇಂಕನ್ನ). ೨. (ಆಲಂ) ಜನರಿಗೆ ಮೋಸ ಮಾಡುವುದು : ಮಂತ್ರಿಮಂಡಲ ಮತ್ತು ಸರ್ಕಾರದ ಇಲಾಖೆಗಳಲ್ಲಿ ನರಭಕ್ಷಣಪ್ರವೃತ್ತಿಯ ಅಂಕುರಾರ್ಪಣೆಯಾಗುತ್ತಿತ್ತೇ ಹೊರತು, ಸೈಬೀರಿಯಾದ ಹೌಗುನೆಲದಲ್ಲಲ್ಲ (ಪುನರು. ೫೫೪).

[ ನರ್$_{2}$ + ಭಕ್ಷಣ ]

**ನರಭಾಲಪಟ್ಟ** (ನಾ). ಮನುಷ್ಯನ ಹಣೆ : ಸಾಧ್ಯಪಡದಾರಿಗಂ ನರಭಾಲ ಪಟ್ಟವನು ಶುದ್ಧಪಡಿಸಲು ತೊಡೆದು ಪೂರ್ವದಲ್ಲವನು (ಮಂಕುತಿ. ೬೩೩).

[ ನರ್$_{2}$ + ಭಾಲಪಟ್ಟ ]

**ನರಭೋಗ** (ನಾ). ಮಾನವನಾಗಿ ಪಡೆಯುವ ಅನುಭವ: ಚರಮವೃತ್ತಿಯೊಳಗಾವ ಭಾವವು ಸ್ಫುರಿಸುವುದೋ ಅಂತಾ ಜನ್ಮಪ್ರಾಪ್ತಿಯಹುದೆಂದು ನರಭೋಗ ಶಿಲಾಭೋಗ ಪ್ರತಿಮಾಭೋಗ ದ್ರವ್ಯಭೋಗಾದಿಗಳ ವೈಚಿತ್ರ್ಯಮುಳ್ಳ ಲೋಕದ ಪ್ರಾಂತಂಗಳಂ ನಂದಿ ನಾರದ ಭರತ ದೇವಲಾದಿ ಪುರಾವೃತ್ತಗಳಂ ಸಮನ್ವಯಗೊಂಡು (ವಿವೇಕ. ೧೯೮).

[ ನರ್$_{2}$ + ಭೋಗ ]

**ನರಮ್, ನರಂ, ನರಮು, ನರ್ಮ್$_{2}$** (ಗು). ೧. ಕೋಪ ಮೊದಲಾದುವುಗಳ ಆವೇಶ ಇಳಿದ ; ಮೆತ್ತಗಾದ ; ತಣ್ಣಗಾದ : ತನಗ ಪ್ರತಿಕಾರನ ಇಲ್ಲಾ ಅಂತ ತ್ಯಾಮರಾಯಗ ಅನಿಸಿದರ ತಾನ ನರಮ್ ಆಗತಾನ (ದೀಪಹ. II, ೧೦೭). **ನರಂ** : ೧. ಗರುಡಮರಿಯನ್ನು ಕಂಡ ಹಾವಿನಂತೆ "ನರಂ" (ಮೆತ್ತಗೆ) ಆಗುತ್ತಾನೆ (ಬಿಸ್ತಕ. ೦೮) ; ಮರುಮಾತಾಡದೆ ನರಂ ಆದ ನರಿಯಂತೆ ಈ ನರೋತ್ತಮ ಕೂಲಗಿದ (ಮೂಮನೆ. ೧೦೭). **ನರಮು** : ೨. ಮೃದುವಾದ ; ಕೋಮಲವಾದ ; ಮೆತ್ತನೆಯ : "ನರಮು = ಮೆತ್ತನ್ನ" (ಜಾನಕೋ. ೯). ೩. ನಮ್ರನಾದ ; ವಿಧೇಯನಾದ. **ನರ್ಮ್$_{2}$** : ೨."ನರ್ಮ = ಮೆತ್ತನ್ನ" (ಜಾನಕೋ. ೯). (ನಾ). ೪. ದುರ್ಬಲತೆ ; ನಿಶ್ಶಕ್ತಿ : ಆಧರ್ಮಿಗಳ . . . ಮೋಹಿಸುವ ಕಾಮಾಂಧರಟ್ಟುಳಿಯನು ಒರ್ಮೆಯಾಂ ಪೊರಲಾರೆನೆಂದಿಳಾಭಾಮಿನಿಯು ನರ್ಮದಿಂ ಕರಗಿ ಕಂದುತ್ತ ಮಿಡುಕುವಳು (ದುರಪು. ೨-೦೮).

**ನರಮುಗೊಳಿಸು** = ಮೆತ್ತಗೆಮಾಡು ; ಬಗ್ಗುಬಡಿ : ಸತ್ಯಪ್ರತಿಜ್ಞರಾದ ರಜಪೂತರನ್ನು ಕುಟಿಲನೀತಿಯಿಂದ . . . ಸ್ವಾಧೀನಪಡಿಸಿಕೊಂಡು ನರಮುಗೊಳಿಸುತ್ತ ತನ್ನ ನೇತೃತ್ವದ ಕೆಳಗೆ ಇಟ್ಟುಕೊಳ್ಳಲುಪಕ್ರಮಿಸಿದನು (ಮೂತ್ಯಭೂ. ೫). [ ←ಹಿಂ. ಮರಾ. ಗುಜ. ನರಮ್ ; ಪಾರ. ನರ್ಮ್ ]

**ನರಮಂಡಲ** (ನಾ). = ನರವ್ಯೂಹ : ಯಾವುದೋ ಒಂದು ತೇಜೋವಾಹಿಯು ನರಮಂಡಲವನ್ನೆಲ್ಲಾ ಆಕ್ರಮಿಸಿ ಕೌಶಿಕನೆನ್ನುವ ತನ್ನನ್ನು ಕಬಳಿಸುವಂತೆ ತೋರುತ್ತಿದೆ (ಮಹಾಕ್ಷ. ೩೭) ; 'ಥಿಯಾಮಿನ್' ಮನಸ್ಥಿತಿಯ ಜೀವಾತು. ನರಮಂಡಲದ ಮತ್ತು ಹೃದಯದ ಕ್ರಿಯೆಗಳು ನಡೆಯಬೇಕಾದರೆ ಇದು ಅಗತ್ಯ (ಆಯುಶಾ. ೬೦) ; ಶರ್ಕರಪಿಷ್ಟಾದಿಗಳಿಂದ ದೇಹಕ್ಕುಂಟಾಗುವ ಪ್ರಯೋಜನಗಳು . . . ಹೃದಯ, ನರಮಂಡಲ ಮತ್ತು ಪಿತ್ತಜನಕಾಂಗಗಳ ಆರೋಗ್ಯಕ್ಕೆ ನೆರವಾಗುವುದು (ಗೃಹವಿ. ೧೮).

[ ನರ್$_{1}$ (<ನರವು) + ಮಂಡಲ ]

**ನರಮನುಷ್ಯ** (ನಾ). ಸಾಮಾನ್ಯಮನುಷ್ಯ ; ಮನುಷ್ಯಮಾತ್ರ : ನೀರು ಜಲಚರದೆಂಜಲು ಮೃಗಪಕ್ಷಿಗಳೆಂಜಲು ಬಳಸಹೋದಲ್ಲಿ ಕೈಕಾಲ ತೊಳೆದು ಬಾಯ ಮುಕ್ಕುಳಿಸುವಲ್ಲಿ ನರಮನುಷ್ಯರೆಂಜಲು (ವಚಸಂ. ೩೭೯-೯೨). [ ನರ$_2$ + ಮನುಷ್ಯ ]

**ನರಮಹಿತ** (ನಾ). ಜನರಿಂದ ಗೌರವಿಸಲ್ಪಟ್ಟವನು ; ಜನರ ಆದರಕ್ಕೆ ಪಾತ್ರನಾದವನು : ನರಮಹಿತಾ [ಪಾಠಾಂ. ಪಾ] ನಿನಗೇನಹಿತರು ಮೊಳರೇ ಸತತ ಪರಹಿತಾಚಾರಪರಾ (ಶವಿಲಾ. ೧-೯೦).
[ ನರ$_2$ + ಮಹಿತ ]

**ನರಮಾಂಸ** (ನಾ). ಮನುಷ್ಯನ ಮಾಂಸ : ಹಿರಿಯರು ನರಮಾಂಸವ ಭುಂಜಿಸುವರೆ (ಬಸವ. ೨೫೦) ; ಕುಂಭ ನರಮಾಂಸದ ಸವಿಯಿಂ ಮನುಜರೆಲ್ಲರಂ ಗುಪ್ತದೆ ಕೊಲ್ಲುದನಱಿದು (ಜಾಂತೀಕ್ಷೆ. ೩-೬೫) ; ಮಾಂಸವಾಗಲೆ ವೇಳ್ಕುವಕ್ಕುಂ ಮಾಂಸಮುಂ ನರಮಾಂಸಂ (ಬಸವು. ೨೪-೭) : ರಕ್ತದ ಜಲಪಾತ ! ನರಮಾಂಸದ ನಾತ ! (ಪಾಂಚಜ. ೬೯-೯). [ ನರ$_2$ + ಮಾಂಸ ]

**ನರಮಾಂಸಭಕ್ಷಕ** (ನಾ). ಮನುಷ್ಯನ ಮಾಂಸವನ್ನು ತಿನ್ನುವವನು ; ನರಭಕ್ಷಕ: ಈ ಮರ್ಯಾದೆಯನಱಿಯದ ಹಿರಿಯರು ನರಮಾಂಸಭಕ್ಷಕರಯ್ಯಾ (ಅನ್ನವ. ಶ. ೩೯೦-೭೦೬). [ ನರಮಾಂಸ + ಭಕ್ಷಕ ]

**ನರಮಾಂಸಭುಂಜಕ** (ನಾ). = ನರಮಾಂಸಭಕ್ಷಕ : ಅವನು ಗುರುದ್ರೋಹಿ ಆಚಾರಭ್ರಷ್ಟ ವ್ರತಗೇಡಿ ನರಮಾಂಸಭುಂಜಕ (ಅನ್ನವ. ಶ. ೨೨೬-೩೦೦).
[ ನರಮಾಂಸ +ಭುಂಜಕ ]

**ನರಮಾಲೆ** (ನಾ). ಒಂದು ಬಗೆಯ ರೋಗ : ಯವಕ್ಷಾರವನ್ನು, ಇಂಗನ್ನು, ಸುಣ್ಣವನ್ನೂ ಲೇಪವಮಾಡೆ ನರಮಾಲೆ ಕರಗಿಹೋಗುವುದು . . . ಪುಣುಗನ್ನೂ ಬೆಣ್ಣೆಯನ್ನೂ ಕೊಡಲು ಗಂಡಮಾಲೆ ಹೋಗುವುದು. ನರಮಾಲೆ ಕರಗಿಹೋಗುವುದು (ವಿಶ್ವವಿ. ೬೯). 'ನರಮಲಿ' ಪರಾ. [ ? ]

**ನರಮು** 'ನರಮ್' ನೋ.

**ನರಮೃಗ** (ನಾ). ೧. = ನರಪಶು : ಮೂಕ ಮೃಗಯಾ ಸ್ತ್ರೀವ್ಯಸನ ನೃಪ ಜಾತಿಗೋಸುಗರಾದವಿದಱ ರಸಾತಿಶಯಮಱಿಯದವ ನರಮೃಗ (ಶುಭ್ವಾಶ. ೦೩-೩೮) ; ನರಮೃಗಾಧಮನೆತ್ತಲುನ್ನತಪರಮತತ್ತ್ವವಿದೆತ್ತಲು (ಶುಭ್ವಾಧೀ. ೩-೭೦). ೨. = ನರಸಿಂಹ ೧ : ಗಿರಿಯ ನೆಗಹಿ ಧರಣಿಯ ತಂದು ನರಮೃಗ ಬಲಿಬಂಧ . . . ಪುರಂದರವಿಠಲ ಮನೆಗೆ ತಾ ಬಂದ (ಪುರಂದ. ೧-೫೩-೩).

**ನರಮೃಗರೂಪ** = ಮನುಷ್ಯನ ದೇಹ ಹಾಗು ಸಿಂಹದ ಮುಖವುಳ್ಳ ರೂಪ ; ನರಸಿಂಹ : ತರಳ ಕರೆಯಲು ನೀ ತ್ವರಿತದಿ ಕಂಭದಿ ಬಂದು ನರಮೃಗರೂಪದಿಂದವನ ಕಾಯ್ದೆ (ಪುರಂದ. ೩-೦೭೦-೩). **ನರಮೃಗಶರೀರ**= ನರಮೃಗರೂಪ : ಪರಮಪುರುಷ ಭವಭಂಜನಕೇಶವ ನರಮೃಗಶರೀರ ನಮೋ ನಮೋ (ಪುರಂದ. ೩-೯೧-೧). [ ನರ$_2$ + ಮೃಗ ]

**ನರಮೇಧ** (ನಾ). ೧. ಮನುಷ್ಯರನ್ನು ಬಲಿಕೊಡುವ ಯಜ್ಞ : ರಾಕ್ಷಸೋತ್ತಮರೊಳಾರ್ಪಿಂತೆ ನರಮೇಧಮಖದೀಕ್ಷೆಯಂ ಕೈಕೊಂಡರಿದಕೆ ಋತ್ವಿಜರಾರು (ಜೈಮಿಭಾ. ೧೩-೨೭) ; ನಿನ್ನ ನರಮೇಧಕಾಕ್ಷಿಣ್ಯಮಂ ಮಾಳ್ಪರಿದಕೆನ್ನನಾಚಾರ್ಯನಾಗಿಯೆ ವರಿಸು ತದ್ಯಾಗಮಂ ನೆಗಳ್ಚು (ಜೈಮಿಭಾ. ೦೬-೨೯) ; ನರಬಲಿ ನರಮೇಧವು ಕೇಳು ಅಶ್ವಮೇಧಕೂ ಸರಿಮೇಲು (ಗಠ. ೬೯-೦೩). ೨. (ಆಲಂ) (ಹಿಂದೆ ಮುಂದೆ ನೋಡದೆ) ಮನುಷ್ಯರನ್ನು ಕೊಲ್ಲುವುದು : ಎಲ್ಲೆಲ್ಲೂ ಗೋಲಿಬಾರ್, ಮಕ್ಕಳು ಮಂಗಳೆನ್ನದೆ ಗುಂಡಿಕ್ಕಿ ಕೊಲ್ಲುವ ನರಮೇಧ (ವಿದ್ಯಾಕ. ೦೨೭) ; ಶಕ್ತಿ ಹಿರಿದಾಗ ಎಲ್ಲವನ್ನೂ ಮರೆತು ನರಮೇಧವನ್ನಾಚರಿಸುವನು (ದಾನಚಿಂ. ೦೯೩) ; ಅವನೆಸಗಿದ ಕ್ರೂರ ನರಮೇಧದ ಪ್ರತಿಫಲವಾಗಿ ಪಡೆದಿದ್ದ ಬೀಳಿಯ ಕ್ರೂಜೆ (ಪುನರು. ೩೫೭). [ ನರ$_2$ + ಮೇಧ ]

**ನರಯಜ್ಞ** (ನಾ).=ನರಮೇಧ ೨ : ಈ ನರಯಜ್ಞ ಎಂಥಾ ಔತನ ಅವರಿಗೆ ! (ವೀರಯೋ. ೩೦). [ ನರ$_2$ + ಯಜ್ಞ ]

**ನರಯಣ** 'ನಾರಯಣ' ನೋ.

**ನರಯುಗ್ಮ** (ನಾ). ೧. ಇಬ್ಬರು ಮನುಷ್ಯರು. ೨. [ಜ್ಯೋತಿ] ಮಿಥುನ ರಾಶಿ : ಶನಿ ಮಕರಲಗ್ನದೊಳ್ . . . ದನುಜೇಜ್ಯಂ ತೊಲೆಯೊಳ್ ಸೌಮ್ಯನಿರಲ್ ನರಯುಗ್ಮದೊಳ್ ನರಾಧಿಪನಕ್ಕುಂ (ಜಾತತಿ. ೦೨-೫).
[ ನರ$_2$ + ಯುಗ್ಮ ]

**ನರರಾಕ್ಷಸ** (ನಾ). ರಾಕ್ಷಸನಂತೆ ನಿರ್ದಯನಾದ ಮನುಷ್ಯ : ಆ ನಿಸರ್ಗವನ್ನು ನರರಾಕ್ಷಸನಂಥ ಅಥವಾ ಅಧಿಕಾರಿಗಳು ಹೇಗೆ ಕಲುಷಿತಪಡಿಸಿ ದುರಂತಕ್ಕೆ ಬಡಜನರನ್ನು ದೂಡುವರೆಂಬುದು . . . ವರ್ಣಿತವಾಗಿದೆ (ಕಾಲಜಿ. ೧ ಮುನ್ನುಡಿ) ; ಹೆಂಡತಿಯ ವಿಕೃತಕೋಪವು ಅವರನ್ನು ನರರಾಕ್ಷಸನನ್ನಾಗಿ ಮಾಡಿಸಿತ್ತು (ಕಾವೇರಿ. ೮೪). [ ನರ$_2$ + ರಾಕ್ಷಸ ]

**ನರರಾಶಿ** (ನಾ). = ನರಲಗ್ನ : ಕನ್ಯಾ ತುಲಾ ಮಿಥುನ ಧನುಸ್ಸು (ಪೂರ್ವಾರ್ಧ) ಕುಂಭ ಇವು ನರರಾಶಿಗಳು (ಜಾತತಿ. ೧-೩೦ ಟೀಕೆ) ; ಮಿಥುನ ಕನ್ಯಾ ತುಲಾ ಧನುಸ್ಸಿನ ಪೂರ್ವಾರ್ಧ ಕುಂಭ ಇವು ನರರಾಶಿಗಳು (ಜಾತತಿ. ೯-೦೯ ಟೀಕೆ). [ ನರ$_2$ + ರಾಶಿ ]

**ನರರೋಗ** (ನಾ). ನರಗಳ ದೌರ್ಬಲ್ಯದಿಂದ ಉಂಟಾಗುವ ಒಂದು ಬಗೆಯ ರೋಗ ; ನರವ್ಯೂಹದ ಅಸ್ವಸ್ಥತೆಯಿಂದ ಉಂಟಾಗುವ ಮನೋವೈಕಲ್ಯ : ಇವೆರಡೂ ಲಕ್ಷಣಗಳು ಮಂದ ಅಥವಾ ತೀರ ಕಡಿಮೆ ಪ್ರಮಾಣದಲ್ಲಿದ್ದರೆ, ಸಾಮಾನ್ಯವಾಗಿ ಅಂತಹ ಮನೋವೈಕಲ್ಯಗಳನ್ನು ನರರೋಗ(Neurosis)ಗಳೆಂದು ಕರೆಯುತ್ತಾರೆ (ಮನೋರೋ. ೨೦) ; ನರರೋಗ ಪ್ರವೃತ್ತಿಗೂ (ನ್ಯೂರೋಟಿಸಿಸಂ) ಶರಣಾಗತಿಗೂ ನೇರವಾದ ಸಹಸಂಬಂಧವಿದೆಯೆಂದು . . . ಸಿದ್ಧಪಡಿಸಿದ್ದಾನೆ (ಶವಿಕೋ. I, ೭೩೫).
[ ನರ$_1$ (<ನರವು) + ರೋಗ ]

**ನರರೋಗಿ** (ನಾ). ನರರೋಗವುಳ್ಳವನು ; ಸೌಮ್ಯರೂಪದ ಮನೋವೈಕಲ್ಯದಿಂದ ಕೂಡಿದವನು: ನರವ್ಯಾಧಿಯುಳ್ಳ(ವನು) ; ನರರೋಗಿ: ವಿಪರೀತಸೂಕ್ಷ್ಮವೇದಿಯಾದ (Neurotic. ಇಂಕಾನಿ) ; ನರರೋಗಿಯಲ್ಲಿ ಸಮಾಜಭಾವನೆಯು ಚೆನ್ನಾಗಿಯೇ ಇರುತ್ತದೆ (ಮನೋರೋ. ೨೦).
[ ನರ$_1$ (< ನರವು) + ರೋಗಿ ]

**ನರಲ್$_1$**, ನರಲು, ನರಳ್, ನರಳು$_1$, ನೆರಳ್$_1$, ನೆರಳು$_1$ (ಕ್ರಿ). ೧. ನೋವಿನಿಂದ ಧ್ವನಿಮಾಡು ; ಮುಲುಕು ; ಒರಲು : "ನರಲ್ – ವೇದನಧ್ವನೌ" (ಶಮದಾ) ; ಸೂಲದೊಳ್ ನೊಂದು ನರಳ್ವ [ಲ್ವ] ಕಳ್ಳರಿಂ (ಕಾವ್ಯಸಾ. ೩೩೯ ಟಿಪ್ಪಣಿ) ; ಎನ್ನ ಭಯಂಕರದುಂಡರತ್ನಹತಿಯಿಂ ಗಿರಿ ನೊಂದು ನರಲ್ವ [ ಪಾಠಾಂ. ಳ್ವ ] ಮಾಟ್ಕೆಯಂತಾಯ್ತಾಗಳ್ (ಅದಿಪು. ೦೩-೩೭) ; ಸುರಿವ ಸರಲ್ ನರಲ್ವ ಭಟರೆತ್ತಮುರುಳ್ವ ದಟಂ (ಪಂಪಭಾ. ೯-೩೭) ; ಸೂತಸುತನೊಂದುಗ್ರೇಷುವಿಂ ಶಿಂಜ್ವವೆಂಚೊಡನಾರ್ದಂ ನಸುಮೂರ್ಛೆವೋಗಿ ರಥದೊಳ್ ಭೀಮಂ ನರಲ್ವನ್ನೆಗಂ (ಪಂಪಭಾ. ೦೦-೦೯೩); ಕುರುರಾಜಂ ತೊಡೆವೇನೆಗೆ ನರಳ[ಲ]ನೆ ಕುಱುವಾದ ತೊಡೆಯ ಬೇನೆಗೆ ಕಂಡರ್ ನರಳ್ವಂತೆ (ಗದಾಯು. ೯-೦೯) ; ಬೆರಲೆರಲೊರಲ್ಕೊರಲ್ಸರಲ್ . . . ನರಲುಂ ಮುಂಗೈ ಸರಲುಂ ಲಾಂಛಮಿವಂ ಗ್ರಾಮ್ಯರಱಿಯದುಚ್ಚರಿಸುವರ್ ಕುಳಾಂತಭ್ರಮೆಯಿಂ (ಶಮದ. ೨೪) ; ಅದೊ ಕೇಳಿಂ, ಆ ನರಲ್ವ ನರಲ್ಗಳನ್ ! (ಅಶ್ವತ್ಥಾ. ೦೪-೨೪). **ನರಲು** : ೧. ಅರೆನುಡಿವ ಸರಸವಾಡುವ ನರಲುವ ಪುಯ್ಯಲಿಡುವ . . . ಪಲುಂಬುವ ನುಡಿ ವಿರಸಮುಪಶ್ರುತಿ ಯೊಳೀಯುವೆಂತುಂ ಫಲಮಂ (ಲೋಕೋಪ. ೦೨-೩೯). **ನರಳ್** : ೧. ನರಳುತ್ತುಂ ಸುಯ್ಯುತ್ತುಂ . . . ಸೇದೆಯ ನೇಣಂ ಕರಗಮನೊಲ್ದಿಕ್ಕುತ್ತು ಸೇದಿ ನೀರ್ಗುಡಿಯೆಂದರ್ (ದಕಳು. ೦೦-೯೦) : ನರಳ್ವ ಮಹಾಸ್ವಪ್ನಡಾಳ

ಹತ್ತಿಯಿಂ ತಲೆ ತುಂಡಿಸಿ ಬಿರ್ದು ಧಾತ್ರಿಯೊಳ್ ಪೊರಳ್ವ . . . ಅತಿಭೀತರಂ ಜಱಿದು ಝುಂಕಿಸುತಿರ್ದುವು ಭೂತಸಂಕುಳಂ (ತ್ರಿಪುರಿ. ೨೮-೩೫೮); ನಲ್ಲದೆ ನರಳ್ವ ಪಸುಳೆಯ ನಿರ್ವಲಾಸ್ಯಮಂ ಪುಲ್ಲೆಗಳ್ಕಂಡು (ಕುಮಿಪಾ. ೨೮-೩೭). ನರಳು₁ : ೧. ರಾಜ ರೋಗಂಗಳು ಲಿಂಗದೇಹಿಗಳೆಂಬವರ ಸೋಂಕಿದಲ್ಲಿ ರೋಗದ ಇಚ್ಛೆಯನಱಿದು ನರಳಿದಲ್ಲಿ ಲಿಂಗದ ಚಿತ್ತವತ್ತಹೋಯಿತ್ತು (ಸರ್ವವ. ೧೨೦-೬೧೯); ಕಾಲು ನೊಂದಂತೆ ನೀಡಿ ನರಳುತಂ (ಸಂಬಿರ. ೬-೧೦೩); ಬಿದ್ದು ಹೊರಳುತ್ತೂ ನರಳುತೊಱಲುತ್ತ ಬಾಯ್ಬಿಟ್ಟಳೆದಳು ತ್ತಿರಲು (ಬಸವು. ೪೩-೫೦); ನರಳುವಾರೋಹಕರ ರಾವ್ತರ . . . ಭಂಗವ ನೇಸನೆಂಬೆನು ವೈರಿಸೇನೆಯಲಿ (ಕುಮಾರವ್ಯಾ. ೧೮-೩೪); ನರಳುತ್ತಂ ತನುತಾಪದಿವೊರಳುತ್ತಂ . . . ಪಾಂಡ್ಯಾವನಿಪಂ ಕರೆಕರೆ ವೈದ್ಯರನೆನುತ್ತ ಲೊಱಲುತ್ತಿರ್ದಂ (ತ್ರಿಪುರಿ. ೩೩-೩೩); ಹಾಡುವ ಸಭೆಯಲ್ಲಿ ನರಳುವದುಂಟೆ? (ಗಾದೆ. ೬೦-೧೦); ಒಡಲ ತೇಯುಬೇಹುದಿಲ್ಲಿ . . . ನರಳುವವರ ಮಧ್ಯದಲ್ಲಿ (ವಿಷ್ಣುಗೀ.೮೨-೪). ೨. ಪರಿತಪಿಸು ; ಸಂಕಟಪಡು : ಪ್ರಜೆಗಳು ತೆರಿಗೆಯ ಭಾರದಿಂದ ನರಳುತ್ತಿದ್ದಾರೆ (ಲೂ). ನೆರಳ್₁ : ೧. ದಿಂಡುರುಳ್ದು ಪೊರಳ್ವ ನೆರಳ್ವ ಪರಾಕ್ರಮಿಗಳಿಂ . . . ತದ್ರಣಾಂಕಣಮೆಸೆದುದು (ಹಬಪು. ೧೬-೨೦). ನೆರಳು₁ : ೧. ನೆರಳುವ ಕರಿತುರಗದಾಲಿಗಳ ಚುಚುಗುಳೀಂದಲಿಂದಿರದು ಹರಿದು ತೀದವು ಘೂಕಚಯ (ಕೋಗಯು. ೨೩-೬).

ನರನರಳು (ದ್ವಿರುಕ್ತಿ) : ಹೊಟ್ಟೆನೋವಿನಿಂದ ನರನರಳಿ ಬೇಸತ್ತನು (ಮಧ್ಯಸು. ೦೯೩,).

[ ದೇ. ॥ ತಮಿ. ನರಲ್; ಮಲ. ನರಣ್ಣು, ಞರಣ್ಣು ; ತುಳು. ನರಲು, ನರಲು. ನರ್ಲು ; ಕುರುಖ್. ನರ್ಯಾನಾ = ಅಳು; ಮಲ್ತೊ. ನಿರೆ ]

ನರಲ್₂, ನರಳು₂ (ನಾ). ನರಳುವಿಕೆ ; ಸಂಕಟದ ಧ್ವನಿ ; ನರಳಾಟ : ಅದೊ ಕೇಳಿಂ, ಆ ನರಲ್ವ ನರಲ್ಗಳನ್ (ಅಕ್ಷತ್ರಾ. ೦೪-೨೬೪); ಒಂದೆ ಕೊರಲ ನರಲನೆತ್ತಿ ಅಬ್ಬುದಲ್ಲ ನೆಲನ್ ತಾನ್ (ಬದ್ರಪ್ರ. ೨೨-೪೬೭). ನರಳ್₂ : ಖಂಡಿಸಿದ ಕೊರಳಿನಿಂ ಕೊರೆವೆಣದ ನರಳಿನಿಂ (ಶರಕು. ೨೯-೨೫).

[< ನರಲ್₁ ]

ನರಲಗ್ನ (ನಾ). [ಜ್ಯೋತಿ] ನಿರ್ದಿಷ್ಟವಾದ ಕೆಲವು ಲಗ್ನ(ರಾಶಿ) ಗಳಿಗೆ ಜ್ಯೋತಿಶ್ಶಾಸ್ತ್ರದಲ್ಲಿ ಹೇಳಿರುವ ಒಂದು ಸಂಜ್ಞೆ : ನರಲಗ್ನ ಮನೀಕ್ಷಿಸೆ ರವಿ ಸುರ ನೃಪ ಗೋಗೃಹದೊಳಗ್ನಿಹೋತ್ರಾಲಯದೊಳ್ ಗುರು ವೀಕ್ಷಿಸೆ ಶಿಲ್ಪಗೃಹಾಂತರದೊಳ್ ವೀಕ್ಷಿಸೆ ಬುಧಂ ನರಂ ಜನಿಯಿ ಸುಗುಂ (ಜಾತತಿ. ೪-೦೯); "ಮಿಥುನ ಕನ್ಯಾ ತುಲಾ ಧನುಸ್ಸಿನ ಪೂರ್ವಾರ್ಧ ಕುಂಭ ಇವು ನರರಾಶಿಗಳು. ಈ ರಾಶಿಗಳಲ್ಲೊಂದು ಲಗ್ನವಾದರೆ ನರಲಗ್ನವೆನಿಸಿಕೊಳ್ಳುತ್ತದೆ" (ಜಾತತಿ.೪-೦೯ ಟೀಕೆ). P ಮೇಲಿನ 'ಜಾತತಿ' ಪ್ರಯೋಗವು ಬೃಹಜ್ಜಾತಕದ ವ್ಯಾಖ್ಯಾನಕ್ಕೆ ಅನುಸಾರವಾಗಿದೆ. ಆದರೆ ಇದರಲ್ಲಿ ಭಿನ್ನಾಭಿಪ್ರಾಯಗಳಿವೆ. ಉದಾಹರಣೆಗೆ 'ಜಾತಕ ತಿಲಕದ ೧-೨೨'ರಲ್ಲಿ ಪುರುಷರಾಶಿಗಳು ಮೇಷ, ಮಿಥುನ, ಸಿಂಹ ತುಲಾ, ಧನುಸ್ಸು ಮತ್ತು ಕುಂಭ ಎಂದಿದೆ. ಇದು ಎಲ್ಲಾ ಗ್ರಂಥ ಗಳಲ್ಲಿಯೂ ಹೇಳಿರುವ ಸಂಜ್ಞೆ. ಆದರೆ ಭಟ್ಟೋತ್ಪಲನು ತುಲಾ, ಕನ್ಯಾ, ಮಿಥುನ ಮತ್ತು ಕುಂಭ ಈ ನಾಲ್ಕು ಪುರುಷಲಗ್ನವೆಂದು ಹೇಳಿದ್ದಾನೆ. [ ನರ₂ + ಲಗ್ನ ]

ನರಲಿಸು, ನರಳಿಸು (ಕ್ರಿ). ನರಳುವಂತೆ ಮಾಡು ; ಸಂಕಟಕ್ಕೆ ಗುರಿಪಡಿಸು : (ಕ). ನರಳಿಸು : ಉರಗ ವರ ಕಿಂಪುರುಷ ಕಿನ್ನರ ತರುಣಿಯರ ವ್ರತಗೆಡಿಸಿ ಭೋಗಿಸಿ ನರಳಿಸುವರು (ಅಂಬಿಕಾ. ೩೪-೩೬); ಸಾಯೋತನಕ 'ಕಿರಿಸಳ್ಳು' ನರಳಿಸಿ ಬಿಟ್ಟೇನು (ಬಿಕುಮ. ೦೯೬).

[ ನರಲ್₁ + -ಇಸು₃ ]

ನರಲು 'ನರಲ್₁' ನೋ.

ನರಲುಲಿ (ನಾ). ನರಳುವ ಸದ್ದು ; ನರಳಾಟ : ಪರಿಪರಿಯಾ ನರಲುಲಿ ಯೋಳ್ ಪಾರ್ಶ್ವಿಕರಾ ಪಾಂಗಿನೊಳೇ ಪ್ರಾರ್ಥನೆಯನ್ ಕೂಗಿ (ಪಾರಸಿ. ೨೯-೮). [ ನರಲ್₁ + ಉಲಿ₂ ]

ನರಲೇಬಳ್ಳಿ (ನಾ). ಒಂದು ಬಗೆಯ ಬಳ್ಳಿ : (ಮೃಶಿಗಿ. ೦೯-೩೪೭) 'ನರಳೆ' ಪರ್ಯಾ. [ ನರಲೆ₀ + ಬಳ್ಳಿ ]

ನರಲೋಕ (ನಾ). ೧. ಮನುಷ್ಯರು ವಾಸಿಸುವ ಲೋಕ ; ಮರ್ತ್ಯ ಲೋಕ : ನರಲೋಕಮನಟ್ಟಿಗೀಟಾಸಿ ನರಲೋಕದ ಸುಖಮನಾತ್ಮವಿಭವದೆ ಪೊಕ್ಕಂ ಕುರುಪತಿ ವೈಶಂಪಾಯನಸರವಂ ಪುಗುವಂತೆ ನಾಗಲೋಕ ಮನಾಗಳ್ (ಗದಾಯು. ೬-೧೪); ನರಲೋಕದಲ್ಪಸೌಖ್ಯಂ ಸ್ಥಿರಮಲ್ಲದು (ಧರ್ಮಾಮೃ. ೭-೨೨೬); ನರಲೋಕದ ನರಗುಱಿಗಳೆಲ್ಲ ನರಸಂಸಾರಕ್ಕೊಳ ಗಾದರು (ಅನಪಂ. ೨೬೭-೧೨೬೨); ಪುಷ್ಪದತ್ತಂ ನರಲೋಕದೊಳ್ ಪುಟ್ಟ . . . ಕೆಟ್ಟು ಪೋಗಲನುವಾಗಿರ್ದಪಂ (ಸಂಬಿರ. ೬-೩ ವ); ನರಲೋಕಂ ನಡೆ ನೋಡಲಾತ್ಮಪುರವುಂ ಕೊಂಡೀಶಲೋಕಕ್ಕೆ ಬಾಧುರವೋದಂ ಬಡೆದಂದು ವರ್ಗ ನೆಗಬ್ದುದ್ಧದ್ರ್ಯೂರ್ಜರಾಧೀಶನಂ ಪಿರಿದಾಲೋಕಿಸಿ (ಉದ್ಭಟ.೧೨-೧೨೨); ಪರಲೋಕಕ್ಕೆ ಹೋದವಗೆ ನರಲೋಕದ ಗೊಡವೆಯೇ? (ಗಾದೆ). ೨. ಮರ್ತ್ಯಸಮೂಹ ; ಮನುಷ್ಯಕೋಟಿ ; ಮಾನವಕುಲ : ನರಲೋಕವೊಂದೆ ಮುನ್ನಿನ ಚರಣಾಬ್ಜಕ್ಕೆಱಗೆ ನೆಗಬ್ದ ಕೇವಲಬೋಧಂ ದೊರೆಕೊಳೆ ಸುರನರಲೋಕಂ ಚರಣಾಬ್ಜಕ್ಕೆಱಗೆ ಭರತಯತಿಪತಿ ನೆಗಬ್ದಂ (ಆದಿಪು. ೧೬-೭೪); ಪೆಣಪೊಗೆಸುತ್ತಿ ನರಲೋಕವೆಲ್ಲಮಂತಕಡಾಮರ ದೊಳೆ ಬೆಂದು ಧೂಮಮಯಮಾದ ದಿಶಾಧೂಮಂ ಕವಿದಂತಾಭೀಳವಾಗೆ (ಶಾಂತಿಪು. ೭-೯೮ವ); ನರಲೋಕಶ್ರೀಕಾಂತಾವಿರಕ್ತಮಾದತ್ತು ಪರಮ ನಿರ್ವೇಗವಶಂಪರ ನೆಗೞ್ ಮುಕ್ತಿಕಾಂತಾನುರಕ್ತಮಾದತ್ತು ವಿಮಲ ವಾಹನನ ಮನಂ (ಅಜಿಪು. ೨-೦೦೩).

ನರಲೋಕದಲ್ಲಟ, ನರಲೋಕದಲ್ಲಣ = ಮನುಷ್ಯರಿಗೆ ಹೆದರಿಕೆ ಯನ್ನುಂಟು ಮಾಡುವವನು ; ಒಂದು ಬಿರುದು : ಬಿರುದಿಂಗೆ – ಗಜದುಳಿ. ಗಜಪಾಱು, ನರಲೋಕದಲ್ಲಟ[ಪಾಠಾಂ.ಣಂ] (ಕಮರ. ೦೭೪ ಪ್ರಯೋ); ನರಲೋಕದಲ್ಲಣಾ, ಗಜವೇಂಟೆಕಾಱಂ, ರಾಯಕೋಲಾಹಲಂ (ಕರ್ನಾಸು. ೨೯೫ ಪ್ರಯೋ). [ ನರ₂ + ಲೋಕ ]

ನರಲೋಕಚಂದ್ರ (ನಾ). ಭೂಲೋಕಕ್ಕೆ ಚಂದ್ರನಂತೆ ಆಹ್ಲಾದಕಾರಿ ಯಾದವನು : ಪರಚಕ್ರಭೂಪರಬ್ದದ ಕರಿಗಳ್ ಬಿಡುತಪ್ಪ ಮದದ ಪೊನಲಿಂದೆತ್ತಂ ನರಲೋಕಚಂದ್ರನಾ ಮಂದಿರದೊಳಗೊಳಗೆಲ್ಲ ಕಾಲಮುಂ ಕೆಸಱಕ್ಕುಂ (ಕವಿರಾ. ೩-೦೮೦). [ ನರಲೋಕ + ಚಂದ್ರ₂ ]

ನರಲೋಕಚರ (ನಾ). ಮನುಷ್ಯಲೋಕದಲ್ಲಿರುವವನು ; ಭೂಲೋಕ ವಾಸಿ : ನೀ ನರಲೋಕಚರನಿನ್ನುಸುರಲೀಂ ಹರಲೋಕಚರನೋಹಿಲನು (ಬಸವು. ೪೪-೩೩). [ ನರಲೋಕ + ಚರ ]

ನರವಂಟಿಗೆ (ನಾ). ಒಂದು ಬಗೆಯ ಸಸ್ಯ : ನರವಂಟಿಗೆಯ ಬೇರಂ ಗೋರೋಚನವಮಂ ಸಮನಾಗಿ ಕೂಡಿ ಅರೆದು (ಕಾಮಶಾ. ೧೧-೨೬೭).

[ ?./ತೆಲು. ನರವೆಂಡು ]

ನರವಕ್ತ್ರ (ನಾ). ಮನುಷ್ಯನ ಮುಖವುಳ್ಳ, ಶಿವಪ್ರಮಥರಲ್ಲಿ ಒಬ್ಬ : ಹಂಸವಕ್ತ್ರಂ ಕರಿವಕ್ತ್ರನಶ್ವವರವಕ್ತ್ರಂ ಮೇಷವಕ್ತ್ರಂ ಫಣೀಶ್ವರವಕ್ತ್ರಂ ನರವಕ್ತ್ರನುಷ್ಟ್ರಪತಿವಕ್ತ್ರಂ . . . ಎಂಬರೆಸೆವವಿಶ್ವೇಶ್ವರಾಸ್ಥಾನದೊಳ್ (ರಾಜಶೇ. ೦೪-೦೩೪). [ ನರ₂ + ವಕ್ತ್ರ ]

ನರವರ (ನಾ). ಮನುಷ್ಯರಲ್ಲಿ ಉತ್ತಮನಾದವನು ; ಅರಸ : ಕ್ರಮದಿ ನೊರ್ವರೊರೊರ್ವರೆ ಕಾದುವಂ ಎಂದು ರಣಧೀರನರವರಸಂದೋಹಂ ನುಡಿದು ನಿದ್ರೆಯ ತಳೆದಿರಲ್ (ನೇಮಿಪು. ೧೨-೩); ನರವರರು [ಪಾಠಾಂ. ರವರು]ರ್ವಿಯೊಳ್ ಧರೆ ಜಗತ್ತ್ರಯದೊಳ್ ಜಗವಂ ತ್ರಿವಾಯುಗಳ್

ಧರಿಯಿಸಿ ನಿಂದುವು (ಜೀವಸಂ. ೧೪೬-೨೪) ; ವಾನರ ಕುಲಂ. ನರವರಂ. ವಾಲಿಯ ಸಹೋದರಂ ಸುಗ್ರೀವನಲ್ತೆ ಆ ಓಜೋನ್ವಿತಂ ? (ಶ್ರೀರಾಮಾ. ೨೬೮-೦೧). [ ನರ$_{2}$ + ವರ$_{3}$ ]

**ನರವರ್ಯ** (ನಾ). ಶ್ರೇಷ್ಠನಾದ ಮನುಷ್ಯ ; ಉತ್ತಮಮಾನವ : ನರವರ್ಯ ಭೀಮಸೇನ ನಾರಿಗೆ ಕುಸುಮ ತರುವೆನೆನುತ ಬೇಗ ತೆರಳಿದನು (ಪುರಂದ. ೩-೨೧೦-೧). [ ಸಂ. ]

**ನರವಲಿ** 'ನರವುಲಿ' ನೋ.

**ನರವಲು** 'ನಱುವಲ್' ನೋ.

**ನರವಾನರ** (ನಾ). ಮನುಷ್ಯನ ಆಕಾರವನ್ನು ಹೋಲುವ ಒಂದು ಬಗೆಯ ವಾನರ : ಪಾಮರ ಹರಿದಾಸನು ಅವನಲ್ಲ ನರವಾನರ ಕಾಣೊ (ಪುರಂದ. ಧಾ. ೨-೬೨-೪); ಉದ್ದತೋಳುಗಳ, ದೊಡ್ಡ ನರವಾನರ ; ಒರಾಂಗೊಟಾಂಗ್ ( = ಕಾಡುಮನುಷ್ಯ) (Orang-outang. ಇಂಕನಿ). [ ನರ$_{2}$ + ವಾನರ ]

**ನರವಾಹ** (ನಾ). ಮನುಷ್ಯನನ್ನು ವಾಹನವನ್ನಾಗಿ ಉಳ್ಳವನು ; ಕುಬೇರ : ನರವಾಹಂ ಬಳ್ಕೆ ಶಕ್ರಂ ಸೆಡೆಯೆ ಹುತವಹಂ ಕಂದೆ ಕಾಲಂ ಕರಂ ಕುಂದೆ (ಶಬಶಂ. ೨-೧೧). [ ನರ$_{2}$ + ವಾಹ ]

**ನರವಾಹನ** (ನಾ). ೧. = ನರವಾಹ : ಐಳಬಿಳಃ . . . ಕುಬೇರಃ, ನರ ವಾಹನಃ, ಗುಹ್ಯಕಃ . . . ಈ ೧೭ ಕುಬೇರನ ಪೆಸರ್" (ಹಲಾಯು. ೧೪-೬೯). ೨. (ಮನುಷ್ಯರು ಹೊರುವ) ದಂಡಿಗೆಯಲ್ಲಿ ಪ್ರಯಾಣ ಮಾಡುವವನು : "ದಂಡಿಗೆಯನೇಱುವಂ ನರವಾಹನಂ" (ಮಂಗರಾ. ೭೩-೨೬). [ ನರ$_{2}$ + ವಾಹನ ]

**ನರವಿಂಡು** (ನಾ). ಮನುಷ್ಯರ ಗುಂಪು ; ಜನಸಮೂಹ : ಆ ಪರಿಯಿಂದ ಕೂಡಿದ ಇಂದ್ರಿಯವಿಕಾರದ ನರವಿಂಡುಗಳು ಕೂಡಿರ್ದು ಫಲವೇನು (ರಜಸಂ. ೪೨೪-೦೨೫). [ ನರ$_{2}$ + ಪಿಂಡು$_{2}$ ]

**ನರವಿಂಧ್ಯ** (ನಾ). "(ಪಶುಗಳಂತಹ) ಜನರು ವಾಸಿಸುವ (ಗುಡ್ಡ ಗಾಡಿನಂತಹ ವಾಸಕ್ಕೆ ಕಷ್ಟಕರವಾದ) ಸ್ಥಾನ" (ಬಸವ. ಕೋಶ) : ನರವಿಂಧ್ಯದೊಳಗೆನ್ನ ಹುಲುಗಿಳಿಯ ಮಾಡಿ ಸಲಹುತ್ತ ಶಿವಶಿವಾ ಎಂದೋದಿಸಯ್ಯಾ (ಬಸವ. ೫೮) ; ಓಱಲುವ ಬಳ್ಳಿವಿನಾತಿಪ್ಪರಯ್ಯಾ ಮನುಜರು ನರವಿಂಧ್ಯದೊಳಗೆ (ಬಸವ. ೨೦೬). [ ನರ$_{2}$ + ವಿಂಧ್ಯ ]

**ನರವು, ನರ$_{1}$** (ನಾ). ೧. ಶರೀರದಲ್ಲಿ ಸ್ನಾಯುವನ್ನು ಎಲುಬಿಗೆ ಸೇರಿಸುವ ಗಟ್ಟಿಯಾದ, ತಂತುಮಯವಾದ ಅಂಗಾಂಶ ; ಸ್ನಾಯು ರಜ್ಜು : ನರವುಮಂ ಬರಿಯುಮಂ ಪತ್ತಿ ತೆಗೆದು ಪೆಡಸಾರ್ವ ನರಗಳುಮಂ ತಾನೆ ಸೋದು (ಪಂಪಭಾ. ೦೩-೫೬ವ). ೨. ಅವಯವಗಳಿಂದ ಮೆದುಳಿಗೆ ಸಂವೇದನಗಳನ್ನೂ ಮೆದುಳಿನಿಂದ ಅವಯವಗಳಿಗೆ ಸೂಚನೆಗಳನ್ನೂ ಒಯ್ಯುವ ತಂತು,-ಸೆರೆ: ತಾನುಂ ಹಿಡಿಂಬೆಯುಮವನ ಬರಿಯ ನರವಿನಡಗಿನಿಡುವಿನಡೆಯ ಕೆನ್ನೆತ್ತರೊಳೊರ್ವರೊರ್ವರಂ ತಳ್ಕಿಱಿದುಂ ಬೊಬ್ಬಿಱಿದುಂ . . . ಆಡುವಾಗಳ್ (ಪಂಪಭಾ. ೦೨-೦೫೮ವ) ; ನರವಿನ ಪುತ್ರಮೇಧ್ಯದ ತವರ್ಮನೆ . . . ಕಡುಗೆಷ್ಟಮೆನಿಪ್ಪ ದುಃಕಳೇವರ ಮಿದನೊಳ್ಕಿತೆಂಬರಱಿವಿಲ್ಲದವರ್ (ಸಮುಹ. ೬-೩೪) ; ನರವುಗಳ್ ತೆಗೆದು ಕೋಲ್ ತನಗೆ ತಾನೆ ನೆಗೆವುದುಂ (ಧರ್ಮಾಮೃ. ೦೨-೪೦ವ) ; ನರವುಂ ನೆರವುಂ ದೇವರ ಬರವುಂ ತೆರವುಂ . . . ತಾಮರೆಬರ ಮತದಿಂದಂತ್ಯ ವರ್ಣಲೋಪಮನಾಳ್ಗುಂ (ಶಮದ. ೪೬) ; ಕೆಸಱಿಡುವ ರಕುತಾಂಬುಗಳ ನರವಿನ ನಾಳದೇಳಿಗೆಯ ಕಡುವಾದದ ಕಾಡಾನೆ ಹೊಕ್ಕೊಡನೊಡನೆ ಕಲಕಿದ ಕೊಳನವೊಲು ಭಯವಡಸುತಿದೆ ಪವನಜನ ರಣಪಥವು (ಕುಮಾ.ದ್ರೋ. ೦೩-೪) : ಮಾಂಸದ ಗೋಡೆ ಚರ್ಮದ ಹೊದಿಕೆ ನರವಿನ ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು (ಹರಿಸಾ. ೮೫). ನರ$_{1}$ : ೨: "ವಸ್ನಸಾ, ಸ್ನಾಯುಃ – ಇವು ನರದ ಪೆಸರು" (ವಾಚಿರಾ. ೦೨೦) : ನರವನುಗಿವ ಸರಿಗಳುಮಂ (ಗರಾಯು. ೫-೩ವ) ; ಸಂದುಗಳುಱಿದೊಡೆ ನರವೊಂದು ದೆಸೆಗೆ ಶಱಿಸಂದೊಡೆ ಶೀತಳಜಳಮಿಶ್ರಿತ ವಸ್ತ್ರವನಳವಟ್ಟಿರೆ ಸುತ್ತಲಿನಿಸು ಬೇನೆಗಳಱಿಗುಂ (ಲೋಕೋಪ. ೯-೧೬೬); ಎನ್ನ ಕಾಯವ ದಂಡಿಗೆಯ ಮಾಡಯ್ಯಾ . . . ಎನ್ನ ನರವ ತಂತಿಯ ಮಾಡಯ್ಯಾ (ಬಸವ. ೫೦೦) ; ತನುವೆಂಬ ಮನೆಗೆ ಅಸ್ಥಿಗಳು ಚರ್ಮದ ಹಂಜರ ನರದ ಭೀಮಗಟ್ಟು (ಅರವ. ೧೫-೩೩) ; ಒಂದು ದಸಿಯಂಗಾಲ ನಟ್ಟಡೆ ನೊಂದು ನರಗಳು ಸುಕ್ಕಿ ತೆಗೆಯಲು (ಬಸಪು. ೪೩-೮೪) ; ನರಗಳೆಲ್ಲವೂ ನಿರನಿರನೆ ಎದ್ದುನಿಂತವು (ಕಾಢಳ. ೦೩೧). ೩. ತಂತಿ : ಬೀಣೆಯಂತೆ ನರದೊಳ್ ಕೂಡಿದುದು (ಧರ್ಮಾಮೃ. ೪-೦೬೫). ೪. ಶಕ್ತಿ ; ಸಾಮರ್ಥ್ಯ. ೫. (ಆಲಂ) ಧೈರ್ಯ.

[ ದೇ. ೫ ತಮಿ. ನರಮ್ಪು ; ಮಲ. ನರಮ್ಪು, ಞರಮ್ಪು ; ತುಳು. ನರ, ನರಂಬು ; ತೆಲು. ನರಮು; ಕೊಲಾ. ನರವ್ ; ಪರ್ಜಿ. ನೆರುಬ್ ; ಕೂ.ಡ್ರಾಂಬು ; ಕುವಿ. ನರೂಮಿ ; ಕುರುಖ್. ನರೀ ; ಮಲ್ತೊ. ನಾರು ]

**ನರವುಲಿ, ನರವಲಿ, ನರಹುಲಿ, ನರುಲಿ, ನರುಳ್ಳೆ, ನರೂಲಿ** (ನಾ). ಚರ್ಮದ ಮೇಲೆ ಏಳುವ ಸಣ್ಣಗಂಟು,-ಗಂತಿ : ಇನವಾರದಂದು ಬಸುರಿಯ ಕೊನೆಯಂ ಕೊಂಡೆಡದ ಬಱಿದು(ಳಸಿ) ಕೆಸಱೊಳದಂ ಪೂಸ್ದನಿತಱೊಳಾ ನರವುಲಿಯೆನಿತನಿತುಮವಿರ್ದಡೆಯನಱಿಯದಂತಿರೆ ಪೋಕುಂ (ಲೋಕೋಪ. ೯-೧೩೦) ; ಬಿಡದೆ ಭಗಂದರಮಂಸೆ ಕುಷ್ಠ ತದ್ರುಂ ನರವುಲಿ ದುಷ್ಟವ್ರಣಂಗಳೆಂದಱುವುದಿವಂ (ಅಶ್ವಶಾ. ೦೨-೦) ; ನರವು [ಪಾಠಾಂ. ವ] ಲಿ ಮೊಡವಿ ಬಂಗು ನೆರೆದಾನನದ ಚಬ್ಬುವೆರಸಿರ್ದ ಕಂಕುಳಿನ ನಿಡಿಯೊಡಲಿನ . . . ಪೆಣ್ಗಳಂ ತರಲಾಗದು (ಜನವ. ೧೧-೧೧). **ನರವಲಿ :** ನರವಲಿ ಉದುರಿ ಹೋಯಿತು (ರೂಢಿ). **ನರಹುಲಿ :** (ಈ). **ನರುಲಿ :** "ನರುಲಿ = ಸಣ್ಣಸಣ್ಣ ವಾಳ" (ಜಾನಕೋ. ೯). **ನರುಳ್ಳೆ:** ಕೈಮೇಲೆ ಒಂದು ನರುಳ್ಳೆ ಎದ್ದಿದೆ (ರೂಢಿ). **ನರೂಲಿ :** "ನರೂಲಿ ; ಗಂಟು ; ತಂತಿ" (Pustle. ಇಂಕನಿ). [ < ನರವು ? ]

**ನರವೆ** (ನಾ). ಒಂದು ಬಗೆಯ ಗಿಡ : ನರುವಲು, ನಾರಲೆ, ನರವೆ, ಮುನ್ನು, ಮಡಿಕೆ (ವೃಕ್ಷಿಗ. ೬೪-೦೩೦೦). [ ? ]

**ನರವೆಣ್** (ನಾ). ಮನುಷ್ಯಲೋಕದ ಹೆಣ್ಣು ; ಮಾನವ ಸ್ತ್ರೀ : ನಿಖಿಳಾಪ್ಸರವಧು ನರವೆಣ್ಗಳೆಸೆಯೆ ದೇವಕಿಯ ನಂದನನೆಡಬಲದಿ (ಚೋಹಚ. ೧೯-೧೪). [ ನರ$_{2}$ + ಪೆಣ್ ]

**ನರವೇಷ** (ನಾ). ಮನುಷ್ಯನ ವೇಷ ; ಮಾನವ ರೂಪ : ಮಜ್ಜನ ಭೋಜನಾದಿ ನಾನಾಕ್ರಿಯೆಗಳೊಂದರೊಳ್ ನರವೇಷಕಾಯಮಂ ಸವೆಸ ಬೇಡೆಂದು ಕೈವಿಡಗೊಟ್ಟಳೇಂ ವಿಶೇಷಮೊ ಪುತ್ರಮೋಹಮಿ ಲೋಕ ದೊಳಗೆ (ಚಬಪು. ೫-೩೦). [ ನರ$_{2}$ + ವೇಷ ]

**ನರವೈದ್ಯ** (ನಾ). ಮಾನವರಿಗೆ ಮಾಡುವ ರೋಗಚಿಕಿತ್ಸೆ ; ಮನುಷ್ಯರಿಗೆ ಸಂಬಂಧಿಸಿದ ವೈದ್ಯಶಾಸ್ತ್ರ : ಚಾಣಕ್ಯಂ ಸಾಮುದ್ರಿಕಂ ಶಾಲಿಹೋತ್ರಂ . . . ಕ್ಷಾರಪಾನೀಯಂ ಮೊದಲಾಗೊಡೆಯ ನರವೈದ್ಯಂಗಳುಂ ಜ್ಯೋತಿಷಂ ಮಂತ್ರವಾದಂ ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮಂ ನೆಱೆಯೆ ಕಲ್ಪಿಸಿ ಯೋಗ್ಯರ್ ಮಾಡಿದೊಡೆ (ಪದ್ಮಾಶಾ. ೪-೨). [ ನರ$_{2}$ + ವೈದ್ಯ ]

**ನರವ್ಯಾಧಿ** (ನಾ). "ನರವ್ಯೂಹದ ಅಸ್ವಸ್ಥತೆಯಿಂದ ದೇಹಸ್ಥಿತಿ ಕೆಟ್ಟು ಹೋಗಿರುವುದು : ನರವ್ಯಾಧಿ (Neurosis. ಇಂಕನಿ)" : ಪ್ರಬಲ ಮನೋರೋಗ (ಸೈಕೋಸಿಸ್), ನರವ್ಯಾಧಿ (ನ್ಯೂರೋಸಿಸ್) ಮುಂತಾದ ವಿಕಾರಗಳು ದುರ್ಜನತೆಗೆ ಕಾರಣಗಳೆಂಬ ಬಹುಜನರ ನಂಬಿಕೆಗೆ ಯಾವ ಆಧಾರವೂ ಇಲ್ಲ (ಕವಿಕೋ. I, ೩೫೮). [ ನರ$_{1}$ (< ನರವು) + ವ್ಯಾಧಿ ]

**ನರವ್ಯೂಹ** (ನಾ). ದೇಹದೊಳಗಿನ ನರಗಳ ರಚನೆ,-ನರಮಂಡಲ: ಮುಖ್ಯವಾಗಿ ಮಿದುಳಿನ ಅಥವಾ ನರವ್ಯೂಹದ ರಚನೆಯೊಳಗೆ ಯಾವುದಾದರೂ ತೊಂದರೆಯುಂಟಾದೊಡನೆ ಅದನ್ನು ನಾವು ಮನೋರೋಗವೆಂದು ಹೇಳುತ್ತೇವೆ (ಮನೋರೋ. ೮) ; ಮಿದುಳು ಗಾತ್ರದಲ್ಲಿ ದೊಡ್ಡದಾಗುವಂತಿದ್ದು, ನರವ್ಯೂಹದ ರಚನೆ ಕ್ರಮಕ್ರಮವಾಗಿ ಸಂಕೀರ್ಣತೆಗೇರುವಂತಿದ್ದು ಸಂಕೀರ್ಣಸಮಾಜಕ್ಕೆ ಅನುಗೊಳಿಸುವ ಸಂಸ್ಕರಣವನ್ನು ಪಡೆಯಲು ಅನುಕೂಲಿಸುವಂತಿವೆ (ಶಿಕ್ಷದ. ೮೬).

[ ನರ$_1$ (< ನರವು) + ವ್ಯೂಹ ]

**ನರಶಾರ್ದೂಲ** (ನಾ). ಮನುಷ್ಯರಲ್ಲಿ (ಹುಲಿಯಂತೆ) ಪರಾಕ್ರಮಿಯಾದವನು ; ಶೂರ: (ಶ). [ ನರ$_2$ + ಶಾರ್ದೂಲ ]

**ನರಶಾಸನ** (ನಾ). ಜೀವಂತವಾಗಿ ಮನುಷ್ಯರೂಪವಾಗಿರುವ ಶಾಸನ,-ಸನದು ; ಪ್ರತ್ಯಕ್ಷಸಾಕ್ಷಿ : ಬಿರುದಿನ ಬೀರದ ಪೆಸರಕ್ಕರಮಂ ಪರನೃಪರ ಮೆಯ್ಯ ಪುಣ್ಗಳೆಗಳ್ ಪೊಲ್ಮಿರೆ ತೋಳ್ವಲಕ್ಕೆ ಪಡೆದಂ ನರಶಾಸನಮಂ ನರೇಂದ್ರಚೂಡಾರತ್ನಂ (ಮಲ್ಲಿಪು. ೩-೧೪) ; ಕವಿತತಿ ಬಲ್ಮೆಗೋಲಗಿಸೆ ಕಾಮಿನಿಯರ್ಸೊರ್ಬಗಿಂಗೆ ಸೋಲೆ ಬೇಟ್ಪವರ್ಗಳುದಾರವೃತ್ತಿಗೊಲವಿಂ ನರಶಾಸನವಾಗೆ ರಾಜ್ಯಮುದ್ಭವದಿನೊಡರ್ಚೆ ರೇಚಿರಾಜನೆಸೆದಂ ಜಸದಿಂ ವಸುಧೈಕಬಾಂಧವಂ (ಎಕ. VII, ಶಿಕಾರಿ. ೧೯೭-೩೨ ; 1182) ; ಕರದಿಂ ಮೆಯ್ಯೊಳ್ ಪನಿತಕ್ಕರದಂತಿರೆ ಸಾಂಜನಾಂಬುಕಣತತಿ ಕಾಮಂ ಬರೆದ ನೃಪಸುತನ ಸೊಬಗಿನ ನರಶಾಸನದಂತೆ ವಿರಹವಿಹ್ವಲೆಯಿರ್ಪಳ್ (ಚಂದ್ರಪ್ರ. ೫-೦೨೬). [ ನರ$_2$ + ಶಾಸನ ]

**ನರಶಿರಮಾಲೆ** (ನಾ). ಮನುಷ್ಯನ ತಲೆಬುರುಡೆಗಳ ಸರ ; ಕರೋಟಿಮಾಲೆ : ಕಂಠದೊಳಂಜಿಪ ನರಶಿರಮಾಲೆ (ಶಾಂತಪು. ೧೯-೭).

[ ನರ$_2$ + ಶಿರ$_2$ + ಮಾಲೆ ]

**ನರಶೂಲೆ** (ನಾ). ದೇಹದ ನರಗಳಲ್ಲಿ ಉಂಟಾಗುವ ನೋವು : ಆವಾವ ಠಾವಿನ ನರಶೂಲೆಗೆ, ಕಪಾಲಶೂಲೆಯ ಠಾವಿಗೆ ಶ... ಆ ಔಷಧಿಯ ನಿಕ್ಕಲು ಶೂಲೆ ಮಾಣ್ಗುಂ (ವಿಶ್ವವಿ. ೫೦). [ನರ$_1$ (<... + ಶೂಲೆ$_1$]

**ನರಸ** (ನಾ). = ನರಸಿಂಹ ೧. 'ನರಸಯ್ಯ' ಪರಾ. [ < ನರಸಿಂಹ ]

**ನರಸಣ್ಣ** (ನಾ). (ಕರಾ) ಬುಡುಬುಡಿಕೆಯವನು ; ಶಕುನ ಹೇಳುವವನು : ನಸುಬೆಳಕು ಹರಿಯುತ್ತಿತ್ತು . . . ಹಗಲ್ವೇಷಿಯ ಹುಂಗನಕೇರಿಯಲ್ಲಿ ನರಸಣ್ಣರಿಬ್ಬರು ಹರಿಯುತ್ತಿದ್ದರು (ನಡೆದಾ. I, ೪೩೩) ; ಹಾಡುವ ಪಲ್ಲವಿಗೂಡಿಸುವ ನರಸಣ್ಣರಿಬ್ಬರೂ ಹಾಲುಮನೆಯ ಅಂಗಳದೊಳಗಾದರು (ನಡೆದಾ. I, ೪೩೪) ; ನರಸಣ್ಣ ಬಂದರೆ ನಮಗೆ ಹೆದುಕೆಯಾಗುತ್ತದೆ (ಹರಾವ. ೨೬). [ ನರಸ$_1$ + ಅಣ್ಣ$_1$ ]

**ನರಸತ್ವ** (ನಾ). [ಕಾಮಶಾ] ಹನ್ನೆರಡು ಬಗೆಯ ಸ್ತ್ರೀಸತ್ವಗಳಲ್ಲಿ ಒಂದು: ದೇವಸತ್ವ ಯಕ್ಷಸತ್ವ ಗಂಧರ್ವಸತ್ವ ನರಸತ್ವ ನಾಗಸತ್ವ ಕಾಕಸತ್ವ ವಾನರಸತ್ವ ಮುನಿಸತ್ವ ಪಿಶಾಚಸತ್ವ ರಾಕ್ಷಸಸತ್ವ ಕಿನ್ನರಸತ್ವ ಖರಸತ್ವವೆಂಬ ದ್ವಾದಶಸತ್ವದ ಸತಿಯರಿಂ (ವಿವೇಕ. ೨೩೯).

ನರಸತ್ವದವಳು=ನರಸತ್ವದ ಸ್ತ್ರೀ: ಋಜುಚಿತ್ತದಿಷ್ಟರ್ಗೆ ನಿಜದೊಳೊಲಿದಿರ್ಪ ನೀರಜನೇತ್ರೆಯವಳ್ ನರಸತ್ವದವಳು (ಜನವ. ೫-೨೯). ನರಸತ್ವದ ಸ್ತ್ರೀ="ಋಜುವಾದ ಚಿತ್ತದವಳು ಸಮರ್ಥಳುಂ ಅವುತಣ ಪ್ರೀತಿಯುಳ್ಳವಳುಂ ಉಪವಾಸದಿಂದಂಜಳು ಸ್ವಲ್ಪ ಉಂಬುವಳು ಇವಳು ನರಸತ್ವದ ಸ್ತ್ರೀ" (ಕಾಮಶಾ. ೪-೬೦). [ ನರ$_2$ + ಸತ್ವ$_1$ ]

**ನರಸಮಿತಿ** (ನಾ). ಜನಸಮೂಹ; ಮಾನವಕೋಟಿ: ನರಸಮಿತಿಗೆ ಬೇಡಿದುದಂ ನಿರಂತರಂ ಕೊಟ್ಟು ಕಲ್ಪವೃಕ್ಷಂ ಪೋಗಲ್ (ಆದಿಪು. ೧೬-೪೩) ; ನರಸಮಿತಿ ಕೊಂದರೆಂದಡೆ ನೆರವಾಗದೆ ನೋಡದೋಡಿದರು ನಿನ್ನವರು (ನನ್ನಿಕಾ. ೫-೪೪). [ ನರ$_2$ + ಸಮಿತಿ ]

**ನರಸಮ್ಮ** (ನಾ). ರೋಗಿಗಳಿಗೆ ಆರೈಕೆಮಾಡುವ ದಾದಿ ; ನರ್ಸ್ : ಬೇಯುತಲಿರುವೆನು ಬಳಿ ಬಾರೆ ನರಸಮ್ಮ ವೈದ್ಯರ ಕರೆಸದಿರಮ್ಮ (ಚಂದ್ರವೀ. ೫೨-೬). [ ನರಸು (<ನರ್ಸ್) + ಅಮ್ಮ$_2$ ]

**ನರಸಯ್ಯ** (ನಾ). ಒಬ್ಬಾತನ ಹೆಸರು : ಪ್ರತಿಮೆಗಳೆಲ್ಲಮಂ ನರಸಯ್ಯ ಮೈಸಗೆಯ್ದುವರ್ (ಎಕ. VI, ಚಿಕ್ಕಮ. ೧೩೩-೦೦ ; 893 ?). 'ನಚ್ಚಯ' ಪರಾ. [ ನರಸ + ಅಯ್ಯ$_1$ ]

**ನರಸಿಂಗ** (ನಾ). ೧. = ನರಸಿಂಹ ೧ : ಇದು ವಿನಂಗ ಮೋಹನಾಂಗ ಮದನಜನಕ ತೊರವೆಯ ನರಸಿಂಗ (ಪುರಂದ. ೧-೯೯ ಅನುಪಲ್ಲವಿ) ; ಕೆಂಗಿಡಿಗಣ್ಣ ಕೇಸರಿಯ ಮಸ್ತಕವ ಬಾಣಂಗಳಿಂದಿಳುಹಿ ತಾಳ್ದವರು ಕಂಗೊಳಿಸಿದರು ಕಾಂತಾರದೆ ಸಿರಿನರಸಿಂಗನ ಲೆಂಕರೆಂಬಂತೆ (ಮೋಹತ. ೧೯-೩೦). ೨. ವೇಮುಲವಾಡದ ಚಾಳುಕ್ಯರ ಒಬ್ಬ ರಾಜನ ಹೆಸರು ; P ಅರಿಕೇಸರಿಯ ತಂದೆ : ನರಸಿಂಗಂಗಂ ಜಾಕಬ್ಬರಸಿಗಮಳಪೊದವೆ ಪುಟ್ಟಿ ಪುಟ್ಟಿಯುಮರಿಕೇಸರಿಯೆನೆ ನೆಗಟ್ದುಮರಾತಿಯ ಸರಿದೊರೆಗಂ ಬಂದೆನಪ್ಪೊಡಾಗಳ್ ನಗಿರೇ (ಪಂಪಭಾ. ೧೨-೧೩). ೩. ಒಬ್ಬಾತನ ಹೆಸರು : ಬೆಳ್ಮಣಿಯ ಪದುಮಣ್ಣನ್ ಕಬ್ಬರ ಸೋಮದಿ ಮಿಟ್ಟಸೆಯ ನರಸಿಂಗನ್ ಸಿಮ್ಮನೂರ ಕಿಳ್ಪುಮ್ಮನ್ (ಎಕ. VIII, ಸೊರಬ. ೦೦-೧೨ ; 800).

[<ಸಂ. ನರಸಿಂಹ]

**ನರಸಿಂಗಪಟ್ಟಸು** (ನಾ). ಜಟ್ಟಿಕಾಳಗದಲ್ಲಿ ಒಂದು ವರಸೆ : ಅಂತರಿಪ ನರಸಿಂಗಪಟ್ಟಸು ಮುಂತಡರೆ ತಳಹತ್ತ ಗಳಹತ್ತಂ ತುಳಿಲ ವಿಂದಾಣದಲಿ ಹರಿ ಕಾದಿ ಬಳಲಿಸಿದ (ಸಾಳ್ವಭಾ. ೨೨-೭೩).

[ ನರಸಿಂಗ + ಪಟ್ಟಸು (<ಪಟ್ಟಸ$_1$) ]

**ನರಸಿಂಗಯ್ಯ** (ನಾ). ಒಬ್ಬಾತನ ಹೆಸರು : ಜನ್ನಯ್ಯ × × × ಮಗ ನರಸಿಂಗಯ್ಯಂಗೆ ಕೊಟ್ಟ ಸಾಶನ (ಎಕ. IV, ಗುಂಡ್ಲುಪೇ. ೫೭-೬ ; ಸು. 900) ; ಅಕಳಂಕ ಮಹೇಶ್ವರಂ ದಣ್ಡಂ ಮುತ್ತಿಚಿಪೊಂ ಶ್ರೀಮತ್ ನರಸಿಂಗಯ್ಯ ನರಸಿಂಗೇಶ್ವರಮ್ಮಾಡಿಸಿ ಮಣಲೆವಾಡಿಯನಭ್ಯಂತರಸಿದ್ಧಿಯಾಗೆ ಬಿಟ್ಟಂ (ಎಕ. XIV, ಮೈಸೂರು. ೦೨೭-೫ ; ಸು. 900).

[ ನರಸಿಂಗ + ಅಯ್ಯ$_1$ ]

**ನರಸಿಂಹ** (ನಾ). ೧. ಮನುಷ್ಯನ ದೇಹ ಹಾಗು ಸಿಂಹದ ಮುಖವುಳ್ಳ ರೂಪವನ್ನು ಹೊಂದಿದ ವಿಷ್ಣುವಿನ ಹತ್ತುಅವತಾರಗಳಲ್ಲಿ ನಾಲ್ಕನೆಯದು ; P ಹಿರಣ್ಯಕಶಿಪುವೆಂಬ ರಾಕ್ಷಸನನ್ನು ಕೊಲ್ಲಲು ಈ ರೂಪ ತಾಳಿ ಕಂಭದಿಂದ ಉದ್ಭವಿಸಿದ ಅವತಾರವೆಂದು ನಂಬಲಾಗಿದೆ : ಬಲಿಯುಂ ಕಟ್ಟಿದನಾವನೀ ಧರಣಿಯಂ ವಿಕ್ರಾಂತದಿಂದಂ ರಸಾತಲದಿಂದೆತ್ತಿದನಾವನಂದು ನರಸಿಂಹಾಕಾರದಿಂ ದೈತ್ಯನಂ ಚಲದಿಂ ಸೀಳ್ದವನಾವನಬ್ಧಿಮಥನಪ್ರಾರಂಭದೊಳ್ ಮಂದರಾಚಲಮಂ ತಂದವನಾವನಾತನೆ ವಲಂ ತಕ್ಕಂ ಪೆಱರ್ ತಕ್ಕರೇ (ಪಂಪಭಾ. ೬-೪೦) ; ಆಗಳಲ್ಲಿಂ ಮಗುಳೆ ನೆಲಸಿದ ಬೇಗದಲು ಸಿರಿವೊಳಲ ನರಹರಿ ಬೇಗ ಮನುಜರ ಪ್ರಾರ್ಥನಂಗಳ ಕೊಂಬ ನರಸಿಂಹ (ಸಂಭಪ. ೮-೦೨೮): ಗಾನವಿನೋದಿ ನಮ್ಮ ತೊರವೆಯ ನರಸಿಂಹ (ಪುರಂದ. ೦-೦೨೩ ಅನುಪಲ್ಲವಿ); ನಿಂದಲ್ಲಿ ನಿಲ್ಲದಾ ನರಸಿಂಹನಾದಿರೊಳ್ಳಿ ತಂದು ನಿಂದು... ಇಂತೆಂದನು (ಜಬಪು. ೩೩-೯). ೨.=ನರಸಿಂಗ ೨ : ಚಲದ ಬಲದ ಕಲಿ ನರಸಿಂಹಂ (ಪಂಪಭಾ. ೦-೩೩). ೩. ಹೊಯ್ಸಳ ರಾಜನಾದ ಒಂದನೆಯ ನಾರಸಿಂಹನ ಹೆಸರು : ನರಸಿಂಹಭೂಮಿಪಾಳನ ಕರಾಸಿ ಮಚ್ಚರಿಪರೆದೆಯ ಗೂಂಟಂ ವಿದ್ಯಾಭರಣಂ ತಾನೆನೆ ರಂಜಿಪಂ . . . ಗಳಗಂ (ಎಕ. V, ಬೇಲೂರು. ೧೧೪-೪೮ ; 1173). ೧, ೩ : ನರಸಿಂಹಂ ನರಸಿಂಹನನ್ತೆ ಮುನಿಸಿಂ ಮಾಜಿಾಂತ ವೀರಾರಿ ಭೂಪರನಮ್ಮಟ್ಟನೊಳಿಂತು ಕಂಡೊಡೆ ಬಳಿಕ್ಕಮ್ಮಮ್ಮ ಪೋಟ್ದಿಕ್ಕಿ (ಎಕ. VI, ತರೀಕೆ. ೪೨-೦೮ ; 1206).

[ ನರ$_2$ + ಸಿಂಹ ]

**ನರಸಿಂಹಕ್ಷೇತ್ರ** (ನಾ). ನರಸಿಂಹದೇವರು ನೆಲೆಸಿರುವ ಪುಣ್ಯಸ್ಥಳ: ಪರಮಭಕ್ತಪ್ರಹ್ಲಾದಗೊಲಿದು ಬಂದು ನರಸಿಂಹಕ್ಷೇತ್ರವೆಂದೆನಿಸಿ ಮೆರೆದೆ (ಪುರಂದ. ೪-೯೦-೩); ಮಹಾನರಸಿಂಹಕ್ಷೇತ್ರಮನಾ ಹಿರಣ್ಯಕಸುತ ಪ್ರತಿಷ್ಠಿತಮನೀಕ್ಷಿಸಿದಂ (ಯಾದಮಾ. ೦೬-೧೬೭).

[ ನರಸಿಂಹ + ಕ್ಷೇತ್ರ ]

**ನರಸಿಂಹಜಯಂತಿ** (ನಾ). ನರಸಿಂಹನು ಅವತಾರಮಾಡಿದ ದಿನ; ವೈಶಾಖಶುದ್ಧಚತುರ್ದಶಿಯಂದು ಆಚರಿಸುವ ಹಬ್ಬ: ನೃಸಿಂಹ ಅಥವಾ ನರಸಿಂಹಜಯಂತಿಯನ್ನು ವೈಶಾಖಶುಕ್ಲ ೧೪ನೆಯ ದಿನದಂದು ಆಚರಿಸುತ್ತಾರೆ (ಭಾಹಬ್ಬ ೫೯). [ ನರಸಿಂಹ + ಜಯಂತಿ ]

**ನರಸಿಂಹಾಡಂಬರ** (ನಾ). ನರಸಿಂಹನ ಆಟೋಪ,–ಅಬ್ಬರ: ಅರಿಗಳ್ ಪೆಸರ್ಗೆಟ್ಟೆರ್ದೆವೊಡೆವರೆಂಬ ಶೂದ್ರಕನ ವಿಕ್ರಮಾಡಂಬರಮೆಂದರೆವಾನಸಿಕೆ ಯೊಳೊಂದಿದ ನರಸಿಂಹಾಡಂಬರಕ್ಕೆ ನಸುನಗುತಿರ್ಕುಂ (ಕಾದಂಪೂ. ೧೧).

[ ನರಸಿಂಹ + ಆಡಂಬರ ]

**ನರಸಿಂಹಾವತಾರ** (ನಾ). ೧. ನರಸಿಂಹನ ಅವತಾರ. ೨. (ಆಲಂ) (ನರಸಿಂಹನಂತೆ) ಕೋಪಾವೇಶದಿಂದ ಕೂಡಿದ ಉಗ್ರರೂಪ: ಅವರ ನರಸಿಂಹಾವತಾರವೆಲ್ಲಾ ಇಳಿದು, ಒಮ್ಮೆ ಹೋಗಿ ಬಿದ್ದುಕೊಂಡರೆ ಸಾಕು ಎಂದೆನಿಸಿತ್ತು (ಮರವಾ. ೬೭); ಅವರು ನರಸಿಂಹಾವತಾರ ತಾಳಿಬಿಟ್ಟಿದ್ದರು, ನಾನು ಮಾತಾಡದೆ ಬಂದುಬಿಟ್ಟೆ (ರೂಢಿ). [ ನರಸಿಂಹ + ಅವತಾರ ]

**ನರಸಿಕ್ಕು** (ನಾ). ದೇಹದಲ್ಲಿ ನರಗಳು ತೊಡಕಿಕೊಂಡಿರುವಿಕೆ: ನರಸಿಕ್ಕು, ಕಪಾಲಶೂಲೆಗೆ–ಕಡಲನಾಲಿಗೆ, ತುತ್ತ, ಸೈಂಧವಲವಣ . . . ಇವೆಲ್ಲಮಂ ಕೂಡಿ ವೇದನೆಯಾದ ಠಾವಿಗೆ ಶಸ್ತ್ರವನ್ನಿಕ್ಕಿ ಆ ಔಷಧಿಯಂ ಲೇಪಂ ಮಾಡೆ ವೇದನೆ ಶೀಗ್ರಂ (ವಿದ್ಯವಿ. ೦೬೩).

[ ನರ$_1$ (<ನರವು) + ಸಿಕ್ಕು$_3$ (<ಸಿಲ್ಕು$_2$) ]

**ನರಸಿಗಮಂಗಲ** (ನಾ). ಒಂದು ಊರಿನ ಹೆಸರು: ಪೊಜ್ಜುಣ್ಣ ಬೆಳ್ಮಾದಣ್ಣಂ ಶ್ರೀಕೞ್ಬಿಶಾಯಿ ನರಸಿಗಮಙ್ಗಲದ ತೊಱುಗೊಳೊಳ್ ಸತ್ತಂ (ಎಕ. X, ಬಾಗೇಪಲ್. ೪೨-೪; ಸು. 920).

[P ಇದು ‘ನರಸಿಂಗಮಂಗಲ’ ಎಂಬುದರ ಅಪಲಿಖಿತವಿರಬಹುದು.]

**ನರಸೀಗೆಱೆ**[3] (ನಾ). ಒಂದು ಊರಿನ ಹೆಸರು.

ನರಸೀಗೆಱೆ[3] ಅಪ್ಪೊರ್ =ನರಸೀಗೆರೆಯೆಂಬ ಊರಿನವರು: ಸ್ವಸ್ತಿಶ್ರೀ ನರಸೀಗೆಱೆ[3] ಅಪ್ಪೊರ್ ದುಗ್ಗಮಾರ ಕೊಯಿಲ್ವಸದಿಗೆ ಅಱುಗಣ್ಣುಗಬ್ಬೆದ ಪಣ್ಣೊಟ್ಟಿರ್ (ಮ್ಯಆರಿ. ೦೯೬೨, ೩೮-೦; ಸು. 825). [ ? ]

**ನರಸು** ‘ನರ್ಸ್’ ನೋ.

**ನರಸುಕ್ಕು** (ನಾ). ನರ ಉಡುಗುವಿಕೆ; ನರ ಮುದುರಿಕೊಳ್ಳುವಿಕೆ (?): ಇಕ್ಕಡಿಯ ಬಸುಱುಚ್ಚುಗಳ ನರಸು[ಪಾಠಾಂ. ಸೊ]ಕ್ಕು ದೊಣ್ಣಸದ ಮಹಾ ಭಯವಕ್ಕಸರದಲಿ ಕಾಣಲಾದುದು ವೈರಿಬಲದೊಳಗೆ (ಕುಮ್ಮಾಭಾರ. ೦೭-೩೬); ಇಕ್ಕಡಿಯ ಬಸುಱುಚ್ಚುಗಳ ನರಸುಕ್ಕುಗಳ ನಾಟಕದವೊಲು ಕೈಯಿಕ್ಕಿದಾನೆಯ ಹಿಂಡು ಮುಱಿದುದು ನಿಮಿಷಮಾತ್ರದಲಿ (ಕುಮ್ಮಾಗ. ೨-೩೪).

ನರಸುಕ್ಕನಿಕ್ಕು=ನರಗಳು ಮುದುರಿಕೊಳ್ಳುವಂತೆ ಮಾಡು; ನರಗಳು ಉಡುಗಿಹೋಗುವಂತೆ ಮಾಡು: ಬಾಳ ಚಾಚಿದಳವಳನಿಗೆ ಗೋನಾಳ ಗೊಡ್ಡಿದ ಬಂದಿಯಲಿ ತುದಿನಾಲಿಗೆಗೆ ನರಸುಕ್ಕನಿಕ್ಕಿದಳವಳು ತನಗೆಂದ (ಕೊರಡರಾ. ೨-೨-೩೮). [ ನರ$_1$ (<ನರವು) + ಸುಕ್ಕು$_2$ (<ಸುರ್ಕು$_2$) ]

**ನರಸುತ** (ನಾ). = ನರನಂದನ: ರಣಾಜಿರದೊಳರಿನೃಪರನಿಕ್ಕಿದ ನರಸುತ ನಿನ್ನೊರೆಗೆ ದೊರೆಗೆ ಗಂಡರುಮೊಳರೇ (ಗದಾಯು. ೪-೩೩); ಸೈಂಧವ ನೆಟ ಎಂದು ತಾಗಿದಂ ನರಸುತನೊಳ್ (ಬಂಹರಿ. ೦೨-೨೨).

[ ನರ$_2$ + ಸುತ ]

**ನರಸೇನೆ** (ನಾ). ಮಾನವ ಸೈನ್ಯ: ನರಸೇನೆಗೆರಿದು ಲಂಕಾಪುರದ ಬಹಿರ್ಜಲಧಿ ದಾಂಟಲೀತಿದು ದೇವಾಸುರರ್ಗಮರಿದೆನಿಸಿ ನರಕನ ಪುರವಂ ಬಳಸಿರ್ದುದೊಂದು ಪೌರವಪಾಶಂ (ಜಗವಿ. ೦೨-೩). [ ನರ$_2$ + ಸೇನೆ ]

**ನರಸೊಬ್ಬ** (ನಾ). ಒಬ್ಬಾತನ ಹೆಸರು: ಸ್ವಸ್ತಿಜಂಬೂದ್ವೀಪಾಂತರೇ ಕಶ್ಚಿತ್ ವಾಸ್ತು ಪ್ರಾಸಾದ ತದ್ಗತಃ ನರಸೊಬ್ಬಸಮೋ ವಿದ್ವಾನ್ ನ ಭೂತೋ ನ ಭವಿಷ್ಯತಿ (ಎಕ. IX, ೬೪-೩; ಸು. 7-8ನೆಯ ಶತ).

[<ನರಸ ? ]

**ನರಸ್ಫೋಟ** (ನಾ). “ನರದ ಮೇಲಿನ ಅಥವಾ ನರಪದಾರ್ಥದ ಮೇಲಿನ ಗಂತಿ” (Neuroma. ಇಂಕಪಾ). [ ನರ$_1$ (<ನರವು) + ಸ್ಫೋಟ ]

**ನರಹತಿ** (ನಾ). = ನರಹತ್ಯೆ: ದೇಶ ದೇಶಗಳ ನಡುವೆ ಆಗುವ ಯುದ್ಧದಲ್ಲಿ ನರಹತಿ ಅಪಾರವಾಗಿರುತ್ತದೆ (ರೂಢಿ). [ ನರ$_2$ + ಹತಿ ]

**ನರಹತ್ಯ** (ನಾ). ಮನುಷ್ಯನನ್ನು ಕೊಲ್ಲುವುದು; ಕೊಲೆ: ನರಹತ್ಯಕ್ಕೆ ಹೆದರದವ ಕುರಿಹತ್ಯಕ್ಕೆ ಹೆದರ್ಯಾನೆ? (ಗಾದೆ). [ ನರ$_2$ + ಹತ್ಯ ]

**ನರಹತ್ಯೆ** (ನಾ).=ನರಹತ್ಯ: “ಮನುಷ್ಯನನ್ನು ಕೊಲ್ಲುವುದು; ನರಹತ್ಯೆ” (Homicide. ಇಂಕಪಾ); ನರಹತ್ಯೆ ನಡೆದರೆ . . . ಅವನಿಗೆ ಗಲ್ಲಾಗುವುದೇ ಖಂಡಿತ! (ಮರವಾ. ೮೧೯). [ ನರ$_2$ + ಹತ್ಯೆ ]

**ನರಹರಿ** (ನಾ).= ನರಸಿಂಹ ೧: ಹಿರಣ್ಯಕ ಕೇಡುಗಾಲಕೆ ಮಗನ ಕೊಲಲಿರೆ ಗೂಢ ನಖದಲಿ ಸೀಳ್ದ ನರಹರಿಯಾಗಿ ದಾನವನ (ಕೌಶಿರಾ. ೧೪-೨೮); ಹರಿಯನ್ನು . . . ಹರಿಯೆನ್ನದಿದ್ದರೆ ನರಹರಿಯಾಣೆ (ಪುರಂದ. ೩-೧೫೩ ಅನುಪಲ್ಲವಿ); ಕೂಗಿದರು ಧ್ವನಿ ಕೇಳಲಿಲ್ಲವೇ ನರಹರಿಯು (ಕನಕ. ೦೩೬ ಅನುಪಲ್ಲವಿ). [ ನರ$_2$ + ಹರಿ$_7$ ]

**ನರಹರ್ಯಕ್ಷ** (ನಾ).=ನರಸಿಂಹ ೧: ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ (ಉತ್ತರಾ. ೨೦-೨೩); ಹರನುತ ಹಲಧರನನುಜ ನರಹರ್ಯಕ್ಷ ಹರುಷದಿ ಸಲಹೆನ್ನನೊಲಿದು (ಕತಕಾಂ. ೬೪-೬೩). [ ನರ$_2$ + ಹರ್ಯಕ್ಷ ]

**ನರಹುರಿ** (ನಾ). ಹೊಸೆದುಕೊಂಡಿರುವ ನರ: Nerve Cord ನರಹುರಿ (ಕೀಟಜೆ. ೨೬). [ ನರ$_1$ (<ನರವು) + ಹುರಿ$_3$ (<ಪುರಿ$_3$) ]

**ನರಹುಲಿ** ‘ನರವುಲಿ’ ನೋ.

**ನರಹುಳು** (ನಾ). ೧. ನರಪಿಳ್ಳೆ; ಮನುಷ್ಯ: ಆದರೆ ರಜಸ್ವಿಯಾಗುವ ತನಕ ಸುದ್ದಿ ನರಹುಳುವಿಗೆ ಸಿಗಕೂಡದು (ಮರವಾ. ೧೬೦). ೨. (ಆಲಂ) ಕೈಲಾಗದವನು; ದುರ್ಬಲ: ಎಲೆ ಯುಧಿಷ್ಠಿರ ಬಿಲ್ಲ ಹಿಡಿ ನರಹುಳುಗಳವದಿರ ಕವಿಸಿ ಕಾಲವ ಕೊಲುವುದೇ (ಕುಮ್ಮಾದ್ರೋ. ೨-೪೩).

[ ನರ$_2$ + ಹುಳು (<ಪುೞು) ]

**ನರಳ್** ‘ನರಲ್$_1$’ ನೋ.

**ನರಳಾಟ** (ನಾ). ನರಳುವಿಕೆ; ಸಂಕಟಪಡುವಿಕೆ; ವೇದನೆಯ ಧ್ವನಿ: ಅದರಿಂದುಂಟಾಗುವ ನರಳಾಟವೂ ಆಶಾಭಂಗವೂ ತೀರದು ಬರುತ್ತವೆ (ಕತ್ತಪ್ರಾ. ೩೯೦); ಈ ನರಳಾಟದಲ್ಲಿಯೇ ಮರುದಿನ ನಸುಕಿನಲ್ಲಿ ಅವನ ಆಯುಷ್ಯವು ಮುಗಿದುಹೋಯಿತು (ಸಮಚೀ. ೪೪೨).

[ ನರಳು$_1$ (<ನರಲ್$_1$) + ಆಟ ]

**ನರಳಾಡು** (ಕ್ರಿ). ನರಳು; ಸಂಕಟಪಡು: ಮಗು ನೋವಿನಿಂದ ನರಳಾಡುತ್ತಿದೆ (ರೂಢಿ). [ ನರಳು$_1$ (<ನರಲ್$_1$) + ಆಡು$_1$ ]

**ನರಳಿಕೆ** (ನಾ). = ನರಳಾಟ: ನಿಶಿತಖಡ್ಗನಿಘಾತವೇದನೆಯ ನರಳಿಕೆಯ ರಘುರಾಮ ನಾಮಸ್ಮರಣೆಯರುಣಕುಮಾರಕನ . . . ಕಂಡನು (ತೊಕರಾ. ೩-೦೨-೪); ಆ ನರಳಿಕೆ, ಆ ಸಂಕಟದ ಕೂಗು ಮತ್ತಾರದೂ ಅಲ್ಲ (ಬನಸಿ. ೩೩); ನನ್ನ ಧ್ವನಿ ನೆಗಡಿಯ ಹಿಡಿತದಿಂದ ತುಸ ಬದಿಸಿಕೊಂಡು . . . ಗುಹೆಯೊಳಗಿನ ನರಳಿಕೆಯಂತೆ ಹೊರಕ್ಕೆ ಬಂದಿತ್ತು (ನಂಟರು. ೩೯).

[ ನರಳು$_1$ (<ನರಲ್$_1$) + –ಇಕೆ ]

**ನರಳಿಸು** 'ನರಲಿಸು' ನೋ.

**ನರಳು₁** 'ನರಲ್₁' ನೋ.

**ನರಳು₂** 'ನರಲ್₂' ನೋ.

**ನರಳುದನಿ** (ನಾ). ನರಳುವ ಧ್ವನಿ ; ನರಳಾಟ : "ಓ ಓ, ಅಯ್ಯೋ . . ." ಎಂಬ ಹೆಂಗಸಿನ ನರಳುದನಿ ಅವನ ಕಿವಿದೆರೆಯನ್ನು ಮುಟ್ಟಿತು (ಪುನರು. ೯೩೪). [ ನರಳು₂ (< ನರಲ್₂) + ದನಿ₁ ]

**ನರಳೆ** (ನಾ). ಒಂದು ಬಗೆಯ ಬಳ್ಳಿ ; ಮಂಗರವಳ್ಳಿ : ಈ ದಿನ ನಮ್ಮ ಮನೆಯಲ್ಲಿ ನರಳೆ ಚಟ್ನಿ ಮಾಡಿದ್ದರು (ರೂಢಿ). 'ನರಲೇಬಳ್ಳಿ' ಪರಾ. [ ದೇ.॥ ತಮಿ. ನರಳೈ ]

**ನರಾಂಗ** (ನಾ). ೧. ಮನುಷ್ಯದೇಹ : ಉಜ್ಜ್ವಲ ಬಡಬಾಗ್ನಿವಹ್ನಿ ಯುಗಮಾಂತು ನರಾಂಗಮನಣ್ಮೆ ಕಾದುವಂತೆ (ಕಬಕಂ. ೪-೬೩). ೨. ಪುರುಷನ ಜನನೇಂದ್ರಿಯ. [ ನರ₂ + ಅಂಗ₂ ]

**ನರಾಕೃತಿ** (ನಾ). ಮನುಷ್ಯನ ಆಕಾರ, -ರೂಪ : ಆಗಳ್ ನರಾಕೃತಿ ಗಕ್ಕನೆ ಪೋಗಿ ರಾಜಕೀರಾಂಚಿತಜನ್ಮವನ್ನವರ್ದಪ್ಪಿದುದು (ಅದ್ಭುತ. ೬-೧೧೫) ; ನರಾಕೃತಿಯ ಪರಬೊಮ್ಮರೂಪನು ತಿರುಹಿದನು ರಥವ (ಕುಮ್ಯಾವ್ಯಾ. ೧೯-೩೧). [ ನರ₂ + ಆಕೃತಿ ]

**ನರಾದಿ** (ನಾ). ಒಂದು ಬಗೆಯ ಆಯುಧ : ಬಲ್ಲೆಹ ಬಂಕು ಬಾಣನೆದೆ ನರಾದಿ ಶೂಲ ಶಿರಾದಿ ಚೂರಿ ಚಿಕ್ಕತಾರಿ . . . ಜವದಾಡೆಗಳೆಂಬ ಬತ್ತೀಸಾಯುಧಗಳಿಂ (ವಿವೇಕ. ೩೮೩). [ ? ]

**ನರಾಧಮ** (ನಾ). ಕೀಳುಮನುಷ್ಯ ; ನೀಚ ; ಹೀನ ಮಾನವ : ನರಾಧಮರೆಮಗೆ ಪಾಡೇ ಪಥವ ಬಿಡು ಬೇಡೆನುತ ತೆಗೆದೆಚ್ಚ (ಕೋಶಸಾ. ೬-೩೦-೩೩) ; 'ನೀನು ಹೇಡಿ' ಎಂದು ಹೇಳಿದರೆ ಕೋಪಿಸಿಕೊಳ್ಳದ ನರಾಧಮನೂ 'ನೀನು ಧೀರ' ಎಂದರೆ ಹಿಗ್ಗದ ನರನೂ ಈ ಪ್ರಪಂಚದಲ್ಲಿ ಇಲ್ಲವೆಂದೇ ನನ್ನ ಅಭಿಪ್ರಾಯ (ಹಂಯುಕ್ತಿ. ೯೩) ; ಏಳ್, ಸರ್ವಶಕ್ತಿ ಸ್ವರೂಪಿಣಿಯೆ . . . ನರಾಧಮ ಕಪಿಪ್ರಾಣಾಪಹಾರಕ್ಕೆ ! (ಶ್ರೀರಾಮಾ. ೬೮೪-೯೦) ; ಈ ನರಾಧಮನ ಬೆದರಿಕೆಗೆ ಅಷ್ಟು ಹೆದರಿದಿರಾ ? (ಹಂಗೀತ. ೩೦೩). [ ನರ₂ + ಅಧಮ ]

**ನರಾಧಿಪ** (ನಾ). ಅರಸ ; ರಾಜ : ಶನಿ ಮಕರಲಗ್ನದೊಳ್ . . . ದಸುತೇಜ್ಯಂ ತೊಳೆಯೊಳ್ ಸೌಮ್ಯನಿರಲ್ ನರಯುಗ್ಮದೊಳ್ ನರಾಧಿಪನಕ್ಕುಂ (ಜಾತಕ. ೧೨-೫) ; ಪೊಲ್ಲಮೆಪ್ಪ ಕನಸಂ ಪರಿವೀಕ್ಷಿಸಿದಂ ನ ರಾ ಧಿ ಪಂ (ಬಂಹರಿ. ೬-೮) ; ಉನ್ನತಚಿತ್ತನಾದನನಿತೊಂದುಪಸರ್ಗದೊಳಾ(ಳಂ) ನರಾಧಿಪಂ (ಜೀವಸಂ. ೫೭-೩೭) ; ಖಳತನುಭವನಿಳೆಯ ನಾಡಾಡಿಯ ನರಾಧಿಪನ್ನೆಸರೇಯೆಂಬ ಬಳಕೆಯುಲಿ ಬೊಬ್ಬಿಡುದು . . . ನಿಡುದನಿದೋಜಲೆಚ್ಚನು ರಾಘವೇಶ್ವರನ (ತೊರರಾ. ೬-೪೧-೩೫). [ ನರ₂ + ಅಧಿಪ ]

**ನರಾಧೀಶ** (ನಾ). = ನರಾಧಿಪ : ತ್ರಿದಶಲೋಕಕ್ಕೇಱುತಿರ್ದಾ ತ್ರಿಶಂಕು ನರಾಧಿಶನ ಲಕ್ಷ್ಮಿ ಶಕ್ರನ ಮಹಾ ಹುಂಕಾರದಿಂ ಬಿರ್ದಳೆಂಬಿನೆಗಂ . . . ಒರ್ವಳ್ ಕನ್ನೆ ಚಂಡಾಲೆ ದರ್ಶನತಾತ್ಪರ್ಯದೆ ರಾಜಕೀರಸಹಿತಂ ಬಂದಿರ್ದಪಳ್ ಬಾಗಿಲೊಳ್ (ಕಾದಂಪೂ. ೩೪). [ ನರ₂ + ಅಧೀಶ ]

**ನರಾಮರ** (ನಾ). = ನರಾಧಿಪ : "ನೃಪತಿ ರಾಟ್ ರಾಜಂ ನರಾಮರಂ ಪಾರ್ಥಿಮಂ. . .ಎನಲ್ಕರಸಕ್ಕು" (ಖುಂಗರಾ. ೭೮-೧). [ ನರ₂ + ಅಮರ₃ ]

**ನರಾಯುಷ್ಯ** (ನಾ). ಮನುಷ್ಯನ ಆಯುಸ್ಸು ; ನೂರು ವರ್ಷ: ಜನನಂ ಸಂಭವಿಸಿರ್ದ ಲಗ್ನಗೃಹದೊಳ್ ಪಾಪಗ್ರಹಂ ನಿಂದೊಡರ್ಧ ನವಾಂಶಾಗಳಿನಾಯುವನ್ನಿಱಿದು ಭಾಗಂಗೊಂಡು ನೂಱಿಂಟಱಿಂದೆ ನರಾಯುಷ್ಯದೊಳಲ್ತೆ ಕುಂದಿಪುದು ಪೆತ್ತು ಲಬ್ಧಮಂ (ಜಾತಕ. ೬-೮). [ ನರ₂ + ಆಯುಷ್ಯ ]

**ನರಾವರಣ** (ನಾ). ನರಗಳ ಆವರಣ, -ಆಚ್ಛಾದನ : ನಶ್ವರವಕ್ಷೀಯಗಳಲ್ಲಿ ನರಗಳ ಹೊರಿಯ ಮೇಲೆ, ನರಾವರಣದ (Perineural Sinus) ಕೆಳಕುಹರವಾಗಿದೆ (ಕೀಟಶಿ. ೩೩). [ ನರ₁ (< ನರವು) + ಆವರಣ ]

**ನರಾಶ್ವ** (ನಾ). ಕುದುರೆಯ ತಲೆ ಹಾಗು ಮನುಷ್ಯನ ಶರೀರ ಅಥವಾ ಮನುಷ್ಯನ ಮುಖ ಹಾಗು ಕುದುರೆಯ ಶರೀರವುಳ್ಳ ಒಂದು ವಿಧದ ದೇವತೆ ; ಕಿನ್ನರ ; ಕಿಂಪುರುಷ : ಹಲವು ಅಸಮಂಜಸ ಭಾಗಗಳು ಸೇರಿ ಆದ ಯಾವುದಾದರೂ ಕಾಲ್ಪನಿಕ ಪ್ರಾಣಿ (ನರಾಶ್ವ, ಕಿಂಪುರುಷ, ಮೊ. ವು) (Monster. ಇಂಕನಿ). [ ನರ₂ + ಅಶ್ವ ]

**ನರಿ** (ನಾ). ೧. ಉದ್ದವಾದ ಮೂತಿ ಮತ್ತು ಕುಚ್ಚಾಗಿರುವ ಬಾಲವನ್ನುಳ್ಳ (ನಾಯಿ ಜಾತಿಗೆ ಸೇರಿದ) ಮಾಂಸಾಹಾರಿಯಾದ ಒಂದು ಬಗೆಯ ಕಾಡುಪ್ರಾಣಿ ; ಜಂಬುಕ ; P ಇದು ಬಹಳ ತಂತ್ರಗಾರ ಎಂದು ನಂಬಲಾಗಿದೆ : ಆಕಾಶಕ್ಕೆ ಬಾಯಂ ತೆಱೆದೂಳ್ವ ಬಳ್ಳುಗಳುಮಂ ನರವುಮಂ ಬರಿಯುಮಂ ಪತ್ತಿ ತೆಗೆದು ಪೆಡಸಾರ್ವ ನರಿಗಳುಮಂ (ಶಂಪಿಶಾ. ೧೩-೫೬ ವ); ಹರಿ ಕರಿಗೆ ಮುಳುಗುಮಲ್ಲದೆ ನರಿಗಂ ಕೋಟಿಗಮೇಂ ಮುಳಿಗುಮೆ (ಶಾಂತಿಪು. ೩-೬೩) ; ಉತ್ತುಂಗಮತ್ತಮಾತಂಗಮಂ ಕೊಂದು ತಿಂಬ ಸಿಂಹನೊಂದು ನರಿಯಂ ತಿಂದುದೆಂದು ಲೋಕಮುಪಹಾಸ್ಯಂಗೆಯ್ಗುಂ (ಶಂಕಿಶಂ. ೦೯೫-೯) ; ಕಬ್ಬಿನ ತೋಂಟಮಂ ನರಿ ಪೊಕ್ಕಂತೆ (ಧರ್ಮಾಮ್ಯ. ೨-೭೦) ; ಇಟ್ಟಿಯ ಹಣ್ಣು ನರಿ ತಿಂದು ಸೃಷ್ಟಿ ತಿರುಗಿತ್ತೆಂಬಂತೆ (ಬಸವ. ೫೭೮) ; ಕೊಬ್ಬಿ ನರಿ ಹೆಬ್ಬುಲಿಯ ಕೂಸನು ಬೇಡುವಂದದಿ ಅಳವನಱಿಯದೆ ಅಧಮ ರಥಿಕರ ಕೂಡೆ ತೊಡಕುವರೆ (ಕುಮ್ಯಾವ್ಯಾ. ೫-೯೨) : ಕರಿಗಳನು ಮುಱಿದಿಡುವ ಸಿಂಹಕೆ ನರಿಗಳಿದಿರೇ ತಾನು ನಿನಗಂ ತರವೆ (ನಳಕ. ೨-೧೮). 'ಕರಟಕ' ಪರಾ. ೨. ಹುಲಿ. 'ನರಿಬೇಂಟೆ', 'ನರಿಮಂಗಲ' ಪರಾ. ೩. (ಆಲಂ) ವಂಚಕ ; ಮೋಸಮಾಡು ವವನು ; ತನ್ನ ಠಕ್ಕುತನವನ್ನು ಸುಳಿವು ಕೊಡದವನು : ತಾನು ಮಾಡುತ್ತಿರುವುದು ಕೇವಲ ಮುಖ್ಯವಾಗಿ ಸ್ವಾರ್ಥ ; ಅದರೊಡನೆ ಸ್ವಲ್ಪ ಪರೋಪಕಾರವೂ ಘಟಿಸುವುದಲ್ಲ. ಅಷ್ಟಾದರೂ ಕಡಿಮೆಯೆ ? ಎಂಬ ನರಿಗಳುಂಟು (ಯಜ್ಞಕ್ಷ. ೧೭೧).

ನರಿಕೂಗು = ಅಲ್ಪರ ಪ್ರಾರ್ಥನೆ, - ಅಹವಾಲು, - ಕೂಗು : ನರಿಕೂಗು ಗಿರಿ ಮುಟ್ಟೀತೆ ? (ಗಾದೆ). ನರಿಮದುವೆ : ಬಿಸಿಲಿದ್ದೂ ಮಳೆ ಬೀಳುವಿಕೆ ; P ಬಿಸಿಲಿದ್ದು ಮಳೆ ಬೀಳುವಾಗ ನರಿಗೂ ನಾಯಿಗೂ ಮದುವೆ ನಡೆಯುತ್ತದೆಂದು ಜನಸಾಮಾನ್ಯರು ಹೇಳುವ ವಾಡಿಕೆ : ನರಿಮದುವೆಯಲ್ಲಿ ಕತ್ತೆಪೌರೋಹಿತ್ಯ (ಗಾದೆ). ನರಿಯ ಬುದ್ಧಿ = ಮೋಸಮಾಡುವ ಬುದ್ಧಿ ; ವಂಚಕತನ : ನನ್ನ ರಾಯಭಾರ ಅಯಶಸ್ವಿಯಾದುದನ್ನು ಕಂಡು ರಾಜ ನನ್ನ ಮೇಲೆ ಮುನಿದುಕೊಳ್ಳುವನೆಂದೇ ಈ ನರಿಯ ಬುದ್ಧಿಯ ಮುರಾರಿ ನನ್ನನ್ನು ಕಳಿಸಿರಲುಸಾಕು (ಗಿಶನ. ೧೦೯). ನರಿಯ ಮುಖ ನೋಡು = ಒಳ್ಳೆಯ ಶಕುನವನ್ನು ಹೊಂದು ; ಅದೃಷ್ಟವಂತನಾಗು : ಬೆಳಗ್ಗೆ ಎದ್ದು ನರಿಯ ಮುಖ ನೋಡಿದ್ದ ಅಂತ ಕಾಣುತ್ತೆ. ಬಡ್ತಿ ಸಿಕ್ಕಿತು (ರೂಢಿ).

[ ದೇ.॥ ತಮಿ. ಮಲ. ತುಳು. ಕೊಡ. ನರಿ ; ತೆಲು. ಕೊಲಾ. ಕುವಿ. ನಕ್ಕ ]

**ನರಿಕು** 'ನಜುಂಕು' ನೋ.

**ನರಿಕೊಂತ** (ನಾ). ಒಂದು ಬಗೆಯ ಆಟ : ನರಿಕೊಂತನ ಆಟ : ಇಲ್ಲಿಯೂ ಕೈತಾಳ ಹಾಕುವುದರ ಮೂಲಕ ಪಕ್ಷ ನಿರ್ಧಾರವಾಗುತ್ತದೆ. ನೆಲಕ್ಕೆ ಸುಮಾರು ಕಡ್ಡಿಗಳನ್ನು ನೆಟ್ಟಿರುತ್ತಾರೆ. ಅವುಗಳನ್ನು ಕಾಯುವವನು ಒಬ್ಬ. ಉಳಿದವರೆಲ್ಲ ಕಡ್ಡಿಗಳನ್ನು ಕೀಳಲಿಕ್ಕೆ ಪ್ರಯತ್ನಿಸುವರು. ಹೀಗೆ ಕಡ್ಡಿಗಳನ್ನು ಕೀಳಲು ಬಂದಾಗ, ಕಾಯುವವನು ಅವರನ್ನು ಹಿಡಿಸಿಕೊಂಡ ಪರೇ ಕಡ್ಡಿಗಳನ್ನೂ ಕಾಯಬೇಕಾಗುತ್ತದೆ. ಕಾಯುವವನು ಹಿಡಿಯಲಾ

ಹೋದಾಗ, ಉಳಿದವರು ಸುಮ್ಮನಿರದೆ ಬೇಲಿಕಡೆಯಿಂದ ಬಂದು ಕಡ್ಡಿಯನ್ನು ಕೀಳುವರು. ಅಷ್ಟು ಜನರನ್ನೂ ಹೆದರಿಸಿ ಕಡ್ಡಿಗಳನ್ನು ಕಾಯಬೇಕಾಗುತ್ತದೆ (ಕವಿಕೆ. I. ೬೦೯). [ ? ]

**ನರಿಕೊಂಬು** 'ನರಿಗೊಂಬು' ನೋ.

**ನರಿಗಣ್ಣು** (ನಾ). (ಆಲಂ) ತೀಕ್ಷ್ಣವಾದ ಕಣ್ಣು ; ಚುರುಕುಗಣ್ಣು : ಸೂರ್ಯ ಕೊರಳಲ್ಲಿ ಎರಡೆಳೆಯ ಸರ ಹೇಗೆ ಬಂದುವು ಎಂಬುದೇ ಕೆಲವು ನರಿಗಣ್ಣಿನ ಕಾಹಕರ ಪ್ರಶ್ನೆಯಾಗಿತ್ತು (ಒಡ್ಡಿಉ. ೪೭). [ ನರಿ + ಕಣ್ಣು (<ಕಣ್) ]

**ನರಿಗನಗಟ್ಟ** (ನಾ). ಒಂದು ಪ್ರದೇಶದ ಹೆಸರು: ಹೊನ್ನೆದೆಜಿ ಆಳಿಗನಹಳ್ಳ ಎತ್ತುರುಳಿ ನರಿಗನಗಟ್ಟ ಮತ್ತುರನಜಿ ನಿಜಾಯಿಂಗಲು ಎರಯವು × ಡಿಗರ ಪಳ್ಳ ಪಂಪುಳಿಯ ಕೆಜಿ (ಎಕ್. VI, ತರೀಕೆ. ೬೭-೧೨ ; 838). [ ? ]

**ನರಿಗೊಂಬು, ನರಿಕೊಂಬು** (ನಾ). (ಆಲಂ) ಅಪರೂಪದ ವಸ್ತು ; ℙ ನರಿಯ ತಲೆಯ ಮೇಲೆ ಅತ್ಯಂತ ಅಪರೂಪವಾಗಿ ಕೆಲವು ವೇಳೆ ಕೊಂಬು ಮೂಡುವುದೆಂದು ನಂಬಿಕೆಯಿದೆ : ಕರಿಯ ಠುಲ್ಲರಿಗಳು ಬೆಳ್ಳವ್ವಾದಿ ಕತ್ತುರಿಯೇಣ ಪುಣುಗಿನ ಚಿಟ್ಟು ಹರಿಣ ಗೋರೋಚನ ಕೃಷ್ಣಾಜಿನ ಪುಲಿಚರ್ಮ ನರಿಗೊಂಬುಗಳನಿತ್ತರೊಲಿದು (ಕೋಹಕ. ೦೯-೬೩). **ನರಿಕೊಂಬು** : ನರಿಕೊಂಬಿದ್ದರೂ ನರನಿಗೆ ಹೆದರಬೇಕು (ಗಾದೆ) ; ನರಿಕೊಂಬಿದ್ದರೂ ಹುರಿಯೋದು ತಪ್ಪೀತೆ ? (ಗಾದೆ). [ ನರಿ + ಕೊಂಬು$_1$ ]

**ನರಿಚೆಂಡು** (ನಾ). ಒಂದು ಬಗೆಯ ಸಸ್ಯ : (+). [ ನರಿ + ಚೆಂಡು (<ಸೆಂಡು) ]

**ನರಿದಾವಿಳೆನಾಡು** (ನಾ). ಒಂದು ಪ್ರಾಂತದ ಹೆಸರು : ಕಲಭೋರ [ನಾ] ಅರಿ ಕಕುಸ್ಥಭಟ್ಟೋರನಾಳೆ ನರಿದಾವಿ[ಳೆ]ನಾಡುಳ್ (ಮ್ಯಆರಿ. ೦೯೬೬, ೧೭-೩ ; ಸು. 450). [ ನರಿದಾವಿಳೆ$_0$ + ನಾಡು ]

**ನರಿಬಲೆ** (ನಾ). ಒಂದು ಬಗೆಯ ಬಲೆ (?) : ಊರ ಹೊರಗೊಂದು ಗಿಡುಮರ. ಅದರೊಳಗೆ ಅಡಗಿಪ್ಪರ್ಪವರು ಕಳ್ಳರು ಒಬ್ಬ ನರಿಬಲೆಯುವ ಒಬ್ಬ ಹುಲಿಬಲೆಯುವ (ಶಿಲ್ಪಶಾ. ೧೭-೦೯೯). [ ನರಿ + ಬಲೆ$_1$ ]

**ನರಿಬಾಲ** 'ನರಿವಾಲ' ನೋ.

**ನರಿಬಾಲದಗಂಡುಹುಲ್ಲು** (ನಾ). ಒಂದು ಬಗೆಯ ಸಸ್ಯ : ನರಿಬಾಲದ ಗಂಡುಹುಲ್ಲು, ನರಿಬಾಲಹುಲ್ಲು (ಮ್ಯಔಗಿ. ೩೦-೫೯೦). [ ನರಿಬಾಲ (<ನರಿವಾಲ) + ಗಂಡು + ಹುಲ್ಲು (<ಪುಲ್) ]

**ನರಿಬಾಲದಹುಲ್ಲು** (ನಾ). ೧. ಒಂದು ಬಗೆಯ ಸಸ್ಯ : "ಕ್ರೋಷ್ಟುವಿನ್ನಾ, ಸಿಂಹಪುಚ್ಛೀ, ಕಲಶೀ, ಧಾವನೀ, ಗುಹಾ – ೫ ನರಿಬಾಲದ ಹುಲ್ಲು, ನರಿಬಾಲದ ಹೊನ್ನೆ" (ಸಿದ್ಧಾಂತಿ. ೦೦೭). ೨. ಬಿಳಿ ಕೊರ್ಲೆ ಹುಲ್ಲು : (+). [ ನರಿಬಾಲ (<ನರಿವಾಲ) + ಹುಲ್ಲು (<ಪುಲ್) ]

**ನರಿಬಾಲದಹೆಣ್ಣುಹುಲ್ಲು** (ನಾ). ಒಂದು ಬಗೆಯ ಸಸ್ಯ : (ಮ್ಯಔಗಿ. ೭೩-೦೪೬೮). [ ನರಿಬಾಲ (<ನರಿವಾಲ) + ಹೆಣ್ಣು (<ಪೆಣ್) + ಹುಲ್ಲು (<ಪುಲ್) ]

**ನರಿಬಾಲದಹೊನ್ನೆ** (ನಾ). = ನರಿಬಾಲದಹುಲ್ಲು ೧ : ಕ್ರೋಷ್ಟುವಿನ್ನಾ, ಸಿಂಹಪುಚ್ಛೀ, ಕಲಶೀ, ಧಾವನೀ, ಗುಹಾ – ೫ ನರಿಬಾಲದ ಹುಲ್ಲು, ನರಿಬಾಲದ ಹೊನ್ನೆ (ಸಿದ್ಧಾಂತಿ. ೧೧೭). [ ನರಿಬಾಲ (<ನರಿವಾಲ) + ಹೊನ್ನೆ (<ಪೊನ್ನೆ) ].

**ನರಿಬಾಲಹುಲ್ಲು** (ನಾ). = ನರಿಬಾಲದ ಗಂಡುಹುಲ್ಲು : "ನರಿಬಾಲದ ಗಂಡುಹುಲ್ಲು, ನರಿಬಾಲಹುಲ್ಲು" (ಮ್ಯಔಗಿ. ೩೦-೫೯೦). [ ನರಿಬಾಲ + ಹುಲ್ಲು (<ಪುಲ್) ]

**ನರಿಬಿಕ್ಕೆ** (ನಾ). ಒಂದು ಬಗೆಯ ಬಿಕ್ಕೆಯ ಮರ : ಕಲ್‌ಬಿಕ್ಕೆ, ನರಿಬಿಕ್ಕೆ (ಮ್ಯಔಗಿ. ೩೩-೬೩೩). [ ನರಿ + ಬಿಕ್ಕೆ$_1$ (<ಬಿಟ್ಕೆ) ]

**ನರಿಬೇಂಟೆ, ನರಿಬೇಟೆ** (ನಾ). ಹುಲಿಯ ಶಿಕಾರಿ. 'ನರಿಬೇಂಟೆಗಾರ' ಪರಾ. **ನರಿಬೇಟೆ** : ನೀನೊಬ್ಬನೇ ನರಿಬೇಟೆಗೆ ಹೋಗುವುದು ಬೇಡ (ಹುಲಿಹಾ. ೧೭).

ನರಿಬೇಟೆಯಾಡು = ಹುಲಿಯ ಶಿಕಾರಿಯನ್ನು ಮಾಡು : ಗ್ರಾಮಕ್ಕ ನರಿಬೇಟೆಯಾಡಲು ಬರಬೇಕೆಂದು ಮಾದಪ್ಪನಿಗೆ ಹೇಳಿ ಕಳುಹಿದ (ಹುಲಿಹಾ. ೧೭). [ ನರಿ + ಬೇಂಟೆ ]

**ನರಿಬೇಂಟೆಗಾರ, ನರಿಬೇಟೆಗಾರ** (ನಾ). ಹುಲಿಯ ಶಿಕಾರಿಯನ್ನು ಮಾಡುವವನು : ಸ್ನೇಹಿತರು ನರಿಬೇಂಟೆಗಾರನನ್ನು ಎಚ್ಚರಿಸಿದರು (ಹುಲಿಹಾ. ೧೭). **ನರಿಬೇಟೆಗಾರ** : ನಾಡವರು ಅವನಿಗೆ ನರಿಬೇಟೆಗಾರ ಮಾದಪ್ಪ ಎಂದು ಗೌರವಸಂಬೋಧನೆಯನ್ನು ಬಳಸುತ್ತಿದ್ದರು (ಹುಲಿಹಾ. ೧೭). [ ನರಿಬೇಂಟೆ + – ಗಾರ (< –ಕಾಱ) ]

**ನರಿಬೇಟೆ** 'ನರಿಬೇಂಟೆ' ನೋ.

**ನರಿಬೇಟೆಗಾರ** 'ನರಿಬೇಂಟೆಗಾರ' ನೋ.

**ನರಿಮಂಗಲ** (ನಾ). "ಹುಲಿಮದುವೆ ; ಬೇಟೆಗಾರನು ಹುಲಿಯನ್ನು ಹೊಡೆದ ವಿಜಯಸಮಾರಂಭದ ಉತ್ಸವ" (ಹುಲಿಹಾ. ಕೋಶ) : ℙ ಕೊಡಗರಲ್ಲಿ ರೂಢಿಯಲ್ಲಿರುವ ಒಂದು ಪದ್ಧತಿ.–ಸಮಾರಂಭ : ಚೆಂಗುವಾಣಿ ಮೂರು ಸಲ ನರಿಮಂಗಲ ಮಾಡಿಸಿಕೊಂಡ ಕೆಚ್ಚೆದೆಯ ಕಲಿಯ ಮಗ (ಹುಲಿಹಾ. ೧೭). [ ನರಿ + ಮಂಗಲ ]

**ನರಿಮಾನಿ** (ನಾ). (?) : ನಾವಿಲರಿಗೆ ಖ ೬೦ ದನವ ಕಾವ × × × ೪೦ ಅಂತೂ ಖ ೨೨೦ ಕೆ ಕಂಮುಗಾಳಿ ಖ ೧೨೨ ನರಿಮಾನಿ ಖ ೫ ಯೇಗೀಯ ದೀದ ಖ ೧೧ ಹಾರುವ ಬಳ್ಳಿ ಖ ೪೫ (ಎಕ್. VIII, ತೀರ್ಥಹ. ೦೯-೧೦೯ ; 1578). [ ? ]

**ನರಿಮೀಸೆಹುಲ್ಲು** (ನಾ). ಒಂದು ಬಗೆಯ ಸಸ್ಯ : ನರಿಮೀಸೆಹುಲ್ಲು, ಜಬ್ಬುರುಕೊರ್ಲೆ ಹುಲ್ಲು (ಮ್ಯಔಗಿ. ೬೧-೧೩೦೮). [ ನರಿ + ಮೀಸೆ + ಹುಲ್ಲು (<ಪುಲ್) ]

**ನರಿಮೊಗ** (ನಾ). ೧. ನರಿಯ ಮುಖ. ೨. (ಆಲಂ) ಮೋಸದ ಸುಳಿವನ್ನು ತೋರಗೊಡದ ಮುಖ : ನರಿಮೊಗದ ನಗೆಯ ಕುಡುಗೋಲ್ ಕೊಂಕು ನೆರವಿಂದು ತುಟಿಗಳಿರ್ಕೆಲದಲ್ಲಿ ಸುಳಿಯುತಿರ್ದುದನಿರುಳ್ ಮರೆಸಿದುದು ಜೊನ್ನಾಯಿಯಿಂ (ಶ್ರೀರಾಮಾ. ೩೭೨-೨೪೯). [ ನರಿ + ಮೊಗ ]

**ನರಿಯುಂಬೊಳೆ** (ನಾ). ಒಂದು ಊರಿನ ಹೆಸರು: ಶ್ರೀಮತ್ ಜನ್ನರಾಶಿ ಪಂಡಿತರ್ಗ್ಗೆ ಧಾರಾಪೂರ್ವ್ವಕಂ ಮಾಡಿಕೊಟ್ಟ ನರಿಯುಂಬೊಳೆಯ ಸ್ವೃತ್ತಿ (ಇಅ. VIII, ೫೦-೧ : 1077) ; ನರಿಯುಂಬೊಳೆಯ ವೃತ್ತಿ ಬಳಿಯ ಕಿರಿಯ ಬೆಳ್ಳುಂಬಟ್ಟಿಯ ಪೊಲದೊಳಗೆ (ಎಇ. XII, ೨೮೩-೨೨೯ ; 1077). [ ? ]

**ನರಿಯುಳ್ಳಿಗೆಡ್ಡೆ** (ನಾ). ಒಂದು ಬಗೆಯ ಉಳ್ಳಿಗಡ್ಡೆ, –ಈರುಳ್ಳಿ. [ ನರಿ + ಉಳ್ಳಿಗೆಡ್ಡೆ ]

**ನರಿವಾಲ, ನರಿಬಾಲ** (ನಾ). ಒಂದು ಬಗೆಯ ಸಸ್ಯ ; ನರಿಹೊನ್ನೆಗಿಡ : "ಪೃಶ್ನಿಪರ್ಣೀ – ನರಿವಾಲ" (ಬಾಹಟಿ. ೨-೨-೬೦ ಪ) ; "ಪೃಥಕ್ಪರ್ಣೀ – ನರಿವಾಲ, ಹೊನ್ನೆ, ಹಗ್ಗುರುಟಿಗೆ, ಒಂದೆಲೆಹೊನ್ನೆ, ಮೂಜೆಲೆಹೊನ್ನೆ" (೬ಆಧಿ. ೧೧೨). **ನರಿಬಾಲ** : ಆನೆಜೊಂಡು, ಆವು, ನರಿಬಾಲ (ಮ್ಯಔಗಿ. ೭೬-೦೫೩೭). [ ನರಿ + ಬಾಲ$_1$ ]

**ನರಿವಾಲವೊನ್ನೆ, ನರಿವಾಲಹೊನ್ನೆ** (ನಾ). = ನರಿವಾಲ : "ಪೃಶ್ನಿಪರ್ಣೀ, ಪೃಥಕ್ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಿಕಾ, ಕ್ರೋಷ್ಟುವಿನ್ನಾ, ಸಿಂಹ

ವೃಷ್ಟೀ, ಕಲಶೀ, ಧಾವನೀ, ಗುಹಾ–ಈ ೯ ನರಿವಾಲವೊನ್ನೆ" (ನಾಟಕರಾ. ೧೦೪): "ಕ್ರೋಷ್ಟುವಿನ್ನಾ–ನರಿವಾಲವೊನ್ನೆ" (ಒಷಧಿ. ೪೨). **ನರಿವಾಲಹೊನ್ನೆ**: "ಕ್ರೋಷ್ಟುವಿನ್ನೆ, ಸಿಂಹಪುಚ್ಛಿ, ಕಲಶಿ, ಧಾವನಿ, ಗುಹೆ" (ನಾಟಕರಾ. ೬); "ದೀರ್ಘವಾಲಾ–ನರಿವಾಲಹೊನ್ನೆ" (ಒಷಧಿ. ೭೭). [ನರಿವಾಲ + ಪೊನ್ನೆ]

**ನರಿವಾಲಹೊನ್ನೆ** 'ನರಿವಾಲವೊನ್ನೆ' ನೋ.

**ನರಿಹೆಸರು** (ನಾ). ಒಂದು ಬಗೆಯ ಸಸ್ಯ: ನರಿಹೆಸರು, ಪಿಲ್ಲಿಪೆಸರ (ವೃಕ್ಷಿಗಿ. ೬೦–೦೨೨೬). [ನರಿ + ಹೆಸರು₂ (<ಪೆಸರ್)]

**ನರಿಹೊನ್ನೆ** (ನಾ). = ನರಿವಾಲ: "ಪೃಶ್ನಿಪರ್ಣೀ, ಪೃಥಕ್ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಿಕಾ ... ೪ ಕೋಲಪೊನ್ನೆ ಎಂಬುವದು, ನರಿಹೊನ್ನೆ ಗಿಡ, ನಕ್ಕಚಿಕ್ಕನಾಕು" (ಸಿದ್ಧಾಂತಿ. ೧೩೩). [ನರಿ + ಹೊನ್ನೆ (<ಪೊನ್ನೆ)]

**ನರು** 'ನಱು' ನೋ.

**ನರುಕು** 'ನಱುಂಕು' ನೋ.

**ನರುಗಂಪು** 'ನಱುಗಂಪು' ನೋ.

**ನರುಗಳ್ಳು** (ನಾ). ಕಮ್ಮನೆಯ ಹೆಂಡ; ಕಂಪುಳ್ಳ ಮದ್ಯ: ಸೇಸನಾಯ್ಕನ ಹುಳಿಗಂಪಿನ ನರುಗಳ್ಳನ್ನು ಕರಟ ತುಳುಕುವಷ್ಟರ ಮಟ್ಟಿಗೆ ಬೊಗ್ಗಿಸಿ (ಹುಲಿಮು. ೦೩). [ನರು (<ನಱು) + ಕಳ್ಳು (<ಕಳ್₃)]

**ನರುಗಾಳಿ** (ನಾ). ಕಂಪುಳ್ಳ ಗಾಳಿ; ಪರಿಮಳ ಭರಿತವಾದ ವಾಯು: ಸಂದರ್ಭಾನುಸಾರವಾಗಿ ಸೂಸುವ ಕಾವ್ಯದ ನರುಗಾಳಿಯನ್ನು ವಾಚಕರು ಸೇವಿಸಬಹುದು (ನಾಡೋಜ. ೩೪೪); ಕೆಚ್ಚಿದೆಯ ದಂಡಾಳುಗಳೇ, ನಮ್ಮ ದಾಳಿಯ ನರುಗಾಳಿಯಿಂದ ಕಂಪಣ್ಣನನ್ನು ಮುತ್ತಿ ಮುಸುರಿಸಿದ ಚೆಂದುಂಬಿಗಳೇ ಕಿವಿಗೊಟ್ಟು ಕೇಳಿರಿ (ನಡದಾ. I, ೪೪೦). [ನರು (<ನಱು) + ಗಾಳಿ₁]

**ನರುಗು** (ನಾ). ಕಂಪು; ಸುವಾಸನೆ: ಇಂಪು, ಸೊಂಪು, ಕಂಪು, ಸೌಸವ, ಅಲಂಪು, ನರುಗು, ಸೊವಡು, ಘಮಘಮ (ಘುಮಘುಮ) (ಕಂನುಹು. ೭೯). [<ನಱು]

**ನರುಗುಗಂಬಳಿ** (ನಾ). ಕಪ್ಪು ಮತ್ತು ಬಿಳಿ ಪಟ್ಟೆಗಳನ್ನುಳ್ಳ ಕಂಬಳಿ: (೬). [ನರುಗು₂ + ಕಂಬಳಿ]

**ನರುಚಲು** 'ನರಚಲು' ನೋ.

**ನರುಟು** 'ನರಟು₂' ನೋ.

**ನರುಟುಗೊಳ್** (ಕ್ರಿ). ಬೆಳವಣಿಗೆ ಕುಂಠಿತವಾಗು; ನರಚಲಾಗು; ಪೀಚಾಗು: "ಹ್ಲಸತಿ–ನರುಟುಗೊಂಡಪುದು" (ಶಾಶಳ್ಕ. ೬೨). [ನರುಟು (<ನರಟು₂) + ಕೊಳ್₁]

**ನರುನೆಯ್ಯಿ** 'ನಱುನೆಯ್' ನೋ.

**ನರುಮಲ್ಲಿಗೆ** (ನಾ). ಸುವಾಸನೆಯಿಂದ ಕೂಡಿರುವ ಮಲ್ಲಿಗೆ: ಇದು ಮಣ್ಣಿನ ನರುಮಲ್ಲಿಗೆ, ಇದು ನೆಲದ ನಿಧಾನ (ಅರಳು. ೨೫೦–೫). [ನರು (<ನಱು) + ಮಲ್ಲಿಗೆ]

**ನರುಲಿ** 'ನರವುಲಿ' ನೋ.

**ನರುವಂಜಿ** 'ನಱುಪಂಜಿ' ನೋ.

**ನರುವಲ** 'ನಱುಪಲ್' ನೋ.

**ನರುವಲು** 'ನಱುಪಲ್' ನೋ.

**ನರುವಾಯು** (ನಾ). ಒಂದು ಬಗೆಯ ಬಾಣ (?): ನೆಱೆದು ನಿರ್ವಾಯಂ ನರುವಾಯುಮುಂ ಮೊನೆ ನೆರೆ ನಾರಾಚಂ ... ಕಣಕನೆ ಪೋಪಂ[ಬು] ಕವಲ[ಂಬುಮಂ]ಬಾಕಧಂಬೆತ್ತ[ಲುಂ] ತುಱುಗಿ ನಡುವಿನಂ ಸಾರ್ದು ಸಾರ್ದೆಚ್ಚೆಚ್ಚು ಕಾದಿದರತಿರಥರೊಂದು ಜಾವಂ (ಶಂಪರಿಭಾ. ೦೩–೭೯). [?]

**ನರುಳ್ಳಿ** 'ನರವುಲಿ' ನೋ.

**ನರೂಲಿ** 'ನರವುಲಿ' ನೋ.

**ನರೆ₁, ನರೆ₄** (ಕ್ರಿ). ೧. ಕೂದಲು ಬೆಳ್ಳಗಾಗು; ಪಲಿತವಾಗು: ತೊಗಲು ಸಡಿಲಿದ ಗಲ್ಲ ಬತ್ತಿದ ಹೆಗಲು ನರುಕಿದ ನರೆತ ಮೀಸೆಯ ... ಮುಪ್ಪಿನ ಮುಗುದನೀತನು (ಕುಮಾವ್ಯಾ. ೦–೩೫); ನರೆತ ಮಂಡೆಯು ನೀರೊಗುವ ಕಂಗಳು ... ಪತ್ತಿದ ಗಲ್ಲದ ನೆಱೆ ವೃದ್ಧನಡಿಯಿಟ್ಟನೊಲಿದು (ಜೀವಂಧಾಂ. ೦೭–೩೦); ನ[ಪಾಠಾಂ. ನೆ]ರೆತ ಮಂಡೆಯ ಕುಸಿದ ತೊಗಲಿನ ಜೋಲ್ವ ಹುಬ್ಬಿನ ... ಶಬರಿಯ ಸುಪ್ರಸಿದ್ಧೆಯ ಸಾರ್ದರೊಲವಿನಲಿ (ತೊರರಾ. ೩–೦೨–೨೯); ನಮಗೇನು ನರೆತ ಹುಬ್ಬುಗಳಿವೆಯೆ? (ಕವಿಕಾವ್ಯ. ೮೪–೨೦). ೨. ಮುಪ್ಪಾಗು; ವೃದ್ಧಾಪ್ಯವನ್ನು ಹೊಂದು: "ಜರಯತಿ–ನರೆತಪಂ" (ಶಾಶಳ್ಕ. ೦೪೩): ಬೆಳ್ಳಗಡ್ಡದಿಂ ನಡುಗುವ ನರದಲೆಯಿಂ ನರೆತು ಸಡಿಲ್ದ ಸರ್ವಾಂಗದಿಂ ... ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡೆ (ಸಂಚಿರ. ೬–೨೫); ಅಂದಿನೀಶ್ವರನಿಂದು ನರೆತನೆಯುಂದಿನ ಚಿಳಿತಭಕ್ತಿಮಹಿಮೆಯದಿಂದು ನವೆಯಿತೆ (ಬಸವು. ೫೨–೩೦); ತನ್ನ ನರೆತ ಅಜ್ಜಾನದಲ್ಲಿ ತಾ ನರೆತ ಒಂದು ಪ್ರಾಣಿ ನೆರಳು ಬೆಳಕು ಅರ್ಥಾರ್ಥವಿರುವ ಮನ; ಬದುಕಿನೊಂದು ಕಾಣಿ (ಅರಳು. ೦೯೫–೫). **ನರೆ₄**: ೧. ಪಲಿತಂ ... ಕೂದಲು ನೆರೆತುಹೋಗುವಿಕೆ (ಸಿದ್ಧಾಂತಿ. ೦೫೭); ಅವರ ಗಡ್ಡ ಮೀಸೆಗಳು ನೆರೆತು ಹೋಗಿದ್ದವು (ಳಳಹು. ೧). [ದೇ.೫ ತಮಿ. ನರೈ; ಮಲ. ನರೆ; ತುಳು. ನರೆವು, ನರೆ; ತೆಲು. ನರಯು, ನರಿಯು]

**ನರೆ₂, ನರೆ₃** (ನಾ). ೧. ಬೆಳ್ಳಗಾದ ಕೂದಲು; ನೆರೆಗೂದಲು: "ಪಲಿತಮೆಂಬುದು ನರೆ" (ಹಲಾಯು. ೮೮–೩೭೫); ಕಚ್ಚು–ಕಿರಕಂ, ಜರ–ನರೆಯುಂ, ಖಾಸ–ಕೆಮ್ಮುಂ (ಪದ್ಮಾರಾ. ೫೩–೪); ತೀವಿದ ನರೆಯುಂ ಡೊಳ್ಳುಂ ದೇವವ್ರತನೆನಿಸಿ ನೆಗಬ್ದ ಯಶಮುಂ ಬೆರಸಿನ್ನೀವುದು ಹರಿಗರ್ಥ್ಯಮನೆಂದಾವನುಮಾ ಭೀಷ್ಮರೇತು ನುಡಿದರುಮೊಳರೇ (ಶಂಪರಿಭಾ. ೬–೪೩); ಎನ್ನಟ್ಟಡುಗೆಯನುಂಡೊಡೆ ಬನ್ನಣಮೇನರಸ ನರೆಗಳಾಗವು (ಶಂಪರಿಭಾ. ೮–೫೪): ನರಪತಿ ನಿನ್ನಂಗಾಲೊಳ್ ನರೆ ಬರ್ಪಿನಮುತ್ತರೋತ್ತರಂ ಪುದುವಾಟು (ಶಾಂತಿಪು. ೯–೫೨); ಅಂಜಿಸಿದುವು ಜವನಾಳ್ಗಳ ಕೆಱದಿನೆನ್ನ ಕೆನ್ನೆಯ ನರೆಗಳ್ (ಅಜಿಪು. ೨–೬೪); ನರೆ ಬಂದನಿತಱೊಳ್ ನರರ್ ಪಿರಿಯರೆ (ಧರ್ಮಾಮೃ. ೩–೦೯೮); ನಿಮ್ಮ ನಿಜವನಱಿಯದ ಮನುಜಂಗೆ ನರೆ ಹಿಂದಾದಡೇನು ಮನದವಗುಣ ಬಿಡದು (ಸಮೂವ. ೫–೦೭); ನರೆಯೆಂಬ ಹೊಜಿಸು ಮೊಗವೆಂಬರಮನೆಯಂ ಪೊಕ್ಕೊಡೆ (ಯಶೋಚ. ೨–೦೨); ಮನದ ಶುದ್ಧಿಕೆ ತಲೆದೋರ್ಪವೊಲು ನರೆ ಮೊಳೆತುದು (ಸಿರ್ರಾ. ೧–೩೪); ಪಟವು (ಪಟವು)–ನರೆಗಿಕ್ಕುವ ಕರ್ಪೂ (ಶಮದ. ಶಿ. ೦); ನರೆ ಶಿರದೊಳೊಗೆದುವು (ಕುಮುಲಾ.೫–೦೯); ನಾಯಿಗೆ ನರೆ ಬಂದರೆ ಅಜ್ಜಿ ಅನಿಸಿಕೊಂಡೀತೇ? (ಗಾದೆ). ೨. ಮುಪ್ಪು; ವಾರ್ಧಕ್ಯ: "ಜರೆಯುಕ್ಕು ನರೆ" (ಪುಂಗರಾ. ೯೦–೦೦); "ನರೆಯೆನಲ್ ಜರೆ" (ಕಕರ. ೫೩). **ನರೆ₃**: ೧. ಭರತಂ ಕಂಡಂ ಕೆನ್ನೆಯ ನೆ[ಪಾಠಾಂ. ನ]ರೆಯಂ ದಳದಳಿಸಿ ಪೊಳೆವ ಮಣಿದರ್ಪಣದೊಳ್ (ಆದಿಪು. ೦೭–೬೦); ನೆ[ಪಾಠಾಂ. ನ]ರೆ ಕೆನ್ನೆಗೆ ತೆರೆ ಗಲ್ಲಕೆ ಶರೀರ ಗೂಡು ಪೋಗದ ಮುನ್ನ ... ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೦೬೦); ಎಡೆಗೊಂಡೀ ಮುಪ್ಪುದೋಱಲ್ ನೆರೆ ನೆಗೆದು ಸಿರಂದೂಗಿ ಬೆನ್ ಬಾಗಿ (ರಕ್ಕಾಶ. ೩೮); ತೆರೆಯಿಲ್ಲದೆ ನರೆಯಿಲ್ಲದೆ ಸೆರೆಯಿಲ್ಲದೆ ಕಱಿದು ಮಾಗಿ ತಳ್ಳಗೆ ಮೊನೆಯಾಗಿರೆ ಕಿವಿಗಳೊಳಂ ನುಣ್ಪಾಗಿರೆ ಕಟಮುಂ ವಿಕಟಮಾಗದಿರೆ [ಹರಿ] ಶುಭದು (ಅಶ್ವಶಾ. ೦–೨೮); ಬಾಧಿಸುವುದೀ ದೇಹಮಂ ನೆ[ಪಾಠಾಂ. ನ]ರೆ ತೆರೆಗಳಿನ್ನು ಸಾಧಿಸುವುದೇನು (ಕೃಮಿಭಾ. ೦೦–೩೪); ತಲೆಯೊಳೊಂದು ನೆರೆಯಿಲ್ಲ (ಸೌಂದರ. ೩–೫೨). [<ನರೆ₁./ತಮಿ. ನರೈ; ಮಲ. ನರ; ಕೊಡ. ನರೆ; ತುಳು. ನರ; ತೆಲು. ನರ]

**ನರೆಕೂದಲ್** 'ನರೆಗೂದಲ್' ನೋ.

**ನರೆಕೂದಲು** 'ನರೆಗೂದಲ್' ನೋ.

**ನರೆಗಡ್ಡ** (ನಾ). ನೆರೆತ ಗಡ್ಡ ; ಬಿಳಿಯ ಗಡ್ಡ : ತೋರದ ದೇಹ ಕುಂಡಲವೆದೆ ನರೆಗಡ್ಡ ಸೇರಿದ ಬೆಂದಿ ಕುಲ್ಲಾಯಿ . . . ರತ್ನಹಾರ ದೊಳಿದ್ದನಾ ಮಂತ್ರಿ (ಭರತೇ. ೧೩-೯) ; ನರೆಗಡ್ಡ ನೆಲಕೆಳಲುವ ಧೋತ್ರ ಭಸಿತಾಂಗ ಧರಿಸಿದ ರುದ್ರಾಕ್ಷಿಗಳಿಂದೆ . . . ವಿಪ್ರರ ಮಧ್ಯಕೆಳ್ತಂದ (ಶ್ರೀಖುಕಿ. ೯-೨೪) ; ನರೆಗಡ್ಡದ ವಿಾಸೆಯು ಮೇಲೆ ಕೈಯನಂತೋರಣದಿಂದ ಪಾಯುತೆ ಪರಾಕ್ರಮಮಂ ಸಲೆ ತೋರ್ದಂ (ಹಾಲಾಸ್ಯ. ೨-೧೭-೦೯).

[ ನರೆ$_2$ + ಗಡ್ಡ$_1$ ]

**ನರೆಗೂದಲ್**, ನರೆಕೂದಲ್, ನರೆಕೂದಲು, ನರೆಗೂದಲು (ನಾ). ನೆರೆತ ಕೂದಲು ; ಬಿಳಿಕೂದಲು : ನರೆಗೂದಲ್ಗಿಕ್ಕಿ ನುಣ್ಪಂ ಮುಡಿಯುನಳ ವಡಲ್ಸಿಕ್ಕಿ . . . ಮುಸುಕನಿಟ್ಟೈದಿದಳ್ ವೃದ್ಧೆ (ದಶಕು. ೮-೦೯೬) : ಒಂದು ನರೆಗೂದಲುಂ ಪಱಿದು ತೋಱಿದಾಗಳೆ ವೈರಾಗ್ಯಂ ಪುಟ್ಟಿ (ಪುಣ್ಯಾಸ್ರ. ೧೦.೦೦ ವ). **ನರೆಕೂದಲ್** : ಹೊತ್ತ ಬೆಳ್ನರೆಕೂದಲಾ ಮುದಿ ಸೂಳೆಯರ ಮೊತ್ತವೊಪ್ಪಿದುದಾಗಲ್ಲಿ (ಕಂನವಿ. ೬-೧೯೦) **ನರೆಕೂದಲು** : ಇಂದಿರೆಯು ಯಜಮಾನಿಯು ತಲೆಯ ನರೆಕೂದಲು ತೆಗೆಯುವುದೇ ಮುಂತಾದ ಕೆಲಸಗಳಿಂದ ಅವಳಿಗೂ ಅಚ್ಚುಮೆಚ್ಚಾದಳು (ಬಂಕಿಮು. ೦೦೯). **ನರೆಗೂದಲು** : ಪಲಿಕ್ನಿ-ನರೆಗೂದಲುಳ್ಳ ಮುದುಕಿ (ಗಂಗಾಮ. ೨೦೧) : ನರೆಗೂದಲ ತಲೆಯನ್ನು ಬೋಳಿಸಿಕೊಂಡಿದ್ದ ಮನುಷ್ಯನನ್ನವಳು ಅದೆ ತಾನೆ ಮೊದಲ ಬಾರಿಗೆ ಕಂಡಿದ್ದಳು (ಪುನರು. ೧೮೬).

[ ನರೆ$_2$ + ಕೂದಲ್ (<ಕುಂದಲ್) ]

**ನರೆಗೂದಲು** 'ನರೆಗೂದಲ್' ನೋ.

**ನರೆತನ** (ನಾ). ಮುದಿತನ; ಮುಪ್ಪು. ಎಳೆತನಕ್ಕೂ ನರೆತನಕ್ಕೂ ಸಂಬಂಧವೇ ಇಲ್ಲ . . . ನರೆತನದ ಎಲೆಗಳ ಅಂಚು ನೀಟಾಗಿರುತ್ತದೆ (ಹಸುಹೊ. ೨೬).

[ ನರೆ$_2$ + –ತನ ]

**ನರೆದಲೆ, ನೆರೆದಲೆ** (ನಾ). ೧. ಕೂದಲು ನರೆತ ತಲೆ : ನಡುಗುವ ನರೆದಲೆಯಿಂ ನರೆತು ಸಡಿಲ್ದ ಸರ್ವಾಂಗದಿಂ . . . ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡೆ (ನಂಚಿಕ. ೬-೨೫) ; ನರೆದಲೆ ಬೇರ್ಬಿಟಲ್ದ ಪಟವರ್ . . . ಮಹೋದರಮೆಸೆಯಲ್ಕೆ ಕೋಕಿಸುತೆ ಓಂದನೆ ಬಂದಳ್ (ದಶಕು. ೮-೧೨) ; ನರೆದಲೆ ಜೋಲ್ದ ಪುರ್ಬು ಕುಳಿದಕ್ಷಿಯುಗಂ (ಧರ್ಮಾಶ. ೩-೨೬) ; ಸರಡುಪತ್ರದಶಾಳುಗೊಂಬ ಗಡ ನಮ್ಮನೀ ನರೆದಲೆಯು ಚಾಳಕನೆನುತ್ತ ಕೋಪಿಸಿದ ಸೌಂದರಕುವರನಾ ವಿಪ್ರನ (ಸೌಂದಪು. ೫-೯). ೨. ಮುಪ್ಪಾದವಳು ; ಮುದುಕಿ : ತಾಯಿಲ್ಲದನನ್ ಸಾಕಿದ ಮುದಿಯಳ್, ಕಂದನ ಕೇಡನ್ ನೋಡಲೊ ಬಟ್ಟಳ್ ? ನರೆದಲೆ, ದುಃಖದ ಮಾಡುವೊಳ್ ಬಿಟ್ಟಳ್ (ಅಶ್ವತ್ಥಾ. ೨೫-೫೦೩). **ನೆರೆದಲೆ** : ೧. ನೆರೆದಲೆಗೆ ಮುಸಿದೊಡೆದು . . . ಬಾ ಜಾಣಯೆಂಬಾ ಹಣ್ಣುಮುದುಕಿ ಸೂಳೆಯರೆಸೆದರೇನೆಂಬೆನು (ಚಬಪು. ೧೦-೬೩). [ ನರೆ$_1$ + ತಲೆ$_1$ ]

**ನರೆದಲೆಗ** (ನಾ). ೧. ಕೂದಲು ಬೆಳ್ಳಗಾದವನು ; ನರೆತ ಮಂಡೆಯವನು. ೨. ರಾಗಿ : ನರೆದಲೆಗನಿದು ನೆಲ್ಲು ಹಾರಕ ಬರಗು ಜೋಳವು ಕಂಬು ಉರುತರದ ರವೆ ಯವೆ ನವಣೆಯಿದೂ ನವಧಾನ್ಯವೆಂದೆನಲು(ರಾಮಧ. ೦೧-೩೬) ; ಕೆಲರು ಗೋಧಿಯ ಸಾಮೆಯನು ಕೆಲಕೆಲರು ನವಣೆಯ . . . ಕೆಲರು ನರೆದಲೆಗನನು ಪತಿಕರಿಸಿರಲು (ರಾಮಧ.೦೦-೩೩); ನರೆದಲೆಗ (ರಾಗಿ), ನೆಲ್ಲು, ಹಾರಕ, ಬರಗು, ಜೋಳ, ಕಂಬು, ಸಾವೆ, ನವಣೆ, ಗೋಧಿ ಈ ನವಧಾನ್ಯಗಳನ್ನು ತಂದು ಸುರಿದರು (ನಾಡು.ಡಿ. ೩೧); ರೀಹಿ (ವ್ರೀಹಿ–ಬತ್ತ) ಹೆಚ್ಚೋ ನರೆದಲೆಗ (ರಾಗಿ) ಹೆಚ್ಚೋ ಎಂಬ ವಾದ ಹುಟ್ಟಿತು (ನನ್ನೂರು. ೫೫). [ ನರೆದಲೆ + –ಗ$_2$ ]

**ನರೆದೊಡು** (ಕ್ರಿ). ಬಿಳಿಯಂ ಕೂದಲನ್ನು ಹೊಂದಂ,–ಪಡೆ ; ಕೂದಲು ಬೆಳ್ಳಗಾಗು : ಕೆನ್ನೆ ನರೆದೊಟ್ಟು ಶಿಥಿಲತ್ವವಳವಟ್ಟು ನೆಱೆ ಮುನ್ನಿನಂಗ ವಿಕಾರಮಂ ಬಿಟ್ಟು ಹೋಗಿ ಧಾತಂಗಳು ಪಲ್ಲಟವಾದವು (ಸಿದ್ಧರಾ. ೦-೪೦).

[ ನರೆ$_2$ + ತೊಡು$_1$ ]

**ನರೆದೋಱು** (ಕ್ರಿ). ೧. ಬಿಳಿಕೂದಲು ಕಾಣಿಸಿಕೊಳ್ಳು. ೨. ಮುಪ್ಪಾಗಂ; ವೃದ್ಧಾಪ್ಯವನ್ನು ಹೊಂದು.

**ನರೆದೋಱದರ್** = ಮುಪ್ಪಿಲ್ಲದವರಂ; ದೇವತೆಗಳು : "ಅಮರ್ದುಣಿಸುಗಳ್, ಕನಸಿಲ್ಲದರ್, ನರೆದೋಱದರ್, ಎವೆಯಿಕ್ಕದರ್ . . . ಅಚ್ಚರರ್ (ಬೋಳಿಯರ್)–ಈ ೯ ದೇವರ್ಕಳ ಪೆಸರ್" (ಕಶಸಾ. ೨-೧೯). [ ನರೆ$_2$ + ತೋಱು ]

**ನರೆನವಿರ್** (ನಾ). ನರೆತ ಕೂದಲು ; ಬೆಳ್ಳಗಾದ ಕೂದಲು; ಬಿಳಿಯ ಕೂದಲು : ನರೆನವಿರ ಹೊತ್ತು ನಡುಗುವ ಮಂಡೆ ಬಿಳ್ದ ಮೊಲೆ ತೆರೆ ಮುಸುಂಕಿದ ಮುಖಂ . . . ಡೊಂಲ್ಕ ಗಲ್ಲಂ ಮಿಸುಪ ವೃದ್ಧವನಚರಿಯೊರ್ವಳಾವಣ್ಣಗಳಂ ಸವಿದು . . . ವಿಱುಂಜವ್ವನಂಬಡೆದಳು (ಸಮ್ಯಕ್ತ್ವ. ೦೦-೪೩). [ ನರೆ$_2$ + ನವಿರ್ ]

**ನರೆಪ** (ನಾ). ಕೂದಲು ನರೆತವನು,–ಬೆಳ್ಳಗಾದವನು ; ಮುದುಕ : ಕೆಮ್ಮಿ ಕುಮ್ಮಿದೊಡೆ ತೋಳೊಳೆ ಜೀವವಿಯೋಗಮಪ್ಪುದೆಂದಿರದೆರ್ದೆಗಪ್ಪುದತ್ತಳಗಮಾ ನರೆಪಂ ನೆರೆವಂದು [ಪಾಠಾಂ. ನರೆಬಂದ] ಪೊಂಗಳಂ ಸುರಿವೊಡ ಮಾರೊ ಸೈರಿಸುವರಾತನ ಪಲ್ಲಿಲಿಮಾಱು ನಾತಮಂ (ಹಂಪಭಾ. ೪-೦೦೦).

[ ನರೆಪು + –ಅ$_7$ ]

**ನರೆಪು** (ನಾ). ಕೂದಲು ನರೆಯುವಿಕೆ,–ಬೆಳ್ಳಗಾಗುವಿಕೆ. 'ನರೆಪ' ಪರಾ. [ ನರೆ$_1$ + –ಪು$_2$./ತಮಿ. ನರೈಪ್ಪು: ತೆಲು. ನರವು ]

**ನರೆಯಂಗಲ್** (ನಾ). ಒಂದಂ ಊರಿನ ಹೆಸರಂ; ಈಗಿನ ಧಾರವಾಡ ಜಿಲ್ಲೆಯ ನರೇಗಲ್ಲು: ಸ್ವಸ್ತಿ ವಿಕ್ರಮಾದಿತ್ಯ ಪೃಥು(ಥ)ವಿವಲ್ಲಭ ಲೋಕಮಹಾದೇವಿಯರಾ ಲೋಕೇಶ್ವರದಾ ನರೆಯಂಗಲ್ಲ ಪನ್ನಾಸುಗಳಾನಿತ್ತ (ಇಂಆ. X, ೧೬೭-೨ ; 7ನೆಯ ಶತ) ; ನರೆಯಂಗಲ್ಲ ಸಾಸಿರ್ವರ ತುಱುಓಿನ ಪುಯ್ಯಲೊಳ್ (ಎಇ. VI, ೧೬೩-೨ ; 780) ; ಆಚಾರ್ಯ ರಾಜಗುರು ವಿಮಳಶಕ್ತಿದೇವರಂ ನರೆಯಂಗಲ್ಲ ಮಹಾಜನಂಗಳಂ . . . ಇನ್ನಿವರ ಸಮಕ್ಷದಲ್ಲಿ (ಕಶಾಂ. ೧೭-೦೦ ; 10ನೆಯ ಶತ).

**ನರೆಯಂಗಲ್ ಪನ್ನೆರಡು**=ಒಂದು ಪ್ರಾಂತದ ಹೆಸರು : ನರೆಯಂಗಲ್ ಪನ್ನೆರಡಱೊಳಗಣ ಉಮ್ಮಚಿಗೆಯಂ ಸರ್ವಾಭ್ಯಂತರಸಿದ್ಧಿಯಾಗಿ . . . ಕುಡೆ (ಎಇ. XX, ೬-೧೧ ; 1012).

**ನರೆಯೋಱು** (ಕ್ರಿ). ೧. ಕೂದಲು ಬೆಳ್ಳಗಾಗು. ೨. ಮುಪ್ಪಾಗಂ ; ಮುದಿಯಾಗು. ೧, ೨ : ವಾರ್ಧಿಯಂತೆ ತೆರೆಯೋಱದೆ ಕೋಡಗದಂತೆ ಶಾಖೆಯೊಳ್ ನಡೆಯದೆ ಪೊಟ್ಟೆ [ ಪಾಠಾಂ. ಪೋದೆ]ಪೋದ ಮರದಂತೆ ಕರಂ ನರೆಯೋಱದಿಟ್ಟು ಮುಪ್ಪಡಸದ ಮುನ್ನಮೇಕೆ ಮನುಜಮರ್ಖಱಿದಿಕ್ಕರೊ ಮೋಹಮಲ್ಲನಂ (ಮಲ್ಲಿಪು. ೧೩-೯೪) ; (ಕಾವ್ಯಸಾ. ೦೦೩೧ ನೋ).

[ ನರೆ$_2$ + ಏಱು$_1$ (< ಏಱ್$_1$) ]

**ನರೆವೆಣ್** (ನಾ). ಕೂದಲು ನರೆತ ಹೆಣ್ಣು ; ಮುದುಕಿ : ನರವೆಣ್ಗಳೊಡನಾಡೆ ಮುಪ್ಪುಹುದ್ಯೆಸೆ (ಭರತೇ. ೬೩-೮೨). [ ನರೆ$_1$ + ಪೆಣ್ ]

**ನರೇಂದ್ರ** (ನಾ). ೧. ಅರಸ ; ದೊರೆ : ರುಂದ್ರಾಂಭೋಧಿಪರೀತ ಮಹೀಂದ್ರರದಾರಿನ್ನರೀ ನರೇಂದ್ರಂ ಸಾಕ್ಷಾದಿಂದ್ರಂ ತಾನೆನೆ ಸಲೆ ನೆಗಳ್ದಂ ದ್ರೇಂದ್ರನ ತೋಳೆ ತೊಟ್ಟಿಲಾಗಿರೆ ಬಳೆದಂ (ಹಂಪಭಾ. ೦-೪೪) ; ಉದ್ವೃತ್ತ ನರೇಂದ್ರಕಂಠಕದಳೀಚ್ಛೇದೈಕದಕ್ಷಾಸಿ (ಶಾಂತಿಪು. ೨-೨೦) : ಚತುಷ್ಪಾದಿ ತದ್ಭೇದದೊಳ್ ತಾನಿದು ಶುಂಡಾಳಂ ನರೇಂದ್ರಂ ನಿಮಗೆ ಕುಡುವ ನಾಗಿರ್ದಪಂ ನೋಡೆ ದೃಷ್ಟಂ (ಸುಕುಮಾ. ೩-೬). ೨. ವಿಷಚಿಕಿತ್ಸಕ ;

ವಿಷವೈದ್ಯ; ಗಾರುಡಿಗ. ೩. ಮಾಂತ್ರಿಕ; ಮಂತ್ರವಾದಿ: "ನರೇಂದ್ರ [ನೆನಲಾಹಿತುಂಡಿಕಂ] ವಾರ್ಥಿವನುಂ" (ವಸು ಕೊ. ೦೨೦-೦೭); "ನೃಪನಲ್ಲಿ ವಾದಿಯುಲಿ ನರೇಂದ್ರನೆಂದೆನಿಕು" (ಲಂಗರಾ. ೦೯೯-೨೭).

[ ನರ$_4$ + ಇಂದ್ರ ]

**ನರೇಂದ್ರಚಂದ್ರ** (ನಾ). ರಾಜರಲ್ಲಿ ಚಂದ್ರನಂತೆ ಹೊಳೆಯುವವನು; ಶ್ರೇಷ್ಠನಾದ ರಾಜ: ಕೃತಿಪತಿ ನರೇಂದ್ರಚಂದ್ರಂ ಕೃತಿಯಂ ಪೇಳ್ವಂ ಬುಧಾಬ್ಜವನಕಳಹಂಸಂ (ಕಾದಂಪೂ. ೭); ರವಿಕುಲನರೇಂದ್ರಚಂದ್ರಂ, ತನ್ನ ಕಿರುವೆಂಡಿತಿಯು ಮನವನುನಾದೊಡಂ ತನ್ನಾಸೆಗೇಳಲ್ಕೆ ತರಿಸಂದು ಹೊರಟನವೇಡೆಗೆ (ಶ್ರೀರಾಮಾ. ೬೬-೩೩೭). [ ನರೇಂದ್ರ + ಚಂದ್ರ$_2$ ]

**ನರೇಂದ್ರನಿಕಾಯ** (ನಾ). ರಾಜರ ಸಮೂಹ, -ಗುಂಪು: ಶಿವ ಎನುತಾ ನರೇಂದ್ರನಿಕಾಯ ನಡುಗಿತು (ಉತ್ತಾಮರ್ರ್ರು. ೮-೪೨).

[ ನರೇಂದ್ರ + ನಿಕಾಯ ]

**ನರೇಂದ್ರವಧು** (ನಾ). ಅರಸಿ; ರಾಣಿ: ಬಾಣಸಿಗಂ ಮಾಡಮನಾ ನರೇಂದ್ರವಧುವಂ ತಕ್ಕಯ್ಯಿಕೊಂಡೆ:ಜಾಡಂ (ಲಂಹರಿ. ೯-೩೦).

[ ನರೇಂದ್ರ + ವಧು ]

**ನರೇಂದ್ರಾಸನ** (ನಾ). ರಾಜನ ಪೀಠ; ಸಿಂಹಾಸನ: "ಗದ್ದುಗೆ ಪಟ್ಟವಣೆ ನರೇಂದ್ರಾಸನಂ" (ಅತುನಿ. ೫೦). [ ನರೇಂದ್ರ + ಆಸನ ]

**ನರೇಯಣ** 'ನಾರಯಣ' ನೋ.

**ನರೇಶ್ವರ** (ನಾ). ಅರಸ; ದೊರೆ: ಸ್ವಸ್ತಿಸಮಸ್ತನರೇಶ್ವರಮಸ್ತಕವಿನ್ಯಸ್ತ ಶಾಸನಂ (ಆದಿಪು. ೦೩-೭೨); ಸಕಲಮೇದಿನೀತಳವನೇಕಚ್ಛತ್ರದಿಂ ಪಾಲಿಸುವ ನರೇಶ್ವರನವಂಗಟ್ಟಿದ್ರುವಾಗಿ ನಡೆವುದು (ಕೃಮಿಭಾ. ೨-೨೭).

[ ನರ$_2$ + ಈಶ್ವರ ]

**ನರ್ಕುಟಕ** (ನಾ). [ಛಂದ] ಪ್ರತಿಯೊಂದು ಪಾದದಲ್ಲಿಯೂ ಹದಿನೇಳು ಅಕ್ಷರಗಳಿರುವ ಒಂದು ವೃತ್ತ; P ನಜಭಜಜಲಗ-ಹೀಗೆ ಗಣ ನಿಯಮವಿರುವ ವೃತ್ತ. ಇದಕ್ಕೆ 'ಕನಕಾಬ್ಜನೀಯ' ಎಂಬ ಹೆಸರೂ ಇದೆ. 'ಕನಕಾಬ್ಜನೀಯ', 'ನರ್ಕುಟಕ' ಪರಾ. [ ಸಂ. ]

△ **ನರ್ಚು$_1$** 'ನಚ್ಚು$_1$' ನೋ.

△ **ನರ್ಚು$_2$** 'ನಚ್ಚು$_2$' ನೋ.

**ನರ್ತಕ** (ನಾ). ೧. ನೃತ್ಯ ಮಾಡುವವನು; ರಂಗದ ಮೇಲೆ ಕುಣಿಯುವವನು; ನಟ: ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತಕಂ ಸುರರಾಜಂ ಸಭೆ ದೇವಮರ್ತ್ಯಸಭೆ (ಆದಿಪು. ೭-೧೨೭); ವಾಣಿನಿಯು ತನ್ನ ಅಧ್ಯಾಧ್ಯಾಯಿಯಲ್ಲಿ . . . ನಾಟ್ಯಗಾರನಿಗೆ ನರ್ತಕ ಎಂಬ ಹೆಸರಿದ್ದುದನ್ನು ತಿಳಿಸುತ್ತಾನೆ (ಭಾರದ. ೫೫೦). ೨. [ಜೈನ] ಸೈನ್ಯದ ಏಳು ವಿಭಾಗಗಳಲ್ಲಿ ಒಂದು. 'ನರ್ತಕಿ' ಪರಾ. [ ಸಂ. ]

**ನರ್ತಕಾಳಿ** (ನಾ). ನರ್ತಕರ ತುಂಡು, -ಸಮೂಹ: ಪ್ರಕಟಿಸಿದತ್ತು ಪದ್ಮಜನ ವಕ್ತ್ರದೊಳ್ . . . ಗಾಯಕಪ್ರತತಿ ವಾದಕಮಂಡಳಿ ನರ್ತಕಾಳಿ (ಪುಷ್ಪಪು. ೫-೨೦). [ ನರ್ತಕ + ಆಳಿ$_4$ ( = ಆಲಿ$_4$ ) ]

**ನರ್ತಕಿ** (ನಾ). ೧. ನೃತ್ಯ ಮಾಡುವವಳು; ನಟಿ: ಕುಡುವುಂ ಕಯ್ಯುಂ ಜತಿಯೊಳ್ ತಡತಡವರೆ ವಾದಕಂಗೆ ಪೂರ್ವಿಂ ಜತಿಯಂ ತೊಡರದೆ ನಡೆಯಿಸಿ ಪೂರ್ವದೆ ಕುಡುವನೆ ನರ್ತಕಿಯೆ ಸಭೆಗೆ ವಾದಕಿಯಾದಳ್ (ಆದಿಪು. ೯-೩೨); ನರ್ತಕಿಯರಾಟಗಳ ನೋಡಲು ಮುತ್ತುತಿಹ ಮಂತರರ ಜಡಿಕೈದಕ್ಕ ತೊಲಗಿಸಿ . . . ಓಜೆಗೋಳಿಸಿದರಪಾರವಡಿಯುಬರು (ಸಾಳ್ವಭಾ. ೩೩-೩೭); ಕಡುತೋರಮಲ್ಲದಗ್ಗದ ನಿಡಿದಲ್ಲದ ಕಿಱಿದುಮಲ್ಲದ ಬಡವಲ್ಲದ ಮುಡುಬಲ್ಲದವಯವಂಗಳನೊಡರಿಸುವಂಗನೆಯೆ ಲಲಿತನರ್ತಕಿಯೆನಿಪಳ್ (ರಾಜಶೇಖರ. ೧-೪೪); ರಂಭೆ ಮೊದಲಾದ ಅಪ್ಸರಸ್ತ್ರೀಯರೇ ಇವನ ನರ್ತಕಿಯರು (ನೀತಿಕಾ. IV, ೮). ೨. [ಜೈನ] ಸೌಧರ್ಮೇಂದ್ರನ ಏಳು ಬಗೆಯ ಸೇನಾಂಗಗಳಲ್ಲಿ ಒಂದು; P ಮರ್ತ್ಯಲೋಕದಲ್ಲಿರುವಂತೆ ದೇವಲೋಕದಲ್ಲೂ ರಾಜ್ಯಾಂಗವ್ಯವಸ್ಥೆ ಇದೆ. ಸೌಧರ್ಮೇಂದ್ರಾದಿ ಇಂದ್ರರಿಗೂ ಸೈನ್ಯವಿದೆ. ಆ ಸೈನ್ಯವನ್ನು ಅನೀಕವೆಂದು ಕರೆಯುತ್ತಾರೆ. ಆ ಸೈನಿಕರಿಗೆ ಅನೀಕದೇವತೆಗಳೆಂದು ಹೆಸರು. ಇವರಿಗೆ ವೈಕ್ರಯಿಕ (ನಾನಾರೂಪವನ್ನು ತಾಳಬಲ್ಲ) ಶಕ್ತಿಯಿದೆ. ಇವರು ಏಳು ಬಗೆಯ ರೂಪವನ್ನು ತಾಳಿ ಇಂದ್ರನನ್ನು ಸೇವಿಸುವ ಸೇನಾಂಗವೆನಿಸುತ್ತಾರೆ. ಅವು ಯಾವುವೆಂದರೆ ೧. ವೃಷಭ = ಎತ್ತು. ೨. ರಥ = ತೇರು. ೩. ತುರಗ = ಕುದುರೆ. ೪. ಮದಗಜ = ಆನೆ. ೫. ಪದಾತಿ ಅಥವಾ ಭೃತ್ಯವರ್ಗ = ಕಾಲುಬಲ. ೬. ನರ್ತಕ ಅಥವಾ ನರ್ತಕಿ = ನಾಟ್ಯವಾಡುವವರು. ೭. ಗಂಧರ್ವ = ಸಂಗೀತಗಾರರು. ಈ ವಿವರಗಳು ಸರ್ವಾರ್ಥಸಿದ್ಧಿ ಮೊದಲಾದ ಜೈನಗ್ರಂಥಗಳಲ್ಲಿ ದೊರಕುತ್ತದೆ: ಹಸ್ತ್ಯಶ್ವರಥಪದಾತಿವೃಷಭಗಂಧರ್ವನರ್ತಕೀಪ್ರಮುಖ ಸಪ್ತಾನೀಕಸಮೇತನುಂ (ಆದಿಪು. ೬-೦೩ ವ); ಗಜತುರಗಸ್ಯಂದನಪದಾತಿ ಗವೇಂದ್ರ ಗಂಧರ್ವ ನರ್ತಕೀಪ್ರಮುಖ ಪ್ರಥಿತಸಪ್ತಾನೀಕಸಂಯುತನುಂ (ನೇಮಿಪು. ೨-೩೨ವ); ಗಜತುರಗಪದಾತಿರಥಗಂಧರ್ವನರ್ತಕೀವೃಷಭವಿಕಲ್ಪದಿಂ ಸಪ್ತವಿಧಮಂಗರಕ್ಷಕರ್ ಪದಿನಾಱುಸಾಸಿರಂ (ತತ್ತ್ವಾರ್ಥ. ೦೯೪); ಸಿಂಧುರಘಟಾಸಂದೋಹದಿಂ . . . ನವನರ್ತಕೀನಿವಹದಿಂ ಗಂಧರ್ವಸಂದೋಹದಿಂದಿದು ಸಪ್ತಾಬ್ಧಿಯೆನಲ್ಕೆ ಸಪ್ತವಿಧಸೇನಾಚಕ್ರಮೇನೊಪ್ಪಿತೋ (ಪುಷ್ಪಪು. ೦೪-೪೭). ೩. [ಸಂಗೀತ] ಒಂದು ರಾಗದ ಹೆಸರು: ನರ್ತಕಿ ಕಕುಭ ಷಡ್ಜ ಕೌಶಿಕ ಭೃಮಾಳ ಪಂಚಮಭೃಮಾಳ ಪಂಚಮಗಾಂಧಾರ ರೂಪಸಾಧಾರಣಮೆಂಬೇಳುರಾಗಂಗಳಂ ಸಪ್ತಸಾಧಾರಣಜಾತೀಯಂಗಳು (ವಿವೇಕ. ೨೩೩). [ ಸಂ. ನರ್ತಕೀ ]

**ನರ್ತನ** (ನಾ). ರಂಗದ ಮೇಲೆ ನಡೆಯುವ ನಾಟ್ಯಾಭಿನಯ; ನೃತ್ಯ; ನಾಟ್ಯವಾಡುವುದು; ಕುಣಿತ: ಬೇಡನನರ್ತನ ಹಾಸ್ಯವನಾಡಂಬರ ನಟನವೇಣುವಾದನಗೇಯಕ್ರೀಡೆಗಳಿಂ. . . ರಾಮಕೃಷ್ಣರಿರ್ದಪಸರದೊಳ್ (ಜಗವಿ. ೪-೪೮); ಗಣನಾಥವಕ್ತ್ರಸರೋರುಹಕೇಳಿನಿವಾಸದಲ್ಲಿ ನರ್ತನಮನೊಡರ್ಚೆ . . . ಇನಿಸು ಬಟ್ಟು ವಾಗ್ವನಿತೆ ವಿಶ್ರಮಿಸಿರ್ಕೆ ಮದಾನನಾಬ್ಜದೊಳ್ (ಪುಷ್ಪಪು. ೧-೭); ನರ್ತನದಿಂ ನವಶಕ್ತಿಯು ಹೊಮ್ಮಿ . . . ತೋರ್ಪುದು ಸುಖದುಃಖಗಳನು! (ಪಾಂಚಜ. ೧೯-೧೫); ಸರಳೆ ವೈದ್ಯನಾಥರಲ್ಲಿ ನರ್ತನವನ್ನು ಕಲಿಯುತ್ತಿದ್ದಳು (ಕರಾಶ. ೨೦). [ ಸಂ. ]

**ನರ್ತನಗಾತಿ** 'ನರ್ತನಗಾರ್ತಿ' ನೋ.

**ನರ್ತನಗಾರ್ತಿ, ನರ್ತನಗಾತಿ** (ನಾ). ನೃತ್ಯಮಾಡುವವಳು; ನರ್ತಕಿ: ಸುರನರ್ತಕಿಯರೊಳು ಮತ್ಸರವಾಂತರೇ ನರನರ್ತನಗಾರ್ತಿಯರ ಪರವೋತ್ಸವದೆ ನೋಡುತ ಬಂದ (ಮೋಹತ. ೪೨ ೩೪). ನರ್ತನಗಾತಿ: ಗುಡಿಗುಡಿಗಳ ನರ್ತನಗಾತಿಯರೊಳು ಪೆರ್ಬಡಿಸುವ ಗೀತಪ್ರಬಂಧಗಳ ಪಡಿ ತಪ್ಪದೆ ಕೋಲಚಾರಿಗಳಿಂದ ಜಕ್ಕಡಿ ಮೆಱೆದುವು ದೇವಾಲಯದಿ (ಮೋಹತ. ೧೮-೭); ತಾಳಮದ್ದಳೆಗೀತ ನರ್ತನಗಾತಿಯ ಮೇಳ ವಿದ್ವತ್ಸಭೆ ಸುರರ ಜಾಲಕ್ಕೆ ಹಸೆಯಿತ್ತು ಜೀಯ್ಕೊಟ್ಟು (ಮೋಹತ. ೪೨ ೩೭).

[ ನರ್ತನಗಾಱ + -ತಿ$_1$ ( < ಇತ್ತಿ ) ]

**ನರ್ತನಗಾಱ** (ನಾ). ನೃತ್ಯ ಮಾಡುವವನು; ನರ್ತಕ. 'ನರ್ತನಗಾರ್ತಿ', ಪರಾ. [ ನರ್ತನ + -ಗಾಱ ( < -ಕಾಱ ) ].

**ನರ್ತನಗೃಹ** (ನಾ). ನೃತ್ಯಮಂದಿರ; ನಾಟ್ಯಶಾಲೆ: ಜಗದೊಳ್ ನಾಟ್ಯಪ್ರಭು ಶಾಂತಿಪರ್ಮಾನೆನಿಸಂ . . . ಸಾಹಿತ್ಯಲೀಲಾಗ್ಗ್ರಹಂ ಭಗವಜ್ಜಿನಮಂತಶಕ್ತಿ ನರ್ತನಗೃಹಂ (ಪುಷ್ಪಪು. ೧-೭೬). [ ನರ್ತನ + ಗೃಹ ]

**ನರ್ತನವಿದ್ಯೆ** (ನಾ). ನಾಟ್ಯ; ನೃತ್ಯಕಲೆ: ಮಕ್ಕಳು ನರ್ತನವಿದ್ಯೆಯ ಕಲಿಕರು (ಇಂದಾಪ. ೪೭ ೨೦). [ ನರ್ತನ + ವಿದ್ಯೆ ]

**ನರ್ತನಶಾಲೆ** (ನಾ). = ನರ್ತನಗೃಹ : ಮತ್ತಮಾ ವನಂಗಳಲ್ಲಿ ಚಿತ್ರಶಾಲೆ . . . ನರ್ತನಶಾಲೆ ಗಾನಶಾಲೆ ಕ್ರೀಡಾಶಾಲೆ . . . ತುರುವಾಟಿಗಳ ತಣ್ಣೆಳಲ್ಗಳೊಳಗೆಯುಂ (ವಿವೇಕ. ೨೨೮). [ ನರ್ತನ + ಶಾಲೈ ]

**ನರ್ತನಸ್ಥಳ** (ನಾ). = ನರ್ತನಸ್ಥಾನ : ರಂಗಃ – ನರ್ತನಸ್ಥಳವುಂ. ರಂಗವಲ್ಲಿಯುಂ (ಕಾಶಕ್ಕ. ೨೦೪). [ ನರ್ತನ + ಸ್ಥಳ (= ಸ್ಥಲ) ]

**ನರ್ತನಸ್ಥಾನ** (ನಾ). ರಂಗಮಂಟಪ ; ರಂಗಸ್ಥಳ : "ನರ್ತನಸ್ಥಾನಮದು ರಂಗಮಕ್ಕು" (ಚುಂಗರಾ. ೨೪-೬). [ ನರ್ತನ + ಸ್ಥಾನ ]

**ನರ್ತನೋತ್ಸವ** (ನಾ). (ಒಂದು ದಿನ ಅಥವಾ ಅನೇಕ ದಿನಗಳು ನಡೆಯುವ) ನಾಟ್ಯಕ್ಕೆ ಸಂಬಂಧಿಸಿದ ಸಂತೋಷಸಮಾರಂಭ,–ಉತ್ಸವ: ೮೬ನೆಯ ಪ್ರಕರಣದ ನರ್ತನೋತ್ಸವದಲ್ಲಿ ಎಲ್ಲ ನವೀನ ಪಾತ್ರಗಳು ಸಾಮುದಾಯಿಕವಾಗಿ ನಮ್ಮ ಚಿತ್ರದಲ್ಲಿ ನೆಲಸುತ್ತವೆ (ಕಮಜೀ. ೨೪ ಟೀ೩೪). [ ನರ್ತನ + ಉತ್ಸವ ]

**ನರ್ತಿಣಿ** (ನಾ). ನರ್ತಕಿ : ನಾಟ್ಯ ಮಾಡುವವಳು : ನರ್ತಿಣಿಯು ತೆರದೊಳಗೆ ಲೋಕವಿದೂರ್ತಿಪುದು ತ್ರೈವಾಯು ಬಿಗಿಯೊಳು ಸುತ್ತಿಹುವು (ಶಬುಧಾ. ೧-೦೪) ; ಸಿಡಿಲ ಮುರಜಂಬರವೆ ತೆರೆ ಅರಳ್ಪಿಡಿವ ಪುಷ್ಪಾಂಜಲಿಯು ಮಳೆ ಬೆಮರೊಡೆದ ತೆರದಿಂ ನಟಿಸೆ ಕುಡಿಮಿಂಚೊ ನರ್ತಿಣಿಯು (ಆರಾಮಾ. ೧೧೦-೪೬). 'ನಚ್ಚಣಿ' ಪರಿ೨. [ < ಸಂ. ನರ್ತಿನೀ ]

**ನರ್ತಿಸು** (ಕ್ರಿ). ೧. ಕುಣಿ ; ನಾಟ್ಯಮಾಡು : ಕುಡುಮಿಂಚಿನಂತೆ ಮೇಗೊಗೆದು ನಾರದಂ ನರ್ತಿಸಿದಂ (ಪಂಚಧಾ. ೧೨-೧೮೯) ; ಭೂತಗಣಾ ಪೇರಾನೆಯ ನೆಣನಂ ತಿಂದೆದ್ದಾರ್ನಂದದೆ ಕೂಡೆ ನಲಿದು ನರ್ತಿಸುತಿರ್ಕ್ಕುಂ (ಎಕ. VIII. ಸಾಗರ. ೧೦೯-೩೯ : 1042) ; ಶಾರದೆಯ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ (ಕುವ್ಯಾಆ. ೧-೩) : ನರ್ತಿಸು, ತಾಯೆ, ಅಜಜಾಯೆ, ಮಮ ಮಸ್ತಕ ನೀರೇಜದಲಿ! (ಅನಿಕೇ. ೧-೧). ೨. ಆಡು ; ಚಲಿಸು : ಭೂಭೃತ್ತಿಲಕನ ಸಿತಾತಪತ್ರದ ಕೆಲದೊಳ್ ನರ್ತಿಸಿತು ಧವಳಚಾಮರಯುಗಳಂ (ಕಾದಂಪೂ. ೪೬೨). [ ನರ್ತನ + – ಇಸು$_3$ ]

**ನರ್ದನ** (ನಾ). (ದನಗಳ) ಗುಟುರು : ಗರ್ಜನೆ : ಜನಾರ್ದನ ನಾಡುತ್ತುಮಿರ್ದ ಪದದೊಳ್ ದೆಸೆಗಳ್ ಪೂರ್ವನಾಮಿತಲಮ್ಯುತವೃಷನರ್ದನ ಪೂರ್ಣಮುದದೊಂದು ಮಜಾಪ್ರಶಾಪೊಲ್ (ಜಗಪಿ. ೩-೩೪). [ ಸಂ. ]

**ನರ್ಮ$_1$** (ನಾ). ೧. ಆಟ : ಲೀಲೆ ; ಕ್ರೀಡೆ ; ವಿನೋದ. ೨. (ಶೃಂಗಾರದಲ್ಲಿನ) ಪರಿಹಾಸ; ನಗೆ: "ಸ್ತ್ರೀ ಪುರುಷರ ಪರಿಹಾಸ" (ಅಮರ. ೬೬೪). ೩. ಚೆಲುವು ; ಸೊಗಸು : ಕೂರ್ಮೋನ್ನತಮೆನಿಸಿರ್ದ ಪದಂಗಳ್ ನರ್ಮಮನಾದರಿಸಿದವು ಮಡಂಗಳ್ (ಸುಕುಮಾ. ೩-೩೦ ರಗಳೆ). ೪. ಸಂತೋಷ : ಉಲ್ಲಾಸ : ಧರ್ಮಮೆ ದೇಹಿಗ(ಮಿ)ಹಪರ ಶರ್ಮಕ್ಕೆ ಸದಾನಂ . . . ನರ್ಮದಿನೆಸೆಗುತ್ಕಟಸತ್ಕರ್ಮಂ ಪ್ರತ್ಯಕ್ಷಫಲಮನೀವುದು ಪುಸಿಯೇ (ಪುಷ್ಪಪು. ೩-೧೦೮). [ ಸಂ. ನರ್ಮನ್ ]

**ನರ್ಮ$_2$** 'ನರಮ್' ನೋ.

**ನರ್ಮಕಥೆ** (ನಾ). ವಿನೋದದ ಪ್ರಸಂಗ,–ಘಟನೆ : ಈ ನರ್ಮಕಥೆಯನ್ನು ತನ್ನ ಚಿತ್ತದಲ್ಲಿ ಬಚ್ಚಿಟ್ಟು ಜೋಪಾನವಾಗಿ ಕಾಪಾಡಿಕೊಂಡು ಬಂದಿದ್ದಳು (ಕಾವ್ಯಸ. ೪೯). [ ನರ್ಮ$_1$ + ಕಥೆ ]

**ನರ್ಮಕುಂಡ** (ನಾ). ವಿನೋದವಾಗಿ ಕ್ರೀಡಿಸುವ ಲತಾಮಂಟಪ : ಕ್ರೀಡಾಸ್ಥಾನ ; ಕೇಳೀಸದನ : ಕವಿಯ ಹೃದಯಾವೆ ನರ್ಮಕುಂಜ ಕವಿತಾಸತಿಗೆ (ಗೀವಿಂ. ೨೧-೧೮). [ ನರ್ಮ$_1$ + ಕುಂಜ ]

**ನರ್ಮಗೋಷ್ಠಿ** (ನಾ). ವಿನೋದದ ಗೋಷ್ಠಿ ; ಸಂತೋಷಕೂಟ : ನಯಸಂಪನ್ನನತೀವಯುವ್ವನಯುತಂ ರೂಪಾನ್ವಿತಂ ನರ್ಮಗೋಷ್ಠಿಯಾಳ್ವಂ . . . ಉತ್ಸಾಹಿಯೆನಿಪ್ಪನೊಳ್ಳಿರವ ಪೆಣ್ಗಾ ರಂಭೆಯೇಂ ಸಾಟಿಯೇ (ರಾಜಶೇ. ೬೧-೧೩೦). [ ನರ್ಮ$_1$ + ಗೋಷ್ಠಿ ]

**ನರ್ಮದೆ** (ನಾ). ೧. ಸಂತೋಷಪಡಿಸುವವಳು ; ನಗಿಸುವವಳು. ೨. ಒಂದು ನದಿಯ ಹೆಸರು ; ಭರತಖಂಡದಲ್ಲಿ ಬಹಳ ಪವಿತ್ರವಾದುದೆಂದು ಭಾವಿಸುವ ಗಂಗೆ, ಯಮುನೆ, ಗೋದಾವರಿ, ಸರಸ್ವತಿ, ನರ್ಮದೆ, ಸಿಂಧು ಮತ್ತು ಕಾವೇರಿ ಎಂಬ ಏಳು ಮಹಾನದಿಗಳಲ್ಲಿ ಒಂದು : "ಮೇಖಳಕನ್ಯಾ, ನರ್ಮದಾ, ರೇವಾ – ಈ ೩ ನರ್ಮದೆ" (ಹಲಾಯು. ೧೧೧-೫೨) ; ನರ್ಮದೆಗೆ ಹೋದರೆ ಕರ್ಮ ತಪ್ಪೀತೇ? (ಗಾದೆ). [ ಸಂ. ನರ್ಮದಾ ]

**ನರ್ಮದ್ಯುತಿ** (ನಾ). ೧. ಸಂತೋಷಕರವಾದ ಬೆಳಕು : ನಿರ್ಮಲಜಲಕಲನಾದಾಹ್ಲಾದಿನಿ ನವಶಶಿನರ್ಮದ್ಯುತಿಸಂವಾದಿನಿ ಗಂಗೆ ತರಂಗಿಣಿ ಮಂಗಳಪೆರೆಮ (ಗಿಡೀಶ. ೧೩-೩೮೦). ೨. [ಕಾವ್ಯವಿ೩] ನಾಟಕವೇ ಮೊದಲಾದ ರೂಪಕಗಳಲ್ಲಿ ಇರಬೇಕಾದ ಅರುವತ್ತುನಾಲ್ಕು ಸಂಧ್ಯಂಗಗಳಲ್ಲಿ ಒಂದು ; ಪ್ರತಿಮುಖಸಂಧಿಯಲ್ಲಿ ಆರನೆಯ ಅಂಗ ; ಪರಿಹಾಸದಿಂದ ಹುಟ್ಟಿದ ಧೈರ್ಯ ಅಥವಾ ಸಮಾಧಾನ, ದೋಷವನ್ನು ಮುಚ್ಚಲು ಬಳಸುವ ಹಾಸ್ಯ. [ ಸಂ. ]

**ನರ್ಮಲಿ** (ನಾ). ಒಂದು ಬಗೆಯ ಗಿಡ : ಇಬ್ಬದಿಯ ಆಡಸೋಗೆ, ನರ್ಮಲೀ ಗಿಡಗಳ ಬೇಲಿಗಳಿಂದ ಚೆಲ್ಲಿಗಿದ್ದ ಯು ಬಾಳಕ ಸುಟ್ಟ ವಾಸನೆ ಮೂಗಿಗೆ ಬಡಿಯಿತು (ಮೂರುದಾ. ೯೦). [ ? ]

**ನರ್ಮವಚನ** (ನಾ). ವಿನೋದದ ಮಾತು,–ನುಡಿ : ನಾರಿಯರ ನರ್ಮವಚನಕ್ಕೆ ನಂದನದ ಮಾವಾರದಂದದಿ ಕಾದ ದೇವ ಹೂವಪ್ಪುದೇ (ಸಮ್ಯಕೌ. ೩-೬೬). [ ನರ್ಮ$_1$ + ವಚನ ]

**ನರ್ಮಸಖ** (ನಾ).=ನರ್ಮಸಚಿವ : (೩). [ ಸಂ. (ನರ್ಮ + ಸಖ + –) ]

**ನರ್ಮಸಚಿವ** (ನಾ). ಅರಸನ ಶೃಂಗಾರ ಮತ್ತು ವಿನೋದದ ಕ್ರೀಡೆಗಳಲ್ಲಿ ಜೊತೆಯಲ್ಲಿರುವವನು,–ಸಹಾಯಕ; ವಿದೂಷಕ ಮೊದಲಾದವರು ; ಆಪ್ತಸಚಿವ ; ಅಂತರಂಗದ ಸಹಾಯಕ : ಭೀಮಸೇನನುಮತದೊಳ್ ನರ್ಮಸಚಿವನುಂ ಪರಿಹಾಸಕೇಳೀಶೀಲನುಮೆನಿಸಿದ ವಿದೂಷಕನೆಂದಂ (ಗದಾಯು. ೨-೮ ವ); ಅವನಿಪತಿ ದಿನಪ್ರಥಮಯಾಮದೊಳ್ ನರ್ಮಸಚಿವಸಮನ್ವಿತಂ . . . ಮಂಗಳಗಾಯನೀಜಮಧುರಗೀತಮನಾಲಿಸುತ್ತುಮಿರ್ಪಿನಂ (ಪುಲ್ಲಿಪು. ೩-೨೮) : ಅಂತವರ್ ನರ್ಮಸಚಿವರಂತಿಚ್ಛೆಯಂ ಪ್ರತಿಪಾಲಿಸಿ ನುಡಿವುದುಂ (ಚಂರಾಮಾ. ೧೨-೩೦ ವ) ; ನರ್ಮಸಚಿವಪ್ರಕೋಷ್ಠನಿವೇಶಿತ ಸವ್ಯಪಾಣಿಪಲ್ಲವನುಂ (ಚಂದ್ರಪ್ರ. ೬-೮೩ ವ) ; ನರ್ಮಸಚಿವಪ್ರಸಾರಿತ ಕರಪಲ್ಲವನ್ಯಸ್ತಹಸ್ತಕಮಳನುಂ . . . ಆಗಿ ನಡೆತಪ್ಪಾಗಳ್ (ರಾಜಶೇ. ೧೦-೧೩ ವ) : ಅವನು ನಯಾಜನ ಅಂತರಂಗದ ಮಿತ್ರನೂ ನರ್ಮ ಸಚಿವನೂ ಆಗಿದ್ದನು (ಚಿತ್ರೋತ. ೧೪೩) ; ಗೋವಿಂದಭಟ್ಟ, ಗೌಡರ ನರ್ಮಸಚಿವ. ಗೌಡರ ಯೋಜನೆ – ಹುಂಚಿಕೆಯ ಅಲಿಖಿತ ರೆಕಾರ್ಡಕೀಪರ್ (ಲೇಖಕ 11, ೪೩). [ ಸಂ. ]

**ನರ್ಮಸಹಾಯ** (ನಾ).=ನರ್ಮಸಚಿವ : ಅತನುವನತಿಶಯದಿಂ ಖುತುತತಿಗಳ್ ಬಳಸುವವೊಲೆಳಸಿ ಬಳಸಿದರಂತಾ ಕ್ಷಿತಿಪತಿಸುತನಂ ವಿಟಪಂಡಿತನಟಪರಿಹಾಸಕಪಿ ನರ್ಮಸಹಾಯರ್ (ಅರ್ಜನೇ. ೪-೦೩೩). [ ನರ್ಮ$_1$ + ಸಹಾಯ ]

**ನರ್ಮಾಲಾಪ** (ನಾ). ವಿನೋದದ ಮಾತು ; ನಗೆನುಡಿ : ಪಲವುಂ ನರ್ಮಾಲಾಪಂಗಳಿಂದಮೆ ಸುಖಸುಮಾನಸ್ವಾಂತನಾಗಿ ರಾಜಾಧಿರಾಜಂ . . . ಪೋಷಿಸಲ (ಕಾದಂಬ. ೪೧೭). [ ಸಂ. ]

**ನರ್ಮೋಕ್ತಿ** (ನಾ).=ನರ್ಮಾಲಾಪ: ಪರಿಪರಿಯ ನರ್ಮೋಕ್ತಿಗಳ ಬಂಧುರ ವಿಹಾರಂಗಳನು ನೆನೆನೆನೆದು ಮರುಗಿದರು ತಾಳಿದರು ಕೃಷ್ಣಾತ್ಮ ಭಾವನೆಯ (ಶಿಭಾಗ. ೧೦-೨೬-೨೪). [ ಸಂ. ]

**ನರ್ವಲ್** 'ನಚುವಲ್' ನೋ.

**ನರ್ವಾಳಿ** (ನಾ). ಒಂದು ಬಗೆಯ ಗಿಡ : ನರ್ವಾಳಿ, ಕಿರಿಚಳ್ಳಿ (ವೃ.ಜಿ. ೨೪-೪೩೪). [ ? ]

**ನರ್ಸ್**, ನರಸು, ನರ್ಸು (ನಾ). ರೋಗಿಗಳಿಗೆ ಆರೈಕೆಮಾಡುವ ದಾದಿ ; ದಾಯಿ : ನಮ್ಮ ಆಫೀಸಿನಲ್ಲಿ ಕಂಪೌಂಡರ್, ಅಕೌಂಟೆಂಟ್ . . . ನರ್ಸ್ ಕೂಡಾ ನಾನೇ ನಾನು (ಸೀತಾರ. ೯೩) ; ಗುಲಾಬಿಯಂಥ ಚೆಂದದ ನರ್ಸ್ ಇದ್ದಾಳಾದರೆ ಅವಳನ್ನಾದರೂ ನೋಡಿ ಕಾಯಿಲೆಯ ಜನ ಬಂದಾರಲ್ಲ ? (ಜಾರುದಾ. ೧೬೦). ನರಸು: 'ನರಸಮ್ಮ' ಪರಾ. ನರ್ಸು: ಓರ್ವ ನರ್ಸಿನ ಸಹಾಯದಿಂದ ಪರೀಕ್ಷೆ ನಡೆಯಿಸಿದ ಡಾಕ್ಟರು .... ಗಾಬರಿಯ ಧ್ವನಿಯ ಲ್ಲಿಯೇ ಹೇಳಿದರು (ಸಮಜೀ. ೧೦೦೪). [ ← ಇಂ. Nurse ]

**ನರ್ಸು** 'ನರ್ಸ್' ನೋ.

**ನಲ್** (ಗು). ೧. ಒಳ್ಳೆಯ ; ಉತ್ತಮವಾದ ; ಶ್ರೇಷ್ಠವಾದ : "ನಲ್ಲೆಂದೊಳ್ಳಿತು"(ಶಬ್ದಮ. ೦೦೦). 'ನಲ್ಗುಣ', 'ನಲ್ಗುದುರೆ', 'ನಲ್ತಪ' ಪರಾ. ೨. ಅಂದವಾದ ; ಸೊಗಸಾದ ; ಮನಸೆಳೆಯುವ : "ನಲ್ ನಯಕ್ಕೆಸಕವುದು" (ಕಕಠ. ೦೨೩). 'ನಲ್ಗಾಡಿ', ನಲ್ದುವ್ವನೆ', 'ನಲ್ವೆಟ್' ಪರಾ. ೩. ಹಿತವಾದ ; ಪ್ರಿಯವಾದ ; ಪ್ರೀತಿಯ. 'ನಲ್ನುಡಿ₂', 'ನಲ್ವರಕೆ', 'ನಲ್ವಾತು' ಪರಾ. ೪. ಸವಿಯಾದ ; ಮಧುರವಾದ. 'ನಲ್ಗಂಪು', 'ನಲ್ಗಳಲ್', 'ನಲ್ಗುಟುಕು', 'ನಲ್ದಂಬುಲ', 'ನಲ್ಲುಣಿಸು' ಪರಾ. ೫. ಹರಿತವಾದ ; ತೀಕ್ಷ್ಣವಾದ. 'ನಲ್ಲಂಬು' ಪರಾ. ೬. ಅತಿಶಯವಾದ ; ಹೆಚ್ಚಾದ. 'ನಲ್ಸೊಗ' ಪರಾ.

ನಲ್ಲದು = ಒಳ್ಳೆಯದು : ನಲ್ಲದು ನನ್ನುಮನ್ ನನ್ನಿಗ್ಗತನಮುಮನ್ ಬಿಟ್ಟು ಕಳಿಯೀಗಳ್ (ಅಂತಿಗೊ. ೩-೮೦). ನಲ್ಲವರ್ = ಒಲಿದವರು ; ನಲ್ಲರು : ಅಂತೆ ಮಾತಾಡುವ ರಾಜಕೀರ ಒಲವಟ್ಕೆಸಲಾಜಿದಗಲ್ದು ಪೂವಿನಂಬಾಡೆ ಲತಾವನಂಬುಗುವ ನಲ್ಲವರಲ್ಲಿಯ ನಂದನಂಗಳೊಳ್ (ಎಇ. XIII, ೪೪-೯೬ ; 1112 ; ಶಾಶಸಂ. ೨೦೬ ನೋ). ನಲ್ಲವಳ್ = ಪ್ರಿಯೆ ; ನಲ್ಲೆ : ಅಳುರ್ವರ್ತನುಸಂತಾಪಕ್ಕುಳ್ಳಿಕ್ಕಿ ನಲ್ಲವಳಂಬುಕೆಯ್ವೆಳಿವಸಲೆಯಂ ಕೇಳೀಶೈಲಂಗಳಂ . . . ಸೆಜೆಗೆಯ್ದನಾಕುಳಮನೆ ಕುಳಿಕರ್ೋಡಿತ್ತಾಗಳ್ ಮನಂ ಮನುಜೇಂದ್ರನಾ (ಧರ್ಮಾಪು. ೪-೬೨). ನಲ್ಲಾತ = ಸ್ವಾಮಿ; ಒಡೆಯ: ನಲ್ಲಾತಂ ಶ್ರೀಮತ್ ಸೋವಯ್ಯ (ಎಕ. XI, ಚಿತ್ರದು. ೪೯-೭೦ ; 947): ಅನವೆಡ(ಡ)ಬ್ಬಂ ಮದಗಜಮಲ್ಲಂ ಧಾಲಕ ನಲ್ಲಾತಂ ಶ್ರೀ ಕನ್ನರದೇವನ ರಾಜ್ಯಂ(ಅಇ. XII, ೨೩೭-೨; 951); ಯಸಕ್ಕೆ ನಲ್ಲಾತಂ ಶ್ರೀಕೊಟ್ಟಿಗದೇವನ ರಾಜ್ಯಂ (ಸೌಇಇ. XI-I, ೯೩-೪; 970) ; ಪರಬಲಧೊತ್ತರ್ಗಂ ಕೃತಯುಗ ಚರಿತನಾಳ್ದೆ ನಲ್ಲಾತಂ (ಸೌಇಇ. XI-I, ೯೨-೭ ; 1064).

[ ದೇ.ಶ ತಮಿ. ಮಲ. ನಲ್; ತುಳು. ನಲ್, ನಲು ;
ಕೊಡ. ನಲ್ಲ; ಗೊಂಡಿ. ನೆಲಾ ]

**ನಲ₁** (ನಾ). ೧. ನಲಿವು ; ಸಂತೋಷ. 'ನಲಂದಳೆ', 'ನಲವೆಚ್ಚು' ಪರಾ. ೨. ಪ್ರೀತಿ ; ಮಮತೆ. 'ನಲವರಕೆ' ಪರಾ.

[ ದೇ.ಶ ತಮಿ. ನಲ; ಮಲ. ನಲ = ಒಳ್ಳೆಯತನ, ಸೌಂದರ್ಯ;
ತುಳು. ನಲ = ಒಳ್ಳೆಯ ]

**ನಲ₂, ನಳ₁** (ನಾ). ೧. ಒಂದು ಬಗೆಯ ಜೊಂಡು,- ಹುಲ್ಲು ; ಲಾಳದ ಕಡ್ಡಿ ಹುಲ್ಲು. ೨. ಕಂಪು; ವಾಸನೆ. ೩. ನಿಷಧದೇಶದ ಒಬ್ಬ ಪ್ರಸಿದ್ಧ ರಾಜ; ವೀರಸೇನನ ಮಗ; ದಮಯಂತಿಯ ಗಂಡ. ೪. ರಾಮಾಯಣ ದಲ್ಲಿ ಒಬ್ಬ ಕಪಿನಾಯಕನ ಹೆಸರು ; ಸುಗ್ರೀವನ ಸೇನಾಪತಿ. ೫. ಅರುವತ್ತು ಸಂವತ್ಸರಗಳಲ್ಲಿ ಐವತ್ತನೆಯದು. ನಳ₁ : ೩. ಹರಿಶ್ಚಂದ್ರ ನಳ ಪುರು . . . ಚಕ್ರವರ್ತಿಗಳಕ್ಕವರ್ಗೆ ಪುಣ್ಯಶ್ಲೋಕರೆಂಬ ನಾಮಂ (ಮಂಗರಾ. ೭೮-೨); ನಳನ ನಹುಷನ ಶಾಲಿಹೋತ್ರನ ಬಲುಮೆಗಳು ಕಿಱಿದೆಂಬ . . . ಹಯಪ್ರೌಢಪ್ರತಾಪರು ಹೊಳೆವ ಮಕುಟದ ಸಾಲುಗಳ ಲೊಪ್ಪಿದರು ರಾವುತರು (ಕುಮಾವ್ಯಾ,ಉ. ೮-೪೧) ; ಏತಱಾಯಾಸವಿವು ಜಗದ್ವಿಖ್ಯಾತನಲ್ಲಾ ರಾಯರಲ್ಲಿ ನಳನಾತಗಾದಾವತ್ತ ಬಲ್ಲೈ ಕೇಳಿ ಪೂರ್ವದಲಿ (ಕಿರಾಂ. ೩-೨-೦೩). ೪. ಒದೆದ ಕೆಡಹಿದ ನಳನ ಮೈಂದನ ಸದೆದ ನೀಲನ ತುಳಿದ (ತೊರಾ. ೨೫-೨೨); ಇಟ್ಟ ಗಿರಿಗಳ ಹಿಡಿಹಿಡಿದು ನಳನೊಟ್ಟಿದನು ಮೆಟ್ಟಿದನು ಕಟ್ಟಿದನಿಟ್ಟಣಿಸಿ ಬಹ ಗಿರಿಯನಾ ಬಳಸಲಿಸಿ ಬಹ ಗಿರಿಯ (ತೊರಾ. ೬-೫-೨೨) ; ನಳ ನೀಲ ಅಂಗದ ಜಾಂಬವಂತ ದಳಪತಿಯಧಿಕ ಸುಗ್ರೀವ ಬಲವಂತ (ಪುರಂದ. ೩-೮೭-೫). ೫. ಮತ್ತಮಾ ವರುಷವೇ ಪ್ರಭವ . . . ನಳ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೧). ೬. ಒಂದು ಬಗೆಯ ವಿಮಾನು ; ಕಿರುವಿಮಾನು : ಬಕ ಮರಾಳ ರಥಾಂಗ ಸಾರಸನಿಕರ ಪುಳಿನಸ್ಥಳದೊಳಿರೆ ನಳವಾಕರನಕ್ರಜಳೂಕ ಮಡುಗಡಲೊಳಗೆ ಸಂಚರಿಸೆ (ಅಕ್ರೂ.ಕ. ೫-೨೬). 'ನಳವಿಮಾನ' ಪರಾ. ೭. [ ಜ್ಯೋತಿ] ಒಂದು ಬಗೆಯ ಯೋಗ. 'ನಳಯೋಗ' ಪರಾ. [ ಸಂ. ]

**ನಲಂದಳೆ** (ಕ್ರಿ). ಸಂತೋಷಪಡು ; ಸಡಗರಿಸು ; ಸಂಭ್ರಮಿಸು : ಆಕಂಪನ್ನಪಂ ಆಲಘುಪ್ರಿಯದಿಂದಿರ್ದಂದು ನಲಂದಳೆದು ಪೊಳಲನೆಯ್ದಿಸಿ . . . ಸಕಲಸನ್ಮಾನಂ ಮಾಡಿದನು (ಜದುಕಾ. ೪-೪೬). [ ನಲ₁ + ತಳೆ₁]

**ನಲಕ, ನಳಕ** (ನಾ). ೧. ದೇಹದ ಉದ್ದವಾದ ಎಲುಬು,- ಮೂಳೆ. ೨. ಕೈಯ ಅಥವಾ ಕಾಲಿನ ಎಲುಬು ; ಶಾಖಾಸ್ಥಿ. ನಳಕ : ೨. "ಕೆಯ್ಯ ಕಾಲ ಎಲ್ವು ನಳಕಯೆಂಬುದು" (ಹಲಾಯು. ೦೦೪-೦೨) ; "ನಳಕಮೆನೆ ಶಾಖಾಸ್ಥಿಯೆಂದನಲು ಕೈಕಾಲ ಯೆಲುವು" (ಮಂಗರಾ. ೦೦೭-೬). [ ಸಂ. ]

**ನಲಕುಪ್ಪ** (ನಾ). (?) : ಮೃಗಶಿರೆ ನಲಕುಪ್ಪನ ಹಾಗೆ ೩ ಆದ್ರ ಹವಳದ ಹಾಗೆ೧ (ಭಾಸ್ಕರ. ೭೦-೨). [ ? ]

**ನಲಕೂಬರ, ನಳಕೂಬರ** (ನಾ). ಕುಬೇರನ ಮಗ. **ನಳಕೂಬರ:** ಪೆಜತೇನುಪಂ ಬಗೆಯದೆ ನಳಕೂಬರನೊಳ್ ಕೂಡಿ ಸುಖಮಿರೆಂದಾಕೆಯ ದುಷ್ಪರಿಣಾಮಮಂ ಪೆತ್ತುವಿಡಿಸಿ (ಶಂರಾಮಾ. ೧೧-೧೯೫ ವ) ; ಸುರರಮಣ ನಳಕೂಬರಾಧಿಕಸರಸಕಾಮುಕರಂ ಸಮಸ್ತಾಮರರನೆಲ್ಲರ ಬಗೆಯದುದನಿಮಿಷ ಸತಿಯರು ಸಹಸ್ರ ನೆರೆದು ನಿನ್ನಂ . . . ಮನಸಿಜಸುಖಾಮೃತಶರನಿಧಿ ಯೊಳೋಲಾಡಿಸುತ್ತಿರಲ್ (ಬಸಪು. ೪೧-೧೮) ; ಉರ್ವ ನಳಕೂಬರ ಜಯಂತಾದಿ ಸುರತನುಜರುರ್ವರೆಗದೇಕೆ ಬಹರು (ಕೃಮಿಧಾ. ೩೦-೨೧).

[ ಸಂ. ]

**ನಲಕೆ** (ನಾ). ಒಂದು ಬಗೆಯ ಸುಗಂಧದ್ರವ್ಯ: (ಶ). [<ಸಂ. ನಲಿಕಾ]

**ನಲಗು** 'ನಲುಗು₁' ನೋ.

**ನಲದ** (ನಾ). ಲಾವಂಚೆ ; ಉಶೀರ. [ ಸಂ. ]

**ನಲಭರಿತ** (ನಾ). ನಲಿವಿನಿಂದ ಕೂಡಿದುದು ; ಸಂತೋಷಭರಿತ ವಾದುದು ; ಸುಖಮಯವಾದುದು : ಅರರೆ ನಲ ನಲಭರಿತವಮೃತದ ಶರಧಿ ಸಾವಿರವಪ್ಪುವಂಗಡಿ ಮೆಱೆವ ಗಣಿಕಾಭವನ ಕೋಟೆಯ ಸುತ್ತ ಲುದ್ಯಾನ (ತೊರಾ. ೦-೨೫). [ ನಲ₁ + ಭರಿತ ]

**ನಲಮಾನ, ನಳಮಾನ** (ನಾ). ಒಂದು ಬಗೆಯ ವಿಮಾನು ; ಚಿಲಿಚಿಮ : "ನಲಮಾನ ಚಿಲಿಚಿಮ ಎಂದೊಡೆ ಸಿಸಿಲು, ಚಿಳಿಯ ಮೀನೆಂದು ಎಂಬರು" (ನಾಚಿರಾ. ೩). ನಳಮಾನ: "ನಳಮಾನಃ ಚಿಳಿಚಿಮಃ-ಈ ೨ ಕಿಱುಮೀನ್" (ಹಲಾಯು. ೧೦೦-೩೬) ; "ಚಿಳಿಚಿಮವೆನಲು ನಳಮಾನವೆನೆ ಕಿಱುಮೀನ ಪೆಸರಿನಿಸ್ಕುಂ" (ಮಂಗರಾ. ೦೨೧-೬). [ ಸಂ. ]

**ನಲವತ್ತು** 'ನಾಲ್ವತ್ತು' ನೋ.

**ನಲವರಕೆ** (ನಾ). ಪ್ರೀತಿಯಿಂದ ಮಾಡಿದ ಆಶೀರ್ವಾದ : ಅರಸಿ ನಲ ವರಕೆಯಿಂದಂ ಪರಸುತ್ತಿಂದೆನ್ನ ತಂದೆ ಬಂದನನುತ್ತಂ (ಶಾರಂಪೂ. ೪೯೯೩; ಕುಮಾರನನಜಿತಸೇನಮಹಾದೇವಿ ನಲವ[ಪಾಠಾಂ. ನಲ್ವ]ರಕೆಯಿಂ ಪರಸಿ

ಮೋಹರಸಪರವಶತೆಯಿಂ . . . ಅಟ್ಟಿ (ಚಂದ್ರಪು. ೬-೯೦ ವ): ನಿಜಾಂಘ್ರಿಗಳನರ್ಚಿಸುವ ಕನ್ಯಾರತ್ನಮಂ ನಿಜಕುಲಲಕ್ಷ್ಮಿದುವೆ ಚೂಡಾರತ್ನಮೆಂದು ನೋಡಿ ಪಾರಯ್ಸಿ ಪಲವುಂ ನಲವ[ಪಾಠಾಂ. ಪಲವಂ ನಲ್ವ]ರಕೆಯಂ ಪರಸಿ (ಪರ್ದಾಪು. ೩-೯೭ವ) : ನಿಜಜನನೀಜನಕರಿರ್ವಡೆಗೆ ರಮಣನವೆರಸೆಲ್ಲಂದು ಪೊಡವಟ್ಟು ನಿಂದಾಗಳ್ . . . ಇರ್ವರುಂ ನಲವರಕೆಯಿತ್ತು ಪರಿತೋಷದಿಂ ಬರಿಸಿ ಕುಳ್ಳಿರಿಸಿ (ರಾಜಶೇ. ೯-೬೨ ವ) ; ನಲವರಕೆಯಿತ್ತು ಸಂತೋಷದಿಂ ನಡೆ ನೋಡಿ ನಲಿದು (ಕುಮಾರಾಪು. ೭-೨೦೪). [ ನಲ್₁ + ಪರಕೆ₁ ]

**ನಲವರಿ** (ಕ್ರಿ). ಸಂತೋಷಗೊಳ್ಳು ; ಆನಂದಿಸು : ಭರದಿಂ ತಲೆಯೆತ್ತಿ ಯುರ್ಬಿ ನಭಮಂ ನುಂಗಲೊಡರ್ಚಿದಂತೆ ಮೇಘಮಂ ನೋಡಿ ದೆಸೆದೆಸೆಯಂ ಪಾಸಿ ನಲವರಿದು ಪ್ರಾಣಿಗಳೊಳ್ ತನಗದಿರದಿರಾಂಪ ರೊರ್ವರುಮಂ ಕಾಣದೆ (ಪಂಚತಂ. ೯೬-೭). 'ನಲಿವರಿ' ಪಠಾ.

[ ನಲ್₁ + ಪರಿ₂ ]

**ನಲವರಿಕೆ** (ನಾ). ಅಭಿನಂದನೆ: "ಅಭಿನಂದಿಸುವುದು . . . ನಲವರಿಕೆ" (Congratulation. ೩೦೪೧) ; ಈಗೆಲ್ಲರೂ ನಲವರಿಕೆ ಸಲ್ಲಿಪರು (ಮೂರುನಾ. ೧೧೪-೭೩೦). [ ನಲವು + ಅರಿಕೆ (<ಅಱಿಕೆ) ]

**ನಲವಾನ್** (ಕ್ರಿ). ಸಂತೋಷವನ್ನು ತಳೆ ; ಆನಂದಿಸು ; ಪ್ರಸನ್ನಚಿತ್ತನಾಗು : ಏಂ ತಾಳ್ದುದೋ ಚೆಲ್ವನೀ ದೇಶವೆಂದು ನಲವಾಂತು ಮುಂದಳೆಯುತಿರೆ (ಕ್ರಮಿಥಾ. ೩-೧೩). [ ನಲವು + ಆನ್₁ ]

**ನಲವು** (ನಾ). ೧. ಹಿಗ್ಗು ; ಸಂತೋಷ ; ಸಡಗರ : "ನಲವೆಂದನೆ ಸಂತೋಷಂ" (ಭಾಠನಿ. ೩೩); ನಲವಿಂ ಕೃತಾರ್ಥಭಾವವನೆಯ್ದುತಿರೆ ಕಂಡು ಚಲಿಸದದಿರದೆ ಬೆನ್ನನೊಡ್ಡಿಕೊಂಡಿರೆ ಕಂಡು (ಸೀದಿಶ. ದೇ. ೭೯-೧೩) ; ಕೊಬ್ಬಿ ನಲವಿಂದೆ ಮಡಲಿಱಿದಡಸಿ ಬೆಳೆದು (ಸಿದ್ಧರಾ. ೨-೨೩) : ನಲವಿಂ ಪಂದಿಯ ಬೇಂಟೆಯಾಡಿ (ಉದ್ಭಟ. ೨-೬೯) ; ನೆರೆದೋಲಗಂ ನಲವು ಕೈಮಿಗೆ ತನ್ನನೆ ನೋಡುತಿರ್ಪಿನಂ (ಕಬ್ಬಿಕಾ. ೮೨) ; ಫಲವ ತಲೆಯಲಿ ಹೊತ್ತು ಬೇಗದಿ ನಲವು ಮಿಗೆ ನಡೆತಂದು (ಕುಮಾರ.ಅ. ೬೦೫. ೯-೧೬) : ಪರಿಮಳ ದಲರ ಪನ್ನೀರಿನಲಿ ತವಕದಿ ನಲವು ಇಂಗಿದ ಸತಿಯನುಪಚರಿಸಿದರು ಪಲತೆಱದಿ (ನಳಚ. ೦-೩೯) ; ಅರ್ಥಲಾಲಿತ್ಯವೆನುವ ಸತೀತ್ವವಿರದೊಡನು ಗೊಳಿಸುವಳೆ ಕವಿತಾರಮಣಿ ರಸಿಕನಿಗೆ ನಲವು ? (ಗೀವಿಂ. ೨೨-೨೪). ೨. ಪ್ರೀತಿ ; ಆದರ : ಸಿರಿ ನಲವಿಂದಮಿರ್ಪ ನೆಲೆ ಕಣ್ಗಳ ಪರ್ವಮೆನಿಪ್ಪ ಪಂಕಜೋತ್ಕರವುಮಮಿಂದುಮಂಡಲಮುಮಂ ಮೊದಲೊಳ್ ಸವೆದ ಬ್ಜಜಂ ಮನೋಹರಮೆನೆ ಮಾಡಿದೀ ಮೊಗದ ಪೋಲ್ಕೆಗೆ ಮುನ್ನೆಗಟಲ್ ತಗುಳ್ಚಿ ಬಿತ್ತರಿಸಿದುದು (ಶಾಂತೀಪು. ೭೪೩) ; ಸಕಲಬುಧಸಮಿತಿ ನೆಱೆ ಕೊಂಡುಕೊನೆಮ ನಲವಿಂದೆ ಕೀರ್ತಿಸುತ್ತಿರೆ ಮುದದಿಂ . . . ಕಾವ್ಯಾವಲೋಕಮಂ ವಿರಚಿಸುವೆಂ (ಕಾವ್ಯಾವ. ೩) ; ಯತಿಪಸಮಂತಭದ್ರನನಿಳಾ (ವಳಯಂ) ನಲವಿಂದೆ ಕೀರ್ತಿಕುಂ (ಪರ್ದಾಪು. ೧-೧೩) ; ನಲ್ಲನ ನಲವಿಂ ನಡೆ ನೋಡಿ (ಉದ್ಭಟ. ೨-೭೭) : ಕಂದುಮೋಱಿಯ ರಾಯನನು . . . ಆಲಿಂಗಿಸುತ ನಲವಿಂದ ಮನ್ನಿಸಿ ತಂದನರವುನೆಗುಟಿತವಚನದಲಿ(ಕುಮಾರಾಭೀ. ೧-೧೭). ೩. ಚೆಲುವು; ಸೌಂದರ್ಯ ; ಮನೋಹರತೆ : ಸುಲಲಿತವಹ ನಾನಾವರ್ಣಾಜ್ಞರ ಪಲವಿಧವಾಂತ ಕೇರಿಗಳು ನಲವಿಂದ ಮೆಱೆದಿಹುವು (ಕೇನವಿ. ೨-೭೪). [ ನಲ್₁ + - ವು./ತಮಿ. ನಲವು; ತೆಲು. ನಲುವು ]

**ನಲವುಗೆಡು** (ಕ್ರಿ). ಸಂತೋಷಗುಂದು ; ಹಿಗ್ಗು ಇಲ್ಲವಾಗು : ಎನ್ನೋಪಳಾ ಕಂದಿದೊಂದಿರವಾ ಚಿಂತಿಸುವಂದವಾ ನಲವುಗೆಟ್ಟಾಕಾರವಾ ಬಾಷ್ಪದೊಳ್ ಪೊರೆದಾಲೋಕನವಾ ಬಟಲ್ದಧರವಾ ಸುಯ್ಯೊಂದು ಪಾಂಗಾ ಸ್ಮರಾತುರಮಂ ತಾಳ್ದುವ ಭಂಗಿ ಪಿಂಗಿರದದೇಂ ಬೆಚ್ಚತ್ತೊ ಮಚ್ಚಿತ್ತದೊಳ್ (ಜಗವಿ. ೦೬-೧೪೦) ; ಮುಂದುಗೆಟ್ಟಿರ್ದೆಯ ಗುಂಡಿಗೆಗಳೊಡೆದರೆಬರಾಚರಿಸಿದರ್ ನಡುಗಿದರ್ ನಲವುಗೆಟ್ಟಸಿಬರು (ಕುಬಪು. ೩೦-೩೭). [ನಲವು+ಕೆಡು₁]

**ನಲವುದಾಳು** (ಕ್ರಿ). ಸಂತೋಷವನ್ನು ತಾಳು ; ಪ್ರಸನ್ನತೆಯನ್ನು ಹೊಂದು : ಭೂಸುರರಿಗೆ ನಿತ್ಯದಾನವ ಮಾಡಿ ನಲವುದಾಳಿದ ಭೂಮಿಪಾಲ (ಕೇನವಿ. ೨೨-೬೭). [ ನಲವು + ತಾಳು₁ (<ತಾಳ್₁) ]

**ನಲವುಮತ್ತು** (ನಾ). ಆನಂದದ ಅಮಲು ; ಸಂತೋಷದ ಗುಂಗು : ವರಪನಿತ್ತು ನಲವುಮತ್ತು ನಮಗೆಂದಿಗು ಇರೆ ಹರಸೈ ಗೋಕುಲಾನಂದನಾ (ಗೋಕುನಿ. ೩೨). [ ನಲವು + ಮತ್ತು₁ ]

**ನಲವೆ** (ನಾ). ಸಂತೋಷಚಿತ್ತೆ ; ಹರ್ಷಿತೆ : ನುಣ್ಣನಿಯ ನೂತನೆ ಭಾಳದ ಭಾಮಿನಿ . . . ನಗೆಗಣ್ಣಳ ನಲವೆ ನಾಸಿಕದ ನೀಱೆ (ಉದ್ಭಟ. ೩-೩೩ ವ).

[ ನಲವು + - ಎ₃ ]

**ನಲವೆಚ್ಚು** (ಕ್ರಿ). ಹಿಗ್ಗು ಹೆಚ್ಚು ; ಸಂತೋಷವು ಅಧಿಕವಾಗು ; ಶಬರಿ ಮುದದಿಂ ಗಾಢಪರಿರಂಭಣಂಗೆಯ್ದು . . . ಬೇಂಟೆಯಂ ನೋಡುತ್ತ ನಲವೆಚ್ಚುತಂ ಪೋದಳು (ರಾಘಚ. ೦೭-೭೦).

[ ನಲ್₁ + ಪೆಚ್ಚು₁ (<ಪೆರ್ಚು₁) ]

**ನಲವೆರೆ** (ಕ್ರಿ). ಪ್ರೀತಿಯನ್ನು ಸುರಿಸು ; ಮಮತೆಯನ್ನು ತೋರು : ಶಿವದ ನೆರೆಯನು ಬಲ್ಲ ವಿಪುಲಮತಿಗಳ ತಡೆದ ಧ್ಯಾನಬಿಂಬ, ನೆನೆದೊಡನೆ ಕೊಳೆ ತೊಳೆದು ನಲವೆರೆದು ನಿಲ್ಲನ್ನ ಮನದ ತುಂಬ (ಪಾಂಚಜ. ೯೦-೦೦).

[ ನಲವು + ಎರೆ₁ (<ಎಱೆ₁) ]

**ನಲವೇರು** 'ನಲವೇಱು' ನೋ.

**ನಲವೇಱಿಸು** (ಕ್ರಿ). ಸಂತೋಷವನ್ನು ಹೆಚ್ಚಿಸು ; ಹರ್ಷಗೊಳಿಸು : ಕಂದಾವರೆಗಳ ಮುಗಿಸುತ ಚಾಕವ್ಯೇದವ ನಲವೇರಿ[ಱಿ]ಸುತ ಚಂದ್ರಕಾಂತವ ಕರಗಿಸುತಾಗ ಪರಿಪೂರ್ಣೇಂದುವದನೆಯರ್ಯೆದಿದರು (ಕೇನವಿ. ೨೦-೭೬). [ ನಲವು + ಏಱಿಸು ]

**ನಲವೇಱು, ನಲವೇರು**(ಕ್ರಿ). ಅಧಿಕವಾದ ಸಂತೋಷವನ್ನು ಹೊಂದು : ಉದಯಗಿರೀಂದ್ರಮಾನಿನನೇಱೆ ಸರೋಜಸಮಿತಿ ನಲ[ಪಾಠಾಂ. ಯ]ವೇಱುವ ಪೊಲ್ (ಚಂದ್ರಪು. ೭-೨) ; ಹೊಸಪರಿಯ ಬಿರಿಮುಗುಳ್ಗಳೆರೆ ಬೀಗಿ ನಲವೇಱೆ ಮಲ್ಲಿಗೆಯರಳ್ಗಳಂ ಮನವಾರೆ ತಿಱಿಯುತಂ (ಪುಷ್ಪರ. ಹ. ೩೨೪-೧೮); ಅಗಲದೆ ನೋಡಿನೋಡಿ ನಲವೇಱುವ ದೇವಿಯ ಭೂಪಚಕ್ರಿಯಾ ಸೊಗಯಿಪ ದೃಕ್ಚಕೋರಚಯಸೇವೆಗೆ ಮೆಚ್ಚಿ (ಕುಸುಮಾ. ೬-೧೩೬) ; ದೇಗುಲಕೆ ನಲವೇಱೆ ನಡೆತಪ್ಪಾಗ (ಬಸಪು. ೨೭-೬) : ದಶರಥನಂದನರ ನಿರೀಕ್ಷಿಸುತ ನಲವೇಱಿದನು ಕಲಿಹನುಮ (ತೊರರಾ. ೬-೩೧-೧೬). ನಲವೇರು : ತಂಗಿನ ಗರಿ ತಲೆದೂಗಲಿ ಬಾಗಲಿ ಗಿಡಮರಗಳು ಸಹ ನಲವೇರಿ (ಕಶಪು. ೬-೦೯೯). [ ನಲವು + ಏಱು₁ (<ಏಱ್₁) ]

**ನಲಾವು** 'ನಲ್ಲಾವು' ನೋ.

**ನಲಿ₁** (ಕ್ರಿ). ೧. ಕುಣಿ ; ನೃತ್ಯ ಮಾಡು : ಸುತ್ತಲುಂ ಪರಿವ ಜರಿವೊನಲ್ಗಳಿಂದೆತ್ತಲುಂ ನಲಿವ ಪೊಸನವಿಲ್ಗಳಿಂ (ಪಂಚಶಾ. ೩-೨೨) ; ನಡುವಿರುಳವರ್ ನಾಟಕಂ ನಲಿದು ಮಱೆದೊಱಗಿರ್ದ ಸಮಯದೊಳ್ (ಪಂಚತಂ. ೨೭೯-೦) ; ಸರ್ವಾಂಗಸುಂದರಿ ವಿದ್ಯಾನಟಿ ನಾಟಕಂ ನಲಿಗೆ ಮಾತ್ಸ್ಯಾವೃಸ್ಥಲೀರಂಗದೊಳ್ (ಶಂಠಾಮಾ. ೧-೬). ೨. ಹಿಗ್ಗು ; ಸಂತೋಷಪಡು ; ಆನಂದಿಸು ; ಉಲ್ಲಾಸಗೊಳ್ಳು : ತಾಮರೆಯರಲೊಳ್ ಸರಸನಿಜಾಮೋದದೊಳೊಂದಿ ನಲಿದು ಮಕರಂದರಜೋವ್ಯಾಮುಗ್ಧದೊಳೇ ಮುಂಗುಳೊಳಮಾ ಮಾಟಕ್ಕೆಯನಱಿಸಿ ಸುಟಿಪ್ಪುದಲೆ ಕಲಕಲದೊಳ್ (ಕವಿರಾ. ೩-೧೨೭) ; ಮೆಯ್ಪೆರ್ಚಿತನ್ನನಿಯಂ ಬಂದೊಡೆ ನಲ್ಲಳೇಂ ನಲಿದಳೊ ನಾನಾವಿಳಾಸಂಗಳಿಂ (ಅದಿಪು. ೧೨-೯೩) : ಗಗನತಳಮೆ ಪಱಿದು ಬಿಟ್ಟುದೆನಿಪ ಬಹುತಟಾಕದಿಂ ಕುಕಿಲ್ವ ನಲಿವ ಕೋಕದಿಂ (ಪಂಪಭಾ. ೦-೩೮): ದೀನವೃದ್ಧದ್ವಿಜನಟಭಟಸಚ್ಚಕ್ರಯುಗ್ಮಂ ಸರುಗ್ಮಂ ನಲಿಯುತ್ತಂ ನೋಡೆ ತನ್ನಂ ಬೆಳಗುವನೆಳೆಯೊಳ್ಬೆಳ್ಗಲಾದಿತ್ಯದೇವಂ (ಸೌಇಇ. XI-i, ೯೩-೦೭ : ೨೮೦) ; ಅರರೆ ಇಂದ್ರಾಣಿಯರು ನಲಿದು

ಸೀಗುರಿಯಿಕ್ಕೆ (ಬಸರ. ೧-೧೨) ; ನಗುತ ನಲಿಯುತ್ತ ಹಾಡುತ್ತಾಡುತಾನಂದ ವೊಗೆಯುತಿರಲು (ಹಳಶಾ. ೬-೪೪) ; ಮರುಳ್ಗಳ ತಂತಂ ನಲಿವಂತೆ ಕೊಂದಂ (ಉದ್ಭಟ. ೪-೮೪) ; ದುಶ್ಶಾಸನಂಗುಬ್ಬರಿಸೆ ರೋಷಾವೇಶಕರ್ಣಾದಿಗಳ ಮಾನ ನಲಿಯೆ (ಕುಮ್ಯಾ.ಭ. ೦-೩೦). ೩. ಸಂತೋಷದಿಂದ ಸುಳಿದಾಡು ; ಲೀಲೆಯಿಂದ ಓಡಾಡು : ಖಚರೀಜನಾನನ ನವಾಂಭೋಜಂಗಳೊಳ್ ಕಂಪನೀಂಟ್ಕೊಳುತುಂ ನಂದನರಾಜಿಯೊಳ್ನಲಿಯುತುಂ ತದಬ್ಜಜಹಂಸಂ ನಿರಾಕುಳವಿಮಾ ಪಾಟ್ಟಿಗಳಿಂದೆ ಪೊಟ್ಟುಗೆಲೆವಂ ಸಂಸಾರ ಸಾರೋದಯಂ (ಆದಿಪು. ೧-೬೪) ; ಪೊಸಕೊಳಂಗಳೊಳೋಲಿದು ನಲಿವಂಚಿಯಿಕ್ಕೆಯಿಂ (ತಿರುಕ. ದೇ. ೧-೧೪) ; ಶಾರದೆಯ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ (ಕುಮ್ಯಾ.ಆ. ೧-೩) ; ಹೊಱವೊಳಲ ರಮ್ಯೋದ್ಯಾನವೆಸೆದುದು . . . ನಲಿವ ಕಿನ್ನರಮಿಥುನದಲಿ ಮಿಗೆ ಗಳಹುವರಗಿಳಿವಿಂಡಿನಲಿ ಹೆಕ್ಕಳಿಪ ಕೋಗಿಲೆಗಳಲಿ (ತೊರರಾ. ೦-೯-೧೧) : ತಾಯ . . . ನಲಿದೊಲಿದು ನರ್ತನಂಗೈಯೆನ್ನ ಜಿಹ್ವೆಯಲಿ (ಚಿತ್ರಾಂಗ. ೧-೯). ೪. ಮೆಚ್ಚು ; ಇಷ್ಟಪಡು ; ಒಲಿ : ದರ್ಪ್ಪವಿಷಯಂಗಳೆನೀಳಿಸಿ ಕಾಡಿಯಾಡಿ ಕಾಮಾರಿಯನಚ್ಚಿಸರ್ಕೆ ನಲಿದಿರ್ಪ್ಪ ಮುನೀಶ್ವರನೀ ಧ್ರುವೇಶ್ವರ (ಶಾಶಾಶ. XI-I, ೯೭-೩೯ ; 1062) ; ಸಕಲಸೂರಿಗಳ ಪಾದಾರವಿಂದವ ನೆನೆದೀ ಕೃತಿಯನು ವೇದಿನಿ ನಲಿಯೆ ಪೇಳುವೆನು (ಕಂಠವಿ. ೧-೧೩) ; ಪೊಲುಸೆಯ್ಕೆಸಿನ ಪೆಣಮನ್ ಮಣ್ ಮಾಡದಿರ್ಪ್ಪಾರುಮಪ್, ಅಬರ್ದಿರ್, ಅಬದೆ, ಪೊಬದೆ, ಬಯಸಿ ಪಾರ್ದು, ನಲಿದೆಱಪ ಪರ್ದಿಂಗೆ ಸವಿಯೆರೆಯ ನಿಧಿಯಾಗೆ ಬಿಸುಟರ್ಕೆ ಬಯಲೆಳುಳ್ (ಅಂತಿಗೂ. ೨-೩೩). ೫. ತೂಗು ; ಅಲ್ಲಾಡು ; ಸಂಚಲವಾಗು : ಅಲಗಣ್ಗಳವರ್ದುಗಂ ತೊದಳ್ನುಡಿಯು ತಪತಿಗಂ ನಲಿವ ಮಾಗಾಯ ನವನರ್ತನದ ಹಸನಿಗಂ (ಬಸರ. ೧-೧೫೦) ; ಶ್ರೀವಧು ಮುತ್ತಿನೆಕ್ಕಸರದಂತುರದೊಳ್ ನಲಿವಂತು ವಿಕ್ರಮಶ್ರೀವಧು ಬಾಹುಪೂರಕದ ಪೊಲ್ ಭುಜದೊಳ್ ನಲಿವಂತು . . . ಪಾಲಿಸಿದನುರ್ವ್ವರೆಯಂ ನರಸಿಂಹಭೂಭಜಂ (ಎಶಿ. III, ಮಂಡ್ಯ. ೦೨೦-೦ ; 1235). ೬. ಸಂತೋಷದಿಂದ ಕೂಗು ; ಕುಕಿಲು : ಘನಯುಂ ನವಿಲ್ಗಳುಂ ಪುರುಡಿಪ ಕಾಗೆಯುಂ ನಲಿವ ಕೋಗಿಲೆಯುಂ ತೊಱೆದೆಯ್ದೆ ವೈರಮಂ ನೆರೆದೊಡನಿರ್ದವು (ಧರ್ಮಾಮೃ. ೩-೯೦).

ನಲಿನಲಿ (ದ್ವಿರುಕ್ತಿ) : ವಲರು ನಲಿನಲಿದಾಟುಂದು ಕೊಂದವಂ ಯುವರಾಜಂ (ಅಜಿಪು. ೩೦-೩೭); ಕೆಲದ ಕೇರಿಯು ಸಕ್ಕಜದ ವಾಕ್ಕಳೊಡನೊಕ್ಕಲಿಕ್ಕೆ ನಲಿನಲಿದು ನರ್ತಿಸುತ್ತಿರಲ್ (ನಂದಿರ. ೨-೧೪) ; ನಲಿನಲಿದು ಹೆಚ್ಚಿ ಮೆಚ್ಚುತ್ತ . . . ಲಲನೆಯರು ನೃಪನ ಪದಯುಗಜಲರುಹದೊಳ್ ಮೆಯ್ಯನಿಕ್ಕಿ (ನನ್ನಚಾ. ೪-೨೧೫). ನಲಿದಾಟ = ಹಿಗ್ಗುವಿಕೆ ; ಸಂತೋಷಪಡುವಿಕೆ. ನಲಿದಾಡಿಸು = ಸಂತೋಷದಿಂದ ಕುಣಿದಾಡುವಂತೆಮಾಡು : ನಿಮ್ಮವರ ಮಾರ್ಗಣಗಳುಬ್ಬರಿಸಿದವು ಗಗನಾಂಗಣವ. . . ನಲಿದಾಡಿಸಿದವು ನಾರದಾದಿಗಳ (ತೊರರಾ. ೦-೧೧-೧೦) ; ಸೊಗಯಿಸುವ ಪರಶಿವ ನಲಿದಾಡಿಸುವ ರೂಢಿಯಿಲ್ಲೆಂದು ನೆಱೆ ನೊಂದು ಮಱುಗುವಳಜಸುಮುವಳು (ಕ್ಷಮಿಕಾ. ೨೮-೦೪). ನಲಿದಾಡು = ೧. ಸಂತೋಷದಿಂದ ಆಟವಾಡು : ತವೆಸ್ನೊಡನೆ ನಲಿದಾಡುವ ಕಿಶೋರಕೇಸರಿಗಳಂ ಪಿಡಿದು ತೆಗೆವ ಕರಿಕಳಭಂಗಳುಮಂ (ಪಂಪಭಾ. ೧-೧೧೩ ವ) ; ಹರಿಣಂಗಳ್ ನಲಿದಾಡುತಿರ್ದುವು ಕರಂ ವ್ಯಾಘ್ರಂಗಳಂ ಪೊರ್ದಿ (ಸುಕುಮಾ. ೮-೬೦) ; ಜಳನಿಧಿಯಲ್ಲಿ ಪುಟ್ಟಿ ಜಲಜಾತನ ಪೇರುರಮಂಬ ತೊಟ್ಟಿಲೊಳ್ ಬಳೆದು ವಿರಾಜಿದಂ ಜಲಜದೊಳ್ ನಲಿದಾಡಿ ಬಟಿಕ್ಕ ಯೌವನಂ ಮೊಳೆವುದುಮಾರುಮಂ ಬಗೆಯದಾ ನೃಪನೊಳ್ ಸಿರಿ ಕೂರ್ತು ಬಂದು ಕೋಮಳೆ ನೆರೆದಿರ್ದಳ್ (ಕಾವ್ಯಸಾ. ೨೦೭). ೨. ಬಹಳ ಹಿಗ್ಗು ; ತುಂಬ ಸಂತೋಷಪಡು : ನೆರೆ ಶುದ್ಧಾಂತ ಕಾಂತೆಯರ್ ನೆರೆದೊಸಗೆಯಂ ಮಾಡೆ ವೃದ್ಧಕಂಚುಕಿಗಳೀದವರೊಡನೆ ನಲಿದಾಡೆ (ಅಜಿಪು. ೪-೭೮ಗಳ) ; ತಿರಿಕಂ ನಿಧಿವಡೆದಂತೆ ನಲಿದಾಡುಗುಮಂತಿರೆ ಜನಪದಾಬ್ಬಸೇವನೆ ದೊರೆಕೊಳೆ ಸಂಸಾರಿ ನಲಿವುದೊಲುಂವಡೆ ಸುಖವಂ (ಸಮಪ. ೧-೧೦೨) ; ಶರಣರ ಸಂಗದಲ್ಲಿ ನಲಿದಾಡು ಕಂಡೆಯಾ ಎಲೆ ಮನವೇ (ಮಹಾದೇ. ಬ. ೭೯-೧೯೩) ; ಭೋಯೆಂದಾಗಲರಸಂಚಿಗಳುಮಳಿವಿಡುಗಳು ನಲಿದಾಡೆ (ನಳಚ. ೧-೩೭). ೩. ಸಂತೋಷದಿಂದ ಕುಣಿದಾಡು,–ನೃತ್ಯಮಾಡು : ನಭದೊಳ್ ನಲಿದಾಡುವ ಸೋಗೆನವಿಲ್ಗಳ ಪಿಂಡುಗಳುಮಂ (ಶಂಕತಂ. ೦೦೮-೧೧) ; ಆಡುವ ನಲಿದಾಡುವ ನಡೆ ನೋಡುವ ಕೊರಲಪ್ಪಿಕೊಳ್ವ . . . ಬಾಳಕ್ರೀಡೆಗಳಂ ನೋಡುತಿರ್ಪುದೊಂದಿರವಲ್ತೆ (ಸುಕುಮಾ. ೯-೧೧೦) ; ಹುಲಿ ನಲಿದು ನಿಲುಗಿಸಿ ಗೆಜ್ಜೆಗಟ್ಟಿ ನಲಿದಾಡಿತ್ತು (ಆದವ. ೧೫-೩೩) ; ನಾರದನು ನಲಿದಾಡಿದನು ಗಗನದಲಿ (ತೊರರಾ. ೪-೧೨-೩೭) ; ನಲಿದಾಡೆ ಎನ್ನ ನಾಲಿಗೆ ಮೇಲೆ ಸರಸ್ವತಿದೇವಿ (ಪುರಂದ. ೦-೧೯೧ ಪಲ್ಲವಿ) ; ಲಕ್ಷ್ಮೀ ನನ್ನ ಮನೆಯಲ್ಲಿ ನಲಿದಾಡುತ್ತಿದ್ದಾಳೆ (ಕಂಬಹು. ೧೩೪); ಅವಳ ತಲೆಯಲ್ಲಿ ಹಿಂದಿನ ಎಷ್ಟೋ ಘಟನೆಗಳು ನಲಿದಾಡಿದವು (ಹಳ್ಳಿಹಾ. ೧೧೬). ನಲಿನಲಿದಾಡು = ೧. ಚಲಿಸಿ ಸುತ್ತು : ಆತನ ಮನೆಯ ಮುಂದೆ ನಭದೊಳ್ ನಲಿನಲಿದಾಡುವ ಜಂತ್ರದ ವಿಮಾನನೆಚ್ಚನುಮಾತೆಗೆ ಗಂಡನಕ್ಕುಂ (ಶಂಪಭಾ. ೩-೩೨ ವ). ೨. ಬಹಳ ಸಂತೋಷಪಡು, –ಹಿಗ್ಗು : ಜಾಲಗಾಱನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಯ ಕೊಂದು ನಲಿನಲಿದಾಡುವ (ಮಹಾದೇ. ಬ. ೪೭-೧೦೯) ; ಆನಂದದಿಂದ ನಲಿನಲಿದಾಡುವೆ (ಬಸವ. ೩೭೭).

[ ದೇ.೩ ತುಳು. ಕೊಡ. ನಲಿ; ಕುರುಖ್. ನಲ್ನಾ ]

ನಲಿ₂, ನಳಿ₄ (ನಾ). ಒಂದು ಬಗೆಯ ಸುಗಂಧ ದ್ರವ್ಯ : "ನಳಿಯೆಂಬ ಗಂಧ-ನಟ, ನಲಿ" (ನಾಚಿರಾ. ೬) ; "ಸುಷಿರಾ, ವಿದ್ರುಮಲತಾ, ಕಪೋತಾಂಘ್ರಿ, ನಟೀ, ನಲೀ, ಧಮನೀ, ಅಂಜನಕೇಶೀ – ೭ ನಳಿ ಎಂಬುವ ಗಂಧದ್ರವ್ಯದ ಹೆಸರುಗಳು ; ಗೂಪಗುತ್ತಿಗೆ" (ನಿಘಂಟು.ಶಿ. ೦೨೪). ನಳಿ₄ : ಮೇಲಿನ ಪ್ರಯೋಗಗಳನ್ನು ನೋಡಿ. [ ಸಂ. ನಲೀ ]

ನಲಿಗಚ್ಚು 'ನಲಿಗರ್ಚು₂' ನೋ.

ನಲಿಗರ್ಚು₁ (ಕ್ರಿ). ಪ್ರೀತಿಯಿಂದ ಕಚ್ಚು : ಅ ಶುಕಶಿಶುಪ್ರಕರಚಂಚುಪುಟಸಂಚಯಮಂ ಚೂತಕಳಿಕಾಕುಳಮೆಂದು ನಲಿಗರ್ಚಲೆಂದವ್ವಳಿಪ ಕಲಕಂಠಬಾಲಕಂಗಳುಂ (ಕುಸುಮಾ. ೨-೭೧ ವ) ; ಕಳಿಕೆಗಳಂ ಪಿಕಾಳಿ ನಲವಿಂ ನಲಿಗರ್ಚುತುಮುನ್ಮದಾಳಿಸಂಕುಳಮಲರ್ಗೋಂಚಲಂ ತು ಡು ಕು ತ ಂ ತನಿವಣ್ಗಳ ಸಾರಮಂ ಶುಕಾವಳಿ . . . ಪೀರುತುಂ ವಿಳಸಿತ ಚುಂಬನಾಭಿನಯಮುಂ ನೆಱೆ ತೋರ್ಪವೊಲಿರ್ದುದಾಮ್ರದೊಳ್ (ಕುಸುಮಾ. ೩-೬೪). [ ನಲಿ₁ + ಕರ್ಚು₁ ]

ನಲಿಗರ್ಚು₂, ನಲಿಗಚ್ಚು (ನಾ). ಪ್ರೀತಿಯಿಂದ ಕಚ್ಚಿದುದು ; ದಂತಕ್ಷತ : ನಲಿಗರ್ಚಂ ನಖರೇಖೆಯುಂ . . . ಮೆಯ್ಯೊಳ್ಪೊಱೆ ರತಾಲಯಾಂಗಣದೊಳೊಪ್ಪಿರ್ದಳ್ ಸಿಱಿ . . . ಸಿಂದಿರ್ದಳ್ (ಸೂಕ್ತಿಸು. ೧೪-೭೪). ನಲಿಗಚ್ಚು : ನಲಿಗಚ್ಚು ಕಟ್ಟಿ ಕಡಿಯಾಗಡೆಯಾಳನೆ ಸೀಳ್ದು ಸಿಱುಂಬಳಾಡದಂಬದೆ ನೆಱನೆಂದು ಭಾವದೊಳೆ ಬಲ್ಮುವ ಸೋಂಬೆಯನಿಕ್ಕು ಕಚ್ಚಿನೊಳ್ (ಸೂಕ್ತಿಸು. ೮-೪೩೪). [ < ನಲಿಗರ್ಚು₁ ]

ನಲಿಗಱಿ (ನಾ). ಪ್ರೀತಿಯಿಂದ ಕಚ್ಚಿದುದರ ಕಲೆ ; ದಂತಕ್ಷತದ ಗುರುತು : ನುಂಗಿಯುಂಗುಟ್ಟುಒಲಿಯುರ ದಶನಂಗಳ ನಲಿಗಱಿಗಳಲ್ಲದೆಳ್ಳಿಕ್ಕಿಲ್ಲಂಗವೆನೆ ಸಂದ ಸೊಬಗಿನ ಜಂಗಮಶಾಸನವೆನಿಪ್ಪ ಸುರತವಿಳಾಸಂ (ಅನಂಪು. ೦-೫೮). 'ನಲಿಗರ್ಚು₂' ಪರಾ. [ ನಲಿ₁ + ಕಱಿ₂ ]

ನಲಿಗೆದಱು (ಕ್ರಿ). ಸಂತೋಷದಿಂದ ಕೆದಕು,–ಬೆದಕು : ಕದಲೆಗದಿರನುರದಿಸುರವಣಿಸಿ ನೆತ್ತಿಯಿಂ ಪೊತ್ತು ನೆಗೆದು ಚಂಚುಪಿಂ ಚಲ್ಲೆವೊಯ್ದು ನಖದಿಂ ನಲಿಗೆದಱಿ ಕೋಡಗಗಳಿನಿಂದಿರ್ದುದು (ಅನಂಪು. ೬-೮೦ ವ).

[ ನಲಿ₁ + ಕೆದಱು₁ (< ಕೆದಱ್₁) ]

**ನಲಿತ** (ನಾ). ನಲಿಯುವಿಕೆ ; ಕುಣಿದಾಟ : ಒಲಿತ. ಅಲಿತ. ನಲಿತವೊ ! ಎಲ್ಲಿ ಇದನು ಕಲಿತವೊ ? (ಸೂರ್ಯಕಾ. ೧೧೩-೧೧). [ ನಲಿ$_1$ + - ತ$_2$ ]

**ನಲಿನ**, ನಳಿನ (ನಾ). ೧. ತಾವರೆ; ಕಮಲ. ೨. ನೀರು ಹೂವು; ಆವಲು. ೩. [ಜೈನ] ಕಾಲವನ್ನು ಅಳೆಯುವ ಒಂದು ಪ್ರಮಾಣ : ಇದೇ ರೀತಿ ಎಂಬತ್ತನಾಲ್ಕು ಮತ್ತು ಎಂಬತ್ತನಾಲ್ಕುಲಕ್ಷ ಗಣಿತ ಕ್ರಮದಿಂದ ಕುಮುದಾಂಗ ಮತ್ತು ಕುಮುದ, ಪದ್ಮಾಂಗ ಮತ್ತು ಪದ್ಮ, ನಲಿನಾಂಗ ಮತ್ತು ನಲಿನ . . . ಎಂಬಿವು ಕ್ರಮದಿಂದ ಆಗುತ್ತವೆ (ಜೈನಶ. ೩೦೬). **ನಳಿನ** : ೧. "ಸಹಸ್ರಪತ್ರಂ, ಶತಪತ್ರಂ . . . ಅಬ್ಜಂ, ನಳಿನಂ, ಪುಷ್ಕರಂ, ರಾಜೀವಂ, ಅರವಿಂದಂ, ಪದ್ಮಂ, ಪಂಕಜಂ-ಈ ೧೭ ತಾವರೆ" (ಹಲಾಯು. ೧೧೩-೩೭) ; ವಿಜೃಂಭಮಾಣ ನವನಳಿನಪರಿಕರಾಸ್ಯಪ್ಪ ಮಧುಕರ ರಮಣೀಯಮುಂ . . . ಧರಾತಳಮುನುತ್ಫುಲ್ಲ ಪಲ್ಲವ ಲೀಲಾಯಮಾನ ಮತ್ತ ಕೋಕಿಲೋಲ್ಲಾಸಿತ ಶೀಕರೋದ್ದಾಮ ದುರ್ದಿನ ವನವನಿಯುಮುದು (ಚಂಪರಾ. ೫-೧೦ ವ) ; ಅವನತಾರಾತಿನೃಪ ಮಣಿಮಯ ಕಿರೀಟಪ್ರಭಾಲೀಢ ಚಳನನಳಿನಯುಗ್ಮಂ (ಸುಕುಮಾ. ೧-೬೯ ವ) ; ನಳಿನದ ಕರ್ಣಿಕೆಯೊತ್ತಿನೊಳ ಳವಡೆ ಕಣ್ಮುಚ್ಚಿ . . . ನಿದ್ರಾಸುಖದಿಂ ಕಳಹಂಸೆಯು ಮಱುಗಿರ್ಪುವು (೧೦೪. ೨-೩೩) ; ನಳಿನಂ ಕುಂದೆ . . . ಮೂಡಿದುದು ತೇಜೋಮಯದಿಂ ಚಂದಿರಂ (ರಾಜಶೇ. ೧೧-೯೩). [ ಸಂ. ]

**ನಲಿನಗರ್ಭ**, ನಳಿನಗರ್ಭ (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ. 'ನಲಿನಗರ್ಭಾಂಡ' ಪರಾ. **ನಳಿನಗರ್ಭ** : 'ನಳಿನಗರ್ಭಾಂಡ' ಪರಾ. [ ನಲಿನ + ಗರ್ಭ ]

**ನಲಿನಗರ್ಭಾಂಡ**, ನಳಿನಗರ್ಭಾಂಡ (ನಾ). ಬ್ರಹ್ಮಾಂಡ; ವಿಶ್ವ: ನಲಿ[ಪಾಠಾಂ. ೪]ನಗರ್ಭಾಂಡಂಗಳಂ ಬಗ್ಗಿದ ಘಟಗಳಕಾದಿಗಳೊಳಗೆಪಲತೆಬದ ಪಕ್ವಾನ್ನ ದಿವ್ಯಾನ್ನಂಗಳಂ ತೀವಿ (ಬಸವು. ೦-೩೭). **ನಳಿನಗರ್ಭಾಂಡ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ನಲಿನಗರ್ಭ + ಅಂಡ$_2$ ]

**ನಲಿನಜ**. ನಳಿನಜ (ನಾ). = ನಲಿನಗರ್ಭ. **ನಳಿನಜ** : ನಳಿನಜ ಹರಿ ವಾಸವ ನತಪದಪಂಕರುಹ ನವಿ ತ ಶುಭವಾಸಂ . . . ಗಳಲನೆ ಜಗದುದು ಸಲಹುಗೆ ಸಲೆ ತೋಟದ ಗುರು ನಿರುತವಿಲಾಸಂ (ಪಾರಾಶ್ಮ. ೩-೧-೨). [ ಸಂ. ]

**ನಲಿನದಲ**, ನಳಿನದಳ (ನಾ). ೧. ತಾವರೆಯ ಎಸಳು ; ಕಮಲದ ದಳ. 'ನಲಿನದಲಲೋಚನ' ಪರಾ. **ನಳಿನದಳ** : ೧. 'ನಳಿನದಳಲೋಚನ' ಪರಾ. ೨. ಕಮಲದ ಎಲೆ: ನಳಿನದಳದೊಳ್ ತೀವಿರ್ದಬ್ಬಿಯು ತಳ್ತಲರ್ವಾಸು . . . ಪೂಗಿಯು ರಾಗದಲಂಪನಗ್ಗಳಿಸೆ (ಪುಷ್ಪಪು. ೨-೯೩). 'ನಳಿನದಳಪುಟ' ಪರಾ. [ ನಲಿನ + ದಲ ]

**ನಲಿನದಲಲೋಚನ**, ನಳಿನದಳಲೋಚನ (ನಾ). ತಾವರೆಯ ಎಸಳಿ ನಾಕಾರದ ಕಣ್ಣುಳ್ಳವನು ; ವಿಶಾಲಾಕ್ಷ ; ಕೃಷ್ಣ : ಸುಧನ್ವನ ಶಿರವ ನೆರದುಕ್ಕಿಗೀಂ ನಲಿನದಲ[ಪಾಠಾಂ. ನಳಿನದಳ]ಲೋಚನಂ ಪಿಡಿದಿತ್ತುಕೊಂಡು ನೋಡಿದನು (ಜೈಮಿಭಾ. ೧೩ ೫೦). **ನಳಿನದಳಲೋಚನ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ನಲಿನದಲ + ಲೋಚನ ]

**ನಲಿನನಾಭ**, ನಳಿನನಾಭ (ನಾ). ಹೊಕ್ಕುಳಲ್ಲಿ ತಾವರೆಯುಳ್ಳವನು ; ಪದ್ಮನಾಭ ; ವಿಷ್ಣು : ನಲಿ[ಪಾಠಾಂ. ೪]ನನಾಭನ ಮಗನ ಕರ್ಣಗಣಗಳ ನನುಬಳಿ ತೋಳತೊಳಗುವವು . . . ವಿಶಾಲವಿಲೋಚನದ್ವಯವು (ಬಸವು. ೪ ೨೬). **ನಳಿನನಾಭ** : ನಳಿನನಾಭನ ಮಧುರವಾಣೀಲುಳಿತಪರ ಮಾಶೀರ್ವಚನಪರಿಕಲಿತ ಕಪಟಕಿರಾಯು ಪಾಂಡವರಾಯ ಹೊಱವಂಟ (ಕುಮಾರರಾ. ೧ ೩) ; ನಳಿನನಾಭನ ನೀನು ಪಾತೂ ಬೇಗ ಒಳಕಣ್ಣೊಳದ ಲವನ ಕಂಡು ನಲಿದಾಡೊ (ಪುರಂದ. ೨-೩೨೯ ಪಲ್ಲವಿ). [ ಸಂ. (ನಲಿನ + ನಾಭಿ + -) ]

**ನಲಿನಬಾಂಧವ** (ನಾ). ತಾವರೆಯ ಮಿತ್ರ ; ಸೂರ್ಯ. [ ನಲಿನ + ಬಾಂಧವ ]

**ನಲಿನಭವ**, ನಳಿನಭವ (ನಾ). = ನಲಿನಗರ್ಭ. 'ನಲಿನಭವಾಂಡ' ಪರಾ. **ನಳಿನಭವ**: ಆಕ್ಷಣ ನಳಿನಭವ ತಾನಂದು ಕೊಟ್ಟನು ಕಶ್ಮಪಾತ್ಮಜನೆಂದ ವರಗಳ (ಸಂಭಪು. ೮-೧೦) ; ಆ ನಳಿನಭವ ಶಂಕರರ ಸುಮ್ಮಾನವಾಯ್ತಾ ಸಕಲ ವಾನರಸೇನೆಗಿಂದ್ರಾದಿಗಳು ಸೇವಕರಾಯ್ತು ಪಯಣದಲಿ (ತೊರರಾ. ೬-೬-೯): ಹರಿಹರ ನಳಿನಭವರಾರಾಜ್ಞೆಯಿಂ ಲಯ ಸೃಷ್ಟಿಗೈಯು ವರು (ಗಗಕಾ. ೧೩-೬೯). [ ಸಂ. ]

**ನಲಿನಭವಾಂಡ**, ನಳಿನಭವಾಂಡ (ನಾ) = ನಲಿನಗರ್ಭಾಂಡ : ಅವಿಭಗವಿಸಿ ನಲಿ[ಪಾಠಾಂ. ೪]ನಭವಾಂಡನಿಚಯಮುಮನುರುಪುತುರವಣಿಸಿ ಕವಿದ ವಿಷಮಂ ನುಂಗಿದನು ಮಾಪುವರನೆನಲು (ಬಸವು. ೧೩-೨). **ನಳಿನಭವಾಂಡ** : ರಾಘವನನುಜನಗ್ಗದ ಚಾಪಪಮೌರ್ವೀನಿನದವನು ನೆಗಹಿದನು ನಳಿನಭವಾಂಡ ಗುಮ್ಮಿಡಲು (ತೊರರಾ. ೬-೯೩-೯). [ ನಲಿನಭವ + ಅಂಡ$_2$ ]

**ನಲಿನಮಿತ್ರ** (ನಾ). = ನಲಿನಬಾಂಧವ. [ ನಲಿನ + ಮಿತ್ರ ]

**ನಲಿನಮುಖಿ**, ನಳಿನಮುಖಿ (ನಾ). ಕಮಲದಂತೆ ಮುಖವುಳ್ಳವಳು ; ಚೆಲುವೆ : ತನ್ನನಿಯನಂ ನೋಡಿ ನಲಿ[ಪಾಠಾಂ. ೪]ನಮುಖಿ ನಗುತಂ (ಬಸವು. ೪೭-೨೩). **ನಳಿನಮುಖಿ** : ನಳಿನಮುಖಿಯರ ಸಕಲ ಸೃಷ್ಟಿಗೆ ಕಳಸವಿದು (ಕುಮಾಅ. ೧೩-೨೩) ; ಚೆಲುವೆಯೋರ್ವಳು ಬಂದು ಹೊಳೆಯೊಳಗೆ ಈಜಾಡಿ ನಲಿವುದನು ನೋಡಿ ನಳಿನಮುಖಿಯನು ಮೇಲೆ ಕರೆಸಲು (ಪುರಂದ. ೩-೦೫೦-೩). [ ಸಂ. ನಲಿನಮುಖೀ ]

**ನಲಿನಲೋಚನೆ**, ನಳಿನಲೋಚನೆ (ನಾ). ತಾವರೆಯೆಸಳಿನಂತೆ ಕಣ್ಣುಳ್ಳವಳು ; ಸುಂದರಿ : ನಲಿ[ಪಾಠಾಂ. ೪]ನಲೋಚನೆಯನೊರ್ವಳನೊಸೆದು ವಿಂಗೆ ಕೊಟ್ಟು (ಬಸವು. ೨೫-೯). **ನಳಿನಲೋಚನೆ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. ನಲಿನಲೋಚನಾ ]

**ನಲಿನವೈರಿ**, ನಳಿನವೈರಿ (ನಾ). ತಾವರೆಯ ಶತ್ರು ; ಚಂದ್ರ : (ಶ). **ನಳಿನವೈರಿ** : ನಳಿನವೈರಿಯ ಸುಳಿವು ತನ್ನಯ ಕೊಲೆಗೆ ಒಂದುದು (ಕುಮಾವಿ. ೨-೩೨). [ ನಲಿನ + ವೈರಿ ]

**ನಲಿನಸಂಭವ**, ನಳಿನಸಂಭವ (ನಾ). = ನಲಿನಗರ್ಭ : ನಲಿ[ಪಾಠಾಂ. ೪]ನ ಸಂಭವಲಿಖಿತದುರ್ಲಿಪಿಗಳನೊರಸಿ (ಬಸವು. ೪೯-೩೬). **ನಳಿನಸಂಭವ** : ಕೃಪಾಳುವನೊಲಿದು ಹೂಗಳದನಜನು ವೇದಸಹಸ್ರಸೂಕ್ತದಲಿ ಬಳಿಕ ಕಾರುಣ್ಯದಲಿ ನಾಭೀನಳಿನದಲಿ ತೆಗೆದನು ವಿರಿಂಚಿಗೆ ನಳಿನಸಂಭವನೆಂಬ ಹೆಸರಾಯ್ತೆಂದು ಮೊದಲಾಗಿ (ಕುಮಾಅ. ೦೯-೪೦). [ ನಲಿನ + ಸಂಭವ ]

**ನಲಿನಸಖಿ**, ನಳಿನಸಖಿ (ನಾ). = ನಲಿನಬಾಂಧವ : ಘನಜಿನಭವನದ ನಲಿ[ಪಾಠಾಂ. ೪]ನಸಖನುದಯಕ್ಕೆ ಮುನ್ನವೆ ಗೋಡೆಗಳುವೆರಸಿ ನೆಲನ ಸರಿಸಕೆ ಬಿದ್ದು (ಬಸವು. ೩೨-೩೩). **ನಳಿನಸಖ** : ನಳಿನಸಖಕೋಟಿತೇಜದ ಮಿಱುತೇಬವನ ಚರಣಾಂಬುಜಕ್ಕೆ ಶರಣು (ಲಕಿತಂ. ೧೦-೬) ; ನಳಿನಸಖ ನವರಾಂಬುರಾಸಿಯ ನಿಲುಕುತ್ತೆದನೆ ಹಸಿದುದಿ: ಮನಿಬಳಗವಾರೋಗಣೆಗೆ ಚಿತ್ತವಿಸೆಂದ ಯಮಸೂನು (ಕುಮಾಅ. ೦೬-೪೭). [ ಸಂ. (ನಲಿನ + ಸಖ + - ) ]

**ನಲಿನಾಂಗ** (ನಾ). [ಜೈನ] ಕಾಲವನ್ನು ಅಳೆಯುವ ಒಂದು ಪ್ರಮಾಣ : ಇದೇ ರೀತಿ ಎಂಬತ್ತನಾಲ್ಕು ಮತ್ತು ಎಂಬತ್ತನಾಲ್ಕುಲಕ್ಷ ಗುಣಿತ ಕ್ರಮದಿಂದ ಕುಮುದಾಂಗ ಮತ್ತು ಕುಮುದ, ಪದ್ಮಾಂಗ ಮತ್ತು ಪದ್ಮ, ನಲಿನಾಂಗ ಮತ್ತು ನಲಿನ . . . ಎಂಬಿವು ಕ್ರಮದಿಂದ ಆಗುತ್ತವೆ (ಜೈನಶ. ೩೦೬). [ ನಲಿನ + ಅಂಗ$_2$ ]

**ನಲಿನಾಕ್ಷ**, ನಳಿನಾಕ್ಷ (ನಾ). ೧. ತಾವರೆಯ ಎಸಳಿನಂಥ ಕಣ್ಣುಳ್ಳವನು ; ಚೆಲುವ ; ಸುಂದರ. ೨. ವಿಷ್ಣು ; ಕೃಷ್ಣ : (ಶ). **ನಳಿನಾಕ್ಷ** :

೨. ನಳಿನಾಕ್ಷನ ಪದಪದ್ಮಕಿಗಳ ಬಟ್ಟೆಯೊಳಲಕ್ತಕಾಂಕ ಪದಪದ್ಮಕಿಗಳ್ ಪೊಳೆವುವು (ಜಗವಿ. ೩-೨೬) ; ನಳಿನಾಕ್ಷ ನಿನ್ನ ಮಾಱಿಯ ಹೊಕ್ಕು ತಬಿಸಲು ಒಲಿದು ಧ್ರುವಗೆ ನಿಜಲೋಕಪಿತ್ರವನು (ಪುರಂದ. ೨-೦೦೯-೩) ; ನಳಿನಾಕ್ಷನಿಲ್ಲ ದಧ್ವರಕಾಪಕ್ರಮಿಸೆ ನಡೆಯದು (ಕೃಮಿಕಾ. ೨-೯೫).

[ಸಂ. (ನಲಿನ + ಅಕ್ಷಿ + –) ]

**ನಲಿನಿ, ನಳಿನಿ** (ನಾ). ೧. ತಾವರೆ ; ಕಮಲ. ೨. ತಾವರೆಗಳಿಂದ ತುಂಬಿರುವ ಕೊಳ ; ಕಮಲಗಳು ಹೆಚ್ಚಾಗಿ ಇರುವ ಸ್ಥಳ. ೩. ತಾವರೆಯ ದಂಟು, –ನಾಳ. **ನಳಿನಿ** : ೧. ನಳಿನಿಯು ಬಿರಿಮುಗುಳೊಳ್ಪಾಯ್ವಳಿಕಳಭಂ ಬೊಡು ನೆಗೆದು ಬಂಡುಣ್ಬವೊಲ್ . . . ಯಶೋದೆಯ ಮೊಲೆಯುಂಡಂ ನವತಮಾಲಕೃಷ್ಣಂ ಕೃಷ್ಣಂ (ಅರ್ಧನೇ. ೬-೫೫); ನಳಿನಿಯನಪ್ಪಿ ತುಂಬಿಗುರುಳಿಂ ನೆಱೆ ನೇರ್ಪಡೆ ತಿರ್ದಿ . . . ಅದೇಂ ಸುಳಿದುದೊ ಮೆಲ್ಲನಾಳ್ದವೊಲತಿ ಶ್ರಮಮಂ ಪನಮಂದಮಾರುತಂ (ಕಬಕಂ. ೦-೫೩). ೨. ನಳಿನೀತೀರ ಲತಾಗೃಹಂಗಳ ನೆಟಲ್ ನೇರ್ಪಟ್ಟಿರಲ್ ಪಟ್ಟು . . . ಪಥಾರ್ತರಿರ್ಪರ್ (ಜಗವಿ. ೯-೪೮). ೩. ನಳಿನಿಯ ನಳಿನಮನಿನನಾಳಿಪಂತಿರೆ ಕರದೆ ಪಧುವ ಕರಮಂ ಕರದಿಂ ತಳೆದಂ ಕುಮಾರನಾದ್ರಾಂಗುಳಿದಳಕಂಟಕಿತಬಾಹು ನಾಳಾನ್ವಿತಮಂ (ಚಂದ್ರಪು. ೬-೬೪). ೪. ತಾವರೆಯ ಗಡ್ಡೆ : "ಕಂದಃ, ಬಿಸಿನೀ, ನಳಿನೀ – ಈ ೩ ಅವಱ ಗಡ್ಡೆ" (ಹಲಾಯು. ೦೦೨-೬೦).

[ ಸಂ. ನಲಿನೀ ]

**ನಲಿನೀಮಿತ್ರ, ನಳಿನೀಮಿತ್ರ** (ನಾ). =ನಲಿನಬಾಂಧವ: ಸರೋಜಾಸನಂ ನಲಿ [ಪಾಠಾಂ. ೪]ನೀಮಿತ್ರ ಸುಪರ್ವರೆಂಬಿವು ವಿಪಸ್ತಂತ್ರಾಹ್ವಯಂ (ಪಾನಾರ. ೦೧೧) . **ನಳಿನೀಮಿತ್ರ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. ]

**ನಲಿಪ** (ನಾ). ಸಂತೋಷ ; ಆನಂದ ; ಉಲ್ಲಾಸ : ಕುಟುಕಿನಿಂದಾಹಾರಮಂ ಸ್ಥಾನದಿಂ ನೆಲೆಯುಂ ಕೂಟಮಂ ನಲಿಪದಿಂದಂ ನಲ್ಮೆಯುಂ ಗೆಲ್ಲದಿಂ ಗೆಲವಂ . . . ಪೇಟೆಲ್ಲಿಯುಂ ತದ್ವಿದಂ (ಲೋಕೋಪ. ೧೨-೬). [ ನಲಿ$_1$ + –ಪ$_2$ ]

**ನಲಿಬಾಳು** (ನಾ). ಸುಖಮಯವಾದ ಜೀವನ ; ಸಂತೋಷದ ಬದುಕು : ಕಂಡೊರೆ ನುಂಗುವ ಜವನನ್ ಕಂಡರ್. ಈ ನಲಿಬಾಳನ್ ಕಡೆ ಬೀಳ್ಕೊಂಡರ್, ಬಯಲಾದರ್ (ಪಾಕಸಿ. ೩೬-೫೩೪).

[ ನಲಿ$_2$ + ಬಾಳು$_2$ (<ಬಾಟ್$_2$) ]

**ನಲಿಯಿಸು, ನಲಿಸು** (ಕ್ರಿ). ೧. ಸಂತೋಷಗೊಳಿಸು ; ಉಲ್ಲಾಸಗೊಳಿಸು : ಆ ವಿಶ್ವೇಶ್ವರನ ಮನೋಮಧುಕರಮಂ ತಮ್ಮ ಮುಖಾರವಿಂದದೊಳ್ ನಲಿಯಿಸಿಯುಂ (ಅದಪು. ೮-೨೪ ವ).; ಶ್ರೀಯೆರ್ದೆಗೊಂಡಿರೆ ಮುನ್ನಿಟ್ಟಿದಾ ಯೆಳೆಯ ನೆಗಪಿ ದಾಡೆಯಿಂ ನಲಿಯಿಸಿದಾ ಮಾಯಾವರಾಹನಖಿಲಶ್ರೀಯಾವು ನೊಲ್ದೀಗೆ ವೀರನರಪತಿಗೀಗಳ್ (ಚಳವಿ. ೪-೦) ; ಈ ವರದ ಕರಮೆ . . . ನಮುಮಲರ್ದ ಲಸಜ್ಜೀವನಜಾತದ ಗರ್ಭದ ಭಾವನೆಯಂ ಬಗೆಗೆ ತಂದು ನಲಿಯಿಸುವೆಮ್ಮಂ (ಪಶ್ಚಪ. ೮). ೨. ಅರಳಿಸು ; ಪ್ರಫುಲ್ಲಗೊಳಿಸು : ನಲಿಯಿಸುಗೆಯ್ದು ಮತ್ತ್ಯಕುಮುದ್ವತಿಯಂ ಕಳೆಗುಂದದಾವಗಂ ನಲುಗದ . . . ಕಂದನಾನದೀ ಬಲಮುರಿಸುಕುಮೆಯ್ಯವರೆ ಮೈವೆಯವಾಂತ ನವೀನಚಂದ್ರಮಂ (ಚಳವಿ. ೦-೬). **ನಲಿಸು** : ೧. ಮಿತ್ರಂ ಮದಯತಿ ಗೆಳೆಯನಂ ನಲಿಸಿದಪಂ(ಶಾಕಕ್ಕ. ೧-೫೩). [ ನಲಿ$_1$ + – ಇಸು$_3$ ]

**ನಲಿವರಿ** (ಕ್ರಿ). ಹಿಗ್ಗಿನಿಂದ ಓಡಾಡು ; ಸಂತೋಷದಿಂದ ಓಡಾಡು ; ಸಡಗರಿಸು : ಪಲದಿವಸಕ್ಕಂತಾನುಂ ಕಲಹಂ ದೊರೆಕೊಂಡುದೆಂದು ಕೆಲಬರ್ ಬಿಲ್ಲಂ ಗೋಲೆಗೊತ್ತಿ ಕೀಪಿ ತೆಗೆದೇಂ ನಲಿವರಿದುದೊ ಜವನ ದೂತರೆನಿಸಿ ಕಿರಾತರ್ (ಪಂರಾಮಾ. ೪-೫೬) ; ಸಿರಿಸದ ಬಾಸಿಗದೊಳ್ ನಲಿವರಿದಾಡುವ ತುಂಬಿಯಂತೆ ಪಾಣ್ಬನ ಕಣ್ಗಳ್ ಪರಿಮಳಿಯಾಡಿದುವು ತನೂದರಿಯ . . . ದೋರ್ವಲ್ಲರಿಯೊಳ್ (ಪಂರಾಮಾ. ೯-೮೦) : ನಲಿವರಿದು ನವೀನವೆನಲ್ ಜಲಜಾಕ್ಷನ ಮುಂದೆ ಕುಣಿದು (ಕುಮಾಸೇ. ೬-೩೪) : ಮೆಲ್ಲು(ಳ್ಳು)ವಡೆದತಿವ್ಯಾಲತೆಯಿಂದೋದಿ ನಲಿವರಿದು ಬಲ ವರ್ಣಂದಾ ಮಾಱಿಗೆರಡು ತಿಂಗಳ್ (ಅಕ್ಕಶಾ. ೫-೪). 'ನಲವರಿ' ಪರಾ.

[ ನಲಿ$_1$ + ಪರಿ$_2$ ]

**ನಲಿವಾಱಿಸು** (ಕ್ರಿ). ಸಂತೋಷದಿಂದ ಹಾರಾಡುವಂತೆ ಮಾಡು : ಮದನದವಾಗ್ನಿತಪ್ತೆಯರ ಸುಯ್ಯ ನಖಂಪಚಮಾಗಿ ಬರ್ಪ ತಣ್ಗದಿರನೆಲರ್ಚೆ ಚಂಚುವಿನೊಳ್. . .ಉತ್ಪಲಾಗ್ರಪತ್ರದೆ ಪೊಗೆದೂಡಿಪಾಡಿ ನಲಿವಾಱಿಸಿ ತೋಱಿಸಿ ಸೋಂಕಿ ನೂಂಕಿ ಕೌಮುದಿಯೊಳದೇಂ ಚಕೋರಿ ಪಿಳ ಗಾಡಿಸಿದತ್ತೊ ನಿಜಾಗ್ರಶಾಬಮಂ (ಅನಂಪು. ೬-೮೧).

[ನಲಿವಾಱು$_1$ + – ಇಸು$_3$]

**ನಲಿವಾಱು$_1$** (ಕ್ರಿ). ಹಿಗ್ಗಿನಿಂದ ಮೇಲಕ್ಕೆ ಹಾರು ; ಸಂತೋಷದಿಂದ ಹಾರಾಡು ; ಆನಂದದಿಂದ ಏರು : ಇರ್ಪೋಡಿದ ಚಂಚುವಂ ತೆಱೆದೆಱಂಕೆ ನೆಱಿಲ್ದಿರೆ ಕಂಠನಾಳಮಂ ನೀಡಿ ವಿಯತ್ತಳಕ್ಕೊಗೆದು ಕಾರ ಮುಗಿಲ್ಪನಿಯಂ ಮನಂ ಕುಳಿರ್ಗೋಡುವಿನಂ ಕರ್ದುಕಿ ನಲಿವಾಱಿದುವಾಱಿದುವಂದು ಚಾತಕಂ (ಪಂರಾಮಾ. ೬-೧೪೬) : ಇಂತಿದು ಗಗನಕ್ಕೆ ನಾಡೆ ನಲಿವಾಱಿದದೊಂದು ಕಪೋತಮಂತುಮಲ್ತಿದು ಪರಿದಿರ್ದ ಪಾವಸೆ ಮುಗಿಲ್ಮಾಱಿಯೆಂಬಿನಮಿಂಬುಗೆಟ್ಟು ಕಂದಿದ ಪಟಗಂಚುಗನ್ನಡಿವೊಲೇನಿಟಿದಾದುದೊ ಚಂದ್ರಮಂಡಲಂ (ಚಂದ್ರಪು. ೯-೫) : ಚಕೋರಮಯೂರ ರಥಾಂಗ ಭೃಂಗಮಂಡಳಿ ನಲಿವಾಱಿದಪ್ಪುವು ತರಂತರದಿಂದೆನಿಸಿತ್ತು ಕಣ್ಗೆ (ಪರ್ದಪು. ೫-೨೮). [ ನಲಿ$_1$ + ಪಾಱು$_1$ ]

**ನಲಿವಾಱು$_2$** (ನಾ). (ಹಕ್ಕಿಗಳ) ಸಂತೋಷದ ಹಾರಾಟ ; ಸಂಭ್ರಮದ ಹಾರಾಟ. 'ನಲಿವಾಱುವಾಱು' ಪರಾ. [ ನಲಿ$_1$ + ಪಾಱು$_2$ ]

**ನಲಿವಾಱುವಾಱು** (ಕ್ರಿ). ಸಂತೋಷದಿಂದ ಹಾರಾಡು ; ಉಲ್ಲಾಸದಿಂದ ಹಾರಾಡು: ಒಸಗೆಗಳೆಂದು ಬಿಟ್ಟ ಶುಕಶಾರಿಕೆಗಳ್ ನಲಿವಾಱುವಾಱಿ ರಾಗಿಸಿದವಿ ತಾರಿನಾಪು ಪರಿಪಾಱಿಯನೋಳಿಯಿನೋದೆ ಕೇಳ್ದು (ಶಾಂತಿಪು. ೨-೪೮). [ ನಲಿವಾಱು$_2$ + ಪಾಱು$_1$ ]

**ನಲಿವು** (ನಾ). ಹಿಗ್ಗು ; ಸಂತೋಷ ; ಆನಂದ : ನಿನ್ನ ಸುಖವೇ ಸುಖಂ ನಿನ್ನ ನಲಿವೇ ನಲಿವು (ಶಂಬಿಕ. ೦-೬೧): ವ್ಯಾಗೀಬಾಳಕಜಾಲದೊಳ್ ನಲಿವಿನಂ ನೆಗೆದಾಡುತುಂ (ಪುಷ್ಪಪು. ೩-೯೬) ; ಪಲವುದಿನಂ ಮನಂ ಬಯಸಿ ಕಯ್ವಿಡಿದಂಗನೆಯಂಗಸಂಗದಿಂ ನಲಿವನನಾರತಂ ಪಡೆದು ರಾಜ್ಯಸುಖಂ ಸತತಂ ಸಲುತ್ತಿರಲ್ (ಪಳಪಂ. ೪೮೮) ; ನಲಿವು ಮಿಗೆ ತಾನವರಡಿಗಳಂ ತೊಳೆದು ಮದಿಸು ವೆಡೆಯೊಳು (ಬಸಪು. ೫೬-೩೩): ನಲಿವು ಹಿಂಗಿದ ತಾಯ ಕಂಗಳ ಜಲವ ಸೆಱಗಿನೊಳೊರಸಿದನು (ಕುವ್ಯಾಕೃಷ್ಣ. ಓರಿಇ. ಪರಿ. ೨೬೮) ; ನೋವು, ನಲಿವುಗಳು ಪರಮಾತ್ಮನ ಇಷ್ಟವೆಂದು ತಿಳಿಯುತ್ತದೆ (ಧರ್ಮಸಾ. ೮೬). 'ನಲವು' ಪರಾ. [ ನಲಿ$_1$ +– ವು ]

**ನಲಿಸು** 'ನಲಿಯಿಸು' ನೋ.

**ನಲುಗಂಟ** (ನಾ). ದಾನಂವಾರಂಗಳ ಮೇಲೆ ಹಾಕುವ ಒಂದು ಬಗೆಯ ಸಣ್ಣ ತೆರಿಗೆ : ಉಗ್ರಾಣ ಪಂಥಾನ ಬೆಡುಂಗೊಳು ಚಳಾಯ ದಾಯದೆಱೆ ಹಡುವರ ಬೀರವಣ ನಲ್ಲೆತ್ತು ನಲುಗಂಟ ನಲ್ಲಾವು ದಣ್ಣಾಯ ತಪ್ಪುಡೆಯೊಳಗಾದ ಸಮಸ್ತ ಕಿಱುಕುಡಪೆಲ್ಲಮಂ . . . ಧಾರಾಪೂರ್ವ್ವಕಂ ಮಾಡಿ (ಎಕ. V, ಬೇಲೂರು. ೫೯-೮೬ ; 1117). [<ನಲ್ + ಗಂಟ$_1$ ]

**ನಲುಗಿಡು** (ಕ್ರಿ). ಅರಿಸಿನ, ಕುಂಕುಮ ಮುಂತಾದುವುಗಳಿಂದ ಪಾದದ ಮೇಲೆ ಚಿತ್ರವನ್ನು ರೇಖಿಸು : ದಿನಾಂತದಲಿ ನದಿಯ ದಂಡೆಯನ್ನು ನಾವ್ ಸೇರಿ ಬಳಿಮಳಲಮಧ್ಯದಲಿ ನಲುಗಿಟ್ಟುದನ್ನು ಕಿಳನೀರ ವಾಹಿನಿಯು ಹರಿವುದೊ ನಿಂದಿಹುದೊ ಬಳಿ ಸೇರಿ ಪರಿಕಿಸುವೆವೆಂದು ಹೋದುದನು (ವಿಸೀಗೀ. ೭೯-೦೨). [←ತಮಿ. ನಲಙ್ಕಿಟು ]

**ನಲುಗಿಸು** (ಕ್ರಿ). ೧. ಸುಕ್ಕುಗೊಳಿಸು; ಮುದುರಿಸು; ಮುದುಡಿಸು: ಹೂವನ್ನು ಅಷ್ಟು ಗಟ್ಟಿಯಾಗಿ ಹಿಡಿದು ನಲುಗಿಸಬೇಡ (ಕೂಡಿ). ೨. ಸೊರಗುವಂತೆ ಮಾಡು; ಕೊರಗಿಸು; ಶೋಷಿಸು: ಈ ರೀತಿಯಲಿ ಮಱುಗುತಲನುದಿನವು ತತ್ಪಾಂಡುನೃಪನಂದನರು ದುಃಖದಿ ರಾಜಭೋಗಂಗಳನು ನೆಱೆ ಬಿಟ್ಟು ತನುವ ನಲ[ಲು]ಗಿಸಿಕೊಂಬರು (ತಿಮ್ಮಕ್ರಿ. ೩-೦೯); ಒಕ್ಕಲನು ನಲುಗಿಸದೆ ಲೆಕ್ಕವನು ಸಿಕ್ಕಿಸದೆ ಕಕ್ಕುಲತೆಯಿಂದ ನಡೆಯಿಸುವ ಅರಸು ತಾ ಚಕ್ಕಂದವಿರುವ (ಸರ್ವಜ್ಞ. ೭೫೭); ಹೊಟ್ಟೆಗೆ ಹಾಕದೆ ನಲುಗಿಸಿದ್ದಾಳೆ ಅಂತಾ ಸಾರಿಕೊಂಡು ಬಂದಾರು! (ನೀಪಾನಿ. ೯೮).

[ನಲುಗು$_1$ + -ಇಸು$_3$]

**ನಲುಗು$_1$** (ಕ್ರಿ). ೧. ಸುಕ್ಕುಸುಕ್ಕಾಗು; ಮುದುರು: ಬಟ್ಟೆಯ ಮಡಿ ನಲುಗದಂತೆ ತೆಗೆದುಕೊಂಡು ಬಾ (ಕೂಡಿ). ೨. ಅಲ್ಲಾಡು; ಅಲುಗು; ಸ್ಪಂದಿಸು: ಆವೇಶ ಅಂಗಾಂಗ ತುಂಬಿ ನರನರ ನಲುಗಿ ಅಲುಗಿ ಗೊಂದಣ ತಾಂಡವಲಾಸ್ಯ ನೃತ್ಯದಲ್ಲೀ (ಸೂರ್ಯಪಾ. ೪-೧); ಬೇಗ ಬೇಗ ಹೆಜ್ಜೆ ಹಾಕಿದಾಗ ಎದೆ ನಲುಗಿ ನಲುಗಿ ಕುಬುಸದ ಮಧ್ಯೆಯ ಗುಬ್ಬಿ ಕಳಚಿಹೋಗಿದ್ದಕ್ಕೆ . . . 'ಪಿನ್ನ'ನ್ನು ಹಾಕಿ 'ಫಿಟ್' ಮಾಡಿದಳು (ಹೊಸಕ್ಕ. ೪೭). ೩. ಒಯ್ಯಾರ ಮಾಡು; ಬಳುಕು: ಕುಟ್ಟುವ ಸೆವದಿಂದ ರಟ್ಟೆಯನು ತಿರುಹುವಳು ನಿಟ್ಟಿಸಿ ನಲುಗಿ ಹಾಡುವಳು ಹಾದರದ ಮೊಟ್ಟೆ ಕಾಣಯ್ಯ (ಸರ್ವಜ್ಞ. ೦೮೪೦); ರತ್ನಾ ಮತ್ತ ನಾಚುತ್ತ ನಲುಗುತ್ತ ಎರಡು ಎಡಾ ತಂದಿಟ್ಟು ಹೋದಳು (ಗಂಮಾಯಿ. ೫೭). ೪. ಕಷ್ಟಕ್ಕೆ ಗುರಿಯಾಗು; ಬಾಡು; ಕಂದು: ಶಾಕಸಂಘಾತದೊಳ್ ಸಿಕ್ಕಿರ್ದ ಕೋಗಿಲೆಯ ಮಱಿಯಂತೆ ನಲುಗಿ ಕತ್ತಲೆಯೊಳಿರ್ದ ಶೀತಳಮರೀಚಿಲಾಂಛನದಂತೆ . . . ಬಾಲಕನಿರ್ದನವರೆಡೆಯೊಳಂಜುತಳುತ (ಪ್ರಮಿಭಾ. ೩೮-೩೦); ಕಳೆಗುಂದದಾವಗಂ ನಲುಗದ ವಾಮದೇವನುರಿಗಣ್ಣೆಡೆವಾವುಗಳಿಂ . . . ಕಂದನಾನದೀ ಬಲಮುರಿಸಂಕು ಮೆಯ್ಯುಮರೆ ಮ್ಮೆಮಯನಾಂತ ನವೀನಚಂದ್ರಮಂ (ಚಿಕವಿ. ೦-೭); ಒಡೆದ ಕೊಳಲ ಪಾಡ ನೋಡು ಇನ್ನೆಲ್ಲಿದೆ ಸುಗ್ಗಿ ಎಂದು . . . ಮುಗ್ಗಿ ಮುರುಟಿ ನಲುಗಿತು (ನವಿಲಂ. ೩೭-೮); ಕಾಯಿ, ತಾಯಿ . . . ನಲುಗಿ, ನಿನ್ನ ನೆರಳ ಸೇರಿ ನಲಿವ ಹೆಣ್ಣನು (ಹೊಂಗಳು. ೦೨-೩). ೫. ಸೊರಗು; ಕೊರಗು; ಕೃಶವಾಗು: ನಲುಗಿದಿರಿ ಹಿರಿದಾಗಿ ಜಡೆ ವಲ್ಕಲ ಫಲಾಶನದಿಂದ . . . ತನ್ನಿಂದಾದುದೀಯಾಪತ್ತು ನಿಮಗೆ (ಕುಂಠರಾ. ೭-೫೫-೭); ನಿರ್ಬಂಧಕಿಕ್ಕಲುರೆ ತಿರಿದುಂಡು ನಲುಗಿದಂ (ಶಠಕು. ೦೪-೨೩); ಒಲಿದವರು ಬೇರಾಗಿ . . . ಕೆಲಕಾಲ ನೂಕುವರು, ನಲುಗದೆಯೆ ಕಾಣುವರು (ಇಂಗೀತ. ೫೦-೦೭); ಬಡತನದ ಬವಣೆಯಿಂದ ನಲುಗಿದ್ದ ಬಳಗದ ಗೆಳೆಯರಾರೂ ಹಣ ಕೊಡುವ ಸ್ಥಿತಿಯಲ್ಲಿರಲಿಲ್ಲ (ಜೀವನ. ೨ ಅರಿಕೆ). ೬. ಬಾಗು; ನಮಸ್ಕರಿಸು: ನಾನೇನಾಡಿದೆ ನಾ ನಿನ್ನ ಪಾಡಿದೆ ನಾ ನಿನ್ನ ನೋಡಿ ನಲುಗಿದೆ ಭೈರೂವಾಸ್ವಾಮಿ ದೊಡ್ಡವನೆಂದು ಮಾರೀ ಬಿದ್ದ (ಹುಟ್ಟಿಹ. ೦೦೦).

[ದೇ.॥ ತಮಿ. ನಲುಙ್ಕು, ನಲಙ್ಕು =ಮುದುಡಿಸು; ತುಳು. ನಲಗು; ತೆಲು. ನಲುಗು, ನಲಗು, ನಲಿಯು, ]

**ನಲುಗು$_2$** (ನಾ). ಹಾಡುವಾಗ ಧ್ವನಿಯನ್ನು ನಡುಗಿಸುವುದು; ಕಂಪನ; ಪಲುಕು: ಚಿಕ್ಕಪುಟ್ಟ ಕಲಹಗಳು ಬಾಳಿನ ಏಕತಾನಕ್ಕೆ ನಡುನಡುವೆ ನಲುಗಾಗಿ ಬಂದು ಸೊಗಸನ್ನು ಹೆಚ್ಚಿಸುತ್ತಿದ್ದವು (ಗಂಮಾಯಿ. ೭).

[<ನಲುಗು$_1$]

**ನಲುಮೆ** 'ನಲ್ಮೆ' ನೋ.

**ನಲುಮೆಕೂಟ** (ನಾ). ಪ್ರೀತಿಯ ಮೇಳ; ಸ್ನೇಹದ ಗೋಷ್ಠಿ: ಮಧುರೆ ಹೆಣ್ಣ ಬೇಟವುಳಿದು ಮರಳಿ ಬರುವೆಯಾ ನಲುಮೆಕೂಟ ಕುಣಿತಗಳಲಿ ನಮ್ಮ ನಲಿವೆಯಾ (ಗೋಕುನಿ. ೫೪-೨).

[ನಲುಮೆ (<ನಲ್ಮೆ) + ಕೂಟ$_1$]

**ನಲುಮೆಯೋಲೆ** (ನಾ). ಪ್ರೇಮಪತ್ರ: ನೀಳವಾದ ನಲುಮೆಯೋಲೆಗಳನ್ನು ಅವನು ಸುಶೀಲಾನಿಗೆ ಬರೆಯುತ್ತಿದ್ದ (ಸಮಜೀ. ೭೭೪).

[ನಲುಮೆ (<ನಲ್ಮೆ) + ಓಲೆ]

**ನಲುವು** (ನಾ). ಬಲಹೀನತೆ; ಅಶಕ್ತತೆ: (೬).

[<ನಲುಗು$_1$./ತಮಿ. ನಲಿವು=ತೊಂದರೆ, ನಾಶ]

**ನಲ್ಕಳೆ** (ನಾ). ಒಳ್ಳೆಯ ಶೋಭೆ,-ಚೆಲುವು,-ಸೊಗಸು: ಕವಿ ಗಂಟಾ ಶೀತನ ಸ್ವರಕ್ಕೆ ಏರಿದಾಗ ಮಾತ್ರ ಆತನ ಕೃತಿ ನಲ್ಕಳೆಯಿಂದ ಮೆರೆಯುತ್ತದೆ (ಕಾವ್ಯಕು. ೩೦). [ನಲ್ + ಕಳೆ$_2$ (=ಕಲೆ$_3$)]

**ನಲ್ಕುಂಚ** (ನಾ). ಸುಂದರವಾದ ಚವರ,-ಚಾಮರ: ನೆಗಳ ಸೊಂಡಿಲ ಚಿನ್ನದಣಸಿನ ಪಲ್ಲಕ್ಕಿ ಸೊಗಯಿಪ ರತ್ನವಿಮಾನ ಏಗೆ ನಲ್ಕುಂಚ ಕಾಳಾಂಜಿ ಮುಂತಾದ ವಸ್ತುಗಳನಿತ್ತನು ಕೃಷ್ಣ ಮಗಗೆ (ಮೋಹತ. ೦೫-೩೦).

[ನಲ್ + ಕುಂಚ]

**ನಲ್ಕೆ** (ನಾ). ನಲ್ಮೆ; ಅನುರಾಗ: ಮನ ಮೆಚ್ಚಿ ನಚ್ಚಿನ ನಲ್ಕೆಯಲಿ ಮನದನ್ನಳೆನಿಸಿದಳು (ಸಾಳ್ವಭಾ. ೦೮-೩೭). [ನಲ್ + -ಕೆ]

**ನಲ್ಗಂಪು** (ನಾ). ಸುವಾಸನೆ; ನರುಗಂಪು: ಧೂಪವಂ ನಲ್ಗಂಪುಣ್ಮಿ ತಿರಲಾಗಳರ್ಪಿಸಿದನಾ ಗಂಗಾಧರಂಗಟ್ಟಜಿಂ (ಉದ್ಭಟ. ೦೦-೭೪); ಚಂದನುಗಳಧೂಪಧೂಮದಾಮೋದಮುಂ ಮೂಗಿಂಗೆ ನಲ್ಗಂಪನೀಯದಿಹುದಿತ್ತಣ್ಗೆ (ಶ್ರೀರಾಮಾ. ೦೦೫-೦೫೭). [ನಲ್ + ಕಂಪು]

**ನಲ್ಗಂಪುಬೀಱು** (ಕ್ರಿ). ಸುವಾಸನೆಯನ್ನು ಬೀರು; ನರುಗಂಪು ಸೂಸು: ನಲ್ಗಂಪುಬೀಱೆ ಮೋಹಿಸುವ ಚೆಂಗಣಗಿಲೆಯರಲ್ಗೊಳಂ . . . ತಣ್ಗೊಳಂ ಮೆಱೆದುವು (ಪದ್ಮರಾ. ೮-೩೮). [ನಲ್ಗಂಪು + ಬೀಱು]

**ನಲ್ಗಡಲು** (ನಾ). ಸಿಹಿಯಾದ ಕಡಲು; ಇಂಗಡಲು: ಈ ಹಿಗ್ಗು ನನ್ನೆದೆಯ ನಲ್ಗಡಲನ್ನು ತುಂಬಿ ತುಳುಕುತ್ತಿದೆ (ಫಲಸಂ. ೪೮).

[ನಲ್ + ಕಡಲು (<ಕಡಲ್$_2$)]

**ನಲ್ಗತೆ** (ನಾ). ಒಳ್ಳೆಯ ಕಥೆ; ಸ್ವಾರಸ್ಯವಾದ ಕಥೆ: ಏನಾನುಮೊಂದು ನಲ್ಗತೆಯಂ ಪೇಟ? (ರಾಮಾಶ್ವ. ೪-೦೭). ಮೇಣಾವ ನಲ್ಗತೆಯುಂ ಪೇಟ್ಬೆನೋ (ರಾಮಾಶ್ವ. ೫-೧). [ನಲ್ + ಕತೆ]

**ನಲ್ಗಬ್ಬಿಗ** (ನಾ). ಒಳ್ಳೆಯ ಕವಿ; ಸತ್ಕವಿ: ಅನಿಬರ್ನಲ್ಗಬ್ಬಿಗರೊಳಮನಿತರ ಸಾಧಾರಣಾಭಿಮಾನಂ . . . ಬಳೆಯಿಕುಂ (ಅಪ್ರತಿ. ೩-೩).

[ನಲ್ + ಕಬ್ಬಿಗ]

**ನಲ್ಗಳಲ್** (ನಾ). ರುಚಿಕರವಾದ ಮಜ್ಜಿಗೆ: ಎಳನೀರ್ಗಳ ಕನಿಗರ್ಬಿನ ತಿಳಿರಸದ ರಸಾಲಪಕ್ವ ಫಳಸಾರದ ನಲ್ಗಳಲ ಬಹುವಿಧದ ಪಾನಂಗಳನಲ್ಲಲ್ಲೆ ಱಿವರಾ ಪ್ರಪಾಪಾಲಿಕೆಯರ್ (ವೃಷವಿ. ೪-೩೦).

[ನಲ್ + ಕಳಲ್$_0$ (<ಕಟಲ್$_3$)]

**ನಲ್ಗಳವು** (ನಾ). ಲಾಭ ತರುವ ಕಳ್ಳತನ; ಹೆಚ್ಚು ಧನ ಸಿಗುವ ಚೌರ್ಯ: ತಾನುಂ ತತ್ಸಖನುಂ ಭೃತ್ಯಾನೀಕಂಬೆರಸು ಪೋಗಿ ನಲ್ಗಳವಿಂದಂ ತಾನಧಿಕ ಲಾಭಮಾದೊಡನೂನಗುಣರ್ ಮಗುಟ್ದು ಲಾಭದಿಂದಂ ಬರುತುಂ (ಧರ್ಮಾಮೃ. ೨-೦೪೦). [ನಲ್ + ಕಳವು]

**ನಲ್ಗಾಡಿ** (ನಾ). ಮನಸೆಳೆವ ಚೆಲುವು; ಮೋಹಕವಾದ ಸೌಂದರ್ಯ: ತಾಟಂಕಂಗಳ್ಕಪೋಲಸ್ಥಲಮನಲೆಯೆ ಮಧ್ಯಂ ಕರಂ ಬಳ್ಕೆ ತೋರ್ಪೊಳ್ಕೋಟಂ ನಲ್ಗಾಡಿಯಂ ಪುಟ್ಟಿಸೆ . . . ಕಾಂತಾಮಣಿಯುಗುರಿಸಿದಳ್ ತ್ರೈಲಮಂ ಬಾಲೆಗಾಗಳ್ (ಉದ್ಭಟ. ೮-೧೫). [ನಲ್ + ಗಾಡಿ$_1$]

**ನಲ್ಗಾದೆ** (ನಾ). ಉತ್ತಮವಾದ ನಾಣ್ಣುಡಿ,-ಜಾಣ್ಣುಡಿ. 'ನಲ್ಗಾದೆಗಾಣ' ಪರಾ. [ನಲ್ + ಗಾದೆ]

**ನಲ್ಗಾದೆಗಾಣ** (ನಾ). ಉತ್ತಮವಾದ ನಾಣ್ಣುಡಿಗಳನ್ನು ಬಲ್ಲವನು,-ಕಟ್ಟಬಲ್ಲವನು: (ಚತುನಿ. ೬. I, ೪೪). [ನಲ್ಗಾದೆ + -ಗಾಣ]

**ನಲ್ಗಾಪು** (ನಾ). ಉತ್ತಮವಾದ ರಕ್ಷಣೆ ; ಭದ್ರವಾದ ಕಾವಲು: ಅಗುಳ್ ಮದಿಲ್ ಬಾಗಿಲ್ ಬಿಯ್ಗಮೆಂಬಿವಱಿಂದೆ ಕಾವ ಕಾಪೇವುದೊ ಪೆಣ್ ಮಿಗೆ ಪಾತಿವ್ರತ್ಯದೆ ನೆಟ್ಟಗೆ ತನ್ನಂ ಕಾವ ಕಾಪೆ ನಲ್ಗಾಪಕ್ಕು (ನೀತಿಮಂ. II, ೨೭). [ ನಲ್ + ಕಾಪು ]

**ನಲ್ಗಿರಿ** (ನಾ). ಶ್ರೇಷ್ಠವಾದ ಪರ್ವತ ; ಪವಿತ್ರವಾದ ಗಿರಿ : ವಿಪುಲ ಶ್ರೀಕಟವಪ್ರ ನಲ್ಗಿರಿಯ ಮೇಲ್ನೋನ್ತೊಂದು ಸನ್ಮಾರ್ಗ್ಗದಿನ್ ಉಪ ಮಾರ್ಗ್ಗ ಸುರಲೋಕಸೌಖ್ಯದೆಡೆಯಾನ್ತಾಮೆಯ್ದಿ ಇಟ್ಟಾರ್ ಮನಮ್ (ಎಕ. II, ೯೮-೩ ; ಸು. 700). [ ನಲ್ + ಗಿರಿ₁ ]

**ನಲ್ಗುಟುಕು** (ನಾ). ಸವಿಯಾದ ಗುಟುಕು ; ರುಚಿಯಾದ ತುತ್ತು : ಸುಂದರಿ ಬಾರ ಸಾರಸಕಳಾಯತಲೋಚನೆ ನೋಡದಿರ್ಪ್ಪದೇ ನಿಂದೆಲೆ ರಾಜಪಕ್ಷಿ ಪೊಸಪಣ್ಗಳ ನಲ್ಗುಟು[ಪಾಠಾಂ. ಟ]ಕಿಕ್ಕು . . . ಎಂದು ಸಾರಿಕಾಬೃಂದಮರಾತಿಪುಂದಿರದೊಳೆಱ್ಬುದು ಬಂದ ಪುಳಿಂದಿಯರ್ಕಳಂ (ರಾಜಶೇ. ೫-೧೨). [ ನಲ್ + ಕುಟುಕು₂ ]

**ನಲ್ಗುಣ** (ನಾ). ಒಳ್ಳೆಯ ಗುಣ ; ಸದ್ಗುಣ : ಕೃತಿಪತಿಯ ನಲ್ಗುಣಂಗಳ್ ಕೃತಿವೇಟ್ಟನ ಮನಮನಲೆದು ನಲಿಯಿಸೆ ಪೇೞ್ವಾ ಕೃತಿಯೆ ಕೃತಿ (ಆಳವಿ. ೧-೩೧). [ ನಲ್ + ಗುಣ ]

**ನಲ್ಗುದುರೆ** (ನಾ). ಒಳ್ಳೆಯ (ಲಕ್ಷಣಗಳಿಂದ ಕೂಡಿದ) ಕುದುರೆ; ಶ್ರೇಷ್ಠವಾದ ಅಶ್ವ : ಅಧ್ವರದ ನಲ್ಗುದುರೆ ಬಂದು ವಾಲ್ಮೀಕಿಯ ನಿಜಾಶ್ರಮದ ವಿನಿಯೋಗದುಪವನದೊಳು . . . ಪೊಕ್ಕೊಡೆ (ಜೈಮಿಭಾ. ೨೦-೫). [ ನಲ್ + ಕುದುರೆ ]

**ನಲ್ಗುನಿಗುಂಜಿ** (ನಾ). ಒಳ್ಳೆಯ ಗುಲಗಂಜಿ : ನಲ್ಗುನಿಗುಂಜಿಯೊಳ್ಚರ ಮನೊಯ್ಯನೆ ನೇರ್ಪಡಿಸುತ್ತುಮೆತ್ತಲುಂ ಪಲ್ಗಳ ಕಾಂತಿಯಂ ಪರಪುತುಂ ನಗುತಂ ನಡೆವರ್ ಪುಳಿಂದಿಯರ್ (ಉದ್ಭಟ. ೨-೭೧).

[ ನಲ್ + ಗುನಿಗುಂಜಿ ( < ಗುರುಗಂಜಿ) ]

**ನಲ್ಗೆಯ್** (ಕ್ರಿ). ಶುದ್ಧಗೊಳಿಸು ; ಶುಭ್ರಗೊಳಿಸು : ಪಾಲ್ಗಡಲ ಚೆಲ್ವ ಬಂಬಲ್ವೆರೆಯನೀಳ್ಕೊಂಡು ನಲ್ಗೆಯ್ದ ತಪರಾಜದೊಡಪೆರಸಿದಿನಿದದೇಂ ಸಾಲ್ಗೆ ಜೆನೆಯ್ದ ಕಂದಲ್ ಸೊಗಸು ಸಾಟಿಯೇ (ಭಾಪಚಂ. ೭-೮) : "ಒಳ್ಳೆಯದನ್ನು ಮಾಡು. ಉತ್ತಮವಾಗಿ ತಯಾರಿಸು, ಹಿತವನ್ನು ಮಾಡು" (ಪ್ರಕಿಕೊ). [ ನಲ್ + ಕೆಯ್₁ ]

**ನಲ್ಗೆಳದಿ** (ನಾ). ಪ್ರೀತಿಯ ಗೆಳತಿ ; ಪ್ರಿಯಸಖಿ : ಹಾ ನಲ್ಗೆಳದಿ . . . ಪಾಗುಲ್ ನಿನ್ನನಾಪೆಡೆಯೊಳ್ ಕಾಣ್ಬೆಂ (ಮಿತ್ರಗೋ. ೫೦) : ತಾನುಂ ನಲ್ಗೆಳದಿ ಚಂದ್ರಪಾಣಿಯುಂ ನಲ್ಲಾಪುಗೊಳುತಿರೆಯರೆ (ರಾಮಾಶ್ವ. ೧೭-೩೦).

[ ನಲ್ + ಕೆಳದಿ ]

**ನಲ್ಗೆಳೆಯ** (ನಾ). ಪ್ರೀತಿಯ ಗೆಳೆಯ ; ಪ್ರಿಯಸಖ : ಸಿರಿಯಾಳ್ದನ ಸೂನುವಿಂಗೆ ನಲ್ಗೆಳೆಯನೊ ಸೌಂದರಾಧಿಪನ ದೂತನೊ (ಪ್ರಭುವಿ. ೩೨-೩೬).

[ ನಲ್ + ಕೆಳೆಯ ]

**ನಲ್ಗೆಱೆ** (ನಾ). (ಕೈಗಳಲ್ಲಿರುವ) ಒಳ್ಳೆಯ ಲಕ್ಷಣವನ್ನು ಸೂಚಿಸುವ ರೇಖೆ ; ಶುಭರೇಖೆ : ನೀಳ್ದು ಸಿವೆಳಗ್ಗೆ ಕಾಲ್ಗಳ್ ತಾಳ್ದುರ್ಪ್ಪವು ಕೆಂದಳಂಗಳೊಳ್ ನಲ್ಗೆಱೆಯಂ (ಚಳವಿ. ೮-೯೨). [ ನಲ್ + ಗೆಱೆ ]

**ನಲ್ಗೊಣಸು** (ನಾ). ಮುದ್ದಾದ ಮರಿ ; ಎಳೆಯ ಮರಿ : ನಸು ಮುಗುಳ್ದ ಲಿಗ್ ಒಡೆವಾಯ ದೂರ್ವೆ . . . ನೆಱಿಯೊಪ್ಪೆ ನಲ್ಗೊಣಸು ಪಟ್ಟೆಸಿದಿರ್ದುದನೊಂದು ತಣಾದೊಳ್ (ಕಲಶಂ. ೨-೪೦).

[ ನಲ್ + ಕೊಣಸು₁ ]

**ನಲ್ಜವ್ವನೆ** (ನಾ). ಚೆಲುವೆಯಾದ ಯುವತಿ ; ಸುಂದರ ತರುಣಿ : ಬಂದರಂದು ಬಲಿಪ್ಪೀಕವಡೆದು . . . ನಲ್ಜವ್ವನೆಯರ ಮಾನ್ಗಣ್ಣ ಬೆಳ್ವಣ್ಣ ಮೂವಣ್ಣಗೊಳಿಸಲ್ಪತಿಗಳ (ಉದ್ಭಟ. ೫-೨೬). [ ನಲ್ + ಜವ್ವನೆ ]

**ನಲ್ಜೋಡು** (ನಾ). ಒಳ್ಳೆಯ ಜೊತೆ : ಇದು ಕಣಾ ಧರ್ಮಜನ ಸತಾಭ್ಯುದಯಕೋಸುಗಪೂರ್ವಶಿಯ ಶಾಪದಲಿ ಬಂದುದು ಹೊತ್ತು ನೂಕಿದೆ ನೊಂದುವತ್ಸರವ ಇದಕೆ ನಲ್ಜೋಡಾಯ್ತು ನಿರ್ವಿಘ್ನದಲಿ ದಾಂಟಿದೆ ವವಧಿಯಾನು (ಕುಮ್ಯಾವಿ. ವಿರಾ. ೭-೫೭). [ ನಲ್ + ಜೋಡು ]

**ನಲ್ತದ** (ನಾ). (?) : ನವಿಲೂರಾ ಸಿರಿಸಂಘದಾಚಿಗಣದಾ ರಾಜ್ಞೀಮತೀಗನ್ತಿಯಾರ್ ಅಮಲಂ ನಲ್ತದ ಶೀಲದಿಂ ಗುಣದಿನಾವಿಕ್ಕೋತ್ತಮಿರ್ಪ್ಪಾಳಿದೊರ್ ನಮಗಿನ್ನೊಬ್ಬುದುಯೆನ್ದು ಏಱಿ ಗಿರಿಯಾನ್ಸನ್ಯಾಸನಂ ಯೋಗದೊಳ್ (ಎಕ. II, ೯೭-೨ ; ಸು. 700).

[ P ಇದು 'ನಲ್ತಪ' ಎಂಬುದರ ಅಪಲಿಖಿತ ]

**ನಲ್ತಪ** (ನಾ). ಉತ್ತಮವಾದ ತಪ ; ಶ್ರೇಷ್ಠವಾದ ತಪಸ್ಸು : ನೆಱೆದಾದ ವ್ರತಶೀಲ ನೋನ್ಪಿ ಗುಣದಿಂ ಸ್ವಾಧ್ಯಾಯಸಮ್ಪತ್ತಿನಿಮ್ ಕಱಿ ಇಲ್ಲಿಲ್ತಪ ಧರ್ಮ್ಮದಾ ಸಸಿಮತಿ ಶ್ರೀಗನ್ತಿಯಾರ್ (ಎಕ. II, ೭೬-೨ ; ಸು. 700). [ ನಲ್ + ತಪ₃ ]

**ನಲ್ತೆತ್ತು** (ನಾ). ಒಂದು ಬಗೆಯ ಸಣ್ಣ ತೆರಿಗೆ : ಉಗ್ರಾಣ ಪಂಧಾನ ಬೆಡಂಗೊಳು ಚಳಾಯ ದಾಯದೆಱಿ ಹಡುವರ ಬೀರವಣ ನಲ್ತೆತ್ತು ನಲುಗಂಟಿ ನಲ್ಲಾವು ದಣ್ಡಾಯ ತಪ್ಪುತೆಯೊಳಗಾದ ಸಮಸ್ತ ಕಿಱುಕುಳ ವೆಲ್ಲವಂ . . . ಧಾರಾಪೂರ್ವ್ವಕಂ ಮಾಡಿ (ಎಕ. V, ಬೇಲೂರು. ೫೯-೮೭ : 1117). [ P ಇದು 'ನಲ್ಲೆತ್ತು' ಎಂಬುದರ ಅಪಲಿಖಿತವಿರಬಹುದೆ ? ]

**ನಲ್ದಂಬುಲ** (ನಾ). ಸವಿಯಾದ ವೀಳೆಯ ; ರುಚಿಯಾದ ತಾಂಬೂಲ ; ನರುದಂಬುಲ : ಪೆರ್ಚುಗೆತೊಯ್ಯಗೆ ನಲ್ದಂಬುಲಮಾವಳೊತ್ತಿ ಸೊಗಸುಣ್ಮಲ್ಟಿಂಬಿವಳ್ . . . ಕಾತರು ಮಿಗೆ ತಾಂ ಕೊಡುವಳೆಂದು ಸೌಂದರಿ ಲಸತ್ಸ್ತಂಭಾವದಿಂ ಕಾಂತನಂ (ಉದ್ಭಟ. ೮-೧೨೩). [ ನಲ್ + ತಂಬುಲ ]

**ನಲ್ದಾಣ** (ನಾ). ಒಳ್ಳೆಯ ನೆಲೆ, ಆಶ್ರಯಂ : ಮುಂದಣವಧಿಯ ವನದ ವಾಸಮಂ ಕಳೆಯೆ ನೆಮ್ಮದಿಯ ನಲ್ದಾಣವೊಂದಂ ಕೃಪೆಯಿಂ ಬೆಸಸಿಂ (ಶ್ರೀರಾಮಾ ೧೯೨-೪೪೭). [ ನಲ್ + ತಾಣ ]

**ನಲ್ದಾಯಿ** (ನಾ). ಅಕ್ಕರೆಯ ತಾಯಿ ; ಪ್ರೀತಿಯ ಜನನಿ : ಶ್ರೀಯೆ ವಾಗ್ದೇವಿಯೆ ಸೌಭಾಗ್ಯದಾಯಿಯೆ . . . ಅಕ್ಕರೆಯ ನಲ್ದಾಯಿಯೆ ಕೃತಿಗೆ ಉನ್ನತಿಯನು ಈಯೆ (ಅಂಚಾಪ. ೩-೧).

[ ನಲ್ + ತಾಯಿ ( <ತಾಯ್) ]

**ನಲ್ದೊಟ್ಟಿಲು** (ನಾ). ಅಂದವಾದ ತೊಟ್ಟಿಲು : ತಾಯ್ವಸಿರ್ ನೀನಾದೆ ಪುಟ್ಟುವಾಗಳ್ ಮತ್ತೆ ನಲ್ದೊಟ್ಟಿಲಾದೆ. ದೋಗುಳ್ವಾದೆಯೊಳೆಯಂಗೆ (ಶ್ರೀರಾಮಾ. ೩೦೭-೪೧೦). [ ನಲ್ + ತೊಟ್ಟಿಲು₁ (<ತೊಟ್ಟಿಲ್₁) ]

**ನಲ್ದೊಡವು** (ನಾ). ಅಂದವಾದ ಆಭರಣ : ಮುಡಿಯಿಂದಡಿವರೆಗಂ ನಲ್ದೊಡವುಗಳಂ ತುಡಿಸಲೆಂದು ದಾದಿ . . . ಸುಡಿದಳೆಂತಚ್ಯುತನಂ (ಗೀತಗೋ. ೭-೧೭). [ನಲ್ + ತೊಡವು ]

**ನಲ್ನಯ** (ನಾ). ಒಳ್ಳೆಯ ರೀತಿ ; ಸರಿಯಾದ ಕ್ರಮ : ಕತಂ ರಸಿಕರಿನೆಯ್ದೆ ತಿರ್ದಿಸಿದೊಡಲ್ಲದೆ ನಿಲ್ಲದು ಚಿತ್ತಮಂತೆ ತಿರ್ದಿಸುವುದೆ ನಲ್ನಯಂ (ಜಗವಿ. ೧-೧೫). [ ನಲ್ + ನಯ₂ ]

**ನಲ್ನಿಶೆ** (ನಾ). ನಡುರಾತ್ರಿ ; ಮಧ್ಯರಾತ್ರಿ : ನಲ್ನಿಶೆಯೊಳ್, ಆಱಿ ತಿರೆ ಸಂಜೆಯುಂ, ಇರ್ಬ್ಬಿಯ, ಖಡ್ಗಮನ್ ತುಡುಕಿ ಗುಹೆಯಿಲ್ಲದೆತ್ತಲೋ ತೆರಳ್ದನನ್ ನಾನ್ ತಡೆದು (ಆಕ್ಮಕಾ. ೧೨-೨೪೯). [ ನಲ್ + ನಿಶೆ₁ ]

**ನಲ್ನುಡಿ₁** (ಕ್ರಿ). ಹಿತವಾದುದನ್ನು ಹೇಳು ; ಹಿತವನ್ನು ನುಡಿ : ಆಗಳಾನ್ ನೆಲ ಮುಗಿಲ ಮಕ್ಕಳಾ ದೈತ್ಯರನ್ ನಲ್ನುಡಿದು ನಡುವಲ್ಲೆ ನೆಗಟ್ಟಿನ್ (ಬಧ್ವಜ್ರ. ೧೨-೨೩೭). [ ನಲ್ + ನುಡಿ₁ ]

**ನಲ್ನುಡಿ₂** (ನಾ). ೧. ಹಿತವಾದ ಮಾತು ; ಸವಿನುಡಿ : ಸುಧರ್ಮಭೂಮಿಪನಂ ನಲ್ನುಡಿಯಿಂ ಬೀಳ್ಕೊಂಡು (ಉದ್ಭಟ. ೭-೭೮) ; ಅವನ

ನಲ್ನುಡಿ ತಾನುಪದೇಶವಾಗೆ (ರಾಜಶೇ. ೧೪-೫೯) : ಕಾಲವಶದಿಂ ಪಲತೆಱನಾದ ದುಃಖಂಗಳ್ಗೆ ಭಾಜನರಾಗಿರ್ಪ ಸೋದರರ್ಗೆ ನಲ್ನುಡಿಗಳಂ ನುಡಿದು (ಭಾರತಾಂ. ೧೪) : ನಲ್ನುಡಿ. ಅದುತಿರ್ಕೆ ಊಡಿದೆಯ-ವೇೞ್ವನೆಗೆ ಪಾಂಡವರ ದಬದ ಬಿಸುನೆತ್ತರಿನ್ ಖಡ್ಗಮುನ್? (ಅಶ್ವತ್ಥಾ. ೫-೮೦) ; ಒಂದುದಿನ ವಾದರೂ ಪ್ರೀತಿಯಿಂದ ನಲ್ನುಡಿಗಳನ್ನಾಡಿದವನು ನಾನಲ್ಲ (ಕುರುಕ್ಷೇ. ೧೦೩). ೨. ಅಂದವಾದ ಮಾತು ; ಚೆಲುವಾದ ನುಡಿ : ಎಡೆಯೆಡೆಯೊಳ್ ಸಕ್ಕದದ ನಲ್ನುಡಿ ಮೆಱೆಯೆ ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ (ರಾಮಾಶ್ವ. ೬-೧೭) ; ನಲ್ನುಡಿಗಳನ್ನು ಛಂದಸ್ಸಿನ ನೂಲಿನಲ್ಲಿ ಸುರಿದು ಮಾಲೆಗೊಳಿಸಬಲ್ಲವನೇ . . . 'ಜಾಣ'ನು (ನಾಡೋಜ. ೩೪೭) ; ಕನ್ನಡದ ನಲ್ನುಡಿಗಳು ಮೂಲೆಪಾಲಾಗುತ್ತಿರುವ ಈ ದಿನಗಳಲ್ಲಿ . . . ಕನ್ನಡಿಗರ ತಿಳಿನುಡಿಯಾಗಿ ಬೆಳೆಯಿಸಲು ಈ ಕೃತಿಯು ಸಹಾಯಕ (ಕಾವ್ಯಾರ. ೧೦ ಮುನ್ನುಡಿ). [ ನಲ್ + ನುಡಿ₁ ]

**ನಲ್ನೆಟಲ್** (ನಾ). ೧. ಹಿತವಾದ ನೆರಳು ; ತಂಪಾದ ಛಾಯೆ. ೨. (ಅಲಂ) ಪ್ರೀತಿಯ ಆಶ್ರಯ. ೧, ೨ : ಎಸೆವೈ ಕಲ್ಪಮಹೀಜದಂತೆ . . . ಬಣ್ಣಿಸೆ ಪುಷ್ಪಸ್ತಬಕಂಗಳಂ ನಖರುಚಿವ್ರಾತಂ ನತರ್ಗೊಲ್ದು ಸರ್ವಸಮಂ ನಲ್ನೆಟಲಿತ್ತು ಕಾವ (ಪಶ್ರ್ವಪು. ೮೫). [ ನಲ್ + ನೆಟಲ್₁ ]

**ನಲ್ನೋಟ** (ನಾ). ಪ್ರೀತಿಯ ನೋಟ : ಕೋಟಿ ಮೂಱುನಿಪ್ಪ ಲೆಕ್ಕದರ್ಥ ದಾಣ್ಮನಾಗಿ ನಲ್ನೋಟಕೊಳ್ಳಿಪಿವ ಯೌವನಾತಿರೇಕ ಮಲ್ಲಣಂ (ಉದ್ಭಟ. ೧೨-೩೫). [ ನಲ್ + ನೋಟ ]

**ನಲ್ಪರಕೆ** 'ನಲ್ವರಕೆ' ನೋ.

**ನಲ್ಪರಕೆವೆಱು** (ಕ್ರಿ). ಪ್ರೀತಿಯ ಆಶೀರ್ವಾದವನ್ನು ಪಡೆ : ಭೂದಿವಿಜರ ನಲ್ಪರಕೆವೆತ್ತು ಜೇರಿಗೆಬೆಲ್ಲದೊಪ್ಪಮೆಸೆಯಲ್ . . . ಅವನ ಕೈಗೆ ಧಾರೆಯನೆಱೆದನು (ಕೃಮಿಶಾ. ೩೦-೧೬).

[ ನಲ್ಪರಕೆ (< ನಲ್ವರಕೆ) + ಪೆಱು₁ ]

**ನಲ್ಪು** (ನಾ). ಸುಂದರವಾದುದು ; ಅಂದವಾದುದು : ಇವರ ನಲ್ಪಿನ ದೇಹ ಉತ್ತಮರ ದಾಹ (ವೀಕ್ಷೈಪು. ೨-೩-೨೬). [ ನಲ್ + -ಪು₂ ]

**ನಲ್ಬರ** 'ನಲ್ಬರವು' ನೋ.

**ನಲ್ಬರವು, ನಲ್ಬರ** (ನಾ). ಸುಖಾಗಮನ ; ಸುಸ್ವಾಗತ : ಬಾ, ಕೃಷ್ಣ, ನಲ್‌ಬರವು, ನಮ್ಮೊಳಗೆ ಸೇರು (ಹಕ್ಕಿಗಳು. ೩೨-೦). ನಲ್ಬರ : ನಮ್ಮ ಕೌರೀ ಮಾಲೆಗೆ ಸಿಮುಗಕ್ಕೆ ನಲ್ಬರಂ (ಶ್ರೀರಾಮಾ. ೨೮೯-೧೦೧).

[ ನಲ್ + ಬರವು ]

**ನಲ್ಮಗು** (ನಾ). ಸುಂದರವಾದ ಮಗು ; ಅಂದವಾದ ಶಿಶು. ನಲ್ಮಕ್ಕಳು (ಬಹುವ) : ಅಯೋಧ್ಯೆ . . . ಕೊರಳಿಂಚರದಿ ಪಕ್ಕಿಗಳನಣ ಕಿಸುವ ನಲ್ಮಕ್ಕಳಿಂದಮಾ ಸಗ್ಗದೂರನೆ ಸೂರೆಗೊಂಡಂತೆ ಮೆರೆದುದಯ್ (ಶ್ರೀರಾಮಾ. ೭-೧೭೪). [ ನಲ್ + ಮಗು ]

**ನಲ್ಮಿಸುನಿ** (ನಾ). ಒಳ್ಳೆಯ ಬಂಗಾರ ; ಅಪ್ಪಟ ಚಿನ್ನ : ವಿಶ್ವಕಥೀಶ ನೊರ್ವನೆನಿಸಿದನುಮೇಶನೆಂದು ಬಿದಿ ಶಾಸನಮಂ ಬರೆದಿಟ್ಟು ನಟ್ಟ ನಲ್ಮಿಸುನಿಯ ಕಂಬದಂತೆಸೆದುದಾ ಗಿರಿ (ಕಲಶಂ. ೧-೩೬).

[ ನಲ್ + ಮಿಸುನಿ ]

**ನಲ್ಮೆ, ನಲುಮೆ** (ನಾ). ೧. ಪ್ರೀತಿ ; ಅನುರಾಗ ; ಒಲುಮೆ : "ತಕ್ಕು, ಅಚ್ಚಟು, ಒಱಲ್, ಕಾದಲ್ಮೆ, ನಲ್ಮೆ, ಕೂರ್ಮೆ, ಎಱಕಂ, ಒಪು – ಈ ೮ ಸ್ನೇಹಕ್ಕೆ ಪೆಸರ್" (ಕಕಶಾ. ೦೯-೩೯೦) ; ಚೆಲಂಗಳಾದಂ ವಿಲಾಸಿನೀಜನದ ನಲ್ಮೆಯುಂ ಸಂಗಮಮುಮಂ (ಕವಿರಾ. ೩ ೯೬) ; ತೆತ್ತುತನಕ್ಕೆ ತೆತ್ತುತನಮಂ ಪುಸಿನಲ್ಮೆಗೆ ಮೋದಿ ನಲ್ಮೆಯಂ . . . ಉಕ್ಕೆವಕುಕ್ಕೆವಗೆಯ್ತುಮಂ ಪೊಣರ್ಚುತ್ತುಮುಪಾಯದಿಂ ಕಳೆಯೆ ಕೂಡುವನಂ ವಿಭು ಕಂಡು ಮೆಚ್ಚಿದಂ (ಕಾವ್ಯಸಾ. ೯೮೫ ಕೂದ್ರಳ) : ಬೆಂಬೆನ್ನನೆ ಬಾರದಂದು ಲಲಿತಾಂಗಿಯ ನಲ್ಮೆಗೆ ಬನ್ನಮಾಗದೇ (ಆದಿಪು. ೩-೦೬) ; ಕೈದವಮಿಲ್ಲದ ನಲ್ಮೆಯಿಂ ನಾಲಗೆಯ ತುದಿಗೆ ತಂದು ನುಡಿದಳ್ ಮತ್ತೊರ್ವಳ್ ತನ್ನಾಣ್ಮನ ದೋರ್ವಲದಗುರ್ವಂ ನಚ್ಚಿ (ಪಂಪಭಾ. ೧೦-೪೫ ವ) ; ಆತ್ಮಭವಂಗೆ ನಲ್ಮೆಯಿಂದುಟಿಪೆ ನಿಜಾತಪತ್ರ ಹರಿವಿಷ್ಟರ ಚಾಮರಮೆಂಬಿವಂ ಬಟಿಕ್ಕುಟಿದುದಾತ್ತಂ (ಚಂದ್ರಪ್ರಪು. ೩-೧೦೨) ; ಕಡುಪಿಂದಾತನೊಳಾಂತರೋಡಿ ಬನಮಂ ಪೊಕ್ಕುಂ ಪೊಡರ್ವಾರ್ದು ಕಾಲ್ಪಿಡಿದುಂ . . . ನಲ್ಮೆಯಂ ನುಡಿದುಂ ಮೆಯ್ಪುರಿಗೆಟ್ಟುವಿಂತು ನೆಲದೊಳ್ ನಾಣ್ಗುಂದಿ ನಿಂದಿರ್ದರ್ (ಕಲ್ಕಿಕಾ. ೦೬೩) : ತಳುವದಡವಿಯೊಳು ತನ್ನ ತಪ್ಪಿಸಿ ಪೋದ ನಳನೊಳು ನಲ್ಮೆಯನೆಸಗಿ . . . ಕೀರ್ತಿಯ ತಳೆದೆಸೆದಳು ದಮಯಂತಿ (ಹರಿಬಿ. ೩-೯೬). ೨. ಅನುಗ್ರಹ ; ಕೃಪೆ ; ದಯೆ : ವಿಶ ನಾಥಂ ಕುಡುಗವಿಳಜನಾನಂದಮಂ ನಲ್ಮೆಯಿಂದು (ಕುಸುಮಾ. ೦-೦) ; ಪುತ್ರನನೀಶನಿಂ ನಲ್ಮೆಯಿಂ ಪಡೆದುಂ ಮಹೀಪತಿ ರಾಜ್ಯಮಾಳುತವಿರ್ಪಿನಂ (ಹಾರಾಶ. ೪-೦೩-೪೬) : ಅವಳ ನಲ್ಮೆಯಿಂ ಪಡೆವನಾಯ್ಕುಳಿಯುಂ ತ್ರಿಜಗತ್ಪ್ರಭುತ್ವಮಂ . . . ಆ ಮಾದೇವಿ ನಿರೀಕ್ಷಿಸನ್ನನತಿವೇಲದಯಾ ರಸಪೂರ್ಣದೃಷ್ಟಿಯಿಂ (ಮುರಾಜ. ೧-೨). ೩. ಒಳ್ಳೆಯತನ ; ಒಳಿತಂ ; ಒಳ್ಳೆಯದಂ ; ಒಳ್ಪು : "ನಲ್ಮೆಯೆ ಶುಭಮೊಳ್ಪು ಲೇಸು" (ಕಕುನಿ. ೮೫) ; ಉಮೆ ಸೌಭಾಗ್ಯದೊಳೊಳ್ಪುವೆತ್ತ ರತಿ ರೂಪಾಶ್ಚರ್ಯದೊಳು ಲಕ್ಷ್ಮಿಪಕ್ಷಮ ನಂಗೀಕರಿಸಿ x x ನಲ್ಮೆಯೊಳತಿಪ್ರಾಗಲ್ಭ್ಯದೊಳು ಸೂಕ್ತಿಲಕ್ಷ್ಮಿ (ಎಕ. VIII, ಸೊರಬ. ೦೩೯-೪೫ : ಸು. 1145) : ಮಗನೆಂದು ನಿಮ್ಮನಾಂ ಪೊರೆದ ಪೊಲ್ಲಮೆಯು ನಲ್ಮೆಯ ಮಾಡಿ ಕೈಕೊಂಡು ರಕ್ಷಿಸನೆ (ಸೌಂದಪು. ೫-೪೪) : ಕಿಱುದಾಸಿಯಿಂದೆ ಜನರು ನಲ್ಮೆ ಪೊಲ್ಮೆಯನಱಿಯದೆ ನೆನೆದುದನೆಸಗಿ ಬಱಿದೆ ಯೌವನವನೆಲ್ಲವನು ಕಳೆವರು (ಕರ್ಣಾಟ. ೧೦-೩೦) ; ಈ ಜಾಣ್ಮೆಯಾ ನಲ್ಮೆಯಾ ಗಾಡಿಯಾ ಮೋಡಿ . . . ಆರಿಗಳವಡದು ಕೇಳೀ ಜಗತ್ರಯ ದೊಳೀ ಚೆಲುವ ವ್ಯರ್ಥಂಗೈಯದಿರು (ಪಂಪರಾ. ೫-೯-೦೦) ; ನುಣ್ಣನಪ್ಪ ಜಾಣ್ಮೆಯಿನ್ ಕಡಕಿಗೊರ್ಮೆ ನಡೆದಪನ್ ನಲ್ಮೆಗೊರ್ಮೆ ನಡೆದಪನ್ (ಅಂತಿಗೊ. ೦೭-೩೫೨). ನಲುಮೆ : ೧. ಆ ಪುರಕೆ ಬಂದನೊರ್ವಂ ಭಕ್ತನೊಲುಮೆಯಿಂ ಕಾಪಾಲಿಪೊಲಿವ ಶರಣಂ ತನ್ನ ನಲುಮೆಯಿಂ (ಬಸಾರ. ದೇ. ೦೦೫-೦೦) ; ನಿನ್ನ ಸಸಿನೆದೆಯೊಲೋರೆಮೆಯ ನಲುಮೆಯ ನೀಡ ! (ಗೀವಿಂ. ೨೮-೨೭) ; ಎಳಸೆಲೆಯಲ್ಲಿ ನೆಲಸಿಪುದು ನಿಲುವಿನ ನಲುಮೆ (ಅರಳು. ೪೦೦-೦೭). ೪. ಸಂತೋಷ : ನಲುಮೆಯಲಿ ಮಾಡಿ ದಾಸೋಹ ಹರಸೇವೆ (ಕನ್ನಜಾ. ೨೦೭).

ನಲ್ಮೆಗೆ ದಿಬ್ಯಂಬಿಡಿ, ನಲ್ಮೆಗೆ ದಿವ್ಯಂಬಿಡಿ = ಪ್ರೇಮಕ್ಕೆ ಸಾಕ್ಷಿಯಾಗಿ ದಿವ್ಯವೆಂಬ ಪರೀಕ್ಷೆಗೆ ಒಳಗಾಗು : ಶಂತನು . . . ತನ್ನೆಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೋಲ್ ಸೋಲ್ತು ಕಂಡೊಲ್ದು ನಲ್ಮೆಗೆ ದಿಬ್ಯಂಬಿಡಿ ಪಂತೆಪೋಲ್ ಓದಿದು (ಪಂಪಭಾ. ೧-೭೦) ; ಅಂಬುಜದ[ಲ]ಮನಮರ್ಚಿ ನಿತಂಬಿನಿ ಓಡಿದಿರ್ದ ಕಃಚಮೆ ತಪ್ಪಾಯಂಪಿಂದಂದೋಲ್ತಿರೆ ನಲ್ಮೆಗೆ ದಿವ್ಯಂ ಬಿಡಿದಳೋ ಪೇೞ್ಮೆನಿಪಳಾ ವ್ಯತಿಕರದೊಳ್ (ಚಂದ್ರಪ್ರಪು. ೫-೧೩೦).

[ ನಲ್ + -ಮೆ₁/ತಮಿ. ನನ್ಮೈ, ನಲುಮ್ಮೆ ]

**ನಲ್ಮೆಕಾಱ** 'ನಲ್ಮೆಗಾಱ' ನೋ.

**ನಲ್ಮೆಕಾಱಿಕೆ** (ನಾ). ನಲ್ಮೆಗಾರನ ಭಾವ ; ಪ್ರೀತಿ ; ಒಲುಮೆ : ಬೇಱೆ ಮನೆಯಿತ್ತು ತಂಗಿಯರನು ನಲ್ಮೆಕಾಱಿಕೆವೆತ್ತ ಮೈದುನರಾ ಮೂಱು ಹೊತ್ತಾರಯ್ಯುತೊಲಿದು ಮನ್ನಿಸಿದನು (ಭರತ. ೩೨-೮೫).

[ ನಲ್ಮೆಕಾಱ (< ನಲ್ಮೆಗಾಱ) + -ಇಕೆ ]

**ನಲ್ಮೆಗಾರ್ತಿ** (ನಾ). ಪ್ರೀತಿಯನ್ನು ಹೊಂದಿರುವವಳು ; ಒಲವಿನವಳು; ನಲ್ಲೆ ; ಪ್ರಿಯೆ : ಇದು ಮನಂಬಂದೊಡೆ ಕುರುಳಂ ಬೆರಲಂ ಬೇಡಿತ್ತಪಂ ತೊಡರಿಲ್ಲೆಂದು ನುಡಿದ ನಲ್ಮೆಗಾರ್ತಿಯ ನುಣ್ಣಿತಂ ಕೇಳ್ದು ಹರ್ಷಂದಾಳ್ದು (ರಾಜಶೇ. ೧೦-೦೫೭ ವ). [ ನಲ್ಮೆಗಾಱ + -ತಿ₁ (< -ಇತ್ತಿ) ]

**ನಲ್ಮೆಗಾಜಿ, ನಲ್ಮೆಕಾಜಿ** (ನಾ). ಪ್ರೀತಿಯನ್ನು ಹೊಂದಿರುವವನು; ನಲ್ಲ; ಪ್ರಿಯ ; ಕಾದಲ ; ಓಪ. 'ನಲ್ಮೆಗಾರ್ತಿ' ಪರಾ. ನಲ್ಮೆಕಾಜಿ : 'ನಲ್ಮೆಕಾಜಿಕೆ' ಪರಾ. [ ನಲ್ಮೆ + – ಕಾಜಿ ]

**ನಲ್ಮೆಮಾತು** (ನಾ). ಪ್ರೀತಿಯ ಮಾತು : ಏನು ಕಲಿತರೇನು ಫಲವು . . . ಕಲಿಯಲಿಲ್ಲ ನಲ್ಮೆಮಾತು ದೇವಯಾನಿ ಕಲಿವಳು (ಕವಿಸೋ. ೨೫-೧೦). [ ನಲ್ಮೆ + ಮಾತು₁ ]

**ನಲ್ಮೊಗ** (ನಾ). ಅಂದವಾದ ಮುಖ: ಅವರ ನಲ್ಮೊಗಗಳನ್ನು ಅಂಗಡಿ ಯೊಳಗಿನ ಹೊಗೆಯು 'ಪಾಲಿಸ್' ಮಾಡಿಬಿಟ್ಟಿತ್ತು (ಮುಂಗಾಪು. ೫೪). [ ನಲ್ + ಮೊಗ ]

**ನಲ್ಮೊರೆ** (ನಾ). ಒಳ್ಳೆಯ ಪ್ರಾರ್ಥನೆ: ಮಾನವ ಮಡಿಯಾಗಿಡಲು ದಮ್ಮಡಿಯು ತಮಡಿ ನಮಗೆ ಬೇಕೇತನಿಗೊ ನಲ್ಮೊರೆಯು ತಮಡಿ (ಗಣೇಶ. ೭೦-೬). [ ನಲ್ + ಮೊ₂ ]

**ನಲ್ಲ₁** (ನಾ). ೧. ಪ್ರೀತಿಗೆ ಪಾತ್ರನಾದವನು ; ಪ್ರಿಯ : "ಕಾದಲಂ, ನಲ್ಲಂ, ಇನಿಯಂ, ಓಪಂ, ಮನದನ್ನಂ – ಈ ೫ ಪ್ರಿಯಂಗೆ ಪೆಸರ್" (ಕಶಸಾ. ೦೯-೩೮೪); ಅನುಪಮನಂ ಬರಿಪ್ಪೆನನಂಂಾಗದೆ ನಲ್ಲನನೀಂದು (ಕವಿರಾ. ೨-೦೦೬); ನಿನ್ನ ನಾನನುಪಿಪೆನೆನ್ನ ಮೆಯ್ಬಡವೊ ನಲ್ಲನ ಮೆಯ್ಬಡವೋ ನಿಶಾಕರಾ (ಆದಿಪು. ೦೨-೯೦) : ನಲ್ಲಳ್ ನಲ್ಲನಂ ವ್ಯವಹಾರಿ ಪಡಪ . . . ನೆನೆವಂತು (ಧರ್ಮಾಮೃ. ೩-೦೯೦) : ಒಡಲಿಲ್ಲದ ನುಡಿಯಿಲ್ಲದ ಕಡೆಯಿಲ್ಲದ ನಲ್ಲನ ಒಡಗೂಡಿ ಸುಖಿಯಾದೆ ಕೇಳಿರಯ್ಯ (ಮಹಾದೇ. ಬ. ೩೧-೬೭); ಎಲ್ಲರ ವರ್ಣಸಬಹುದು ಎನ್ನ ನಲ್ಲ ಗುರುದೇವನ ವರ್ಣಿಸಬಾರದು (ಸಿದ್ಧವ. ೧೦೦೬-೬೬೮) : ಬಿಡದೆ ಸಿಂಗರಿಸಿ ನಲ್ಲರ ಗೋಷ್ಠಿಯೊಳಗಿಪ್ಪ ಮಾದದಿಯರನೀಕ್ಷಿಸುತ (ಹರಿಕಾ. ೪-೯) ; ಪೊಲ್ಲಮೆಯ ಲೇಸು ನಲ್ಲರ ಮೆಯ್ಯೊಳ್ (ಜಗಸೋಜ. ೨-೪೨) ; ಕೆಳದೀ ನೀಂ ಬಲ್ಲಿಯೆಂತೆಂದನುವಿಸಿದಪೆ ಬೇಸತ್ತೆ ನಾಂ ನಲ್ಲನೇಕಿನ್ನೊಳಗಪ್ಪಂ ನೀನುಪಮಾನಂ ಸುಟಿಪ ಮದನನುಂ ಬಲ್ಲಿರಾಪೆತ್ತ ಬಲ್ಲೆಂ (ಅನಂಪು. ೮-೧೨) ; ನಲ್ಲರ ಕಂಡು ನಗುವಳ ತನ್ನ ಬಲ್ಲಿದ ಗಂಡನ ಬೈದು ಕರೆವಳ . . . ಜಿಹ್ವೆ ಸೀಳಬೇಕು (ಪುರಂದ. ೨-೦೪-೪); ನಲ್ಲನಗಲಿಕೆಯಾಗ ಮನಕೆ ಕುಗ್ಗು (ನನಲ್ಲ. ೪-೦೦) ; ನಲ್ಲ ಮುಟ್ಟದ ಗಲ್ಲ, ನಲ್ಲೆಯ ಮೈಯೆಲ್ಲ ಹಿಗ್ಗಿನ ಮುಳ್ಳಿಗೆ ಸಿಕ್ಕ್ಯಾಂಗ (ಸಖೀಗೀ. ೫೦-೧೧). ೨. ಗಂಡ ; ಪತಿ : "ಕಾದಲನುಂ ನಲ್ಲನುಮೆಂದೀ ಧರೆಯೊಳಗಿನಿಯ ನೋಪನಾ ಮನದನ್ನಂ ಸಾದರದೆ ಪತಿಯ ಪೆಸರುಗಳ್" (ಕವಿಕಂ. ೦೭೦) ; ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ ನಮ್ಮ ನಲ್ಲ ಸುಳಿಯಲಿಲ್ಲ ಸುಳಿದು ಸಿಂಗಾರವ ಮಾಡಲಿಲ್ಲ (ಬಸವ. ೮೪೯). ೩. ಒಡೆಯ; ಸ್ವಾಮಿ: ಧಾತ್ರೀಶ್ವರ ಚೂಡಾಮಣಿ ವಿಜಯಕ್ಕೆ ನಲ್ಲನಾಹವಮಲ್ಲ ಅವನೀಮಣ್ಡಳಮಂ . . . ಪಾಳಿಸಿದಂ (ಸೌಇಇ. IX-1, ೦೨೬-೦ ; 1064) ; ದಕ್ಷಿಣದಿಶಾವಿಷಯ ಗಡಿಯಂಕಮಲ್ಲಂ ವಿಬುಧಸಂದೋಹಕ್ಕೆ ನಲ್ಲಂ (ಎಕ. XI, ಚಿತ್ರದು. ೩೪-೦೩ ; 1123) ; ವೀರದ ಬಾಗದ ಕಾವ ಪೆರ್ಮ್ಮೆಗಾವಂ ತೊಣೆಯೆಂದು ಬಣ್ಣಿಪರು ಮಲ್ಲನನುದಧಿಯಾಚಕಕೆ ನಲ್ಲನಾ (ಎಕ. VI, ಕಡೂರು. ೩೦-೨೬ ; 1170) ; ಗುಣಕ್ಕೆ ನಲ್ಲ ಗಣೇಶಂ (ಶಮುದ. ೭೫ ಪ್ರಯೋ). ೪. ಒಳ್ಳೆಯವನು : (ಕ). ೫. ಒಳ್ಳೆಯತನ ; ಶ್ರೇಷ್ಠತೆ : "ಒಳಿತು, ನಲ್ಲ, ಲೇಸು, ಚೆನ್ನ" (ಕಂಸುಹು. ೬೦). ೬. ಅಂದ ; ಚೆಲುವು : (ಕ).

ನಲ್ಲರ್ (ಬಹುವ) ೧. ಪ್ರೀತಿಗೆ ಪಾತ್ರರಾದವರು : ಎರೆದರ್ ಸಂತುಷ್ಟರಾದರ್ . . . ಬಿರ್ದುಗೊಂಡಾಡುವ ಮದನಮದೋನ್ಮತ್ತೆಯರ್ ನಲ್ಲರಾದರ್ ನರರಾರ್ ನಿನ್ನನ್ನರಿನ್ನೀ ಭುವನಭವನದೊಳ್ ಗಂಗಚಕ್ರಾಯುಧಾಂಕಾ (ಕಾವ್ಯಸಾ. ೨೦೫ ಹೊದ್ರಳ). ೨. ಹಿತವರು : ಪೊಡೆವಡುವಪ್ಪಿಕೊಳ್ವ ನೆನೆಯುತ್ತಿರಿಮೆಂಬ . . . ಕೈಯೆಡೆ ನಿಮಗೆಂದೊಡಂಬಡಿಪ ನಲ್ಲರಗಲ್ಕೆಗೆ ಕಣ್ಣನೀರ್ಗಳಂ ಮಿಡಿವ ಬಹುಪ್ರಕಾರಜನಸಂಕಟಮೊಕ್ಕುದುದಾ ಪ್ರಯಾಣದೊಳ್ (ಆದಿಪು. ೯-೫೭): ನಂಟರುಂ ಶಂಭುವೇ ನಲ್ಲರುಂ ಶಂಭುವೇ (ಅರಿರ. ದೇ. ೦೭೩-೦೫). ೩. ಪ್ರಿಯಪ್ರೇಯಸಿಯರು ; ಪರಸ್ಪರ ಒಲಿದವರು : ಮಲ್ಲಿಗೆಗಳ್ ವಸಂತದೊಳ್ ಬಿರಿದೊಡೆ ನಲ್ಲರುಂ ನೆನೆದು ನಲ್ಲರ ಮೆಲ್ಲೆರ್ದೆಗಳ್ ನಿರಂತರಂ ಬಿರಿವುವದೆಂತೊ ಮಲ್ಲಿಗೆಗೆ ನಲ್ಲರ ಮೆಲ್ಲೆರ್ದೆ ಮೇಳಗೊಂಡುದೋ (ಆದಿಪು. ೧೦-೧೦೦) ; ನಲ್ಲರೊಳ್ಪೊಗಂ ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಟಿಪ್ಪೊಡಾವ ಬೆಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿದೇಶದೊಳ್ (ಪಂಪಭಾ. ೪-೨೮) ; ನಲ್ಲರ ಕೂಡುವಾಸೆಯೆ ಬರ್ದುಂಕುವುದರ್ಕೆ ನಿಮಿತ್ತಮಾಗದೇ (ಕಾದಂಬ. ೩೨೮) ; ಬೇಟಿರ್ಗೆ ಪೋದ ನಲ್ಲರ ನೆನೆದು ದೂಱಿಸುವ ನೀಱೆಯರ ನಿಡುಸುಯ್ಯ ಗಡಣದಿಂ ಜೌವನವೇಳಿಯುಂ (ಕಲ್ಯಾಕಾ. ೫೪). ನಲ್ಲರ ಮರುಳ = ಒಂದು ಬಿರುದು : ಮಹಾರಾಜಾ[ಧಿ]ರಾ[ಜನೆ (ನ) ]ಲ್ಲರ ಮರುಳನಾನೆ[ಪೆಡೆ]ಙ್ಗ (ಎಇ. XIX, ೨೦೯-೪ ; ೨೬೩). ನಲ್ಳ್ = ೧. ಪ್ರಿಯೆ ; ಪ್ರೇಯಸಿ : "ಮನದನ್ನಳ್ ಕಾದಲೆಯಂದಿನಿಯಳ್ ತಾನೋಪಳೆಂದು ನಲ್ಲಳೆನಲ್ಕಂದನುನಯದಿಂ ಪ್ರಿಯೆ ತಾಂ" (ಕವಿಕಂ. ೦೭೨) ; ಕೆಲದೊಳ್ ನಿಲೆಯುಂ ಜ್ಯೋತ್ಸ್ನಾವಿಲಾಸದೊಳ್ ಬಗೆದನಿಲ್ಲ ನಲ್ಲಳನಿನಿಸಂ (ಕವಿರಾ. ೩-೯೪) ; ಅಗಲ್ಕೆ ಮುಳಿಸೆಂಬೆರಡುಂ ಗಡ ಕಾಳಕೂಟವಾಗಮರ್ದಿನ ಕಾಳಕೂಟದೊಡವುಟ್ಟಿದಳೆಂದಪೆನೆನ್ನ ನಲ್ಲಳಂ (ಆದಿಪು. ೦೨-೨೮) ; ನಲ್ಲಳೊಲುಮೆಗಾಗಿ ಸಖಿ ಸಖಿ ದೂತಿಯರೆಲ್ಲರ ಮನ್ನಿಪನಂತೆ (ಧರಣಿ. ೨-೪೫). ೨. ಹೆಂಡತಿ ; ಪತ್ನಿ : ಎನ್ನ ನಲ್ಲಳೆಯೆಂದು ಪ್ರಳಾಪಂಗೆಯ್ದು (ವಡ್ಡಾರಾ. ೦೯೦-೫) : ಅಂತು ಕಂಡು ಮನಂಗೊಂಡೆತ್ತಿಕೊಂಡು ಮನೆಗೆ ತಂದು ರಾಧೆಯೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನಿಟ್ಟೊಡೆ (ಪಂಪಭಾ. ೦-೯೭ ವ). ನಲ್ಲಿರ್ = (ಸಂಬೋಧನಾ ರೂಪದಲ್ಲಿ) ಒಳ್ಳೆಯವರು : ನಿಲ್ಲದಿರಿಂ, ಅಣ್ಣಂದಿರ್, ಓಡಿಂ, ತಡೆಯ ಪೊಟ್ಟಲ್ಪು, ಓ ನಲ್ಲಿರ್ (ಅಶ್ವತ್ಥಾ. ೩೩-೬೬೭). ☞ ತಮಿಳಿನಲ್ಲಿ ವಂಧ್ಯವಂಪುರುಷವಾಚಕ ಪ್ರತ್ಯಯವು ಗಣವಚನಾದಿಗಳಿಗೆ ಹತ್ತಿ ಸಂಬೋಧನಾರ್ಥವನ್ನೂ ಕೊಡುತ್ತದೆ. ಉದಾ–"ನಲ್ಲೀರ್=ಒಳ್ಳೆಯವರೇ!" "ಪೆರಿಯಾಯ್= ಹಿರಿಯಂವನೇ (ಳೇ)!" (ಸಮಾಲೋ. ೨೫೨). [ ನಲ್ + – ಅ₇ ]

**ನಲ್ಲ₂** (ಗು). ೧. ಒಳ್ಳೆಯ ; ಚೆನ್ನಾದ ; ಶ್ರೇಷ್ಠವಾದ. 'ನಲ್ಲಗುಣ', 'ನಲ್ಲಪಾಲ್' ಪರಾ. ೨. ಅಂದವಾದ; ಸುಂದರವಾದ. 'ನಲ್ಲವೆಣ್' ಪರಾ. ೩. ಶುದ್ಧವಾದ ; ನಿರ್ಮಲವಾದ. 'ನಲ್ಲತೈಲ', 'ನಲ್ಲಭಕ್ತಿ' ಪರಾ. ೪. ಶುಭಕರವಾದ ; ಮಂಗಳಕರವಾದ. 'ನಲ್ಲವರಕೆ' ಪರಾ. [ ದೇ.೩ ತಮಿ. ಮಲ. ನಲ್ಲ, ತುಳು. ನಲ್, ನಲ ; ಕೊಡ.ನಲ್ಲೇ ; ತೆಲು. ನಲುವು ; ಗೊಂಡಿ. ನೆಲಾ ]

**ನಲ್ಲ₃** 'ನೆಲ್ಲ' ನೋ.

**ನಲ್ಲಂಬು** (ನಾ). ೧. ಮೋಹವನ್ನುಂಟುಮಾಡುವ ಬಾಣ : ನಲ್ಲಂಬಿಂದಿಸೆ ಪುಷ್ಪಬಾಣನೆರ್ದೆಯಂ ಪೆಂಪಿಟ್ಟು ಬೆಳ್ಪಾಗಿ ತಕ್ಕಲ್ಲಂ ಕಿಟ್ಟಿರ್ದೆಗೆಟ್ಟು (ಕಾವ್ಯಸಾ. ೫೫೦ ಹೊದ್ರಳ) ; ಪೂಲ್ಸರಂಗಿಸುವೆಡೆಗಿವೆ ನಲ್ಲಂಬುಗಳೆನಿಸಿ ತುಱುಗಿ ಮಲರ್ದಲರ್ದೆಸೆವೀ ಪೊಲ್ಲೆಯುಮೊಲಿಸಿದ ನಲ್ಲರ ಲಲ್ಲೆಯು ಮಾರಾರ ಮನಮುಮಂ ಸೋಲಿಸದೇ (ಆದಿಪು. ೦೧-೦೧೪) ; ಅಂಗಜಂ ಪೆಲ್ಲಗೆ ಪಾರ್ದಾರ್ದಾಗಳುಂ ಕಿನ್ನರಯುವತಿ ಮೃಗೀವ್ರಾತಮಂ ತನ್ನ ನಲ್ಲಂಬುಗಳಿಂದೆಚ್ಚೆಚ್ಚು ಮೆಚ್ಚಂ ಸಲಿಸುವಂ (ಪಂಪಭಾ. ೪-೨೩). ೨. ತೀಕ್ಷ್ಣವಾದ ಬಾಣ ; ಹರಿತವಾದ ಬಾಣ : ತನ್ನ ನಲ್ಲಂಬುಗಳಿಂದಮಾರ್ದಿರದಡುತಿರ್ಪ ಭೂಭುಜರೆಲ್ಲಮಲ್ಲಿ ಬಿಲ್ಲುಂಬೆಱಗಾಗೆ (ಪಂಪಭಾ. ೦೦-೪೨) ; ಅವರ ಪಿಡಿವ ಬಿಲ್ ಬಿಲ್ಲೆಮ್ಮೆಬುಗಳುಮವರಿತ್ತ ನಲ್ಲಂಬುಗಳೆನೆ ಬಟಿಗಾಯದಂತು ಚಲಮನೆ ಕಾಮೆ (ಪಂಪಭಾ. ೦೨-೩೯). [ ನಲ್ + ಅಂಬು₂ ]

**ನಲ್ಲಗನ್ನೆ** (ನಾ). ಒಂದು ಬಗೆಯ ಗಿಡ : ಕೊರ್ಮೆ, ಗನಿಜೆಲೆ, ಈಚಿಮುಳ್ಳು, ಕೊಂಬೆ, ನಲ್ಲಗನ್ನೆ (ಮೃಶಿಗಿ. ೦೫-೨೭೦). [ ? ]

**ನಲ್ಲಗುಣ** (ನಾ). ಒಳ್ಳೆಯ ಗುಣ ; ಸದ್ಗುಣ : ಬಳಿಯಂ ಬೆಳಗಿಪ್ಪಂ ತಾಂ ತನ್ನ ನಲ್ಲಗುಣಂಗಳಿಂ (ಶಾಂತೀಶ. ೨-೩೯). [ ನಲ್ಲ₂ + ಗುಣ ]

**ನಲ್ಲತನ** (ನಾ). ಒಳ್ಳೆಯತನ ; ಸಜ್ಜನಿಕೆ : ನಲ್ಲತನಕೆ ಬಲ್ಲತನಕೆ ಲೋಕದೊಳು ನೀನಲ್ಲದುಂಟೆ ನಿನ್ನ ನಡೆಗೆ ನಲ್ಲರು ನಾರಿಯರೊಲಿವರು (ಭರತೇ. ೭೬-೩೯). [ ನಲ್ಲ₂ + -ತನ ]

**ನಲ್ಲತೈಲ** (ನಾ). ಒಳ್ಳೆಣ್ಣೆ ; ಶುದ್ಧವಾದ ಎಣ್ಣೆ ; ಅಚ್ಚೆಣ್ಣೆ : ನಲ್ಲತೈಲದೊಳೆಡರ್ವ ಸೊಡರಾ ಎಳ್ಳಿನಿಂದಲರುವುದೆ (ಬಸವು. ೫೧-೩೭). [ ನಲ್ಲ₂ + ತೈಲ₁ ]

**ನಲ್ಲತ್ತೂರ್** (ನಾ). ಒಂದು ಊರಿನ ಹೆಸರು : ಪುತ್ತೂರುಡೆ ಶಿವಮಾರವ್ವಂ ದುಣ್ಣಗೆಗ್ಗಂ ನಲ್ಲತ್ತೂರೊಡೆ ಬಗ್ಗಮನೆ ಬಳಿಗವುಂ ಅಯ್ದೂವುಬ್ಬು . . . ಕೊಟ್ಟೂರು (ಎಕ. X, ಕೋಲಾರ. ೨೫೦-೩ ; ಸು. ೮೦೦ ?). [ ? + ಊರ್ ]

**ನಲ್ಲಪಾಲ್** (ನಾ). "ಒಳ್ಳೆಯ ಅದೃಷ್ಟ, ಸೌಭಾಗ್ಯ" (ಅಂತಿಗೊ. ಕೋಶ) : ಈಯೊಂದು ನಲ್ಲಪಾಲೆನಗೆ ತಾನ್ ಬಂದತ್ತು (ಅಂತಿಗೊ. ೦೯-೩೮೪). [ ನಲ್ಲ₂ + ಪಾಲ್₂ ]

**ನಲ್ಲಭಕ್ತಿ** (ನಾ). ಶುದ್ಧವಾದ ಭಕ್ತಿ : ನಲ್ಲಭಕ್ತಿಯೊಳಿರ್ದು ಏಕಾದಿನಾಥ ಭೂವಲ್ಲಭನ ಭಕ್ತಿಗಾನಂದಿಸಿ (ಗುರುಚಾ. ೩-೪೩). [ ನಲ್ಲ₂ + ಭಕ್ತಿ ]

**ನಲ್ಲಮನ** (ನಾ). ೧. ಒಳ್ಳೆಯ ಮನಸ್ಸು. ೨. ಅನುರಾಗದಿಂದ ಕೂಡಿದ ಮನಸ್ಸು. 'ನಲ್ಲಮನಂದೋಱು' ಪರಾ. [ನಲ್ಲ₂ + ಮನ₁ ]

**ನಲ್ಲಮನಂದೋಱು** (ಕ್ರಿ). ೧. ಒಳ್ಳೆಯ ಮನಸ್ಸನ್ನು ತೋರಿಸು. ೨. ಒಲವನ್ನು ತೋರಿಸು ; ಅನುರಾಗವನ್ನು ವ್ಯಕ್ತಪಡಿಸು : ಈಕೆಯು ಮೆನಗೆರಡಱಿಯದ ನಲ್ಲಮನಂದೋಱುವುದು ಸಲ್ಗೆದೋಱುವುದುಮಾವುದು ದೋಸಂ (ಪಂಪಭಾ. ೫-೧೭ ವ). [ ನಲ್ಲಮನ + ತೋಱು ]

**ನಲ್ಲಮುದ್ದು** (ನಾ). ಪ್ರೀತಿಯ ಮುದ್ದು,-ಲಲ್ಲೆ: ನಲ್ಲಮುದ್ದಿಗೆ ಬಯಸುವಂ ಮನದಲ್ಲಿ ಕೇಳ್ವನು ನಸುತೊದಲಿಸುವ (ಬಸವು. ೪೭-೩೨). [ ನಲ್ಲ₂ + ಮುದ್ದು ]

**ನಲ್ಲಯ್ಯ** (ನಾ). ಒಬ್ಬಾತನ ಹೆಸರು : ದಾತಾರಂ ದೇಯಿಮಯ್ಯಸೆಟ್ಟಿಯರಗಂ ಮುಟ್ಟಂ [ನ]ಲ್ಲಯ್ಯನುಂ ಮಾರಳಯ್ಯನುಂ (ಸೌಇಇ. XX, ೦೯-೭೦ ; 1016). [ ನಲ್ಲ₂ + ಅಯ್ಯ₁ ]

**ನಲ್ಲರಿವು** (ನಾ). ಒಳಿತು ಕೆಡುಕುಗಳ ತಿಳಿವಳಿಕೆ ; ಸದಸದ್ವಿವೇಕ : "ಒಪ್ಪುತಪ್ಪುಗಳ ಪ್ರಜ್ಞೆ ; ಸದಸದ್ವಿವೇಚನೆ . . . ಒಳುಪಿನರಿವು ; ನಲ್ಲರಿವು" (Conscience. ಇಂಕನಿ). [ ನಲ್ + ಅರಿವು (<ಅಱಿವು) ]

**ನಲ್ಲರೂಪು** (ನಾ). ಅಂದವಾದ ರೂಪ; ಸುಂದರವಾದ ರೂಪ: ನಲ್ಲರೂಪಿಲ್ಲೆಂದೊಡೀಕ್ಷಿಸು ಚೆಲ್ಲೆಗಂಗಳಿಂ (ಬಸವು. ೪೦-೦೯). [ ನಲ್ಲ₂ + ರೂಪು ]

**ನಲ್ಲಲರ್** (ನಾ). ಅಂದವಾದ ಹೂವು ; ಸುಗಂಧಭರಿತವಾದ ಪುಷ್ಪ : ನಲ್ಲಲರ ಕಂಪು ಪೀನಸದಲ್ಲೊಂದಿದವಂಗೆ ಸೊಗಸದಿರೆ ಕಟ್ಟಪುದೇ (ಉದ್ಭಟ. ೦-೧೭). [ ನಲ್ + ಅಲರ್₂ ]

**ನಲ್ಲಲೋಹ** (ನಾ). ಉತ್ತಮವಾದ ಧಾತು,-ಲೋಹ ; ಚಿನ್ನ : ಬೆಳ್ಳಿ ಮೂಱುಕುತಿ ಮುರುಹು ತಾಂಬ್ರಂ ನಲ್ಲಲೋಹಂ ಕಂಚು ಮೊದಲಾದೆಲ್ಲವಂ ಒಟ್ಟೈಸಿ ತರಿಸಿ (ಬಸವು. ೧೩-೬). [ ನಲ್ಲ₂ + ಲೋಹ ]

**ನಲ್ಲವರಕೆ** (ನಾ). ಮಂಗಳಕರವಾದ ಹರಕೆ ; ಶುಭಾಶೀರ್ವಾದ : ಅವರ್ ನಲ್ಲವರಕೆಯುಂ ಪರಸುವುದುಂ (ನೇಮಿಪು. ೯-೮೭ ವ). 'ನಲ್ವರಕೆ' ಪರಾ. [ ನಲ್ಲ₂ + ಪರಕೆ₁ ]

**ನಲ್ಲವಸ್ತು** (ನಾ). ಪ್ರಿಯವಾದ ವಸ್ತು : ಗೌರೀವಲ್ಲಭಂ . . . ನಲ್ಲವಸ್ತುಗಳಂ ಬಯಸುವಂ (ಬಸವು. ೨೫-೦೮). [ ನಲ್ಲ₂ + ವಸ್ತು ]

**ನಲ್ಲವೂ** (ನಾ). = ನಲ್ಲಲರ್ : ಅವಿರಳಮಾಗಿ ಝುಂಕರಿಸುತುಂ ವನವಲ್ಲಿಯ ನಲ್ಲವೂಗೆ ಪಾಱುವ ಮದಭೃಂಗಸಂಚಯ (ಕುಸುಮಾ. ೦೪-೨೩). [ ನಲ್ಲ₂ + ಪೂ₂ ]

**ನಲ್ಲವೆಣ್** (ನಾ). ಅಂದವಾದ ಹೆಣ್ಣು ; ಸುಂದರಸ್ತ್ರೀ : ನಲ್ಲವೆಂಗಳ ಪೆತ್ತವರು ಪೆಣ್ಣ ತಂದರದಿಲ್ಲದಿದ್ದವರು ಭೂಷಣವ ಝುಲ್ಲಿಪಟ್ಟಿಗಳು ಮುಂತಾದವ ತಂದಿದ್ದರೆಲ್ಲರ ಕರಸಬೇಕೆಂದ (ಭರತೇ. ೩೧-೦೩). [ ನಲ್ಲ₂ + ಪೆಣ್ ]

**ನಲ್ಲವೊಣರ್** (ನಾ). ನಲ್ಲರ ಜೋಡಿ ; ಪ್ರಿಯ ಪ್ರೇಯಸಿಯರ ಜೊತೆ : ಕಂದದೊಳ್ ಭುಜಲತಾವಳಿ ತಳ್ತಿರೆ ಬಾಯೊಳಗೊಂದಿ ಬಾಯ್ ತೊಡರ್ದಿರೆ ಕೂಡೆ ನಿದ್ದೆಗಿಳಿದಿರ್ದುವು ನಲ್ಲವೊಣರ್ ನಿಶಾಂತದೊಳ್ (ಸೂಕ್ತಿಸು. ೯-೬೦). [ ನಲ್ಲ₂ + ಪೊಣರ್₂ ]

**ನಲ್ಲವೋಗಂಡಿಕೆ** (ನಾ). ತನ್ನ ಸಮಾನರಿಲ್ಲವೆಂದು ಭಾವಿಸುವಿಕೆ ; ಅತಿಶಯವಾದ ಒಣಜಂಬ ; ಅಧಿಕವಾದ ದುರಹಂಕಾರ : "ಅಹೋ ಪುರುಷಾ ಎಂಬುದು ನಲ್ಲವೋಗಂಡಿಕೆ[ಒಣಜಂಬ, ವ್ಯರ್ಥಾದರ್ಪ]" (ಚರಾಯು. ೦೨೯-೯೯). [ ನಲ್ಲ₂ + ಪೋಗಂಡಿಕೆ ]

**ನಲ್ಲಳಿ** (ನಾ). (?) : ಮಿಸುಗುತುಮಿರ್ಪ ಬಲ್ಲೊನೆಯ ಸನ್ನೆಗೆ ಕಾಂಚನಕೇತಕೀ ದಳಪ್ರಸವದಳಂಗಳೋಲಿಗೊಡೆ ನಲ್ಲಳಿಗವ್ವುವು ನಂದನಂಗಳೊಳ್ (ಸೂಕ್ತಿಸು. ೪-೩೪). [ ? ]

**ನಲ್ಲಾಉ** 'ನಲ್ಲಾವು' ನೋ.

**ನಲ್ಲಾಟ** (ನಾ). ಉಲ್ಲಾಸಕರವಾದ ಆಟ ; ಚೆಲ್ಲಾಟ ; ವಿನೋದ : "ಆಟ, ಕೇಳಿ, ಚಿಣ್ಣಾಟ (ಕೂಸಾಟ), ಹುಡುಗಾಟ, ನಲ್ಲಾಟ" (ಕಂನುಹು. ೬೮) : ಪುಲ್ಲೆಗಂಗಳೆ[ಳೆಳೆ]ಯರ ಚಲ್ಲಿಕೆಗಳ ಕಂಡು ನಲ್ಲಾಟವಾಡುವ ಖುಲ್ಲಮನವ (ಪ್ರಭುರಾ. ೦೯೩-೮). [ ನಲ್ + ಆಟ ]

**ನಲ್ಲಾಮ** (ನಾ). ಒಂದು ಬಗೆಯ ತೆರಿಗೆ : ಚಳಾಯು ದಾಯ.ದೆಱೆ ಹಡುವರ ಬೀರವಣ ನಲ್ಲೆತ್ತು ನಲುಗಂಟ ನಲ್ಲಾಮ ದಣ್ಣಾಯ ತಪ್ಪುಡೆಯೊಳಗಾದ ಸಮಸ್ತ ಕಿಱುಕುಳವೆಲ್ಲವಂ (ಎಕ. V, ಬೇಲೂರು. ೫೯-೮೭ ; 1117). 'ನಲ್ಲಾವು' ಪರಾ.

[ ☞ಇದು 'ನಲ್ಲಾವು' ಎಂಬುದರ ಅಪಲಿಖಿತವಿರಬಹುದು ]

**ನಲ್ಲಾಲ** (ನಾ). ಒಂದು ಊರಿನ ಹೆಸರು : ಕೊಱೆಕುಂಡವಿಷಯೋ ನಲ್ಲಾಲನ್ನಾಮಗ್ರಾಮಃ (ಮೈಆರಿ. ೦೯೨೪, ೭೯-೩೪ ; ಸು. ೬ನೆಯ ಶತ). [ ? ]

**ನಲ್ಲಾವು,ನಲಾವು, ನಲ್ಲಾಉ, ನಾಲ್ಲಾವು** (ನಾ). ಒಳ್ಳೆಯ ಹಸುಗಳ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಎಳ್ಳು ಜೋಳ ನಲ್ಲಾವು ನಲ್ಲೆತ್ತು ಕಳುಕು ಕಂಡಿಕೆವಣ . . . ಅಗಾಮ್ಯಸಹಿತವಾಗಿ ಸರ್ವಾಯ ಶುದ್ಧಿ (ಎಕ. VI, ಕಡೂರು. ೨೦-೨೮ ; 1186): ಮಂನಿಬ್ಬರುಂ ಮಹಾಜನಂಗಳ ಭೋಜನಕ್ಕಂ ಬಿಟ್ಟ ನಲ್ಲಂಮೆ ನಲ್ಲಾವು . . . ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಸೌಇಇ. IX-1, ೩೪೯-೭ ; 1282). **ನಲಾವು** : ಶ್ರೀಕರಣ ಸುಂಕ ಪಂನಾಯ ಅಡಕೆಯ ಸುಂಕ ಹಣವ್ವೊದಲ ಸೇಸೆ ವೀರಸೇಸೆ ತೊಡರು ನಲಾವು ನಲ್ಲೆತ್ತು ಕಳಕು ಕಂಡಿಕೆವಣ . . . ಧಾರಾಪೂರ್ವಕಂ ಮಾಡಿ ತಾಂಮ್ರಶಾಸನವಂ ಕೊಟ್ಟರು (ಮೈಆರಿ. ೦೯೪೦, ೩-೨೫ ; 1215). **ನಲ್ಲಾಉ** : ಗ್ರಾಮುಗದ್ಯಾಣ ನಲ್ಲಾಉ ಸುಂಕ ತಳವಾರಿಕೆ (ಎಕ. VIII, ತೀರ್ಥಹ. ೧೩೮-೨೬ ; 1420). **ನಾಲ್ಲಾವು** : ನಾಲ್ಲಾವು ನಲ್ಲೆತ್ತು ಗ್ರಾಮಿ (ಎಕ. V, ಹಾಸನ. ೯೪-೬೩ ; 1280). 'ನಲ್ಲೆತ್ತು' ಪರಾ. ☞ ಇಲ್ಲಿ ಮುಖ್ಯೋಲ್ಲೇಖವನ್ನುಳಿದು ಉಳಿದವು ಅಪಲಿಖಿತ. [ ನಲ್ + ಆವು ]

**ನಲ್ಲಿ₁, ನಳ್ಳಿ, ನಳ್ಳೆ** (ನಾ). ೧. ನಾಳ ; ಕೊಳವೆ : "ನಲ್ಲಿ – ನಾಲೀ = ನಳ್ಳಿ" (ತದ್ಭಕೋ. ೨೦). ೨. ನೀರನ್ನು ಪೂರೈಸುವ ಕೊಳವೆ ;

ಕೊಳಾಯಿ ; ನಳ : ನನ್ನ ವಾಗ್ವಾಹಿನಿ ಬೇಸಗೆ ದಿನದ ನಲ್ಲಿಯ ನೀರಿನಂತೆ ತೊಟತೊಟ ಎಂದು ಕ್ಷೀಣವಾಗಿ ಜಿನುಗುತ್ತಿತ್ತು (ನಂಟರು. ೬೯) ; ಎಲ್ಲಿ ತಿರುಗಿದರಲ್ಲಿ ಅಮೃತ ಸೂಸುವ ನಲ್ಲಿ (ಕಂಠಕು. ೮-೧೦೦) ; ಬೆಳಗ್ಗೆ ಆಕೆ ಎಂದಿನಂತೆ ನೀರಿನ ನಲ್ಲಿಯನ್ನು ತೆರೆದಿದ್ದು ಕೇಳಿಸಿತು (ಒಂಟಿದ. ६೯). ನಳ್ಳಿ₂ : ೨. ಶರೀರದಲ್ಲಿರುವ ಯಾವುದೇ ನಾಳ,– ತಂತು : ಬೆನ್ನ ನಳಿಯಜೆ'ದಂಗೆ ವಂನ್ನಣೆಯು ಒರದಕ್ಕು ಉನ್ನತವಕ್ಕು ಸಿರಿಯಕ್ಕು (ಸರ್ವಜ್ಞ. ೫೪೭). ೩. ಕೊಳವೆ ಅಥವಾ ನಾಳದಂಥ ಸಾಧನ : ಅವನು ಟೆಲಿಫೋನಿನ ನಳಿಗಳನ್ನು ಕಳಗಿಟ್ಟು, ಕಳ್ಳನ ಈ ಕಿವಿಮಾತುಗಳನ್ನು ಯೋಚಿಸುತ್ತ ಕುಳಿತುಕೊಂಡನು (ಕಳ್ಳಕಾ. ೦೮) ; ರಾವಜೀಶಾಕಾನ ಜೋಡುನಳಿಯ ಬಂದೂಕಿನಿಂದ ಅಗ್ನಿ ಕಿಡಿ ಸಿಡಿಯಬೇಕು (ದೀಪಜ. II. ೨೨೨). ನಳ್ಳಿ₃ : ೧. ಕೆಲವು ಮನೆಗಳಲ್ಲಿ ಕೊಳಚೆ ನೀರು ಹೋಗಲು ನಳ್ಳಿಗಳಿರುತ್ತವೆ (ಅಡುಕಾ. ೪೦).

ನಲ್ಲಿ ನಿಲ್ಲು = ನೀರು (ಕೊಳಾಯಿಯಲ್ಲಿ) ನಿಂತುಹೋಗು : ನೀರು ಕುಂದಿಟ್ಟುಕೊಳ್ಳುವಷ್ಟರಲ್ಲಿ ನಲ್ಲಿ ನಿಂತುಹೋಯಿತು (ಬೂಧಿ). ನಲ್ಲಿ ಬರು = (ಕೊಳಾಯಿಯಲ್ಲಿ) ನೀರು ಬರು : ಕಾಲಕ್ಕೆ ಸರಿಯಾಗಿ ಈಚೀಚೆಗೆ ನಲ್ಲಿ ಬರದೆ ತುಂಬಾ ಕಷ್ಟವಾಗಿದೆ (ಬೂಧಿ). [ < ಸಂ. ನಾಲಿ, ನಾಲೀ ]

ನಲ್ಲಿ₃ (ನಾ). ಒಂದು ಬಗೆಯ ಭೂಮಿ (?) : ಮೂವತ್ತೆರಡು ಹೊಂನಿಗೆ ಕ್ರಯವ ಕೊಂಡ ಮಾನಿಯ ಬೈಲ ಒಳಗೆ ನಲ್ಲಿ ಹುಲ್ಲಿ ಸಹ ಬೀಜವರಿ ಖಂಡುಗ(ಎಳ. VI, ಕೊಪ್ಪ. ೩೨-೦೬ : 1448). [ ? ]

ನಲ್ಲಿತಿರುವು (ನಾ). ಕೊಳಾಯಿಯಿಂದ ಬೇಕಾದಾಗ ನೀರನ್ನು ಹರಿಬಿಡಲೂ ಬೇಡವಾದಾಗ ತಡೆಯಲೂ ಅನುಕೂಲವಾಗುವಂತೆ ಅಳವಡಿಸಿರುವ ತಿರುವು : ನಲ್ಲಿತಿರುವು ಸಡಿಲವಾಗಿ ನೀರು ವ್ಯರ್ಥವಾಗಿ ಸುರಿಯುತ್ತಿದೆ (ಬೂಧಿ). [ ನಲ್ಲಿ₁ + ತಿರುವು₂ ( < ತಿರಿಪು₂ ) ]

ನಲ್ಲಿಜುಂಪೆ (ನಾ). ೧. ಇರುವೆಗಳಲ್ಲಿ ಒಂದು ಬಗೆ. ೨. ಕರಿ ಇರುವೆ ; ಕಟ್ಟಿರುವೆ : ಧರೆಯೊಳ್ ಸಂಜಲಿ ನಲ್ಲಿಜುಂಪೆ ಮೊದಲಾದೆಲ್ಲಂ ವಿಷಗ್ರಾಹಿಗಳ್ (ಖಮುದ. ೧-೬೯).

[ ನಲ್ಲ₀ + ಇಜುಂಪೆ. / ತಮಿ. ತೆಲು. ನಲ್ಲ = ಕಪ್ಪು ]

ನಲ್ಲುಗುಳು (ನಾ). (ಮಕ್ಕಳ) ಆಕರ್ಷಕವಾಗಿರುವ ಉಗುಳು : ಉಸುರಿನಿಂದುಣ್ಮುತಿಪ ಸೊಲ್ಲುಗಳ ಗಲ್ಲಗಳ ಎಸರದಿಜುಬಿನೊಳೀಂವ ಜೊಲ್ಲುಗಳ ನಲ್ಲುಗ[ಗು]ಳ ವಸರಿಸುವ ಕೂಸಾಟದಾಟಗಳ ನೋಟಗಳ ವಸುಳೆ ಪರಿಶೋಭಿಸಿದಳು (ಮದೀಕು. ೧೭-೧೦).

[ ನಲ್ + ಉಗುಳು₁ ( <ಉಗುೞ್₁ ) ]

ನಲ್ಲುಣಿಸಿಕ್ಕು (ಕ್ರಿ). ಸವಿಯಾದ ಊಟವನ್ನು ಬಡಿಸು ; ರುಚಿಯಾದ ತಿನಿಸುಗಳನ್ನು ನೀಡು : ಪರಿಮಳವಾರಿಯಿಂ ಜಳಕಮಾಗಿವ ನಲ್ಲುಣಿಸಿಕ್ಕುವ . . . ಬೆಳ್ಳಿಲೆಯಿಂ ಮಡಿದೀವ ದಿವ್ಯಚಾಮರಮನೆ ಬೀಸುವಗ್ಗದ ವಿದಗ್ಧೆಯರೊಪ್ಪಿರೆ ದೇವಿ ರಂಜಿಪಳ್ (ರಾಜಶೇ. ४-४೧).

[ ನಲ್ಲುಣಿಸು + ಇಡು₁ ]

ನಲ್ಲುಣಿಸು (ನಾ). ಸವಿಯಾದ ಊಟ ; ರುಚಿಕರವಾದ ಆಹಾರ : ಒಳ್ಳೆಯ ತಿನಿಸು : ಅಜುತರ್ದಯಾಚ್ ಪೀರ್ದುಂ . . . ಗೆಲೆವಕ್ಕಿಯೆಲ್ಲಮಂ ನೆಱೆ ಬಟಿಯಟ್ಟಿ ನಲ್ಲುಣಿಸನೂಡಿಯುಮಾತ್ಮದ ತೀರದವೇಣ್ಗೊಳೊಂದಿಜಿ ರಸದಂತುಗುಣದೆ ದಲೊಂದು ಶುಕಂ ಮಧುಸಮ್ಮದೋತ್ಸುಕಂ (ಚಂದ್ರಕು. ೬-೪೭) ; ನಸು ಬಿಸಿಯಪ್ಪ ನಲ್ಲುಣಿಸಿನಿಂ . . . ಎಸಕದ ಶೋಣ ವರ್ಣವಸನಾವೃತದಿಂ ಜನಮಾಗಳಂತು ಜೀವಿಸಿತಿನಿತಲ್ಲದುದುಟ್ವುದೇ ಪಿಪಾಸದಾಗರವಾದ ಮಾಗೆಯೊಳ್ (ಶಬಸುಪಾ. ೬-೨೩) ; ಮಜ್ಜನವ ಮಾಡಿಸಿ ನಲ್ಲುಣಿಸನಿಟ್ಟನುಪಮಸ್ನೇಹದಲಿ ಸಂತುಷ್ಟತೆಯ ಮಾಡಿದಳು (ಸಾಳ್ವಭಾ. ೧೭-೬೭) : ನಲ್ಲುಣಿಸುಗಳನಿಟ್ಟು ತಂದಿಪನ್ (ಶ್ರೀರಾಮಾ. ೧೫೫-೮೫). [ ನಲ್ + ಉಣಿಸು₂ ]

ನಲ್ಲುಲಿ (ನಾ). ೧. ಹಿತವಾದ ಮಾತು; ಒಳ್ಳೆಯ ನುಡಿ: ಗಾನದ ಮಲ್ಲುಲಿ ಶ್ರುತಿಶಾಸ್ತ್ರವ್ಯಾಖ್ಯಾನದ ನಲ್ಲುಲಿ . . . . ಎಸೆಗಾ ಹುರದಲ್ಲೆಡೆಯರ ಬೀದಿಯೊಳು (ಉದ್ಭಟೀ. ೨-೩೭). ೨. ಮಧುರವಾದ ಧ್ವನಿ ; ಇಂಪಾದ ಉಲಿ : ಹಲಸರಿನ್ ಮೊದಲೆದ್ದುದೊಂದಾರ್ಪು – ಬಲ್ಲುಲಿಯ, ನಲ್ಲುಲಿಯ ಪಾಡು, ದೀವಿಕರೆಯರೆಗಳಿನ್ ಮೊಳಗೆ ಮಾರುಲಿಗಳ್ (ಶಾರಿಸಿ. ೧೫-೩೩೩).

[ ನಲ್ + ಉಲಿ₂ ]

ನಲ್ಲೂರ್, ನಲ್ಲೂರು (ನಾ). ಒಂದು ಊರಿನ ಹೆಸರು : ತತಃ ಗ್ರಾಮ ತ್ರಯ ಸೀಮಾ ಅಶ(ಶ್ವ)ತ್ಥ ತತ ನಲ್ಲೂರ್ತಟಾಕಸ್ಯ ದಕ್ಷಿಣಾನ್ತಭಾಗ (ಮೈಆರಿ. ೧೯೧೨, ೭೫-೧೦೮ : 810). ನಲ್ಲೂರು : ಪೂವಿನ ಪುಲ್ಲಿಮಬ್ಬಿಲ ಕೂತನಿದುನಲ್ಲೂರು ನಲ್ಲೂರು ಕೊಮರಜ್ಜನ್ನು ಇಗ್ಗಲೂರು (ಎಳ. IX, ಬೆಂಗಳೂ. ೮೩-೬ ; ಸು. 890) ; ಇದಕ್ಕೆ ಸಾಕ್ಷಿ . . . ಕಿಱಿಯ ಮುಗುಳಿ ಮುಟ್ಟಳ್ಳಿ ನಲ್ಲೂರು ಮಾಗಣ್ಣ ತೇಗುರು (ಎಳ. VI, ಚಿಕ್ಕಮ. ೧೨-೨೨ ; 959) : × × × ಚ ಗಾವುಣ್ಣನುಂ ನಲ್ಲೂರೆಱೆಯಂಗ ಗಾವುಣ್ಣ × × × (ಎಳ. I (R), ೩೫-೦೨ ; 11ನೆಯ ಶತ). [ ನಲ್ಲ₂ + ಊರ್ ]

ನಲ್ಲೂರು 'ನಲ್ಲೂರ್' ನೋ.

ನಲ್ಲೆ (ನಾ). ೧. ಪ್ರಿಯೆ ; ಕಾದಲೆ : ನಕ್ಕನು ಕೃಷ್ಣ ನಲ್ಲೆಯ ಮಾತ ಕೇಳ್ದು (ಮೋಹತ. ४-೨೨) : ನಲ್ಲೆಯಂ ನೆನೆಯುತ್ತ ಬಿಕ್ಕಿದಂ (ಸಾನಂದ. ೬-೩) ; ಬದುಕಿನೊಳವಂ ಕಡೆಗಣ್ಣ ಕೂಡಲಿಂದರಿವಂತೆ ನಲ್ಲೆ, ನಿನ್ನೊಳವನೇತರಿಂ ನಾನರಿಯ ಬಲ್ಲೆ? (ಗೀಪಿಂ. ೨೮-೩೫); ನಲ್ಲೆ ವರಿಸಿದಳೆನ್ನ (ಅನೀಕೇ. ೯-೭). ೨. ಹೆಂಡತಿ : ನಲ್ಲೆ ಲಕ್ಷ್ಮೀಮತಿಯು ಸಹ ತಾನುಲ್ಲಸದಿ ಕುಳ್ಳಿರಲು (ನಾಗಚ. ४೦-೫೪). [ ನಲ್ಲ₁ + – ಎ₂ ]

ನಲ್ಲೆಣ್ಣೆ (ನಾ). ಅಡುಗೆಗೆ ಉಪಯೋಗಿಸುವ ಎಣ್ಣೆ ; ಒಳ್ಳೆಯ ಎಣ್ಣೆ : ಎಳೆಯ ಬಾಳೆಯ ಹೂವಿನೆಸಳ ಕಾಯ್ಗಳನು ಸಂಬಳಿಸಿವಾ ಹುಡಿಗೆ ನಲ್ಲೆಣ್ಣೆ ಸುಣ್ಣವನಿಕ್ಕಿ ತಿಳಿಯಕ್ಕಿಗಟ್ಟಿನಿಂದುತ್ಕರಿಸಿ (ಸೂಪಶಾ. ४-೬४).

[ ನಲ್ + ಎಣ್ಣೆ ]

ನಲ್ಲೆತ್ತು (ನಾ). ೧. ಒಳ್ಳೆಯ ಎತ್ತು ; ಉತ್ತಮವಾದ ವೃಷಭ : ನಲ್ಲೆತ್ತುವಿಡಿದು ನಾಡೊಳಗೆಲ್ಲಂ ಪೆಸರ್ವೆತ್ತ ಜೀವದನವಂ ಕೊಂಡೊಯ್ದಲ್ಲಲ್ಲಿ ವೀರಪ್ರಣಾಮಂ ನಿಲ್ಲದೆ (ಪುಣ್ಯಾಸ್ರ. ६-೧೮) ; ನಲ್ಲೆತ್ತು ಬಂಡಿ ಬಲವಿಲ್ಲದ ಆರಂಬ ಕಲ್ಲು ಕಸಗಳನು ಬಿಟ್ಟಾತ ಹೊಲದೊಳಗೆ ಹುಲ್ಲನೇ ಬೆಳೆವ (ಸರ್ವಜ್ಞ. ೦೩೬೦). ೨. ಒಳ್ಳೆಯ ಎತ್ತುಗಳ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ನಲ್ಲಾವು ನಲ್ಲೆತ್ತು ಕಳುಕು (ಎಳ. VI, ತರೀಕೆ. ೨೦-೨೮ ; 1186) ; ನಲಾವು ನಲ್ಲೆತ್ತು ಕಳುಕು ಕಂಡಿಕೆವಣ (ಮೈಆರಿ. ೧೯४೦, ६-೨೫ ; 1216) ; ನಲ್ಲೆತ್ತು ನಲ್ಲವಿಡ್ಡಾಯಗೋಣಿ ಕವಡಿಯಿಲ್ಲ (ಎಳ. IV (R), ಕೊಳ್ಳೇಗಾ. ६३-४೦ ; 1384) ; ಕ್ರಯ ಕಡ್ಡಾಯ ನಲ್ಲೆತ್ತು ನಲ್ಲೆಮ್ಮೆ ಪೊಂಬಳಿ × × × (ಮೈಆರಿ. ೧೯३४, ೫೩-೧೧ ; 1406) ; ಕ್ರಯ ಕಡಾಯ ಭಿಟ್ಟ ಕೊಟ್ಟ ನಲ್ಲೆತ್ತು ನಲ್ಲೆಮ್ಮೆ (ಮೈಆರಿ. ೧೯३४, ೫೭-೨೦ ; 1480).

[ ನಲ್ + ಎತ್ತು₂ ( < ಎಱು₁ ) ]

ನಲ್ಲೆಮ್ಮೆ (ನಾ). ೧. ಒಳ್ಳೆಯ ಜಾತಿಯ ಎಮ್ಮೆ. ೨. ಒಳ್ಳೆಯ ಎಮ್ಮೆಗಳ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಈಂತಿ ಅಧಿಕಾರವ ಅವಸಗಿ ಹಡದು ಬಂದಾತ ತುನ ಧರ್ಮ್ಮವಾಗಿಯ ಪ್ರತಿಪಾಲಿಸುದು ನಲ್ಲೆಂಮೆಯ [ವ]ರಣಪ್ಪ ಶ್ರೀಮತು ಮಾರ್ಕಂಡೇಸರ (ಸಾಇಇ. IX-1, ३೨೮-೦४ ; 1197) : ನಲ್ಲೆಂಮೆಯು ಉಗ್ರಾಣ ನಾರಣವೆಗ್ಗಡೆಯು ಗಿರಿಪಯ್ಯ ಪಿರಿಯಣಾಂಗಳು (ಸಾಇಇ. IX-1, ३४೯-४ ; 1232) : ಗಡುಗೆ ನಿವೇದ್ಯ ನಂದಾದೀವಿಗೆ ಮಂನಿರ್ಬರು ಮಹಾಜನಂಗಳ ಭೋಜನಕ್ಕಂ ಬಿಟ್ಟ ನಲ್ಲೆಂಮೆ ನಲ್ಲಾವು . . . ಧಾರಾಪೂರ್ವ್ವಕಂ ಮಾಡಿಕೊಟ್ಟರು ನಲ್ಲೆಮ್ಮೆಯ ಪಡಿಕೆಯನೆತ್ತುವ ಪೆಗ್ಗಡೆಗಳಾರು ಬಂದಡಂ ತಂಮ ಧರ್ಮವಾಗಿ ಪ್ರತಿ

ಪಾಳಿಸುವರು (ಸೌಇಇ. IX-1, ೩೪೯-೭ ; 1285) ; ತುಪ್ಪ ನಲ್ಲೇರು ನಲ್ಲಮ್ಮೆ ಹೊಡಕೆ ತಿರುಪು ಮಗ್ಗ ಮುದ್ರೆ ಕ್ರಯ . . . ೯ಧಿಕವಾಸ ಮುಂತಾಗಿ ಯೇನುಳ ಸರ್ವ್ವಸ್ವಾಮ್ಯವನೂ ನೀಉ ಆಗುಮಾಡಿಕೊಂಡು . . . ಭೋಗಿಸಿ ಬಹುದು (ಸೌಇಇ. IX-II, ೪೪೦-೨೫ ; 1419) ; ಕ್ರಯ ಕಡಾಯಭಟ್ಟಕೊಟ್ಟ ನಲ್ಲೆತ್ತು ನಲ್ಲೆಮ್ಮೆ ಮಾವಿನ ಬಟ್ಟ . . . ನಿವಾಗೆ ಧಾರೆಯೆರದು ಕೊಟ್ಟು (ಮೈಆರಿ. ೧೯೩೪, ೨೭-೨೦ ; 1430).

[ ನಲ್ + ಎಮ್ಮೆ (<ಎರ್ಮೆ) ]

**ನಲ್ಲವೆಣ್** (ನಾ). ಪ್ರೀತಿಯ ಹೆಣ್ಣು ; ಪ್ರಿಯೆ : ಒಳ್ಳಿತಾಯ್ತುದ ಪೇಳ್ವೆ ವೆಮ್ಮಣ್ಣಗೆಂದರು ನಲ್ಲವೆಣ್ಣದೆ ನಾಟಿ ಬೆದಱ್ (ಭರತೇ. ೪೦-೭೭).

[ ನಲ್ಲ + ಪೆಣ್ ]

**ನಲ್ಲೇರು** (ನಾ). ಒಳ್ಳೆಯ ನೇಗಿಲಿನ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ತುಪ್ಪ ನಲ್ಲೇರು ನಲ್ಲಮ್ಮೆ ಹೊಡಕೆ ತಿರುಪು ಮಗ್ಗ ಮುದ್ರೆ ಕ್ರಯ ಕಡ್ಡಾಯ . . . ಮುಂತಾಗಿ ಯೇನುಳ ಸರ್ವ್ವಸ್ವಾಮ್ಯವನೂ ನೀಉ ಆಗುಮಾಡಿಕೊಂಡು . . ಭೋಗಿಸಿ ಬಹುದು (ಸೌಇಇ. IX-II, ೪೪೦-೨೫ ; 1419). [ ನಲ್ + ಏರು$_2$ (<ಏರ್) ]

**ನಲ್ಲೈವರು** (?) (ನಾ). (?) : ತಗೂಡರ ಕುರುಳ ಕೊಗೂಣ್ಣ ಎಡತಲೆಯ ಕೊತದ ವುಳ್ಳಿಗನುಂ ಕೆಂನ್ನಲ್ಲೆಯ ಬದ್ರಿಮೆ ಐಯನೂಂ ನಿಟ್ಟರೆಯ ಬೋರ ಅಚ್ಚಗಣ್ಣನುಂ ನಲ್ಲೈವರು ಸಕ್ಷಿ (ಎಕ. III, ನಂಜನ. ೦೯೯-೦೯ ; 972 ?).

[ P ಇದು 'ನಾಲ್ವರು' ಎಂಬುದರ ಅಪಲಿಖಿತವಿರಬಹುದೆ? ]

**ನಲ್ವ** (ನಾ). ದೂರವನ್ನು ಅಳೆಯುವ ಒಂದು ಪ್ರಮಾಣ; ನಾನೂರು ಹಸ್ತಗಳ ಅಳತೆ; ಫರ್ಲಾಂಗು: ಆ ಸುಧನ್ವಂ ಬಳಿಕ ಮೇದಿನಿಯದಿರ್ದನಂ ತೆಗೆದೆಚ್ಚ ನರ್ಜುನನ ತೇರೊಂದು ನಲ್ವಮಾತ್ರಂ ತೊಲಗಲು (ಕೃಮಿಅ. ೦೩-೩೦). [ ಸಂ. ]

**ನಲ್ವಗಲ್** (ನಾ). ೧. ಒಳ್ಳೆಯ ಹಗಲು. ೨. ಒಳ್ಳೆಯ ದಿವಸ ; ಶುಭ ದಿನ : ಬಟಾಕ್ಕ ಮೌಹೂರ್ತಿಕರ್ ಕೂರ್ತು ವೇಟ್ಟ ನಲ್ವಗಲೊಳ್ . . . ನಾಮಕರಣಮಂ ನಿರ್ವರ್ತಿಸುತ್ತ (ಚಳಪಿ. ೪-೮೩). [ ನಲ್ + ಪಗಲ್ ]

**ನಲ್ವಗೆ** (ನಾ). ೧. ಒಳ್ಳೆಯ ಮನಸ್ಸು ; ಸ್ನೇಹಪರವಾದ ಮನಸ್ಸು. 'ನಲ್ವಗೆಗೊಳ್' ಪರಾ. ೨. ಉಲ್ಲಾಸದಿಂದ ಕೂಡಿದ ಮನಸ್ಸು ; ಪ್ರಸನ್ನಚಿತ್ತ. 'ನಲ್ವಗೆವೆಱು' ಪರಾ. [ ನಲ್ + ಬಗೆ$_1$ ]

**ನಲ್ವಗೆಗೊಳ್** (ಕ್ರಿ). ಒಳ್ಳೆಯ ಮನಸ್ಸನ್ನು ಹೊಂದು; ಪ್ರಸನ್ನವಾಗು: ನಿನ್ನಯ ಚಾಗಮುಂ ಸಿರಿಯುಂ . . . ನಿನ್ನಯುಮಾರ್ಗಮಚ್ಚರಿಯನಿತ್ತು ಪುವಮ್ಮೊಡೆಯಂಗಮಿಾ ತೆಱಂ ಪೊನ್ನದು ಕಮ್ಮಿತಾದ ತೆಱನಲ್ಲವೆ ನಲ್ವಗೆಗೊಂಡೊಡಿರ್ವರುಂ (ಕಬ್ಬಿಕಾ. ೦೭೭) [ ನಲ್ವಗೆ + ಕೊಳ್$_1$ ]

**ನಲ್ವಗೆವೆಱು** (ಕ್ರಿ). ಸಂತೋಷಗೊಳ್ಳು ; ಉಲ್ಲಾಸದಿಂದ ಕೂಡು : ತಾವರೆಮೊಗದವರ್ಮುದ್ದುಮೊಗದ ಮಿಗೆ ಚೆಲುವಿನ ಬಟ್ಟಮೊಗದವರು ನಲ್ವಗೆವೆತ್ತು ನಡೆದರೊಗ್ಗಿನಲಿ (ಮೋಹತ. ೨೪-೦೩). [ ನಲ್ವಗೆ + ಪೆಱು$_1$ ]

**ನಲ್ವಚ್ಚ** (ನಾ). ಅಂದವಾದ ಒಡವೆ-ಆಭರಣ : ಚಲಧಮ್ಮಿಲ್ಲಕ್ಕೆ ಚಾಂಪೇಯದ ಬಿರಿಮುಗುಳಂ . . . ಉರುಕುಚಂಗಳ್ಗೆ ಸನ್ನಾಧವೀ ಕುಟ್ಮಲಮಂ ನಲ್ವಚ್ಚಮಂ ಗೈದುಱ್ ತೊಡಿಸಿದರಾ ಕಾಂತೆಯರ್ಕಾಂತೆ ನಾಗಲ್ (ಉದ್ಭಟ. ೯ ೭೩). [ ನಲ್ + ಪಚ್ಚ$_2$ ]

**ನಲ್ವಡಿಗ** (ನಾ). ಸುಂದರವಾದ ಪೀಕದಾನಿ : ಒಮ್ಮೆ ವೀಳೆಯವೀಯು ತೊಮ್ಮೆ ಪನ್ನೀರ್ಗುಡುತೊಮ್ಮೆ ನಲ್ವಡಿಗಪನೊದಪಿಸ ತ ಒಮ್ಮೆ . . . ನಡೆವೈ (ನೀತಿಗೊ. ೫೭-೨). [ ನಲ್ + ಪಡಿಗ ]

**ನಲ್ವಣ್ಣ** (ನಾ). ಅಂದವಾದ ಬಣ್ಣ ; ಸುಂದರವಾದ ವರ್ಣ : ನಡುದೋಲ್ವ ಮೇಲುದಸಿಸು ಮುಸುಕತರ್ಗಣ್ಣ ಬಂಬಲ್ವೆಳಗುಗಳ ಸೂಸುತೆ ನಲ್ವಣ್ಣದಿಸ್ಸಳ [ಮಾಡಂ. ಗಿನ್ನಂ]ಯನುಟ್ ಮೇಳಯಿಸಿಕೊಂಡು . . . ಕಾಂತೆಯೊರ್ವಳ್ ವಿಲಾಸದಿಂ ಚೆಲ್ವಮರೆ ಪದ್ಮರಾಜಾಂಕಮಾಲೆಯ ಬಾಜಿಸುತ್ತಿಸೆದಳ್ (ಪದ್ಮರಾ. ೮-೨೦). [ ನಲ್ + ಬಣ್ಣ ]

**ನಲ್ವತ್ತ** (ನಾ). ಒಳ್ಳೆಯ ಬತ್ತ ; ಶ್ರೇಷ್ಠ ದರ್ಜೆಯ ನೆಲ್ಲು (?) : ಸ್ವಸ್ತಿಶ್ರೀ ಅಪ್ಪೋರಯ್ಯದಿವಕರ್ಕ್ಕ ಪದಿರ್ಕ್ಕಣ್ಣಾಗ ನಲ್ವತ್ತ × × × ಮರವಾಸುಕೆಯೆ (ಎಕ. VI, ಚಿಕ್ಕನಾ. ೫೦-೭ ; ಸು. 450 ?).

[ ನಲ್ + ಬತ್ತ$_1$ ]

**ನಲ್ವಯಕೆ** (ನಾ). ಪ್ರಿಯವಾದ ಬಯಕೆ ; ಹಾರೈಕೆ : ಸ್ಕೂಸ್ ಅಧಿಕಾರ ಪದದಿಂದ ಉರುಳಬೇಕೆನ್ನುವುದು ಅವರ ನಲ್ವಯಕೆ (ಬದ್ಮಪ್ರ. II ೩೬೦೪).

[ ನಲ್ + ಬಯಕೆ$_2$ ]

**ನಲ್ವರಕೆ, ನಲ್ಬರಕೆ** (ನಾ). ಪ್ರೀತಿಯ ಆಶೀರ್ವಾದ; ಶುಭಾಶೀರ್ವಾದ : ಅವುಳರುಮುಟ್ಟುಜಿನೋಜಲ್ಲು ತೆಗೆದಟ್ಟಿ ಪರ[ಸ] ನಲ್ವರಕೆಗಳಿಂ (ಪಂಪಭಾ. ೯-೩) ; ಕಾರ್ಯಸಿದ್ಧಿಯಕ್ಕೆಂದು ಪರಸೆ ನಲ್ವರಕೆಗಳಿಂ (ಸುಕುಮಾ. ೨-೪೫); ಮಾತುಳಂಗಂ ಮಾತುಳಾನಿಗಂ ತುಟಾಲ್ಗೆಯ್ವುದುವವರನೇಕ ನಲ್ವರಕೆಗಳ್ಪೆರಸು ಪರಮೋತ್ಸವಪರಂಪರೆಯನೆಯ್ದಿ (ಪುಷ್ಪಪು. ೮-೪೯ ವ) ; ಪುರೋಹಿತರ್ ನಾಮಕರಣಂಗೆಯ್ದು, ನುಡಿದು ನಲ್ವರಕೆಯಂ (ಶ್ರೀರಾಮಾ. ೦೩-೪೩೦). **ನಲ್ಬರಕೆ** : 'ನಲ್ಬರಕೆವೆಱು' ಪರಾ. [ ನಲ್ + ಪರಕೆ$_1$ ]

**ನಲ್ವಳಿ** (ನಾ). ೧. ಒಳ್ಳೆಯ ದಾರಿ; ಸನ್ಮಾರ್ಗ: ಅರ್ಗೆ ನಲ್ವಳಿ ತಪ್ಪಿತ್ತೋ ತಪ್ಪಿತ್ತಾತಂಗೆ ಮುಕ್ತಿಯುಂ (ಸಾನಂದ. ೦೪-೪೪). ೨. ಒಳ್ಳೆಯ ವಂಶ ; ಸತ್ಕುಲ. 'ನಲ್ವಳಿಗ' ಪರಾ. [ ನಲ್ + ಬಳಿ$_3$ (<ಬಟ್$_3$) ]

**ನಲ್ವಳಿಗ** (ನಾ). ಒಳ್ಳೆಯ ವಂಶದಲ್ಲಿ ಹುಟ್ಟಿದವನು ; ಸತ್ಕುಲಪ್ರಸೂತ; ಕುಲೀನ : ಜವ ನಿಗನುಂ ಸೊಬಗನುಂ ನಲ್ವಳಿಗನುಮೈಸಿರಿವಂತನುಂ ಚೆಲ್ವನುಮವನಾಗಿರ್ದೊಡಂ ವಿಚಾರನೆಂದುಂ ನಿನ್ನಂ (ಸಾನಂದ. ೬-೨೦).

[ ನಲ್ವಳಿ + -ಗ$_3$ ]

**ನಲ್ವಾಡು** (ನಾ). ಪ್ರೇಮಗೀತೆ ; ಪ್ರಣಯಗೀತೆ : ತರುಣವರ್ಗದ ನಲ್ವಾಡುಗಳನ್ನು ಕೇಳಬೇಕು : ತಾಳವಿಲ್ಲ ; ತಂತಿಯಿಲ್ಲ (ಹೆಬ್ಬಿನಿ. ೨೪) ; ನೀವು ಇಷ್ಟೊಂದು ನಲ್ವಾಡುಗಳನ್ನು ಬರೆದಿದ್ದೀರಿ. ಈ ಸ್ಫೂರ್ತಿಯ ನೆಲೆ ಯಾವುದು ಹೇಳಬಲ್ಲಿರಾ ? (ಸಮಚಿ. ೩೫೪). [ ನಲ್ + ಪಾಡು$_3$ ]

**ನಲ್ವಾತು** (ನಾ). ಒಳ್ಳೆಯ ಮಾತಂ ; ಹಿತವಾದ ನುಡಿ. 'ನಲ್ವಾತುಗುಂಟ್ಟು' ಪರಾ. [ ನಲ್ + ಮಾತು$_1$ ]

**ನಲ್ವಾತುಗ** (ನಾ). ಹಿತವಾದ ಮಾತುಗಳನ್ನಾಡುವವನು ; ಸವಿಮಾತುಗಳನ್ನಾಡುವವನು : ಪ್ರಜೆಗಳ್ ವೀರರೆನಿಸಿಯುಂ ವಿನಯವಂತರುಂ ನಲ್ವಾತುಗರಾಗಿಯುಂ ನನ್ನಿಗರುಂ (ಚಿಕವಂ. ೦೪೩-೦೭).

[ ನಲ್ವಾತು + -ಗ$_3$ ]

**ನಲ್ವಾತುಗುಂಟ್ಟು** (ಕ್ರಿ). ಒಳ್ಳೆಯ ಮಾತುಗಳನ್ನಾಡು : ಮುದದಿಂದೋ ಸಱಗೇಳಲೆಂದು ನಿಲೆ ಮೋನಂಗೊಂಡು ನಲ್ವಾತುಗುಂಟ್ಟದೆ ಮಾಣ್ದಿರ್ದೊಡೆ ಸಿಪ್ಪಲಿಂ (ರಾಜಶೇಖ. ೦೨-೫೬). [ ನಲ್ವಾತು + ಕುಂಟ್ಟು$_1$ ]

**ನಲ್ವಾಸು** (ನಾ). ಮೃದುವಾದ ಶಯ್ಯೆ ; ಮೆತ್ತನೆಯ ಹಾಸುಗೆ : ಆ ಚಂದ್ರನನು . . . ದಶರಥನ ಸೊಸೆಯನಿರಿಸಿದಳಂಚೆತಿಪ್ಪುಳಿಂ ಸಮೆದ ನಲ್ವಾಸಿನೊಳ್ (ಶ್ರೀರಾಮಾ. ೩೩೦ ೪೪). [ ನಲ್ + ಪಾಸು$_2$ ]

**ನಲ್ವಾಟೆವಣ್** (ನಾ). ಸವಿಯಾದ ಬಾಳೆಯ ಹಣ್ಣು ; ರುಚಿಯಾದ ಬಾಳೆಹಣ್ಣು : ಉರುಕರ್ಣಿಕಾರದಲರಂ ನಲ್ವಾಟೆವಣ್ಣಂ ಮಹೀಶಂಗೆ ತ್ರಿಳ್ಳನಮಾಲಿಕಾಂಗನೆ (ಉದ್ಭಟ. ೯ ೦೨); ನಲ್ವಾಟೆವಣ್ಣಂ . . . ತೋಂಟಿಗಂ ಕೊಟ್ಟನೊರ್ವಂ (ಕಬ್ಬಿಕಾ. ೮೮). [ ನಲ್ + ಬಾಟೆವಣ್ ]

**ನಲ್ವಡಿ** (ನಾ). ಒಂದು ಊರಿನ ಹೆಸರು ; P ಈಗಿನ ಬಳ್ಳಾರಿಜಿಲ್ಲೆಯ ಕುರುಗೋಡು ತಾಲ್ಲೂಕಿನ ನಲವಡಿ : ನೊಳಂಬಮಹಾದೇವಿಯ ರಂಗಮುಂ ಗಂಗೆಯೊಳಿಕ್ಕಿ ಬಂದ ಬ್ರಾಹ್ಮಣ ಪಾದಪಸೆನಂಗಿಯರ್ಗೆ

ಕೃಷ್ಣಯ್ಯಂಗಂ ತುಪ್ಪದ ದೇವಯ್ಯಂಗಂ ನಲ್ವಿಡಿ ೧೨ ಅ ಕಂಪಣಂ ಒರ್ವಾಯಿಯಂ ಕುಡೆ (ಸೌಇಇ. IX-1, ೯೨-೧೬ ; 1036). [ ? ]

**ನಲ್ವು** (ನಾ). ನಲಿವು; ಸಂತೋಷ: ಬಿಲ್ವಪತ್ರೆಯನೆಯ್ದೆ ಕೊಯ್ದಾತಿ ನಲ್ವಿನಿಂ ಶಿವಲಿಂಗಪೂಜೆಗೆ ಸಲ್ವ ವಸ್ತುವಿದೆಂದು ಶೋಧಿಸಿ ಸಜ್ಜೆಯೊಳು ತುಂಬಿ (ಬಸಪು. ೪೭-೨೬). 'ನಲವು₁', 'ನಲಿವು' ಪರಾ.

[ ನಲ್ + – ವು ]

**ನಲ್ವೆಣ್** (ನಾ). ಒಳ್ಳೆಯ ಹೆಂಗಸು; ಪತಿವ್ರತೆ.

ನಲ್ವೆಂಡಿರ್ (ಬಹುವ): ಪಲನೀರ ಮುಳುಗಿ ಮುಂಗೆಡದೆ ನಲಿದೆಸಗುವ ನಲ್ವೆಂಡಿರ ನಡತೆಗೆ ಪಲನೇಮಗಳು ಪಾಸಟಿಯೆ (ಹರಿಬ. ೨-೨೩); ಮೂವರುಂ ನಲ್ವೆಂಡಿರುಂ ಕಾಮದಿಂ ಪ್ರೇಮದಿಂ ಮದುವೆನಿಂದಿರ್ದೊಡಂ (ಶ್ರೀರಾಮಾ. ೮-೧೪೦). [ ನಲ್ + ಪೆಣ್ ]

**ನಲ್ವೆಸ** (ನಾ). ಒಳ್ಳೆಯ ಕೆಲಸ; ಉತ್ತಮ ಕಾರ್ಯ,-ಕರ್ತವ್ಯ: ಈ ಎಡರಿನೊಳ್ ನಿಮ್ಮ ನಲ್ವೆಸನ್, ಜನವಂಜದಂತೊಳ್ಪು ನುಡಿದು, ನಂಬುಗೆಯನುಳಿಸುವುದು (ಹಾಕಸಿ. ೦೯-೪೪೦). [ ನಲ್ + ಬೆಸ₁ ]

**ನಲ್ವೆಸರ್** (ನಾ). ಉತ್ತಮವಾದ ಹೆಸರು; ಚೆನ್ನಾದ ಹೆಸರು: ದೇವರಾಜರಸರೆಂದುಂ ಚೆನ್ನರಾಜರಸರೆಂದುಮನ್ವರ್ಥಂಗಳಾದ ನಲ್ವೆಸರ್ಗಳನಿಟ್ಟು (ಚಕವಿ. ೨-೨೪). [ ನಲ್ + ಪೆಸರ್ ]

**ನಲ್ವೆಟ್** (ನಾ). ಸುಂದರವಾದ ಚಂದ್ರ: ಸುರನಿಮ್ನಗೆ ನಲ್ವೆಟ್ ಕಂಜಡೆ ತಳ್ತುರಿಗಣ್ಣಸುಳಂ ಗರಳಂ ಭಸಿತಂ . . . ಫಣಾಧರನೊಪ್ಪಿರೆ ರಂಜಿಸಿದಂ ಗಿರಿಶಂ (ವೃಷವಿ. ೪೨-೩೪). [ ನಲ್ + ಪೆಟ್ ]

**ನಲ್ವೊಟ್ತು** (ನಾ). ಒಳ್ಳೆಯ ಗಳಿಗೆ; ಶುಭಮುಹೂರ್ತ: ಬಟಿಕ್ಕೆ ರಾಜನೃಪಂ . . . ಜೋಯಿಸಿಗನಿತ್ತ ನಲ್ವೊಟ್ತಿನೊಳೋಲಗಮಿರ್ದು . . . ಅರಸುಗೆಯ್ಯುತ್ತಿರೆ (ಚಕವಂ. ೪೯-೦೭). [ ನಲ್ + ಪೊಟ್ತು ]

**ನಲ್ವೊಗ** (ನಾ). ಅತಿ ಸುಖ; ಅತ್ಯಾನಂದ: ಒಡರ್ಚಿ ನಲ್ವೊಗಮನಗ್ಗಿ ವೊಗೆರ್ಗೆ ಸಮಂತು ಬೆಳ್ವಸಂದಲೆದೆಸೆದಿರ್ದ ಬಾನ್ನವಿರನೊಳ್ಳರಿಜಂ ತಳೆದೊಪ್ಪಿ ತೋಟಿದಂ (ಕಲಕಂ. ೩-೯). [ ನಲ್ + ಸೊಗ ]

**ನವ₁** (ನಾ). ಒಂದು ಸಂಖ್ಯಾವಾಚಕ; ಒಂಬತ್ತು: "ನವ. ಪದಾರ್ಥ, ರಂಧ್ರ . . . ನಾಟ್ಯಾಂಗ, ಇಂತಿನಿತುಂ ೯ಕ್ಕೆ ಪೆಸರು" (ವೃಪಹಾ. ೦೦-೩); ನವ ನಿಧಿ ಶರ ಶಶಿ ಸಂಖ್ಯಾಪ್ರವಿಲಸಿತಂ ಶಾಲಿವಾಹನ ಶಕಾಬ್ದಂಗಳ್ (ಜೂದಕಂ. ೦೬-೦೧೬). 'ನವನಿಧಿ', 'ನವರತ್ನ' ಪರಾ. [ ಸಂ. ನವನ್ ]

**ನವ₂** (ಗು). ೧. ಹೊಸತಾದ; ನವೀನವಾದ: "ನವಮಭಿನವಂ ನವೀನಂ ನೂತನಂ ನವ್ಯಮಿವು ಪೊಸತೆನಿಕು" (ಮಂಗರಾ. ೦೨೯-೦೩); ಅದೊರ್ಮೆ ನವಕಾವ್ಯಬಂಧರಚನಾವಿಶೇಷಂಗಳಿಂದಂ . . . ಕಳೆವನಿಂತು ಪೊಟ್ತಂ ನೃಪಂ (ಕಾದಂಪೂ. ೨೨); ತನ್ನ ಬಾಟ್ಕೆಯನ್ನೇತಜದೆಂಬ ಮೆಯ್ಯಬುಕದಿಂ ನವಚಿತ್ರಪಟಂಬೊಲಿರ್ಪನಾ ಭೂತಳವಲ್ಲಭಂ (ನೇಕಂ. ೩೩): ಐತಂದುವೆಡೆ ಬಿಡದೆ ಕ್ರೌಂಚಸಾರಸಪಂಕ್ತಿ . . . ನವವರ್ಷಹರ್ಷದುನ್ಮಾದಕಲನಾದದಿಂ (ಶ್ರೀರಾಮಾ. ೦೩-೩೯೯). ೨. ಎಳೆಯ; ತರುಣ; ತಾಜಾ: ನವಕಂಕೇಲುದ್ಗಮಮುಂ ತವೆ ಕೊಯ್ಯಲ್ಕೆಯ್ಯನಿಕ್ಕಿ (ಉದ್ಭಟ. ೯-೬೬); ತೋಳ ನವಗುಂಜಿಯಿಂ ಕಿಸಲಯದ ನಿಜಿಗಳಿಂ ಭಾಳತಟದೆಡೆಯ ಕತ್ತುರಿಯ ನವತಿಲಕದಿಂ (ಲಿಂಗಪು. ೬-೨೦). 'ನವಕನ್ನೆ', 'ನವಪಲ್ಲವ' ಪರಾ. ☞ 'ನವ' ಎಂಬುದನ್ನು ಇತರ ಅನೇಕ ನಾಮಪದಗಳೊಡನೆ ಸೇರಿಸಿ ಸಮಾಸ ಗಳನ್ನು ಮಾಡುತ್ತಾರೆ.

ನವನವ (ದ್ವಿರುಕ್ತಿ): ಮತಿಯು ತಾಂ ಸತ್ಕಶುಭಗಳ ನವನವಾಂಶಗಳ ಗತಿಯನರಸುತ ನಡೆಯೆ ಪೌರುಷಪ್ರಗತಿ ಮತನೀತಿ ಶಾಸ್ತ್ರಗಳು ರಾಜ್ಯ ಸಂಧಾನಗಳು ಮತಿಯ ಕಿಂಚಿದ್ವಿಜಯ (ಮಂಕುಳ. ೨೨೪).

[ ಸಂ. ]

**ನವಕ₁** (ಗು). ೧. ಒಂಬತ್ತರಿಂದ ಕೂಡಿದ. (ನಾ). ೨. ಒಂಬತ್ತರ ಗುಂಪು: ಬಟಿಯಂ ಸಂಜ್ವಳನಕಷಾಯಚತುಷ್ಕನೋಕಷಾಯ ನವಕ ನಾಮ ತ್ರಯೋದಶಪ್ರಕೃತಿಗಳನರೆದು (ಶಾಂತಿಪು. ೦೦-೦೦೦ ವ); ಇಂತು ಸೂತ್ರ ನವಕದಿಂ . . . ಪೀಠಿಕಾಕಥನಂ ಸಮಾಪ್ತಂ (ಶಬ್ದಾನು. ೦೮೩); ಬಳಿಕ್ಕಂ ದ್ವಿವಿಧಪೂರ್ವದಶಂಗಳ್ ತಾವಿರೆ ಸದ್ದಿವಸಂಗಳ್ ಕೋವಿದ ಕೇಳ್ ನವಕಂಗಳ್ (ಜಾತಾಸ್ಕ. ೪-೦೦-೯೯), ಕ್ರಮದಿ ಮೂಱಂ ಬಿಟ್ಟುದು ಪರಿದುತ್ತಮವವನ್ನೆದು ಮೇಲೆ ನವಕವ ಸುಮುಖನಾಗಿಯೆ ನಡಿಸುವವನಾವವನಿವಂ ಧನ್ಯ (ವಿವೇಕ. ೮-೨೪). [ ಸಂ. ]

**ನವಕ₂** (ನಾ). ೧. ಹೊಸತನ; ನವೀನತೆ; ಅಪೂರ್ವತೆ: ಗುಲ್ಮಂಗಳೆಸೆವವು ವೃತ್ತವೆತ್ತತ್ತಿ ನವಕದಲಿ ಸತಿಯ (ಬಸಪು. ೪-೦೭); ನವಕವಿಲ್ಲದ ಕಳಿದ ಮುನ್ನಿನ ದಿವದ ತೊಟ್ಟಂ ಕಳೆಯದರಳಂ ವಿವರದಲಿ ಶೋಧಿಸದೆ (ಬಸಪು. ೪೭-೦೩). ೨. ಹೊಸಬ; ಅಪರಿಚಿತ: ನವಕನಿವಂ ಬಂದಂ ಮಾಣವಕಂ ತಾನೆತ್ತಣಂದವೆಂದಾ ವಿಪ್ರಪ್ರವರನ ಸಭೆ . . . ಇನಿತು ಬೇಗಮಿಕ್ಕಿಸುತಾಗಳ್ (ವರ್ಧಪು. ೦೬-೬). [ ಸಂ. ]

**ನವಕಂಟಕ** (ನಾ). ಹೊಸದಾಗಿರುವ ಮುಳ್ಳು; ಎಳೆಯ ಮುಳ್ಳು: ನವಕಂಟಕಮಾಡಿಯಂ ನಡೆ ಸವತಿಯನಪ್ಪಿದುದನಱಿದು ಪತಿ ಪೆಗಲಿಂ ಪೊತ್ತವಳಗಿದರ್ (ಲೀಲಾವ. ೦೩-೯೦). [ ನವ₂ + ಕಂಟಕ ]

**ನವಕಂಡ** (ನಾ). (?) : ಅ[ ಸು ]ವಟ್ಟಗವೊನ್ದು ದೇಗುಲಕ್ಕೆ ನವಕಣ್ಣದ ಪಲಗೆಯುಂವ ಕೊಳನಂ ಬೀಕೆಸ್ವರಕೆ ಕೊಟ್ಟ (ಸೌಇಇ. XI-1, ೩೫-೦೨; ೨೨೩). [ ? ]

**ನವಕಂಬಡೆ** (ಕ್ರಿ). ಹೊಸತನವನ್ನು ಪಡೆ; ನವೀನವಾಗು: ಥವಿವಡೆದು ನವಕಂಬಡೆದ ನವ್ಯಸಹಸ್ರದಳಶತದಳಮನರ್ಪಿಸುತ (ಬಸಪು. ೩೫-೦೩).

[ ನವಕ₂ + ಪಡೆ₁ ]

**ನವಕನ್ನೆ** (ನಾ). ಎಳೆಹರಯದ ಕನ್ಯೆ; ಹೊಸಪ್ರಾಯಂದ ಹಂಡಂಗಿ: ಎಸಳೆಸಳಿನ ಸಿರಿಸಲ ಚವುರಿಸುವದು ಮೈಯನ್ನೆ ಬೀಸಲು ಮೈನವಿರೇರಿದ ನೇರಿಳೆ ನವಕನ್ನೆ (ಮುಕ್ತಕಂ. ೪೪-೮). [ ನವ₂ + ಕನ್ನೆ₁ ]

**ನವಕಮಲ, ನವಕಮಳ** (ನಾ). ಆಗ ತಾನೇ ಅರಳಿದ ತಾವರೆ; ಹೊಸದಾಗಿ ಅರಳಿದ ಕಮಲ: ನವಕಮಲೋದ್ಗಮದಿಂದುತ್ಸವಮಂ ತಾಂ ಗಂಧಗಜಕೆ ಕಮಲಿನಿ ಮಾಳ್ಪಂತೆವೊಲರಸ ನಿನಗೆ ಪರಮೋತ್ಸವಮಂ ಮಾದೇವಿ ಮಾಟ್ಬುಮಿಮಾ ಕನಸಿಂದಂ (ಕಾದಂಪೂ. ೩೭೩). ನವಕಮಳ: ನವಕಮಳದಳಂಗಳ್ ಭೀಕರಂ ಬಲ್ಪುವಾಗಿರ್ಪುವೆ ತಳಿಕೆ ತಳಂಗಳ್ ನೋಯವೇ ಮೆಟ್ಟಿದಂದೆಂದವಱಿಸಟನವಲ್ದಿರ್ ಮಟ್ಟಿದರ್ ಮೆಟ್ಟರೆಂಬಂತ ವಯವದೊಳೆ ಲೀಲಾನೃತ್ಯದಿಂ ಕಣ್ಗೆವಂದರ್ (ಆದಿಪು. ೭-೩೫).

[ ನವ₂ + ಕಮಲ ]

**ನವಕಮಳ** 'ನವಕಮಲ' ನೋ.

**ನವಕರಿ** 'ನೌಕರಿ' ನೋ.

**ನವಕರ್ಮ** (ನಾ). ೧. ಜೀರ್ಣೋದ್ಧಾರದ ಕೆಲಸ; ಮುರಿದುದನ್ನು ಅಥವಾ ಜೀರ್ಣವಾದುದನ್ನು ಮತ್ತೆ ಕಟ್ಟುವ ಕೆಲಸ: ತಪೋಧನರ ವಿದ್ಯಾರ್ಥಿಮಾಣಿಗಳಾಹಾರದಾನಕ್ಕಂ ಪಾವುಳವರಿವಾರದ ಜೀವಿತಕ್ಕಂ ದೇಗುಲದ ಖಣ್ಡಸ್ಫುಟಿತ ನವಕರ್ಮ್ಮಕ್ಕವೆಂದು ಕೊಟ್ಟ ಅಲ್ಲಿಯ ಘಳೆಯ ಮತ್ತರು ೫೦ (ನಾಂದೇಡ್. ೩-೨೨ ವ; 1047). ೨. ನವೀನವಾಗಿ ಮಾಡಿದುದು; ಹೊಸರಚನೆ: ವಿಶ್ವಕರ್ಮನಿರ್ಮಿತ ನವಕರ್ಮಜಾಳಾಂತರಂಗಳೊಳ್ . . . ಅಕಳಂಕಾಚಾರಸಾರನನೆ ಲಕ್ಷ್ಯಂ ಮಾಡಿ ನೋಡುವಲ್ಲಿ (ಶಾಂತಿಪು. ೬-೫ ವ). [ ನವ₂ + ಕರ್ಮ ]

**ನವಕರ್ಮಿಕ** (ನಾ). (?) : ನವಕರ್ಮಿಕ ಮಾಡಿರಿಪುತ ಸಿರಿವೀರ ಪುರಿಸದತ (ಮ್ಯುಎಪಿ. ೦೯೩೪; ೨೯). [ ? ]

**ನವಕವಿ** (ನಾ). ಹೊಸಕವಿ ; ಆಧುನಿಕ ಕವಿ : ಕನ್ನಡಿಸುವ ನವಕವಿಯುವ ನಾವನು ವಿರಹಿಣಿಯರ ಬಪಣೆಯನು (ಇಂಚಾ ಹ. ೨೦೦-೮೭).
[ ನವ₂ + ಕವಿ₁ ]

**ನವಕವಿತ್ವ** (ನಾ). ಹೊಸಕಾವ್ಯ ; ನೂತನ ಕಾವ್ಯ : ಈ ನುಡಿಯ ಪಾಯಂಗಳನೆನಗೆ ಪೇಟ್ಟುದುಂ ನಿನ್ನಿಯ್ದಿದ ನವಕವಿತ್ವಮಂ ನೀನಭಿನಯಿಸಿ ದಂತಾಗಿರ್ದಪುದು (ಶಾಂತಿಪು. ೩-೯೩ ವ). [ ನವ₂ + ಕವಿತ್ವ ]

**ನವಕಳೆ** (ನಾ). ಒಂಬತ್ತು ಅಂಶಗಳು : ಬಿಂದುವೆ ಶಿವಾಂಶಿಕಂ ರಕ್ತ ಶಕ್ತ್ಯಂಶಿಕವು ಚಂದ್ರಾಂಶು ಶುಕ್ಲಶೋಣಿತವು ಸೂರ್ಯಾಂಶುವಿವು ದ್ವಂದ್ವ ಸಮ್ಮಿಳಿತದಿಂ ಪಿಂಡವೆನಿಸಿತ್ತು ರುಧಿರಮ್ಮಾಂಸ ಚರ್ಮತ್ರಿವಿಧಾ ಸಂದು ಮಾತಾಂಶಸ್ಥಿ ನಾಡಿ ರೋಮಮಜ್ಜಾರು ತಂದೆಯಂಶಗ್ನಿ ವಾಯುವು ಯಾತ್ಮಯಿಾ ತ್ರಿತಯ ಬಂಧುರ ಶಿವಾಂಶುಗಳಿಂದೆ ನವಕಳೆಯು ಸಂಯೋಗ್ಯದಿಂ ಪಿಂಡವಹುದು (ಷಟಮೋ. ೧೪-೪೦).
[ ನವ₁ + ಕಳೆ₆ (= ಕಲೆ₃ ) ]

**ನವಕಾಂಡ** (ನಾ). (?) : ನವರತ್ನದ ಸೌಧಂಗಳ ಸವಿವೆಳಗಾ ಪುರಮನೆಲ್ಲ ಮಾವರಿಸೆ ಜನರ್ ನವರತ್ನಪುತ್ಥಳಿಗಳೆನೆ ನವಕಾಂಡದರೆಯ್ದೆ ನೋಡ ಬಂದಂತಪ್ಪರ್ (ಹಾಲಾಸ್ಯ. ೧-೪-೭೨). [ ? ]

**ನವಕಾರಮಂತ್ರ** (ನಾ). [ಜೈನ] ಶಾಸ್ತ್ರದಲ್ಲಿ ಪ್ರಸಿದ್ಧವಾದ ಒಂದು ಸೂತ್ರ,-ಮಂತ್ರ ವಿಶೇಷ : ಜೈನಸಾಧುಗಳು ಘನಗಂಭೀರವಾಗಿ ನವ ಕಾರಮಂತ್ರವನ್ನು ಹಾಡಿದರು (ಸವಕಿ. ೨೩೮).
[ ನವಕಾರ₀ (P ← ಪ್ರಾ. ಣವಕಾರ) + ಮಂತ್ರ ]

**ನವಕುರುಜು** (ನಾ). ಹೊಸದಾಗಿ ನಿರ್ಮಿಸಿದ ಮಂಟಪ : ರಂಗವಾಲಿ ಯಿಂದನುಪಮದ ಕಸ್ತುರಿ ಚಳೆಯ ನವಕುರುಜಿನಿಂ ಜನಿತ ಹರುಷದೊಳಗೆ ಶರಣ ಸಹ ಬರುತಿರ್ದ ಘನಮಹಿಮ ನಂದೀಶನು (ಲಿಂಗಪು. ೭-೪೦).
[ ನವ₂ + ಕುರುಜು ]

**ನವಕೇಶವ** (ನಾ).=ನವನಾರಾಯಣ ೨: ನವಕೇಶವರುರ್ವರೆಯೊಳಗವರುಂ ಮುನ್ನಾಗಿ ಪೋದರ್ (ಧರ್ಮಾಮೃ. ೫-೨೨೨). [ ನವ₁ + ಕೇಶವ ]

**ನವಕೋಟಿ** (ನಾ). ಒಂದು ಸಂಖ್ಯೆ ; ಒಂಬತ್ತು ಕೋಟಿ: ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ ನವಕೋಟಿಬ್ರಹ್ಮರಿಗೆ ಪ್ರಳಯವ ಮಾಡುವದ ನಾ ಬಲ್ಲೆನಾಗಿ (ಬಸವ. ೩೪೦). [ ನವ₁ + ಕೋಟಿ₁ ]

**ನವಕೋಟಿನಾರಾಯಣ** (ನಾ). ೧. ನವಕೋಟಿಹೊನ್ನಿಗೆ ಒಡೆಯ ನಾದವನು ; ಒಂದು ಬಿರುದು ; P ಚಿಕ್ಕದೇವರಾಜರ ಬಿರುದು ೨ ತಮ್ಮಲ್ಲಿದ್ದ ವಸ್ತ್ರಾಭರಣ ದ್ರವ್ಯಗಳನ್ನು ಲೆಕ್ಕಮಾಡಿಸಿ ನೋಡಲು, ನವ ಕೋಟಿ ದ್ರವ್ಯವಾಗಿದ್ದುದರಿಂದ . . . ಉತ್ಸವಕಾಲದಲ್ಲಿ ನವಕೋಟಿ ನಾರಾಯಣ ಎಂಬದಾಗಿ ಹೊಗಳಿಸಿಕೊಳ್ಳುತ್ತ (ಮಹಾವಂ. I, ೧೩೦). ೨. ಪುರಂದರದಾಸರ (ಶ್ರೀನಿವಾಸನಾಯಕನಾಗಿದ್ದಾಗ ಇದ್ದ) ಬಿರುದು: ಬೆಳ್ಳಿ ಬಂಗಾರ ರತ್ನಪಡಿ ವ್ಯಾಪಾರಗಳಿಂದ ಕೋಟ್ಯಾವಧಿ ಧನಾರ್ಜನೆ ಮಾಡಿ ನವಕೋಟಿನಾರಾಯಣನೆಂದು ಹೊಗಳಿಸಿಕೊಂಡನು (ಕಳವಿ. ೦೭೯). ೩. ತುಂಬ ಶ್ರೀಮಂತ,-ಧನಿಕ: ನಮ್ಮ ಶೀನು ನವ ಕೋಟಿನಾರಾಯಣನಾಗ್ತಾನೆ, ನೋಡ್ತಿರಿ (ಹೇಮುಕೂ. ೧೦). ೪. (ಆಲಂ) ಒಂಬತ್ತುಕೋಟಿ ಮಕ್ಕಳನ್ನುಳ್ಳವನು ; ಕೃಷ್ಣ : (೬). ೫. ಹೆಚ್ಚು ಮಕ್ಕಳಿರುವವನು : (೬). [ ನವಕೋಟಿ + ನಾರಾಯಣ ]

**ನವಖಂಡ₁** (ನಾ). ೧. ಭೂಮಿಯ ಒಂಬತ್ತು ವಿಭಾಗಗಳು : ಜಂಬೂ ದ್ವೀಪ ನವಖಂಡ ಪೃಥ್ವಿಯೊಳಗೆ ಕೇಳಿರಯ್ಯ ಎರಡಾಳಿನ ಭಾಷೆಯ (ಬಸವ. ೭೭೭) ; ನವಖಂಡ ಪೃಥ್ವಿ ಚತುರ್ದಶಭುವನ ಗ್ರಾಮದಿಂದತ್ತತ್ತ ಮುನ್ನ ಅನಾದಿಯಲ್ಲಿ ಜಂಗಮವೆ ಲಿಂಗವೆಂಬಿರಿ (ಅವಕಂ. ೪. ೩೫೩-೮೮೩). ೨. ಒಂಬತ್ತು ಚೂರು ; ಚೂರು ಚೂರು ; ಛಿದ್ರಛಿದ್ರ : ಭವ ಬದ್ಧವೈರಮಂ ತಿಳಿದು ವಿಭಂಗಜ್ಞಾನದಿಂದೆ ಪರಿಕ್ರುದ್ಧಮನರ್ ನವಖಂಡ ಮಾಗೆ ಮಾಟ್ಟರ್ ನವನಾರಕರಂ ಪುರಾಣನಾರಕರಾಗಳ್(ಮಲ್ಲಿಪು. ೧೩-೧೩೩); ಹುಟ್ಟಿದ ಮಕ್ಕಳ ನವಖಂಡವ ಮಾಡಿ ಕಡಿಯುತ್ತಿರಲಿ (ಬಸವ. ೭೦೬). ೩. [ಜೈನ] ಇಂದ್ರಖಂಡ, ಶ್ವೇತಖಂಡ, ತಾಮ್ರಖಂಡ, ಗಭಸ್ತಿ ಖಂಡ, ನಾಗಖಂಡ, ಸೌಮ್ಯಖಂಡ, ಗಂಧರ್ವಖಂಡ, ಚಾರಣ ಖಂಡ ಮತ್ತು ಭರತಖಂಡ ಎಂಬ ಭೂಮಿಯ ಒಂಬತ್ತು ಭಾಗ ಗಳು : ನವಖಂಡಾವನಿಯೊಳಗಿರ್ಪವನೀಶರ ಹೃದಯಮೆಯ್ದೆ ಶತಖಂಡ ಮೆನಿಪ್ಪವೊಲೊಡೆಯ ಭೂರಿಭೇರೀರವವೆಸೊಗೆದುದು ಚಕ್ರಿವಿಜಯಯಾತ್ರೋ ತ್ಸವದೊಳ್ (ಪಾರ್ಶ್ವಪು. ೮-೩೦). [ ನವ₁ + ಖಂಡ ]

**ನವಖಂಡ₂** (ನಾ). ಹೊಸ ಮಾಂಸ : ಕರುಳ ಹೂಗೊಂಚಲಿನ ಮಾಲೆಯ ಬಿರಿಮುಗುಳ ನವಖಂಡದಿಂದೆಯ ಕರತಳದ ತಳಿರೆಲೆಯ ಕಡಿದೋಳುಗಳ ಕೊಂಬುಗಳ . . . ರಣವನವೆಸೆದುದೀತನ ಖಡ್ಗಚೈತ್ರದಲಿ (ಕುಮ್ಯಾದ್ರೋ. ೬-೪೨). [ ನವ₂ + ಖಂಡ ]

**ನವಗರ** (ನಾ). = ನವಗ್ರಹ : ಕುಟಿಲತೆ ಬಾಲಕೀವ್ರಜದ ಕುಂತಳದಲ್ಲಿ . . . ಪಟುತರವಕ್ರಮಾ ನವಗರಂಗಳೊಳಲ್ಲದೆಯಿಲ್ಲ ನಾಡಿನೊಳ್ (ದಶಾವ. ೫-೬೨). [ ನವ₁ + ಗರ₂ ]

**ನವಗಾಯ** (ನಾ).(ಆಲಂ) ದೇಹದ ಒಂಬತ್ತುದ್ವಾರಗಳು; ನವದ್ವಾರ: ಓಹೊ ಎನ ಜೀವಾ ಮೈಯೊಳ್ಲಾ ನವಗಾಯ (ಕನಕ. ೨೨೦ ಅಮಕಲ್ಲವಿ).
[ ನವ₁ + ಗಾಯ ]

**ನವಗುಣ** (ನಾ). ಸುಖ, ದುಃಖ, ರಾಗ, ದ್ವೇಷ, ಬುದ್ಧಿ, ಭಾವನೆ, ಪ್ರಯತ್ನ, ಧರ್ಮ ಮತ್ತು ಅಧರ್ಮ ಎಂಬ ಆತ್ಮನ ಒಂಬತ್ತು ಗುಣಗಳು : ತೇಜದ ಮಣಿಯ ನವಗುಣದ ಹೊಳಹಿನಂತೆ ವಾಯುವಿನ ಮಣಿಯ ನಾನಾ ಸುಳುಹಿನಂತೆ . . . ಇಂತಿಹ ತದ್ರೂಪು ತದ್ರೂಪಂಗಳ ಹೊದ್ದಿಹವಾದ ಕಾರಣ ಇಂತೀ ಆತ್ಮತತ್ತ್ವಭೇದದಲ್ಲಿ ಆಗುಚೇಗೆಯುನಟಿಯ ಬೇಕು (ಮೋಳಿಮಾ. ೧೦-೪೦) ; ಬುದ್ಧಿ ಸುಖ ದುಃಖ ರಾಗ ದ್ವೇಷ ಪ್ರಯತ್ನ ಧರ್ಮ ಅಧರ್ಮ ಭಾವನೆಯೆಂಬ ನವಗುಣಗಳಂ ವ್ಯವಹರಿಸಿ (ವಿವೇಕ. ೨೪೬). P 'ಬ್ರಹ್ಮಸೂತ್ರಭಾಷ್ಯ'ದ ಪ್ರಕಾರ: ಜ್ಞಾನ, ಸುಖ, ದುಃಖ, ಇಚ್ಛೆ, ದೋಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರ ಎಂಬುವು ಆತ್ಮನ ನವಗುಣಗಳು. [ ನವ₁ + ಗುಣ ]

**ನವಗ್ರಹ** (ನಾ). (ಭಾರತೀಯ ಸಂಪ್ರದಾಯದಂತೆ) ಸೂರ್ಯ, ಸೋಮ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತು ಎಂಬ ಒಂಬತ್ತು ಗ್ರಹಗಳು : ಇಪ್ಪತ್ತೇಳು ನಕ್ಷತ್ರ . . . ರಾಹು ಕೇತು ನವಗ್ರಹ ಇಂತಿವರೆಲ್ಲರು ಆ ಮೇರುವಿಂದಿರದ ಹೊಟಿ ಪ್ರದಕ್ಷಿಣವ ದಿವರಾತ್ರಿಯಲ್ಲಿ ತಿರುಗುತ್ತಿಹರು (ಅನ್ನವ. ೪. ೫೯೨-೧೩೨೮) ; ನವಗ್ರಹದ ನಡುವೆ ಚಂದ್ರಾದಿತ್ಯರ್ . . . ಎಸೆವ ತೆಱದಿ . . . ಮುನಿ ಕುಲದ ನಡುವಿರ್ದರಧಿಕ ವಿಶ್ವಾಮಿತ್ರ ವಾಸಿಷ್ಠರು (ಹರಿಶ್ಚಂ. ೩-೫) : ಮಂಗಳ ಬುಧ ಬೃಹಸ್ಪತ್ಯಾದಿ ನವಗ್ರಹಂಗಳೆಲ್ಲಂ ಪುಂ ನಪುಂಸಕಲಿಂಗಂಗಳ್ (ಶಮದ. ೮೮ ವೃತ್ತಿ). [ ನವ₁ + ಗ್ರಹ ]

**ನವಗ್ರಹಜಪ** (ನಾ). ಸೂರ್ಯನೇ ಮೊದಲಾದ ಗ್ರಹಗಳ ಅನುಗ್ರಹ ಕ್ಕಾಗಿ ಶಾಸ್ತ್ರೋಕ್ತವಾದ ವಿಧಾನದಿಂದ ಮಾಡುವ ಆಯಾಯ ಗ್ರಹಗಳ ಮಂತ್ರ ಪುರಶ್ಚರಣೆ : ನವಗ್ರಹಜಪ ಮಾಡಿ. ಪೀಡೆ ಪರಿಹಾರ ವಾಗುತ್ತದೆ (ಬೂ೦). [ ನವಗ್ರಹ + ಜಪ ]

**ನವಗ್ರಹದಾನ** (ನಾ). ನವಗ್ರಹಗಳನ್ನು ಪ್ರಸನ್ನಗೊಳಿಸುವುದಕ್ಕಾಗಿ ಮಾಡುವ ನವಧಾನ್ಯಗಳ ದಾನ : (೬). P ಸೂರ್ಯನ ಪ್ರೀತ್ಯರ್ಥ ವಾಗಿ ಗೋದಿ, ಚಂದ್ರನಿಗೆ ಬತ್ತ, ಕಂಜನಿಗೆ ತೊಗರಿ, ಬುಧನಿಗೆ ಹೆಸರು, ಗುರುವಿಗೆ ಕಡಲೆ, ಶುಕ್ರನಿಗೆ ಅವರೆ, ಶನಿಗೆ ಎಳ್ಳು,

ರಾಹುವಿಗೆ ಉದ್ದು ಮತ್ತು ಕೇತುವಿಗೆ ಹುರುಳಿಯನ್ನು ದಾನ ಮಾಡಬೇಕೆಂಬ ವಿಧಿಯಿದೆ. [ ನವಗ್ರಹ + ದಾನ ]

**ನವಗ್ರಹಶಾಂತಿ** (ನಾ). ಜಪ, ದಾನ, ಹೋಮಗಳಿಂದ ನವಗ್ರಹಗಳನ್ನು ಪ್ರಸನ್ನಗೊಳಿಸುವ ಪುಣ್ಯಕರ್ಮ : (ಕ). [ ನವಗ್ರಹ+ ಶಾಂತಿ ]

**ನವಗ್ರಹಹೋಮ** (ನಾ). ನವಗ್ರಹಗಳ ಸಂಪ್ರೀತಿಗಾಗಿ ಸಮಿತ್ತು, ಚರು, ಆಜ್ಯಗಳಿಂದ ಯಥೋಕ್ತಸಂಖ್ಯೆಯಿಂದ ವಿಧಿಪೂರ್ವಕವಾಗಿ ಮಾಡುವ ಮಂತ್ರಪೂರ್ವಕವಾದ ಹೋಮ: (ಕ).

[ ನವಗ್ರಹ + ಹೋಮ ]

**ನವಗ್ರಾಹಕರಿಣಿ** (ನಾ). ಹೊಸದಾಗಿ ಹಿಡಿದ ಹೆಣ್ಣಾನೆ : ಗೆಂಟನೊಳ್ ಬರುತಿರ್ದ ಯುವರಾಜನಂ ಭೋಂಕನೆ ಕಂಡು ನವಗ್ರಾಹಕರಿಣಿಯಂದದಿ ನೂರುಸ್ತಂಭವಿಧೃತೆಯಾಗಿ (ಕಾದಂಉ. ೨೩೨). [ ಸಂ. ನವಗ್ರಾಹಕರಿಣೀ ]

**ನವಗ್ರೈವೇಯಕ** (ನಾ). [ಜೈನ] ಹದಿನಾರು ಸ್ವರ್ಗಗಳ ಮೇಲೆ ಇರುವ ಸುದರ್ಶನ, ಅಮೋಘ, ಸುಪ್ರಬುದ್ಧ, ಯಶೋಧರ, ಸುಭದ್ರ, ಸುವಿಶಾಲ, ಸುಮನಸ, ಸೌಮನಸ ಮತ್ತು ಪ್ರೀತಿಂಕರ ಎಂಬ ಒಂಬತ್ತು ಕಲ್ಪಾತೀತವಾದ ಸ್ವರ್ಗಗಳು : ಆ ಪದಿನಾಱು ಕಲ್ಪಂಗಳ ಮೇಲೆ ನವಗ್ರೈವೇಯಕಂಗಳಿರ್ದುವು (ಅಜಿಪು. ೧೦-೨೯ ವ) ; ಬಱಿಯ ಮಗ್ರಿಮನವಗ್ರೈವೇಯಕಮಧ್ಯನಾಯಕನಾದಂ (ಶಾಂತಿಪು. ೬-೫೭ ವ) : ಇರ್ಪತುಮೂಱಬ್ಧಿ ಮೊದಲೆನಲ್ಕೊಂದುವರಮಾಯುಃಕ್ರಮದ ನವಗ್ರೈವೇಯಕದಮರರುಮಂ ನೋಕೆವನೇಂ ಜವಂ ನಿರ್ಗುಣನೋ (ಮಲ್ಲಿಪು. ೧೩-೧೧೮). [ ನವ$_1$ + ಗ್ರೈವೇಯಕ ]

**ನವಚಕೋರಿ** (ನಾ). ಎಳೆಯ ಪ್ರಾಯದ ಹೆಣ್ಣುಚಕೋರಪಕ್ಷಿ: ಹೊನ್ನ ಪೆಟ್ಟಿಗೆಗಳಂ ನಲವಿಂದೆ ಬಗೆವೆಟ್ಟಿಕೊಂಡು ಬರುತಿರ್ದನುತ್ಸವದಿಂದೆ ನವ ಚಕೋರಿಗೆ ಚಂದ್ರಿಕೆಯ ಕುಟುಕುದಪ್ಪಂತೆ (ನಂಬಿರ. ೦೦-೦೨೫).

[ ನವ$_2$ + ಚಕೋರಿ ]

**ನವಚಕ್ರ** (ನಾ). [ಯೋಗ] ಕುಂಡಲಿನಿಯು ಏರುವ ಒಂಬತ್ತು ಬೇರೆ ಬೇರೆ ಸ್ಥಾನಗಳು ; ಆಧಾರಚಕ್ರ, ಸ್ವಾಧಿಷ್ಠಾನಚಕ್ರ, ಮಣಿಪೂರಕ ಚಕ್ರ, ಅನಾಹತಚಕ್ರ , ವಿಶುದ್ಧಿಚಕ್ರ, ಆಜ್ಞಾಚಕ್ರ, ಬ್ರಹ್ಮಚಕ್ರ, ಶಿಖಾಚಕ್ರ ಮತ್ತು ಪಶ್ಚಿಮಚಕ್ರ ಎಂಬ ಒಂಬತ್ತು ಚಕ್ರಗಳು : ಕರಣಾದಿ ಗುಣಂಗಳಳಿದು ನವಚಕ್ರಂಗಳು ಭಿನ್ನವಾದ ಬಳಿಕ ಇನ್ನೇನೋ ಇನ್ನೇನೋ (ಅವಚಂ. ೮೭-೩೮೮) ; ನವಚಕ್ರಾಂಬುಜಂಗಳ ದಳ ಕುಳವರ್ಣಾದಿ ದೇವತೆಗಳ ತೋಱಿಕೆ ಏನೇನೂ ಇಲ್ಲದ ನಿತ್ಯನಿರಂಜನ ನಿರಾಮಯನಾದ ಶರಣಂಗೆ ನಮೋ ನಮೋ ಎಂಬೆನು (ಸಿದ್ಧೇವ. ೦೫೯-೪೭೮) ; ನವಚಕ್ರಂಗಳಲ್ಲಿ ನವಬ್ರಹ್ಮಂಗಳ ಮೂರ್ತಿಗೊಳಿಸಿ ಕಾಯದ ಕಣ್ಣಿಂದ ಕರತಲಾಮಲಕವ ನೋಡುವಂತೆ ಮನದ ಕಣ್ಣಿಂದ ನವಬ್ರಹ್ಮಸ್ವರೂಪವ ಮನದಣಿವಂತೆ ನೋಡಿ (ಘನವ. ೨೩-೦೯). 'ಷಟ್ಚಕ್ರ' ಪರಾ. [ ನವ$_1$ + ಚಕ್ರ$_1$ ]

**ನವಚೂಟಿ** (ನಾ). ಅಪೂರ್ವವಾದ ಚುರುಕುತನ,-ಚಟುವಟಿಕೆ : ನವ ಚೂಟಿಯಲಿ ಕಾಯ ನಡಸಿ ಹಳದಿ ಜೋಡ ಬವರಕ್ಕೆ ಸಿಲಿಸಿಯಾಡಿದರು (ಸೌಂದಕಾ. ೪-೪೯). [ ನವ$_2$ + ಚೂಟಿ$_1$ (<ಸೂಟಿ$_1$) ]

**ನವಜವಾನ** (ನಾ). ತುಂಬುಹರೆಯದವನು ; ನವಯುವಕ ; ತರುಣ : ಅವರಿಗೆ ೬೫ ವರ್ಷ ಪ್ರಾಯ, ಮುದುಕರು. ಹುರುಪು ಮಾತ್ರ ನವ ಜವಾನರದು (ಕರವೀ. ೦೦೫) ; ಹರಕು ಅಂಗಿಯ ಒಬ್ಬ ದೃಢಕಾಯನಾದ ನವಜವಾನನು ಶೀಳು ಹಾಕುತ್ತಿದ್ದನು (ರಕ್ತಧ್ವ. ೧೭೨).

[ ←ಪಾರ. ಹಿಂ. ನೌಜವಾನ್ ]

**ನವಜ್ವರ** (ನಾ). ಒಂದು ಬಗೆಯ ಜ್ವರ ; ಒಂಬತ್ತು ದಿನಗಳವರೆಗೆ ತೀಕ್ಷ್ಣವಾಗಿ ಕಾಡುವ ಜ್ವರ : ಶಿಗಡೆ, ರಸ, ಗಂಧಕ . . . ಇವಂ ಕಲ್ವದಲ್ಲಿ ಕಳ್ಳಿಯ ಹಾಲಲ್ಲೂ ಎರಡುಜಾವ ಮರ್ದಿಸಿ ರಸಶುದ್ಧಿ ಮಾಡಿಕೊಂಡು ಎರಡು ಗುಂಜಿಯ ತೂಕವನ್ನು ಅಲ್ಲದ ರಸ ಸಕ್ಕರೆ ಬೆರಸಿಕೊಡಲು ನವಜ್ವರ ಹರ (ವಿಷ್ಣವಿ. ೩೩) ; ನವಜ್ವರದಲ್ಲಿಯೂ, ಸನ್ನಿಪಾತದಲ್ಲಿಯೂ, ಗರ್ಭಿಣಿಯರಲ್ಲಿಯೂ . . . ವಿರೇಚನ ಮಾಡಲಾಗದು (ಸಕವೈ. ೨೬) ; ಸೌಭಾಗ್ಯವತಿ ನವಜ್ವರದಿಂದ ತೀರಿಕೊಂಡಳೆಂದು ತಿಳಿದುಬಂತು (ಸ್ವಪ್ನಶಿ. ೩೦). [ ನವ$_1$ + ಜ್ವರ ]

**ನವಟಾಕು** (ನಾ). ತೂಕದಲ್ಲಿ ಒಂದು ಸೇರಿನ ಎಂಟನೆಯ ಭಾಗ ; ತೂಕದಲ್ಲಿ ಎಂಟನೆಯ ಒಂದು ಭಾಗ ; ಅರಪಾವು : ನನ್ನವಳು ಒಂದು ಸಿಂಗಲ್ ಅಥವಾ ಒಂದು ನವಟಾಕು ಸಜ್ಜಿಗೆ ಮಾಡಿದರೆ ಸೇರುತುಪ್ಪ ಅಷ್ಟೇರು ದೀಪದ್ರಾಕ್ಷಿ ಖರ್ಚುಮಾಡುತ್ತಾಳೆ (ಮುಂಗಾಪು.೫೭). 'ಚಟಾಕು' ಪರಾ. [ ←ಮರಾ. ನವಟಾಂಕ ]

**ನವಠಾಣ** (ನಾ). [ಸಂಗೀತ] ಒಂಬತ್ತು ಸ್ವರಗಳು (?) : ಗಾನವೊಪ್ಪುವ ದಂಡಿಗೆಯನವಧಾನಿಸುತ ವಿಂಗೆ ಮೇಘಟಾಳವನೊಡನೆ ಯಾಠಾಣವಾನಿತಂ ನವಠಾಣವುಂ . . . ಅನೂನಪತ್ರಂ ಪೊಟ್ಟವಣೆ ಸಾರಣಮಲರ್ದಿರಲು (ಲಕಪು. ೦೯-೮). [ ನವ$_1$ + ಠಾಣ ? ]

**ನವಣಕ್ಕಿ** 'ನವಣೆಯಕ್ಕಿ' ನೋ.

**ನವಣಿ** 'ಲವಣಿ' ನೋ.

**ನವಣಿವಡೆ** (ಕ್ರಿ). ಸೊಗಸಾಗು ; ಅಂದವನ್ನು ಪಡೆ : ಬಿಂಕಂ ಲುಳಿವಡೆಯೆ ಲುಳಿ ನವಣಿವಡೆಯೆ ನವಣಿ ಬಹುವಿಕೆವಡೆಯೆ ಬಹುವಿಧದ ವಹಣಿಯ ಮಾರ ಚಿತ್ರದ ಗತಿಗಳೊಳ್ ಮೆಱೆದು (ಅನಂಪು. ೨-೨೮ ವ).

[ ನವಣಿ (<ಲವಣಿ) + ಪಡೆ$_1$ ]

**ನವಣೆ** (ನಾ). ಒಂದು ಬಗೆಯ ಧಾನ್ಯ ; ಕಂಗು : "ಪ್ರಿಯಂಗುಃ, ಕಂಗುಃ– ಈ ೨ ನವಣೆ" (ಹಲಾಯು. ೯೫-೪೨೮) ; ನವಣೆಯ ಪಿಟ್ಟಂ ನೆಲದಾಟುವ ನೊಡವೊಯ್ದುಟ್ಟು ಘೃತಸಮೇತಂ ಮೇಣ್ ದುಗ್ಧವಿಮಿಶ್ರಂ ಸೇವಿಸೆ ವೀರ್ಯವೃದ್ಧಿಯುಂ ಮೆಯ್ಗೆ ಪುಷ್ಟಿಯುಂ ಸವನಿಸುಗುಂ (ಲೋಕೋಪ. ೯-೪೫) : ಮರ್ದಂ ನವಣೆಯ ಪಿಟ್ಟಿನೊಳ್ ಕೂಡಿ ಕಿಱಿಯುಪಮ್ಮುಂಡೆಗಳಂ ಮಾಡಿ (ಧರ್ಮಾಮೃ. ೧೨-೮೮) ; ನವಣೆ ಹಾರಕ ಬರಗು ಸಾವೆ ಮಾಸಿಗಳೆಂಬ ಧಾನ್ಯ ಐವತ್ತುಲಕ್ಷ ಖಂಡುಗ (ಚೆನ್ನಸಂ. ೩೩೪-೦೯) ; ನವಣೆಯ ಹಾಳಲು ಬೆದ್ದತಿ ಮತ್ತರೊಂದು (ಎಕ. VI, ಕಡೂರು. ೩೭-೭೩ ; 1187 ?) ; ಬಾಗಿ ಬಳುಕುವ ತೆನೆಗಳಿಂದೆಸೆವ ತಮ್ಮ ನವಣೆಯ ಕೆಯ್ಗೆ ಬಳಿಯೊಳ್ (ಸಿದ್ಧರಾ. ೨-೨೩) ; ಬಲು ರಾಯರೊಲ್ಮೆ ಗಡಯುಂಬುದಲ್ಲಂ ನವಣೆಯೊಳು ಗಂಜಿ (ಚಿದಪು. ೦೦-೭೦) ; ನವಣೆಯ ಬೋನಕ್ಕೆ ಹವಣಾದ ತೊಗೆಯಾಗಿ ಕವಣೆಗಲ್ಲಷ್ಟು ಬೆಣ್ಣೆಯಿಡಲೂಟದ ಹವಣ ನೋಡು (ಸರ್ವಜ್ಞ. ೧೭೦೮).

**ನವಣೆಯ ಪಾಯಸ** = ನವಣೆ ಅಕ್ಕಿಯನ್ನು ತುಪ್ಪದಲ್ಲಿ ಹುರಿದು, ಬೇಯಿಸಿ ಮಾಡುವ ಪಾಯಸ : ಅವರು ಮಾಡಿದ ನವಣೆಯ ಪಾಯಸ ಬಹಳ ರುಚಿಯಾಗಿತ್ತು (ರೂಢಿ).

[ದೇ.॥ ತಮಿ. ನವರೈ = ಒಂದು ಬಗೆಯ ಬತ್ತ ; ಮಲ. ನವಿರ, ನವಿರಿ = ಒಂದು ಬಗೆಯ ಅಕ್ಕಿ ; ತುಳು. ನವರ, ನವರೆ ; ತೆಲು. ನಿವರಿ ]

**ನವಣೆಅಕ್ಕಿ** 'ನವಣೆಯಕ್ಕಿ' ನೋ.

**ನವಣೆಯಕ್ಕಿ, ನವಣಕ್ಕಿ, ನವಣೆಅಕ್ಕಿ** (ನಾ). ಹೊಟ್ಟು ತೆಗೆದ ನವಣೆ : ಚಾಬೇಸೊಪ್ಪನು ನವಣೆಯಕ್ಕಿಯನ್ನು ಕೂಡ ಕುಟ್ಟಿ ಹಿಟ್ಟು ತೊಳಸಿ . . . ಸಪ್ಪೆ ತುಪ್ಪದಿಂ ಮೆಲ್ಲಲು ಪೆನ್ನೆತ್ತರು ಮಾಣ್ಗುಂ (ಸಕವೈ. ೦೯೫). **ನವಣಕ್ಕಿ:** ನವಣಕ್ಕಿಯ ಹಿಟ್ಟುಕುಟ್ಟಿ ತುಪ್ಪದಲ್ಲಿ ಮೆಲ್ಲೆ ಗರ್ಭವಕ್ಕುಂ (ವಿಷ್ಣವಿ. ೮). **ನವಣೆಅಕ್ಕಿ :** ಹೊನ್ನುಗೊನ್ನೆಸೊಪ್ಪು ಸಹಮೂಲವನ್ನು ನವಣೆಅಕ್ಕಿ ಗಂಜಿಯಲ್ಲಿ ಅರೆದು ಮೂರುದಿನ ಕೊಟ್ಟರೆ ಕಲ್ಲುಕರಗಿ ಬೀಳುವುದು (ಸಕವೈ. ೫೦. ೪೯೬). [ ನವಣೆ + ಅಕ್ಕಿ$_1$ ]

**ನವತ** (ನಾ). ೧. ಹೊದಿಕೆ ; ಅಚ್ಛಾದನೆ. ೨. ಉಣ್ಣೆಯ ಹೊದಿಕೆ ; ಕಂಬಳಿ : ಸ್ನಾನಂಗೆಯ್ವಡೆಯೋ ಮೇಣ್ ದಾನಂ ಕೊಳ್ವೆಡೆಯೊ ನವತಮಂ ಪೋರ್ಲ್ವೆಡೆಯೋ ನೀನೀ ಸಂಗ್ರಾಮಾವನಿಗೇನೆಂದಟ್ಟುವೈ ಏವ್ರು ಪೆರ್ಮಟ್ಟೆ ನುತುಂ (ಮಹಾನೀ. ೧೨-೨೦೦). [ ಸಂ. ]

**ನವತಯಾರುಮಾಡಿಸು** (ಕ್ರಿ). ಹೊಸದಾಗಿ ಸಿದ್ಧಪಡಿಸು : ಒಂದು ಹೂವನ್ನು ಅರ್ಧಚಂದ್ರನೋಪಾದಿ ಚಿನ್ನದಲ್ಲು ಮಾಡಿಸಿ. ಅದಕ್ಕೆ ವಜ್ರಕೆತ್ತಿಸಿ. ಹೊಳೆಯುವಂಥಾದ್ದು ಒಂದು ನವತಯಾರುಮಾಡಿಸಿ, ತಮ್ಮ ಬಳಿಯು ಮಾಡಗಿದ್ದರು (ರಾಜೇಂದ್ರ. ೨೨೫). [ ನವ$_2$ + ತಯಾರು + ಮಾಡಿಸು ]

**ನವತರುಣ** (ನಾ).=ನವಯೌವನ ೨ : ಈಗ ಮಾತ್ರ ನಾನೊಬ್ಬ ನವತರುಣನಂತೆ ಹುರುಪಿನಿಂದ ಆಕಾಶಕ್ಕೇರುವಷ್ಟು ಪ್ರಫುಲ್ಲನಾಗಿದ್ದೆ (ಗಂಗಾವ. ೧೦೧). [ ನವ$_2$ + ತರುಣ ]

**ನವತರುಣಿ** (ನಾ). = ನವಯುವ್ವನೆ : ಈಗಿನ ನವತರುಣರಿಗಿಂತ ನವತರುಣಿಯರಲ್ಲಿ ಓದಿನ ಬಗೆಗೆ ಒಲವು ಹೆಚ್ಚು (ರೂಢಿ). [ ನವ$_2$ + ತರುಣಿ ]

**ನವತಾರುಣ್ಯ** (ನಾ). ಹೊಸಹರೆಯ ; ನವಯೌವನ : ಮಕ್ಕಳು ನವತಾರುಣ್ಯವನ್ನು ಹತ್ತುವಾಗ ಆರಂಭವಾಗುವ ಪ್ರೌಢಶಿಕ್ಷಣ ಉತ್ತಮವೆಂದು ಹಲವರು ಭಾವಿಸುವರು (ಶಿಕ್ಷಣ. ೯೦). [ ನವ$_2$ + ತಾರುಣ್ಯ ]

**ನವತಾಲ** (ನಾ). [ಶಿಲ್ಪಶಾ] ಮೂರ್ತಿಶಿಲ್ಪದಲ್ಲಿ ಬಳಸುವ ಒಂಬತ್ತು ತಾಳಪ್ರಮಾಣದ ಒಂದು ಅಳತೆ : ಮಾನಾಂಗುಲ, ಮಾತ್ರಾಂಗುಲ, ದೇಹಲಬ್ಧಾಂಗುಲವೆಂಬ ಅಳತೆಗಳಿಂದ ಪಂಚತಾಲ, ನವತಾಲಾದಿ ವಿವೇಚನೆಯಿಂದ ಮೂರ್ತಿಗಳನ್ನು ರಚಿಸುವ ವಿಧಾನಗಳನ್ನೂ . . . ಶಿಲ್ಪಶಾಸ್ತ್ರ ಮತ್ತು ಆಗಮಶಾಸ್ತ್ರಗಳು ತಿಳಿಸುತ್ತವೆ (ಭಾರತ. ೮೦). [ ನವ$_1$ + ತಾಲ ]

**ನವತಿ** (ನಾ). ಒಂದು ಸಂಖ್ಯೆ ; ತೊಂಬತ್ತು : ಭರತಕ್ಷೇತ್ರದ ವಿಷ್ಕಂಭಂ ಜಂಬೂದ್ವೀಪದ ನವತಿಶತಭಾಗಪ್ರಮಾಣಮಕ್ಕುಂ (ಸುಕುಮಾ. ೦೧-೩೦೫); ಬಾಹುಕ್ಷೇಪದಿಂದಂ ನವತಿ ನಯನಭೇದಂಗಳಿಂ ರಂಜಿಸುತ್ತಿರ್ದುದು ಸರ್ವಾಶಾಪ್ರದೇಶಂ ಸುರಪತಿನಟನಂ ವಿಸ್ಮಯಂಬೆತ್ತುದಾದಂ (ಆದಿಪು. ೯-೦೪). [ಸಂ.]

**ನವತುಷ್ಟಿ** (ನಾ). [ಸಾಂಖ್ಯ] ಅಂಭಸ್ಸು, ಸಲಿಲ, ಓಘ, ವೃಷ್ಟಿ, ಪಾರ, ಸುಪಾರ, ಪಾರಾಪಾರ, ಅನಂತ್ತಮಾಂಭ ಮತ್ತು ಉತ್ತಮಾಂಭ ಎಂಬ ಬುದ್ಧಿಗೆ ಸೇರಿದ ಒಂಬತ್ತು ಬಗೆಯ ತುಷ್ಟಿಗಳು : ನವತುಷ್ಟಿಗಳು-ವಿವೇಕಸಾಕ್ಷಾತ್ಕಾರವನ್ನು ಪ್ರಕೃತಿಯೇ ಮಾಡುತ್ತದೆ. ನಾವೇಕೆ ಶ್ರಮಪಡಬೇಕೆಂಬ ತೃಪ್ತಿಯೊಂದು. ಇದಕ್ಕೆ ಅಂಭಸ್ಸೆಂದು ಹೆಸರು . . . ಉತ್ತಮಾಂಭ ಎಂದರೆ ಪ್ರಾಣಿಹಿಂಸೆಯಿಲ್ಲದ ಸುಖವಿಲ್ಲವೆಂದು ತಿಳಿದು ವೈರಾಗ್ಯವನ್ನು ಪಡೆಯುವುದು ಒಂಬತ್ತನೆಯದು. ಈ ನವತುಷ್ಟಿಗಳು ಬುದ್ಧಿಗೆ ಸೇರಿದುವು (ಹಿಂದಕಾ. ೬೪). [ ನವ$_1$ + ತುಷ್ಟಿ ]

**ನವತೆ** (ನಾ). ಹೊಸತನ ; ನವೀನತೆ : ಮುಡುಕತೊರೆಗೆ ಹೋಗಬೇಕಾದರೆ ದೋಣಿಯಲ್ಲೇ ಪ್ರಯಾಣಮಾಡುತ್ತಿದ್ದೆವು. ಅದರ ನವತೆ ಸವಿದರೂ ನಮ್ಮಜನಕತ್ವ ಸಮೆಯಲಿಲ್ಲ (ಕಲಿಸಿ. ೩೩೪) ; ಹಳೆಯ ಕರ್ಮವ ಹೊಸದು ಕೊಟ್ಟ ಪೌರುಷನದಿಯ ಬೆಳೆಯುವುದು ನವತೆಯಲಿ (ಮಂಕುಳ. ೦೬೪).

[ ಸಂ. ನವತಾ ]

**ನವತೇಜ** (ನಾ). ಹೊಸಕಾಂತಿ ; ನವೀನಶೋಭೆ : ನನ್ನಂತೆ ಲಾಂಗೂಲಯಜ್ಞದಿಂ ನವತೇಜಪುಣ್ಯಗಳ ಗಳಿಸಿ ಜೀವನ್ಮುಕ್ತರಾಗಿ ! (ಶ್ರೀಪು. ೪೩-೦೦).

[ ನವ$_2$ + ತೇಜ$_1$ ]

**ನವತ್ವ** (ನಾ). = ನವತೆ : ಮಾತೂ ಕೂಡ ನವತ್ವವನ್ನು ಪಡೆಯುತ್ತದೆ (ಧ್ವನ್ಯಾಲೋ. ೨೪೦). [ ಸಂ. ]

**ನವದಂಪತಿ** (ನಾ). ನೂತನ ದಂಪತಿ ; ಆದೇ ತಾನೇ ಮದುವೆಯಾದ ಗಂಡಹೆಂಡಿರು: ತಾನುಂ ಪತಿಯುಂ ಮಹಾ[ವಿಭವ]ತೀಕರವೊಪ್ಪಿರೆ ಮಾಡೆ ಕಾಮದೇವಂ ಪಸೆಯೊಳ್ ಸುರೇಂದ್ರ ನವದಂಪತಿಯಿರ್ದಪೊಲಿರ್ದರ್ (ಬಂಹರಿ. ೯-೮೬) ; ಅಮ್ಮ ಅಪ್ಪ ನವದಂಪತಿಗಳಂತೆ ಇನ್ನೂ ಸುಖವನ್ನು ಅರಸಿ ಹೊರಟಾತಿದೆ (ನಡರಾ. II. ೯೬೩). [ ನವ$_2$ + ದಂಪತಿ ]

**ನವದರ್ಶನಾವರಣ** (ನಾ). [ಜೈನ] ಚಕ್ಷುಸ್ಸು, ಅಚಕ್ಷುಸ್ಸು, ಅವಧಿ, ಕೇವಲ, ನಿದ್ರಾ, ನಿದ್ರಾನಿದ್ರಾ, ಪ್ರಚಲಾ, ಪ್ರಚಲಾಪ್ರಚಲಾ ಮತ್ತು ಸ್ತ್ಯಾನವೃದ್ಧಿ ಎಂಬ ಒಂಬತ್ತು ಬಗೆಯ ದರ್ಶನಜ್ಞಾನಾವರಣೀಯ ಕರ್ಮಪ್ರಕೃತಿಗಳು : ಪಂಚಜ್ಞಾನಾವರಣಂಗಳುಂ ನವದರ್ಶನಾವರಣಂಗಳುಂ ದ್ವಿವೇದನೀಯಂಗಳುಮಷ್ಟಾವಿಂಶತಿಮೋಹನೀಯಂಗಳುಮೇಕಂ ದೊಡೆ (ಗೊಮ್ಮಸಾ. ೬-೪) [ ನವ$_1$ + ದರ್ಶನಾವರಣ ]

**ನವದುರ್ಗಿ** (ನಾ). ಶೈಲಪುತ್ರೀ, ಬ್ರಹ್ಮಚಾರಿಣೀ, ಚಂದ್ರಘಂಟಾ, ಕೂಷ್ಮಾಂಡಾ, ಸ್ಕಂದಮಾತಾ, ಕಾತ್ಯಾಯನೀ, ಕಾಲರಾತ್ರೀ, ಮಹಾಗೌರೀ ಮತ್ತು ಸಿದ್ಧಿಧಾತ್ರೀ ಎಂಬ ದುರ್ಗಾದೇವಿಯ ಒಂಬತ್ತು ರೂಪಗಳು : ಸಪ್ತಮಾತೃಕೆಯರುಂ ಉರಗಿಯರ್ ನವದುರ್ಗಿಯಂಬಿಕೆಯರನಿಬರುಂ ಧರಿಸಿದರು ಶಾಬರವನು (ಲಕಿತಂ. ೨೩-೧೩); ವಿಷ್ಣುವಿನ ದಶಾವತಾರ . . . ಶಕ್ತಿಯ ನವದುರ್ಗಿಯರು, ಸಪ್ತಮಾತೃಕೆಯರು (ಭಾರತ. ೮೦). [ ನವ$_1$ + ದುರ್ಗಿ ]

**ನವದ್ವಾರ** (ನಾ). ೧. ಒಂಬತ್ತು ಬಾಗಿಲುಗಳು : ನರಕಕ್ಕೆ ನವದ್ವಾರ, ನಾಕಕ್ಕೆ ಒಂದೇ ದ್ವಾರ (ಗಾದೆ). ೨. ಕಣ್ಣುಗಳು, ಕಿವಿಗಳು, ಮೂಗಿನ ಹೊಳ್ಳೆಗಳು, ಬಾಯಿ, ಮೂತ್ರದ್ವಾರ ಮತ್ತು ಗುದದ್ವಾರ ಎಂಬ ದೇಹದ ಒಂಬತ್ತು ದ್ವಾರಗಳು : ಪರಿಮಳದಿಂಡೆಯ ಕಟ್ಟಿ ಪೂಜಿಸುತ್ತಿರ್ದುದೋ ನವದ್ವಾರ ಶಿವಾಲಯದಾದಿ ಮಧ್ಯಸ್ಥಾನದಲ್ಲಿ (ಅವಕಂ. ೪೩-೦೯೩) ; ಬಿಸುಗುದಿಯ ನರರುಧಿರಜಲ ಜಾಳಿಸೆ ನವದ್ವಾರದಲಿ ದೈತ್ಯನ ಕುಸುಕಿಜಡಿದು ತಿವಿತಿವಿದು ಕೊಂದನು ಕಲಿ ಜಟಾಸುರನ (ಕುಮ್ಮಾ.ಅ. ೦೦-೧೧); ನೆಲೆಗೊಂಡ ನವದ್ವಾರದ ಹೊಲೆಯೊಳು ನರಳುತ ನೀ ಬಿದ್ದ ಬಿಕನಾಸಿ (ಪುರಂದ. ೦-೦೦೫-೦) ; ಐದುತಿಂಗಳಿಗೆ ಕಿವಿ ಮೂಗು ಕಂಗಳುಂ ಜನಿಸಿ ನವದ್ವಾರಂಗಳಂ ತೋರ್ಪವು (ನವವೋ. ೦೪-೩೧); ಸುರಲೋಕಕ್ಕೆ ತೆರಳುವ ತವಕದಿಂದ ಅವಳು ನವದ್ವಾರಗಳ ವಾಯುವನ್ನು ಬಲಿದು, ಪ್ರಾಣತ್ಯಾಗ ಮಾಡಿದಳು (ನಂಜುಂಡ. ೩೦). [ ನವ$_1$ + ದ್ವಾರ ]

**ನವದ್ವೀಪ** (ನಾ). = ನವಚಕ್ರ : ಚಿದ್ಬ್ರಹ್ಮಾಂಡದೊಳಗಣ ಏಳುತಾವರೆಯ ಮೇಲಿಪ್ಪ ನಿಷ್ಕಲಚಿದ್ಬಿಂದುಲಿಂಗಕ್ಕೆ ಪ್ರಾಣಪೂಜೆಯಂ[ಮಾಡೆ] ಮಹಾಜ್ಞಾನಬಲದಿಂದ ನವದ್ವೀಪಂಗಳ ಲಿಂಗಂಗಳ ಬೆಳಗು ಪಿಂಡಾಂಡದಲ್ಲಿ ಪ್ರಭಾವಿಸಿ ತೋಱುತಿರ್ಪುದಾಗಿ ನಾನು ಸರ್ವಾಂಗಲಿಂಗಿಯಾದೆನಯ್ಯ (ಶೂನ್ಯ. ೩೯-೩೨); "ಆಚಾರಾದಿಯಾಗಿ ನಿರಂಜನಲಿಂಗಾಂತ್ಯವಾದ ಒಂಬತ್ತು ಲಿಂಗಗಳಿರುವ ಆಧಾರಾದಿಯಾಗಿ ಪಶ್ಚಿಮಾಂತ್ಯವಾದ ಒಂಬತ್ತು ಚಕ್ರಗಳು" (ಶೂನ್ಯ. ೬೦೦೫). P ಇಲ್ಲಿ 'ಚಕ್ರ'ವೆಂಬ ಸ್ಥಾನವನ್ನು 'ದ್ವೀಪ'ವೆಂದು ರೂಪಕ ಮಾಡಿದೆ. [ ನವ$_1$ + ದ್ವೀಪ ]

**ನವಧಾನ್ಯ** (ನಾ). ಗೋಧಿ, ಭತ್ತ, ಉದ್ದು, ಹೆಸರು, ಕಡಲೆ, ತೊಗರಿ, ಹುರುಳಿ, ಅವರೆ ಮತ್ತು ಎಳ್ಳು ಎಂಬ ಒಂಬತ್ತು ಬಗೆಯ ಧಾನ್ಯಗಳು : ನವಧಾನ್ಯ ಬೆಳೆದವನಿಗೆ ವ್ಯವಧಾನವಿಲ್ಲ (ಗಾದೆ). P ಪಿತೃಶ್ರಾದ್ಧದಲ್ಲಿ ಉಪಯೋಗಿಸಲು ಪ್ರಶಸ್ತವಾದಂವು : ಭತ್ತ, ಯವೆ, ಎಳ್ಳು, ಉದ್ದು, ಗೋಧಿ. ಸಾವೆ, ನವಣೆ, ಹೆಸರು ಮತ್ತು ಸಾಸುವೆ.

[ ನವ$_1$ + ಧಾನ್ಯ ]

**ನವಧಾಭಕ್ತಿ** (ನಾ). [ಜೈನ] ಶ್ರಾವಕನು ಸಾಧುಗಳ ಬಗ್ಗೆ ಭಕ್ತಿಯನ್ನು ತೋರಿಸುವ ಸಂಗ್ರಹ, ಉಚ್ಚಸ್ಥಾನ, ಪಾದಪ್ರಕ್ಷಾಲನ, ಪೂಜನ, ಪ್ರಣಾಮ, ಮನಃಶುದ್ಧಿ, ವಚನಶುದ್ಧಿ, ಕಾಯಶುದ್ಧಿ ಹಾಗು ಆಹಾರಶುದ್ಧಿಗಳೆಂಬ ಒಂಬತ್ತು ವಿಧಾನಗಳು : ನಿಜವಾದ ಶ್ರಾವಕ ಊಟದ ಹೊತ್ತಿನಲ್ಲಿ ಬಾಗಿಲದೊಳಗೆ ನಿಂತು ಸಾಧುಗಳ ಬರವನ್ನು

**ನವಿರೇರು** 'ನವಿರೇಱು' ನೋ.

**ನವಿರೇಱು, ನವಿರೇರು** (ಕ್ರಿ). ಕೂದಲು ಎದ್ದು ನಿಲ್ಲು ; ರೋಮಾಂಚನ ವಾಗು ; ಪುಳಕಗೊಳ್ಳು : ರತ್ನಶೇಖರನಾಗಳ್ ನವಿರೇಱಿದ ತನುವಂಕದ ಬವರಮನೊಳಕೊಳ್ವ ಮಾಸವಳನಂ ಪೋಲ್ತಂ (ಪುಶ್ಪಾಸ್ತ್ರ. ೧-೬೭) ; ಗಟ್ಟನೆ ನವಿರೇಱಿಯಾಲಿನೀರೊಱಿವಿನೆಗಂ ತಬ್ಬಿಸಿ ಜಗಿಮ ಮುದ್ದಿಸಿ (ಚಕವಿ. ೬-೧೦೨). ನವಿರೇರು : ಹಿಗ್ಗು, ಉಬ್ಬು, ಗುಡಿಗಟ್ಟು, ನವಿರೇರು, ಜುಮ್ಮೆನ್ನು (ಕನುಹು. ೯೧). [ ನವಿರ್ + ಏಱು$_1$ (<ಏಱ್$_1$) ]

**ನವಿರೇಱ್** (ಕ್ರಿ). = ನವಿರೇಱು : ಏನದು! ನವಿರೆಱ್ಬು ನಡುಗಿದವೇನೇ ನಿನ್ನ ಬಾಯ್ಗೆ ! (ಅಂತಿಗೊ. ೪೪-೯೩೦). [ ನವಿರ್ + ಏಱ್$_1$ ]

**ನವಿರೊಳ್ಪು** (ನಾ). ಕೇಶಸಂಪತ್ತು : ನವಿರೊಳ್ಪ ಹೊಗೆಯಲ್ಲಿ ತುಂಬಿ ತಲೆದೂಗಿ (ಕಾಲೂರ. ೦೮೪-೧೧೮). [ ನವಿರ್ + ಒಳ್ಪು ]

**ನವಿರ್ಓಳಿ** (ನಾ). ಕೂದಲಿನ ಸಾಲು: ಮೇಂಗೊರಲ ನವಿರೋಳಿ ನಸೆಯೆ . . . ಭೀಕರಂಗಳಾಗಿರ್ಪ ಕಾಳ್ಕೋಣಂಗಳ ಗಡಣಂಗಳೊಳ (ಮಹಾಜ. ೮-೨೪ ವ). [ ನವಿರ್ + ಓಳಿ ]

**ನವಿರ್ಗುಡಿಗಟ್ಟುಹ** (ನಾ). ನವಿರೇಳುವಿಕೆ ; ರೋಮಾಂಚನ ; ಪುಳಕ : ಎನಗಿದೆ! ಉಂತೆ ಮೆಯ್ಯುಡುಕವೋವೋ! ನವಿರ್ಗುಡಿಗಟ್ಟುಹಂ ಚಿಕ್ಕಿಲ್ಲನೆ ಬೆಮರಶುಸ್ರುವಾರೆ (ಸಂಸಪ. ೨೦-೩) [ ನವಿರ್ + ಗುಡಿಗಟ್ಟು$_2$ + –ಹ$_2$ ]

**ನವಿರ್ಗೆದಱ್** (ಕ್ರಿ). ಮೈನವಿರೇಳಿಸು ; ರೋಮಾಂಚನಗೊಳಿಸು : ಪುದಿದ ಹಿಮಂ ನವಿರ್ಗೆದಱೆ ಮೆಯ್ಗೆ ಮಿಗೆ ಕೋಡೆ ಕಪಿವೃಜಂ . . . ಕೆಂಬೆಳಗಂ ಕೆದಱುತ್ತುಮಿರ್ಪ ರತ್ನದ ಏರಿದೆ ಇಂದು ಪಾಸಱೆ ದವಾಗ್ನಿಯ ದಳ್ಳುರಿಯಿಂದು ಪತ್ರಿಕಾರ್ವುದು ತಳವಮಂ ನಿವಿರ್ಚುರ್[ಚ್ಚ]ತನ ವಾಗಿಯ ಶೀತಮದೇಂ ಪ್ರಭೂತಮೋ (ಕುಸುಮಾ. ೭-೧೪).

[ ನವಿರ್ + ಕೆದಱ್$_1$ ]

**ನವಿರ್ಗೊಂಚಲ್** (ನಾ). ಕೂದಲಿನ ಗುಚ್ಛ ; ಕೇಶರಾಶಿ : ಆ ಗಡ್ಡವು ಅವನದೇ ಆಗಿದ್ದರೊ ? . . . ಆ ನವಿರ್ಗೊಂಚಲ ನರಕವು ನಿಜದಿಂದ ಗಲ್ಲಗ್ರಹಚಾರವಾಗಿರಬಾರದೆ ? (ಮಂತ್ರಕ. ೯೪-೩).

[ ನವಿರ್ + ಗೊಂಚಲ್ ]

**ನವಿರ್ತಟ್** (ಕ್ರಿ). ಅತಿಯಾಗಿ ರೋಮಾಂಚನವುಂಟಾಗು; ಅಧಿಕವಾಗಿ ಪುಳಕಗೊಳ್ಳು: ಬಗೆಯೊಳ್ಪಲ್ಪು ಕವಿಲ್ದೊಡಂ ನಡುಕದಿಂದಂಗಂ ನವಿರ್ತ ಳ್ತು[ಟ್ಟು]ಡಂ (ಚಕವಿ. ೬-೨೫೦). [ ನವಿರ್ + ತಟ್$_1$ ]

**ನವಿರ್ಮುಡಿ** (ನಾ). ಕೂದಲಿನ ಮುಡಿ ; ತುರುಬು : ೧ರಿಜಾತ ನವಿರ್ಮುಡಿಗೆ ತುರುಗಿರ್ದ ನರುಗಂಪಿನರಳ ಗಂಧಕ್ಕೆರಗಿ ಝೇಂಕರಿವ ತರುಣ ಷಟ್ಚರಣಗಳ ಯಮಳಗಾನಂಗೇಳ್ದು (ನವಮೋ. ೧೮-೨).

[ ನವಿರ್ + ಮುಡಿ$_1$ ]

**ನವಿರ್ಮೂಡು** (ಕ್ರಿ). = ನವಿರೇಱು : ಕೈವಿಡಿದ ನಲ್ಲಳ್ಗೆ ಸಂತಸವೆಕ್ಕಸಂಗಳ ನವಿರ್ಮೂಡುವಂತುವು . . . ಎತ್ತಿವಂದ ವಗೆಯಂ ಬಾರಿಸುವಂ (ರಾಮಾಶ್ವ. ೮೬-೨). [ ನವಿರ್ + ಮೂಡು$_1$ ]

**ನವಿಲ್, ನವಿಲು, ನವಿಲ್ಕೆ** (ನಾ). ೧. ಉದ್ದವಾದ ತೋಕೆಯಲ್ಲಿ ಕಣ್ಣಿನಾಕಾರದ ಸಾಲು ಚಿತ್ರವಿರುವ, ತಲೆಯ ಮೇಲೆ ಕೊಟ್ಟುಳ್ಳ ನೀಲಿ ಬಣ್ಣದ ಒಂದು ಬಗೆಯ ಪಕ್ಷಿ ; ಮಯೂರ; P ಭಾರತದ ರಾಷ್ಟ್ರಪಕ್ಷಿ: "ಕೇಕೀ, ಶಿಖೀ, ಶಿಖಂಡೀ ... ಶಿಖಾವಳ, ಶ್ಯಾಮಕಂಠ(ಃ)– ಈ ೧೦ ನವಿಲ್" (ಹಲಾಯು. ೪೦-೪೮); ಧವಳಂಪಾಂಗು ಕೇಕಾರವಮುಖರಂ ಹರಿತಶಾಬಲಾಂಕಕಳಾಪಂ ನವಿಲಾದಂ[ಪಾಠಾಂ.ಟಂ] ಸೊಗಯಿಸುಗುಂ ಸುವಿ ನೀಲಾಯತಗಳಂ ಪಯೋದಾಗಮದೊಳ್ (ಕವಿರಾ. ೩-೭): ದೇವತೆ ನವಿಲ ರೂಪಿಸಿಂದೆತ್ತಿಕೊಂಡು ಬೆನ್ನೊಳಿಟ್ಟು ... ಪೋದೊಡೆ (ವಡ್ಡಾರಾ. ೦೦೮-೩); ಕಾಮಕಾಂತೆ ಬಟೆಯಂ . . . ಬಣ್ಣವುರಂ ತೀವಿದ ಮಾಟ್ಕೆಯಾಯ್ತು ನವಿಲಿಂ ಕುಂದಂಗಳಿಂದಿಂದ್ರಗೋಪವಿಳಾಸಂಗಳಿನಾಲಿಕಲ್ಲ ಪರಲಿಂ ಕಾರೊಳ್ ಮಹೀಮಂಡಲಂ (ಶಂಪಥಾ. ೭-೨೪) ; ನೃತ್ಯವಿಧುಮಹೀವಂ ನವಿಲಾತ ಪತ್ರಸದೃಶ್ಯಂ ಮಾಡಿತ್ತು ಪಿಂಛಾಳಿಯಂ (ಶಾಂತಿಪು. ೮-೯) ; ಅದಂ ಕೇಳ್ದು ಕಾರ ಮೊಬಗಂ ಕೇಳ್ದ ನವಿಲಂತೆ ನಲಿದು(ಅರ್ಥನೀ. ೧-೭೯ ವ). ೨. ನವಿಲಿನ ಚಿತ್ರವಿರುವ ನಾಣ್ಯ : ಆಯದೊಳಗೆ ಲೊಕ್ಕಿಯು ನವಿಲುಹಾಗಿ ಪೊನ್ನವಣ (ಸೌಇಇ. IX–I, ೧೬೪–೨೮; 1098). **ನವಿಲು:** ೧. "ಮಯೂರಃ, ಬರ್ಹಿಣಃ, ಬರ್ಹಿನ್, ನೀಲಕಂಠಃ, ಭುಜಂಗಭುಕ್, ಶಿಖಾವಲಃ, ಶಿಖಿನ್, ಕೇಕಿನ್, ಮೇಘನಾದಲಾಸಿನ್ – ಈ ೯ ನವಿಲು" (ನಾಚಿರಾ. ೧೧೫) ; ಗಿರಿಯಲ್ಲಲ್ಲದೆ ಹುಲ್ಲುಮೊರಡಿಯಲ್ಲಾಡುವುದೆ ನವಿಲು (ಮಹಾದೇ. ೪. ೧೩೦–೨೮೫) ; ಘನಮೇಘಮಂ ಕಂಡ ನವಿಲಂತೆ (ಸಿದ್ಧರಾ. ೨-೨೭) ; ನವಿಲಿಂಗೆ ಚಿತ್ರಪತ್ರವನಾರು ಬರೆದವರು (ಪುರಂದ. ೨-೪೭-೨) ; ಹಾಡುವ ವಣ್ಣಂಬ ನರ್ತಿಪ ನವಿಲು (ಮೋಹತ. ೫-೩೪) ; ನವಿಲನ್ನು ನೋಡಿ ಕೆಂಬೂತ ಪುಕ್ಕ ತೆರೆದುಕೊಂಡಿತು (ಗಾದೆ). **ನವಿಲ್ಕೆ:** ೧. ಮಾಘಮಾಸದ ನವಿಲೆಯಂತೆ[ಪಾಠಾಂ. ನವಿಲಿನಂತೆ] ಆದೆ ನೋಡವ್ವಾ (ವಚಶಾ. II, ೩೬೩).

ನವಿಲ ಕೊಟ್ಟು = ನವಿಲಿನ ಜುಟ್ಟು : "ಶಿಖಾ, ಚೂಡಾ – ಈ ೨ ನವಿಲ ಕೊಟ್ಟು" (ಹಲಾಯು. ೪೦-೮೯) ; ನವಿಲ ಕೊಟ್ಟು ಕರಿಂಜ(ದ) ಪುಷ್ಪ ಫಳಂ ಘೃತಂ ಮಧು ಬೇವು ಸಾಸಿವೆಗಳಿಂಬಿವನಕ್ಕಿ . . . ತ್ರಿಶೂಲಿ ಯನಕ್ಕಿ ಸಂಭವಿಪುದು ಕುಡಿ ಪಿಂಗುಗುಂ ಕೊಟಿವಾವು ತಿಂದ ಮಹಾವಿಷಂ (ಕೋಕೋಶ. ೧೦-೨೨); ನವಿಲ ಕೊ [ಪಾಠಾಂ. ಕ]ಟ್ಟು ಕರಂಜ ಪುಷ್ಪ ಫಲಂ ಘೃತಂ ಮಧು ಬೇವು ಸಾಸಿವೆಗಳಿಂಬಿವನಕ್ಕಿ . . . ಕವಳಮಂ ಕುಡೆ ಪಿಂಗುಗುಂ ಕೊಟಿವಾವು ಕೊಂಡ ಮಹಾವಿಷಂ (ಖಮರ. ೦೦-೬೯). ನವಿಲ ಗಱಿ, ನವಿಲ ಗರಿ = ನವಿಲುಗರಿ : "ಮೇಚಕಃ – ಹಗ್ಗಳ್ಕಂಗಡಲೆ, ನವಿಲ ಗಱಿ" (೬ಷಡಿ. ೦೨೯) ; "ಪಿಂಛಂ–ನವಿಲ ಗರಿ" (ಅಕಶ್ಚ. ೩೫೮). ನವಿಲ ನುಡಿ = ನವಿಲಿನ ಕೂಗು : "ಕೇಕಾರವಂ ನವಿಲ ನುಡಿ" (ಶಂಗರಾ. ೫೦-೩). ನವಿಲ ಸೋಗೆ=ನವಿಲುಗರಿ: "ಶಿಖಂಡಃ, ಪಿಂಛಂ, ಬರ್ಹಂ -ಈ ಮೂಱು ನವಿಲ ಸೋಗೆ" (ನಾಚಿರಾ. ೧೦೫); "ಕಲಾಪಃ-ನವಿಲ ಸೋಗೆ" (೬ಷಡಿ. ೨೦). ನವಿಲುತುಪ್ಪ = ನವಿಲಿನ ಕೊಬ್ಬು : ವಾಯು ನೋವಿಗೆ ನವಿಲುತುಪ್ಪ ಒಳ್ಳೆಯದು (ರೂಢಿ). [ ದೇಱ. ತಮಿ. ಇಮಲಿ ; ತುಳು. ನೆಯಿಲು ; ತೆಲು. ನಮಲಿ, ನೆಮಲಿ, ನೆಮಿಲಿ ; ಕೊಲಾ. ನಮ್ಲಿ, ನಮ್ಲಿ, ಲಮ್ನಿ; ನಾಯ್ಕಿ. ನಮ್ಲಿ, ಲಮ್ಲಿ ]

**ನವಿಲಗುಂದ** 'ನವಿಲ್ಗುಂದ' ನೋ.

**ನವಿಲಚ್ಚು** (ನಾ). ನವಿಲಿನ ಮುದ್ರೆ,–ಗುರುತು : ಚಿಕ್ಕ ಮಾದೋಜನುಂ ಶ್ರೀಸ್ವಾಮಿದೇವರ ನವಿಲಚ್ಚಿನ ಪೊನ್ನಂ ಲೊಕ್ಕಿಯ ಪೊನ್ನಾಣೆಯು(ಂ) ಮಾಪೊನ್ನ ತೂಕಮುವಾಗಿ ಪೊಯ್ದು ಸಲಿಸುವರು (ಸೌಇಇ. IX–I, ೧೬೪–೨೫ ; 1098). [ ನವಿಲ್ + ಅಚ್ಚು$_3$ ]

**ನವಿಲಡಿ, ನವಿಲಾಡಿ** (ನಾ). ಒಂದು ಬಗೆಯ ಮರ: "ನವಿಲಡಿ ಮಯೂರ ಪದಿಯಕ್ಕು" (ಶಂಗರಾ. ೩೫-೧೫) : ನವಿಲಡಿ ಹೊನ್ನೆ. (ರೇವಜ. ೩೭-೦೩). ನವಿಲಾಡಿ : ಮರಗಳು: ಹೆಸವ, ಹೆಬ್ಬಲಸು . . , ಆಳಲೆ, ಹುಲುವೆ, ಹುನ್ನಲು, ಮತ್ತಿ, ನವಿಲಾಡಿ. ಜಂಬೆ (ನಮ್ಮನು. ೨೩೭).

ನವಿಲಡಿಯ ಮರ = ನವಿಲಡಿ : "ಮಯೂರಜಂಘಃ – ನವಿಲಡಿಯ ಮರ ಹೆಪ್ಪಾರ." (೬ಷಡಿ. ೧೨೨). [ ನವಿಲ್ + ಅಡಿ$_1$ ]

**ನವಿಲಾಟ** (ನಾ). ನವಿಲಿನ ಕುಣಿತ ; ಕೇಕಿನರ್ತನ : ನವಿಲಾಟಂ ಸೊಗ ಯಿಸುವುದು ವಿವೇಕಿಯಪ್ಪಂಗೆ ನಾಯ್ಗೆ ಸೊಗಯಿಸುವುದೆ (ಧರ್ಮಾಮೃ. ೧-೪೭) ; ನವಿಲಾಟಂ ಹಂಸೆಯ ನಡೆ ತವೆ ಮಂದಾನಿಳನ ಸುಗತಿ . . . ತವತವಗದಂಗುತಿರ್ದುವು ನವೀನಬಾಲಕಿಯ ಮಧುರಮೃದುಪದಗತಿಯೊಳ್ (ಗಿರಿಕ. ೩-೧೦೮). [ ನವಿಲ್ + ಆಟ ]

**ನವಿಲಾಡಿ** 'ನವಿಲಡಿ' ನೋ.

**ನವಿಲು** 'ನವಿಲ್' ನೋ.

**ನವಿಲುಕೋಸು** (ನಾ). ಅಡಿಗೆಗೆ ಉಪಯೋಗಿಸುವ ಒಂದು ಬಗೆಯ ಗಡ್ಡೆ ; ನವಿಲುಕೋಲು : ಇದು ಕೋಸುಗಡ್ಡೆಯ ಜಾತಿಗೆ ಸೇರಿದ ತರಕಾರಿ . . . ಅರ್ಧ, ಮುಕ್ಕಾಲು ಅಡಿಗೊಂದರಂತೆ ನವಿಲುಕೋಸನ್ನು ಬೆಳೆಯಲಾಗುವುದು (ತರಕಿ. ೪೮). 'ನವಿಲ್ಕೋಲ್' ಪರಾ.

[←ಲ್ಯಾಟಿನ್. ಫ್ರೆಂಚ್. ಜರ್ಮನ್. Knol khol]

**ನವಿಲುಗರಿ** (ನಾ). ೧. ನವಿಲಿನ ಪುಕ್ಕ,-ಗರಿ ; ಬರ್ಹ. ೨. ಸೋಗೆ : ನವಿಲುಗರಿ ಬೀಸಣಿಗೆಯನ್ನು ಉಪಯೋಗಿಸುವುದರಿಂದ ವಾತಹರವಾಗಿ ಬಲವಾಗಿ ಮಂಡೆಯು ಕೂದಲಿಗೆ ಹಿತವಾಗಿ ಉಷ್ಣಕರವಾಗಿರುವುದು (ಸಕಪ್ಪ. ೫೭). [ನವಿಲು (<ನವಿಲ್) + ಗರಿ (<ಗಱು)]

**ನವಿಲುಗುಂದ** 'ನವಿಲ್ಗುಂದ' ನೋ.

**ನವಿಲುಜುಟ್ಟು** (ನಾ). ನವಿಲಿನ ತಲೆಯ ಮೇಲಿರುವ ಕೊಟ್ಟು,-ತುರಾಯಿ,—ಶಿಖೆ : (ಕಿ). [ನವಿಲು (<ನವಿಲ್) + ಜುಟ್ಟು]

**ನವಿಲುದೊಂದಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ನವಿಲುದೊಂದಿ ಹುಲ್ಲು, ಸಣ್ಣ ಹಂಚೀ ಹುಲ್ಲು, ದೊಡ್ಡಕರೇಕಂದಕಹುಲ್ಲು (ಮ್ಯಾಜಿ. ೬೨-೦೪೬೯). [ನವಿಲುದೊಂಡ್ರಿ + ಹುಲ್ಲು (< ಪುಲ್)]

**ನವಿಲುಪುಕ್ಕ** (ನಾ). = ನವಿಲುಗರಿ ೧ : (ಕಿ).

[ನವಿಲು (<ನವಿಲ್) + ಪುಕ್ಕ$_2$ (<ಪುಚ್ಛ$_2$)]

**ನವಿಲುಬಣ್ಣದ ಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಮ್ಯಾಜಿ. ೫೩-೧೦೭೭). [ನವಿಲು (<ನವಿಲ್) + ಬಣ್ಣ + ಹುಲ್ಲು (<ಪುಲ್)]

**ನವಿಲುಬಾಲದ ಗಿಡ** (ನಾ). ಒಂದು ಬಗೆಯ ಗಿಡ : ನವಿಲುಬಾಲದ ಗಿಡ, ಫೆರ್ನು (ಮ್ಯಾಜಿ. ೩-೪೪).

[ನವಿಲು (<ನವಿಲ್) + ಬಾಲ$_1$ + ಗಿಡ (<ಗಿಡು)]

**ನವಿಲುಮೆಟ್ಟಿನ ಪಲ್ಯ** (ನಾ). ಅಡಿಗೆ ಮಾಡಲು ಬಳಸುವ ಒಂದು ಬಗೆಯ ಸೊಪ್ಪು :(ಕಿ). [ನವಿಲು (<ನವಿಲ್) + ಮೆಟ್ಟು ? + ಪಲ್ಯ$_1$]

**ನವಿಲುಯಾಲೆ** 'ನವಿಲುಯ್ಯಾಲ್' ನೋ.

**ನವಿಲುಯ್ಯಾಲ್**, ನವಿಲುಯಾಲೆ, ನವಿಲುಯ್ಯಾಲು, ನವಿಲುಯ್ಯಾಲೆ, ನವಿಲುಯ್ಯಾಲೆ (ನಾ). ನವಿಲಿನಾಕಾರದ ತೂಗುಮಂಚ,-ಉಯ್ಯಾಲೆ, - ಜೋಕಾಲಿ : ಮದನ ಮಂಗಳಾಗಾರದ್ವಾರಮಕರ ತೋರಣದಂತಿರ್ದ ನವಿಲುಯ್ಯಾಲ ಕೆಲಕ್ಕೆ ವಂದು (ಚಂದ್ರಕು. ೮-೪೫ ವ) ; ಅನೇಕ ನವೀನರತ್ನಮಯದರ್ಪಣಾನನಕಳಶವಿಚಿತ್ರಪತ್ರಪರಿಶೋಭಿತಮಾಗಿ ನವೀನಕ್ರೀಡೆ ತವಿಲ್ಲದ ನವಿಲುಯ್ಯಾಲ ಮುಂದೊರ್ವ ವಿದಗ್ಧವನಿತೆ . . . ಮಂದಯ್ಸಿದ ಸತಿಯರ ಸಂದಣಿಯೊಳಾಂದೋಳಮನೇಱದಾಗಳ್ (೧೮ಕ. ೪-೦೫೭ ವ). **ನವಿಲುಯಾಲೆ** : ಸೇನಬೋವ[ರ ಮಗ] ತಿಂಮಂಣ ಗ್ರಾಮದ ಸಮಸ್ತರು ದೇವರಿಗೆ ನವಿಲುಯಾಲೆಯ ಕಂಭವ ನಿಲಿಸಿದರು (ಕಇ. IV, ೭-೭ ; 16ನೆಯ ಶತ). **ನವಿಲುಯ್ಯಾಲು** : ಪೇಡಾಕುಲೀಯ ಕೆಲದೆ ಮಾಡುಮೆಟ್ಟುಗಳಾಡುವ ನವಿಲುಯ್ಯಾಲುಗಳು . . . ಗಾನವ ಮಾಡುವ ಮಂದಿರವಿಹವು (ಅಂಜಕ. ೩-೩೭) ; ಮಾಡಿಸಿದ ದ್ವಮ್ಮಾ ದೇವಲ್ಯದ ಮುಂದಣ ಅದಿಷ್ಟಣ ಮುಖನೆಲೆಯ ಉಪ್ಪರಿಗೆ ಕಲ್ಲ ನವಿಲುಯ್ಯಾಲು ಮೇಲಣ ಸಿಖರವು (ಪ್ರಾಆರಿ. ೦೯೩೯, ೪-೬ ; 1365) ; ಆ ನಲ್ಲರಾಟವಿದ್ದುದು ನವಿಲುಯ್ಯಾಲ ತಾನೇಱು ತೂಗಾಡಿದಂತೆ (ಧರ್ಮಕ. ೧೦-೦೨೭) ; ಬಾನೆಡೆಯೊಳಗಿಹ ಚಂದ್ರನೆನ್ನಯ ಮೊಗಕಾನಲಾಪನೆಯೆಂದು ಜಱಿದು ತಾನೊದೆವವೊಲು ನವಿಲುಯ್ಯಾಲನಾಡುವ ಮಾನಿನಿಯೊರ್ವ ಳೊಪ್ಪಿದಳು (ಕಂಸವಿ. ೨-೯೩). **ನವಿಲುಯ್ಯಾಲೆ** : ಕಾಲಾಂತಕನ ದುಂಬ್ಯಾಳಿಯಲಿ ನವಿಲುಯ್ಯಾಲೆಯ ನೀವಾಡಲಾಪಿರಲೆ (ಕುವ್ಯಾಸ. ೦೪-೩೦).

**ನವಿಲುಯ್ಯಾಲೆ** : ಘನತರವಹ ನವಿಲುಯ್ಯಾಲೆಗಳಿಂದಲನಿಮಿಷಪುರವ ಪೋಲ್ತಿಹುದು (ಕಂಸವಿ. ೨-೭೦) ; ಚಿತ್ರರವಹ ಮಿಸುನಿಯ ನವಿಲುಯ್ಯಾಲೆ ಯಿತ್ತುವು ಕಣ್ಗೆ ಕೌತುಕವ (ಕಂಸವಿ. ೬-೮). [ನವಿಲ್ + ಉಯ್ಯಲ್]

**ನವಿಲುಯ್ಯಾಲು** 'ನವಿಲ್ಯುಯ್ಯಾಲ್' ನೋ.

**ನವಿಲುಯ್ಯಾಲೆ** 'ನವಿಲುಯ್ಯಾಲ್' ನೋ.

**ನವಿಲುಯ್ಯಾಲೆ** 'ನವಿಲುಯ್ಯಾಲ್' ನೋ.

**ನವಿಲೂರ್**, ನವಿಲೂರು (ನಾ) ಒಂದು ಊರಿನ ಹೆಸರು; ಈಗಿನ ಧಾರವಾಡಜಿಲ್ಲೆಯ ನವಲೂರು : ನವಿಲೂರ ನಾಲ್ವತ್ತುಮುಣ್ಣರು ಬೆಳ್ಗೊಳದ ಗೋವಿಂದವಾಡಿಯಲು (ಎಕ. II, ೩೫-೮ ; ಸು. 800) ; ನವಿಲೂರ ಸೀಮೆಯೊಳ ಬಡಗಲು (ಎಇ. XIII, ೩೦೯-೧೧೪ ; 1126). **ನವಿಲೂರು** : ಮೂಗುರು ಸೀಮೆಯ ತಾಯೂರ ಸ್ಥಳದ ತಾಯೂರ ಗ್ರಾ [ಮ] ೧ ಯಾತ್ರರಗೊಂಡನಹಳ್ಳಿ ೧ . . . ನವಿಲೂರು ೧ ಬೆಳುಗುಂದ ೧ . . . ಯಿಲವನೂ ನಿನ್ನ ಮಗ ತಿರುಮಲರಾಜನಾಯಕಗೆ ಪಲಕಿಯ ಉಂಬಳಿಗೆ ಗೊಡಗೆಯಾಗಿ ಕೊಟೆವಾಗಿ (ಎಕ. III (R), ನಂಜನ. ೩೦೮-೦೩ ; 1686) ;ಯಲ್ಲಿಗೆ ತಾಗಿ ನವಿಲೂರೆಲ್ಲೆ ಯೆಡಕೆಕ್ಕಿ . . . ಈಶಾನ್ಯದಲ್ಲಿ ನೆಟ್ಟ ಕಲ್ಲ ಕೊಡಿತು (ಎಕ. III (R), ನಂಜನ. ೨೦೨-೦೪೨ ; 1639).

ನವಿಲೂರ ಗಣ = ಜೈನಯತಿಗಳ ಒಂದು ಶಾಖೆ : ನವಿಲೂರ ಗಣದ ಬಾಳಂಬಾ ಕನ್ತಿಯರ ಮಗಳ್ ವಿಜಕ್ಕಂ (ಎಕ. VI, ಕಡೂರು. ೦೫೯-೦೨ ; 961). . [ನವಿಲ್$_0$ + ಊರ್]

**ನವಿಲೂರು** 'ನವಿಲೂರ್' ನೋ.

**ನವಿಲೂರ್ಸಂಘ** (ನಾ). ಜೈನಯತಿಗಳ ಒಂದು ಶಾಖೆ : ಸ್ವಸ್ತಿ ಶ್ರೀಮತ ನವಿಲೂರ್ಸಂಘದ ಪುಷ್ಪಸೇನಾಚಾರಿ x x x ಯ ನಿಸಿಧಿಗೆ (ಎಕ. II (R), ೦೦೯-೦ : ?). [ನವಿಲೂರ್ + ಸಂಘ]

**ನವಿಲೆ**$_1$ 'ನವಿಲ್' ನೋ.

**ನವಿಲೆ**$_2$ (ನಾ). ೧. ಒಂದು ಊರಿನ ಹೆಸರು : ಆ ಕಂಪಣದ ಬಳಿಯ ನವಿಲೆಯಲಿ ಬೆಳ್ದಿರೆ ಮತ್ತರ್ ೨ . . . ಇನಿತುಮಂ ಪ್ರತಿಪಾಳಿಸುವರ್ (ಎಕ. VII, ಶಿಕಾರಿ. ೨೦-೨೨ ; 1082). ೨. ರಾಯಚೂರುಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನ ಈಗಿನ 'ನವಲಿ' ಎಂಬ ಊರು : ನವಿಲೆಯ (ಜಟಿ)ಯ ಸಂಕರದೇವಾಲಯಮುಮಂ . . . ಪೊಸತಾಗೆ ಪಡಿ (ಸಲಿಸಿ) (ಸೌಇಇ. XI-I, ೦೦೩-೨೩ ; 1068 ?). [ ? ]

**ನವಿಲೆನಾಡು**, ನವಲೆನಾಡು (ನಾ). ೧. ಒಂದು ಊರಿನ ಹೆಸರು : ಸುಗುನಾಡಧಿಪತಿ ರವಿಗನ ಮಗಳಾಗಿಯುಮನ್ತೆ ನವಿಲೆನಾಡಧಿಪತಿಗಾಂ ನೆಗಳೆ ಸತಿಯಾಗಿ ಬಾಳ್ದುದು ಎಗೆದಪ್ಪೆನೆ ಕೊಟ್ಟ ಕೊಣ್ಣ ಮನೆಯೆಸ ಮಟ್ಟಿಯಲ್ ಎನ್ದು . . ಕಯ್ಯುಗಿದುರಿವುರಿಯಂ ಪೊಕ್ಕು ದೇಕಬ್ಬೆ ತನ್ನಂ ಧರೆಯಲ್ಲಂ ಮೆಚ್ಚೆ ನಿಚ್ಚಂ ಪೊಗಳೆ ನೆಗಟುತುಂ ದೇವಲೋಕಕ್ಕೆ ಪೋದಳ್ (ಎಕ. III (R), ಹೆಗ್ಗಡ. ೬೦-೨೨ ; 1057). **ನವಲೆನಾಡು** : ೨. ಹೆಗ್ಗಡ ದೇವನ ಕೋಟೆಯ ಬಳಿ ಇರುವ ಒಂದು ಪ್ರಾಂತದ ಹೆಸರು : ಶ್ರೀಮದೆಱೆಪ್ಪೆರಸರ್ ನುಗುನಾಡು ನವಲೆನಾಡುಮಮಾಳುತ್ತಮಿರೆ (ಎಕ. IV, ಹೆಗ್ಗಡ. ೦೦೩-೭ ; ಸು. 910) ; ವೀರಂ ನವಲೆನಾಡಧಿಪತಿ ಕುಱುವನ್ದಗಲದ ಪೆರ್ವ್ವಣಿಯಲಾತಂ (ಎಇ. VI, ೨೦೬-೦೮ ; 1057).

[ನವಿಲೆ$_2$ + ನಾಡು]

**ನವಿಲ್ಕೋಲ್**(ನಾ). = ನವಿಲುಕೋಸು: (ಮ್ಯಾಜಿ. ೦೪-೨೫೨).

[←ಲ್ಯಾಟಿನ್. ಫ್ರೆಂಚ್. ಜರ್ಮನ್. knol khol]

**ನವಿಲ್ಗುಂಚ** (ನಾ). ನವಿಲುಗರಿಯ ಕಂಚ್ಚು. -ಕುಂಚ : ನವಿಲ್ಗುಂಚ ಚೌರಿಯ ಉಭಯಪಕ್ಷದೊಳು ನಿಂದು ಸೋವುತ್ತಿರಲು (ನವಮೋ. ೨೫-೩೦).

[ನವಿಲ್ + ಕುಂಚ]

**ನವಿಲ್ಗುಂದ, ನವಿಲಗುಂದ, ನವಿಲುಗುಂದ** (ನಾ). ಒಂದು ಊರಿನ ಹೆಸರು; P ಈಗಿನ ಧಾರವಾಡಜಿಲ್ಲೆಯ ನವಿಲ್ಗುಂದ : ಕೆಂಚನೆಂಬೋ ನಿಳಾ ಮಹಿತಂ ವೀರನ್ಸ್ಕರ್ಸುತನಿನುದ್ಜರ[ಂ] ಒಡಿದಡುಸಿ ನವಿಲಕೊನ್ದುಡಿಗ[ಡೆ] ತಳ್ಕಿಕ್ಕಿ ಬೇಡವಡೆಯಂ ಬಲ್ಲಾಳ್ವೆಡೆದು ಬೆಳ್ವಲಮಂ ನೋಳ್ಪ[ಡೆ]ಮುನ್ನಂ ಬಳಿಕ್ಕೆ ನೆಲೆ ನವಿಲ್ಗುನ್ದಪುರಂ (ಸೌಇಇ. XI–I ೪೩–೪ ; ೧೧೦). **ನವಿಲಗುಂದ:** ಪುತ್ರೋ ನವಿಲಗುಂದ ಶ್ರೀಶಿಮ್ಮಯೇಂದ್ರಸ್ಯ ನಂದನಃ (ಎಕ. XII, ತುಸಾಳ೩. ೧–೨೦೭ : 1571). **ನವಿಲುಗುಂದ:** ದೊಡ್ಡವಾಡ ನವಿಲುಗುಂದ ನಾಲ್ವತ್ತು (ಇಅ. XII, ೯೭–೨೫ ; 1187). [ < ನವಿಲ್ $_4$ + ಕುಂದ$_1$ ]

**ನವಿಲ್ಗುಂದಗೋಲು** (ನಾ). ನವಿಲುಗುಂದದ ಕಡೆಯ ಅಳತೆಯ ಕೋಲು : ನವಿಲ್ಗುಂದಗೋಲಿನಲಳೆದು ಸರ್ವ್ವನಮಸ್ಯವಾಗಿ ಕೊಟ್ಟ ಕೆಯಿ ಮತ್ತರ್ನ್ನಾಲ್ಕು (ಸೌಇಇ. XX, ೨೧೪–೭೭ ; 1228). [ ನವಿಲ್ಗುಂದ + ಕೋಲು$_1$ (<ಕೋಲ್$_1$) ]

**ನವಿಲ್ದೇರ** (ನಾ). ನವಿಲನ್ನು ವಾಹನವಾಗಿ ಉಳ್ಳವನು ; ಷಣ್ಮುಖ: "ನವಿಲ್ದೇರಂ, ಮುಯ್ಯಿಮೊಗಂ, (ಅಱುವೊಗಂ), ಮರಗೂಟಮಗು– ಈ ೪ ಕಾರ್ತಿಕೇಯಂಗೆ ಪೆಸರ್" (ಕಕಸಾ. ೯೭–೫) ; "ಕುವರಂ ಮರಗೂಟ ಮಗಂ ನವಿಲ್ದೇರಂ ಬಗೆಯಲಱುವೊಗಂ ತಾನೆನ್ನರ್ ... ಅಭಿಧಾನಂಗಳ್ ಕವಿವರರಿಂ ಷಣ್ಮುಖಂಗಮರ್ವುವ" (ಕವಿಕಂ. ೨೦). [ ನವಿಲ್ದೇರು + – ಅ$_7$ ]

**ನವಿಲ್ದೇರು** (ನಾ). ನವಿಲಿನ ವಾಹನ. 'ನವಿಲ್ದೇರ' ಪರಾ. [ ನವಿಲ್ +ತೇರು$_2$ (<ತೇರ್$_2$) ]

**ನವಿಲ್ಮುಡಿ** (ನಾ). ತುರುಬುಗಳಲ್ಲಿ ಒಂದು ವಿನ್ಯಾಸ ; ನವಿಲುಗರಿಯ ಆಕಾರದಂತೆ ಕೂದಲನ್ನು ಇಳಿಬಿಟ್ಟು ಕಟ್ಟಿದ ಮುಡಿ: ಜಟಾಗ್ರದೊಳು ವಿಧು ನವ್ಯಮೂರ್ತಿ ಮಂದಾಕಿನಿಯ ಪಟ್ಟದ ನವಿಲ್ಮುಡಿಯ ತೋಱಿಸಿದ (ಮೋಹತ. ೨೦–೭೧) ; ಬಳಲುಮುಡಿ ಬಲ್ಮುಡಿಯು ಸೋಲ್ಮುಡಿಯು ಜೋಲ್ಮುಡಿಯು ನಲಿವ ನವಿಲ್ಮುಡಿ ವಾರೆಮುಡಿ ಒಲು ಪಿನಮುಳಮುಡಿಗಳಲಿ ಬರುತಿರ್ದರು (ನವಮೋ. ೨೪–೧೮). [ ನವಿಲ್ + ಮುಡಿ$_3$ ]

**ನವಿಲ್ಬಾಣತಿ** (ನಾ). ಹೊಸ ಮರಿಗಳನ್ನುಳ್ಳ ನವಿಲು; ಬಾಣಂತಿಯಾದ ನವಿಲು: ನವಿಲ್ಬಾಣತಿಯ ಬೆನ್ನನೇಱಿ ಮಂಡೆಯ ಚುಂಡಿಕೆಯಂ ಕರ್ಚಿ ಸೆಳೆವ ಸೋಗೆಯ ಮಱಿಯ ಮುದ್ದುತನಮಂ (ಅರ್ಧನೇ. ೦–೯೨ ವ). [ ನವಿಲ್ + ಬಾಣತಿ ]

**ನವೀಕರಣ** (ನಾ). (ಹಳೆಯದನ್ನು) ಹೊಸತು ಮಾಡುವುದು ; ಹೊಸ ಸತ್ತ್ವವನ್ನು ತುಂಬುವುದು: ಅತಿವೃದ್ಧದಿಂದ ಹೊಸರುಜಿನಕಡೆಯಾದೀತೂ ಮಿತಿಯಿಂ ನವೀಕರಣ (ಮಂಕುಳ. ೬೭೭); ಈ ಉತ್ಸವವು ಕನ್ನಡ ಭಾಷೆಯ ನವೀಕರಣ ಪ್ರಯತ್ನದ ಒಂದು ರೂಪ (ಸಾಹಿಕ. ೫೮). [ ಸಂ. ]

**ನವೀಕರಿಸು** (ಕ್ರಿ). ೧. "ಮೊದಲಿನ ಸ್ಥಿತಿಗೆ ತರು; ಹೊಸದಂ ಹೇಗೊ ಹಾಗೆ ಕಾಣುವಂತೆ ಮಾಡು ; ನವೀಕರಿಸು ; ಜೀರ್ಣೋದ್ಧಾರ ಮಾಡು . . . ಪುನರುಜ್ಜೀವನಗೊಳಿಸು" (Renew. ಇಂಕನಿ). ೨. ಹೊಸದಾಗಿ ಮಾಡಿಸು; ಹೊಸತುಗೊಳಿಸು : ಸಾಹಿತ್ಯಪರಿಷತ್ತಿನಲ್ಲಿ ನನ್ನ ಸದಸ್ಯತ್ವವನ್ನು ನವೀಕರಿಸಬೇಕು (ರೂಢಿ). [ ನವೀಕರಣ + – ಇಸು$_3$ ]

**ನವೀಕೃತ** (ಗು). ಜೀರ್ಣೋದ್ಧಾರ ಮಾಡಿದ: ನವೀಕೃತಮಪ್ಪ ಬಂದಣಿಕೆಯ ತೀರ್ತ್ಥ (ಎಕ. VII, ಶಿಕಾರಿ. ೨೨೦–೨೮ ; 1076). [ ಸಂ. ]

**ನವೀನ** (ಗು). ೧. ಹೊಸತಾದ ; ನೂತನವಾದ : "ನವ್ಯಂ, ನವಂ, ನವೀನಂ, ನೂತನಂ, ಅಭಿನವಂ, ನೂತ್ನಂ–ಈ ೬ ಪೊ(ಹೊ)ಸತು" (ಹಲಾಯು. ೧೧೯–೨೬): ಅಬ್ಜಮಂ ಬಿಸುಟತ್ಯುತ್ತಮಮಿಂತುಟೆಂದು ಪಿರಿದುಂ ಸಂತೋಷದಿಂ ವಾಣಿ ಬಂದು ಸಮಂತಿರ್ಕೆ ನವೀನಸೌರಭದ ಪೋಲ್ ಜಿಹ್ವಾಗ್ರದೊಳ್ ರುದ್ರನಾ (ಜಗವಿ. ೧–೬) ; ಕಂಡಂ ಕೃಷ್ಣಾಜಿನ ದರ್ಭ ನವೀನ ವಿಷ್ಟರಾಸೀನರಂ (ವಿಷ್ಣು.ಪು. ೩–೩೯) ; ಹಂತಿಯ ಹಾಡುಗಳಲ್ಲಿ ಬರುವ ವರ್ಣನೆಗಳು ನವೀನವಾಗಿಯೂ ಅತ್ಯಂತ ಹೃದಯಂಗಮವಾಗಿಯೂ ಇವೆ (ಕನ್ನಕಾ. ೨೦೦). ೨. ಇತ್ತೀಚಿನ ; ಆಧುನಿಕ : ನಾಡಿನ ಪುಣ್ಯದ ಪೂರ್ವ ದಿಗಂತದಿ ನವ ಅರುಣೋದಯ ಹೊಮ್ಮುತಿದೆ ! ಚಿರನೂತನ ಚೇತನ ದುತ್ಸಾಹದಿ ನವೀನ ಜೀವನ ಚಿಮ್ಮುತಿದೆ ! (ಕನ್ನಡಾ. ೦೩೦): ನವೀನ ನಾಗರಿಕತೆಯೊಂದರ ಇರವು ಪ್ರಕಾಶಕ್ಕೆ ಬಂದಿತು (ದ್ರಾವಿವಿ. ೨೨). [ ಸಂ. ]

**ನವೀನಚೀನ** (ನಾ). ಹೊಸಬಗೆಯ ರೇಷ್ಮೆಯ ವಸ್ತ್ರ : ಪಡೆದನುಡಲ್ ನೃಪಂ ಸತಿಯ ಮೆಯ್ವೆಳಗೆಂಬ ನವೀನಚೀನವಮಂ (ಚಂದ್ರಪು. ೭–೭೭). [ ನವೀನ + ಚೀನ$_1$ ]

**ನವೀನತರ್ಕ** (ನಾ). ತಾರ್ಕಿಕ ದರ್ಶನದಲ್ಲಿ ಹೊಸಪಂಥ : ಈ ತರ್ಕಶಾಸ್ತ್ರ ದಲ್ಲಿ ಪ್ರಾಚೀನತರ್ಕ ನವೀನತರ್ಕ ಎಂಬ ಎರಡು ವಿಭಾಗವಿರುವುದು (ಹಿಂದಸಾ. ೦೦೩). [ ನವೀನ + ತರ್ಕ ]

**ನವೀನತೆ** (ನಾ). ಹೊಸತನ ; ಆಧುನಿಕತೆ : ಜೀವನದ ವಿವಿಧ ಕ್ಷೇತ್ರಗಳಲ್ಲಿ ನವೀನತೆ ತಲೆದೋರಿದೆ (ಶಿಕ್ಷದ. ೭). [ ಸಂ. ನವೀನತಾ ]

**ನವೀನಪ್ರಜ್ಞೆ** (ನಾ). ಹೊಸಪ್ರಜ್ಞೆ ; ಆಧುನಿಕ ಪ್ರಜ್ಞೆ ; ಇತ್ತೀಚಿನ ಆಗುಹೋಗುಗಳ ಅರಿವು ; ಸಮಕಾಲೀನತೆಯ ಅರಿವು : ಇದು ನವೀನಪ್ರಜ್ಞೆಯಲ್ಲಿ ಬರೆದ ಶ್ರೇಷ್ಠಕತೆಗಳ ಪ್ರಾತಿನಿಧಿಕ ಸಂಗ್ರಹವೇನಲ್ಲ (ಹೊಸಕ್ಕ. ೨೯೭). [ ನವೀನ + ಪ್ರಜ್ಞೆ ]

**ನವೀನವೇದಾಂತಿ** (ನಾ). ವೇದಾಂತದರ್ಶನದಲ್ಲಿ ಹೊಸಪಂಥಕ್ಕೆ ಸೇರಿದವನು : ಈ ಮಾರ್ಗವನ್ನೇ ಪ್ರಾಯಶಃ . . . ಭರ್ತೃಪ್ರಪಂಚ, ಮೊದಲಾದ ಪ್ರಾಚೀನವೇದಾಂತಿಗಳೂ ಭಾಸ್ಕರ, ಯಾದವಪ್ರಕಾಶ ಮೊದಲಾದ ನವೀನವೇದಾಂತಿಗಳೂ ಆಶ್ರಯಿಸಿರುವರು (ಹಿಂದಸಾ. ೦೮೯). [ ನವೀನ + ವೇದಾಂತಿ ]

**ನವುಕರ** 'ನೌಕರ' ನೋ.

**ನವುಕರಿ** 'ನೌಕರಿ' ನೋ.

**ನವುಟು** (ನಾ). (ಕರಾ). ೧. ಬತ್ತದ ಸಸಿಗೆ ತಗಲುವ ಒಂದು ಬಗೆಯ ಹುಳು. ೨. ಬಹಳ ಹಂಳಿ. [ ? ]

**ನವುಬತ್ತು** 'ನೌಬತ್ತು' ನೋ.

**ನವುರು** 'ನವಿರು$_3$' ನೋ.

**ನವುರುಕಟ್ಟೆ** (ನಾ). ಒಂದು ಬಗೆಯ ಗಿಡ : (ವೃಕ್ಷಾಗಿ. ೪೦–೭೮೪). [ ? ]

**ನವುಲಾದಿ** (ನಾ). ಒಂದು ಬಗೆಯ ಗಿಡ : ನವುಲಾದಿ, ಮೈರೊಳೆ, ಭರಣಿಗೆ (ವೃಕ್ಷಾಗಿ. ೭೮–೦೫೯೬). [ ? ]

**ನವುಲೆ$_1$** (ನಾ). ಒಂದು ಬಗೆಯ ಗಿಡ ; ತಪಸೀಗಿಡ. 'ನವುಲೆಗಿಡ' ಪರಾ. [ ? ]

**ನವುಲೆ$_2$** (ನಾ). (?) : ಪಂಪೋನೀಲಗಂಗೆ ಅಂಬುಟಗಂಗೆ ದೇವಕಿವಯನ್ನೈಸೆ ಸತಿ ನವುಲೆಗಳೂ (ದೇಜಾಂಪು. ೯ ೫೦). [ ? ]

**ನವುಲೆಗಿಡ** (ನಾ).=ನವುಲೆ$_1$ : "ಪ್ರಕೀರ್ಯಃ, ಪೂತಿಕರಜಃ, ಪೂತಿಕಃ, ಕಲಿಕಾರಕಃ – ೪ ತಪಸೀಗಿಡದ ಹೆಸರು, ನವು [ಕಾಕಾಂ. ನೌ]ಲೇ ಗಿಡವೆಂದು ಕೆಲವರನ್ನುವರು" (ಸಿದ್ಧಾಂತಿ. ೧೦೮). [ ನವುಲೆ$_1$ + ಗಿಡ (<ಗಿಡು) ]

**ನವೆ$_1$** 'ನಮೆ$_1$' ನೋ.

**ನವೆ$_2$** 'ನಮೆ$_2$' ನೋ.

**ನವೆತ** (ನಾ). ಸೊರಗುವಿಕೆ ; ಕ್ಷಯಿಸುವಿಕೆ ; ಕ್ಷಯ : ಕ್ಷೀ – ಕ್ಷಯೇ, ನವೆತದೊಳ್ (ಕಾಶಕ್ಕ. ೦೪) ; ಸಣ್ಣಾಗುತ್ತ ನವೆಯುತ್ತ ನಡೆದಿದ್ದರು . . . ಇವರ ಅಭಯದಿಂದ ಅವರ ಚಿಂತೆ, ನವೆತ ಅಟ್ಟಿಸುವಂತಿರಲಿಲ್ಲ (ದೀಪಹ. II, ೪೭). [ ನವೆ$_1$ (<ನಮೆ$_1$) + – ತ$_2$ ]

**ನವೆಸು** 'ನಮೆಯಿಸು' ನೋ.

**ನವೋಢೆ** (ನಾ). ನವವಧು : ಭಂದಾರೂಢಾ ನವೋಢಾ ಮುಗ್ಧಾ, ರಸಿಕಾ, ಅನೂನ ಧ್ವನಿತಪ್ರಾಣಾ (ಸೂರ್ಯಶಾ. ೬-೬); ನವಿಲುಗರಿಯ ಕರ್ಣಪೂರದಿಂದ ಶೋಭಿಸುವ ಮತ್ತು ನವೋಢೆಯಾದ ಬೇಡರ ಯುವತಿಯೊಬ್ಬಳ ಸೌಭಾಗ್ಯಾತಿಶಯವು ಧ್ವನಿತವಾಗುತ್ತದೆ (ಧ್ವನ್ಯಾಲೋ. ೧೩೪). [ಸಂ. ನವೋಢಾ]

**ನವೋತ್ಪಲ** (ನಾ). ಹೊಸದಾಗಿ ಅರಳಿದ ಕನ್ನೈದಿಲೆ : ಪರಿಮಳಕೊಯ್ಯು ನಾವರಿಪ ತುಂಬಿ ಮುಗಿಲ್ಗನೆಕಾವಿಲಾಸಮಂದಿರ ಜಲದಗ್ರುಘಂಟೆಯುಲಿ ಮೇಘರವಂ ಪಣಭಾಮಿನೀವಿಲೋಲರುಚಿರಕರ್ಣಪತ್ರರುಚಿ ಮಿಂಚು ನವೋತ್ಪಲ ನಿರ್ಗಮತ್ಸ್ವಸೂನರಸ ರಸಕಣಾಳಿವೃಷ್ಟಿಯೆನೆ ಕಾರವೊಲೊಪ್ಪಿದುದಲ್ಲಿ ತಣ್ಣೆಲರ್ (ಯಾದಕಂ. ೩-೭೮). [ನವ್ಯ + ಉತ್ಪಲ]

**ನವೋತ್ಪಲದಲ, ನವೋತ್ಪಳದಳ** (ನಾ). ಹೊಸದಾಗಿ ಅರಳಿದ ಕನ್ನೈದಿಲೆಯ ಎಸಳು : ನವೋತ್ಪಲದಲೇ[ಪಾಠಾಂ. ಳದಳೇ]ಕ್ಷಣೇ ಮನದೊಳಾದ ನಿರ್ವೇಗವೊಂದವಶ್ಯಮದು ಕೂರ್ಪರೊಳ್ ನುಡಿದೊಡಲ್ಲದೇಂ ಪೋಕುಮೇ ನಿವೇದಿಸು ನಿಜಾಂತರಂಗಗತವುಪ್ಪುದಂ (ಆದಿಪು. ೩-೩೨). **ನವೋತ್ಪಳದಳ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ನವೋತ್ಪಲ + ದಲ]

**ನವೋತ್ಪಳದಳ** 'ನವೋತ್ಪಲದಲ' ನೋ.

**ನವೋದಬಿಂದು** (ನಾ). ನೀರಿನ ಹೊಸ ಹನಿ ; ಹೊಸ ಮಳೆಹನಿ : ಚಾದಗೆ ನವೋದಬಿಂದುಕಣ ಭಕ್ಷಣವ್ರತನುಜ್ಜುಯಿಸಿಯುಂ (ಮಲ್ಲಿಪು. ೮-೧೦೨). [ನವ್ಯ + ಉದಬಿಂದು]

**ನವೋದಯ** (ನಾ). ೧. ಉದಯಂದ ಹೊಸತು,-ಪ್ರಾರಂಭ : ಶಶಿಯೊಳ್ ಪ್ರಕಾಶ ಗುಣಮತಿವಿಶದಂ ಸೊಗಯಿಸುವವೊಲ್ ನವೋದಯದೊಳ್ ವಾಪ್ರಶಮಿತತಮನೊಳ್ ನೆಟಿದುದು ಶಿಶುತೆಯೊಳಂ ನಾಡೆ ರೂಢಿವೆತ್ತ ವಿವೇಕಂ (ಚಂದ್ರಪು. ೫-೧೯). ೨. ಭಾರತೀಯ ಬದುಕಿನಲ್ಲಾದ ಉತ್ಕ್ರಾಂತಿಯ ಪರಿಣಾಮವಾಗಿ ಸಾಹಿತ್ಯದಲ್ಲಿ ಉಂಟಾದ ಹೊಸತನದ ಆವಿರ್ಭಾವ,-ಹೊಸವಿಚಾರಗಳ ಕ್ರಾಂತಿ : ನಾನಾಮುಖವಾಗಿ ಹಿಂದೀ ಸಾಹಿತ್ಯದ 'ನವೋದಯ' ಕ್ಕೆ ಕಾರಣನಾದ ಸಾಹಿತಿ ಹರಿಶ್ಚಂದ್ರ (ಭಾರಿದ. ೪೬೩) ; ಶ್ರೀಯವರು . . . ಕನ್ನಡ ಕವನಗಳಿಗೆ ನವೋದಯದ ನಾಂದಿಯನ್ನು ಹಾಡಿದರು (ಭಾವಗೀ. ೨೩೬). [ನವ್ಯ + ಉದಯ]

**ನವೋದಯಕಾವ್ಯ** (ನಾ). ಕನ್ನಡ ಸಾಹಿತ್ಯದಲ್ಲಿ ಉಂಟಾದ ಕ್ರಾಂತಿಯ ಪರಿಣಾಮವಾಗಿ ಉಂಟಾದ ಕಾವ್ಯ : ರಮ್ಯಕಾವ್ಯ ; ಇಂಗ್ಲೀಷಿನ ರೊಮ್ಯಾಂಟಿಕ್ ಪದ್ಧತಿಯನ್ನು ಅನುಸರಿಸಿದ ಕಾವ್ಯ : ಕನ್ನಡದಲ್ಲಿ ಈ ಶತಮಾನದ ಮೊದಲಿನಲ್ಲಾದ ಪರಿವರ್ತನೆಯಿಂದ ಇದನ್ನು ಬೇರ್ಪಡಿಸುವುದಕ್ಕಾಗಿ, ಅದನ್ನು ನವೋದಯಕಾವ್ಯ ಎಂದು ಕರೆದಂತೆ ಇದನ್ನು ನವ್ಯಕಾವ್ಯ ಎಂದಿದ್ದಾರೆ (ಭಾವಗೀ. ೩೦೮). [ನವೋದಯ + ಕಾವ್ಯ]

**ನವೋದಯಸಾಹಿತ್ಯ** (ನಾ). ಕನ್ನಡ ಸಾಹಿತ್ಯದಲ್ಲಿ ಉಂಟಾದ ಕ್ರಾಂತಿಯ ಪರಿಣಾಮವಾಗಿ ಉಂಟಾದ ಸಾಹಿತ್ಯ ; ಇಂಗ್ಲೀಷಿನ ರೊಮ್ಯಾಂಟಿಕ್ ಪದ್ಧತಿಯನ್ನು ಅನುಸರಿಸಿದ ಸಾಹಿತ್ಯ : ಭಾರತೀಯ ಬದುಕಿನಲ್ಲಾದ ಉತ್ಕ್ರಾಂತಿಯ ಪರಿಣಾಮವಾಗಿ ಸಾಹಿತ್ಯದಲ್ಲಿ ಉಂಟಾದ ಉತ್ಕ್ರಾಂತಿಯಿಂದ ಮೂಡಿದ (ಕನ್ನಡ) ಸಾಹಿತ್ಯವನ್ನು ನವೋದಯ ಸಾಹಿತ್ಯವೆಂದು ಕರೆದರು (ರೂಢಿ). [ನವೋದಯ + ಸಾಹಿತ್ಯ]

**ನವೋದಿತ** (ಗು). ಇತ್ತೀಚೆಗೆ ಪ್ರಸಿದ್ಧಿಗೆ ಬಂದ ; ಉದಯೋನ್ಮುಖವಾದ : ನವೋದಿತಲೇಖಕರಾದ ದಿನೇಶರು, ತಮ್ಮ ಈ ಕಾದಂಬರಿಗೆ ನಾನೊಂದು ಮುನ್ನುಡಿ ಬರೆಯಬೇಕೆಂದು ಅಪೇಕ್ಷಿಸಿದ್ದಾರೆ (ದೀಪದ. ೩). [ನವ್ಯ + ಉದಿತ$_1$]

**ನವೋದ್ಧೃತ** (ನಾ). ಆಗತಾನೇ ಕಡೆದು ತೆಗೆದ ಬೆಣ್ಣೆ ; ನವನೀತ : "ನವನೀತಂ, ನವೋದ್ಧೃತಂ-೨ ಬೆಣ್ಣೆಯ ಪೆಸರುಗಳು" (ಸಿದ್ಧಾಂತಿ. ೨೮೯). [ನವ್ಯ + ಉದ್ಧೃತ]

**ನವೋನವ** (ಗು). ಹೊಚ್ಚಹೊಸದಾದ ; ನಿತ್ಯನೂತನವಾದ : ಎಲ್ಲವೂ ದಿವ್ಯದೃಷ್ಟಿಯಲ್ಲಿ ನವೋನವವಾಗಿ ಕಾಣುವುವು (ಸಮುಜೀ. ೧೧೦) ; ನನ್ನ ನವೋದಿತ ತಾರುಣ್ಯದ ನವೋನವಪ್ರೇಮ, ನಿಸ್ಸೀಮಭಕ್ತಿ (ಇಕ್ಕಳ. ೨೧೧) ; ವಿಶ್ವವನ್ನು ನವೋನವವಾದ ರಸೈಕದೃಷ್ಟಿಯಿಂದೊಮ್ಮೆ . . . ಎಷ್ಟೆಷ್ಟು ವಿವೇಚಿಸಿದರೂ . . . ಸೌಖ್ಯ ದೊರೆಯಲಿಲ್ಲ ! (ಧ್ವನ್ಯಾಲೋ. XXVII, ೬೬೦೪). P ಸಂಸ್ಕೃತದಲ್ಲಿ 'ನವಃ ನವಃ' ಎಂಬಿವು ಭಿನ್ನ ಶಬ್ದಗಳು. [<ನವ$_2$]

**ನವೋನವತೆ** (ನಾ). ಹೊಚ್ಚಹೊಸತನ : ಹೊಸದನ್ನುವದು ಕೃತಿಯ ಗುಣಾವಗುಣವಲ್ಲಷ್ಟೇ ಜೀವಿತವಾಗಿರುವದಿಲ್ಲ ; ಅಥವಾ ಅದು ಒಳ್ಳೆಯ ಕೃತಿಗಳ ನವೋನವತೆಯೂ ಅಲ್ಲ (ಹೊಸಸ್ಥ. ೨೭೮). [ನವೋನವ + -ತೆ]

**ನವ್ಯ** (ಗು). ೧. ಹೊಸತಾದ ; ನವೀನವಾದ : "ನವ್ಯಂ, ನವಂ, ನವೀನಂ, ನೂತನಂ, ಅಭಿನವಂ, ನೂತ್ನಂ – ಈ ೬ ಪೊ(ಹೊ)ಸತು" (ಹಲಾಯು. ೧೧೮-೨೭) ; ನವ್ಯಮೇಘನಿನದಂ ಪೂಣ್ಕೆತ್ತು ರೋದೋಂತದೊಳ್ (ಆಗವಿ೬ ೪-೮) ; ತಣ್ಣದಿರ ತೊಂಗಲ ತೋರ್ಕೆಯಡಂಗಿ ತಟ್ಟ ತಣ್ಣದಿರ ಪೊದಟ್ಕೆಯಂ ಕಟೆವ ನವ್ಯಕಳಾವಿಸರಂ ಮಸುಳ್ದು ಮಾಸಿದ ಮಯೂರಂದ[ರಾಂಧ್ರ]ದಂತೆ ಗಳಿತಪ್ರಭಮಾಯ್ತು ಮೃಗಾಂಕಮಂಡಲಂ (ಶಾಂತೀಶ್ವ. ೧೦-೮೮) ; ಶಚೀಪತಿಯುಂ . . . ದೇವಲೋಕದನೇಕ ನವ್ಯದಿವ್ಯಾರ್ಘನೆಗಳಿಂದರ್ಚಿಸಿ (ಪುಷ್ಪಪು. ೧೪-೪೯ ವ). ೨. ಇತ್ತೀಚಿನ ; ಆಧುನಿಕ. (ನಾ). ೩. ಹೊಸತನ ; ನವೀನತೆ : ಕೃತಿಯೊಳು ಕಾವ್ಯವು ಹೆಚ್ಚಾಗಿ ತೋರಲಿ ನವ್ಯವು ಕಡಿಮೆಯಾಗಿರಲಿ (ಶಂಕಾಕ. ೧೨೯-೮೨). ೪. ಆಧುನಿಕವಾದುದು ; P ಪಾಶ್ಚಾತ್ಯರ ಸಾಹಿತ್ಯದಲ್ಲಿ Moderrist Movement ಎಂದು ಕರೆಯಲಾಗುವ ಸಾಹಿತ್ಯಕ್ರಾಂತಿಯ ಪರಿಣಾಮವಾಗಿ, ಕನ್ನಡದ ನವೋದಯಕ್ಕೆ ಪ್ರತಿಕ್ರಿಯೆಯಾಗಿ ಬಂದ ಸಾಹಿತ್ಯರಚನೆ : ಸಾಹಿತ್ಯವು ರಾಜಕೀಯ ಪ್ರಚಾರ ಇಲ್ಲವೆ ಮತದ ತೊತ್ತಾಗಿ ನವ್ಯವಾಗಲಾರದು (ನವ್ಯಕಾ. ೧೬). [ಸಂ.]

**ನವ್ಯಕ** (ನಾ). ಹೊಸವಿಚಾರಗಳುಳ್ಳವನು ; ಆಧುನಿಕ : ದಾರಿಗಾಣದ ಕಣ್ಣಿ ಹೆದ್ದಾರಿಯಾಗಿದ್ದ ಓ ಕವೀಂದ್ರ ! ಆಧುನಿಕನಿಗೆ ಗುರುವು, ನವ್ಯಕಗೆ ದೀಪದಾನಿ, ಓ ಋಷೀಂದ್ರ ! (ಚಿಂತನ. ೬೦-೩). [ಸಂ.]

**ನವ್ಯಕತೆ** (ನಾ). ಹೊಸಶೈಲಿಯಲ್ಲಿ ಬರೆದ ಕಥೆ ; ಆಧುನಿಕ ಕಥೆ : ಯು. ಆರ್. ಅನಂತಮೂರ್ತಿಯವರ 'ಎಂದೆಂದೂ ಮುಗಿಯದ ಕತೆ' ನವ್ಯಕತೆಗಳ ಇನ್ನೊಂದು ಪ್ರಾತಿನಿಧಿಕ ಸಂಗ್ರಹವಾಗಿದೆ (ನಡೆದಾ. II, ೬೩೨). 'ನವ್ಯ' ಪರಾ. [ನವ್ಯ + ಕತೆ]

**ನವ್ಯಕವಿ** (ನಾ). ಹೊಸಶೈಲಿಯಲ್ಲಿ ಕಾವ್ಯವನ್ನು ರಚಿಸುವ ಕವಿ : ನವ್ಯಕವಿಯು ಕಾವ್ಯವಸ್ತುವನ್ನು ಹೃದಯದಿಂದಲೂ ಬುದ್ಧಿಯಿಂದಲೂ ಕೂಡಿಯೆ ಭೇದಿಸುತ್ತಾನೆ (ನವ್ಯಕಾ. ೩೦). 'ನವ್ಯ' ಪರಾ. [ನವ್ಯ + ಕವಿ$_1$]

**ನವ್ಯಕವಿತೆ** (ನಾ). ಹೊಸಬಗೆಯ ಕವಿತೆ : ಕನ್ನಡ ನವ್ಯಕವಿತೆಗೆ ಇಂಗ್ಲಿಷ್ ನವ್ಯಕವಿತೆ ಪ್ರೇರಣೆಯನ್ನೊದಗಿಸಿತು (ಧಂರೋವಿ. ೩೦೭). 'ನವ್ಯ' ಪರಾ. [ನವ್ಯ + ಕವಿತೆ]

**ನವ್ಯಕಾವ್ಯ** (ನಾ). ೧. ಹೊಸಕಾವ್ಯ : ಪೇಳ್ಪಿಸಿದಪ್ಪಾದರಸ್ಥಳವಿವರ್ಣನಂ ಕೇಳಿಸಿನಿತುಳ್ಳ ಕೃತಿ ನವ್ಯಕಾವ್ಯಮೆನಿಕ್ಕುವಿಲ್ಲದಿರೆ ದುರ್ಲಕ್ಷಣಂ (ಮಂಗಳಾ. ೧೧೬-೧೭) ; ತನಗೆ ಕವಿತ್ವದೊಳ್ನುಡಿಗಳೊಳ್ ಸುಡಿಯಾದ ರಸಂಗಳಿಂಪುವೆತ್ತನುವಶವಾದ ಭಾವವತಿ ಬಂಧುರವಾದ ಪೊದಲ್ದ ರೀತಿ... ಮನಂಬುಗೆವೇಟ್ಪುದು ನವ್ಯಕಾವ್ಯಮಂ (ಧರ್ಮನಾ. ೧-೪೪). ೨. = ನವ್ಯಕವಿತೆ :

ನವ್ಯಕಾವ್ಯವೆಂದರೆ ಆಧುನಿಕಕಾವ್ಯಕ್ಕಿಂತ ಬೇರೆಯಾದ ಕಾವ್ಯ. ವಿಶೇಷ ತಂತ್ರ-ವಿಧಾನಗಳನ್ನು ಪಡೆದ ಕಾವ್ಯವೆಂಬರ್ಥದಲ್ಲಿ ಆ ಶಬ್ದವನ್ನು ಉಪಯೋಗಿಸುತ್ತೇನೆ (ನವ್ಯಕಾ. ೨೪) : ನವ್ಯಕಾವ್ಯದ ಸುರ್ಪಣ ಪಡುವಣದಿಂದ ಬೀಸಿದ ಗಾಳಿಯು ಒಂದು ತೆರೆಯೆಂಬುದು ನಿಜ (ನವ್ಯಕಾ. V ಮುನ್ನುಡಿ). 'ನವ್ಯ' ಪರಾ. [ ನವ್ಯ + ಕಾವ್ಯ ]

**ನವ್ಯಗುಣ** (ನಾ). ೧. ಹೊಸತನ. ೨. ಹೊಸ ಹದೆ. ೧, ೨: ಕೊರ್ವಿ ಪೊಜವೊಣ್ಮೆ ತನಿರಸಮುರ್ವೆ ಕರಂ ಕೊಂಕು ಕವಿವರಂ ನವ್ಯಗುಣಂ ಪರ್ವೆದಿಸುವ ಕಾವನ ಕರ್ವಿನ ಬಿಲ್ಲಂತೆ ಕಾವ್ಯವೇಂ ಮೋಹಿಸದೇ (ಧರ್ಮನಾ. ೧-೯೭). [ ನವ್ಯ + ಗುಣ ]

**ನವ್ಯತೆ** (ನಾ). ೧. ಹೊಸತನ; ನೂತನತೆ. ೨. (ಸಾಹಿತ್ಯದಲ್ಲಿ) ಹೊಸತನ,-ನೂತನತೆ : ಸಮುದ್ರಗೀತಗಳು, ಬಾಳದೇಗುಲದಲ್ಲಿ ಮತ್ತು ಉಗವು ಎಂಬ ಕವನಸಂಗ್ರಹಗಳನ್ನು ಓದಿದವರಿಗೆ ನಾನು ನವ್ಯತೆಯ ಪ್ರತಿಪಾದನೆಗೆ ಏಕೆ ಉದ್ಯುಕ್ತನಾದೆನೆಂಬುದು ಸಹಜವಾಗಿ ಹೊಳೆಯಬಹುದು (ನವ್ಯಕಾ. V ಮುನ್ನುಡಿ). 'ನವ್ಯ' ಪರಾ. [ ಸಂ. ನವ್ಯತಾ ]

**ನವ್ಯದುಕೂಲ** (ನಾ). ಹೊಸ ರೇಷ್ಮೆವಸ್ತ್ರ: ನವ್ಯದುಕೂಲಮಂ ತೆಗೆದುಟ್ಟು (ಬಸರ. ೨-೪೪). [ ನವ್ಯ + ದುಕೂಲ ]

**ನವ್ಯಪಾಕ** (ನಾ). ಹೊಸ ಅಡುಗೆ; ಹೊಸರುಚಿಯುಳ್ಳ ತಿನಿಸು : ಒಲೆ ಹೂಡಿದ ಮೇಲೆ ಅದರ ಬಿಸಿ ತಾಗುವುದು ಕುದ್ದು ಹಣ್ಣಾಗುವದ್ರ ನೂರು ಅನುಭವದ ನವ್ಯಪಾಕ (ನೆಲಮು. ೩೩-೦೦). [ ನವ್ಯ + ಪಾಕ$_1$ ]

**ನವ್ಯಪ್ರಜ್ಞೆ** (ನಾ). ೧. ಹೊಸತನದ ಅರಿವು; ಹೊಸಸ್ಥಿತಿಯ ತಿಳಿವಳಿಕೆ. ೨. ನವ್ಯಸಾಹಿತ್ಯಕ್ಕೆ ಸಂಬಂಧಿಸಿದಂತೆ ಇರುವ ಅರಿವು : ಆಧುನಿಕ ಇಲ್ಲವೆ ರೊಮ್ಯಾಂಟಿಕ್ ಕನ್ನಡಕಾವ್ಯದಲ್ಲಿ ನವ್ಯಪ್ರಜ್ಞೆ ಆನುಷಂಗಿಕವಾಗಿ ಹೇಗೆ ಮೂಡಿದೆಯೆಂಬುದನ್ನು . . . ತೋರಿಸಲಾಗಿದೆ (ನವ್ಯಕಾ. VI ಮುನ್ನುಡಿ). [ ನವ್ಯ + ಪ್ರಜ್ಞೆ ]

**ನವ್ಯಪ್ರಸೂನ** (ನಾ). ಆಗ ತಾನೇ ಅರಳಿದ ಹೂವು: ಶೀತಳಸಲಿಲನೂತನ ಮಳಯಜನವ್ಯಪ್ರಸೂನನಾನಾವಿಧ ಪೂಜಾಸಮರ್ಚಿತ . . . ಸರ್ವಾಂಗ ಶರೀರ ಪ್ರ(ಣ)ತನಾಗಿ (ಬಸರ. ೪-೩). [ ನವ್ಯ + ಪ್ರಸೂನ ]

**ನವ್ಯಫಳ** (ನಾ). ಹೊಸ ಹಣ್ಣು : ಬೆಳಿಸಿದಪೆನೀ ಕಾವ್ಯವೃಕ್ಷವನು . . . ತುದಿವೊದಲ್ಗನಕ ಹೇಱಿದ ನವ್ಯಫಳರಸಂ [ಪಾಠಾಂ. ಕಾವ್ಯರಸಫಲಂ, ನವ್ಯರಸಫಳಂ]ಗಳನು ಸವಿಸುವುದು ಲೋಕದ . . . ರಸಿಕರುತ್ತಮರು ಸುಕಲಾಪ್ರೌಢರು (ಹಕಕಾ. ೧-೧೮). [ ನವ್ಯ + ಫಳ$_1$ (= ಫಲ$_1$) ]

**ನವ್ಯಯುಗ** (ನಾ). ಹೊಸತನದ ಕಾಲ : ಕನ್ನಡಕಾವ್ಯದಲ್ಲಿ 'ಆಧುನಿಕ' ಯುಗವು ಮುಗಿಯುವ ಸಮಯ ಬಂದಿದೆ; ನವ್ಯಯುಗ ಆರಂಭವಾಗಲಿದೆ (ನವ್ಯಕಾ. ೨೪). 'ನವ್ಯ' ಪರಾ. [ ನವ್ಯ + ಯುಗ ]

**ನವ್ಯವೈನೋದಿಕಯುಗ** (ನಾ). ಸುಖಾಂತನಾಟಕಗಳ ಹೊಸಯುಗ; ಪ್ರಹಸನಗಳ ಹೊಸಯುಗ : ನವ್ಯವೈನೋದಿಕಯುಗದ ವೇಳೆಗೆ ಕವಿಗಳು ತಾವೇ ಕಲ್ಪಿಸಿದ ಕಥೆಗಳನ್ನು ನಾಟಕದ ವಸ್ತುಗಳನ್ನಾಗಿ ಮಾಡತೊಡಗಿದರು (ಅರಿಕಾ. ೦೮೦). 'ನವ್ಯ' ಪರಾ.

[ ನವ್ಯ + ವೈನೋದಿಕ + ಯುಗ ]

**ನವ್ಯಶೈಲಿ** (ನಾ). ೧. ಬರವಣಿಗೆಯ ಹೊಸರೀತಿ. ೨. ಇಂದಿನ ನವ್ಯಕಾವ್ಯಮಾರ್ಗದಲ್ಲಿ ಬರೆಯುವ ರೀತಿ : ನವ್ಯಶೈಲಿಯಲ್ಲಿಯ ಇನ್ನೊಂದು ಪ್ರಕಾರವೆಂದರೆ ಇಂದಿನ ಬಳಕೆಯ ಮಾತನ್ನು ನೇರವಾಗಿ ಕಾವ್ಯಭಾಷೆಯಾಗಿಸುವದು (ನವ್ಯಕಾ. ೩೩). 'ನವ್ಯ' ಪರಾ. [ ನವ್ಯ + ಶೈಲಿ ]

**ನವ್ಯಸಮಾಜ** (ನಾ). ಹೊಸತತ್ತ್ವಗಳ ಮೇಲೆ ನಿರ್ಮಾಣವಾದ ಸಮಾಜ: ನವ್ಯಸಾಹಿತ್ಯವೂ ಈ ನವ್ಯಸಮಾಜದ ಶ್ರುತಿಯಾಗುವುದು . . . ಭಾಷ್ಯವಾಗುವದು (ನವ್ಯಕಾ. ೨೨). [ ನವ್ಯ + ಸಮಾಜ ]

**ನವ್ಯಸಾಹಿತಿ** (ನಾ). ನವ್ಯಪ್ರಜ್ಞೆಯಿಂದ ಸಾಹಿತ್ಯ ನಿರ್ಮಾಣ ಮಾಡುವವನು : ನವ್ಯಸಾಹಿತಿಯು ಮಾನವತೆಯ ಉಚ್ಚಗುಣಗಳಲ್ಲಿ ದೃಢವಿಶ್ವಾಸವನ್ನು ತಾಳಬೇಕು (ನವ್ಯಕಾ. ೦೭). [ ನವ್ಯ + ಸಾಹಿತಿ ]

**ನವ್ಯಸೇಸೆ** (ನಾ). ಒಂದು ಬಗೆಯ ತೆರಿಗೆ : ಆ ನವ್ಯಸೇಸೆ ಗದ್ಯಾಣಂ ಹತ್ತು ಪಣವೊಂಭತ್ತು ಹಾಗವೊಂದು . . ಅಷ್ಟಭೋಗ ತೇಜಸ್ವಾಮ್ಯ ನಿಧಿನಿಕ್ಷೇಪ ಸಹಿತ ಧಾರಾಪೂರ್ವಕವಾಗಿ ಕೊಟ್ಟರು (ಎಕ. VI (R), ಕೃಷ್ಣರಾ. ೩೯-೪೭ : 1236). [ ನವ್ಯ + ಸೇಸೆ ]

**ನವ್ಯಾಮೋದ** (ನಾ). ೧. ಹೊಸ ಪರಿಮಳ,-ಸುವಾಸನೆ. ೨. (ಅಲಂ) ಹೊಸ ಮಕರಂದ : ಚಂದ್ರಕಾಂತವೊಸರ್ವಂತಿರೆ ಗೋರಿಕಲ್ಲೊಸರ್ಗಮೇ ಬೆಳ್ದಿಂಗಳೊಳ್ ತುಂಬಿ ಪೀರ್ವವೊಲೇಂ ಪೀರ್ದಪುದೇ ಕಡುಂದುಱು ತೆ ನವ್ಯಾಮೋದಮಂ ಪೂಗಳೊಳ್ (ಆಗವಿ. ೧-೧೩). [ ನವ್ಯ + ಆಮೋದ ]

**ನಶನ** (ನಾ). ೧. ಮರೆಯಾಗುವಿಕೆ; ೨. ಹಾಳಾಗುವಿಕೆ; ನಾಶವಾಗುವಿಕೆ. 'ನಶಿಸು' ಪರಾ. [ ಸಂ. ]

**ನಶನಶೆ** 'ನಸನಸೆ' ನೋ.

**ನಶಿಸು** (ಕ್ರಿ). ೧. ಮರೆಯಾಗು; ಇಲ್ಲವಾಗು; ಕ್ಷೀಣವಾಗು; ಕ್ಷಯಿಸು : ನನ್ನ ಯುಕ್ತಾಯುಕ್ತಜ್ಞಾನವು ನಶಿಸಿಹೋಯಿತು (ಶಾವಿಜ. ೦೦೯) ; ನಿಮ್ಮ ದಾರಿಯ ಕಂಟಕಗಳು ಕೆಲವೇ ದಿನಗಳಲ್ಲಿ ನಶಿಸುವುವು (ಮುಕಳ. ೧೬೩) : ದಿನೇ ದಿನೇ ನಶಿಸತೊಡಗಿರುವ ಈ ಜನಾಂಗಗಳ ಭಾಷೆಗಳನ್ನು ಕುರಿತು ಹೆಚ್ಚು ಸಂಶೋಧನೆ ಶೀಘ್ರ ನಡೆಯುವುದು ಅಗತ್ಯ (ದ್ರಾವಿವಿ. ೨೦೩). ೨. ಕೆಡು; ಹಾಳಾಗು : ಪುಳಿವೆರೆಯೆ ಕೊಡವಾಲು ಸಹಜವನುಳಿವುದಲ್ಲದೆ ಕ್ಷೀರಸಾಗರ ಮೇಲ್ವುದೇ ಸುಜ್ಞಾನಿ ನಶಿಪನೆ ಪರರ ದೂಷಣದಿ (ಗಗಕಾ. ೧೭-೪೫).

[ ನಶನ + -ಇಸು$_3$ ]

**ನಶಿಹತ್ತು, ನಸೀಯತ್ತು** (ನಾ). ಶಿಕ್ಷೆ ; ದಂಡನೆ : ರಶೀದಿಗಳನ್ನು ಕೊಡದ ಇದ್ದರೆ ಆ ಶೇಕದಾರ ಶ್ಯಾನುಭಾಗರಿಗೆ ನಶಿಹತ್ತು ಮಾಡಿ ಅವರಿಗೆ ಬದಲಿಯಿತಬಾರಿ ಶೇಕದಾರ ಶ್ಯಾನಭಾಗರನ್ನ ಮೊಕರರ್ಮಾಡಿಟ್ಟು ಮುಂದೆ ಸದರಿ ಬರಹದ ಪ್ರಕಾರ ನಡೆದುಕೊಳ್ಳುವದು (ಮುಹಾವಂ. II, ೩೩). **ನಸೀಯತ್ತು :** (ಕ). [ ← ಅರ. ನಸೀಹತ್ ; ಹಿಂ. ನಸೀಹತ್, ನಸೀತ್ ; ಮರಾ. ನಸೀಹೆತ್, ನಸೀಯತ್ ]

**ನಶೀಬ** 'ನಸೀಬು' ನೋ.

**ನಶೀಬಗೇಡಿ** (ನಾ). ದೈವಗೇಡಿ ; ದುರ್ದೈವಿ ; ನತದೃಷ್ಟ : " ಇಷ್ಟು ಸಣ್ಣ ವಯಸ್ಸಿನಲ್ಲಿ ತಂದೆ ತಾಯಿ ಇಬ್ಬರನ್ನೂ ಕಳೆದುಕೊಂಡಿತು ನಶೀಬಗೇಡಿ" ಎಂದು ಜನರಾಡುವುದನ್ನು ಹೇಗೆ ಸಹಿಸುವುದು ? (ವ್ಯನಿ. ೮೯).

[ ನಶೀಬ (< ನಸೀಬು) + ಕೇಡಿ$_1$ ]

**ನಶೀಬು** 'ನಸೀಬು' ನೋ.

**ನಶೆ, ನಿಶಾ, ನಿಶ್ಯೆ, ನಿಷಾ** (ನಾ). (ಮಾದಕದ್ರವ್ಯಗಳ ಸೇವನೆಯಿಂದಾಗುವ) ಸೊಕ್ಕು,-ಮತ್ತು; ಅಮಲು : ಬಾಟ್ಲ ಬರಿದಾಯಿತು. ನಶೆ ತಲೆಗೇರಿತು (ಮಾಲತಿ. ೪೮) ; ಬೆಳಿಗ್ಗೆ ಹೊತ್ತು ನಶೆ ಇರಾಕಿಲ್ಲ ಬಾಬುಗಳಿಗೆ (ಸಾಹೇಬ್. ೩೦೪). **ನಿಶಾ :** 'ನಿಶಾಖೋರ' ಪರಾ. **ನಿಶ್ಯೆ :** ಜಹಾಂಗೀರನಿಗೆ ಹಗಲಲ್ಲಿಯೂ 'ನಿಶೆ' ಇರುತ್ತಿತ್ತು (ನೂರಜ. ೩೧) ; ಕುಡಿದು ನಿಶೇದಾಗ ನನ್ನ ಸೊಸಿಗೇನೋ ಅನ್ನಾಕ ಬಂದಿತ್ತಂತ (ಗ್ರಾಮಾಯ. ೨೬) ; ಕಾಳಪ್ಪನು ಸಂಜೆ ನಿಶೆಯಾಗಿ ಬಂದು ಬಿದ್ದುಕೊಂಡನು (ದಾಸಕು. ೩೨); **ನಿಷಾ :** ನನಗೆ ಕೊಲೆ ಮಾಡುವುದೆಂಬುದು ಒಂದು ಬಗೆಯ 'ನಿಷಾ'. ಆ 'ನಿಷಾ' ಈಗ ಬಿಟ್ಟು ಹೋಯಿತೇ ? (ಮಾಯಾವಿ. ೨೮೩) ; ಗಾಂಜಾ ಸೇದುವವರಿಗೆ ಗಾಂಜಾದಿಂದ ನಿಷಾ ಏರದಿದ್ದರೆ, ಅದರಲ್ಲಿ ಎರಡು ದತ್ತೂರಬೀಜಗಳನ್ನು ಸೇರಿಸಿದರಾಯಿತು (ಕಮಳ. ೧೭). 'ನಿಷಾಖೋರ' ಪರಾ.

[ ← ಅರ. ಹಿಂ. ನಶಾ ; ಮರಾ. ನಶಾ, ನಿಶಾ ]

**ನಶ್ಯ₁, ನಸ್ಯ₁, ನೆಶ್ಯ** (ನಾ). ೧. ಮೂಗಿಗೆ ಏರಿಸುವ ಔಷಧದ ಪುಡಿ: ಸುಷೇಣನು ಆ ಮೂಲಿಕೆಗಳಂ ನಶ್ಯಮಂ ಮಾಡಿ ಲಕ್ಷ್ಮಣನಿಗೆ ಕೊಡಲು ಅವನು ಯಚ್ಚತ್ತು ಸುಖದೀದಿರಲು (ಕೃಷ್ಣ.ರಾ. ೬-೯೦). ೨. ಮೂಗಿಗೆ ಏರಿಸುವ ತಂಬಾಕಿನ ಪುಡಿ: ತನ್ನ ನಶ್ಯದ ಬುರುಡೆಯಿಂದ ಒಂದಿಷ್ಟು ನಶ್ಯವನ್ನು ಮೂಗಿಗೇರಿಸಿ (ವಿಧಿಕ. ೧೮); ನಶ್ಯ, ತಂಬಾಕು, ಬೀಡಿ ಮತ್ತು ಸಿಗರೇಟುಗಳ ಅಭ್ಯಾಸ (ನಾಡಿಗೇ. ೩೩೬); ನಶ್ಯ ಹಾಕಿ ಹಾಕಿ ಮಂಜಾದ ಕಣ್ಣು (ಮಹಾಬ. ೮). **ನಸ್ಯ**: ೧. ನಸ್ಯ – ನಸಿ, ಮಾಣಿಕ್ಯ– ಮಾಣಿಕ (ಹೊಸಗ. ೧೧೪). ೨. ನಸಿಭ್ರಮೆ ಇದ್ದವ ನಸಿ ಆದರೂ ಹಾಕಿ ಕೊಂಡಾನು (ಗಾಜಿ). **ನೆಶ್ಯ**: ೨. ನೆಶ್ಯವು ಮೂಗಿನೊಳಕ್ಕೆ ಹೋದುದೇ ತಡ ಬುಳುಬುಳುಗುಟ್ಟಿ ಅಸಾಧ್ಯ ಫಜೀತಿ ಮಾಡಿಬಿಟ್ಟಿತು (ಕಳಕು. ೬೭); ಇವರು ಬಾಗಿಲಿನಲ್ಲಿ ಕುಳಿತು ನೆಶ್ಯವನ್ನು ತೀಡುತ್ತಿರುವಾಗ (ನಮ್ಮೂರ. ೨).

**ನಶ್ಯ ಏರಿಸು** = ನಶ್ಯ ಹಾಕು: ಹಿರಿಯರಾದ ಆಚಾರ್ಯರು ನಶ್ಯ ಕೊಟ್ಟರೆ ಅವರಿಗೆ ಕೈಮುಗಿದು ಅನಂತರ ಉಳಿದವರು ನಶ್ಯ ಏರಿಸಬೇಕು (ನಮ್ಮೂರು. ೧೮೪). **ನಶ್ಯ ತೀಡು** = (ಬೆಣ್ಣೆಯಲ್ಲಿ ಮಿದ್ದ ಉಂಡೆ ನಶ್ಯವನ್ನು ಪುಡಿ ಮಾಡಲು) ಅಂಗೈಯಲ್ಲಿ ಹಾಕಿ ಉಜ್ಜು: ನಶ್ಯ ತೀಡುವಾಗ ಆಚಾರ್ರ ಅಂಗಾಂಗಗಳೆಲ್ಲ ಕೆಲಸ ಮಾಡುತ್ತಿದ್ದುವು (ನಮ್ಮೂರು. ೧೮೩). **ನಶ್ಯದ ಬಣ್ಣ, ನಶ್ಯದ ಬಣ್ಣ** = ಕಂದುಬಣ್ಣ: ನಶ್ಯದ ಬಣ್ಣ ಬೀಡಿಯ ಬಣ್ಣ ಮುಂತಾದ ಅನೇಕ ಬಣ್ಣಗಳ ವಿವಿಧ ಮಾದರಿಗಳ ಸೀರೆಗಳು (ನಾಡಿಗೇ. ೨೩೦); ಅವಳ ಹತ್ತಿರ ನಶ್ಯದ ಬಣ್ಣದ ಸೀರೆ ಇದೆ (ರೂಢಿ). **ನಶ್ಯ ಮಾಡು, ನಶ್ಯಮಾಡು** = ೧. ಮೂಗಿಗೇರಿಸುವ ಔಷಧವನ್ನು ತಯಾರಿಸು,– ಸಿದ್ಧಮಾಡು: ನಶ್ಯ ಮಾಡುವುದಕ್ಕೆ ತೈಲವನ್ನಾಗಲೀ ತುಪ್ಪವನ್ನಾಗಲೀ ಮೃದುವಾದ ಪಾಕದಲ್ಲಿ ಇಳಿಸಬೇಕು (ರೂಢಿ). ೨. ಹೊಗೆಸೊಪ್ಪಿನಿಂದ ನಶ್ಯದ ಪುಡಿಮಾಡು: ಅವನು ನಶ್ಯ ಮಾಡುತ್ತಿದ್ದಾನೆ (ರೂಢಿ). **ನಶ್ಯಹಾಕು** = ನಶ್ಯವನ್ನು ಮೂಗಿಗೆ ಏರಿಸು: ಹಿರಿಯರು ಹೇಳುವವರೆಗೆ ಯಾರೂ ನಶ್ಯ ಹಾಕುವಂತಿಲ್ಲ. ಇದು ನಶ್ಯ ಹಾಕುವವರ ಮರ್ಯಾದೆ (ನಮ್ಮೂರು. ೧೮೩). [ < ಸಂ. ನಸ್ಯ ]

**ನಶ್ಯ₂** (ನಾ). ನಾಶವಾಗತಕ್ಕುದು; ಕ್ಷಣಿಕವಾದುದು: ಕಾಣಿಸಿಕೊಳು ತ್ತಿಹುದು ನಶ್ಯ ಎಂಬುದು ನಿಜಂ (ವೀಕೃಪು. ೪-೬-೩೩); ದೃಶ್ಯವೆಲ್ಲವು ನಶ್ಯವಾದೊಡೇಂ? ದೃಷ್ಟಿಗದು ವಶ್ಯವಿರುವನಕದನು ದೃಷ್ಟಿಪುದೆ ಕಾರ್ಯಂ . . . ನಶ್ಯದಿಂದ ವಿನಶ್ಯ (ಮಂಕುತಿ. ೪೦೦). [ < ಸಂ. ನಾಶ್ಯ ]

**ನಶ್ಯಂಗೆಯ್ಯು** (ಕ್ರಿ). = ನಸ್ಯಂಗೆಯ್ ೧: ಇಪ್ಪತ್ತೆಚ್ಚು . . . ಹಿಪ್ಪಲಿ ಸಹ ಸಪಾಸವಾಗಿ ಸಣ್ಣನಾಗರದು ನೀರಿನಲ್ಲಿ ನಶ್ಯಂಗೆಯ್ಯೆ ಅಭಿನ್ಯಾಸ ಸನ್ನಿ ಯಿಂದಾದ ಮೂರ್ಛೆ ಆ ಕ್ಷಣವೆ ತಿಳಿಯುವುದು (ಸಕವೈ. ೦೬೮).
[ ನಶ್ಯ₂ + ಗೆಯ್ಯು ( < ಕೆಯ್₁) ]

**ನಶ್ಯತ್ಪ್ರಸೂತಿ** (ನಾ). ಮಕ್ಕಳು ಬಾಳದವಳು: "ನಶ್ಯತ್ಪ್ರಸೂತಿಃ, ಬಂದುಃ – ಈ ೨ ಮಕ್ಕಳ್ ಬಾಳದವಳು" (ಹಲಾಯು. ೮೦-೩೩೪).
[ ಸಂ. ]

**ನಶ್ವರ** (ನಾ). ನಾಶವಾಗತಕ್ಕುದು; ಕ್ಷಣಿಕವಾದುದು; ಶಾಶ್ವತವಲ್ಲ ದುದು: ನಶ್ವರಾನಶ್ವರಗಳೆಲ್ಲವು ಸ್ವಸ್ವರೂಪವಾದುದು (ಗಗತಾ. ೦೬-೩೦); ನಶ್ವರವನು ನೀನ್ ಅವಿನಶ್ವರ ಮಾಡ (ಅನಿಕೇ. ೩೩-೦೪); ಶಾಶ್ವತವನರಿ ಯಲ್ಕೆ ನಶ್ವರದ ಹೃದಯಮಂ ಭೇದಿಸುವ ಕವಿಯ ದರ್ಶನದಂತೆ (ಶ್ರೀರಾಮಾ. ೨೩೬.೨೬೦); ದೇಹ ನಶ್ವರ, ಬಯಕೆ ನಶ್ವರ, ಆತ್ಮವೊಂದೇ ಶಾಶ್ವತ (ಚಂದ್ರಮಾ. ೧೮-೯). [ ಸಂ. ]

**ನಶ್ವರತೆ** (ನಾ). ಕ್ಷಣಿಕತೆ; ಅಶಾಶ್ವತತೆ: ಅಶ್ವತ್ಥವಿಲ್ಲಿ ಬಾಡಿದೊಡೇನು? ಚಿಗುರಲ್ಲಿ; ನಶ್ವರತೆ ವಿಟಪಪರ್ಣಂಗಳಲ್ಲಿ ಮಾತ್ರ (ಮಂಕುತಿ. ೮೮೬).
[ ಸಂ. ನಶ್ವರತಾ ]

**ನಷ್ಟ** (ಗು). ೧. ಕೆಟ್ಟ; ಹಾಳಾದ; ನಾಶವಾದ. ೨. ಕಾಣದಂತಾದ; ಇಲ್ಲವಾದ; ಮರೆಯಾದ; ಕಳೆದುಹೋದ. ೩. ಓಡಿಹೋದ. (ನಾ). ೪. ಹಾನಿ; ಕೇಡಕು; ನಾಶ: ಕೊಲುವಾ ಕೂಟವು ನಷ್ಟಮಪ್ಪ ಕೆಲಸಂ . . . ಫಲದ ಭ್ರಾಂತಿಯ ತೋರ್ಪುದೈ (ಕೋಮೀಶ. ೨೩); ಪರ ಹೆಣ್ಣಿಗಾಗಿ ರಾವಣ ತಲೆ ಕೊಟ್ಟ ಇನ್ನೆಷ್ಟು ಹೇಳಲಾ ನಷ್ಟ ಪರಹೆಣ್ಣ ಮೋಹಿಸಿದರೆ ಬರುವೋದು ಕಷ್ಟ (ಪುರಂದ. ೩-೧೦೨-೧); ಕಷ್ಟದಲಿ, ನಷ್ಟ ದಲಿ . . . ನಿನ್ನ ಮಂತ್ರಮಯಮಾತೃವಕ್ಷಸ್ತನ್ಯಧೈರ್ಯವನೀಂಟು ತಿರಲೆನ್ನ ಬಾಯಿ (ಅನಿಕೇ. ೪೮-೩); ಎಷ್ಟು ಮಾಡಿದರೂ ನಷ್ಟವಾಗದೇ ಬಿಡದು (ಗಾದೆ). ೫. ಹೋಗುವಿಕೆ; ಮರೆಯಾಗುವಿಕೆ: "ನಷ್ಟಂ ನಷ್ಟಿಃ ... ಈ ೬ ಹೋಕು" (ಕಾಶಿಕ್ಸ. ೧೮೯). ೬. ದಿಕ್ಕುಗೆಟ್ಟವನು; ಭಯದಿಂದ ಓಡಿಹೋಗುವವನು: "ನಷ್ಟಃ, ಗೃಹೀತದಿಕ್, ಕಾಂದಿಶೀಕಃ, ಭಯ ದ್ರುತಃ – ಈ ೪ ದೆಸೆಗೆಟ್ಟವಂ" (ಹಲಾಯು. ೭೯-೩೨೩). ೭. ವ್ಯಾಪಾರ ದಲ್ಲಿ ಹಾಕಿದ ಹಣ ಬರದಿರುವುದು; ಲುಕ್ಸಾನು: ಜವಳಿ ವ್ಯಾಪಾರ ದಲ್ಲಿ ತುಂಬಾ ನಷ್ಟವೇ ಆಯಿತು (ರೂಢಿ). 'ಲಾಭ' ಹೋ. ೮. [ಛಂದ] ಷಟ್ಪ್ರತ್ಯಯಗಳಲ್ಲಿ ಒಂದು; ನಮಗೆ ಬೇಕಾದ ವೃತ್ತದ ಸ್ವರೂಪ ವನ್ನು ಕಂಡುಹಿಡಿಯುವ ವಿಧಾನ; "ನಮಗೆ ಬೇಕಾದ ವೃತ್ತದ ಸಂಖ್ಯೆಯನ್ನು ಆ ವೃತ್ತದ ಛಂದಸ್ಸು ಎಷ್ಟನೆಯದೋ ಅಷ್ಟು ಸಾರಿ ಅರ್ಧಿಸುವುದು. ಅರ್ಧಿಸಲ್ಪಡುವ ಸಂಖ್ಯೆಯು ವಿಷಮವಾದರೆ ಅದಕ್ಕೆ ಒಂದನ್ನು ಸೇರಿಸಿ ಅರ್ಧಿಸಬೇಕು. ಹಾಗೆ ಅರ್ಧಿಸುವಲ್ಲಿ ಒಂದನ್ನು ಸೇರಿಸಿದರೆ ಗುರುವೆಂದೂ, ಒಂದನ್ನು ಸೇರಿಸದಿರಲು ಲಘುವೆಂದೂ ತಿಳಿಯಬೇಕು. ಈ ಉಪಾಯಕ್ಕೆ ನಷ್ಟವೆಂದು ಹೆಸರು" (ಕೃಪಿಡಿ. ೯೨): ಮೊದಲೊಳೆ ಛಂದದೀಯೆಡೆಯಲೆಕ್ಕದ ಕೆಟ್ಟುದು ವೃತ್ತಮೆಂದು ಪೇಳ್ದುದು ಬಗೆವಂದೊಡಾಗಳವಱಂಕಮಂ ಸರ್ಧಿಸಿ ಬೆಳ್ಪ ನಿಟ್ಟುಕೊಳ್ವುದು ಸಮಭಾಗಮಾಯಿದೊಡೆ ರೂಪಯುತಾರ್ಧದೆ ಬಿಣ್ಪನಿಟ್ಟು ಕೊಳ್ವುದಂ ಗಡ ಸೂತ್ರಮಿಾ ತೆಱದೆ ಕಾಣ್ಬುದು ನಷ್ಟಮನಂಬುಜಾನನೇ (ಛಂದೋಂಬು. ೬-೨೬೨); ಅಸಮವಿರಲೊಂದು ಕೂಡಿರ್ಧಿಸಿದು ಗುರುವ ಸಮ ವಸಿಸಲರ್ಧಿಸಿ ಲಘುವನಿಕ್ಕಿನಿತು ಛಂದದೊಳು ಪಸರಿಸಿದ ಸಂಖ್ಯೆಯುಕ್ಕವಟಿ ವಟಿ ನಷ್ಟವೃತ್ತಕ್ಕುಳ್ಳ ಗಣದೆ ಬರ್ಕುಂ (ಮಂಗರಾ. ೧೦೮-೨೪).

**ನಷ್ಟ ಕಟ್ಟಿಕೊಡು** = ಆದ ನಷ್ಟಕ್ಕೆ ಪರಿಹಾರವನ್ನು ತುಂಬಿಕೊಡು. **ನಷ್ಟ ತುಂಬಿಕೊಡು** = ನಷ್ಟಕಟ್ಟಿಕೊಡು. **ನಷ್ಟ ಭರ್ತಿಮಾಡು** = ನಷ್ಟ ಕಟ್ಟಿ ಕೊಡು. **ನಷ್ಟವಾಗು** = ೧. ಹಾನಿಯಾಗು; ಲುಕ್ಸಾನಾಗು; ಕಳೆ; ದಂಡವಾಗು: ಲಾಭ ಮಾಡಲು ಹೋಗಿ ನಷ್ಟವಾಗುವಂತಾಗಬಾರದು (ಅಡುಸಾ. ೦೨೩). ೨. ಇಲ್ಲವಾಗು; ಅಳಿ; ಮರೆಯಾಗು: ಪುಸಾದಿ ಯಿಂತಯ್ಯಾ ಆಧಿವ್ಯಾಧಿ ನಷ್ಟವಾಗದನ್ನಕ್ಕ (ಬಸವ. ೩೦೦); ಭಾವ ನಿರ್ಭಾ ವಂಗಳ ಸುಳುಹ ನಷ್ಟವಾದ ಸದ್ಭಾವದ ಧೂಪವನಿಕ್ಕಿ (ಅದವ. ೨೮-೮೪); ಕ್ಷರ ಎಂದರೆ ನಷ್ಟವಾಗುವುದು . . . ಅಕ್ಷರ ಎಂದರೆ ನಷ್ಟವಾಗದುದು (ದ್ರಾವಿವಿ. ೯೩); ಅಕ್ಕಿಯನ್ನು ಪಾಲಿಶ್ ಮಾಡಿದರೆ ಭ್ರೂಣ ಮತ್ತು ತವುಡು ನಷ್ಟವಾಗುತ್ತವೆ (ಅಡುಸಾ. ೬೨). [ ಸಂ. ]

**ನಷ್ಟಕಾಲ** (ನಾ). ಕಳೆದುಕೊಳ್ಳುವ ಕಾಲ; ಹಾಳಾಗುವ ಕಾಲ: ನಷ್ಟ ಕಾಲದಲ್ಲಿ ಎತ್ತಿದ್ದರೇನು? (ಗಾದೆ). [ ನಷ್ಟ + ಕಾಲ ]

**ನಷ್ಟಗ್ರಹ** (ನಾ). ದುಷ್ಪರಿಣಾಮವನ್ನುಂಟುಮಾಡುವ ಗ್ರಹ; ಕೆಟ್ಟ ಗ್ರಹ; ದುಷ್ಟಗ್ರಹ: ಇಷ್ಟೊಂದು ದೊಡ್ಡ ಕಲಂಕದ ಗುರುತನ್ನು . . . ಯಾವ ನಷ್ಟಗ್ರಹ ಯಾಕೆ ತೊಡೆದುಬಿಟ್ಟಿತೋ ಕಾಣೆ (ಇಪ್ಪಕ. ೪೩೩).
[ ನಷ್ಟ + ಗ್ರಹ ]

**ನಷ್ಟಚೇತನ** (ನಾ). ಚೈತನ್ಯವಿಲ್ಲದವನು; ಬಲಹೀನ: ವ್ಯಸನಾಭಿಭೂತರ ಉತ್ಸಾಹಹೀನರು ದೀನರು ನಷ್ಟಚೇತನರು . . . ತಳಮಳಗೊಳುವರು

ಬರಿದೆ (ಇಂಜಾಪ. ೧೩೭-೭೩); ಆಕೆಯ ಕಾಣದ ಕಂಡವರಂಬ್ಬರು ಭಾವಿಸೆ ಸರಿಸಮರಹರು ಒಬ್ಬರು ವಿಫಲ ವಿರೋಚನರಾದರು ಒಬ್ಬರು ನಷ್ಟ ಚೇತನರು (ಇಂಜಾಪ ೧೫೦-೪೮). [ ನಷ್ಟ + ಚೇತನ ]

**ನಷ್ಟಚೇಷ್ಟತೆ** (ನಾ). ಮೈಮರೆವು; ಮೂರ್ಛೆ; ಚೈತನ್ಯವಿಲ್ಲದಿರುವುದು. [ ಸಂ. ನಷ್ಟಚೇಷ್ಟತಾ ]

**ನಷ್ಟಜಾತಕ** (ನಾ). ೧. ಕಳೆದ ಜಾತಕ ; ಕಳೆದುಹೋದ ಜನ್ಮಪತ್ರಿಕೆ ; ಕಳೆದುಹೋದುದರಿಂದ ಮತ್ತೆ ಬರೆದ ಜಾತಕ : ಜನನಕಾಲವು ತಿಳಿಯದಿದ್ದಾಗ ಈ ಅಧ್ಯಾಯದಲ್ಲಿ ತಿಳಿಸಿರುವ ಕ್ರಮದಂತೆ ನಷ್ಟಜಾತಕ ವನ್ನು ಬರೆದು ಅದರಿಂದ ಆ ಜಾತಕನಿಗೆ ಫಲಗಳನ್ನು ಹೇಳಬೇಕು (ಜಾತಕ. ೨೪-೧ ಟೀಕು). ೨. ಜಾತಕವನ್ನು ಕಳೆದುಕೊಂಡವನು : ನಷ್ಟಜಾತಕನು ಬಂದು ಪ್ರಶ್ನೆಮಾಡಿದ ಲಗ್ನದಿಂದ ಚಂದ್ರನಿರುವ ರಾಶಿಯಿಂದ ಮುಂದಕ್ಕೆ ಕ್ರಮವಾಗಿ ಎಣಿಸಿ ಬರುವ ರಾಶಿಯೇ ಪೃಚ್ಛಕನ ಜನ್ಮರಾಶಿಯಾಗುತ್ತದೆ (ಜಾತಕ. ೨೪-೧೭ ಟೀಕು). [ ನಷ್ಟ + ಜಾತಕ ]

**ನಷ್ಟಜೀವಿ** (ನಾ). ೧. ಜೀವವನ್ನು ಕಳೆದುಕೊಂಡವನು ; ಸತ್ತವನು. ೨. ಮೇಲಿಂದ ಮೇಲೆ ನಷ್ಟವನ್ನು ಅನುಭವಿಸುವವನು. [ ನಷ್ಟ + ಜೀವಿ$_1$ ]

**ನಷ್ಟತೂಕ** (ನಾ). ಕಡಮೆಯಾದ ತೂಕ (?): ೫೮೫ ಈ ೨೦೦ ರೊಳಗೆ ೧೫೫ ಕಳೆಯಲು ೪೫ ಈ ದಿಗಹಾರ ೫೮೫ ನ್ನು ೪೫ ರಿಂದ ಭಾಗಿಸಲು ನಷ್ಟತೂಕ ಬರುವದು (ಭಾಸ್ಕರ. ೩೮-೯). [ ನಷ್ಟ + ತೂಕ ]

**ನಷ್ಟದಾಸ** (ನಾ). ಕೆಟ್ಟ ಆಳು ; ನೀಚನಾದ ಸೇವಕ : ಸೃಷ್ಟಿಯೊಳಗೆ ಬಹುಧನವಂತರ ಮನೆಯ ಮೆಟ್ಟು ಕಂಡರೆ ಬಿಡದಿಪ್ಪ ದಾಸ ನಾನು ನಷ್ಟ(ನಷ್ಟ)ದಾಸನು ಕಷ್ಟದಾಸನು ನಾನು (ವಿಠ್ಠಲದೀ. ೭೫-೮). [ ನಷ್ಟ + ದಾಸ ]

**ನಷ್ಟದೃಷ್ಟಿ** (ನಾ). ದೃಷ್ಟಿಯನ್ನು ಕಳೆದುಕೊಂಡವನು ; ಕುರುಡ. [ ನಷ್ಟ + ದೃಷ್ಟಿ ]

**ನಷ್ಟದ್ರವ್ಯ** (ನಾ). ಕಳೆದುಹೋದ ವಸ್ತು. [ ನಷ್ಟ + ದ್ರವ್ಯ ]

**ನಷ್ಟಧನ** (ನಾ). ಕಳೆದುಹೋದ ಸಂಪತ್ತು. [ ನಷ್ಟ + ಧನ ]

**ನಷ್ಟಪರಿಹಾರ** (ನಾ). ಆದ ನಷ್ಟವನ್ನು ತುಂಬಿ ಕೊಡುವುದು : ನಷ್ಟ ಪರಿಹಾರ (ದ್ರವ್ಯ); ದಂಡ (Damage. ಇಂಕನಿ). [ ನಷ್ಟ + ಪರಿಹಾರ ]

**ನಷ್ಟಪ್ಪ** (ನಾ). ಒಬ್ಬಾತನ ಹೆಸರು : ಶನ್ನಪನ ಮಗ ದೇವೆಟಿಯಗೆ ನಷ್ಟಪ್ಪ ಗೊಣ್ಣು ಕೊಟ್ಟನ್ (ಎಕ. VIII, ಸೊರಬ. ೫೭೧-೨೯: 692). [ ? + ಅಪ್ಪ$_1$ ]

**ನಷ್ಟಬಲ** (ನಾ). ೧. ಶಕ್ತಿಹೀನ. ೨. ಸೈನ್ಯವನ್ನು ಕಳೆದುಕೊಂಡವನು: ಬಾಣ ವಿಧ್ವಂಸನವಾದ ಮೇಲೆ ನಷ್ಟಬಲನಾಗಿದ್ದ ನನ್ನಿಯ ಗಂಗನಿಂದ ರಾಚಮಲ್ಲನು ಉಳಿದು ಹೋಗಿದ್ದ ರಾಜಧಾನಿಯನ್ನು ಕಿತ್ತುಕೊಂಡನು (ಕರ್ಣಾಟ. ೧೨೨). [ ನಷ್ಟ + ಬಲ$_2$ ]

**ನಷ್ಟಮೂಲ** (ನಾ). ಬೇರಿಲ್ಲದ್ದು ; ಬೇರು ಒಣಗಿದುದು : ಸಸಿಗೆ ನೀರೆರೆದರೆ ಎಳಕುವುದಲ್ಲದೆ ನಷ್ಟಮೂಲಕ್ಕೆ ಹೊತ್ತು ನೀರ ಹೊಯ್ದರೆ ಎಳಸುವುದೆ ಮಾರಯ್ಯ (ವಚಸಂ. ೩೯೫-೧೮). [ ನಷ್ಟ + ಮೂಲ ]

**ನಷ್ಟರಾಜ** (ನಾ). ರಾಜನನ್ನು ಕಳೆದುಕೊಳ್ಳುವಿಕೆ; ರಾಜನೇ ಇಲ್ಲದಂತೆ ಆಗುವಿಕೆ : ಪರಲೋಕಪ್ರಾಪ್ತನಾದೊಡೆ . . . ಆತಂಗೆ ಪರಲೋಕಕ್ರಿಯೆ ಗಳಂ ಮಾಡಿ ರಾಜ್ಯಂ ನಷ್ಟರಾಜಮಾದುದರ್ಕೆ ಮಜುಗಿ ಯೋಜನಗಂಧಿ ಸಿಂಧುಪುತ್ರನನಿಂತೆಂದಳ್ (ಪಂಪಭಾ. ೧-೮೦ ವ). [ ನಷ್ಟ + ರಾಜ ]

**ನಷ್ಟವೀರ್ಯ** (ನಾ). ವೀರ್ಯವು ನಾಶವಾಗುವಿಕೆ ; ಧಾತುಕ್ಷಯ ; ಒಂದು ರೋಗ : ಏಲೇಯಾದಿ ಲೇಹ್ಯ . . . ಅಪಸ್ಮಾರ, ನಷ್ಟವೀರ್ಯ ಮೊದಲಾದ ಸಮಸ್ತ ಪಿತ್ತರೋಗಗಳೂ ಮಾಣುವುವು (ಸಕವೈ. ೪೦೩). [ ನಷ್ಟ + ವೀರ್ಯ ]

**ನಷ್ಟಶತ್ರು** (ನಾ). ಶತ್ರುಗಳನ್ನು ನಾಶಮಾಡಿದವನು, ಶತ್ರುಗಳಿಲ್ಲ ದವನು : ಜಯಶೀಲನಾಗಿ ನಷ್ಟಶತ್ರುವಾಗಿರುವ ನಿನಗೆ ಒಂದು ಯುಗ ಒಂದು ಕ್ಷಣದಂತೆ ಕಾಣುತ್ತಿರಬೇಕು (ಅಗ್ನಿಪು. ೮). [ ನಷ್ಟ + ಶತ್ರು ]

**ನಷ್ಟಸಂತಾನ** (ನಾ). ೧. ಪುನರ್ಜನ್ಮವಿಲ್ಲದವನು ; ಹುಟ್ಟಳಿದವನು : ಕಿಚ್ಚಿನ ದೇವನು ಕೆಂಡದ ದೇವನು ಮಾರಿಯ ದೇವನು ಮಸಣದ ದೇವನು ತಿರುಕಗೊರವನೆಂದು ಅಲ್ಲಲ್ಲಿ ಒಂದೊಂದನಾಡುತ್ತಿಪ್ಪರಯ್ಯ ನಾ ನಿಮ್ಮ ಪೂಜಿಸಿ ನಷ್ಟಸಂತಾನವಾ[ಪಾಠಾಂ. ನಾ]ಗಿ ಬಟ್ಟಬಯಲಲ್ಲಿ ಬಿದ್ದು ಕೆಟ್ಟೆನು (ಅಪವಚ. ೦೨೦-೪೧೫). ೨. ಮಕ್ಕಳನ್ನು ಕಳೆದುಕೊಂಡವನು ; ಮಕ್ಕಳಿ ಲ್ಲದವನು : ಮುಪ್ಪಿನ ವಯಸ್ಸಿನಲ್ಲಿ ನಷ್ಟಸಂತಾನನಾದ ಅವನನ್ನು ನೋಡಿ ಕೊಳ್ಳಲು ಯಾರೂ ಮುಂದೆ ಬರಲಿಲ್ಲ (ರೂಢಿ). [ ನಷ್ಟ + ಸಂತಾನ ]

**ನಷ್ಟಸಮಾಸ** (ನಾ). [ ಕಾವ್ಯಮಿ ] ಹದಿನೆಂಟು ಕಾವ್ಯದೋಷಗಳಲ್ಲಿ ಒಂದು ; ಪದಸಮುಚ್ಚಯದಲ್ಲಿ ಸಮಾಸವಾಗಬೇಕಾದ ಕಡೆ ಸಮಾಸ ಮಾಡದೆ ಇರುವುದು : ಅಸದರ್ಥಂ ವಿಪರೀತಕಲ್ಪನೆಯಭವ್ಯಂ ದುಷ್ಕರಂ ಗ್ರಾಮ್ಯನೀರಸಮಪ್ರೌಢತೆಯಪ್ರತೀತಿವಚನಂ ದುಸ್ಸಂಧಿವಿಶ್ಲೇಷ ನಷ್ಟ ಸಮಾಸ[ಪಾಠಾಂ. ನಂ] ನಯನಾಶನೀತಿವಿಫಲಂ ದುರ್ಲಕ್ಷಣಂ ಹಾಸ್ಯ ವಾಗ್ವಿಷಮಾಸೌಮ್ಯಮನೋಜೆಯೆಂಬಿವಿನಿತುಂ ದೋಷಂಗಳಪ್ಪಾದಶಂ (ಛಂದೋಂಬು. ೧-೪೭ ಅಡಿಟಿ). [ ನಷ್ಟ + ಸಮಾಸ ]

**ನಷ್ಟಾಂಬರ** (ನಾ). ಉಡುಪನ್ನು ಕಳೆದುಕೊಂಡವನು ; ಬಟ್ಟೆಯಿಲ್ಲ ದವನು ; ಬತ್ತಲೆಯಾಗಿರುವವನು ; ದಿಗಂಬರ : ಎಲವೋ ನೀ ದಿಟ ವೀರ ತಪ್ಪದು. . . ಕಾದಿ ಬಳಲಿದೆ ತೊಲಗು ನಷ್ಟಾಂಬರನ ಕೊಲ್ಲೆನೆಕೀರ್ತಿ ಬಹುದು (ಭಾರಿಂ. ೨೨-೫೨). [ ನಷ್ಟ + ಅಂಬರ ]

**ನಷ್ಟಾಗ್ನಿ** (ನಾ). ಹೋಮಾಗ್ನಿಯು ನಂದಿಹೋದವನು : "ವೀರಹಾ, ನಷ್ಟಾಗ್ನಿಃ-ಉತ್ಸರ್ಗೇಷ್ಟಿಯನ್ನು ಮಾಡಿ ಗಾರ್ಹಪತ್ಯಾಗ್ನಿಯನ್ನು ಬಿಟ್ಟವನ ಹೆಸರುಗಳು" (ಸಿದ್ಧಾಂತಕಿ. ೨೫೨). [ ನಷ್ಟ + ಅಗ್ನಿ ]

**ನಷ್ಟಾಯ** (ನಾ). ಆದಾಯ ಹಾಳಾಗುವುದು ; ಕಡಮೆ ಆದಾಯ : ದುಡಿಯುತ್ತ ಹೋದಂತೆ ಅನುಭವದಿಂದ ಹದ, ಹಿಡಿತ ಒದಗುತ್ತ ಹೋದಂತೆ ಶ್ರಮದ ಉತ್ಪಾದನೆಯು ನಷ್ಟಾಯವಿಲ್ಲದೇ ಹೆಚ್ಚುವ ಸಫಲ ತೆಯು ಬೆಳೆಯುತ್ತ ಹೋಗುವುದು (ಮಾವಾದ. ೦೪೭). [ ನಷ್ಟ + ಆಯ$_7$ ]

**ನಷ್ಟಿ** (ನಾ). ೧. ಕೇಡು ; ಹಾನಿ : "ನಷ್ಟಂ, ನಷ್ಟಿಃ, ನಾಶಃ, ನಶ್ಯಃ, ನಾಶ್ಯಃ, ನಷ್ಟವ್ಯಂ, ಈ ೬ ಹೋಕು" (ಶಾಶಬ್ದ. ೧೮೯) ; ಅಲ್ಲಿಯ ನಷ್ಟಿ ತುಷ್ಟಿಗೆ ಆವುದಕ್ಕೆ ಅರಸು ನಾಡು ಅರು ಹಿಡಿಯ ಸಲ್ಲದೆಂದು (ಪ್ರಾಅಶಿ. ೧೯೫೨, ೪೨-೫೦ ; 1418) ; ನಷ್ಟಿಯಲಿ ತುಷ್ಟಿಯಲಿ ಮಾನವನು ಬಿಟ್ಟು ಹಿಡಿಯದೆ ಕಾಲಕರ್ಮದ ಮೆಟ್ಟಿ ನಿಲೆ ಭಗವಂತನೆನಿಸುವೆ (ಕುವ್ಯಾಉ. ೪-೮); ನಷ್ಟಿಯದು ಸಂಸಾರದೊಳಗುತ್ಕೃಷ್ಟವಿದು . . . ಕಾಲಕರ್ಮದ ಕಟ್ಟಳೆಯ ದೆಂದರಿದು ನಡೆವಂಗಿಟ್ಟಣಿಸುವುದದಾವುದೈ (ಕುವ್ಯಾಉ. ೪-೨೨) ; ಕಷ್ಟ ವಿಷಯದ ಧ್ಯಾನದಿಂ ಬಹ ನಷ್ಟಿಯನು ವರ್ಣಿಸುವೆ(ನಿಭಾಗ. ೧೦-೨೫-೦೭). ೨. ಕೆಡಿಸಿದುದು ; ಹಾಳುಮಾಡಿದುದು ; ಮಿಂಶ್ರಮಾಡಿದುದು. 'ನಷ್ಟಿಗೈ' ಪರಾ. [ ಸಂ. ]

**ನಷ್ಟಿಗೈ** (ಕ್ರಿ). ಕೀಳುಹೊನ್ನಿನ ಬೆರಕೆಯಿಂದ ಹೀನಗೊಳಿಸು,-ಮಿಶ್ರಣ ದಿಂದ ಬಣ್ಣಗೆಡಿಸು : ತುಷ್ಟಿಯನ್ನೆರದರ್ ಮಿಶ್ರವರ್ಣದಿನೊರ್ಬ ನಷ್ಟಿ ಗೈದಿರ್ದ ಪೊನ್ನಂ ನೆಟ್ಟನೆ ತೆಗೆಯಲ್ಕೆ ಬಕ್ಕು ಸಪ್ಪದ ಬಣ್ಣಂ (ಕೃಪಹಾ. ೪೭-೫೪). [ ನಷ್ಟ + ಗೈ (< ಕೆಯ್$_1$ ) ]

**ನಷ್ಟೇಂದುಕಲೆ** (ನಾ). ಚಂದ್ರಕಲೆ ಕಾಣದಿರುವ ಅಮಾವಾಸ್ಯೆ : "ನಷ್ಟೇಂದುಕಲಾ — ಕಾಣಿಸಲ್ಪಡದೆ ಇರುವ ಚಂದ್ರಕಲೆಯುಳ್ಳ . . . ಅಮಾವಾಸ್ಯೆಗೆ ಕುಹೂ ಎಂದು ಹೆಸರು" (ಸಿದ್ಧಾಂತಕಿ ೩೬). **P** ಅಮಾವಾಸ್ಯೆ

ಎರಡು ವಿಧವಾಗಿದೆ. (೧) ದೃಷ್ಟೇಂದು ಕಲೆ. (೨) ನಷ್ಟೇಂದುಕಲೆ. ಚತುರ್ದಶಿಯಿಂದ ಕೂಡಿದ ಅಮಾವಾಸ್ಯೆಯಲ್ಲಿ ಚಂದ್ರಕಲೆಯಿರುವುದರಿಂದ ಅದು ದೃಷ್ಟೇಂದುಕಲೆ. ಇದನ್ನು ಸಿನೀವಾಲೀ ಎಂದು ಕರೆಯುತ್ತಾರೆ. ಚಂದ್ರಕಲೆಯಿಲ್ಲದಿರುವ ಅಮಾವಾಸ್ಯೆ ನಷ್ಟೇಂದುಕಲೆ. ಅದನ್ನು ಕುಹೂ ಎಂದು ಕರೆಯುತ್ತಾರೆ. ಎರಡು ದಿನಗಳಲ್ಲಿ ಅಮಾವಾಸ್ಯೆ ಇದ್ದರೆ ಮೊದಲನೆಯದು ಸಿನೀವಾಲಿ, ಎರಡನೆಯದು ಕೂಹೂ ಆಗುತ್ತದೆ ಎಂದು ವೇದದಲ್ಲಿ ಹೇಳಿದೆ. ಈ ತಿಥಿಗಳ ಅಧಿದೇವತೆಗಳಿಗೂ ಇದೇ ಹೆಸರಿದೆ. ಇವರಿಬ್ಬರೂ ಅಂಗೀರಸಮುನಿಯ ಮಕ್ಕಳು, ದೇವಪತ್ನಿಯರು ಎಂದು ರುಕ್ತದಲ್ಲಿದೆ. ಈ ಎರಡು ತಿಥಿಗಳಲ್ಲೂ ಜನನವಾದರೆ ಅನಿಷ್ಟವುಂಟಾಗುವುದರಿಂದ ಶಾಂತಿ ಮಾಡಿಕೊಳ್ಳಬೇಕೆಂದು ಶಾಸ್ತ್ರವಚನಗಳಿವೆ.

[ ಸಂ. ನಷ್ಟೇಂದುಕಲಾ ]

**ನಷ್ಟೇಂದ್ರಿಯ** (ನಾ). ೧. ಪಂಚಜ್ಞಾನೇಂದ್ರಿಯಗಳ ಶಕ್ತಿಯನ್ನು ಕಳೆದುಕೊಂಡವನು. ೨. = ನಷ್ಟವೀರ್ಯ : ಅಂತರದಾವರೆ : – ಈ ಎಲೆಯ ರಸವಂ ಸಕ್ಕರೆ ಬೆರಸಿ ತೆಗೆದುಕೊಳ್ಳಲು ನಷ್ಟೇಂದ್ರಿಯ ಗುಣ (ವಿಶ್ವವಿ. ೧). [ ನಷ್ಟ + ಇಂದ್ರಿಯ ]

**ನಷ್ಟೋದ್ಧಾರ** (ನಾ). ಶಿಥಿಲವಾದುದನ್ನು ಕಟ್ಟಿಸಿ ಸರಿಪಡಿಸುವುದು; ಜೀರ್ಣೋದ್ಧಾರ : ಶ್ರೀರಾಮೇಶ್ವರದೇವರ ಗೋಪುರದೊಳಗಣ ನಷ್ಟೋದ್ಧಾರಕ್ಕಂ ಕೊಟ್ಟರು (ಕಇಅ. ೦-೧-೧೦ ; 1092). [ ನಷ್ಟ + ಉದ್ಧಾರ ]

**ನಸಕು** 'ನಸುಕು₃' ನೋ.

**ನಸನಸೆ** 'ನಸೆನಸೆ' ನೋ.

**ನಸಗುನ್ನಿ** 'ನಸುಗುನ್ನಿ' ನೋ.

**ನಸರ್** 'ನಜರು' ನೋ.

**ನಸರಾಣಿ** 'ನಸ್ರಾಣಿ' ನೋ.

**ನಸರಿ** (ನಾ). ಒಂದು ಬಗೆಯ ಜೇನು : ಮರದ ಪೊಟರೆಗಳಲ್ಲಿ ಕಟ್ಟುವ ಜೇನು : ದತ್ತನು ಮಗನಲ್ಲ ಧಾವಳಿ ಮಡಿಯಲ್ಲ . . . ಚಾವಡಿ ನೆಲೆಯಲ್ಲ ನಸರಿಯು ಜೇನಲ್ಲ ಬಾಣಂತಿ ಚೆಲುವೆಂಸೇನಲ್ಲ (ಇಂಜಾಪ. ೦೭೦-೪೨). 'ನಸರಿಹುಳ' ಪರಾ. [ ←ಹಿಂ. ನಸರೀ ]

**ನಸರಿತುಪ್ಪ** (ನಾ). = ನಸರಿ : ಪುತ್ತಿನೊಳಗಿರ್ದ ತುಡುವೆಜೇನಂ, ಮರದ ಬಿರುಕಿನೊಳಗಣ ನಸರಿತುಪ್ಪವುಂ ಬಂಡೆಯುಂ ಜೋಲ್ದ ಹೆಜ್ಜೇನ್ಗಳಂ ಕಿಳ್ತರೊಪ್ಪಂಮಾಡಿ ಪಣ್ಪಲಂಗಳನೂಡಿ ಬನದೌತಣವನುಂಡರನಿಬರುಂ (ಶ್ರೀರಾಮಾ. ೩೭೭-೧೩೨). [ ನಸರಿ + ತುಪ್ಪ ]

**ನಸರಿಹುಳ** (ನಾ). ನಸರಿ ಎಂಬ ಜೇನನ್ನು ಕೂಡಿಡುವ ಜೇನ್ನೊಣ : (ಕ).

[ ನಸರಿ + ಹುಳ (<ಪುಲು) ]

**ನಸರು** 'ನಜರು' ನೋ.

**ನಸರುಬಂದಿ, ನಸರ್ಬಂದಿ** (ನಾ). ನಿರ್ದಿಷ್ಟಸ್ಥಳದಿಂದ ಹೋಗದಂತೆ ಹಿಡಿದು ಹಾಕುವ ಶಿಕ್ಷೆ.-ಬಂಧನ; ಸ್ಥಾನಬದ್ಧತೆ: ಕಂಪನಿ ಸರ್ಕಾರದವರು ವೆಂಕಟಪ್ಪಾಜಿ, ತಂಜಾವೂರ ನಾಯಕ ಮೊದಲಾದವರನ್ನು ಅಕಸ್ಮಾತ್ತಾಗಿ ಬೆಂಗಳೂರಿಗೆ ಸಾಗಿಸಿ ನಸರುಬಂದಿಯಲ್ಲಿಟ್ಟರು (ಕುಂರಾಚ. ೪೩). ನಸರ್ಬಂದಿ: ಆದಕ್ಕೆ ಸಂಬಂಧಪಟ್ಟ ಜನಂನ್ನು . . . ಹಿಡಿದು ನಸರ್‌ಬಂದಿಯಲ್ಲಿಡುತಾ ಇದಾರೆಂದು ಅಲ್ಲಲ್ಲಿ ಜನರು ಹೇಳಿಕೊಳ್ಳುತಾ ಬಂದರು (ಮುಸುಗ. ೧೪೭). 'ನಜರುಕೈದು' ಪರಾ.

[ ನಸರು (<ನಜರು) + ಬಂದಿ₁/ಹಿಂ. ನಜರ್ಬಂದೀ ]

**ನಸರ್ಬಂದಿ** 'ನಸರುಬಂದಿ' ನೋ.

**ನಸವೆ** (ನಾ). (?) : ಕೊಟ್ಟ ನೆಲಂ ಮತ್ತರ್ಪ್ಪೇರೂರೊಳಯ್ನೂಱು ಮನೆಯುಯ್ವತ್ತು ಪೂವಿನ ತೋಂಟ ಮತ್ತರೆರಡು ಚತುಸ್ಸೀಮೆ (ಶವಾ ಪರ್ಯ್ಯಂತಮೆರಡುಂ ನಸವೆ ರಾಜಾ(ಜ) ರಕ್ಷಿತಂ ಧರ್ಮ್ಮ (ಇಅ. XVIII, ೨೭೪-೩೭ ; 1022). [ ? ]

**ನಸಿ₁** (ಕ್ರಿ). ೧. ಹಾಳಾಗು; ನಾಶವಾಗು; ಅಳಿದುಹೋಗು : "ನಸಿ – ಜೀರ್ಣೇ, ನಷ್ಟಚೇಷ್ಟಾಯಾಂ ಚ (ನಿಶ್ಚೇಷ್ಟಿತನಾಗು)" (ಕಮುಧಾ); ಎಸೆವ ತ್ರಿಪುಂಡ್ರಾಂಕ ಭಸಿತ ರುದ್ರಾಕ್ಷಿ ಜಪ ಶಶಿಧರಾರ್ಚನೆ ಹೋಮ ತಪಪನಿತುವುಂ ನಸಿದು ಹೋಹವು ದೀಕ್ಷೆವೊಸಗೆಯಿಲ್ಲದೆ ನರಂಗುಸುರ್ದ ಭೀಮಾಖ್ಯ ತಂತ್ರಾಗಮವದಂ (ಶಾನಂಚ. ೩-೧೩) ; ದುಷ್ಟಪ್ರಸರದೇಳಿಗೆ ಪಾಪಿಯೋಲಗ ಹುಸಿಯ ಬಾಳುವೆ ಹುದುವಿನಾರಂಭದ ಫಲೋದಯವು ನಸಿದು ಹೋಗದೆ ಲೋಕದೊಳಗವು ಹೆಸರುವಡೆಪವೆ (ಕುವ್ಯಾಅ. ೮-೪೮) ; ಝಳದ ಸುಯ್ಲಿನ ಮುಖದ ಮೋನದ ನೆನಹುಗಳ ಕಳಿದ ಕಡುಹಿನ . . . ನೃಪತಿಗಳನಗ್ಗಳೆಯ ರವಿಸುತ ಕಂಡು ಹೊಗಳಿದನಾ ಘಟೋತ್ಕಚನ (ಕುವ್ಯಾದ್ರೋ. ೦೭-೨೦) ; ನಸಿಯದಿರದಿನ್ನಸುರವಂಶದ ಸಸಿಯ ಬೆಳಸೆನುತ (ತೊರರಾ. ೩-೮-೩೦) ; ನೋಡಲು ನಸಿದು ಪೋಪುದು ಪಾಪವೆಂದು ಕೊಂಡಾಡಿದರ್ ಕುಶಲಜ್ಞರೊಲಿದು (ಮೋಹಚ. ೪೨-೩೩) ; ವಿಷಮುವಹ ಮನಸಿನ ವಿಕಲ್ಪದಲೆಸೆದು ತೋಱುವ ನಾಮರೂಪಿನ ವಿಸರವಹ ಭೇದ ಸಸಿನೆ ಗುರುಮುಖದಿಂದ ತಿಳಿಯಲು ನಸಿದು ಪೋಪುದು ಸ್ವಪ್ನದಂದದಿ (ಅಮೃಕ. ೮-೨೭). ೨. ನವೆ; ಸೊರಗು; ಕೃಶವಾಗು; ಬಡವಾಗು : ಒಡಲುಳ್ಳನಿತುಂ ನಸಿದೊಡೆ ಬಡಲಾಱಿಂ (ಸಮುಪ. ೫-೪) ; ನಸಿದು ಬೆಳೆಯದೆ ಕೊಬ್ಬಿ ಮೊಡ್ಡಿತಹ ತೆನೆಗಳೊಳು (ಸಿದ್ಧರಾ. ೨-೨೯) ; ನಸಿವ ಮುಪ್ಪಿನ ದೇಹ ತಾನದು (ಕುವಾಅ. ೭ರಿಇ. ಪರಿ. ೩೩೩) ; 'ನಸಿಗುತ್ತ', 'ನಸಿಬೇನೆ' ಪರಾ. ೩. ಮೈಮರೆ; ನಿಶ್ಚೇಷ್ಟಿತನಾಗು : "ನಸಿ – ಜೀರ್ಣೇ" ನಷ್ಟಚೇಷ್ಟಾಯಾಂ ಚ (ನಿಶ್ಚೇಷ್ಟಿತನಾಗು)" (ಕಮುಧಾ). ೪. (ಭಾರದಿಂದ) ಬಾಗು; ಕುಗ್ಗು; ಕುಸಿ : ಕೂರಲ್ ನಸ[ಸಿ]ಯೆ ಸಟ್ಟು ನಿಲೆ ಕಿವಿ ಬಸಿಱಿಕ್ಕುಟಾಸೆ ದಡದಡಿಸಿ ಕಾಲ್ಗಳಸೆಟಿಯೆ ತುರಂಗಮುದ ಕುತ್ತಮುದು ಮೃಗಜಂಭದ (ಅಕ್ಷಚ. ೧೩-೩೩) ; ಕುಸಿಯನೇ ಕೂರುಮನು ಭಾರಕ್ಕೆ ನಸಿಯನೇ ನಾಗೇಂದ್ರನಾನೆಗಳುಸುರು ಹದುಳವೆ ನೋಡೆನಲು ಬಂದುದು ನೃಪವ್ರಾತ (ಕುವ್ಯಾಉ. ೨-೧೯) ; ಫಣೀಶ್ವರನ ಪೆಡೆಗಳ್ ಮಣಿದುವಾದಿ ಕೂರ್ಮಂ ನಸಿದ ಸರಸಿಜಭವಾಂಡ ಖರ್ಪರಮಾನುಱೆ ಕರ್ಚಿದ (ಚಲಕು. ೨೭-೧೧) ; ಭೋಗಿವನ ಭೋಗಂ ನಸಿಯೆ ದೆಸೆಗೊಡೆಯರ್ ಸರಿಯೆ . . . ಸಬ್ಬನಬ್ಬರಂ ಕಡಿದಾಯ್ತು (ರಾಮಾಶ್ವ. ೦೩೧-೨೭). ೫. ಒಡೆ; ಸೀಳು; ಛಿದ್ರವಾಗು : ನಸಿದುದಾತನ ವರ್ಮ ಕರ್ಮವನುಸುರ್ದ ಬಲುಗೊಂಡೆಯ ತನವು ನಿಪ್ಪಸರದಲಿ ಜಡಿದಿಟ್ಟನೀತನಾತುಕೋಯೆನುತ (ತೊರರಾ. ೬-೪೭-೦೦). ೬. ಬಳಲು; ಆಯಾಸಗೊಳ್ಳು; ಉತ್ಸಾಹಗುಂದು : ಹಸಿದೆಂಬರು ಕೆಲರು ತೃಷೆಯೆಂಬವರ್ಕೆಲರು ನಸಿದೆವೆಂಬರ್ಕೆಲರು ಛಳಿಯೆಂಬವರ್ಕೆಲರು (ಶಾನಂಚ. ೪-೧೯೭ ರಗಳೆ) ; ನಂದಿಯು ನೋಡಿ ಸೀಂ ತಪಕೆ ನಿಶ್ಚಲಚಿತ್ತನಾದ ಕಾರಣಮಾದೇನುಸಿರೆನಲ್ ನಸಿದ ಮಾನಸನುಸಿರ್ದನು (ನಂದಿಪಾ. ೯-೫೭). ೭. ಕಂಗೆಡು; ದಿಕ್ಕುತೋಚದಂತಾಗು : ಘಾಯವಾಯ್ತರ್ಜುನಗೆ . . . ಬಾಯ ಬಿಟ್ಟುದು ಭೀತಿಯಲಿ ಕೌಂತೇಯಸುತರಿನ್ನುಳಿದ ಸುಭಟರ ನಾಯಕರ ಪಾಡೇನು ನಸಿದುದು ಪಾಂಡುಸುತಸೇನೆ (ಕುವ್ಯಾದ್ರೋ. ೧೮-೪೯) ; ಕೂಡೆ ಹೞಹಂಚಾದ ಸುಭಟರು ಕೂಡಿಕೊಂಡುದು ನೊಂದು ನಸಿದವರೋಡಿದವ ರೊಗ್ಗಾಯ್ತು ಕುರುರಾಯನ ಪರೋಕ್ಷದಲಿ (ಕುವ್ಯಾಗ. ೧-೬೩) ; ಮಬ್ಬಿನೊಳಗಾಚರಿಸಿ ಕೆಡೆವರಿಂ ಮಡಿವರಿಂ . . . ಒಬ್ಬೊಬ್ಬರಿಂತಾಗಿ ಬೀಳ್ವರಿಂ ದೇಳ್ವರಿಂದೆಬ್ಬಿಸಲ್ ದಿಕ್ಕಿಲ್ಲದಳಿವರಿಂ ಕೊಳೆವರಿಂ ಸಬ್ಬಲೋಕದೊಳೆ ಜಾನಿಸುವರಿಂ ನಸಿವರಿಂ ಪೇಳಲದ್ಭುತವಾದುದು (ಚಲಕು. ೪೭-೨೦). ೮. (ಅಂತರಂಗದಲ್ಲಿ) ಮಾತ್ಸರ್ಯ ಪಡು; ಕರುಬು : ಗೋಳದುಂಬವ ನೋಡುವುದು ನೆವ ಕುರುಪತಿಯ ಗಾಢದ ಸಗಾಢಿಕೆಯ ನೋಡಿ ನಸಿಯಲಿ

ಪಾಂಡುಸುತರು (ಕುಮ್ಮಾಅ. ೧೭-೩೦). ೯. ತಗ್ಗು ; ಕಡಮೆಯಾಗು ; ಇಳಿ : ನಸಿದ ಗರ್ವದ ನೆಗ್ಗಿ ದಾಳ್ಮನದೆಸಕದೊಣಗಿಲಬಾಯ ಭೂಪನ ಕಂಡನಾ ದ್ರೋಣ (ಕುಮ್ಮಾದ್ರೋ. ೩-೨೧) ; ಮುರಿಮುರಿದು ಕಬ್ಬೊಗೆಯ ಹೊದಳಿನ ಹೊರಳಿ ಹರೆದುದು ಸೂಸುಗಿಡಿಗಳ ನೆರವಿ ನಸಿದುದು ನಿರ್ಮಿರ್ದ ಹೊಂಗಳು ಯಂಬು ಹೊಳೆಹೊಳೆದು ಮುರಹರನ ಪಾದಾರವಿಂದದ ಹೊರೆಯೊಳದಗಿತು (ಕುಮ್ಮಾದ್ರೋ. ೧೯-೩೦); ನಸಿದ ಕಾಮದ ಪೆರ್ಚಿಸುವ ದಿವ್ಯಘುಟಿಕೆಯ ಹಸುರ್ಗರಡಿಗೆಯೊಳು ತುಂಬಿ ರಸೆಯೊಳು ಮೆಚಿಸಲು ಕಟ್ಟಿದಂದದಲಿ ಕಣ್ಗೆಸೆದುವು ಪೂಗವೃಕ್ಷಗಳು (ವೋಹಚ. ೨೧-೯೩) ; ಹೇಮಂತ ಶೈಶಿರದ ಮಾಗಿ ಮಡಲಿಡೆ . . . ಬಿಸಿಲ್ ಬೆಳ್ದಿಂಗಳವೊಲಾಗೆ ತಾಮರಸರಾಜಿ ನಸಿದುವು ಕುಗ್ಗಿದುವು ಕೋಗಿಲೆಯ ಕಂಠಕಲರವಗಳು (ಚ್ರಮಿಥಾ. ೨೮-೦). ೧೧. ಕಳೆ ; ಮುಗಿ ; ವ್ಯತೀತವಾಗು : ನಸಿದ ಯುಗದವಸಾನದ ಲಳಿ ಮಸಗಿ ಲಯಶಿಖಿ ಶಿಖಿಯೊಳಗೆ ಲಂಬಿಸುವವೊಲು ಹಳಚಿದವು ಬಲವೆರಡಳುಕಿ ಭುವನಚಯ (ತೊರರಾ. ೬-೧೩-೩೨) : ಹುಸಿಯದ್ವೆ ನಾಲ್ವತ್ತು ವರುಷವು ನಸಿದುಪೋಪವುಯಷ್ಟಲಗ್ನದೊಳೆಸೆಯೆ ಮಂದಿಗಳಂದು ಸುತ ಸಂಬಂಧ ವಾಗಿರಲು (ಕೀರಹ. ೨-೩೧). ೧೨. ಹಾಳಾಗು ; ಕೊಳೆತುಹೋಗು ; ಕೆಡು : ಹಸಿಯ ಕಾಯ ಕೊಯ್ದು ತಂದು ಬಿಸಿಯ ತೋಟು ಮುಸುಕಿ ಇಡಲು ನಸಿದು ಕೆಡುವದಲ್ಲದದುವೆ ಪಕ್ವವಪ್ಪುದೆ (ಸುಶಾರ. ೬೩-೨) ; ನಸಿದ ಬೆಣ್ಣೆ ಗಸಿ ಹಾಗೆ (ಗಾದೆ).

ನಸಿದಾಡು = ಹಾಳಾಗು ; ಕೆಡು : ಹಸಿದುಂಬ ಅಣ್ಣಗಳೆಲ್ಲರು ಅಸುವಿನ ಘಾತಕೊಳಗಾದರು ಹಸಿಯ ವಿಷಯಂಗಳಲ್ಲಿ ನಸಿದಾಡದೆ ಹುಸಿಯದ ಮರ್ತ್ಯರಂತೆ ಗಸಣಿಗೊಳ್ಳದೆ ದಯದೆಚಕದಲ್ಲಿರು ಬಂಕೇಶ್ವರಲಿಂಗವನಚು ವುದಕ್ಕೆ (ಸುಂಕಬಂ. ೬೩೦-೩೯).

[ ದೇ.॥ ತಮಿ. ನಚಿ; ಕುರುಖ್. ನಸ್ರುನಾ./ಸಂ. ನಶ್ ]

ನಸಿ₂ 'ನಸ್ಸೆ₁' ನೋ.

ನಸಿ₃ 'ನಶ್ಯ' ನೋ.

ನಸಿಕ (ನಾ). ಸೊರಗಿದವನು ; ಬಡವಾದವನು ; ಕೃಶಾಂಗ : ನಸಿಕಂ, ನಸೆ ಇತಿ ವಯಸಾ ವ್ಯಾಧಿನಾ ಕೃತ್ರಿಮವಿಷೇಣ ವಾ ಜೀರ್ಣಂ ಗಾತ್ರಂ ತದ್ವಾನ್ (ಶಬ್ದಾನು. ೪೪೦ ವ್ಯಾಖ್ಯಾ) ; ಬಾರಿಕಂ, ನಸಿಕಂ, ಕುಸಿಕಂ (ಶಬ್ದಾನು. ೪೪೦ ಪ್ರಯೋ). [ ನಸಿ₁ + -ಕ₃ ]

ನಸಿಗ (ನಾ). = ನಸೆಗಾರ : ನಸಿಗನೊಳಗ್ಗದ ನಸಿಗಂ ಬಸನಿಗಳೊಳ್ಮಿಕ್ಕ ಬಸನಿಗಂ . . . ಸತ್ಪ್ರಳೆಮಂ ನಿಯಮಿಸಿ ಧರ್ಮಪಥಕ್ಕೆದಂದು ನಿಲಿಪರೆ ಲೋಗರ್ (ಸಮುಪ. ೬-೩೦). [ ನಸಿ₂ (<ನಸೆ₁) + -ಗ₂ ]

ನಸಿಗುತ್ತ್ರ (ನಾ). ಶರೀರ ನವೆಯುತ್ತ ಹೋಗುವ ಒಂದು ರೋಗ : ಎಸೆವಾ ಪ್ರಥಮಂ ಪ್ರತಿಪಾಳಿಸುತ್ತುಮಿರ್ದಂಗದೊರ್ಮೆ ಕರ್ಮದ ಬಸದಿಂ ನಸಿಗುತ್ತಂ ಪತ್ತಿ ವಿವರ್ಧಿಸುತಿರ್ದುದು ಬಂಧುಜನದ ಮನದುಮ್ಮಳಮಂ (ವರ್ಧಪು. ೦೬-೩೬). [ ನಸಿ₁ + ಕುತ್ತ್ರ ]

ನಸಿನಸಿನಗೆ (?). (?) : ಬಸವಳಿವು ಮಟುಗದಿರ್ ನಿರ್ನೆರಂ ಭರತ ನೋಯಿಸುವರಾರ್ ನೋವರಾರ್ . . . ಸುಖದುಃಖಮಿರವ ಪಗಲಿರುಳಂತೆ ಸಹಜಮಿದು ಪುಟ್ಟಿದರ್ಗೆ ಬೆಸನವಿಂತಿವುಗೆ ನಾಣ್ನುಡಿಗೆ ನಿನ್ನಿಂದೊದಗೆ ನಸಿನಸಿನಗೆಮ್ಮತ್ರಣಿಂ ತೋಟು ಲೋಕದಾಯಸಕೊರ್ವನೊರ್ವನಂ ದೂಟು ಮರುಳಾಗದೇಂ ಬಲ್ಲವರ್ಗಂದೊರೆದಳು (ಶ್ರೀರಾಪು. ೪-೩೩). 'ನಸೆನಸೆ' ಪರಾ. ಈ ಇಲ್ಲಿ ಪಾಠದೋಷವಿರುವಂತೆ ತೋರುತ್ತದೆ. [ ? ]

ನಸಿಬ 'ನಸೀಬು' ನೋ.

ನಸಿಬೇನೆ (ನಾ).=ನಸಿಗುತ್ತ್ರ : ಮೂರನೆಯ ಕಂಪೌಂಡಿನೊಳಗಿಂದ ನಸಿಬೇನೆ ಹತ್ತಿದ ಸಪ್ಪಗಿನ ಮುಖದ ಒಬ್ಬ ತರುಣನು . . . ಬರುತ್ತಿದ್ದನು (ಮುಳ್ಳುಬೇ. ೧೭). [ ನಸಿ₁ + ಬೇನೆ ]

ನಸಿಮೆಯ್ (ನಾ). ಸೊರಗಿದ ದೇಹ ; ಬಡವಾದ ಮೈ : ಮಿಸುನಿಯ ಮೆದೆಗಳಸತ್ಯೆಯು ನಸಿಮೆಯ್ಯಂ ಸೊಬಗನೊಡಲ ಸೋಂಕಿದೆನ್ನಂ ಪಸ ಗೆಯ್ಮೆಯ ಚಳಕದೆ ಸಂತಸಪಡೆದನುಪದಿಪ ಕೆಳೆಯುನಸುವಿಂ ತಣಿಸಾ (ಚಕವಿ. ೬-೧೧೩). [ ನಸಿ₁ + ಮೆಯ್ ]

ನಸೀಬ 'ನಸೀಬು' ನೋ.

ನಸೀಬವಾನ (ನಾ). ಅದೃಷ್ಟಶಾಲಿ ; ಸಂದೈವಿ : ನಿನ್ನ ನಸೀಬ ಚೆನ್ನಾಗಿದೆ ಹಾಂ ! ನೀನು ನಿಜವಾಗಿಯೂ ನಸೀಬವಾನನು (ಚೀನಬಾ. ೧೨).

[ ← ಮರಾ. ನಸೀಬವಾನ, ನಶೀಬವಾನ ]

ನಸೀಬು, ನಶೀಬ, ನಶೀಬು, ನಸಿಬ, ನಸೀಬ (ನಾ). ೧. ಹಣೆಬರಹ ; ದೈವ; ಅದೃಷ್ಟ: ಎಲ್ಲಾ ಅವರವರ ನಸೀಬು ಕಣ್ರಪ್ಪಾ (ಮೂಮನ. ೯೬); ಇನ್ನು ಅವನ ನಸೀಬಿನಲ್ಲಿದ್ದಂತಾಗಲಿ ಎಂದು ಅವಳೂ ಸುಮ್ಮನಾದಳು (ಮುಕಳ್ಳಿ. ೯) ; ನಿಮ್ಮ ನಸೀಬು ಗಟ್ಟಿಯಾಗಿತ್ತು ಬದುಕಿಕೊಂಡಿರಿ (ವಿದ್ಯಾರಿ. ೮೨). ನಶೀಬ: ೧. ಏನು ಮಾಡೋದು, ಆಕೆಯ (ದೀಪಹ. II,೦೩); ನಶೀಬ ಖೊಟ್ಟಿ ಅದ (ಕಾಗಿಳ. ೬೨) ; ಅವರವರ ನಶೀಬಾ ಅವರವರ ಸುತ್ತ " ಮುದೀ ನಶೀಬ ಏನಾದನೋ ಏನೊ! " ಎಂದು ತಂದೆ-ತಾಯಿಗಳಿಬ್ಬರೂ ಚಿಂತೆಗೊಳಗಾದರು (ನತರಾ.II,೦೩೬೭). ೨. ದುರದೃಷ್ಟ ; ದುರ್ದೈವ ; ದೌರ್ಭಾಗ್ಯ : ನನಗ ಒಬ್ಬಗ ಹಂಗ ಬರಿ ಕೈಲೆ ಕಳಿಸಬೇಕು ಅಂಥ ತಮ್ಮಂಥವರ ವಿಚಾರವಾದಿದರ, ಅದು ನನ್ನದ ನಶೀಬ ಅಂದಾ ಕೊಳ್ಳಲ್ಯಾ (ಗಂಮೂಯಿ. ೦೦೭) ; ನನ್ನ ನಶೀಬ ನೋಡು ನಾ ಹೋದಾಗಲೇ ಇಂತಹ ಪುರಾಣ ನಡೆಯಬೇಕೆ? (ಮೂರುದಾ. ೪೨) ; ಸಂಸಾರದಾಗಿಂದ ಹೀಂಗ ಏಕಾಏಕೀ ಎದ್ದು ಹೋಗಬೇಕಂದರ ದೈವ, ನಶೀಬ (ಕೃತಿಜ. ೩೬). ೩. ಸುದೈವ ; ಸೌಭಾಗ್ಯ : ಏಸೋ ಯಾರ ಜೀವಕ್ಕೂ ಧಕ್ಕೆ ಆಗಲಿಲ್ಲ ನಶೀಬ (ಕಮ್ಮಟ. ೪೩). ನಶೀಬು : ೧. ಇವತ್ತಿನ ನಶೀಬು ಖರಾಬಾಯಿತು (ಚೀಗೂಂ. ೮೨) ; ಅವಳ ನಶೀಬಿನಲ್ಲಿ ಮದುವೆ ಬರೆದಿಲ್ಲವಾದುದರಿಂದ ಹೀಗೆಲ್ಲ ವಿಪರೀತವಾಯಿತು (ಸ್ವಪ್ನಹೊ. ೩೦೭) ; ಯಾವುದಕ್ಕೂ ಬೂದ ಮರಕಾಲನ ನಶೀಬೇ ಕಾರಣ (ಹೊಸಕ್ಕ. ೩೨). ನಸಿಬ : ೧. ಮುಖ್ಯ ನನ್ನ ಶೇಷನ ನಸಿಬ ಬಹಳ ಖೊಟ್ಟಿ(ಮುತ್ತ್ಯರ. ೬); ನಸಿಬದಾಟದ ಮುಂದ ಯಾವ ಮಾಟವು ಏನ (ಕನ್ನಡಾ. ೩೪೬). ೩. ಕಾವೇರಮ್ಮನ ನಸಿಬ ದೊಡ್ಡದು (ರಂಗರಿಣ. ೬೭). ನಸೀಬ : ೧. ಯಾರ ನಸೀಬದಾಗ ಏನು ಬರೆದೈತ್ಯೋ ಯಾರಿಗ್ಗೊತ್ತು (ಚೀದಾನ. ೭೦) ; ನಸೀಬದಾಟವನ್ನು ಈ ಲಾವಣಿಯಲ್ಲಿ ಕಾಣಬಹುದಾಗಿದೆ (ಕನ್ನಡಾ. ೯೦) ; ನಿನ್ನ ನಸೀಬಾನೇ ಭಾಳ ಖೊಟ್ಟಿ (ಚವರಿ. ೦೭). ೨. ಒಂದೂ ಸಾಹುಕಾರನನ್ನ ಮಾಡಿಕೊಂಡಿದ್ದರ ನಮ್ಮ ನಸೀಬಕ್ಕೆ ಅವನ್ನ ಮುಂಬಯಿ ಯಾಗ ತುಡುಗು ಮಾಡಿಕೊಂಡು ಹೋಗಬೇಕ (ಮೇದಿಮು. ೩೦೪) ; ನನ್ನ ನಸೀಬ (ಪಾರೂ ಅಳುಮುಖ ಮಾಡುವಳು) (ಕುಂಕುಮ. ೦೭); "ಮದುವೆ ಯಾಗುವುದಕ್ಕೆ ನಸೀಬ ಬೇಕು" ಎಂದು ತಿಳಿದ ಅನೇಕ ದುರ್ಭಾಗ್ಯ ಹುಡುಗಿ ಯರಲ್ಲಿ ಅವಳೂ ಒಬ್ಬಳಾಗಿದ್ದಳು (ಚಕ್ಕಿತ. ೨೭).

ನಶೀಬು ತೆಗೆ = ಅದೃಷ್ಟ ಖುಲಾಯಿಸು ; ದೈವ ಕಣ್ಣುಬಿಡು : ವೆರೀ ಸಾಹೇಬಂದ್ರರೆ ಖಾತ್ರೀಯಾಗಿ ಮಗನ ನಶೀಬು ತೆಗೆಯುತ್ತಿತ್ತು (ಗೀಕುಗಿ. ೩೦). [ ← ಅರ. ಹಿಂ. ನಶೀಬ್; ಮರಾ. ನಸೀಬ್, ನಶೀಬ್]

ನಸೀಯತ್ತು 'ನಶಿಹತ್ತು' ನೋ.

ನಸು₁ (ಗು). ೧. ತುಸಂ ; ಕೊಂಚ ; ಸ್ವಲ್ಪವಾದ : ದೀರ್ಘಾಕಾರಂ ಸುಬುದ್ಧಿ ಮೇದಸ್ಸಾರಂ ನಸು ಕಿಂಚತಲೆಯನಕ್ಕುಂ ಜೀವಂ (ಜಾತತಿ. ೨-೨೩) ; ಬಲಿದ ತಪಸಿಗಳ ನಸು ಪದುಳೊಲಹುಗಳ ಜವವೆದ್ದ ಝೊಮ್ಮಿನ ಬರೆಗೆ ಸಿಲುಕಿದ ಒಲವಸರ್ಜನದೇಪನಿಕ್ಷಿಸಿವ (ಕುಮ್ಮಾದ್ರೋ. ೦೬-೪) ; ಪರಿಮಳದ ಪಸಂಕೆಯ ಕುಸುಮೋತ್ಕರದ ನಸುಮಿಡಿಗಾಯ ಕಸುಗಾಯ್ ದೋರೆಗಾಯಿಗಳ . . . ಪ್ರಮುಖ ಭೂಜದಿನೆಸೆದುದುದ್ಯಾನ

(ತೀರಥಾ.೧-೯-೧೩); ಭೂಗೋಲ ತಾರಾಂಬರಾದಿಗಳನಣಮಾಡಿ ಬಿಗಿದು ನಸು ಸಡಿಲವನು ಮಿರಿಸಿ ಕುಣಿಸುತಿರುವನು . . . ಪರಬೊಮ್ಮ (ಮಂಕುಕ. ೮೪); ಕಣ್ಣಿಗೆ ನಸುಜಂಪು ಬಂದಂತಾಗಿತ್ತು (ಅಕೋಳ. ೩೭). ೨. ಮಂದವಾದ; ದಟ್ಟವಾದ. 'ನಸುಕಾಂತಿ' ಪರಾ. ೩. ಚಿಕ್ಕದಾದ; ಸಣ್ಣ. 'ನಸುಗಾಯ್', 'ನಸುದಱಿ' ಪರಾ. ೪. ತಿಳಿಯಾದ; ದಟ್ಟವಲ್ಲದ. 'ನಸುಗಾವಿ' ಪರಾ. [ ದೇ.॥ ತಮಿ. ನಚ್ಚು ; ಮಲ. ನನು ]

**ನಸು$_{2}$** (ಅ). ೧. ಸ್ವಲ್ಪವಾಗಿ ; ಕೊಂಚವೆ : ಹೋಮಧೂಮದ ಗಂಧಂ ನಸುಮುಟ್ಟೆ ದಿವ್ಯಮ[ಖ]ಮಂ ಕೆಯ್ಕೊಂಡು ಸಗ್ಗಕ್ಕೆ ಪಾಱಿದುವಾ ಪಾರಿವ ಜಕ್ಕವಕ್ಕಿಗಳದೇಂ ಪೆಂಪೋ ಮಹಾಯಜ್ಞದಾ (ಪಂಪಭಾ. ೬-೩೮); ಸೊಗಯಿಸುವ ಪಾಲೆಯಿಂ ನಸುಜಗುಳುತ್ತಿರೆ ಕರ್ಣಪೂರಪಲ್ಲವಂ (ಕಾದಂಪೂ. ೫೨); ನಸುಪೊಂಗಿರ್ದಳ್ಳೆಗಳ್ ತೋಱೆ (ರಾಜಶೇಖ. ೧೧-೬); ನಡೆನಡೆದು ನಸುಬಳಲ್ಕೆಕಾಲ್ತೊಡಬಲನಂ ನೋಡಿ (ಗಿರಿಕ. ೧-೮೫); ಆ ಪುರದಜನವಱಿಯದಂತಿರೆ ಕಾಪುರುಷನಳವಡಿಸಿದನು ನ ಸು ದೀ ವ ತಾಗಿದೊಡೇಕರೂಪಹ ರಾಜಭವನವನು (ಕುಮಾ.ಅ. ೮-೬೬); ನೀನು ನೆರಹಿದ ಸುಕೃತ ಫಲವದನೇನ ಹೇಳುವೆನಿತ್ತಲುಗ್ಗಡದಾನೆ ಬಿದ್ದುದು ಕಾದಿ ನಸುಸೊಪ್ಪಾದುದರಸೆ:ನೆ (ಕುಮಾ.ದ್ರೋ. ೪-೧); ನಸು ಕಣ್ತೆರೆದು ನಿಟ್ಟಿಸಿದರೆ ಮುಂದೆ ನಿಂತ ಗೌರಿ ಮೊರೆಯಿಡುತ್ತಿದ್ದಾಳೆ! (ಬಾಳಬ. ೧). ೨. ಮಂದವಾಗಿ. 'ನಸುಬೆಳಗು' ಪರಾ. ೩. ಮೆಲ್ಲನೆ. 'ನಸುತೇಂಕು' ಪರಾ.

**ನಸುನಸು** (ದ್ವಿರುಕ್ತಿ) : ನಸುನಸು ನಾಣ್ಚುತೊಂದಿನಿಸು ಬಾಗಿದ ನುಣ್ಮೊಗಂ (ಅಪ್ರತಿ. ೧೮-೨೦). [ < ನಸು$_{1}$ ]

**ನಸು$_{3}$** (ನಾ). ಕತ್ತಿಕಾಳಗದ ಒಂದು ವರಸೆ (?) : ಪುಸಿ ನಸು ವಂಚನೆ ನೋರ್ಪನುವಸಿದಗಲಿತು ತಕ್ಕುದಕ್ಕು ಪಗೆ ಕೆಯ್ಬಗೆ ಕೆಯ್ಕುಸುರಿ ನುಸುಳೆಂಬ ಕೇಣದ ಬಸುರಿಯನಱಿದಿಱಿದು ಮೆಚ್ಚಿದು ನೆಱೆದುಱಿದರೆಬರ್ (ಪಂಪಭಾ. ೧೧-೮೧). P 'ನಸೆ' ಎಂಬುದು ಸರಿಯಾದ ರೂಪವಿರಬಹುದೇ? ಉದಾ :-ಎಕ. VI, ಚಿಕ್ಕಮ. ೯೪-೧೮; 1068ರ ಪ್ರಯೋಗವನ್ನು ನೋಡಿ. [ ? ]

**ನಸುಕತ್ತಲು** 'ನಸುಗಟ್ತಲೆ' ನೋ.

**ನಸುಕಲಂಕು** (ಕ್ರಿ). ಸ್ವಲ್ಪ ಕದಡು ; ತುಸು ಚೆಲ್ಲಾಪಿಲ್ಲಿಯಾಗು : ಉಸುರಿಪ ತಮಂಧಂ . . . ಚೀತರಿಸುವ ಮಾರುತಂ ನಸುಕಲಂಕುವ ಸಾಂಧ್ಯಮಯೂಖಲೇಖೆಗಳ್ (ಗಿರಿಕ. ೯-೬೬). [ ನಸು$_{2}$ + ಕಲಂಕು ]

**ನಸುಕಾಂತಿ** (ನಾ). ಅಲ್ಪವಾದ ಪ್ರಕಾಶ; ಮಂದವಾದ ಪ್ರಕಾಶ : ದಳಿತಪ್ರಕಾಶ ಕೃಷ್ಣನ ಮುಂದೆ ಸೊಡರ್ಗಳು ಕಳಿತುವು ನಸುಕಾಂತಿವೆರಸಿ (ಮೋಹತ. ೧೫-೧೨). [ ನಸು$_{2}$ + ಕಾಂತಿ ]

**ನಸುಕು$_{1}$** (ಕ್ರಿ). ಜಜ್ಜು ; ಹಿಸುಕು : ಮನಸ್ಸಿನಲ್ಲಿ ಸಂಗ್ರಾಮ ಬಿರುಸಾಗಿಯೇ ಸಾಗಿತ್ತು . . . ಕಲ್ಲುಗಳೆರಡರ ನಡುವೆ ಸಿಕ್ಕಿದ ಹಸುರೆಲೆಯಂತೆ ನಸುಕಿ ಹೋಗುತ್ತಿದ್ದ (ಮುಯಿಳು. ೧೪); ಕಾಂಡವನ್ನು ಹಿಡಿದು ಕೀಳಹೋದರೆ ಹಿಡಿತದಲ್ಲಿಯೇ ನಸುಕಿ ಹೋಗುತ್ತದೆ (ಹಸುಹೊ. ೧೮೯).

[ ದೇ.॥ ತಮಿ. ನಶುಕ್ಕು. ನಶುಜ್ಜು ]

**ನಸುಕು$_{2}$**, ನಸಕು (ನಾ). ಬೆಳಗಿನ ಜಾವ; ಮುಂಜಾವ; ಉದಯಕಾಲ : ೧೨ನೆಯ ಶತಮಾನದ ಮಧ್ಯಕ್ಕೆ ಉದಯುವಾಗಲಿರುವ ಬಸವಯುಗದ ನಸುಕಿನಂತೆ ವಚನಸಾಹಿತ್ಯ ಇದ್ದಿರಬೇಕೆಂದು ತೋರುತ್ತದೆ (ಕಸಾಚ. ೮೯); ಚುಮುಚುಮು ನಸುಕಿನಲಿ ಹೂವುಗಳರಳುವುವು (ಉಯ್ಯಾಲೆ. ೭೩-೧); ತೀರ ನಸುಕಿನಲ್ಲಿ ಕೋಳಿ ಕೂಗುತ್ತಲೇ ಎದ್ದು ಹೊರಡಬಹುದು (ಶ್ಯಾಮಶಾ. ೧೨); ಅವನು ನಸುಕು ಇರುವಾಗಲೇ ಏಳುವವನು (ಮುಂಬಯಿ. ೫-೨೩೦); ಇನ್ನೂ ನಸುಕು ಇರುವಾಗಲೇ ಭೀಮಪ್ಪ . . . ಅಂಗಳ ಕಸಗುಡಿಸುವುದರಲ್ಲಿದ್ದ (ಪ್ರಬಿಶ ೭೯). ಇವರ ಕೃತಿಗಳಲ್ಲಿ ಪ್ರತಿಭೆಯ ನಸುಕು ಕಂಡುಬರುವುದಲ್ಲದೆ ಬಲವತ್ತರವಾದ ಕಲ್ಪನಾಶಕ್ತಿಯಿದೆ (ಗೊತ್ತುಗು. ೨೬). 'ನಸುಕುಹರಿ' ಪರಾ. ನಸಕು: ಮಾರನೇ ದಿನ ನಸಕಿನಲ್ಲಿ ವಿಜಯನಗರದಲ್ಲಿ ವಿಲಕ್ಷಣವಾದ ಕೋಲಾಹಲವೆದ್ದಿತು (ಸ್ಮೃಲಮಿ. ೨೨೧); ಹಬ್ಬವಸು ಹೂಡಿದನು ಉಬ್ಬ ಊರಿಗೆಲ್ಲ ಜಬ್ಬು ಕವಡೊಂದು ಬಳಿಯಿಲ್ಲ ಬೀಡನಿಗೆ ನಬ್ಬು ನಸಕಿನಲ್ಲಿ ಮನೆಬಿಟ್ಟ (ಕನ್ನಜಾ. ೨೯೩); ಮಸಕು ಹರಿಹರಿಯುತಲಿ ನಸಕು ಬರುಬರುತ್ತಿರಲು ಯಶವು ಬಂದಂತೆ ಅಂಗಳಕೆ (ಕನ್ನಜಾ. ೨೯೩); ರೈತರು ನಸಕಿನಲ್ಲಿ ಎದ್ದು ಹೊಲಗದ್ದೆಗಳ ಕಡೆ ಹೋಗುವುದು ಪದ್ಧತಿ (ರೂಢಿ). [ ದೇ.॥ ತೆಲು. ನಸುಕು, ನಸ್ಕ ]

**ನಸುಕುನ್ನಿ** 'ನಸುಗುನ್ನಿ' ನೋ.

**ನಸುಕುನ್ನಿಬೀಜ** 'ನಸುಗುನ್ನಿಬೀಜ' ನೋ.

**ನಸುಕುಹರಿ** (ಕ್ರಿ). ಬೆಳಕು ಹರಿ ; ಬೆಳಗಾಗು ; ಸೂರ್ಯೋದಯವಾಗು: ನಸುಕುಹರಿಯದ ಮುನ್ನ . . . ಸತಿಪತಿ ಬಂದು ಕವಾಟದ ತಳುಪನಗಲಿಸಲು (ನಂದಿಲೀ. ೬-೩೫); ನರಹರಿಯು ನಿಲ್ಮನೆಯನ್ನು ಮುಟ್ಟಿದಾಗ ನಸುಕು ಹರಿಯಲು ಇನ್ನೂ ಒಂದೆರಡು ತಾಸಿತ್ತು (ಸಮುಜೀ. ೨೯೩); ದಿಗಂತದಲ್ಲಿ ನಸುಕುಹರಿದು ಹೊಂಬಣ್ಣದ ಹೊಸಹಗಲು ಮೂಡುತ್ತಿತ್ತು (ರೂಪಕ. ೮); ನಸುಕು ಹರಿಯಿತು (ನಾಕಥ. ೪೫). [ ನಸುಕು$_{2}$ + ಹರಿ$_{2}$ (<ಪರಿ$_{2}$) ]

**ನಸುಕೆಂಚತಲೆಯ** (ನಾ). ನ ಸಂ ಗೆಂ ಪಾ ದ ಕೂದಲುಳ್ಳವನು : ಗೌರಚ್ಛಾಯಂ ಸ್ಥೂಲಶರೀರಂ ಮೃದುಲೋಚನಂ ಕಫಾತ್ಮಂ ದೀರ್ಘಾಕಾರಂ ಸುಬುದ್ಧಿ ಮೇದಸ್ಸಾರಂ ನಸುಕೆಂಚತಲೆಯನಕ್ಕುಂ ಜೀವಂ (ಜಾತತಿ. ೨-೨೩).

[ ನಸು$_{1}$ + ಕೆಂಚ$_{1}$ + ತಲೆ$_{1}$ + – ಅ$_{7}$ ]

**ನಸುಕೆರಳ್** (ಕ್ರಿ). ಸ್ವಲ್ಪ ರೇಗು ; ನಸುಗೋಪವನ್ನು ತಾಳು : ಎಳೆನೆತ್ತರಲ್ತೆ ನಸುಕೆರಳ್ದನೇಕೇಟೆನಗೆ ತಿಳಿಯನೇಂ ದೂಸರನೆ ನೀಂ ಮರೆವುದರಿಂದೆ (ಕಾಲೂರ. ೧೬೩-೩೬೧).

[ ನಸು$_{2}$ + ಕೆರಳ್ (<ಕೆಳರ್) ]

**ನಸುಗಂದು** (ಕ್ರಿ). ೧. ಸ್ವಲ್ಪವೆ ಕಪ್ಪಾಗು ; ನಸುಗಪ್ಪು ಬಣ್ಣವನ್ನು ತಾಳು : ನೆಗೆದೆತ್ತ ಧೂಪಧೂಮಂ ಪಸರಿಸೆ ನಸುಗಂದಿರ್ದ ಕೆಂಬಟ್ಟೆಯಿಂ ಗಂಟೆಗಳಿಂ ಮ ಯೂ ರ ಕಂ ಠಾ ವ ಳಿ ಯಿ ನೆ ಸೆ ದಿ ರ ಲ್ ತೋರಣಂ . . . ಚಂಡಿಕಾಗರ್ಭಗೃಹದ್ವಾರಪ್ರದೇಶಂ ಜನಪನ ಬಗೆಗಾಶ್ಚರ್ಯಮಂ ಮಾಡಿತಾಗಳ್ (ಕಾದಂಉ. ೨೭೦). ೨. ಸ್ವಲ್ಪವೆ ಮಾಸು,–ಬಾಡಂ : ಅತನುರಿಯಂಬಿನ ಪೊಗೆ ಮೊಗಸಿದಂತಧರಕಿಸಲಯಂ ನಸುಗಂದಿದುದು (ಕಾದಂಉ. ೭೭೦); ಕುಂದದ ಚಂದ್ರಲೇಖೆ ನಸುಗಂದದೆ ಧಂಜಿವ ಪುಷ್ಪಮಾಲೆ (ದಶಕು. ೧-೨೮). [ ನಸು$_{2}$ + ಕಂದು$_{1}$ ]

**ನಸುಗಡುಸು** (ನಾ). ಸ್ವಲ್ಪ ಬಿರುಸು : ನಸುಗಡುಸಿನ ಹೆಣ್ಣನಿಯೊಂದು ಬಾಗಿಲಾಚೆಯಿಂದ ನುಡಿಯುತ್ತಿತ್ತು (ರೂಪಕಂ. ೮).

[ ನಸು$_{1}$ + ಗಡುಸು ]

**ನಸುಗತ್ತಲು** 'ನಸುಗಟ್ತಲೆ' ನೋ.

**ನಸುಗತ್ತಲೆ** 'ನಸುಗಟ್ತಲೆ' ನೋ.

**ನಸುಗರ್ಪು** (ನಾ). ತಿಳಿಗಪ್ಪು ; ಗಾಢವಲ್ಲದ ಕಪ್ಪು : ನಿಶಾಮುಖಂ ನಸುಗರ್ಪಿಂದೆಸೆದುದು ಪಡುವಣದೆಶೆ ಕೆಂಪೆಸೆದುದು (ಕಾದಂಉ. ೦೪೦).

[ ನಸು$_{1}$ + ಕರ್ಪು$_{1}$ ]

**ನಸುಗಳ್ತಲೆ** 'ನಸುಗಟ್ತಲೆ' ನೋ.

**ನಸುಗಟ್ತಲೆ**, ನಸುಕತ್ತಲು, ನಸುಗತ್ತಲು, ನಸುಗತ್ತಲೆ, ನಸುಗಳ್ತಲೆ (ನಾ). ದಟ್ಟವಲ್ಲದ ಕತ್ತಲೆ ; ಮಬ್ಬುಗತ್ತಲೆ : ಸಂಶಯಬಲವೆಂಬ ನಸುಗಟ್ತಲೆಯುಮಂ ತಲೆದೋಱಲೀಯದೆ ತೊಳಗಿ ಬೆಳಗುತ್ತುಂ . . . ಸಮ್ಯಗ್ದರ್ಶನಂ ಸರ್ವಾಂಗಶಕ್ತಿಯಂ ಕೊರ್ವಿಸುತ್ತಿರೆ (ವರ್ಧಕು. ೧೨-೩೫ ವ). **ನಸುಕತ್ತಲು** : ನಸುಕತ್ತಲು ಹರಡಿತ್ತು (ದೇವಸಾ. ೧). **ನಸುಗತ್ತಲು** :

ನಸುಗತ್ತಲಿನಲ್ಲಿ ತೋಟವೆಲ್ಲಾ ಹಕ್ಕಿಗಳ ಹಾಡಿನಿಂದಲೂ ಕಾಗೆಗಳ ಕೂಗಿನಿಂದಲೂ ತುಂಬಿತ್ತು (ಯಶೋಧಕು. ೧೯); ಅಲ್ಲಿ ನಸುಗತ್ತಲಲ್ಲಿ . . . ಇವನನ್ನೇ ನೋಡುತ್ತ ಕುಳಿತ ವ್ಯಕ್ತಿಯೊಂದು ಕಾಣಿಸಿತು (ಗಂವಾಹಿ. ೮೭). **ನಸುಗತ್ತಲೆ:** "ನಸುಗತ್ತಲೆ–ಧೂಳ ಸಂಜೆ" (ಜಾನಕೋ. ೧೦); ನಸುಗತ್ತಲೆಯಾಯಿತು. ರತ್ನವ್ವ . . . ಉಳಿದ ಜನರನ್ನು ಕರೆದು ಕರೆದು ಉಣಿಸುವುದರಲ್ಲಿದ್ದಳು (ನಿಸರ್ಗ. ೬೦). **ನಸುಗಳ್ತಲೆ:** ನಸುಗಳ್ತಲೆಯುರೆಗಳ್ತಲೆ ಮುಸುಕುಂಕುಗಳ್ತಲೆ ಪೊಗಳ್ದ ಪೆರ್ಗಳ್ತಲೆ ನಾಲ್ದೆಸೆಗಳ್ತಲೆ ಪೊಸಗಳ್ತಲೆ ರಸೆಗಳ್ತಲೆಯೆನಿಸಿ ಕೂಡೆ ಕೀವಿತು ತಿಮಿರಂ (ಗಿರಿಶ. ೪-೭೩).

[ ನಸು₁ + ಕಟ್ತಲೆ ]

**ನಸುಗಾಯ್** (ನಾ). ಸಣ್ಣ ಕಾಯಿ; ಚಿಕ್ಕ ಕಾಯಿ; ಎಳೆಯ ಕಾಯಿ; ಮಿಡಿಗಾಯಿ: ನಸುಗಾಯ್ ಕನರುಗಾಯ್ ಕಸುಗಾಯ ಹುಳಿಗಾಯ್ ತನಿರಸದ ಮಧುರಾಮ್ರ ಪೂರಿತ ಮಾಧುರ್ಯಕರ . . . ಘನತರದ ಸಹಕಾರ ಸಹ ಸುರವನಕದಂಬಕವೆಸೆದುದಿದಿರಲಿ ಕಪಿಕುಲೇಶ್ವರನ (ತೊರರಾ. ೩-೩-೧೪). [ ನಸು₁ + ಕಾಯ್₄ ]

**ನಸುಗಾವಿ** (ನಾ). ತಿಳಿಯಾದ ಕಾವಿಬಣ್ಣದ ಬಟ್ಟೆ: ವಿಭೂತಿ ರುದ್ರಾಕ್ಷೋಜ್ವಲಾಂಗದಿಂ ನಸುಗಾವಿಯಿಂ ಮಿಱುಗುವೃತ್ತೀಪ ಬೃಹತಿಕೆಗಳಿಂ ದೋತ್ರದಿಂ . . . ಶಾಂತಿರಸದೆರಕದಿಂ ಸಮೆದ ಪುತ್ಥಳಿಯೆನಲ್ (ಹದ್ಮರಾ. ೫-೬೦). [ ನಸು₁ + ಕಾವಿ ]

**ನಸುಗಾಳಿ** (ನಾ). ಮೆಲ್ಲನೆ ಬೀಸುವ ಗಾಳಿ; ಮೆಲುಗಾಳಿ; ಸುಳಿಗಾಳಿ; ಮಂದಮಾರುತ: ನಸುಗಾಳಿಗೊಡೆದೊಸರ್ವ ಮಂಜುಳಫಲಂಗಳಿಂ (ಉದ್ಭಟ. ೩-೯೦); ನಸುಗಾಳಿ ಸಂಧಿಸೆ ಕೆದರ್ದ ಪೊಂಬಾಳೆಗಳ ಕುಸುರಿಗಳ್ತಳಿವಕ್ಷತೆಗಳ್ (ಕೃಮಿಥಾ. ೩-೨೭). [ ನಸು₁ + ಗಾಳಿ₁ ]

**ನಸುಗಿಱಿದು** (ನಾ). ಸ್ವಲ್ಪ ಸಣ್ಣದು,–ಕಡಮೆ: ನಸುಗಿಱಿದಯ್ದು ಮನುತ್ತರೆಯ ಸುಖಂ ಮೋಕ್ಷದ ಸುಖಕ್ಕೆ (ಚಂದ್ರಪ್ರ. ೧೧-೩೨).

[ ನಸು₁ + ಕಿಱಿದು ]

**ನಸುಗುಂದು** (ಕ್ರಿ). ಸ್ವಲ್ಪ ಕಡಮೆಯಾಗು: ರಸವಿಶೇಷದೊಳೆತಿವಿಮಲ ಸಿತವಸನವನು ತೋಯಿಸಿ ಅಗ್ನಿಯೊಳಗಿಡೆ ಪಸರಿಸುವುದು ಪ್ರಕಾಶ ನಸುಗುಂದದಲೆ ಸರ್ವತ್ರ (ಹಸಾರ. ೧೪-೨೮); ಶಶಿಮಂಡಲಕೆ ಸ್ವರ್ಭಾನು ತಾಮ್ಮುಸುಗಿದೊಡೆ ನಸುಗುಂದುವದೆ ಕಳೆ ಸುಧಾರಸಂ ಕಹಿಯಹುದೆ (ಸವಬೋ. ೯-೩೯). [ ನಸು₂ + ಕುಂದು₁ ]

**ನಸುಗುತ್ತು** (ಕ್ರಿ). ಸ್ವಲ್ಪ ಸಂಕೋಚಗೊಳಿಸು,–ಕುಗ್ಗಿಸು: ಕತ್ತರಿಸಿ ಕಿವಿಗಳಂ ನಸುಗುತ್ತುತ್ತುಂ ಮೆಯ್ಯ ಖಂಡಮಂ ಘುರುಘುರಿನುತ್ತೊತ್ತರಿಸೆ ಘೋಣಪವನನುದಾತ್ತಂ ಮುಸಗಿತ್ತು ವಾಜಿ ಪೆಮರ್ಗರಿಯ ಪೋಲ್ (ಶಂಧಾಮಾ. ೪-೧೦೮). [ ನಸು₂ + ಕುತ್ತು₁ ]

**ನಸುಗುನ್ನಿ, ನಸಗುನ್ನಿ, ನಸುಕುನ್ನಿ, ನಸುಗುನ್ನೆ, ನೊಸಗೊನ್ನೆ** (ನಾ). ೧. ಮೈಗೆ ತಾಗಿದರೆ ನವೆಯನ್ನುಂಟುಮಾಡುವ ಒಂದು ಬಗೆಯ ಗಿಡ; ಕಪಿತುರುಚಿ: "ಆತ್ಮಗುಪ್ತಾ, ಜಹಾ, ಅವ್ಯಂಡ, ಕಂಡುರಾ, ಪ್ರಾವೃಷಾಯಿಣೀ, ಋಷ್ಯಪ್ರೋಕ್ತಾ, ಶೋಕಸಿಂಬಿ, ಕಪಿಕಚ್ಛೂ, ಮರ್ಕಟೀ ಈ ೯ ನಸುಗುನ್ನಿ" (ನಾಚಿರಾ. ೧೧೯); ನಸುಗುನ್ನಿಯ ತಿ(ವಿ)ನಿಸ(ರ)ಂ ಮಾಣಿಸುಗುಂ ಘೃತಮೊಂದೆ (ಲೋಕೋಪ. ೧೦-೪೦); ನಸುಗುನ್ನಿ ಮುಟ್ಟಿದಂತಿರೆ ಬಸವಲ್ಲದೆ ತಿಂಬ ನೊಯ್ಯ ತಿನಿಸಿಂಗಂ ಸೈರಿಸಲಾಱದೆ (ಧರ್ಮಾಮೃ. ೦-೧೬೩): ಹಸಿದಡುಣಬಹುದೇ ನಸುಗು[ಪಾಠಾಂ. ಕು]ನ್ನಿ ತುಱುಚಿಯನು (ಅವಹಂ. ೭೦-೩೦೫); ಸುಂಕಿಗನು ಹುರಿಹ [ಹು]ಲ್ಲು ಬಿಂಕದ ಬೆಲೆವೆಣ್ಣು ಕಂಕಿಯು ಸುಂಕ ನಸುಗುನ್ನಿ ಇವು ಅಱು ಸೋಂಕಿದರೆ ಬಿಡವು (ಸರ್ವಜ್ಞ. ೦೫೦೦). ೨. (ಆಲಂ) ಕೀಟಲೆ ಸ್ವಭಾವದ ವ್ಯಕ್ತಿ: ಅವನೊಬ್ಬ ಮಹಾ ನಸುಗುನ್ನಿ (ರೂಢಿ). **ನಸಗುನ್ನಿ:** ೧. ನಸಗುನ್ನಿ, ನಾಯಿಸೊಂಕುಬಳ್ಳಿ, ತುರಚಿಅವರೆ (ವ್ಯಾಕಿ. ೫೫-೦೦೦೪). **ನಸುಕುನ್ನಿ:** ೧. "ಲೋಮಫಲಾ–ನಸುಕುನ್ನಿ" (ಒಷಧಿ. ೧೪೪); ಮನ್ನಿಸದ ನೃಪತಿಯಿಂ ನಸುಕುನ್ನಿಯ ತುರುಚೆಯನೆ ಸಾರಿ ಬಾಳ್ವುದು ಸೌಖ್ಯಂ (ನೀತಿಸಾ. ೧೪೫). **ನಸುಗುನ್ನೆ:** (೩). **ನೊಸಗೊನ್ನೆ:** ೧. ನೊಸಗೊನ್ನೆ, ರಾಸ್ನೆ . . . ಕಾಯಿಸಿ ಇದಱಿಂ ಬಂದ ತೈಲವನ್ನು ಅಭ್ಯಂಜನಕ್ಕೆ ಉಪಯೋಗಿಸಲು ಶೀತಜ್ವರ . . . ಮೊದಲಾದವುಗಳು ನಾಶವಾಗುವುವು (ಕಳವೈ. ೬೨).

ನಸುಗುನ್ನಿಕಾಯಿ=ಕೀಟಲೆಸ್ವಭಾವದ ವ್ಯಕ್ತಿ: ಆ ನಸುಗುನ್ನಿಕಾಯಿಯನ್ನು ನಂಬಬೇಡ (ರೂಢಿ). ನಸುಗುನ್ನಿಯ ಬೇರು = ನಸುಗುನ್ನಿಗಿಡದ ಬೇರು: ನಸುಗುನ್ನಿಯ ಬೇರಂ ಗೋಮೂತ್ರದಿಂದ ಅರೆದು ಕಂಬಳಿಯ ಹುಳು ಮುಟ್ಟಿದ ಠಾವಿಗೆ ಪೂಸಲು ಅದಱ ವಿಷ ಶಮನವಹುದು (ವೈದ್ಯಸಾ. II, ೨೨೨). [ ? ]

**ನಸುಗುನ್ನಿಬೀಜ, ನಸುಕುನ್ನಿಬೀಜ** (ನಾ). ನಸುಗುನ್ನಿಯ ಗಿಡದ ಬೀಜ: ಉಮ್ಮತ್ತದ ಬೀಜ, ನಸುಗುನ್ನಿಬೀಜ ... ಚಿತ್ರಮೂಲ ಈ ೫೦ ಬಗೆಯನ್ನು ಸಮಾನಂಗೊಂಡು ಚೆನ್ನಾಗಿ ಕುಟ್ಟಿ ಚೂರ್ಣಮಂ ಮಾಡಿ ಇರಿಸಿಕೊಂಡು ತೆಗೆದುಕೊಂಬುದು (ವಿಷವೈ. ೪೨); ಕುಂಕುಮಕೇಸರಿ ಭೂಸಕ್ಕರೆಗೆಡ್ಡೆ ನಸುಗುನ್ನಿಬೀಜ ಬಜೆ (ಕಾಮಶಾ. ೧೦-೨೪೬). **ನಸುಕುನ್ನಿಬೀಜ:** "ವಾರಪುಸ್ಥಿ–ಇ(ಹಿ)ಪ್ಪೆ, ನಸುಕುನ್ನಿಬೀಜ" (ಒಷಧಿ. ೧೫೦).

[ ನಸುಗುನ್ನಿ + ಬೀಜ ]

**ನಸುಗುನ್ನೆ** 'ನಸುಗುನ್ನಿ' ನೋ.

**ನಸುಗೆಂಪು** (ನಾ). ತಿಳಿಗೆಂಪು ಬಣ್ಣ; ಪಿಂಗಳವರ್ಣ: "ಹರಿಃ, (ಕ್ರಮಂ) ಕದ್ರುಃ, ಕಡಾರಃ, ಪಿಂಗಳಃ–ಈ ೪ ನಸುಗೆಂಪು" (ಹಲಾಯು. ೦೨೧-೩೦); ನಸುಗೆಂಪುವಡೆದ ದಶನದ ಮಿಸುಪಧರದ ಕೆಂಪು (ಧರ್ಮಾಮೃ. ೭-೧೯೧); ನಸುಗೆಂಪಿನಿಂ ಬೀಗಿ ಬಾಗಿ ತೂಗುವ ಚೆಲುವ ಹೊಸಹಾಲ ಹನಿಗಳಡಸಿದ ತೆಱದ ತೆನೆಗಳಂ ತಿಱಿತಿಱಿದು (ಸಿದ್ಧರಾ. ೨-೨೯); ಅವಳ ಮೋರೆಯು ನಸುಗೆಂಪುಬಣ್ಣವನ್ನು ತಾಳಿತು (ಸವಿತೀ. ೨೦). [ ನಸು₁ + ಕೆಂಪು₁ ]

**ನಸುಗೆತ್ತು** (ಕ್ರಿ). ತುಸು ಸ್ಪಂದಿಸು; ಸ್ವಲ್ಪ ಅದಿರು,–ಮಿಡಿ: ಉಸಿರ್ವೊಜ್ಜುಗದಿಂದಧರಂ ನಸುಗೆತ್ತಲ್ (ಕಾದಂಬ. ೨೯೬); ಬಿಟ್ಟ ಉರುಳ್ ಪೊದಟ್ದು ಕಿಸುಗಣ್ ನಸುಗೆತ್ತುವ ಮಿಸೆ (ಚಂದ್ರಪ್ರ. ೫-೬೦); ಪ್ರಿಯ ಸಂದು ಕಲ್ಪಿಸಿರ್ದಾ[ಳ]ಯನಂಗನೆ ಮಾನಯೋಗ್ಯಂ [ಮಾ]ಡಲ್ಕಂ ನಿಯತಂ ಭ್ರೂಸದಿ[ಕುಟ]ಜಿಹ್ಮಕ್ರಿಯಾಗಿ ನಸು[ಗೆ]ತ್ತ ಲ[ಧ]ರವಿಲಾಕ್ಷಿಸುತಿರ್ದಳ್ (ಮೂರವಾ. ೨-೨೪೨); ನಸುಗೆತ್ತಲು ಮಿಸೆ ತೆಳುಗದವುಗಳೊಳು (ಶಂಪ್ರಸಾಂ. ೮-೯೦). [ ನಸು₂ + ಕೆತ್ತು₁ ]

**ನಸುಗೆರೆ** (ನಾ). ಸಣ್ಣ ರೇಖೆ: ದಿನವಹಣಿಯು ನಸುಗೆರೆ ಕೆಳಗಿಳಿದು ಮಾಸಿ ಹೋದುದನ್ನು ಹೊರಗಣ್ಣಿನಿಂದ ಕಂಡ ಬಂಕೆಯನ ಹೊ ಗಣ್ಣು ದೊರೆಯುತ್ತ ತಿರುಗಿತು (ವೀರಬಂ. ೬). [ ನಸು₁ + ಗೆರೆ (<ಗೆಱೆ) ]

**ನಸುಗೇಳ್** (ಕ್ರಿ). ೧. ಸ್ವಲ್ಪ ಕೇಳಿಸು; ಅಸ್ಪಷ್ಟವಾಗಿ ಕೇಳಿಸು: ಅದೇ ದೂರಂ ನಸುಗೇಳಲಾಯ್ತು ಜಳದೇವೀನೂಪುರಾರಾವದಂದದೆ ಹಂಸಸ್ವನ (ಕಾದಂಪೂ. ೧೯೫). ೨. ಸ್ವಲ್ಪ ಕೇಳು; ಅಸ್ಪಷ್ಟವಾಗಿ ಕೇಳಿ ಬಂದುದನ್ನು ಆಲಿಸು: ಓರಂತೆ ಪಲುಂಬಿ ಪಂಬಲಿಪ ದಾಸೀವೃಂದದಾಕ್ರಂದದೊಳ್ ನಸುಗೇಳುತ್ತೆ ನಿಜಾನುಜನ್ಮನ ಗುಣಪ್ರಖ್ಯಾತನಾಮಂಗಳಂ ತೊದಳಿಸಿ ತಮ್ಮನೇಯಿನುತೆ ಬಾಯ್ವಿಡಿ ಮಾಣ್ದಿರೆಮುಚ್ಚಿ ಕಿತ್ತುಸಿರ್ ಕಿದೆಱುತು ಮಾಱು ಮೆಯ್ಗುರೆಯೆ ಕಳ್ಗಲರ್ಗಳ್ ಪೊಸನೀರ ಮಿಾಂಗಳಂದದಿನಿದಿರೇಱೆ ... ಮೂರ್ಛೆಗೆ ಸಂದು (ವರ್ಧಪು. ೯-೩೭). [ ನಸು₂ + ಕೇಳ್ ]

**ನಸುಗೊರಕೆ** (ನಾ). ಸಣ್ಣದನಿಯ ಗೊರಕೆ: ನಿದ್ದೆಯು ಮುಸುಕನ್ನು ಕಣ್ಣ ಮೇಲೆ ಎಳೆದು ನಸುಗೊರಕೆಯನ್ನು ಹೊಡೆಯುತ್ತಿದ್ದನು (ಜಯಂತ. ೦).

[ ನಸು₁ + ಗೊರಕೆ₁ (<ಗುಱುಕು) ]

**ನಸುಗೋಪ** (ನಾ). ತುಸು ಕೋಪ: ಆರ ಸಂಭ್ರಮಾವಿದಾರ ಮರುಳ್ತನವೆಂದು ನಂದಿಕೇಶ್ವರ ನಸುಗೋಪ [ಪಾಠಾಂ. ನಸಿಕೋಪ]ದಿಂ ಮದನಸೇನೆಯ ನೀಕ್ಷಿಸಿದಾ ಕ್ಷಣಾರ್ಧದೊಳ್ (ಗಿರಿಜ. ೮-೯) ; ಕುಮುದಳೆ ಮೊಗದ ಮೇಲೆ ನಸುಗೋಪ ಮೂಡಿತು (ಹಾಡುಹ. ೧೧೧). [ ನಸು$_1$ + ಕೋಪ ]

**ನಸುಜೋಲ್** (ಕ್ರಿ). ಸ್ವಲ್ಪ ಜಾರು : ನಸುಜೋಲ್ದುಳ್ಳುಡೆಯುಂ ತೆಱಂಬೊಳೆದು ಪಾಱುತ್ತಿರ್ಪ ಸಂವ್ಯಾನಮುಂ ... ಪೊಸತೊಂದೊಪ್ಪಮ ನೀಯೆ ವಿಹ್ವಳತೆಯುಂ ಬಂದತ್ತು ಗೋಪೀಜನಂ (ಜಗವಿ. ೩-೮೯) ; ಪೂಗಳಿಂ ಸಮೆದ ಮಾಲೆಯುಂ ಧರಿಸಿ ನಸುಜೋಲ್ದ ಮೇಲುದನಿನಿಸು ಮುಸುಕುತ (ಶಬ್ದರಾ. ೮-೨೦). [ ನಸು$_2$ + ಜೋಲ್$_1$ ]

**ನಸುತೂಕಡಿಕೆ** (ನಾ). ಸ್ವಲ್ಪ ತೂಕಡಿಕೆ,-ತೂಂಕು: ಊಕುವುದು ಬಲುನಿದ್ರೆ ನಿದ್ರೆಯ ನೂಕುವನು ಕಣ್ಣವೆಗಳಲಿ ನಸುತೂಕಡಿಕೆ ತೋಱಿದೊಡೆ ವ್ಯಗೆದಱುವನು ಕೈಯೊಡನೆ (ಕುವ್ಯಾಅ. ೯-೮).

[ ನಸು$_1$ + ತೂಕಡಿಕೆ (<ತೂಂಕಡಿಕೆ) ]

**ನಸುತೇಂಕು** (ನಾ). ಮೆಲ್ಲನೆ ತೇಲುವಿಕೆ. 'ನಸುತೇಂಕುದೇಂಕು' ಪರಾ.

[ ನಸು$_1$ + ತೇಂಕು$_1$ ]

**ನಸುತೇಂಕುದೇಂಕು** (ಕ್ರಿ). ಮೆಲ್ಲನೆ ತೇಲು ; ನಿಧಾನವಾಗಿ ತೇಲು : ಬೆಳಗುವ ತಾರಕಾನಿಕರಮಾ ಕಡಲೊಳ್ ನಸುತೇಂಕುದೇಂಕೆ ಬೊಬ್ಬುಳಿಕೆಗಳಂತೆ ತೋಱಿದುವು (ಆದಿಪು. ೭-೯೮). [ ನಸುತೇಂಕು + ತೇಂಕು$_1$ ]

**ನಸುದಗ್ಗು** (ಕ್ರಿ). ಸ್ವಲ್ಪ ಕೆಳಕ್ಕೆ ಬರು ; ತುಸು ಕೆಳಗಿರು : ಅದಱಿಂ ಕೆಲದೊಳ್ ನಸುದಗ್ಗಿ ದಲಿರೆ ಭದ್ರಾಸನಂಗಳುನ್ನುಖರುಚಿಗಳ್ ಮುದದಿಂ ನೆಲಸಿದರದಱೊಳ್ ಪದುಳಂ ಪ್ರಥಮ ದ್ವಿತೀಯ ಕಲ್ಪಾಧೀಶರ್ (ಪುಷ್ಪಪು. ೧೦-೭೯). [ ನಸು$_2$ + ತಗ್ಗು$_1$ (<ತಗ್ಗು) ]

**ನಸುದಱಿ** (ನಾ). ಸಣ್ಣ ತುಂಡು ; ಚಿಕ್ಕ ಚೂರು.

ನಸುದಱಿಮಾಡು = ಸಣ್ಣ ತುಂಡುಗಳಾಗಿ ಮಾಡು ; ಚೂರಾಗಿಸು : ಮಸೆಗೆಟ್ಟ ಕೊಡಲಿಯ ಹೊಯಿಲಂತೆ ಕರ್ಮವ ನಸುದಱಿ ಮಾಳ್ಪುದು ಧರ್ಮ ಮಸೆಯುಳ್ಳ ಕೊಡಲಿಯ ಹೊಯಿಲಂತೆ ಕರ್ಮವ ಕುಸುರಿದಱಿವುದೀಗ ಶುಕ್ಲ (ಭರತ. ೭೯-೪೪). [ ನಸು$_1$ + ತಱಿ$_2$ ]

**ನಸುದಿಟ್ಟಿ** (ನಾ). ಅರೆದೆರೆದ ಕಣ್ಣಿನ ನೋಟ ; ಓರೆನೋಟ : ಬಟ್ಟಮೊಲೆಗಳ ತುದಿಯೊಳಿಱಿದುಱ ನಸುದಿಟ್ಟಿಯಿಂದೀಕ್ಷಿಸುತಾಗ ಕಟ್ಟೆಱಕದೊಳಾತನ ಚರಣಕೆ ಪೊಡಮಟ್ಟು ಕೂಡೆಂಬಳಂದೊಲಿದು (ಕಂಸವಿ. ೯-೧೭೮). [ ನಸು$_1$ + ದಿಟ್ಟಿ ]

**ನಸುದೆಱಹು** (ನಾ). ಸ್ವಲ್ಪ ಅವಕಾಶ; ಕೊಂಚ ತೆರವು,-ಎಡೆ : ಮಱವೆಗೆ ನಸುದೆಱಹುಗೊಡದಾತ್ಮನಲಿ ಚೇಷ್ಟಿಸುವ ಕರಣಂಗಳಿಗೆ ರವಿಯುಂತಿದ್ದನವನೀಶ (ನಿಭಾಗ. ೪-೧೫-೩೩). [ ನಸು$_1$ + ತೆಱಹು (<ತೆಱವು) ]

**ನಸುದೆಱೆ** (ಕ್ರಿ). ಸ್ವಲ್ಪ ತೆಗೆ ; ಕೊಂಚ ಬಿರಿ : ನಸುದೆಱೆಯುತ್ತುಮಿರ್ದ ಪೊಸಮುತ್ತಿನ ಸಿಂಪಿನ ಸಂಪುಟಂಗಳಿಂ ನುಸುಳ್ದು ಸುಪಾಣಿಯಾಗಿ ಪೊಱ ಪೊಣ್ಮುವ ಮುತ್ತಿನ ಮಾಲೆಯಂದದಿಂ ಮಿಸುಗಿ . . . ಪಸರಿಸಿ ನೀಳ್ದು ಪೊಣ್ಮದುವು ಕಣ್ಬನಿಗಳ್ ತರಳಾಯತೇಕ್ಷಣೇ (ಕಾದಂಪೂ. ೩೩೧) ; ನಸುದೆಱೆದಿರ್ದ ಬಾಯ್ ನಿಮಿರ್ದ ಗೋಣೆಮೆಯಿಕ್ಕದ ದಿಟ್ಟಿ . . . ಕಣ್ಗೆಸೆದಿರೆ ಸುಯ್ಕ ಪೆಂಪಱಿದು ಚಿತ್ರದ ಪೆಣ್ಣುಪೊಲಾಗಿ ಬಾಗಿಲೊಳ್ ಸಸಿಮುಖಿ ನಿಂದು ನೋಟ್ಪಳಿನಿಯಂ ತಡೆದೊಯ್ಯನೆ ಬರ್ಪ ಬಟ್ಟೆಯಂ (ಚಸರ. ೪-೨೭೩) ; ನೊಸಲ ತಿಲಕದ ಕೆದಱಿದಳಕದ ನಸುದೆಱಿದ ಲೋಚನದ . . . ಮುನಿಪತಿ (ನಿಭಾಗ. ೧-೩-೧೨). [ ನಸು$_2$ + ತೆಱೆ$_1$ ]

**ನಸುದೆಱೆವಾಯ್** (ನಾ). ಅರೆದೆರೆದ ಬಾಯಿ : ನಟ್ಟ ಕಣ್ ನಿಮಿರ್ದ ಕೊರಲು ನಸುದೆಱೆವಾಯ್ ಬಿಟ್ಟ ಮೇಲುದು ಬೀಳ್ದ ಕೇಶ (ಶ್ರೀಪಾಂ. ೧೩-೩೭). [ ನಸುದೆಱೆ + ಬಾಯ್ ]

**ನಸುದೇಲ್** (ಕ್ರಿ). ಸ್ವಲ್ಪ ತೇಲು; ನಸುವೆ ಮೇಲಕ್ಕೆ ಏಳು : ನಸುದೇಲ್ವಕ್ಷಿ ವಿಲುಪ್ತವರ್ಣವಚನಂ ರೋಮಾಂಚನಂ . . . ಕರಂ ಶೋಭಿಸಲ್ ಕುಸುಮಾಸ್ತ್ರೋನ್ನತಕೇಳಿಯೊಳ್ಪಡದೆ ತಾಂ ಬೆಚ್ಚಿರ್ದರಾ ಕಾದಲರ್ (ಉದ್ಭಟ. ೮-೧೧೯). [ ನಸು$_2$ + ತೇಲ್ ]

**ನಸುದೋಯಲು** (ನಾ). (?) : ಈ ಹೆಬ್ಬಟ್ಟೆಗಳಲ್ಲಿ ಹೋದರೆ ಎಂಬತ್ತು ನಾಲ್ಕುಲಕ್ಷ ಪ್ರಕಾರದ ಪರಮಂಡಲದಲ್ಲಿ ಸುಳಿವುದು ತಪ್ಪದೆಂದು ಅದಕ್ಕೆ ಹೇಸಿ ಮಾಡಿ ತಮ್ಮವರು ಪೋದ ನಸುದೋಯ [ಪಾಠಾಂ. ತೋಯಿಲ] ಬೆಂಬಳಿವಿಡಿದು ಹೋಗಿ ಭಕ್ತಿಪುರವಂ ಕಂಡು (ಭಾನವ. ೪೯-೪೫) ; "ನಸುದೋಯಲು-ಅಸ್ಪಷ್ಟವಾದ ಜಾಡು ?" (ಭಾನವ. ಕೋಶ).

[ ? ]

**ನಸುದೋರೆ** (ನಾ). ಸ್ವಲ್ಪ ಹಣ್ಣಿಗೆ ಬರುತ್ತಿರುವ ಕಾಯಿ ; ಪಾಡುಗಾಯಿ : ಅಲರ್ ಮಿಡಿಕಾಯ್ ನಸುದೋರೆ ದೋರೆವಣ್ ಬಳಸಿರಲಾಗಳಾವ ಪರಿಯುಂ ನಡೆ ನೋಟ್ಪೊಡಮಂತೆ ತಾನೆ ಕಣ್ಗಳ ಸಿರಿ . . ಆಮುದು ಬಂದ ಮಾಮರಂ (ಜಗವಿ. ೧೪-೨೭) ; ತಳಿರಲರುಳ್ಳಲರ್ಮಿಡಿ ಪೊದಳ್ದೆಳಗಾಯ್ನಸುದೋರೆ ದೋರೆವಣ್ಣಾಳತಸೆವಚ್ಚಪಣ್ಣಡಿಮು ಬೀಗಿದ ಬಿಣ್ಪಿನೆ (ಅಲಕಂ. ೧-೫೧). [ ನಸು$_1$ + ದೋರೆ$_1$ ]

**ನಸುದೋರೆವಣ್** (ನಾ). ಸ್ವಲ್ಪ ದೋರೆಯಾದ ಹಣ್ಣು : ಸಣ್ಣಗಾಯ ಬಲುಗಾಯ ಪೊಂಬಿಲ್ ನಸುದೋರೆವಣ್ಣ ತಾಯ್ವನೆ ಪೊಸವಣ್ಣ ಗೊತ್ತಿದೆನೆ ಕಣ್ಗೆಸೆದಿರ್ದುದೊಂದು ಮಾಮರಂ (ಅಬ್ಬಿಕಾ. ೧೧೧).

[ ನಸುದೋರೆ + ಪಣ್$_3$ ]

**ನಸುದೋಱು** (ಕ್ರಿ). ೧. ಸ್ವಲ್ಪ ಕಾಣಿಸು,-ಕಾಣು ; ತುಸುವೆ ವ್ಯಕ್ತವಾಗು : ನಸುದೋಱುತ್ತಿರ್ದ ಸುಣ್ಮೀಸೆಗಳುಮತಿಮೃದುಸ್ನಿಗ್ಧಕೇಶಂಗಳುಂ ಕಣ್ಗೆಸೆಯುತ್ (ಕಾದಂಬ. ೫೪೭); ಎತ್ತಾನುಮೊರ್ಮೆ ನಸುದೋಱುತ್ತುಂ ಜಿನಭಕ್ತಿ ಮಾಣ್ದುದಾದೊಡಮಾಭವ್ಯೋತ್ತಮನಘಮುರಿತಾಗಿದ ಬಿತ್ತಿಂಗೆಣೆಯುಕ್ಕುಂ (ವರ್ಧಪು. ೧೨-೧೭) ; ಕುಚಂಗಳೊತ್ತರಿಸೆ ಕಕ್ಷಪುಟಂ ನಸುದೋಱೆ . . . ಕರ್ಣಪೂರಿತೋತ್ಪಳಮೊಲೆದಾಡೆ ಗಟ್ಟಿಗಳನಂದು ಮಗುಳ್ಚಿದರಿಂದುವಕ್ತ್ರೆಯರ್ (ಗಿರಿಜ. ೨-೯೦) ; ನಸುದೋಱುವ ಕಿಱುನಗೆಯ ಕದಪುಗಳ ಕುಂಡಲದ ಚೆಲ್ವಿನಿಂ ಮೆಱೆವ ಸದ್ವದನನಂ . . . ಕಂಡನವನೀಪಾಲನು (ಕೃಮಿಥಾ. ೨-೪೮). ೨. ತುಸುವೆ ತೋರಿಸು : ಕುಂಚಿತಕುಂತಳಾಳಿಗಳನೊಯ್ಯನೆ ನೇರ್ಪಡಿಪೊಂದು ಲಕ್ಷ್ಯದಿಂ ಕಾಂಚನಕುಂಭಮಂ ಪಱಿವ ಪೆರ್ಮೊಲೆಯಂ ನಸುದೋಱುತುಂ (ಉದ್ಭಟ. ೧೦-೬೮).

[ ನಸು$_2$ + ತೋಱು ]

**ನಸುನಗು$_1$** (ಕ್ರಿ). ೧. ಸ್ವಲ್ಪ ನಗು ; ಮುಗುಳುನಗೆ ನಗು : ಮಂದಹಾಸವನ್ನು ಬೀರು : ಆವರ್ತನಾಭಿ ನಸುನಕ್ಕು ವರನಿಂದತ್ತ ಪೋದಳ್ (ಶಾಂತಿಪು. ೫-೧೪೭) ; ಬಹ ಭೃಂಗಿಯುಂ ಕಂಡು ನಸುನಕ್ಕರು (ಸಿದ್ಧರಾ. ೧-೨೪) ; ಸತಿ ನಸುನಗುತ್ತಕ್ಕಕ್ಕು . . . ನಾನಱಿದೆನಱಿದೆನು ನಿನ್ನ ಮಾಯವನು (ಬಸಪು. ೨೪-೬೩) ; ಧುರದ ಜಯುವಹುದೊಂದು ಪರಿಯಲಿ ನಿರುತವಲ್ಲದ ನುಡಿಯ ನುಡಿದರೆ ಪರಿಹರಿಸಬಹುದೆಂದನಸುರಾರಾತಿ ನಸುನಗುತ (ಕುವ್ಯಾದ್ರೋ. ೧೮-೩೯) ; ಮುಖದಲ್ಲಿ ಕಿಱುಬೆವರಿಟ್ಟದೆ ಹೊಸಹೊಸ ಪರಿ ಸುದ್ದಿ ಹುಟ್ಟದೆ ನಸುನಗುವೆಲ್ಲ ನಿನ್ನ ಕೀರ್ತಿ ಹೆಚ್ಚಿದೆ (ಪುರಂದ. ೫-೧೭-೧) ; ಅಪ್ಪಾಜಿಯು ನಸುನಗುತ್ತ ಕೇಳಿದರು (ಚದೇವ. ೧೭೦) ; ಹುಸಿನಗುತ ಬಂದೇವ ನಸುನಗುತ ಬಾಳೋಣ ತುಸುನಗುತ ತೆರಳೋಣ (ಗರಿ. ೧೦೩-೯). ೨. ಹೀಯಾಳಿಸು ; ಜರೆ ; ತಿರಸ್ಕರಿಸು : ಅರಿಗಳ್ ಪೆಸರ್ಗೇಳ್ದ ದರ್ಪೊಡೆವರೆಂಬ ಶೂದ್ರಕನ ವಿಕ್ರಮಾಡಂಬರಮಂದರೆವಾನಿಸಿಕೆಯೊಳೊಂದಿದ ನರಸಿಂಹಾಡಂಬರಕ್ಕೆ ನಸುನಗುತಿರ್ಕುಂ (ಕಾದಂಪೂ. ೧೦) ; ಪಗೆಗೊಂಡ ತುಂಬಿಯಂ ನಸುನಗುವವೊಲುಳ್ಳಲರ್ದು ಪೊಂಗಿ ಕಂಪಾದು

ದೆನಲ್ ಸೊಗಯಿಸಿ ಕಾವಾನ ಪಗೆಯುಂ ಬಗೆಯುಂ ತೀರ್ಚಿದುವು ಸುಗ್ಗಿಯೊಳ್ ಸಂಪಗೆಗಳ್ (ಮಲ್ಲಿಪು. ೩-೧೯) ; ತಾರೆಗಳತಿಶುಭ್ರವಿಡಿದಿರ್ದರಮ್ಮಂತೆ ಸೌರಭ್ಯವಿಲ್ಲೆಂದು ಜಜಿದು ಸೇರದೆ ನಸುನಗುವೊಲು ಬಿರಿಮುಗುಳ ಶೃಂಗಾರದ ವಲ್ಲಿಗೆಯಿಹುವು (ಕಂಸವಿ. ೭-೩೧). ೩. (ಅಲಂ). ಅರೆ ಬಿರಿ ; ತೆಂಸು ಅರಳು : ವಿಸುವ ಕುವಲಯಚಲತ್ಪತ್ರಂಗಳೊಳ್ಪುಟಿದು ನಸುನಗುವ ನವನೀರಜಾತಂಗಳಂ ತುಟಿದು (ಉದ್ಭಟ. ೧೦-೦೨೩).

[ ನಸು$_1$ + ನಗು$_1$ ]

**ನಸುನಗು$_2$** (ನಾ). ತಿಳಿಯಾದ ನಗು ; ಮುಗುಳುನಗೆ; ಮಂದಹಾಸ : ಸುಖಾರುವಿನ ಮುಖದಲ್ಲಿ ನಸುನಗು ತೋರಿತು (ಮಹಸ. ೩೬).

[ ನಸು$_1$ + ನಗು$_2$ ]

**ನಸುನಗೆ** (ನಾ).=ನಸುನಗು$_2$ : ನಸುನಗೆ ದಶನಪ್ರಭೆಯಿಂದ ಕೂಡಲಾ ದೆಸೆ ಧವಳಿಸಿದವೊಲಾಯ್ತು (ಶಾಂತಿಪು. ೪೮೨ ರಗಳೆ); ನಸುನಗೆ ಕಮಳದ ಸಿರಿಯುಂ ನಸುನಗೆ ಜನನಿಯುತ ಲೋಚನಭ್ರಮರಂಗಳ್ ಮುಸುಱಿದುವು ಮೋಹ ವಲ್ಲರಿ ಪಸರಿಸಿ ಪರ್ವಿದುದು ಸುತರ ಲೀಲಾಜಲದಿಂ (ಪಂಪಾಮಾ. ೩-೧೩೯) : ಶ್ರೀಮುಖದೊಳ್ ನಸುನಗೆ ಬೆಳ್ದಾವರೆಯೊಳಲರ್ಕೆಯುಂಬರ್ವೊಲ್ ಪಸರಿಸೆ (ಚಂದ್ರಪು. ೧೩-೧) ; ಒಸೆದರಳ್ದ ನಸುನಗೆಯು ಶಶಿವೌಳಿಯೊಪ್ಪಿದು (ವಾಗೀಶ. ದೇ. ३೮೦-೧೫) ; ಎಸೆವ ನಸುನಗೆ ದಶನರುಚಿ ದೆಸೆದೆಸೆಗೆ ಪಸರಿಸೆ ವೀಣೆಯಂ ಬಾಜಿಸುತ (ಬಸವು. ೧-೩೩) ; ನಸುನಗೆ ಮೊಳೆಯೆ ನುಡಿದನು ಧರ್ಮನಂದನನು (ಕುಮ್ಮಾ.ಅ. ೨೩-೪೮) ; ಮೆಲ್ನಗೆ, ಮುಗುಳ್ನಗೆ, ನಸುನಗೆ ಇತ್ಯಾದಿ ನೂರುಬಗೆಯ ನಗೆಯನ್ನು ಮೊಗದ ಮೇಲೆ ನಲಿಸುತ್ತಲೇ ಇರಬಹುದು (ಶರಷ. ೪೮೩). [ ನಸು$_1$ + ನಗೆ ]

**ನಸುನಗೆಮೊಗ** (ನಾ). ಮುಗುಳುನಗೆಯಿಂದ ಕೂಡಿದ ಮುಖ : ನಸುನಗೆಮೊಗದ ಸೊಂಪಿನಲಾಹವಕ್ಕನುವಾದನಭಿಮನ್ಯು (ಕುಮ್ಮಾದ್ರೋ. ೪-೪೯).

[ ನಸುನಗೆ + ಮೊಗ ]

**ನಸುನಡುಗು** (ಕ್ರಿ). ಸ್ವಲ್ಪ ಕಂಪಿಸು : ನಿಡುಸುಯ್ಯಾರೋಡುವ ವದನಂ ನಸುನಡುಗುವ ಮೆಯ್ (ಜಯಾಚ ೩-೦೭). [ ನಸು$_1$+ನಡುಗು$_1$ ]

**ನಸುನನೆ** (ನಾ). ಸಣ್ಣ ಮೊಗ್ಗು ; ಎಳೆಮೊಗ್ಗು ; ಕಸುಕಾದ ಮೊಗ್ಗು ; ಕರಲುಮೊಗ್ಗು : ನಸುನನೆಯೊಳಡಗಿರ್ದ ನವಸುಗಂಧದ ತೆಱದಿ ಉಸಿರೊಳಡಗಿರ್ದ ಚೈತನ್ಯದಂತೆ (ಶಿವಗೀ. ೧-೩) ; ನಸುನನೆಯನಪ್ಪಿದಳಿ ಕುಳದಂತೆ ಕಡುಹಸಿದು ಕಸುಗಾಯನಗಿದ ಗಿಳಿಗಳ ಬಳಗದಂತೆ (ಹಂಪಾ. ೮-೭೦). [ ನಸು$_1$ + ನನೆ$_3$ ]

**ನಸುನಳಿ** (ಕ್ರಿ). ಸ್ವಲ್ಪ ಬಾಗು : ನಸುನಳಿದು ನಿಮಿರೆ ತೋಳ್ಗಳ್ ಲಸಿತ ತ್ರಿಪತಾಕದಿಂ ಲತಾಕರಮೆಸೆಯಲ್ ಪೊಸದಳಿರಂ ಪೊತ್ತೆಲಲತೆ ಮಿಸುಗುವ ಕುಡಿಯರಡನೆಬಲೆ ಬಿಟ್ಟವೊಲೆಸೆದಳ್ (ಲೀಲಾವ. ४-೧೦೦).

[ ನಸು$_2$ + ನಳಿ$_1$ ]

**ನಸುನಾಚಿಕೆ** (ನಾ). ತಂಸು ಲಜ್ಜೆ : ಮುಂಜೆಱಗ ಸಂವಂಸಿಸುತ್ತ ನಸುನಾಚಿಕೆಯ ಭಾರದಲಿ . . . ಮುಱುಕ ಮಿಗೆ ಕಾಣಿಸುತ ಬಂದಳು ರಾವುನಿದ್ದೆಡೆಗೆ (ತೊರವೆ. ೩-೪-೮). [ ನಸು$_1$ + ನಾಚಿಕೆ (< ನಾಣ್ಚಿಕೆ) ]

**ನಸುನಾಚು** 'ನಸುನಾಣ್ಚು' ನೋ.

**ನಸುನಾಣ್ಚು**, ನಸುನಾಚು (ಕ್ರಿ). ಸ್ವಲ್ಪ ಲಜ್ಜೆಪಡು : ಎಂದೊಡಾ ಮಾತಿಂಗೆ ನಸುನಾಣ್ಚಿ ಹೃದಯಾರವಿಂದದುಲ್ಲಾಸ ಪೂರಯಿಸಿ ಚಂದನ ಸೌರಭ್ಯವಡೆದ ವಿಗ್ರಹಜಾತ ಸಂದೋಹ ಗುಡಿಗಟ್ಟಿತವಳ (ಮೋಹತ. ೨೭-೩೮); ನಸುನಾಣ್ಚುತ ನಲವಿನೊಳು ಒಸೆದೊಲವಱಿತೊಯ್ಯನುಚಿತೋಪಚಾರ ವನೆಸಗುವುದೇಕಚಿತ್ತದೊಳು (ಹರಿಬ. ೩-೦೩). ನಸುನಾಚು : ಮಾಯಾ– (ನಸುನಾಚಿ) ನಾನು . . . ನಾನು . . . ನಾನೊಬ್ಬ ನರ್ತಕಿ (ತುಂಗಭ. ೯೯). [ ನಸು$_2$ + ನಾಣ್ಚು$_1$ ]

**ನಸುನಿದ್ದೆ** (ನಾ). ಗಾಢವಲ್ಲದ ನಿದ್ದೆ ; ಲಘುನಿದ್ರೆ ; ಜೋಂಪು : ಎಸಟ್ಟಡಿಗೆತ್ತ ತಾವರೆಗಳೋವರಿಯೊಳ್ ನಸುನಿದ್ದೆ [ಪಾಠಾಂ. ಸುಖನಿದ್ರೆ] ಯಿಂದೆ ಜೋಂಪಿಸುವಳಿಯಂ . . . ಪ್ರಚಾರಿಸಿದುದು ಕಾಲಭೂಪನ ನಿಯೋಗದ ಸೂಳೆವಳಂಬೊಲೊಂದೆಲರ್ (ವರ್ಧಪು. ೮-೩೩).

[ ನಸು$_1$ + ನಿದ್ದೆ ]

**ನಸುನಿದ್ರೆ** (ನಾ).=ನಸುನಿದ್ದೆ : ಸಸಿಗಲ್ಲ ಬಟ್ಟಱೆಗಳ ಮೇಲೆರಳಿಗಳು ನಸುನಿದ್ರೆಯಿಂದೊಱಗಿರಲು (ಕುರಾಹಾಂ. ೪-೧೬). [ ನಸು$_1$ + ನಿದ್ರೆ ]

**ನಸುನೀಡು** (ಕ್ರಿ). ತಂಸುವೆ ಮುಂದಕ್ಕೆ ಚಾಚು : ಪಕ್ಷಿಗಳ ಸದೃಸಬೀಂದು ವೃಂದವಮಂ ... ತಂದಿದಿರೊಳ್ ನಸುನೀಡಿ ಗೋಣನಾಗಳೆ ನೆಱೆ ಚಂಚುವಿಂ ತೆಱೆದು ಮೆಲ್ಲನೆ ಲಲ್ಲೆಯೊಳಂತು ತನ್ನ ಪೆಣ್ಗಿಳಿಗೆಱೆಯುತ್ತುಮಿರ್ದುದೆನಸುಂ ನಲವಿಂ ಸುರತೋತ್ಸುಕಂ ಶುಕಂ (ಕುಸುಮಾ. ೫-೮೬). [ನಸು$_2$ + ನೀಡು$_1$]

**ನಸುನೆನೆ** (ಕ್ರಿ). ಸ್ವಲ್ಪ ತೋಯು; ತುಸುವೆ ಒದ್ದೆಯಾಗು: ನಸುನೆನೆ ದೊಯ್ಯನುಳ್ಳಲರೆ ಪೋಟ್ಟಿಲೆ ಕಂದದೆ ಕೂಡೆ ಕೆಂಪಿನಿಂ ರಸವೊಸರ್ವಂತಿರೊಕ್ಕ ನಱುದಂಬುಲಕಂ . . . ಮದಾಳಿ ಮೊರೆದೆರ್ದಱಗುತ್ತಿರೆ ಬೀದಿಗಳ್ ಜನಕ್ಕಸತಿಯರೆರ್ದು ಪೋದುದನೆ ಪೇೞ್ವವೊಲಿರ್ದುವು ಸುಪ್ರಭಾತದೊಳ್ (ಲೀಲಾವ. ೩-೦೭). [ ನಸು$_2$ + ನೆನೆ$_2$ (< ನನೆ$_1$) ]

**ನಸುನೆಮ್ಮು** (ಕ್ರಿ). ತುಸು ಒರಗು,–ಆಶ್ರಯಿಸು: ನಡುಗಿ ಬೆಮರ್ವ ಪೆಟ್ಟಲೆಸಿ ನೋಟಪ್ಪಿರ್ದ ಕಂಪಿಪ ತಲ್ಲಣಿಪ್ಪ ಕಾಲ್ ತಡತಡಮಾಗೆ ಕೆಯ್ಗುಡಿ ವಳಂ ನಸುನೆಮ್ಮು [ಪಾಠಾಂ. ಮ್ಮ]ವ ಮೇಲುದು ಕುಚಕ್ಕಡಿಗಡಿಗೇಱೆ ಸಾರ್ಚುವ . . . ವಿಕಾರವಮಾಗಿದಿರೊಳ್ ಕರೆಗಣ್ಮದುದಂಬುಜಾಕ್ಷಿಯಾ (ವರ್ಧಪು. ೬-೧೯). [ ನಸು$_2$ + ನೆಮ್ಮು$_1$ ]

**ನಸುನೋ** (ಕ್ರಿ). ಸ್ವಲ್ಪ ವ್ಯಥೆಪಡು,–ನೋಯು : ಉರಃಪ್ರದೇಶಮನಿಸೆ ನೆತ್ತರೊಕ್ಕು ಪತಿ ಮುಚ್ಚೆಯೊಳಿಚ್ಚೆಯಗೆಟ್ಟು ಜೋಲ್ದೊಡಾದಮೆ ನಸುನೊಂದು ನಂದಿಸದೆ ತನ್ನನೆ ನಿಂದಿಸಿದಂ ದಿನೇಶಜಂ (ಪಂಪಭಾ. ೧೨-೦೦೬).

[ ನಸು$_2$ + ನೋ$_1$ ]

**ನಸುನೋಟ** (ನಾ). ಕಡೆಗಣ್ಣೋಟ ; ಕುಡಿನೋಟ ;ಓರೆನೋಟ : ನಸುನೋಟಂ ಜನವಶ್ಯಮಾಕೃತಿ ಗತಿಸ್ತಂಭಂ ವಚಃಪ್ರೌಢಿ ಭಾವಿಸೆ ಸಮ್ಮೋಹನ ಮಂತ್ರಂ (ಸೂಕ್ತಿಸು. ೮-೪೬೦) ; ಅಜ್ಞಾನದ ತಿಮಿರವಮಂ ಕೆಡಿಸುವುದು ಗುರುವರ್ಯ ನಿನ್ನ ನಸುನೋಟ (ಅನುಸಾ. ೫-೯-೧) ; ಶಾಳಿ ನಸುವರೆಯ ನಸುನೋಟ ನಸುಲಜ್ಜೆಯಿಂ ಬಾಲಕಿಯರಿರ್ವರು ವಿರಾಜಿಸಲು (ನವಮೋ. ೨೨-೩೯). [ ನಸು$_1$ + ನೋಟ ]

**ನಸುಬಳಲ್ಕೆ** (ನಾ). ಸ್ವಲ್ಪ ಆಯಾಸ ; ತುಸು ದಣಿವು : ನೋಟಂ ತವೆ ತಳೆದುವು ನಸುಬಳಲ್ಕೆಯುಂ ಮೇಸಕೆಯಾ (ಗಿರಿಕ. ೩-೩೭).

[ ನಸು$_1$ + ಬಳಲ್ಕೆ (<ಬಟಲ್ಕೆ) ]

**ನಸುಬಾಗು** 'ನಸುವಾಗು' ನೋ.

**ನಸುಬಾಡು** 'ನಸುವಾಡು' ನೋ.

**ನಸುಬಾಸಲ್** (ನಾ). ತುಸು ಮಸುಕಾದುದು; ಸ್ವಲ್ಪ ಬಣ್ಣವಳಿದುದು: ಚುಂಬಿಸಿ ಬೇಗಿ ಬೆಳ್ಪಡರ್ದ ಬಾಯ್ದೆಱೆ . . . ಉಣ್ಣೆ ಬೆಮರ್ ನಸುಬಾಲನಾ [ನಲು]ದ ಬೊಟ್ಟಂಬಿವು ಕೂಟದೊಂದು ಸವಿಯಂ ಪಿಸುಣಾಡುವುವೀ ಲತಾಂಗಿಯಾ (ಚಂದ್ರಪು. ೮-೭೨). [ ನಸು$_1$ + ಬಾಸಲ್ ]

**ನಸುಬಿರಿ** 'ನಸುವಿರಿ' ನೋ.

**ನಸುಬಿಸಿ** (ಗು). ೧. ಸ್ವಲ್ಪ ಬಿಸಿಯಾದ ; ಬೆಚ್ಚನೆಯ : ನಸುಬಿಸಿಯಪ್ಪ ನಲ್ಲುಣಿಸಿನಿಂ ಘಸೃಣಾರ್ದ್ರವಿಲೇಪದಿಂ ವಿರಾಜಿಸುವ ಕದಂಬದಂಬುಲದಿಂ . . . ಜನಮಾಗಳಿಂತು ಜೀವಿಸಿತಿನಿತಲ್ಲದುದುಱೆವುದೇ ಹಿಮದಾಗರಮಾದ ಮಾಗೆಯೊಳ್ (ಕುಸುಮಾ. ೭-೨೩) ; ಬೆಸುನೊಸೆ ಮಸಗಿ ನಸುಬಿಸಿರಕುತ ಹೊನಲಿಡಲು(ಕುಮ್ಮಾದ್ರೋ. ೧೦-೬). (ನಾ). ೨. ಸ್ವಲ್ಪ ಬೆಚ್ಚಗಾದುದು

ಗಾಂಧಾರೀಸೊಪ್ಪಿನ ರಸಮಂ ನಸುಬಿಸಿಯುಂ ಮಾಡಿ ನೆತ್ತಿಗೊತ್ತೆ ವಾತಜ್ವರ ಪರಿಹಾರವಾಗುವುದು (ಸಕವ್ಯ. ೬೦). [ ನಸು$_1$ + ಬಿಸಿ ]

**ನಸುಬಿಸುಪೇಱು** (ಕ್ರಿ). ಸ್ವಲ್ಪ ಬೆಚ್ಚಗಾಗು: ನಸುಬಿಸುಪೇಱೆ ಮೆಯ್ಯಗುಱಿ ಕೆತ್ತುವ ತಱಿಯಮ ಕೆತ್ತೆ . . . ಜಾನಕೀಯಿಸುತ್ತುಸಿರ್ದುಸಿರ್ದಟ್ಟನಾ ರಘು ಕುಲಾಂಬರಚಂಡಮರೀಚಿ ಮೂರ್ಛೆಯಿಂ (ಶಂರಾಮಾ. ೯-೧೦೭). [ ನಸು$_2$ + ಬಿಸುಪು + ಏಱು$_1$ (< ಏಱ್$_1$) ]

**ನಸುಬಿಳಿದು** (ನಾ). ತಿಳಿಯಾದ ಬಿಳಿ ; ಮಾಸಲು ಬಿಳಿ ; ಬೂದುಬಣ್ಣ; ಧೂಸರ : "ಧೂಸರಂ=ದೂಸರಂ, ದೂಸರಮೆಂದು ನಸುಬಿಱದು" (ಶಮದ. ೬. ೨೫೫ ಪ್ರಯೋ) ; ಕೋಠ = ನಸುಬಿಳಿದಾಗಿ ಮಿಂಚುಹ ಬಟ್ಟೆಹ ತೊನ್ನು (ನಾಜಿಶಾ. ೬). [ ನಸು$_1$ + ಬಿಳಿದು ]

**ನಸುಬಿಳುಪು** 'ನಸುಂವೆಳ್ಪು' ನೋ.

**ನಸುಬೆಡಗು** (ನಾ). ತುಸು ಒಯ್ಯಾರ : ನಡಿಗೆಯಲ್ಲಿ ಕಂಡೂ ಕಾಣದಂತಹ ನಸುಬೆಡಗು (ಅಲಹೂ. ೦೮). [ ನಸು$_1$ + ಬೆಡಗು (< ಬೆಡಂಗು) ]

**ನಸುಬೆಳಗು** 'ನಸುವೆಳಗು' ನೋ.

**ನಸುಬೆಳಗು** (ಕ್ರಿ). ಮಂದವಾಗಿ ಉರಿಸು: ನಸುಬೆಳಗುಗೆ ಸೊಡರಂ (ಮರಶಿ. ೮-೨೮). [ ನಸು$_2$ + ಬೆಳಗು$_1$ ]

**ನಸುಬೆಳರ್** (ಕ್ರಿ). ಸ್ವಲ್ಪ ಬಿಳಿದಾಗು ; ಮಾಸಲುಬಿಳಿ ಬಣ್ಣವನ್ನು ತಾಳು: ಮಂದ್ಯಸಿದ ಸಿಂಧುವಾರ ವನರಾಜಿಯಿಂ ನಸುಬೆಳರ್ತ ತಡಿಗಳುಮಂ . . . ಪಥಿಕರಜಿಲ್ಗೊಂಡು ತೋಡಿದಜಲುಂಬುನೀರ ಬಗರಗೆಗಳುಮನೊಳಕೆಯ್ದು ಬತ್ತಿದ ಪಳ್ಳಂಗಳೊಳಮತಿರೌದ್ರಮಾದ ಪೇರಡವಿಯೊಳಗೆ ಬರ್ಪಾಗಳ್ (ಕಾದಂಸಂ. ೨೬೭). [ ನಸು$_2$ + ಬೆಳರ್$_1$ ]

**ನಸುಬೇನೆ** (ನಾ). ಅಲ್ಪವಾದ ಬೇನೆ ; ಘನವಲ್ಲದ ನೋವು : ಗರ್ಭಿಣಿಗೆ ನವಮಾಸ ಪೂರ್ಣಮಾದುದು ತದ್ವಿಲಾಸಿನಿಯ ಸಂತಸದ ಮುಂದೆ ನಸುಬೇನೆಯುಂ ಪೇಳಲಹುದೇ (ಭಾವಚಿಂ. ೩-೫೬). [ ನಸು$_1$ + ಬೇನೆ ]

**ನಸುಬೇ** (ಕ್ರಿ). ಸ್ವಲ್ಪ ಬೇಯು ; ಅರ್ಧ ಬೇಯು : ಹುರಿದ ತೆಂಗಾಯ ನಸುದೆಂದ ಬೇಳೆಯ ಹಸರು ಹುರಿದು ಬೇಯುಸಿದ ಸೊಜ್ಜಿಗೆಯುವನು ಕೂಡಿ ಸಕ್ಕರೆಯಿಕ್ಕಿ ಕರ್ಪೂರವನು ತಳಿದು (ಸೂಶಬಶಾ. ೦-೩೪). [ ನಸು$_2$ + ಬೇ$_1$ ]

**ನಸುಭಯ** (ನಾ). ತುಸು ಅಂಜಿಕೆ ; ಸ್ವಲ್ಪ ಹೆದರಿಕೆ : ಬಾಣಧಿಯೋಳನ್ನ ಬರಡಗಿರೆಂದಸುರಾರಿ ನೇಮಿಸೆ ನುಡಿದನತ್ತಲು ರಾವಣನು ನಸುಭಯದ ಬೆಱಗಿನಲಿ (ತೊರರಾ. ೬-೯-೦೪). [ ನಸು$_1$ + ಭಯ ]

**ನಸುಮರ್ಬು** (ನಾ).=ನಸುಗತ್ತಲೆ : ಉಱವಳಗು ಸಂಜೆ ವಸುಮರ್ಬು ಛರ್ದಂಬರದಂತೆ ತಿಳಿವು ರಾಗಂ ನೆಗಳ್ದುಮ್ಮಳಮನೊಳಕೊಂಡ ಬಗೆಯಿಂ ತಳವೆಳಗಾಗುತ್ತೆ ಪಾರ್ಥನಂದಿಂತೆಂದಂ (ಕಲಕಂ. ೪-೦೦೪). [ ನಸು$_1$ + ಮರ್ಬು (<ಮರ್ವು) ]

**ನಸುಮಸಿ** (ನಾ). ಸ್ವಲ್ಪ ಕಪ್ಪು ; ತುಸು ಕಪ್ಪು : ನಸುಮಸಿಯಾದ ಕರ್ಪಡವನುಟ್ಟು (ಕಕೆಕಂ. ೦೭). [ ನಸು$_1$ + ಮಸಿ ]

**ನಸುಮಸುಳ್** (ಕ್ರಿ). ಸ್ವಲ್ಪ ಕಳೆಗುಂದು ; ಮಂಕಾಗು ; ಮಸುಕಾಗು : ಪೊಸತಲರ್ದ ಬಿಳಿಯ ತಾವರೆಯಸಟ್ಟಳ ನಡುವಿರ್ಪ ಸಿರಿಯುವಾಕೆಯ ಕೆಲದೊಳ್ ನಸುಮಸುಳ್ದು ತೋರ್ಪಳ್ (ಪಂಪಭಾ. ೦-೪೦) ; ಒರ್ಮೊದಲೆಱಗಿ ದೆಸೆಗಳಲ್ಲಮನೊಡನಾವರಿಸಿ ತರತರದೆ ನಸುಮಸುಳ್ಕೆ ಪುದಿದುವು ನಭವನಭವನಂಬುಗಳೆತ್ತಂ (ಕಾವ್ಯಾವ. ೦೯೪) ; ನಸುಮಸುಳ್ದಂಗಲೀಚೆ ಪೊಱಮಟ್ಟಿಪಗಾಲ್ . . . ಕಣ್ಗೆಸೆದಿರೆ ಪಾಱಿದಳ್ ಪೊಳೆದು ಪೇಱಿ ಮಿಂಚಿನ ಬೊಂಬೆಯುಂಬಿನಂ (ಅರ್ಧನೇ. ೩-೦೭). [ ನಸು$_2$+ಮಸುಳ್ ]

**ನಸುಮಾತು** (ನಾ). ಸಣ್ಣ ಮಾತು : ವಿಷಯಾತುರಗೆ ವಿವೇಕವಿಲ್ಲೆಂಬುದು ಪುಸಿಯಲ್ಲ ಮಾಯಾವಿ ನುಡಿದ ನಸುಮಾತಿಗೆ ನಿಶ್ಚಯಿಸಿದ ಪಯಣವನುಸಿಯ ತಾತ್ಪರ್ಯದುಬ್ಬಿನಲಿ (ಪೋಠಕಕ. ೩೦-೨೫). [ ನಸು$_1$ + ಮಾತು$_1$ ]

**ನಸುಮಾಸು** (ಕ್ರಿ). = ನಸುಮಸುಳ್ : ನಸುಮಾಸಿ ಪಾಡಳಿದ ರೂಪಿನೊಳುಣ್ಮುವ ಗಾಡಿ ನಾಡೆ ಕಣ್ಗೆಡಱೆ (ಪಂಪಭಾ. ೦೩-೯೯) ; ನಸುಮಾಸಿ ದೆಱಂಕೆಗಳಿಂ ಕಲಹಂಸೆಗಳೆಂಬುದು (ಹರಾಯು. ೪೨-೯೯) ; ಎಸೆದುದು ಧರಿತ್ರಿ ಪೊಗೆ ಪುಗೆ ನಸುಮಾಸಿದ ಪೊಗೆಯ ಚಿತ್ರಭಿತ್ತಿಯ ತೆಱದಿಂ (ಪುಷ್ಪಪು. ೩-೪೦). [ ನಸು$_2$ + ಮಾಸು$_1$ ]

**ನಸುಮುಗಿ** (ಕ್ರಿ). ಸ್ವಲ್ಪ ಮುಚ್ಚು ; ಅರೆಮುಚ್ಚು ; ಅರ್ಧ ನಿಮೀಲಿತವಾಗು : ನಸುಮುಗಿದಕ್ಷಿ ನಾಸಿಕದೊಳೊಂದಿರೆ (ರಶಕು. ೨-೬೩). [ ನಸು$_2$ + ಮುಗಿ ]

**ನಸುಮುಚ್ಚು** (ಕ್ರಿ). ಅರ್ಧ ಮುಚ್ಚು ; ಅರೆಮುಗಿ : ನಸುಮುಚ್ಚುವ ಬಿಚ್ಚುವ ಪೊಳೆವ ಸುಳಿವ ಬಳಸುವ ಬಟಲ್ವ ತೆರೆಮಸಗಿ ಮರಲ್ದೆಸವ ರಸಭಾವದೃಷ್ಟಿಗಳಸದಳಮೆನಿಸಿದುವು ನೃತ್ಯದೊಳ್ ನರ್ತಕಿಯಾ (ರಅರಾವ. ೪-೧೨೬) ; ಬಿಗಿಯಪ್ಪಿ ಮೊಗಮನಿಟ್ಟಾಲಿಗಳಂ ನಸುಮುಚ್ಚೆ (ಗಿರಿಕ. ೨-೩೯). [ ನಸು$_2$ + ಮುಚ್ಚು$_1$ ]

**ನಸುಮುಚ್ಚಿಪೋಗು** (ಕ್ರಿ). ಸ್ವಲ್ಪ ಮೈಮರೆ,-ಎಚ್ಚರ ತಪ್ಪು ; ಮೂರ್ಛೆಹೋಗು : ತನ್ನ ಚಿತ್ತದೊಳ್ ನೆಲಸಿದ ರಾಮನಂ ಬಯಸಿ ನೋಡಲಪೇಕ್ಷಿಸಿ ಬಾಹ್ಯದರ್ಶನಕ್ಕಲಸಿದಳೆಂಬಿನಂ ಮುಗಿಯೆ ಕಣ್ಮಲರ್ಗಳ್ ನಸುಮುಚ್ಚಿಪೋಗಿ ತಣ್ಗೆಲರೆಲೆಪಿಂದೆ ಮೂರ್ಛೆದಿಳಿದಳ್ (ಶಂರಾಮಾ. ೯-೧೧೧). [ ನಸು$_2$ + ಮುಚ್ಚಿ$_2$ + ಪೋಗು$_1$ ]

**ನಸುಮುಟ್ಟು** (ಕ್ರಿ). ಸ್ವಲ್ಪ ತಾಗು ; ಮೃದುವಾಗಿ ಸ್ಪರ್ಶಿಸು : ಮೃಗಧರನಂಶುಮಾಲೆ ನಸುಮುಟ್ಟುವುದುಂ ಜಲಸೂಕ್ಷ್ಮಬಿಂದುಗಳ್ನೆಗೆದಪು ವಿಂದುಕಾಂತಮಣಿಪುತ್ರಿಕೆಯಿಂದೆನೆ (ಮಲ್ಲಿಪು. ೪-೨೯). [ ನಸು$_2$ + ಮುಟ್ಟು$_1$ ]

**ನಸುಮುತ್ತು** (ನಾ). ಹಗುರವಾದ ಚುಂಬನ; ಲಘುವಾದ ಚುಂಬನ : ನಸುಮುತ್ತ ಕೊಡುವಾಗ ಮೂರ್ಛೆ ಸಂಧಿಸಿತು ಸಾಹಸದಿ ಬೀಳದೆ ನಿಂದೆ ನಾನು (ಭಕಡ. ೯-೧೧೧). [ ನಸು$_1$ + ಮುತ್ತು$_4$ ]

**ನಸುಮುರಿ** (ಕ್ರಿ). ಸ್ವಲ್ಪ ತಿರುಗು ; ತುಸುವೆ ಹೊರಳು : ಪರಿದ ತಲೆ ಬಿಟ್ಟ ಬಾಯ ನಸುಮುರಿದ ಕೊರಲ್ಮಗುಟ್ದ ಕಣ್ಗಳ್ (ಗದಾಯು. ೪-೨೫). [ ನಸು$_2$ + ಮುರಿ$_1$ ]

**ನಸುಮುರುಟು** (ಕ್ರಿ). ತುಸು ಮುದುಡು,-ಬಾಗು,-ತಿರಿಚಿಕೊಳ್ಳು, 'ನಸುಮುರುಟುಗಿವಿ' ಪರಾ. [ ನಸು$_2$ + ಮುರುಟು$_1$ (<ಮುರುಂಟು$_1$ ) ]

**ನಸುಮುರುಟುಗಿವಿ** (ನಾ). ತುಸು ಮುದುಡಿದ ಕಿವಿ : ನೊರೆವಾಯು ಹಾವಸೆವರಿದ ಪಲ್ಗಳ ಜೋಲ್ದುಟಿಯ ನಸುಮುರುಟುಗಿವಿಗಳ ಹಱಿಕಗಡ್ಡದ ಕೆಂಪುಮಿಸೆಗಳ . . . ತೋರ ಕಾರೊಡಲ ಕುಱಬನು (ಬಸಪು ೨೦-೧೧). [ ನಸುಮುರುಟು + ಕಿವಿ$_3$ ]

**ನಸುಮುಸುಂಕು** (ನಾ). ತೆಳುವಾದ ಮುಸುಕು,-ತೆರೆ : ಎಸೆವ ಸಭೆಯೊಳ್ ನಸುಮುಸುಂಕು ನಾಡೆ ಮೆಱೆಯೆ ಮೆಱೆಗೊಂಡು ಕುಳ್ಳಿರ್ಪಲ್ಲಿ (ಗಿರಿಕ. ೨-೧೦೫ ವ). [ ನಸು$_1$ + ಮುಸುಂಕು$_2$ ]

**ನಸುಮೆಲ್** (ಕ್ರಿ). ಸ್ವಲ್ಪ ಜಗಿ ; ತುಸು ಅಗಿ : ನಸುಮೆಲ್ವಚ್ಚಗಱುಕೆ ಸೂಸುತಿದೆ ಪೋದತ್ತಿಲ್ಲಿ ನಾನಾಮೃಗಂ (ಕಾದಂಪೂ. ೧೩೮). [ ನಸು$_2$ + ಮೆಲ್$_1$ ]

**ನಸುಮೊಳೆ** (ಕ್ರಿ). ತುಸು ಅಂಕುರಿಸು ; ಸ್ವಲ್ಪವೆ ಕಾಣಿಸಿಕೊಳ್ಳು : ಮುಗುಳುನಗೆ ನಸುಮೊ[ಪಾಠಾಂ. ಹೊ]ಳೆಯ ಭೀಮಾದಿಗಳಿಗೆಂದನು ಕೃಷ್ಣನು (ಕುವ್ಯಾಭೀ. ೭-೦೨). [ ನಸು$_2$ + ಮೊಳೆ$_1$ ]

**ನಸುಲಜ್ಜೆ** (ನಾ).=ನಸುನಾಚಿಕೆ : ನಗೆ ನಸುಲಜ್ಜೆಯೊಳ್ ತೊಡರಲಿರ್ದುದೆ ಬಲ್ಪಡೆ ಮಾಂದ್ಯಭಾವದೊಳ್ ಪುಗಲಿವೆ . . . ಯೌವನೋದಯವೊ

ಬಾಳ್ಕೆವಿಮೋಚನವೋ . . . ಭವಾನಿಯಾ (ಗಿರಿಕ. ೪-೫) : ನಸುಲಜ್ಜೆ ನಗೆಮೊಗದೊಳಂಬರಿಸೆ (ಕೃಮಿಥಾ. ೨೯-೨೦೮). [ ನಸು₁ + ಲಜ್ಜೆ ]

**ನಸುವಕ್ಕೆ** (ನಾ). ತುಸು ಒರಗುವಿಕೆ; ಸ್ವಲ್ಪ ಬಾಗುವಿಕೆ: ಹರವಸವೊಯ್ಕು ನಾಜಿ ಮುಗುಳ್ಗಣ್ಣಿಗಳಲ್ಲ ಬಿ ಕೂಡೆ ಮೆಯ್ಯೊಳುಬ್ಬರಿಸಿದ ರೋಮರಾಜಿ ನಸುವಕ್ಕೆಗೆ ಸಾಜಿ ಬಟ್ಟಲ್ದ ಮೆಯ್ಗೆ ಚೀತರಣೆಯಲರ್ಚೆ(ಚಂದ್ರಪು. ೮-೭೦). [ ನಸು₁ + ಪಕ್ಕೆ₁ (<ಪಟ್ಕೆ₁) ]

**ನಸುವರೆ** (ಕ್ರಿ). (ಸಂದಣಿ) ಸ್ವಲ್ಪ ಚೆದರು : ನೂಕುತಾಸಂ ನಿರವಿಸಿ ಕಿಜುದುಂ ಪೊಟ್ಟು ನೀದು ಅಲ್ಲಿಯ ಸಂದಣ ನಸುವ[ಪಾಠಾಂ. ಪ]ರೆವುದುಂ . . . ಪೋಬಾಗಿಲನೊಳಪೊಕ್ಕು (ಚಕವಂ. ೧೨೧೦-೩೩); "ಸ್ವಲ್ಪ ಹರಿ, ತುಸು ಕಮ್ಮಿಯಾಗು" (ಪ್ರಭಾ₁). [ ನಸು₂ + ಪರೆ₁ ]

**ನಸುವರೆಯ** (ನಾ). ಎಳೆಯ ಪ್ರಾಯ ; ಹರೆಯದ ಪ್ರಾರಂಭ ; ಏರುಂಜವ್ವನ : ತಾಳಿ ನಸುವರೆಯ ನಸನೋಟ ನಸುಲಜ್ಜೆಯಿಂ ಬಾಲಿಕೆಯರೀವರ್ಗರು ವಿರಾಜಿಸಲು (ನವಪುರಾ. ೨೩-೩೪). 'ಎಳವರೆಯ' ಪರಾ. [ ನಸು₁+ ಪರೆಯ₂ (< ಪರಯ) ]

**ನಸುವಾಗು,** ನಸುಬಾಗು (ಕ್ರಿ). ೧. ತುಸು ಬಾಗಂ; ಕೊಂಚ ಬಳುಕಂ,- ಬಗ್ಗು : ಮೇಲುದಿನೊಳ್ಪೊದರ್ದ ಕುಚಭಾರದಿಂ ನಸುವಾಗಿದುಗಲತೆ (ಕೃಮಿಥಾ. ೬-೪೬). **ನಸುಬಾಗು** : ೧. ನಸುಬಾಗಿ ಕೊಂಬಿನೊಳ್ ಪೊಳೆವೆಳ ಗಾಯ ನುಣ್ಪೊಗರಿಯಿಂ ಸುಟಿತರ್ಪಲರಿಂದೆ ಬಿಟ್ಟ ಪೂಗಳ ಪುಡಿಯಿಂ ಕರು ಸೊಗಯಿಪೋಲಗಸಾಲೆಯೋಳಿರ್ದರೊಪ್ಪದಿಂ (ಕಬ್ಬಿಗರ. ೧೩೬). ೨. ತುಸು ತಗ್ಗಿಸು,-ಬಾಗಿಸು : ಪರರು ಪತಿಕರಿಸಿದೊಡೆ ಲಜ್ಜೆಗೆ ಶಿರವ ನಸುಬಾಗು ವರು ಗರುವರು (ಕುವ್ಯಾವಿ. ೭-೧೮). [ ನಸು₂ + ಬಾಗು₁ ]

**ನಸುವಾಡು,** ನಸುಬಾಡಂ (ಕ್ರಿ). ತುಸು ಬಾಡು : ನಸುಗಂದು : ಮಿಸುಗುವ ಬಣ್ಣವಾಸಿಗದೆಸಟಿ ನಸುವಾ[ಪಾಠಾಂ. ಬಾ]ಡೆ ವಿಭೂಷಣಾಂಶುಗಳ್ ಮಸುಳೆ (ಸುಕುಮಾ. ೧೦-೫) ; ನೀರ್ಗುಡಿಯಲ್ ಗಡಣದಿಂ ಬಂದು ಬಟ್ಟಲ್ದು ಕುಳ್ಳಿರ್ದ ಪಾಮರಿಯರ ಪೆರ್ಮುಡಿಯಿನೆಸ್ತೊಕ್ಕು ನಸುವಾಡಿದ ಸೆಲ್ಲ ನಿಡುಪೊಡೆ ಂ (ಲೀಲಾವ. ೫-೬೭ ವ). **ನಸುಬಾಡು** : ಮೇಲಿನ 'ಸುಕುಮಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ನಸು₂ + ಬಾಡು₁ ]

**ನಸುವಿರಿ,** ನಸುಬಿರಿ (ಕ್ರಿ). ತುಸು ಅರಳು ; ಅರೆಬಿರಿ : ನಸುವಿರಿದ ಸೇವಂತಿಗೆಯ ಕೇವಣದಂಗುರಂಗಳುಮಂ. . .ನೋಡಿ (ಜಗವಿ. ೬-೧೩೪) ; ನಸುವಿರಿದಿರ್ದ ಪದ್ಮವನದೊಳ್ ನಲಿವಂಚೆಗಳಿಂ . . ರಸಾಲದೊಳ್ ಪೊಸತನಿವಣ್ಗಳಿಂ ಸವಿದು ರಾಗಿಪ ರಾಜಶುಕಂಗಳಿಂ ನಿರೀಕ್ಷಿಸೆ ಸೆಜೆಗೆಯ್ವ ದೊರ್ವೊದಲೊಳಾ ವನಮಾ ವನಲೋಚನಂಗಳಿಂ (ಧರ್ಮಾಪಾ. ೨-೫೪). **ನಸುಬಿರಿ** : ಕುಸುಮಮತ್ತಳಕ್ಕೆ ನಿನ್ನರಸೆ ನಿನ್ನ ವಿಳಾಸಮೆ ನಿನ್ನ ಚೆಲ್ವೆ . . . ಎಂದಭಿಷೇಕಪುರಸ್ಸರಂ ಸ್ಮರಂ ನಸುಬಿರಿದಿರ್ದ ಮಲ್ಲಿಗೆಗೆ ಕಟ್ಟಿದನಂಕದ ರಾಜ್ಯ ಪಟ್ಟಮಂ (ಶಾಂತಿಪು. ೭-೧೪೨); ನಸುಬಿರಿವ ಕಮಲಮುಕುಳದ ನಸುಬಿರಿವ ತ್ಪಲದ ಮುಗ್ಧ ಪರಿಮಳಗಂಧಂ (ಅಜಿಪು. ೬-೬೫) ; ನಸ ಬಿರಿವ ಕುಸುಮಕೆ ಸುಗಂಧ ರನ್ನಕೆ ರಂಗು ದೊರೆಕೊಂಡ ಪಾಳ್ಕೆಯಿಂ (ಸೌಂದಪು ೬-೩). [ ನಸು₂ + ಬಿರಿ₁ ]

**ನಸುವಿರಿದು** (ನಾ). ಸ್ವಲ್ಪ ದೊಡ್ಡದು : ಎಳದು + ಪೆಜಿ = ಎಳವೆಜಿ ಎಮಂ ಪೆಳೆಪೊಲಂ, ಮೂವಣ್ಣಂ, ನಸುವಿರಿದು, ಮರವಣೆ (ಶಬ್ದಾನು. ೯೦ ಪ್ರಯೋ). [ ನಸು₁ + ಪಿರಿದು ]

**ನಸುವೆಸೆ** (ಕ್ರಿ). ಸ್ವಲ್ಪ ಬಿಂಕವನ್ನು ತೋರು,-ಬೀಗು : ಪಸರಿಸಿದ ಕುಸುಮದೆಸಟ್ಟಿಳ ಮಸುಳೆಗೆಯಂ ಪಳುಚುವೆಸವ ಸೆಗಸವಸದಿಂ ಸಸಿವಸು ಯಿಸಿದವೊಲೆಸೆದುದನಸಿಯಳ್ ನಸುವೆಸೆದು ಪ ಸು ಗೆ ಕು ಡೆ ಕುಳ್ಳಿರ್ದಂ (ಅನಂಪು. ೮-೩೫). [ ನಸು₂ + ಬೆಸೆ₁ ]

**ನಸುವೆಳಗು,** ನಸುಬೆಳಕು (ನಾ). ಮಂದವಾದ ಕಾಂತಿ; ಸ್ವಲ್ಪ ಬೆಳಕು ; ಮಬ್ಬು ಬೆಳಕು : ಕುಸುಮಮರಜದಿಂದೆ ಸೊಗಯಿಪ ಪಸಂತವನರಾಜಿಯಂತೆ ಚಂದ್ರೋದಯಮಿನ್ನೆಸೆದಪುದೆನೆ ನಸುವೆಳಗಿಂ ಮಸಗಿದುದಿನಿಸಿಂದ್ರದಿಗ್ವಧೂಮುಖಬಿಂಬಂ (ಕಾದಂಪೂ. ೪೭೮). **ನಸುಬೆಳಕು** : ಇನ್ನೂ ನಸುಬೆಳಕು ಹರಿಯುತ್ತಿತ್ತಷ್ಟೆ (ರೂಪಸಂ. ೧೭). [ ನಸು₁ + ಬೆಳಗು₂ ]

**ನಸುವೆಳ್ದಿಂಗಳ್** (ನಾ). ತಿಳಿಯಾದ ಬೆಳದಿಂಗಳು : ನಸುವೆಳ್ದಿಂಗಳ ತಣ್ಣದಿರ್ಗೊನರ್ಗಳಂ ದಂತಾಂಶುಗಳ್ ಬೀಜಿ (ಮಹಾನೇ. ೮-೦೩). [ ನಸು₁ + ಬೆಳ್ದಿಂಗಳ್ ]

**ನಸುವೆಳ್ಪು,** ನಸುಬಿಳುಪು (ನಾ). ಸ್ವಲ್ಪ ಬಿಳುಪು ; ನಸುಕಾಂತಿ : ಒಸರ್ದಪುದು ನುಡಿಯೊಳೊಲವಿನ ರಸವೆನೆ ನಸುವೆಳ್ಪು ಮಂದಮಂದ ಸ್ಮಿತದಿಂ ಪಸನಿಸುತಿರೆ (ಕಾದಂಬ. ೦೮೬). **ನಸುಬಿಳುಪು** : "ಈಷತ್ಪಾಂಡು, ಧೂಸರ = ನಸುಬಿಳುಪು" (ನಾಚಿರಾ. ೩). [ ನಸು₁ + ಬೆಳ್ಪು ]

**ನಸುಸಂಜೆ** (ನಾ). ಸೂರ್ಯ ಮುಳುಗುವ ಸಮಯ ; (ರಾತ್ರಿಯಾಗಲು) ಸ್ವಲ್ಪ ಕಾಲವೆ ಉಳಿದಿರುವ ಸಂಜೆ ; ಗೋಧೂಳಿಕಾಲ : ನಸುಸಂಜೆಯಾಗಲುದ್ಭಟನೊಸೆದರ್ಘ್ಯಮನಿತ್ತು ಚಂದ್ರಭೂಷಣನಂ ಪೂಜಿಸಿ ಮೆಲ್ಲನೆ ಮಗುಟ್ದಾರೋಗಿಸಿದಂ ಶಿವಭದ್ರವೆರಸು ಮುದದಿಂದಾಗಳ್ (ಉದ್ಭಟ. ೮-೮೭). [ ನಸು₁ + ಸಂಜೆ ]

**ನಸುಸವಿ** (ಕ್ರಿ). ಸ್ವಲ್ಪ ರುಚಿ ನೋಡು ; ತುಸು ತಿನ್ನು : ನಸುಸವಿದಿತ್ತ ಪೊಚ್ಚಪೊಸಗಂಪಮರ್ದಿಂಪಿನ ತಂಬುಲಂ (ಉದ್ಭಟ. ೪-೩೮). [ ನಸು₂ + ಸವಿ₁ ]

**ನಸುಸುಯ್** (ಕ್ರಿ). ಸ್ವಲ್ಪ ಉಸಿರುಬಿಡು : ಸುರಭಿಪರಿಮಳಸುಗಂಧೋತ್ಕರಮಂ ಪನ್ನೊಂದು ತಿಂಗಳ್ಗೊರ್ಮೆ ಮನೋಹರಮಾಗಿರೆ ನಸುಸುಯ್ವಂ ನಿರುಪಮಮಹಿಮಾಪ್ರಭಾವನಂತಾ ದೇವಂ (ಸುಕುಮಾ. ೯-೩೪). 'ಬಿಸುಸುಯ್' ಪರಾ. [ ನಸು₂ + ಸುಯ್₁ ]

**ನಸುಸುರ್ಕು** (ಕ್ರಿ). ಸ್ವಲ್ಪ ಕುಗ್ಗು : ಸುರ್ಕುಟಿದುರುಳ್ಗುರುಳ್ ನಸುಸುರ್ಕಿದ ಕುಚಚೂಚುಕಂ (ಆದಿಪು. ೧೧-೧೪೫). [ ನಸು₂ + ಸುರ್ಕು₁ ]

**ನಸುಸುಳಿವು** (ನಾ). ಮಂದವಾದ ಚಲನೆ : ಲಲಿತಮೃದುತರ ಹಂಸತೂಲದ ತಳಿತ ಮಂಚದ ತಂದಲರ ನಸುಸುಳಿವಿನಲಿ ಥಳಥಳಿಪ ಜಾಳಕಪಂಕ್ತಿ ರಂಜಿಸಲು (ಬಸಪು. ೧೧-೧೪). [ ನಸು₁ + ಸುಳಿವು ( < ಸುಟಿವು ) ]

**ನಸುಸೇಕ** (ನಾ). ಸ್ವಲ್ಪ ಶಾಖ ; ಸುಖೋಷ್ಣ : ದಿಟ್ಟ ಪಾರ್ವಂ ಕಾಸಿ ತೆಗೆವುತ ಪೊಟ್ಟಣವನಂಗೈಯ್ಯೊಳೊಯ್ಯನೆ ಮುಟ್ಟಿಮುಟ್ಟಿ ಶರೀರದೊಳು ನಸುಸೇಕವಂ ಮಾಡಿ ಅಟ್ಟ ಪಾತದ ತೈಲವಂ ತಾಂ ಬೊಟ್ಟಿಡಿಸಿ ಲೇಪಿಸುತ ಪಥ್ಯಂಗೊಟ್ಟದಕೆ ತಕ್ಕನಿತು ಜೋಪಾಸನವನಾಚರಿಸಿ (ಬಸಪು. ೧೭-೮). [ ನಸು₁ + ಸೇಕ₁ ]

**ನಸುಸೈರಣೆ** (ನಾ). ಸ್ವಲ್ಪ ತಾಳ್ಮೆ,-ಸಹಿಷ್ಣುತೆ: ಪ್ರಣಯಕಲಹವನೊದರ್ಚೆ ನಸುಸೈರಣೆಯ ಗೆಲವಂ ಕೊಟ್ಟು ಮೆಲ್ಲನೆ ಸೆಣಸಿ ಮುನಿದಡೆ ಸೋಲ್ವು ಮನವಲುಸುತೊಡನೆ ಸಾರ್ದು . . . ಮೋಳ್ಕೈಸಿ (ಬಸಪು. ೪೨-೧೪). [ ನಸು₁ + ಸೈರಣೆ ]

**ನಸುಸೋಂಕು₁** (ಕ್ರಿ). ಸ್ವಲ್ಪ ತಗುಲು,-ತಾಗು : ಪೊಸ ಪೂವಿನ ಕಂಪಿನೊಳಟ್ಟು ಚಿತ್ರಜೋತ್ಸವವಿಳಾಸಮಂ ವಿರಹಿಗಿರ್ಮಡಿಪಮಾಡಿ ಶರದ್ಭವ ಸಮೀರ[ನ್ನ]ಸುಸೋಂಕೆ ಘರ್ಮಜಲಬಿಂದುವನಾಜಿಸಿದತ್ತು ನಲ್ಲರಾ (ಶಾಂತಿಪು. ೧೦-೧೩೩) ; ಅರಗಿಳಿವಿಂದು ಪಾಜಿ ನಸುಸೋಂಕಿದೆಜಂಕೆಯ ಗಾಳಿಗೊಂದನೊಂದೊರಸೆ ನಿರಂತರಂ ಸುರಿವ ನುಣ್ಣನೆಪಾಲ್ಗಳ ಧಾರೆಗೊಡ್ಡಿ ಚಂಚುರ ನಿಜಚಂಚುವಿಂ ಸವಿದು (ಕಾವ್ಯಸಾ. ೦೦೪) ; ತಕ್ಕೆಯೊಳ್ಪಿರಿದು ನಸುಸೋಂಕಿ ಪಿಟಿದಿ ಫಣಂದೆಗೆಯೆಂದು ಮುಂದಿಸೂಳೆ ಮಗುಳುಸುರ್ದಳು (ಸಂದಿಪುಂ. ೨೩-೪೩). [ ನಸು₂ + ಸೋಂಕಂ₁ ]

**ನಸುಸೋಂಕು₂** (ನಾ). ಮೃದುವಾದ ಸ್ಪರ್ಶ : ಎನ್ನ ಕದಂಬಿನ ನಸುಸೋಂಕಿನೊಂದು ಸುಖದಿಂದಾದಂ ಕಂಪಿಸುತಿರೆ ಕರತಳದಿಂದಂ ಪೋದತ್ಕಕ್ಷವಾಳಿ ನಾಣ್ಚೆರಸಾಗಳ್ (ಕಾದಂಪೂ. ೭೭೦). [ ನಸು₁ + ಸೋಂಕು₂ ]

**ನಸುಹೊಳೆ** (ಕ್ರಿ). ಸ್ವಲ್ಪಕಾಣು,-ತೋರು : ನಗೆಯ ವೊಳೆ ನಸುಹೊಳೆಯೆ ಬೊಮ್ಮನ ಮೊಗವ ನೋಡಿದನಭವ (ಕುಮ್ಮಾಕ. ೬-೨೩).
[ ನಸು₂ + ಹೊಳೆ₁ ( < ಪೊಳೆ₁ ) ]

**ನಸೆ₁, ನಸ್ಸಿ, ನೆಸೆ₂** (ನಾ). ೧. ಕಾಮಾತುರ ; ಕಾಮವಿಕಾರ ; ಬೆದೆ : "ನಸೆ ಕಾಮವಿಕಾರ ವೃದ್ಧಿಯೊಳ್" (ಕರ್ಣಾನಿ. ೯೦) ; ಪೊಸವಿಮದದಾನೆಯುಂ ನಸೆಯು ಪೆರ್ಚಿಡಿ ಜಂಗಮಕಲ್ಪವೃಕ್ಷಮಂ ಮಿಸುಗುವನಲ್ಪಕಲ್ಪಲತೆ ನೀರದವಾಂ ಕುಡುಮಿಂಚು ಪೊರ್ದಿ ಶೋಭಿಸುವವೊಲಾ ಸುರಾಧಿಪನನಾಪರಮೇಶ್ವರಿ ಪೊರ್ದಿ ನಾಡೆ ಕಣ್ಗೆಸೆದಳ್ (ಶಾಂತಿಪು. ೬-೩೯) ; ನಸೆಗನುಪಶಮಾಗಿರ್ದುದಿದೇದೊಂದಿಭೇಂದ್ರಂ (ಜಗವಿ. ೧೭-೧೦) ; ಹಸಿವಿಲ್ಲದೆ ಮುನ್ನ ಉಂಡೂಟವ ನಸೆಯಿಲ್ಲದೆ ಅಪ್ಪಾಯನವನಜೀಯರು (ಸರ್ವಜ. ೩೩-೧೬೦) ; ಮಣಿಕದ ನಸೆಗಸವಸದಿಂದಣಿಯರವಾಡುವ ಗವೇಂದ್ರನಂ ಸತಿ ಕಂಡಳ್ (ಅನಂಪು. ೪-೧೧೧) ; ಹಿಂಡೆಗಲಿದ ಹುಲ್ಲೆಯು ನಸೆಯೊಳಗಿಪ್ಪ ಗಂಡೇಣ ತನ್ನ ವಲ್ಲಭನ ಕಂಡುದುಂಟಾದಡೆ ತೋಟು ತೋಟೆನುತಲಿ ಪುಂಡರೀಕಾಕ್ಷಿ ಕೇಳಿದಳಾ (ಪ್ರಾಚತ. ೯-೬೪) ; ಆಕಳು ನಸೆಗೆ (ಬೆದೆಗೆ) ಬಂದಾಗ ಇಂದ್ರಿಯದಿಂದ ಸಣ್ಣಗೆ ಸ್ರಾವ ಜಿನುಗುವುದು (ಗೋಗ್ರಾಸ. ೨೪). **ನಸ್ಸಿ** : ೧. ಅಳಗಳವ್ಪಗೆ ಸಿಂಗವಜೀಗಳ ಚೆಲ್ಲಾಟ ಕಳಹಂಸಗಳ ಬಾಯ್ದೂಟ ತೊಳಗುವ ಹರಿಣಹುಲ್ಲೆಯ ನಸಿಯಿರ್ವರ ನೆಲೆಗೊಂಡು ಮೆಚಿದವನೆಂಬೆ (ಕಂಜವಿ. ೧೦-೪೪) ; ಕದುಹಸಿದ ತೋಳನು ಮಾಂಸದ ಪಿಂಡವನ್ನು ನೋಡುವಂತೆ ನಸಿಯನ್ನೆಲ್ಲ ಕಣ್ಣಿಗೆ ತಂದು, ಇಳಿದು ಬರುತ್ತಿರುವ ಗೃಹಿಣಿಯನ್ನು . . . ನೋಡುತ್ತ ನಿಂತಿದ್ದಾರೆ (ಬೆಳುವಾ. ೦೭೪). **ನೆಸೆ₂** : ೨. (ಕರಾ) ಸಲಿಗೆ ; ಸದರ : ಮಕ್ಕಳಿಗೆ ನೆಸೆ ಕೊಡಬಾರದು (ಮರಮ. ೧೮೦) ; ನೆಸೆ ಕೊಟ್ಟವ ಹಸೆ ಕದ್ದುಕೋಡುಹೋದ (ಗಾದೆ).

**ನಸೆ ಮಾಡು** = ಕಾಮಚೇಷ್ಟೆಗಳನ್ನು ಮಾಡು ; ರತಿಕ್ರೀಡೆಯಾಡು : ತನ್ನ ಹರೆಯದ ನಲ್ಲರೊಡನೆ ನಕ್ಕು ನಸೆ ಮಾಡುತಂ ಸಿಂಗರಕ್ಕೆ ಮನಮೆಳಸಿ . . . ಲೋಲೆಯರ್ ಮೆಚಿದರು (ಹಂಪು. ೧೦-೭೫).
[ ದೇ. ॥ ತಮಿ. ನಚ್ಚೈ ; ತೆಲು. ನಸ ; ಕೊಲಾ. ನಸವ್ = ತುರಿಕೆಯಾಗು, ನವೆಯಾಗು ]

**ನಸೆ₂** (ನಾ). ಒಂದು ಬಗೆಯ ಸಸ್ಯ : ಕಬ್ಬು, ನಸೇ, ಲಾವಂಚಿ, ಕಾಶಿ . . . , ಜೊಂಡು, ಬಿದಿರು (ನಮ್ಮುಸು. ೨೪೯). [ ? ]

**ನಸೆಗಾರ** 'ನಸೆಗಾಟಿ' ನೋ.

**ನಸೆಗಾರ್ತಿ** (ನಾ). ಕಾಮೋದ್ರೇಕವನ್ನುಂಟುಮಾಡುವವಳು ; ಬೆದೆಗಾತಿ : ನಸೆಗಾರ್ತಿ! ಇಂತು ದಮನಂ ಹಯಮಾ ಸೆಚಿವಿಡಿದು ನಿಜಪುರಕೆ ಕಳಿಪಲ್ (ರಾಮಾಶ್ವ. ೮೭-೧೦). [ ನಸೆಗಾಟಿ + –ತಿ₁ (<–ಇತ್ತಿ) ]

**ನಸೆಗಾಟಿ, ನಸೆಗಾರ** (ನಾ). ೧. ಕಾಮೋದ್ರೇಕವನ್ನುಂಟುಮಾಡುವವನು. ೨. ಕಾಮ ; ಮದನ ; ಮನ್ಮಥ : "ಕುಡುವಿಲ್ಲ ಪೂವೂಣಂಬು . . . ಕಾವ ಕೊಂಕುವಿಲ್ಲಂ ಒಡಲಿಲ್ಲಂ ನಸೆಗಾಟಿ ಕಮ್ಮಂಗಣೆಯ ಜೊನ್ನೊಡಲನಳಿಯಂ ದವ್ಪಕಂ ವ್ರಯಣನೆಂಬಿವಿಂತೊಡನೆ ಮನ್ಮಥ ನಾಮವು" (ಚಚ್ಚುಮಂ. ೮) ; ತನಗೆ ಬಿರಯಿಮಿಗಂಗಳ ಬೇಂಟೆಗೆ ಬೇಟೆವೇಟಿವಿಲ್ಲಳ್ ದೊರೆಕೊಳ್ವಂತು ನಸೆಗಾಟಿನೊಸೆದು ಬೆಳೆಯಿಸಿದನೆನಿಸ್ಪ್ಪೆವ ಕರ್ಬಿನ ತೋಟ (ರಾಮಾಶ್ವ. ೦೦೦-೩೦). **ನಸೆಗಾರ** : ೧. "ನಸೆಗಾರ – ಬೆದೆಗಾರ, ಕಾಮು" (ಗಂಗಾಮ. ೦೭೪) ; ಸೈರಿಪನೆಂತು ಚೆನ್ನ ನಸೆಗಾರನ ರೂಪಮ ನೀನೆಯಲ್ತೆ ವೇಳ್ವಾರಸಮಾನರೂಪ ನಸೆಗಾರನೆ ಸುತ್ತಿಹಳೇಕೆ ಬಾರಳೊ (ಚಿಲವಿ. ೩೮).
[ ನಸೆ₁ + –ಗಾಟಿ ( < –ಕಾಟಿ ) ]

**ನಸೆಗೆಡು** (ಕ್ರಿ). ಕಾಮೋದ್ರೇಕವಿಲ್ಲದಾಗು ; ಕಾಮಾತುರವನ್ನು ಕಳೆದುಕೊಳ್ಳು ; ನೀರಸವಾಗು : ಅಲ್ಲಿಯೋದುವ ಶುಕಾವಳಿ ಮೂಗುವಟ್ಟಿರ್ದುವಲ್ಲಿ ಸಲಹಿದ ಹಂಸಮಾಲೆ ನಸೆಗೆಟ್ಟಿರ್ದುವು (ವೀರಶ. ಹ. ೪೯೦-೭).
[ ನಸೆ₁ + ಕೆಡು₁ ]

**ನಸೆದಿಟ್ಟಿ** (ನಾ). ಕಾಮಾತುರತೆಯಿಂದ ಕೂಡಿದ ದೃಷ್ಟಿ ; ಕಾಮುಕನೋಟ : ಸಿಂಗಾರವ್ಮಾ . . . ನಸೆದಿಟ್ಟಿಯು ಬಿತ್ತುಂದನಿಯಿಂದ (ಶಬ್ಬಳ. ೯೬-೨೦). [ ನಸೆ₁ + ದಿಟ್ಟಿ ]

**ನಸೆನಸೆ, ನಶನಶೆ, ನಸನಸೆ** (ನಾ). ಸಂಶಯ ; ಅನುಮಾನ ; ಅಪನಂಬಿಕೆ : ನಸೆನಸೆಯುಳ್ಳವನು ಹಸಿಯಿನೇ? (ಗಾದೆ). **ನಶನಶೆ** : ಆಡುವ ಮಾತನ್ನೆಲ್ಲಾ ಖಂಡಿತವಾಗಿ ಆಡುವುದು. ನಶನಶೆ ಇಲ್ಲ (ಮುಸುಗ. ೩೩). **ನಸನಸೆ** : (ಶ).
**ನಸೆನಸೆ ಪಡು** = ಅನುಮಾನ ಪಡು ; ಸಂಶಯಂಹೊಂದು : ಜೋಕೆಯಿಂದ ಆಯು ; ಆಯ್ಕೆಯಲ್ಲಿ ( ಸುಲಭವಾಗಿ ಒಪ್ಪದೆ ) ನಸೆನಸೆ ಪಡು (Pick and Choose. ಇಂಕನಿ). **ನಸೆನಸೆ ಮಾಡು** = ನಸೆನಸೆ ಪಡು : ನಮ್ಮ ದೇಶದ ಕಥಕರು . . . ಕೊಟ್ಟದ್ದಕ್ಕೆ ತಕ್ಕಷ್ಟು ತೀವು ಬಂತೇ ಇಲ್ಲವೇ ಎಂದು ತುಂಬ ನಸೆನಸೆ ಮಾಡಿ ನೋಡುವರು (ನಿಬಂಧ. II, ೫೯).
[ ದೇ. ॥ ತಮಿ. ನಚುನಚು = ( ಮಾತು ಅಥವಾ ಕೃತಿಗಳಲ್ಲಿ ) ನಿರ್ಧಾರಕ್ಕೆ ಬರದಿರು, ಹೊಯ್ದಾಡು ]

**ನಸೆನೋಟ** (ನಾ). ಕಾಮೋದ್ರೇಕವನ್ನುಂಟುಮಾಡುವ ನೋಟ ; ಕಾಮಾತುರದಿಂದ ಕೂಡಿದ ದೃಷ್ಟಿ : ಬೆಸುಗೆವಾತಿನ ವಿಟರಸುಗುಬ್ಬುಸವ ಮಾಳ್ಪ ನಸೆನೋಟದೊಳು ಶಂಕಿನಿಯರು (ಭೈರಸೂ. ೨೬೯).
[ನಸೆ₁ + ನೋಟ ]

**ನಸೆಮುಸಪು** (ನಾ). ವಿರಹದ ಹೆಚ್ಚಳ : ನಸೆಮುಸಪೊಂದೆ ನುಣ್ಪಸಲೆಯೊಳ್ ಸುಸಿಲಾಂತೆಸೆವೆಣನಂ ವಿಲಂಬಿಸದಿಸಲೆಂದು ಬಂದನ ಪುಳಿಂದನ ವಕ್ಷಮನುದ್ಗಮೂಸ್ತ್ರದಿಂದಿಸೆ ಕುಸುಮಾಸ್ತ್ರಂ (ರಾಜಶೇ. ೫-೧೦೫). [ ನಸೆ₁ + ಮುಸಪು ]

**ನಸೆಮುಸೆ₁** (ನಾ). ಕಾಮೋದ್ರೇಕವನ್ನುಂಟುಮಾಡುವಂಥದು ; ಬಯಕೆಯನ್ನು ಹೆಚ್ಚಿಸುವಂಥದು : ಬೆಸುಗೆವಾತಿನ ವಿಟರಸುಗುಬ್ಬುಸವ ಮಾಳ್ಪ ನಸೆಮುಸೆಯ ನೋಟದ ಶಂಖಿನಿಯರು (ಭೈರವೇ. ೨-೧೭); ರಸಿಕದಂಪತಿಗಳು ಕೂಡಿದರೆನೆ ಸಾಕು ನಸೆಮುಸೆ ಲಲ್ಲೆ ಕೊಲ್ಲಿಯೊಳು ಬೆಸುಗೆವಡೆದರಂತುಟಂತುಟಾಡಿದರೆಂದು ಹಸರಮಿಕ್ಕುವುದಾವ ಜಾಣ್ಮೆ (ಭರತೇ. ೧೦-೧೦೩).
[ ನಸೆ₁ + ಮುಸೆ₂ ]

**ನಸೆಮುಸೆ₂** (ನಾ). ಹರಿತವಾಗುವಂತೆ ಮಸೆಯುವಿಕೆ; ತೀಕ್ಷ್ಣವಾಗುವಂತೆ ತೀಡುವಿಕೆ (?) : ಕದಡಿದವು ಬಲಮೆರಡು ಕಲ್ಪದೊಳುದಧಿಯುದಧಿಯ ನೊದೆವವೊಲು ತಾಗಿದರು ನೀಗಿದರಸುವ ನಸೆಮುಸೆಗಳ್ಕುಡಿಸಿದವರು (ಕುಮ್ಮಾರಾಮ. ೧೭-೨೦) ; ಕಾಲನೇಮಿಯುಂ ಜಡಿದುಂ ಬಡಿದುಂ ಸಂದ ತನ್ನ ಪನ್ನತಿಕೆಯುಂ ಪೊಣರ್ದ ರಾಮಭೃತ್ಯಂ ನಸೆಮುಸೆಯ ತಿಸುಳಂ ಬೆಳಬೆಳಗೆ ಉರಿಗಣ್ಣ ಚಾಲೆ ದಳ್ಳಿಸೆ ... ಮಾರುತಿಗ್ಸೆಮೊಗಂ ಮುಮ್ಮೊಗನಾಗಿ ಜಡಿದಂ (ರಾಮಾಶ್ವ. ೧೩೩-೭) [ ನಸೆ₀ + ಮುಸೆ₂ ]

**ನಸೆಯಳಿಪು** (ನಾ). = ನಸೆಯಿಚ್ಚೆ : ನಸೆಯ [ಪಾಠಾಂ. ಮುಸಪ, ಮುಸುಪ] ಳಿಪಿಂ ಪ್ರಿಯಾನನಮನೀಕ್ಷಿಸಲುದ್ಯತೆಯಾಗಿ ತಾನೆ ಲಜ್ಜಿಸಿ ತಲೆವಾಗಿ (ಸೂಕ್ತಿಸು. ೬-೮೨) ; (ಚಂದ್ರಪು. ೬-೭೬ ನೋ). [ ನಸೆ₁ + ಅಳಿಪು₂ ]

**ನಸೆಯಿಚ್ಚೆ** (ನಾ). ಕಾಮಾತುರ ; ಕಾಮೇಚ್ಛೆ ; ಸಂಭೋಗಾಪೇಕ್ಷೆ .
**ನಸೆಯಿಚ್ಚೆಯಾಗು** = ಕಾಮಾಪೇಕ್ಷೆಯುಂಟಾಗು ; ರತಿಯ ಬಯಕೆಯುಂಟಾಗು : ಪಸಿದೊಡೆ ಸಲ್ಲಿಕೀಕಿಸಲಯಂಗಳನೊಯ್ಯನೆ ನೀಡಿ . . . ನಸೆಯಿಚ್ಚೆಯಾದೊಡಗೂಡಿ ಬಟಲ್ದೊಡೆ ಕರ್ಣವಾತಮಂ ಪಸರಿಸಿ ತನ್ನ ಕೈಪಿಡಿಯವೊಲ್ ಪಿಡಿಯಂ ಪಿಡಿದಿರ್ದುದೊಂದಿಭಂ (ಚಂದ್ರಪು. ೫-೭೪).
[ ನಸೆ₁ + ಇಚ್ಚೆ ]

**ನಸೆಯೇೞಿಸು** (ಕ್ರಿ). ಉದ್ರೇಕಿಸು : ತಗರ ತಲೆಗೆ ಜಂಬೀರದ ಪುಳಿಯಿಟ್ಟು ವಿಗೆ ನಸೆಯೇೞಿಸಿ ನಗುತ ಜಗಳವ ಕಾದಿಸುತಿಹ ರಾಜಪುತ್ರರು ಸೊಗಸಿದರಾ ಬೀದಿಯೊಳಗೆ (ಕಂಸವಿ. ೭-೧೧). [ ನಸೆ$_1$ + ಏೞಿಸು ]

**ನಸೆವಣಕ** 'ನಸೆವಣಿಕ' ನೋ.

**ನಸೆವಣಿಕ, ನಸೆವಣಕ** (ನಾ). ಕಾಮೋಚ್ಛೆಯುಳ್ಳ ಪಶು ; ಬೆದೆಗೆ ಬಂದಿರುವ ಮಣಕ,-ಪಡ್ಡೆ : ನಸೆವಣಿ[ಪಾಠಾಂ. ಣ]ಕದೆ ಬೆನ್ನಂ ಸಂಧಿಸುವುದುಮಸವಸದಿನೆಡೆಗೆ ವುಗಲೊಡನಂತಾ ಬಸವಂ ಪಾಯ್ದೊಡೆ ಕಿಸಱಿಱಿಳ್ ಬಸವಟ್ಟಿದಿರ್ದೊಂದು ಗೊಂದೆ ಪೊಡಿತ್ತಾಗಳ್ (ಚಂದ್ರಪ್ರ. ೫-೨೯). ನಸೆವಣಕ: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ನಸೆ$_1$ + ವಣಿಕ ]

**ನಸೆಹಚ್ಚು** (ಕ್ರಿ). ಕಾಮದ ಬಯಕೆಯನ್ನುಂಟುಮಾಡು, – ಆಸೆ ತೋರಿಸು : ನಸೆಹಚ್ಚಿ, ವುಸಲಾಯಿಸಿ, ಹೊತ್ತುಗೊತ್ತುಗಳ ನೆವ ಹೇಳಿ, ತುಸುತುಸು ಎಳೆದುಕೊಳ್ಳಬೇಕು ... ಸ್ವಲ್ಪ ಸಹನೆಯಿಂದಿರು (ಕೃಹೀಶ. ೯೦). [ ನಸೆ$_1$ + ಹಚ್ಚು$_1$ (< ಪಚ್ಚು$_3$) ]

**ನಸ್ತ** (ನಾ). ಮೂಗು ; ನಾಸಿಕ. [ ಸಂ. ]

**ನಸ್ತಿತ** (ನಾ). ಮೂಗಿನಲ್ಲಿ ರಂಧ್ರವನ್ನು ಮಾಡಲ್ಪಟ್ಟುದು ; ಮೂಗುದಾರವನ್ನು ಹಾಕಿರುವ ಎತ್ತು, ಹಸು, ಮೊದಲಾದುವು "ನಸ್ಯೋತಃ, ನಸ್ತಿತಃ-ಈ ೨ ಮೂಗಿಟ್ಟುದು" (ಹಲಾಯು. ೪೪-೧೨೨) ; "ಒತ್ತಿ ಮೂಗಂ ಚುರ್ಚಿ ನಸ್ತಿತಂ [ಪಾಠಾಂ. ಮೂಗುರ್ರಿ ಬೊಚ್ಚಿ] ನ್ನುರಂ" (ಮಂಗರಾ. ೩೩-೨). [ ಸಂ. ]

**ನಸ್ಯ** (ನಾ). ೧. ಮೂಗಿಗೆ ಸಂಬಂಧಿಸಿದುದು. ೨. (ಔಷಧದ್ರವ್ಯ ಮೊದಲಾದುವನ್ನು)ಮೂಗಿಗೇರಿಸುವಿಕೆ; ಮೂಗಿನಿಂದ ಸೇವಿಸುವಿಕೆ; **P** ಆಯುರ್ವೇದದಲ್ಲಿ ರೋಗಗಳನ್ನು ಗುಣಪಡಿಸಲು ೧. ನಸ್ಯ= ಪುಡಿಯನ್ನು ಮೂಗಿಗೇರಿಸುವುದು. ೨. ಪಾನ=ನೀರಾಗಿರುವ ಔಷಧಿಯನ್ನು ಕುಡಿಸುವುದು. ೩. ಅಂಜನ=ಲೇಪನ ದ್ರವ್ಯವನ್ನು ಬಳಿಯುವುದು ಎಂಬ ಮೂರು ವಿಧದಲ್ಲಿ ಚಿಕಿತ್ಸೆಯನ್ನು ನಡೆಸುತ್ತಾರೆ: ನರಮೂತ್ರದಿಂದೆ ನಸ್ಯಮನಿರದಾಗಿಸೆ ಕಣ್ಗೆ ತೀದೆಸಲ್ ತದ್ವಿಷಮುಂ ಪರಿಗುಂ (ಖಮದ. ೭-೭); ಒಳ್ಳಿತ್ತಾಗಿ ಹಣ್ಣಾದ ಗದುಗಿನ ತಿರುಳಂ ಶುಂಠಿಯುಮನ ದಕದಲ್ಲರದು ನಸ್ಯಮಂ ಮಾಡಲ್ ಮಂಕಿನಂತೆ ಇರ್ಪುದಾಂ, ಬಾಹುಗಂಟುಗಳುಂ ಮಾಣ್ಬುವು (ಲೋಕೋಪ. ೯-೧೦೦ ಟೀಕೆ) ; ಮಹಾಷಟ್ಪಲ ಘೃತವನಾದರೂ ... ಹಾಕಿ ಕಾಸಿ ಪಾಕದಲ್ಲಿ ಇಳುಹಿ ಹಿಂಡಿಕೊಂಡು ಪಾನ, ಅಭ್ಯಂಗ, ನಸ್ಯ ಮೊದಲಾದ ಕ್ರಿಯೆಗಳನು ಮಾಡಿಸಲು ಸಕಲ ನಾಸಿಕರೋಗಂಗಳು ಶಮನವಹವು (ವೈದ್ಯಸಾ. II. ೦೦೪). ೩. ಮೂಗಿಗೇರಿಸುವ ಔಷಧದ್ರವ್ಯ : ನಸ್ಯಂಗಳಿಂದೆ ತನುಸಾರಸ್ಯಂ ಪಿರಿದಕ್ಕುಂ (ಖಮದ. ೭-೨) ; ರಜನಿ ಬರಿವದಣೆ ಕಟುಕವ್ರಜಮಿನಿತುಮನರೆವುದಾಡಪಾಲೊಳ್ ತುರಗವ್ರಜಕೆ ಕುಡೆ ನಸ್ಯಮು ವಾತಜ ಪಿತ್ತಜ ಕಫಜಮೆನಿಪ ಸಿಂ(ಘಾ)ಹಾಣಹರಂ (ಅಶ್ವಶಾ. ೧೧-೩೦); ವದ್ದುಗಳನಿಡಿವ ಉರಿವ ಸೇಕದ ನಸ್ಯದೊಳು ಹದನಱಿವ ತುರಗದ ವೈಸ್ವತಕಿಯೆಚ್ಚಱಿಕೆಯಲಿ ಸಂತೈಸಿದರು ವಾಜಿಗಳ ವೇದನೆಯ (ಕುಮ್ಮಭೀ. ೩-೩೯). ೪. ಹೊಗೆಸೊಪ್ಪಿನಿಂದ ತಯಾರಿಸಿದ, ಮೂಗಿಗೇರಿಸುವ ಪುಡಿ ; ನಾಸೀಪುಡಿ ; ತಂಬಾಕುಪುಡಿ ; ನಶ್ಯ : ಈ ಅರಸು ಬಾಲ್ಯದಿಂದಲೂ ನಸ್ಯವನ್ನು ಹಾಕಿಕೊಳ್ಳುತ್ತಾ ಇದ್ದನು (ನೀತಿಚಿಂ. II. ೨೦) ; ನೆರೆಮನೆ ಮಲ್ಲವ್ವ ಮುದುಕಿ ಕಲ್ಲವ್ವನ ಹತ್ತಿರ ನಸ್ಯ ಬೇಡಲು ಬಂದವಳು ...ಕೇಳಿದಳು (ಚನ್ನಹಿಂ. ೭೦); ನಸ್ಯ ನೆತ್ತಿಗೆ ಮೂಲ ಗುಡಿಗುಡಿ ಗುಂಡಿಗೆಗೆ ಮೂಲ (ರೂಢಿ).

ನಸ್ಯಂಮಾಡು, ನಸ್ಯ ಮಾಡು=೧.ನಸ್ಯಂಗೆಯ್ ೧: ಶುಂಠಿಯುಂ.ಬೆಲ್ಲಮಂ ಉದಕದಲ್ಲಿ ತೇದು ನಸ್ಯಂಮಾಡಲ್ ತಲೆತಿರುಗುಹ ... ಶ್ಲೇಷ್ಮವಾತಂ, ಈ ರೋಗಂಗಳ್ ಕಿಡುವುವು (ಲೋಕೋಪ. ೯-೦೩ ಟೀಕೆ) ; ಬಿಳಿಯ ಉಗನಿಯ ಬೇರಂ ಮೊಲೆಹಾಲಲ್ಲಿ ನಸ್ಯಂ ಮಾಡೆ ಮುಖರೋಗ ಮಾಣ್ಗುಂ (ವಿಷ್ಣುವಿ. ೦೫೦) ; ತಾಳಕದ ಹಣ್ಣಂ ಮೊಲೆಹಾಲಲ್ಲಿ ತೇದು ನಸ್ಯ ಮಾಡೆ ಅರೆದಲೆಬೇನೆ ಮಾಣ್ಗುಂ (ವಿಷ್ಣುವಿ. ೭೨). ೨. ಮೂಗಿಗೇರಿಸುವ ಔಷಧವನ್ನು ತಯಾರಿಸು,-ಸಿದ್ಧಮಾಡು. ೩. ಹೊಗೆಸೊಪ್ಪಿನಿಂದ ನಶ್ಯದ ಪುಡಿಯನ್ನು ಮಾಡು. ನಸ್ಯ ಮಾಡಿಸು = ಮೂಗಿಗೇರಿಸುವ ಔಷಧ ಮೊದಲಾದುವನ್ನು ತಯಾರುಮಾಡಿಸು,—ಸಿದ್ಧಗೊಳಿಸುವಂತೆ ಮಾಡು : ನಸ್ಯ ಮಾಡಿಸುವುದಕ್ಕೆ ತೈಲವನ್ನಾಗಲೀ ಘೃತವನ್ನಾಗಲೀ ಮೃದುಪಾಕದಲ್ಲಿ ಇಳಿಸಬೇಕು (ಸಕಪ್ರ. XIII ಪ್ರಸ್ತಾವನೆ). ನಸ್ಯ ಹಾಕು = ನಶ್ಯವನ್ನು ಮೂಗಿಗೇರಿಸು,-ಸೇದು : ವಿಲಾಯಿತಿಯಲ್ಲಿಯೂ ನಸ್ಯ ಹಾಕುವ ರೂಢಿಯಿತ್ತು (ಸಪಾಜೀ. ೭೦೭) : ಪುಷ್ಪಮಾಸವಾದರೆ ನಸ್ಯ ಹಾಕಿಕೊಳ್ಳಬಾರದೆ? (ಗಾದೆ). [ ಸಂ. ]

**ನಸ್ಯಂಗುಡು** (ಕ್ರಿ). (ಔಷಧವನ್ನು) ಮೂಗಿನ ಮೂಲಕ ಏರಿಸು,- ಸೇವಿಸುವಂತೆ ಮಾಡು : ನರಮೂತ್ರದೆ ನಸ್ಯಂಗುಡು ಗುರುಗುಂಜಿಯ ಬಕುಳಮರಿಚಯುಗ್ಮದ ಬಿತ್ತಂ ಪರಿಹರಿಕುಂ ಗರಳಭಯಂ ನಿರುತಂ (ಖಮದ. ೭-೪೭). [ ನಸ್ಯ + ಕುಡು$_1$ (<ಕೊಡು$_1$) ]

**ನಸ್ಯಂಗೆಯ್** (ಕ್ರಿ). ೧. (ಔಷಧ ಮೊದಲಾದುವನ್ನು) ಮೂಗಿಗೇರಿಸು,-ಸೇದು : ಬವಣ ತಲೆಬೇನೆಗಳ್ . . . ಕಫ ವಾತವಿಕಾರಂ ಪಿಂಗುಗು ವಾದವೆ ನಸ್ಯಂಗೆಯ್ಯೆ ಶುಂಠಿಯುಂ ಬೆಲ್ಲಮುಮಂ (ಲೋಕೋಪ. ೯-೦೫) ; ಅರಿಸಿನಮಂ ನೀಲಿಯುಮಂ ಬೆರಸಲ್ಲವ ರಸದೊಳರೆದು ನಸ್ಯಂಗೆಯ್ಯಲ್ಕುರಗೋಗ್ರವಿಷಂ ಕಿಡುಗುಂ (ಖಮದ. ೭-೦೪); ಅರದಗಸೆಯೆಲೆಗಳಂ ವಿಸ್ತರದಿಂ ಗಾಳಿಸಿ ಕಟುತ್ರಿಕಂ ತ್ರಿಫಲೆಗಳಂ ಬೆರಸಿ ತನಿರಸದೊಳಿಂಬಾಗಿರೆ ನಸ್ಯಂಗೆಯ್ದೊಡದುವೆ ಸಿಂಘಾ(ಹಾ)ಣಹರಂ (ಅಶ್ವಶಾ. ೧೧-೩೧) ; ಯಷ್ಟಿ ಮಧುಕ, ಇಂಗು, ಇಪ್ಪೆಮರದ ಕಚ್ಚು ಇವಂ ನೀರಿಂ ತೇದು ನಸ್ಯಂಗೆಯ್ಯೆ ಭಗ್ನನೇತ್ರ, ಸನ್ನಿ ಗುಣಮಕ್ಕುಂ (ಸಕಪ್ರ. ೧೬೩). ೨. (ಔಷಧ ಮೊದಲಾದುವನ್ನು) ಮೂಗಿನ ಮೂಲಕ ಏರಿಸುವಂತೆ ಮಾಡು.-ಸೇವಿಸುವಂತೆ ಮಾಡು : ಹಾಮೆಕ್ಕೆಯ ಹಣ್ಣೊಳತಿಕ್ಷೇಮದೊಳಿರಿಸಿಟ್ಟ ಸುಂಟಿ ಹಿಪ್ಪಲಿ ಮೆಟಸೆಂಬೀ ಮೂಜನಾತ್ಮಜಲದಿಂ ಪ್ರೇಮದಿನಾತಂಗೆ. ನಲಿದು ನಸ್ಯಂಗೆಯ್ದಿಂ (ದಶಕು. ೯-೦೦೦). [ ನಸ್ಯ + ಕೆಯ್$_1$ ]

**ನಸ್ಯಕರ್ಮ** (ನಾ). (ಔಷಧ ಮೊದಲಾದುವನ್ನು) ಮೂಗಿನ ಮೂಲಕ ಸೇವಿಸುವ ಕ್ರಿಯೆ,-ಮೂಗಿಗೇರಿಸುವ ಕ್ರಿಯೆ : ಸಿರಿಸದ ಪೂವಂ ಹುಲಿಗಿಲ ಪರಫಲ ಮಡುವಾಗಲೆಲೆ(ಳೆ)ಯ ಫಲಮುಂ ಮೂತ್ರಂಬೆರಸರದು ನಸ್ಯಕರ್ಮಕ್ಕೆರದೊಡರಿಸಲಹಿಕುಲೋಗ್ರವಿಷಮಂ ಕಳೆಗುಂ (ಖಮದ.೭-೩೬). [ ನಸ್ಯ + ಕರ್ಮ ]

**ನಸ್ಯಮಿಾ** (ಕ್ರಿ). =ನಸ್ಯಂಗೆಯ್ ೨ : ಏೞಿಸದಿಲುಮಿಚ್ಚೆಯ ಹುಳಿಬೇೞಿಯ ದಳ ಲಶುನ ಮರಿಚಮಂಬಿವನಿಂಬಿಂ ಮೇಳಯ್ಸಿ ನಸ್ಯಮಿಾಯಲ್ [ಪಾಠಾಂ. ನಸ್ಯನಾಳಿಸು] ಜಾಳಿಸುಗುಂ ಸರ್ಪವಿಷಮಂ (ಖಮದ. ೭-೧೭). [ ನಸ್ಯ + ಈ$_2$ ]

**ನಸ್ಯವಿಧಿ** (ನಾ). (ಔಷಧವನ್ನು)ಮೂಗಿನ ಮೂಲಕ ಸೇವಿಸುವ ಕ್ರಮ,- ರೀತಿ,-ಪದ್ಧತಿ : ಶ್ಲೇಷ್ಮ ರೋಗದಲ್ಲಿ ವಮನವಿಧಿಯನ್ನು ಪ್ರಯೋಗಿಸುವುದು. ಸನ್ನಿಪಾತರೋಗಗಳಲ್ಲಿ ನಸ್ಯವಿಧಿಯನ್ನು ಪ್ರಯೋಗಿಸುವುದು (ಸಕಪ್ರ. ೨೩). [ ನಸ್ಯ + ವಿಧಿ ]

**ನಸ್ಯವೆೞ್³** (ಕ್ರಿ). (ಔಷಧವನ್ನು) ಮೂಗಿನ ಮೂಲಕ ಏರಿಸು,- ಸೇವಿಸು : ಸಮಭಾಗೆಯಾಗಿ ಪೊಸ ಸಾಸಿವೆಯುಮನಂಕೊಲೆಯ ಬೀಜಮಂ ಕೂಡಿ ಬಟ್ಟಿಕ್ಕವನೆಣ್ಣೆಗೊಂಡು ಸಲೆ ನಸ್ಯವೆೞ್ದೊಡಾಯುಷ್ಯವರ್ಧನಂ (ಲೋಕೋಪ. ೯-೪೦). [ ನಸ್ಯ + ಎೞ್$_1$ ]

**ನಸ್ಯಸೇದು** (ಕ್ರಿ). ನಶ್ಯಹಾಕು ; ನಶ್ಯವನ್ನು ಮೂಗಿಗೇರಿಸು : ಅವನಿಗೆ ನಸ್ಯ ಸೇದುವ ಅಭ್ಯಾಸವಿದೆ (ಜಾಂ). [ ನಸ್ಯ + ಸೇದು$_1$ (<ಸೇಂದು) ]

**ನಸ್ಯಾಂಗ** (ನಾ). = ನಸ್ಯ ೨ : ಪಂಥ್ಯಾ ಕರ್ಕೋಟಕೀ ಕಂದದೊಳಿಡುವುದಜಾ ಮೂತ್ರದಿಃ . . . ಬೇಟೀಂ ಧ್ಯಾನಂ ತದ್ಬಿಷಕ್ಸ್ವಾಂಗೆ ವಿಷಧರದಷ್ಟಂಗೆ ನಸ್ಯಾಂಗ [ಪಾಠಾಂ. ನಸ್ಯಗ]ಮಾಗಿರ್ ಸಂಧ್ಯಾಭ್ರಾರಕ್ತದಂತಾಗಳೆ ವಿಷ ಮಟಿಗುಂ (ಖಮದ. ೭-೯೦). [ ಸಂ. ]

**ನಸ್ಯೋತ** (ನಾ).=ನಸ್ಯಿತ : "ನಸ್ಯೋತಃ, ನಸ್ಯಿತಃ-ಈ ೨ ಮೂಗಿಟ್ಟುದು" (ಶಬ್ದಾಯು. ೪೪-೧೦೩). [ ಸಂ. ]

**ನಸ್ರಾಣಿ, ನಸರಾಣಿ** (ನಾ). ೧. ಕ್ಷುದ್ರವ್ಯಕ್ತಿ; ತುಚ್ಛನಾದ ಮನುಷ್ಯ ; ಅಲ್ಪಜೀವಿ : ಅವನಿಗೆ ಈಗ ಸಾರಥಿಯಾದ ಆ ನಸ್ರಾಣಿ ಸುಬ್ಬಭಟ್ಟ, ಆ ಗಾಣಿಗ ಸಂಕ . . . ಇವರೆಲ್ಲರ ದೆಸೆಯಿಂದ ಏನು ಹೇಳಿದರೂ ಗೋರ್ಕಲ್ಲ ಮೇಲೆ ಮಳೆ ಕರೆದಂತೆ ಸರ್ವಜ್ಞ ಎಂಬ ಹಾಗೆ ಆಗಿದೆ (ಹಶಸ. ೩೭). ನಸರಾಣಿ: ೨. ನಯವಾಗಿ ಮಾತನಾಡಿ ಮೋಸ ಮಾಡುವವನು ; ಚಾಣಾಕ್ಷ ; ಚಾಲಾಕಿ; ಬೆರಕಿ : "ನಸರಾಣಿ=ಪೆಕ್ಕಾ, ಚಾಲಾಕು" (ಜಾನಕೋ. ೦೦). [ ←ಅರ. ನಸ್ರಾನೀ; ಮರಾ. ನಸರಾಣೀ./ತುಳು. ನಸ್ರಾಣಿ. ನಸರಾಣಿ ]

**ನಹಿ** (ಅ). ನಿಷೇಧಾರ್ಥವನ್ನು ಸೂಚಿಸುವ ಸಂಸ್ಕೃತದ ಒಂದು ಅವ್ಯಯ ; ಇಲ್ಲ ;ನಾಸ್ತಿ : "ನಹಿ ನೋನ ಅ-ಈ ೪ ಅವ್ಯಯಗಳೂ . . . ಅಭಾವದಲ್ಲಿಯೂ ನಿಷೇಧದಲ್ಲಿಯೂ ಭೇದದಲ್ಲಿಯೂ ವರ್ತಿಸುವವು" (ಸಿದ್ಧಾಂತಿ. ೩೭೭) ; ವಿಶಾಲಮತಿಯೆ ನಿನ್ನ ಪೋಲುವ ಸತಿಯರು ಮಾಲೋಕದಿ ನಹಿ (ಯಾದವಾ. ೦೭).

ನಹಿನಹಿ (ದ್ವಿರುಕ್ತಿ) : ನಹಿನಹೀ ಎಂಬವ ಮಹಿಗೆ ಹೊರೆ (ಗಾದೆ). [ P ಇದು ಸಂಸ್ಕೃತದ ಎರಡು ಅವ್ಯಯಗಳು ಸೇರಿ ಆಗಿರುವ ಕೂಡುನುಡಿ ]

**ನಳ$_1$** 'ನಲ$_2$' ನೋ.

**ನಳ$_2$** (ನಾ). (ಉಕ) ೧. ನಾಳ ; ಕೊಳವೆ : ಮನೆಯ ಕೊಳಚೆನೀರು ಹೋಗಲು ನಳಗಳಿರುತ್ತವೆ (ಜಾಂ). ೨. ನಲ್ಲಿ ; ಕೊಳಾಯಿ : ಸಮಾಜಸುಧಾರಕರೆಂಬುವರೆಲ್ಲ ಮೊದಲು ಬೀದಿಯ ನಳಕ್ಕೆ ಬಂದು ಅಲ್ಲಿ ನಡೆಯುವ ಕಾರ್ಯಕಲಾಪಗಳನ್ನು ನೋಡುವುದು ಒಳ್ಳೇದು ! (ಗಾಳಿಗು. ೭೦) ; ಚಾಳಿನ ಕೊನೆಗೆ ಇದ್ದ ನಳದಿಂದ ನೀರು ತರುವದೆಂದರೆ ಜೀವದ ಮೇಲೆ ಬರುತ್ತಿತ್ತು (ಕೃಹಿಜ. ೩೯) ; ಅತ್ತಿಕೊಳ್ಳದಲ್ಲಿ ದೊಡ್ಡದೊಂದು ಕೆರೆ ಕಟ್ಟಿ ಊರೊಳಗೆ ನಳ ತರುವ ಆಲೋಚನೆಯು ನಡೆದದೆ (ಶಧಾಗಿ. ೪೩೫). [ ←ಮರಾ. ನಳ./ ಸಂ. ನಾಲ ]

**ನಳಕ** 'ನಲಕ' ನೋ.

**ನಳಕೂಬರ** 'ನಲಕೂಬರ' ನೋ.

**ನಳದ್ವಯ** (ನಾ). ಒಂದು ಬಗೆಯ ಸಸ್ಯ,-ಜೊಂಡು (?) : "ನಳಕ-ನಳದ್ವಯ, ಕಪ್ಪಲಿ" (ಒಷಧಿ. ೮೩). [ ಸಂ. ನಲದ್ವಯ ]

**ನಳನಳ** (ನಾ). ಕೋಮಲತೆ, ಮೃದುತ್ವ, ಸೌಂದರ್ಯ, ಕಾಂತಿಗಳನ್ನು ಸೂಚಿಸುವ ಒಂದು ಶಬ್ದ. 'ನಳನಳಿಕೆ', 'ನಳನಳಿಸು' ಪರಾ.

**ನಳನಳನೆ** (ಅ). ಮನೋಹರವಾಗಿ : ನೆಲ ಗಿರಿಯುಲ್ಲವು ಕಂಪಾಗೆ ಗಗನ ಕುಚ್ಛಳಿವ ಸುಗಂಧಕರ್ತಿಸುತ ನಳನಳನೀತಂದು ಗಿರಿಯ ಸಾರ್ದಾನೆಯಿಂದಿ ಳದನಂಗನೆಗೂಡಿ ಪಜ್ರಿ (ಭರತ. ೭೩-೧೩೭). [ ನಳನಳ + – ಅನೆ$_1$ ]

**ನಳನಳಿಕೆ** (ನಾ). ಕೋಮಲತೆ; ಮೃದುತ್ವ : "ನಳನಳಿಕೆಯೆಂದು ಕೋಮಲಂ" (ಕಶಸಾ. ೭೦-೭೦೩) ; "ನಳನಳಿಕೆಯನೆ ಕೋಮಲಂ" (ಕಶರ. ೩೩) ; ತುಂಬುರದಾಡನಾಥಂ ನಂಬಿಮುಣ್ಣಾನೇಜುಂಜವ್ವನದುರವಣೆ ಯುಮಂ ಸ್ವರೂಪಸೌಂದರ್ಯದ ನಳನಳಿಕೆಯುಮಂ . . . ದೃಷ್ಟಿಯ ದೈನ್ಯಮುಮನಟಿದು (ನಂಶಿರ. ೪-೦೦) ; ಸುಕುಮಾರಚೂಡಾಮಣಿಗೆ ಶೈಶವಂ ಕ್ರಮದೆ ಜಾಱಿ ಒತ್ತಿಸಿದ ಕೋಮಲಾಂಗದ ನಳನಳಿಕೆ . . . ಪೊಸಜವ್ವನಮನದೇಂ ಸೂಚಿಸಿದುವೊ (ಪದ್ಮರಾ. ೩-೨) ; ನಳನಳಿಕೆ ಯೊಳೊಡಗೂಡಿದರನೆ ಸಾಕು ಕೊರ್ವಕ್ಕಿಗಳ ಕೊರಳಂತೆ ಗಳರವ ತಾಡಸ ಸೀತ್ಕಾರ ಭೂಷಣದುಲುಹು ಪೆರ್ಚಿಹಃದೆನಲೇಕೆ (ಭರತ. ೧೦-೧೦೪).

[ ನಳನಳ + – ಇಕೆ ]

**ನಳನಳಿಕೆವೆಱು** (ಕ್ರಿ). ಕೋಮಲತೆಯನ್ನು ಹೊಂದು ; ಮೃದುತ್ವ ವನ್ನು ಪಡೆ: ಪರಿಕಾಲ್ಗಳಿಂ ಬಳಸಿದ ಪರಮಕ್ಕವಲ್ಲಿಕಲ್ಪತರುವೆಂಬಂತೆಸೆದು ನಳನಳಿಕೆವೆತ್ತ ವಿನುಳಕೋಮಳದಳತ್ರಯುವಿಳಸಿತ ಸರಳಶಾಖಾನಿಕಾಯಾ ಕಲಿತಬಿಲ್ವವೃಕ್ಷ (ಶಬಶಂ. ೩-೭೮ವ). [ ನಳನಳಿಕೆ + ವೆಱು$_1$ ]

**ನಳನಳಿಸು** (ಕ್ರಿ). ೧. ಕೋಮಲವಾಗಿರು ; ಮೃದುವಾಗಿರು ; ನವು ರಾಗಿರು : ವಿಳಸಿತಫಳಮಂಜರಿಯಿಂ ತಳೆದೊಪ್ಪುವ ಕಲ್ಪಲತೆಗೆ ಪಾಸಟಿ ಯಾದರ್ ನಳನಳಿಸುವ ಜನಿಶಿಶುವಂ ತಳೆದು ತಳತ್ತಳಿಪ ಹರಿಯ ವರವಧು ವಾಗಳ್ (ವರ್ಧಪು. ೧೩-೯೭) ; ನಳನಳಿಪಶೋಕೆಯ ತರುವಿನ ತಳಿರ ತೊಂಗಲು (ಹತಕಾ. ೩-೦೭) . ೨. ಕಾಂತಿಯುಕ್ತವಾಗು ; ಪ್ರಕಾಶ ಮಾನವಾಗು ; ತೇಜೋಮಯವಾಗು : ನಳನಳಿಸಿ ಬಳೆದು ವಿರಹಾನಳ ನಳಂಗುರ್ಗುಮಾ ವಿಳಾಸರಸದ ತರಂಗಾವಳಿಗಳನಿಟಿಸುವ ಮಧ್ಯದ ವಳಿಗಳ ನೀಕ್ಷಿಸಿದ ನೀಱರಂ ರುಕ್ಮಿಣಿಯಾ (ಜಗವಿ. ೦೦-೨೭) ; ಓರಂತೆ ನಳನಳಿಸಿ ತೊಳಗುತ್ತಿರ್ಪನೋರ್ವನೇ ರುದ್ರಂ (ಪದ್ಮರಾ. ೧೦-೪೭). ೩. ಸುಂದರ ವಾಗು ; ಚೆಲುವಾಗು ; ಸೊಂಪಾಗು : ನೆಱೆ ಬಣ್ಣಸಲ್ಪುಭವಂ ನೆಱೆಯಿಂ ಪೆಚಿರಳವೆ ಪೊಸಿವ ತರುಗಳಿಂ ಪಣ್ಗೊಂಚಗಳ ನೆಱಿವೀಂದು ಬಗೆ ಗಱಿಪೋಲ್ ನಳನಳಿಸುತೊಱಿಗಿ ತಾಱಿಗಿದ ಬನವಂ (ಲೋಕೋಪ. ೬-೩೦) ; ತಿಳಿಗೊಳನ ಬಳಸಿ ನಳನಳಿಸಿ ಬೆಳೆದೆಳಮಾವುಗಳ ತಳದ ವಲ್ಲಿಕಾ ಮಂಟಪದ . . . ಅಶೋಕೆಯ ತಳಿರ ತೊಂಗಲ ಗದ್ದುಗೆಯೊಳು . . . ಪಶುಪತಿಯಂತಿರಿರ್ದ ಮುನಿನಾಥ ಕಣ್ಗೆಸೆದಿರ್ದನು (ಹಕಶಾ. ೩-೬೭) ; ವಾತ್ತದಟ ವಲಯದೊಳೋಗದಿಂ ಕೀಲಿಸಿ ಪಜ್ಜಳಿಸುವ ಪಸುರ್ವಣಿ ಯಂಬ ತೆಱದಿ ನಳನಳಿಸುತ ತುಱುಗಿ ಬೆಳೆದ ಬಹಿರುದ್ಯಾನಂ ಕಣ್ಗೊಳಿಸಿದುದು (ಜಯುಕಾ. ೦-೪೫). ೪. ಸೊಗಸಾಗು ; ರುಚಿಕರವಾಗು : ನಳನಳಿಪ ಬಹುವಿಧದ ಭಕ್ಷಾವಳಿಯ ಹಡೆಗೆಗಳೋರಣಿಸಿ ಮುಂದಳಿಸಿ ಕೂಡಿದ . . . ಕೂಳ ರಾಶಿಯ ಬಂಡಿ ಜೋಡಿಸಿತು (ಕುಮ್ಯಾಳ. ೦೦-೨೫).

[ ನಳನಳ + – ಇಸು$_3$ ]

**ನಳಪಾಕ** (ನಾ). (ಅಲಂ) ಅತ್ಯಂತ ರುಚಿಕರವಾದ ಅಡುಗೆ ; P ನಳನು ರುಚಿಕರವಾದ ಅಡುಗೆ ಮಾಡುವುದರಲ್ಲಿ ತುಂಬಾ ಸಮರ್ಥನಾಗಿದ್ದ ನೆಂದು ಇತಿಹಾಸಪ್ರಸಿದ್ಧವಾಗಿದೆ : ಷಡ್ರಸಗಳನ್ನು ಸೇರಿಸಿ ನಳಪಾಕ-ಭೀಮಪಾಕಗಳನ್ನು ಇಳಿಸುವವರೇ ಪಾಕಕಲಾನಿಪುಣರು (ಜೀವಾಕ್ಕ. ೦೭೨) ; ಚಂದ್ರಿಯ ಅಡಿಗೆ ಎಂದರೆ ನಳಪಾಕ (ನಿಕಲು. ೪೦) ; ಸೀತೆಯ ನಳ ಪಾಕದಿಂದ ಹೊಟ್ಟೆಯಲ್ಲಿನ ವೈಶ್ವಾನರವನ್ನು ತಣಿಸೋಣ (ಸೀತಾರ. ೨೯). 'ಭೀಮಪಾಕ' ಪರಾ. [ ನಳ$_1$ (=ನಲ$_2$) + ಪಾಕ$_1$ ]

**ನಳವಿಮಾನ** 'ನಲವಿಮಾನ' ನೋ.

**ನಳಯೋಗ** (ನಾ). [ಜ್ಯೋತಿ] ಜಾತಕನ ಜನ್ಮಕಾಲದಲ್ಲಿ ಏಳುಗ್ರಹಗಳು ದ್ವಿಸ್ವಭಾವ ರಾಶಿಯಲ್ಲಿರುವುದು; P ಈ ನಳಯೋಗದಲ್ಲಿ ಹುಟ್ಟಿದ ವ್ಯಕ್ತಿ ಸಿರಿವಂತನಾಗಿ, ಸುಖಿಯಾಗಿ, ಚತುರನಾಗಿರುತ್ತಾನೆಯಾದರೂ ಅಂಗವಿಕಲನಾಗುತ್ತಾನೆಂದು ನಂಬಿಕೆಯಿದೆ : ಏಟುಗ್ರಹಂ . . . ದ್ವ್ಯಂಗರಾಶಿಯೊಳ್ ಕೂಡಿ ನಿಂದೊಡದು ನಳಯೋಗಂ (ಜಾತತಿ. ೦೩-೦) ; ದ್ವಿಸ್ವಭಾವರಾಶಿ (ಮಿಥುನ ಕನ್ಯಾ ಧನುಸ್ಸು ಮೀನ)ಗಳಲ್ಲಿ ಏಳುಗ್ರಹಗಳೂ ಇದ್ದರೆ ನಳಯೋಗ (ಜಾತತಿ. ೦೩-೦ ಟೀಕೆ).

[ ನಳ$_1$ (=ನಲ$_2$) + ಯೋಗ ]

**ನಳಸಂಯುತ** (ನಾ). ಜೊಂಡುಹುಲ್ಲಿನಿಂದ ತುಂಬಿದುದು : "ನಡ್ವಳಂ. ನಳಸಂಯುತಂ – ಈ ೨ ನಾ(ಣ)ನಲುಳ್ಳ ಭೂಮಿ." (ಹಲಾಯು. ೨೬-೪). [ ನಳ$_1$ (=ನಲ್$_2$) + ಸಂಯುತ ]

**ನಳಸಂವತ್ಸರ** (ನಾ). ಅರುವತ್ತು ಸಂವತ್ಸರಗಳಲ್ಲಿ ಐವತ್ತನೆಯದು : ನಳಸಂವತ್ಸರದೊಳ್ ಮ.೦ ಘಟಿಲೆನೆ ಮನುಜರ್ಗಮಧಿಕತೃಷೆ ತಾನಕ್ಕುಂ (ಅಟ್ಟಮ. ೬-೨೩). [ ನಳ$_1$ (=ನಲ್$_2$) + ಸಂವತ್ಸರ ]

**ನಳಸಮುದ್ಭವ** (ನಾ). [ಜ್ಯೋತಿ] ನಳಯೋಗದಲ್ಲಿ ಹುಟ್ಟಿದವನು : ಧನಪತಿ ಪದುಳಿದನೂನಾಂಗಿ ನಿಪುಣಮತಿ ನಳಸಮುದ್ಭವಂ (ಜಾತಕ. ೦೩-೧೨). [ ನಳ$_1$ ( = ನಲ್$_2$ ) + ಸಮುದ್ಭವ ]

**ನಳಿ$_1$** (ಕ್ರಿ). ೧. ಬಾಗು ; ಬಗ್ಗು ; ಡೊಂಕಾಗು : "ನಳಿ_ನಮನೇ" (ಶಮದಾ): ಪದುಳಂ ನಿಂದೆಡಗಯ್ಯೊಳೊತ್ತಿ ಘುಜಂ ಕೊಪ್ಪಂ ಪವಾಂಗುಷ್ಟ ಮೂಲದೊಳಿಟ್ಟೇಱಿಸೆ ಕಾಲದಂಡನಿಭಮಂ ಕೋದಂಡಮಂ . . . ಕೂರ್ಮೋನ್ನತ ಕರ್ಪರಂ ನಳಿದು ಬೆನ್ನಂ ಪತ್ತಿದೇಂ ಮಾಣ್ದುದೇ (ಪಂಪಾಮಾ. ೩-೮೬) ; ಶಿರದ ನರೆ ಮೆಯ್ಯ ತೆರೆ ಕಯ್ಯ ಕೋಲಿಂದೆಸೆಯೆ ಸುರುಳ್ದ ತನು ನಳಿತ ಬೆನು ಜೋಲ್ವ ಪುರ್ಬಿಂದೆಸೆಯೆ (ಇಳೆರ. ದೀ. ೩೦-೧೬) ; ಕಿಱುಗೊಂಬು ನಳಿದ ಬೆನ್ನಂ ಕಿಱುಕಿದ ಕೊಡೆಗೆಚ್ಚಲಲೆವ ಬಾಲಂ ತಳಮ್ಮೆ ಮೆಱೆಯೆ ಬಿಳಿದಾಗಿ ವಣಾದ ಕಱೆವೆಮ್ಮೆಯ ಪಿಂಡು ಪಳ್ಳಿಪಳ್ಳಿಯೊಳೆಸೆಗುಂ (ಸೂಕ್ತಿಸು. ೪-೬೦) ; ಕವಿದು ಹಳಚಿದುದುಭಯಬಲ ಶಿವಶಿವ ಮಹಾ ದೇವಮವು ಪದರಜ ರವಿಯ ಶಿಪಿದುದು ದಿವವನಳಿದುದು ನಳಿದನಹಿರಾಯ (ಕುಮಾ್ಭೀ. ೪ ಸೂಚನೆ). ೨. ಮಣಿ ; ನಮಸ್ಕರಿಸು ; ಶರಣಾಗು : "ನಳಿಯೆಂಬ ನುಡಿ ನಮಸ್ಕಾರಾರ್ಥದಲ್ಲಿ ಕಾಡಿನ ಸರವಿನಲ್ಲಿ ಸಲ್ಗುಂ" (ಸಂಜೀವ. ೨೮) ; ಕದನದೊಳಂದು ನಿನ್ನ ತರವಾರಿಯ ಬಾರಿಗೆ ಮೆಯ್ಯನೊಡ್ಡಲಾಱದೆ ನಳಿದಿನ್ನುವಂತದನೆ ಜಾನಿಸಿ ಜಾನಿಸಿ ಗಂಗ ತನ್ನ ನಂಬಿದ ಸುದತೀಕದಂಬದೆರ್ದೆ ಪೌವನೆವೋಗಿರೆ ಪುಲ್ಲೆಪೆಚ್ಚುವೆಚ್ಚದಪನಹನ್ನಿಗಂ ಕಿಗುಳ ದಾಮನರಣ್ಯಶರಣ್ಯವೃತ್ತಿಯಿಂ (ಎಕ. II, ೨೪೦-೨೩; 1176). ೩. ಬಳುಕು; ತೊನೆದಾಡು : ಕಾಲ್ ಬಳೆಯೆ ನಡು ನಳಿಯೆ ಕಳಲುತುಂ ಬಳಲುತುಂ . . . ಬಾದರತಿವೇಗದಿಂ (ಲೀಲಾವ. ೧೦-೯) ; ಮುಡಿ ಜಡಿಯೆ ಕುಂತಳಂ ಕುಣಿಯೆ ಕಡೆಗಣ್ ಹೊಳೆಪೆ ನಡು ನಳಿ[ಪಾಠಾಂ. ಮಣಿ]ಯೆ . . . ನೇವುರ ಝಣಂ ಝಣಮೆನಲು ಪನಿತೆಯರ ನಡುವೆ ಚೆಂಡಂ ಹೊಯ್ಯುತಿರ್ದಳೊಬ್ಬಳು ಕಾಮನಂಕಮಾಲೆಯ ಪಾಡುತ (ಹಕಳಾ. ೪-೦೩).

ನಳಿನಳಿ (ದ್ವಿರುಕ್ತಿ) : ಮದಸಿಂಧುರಭಾರಮನಾನಲಾಜದಳಿಪಿಂ ಬೆನ್ನಂ ನಳಿನಳಿದು ನಡೆವ ಹಯದಟಿಯಳವಂ ಕಂತು (ಆದಿಪು. ೦೫-೩೧).

[ ದೇ.॥ ತಮಿ. ನೆಳಿ; ಮಲ. ಞೆಳಿ; ಕೊಡ. ನೊಳ್ಗ ]

**ನಳಿ$_2$** (ನಾ). ೧. ಸೊಬಗು; ಚೆಲುವು : ತೊಳಗುತಿವೆ ತೋಟದಲಿ ತರ ತರ ಗುಲಾಬಿಹೂ . . . ಎಳೆಬಿಸಿಲು. ತಿಳಿಗಾಳಿ; ನೋಡಿಕೊಳ್ಳಲು ಮಾಲಿ; ಏಳಿ ಹೇಳುವುದು ಆ ನಳಿಯ ? (ಸುನೀತ. ೬-೮). (ಗು). ೨. ಕೋಮಲವಾದ ; ಮೃದುವಾದ. ೩. ಕಾಂತಿಯುಕ್ತವಾದ. 'ನಳಿದೊಳ್', 'ನಳಿಮೊಗ' ಪರಾ.

**ನಳಿ$_3$** 'ನಲ್ಲಿ$_1$' ನೋ.

**ನಳಿ$_4$** 'ನಲ್ಲಿ$_2$' ನೋ.

**ನಳಿಕೆ** (ನಾ). ೧. ಸಣ್ಣ ಕೊಳವೆಯಂಥ ಟೊಳ್ಳಾದ ಸಾಧನ ; ನಾಳ : ವಿವಿಧ ಬಗೆಯ ಉದ್ದೀಪನಕಾಲಕ್ಕೆ ಸಸ್ಯಗಳ ನಳಿಕೆಗಳು ವ್ಯಕ್ತಪಡಿಸುವ ಪ್ರತಿಕ್ರಿಯೆಯು ಪ್ರಾಣಿಗಳ ನರಗಳ ಪ್ರತಿಕ್ರಿಯೆಯಂತೆಯೇ ಇರುವುದೆಂಬುದನ್ನು ಅವರು ಯಶಸ್ವಿಯಾಗಿ ತೋರಿಸಿದರು (ಜಸ್ಮಕ. ೦೦೩). ೨. ಕೊಳವೆಗಳಿಂದ ತಯಾರಿಸಿದ ಪಂಜರ: ಬಲಪಂತರೆಲ್ಲ ನಳಿಕೆಯ ಕೀರನಂತೆ ಅವರು ದಿಕ್ಕಾಗಲಱಿಯರು (ಮೋಕ್ಷಮೂ. ೬೬-೨೬೯). [ ಸಂ. ನಲಿಕಾ ]

**ನಳಿಗೆ, ಲಳಗಿ, ಲಳಿಗೆ** (ನಾ). ೧.=ನಳಿಕೆ ೧ : "ನಳಿಗ (ಲಳಿಗ) – ನಾಲಿಕಾ (ನಲಕ) = ಕೊಳವೆ" (ತದ್ಭಕೋ. ೨೧) ; ನಳಿಗೆಯೊಳ್ ನಾಯ ಬಾಲವನು ಕಟ್ಟಲ್ತನ್ನ ನಳುಹ ಬಿಡದು (ತಮ್ಮಕಾ. ೧೦-೦೨) ; ನಾಯ ಬಾಲ ನಳಿಗೆಯಲ್ಲಿ ಹಾಕಿದ ಹಾಗೆ ಅವನ ಬುದ್ಧಿ ಎಂದಿಗಾದರೂ ಸರಿದಾರಿಗೆ ಬರುವುದಿದೆಯೇ ? (ತ್ಯಾಗಮ. ೧೨೦) ; ಪಿಸ್ತೂಲಿನ ನಳಿಗೆಯೊಂದು ಗಂಗಾರಾಮನ ಎದೆಯ ಕಡೆಗೆ ಗುರಿ ನೋಡುತ್ತಿತ್ತು (ವಿಧಿವ್ಯ. ೦೦೪) ; ಇಬ್ಬರೂ ಹುಕ್ಕೆಯ ನಳಿಗೆಗಳನ್ನು ಬಾಯಲ್ಲಿಟ್ಟುಕೊಂಡು ತುಸುಹೊತ್ತು ಸುಮ್ಮನೆ ಈಜಿಚೆಯರುಗಳಲ್ಲಿ ಒರಗಿದರು (ವಿಷ್ಣುಮ. ೧) ; ನಾಯಿಯ ಬಾಲ ನಳಿಗೆಯಲ್ಲಿ ಹಾಕಿದರೆ ಡೊಂಕು ಬಿಟ್ಟೀತೆ ? (ಗಾದೆ). ೨. ನೆಯ್ಗೆಯಲ್ಲಿ ಉಪಯೋಗಿಸುವ ಸಾಧನ; ಲಾಳಿ: ಊಕೆಯ ಮಾಡುವಾತನ ಕೆಯ್ಯ ಕುಂಚಿಗೆಯ ತುಂತುಱು ನುಂಗಿತ್ತು ನೆಯ್ವ ಅಣ್ಣನ ಕಣ್ಣ ಕೆಯ್ಯ ನ[ಪಾಠಾಂ. ಲ]ಳಿಗೆ ನುಂಗಿತ್ತು (ಗುಪ್ತಮಂ. ೪). ೩. ಬಲಿತ ಬಿದಿರು ; ಬೊಂಬು. ೪. ಬೊಂಬಿನಿಂದ ತಯಾರಿಸಿದ ಪಾತ್ರೆಯಂಥ ಸಾಧನ ; ಅಂಡೆ : ಉಗ್ರಮಾತಂಗ ದಂತಗಳಂ ಚಮರಿವಿಣಲಂ ಜೇನ ನಳಿಗೆಯಂ ಪೂತಿಬೆಕ್ಕಂ ಹರಿಶ್ಚಂದ್ರ ರಾಯಂಗೆ ಕಾಣಿಕೆಯನಿತ್ತಡಿಗೆಱಗುತಿರ್ದರಗ್ಗದ ಬೇಡಪಡೆಯೊಡೆಯರು (ಹಚಳಾ. ೩-೩): ತೈಲವನೊಂದು ನಳಿಗೆಯೊಳು ತುಂಬಿ (ವೀಶೈಪು. ೮-೮-೪೦); ಪುಲಿದೊವಲೆತಲೆಯ ಮಱಿ ಪೀಲಿವೊಱೆ ಜೇನ ನಳಿಗೆ ಬಲ್ಪಂದಿದಾಡೆಗಳ ಒಲಿದಿತ್ತು ಕಾಣಿಕೆಯನು ಕೈಮುಗಿದರಾ ಬಲದ ನಾಯಕರು ಕಂಪಿಲಗೆ (ಕುರಾಸಾಂ. ೨೬-೩೮) ; ಪುಲಿದೊಗಲ ಪೊಱೆ ಜೇನುತುಪ್ಪದ ನಳಿಗೆ ಮೇಣದ ಮುದ್ದೆ (ಸಾಳ್ವಭಾ. ೧೬-೬). ೫. ಒಂದು ಬಗೆಯ ಸುಗಂಧದ್ರವ್ಯ : "ನಾಳಿಕಾ – ನಳಿಕೆ, ಒಳ್ಳಿ, ತೆಂಗು, ಸೂರ್ಯಭಕ್ತ" (ಒಷಧಿ. ೮೫). **ಲಳಗಿ:** ೧. ಶ್ವಾನನ ತಂದು ಬಾಲ ನೀವಿ ಲಳಗಿಯೊಳು ತಾನಿಡಲದರಿಂದ ಮೇಣ್ ಸರಳಾಗುವದೇ (ವಿಶಾಸು. ೪೧-೦) ; ನಾಯಿಯ ಬಾಲವನ್ನು ಲಳಗಿಯಲ್ಲಿ ಹಾಕಿದರೂ ಅದರ ಡೊಂಕು ಹ್ಯಾಗೆ ಹೋದೀತು ? (ಮೋಹಿನೀ. ೪೯). **ಲಳಿಗೆ :** ೧. "ನಾಳಃ = ಲಳಿಗೆ" (ಕಾಶಕ್ಮ. ೩೧) ; ಬಿಳಿಯಕ್ಕಿವಿಟ್ಟ ಸೋದಿಸಿ ಮತ್ತೆ ಹರಿಯಣಕಿ ತಳಿದುಕೊಂಡು . . . ಲ[ಪಾಠಾಂ. ನ]ಳಿಗೆಯಂದದಿ ತಿರಿಹಿ ತಿರಿಹಿ ಮುಖಗೆಡದೆ ಹಪ್ಪಳವನೊತ್ತುವ ಹಾಗೆಯೊತ್ತಿ (ಸೂಪಶಾ. ೦-೪೮) ; ಹೊರಗ ಬಂದೂಕಿನ ಲಳಿಗೆಗಳು ಹಾಯ್ದಿವೆ (ಪ್ರಡಸ. ೧೮) ; ಶ್ವಾನದ ಬಾಲವ ಲಳಿಗೆಯೊಳಿಟ್ಟರೆ ಮಾಣದೆ ಸರಳವದಾಗೀತೆ ? (ಜನನಾ. ೦೦೨) ; ನಾನಿಯ ಮನಸ್ಸು ಲಳಿಗೆಯಲ್ಲಿ ಹಾಕಿದ ನಾಯಿಯ ಬಾಲದಂತೆ ಇದ್ದಿತು (ನಾಡಿಗೇ. ೦೦೬). ೩. ಕಳಿಲೆಯ ನಖದಲ್ಲಿ ಚಿವುಟಲಹುದು ಮುಂದೆ ಲಳಿಗೆ ಕೂರುಗುರಿಗಂಜುವುದೇ (ಮೋಹತ. ೦೦-೦೩) ; ಕಳಿಲೆಯನ್ನಖದಿ ಚಿವುಟಲು ಸುಲಭವುದು ಬಲಿದು ಲಳಿಗೆಯಾದೊಡೆಯ [ಯು] ಗುಗರ್ಳಿಗೆ ಸಾಧ್ಯವೆ (ನವಮೋ. ೧೧-೧೬). ೪. ಧಾರುಣಿಯೊಳಗೆ ಹೇಱಿನಕ್ಕಿ ಲಳಿಗೆಯ ಎಣ್ಣೆ ಹೂವು ಕಾಯಿ ಹಣ್ಣು ಮೊದಲಾದುದ ತಪ್ಪ ಸಾಧಿಸಿ ತರಿಸಿಕೊಂಡುಂಬ ಚಿಕ್ಕಮಕ್ಕಳಿಗೆಲ್ಲಿಯದೋ ನೆಟ್ಟನೆಯ ದೇವತ್ವ (ಮೋಕ್ಷಮೂ. ೧೦೪-೪೧೬) ; ತುಡುವೆಯ ಜೇನು ಕೋಲುಜೇನು ಹುತ್ತಜೇನು ಹೆಜ್ಜೇನು ಸಕ್ಕರೆಜೇನು ಯಿಂತಿವು ಮೊದಲಾದ ಜೇನುತುಪ್ಪದ ಲಳಿಗೆಗಳ ಸಾಲುವೊಱೆಯಿಂ . . . ಕಾಣಿಕೆಯನಿಕ್ಕಿ (ನನ್ನಚಾ. ೪-೦೪ ವ). [<ಸಂ. ನಲಿಕಾ. / ತುಳು. ನಳಿಗೆ]

**ನಳಿಗೊಂಬು** (ನಾ). ಕೋಮಲವಾದ ಕೊಂಬೆ ; ಎಳೆಸುದಾದ ರೆಂಬೆ : ಕವಲ್ತ ಕೊಂಬಿನ ಮಡವಡ್ಡಪಂದ ನಳಿಗೊಂಬಿನ ಪತ್ತುಗೆ ಜೋಲ್ವ ಬಳ್ಳಿಗೊಂಬಿನ ಬಳೆ ತೋರಗೊಂಬಿನ ನೊಗಂ ನಿಡುಗೊಂಬಿನ ಮೂಂಕು ಕಣ್ಗೆ ಚೆಲ್ವೆನೆ ನಡೆತಂದುವಂದಸುಗೆಯೆಂಬ ನೆಗಟ್ತೆಯ ತೇರ್ಗಳೆತ್ತಲುಂ (ಕಬ್ಬಿಗಕಾ. ೨೦೩). [ ನಳಿ$_2$ + ಕೊಂಬು$_1$ ]

**ನಳಿತೋಳ್** 'ನಳಿದೋಳ್' ನೋ.

**ನಳಿತೋಳು** 'ನಳಿದೋಳ್' ನೋ.

**ನಳಿದು** (ನಾ). ಬಾಗಿದುದು ; ಡೊಂಕಾದುದು ; ವಕ್ರವಾದುದು. 'ಕಡುನಳಿದು' ಪರ್ಯಾ. [<ನಳಿ₁]

**ನಳಿದೋಳ್, ನಳಿತೋಳ್, ನಳಿತೋಳು** (ನಾ). ಕೋಮಲವಾದ ತೋಳು ; ಮೃದುವಾದ ಬಾಹು : ನಳಿದೋಳ್ಗಳ್ ಶಾಖೆಯುಂ ಕಂದಳ ವೆಳದಳಿರಂ . . . ಸುಯ್ಗಂಪು ಕಂಪಂ ಮಿಗೆ ಸೊಗಯಿಸಿತಂಗೋದ್ಭವ ಶ್ರೀ ಜಗನ್ಮಂಗಳಶೃಂಗಾರಾಬ್ಧಿವೇಳಾವನಲತೆಯೆನೆ ಶುದ್ಧಾಂತಕಾಂತಾಜನಂ (ಪುಷ್ಪಪು. ೬-೨೯). **ನಳಿತೋಳ್ :** ಕುಂತಿ . . . ನಿಧಾನಮನೀಡಾಡು ವಂತೆ ಕೂಸಂ ಗಂಗೆಯೊಳೀಡಾಡಿ ಬಂದಳಿತ್ತ ಗಂಗಾದೇವಿಯುಮಾ ಕೂಸಂ ಮುಳುಗಲೀಯದೆ ತನ್ನ ತೆರೆಗಳೆಂಬ ನಳಿತೋಳ್ಗಳಿನೊಯ್ಯನೊಯ್ಯನೆ ತಟ್ಟಿ ಕೈಸಿ ತರೆ (ಪಂಪಭಾ. ೧-೯೩ ವ) ; ಮುಗುಳ್ಗಳಂ ಮಿಸುಗುವ ದಂತ ಪಂಕ್ತಿ ಲತೆಯಂ ನಳಿತೋಳ್ಗಳಿಂ ಪೋಲ್ತು ನಾಡೆ ರಂಜಿಸುವ ವಿಳಾಸಿನೀ ನಿಕರದಿಂ ಪೊಸಸುಗ್ಗಿ ಪೊಲಿರ್ದುದೋಲಗಂ (ಧರ್ಮಾಮೃ. ೪-೧೪೦) ; ತಾಮರಸಮಮುಖಿಯ ನಳಿತೋಳ್ ತಾಮರಸಬೆಡಂಗುವೆತ್ತು ಸಿರಿಸದ ಸುಮನೋದಾಮಕಮಂ ಗೆಲೆವಂದೆಸೆದು ಮಕರಧ್ವಜನ ಪಾಶಮನೆ ಸೊಗಯಿಸುಗುಂ (ಆಗವಿ. ೧೧-೩೨) ; ನಿಱುಗುರುಳ್ ಸೋರ್ಮುಡಿ . . . ನಳಿತೋಳ್ ಕಂದಳಂ . . . ಸೊರ್ಕುಂಗೋಗಿರೆ – ಇವು ಉಪಸರ್ಗಂ ಬೆರಸಿದ ಶಬ್ದಂಗಳ್ (ಶಶಾ. ೬೩-೧೧೬) ; ಕಂದನಾಡುವ ಬಾಲಲೀಲೆಯಂ ನೋಡಿ ತೊದಲೊಂದಿದಿನಿವಾತನುಱ್ ಕೇಳ್ದು ಮುದ್ದಿನ ಮುದ್ದೆಯಂದ ದಂಗವನೆತ್ತಿಕೊಂಡು ನಳಿತೋಳ್ಗಳಿಂದಪ್ಪಿ . . ಪಂಚೇಂದ್ರಿಯ ಪ್ರೀತಿಯಂ ಪಡೆವರಿನ್ನುವ ಕೃತರೊ (ಕೃಮಿಭಾ. ೧೮-೨೦) ; ಮಲ್ಲಸಾಧನೆಯಂತೆ ನಳಿ ತೋಳ್ಗಳಿಂದಪ್ಪಿಯುಲ್ಲಾಸವನು ತೋಱ್ ಬಿಟಗೆ (ಕಂಸವಿ. ೬-೦೨೨). **ನಳಿತೋಳು:** ವನಿತೆ ಹೊರಳಿದಳು ಶೋಕವ ತಾಳ್ದು . . . ನಳಿತೋಳನು ಕಿದಱಿದಳವನಿಯಲಿ ಹಲುಬಿದಳಧಿಮನ್ಯುವಿನಳಲಿನಲಿ (ಕುಮಾರವ್ಯಾ. ೬೦೩. ಪರಿ ೨೮೪) ; ಶೂರ್ಪಣಖಿ . . . ಹೊಳಹೊಳವ ನಿಡುಗಂಗಳಿನ ಕೋಮಲದ ಕದಪಿನ . . . ನಳಿತೋಳುಗಳ ಮಾನವವಿಲಸಿತಾಂಗದ ರೂಪ ಕೈಕೊಂಡೆಸೆದಳದಿರಿನಲಿ (ತೊರರಾ. ೩-೪-೩) ; ಮಿಸುವ ನದೀನಾರಿಯ ನಳಿತೋಳನಲೆಸೆವಿರ್ತಡಿಗಾಲುವೆ (ಜಯಚಾ. ೦-೩೮) ; ಕಂದರ್ಪ ನಗುತ ಬಾಲಿಸುತ ಸಂತಸದೊಳಂ ಚಂದದೆ ಪಿಡಿದು ರಾಜಿಸುವ ಇಂದೀವರವಾಂತ ಲತೆಯನೆ ತತ್ಕರದಿಂದೊಪ್ಪಿದುವು ನಳಿತೋಳು (ಕಂಸವಿ. ೯-೨೯); ನಳಿತೋಳ ತಲೆಗಿಂಬ ಮಾಡಿ ಪದಗಳ ನೀಡಿ ಸುಳಿಗುರುಳ ಚದರಿ ಕೆದರಿದ ಅಲಾಮಂಗಳಿಂ ಲಲನೆಯಿರಿರಲು (ಪಂಚಾರಾ. ೫-೪-೦೩). [ನಳಿ₃ + ತೋಳ್]

**ನಳಿನ** 'ನಲಿನ' ನೋ.

**ನಳಿನಕೋರಕ** (ನಾ). ತಾವರೆಯ ಮೊಗ್ಗು : ತಳಿರ ಕಕ್ಕಡದರುತ್ಪಳದ ತೋಮರದವರ್ ನಳಿನಕೋರಕದಿಟ್ಟಿಯವರು . . . ಬಳಸಿ ಕೈಮಾಡಿದರ್ ನೃಪನ (ಭೈರಪೇ. ೨-೪೮). [ಸಂ. ನಲಿನಕೋರಕ]

**ನಳಿನಗರ್ಭ** 'ನಲಿನಗರ್ಭ' ನೋ.

**ನಳಿನಗರ್ಭಾಂಡ** 'ನಲಿನಗರ್ಭಾಂಡ' ನೋ.

**ನಳಿನಜ** 'ನಲಿನಜ' ನೋ.

**ನಳಿನಜಾಂಡ** (ನಾ). ಬ್ರಹ್ಮಾಂಡ ; ಪ್ರಪಂಚ : ನಳಿನಜಾಂಡ ತಲೆಯ ತೂಗಿ ಮೋಹಿಸುತಿರಲು ಕೊಳಲನೂದಿ ಭ್ರಾಜಿಸುವ ಚೆಲುವ ಕೃಷ್ಣರಾಯನ ನೋಡಿ (ಪುರಂದ. ೫-೪೬ ಪಲ್ಲವಿ). [ಸಂ. ನಲಿನಜಾಂಡ]

**ನಳಿನದಳ** 'ನಲಿನದಲ' ನೋ.

**ನಳಿನದಳನಯನೆ** (ನಾ). ಕಮಲದ ಎಸಳಿನಂತೆ ಕಣ್ಣುಳ್ಳವಳು ; ಕಮಲಾಕ್ಷಿ : ನಳಿನದಳನಯನೆ ತನಗಾಗುಬ್ಬಿವರೆ ಕರತಳದೆ ವದನಮಂ ಮುಚ್ಚುತವಗ್ಗಲಿಸಿ ಪೊಱಮಡುವ ಗೋತ್ರಸ್ಖಲನೆಯ ಭಯದಿಂದೆ ಮುಚ್ಚಿದಂತೆಪೊಲಿರ್ದಳ್ (ಕಾದಂಬ. ೦೨೪). [ಸಂ. ನಲಿನದಲನಯನಾ]

**ನಳಿನದಳಪುಟ** (ನಾ). ಕಮಲದ ಎಲೆಯಿಂದ ಮಾಡಿದ ದೊನ್ನೆ : ನಳಿನದಳಪುಟದೆ ನೀರು ನಳಿನಿಗಳವು ರೂಪುಗೊಂಡು ಸುರಿದಪುವೆನೆ ಕಂಗೊಳಿಪ ಮರಕತದ ಕಳಶಂಗಳ ಜಲವಂ ಸುರಿದರವಾಳಕವಳಾನನ ಯರಾ (ಕಾದಂಪೂ. ೬೩). [ನಳಿನದಳ (= ನಲಿನದಲ) + ಪುಟ₂]

**ನಳಿನದಳಲೋಚನ** 'ನಲಿನದಲಲೋಚನ' ನೋ.

**ನಳಿನದಳಾಕ್ಷ** (ನಾ). ೧. ಕಮಲದ ಎಸಳಿನಂತೆ ಕಣ್ಣುಳ್ಳವನು. ೨. ಕೃಷ್ಣ : ನಳಿನದಳಾಕ್ಷಂ ರುಕ್ಮಿಣಿ ಸಲೆ ಭಾಗ್ಯಸಂಪ್ರಾನುಭಾವದಿಂದಂ ದಿನವಂ ಕಳೆಯುತ್ತಿರೆ (ರುಕ್ಮಿವ. ೯-೧೬೮). [ಸಂ. ನಲಿನದಲಾಕ್ಷ (ನಲಿನದಲ + ಅಕ್ಷಿ + –)]

**ನಳಿನದಳಾಯತಾಕ್ಷ** (ನಾ). ಕಮಲದ ಎಸಳಿನಂತೆ ವಿಶಾಲವಾದ ಕಣ್ಣುಳ್ಳವನು : ನಳಿನದಳಾಯತಾಕ್ಷನುರುವಕ್ಷನಿಭಾಹಿತವಧ್ಯನಕ್ಷರಾಡ್ಗಳ ನಳಮಾಲಿಕಾಪ್ರಭನಹಿಪ್ರಭುಸನ್ನಿಭಬಾಹುಯುಗ್ಮಂ . . . ನಿಟ್ಟೆದಿರಾಗಿ ನಿಲ್ವುದಂ (ಮಹಾನೇ. ೬-೩೮). [ಸಂ. ನಲಿನದಲಾಯತಾಕ್ಷ (ನಲಿನದಲ + ಆಯತ + ಅಕ್ಷಿ + –)]

**ನಳಿನದಳಾಯತಾಕ್ಷಿ** (ನಾ). ಕಮಲದ ಎಸಳಿನಂತೆ ವಿಶಾಲವಾದ ಕಣ್ಣುಳ್ಳವಳು: ನಳಿನದಳಾಯತಾಕ್ಷಿ . . . ಪೊಳೆವವತಂಸಪುಷ ರಜದಿಂ ಪೊರೆದಿರ್ದ ಕಪೋಲಪಟ್ಟಮಂ ತೊಳೆದಳನಾರತಂ ಸುರಿವ ಚಂದನಶೀತಲ ಹರ್ಷವಾರಿಯಿಂ (ಕಾದಂಬ. ೨೪೬). [ನಳಿನದಳ (=ನಲಿನದಲ) + ಆಯತಾಕ್ಷಿ]

**ನಳಿನದೃಶ** (ನಾ). ೧ ಕಮಲದಂತೆ ಕಣ್ಣುಳ್ಳವನು. ೨ ಕೃಷ್ಣ : ಜಲಧಿಯಲಿ ನಿಜಯೋಗ ನಿದ್ರಾಲಲನೆಗಭಿಮುಖನಾಗಿ ಪವಡಿಸಿ ನಳಿನದೃಶನಿರೆ ನಾಭಿನಳಿನ ದಲುದಯಿಸಿದನಜನು (ನಿಭಾಗ. ೧-೨-೨). [ಸಂ. ನಲಿನದೃಶ್]

**ನಳಿನದೃಶೆ** (ನಾ). ಕಮಲದಂತೆ ಕಣ್ಣುಳ್ಳವಳು : ಎಳೆಯ ಮಿಂಚಿನ ಕುಡಿಯ ಸೂಸುವ ನಳಿನದೃಶೆಯರು [ಪಾಠಾಂ. ನಯನದ] ಶಶಿಯ ಬಿಂಬವ ಹಳಿವ ಹುರುಡಿಸುವಬುಜಮುಖಿಯರು . . . ಕುರುರಾಯ ನೆಡವಂಕದಲಿ ವೋಹಿದರು (ಕುಮಾರವ್ಯಾ. ೮-೪೪). [ನಳಿನದೃಶ + – ಎ₃]

**ನಳಿನನಯನ** (ನಾ). ೧. ಕಮಲದಂತೆ ಇರುವ ಕಣ್ಣು : ಎಳೆಯ ಮಿಂಚಿನ ಕುಡಿಯ ಸೂಸುವ ನಳಿನನಯನದ [ಪಾಠಾಂ. ದೃಶೆಯರು] ಶಶಿಯ ಬಿಂಬವ ಹಳಿವ ಹುರುಡಿಸುವಬುಜಮುಖಿಯರು (ಕುಮಾರವ್ಯಾ. ೮-೪೪). ೨. ಕಮಲದಂತೆ ಕಣ್ಣುಳ್ಳವನು : ಶ್ಯಾಮಸುಂದರನೂ ಮಹಾಬಾಹುವೂ ನಳಿನ ನಯನನೂ ಆದ ಈತನು ನನಗೆ ತಕ್ಕ ಗಂಡ (ಪಕಥಾ. ೩೭). ೩. ವಿಷ್ಣು. [ನಳಿನ (= ನಲಿನ) + ನಯನ]

**ನಳಿನನಾಭ** 'ನಲಿನನಾಭ' ನೋ.

**ನಳಿನನಾಳ** (ನಾ). ತಾವರೆಯ ದಂಟು ; ಕಮಲದ ಕಾಂಡ,–ದೇಟು : ನಳಿನನಾಳವು ಗಜದ ಕೈಯೊಡನಳವಿಗೊಡಲಂತರವೆ (ಕುಮಾರವ್ಯಾ. ೪-೪) : ಬಳಿಕ ನೋಡುವೆ ದನುಜಗಿನುಜರ ಬಲುಹನೆನುತಾ ವೀರ ಲಂಕೆಯ ನಳಿನನಾಳವ ಭದ್ರಗಜ ಕೀಳ್ವಂತೆ ಕೀಳ್ವಗೆದ (ಛಾಶಿರಾ. ೧೧-೪೮) ; ಜಲವೆಲ್ಲ ಹರಿಮಯ ಶಿಲೆಯೆಲ್ಲ ಶಿವಮಯ ಮಳಲುಮಿಟ್ಟೆಗಳೆಲ್ಲ ಮಣೆಯ ಮಯವು ಬೆಳೆದಿಪ್ಪ ದರ್ಭೆಗಳು ಸಾಕ್ಷಾತ್ತು ಬ್ರಹ್ಮಮಯ ನಳಿನನಾಳವು ಸರ್ವ ವಿಷ್ಣು ಮಯವು (ಪುರಂದ. ೪-೪೦-೨). [ನಳಿನ (= ನಲಿನ) + ನಾಳ₁ (= ನಾಲ₁)]

**ನಳಿನನಿಭ** (ನಾ). ತಾವರೆಯಂತಿರುವುದು ; ಕಮಲಕ್ಕೆ ಸದೃಶವಾದುದು: ಕಾಂಚನಭಾಜನರತಮಭಿಕಾಂಚನಭಾಜನವೆನಿಪ್ಪ ಸುರುಚಿರಚರುವಿಂ ಸಂಚಿತ ಗಂಧನಡಿಗಳನಿನಸಂಚಿತಗುಣ ನಳಿನನಿಭಮನೊಸೆದರ್ಚಿಸಿದಂ (ಪುಷ್ಪಪು.೧೪-೬). [ಸಂ. ನಲಿನನಿಭ]

**ನಳಿನಪತ್ರ** (ನಾ). ತಾವರೆಯ ಎಲೆ : ದಿವಿಜಕುಲವಿಳಯಕಾಲಾನಲಂ ಬಪ್ಪಂತೆ ಹಾಲಾಹಳ ಸುಡುತ ಬರಲು . . . ಶಂಕರನು ಕರತಳದೊಳದ

ತಳೆದು ನೋಡಲು ನಳಿನಪತ್ರದೊಳು ಜಲಬಿಂದುವಂತೆ ತಲ್ಲಣಗೊಳಲು (ಲಕಿಸಾಂ. ೧೨-೧೪). [ ನಳಿನ(= ನಲಿನ) + ಪತ್ರ ]

**ನಳಿನಭವ** 'ನಲಿನಭವ' ನೋ.

**ನಳಿನಭವಾಂಗ** (ನಾ). ಬ್ರಹ್ಮನ ದೇಹ,-ಶರೀರ : ಮತ್ತಮಾ ಘನ ಸಮಯಂ ಗದಾಧರಮೂರ್ತಿಯಂತೆ ಘನಶ್ರೀಮನೋಜ್ಞಮುಂ ನಳಿನ ಭವಾಂಗದಂತೆ ಕಃದಂಬವಿತತಾವೋದವಾಹಮುಂ . . . ಎನಿಸಿರ್ದುದು (ರಾಜಶೇ. ೮-೧೧೮ ವ). [ ನಳಿನಭವ ( = ನಲಿನಭವ) + ಅಂಗ್ಯ ]

**ನಳಿನಭವಾಂಡ** 'ನಲಿನಭವಾಂಡ' ನೋ.

**ನಳಿನಮುಖಿ** 'ನಲಿನಮುಖಿ' ನೋ.

**ನಳಿನರಿಪು** (ನಾ). ಕಮಲದ ವೈರಿ ; ಚಂದ್ರ : ಬೆಳೆವುತಿರ್ದಾರು ಹರಿಣಪಕ್ಷದ ನಳಿನರಿಪುವಿನವೋಲ್ ಕುಮಾರರು (ಕುವ್ಯಾ.ಆ. ೩-೧೧) ; ಎಲೆ ಭಗೀರಥವಂಶ ವಾರುಧಿ ನಳಿನರಿಪು[ಪಾಠಾಂ. ಸವಿ]ಸುತ ಕೇಳು ಕರುಣಾಜಲಧಿಯಲ್ಲಾ ಕಾಯ್ದನನ್ವಯನಾಮಧಾರಕನ (ತೊರರಾ. ೬-೫-೦). [ ನಳಿನ ( = ನಲಿನ) + ರಿಪು ]

**ನಳಿನಲೋಚನ** (ನಾ). ೧. ಕಮಲದಂಥ ಕಣ್ಣುಳ್ಳವನು. ೨. ವಿಷ್ಣು : ನಳಿನಲೋಚನನಾರ್ದು ಶಾರ್ಙ್ಗವ ಬಲಿದು ಜೇವೊಡೆಗೆಯ್ಯೆ ಲೋಕ ವನಳರಿಸುವ ದನಿ ಮಾಯವಾದುದು (ಸಾಳ್ವಭಾ. ೩೦-೬೫). [ ನಳಿನ (= ನಲಿನ) + ಲೋಚನ ]

**ನಳಿನಲೋಚನೆ** 'ನಲಿನಲೋಚನೆ' ನೋ.

**ನಳಿನವದನೆ** (ನಾ). ಕಮಲದಂತೆ ಮುಖವುಳ್ಳವಳು ; ಸುಂದರಿ : ಕಳಸಕನ್ನಡಿ ಸಹಿತ ನಡೆಯಲಿ ನಳಿನವದನೆಯರೆಂದು ನೇಮಿಸಿದನುಪಹೀಪಾಲ (ಕುವ್ಯಾ.ಆ. ೬-೧೭). [ ಸಂ. ನಲಿನವದನಾ ]

**ನಳಿನವನ** (ನಾ). ಕಮಲಗಳ ಸಮೂಹ ; ತಾವರೆಗಳ ಗುಂಪು : ನಳಿನ ವನಶ್ರೀನಿವಹಂ ಕಳಹಂಸಂಬೆರಸು ಬಂದುದೆನೆ ಲತಿಕಾಕೋಮಳೆಯರ ನಡುವೊರ್ವಂ ನಿರ್ಮಳರೂಪಂ ದ್ವಿಜಕುಲೋತ್ತಮಂ ಬರುತಿರ್ದಂ (ಅನಂಪು. ೨-೩೯). [ ನಳಿನ (= ನಲಿನ) + ವನ ]

**ನಳಿನವೈರಿ** 'ನಲಿನವೈರಿ' ನೋ.

**ನಳಿನಶರ** (ನಾ). ಮನ್ಮಥ ; ಅನಂಗ : ದೇವರಾಜೇಂದ್ರಭೂಪತಿಚಂದ್ರನು ನಳಿನಶರನದಟ ಹರಪಾದಸರಸಿಜಭೃಂಗನೆಳೆಕೀರವಾಣಿ . . . ಶಚಿದೇವಿ ಯೆಂದೆಂಬ ಸತಿಸಹಿತ ರಾಜ್ಯವನಾಳುತ (ಪ್ರಾಭರಾ. ೯-೩೭). [ ನಳಿನ (= ನಲಿನ)+ ಶರ ]

**ನಳಿನಸಂಭವ** 'ನಲಿನಸಂಭವ' ನೋ.

**ನಳಿನಸಖ** 'ನಲಿನಸಖ' ನೋ.

**ನಳಿನಸಖನೇತ್ರ** (ನಾ). ಸೂರ್ಯನನ್ನು ಕಣ್ಣಾಗಿ ಉಳ್ಳವನು ; ಶಿವ : ನಳಿನಸಖನೇತ್ರನಿಹನುಮೆಯೊಳುಂ ಕ್ರೀಡಿಸುತ (ಲಕಿಸಾಂ. ೦೬-೦೩). [ ನಳಿನಸಖ (= ನಲಿನಸಖ) + ನೇತ್ರ ]

**ನಳಿನಸಖಸುತ** (ನಾ). ಕಮಲದ ಗೆಳೆಯನ ಮಗ ; ಸೂರ್ಯನ ಮಗ ; ಯಮ : ನಳಿನಸಖಸುತ ಕೋಪದಿಂದೆ ಸೇನಾಧಿಪತಿಗಳನೆಲ್ಲ ಬೇಗದಿಂ ಬಲಗೂಡಿ ಕಳುಹಲ್ಕೆ ತಳುವದವ್ವತಂದು ಕಾದಿ ಮುರಿದೋಡಲಾ ಯಮ ರಾಜ ತಾನೆ ಬಂದು ಮಲಹರನ ದೂತರೊಳು ಮಲಕಾಲ ಕಾದುತಿರೆ (ಪ್ರಾಭರಾ. ೦೬-೫). [ ನಳಿನಸಖ(= ನಲಿನಸಖ) + ಸುತ ]

**ನಳಿನಸಮಾಜ** (ನಾ). = ನಳಿನವನ : ನಳಿನಸಮಾಜಮುಳ್ಳಲರೆ ತಣ್ಣೆಲ ರೊಯ್ಯನೆ ತೀಡೆ ಚಕ್ರಸಂಕುಳಮುರುಲೀಲೆಯಿಂ ನೆರೆಯೆ ಮೆಲ್ಲನೆ ಪಾಟಿ ವಿಹಂಗರಾಜಿ ಕಿಂಚೆಳಗಖಿಲೋ:ರ್ವಿಯಂ ಪರೆದು ತಕ್ಕನೆ ತೀವೆ ನಿಳಿಂಪರಾಟ್ ದಿಶಾಚಳಶಿಖರಾಗ್ರದೊಳ್ಪೊಳಗುತೊಪ್ಪಿದನಂದು ಕರಂ ದಿವಾಕರಂ (ಉದ್ಭಟ. ೦೦-೬). [ ನಳಿನ (= ನಲಿನ) + ಸಮಾಜ ]

**ನಳಿನನಳಿನಬಾಣ** (ನಾ). ಕೋಮಲವಾದ ಕಮಲಪುಷ್ಪದ ಬಾಣವನ್ನುಳ್ಳ ವನು ; ಪುಷ್ಪಬಾಣ ; ಕಾಮ ; ಮನ್ಮಥ : ನಳಿನನಳಿನಬಾಣಂಗೆ ಕೂರ್ಸರಲಾಗಿ ತಾಗಿಯಾ ಲಲನೆಯರ ವಿರಹದಿಂ ನೋಯಿಸಲು ಮುನಿದವರು ಬಲುಗೋಪ್ಪದಿಂದೆ ಶಾಪಿಸಲು (ನವಮೋ. ೨೩-೦೫). [ ನಳಿ೨ + ನಳಿನ (= ನಲಿನ) + ಬಾಣ ]

**ನಳಿನಾಂಬಕೆ** (ನಾ). ಕಮಲದಂತೆ ಕಣ್ಣುಳ್ಳವಳು ; ಸುಂದರಿ : ಉಳಿದು ಸುಮಶಯನಮಂ ಮೇಣ್ ನಳಿನೀದಳದಿಂದೆ ರಚಿಸಿದೆದೆಗುಪ್ಪಸಮಂ ಬಳಲಿಕೆಯಂ ತಳೆದಾಗದೆ ನಳಿನಾಂಬಕೆ ನೀನದೆಂತು ಪೋದಪೆ ಬಿಸಿಲೊಳ್ (ಶಾಕುಂತ. ೪೧-೭೩). [ ಸಂ. ನಲಿನಾಂಬಕಾ ]

**ನಳಿನಾಕರ** (ನಾ). ಕಮಲಗಳ ಆವಾಸಸ್ಥಾನ ; ಕೊಳ ; ಸರೋವರ : ನಳಿನಾಕರಮುಂ ರಮೆಯುಂ ಜಳನಿಧಿಯುಂ ನಿರ್ಮಳೋರ್ವಿಯುಂ ಚಂದ್ರಮನುಂ ಕಳೆಯುಂ ಮೆಸೆವಂತೆ ಸಮಸಂದಿಳೇಶನುಂ ಕಾಂತೆಯುಂ ಕರಂ ಸೊಗಯಿಸುವರ್ (ಚಂದ್ರಪು. ೧೧-೧೧೪) ; ನಳಿನಾಕರಕ್ಕೆ ಬಂದು ಕೊಳ ದೊಳಲರ್ದಬ್ಜದಲರಂ ನಳಿನೇಕ್ಷಣೆ ಮುಡಿವೆನೆಂದು ಪುಗೆ . . . ಕಣ್ಗದೇಂ ರಂಜಿಸಿತೊ (ರಾಜಶೇ. ೧೦-೪೫ ವ). [ ನಳಿನ (= ನಲಿನ) + ಆಕರ೨ ]

**ನಳಿನಾಕ್ಷ** 'ನಲಿನಾಕ್ಷ' ನೋ.

**ನಳಿನಾಕ್ಷಿ** (ನಾ). ಕಮಲದಂತೆ ಕಣ್ಣುಳ್ಳವಳು ; ಕಮಲಾಕ್ಷಿ : ಹಾ ತರುಣಿ ನಳಿನಾಕ್ಷಿ ನಯಸುಪ್ರೀತಿಪೂರ್ವಕದಿಂದ ಕನಸಲಿ ಮಾತುದೋರದೆ ಬಂದು ನನ್ನಲಿ ಕರುಣದಿಂ ನೀನು (ನಳಕ. ೭-೯) ; ಕೆಳಗಣ ಮೇಗಣ ಪಲ್ಲಂ ಘಳಿಲನೆ ತಾಗಲ್ಕೆ ಕುಟ್ಟನಾಖ್ಯಂ ಮತ್ತಂ ನಳಿನಾಕ್ಷಿ ಪಲವು ಸೂಳಿಂದೆಳೆಯುಳೆ ಸೋಂಕು ತ್ರಮಂಗಲೆ ಖಾದನಮಕ್ಕುಂ (ಶಾಸ್ತ್ರಕಂ. ೩-೮೯). [ ಸಂ. ನಲಿನಾಕ್ಷೀ ]

**ನಳಿನಾನನೆ** (ನಾ). ಕಮಲದಂತೆ ಮುಖವುಳ್ಳವಳು: ಗಳಯಿಸುತಿರೆ ನಯನ ವಾರಿ ನಿನ್ನಾನನದಿಂ ನಳಿನಾನನೆ ನೀನಿರೆ ಕುರುಕುಳಾಂತಕಂ ಗಳಿತಕೋಪನೇ [ ಕಲಿ ]ಭೀಮಂ (ಗದಾಯು. ೦-೬೩). [ ಸಂ. ನಲಿನಾನನಾ ]

**ನಳಿನಾಭಿನಳಿನ** (ನಾ). ಕೋಮಲವಾದ ನಾಭಿಯಲ್ಲಿರುವ ಕಮಲ ; ವಿಷ್ಣುವಿನ ಹೊಕ್ಕುಳಿನಲ್ಲಿರುವ ತಾವರೆ : ಹರಿಯ ನಳಿನಾಭಿನಳಿನಂ ವಿರಂಚಿಯುಂ ಪಡೆಮುದರ್ಕೆ ಪುರುಡಿಸಿ ತಾನಾ ಪರಿಯನೆ ಪಡೆದವೊಲೆಸೆದುದು ಸರೋವರಾವರ್ತನಳಿನಮೊಂದಳಿಗರ್ಭಂ (ಅರ್ಜನೀ. ೫-೧೦೩). [ ನಳಿ೨ + ನಾಭಿ + ನಳಿನ (= ನಲಿನ) ]

**ನಳಿನಾರಿ** (ನಾ). = ನಳಿನರಿಪು. 'ನಳಿನಾರಿಧರ' ಪರಾ. [ ನಳಿನ (= ನಲಿನ) + ಅರಿ೨ ]

**ನಳಿನಾರಿಧರ** (ನಾ). ಚಂದ್ರನನ್ನು ಧರಿಸಿದವನು ; ಶಿವ : ನಳಿನಾರಿಧರ ನಿಪ್ಪ ಕೈಲಾಸಗಿರಿಯಲ್ಲಿ . . . ಚೆಳವೆಟ್ಟಮಗಳರಸನಂ ಕೂರ್ತು ತಪದಿ ಮುನಿಗಳ ಶ್ರೇಷ್ಠ ಮಾರ್ಕಂಡ್ಯನಿರೆ (ಪ್ರಾಭರಾ. ೦೦-೧೮). [ ಸಂ. ನಲಿನಾರಿಧರ ]

**ನಳಿನಿ** 'ನಲಿನಿ' ನೋ.

**ನಳಿನೀಗರ್ಭ** (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ. 'ನಳಿನೀ ಗರ್ಭಾಂಡ' ಪರಾ. [ ಸಂ. ನಲಿನೀಗರ್ಭ ]

**ನಳಿನೀಗರ್ಭಾಂಡ** (ನಾ). ಬ್ರಹ್ಮಾಂಡ ; ವಿಶ್ವ : ನಳಿನೀಗರ್ಭಾಂಡವಮಾಲಾ ಫಲಿತಮೆನಿಪ ಪೃಥ್ವೀಮಹಾವಲ್ಲಿಯಂ ತಾಂ ಬಳಸಿರ್ದಾಪಾಲದಂತಿರ್ಪುದು ಜಲಚರಸಂಭೂತಸಂಪದ್ವಿಧಾನಂ . . . ಪ್ರಬಳಘುಳುಘುಳುಧ್ವಾನಮಂಭೋ ನಿಧಾನಂ (ಜಗವಿ. ೦-೨೩). [ ಸಂ. ನಲಿನೀಗರ್ಭಾಂಡ ]

**ನಳಿನೀತೀರ** (ನಾ). ಕಮಲಗಳಿಂದ ಕೂಡಿದ ಸರೋವರದ ತೀರ,-ದಡ: ನಳಿನೀತೀರಲತಾಗೃಹಂಗಳ ನೆಬಲ್ ನೇರ್ಪಟ್ಟಿರಲ್ . . . ಎಳನೀರಿಂಟ ಪಥಾರ್ತರಿರ್ಪರಳಿಕೇರಧ್ವಾನದುದ್ಯಾನದೊಳ್ (ಜಗವಿ. ೯-೮೮). [ ಸಂ. ನಲಿನೀತೀರ ]

**ನಳಿನೀದಳ** (ನಾ). ೧. ಕಮಲದಳ; ತಾವರೆಯ ಎಸಳು: ಉಳಿದು ಸುಮಶಯನಮಂ ಮೇಣ್ ನಳಿನೀದಳದಿಂದೆ ರಚಿಸಿದೆಡೆಗಃಪ್ಪಸವಂ ಬಳಲಿಕೆಯಿಂ ತಳೆದಂಗದೆ ನಳಿನಾಂಬಕಿ ನೀನದೆಂತು ಪೋದಪೆ ಬಿಸಿಲೊಳ್ (ಶಾಕುಂತ. ೯೧-೭೩). ೨. ಕಮಲಪತ್ರ; ತಾವರೆಯ ಎಲೆ. 'ನಳಿನೀದಳತಾಳವೃಂತ' ಪರಾ. [ ಸಂ. ನಲಿನೀದಲ ]

**ನಳಿನೀದಳತಾಳವೃಂತ** (ನಾ). ಕಮಲಪತ್ರಗಳಿಂದ ತಯಾರಿಸಿದ ಬೀಸಣಿಗೆ: ಬಳಲಿಕೆ ಪಿಂಗುವಂತೆ ನಿನಗಾಂ ನಳಿನೀದಳತಾಳವೃಂತದಿಂ ಸುಳಿಯಿಪೆನೇಂ ಕುಳಿರ್ವಗಾಳಿಯ ತಂಬೆಲರಂ (ಶಾಕುಂತ. ೯೧-೭೨).
[ ನಳಿನೀದಳ + ತಾಳವೃಂತ (= ತಾಲವೃಂತ) ]

**ನಳಿನೀಪತ್ರ** (ನಾ). = ನಳಿನೀದಳ ೨: ನಳಿನೀಪತ್ರಾಂಶುಕಃಚ್ಛಾದಿತಕುಚಯುಗಳಂ ಚಂದನಾಪಾಂಡುಗಾಡಸ್ಥಳಯುಗ್ಮಂ ... ಭೋಂಕನೆ ಪೊಱಮಡುತಿರ್ದತ್ತು ಕಾಂತಾಕದಂಬಂ (ಕಾದಂಬ. ೨೦೦) : ನಳಿನೀಪತ್ರಗತಾಂಬುವೋಲ್ ನಡುಗಿತೀ ವಿಶ್ವಾವನೀಮಂಡಲಂ . . . ಭೂಭಾಗವಂ ಬಳಸಿತ್ತಾ ವಿಜಯಪ್ರಯಾಣಜನಿತಂ ಪ್ರಸ್ಥಾನಭೇರೀರವಂ (ಸೂಕ್ತಿಸು. ೧೮-೧೩).
[ ಸಂ. ನಲಿನೀಪತ್ರ ]

**ನಳಿನೀಮಿತ್ರ** 'ನಲಿನೀಮಿತ್ರ' ನೋ.

**ನಳಿನೀರೇಣು** (ನಾ). ಕಮಲದ ಹೂವಿನ ಪರಾಗ,-ಧೂಳಿ: ನಳಿನೀರೇಣುಗಳಂ ಒಟ್ಟಿಲ್ದಲರ್ಗಳಂ ಶೀಲ್ಗಳಿ ನಾದಂಗಳಂ ತಳೆದತ್ತಂ ಪಟವಾಸಮಂ ಕೆದಱುತುಂ . . . ಇದಿರ್ವಂದತ್ತೊಂದು ಮಂದಾನಿಳಂ (ಜಗವಿ. ೦೪-೫೩).
[ ಸಂ. ನಲಿನೀರೇಣು ]

**ನಳಿನೇಕ್ಷಣೆ** (ನಾ). = ನಳಿನದೃಶೆ: ರಜನಿಗಳ್ಗೆಂದವದಿಂಬತ್ರುಜದಿಂ ಜ್ಯೋತ್ಸ್ನಾಪ್ರವಾಹಮಂ ಪಸರಿಪವೋಲ್ ರಜತಕಳಶಂಗಳಿಂ ಮಳಯಜಜಳಮಂ ಸುರಿದರಸಿತನಳಿನೇಕ್ಷಣೆಯರ್ (ಕಾದಂಪೂ. ೭೪).
[ ಸಂ. ನಲಿನೇಕ್ಷಣಾ ]

**ನಳಿನೋದರ** (ನಾ). ಹೊಟ್ಟೆಯಲ್ಲಿ ತಾವರೆಯನ್ನು ಉಳ್ಳವನು; ವಿಷ್ಣು: ಜಲಧಿಶಯನ ರವಿಚಂದ್ರವಿಲೋಚನ ಜಲರುಹಭವನುತ ಚರಣಯುಗ ಬಲಿಬಂಧನ ಗೋವರ್ಧನೋದ್ಧಾರ ನಳಿನೋದರ ತೇ ನಮೋ ನಮೋ (ಪುರಂದ. ೩-೯೧-೨).
[ ನಳಿನ (= ನಲಿನ) + ಉದರ ]

**ನಳಿಮೊಗ** (ನಾ). ಕಾಂತಿಯುಕ್ತವಾದ ಮುಖ: ಎಳವಿದಿರ ಬಣ್ಣವೊಳ್ನಡುಕಳಕಮನವ್ವಳಿಪ ಮೊಳೆ ಪೊದಟಿಸುವ ಬಾಯ್ ಬಳಸುವ ಕಣ್ ವಿಳಿರ್ವ ಕುರುಳ್ ನಳಿಮೊಗವೆನೆ ಸೊಬಗಿವಲ್ಲ ನಾಟ್ಯರ್ತನವೇ (ಆದಿಪು. ೪-೪೪).
[ ನಳಿ$_2$ + ಮೊಗ ]

**ನಳು** (ನಾ). ತಗ್ಗಾದ ಪ್ರದೇಶ; ಹಳ್ಳ: ಇಡುಸುಱಿನೊಳು ಕುಸಿದು ಹೊದಱಿನೊಳು ನುಸುಳಿ ನಳುವಿ[ಪಾಠಾಂ. ಕಪ್ಪಿ]ನೊಳಡಗಿ ನಾಳಲೊಳು ಪೊಕ್ಕು . . . ಅದಟುಗಟ್ಟು ಬೆಂಡಾದಸುಖಿಗಳನುಗ್ರದಳಲ ಬೇಸಱ ಬೇಗೆಗಿಚ್ಚು ವಿಶ್ವಾಮಿತ್ರಮುನಿಯನೆಯ್ದದೆ ಮಾಣದು (ಹರಿಶ್ಚ. ೯-೩೩).
[ < ನಳಿ$_1$ ]

**ನಳುರವಾಡಿ** (ನಾ). ಒಂದು ಊರಿನ ಹೆಸರು: ನಳುರವಾಡಿಯ ಬಯಲೊಳ್ ಕೀರ್ತ್ತಿವಾತ್ತಾಣ್ಡದೇವರಿಗೆ ಪಡುವಣಕಡೆಯಿಂ ತೆಂಕಣ ತೆಂಬಡಗಣ ತೆವರಿಂ ಮೂಡಲ್ಕೆಪತ್ತೆರಡು ಗೇಣ ಗಳೆಯಲೊಂದು ಮತ್ತರುಮನ್ . . . ಸರ್ವ್ವನಮಸ್ಯಂ ಮಾಡಿ ಕೊಟ್ಟನ್ (ಎಕ. VIII, ಸಾಗರ. ೧೧೯-೬೨; 1042). [ ? + ವಾಡಿ$_1$ (< ಪಾಡಿ$_2$) ]

**ನಳುಹು** (ನಾ). ಬಾಗಿರುವಿಕೆ; ಡೊಂಕು; ವಕ್ರತೆ: ನಳಿಗೆಯೊಳ್ ನಾಯಬಾಲವನು ಕಟ್ಟಲ್ಕನ್ನ ನಳುಹ ಬಿಡದಂತೆ (ಸಮ್ಯಕ್ತ್ವ. ೦೦-೧೨).
[ < ನಳಿ$_1$ + -ಹು$_2$ ]

**ನಳಿಯಿಸು** (ಕ್ರಿ). ನಡೆಸು; ಮುಂದುವರಿಸು: ಈ ಶ್ರೀಧರ್ಮಂ ನಳಿಯಿಸಿದಾತಂ ತುಳಾಪುರುಷವಿಟ್ಟು ಅಸ್ವಮೇಧಂಗೆಯ್ದು ಫಲಮನ್ನೆದುವಂ (ಎಕ. XI, ಚಿತ್ರದು. ೭೪-೩೨; 968).
[ P ಇದು 'ನಡೆಯಿಸು' ಎಂಬುದರ ಅಪಲಿಖಿತವಿರಬಹುದು ]

**ನಳ್ಗಿಸು** 'ನೆಗ್ಗಿಸು' ನೋ.

**ನಳ್ಗು** 'ನಱುಂಕು' ನೋ.

**ನಳ್ಳಿ$_1$** (ನಾ). ಹತ್ತುಕಾಲಿನ, ಗಡಸುಚರ್ಮದ ಒಂದು ಬಗೆಯ ಸಣ್ಣ ಜಲಚರ ಪ್ರಾಣಿ; ಎಸಡು; ಏಡಿ: "ಊರ್ಧ್ವದೃಕ್-ನಳ್ಳಿ" (ಒಷಧಿ. ೧೭); ಲಿಂಗನಿಷ್ಠಾಂಗಿ ವಚನವ ಹಾಡಿದರೆ ಒಪ್ಪುವರಲ್ಲದೆ ಲಿಂಗನಿಷ್ಠಾಹೀನರು ಓದಿ ಹಾಡಿದರೆ ನಳ್ಳಿ ಗುಳ್ಳೆಯ ತಿಂದ ನರಿ ಹಳ್ಳದ ತಡಿಯಲ್ಲಿ ಬಳ್ಳಿಟ್ಟು ಬಗುಳಿದಂತೆ ಏನೆಂದೂ ಪಾಟವಾದರಯ್ಯಾ (ಸಿದ್ಧೇಶ. ೬೩-೨೦೯); ಭೂನುತ ಭುಜಬಲರಿದ್ದು ಗೆಲಲು ಬಾರದೀ ನಳ್ಳಿ ಗುಳ್ಳೆ ವಿವಾಸಗಳ ಸೇನೆ ಏಡಿದು ಗೆಲ್ವೆನೆಂದು ಹೊಕ್ಕೆಯಲಾ ಈ ನೀರ ನಡುಮಡುವಿನೊಳು (ನೇಮಿಷಂ. ೩೦-೮೩); ತಾಯಿನಳ್ಳಿಯ ಒಡಲನ್ನು ಅದರ ಮರಿಗಳು ಸೀಳುವುದರ ಹಾಗೆ ಈ ಅಂಬುಗಳು ನನ್ನ ಪ್ರಾಣವನ್ನು ಸಂಕಟಪಡಿಸುತ್ತಿವೆ (ವ್ಯಾಸಭಾ. ೩೬೨); ಶೀಗಡಿ, ನಳ್ಳಿ, ಏಡಿ ಮತ್ತು ಅವುಗಳ ಸಂಬಂಧಿಗಳಿಗೆ ೫ ಜೊತೆ ಕಾಲುಗಳು (ಕೀಟಬ. ೦೫); ಸಮುದ್ರದ ನಳ್ಳಿಯ ಪಲ್ಯ . . . ಬೆಣ್ಣೆ - ರುಚಿರುಚಿಯಾದ ಈ ಭಕ್ಷ್ಯಗಳು ಭೋಜನ ವೇಳಿದ್ದುವು (ಪುನರು. ೦೦೪); ದೂರದರ್ಶಕದಲ್ಲಿ ನೋಡಿದರೆ ಈ ಗುಚ್ಛಗಳು ಅನೇಕ ವೇಳೆ ಕಿರೀಟಗಳಂತೆಯೂ ಮಾನುಗಳಂತೆಯೂ ನಳ್ಳಿಗಳಂತೆಯೂ . . . ಮೆರೆಯುತ್ತಿರುವುವು (ಜ್ಯೋತಿರ್ವಿ. ೭೪); ನಳ್ಳೀ ರಾಗಕ್ಕೆ ನರಿ ತಲೆ ತೂಗಿದ ಹಾಗೆ (ಗಾದೆ).
[ ದೇ.॥ ತಮಿ. ನಳ್ಳಿ, ನಳಿರ್, ಞಣ್ಡು, ಞೆಣ್ಡು, ನಣ್ಡು; ಮಲ. ಞಣ್ಡು, ನಣ್ಡು ]

**ನಳ್ಳಿ$_2$** 'ನಲ್ಲಿ$_1$' ನೋ.

**ನಳ್ಳಿಕೈವಾರ** (ನಾ). ಬಾಗಿರುವ ಕೈವಾರ; ಬಗ್ಗಿರುವ ವೃತ್ತರೇಖಕ: "ಕೀಲು ಹಾಕಿ ಅಳವಡಿಸಿರುವ ತೋಳುಗಳುಳ್ಳ ಕೈವಾರ; ಬಿಲ್ಲು ಕೈವಾರ; ನಳ್ಳಿಕೈವಾರ" (Bows, Bow-Compass(es). ಇಂಕನಿ).
[ < ನಳ್ಳಿ$_1$ + ಕೈವಾರ$_2$ (< ಕೆಯ್ವಾರ$_2$) ]

**ನಳ್ಳಿಮೂಗು** (ನಾ). ಡೊಂಕಾದ ಮೂಗು; ವಕ್ರವಾದ ನಾಸಿಕ: ಬಾತಕಕ್ಕೆಯ ಬಲುಮುಕ್ಕರಿಹೊಟ್ಟೆಯ ಓತಿದಲೆಯ ಕೀನದನಿಯ ನಾತಪಡದ ತನುವಿನ ನಳ್ಳಿಮೂಗಿನ ಭೂತವೆ ನಡೆತಪ್ಪುತ ಮನೆಗೆ ಬರಲು (ನೇಮಿಷಂ. ೬-೦೦೫). [ < ನಳ್ಳಿ$_1$ + ಮೂಗು$_1$ ]

**ನಳ್ಳಿಸು** (ಕ್ರಿ). ತಗ್ಗು; ಬಗ್ಗು; ಬಾಗು: ಪಡೆಯ ಭಾರವ ತಾಳಲಾಱದೆ ಫಣಿಪತಿ ಪೆಡೆಯ ಪಲ್ಲಟಿಸಿ ಕಮಠನ ನಡುಬೆನ್ನು ನಳ್ಳಿಸೆ ನಲವಿಂದ ಕುವರನಂದೊಡನಿಕ್ಕಿದನು ಧಾಳಿಯನು (ಕುಮಾರಾಮ. ೦೦-೩೦).
[ < ನಳ್ಳಿ$_1$ + -ಇಸು$_3$ ]

**ನಳ್ಳು** (ನಾ). ಒಂದು ಬಗೆಯ ಜೊಂಡು; ನಾಣಲು. 'ನಳ್ಳುನೆಲ', 'ನಾನಲ್' ಪರಾ.

**ನಳ್ಳುನೆಲ** (ನಾ). ಜೊಂಡು ಬೆಳೆದಿರುವ ಪ್ರದೇಶ; ನಡ್ವಲ: "ನಡ್ವಳಂ ನಳಯುತಂ ನಳ್ಳುನೆಲನಕ್ಕು" (ಮಂಗರಾ. ೨೪-೨). [ ನಳ್ಳು + ನೆಲ ]

**ನಳ್ಳುಶಿಲೆ** (ನಾ). (?): ಅಲ್ಲಿಂದಂ ದಕ್ಷಿಣವಾಗಿ ಹೊಕ್ಕ ಓಲೇಹಳ್ಳಿ ಬೇವಿನ ಹಳ್ಳಿ ಪೊಂನಾಪುರ ಮುಗ್ಗಡ್ಡಿಯಲ್ಲಿ ವಾಮನಮುದ್ರೆ ನಳ್ಳುಶಿಲೆ (ಎಕ. XIV, ೨೨೯-೫೯೬; 1551). [ ? + ಶಿಲೆ ]

**ನಱಿಕು** 'ನಱುಂಕು' ನೋ.

**ನಱುವಾಡಿ** (ನಾ). ಒಂದು ನಾಡಿನ ಹೆಸರು: ಶ್ರೀಮನ್ಮಹಾಮಂಡಳೇಸ್ವರ ಬದ್ದಣಚೋಳಮಹಾರಾಜರು ಕನ್ನಿಮೂನೂಱುಂ ಪೆಡಕಲ್ಲೆಂಟುನೂಱು

ನಱವಾಡಿಯುಯುಕ್ಕ್ನಱವುಱುಜೆ ಮುನಃಱುವಿನ್ನು ನಾಲ್ಕುಂ ನಾಡುಮಂ ದುಷ್ಟನಿಗ್ರಹಂ ವಿಶಿಷ್ಟಪ್ರತಿಪಾಳನಂ ಗೆಯ್ದು ಬಿಡವಿತ್ತಿಯಿಂನಾಳುತ್ತುಂ (ಕಇಅ. ೧೧೬-೨೨-೧೮ : 1073). [ ? + ವಾಡಿ$_1$ (<ಪಾಡಿ$_2$) ]

**ನಱುಬ್ಬೆಗವುಂಡಿ** (ನಾ). ಒಬ್ಬಾಕೆಯ ಹೆಸರು : ತವುದಟ್ಟಿಗೆ ನಱುಬ್ಬೆಗವುಣ್ಡಿಯ ವಂಗ ಅಪ್ಪಣ್ಣಗವುಣ್ಡ ತನೂರಟುವ ಕಂಡು ಕೆಱುವಳಿ ತಱುಸಂನ್ದು ಸ್ವರ್ಗ್ಗಕ್ಕೆ ಸಂದನ್ (ಎಕ VIII, ಸೊರಬ. ೨೬೪-೯ ; 999). [ ? + ಗವುಂಡಿ (<ಗಾವುಂಡಿ) ]

**ನಱುಲಕೆಱೆ** (ನಾ). ಒಂದು ಕೆರೆಯ ಹೆಸರು : ಅಪ್ಪಣಭಟ್ಟರು ಪಾದ ಪೂಜೆಗೊಟ್ಟ ದೇಸಿಗ ಪ್ರವಾಸಿನರಾಹಾರಸತ್ರಕ್ಕೆ ದೆವಸಲುಂ ಬ್ರಾಹ್ಮಣರುಣ್ಬಂತಾಗಿ ನಱುಲಕೆಱೆಯ ಕೆಳಗೆ ಕಚ್ಚವಿಯು ಗಡಿಂಬದಲು ಬಿಟ್ಟ ಗಟ್ಟಿ ಕಮ್ಮ ಅಯ್ವತ್ತು ೫೦ (ಎಕ. VII, ಶಿಕಾರಿ. ೧೬-೨೨ ; 1085). [ ? + ಕೆಱೆ$^3$ ]

**ನಱು**, ನರು (ನಾ). ೧. ಕಂಪು ; ಪರಿಮಳ ; ಸುವಾಸನೆ ; ಸೌರಭ. "ನಱು ಸೊಪಡು ಕಂಪು ನಾತಂ . . . ಸೌರಭ್ಯಮಕ್ಕು" (ಕವಿಕಂ. ೯೬) ; "ಸೌಸವಂ, ನಱು, ಕವ್ಮಿತು, ಸೊಪಡು, ಕಂಪು, ನಾತಂ, ಮಗಮಗಿಸು – ಈ ೭ ಪರಿಮಳಕ್ಕೆ ಪೆಸರ್" (ಕಶಸಾ. ೫೪-೧೬೭). 'ನಱುಮಂಡು', 'ನಱುಸುಯಿಲ್' ಪರಾ. (ಗು). ೨. ಕಂಪಿನಿಂದ ಕೂಡಿದ ; ಪರಿಮಳಯುಕ್ತವಾದ : ಸುರಗಿ ಸುರಹೊನ್ನೆ . . . ಸರಸಿರುಹ ಕುಮುದ ಪಾದರಿ ನಱುಸೇವಂತಿಗೆಯ ಹೂವಿನಂಗಡಿಯೆಸೆಗುಂ (ದಶಾವ. ೫-೫೨). ೩. ರಸವತ್ತಾದ ; ರಸಪೂರ್ಣವಾದ. 'ನಱುಗಬ್ಬು' ಪರಾ. ನರು : ೧. "ನರುಯೆನಲ್ಕೆ ಪರಿಮಳ" (ಕಶರ. ೫೩). ೨. 'ನರುಗಂಪು' ಪರಾ.

[ ದೇ.೫ ತಮಿ. ನಱ, ನಱವು, ನಱಾ, ನಱೈ; ಮಲ. ನಱು ]

**ನಱುಂಕು**, ನಗ್ಗು$_1$, ನರಿಕು, ನರುಕು, ನಳ್ಗು, ನಱಿಕು, ನಱುಕು, ನೆಕ್ಕು$_2$, ನೆಗ್ಗು$_1$, ನೆಗ್ಗು, ನೆಳ್ಗು, ನೆಟ್ಗು (ಕ್ರಿ). ೧. ಬೆಳವಣಿಗೆ ಕುಂಠಿತವಾಗು ; ನರಚಲಾಗು : ತುಱುಗಿ ತಳೆರ್ತ ಪೂತು ಫಲವಾದೆಲೆಯಿಕ್ಕಿ(ಕ್ಕ)ದ ಕೊಂಬುಗಳ್ ನೆಲಕ್ಕೊಱಗಿದ ನುಣ್ಪುವೆತ್ತ ಮಱನುಳ್ಳೆಡೆಯೊಳ್ ಜಳಮಕ್ಕುಮಲ್ಲಿಯೆಂದಱುವುದು ತಾಱುದಂಕಿದ ನಱುಂಕಿದ ಕೊಂಬೆಣಗಿರ್ದ ಪೊಟ್ಟೆಪೋದೊಱಗಿದ ವೃಕ್ಷದಿಂದಱುವುದಾಯೆಡೆಯೊಳ್ ಜಳಮಾಗದೆಂಬಾದಂ (ಲೋಕೋಪ. ೫-೪). ನೆಗ್ಗು$_1$ : ೨. ಕುಗ್ಗು ; ಕುಸಿ : ಅಗ್ಗಿಸಿದೊಡೆ ದಿಟವೆಂದೆಗ್ಗಱಿಯದ ನಗ್ಗದ ಹೆಗ್ಗರು ನುಗ್ಗುಗಳಂ ಬಗ್ಗಿಸಿ (ವೀರೇಶ. ೨-೨೭) ; ನಗ್ಗಿದವು ದಿಗ್ಗಜಂ ಜರ್ಜಿದುದು ಕಚ್ಛಪಾಂಗಂ (ಹಬಪು. ೨೮-೧೧). ೩. (ಪಾತ್ರೆ ಮುಂತಾದುವು) ಜಜ್ಜಿ ತಗ್ಗಾಗು,–ತಗ್ಗುಬೀಳು : ನಗ್ಗಿಹೋಗಿರುವ ಪಾತ್ರೆಗಳನ್ನೆಲ್ಲಾ ಸರಿಮಾಡಿಸಬೇಕು (ರೂಢಿ). ೪. ಪೆಟ್ಟುಬೀಳು : "ನಗ್ಗು = ಪೆಟ್ಟು ಹತ್ತು ; ಹೊಡತ ಬೀಳು" (ಜಾನಕೋ. ೯). ೫. ಕೆಳಕ್ಕೆ ಹಾರು : "ಧುಮುಕು, ಬೀಳು, ನೆಗೆ, ನಗ್ಗು, ಹಾರು, ಜಿಗಿ, ಎಗರು, ಎರಗು" (ಕಂನುಹು. ೮೬). ನರಿಕು : ೬. ಅರೆ ; ಜಜ್ಜು ; ಕುಟ್ಟು ; ಚೆಚ್ಚು : ಯಾರೋ ತಿಪ್ಪಾರೆಡ್ಡಿಯೆಂಬುವನನ್ನು ಆ ಹಿಂದಿನ ದಿನ ಅಲ್ಲಿ ಹೇಗೆ 'ನರಿಕಿ' ಹಾಕಿದರೆಂಬ ಪ್ರಸಂಗಕ್ಕೆ ಮೊದಲಾಗುವುದರೊಳಗಾಗಿ ಮಳೆಯ ಜೋರು ಸ್ವಲ್ಪ ಕಡಿಮೆಯಾಯಿತು(ಹಂಯಾತ್ರೆ. ೪೩). ನರುಕು : ೭. ಅಗಿ ; ಜಗಿ ; ನುಣ್ಣಗೆ ಮಾಡು ; ಮೆಲುಕಾಡಿಸು : ಕೆಲವರು ಸೂರ್ಯಕಾಂತಿಯ ಬೀಜಗಳನ್ನು ನರುಕಿ ತಿನ್ನುತ್ತಿದ್ದರು (ಪುನರು. ೪೬೯). ೮. ಕತ್ತರಿಸು ; ಚೂರುಮಾಡು : ಅಡಕೆಯನ್ನು ನರುಕು (ರೂಢಿ). ನಳ್ಗು : ೯. ಇಲ್ಲವಾಗು ; ಕಾಣದಂತಾಗು. 'ನಳ್ಗಿಸು' ಪರಾ. ನಱಿಕು : ೧೦. ಒತ್ತು ; ಅದುಮು : ತೊರೆದ ಮೊಲೆಯ ನಱಿಕುತೆ ಚೆಲ್ಲಕಣ್ಣೊಳು ಸುರಿವ ಸಂತಸಗಂಬನಿಗಳ ಒರಸುತೆ . . . ತರಳನ ಬಿಗಿಮುಟ್ಟಿದಳು ಮಾತೆ (ಶ್ರೀಭುತಿ. ೨೬-೩೦). ನಱುಕು : ೨. ತೊಗಲು ಸಡಲಿದ ಗಲ್ಲ ಬತ್ತಿದ ಪೆಗಲು ನಱುಕಿದ [ಪಾಠಾಂ. ನಲುಗಿದ] ನರೆತ ಮೊಸೆಯ ಜಗುಳ್ದ ಹಲುಗಳ . . . ಮುಪ್ಪಿನ ಮುಗುದನೀತನ ಕಾದ ಹೇಳಿದು ನಗೆಯ ಸುರಿದೈ ರಾಯ (ಕುವ್ಯಾಭೀ. ೧-೩೫). ೭. ಅಱುಚುವ ಮೇಕೆಗಳಂಬೆಗರೆವ ಗೋವು ನಱುಕುತೆಯುದ್ದವ ಮಹಿಷಿಗಳು (ನಾಗಳು. ೧೫-೫೫). ನೆಕ್ಕು$_2$ : ೧೧. ಒಳಸೇರು ; ಗುಳಿಬೀಳು ; ಹಳ್ಳವಾಗು ; ತಗ್ಗಾಗು : ಮಕರಂ ಬಾಯ್ದೆಱೆದಂದದಿಂ ಕೆಱೆದ ಬಾಯ್ ಪೇಱುರ್ದ ಕೊರ್ದಾಡೆ ನೆಕ್ಕ ಕದಂಪೆತ್ತಿದ ಪುರ್ವು . . . ಭಯದಮಾಯಾತ್ತ ರಾಕ್ಷಸೀರೂಪಕಂ (ಕಾವ್ಯಾವ. ೯೨೨) ; ಪೆಱ ಸೊಸಲಾಗೆ ನೆ[ಪಾಠಾಂ. ನೊ]ಕ್ಕ ನೊಸಲೊಳ್ಳಲೆಯುಪ್ಪೂಡಲಾಗೆ ನಿಟ್ಟೊಡಲ್ನಿಱುದಲೆಯಾಗೆಯೊಪ್ಪುದಲೆ . . . ಪೂತನಿ ಗೋಪಿಪೋಲಾಗೆ ಬೇಗದಿಂ ಬಂದು (ಅರ್ಧನೇ. ೬-೭೦); ನೆಕ್ಕ ಕದಂಪು ಕಂಪಿಪಧರಂ ವಿಗೆ ಕೆಂಪಡರ್ದಕ್ಷಿ . . . ಮರುಳ್ವಕ್ಕದ ನಿಟ್ಟೊಡಲ್ ಮಸೆದ ಕತ್ತಿಗೆ ಕಣ್ಗೊಲನಾದುವೆತ್ತಲುಂ (ವರ್ಧಪು. ೦೫-೩೮). ನೆಗ್ಗು$_1$ : ೨. ಬಲಭಾರಕ್ಕೆ ನೆಗ್ಗಿದುದಾ ರಣಭೂಮಿ (ತ್ರಿಪುಸಾಂ. ೨೦೫) ; ಕಚ್ಛಪಂ ನೆಗ್ಗಿದನುರಗಪತಿ ಕುಗ್ಗಿತು (ಬಸಪು. ೨೮-೫೬) ; ಆಳುಕಿತೀ ನಮ್ಮವರ ಭೀಮನ ಸುಳಿವಿನಲಿ ಸೊಪ್ಪಾದೆವರ್ಜುನನೆಳತಟಕೆ ನಿಲವೆಂತನುತ ನೆಗ್ಗಿದುದು ದುಗುಡದಲಿ (ಕುವ್ಯಾಕ. ೧೮-೨೫) ; ವೆಗ್ಗಳವಾಗಿ ಸೇನೆಯ ಕೊಂಡು ಹೋಹುದು ಮೊಗ್ಗಾಗಿ ನಡೆದು ಗೆಲ್ಲುವುದು ನೆಗ್ಗಿಹುದವರಿಗಾಗಳೆ ಕಿಚ್ಚ ಕಂಡೆದೆ ಭೊಗ್ಗನಿನ್ನೆಯ್ದಿ ನೀವೇವ (ಭರತ. ೩೦-೫) ; ಕರಿಘಟೆಯ ಮೊಗ್ಗರಂ ವರ ಸರೋವರ ಸಲಿಲಪಾನಕೆಳಿ ನೆಗ್ಗಿದಲ್ಲದೆ ಮಾಣದೆಂಬಿನಂ ಪೊಳಲ ಪೊಱಮಟ್ಟು ಬಂದವುದು (ಜೈಮಿಭಾ. ೩-೩೮) ; ನೆವವಿಲ್ಲದೆ ನೆಗ್ಗಿ ನೆಲಕೆಳದೊಱಲದೆ ಸವನಿಸುವುದು ಸಂತಸವನು (ಹರಿಬ. ೩-೨೪) ; ನಾಗೇಂದ್ರ ಕೂರ್ಮರ ಹೆಗಲುಗಳು ನೆಗ್ಗಿದವು (ಉತ್ತಕ. ೬-೪೭). ೩. ಬಂಗಾರದ ಪಾತ್ರೆಯನ್ನು ಒಮ್ಮೆ ಸಿಟ್ಟಿನಿಂದ ಎತ್ತಿ ಹಾಕಿದರೂ ಅದು ಒಡೆದು ಹೋಗುವದಿಲ್ಲ ; ಸ್ವಲ್ಪ ನೆಗ್ಗುವದು(ನೀಗಟ್ಟು. ೧೧೭). ೬. ಒಡಿದೊತ್ತಿಯೊದೆದೆಲುವ ನೆಗ್ಗಲಾ ಕಾಲದೊಳು (ವೀಕೃಪು. ೩-೧೪-೩೧) ; ನೆಗ್ಗಲೋ ಬ್ರಹ್ಮಾಂಡವಂ ಬ್ರಹ್ಮನೆಲುಗಳಂ ಸುಗ್ಗಮಾಡಲೋ (ಹಬಪು. ೩೦-೧೧) : ಆ ಆನೆ ಭೀಮಸೇನನ ಮೇಲೆ ಹಾಯ್ದು ಅವನ ರಥವನ್ನು ಕುದುರೆಗಳನ್ನು ನೆಗ್ಗಿ ಪುಡಿ ಮಾಡಿಬಿಟ್ಟಿತು (ವ್ಯಾಸಚಿ. ೩೮೧) ; ಹಿಡಿಂಬಾಸುತನು ಅವರನ್ನು ಲೆಕ್ಕಕ್ಕೆ ತಾರದೆ ನುಚ್ಚುನುರಿಯಾಗಿ ನೆಗ್ಗಿ ನಾಶಮಾಡಿದನು (ಭಾಮುಕ. ೧೮). ೯. ಕೃತಾಂತನ ದಾಳಿಗೆತ್ತಣ ವೀರವೋ ನೆಗ್ಗಿದವುನೆ ನಹುಗಳು (ಕುವ್ಯಾದ್ರೋ. ೨-೩೨) ; ಮನದ ಮದದಕ್ಕಱಿನ ವಿಷಯದ ನೆನಹು ನೆಗ್ಗಿತು . . . ಉದಿಸಿತವಳಾನನದಧಿಕಕ್ರೋಧಶಿಖಿ ಸಿಡಿದೊಗುವ ಕಿಡಿಗಳಲಿ (ತೊರರಾ. ೩-೪-೨೪) : ಪಱುದನೊಡನೆ ಮುಂದ ರತಿ ಶೋಕಾದಿಯಾದಾಱುಕಷಾಯ ನೆಗ್ಗಿದುವು (ಭರತ. ೭೭-೬೬). ೧೧. ಬಿಡೆ ಬಾದುಗೆಯ್ದೊಡರಿಸುವ ತಮ್ಮ ಕಡುಪಿಂದೆ ಒರೋರ್ವರಂ ತಿವಿಯೆ ನೆಗ್ಗಿರ್ದ ಕದಪಿಂದೆ ಹಾಸ್ಯ ಬೀಭತ್ಸಾದಿ ನಾನಾರಸಂಗಳಿಂದೊಂದಿದ ಜರದ್ವಿಳ ಧಾರ್ಮಿಕ ಜನಂಗಳಿಂ (ಕಾದಂಬ. ೨೭೧) ; ದೌಡೆಗಳು ನೆಗ್ಗಿರೆ ದಂತಗಳುದುರಿವೊಡದು ರಕ್ತವು ತೋರುತಿರೆ (ಕೂಲ್ಲಿಮೂ. ೮೭-೧) ; ಮುಗ್ಗಿ ಬೀಳುತ ಮತ್ತೆ ನೆಲ ತಾಂ ನೆಗ್ಗಲೋಡುತ (ದೇವಪು. ೦೪-೧೦೦) ; ೧೨. ಪುಡಿಯಾಗು ; ಚೂರಾಗು : ಮೊದಲ ಲಗ್ಗೆಗೆ ಮೂಱುಸಾವಿರ ತೇರು ನೆಗ್ಗಿದವೊಂದು ನಿಮಿಷದಲಿ (ಕುವ್ಯಾಭೀ. ೮-೪೮) ; ಸೀಸಕ ಸಿಡಿಯಲು ವಜ್ರಕವಚ ನೆಗ್ಗಲು ವಾಹಕರು ಬವರದೊಳಿಱುದಾಡಿ ಮಡಿದರು (ಕುರಾಸಾಂ. ೦೨-೨೨೦) ; ಸಿಡಿದ ಹುಬ್ಬಿನ ಕಡಿದ ತೋಳ್ಗಳ ನೆಗ್ಗಿದೆಲುಗಳ . . . ಒಡೆವ ನೆತ್ತಿಗಳಿಂದ ರಕುತದ ಮಡು ಹರಿಯೆ (ನಳಚ. ೯-೨೭) ; ಮಗ್ಗಿ ಮಡು ಕುದುರೆ ಸಾರಥಿ ಮಡಿದನಾ ರಥಾ ನೆಗ್ಗಿದುದು (ಜೈಮಿಭಾ. ೭-೪೬). ೧೩. ಕುಂದು ; ಕಡಿಮೆಯಾಗು ; ಕ್ಷೀಣಿಸು : ನೆಗ್ಗಿದಾಳ್ಗನ ದೆಸೆತದೊಣಗಿಲ ಬಾಯ ಭವನ ಕಂಡನಾ ದ್ರೋಣ (ಕುವ್ಯಾದ್ರೋ. ೫-೨೦):

ಕಾಮುಂಕತ್ನದ ನೆನಹು ನೆಗ್ಗದೆ ಪ್ರಾಣದೇವಸುರೇಂದ್ರನಳವಳಿದ (ತೊರರಾ. ೬-೨೬-೯) : ಸೆರೆ ಬಿಗಿದು ಗಂಟಲು ಗದುಗದಿಸಿ ನುಡಿ ನೆಗ್ಗಿ ತನು ನಡುಗಿ . . . ಕಣ್ಣಾಲಿ ನುಂಗುವಂತಿರಲಗನಿವಾಸಿಯಸೀಕ್ಷಿಸುತ್ತಿಂತೆಂದನಾ ದಕ್ಷ (ನಿಭಾಗ. ೪-೯-೪) ; ಬಗ್ಗಿದ ತಲೆಯ . . . ನೆಗ್ಗಿದ ಧೈರ್ಯದ ನಿಜತನಯನ ಕಂಡು ಕುಗ್ಗಿದಳೆದೆಯೊಳು ಕುಂತಿ (ಕರ್ಣಾವೃ. ೬-೨) ; ಅಂದವುಳ್ಳವನೆ ನಿನ್ನಧಟು ನೆಗ್ಗಿದವು (ಕಂಳ. ೮೨-೬). ೧೪. ಮುದುರಿಕೊಳ್ಳು ; ಸಂಕುಚಿಸು : ತಳತ ಚಿಂತೆಯ ಬಾಡಿಪಾಸ್ಯದ . . . ನೆಗ್ಗಿದಂಗದ ನಟ್ಟ ದೃಷ್ಟಿಗಳ ಬಲಿದ ಭೀತಿಯ ಕುತ್ತುದಲೆಗಳಲಿಳಿಯ ಪತಿಗಳು ಸತಿಯ ಬಯ್ಯುತ ಮುಳಿಯುತಿರ್ದರು ತತ್ಕುಮಾರನಿಗಧಿಕ ರೋಷದಲಿ (ಜೀವಂಜ. ೯-೧೮) ; ನೆಗ್ಗಿದವಯವದ ಅಗಿಯಲಲುಗುವ ತಲೆಯ ಮುಪ್ಪಿನ ಮುಗುದ ನೀತನ ಕಾದ ಹೇಳದು ನಗೆಯ ಸುರಿದೈ ರಾಯ ಕಟಕದೊಳೀದನಾ ದ್ರೋಣ (ಕುವ್ಯಾಭೀ. ೧-೩೩) : ಶಿವನ ಮೆಲ್ಲಡಿ ಸೋಂಕಲೊಡನೆ ಕೌಂತೇಯ ನವಯವಮೆಲ್ಲ ನೆಗ್ಗಿ ಮೈಮರೆದು ಚೀತರಿಸಿ ಕಣ್ದೆರೆದೆಜೆದು ನೋಡಿ (ಹಬಭು. ೩೬-೫೬). ೧೫. ಕಡಿಮೆಮಾಡು ; ತಗ್ಗಿಸು : ಬ್ರಿಟಿಷರ ಆಡಳಿತವು ಪ್ರಾರಂಭವಾದ ಮೇಲೆ ಗ್ರಾಮಪಂಚಾಯಿತಿಗಳ ಪ್ರಾಬಲ್ಯವನ್ನು ಆಗಲೇ ಸೂಚಿತವಾದಂತೆ – ನೆಗ್ಗಿದರು (ಕೃಷಿಶಿ. ೧೦೭) ; ಬನ್ನಿ ಕನ್ನಡ ನಾಡ ಗಡಿಮೂಲೆಯಿಂದ, ಹಳ್ಳಿಪಟ್ಟಣಗಳಿಂದ, ಸುಗ್ಗಿಗಾಳಿಗೆ ಹಿಗ್ಗಿ ಬೆಳ್ಗೊಡೆಗಳನ್ನು ನೆಗ್ಗಿ ನುಗ್ಗಿ ಬಹ ಬೂರಲದ ಮಾಲೆಯಂದ (ಪಡಬಂ. ೬೨-೮). ೧೬. ಇಲ್ಲವಾಗಿಸು ; ಇಲ್ಲದಂತೆ ಮಾಡು : ಮೃದ್ವಧುವಿತ್ತ ದಾಸಿಗರ ನೆಗ್ಗಿದುದೆ ವೈರಾಗ್ಯಮೆಂಬರು (ಗಗಣಾ. ೦೬-೨೮). ೧೭. ಹಳ್ಳವಾಗಿಸು; ತಗ್ಗುಮಾಡು : ತುಳಿದರೆ ಭೂಮಿ ನೆಗ್ಗುವ ದಂತಿ ಹೊಸ ವಜ್ರ ಹಳವತ್ತ ರಥವಾಜನಿಚಯ ತಳತ ಕೋರಿತದ ಪೊಂಬೆಳಗಿನ ಭಟರು ಸಂದಳಿಸಿತು ಖಳರಾಯನೊಡನೆ (ಪೋಣಶ. ೪೦-೬) ೧೮. ಬಾಗು ; ಬಗ್ಗು : ಮೊರೆದೆರಗುವ ಭೃಂಗಾವಳಿಯಡಿಯಿಂ ನೆಗ್ಗಿದ ಮಾವಿನ ಕೊನರಿದನೆ ಖತುಗೆ ಮಂಗಳಮೆಂಬಂ (ಶಾಕುಂತ. ೬೯-೦೩೩). ೧೯. ನಾಶಮಾಡು ; ಧ್ವಂಸಮಾಡು ; ಹಾಳುಮಾಡು : ಇಪ್ಪತ್ತೈದು ಸಾವಿರ ಬಾರ್ವಾಕರಂ ನೆಗ್ಗಲೊತ್ತಿ ಅಪ್ರತಿಮ ಶಿವಗಣಂಗಳ ಮಹಾತ್ಮ್ಯೆಯಂ ಮೆರೆದಾತ ನಮ್ಮ ಬಸವಯ್ಯನು (ಸೀಲಪ. ೬-೯) ; ಮುಗ್ಗದಿರು ಮಾಯೆಯುಲಿ ಮದದಲಿ ನೆಗ್ಗದಿರು . . . ಹಿಗ್ಗದಿರು ಹೊಗಳಿಕೆಗೆ ಮನದಲಿ ಪಾರ್ಥ ಕೇಳೆಂದ (ಕುವ್ಯಾಅ. ೪-೨೨); ದಾನವರ ಥಟ್ಟಣೆಯ ಕೀಲಣದಾ ನಗರಿಯನು ನೆಗ್ಗಿ [ಪಾಠಾಂ. ನುಂಗಿ] ದಂತಿರಲೀ ನಿಘಾತದ ಸೇನೆ ಮುರಿದುದು ಭಟನ ಭಾರಣೆಗೆ (ಕುವ್ಯಾಕ. ೦೩-೦೩) : ಪೊಯ್ದಾಡಿ ರಿಪುಸೈನ್ಯಕಾನನವನು ನೆಗ್ಗಿದ ನೆರೆಗೆಡಿಸಿ (ಜೈಮಿಭಾ. ೮-೩೨) ; ಅದು ಸಕಲ ಸಚರಾಚರವನು ನೆಗ್ಗುತ್ತ ಬರಲ್ಬೆದರಿಯಾಲೋಕ ಶಿವಶಿವಯೆಂದು ಮೊರೆಯಿಡಲ್ (ಹತುಪು. ೩-೩-೦೯) ; ಅವನನ್ನು ನೆಗ್ಗಬೇಕೆಂದು ದೃಢಸಂಕಲ್ಪ ಮಾಡಿದರು (ಕೃಮು.ಹ. ೪೮). ೨೦. ಒಡೆ ; ಮುರಿ : ಬಳಿಕ ಬಳೆಗಳನ್ನು ನೆಗ್ಗಿ ಹೆಣ್ಣಾಡಿಯನ್ನು ತೊರೆದು (ಕಪಾಶಿ. ೯೦). ೨೧. ಪುಡಿಯಾಗು ; ಚೂರಾಗು: ಪಳುಕಿನಜಿ ನೆಗ್ಗಿದವು ವಜ್ರದ ಹಳಿಯ ಹೊಯ್ಲಿಗೆ (ತೊರರಾ. ೫-೬-೧೬) ; ತುಳಿದೊಡದ ಮಣ್ಣ ಕಪ್ಪರದಂತೆ ನೆಗ್ಗಿದುದು ಕೂರ್ಪರ ಖರ್ಪರಂ (ಹಬಪು. ೪೮-೫). ೨೨. ಮುಂರಿದು ಬೀಳು ; ಕತ್ತರಿಸಿಹೋಗು: ಸವಡಿವುರ ನೆಗ್ಗಿದುವು ಗಡ (ಕುವ್ಯಾಸ. ೦೦-೦೩) ; ಭರದ ಬವರದಲಚ್ಚು ನೆಗ್ಗಲು ಕರವ ಸಲಿಸಿಯ ಕೇರ ನಡೆಸಿದಳರಸಿ (ಶಾಕಿರಾ. ೦-೩೬) ; ನೆಲೆವಾಡಗಳು ನೆಗ್ಗಿದವು ಮಾಳಿಗೆಗಳೆಂದೊಲೆದವು . . . ರಿಪುಭವನದೊಳಾ ವಾಜಿ ಪೊಲಿದು ರಾಮಗೆ ಕೈಸೇರೆ (ಕುರಾಸಾಂ. ೯-೦೦೮). ೨೩. ಹಾಳಾಗು ; ನಾಶವಾಗು: ದ್ಯೂತವ್ಯಗಯಾವ್ಯಸನ ಪಾರ್ಥಿವಜಾತಿಗಿವು ದುರ್ವಿಷಯ ವಿದಲಿ ನೆಗ್ಗಿದರು ನಳ ದಶರಥಾದಿಗಳು (ಕುವ್ಯಾಸ. ೦೦-೦೮).

೨೪. ಕೊಲ್ಲು ; ಸಾಯಿಸು : ನೆಗ್ಗಿದನೋದು ಹಲಗೆಯಲೇಜಿದವರನು (ಕುವ್ಯಾಳ. ೦೩-೨೪). ೨೫. (?) : ಅಗ್ಗಳೆಯನೆಮ್ಮರಸ ಸಂಪ್ರತಿ ನೆಗ್ಗಿ ಕೆಟ್ಟಿರಿ ನೀವು ನಿಮಗೀ ಹುಗ್ಗಿಗರು ಹುರಿಗೂಡಿ ಗೆಲಿದಿನ್ನಿಳೆಯ ಕೊಡಿಸುವರ (ಕುವ್ಯಾಭೀ. ೦-೩೮). ನೆರ್ಗು : ೨. ಭೂಮಿ ದಳಭಾರಣೆಯಿಂ ನಸುನೆರ್ಗೆ ವೈರಿ ಮುಂಗೆಟ್ಟಿರೆ ಚಂಡವರ್ಮನರಪಂ ನಡೆಗೊಂಡನತೀವಕೋಪದಿಂ (ದಶಳಾ. ೬-೬೬) ; ದುರ್ಗದಿಂ ಕಂಪಿಲನೃಪತಿ ನಿರ್ಗಮಿಸಿದನು ಭೂಮಿಗೆ ಬಲಭಾರದಿಂ ನೆರ್ಗೆ ಪಡೆಗಳು ಘಣಿಪನ (ಕುರಾಸಾಂ. ೨೬-೩೨). ೧೯. ಕೆತ್ತು ಪೂಡೆ ಸೀಳ್ಕಡಿ ಖಂಡಿಸು ನೆರ್ಗು ನುರ್ಗು ಕೊಯ್ ಕೊಜ್ ಮುಜ್ ಯೆಂದು ನಿನ್ನ ಭಟರಡ್ಡರಿಸಲ್ (ಅಪ್ರತಿ. ೨೬-೨೦) ; ಪುರದಿಂದು ಪೊಜ ವಟ್ಟು ಪೊಕ್ಕು ದಟವಂ ನೆರ್ಗುತ್ತೆ ನುರ್ಗುತ್ತೆಯೊತ್ತರದೊಳ್ ಮುತ್ತಿ ದಿರಾಗೆ ಮೂಗಜಿದು (ಚಳವಿ. ೫-೨೨) : ೨೬. ಬಗ್ಗಿಸು ; ಜಗ್ಗು : ನೆಗಟ್ಟುದ್ದಂಡದ ಪುಷ್ಪಕಾಂಡನಲರಂಬಂ ನೆರ್ಗೆ ಕೋದಂಡಮಂ ತೆಗೆದಾರ್ಪಿಂ ಮುಳಿದಿಕ್ಕೆ (ಧರ್ಮನಾ. ೦-೫). ನೆಳ್ಗು : ೧೧. ಸುಗ್ಗಿದ ಪಲ್ಗಳಿಂದೊಡೆದ ಮುಂಡೆಗಳಿಂ ಮುಜಿದಿರ್ದ ಕಾಲ್ಗಳಿಂ ನೆಳ್ಗಿದ ಬಾಯ್ಗಳಿಂ . . . ಬಂದೆಜಗಿ ಕೀರ್ತಿಸುತಿರ್ದುದು ದೇವಸಂಕುಳಂ (ವೀರವಿ. ೦೨-೦೦೦). ೧೩. " ನವೆ, ಸವೆ, ತವಿ (ತವು), ಸೊರಗು, ಕೊರಗು, ನೆಳ್ಗು (ನೆಗ್ಗು)" (ಕಂನುಕು. ೦೬). △ ನೆಟ್ಟು : ಕಿ. "ನೆಟ್ಟು [ಪಾಠಾಂ. ನೆರ್ಗು] ಅಂತ ರ್ಲೀನೇ (ಅಡಗಿ ಹೋಗು) " (ಕವಂರಾ) ; ಮೂಗು ನೆಟ್ಗಿ ಬಿಣ್ಸರೆಯೊಡೆ ದುರ್ಕಿ ಪಾಯ್ದು ಪೊನಲಿಟ್ಟುದು ಮಲ್ಲನ ನೆತ್ತರೆತ್ತಲುಂ (ಚಳವಿ.೪-೦೪೨).

ನೆಗ್ಗುನೆಗ್ಗು (ದ್ವಿರುಕ್ತಿ): ಅಗ್ಗಳೆಯೊಳೆತನದಿ ನಿಜದ ಹಗ್ಗದಿಂದ ಬಿಗಿದು ಕಟ್ಟಿ ನೆಗ್ಗನೆಗ್ಗಿ ಮಾಱವೆ ಜಡವ ನುಗ್ಗುಮಾಡಿ ಓಡಿಸುವೆನು (ಶಿವಗೀ.೭೯೪). 'ನಜುಂಗು', 'ನೊರಕಂ' ಪರಾ.

[ ದೇ.೩ ತಮಿ. ನಜುಕ್ಕು, ನರುಕ್ಕು, ನೆರುಕ್ಕು ; ಮಲ. ನಜುಕ್ಕು, ಞಿರುಣ್ಣು ; ತುಳು. ನರ್ಗು ; ತೆಲ. ನಜುಕು, ನಜಿಕು, ನರ್ಕು; ಪರ್ಜಿ. ಗಡಬ. ನೆನ್ಗ್ ]

ನಜುಂಬು (ಕ್ರಿ). ಒತ್ತು ; ಇರುಕಿಸು : ರಸೆಯೊಳ್ ಕಾರಸೆಗೊಂಡವೊಲ್ ತಳಮಳಂ[ಕಿ]ರ್ವನ್ನೆಗಂ ತುಂಗಕೂಟಸಹಸ್ರಂ ದಿವಮಂ ನಜುಂಬಿದವೊಲಂ ತಿರ್ವನ್ನೆಗಂ ಸುತ್ತಲುಂ ದೆಸೆಗಳ್ ಪೊಂಗಳಸಂಗಳಿಂ ತೊಳಗುಗುಂ ತೋರ್ಪ ನ್ನೆಗಂ ಮಾಡೆ ಮಾಡಿಸಿದಂ ಚೈತ್ಯನಿಕೇತನಾವಳಿಗಳಂ ತನ್ನಾಳವಾಧೀಶ್ವರಂ (ವರ್ಧಮಾ. ೬-೩೮). 'ನಜುಂಕಂ' ಪರಾ. [ ? ]

ನಜುಕು 'ನಜುಂಕು' ನೋ.

ನಜುಗಂಪು, ನರುಗಂಪು (ನಾ). ಒಳ್ಳೆಯ ವಾಸನೆ; ಸುವಾಸನೆ; ಪರಿಮಳ: ನೆಱದಾತನ ಪುಣ್ಯಮೆ ಕಣ್ದೆಱದಂತಿರೆ ತೆಱದುವಾ ವಿಮಾನದ ಪಡಿಗಳ್ ನಜುಗಂಪು ಪೊಣ್ಮೆ ಸಗ್ಗದ ಮಿಂಚುಪಿನಿಯರ ಮನಮುಮೊಡನೆ ಪಡಿದೆಱವಿ ನೆಗಂ (ಚಂದ್ರಪು. ೪-೬೨) ; ಮುಗುಳ್ಗಳ ಮಾಲೆ ಸುಯ್ಯ ನಜುಗಂಪಿನೊಳ್ ಮರ್ಡಿ ಗಮ್ಮನಾಗೆ . . . ಕಾಮಿಗಳ ಮನಂಗಳೊಳ್ ಗಡಣದಿಂದಲಗಗ್ಗು ವುದಂಗನಾಜನಂ (ವರ್ಧಪು. ೦-೬೪) ; ಅರ್ಕಮಂಡಲಮಂ ಕಂಡ ಮರಾಳನಂತೆ ನಜುಗಂಪಂ ಕಂಡ ಮಱದುಂಬಿಯಂತೆ (ಉದ್ಭಟ. ೧೧-೫೫ ವ); ಕಣ್ಮಲರ್ಗೆ ಕಡುರಯ್ಯಮಾಗಿ ನಱಗಂಪು ನೆಜುಪೊಣ್ಮಲರೆವಿರಿದ ಪೊಂದಾವರೆಯ ಬಂಡ ನುಂಡುಣ್ಮುವಾನಂದದಿಂ ಮೈಮಱದು ಜಿನುಗುವಾಱಡಿವಜೆಯ ಲೀಲೆ ಯಂತೆ (ಪದ್ಮರಾ. ೧-೪೦) ; ನಜುಗಂಪನೆಚ್ಚಸಿಗೆ ಬೀಱುವಲರ್ವಂಡುಣ್ಣ ಪಱವೆಗಳು (ಭಾವಚಿಂ. ೬-೨೦); ಕೆಜುಜವ್ವನದ ಬಾಲೆಯರ್ ... ಸುಯ್ಕೆಲರ ನಜುಗಂಪನೂಡಿ, ತಣ್ಣೀರಂ ಬಿದುಗಲ್ಗಂದಲೊಳೊಸರ್ವ ಪನಿನೀರನೆ ನೀರಡಿಸಿದರ್ಗೆಜದಪರ್ (ಕಾಮಾಪಿ. ೯-೦೬). ನರುಗಂಪು : ಅರೆವಿರಿದ ಕುಸುಮ ನರುಗಂಪಿನಿಂ ಯಿಂಪಿನಿಂ ತಣ್ಣೆಳಲ ತಂಪಿನಿಂದೆ . . . ಇಂತೊಪ್ಪುವಾ ಬನ (ನವಮೋ. ೮-೨೮) ; ದಿನದಿನದ ಬೆಳಗು ಹೊಂಗಿರಣದ

ಕಿರೀಟ ನೂರುಬಣ್ಣದ ಹೂವ ನರುಗಂಪನೊಮ್ಮಲೇ ಚಿಮ್ಮುವ ತೋಟ (ನಿಂಮು. ೩-೯); ಹೂಗಳು ನರುಗಂಪು ಸೂಸುತ್ತವೆ (ಧರ್ಮಶಾ. ೭); ನರುಗಂಪು ಬೀರುತ್ತಿರುವ ನವಕುಸುಮ (ಸುವಸಂ. ೧೭).

[ ನಱು + ಕಂಪು ]

**ನಱುಗಂಪುವೊರೆ** (ಕ್ರಿ). ಸುವಾಸನೆಯಿಂದ ಕೂಡಿರು; ಸುಗಂಧವನ್ನು ಹೊಂದಿರು: ತುಱುಗಿದ ತಾರಾಪುಂಜದ ವಿಱುಗುತಿರ್ದವುದೂ ಪಶ್ಚಿಮಾದ್ರೀಂದ್ರವೆನಲ್ ನಱುಗಂಪುವೊರೆದ ಜಾದಿಯ ತುಱುಬು ಕಣ್ಗೊಳಿಸೆ ಶೂದ್ರಕಂ ಕರಮೆಸೆದಂ (ಶಾದಂಪೂ. ೩೨).

[ ನಱುಗಂಪು + ಪೊರ್ೆ₂ ]

**ನಱುಗಬ್ಬು** (ನಾ). ರಸವತ್ತಾದ ಕಬ್ಬು,-ಇಕ್ಷು: ನಱುಗಬ್ಬಿನೊಳಗಣ ರಸವ ಕಾಣದೆ ಪಶು ಹೊಱಗಣೆಲೆಯ ಸವಿವಂತೆ ಅಱಿದೊಳಗಾತ್ಮಸುಖವನುಣಲಱಿಯದೆ ಹೊಱಗೆಳಸುವರಂಗಸುಖಕೆ (ಭಂಶ. ೧-೧೦೩).

[ ನಱು + ಕಬ್ಬು₂ (<ಕರ್ಬು₁) ]

**ನಱುಗೋಲ** (ನಾ). ೧. ಪುಷ್ಪಬಾಣವನ್ನು ಉಳ್ಳವನು; ಕಾಮ; ಮನ್ಮಥ: ನಱುಗೋಲನೊಲಿದು ತನ್ನ ಖಿಲರಾಣಿಯರೊಡವೆರಸಿ ಬನದವಮಾಳ್ಪವೊಲು ಸರಸಸಲ್ಲಾಪವಿನೋದದೀದರಸ ತನ್ನರಸಿಯರೊಡನಿರುತಿರಲು (ನಾಗಕು. ೩೨-೭೪). ೨. [ಜೈನ] ಬಾಹುಬಲಿ: ನಱುಗೋಲನೊತ್ತಿಂದ ದಕ್ಷಿಣದಿರಾಗಿ ಮಱಿಯರಳಗಳೋಡಿ ಬಂದು ದುಱುಮುಱಿನೀಕ್ಷಿಸಿ ಹೊಸ ಗವಲಿಗೆ ಬೆಟ್ಟ ಬಿರಿತೋಡಿದುವು ಕಂಡ ಕಡೆಗೆ (ಭರಚ. ೯೭-೬೨); ಒಱಗು ಮೂಡೆಯು ನೆಮ್ಮಿ ಕುಳಿತನು ಚಕ್ರೇಶ ನಱುಗೋಲ ನಿಲೆ ಬಿಸಿಲಲ್ಲಿ ಮಱಿಸನ್ನೆಗೈದು ಸತ್ತಿಗೆವಿಡಿಸಿದನೇನು ಮಱುಕವೊ ತಮ್ಮನ ಮೇಲೆ (ಭರಚ. ೩೧-೧೨೯). [ ನಱುಗೋಲು + -ಅ₇ ]

**ನಱುಗೋಲು** (ನಾ). ಪುಷ್ಪಬಾಣ: ನಱುಗೋಲ ತುಱುಗಿವೆಮುಂಬಿದಿರುವ ಹೂಡಿಯುಱುವ ಕಬ್ಬಿನ ಬಿಲ್ಲುಗಳೆನು (ಕಂಪ್ರಸಾಂ. ೨೩-೭೨).

[ ನಱು + ಕೋಲು₁ (<ಕೋಲ್₁) ]

**ನಱುಜವ್ವನೆ, ನಱುಜೌವನ** (ನಾ). ಪೂರ್ಣಯೌವನ; ತುಂಬಿದ ಹರಯ: ಈ ಸಿರಿಯಾ ನಱುಜವ್ವನವಿಾ ಸುಭಗತೆಯಾ ವಿಳಾಸವಿಾ ಸಕಳಕಳಾಭ್ಯಾಸಂ ಸುತನಂ ಪಡೆಯದ ದೂಸಱನಿನಿತುಂ ನಿರರ್ಥಮಲ್ತೆ ಮೃಗಾಕ್ಷಿ (ವೃಷವಿ. ೨-೩೪). **ನಱುಜೌವನ**: ಅಂತೈದಿದ ನಱುಜೌವನದ ಸಿರಿಯಂ ವೈಸಿರಿಯೊಡನೆ ಕೇಳಿಯಾ ಕೆಳೆಗೊಳಿಸಿ . . . ನರೇಂದ್ರಸೂನು ತಳೆದಂ ತಾರುಣ್ಯ ಲಾವಣ್ಯಮಂ (ರಾಜಶೇ. ೪-೧೦೬ ವ). [ ನಱು + ಜವ್ವನ ]

**ನಱುಜೌವನ** 'ನಱುಜವ್ವನ' ನೋ.

**ನಱುದಂಬುಲ** (ನಾ). ಸುಗಂಧಭರಿತವಾದ ತಾಂಬೂಲ; ಪರಿಮಳಯುಕ್ತವಾದ ತಾಂಬೂಲ: ಬಾಯೊಳೆ ಬಾಯನಿಟ್ಟು ನಱುದಂಬುಲ ವಿಕ್ಕುವ ಮುಗ್ಧೆಯೊಂದುವೊಟ್ಟಾಯತದಿಂದಮಾನಱಿದೆನಾಕೆಯ ವಲ್ಲಭನಾತನೆಂಬುದಂ (ಲೀಲಾವ. ೨-೯೨); ಮೊಱಿಯನುಳಿದ ಮೆಲ್ಲುಡಿ ಮೊನೆ ಮುಸೆವಕ್ಕುಱು ಬಾಯ್ದೆ ಱಿಗೆಡೆವಿಡದೆಡೆಯಾಡುವ ನಱುದಂಬುಲ . . . ನೆಱೆ ಸೊಗಯಿಸಿದುವು ನವಸುರತಕ್ರೀಡೆಯೊಳಾ ದಂಪತಿಗೆ (ಜಯನೃ. ೮-೩೩); ಸಸಿಯುದಯಂ ಮುಗಿಲ್ವೊಱಗು . . . ನಱುದಂಬುಲಂ ಸುಗೀತಸರಸ ದೂತಿವಾಕ್ಪ್ರಭೃತಿ ಮುಂ ಪೆಸರ್ಗೊಂಡ ತಟಸ್ಥಮಲ್ಲದೇ (ಕಕರ. ೧-೬೨); ಅತ್ಯಮಿತ್ರ ಚೆಲ್ವಿಂಗೆಡೆಯಾಗಿ ಸೂಸಿದಲರುಂ ನಱುದಂಬುಲಮುಂ ಮೃಗೋದ್ಭವಂ ಸಂಗಳಿಸಿರ್ದ ಕುಂಕುಮಮುಪರಾಗಮುಮಾರ್ದೆಱಪುಷ್ಪ ದಾಳಿಯಂ ಓಂಗದೆ ದೇವದಂಪತಿಯ ಕೂಟಮನೇಂ ಓಸುಣಾಡಲಾರ್ತವೋ (ಶಬಶಂ. ೦-೩೦); ಈವುವಚಾರದಿನಾತನ ಪಸಿವುಂ ಬಟಲ್ಕೆಯುಂ ಮುಡಿಯೆ ಕೆಳದಿ ನಱುದಂಬುಲಮಂ ಸವಿಯಲ್ಕೆಂದು ಮಡಿದೀಯುತುಮಿರೆ (ರಾಮಾಶ್ವ. ೪-೧೨). [ ನಱು + ತಂಬುಲ ]

**ನಱುನಾಣು** (ನಾ). ಆಕರ್ಷಕವಾದ ಲಜ್ಜೆ; ಮೋಹಕವಾದ ನಾಚಿಕೆ: ನಸುನಗೆ ನಱುನಾಣು ನೆರೆವೊಲೆ ನಳಿತೋಳು ಮಿಸುಪ ಕಣ್ಣೆಗಹಿದ ಕಳಸ ಪೊಸದೆಸಿಪಡೆಯೆ ನೀರೆಱಿವ ನೀಱೆಯರು ಕಣ್ಗೆಸೆದಿಹರಲ್ಲಿ ಪಥಿಕರ (ಕುಠಾಸಾಂ. ೨-೪೨). [ ನಱು + ನಾಣು₁ (<ನಾಣ್₁) ]

**ನಱುನೆಯ್, ನರುನೆಯ್ಯಿ** (ನಾ). ಸುವಾಸನೆಯಿಂದ ಕೂಡಿದ ತುಪ್ಪ; ಪರಿಮಳಭರಿತವಾದ ಘೃತ: ಕುಱಿಯುಂ ಕಳ್ಳಂ ಕೂಟಂ ನಱುನೆಯ್ಯುಂ ಬೇಡಿ ತಿಂಬ ಓರುತಿನಿ ಬರವಂ ಪೆಱರ್ಗೆ ಕುಡಲಱಿಯಳೆಂಬುದನಱಿಯದ ಪಶು ಮನುಜನಲ್ಲ ಕುಱಿಗಳ ಭಾವಂ (ಸಮಚ. ೯-೧೧೧); ನಾಯಿ ನಱುನೆಯ್ಯಟ್ಟದೆಂಬುತೆನ್ನ ಮೇಟ್ಟ ಧರ್ಮಶ್ರವಣಮನೊಲ್ಲದೆ ಸುದಂತಿಯನೆ ಮನದೊಳ್ಳನೆಯುತಿರ್ಪ (ಧರ್ಮಾಮೃ. ೭-೨೨೭ ವ); ನಱುನೆಯ್ಯಾಱಿದ ಸಿರಿಯಂ ಮೆಱಿಯಲೆ ಪೊಂಗಳನೆ ಗೋಪಿಯರ್ ಕೆದಱಿದವೋಲ್ ತುಱುವೆಯ ನೆಗ್ಗಿಲ ಪೂಗಳ್ ತುಱುಪಟ್ಟಿಯ ಪೊಱಗೆ ತುಱುಗಿ ಕರಮೆಸೆದಿರ್ದುಂ (ಲೀಲಾವ. ೩-೯೯); ಪೊಸಸಕ್ಕರೆಯಂ ನವಮಧುರಸಮಂ ನಱುನೆಯ್ಯನೆಸೆವ ಕದಳೀಫಲಮಂ ರಸನೆಯಳಸಿದುದನನ್ನೊಳ್ಳೆಸೀಗಳೆ ನಿನಗೆ ತಂದಪೆಂ ಶಶಿಮೌಳಿ (ವೃಷವಿ. ೯-೭೭); ನಱುನೆಯ್ಯುಂ ಪಾಲನುಣುತೆ ಬ್ರಾಟ್ಟರೊಳಧಮರ್ ತುಱುಗಿದ ಕಱುಂಬಿನಿಂದಂ ಪೊಱಿಸಲ್ ಪಾರ್ದಿರ್ಪರ ಕೃಟಿಲ್ಲದ ದೂಱು (ನೀತಿಮಂ. II, ೩೭೯). **ನರುನೆಯ್ಯಿ**: ನರುನೆಯ್ಯಿ, ಬಾಳೆಹಣ್ಣು . . . ಇವೆಲ್ಲ ಇವೆ ನಮ್ಮ ಮನೆಯಲ್ಲಿ (ಕಸಾಕ. ೧೦೬).

[ ನಱು + ನೆಯ್₂ ]

**ನಱುಮುಡಿ** (ನಾ). ಸುವಾಸನೆಯಿಂದ ಕೂಡಿದ ಮುಡಿ; ಪರಿಮಳಯುಕ್ತವಾದ ಕೇಶ: ನಱುಮುಡಿಗೆ ಮುಡಿವೆನು ಕುಸುಮಮಾಲೆಯನು (ಸಾಳ್ವಭಾ. ೧೦-೩೩). [ ನಱು + ಮುಡಿ₂ ]

**ನಱುವಂಜಿ, ನರುವಂಜಿ** (ನಾ). ಒಂದು ಬಗೆಯ ಹುಲ್ಲು: "ಶಂಖಿನೀ, ಚೋರಪುಷ್ಪೀ, ಕೇಶಿನೀ, ಹಗಱ = ನಱುವಂಜಿ" (ನಾಚರಾ. ೬); ನಱುವಂಜಿ [ಪಾಠಾಂ. ನಱುವಲ್ಗೆ] ನೆರಾ[ವಲ್ಗಲಾ]ವರಗಳ್ ತುಱುಱಿಯ ಕರಿಯಂ ಜಲಾನ್ವಿತಂ ಪೂಸುಗೆ ಮೇಣ್ ಪಱಿಗುಂ ಪಂಕದ ಲೇಪದಿನಱಿ ನಸುಗುನ್ನಿಯ ವಿಷಂ ಭಿಷಗ್ವರಮತದಿಂ (ಖಮದ. ೨-೯೯); ಮೂತ್ರರೋಗಕ್ಕೆ . . . ನರು[ಱು]ವಂಜಿ, ಕಳ್ಳಂಗಡಲೆ ಇವಂ ಅರೆದು ಬಱಿಗೆ ಪೂಸಿಳಿಯ ತೊಡೆಯುವುದು (ವಿಶ್ವವಿ. ೦೩೨); ನಱುವಂಜಿಯ ಬೇರು, ನೆಲಾವರೆಯ ಬೇರು, ಬಳ್ಳಿದುಱುಚಿಯ ಬೇರು ಇವಿಷ್ಟನು ಸುಟ್ಟು ಕರಿಯ ಮಾಡಿ ನೀರಲ್ಲಿ ಅರೆದು ಪೂಸಲು ನಸುಗುನ್ನಿಯ ವಿಷ ಶಮನವಹುದು (ಕೃದ್ಯಸಾ. II, ೨೩೪). **ನರುವಂಜಿ**: "ಅಲಕ್ಷ್ಮಿ-ನರುವಂಜಿ" (ಅಕಾನಿ. ೨-೦೬). [ ? ]

**ನಱುವಂಡು** (ನಾ). ಸುವಾಸನೆಯಿಂದ ಕೂಡಿದ ಬಂಡು,-ಮಧು: ಸೊಪ್ಪುಸೊಪಡಾಗದೆಸಱಿಸಟ್ಟವ್ವದೆ ಮೊಗಮಿಱಿದು ಕಾರ್ದುಂಬಪ್ಪಲರ್ವಿನೆಂ ಸಿಪ್ಪಿಟ್ಟು ಕಱಿದು ಕೊಂಡುವು ಸಪ್ಪದಮುಪ್ಪಳದಿನೊಱಿವ ನಱುವಂಡುಗಳಂ (ಲೀಲಾವ. ೯-೮೬). [ ನಱು + ಬಂಡು₂ ]

**ನಱುವಲ್, ನರವಲು, ನರುವಲ, ನರುವಲು, ನರ್ವಲ್, ನಱುವಲ, ನಱುವಲು** (ನಾ). ೧. ಒಂದು ಬಗೆಯ ಮರ; ನೆಲ್ಲಿಗಿಡದಲ್ಲಿ ಒಂದು ಬಗೆ: "ಅಗ್ನಿಮಂಥನ ನಱುವಲ್" (ವಸ್ತುಕೋ. ೩೭-೨೭); "ಅಗ್ನಿಮಂಥವೆನೆ ನರು[ಱು]ವಲೆನಿಸಿಕ್ಕು" (ಮುಂಗರಾ. ೩೬-೦೬); ಲವಣಂ ನಱುವಲಬೇರ್ ಗುಳ್ಳವದಱ ಬರಿವದಱ ಲೊಕ್ಕಿ ಕಿಱುಮೆಕ್ಕೆಗಳಿಂ ಬಿವನಱಿದು ತಕ್ರದೊಳ್ ಪೂಸುವುದು (ಲೋಕೋಪ. ೯-೦೯೭); ನಱುವಲ್ ಪುಗ್ಗಾರೆಯ ಕಾಯ್ . . . ಇವನಱಿಯಲ್ ಜಲದಿಂದೆ ಫಣಿಯ ವಿಷ ನಿರ್ಹರಣಂ (ಖಮದ. ೩-೧೦೪); ಬರಿವದಱ ಸುಣ್ಣಗುಂದಿಗೆ ನಱುವಲ್ಗುಳ್ಳಂ ಮಣಿಸಿಟೆ ಸೀವನ್ನಿ (ಅಶ್ವಶಾ. ೧೦-೬೦). ೨. ಸೀಗೆಮರ:

**ನರವಲು :** (ಕ). **ನರುವಲ :** ೧. ನೆಲಬೇವು, ಭದ್ರಮುಸ್ತೆ, ಅಮರವವಳ್ಳಿ, ನರುವಲದ ಬೇರು . . . ಶುಂಠಿ ಇವುಗಳ ಕಷಾಯವಿಕ್ಕಿ ಸೇವಿಸಿದರೆ ವಾತಜ್ವರಂ ಕೆಡುಗುಂ (ಸಕವ್ಯ. ೬೫); ನರುವಲದ ಸೊಪ್ಪು, ಪುಳ್ಳಂಪುರಚಿ, ಒಂದೆಲಗ . . . ಈರುಳ್ಳಿ ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳು (ಸಕವ್ಯ. ೧೦೨). **ನರುವಲು :** "ಟಾನಲ-ನರುವಲು" (ಅಕಾನಿ. ೧೦-೨೨). **ನರ್ವಲ್ :** ೧. (ನಾಚಿರಾ. ೩). **ನಱುವಲ :** ೧. "ಅರಿಣಿಕೇತುಃ – ನಱುವಲ" (ಓಷಧಿ. ೯). **ನ ಱು ವ ಲು :** ೧. "ಶ್ರೀಪರ್ಣಂ, ಅಗ್ನಿಮಂಥಃ ಕಣಿಕಾ, ಗಣಿಕಾರಿಕಾ, ಜಯಃ – ಈ ೫ ನಱುವಲು" (ನಾಚಿರಾ. ೦೦೮) ; ೩. ಒಂದು ಬಗೆಯ ಸೊಪ್ಪು : ಕೀರೆ ನಱುವಲು ಚಕ್ಕವತ್ತ ಸೊರೆ ಸಬ್ಬಸೀಗೆ ಮೊದಲಾದ ಸೊಪ್ಪುಗಳ ಬೇಱಿಬೇಱುಕ್ಕರಿಸಿ (ಸೂಪಶಾ. ೪-೧೬) ; ಹಾರೆಯ ಸೊಪ್ಪು, ಚಕ್ಕೋತ, ಕೀರೆಸೊಪ್ಪು, ಕೆಂಪಿನ ಚಕ್ಕೋತ್ರ, ನರು[ಱು]ವಲ ಸೊಪ್ಪು . . . ಸೂರಣದ ಗೆಡ್ಡೆ– ಇವು ಜ್ವರ ಬಂದವರಿಗೆ ಪಥ್ಯ (ವೃದ್ಯಶಾ. I, ೫೫) ; ಬಜೆ, ಓಮ, ಔಡಲದ ಬೇರು, ನರು[ಱು]ವಲಬೇರು, ಹಿಪ್ಪಲಿ, ಚಿತ್ರಮೂಲ ಇವಿಷ್ಟನು ಸಮಾಂಶವಾಗಿ ಕೂಡಿಸಿ ನೀರಿಂದ ಅರೆದು ಕುಡಿಯ ಕೊಡಿಸಲು ಒಂಟೆಯ ವಿಷಗಳೆಲ್ಲವೂ ಪರಿಹರವಹವು (ವೃದ್ಯಶಾ. II, ೨೦೮). ೪. (?) : ನಱುವಲ ಮೊನೆಯ.ಲ್ಲಿ ಸಟ್ಟ ಕಲ್ (ಎಕ XIII, ೩೦-೩೦ : 1204). [ ದೇ.೫ ತುಳು. ನರುವೊಲು, ನರ್ವೊಲು ]

**ನಱುವಲ** 'ನಱುವಲ್' ನೋ.

**ನಱುವಲರು** (ನಾ). ಸುಗಂಧಯುಕ್ತವಾದ ಪುಷ್ಪ ; ಸುವಾಸನೆಯ ಹೂವು : ತರುಣಿ . . . ಶಿವನಿರ್ಮಾಲ್ಯವೆನಿಪ ನಱುವಲರನೆಯ್ದೆ ಶಿರದೊಳ್ಪುಱುಬಿ . . . ಶಿವವೇಷದಿಂ ತಣದು (ಶಾಸೋಕು. ೨-೩೦) : ನಱುವಲರುಗಳ ಓಡಿದು ಪುಷ್ಪಾಂಜಲಿಯನೆಸಗಿ . . . ಹರ್ಷದಿಂದಖಿಳ ಪುರಜನ ಪರಿಜನಂಗಳೆಲ್ಲಂ ತುಱುಗಿ ಬರುತಿರೆ (ಸಿದ್ಧೇಶ್ವ. ೦೯-೨೦).

[ ನಱು + ಅಲರು₂ (<ಅಲರ್₂) ]

**ನಱುವಲು** 'ನಱುಂಬಲ್' ನೋ.

**ನಱುವೂವಲಿ** (ನಾ). ಸುವಾಸನೆಯ ಹೂವುಗಳನ್ನು ಹರಡುವಿಕೆ ; ಹೂವಿನ ಹಸೆ : ರಂಗವಲ್ಲಿಯಿಂದ್ಯದು ರನ್ನದ ರಂಗಿಸಿದ ಪುಡಿಗಳ ಚದುರಿನಿಂ ಓಂಗದಾ ನಱುವೂವಲಿಗಳಿಂ ಚಿನ್ನಬೆಳ್ಳಿಗಳಾ ತುಂಗಘಟದೊಳ್ಪಿಹಿಪ ಚೆಲ್ವದಶಾಂಗಮುಖ್ಯದ ನಱುವೊಗೆಗಳಿಂ ತೊಂಗಲಿಪ ಸುರಘಂಟೆಯಿಂ ಮೆಱೆವುದನರಸ ಕಂಡ (ಸಾಳ್ವಭಾ. ೪-೯೦). [ ನಱು + ಪೂವಲಿ ]

**ನಱುವೊಗೆ** (ನಾ). ಸುವಾಸನೆಯ ಹೊಗೆ ; ಧೂಪ : ಚಿನ್ನಬೆಳ್ಳಿಗಳಾ ತುಂಗಘಟದೊಳ್ಪಿಹಿಪ ಚೆಲ್ವದಶಾಂಗಮುಖ್ಯದ ನಱುವೊಗೆಗಳಿಂ ತೊಂಗಲಿಪ ಸುರಘಂಟೆಯಿಂ ಮೆಱೆವುದನರಸ ಕಂಡ (ಸಾಳ್ವಭಾ. ೪-೯೦).

[ ನಱು + ಪೊಗೆ₂ ]

**ನಱುಸುಯ್** (ನಾ). ಸುವಾಸನೆಯಿಂದ ಕೂಡಿದ ಉಸಿರು ; ಸುಗಂಧಪೂರಿತವಾದ ಶ್ವಾಸ : ಪೋಪ ಸಪ್ತಸಪ್ತಿಯ ವಿರಹಕ್ಕದಲ್ಪು ಬಿಸುಸುಯ್ ಪುಸಿಸುಯ್ಯೆನೆ ಸುಯ್ದು ದಕ್ಷಿಣಾಶೆಯ ನಱುಸುಯ್ಯ ಗಾಳಿಯನೆ ಪೋಲ್ತುದು ಗಂಧವಹಂ ವಸಂತದೊಳ್ (ಶಾಂತಿಪು. ೭-೦೫೬) ; ನಱುಸುಯ್ಯಂ ಮಾಲೆಗಂ ಸೂಟಱಿದೆಱಗುವಿನಂ ತುಂಬಿಗಳ್ ನೋಡಿದರ್ಮೆಯ್ಯುಱೆವನ್ನಂ (ಪಂಪರಾಮಾ. ೦-೧೩೦) ಭ ರ ದಿ ಂ ದ ಂ ನವಕುಸುಮಾಭರಣಂಗಳನಭವನಂಗದೊಳ್ ಸಿಂಗರಿಸುತ್ತರಳುತ್ತುರ್ಬುತೆ ಕೊರ್ಬುತೆ ಗಿರಿಸುತೆ ನಱುಸುಯ್ಯ ಧೂಪಮಂ ಪದೆದಿತ್ತಳ್ (ಗಿರಿಕ. ೫-೮೬) ; ಮಗಮಗಿಸುತ್ತುವಿರ್ಪ ನಱುಸುಯ್ ಪೊಸಪೂಗಳ ಕಂಪನೆತ್ತೆ . . . ಸುತ್ತಲುಂ ಸೊಗಯಿಸುತಿರ್ಪ ಬಾಸಿಗಮನೆತ್ತು ವರಗ್ಗದ ಮಾಲೆಗಾರ್ತಿಯರ್ (ಅದ್ಭುಶಾ. ೯೦) ; ಮಾಲೆಗಟ್ಟುತೆ ನೋಟಕರ ಕಣ್ ಮಾಲೆಗಟ್ಟುವರೊರ್ಮೆ ತುಂಬಿಯ ಮಾಲೆಮಾಲೆಯು ಕಾಣಗುಡದಿರೆ ತಮ್ಮ ನಱುಸುಯ್ಯಾ ಮಾಲೆಮಾಲೆಯು ತೋಱೆ ಕಟ್ಟಿದ ಮಾಲೆಯನೆ ವಿಟರಾಲೆಗತಿಸಲ್ಲೀಲೆಯಿಂ ಮಾಱುವರದಲ್ಲಿಯು ಮಾಲೆಗಾರ್ತಿಯರು (ಸಾಳ್ವಭಾ. ೨-೦೨). [ ನಱು + ಸುಯ್₂ ]

**ನಱುಸುಯ್ಯೆಲರ್** (ನಾ). ಸುವಾಸನೆಯಿಂದ ಕೂಡಿದ ಉಸಿರಿನ ಗಾಳಿ; ಒಳ್ಳೆಯ ಕಂಪುಳ್ಳ ಶ್ವಾಸವಾಯುಃ ನಱುಸುಯ್ಯೆಲರಿಂಗೆಱಗುವ ಮಱಿದುಂಬಿಗಳಂ ಸೆಱಂಗಿನಿಂ ಸೋವುತುಮಾ ತೆಱದೊಳೆ ಯುವರಾಜನನಟ್ಟಱೆಂದಡಿಗಡಿಗೆ ಕಾಂತೆ ಕರೆವಂತಿರ್ದಳ್ (ಕಾದಂಬ. ೦೨೯) ; ಎಲೆ ತೀಡುವ ತೆಂಗಾಳಿಯ ನೆಲವಿಂ ಕಾಲ್ಪಿಡಿದು ತಿಳಿಪಿ ತಳ್ವಿಲ್ಲದೆ ಕಾದಲನಂ ತಂದೊಡೆ ನಱುಸುಯ್ಯೆಲರಿಂದಂ ನಿನ್ನನಾಗಳುಂ ನೆಱೆ ಪೊರೆವೆಂ (ಕಬ್ಬಿಗಕಾ. ೬೧) ; ಕುರುಳೊಳ್ಪೊಲೀವಿದ ಕತ್ತುರಿಯ ರಜಂ ಮೊಗರಸದೊಳುದಿರ್ದು ನಱುಸುಯ್ಯೆಲರಿಂ ಪರೆದು ತೆರೆಮಸಗಿ ನಿಂದುದಿರೆ ಕೊಂಕಿಂ ಭ್ರೂಯುಗಂ ವಿರಾಜಿಪುದವಳಾ (ರಾಜಶೇ. ೭-೫೬). [ ನಱುಸುಯ್ + ಎಲರ್ ]

**ನಱುಸುಯ್ಯು** (ನಾ). = ನಱುಸುಯ್ : ನಱುಸುಯ್ಯ[ಪಾಠಾಂ. ಯ್ಯ] ಗಾಳಿಗೆ ತೇಲ್ವ ದುಕೂಲದ ಸೆಱಗು ಸೀರುವೆ ದೊರೆ ಹೊದೆದು ತೆಱಪಿನೆದೆಯ ಹೊನ್ನ ಜನ್ನಿವಾರದ ರ ಪೆ ಮೆಱೆಯೆ ರಾಜೇಂದ್ರ ಮೆಱೆದನು (ಭರತೇ. ೧-೩೩). [ ನಱು + ಸುಯ್ಯು ]

**ನಱುಹರೆಯ** (ನಾ). ತುಂಬಿದ ಪ್ರಾಯ ; ಪೂರ್ಣಯೌವನ : ಹಿಂದಣಾಗರಿಲ್ಲದಾಯಸವಟ್ಟು ಗುರುಕರುಣದಿಂದೆನ್ನ ಪೆತ್ತು ಬಾಲ್ಯದ ಮುದ್ದು ನಱು[ಪಾಠಾಂ. ಡು] ಹರೆಯದಿಂದೆಸೆವ ಸಿರಿಯ ನಡೆನೋಡಿ ದಣ್ಣನೆ ದಣಿವ ಕಾಲದೆ ಇಳು ನುಡಿದಪ್ಪಿಗೆ ತಂದೆ ತಾನೇ ಕೊರಲ್ಗೊಯ್ಯಿಸಿದವನು (ಭಾವಚಿಂ. ೯-೦೫) ; ಪುಟ್ಟಿ ಲಾವಣ್ಯಲತೆ ಬೆಳೆವಂತೆ ನಱುಹರೆಯಮಿಟ್ಟಣಿಸಿ ದಿನದಿನಕೆ ಬಳೆದು ವಿಗೆ ಸಂತಸಂಬಟ್ಟು (ಕೊಟ್ಟೂರುಬ. ೪-೦೦೨).

[ ನಱು + ಹರೆಯ (<ಪರಯ) ]

**ನಱಿ³** (ನಾ). ಒಗ್ಗರಣೆ. 'ನಱಿಗೊಡು' ಪರಾ.

**ನಱಿಯಂ ಕೊಡು, ನಱಿಯ ಕೊಡು** = ನಱಿಗೊಡು : ಪುಡೆಯಮಂ ಮಾಡಿ . . . ಹುರುಳಿಯ ಹಾ ಲಿ ನೊ ಳ ಗಿ ಳಿ ಯ ಬಿ ಡು ತ ಪೊ ಗ್ಗ ರಿ ಸಿ ನರ[ಱಿ]ಯಂ ಕೊಟ್ಟು ನಸುಹುಳಿಯನಿಕ್ಕಿ ಪರಿಮಳವಿಡುವುದು (ಸೂಪಶಾ. ೫-೫೦); ಮೆತ್ತನುಕ್ಕರಿಸಿಕೊಂಡೆಳೆಯ ಕಳಲೆಯ ಕುಡಿಯನು ... ಪೊದ್ದಣಿಗೆಯಿತ್ತು ನರ[ಱಿ]ಯು ಕೊಟ್ಟು ಪರಿಮಳವನಿಕ್ಕಲದು ಚುಚ್ಚುಗಳಿಲೆ[ವೆಸರು] (ಸೂಪಶಾ. ೬-೨); ಹಸಿಯ ಕರಿಬೇವು ಕೊತ್ತುಂಬರಿಯನಿಕ್ಕಿ ತಾಳಿಸಿ ನರ[ಱಿ]ಯ [ಪಾಠಾಂ. ಯು] ಕೊಟ್ಟು . . . ಮುದ್ಗರಂಭಾ ಕುಸುಮಪಾಕವೆಂದೆಂಬ ಹೆಸರಂ ಕರೆವುದು (ಸೂಪಶಾ. ೪-೫೩).

[ ← ತಮಿ. ನಱಿ = ಮಸಾಲೆಪದಾರ್ಥ, ಸಂಬಾರದ್ರವ್ಯ ]

**ನಱಿಗೊಡು** (ಕ್ರಿ). ಒಗ್ಗರಣೆಯನ್ನು ಕೊಡು,-ಹಾಕು ; ಒಗ್ಗರಿಸು : ಅಟ್ಟೆರಡು ಭಾಗೆಯಂ ಮಾಡುಳ್ಳಿ ಸಕ್ಕರೆಯನಿಟ್ಟು ಪಸರಿಸಿದ ಹೋಳೊಳು ತುಂಬಿ ತುಪ್ಪದೊಳಗಟ್ಟು ಕೆಂಪಂ ಮಾಡಿ ನರ[ಱಿ] [ಪಾಠಾಂ. ರಿಯಂ] ಗೊಡಲು ಗೌರಬದನೆಯಕಾಯಿಯೆಸರಾದವು (ಸೂಪಶಾ. ೪-೨೪).

[ ನಱಿ³ + ಕೊಡು₁ ]

**ನಱಿಯಿಕ್ಕು** (ಕ್ರಿ).=ನಱಿಗೊಡು : ಶೋಧಿಸಿದ ಕೊಣಬಿನೊಳು [ಬಾಳೆಯ] ಹೂವನು ಇಟ್ಟು . . . ಒಗ್ಗರಣೆಗೊಟ್ಟು ನರ[ಱಿ]ಯಿಕ್ಕಿ ಪರಿಮಳಗೊಡಲು ತಕ್ರರಂಭಾಕುಸುಮಪಾಕಪಾಯ್ತು (ಸೂಪಶಾ. ೪-೩೬).

[ ನಱಿ³ + ಇಕ್ಕು ]

**ನಱಿಯಿಸು** (ಕ್ರಿ). = ನಱಿಗೊಡು : ಮತ್ತೊಂದು ಬೆಸಳಿಗೆಯ ತೊಳೆದು ಕೊಂಡದಕೆ ನ[ಪಾಠಾಂ. ನೆ]ರೆ[ಱಿ]ಯಿತ್ತದು ಪೊಯ್ದು ಕರಿಬೇವು ಮೊದಲವಿಕ್ಕಿ(ಸೂಪಶಾ. ೫-೧೦); ಕೊತ್ತುಂಬರಿಯನಿಕ್ಕಿ ಚೆನ್ನಾಗಿ ನ[ಪಾಠಾಂ.ನೆ, ಲ]ರೆ[ಱಿ]ಯಿತ್ತು [ಜಡಿದುಕೊಂಡು] (ಸೂಪಶಾ. ೫-೦೪). [ ನಱಿ³ + ಈ₂ ]

**ನಟುಣ್ಣಿಗ** (?) (ನಾ). (?) : ಕಾಲ್ನಾಡಿಂ ನಟುಣ್ಣಿಗರಾರೆನ್ನೊಡೆ ತೊರೆ ಕಾವಗಾದನುಂ ಬೀವಗದನುಂ . . . ಇಲ್ಲಿಯ ಪುರದ ಒಕ್ಕಲಿವರು (ಎಕ. III, ಸಂಜನ. ೧೩೯-೫ : 915 ?). [ ? ]

**ನಟುಳ್ಗುಂದ** (ನಾ). ಒಂದು ಸ್ಥಳದ ಹೆಸರು : ಸ್ವಸ್ತಿಶ್ರೀ ನಟುಳ್ಗುಂದ ಚಾತಮ್ಮನ್ ತೊಱುಗೊಳ ಇರ್ವ್ವ ವೇಡರಾ ಕೊನ್ದು ತೊಱುವ ಇಕ್ಕಿಸಿ ಸುರಲೋಕಮ್ ಪುಕ್ಕ (ಎಕ. X, ಚಿಂತಾಮ. ೧೨೨-೧ ; ಸು. 1000). [P ಇದು 'ನವಿಲ್ಗುಂದ' ಎಂಬುದರ ಅಪಲಿಖಿತವಿರಬಹುದು]

**ನಟ್ಗವುಂಡು** 'ನಾಟ್ಗಾವುಂಡು₂' ನೋ.

**ನಟ್ಗವುಂಡುಗೆಯ್** 'ನಾಟ್ಗಾವುಂಡುಗೆಯ್' ನೋ.

**ನಾ₁** 'ನಾನ್₂' ನೋ.

**ನಾ₂** 'ನಾಲ್' ನೋ.

**ನಾಊದ** (ನಾ) (?) : ಮುಡೆ ೧ ನಾಊದನ ಬಗುಳ ಗದೆ ಮೇಲೆ ಮುಡೆ ೨ (ಸೌಇಎ. ೧೯೩೨, ಉಡುಟಿ. ೩೦೬-೬ : ?). [ ? ]

**ನಾಂ** 'ನಾನ್₂' ನೋ.

**ನಾಂಗರು, ನಂಗರಿ, ನಾಕರ** (ನಾ). ನೇಗಿಲು ; ಹಲ ; ಲಾಂಗಲ : ದರ ನಾಂಗರು ೧ಕ್ಕೆ ಗು ೪ ನಾಲ್ಕು ವರಹಾದ ಪ್ರಕಾರ (ಮಹಾವಂ. II, ೬೨). **ನಂಗರಿ :** ನಂಗರಿ ಹೊಡೆಯುವುದರಿಂದ ನೆಲ ಪೊಳ್ಳಾಗಿದೆ (ಊಉ). **ನಾಕರ :** 'ನಾಕರಕಂಟೆ' ಪರಾ.

[ ←ಮರಾ. ನಾಂಗರ್, ನಾಗರ್. / ಪ್ರಾ. ಣಂಗಲ. / ಸಂ. ಲಾಂಗಲ ]

**ನಾಂಗಲಿಕ** 'ನಾಂಗುಲಿಕ₁' ನೋ.

**ನಾಂಗುರಿಕ** 'ನಾಂಗುಲಿಕ₁' ನೋ.

**ನಾಂಗುಲಿಕ₁, ನಾಂಗಲಿಕ, ನಾಂಗುರಿಕ, ನಾಂಗುಲೀಕ, ನಾಗುಲಿಕ** (ನಾ). ಒಂದು ಬಗೆಯ ಗಿಡ ; ಕೋಳಿಕುಟುಮನ ಗಿಡ : ಜಲರುಹ ಕಂದಾನ್ವಿತಮಿರುಳೆಲೆಯೊಳ್ ಸಲೆ ಕಟ್ಟಿಗಿರಿಯ ಬೂದಿಯ ತಳಿದೂಱಲೊಳಿಂಬಿನೆ ಕುದಿಯಿಸೆ ನಾಂಗುಲಿಕಮನಡುಗಾಜ್ಯದಿಂ ರಸಾಯನಮಕ್ಕುಂ (ಲೋಕೋಪ. ೮-೨೯) ; ದೃಷ್ಟಿ ದ್ರಾವಣಕ್ಕೆ – ಬಿದುರೆಲೆ . . . ನಾಂಗುಲಿಕ ಇವನ್ನು ಕೂಡಿ ಮರ್ದಿಸಿ ತಿಲಕವಿಡಲು ದೃಷ್ಟಿದ್ರಾವಣ ಮಾಣ್ಗುಂ (ವಿಷ್ವ. ೨೦೦) : ವಿಷಮುಷ್ಟಿ ನಾಂಗುಲಿಕ ಶಶನಯನ ಚಿತ್ರಮರರಸವು ತಾಂಬೂಲ ದೊಡಗೂಡೆ ಸ್ತ್ರೀವಶವು ಹುಸಿಯಲ್ಲ ನೋಡ (ಸರ್ವಜ್ಞ. ೧೯೬೯) **ನಾಂಗಲಿಕ :** ಮೂಲವ್ಯಾಧಿಗೆ–ನಾಂಗಲಿಕ, ವೊಗನ ಹರುವೆ, ಚಿತ್ರಮೂಲ . . . ಕಲಸಿ ಗುದದಲ್ಲಿ ಪೂಸೆ ಎಲ್ಲಾ ಮೂಲವ್ಯಾಧಿ ಕೆಡುಗುಂ (ವಿಷ್ವ. ೦೬೬). **ನಾಂಗುರಿಕ :** ವಿಷಮುಂಗುರಿಯುಂ ಗುರು ನಾಂಗುರಿಕಂ ಬೞಿಯವನರೆದಿಂಬಿಂ ಪೂಸೆ ಕಂಟಕೋಗ್ರವಿಷಘ್ನಂ (ಖಮುದ. ೨-೨೦೩). **ನಾಂಗುಲೀಕ :** ಬಯಸಿ ಚುಂಬಿಸಿದರ್ ಸ್ಮರನಿರ್ದು ನಾಂಗುಲೀಕದ ಕುಸುಮಂಗಳಂ ಪಱಿದು ಪತ್ರಿಸಿದಂತೆಪೊಲೊಚ್ಚಿ ತೋರ್ಪಿನಂ (ಕಾವ್ಯಸಾ. ೬೬೬ ಹೂದ್ಯಳ). **ನಾಗುಲಿಕ :** "ಲಾಂಗಳೀ, ಅಗ್ನಿಶಿಖಾ ಈ ೨ ನಾಗುಲಿಕಂ" (ನಾಚಿರಾ. ೧೦೦).

[ <ಸಂ. ಲಾಂಗಲಿಕ ]

**ನಾಂಗುಲಿಕ₂** (ನಾ). ಒಂದು ಬಗೆಯ ಗಿಡ; ಸರ್ಪಾಕ್ಷಿ ಗಿಡ; ನಾಗದಾಳಿ; ಮುಂಗುಸಿಮೇವುಗಿಡ ; ನಾಗಸುಗಂಧ : "ವ್ಯಾಳಗಂಧಿಯೆನೆ ನಾಂಗುಲಿಕವಕ್ಕು" (ಮುಂಗರಾ. ೪೦-೩೦). [< ಸಂ. ನಾಕುಲಿಕ ]

**ನಾಂಗುಲಿಕಬಳ್ಳಿ** (ನಾ). ನಾಂಗುಲಿಕದ ಬಳ್ಳಿ,-ಲತೆ; ಕೆಂಪು,ಹಳದಿ ಹೂವು ಬಿಡುವ ಸುಂದರವಾದ ಹಾಗೂ ಮೇಲಕ್ಕೆ ಹಬ್ಬಿಕೊಂಡು ಹೋಗುವ ಒಂದು ಬಗೆಯ ಬಳ್ಳಿ : (೬). [ ನಾಂಗುಲಿಕ₁ + ಬಳ್ಳಿ ]

**ನಾಂಗುಲೀಕ** 'ನಾಂಗುಲಿಕ₁' ನೋ.

**ನಾಂಚಿಕೆ** 'ನಾಣ್ಚಿಕೆ' ನೋ.

**ನಾಂಚು** 'ನಾಣ್ಚು₁' ನೋ.

**ನಾಂಟಸು, ನಾಟಿಸ** (ಕ್ರಿ). ೧. ಚುಚ್ಚುವಂತೆ ಮಾಡು ; ನಾಟಿಕೊಳ್ಳುವಂತೆ ಮಾಡು : ಚಿಗುರುದೋಱಿದ ತಳಿರ ತಱಿತಱಿದಗಲದಲಿ ಪಸರಿಸುತ ಪದಕಂಟಕವ ನಾಂಟಿಸದೆ [ಪಾಠಾಂ. ಪಂಟಿಸುತ]. . . ಜನಕನ ಮಗಳ ನಡೆಸುತ ತಂದರೊಂದು ಮಹಾಸರೋವರಕೆ (ತೊರರಾ. ೨-೪-೧೯); ಕಂಟಣೆಯರೆಳೆವ ಕುಲಟೆಯರಂತೆ ಖುರಪುಟವ ನಾಂಟಸಂಗವನೆಳೆದು ಕಾಲಮಹಿಷಿಯು (ಜಿನಮು. ೫-೫೦). ೨. [ಗಣಿತ] ಗುಣಿಸು : ಒತ್ತಿಱಿ ನಾಂಟಸಮ್ಮ ? ಬಳಸೊತ್ತು . . . ಗುಣಿಸು ಪೆರ್ಚಿಸೆನಲಿವು ಗುಣಕಾರ ಭಾಷೆಗಳ್ ಪೇೞ್ ಗಣಕಾ (ವ್ಯವಹಾ. ೧೦-೧೨). **ನಾಟಿಸು :** ೩. ಊಂಟುಮಾಡು; ನೆಲೆಗೊಳಿಸು : ಮನದ ಬೆಚ್ಚ ಬೞಿಯಱಿವು ಬೞಿದು ಬೆಱಗನೆ ನೋಟದೊಳ್ ನಾಟಿಸೆ [ಪಾಠಾಂ. ನಾಂಟಿಸಿ] (ಅರ್ಜನೇ. ೨-೬೦ ವ); ಬೇಟದ ಸೊಗಸಂ ಪ್ರಿಯರೊಳ್ ನಾಟಿಸುತುಂ . . . ಶಬರಿಯರ್ ನಡೆತಂದರ್ (ಉದ್ಭಟ.೨-೬೨) : ನಾಟಿಸುವೆನವರಱಿವಿಗಱಿವನು ಮಾಟವೆಲ್ಲವ ಮಾಣಿಸುವೆನೆನುತಿರ್ದ ಪ್ರಭುರಾಯ (ಪ್ರಭುಲಿ. ೨೦-೩೪) ; ಕೂಟದೊಳಗೆ ದಣಿವನು ಪೊರ್ದದಾ ಸತಿ ನಾಟಿಸಿದಳು ತನ್ನೊಳವನ (ನೇಮಿಸಂ. ೧೦-೯೨) : ನಾಟ್ಯರಸದಲಸಿಕೆಯು ಪ್ರೇಕ್ಷಕರ ಕಣ್ಣು ಕಿವಿಗಳ ಮೂಲಕ ಹೃದಯದಲ್ಲಿ ನಾಟಿಸಲಾಗುವುದು (ಪ್ರಬಂಧ. ೨೫). ೪. ಊರು ; ಆಧಾರ ಕೊಡು : ಮಡದಿಯ ಪೀನ ಪಯೋಧರಭಾರಕೆ ನಡು ಮುಱಿದಪುದೆಂದಜನು ನಡುಗೆ ನಾಟಿಸಿ ಸಟ್ಟಕಂಭವೆನಲು ಬಾಸೆ ಕಡುಚೆಲುವಾಗೊಪ್ಪುತಿಹವು (ಅಂಜಿಷ. ೫-೧೨೩) : ಅವರುಗಳ ಪೊಡೆಯೊಳಗೊಂದಕೆಂಟೆಂಟ ನಾಟಿಸಿ ಬಂದ ಪಡೆಯನಿಕ್ಕಿದ ರಣಬಲಿಯ (ಮೋಹತ. ೩೫-೧೩). ೫. "ಸೃಷ್ಟಿಸು" (ತೊರರಾ. ಕೋಶ) : ನಾಟಿಸುವ ಜಗದವನನಣುವಿಗೆ ಪಾಟಮಾಡದ ಸುಪ್ರಸಿದ್ಧನ ಘಾಟ ರಣಸುಖವಲ್ಲೆನುತಲೊದಱಿದವು ತಹಳೆಗಳು (ತೊರರಾ. ೬-೪೬-೩೫). ೬. (ಅಲಂ) ನಿರೂಪಿಸು ; ಹೇಳು : ಬೇಟೆಯ ನೆವದಿಂದರಸಿನ ಕೂಟದ ನಾಯಕರ್ ಬಂದುಮಿಾ ತಮನಂ ನಿರ್ದಾಟಿಸಿ ಕೊಂದರೆನುತ್ತಂ ನಾಟಿಸು ನೀನಿವನ ಪೆಂಡಿರೊಳ್ ಮಕ್ಕಳೊಳಂ (ನನ್ನಚಾ. ೨-೧೨೨) ; ರತಿಯ ಪ್ರಸಂಗವ ನಾಟಿಸಿದನು ಕಿವಿಯೊಳಗೆ (ಮೋಹತ. ೯-೪೬). ೭. ಚೆನ್ನಾಗಿ ಸೇರಿಕೊಳ್ಳು ; ಅಂಟಿಕೊಳ್ಳು ; ಗಂಟುಬೀಳು : ಕೂಟದಲಿ ಕೋಪ ಕೊನರಿಸುತ ಶಂಖಿನಿಯು ನಾಟಿಸದೆ ಬಿಡಳು (ಸರ್ವಜ್ಞ. ೦೬೪೩) : ನೋಱಿಕ್ಕೆ ಬಲು ಚೆಂದ ಕೂಟಕ್ಕೆ ಕಡುನರಕ ನಾಟಿಸಿ[ಸ]ಲು ಪ್ರಾಣಧನ ಹಾನಿ ಸೂಳೆಯೋಱಾಟವೇ ಬೇಡ(ಸರ್ವಜ್ಞ. ೦೯೫೫). [ ನಾಂಟು + – ಇಸು₁ ]

**ನಾಂಟು, ನಾಟು₁** (ಕ್ರಿ). ೧. (ಮುಳ್ಳು, ಬಾಣ ಮೊದಲಾದುವು) ಒಳಹೊಗು ; ಒಳಕ್ಕೆ ಚುಚ್ಚು : "ನಾಂಟು–ಅಂತರ್ಭೇದೇ (ನಾಟಿಕೊಳ್ಳು)" (ಕಮುಧಾ) ; ಕಪೋಲಕಂಟಕನಿಕಾಯಾಗ್ರಂಗಳಂ ಕೂಡೆ ನಾಂಟಿದುದೋ ವೇೞ್ ಸುಭಗತ್ವಮೆಂಬ ಗುಣದಿಂ ಪೊಲ್ದತ್ತೊ ಮೇಣೆಂಬಿನಂ ಪದಪಿಂ ನಟ್ಟಿರೆ ದಿಟ್ಟಿಯಂ ತೆಗೆದೆನೆಂತಂತಾನುಮುದ್ವೇಗದಿಂ (ಕಾದಂಪೂ. ೬೬೩) ; ಜವನಾಳಂತಪ್ಪ ಕಣೆ ರೋಮರೋಮಂದಪ್ಪದೆ ನಾಂಟಿದುವು (ಪಂಪಾಮಾ. ೦೩-೬೧) : ನಾಂಟದುವರಿಭಟರಂಗವಂ . . . ಶರಂಗಳ್ (ಜಗವಿ. ೮-೫೩); ಕಂಟಕಂಗಳ್ ನಾಂಟ ಬಿದ್ದು ಕಾಲೊಡೆದು ಬಾಯ್ ಗಂಟಲ್ಗಳೊಣಗಿ ಗತಿಗೆಟ್ಟು (ಚಲಪು. ೨೦-೨೦) : ಸಲೆ ಪಚ್ಚೆಯನಿಡೆ ನಾಂಟುವ ಮೊಮುಳ್ಳಿನಿಂದೊಳುಗಾಡಿಸದುದೇನೆಂಬೆ (ಕಂಪವಿ. ೧೪-೪೬). ೨. ತಗುಲು ; ಸಂಪರ್ಕ ಹೊಂದು; ಸೇರು ; ಕೂಡು ; ಅಂಟು : ಬೆಂಗೆ ನೀರ ಧಾರೆಗಳಱಿ ನಾಂಟಲೀಂಟಿದುದು ನೇಹದೆ . . . ಚಾತಕಂ (೧೦ಕ. ೯-೪೮) ; ಪಾಪಂಗಳಾಟಂ ನಾಂ[ಪಾಠಾಂ. ನಾ]ಟವನ್ನಾಯದ ಕಳೆಗೆ ತೆಕ್ಕವು . . . ಮುಕ್ತಿಯ ಮೂಲವೆನಿಸುವು ಕಾಶಿ ಹಂಪೆಗಳು (ಹಕಚಾ. ೮-೩೯) ; ಗುರುಕುಚಂಗಳಂ ನೋಳ್ಪ ಕಾಮುಕನಿಕರದ ದಿಟ್ಟಿ ನಾಂಟದ ತೆಱದಿ ಮಱಿಮಾಡಿ ದಂದದಿಂ (ಸೌಂದಪು. ೬-೨೪). ೩. (ಗಿಡ ಮೊದಲಾದುವನ್ನು) ಭೂಮಿ

ಯಲ್ಲಿ ನೆಡು.-ಊರು,-ಹಚ್ಚು : ಬಗೆ ಮುಟ್ಟಿರ್ದೆಡೆಯೊಳ್ ತರ್ತ ಮರನಂ ಹೇಮಂತದೊಳ್ ಕಿಟ್ಟು ನಾಂಟುಗೆ (ಲೀಲಾಶೋಕ ೬-೧೭); ಪಾಂಥರೀಂಟೆ ವಿಕಸತ್ಪ್ರಸ್ಸಾತುರರ್ ಚಿತ್ರಭೂತಲದೊಳ್ ನಾಂಟದ ಬೇಂಟವೇಂ[ ಮೆಂ] ಬಗೆಗೆ ನೀರ್ಪೊಯ್ಯಂತೆ ಭೃಂಗಾರಶೀತಲತೋಯಂ ಗಳನಾಂತು ಮಾಣಿತಳದೊಳ್ ಪೊಯ್ವರ್ ಪ್ರಮಾಕಾಂತೆಯರ್ (ಲೀಲಾವ. ೬-೧೨೯). ೪. ಮೊಳೆ; ಮೊಳಕೆಯಾಗು: ಬಿತ್ತಿದಾಗಳಲ್ಲಿಗವ್ವನಿತೆ ಮಟಿ ಕೊಡು ಕಿಸಬಾಗಿ ನಾಂಟ ಬೆಳೆದೆಬಗಿರ್ದಡಾಗಳ್ (ಬಂಹರಿ. ೯-೩೩ ವ).

ನಾಟ್ಟು$_1$: ೧. ನಾಟುವ ನರ್ಗಣೆ ಚಿತ್ತಮನಾಟಪಿಟಂಬರಿಸಿ ನೆನಹದಿಂ ಪೊಸವೇಟಂ ಕೋಟ ತೆಜನಾಗೆ (ಲೀಲಾವ. ೯-೦೨೦); ಉದ್ವಟೇಂದ್ರನಿಟ್ಟ ಶೂಲವೈದೆ ಮುಂ ಕೊಂಡು ನಾಟ ವಕ್ಷಮಂ (ಉದ್ಭಟ. ೪-೧೦೮); ನೋಟದಲಿ ಮದನಾಸ್ತ್ರವೆದೆಯಲಿ ನಾಟಿದವು (ತೊರೆರಾ. ೧-೧೪-೨೪); ಹೊಂಗಳಸ ಚಂಡವೃತ್ತರದಕ್ಷಿಣವೀಥಿಗೊಟ್ಟು ಬ್ರಹ್ಮಾಂಡವ ತುಡುಕಿ ನಾಟಿದುವು (ಮೋಹತ. ೨೦-೨೯); ಕೊರುಗುರು ನಾಟದೊಲ್ಪಿಡಿ ಕುಚಂಗಳ (ವಂಶಾರಾ. ೧-೩-೪೦); ರಣರಂಗದ ಮತ್ತೊಂದು ಕಡೆ ಭಾಮನು ಖಡ್ಗ ನಾಟ ಬಿದ್ದಿದ್ದಾನೆ (ಸಂಕಳ. ೧೦೦). ೩. ಪುಣ್ಯಾರ್ತ್ಥ ಕಲ್ನಾಟ ಬಿಟ್ಟದತ್ತಿ (ಎಕ. XIV, ಮೈಸೂರು. ೧೨೭-೧೦ ; ೫೦೦); ನಾಟರ್ದ ಪಸುರ್ಗಿಡು ಪುಷ್ಪಲತೆಮ ವೃಕ್ಷ ವಾಟಿಯೊಳ್ ಕುಸುಮಸೌರಭಕೆ ಊಟಿವರವ ತುಂಬಿಗಳ ದೋಬ . . . ಒಪ್ಪಿದುವು (ಮೋಹತ. ೫-೨೩); ನೀರ ಕಡೆಗೆ ನಾಟದ ಮರ ಚಿಗುರದೆ ಬಿಟ್ಟೀತೆ? (ಗಾದೆ). ೫. (ಮಾನಸ್ಸಿಗೆ) ಹತ್ತು; ಹಿಡಿ; ತಟ್ಟು: ಬಗೆಯೆಳ್ ನಾಟುವಿನಮುಮರಿ ಸಂಸ್ಕೃತಿನಾಟಕಮುಮನೆನಗೆ ನೆಟಿಯ ತೋರಿಡಲೀಗಳ್ (ಆದಿಪು. ೯-೪೩); ಭಯಂ ನಾಟ ಚಿತ್ತದೊಳ್ ದೂತರ್ಕೆತಂದಾ ಕೃತಾಂತನೊಡನಿಂತೆಂದರು (ಕಬಪು. ೫೦-೨೪); ಈ ವಿಚಾರಗಳು ಶಂಕರಭಟ್ಟರ ಮನಸ್ಸಿಗೆ ನಾಟದವು (ಗಂಗಾಸಾ. ೩೦); ಅವಕಾಶವುಟಾದಾಗ . . . ಅವುಗಳ ಗುಣದೋಷಗಳನ್ನೂ ನಾಟುವಂತೆ ಬೋಧಿಸಬೇಕು (ಸಾಹಿಜೀ. ೭೮). ೬. ತೋರು; ಉಂಟಾಗು: ಬೇಟಕ್ಕೆ ತವದ ಕೂಟಂ ಕೂಟಕ್ಕೆ ತನೂಜನಾ ತನೂಜನೊಳು ಮುದ್ದಾಟಂ ಫಲಮುದೆ ತಮ್ಮೊಳ್ ನಾಟದು ಗಡ ಪೆಣ್ಣು ಪುಟ್ಟಿದಾಗಳೊಳೇನೋ (ಚಂದ್ರಪು. ೩-೪೨); ಕಿಡಿನಾ[ಪಾಠಾಂ. ದಾ]ಟದವು ಕಂಗಳಲಿ ಕಾಲಕರೋಟ ಮೂರ್ಧರನವೊಲು ಮುಳಿದೆದ್ದನಸುರೇಂದ್ರ (ತೊರೆರಾ. ೬-೧೭-೭). ೭. ಒಗ್ಗು; ಹೊಂದಿಕೆಯಾಗು: ಈ ಔಷಧಿ ಅವರ ಮೈಗೆ ನಾಟುವುದಿಲ್ಲ (ರೂಢಿ). ೮. (ಅಲಂ) ಶಕ್ತವಾಗು; ಸಮರ್ಥವಾಗು: ಫಣಿಪತಿಗೆ ನಾಲಗೆ ನಾಟದೆಣಿಸಲು ಗಣನೆಯಿಲ್ಲದ ರಾಮಸ್ಮನಿಕವ (ತೊರೆರಾ. ೪-೭-೨೩).

[ ದೇ.೫ ತಮಿ. ಮಲ. ನಾಟ್ಟು; ತುಳು. ತೆಲು. ನಾಟು ]

ನಾಂಟುಗೊಳ್ (ಕ್ರಿ). ಬೇರೂರು; ನಾಟಿಕೊಳ್ಳು; ನೆಲಸು; ಸ್ಥಿರವಾಗು: ಸಿರಿ [ಆಳೊಪ್ಪು]ಗೊಂಡುದು ನಯಂ ನೆಲೆಗೊಂಡು ನನ್ನಿ ನಾಂಟುಗೊಂಡುದು (ಶಾಶಿಶ XV, ೨೦೭-೦೯; 1206). [ ನಾಂಟು + ಕೊಳ್$_1$ ]

ನಾಂಟ್ಯ (ನಾ). ನಾಟ್ಯ; ನರ್ತನ: ನಂದಿಕೇಶ್ವರ ಭೃಂಗಿ ನಾಂಟ್ಯ ನಮ್ಮ ಲಿಂಗದ ಮುಂದೆ (ಬಸವ. ೫೬೩); ಬಂದ ಬಹುರೂಪಿ ನಿಂದ ಕೈಯೊಳು ಸಂದ ಪುರಾತನರು ಕೇಳಿ ಕಂದರ್ಪನ ಕೊಂದು ನಿಂದು ನಾಂಟ್ಯವನಾಡಿ ದಂದುದಿನ ಬಹುರೂಪನಾಹೋ (ಶಿವನೀ. ೦೭೯-೮೮೩); ನಾಂಟ್ಯ[ಪಾಠಾಂ. ನಾಟ್ಯ]ವಾಡುವ ಭೃಂಗಿಪನ ಕಂಡು ಪರಶಿವಂ ನಸುನಗುತಿರೆ (ಪ್ರಭುಪು. ೨-೬೯); ತಾಂಡವ ನಾಂಟ್ಯ ನೃತ್ಯ ಲಾಸ್ಯ ಗುಂಡಿಲ ಪಿಕ್ಕಣ ಲಚ್ಚಣ ಅಪರಿಪಾತ್ರ ಸುಪಾತ್ರ ಸರ್ವತೋಭದ್ರಯೆಂಬ ದಶಪಾತ್ರಂಗಳ ತೋಱಿ (ಭೈರವ. ೧-೭೦ ವ). [ <ಸಂ. ನಾಟ್ಯ ]

ನಾಂಡರಸ 'ನಾಡರಸು' ನೋ.

ನಾಂಡು 'ನಾಡು' ನೋ.

ನಾಂಡೆಱಿಯ 'ನಾಡೆಱಿಯ' ನೋ.

ನಾಂತ (ಗು). ೧. ನಕಾರವು ಕೊನೆಯಲ್ಲಿರುವ: ನಾಂತಾವ್ಯಯಪದಕ್ಕಮನು ಕೃತಿಪದಕಂ (ಶಮದ. ೧೯೩). (ನಾ). ೨. ನಕಾರವು ಕೊನೆಯಲ್ಲಿರುವ ಪದ: ನೆಗಳ್ದಿರ್ದ ರೇಫ ಱಟ ನಾಂತ ಗಾಂತ ಸಾಂತಂಗಳತ್ವದಿದಿರ ವತ್ವಂ ವತ್ವಂ (ಶಮದ. ೨೩೨). [ ನ + ಅಂತ$_2$ ]

ನಾಂದ 'ನಾನ್$_1$' ವರಾ.

ನಾಂದಿ$_1$ 'ನಾಂದ್ಯ$_1$' ವರಾ.

ನಾಂದಿ$_2$ (ನಾ). ೧. ವಿವಾಹ ಮೊದಲಾದ ಶುಭಕಾರ್ಯಗಳ ಅಂಗವಾಗಿ ಅವುಗಳ ಪ್ರಾರಂಭದಲ್ಲಿ ಪಿತೃದೇವತೆಗಳ ಪ್ರೀತ್ಯರ್ಥವಾಗಿ ಮಾಡುವ ಒಂದು ಸಾಂಪ್ರದಾಯಿಕ ವಿಧಿ: ನಾಂದಿಗೆ ಕೂಡಿದ ಮಂದಿ ಪ್ರಸ್ತಕ್ಕೆ ಕೂಡೀತೇ? (ಗಾದೆ); ಕಟ್ಟಿದ ಲಗ್ನದಲ್ಲಿ ಧಾರೆಯಾಗಬೇಕು. ನಾಂದಿ, ನವಗ್ರಹ ಎಲ್ಲ ಬೇಗ ಆಗಿಬಿಡಬೇಕು ಗುರುಗಳೇ (ರೂಢಿ). ೨. [ಕಾವ್ಯವಿಮಾ] ನಾಟಕ, ಕಾವ್ಯ ಮೊದಲಾದುವುಗಳ ಪ್ರಾರಂಭದಲ್ಲಿ ಬರುವ ಮಂಗಳ ಪದ್ಯ: "ನಾಂದಿ ದೇವತಾಸ್ತೋತ್ರರೂಪವಾಗಿಯೂ ರಾಜನ ಪ್ರಜೆ ಮುಂತಾದವರಿಗೆ ಆಶೀರ್ವಾದರೂಪವಾಗಿಯೂ ಇರತಕ್ಕ ವಚನ" (ಕೃಬಿಪ. ೨೧೨); P ಕಾವ್ಯಮೀಮಾಂಸೆಯಲ್ಲಿ ಈ ಬಗೆಗೆ ಅನೇಕ ಚರ್ಚೆಗಳು ನಡೆದಿವೆ. ನಾಂದೀಶ್ಲೋಕದ ಕಥಾಂಶ, ಪದನಿಯಮ ಇತ್ಯಾದಿಗಳಲ್ಲಿ ಭಿನ್ನಾಭಿಪ್ರಾಯವುಂಟು. ನಾಂದಿಯಲ್ಲಿ ಆಶೀರ್ವಚನ, ನಮಸ್ಕಾರ ಮತ್ತು ವಸ್ತುನಿರ್ದೇಶವೆಂಬ ಮೂರು ವಿಧಗಳಿವೆ: ನಾಂದಿಯನನಂತರಂ . . . ಬಲ್ಲಾಳದೇವನನ್ವಯಕಥನಂ (ಯಶೋಚ. ೧-೬); ತಾಳಮಾರ್ಗಗಳನ್ನನುಸರಿಸಿ ವಿಧಿಸಲ್ಪಟ್ಟ ನಾಂದಿಯನ್ನು ಕೂಡ ಸಂಸ್ಕೃತ ನಾಟಕಕರ್ತರು ಒಂದು ವೃತ್ತವಾಗಿ ಬದಲಾಯಿಸಿಕೊಂಡರು (ಸಾಹಿಜೀ. ೧೮). ೩. ಸಂತೋಷ; ಆನಂದ; ಸಂತೃಪ್ತಿ. ೪. (ಅಲಂ) (ಶುಭಕಾರ್ಯದ) ಆರಂಭ; ಮೊದಲು; ಪ್ರಾರಂಭ: ವಿಜಯಪ್ರಸ್ಥಾನನಾಂದೀನಿನದಾನಂದಿತ ದಿಕ್ಪಾಲಚಕ್ರನುಂ . . . ಮೇದಿನೀಚಕ್ರನುಂ (ಆದಿಪು. ೧೪-೯೦ ವ); ಭರತವಾಕ್ಯಮಿ ಐಹಿಕದ ನಾಟಕಕೆ ತಾನಾದೊಡೇಂ ಮೃತ್ಯು ತಾಂ ನಾಂದಿಯ್ಯಸಲೆವೇಳ್ ಅಲೌಕಿಕಕೆ? (ಶ್ರೀರಾಮಾ. ೧೧೯-೨೦೭); ಜತೀಂದ್ರನ ಬಲಿದಾನವೇ ಭಾರತದ ಸ್ವಾತಂತ್ರ್ಯಘೋಷಣೆಗೆ ನಾಂದಿಯಾಯಿತು (ಅಕ್ಷಾರ್ಷ. ೧೩೦); ಅನಾಗರಿಕ ದಾಸ್ಯಪದ್ಧತಿಯ ಅವನತಿಗೆ ಅದು ನಾಂದಿಯಾಗಿತ್ತು (ಪುನರು. ೨೬೨). [ ಸಂ. ನಾಂದೀ ]

ನಾಂದಿಸು, ನಾದಿಸು$_1$ (ಕ್ರಿ). ನೆನೆಸು; ಒದ್ದೆಮಾಡು; ತೋಯಿಸು: ಪ್ರೇಮಪೀಯೂಷದಿಂ ಪಿರಿದುಂ ನಾಂದಿಸುವಂತೆ ಮಾಣ[ದೊಲವಿಂದಾ ದೇವಿ] ಪೊಯ್ದಳ್ ಮಹೀವರಶೋಭಾಂಗದ ಮೇಲೆ ಲೀಲೆಯೊದವಿಂ ಕರ್ಪೂರಪೂರಾಂಬುವಂ (ಕುಸುಮಾ. ೫-೦೪೩). ನಾದಿಸು$_1$: ಎಲೆ ಮರುಳೆ ನಿನ್ನೊಡಲ ಸೀಳಿಯ ತೀರಕಂತದಲಿ ತಾಯ ತುಱಬನು ನಾದಿಸುವೆನೆಂದ (ಕುಮಾರ್ದ್ರೌ. ೫-೪೪). [ ನಾಂದು$_1$ + - ಇಸು$_3$ ]

ನಾಂದೀಕರ (ನಾ). ಮಂಗಳಪದ್ಯಗಳನ್ನು ಹಾಡುವವನು; ಮಂಗಳ ಪಾಠಕ: "ನಾಂದೀವಾದೀ, ನಾಂದೀಕರಃ – ೨ ಆಶೀರ್ವಾದದಿಂದ ಕೂಡಿದ ದೇವತಾದಿಗಳ ಸ್ತೋತ್ರವನ್ನು ಮಾಡುವ ಪಾಠಕರು" (ಸಿದ್ಧಾಂತಿ. ೨೮೮).

[ ಸಂ. ]

ನಾಂದೀದೇವತೆ (ನಾ). ನಾಂದಿ ಎಂಬ ಶುಭಕಾರ್ಯದ ಪ್ರಾರಂಭದಲ್ಲಿ ಉದ್ದಿಷ್ಟರಾದ ಪಿತೃದೇವತೆಗಳ ವರ್ಗ; P ಪ್ರಪಿತಾಮಹ, ಪಿತಾಮಹ, ಮಾತೃ-ಪ್ರಪಿತಾಮಹ, ಪಿತಾಮಹ, ಪಿತೃ-ಮಾತೃ ಸಪತ್ನೀಕರಾದ ಮಾತಾಮಹವರ್ಗ–ಇವರೆಲ್ಲ ಈ ವರ್ಗಕ್ಕೆ ಸೇರುತ್ತಾರೆ: ನಾಂದೀದೇವತೆಗಳು ಮೊದಲು ತೃಪ್ತರಾದರೆ ಮುಂದಿನ ಕರ್ಮಕ್ಕೆ ಮಾರ್ಗವಾಗುತ್ತದೆ (ರೂಢಿ). [ ಸಂ. ನಾಂದೀದೇವತಾ ]

**ನಾಂದೀಪದ** (ನಾ). ಮಂಗಳಗೀತ; ಗ್ರಂಥಾರಂಭದಲ್ಲಿ ಬರುವ ಮಂಗಳ : ರಸಮುಂ ಭಾವಮುಮರ್ಥಮುಂ ರಚನೆಯುಂ ಕಾವ್ಯಜ್ಞರಾರಯ್ದು ಭಾವಿಸಿ ನಾಂದೀಪದ ನಾಯಕಾಭ್ಯುದಯಪರ್ಯಂತಂಬರಂ ಕೂಡೆ ಶೋಧಿಸಿ ನೋಳ್ಪೊ ರಘುವಂಶರಾಮಕೃತಿಯೊಳ್ ಪತ್ತೆಂಟು ಪದ್ಯಂಗಳಂ (ಶಂರಾಮಾ. ೧-೩೬); ನಾಂದೀಪದವ ಪಾಡಿದನು ನಂಬಿ ಶಂಭುವಿನಿದಿರೊಳು (ಸೌಂದಪು. ೫-೨೭). [ಸಂ.]

**ನಾಂದೀಪದ್ಯ** (ನಾ). = ನಾಂದೀಪದ : ನಾಟಕದ ಪ್ರಾರಂಭದಲ್ಲಿ ನಾಂದೀ ಪದ್ಯವನ್ನು ಹಾಡಿದರು (ರೂಢಿ). [ಸಂ.]

**ನಾಂದೀಮುಖ** (ನಾ). ೧. ವಿವಾಹವೇ ಮೊದಲಾದ ಶುಭಕಾರ್ಯಕ್ಕೆ ಮೊದಲು ಮಾಡುವ ನಾಂದೀಕರ್ಮದಲ್ಲಿ ಆವಾಹಿಸಲ್ಪಡುವ ಪಿತೃಗಳ ವರ್ಗ; ನಾಂದೀಶ್ರಾದ್ಧದಲ್ಲಿ ಉದ್ದಿಷ್ಟರಾದ ಪಿತೃಗಳು. ೨. = ನಾಂದೀಶ್ರಾದ್ಧ : ನಾಂದೀಮುಖಮಂ ನಿರ್ವರ್ತಿಸಿ ಶುಭಲಕ್ಷಣಲಕ್ಷಿತನುಂ ಸನ್ನಾಹಕರ್ಮನಿರ್ಮಿತನುಂ . . . ಭದ್ರಮನನುಮಪ್ಪ ವಿಜಯಗಜಮುಮಂ . . . ಅರ್ಚಿಸಿ (ಶಂಶಭಾ. ೧೦-೯೬ ವ) ಆಕೆಗೀ ಜನಕಥಾನಾಂದೀಮುಖಂ ಮುಖ್ಯಮಂಗಳಮರ್ಹತ್ಸ್ತುತಿ ಮಂಗಳಂ . . . ಧರ್ಮಂ ಮಹಾಮಂಗಳಂ (ಅರ್ಧನೇ. ೧-೨೧); ಗೋವಿಂದ ನಾಂದೀಮುಖವನು ವಿರಚಿಸಿ ವಿಪ್ರರಿಂದ ತನುಜೆಯ ಶೃಂಗರಿಸುವುದೆಂದು ಕೆಳದಿ ಜನಕೆ ಪೇಳಲು (ಜೀವಸಾಂ. ೧೭-೩೦). [ಸಂ.]

**ನಾಂದೀವಾದಿ** (ನಾ). = ನಾಂದೀಕರ : "ನಾಂದೀವಾದೀ, ನಾಂದೀಕರಃ – ಆಶೀರ್ವಾದದಿಂದ ಕೂಡಿದ ದೇವತಾದಿಗಳ ಸ್ತೋತ್ರವನ್ನು ಮಾಡುವ ಪಾಠಕರು" (ಸಿದ್ಧಾಂತಿ. ೨೮೮). [ಸಂ. ನಾಂದೀವಾದಿನ್]

**ನಾಂದೀವಿಧಿ** (ನಾ). ೧. = ನಾಂದಿ. ೨. [ಕಾವ್ಯಮಿ] ಅಭಿನಯಕ್ಕೆ ಪೂರ್ವಭಾವಿಯಾಗಿ ಮಾಡುವ ಮಂಗಳಾಚರಣೆಗೆ ಸಂಬಂಧಪಟ್ಟ ಕಾರ್ಯಕಲಾಪ : ಶುದ್ಧಚಿತ್ರಮೆಂಬ ಪೂರ್ವರಂಗಪ್ರಸಂಗದೊಳ್ ಜರ್ಜರಪೂಜಾಮಂಗಳ ಪದೋಚ್ಚಾರಣಪುಷ್ಪಾಂಜಲಿ ವಿಕ್ಷೇಪಣಾದಿ ನಾಂದೀವಿಧಿಯಂ ನಿರ್ವರ್ತಿಸಿ (ಆದಿಪು. ೭-೧೦೯ ವ). [ಸಂ.]

**ನಾಂದೀಶ್ರಾದ್ಧ** (ನಾ). ಮಂಗಳಕಾರ್ಯಗಳಿಗೆ ಪೂರ್ವಭಾವಿಯಾಗಿ ನೆರವೇರಿಸುವ ಪಿತೃಕ್ರಿಯೆ : ಆಮೇಲೆ ನಾಂದೀಶ್ರಾದ್ಧವನ್ನು ಮಾಡಿ ಯಾವತ್ತು ಜಾತಕರ್ಮವಿಧಿಯನ್ನು ಮುಗಿಸಿದರು (ತುಳಸೀ. ೫೭). [ಸಂ.]

**ನಾಂದೀಸ್ಥಾಪನೆ** (ನಾ). ನಾಂದೀಕರ್ಮದಲ್ಲಿ ಮಾಡುವ ಪಿತೃದೇವತೆಗಳ ಆವಾಹನೆ : ಮುಂಜಿವಿಯ ನಾಂದೀಸ್ಥಾಪನೆಯ ಕಾಲಕ್ಕೆ ಟಳಕರಿಂದ ಮಾರುಪ್ಪದ ನಾಲ್ಕು ಪತ್ರಗಳು ಬಂದು ಸೇರಿದವು (ಸ್ಮೃತಿಚಿ. ೨೨೫).

[ಸಂ. ನಾಂದೀಸ್ಥಾಪನಾ]

**ನಾಂದು₁, ನಾದು₂** (ಕ್ರಿ). ನಾಂದಿ₁ (ಭೂತಸ್ಯ). ೧. ಒದ್ದೆಮಾಡು; ತೋಯಿಸು; ನೆನೆಸು : ಅತಿವಿಶದವಿಶಾಲೋರುಕ್ಷತದಿಂದೊಱೆದನಿತು ಜಡೆಯುಮಂ ನಾಂದಿ ಮನಃಕ್ಷತದೊಡನೆಟ್ಟಿಱಿಸಿದುದು . . . ಗಂಧಂ (ಶಂಶಭಾ. ೧-೧೦೫); ಪೊರೆದ ಪುಡಿಯನೊಡನೊಡನೆ ಬೆಮರ ಬಿಂದುಗಳ್ ನಾಂದೆ(ವರ್ಧಪು.೯-೭೦ ವ); ವಹ್ನಿಸಖ ನಾನೆಂಬೊಂದಹಂಕಾರಮಂ ತಳೆದಾ ಮಾರುತನಂ ಕರಂ ಪಿಡಿದು ತನ್ನೈಕಿಲ್ಲಳಿಂ ನಾಂದಿ ಸಂಚಳನಂ ಮಾಡಿ ತದಾಪ್ರನುರ್ಮ ಮುಱಿದೇಂ ಪರ್ವಿತ್ತೊ ಹೈಮಾಗಮಂ (ಕಾಚಿಶೀ. ೯-೭). ೨. ಒದ್ದೆಯಾಗಂ; ತೋಯಂ; ನೆನೆ : ಬಿಸಿಲಿಂ ಕಂದದ ಬೆಂಕಿಯಿಂ ಸುಡದ ನೀರಿಂ ನಾಂದದುಗ್ರಾಸಿ ಭೇದಿಸಲುಂ ಬಾರದ ಚಿನ್ಮಯಂ (ರಕ್ಷಾಶ. ೮). ೩. ಕರಗು; ದ್ರವರೂಪ ತಾಳು; ನೀರಾಗು: "ನಾಂದು–ದ್ರವೀಕರಣೇ" (ಶಮಧಾ); ನಿತ್ಯಬಿಂದುಗಳ್–ನಾಂದು. ಕಡುಂಬು (ಶಮದ. ೩೭ ಪ್ರಯೋ). ೪. (ಅಲಂ) ಆರ್ದ್ರಗೊಳಿಸು; ಮೃದುಗೊಳಿಸು : ಅರಸನ ಕಣ್ಣುಗಳಿಂದ ಚಿಮ್ಮಿದ ಅಶ್ರುಗಳು ವೀರಣ್ಣನ ಎದೆಯನ್ನು ನಾಂದಿದುವು (ಹಾಹುತ. ೧೦೦). ನಾದು₂ : ೧. ಇನನಂದನನು . . . ಸರಳಮಂಚವ ಹೊದ್ದಿ ಭೀಷ್ಮನ ಚರಣಕಮಲವ ಹಿಡಿದು ನೊಸಲಿನೊಳೊರಸಿಕೊಂಡನು ನಾದಿದನು ಕಂಬನಿಯೊಳಂಘ್ರಿಗಳ (ಕುಮ್ವಾದ್ರೋ. ೧-೨೧); ಕಡಲಿಡುವ ನಯನಾಮೃತಾನಂದಾಶ್ರುಪೂರದಲಿ ಅಡಿಗಳನು ನಾದಿದನು (ನಿಭಾಗ. ೭-೧೫-೬); ರುಧಿರದಿಂ ನಾದಿದಂ ಧರೆಯನುಸಿರ್ಗಾಳಿಯಿಂದಂ ಪಾಱಲೂದಿದಂ ರಣದೊಳ್ಪೆಣದ ರಾಶಿ ಮಾಡಿದಂ ಪರಬಲದೊಳಾ ಭೀಮನು (ಕೃಮಿಭಾ ೭-೪೭). ೫. ತೊಡೆ; ಪೂಸು; ಬಳಿ; ಲೇಪಿಸು : ಚಂದನಸೌರಭ ದೇಹಿಯ ಪದನಾರವಿಂದಕೆ ಪನ್ನೀರ ನಾದಿ (ಮೋಹಶ. ೯-೩೦).

[ < ನಾನ್$_1$ ]

**ನಾಂದು₂** 'ನಾನ್$_1$' ಪರಾ.

**ನಾಂದೂರ್** (ನಾ). ಒಂದು ಊರಿನ ಹೆಸರು : ಖಣ್ಡಸ್ಫುಟಿತ ನವಕರ್ಮ್ಮದೇವಾರ್ಚ್ಚನಾಸತ್ರ ವೃತ್ತಿಗೆ ಸೀರೆನಾಡ ನಾನ್ದೂರನಿತ್ತಂ (ಎಕ. XII, ಶಿರಾ. ೬೮-೩೦ ; 878). [ ? + ಊರ್ ]

**ನಾಂಬ₁** (ನಾ). ಆಲಸ್ಯಸ್ವಭಾವದವನು; ಸೋಮಾರಿ; ಅಲಸ : "ಸೋಂಬನೆಂದುಂ ನಾಂಬನೆಂದುಂ ಅಲಸುಗೆಕಾಱಂ" (ಕಶಸಾ. ೧೮-೩೬೦); "ನಾಂಬಂ ಸೋಂಬನುಮೆನಲ್ಕಮಲಸುಕೆಗಾಱಂ" (ಕವಿಕಂ. ೦೫೫); "ನಾಂಬನೆನೆ ಮೈಗಳ್ಳ" (ಕಕರ. ೫೩); ಕೆಲಸಮನೇನುಮನೊಡರಿಸದಲಸತೆಯಂ ಬಯಸಿ ಬಾಟ್ವ ನಾಂಬರ್ . . . ವಿಗರ್ಹಣಮನಾಲಿಪರ್ ಪ್ರಿಯಸಖರಿಂ (ನೀತಿಮಂ. II, ೩೨೭). [ ನಾಂಬು + – ಅ$_8$ ]

**ನಾಂಬ₂** 'ನಾನ್$_1$' ಪರಾ.

**ನಾಂಬು** (ಕ್ರಿ). ಸೋಮಾರಿಯಾಗು; ಜಡನಾಗು; ಅಲಸನಾಗು : "ನಾಂಬು– ಆಲಸ್ಯೇ" (ಶಮಧಾ); ಇರುಳ್ ಕ್ರಿಯಾಮುಮದರ ಮೊದಲಂ ಕಳೆ ಯೋಗದೊಳ್ ಮತ್ತಂ ಮಯ್ದಾಣುವಾರಲ್ಕೆ ಮಲಂಗಾದೊಡೆ ನಾಂಬದಿರ್ (ಶಾನಂದ. ೧೪-೩೨); "ನಿದ್ರಿಸು" (ಶಾನಂದ. ಕೋಶ).; ಕುಡು ನೀಂ ನಾಂಬದೆ ಹೇ ವಿಧಾತ್ರ (ಸಂಶಪ. ೦೭-೯).

[ದೇ.೫ ತಮಿ. ನಾಮ್ಪು = ತಳ್ಳಗಾಗು]

**ನಾಕ** (ನಾ). ೧. ದೇವತೆಗಳು ವಾಸಿಸುವ ಲೋಕ; ಸ್ವರ್ಗ; ಪುಣ್ಯವಂತರು ಸತ್ತ ವೇಳೆ ಪಡೆಯುಂವರೆಂದು ನಂಬಲಾದ ಊರ್ಧ್ವ ಲೋಕ : "ನಾಕಂ ತ್ರಿವಿಷ್ಟಪಂ ದಿವಮೆಂದಿಂತಿದು ತಾನಮರ್ತ್ಯಭವನಂ" (ವಸ್ತುಕೋ. ೭-೩೦); ನಾಕದಿನಿಳಿತಂದುದೊ ಫಣಿಲೋಕದಿನೊಗೆತಂದುದೊ ವಸುಂಧರೆಗಾಗೀ ಲೋಕ ಬಣ್ಣಿಸೆ ತಾರಕ ಶ್ರೀಕಣ್ಣ × × × ಮನ್ ಎಸೆವಿನಂ ಮಾಡಿಸಿದಂ (ಎಕ. VIII, ಸೊರಬ. ೨೮೬-೪೬ ; 1168); ನಾಕಮಂ ನಗುವ ನಗರಂಗಳಪ್ಪೋಜೆಯಿಂ ಎಮೆಯಿಕ್ಕಲಿಂಬಿಲ್ಲದಿರ್ಪ ಶಿವಭವನದಿಂ (ತಿರುಕು. ದೀ. ೨-೪); ಯಶೋಧರಂ ಸುಖದಿಂದಿರ್ಕಾ ನಾಕದೊಳೆಂದೂರ್ಧ್ವಪರ್ (ಯಶೋಚ. ೩-೫೨); ತಂದೆಯೆಂದುದೆ ವೇದಸಮ್ಮತವೆಂದು ರಣದಲಿ ಕಾದಿ ಮಡಿದನು ಇಂದ್ರಜಿತು ನಾಕವನು ಹೊಕ್ಕನು ಸಕಲದಳ ಸಹಿತ (ಕಾಶಿರಾ. ೩೭ ಸೂಹನ); ಕಮಲವಂದದಿ ಶ್ರೀನಿಳಯ ನಾಕದವೊಲು ಸುಮನಸಮಾಲಾಭರಿತ ಕುಮುದವ ತಳೆದುದು ನಿರುತಿಯ ದೆಸೆಯೊಲು (ಜೀವಂಸಾಂ. ೯-೮೧); ನಾಕ ನರಕಂಗಳಂ ವಿಕವನೆನಿಪ್ಪುವು ನಿನಗೆ (ಮುಂಕುಳ. ೩೪೦); ಲೋಕ ಹಾಳಾದರೆ ನಾಕ ಹಾಳಾದೀತೆ? (ಗಾದೆ). ೨. ಬಾನು; ಆಕಾಶ. ೩. ಭೂಮಿ : "ನಭದಲ್ಲಿ ಅನಿಮಿಷಾಲಯದಲ್ಲಿ ಧರೆಯಲ್ಲಿ ನಾಕಮೆಂದೆನಿಸುವುದು" (ಮಂಗರಾ.೦೩೯-೭). ೪. ವಾಯುಮಂಡಲ; ವಾತಾವರಣ: (ಕ). ೫. [ಛಂದ] ಮೂರಂ ಲಘುಗಳಿಂದ ಕೂಡಿರುವ ಒಂದು ಅಕ್ಷರ ಗಣ; ನಗಣ (U U U): ಮೂಱು ಲಘುವಿಂ ನಾಕಂ (ಛಂದೋಂಬು. ೦-೩೮).

[ಸಂ.]

**ನಾಕಚಾಪು** 'ನ್ಯಾಪ್‌ಚಾಕ್' ನೋ.

**ನಾಕಚಿಕುರ** (ನಾ). ಆಕಾಶವೇ ತಲೆಗೂದಲಾಗಿರುವವನು ; ವ್ಯೋಮಕೇಶ ; ಶಿವ : ಶ್ರೀಗುರು ಶಂಕರ ಶುಭಕರ ನಾಗಾಲಂಕಾರ ನಾಕಚಿಕುರ ಮಹೇಶಂ . . . ಇರ್ಕೆಮ್ಮ ಚಿತ್ತನಾಕದೊಳನಿಶಂ (ಹಮ್ಮೀರ. ೪-೧). [ ನಾಕ + ಚಿಕುರ ]

**ನಾಕಚ್ಯುತ** (ನಾ). ಸ್ವರ್ಗಲೋಕದಿಂದ ಹೊರಕ್ಕೆ ಬಂದವನು ; ಸ್ವರ್ಗಲೋಕದ ವಾಸ ಮುಗಿದ ಮೇಲೆ ಭೂಮಿಯಲ್ಲಿ ಹುಟ್ಟಿದವನು : ನಾಕಚ್ಯುತಂ ಶ್ರೀಕಂಠನಾಗಿ ತದಚ್ಯುತೇಂದ್ರದರ್ಶನಜನಿತಜಾತಿಸ್ಮರಂ (ಶಂರಾವಿಮ. ೧೦-೧೧೬ ವ). [ ನಾಕ + ಚ್ಯುತ ]

**ನಾಕಜ** (ನಾ). ಸ್ವರ್ಗಲೋಕದಲ್ಲಿ ಹುಟ್ಟಿದವನು ; ದೇವತೆ : ಸುಂದರವಾದ ಮನದ ನಾಕಜಸಂದೋಹದ ಬಗೆಯುಸಘಹರಂ ಕಳೆಯಲ್ (ಶಾಂತಿಪು. ೧೦-೪೩) ; ನಾಕಜರಜನಿರ್ಕಲಂ ಬಿಡಿದದೇಂ ನಡೆಗೊಂಡರೊ ಮೇಘಮಾರ್ಗದೊಳ್ (ಜಗವಿ. ೧-೪೧). [ ಸಂ. ]

**ನಾಕಜನಾಥ** (ನಾ). ದೇವತೆಗಳ ಒಡೆಯ ; ಇಂದ್ರ : ಸ್ಫಟಿಕಕಳಶಮಂ ತೀವಿ ದಿವ್ಯಾಂಬುವಿಂ ನಾಕಜನಾಥಂ ಮಜ್ಜನಕ್ಕೆತ್ತಿದ ತೆಱದೆ ಸುಧಾಸೂತಿ ಕಣ್ಗೆದ್ದಮಾದಂ (ಆದಿಪು. ೧೨-೫೨). [ ನಾಕಜ + ನಾಥ ]

**ನಾಕಜಮಂತ್ರಿ** (ನಾ). ದೇವತೆಗಳ ಮಂತ್ರಿ ; ಬೃಹಸ್ಪತಿ ; ಗುರು : ನಾಕಜಮಂತ್ರಿ ಪ್ರಾಟೋದಯಂ ನೆಗಬ್ವಾನು ತನ್ನುಚ್ಚದೊಳ್ ಪುಟ್ಟಿದಳ್ (ಅಜಿಪು. ೧೨-೫೨). [ ನಾಕಜ + ಮಂತ್ರಿ ]

**ನಾಕಜಾಪಗೆ** (ನಾ). ದೇವಲೋಕದಲ್ಲಿ ಹುಟ್ಟಿದ ನದಿ ; ಗಂಗಾನದಿ : ಹಿಮವತ್ಕುಕ್ಷಿಲದಿಂ ನಾಕಜಾಪಗೆಯಂ ತಾಪಿನಮಾಳ್ಗಂ (ಅಭ್ಯಸು. ೮-೧). [ ಸಂ. ನಾಕಜಾಪಗಾ ]

**ನಾಕಡಿ** 'ನಾಲ್ಕಡಿ' ನೋ.

**ನಾಕತರಂಗಿಣಿ** (ನಾ). = ನಾಕಜಾಪಗೆ : ನಾಕತರಂಗಿಣೀಪ್ರವಾಹದೊಳ್ . . . ಪೊಳೆಯುತಿರ್ಪುದು ಚಂಡಮರೀಚಿಮಂಡಲಂ (ಜಗವಿ. ४-೬೧). [ ನಾಕ + ತರಂಗಿಣಿ ]

**ನಾಕನಾಯಕ** (ನಾ). ಸ್ವರ್ಗಲೋಕದ ಅಧಿಪತಿ ; ಇಂದ್ರ : ಆ ಜಂಬೂದ್ವೀಪದ ನಟ್ಟನಡುವೆ . . . ಅನೇಕ ನಾಕನಾಯಕಲೋಕಪಾಲಲೀಲಾಭವನಾಧ್ಯಾಸಿತಮುಂ (ಆದಿಪು. ೧-೪೭ ವ) ; ನಾಕನಾಯಕಂ ತ್ರಿಲೋಕಗುರು ಸವಿತ್ರಿಗೆ ಸೀಯನಪ್ಪ ಗೇಯದಿಂ ಪೊಟ್ಟುಗಳೆಯಲ್ ನಿಯಮಿಸಿದಂ (ಶಾಂತಿಪು. ೯-೦೬೮ ವ). [ ನಾಕ + ನಾಯಕ ]

**ನಾಕನಾರಿ** (ನಾ). ಒಂದು ಬಗೆಯ ಗಿಡ ; ಸಹದೇವಿ : "ನಾಕನಾರಿ [ಪಾಠಾಂ. ನಾಕರಿ]ಯೆನೆ ಸಹದೇವಿಮುಕ್ಕು" (ಮಂಗರಾ. ೪೫-೨೩). [ ? ]

**ನಾಕನಿತಂಬಿನಿ** (ನಾ). ಸ್ವರ್ಗಲೋಕದ ಮಹಿಳೆ; ದೇವತಾಸ್ತ್ರೀ; ಅಮರಿ: ಝೊಂಬಿಸಲಿ ಕೌರವರು ನಾಕನಿತಂಬಿನಿಯರಳಕವನು (ಕುಮ್ಮಾಗ. ೧೧-೫೦). [ ನಾಕ + ನಿತಂಬಿನಿ ]

**ನಾಕನಿವಾಸಿ** (ಗು). ಸ್ವರ್ಗಲೋಕದಲ್ಲಿ ವಾಸಿಸುವ : ಆ ಸುರಾರಿಪ್ರಮುಖರಕ್ಷರಿಗಾಸೆ ಕರ್ಣನ ಮೇಲೆ ನಾಕನಿವಾಸಿನಿರ್ಜರನಿಕರವಾದುದು ನರನ ಕೈವಾರ (ಕುಮ್ಮಾಭ. ೨೨-೪). [ ಸಂ. ನಾಕನಿವಾಸಿನ್ ]

**ನಾಕನಿಳಯ** (ನಾ). ಸ್ವರ್ಗವೇ ಮನೆಯಾಗಿರುವವನು ; ಸ್ವರ್ಗಲೋಕದಲ್ಲಿ ವಾಸಿಸುವವನು ; ದೇವತೆ : ನಾಕನಿಳಯರಿಂಗರಿದು ನಿನಗೆ ವಿವೇಕವೆಳ್ಳನಿತಿಲ್ಲ ತೆಗೆತಗೆ ಸಾಕು ವಾಘೆಯ ಮರಳಿ ಹಿಡಿ ತೆಜಗಳ ತಿರುಹಿಂದ (ಕುಮ್ಮಾವಿ. ೬-೧೧) : ಏಕೆ ಸಹಜದ ಬಿಸುಟು ತಾಳಿದೆ ಸೂತಕಾಕಾರವನು ಕೊಲ್ಲನು ನಾಕನಿಳಯರ ಪಕ್ಷಪಾತವನುಳಿದು ಮುಟಿಯೊಗಲು (ನಿಭಾಗ. ೩-೮-೪೧). [ ನಾಕ + ನಿಳಯ (= ನಿಲಯ) ]

**ನಾಕಪತಿ** (ನಾ). ಸ್ವರ್ಗಲೋಕದ ಒಡೆಯ ; ಸ್ವರ್ಗದ ಅಧಿಪತಿ ; ಇಂದ್ರ: ಅಪರಾಜಿತ . . . ವೈಜಯಂತೆಯೆಂಬಿವರಂ ನಾಕಪತಿ ನಿಯೋಜಿಸಿದಂ ವಿಷ್ಕಪತ್ರಯಾಧೀಶಜನನಿಗಿಸುವೆಸಗೆಯ್ಯಲ್ (ಶಾಂತಿಪು. ೯-೧೬೩) ; ಎಂತು ನಾಕಪತಿಗಂ ಪೌಲೋಮಿಗಂ ಪುಟ್ಟಿದೊಂ ವರಸೌಂದರ್ಯ್ಯಜಯಂತನಂತೆ . . . ಪುಟ್ಟಿದೊಂ ಸ್ಥಿರವೀ ಪಟ್ಟಣಸಾಮಿ ವಿಶ್ವವಿನುತಂ ಶ್ರೀಮಲ್ಲಿದೇವಾಹ್ವಂ (ಎಕ. II(R), ४೫೬-४೦ ; 1195) ; ಲೋಕಹಿತಮಪ್ಪ ಕಥೆಯೆನುತ ನಂದೀಶ್ವರ ಏಕಪಾದದ ಮೂರ್ತಿಯಾದ ಶಿವನಂದವಂ ನಾಕನಿಳಯರ್ ಮೆಚ್ಚೆ ಪೇಳಿದಂ ಬ್ರಹ್ಮಜಗೆ ಹರನ ಕಥನಾಮೃತವನು (ಲಶಿಚಂ. ೨೫-೯). [ ನಾಕ + ಪತಿ₂ ]

**ನಾಕಪ್ರಭವ** (ಗು). ೧. ಸ್ವರ್ಗಲೋಕದಲ್ಲಿ ಹುಟ್ಟಿದ,–ಉತ್ಪನ್ನವಾದ : ನಾಕಪ್ರಭವೋದ್ಯನ್ಮಾಲೆಯಂ ಭೂಪತಿಯನೊಸೆದೊಡಿಲ್ದರ್ಚಿಸಿರ್ದಂ ಸುರೇಂದ್ರಂ (ಶಾಂತಿಪು. ೯-೯೩). (ನಾ). ೨. ಸ್ವರ್ಗಲೋಕದಲ್ಲಿ ಹುಟ್ಟಿದವನಂ. [ ನಾಕ + ಪ್ರಭವ ]

**ನಾಕಬಲಿ** (ನಾ). ವಿವಾಹದ ಅಂಗವಾಗಿ ಮಾಡುವ ಒಂದು ವಿಧಿ ; ನಾಗೋಲಿ. [ ನಾಕ + ಬಲಿ₂ ]

**ನಾಕಬೋವ** (ನಾ). ಒಬ್ಬಾತನ ಹೆಸರು : ಕಂಚಗಾಡ ನಾಕಬೋವಂಗೆ ಕೊಟ್ಟ ಉಂಬಳಿ ಕಂಬ ४೦ ಕೆಯಿ (ಕಇ. IV, ೧೬-೧ ; ?). [ ? ]

**ನಾಕಭೂರುಹ** (ನಾ). ೧. ಸ್ವರ್ಗದಲ್ಲಿರುವ ಮರ ; ಕಲ್ಪವೃಕ್ಷ. ೨. (ಅಲಂ) ಉದಾರಿ ; ದಾನಿ : ಅಂಬುಜಪ್ರಿಯಕುಲಲಲಾಮನು ನಂಬಿದವಂಗೆ ನಾಕಭೂರುಹ (ಕಾಶಿಗಾ. ೨೫ ಸೂಚನೆ). [ ನಾಕ + ಭೂರುಹ ]

**ನಾಕಯ್ಯ** (ನಾ). ಒಬ್ಬಾತನ ಹೆಸರು : ಸೇನಬೋವ ನಾಕಯ್ಯಂ ಬರೆದೊಂ (ಎಕ. VIII, ಸೊರಬ. ४೭४-೨೭ ; 954) ; ಪಡುವ ಬಸದಿಯ ಕೆಯ್ಯು[ಂ] ನಾಕಯ್ಯನ ಕೆಯಿ (ಇಇ. XXVIII, ४೯-೨೯ ; 1077). [ <ನಾಕ + ಅಯ್ಯ₁ ]

**ನಾಕರ** 'ನಾಂಗರು' ನೋ.

**ನಾಕರಕುಂಟೆ** (ನಾ). (ಉಕ) ಒಂದು ಬಗೆಯ ವ್ಯವಸಾಯದ ಉಪಕರಣ : (ಕ). [ ನಾಕರ (<ನಾಂಗರು) + ಕುಂಟೆ₁./ಮರಾ.ನಾಂಗರಖುಂಟಾ ]

**ನಾಕರಿಪು** (ನಾ). ದೈತ್ಯ ; ರಾಕ್ಷಸ : ಭೀಕರಾಂಗವನಾಂತು ನಭದಲಿ ನಾಕರಿಪು ಕೊಂಡೊಯ್ಯುತಿರೆ . . . ಕೃಪಾಕರನು ದೈತ್ಯಾಪಹರಣಕೆ ಮಾಡಿದನು ಮನವ (ನಿಭಾಗ. ೧೧-೭-೧೧). [ ನಾಕ + ರಿಪು ]

**ನಾಕಲೋಕ** (ನಾ). ಸ್ವರ್ಗಲೋಕ : ತನಗೆ ತಾನೆ ಪೊಣ್ಮುವ ಭಯಮುಮಂ ಭೋಂಕೆನೆ ಕಂಡು ನಾಕಲೋಕಚ್ಯುತಿಯನಾಗಳಱಿದು ಮನದೊಳಕ್ಕೆ (ಆದಿಪು. ೩-೩ ವ) ; ದಿಗಂತಪರ್ಯಂತಮಾ ನಾಕಲೋಕಮೆಲ್ಲಂ ಕಿಟ್ಟಿಟ್ಟು ಬರೆ (ಶಾಂತಿಪು. ೦೦-೨೧ ವ) ; ನಾಕಲೋಕಸುಖಮಂ ಕೈಕೊಂಡಳೊ . . . ಎನುತ್ತೆ ಪದಪಿಂದಾನಾಕೆಯುಂ ನೋಡಿದಂ (ಕಾದಂಪೂ. ೬೦೪) ; ಆ ಮಹಾರ್ಣವಂ . . . ನಾಕಲೋಕದಂತೆ ಅನಿಮಿಷಪ್ರಕೀರ್ಣಕಮುಂ (ಜಗವಿ. ೦-४४ ವ). [ ನಾಕ + ಲೋಕ ]

**ನಾಕಲೋಕೇಶ** (ನಾ). ಸ್ವರ್ಗಲೋಕದ ದೊರೆ,–ರಾಜ ; ಇಂದ್ರ : ನಾಕಲೋಕೇಶನೆನಿಸಿದ ಗಂಡು ಮನೋಭವನೆನಿಸಿದ ಸೊಬಗು ರೇಚ ಭೂಪಾಲಕನ (ಮುದತಿ. ೦-೨೯). [ ನಾಕಲೋಕ + ಈಶ ]

**ನಾಕವಿಭವ** (ನಾ). ಸ್ವರ್ಗಲೋಕದ ಸಂಪತ್ತು : ದೇವರ್ ಪೊಯ್ಯ ದೋರಂತೆ ಪೊಣ್ಮುವ ಭೇರೀನಿನಾದಕ್ಕೆ ನಾಕವಿಭವಶ್ರೀ ವಿಸ್ಮಯಂಬಟ್ಟು (ಮಲ್ಲಿಪು. ೦೨-೦४). [ ನಾಕ + ವಿಭವ ]

**ನಾಕಸದನ** (ನಾ). ಸ್ವರ್ಗವಾಸಿ ; ದೇವತೆ : "ಸುಪರ್ವ ನಾಕಸದನರ್ ನಿಳಿಂಪ ವಿಬುಧರು ಸುಮನಸರು ಲೇಖರೆನಲು ವಿಬುಧರ್ಗೆ ನಾಮಂ" (ಮಂಗರಾ. ३-೮). [ ನಾಕ + ಸದನ ]

**ನಾಕಸದ್ಮ** (ನಾ). = ನಾಕಸದನ : ತರಳಲುದ್ಯುಕ್ತರಾದರ್ ಸಭೂಭಾರ ವಿಷಾದರ್ ದೈತ್ಯಪೀಡಾಕುಪಿತನಿಜಮನಃಪದ್ಮರಾ ನಾಕಸದ್ಮರ್ (ಜಗವಿ ೧-೩೫). [ ನಾಕ + ಸದ್ಮ ]

**ನಾಕಸುಖ** (ನಾ). ಸ್ವರ್ಗಲೋಕದ ಸುಖ ; ಸ್ವರ್ಗಸೌಖ್ಯ : ನಾಕಸುಖ ಶೇಷಮಂ ನಾಕೌಕರ್ ಬಂದದರಿಂ ಬಳನುಭವಿಪ್ಪುದರಿಂದೇಕಾಕೃತಿ ಕುರುಜಾಂಗಲಮಂ ನಾಕಮುಮದು ಕಿಱುತುಳಂಗೆ ಬಣ್ಣಿಸಲರಿದೇ (ಶಾಂತಿಪು. ೯-೧೩೭). [ ನಾಕ + ಸುಖ ]

**ನಾಕಸ್ತ್ರೀ** (ನಾ). ಸ್ವರ್ಗಲೋಕದ ಮಹಿಳೆ ; ಅಪ್ಸರೆ ; ರಂಭೆ, ಊರ್ವಶಿ ಮೊದಲಾದವರು : ನುಡಿಯಿಸಿದತ್ತಾ ನಾಕಸ್ತ್ರೀಯ ಗೇಯಮಾಸ್ಥಾಯಿಕೆಯೊಳ್ (ಆದಿಪು. ೭-೧೭). [ ನಾಕ + ಸ್ತ್ರೀ ]

**ನಾಕಾಘದೂರ** (ನಾ). ಭೂಲೋಕದ ಪಾಪವನ್ನು ನಾಶಮಾಡುವವನು ; ಲೋಕಪಾಪನಾಶಕ : ನಾಕಾಘದೂರ ಷಡ್ಲಿಂಗಾವರಣ ಸಚ್ಚಿದಾಕಾರ ವೇದಾಗಮಾದಿಬಹುಶಾಸ್ತ್ರಜ್ಞ (ಏಕೋಪು. ೦-೦).

[ ನಾಕ + ಅಘ + ದೂರ ]

**ನಾಕಾಣೆ** 'ನಾಲ್ಕಾಣೆ' ನೋ.

**ನಾಕಾಧಿನಾಥ** (ನಾ). = ನಾಕಲೋಕೇಶ : ಶ್ರೀಮನ್ನಾಕಾಧಿನಾಥಾನತ ಮಕುಟಮಣಿದ್ಯೋತಿತಾಂಘ್ರಿದ್ವಯಂ ... ಕುಡುಗೆಮಗಮೃತಾವಾಸಮಂ ವೀರನಾಥಂ (ಸುಕುಮಾ. ೧-೧). [ ನಾಕ + ಅಧಿನಾಥ ]

**ನಾಕಾಧಿಪ** (ನಾ). = ನಾಕಲೋಕೇಶ : ಆ ನಾಕಾಧಿಪನ ಸಿರಿಯು ಜಱಿದು ದಂದವರ ವಾಹಿನಿ ಸಕಲಜನಮೋಹಿನಿ (ಭಾವಚಿಂ. ೮-೦೫). [ನಾಕ+ಅಧಿಪ]

**ನಾಕಾನೀಕ** (ನಾ). ದೇವತೆಗಳ ಸೈನ್ಯ ; ಅಮರರ ಸೇನೆ : ನಿಜವಾಹನವಿಹೀನ ವಿಸ್ಮಯಸ್ಮೇರವದನಸರಸಿರುಹದ್ವಾತ್ರಿಂಶನ್ನಾಕಾನೀಕಮುಂ ಕರಮೊಪ್ಪೆ ... ಜಿನಚಂದ್ರನಘೌಘಶೇಷದೈನ್ಯದನಾದಂ (ಶಾಂತಿಪು. ೦೨-೦೯ ವ).

[ ನಾಕ + ಅನೀಕ ]

**ನಾಕಾನೋಕಹ** (ನಾ). ದೇವಲೋಕದ ಮರ ; ಕಲ್ಪವೃಕ್ಷ ಮೊದಲಾದವು : ನಾಕಾನೋಕಹಸುಮನಶ್ಶ್ರೀಕಂಠಾಭರಣಮಾಗೆ (ಪಂರಾಮಾ. ೧೦-೧೦೫) ; ಅದು ಮುಕ್ತಿಪುರಕ್ಕೆ ಗೋಪುರಮದು ನಾಕಾನೋಕಹಕ್ಕೆ ಫಳಮಂಜರಿ (ಚಂದ್ರಪು. ೧೦-೨೯). [ ನಾಕ + ಅನೋಕಹ ]

**ನಾಕಾಪಗಾಜೂಟ** (ನಾ). ಜಟೆಯಲ್ಲಿ ಗಂಗಾನದಿಯನ್ನುಳ್ಳವನು ; ಗಂಗಾಧರ ; ಶಿವ : ನಾಕಾಪಗಾಜೂಟನಾಜ್ಞೆಯಿಂ ಬಂದೆಸೆವ ಲೋಕೈಕಪೂಜ್ಯರಂ ಕಂಡು (ದುರುಪು. ೩-೨೮). [ ಸಂ. ]

**ನಾಕಾಪಗಾಧರ** (ನಾ). ಗಂಗಾನದಿಯನ್ನು ತಲೆಯಲ್ಲಿ ಧರಿಸಿರುವವನು ; ಗಂಗಾಧರ ; ಶಿವ : ಹೃದಯಾಬ್ಜದೊಳಗೆ ನೆಲಸಿರ್ಪನನೆ ನಾಕಾಪಗಾಧರನೆ ತೋರ್ಪುದು (ದುರುಪು. ೨-೨೪). [ ಸಂ. ]

**ನಾಕಾರಿಸು** (ಕ್ರಿ₁). ನಿರಾಕರಿಸು ; ಸಾಧ್ಯವಿಲ್ಲವೆಂದು ಹೇಳು : ಅವನಿಗೆ ಪರವಾನೇ ಕೊಡುವುದನ್ನು ನಾಕಾರಿಸಿದ್ದರೆ . . . ಅವನಿಗೆ ಅವಶ್ಯವಾಗದಂತೆ ಮಾಡಬಹುದು (ಕಥಾಗ. ೧೮ ಪರಿ).

[ ನಾಕಾರ್₀ (P ←ಮರಾ. ನಾಕಾರಣೇ) + – ಇಸು₃ ]

**ನಾಕಾವಾಸ** (ನಾ). ಸ್ವರ್ಗದಲ್ಲಿ ವಾಸಿಸುವವನು ; ದೇವತೆ : ನಾಕಾವಾಸರಿಭಂ ಬಲಾಹಕಕುಜಂ ವೃಂದಾರಕಾಖ್ಯಂ (ನಾನಾರ. ೦೫೪).

[ ನಾಕ + ಆವಾಸ ]

**ನಾಕಿ** (ನಾ). ಸ್ವರ್ಗದಲ್ಲಿರುವವನು ; ದೇವತೆ ; ಅಮರ : ನಾಕಿಗಳಿಂದ್ರಾದ್ಯರ್ ಪರಮಾಕೃತಿದುರ್ಲಕ್ಷ್ಯವೆಂದೆನಲ್ ನಿನ್ನವತಾರಾಕೃತಿಯ ನರ್ಚಿಪರ್ (ಜಗವಿ. ೩-೦೦೭) ; ನಾಕಿಗಳನು ಕೂಡಿ ತ್ರಿಪುರಕೆ ನಡೆದೀ ಕಾಕುಮಾತ ಕೇಳಬಹುದೆ (ತ್ರಿಪುರಾಂ. ೨೯) ; ನಾಕಿಗಳು ನಲಿದಾಡುತಿರಲಾ ಲೋಕಪಾಲರು ತುಷ್ಟಿವಡೆದರು (ಕಾಶಿರಾ. ೨-೫೦). [ ಸಂ. ನಾಕಿನ್ ]

**ನಾಕಿಗ** (ನಾ). = ನಾಕಿ : ಸಾಕುಸಾಕೈ ಸುರವ ಕೇಳ್ ಸುಧಾಸಲಿಲವಿದಾ ನಾಕಿಗರ ಜೀವನಾಧಾರಂ (ಚಬಸ್ತು. ೨೦-೦೦). [ ನಾಕ + – ಇಗ ]

**ನಾಕಿಗಣ** (ನಾ). ದೇವತೆಗಳ ಗುಂಪು, –ಸಮೂಹ : ಮಗನೊರ್ವಂ ಪುಟ್ಟಿದೋಷಾಕರನೆನಿಸಿದಂ . . . ನಾಕಿಗಣಂ ಸರ್ವಸ್ವಮಂ ಮೋಣ್ಕುವರ್ದುದಕಟ ಭಂಗಕ್ಕೆ ಪಕ್ಕಾದೆನೆಂದಾತ್ಮಗತೌರ್ವಾಗ್ನಿ ಚ್ಛಲಂಬೆತ್ತಳಲುರಿಯೊಳಕೊಂಡಂತೆ ತೋರ್ಕುಂ ಸಮುದ್ರಂ (ಕಬಕಂ. ೧-೩೩). [ ನಾಕಿ + ಗಣ ]

**ನಾಕಿತಿ** (ನಾ). ಹೆಣ್ಣುದೇವತೆ : ದೇವಿ : ನಾಗರಿಗೆ ಮದ್ದ ಹೇಳಬಂದ ಅಯ್ಯಗಳು ನಾಕಿತಿಯ ನಟಣೆಯಲ್ಲಿ ಸಿಲುಕಿದರು (ಸಿದ್ಧೇವ. ೧೯೨-೫೮೪).

[ ನಾಕ + – ಇತಿ₁ (< – ಇತ್ತಿ) ]

**ನಾಕಿನಾಯಕ** (ನಾ). = ನಾಕಪತಿ : ಸಕಳೋರ್ವೀಶ್ವರ ನಾಕಿನಾಯಕ ಚಮೂಪರ್ಯಾಪ್ತಿಪಾತ್ರಂ (ಶಾಂತಿಪು. ೮-೧೨೩). [ ನಾಕಿ + ನಾಯಕ ]

**ನಾಕಿನಿಕರ** (ನಾ). ದೇವತೆಗಳ ಗುಂಪು, –ಸಮೂಹ : ಓಲಗಸಾಲೆಯೊಳನೇಕ ನಾಕಿನಿಕರಪರಿವೃತನಾಗಿರ್ಪಲ್ಲಿ (ಚಂದ್ರಪು. ೪-೭೪ ವ). [ ನಾಕಿ + ನಿಕರ₁ ]

**ನಾಕಿನಿಕಾಯ** (ನಾ). = ನಾಕಿನಿಕರ : ಅಂತು ಗಗನತಲದಿ ನವನೀತ ಲಕ್ಕವ ತರಿಸಿ ವಿವಿಧಮಣಿನಿಕೇತನಾಗ್ರಾವಲಗ್ನಕೇತುಮಾಲಾವಿಲಸಿತಸಾಕೇತಮುಂ ಬಳಸಿ ನಾಕಿ[ಪಾಠಾಂ. ದೇವ]ನಿಕಾಯಮಿರೆ (ಆದಿಪು.೭-೪೩ ವ) ; ನುಡಿಯದೆ ಮೋನಗೊಂಡಿನಿಸಿರ್ದಧಿಪತಿಗೆ ನಿಚ್ಚಂ [ಮೆಚ್ಚಂ] ಪಡೆದು ನಚ್ಚಿನ ನಾಕಿನಿಕಾಯ ಮಾಮಗಲದಹೋರಾತ್ರಮೋಲಗಿಸಂ (ಶಾಂತಿಪು. ೧೦-೮೭).

[ ನಾಕಿ + ನಿಕಾಯ ]

**ನಾಕಿನಿಳಯ** (ನಾ). ದೇವತೆಗಳ ವಾಸಸ್ಥಾನ ; ಸ್ವರ್ಗ : ನಾಕಿನಿಳಯದಂತೆ ಅನೂನಾಪ್ಸರೋಗಣಪ್ರಣೂತಮುಮತರ್ಕ್ಯಗೋಚರಮುಂ (ಚಂದ್ರಪು. ೫-೫೨ ವ). [ ನಾಕಿ + ನಿಳಯ (= ನಿಲಯ) ]

**ನಾಕಿಯಚಟ್ಟಯ್ಯ** (ನಾ). ಒಬ್ಬಾತನ ಹೆಸರು : ಕ್ರಮಾಗತ ಹೆಗ್ಗಡೆ ನಾಕಿಯ-ಚಟ್ಟಯ್ಯಂ ಚಿತ್ರದಟಹಳ್ಳಿ ಓಟೂಗ್ಗ್ ಮೂಲಿಗನ್ (ಎಕ. VIII, ಸೊರಬ. ೭೦-೦೦ : 938). [ ? ]

**ನಾಕಿವರ** (ನಾ). ದೇವತೆಗಳಲ್ಲಿ ಶ್ರೇಷ್ಠನಾದವನು ; ಇಂದ್ರ : ಪವನಂ ಸೌರಭ್ಯಮಂ . . . ಅಮಲಮಂದಾರಮಾಲಾಳಿಯಿಂ ನಾಕಿವರಂ ಕೆಯ್ಗಾಣ್ಕೆಗೆಯ್ದಂಘ್ರಿಗೆ ಮಣಿದೊಲವಿಂ ಕೀರ್ತನಂಗೆಯ್ಯುತಿರ್ದರ್ (ಕಬಕಂ. ೦-೮೪). [ ನಾಕಿ + ವರ₂ ]

**ನಾಕು₁** 'ನಾಲ್ಕು' ನೋ.

**ನಾಕು₂** (ನಾ). ಹಾವಿನ ಹುತ್ತ, –ಬಿಲ : "ನಾಕು ವಾಮಲೂರಾಹ್ವಹ ಗೃಹಂ ವಲ್ಮೀಕಂ" (ವಸ್ತುಕೋ. ೦೯-೬) ; "ವಾಮಲೂರು ನಾಕು ವಲ್ಮೀಕ ಮೆನಲು ಹುತ್ತಿಂಗೆ ನಾಮಂ" (ಮಂಗರಾ ೧೧೯-೩). [ ಸಂ. ]

**ನಾಕುಮೈ** (ನಾ). ನಾಲ್ಕುದಿಕ್ಕು ; ಸುತ್ತಮುತ್ತು : ಆಕರಿಸಿ ಬೆಸಗೊಂಡು ಬಿಟ್ಟರನೇಕ ನೃಪರನು ಬೇಹು ಹರಿದುದು ನಾಕುಮೈಯಲಿ ತುಬ್ಬು ಕಾಣಿಂಗಿತ್ತು ಬಹುಧನವ (ಕೊರರಾ. ೪-೯-೦೦).

[ ನಾಕು₁ (<ನಾಲ್ಕು) + ಮೈ (<ಮೆಯ್) ]

**ನಾಕುಲಿ** (ನಾ). ಒಂದು ಬಗೆಯ ಗಿಡ ; ಮುಂಗುಸಿಯ ಮೇವಿನ ಗಿಡ ; ಸರ್ಪಾಕ್ಷಿ : "ನಾಕುಲೀ . . . ಸುವಹಾ ೮ ಸರ್ಪಾಕ್ಷಿಗಿಡದ ಹೆಸರು . . . ಮುಂಗೀಮೇವು ಗಿಡ" (ಸಿದ್ಧಾಂತಿ. ೧೩೮). [ ಸಂ. ನಾಕುಲೀ ]

**ನಾಕೆ** (ನಾ). ಸುಂಕವನ್ನು ವಸೂಲು ಮಾಡುವ ಸ್ಥಳ ; ಪರವಾನಿಗೆ ಕೊಡುವ ಕಚೇರಿ ; ಸುಂಕದ ಕಟ್ಟೆ ; ಉಕ್ಕಡ ; ಜಕಾತಿಕಟ್ಟೆ (ಉಕ) : ಗೊತ್ತುಮಾಡಿದ ಸರಹದ್ದಿನ ನಾಕೆಯಲ್ಲಿ ಅದನ್ನು ಕೊಟ್ಟು ಅಂಥದೇ ಬಿಳೀ ಕಾಗದದ ಪಾಸನ್ನು ತಕ್ಕೊಳ್ಳಬೇಕು (ಕಥಾಗ. ೧೭ ಪರಿ); ನಾಕೇದ ಮೇಲಿನ ಕಾರಕೂನನದು ಕೆಲಸ ಅದ (ಎತ್ತಿಕ್ಕ. ೫).

[ ←ಹಿಂ. ನಾಕಾ ; ಮರಾ. ನಾಕೇ ]

**ನಾಕೆಬಂದಿ** (ನಾ). ಮಾರ್ಗವನ್ನು ಜನಸಂಚಾರಕ್ಕೆ ಅವಕಾಶವಿಲ್ಲದಂತೆ ಮಾಡುವುದು; ರಸ್ತೆಗಳಲ್ಲಿ ಸಂಚಾರವನ್ನು ನಿಷೇಧಿಸುವುದು: ಎರಡು ತಾಲೂಕುಗಳಲ್ಲಿ ನಾಕೆಬಂದಿ ಮಾಡಲಾಯಿತು (ಕರವೀ. ೧೨೨). [ ←ಮರಾ. ನಾಕೇಬಂದೀ ]

**ನಾಕೇಂದ್ರ** (ನಾ). ದೇವಲೋಕದ ದೊರೆ; ದೇವೇಂದ್ರ: ಪುಟ್ಟಿತ್ತಾ ನಾಕೇಂದ್ರಂಗೆ ನಿರ್ವಾಕುಲಮಮಳಭವಪ್ರತ್ಯಯಜ್ಞಾನಮಾಗಳ್ (ಸುಕುಮಚ. ೯-೨೩). [ ನಾಕ + ಇಂದ್ರ ]

**ನಾಕೇಶ₁** (ನಾ).=ನಾಕೇಂದ್ರ: ಲೋಕಾಪವಾದಕ್ಕೆ ಅಂಜ ನಡೆವುದು ವಿವೇಕ ಕೇಳಿಚ್ಚರಿಕೆ ನಾಕೇಶನಾದರೂ ಬಿಡದಪವಾದ ಪರಾಕು ಕೇಳಿಚ್ಚರಿಕೆ (ನೀತಿಚಿಂ. XI, ೦೯). [ ನಾಕ + ಈಶ ]

**ನಾಕೇಶ₂** (ನಾ). ಕೂದಲು ಇಲ್ಲದವನು; ಲುಂಚನ ಮಾಡಿಕೊಂಡವನು; ಸವಣ: ನಾಕೇಶನಾಗಲೊಡನೊಡನಾ ಕೇಶಮನಾಂತ ಶೋಣ ಮಣಿಪಟಳಕಮಾರೋಕನದ ತಣಿವನಿತ್ತುದು (ಪುಷ್ಪಪು. ೦೩-೦೦೦). [ ಸಂ. (ನಾ + ಕೇಶ) ]

**ನಾಕೌಕ** (ನಾ).=ನಾಕನಿಳಯ: ನಾಕಸುಖಶೇಷಮಂ ನಾಕೌಕರ್ ಬಂದದರೊಳನುಭವಿಪ್ಪುದರಿಂದ (ಶಾಂತಿಪು. ೯-೦೩೭).
[ ನಾಕ + ಓಕ₁ ]

**ನಾಕ್ಚಾಪ್** 'ನ್ಯಾಪ್‌ಚಾಕ್' ನೋ.

**ನಾಕ್ಷತ್ರ** (ಗು). ೧. ನಕ್ಷತ್ರಕ್ಕೆ ಸಂಬಂಧಪಟ್ಟ: ನಾಕ್ಷತ್ರ (Sidereal) ಪಂಚಾಂಗವನ್ನು ನಿರ್ಮಿಸಿ ಹಳೆಯ ಪಂಚಾಂಗವನ್ನು ತಿದ್ದಿದರು (ಶಿಲ್ಪನಾ. ೩೩). ೨.=ನಾಕ್ಷತ್ರಮಾನ: ಆ ಸಂವತ್ಸರವೇ ಸೌರ ಚಾಂದ್ರ ಬಾರ್ಹಸ್ಪತ್ಯ ನಾಕ್ಷತ್ರ ಸಾವನ ಭೇದದಿಂದೈದುತೆಱನಾಗಿರ್ಪುದು (ವಿವೇಕ. ೩೯೨); ಶ್ರೀಪರಮಾತ್ಮನು ಮೇಲೆ ಹೇಳಿದ ಪ್ರಕಾರ, ಬಾರ್ಹಸ್ಪತ್ಯ, ಸೌರ, ಅನುಸೌರ, ನಾಕ್ಷತ್ರ, ಚಾಂದ್ರಮಾನಗಳೆಂಬ ಐದು ಬಗೆಯಾಗಿ ಗಣಿಸುವ ಪರಿವತ್ಸರಾದಿ ೫ ಹೆಸರುಗಳನ್ನು ಧರಿಸಿರುವನು (ಹಕಾರ. ೫-೪೦ ಟೀಕು). [ ಸಂ. ]

**ನಾಕ್ಷತ್ರಮಾನ** (ನಾ). ನಕ್ಷತ್ರಗಳ ಗತಿಯನ್ನು ಅನುಸರಿಸಿ ಮಾಸ, ವರ್ಷಗಳನ್ನು ಗಣಿಸುವ ಕಾಲಮಾನ; P ಈ ಕಾಲಮಾನದಂತೆ ನಕ್ಷತ್ರಗಳು ಒಂದು ಸುತ್ತು ತಿರುಗುವುದಕ್ಕೆ ೨೭ ದಿನಗಳಾಗುವುದರಿಂದ, ೨೭ ದಿನಗಳಿಗೆ ಒಂದು ತಿಂಗಳಾಗುತ್ತದೆ. [ ನಾಕ್ಷತ್ರ + ಮಾನ ]

**ನಾಖುಷಿ** (ನಾ). ಸಂತೋಷವಿಲ್ಲದಿರುವುದು; ಅಸಂತೋಷ; ಅತೃಪ್ತಿ: ಅರಶಿನವರು ತಮ್ಮ ಮಾತ ಕೇಳಲಿಲ್ಲವೆಂದು ನಾಖುಷಿಯಿಂದ ಬರಕ್ಕೆ ಶ್ರೀನಿವಾಸರಾಯರು ಹೊರಟುಹೋಗಿ ಪಟ್ಟಕ್ಕೆ ದಾಖಲಾದರು (ಹೈದರ. ೦೦೭); ತುಸು ನಾಖುಷಿ ತೋರಿದರೂ ಹೇಳಿ ಒಪ್ಪಿಸಬಹುದು ಬಿಡಿ ಅದರಾಗೇನು (ಭಾಗ್ಯಶ್ರೀ. ೨೨). [ ← ಪಾರ. ಹಿಂ. ನಾಖುಶೀ ]

**ನಾಗ** (ನಾ). ೧. ಹಾವು; ಸರ್ಪ: "ಅಹಿ ನಾಗಂ ವ್ಯಾಳನಾಶೀವಿಷಂ" (ವಸ್ತುಕೋ. ೦೯-೭); "ಉರಗಂ ಸರೀಸೃಪಂ . . . ನಾಗನಾಶೀವಿಷಂ . . . ವ್ಯಾಳನೆನಲು ಸರ್ಪಂಗೆ ನಾಮಂ" (ಮಂಗರಾ. ೧೧೮-೧). ೨. ನಾಗರಹಾವು: ನಾಗರ ನಾಗರಕನ್ನೆಯರ ರೂಪುಗಳಟ್ಟಳೆವಾಗೆ ಭೋಗಿಗಳ್ ಭೋಗಿಗಳೆಂಬ ಭೋಗಿಗಳೆ ಭೋಗಿಗಳಲ್ಲಿಯ ಭೋಗನಾಯಕರ್ (ಪಂಪಭಾ. ೪-೧೬); ನಾಗ ಬಂದರೆ ಕೋಲ ಕಳೆದುಕೊಂಬರು (ಬಸವ. ೧೯೫); ನವಿಲು ನಾಗಂಗಳಡಸಿ ನಿಜವೈರಮಂ ಮಱೆದಿಪ್ಪವೆನೆ ಮುನಿಯ ಮಹಿಮೆಯಂ ಪೊಗಳ್ವರಾರು (ಹದಕಾ. ೫-೫೭); ತಾನಲ್ಲಿ ಮೊಸಳೆಯಾದತ್ತಾ ನಾಗನುಮಾಗಿ ಬಳೆಯೆ (ಯಶೋಚ. ೩-೪೭); ಹಳದಿಯ ಹೆಡೆಯನು ಬಿಚ್ಚೋ ಬೇಗಾ ಹೊಳಹಿನ ಹೊಂದಲೆ ತೂಗೋ ನಾಗಾ! (ಕನ್ನಡಾ. ೧೨೨-೨೦). ೩. ಕಶ್ಯಪನ ಪತ್ನಿಯಾದ ಕದ್ರು ಎಂಬುವಳಲ್ಲಿ ಜನಿಸಿದ (ಪುರಾಣೋಕ್ತವಾದ) ಒಂದು ದೇವಸಂತತಿ; ಮನುಷ್ಯನ ಮುಖವೂ ಸರ್ಪದ ದೇಹವೂ ಇರುವ ಪಾತಾಳನಿವಾಸಿಯಾದ (ಅರ್ಧ ದೇವತಾಸ್ವರೂಪದ) ಜೀವ: ದೇವ ನಾಗ ನರ ಸುರ ಸೇವ್ಯ . . . ರಕ್ಷಿಪುದೆನ್ನ (ಪ್ರಾರ್ಥನಾ. ೨೦-೦). 'ಅಷ್ಟನಾಗ', 'ಅಷ್ಟಫಣಿ' ಪರಾ. ೪. ಆನೆ; ಗಜ: "ಆನೆಯಲ್ಲಿಯಂ ನಾಗಮೆಂಬುದು" (ಹಲಾಯು. ೦೩೨-೧೧); ಮನಮಂಜದು ನಗೆಯೊಳಾ ನೃಪತನಯೆಯ ರಥಮಂ ನೃಪಾಂತರಕ್ಕುಯ್ವುದೋ ಪೇಟಿಬ್ ಎನೆ ನೊಂದು ನಿಷಾದಿಗೆ ಮುಳಿದನಂಗ ನೃಪಯಾನನಾಗಮಂ ವಧು ಪೋಲ್ವಳ್ (ಶಾಂತಿಪು. ೫-೦೫೯); ನಾಗಮ ನಾಗದಂತಿಕೆ ಪಡಲ್ವಡೆ . . . ನಡುಗಿತ್ತು ಚಂಚಲಾಂಭೋಗತಚಂದ್ರಮಂಡಲದವೋಲ್ ಜಿತಶತ್ರುಗೆ ಶತ್ರುಮಂಡಲಂ (ಅಜಿಪು. ೨-೪೮). 'ನಾಗಮುಖ' ಪರಾ. ೫. ಮೋಡ; ಮೇಘ: ನಾಗಮ ನಾಗದಂತಿಕೆ ಪಡಲ್ವಡೆ . . . ನಡುಗಿತ್ತು ಚಂಚಲಾಂಭೋಗತಚಂದ್ರಮಂಡಲದವೋಲ್ ಜಿತಶತ್ರುಗೆ ಶತ್ರುಮಂಡಲಂ (ಅಜಿಪು. ೨-೪೮). 'ನಾಗಭೂಷಣ' ಪರಾ. ೬. ಮುಖಂಡ; ಮೊದಲಿಗ; ಪ್ರಧಾನ; ಸಚಿವ: "ನಾಗಂ ಪ್ರಧಾನಭೂತಂ" (ವಸ್ತುಕೋ. ೦೩೦-೮೩). ೭. ಶರೀರದಲ್ಲಿರುವ ಉಪವಾಯುಗಳಲ್ಲಿ ಒಂದು; ತೇಗು, ವಾಂತಿ, ಉದ್ಗಾರಗಳನ್ನು ಉಂಟುಮಾಡುವ ವಾಯು: "ದೇಹಮಂ ತಾಳ್ದಿಹುದು ನಾಗಮುಕ್ಕುಂ" (ಮಂಗರಾ. ೦೫-೧೨); ಉದ್ಗಾರವೆಂಬ ಕ್ರಿಯೆಯಂ ಮಾಡುವದ್ದರಿಂದ ಆ ಅಂತರವಾಯು ನಾಗಸಂಜ್ಞೆಯನ್ನೂ . . . ಪಡೆದುಕೊಂಡಿರುವುದು (ಮುಮುಕ್ಷು. ೩). ೮. ಒಂದು ಲೋಹ; ಸೀಸ: "ಅನುಗೋಳಿಸಿ ನಾಗವಾಸೀಸಪತ್ರಂ ಸೀಸಮೆನಿಕುಂ" (ಮಂಗರಾ. ೩೦-೫); "ಫಣಿಯೊಳು ಸೀಸದೊಳು ಸಚಿವನೊಳು ಗಜದೊಳು ಸಲೆ ನಾಗಮಕ್ಕು" (ಮಂಗರಾ. ೦೪೮-೯೦). ೯. ಒಂದು ಬಗೆಯ ಸುವಾಸನೆಯ ಹೂಬಿಡುವ ಮರ; ಸುರಗಿ; ಸುರಹೊನ್ನೆ: "ನಾಗಂ ಪ್ರಧಾನಭೂತಂ ನಾಗಂ ಭೂರುಹವಿಶೇಷಮುಂ ಕುಂಜರಮುಂ" (ವಸ್ತುಕೋ. ೦೩೦-೭೩); "ನಾಗಮೆನೆ ಸುರಗಿಯೆನಿಸಿಕ್ಕು" (ಮಂಗರಾ. ೩೮-೨೪); "ನಾಗಃ – ವತ್ಸನಾಭ, ಆನೆ, ಸರ್ಪ, ನಾಗದಂತಿ, ಸುರಹೊನ್ನೆ, ಮಗ್ಗಾರೆ" (ಓಷಧಿ. ೮೫). ೧೦. ಒಂದು ಬಗೆಯ ಹೂಬಿಡುವ ಮರ; ನಾಗಸಂಪಿಗೆ; ನಾಗಕೇಸರ: "ನಾಗಂ ಗಜಕೇಸರಂ" (ವಸ್ತುಕೋ. ೩೯-೭); ಷಷ್ಠೋಪವಾಸದಿಂ ಪುಷ್ಪಕೋದ್ಯಾನದೊಳ್ ನಾಗವೃಕ್ಷದಡಿಯೊಳ್ . . . ಕೇವಲಜ್ಞಾನ ಮಹಾಕಲ್ಯಾಣ ಮಹಾಪೂಜೆಯನೆಯ್ದಿ (ಚಾವುಂಪು. ೧೨೮); ಕೇದಗೆ ಸಂಪಗೆ ನಾಗಂ ಹಾದರಿ ಯದಿರ್ಗೊಂತೆ ಸುರಯಿ ವಕುಳ ಲವಂಗಂ (ಎಕ. VIII, ಸಾಗರ. ೦೦೯-೫೦; 1042); ಕುರವಕ [ಚಂಪ]ಕಾರ್ಜು[ನ] ತಮಾಳ ಕುಚಂದನ ಚಂದ ನಾಗ ಜಂಬಿರ ಪನಸಾಮ್ರ ನಿಂಬ ಕುಟಜಾದಿ ಮಹಾಕುಜಸಂಕುಲಂಗಳಿಂ (ಬಂಹರಿ. ೭-೭). ೧೧. ಬೆಂಕಿ; ಅಗ್ನಿ. ೧೨. ಕತ್ತಲೆ; ತಮಸ್ಸು. ೧೩. ನೀರು; ಜಲ: "ಸಿಂಧೂರಕುಜಾಹಿ ಮುಖ್ಯ ತಮ ಸೀಸ ಜಲಾನಲ ನಾಗವಾಚಕಂ" (ನಾನಾರ. ೨೭). ೧೪. ಶಂಖ: "ಮತ್ತಗಜಂ ಮರ ಸರ್ಪಂ ಕತ್ತಲೆಯುದಕಾಗ್ನಿ ಸೀಸ ಮುಖ್ಯಂ ಶಂಖಂ ಬಿತ್ತರಮಾಗಿಹ ಪೆಸರೊಂಭತ್ತುಂ ನಾಗಾಭಿಧಾನಮೆನಿಕುಂ ಜಗದೊಳ್" (ನಾನಾಕಂ. ೭). ೧೫. ಒಂದು ಜಾತಿಯ ಮೀನು; ಹಾರ್ಕ್‌ಮೀನು. ೧೬. ಕ್ರೂರಿ; ದುಷ್ಟ. ೧೭. ದೀಪ ಮೊದಲಾದುವನ್ನು ತೂಗುಹಾಕಲು ಬಡಿದಿರುವ ಕೊಕ್ಕೆ. ೧೮. ನಾಗರಹಾವಿನ ವಿಗ್ರಹ,-ಪ್ರತಿಮೆ: ಈ ರಾಜನ ಮಗಳು . . . ನಾಗವನ್ನೂ, ಕೆರೆಯನ್ನೂ ಒಂದು ವಿಹಾರವನ್ನೂ ದಾನಮಾಡಿದಳೆಂದು ತಿಳಿದು ಬಂದಿದೆ (ಕರ್ನಾಇ. ೩). 'ನಾಗಪ್ರತಿಷ್ಠೆ' ಪರಾ. ೧೯. ಒಬ್ಬಾತನ ಹೆಸರು: ಶ್ರೀ ಅಪ್ಪಿಆಚಾರಿಯರ ಮಗನ್ನಾಗನ್ ಮಾಡಿದ (ಎಕ. IX, ಬೆಂಗಳೂ. ೩೭-೫; 760); ಮಾಧವಯ್ಯಂ ಬರೆದಂ

ನಾಗಂ ಬೆಸೆಗೆಯ್ದಂ (ಎಕ್. VIII, ಸೊರಬ. ೫೩೦-೧೨ ; ೧೧೦). ೨೦. ಭಾರತದ ನಾಗಾಲ್ಯಾಂಡ್ ಮತ್ತು ಅಸ್ಸಾಂ ಪ್ರಾಂತಗಳಲ್ಲಿ ನೆಲೆಸಿರುವ ಒಂದು ಜನಾಂಗ : ಇಷ್ಟೆಲ್ಲ ನಾಗರಿಕತೆಯುಳ್ಳ ಜನರ ಎಡೆಯಲ್ಲಿರುವ ನೀಲಗಿರಿಯ ತೋಡರೂ, ಅಸ್ಸಾಮಿನ 'ನಾಗ'ರೂ . . . ಹೊಸಸಂಸ್ಕೃತಿಗಳಿಗೆ ಸಿಗದವರು (ಕಾಲಂತ್ರ. I, ೪೯೯). ೨೧.=ನಾಗವ : ಕರಣವೇಕಾದಶಗಳಲಿ ಚರಕರಣ ಶಕುನಿ ಚತುಷ್ಪ ವಣಿಜೆಯು ನಾಗ ಕಿಂಸ್ತುಘ್ನ (ಗಗಣಿ. ೪-೭೦). 'ನಾಗವ' ಪರಾ. ೨೨. [ಛಂದ] ಒಂದು ಅರ್ಧಸಮವೃತ್ತ : ನಾಗ – ಒಂದು ಮೂರನೆಯ ಪಾದಗಳಲ್ಲಿ ಒಂದು ತಗಣವೂ ಒಂದೊಂದು ಗುರು ಲಘುಗಳೂ, ಎರಡು ನಾಲ್ಕನೆಯ ಪಾದಗಳಲ್ಲಿ ಒಂದು ತಗಣವೂ ಒಂದು ಗುರುವೂ ಇರುವುವು (ಛಂಬುಧಿ. ೮೯). ೨೩. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : "೫೦ ನಾಗ ವಸುವೆಂಟು" (ಮಂಗರಾ. ೧೦೪-೮) ; ಯುಗ ಋತು ಗಜ ನಾಗಾಂಬರ ಮೃಗಧರವಗ ಷಟ್ಕವೆನಿಪ ವೃತ್ತದ ಲೆಕ್ಕಂ ಸೊಗಯಿಸಿ ತೋರ್ಕುಂ ಗಣಿಯಿಪುದರಗಣಿತ ಗುಣನಿಲಯ ನಾಗವರ್ಮನ ಮತದಿಂ (ಛಂದೋಂಬು. ೨-೨೦೦). ೨೪. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : "ನಾಗ ಶೈಲ ಸಪ್ತಂ" (ಭಾಸ್ಕರ.೪೪-೫).

ನಾಗನ ಹುಲ್ಲು = ಒಂದು ಬಗೆಯ ಹುಲ್ಲು; ಶತ್ರೆಹುಲ್ಲು; ದೇವ ನಾಳ : "ದೇವನಾಳಂ ಪಿರಿದಾಗಿರ್ಪ ಭೂಮಿ–ನಡ್ವತ್, ನಡ್ವಲ, ಒಟ್ಟಿಲೆ, ನಾಗನ ಹುಲ್ಲೆಂ[ಪಾಠಾಂ. ಟ್ಯಂ]ದೂ ಎಂಬರು" (ನಾಥಿರಾ. ೬). ನಾಗಪ್ಪ = ನಾಗರಹಾವು : ನಾಗಪ್ಪಗ್ವಾಲ ಎರಿಯೋಣ (ಜನಗೀ. ೩) ; ನಾಗಪ್ಪನಿಗೆ ತನಿ ಎರೀತೀನಿ ಅಂತ ಹರಕೆ ಕಟ್ಟಿಕೊ (ರೂಢಿ). [ ಸಂ. ]

ನಾಗಂಡುಗ 'ನಾಲ್ಗಂಡುಗ' ನೋ.

ನಾಗಂದ (ನಾ). ಒಬ್ಬಾತನ ಹೆಸರು : ಶ್ರೀಗೋವಿನ್ದರ ವಲ್ಲಹನ್ಪೃಥಿವೀ ರಾಜ್ಯಂಗೆಯೆ ಮೆಡ ನಾಗನ್ದನ್ × × × ನಾಡಾಳೆ (ಎಕ್. VIII, ಸೊರಬ. ೫೧೨-೧ ; ಸು. ೮೦೦). [ ? ]

ನಾಗಂದಿ 'ನಾಗಂದಿಗೆ' ನೋ.

ನಾಗಂದಿಗೆ, ನಾಗಂದಿ, ನಾಗವಂದಿ, ನಾಗವಂದಿಗೆ, ನಾಗೊಂದಿ, ನಾಗೊಂದಿಗೆ (ನಾ). ೧. ಮನೆಗಳಲ್ಲಿ ಸಾಮಾನುಗಳನ್ನು ಇಡಲು ಅನುಕೂಲವಾಗುವಂತೆ ಗೋಡೆಗಳಿಗೆ ಎತ್ತರದಲ್ಲಿ ಜೋಡಿಸಿರುವ ಮರದ ಹಲಗೆ; ಬಡು. ೨. ಬಾಗಿಲುವಾಡದ ಮೇಲೆ ಅಥವಾ ಕಂಬದ ಸುತ್ತ ಇರುವ, ಸಾಮಾನಿಡುವ ಸ್ಥಳ : ಜಾನಕಿಯು ಪಸೂಲುಪತಾಡಿ ತಂದ ರೂಪಾಯಿಗಳನ್ನು ನಾಗಂದಿಗೆಯ ಮೇಲೆ ಇರಿಸಿ ಸ್ನಾನಕ್ಕೆ ಹೋಗಿದ್ದಳು (ಸಂಸ. ೩) ; ನಾಗಂದಿಗೆ ಮೇಲಕೆ ಫೇಣಿಯನಿರಿಸಿ ಮರತೇ ಬಂದಿಹನು (ನಡದಾ. I, ೪೦೦) : ನಾಗಂದಿಗೆಯಿಂದ ನಾಗಂದಿಗೆಗೆ ಅಡ್ಡಲಾಗಿ ಹಾಕಿದ್ದ ಬಿದಿರ ಗಳುವಿಗೆ ತೂಗುಹಾಕಿದ್ದ (ಮರಳಿಮ. ೨೩೮). ನಾಗಂದಿ : ೨. ಕುಡುಗೋಲುಗಳು ನಾಗಂದಿಯ ಮೇಲೆ; ಜಂಗು ತಿನ್ನುತ್ತ ಬಿದ್ದಿದ್ದವು (ಜೀನಬಾ. ೨೩೮). ನಾಗವಂದಿ : ೧. ಹುಳಿತ ನಾಗವಂದಿಗಳೂ ಗೂಟಗಳೂ ಬೇಕಾದಷ್ಟಿವೆ (ಮೋಜೀವ. ೮). ನಾಗವಂದಿಗೆ : ೧. "ನಿರ್ವ್ಯೂಹ . . . ನಾಗವಂದಿಗೆ" (ಗಂಗಾಮ. ೦೮೫) ; ಈ ಪುಸ್ತಕಗಳನ್ನು ಕಟ್ಟಿ ನಾಗವಂದಿಗೆಯ ಮೇಲಿಟ್ಟುಬಿಡು (ರೂಢಿ). ನಾಗೊಂದಿ: ೨. ಗೋದಾವರಿ ಮಾತನಾಡಲಿಲ್ಲ. ಕೈಯನ್ನೆತ್ತಿ ಪಡಸಾಲೆಯ ನಾಗೊಂದಿಯಲ್ಲಿಯ ಒಂದು ಕಾಗದವನ್ನು ಎತ್ತಿ ಬಾಬೂನ ಕೈಯಲ್ಲಿರಿಸಿದಳು (ರಕ್ತರ್ಕ. ೨೭೨). ನಾಗೊಂದಿಗೆ : ೧. ಸಾಬೂನು, ಬ್ರಶ್ ಮತ್ತು ಇತರ ತೊಳೆಯುವ ಸಾಧನಗಳನ್ನಿರಿಸಲು ಸಿಂಕಿನ ಮೇಲುಗಡೆಯಲ್ಲಿ ಒಂದು ಕಪಾಟು ಅಥವಾ ನಾಗೊಂದಿಗೆ (Shelf) ಇರಬೇಕು (ಅಡುಸಾ. ೦೩). ಪಕ್ಕದ ನಾಗೊಂದಿಗೆಯ ಮೇಲಿದ್ದ ಹಲ್ಲುಪುಡಿಯ ಡಬ್ಬವನ್ನು ತೆಗೆದು ಆಕೆಯ ಕೈಗಿತ್ತ (ವಾತ್ಸಲ್ಯ. ೧೭). [ < ಸಂ. ನಾಗದಂತಕ ]

ನಾಗಕಂಕಣ (ನಾ). ಹಾವುಗಳೇ ಕೈಕಡಗವಾಗಿರುವವನು ; ಸರ್ಪಗಳನ್ನು ಕಡಗದಂತೆ ಕೈಗೆ ಸುತ್ತಿಕೊಂಡಿರುವವನು ; ಶಿವ : ನಾಗಕಂಕಣಗೆ ಯತಿವರ ಮರುಳಾರ್ಯಂಗೆ ರಾಗದಿಂದೊಪ್ಪಿ ಶರಣೆಂಬೆ (ಅಕ್ಕಕೃ. ೧) ; ನಾಗಾಂಕನ ಅಜಿಾದು ತಾನಾಗದೆ ನಾಗಕಂಕಣನಾದ ನಾಗಾಯಿ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ (ಸಿದ್ಧವ. ೪೨೨-೧೩೩೦) ; ಗಿರಿಜೆ ತಪವಟ್ಟು ಮೆಚ್ಚಿಸಿ ರಜತಾದ್ರಿಯಲಿ ನಾಗಕಂಕಣನಿಂ ಪಡೆದಳನುರಾಗದಿಂದೀ ಲಾಂಛನವನು (ಬಸಪು. ೧೨-೨೫) : ದಕ್ಷನಂ ಕೊಲಲೆಂದು ನಾಗಕಂಕಣನೆನ್ನನಟ್ಟದಂ (ವೀಕೃಪು. ೩-೪-೨೫) ; ನಾಗಕಂಕಣ ಕರಯ ಎಗದಿಂದೆ ಪಿಡಿದೆತ್ತಿ ಪೂಗೋಲ ನಿರ್ಧಾಂಗಿಗಾಗ ರಾಗದಿ ವಸ್ತ್ರಭೂಷಣವಿತ್ತು (ಪೋಹತ. ೮-೪೫).

[ ನಾಗ + ಕಂಕಣ ]

ನಾಗಕಟಕ (ನಾ) = ನಾಗಕಂಕಣ : ನಾಗಕಟಕಂಗಿತ್ತು ವಿಷಮಂ ರಾಗದಿಂ ನೀವುಂಡು ಸಾಯದಡಾ ಪ್ರಸಾದವನು ನೀವು ಕೈಕೊಂಡನುಭವಿಸುತಿರೆ ನಾವು ಬೇಡವು (ಬಸಪು. ೫೮-೪೬) ; ನಾಗಯಜ್ಞೋಪವೀತಂ ನಾಗಕುಂಡಲಂ ನಾಗಕಟಕಂ . . . ನಾಗವಿಷಧರನೊಪ್ಪುತಿರ್ದಂ (ಅಕಿಚಂ. ೨೭-೨೯).

[ ನಾಗ + ಕಟಕ ]

ನಾಗಕನ್ನಿಕೆ (ನಾ).=ನಾಗಕನ್ನೆ : ನಾಗಕನ್ನಿಕೆಯರು ನಾಥನ ಬೇಡಲು ನಾನಾ ವಿಧದಿ ಸ್ತುತಿಮಾಡಲು (ಪುರಂದ. ೨-೧೦೬-೩). [ ನಾಗ + ಕನ್ನಿಕೆ ]

ನಾಗಕನ್ನೆ (ನಾ). ನಾಗಲೋಕದ ಹೆಣ್ಣು : ಪಡಮೆಚ್ಚಗಂಡನ ಗಂಡ ಗಾಡಿಯಂ ಕಂಡು ಫಣೀಂದ್ರನ ಕನ್ನೆ ಮದನಲತೆಯೆಂಬ ನಾಗಕನ್ನೆ ಕಣ್ಸೋಲಂಗೊಂಡು ತನ್ನ ಲೋಕಕ್ಕೊಡಗೊಂಡು ಪೋಗಲ್ (ಪಂಪಭಾ. ೪-೧೫ ವ). [ ನಾಗ + ಕನ್ನೆ₁ ]

ನಾಗಕನ್ಯೆ (ನಾ). = ನಾಗಕನ್ನೆ : ಮಧ್ಯಮಪಾಂಡವ ಅರ್ಜುನ ಉಲೂಪಿ, ಚಿತ್ರಾಂಗದೆ ಎಂಬ ನಾಗಕನ್ಯೆಯರ ಕೈಹಿಡಿದ ಕಥೆ ಪ್ರಸಿದ್ಧವಾಗಿಯೇ ಇವೆ (ಭಾಹಲ್ಯ. ೧೦೦). [ ನಾಗ + ಕನ್ಯೆ ]

ನಾಗಕರಣ (ನಾ). ೧. = ನಾಗ ೨೧. ೨. [ಕಾಮಶಾ] ಸಂಭೋಗದಲ್ಲಿ ಒಂದು ಬಂಧ : ಆ ಕಾರಣಮಂ ಪುರುಷನ ಪುರುಷನ ತಿಪಿದಿಂ ಪೊರದೆ ಯೆರಡು ತೊಡೆಗಳನಿಕ್ಕಿದರೆ ನಾಗಕರಣ (ಕಾಮಶಾ. ೬-೧೩೬).

[ ನಾಗ + ಕರಣ ]

ನಾಗಕುಂಡಲ (ನಾ). ೧. ಸರ್ಪದ ಕರ್ಣಾಭರಣ; ಹಾವಿನ ಕುಂಡಲ : ನಾಗಕುಂಡಲಂ ಪೊಸ್ನೋಲೆಯೆಸೆವ ಕಟಿ ರನ್ನದಾಳಿ (ಹಡಕಾ. ೦-೬) ; ಬಲಗಿವಿಯಲ್ಲಿ ನಾಗಕುಂಡಲ ಎಡಗಿವಿಯಲ್ಲಿ ಮಕರಕುಂಡಲವೂ ಇವೆ (ಹೊಯ್ಸಳಶಾ. ೯೭). ೨. ಸರ್ಪವೇ ಕುಂಡಲವಾಗಿರುವವನು ; ಶಿವ : ನಾಗಕುಂಡಲನಣಿದೆವೆಂಬರು ನಾಗದೇವತೆಗಳಾದರು ನಾಗಾಯಿ (ಸಿದ್ಧವ. ೪. ೪೨೨-೧೩೩೦) ; ನಾಗಯಜ್ಞೋಪವೀತಂ ನಾಗಕುಂಡಲಂ ನಾಗಕಟಕಂ . . . ನಾಗವಿಷಧರನೊಪ್ಪುತಿರ್ದಂ (ಅಕಿಚಂ.೨೭-೨೯) : ನಾಗಕುಂಡಲ ನಾಗದನುಜ ಚರ್ಮಾಂಬರನೆ ನಾಗನರಲೋಕಕಧಿಕನೆ ರಕ್ಷಿಸುವುದೆಂದು ನುತಿಸೆ (ಪ್ರಾರಂಭ. ೨-೪೦). [ ನಾಗ + ಕುಂಡಲ ]

ನಾಗಕುಷ್ಠ (ನಾ). ಒಂದು ಬಗೆಯ ಕುಷ್ಠರೋಗ ; ಹಾವಿನ ಮೈಮೇಲೆ ಚುಕ್ಕೆಗಳು ಇರುವಂತೆ ಮೈಮೇಲೆ ಚುಕ್ಕೆಗಳುಂಟಾಗುವ ಕುಷ್ಠ ರೋಗ : (೬). [ ನಾಗ + ಕುಷ್ಠ ]

ನಾಗಕೆ (ನಾ). = ನಾಗ ೬ : ಅವುಗಳಿಗ್ನನ್ನು ಕರ್ಮಾದಿಗಳವೆಂತೆಂದೆನ್ನಲಿಕೆ ನಾಗಕೆಯು ಉದ್ಯಾರಾದಿ ಗುಣವಹುವು (ಗಗಣಿ. ೯-೬೩). [ಸಂ. ನಾಗಕ]

ನಾಗಕೇಶರ (ನಾ). = ನಾಗಕೇಸರಿ ೧ : ಮುಂಬಯಿ ೨೧ ಮಣದ ಖಂಡಗದ ಮೇಲೆ ಕಿಮ್ಮತ್ತು ಆಗತಕ್ಕ ಜೀನಸಗಳು. ೧. ಬಾಕ್ಕಿಟ್ಟು (ಅಬೀರ) ; ೨. ಅಂಬೆಹಳದಿ (ಗಂಟು ಅರಶಿಣ) . . . ೧೩. ನಾಗಕೇಶರ ಕೇಂದು; ೧೪ ಪತಂಗ, ಮಲಬಾರಿ (ಮುಂಬವ್ಯಾ. ೧೨೦). [ ಸಂ. ]

ಸಾಧಾರಣ ವ್ಯಕ್ತಿ; ಅರಿಕೇಸರಿ ತೆಂಕನಾಡಂ ನಾಡಾಡಿಯಲ್ಲದೆ ಮೆಚ್ಚುತ್ತುಂ (ಪಂಪಭಾ. ೪-೩೦ ವ); ಪುರುಹೂತನಬಿದಿಯೋಧ್ಯಾಪುರಮಂ ನಾಡಾಡಿಯಲ್ಲ ದಂತಿರೆ ಪಡೆದಂ (ಪಂರಾಮಾ. ೧-೪೪); ನಾಡಾಡಿಗಳಿಗೆ ನಾಡಾಡಿಗಳನು ಸರಿಮಾಡಬಹುದು ಕೂಡಬಹುದು (ಭರತ. ೯-೯೧); ಆಕೆ ನಾಡಾಡಿಯಲ್ಲ (ನವಮೋ. ೯-೧೩). ೩. ಸ್ವಲ್ಪವೂ ಗಣನೆಗೆ ಬಾರದ ವ್ಯಕ್ತಿ; ಅಲ್ಪ; ಕ್ಷುದ್ರ: ನಾಡಾಡಿಗಳ ಒಡಿದು ಫಲವೇನೆಂದು ಕೂಡಿದ ತನ್ನೊಡೆಯ ನೊಳು (ಅಂಜಿಕ. ೪-೯೧); ಪುಣ್ಯವುಳ್ಳ ಮಗನಂ ಪೋಗಾಡಿ ವಪ್ರಹೃದಯರಾಗಿ ಬದುಕಿರ್ದವರ್ ನೋಡಿರೆ ಯೆಂಬ ನಾಡಾಡಿಯ ಮಾತ ಕೇಳುತಂ (ಪುಣ್ಯಾಸ್ರ. ೧೨-೨೭ ವ); ನಾಡಾಡಿಗಳ ನಾಟಕದ ಫಣಿಯಲ್ಲಾರು ನೀನೆಂದ (ಕುಮ್ಯಾಭ. ೧೩-೪೧); ಎನ್ನ ನಾಡಾಡಿ ಯಂತೆ ನೋಡಿದನು (ಜಾಂಬವ. ೬೩-೨೦). ೪. ದೇಶದಿಂದ ದೇಶಕ್ಕೆ ಹೋಗಿ ಬರುವವನು; ದೇಶಸಂಚಾರಿ; ಯಾತ್ರಿಕ. ೫. ಹಳ್ಳಿಗಾಡಿನಲ್ಲಿ ವಾಸಿಸುವವನು; ಹಳ್ಳಿಗ; ಗ್ರಾಮೀಣ: (ಕ). (ಗು). ೬. ಸಾಮಾನ್ಯ ಗುಣವುಳ್ಳ; ಸಾಧಾರಣವಾದ: ಅಳುತ್ತಳುತಲಂಜದವೊಲಾನನಕೊರಸಿ ಕೈವೆರಳ ಮಜಿಯಲಿ ಜನನಿಯನು ನೋಡುತ್ತಲಾ ನಾಡಾಡಿ ಶಿಶುವಂತೆ ತನು ನಡುಗೆ ಕಾಡಿಗೆ ಸಹಿತ ಕಂಬನಿ ಮುಖೇಂದು ಕಳಂಕವಾಗಲು ಮುನಿಗಳನು ನಗಿಸಿದನು ನರಶಿಶುತನದ ನಟನೆಯಲಿ (ವಿಭಾಗ. ೧೦-೯-೩೭); ನಾಡಾಡಿ ದ್ವಿಜರಿಂಗೆ ವಿತ್ತವ ಮುತ್ತವಂ ಬೇಡಿದಂತಿತ್ತು ಬೀಳ್ಕೊಟ್ಟು (ಮೋಹತ. ೨೨-೩೨); ಇರ್ವರುಂ ಬೇದಬಿಜ್ಜೆಗಂಗೆ ಸರಿಮಿಗಿಲೆನಿಪರ್ . . . ನಾಡಾಡಿ ಕಿತ್ತಡಿಗಳಲ್ತು (ಅದ್ಭುತ. ೧೧-೧೭); ಆ ನಾಡಾಡಿ ಬೀದಿ ಬಾಲಕ ನೆಮ್ಮ ನಾಡಿಂಗೆ ದೊರೆಯಪ್ಪನೆಂದು ? (ಚಂದ್ರಸ. ೧೩-೧೭). ೭. ದೇಶದಿಂದ ದೇಶಕ್ಕೆ ಹೋಗಿ ಬರುವ; ದೇಶಸಂಚಾರಿಯಾದ: ಚೀಣಾವು ಬೌದ್ಧಮತವನ್ನು ಅದೇ ನಾಡಾಡಿ ಜನಗಳ ಮೂಲಕ ಕ್ರಿ.ಪೂ. ಒಂದನೆಯ ಶತಮಾನದ ಅಂತ್ಯದಲ್ಲಿ ಪಡೆಯಿತು (ಕತ್ಯಶಾ. ೬೨೭).

**ನಾಡಾಡಿ ದೈವ** = ಸಾಮಾನ್ಯ ದೇವತೆ; ಕ್ಷುದ್ರದೇವತೆ: ನಾಡಾಡಿ ದೈವವನೋತಡೆ ಕೇಡಲ್ಲದೆ ಸುಖವಿಲ್ಲವಮ್ಮ (ಶಿವಗೀ. ೧೬೧-೪೦೦); ನಾಡಾಡಿ ದೈವವೇ ನೀನು ದೇವರ್ಗಲ್ಲ ಚೂಡಾಮಣಿ (ಸೌಂದಪು. ೦೪-೩೦); ನಾಡಾಡಿ ದೈವಗಳ ಚಿನ್ನ ಬೆಳ್ಳಿಗಳಿಂದ ಮಾಡಿಕೊಂಡದಱ ಪೂಜೆಯನು ಮಾಡಿ ಕಾಡ ಕಳ್ಳರು ಬಂದು ಅವುಗಳನು ಕೊಂಡೊಯ್ಯೆ ಮಾಡಿಕೊಂಡಿರ್ದುದಕೆ ಬಾಯ ಬಡಕೊಳ್ಳುವೆಯೊ (ಪುರಂದ. ೧-೪೪-೩). **ನಾಡಾಡಿ ನರ**=ಸಾಮಾನ್ಯ ಮನುಷ್ಯ; ಅನಾಮಧೇಯ: ಇವ ನಾಡಾಡಿ ನರನಲ್ಲ ನಾರಿ ಚಿತ್ತೈಸು (ಕಂಸವಿ. ೯-೧೩೦). **ನಾಡಾಡಿಯವ** = ಸಾಮಾನ್ಯಮನುಷ್ಯ: ಓಡು ಮಾಡಿದಳೆನ್ನ ನೀ ನಾಡಾಡಿಯವನೆಂದೇ ವಿಭಾಡಿಸಿ (ವಿಭಾಗ. ೭-೯-೨೪).

[ನಾಡು + – ಆಡಿ₁]

**ನಾಡಾಡಿಕೆ** (ನಾ). ೧. ಸಾಮಾನ್ಯವಾಗಿರುವಿಕೆ; ಸಾಧಾರಣವಾಗಿರುವಿಕೆ: ಹನುಮನ ಪೊಗದ ಪೋಡಿಯ ಧೂರ್ತವಚನದ ಬಗೆಯ ಭಂಗಿಯನಾ ಪ್ರಹಸ್ತ ವಿವೇಕದಿಂದಱಿದು ವಿಗಡಭಟನಿವ ಕುಟಿಲಶಾಖಾಮೃಗವಿವನು ನಾಡಾಡಿಕೆಯ ವನಮೃಗದ ಪರಿಯಲ್ಲಿವನ ನುಡಿಸಿದು ನೋಡಬೇಕೆಂದ (ತೊರರಾ. ೩-೭-೨೩). ೨. ಒಂದು ದೇಶದಲ್ಲಿ ಹಿಂದಿನಿಂದ ಬಂದ ವ್ಯವಹಾರ,–ರೂಢಿ,–ಸಂಪ್ರದಾಯ: ಅವರು ಚಿಕ್ಕಂದಿನಲ್ಲಿ ಬಹಳ ಕ್ಷೀಣವಾಗಿದ್ದು . . . ಹಿರಿಯರು ಕೈಕೊಂಡ ಒಂದು ನಾಡಾಡಿಕೆಯ ವಿಧಿ ಯಿಂದಾಗಿ ಹೀಗೆ ಹೆಸರಿಡುವುದಕ್ಕೆ ಕಾರಣವಾಯಿತೆಂದು ತಿಳಿಯಿತು (ಕನ್ನಮ. ೧-೩೪೨). [ನಾಡು + ಆಡು₁ + – ಇಕೆ]

**ನಾಡಾಡಿಗ** (ನಾ). ೧. = ನಾಡಾಡಿ ೧: ಈ ಶ್ರೀರತ್ನಸಿಂಹಾಸನವನ್ನು ನಾಡಾಡಿಗ ಹುಗುಳಿಯೆಂದೆನ್ನ, ಉದಾಸೀನಭಾವಕ್ಕೆಡೆಗೊಟ್ಟು, ಕಯ್ಯೋಂಕು ವಮ್ಮ ಅನಾಚಾರಕ್ಕೆ ಎರ್ದೆಮಾಡಿ ಉರವಣಿಸಿದರೆ . . . ದಣ್ಣ ಸದಿರವು (ಬೆಟ್ಟಳ. ೧೧೭-೧೮). ೨. = ನಾಡಾಡಿ ೩: ಚಿತ್ರವಂ ಚೆನ್ನಾಗಿ ಬಂಧಿಸಿ ಬಳಿಕ್ಕ ದೇವೋತ್ಸವಸಂಗವಂ ನೆಱೆ ಕಡಿಸಿಲ್ಲವೇ ಚಿತ್ರಭವನದ ನಾಡಾಡಿಗರನೇನ ಮಾಡುವನೆಂದು ಕಂಡರಾರು (ಸಮ್ಯಕ್ತ್ವ. ೩-೨೪); ವಿಗಡನಹೆನರ್ಜುನನು ನಾಡಾಡಿಗರ ಬಗೆಯನು ಸಾಕು ನಗಿಸದಿರು (ಕೋಗಡು. ೧೭-೮೧). [ನಾಡಾಡಿ + – ಗ₂]

**ನಾಡಾಡಿಗಟ್** (ಕ್ರಿ). ನಾಡಾಡಿತನವನ್ನು ಬಿಡು; ಸಾಮಾನ್ಯತೆಯನ್ನು ಬಿಡು; ಲೋಕೋತ್ತರವಾಗು: ನಾಡಾಡಿಗಟ್ಟಿದ ರೂಪುಂ ಗಾಡಿಯು ಮಸೆದೊಪ್ಪೆ (ಅಜಪು. ೩-೨೨). [ನಾಡಾಡಿ + ಕಟ್₁]

**ನಾಡಾಡು** (ಗು). ಅಲ್ಪವಾದ; ಕ್ಷುದ್ರವಾದ: ಯಾ ಗಜವು ಸಾಮಾನ್ಯ ವಾದ ನಾಡಾಡು ಗಜವಲ್ಲ (ಸೌಗಂಧಿ. ೩೩೦-೧೮). [<ನಾಡಾಡಿ]

**ನಾಡಿ₁** (ನಾ). ೧. ಸಸ್ಯಗಳ ಟೊಳ್ಳಾದ ಕಾಂಡ. ೨. ತಾವರೆಯ ದಂಟು,–ನಾಳ. ೩. ಶರೀರದಲ್ಲಿ ರಕ್ತಚಲನೆಗಾಗಿ ಇರುವ ಕೊಳವೆ ಯಾಕಾರದ ರಚನೆ; ರಕ್ತವಾಹಿನಿ; ಧಮನಿ: "ನಾಡೀ, ಧಮನೀ, ಸಿರಾ ಸಾಮಾನ್ಯವಾಗಿ ನರಗಳ ಹೆಸರು" (ಸಿದ್ಧಾಂತ. ೦೬೩); ನಾಡಿಯೊಳಂ ಕೆಱಗೊತ್ತಿ ಸೋಂಕಿ ಮಧ್ಯದೊಳೆಸಗುತ್ತುಮಿರ್ಪೊಡೆ ಶುಭಾವಹಂ (ಕೋಕಶಾಸ್ತ್ರ. ೧೧-೭); ಎನಿತು ನಾಡಿಗಳವಕೆ ಸ್ಥಾನಗಳೆನಿತು (ಗಗಶಾ. ೯-೩). ೪. ಕೈಯ ಮಣಿಕಟ್ಟು, ಎದೆ, ಕಪೋಲ ಮೊದಲಾದೆಡೆಗಳಲ್ಲಿ ಕಂಡುಬರುವ, ಬೆರಳಿಗೆ ತೋರುವ ಲಯಬದ್ಧವಾದ ರಕ್ತಚಲನೆಯ ಮಿಡಿತ,–ಸ್ಪಂದನ: ನಾ ಮುಟ್ಟಲು ನಾಡಿಯ ಬಲ್ಲೆ (ಸರ್ವಜ್ಞ. ೨೦-೮); ಬಿಸಿಯಂ ಸಂಹನನದಿ ಮೇಗುಸುರಂ ನಾಸಿಕದಿ ನಾಡಿಗಳನಾಗಳ್ಪಣೆಸುತಂ ಗಳೊಳಂ ನಖದೊಳ್ ನಸುಗೆಂಪು ನೋಡಿ ಕಾಣದಳವಳಿದಳಿಲಿಂ (ನನ್ನಜಾ. ೬-೦೩೪); ಪುರುಷರ ಬಲದ ಕೈಯ ಹೆಬ್ಬೆರಳ ಮೂಲದಲ್ಲಿ . . . ಒಡಿದು ನಾಡಿಯನ್ನು ನಿದಾನಿಸಬೇಕು (ಸಳಮ್ಮ. ೧೧); ರಕ್ತದ ಪ್ರಮಾಣ ಕಡಿಮೆ ಯಾಗಿ, ನಾಡಿಯಲ್ಲಿ (pulse) ರಕ್ತದ ಒತ್ತಡ ಕಡಿಮೆಯಾಗುತ್ತದೆ (ಕಂಠೀಠೋ. ೧೭). ೫. (ಯಾವುದಾದರೂ) ನೀಳವಾದ ಕೊಳವೆ; ನಾಳ. ೬. ಒಂದು ಬಗೆಯ ಕೊಳವೆಯಂತೆ ಉದ್ದವಾದ ವ್ರಣ; ನಾಳಿವ್ರಣ; ಭಗಂದರ. ೭. ಒಂದು ದಿನದ ಅರುವತ್ತನೆಯ ಒಂದು ಭಾಗ; ಒಂದು ಗಳಿಗೆ; ಅರ್ಧ ಮುಹೂರ್ತ; ಇಪ್ಪತ್ತುನಾಲ್ಕು ನಿಮಿಷ: ನಾಡಿಯರುವತ್ತಕ್ಕೆ ಒಂದು ತಿಥಿಯಕ್ಕು (ಮಂಗರಾ. ೨೦-೪); "ನಾಳಿಯೆನೆ ನಾಡಿಯೆನೆ ಗಳಿಗೆಯೆಂದಕ್ಕು" (ಕಶಿರ. ೩೪); ಅನುರಾಧ ನಕ್ಷತ್ರದೊಡನೆ ಚಂದ್ರನ ಸಂಬಂಧ ೧೧ ನಾಡಿ ೪೧ ವಿನಾಡಿಗಳಲ್ಲಿ . . . ಬೆಳೆಯುತ್ತದೆ (ಅಕಾಶ. ೯೦). ೮. ಒಂದು ಬಗೆಯ ಬಾಗಿದ ಹುಲ್ಲು. ೯. ಸಂಚು; ಮೋಸ. ೧೦. [ಯೋಗ] ಶರೀರದಲ್ಲಿ ವಾಯು ಸಂಚಾರವಾಗುವ ನಾಳ; ಈ ನಾಡಿಗಳ ಸಂಖ್ಯೆಗಳನ್ನು ಒಂದೊಂದು ಗ್ರಂಥದಲ್ಲಿ ಒಂದೊಂದು ಬಗೆಯಾಗಿ ಹೇಳಿದ್ದಾರೆ. ಕಾತಕೋಪ ನಿಷತ್ತಿನಲ್ಲಿ ನೂರೊಂದು ನಾಡಿಗಳಿವೆಯೆಂದೂ ಅವಕ್ಕೆಲ್ಲ ಹೃದಯವು ಮೂಲಸ್ಥಾನವೆಂದೂ ಹೇಳಿದೆ. 'ನಾಡೀಪ್ರಕಾಶ'ವೆಂಬ ಗ್ರಂಥದಲ್ಲಿ ನಾಡಿಗಳು ಮೂರೂವರೆಕೋಟಿಗಳಿವೆಯೆಂದು ಹೇಳಿದ್ದು, ಅವುಗಳಲ್ಲಿ ಹದಿನಾರು ನಾಡಿಗಳನ್ನು ಪ್ರಧಾನವಾಗಿ ಗಣನೆಮಾಡಿದೆ. ಅವುಗಳು ಯಾವುವೆಂದರೆ–೧. ಇಡಾ. ೨. ಪಿಂಗಲಾ. ೩. ಸುಷುಮ್ನಾ. ೪. ಗಾಂಧಾರೀ. ೫. ಹಸ್ತಿಜಿಹ್ವಾ. ೬. ಪೂಷಾ. ೭. ವಸುವಶಾ. ೮. ಅಲಂಬುಷಾ. ೯. ಕುಹೂ. ೧೦. ಶಂಖಿನೀ. ೧೧. ತಾಲಜಿಹ್ವಾ. ೧೨. ಇಭಜಿಹ್ವಾ. ೧೩. ವಿಜಯಾ. ೧೪. ಕಾಮದಾ. ೧೫. ಅಮೃತಾ. ೧೬. ಬಹುಲಾ ಎಂಬುವು. ೧೧. (ಅಲಂ) ಪರಿಸ್ಥಿತಿ; ಆಗುಹೋಗು: ನೋಡಿ ಬಂದೊರೆ ರಣಸ್ಥಿತಿಯ ನಾಡಿಯಂ (ಶ್ರೀರಾಮಾ. ೬೩೦-೩೩೪).

ನಾಡಿ ಆಡು = ನಾಡಿ ಸ್ಪಂದಿಸು,-ಮಿಡಿ : ನಾಡಿ ಆಡದವ ಓಡಿ ಬಂದಾನೇ ? (ಗಾದೆ). ನಾಡಿ ನಿಲ್ಲು = ನಾಡಿ ಮಿಡಿಯುವುದು ನಿಂತು ಹೋಗು : ನಾಡಿ ನಿಂತ ಮೇಲೆ ಕಾಡ ಪಾಲು (ಗಾದೆ). ನಾಡಿ ನೋಡು= ನಾಡಿಯ ಮಿಡಿತವನ್ನು ಪರೀಕ್ಷಿಸು: ನಾಡಿ ನೋಡದೆ ಮದ್ದು ಕೊಟ್ಟರೆ ಕಾಡುರೋಗ ಬರುವುದು (ಗಾದೆ). ನಾಡಿ ಮಿಡಿ=ನಾಡಿಯು ಸ್ಪಂದಿಸು : ಆಯಾಸದಿಂದ ಅವನಿಗೆ ಜೋರಾಗಿ ನಾಡಿ ಮಿಡಿಯುತ್ತಿದೆ (ಬಳಕೆ). ನಾಡಿ ಮಿಡಿತ=ನಾಡಿಯ ಸ್ಪಂದನ: ಅವರಿಗೆ ಉದ್ವೇಗದಿಂದ ನಾಡಿ ಮಿಡಿತ ಏರಿದೆ (ಬಳಕೆ). ನಾಡೀ ಹುಣ್ಣು = ನಾಡೀವ್ರಣ : ನಾಡೀಷು ಚ=ನಾಡೀ ಹುಣ್ಣುಗಳೊಳು (ವಿವ್ಯಮಿ. ೧೬೩). [ ಸಂ. ]

**ನಾಡಿ₂** (ನಾ). ಒಂದು ಬಗೆಯ ವಾದ್ಯ : ವೇದಗಳ ಕಾಲದಲ್ಲಿ ಉಪಯೋಗದಲ್ಲಿದ್ದ ಬಕುರ, ನಾಡಿ, ತುರುವ . . ಮೊದಲಾದ ವಾದ್ಯಗಳ ರೂಪರಚನೆಗಳನ್ನೂ . . . ಶಿಲ್ಪಕಲಾಭಿತ್ತಿಗಳಿಂದ ನಾವು ಗ್ರಹಿಸಬಹುದು (ಸಂಗೀಶಂ. ೦೯೩). [ ? ]

**ನಾಡಿಂಧಮ** (ನಾ). ಊದುಗೊಳವೆಯ ಮೂಲಕ ಊದುವವನು ; ಅಕ್ಕಸಾಲಿ : "ನಾಡಿಂಧಮಃ, ಸ್ವರ್ಣಕಾರಃ, ಕಲಾದಃ, ರುಕ್ಮಕಾರಕಃ–ಇ ಅಗಸಾಲಿಗನ ಪೆಸರು" (ಸಿದ್ಧಾಂತಿ. ೩೦೦). [ ಸಂ. ]

**ನಾಡಿಕೆ** (ನಾ). ೧. ಒಂದು ಘಳಿಗೆ ; ಇಪ್ಪತ್ತುನಾಲ್ಕು ನಿಮಿಷಗಳ ಕಾಲ : "ನಾಡಿಕೆಗೆ ನಾಟಿಗೆಯನಿಪ್ಪುದು" (ಸಂಜೀವ. ೨೨) ; ಸಮುಯಾವಳಿ ಕೋಟ್ಯುಸಸ್ರೋಃನಿಮೇಷನಾಡಿಕಾಮುಹೂರ್ತ . . .ಗಣನಾನುಕ್ರಮದಿಂದಂ ಪೆರ್ಚಿದೆಣಿಕೆಯೊಳ್ (ಆದಿಪು. ೬-೪೮ ವ). ೨. ಜಾಗಟೆ, ಗಂಟೆ ಮೊದಲಾದುವು. ೩. [ಕಾಮಶಾ] ಒಂದು ನಾಡಿಯ ಹೆಸರು : ಒಂದು ನಾಡಿ ಅದು . . . ಕಾಮಾಂದೋಳಿಕೆಯೆಂಬುವದು ಮತ್ತೊಂದು ಚಿರಕಾಲಂ ಮುಟ್ಟಿಸಿದೊಡಂ ನಾಡಿಕೆಯಂ ಮುಖಂ ಬಿರಿದು ಕಾಮಜಲಂ ಸ್ರವಿಸುವದು (ಕಾಮಶಾ. ೬-೦೦೯). [ ಸಂ. ನಾಡಿಕಾ ]

**ನಾಡಿಗ** (ನಾ). ೧. ಒಂದು ದೇಶದಲ್ಲಿ ಹುಟ್ಟಿ ಬೆಳೆದು ವಾಸಮಾಡಿಕೊಂಡಿರುವವನು; ಒಂದು ದೇಶದ ಪ್ರಜೆ: ಮೃಗನಿಭಮಂ ಮೃಗಾವತಿಯ ನಂದನನೊರ್ವನೆ ನಿಂದು ಕೊಂದು ನಾಡಿಗರ ಮನಕ್ಕೆ ಮಿಕ್ಕ ಪರಿತೋಷಮನಿತ್ತು (ವರ್ಧಪು. ೩-೪೬) ; ನಾಡಿಗರೆಲ್ಲರುಂ ಭೋಗಿಗಳ್ ಕುಟಿಲಗಾಮಿಗಳಲ್ತು (ರಾಮಾಶ್ವ. ೭-೨೩) ; ನಮ್ಮ ನಾಡಿಗರು ತಮ್ಮ ತಮ್ಮ ಜಾತಿ, ಧರ್ಮ, ಮತಗಳ ಅನುಷ್ಠಾನದಿಂದ ಮೋಕ್ಷಸಂಪಾದನಕಾರ್ಯದಲ್ಲಿ ಆಸಕ್ತರಾಗಿದ್ದಾಗ (ಹುಕ್ಕಪ್ರ. ೨೦). ೨. ಗ್ರಾಮಾಧಿಕಾರಿ : ನಾಡಿಗ ಯಂಕವನು ಅಡಬಿದ್ದು ಬೇಡಿಕೊಂಡಾಗ (ಎಕ.VII, ಶಿವಮೊ. ೧೧೭-೩೬; 1578?); ಶಾನುಬೋಗರು ನಾಡಿಗರು ಹನ್ನೆರಡು ಮಂದಿ ಆಯಗಾರು (ಎಕ. XI, ಮೊಳಕಾ. ೨೩-೬೩ ; 1665) ; ಪಟೇಲನ ಕೆಲಸಕ್ಕಾಗಲಿ ಶ್ಯಾನುಭೋಗ ನಾಡಿಗ ಕರಣೀಕನ ಕೆಲಸಕ್ಕಾಗಲಿ . . . ವಹಿಸುವುದು ಅವಶ್ಯಕವಾಗಿ ಕಂಡುಬರುವದಿಲ್ಲವು (ಗ್ರಾಮಾಳ. ೫). [ ನಾಡು + –ಇಗ ]

**ನಾಡಿಗತನ** (ನಾ). ನಾಡಿಗನ ಅಧಿಕಾರ ; ಗ್ರಾಮಾಧಿಕಾರ : ವಂಶ ಪಾರಂಪರ್ಯವಾಗಿ ನಮ್ಮ ಪರಗಣೆಯಲ್ಲಿ ಪ್ರತಿಗ್ರಾಮದಲ್ಲಿ ಭೂಮಿ, ಮನೆ, ಕಣ, ನಾಡಿಗತನ . . . ಇಷ್ಟನ್ನೂ ಮಾಡಿಕೊಡಬೇಕೆಂದು ಕೇಳಿದನು (ಕಥಮ. II, ೩೦೫). [ ನಾಡಿಗ + –ತನ ]

**ನಾಡಿಗವರ್ಯ** (ನಾ). ಗ್ರಾಮಾಧಿಕಾರಿಗಳಲ್ಲಿ ಶ್ರೇಷ್ಠನಾದವನು : ನೀವು ಕುಳಿತುಕೊಳ್ಳಬೇಕು ನಾಡಿಗವರ್ಯ . . . ನಿಮ್ಮನ್ನು ಅವಜ್ಞೆ ಮಾಡುವುದು ಆಊರ ಎಲ್ಲ ನಾಡಿಗರನ್ನೂ ಅವಜ್ಞೆಗೈದಂತೆ (ಸವತಿ. ೧೬೨). [ ನಾಡಿಗ + ವರ್ಯ ]

**ನಾಡಿಗಿತ್ತಿ** (ನಾ). ೧. ಒಂದು ದೇಶದ ಸಾಮಾನ್ಯ ಸ್ತ್ರೀ. ೨. ಗ್ರಾಮಾಧಿಕಾರಿಯ ಹೆಂಡತಿ : (ಕ). [ ನಾಡಿಗ + –ಇತ್ತಿ ]

**ನಾಡಿದು** 'ನಾಳಿದು' ನೋ.

**ನಾಡಿದ್ದು** 'ನಾಳಿದು' ನೋ.

**ನಾಡಿಪರೀಕ್ಷೆ** (ನಾ). ರೋಗವನ್ನು ಕಂಡುಹಿಡಿಯುವುದಕ್ಕಾಗಿ ನಾಡಿಯನ್ನು ಹಿಡಿದು ಮಿಡಿತವನ್ನು ತಿಳಿದುಕೊಳ್ಳುವಿಕೆ : ನಾಡಿಪರೀಕ್ಷೆ . . . ಆ ನಾಡಿಯನ್ನು ಪರೀಕ್ಷಿಸುವ ಪ್ರಕಾರವೆಂತೆಂದೊಡೆ (ಸಕವೈ. ೦೦). [ ನಾಡಿ₁ + ಪರೀಕ್ಷೆ ]

**ನಾಡಿಮೂಲ** (ನಾ). ರಕ್ತಧಮನಿಯು ಪ್ರಾರಂಭವಾಗುವ ಸ್ಥಳ; ನಾಡಿಯ ನೆಲೆ : ಮೊರೆ ಬದಿ ತಿಗ ಬೆನ್ನು ತಲೆಯೊಳುದಿಸಿ ತೋರ್ಪ ಸರೆ ನಾಡಿಮೂಲವ ತಿಳಿದು ಗೆಲವಿತ್ತು ಸುಸಿಲಿಂಪುಗಲಿಸಿ ಕಾಣಿಪರು ಪೂವಿಲುಗಾಬಿ ನಾಗವರ್ಾರ್ಥವನು (ಭೃಕಶ. ೨೯೭). [ ನಾಡಿ₁ + ಮೂಲ ]

**ನಾಡೀಕೂಟ** (ನಾ). [ಜ್ಯೋತಿ] ವಿವಾಹಕ್ಕೆ ಮೊದಲು ವಧೂವರರ ಜಾತಕದ ಆಧಾರದ ಮೇಲೆ ನೋಡುವ ಹನ್ನೆರಡು ಕೂಟಗಳಲ್ಲಿ ಒಂದು : ನಾಡೀಕೂಟವೇ ಕೂಡದಿದ್ದರೆ ಮದುವೆಯ ಮಾತು ಮುಂದುವರಿಸುವುದು ಬೇಡ (ಬಳಕೆ). P ನಕ್ಷತ್ರಗಳನ್ನು ಮೂರುವರ್ಗಗಳಾಗಿ ವಿಂಗಡಿಸಿದೆ. ವಧೂವರರ ನಕ್ಷತ್ರಗಳು ಒಂದೇ ವರ್ಗಕ್ಕೆ ಸೇರದೆ ಹೋದರೆ ನಾಡೀಕೂಟವಿದೆ ಎಂದು ತಿಳಿಯಬೇಕು. 'ದ್ವಾದಶ ಕೂಟ' ಪರಾ. [ ಸಂ. ]

**ನಾಡೀಚಕ್ರ** (ನಾ). ದೇಹದಲ್ಲಿರುವ ಎಲ್ಲ ನಾಡಿಗಳ ಸಮೂಹ: ಗಗನ ತುರ್ಯಾರೂಢ ಮಗನಿಗೆ ಮಿಗಿಲು ಪೇಳಿಯೆ ಬೋಧಿಸಿದನಾ ನಿಗಮ ಸಮ್ಮತಿಯಿಂದೆ ನಾಡೀಚಕ್ರ ವಿವರಣೆಯ (ಗಗಚಾ. ೯ ಸಂಧಿ). [ ಸಂ. ]

**ನಾಡೀಪರೀಕ್ಷೆ** (ನಾ). ನಾಡಿಯ ಮಿಡಿತವನ್ನು ಕಂಡುಹಿಡಿಯುವಿಕೆ : ನಾಡೀಪರೀಕ್ಷೆ ಆಡು ಬಲ್ಲುದೇ ? (ಗಾದೆ). [ ಸಂ. ನಾಡೀಪರೀಕ್ಷಾ ]

**ನಾಡೀಯಂತ್ರ** (ನಾ). ಗಳಿಗೆಯನ್ನು ಕಂಡುಹಿಡಿಯುವ ಸಾಧನ; ಸಮಯವನ್ನು ಕಂಡುಹಿಡಿಯುವ ಉಪಕರಣ : ಅವರು ಉಪಯೋಗಿಸುತ್ತಿದ್ದ ಉಪಕರಣಗಳು ಇವು. (೧) ನಾಡೀಯಂತ್ರ (Sun-dial). (೨) ಗೋಳಯಂತ್ರ (Sphere) (ಶಿಲ್ಪನಾ. ೦೦೩). [ ಸಂ. ]

**ನಾಡೀವ್ರಣ** (ನಾ). ಗುದದ್ವಾರದಲ್ಲುಂಟಾಗುವ ಒಂದು ಬಗೆಯ ಹುಣ್ಣು ; ಭಗಂದರ ; ನಾರುಹುಣ್ಣು : ಹಾವುಮೆಕ್ಕೆಬೇರಂ ನೀರಲ್ಲಿ ಅರೆದು ಪೂಸೆ ನಾಡೀವ್ರಣ ಮೊದಲಾದುವು ಮಾಣ್ಗುಂ (ವಿವ್ಯಮಿ. ೦೦೩). 'ನಾಳಿವುಣ್' ಪರಾ. [ ಸಂ. ]

**ನಾಡೀಶೋಧನ** (ನಾ). [ಯೋಗ] ನಾಡಿಯ ಪರಿಶುದ್ಧಿ,-ಸ್ವಚ್ಛತೆ : ಸಾಧಕನು ಈ ಕ್ರಮವನ್ನು ಅನುಸರಿಸಿದರೆ ಉತ್ತಮಾಧಿಕಾರಿಯಾಗಿದ್ದ ಪಕ್ಷದಲ್ಲಿ ಮೂರುತಿಂಗಳಿಗೆ ಪ್ರಾಣಾಯಾಮಸಿದ್ಧಿಯಾಗಿ ನಾಡೀಶೋಧನ ವಾಗುತ್ತದೆ (ಭಾರದ. ೦೬೨). [ ಸಂ. ]

**ನಾಡು, ನಾಂಡು** (ನಾ). ೧. (ಕಾಡಲ್ಲದ) ಜನವಸತಿಯುಳ್ಳ ಪ್ರದೇಶ,-ಭೂಭಾಗ: "ನೀವೃತ್, ಜನಪದಃ, ದೇಶಃ, ಉಪವರ್ತನಂ–ಈ ೪ ನಾಡು" (ಹಲಾಯು. ೪೭-೦೨೯) ; "ಎಸೆವ ನೀವೃಜ್ಜನಪದಂ ದೇಶಮೆನೆ ನಾಡ ಪೆಸರಕ್ಕು" (ಮಂಗರಾ. ೫೬-೨) ; ನಾಡ ಕಾಡ ಬೆಳಸಿಂಬೆಳಸಾ ವಿಷಯಾಂತರಾಳದೊಳ್ (ಪಂಪಭಾ. ೧-೫೧) ; ನಾಡುಗಳೆರಸನಿದೆಂಬೊಂದಾಡಂಬರದಿಂದೆ ಸತ್ತಿಗೆತ್ತಿದುವೆನೆ ಕಣ್ಗಾಡುಂಬೊಲನಾದುವು ಬೆಳ್ಗಾಡಿನೊಳಲರ್ದೆಸೆವ ಬಯಲ ಬೆಳ್ದಾವರೆಗಳ್ (ಚಂದ್ರಪ್ರ. ೧-೮೮) ; ಮುನ್ನಿರ್ದ ಕಾಡೆಲ್ಲಮೆಸೆವ ನಾಡಾಗಿರಲ್ಕೆ ಮನದೊಳ್ಕುಬನಾಂತು (ಕ್ಷಮಿಥಾ. ೨೯-೩೨). ೨. ದೇಶ; ರಾಜ್ಯ ; ರಾಷ್ಟ್ರ : ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ (ಕವಿರಾ. ೧-೩೬) ; ಪನ್ನೆರಡು ವರ್ಷಂಬರೆಗಮಾ ನಾಡೆಳನಾವೃಷ್ಟಿಯಾಗಿ ಮಹಾರೌದ್ರಪಸವಮಕ್ಕುಂ

(ಪದ್ಮರಾ. ೪೮-೯) ; ಆ ನಾಡೊಳಗ್ರಹಾರಂ ಭೂನಾರೀಕುಚತಟಾಗ್ರಹಾರಂ ವಿಪುಳಶ್ರೀನಿಲಯವೆನಿಸಿ (ಪಂಪಶಂ. ೮-೧೫) ; ನಾಡುಂ ನಂಟರ್ಕಳುಂ ನಮ್ಮಯ ಪರಿಜನಮುಂ ನಾಮುಮಿಾ ಬುದ್ಧಿ ನಿಮ್ಮೊಳ್ ಕೂಡಲ್ ಸೈತಿರ್ಪ ಸೈಪಿನ್ನೊಡರಿಸದು (ಮಹಾನೀ. ೧೧-೯೩) ; ನಾಡಾಡಿಯಂತೆಯೇ ಮಾಡಿಬಿಟ್ಟರು ಇವಗೆ ನಾಡೆಲ್ಲ ಹುಡುಕಿದರು ಈಡಾರ ಕಾಣೆ (ಪುರಂದ. ೧-೨೦೫-೬) ; ಚೆನ್ನಾಗಿ ಒಣಗಿದ ಮೇಲೆ . . . ದೂರದೂರದ ನಾಡುಗಳಿಗೆ ಮಾರಾಟದ ಸಲುವಾಗಿ ಕಳುಹುತ್ತಾರೆ (ಮುಂಬಯಿ. ೪-೫೫); ಬಡವಗೆ ನಾಡ ಮಾತ್ಯಾಕೆ ? (ಗಾದೆ). ೩. ಗ್ರಾಮಾಂತರ ಪ್ರದೇಶ; ಹಳ್ಳಿಗಾಡು. ೪. ಭೂಮಿ ; ನೆಲ : ನಗಿಸಿದರು ನಾಡನು, ಕಡಿದು ಕಗ್ಗಾಡನು (ಕನ್ನಡಾ. viii ಪ್ರಸ್ತಾವನೆ). ೫. ಆಡಳಿತ ಸೌಕರ್ಯಕ್ಕಾಗಿ ಮಾಡಿರುವ ದೇಶದ ವಿಭಾಗ : ನರಿದಾವಿ[ಳ]ನಾಡುಳ್ ವ್ಯಗೆ:ಶನಾಗೇನ್ದ್ರಾಭೀಳಬ್ಭಟಹರ ಪ್ಪೂರ್ (ಮೈಅರಿ. ೧೯೩೬, ೧೬-೩ ; ಸು. 450) ; ಇನ್ದ್ರಾಪಾಯ್ಯಂ ನಾಡಾ ನಾಳುತ್ತಿರೆ ಪುರಿಗೆಱೆನಾಡ ಸರಟಪುರದಾಯ್ದಿಮ್ಬುರುಮಿಟ್ಟು ನಾಡಯಿಸೆ (ಎಇ. XXI, ೩೫-೪ ; 883) ; ಚೇರ, ಮತ್ತು ಪಾಂಡಿಯ ರಾಜ್ಯಗಳು ನಾಡು ಎಂದರೆ ಪ್ರಾಂತ್ಯವಾಗಿ. . .ವಿಭಾಗಿಸಲ್ಪಟ್ಟಿದ್ದುವು(ದಭಾಇ. ೦೦೬) : ನಾಡಿನೊಡೆಯ ಭರಮಹೆಗ್ಗಡೆ ರಾಜ್ಯದ ಮಹಾದಣಾಯಕನಿಗಾಗಿ ಸರ್ವ ಸಿದ್ಧತೆಗಳನ್ನೂ ಮಾಡಿದ್ದನು (ಸವಶಿ. ೬೫). ೬. ಒಂದು ದೇಶದ ಆಡಳಿತ; ಸರ್ಕಾರ : ಆಹಾರ ವ್ಯವಸ್ಥೆ ಮುಂತಾದವುಗಳಿಗೆ ನಾಡು ಎಷ್ಟು ವ್ಯಯ ಮಾಡಿದರೂ ವ್ಯರ್ಥವಲ್ಲ(ಶ್ರೀದ. ೩೮೩). ೭. ಸಾಮಾನ್ಯಜನ: ನಾಡ ಹಿಡಿದಾಡುವ ಕೇಡಿಗದೈವವ ಬಗೆಯದಿರಮ್ಮ (ಶಿವಗೀ. ೦೬೦-೮೦೦) : ನಾಡ ಹಂತಿಯಲಳುಕುವರ್ಜುನನೆ (ಕುವ್ಯಾಕ. ೪-೨೨); ನಾಲಿಗೆ ಒಳ್ಳೇದಾದರೆ ನಾಡೆಲ್ಲ ಒಳ್ಳೇದು (ಗಾದೆ). **ನಾಂಡು** : ೫. ವೆಂಗೀನಾಣ್ಡುವಿಷಯ ನಿವಾಸಿನೋ ರಾಷ್ಟ್ರ(ಷ್ಟ) ಕು(ಕೂ)ಟಪ್ರಮುಖಾನ್ (ಇಆ. XIII, ೨೪೯-೨೦ ; ?). ೭. ನಾಂಡು ಬರದು ನಟ್ಟ ಸಿಲಾಸಾಸನ (ಸಾಇಇ. IX_II, ೪೦೮-೪೦ : 1864).

**ನಾಡುನಾಡು**(ದ್ವಿರುಕ್ತಿ) : ತಿಳಿವಡೆದು ಸುಕುಮಾರವೈವಾಹವಂ ಬೀಱೆ ನಾಡುನಾಡೊಳಗೆಲ್ಲಮಿಾಯುತ್ಸವಂ ನೋಡೆ (ನಂಬಿರ. ೫-೯). **ನಾಡ ಕಥೆ** = ಒಂದು ದೇಶದಲ್ಲಿ ಪ್ರಚಲಿತವಾದ ಕಥೆ ; ಇತಿಹಾಸದ ಆಧಾರವಿಲ್ಲ ದಿದ್ದರೂ ಜನರು ಹಿಂದಿನಿಂದಲೂ ಹೇಳುತ್ತಾ ಬಂದಿರುವ ಕಥೆ; ಜಾನಪದ ಕಥೆ : ಇಂಥ ಅಲ್ಪ ಸ್ವಲ್ಪ ಸಾಮಗ್ರಿಯಿಂದ ಅಷ್ಟೇನೂ ಪರಿಣಾಮಕಾರಿಯಲ್ಲದ ನಾಡ ಕಥೆಯಿಂದ ಈಸ್ಕಿಲಸ್ ಏನು ಮಾಡಲು ಸಾಧ್ಯ ? (ಐದ್ಯಪ್ರ. vi ಟೀಕೆ೪). **ನಾಡ ಕಬು** = ಒಂದು ಬಗೆಯ ತೆರಿಗೆ (?) : ಎಲಗೂಡಿ ನಾಡ ಕಬು ಕಲವೆ ಕುವರಿ ಕೋಹು ಮಕ್ಕಿ ಹಕ್ಕಲು ಬಾಲದೆರೆ (ಮೈಅರಿ. ೧೬೩೪, ೫೮-೨೦ ; 1434). **ನಾಡಕರಣ, ನಾಡಕರಣೆ, ನಾಡಕರ್ಣ, ನಾಡಕರ್ಣಿ, ನಾಡ್ಕರ್ಣಿ** = ೧. ಮುಖಂಡ ; ಮುಂದಾಳು : ದೇಶವಿಚಾರಿಗಳುಂ ನಾಡಕರಣಂಗಳುಂ (ಬೊಂಕಶಾ. ೦೯೨೯, ನವಿಲುಗುಂದ ೨೦೦-೫೫ ; 1157) ; (ದೋಕಸ. ೪೪); ದೇಶಕುಲಕರ್ಣಿ ನಾಡಕರ್ಣಿ ಬಾಳಪ್ಪನ ಭಕ್ತಿ (ಇಎ. ೦೯೫೦, ಹಾನಗಲ್, ೧೨೬-೬ ; 1735). ೨. ಒಂದು ಮನೆತನದ ಹೆಸರು ; ಕುಲನಾಮ : ಕರಣಿ (ನಾಡ ಕರಣಿ), ಶ್ಯಾನುಭಾಗ . . . ಮೇಲಿತ್ತ ಹೆಸರುಗಳನ್ನು ಜಾತಿಗೆ . . . ಗೌರವಕ್ಕೆ ಸಂಬಂಧಿಸಿದವುಗಳೆಂದು ಮೂರು ವಿಭಾಗಗಳಾಗಿ ವಿಂಗಡಿಸಬಹುದು (ತುಳುನಾ. ೦೮೪) ; ನಾಡ್ಕರ್ಣಿ ರಾಮರಾಯರ ಹಿರಿಯ ಮಗಳು ಸುಮಿತ್ರೆಗೆ ನಾಳೆ ಮದುವೆ (ಮೂಕದಾ. ೨೧೫). **ನಾಡ ಕಾಲುವೆ** = ಜನರಿಗೆ ಉಪಯೋಗವಾಗದ ಕಾಲುವೆ,- ನಾಲೆ: ಮೂಢರಂದದೊಳೂರ ಗುದ್ದಲಿಯನ್ನು ಕೊಂಡು ನಾಡ ಕಾಲುವೆಯ ತಿದ್ದುವರೆ (ಕೋಹಶ. ೬-೮). **ನಾಡ ಕುದುರೆ, ನಾಡ ಗುದುರೆ** = ನಾಡಿನಲ್ಲಿ ಹುಟ್ಟಿದ ಕುದುರೆ ; ದೇಶೀಯಾಶ್ವ ; ನಾಟಿ ಕುದುರೆ : ಹೊಲೆಯ ಕುದುರೆ ಪಿಡಿಲೆಯ ಕುದುರೆ ನಾಡ ಕುದುರೆಗೆ ಪ್ರತಿ ಗದ್ಯಾಣಂ ಒಂದಕ್ಕಂ ಬೇಳೆ (ಎಕ. V, ಬೇಲೂರು. ೬೫-೧೧೧ ; 1382) ; ಜಾತಿತುರಂಗಮಾವಳಿವ ಹೊಳೆಗಳೆಮ್ಮ ನೀತಿನಿಪುಣ ನರಪತಿಯ ಮಾಶಿನೊಳಹವೆನೆ ನಾಡಗುದುರೆ ಯಾಳ್ವ ಭೂತಳಾಧಿಪರವರ್ಗೆಣೆಯೆ (ಕುರಾಪಾಂ. ೧೦-೧೯). **ನಾಡ ಕೋಡಿ** = ನಾಡಿಗೇ ತಿಳಿದ ಕೆಡುಕ ; ಮಹಾದುರುಳ ; ಎಲ್ಲರಿಗೂ ತಿಳಿದಂಥ ದುಷ್ಟ : ನಾಡ ಕೋಡಿಗಳು ವ್ಯಾಸನ ವಚನ ನಂಬದೆ ಮೂಢಗರ್ವರು ಗುರುವೆನಿಪ (ಪ್ರಕುಂವ. ೧-೬೦). **ನಾಡ ಗಾದೆ** = ದೇಶದಲ್ಲಿ ಪ್ರಚಲಿತ ವಾದ ಗಾದೆ; ನಾಣ್ಣುಡಿ : ವಸುಧೆಯೊಳು ಪೊಡಮಡಲು ದೇಗುಲಂ ಬಿರ್ದ ನುಡಿ ಪಸರಿಸುವ ನಾಡ ಗಾದೆಯ ತೆಱದಿ ನಿಮ್ಮ ಸೇವಿಸ ಬಂದ ನಮಗಾಯ್ತು ನರಕವು (ಸಿದ್ಧರಾ. ೧-೨೬). **ನಾಡಗಾರ** = ದೇಶದ ಪ್ರಜೆ : ಬಳ್ಳಿ ನೀ ನಾಡಗಾರರಿಗೆ ನೆರವಾಗಿ (ಹಳ್ಳಿಯ. ೬೧). **ನಾಡ ಗಾವುಂಡ** = ನಾಡಿನ ಒಡೆಯ,-ಪ್ರಭು : ಇದಾಗವಱೆ ಗಲ್ಪಸೆಗುತ್ತನಾಡ ಗಾವುಣ್ಡನು ಎತ್ತಿಕೊಳ್ಳ (ಮೈಅರಿ. ೧೯೪೬, ೩೦ : 1067). **ನಾಡ ಗಾವುಂಡಿ** = ಒಬ್ಬಾತನ ಹೆಸರು : ಚಿನ್ದಗಾವುಣ್ಡರ ಮಗ ನಾಡಗಾವುಣ್ಡ ಗಾವುಣ್ಡಗೆಯ್ವನ್ದು (ಎಕ. X, ಮೂಲೂರು. ೯೪-೮ ; ಸು. 950). **ನಾಡ ಗೀತೆ** = ೧. ನಾಡಿನ ಹಿರಿಮೆಯನ್ನು ಸಾರುವ ಹಾಡು, - ಪದ : ಅಂದಿನ ಕಾರ್ಯಕ್ರಮವು 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂಬ ನಾಡ ಗೀತೆಯೊಂದಿಗೆ ಆರಂಭವಾಯಿತು (ರೂಢಿ). ೨. ದೇಶಭಕ್ತಿಗೀತೆ : 'ಜನಗಣಮನ' ಎಂಬ ನಾಡಗೀತೆಯ ನಂತರ ಅಂದಿನ ಸಭೆ ಮುಕ್ತಾಯವಾಯಿತು (ರೂಢಿ). **ನಾಡ ಗುಡಿ** = ರಾಷ್ಟ್ರಧ್ವಜ : ನಮ್ಮ ನಾಡ ಗುಡಿಯ ನೋಡ ನೋಡಿರಣ್ಣ ಹೇಗಿದೆ ! (ಕಪಪ್ರ. ೨-೩೬). **ನಾಡ ಚಲ್ಲವತ್ತ** = ಸುಳ್ಳುಗಾರನಾದ ವಂಚಕ; ನಂಬಿಸಿ ಮೋಸಮಾಡುವವನು : ಕೆಮ್ಮಗೆ ನಾಡ ಚಲ್ಲವತ್ತರ ನುಡಿಗೊಳ್ಳದಿರ್ (ಪಂಪಭಾ. ೯-೪೩). **ನಾಡ ಜಂಬುಕ** = ತುಚ್ಛ ವ್ಯಕ್ತಿ ; ದಡ್ಡ ; ಕೀಳು ಮನುಷ್ಯ : ಕಣ್ಣೀರವನನ್ನರಿಯಲಾರದ ನಾಡ ಜಂಬುಕ (ಚಟ್ಯಆ. ೦೯೫-೨೨). **ನಾಡ ಜನ** = ಸಾಮಾನ್ಯ ಜನ : ಹರಿಭಕ್ತರನ್ನು ಕುರಿತು ಕನಕ ದಾಸರು ನಾಡ ಜನರುಗಳಂತೆ ನಡೆಯರು, ನುಡಿಯರು . . ಎಂದಿದ್ದಾರೆ (ಭಾರದ. ೪೦೩). **ನಾಡ ಜೂದು** = ೧. ತುಚ್ಛವಾದ ಜೂಜು, - ಪಗಡೆ ಯಾಟ. ೨. ಮೋಸದ ಜೂಜು : ಇದು ಲಾಕ್ಷಾಗೇಹದಾಹಕ್ಕಿದು ವಿಷಮವಿಷಾನ್ನಕ್ಕಿದಾ ನಾಡ ಜೂದಿಂಗೆ . . . ಎಂದೋವದೆ ಪೊಯ್ದಂ (ಗದಾಯು. ೮-೦೯). **ನಾಡಡವಿಗೋಡಗ** = ಸಾಮಾನ್ಯವಾದ ಕಾಡುಕಪಿ : ಕಡಲ ಮಧ್ಯದ ಖಳನೊಡನೆ ಕೈಹೊಡೆದುದಲ್ಲಿಗೆ ತೆತ್ತಿಗರು ನಾಡಡವಿಗೋಡಗ ವಾಳು ಕುದುರೆಗಳಸುರವಿಗ್ರಹಕೆ (ಕುವ್ಯಾಅ. ೨೨-೫೧). **ನಾಡ ತಂದೆ** = ದೇಶಕ್ಕೆ ತಂದೆಯಂತೆ ಇರುವವನು ; ರಾಷ್ಟ್ರಪಿತ : ಹರಿಜನರ ಬಳಗ ಉಳಿದವರ ಒಳಗೆ ಬಳಸಿದೆಯೊ ನಾಡ ತಂದೆ (ಸೂರ್ಯಪಾ. ೧೪-೩). **ನಾಡ ತಕ್ಕ** = ದೇಶಭಾಗದ ಮುಖಂಡ ; ಸುತ್ತುಮುತ್ತಿನ ಪ್ರದೇಶದ ಜನಕ್ಕೆ ಮುಖಂಡ : ನಾಡ ತಕ್ಕ ಸುಬ್ಬಯ್ಯವೋಲಿಗೆ ಕುಲದ ಅಭಿಮಾನ ಹೆಚ್ಚು (ಹುಲಿಹಾ. ೬೮). **ನಾಡ ತಕ್ಕಾಮೆ** = ನಾಡಿನ ಮುಖಂಡ ಪದವಿ,-ಅಧಿ ಕಾರ : ಹಾಲೇರಿವಂಶದ ಅರಸರ ಆಡಳಿತ ಪ್ರಾರಂಭವಾಗುವ ಮುನ್ನ ರೂಢಿಯಲ್ಲಿದ್ದ ನಾಡ ತಕ್ಕಾಮೆ ಮತ್ತು ಗ್ರಾಮ ತಕ್ಕಾಮೆಗಳನ್ನು ಊರ್ಜಿತಕ್ಕೆ ತಂದರು (ಹುಲಿಹಾ. ೮೪). **ನಾಡ ತೊತ್ತು** = ದೇಶದ ಸೇವಕ ಸರ್ವರ ಕರುಣದ ಶಿಶು ನಾನು, ನಾಡ ತೊತ್ತು (ಕಬಸಾ. ೧೪೬). **ನಾಡ ದೇವಿ** = ೧. ನಾಡಿನ ಅಧಿದೇವತೆ. ೨. ಕನ್ನಡ ಭಾಷೆಯ ಅಭಿಮಾನಿ ದೇವತೆ ; ಭುವನೇಶ್ವರಿ : ಮುಂಜಾನೆ ನಾಡ ದೇವಿಯ ಮೆರವಣಿಗೆಯು ವೈಭವದಿಂದ ನಡೆಯುವುದು (ಕಪಪ್ರ. ೫-೧೨). **ನಾಡ ದೈವ** = ಕ್ಷುದ್ರದೇವತೆ: ದೆಸೆಗಟ್ಟು ನಾಡ ದೈವಂಗಳಿಗೆ ಹಲುಬಿದಡೆ ನೊಸಲ ಬರಹವ ತೊಡೆದು ತಿದ್ದಲಳವೆ (ಕನಕ. ೫೪-೩). **ನಾಡ ಧಡ್ಡಿ** = ಏನೂ ತಿಳಿಯದ ಮೂಢ ;

ಮಹಾಮೂರ್ಖಹೆಂಗಸಂ : ಕಣ್ಣೀರು ಸುರಿಸಲಿಕ್ಕೆ ಈಗೇನು ಆಗೇದೆ ಧಡ್ಡಿ – ನಾಡ ಧಡ್ಡಿ (ದಾಸಕೃ. ೦೦೪). ನಾಡ ನರಿ = ಬಡನರಿ ; ಹೇಡಿ ನರಿ : ರಿಪುವಾಹಿನಿಯನಿರಿಯದೆ ನಾಡ ನರಿಯವೊಲೆನಗೆ ನೀ ಹಲುಗಿರಿಯೆ ಬಿಡುವೆನೆ (ಕುವ್ಯಾವಿ. ೬-೧೯). ನಾಡ ನಾಲಗೆ = (?) : ಪಟ್ಟಣಸಾಮಿ ಮಹ ದೇವಸೆಟ್ಟಿ ನಾಡ ನಾಲಗೆ ಬಮ್ಮಿಸೆಟ್ಟಿಯೊಳಗಾದ ಸಮಸ್ತ ನಖರಂಗಳುಂ ಸಂತೆಯ ಆಯಮಂ ಸಲಿಸುವರು (ಎಕ. XII, ತಿಪಟೂ. ೪೮-೫೦ ; 1214). ನಾಡ ನಾಲಗೆಗೆಳೆಯ = ಸಾಮಾನ್ಯವಾಗಿ ಮಾತಿನಲ್ಲಿ ಮಾತ್ರ ಸ್ನೇಹಿತ ನಾಗಿರುವವನು ; ಕೆಲಸಕ್ಕೆ ಹಿಂದೆಗೆಯುವವನು : ಸವಿಮಾತುಗಳ ನಿನ ಗಾಡುವವರಿಗೆ ಚಿತ್ತಗೊಡದಿರು ಹಿಸುಣ ಹೊಗಿಸರು ನಾಡ ನಾಲಗೆಗೆಳೆಯ ರೆಂಬುದ ಮಾಡದಿರು (ಕುವ್ಯಾಉ. ೯-೧೮). ನಾಡ ನುಡಿ = ೧. ಗಾದೆ ; ಲೋಕೋಕ್ತಿ ; ನಾಣ್ಣುಡಿ : ಹಾಡಿ ಹಡೆದಾಡಿ ಹೋಗಾಡಿದಂ ಕಡೆಗೆಂಬ ನಾಡ ನುಡಿಯಂತೆ (ಸೋಮಕ. ೧-೬೭). ೨. ಕೀಳುಮಾತು : ಪೊಂದುವ ಸಂಧಿಯ ನುಡಿಗಳನಾಡದೆ ಸಲ್ಲದ ನಿಲ್ಲದ ನಾಡ ನುಡಿಗಳನೆಮ್ಮವರ್ ನೋವಂ ತಿರೆ ನುಡುಮಾತುಗಳಂ ಗಲಪುವಯ್! (ರಾಮಾಶ್ವ. ೧೪೨-೨೯). ನಾಡ ಪದ = ನಾಡಿನಲ್ಲಿ ಪ್ರಚಲಿತವಾಗಿರುವ ಹಾಡು,–ಗೀತೆ ; ಜನಪದಗೀತೆ : ವಾಲ್ಮೀಕಿಯ ಕಾಲಕ್ಕೆ ರಾಮಾಯಣದ ಕಥೆಯು ದೇಶದಲ್ಲೆಲ್ಲ ನಾಡ ಪದಗಳ ರೂಪದಲ್ಲಿ ಹಬ್ಬಿ ಹರಡಿರಬೇಕೆಂದು ಪಾಶ್ಚಾತ್ಯವಿದ್ವಾಂಸರು ಊಹಿಸುತ್ತಾರೆ (ಭಾರದ. ೫೬). ನಾಡ ಪಾಲ = ನಾಡಿನ ಪ್ರಭು,–ಮುಖಂಡ: ಬೆಳ್ಳರೆಸೀಮೆ ಹೊಸೂರ ನಾಡ ಪಾಲ ಮೂಡಲ ದೈಲ ಗ್ರಾಮದಲ್ಲೂ . . . ಭೂಮಿ ಯಂನ್ನು ಮೂಲಕ್ಕೆ ಮಾಡಿಕೊಂಡು (ಮ್ಯುಆರಿ. ೦೯೩೪, ೯-೩ ; 1690). ನಾಡ ಪೆರ್ಗಡೆ, ನಾಡ ಹೆಗ್ಗಡೆ = ನಾಡ ಪಾಲ : ತೊಳಕಲೆಯ ಸಿರಿಯಮ ಸೆಟ್ಟಿಯುಂ ನಾಡ ಪೆರ್ಗಡೆ ಹಮ್ಮಸೆಟ್ಟಿ [ಯುಂ] (ಎಇ. XIX, ೩೭-೧೫ ; 1144) ; ನಾಡ ಹೆಗ್ಗಡೆ ತಡಮಾಡದೆ ಕುದುರೆಯನ್ನೇರಿ ಹೋದನು (ಸುವಿ. ೫೭). ನಾಡ ಪ್ರಭು = ನಾಡ ಪಾಲ : ನಾಡ ಪ್ರಭುಗಳ ಸನ್ನಿಧಾನದಲು . . . ಧಾರಾಪೂರ್ವ್ವಕಂ ಮಾಡಿ ಬಿಟ್ಟರು (ಎಕ. VII, ಶಿವಮೊ. ೯೭-೪೮ ; 1113) : ನಾಡ ಪ್ರಭುಗಳು ಸ್ಥಾನಮಾನ್ಯವೊಳಗಾದ ಸಮಸ್ತಪ್ರಜೆಗಳ ಪುರಸ್ಸರದಿಂದವೂ . . . ಸಾಕಲ್ಯೇನ ಹಸ್ತಸ್ಥವಾಗಿ ಕೊಟ್ಟು (ಎಕ. XI, ಚಿತ್ರದು. ೧೨-೧೭ ; 1286). ನಾಡ ಬಾವುಟ = ನಾಡ ಗುಡಿ : ಸ್ವಾತಂತ್ರ್ಯ ದಿನದಂದು ಸರ್ಕಾರಿ ಕಟ್ಟಡಗಳ ಮೇಲೆ ನಾಡ ಬಾವುಟವನ್ನು ಏರಿಸುತ್ತಾರೆ (ರೂಢಿ). ನಾಡ ಬೇಂಟೆ = ಸುತ್ತುಮುತ್ತಿನ ಗ್ರಾಮಸ್ಥರು ಒಟ್ಟುಗೂಡಿ ಆಡುವ ಬೇಟೆ : ಕಾಡ ಕಟ್ಟಳೆ ನಾಡ ಬೇಂಟೆಯಂ ಕೊರಲೊಂಕೆ (ಕಾಊರ. ೪೯-೭೨). ನಾಡ ಮದ್ದು = ಸ್ವದೇಶೀ ಔಷಧಿ ; ಜನರು ತಮ್ಮ ಅನುಭವ ದಿಂದ ಪ್ರಯೋಗಿಸುವ ಔಷಧ ; ನಾಟಿ ಮದ್ದು : ನಾಡ ಮದ್ದಂ ತಿಂದು ಕುತ್ತ ಕೆಡದಿರಬಹುದೆ (ಹಕಾ. ೧೦-೨೪). ನಾಡ ಮಾತು = ೧. ದೇಶದ ವೃತ್ತಾಂತ ; ರಾಜಕೀಯಕ್ಕೆ ಸಂಬಂಧಪಟ್ಟ ಮಾತು : ನಾಡ ಮಾತುಗಳೇತಕೋ ಸಂಗೀತವು ಪಾಡುವ ಸಮಯವೇನೊ ಗಾಡಿಗಾಬ ಶ್ರೀಪುರಂದರವಿಠಲನ ಪಾಡಿ ಪಂಥಗಳೊಡಗೂಡುವ ಸಮಯಕ್ಕೆ (ಪುರಂದ. ೩-೩೨-೩) ; ಅಡಿಗಟ್ಟಣವೇಕೆ ಬೋಡಂಗೆ ಕಬ್ಬೇಕೆ ಕೋಡಗಕ್ಕೆ ಕೈಗೆ ಬಳೆ ಯೇಕೆ ಬಡವಂಗೆ ನಾಡ ಮಾತೇಕೆ (ಸರ್ವಜ್ಞ. ೧೩೭೪). ೨. ಗಾದೆ ; ನಾಣ್ಣುಡಿ : (೬). ೩. ಜನಸಾಮಾನ್ಯರ ಮಾತು ; ಯೋಚನೆ ಮಾಡದೆ ಆಡುವ ಮಾತು ; ಅಪಲಾಪ : ನಾಡ ಮಾತು ಬೇಡ ಸೆಟಗೊಡ್ಡಿ ಬೇಡು ಕೂಡಲ ಸಂಗನ ಶರಣರ (ಬಸವ. ೨೭೮) : ನಾಡ ಮಾತೇನೊಲಿದೊಡಂ ಕೊಂಡಾಡು ಮೇಣಲ್ಲದಡೆ ಲಘುವಂ ಮಾಡಿ ನುಡಿಯದಿರು (ಬಸಪು. ೪೪-೫೬); ಮತ್ತೆ ಮಾಣದೆ ನಾಡ ಮಾತನು ಕಲಿತು ನಮ್ಮೊಡನಾಡುತಿಹರೆ (ಪ್ರಭುಲೀ. ೧೩-೧೨) ; ನಾಡ ಮಾತು ಬೇಡ ನಾಲಿಗೆ ನಿನ್ನ ಬೇಡಿಕೊಂಬೆನು ಕಂಡ್ಯ ನಾಲಿಗೆ (ಪುರಂದ. ೫-೪೮ ಪಲ್ಲವಿ) ; ಕೇಡು ಬರಲದಕಂಜೆನಂಜೆವು ನಾಡ ಮಾತು ಗಳೇಕೆ (ನಿಧಾಗ. ೬-೭ ೨೮) : ಬಹುಜನದ ಮುಂದೆ ಸುಳಿವಳ್ನಾಡ ಮಾತಂ ಗಳಪುವವಳ್ . . . ನಿಲ್ವಳೇ ಶಿಕ್ಷಿಸಿದೊಡೆ (ಚಿಕ್ಕಹಿತ. ೫-೫೭) ; ನಾಡ ಮಾತೇಕೆ ! ಎನಗೆಂತೋ ಮೇಣುಂ ಮೇಣ್ ಕೇಳ್ವೆನೆಂಬೊಂದಾಸೆ ಪುಟ್ಟುಗುಂ (ರಾಮಾಶ್ವ. ೦೬೪-೧೭). ನಾಡ ಮಾನಸ = ಸಾಮಾನ್ಯಮನುಷ್ಯ ; ಅಲ್ಪ: ಮರೆಸಿ ನಾಡಮಾನಸರದೇಂ ನೆರೆ ಪೋಲ್ವರೆ ಜಕ್ಕಿಸೆಟ್ಟಿಯ (ಕಇ. IV, ೧೨-೫೯ ; 1121). ನಾಡ ಮುಖ = ದೇಶದ ಮುಖಂಡ, – ಮುಖ್ಯಸ್ಥ : ತಳಗೆಯ ನಾಡಾಳುವ ನಾಡ ಮುಖಗಳು ರಣಪಟುವಗವುಡನ ಮಗ ದಾಳಿ ಗವುಡ (ಎಕ. XIV, ತಿರುಮ. ೭೮-೫೦ ; 1277). ನಾಡವರ್, ನಾಡವರು = ೧. ದೇಶದ ಜನರು ; ಪ್ರಜೆಗಳು : ಮದನಱಿದು ನುಡಿಯಲುಂ ನುಡಿದು ದನಱಿದಾರಯಲುಮಾರ್ಪರ್ ನಾಡವರ್ಗಳ್ (ಕವಿರಾ. ೧-೩೮) ; ಮುನ್ನಿನ ದಿವಸಂ ನಾಡವರೆಲ್ಲಂ ಪೂಜಿಸಿ ಪೋದ ಒಟ್ಟನೆತ್ತುಮಂ ಬಂಡಿಯುಮಂ ತಂದು ತೋಱ (ಧರ್ಮಾಮೃ. ೨-೦೯೧). ೨. ಸಾಮಾನ್ಯಜನ ; ಜನ ಸಾಮಾನ್ಯ : ಮೇರೆಯಂ ತಪ್ಪುವ ಮಾನಿಸರಂ ಕಂಡೊಡೆ ಪಂಚಮಹಾ ಪಾತಕರೆಂದು ಬೈವ ನಾಡವರ ಬೈಗುಳ್ಗಳಿಂದಮುಂ (ಧರ್ಮಾಮೃ. ೯-೬೮) ; ನಾಡವರು ಅವರಿಗೆ ನಂಬೇಟಿಗಾರಮಾದಪ್ಪ ಎಂದು ಗೌರವಸಂಬೋಧನೆ ಯನ್ನು ಬಳಸುತ್ತಿದ್ದರು (ಹುಂಹಾ. ೦೭). ೩. ನಾಡಿನ ಮುಖಂಡರು : ಮುಂದೆ ನಾಡವರು ಆ ಹೆಂಡೆ ಮುಂದಕೆ ಸಾಗಿ ಹೋಗುವಾಗ (ಎಕ. VII, ಶಿವಮೊ. ೦೦೭-೨೫ ; 1576 ?). ೪. (ಕರಾ) ಒಂದು ಜನಾಂಗದ ಹೆಸರು: ಕರಾವಳಿ ಪ್ರದೇಶದಲ್ಲಿ ವಾಸಿಸುವ ಜನರಲ್ಲಿ ನಾಡವರು, ಹಾಲಕ್ಕಿ ಒಕ್ಕಲರು . . . ಒಕ್ಕಲುತನದಿಂದ ಜೀವಿಸುವವರು (ಕರವೀ. ೬) ; ನಾಡವರು ಯಾ ನಾಡ ಬಂಟರು – ಜಿಲ್ಲೆಯ ಉತ್ತರ ಭಾಗದಲ್ಲಿದ್ದು ಕನ್ನಡ ಮಾತನಾಡುವ ವರು (ತುಳುನಾ. ೫೦). ನಾಡ ವಾರ್ತೆ = ನಾಡಿನ ಮಾತು ; ಲೋಕಾಭಿ ರಾಮವಾದ ಮಾತು ; ಲೌಕಿಕವಾದ ಮಾತು : ರೂಢಿಯೊಳಗೆ ನಮ್ಮ ಪುರಂದರವಿಠಲನ್ನ ಪಾಡಿ ಪೊಗಳದೆ ನಾಡ ವಾರ್ತೆಯಾಡುವರು (ಜಗದಾ. ೦೦೦). ನಾಡವೊಪ್ಪ = ನಾಡಿನ ಪರವಾಗಿ ಹಾಕುವ, ಒಬ್ಬ ಅಧಿಕೃತ ವ್ಯಕ್ತಿಯ ಸಹಿ,–ಹಸ್ತಾಂಕನ : ಸ್ವರುಚಿಯಿಂದ ಧಾರಾಪೂರ್ವ್ವಕವಾಗಿ ಬಿಟ್ಟ ಧರ್ಮ್ಮ ನಾಡವೊಪ್ಪ ಶ್ರೀಭೀಮನಾಥ ಮಲಪರೊಳು ಗಂಡ (ಎಕ. VII, ಶಿಮಹೂ. ೦೯-೦೮ ; 1309). ನಾಡ ಸೇನಬೋವ = ನಾಡಿನ ಶಾನು ಭೋಗ ; ನಾಡಕರಣಿ : ನಾಡ ಸೇನಬೋವ ಬಾಚಣ್ಣ (ಎಕ. XI, ಚಿತ್ರದು. ೧೨-೩೪ ; 1286). ನಾಡ ಸ್ವಾಮಿ = ನಾಡ ಪಾಲ : ನಾಡ ಸ್ವಾಮಿ ಶಂಕರೈಯ್ಯನು ಸೇನಬೋವ ಶಂಕರೈಯ್ಯನು (ಎಕ. VII, ಶಿಕಾರಿ. ೯೪-೧೫ ; 1094) : ನಾಡ ಹಬ್ಬ = ಏಕೀಕರಣದ ದೃಷ್ಟಿಯಿಂದ ಪ್ರಾರಂಭಿಸಿದ ದಸರಾ ಮೊದಲಾದ ಹಬ್ಬ : ತಾವು ಮಾಡಿಕೊಂಡ ನಾಡ ಹಬ್ಬದ ಯೋಜನೆಯನ್ನು ಅವರಿಗೆ ತಿಳಿಸಲು ಆತುರಗೊಂಡಿದ್ದರು (ಕಹವು. ೫-೦೨): ಅವರ ಭೆಟ್ಟಿಯ ಎರಡನೆಯ ಪ್ರಸಂಗವು ಕೂಡಿ ಬಂದುದು ಎಂದರೆ . . . ನಾಡ ಹಬ್ಬದ ಕಾಲಕ್ಕೆ (ಪ್ರಬಂಧ. ೯೪) : ಅದು ಅಲ್ಲಿ ನಾಡ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸಲಾಯಿತು (ಆಶೋಲೀ. ೧೬೦). ನಾಡ ಹಲವರು, ನಾಡಿನ ಹಲವರು = ದೇಶದ ಮುಖಂಡರು ; ದೇಶದ ಪಂಚಾಯಿತಿಯ ವರು: ಶ್ರೀಮತು × × × ನಾಡ ಹಲವರು ಸ್ವಾಮಿತನವನು ಸೋಮೋಜರ ಸೆಟ್ಟಿಯ ಮಕ್ಕಳು ಮೆಂಗಟಸೆಟ್ಟಿಗೆ . . . ಕೊಟ್ಟ ಸರ್ವಮಾನ್ಯ ಹೊಲ ಖ ೧ ಗದ್ದೆ (ಮ್ಯುಆರಿ. ೦೯೨೫. ೦೦೦-೨ ; ?) : (ದೋಕಸ. ೭೧). ನಾಡ ಹಾಡು= ನಾಡಗೀತೆ ೧ : ಕಾರ್ಯಕ್ರಮದ ಮೊದಲಿನಲ್ಲಿ ನಾಡ ಹಾಡು ಹಾಡುವುದು ವಾಡಿಕೆ (ರೂಢಿ). ೨.=ನಾಡಗೀತೆ ೨ : ನಾಡ ಹಾಡು ಹೇಳುವಾಗ ಎದ್ದು ನಿಲ್ಲಬೇಕು ಎಂದು ಮಕ್ಕಳಿಗೆ ಹೇಳಿಕೊಡಬೇಕು (ರೂಢಿ). ನಾಡ ಹಾದಿ= ಹಳ್ಳಿಯಿಂದ ಹಳ್ಳಿಗೆ ತಿರುಗಾಡಲು ಮಾಡಿಕೊಂಡಿರುವ ಕಾಲುದಾರಿ; ಹಳ್ಳಿಗಾಡಿನ ದಾರಿ ; ನರ್ತನ ಮಾಡುವ ಕಾಲು ನಾಡ ಹಾದಿಯನ್ನು

ಮೆಟ್ಟೀತೆ! (ಶಾಂತಲಾ. ೧೨೨). **ನಾಡ ಹಾನೆ** = ಒಂದು ಅಳತೆ : ಶಾಸನಗಳಲ್ಲಿ ಬರುವ ನಾಣ್ಯಗಳೂ ಅಳತೆಗಳೂ:- ಗಡ್ಯಾಣ (ಗದ್ಯಾಣ) . . . ಹಾನೆ, ನಾಡ ಹಾನೆ, ಕಂಚಿನ ಹಾನೆ (ತುಳುನಾ. ೨೭೧). **ನಾಡ ಹುಚ್ಚ** = ಏನೇನೂ ತಿಳಿಯದವನು ; ಬಹಳ ದಡ್ಡ : ಹಾಗೆ ಕೇಳೋ ಹುಚ್ಚಾ, ನಾಡ ಹುಚ್ಚಾ (ಹಸ್ತೂಂಡ. ೧೬). **ನಾಡ ಹೆಣ್ಣು** = ಹಳ್ಳಿಯ ಹೆಂಗಸು : ಕಾವ ತಿಳಿಬಗೆಯಿರ್ಪ ನಾಡ ಹೆಣ್ಣಲ್ಲಿ (ಕಾಂ೩ರ. ೨೭-೧೫). **ನಾಡಾಳ್ವೋನ್**= ದೇಶವನ್ನು ಆಳುವವನು ; ನಾಡ ಪ್ರಭು : ಇದಾ ನಾಡಾಳ್ವೋನಾನುಂ ಊರಾಳ್ವೋನಾನುಂ ಊರಾ ಒಕ್ಕಲನುಂ ಅಟ್ಟಿದೋರ್ ಪಂಚಮಹಾಪಾತಕ ... ಅಕ್ಕುಂ (ಎಕ. VI, ಚಿಕ್ಕಮ. ೯೨-೬; ಕು. 750 ?). **ನಾಡುಗಳ್**=ನಾಡಿನ ಅಧಿಕಾರ ನಡೆಸುವ ಮಹಾಜನರು: ಶ್ರೀವಣಿಕೇಶ್ವರದೇವರ ಶ್ರೀಕಾರ್ಯ ನಡೆವಂತಾಗಿ ನಾಡುಗಳ್ ಕೊಟ್ಟ ಆಯದಾಯವಾವುದೆಂದಡೆ (ಮುಂಬಂಶಾ. X, ೨೪೯-೭೩ ; 1219). **ನಾಡು ಬೀಡು** = ದೇಶ ಮತ್ತು ವಾಸಸ್ಥಳ ; ಅಖಂಡ ದೇಶ : ಸಂಪ್ರೀತಿಯನು ಸುಜನರಲಿ ನಿರ್ಮಳನೀತಿಯನು ಪರಿವಾರಪುರಜನ ನಾಡುಬೀಡಿನಲಿ . . . ಅಖಿಳಜ್ಞಾತಿಗಳೆಲ್ಲ ಬಿಕೆಯೊಳಗಿಹುದು (ಕುವ್ಯಾಸ. ೧೧-೧೯) ; ನಾಡುಬೀಡೆನಗಾಯ್ತು ವಶ ಖಯಖೋಡಿಯಿಲ್ಲದೆ ಶಕ್ರಪದದಲಿ ಜಾಡಿಸುವೆನದನೇನ ಹೇಳುವೆನೆನುತ ಬಿಸುಸುಯ್ದ (ಕುವ್ಯಾಅ. ೦೩-೬೪) : ಎಲ್ಲಗಳಿದಬ್ಬಿಯೆನಲ್ ಪಡೆಯೇಂ ಕಡಂಗಿತೋ ನಡೆದುದು ನಾಡುಬೀಡು ಗುಡಿಗೋಪುರಗಳ್ ಪುಡಿಯೇಟ್ ಭೋರೆನಲ್ (ಚಕವಿ. ೩-೧೦೫). **ನಾಡುಬೀಡುಗ** = ದೇಶದಲ್ಲಿ ವಾಸಮಾಡುವವನು; ದೇಶದ ಸಾಮಾನ್ಯ ಪ್ರಜೆ ; ನಾಡಿಗ : ಕಾಣ್ಕೆ ಕೊಂಡು ಭಕ್ತಿಭರದಿಂ ಪುಗುವ ನಾಡುಬೀಡುಗರುಂ (ಚಕವಂ. ೧೨೧-೧೬).

[ ದೇ.II ತಮಿ. ಮಲ. ನಾಟು; ತುಳು. ನಾಡ್, ನಾಡು; ತೆಲು. ನಾಡು; ಗೊಂಡಿ. ನಾರ್; ಕುಇ. ನಾಟೊ ]

**ನಾಡುಅಕ್ರೋಟು** (ನಾ). ಒಂದು ಬಗೆಯ ಮರ : ನಾಡುಅಕ್ರೋಟು, ಅಲ್ಯೂರೈಟಸ್ ಗಿಡ (ವೃಶಿಗಿ. ೪-೬೪).

[ ನಾಡು + ಅಕ್ರೋಟು (< ಅಕ್ರೋಡ) ]

**ನಾಡುಗ, ನಾಡಗ** (ನಾ). ೧. ಸಾಮಾನ್ಯ ಮನುಷ್ಯ ; ಸಾಧಾರಣ ವ್ಯಕ್ತಿ : ಆಡಿನ ಹಿಂಡಾನೆಯ ಹಿಡಿವಂತಾ ರೂಢಿವಡೆದ ಬಲಯುತನಂ ನಾಡುಗರೆಯ್ದಿ ಹಿಡಿಯೆ (ಪ್ರಭಂಚ. ೨-೧೫೦) ; ಎಂದನಾ ಫಣಿಭೂಷಣನು ಶೂಲವೇಣಿನೇ ಲೋಕರಕ್ಷಣದಕ್ಷ ಲಕ್ಷ್ಮಿಯಧಿಪತಿಯುಳಿದ ನಾಡುಗರ ಪಾಡೇನು ಕೇಳ್ಳೆಂದನ (ಸಮ್ಯಕೌ. ೪-೩೧). ೨. ನಾಡನ್ನಾಳುವವನು ; ದೊರೆ : ನಾಡುಗರಿಗೆ ಸೇನೆದೋಜ್ ಗೆಲ್ದನು ಯುದ್ಧ ಮಾಡುವರಿವಗಿದಿರುಂಟೆ (ಭರತ. ೪೯-೦೩೬). ೩. ದಡ್ಡ ; ಮೂಢ; ಅಜ್ಞ : ನಾಡುಗರೊಳು ವರ್ತಿಸದಿರು (ಹೋಗಾಂವಿ. ೫-೩). **ನಾಡಗ** : ೩. ಕೇಳು ನಾಡಗರೊಲಿದು ಗಜನ ಮಾಲೆಯನು ಕೊಳ್ವಂತೆ (ಸ್ವರೂಪಾ. ೨-೧೬). [ ನಾಡು + -ಗ$_{4}$ ]

**ನಾಡುಗವುಡ, ನಾಡಗೌಡ** (ನಾ). ಗ್ರಾಮದ ವ್ಯವಹಾರಗಳಲ್ಲಿ ತೀರ್ಪು ನೀಡುವ ಮುಖಂಡ ; ಹಳ್ಳಿಯ ಮುಖ್ಯಸ್ಥ ; ಪಟೇಲ : (+). **ನಾಡುಗೌಡ** : ನಾಡುಗೌಡನ ಪಂಚಾಯ್ತಿಯಲ್ಲಿ ಫಿರ್ಯಾದಿ ಅಪರಾಧಿಗಳಿಬ್ಬರೂ ತಮ್ಮ ತಮ್ಮ ಪರವಾಗಿ ವಾದಿಸುವವರನ್ನು ನೇಮಿಸಿಕೊಳ್ಳುವ ಅಧಿಕಾರವಿತ್ತು (ಹುಬ್ಬಹ. ೧೬) ; ಪಟೇಲನಿಗೆ-ಪಟೇಲ, ಗೌಡ, ನಾಡುಗೌಡ ಎಜಮಾನ, ರಡ್ಡಿ, ಪೆದ್ದಕಾಪು, ಮಾನ್ಯಕರಣಂ, ಮಣೇಗಾರ ಅಥವಾ ಅಡಿಗಾರ, ನಾಯಿಡು ವಗೈರೆ ಹೆಸರುಗಳುಂಟು (ಗ್ರಾಮೂಳ. ೧).

[ ನಾಡು +ಗವುಡ$_{1}$ (< ಗಾಮುಂಡ) ]

**ನಾಡುಗಾಣೆ** (ನಾ). ಒಂದು ಊರಿನ ಹೆಸರು : ಸೂಜಿಗೋರುಮ್ ನಾಡುಗಾಣೆಮ್ ಪ್ರಥುತರ ಮಿಡಿಗೇ ಸೂಳಿಕ್ಕೆಲೆಂದ್ರು ದುಗ್ಗೇನನ್ನಾಮ್ (ಮ್ರುಅರಿ. ೧೯೩೧, ೧೧-೭೭ ; 907). [ ? ]

**ನಾಡುಗಾದೆ** (ನಾ). ಒಂದು ದೇಶದಲ್ಲಿ ಪ್ರಚಲಿತವಾಗಿರುವ ಮಾತು ; ಲೋಕೋಕ್ತಿ ; ನಾಣ್ಣುಡಿ : (ಕಚುನಿ. ಕ. I, ೭೫).

[ ನಾಡು + ಗಾದೆ ]

**ನಾಡುಗೌಡ** 'ನಾಡುಗವುಡ' ನೋ.

**ನಾಡುತಟ್ಟು** (ನಾ). ಸಾಮಾನ್ಯವಾದ ಕುದುರೆ ; ಗಿಡ್ಡಕುದುರೆ : ಅವನು ತನ್ನ ಹೊಲದ ಹತ್ತಿರ ಮೇದುಕೊಂಡಿದ್ದ ನಾಡುತಟ್ಟಾದ ಒಂದು ಕುದುರೆಯನ್ನು ಹಿಡಿದುಕೊಂಡು ಬಂದು . . . ಕಾಣಿಕೆಯಾಗಿ ಒಪ್ಪಿಸಿದನು (ನಗಿಗ. ೩೦). [ ನಾಡು + ತಟ್ಟು$_{4}$ ]

**ನಾಡುನುಡಿ** (ನಾ). ಜನಸಾಮಾನ್ಯರಲ್ಲಿ ಬಳಕೆಯಲ್ಲಿರುವ ಮಾತು : ಆಳ್ವಾರರ ಹಾಡುಗಳು ನಾಡುನುಡಿಯಲ್ಲಿದ್ದುದರಿಂದ ಇವು ಜನಸಾಮಾನ್ಯರಲ್ಲಿ ಹರಡುವುದಕ್ಕೆ ಅವಕಾಶವಾಯಿತು (ಧಾರದ. ೩೪೯).

[ ನಾಡು + ನುಡಿ$_{2}$ ]

**ನಾಡುನೇಗಿಲು** (ನಾ). ಹಳ್ಳಿಗರು ಉಪಯೋಗಿಸುತ್ತಿದ್ದ ನೇಗಿಲು : ಈಗ ಸಾಮಾನ್ಯವಾಗಿ ಉಪಯೋಗದಲ್ಲಿರುವ ನಾಡುನೇಗಿಲು ಎಷ್ಟೋ ಶತಮಾನಗಳಿಂದ ಬಳಕೆಯಲ್ಲಿದೆ (ವ್ಯವಮು. ೮).

[ ನಾಡು + ನೇಗಿಲು (<ನೇಗಿಲ್) ]

**ನಾಡುಪ್ಪು** (ನಾ). ಸಾಮಾನ್ಯವಾದ ಉಪ್ಪು,-ಲವಣ : ಸಾವಿರಪಾಲಿಗೆ ಸಾಧಾರಣವಾಗಿ ಇರುವ ೩೪-೩೫ ಪಾಲು ಉಪ್ಪಿನಲ್ಲಿ ಕಲ್ಲುಪ್ಪು ಅಥವಾ ನಾಡುಪ್ಪು (ಸೋಡಿಯಂ ಕ್ಲೋರೈಡ್) ೨೭ ಭಾಗದಷ್ಟಿದೆ (ಭೂವಿವ. ೫೬).

[ ನಾಡು + ಉಪ್ಪು$_{1}$ ]

**ನಾಡುಬಾದಾಮಿ** (ನಾ). ಒಂದು ಬಗೆಯ ಮರ : (ವೃಶಿಗಿ. ೬೪-೦೫೦೨).

[ ನಾಡು + ಬಾದಾಮಿ ]

**ನಾಡುಮಿಂಡ** (ನಾ). ದುರಾಚಾರಿಯಾದ ವಿಟ ; ದುಷ್ಟವಿಟ ; ಅನೀತಿವಂತ : ತೊಂಡಿಲ ಮುಡಿದುಕೊಂಡು ತಮ್ಮ ತಮ್ಮ ಗಂಡರ ಹಿಂದುಗೊಂಡು ನಾಡುಮಿಂಡರ ನೋಡುತ್ತಲಿ ಇಂದು ನಮ್ಮ ಹುಲಿ ಹೋಯಿತ್ತು (ಬಸಹ. ೭೦-೧೩೭). [ ನಾಡು + ಮಿಂಡ$_{1}$ ]

**ನಾಡುವಟ್ಟ** (ನಾ). ಒಂದು ಬಗೆಯ ತೆರಿಗೆ : ನಾಡೊಳಗಳ ಹಲವ × × × ಇಂತಹ × × ನಾಡುವಟ್ಟವಾಗಿ ನಾಲು (ಎಕ. XIV, ಮಂಡ್ಯ. ೧೩೭-೨೦ ; 1278). [ ನಾಡು + ವಟ್ಟ$_{3}$ ]

**ನಾಡುವಡೆ** (ಕ್ರಿ). ನಾಡನ್ನು ಹೊಂದು ; ನಾಡಿನ ಒಡೆತನವನ್ನು ಪಡೆ : ಸಿರಿವಂತನ ಕಯ್ಯಂ ಪಿಡಿದ ಬಡವೆಯಂತೆ ನಾಡುವಡೆದ ಪಸಾಯಿತನಂತೆ (ಧರ್ಮಾಮೃ. ೫-೧೨೫). [ ನಾಡು + ಪಡೆ$_{1}$ ]

**ನಾಡುವಿಡಿ** (ಕ್ರಿ). (ಆಕ್ರಮಣದಿಂದ) ದೇಶವನ್ನು ಸ್ವಾಧೀನಕ್ಕೆ ತೆಗೆದುಕೊಳ್ಳು,-ವಶದಲ್ಲಿಟ್ಟುಕೊಳ್ಳು : ನಾಡುವಿಡಿಯದರಸುಗೆಯ್ವೆನೆಂಬಂತೆ ಭೃತ್ಯವಿಲ್ಲದೂರನಾಳುವೆನೆಂಬಂತೆ ಮದವಣಿಗನಿಲ್ಲದೆ ದಿಬ್ಬಣಂಬೋಪೆನೆಂಬಂತೆ (ಧರ್ಮಾಮೃ. ೪-೫೦). [ ನಾಡು + ಪಿಡಿ$_{1}$ ]

**ನಾಡುಶಾನಭೋಗ** (ನಾ). ಹಲವಾರು ಹಳ್ಳಿಗಳ ಶಾನುಭೋಗ,-ಕರಣಿಕ : (+). [ ನಾಡು + ಶಾನಭೋಗ (<ಸೇನಬೋವ) ]

**ನಾಡೂರ್** (ನಾ). ನಾಡಿನಲ್ಲಿರುವ ಊರು,-ಗ್ರಾಮ : ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕೆಯ್ಪಿಡಿವೊಲಾದುವಾ ನಾಡೂರ್ಗಳ್ (ಪಂಪಭಾ. ೮-೫೧) ; ಚೆಲ್ವಿಂಗಾವಾಸಮೆನಿಪ್ಪವೊಪ್ಪುವಾ ನಾಡೂರ್ಗಳ್ (ಮಲ್ಲಿಪು. ೨-೨೬) ; ಕಾಣಿಕೆಯುಂ ತಂನಾಳ್ವ ನಾಡೂರ್ಗ್ಗಳೊಳು . . . ಕೊಟ್ಟರ್ (ಎಕ. VII, ಶಿವಪೂ. ೪-೯೨ ; 1123). [ ನಾಡು + ಊರ್ ]

**ನಾಡೆ** (ಅ). ಹೆಚ್ಚಾಗಿ ; ಚೆನ್ನಾಗಿ ; ಬಹಳವಾಗಿ ; ವಿಶೇಷವಾಗಿ ; ಅತಿಶಯವಾಗಿ : "ನಾಡೆಯೆಡೆಯಾಪಗಂ ನೆಟ್ ನೀಡುಂ . . . ಇವಮ್ಮಯ ದೊಳಧಿಕಾರ್ಥಂ" (ಕಮದ. ೩೦೪) ; ಸದಭಿಸ್ತುತಮಪ್ಪೊಂಕಂದದ

ನಡುವಣ ನಾಡೆ ನಾಡೆ ಕನ್ನಡದ ತಿರುಳ್ (ಕವಿರಾ. ೧-೩೭) : ವಿಶ್ವಸೇನ ಮಹಾರಾಜನ ಮಹಾಸಾಮಂತರ್ಕಳುಂ ಪರಿವಾರಮುಮೆಲ್ಲಂ ಕುದುರೆ ವಡಿವಜ್ಜೆಯಂ ನೋಡಿ ನಾಡೆಗೆಟ್ಟುಪೋಗಿ (ವಡ್ಡಾರಾ. ೫೪-೨೫) : ಮಾಡುವ ಕಿಡಿಸುವ ಗಸಣಿಗೆ ನಾಡೆಯುಮದು ಪೊಱಗು (ಆದಿಪು. ೧-೪೫) ; ಚಿಂತಿಪ ಪಾರ್ವನ ಶೋಕದೊಂದು ಪೊಂಪುೞಿಯನೆ ನೋಡಿ ನಾಡೆ ಕರುಣಂ ತನಗಾಗಿರೆ (ಪಂಪಭಾ. ೩-೨೫) ; ಕರುಮಾಡಂ ನಾಡೆ ಚೆಲ್ವಂ ತಳೆದುದು ಪಲವುಂ ಬಳ್ಳಿಮಾಡಂಗಳಿಂದೆ (ಕಾದಂಪೂ. ೪೮೭) ; ನಾಡೆ ಸೊಗಯಿಪ್ಪ ಕಯ್ಯಿಂ . . . ಸುರದಂತಿಯಂತೆ ನಿಂದತ್ತಾಗಳ್ (ನೇಮಿಪು. ೧೧-೫೩) ; ಬೇಡು ವರವನು ಮಗನೆ ನುಡಿನುಡಿ ನಾಡೆ ಮೆಚ್ಚಿದೆನೆಂಬ ಹರಿಯನು ನೋಡಿ ನಕ್ಕನು (ನಿಭಾಗ. ೭-೮-೪೭) ; ಇಂತು ಭೂಜಾತೆ ಗರ್ಭಿಣಿಯಾದ ಳಾಗೆ, ನಾಡೆ ನಾಡೆ ಸಂತಸಗಡಲೊಳೋಲಾಡುತಿರ್ದುದು (ರಾಮಾಶ್ವ. ೨೧-೧೭).

ನಾಡೆಯುಂ = ನಾಡೆ : ಕೌರವರ್ಗಿದು ನಾಡೆಯುಂ ತಿಣುಕನಾಗಿಸದೇಂ ಗಳ ಸಯ್ಯು ಪೋಕುಮೇ (ಪಂಪಭಾ. ೨-೮೭) ; ಇರುಳೆಲ್ಲಂ ಜಾಗರಮಿರ್ದು ನೇಸಱ್ ಮೂಡೆ ನಾಡೆಯುಂ ಪೊೞ್ತಿರ್ದು ಎಂತುಂ ಬರವಂ ಕಾಣದೆ (ಪಂಚತಂ. ೨೩೦-೧೯) ; ಬಾನೆಡೆ ನಾಡೆಯುಂ ಪೊಡವಿಯಂತಿರೆ (ಕಬ್ಬಿಗಕಾ. ೨೫೧). 'ನಡ್ಕೆ' ಪರಾ. [P ತಮಿಳಿನಲ್ಲಿ 'ನಾಡಂ' ಎಂಬುದಕ್ಕೆ 'ಪರೀಕ್ಷಿಸು, ಆಲೋಚಿಸು, ಹುಡುಕು' ಎಂಬರ್ಥವಿದೆ]

**ನಾಡೆಯ** (ನಾ). (?) : ಆವಿನಹಳಿಯ ಬಲಿನಾಡವೆರಡುನಾಡನೂ ಕೂಡೆ ಕೊಂಡು ಅಂಕೆಯನಾಯಕನ ನಾಡೆಯನ ತೊಳಲೊಳಗೆ ಕೊಂಡುದುನಾ ದೇವಿ ತಂಮರಸ (ಎಕ. VIII, ಸಾಗರ. ೭೦-೨೨ ; 1276 ?). [ ? ]

**ನಾಡೆಱೆಯ, ನಾಂಡೆಱೆಯ** (ನಾ). ನಾಡಿನ ಒಡೆಯ : ನಾಡೆಱೆಯಂ ಭರತಂ ಬೆಸಸಿದ ತೆಱನಂ ಕೇಳ್ (ಪಂರಾಮಾ. ೭-೪೯) ; ಎಱಗಿಸಿ ತನ್ನ ಚಾರು ಚರಣಾಂಬುರುಹದ್ವಿತಯಕ್ಕೆ ವಿಕ್ಕ ನಾಡೆಱೆಯರನೆಲ್ಲರಂ (ವರ್ಧಪು. ೧-೧೦೪); ನಾಡೆಱೆಯನ ಕೆಲದೊಳ್ ತೀಡಿದತ್ತು ತಂಬೆಲರಾಗಳ್ (ಕಬ್ಬಿಗಕಾ. ೮೭) ; ಬೇಡುವರನು ಮನ್ನಿಪ ಬಿಡುಗಣ್ಣರ ನಾಡೆಱೆಯನ ಮಗನಂತೆ ಗಾಡಿವಡೆದ ರೂಪಿನ ಗರುವನ ನೀ ನೋಡು ಕಳಿಂಗನನಬಲೆ (ಜೀವಂಸಾಂ. ೧೧-೮೪) : ಭುವನೇಶನೆಂಬೊರ್ವಂ ನಾಡೆಱೆಯರ . . . ಅರಸುಗೆಯ್ಯುತಿರ್ದಂ (ಅದ್ಭುತ. ೨೨-೧೭). **ನಾಂಡೆಱೆಯ** : ಸ್ವಸ್ತಿಶ್ರೀ ನಾಣ್ಡೆಱೆಯರಾ ಎರ್ವೆಕೊಳ್ವಲ್ಲಿ ಸತ್ತೊನ್ ಕಾಸೂರನ್ (ಎಕ. X (8), ಚಿಂತಾಮ. ೩೪-೦ : 8ನೆಯ ಶತ).

[ ನಾಡು + ಎಱೆಯ ]

**ನಾಡೊಡೆಯ** (ನಾ). ೧. = ನಾಡೆಱೆಯ : ಜನಪತಿಗೆ ನೀಡಲೆರಡುವಂನೀಸಿ ಕೊಂಡಾ ನಾಡೊಡೆಯನುರಿಪುರಿಯೊಳಗೆ ಪತ್ರಂಗಳಂ ಹಾಯ್ಕಿ (ಬಸವಪು. ೫೦-೩೭) ; ಮಾಡಿತಿಲ್ಲವರಾಧವನು ಹರಿ ಕ್ರೋಡ ಖಡ್ಗಿ ಕುರಂಗಿಗಳಿರೆಲೆ ನಾಡೊಡೆಯ ರಾಮಂಗೆ ಹೇಳುವುದೆಂದಳಾ ಸೀತೆ (ತೊರರಾ. ೩-೧೧-೭) ; ಬಿಡುವರಲ್ಲ ಕುಮಾರಿಪುನು ನಾಡೊಡೆಯರೆಂಬಾ ದೂತನಾ ಬಿಱುನುಡಿಗೆ ಕವಡರೆ (ಸಾಳ್ವಭಾ. ೧೮-೭೩) ; ನಾಡೊಡೆಯನಂಗನೆಯ ಕಾಣದೆ ಬಳಲುತ (ಅನಂರಾ. ೩-೬-೮) ; ಧರಣಿಸುತೆಯಂ ಕಂಡು ನಾಡೊಡೆಯನೆಡೆಗೆ ಪೋದವಂ (ವೆಂಕಾರಾ. ೫-೫-೬) ; ನಿನ್ನ ನಾಡೊಡೆಯ ನೀನ್ ; ವೈರಿಯನು ತೊರೆಯ್ಯೆ (ಕೊಂಗಿಲಿ. ೪೮-೩). ೨. ದೇಶವಿಭಾಗದ ಅಧಿಕಾರಿ ; ಪ್ರಾಂತಾಧಿಕಾರಿ : ಕನ್ನರದೇವನ ನಾಡೊಡೆಯಪ್ಪರಿಣತ[ರಾ]ಕ್ಕರ್ನನ್ಧಕ[ಕ್ಕೆ] (ಸೌಇಇ. XI-1, ೪೫೮-೦೪ ; 960). [ ನಾಡು + ಒಡೆಯ$_1$ ]

**ನಾಡೊವಜ, ನಾಡೋಜ** (ನಾ). ದೇಶದ ಗುರು ; ನಾಡಿನ ಜನರ ಮನ್ನಣೆಗೆ ಪಾತ್ರನಾದವನು ; ಲೋಕಮಾನ್ಯ : ಪುರಾಣಕವಿಯುಂ ಧರೆಗಾಗಿರೆಯುಣ್ಮೆ ಪೊಣ್ಮುವೀ ದೇಸಿಗಳುಂತೆ ನಾಡೊವಜನಾದನೊ ಪೇೞ್ ಕವಿತಾಗುಣಾರ್ಣವಂ (ಪಂಪಭಾ. ೧೪-೬೨). **ನಾಡೋಜ** : ರಾಜ್ಯಚಿಹ್ನಂಗಳ್ವೆರಸಿಂತು ನಡೆತಂದು ರಾಜ್ಯಲಕ್ಷ್ಮಿ ಬಳೆದ ಸಂತೋಷದಂತಮನೆಯ್ದೆ ಪತ್ತಿದಳ್ ಸಹಜಮನೋಜನಂ ನಾಡೋಜನಂ (ಪಂಪಭಾ. ೧೩-೧೦೮) ; 'ಸಕಳಾವನೀತಳಜನ'ವನ್ನು ಮೆಚ್ಚಿಸುವ 'ನಾಡೋಜ' ನವನು (ನಾಡೋಜ. ೩೩೭) ; ನಾಡೋಜನ ಮುಂದೆ ನಾನು ತಪ್ಪಾಡೇನೆ ? (ದಾನಚಿಂ. ೬೩).

[ ನಾಡು + ಒವಜ (<ಒವಝು) ]

**ನಾಡೊಳ್ಪು** (ನಾ). ದೇಶದ ಹಿತ-ಮೇಲ್ಮೆ ; ಪ್ರಜೆಗಳ ಕ್ಷೇಮ : (ಪೂರ್ವಕಾಲದಲ್ಲಿ) ಪ್ರಜಾಕ್ಷೇಮ; ಲೋಕಹಿತ; ನಾಡೊಳ್ಪು (Common-Wealth. ಇಂಕನಿ). [ ನಾಡು + ಒಳ್ಪು ]

**ನಾಡೋಜ** 'ನಾಡೊವಜ' ನೋ.

**ನಾಡೋರ** (ನಾ). (ಉಕ)ಉಪ್ಪುಮಾಡುವ ಕಸಬನ್ನು ಅವಲಂಬಿಸಿರುವ ಒಂದು ಜನಾಂಗ : ಉಪ್ಪುಮಾಡುವ ನಾಡೋರರು ಮುಂತಾದ ಜಾತಿಯವರು . . . ಎಕರೆಗೆ ಸುಮಾರು ೩ ರೂಪಾಯಿಯಂತೆ ತೆರಿಗೆಯನ್ನು ಕೊಡುತ್ತಾರೆ (ಕಭಾಗೆ. ೫೮೨). [ ? ]

**ನಾಡ್ಕರ್ಣೆ** 'ನಾಡು' ಪರಾ.

**ನಾಣ್$_1$, ನಾಣು** (ನಾ). ೧. (ಹೆಂಗಸಿಗೆ ಗಂಡಸಿನ ಎದುರಿನಲ್ಲಿ ಒದಗುವ) ನಾಚಿಕೆ; ಸಿಗ್ಗು; ಲಜ್ಜೆ : "ಲಜ್ಜೆ ನಾಣ್" (ಕರ್ಣನಿ. ೬೨) ; ಲಲಿತಾಂಗಿಯ ಶಂಕೆಯುಂ ಭಯಂ ಬೆರಸಿದ ನಾಣುಮಂ ಕ್ರಮದೆ ಪಿಂಗಿಸು ಬೇಸಱದಿರ್ ಗುಣಾರ್ಣವಾ (ಪಂಪಭಾ. ೩-೭೭); ಚುಂಬಿಸುವಾಗಳ್ ಶಬ್ದವಿಲ್ಲ ವ್ರಣ ನಖ ಮುಖದಂತಕ್ಷತಂ ನಾಣ್ಗೆ ಪಕ್ಕಾಗಿಸದು . . . ಸಂಕಲ್ಪಸಮಾಯೋಗಂ ವಿಯೋಗಾಕುಲ ಕುಲಲಲನಾಜೀವನಾಧಾರಮಲ್ತೇ (ಕಾದಂಬ. ೩೧೯) ; ಜಡ ಜಾಂಬಕೆ ಮಂಡಿಸಿದಳ್ ನಡೆತಂದೆಡದಲ್ಲಿ ನಮ್ರಮುಖಿ ನಾಣಿಂದಂ (ಉದ್ಭಟ. ೮-೧೦೦): ನಾಣಂ ಪಿಂಗಿಸಿ ಮುಗ್ಧೆಗೆ ಜಾಣಂ ಕೈಗೊಳಿಸುವಂತೆ (ಶಮದ. ೬೯ ಪ್ರಯೋ): ನುಣ್ಮಿಡಿ ಬಿಣ್ಪುದುದು ಮೆಲ್ಲೆರ್ದೆಯೊಳ್ ನಾಣ್ಮೊಳೆತುದು (ಜಯಕಾ. ೩-೨೫). ೨. ಅವಮಾನ ; ಸಂಕೋಚ. 'ನಾಣ್ಗೆಯ್' ಪರಾ. ೩. ಸ್ತ್ರೀಪುರುಷರ ಗುಹ್ಯೇಂದ್ರಿಯ : "ಗುಹ್ಯಂ=ಸ್ತ್ರೀ ಪುರುಷರ ನಾಣ್" (ಕಾಶಕ. ೬೬) ; ಎಡೆವಿಡದ ದೆಯ್ವಧರ್ಮದೊಳಿಡದಫಮುಂ ತಮ್ಮ ಮತ ದೊಳಂ ಕಂಡುಮದಂ ಕಡೆಗಣಿಸುವರಂತದೆ ದಲ್ಕಡೆಗಣಿಸರೆ ತಮ್ಮ ತಾಯ ನಾಣಂ ಕಂಡರ್ (ಸಮಪ. ೮-೨೨೭) ; ನಾಣ ಮಱೆಯ ನೂಲು ಸಡಿಲೆ ನಾಚುವರು ನೋಡಾ ಗಂಡು ಹೆಣ್ಣೆಂಬ ಜಾತಿ (ಮುಹಾದೇ. ಬ. ೭೪-೧೮೪) ; ಜುಗುಪ್ಸೆಯಾಂತ ನಾಣಡಿಗಡಿಗಲ್ಲರುಂ ಪೊರಳ್ವ ಮುಮ್ಮಿಗೆವಾಸುಗುಟ್ಟುಪ್ಪೆಯಾದ ಮೆಯ್ ಬಿಡದಿರದಂತು ಸೂಳೆಯರ ಸಂಗಮನೊಲ್ವರೊ ಖೂಳ ಮಾನವರ್ (ಕಾವ್ಯಸಾ. ೧೦೦೪). **ನಾಣು** : ೧. "ನಾಣು, ನಾಚಿಕೆ, ಸಿಗ್ಗು, ಏವ(ಹೇವ), ಎಗ್ಗು" (ಕಂನುಹು. ೪೭) ; ನಾಣೆಂಬುದು ನಾರಿಯರಿಗಾಭರಣವು (ಕುಂರಾಸಾಂ. ೩೭-೧೭); ಜಾಣೆ ಮಗುವನೆತ್ತಿಕೊಂಡು ನಾಣ ಮರೆತು ಓಡಿಬಂದು (ಹರಿಪು. ೧೪-೧೨) ; ಹೊಸನಾಣು ಹೊಸಮುನಿಸು ಹೊಸದಾಗೆ ಸತಿಯು . . . ಹೊಸದೊಂದು ರತಿಯು (ಗಿರಿ. ೩೮-೭). 'ನಾಣುಗೆಡು' ಪರಾ. ೩. ಗಲ್ಲ ಪಲ್ಲು ಬಂಧುರದಧರ ನಾಣು ನಖ ವಸುರುತೆಳು ಪಾರು ಕಂಗಳು . . . ಮೆರೆದವು (ನವಮೋ. ೨೨-೩೩).

**ನಾಣ ದಾಣ** = ಯೋನಿ; ಭಗ : "ವಚ್ಯೇ – ನಾಣ ದಾಣು" (ಕಾಶಕ. ೨೫೮). **ನಾಣ ನುಡಿ** = ಅವಮಾನಕರವಾದ ಮಾತು: ಈಗಳೋ ಇಂತಪ್ಪ ನಿಲ್ಲಮಂದೇ ಆದೆನ್ ! ಪುಡಿಯೊಳಗೆ ಪುಡಿಯ ಪುಡಿಯಾದೆನ್ – ನಾಣ ನುಡಿಯಾದೆನ್ (ಅಶ್ವಶಾ. ೧೭-೩೬೮). **ನಾಣನೊಗು** = ನಾಚಿಕೆಯನ್ನು ಬಿಡು : ನಾಣನೊಕ್ಕು ಗತಭೀತಿಯಿನಪ್ಪುವ . . . ಅಸಿಯಳದೇಂ ಮನಂ ಬಿಡಿದಳೋ ಚದುರಿಂ ಸುದತೀಮನೋಜನ (ರಸರ. ೧-೩೫). **ನಾಣ ಪುತ್ತು**= ಲಜ್ಜಾಸ್ಪದವಾಗಿರುವಿಕೆ : ಪೇಸುಗೆಟ್ಟೀ ನಾಣ ಪುತ್ತುಪ್ಪಟೆಜಗಳದೊಳೇ ನಮ್ಮ ತಕ್ಕೊರ್ವೆಯುಂಟೇ (ರಾಂತಿಪು. ೬-೮೭) : ಅಱಿಕಮುಳ್ಳರ್

ಕಲ್ಲೊಳ್ ಕಡೆದರ್ಪವರೇಘುಟಿತಮೆ ಮೃಡಾನಿಯಂ ಕರವೆ ನಾಣ ಪುತ್ರಿನ ರೂಪಂ (ಸಮುಪ. ೧೦-೭೫); ದುರ್ಗಂಧಕ್ಕೆರಲಾಚಿದೆ ಲೆಂಕರ್ ದಂಡಂ ಗೊಂಡರಂತೆ ತಂಕಿಸುತ್ತುಂ ಪೆಜಿಂಗೆ . . . ಬಾಣಸಿಗರಿದೇನ್ನಾಣ ಪುತ್ರೋದು ಪೋಗೆ (ಧರ್ಮಾಮೃ. ೪-೧೩೪); ಕೇಣಾಚಾಜಿನವರೇಕಗ ಕಾವ್ಯೆ ನಾಣ ಪುತ್ತ ನಗೆಯಂ ನೀಂ ಬಗೆಯ್ಯ (ಕಾವ್ಯಾವ. ೪೪೫). ನಾಚಿಕ ಪಲಯ = ನಾಚಿಕೆಯ ಭಾಗ; ಯೋನಿ : ತಮ ಕಲಕ್ಕೆ ಓಸರಿಸಿದ್ದ ಕಂಬಳಿಯನ್ನು ಅವಳಿಗೆ ಸರಿಯಾಗಿ ಹೊದಿಸಿ, ಇಣುಕುವಂತಿದ್ದ ನಾಣನ ವಲಯವನ್ನು ಮುಚ್ಚಿದನು (ಮಕರು. ೬೮೨). ನಾಣೊಕ್ಕ = ನಾಚಿಕೆಗೇಡಿ ; ಲಜ್ಜಾಹೀನ ; ನಾಚಿಕೆ ಬಿಟ್ಟವನಂ: ವಿಕಳರುಂ ನಾಣೊಕ್ಕರುಂ ಮಿಕ್ಕರುಂ ಪಡೆದಾ ದೋಷನಿವಾರಣಕ್ಕೆ (ಎಕ. VI, ಕಡೀಳ. ೪೫-೬೭ ; 1106).

[ ದೇ.॥ ತಮಿ. ನಾಣ್, ನಾಣ; ಮಲ. ನಾಣ; ತುಳು. ನಾಣ್, ನಾಣ, ವಾಣು = ಬೆತ್ತಲೆ; ಕೊಡ. ನಾಣ; ತೆಲು. ನಾನ ]

ನಾಚ್₃ 'ನಾಟ್' ನೋ.

ನಾಣ₁ (ನಾ). ಸ್ನಾನ. 'ನಾಣಗೆ' ಪರಾ.

[ <ಪ್ರಾ. ಣ್ಹಾಣ. / ಸಂ. ಸ್ನಾನ ]

ನಾಣ₂ (ನಾ). ತಿಳಿವಳಿಕೆ ; ಜ್ಞಾನ ; ಬುದ್ಧಿ : ಏನು ಬರುವದೂ ದೇವ, ನಾಣ ನಮಗೇಟಲ್ಲ ಹಾನಿ ತಪ್ಪುವದು ಹೇಳೆನಗೆ ನಾಡೊಳಗೆ ಏನು ಶಾಂತಿ ಯನು ಮಾಡಿಸಲಿ (ಕನ್ನಜಾ. ೩); ಬಾಣ ಬಿಡು ಅಣ್ಣನ ನಾಣ ನಾಸ್ತೀಲಾರೆ ರಾಗಿಯ ಕಾಳಟು ಕಸಲ್ಲ ನಮ್ಮವರು ಈಜ್ಯಾಡಿ ಬಾಣ ಬಿಡತಾರ (ಜೋಳಗೀ. ೭೭). [ <ಪ್ರಾ. ಣಾಣ. / ಸಂ. ಜ್ಞಾನ ]

ನಾಣಕ (ನಾ). ೧. ಮುದ್ರೆ; ಅಚ್ಚು : "ನಾಣಕ = ಪಲವು ಬಣ್ಣದಚ್ಚುಗಳುಂ . . . ವ್ಯಾವಹಾರಿಕ ನಾಣಕವಂಗಳೋಹಪಾನ್ . . . ಕೋಶಗುಣಾಃ" (ನೀತಿವಾ. ೨೩-೨). ೨. ನಾಣ್ಯ. 'ನಾಣಕಪ್ರಚಾರ' ಪರಾ. [ ಸಂ. ]

ನಾಣಕಪ್ರಚಾರ (ನಾ). ನಾಣ್ಯವನ್ನು ಚಲಾವಣೆಗೆ ಕೊಡುವುದು : ಇಂದಿಣ ಶ್ರೀನೃಸಿಂಹಜಯಂತಿಯ ಶ್ರೀಮನ್ಮಹಾರಾಜರ ವರ್ಷವರ್ಧಂತ್ಯುತ್ಸವದ ಶ್ರೀನಾಣಕಪ್ರಚಾರದ ಸಮಾರಂಭದ ಈ ಮುಮ್ಮಡಿಹಬ್ಬದ ದಿವಸ (ಸಂಸಕ. ೦೨೨). [ ನಾಣಕ + ಪ್ರಚಾರ ]

ನಾಣಯ, ನಾಣೆಯ, ನಾಣ್ಯ (ನಾ). ೧. ಚಲಾವಣೆಗಾಗಿ ಆಡಳಿತದ ಮುದ್ರೆಯೊತ್ತಿ ತಯಾರಿಸಿದ ಚಿನ್ನ, ಬೆಳ್ಳಿ ಮೊದಲಾದ ಲೋಹದ ಬಿಲ್ಲೆ ; ಕಾಸು, ರೂಪಾಯಿ ಮೊದಲಾದುವು ; ಹಣ : ಅಖಿಂವತ್ತು ಬಂದಿಗೆಯೊಳು ನಾಣಯ[ಪಾಠಾಂ. ನಾಣ್ಯ]ವನು ಕೆಯುಹಿನ ಭಂಗಾರಗಳವು . . . ಮಗಗೆ ಕಳುಹಿದನು (ಕುಂಠಾನಾಂ. ೪೨-೬೪) ; ಬೊಕ್ಕಸ ಭಂಡಾರದಿಕ್ಕೆಲದಲ್ಲಿ ಚೊಕ್ಕನಾಣಯ ವಸ್ತುಗಳನು ಚೆಕ್ಕನೆ ಓದಿದಿರ್ದರರಸು ಮೆಚ್ಚಿದೊಡಾಗ ದೊಕ್ಕನೆ ಕೊಡಲೆಂದಾಗ (ಅಜಿಂದ. ೨-೬೪). ೨. ಅರ್ಥ ವತ್ತಾದ ನುಡಿ : ವೈದಿಕಬೌದ್ಧರಿಂದಾಗಿ ಸಂಸ್ಕೃತ ಪಾಲಿಗಳ ನಾಣಯಗಳು ಕನ್ನಡದಲ್ಲಿ ಬಳಕೆಗೆ ಬರತೊಡಗಿರಬೇಕು (ಕನ್ನಡ. ೦೩೪). ನಾಣೆಯ : ೧. "ಉಳಿಯಭಿಮಾನ ನಾಣೆಯಗಳೆಂಬವು ಟಂಕಮನಿಕ್ಕು" (ಶಾನಾಪ. ೧೫೦) ; ಪರಿಪುರಜನಗಳುತ್ತಮನಾಣ[ಪಾಠಾಂ. ಣೆ]ಯುವ ನೀಡಿದರು ದರುಶನ ಕವನಿಜೇಶ್ವರನ (ಕೊರಟಾ. ೬-೫೫-೧೯). ೩. ಶ್ರೇಷ್ಠವಾದುದು ; ಬೆಲೆ ಯುಳ್ಳುದು ; ಸೊಗಸಾದುದು : ನಾಣೆಯದ ಪಟ್ಟೆ ಹಚಡ ೧೦ ಪಟ್ಟೆ ಸೀರೆ ೧೧ (ಸೌಇಇ. IX-II, ೫೯೭-೩ ; 1532). ನಾಣೆಯ : ೧. ಬಳಿಯ ನಾಣೆಯಮಾಂ ಬಳಿಯಾಪ್ತವರ್ಗಮಂ . . . ಪದಮೋದವಳೋಕಿಸುತ್ತೆ . . . ನಡತಂದನೀಶ್ವರಂ (ಗಿರಿಕ. ೦೦-೯೯) ; ತೆಗೆದನು ಬಳಿಕಿನಕುಲದ ಪೀಳಿಗೆಯ ನೃಪರಾರ್ಜಿಸಿದ ನಾನಾಯುಗಯುಗಂಗಳ ವಾಣೆಯಂಗಳನಖಿಳವಸ್ತುಗಳ (ಕೊರಟಾ. ೦-೬-೪) ; ತನ್ನಯದು ನಾಣೆಯವೆಂದು ಜಗವಟಿಯೆ (ನಿಭಾಗ. ೧೦-೫೫-೫೩) ; ಚಪ್ಪನ್ನದೇಶದ ನಾಣೆಯಂಗಳ ನೋಟ ತಪ್ಪದ ಚಪಲ ಸೆಟ್ಟಿಗಳು ಒಪ್ಪವಡೆದು ಕುಳಿತಿರ್ದರು (ಮೋಹತ. ೩-೨೭) ; ಬಿಡಲುಪಟ್ಟ ಬೇಂಟೆಯನುಳ್ಳ ಪುರುಷನು ಪಂಜರಂಗದ ವಸ್ತ್ರ ನಾಣೆಯ ಶಿಲೆ ಲೆಪ್ಪ ಕಾಷ್ಟ ಮೊದಲಾದವರಲ್ಲಿ ಸ್ಥಾಪಿಸಲ್ಪಟ್ಟ ಜೀವಂಗಳ ಭೇದ ಮೊದಲಾದವನು ಮಾಡಲಾಗದು (ಶಾಗಾಧ. ೩೪). ೩. ಬಂಧುಗಳಾನಂದದಿಯೊಂದೀತ ಮಾಯಣಸೆಟ್ಟಿ ಎಂದು ಕರೆಯಲಾ ಪೆಸರೀ ಧರೆಯೊಳು ಸಂದುದು ನಾಣೆಯ ವಾಗಿ (ತ್ರಿಪುಸಾಂ. ೨೪-೩೭೫). ನಾಣ್ಯ : ೧. ಬಾಚಿರವ ಕಳೆದು ಏಡೆನಾಣ್ಯವನುಳಿದು ಹಲವು ನಾಣ್ಯವ ಕಳೆದು ಸಲುವ ನಾಣ್ಯವ ಹಿಡಿದು ನೋಡುವೆ ನಯ್ಯ (ಅದಕ. ೨೭-೭೭) ; ಹೀಗೆ ವಿಶಾಲ ವ್ಯಾಪಾರ ನಡೆಯುತ್ತಿದ್ದರೂ ನಾಣ್ಯಗಳೇ ಕಂಡಮಿಂದಿಲ್ಲ (ಧಾರಣ. ೧೫) ; ಸಹನಿಯು ೧೯೪೫ರಲ್ಲಿ ಪ್ರಾಚೀನ ಭಾರತದಲ್ಲಿ ನಾಣ್ಯಗಳನ್ನು ಎಸಗುವ ಒಂದು ಪದ್ಧತಿಯನ್ನು ಬೆಳಕಿಗೆ ತಂದು ಅದಕ್ಕೆ ಒಂದು ಪದಕವನ್ನು ಪಡೆದಿದ್ದನು (ಸಸ್ಯಕ. ೦೨೮). ೪. ಘನತೆ ; ಗೌರವ : ಇಂಥ ಅಂಗಡಿಯ ನಾಣ್ಯವನ್ನು ಕೆಡಿಸಿ ನಾನು ಬದುಕಿರಲೆ ? (ಅದೂಟ. ೮). ೫. ಸತ್ಯ; ಪ್ರಾಮಾಣಿಕತೆ : (೬). ೬. ನಯ; ಮೃದುತ್ವ: ಮಾನಿತಮಾದ ವಸ್ತ್ರದ ನಾಣ್ಯವಣಿಬಡನೇನೆಂದು ಬಣ್ಣಿಸಬಹುದು (ಅನಂಕ. ೧-೧೫೪) ; ಪೂರ್ಣಗುಣಸಂಪನ್ನೆ ಬಾರೆಂದು ನಾಣ್ಯದಿಂ ಗೊಲ್ಲ ಕರೆದನು (ಗೋಣಜಾಡು. ೮-೩೭). ೭. ನವಿರಾದ ಬಟ್ಟೆ ; ಬೆಲೆ ಬಾಳುವ ವಸ್ತ್ರ ; ತೊತ್ತು ಲಕ್ಷಣವಿರಲು ನಾಣ್ಯವನುಡಿಸಿ ನವರತ್ನಾಭರಣಂಗಳ ತೊಡಿಸಿ (ದನ್ನವ. ೯. ೧೭೮-೩೭೭).

[ ದೇ.॥ ತಮಿ. ನಾಣಯ, ನಾಣೆಯ; ಮಲ. ನಾಣಯ; ತುಳು. ನಾಣ್ಯೊ ; ತೆಲು. ನಾಣೆ, ನಾಣ್ಯ, / ಪ್ರಾ. ಣಾಣಕ. / ಸಂ. ನಾಣಕ./ ಮರಾ. ನಾಣೇ; ಗುಜ. ನಾಣುಂ; ಸಿಂಧಿ. ನಾಣು ]

ನಾಣಲ್ 'ನಾನಲ್' ನೋ.

ನಾಣಲು 'ನಾನಲ್' ನೋ.

ನಾಣಳ್ಕು (ನಾ). ನಾಚಿಕೆಯಿಂದ ಉಂಟಾದ ಭಯ ; ಲಜ್ಜೆಯಿಂದುಂಟಾದ ಹೆದರಿಕೆ : ಮಜ್ಜನಬುಗದಾರೋಗಿಸಲೊಲ್ಲದಿರ್ಪರವಿವೇಂ ನಾಣಳ್ಕಿದೇಂ (ಸಂಪಭಾ. ೪-೭೩). [ ನಾಚ್₁ + ಅಳ್ಕು₁ ]

ನಾಣಟು (ಕ್ರಿ). ನಾಚಿಕೆಯಿಲ್ಲದಂತಾಗು; ಲಜ್ಜೆಯನ್ನು ಕಳೆದುಕೊಳ್ಳು : ಬಟಲದ ಪುಷ್ಪಬಾಣಹತಿಯಿಂ ಪುಳಕಂಗಳನಾನದುಣ್ಣ ನಾಣಟಿಯದೆ ಜಾಣನಿಕ್ಕದ ಬೆಮರ್ತಜಿಚಾಜಿದೆ ತೀರ್ದು ತಾನೆ ಮಯ್ಯುಟಲೆ ಕಡುಂಗಿ ಮುಕ್ಕೆಯೊಡಗೂಡಿದ ಪೆಂಪಿನ ಸೌಖ್ಯದಿಂಪು ಪೊಂಪುಟಿಯೆನಿಸಿರ್ದ ಸಿದ್ಧ ರಿವಂಗೀಗೆ ವಿಶುದ್ಧರಭೀಷ್ಟಸಿದ್ಧಿಯಂ (ಶೀಲಾವ. ೧-೪) ; ಕಾಣದ ಜನಂ ಬೈದು ನಾಣಟಿದು ಬಿಸುಸುಯ್ದು (ಅಗಿಪು. ೭೭-೦೦೮ ಠಳ) ; ಬಂಧ ಕೊರ್ವಳ್ ನಡೆ ನೋಡಿದಳಾಗಳಂತೆ ನಾಣಟಿವಿನೆಗಂ (ಕಾವ್ಯಾಅ. ೩೩೩) ; ನಾಣಟಿಯಲ್ ಮನಂ ಬೆಜಗಿನಿಂ ಮರವಟ್ಟಿರೆ (ದಶಕು. ೬-೧೯೯).

[ ನಾಚ್₁ + ಅಟು₁ ]

ನಾಣಿ (ನಾ). ತಿಳಿವಳಿಕೆಯುಳ್ಳವನು ; ಜ್ಞಾನಿ : ದುಡುಕು ಮಾಡುವರ ಬಸವೇಶ ನಾಣಿಗಳು ಹುಡುಕುವರೆ ಕದನ ಜಗದೊಳಗೆ (ಅನ್ನಜಾ. ೨೫೯).

[ <ಪ್ರಾ. ಣಾಣಿ. / ಸಂ. ಜ್ಞಾನಿನ್ ]

ನಾಣಗೆ (ನಾ). (ಕರಾ) ಸ್ನಾನ ಮಾಡುವ ಮನೆ ; ಬಚ್ಚಲುಮನೆ ; ಸ್ನಾನಗೃಹ : ಶಾಂತಾ ಹಾಗೂ ಅವಳ ನೆರೆಮನೆಯ ಆನಂದಿ ನಾಣಗೆಯ ಹಂಡೆಗೆ ನೀರು ತುಂಬಲೆಂದು ಹಿತ್ತಿಲದ ಬಾವಿಗೆ ಬಂದಿದ್ದರು (ಮುರುದಾ. ೧೬೬) : ನಾಣಗೆಯಲ್ಲಿ ನೀರು ಕಾದಿದೆ. ಎಂದು ಊಟಮಾಡಿ ಹೋಗಿರಿ (ದಾ೨).

ನಾಣಗೆ ಮನೆ = ಬಚ್ಚಲುಮನೆ : ಯಾರೇ ಅವನು-ನಾಣಗೆಮನೆಯಲ್ಲಿ ಹಾಗೆ ಕಾರಿಕೊಳ್ಳುವವನು ? (ಮುರುದಾ. ೦೬೩). [ ನಾಣ₁ + – ಇಗೆ₀ ]

ನಾಣೆಯ 'ನಾಣಯ' ನೋ.

**ನಾಣಿಲ್** (ನಾ). ಒಂದು ಬಗೆಯ ಮರ ; ಆಲಿವ್ ಜಾತಿಗೆ ಸೇರಿದ ವೃಕ್ಷ : ಪಂಚಾದುಂಬರ ಜಂಬ್ವಾಮ್ರ ಗುಡಪುಷ್ಪಸಮನ್ವಿತಕಷಾಯದ್ರವ್ಯ ಕುಂಭಾಸ್ಯ ಜಂಬೂನೇರಿಲ ಆಮ್ರಮಾವು ಗುಡಪುಷ್ಪ ನಾಣಿಲ ಹೂವು (ಪ್ರಕಟು. ೧೦-೧) : ನಾಣಿರಾಯನೆಂಬವನು 'ನಾಣಿಲ್' ಮರದಡಿಯಲ್ಲಿ ವಾಸಿಸುತ್ತಿದ್ದಿರಬಹುದು (ತುಳುನಾ. ೧೫೫). [←ತುಳು. ನಾಣಿಲ್]

**ನಾಣಿಲಿ** (ನಾ). ೧. ನಾಚಿಕೆಯಿಲ್ಲದ ವ್ಯಕ್ತಿ ; ಲಜ್ಜೆಗೇಡಿ : "ನಾಣಿಲಿಯೆಂದು ಲಜ್ಜಾಹೀನಂ" (ಶಬಸಾ. ೧೮-೩೬೨) ; ನಾಣಿಲಿ ಪಣ್ಯಂ ಪಂದೆ . . . ನಿತ್ಯರೋಗಾಕುಳನೆಂಬೀ ನಾಮ ನಾಮಾವಳಿಗೆ ನಿಳಯನಕ್ಕುಂ ವ್ರತಪ್ರಾಶಹೀನಂ (ವರ್ಧಮಾ. ೧೧-೪೦) ; ಏಗೆ ನಾಣಿಲಿಯೆನಿಸಂವ ವಧು ನಗೆಗೆಡೆಯಕ್ಕುಂ ಸಮಸ್ತಜಗತೀತಳದೊಳ್ (ಕಾವ್ಯಾವ. ೨೫೭) ; ನಾಣಿಲಿ ಮಿಟ್ಟುರಂ ಸಿತಗನಾಟವಿಟಂ ತುದಿಗೋಡ ಪಾಟು ನಿನ್ನಾಣೆ ಗಡಾಗಡುಂ ವಿತಗೆ ಕೂರದರೊಳ್ ಬೆರಸಿರ್ಪನಾತಂ (ಲೀಲಾವ. ೨-೧೨೨) ; ತಲೆಗೆ ಪದರಕ್ಷೆಯುಂ ನಾಣಿಲಿ ಕಟ್ಟಿಸಿಕೊಂಡ ತೆಱದೆ ಲೋಕವಿರುದ್ಧಂ ದಲದೆನಿಸಿ ಪಡೆದ ಕೀರ್ತಿಗೆ ನೆಲೆಯಾದಂ ಪಾಪಕರ್ಮಕರ್ಮಂ ಕಮಠಂ (ಪಾರ್ಶ್ವಪು. ೬-೬೮) ; ನಾಣಿಲಿಯೊಳ್ ನಿಷ್ಠುರನೊಳ್ . . . ಸದ್ಗುಣಹೀನನೊಳ್ ನೆರೆವ ಕೂಟಂ ನಂಜಿನೂಟಂ (ಕಾಮಶಾ. ೧೧-೦೫೦) ; ನಾಣಿಲಿಗಳ ತಲೆವಣ ಮಾಣ್ಬಾಳಲವೋ (ಚಿಕವಿ. ೬-೨೭೭). (ಗು). ೨. ನಾಚಿಕೆಯಿಲ್ಲದ ; ಲಜ್ಜೆಯಿಲ್ಲದ : ಈ ನಾಣಿಲಿ ಪಾರ್ವನೆಸಟೆದು ಕಳೆಯಿಂ (ಶಂಪಭಾ. ೨-೯೮ ವ); ಮುಳಿದು ಪಿಡಿದೆಟೆದು ನಿನ್ನಾಣ್ಮನಪ್ಪ ನಾಣಿಲಿ ಸವಣನನೊಡಗೊಂಡು ಬಾ ಪೋಗು (ಸುಕುಮಾ. ೫-೭ ವ). 'ನಾಣಿಲಿವಾನಸ', 'ವಾಣಿಲಿವೆಣ್' ಪರಾ. [ ನಾಣ್$_1$ + – ಇಲಿ$_3$ ]

**ವಾಣಿಲಿಗ** (ನಾ). =ನಾಣಿಲಿ ೧ : ಮಹೀಪತಿಗಂ ದ್ವಿಜವಂಶಜಂಗಮೇತಱ ಕೆಳೆಯಿಂತು ನಾಣಿಲಿಗರಪ್ಪರೆ ಮಾನಸರ್ (ಹಂಪಭಾ. ೨-೪೮).
[ ನಾಣಿಲಿ + – ಗ$_2$ ]

**ನಾಣಿಲಿಗತನ** (ನಾ). ನಾಚಿಗೇಡಿತನ ; ಲಜ್ಜಾಹೀನತೆ : ಒಳ್ಳನದಿ ಇೀ ಪಿಡಿದ ಪಂಜು ನಿನ್ನ ನಾಣಿಲಿಗತನವನೆ ಸಾರುತಿಹುದೋ ಮರುಳೆ ! (ಕಗಜ್ವ. ೭೫). [ ನಾಣಿಲಿಗ + – ತನ ]

**ನಾಣಿಲಿತನ** (ನಾ). =ನಾಣಿಲಿಗತನ: ಕಾಂಗಿಗಟಲ್ವ ನಾಣಿಲಿತನಂ ಬೆಂಡೇಟ್ವ ಕಣ್ (ಚಂದ್ರಪ್ರ. ೮-೬೪) ; ಪಡೆವೊಡಿಂತಪ್ಪನಂ ಕೂಸನುಱ ಪಡೆಯದೊಡೆ ಪೊಡವಿಯೊಳ್ನಾಣಿಲಿತನಕ್ಕೆ ಪಕ್ಕಾಗರೇ (ಅಡಾಜ. ೨-೫೭) ; ಸುಡು ನಾಣಿಲಿ ತನವಿದೆನುತೆ ವಹಾನಿಧಾನಂ ಮನದನ್ನೆಯೊಳು ಮಾಣದೆ ಮಾಱುತ್ತರವಿತ್ತಂ (ಅದ್ವರೀ. ೩-೭೨) ; ಆಗಳಿಂತು ವಿಚಾರಿಸಿ ನಂಬುಗೆವೆತ್ತು ನಾಣಿಲಿತನಂ ಮಿಕ್ಕು (ವೃಷವಿ. ೩೫-೭೦ ವ). [ ನಾಣಿಲಿ + – ತನ ]

**ವಾಣಿಲಿವಾನಸ** (ನಾ). ನಾಚಿಕೆಯಿಲ್ಲದ ಮನುಷ್ಯ : ನಾಣಿಲಿವಾ[ಪಾಠಾಂ. ಮಾ]ನಸಂ, ಪಲ್ಲಿಲಿವಾಯಂ (ಛಾವಾಧೂ. ೬-೧೫೦ ಉದಾ).
[ ನಾಣಿಲಿ + ಮಾನಸ$_1$ ]

**ನಾಣಿಲಿವೆಣ್** (ನಾ). ನಾಚಿಕೆಯಿಲ್ಲದ ಹೆಂಗಸು: ಕೂರಿಲಿ, ಕುಡುಗೋಲ್, ಬೆಳಗಿಲಿಗಣ್, ನಾಣಿಲಿವೆಣ್ (ಶಮದ. ೧೮೭ ಪ್ರಯೋ).
[ ನಾಣಿಲಿ + ಪೆಣ್ ]

**ನಾಣಿಸು** (ಕ್ರಿ). ನಾಚುವಂತೆ ಮಾಡು ; ನಾಚಿಸು : ಆತನ ದಾದಿ ಏನಯ ಮತಿಯಿಂಬೊಳ್ . . . ನೋಡಿದ ಜನಕ್ಕೆ ಭಯಮಂ ಪಡೆವೊಳ್ ನಾಣಿಸೆ [ಪಾಠಾಂ. ನಾಣ್ಚೆ, ನಾಣ್ಚೆ] ಪಡುವೊಳ್ (ವರ್ಧಮಾ. ೧೦೭-೨೪) : ತಮವಱಯದರ ನಾಣಿಸಿಯನ್ನ ಮೊಮ್ಮಗೆ ತಕ್ಕ ಸತಿ ಕಟ್ಟಾಣಿರತ್ನವ ತಂದೆ ಜೀಯ (ಮೋಹತ. ೯೨-೫೫). [ ನಾಣ್$_1$ + – ಇಸು$_3$ ]

**ವಾಣು** 'ನಾಣ್$_1$' ನೋ.

**ನಾಣುಗೆಡಿಸು** 'ನಾಣ್ಗೆಡಿಸು' ನೋ.

**ನಾಣುಗೆಡು** 'ನಾಣ್ಗೆಡು' ನೋ.

**ನಾಣುಗೇಡಿಗ** (ನಾ). ಲಜ್ಜೆಗೇಡಿ ; ನಾಚಿಕೆಗೆಟ್ಟವನು : ನಾಣುಗೇಡಿಗರಸುರರುಱ ಕಟ್ಟಾಣೆ ನೀನವರೊಳಗೆ (ಕೂರಜಾ. ೬-೨೨-೨೬).
[ ನಾಣು (<ನಾಣ್$_1$) + ಕೇಡಿಗ ]

**ನಾಣುದಾಣ** 'ನಾಣ್ದಾಣ' ನೋ.

**ನಾಣುನಸಿಕ** (ನಾ). ಅವಮಾನಕ್ಕೆ ಅಂಜುವವನು : ಭಂಡನಾವನೀ ಖಳನು ಲೋಕದ ಭಂಡರಿಗೆ ಗುರು ನಾಣುನಸಿಕರ ಚಂಡಿಯಿವನಲೆ ಖೂಳವೇಸಾಕಿನ್ನು ಬೆಳೆಯದಿರು (ಕೂರಜಾ. ೫-೮-೨೩).
[ ನಾಣು (<ನಾಣ್$_1$) + ನಸಿಕ ]

**ನಾಣುಮಡಿ$_1$** (ಕ್ರಿ). ನಾಚಿಕೆಯನ್ನುಂಟು ಮಾಡುವಂತೆ ಮಾತನಾಡು ; ಲಜ್ಜಾಹೀನವಾದ ಮಾತನಾಡು: ನಾಣುನುಡಿದು ಧಗೆಗೆಡೆಯಾದನೆಂಬುದ ಕಾಣದೆ (ಅಂಜನ. ೭-೮೦). [ ನಾಣು (<ನಾಣ್$_1$) + ಮಡಿ$_1$ ]

**ನಾಣುನುಡಿ$_2$** (ನಾ). ನಾಚಿಕೆಯನ್ನುಂಟುಮಾಡುವ ಮಾತು ; ಲಜ್ಜಾರಹಿತವಾದ ಮಾತು : ರಜ್ಜಿಯ ನೆರವಿಗೆ ನಾಣುನುಡಿಯಿಲ್ಲದಿಹುದೆ (ಬಸವ. ೞ೫). [ ನಾಣು (<ನಾಣ್$_1$) + ನುಡಿ$_2$ ]

**ನಾಣೆಡೆ** (ನಾ). ನಾಚಿಕೆಯನ್ನುಂಟುಮಾಡುವ ಸ್ಥಳ ; ಗುಹ್ಯಾಂಗ : ತಲೆ ರೋಮದಂಚು ನಾಣೆಡೆ ಕುಳಮಧ್ಯಮಂ . . . ಮಹಾಹಿಕೊಂಡೊಡೆ ಗರುಡಂಗಮುತ್ತ(ಕ್ಕೆ)ಲರಿದೆಂದೊಡೆ ಪೇಟುಟೆದರ್ಗೆ ಸಾಧ್ಯಮೇ (ಖಮದ. ೩-೪೨) ; ಸರಸದಿಂ ನಾಣೆಡೆಗೆಯೆರಡೊಂದೆನಿಸಲಪ್ಪ (ಅನವ. ೧೦-೬೦) ; ನಾಣೆಡೆ ದ್ರವಿಸುತಿದ್ದುದು ಪಾಱ ಹೆಗಯ ತಾನೊಱಗಿದಳವಳು (ಭರತ. ೪೦-೬೦) ; ಸವಿಲಲ್ಲನುಡಿಗೆ ಲವಲವಿಪ ಕಾಲಗೆ ಕೂಟಕೆ ಕಾತರಿಸಿ ಮಿಡುಮಿಡುಕಲೊಸರ್ವ ನಾಣೆಡೆ . . . ಎಸೆಯಲೆಸೆದರ್ ಶಿವನ ಬೆಂಕೊಂಡು ಸುರಸತಿಯರು (ಚಬಪು. ೧೯-೩೨) ; ಉಟ್ಟುದು ಸರಿದು ಮದವಜಲ ನೆಱ ಪೊಱಮಟ್ಟುದು ನಾಣೆಡೆಯಿಂದ (ಕಂಪವಿ. ೯-೧೯೬).
[ನಾಣ್$_1$ + ಎಡೆ$_3$ ]

**ನಾಣೆಯ** 'ನಾಣಯ' ನೋ.

**ನಾಣೆಱಕ** (ನಾ). ಲಜ್ಜಾಭಾರ ; ನಾಚಿಕೆಯ ಆಧಿಕ್ಯ : ಅಂತಶ್ಶೀಂದ್ರಿಯ ಸೌಖ್ಯಪರಮಕೋಟಿಯಂನಯ್ದು ನಾಣೆಱಕದಿಂದನಿತಬೇಗಂ ತಲೆಯಂ ಬಾಗಿರಲ್ (ಶಾಂತೀಪು. ೫೬೫). [ ನಾಣ್$_1$ + ಎಱಕ$_1$ ]

**ನಾಣೊಡೆಯ** (ನಾ). ವಿಂಡ ; ಜಾರ ; ವಿಟ ; ರಸಿಕ : ಪದನಱದೀವ ನಿತ್ಯ ಮ ಱ ಪ ೦ ಕಡುಬಚ್ಚಡಮೆಂಬುದಿ[ಲ್ಲದಿ]ಲ್ಲದನಭವಾನಿ ನಾಣೊಡೆಯನಿಂಬಱವಂ ಸುಭಗಂ ಪ್ರಿಯಂವದಂ (ವರ್ಧಮಾ. ೮-೯೫) ; ಕೇಣದಿಂ ನಾಣೊಡೆಯನವೆಡೆಯೊಳ್ ನಿರ್ಧನಂ ಮಾಣ್ಬುಳ್ (ಲೀಲಾವ. ೨-೯೭). [ ನಾಣ್$_1$ + ಒಡೆಯ$_1$ ]

**ನಾಣ್ಗರೆ**(ಕ್ರಿ). ನಾಚಿಕೆಯನ್ನು ಪಡೆ ; ಲಜ್ಜೆ ಹೊಂದು ; ನಾಚಿಕೆಯನ್ನು ತೋರಿಸು : ಕಾಯ್ದು ಬಯ್ದು ನಾಣ್ಗರೆವರೆಂಬುಕೆಯ್ಮುವ್ವೊಳಪೊಯ್ಮುವನೇಕವಿಚಿತ್ರಚೇಷ್ಟೆಗಳ್ (ಹುಪ್ರಪು. ೨-೫೭). [ ನಾಣ್$_1$ + ಕರೆ$_1$ ]

**ನಾಣ್ಗಾದೆ** 'ನಾಟ್ಗಾದೆ' ನೋ.

**ನಾಣ್ಗಾಪು** (ನಾ). ಅವಮಾನವಾಗದಂತೆ ನೋಡಿಕೊಳ್ಳುವುದು ; ಮಾನರಕ್ಷಣೆ : ತನ್ನ ನಾಣ್ಗಾಪನೆ ಬಗೆದಕನುಹರಿಕಾಪಿತಶರೀರನವಾಗಿ ಶಂತನು ಕೆರಂಗರ್ದೆಗಿಡೆ (ಹಂಪಭಾ. ೧-೭೦ ವ). [ ನಾಣ್$_1$ + ಕಾಪು ]

**ನಾಣ್ಗೆಡಿಸು** 'ನಾಣ್ಗೆಡಿಸು' ನೋ.

**ನಾಣ್ಗೆಡು** 'ನಾಣ್ಗೆಡು' ನೋ.

**ನಾಣ್ಗುಂದು** (ಕ್ರಿ). ನಾಚಿಕೆಯಿಂದ ಕುಗ್ಗು : ನುಡಿದುಂ ಮಯ್ಯುರಿಗೆಟ್ಟು ವಿಂತು ನೆಲದೊಳ್ ನಾಣ್ಗುಂದಿ ನಿಂದಿರ್ದರ್ (ಆದ್ಯಕಾ. ೦೬೨).
[ ನಾಣ್$_1$ + ಕುಂದು$_1$ ]

**ನಾಣ್ಗೆಡಿಕ** (ನಾ). ಅವಮಾನ ಮಾಡುವವನು ; ನಿಂದಕ : ದುರ್ನೀತರಂ ನಾಣ್ಗೆಡಿಕರಂ ಸುಜನಾಹಿತರನಾಚಾರದೂರರನು . . . ವ್ಯಾಕುಳರನತಿ ಕೃಪೆವೆತ್ತು ಕಾಯ್ಪಾಯಿತ್ (ಬಸಪು. ೩೮-೭೦). [ ನಾಣ್$_1$ + ಕೆಡಿಕ ]

**ನಾಣ್ಗೆಡಿಸು, ನಾಣುಗೆಡಿಸು, ನಾಣ್ಗೆಡಿಸು** (ಕ್ರಿ). ೧. ನಾಚಿಕೆಯನ್ನುಂಟು ಮಾಡು ; ಲಜ್ಜಿತರು : ಏ ಸೊಬಗನೋ ರೂಪವಮಾತ್ರದಿಂ ರಂಭಾದಿ ಭಾಸುರಸ್ತ್ರೀಯರಂ ನಾಣ್ಗೆಡಿಪನಿವನೆಂದು ಪುರಜನಂ ಬೆಱಗಾದುದು (ಜಬಪು. ೧೯-೪೩). ೨. ಅವಮಾನಗೊಳಿಸು ; ಅವಮಾನವನ್ನುಂಟು ಮಾಡು : ಅನನಾಂಬುಜಂ ತಗ್ಗಿದಿರಂಗೆ ಸೋಲವನೊಡರ್ಚೆ ವಿಭೂಷಣ ಕಾಂತಿ ಭಾನುವಂ ನಾಣ್ಗೆಡಿಪಂತೆ ಪರ್ಬಿರೆ . . . ಬಂದನವಮಾತ್ಯನಂದನಂ (ರಾಜಶೇ. ೧೩-೬೧). **ನಾಣುಗೆಡಿಸು :** ೨. ಬಲ್ಲಿದನೆಂಬವನ ಕೆಡಿಸಿತ್ತು ವಿಧಿ . . . ದೇವೇಂದ್ರನ ಮೆಯ್ಯ ನಾಣುಗೆಡಿಸಿತ್ತು (ಬಸಹ. ೩೭-೯೩) ; ತೃಣಗಳು ನಾನಾವಿಧದಲತಿ ನಾಣುಗೆಡಿಸಲು ಹರಿಯ ನರರೊಳು ಕಾಣುತಲಿ ಲಕ್ಷ್ಮೀರವಣನಾಜ್ಞೆಯಲ್ಲಿ ವರ್ತಿಸುತ (ನಿಭಾಗ. ೧೧-೦೩-೨೨). **ನಾಣ್ಗೆಡಿಸು :** ೧. ಕುಡಿದೊಡೆ ಸೆರ್ಕಿಸದವು ನಾಣ್ಗೆಡಿಸದವು ಮನಕ್ಕಲಂಪನೀವುವು . . . ಮಧುಗಳನೆಡೆಯುಡುಗದೆ ಕುಡುಗುವಮುಚಿತಮದ್ಯಾಂಗಕುಜಂ (ಆದಿಪು. ೫-೩೨) ; ಕುವರನ ರೂಪೊಳ್ಪಿಂಗಳನೀಕ್ಷಣಮಾತ್ರದೆ ನಾಣ್ಗೆಡಿಸಿದುದಾದವೆಂಸವ ಪೊಸಜವ್ವನದೊಳ್ (ಚಂದ್ರಪ್ರ. ೪-೮) ; ನೃಪನ ಮನಮಾರ್ದಿಸುತುಂ ನಾಣ್ಗೆಡಿಸಿ ಪಿಡಿದನಂಗಜಚೋರಂ (ವರ್ಧಪು. ೬-೮).

[ ನಾಣ್$_1$ + ಕೆಡಿಸು$_1$ ]

**ನಾಣ್ಗೆಡು, ನಾಣುಗೆಡು, ನಾಣ್ಗೆಡು** (ಕ್ರಿ). ೧. ನಾಚಿಕೆಯನ್ನು ಬಿಡು ; ಲಜ್ಜೆಯಿಲ್ಲದಿರು : ಕೀಚಕಂ ಕಾಮದೇವಂ ಮಾಡಿದ ಯಾಚಕನಂತೆ ಕರಮೆ ನಾಣ್ಗೆಟ್ಟು ಮನಂಗಾವಟಿದಳಿಪಿ ನೋಡಿ ತನ್ನ ಮನದೊಳಿಂತೆಂದು ಬಗೆದಂ (ಪಂಪಭಾ. ೮-೫೯ ವ) : ತಾನಿತರ ಕನ್ಯಕೆಯಂತೆ ನಾಣ್ಗೆಟ್ಟು (ಕಾದಂಪೂ. ೮೭೪) ; ಮನ್ಮಥನ ಪಟ್ಟದಾನೆಯೊಲೆಸೆವ ನಳಿನವದನೆಯು ಕಂಡು ನಾಣ್ಗೆಟ್ಟನಾ ಪ್ರಮುಖ ನನೆಯಂಬನುಪಟಲದಲಿ (ಸನತ್ಕು. ೧೦-೨೩) ; ಕಣ್ಗೆಟ್ಟು ದಿಗ್ಪಾಲಪಾಲರಂ ಭೀತಿಯಿಂ ನಾಣ್ಗೆಟ್ಟು ಸರ್ವ ಗಂಧರ್ವರಂ ಪರಿದೆಯ್ದೆ (ಜಬಪು. ೩೦-೨೯). ೨. ಅಭಿಮಾನ ಕಳೆದುಕೊಳ್ಳು ; ಅವಮಾನಕ್ಕೊಳಗಾಗು : ಇಲ್ಲದಿರೆ, ಎಂತಕ್ಕುಮದ್ ಈ ಪೊಲ್ಲಗಯ್ಮೆ ? ಎಲ್ಲರುಂ ಕೂಗುವೀ ನಾಣ್ಗೆಟ್ಟ ಗೆಯ್ಮೆ ? (ಅಶ್ವತ್ಥಾ. ೮-೦೫೩). **ನಾಣುಗೆಡು :** ೨. ಕಾಯದ ಕರದಲ್ಲಿ ಲಿಂಗವ ಪಿಡಿದು ಜಾಯಾಜೀ ಭವಗಟ್ಟು ನಾ ಣು ಗೆ ಟ್ಟು ನಾನಾರಂಬುದನಱಿಯದೆ (ಪ್ರೋಳಪಪು. ೨೪-೯೩) ; ಲಜ್ಜೆಗೆಟ್ಟಾದರೂ ಲಿಂಗವನೊಲಿಸುವೆ ನಾಣುಗೆಟ್ಟಾದರೂ ಲಿಂಗವನೊಲಿಸುವೆ (ಬಸವ. ೯೯೮) ; ಈರ್ವರು ಮುನಿಗಳು . . . ನಾಣುಗೆಡುತ ಬಂದರೇಣಾಕ್ಷಿಯೆಡೆಗವಸರದಿ (ಅಮುಸಾಂ. ೬-೯೩). **ನಾಣ್ಗಡು :** ೧. ನಾಣ್ಗಡುವಿನಮಿಾ ತೆಱದಿಂದೆನ್ನಂ ವಿಡಂಬಿಸಲ್ಕೊಡರಿಕುಮೆ (ಕಾದಂಉ. ೬೦). ೨. ಅವಂ ಗಡ ವಾರುಣಿಯಂ ಸೇವಿಸಿ ನಾಣ್ಗಡದಂ (ಶಂಬರಾಮಾ. ೧೧-೦೭೯). [ ನಾಣ್$_1$ + ಕೆಡು$_1$ ]

**ನಾಣ್ಗೆಯ್** (ಕ್ರಿ). ಅವಮಾನಪಡಿಸು ; ಅಗೌರವವನ್ನುಂಟುಮಾಡು : ಪೊಟರೆಯ ದೇಹಮನ್ ನಾಯ್ಗಳ್ಗೆ ಪರ್ದುಗಳ್ಗೆರೆಯಾಗಿ, ನೋಟಕ್ಕೆ ಬರ್ ಘೋರವಾಗಿ, ನಾಣ್ಗೆಯ್ದು ತಾವ್ ಬಿಸುಡುಗೆ (ಅಂಶಿಗೆ. ೧೧-೦೮೯) ; ಅಪರಾಧದಿನ್ ಸ್ಕೂಸ್ ನಿನ್ನನೀ ಬಗೆಯಲ್ಲಿ ನಾಣ್ಗೆಯ್ದು . . . ಗೋಟಿಡಿಸುತಿರ್ಪನ್ ? (ಬದ್ಧಪ್ರ. ೦೨-೨೩೭). [ ನಾಣ್$_1$ + ಕೆಯ್$_1$ ]

**ನಾಣ್ಗೇಡಿ** (ಗಂ). ನಾಚಿಕೆಯಿಲ್ಲದ ; ಲಜ್ಜೆಯಿಲ್ಲದ : ನೀನು ಬಹಳ ನಾಣ್ಗೇಡಿ ಹೆಣ್ಣಾದ ಎಂದಳು (ಕೋಹಿಸೂ. ೦೦೮) ; ಸೂರಣ, ನೀನು ಬಹಳ ನಾಣ್ಗೇಡಿ ಬ್ರಾಹ್ಮಣನಾದೆ (ಸುಗುಗಂ. ೩೩-೭).

[ ನಾಣ್$_1$ + ಕೇಡಿ$_1$ ]

**ನಾಣ್ಗೇಡು** (ನಾ). ಅವಮಾನ : ಸ್ಕೂಸ್ಗೆ ಕೀಟ್ಟಟ್ಟ ನಾಣ್ಗೇಡು ನೋಟ ಮಾಡೆನ್ (ಬದ್ಧಪ್ರ. ೦೯-೨೦೩). [ ನಾಣ್$_1$ + ಕೇಡು ]

**ನಾಣ್ಗೊಳ್** (ಕ್ರಿ). ನಾಚಿಕೊಳ್ಳು ; ಸಿಗ್ಗಾಗು : ನೀವಿ ಜಾಱದೆ ಸುಸಿಲ್ ಗೈವಲ್ಲಿ ನಾಣ್ಗೊಂಡೊಡುತ್ತುಳಕಂ ಮಾಡದೆ (ರಾಜಶೇ. ೧೧-೧೫೪).

[ ನಾಣ್$_1$ + ಕೊಳ್$_1$ ]

**ನಾಣ್ಚಿಕೆ, ನಾಂಚಿಕೆ, ನಾಚಿಕೆ, ನಾಚಿಗೆ** (ನಾ). ೧. ಲಜ್ಜೆ ; ಸಿಗ್ಗು : ರಾಗದಿನಗಸುತೆಯೊಳ್ಸಂಭೋಗಿಸುತಿಪ್ಪಲ್ಲಿಗಗ್ನಿ ಬರೆ ನಾಣ್ಚಿಕೆಯಿಂದಾ ಗಿರಿಜೆ ಪೋಗಿ (ಸಮಪಃ. ೮-೫೪) : ತಲೆವಾಗಿ ನಾಣ್ಚುತಿಪ್ಪರುಕುತಿದ್ದವರ ನಾಣ್ಚಿಕೆ ಭಯವನೊಯ್ಯನೆ ಕಳೆದನು ಮುಟ್ಟಿ ನುಣ್ಚುರದೋಱಿ ಮಾತಾಡಿ (ಭರತ. ೩೦-೧೦೩). ೨. ಅವಮಾನ : ಪೊಯ್ವಳ್ಳಿಗಳ ಪೊತ್ತ ನಾಣ್ಚಿಕೆಯು ಸರ್ವ ದಿಕ್ಪಾಲರೋಟಂಗಾಣುತಜನಾಗ್ರಹಂದಾಳ್ದನಾ ಕ್ಷಣದೊಳು (ಜಬಪು. ೯೯-೨೯). **ನಾಂಚಿಕೆ :** ೨. ಪರಿಕಿಸುವೊಡವಂಗವಮರವೆಸರಿನ ಕರಕರೆಯ ನಾಂಚಿಕೆಯವೊಳಗಿದು ಶರಣ ನೀವಱಿಯದುದೆಯವ್ವಯ ನಿತ್ಯತೆಯ ಹದನಂ (ಶಾಸಂಕ. ೬-೨೩). **ನಾಚಿಕೆ :** ೧. ನುಡಿವೊಡೆ ನಾಚಿಕೆ ಗಡ ನಿನ ಗುಡಿನೂಲ್ ಬಗಿವಿನೆಗವಿಮಾ ವಳಿತ್ರಯಮಿಾಗಳ್ ಕಿಡುಕಿರ್ಪುದು (ಕಾದಂಪೂ. ೮೦೩) ; ಮೊಲೆದುದಿ ಮೃದಿಲ ಮೆಱೆಯೊಳಿರುವುದೆಂದು ಸಲೆ ನಾಚಿಕೆಯನು ತೊಱೆದು (ಕಂನವಿ. ೬-೦೪೯). ೨. ಬೈತು ಬಿತ್ತನೊಲವಿಂ ಬೆಳೆಗೆಯ್ದಾವುದುಮಂ ಸತ್ಪಾತ್ರಕ್ಕೀವುದುಮಂ ದಾನವೆಂಬ ನಾಚಿ[ಪಾಠಾಂ. ಣ್ಚಿ] ಕೆಯುಂಟೇ (ಅರ್ಧನೇ. ೪-೪೪) ; ನುಸುಳಿದರು ನಾಚಿಕೆಯಲಾತನ ವಿಶಿಖ ಜಲದಲಿ ತೊಳೆದರತಿರಥರಸಮಸಂಗರವಾಯ್ತು (ಕುಮಾರವ್ಯಾ. ೬-೪). **ನಾಚಿಗೆ :** ೧. ಮಾತೀಗು ಅಟಗೆ ವಿಾರಿದ್ದ ನಾಚಿಗೆ ಮುಸುಕ್ಯಾವ ಹೂವಿಗೆ (ಗಂಗಾತ. ೩೨-೦೭) ; ಅಪೂರ್ವನಿಗೆ ತುಂಬ ನಾಚಿಗೆಯಾಯಿತು (ಧಾರಿತ. ೦೦).

ನಾಚಿಕೆಯ ಗೊತ್ತು = ನಾಣ್ಕಾಣ : ಬ ಡ ವ ಲ್ಲ ದು ಬ್ಬ ಲ್ಲ ದೊ ಡ ಲು ಕಿಱುದೊಡೆಯಯಡೆವಿಡದ ರೋಮದ ನಾಚಿಕೆಯ ಗೊತ್ತಿನ . . . ಅತಿ ಚದುರಿನವಳೆ ಶಂಖಿಣಿಯೆನಿಪಳು (ಜನವ. ೨-೦೪).

[ ನಾಣ್ಚು$_1$ + – ಇಕೆ. / ತುಳು. ನಾಚಿಕೆ, ನಾಚಿಗೆ ]

**ನಾಣ್ಚಿಸು, ನಾಚಿಸು** (ಕ್ರಿ). ೧. ನಾಚುವಂತೆ ಮಾಡು ; ಲಜ್ಜೆಯನ್ನುಂಟು ಮಾಡು : ನಿಜಾಕಾರವಂ ತೋಱಿ ನಾಣ್ಚಿಸಿ ಶಾಂತಿದಾಂತಿಯನುವಂ ಬೋಧಿಸಿ (ಪದ್ಮರಾ. ೨-೨೩) : ಎಂದವಳಂ ನಾಣ್ಚಿಸಿದಂ (ರಾಜಶೇ. ೧೧-೧೬೦ವ) ; ಕಾಂಚನಸುಕಾಶ್ಮೀರಕರ್ನಿಕಾರವ್ರಭೆಯು ನಾ ಣ್ಚಿ ಸು ವ ತತ್ಪುರವುಖದೊತ್ತಿನೊಳ್ಮೀರಕಾಂಚನಾದ್ರಿಯ ಪೋಲ್ವ ತನುಕಾಂತಿ (ಚಕುಪು. ೦-೨-೪೧). ೨. ಅವಮಾನಮಾಡು. **ನಾಚಿಸು :** ೧. ಮಲ್ಲೆಯಂ ಸರವಿದೆ ಕೊಳ್ಳೆಂದು ಬೆರೆಗೊಡು ನಿಲ್ಲದವನ ನಾಚಿಸಿದಳು (ಕಂನವಿ. ೬-೮೪). ೨. ಓಡಿ ನಾಚಿಸುವವರು ನಿಲಿ ರಣಖೇಡರೀಗಳ ಮರಳಿ (ಕುಮಾರವ್ಯಾ. ಶ. ೮-೩೦) ; ನಿಮ್ಮ ಶಿಕ್ಷಣ ಶಿಕ್ಷಕರನ್ನೂ ನಾಚಿಸುತ್ತದೆ (ರಂಗಗೀತೋ. ೮೭).

[ ನಾಣ್ಚು$_1$ + – ಇಸು$_3$ ]

**ನಾಣ್ಚು$_1$, ನಾಂಚು, ನಾಚು$_1$** (ಕ್ರಿ). ೧. ನಾಚಿಕೆಪಡು ; ಲಜ್ಜೆಯನ್ನು ಹೊಂದು ; ಸಿಗ್ಗಾಗು : "ನಾಣ್ಚು-ಲಜ್ಜಾಯಾಂ" (ಶಮುಧಾ) ; ನೀಂ ಬಾ ಪೋಪಮೆಂದಂಗೆ ಮೆಲ್ಲಗೆ ತತ್ಕನ್ಯಕೆ ನಾಣ್ಚಿ ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ ಎಂಬುದುಂ (ಪಂಪಭಾ. ೦-೭೦) ; ಆನಕ್ಕ ನಾಣ್ಚುವೆಂ ಪಿಡಿ ನೀನೆ ನೃಪಂಗಿಕ್ಕು ತಂಬುಲವಂ (ಕಾದಂಉ. ೫೫) ; ಗಾಡಿಯಿಂದವಳು ನಾಣ್ಚಿರಲು ಬಿನ್ನಹವನು ಮಾಡಿದಳಾ ಚಿತ್ರಲೇಖೆ (ಮೋಹತ. ೨೫-೩) ; ಒಡೆಯ ನಿನ್ನೊತ್ತಿನೊಳಿರಲು ನಾಣ್ಚುವಳು (ಭರತ. ೬-೨೩); ಅಲಸದೆ ನಾಣ್ಚದಂಜದೆ ಯಱುಕದೆ ಪೇಳು (ಹರಿಬ. ೧-೨೯). ೨. ಅವಮಾನ ಹೊಂದು ; ಅವಮರ್ಯಾದೆಗೊಳಗಾಗು : ಪಾದರಿಗನಂತೆ ಪಲರ ಮುಂದೆ ನಾಣ್ಚದೆ ಲೋಭಿಯಪ್ಪರಸಿನಂತವಿಚಾರಿಯಾಗದೆ (ಧರ್ಮಾಮೃ. ೪-೪೭). **ನಾಂಚು :**

೧. ಮಹಾದೇವಿಸೆಟ್ಟಿಯವರು ನಾಂಚಿ ತಲೆವಾಗಿರ್ದುದನಱಿದು (ಬಸರ. ೦೨-೫೬); ಕರ ನಾಂಚಿ ಶರನಿಧಿಯ ಮುಳುಗಿದನೊಯ್ಯಂಬ ತತ್ಪರಿಯೊಳಂ ಚಂದ್ರ ಪಶ್ಚಿಮಗಿರಿಯ ಮರೆಗೊಳಲು (ನವಮೋ. ೦೮-೨೫). ನಾಚು₁ : ೧. ಆ ಮಾಡುವ ಯುದ್ಧದೊಳ್ ಕಿಱಿದು ನಾಚುಗುವೋ ವಧು (ಅರಂಉ. ೬೮೫). ೨. ಸಂತೆಯೊಳಗೊಂದು ಮನೆಯ ಮಾಡಿ ಕುಬ್ಜಕ್ಕೆ ನಾಚಿದಡಂತಯ್ಯ (ಮಹಾದೇ.ಬ.೪೫-೦೦೬); ನಚ್ಚಿದಾಳಿನ ಬಿನ್ನಹಕೆ ಹರಿ ಮೆಚ್ಚಿ ಮನದಲಿ ನಾಚಿ ಚಕ್ರವ ಮುಚ್ಚಿದನು (ಕುದ್ಯಾರ್ಥಿ. ೬-೪೬): ನುಡಿಗೆ ನಾಚಿದನರಸ ಹಂಸದ ನಡವಳಿಗೆ ಮೆಚ್ಚಿದನು (ನಳಚ. ೨-೨೦); ನನಗೆ ಬೇಕಾದದ್ದು ಬಿಡುಗಡೆ; ಅದನ್ನು ಕೋರುವುದಕ್ಕೆ ನಾಚುತ್ತೇನೆ (ಧರ್ಮಸಾ. ೮೬). [ ನಾಣ್₁ + -ಚು₁ ]

**ನಾಣ್ಚು₂** (ನಾ). = ನಾಣ್ಚಿಕೆ ೧ : ಅರಳಿಯಲಿ ರಸವಿಲ್ಲ ಕರುಳಿಗೆ ನಾಣ್ಚಿಲ್ಲ ಮರುಳನಿಗಾರು ಇದಿರಿಲ್ಲ ಸೂಳೆಯಲಿ ಸರಲವೆ ಇಲ್ಲ (ಸರ್ವಜ್ಞ. ೧೪೮೬).

[ <ನಾಣ್ಚು₁ ]

**ನಾಣ್ಣುಡಿ** 'ನಾಟ್ನುಡಿ' ನೋ.

**ನಾಣ್ದಂಡ** (ನಾ). ಪುರುಷನ ಗುಹ್ಯಾಂಗ; ಶಿಶ್ನ : ಬಾಳೆಯೊಳು ಬಾಳೆ ನಾಣ್ದಾಣದೊಳು ನಾಣ್ದಂಡ . . . ಮತ್ತೆ ನಾಳಕಾವ್ಯೆರಿಶಕಲದೊಳು ಶಕಲಗಳಮರ್ದು ಸ್ತ್ರೀಪುರುಷರಿರೆ ಕಂಡರು (ಪ್ರಭುಪು. ೯-೦೨೯).

[ ನಾಣ್₁ + ದಂಡ ]

**ನಾಣ್ದಳೆ** (ಕ್ರಿ). ನಾಚಿಕೆಯನ್ನು ಹೊಂದು; ನಾಚು : ಸಂಕ್ರಂದನಂ ಸದ್ಗುಣೋಜ್ವಳಸತ್ಯೇಂದ್ರನರೇಂದ್ರರುಂದ್ರಯಶಮಂ ಗಂಧರ್ವರಿಂ ಕೇಳ್ದು ನಾಣ್ದಳೆದು (ರಾಜಶೇ. ೩-೪). [ ನಾಣ್₁ + ತಳೆ₁ ]

**ನಾಣ್ದಾಣ, ನಾಣುದಾಣ** (ನಾ). = ನಾಣ್₁ ೩: "ಭಗದೊಳ್ ನಾಣ್ದಾಣ ಮೆಂದುಂಟು" (ಕರ್ಣಾಸಿ. ೮೮); ಮೊಱೆಯಂ ಮಾಱುವ ಮಾತು ಕೆಂದೆಸವ ನಾಣ್ದಾಣಂ (ಚಂದ್ರಪ್ರ. ೮-೬೫); ಪಳ್ಳಿಯೊಳಿಕ್ಕಸರು ಪೊಂಗುತ್ತಿರೆ ನಾಣ್ದಾಣಂ ಸೂಳ್ವಡದಿಂಗೂಟಂ ಗಡಿಗೆಟ್ಟಿರಲ್ (ಉದ್ಭಟಕಾ. ೪-೨೦); ಲಜ್ಜಿಸುವ ತಿಣ್ಣಮಂ ಬಿಡಿಸಿ ನಾಣ್ದಾಣಮಂ ತಡವಿ (ಚಂಪು. ೦೦-೫೯). ನಾಣುದಾಣ : ಹದನಾದ ನಾಣುದಾಣಕೆ ಲಿಂಗಯೋಗವ ಪಡುಳಿಸುವಾಗ ಸ್ವರ್ಗವನು ಮಿದಿಯದೆ ಗೇಣು ಚೋಟಿನೆ ತೋಱುತಿದ್ದುದು (ಭರಚ. ೪೧-೬೨).

[ ನಾಣ್₁ + ತಾಣ ]

**ನಾಣ್ದುಡುಕು** (ಕ್ರಿ). ಗುಹ್ಯೇಂದ್ರಿಯವನ್ನು ಹಿಡಿದುಕೊಳ್ಳು; ಶಿಶ್ನವನ್ನು ಹಿಡಿ: ಚೆಲ್ಲದೊಳಾಕೆ ನಾಣ್ದುಡುಕಿ ನುಣ್ಗೊಗ್ಗರಲಿಂದನಿ ಪೊಣ್ಮೆ ಚುಂಬಿಸುತ್ತಲ್ಲ ಸುಖಕ್ಕೆ ಸೀಮೆಯನಲಂಗಜಕೇಳಿಯನುಂಟುಮಾಡಿದಳ್ (ರಶಕು. ೮-೫೨).

[ ನಾಣ್₁ + ತುಡುಕು₁ (<ತೊಡಂಕು₁) ]

**ನಾಣ್ನುಡಿ** 'ನಾಟ್ನುಡಿ' ನೋ.

**ನಾಣ್ಪು** (ನಾ). = ನಾಣ್ಚಿಕೆ ೧ : ಈಕೆಯ ಸಲ್ವ ಜಾಣ್ನುಡಿಗಳಿಂಪಿನಿವಿಲ್ಲನ ಪೆಂಪಲಂಪು ಮೇಣೀಕೆಯ ನೋಟದೊಳ್ಪು ಮುನಿದಾಲಮನಕ್ಕೆ ಬೆಗಟ್ಪು ನಾಣ್ಪು ತಾನೀಕೆಯ ಸುಯ್ಯ ಗಾಳಿ ಮಲಯಾನಿಲನೊಳ್ ಸರಿ ಜೋಳಿಪಾಳಿ (ಉದ್ಭಟ. ೮-೪೪). [ ನಾಣ್₁ + -ಪು₂ ]

**ನಾಣ್ಪೋಗು** (ನಾ). (ಪ್ರಾಣಿಗಳ) ಸಂಭೋಗ : ಮೂಱು ಕೊಂಬುವ ನಾಱು ನಾಣ್ಪೋಗುಮನೆರಬ್ಬಜ್ಜಯುಮಂ . . . ಬಲ್ಲನಾಗಿ (ಶಂಕಭಾ. ೫-೪೩ ವ). [ ನಾಣ್₁ + ಪೋಗು₂ ]

**ನಾಣ್ಬಟ್ಟೆ** 'ನಾಟ್ಬಟ್ಟೆ' ನೋ.

**ನಾಣ್ಬಟ್ಟೆವೆಣ್** (ನಾ). ನಾಡಿನ ರಸ್ತೆಯಲ್ಲಿ ತಿರುಗಾಡುವ ಹೆಂಗಸು; ನಾಡ ದಾರಿಯಲ್ಲಿ ಓಡಾಡುವ ಹೆಣ್ಣು : ಪತ್ತನ ದ್ರೋಣಾಮುಖಂಗಳ್ಗೆ ಮಾಣದೆ ನಡೆವ ನಾಣ್ಬಟ್ಟೆವೆಣ್ಣ ಕಣ್ಣಪೂರವನಲಂಕರಿಸಿದ ಪಾನೀಯ ಕಾಯಮಾನನಿಕಾಯಾಭ್ಯಂತರಾಳದಲ್ಲಿ ವಱಿವಡೆ ಸೇದೆ (ಅನಂಪು. ೧-೮೨ ವ).

[ ನಾಣ್ಬಟ್ಟೆ (<ನಾಟ್ಬಟ್ಟೆ) + ಪೆಣ್ ]

**ನಾಣ್ಬದ** (ನಾ). ಕಾಮಜಲ; ಯೋನಿದ್ರವ : ಊರುಯುಗಂಗಳಿಂದಿಟುವ ನಾಣ್ಬದನಂ ನಿಜಱಿಯಿಂದಮೊತ್ತುತುಂ ಜಾರೆಯುರೆಯ್ದು ಶಿರ್ದರ್ (ಕುಸುಮಾ. ೪-೫೫); ನೀವಿ ಸಸುಬೀಟ್ಟರೆ ನಾಣ್ಬದನಂಗಜೌಕದಿಂದಿಟಿತರೆ ಘರ್ಮವಾಃಕಣಗಣಂ ನೆಯುತ್ತಿರೆ ನೋಡುತಿರ್ದಳಾಕುಳತೆಯಿನೊರ್ವ ಚಂದ್ರಮುಖಿ ಮೆಯ್ಯುಱಿದಾ ನರನಾಥಪುತ್ರನಂ (ಶಾಂತೀಶ. ೩-೩೦).

[ ನಾಣ್₁ + ಪದ₁ ]

**ನಾಣ್ಬಿಡು** (ಕ್ರಿ). ನಾಚಿಕೆಯನ್ನು ಬಿಡು,-ತ್ಯಜಿಸು: ಮೊಗಂಗುಡೆ ಪದವೆತ್ತು ಚುಂಬಿಸಿ ಭಯಂಗೆಯೆ ಬಲ್ಪಿಣಸಂ ಪೊದಲ್ಚು ನಾಣ್ಬಿಡೆ ನೆರೆದೂಢೆಯಂ ಪ್ರಥಮಸಂಗಮದೊಳ್ ಕುವರಂ ಮರುಳ್ಚಿದಂ (ಚಂದ್ರಪ್ರ. ೬-೮೨); ತೋಳ್ಗಳಿಂ ಬಿಗಿದು ತಳ್ಕಿಸಿ ನಾಣ್ಬಿಡೆ ಜಾಣ್ಮೆದೋಱೆ . . . ತನ್ನಳ ಮನಮಂ ಮರಳ್ಚಿದನದೇಂ ರತಿಕೋವಿದನೋ ಕುಮಾರಕಂ (ರಾಜಶೇ. ೮-೮೫). [ ನಾಣ್₁ + ಬಿಡು₁ ]

**ನಾಣ್ಬೆದರು** (ಕ್ರಿ). ಲಜ್ಜೆಯಿಂದ ಬೆದರು: ಭರದಿ ಮರೆತುದು, ಮಹೇಂದ್ರ ಶಿಖರಂಗಳುಂ ನಾಣ್ಬೆದರಿ ಗೋಣ್ಬಾಗ್ಗುವೋಲ್ (ಶ್ರೀರಾಮಾ. ೫೦೬-೬೬).

[ ನಾಣ್₁ + ಬೆದರು₁ (<ಬೆದಱು₁) ]

**ನಾಣ್ಬೆರಸು** 'ನಾಣ್ವೆರಸು' ನೋ.

**ನಾಣ್ಬೆಳ್ಪೇರು** (ಕ್ರಿ). ನಾಚಿಕೆಯಿಂದ ಬಿಳಿಚಿಕೊಳ್ಳು: ಮೇಘಸಂಧಿಗಳಿಂದೆ, ಮುಸುಕಿತ್ತಿ, ನಸುನಾಣ್ಚಿ, ಮೊಗಕೆ ನಾಣ್ಬೆಳ್ಪೇರಿದಪರಿಚಿತಳಂತವೋಲ್ ಇಣಿಕಿತು ಗತೋಪ್ಲಾತಪಂ (ಶ್ರೀರಾಮಾ. ೩೪೫-೦೫೦).

[ ನಾಣ್₁ + ಬೆಳ್ಪು + ಏರು₁ (<ಏಱು₁) ]

**ನಾಣ್ಮಸಗು** (ಕ್ರಿ). ಅವಮಾನ ಹೆಚ್ಚಾಗು: (ನಾಣ್ಮಸಗಿ, ಅವನತವಕ್ತ್ರನಾಗಿ) (ಮಂತ್ರಕ. ೩೯-೨). [ ನಾಣ್₁ + ಮಸಗು₁ ]

**ನಾಣ್ಮಾತು** 'ನಾಲ್ಮಾತು' ನೋ.

**ನಾಣ್ಮೀಸಲು** (ನಾ). ನಾಚಿಕೆಯಲ್ಲಿ ತೋರುವ ಪವಿತ್ರತೆ; ಪರಿಶುದ್ಧತೆಯುಳ್ಳ ನಾಚಿಕೆ : ನಾಣ್ಮೀಸಲಳಿಯದವಯವದ ಭೇದಮಂ ಮಱಿದು ಜಾಣ್ಮೆಗಳ ಬಂಧಂಗಳೊಳ್ಪಳಿಸಿ . . . ಲಲ್ಲೆಗೈದೊಲವನಾಣ್ಮಂಗೆ ಕಾಣಿಸಿದಳವಳ್ (ಕ್ರಮಿಭಾ. ೦೦-೨೨). [ ನಾಣ್₁ + ಮೀಸಲು (<ಮೀಸಲ್) ]

**ನಾಣ್ಮುಚ್ಚು** (ಕ್ರಿ). ಮಾನವನ್ನು ರಕ್ಷಿಸು: ಉಡೆ ನಾಣ್ಮುಚ್ಚದ ನಾಗವಟ್ಟಣಿಗೆ (ಮಲ್ಲಕಾ. ೮-೩೦೪). [ ನಾಣ್₁ + ಮುಚ್ಚು₁ ]

**ನಾಣ್ಮೆ** (ನಾ). ನಾಚಿಕೆ; ಲಜ್ಜೆ : ಆದೊಡದನಾಡುತಿರ್ಪಾಗಳೇ ನಾಣ್ಮೆಯೊತ್ತಿ ಬರ್ಪುದು ಎನಗೆ (ಬದ್ಧಪ್ರ. ೩೪-೬೨೬); ಆಳವನ್ ಜ್ಞಾನಿಯಾಗಿ ದೊರ್ಡಂ, ತಾನ್ ಕಲ್ಪುದದು ನಾಣ್ಮೆಯಲ್ಲಂ (ಅಂಕಿಗೂ. ೬೨-೬೫೫).

[ ನಾಣ್₁ + -ಮೆ₁./ತಮಿ. ನಾಣ್ಮೈ ]

**ನಾಣ್ಮೊಗ** (ನಾ). ನಾಚಿಕೆಯನ್ನು ತೋರ್ಪಡಿಸುವ ಮುಖ : ಬಲವಂತರೆಲ್ಲ ನಳಕೆಯ ಕೀರನಂತೆ ಅವರು ದಿಕ್ಕಾಗಲಱಿಯರು ನಾಣ್ಮೊಗದವ್ವವರ ಒಪ್ಪವಿಟ್ಟುಕೊಳ್ಳ (ಮೋಳಿಮಾ. ೬೬-೨೬೯). [ ನಾಣ್₁ + ಮೊಗ ]

**ನಾಣ್ಯ** 'ನಾಣಯ' ನೋ.

**ನಾಣ್ಯಗಾರ** (ನಾ). ಗಣ್ಯ; ಗೌರವಸ್ಥ; ಮಾನ್ಯ : (ಶ).

[ ನಾಣ್ಯ (<ನಾಣಯ) + -ಕಾರ₁ (<-ಕಾಱ) ]

**ನಾಣ್ಯಪದ್ಧತಿ** (ನಾ). ನಾಣ್ಯಗಳನ್ನು ಚಲಾವಣೆ ಮಾಡುವ ವ್ಯವಸ್ಥೆ,-ನಿಯಮ : ಈ ಹದ ಬಹುಕಾಲದವರೆಗೆ ನಿಲ್ಲುವಂತೆಯೂ ಸಮಧಾತುವಾಗಿರುವಂತೆಯೂ ಏರ್ಪಡಿಸಬೇಕು–ಎಂಬುದೇ ಎಲ್ಲ ನಾಣ್ಯಪದ್ಧತಿಗಳ ಗುರಿ (ಹಣಶ್ರ. ೨೯). [ ನಾಣ್ಯ (<ನಾಣಯ) + ಪದ್ಧತಿ ]

**ನಾಣ್ಯಪರೀಕ್ಷೆ** (ನಾ). ನಾಣ್ಯಗಳ ಗುಣಾವಗುಣಗಳ ಪರಿಶೀಲನೆ: ಅವನು ನಾಣ್ಯಪರೀಕ್ಷೆಯಲ್ಲಿ ಖದೀಮ (ರೂಢಿ).

[ ನಾಣ್ಯ (<ನಾಣಯ) + ಪರೀಕ್ಷೆ ]

**ನಾಣ್ಯವಂತ** (ನಾ). = ನಾಣ್ಯಗಾರ : ಇಡೀ ಹಳ್ಳಿಯಲ್ಲೇ ಅವನು ನಾಣ್ಯವಂತನೆಂದು ಹೆಸರು ಗಳಿಸಿದ್ದಾನೆ (ಬಳಕೆ).

[ ನಾಣ್ಯ (<ನಾಣಯ)+-ವಂತ ]

**ನಾಣ್ಯವಟ್ಟ** (ನಾ). ನಾಣ್ಯವಿನಿಮಯದ ಸಂದರ್ಭದಲ್ಲಿ ತೆರಬೇಕಾದ ಶುಲ್ಕ ; ಒಂದು ನಾಣ್ಯವನ್ನು ಮತ್ತೊಂದು ನಾಣ್ಯಕ್ಕೆ ಬದಲಾಯಿಸಿಕೊಳ್ಳುವಾಗ ಕೊಡಬೇಕಾದ ಹಣ,-ಶುಲ್ಕ : (ಆ).

[ ನಾಣ್ಯ (<ನಾಣಯ) + ವಟ್ಟ$_2$ ]

**ನಾಣ್ಯವಾರು** (ನಾ). ಬೇರೆ ಬೇರೆಯಾದ ನಾಣ್ಯಗಳ ವಿವರವಾದ ಲೆಕ್ಕ ; ಬೇರೆ ಬೇರೆ ಬೆಲೆಯ, ಆಕಾರದ ನಾಣ್ಯಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ವಿಂಗಡಿಸುವುದು : ತಿರುಪತಿಬೆಟ್ಟದಲ್ಲಿ ಪ್ರತಿನಿತ್ಯ ಹುಂಡಿಯ ಹಣವನ್ನು ನಾಣ್ಯವಾರಾಗಿ ವಿಂಗಡಿಸುತ್ತಾರೆ (ಬಳಕೆ).

[ ನಾಣ್ಯ (<ನಾಣಯ) + ವಾರು$_2$ (<ವಾರ್) ]

**ನಾಣ್ಯವಿದ್ಯೆ** (ನಾ). ನಾಣ್ಯದ ವಿಷಯವನ್ನು ತಿಳಿಸುವ ವಿದ್ಯೆ; ನಾಣ್ಯಕ್ಕೆ ಸಂಬಂಧಪಟ್ಟ ವಿಷಯಗಳನ್ನು ವಿವರಿಸುವ ಶಾಸ್ತ್ರ: "ನಾಣ್ಯ(ಪರಿಚಯ) ವಿದ್ಯೆ" (Numismatics. ಇಂಕೋಶ). [ ನಾಣ್ಯ (<ನಾಣಯ)+ವಿದ್ಯೆ ]

**ನಾಣ್ಬೆರಸು**, ನಾಣ್ಬೆರಸು (ಕ್ರಿ). ನಾಚಿಕೆಯಿಂದ ಕೂಡಿರು; ಲಜ್ಜೆಯನ್ನು ಹೊಂದು : ಆಕೆಯ . . . ಗಾಡಿವೆರಸಿದ ಹಾವಕ್ಕಂ ನಾಣ್ಬೆರಸಿದ ಭಾವಕ್ಕ ವೊಲ್ದುವೊಜಲ್ದುವಿರೆಯಿರೆ (ಶಂಪುರಾ. ೪-೦೭ ವ). **ನಾಣ್ಬೆರಸು** : ಕಂಪಿಸುತಿರೆ ಕರತಳದಿಂದು ಪೋದತ್ತಕ್ಷವಮಾಲೆ ನಾಣ್ಬೆರಸಾಗಳ್ (ಶಾರಂಪೂ. ೭೭೦). [ ನಾಣ್$_1$ + ಬೆರಸು$_1$ ]

**ನಾತ**, ನಾತಂ (ನಾ). ೧. ಮೂಗಿನಿಂದ ಕಂಡುಹಿಡಿಯುವ ಒಂದು ದ್ರವ್ಯಗುಣ ; ವಾಸನೆ ; ಗಂಧ ; ಪರಿಮಳ : ಸವಿ ಬೆಳಗು ತಡವು ಬನಿ ನಾತಮೆಂಬೈದಜ ಬಗೆ ತಿಳಿವನೆಡೆಯದೆ ಲೋಕಂ (ಕಾಜಾಳ್. ೦-೩-೭) ಆವನ ಸುತ್ತ ಕ್ಯಾದಿಗೇ ಹೊಡಿವಾಸ, ಪಲ್ಲೇದ ಕಂಪಾ, ಎಲಿಬಳ್ಳೀ ನಾತ (ಜಾಬಲ. ೫೩). ೨. ಸುವಾಸನೆ ; ಸುಗಂಧ : "ಸೌಸಮ . . . ನಾತಂ, ವಂಗಮಗಿಸು-ಈ ೭ ಪರಿಮಳಕ್ಕೆ ಪೆಸರ್" (ಕಶಸಾ. ೯-೦೭೭); "ನಾತಂ ನೆಟ್ಟೆ ಸೌಸವ ಕವ್ವಿತೆಂದು ಮಗಮಗಿಸಿದುದೆಂದಿಕದೆ . . . ಸೌರಭ್ಯಮಕ್ಕುಂ" (ಕವಿಕಂ. ೯೭) ; ಕಸವು ಹೊಡೆದ ಕೈಯು ಕಸ್ತೂರಿ ನಾತಾವ ಬಸವಣ್ಣ ನಿನ್ನ ಸೆಗಣೆಯ ಬಳೆದ ಕೈ ಎಸಳ ಯಾಲಕ್ಕಿ ಗೊನಿ ನಾತ (ಗತಿ. ೪೨). ೩. ದುರ್ವಾಸನೆ ; ದುರ್ಗಂಧ : "ನಾತವೆನೆ ದುರ್ಗಂಧದೋಲ್" (ಕಶರ. ೫೪) ; ಪೊಂಗಳಂ ಸುರಿವೊಡಮಾರೊ ಸೈರಿಸುವರಾಹನ ಪಲ್ಲಿಲಿವಾಯ ನಾತಮಂ (ಶಂಪುರಾ. ೪-೦೦೦) ; ಕೂಲಿ ಹೊಲಸಿನ ನಾತದೊಳಗೆ ನಿಂದ್ಯೆ ತಂದೆ (ಇಹರ. ದೀ. ೪೪-೨೨) ; ನಾತವಧಿಕ ಭಯಂಕರವು (ಬಸಪು. ೪೭-೫೯); ಇಡಿದ ಹೊಲಸಿನ ನಾತದುಬ್ಬರದೆಡಬಲದ ತಿನಿಸುಗಳ . . . ಕಂಡು ಹೇಸುತ ಹನುಮ ಹೋಜಿವಂಟ (ತೊರರಾ. ೫-೨-೩೭) ; ನಷ್ಟ ಬೀಳುವುದಲ್ಲ ನಾತ ಹುಟ್ಟುವುದಲ್ಲ (ಪುರಂದ. ೧-೨೦೬-೨) : ನಡುಮನೇಲಿ ಹೇತು ನಾತ ಬರುತ್ತೆ ಎಂದ (ಗಾದೆ). ೪. ಕಟುವಾಸನೆ ; ಉಗ್ರಗಂಧ; ಸಹಿಸಲಾಗದ ವಾಸನೆ : "ಹೆಸಲುನಾತಂ ಸೊವಡು ಸೊಗಡುದುಂದುಲಿಗ ಕೂರಿಕ್ಕಾದ ಗಂಧಕ್ಕೆ" (ಕಿಶ್ಯಶು. ೨೪) ; ಇಂಗಿನೊಳು ನಾತವನು ತೆಂಗಿನೊಳಗೆಳನೀರ ಭೃಂಗಕೋಕಿಲೆಯು ಕಂಠದೊಳು ಗಾಯನವ ತುಂಬಿದವರಾರು (ಸರ್ವಜ್ಞ. ೧೯೩). ೫. (ಆಲಂ) ಸುಳಿವು ; ಮುನ್ಸೂಚನೆ : ನೀಲವ್ವ ಮೊದಲ ಸಲ ಗರ್ಭಿಣಿಯಾದಳು. ಆ 'ನಾತ'ವನ್ನು ಮೊದಲು ಕಂಡುಹಿಡಿದವಳೂ ಬಸವ್ವನೇ (ಬರಹಾ. ೧೭) ; ನಯನ ನಿಗಿನಿಗಿ ಎದೆಯ ದೃಢವಡೆ ಏನೊ ನಾತವ ಹಿಡಿದಿದೆ (ಕೃಶ್ಯಾಲಿ. ೨೮-೩). **ನಾತು** : ೧. ನಾತು ಖಿವಟ ಇರದೆ ಬಣ್ಣ ಕೆಂಪದಿದ್ದು ತೇಜವುಳ್ಳದ್ದಿರಬೇಕು (ಮುಂಬಾಪ್ಯಾ. ೩೭).

[ ದೇ.॥ ತಮಿ. ಮಲ. ನಾಱು; ತುಳು. ಕೊಡ. ನಾತ ]

**ನಾತಂಬಿಡಿ**, ನಾತಹಿಡಿ (ಕ್ರಿ). ೧. ವಾಸನೆ ಹಿಡಿ ; ವಾಸನೆಯಿಂದ ಪತ್ತೆಹಚ್ಚು : ನೆತ್ತರ ಧಾರೆಯೊಳ್ ನಾದು ನನೆದಡಿವಜ್ಜೆಯುನು ನಾತಂಬಿಡಿದು ಬಂದು (ಸುಕುಮಾ. ೧೨-೨೪ ವ). **ನಾತಹಿಡಿ** : ೨. ಕೆಟ್ಟ ವಾಸನೆ ಇಡುಗು ; ದುರ್ಗಂಧವಾಗು : ತಲೆ ನಾತಹಿಡಿದಿದೆ, ಸ್ನಾನ ಮಾಡಬೇಕು (ಬಳಕೆ). [ ನಾತ + ಪಿಡಿ$_1$ ]

**ನಾತವಡೆ** (ಕ್ರಿ). = ನಾತಂಬಿಡಿ ೨: ನಾತವಡೆದ ತನುವಿನ ನಳ್ಳವಾಗಿನ ಭೂತವೆ ನಡೆತಪ್ಪಂತೆ ಮನೆಗೆ ಬರಲು (ಸೋಮಿಸಂ. ೭-೧೦೫).

[ ನಾತ + ಪಡೆ$_1$ ]

**ನಾತಹಿಡಿ** 'ನಾತಂಬಿಡಿ' ನೋ.

**ನಾತಹೂ**, ನಾತಹೂವು (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು : (ಆ). **ನಾತಹೂವು** : ಈ ಮಕರಗ್ರಂಥಿಗಳನ್ನು ನಾವು ತುಂಬೆ, ನಾತಹೂವು (Lantana) ಈ ಹೂವುಗಳಲ್ಲಿ ನೋಡಬಹುದು (ಸಸ್ಯಶಾ. ೫೩).

[ ನಾತ + ಹೂ$_2$ (<ಪೂ$_2$) ]

**ನಾತಹೂವು** 'ನಾತಹೂ' ನೋ.

**ನಾತಾಳಿ** (ನಾ). ಕ್ರಿಸ್‌ಮಸ್ ಹಬ್ಬ ; ಏಸುಕ್ರಿಸ್ತನ ಜನ್ಮದಿವಸ : ದತ್ತೂನ ಮದುವೆಯಾದ ಮೇಲೆ ಬಂದುದು ಅದೇ ಮೊದಲ ನಾತಾಳಿ (ಸ್ಮೃತಿಚಿ. ೪೩೪).

**ನಾತಾಳಿ ದಿನ** = ಕ್ರಿಸ್‌ಮಸ್ ಹಬ್ಬವನ್ನು ಆಚರಿಸುವ ದಿವಸ : ನಾತಾಳಿ ದಿನಗಳು, ಹತ್ತು ಗಂಟೆಯು ಹೊತ್ತು. ನಾನು ಮಲಗಿದ್ದೆ (ಸ್ಮೃತಿಚಿ. ೩೭೨). **ನಾತಾಳಿಯ ರಜೆ** = ಕ್ರಿಸ್‌ಮಸ್ ಹಬ್ಬದ ಬಿಡುವು,-ರಜೆ : ಇನ್ನೆರಡು ದಿನಗಳಲ್ಲಿ ಹೇಗಾದರೂ ನಿನ್ನ ನಾತಾಳಿಯ ರಜೆ ಸುರು (ಮೂರುದಾ. ೦೨೩). **ನಾತಾಳಿ ಸೂಟಿ**=ನಾತಾಳಿಯ ರಜೆ : ಉಮೇಶನಿಗೆ ನಾತಾಳಿ ಸೂಟಿ (ದಾಕೊಟಿ. ೦೦) ; ಈ ದುಡಿತದಲ್ಲಿ ನುಗ್ಗಾದ ಹುಡುಗರಿಗೆ ಹತ್ತುದಿನದ ನಾತಾಳಿ ಸೂಟಿಯೂ ಹಿಗ್ಗಿನ ಹುತ್ತವಾಯಿತು (ಅನ್ನ. ೦೦).

[ ←ಮರಾ. ನಾತಾಳ್, ನಾಥಾಳ್./ಇಂ. Natal./ಪೋರ್ಚ್. ನಾತಾಲ್ ]

**ನಾತಿದೂರ** (ನಾ). ಬಹಳ ದೂರವಲ್ಲದುದು ; ಹತ್ತಿರ ; ಸಮೀಪ : ನಾತಿದೂರಂ ಶ್ಲಾಘನೀಯಮಾ ಪಂಚವಟಿ (ಶ್ರೀರಾಮಾ. ೧೯೩-೯೫೩) ; ನಾತಿದೂರದೊಳೊಂದು ಪೊಣ್ಮದುದು ಸೀಳ್ವೊಲ್ ವನ್ಯನಿಶ್ಶಬ್ದಮಂ ದೀರ್ಘಶ್ರುತಿಯ ಸೀಳ್ ! (ಶ್ರೀರಾಮಾ. ೨೮೦-೧೭೮). [ ಸಂ. ]

**ನಾತಿನಿಕಟ** (ನಾ). ಬಹಳ ಹತ್ತಿರವಲ್ಲದಂದು ; ಸ್ವಲ್ಪದೂರ : ನಾತಿದೂರಂ ನಾತಿನಿಕಟಮದೊ ಕಾಣ್ಗೆಗಂ ಸುಳಿಯುತಿವೆ ಮನಮೋಹಕಂ (ಶ್ರೀರಾಮಾ. ೦೯೭-೫೪). [ ಸಂ. ]

**ನಾತಿಮಾನಿತೆ** (ನಾ). ಹೆಚ್ಚು ಅಹಂಕಾರವಿಲ್ಲದಿರುವಿಕೆ : ನಾತಿಮಾನಿತಾ ಎಂದರೆ ಅಹಂಕಾರರಾಹಿತ್ಯ (ಭಾತತ್ತ್ವ. ೧೪೦). [ ಸಂ. ನಾತಿಮಾನಿತಾ ]

**ನಾತು** 'ನಾತ' ನೋ.

**ನಾತೆ** (ನಾ). ೧. ನಂಟುತನ, ಅಧಿಕಾರ ಮೊದಲಾದಂವುಗಳಿಂದ ಉಂಟಾದ ಸಂಬಂಧ,-ಬಾಂಧವ್ಯ : ನಮ್ಮ ಉಪೇಂದ್ರನ ಮಗನೆಂಬ ನಾತೆಯಿಂದಾದರೂ ನಿಜವಾದ ಸಂಗತಿಯನ್ನು ಇವರಿಗೆ ತಿಳಿಸಬೇಡವೆ ? (ಮೂರುದಾ. ೧೪೮). ೨. ಕಾರಣ ; ನಿಮಿತ್ತ : ಗಜೇಂದ್ರಸಿಂಹನಿಗೆ, ಕಿಶೋರಿಗೆ ಗೊತ್ತುಮಾಡಿದ ಸಂಬಂಧವನ್ನು ಚಿಕ್ಕಪ್ಪ ಈ ನಾತೆಯಿಂದ ಒಪ್ಪಲಿ (ಜಮಿನ್ಯಾ. ೧೪೭) ; ಅದು ತಮಗೆ ಹಿರಿಯರಿಂದ ಬಂದ ವಿಶ್ವಸ್ಥರೆಂಬ ನಾತೆಯಿಂದ ತಾವು ಶಿರೋಧಾರಣ ಮಾಡಿದ ಶ್ರೀಮಂತರ ಧನಪೇಶ್ವೆಯರ ಅಮೂಲ್ಯ ದತ್ತಿ (ದೀಹಪ. I, ೧೭) ; ತಾವು ದೇವಸ್ಥಾನದ 'ಅರ್ಚಕ' ಎಂಬ 'ನಾತೆ'ಯಿಂದ ಮೇಲಿನವರಿಗೆ ಅರ್ಜೀ ಮಾಡುವ ಪ್ರಸಂಗ ಬರಬಹುದೆಂದೂ ಅವರಿಗೆ ತಿಳಿಸಿದರು (ಗಂಗಾಸಾ. ೧೧೯).

[ ←ಮರಾ. ನಾತೇ ; ಹಿಂ. ನಾತಾ ]

